ಭಾರತದ ಗ್ಯಾಸೆಟಿಯರ್



# ಕರ್ನಾಟಕ ರಾಜ್ಯ ಗ್ಯಾಸೆಟಿಯರ್

ಭಾಗ ಮೂರು


ಮುಖ್ಯ ಸಂಪಾದಕ

ಸೂರ್ಯನಾಥ ಯು. ಕಾಮತ್



ಮುದ್ರಕರು :

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್

ಎಂ. ಬಿ. ಡಿ. ಮುದ್ರಾಕ್ಷರ ಶಾಲೆ

1101, ಓ. ಟಿ. ಸಿ. ರಸ್ತೆ, ಬೆಂಗಳೂರು-560 002

1986

ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ
1986



ಮುಖ್ಯ ಸಂಪಾದಕರ ಕಚೇರಿ
ಕರ್ನಾಟಕ ಗ್ಯಾಸೆಟಿಯರ್ ಇಲಾಖೆ
ಎಂಟನೇಯ ಮಹಡಿ, ಜಲಮಂಡಳಿ ಕಟ್ಟಡ
ಕಾವೇರಿ ಭವನ
ಜಿಲ್ಲಾ ಕಚೇರಿ ರಸ್ತೆ
ಬೆಂಗಳೂರು-560 009

ಪ್ರತಿಗಳು ದೊರೆಯುವ ಸ್ಥಳ :

ನಿರ್ದೇಶಕರು
ಸರಕಾರೀ ಕೇಂದ್ರ ಪುಸ್ತಕದ ಮಳಿಗೆ
ಡಾ|| ಅಂಬೇಡ್ಕರ್ ವೀದಿ
ಬೆಂಗಳೂರು-560 001

ಅಥವಾ

ಉಪನಿರ್ದೇಶಕರು
ಸರಕಾರೀ ಶಾಖಾ ಪುಸ್ತಕದ ಮಳಿಗೆ
ಧಾರವಾಡ

ಅಥವಾ

ಉಪನಿರ್ದೇಶಕರು
ಸರಕಾರೀ ಶಾಖಾ ಪುಸ್ತಕ ಮಳಿಗೆ
ಕಲ್ಬುರ್ಗಿ

ಗ್ಯಾಸೆಟಿಯರ್ ಇಲಾಖೆಯಲ್ಲಿ ಕೂಡ ಪ್ರತಿಗಳನ್ನು ಪಡೆಯಬಹುದು

# ಮುನ್ನುಡಿ

ರಾಜ್ಯ ಗ್ಯಾಸೆಟಿಯರ್‌ಅನ್ನು ಸ್ವಾತಂತ್ರ್ಯಾನಂತರ ಪ್ರಕಟಿಸುವಲ್ಲಿ ಮೊದಲನೇಯ ರಾಜ್ಯವಾದ ಕರ್ನಾಟಕವು ಅದನ್ನು ಪ್ರಾದೇಶಿಕ ಭಾಷೆಯಲ್ಲಿ ಪ್ರಕಟಿಸುವುದರಲ್ಲೂ ಪ್ರಥಮವಾಗಿ ದಾಖಲೆ ಸ್ಥಾಪಿಸಿದೆ. ಇಂಗ್ಲಿಷ್‌ನಲ್ಲಿ ಎರಡು ಭಾಗಗಳಲ್ಲಿ 1982 ಮತ್ತು 1983ರಲ್ಲಿ ಪ್ರಕಟವಾದ ರಾಜ್ಯ ಗ್ಯಾಸೆಟಿಯರ್ ಅನ್ನು ಮೂರು ಭಾಗಗಳಲ್ಲಿ ಕನ್ನಡದಲ್ಲಿ ಪ್ರಕಟಿಸಲು ನಿರ್ಧರಿಸಿ, ಅದರಂತೆ 1984ರಲ್ಲಿ ಭಾಗ I, 1985ರಲ್ಲಿ ಭಾಗ II, ಮತ್ತು ಈಗ 1986ರಲ್ಲಿ ಕೊನೆಯದಾದ ಭಾಗ IIIನ್ನು ಹೊರತಂದಿದ್ದೇವೆ. ನಮ್ಮ ಕಚೇರಿಯ ಮಾಮೂಲು ಕೆಲಸವಾದ ಇಂಗ್ಲಿಷ್‌ನಲ್ಲಿ ಜಿಲ್ಲಾ ಗ್ಯಾಸೆಟಿಯರ್ ಪ್ರಕಟಿಸುವ ಕೆಲಸಕ್ಕೆ ವ್ಯತ್ಯಯ ಬರದಂತೆ, ಪ್ರೀತಿಯ ಶ್ರಮವಾಗಿ ಈ ಕನ್ನಡ ಆವೃತ್ತಿಯ ಪ್ರಕಟಣಾ ಕಾರ್ಯವನ್ನು ನಿರ್ವಹಿಸಿ ಮುಗಿಸಿದ ಕೃತಾರ್ಥಭಾವ ಈ ಕಚೇರಿಯ ಎಲ್ಲ ಸಿಬ್ಬಂದಿಗೆ ಇದೆ.

1985ರಲ್ಲಿ ಉತ್ತರ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಪ್ರಕಟಿಸಿದ ನಂತರ ಹೊಸ ಮಾಲಿಕೆಯಲ್ಲಿ 17ನೇಯದಾದ ಬೆಳಗಾವಿ ಜಿಲ್ಲಾ ಗ್ಯಾಸೆಟಿಯರನ್ನು 1986-87ರಲ್ಲಿ ಪ್ರಕಟಿಸಲಿದ್ದೇವೆ. ಅದರ ಅಧ್ಯಾಯಗಳು ಅಂತಿಮರೂಪ ತಾಳುತ್ತಿವೆ. ಅಪೇ ರೀತಿ ಮೈಸೂರು ಜಿಲ್ಲಾ ಗ್ಯಾಸೆಟಿಯರ್ ಅನ್ನು 1987-88ರಲ್ಲಿ ಹೊರತರಲು ತೀವ್ರ ವೇಗದಿಂದ ವಿಷಯ ಸಂಗ್ರಹ ನಡೆದಿದ್ದು, ಕೊನೆಗೆ ಉಳಿಯುವುದು ಬೆಂಗಳೂರು ಜಿಲ್ಲೆ ಮಾತ್ರ (ಆದರೆ, ಈಗ ಪ್ರಕಟವಾದ 16ರಲ್ಲಿ ಹಲವು ಜಿಲ್ಲಾ ಗ್ಯಾಸೆಟಿಯರ್‌ಗಳ ಪ್ರತಿಗಳು ಆಗಲೇ ಮುಗಿದು ಹೋಗಿವೆ).

ಕನ್ನಡದಲ್ಲಿ ಹೊರತಂದ ರಾಜ್ಯ ಗ್ಯಾಸೆಟಿಯರ್‌ನಲ್ಲಿ ಇಂಗ್ಲಿಷ್‌ಗಿಂತ ಪರಿಷ್ಕೃತವಾದ ಹಾಗೂ ಕೆಲ ಮಟ್ಟಿಗೆ ಹೊಸದಾದ (ತಾಜಾ) ಮಾಹಿತಿ ಇದೆ. ಈ ಮೂರನೇಯ ಸಂಪುಟವು ಕರ್ನಾಟಕದ ಸಾಂಸ್ಕೃತಿಕ ಸಾಧನೆಯನ್ನು ಚಿತ್ರಿಸಲು ವಿಶೇಷ ಒತ್ತುಕೊಟ್ಟಿದೆ.

ತಾತ್ಪೂರ್ತಿಕವಾಗಿ ನಮ್ಮ ಕಚೇರಿಗೆ ಬಂದು ಇಡೀ ಹಸ್ತಪ್ರತಿಯನ್ನು ಬೆರಳಚ್ಚು ಮಾಡಿಕೊಟ್ಟ ಶ್ರೀ ಎಸ್. ಜಗನ್ನಾಥ, ರಜಾ ದಿನಗಳಲ್ಲೂ ಕೂಡ ಮುದ್ರಣಾಲಯಕ್ಕೆ ಬಂದು ಕರಡು ತಿದ್ದಲು ನನ್ನ ಜೊತೆ ಶ್ರಮಿಸಿದ ನಮ್ಮ ಕಚೇರಿಯ ಸಂಪಾದಕರಾದ ಶ್ರೀ ಬಿ. ಎಸ್. ಸತ್ಯನಾರಾಯಣ (ಇವರು ಶಬ್ದಸೂಚಿಯನ್ನೂ ತಯಾರಿಸಿದ್ದಾರೆ) ಹಾಗೂ ಅನ್ವೇಷಕರಾದ ಶ್ರೀ ಎ. ಲಕ್ಷ್ಮೀನರಸಿಂಹನ್, ಶ್ರೀ ಎಂ. ಚಂದ್ರಶೇಖರ ಮತ್ತು ಶ್ರೀ ಎಸ್. ದೇವೇಂದ್ರ, ಹಾಗೂ ಹಸ್ತ ಪ್ರತಿಯನ್ನು ತಾಳೆ ನೋಡಿದ ಶ್ರೀ ದೇವರಕೊಂಡಾರೆಡ್ಡಿ ಇವರುಗಳ ಶ್ರಮ ಸ್ಮರಣೀಯ. ನಮ್ಮ ಕಚೇರಿಯ ಎಲ್ಲ ಸಿಬ್ಬಂದಿ ಹಾಗೂ ಮುದ್ರಣಾಲಯದ ಮಾಲಿಕರಾದ ಶ್ರೀ ವಿ. ಬಿ. ವಿಶ್ವನಾಥ್ ಹಾಗೂ ಸಿಬ್ಬಂದಿಯನ್ನು ಅವರ ನೆರವಿಗಾಗಿ ಇಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕು.

ಸೂರ್ಯನಾಥ ಯು. ಕಾಮತ್

29-3-1986

ಮುಖ್ಯ ಸಂಪಾದಕ

# ವಿಷಯಾನುಕ್ರಮಣಿಕೆ

## ಮೂರನೇಯ ಭಾಗ



## ಅಧ್ಯಾಯ 10 ಸಮಾಜ ಸೇವಾ ಸೌಲಭ್ಯಗಳು

## ಅಧ್ಯಾಯ 11 ಸಂಸ್ಕೃತಿ

## ಅಧ್ಯಾಯ 12 ಪ್ರೇಕ್ಷಣೀಯ ಸ್ಥಳಗಳು

## ಗ್ಯಾಸೆಟಿಯರ್ ಸಲಹಾ ಸಮಿತಿ
(ಇಂಗ್ಲಿಷ್ ಆವೃತ್ತಿ ಪ್ರಕಟ ಆದಾಗ)

ಅಧ್ಯಕ್ಷರು

ಶ್ರೀ ಆರ್. ಎ. ನಾಯಕ್, ಐ. ಎ. ಎಸ್., ಸರ್ಕಾರದ ಮುಖ್ಯ ಕಾರ್ಯದರ್ಶಿ, ಬೆಂಗಳೂರು

ಸದಸ್ಯರು

ಶ್ರೀ ಎ. ಎಸ್. ಮೇಲ್‌ಕೋಟೆ, ಐ. ಎ. ಎಸ್., ಸರ್ಕಾರದ ಕಾರ್ಯದರ್ಶಿ, ವಿದ್ಯಾ ಮತ್ತು ಯುವಜನ ಸೇವಾ ಇಲಾಖೆ, ಬೆಂಗಳೂರು
ಶ್ರೀ ಕೆ. ಬಾಲಸುಬ್ರಮಣ್ಯಂ, ಐ.ಎ.ಎಸ್. (ನಿವೃತ್ತ), ಬೆಂಗಳೂರು
ಶ್ರೀ ಎಚ್. ಎಲ್. ನಾಗೇಗೌಡ, ಐ.ಎ.ಎಸ್. (ನಿವೃತ್ತ), ಬೆಂಗಳೂರು
ಪ್ರೊ|| ಕು. ಶಿ. ಹರಿದಾಸಭಟ್ಟ (ನಿವೃತ್ತ), ಪ್ರಿನ್ಸಿಪಾಲ್, ಎಂ.ಜಿ.ಎಂ. ಕಾಲೇಜು, ಉಡುಪಿ
ಪ್ರೊ|| ಸ. ಸ. ಮಾಳವಾಡ, (ನಿವೃತ್ತ) ಪ್ರಿನ್ಸಿಪಾಲ್, ಕರ್ನಾಟಕ ಕಾಲೇಜು, ಧಾರವಾಡ
ಡಾ|| ಜಿ. ಎಸ್. ಗಾಯಿ, ಮುಖ್ಯ ಶಾಸನ ತಜ್ಞರು (ನಿವೃತ್ತ), ಭಾರತ ಸರ್ಕಾರ, ಮೈಸೂರು
ಶ್ರೀ ಅನ್ನದಾನಯ್ಯ ಪುರಾಣಿಕ, ವಕೀಲರು ಮತ್ತು ಬರಹಗಾರರು, ಬೆಂಗಳೂರು
ಡಾ|| ಪಿ. ಎನ್. ಚೋಪ್ರ, ಮಾಜೀ ಸಂಪಾದಕರು, ಇಂಡಿಯಾ ಗ್ಯಾಸೆಟಿಯರ್, ಹೊಸದೆಹಲಿ

ಕಾರ್ಯದರ್ಶಿ

ಡಾ|| ಸೂರ್ಯನಾಥ ಯು. ಕಾಮತ್, ಮುಖ್ಯ ಸಂಪಾದಕ, ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು

## ಗ್ಯಾಸೆಟಿಯರ್ ಸಲಹಾ ಸಮಿತಿ
(ಈಗ ಇರುವಂತೆ)

ಅಧ್ಯಕ್ಷರು

ಶ್ರೀ ಟಿ. ಆರ್. ಸತೀಶ್ಚಂದ್ರನ್, ಐ. ಎ. ಎಸ್., ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ

ಸದಸ್ಯರು

ಶ್ರೀ ಚಿರಂಜೀವಿ ಸಿಂಗ್, ಐ. ಎ. ಎಸ್., ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಕಾರ್ಯದರ್ಶಿ
ಶ್ರೀ ಕೆ. ಬಾಲಸುಬ್ರಮಣ್ಯಂ, ಐ. ಎ. ಎಸ್. (ನಿವೃತ್ತ), ಬೆಂಗಳೂರು
ಶ್ರೀ ಎಚ್. ಎಲ್. ನಾಗೇಗೌಡ, ಐ. ಎ. ಎಸ್. (ನಿವೃತ್ತ), ಬೆಂಗಳೂರು
ಪ್ರೊ|| ಕು. ಶಿ. ಹರಿದಾಸ ಭಟ್ಟ, (ನಿವೃತ್ತ) ಪ್ರಿನ್ಸಿಪಾಲರು, ಎಂ. ಜಿ. ಎಂ. ಕಾಲೇಜು,ಉಡುಪಿ
ಶ್ರೀ ಅನ್ನದಾನಯ್ಯ ಪುರಾಣಿಕ, ವಕೀಲರು ಮತ್ತು ಲೇಖಕರು, ಬೆಂಗಳೂರು
ಪ್ರೊ|| ಎಸ್. ಎಂ. ಎ. ಹಮೀದ್, (ನಿವೃತ್ತ) ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕರು, ಬೆಂಗಳೂರು
ಪ್ರೊ|| ಎಂ. ಷಡಕ್ಷರಸ್ವಾಮಿ, (ನಿವೃತ್ತ) ಪ್ರಿನ್ಸಿಪಾಲ್, ಸೆಂಟ್ರಲ್ ಕಾಲೇಜು, ಬೆಂಗಳೂರು
ಶ್ರೀ ಪಾಟೀಲ ಪುಟ್ಟಪ್ಪ, ಸಂಪಾದಕರು, 'ಪ್ರಪಂಚ', ಸಾಪ್ತಾಹಿಕ, ಹುಬ್ಬಳ್ಳಿ
ಡಾ|| ಕೆ. ವಿ. ರಮೇಶ್, ನಿರ್ದೇಶಕರು, ಮುಖ್ಯ ಶಾಸನ ತಜ್ಞರ ಕಚೇರಿ, ಭಾರತ ಸರಕಾರ, ಮೈಸೂರು

ಕಾರ್ಯದರ್ಶಿ

ಡಾ|| ಸೂರ್ಯನಾಥ ಯು. ಕಾಮತ್, ಮುಖ್ಯ ಸಂಪಾದಕ, ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು

# ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ

## ಸಿಬ್ಬಂದಿ

| | | |
|---|---|---|
| ಮುಖ್ಯ ಸಂಪಾದಕರು | : | ಡಾ|| ಸೂರ್ಯನಾಥ ಯು. ಕಾಮತ್ |
| ಸಂಪಾದಕರು | : | ಎಂ. ಕೇಶವರಾವ್*, ಬಿ. ಎಸ್. ಸತ್ಯನಾರಾಯಣ<br>ಎಂ. ಬಿ. ಪಾಟೀಲ್, ಪಿ. ವೀರಶೆಟ್ಟಿ*<br>ಎ. ಎಸ್. ನಾಗರಾಜ, ಎಸ್. ಎನ್. ರಾಮಚಂದ್ರಯ್ಯ<br>ಎಚ್. ಎಂ. ರಂಗೇಗೌಡ, ಎ. ನೂರುಲ್ಲ*<br>ಆರ್. ಮಧ್ವರಾಜ್, ಎಸ್. ಎ. ಜಗನ್ನಾಥ್<br>ಎಸ್. ಲಕ್ಷ್ಮೀನಾರಾಯಣ ಶೆಟ್ಟಿ<br>ಕೆ. ಜಿ. ನಾಗರಾಜ್* ಮತ್ತು ಎಸ್. ಎನ್. ರಾಜು |
| ಅನ್ವೇಷಕರು | : | ಜಿ. ಭಾನುದಾಸ್, ಸ್ಟೀಫನ್ ಪಾಲ್<br>ಎ. ಲಕ್ಷ್ಮೀನರಸಿಂಹನ್, ಆರ್. ಜಿ. ಕುಲಕರ್ಣಿ<br>ಕೆ. ರಾಜಶೇಖರ್, ದೇವರಕೊಂಡಾರೆಡ್ಡಿ<br>ಎಂ. ಚಂದ್ರಶೇಖರ್ ಮತ್ತು ಎಸ್. ದೇವೇಂದ್ರ |
| ಅಧೀಕ್ಷಕರು | : | ಎಚ್. ಜಿ. ಗಂಗಯ್ಯ |
| ಸಹಾಯಕರು | : | ಬಿ. ಸಿ. ರೇವಣ್ಣ<br>ಎಸ್. ಎನ್. ಶ್ರೇಯಾಂಸಕುಮಾರ್<br>ಎಂ. ಎನ್. ಮನೋಹರ ಮತ್ತು<br>ಎಸ್. ರಾಘವೇಂದ್ರ ರಾವ್ |
| ಬೆರಳಚ್ಚುಗಾರರು | : | ರಾಮಲಿಂಗ, ಬಿ. ಅಬ್ದುಲ್ ಖುದ್ದೂಸ್<br>ಸಿ. ಎಸ್. ಮಾಧುರಾವ್ ಮತ್ತು<br>ಎ. ಜಗನ್ನಾಥ* |
| ಗ್ರಂಥಪಾಲಕ ಹಾಗೂ ಸಹಾಯಕ | : | ಜಿ. ಎಸ್. ಪಾಟೀಲ್ |
| ಚಾಲಕ | : | ಎಂ. ಬಾಬು |
| 'ಡಿ' ಗುಂಪಿನ ನೌಕರರು | : | ತಮ್ಮಣ್ಣ. ಬೀರಯ್ಯ, ಭದ್ರಯ್ಯ, ಗಂಗಭೈರಯ್ಯ*<br>ಮತ್ತು ಚಂದ್ರ |

---

* 31-3-1986ರ ವರೆಗೆ

# ಮೂಲ ಲೇಖಕರ ಮತ್ತು ಭಾಷಾಂತರಕಾರರ ಪಟ್ಟಿ

ಅಧ್ಯಾಯ 10  ಸಾಮಾಜಿಕ ಸೇವೆ :

| | | |
|---|---|---|
| ವಿದ್ಯಾಭ್ಯಾಸ (ಪೀಠಿಕೆ) | : | ಡಾ|| ಸೂರ್ಯನಾಥ ಕಾಮತ್<br>(ಅನು: ಎಚ್. ವಿ. ಶ್ರೀರಂಗರಾಜು) |
| ಪ್ರಾಥಮಿಕ ಶಿಕ್ಷಣ<br>ಪ್ರೌಢ ಶಿಕ್ಷಣ<br>ಪದವಿಪೂರ್ವ ಶಿಕ್ಷಣ | : | ಬಿ. ಮರಿರಾಜ್ ಮತ್ತು<br>ಎಸ್. ಎನ್. ರಾಮಚಂದ್ರಯ್ಯ*<br>(ಅನು: ಎಚ್. ವಿ. ಶ್ರೀರಂಗರಾಜು,) |
| ಉನ್ನತ ಶಿಕ್ಷಣ | : | ಎಚ್. ವಿ. ಶ್ರೀರಂಗರಾಜು ಮತ್ತು<br>ಎಸ್. ಎನ್. ರಾಮಚಂದ್ರಯ್ಯ*<br>(ಅನು: ಎಚ್. ವಿ. ಶ್ರೀರಂಗರಾಜು) |
| ವಯಸ್ಕರ ಶಿಕ್ಷಣ | : | ಎಸ್. ಎನ್. ರಾಮಚಂದ್ರಯ್ಯ*<br>(ಅನು: ಎಂ. ನಾಗಾರಾಜರಾವ್) |
| ತಾಂತ್ರಿಕ ಶಿಕ್ಷಣ | : | ಆರ್. ಮಧ್ವರಾಜ್*<br>(ಅನು: ಎಂ. ನಾಗರಾಜರಾವ್) |
| ನ್ಯಾಯ ಶಿಕ್ಷಣ | : | ಎಂ. ಕೇಶವರಾವ್*<br>(ಅನು: ಎಂ. ನಾಗರಾಜರಾವ್) |
| ವೈದ್ಯಕೀಯ ಶಿಕ್ಷಣ<br>ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ ಸೇವೆಗಳು | : | ಡಾ|| ವೈ. ಪಿ. ರುದ್ರಪ್ಪ ಮತ್ತು<br>ಡಿ. ಎನ್. ನಾಗಭೂಷಣರಾವ್*<br>(ಅನು: ಗೊ. ರು. ಚನ್ನಬಸಪ್ಪ) |
| ಕರ್ನಾಟಕದ ವೈಜ್ಞಾನಿಕ ಪರಂಪರೆ | : | ಬಿ. ವಿ. ಸುಬ್ಬರಾಯಪ್ಪ<br>(ಅನು: ಕೆ. ಆರ್. ಗಣೇಶ್) |
| ಸಾರ್ವಜನಿಕ ಗ್ರಂಥಾಲಯಗಳು | : | ಡಾ|| ಎಸ್. ಆರ್. ಗುಂಜಾಳ್†<br>ಮತ್ತು ಎ. ವೈ. ಆಸುಂಡಿ |

† ಮೂಲ ಲೇಖಕರು ಹಾಗೂ ಅನುವಾದಕರು

* ಕಚೇರಿಯ ಸಿಬ್ಬಂದಿ ವರ್ಗ

| | | |
|---|---|---|
| ವಸ್ತು ಸಂಗ್ರಹಾಲಯಗಳು ಮತ್ತು ಕಲಾ ಪ್ರದರ್ಶನಾಲಯಗಳು | : | ಡಾ|| ಎಂ. ಎಸ್. ನಾಗರಾಜರಾವ್ (ಅನು: ಕೆ. ಆರ್. ಗಣೇಶ್) |
| ಧಾರ್ಮಿಕ ಮತ್ತು ದತ್ತಿ ನಿಧಿಗಳು | : | ಎಸ್. ಎನ್. ರಾಮಚಂದ್ರಯ್ಯ* (ಅನು: ಮಾ. ಮಂಜುಳಾ) |
| ಕಾರ್ಮಿಕ ಕಲ್ಯಾಣ | : | ಕೆ. ಆರ್. ಸತ್ಯನಾರಾಯಣ (ಅನು: ಮಾ. ಮಂಜುಳಾ) |
| ಪಾನ ನಿರೋಧ | : | ಎಸ್. ಎನ್. ರಾಮಚಂದ್ರಯ್ಯ* (ಅನು: ಮಾ. ಮಂಜುಳಾ) |
| ಹಿಂದುಳಿದ ವರ್ಗಗಳ ಚಳುವಳಿ | : | ಎಸ್. ಎನ್. ರಾಮಚಂದ್ರಯ್ಯ* (ಅನು: ಎನ್. ದಯಾನಂದ) |
| ಮಹಿಳಾ ಮತ್ತು ಮಕ್ಕಳ ಕಲ್ಯಾಣ | : | ಎಸ್. ಎನ್. ರಾಮಚಂದ್ರಯ್ಯ* (ಅನು: ಎಚ್. ವಿ. ನಾಗೇಶ) |

ಅಧ್ಯಾಯ 11 ಸಂಸ್ಕೃತಿ :

| | | |
|---|---|---|
| ಸಾಂಸ್ಕೃತಿಕ ಪರಂಪರೆ | : | ಡಾ|| ಎಂ. ಚಿದಾನಂದಮೂರ್ತಿ (ಅನು: ಎ. ಎಂ. ಅಣ್ಣಿಗೇರಿ) |
| ಕನ್ನಡ ಭಾಷೆಯ ಹುಟ್ಟು ಮತ್ತು ಬೆಳವಣಿಗೆ | : | ಡಾ|| ಕೃಷ್ಣಪರಮೇಶ್ವರ ಭಟ್ಟ† |
| ಕನ್ನಡ ಸಾಹಿತ್ಯ | : | ಪ್ರೊ|| ದೇ. ಜವರೇಗೌಡ† |
| ಕರ್ನಾಟಕ ಜಾನಪದ ಸಾಹಿತ್ಯ | : | ಜೀ. ಶಂ. ಪರಮಶಿವಯ್ಯ (ಅನು: ಡಾ|| ಕೆ. ವಿ. ನಾರಾಯಣ) |
| ಕರ್ನಾಟಕದಲ್ಲಿ ಪತ್ರಿಕೋದ್ಯಮ | : | ಡಾ|| ನಾಡಿಗ ಕೃಷ್ಣಮೂರ್ತಿ (ಅನು: ಶ್ರೀಕರ ಎಲ್. ಭಂಡಾರ್‌ಕರ್) |
| 1956ರವರೆಗೆ ಕರ್ನಾಟಕದಲ್ಲಿದ್ದ ಪತ್ರಿಕೆಗಳ ಪಟ್ಟಿ | : | ಮೋಹನ ಜಿ. ಹೆಗಡೆ† |
| ಕೊಡವ ಭಾಷೆ ಮತ್ತು ಸಾಹಿತ್ಯ | : | ಬಿ. ಡಿ. ಗಣಪತಿ† |
| ತುಳು ಭಾಷೆ ಮತ್ತು ಸಾಹಿತ್ಯ | : | ಡಾ|| ಎಂ. ರಾಮ (ಅನು: ಕೆ. ಆರ್. ಗಣೇಶ್) |
| ಕರ್ನಾಟಕದಲ್ಲಿ ಕೊಂಕಣಿ | : | ಸಿರಿಲ್ ಮಾಡ್ತ (ಅನು: ಶ್ರೀಕರ ಎಲ್. ಭಂಡಾರ್ಕರ್) |
| ಕರ್ನಾಟಕದಲ್ಲಿ ಮಲೆಯಾಳಂ | : | ಸಿ. ಕಮಲಾದೇವಿ (ಅನು: ಕೆ. ಎಸ್. ಕರುಣಾಕರನ್) |
| ಕರ್ನಾಟಕದಲ್ಲಿ ತೆಲುಗು | : | ಶಂಕರನಾರಾಯಣ ರಾಜು (ಅನು: ಕೆ. ಎಸ್. ಕರುಣಾಕರನ್) |
| ಕರ್ನಾಟಕದಲ್ಲಿ ತಮಿಳು | : | ಪ್ರೊ|| ಎಲ್. ಗುಂಡಪ್ಪ (ಅನು: ಕೆ. ಎಸ್. ಕರುಣಾಕರನ್) |
| ಕರ್ನಾಟಕದಲ್ಲಿ ಉರ್ದು, ಕರ್ನಾಟಕದಲ್ಲಿ ಪರ್ಷಿಯನ್ ಮತ್ತು ಅರಬ್ಬೀ ಭಾಷೆಗಳು | : | ಎಚ್. ಸಯ್ಯದ್ ಅಹಮದ್ (ಅನು: ಎಂ. ಫಜಲುಲ್ ಹಸನ್) |
| ಕರ್ನಾಟಕದಲ್ಲಿ ಹಿಂದಿ | : | ಡಾ|| ಎಂ. ರಾಜೇಶ್ವರಯ್ಯ (ಅನು: ಎಂ. ಫಜಲುಲ್ ಹಸನ್) |

| | | |
|---|---|---|
| ಕರ್ನಾಟಕದಲ್ಲಿ ಮರಾಠಿ ಭಾಷೆ | : | ಡಾ|| ಪಂಡಿತ್ ಅವಳೀಕರ್<br>(ಅನು: ಡಾ|| ವರದರಾಜ ಹುಯಿಲಗೋಳ) |
| ಕರ್ನಾಟಕದಲ್ಲಿ ಪ್ರಾಕೃತ ಭಾಷೆಗಳು | : | ಡಾ|| ಬಿ. ಕೆ. ಖಡಬಡಿ<br>(ಅನು: ಡಾ|| ವರದರಾಜ ಹುಯಿಲಗೋಳ) |
| ಕರ್ನಾಟಕದಲ್ಲಿ ಸಂಸ್ಕೃತ | : | ಪ್ರೊ|| ಕೆ. ಟಿ. ಪಾಂಡುರಂಗಿ<br>(ಅನು: ಡಾ|| ವರದರಾಜ ಹುಯಿಲಗೋಳ) |
| ಕರ್ನಾಟಕದಲ್ಲಿ ಇಂಗ್ಲಿಷ್ | : | ಪ್ರೊ|| ಎಲ್. ಎಸ್. ಶೇಷಗಿರಿರಾವ್† |
| ಕರ್ನಾಟಕದ ತಾತ್ವಿಕ ಪಂಥಗಳು | : | ಪ್ರೊ|| ಎಸ್. ಕೆ. ರಾಮಚಂದ್ರರಾವ್<br>(ಅನು: ಕೆ. ಆರ್. ಗಣೇಶ್) |
| ವಾಸ್ತುಶಿಲ್ಪ ಮತ್ತು ಆಧುನಿಕ ವಾಸ್ತುಶಿಲ್ಪ, ಶಿಲ್ಪಕಲೆ | : | ಡಾ|| ಎಸ್. ಆರ್. ರಾವ್ ಮತ್ತು<br>ಡಾ|| ಸೂರ್ಯನಾಥ ಕಾಮತ್<br>(ಅನು: ಡಾ|| ಎ. ವಿ. ನರಸಿಂಹಮೂರ್ತಿ) |
| ಚಿತ್ರಕಲೆ, ಕರ್ನಾಟಕದಲ್ಲಿ ಸಂಗೀತ | : | ಬಿ. ವಿ. ಕೆ. ಶಾಸ್ತ್ರಿ† |
| ಕರ್ನಾಟಕದಲ್ಲಿ ನೃತ್ಯಕಲೆ | : | ಪ್ರೊ|| ಯು. ಎಸ್. ಕೃಷ್ಣರಾವ್<br>(ಅನು: ಬಿ. ವಿ. ಕೆ. ಶಾಸ್ತ್ರಿ) |
| ಕರ್ನಾಟಕ ರಂಗಭೂಮಿ | : | ಡಾ|| ಆದ್ಯ ರಂಗಾಚಾರ್ಯ<br>(ಅನು: ಕ. ವೆಂ. ರಾಜಗೋಪಾಲ್) |
| ರಂಗಭೂಮಿಯಲ್ಲಿ ಇತ್ತೀಚಿನ ಬೆಳವಣಿಗೆ | : | ಕ. ವೆಂ. ರಾಜಗೋಪಾಲ್† |
| ಯಕ್ಷಗಾನ ರಂಗಭೂಮಿ | : | ಡಾ|| ಕೆ. ಶಿವರಾಮ ಕಾರಂತ<br>(ಅನು: ಕ. ವೆಂ. ರಾಜಗೋಪಾಲ್) |
| ಕನ್ನಡ ಚಲನಚಿತ್ರಗಳು | : | ಕೆ. ವಿ. ಗುರುಪ್ರಸಾದ್<br>(ಅನು: ಜಿ. ನಾಗೇಶ ಹೆಗ್ಡೆ) |
| ಲಲಿತ ಕಲಾ ಶಿಕ್ಷಣ, ಅಕ್ಯಾಡೆಮಿಗಳು | : | ಎ. ಎಸ್. ನಾಗರಾಜ್*<br>(ಅನು: ಜಿ. ನಾಗೇಶ ಹೆಗ್ಡೆ) |

ಅಧ್ಯಾಯ 12 ಪ್ರೇಕ್ಷಣೀಯ ಸ್ಥಳಗಳು :

| | | |
|---|---|---|
| ಬಳ್ಳಾರಿ, ದಕ್ಷಿಣ ಕನ್ನಡ, ಹಾಸನ, ಶಿವಮೊಗ್ಗ, ತುಮಕೂರು ಜಿಲ್ಲೆಗಳು | : | ಡಿ. ಎನ್. ನಾಗಭೂಷಣರಾವ್* |
| ಕಲ್ಬುರ್ಗಿ, ರಾಯಚೂರು ಜಿಲ್ಲೆಗಳು | : | ನರಸೋಜಿ* ಮತ್ತು ಕೆ. ಜಿ. ನಾಗರಾಜ್* |
| ಚಿತ್ರದುರ್ಗ ಜಿಲೆ | : | ಎಂ. ಕೇಶವರಾವ್* |
| ಬೆಳಗಾವಿ ಮತ್ತು ಧಾರವಾಡ ಜಿಲ್ಲೆ | : | ಎಂ. ಬಿ. ಪಾಟೀಲ್* ಮತ್ತು ಜಿ. ಭಾನುದಾಸ್* |
| ಮಂಡ್ಯ ಮತ್ತು ಮೈಸೂರು ಜಿಲ್ಲೆ | : | ಸಿದ್ದಲಿಂಗಯ್ಯ* |
| ಬೆಂಗಳೂರು ಮತ್ತು ವಿಜಾಪುರ ಜಿಲ್ಲೆ | : | ಲಕ್ಷ್ಮೀನಾರಾಯಣ ಶೆಟ್ಟಿ* |
| ಕೋಲಾರ ಜಿಲ್ಲೆ | : | ಎ. ನೂರುಲ್ಲ* |
| ಬಿದರೆ ಜಿಲ್ಲೆ | : | ಆರ್. ಮಧ್ವರಾಜ್* |

| | | |
|---|---|---|
| ಕೊಡಗು ಜಿಲ್ಲೆ | : | ಟಿ. ಆರ್. ಕೃಷ್ಣಸ್ವಾಮಿ* |
| ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲೆ | : | ಎಸ್. ಎ. ಜಗನ್ನಾಥ* ಮತ್ತು<br>ಎ. ಲಕ್ಷ್ಮೀನರಸಿಂಹನ್* |

ಅನುವಾದಕರು :

| | | | |
|---|---|---|---|
| ಮೂಲ ಗ್ರಂಥದ ಪುಟ | : | 1119 ರಿಂದ 1163 ರವರೆಗೆ : | ಡಾ|| ಎಚ್. ಆರ್. ರಘುನಾಥ ಭಟ್ |
| ,, | : | 1163 ರಿಂದ 1198 ರವರೆಗೆ : | ಡಾ|| ಎಸ್. ಜಿ. ಘಟಿಫಣದಿ |
| ,, | : | 1199 ರಿಂದ 1241 ರವರೆಗೆ : | ಡಾ|| ಎಂ. ವಿ. ಶ್ರೀನಿವಾಸ್ |
| ,, | : | 1241 ರಿಂದ 1280 ರವರೆಗೆ : | ಸಿ. ಕೆ. ನಾಗರಾಜರಾವ್ |
| ,, | : | 1281 ರಿಂದ 1327 ರವರೆಗೆ : | ಡಾ|| ಎಂ. ವಿ. ಕೃಷ್ಣಪ್ಪ |
| ,, | : | 1327 ರಿಂದ 1375 ರವರೆಗೆ : | ಎಚ್. ಪಿ. ಶಶಿಧರಮೂರ್ತಿ |

ಅಧ್ಯಾಯ 10

# ಸಮಾಜ ಸೇವಾ ಸೌಲಭ್ಯಗಳು

ರಾಜ್ಯ ಸರ್ಕಾರದ ವಿವಿಧ ಇಲಾಖೆಗಳೂ, ಸಾರ್ವಜನಿಕ ಸೇವಾ ಸಂಸ್ಥೆಗಳೂ ಕೈಗೊಳ್ಳುತ್ತಿರುವ ಸಮಾಜ ಸೇವೆಗಳು ರಾಜ್ಯದಲ್ಲಿನ ಚಟುವಟಿಕೆಗಳ ಒಂದು ಗಣ್ಯ ಭಾಗವಾಗಿವೆ. ಶಿಕ್ಷಣ, ಆರೋಗ್ಯ ಮತ್ತು ರೋಗ ನಿವಾರಣಾ ಕಾರ್ಯ, ಬಡಜನರು, ಹೆಂಗಸರು, ಮಕ್ಕಳು, ದುರ್ಬಲ ವರ್ಗಗಳು, ಅಂಗವಿಹೀನರು ಮುಂತಾದವರ ಕಲ್ಯಾಣಕಾರ್ಯ ಇವೆಲ್ಲವೂ ಸಮಾಜ ಸೇವೆಯ ವಿವಿಧ ಮುಖಗಳು. ಈ ಅಧ್ಯಾಯದಲ್ಲಿ ಈ ಬಗೆಯ ಕಾರ್ಯಗಳ ಸಮೀಕ್ಷೆಯನ್ನು ಕೊಡಲು ಪ್ರಯತ್ನಿಸಲಾಗಿದೆ. ಈ ಎಲ್ಲಾ ರೀತಿಯ ಸಮಾಜ ಸೇವೆಗಳ ಸಮೀಕ್ಷೆ ಇದಾಗಿದೆ.

## ಶಿಕ್ಷಣ

ಬಹು ಹಿಂದೆ ಅಗ್ರಹಾರ, ಮಠ ಮತ್ತು ಘಟಿಕೆಗಳೆಂಬ ವಿದ್ಯಾ ಸಂಸ್ಥೆಗಳು ಕರ್ನಾಟಕದಲ್ಲಿ ಹರಡಿಕೊಂಡಿದ್ದುವು. ಆ ಕಾಲದಲ್ಲಿ ಇಂದಿನ ಪ್ರತೀಯೊಂದು ತಾಲೂಕಿನಲ್ಲಿಯೂ ಮೂರು ನಾಲ್ಕು ಅಗ್ರಹಾರಗಳಿದ್ದುದು ಶಾಸನಗಳಿಂದ ಗೊತ್ತಾಗುತ್ತದೆ. ಅಗ್ರಹಾರವೆಂದರೆ ಬ್ರಾಹ್ಮಣ ಪಂಡಿತರು ವಾಸಿಸುತ್ತಿದ್ದ ನೆಲೆ (ಗ್ರಾಮ). ತಮ್ಮ ಜ್ಞಾನಾನ್ವೇಷಣೆಯಲ್ಲಿ ನಿರತರಾಗಲು ಅನುಕೂಲವಾಗುವಂತೆ ಭೂಮಿ, ವಸತಿ ಮುಂತಾದ ಅನೇಕ ಸೌಕರ್ಯಗಳನ್ನು ಅವರಿಗೆ ಒದಗಿಸಲಾಗಿತ್ತು. ಜ್ಞಾನಾನ್ವೇಷಣೆ ಬ್ರಾಹ್ಮಣರ ಷಟ್ಕರ್ಮಗಳಲ್ಲಿ ಒಂದು. ಆ ಷಟ್ಕರ್ಮಗಳು ಯಾವುವೆಂದರೆ ಯಜ್ಞಯಾಗಾದಿಗಳನ್ನು ತಾವೇ ನಡೆಸುವುದು ; ಅಂಥ ಯಜ್ಞಗಳಲ್ಲಿ ಪುರೋಹಿತರಾಗಿ ಕೆಲಸ ಮಾಡುವುದು ; ಸ್ವಾಧ್ಯಾಯದಲ್ಲಿ ತೊಡಗುವುದು ; ಇತರರಿಗೆ ಅಧ್ಯಾಪನವನ್ನು ಮಾಡಿಸುವುದು ; ದಾನ ನೀಡುವುದು ; ಮತ್ತು ದಾನವನ್ನು ಸ್ವೀಕರಿಸುವುದು. ಈ ಅಗ್ರಹಾರಗಳನ್ನು ಸ್ಥಾಪಿಸಿದವರು ರಾಜರಾಣಿಯರು, ಸೇನಾಪತಿಗಳು ಮತ್ತು ಇತರ ಶ್ರೀಮಂತರು. ಕೃಷಿ ಚೆನ್ನಾಗಿ ನಡೆಯುತ್ತಿದ್ದ ಕಡೆ ಭೂಮಿಯನ್ನು ಕ್ರಯಕ್ಕೆ ತೆಗೆದುಕೊಂಡು ಆ ಸ್ಥಳಗಳಲ್ಲಿ ನಿಲ್ಲುವಂತೆ ಪಂಡಿತರನ್ನು ಆಹ್ವಾನಿಸಲಾಗುತ್ತಿತ್ತು. ಹಾಗೆ ಆಹ್ವಾನಿಸಲ್ಪಟ್ಟ ಪಂಡಿತರ ಸಂಖ್ಯೆ ಮೊದಲೇ ನಿಗದಿಯಾಗಿರುತ್ತಿತ್ತು. ಕೊಂಡ ಭೂಮಿಯನ್ನು ವಶಪಡಿಸಿಕೊಂಡು ಅದನ್ನು ಬ್ರಾಹ್ಮಣರ ವಶಕ್ಕೆ ಕೊಡಲಾಗುತ್ತಿತ್ತು. ಅವರು ಗೇಣಿದಾರರಿಂದಲೋ ಕಾರ್ಮಿಕರಿಂದಲೋ ವ್ಯವಸಾಯವನ್ನು ಮಾಡಿಸುತ್ತಿದ್ದರು. ಸಾಮಾನ್ಯವಾಗಿ ಅಂಥ ಕಡೆಗಳಲ್ಲಿ ಪಂಡಿತರಿಗೆಲ್ಲಾ ಸಮಾನ ಗಾತ್ರದ ಭೂಮಿಯ ಹಿಡುವಳಿ ಇರುತ್ತಿತ್ತು. ದೊಡ್ಡ ಮತ್ತು ಸಣ್ಣ ಪಟ್ಟಣಗಳಲ್ಲಿ ಅವರಿಗಾಗಿ ಕೆಲವು ಬೀದಿಗಳನ್ನು ಬಿಡಲಾಗುತ್ತಿತ್ತು. ನಗರಗಳ ಇಂಥ ಭಾಗಗಳನ್ನು 'ಬ್ರಹ್ಮಪುರಿ' (ಹಾರುವರ ಕೇರಿ) ಎಂದು ಕರೆಯುತ್ತಿದ್ದರು. ಶಿವಮೊಗ್ಗೆಯ ಬೆಳ್ಗಾವಿಯಲ್ಲಿ ಅಂಥ ಏಳು ಬ್ರಹ್ಮಪುರಿಗಳಿದ್ದುವು. ಚಲುಕ್ಯರ ಬಾದಾಮಿಯ ಬ್ರಹ್ಮಪುರಿಯಲ್ಲಿ 2,000 ಬ್ರಾಹ್ಮಣರಿದ್ದರು. ವ್ಯಾಪಾರ ಕೇಂದ್ರವಾಗಿದ್ದ ಐಹೊಳೆಯ ಬ್ರಹ್ಮಪುರಿಯಲ್ಲಿ 500 ಬ್ರಾಹ್ಮಣರಿದ್ದರು.

ಅಗ್ರಹಾರಗಳು ಕೇವಲ ಕರ್ನಾಟಕದ ವಿಶಿಷ್ಟ ಸಂಸ್ಥೆಗಳಲ್ಲ. ಕೌಟಿಲ್ಯನ ಗ್ರಂಥದಲ್ಲೂ ಅ ಪದವನ್ನು ಕಾಣಬಹುದು. ಶಾತವಾಹನರು ಕೆಲವು ಅಗ್ರಹಾರಗಳನ್ನು ಕಟ್ಟಿಸಿದ್ದರೆಂದು ತೋರುತ್ತದೆ. ಶಿವಮೊಗ್ಗೆಯ ತಾಳಗುಂದವು ಅಂಥ ಅಗ್ರಹಾರಗಳಲ್ಲಿ ಒಂದಾಗಿತ್ತು. ಕದಂಬ ಮಯೂರಶರ್ಮನ ಅಜ್ಜ ಈ ಅಗ್ರಹಾರಕ್ಕೆ ಸೇರಿದವನು. ಬೇರೆ ಬೇರೆ ಅಗ್ರಹಾರಗಳಲ್ಲಿ ಬೇರೆ ಬೇರೆ ಸಂಖ್ಯೆಯ ಪಂಡಿತರಿದ್ದರು. ಇವರಿಗೆ ಮಹಾಜನರೆಂಬ ಹೆಸರಿತ್ತು. (ಮೊದಲು ಅಗ್ರಹಾರವನ್ನು ದಾನವಾಗಿ ಪಡೆದ ಕುಟುಂಬಗಳ ಯಜಮಾನರು ಮಹಾಜನರೆನ್ನಿಸಿಕೊಳ್ಳುತ್ತಿದ್ದರು).

ತಾಳಗುಂದದಲ್ಲಿ ಅಂಥ 32,000 ಮಂದಿ ಇದ್ದರು. ಧಾರವಾಡ ಜಿಲ್ಲೆಯ ಗುಡಿಗೇರಿಯಲ್ಲಿ 12, ರೋಣದಲ್ಲಿ 84, ಮತ್ತು ನರಗುಂದದಲ್ಲಿ 220 ಮಹಾಜನರಿದ್ದರು. ಈ ಮಹಾಜನರು ಘನ ಪಂಡಿತರಾಗಿದ್ದರೆಂದು ಹೇಳಲಾಗಿದೆ. ಬಾದಾಮಿಯಲ್ಲಿನ ಮಹಾಜನರು 14 ವಿದ್ಯೆಗಳಲ್ಲಿ ಪಾರಂಗತರಾಗಿದ್ದರು (ನಾಲ್ಕು ವೇದಗಳು, ಆರು ವೇದಾಂಗಗಳು, ತರ್ಕ, ಧರ್ಮಶಾಸ್ತ್ರ, ಪುರಾಣ ಮತ್ತು ಮೀಮಾಂಸೆ, ಇವು 14 ವಿದ್ಯೆಗಳು). ಶಿವಮೊಗ್ಗ ಜಿಲ್ಲೆಯ ಕುಬಟೂರಿನ ಮಹಾಜನರು ನಾಲ್ಕು ವೇದಗಳಷ್ಟೇ ಅಲ್ಲದೆ ನಾಟಕ, ಇತಿಹಾಸ, ಮೀಮಾಂಸೆ, ವಾತ್ಸ್ಯಾಯನ (ಅಂದರೆ ಅವನ ಕಾಮಸೂತ್ರ), ಭರತ (ಅಂದರೆ ನಾಟ್ಯಶಾಸ್ತ್ರ) ಮತ್ತು ಗಣಿತಗಳಲ್ಲಿ ಪರಿಣತಿಯನ್ನು ಪಡೆದಿದ್ದರು, ಎಂದು ವರ್ಣಿಸ ಲಾಗಿದೆ. ಇಂಥ ಅಗ್ರಹಾರಗಳಲ್ಲಿ ನೆಲಸುವಂತೆ ದೇಶದ ನಾನಾ ಕಡೆಗಳಲ್ಲಿದ್ದ ಪಂಡಿತರಿಗೆ ಆಹ್ವಾನ ನೀಡಲಾಗುತ್ತಿತ್ತು. ಅವರಿಗೆ ಭೂಮಿಯನ್ನು ದಾನವಾಗಿ ಕೊಡಲಾಗುತ್ತಿತ್ತು ಮತ್ತು ಅವು ಗಳು ಎಲ್ಲ ತೆರಿಗೆ ಮತ್ತು ಕಂದಾಯಗಳಿಂದ ಮುಕ್ತವಾಗಿದ್ದುವು.

ಪ್ರತಿಯೊಂದು ಅಗ್ರಹಾರದಲ್ಲಿಯೂ ಒಂದು ಪ್ರಾಥಮಿಕ ಶಾಲೆಯಿದ್ದು ಅಲ್ಲಿ ಒಬ್ಬ ಪಂಡಿತನು ಇರುತ್ತಿದ್ದನು. ಅವನು ಮಾಡುತ್ತಿದ್ದ ಅಕ್ಕರಿಗ ವೃತ್ತಿ ಅಥವಾ ಬಾಲಶಿಕ್ಷೆ ಅಥವಾ ಕನ್ನಡ ಶಿಕ್ಷಣಕ್ಕೆ ಪ್ರತಿಫಲವಾಗಿ ಅವನಿಗೆ ಭೂಮಿಯನ್ನು ಕೊಡುಗೆಯಾಗಿ ಬಿಡಲಾಗುತ್ತಿತ್ತು. ಇಲ್ಲವೇ ಸಾಕಷ್ಟು ಹಣ ವನ್ನು ಪುದವಟ್ಟಾಗಿಡಲಾಗುತ್ತಿತ್ತು. ಇಂಥ ಶಿಕ್ಷಕರನ್ನು ಕನ್ನಡ ಪಂಡಿತರೆಂದೋ, ಕನ್ನಡ ಉಪಾಧ್ಯಾಯರೆಂದೋ ಕರೆಯುತ್ತಿ ದ್ದರು. ಧಾರವಾಡ ಜಿಲ್ಲೆಯ ಕೋಟುಮಚಿಗೆ ಎಂಬಲ್ಲಿನ ಒಬ್ಬ ಶಿಕ್ಷಕನಿಗೆ 24 ಮತ್ತರುಗಳಷ್ಟು ಭೂಮಿಯನ್ನು ಅಕ್ಕರಿಗ ವೃತ್ತಿ ಯೆಂದು ಕೊಡಲಾಗಿತ್ತು. (ಒಂದು ಮತ್ತರು ಎಂದರೆ ಸುಮಾರು ಐದು ಎಕರೆ). ಅವನು ಓದು, ಬರಹ, ಗಣಿತವನ್ನು ಕಲಿಸು ವುದಷ್ಟೇ ಅಲ್ಲದೆ ಜ್ಯೋತಿಷ್ಯ, ಛಂದಸ್ಸು, ಮತ್ತು ಅಲಂಕಾರ ಶಾಸ್ತ್ರಗಳನ್ನು ಬೋಧಿಸಬಲ್ಲವನಾಗಿದ್ದನಂತೆ. ತನಗೆ ಭೂಮಿ ಯಿಂದ ಬಂದ ಉತ್ಪತ್ತಿಯಿಂದ ಅವನು ತನ್ನ ವಿದ್ಯಾರ್ಥಿಗಳಿಗೆ ಒಂದು ಹೊತ್ತು ಊಟವನ್ನು ಹಾಕಬೇಕಾಗಿತ್ತು; ಮತ್ತು ವರ್ಷಕ್ಕೊಂದು ಸಾರಿ ಬಟ್ಟೆಗಳನ್ನು ಒದಗಿಸಬೇಕಾಗಿತ್ತು. ತುಮಕೂರು ಜಿಲ್ಲೆಯ ಶೆಟ್ಟಿಕೆರೆಯಲ್ಲಿನ ಪುರಾಣಭಟ್ಟನು (ಪುರಾಣವನ್ನು ಹೇಳುತ್ತಿದ್ದವನು) ಗ್ರಾಮದ ಮಕ್ಕಳಿಗೆ ಓದು ಬರಹ ಮತ್ತು ಗಣಿತಗಳನ್ನು ಕಲಿಸಬೇಕಾಗಿತ್ತು. ಅರಸೀಕೆರೆಯ ಹತ್ತಿರವಿರುವ ನರಸಿಂಹಪುರದಲ್ಲಿ ಹೊಯ್ಸಳ ರಾಜ್ಯದ ಒಬ್ಬ ಅಧಿಕಾರಿಯು ಮಕ್ಕಳಿಗಾಗಿ ಒಂದು ವಿದ್ಯಾರ್ಥಿನಿಲಯವನ್ನು ಕಟ್ಟಿಸಿದ್ದನು. ಆ ಗ್ರಾಮದ ಅಗ್ರಹಾರದ ಒಬ್ಬನನ್ನು ಬಾಲ ಶಿಕ್ಷೆಯನ್ನು ಕಲಿಸಲು ನೇಮಿಸಿದ್ದನು. ಅವನಿಗೆ ವರ್ಷಕ್ಕೆ 12 ಗದ್ಯಾಣಗಳಷ್ಟು ವೇತನ ದೊರೆಯುತ್ತಿತ್ತು. ವಿದ್ಯಾರ್ಥಿ ನಿಲಯದ ಅಡಿಗೆಯವಳಿಗೆ ವರ್ಷಕ್ಕೆ ಮೂರು ಗದ್ಯಾಣಗಳಷ್ಟು ವೇತನ ದೊರೆಯುತ್ತಿತ್ತು. ಮೈಸೂರು ಜಿಲ್ಲೆಯ ಮಾಲಂಗಿ ಯಲ್ಲಿನ ಉಪಾಧ್ಯಾಯನಿಗೆ 1290ರಲ್ಲಿ ವರ್ಷಕ್ಕೆ ಆರು ಗದ್ಯಾಣ ವೇತನ ದೊರೆಯುತ್ತಿತ್ತು. ಅವನು ಮಕ್ಕಳಿಗೆ ನಾಗರಿ, ಕನ್ನಡ ಮತ್ತು ಗ್ರಂಥ ಲಿಪಿ (ತಿಗಳಾರಿ) ಗಳನ್ನು ಕಲಿಸಬೇಕಾಗಿತ್ತು. ಹುಬ್ಬಳ್ಳಿ (ಎಲೆಯ ಪೂರ್ಬಳ್ಳಿ) ಯಲ್ಲಿನ ಮಹಾಜನರೂ ನವಿಲೂರಿನ ಕುರುಬರೂ ಕೂಡಿಕೊಂಡು ಉಣಕಲ್ಲಿನ ದೇವಾಲಯ ವೊಂದರ ಆವರಣದಲ್ಲಿ ಒಂದು ಶಾಲಾ ಕಟ್ಟಡವನ್ನು ನಿರ್ಮಿಸಿ ದ್ದರು.

ದೇವಸ್ಥಾನಕ್ಕೆ ಸೇರಿದಂತೆ ಮಠಗಳಿದ್ದುವು. ಈ ಮಠ ಗಳಲ್ಲಿ ನಿಲ್ಲುವುದಕ್ಕೂ, ಊಟಕ್ಕೂ ಅವಕಾಶವಿತ್ತು, ವಿದ್ಯೆ ಯನ್ನೂ ಕಲಿಸಲಾಗುತ್ತಿತ್ತು. ಈ ಮಠಗಳು ವಿದ್ಯಾ ಕೇಂದ್ರ ಗಳಾಗಿದ್ದು ಬೌದ್ಧರ ವಿಹಾರಗಳ ಅನುಕರಣೆಯಾಗಿದ್ದಿರಬಹುದು. ವಿಹಾರಗಳು ಸಾಮಾನ್ಯವಾಗಿ ಚೈತ್ಯಗಳ (ಪೂಜಾ ಮಂದಿರಗಳ) ಹತ್ತಿರ ಇರುತ್ತಿದ್ದುವು. ಜೈನ ಬಸ್ತಿಗಳೂ ಹೀಗೆಯೇ ಪೂಜಾ ಮಂದಿರಗಳಾಗಿದ್ದುವಲ್ಲದೆ, ಇವುಗಳಲ್ಲಿ ಸಮಣರು ವಾಸಿಸುತ್ತಿದ್ದು ಅಧ್ಯಯನ ಅಧ್ಯಾಪನಗಳನ್ನು ಮಾಡುತ್ತಿದ್ದರು. ಕನ್ನಡ ವಡ್ಡಾರಾಧನೆ ಗ್ರಂಥದಲ್ಲಿ ಗುರುವು ತನ್ನ ಶಿಷ್ಯರನ್ನು ಮನೆ ಯಲ್ಲಿಟ್ಟುಕೊಂಡಿದ್ದ ಪ್ರಸಂಗಗಳು ಬರುತ್ತವೆ. ಆದರೆ ಅಂಥ ಶಿಷ್ಯರು ಭಿಕ್ಷಾಟನೆ ಮಾಡಿ ಆಹಾರವನ್ನು ಪಡೆಯುತ್ತಿದ್ದರು. 'ಹತ್ತನೇಯ ಶತಮಾನದಿಂದೀಚೆಗೆ ಮಠಗಳನ್ನು ದೇವಸ್ಥಾನಗಳಿಗೆ ಹೊಂದಿಸುವ ಅಥವಾ ದೇವಸ್ಥಾನಗಳಿಗೆ ಮಠಗಳನ್ನು ಸೇರಿಸುವ ಪದ್ಧತಿ ಆಚರಣೆಗೆ ಬಂತು', ಎಂದು ಡಾ|| ಜಿ. ಎಸ್. ದೀಕ್ಷಿತರು ಹೇಳುತ್ತಾರೆ. ನಂಜನಗೂಡಿನ ಹತ್ತನೇಯ ಶತಮಾನದ ಒಂದು ಶಾಸನದಲ್ಲಿ ವಿದ್ಯಾದಾನಕ್ಕಾಗಿ ದೇವಸ್ಥಾನಕ್ಕೆ ದತ್ತಿ ಯನ್ನು ಬಿಟ್ಟಿರುವುದು ಕಂಡುಬರುತ್ತದೆ. 1029ರ ಶಾಸನ ಒಂದರಲ್ಲಿ ಚಾಳುಕ್ಯ ಮಹಾರಾಣಿಯೊಬ್ಬಳು ಒಂದು ದೇವಸ್ಥಾನ ದಲ್ಲಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳ ಊಟ ಬಟ್ಟೆ ಮತ್ತು ಔಷಧಿಗಳ ವೆಚ್ಚಕ್ಕಾಗಿ ಆ ದೇವಸ್ಥಾನಕ್ಕೆ ದತ್ತಿ ಬಿಟ್ಟಿದ್ದುದು ಕಂಡುಬರುತ್ತದೆ. ಶಿಕಾರಿಪುರದ ಜಂಬೂರುಮಠದ 1010ರ ಒಂದು ಶಾಸನದಲ್ಲಿ ಅಲ್ಲಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳಿಗೆ 16 ಜೊತೆ ಬಟ್ಟೆಗಳಿಗೆ 16 ಗದ್ಯಾಣಗಳನ್ನೂ, ಉಪ್ಪು ಮತ್ತು ಎಣ್ಣೆಗಳಿಗಾಗಿ 12 ಗದ್ಯಾಣಗಳನ್ನೂ, ಉಪ್ಪಿನ ಕಾಯಿಗೆ ಎರಡು ಗದ್ಯಾಣಗಳನ್ನೂ ದಾನ ಮಾಡಿರುವ ದಾಖಲೆ ಇದೆ. ಲಾಕುಳ ಶೈವರಿಗೆ ಸೇರಿದ್ದ ಬಳ್ಳಿಗಾವೆ (ಬೆಳ್ಗಾವಿ) ಯ ಕೇದಾರೇಶ್ವರ ಮಠದ ಮಠಾಧೀಶರಾಗಿದ್ದ ಕೇದಾರೇಶ್ವರ, ಶ್ರೀಕಂಠಪಂಡಿತ, ಸೋಮೇಶ್ವರಪಂಡಿತ, ವಿದ್ಯಾಭರಣ, ಗೌತಮ ಮತ್ತು ವಾಮಶಕ್ತಿಯವರು 11-13ನೇಯ ಶತಮಾನಗಳಲ್ಲಿದ್ದ ವರು. ತಮ್ಮ ಅತ್ಯುತ್ಕೃಷ್ಟ ಪಾಂಡಿತ್ಯಕ್ಕೆ ಹೆಸರಾಗಿದ್ದರು. ಅಲ್ಲಿ ಬೇರೆ ಶಾಸ್ತ್ರಗಳ ಜೊತೆಗೆ ವೇದಗಳು, ವ್ಯಾಕರಣ, ಷಡ್ದರ್ಶನಗಳು, ಪತಂಜಲಿಯ ಯೋಗಸೂತ್ರ, ಪುರಾಣ, ನಾಟಕ, ಕಾವ್ಯ

ಮುಂತಾದವನ್ನೂ ಹೇಳಿಕೊಡಲಾಗುತ್ತಿತ್ತು. ಬೆಳ್ಗಾವಿಯಲ್ಲಿ ಇಂಥ ಬೇರೆ ಪಂಥಗಳಿಗೆ ಸೇರಿದ ಇನ್ನೂ ನಾಲ್ಕು ಮಠಗಳಿದ್ದುವು. ಆದರೆ ಕೋಡಿಮಠವು ಎಲ್ಲಕ್ಕಿಂತ ಹೆಚ್ಚು ಖ್ಯಾತಿಯನ್ನು ಗಳಿಸಿತ್ತು. ಈ ವಿದ್ಯಾಸಂಸ್ಥೆಗಳಲ್ಲಿ ಬ್ರಾಹ್ಮಣರ ಮಕ್ಕಳೇ ಹೆಚ್ಚಾಗಿರುತ್ತಿದ್ದರು. ರಾಜಮನೆತನದವರೂ ಶ್ರೀಮಂತರೂ ತಮ್ಮ ಹೆಣ್ಣು, ಗಂಡು ಮಕ್ಕಳಿಗೆ ಶಿಕ್ಷಣ ಕೊಡಿಸಲು ಬೇರೆ ಉಪಾಧ್ಯಾಯರನ್ನೇ ನೇಮಿಸಿಕೊಳ್ಳುತ್ತಿದ್ದರು. ಹೆಣ್ಣುಮಕ್ಕಳಿಗೆ ಸಂಗೀತ ಮತ್ತು ನೃತ್ಯಗಳನ್ನು ಕಲಿಸಲಾಗುತ್ತಿತ್ತು. ಸಾಮಾನ್ಯ ಮನೆತನಗಳ ಹೆಣ್ಣುಮಕ್ಕಳಿಗೆ 12ನೇಯ ವರ್ಷವಾಗುವ ಹೊತ್ತಿಗೆ ಮದುವೆಯಾಗಿಬಿಡುತ್ತಿದ್ದುದರಿಂದ ಅವರಿಗೆ ಹೆಚ್ಚು ಕಲಿಯಲು ಅವಕಾಶವೇ ಸಿಕ್ಕುತ್ತಿರಲಿಲ್ಲ. ಆದುದರಿಂದ ಅವರಿಗೆ ಉನ್ನತ ವ್ಯಾಸಂಗದ ಅವಕಾಶವೇ ಇರಲಿಲ್ಲ. ಬ್ರಾಹ್ಮಣೇತರರ ಪೈಕಿ ಜೈನರೂ, ಲಿಂಗಾಯಿತರೂ, ವರ್ತಕರೂ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದರು. ಆದರೆ ಕೃಷಿಕರಾಗಲೀ ಅಥವಾ ಇತರ ಕಸುಬಿನ ಜನಗಳಾಗಲೀ (ವಿಶ್ವಕರ್ಮ ಜಾತಿಯವರನ್ನು ಬಿಟ್ಟು) ಬಹುಕಾಲ ತೆಗೆದುಕೊಳ್ಳುವ ಉನ್ನತ ವ್ಯಾಸಂಗಕ್ಕೆ ಮಕ್ಕಳನ್ನು ಕಳುಹಿಸುತ್ತಿರಲಿಲ್ಲ. ಉದ್ಯೋಗಾವಕಾಶಗಳು ತುಂಬ ಮಿತಿಯಾಗಿರುತ್ತಿದ್ದುದರಿಂದ ಮತ್ತು ಅವರ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲದಿದ್ದುದರಿಂದ ದೂರದ ಊರುಗಳಿಗೆ ತಮ್ಮ ಮಕ್ಕಳನ್ನು ಕಳುಹಿಸಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಅವರಿಗೆ ವಿದ್ಯೆಯ ಮೌಲ್ಯವೂ ಗೊತ್ತಿರಲಿಲ್ಲ; ಜೊತೆಗೆ ವಿದ್ಯೆಯಿಂದ ಯಾವ ತಕ್ಷಣದ ಆರ್ಥಿಕ ಲಾಭವೂ ಅವರಿಗೆ ಕಾಣುತ್ತಿರಲಿಲ್ಲ. ಪಂಡಿತ ವರ್ಗದ ಸಾಂಪ್ರದಾಯಿಕ ಮನೋಧರ್ಮವೂ ಬಹುಶಃ ಕೃಷಿಕರ ಮತ್ತು ಇತರ ಇಂಥ ವೃತ್ತಿಯ ಮಕ್ಕಳ ಉನ್ನತ ವ್ಯಾಸಂಗಕ್ಕೆ ಅಡ್ಡಿಯಾಗಿತ್ತು.

ವೇದಗಳು, ವೇದಾಂಗಗಳು, ವೇದಾಂತ, ಪುರಾಣ, ನ್ಯಾಯ, ಮೀಮಾಂಸೆ, ಆಗಮ, ನಾಟ್ಯಶಾಸ್ತ್ರ, ಕಾಮಸೂತ್ರ, ಜ್ಯೋತಿಷ್ಯ, ವ್ಯಾಕರಣ, ಯೋಗಸೂತ್ರ, ಗಣಿತ, ಭಾಷೆಗಳು, ಧರ್ಮಶಾಸ್ತ್ರ, ಮುಂತಾದವುಗಳನ್ನು ಅಗ್ರಹಾರಗಳಲ್ಲಿ ಬೋಧಿಸುತ್ತಿದ್ದರು. ಕರ್ನಾಟಕದಲ್ಲಿ ಇಂತಹ ನೂರಾರು ಅಗ್ರಹಾರಗಳಿದ್ದುವೆಂದು ಶಾಸನಗಳಿಂದ ತಿಳಿದುಬರುತ್ತದೆ. ಇಂಥ ಅಗ್ರಹಾರಗಳ ಸ್ಥಾಪನೆಯು ವಿಜಯನಗರದ ರಾಜರ ಕಾಲದಲ್ಲಿಯೂ ಆಗುತ್ತಿತ್ತು. ಮುಂದೆ ಕೆಳದಿ ಮತ್ತು ಮೈಸೂರು ಅರಸರ ಕಾಲದಲ್ಲಿಯೂ, ಅಂದರೆ 18ನೇಯ ಶತಮಾನದವರೆಗೆ ಮುಂದುವರೆಯಿತು. ದೇವಸ್ಥಾನ, ಕಲ್ಯಾಣಿಗಳ ನಿರ್ಮಾಣದಂತೆ ಅಗ್ರಹಾರದ ಸ್ಥಾಪನೆಯನ್ನು ಒಂದು ಪುಣ್ಯಕಾರ್ಯವೆಂದು ಬಗೆಯಲಾಗಿತ್ತು. ಉನ್ನತ ವ್ಯಾಸಂಗಕ್ಕೆ ಹತ್ತಿರದ ಮತ್ತು ದೂರದ ಊರುಗಳಿಂದ ಬರುತ್ತಿದ್ದ ವಿದ್ಯಾರ್ಥಿಗಳಿಗೆ ಅನೇಕ ಅಗ್ರಹಾರಗಳು ವಸತಿ ಮತ್ತು ಊಟದ ಸೌಕರ್ಯಗಳನ್ನು ಒದಗಿಸುತ್ತಿದ್ದವು. ಸಾಲೆಪಾವಿಟ್ಟಿಗೆಯ (ಬಿಜಾಪುರ ಜಿಲ್ಲೆಯ ಇಂದಿನ ಸಾಲೊಟಗಿ) ತ್ರಯೀಪುರುಷ ದೇವಸ್ಥಾನದಲ್ಲಿದ್ದ ಶಾಲೆಗೆ ಹೊರದೇಶಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಆ ಪಟ್ಟಣದಲ್ಲಿ 27 ವಿದ್ಯಾರ್ಥಿ ನಿಲಯಗಳಿದ್ದುವು. ಈ ನಿಲಯಗಳಿಗೆ ದೀಪವನ್ನೊದಗಿಸುವುದಕ್ಕೋಸ್ಕರ 12 ನಿವರ್ತನಗಳಷ್ಟು ಭೂಮಿಯನ್ನು ದಾನಮಾಡಲಾಗಿತ್ತು. ಇಲ್ಲಿಯ ಅಗ್ರಹಾರದ ಮಹಾಜನರು ಶಾಲೆಯ ವಿಷಯದಲ್ಲಿ ತುಂಬ ಆಸಕ್ತಿಯನ್ನು ವಹಿಸಿದ್ದರು. ವಿದ್ಯಾರ್ಥಿನಿಲಯಗಳನ್ನು ನಡೆಸಲು (500 ನಿವರ್ತನಗಳಷ್ಟು ಭೂಮಿಯು ದಾನವಾಗಿ ಕೊಡಲ್ಪಟ್ಟಿದ್ದರೂ ಕೂಡ) ಅವರು ತಮ್ಮ ಮನೆಯ ಮದುವೆಯ ಸಮಯದಲ್ಲಿ ಐದು ಚಿನ್ನದ ನಾಣ್ಯಗಳನ್ನೂ, ಉಪನಯನದ ಸಮಯದಲ್ಲಿ ಎರಡೂವರೆ ನಾಣ್ಯಗಳನ್ನೂ, ಚೌಲದ ಸಮಯದಲ್ಲಿ ಒಂದೂಕಾಲು ನಾಣ್ಯವನ್ನೂ ಈ ಕಾರ್ಯಕ್ಕಾಗಿ ಇಟ್ಟ ನಿಧಿಗೆ ದಾನವಾಗಿ ಕೊಡುತ್ತಿದ್ದರು. ಶ್ರಾದ್ಧ, ವಿವಾಹ ಮತ್ತು ಹಬ್ಬ ಹರಿದಿನಗಳಲ್ಲಿ ಅಗ್ರಹಾರದ ಮಹಾಜನರು ವಿದ್ಯಾರ್ಥಿಗಳನ್ನು ಸಹಭೋಜನಕ್ಕೆ ಕರೆಯುತ್ತಿದ್ದರು. ಹತ್ತನೇಯ ಶತಮಾನದ ದಾಖಲೆಯಲ್ಲಿ ಈ ವಿವರಗಳೆಲ್ಲಾ ದೊರೆಯುತ್ತವೆ.

ಘಟಿಕಾಸ್ಥಾನಗಳು ಪ್ರಾಯಶಃ ವಿದ್ವಾಂಸರ ವಿದ್ವತ್ತನ್ನು ಪರೀಕ್ಷಿಸುವ ಕೇಂದ್ರಗಳಾಗಿದ್ದು, ವಿದ್ವಾಂಸನು ಒಂದು ಕ್ಲುಪ್ತ ಅವಧಿಯೊಳಗೆ ವಿದ್ವಾಂಸರ ಗೋಷ್ಠಿಯು ಹಾಕುತ್ತಿದ್ದ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗಿತ್ತು. ಕರ್ನಾಟಕದ ನಾಗಾಯಿ (ಕಲ್ಬುರ್ಗಿ ಜಿಲ್ಲೆ), ಕಾಡಿಯೂರು ಮತ್ತು ಹೊಟ್ಟೂರು (ಧಾರವಾಡ ಜಿಲ್ಲೆ), ಕುಕನೂರು (ರಾಯಚೂರು ಜಿಲ್ಲೆ) ಹೂವಿನಬಾಗೆ, ಮೋರಿಂಗೆರೆ ತುಂಬ ಪ್ರಮುಖವಾದ ಘಟಿಕಾಸ್ಥಾನಗಳಾಗಿದ್ದುವು. ಇಂಥ ಕಡೆ ಘಟಿಕಾಯಂತ್ರಗಳನ್ನು ಇಡಲಾಗಿತ್ತು. ಪರೀಕ್ಷೆಯಲ್ಲಿ ಯಶಸ್ವಿಯಾದವನಿಗೆ ಘಟಿಕಾ ಸಾಹಸಿ (ಅಥವಾ ಘೈಸಾಸ) ಎಂಬ ಪ್ರಶಸ್ತಿ ದೊರಕುತ್ತಿತ್ತು.

ಭಾರತದಲ್ಲಿಯ ಇತರ ಭಾಗಗಳಂತೆ ಈ ಅಗ್ರಹಾರಗಳು ಕರ್ನಾಟಕದಲ್ಲಿ ಸಾಂಪ್ರದಾಯಿಕವಾಗಿ ಬಂದ ವಿದ್ವತ್ತನ್ನು ಕಾಪಾಡಿಕೊಂಡು ಬಂದುವು. ಜೈನರ ಬಸ್ತಿಗಳೂ ಈ ಸಂಪ್ರದಾಯವನ್ನು ಮುಂದುವರಿಸಿದುವು. ಮುಸಲ್ಮಾನರ ಕಾಲದಲ್ಲಿಯೂ, ಅಗ್ರಹಾರಗಳು ಯಾವ ತೊಂದರೆಯನ್ನೂ ಅನುಭವಿಸದೆ ಮುಂದುವರೆದವು. ಆದರೆ ಟಿಪ್ಪುವಿನ ಕಾಲದಲ್ಲಿ ಕೆಲವು ಅಗ್ರಹಾರಗಳು ತೊಂದರೆಗೊಳಗಾದವು. ಈಗ ಮಂಡ್ಯ ಜಿಲ್ಲೆಯ ಅರ್ಜುನಪುರಿಯ (ಈಗಿನ ಮದ್ದೂರು) ಮಹಾಜನರಿಗೆ ಸೇರಿದ್ದ ಭೂಮಿಯನ್ನು ಅವರಿಂದ ಕಿತ್ತುಕೊಳ್ಳಲಾಯಿತು. ಬಿದರೆಯಲ್ಲಿ ಮಹಮೂದ್ ಗಾವಾನನು ಒಂದು ಮದ್ರಸಾವನ್ನು ಸ್ಥಾಪಿಸಿದನು. ಅದಕ್ಕೆ ಸೇರಿದಂತೆ ಒಂದು ಮಸೀದಿಯೂ, ಒಂದು ಗ್ರಂಥ ಭಂಡಾರವು ಇದ್ದುವು. ಪ್ರಾಧ್ಯಾಪಕರು ಮತ್ತು ಸ್ನಾತಕರಿಗೆ ವಸತಿಗೃಹಗಳೂ ಇದ್ದವು. ಈ ಕಟ್ಟಡವು ಇಂದೂ ಅಸ್ತಿತ್ವದಲ್ಲಿದೆ. 1623ರಲ್ಲಿ ಕರ್ನಾಟಕಕ್ಕೆ ಬಂದಿದ್ದ ಪೀಟ್ರೊ

ದೆಲ್ಲ ವಲ್ಲೆಯು ಮಾಡಿರುವ ಶಿವಮೊಗ್ಗ ಜಿಲ್ಲೆಯ ದೇವಸ್ಥಾನ ದೊಳಗಿನ ಶಾಲೆಯ ವರ್ಣನೆಯು ಸ್ವಾರಸ್ಯವಾಗಿದೆ. ಒಬ್ಬ ಬಾಲಕನು ರಾಗವಾಗಿ ಮಗ್ಗಿಯ ಒಂದು ಭಾಗವನ್ನು ಹೇಳುತ್ತಿದ್ದನು. ಆಮೇಲೆ 'ಒಂದೊಂದಲಿ ಒಂದು' ಇತ್ಯಾದಿ ಹೇಳಿದ ಭಾಗವನ್ನು ಬರೆಯುತ್ತಿದ್ದನು. ಇತರ ಮಕ್ಕಳು ಅವನು ಹೇಳಿದುದನ್ನು ಅದೇ ರೀತಿ ರಾಗವಾಗಿ ಪುನರುಚ್ಚರಿಸುತ್ತಿದ್ದರು. ಹೀಗೆ ಇಡೀ ತರಗತಿಗೆ ಮಗ್ಗಿ ಪಾಠವಾಗುತ್ತಿತ್ತು. ಮಕ್ಕಳು ಅದನ್ನು ಹೇಳಿಕೊಂಡು ತಮ್ಮ ಮುಂದೆ ಹರಡಲಾಗಿದ್ದ ಮರಳಿನ ಮೇಲೆ ಬೆರಳಿನಿಂದ ಬರೆಯುತ್ತಿದ್ದರು. ಶೃಂಗೇರಿ, ಉಡುಪಿ, ಗೋಕರ್ಣ, ಮೇಲ್ಕೋಟೆ, ಮುಂತಾದ ಧಾರ್ಮಿಕ ಕೇಂದ್ರಗಳೂ ನೂರಾರು ವೀರಶೈವ ಮಠಗಳೂ ಅನೇಕ ಶತಮಾನಗಳ ಕಾಲ ಸಾಂಪ್ರದಾಯಿಕ ವಿದ್ವತ್ತನ್ನು ಪೋಷಿಸುತ್ತಾ ಬಂದವು.

ಮುಸಲ್ಮಾನರ ಆಳ್ವಿಕೆಯಲ್ಲಿ ಎಲ್ಲ ಕಡೆಗಳಲ್ಲೂ ಒಂದೇ ರೀತಿಯ ಇಸ್ಲಾಂ ಶಿಕ್ಷಣವು ಆಚರಣೆಗೆ ಬಂತು. ಮಸೀದಿಯು (ಅದರಲ್ಲಿಯೂ ನಗರಗಳಲ್ಲಿ) ಶಿಕ್ಷಣ ಮತ್ತು ಸಾಹಿತ್ಯ ಚಟುವಟಿಕೆಗಳ ಕೇಂದ್ರವಾಗಿತ್ತು. ಮಕ್ತಬಾಗಳು ಮತ್ತು ಮದ್ರಸಾಗಳು ಎರಡು ಸ್ತರದ ಇಸ್ಲಾಂ ಶಿಕ್ಷಣದ ಸಂಸ್ಥೆಗಳಾಗಿದ್ದುವು. ಮಕ್ತಬಾಗಳಲ್ಲಿ ಶಿಕ್ಷಣ ಮಟ್ಟವು ಪ್ರಾಥಮಿಕ ಹಂತದ್ದಾಗಿದ್ದು, ಮದ್ರಸಾಗಳಲ್ಲಿ ಪ್ರೌಢ ಅಥವಾ ಇನ್ನೂ ಹೆಚ್ಚಿನ ಮಟ್ಟದ್ದಾಗಿದ್ದಿತು. ಮಕ್ತಬಾಗಳಲ್ಲಿ ಮುಸಲ್ಮಾನರು ತಮ್ಮ ದೈನಂದಿನ ಧಾರ್ಮಿಕ ಕರ್ಮಗಳನ್ನು ಆಚರಿಸಲು ಸಹಾಯಕವಾಗುವಂತೆ ಕುರ್‌ಆನನ್ನು ಕಂಠಪಾಠ ಮಾಡಿಸಲಾಗುತ್ತಿತ್ತು. ಕೆಲವೊಮ್ಮೆ ಪಾಠ ಪಟ್ಟಿಯಲ್ಲಿ ಓದು, ಬರಹ, ಸರಳ ಗಣಿತಗಳು ಇರುತ್ತಿದ್ದುವು. ಮದ್ರಸಾಗಳಲ್ಲಿನ ಪಠ್ಯವಸ್ತು ಒಂದೇ ರೀತಿಯದಾಗಿರಲಿಲ್ಲ. ಆದರೆ ಸಾಮಾನ್ಯವಾಗಿ ಅವುಗಳಲ್ಲಿ ಮತ, ಧರ್ಮಶಾಸ್ತ್ರ, ರಾಜ್ಯಶಾಸ್ತ್ರ, ದರ್ಶನಶಾಸ್ತ್ರ ಮತ್ತು ನೀತಿಶಾಸ್ತ್ರಗಳನ್ನು ಹೇಳಿಕೊಡಲಾಗುತ್ತಿತ್ತು. ಮುಸಲ್ಮಾನ್ ಶಿಕ್ಷಣದ ಉದ್ದೇಶಗಳಿಗೆ ತಕ್ಕಂತೆ ಶಿಕ್ಷಣದಲ್ಲಿ ಧಾರ್ಮಿಕ ಅಂಶಗಳನ್ನು ಬಳಸಲಾಗುತ್ತಿತ್ತು. ಮೈಸೂರಿನಲ್ಲಿ, ಮುಸಲ್ಮಾನ್ ಆಡಳಿತ ಪ್ರಬಲವಾಗಿದ್ದಾಗ (1761-1799), ಅದರಲ್ಲಿಯೂ ಟಿಪ್ಪುಸುಲ್ತಾನನ ಕಾಲದಲ್ಲಿ ಮುಸಲ್ಮಾನರ ಶಿಕ್ಷಣಕ್ಕೆ ಸಾಕಷ್ಟು ಪ್ರೋತ್ಸಾಹ ಸಿಕ್ಕಿತು. ಮುಂದೆ ಸರ್ಕಾರವು ಎಲ್ಲರಿಗೂ ಹೊಂದುವಂಥ ವ್ಯವಸ್ಥಿತ ಶಿಕ್ಷಣ ಪದ್ಧತಿಯನ್ನು ರೂಪಿಸಿದ ಕಾಲದಲ್ಲಿ ಪ್ರತ್ಯೇಕವಾದ ಉರ್ದು ಶಾಲೆಗಳು ಸ್ಥಾಪಿತವಾಗಿ ಸರ್ಕಾರವು ಅವನ್ನು ನಡೆಸುತ್ತಿತ್ತು. ಮುಸಲ್ಮಾನ ವಿದ್ಯಾರ್ಥಿಗಳಿಗೆಲ್ಲಾ ಏಕರೂಪದ ಶುಲ್ಕರಿಯಾಯಿತಿ ಕೊಡಲ್ಪಟ್ಟಿತು.

## ಆಧುನಿಕ ಶಿಕ್ಷಣದ ಪ್ರಾರಂಭ

**ಮೈಸೂರು ಪ್ರದೇಶ :** 1833ರಲ್ಲಿ ಅಂದಿನ ಮೈಸೂರು ರಾಜರು ಮೈಸೂರು ನಗರದಲ್ಲಿ ಒಂದು ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿದರು. ಅಲ್ಲಿ ಶಿಕ್ಷಣ ಉಚಿತವಾಗಿತ್ತು. ಸರ್ ಚಾರ್ಲ್ಸ್ ವುಡ್‌ನ ವರದಿಯ ಫಲವಾಗಿ, ಭಾರತದ ಇತರ ಭಾಗಗಳಂತೆ ಇಲ್ಲಿಯೂ ಆಧುನಿಕ ಶಿಕ್ಷಣವೂ ವ್ಯವಸ್ಥಿತವಾಗಿ 1854ರಲ್ಲಿ ಆರಂಭವಾಯಿತು. ಆ ವರದಿಯ ಆಧಾರದ ಮೇಲೆ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರು ಆಧುನಿಕ ಶಿಕ್ಷಣವನ್ನು ರೂಪಿಸಿದ್ದರು. (ಈ ಗ್ಯಾಸೆಟಿಯರ್‌ನ ಒಂದನೇಯ ಭಾಗದಲ್ಲಿ 'ನವೋದಯ ಮತ್ತು ರಾಷ್ಟ್ರೀಯತೆಯ ಉದಯ' ಎಂಬ ಭಾಗದಲ್ಲಿ ಕ್ರೈಸ್ತಪಾದ್ರಿಗಳಿಂದಾದ ಸೇವೆಯನ್ನು ತಿಳಿಸಲಾಗಿದೆ. ಪು. 282 ರಿಂದ ನೋಡಿ). ಮೈಸೂರು ಮತ್ತು ಕೊಡಗುಗಳೆರಡಕ್ಕೂ ಸಾಮಾನ್ಯವಾದ ಒಂದು ಶಿಕ್ಷಣ ಯೋಜನೆಯನ್ನು ದೆವೆರೊ (Devereaux) ಎಂಬುವನು ಸಿದ್ಧಪಡಿಸಿದನು. ಕಮೀಷನರ್‌ರ ಅಧೀನದಲ್ಲಿ ಅವರ ನೇರ ನೇತೃತ್ವದಲ್ಲಿ ಒಂದು ಇಲಾಖೆ ಇರಬೇಕೆಂದೂ, ಅದರ ಮುಖ್ಯಸ್ಥರಾಗಿ ಶಿಕ್ಷಣ ನಿರ್ದೇಶಕರು ಇರತಕ್ಕದ್ದೆಂದೂ ಅವರಿಗೆ ಸಹಾಯಕ ಸಿಬ್ಬಂದಿಯು ಇರತಕ್ಕದ್ದೆಂದೂ ಆ ಯೋಜನೆಯಲ್ಲಿ ಹೇಳಿತ್ತು. ಆರಂಭಿಸಬೇಕಾದ ಶಾಲೆಗಳ ಸಂಖ್ಯೆ ಮತ್ತು ಅದಕ್ಕೆ ಬೇಕಾದ ಹಣವನ್ನು ಆ ಯೋಜನೆಯಲ್ಲಿ ತಿಳಿಸಿತ್ತು. ಮುಂದಿನ ಮುಖ್ಯ ಹೆಜ್ಜೆ ಎಂದರೆ ಹೋಬಳಿ ಶಿಕ್ಷಣ ಪದ್ಧತಿಯನ್ನು ಆಚರಣೆಗೆ ತಂದದ್ದು. ಪ್ರತಿಯೊಂದು ಹೋಬಳಿಯಲ್ಲೂ ಒಂದೊಂದು ಶಾಲೆಯನ್ನು ಆರಂಭಿಸಬೇಕೆಂದು ಆ ಯೋಜನೆಯಲ್ಲಿ ನಿರೂಪಿಸಲಾಗಿತ್ತು. ಆಗ 645 ಹೋಬಳಿಗಳಿದ್ದುವೆಂದು ಅಂದಾಜು ಮಾಡಲಾಗಿತ್ತು.

ವೆಸ್ಲಿಯನ್ ಮಿಷನ್‌ನಿಂದ ಮೊದಲನೇಯ ಮಿಷನ್ ಶಾಲೆ ಆರಂಭವಾಯಿತು. ಇದಕ್ಕೆ ಸರ್ಕಾರದಿಂದ ಉದಾರವಾದ ಅನುದಾನವು ದೊರೆಯುತ್ತಿತ್ತು. ಇದು ಕೇಂದ್ರ ಸಂಸ್ಥೆಯಾಗಬೇಕೆಂಬ ನಿರೀಕ್ಷೆಯಿತ್ತು. ಆದರೆ ಮೇಲೆ ತಿಳಿಸಿದ ಯೋಜನೆಯು ಮಂಜೂರಾದ ಮೇಲೆ ಆ ಮಿಷನ್ ಶಾಲೆಯು ಕೇಂದ್ರ ಸಂಸ್ಥೆಯಾಗಿ ಉಳಿಯಲಿಲ್ಲ. (ಯೋಜನೆಯಲ್ಲಿ ಒಂದು ಕೇಂದ್ರ ಕಾಲೇಜೂ ನಾಲ್ಕು 'ಆ್ಯಂಗ್ಲೋ-ವರ್ನಾಕ್ಯುಲರ್' ಶಾಲೆಗಳೂ ಸ್ಥಾಪಿತವಾಗಬೇಕೆಂದು ವಿಧಿತವಾಗಿತ್ತು). 1858ರಲ್ಲಿ ಬೆಂಗಳೂರಿನಲ್ಲಿ ಒಂದು ಸರ್ಕಾರಿ ಪ್ರೌಢಶಾಲೆಯು ಆರಂಭವಾಯಿತು. ಇದು ಮದ್ರಾಸು ವಿಶ್ವವಿದ್ಯಾನಿಲಯದ ಅಂಗೀಕೃತ ಸಂಸ್ಥೆಯಾಗಿತ್ತು. ತುಮಕೂರು, ಶಿವಮೊಗ್ಗ, ಹಾಸನದಲ್ಲಿದ್ದ ಪ್ರೌಢಶಾಲೆಗಳನ್ನೂ, ಮೈಸೂರಿನ ಮಹಾರಾಜ ಪ್ರೌಢಶಾಲೆಯನ್ನೂ ಸರ್ಕಾರದ ಅಧೀನಕ್ಕೆ ತೆಗೆದುಕೊಳ್ಳಲಾಯಿತು. ಇವು ವಿಭಾಗೀಯ ಶಾಲೆಗಳಾದುವು. ರಾಜ ಮನೆತನದ ವಶಕ್ಕೆ ರಾಜ್ಯದ ಆಡಳಿತವು ಬಂದಮೇಲೆ ಶಿಕ್ಷಣಕ್ಕೆ ತುಂಬ ಪ್ರೋತ್ಸಾಹ ದೊರಕಿತು. ಅಲ್ಲಿಂದೀಚೆಗೆ ಶಿಕ್ಷಣವು ಎಲ್ಲ ದೆಸೆಗಳಲ್ಲೂ ಪ್ರಗತಿ ಹೊಂದುತ್ತಿದೆ.

1911-1916ರ ಅವಧಿಯಲ್ಲಿ ಶಿಕ್ಷಣದ ಇತಿಹಾಸದಲ್ಲಿ ಮತ್ತೊಂದು ಮಹತ್ತರವಾದ ಕಾಲ. ಆ ಕಾಲದಲ್ಲಿ ಅನೇಕ

ನೂತನ ವಿಚಾರಗಳನ್ನು ಶಿಕ್ಷಣ ಪದ್ಧತಿಯಲ್ಲಿ ಆಳವಡಿಸಲಾಯಿತು. ಕಡ್ಡಾಯ ಪ್ರಾಥಮಿಕ ಶಿಕ್ಷಣ ಪದ್ಧತಿಯನ್ನು ಕೆಲವು ಕೇಂದ್ರಗಳಲ್ಲಿ ಜಾರಿಗೆ ತರಲಾಯಿತು. ರಾಜ್ಯದಲ್ಲಿ "ಸೆಕೆಂಡರಿ ಸ್ಕೂಲ್ ಲೀವಿಂಗ್ ಸರ್ಟಿಫಿಕೇಟ್ ಯೋಜನೆ"ಯು ಆಚರಣೆಗೆ ಬಂದಿತು.

ಮೈಸೂರು ಪ್ರಾಥಮಿಕ ಶಿಕ್ಷಣ ನಿಯಮಕ್ಕೆ ಅನುಗುಣವಾಗಿ, 1931ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಸ್ಥಳೀಯ ಸಂಸ್ಥೆಗಳಿಗೆ—ಅಂದರೆ ಜಿಲ್ಲಾ ಬೋರ್ಡುಗಳಿಗೆ ಮತ್ತು ನಗರಸಭೆಗಳಿಗೆ ವಹಿಸಿಕೊಡಲಾಯಿತು. ಈ ವರ್ಗಾವಣೆಯಾದ ಮೇಲೆ ಶಾಲೆಗಳ ಸಂಖ್ಯೆ ಬೆಳೆಯಲಿಲ್ಲ, ದಕ್ಷತೆ ಉತ್ತಮಗೊಳ್ಳಲಿಲ್ಲ. ಆದುದರಿಂದ 1941ರಲ್ಲಿ ಸರ್ಕಾರ ಪ್ರಾಥಮಿಕ ಶಿಕ್ಷಣವನ್ನು ಮತ್ತೆ ತನ್ನ ಅಧೀನಕ್ಕೆ ತೆಗೆದುಕೊಂಡಿತು. ಈ ಕೆಳಗಿನ* ಪಟ್ಟಿಯಲ್ಲಿ 1867-68ರಿಂದ 1955-56ರವರೆಗೆ ಇದ್ದ ಶಾಲೆಗಳ ಸಂಖ್ಯೆ ಮತ್ತು ವಿದ್ಯಾರ್ಥಿಗಳ ಸಂಖ್ಯೆಯನ್ನು ಕೊಡಲಾಗಿದೆ.

ಬೆಳಗಾವಿ ಪ್ರದೇಶ: ಬೆಳಗಾವಿ ಪ್ರದೇಶದಲ್ಲಿ ಆಧುನಿಕ ವಿದ್ಯಾಭ್ಯಾಸ ಕ್ರಮವು 1826ರಲ್ಲಿ ಆರಂಭವಾಯಿತು. ಆಗ ಮುಂಬೈಯಲ್ಲಿದ್ದ "ಬಾಂಬೆ ನೇಟಿವ್ ಸ್ಕೂಲ್ ಆ್ಯಂಡ್ ಸ್ಕೂಲ್ ಬುಕ್ ಸೊಸೈಟಿ" ಎಂಬ ಸಂಸ್ಥೆಯು ಹುಬ್ಬಳ್ಳಿ ಮತ್ತು ಧಾರವಾಡಗಳಲ್ಲಿ ಎರಡು ಮರಾಠಿ "ವರ್ನ್ಯಾಕ್ಯುಲರ್" ಶಾಲೆಗಳನ್ನು ಆರಂಭಿಸಿತು. 1826ಕ್ಕೆ ಹಿಂದೆ, ದೇಶೀಯ ಪದ್ಧತಿಯ ಶಾಲೆಗಳು ಈ ಭಾಗದಲ್ಲಿದ್ದುವು. 1825ರ ಒಂದು ವರದಿಯಂತೆ ಅಂಥ ಶಾಲೆಗಳ ಸಂಖ್ಯೆ 270 ಇದ್ದು ಅವುಗಳಲ್ಲಿ 291 ಉಪಾಧ್ಯಾಯರೂ ಮತ್ತು 3,928 ವಿದ್ಯಾರ್ಥಿಗಳೂ ಇದ್ದರು. 1836ರಲ್ಲಿ ಬೆಳಗಾವಿ ಮತ್ತು ಧಾರವಾಡ ಕಲೆಕ್ಟರೇಟುಗಳಲ್ಲಿ ಕನ್ನಡವು ಅಧಿಕೃತ ಭಾಷೆಯಾಯಿತು. ಅಲ್ಲಿಂದೀಚೆಗೆ ಮಾತ್ರವೇ ಕನ್ನಡ ಶಾಲೆಗಳು ಅಲ್ಲಿ ಆರಂಭವಾದುವು. 1840ರಲ್ಲಿ ಶಿಕ್ಷಣ ಮಂಡಲಿಯೊಂದನ್ನು ಸರ್ಕಾರವು ರಚಿಸಿತು. 1855ರವರೆಗೆ ಇದು ಅಸ್ತಿತ್ವದಲ್ಲಿದ್ದು ಆನಂತರ ಅದರ ಕಾರ್ಯವು ಶಿಕ್ಷಣ ಇಲಾಖೆಗೆ ವರ್ಗಾವಣೆಯಾಯಿತು. ಶಿಕ್ಷಣ ಮಂಡಲಿಯು ಅಸ್ತಿತ್ವದಲ್ಲಿದ್ದ 15 ವರ್ಷಗಳ ಅಲ್ಪ ಕಾಲದಲ್ಲಿಯೇ ಧಾರವಾಡದಲ್ಲಿ ಒಂದು ಇಂಗ್ಲಿಷ್ ಶಾಲೆಯನ್ನೂ ಧಾರವಾಡ, ಬೆಳಗಾವಿ ಕಲೆಕ್ಟರೇಟುಗಳ ಪ್ರದೇಶದಲ್ಲಿ ಮತ್ತು ಸೊಲ್ಲಾಪುರದ ಕನ್ನಡ ಭಾಗಗಳಲ್ಲಿ "ವರ್ನ್ಯಾಕ್ಯುಲರ್ ಸ್ಕೂಲ್" ಎಂಬ 34 ಕನ್ನಡ ಶಾಲೆಗಳನ್ನು ಸ್ಥಾಪಿಸಿತು; ಕನ್ನಡದಲ್ಲಿ ಕೆಲವು ಪುಸ್ತಕಗಳನ್ನು ಸಿದ್ಧಗೊಳಿಸಿ ಪ್ರಕಟಿಸಿತು; ಕನ್ನಡ ಶಿಕ್ಷಕರನ್ನು ನೇಮಿಸಲು ಪ್ರಯತ್ನಿಸಿತು. ಬೆಳಗಾವಿಯಲ್ಲಿ ಒಂದು ಗ್ರಂಥಾಲಯವನ್ನೂ ಮತ್ತು ಧಾರವಾಡದಲ್ಲಿ ಒಂದು ವಾಚನಾಲಯವನ್ನೂ ಸ್ಥಾಪಿಸಿತು. 1854ರಲ್ಲಿ ಸ್ಥಳದ ಜನರು ಶಿಕ್ಷಣಕ್ಕಾಗುವ ವೆಚ್ಚದ ಸ್ವಲ್ಪ ಭಾಗವನ್ನು ವಹಿಸಿಕೊಳ್ಳುವಂಥ ಒಂದು ಯೋಜನೆಯನ್ನು ತಯಾರಿಸಲಾಯಿತು. ಈ ಯೋಜನೆ ಯಶಸ್ವಿಯಾಯಿತು. 1855ರಲ್ಲಿ ಶಿಕ್ಷಣ ಮಂಡಲಿಯು ರದ್ದಾದ ಮೇಲೆ ಯೋಜನೆಯು ಮುಂದುವರಿಯಲಿಲ್ಲ. ಇದರಿಂದ ಆ ಭಾಗದಲ್ಲಿ

*

| ವರ್ಷ | ಪ್ರಾಥಮಿಕ ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | | ಒಟ್ಟು |
|---|---|---|---|---|
| | | ಬಾಲಕರು | ಬಾಲಕಿಯರು | |
| 1867-68 | 81 | — | — | 4,471 |
| 1870-71 | 502 | — | — | 17,393 |
| 1880-81 | 907 | 35,219 | 3,077 | 38,296 |
| 1890-91 | 1,306 | 40,261 | 6,832 | 47,093 |
| 1900-01 | 1,946 | 52,118 | 13,375 | 65,493 |
| 1910-11 | 2,077 | 60,168 | 14,636 | 74,804 |
| 1920-21 | 8,800 | 1,83,108 | 38,866 | 2,21,974 |
| 1930-31 | 6,395 | 2,22,816 | 31,443 | 2,54,259 |
| 1940-41 | 6,505 | 2,39,163 | 35,291 | 2,74,454 |
| 1950-51 | 10,184 | 4,21,558 | 2,13,648 | 6,35,206 |
| 1955-56 | 12,553 | 5,66,705 | 2,93,360 | 8,60,065 |

"ವರ್ನ್ಯಾಕ್ಯುಲರ್ ಸ್ಕೂಲು"ಗಳು ಆರಂಭವಾಗಲು ಅಡಚಣೆಯಾಯಿತು. 1854-55ರಲ್ಲಿ ಪ್ರಾಂತದ ಕನ್ನಡ ಭಾಗದಲ್ಲಿ 34 ಕನ್ನಡ ಶಾಲೆಗಳಿದ್ದುವು. 1848ರಲ್ಲಿ ಧಾರವಾಡದಲ್ಲಿ ಇಂಗ್ಲಿಷ್ ಶಾಲೆ ಆರಂಭವಾದ ಎರಡು ವರ್ಷಗಳಲ್ಲಿಯೇ-ಅಂದರೆ 1850ರಲ್ಲಿ—ಬೆಳಗಾವಿಯಲ್ಲಿ ಸರ್ದಾರ್ ಇಂಗ್ಲಿಷ್ ಸ್ಕೂಲ್ ಆರಂಭವಾಯಿತು. ಲಂಡನ್ ಮಿಷನರಿ ಸೊಸೈಟಿಯು 1835ರಲ್ಲಿ ಕನ್ನಡ ಪ್ರದೇಶವನ್ನೂ ಪ್ರವೇಶಿಸಿ ಬೆಳಗಾವಿಯಲ್ಲಿ ಏಳು ಬಾಲಕರ ಶಾಲೆಗಳನ್ನೂ ಆರು ಹೆಣ್ಣು ಮಕ್ಕಳ ಶಾಲೆಗಳನ್ನೂ ಪ್ರಾರಂಭಿಸಿತು. ಬಾಲಕರ ಶಾಲೆಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 221. ಧಾರವಾಡ, ಗದಗು, ಗುಳೇದಗುಡ್ಡ, ಹುಬ್ಬಳ್ಳಿ ಮುಂತಾದ ಸ್ಥಳಗಳಲ್ಲಿ ಬಾಸೆಲ್ ಮಿಷನ್ ಸಂಸ್ಥೆಯು ಶಾಲೆಗಳನ್ನು ಸ್ಥಾಪಿಸಿತು. 1855–1882ರ ಅವಧಿಯು ಮುಂಬೈ ಪ್ರಾಂತದ ಕನ್ನಡ ಭಾಗದಲ್ಲಿನ ಆಧುನಿಕ ಶಿಕ್ಷಣ ಪದ್ಧತಿಯ ಇತಿಹಾಸದಲ್ಲಿ ಸ್ಮರಣೀಯವಾದುದು. ಅದು "ಕನ್ನಡ ಪುನರುಜ್ಜೀವನದ ಕಾಲ". 1881–82ರ ಹೊತ್ತಿಗೆ ಶಿಕ್ಷಣದಲ್ಲಿ ಸಾಕಷ್ಟು ಪ್ರಗತಿಯಾಯಿತು. ಕನ್ನಡದಲ್ಲಿ ಪಠ್ಯಪುಸ್ತಕಗಳೆಲ್ಲಾ ಸಿದ್ಧವಾದುವು. ಧಾರವಾಡದಲ್ಲಿ ಕನ್ನಡ ಭಾಷಾಂತರ ಕಛೇರಿಯು ಆರಂಭವಾಯಿತು. ಹಳಗನ್ನಡ ಸಾಹಿತ್ಯವನ್ನು ಪರಿಶೀಲಿಸಲು ಒಂದು ಸಮಿತಿಯು ರಚಿತವಾಯಿತು. ಡೆಪ್ಯುಟಿ ಚನ್ನಬಸಪ್ಪ, ವೆಂಕಟ ರಂಗೋ ಕಟ್ಟಿ, ಭುಜಂಗರಾವ್ ಹುಯಿಲುಗೋಳ, ಎಸ್. ಕೆ. ರೊದ್ದ, ಆರ್. ಎ. ಸವಣೂರ್, ಡಬ್ಲ್ಯು. ಎ. ರಸೆಲ್, ಎಸ್. ವಿ. ಪಟವರ್ಧನ್ ಮುಂತಾದ ಅಧಿಕಾರಿಗಳು ಕನ್ನಡ ಶಾಲೆಗಳ ಅಭಿವೃದ್ಧಿಗಾಗಿ ತುಂಬ ಶ್ರಮಿಸಿದರು. ಸತಾರಾ ಮತ್ತು ಸೊಲ್ಲಾಪುರದ ಕಲೆಕ್ಟರೇಟುಗಳಲ್ಲಿದ್ದ ಕನ್ನಡ ಪ್ರದೇಶಗಳನ್ನು 1861ರಲ್ಲಿ ಒಂದು ಹೊಸ ಕಲೆಕ್ಟರೇಟ್‌ನ ಅಧೀನಕ್ಕೆ ತರಲಾಯಿತು. ಈ ಹೊಸ ಕಲೆಕ್ಟರ್‌ನ ಕೇಂದ್ರವು ಕಲಾದಗಿಯಾಗಿತ್ತು. 1863ರಲ್ಲಿ ಕನ್ನಡ ಪ್ರದೇಶಗಳನ್ನೆಲ್ಲಾ ಒಟ್ಟುಗೂಡಿಸಿ ಶುದ್ಧ ಕನ್ನಡ ವಿಭಾಗವಾದ ದಕ್ಷಿಣ ವಿಭಾಗ (ಡಿವಿಜನ್) ವನ್ನು ರಚಿಸಲಾಯಿತು. ಶಿಕ್ಷಣ ಕ್ಷೇತ್ರದಲ್ಲಿ ಕನ್ನಡದ ಪ್ರಗತಿಯಾಗಲು ಇದು ಸ್ಫೂರ್ತಿ ಕೊಟ್ಟಿತು. 1863ರಲ್ಲಿ ಸ್ಥಳೀಯ ವಿಷಯಗಳಾದ ಸಾರ್ವಜನಿಕ ರಸ್ತೆ, ಶಿಕ್ಷಣ ಮೊದಲಾದವುಗಳಿಗೆ ಅಂಗೀಕಾರಾರ್ಹವಾದ ಮೇಲುತೆರಿಗೆ ಹಾಕುವುದಕ್ಕೆ ಮಾಡಿಕೊಟ್ಟ ಅವಕಾಶ ಹಾಗೂ 1869 ಮುಂಬೈ ಸ್ಥಳೀಯ ನಿಧಿಯ ಶಾಸನ ಇವುಗಳು ಸಾಮೂಹಿಕ ಶಿಕ್ಷಣದ ವಿಸ್ತಾರಕ್ಕೆ ಅವಶ್ಯಕವಾಗಿದ್ದ ಹಣವನ್ನು ಒದಗಿಸಿದವು. 1881–82ರಲ್ಲಿ 763 ಸರ್ಕಾರಿ ವರ್ನಾಕ್ಯುಲರ್ ಶಾಲೆಗಳು ಮತ್ತು ಸರ್ಕಾರದ ಅನುದಾನ ಪಡೆಯುತ್ತಿದ್ದ 17 ಶಾಲೆಗಳಿದ್ದವು. ಅವುಗಳಲ್ಲಿ ಕ್ರಮವಾಗಿ 44,603 ಮತ್ತು 1,110 ವಿದ್ಯಾರ್ಥಿಗಳಿದ್ದರು. ಜಮಖಂಡಿ, ಮುಧೋಳ, ಸವಣೂರು, ಲಕ್ಷ್ಮೇಶ್ವರ ಮತ್ತು ರಾಮದುರ್ಗ ದೇಶೀಯ ಸಂಸ್ಥಾನಗಳಲ್ಲಿ 47 ಶಾಲೆಗಳಿದ್ದು, ಅವುಗಳಲ್ಲಿ 2,048 ವಿದ್ಯಾರ್ಥಿಗಳು ಇದ್ದರು. ಜೊತೆಗೆ ನಾಲ್ಕು ಸರ್ಕಾರಿ ಪೋಲೀಸ್ ಇಲಾಖೆ ಶಾಲೆಗಳೂ ಮೂರು ಸರ್ಕಾರಿ ಜೈಲ್ ಇಲಾಖೆ ಶಾಲೆಗಳೂ ಇದ್ದುವು. (ಬಾಗಲಕೋಟೆ ಮತ್ತು ಸಂಸ್ಥಾನವಾದ ಮುಧೋಳದಲ್ಲಿ ಒಂದೊಂದು ಸರ್ಕಾರಿ ರಾತ್ರಿ ಶಾಲೆ ಇದ್ದುವು; ಇಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ಅನುಕ್ರಮವಾಗಿ 45 ಮತ್ತು 34). ಇವಲ್ಲದೆ ದಾಖಲಾತಿಗೆ ಸೇರದಿದ್ದ 574 ದೇಶೀಯ (ಗಾಂವಟಿ) ಶಾಲೆಗಳೂ ನಾಲ್ಕು ಜಿಲ್ಲೆಗಳಲ್ಲಿದ್ದುವು; ಅದೇ ಮಾದರಿಯ 63 ಶಾಲೆಗಳು ದೇಶೀಯ ಸಂಸ್ಥಾನಗಳಲ್ಲಿದ್ದುವು. ಈ ಶಾಲೆಗಳಲ್ಲಿ ಅನುಕ್ರಮವಾಗಿ 8,779 ಮತ್ತು 920 ವಿದ್ಯಾರ್ಥಿಗಳಿದ್ದರು. 1896–1902 ಅವಧಿಯಲ್ಲಿ ಶಿಕ್ಷಣ ವಿಸ್ತರಣೆ ಕುಂಠಿತವಾಗಿತ್ತು. ಇದಕ್ಕೆ ಆ ಕಾಲದಲ್ಲಿ ಬಂದ ಬರ ಮತ್ತು ಪ್ಲೇಗು ಸಾಂಕ್ರಾಮಿಕ ರೋಗಗಳು ಕಾರಣವಾಗಿದ್ದುವು. 1919ರ ಸುಧಾರಣಾ ಶಾಸನದಂತೆ ಶಿಕ್ಷಣವು "ವರ್ಗಾಯಿಸಿದ ವಿಷಯ"ವಾಯಿತು. ಇದು ನೂತನ ಶಿಕ್ಷಣಕ್ಕೆ ವರದಾನವಾಗಿ ಪರಿಣಮಿಸಿತು. 1922–23ರಿಂದೀಚೆಗೆ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಹೆಚ್ಚು ಬೇಡಿಕೆ ಬಂತು. ಇದಕ್ಕೆ ಕಾರಣಗಳೆಂದರೆ ಶಿಕ್ಷಣದ ವಿಸ್ತರಣೆಯಿಂದ ಸಾಮಾನ್ಯ ಜನರಲ್ಲುಂಟಾದ ಜಾಗೃತಿ ಮತ್ತು ರಾಷ್ಟ್ರೀಯ ಚಳವಳಿ. ರಾಷ್ಟ್ರೀಯ ಶಿಕ್ಷಣದ ಕಡೆಗೆ ಜನರ ಗಮನ ಹೋಯಿತು. ಜೊತೆಗೆ ತಮ್ಮ ಮಕ್ಕಳು ಆಧುನಿಕ ಶಾಲೆಗಳಲ್ಲಿ ಓದಿ ಅವರು ಸರ್ಕಾರಿ ನೌಕರಿಗೆ ಅರ್ಹರಾಗಬೇಕೆಂಬ ಬಯಕೆಯೂ ಇತ್ತು. 1923ರ ಮುಂಬೈ ಪ್ರಾಥಮಿಕ ಶಿಕ್ಷಣ ಶಾಸನದಂತೆ ಸ್ಥಳೀಯ ಸಂಸ್ಥೆಗಳಿಗೆ ಪ್ರಾಥಮಿಕ ಶಿಕ್ಷಣವನ್ನು ವಹಿಸಲಾಯಿತು. ಈ ಸ್ಥಳೀಯ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಸೌಲಭ್ಯಗಳನ್ನು ಒದಗಿಸಲು ಎಲ್ಲ ಪ್ರಯತ್ನಗಳನ್ನೂ ಮಾಡಿದುವು. ಪ್ರಾಂತ್ಯದ ಜನಪ್ರಿಯ ಸರ್ಕಾರವು, ಜನಸಂಖ್ಯೆಯು 700ಕ್ಕಿಂತಲೂ ಹೆಚ್ಚಾಗಿದ್ದ ಹಳ್ಳಿಗಳಲ್ಲಿ ಬೋರ್ಡ್ ಶಾಲೆಗಳನ್ನೂ 700ಕ್ಕಿಂತ ಕಡಿಮೆ ಜನಸಂಖ್ಯೆ ಇದ್ದ ಗ್ರಾಮಗಳಲ್ಲಿ ಖಾಸಗೀ (ಗಾಂವಟಿ) ಶಾಲೆಗಳನ್ನೂ ಸ್ಥಾಪಿಸಲು ಒಂದು ಯೋಜನೆಯನ್ನು ಜಾರಿಗೆ ತಂದಿತು. 1930ರಲ್ಲಿ ಜಾರಿಗೆ ಬಂದ ಮುಂಬೈ ಪ್ರಾಥಮಿಕ ಶಿಕ್ಷಣ (ತಿದ್ದುಪಡಿ) ಶಾಸನವು ಬೋಧನೆ ಮತ್ತು ಆಡಳಿತಗಳ ಸರ್ವಾಂಗೀಣ ಪ್ರಗತಿಗೆ ಅವಕಾಶ ಮಾಡಿಕೊಟ್ಟಿತು. 1947ರಲ್ಲಿ ಜಾರಿಗೆ ಬಂದ "ಮುಂಬೈ ಪ್ರಾಥಮಿಕ ಶಿಕ್ಷಣ ಶಾಸನ"ವು ಜಿಲ್ಲಾ ಶಿಕ್ಷಣ ಮಂಡಲಿಗಳ ಅಧಿಕಾರವನ್ನು ಮೊಟಕು ಮಾಡಿತು. ಇದರಿಂದ ಅವು ಕೇವಲ ಸಲಹಾ ಸಮಿತಿಗಳಾಗಿ ಬಿಟ್ಟವು. ಶಾಲೆಗಳ ಆಡಳಿತ ಮತ್ತು ಹತೋಟಿ ಎಲ್ಲವೂ ಸರ್ಕಾರದಿಂದ ನೇಮಿತವಾದ ಆಡಳಿತಾಧಿಕಾರಿಯ ಕೈಗೆ ಹೋದುವು. ಸಾವಿರಕ್ಕೆ ಮೇಲ್ಪಟ್ಟ ಜನಸಂಖ್ಯೆಯುಳ್ಳ ಎಲ್ಲ ಗ್ರಾಮಗಳಲ್ಲಿಯೂ ಕಡ್ಡಾಯ ಶಿಕ್ಷಣವನ್ನು 1947–48 ರಿಂದ ಸರ್ಕಾರವು ಹಂತ ಹಂತವಾಗಿ ಆಚರಣೆಗೆ ತಂದಿತು. ಮುಂದಿನ ಪುಟದಲ್ಲಿರುವ ಪಟ್ಟಿಯು 1891-92 ರಿಂದ 1955-56 ರವರೆಗಿನ ಅವಧಿಯಲ್ಲಿ ಆದ ಪ್ರಾಥಮಿಕ ಶಿಕ್ಷಣದ ಪ್ರಗತಿಯನ್ನು ತೋರಿಸುತ್ತದೆ.

| ವರ್ಷ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| 1891-1892 | 1,309 | 76,094 |
| 1902-1903 | 1,372 | 55,298 |
| 1921-1922 | 2,240 | 1,45,297 |
| 1946-1947 | 4,111 | 3,04,346 |
| 1955-1956 | 6,086 | 6.32.000 |

ಮದ್ರಾಸ್ ಕರ್ನಾಟಕ ಪ್ರದೇಶ: ಅಧುನಿಕ ಶಿಕ್ಷಣ ಆರಂಭವಾಗುವುದಕ್ಕೆ ಮೊದಲು ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ದೇಶೀಯ ಶಾಲೆಗಳಿದ್ದುವು. ಇವುಗಳನ್ನು "ಅಯ್ಯಗಳ ಮಠ" ಅಥವಾ 'ಪಯಾಲ್' ಎಂದು ಕರೆಯುತ್ತಿದ್ದರು. ವೇದ ಮತ್ತು ಸಂಸ್ಕೃತ ಪಾಠಶಾಲೆಗಳೂ, ಚರ್ಚುಗಳಲ್ಲಿ ಕ್ಯಾಥೋಲಿಕ್ ಪಾದ್ರಿಗಳು ನಡೆಸುತ್ತಿದ್ದ ಶಾಲೆಗಳೂ ಇದ್ದುವು. ವುಡ್‌ನ ವರದಿಯು ಈ ಜಿಲ್ಲೆಗಳಲ್ಲಿ ಶಿಕ್ಷಣದ ಪ್ರಗತಿಯಾಗಲು ಒಂದು ಹೊಸ ದೃಷ್ಟಿಯನ್ನೇ ನೀಡಿತು. ಮಿಷನರೀ ಸೊಸೈಟಿಗಳು 1838 ರ ಹೊತ್ತಿಗೆ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿ ಮಂಗಳೂರು, ಉಡುಪಿ ಮತ್ತು ಬಳ್ಳಾರಿಗಳಲ್ಲಿ ಶಾಲೆಗಳನ್ನು ಸ್ಥಾಪಿಸಿದುವು. 1855 ಮತ್ತು 1858ರಲ್ಲಿ ಜಾರಿಗೆ ಬಂದ ಅನುದಾನ ಸಂಹಿತೆಯಿಂದ ('ಗ್ರ್ಯಾಂಟ್-ಇನ್ ಏಡ್ ಕೋಡ್') ಅನೇಕ ದೇಶೀಯ ಶಾಲೆಗಳು ಅಧುನಿಕ ಶಿಕ್ಷಣ ಪದ್ಧತಿಯ ವ್ಯಾಪ್ತಿಗೆ ಬರುವಂತಾಯಿತು. 1863 ರ ಮದ್ರಾಸು ಪ್ರಾಥಮಿಕ ಶಿಕ್ಷಣ ಶಾಸನ, 1871ರ ನಗರಾಭಿವೃದ್ಧಿ ಶಾಸನ III, 1871 ರ ಮದ್ರಾಸು ನಗರಸಭಾ ಶಾಸನ, ಅದೇ ವರ್ಷದ ಸ್ಥಳೀಯ ನಿಧಿ ('ಲೋಕಲ್ ಫಂಡ್') ಶಾಸನ IV, ಪ್ರಾಥಮಿಕ ಶಿಕ್ಷಣಕ್ಕೆ ಹಣವನ್ನೊದಗಿಸಲು ಸಹಾಯಕವಾದುವು. ಇದರಿಂದ ಪ್ರಾಥಮಿಕ ಶಿಕ್ಷಣಕ್ಕೆ ಒಂದು ಭದ್ರವಾದ ತಳಹದಿ ದೊರೆಯಿತು. 1870-71 ಮತ್ತು 1880-81 ರ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆ 73 ರಿಂದ 148 ಕ್ಕೆ ಏರಿತು. ಇದೇ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಶಾಲೆಗಳ ಸಂಖ್ಯೆ 132 ರಿಂದ 726 ಕ್ಕೆ ಏರಿತು. ಪ್ರಾಥಮಿಕ ಶಿಕ್ಷಣವು ಎಲ್ಲ ದಿಕ್ಕುಗಳಲ್ಲಿಯೂ ಪ್ರಗತಿ ಹೊಂದಲು ಮೊದಲನೇಯ ಮಹಾಯುದ್ಧವು ಅಡ್ಡಿಯೇನೋ ಆಯಿತು. ಆದರೆ ಕೇಂದ್ರ ಸರ್ಕಾರವು ವಿಶೇಷ ರೀತಿಯ ಆರ್ಥಿಕ ಸಹಾಯವನ್ನು ನೀಡಿದ್ದರಿಂದ ಪ್ರಾಥಮಿಕ ಶಿಕ್ಷಣವು ಬಹಳವಾಗಿ ವಿಸ್ತರಿಸಿತು. 1921-1947 ರ ಅವಧಿಯಲ್ಲಿ ಶಿಕ್ಷಣವು ಬಹುವಾಗಿ ವಿಸ್ತಾರಗೊಂಡಿತು. ಈ ಅವಧಿಯಲ್ಲಿ ಆದ ಒಂದು ವಿಶೇಷವಾದ ಕಾರ್ಯ ಈ ವಿಸ್ತರಣೆ. 1920 ರ ಮದ್ರಾಸು ಪ್ರಾಥಮಿಕ ಶಿಕ್ಷಣ ಶಾಸನದ ಪ್ರಕಾರ ಜಿಲ್ಲಾ ಶಿಕ್ಷಣ ಮಂಡಲಿಗಳು (ಎಜುಕೇಶನಲ್ ಕೌನ್ಸಿಲ್) ಪ್ರಾಥಮಿಕ ಶಿಕ್ಷಣವು ಕಡ್ಡಾಯವಾಗಲು ಬೇಕಾದ ತೆರಿಗೆಯನ್ನು ವಿಧಿಸುವ ಅಧಿಕಾರವನ್ನು ಪಡೆದವು. 1920 ರ ಮದ್ರಾಸು ನಗರ ಸಭೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಶಾಸನ (ಮುನಿಸಿಪಾಲಿಟೀಸ್ ಆ್ಯಂಡ್ ಲೋಕಲ್ ಬೋರ್ಡ್ಸ್ ಆ್ಯಕ್ಟ್) ದ ಪ್ರಕಾರ ಪ್ರಾಥಮಿಕ ಶಿಕ್ಷಣವು ತಾಲೂಕು ಬೋರ್ಡ್ ಮತ್ತು ಪಂಚಾಯಿತಿ ಬೋರ್ಡ್‌ಗಳ ಅಧೀನಕ್ಕೆ ಬಂತು. 1934 ರಲ್ಲಿ ತಾಲೂಕು ಬೋರ್ಡುಗಳು ರದ್ದಾದುವು. ಇದರ ಪರಿಣಾಮವಾಗಿ ಆ ಬೋರ್ಡುಗಳ ಅಧೀನದಲ್ಲಿದ್ದ ಶಾಲೆಗಳು ಜಿಲ್ಲಾ ಬೋರ್ಡುಗಳ ವಶಕ್ಕೆ ಬಂದುವು. 1939 ರಲ್ಲಿ ಜಿಲ್ಲಾ ಶಿಕ್ಷಣ ಮಂಡಲಿಗಳು ರದ್ದಾದುವು. ಶಾಲೆಗಳಿಗೆ ಮಾನ್ಯತೆ ಕೊಡುವ ಹಾಗೂ ಅನುದಾನವನ್ನು ಮಂಜೂರು ಮಾಡುವ ಅಧಿಕಾರವು ಇಲಾಖೆಯ ಅಧಿಕಾರಿಗಳಿಗೆ ಬಂದಿತು. 1881 ರಿಂದ 1955–56 ರವರೆಗೆ ಕೆಲವು ವರ್ಷಗಳಲ್ಲಿ ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಆದ ಪ್ರಗತಿಯನ್ನು ಪುಟ ಎಂಟರಲ್ಲಿ ಕಾಣಿಸಿದೆ.

1854ಕ್ಕೆ ಹಿಂದೆ ಕೊಳ್ಳೇಗಾಲ ತಾಲೂಕಿನಲ್ಲಿ ಕೆಲವು ದೇಶೀಯ ಶಾಲೆಗಳಿದ್ದವು. 1881-82 ರಲ್ಲಿ ಲೋಕಲ್ ಬೋರ್ಡ್ ಪರೀಕ್ಷಿಸಬೇಕಾದ 32 ಶಾಲೆಗಳ ಪಟ್ಟಿಯನ್ನು ಪ್ರಕಟಿಸಲಾಯಿತು. ಆದರೆ 1880 ರ ಅನುದಾನ ಸಂಹಿತೆಯಂತೆ 20 ಶಾಲೆಗಳನ್ನು ಮಾತ್ರ ಪರೀಕ್ಷಿಸಲಾಯಿತು. ಪ್ರಕಟಿತವಾದ ಪಟ್ಟಿಯಂತೆ 431 ಬಾಲಕರನ್ನು I, II, ಮತ್ತು III ನೇಯ ತರಗತಿಗಳಲ್ಲಿ ಪರೀಕ್ಷಿಸಬೇಕಾಗಿತ್ತು. ಆದರೆ 240 ವಿದ್ಯಾರ್ಥಿಗಳನ್ನು ಪರೀಕ್ಷಿಸಲಾಯಿತು. 1920 ರಲ್ಲಿ 33 ಪ್ರಾಥಮಿಕ ಶಾಲೆಗಳಿದ್ದವು. 1943 ರಲ್ಲಿ ಬಾಲಕರು ಮತ್ತು ಬಾಲಕಿಯರಿಗೆ ಇದ್ದ ಪ್ರತ್ಯೇಕ ಶಾಲೆಗಳನ್ನು ರದ್ದು ಮಾಡಲಾಯಿತು. ಇದರಿಂದ ಕೆಲವು ಶಾಲೆಗಳನ್ನು ಒಟ್ಟುಗೂಡಿಸಲಾಯಿತು. 1945-46 ರಲ್ಲಿ ತಾಲೂಕಿನ ನಾಲ್ಕು ಕೇಂದ್ರಗಳಲ್ಲಿ (ಕೊಳ್ಳೇಗಾಲ, ಪಾಳೆಯಂ, ಮೂಡುವನಹಳ್ಳಿ ಮತ್ತು ಕಾಮಗೆರೆ) ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರಲಾಯಿತು. 1947-56 ರ ಅವಧಿಯಲ್ಲಿ ತಾಲೂಕಿನಲ್ಲಿ 16 ಹೊಸ ಶಾಲೆಗಳನ್ನು ತೆರೆಯಲಾಯಿತು. 1947 ರಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆ 64 ಇದ್ದದ್ದು 1957 ರ ಹೊತ್ತಿಗೆ 96 ಕ್ಕೆ ಏರಿತು.

ಕಲ್ಬುರ್ಗಿ ಪ್ರದೇಶ: ಅಬ್ದುಲ್‌ಖಾದರ್ ಸರ್ವಾರಿಯು 19ನೇಯ ಶತಮಾನದ ಆದಿಯಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿದ್ದ ದೇಶೀಯ ಶಿಕ್ಷಣ ಪದ್ಧತಿಯ ಒಂದು ನೈಜಚಿತ್ರವನ್ನು ಕೊಟ್ಟಿದ್ದಾನೆ. 1854ಕ್ಕೆ ಹಿಂದೆ ದೇಶದ ಇತರ ಭಾಗಗಳಲ್ಲಿದ್ದಂತೆ ಹೈದರಾಬಾದ್ ಸಂಸ್ಥಾನದಲ್ಲಿಯೂ ಧರ್ಮವನ್ನೂ ಧಾರ್ಮಿಕ ಗ್ರಂಥಗಳನ್ನೂ ಅಧ್ಯಯನ ಮಾಡುವುದೇ ಶಿಕ್ಷಣದಲ್ಲಿ ಪ್ರಧಾನವಾಗಿತ್ತು. ದೇವಸ್ಥಾನ, ಮಸೀದಿ, ಮಕ್ತಬಾಗಳಲ್ಲಿ

| ವರ್ಷ | ಬಳ್ಳಾರಿ ಜಿಲ್ಲೆ | | ದಕ್ಷಿಣ ಕನ್ನಡ ಜಿಲ್ಲೆ | |
|---|---|---|---|---|
| | ಶಾಲೆಗಳು | ವಿದ್ಯಾರ್ಥಿಗಳು | ಶಾಲೆಗಳು | ವಿದ್ಯಾರ್ಥಿಗಳು |
| 1881-82 | 557 | 9,956 | 188 | 6,986 |
| 1891-92 | 873 | 19,116 | 548 | 12,487 |
| 1921-22 | ದೊರೆತಿಲ್ಲ | ದೊರೆತಿಲ್ಲ | 775 | 60,266 |
| 1931-32 | 1,211 | 44,323 | 1,352 | 97,033 |
| 1946-47 | 784 | 53,970 | 1,249 | 1,69,946 |
| 1955-56 | ದೊರೆತಿಲ್ಲ | ದೊರೆತಿಲ್ಲ | 1,298 | 1,74,000 |

ಪಂಡಿತರು ಮತ್ತು ಮೌಲ್ವಿಗಳಿಂದ ಬೋಧನೆ ನಡೆಯುತ್ತಿತ್ತು. ಆಳುವವರು ಪಂಡಿತರಿಗೆ ಮತ್ತು ಮೌಲ್ವಿಗಳಿಗೆ ಅವರ ಸೇವೆಗಳಿಗಾಗಿ ಇನಾಂಗಳನ್ನೂ, ಮಾಸಾಶನವನ್ನೂ, ಜಹಗೀರುಗಳನ್ನೂ ಕೊಡುತ್ತಿದ್ದರು. ಕೆಲವೊಮ್ಮೆ ಜಹಗೀರುದಾರರು, ಮನಸಬ್‌ದಾರರು, ದೇಶಮುಖರು ಮತ್ತು ದೇಶಪಾಂಡೆಗಳು ಪೌರ್ವಾತ್ಯ ಭಾಷೆಗಳಲ್ಲಿಯೂ ಮತ್ತು ಶಾಸ್ತ್ರಗಳಲ್ಲಿಯೂ ಪರಿಣತಿಯನ್ನು ಪಡೆದಿದ್ದ ಪಂಡಿತರಿಗೂ ಮತ್ತು ಮೌಲ್ವಿಗಳಿಗೂ ಆಶ್ರಯದಾತರಾಗಿದ್ದರು. ಹೈದರಾಬಾದ್ ಸಂಸ್ಥಾನದ ಅನೇಕ ಗ್ರಾಮಗಳಲ್ಲಿದ್ದ ಪಾಠಶಾಲೆಗಳನ್ನು ಮತ್ತು ಮಕ್ತಬಾಗಳನ್ನು ನಡೆಸಲು ಪಟೇಲರೂ, ಪಟ್ವಾರಿಗಳೂ ಮತ್ತು ಸಾಧಾರಣ ಜನರೂ ಸಹಾಯ ಮಾಡುತ್ತಿದ್ದರು. ಇಂಥ ಸಂಸ್ಥೆಗಳಲ್ಲಿ ಓದು ಬರಹ ಮತ್ತು ಗಣಿತಗಳನ್ನು ಚೆನ್ನಾಗಿ ಕಲಿಸಲಾಗುತ್ತಿತ್ತು. ಮೌಲ್ವಿಗಳು ಕುರ್-ಆನ್ ಜೊತೆಗೆ ಪಾರ್ಸಿ, ಉರ್ದು ಮತ್ತು ಅರಬ್ಬೀ ಭಾಷೆಗಳನ್ನು ಕಲಿಸುತ್ತಿದ್ದರು. ಪಂಡಿತರು, ಸಂಸ್ಕೃತ ಮತ್ತು ಪ್ರಾದೇಶಿಕ ಭಾಷೆಗಳನ್ನೂ ಧರ್ಮಗ್ರಂಥಗಳನ್ನೂ ಬೋಧಿಸುತ್ತಿದ್ದರು.

1853 ರಲ್ಲಿ ಹೈದರಾಬಾದ್ ನಗರದಲ್ಲಿ ಸರ್ ಸಾಲಾರ್ ಜಂಗರಿಂದ ಸ್ಥಾಪಿತವಾದ ದಾರುಲ್-ಉಲೂಮ್‌ನಲ್ಲಿ ಆಧುನಿಕ ಶಿಕ್ಷಣದ ಕುರುಹನ್ನು ಕಾಣಬಹುದು. ವುಡ್‌ನ ವರದಿಗೆ ಅನುಗುಣವಾಗಿ ಶಿಕ್ಷಣ ಪದ್ಧತಿಯು ರೂಪುಗೊಂಡಿತು. ಏಳನೇಯ (ಸರ್) ಮೀರ್ ಉಸ್ಮಾನ್ ಅಲಿ ಖಾನ್ ಬಹದೂರ್ ಆಸಫ್ ಝಾರ ಕಾಲದಲ್ಲಿ ಶೈಕ್ಷಣಿಕ ಚಟುವಟಿಕೆಗಳು ಬಹು ತೀವ್ರವಾದುವು. ನಂತರ ಬಂದ ಆಳುವವರೂ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡಿದರು. ಪ್ರತೀಯೊಂದು ತಾಲೂಕು ಮತ್ತು ಜಿಲ್ಲಾ ಕೇಂದ್ರದಲ್ಲಿಯೂ ಒಂದು ಪಾರ್ಸಿ ಶಾಲೆಯನ್ನು ಮತ್ತು ಒಂದು ಪ್ರಾದೇಶಿಕ ಭಾಷೆಯ ಶಾಲೆಯನ್ನು ಆರಂಭಿಸಲಾಗುವುದೆಂದು 1859ರಲ್ಲಿ ಸರ್ಕಾರವು ಒಂದು ಪ್ರಕಟಣೆಯನ್ನು ಹೊರಡಿಸಿತು. 1869 ರ ವರೆಗೆ, ಈ ಶಾಲೆಗಳು ರೆವಿನ್ಯೂ ಇಲಾಖೆಯ ಆಧೀನದಲ್ಲಿದ್ದವು. 1887–88 ರವರೆಗೆ, ಹೈದರಾಬಾದ್ ಸಂಸ್ಥಾನದ ಕನ್ನಡ ಜಿಲ್ಲೆಗಳಲ್ಲಿಯೂ ಮರಾಠಿಯೇ ಶಿಕ್ಷಣ ಮಾಧ್ಯಮವಾಗಿತ್ತು. ಅನಂತರ, ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮವು ಕನ್ನಡವಾಯಿತು. 1911-21 ರ ಅವಧಿಯಲ್ಲಿ 1,000 ಜನಸಂಖ್ಯೆಗೆ ಮೀರಿದ ಪ್ರತೀಯೊಂದು ಗ್ರಾಮದಲ್ಲಿಯೂ ಒಂದು ಶಾಲೆ ಇರುವಂತೆ ಶಿಕ್ಷಣವು ವಿಸ್ತಾರಗೊಂಡಿತು. 1911 ರಲ್ಲಿ ಪ್ರಾಥಮಿಕ ಶಿಕ್ಷಣವು ಉಚಿತವಾಗಿರಬೇಕೆಂಬ ರಾಜಾಜ್ಞೆಯನ್ನು ಹೊರಡಿಸಲಾಯಿತು. 1937 ರಲ್ಲಿ ಪ್ರಾಥಮಿಕ ಶಾಲೆಗಳು ಪುನರ್ವ್ಯವಸ್ಥೆಗೊಂಡುವು. ಅದರಂತೆ ಹಳ್ಳಿಯ ಮತ್ತು ಪಟ್ಟಣಗಳ ಶಾಲೆಗಳು ಬೇರೆ ಬೇರೆ ಆದವು. ಮುಂದಿನ ಪಟ್ಟಿಯಲ್ಲಿ 1921, 1931, 1935 ಮತ್ತು 1956 ರಲ್ಲಿ ಕನ್ನಡ ಪ್ರದೇಶದಲ್ಲಿದ್ದ ಶಾಲೆಗಳ ಸಂಖ್ಯೆಯನ್ನು ವಿದ್ಯಾರ್ಥಿಗಳ ಸಂಖ್ಯೆಯನ್ನು ಕೊಟ್ಟಿದೆ. (ಇದರಲ್ಲಿ ಬಿದರೆಯ ಶಾಲೆಗಳು ಸೇರಿಲ್ಲ)

| ವರ್ಷ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| 1921 | 591 | 31,138 |
| 1931 | 797 | 52,221 |
| 1935 | 924 | 62,172 |
| 1956 | 2,092 | 1,30,000 |

ಕೊಡಗು : ಬ್ರಿಟಿಷ್ ಆಡಳಿತಕ್ಕೆ ಮೊದಲು ಸರ್ಕಾರವಾಗಲೀ, ಸಾರ್ವಜನಿಕ ಸಂಸ್ಥೆ ಅಥವಾ ವ್ಯಕ್ತಿಗಳಾಗಲೀ, ಶಿಕ್ಷಣವು ಕ್ರಮಬದ್ಧವಾಗಿ ನಡೆಯುವಂಥ ಯಾವ ವ್ಯವಸ್ಥೆಯನ್ನೂ ಮಾಡಿರಲಿಲ್ಲ. ಓದು, ಬರಹ ಮತ್ತು ಲೆಕ್ಕ ಬರೆಯುವುದನ್ನು

ಬಲ್ಲ ಜನರಿದ್ದುದೇನೋ ನಿಜ. ಇತಿಹಾಸ ಕಾಲಕ್ಕೆ ಬರುವುದಾದರೆ ಹಿಂದಿನ ಕಾಲದ ರಾಜರು ಮತ್ತು ಅಮೇಲೆ ಬಂದ ರಾಜರು ಸರ್ಕಾರಕ್ಕೆ ಬರಬೇಕಾದ ಆದಾಯದ ಲೆಕ್ಕಗಳನ್ನು ಇಡಬಲ್ಲ ಅಧಿಕಾರಿಗಳನ್ನು ಅವರ ಅಧೀನದಲ್ಲಿಟ್ಟುಕೊಂಡಿದ್ದರು. ರಾಜರ ಕಾಲದಲ್ಲಿ ಸರ್ಕಾರವು ಜನರಿಗೆ ಶಿಕ್ಷಣವನ್ನು ಕೊಡುವ ಜವಾಬ್ದಾರಿಯನ್ನೇ ಹೊರಲಿಲ್ಲ. ಸಾಧಾರಣ ಜನರು ತಮ್ಮ ತಂದೆಯರಿಂದಲೋ ಅಥವಾ ಹಿರಿಯರಿಂದಲೋ ಜ್ಞಾನವನ್ನು ಗಳಿಸುತ್ತಿದ್ದರು. ರಾಜರ ಆಸ್ಥಾನಗಳಲ್ಲಿರುವುದು ಪ್ರತಿಷ್ಠೆಯನ್ನು ತರುತ್ತಿತ್ತು. ಲಾಭದಾಯಕವಾಗಿಯೂ ಇತ್ತು. ಆದುದರಿಂದ ಆಸ್ಥಾನಕ್ಕೆ ಸಂಬಂಧಿಸಿದ ಜನರು ಮತ್ತು ಅವರ ಬಂಧುಗಳು ತಮ್ಮ ಸ್ವಪ್ರಯತ್ನದಿಂದಲೇ ವಿದ್ಯೆಯನ್ನು ಗಳಿಸುತ್ತಿದ್ದರು. ಇದು ಪರಂಪರಾನುಗತವಾಗಿ ನಡೆಯುತ್ತಿತ್ತು. ಮಡಿಕೇರಿ ಮತ್ತು ವೀರರಾಜಪೇಟೆಗಳಲ್ಲಿ ಎರಡು ಆ್ಯಂಗ್ಲೋ ವರ್ನಾಕ್ಯುಲರ್ ಶಾಲೆಗಳನ್ನೂ ಪೊನ್ನಂಪೇಟೆಯಲ್ಲಿ ಒಂದು ಕನ್ನಡ ಶಾಲೆಯನ್ನೂ 1834 ರಲ್ಲಿ ಆರಂಭಿಸಲಾಯಿತು. ಅಲ್ಲಿಂದ ಕೊಡಗಿನಲ್ಲಿ ಆಧುನಿಕ ಶಿಕ್ಷಣ ಆರಂಭವಾಯಿತು. ದೆವೆರೊ ಸಿದ್ಧಪಡಿಸಿದ ಯೋಜನೆಯು ಆಚರಣೆಗೆ ಬಂದ ಮೇಲೆ 1857 ರಲ್ಲಿ ಆಧುನಿಕ ಶಿಕ್ಷಣ ಕ್ರಮ ಆರಂಭವಾಯಿತು. 1874–75 ರ ಹೊತ್ತಿಗೆ ಪ್ರಾಥಮಿಕ ಶಾಲೆಗಳ ಸಂಖ್ಯೆ 44ಕ್ಕೆ ಏರಿತು. ನೇಗಿಲ ತೆರಿಗೆಯನ್ನು ಜಾರಿಗೆ ಕೊಟ್ಟಮೇಲೆ ಅದಕ್ಕೆ ಸರ್ಕಾರ ತನ್ನ ಭಾಗವಾದ ಶೇಕಡಾ 50ನ್ನು ಸೇರಿಸುತ್ತಿತ್ತು. ಇದು ಆದದ್ದು 1884ರಲ್ಲಿ. ಅಲ್ಲಿಂದೀಚೆಗೆ ಪ್ರಾಥಮಿಕ ಶಿಕ್ಷಣವು ಹೆಚ್ಚು ಜನಪ್ರಿಯವಾಯಿತು. 1885 ರಲ್ಲಿ ಮಡಿಕೇರಿ ಮತ್ತು ವೀರರಾಜಪೇಟೆ ನಗರಸಭೆಗಳು ತಮ್ಮ ನಗರಸಭೆಯ ಪ್ರದೇಶದಲ್ಲಿ ಪ್ರಾಥಮಿಕ ಶಾಲೆಗಳನ್ನು ನಡೆಸುವಂತೆ ಆಜ್ಞೆ ನೀಡಲಾಯಿತು. 1902 ರಲ್ಲಿ ಉಳಿದ ಶಾಲೆಗಳನ್ನು ಜಿಲ್ಲಾ ಬೋರ್ಡಿಗೆ ವಹಿಸಿಕೊಡಲಾಯಿತು. 1921–22 ರ ಹೊತ್ತಿಗೆ ಪ್ರಾಥಮಿಕ ಶಾಲೆಗಳು 117 ರಷ್ಟಾದುವು. ವಿದ್ಯಾರ್ಥಿಗಳ ಸಂಖ್ಯೆ 8,715 ಆಗಿತ್ತು. 1946–47 ರಲ್ಲಿ ಶಾಲೆಗಳ ಸಂಖ್ಯೆ 127 ಕ್ಕೂ ವಿದ್ಯಾರ್ಥಿಗಳು ಸಂಖ್ಯೆ 13,997 ಕ್ಕೂ ಏರಿತು. ಜೊತೆಗೆ 20 ಖಾಸಗಿ ಅನುದಾನ ಪಡೆಯದ ಪ್ರಾಥಮಿಕ ಶಾಲೆಗಳಿದ್ದುವು. ಹೀಗೆ ಒಟ್ಟು ಶಾಲೆಗಳ ಸಂಖ್ಯೆ 147 ಇತ್ತು. 1955–56 ರಲ್ಲಿ 221 ಪ್ರಾಥಮಿಕ ಶಾಲೆಗಳಿದ್ದು ಅವುಗಳಲ್ಲಿ 28,000 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು.

ರಾಜ್ಯ ಪುನರ್ಘಟನೆಯ ನಂತರ: ಪುನರ್ಘಟನೆಯ ಸಮಯದಲ್ಲಿ ವಿವಿಧ ರೀತಿಯ ಶಾಲಾ ಶಿಕ್ಷಣ ಕ್ರಮಗಳಿದ್ದುವು. ಬೇರೆ ಬೇರೆ ವಲಯಗಳಲ್ಲಿ ಬೇರೆ ಬೇರೆ ನಿಯಮಗಳೂ, ಆಚರಣೆಗಳೂ ಇದ್ದುವು. ಆದುದರಿಂದ ಇಡೀ ರಾಜ್ಯಕ್ಕೆ ಶಿಕ್ಷಣದಲ್ಲಿ ಏಕತೆಯನ್ನು ರೂಪಿಸುವುದು ಕೂಡಲೇ ಮಾಡಬೇಕಾದ ಕೆಲಸವಾಯಿತು. ಇದು ಹಂತ ಹಂತವಾಗಿಯೇ ಆಗಬೇಕಾಗಿದ್ದ ಕಾರ್ಯ. ಡಿಸೆಂಬರ್ 1957 ರಲ್ಲಿ ಸರ್ಕಾರದಿಂದ ರಚಿತವಾದ ಶಿಕ್ಷಣ ಏಕೀಕರಣ ಸಲಹಾ ಸಮಿತಿಯು ಈ ಕಾರ್ಯವನ್ನು ಕೈಗೆತ್ತಿಕೊಂಡಿತು. ಆ ಸಮಿತಿಯು ಮಾಡಿದ ಶಿಫಾರಸುಗಳನ್ನು ಶಿಕ್ಷಣದ ವಿವಿಧ ಹಂತಗಳನ್ನು ಕುರಿತು ಹೇಳುವಾಗ ಸೂಕ್ತವಾದೆಡೆಗಳಲ್ಲಿ ಚರ್ಚಿಸಲಾಗುವುದು. ಹೊಸ ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿ ವಿವಿಧ ಶಿಕ್ಷಣ ಕ್ರಮಗಳಿದ್ದುವು. ಜೊತೆಗೆ ಶೈಕ್ಷಣಿಕ ಸೌಲಭ್ಯಗಳು ವಿವಿಧ ಪ್ರದೇಶಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿದ್ದು ಅವುಗಳಲ್ಲಿನ ವ್ಯತ್ಯಾಸ ಬಹಳವಾಗಿತ್ತು. ಹಳೇ ಮೈಸೂರು ಭಾಗದಲ್ಲಿ ಶಿಕ್ಷಣವು ಸಾಕಷ್ಟು ಪ್ರಗತಿಯನ್ನು ಸಾಧಿಸಿತ್ತು. ಅದರ ಚಿತ್ರವೇ ಬೇರೆಯಾಗಿತ್ತು. ಬೆಳಗಾವಿ ಪ್ರದೇಶ ಮದ್ರಾಸ್ ಕರ್ನಾಟಕ ಮತ್ತು ಕೊಡಗು ಪ್ರದೇಶಗಳಲ್ಲಿ ಒಂದೇ ಬಗೆಯ ಶಿಕ್ಷಣ ಪದ್ಧತಿ ಇತ್ತು.

## ಪೂರ್ವ ಪ್ರಾಥಮಿಕ ಶಿಕ್ಷಣ

ಪೂರ್ವ ಪ್ರಾಥಮಿಕ ('ಪ್ರಿ ಪ್ರಾಯಿಮರಿ') ಶಿಕ್ಷಣವು ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯದಾಗಿತ್ತು. ಆದರೂ ಒಂದಂಶವು ಸಾಮಾನ್ಯವಾಗಿತ್ತು. ಅದು ಯಾವುದೆಂದರೆ ಸರ್ಕಾರವೂ ಪೂರ್ವ ಪ್ರಾಥಮಿಕ ಶಿಕ್ಷಣದ ನೇರ ಜವಾಬ್ದಾರಿಯನ್ನು ತೆಗೆದುಕೊಂಡಿರಲಿಲ್ಲ. ಹಳೆಯ ಮೈಸೂರು ಪ್ರದೇಶದಲ್ಲಿ ಶಿಶುವಿಹಾರಗಳನ್ನು ನಡೆಸುವುದು ಖಾಸಗೀ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಹೊಣೆಗಾರಿಕೆಯೆಂದು ಭಾವಿಸಲಾಗಿತ್ತು. ಸಾಮಾನ್ಯವಾಗಿ ಪ್ರಾಥಮಿಕ ಶಾಲೆಗಳಿಗೆ ಸೇರಿದ ಶಿಶುವಿಹಾರಗಳಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವು ನಡೆಯುತ್ತಿತ್ತು. ಅಂಥವು ಕೆಲವು ಮಾತ್ರ ಇದ್ದುವು. ಮಾನ್ಯತೆಯನ್ನು ಪಡೆದಿದ್ದ ಶಿಶುವಿಹಾರಗಳಿಗೆ ಅನುದಾನದ ರೂಪದಲ್ಲಿ ಸರ್ಕಾರವು ಆರ್ಥಿಕ ಸಹಾಯವನ್ನು ನೀಡುತ್ತಿತ್ತು. ಕಲ್ಬುರ್ಗಿ ಪ್ರದೇಶದಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವೇ ಇರಲಿಲ್ಲ. ಆದರೆ ಪ್ರಾಥಮಿಕ ಶಾಲೆಗಳಲ್ಲಿ ಶಿಶು ತರಗತಿಗಳಿದ್ದವು. ಈ ತರಗತಿಗಳಲ್ಲಿ ಪ್ರಾಥಮಿಕ ಶಾಲೆಗಳಲ್ಲಿನ ತರಗತಿಗಳಲ್ಲಿ ಆಗುತ್ತಿದ್ದ ಪಾಠಗಳೇ ನಡೆಯುತ್ತಿದ್ದುವು. ಬೆಳಗಾವಿ ಪ್ರದೇಶದಲ್ಲಿಯೂ ಇದೇ ರೀತಿಯ ಶಿಶು ತರಗತಿಗಳಿದ್ದವು. ಪೂರ್ವ ಪ್ರಾಥಮಿಕ ತರಗತಿಗಳು ಇದ್ದ ಕಡೆ ಅವನ್ನು ಬೇರೊಂದು ಘಟಕವೆಂದೇ ಭಾವಿಸಿ ಅನುದಾನವನ್ನು ಕೊಡಲಾಗುತ್ತಿತ್ತು. ದಕ್ಷಿಣ ಕನ್ನಡ, ಕೊಳ್ಳೇಗಾಲ ವಲಯದಲ್ಲಿ ಪ್ರತ್ಯೇಕವಾದ ಶಿಶುವಿಹಾರಗಳಿದ್ದುವು ; ಜೊತೆಗೆ ಪೂರ್ವ ಪ್ರಾಥಮಿಕ ಶಿಕ್ಷಣದ ತರಗತಿಗಳನ್ನು ಕೆಲವು ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಜೋಡಿಸಲಾಗಿತ್ತು. ಅನುದಾನವನ್ನು ನೀಡುವಾಗ ಅವನ್ನು ವಿಶೇಷ ಶಾಲೆಗಳೆಂದು ಪರಿಗಣಿಸಲಾಗುತ್ತಿತ್ತು.

1957ರಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ಪರಿಶೀಲಿಸಲು ಒಂದು ಸಮಿತಿಯನ್ನು ಸರ್ಕಾರವು ರಚಿಸಿತು. ಈ ಸಮಿತಿಯು

ವ್ಯಾಪಕವಾದ ಮತ್ತು ಬಹು ಪರಿಣಾಮಕಾರಿಯಾದ ಶಿಫಾರಸ್ಸುಗಳನ್ನು ಮಾಡಿತು. ಆದರೆ ಬಹುಸಂಖ್ಯೆಯ ಶಿಫಾರಸ್ಸುಗಳು ಜಾರಿಗೆ ಬರಲಿಲ್ಲ. ಪೋಷಕರಿಗೂ ಮತ್ತು ಖಾಸಗಿ ಸಂಸ್ಥೆಗಳಿಗೂ ಪ್ರಾಥಮಿಕ ಶಿಕ್ಷಣದ ಹೊಣೆಯನ್ನು ಬಿಟ್ಟು ಬಿಡುವುದು ಸರ್ಕಾರದ ನೀತಿಯಾಗಿತ್ತು. 1968-69 ರಲ್ಲಿ 704 ಶಿಶುವಿಹಾರಗಳು ಇದ್ದವು ; ಒಟ್ಟು 45,762 ಮಕ್ಕಳು ಈ ಶಾಲೆಗಳಲ್ಲಿದ್ದವು. 1979-80ರಲ್ಲಿ 3,118 ಶಿಶುವಿಹಾರಗಳಿದ್ದುವಲ್ಲದೆ ಅವುಗಳಲ್ಲಿ 1,91,737 ಮಕ್ಕಳಿದ್ದವು. ಇತ್ತೀಚಿನ ದಿನಗಳಲ್ಲಿ ದುರ್ಬಲ ವರ್ಗಗಳ ಮಕ್ಕಳ ಅನುಕೂಲಕ್ಕಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಪಂಚವಾರ್ಷಿಕ ಯೋಜನೆಯ ಅಂಗವಾಗಿ ಶಿಶುವಿಹಾರಗಳನ್ನು ಆರಂಭಿಸಲಾಗುತ್ತಿದೆ. ನಗರ ಪ್ರದೇಶಗಳಲ್ಲಿ ಮಾನ್ಯತೆ ಪಡೆಯದ ಶಿಶುವಿಹಾರಗಳು ಸಾಕಷ್ಟಿವೆ. ಅವುಗಳಲ್ಲಿ ಇಂಗ್ಲೀಷ್ ಮಾಧ್ಯಮದ ಶಿಶುವಿಹಾರಗಳ ಸಂಖ್ಯೆಯೇ ಹೆಚ್ಚು. ಅವುಗಳ ವಿಧಿಸುವ ಫೀಸೂ (ಶುಲ್ಕ) ಹೆಚ್ಚು. ಶಿಶುವಿಹಾರದಲ್ಲಿ ಕೆಲಸ ಮಾಡಬೇಕಾದ ಶಿಕ್ಷಕಿಯರು ಬಾಲಸೇವಿಕಾ ಶಿಕ್ಷಣ ಕೇಂದ್ರಗಳಲ್ಲಿಯೂ, ಶಿಶುವಿಹಾರ ಶಿಕ್ಷಕಿಯರ ಶಿಕ್ಷಣ ಸಂಸ್ಥೆಗಳಲ್ಲೂ ತರಬೇತಿಯನ್ನು ಪಡೆಯುತ್ತಾರೆ.

## ಪ್ರಾಥಮಿಕ ಶಿಕ್ಷಣ

"ಪ್ರಾಥಮಿಕ ಶಿಕ್ಷಣ" ಎಂಬ ಪದಪುಂಜವು 1955-56ರಲ್ಲಿ ಹಳೆಯ ಮೈಸೂರು ಭಾಗದಲ್ಲಿ ಒಂದು ಹೊಸ ಅರ್ಥವನ್ನು ಪಡೆಯಿತು. ಪ್ರಾಥಮಿಕ ಶಾಲೆಗಳಲ್ಲಿದ್ದ ನಾಲ್ಕು ತರಗತಿಗಳನ್ನು ಮಿಡ್ಲ್ ಸ್ಕೂಲಿನ ನಾಲ್ಕು ತರಗತಿಗಳನ್ನೂ ಒಂದುಗೂಡಿಸಲಾಯಿತು. ಅದು ಎಂಟು ವರ್ಷಗಳ ಸಮಗ್ರ ಪ್ರಾಥಮಿಕ ಶಿಕ್ಷಣವಾಗಿ ರೂಪುಗೊಂಡಿತು. ಒಂದರಿಂದ ನಾಲ್ಕನೇಯ ಪ್ರಾಥಮಿಕ ತರಗತಿಗಳಿದ್ದ ಶಾಲೆಗಳು ಕಿರಿಯ ಪ್ರಾಥಮಿಕ ಶಾಲೆಗಳಾದುವು. ಮುಂದಿನ ನಾಲ್ಕು ತರಗತಿಗಳನ್ನುಳ್ಳ ಶಾಲೆಗಳು ಹಿರಿಯ ಪ್ರಾಥಮಿಕ ಶಾಲೆಗಳಾದುವು. ಗ್ರಾಮಾಂತರ ಪ್ರದೇಶಗಳಿಗೆ ಹೆಚ್ಚಿನ ಸೌಲಭ್ಯಗಳನ್ನೊದಗಿಸಲು ಆರಂಭಿಸಿದ್ದ ಹೊಸ ಮಾದರಿ ಮಿಡ್ಲ್ ಸ್ಕೂಲ್‌ಗಳಲ್ಲಿ ಎಂಟು ತರಗತಿಗಳೂ ಇದ್ದವು. ಬೆಳಗಾವಿ ಪ್ರದೇಶದಲ್ಲಿ ಪ್ರಾಥಮಿಕ ಶಿಕ್ಷಣದ ಅವಧಿ ಏಳು ವರ್ಷವಾಗಿತ್ತು. ಮೊದಲನೇಯ ನಾಲ್ಕು ತರಗತಿಗಳನ್ನು ಕಿರಿಯ ಪ್ರಾಥಮಿಕ ಶಾಲೆಯ ತರಗತಿಗಳೆಂದೂ, ಉಳಿದ ಮುಂದಿನ ಮೂರು ತರಗತಿಗಳನ್ನು ಉನ್ನತ ಪ್ರಾಥಮಿಕ ತರಗತಿಗಳೆಂದೂ ಕರೆಯುತ್ತಿದ್ದರು. ಹೈದರಾಬಾದ್ ರಾಜ್ಯದಲ್ಲಿಯೂ ಪ್ರಾಥಮಿಕ ಶಿಕ್ಷಣದ ಅವಧಿಯು ಏಳು ವರ್ಷಗಳಷ್ಟಿತ್ತು. ಪ್ರಾಥಮಿಕ ತರಗತಿಗಳಿಗೆ ಶಿಶು ತರಗತಿಯನ್ನು ಸೇರಿಸುವುದು ಅಲ್ಲಿನ ಪದ್ಧತಿಯಾಗಿತ್ತು. ಆದರೆ ಶಿಶು ತರಗತಿಗೆ ಮಕ್ಕಳು ಸೇರಲೇಬೇಕೆಂಬ ಕಡ್ಡಾಯವಿರಲಿಲ್ಲ. ಹಳೆಯ ಮದ್ರಾಸು ಮತ್ತು ಕೊಡಗು ರಾಜ್ಯಗಳಲ್ಲಿ ಪ್ರಾಥಮಿಕ ಶಿಕ್ಷಣದ ಅವಧಿಯು ಎಂಟು ವರ್ಷವಾಗಿತ್ತು. ಈ ಹಂತದ ಶಿಕ್ಷಣಕ್ಕೆ "ಎಲಿಮೆಂಟರಿ ಎಜುಕೇಷನ್" ಎಂಬ ಹೆಸರಿತ್ತು. ಅದನ್ನು ಐದು ವರ್ಷದ ಆರಂಭ ಪ್ರಾಥಮಿಕ 'ಲೋವರ್ ಎಲಿಮೆಂಟರಿ' ಶಿಕ್ಷಣವೆಂದೂ ಮತ್ತು ಮೂರು ವರ್ಷದ ಉನ್ನತ ಪ್ರಾಥಮಿಕ 'ಹಾಯರ್ ಎಲಿಮೆಂಟರಿ' ಶಿಕ್ಷಣವೆಂದೂ ವಿಭಾಗಿಸಲಾಗಿತ್ತು. ಶಿಕ್ಷಣ ಏಕೀಕರಣ ಸಲಹಾ ಸಮಿತಿಯು ಪ್ರಾಥಮಿಕ ಶಿಕ್ಷಣವು ಏಳು ವರ್ಷಗಳ ಕಾಲ ಅಖಂಡವಾಗಿರಬೇಕೆಂದು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸನ್ನು 1959ರಲ್ಲಿ ಆಚರಣೆಗೆ ತಂದು ಹಂತಹಂತವಾಗಿ ಮುಂದಿನ ವರ್ಷಗಳಲ್ಲಿ ಜಾರಿಗೆ ಕೊಡಲಾಯಿತು. 1962-63ರ ಹೊತ್ತಿಗೆ ಅದು ಪೂರ್ಣವಾಗಿ ಜಾರಿಗೆ ಬಂತು. ಪ್ರಾಥಮಿಕ ಶಿಕ್ಷಣದಲ್ಲಿ ಏಕತೆಯನ್ನು ತರಲು ಇದು ಒಂದು ಮುಖ್ಯ ಹೆಜ್ಜೆಯಾಯಿತು.

ಭಾರತ ಸರ್ಕಾರದ ಸೂಚನೆಯಂತೆ ನಡೆದ ಮೊದಲನೇಯ ಶಿಕ್ಷಣ ಸಮೀಕ್ಷೆಯು ಪ್ರಾಥಮಿಕ ಶಿಕ್ಷಣ ಸೌಲಭ್ಯಗಳಲ್ಲಿದ್ದ ತಾರತಮ್ಯವನ್ನೂ ತೋರಿಸಿದ್ದಷ್ಟೇ ಅಲ್ಲದೆ, ಅಂಥ ಸೌಲಭ್ಯಗಳು ಇಲ್ಲದಿದ್ದ ಸ್ಥಳಗಳನ್ನೂ, ಶಾಲೆಗಳನ್ನು ಅಗತ್ಯವಾಗಿ ಆರಂಭಿಸಬೇಕಾದ ವಾಸಸ್ಥಳಗಳನ್ನೂ ಹೆಚ್ಚಿಗೆ ಉಪಾಧ್ಯಾಯರನ್ನು ಕೊಡಬೇಕಾದುದಕ್ಕೆ ಆಧಾರಗಳನ್ನೂ ತಿಳಿಯಲು ಸಹಾಯಕವಾಯಿತು. 1956-57ರಲ್ಲಿ ಉನ್ನತ ಪ್ರಾಥಮಿಕ ಶಾಲೆಗಳೂ ಸೇರಿದಂತೆ 22,803 ಪ್ರಾಥಮಿಕ ಮತ್ತು ಮೂಲ ಶಿಕ್ಷಣ ಶಾಲೆಗಳಿದ್ದುವು. ಅವುಗಳಲ್ಲಿದ್ದ ಒಟ್ಟು ಮಕ್ಕಳ ಸಂಖ್ಯೆ 19,17,258. ಅದರ ಹಿಂದಿನ ವರ್ಷದಲ್ಲಿದ್ದ ಒಟ್ಟು ಶಾಲೆಗಳು 22,250 ಮತ್ತು ಅವುಗಳಲ್ಲಿದ್ದ ಒಟ್ಟು ಮಕ್ಕಳ ಸಂಖ್ಯೆ 18,31,018. ಎರಡನೇಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲೇ ಹೊಸ ಶಾಲೆಗಳನ್ನು ತೆರೆದಿದ್ದರಿಂದ ಶಾಲೆಗಳ ಸಂಖ್ಯೆ ಹೆಚ್ಚಾಯಿತು. 1956-57ರಿಂದ ಹೆಚ್ಚಿನ ಸಂಖ್ಯೆಯಲ್ಲಿ ಏಕೋಪಾಧ್ಯಾಯ ಪ್ರಾಥಮಿಕ ಶಾಲೆಗಳನ್ನು ಶಾಲೆಗಳೇ ಇಲ್ಲದ ಕಡೆಯಲ್ಲಿ ತೆರೆಯಲಾಗುತ್ತಿತ್ತು. ಶಿಕ್ಷಣ ಸಮೀಕ್ಷೆಯ ವರದಿಯು ಹೊಸ ಶಾಲೆಗಳನ್ನು ತೆರೆಯಲು ಆಧಾರವಾಗಿತ್ತು.

ಮೂರನೇಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ, ಪ್ರಗತಿಯ ವೇಗ ಹೆಚ್ಚಾಯಿತು. 1965ರ ಅವಧಿಯಲ್ಲಿ ಸರಿಯಾದ ಸ್ಥಾನವನ್ನು ಗುರುತಿಸುವುದಕ್ಕೋಸ್ಕರ ಎರಡನೇಯ ಶೈಕ್ಷಣಿಕ ಸಮೀಕ್ಷೆಯನ್ನು ಕೈಗೊಳ್ಳಲಾಯಿತು. ಇದರ ಉದ್ದೇಶ ಅಂದು ಇದ್ದ ನೈಜಪರಿಸ್ಥಿತಿಯನ್ನು ಅರಿಯುವುದಾಗಿತ್ತು. ಈ ಸಮೀಕ್ಷೆಯ ಪ್ರಕಾರ ಶೇಕಡ 90ರಷ್ಟು ಜನ ವಸತಿಗಳು ಮತ್ತು ಶೇಕಡ 97.3ರಷ್ಟು ಜನರು ತಮ್ಮ ಮನೆಗೆ ಒಂದು ಮೈಲಿಯೊಳಗೇ ಪ್ರಾಥಮಿಕ ಶಿಕ್ಷಣ ಸೌಲಭ್ಯವನ್ನು ಹೊಂದಿದ್ದರು. (ಪ್ರಥಮ ಶೈಕ್ಷಣಿಕ ಸಮೀಕ್ಷೆಯ ಸಮಯದಲ್ಲಿ ಇಂಥ ಜನರ

ಶೇಕಡ ಪ್ರಮಾಣ 91.8ರಷ್ಟು). ಶೇಕಡ 0.5ರಷ್ಟು ಜನರು ಮಾತ್ರ ಪ್ರಾಥಮಿಕ ಶಿಕ್ಷಣಕ್ಕಾಗಿ ಮೂರು ಮೈಲಿಗಿಂತ ಹೆಚ್ಚು ದೂರ ಹೋಗಬೇಕಾಗಿತ್ತು. ಪ್ರಥಮ ಶಿಕ್ಷಣ ಸಮೀಕ್ಷೆಯ ವರದಿಯಂತೆ 28,539 ಜನವಸತಿಗಳಿಗೆ ಮೂರು ಮೈಲಿಯೊಳಗೆ ಉನ್ನತ ಪ್ರಾಥಮಿಕ ಶಿಕ್ಷಣ ದೊರಕುತ್ತಿತ್ತು. ಶೇಕಡ 70.75 ಜನರು ಈ ಸೌಲಭ್ಯವನ್ನು ಪಡೆದಿದ್ದರು. 1965ರ ಶೈಕ್ಷಣಿಕ ಸಮೀಕ್ಷೆಯ ಪ್ರಕಾರ 34,656 ಜನವಸತಿಗಳಿಗೆ ಈ ಅನುಕೂಲವಿತ್ತು. ಶೇಕಡ 91.06ರಷ್ಟು ಜನರಿಗೆ ಈ ಸೌಲಭ್ಯವಿತ್ತು. ಶೇಕಡ 1.9ರಷ್ಟು ಜನರು ಮಾತ್ರ ಈ ಸೌಲಭ್ಯ ಪಡೆಯಲು ತಮ್ಮ ಊರಿನಿಂದ ಐದು ಮೈಲಿಗಳಿಗಿಂತ ಹೆಚ್ಚು ದೂರ ಹೋಗಬೇಕಾಗಿತ್ತು. 1975-76ರಲ್ಲಿ ರಾಜ್ಯದಲ್ಲಿ ಒಟ್ಟು 33,441 ಶಾಲೆಗಳಿದ್ದವು. ಅದರ ಹಿಂದಿನ ವರ್ಷ ಅಂದರೆ 1974-75ರಲ್ಲಿ 32,840 ಶಾಲೆಗಳು ಮಾತ್ರ ಇದ್ದವು. 1974-75ರಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿದ್ದ ಮಕ್ಕಳ ಸಂಖ್ಯೆ 32.53 ಲಕ್ಷ. ಇದು 1975-76ರಲ್ಲಿ 33.44 ಲಕ್ಷಕ್ಕೆ ಏರಿತು. ಉನ್ನತ ಪ್ರಾಥಮಿಕ ಶಾಲೆಗಳಲ್ಲಿ, ಇದೇ ಅವಧಿಯಲ್ಲಿ ಮಕ್ಕಳ ಸಂಖ್ಯೆಯು 9.57 ಲಕ್ಷದಿಂದ 9.68 ಲಕ್ಷಕ್ಕೆ ಏರಿತು.

ಐದನೇಯ ಪಂಚವಾರ್ಷಿಕ ಯೋಜನೆಯು 6-10 ವರ್ಷದ ಎಲ್ಲ ಮಕ್ಕಳೂ ನೂರಕ್ಕೆ ನೂರರಷ್ಟು ಶಾಲೆಗೆ ಸೇರುವಂಥ ಯೋಜನೆಯನ್ನು ಹಾಕಿಕೊಂಡಿತು. ಜೊತೆಗೆ 10-13 ವರ್ಷದ ಗುಂಪಿನ ಶೇಕಡ 50ರಷ್ಟು ಮಕ್ಕಳಿಗೆ ಶಾಲೆಗೆ ಸೇರುವಂಥ ಸೌಲಭ್ಯಗಳನ್ನು ಕಲ್ಪಿಸುವ ಯೋಜನೆಯನ್ನೂ ಹಾಕಿಕೊಂಡಿತು. ಆರನೇಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮತ್ತು ಮುಂದಿನ ಯೋಜನೆಯ ಅವಧಿಯಲ್ಲಿ, ಅಂದರೆ ಹತ್ತು ವರ್ಷಗಳಲ್ಲಿ 6-13 ವರ್ಷದ ಎಲ್ಲ ಮಕ್ಕಳಿಗೂ ಶಿಕ್ಷಣ ಕೊಡುವಂಥ ಕಾರ್ಯಕ್ರಮವನ್ನು ಸರ್ಕಾರವು ಹಮ್ಮಿಕೊಂಡಿತು. ಆದರೆ ಎಲ್ಲ ಮಕ್ಕಳೂ ಶಾಲೆಗೆ ಸೇರುವುದಿಲ್ಲವೆಂಬ ವಾಸ್ತವಿಕಾಂಶವನ್ನು ಗಮನಕ್ಕೆ ತೆಗೆದುಕೊಂಡಿತು. ಆದುದರಿಂದ ಈ ಅವಧಿಯಲ್ಲಿ ಶಾಲೆಗೆ ಸೇರದ ಮಕ್ಕಳಿಗೆ ಅನೌಪಚಾರಿಕ ಶಿಕ್ಷಣದ ಮೂಲಕ ಅವರನ್ನು ವಿದ್ಯಾವಂತರನ್ನಾಗಿ ಮಾಡುವ ಉದ್ದೇಶವನ್ನಿಟ್ಟು ಕೊಂಡಿದೆ. ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕ ಮಾಡುವ ಉದ್ದೇಶದಿಂದ ಮತ್ತು ಶಾಲೆಗೆ ಹೋದ ಮಕ್ಕಳು ಮತ್ತೆ ನಿರಕ್ಷರಸ್ಥರಾಗುವ ಸಂಭವವನ್ನು ತಪ್ಪಿಸುವ ಉದ್ದೇಶದಿಂದ ಉನ್ನತ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಗಮನ ಕೊಟ್ಟಿದೆ. ಇದಕ್ಕಾಗಿ ನಾಲ್ಕನೇಯ ತರಗತಿಯ ಎಲ್ಲ ಮಕ್ಕಳನ್ನು ಐದನೇಯ ತರಗತಿಗೆ ಕಳುಹಿಸಲು ಯೋಜಿಸಲಾಯಿತು. ಹೀಗೆ ಎಲ್ಲ ಮಕ್ಕಳೂ ಮುಂದಿನ ತರಗತಿಗೆ ಹೋದ ಮೇಲೆ, ಅವರೆಲ್ಲರೂ ಏಳನೇಯ ತರಗತಿಯನ್ನು ಮುಗಿಸುವವರೆಗೆ ಶಾಲೆಯಲ್ಲಿ ಉಳಿಯುವುದು ಸಾಧ್ಯವಾಗುತ್ತದೆ. ಈ ಕಾರ್ಯಕ್ರಮವು ಕೆಲಕಾಲದ ಮೇಲೆ ವಯಸ್ಕರ ಶಿಕ್ಷಣವನ್ನು ತೀವ್ರಗೊಳಿಸುವುದಕ್ಕೆ ಸಹಾಯಕವಾಗುತ್ತದೆ. ಈ ಗುರಿಯಂತೆ ಒಂದನೇಯ ತರಗತಿಯಿಂದ ನಾಲ್ಕನೇಯ ತರಗತಿಯಲ್ಲಿನ ಮಕ್ಕಳ ಸಂಖ್ಯೆ 35.76 ಲಕ್ಷದಿಂದ 39 ಲಕ್ಷಕ್ಕೆ ಏರುತ್ತದೆ. ಐದನೇಯ ತರಗತಿಯಿಂದ ಏಳನೇಯ ತರಗತಿಯ ಮಕ್ಕಳ ಸಂಖ್ಯೆ 10.94 ಲಕ್ಷದಿಂದ 16.40 ಲಕ್ಷಕ್ಕೆ ಏರುತ್ತದೆ. ಈ ಲೆಕ್ಕಾಚಾರದ ಪ್ರಕಾರ 1983ರ ಅಂತ್ಯದ ಹೊತ್ತಿಗೆ 6-13 ವಯಸ್ಸಿನ ಮಕ್ಕಳಲ್ಲಿ ಶೇಕಡ 87ರಷ್ಟು ಮಂದಿ ಶಾಲೆಯಲ್ಲಿರುತ್ತಾರೆಂದು ಅಂದಾಜು ಮಾಡಲಾಗಿದೆ. 1981-82ರಲ್ಲಿ 35,161 ಪ್ರಾಥಮಿಕ ಶಾಲೆಗಳಿದ್ದುವು. ಒಟ್ಟು ಮಕ್ಕಳ ಸಂಖ್ಯೆ 49,71,971 ಇತ್ತು; ಶಿಕ್ಷಕರ ಸಂಖ್ಯೆ 1,03,145 ಇತ್ತು.

ಈ ಕೆಳಗಿನ ಪಟ್ಟಿಯಲ್ಲಿ 1979ರಲ್ಲಿದ್ದ ಎರಡು ವಿಧದ ಶಾಲೆಗಳ ಸಂಖ್ಯೆ ಮತ್ತು ಅವುಗಳಲ್ಲಿ ಓದುತ್ತಿದ್ದ ಮಕ್ಕಳ ಸಂಖ್ಯೆಯನ್ನು ತೋರಿಸಲಾಗಿದೆ.

| ವಿದ್ಯಾರ್ಥಿ/ ವಿದ್ಯಾರ್ಥಿನಿಯರು | ಕಿರಿಯ ಪ್ರಾಥಮಿಕ ಶಾಲೆಗಳು | | ಹಿರಿಯ ಪ್ರಾಥಮಿಕ ಶಾಲೆಗಳು | |
|---|---|---|---|---|
| | ಶಾಲೆಗಳ ಸಂಖ್ಯೆ | ದಾಖಲಾದವರು | ಶಾಲೆಗಳ ಸಂಖ್ಯೆ | ದಾಖಲಾದವರು |
| ಗಂಡು ಮಕ್ಕಳು* | 22,047 | 8,74,694 | 11,217 | 19,04,351 |
| ಹೆಣ್ಣು ಮಕ್ಕಳು** | 481 | 6,75,479 | 696 | 13,57,473 |
| ಮೊತ್ತ | 22,528 | 15,50,173 | 11,913 | 32,61,824 |

ಒಟ್ಟು ಶಾಲೆಗಳು : 34,441 ವಿದ್ಯಾರ್ಥಿಗಳು : 48,11,997

* ಗಂಡು ಮಕ್ಕಳೂ ಹೆಣ್ಣು ಮಕ್ಕಳು ಇರುವ ಸಂಯುಕ್ತ ಶಾಲೆಗಳು.

** ಹೆಣ್ಣು ಮಕ್ಕಳಿಗಾಗಿದ್ದ ಪ್ರತ್ಯೇಕ ಶಾಲೆಗಳು.

ಕಡ್ಡಾಯ ಪ್ರಾಥಮಿಕ ಶಿಕ್ಷಣ

1956ಕ್ಕೆ ಹಿಂದೆ ಕಡ್ಡಾಯ ಶಿಕ್ಷಣ ವ್ಯವಸ್ಥೆ ರಾಜ್ಯದ ಎಲ್ಲ ಭಾಗಗಳಲ್ಲಿಯೂ ಒಂದೇ ತರನಾಗಿರಲಿಲ್ಲ. 1913ರಲ್ಲಿ, ಮೈಸೂರು ಸಂಸ್ಥಾನವು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಆರಂಭಿಸಿತು. ಬರೋಡ ಸಂಸ್ಥಾನದ ನಂತರ ಕಡ್ಡಾಯ ಶಿಕ್ಷಣ ವನ್ನು ಆರಂಭಿಸಿದ ದೇಶೀಯ ಸಂಸ್ಥಾನಗಳಲ್ಲಿ ಮೈಸೂರು ಎರಡನೇಯದು. 1913ರ ಮೈಸೂರು ಪ್ರಾಥಮಿಕ ಶಿಕ್ಷಣ ನಿಬಂಧನೆಯು ('ರೆಗ್ಯುಲೇಶನ್') ಸಾರ್ವತ್ರಿಕ ಕಡ್ಡಾಯ ಶಿಕ್ಷಣಕ್ಕೆ ಅವಕಾಶ ಮಾಡಿಕೊಟ್ಟಿತು; ಮತ್ತು ಶಿಕ್ಷಣವು ಉಚಿತವಾಗಿತ್ತು. ಆರಂಭದಲ್ಲಿ 15 ಕೇಂದ್ರಗಳಲ್ಲಿ ಈ ನಿಬಂಧನೆಯನ್ನು ಜಾರಿಗೆ ತರಲಾಯಿತು. 1921ರಲ್ಲಿ 240 ಕೇಂದ್ರಗಳಲ್ಲಿ ಕಡ್ಡಾಯ ಶಿಕ್ಷಣ ಜಾರಿಯಲ್ಲಿತ್ತು. 1926ರಲ್ಲಿ ಅಂದಿದ್ದ ಪರಿಸ್ಥಿತಿಯನ್ನು ಪರಿಶೀಲಿಸಲಾಯಿತು. ತಾತ್ಕಾಲಿಕವಾಗಿ ಕಡ್ಡಾಯ ಶಿಕ್ಷಣವನ್ನು ಮುಂದೂಡಲಾಯಿತು. ಶಿಕ್ಷಣದ ತೀವ್ರ ವಿಸ್ತರಣೆಗೆ ಬದಲಾಗಿ ಇರುವ ಶಾಲೆಗಳನ್ನು ಉತ್ತಮಪಡಿಸುವುದಕ್ಕೆ ಪ್ರಾಮುಖ್ಯತೆ ಯನ್ನು ಕೊಡಲಾಯಿತು. 1941ರ ಮೈಸೂರು ಶಿಕ್ಷಣ ಶಾಸನವು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಲು ಅವಕಾಶ ಮಾಡಿ ಕೊಟ್ಟಿತು. ಆದರೆ ಆರ್ಥಿಕ, ಸಾಮಾಜಿಕ, ಆಡಳಿತ ಸಮಸ್ಯೆಗಳ ಸಲುವಾಗಿ ಯೋಜನೆಯನ್ನು ಕೈಬಿಟ್ಟು ತಾವಾಗಿ ಸೇರಿದ ಮಕ್ಕಳ ಹಾಜರಿಯನ್ನು ಕಡ್ಡಾಯ ಮಾಡಲು ಯೋಜಿಸ ಲಾಯಿತು. 1944ರ ತಿದ್ದುಪಡಿಯಾದ ಶಿಕ್ಷಣದ ಶಾಸನದ ಪ್ರಕಾರ ತಾವಾಗಿ ಸೇರಿದ ಮಕ್ಕಳ ತಂದೆತಾಯಿಯರು ಅಥವಾ ಪೋಷಕರು ಮಕ್ಕಳನ್ನು ಶಾಲೆಗೆ ಕ್ರಮವಾಗಿ ಕಳಿಸುವುದು ಕಡ್ಡಾಯವಾಯಿತು. ಇಂಥ ಮಕ್ಕಳು ತಮ್ಮ 12ನೇಯ ವಯಸ್ಸಿನವರಿಗೆ ಶಾಲೆಯಲ್ಲಿ ಉಳಿಯಬೇಕಾಯಿತು. 1945-46 ರಲ್ಲಿ ಪ್ರತೀ ಜಿಲ್ಲೆಯ ಒಂದೊಂದು ತಾಲೂಕಿನಲ್ಲಿ ಕಡ್ಡಾಯ ಹಾಜರಿ ಯೋಜನೆಯನ್ನು ಜಾರಿಗೆ ತರಲಾಯಿತು. ('ಕಂಪಲ್ಸರಿ ಅಟೆಂಡೆನ್ಸ್ ಸ್ಕೀಮ್'). ಕ್ರಮೇಣವಾಗಿ ಯೋಜನೆಯನ್ನು ಉಳಿದ ತಾಲೂಕುಗಳಿಗೆ ವಿಸ್ತರಿಸಲಾಯಿತು. ಹೆಚ್ಚುವರಿ ಶಾಲಾ ತನಿಖಾಧಿಕಾರಿಗಳು ಮತ್ತು ಹಾಜರಿ ಅಧಿಕಾರಿಗಳೂ (ಅಟೆಂಡೆನ್ಸ್ ಆಫೀಸರ್) ಮಕ್ಕಳ ಹಾಜರಿಯನ್ನು ತನಿಖೆ ಮಾಡುತ್ತಿದ್ದರು. ಆದರೆ ಈ ಯೋಜನೆಯ ಪ್ರಕಾರ ಪ್ರಾಥಮಿಕ ಶಾಲೆಗೆ ಸೇರದ ಮಕ್ಕಳ ಮೇಲೆ ಯಾವ ಹತೋಟಿಯೂ ಇರಲಿಲ್ಲ. 1950-51 ರಲ್ಲಿ ಈ ಯೋಜನೆಯನ್ನು ಬಿಟ್ಟುಬಿಡಲಾಯಿತು. ಈ ಮಧ್ಯೆ 1947-48ರಲ್ಲಿ ಒಂದು ಹೊಸ ಕಡ್ಡಾಯ ಶಿಕ್ಷಣ ಯೋಜನೆ ಯನ್ನು ರಾಜ್ಯದ ಒಂಬತ್ತು ಹೋಬಳಿಗಳಲ್ಲಿ ಜಾರಿಗೆ ತರಲಾ ಯಿತು. 1948-49ರಲ್ಲಿ ಮತ್ತೆ ಒಂಬತ್ತು ತಾಲೂಕುಗಳಿಗೆ ಈ ಯೋಜನೆಯನ್ನು ವಿಸ್ತರಿಸಲಾಯಿತು.

ಬೆಳಗಾವಿ ಪ್ರದೇಶದ ಜನರು ಆಗಿಂದಾಗ್ಗೆ ಕಡ್ಡಾಯ ಶಿಕ್ಷಣಕ್ಕಾಗಿ ಒತ್ತಾಯ ಮಾಡುತ್ತಲೇ ಇದ್ದರು. 1912ರಲ್ಲಿ ಗೋಪಾಲಕೃಷ್ಣ ಗೋಖಲೆಯವರು ಕೇಂದ್ರ ವಿಧಾನಸಭೆಯಲ್ಲಿ ಕಡ್ಡಾಯ ಶಿಕ್ಷಣ ಮಸೂದೆಯನ್ನು ಮಂಡಿಸಿ ಅದನ್ನು ಜಾರಿಗೆ ತರುವಂತೆ ಸರ್ಕಾರವನ್ನು ಒತ್ತಾಯಿಸಿದರು. ಆದರೆ ಆ ಸಭೆಯು ತನ್ನ ಒಪ್ಪಿಗೆಯನ್ನು ಕೊಡಲಿಲ್ಲ. ಮತ್ತೆ 1928ರಲ್ಲಿ ವಿಠ್ಠಲ ಭಾಯಿ ಪಟೇಲರು ಬೊಂಬಾಯಿ ಪ್ರಾಂತದ ವಿಧಾನಸಭೆಯಲ್ಲಿ ಪಟ್ಟಣಗಳಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ಕೊಡುವ ಮಸೂದೆಯನ್ನು ಮಂಡಿಸಿದರು. ಸಭೆಯು, ಕೆಲವು ಷರತ್ತು ಗಳೊಂದಿಗೆ ಈ ಮಸೂದೆಗೆ ಸಮ್ಮತಿಯನ್ನು ನೀಡಿತು. ನಾಲ್ಕು ಕನ್ನಡ ಜಿಲ್ಲೆಗಳಲ್ಲಿ, ಬ್ಯಾಡಗಿ ಪೌರಸಭೆಯೊಂದು ಮಾತ್ರ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದಿತು. ಅಥಣಿ, ಹಲ್ಯಾಳ ಮತ್ತು ಹೊನ್ನಾವರ ಪುರಸಭೆಗಳು ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ಕೊಡಲು ತೀರ್ಮಾನಿಸಿದುವು. ಆದರೆ ಶಿಕ್ಷಣವನ್ನು ಕಡ್ಡಾಯ ಮಾಡಲಿಲ್ಲ. 1923ರ ಪ್ರಾಥಮಿಕ ಶಿಕ್ಷಣ ಶಾಸನವು ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕ ಮಾಡುವ ಮತ್ತು ಕಡ್ಡಾಯವನ್ನಾಗಿ ಮಾಡುವ ಗುರಿಯನ್ನಿಟ್ಟುಕೊಂಡಿತ್ತು. ಆದರೆ ಹಣದ ಅಭಾವದಿಂದ ಮತ್ತು ಮುಂದೆ 1930 ದಶಕದಲ್ಲಿ, ಸರ್ಕಾರವು ಸ್ಥಳೀಯ ಸಂಸ್ಥೆಗಳಿಗೆ ಕೊಡುವ ಅನುದಾನವನ್ನು ಕಡಿಮೆ ಮಾಡಿದ್ದರಿಂದ ಪ್ರಾಥಮಿಕ ಶಿಕ್ಷಣವು ವಿಸ್ತಾರಗೊಳ್ಳಲು ಸಾಧ್ಯವಾಗಲಿಲ್ಲ.

ಅನಂತರ 1940ರ ದಶಕದಲ್ಲಿ ಕೆಲವು ಪೌರಸಭೆಗಳು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿ ಮಾಡಿದವು. ಹುಬ್ಬಳ್ಳಿ, ಧಾರವಾಡ, ವಿಜಾಪುರ ಮತ್ತು ಬೆಳಗಾವಿ ಪೌರ ಸಭೆಗಳು ಕ್ರಮವಾಗಿ ಜುಲೈ 1941, ಜೂನ್ 1942, ಜೂನ್ 1944 ಮತ್ತು 1947ರಲ್ಲಿ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತಂದವು. ಧಾರವಾಡ ಜಿಲ್ಲಾ ಸ್ಥಳೀಯ ಮಂಡಲಿ (ಲೋಕಲ್ ಬೋರ್ಡ್) ಜೂನ್ 1943ರಲ್ಲಿ ಬ್ಯಾಡಗಿ, ಹಾವೇರಿ ಮತ್ತು ರಾಣೇಬೆನ್ನೂರು ನಗರಗಳಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದಿತು. ಇವು ಸ್ಥಳೀಯ ಮಂಡಳಿಯ ಅಧಿಕಾರಕ್ಕೆ ಒಳಪಡದ ಪುರಸಭೆಗಳು.

1934ರಷ್ಟು ಹಿಂದೆಯೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ರೀತಿಯ ಕಡ್ಡಾಯ ಶಿಕ್ಷಣವು ಜಾರಿಗೆ ಬಂದಿತ್ತು. ಆದರ ಪ್ರಕಾರ ಶಾಲೆಗೆ ಸೇರಬೇಕಾದ ವಯಸ್ಸಿನ ಮಗುವೊಂದನ್ನು ಶಾಲೆಯಿಂದ ಬಿಡಿಸಲು ಸಾಧ್ಯವಾಗುತ್ತಿರಲಿಲ್ಲ. 1945-46 ರಲ್ಲಿ ಕರಾವಳಿ ಪ್ರದೇಶದಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಲಾಯಿತು. 1957ರ ಹೊತ್ತಿಗೆ ಎಲ್ಲ ಪಟ್ಟಣಗಳಲ್ಲೂ ಮತ್ತು 222 ಗ್ರಾಮಗಳಲ್ಲೂ ಕಡ್ಡಾಯ ಶಿಕ್ಷಣವು ಜಾರಿಯಲ್ಲಿತ್ತು. ಬಳ್ಳಾರಿ ಜಿಲ್ಲೆಯಲ್ಲಿ ಕಡ್ಡಾಯ ಶಿಕ್ಷಣವನ್ನು 1945-46ರಲ್ಲಿ ಆರು ಕೇಂದ್ರಗಳಲ್ಲಿಯೂ, 1946-47ರಲ್ಲಿ 35 ಕೇಂದ್ರ ಗಳಲ್ಲಿಯೂ 1947-48ರಲ್ಲಿ 18 ಕೇಂದ್ರಗಳಲ್ಲಿಯೂ ಜಾರಿಗೆ

ತರಲಾಯಿತು. ಯುದ್ಧೋತ್ತರ ಪುನರ್ನಿರ್ಮಾಣ ಯೋಜನೆಗಳಿಗೆ ಅನುಗುಣವಾಗಿ ಕೊಳ್ಳೇಗಾಲದ ನಾಲ್ಕು ಕೇಂದ್ರಗಳಲ್ಲಿ ಅಂದರೆ - ಕೊಳ್ಳೇಗಾಲ, ಪಾಳಯಂ, ಮೂಡುವನಹಳ್ಳಿ ಮತ್ತು ಕಾಮಗೆರೆ ಗಳಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಲಾಯಿತು. 1952ರ ಹೈದರಾಬಾದ್ ಕಡ್ಡಾಯ ಶಿಕ್ಷಣ ಶಾಸನದ ಪ್ರಕಾರ, ಕಲ್ಬುರ್ಗಿ ಪ್ರದೇಶದಲ್ಲಿ 1953ರಲ್ಲಿ ಕಡ್ಡಾಯ ಶಿಕ್ಷಣವನ್ನು ಪ್ರತಿಯೊಂದು ಜಿಲ್ಲೆಯಲ್ಲೂ ಹಂತಹಂತವಾಗಿ ವಿವಿಧ ಭಾಗಗಳಲ್ಲಿ ಜಾರಿಗೆ ತರಲಾಯಿತು. ರಾಜ್ಯದ ಏಕೀಕರಣದ ಸಮಯದಲ್ಲಿ ಕೊಡಗಿನಲ್ಲಿ ಕಡ್ಡಾಯ ಶಿಕ್ಷಣವು ಜಾರಿಯಲ್ಲಿರಲಿಲ್ಲ. ಭಾರತ ಸರ್ಕಾರದ ಸೂಚನೆಯಂತೆ, ಮೂರನೇಯ ಪಂಚವಾರ್ಷಿಕ ಯೋಜನೆಯ ಆದಿಯಲ್ಲೇ ಈ ವಿಷಯದಲ್ಲಿ ಒಂದು ಏಕರೂಪತೆಯನ್ನು ಸ್ಥಾಪಿಸಲು ಕ್ರಮ ತೆಗೆದುಕೊಳ್ಳಲಾಯಿತು. ಅಂದು ಜಾರಿ ಯಲ್ಲಿದ್ದ ವಿವಿಧ ಕಾನೂನುಗಳನ್ನು ಒಟ್ಟುಗೂಡಿಸುವುದು ಪ್ರಥಮ ಕರ್ತವ್ಯವಾಯಿತು. ಕರ್ನಾಟಕ ಕಡ್ಡಾಯ ಪ್ರಾಥಮಿಕ ಶಿಕ್ಷಣ ಶಾಸನವು ವಿಧಾನ ಮಂಡಲಗಳಲ್ಲಿ 1961ರಲ್ಲಿ ಅನು ಮೋದಿತವಾಯಿತು. 1961 ಆಗಸ್ಟ್‌ನಿಂದಲೇ ಈ ಶಾಸನವನ್ನು ಜಾರಿಗೆ ತರಲಾಯಿತು.

ಈ ಶಾಸನದ ಪ್ರಕಾರ ಐದು ವರ್ಷ ಹತ್ತು ತಿಂಗಳಿನಿಂದ ಆರು ವರ್ಷ ಹತ್ತು ತಿಂಗಳು ವಯಸ್ಸಿನ ಮಕ್ಕಳೆಲ್ಲರೂ ಒಂದನೇಯ ತರಗತಿಗೆ ಸೇರಲೇಬೇಕಾಗಿದ್ದಿತು. ಇದು ಶಾಸನದ ಆಚರಣೆಯ ಆರಂಭವಾಗಿತ್ತು. ಯೋಜನೆಯನ್ನು ಅನ್ವಯಗೊಳಿಸುವ ಪೂರ್ವ ಭಾವಿಯಾಗಿ 1961ನೆ ಫೆಬ್ರವರಿಯಲ್ಲಿ ಮಕ್ಕಳ ಗಣತಿಯನ್ನು ಮೊತ್ತ ಮೊದಲನೇಯ ಬಾರಿಗೆ ಮಾಡಲಾಯಿತು. ಇದರಂತೆ ಕ್ರಮ ಕ್ರಮವಾಗಿ ಮುಂದಿನ ವಯಸ್ಸಿನ ಮಕ್ಕಳಿಗೆ ಕಾನೂನನ್ನು ಅನ್ವಯಿಸಿ ಮೂರನೇಯ ಯೋಜನೆಯ ಕೊನೆಯ ಹೊತ್ತಿಗೆ, ಆರು ವರ್ಷದಿಂದ ಹತ್ತು ವರ್ಷದವರೆಗಿನ ಎಲ್ಲ ಮಕ್ಕಳನ್ನೂ ಕಡ್ಡಾಯ ಶಿಕ್ಷಣದ ವ್ಯಾಪ್ತಿಯೊಳಗೆ ತರುವ ಯೋಜನೆಯನ್ನು ಮಾಡಲಾಯಿತು. ರಾಜ್ಯಾದ್ಯಂತ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದ ಮೊದಲನೇಯ ವರ್ಷದಲ್ಲಿ (1961-62) ಈ ಯೋಜನೆಗೆ ತುಂಬ ಪ್ರೋತ್ಸಾಹ ದೊರಕಿತು. ದಾಖಲಾದ ಮಕ್ಕಳ ಸಂಖ್ಯೆ ತುಂಬ ಹೆಚ್ಚಾಗಿದ್ದಿತು. ಕಾನೂನಿನ ಯಾವ ಬಲಾತ್ಕಾರವೂ ಇಲ್ಲದೆ ಕೇವಲ ಜನರ ಮನಸ್ಸನ್ನು ಒಲಿಸುವುದ ರಿಂದಲೇ 1961-62ರಲ್ಲಿ ಗಣತಿಯಾದ ಗಂಡು ಮಕ್ಕಳಲ್ಲಿ ಶೇಕಡ 94.8 ರಷ್ಟು ಹೆಣ್ಣು ಮಕ್ಕಳಲ್ಲಿ ಶೇಕಡ 91.8 ರಷ್ಟು, ಒಟ್ಟು ಶೇಕಡ 93.8 ರಷ್ಟು ಮಕ್ಕಳು ದಾಖಲಾದರು. ಜನಗಳ ಪ್ರತಿಕ್ರಿಯೆಯು ಮುಂದಿನ ವರ್ಷಗಳಲ್ಲಿ ತೃಪ್ತಿಕರವಾಗಿಯೇ ಇದ್ದು 1977-78ರ ಕೊನೆಯ ಹೊತ್ತಿಗೆ 35.70 ಲಕ್ಷ ಮಕ್ಕಳು ದಾಖಲಾದರು. ಇದು ಗಣತಿಯಾದ ಮಕ್ಕಳಲ್ಲಿ ಶೇಕಡ 99.24 ರಷ್ಟಾಗಿತ್ತು. ಆದರೆ ಮಕ್ಕಳ ಹಾಜರಾತಿ, ಅದರಲ್ಲೂ ಗ್ರಾಮಾಂತರ ಪ್ರದೇಶಗಳಲ್ಲಿಯ ಹಾಜರಾತಿ ಕಡಿಮೆಯಾಗಿತ್ತು. ಜೊತೆಗೆ ಮಧ್ಯದಲ್ಲಿ ಬಿಡುವ ಮತ್ತು ಒಂದೇ ತರಗತಿಯಲ್ಲಿ ಬಹಳ ಕಾಲ ಉಳಿಯುವ ಮಕ್ಕಳ ಸಂಖ್ಯೆಯು ಸಾಕಷ್ಟಿತ್ತು. ಇವುಗಳ ಪರಿಣಾಮವೆಂದರೆ, ದಾಖಲೆಯಲ್ಲಿ ಸಾಧಿತವಾದ ಪ್ರಗತಿಯು ಸ್ವಲ್ಪಮಟ್ಟಿಗೆ ಭಂಗ ಹೊಂದಿದ್ದು, 1979-80ರಲ್ಲಿ 31.70 ಲಕ್ಷ ಮಕ್ಕಳು ಗಣತಿಯಲ್ಲಿದ್ದರು. ಇದರಲ್ಲಿ ಗಂಡು ಮಕ್ಕಳ ಸಂಖ್ಯೆ ಮತ್ತು ಹೆಣ್ಣು ಮಕ್ಕಳ ಸಂಖ್ಯೆ ಕ್ರಮವಾಗಿ 17.44 ಮತ್ತು 14.26 ಲಕ್ಷ ಆಗಿತ್ತು. ಆದರೆ 29.921 ಲಕ್ಷ ಮಕ್ಕಳು ಮಾತ್ರ ದಾಖಲಾಗಿದ್ದು, ದಾಖಲಾದ ಮಕ್ಕಳ ಶೇಕಡಾವಾರು ಸಂಖ್ಯೆ 94.36 ಆಗಿತ್ತು. ಮಧ್ಯಾಹ್ನದ ಊಟ, ಹೆಣ್ಣು ಮಕ್ಕಳ ಹಾಜರಾತಿ ವಿದ್ಯಾರ್ಥಿವೇತನ, ಪುಸ್ತಕ, ಪಾಟಿ (ಸ್ಲೇಟ್)ಗಳನ್ನು ಉಚಿತವಾಗಿ ಕೊಡುವುದು, ಮುಂತಾದ ಸೌಕರ್ಯಗಳನ್ನು ಒದಗಿಸಲಾಯಿತು. ಜೊತೆಗೆ, ಕಡ್ಡಾಯ ಶಿಕ್ಷಣವನ್ನು ಪರಿಣಾಮಕಾರಿಯಾಗಿ ಆಚರಣೆಗೆ ತರಲು ಶಾಲಾಭಿ ವೃದ್ಧಿ ಸಮಿತಿಗಳನ್ನು ರಚಿಸಲಾಯಿತು. ಪ್ರತಿಯೊಂದು ಶಾಲೆಗೂ ಒಂದೊಂದು ಅಭಿವೃದ್ಧಿ ಸಮಿತಿ ಇತ್ತು. ಇದರಿಂದ ಸ್ಥಳೀಯ ಜನರು, ಕಡ್ಡಾಯ ಶಿಕ್ಷಣ ಯೋಜನೆಯನ್ನು ಜಾರಿಗೆ ತರುವುದರಲ್ಲಿ ಸಕ್ರಿಯವಾಗಿ ಭಾಗವಹಿಸುವಂತಾಯಿತು. ಈ ಸಮಿತಿಗಳಿಗೆ ದಾಖಲಾತಿ, ಹಾಜರಾತಿ, ಅಗತ್ಯವಾದ ಸಕಲ ಸೌಕರ್ಯಗಳನ್ನು ಒದಗಿಸುವುದು, ಕಟ್ಟಡಗಳ ನಿರ್ಮಾಣ ಮುಂತಾದ ಕಾರ್ಯ ಗಳನ್ನು ವಹಿಸಲಾಯಿತು. ಜಿಲ್ಲಾ ಮಟ್ಟದಲ್ಲಿ ನಡೆದ ಏಳನೇಯ ತರಗತಿಯ ಪರೀಕ್ಷೆಯಲ್ಲಿ ಉತ್ತಮವಾಗಿ ತೇರ್ಗಡೆ ಹೊಂದಿದವರಿಗೆ ಪ್ರತಿಭಾ ವಿದ್ಯಾರ್ಥಿ ವೇತನವನ್ನು ಕೊಡುವ ಯೋಜನೆಯೂ ಜಾರಿಗೆ ಬಂತು.

## ಮೂಲ ಶಿಕ್ಷಣ

ಮೂಲ ಶಿಕ್ಷಣ (ಬೇಸಿಕ್ ಎಜುಕೇಶನ್) ಯೋಜನೆಯು ವಾರ್ಧಾ ಶಿಕ್ಷಣ ಯೋಜನೆ ಎಂಬ ಹೆಸರಿನಲ್ಲಿ ಮಹಾತ್ಮಾ ಗಾಂಧೀಜಿಯವರಿಂದ 1937 ರಲ್ಲಿ ರೂಪಿತವಾಯಿತು. 1938 ರಲ್ಲಿ ಮೂಲ ಶಿಕ್ಷಣವನ್ನು ವ್ಯವಸ್ಥೆ ಮಾಡಲು, ಮೇಲ್ವಿಚಾರಣೆ ಮಾಡಲು, ಮತ್ತು ಅದನ್ನು ವ್ಯಾಪಕವಾಗುವಂತೆ ಮಾಡಲು ಮುಂಬೈ ಪ್ರಾಂತದಲ್ಲಿ ಒಬ್ಬ ವಿಶೇಷ ಅಧಿಕಾರಿಯನ್ನು ನೇಮಿಸಿದರು. ಇದು ಆದದ್ದು 1938 ರ ನವೆಂಬರ್‌ನಲ್ಲಿ, ಅನಂತರ, 1939 ರಲ್ಲಿ ಮೂಲ ಶಿಕ್ಷಣಕ್ಕೆ ಸಂಬಂಧಿಸಿದಂಥ ಒಂದು ಸಲಹಾ ಸಮಿತಿಯನ್ನು ರಚಿಸಲಾಯಿತು. ಇದರಲ್ಲಿ ಪ್ರಾಂತ್ಯದ ಮೂರೂ ಭಾಷಾ ಪ್ರದೇಶಗಳಿಗೆ ಸೇರಿದ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರು ಇದ್ದರು. ಈ ಯೋಜನೆ ಯನ್ನು ಆರಂಭಿಸಲು ನಾಲ್ಕು ಸಾಂದ್ರ ಕ್ಷೇತ್ರಗಳನ್ನು ಆರಿಸಿ ಕೊಳ್ಳಲಾಯಿತು. ಇದರಲ್ಲಿ ಧಾರವಾಡವೂ ಒಂದಾಗಿದ್ದು, ಈ ಸಾಂದ್ರ ಕ್ಷೇತ್ರದಲ್ಲಿ 16 ಕನ್ನಡ ಶಾಲೆಗಳಿದ್ದವು. ದಿಲ್ಲಿಯ ಜಾಮಿಯ ಮಿಲಿಯ ಮತ್ತು ವಾರ್ಧಾಗಳಲ್ಲಿ ತರಬೇತಿ ಪಡೆದವರು

ಮೂಲ ಶಿಕ್ಷಣ ಶಾಲೆಗಳಿಗಾಗಿ ಆರಿಸಿದ ಶಿಕ್ಷಕರಿಗೆ ತಕ್ಕ ಶಿಕ್ಷಣವನ್ನು ಕೊಟ್ಟರು. ಒಂದು ಮತ್ತು ಎರಡನೇಯ ತರಗತಿಗಳಿಗೆ ವಿವರವಾದ ಪಾಠ ಕ್ರಮವನ್ನೂ ಸಿದ್ಧಪಡಿಸಲಾಯಿತು. ಹೀಗೆ ಸಿದ್ಧಪಡಿಸಿದ ಪಾಠ ಕ್ರಮವನ್ನು ಶಾಲೆಗಳಲ್ಲಿ ಆಚರಣೆಗೆ ಕೊಡಲಾಯಿತು. ಮೂಲ ಶಿಕ್ಷಣದಲ್ಲಿ ತರಬೇತು ಕೊಡಲು ಪ್ರಾಂತದಲ್ಲಿ ನಾಲ್ಕು ಶಿಕ್ಷಕರ ತರಬೇತಿ ಕೇಂದ್ರಗಳನ್ನು 1939ರಲ್ಲಿ ಆರಂಭಿಸಲಾಯಿತು. ಇದರಲ್ಲಿ ಧಾರವಾಡವೂ ಒಂದು. ಕೆಲಸದಲ್ಲಿದ್ದ ಕೆಲವು ಶಿಕ್ಷಕರಿಗೂ ಮತ್ತು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದವರಿಗೂ ಕೈ ಕಸುಬು, ಭಾಷೆಗಳು, ಇತರ ಬೌದ್ಧಿಕ ವಿಷಯಗಳು, ಮತ್ತು ಶೈಕ್ಷಣಿಕ ಸಿದ್ಧಾಂತ, ಮನೋವಿಜ್ಞಾನ, ಮತ್ತು ಬೋಧನಾ ಕ್ರಮಗಳಲ್ಲಿ ಶಿಕ್ಷಣವನ್ನು ಕೊಡಲಾಯಿತು. ಈ ತರಬೇತಿಯ ಅವಧಿ ಒಂದು ವರ್ಷ. 1941-44 ರ ಅವಧಿಯಲ್ಲಿ ಆದ ರಾಜಕೀಯ ಅಶಾಂತಿಯಿಂದ ಮೂಲ ಶಿಕ್ಷಣದ ಪ್ರಗತಿಯು ಕುಂಠಿತವಾಯಿತು. ಏನೇ ಆಗಿರಲಿ, ಕೆಲಕಾಲವಾದ ಮೇಲೆ ಮುಂದಿನ ತರಗತಿಗಳಲ್ಲಿ ಹೊಸ ಪಠ್ಯ ಕ್ರಮ ಆಚರಣೆಗೆ ತರುವುದರ ಮೂಲಕ ಮೂಲ ಶಿಕ್ಷಣ ಪದ್ಧತಿಯನ್ನು ಮುಂದುವರಿಸಲಾಯಿತು. ಪದವೀಧರ ಶಿಕ್ಷಕರಿಗೆ ಮೂಲ ಶಿಕ್ಷಣದ ಬಗೆಗೆ ತರಬೇತಿ ಕೊಡಲು, ಒಂದು ತರಬೇತಿ ಕೇಂದ್ರವನ್ನು 1947-48 ರಲ್ಲಿ ಬೆಳಗಾವಿಯಲ್ಲಿ ಆರಂಭಿಸಲಾಯಿತು. 1948-49 ರಲ್ಲಿ ಇದನ್ನು ಧಾರವಾಡಕ್ಕೆ ವರ್ಗಾಯಿಸಲಾಯಿತು. ಇಲ್ಲಿ ಶಿಕ್ಷಣಾವಧಿಯು ಒಂದು ವರ್ಷದ್ದಾಗಿದ್ದು ತರಬೇತಿಯು ಡಿಪ್ಲೋಮಾ ಮಟ್ಟದ್ದಾಗಿತ್ತು. 1954-55 ರ ಹೊತ್ತಿಗೆ ಪ್ರಾಥಮಿಕ ಶಿಕ್ಷಕರ ಎಲ್ಲ ತರಬೇತಿ ಕೇಂದ್ರಗಳೂ ಮೂಲ ಶಿಕ್ಷಣ ಶಾಲೆಗಳ ಶಿಕ್ಷಕರ ತರಬೇತಿ ಕೇಂದ್ರಗಳಾದವು. ಪಠ್ಯಕ್ರಮವು ತುಂಬ ಬದಲಾವಣೆ ಹೊಂದಿತು. 1949-50 ರಲ್ಲಿ ಶಿಕ್ಷಣಾವಧಿಯು ಒಂದು ವರ್ಷದಿಂದ ಎರಡು ವರ್ಷದಷ್ಟು ಹೆಚ್ಚಾಯಿತು. ಧಾರವಾಡ ಮೂಲ ಶಿಕ್ಷಣ ಕೇಂದ್ರದ ಡಿಪ್ಲೋಮಾವನ್ನು ಬಿ. ಟಿ. ಅಥವಾ ಬಿ. ಎಡ್. ಗೆ ಸಮವೆಂದು ಪರಿಗಣಿಸಲಾಯಿತು.

ರಾಜರ ಆಳ್ವಿಕೆಗೆ ಒಳಪಟ್ಟಿದ್ದ ಮೈಸೂರು ಸಂಸ್ಥಾನದಲ್ಲಿ, ಮೈಸೂರು ನಗರದಲ್ಲಿದ್ದ ವಾರ್ಧಾ ಶಿಕ್ಷಣ ಸಮಿತಿಯೂ ಕೆಂಗೇರಿಯಲ್ಲಿದ್ದ (ಬೆಂಗಳೂರು ಉಪನಗರ) ಮೂಲ ಶಿಕ್ಷಣ ಮಂಡಲಿಯೂ 1944ಕ್ಕೆ ಮೊದಲೇ ಮೂಲ ಶಿಕ್ಷಣಕ್ಕಾಗಿ ಶ್ರಮಿಸುತ್ತಿದ್ದವು. ಇವೆರಡೂ ಖಾಸಗೀ ಸಂಸ್ಥೆಗಳು. ಆ ವರ್ಷ ಪ್ರಜಾಪ್ರತಿನಿಧಿ ಸಭೆಯು 2,000 (ಎರಡು ಸಾವಿರ) ಮೂಲ ಶಿಕ್ಷಣ ಶಾಲೆಗಳನ್ನು ಆರಂಭಿಸಬೇಕೆಂದು ನಿರ್ಣಯ ಮಾಡಿತು. ವಾರ್ಧಾ ಜಿಲ್ಲೆಯ ಸೇವಾಗ್ರಾಮ ಮತ್ತು ಶಾಂತಿನಿಕೇತನಗಳಿಗೆ ಕೆಲವು ಅಧಿಕಾರಿಗಳನ್ನು ಮೂಲ ಶಿಕ್ಷಣದಲ್ಲಿ ತರಬೇತಿ ಪಡೆಯಲು ಕಳುಹಿಸಲಾಯಿತು. 1947 ರ ಏಪ್ರಿಲ್‌ನಲ್ಲಿ ಪ್ರಾಥಮಿಕ ಶಿಕ್ಷಕರಿಗಾಗಿ ಮೂಲ ಶಿಕ್ಷಣ ತರಬೇತಿ ಕೇಂದ್ರವನ್ನು ವಿದ್ಯಾನಗರದಲ್ಲಿ ಆರಂಭಿಸಲಾಯಿತು. ಶಿಕ್ಷಣ ನಿರ್ದೇಶಕರ ಅಧ್ಯಕ್ಷತೆಯಲ್ಲಿ ಮೂಲ ಶಿಕ್ಷಣದ ವಿಚಾರವಾಗಿ ಸಲಹೆ ಕೊಡಲು ಒಂದು ಸಲಹಾ ಸಮಿತಿಯನ್ನು ರಚಿಸಲಾಯಿತು. ತರಬೇತಾದ ಶಿಕ್ಷಕರು ದೊರೆತಂತೆ ಶಾಲೆಗಳನ್ನು ಮೂಲ ಶಿಕ್ಷಣ ಶಾಲೆಗಳಾಗಿ ಪರಿವರ್ತಿಸಲಾಯಿತು. 1955-56 ಹೊತ್ತಿಗೆ ಇದ್ದ ಕಿರಿಯ ಮೂಲ ಶಿಕ್ಷಣ ಶಾಲೆಗಳ ಸಂಖ್ಯೆ 264, ಹಿರಿಯ ಮೂಲ ಶಿಕ್ಷಣ ಶಾಲೆಗಳ ಸಂಖ್ಯೆ 11. ಇವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 16,156; ಶಿಕ್ಷಕರ ಸಂಖ್ಯೆ 749. ಇವರಲ್ಲಿ ತರಬೇತಿ ಪಡೆದವರು 558, ತರಬೇತಿ ಪಡೆಯದ ಶಿಕ್ಷಕರ ಸಂಖ್ಯೆ 191. ಶಾಲೆಗಳಿಗಾಗಿ ಆಗುತ್ತಿದ್ದ ವಾರ್ಷಿಕ ವೆಚ್ಚ 5.06 ಲಕ್ಷ.

ಕೊಡಗು ಜಿಲ್ಲೆಯಲ್ಲಿ (ಕೊಡಗು ರಾಜ್ಯ) ಮೂಲ ಶಿಕ್ಷಣ ಯೋಜನೆಯನ್ನು 1953 ರಲ್ಲಿ ಆರಂಭಿಸಲಾಯಿತು. ಸೋಮವಾರಪೇಟೆ ತಾಲೂಕಿನ 21 ಪ್ರಾಥಮಿಕ ಶಾಲೆಗಳನ್ನೂ, 13 ಮಾಧ್ಯಮಿಕ ಶಾಲೆಗಳನ್ನೂ ಕಿರಿಯ ಮತ್ತು ಹಿರಿಯ ಮೂಲ ಶಿಕ್ಷಣ ಶಾಲೆಗಳನ್ನಾಗಿ (ಕೃಷಿ ಕೆಲಸವು ಮುಖ್ಯ ಕಸಬಾಗಿತ್ತು) ಪರಿವರ್ತಿಸುವುದರ ಮೂಲಕ ಮೂಲ ಶಿಕ್ಷಣ ಆರಂಭವಾಯಿತು. ವೀರರಾಜಪೇಟೆ ಮೂಲ ಶಿಕ್ಷಣ ತರಬೇತಿ ಕೇಂದ್ರವು ಶಿಕ್ಷಕರಿಗೆ ತರಬೇತಿ ಕೊಡುತ್ತಿತ್ತು. 1954-55 ರ ಹೊತ್ತಿಗೆ ಸೋಮವಾರಪೇಟೆಯನ್ನು ಬಿಡು ಇತರ ತಾಲೂಕುಗಳಲ್ಲಿ 46 ಪ್ರಾಥಮಿಕ ಶಾಲೆಗಳೂ 35 ಮಾಧ್ಯಮಿಕ ಶಾಲೆಗಳೂ ಮೂಲ ಶಿಕ್ಷಣ ಶಾಲೆಗಳಾಗಿ ಪರಿವರ್ತಿತವಾಗಿದ್ದವು.

1948 ರ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂಲ ಶಿಕ್ಷಣವು ಆರಂಭವಾಯಿತು. ಉಜಿರೆಯಲ್ಲಿ ಮೂಲ ಶಿಕ್ಷಣದ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಮಂಗಳೂರು ಉಡುಪಿ ಮತ್ತು ಕಿನ್ನಿಕಂಬಳ ತರಬೇತಿ ಸಂಸ್ಥೆಗಳು ಮೂಲಶಿಕ್ಷಣ ತರಬೇತಿ ಸಂಸ್ಥೆಗಳಾಗಿ ಪರಿವರ್ತನೆ ಹೊಂದಿದುವು.

15ನೇ ಪುಟದಲ್ಲಿ 1956-57 ರಲ್ಲಿ ಬೇರೆ ಬೇರೆ ವಲಯಗಳಲಿದ್ದ ಮೂಲ ಶಿಕ್ಷಣ ಶಾಲೆಗಳ ಸಂಖ್ಯೆಯನ್ನು ಕೊಡಲಾಗಿದೆ.

ಹೊಸ ರಾಜ್ಯವು, ಪ್ರಾಥಮಿಕ ಶಿಕ್ಷಣವು ಮೂಲ ಶಿಕ್ಷಣದ ರೂಪದ್ದಾಗಿರಬೇಕೆಂಬ ನಿರ್ಣಯವನ್ನು ತೆಗೆದುಕೊಂಡಿತು. ಅಭಿವೃದ್ಧಿಯಲ್ಲಿದ್ದ ಪ್ರಾಥಮಿಕ ಶಾಲೆಗಳನ್ನು ಮೂಲ ಶಿಕ್ಷಣ ಶಾಲೆಗಳಾಗಿ ಪರಿವರ್ತನೆ ಮಾಡುವುದರ ಮೂಲಕ ಮೂಲ ಶಿಕ್ಷಣದ ಪ್ರಸಾರ ಆಗುತ್ತಿತ್ತು. 1960-61 ರಲ್ಲಿ 2,068 ಕಿರಿಯ ಮೂಲ ಶಿಕ್ಷಣ ಶಾಲೆಗಳೂ, ಮತ್ತು 1,059 ಹಿರಿಯ ಮೂಲ ಶಿಕ್ಷಣ ಶಾಲೆಗಳೂ ಇದ್ದವು. 1965-66 ರ ಹೊತ್ತಿಗೆ, ಕಿರಿಯ ಶಾಲೆಗಳ ಸಂಖ್ಯೆಯು 1,140 ಕ್ಕೆ ಇಳಿಯಿತು ; ಹಿರಿಯ ಮೂಲ ಶಿಕ್ಷಣ ಶಾಲೆಗಳ ಸಂಖ್ಯೆ 2,179 ಕ್ಕೆ ಏರಿತು. ಕಿರಿಯ

| ವಲಯ | ಕಿರಿಯ ಮೂಲ ಶಿಕ್ಷಣ ಶಾಲೆಗಳು | ಹಿರಿಯ ಮೂಲ ಶಿಕ್ಷಣ ಶಾಲೆಗಳು | ಮೂಲ ಶಿಕ್ಷಣ ಶಾಲೆಗಳ ಒಟ್ಟು ಸಂಖ್ಯೆ | ಒಟ್ಟು ಪ್ರಾಥಮಿಕ ಶಾಲೆಗಳಲ್ಲಿ ಮೂಲ ಶಿಕ್ಷಣ ಶಾಲೆಗಳ ಶೇಕಡ |
|---|---|---|---|---|
| ಹಳೆಯ ಮೈಸೂರು | 264 | 11 | 275 | 2 |
| ಬೆಳಗಾವಿ | 53 | 555 | 608 | 10 |
| ಕಲ್ಬುರ್ಗಿ | 55 | — | 55 | 3 |
| ಹಳೆಯ ಮದ್ರಾಸ್ | 48 | 19 | 67 | 5 |
| ಕೊಡಗು | 69 | 49 | 118 | 53 |
| ಒಟ್ಟು | 489 | 634 | 1,123 | 5 |

ಶಾಲೆಗಳನ್ನು ಹಿರಿಯ ಮೂಲ ಶಿಕ್ಷಣ ಶಾಲೆಗಳಿಗೆ ಪರಿವರ್ತನೆ ಮಾಡಿದುದು ಕಿರಿಯ ಶಾಲೆಗಳ ಸಂಖ್ಯೆಯು ಕಡಿಮೆಯಾಗಲು ಮುಖ್ಯ ಕಾರಣವಾಗಿತ್ತು. ಮೂಲ ಶಿಕ್ಷಣದಲ್ಲಿ ತರಬೇತಿ ಪಡೆದ ಶಿಕ್ಷಕರ ಬೇಡಿಕೆಯನ್ನು ಪೂರೈಸಲು ಅನೇಕ ಮೂಲ ಶಿಕ್ಷಣ ತರಬೇತಿ ಕೇಂದ್ರಗಳನ್ನು ತೆರೆಯಲಾಯಿತು. ತರಬೇತಿ ಪಡೆದ ಶಿಕ್ಷಕರಿಗಾಗಿ ಮೂರು ತಿಂಗಳ ಒಂದು ಅಲ್ಪಾವಧಿ ತರಬೇತಿ ಶಿಕ್ಷಣವನ್ನು ವಿದ್ಯಾನಗರ, ಗುಡಿಗುಂಟೆ (ರಾಯಚೂರು ಜಿಲ್ಲೆ) ಮತ್ತು ಜಮಖಂಡಿಗಳಲ್ಲಿ ಆರಂಭಿಸಲಾಯಿತು. ಈ ಮೂರು ಕೇಂದ್ರಗಳಿಂದ ಒಂದು ವರ್ಷದಲ್ಲಿ ಒಟ್ಟು 450 ಶಿಕ್ಷಕರು ತರಬೇತಿ ಪಡೆಯುತ್ತಿದ್ದರು. ಇದರ ಜೊತೆಗೆ ಪೂರ್ಣ ಮೂಲ ಶಿಕ್ಷಣ ತರಬೇತಿ ಕೇಂದ್ರಗಳಿಂದ ತರಬೇತಿ ಪಡೆದ ಶಿಕ್ಷಕರೂ ಇರುತ್ತಿದ್ದರು. 1955-56 ರಲ್ಲಿ ವಿದ್ಯಾನಗರದಲ್ಲಿ ಒಂದು ಮೂಲ ಶಿಕ್ಷಣ ತರಬೇತಿ ಕೇಂದ್ರವೂ ಹಾಗೂ ರಾಜ್ಯದ ಬೇರೆ ಭಾಗಗಳಲ್ಲಿ 22 ಮೂಲ ಶಿಕ್ಷಣ ಸಂಸ್ಥೆಗಳೂ ಇದ್ದವು. 1962-63 ರಲ್ಲಿ ಹೊಸ ಪಾಠ ಕ್ರಮವನ್ನು ಆರಂಭಿಸಿದ ಮೇಲೆ ರಾಜ್ಯದ ಎಲ್ಲ ಪ್ರಾಥಮಿಕ ಶಾಲೆಗಳಲ್ಲಿಯೂ ಮೂಲ ಶಿಕ್ಷಣ ಪದ್ಧತಿಯೇ ಆಚರಣೆಗೆ ಬಂದಿತು.

## ಪ್ರಾಥಮಿಕ ಶಿಕ್ಷಣದ ಪುನರ್ವ್ಯವಸ್ಥೆ

ರಾಜ್ಯ ಏಕೀಕರಣಕ್ಕೆ ಮೊದಲು, ಇತರ ವಿಷಯಗಳಂತೆ, ಶಾಲಾ ಪಠ್ಯಕ್ರಮವೂ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿತ್ತು. ಸಮಗ್ರ ಶಿಕ್ಷಣ ಸಲಹಾ ಸಮಿತಿಯು, ಪ್ರಾಥಮಿಕ ಶಿಕ್ಷಣವು ಏಳು ವರ್ಷಗಳಾಗಿರತಕ್ಕದ್ದೆಂದೂ, ಇದೊಂದು ಅಖಂಡವಾದ ಪದ್ಧತಿಯಾಗಿರತಕ್ಕದ್ದೆಂದೂ ಈ ಪದ್ಧತಿಯಲ್ಲಿ (1) ಮಾತೃಭಾಷೆ, (2) ಕನ್ನಡ ಮಾತೃಭಾಷೆಯಲ್ಲದವರಿಗೆ ಮೂರನೇಯ ತರಗತಿಯಿಂದ ಕನ್ನಡದ ಬೋಧನೆ, (3) ಐದನೇಯ ತರಗತಿಯಿಂದ ಇಂಗ್ಲೀಷ್ ಬೋಧನೆ, (4) ನಾಲ್ಕನೇಯ ತರಗತಿಯಿಂದ ಹಿಂದಿ ಶಿಕ್ಷಣ, (5) ಸಾಮಾನ್ಯ ವಿಜ್ಞಾನ, (6) ಸಾಮಾಜಿಕ ಪಾಠಗಳು, (7) ಸಾಮಾನ್ಯ ಗಣಿತ, (8) ಕಲೆ, ಕಸುಬು ಮತ್ತು ಇತರ ಸಾಮಾನ್ಯ ಚಟುವಟಿಕೆಗಳು, ಮತ್ತು (9) ದೈಹಿಕ ಶಿಕ್ಷಣ ಅಡಕವಾಗಿರತಕ್ಕದ್ದೆಂದು ಸಮಿತಿಯು ಶಿಫಾರಸ್ಸು ಮಾಡಿತು. ಮೂಲ ಶಿಕ್ಷಣ ಸ್ವರೂಪವನ್ನು ಪಡೆದಿದ್ದ ಈ ಯೋಜನೆ ಮೂಲ ಶಿಕ್ಷಣ ಶಾಲೆಗಳು ಮತ್ತು ಬೇರೆ ಸಾಧಾರಣ ಶಾಲೆಗಳೆರಡಕ್ಕೂ ಸಾಮಾನ್ಯವಾಗಿತ್ತು. ಎಲ್ಲ ಶಾಲೆಗಳಿಗೂ ಅನ್ವಯವಾಗುತ್ತಿದ್ದ ಈ ಪಾಠಕ್ರಮವು 1959-60ರಲ್ಲಿ ಆರಂಭವಾಗಿ ಕ್ರಮ ಕ್ರಮೇಣ ಮುಂದಿನ ತರಗತಿಗಳಲ್ಲಿ ಆಚರಣೆಗೆ ಬಂದಿತು. 1962-63ರ ಹೊತ್ತಿಗೆ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲೂ ಆಚರಣೆಗೆ ಬಂದು, ಎಲ್ಲ ಶಾಲೆಗಳಿಗೂ ಒಂದು ಸಾಮಾನ್ಯ ಪಠ್ಯಕ್ರಮ ದೊರೆಯುವಂತೆ ಆಯಿತು.

ಸೆಕೆಂಡರಿ ಶಾಲೆಗಳ ಪಾಠಕ್ರಮಕ್ಕೆ ಹೊಂದುವಂತೆ ಪ್ರಾಥಮಿಕ ಶಾಲೆಗಳ ಪಾಠಕ್ರಮವನ್ನು ಮಾರ್ಪಾಡು ಮಾಡಲು 1969ರಲ್ಲಿ ಒಂದು ಸಲಹಾ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ಪರಿಷ್ಕಾರಗೊಳಿಸಿದ್ದ ಪಾಠಕ್ರಮವನ್ನು 1971 ರಲ್ಲಿ ಅನುಮೋದಿಸಿತು. ಪರಿಷ್ಕಾರಗೊಳಿಸಿದ ಪಠ್ಯಕ್ರಮದ ಮುಖ್ಯಾಂಶಗಳು ಇವು : (1) ತ್ರಿಭಾಷಾ ಸೂತ್ರದಂತೆ ಮೂರು ಭಾಷೆಗಳ ಜೊತೆಗೆ, ಮೂರನೇಯ ತರಗತಿಯಿಂದ ಆರನೇಯ ತರಗತಿಯವರೆಗೆ ಕನ್ನಡೇತರರಿಗೆ ಕನ್ನಡ ಬೋಧನೆ ಕಡ್ಡಾಯವಾದುದು, (2) ಆರೋಗ್ಯ ಶಿಕ್ಷಣವು ವಿಜ್ಞಾನ ಶಿಕ್ಷಣದ ಒಂದು ಅಂಶವಾದುದು ಮತ್ತು ಸಮಾಜ ಪಾಠದ ಅಂಗವಾಗಿ ಜನಸಂಖ್ಯಾ ಶಿಕ್ಷಣದ ಸುಲಭ ಪಾಠಗಳನ್ನು ಸೇರಿಸಿದುದು, (3) ನೈತಿಕ ಶಿಕ್ಷಣವು ಕಡ್ಡಾಯವಾದದ್ದು, (4) ದೈಹಿಕ ಶಿಕ್ಷಣದ ಪಾಠಕ್ರಮವು ಕಡ್ಡಾಯವಾದದ್ದು. 1974-75 ರಿಂದ

ಪರಿಷ್ಕೃತ ಪಠ್ಯಕ್ರಮವು ಜಾರಿಗೆ ಬಂದಿತು. ಇದು ಮುಂದಿನ ತರಗತಿಗಳಲ್ಲಿ ಕ್ರಮೇಣ ಆಚರಣೆಗೆ ಬಂದಿತು.

ಬೆಳಗಾವಿ ಪ್ರದೇಶದಲ್ಲಿ, ಜಿಲ್ಲಾ ಲೋಕಲ್ ಬೋರ್ಡುಗಳು ಜಿಲ್ಲಾ ಶಿಕ್ಷಣ ಮಂಡಲಗಳ ಮೇಲೆ ಯಾವ ಹತೋಟಿಯನ್ನೂ ಹೊಂದಿರಲಿಲ್ಲ. ಆದರೆ ಅವು ಪ್ರಾಥಮಿಕ ಶಿಕ್ಷಣಕ್ಕಾಗುವ ವೆಚ್ಚದಲ್ಲಿ ಒಂದು ಭಾಗವನ್ನು ಹೊರಬೇಕಾಗಿತ್ತು. ಲೋಕಲ್ ಫಂಡ್ ಸೆಸ್‌ನಿಂದ ಈ ಹಣವನ್ನು ಕೊಡಬೇಕಾಗಿತ್ತು. ಸೆಸ್ ಅನ್ನು ವಸೂಲ್ಮಾಡುವುದು ಲೋಕಲ್ ಬೋರ್ಡ್‌ನ ಕರ್ತವ್ಯವಾಗಿತ್ತು. ಪೂರ್ಣ ವೆಚ್ಚದಲ್ಲಿ ಶೇಕಡ 95ರಷ್ಟು ವೆಚ್ಚವನ್ನು ಸರ್ಕಾರವೇ ವಹಿಸಿಕೊಂಡಿತ್ತು. ಆದುದರಿಂದ 1969 ರಲ್ಲಿ ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಿ ರಾಜ್ಯಪಾಲರು ಆ ಭಾಗದ ಜಿಲ್ಲಾ ಶಿಕ್ಷಣ ಮಂಡಲಗಳನ್ನು ರದ್ದು ಮಾಡಿದರು. ಮತ್ತು ಅದೇ ಆಜ್ಞೆಯ ಪ್ರಕಾರ ಎಲ್ಲ ಶಾಲೆಗಳನ್ನೂ ಸರ್ಕಾರವು ವಹಿಸಿಕೊಂಡಿತು.

## ಸೆಕೆಂಡರಿ ಅಥವಾ ಪ್ರೌಢ ಶಿಕ್ಷಣ

### ಕರ್ನಾಟಕ ಏಕೀಕರಣಕ್ಕೆ ಪೂರ್ವದಲ್ಲಿ

ಹಳೆಯ ಮೈಸೂರು ಸಂಸ್ಥಾನ: 1858 ರಲ್ಲಿ ಬೆಂಗಳೂರಿನಲ್ಲಿ ಅಂದಿನ ಮೈಸೂರು ಸಂಸ್ಥಾನದಲ್ಲೇ ಪ್ರಥಮ ಪ್ರೌಢಶಾಲೆಯನ್ನು ಆರಂಭಿಸಲಾಯಿತು. ಇದು ಮದ್ರಾಸು ವಿಶ್ವವಿದ್ಯಾಲಯದ ಅಂಗೀಕೃತ ಸಂಸ್ಥೆ ('ಎಫಿಲಿಯೇಟೆಡ್') ಯಾಗಿತ್ತು. ಅನಂತರ ತುಮಕೂರು, ಶಿವಮೊಗ್ಗ ಮತ್ತು ಹಾಸನಗಳಲ್ಲಿದ್ದ ಮಿಷನ್ ಶಾಲೆಗಳನ್ನೂ, ಮೈಸೂರು ನಗರದಲ್ಲಿದ್ದ ಮಹಾರಾಜ ಪ್ರೌಢ ಶಾಲೆಯನ್ನೂ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಯಿತು. 1871-72 ರಲ್ಲಿ ಮೆಟ್ರಿಕ್ ತರಗತಿಯವರೆಗೆ ಶಿಕ್ಷಣ ಕೊಡುತ್ತಿದ್ದ 11 ಪ್ರೌಢ ಶಾಲೆಗಳಿದ್ದವು. ರಾಜ್ಯವನ್ನು ಅರಸು ಮನೆತನಕ್ಕೆ ಮತ್ತೆ ವಹಿಸಿಕೊಟ್ಟಾಗ (1881) 166 ಪ್ರೌಢ ಮಟ್ಟದ ಶಾಲೆಗಳಿದ್ದವು. ಅವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 3,084. ಸೆಕೆಂಡರಿ ಅಥವಾ ಪ್ರೌಢ ಶಿಕ್ಷಣದಲ್ಲಿ ಎರಡು ಹಂತಗಳಿದ್ದವು—ಮಿಡ್ಲ್ ಸ್ಕೂಲ್ ಹಂತ ಮತ್ತು ಪ್ರೌಢ ಶಾಲೆಯ ಹಂತ. ಈ ಶಿಕ್ಷಣವನ್ನು ನಾಲ್ಕು ವಿವಿಧ ಶಾಲೆಗಳಲ್ಲಿ ಕೊಡಲಾಗುತ್ತಿತ್ತು—ವರ್ನಾಕ್ಯುಲರ್ ಲೋಯರ್ ಸೆಕೆಂಡರಿ ತರಗತಿಗಳಿದ್ದ ಪ್ರಾಥಮಿಕ ಶಾಲೆಗಳು, ವರ್ನಾಕ್ಯುಲರ್ ಅಪ್ಪರ್ ಸೆಕೆಂಡರಿ ಶಾಲೆಗಳು, ಆ್ಯಂಗ್ಲೋ—ವರ್ನಾಕ್ಯುಲರ್ ಶಾಲೆಗಳು ಮತ್ತು ಪ್ರೌಢ ಶಾಲೆಗಳು. ಅಪ್ಪರ್ ಸೆಕೆಂಡರಿ ಶಾಲೆಗಳಲ್ಲಿ ಓದುತ್ತಿದ್ದವರು ಮಿಡ್ಲ್ ಸ್ಕೂಲ್ ಪರೀಕ್ಷೆಯ ಇಂಗ್ಲಿಷ್‌ನಲ್ಲಿ ತೇರ್ಗಡೆಯಾದ ಹೊರತು ಅವರನ್ನು ಪ್ರೌಢ ಶಾಲೆಗೆ ಸೇರಿಸುತ್ತಿರಲಿಲ್ಲ. 1910-11 ರಲ್ಲಿ 16 ಪ್ರೌಢ ಶಾಲೆಗಳಿದ್ದವು. ಅವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 3,435. 1930-31 ರವರೆಗೆ ಪ್ರೌಢ ಶಾಲೆಗಳಲ್ಲಿ ಇಂಗ್ಲೀಷ್ ಶಿಕ್ಷಣ ಮಾಧ್ಯಮವಾಗಿತ್ತು. ಆ ವರ್ಷ ಪ್ರೌಢ ಶಾಲೆಯ ಮೊದಲನೇಯ ತರಗತಿಯಲ್ಲಿ ಕನ್ನಡವು ಶಿಕ್ಷಣ ಮಾಧ್ಯಮವಾಯಿತು. 1913 ರಲ್ಲಿ ಎಸ್.ಎಸ್.ಎಲ್.ಸಿ. ಯೋಜನೆಯನ್ನು ಆರಂಭಿಸಲಾಯಿತು. 1937-38 ರಲ್ಲಿ ಪಾಠ ಪಟ್ಟಿಯನ್ನು ಸುಧಾರಿಸಲಾಯಿತು. ಕಡ್ಡಾಯ ಅಥವಾ ಕಂಪಲ್ಸರಿ ಗುಂಪು ಮತ್ತು ಐಚ್ಛಿಕ ಗುಂಪು ಎಂಬ ಎರಡು ಗುಂಪುಗಳನ್ನು ಪಾಠ ಪಟ್ಟಿಯಲ್ಲಿ ಅಳವಡಿಸಲಾಯಿತು. 1948 ರಲ್ಲಿ ಜಿಲ್ಲಾ ಬೋರ್ಡುಗಳು ಪ್ರೌಢ ಶಾಲೆಗಳನ್ನು ಆರಂಭಿಸಿದವು. ರಾಜ್ಯದಲ್ಲಿ ಪ್ರೌಢ ಶಿಕ್ಷಣ ವಿಸ್ತರಿಸಲು ಇದು ಕಾರಣವಾಯಿತು.

ಈ ಕೆಳಗಿನ ಪಟ್ಟಿಯಲ್ಲಿ ಬೇರೆ ಬೇರೆ ವರ್ಷಗಳಲ್ಲಿದ್ದ ಪ್ರೌಢ ಶಾಲೆಗಳ ಮತ್ತು ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆಯನ್ನು ಕೊಡಲಾಗಿದೆ.

| ವರ್ಷ | ಪ್ರೌಢಶಾಲೆಗಳು | | | ವಿದ್ಯಾರ್ಥಿಗಳು | | |
|---|---|---|---|---|---|---|
| | ಬಾಲಕರ | ಬಾಲಕಿಯರ | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| 1931 | 29 | 5 | 34 | 6,568 | 383 | 6,951 |
| 1943-44 | 47 | 15 | 62 | 16,032 | 1,977 | 18.009 |
| 1951-52 | 181 | 36 | 217 | 53,535 | 12,195 | 65,730 |
| 1955–56 | 219 | 47 | 266 | 67,379 | 16,638 | 84,017 |

ಬೆಳಗಾವಿ ಪ್ರದೇಶ : ಬೆಳಗಾವಿ ವಲಯದಲ್ಲಿ 1882ರಲ್ಲಿ ನಾಲ್ಕು ಪ್ರೌಢಶಾಲೆಗಳಿದ್ದವು. ಬೆಳಗಾವಿಯಲ್ಲಿ ಸರ್ಕಾರದ ಅನುದಾನವನ್ನು ಪಡೆಯುತ್ತಿದ್ದ ಒಂದು ಮಿಷನರಿ ಶಾಲೆಯೂ, ಧಾರವಾಡ, ಬೆಳಗಾವಿ ಮತ್ತು ಕಾರವಾರಗಳಲ್ಲಿ ಒಂದೊಂದು ಸರ್ಕಾರಿ ಪ್ರೌಢಶಾಲೆಯೂ ಇದ್ದವು. ಧಾರವಾಡ ಶಾಲೆಯು 1848ರಲ್ಲಿಯೂ, ಬೆಳಗಾವಿ ಸರ್ಕಾರಿ ಪ್ರೌಢಶಾಲೆಯು 1850 ರಲ್ಲಿಯೂ ಆರಂಭವಾದವು. ಕನ್ನಡ ಪ್ರದೇಶವಾದ ದಕ್ಷಿಣ ವಿಭಾಗದಲ್ಲಿ ಹತ್ತು ಪ್ರಥಮ ದರ್ಜೆ ಮತ್ತು 47 ದ್ವಿತೀಯ ದರ್ಜೆಯ ಆ್ಯಂಗ್ಲೊ-ವರ್ನ್ಯಾಕ್ಯುಲರ್ ಶಾಲೆಗಳು ಇದ್ದವು. ಪ್ರತಿಯೊಂದು ಜಿಲ್ಲಾ ಕೇಂದ್ರದಲ್ಲಿಯೂ ಒಂದೊಂದು ಸರ್ಕಾರಿ ಪ್ರೌಢಶಾಲೆಯನ್ನು ತೆರೆಯುವುದು ಸರ್ಕಾರದ ನೀತಿಯಾಗಿತ್ತು. ಅದರಂತೆ ವಿಜಾಪುರದಲ್ಲಿ ಸರ್ಕಾರಿ ಪ್ರೌಢಶಾಲೆಯು 1890ರಲ್ಲಿ ಆರಂಭವಾಯಿತು. ಇದರಿಂದ ನಾಲ್ಕು ಜಿಲ್ಲಾ ಕೇಂದ್ರಗಳಲ್ಲಿಯೂ ಒಂದೊಂದು ಸರ್ಕಾರಿ ಪ್ರೌಢಶಾಲೆಯಿದ್ದಂತೆ ಆಯಿತು. ಪ್ರೌಢಶಿಕ್ಷಣದ ವಿಸ್ತರಣೆಯನ್ನು ಖಾಸಗೀ ಸಂಸ್ಥೆಗಳಿಗೇ ಬಿಡಲಾಯಿತು. ಕ್ರೈಸ್ತ ಮಿಷನರಿಗಳು ತಮ್ಮ ಸಂಸ್ಥೆಗಳನ್ನು ಪ್ರೌಢಶಾಲೆಯ ಮಟ್ಟಕ್ಕೆ ತರಲು ಪ್ರಾರಂಭಿಸಿದರು. ಪುರಸಭೆಗಳೂ ಪ್ರೌಢಶಾಲೆಗಳನ್ನು ಸ್ಥಾಪಿಸಿ ಬೆಳೆಸಲು ಆಸಕ್ತಿ ವಹಿಸಿದ್ದವು. 1921-22ರ ಹೊತ್ತಿಗೆ 19 ಪ್ರೌಢಶಾಲೆಗಳಾದವು. ಕೆ.ಎಲ್.ಇ. ಸೊಸೈಟಿ ಮತ್ತು ಕೆ.ಇ. ಬೋರ್ಡ್ (ಕರ್ನಾಟಕ ಎಜುಕೇಷನ್ ಬೋರ್ಡ್) ಮುಂತಾದ ಸೊಸೈಟಿಗಳು ಅಸ್ತಿತ್ವಕ್ಕೆ ಬಂದವು. ಅವಕ್ಕೆ ಶಿಕ್ಷಣವನ್ನು ಚೆನ್ನಾಗಿ ಬೆಳೆಸುವ ಸಾಮರ್ಥ್ಯವು ಇತ್ತು. ವೃತ್ತಿಶಿಕ್ಷಣವನ್ನು ಕೊಡುವ ಉದ್ದೇಶದಿಂದ ವೃತ್ತಿ ಶಿಕ್ಷಣ ಪ್ರೌಢಶಾಲೆಗಳನ್ನು ಧಾರವಾಡ, ಬೆಳಗಾವಿ ಮತ್ತು ವಿಜಾಪುರಗಳಲ್ಲಿ 1938-39ರಲ್ಲಿ ಆರಂಭಿಸಲಾಯಿತು. 1939-40ರ ಹೊತ್ತಿಗೆ ಧಾರವಾಡದಲ್ಲಿದ್ದ ಬಾಲಕರ ಸರ್ಕಾರಿ ಪ್ರೌಢಶಾಲೆಯನ್ನು ಮುಚ್ಚಲಾಯಿತು. ಅಲ್ಲಿದ್ದ ಸರ್ಕಾರಿ ಬಾಲಕಿಯರ ಮಿಡ್ಲ್ ಸ್ಕೂಲನ್ನು ಸರ್ಕಾರಿ ಬಾಲಕಿಯರ ಪ್ರೌಢಶಾಲೆಯನ್ನಾಗಿ ಪರಿವರ್ತಿಸಲಾಯಿತು. 1956ರ ಹೊತ್ತಿಗೆ 128 ಪ್ರೌಢಶಾಲೆಗಳು ಆ ಪ್ರದೇಶದಲ್ಲಿದ್ದವು. ಅಲ್ಲಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರ ಒಟ್ಟು ಸಂಖ್ಯೆ 41,571. ಇವುಗಳಲ್ಲಿ, ಒಂಬತ್ತು ಮಾತ್ರ ಸರ್ಕಾರಿ ಪ್ರೌಢಶಾಲೆಗಳಿದ್ದವು.

ಮದ್ರಾಸ್ ಪ್ರದೇಶ : ಪ್ರೌಢಶಿಕ್ಷಣವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1860-61ರಲ್ಲಿ ಆರಂಭವಾಯಿತು. ಆಗ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ನಡೆಸುತ್ತಿದ್ದ ವಿಶ್ವವಿದ್ಯಾನಿಲಯದ ಅಂಗೀಕೃತ ಸಂಸ್ಥೆಯಾಗಿದ್ದ ಒಂದು ಶಾಲೆಯನ್ನು ಮಿಷನರಿ ಸಂಸ್ಥೆಯು ಪ್ರಾರಂಭಿಸಿತು. 1881-82ರ ಹೊತ್ತಿಗೆ ಎರಡು ಪ್ರೌಢಶಾಲೆಗಳಿದ್ದವು. ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 192. 1891-92ರಲ್ಲಿ ಶಾಲೆಗಳ ಸಂಖ್ಯೆಯು ನಾಲ್ಕು ಆಯಿತು. ವಿದ್ಯಾರ್ಥಿಗಳ ಸಂಖ್ಯೆ 400ಕ್ಕೆ ಏರಿತು. ಇಪ್ಪತ್ತನೇಯ ಶತಮಾನದ ಆದಿ ದಶಕಗಳಲ್ಲಿ ಅನೇಕ ಖಾಸಗಿ ಸಂಸ್ಥೆಗಳು ಅನೇಕ ಪ್ರೌಢಶಾಲೆಗಳನ್ನು ಆರಂಭಿಸಿದವು. ಇದರಿಂದ ಪ್ರೌಢಶಿಕ್ಷಣವು ಬೆಳೆಯಿತು. ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ 1923ರಲ್ಲಿ ಜಿಲ್ಲಾ ಪ್ರೌಢಶಿಕ್ಷಣ ಸಮಿತಿ ಅಥವಾ ಡಿಸ್ಟ್ರಿಕ್ಟ್ ಸೆಕೆಂಡರಿ ಎಜುಕೇಷನ್ ಬೋರ್ಡುಗಳು ಅಸ್ತಿತ್ವಕ್ಕೆ ಬಂದವು. ಪ್ರೌಢಶಿಕ್ಷಣವನ್ನು ಈ ಸಂಸ್ಥೆಗಳು ವ್ಯವಸ್ಥೆ ಮಾಡುತ್ತಿದ್ದವು. 1931-32ರಲ್ಲಿ ಈ ಪ್ರದೇಶದಲ್ಲಿ 17 ಪ್ರೌಢಶಾಲೆಗಳಿದ್ದವು. 1946-47ರ ಹೊತ್ತಿಗೆ 29 ಆದವು; 1951ರ ಹೊತ್ತಿಗೆ 64 ಆದವು. ವಿದ್ಯಾರ್ಥಿಗಳ ಸಂಖ್ಯೆ 24,600 ಇತ್ತು. ಬಳ್ಳಾರಿ ಜಿಲ್ಲೆಯಲ್ಲಿ, 1845ರಲ್ಲಿ ವಡ್ಲಾರ್ ಹೈಸ್ಕೂಲ್ ಆರಂಭವಾಯಿತು. ಇದು ಇಡೀ ಜಿಲ್ಲೆಯಲ್ಲಿನ ಅತ್ಯಂತ ಹಳೆಯ ಪ್ರೌಢಶಾಲೆ. 1881-82ರಲ್ಲಿ ಎರಡು ಪ್ರೌಢಶಾಲೆಗಳಿದ್ದವು. ಇವುಗಳಲ್ಲಿನ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 57. 1891ರ ಹೊತ್ತಿಗೆ ಇವುಗಳ ಸಂಖ್ಯೆ ಎಂಟಕ್ಕೆ ಹೆಚ್ಚಿ ವಿದ್ಯಾರ್ಥಿಗಳ ಸಂಖ್ಯೆ 197 ಆಯಿತು. 1932ರವರೆಗೆ ಈ ಸಂಖ್ಯೆ ಎಂಟೇ ಆಗಿದ್ದಿತು. ಆದರೆ ವಿದ್ಯಾರ್ಥಿಗಳ ಸಂಖ್ಯೆ 2,418 ಆಯಿತು. 1946-47ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿದ್ದ ಪ್ರೌಢಶಾಲೆಗಳ ಸಂಖ್ಯೆ 11. ಕೊಳ್ಳೇಗಾಲದಲ್ಲಿ 1919ರಲ್ಲಿ ಇಡೀ ತಾಲೂಕಿಗೆ ಒಂದೇ ಒಂದು ಬೋರ್ಡ್ ಪ್ರೌಢಶಾಲೆ ಇತ್ತು. 1940ರಲ್ಲಿ, ಪ್ರೌಢಶಾಲೆಯ ಉನ್ನತ ತರಗತಿಗಳಲ್ಲಿ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡಲಾಯಿತು. 1947ರಲ್ಲಿ ಇಡೀ ತಾಲೂಕಿನಲ್ಲಿ ಒಂದು ಪ್ರೌಢಶಾಲೆಯೂ ಒಂದು ಮಿಡ್ಲ್ ಸ್ಕೂಲೂ ಇದ್ದವು. 1954ರಲ್ಲಿ ಕೊಳ್ಳೇಗಾಲದಲ್ಲಿ ಹೆಣ್ಣುಮಕ್ಕಳಿಗೆ ಪ್ರತ್ಯೇಕವಾಗಿ ಒಂದು ಪ್ರೌಢಶಾಲೆಯನ್ನೂ ಸಿಂಗಾನಲ್ಲೂರಿನಲ್ಲಿ ಇನ್ನೊಂದು ಪ್ರೌಢಶಾಲೆಯನ್ನೂ ಜಿಲ್ಲಾ ಬೋರ್ಡ್ ಪ್ರಾರಂಭಿಸಿತು. ಅಂದರೆ ತಾಲೂಕಿನಲ್ಲಿದ್ದ ಮೂರು ಪ್ರೌಢಶಾಲೆಗಳೂ ಜಿಲ್ಲಾ ಬೋರ್ಡ್ ಶಾಲೆಗಳೇ ಆಗಿದ್ದವು.

ಕಲ್ಬುರ್ಗಿ ಪ್ರದೇಶ : ಕಲ್ಬುರ್ಗಿ ಪ್ರದೇಶದಲ್ಲಿ ಇಂಗ್ಲೀಷ್ ಹೈಸ್ಕೂಲ್ ಮತ್ತು ಉಸ್ಮಾನಿಯ ಹೈಸ್ಕೂಲ್ ಎಂಬ ಎರಡು ವಿಧದ ಪ್ರೌಢಶಾಲೆಗಳಿದ್ದವು. ಇಂಗ್ಲಿಷ್ ಪ್ರೌಢಶಾಲೆಗಳು ಮದ್ರಾಸು ವಿಶ್ವವಿದ್ಯಾಲಯದ ಎಸ್.ಎಸ್.ಎಲ್.ಸಿ ಪರೀಕ್ಷೆಯ ನಿಯಮಗಳನ್ನು ಅನುಸರಿಸುತ್ತಿದ್ದವು. ಉಸ್ಮಾನಿಯ ಪ್ರೌಢಶಾಲೆಗಳು ಉಸ್ಮಾನಿಯ ವಿಶ್ವವಿದ್ಯಾಲಯವನ್ನು ಸೇರುವುದಕ್ಕೆ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುತ್ತಿದ್ದವು. 1875-76ರಲ್ಲಿ ಕಲ್ಬುರ್ಗಿ ನಗರದಲ್ಲಿ ಆರಂಭವಾದ ಆ್ಯಂಗ್ಲೋ-ವರ್ನ್ಯಾಕ್ಯುಲರ್ ಸ್ಕೂಲ್ 1885-86ರಲ್ಲಿ ಪ್ರೌಢಶಾಲೆಯಾಯಿತು. ಬಿದರೆಯಲ್ಲಿದ್ದ ಶಾಲೆ 1891ರಲ್ಲಿ ಪ್ರೌಢಶಾಲೆಯಾಯಿತು. 1916ರಲ್ಲಿ ಕಲ್ಬುರ್ಗಿಯಲ್ಲಿ ಒಂದು ಉಸ್ಮಾನಿಯ ಪ್ರೌಢಶಾಲೆ ಇತ್ತು. 1935ರಲ್ಲಿ ಐದು ಪ್ರೌಢಶಾಲೆಗಳಿದ್ದವು. 1937ರಲ್ಲಿ ಸೆಕೆಂಡರಿ ಎಜುಕೇಷನ್ ಬೋರ್ಡ್ (ಪ್ರೌಢಶಾಲಾ

ಶಿಕ್ಷಣ ಮಂಡಲಿ) ರಚಿತವಾಯಿತು. ಉಸ್ಮಾನಿಯ ಮೆಟ್ರಿಕ್ಯುಲೇಷನ್ ಮತ್ತು ಎಚ್. ಎಸ್. ಎಲ್. ಸಿ. ಕೋರ್ಸುಗಳೆರಡೂ ಪರಸ್ಪರ ಐಕ್ಯವಾಗಿ ಒಂದೇ ಕೋರ್ಸ್ ಆಗಿ ರೂಪು ತಾಳಿತು. ಇದು ಹೈಯರ್ ಸೆಕೆಂಡರಿ ಸರ್ಟಿಫಿಕೇಟ್ ಪರೀಕ್ಷೆಯ ಕೋರ್ಸ್ ಎಂಬ ಹೆಸರನ್ನು ಪಡೆಯಿತು. ಇಂಗ್ಲಿಷ್ ಉರ್ದು ಗಳೆರಡೂ ಶಿಕ್ಷಣ ಮಾಧ್ಯಮಗಳಾದವು. 1956ರಲ್ಲಿ ಆದ ಏಕೀಕರಣದ ಸಮಯದಲ್ಲಿ 19 ಪ್ರೌಢಶಾಲೆಗಳಿದ್ದವು. ಅವುಗಳಲ್ಲಿ 11 ಸರ್ಕಾರಿ ಶಾಲೆಗಳು ; ಎಂಟು ಖಾಸಗೀ ಪ್ರೌಢಶಾಲೆಗಳು ; 15 ಬಾಲಕರ ಮತ್ತು ನಾಲ್ಕು ಬಾಲಕಿಯರ ಪ್ರೌಢಶಾಲೆಗಳು.

**ಕೊಡಗು :** ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್‌ನಲ್ಲಿ 1879–80ರಲ್ಲಿ ಮೆಟ್ರಿಕ್ಯುಲೇಷನ್ ತರಗತಿಯೂ ಆರಂಭವಾಯಿತು. ಆಗ ಅದು ಒಂದು ಪೂರ್ಣ ಪ್ರೌಢಶಾಲೆಯಾಯಿತು. 1909ರಲ್ಲಿ ಫ್ರೆಂಚ್ ಕ್ಯಾಥೋಲಿಕ್ ಮಿಷನ್ ಒಂದು ಬಾಲಕಿಯರ ಪ್ರೌಢಶಾಲೆಯನ್ನು ಆರಂಭಿಸಿತು. 1923ರಲ್ಲಿ ಮಡಿಕೇರಿಯಲ್ಲಿನ ಹೆಣ್ಣುಮಕ್ಕಳ ಲೋಅರ್ ಸೆಕೆಂಡರಿ ಸ್ಕೂಲ್ ಮತ್ತು ವೀರರಾಜಪೇಟೆಯಲ್ಲಿನ ಸರ್ಕಾರಿ ಶಾಲೆ ಹೈಸ್ಕೂಲ್ ಮಟ್ಟಕ್ಕೆ ಏರಿಸಲ್ಪಟ್ಟವು. ಈ ಎರಡು ಶಾಲೆಗಳೂ ಮದ್ರಾಸಿನ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತಯಾರು ಮಾಡುತ್ತಿದ್ದವು. 1946–47ರ ಹೊತ್ತಿಗೆ ಕೊಡಗಿನಲ್ಲಿ ಏಳು ಪ್ರೌಢಶಾಲೆಗಳಿದ್ದವು. ಅವುಗಳಲ್ಲಿ, ಎರಡು ಸರ್ಕಾರಿ ಶಾಲೆಗಳಾಗಿದ್ದವು, ಒಂದು ಬಾಲಕಿಯರ ಪ್ರೌಢಶಾಲೆಯು ಅನುದಾನ ಪಡೆಯುತ್ತಿತ್ತು, ಮತ್ತು ಉಳಿದವು, ಅನುದಾನವಿಲ್ಲದ ಶಾಲೆಗಳಾಗಿದ್ದವು. 1944ರವರೆಗೆ ಶಿಕ್ಷಣ ಮಾಧ್ಯಮವು ಇಂಗ್ಲಿಷ್ ಆಗಿತ್ತು. ಅನಂತರ, ಕನ್ನಡವು ಶಿಕ್ಷಣ ಮಾಧ್ಯಮವಾಯಿತು. 1956ರ ಮಾರ್ಚ್ ಹೊತ್ತಿಗೆ, ಐದು ಸರ್ಕಾರಿ ಪ್ರೌಢಶಾಲೆಗಳೂ, ಆರು ಖಾಸಗಿ ಅನುದಾನ ಪಡೆಯುತ್ತಿದ್ದ ಶಾಲೆಗಳೂ ಅಂದರೆ ಒಟ್ಟು ಹನ್ನೊಂದು ಶಾಲೆಗಳು ಇದ್ದವು.

**ಏಕೀಕರಣದ ಅನಂತರ :** ಏಕೀಕರಣದ ಮೊದಲ ದಿನಗಳಲ್ಲಿ 'ಸೆಕೆಂಡರಿ ಎಜುಕೇಷನ್' ಪದದ ಅರ್ಥ ಒಂದೊಂದು ಭಾಗದಲ್ಲಿ ಒಂದೊಂದು ರೀತಿಯಾಗಿತ್ತು. "ಸೆಕೆಂಡರಿ ಎಜುಕೇಷನ್" ಪ್ರಾರಂಭವಾಗುವ ತರಗತಿಗಳು ಬೇರೆ ಬೇರೆ ಕಡೆ ಬೇರೆ ಬೇರೆಯಾಗಿದ್ದವು. ಹಾಗೆಯೇ ಪ್ರೌಢಶಾಲೆಗಳು ಬೇರೆ ಬೇರೆ ರೀತಿಯಾಗಿದ್ದವು. ಹಳೇ ಮೈಸೂರು ಭಾಗದಲ್ಲಿ, ಮೂರು ವರ್ಷಗಳ ಕೋರ್ಸ್ ಇದ್ದ ಶಾಲೆಗಳು ಪ್ರೌಢಶಾಲೆಗಳು ಎನ್ನಿಸಿಕೊಂಡಿದ್ದವು. ಮುಂದೆ ಆಗಬೇಕಾಗಿದ್ದ ಸುಧಾರಣೆಯಂತೆ, ಸೆಕೆಂಡರಿ ಶಿಕ್ಷಣವನ್ನು ನಾಲ್ಕು ವರ್ಷಗಳಿಗೆ ವಿಸ್ತರಿಸಬೇಕೆಂಬ ಯೋಜನೆ ಇದ್ದಿತು. ಈ ಹಂತದ ಶಿಕ್ಷಣವನ್ನು ನೀಡುತ್ತಿದ್ದ ಶಾಲೆಗಳು ಬಹುತೇಕ ಸರ್ಕಾರದ ಶಾಲೆಗಳೇ ಆಗಿದ್ದವು. ಕೆಲವು ಶಾಲೆಗಳನ್ನು ಜಿಲ್ಲಾ ಬೋರ್ಡುಗಳು ಮತ್ತು ಪುರಸಭೆಗಳು ನಡೆಸುತ್ತಿದ್ದವು. ಬೆಳಗಾವಿ ವಲಯದಲ್ಲಿ ಎಂಟನೇಯ ತರಗತಿಯಿಂದ ಹನ್ನೊಂದನೇಯ ತರಗತಿಯವರೆಗೆ ಅಂದರೆ ನಾಲ್ಕು ತರಗತಿಗಳು ಇದ್ದ ಶಾಲೆಗಳು ಸೆಕೆಂಡರಿ ಶಾಲೆಗಳೆನಿಸಿಕೊಂಡಿದ್ದವು. ಈ ವಲಯದಲ್ಲಿನ ಬಹುಸಂಖ್ಯೆಯ ಶಾಲೆಗಳು ಖಾಸಗೀ ಶಾಲೆಗಳಾಗಿದ್ದವು. ಕೇವಲ ಕೆಲವು ಮಾತ್ರ ಸರ್ಕಾರ ಅಥವಾ ಸ್ಥಳೀಯ ಸಂಸ್ಥೆಗಳ ಅಧೀನದಲ್ಲಿದ್ದವು. (ಹಳೆಯ ಮದರಾಸು ಪ್ರದೇಶದಲ್ಲಿ) ಮೂರು ವರ್ಷದ ಕೋರ್ಸ್ ಸೆಕೆಂಡರಿ ಎಜುಕೇಷನ್ ಎನಿಸಿಕೊಂಡಿತ್ತು. ಈ ವಲಯದಲ್ಲಿನ ಬಹುಸಂಖ್ಯೆಯ ಶಾಲೆಗಳನ್ನು ಖಾಸಗೀ ಸಂಸ್ಥೆಗಳು ನಡೆಸುತ್ತಿದ್ದವು. ಕೆಲವು ಶಾಲೆಗಳನ್ನು ಸ್ಥಳೀಯ ಸಂಸ್ಥೆಗಳು ನಡೆಸುತ್ತಿದ್ದವು. ಕೊಡಗಿನಲ್ಲಿ ಕೆಲವು ಪ್ರೌಢಶಾಲೆಗಳನ್ನು ಸರ್ಕಾರವೂ ಮತ್ತೆ ಕೆಲವು ಪ್ರೌಢಶಾಲೆಗಳನ್ನು ಖಾಸಗೀ ಸಂಸ್ಥೆಗಳೂ ನಡೆಸುತ್ತಿದ್ದವು. ಸ್ಥಳೀಯ ಸಂಸ್ಥೆಗಳು ನಡೆಸುವ ಶಾಲೆಗಳೇ ಇರಲಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲ ಪ್ರೌಢಶಾಲೆಗಳೂ ಸಂಘಟಿತ ಅಥವಾ "ಕಾಂಪೊಸಿಟ್" ಶಾಲೆಗಳೇ ಆಗಿದ್ದವು. ಕಲ್ಬುರ್ಗಿ ಪ್ರದೇಶದಲ್ಲಿ ಪ್ರೌಢಶಿಕ್ಷಣದ ಅವಧಿಯು ಮೂರು ವರ್ಷದ್ದಾಗಿತ್ತು. ಅಲ್ಲಿ ಮಾತ್ರ ಶಾಲಾ ಶಿಕ್ಷಣದ ಒಟ್ಟು ಅವಧಿ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವು ಸೇರಿದಂತೆ) ಹತ್ತು ವರ್ಷದಷ್ಟಾಗಿತ್ತು. ಬೇರೆಲ್ಲ ಪ್ರದೇಶಗಳ ಶಿಕ್ಷಣ ಅವಧಿಯು ಹನ್ನೊಂದು ವರ್ಷದ್ದಾಗಿದ್ದು, ಪ್ರಾಥಮಿಕ ಶಿಕ್ಷಣದ ಅವಧಿಯು ಏಳು ಅಥವಾ ಎಂಟು ವರ್ಷದ್ದಾಗಿತ್ತು.

**ಬೆಸ್ತರಿಗಾಗಿ ನಡೆಸುತ್ತಿದ್ದ ಶಾಲೆಗಳು :** ರಾಜ್ಯದ ಮತ್ಸ್ಯ ಅಭಿವೃದ್ಧಿ ಇಲಾಖೆಯು ಬೆಸ್ತರ ಅಭಿವೃದ್ಧಿಗಾಗಿ ವಿಶೇಷ ಶಾಲೆಗಳನ್ನು ಆರಂಭಿಸಿತು. ಇವುಗಳಿಗೆ "ಫಿಷರೀಸ್ ಸ್ಕೂಲು"ಗಳು ಅಥವಾ "ಮತ್ಸ್ಯ ಶಾಲೆಗಳು" ಎಂಬ ಹೆಸರಿತ್ತು. ಬೆಸ್ತರ ಮಕ್ಕಳಿಗೆ ಅಗತ್ಯವಾಗಿ ಬೇಕಾದ ಮತ್ತು ಪರಿಸರಕ್ಕೆ ಹೊಂದಿಕೊಳ್ಳುವ ಶಿಕ್ಷಣವನ್ನು ಕೊಡುವ ಉದ್ದೇಶದಿಂದ ಮತ್ಸ್ಯೋದ್ಯಮಕ್ಕೆ ಸಂಬಂಧಿಸಿದ ಸರಳ ವಿಷಯಗಳು, ಮತ್ಸ್ಯ ಜೀವನಕ್ಕೆ ಸಂಬಂಧಿಸಿದ ವಿಜ್ಞಾನ, ಸಮುದ್ರದಲ್ಲಿ ದೊರೆಯುವ ಸಂಪತ್ತು ಮುಂತಾದ ವಿಷಯಗಳನ್ನು ಪಾಠ ಪಟ್ಟಿಯಲ್ಲಿ ಸೇರಿಸಲಾಗಿತ್ತು. ಈ ಯೋಜನೆಯು 1971ರಲ್ಲಿ ಪ್ರಾರಂಭವಾಯಿತು. 1972ರ ಹೊತ್ತಿಗೆ ಆರು ಕಿರಿಯ ಪ್ರಾಥಮಿಕ ಶಾಲೆಗಳೂ, 18 ಹಿರಿಯ ಪ್ರಾಥಮಿಕ ಶಾಲೆಗಳೂ ಮತ್ತು 13 ಪ್ರೌಢಶಾಲೆಗಳೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದವು. ಇವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 6,497. ಶಿಕ್ಷಕರ ಸಂಖ್ಯೆ 296. ಕೆಲವು ಕಾಲದ ಮೇಲೆ ಈ ಶಾಲೆಗಳನ್ನೆಲ್ಲಾ ಶಿಕ್ಷಣ ಇಲಾಖೆಗೆ ವಹಿಸಲಾಯಿತು.

### ವಿವಿಧೋದ್ದೇಶ ಪ್ರೌಢಶಾಲೆಗಳು

ವಿವಿಧೋದ್ದೇಶ ('ಮಲ್ಟಿ ಪರ್‌ಪಸ್') ಪ್ರೌಢಶಾಲೆಗಳ ಯೋಜನೆಯು 1955-56ರಲ್ಲಿ ಆರಂಭವಾಯಿತು. ಹಳೆಯ

ಮೈಸೂರು ಸಂಸ್ಥಾನದ ಸುಮಾರು 13 ಪ್ರೌಢಶಾಲೆಗಳನ್ನು ವಿವಿಧೋದ್ದೇಶ ಶಾಲೆಗಳನ್ನಾಗಿ ಪರಿವರ್ತಿಸಲಾಯಿತು. ಬೆಳಗಾವಿ ಪ್ರದೇಶದಲ್ಲಿ 1955-56ರಲ್ಲಿ ಒಂಬತ್ತು ಪ್ರೌಢಶಾಲೆಗಳನ್ನು, 1956-57ರಲ್ಲಿ ನಾಲ್ಕು ಪ್ರೌಢಶಾಲೆಗಳನ್ನು ವಿವಿಧೋದ್ದೇಶ ಪ್ರೌಢಶಾಲೆಗಳನ್ನಾಗಿ ಪರಿವರ್ತಿಸಲಾಯಿತು. ಕೊಡಗು ಜಿಲ್ಲೆಯಲ್ಲಿ ಎರಡು ಶಾಲೆಗಳನ್ನು ವಿವಿಧೋದ್ದೇಶ ಶಾಲೆಗಳನ್ನಾಗಿ ಪರಿವರ್ತಿಸಲಾಯಿತು. ಕಲ್ಬುರ್ಗಿ ವಲಯದಲ್ಲಿ 1956-57ರಲ್ಲಿ ಐದು ಶಾಲೆಗಳನ್ನು ವಿವಿಧೋದ್ದೇಶ ಶಾಲೆಗಳಾಗಿ ಪರಿವರ್ತಿಸಲಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1955-56ರಲ್ಲಿ ಐದು ಪ್ರೌಢಶಾಲೆಗಳಲ್ಲಿಯೂ 1956-57ಲ್ಲಿ ಒಂದು ಶಾಲೆಯಲ್ಲಿಯೂ ಭಿನ್ನ ಭಿನ್ನ ರೀತಿಯ ಪಾಠಕ್ರಮಗಳನ್ನು ('ಡೈವರ್ಸಿಫೈಡ್ ಕೋರ್ಸ್'ಗಳನ್ನು) ವಿವಿಧೋದ್ದೇಶ ಪ್ರೌಢಶಾಲೆಗಳ ಯೋಜನೆಯ ವ್ಯಾಪ್ತಿಯೊಳಗೆ ಆರಂಭಿಸಲಾಯಿತು.

1956-57ರಲ್ಲಿ 535 ಬಾಲಕ ಬಾಲಕಿಯರ ಪ್ರೌಢಶಾಲೆಗಳಿದ್ದುವು. ಎರಡು ಮಿಲ್ಟ್ರಿ ಶಾಲೆಗಳಿದ್ದವು. ಒಟ್ಟು ಮಕ್ಕಳ ಸಂಖ್ಯೆ 1,25,164. ಬೆಳಗಾವಿ ಮತ್ತು ಬೆಂಗಳೂರಿನಲ್ಲಿದ್ದ ಮಿಲಿಟರಿ ಶಾಲೆಗಳಲ್ಲಿದ್ದ ಒಟ್ಟು ಬಾಲಕರ ಸಂಖ್ಯೆ 471. ಬೆಳಗಾವಿ ಪ್ರದೇಶದಲ್ಲಿ ಪ್ರೌಢಶಾಲೆಗಳ ತರಗತಿಗಳಿದ್ದ 31 ಲೋಯರ್ ಸೆಕೆಂಡರಿ ಶಾಲೆಗಳಿದ್ದವು. ಕಲ್ಬುರ್ಗಿ ಪ್ರದೇಶದಲ್ಲಿದ್ದ ಮಿಡ್ಲ್ ಹೈಸ್ಕೂಲ್‌ಗಳು 1958-59ರಲ್ಲಿ ಮಿಡ್ಲ್ ಸ್ಕೂಲ್ ತರಗತಿಗಳನ್ನು ಒಳಗೊಂಡ ಸರ್ಕಾರಿ ಪ್ರಾಢಶಾಲೆಗಳಾದವು. ಜೊತೆಗೆ ಗಣನೀಯ ಸಂಖ್ಯೆಯಲ್ಲಿ ಪ್ರೌಢಶಾಲೆಗಳೂ ಅಸ್ತಿತ್ವಕ್ಕೆ ಬಂದವು. ರಾಜ್ಯದಲ್ಲಿ 1956-57ರಲ್ಲಿ 535 ಇದ್ದ ಪ್ರೌಢಶಾಲೆಗಳು 1968–69ರಲ್ಲಿ 1,833 ಆದವು. ಅಂದರೆ ಶೇಕಡ 243ರಷ್ಟು ಸಂಖ್ಯೆ ಬೆಳೆಯಿತು. 1956-57ರಲ್ಲಿ 1.25 ಲಕ್ಷ ಇದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಂಖ್ಯೆ 1968-69ರ ಹೊತ್ತಿಗೆ 4.60 ಲಕ್ಷದಷ್ಟಾಯಿತು. ಅಂದರೆ ಶೇಕಡ 268ರಷ್ಟು ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು. 1981-82ರ ಸಮಯಕ್ಕೆ ಪಢ್ರೌಶಾಲೆಗಳ ಸಂಖ್ಯೆ 2,416ಕ್ಕೆ ಏರಿತು. ಆ ವರ್ಷ ಪ್ರೌಢಶಾಲೆಗಳಲ್ಲಿದ್ದ (ಎಂಟರಿಂದ ಹತ್ತನೇಯ ತರಗತಿಯವರೆಗೆ) ವಿದ್ಯಾರ್ಥಿಗಳ ಸಂಖ್ಯೆ 7.22 ಲಕ್ಷದಷ್ಟಾಯಿತು. ಆದರೆ 1977-78ರಲ್ಲಿ ಆ ತರಗತಿಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 6.39 ಲಕ್ಷ. 1981-82ರ ಸಾಲಿನಲ್ಲಿ ಪ್ರೌಢಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರ ಸಂಖ್ಯೆ 22,407.

ಬೇರೆ ಬೇರೆ ವಲಯಗಳಲ್ಲಿದ್ದ ಪ್ರೌಢಶಾಲೆ ಶಿಕ್ಷಣದ ರೀತಿಯು ಬೇರೆ ಬೇರೆ ಆಗಿದ್ದು, ಪಠ್ಯವಸ್ತು ಮತ್ತು ಪರೀಕ್ಷೆಗಳಲ್ಲಿ ಭಿನ್ನತೆ ಇದ್ದುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ಶಿಕ್ಷಣ ಏಕತಾ ಸಲಹಾ ಸಮಿತಿಯು (ಎಜುಕೇಶನ್ ಇಂಟೆಗ್ರೇಶನ್ ಎಡ್ವೈಸರಿ ಕಮಿಟಿ) ಪ್ರೌಢಶಾಲಾ ಶಿಕ್ಷಣವು ನಾಲ್ಕು ವರ್ಷದ್ದಾಗಿರಬೇಕೆಂದು ಶಿಫಾರಸು ಮಾಡಿತು. ಇದು ಮೊದಲಿಯಾರ್ ಆಯೋಗದ ಶಿಫಾರಸುಗಳ ಆಧಾರದ ಮೇಲೆ ಮಾಡಿದ ಸಲಹೆ. ಹೊಸ ಪಾಠಕ್ರಮವು ರಾಜ್ಯದ ಎಲ್ಲ ಶಾಲೆಗಳಲ್ಲಿಯೂ 1960-61ರಲ್ಲಿ ಜಾರಿಗೆ ಬಂತು. ಆ ವರ್ಷ ಎಂಟನೇಯ ತರಗತಿಯಲ್ಲಿ ಆರಂಭವಾದ ಈ ಪಠ್ಯಕ್ರಮವು, ಒಂಬತ್ತು ಮತ್ತು ಹತ್ತನೇ ತರಗತಿಗಳಲ್ಲಿ ಕ್ರಮವಾಗಿ 1961-62 ಮತ್ತು 1962-63ರಲ್ಲಿ ಆಚರಣೆಗೆ ಬಂದಿತು. 1962-63ರ ಹೊತ್ತಿಗೆ ಪ್ರೌಢಶಾಲಾ ಶಿಕ್ಷಣದಲ್ಲಿ ಏಕರೂಪತೆ ಬಂದು ಪಠ್ಯ ವಸ್ತು ಮತ್ತು ಪರೀಕ್ಷೆಯು ಎಲ್ಲ ಶಾಲೆಗಳಿಗೂ ಒಂದೇ ಆದವು.

ಪ್ರೌಢಶಾಲೆಗಳನ್ನು ಉನ್ನತ ಪ್ರೌಢಶಾಲೆಗಳನ್ನಾಗಿ ಪರಿವರ್ತಿಸುವ ಯೋಜನೆಯು 1963-64ರಲ್ಲಿ ಸಂಪೂರ್ಣವಾಗಿ ಜಾರಿಗೆ ತರಲು ಆಗಲಿಲ್ಲ; ಭಾಗಶಃ ಅದು ಆಚರಣೆಗೆ ಬಂದಿತು. ಇದಕ್ಕೆ ಕಾರಣ, ಅವಶ್ಯಕ ಅರ್ಹತೆಯನ್ನು ಹೊಂದಿದ್ದ ಶಿಕ್ಷಕರೂ ಮತ್ತು ಇತರ ಅನುಕೂಲಗಳೂ ಇಲ್ಲದೇ ಇದ್ದದ್ದೇ ಆಗಿತ್ತು. ಈ ಯೋಜನೆಯಂತೆ ಆರಿಸಿದ ಪ್ರೌಢಶಾಲೆಗಳಲ್ಲಿ 11ನೇಯ ತರಗತಿ ಆರಂಭವಾಯಿತು. ಯೋಜನೆಯ ಮುಖ್ಯ ಉದ್ದೇಶ ದೂರದ ಊರುಗಳಿಗೆ ಹೋಗಲಾರದ ಹಳ್ಳಿಯ ಮಕ್ಕಳು ತಮ್ಮ ವ್ಯಾಸಂಗವನ್ನು ಮುಂದುವರಿಸಲು ಅನುಕೂಲ ಮಾಡಿಕೊಡುವುದೇ ಆಗಿತ್ತು. 1963–65ರ ಅನಂತರ, ಪಂಚವಾರ್ಷಿಕ ಯೋಜನೆಗೆ ಅನುಗುಣವಾಗಿ ಪ್ರೌಢಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರನ್ನು ಸ್ನಾತಕೋತ್ತರ ತರಗತಿಗಳಿಗೆ ನಿಯೋಜಿಸುವ ವ್ಯವಸ್ಥೆಯಾಯಿತು. ಇದರ ಉದ್ದೇಶ ಉನ್ನತ ಪ್ರೌಢಶಾಲೆಗಳಿಗೆ ಬೇಕಾದ ಶಿಕ್ಷಕರನ್ನು ಒದಗಿಸುವುದೇ ಆಗಿತ್ತು. ಪ್ರೌಢಶಾಲೆಗಳನ್ನು ಉನ್ನತ ಪ್ರೌಢಶಾಲೆಗಳನ್ನಾಗಿ ಪರಿವರ್ತಿಸುವ ಕಾರ್ಯ 1964–65ರಲ್ಲಿ ಆರಂಭವಾಯಿತು. ಆ ವರ್ಷ 50 ಪ್ರೌಢಶಾಲೆಗಳು ಉನ್ನತ ಪ್ರೌಢಶಾಲೆಗಳಾದವು. ಈ ಯೋಜನೆಯು ಮುಂದುವರಿದು ಮೂರನೇಯ ಪಂಚವಾರ್ಷಿಕ ಯೋಜನೆಯ ಅಂತ್ಯದ ಹೊತ್ತಿಗೆ 100 ಉನ್ನತ ಪ್ರೌಢಶಾಲೆಗಳು ಅಸ್ತಿತ್ವದಲ್ಲಿದ್ದು, 11ನೇಯ ತರಗತಿಯಲ್ಲಿ 4,312 ವಿದ್ಯಾರ್ಥಿಗಳೂ 119 ವಿದ್ಯಾರ್ಥಿನಿಯರೂ ಇದ್ದರು; ಈ ತರಗತಿಯಲ್ಲಿ ಪಾಸಾದವರು ಮೂರು ವರ್ಷದ ಡಿಗ್ರಿ ಕೋರ್ಸಿಗೆ ಸೇರಲು ಅರ್ಹರಾಗಿದ್ದರು.

ಭಾರತೀಯ ಶಿಕ್ಷಣ ಆಯೋಗವು (1964–66) ಮಾಡಿದ ಮುಖ್ಯವಾದ ಸಲಹೆಯೊಂದಕ್ಕೆ ಅನುಗುಣವಾಗಿ, ಒಂದನೇಯ ತರಗತಿಯಿಂದ ಹತ್ತನೇಯ ತರಗತಿಯವರೆಗೆ ಎಲ್ಲರಿಗೂ ಕೊಡಬೇಕಾದ ಶಿಕ್ಷಣದ ಪಠ್ಯವಸ್ತುವನ್ನು ತಯಾರಿಸಲಾಯಿತು. ಅದರಂತೆ 1969–70ರಲ್ಲಿ ಒಂಭತ್ತನೇಯ ತರಗತಿಗೂ, 1970–71ರಲ್ಲಿ ಎಂಟನೇಯ ಮತ್ತು ಹತ್ತನೇಯ ತರಗತಿಗಳಿಗೂ ಪಠ್ಯವಸ್ತುವನ್ನು ಜಾರಿಗೆ ಕೊಡಲಾಯಿತು. ಇದರಂತೆ ಮೂರು

ಭಾಷೆಗಳೂ ಮತ್ತು ಮೂರು ಮುಖ್ಯ ವಿಷಯಗಳೂ ('ಕೋರ್ ಸಬ್ಜೆಕ್ಟ್ಸ್') ಪಠ್ಯವಸ್ತುವಿನಲ್ಲಿವೆ. ಪಠ್ಯವಸ್ತುವಿನಲ್ಲಿ ದುಡಿಮೆಯ ಅನುಭವವನ್ನು ('ವರ್ಕ್ ಎಕ್ಸ್‌ಪೀರಿಯನ್ಸ್') ಸೇರಿಸಿರುವುದು ಒಂದು ಮುಖ್ಯ ಸುಧಾರಣೆಯಾಗಿದೆ. ಅಂಥ 'ದುಡಿಮೆಯ ಅನುಭವ' (ಕಾಯಕಾನುಭವ) ದಲ್ಲಿ ವಿವರವಾಗಿ ಹೇಳಿಕೊಡಬೇಕಾದ ಕಸುಬುಗಳೂ, ಸ್ಥೂಲವಾಗಿ ಸೂಚಿಸಿರುವ ಚಟುವಟಿಕೆಗಳೂ ಸೇರಿಕೊಂಡಿವೆ. ಕೆಲವು ದಿನನಿತ್ಯದ ಚಟುವಟಿಕೆಗಳೂ 'ದುಡಿಮೆಯ ಅನುಭವ'ದ ವಿಷಯವಾಗಿವೆ. ಈ ಸುಧಾರಣೆಗೆ ಅನುಗುಣವಾಗಿ ಐಚ್ಛಿಕ ವಿಷಯಗಳು ಯಾವುವೂ ಇಲ್ಲ. ಎಲ್ಲ ವಿದ್ಯಾರ್ಥಿಗಳೂ ಪಠ್ಯವಸ್ತುವಿನಲ್ಲಿರುವ ಎಲ್ಲ ವಿಷಯಗಳನ್ನೂ ಕಲಿಯಬೇಕು. ಇದರ ಫಲವಾಗಿ ಮುಖ್ಯ ವಿಷಯಗಳ ಪಠ್ಯವಸ್ತುವಿನ ಮಟ್ಟ ಏರಿತು.

ಪುರಸಭೆಗಳು ಮತ್ತು ತಾಲೂಕು ಬೋರ್ಡುಗಳಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರು ಬಹು ಕಾಲದಿಂದ ತಮಗೆ ಬಡ್ತಿ ಅವಕಾಶಗಳಿಲ್ಲವೆಂದೂ ಮತ್ತು ನೇಮಕಾತಿ ಸಮಯದಲ್ಲಿ ನಿಯಮಗಳ ಪಾಲನೆಯಾಗುತ್ತಿಲ್ಲವೆಂದೂ ಮನವಿ ಮಾಡಿಕೊಳ್ಳುತ್ತಿದ್ದರು. ಈ ಶಾಲೆಗಳೆಲ್ಲವೂ ಸರ್ಕಾರದಿಂದ ವೆಚ್ಚದ ಶೇಕಡ ನೂರರಷ್ಟು ಅನುದಾನವನ್ನು ಪಡೆಯುತ್ತಿದ್ದವು. ಸ್ವಇಚ್ಛೆಯಿಂದ ಸರ್ಕಾರಕ್ಕೆ ಒಪ್ಪಿಸಿದ ಪುರಸಭೆ ಮತ್ತು ತಾಲೂಕು ಬೋರ್ಡುಗಳ ಶಾಲೆಗಳನ್ನು ಸರ್ಕಾರವು ವಹಿಸಿಕೊಳ್ಳಬೇಕೆಂಬ ನಿರ್ಧಾರವನ್ನು 1970 ರ ಏಪ್ರಿಲ್ ತಿಂಗಳಿನಲ್ಲಿ ಸರ್ಕಾರವು ತೆಗೆದುಕೊಂಡಿತು. ಆ ಸಮಯದಲ್ಲಿ, 108 ಪುರಸಭೆ ಶಾಲೆಗಳೂ, 332 ತಾಲೂಕು ಬೋರ್ಡ್ ಶಾಲೆಗಳೂ ಮತ್ತು ನಾಲ್ಕು ನಗರ ಪಂಚಾಯಿತಿ ಶಾಲೆಗಳೂ ಇದ್ದವು. ಮೊದಲು, 61 ನಗರಸಭೆಗಳೂ ಮತ್ತು ಮೂರು ನಗರ ಪಂಚಾಯಿತಿಗಳೂ ತಮ್ಮ ವಶದಲ್ಲಿದ್ದ 71 ಪುರಸಭಾ ಪ್ರೌಢಶಾಲೆಗಳನ್ನು ಸರ್ಕಾರಕ್ಕೆ ವಹಿಸಲು ಒಪ್ಪಿದವು. ಅದೇ ರೀತಿ, 104 ತಾಲೂಕು ಬೋರ್ಡುಗಳು ತಾವು ನಡೆಸುತ್ತಿದ್ದ 295 ಶಾಲೆಗಳನ್ನು ವಹಿಸಲು ಒಪ್ಪಿದವು. ಈ ಸಂಸ್ಥೆಗಳು ಶಾಲೆಗಳನ್ನು ವಹಿಸಲು ಒಪ್ಪಿಗೆ ಕೊಡಬೇಕಾದ ದಿನಾಂಕವನ್ನು ಸರ್ಕಾರವು ಮುಂದುವರಿಸಿತು. 1978-79 ರ ವೇಳೆಗೆ ವಹಿಸಿಕೊಳ್ಳಬೇಕಾದ ಈ ಕಾರ್ಯವು ಮುಗಿಯಿತು.

### ಸೆಕೆಂಡರಿ ಪರೀಕ್ಷಾ ಮಂಡಲಿ

ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿಯು 1966 ರಲ್ಲಿ ಒಂದು ಶಾಸನಬದ್ಧ ಸಂಸ್ಥೆಯಾಯಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ನಿರ್ವಹಿಸುವ ಕಾರ್ಯವನ್ನು ಈ ಮಂಡಲಿಗೆ ವಹಿಸಲಾಯಿತು. ಶಿಕ್ಷಕರ ತರಬೇತಿ, ವಾಣಿಜ್ಯ, ಸಂಸ್ಕೃತ, ನೃತ್ಯ ಮುಂತಾದವುಗಳ ಪರೀಕ್ಷೆಗಳನ್ನು ಈ ಮಂಡಲಿಗೆ ವಹಿಸಿಕೊಡಲಾಯಿತು. ಇದರ ಅಧ್ಯಕ್ಷರು ಶಿಕ್ಷಣ ನಿರ್ದೇಶಕರ ಸ್ಥಾನವನ್ನು ಹೊಂದಿದ್ದಾರೆ. ಇವರೇ ಮಂಡಲಿಯ ಮುಖ್ಯ ಕಾರ್ಯಾಧಿಕಾರಿಗಳೂ ಆಗಿದ್ದಾರೆ.

ಮಂಡಲಿಯು ಮೂರು ವರ್ಷಕ್ಕೊಂದು ಸಾರಿ ಪುನರ್ರಚಿತವಾಗುತ್ತದೆ. ಅದರಲ್ಲಿ ಒಬ್ಬ ಅಧ್ಯಕ್ಷರು, ಒಬ್ಬ ಉಪಾಧ್ಯಕ್ಷರು ಮತ್ತು ಒಬ್ಬ ಕಾರ್ಯದರ್ಶಿ, 12 ಪದನಿಮಿತ್ತ ಸದಸ್ಯರು, 19 ನಾಮಕರಣ ಸದಸ್ಯರು ಮತ್ತು ಎಂಟು ಚುನಾಯಿತ ಸದಸ್ಯರು ಇರುತ್ತಾರೆ. ಮಂಡಲಿಯು ಕೆಳಕಂಡ ಪರೀಕ್ಷೆಗಳನ್ನು ಈಗ ನಡೆಸುತ್ತಿದೆ. ಎಸ್.ಎಸ್.ಎಲ್.ಸಿ., ಸಂಸ್ಕೃತ, ಭಾಷಾ ಪರೀಕ್ಷೆಗಳು, ಕನ್ನಡ ಪಂಡಿತ ಪರೀಕ್ಷೆ, ಉರ್ದು ಮುನ್ಷಿ ಪರೀಕ್ಷೆ, ಹಿಂದಿ ವಿದ್ವಾನ್ ಮತ್ತು ಹಿಂದಿ ಶಿಕ್ಷಕರ ತರಬೇತಿ ಪರೀಕ್ಷೆಗಳು (ಪೂರ್ವ ಪ್ರಾಥಮಿಕ ಶಾಲೆಯ ಶಿಕ್ಷಕರ, ಹೈಯರ್ ಮತ್ತು ಲೋಯರ್ ತರಬೇತಿ ಪರೀಕ್ಷೆಗಳು), ಶಾರೀರಿಕ ಶಿಕ್ಷಣ ಪರೀಕ್ಷೆ, ಸಂಗೀತ, ನೃತ್ಯ ಮತ್ತು ತಾಳವಾದ್ಯ ಪರೀಕ್ಷೆಗಳು, ಹೈಯರ್ ಮತ್ತು ಲೋಯರ್ ಡ್ರಾಯಿಂಗ್ ಪರೀಕ್ಷೆಗಳು, ಕಲಾ ಪರೀಕ್ಷೆಗಳು (ಉನ್ನತ), ವಾಣಿಜ್ಯ ಪರೀಕ್ಷೆಗಳು, ಚಲನಚಿತ್ರದಲ್ಲಿನ ಅಭಿನಯ ಮತ್ತು ಹಿನ್ನೆಲೆ ಸಂಗೀತ ಪರೀಕ್ಷೆಗಳು ಮತ್ತು ಜೂನಿಯರ್ ತಾಂತ್ರಿಕ ಪರೀಕ್ಷೆಗಳು. ಇವಲ್ಲದೆ, ಕೇಂದ್ರ ಸರ್ಕಾರವು ಗ್ರಾಮಾಂತರ ಪ್ರದೇಶದಲ್ಲಿ ಏಳನೇಯ ತರಗತಿಯ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಕೊಡುವ ವಿದ್ಯಾರ್ಥಿ ವೇತನಕ್ಕಾಗಿ ಮಾಡುವ ಯೋಗ್ಯತಾ ನಿರ್ಣಯ ಪರೀಕ್ಷೆಯನ್ನು ಮಂಡಲಿಯೇ ನಡೆಸುತ್ತಿದೆ. ಮಂಡಲಿಯು ಮೌಲ್ಯಮಾಪನವೆಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರ ತರುತ್ತಿದೆ. ವಿದ್ಯಾರ್ಥಿಗಳಿಂದ ಬರುವ ಪರೀಕ್ಷಾ ಶುಲ್ಕವು ಮಂಡಲಿಯ ಮುಖ್ಯ ಆದಾಯವಾಗಿದೆ. 1981-82 ರಲ್ಲಿ ಮಂಡಲಿಯು 141.19 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿತು.

ಇಪ್ಪತ್ತೊಂದನೇಯ ಪುಟದಲ್ಲಿ ವಾರ್ಷಿಕ ಸಾರ್ವಜನಿಕ ಪರೀಕ್ಷೆಗಳ (ಅಂಕಿ ಸಂಖ್ಯೆಗಳನ್ನು) ವಿವರಗಳನ್ನು ತೋರಿಸುವ ಪಟ್ಟಿಯನ್ನು ಕೊಟ್ಟಿದೆ.

### ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ

ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಇಲಾಖೆಯು 1975–76 ರಲ್ಲಿ ಅಸ್ತಿತ್ವಕ್ಕೆ ಬಂತು. ಶಾಲಾ ಶಿಕ್ಷಣದ ಗುಣ ಮಟ್ಟವನ್ನು ಸುಧಾರಿಸಲು ಒಂದು ನಿಯೋಜಿತ ಕಾರ್ಯಕ್ರಮವನ್ನು ಪ್ರಾರಂಭಿಸುವುದೇ ಈ ಇಲಾಖೆಯ ಮುಖ್ಯ ಕಾರ್ಯವಾಗಿದೆ. ಈ ಇಲಾಖೆಯು ಮುಖ್ಯವಾಗಿ ಪೂರ್ವ ಪ್ರಾಥಮಿಕ, ಪ್ರಾಥಮಿಕ ಮತ್ತು ಸೆಕೆಂಡರಿ ಶಾಲಾ ಶಿಕ್ಷಕರಿಗೆ ಸೇವಾ ಪೂರ್ವ ತರಬೇತಿಯನ್ನು ಕೊಡುವುದರಲ್ಲಿ ನಿರತವಾಗಿದೆ. ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳಲ್ಲಿ ತರಬೇತಿಯಾಗದ ಇರುವ ಎಲ್ಲ ಶಿಕ್ಷಕರಿಗೆ ತರಬೇತಿಯನ್ನು ಕೊಟ್ಟು ಆ ಶಾಲೆಗಳಲ್ಲಿ ತರಬೇತಿ

| ವರ್ಷ (ಏಪ್ರಿಲ್) | ಪರೀಕ್ಷೆಯಲ್ಲಿ ಪಾಸಾದವರ ಸಂಖ್ಯೆ | | |
|---|---|---|---|
| | ಬಾಲಕರು | ಬಾಲಕಿಯರು | ಒಟ್ಟು |
| 1977 | 63,869 | 30,691 | 94,560 |
| 1978 | 78,271 | 35,579 | 1,13,850 |
| 1979 | 81,270 | 39,375 | 1,20,645 |
| 1980 | 94,614 | 45,322 | 1,39,936 |
| 1981 (ಹಳೆಯ ಯೋಜನೆ) | 11,340 | 4,908 | 16,248 |
| 1981 (ಹೊಸದು) | 44,369 | 24,463 | 68,832 |
| 1982 (ಹಳೆಯದು) | 10,024 | 3,823 | 13,847 |
| 1982 (ಹೊಸದು) | 82,625 | 42,327 | 1,24,952 |

| ವರ್ಷ (ಏಪ್ರಿಲ್) | ಪರೀಕ್ಷೆಗೆ ಕುಳಿತವರ ಸಂಖ್ಯೆ | | |
|---|---|---|---|
| | ಬಾಲಕರು | ಬಾಲಕಿಯರು | ಒಟ್ಟು |
| 1977 | 1,41,729 | 62,044 | 2,03,773 |
| 1978 | 1,55,273 | 68,855 | 2,24,128 |
| 1979 | 1,68,609 | 76,777 | 2,45,386 |
| 1980 | 1,78,730 | 83,670 | 2,62,400 |
| 1981 (ಹಳೆಯ ಯೋಜನೆ) | 49,316 | 18,218 | 67,534 |
| 1981 (ಹೊಸದು) | 1,23,603 | 64,072 | 1,87,675 |
| 1982 (ಹಳೆಯದು) | 23,581 | 7,614 | 31,195 |
| 1982 (ಹೊಸದು) | 1,72,792 | 83,702 | 2,56,494 |

ಯಿಲ್ಲದೆ ಇರುವ ಒಬ್ಬ ಶಿಕ್ಷಕನೂ ಇಲ್ಲದಂತೆ ನೋಡಿಕೊಳ್ಳುವುದು ಮತ್ತು ಅದಕ್ಕೆ ಅವಶ್ಯಕವಾದ ಸಾಹಿತ್ಯವನ್ನು ಸಿದ್ಧಪಡಿಸುವುದು ಈ ಇಲಾಖೆಯ ಇತರ ಕಾರ್ಯಗಳು. ಶೈಕ್ಷಣಿಕ ಸಂಶೋಧನೆಯನ್ನು ಮಾಡುವುದರ ಜೊತೆಗೆ ಈ ಇಲಾಖೆಯು ಅಂಥ ಸಂಶೋಧನೆಗೆ ತಕ್ಕ ಸಹಾಯವನ್ನು ಕೊಡುತ್ತದೆ ಮತ್ತು ಸಂಶೋಧನೆಗಳನ್ನು ಸಮನ್ವಯಗೊಳಿಸಿ ಅವಕ್ಕೆ ಪ್ರೋತ್ಸಾಹವನ್ನು ಕೊಡುತ್ತದೆ. ಸೇವಾಪೂರ್ವ ತರಬೇತಿ ಮತ್ತು ಸೇವೆಯಲ್ಲಿದ್ದವರಿಗೆ ಬೇಕಾದ ತರಬೇತಿಯನ್ನು ವ್ಯವಸ್ಥೆ ಮಾಡುತ್ತದೆ. ತರಬೇತಿಯ ವಿಸ್ತರಣಾ ಕಾರ್ಯವನ್ನು ವ್ಯವಸ್ಥೆ ಮಾಡುತ್ತದೆ. ಶೈಕ್ಷಣಿಕ ಕಾರ್ಯಕ್ರಮಗಳ ಮೌಲ್ಯ ಮಾಪನ ಮಾಡುತ್ತದೆ. ಯೋಜನೆಗಳನ್ನು ಸಿದ್ಧಪಡಿಸುತ್ತದೆ. (ಇಲ್ಲವೇ ಸಿದ್ಧಪಡಿಸಲು ಸಹಾಯ ಮಾಡುತ್ತದೆ). ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳನ್ನು ಸಮೀಕ್ಷೆ ಮಾಡುವುದು ಮತ್ತು ಅವುಗಳನ್ನು ಪರೀಕ್ಷಿಸುವುದು ಮುಂತಾದ ಕಾರ್ಯಗಳನ್ನು ಮಾಡುತ್ತದೆ. ರಾಜ್ಯ ಶಿಕ್ಷಣ ಸಂಸ್ಥೆ (ಸ್ಟೇಟ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್), ರಾಜ್ಯ ವಿಜ್ಞಾನ ಶಿಕ್ಷಣ ಸಂಸ್ಥೆ (ಸ್ಟೇಟ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್), ಶೈಕ್ಷಣಿಕ ಮತ್ತು ಔದ್ಯೋಗಿಕ ಮಾರ್ಗದರ್ಶನ ಸಂಸ್ಥೆ (ಅಥವಾ ಎಜುಕೇಷನಲ್ ಅ್ಯಂಡ್ ವೊಕೇಷನಲ್ ಗೈಡೆನ್ಸ್ ಬ್ಯೂರೋ), ರಾಜ್ಯ ಶಿಕ್ಷಣ ಮೌಲ್ಯ ಮಾಪನ ಸಂಸ್ಥೆ (ಸ್ಟೇಟ್ ಎವಾಲ್ಯುಯೇಷನ್ ಯೂನಿಟ್), ವಾಕ್ ದೃಶ್ಯ ಶಿಕ್ಷಣ ವಿಭಾಗ, ಶಿಕ್ಷಣ ತಂತ್ರ ಘಟಕ (ಎಜುಕೇಷನಲ್ ಟೆಕ್ನಾಲಜಿ ಸೆಲ್), ಪಠ್ಯ ಪುಸ್ತಕ ವಿಭಾಗ ಮತ್ತು ಶಿಕ್ಷಕರ ತರಬೇತಿ ವಿಭಾಗ–ಈ ವಿಭಾಗಗಳೆಲ್ಲಾ ಈ ಇಲಾಖೆಯ ಅಧೀನದಲ್ಲಿವೆ.

ಶೈಕ್ಷಣಿಕ ಮತ್ತು ಔದ್ಯೋಗಿಕ ಮಾರ್ಗದರ್ಶನ ಸಂಸ್ಥೆಯು (ಎಜುಕೇಶನಲ್ ಅ್ಯಂಡ್ ವೊಕೇಶನಲ್ ಗಾಯಿಡೆನ್ಸ್ ಬ್ಯೂರೋ) 1960-61ರಲ್ಲಿ ಸ್ಥಾಪಿತವಾಯಿತು. ಆಗತಾನೇ ಪ್ರೌಢಶಾಲೆಗಳಲ್ಲಿ ಐಚ್ಛಿಕ ವಿಷಯಗಳನ್ನೊಳಗೊಂಡ ನೂತನ ಪಠ್ಯ ಕ್ರಮವು ಆಚರಣೆಗೆ ಬಂದಿದ್ದಿತು. ವೃತ್ತಿ ಮಾರ್ಗದರ್ಶನ ಮಾಡಬಲ್ಲ ಶಿಕ್ಷಕರಿಗೆ ಈ ಸಂಸ್ಥೆಯು ಅಗತ್ಯವಾದ ತರಬೇತಿಯನ್ನು ಕೊಟ್ಟಿತು. ವಿದ್ಯಾರ್ಥಿಗಳು ಯಾವ ವೃತ್ತಿಗಳನ್ನು ಆರಿಸಿಕೊಳ್ಳಬೇಕು ಮತ್ತು ಯಾವ ಐಚ್ಛಿಕ ವಿಷಯಗಳು ಅವರಿಗೆ ಸರಿ ಹೊಂದುತ್ತವೆ ಎಂಬುದರಲ್ಲಿ ಈ ಶಿಕ್ಷಕರು ಅವರಿಗೆ ಮಾರ್ಗದರ್ಶನ ನೀಡಬೇಕಾಗಿತ್ತು. ಪರೀಕ್ಷೆಗೆ ಬೇಕಾದ ಸಾಹಿತ್ಯವನ್ನು ಸಿದ್ಧಪಡಿಸುವುದು, ಪ್ರಶ್ನೆಪತ್ರಿಕೆಗಳನ್ನು ವಿಶ್ಲೇಷಿಸುವುದು, ಅಗತ್ಯವಾದ ಸಾಹಿತ್ಯವನ್ನು ಪ್ರಕಟಿಸುವುದು, ಮುಂತಾದ ಕಾರ್ಯಗಳು ಈ ಸಂಸ್ಥೆಯ ಚಟುವಟಿಕೆಗಳಾಗಿವೆ. ಈ ವಿಭಾಗವು ಕಾರ್ಯಾಗಾರಗಳನ್ನು ವ್ಯವಸ್ಥೆ ಮಾಡುವುದಷ್ಟೇ ಅಲ್ಲದೆ ವೃತ್ತಿ ಮಾರ್ಗದರ್ಶನಕ್ಕೆ ಸಂಬಂಧಪಟ್ಟ ಸಮ್ಮೇಳನಗಳನ್ನೂ, ಅದಕ್ಕೆ ಸಂಬಂಧಿಸಿದ ಪ್ರದರ್ಶನಗಳನ್ನೂ ಏರ್ಪಡಿಸುತ್ತದೆ. 1982–83ರ ಹೊತ್ತಿಗೆ ಈ ಸಂಸ್ಥೆಯು 1,766 ಸೆಕೆಂಡರಿ ಶಾಲಾ ಶಿಕ್ಷಕರನ್ನು ಮಾರ್ಗದರ್ಶನ ವೃತ್ತಿಯಲ್ಲಿ ತರಬೇತಿ ಮಾಡಿತ್ತು.

ರಾಜ್ಯ ವಿಜ್ಞಾನ ಶಿಕ್ಷಣ ಸಂಸ್ಥೆಯು (ಸ್ಟೇಟ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್) 1964ರಲ್ಲಿ ಆರಂಭವಾಯಿತು. ಕೇಂದ್ರ ಸರ್ಕಾರದ ಯೋಜನೆಯಂತೆ ಆರಂಭವಾದ ಈ ಸಂಸ್ಥೆಗೆ ಬೇಕಾದ ಹಣವನ್ನು ಆ ಸರ್ಕಾರವೇ ಕೊಡುತ್ತಿತ್ತು. ಇದರ ಉದ್ದೇಶ ಶಾಲೆಗಳಲ್ಲಿ ವಿಜ್ಞಾನ ಶಿಕ್ಷಣವನ್ನು ಉತ್ತಮಪಡಿಸುವುದು. ಈ ಸಂಸ್ಥೆಯು ಸಣ್ಣದಾಗಿ ಆರಂಭವಾದರೂ ಈಗ ಪ್ರಾಥಮಿಕ ಮತ್ತು ಪ್ರೌಢಶಾಲೆಗಳೂ, ತರಬೇತಿ ಸಂಸ್ಥೆಗಳು ಇದರ ವ್ಯಾಪ್ತಿಗೆ ಬರುತ್ತವೆ ; ಇವುಗಳಿಗೆ ತಕ್ಕುದಾದ ಚಟುವಟಿಕೆಗಳನ್ನು ಈ ಸಂಸ್ಥೆ ವ್ಯವಸ್ಥೆ ಮಾಡುತ್ತದೆ. ಸ್ಥಳದಲ್ಲೇ ಅಗ್ಗವಾಗಿ ದೊರೆಯುವ ವಸ್ತುಗಳಿಂದ ಪ್ರಾಥಮಿಕ ಶಾಲೆಗಳಲ್ಲಿ ವೈಜ್ಞಾನಿಕ ಪ್ರಯೋಗಗಳನ್ನು ಮಾಡಬಹುದು ಎಂಬುದನ್ನು ಶಿಕ್ಷಕರಿಗೆ ತೋರಿಸಿ ಅವರಿಗೆ ಅಗತ್ಯವಾದ ತರಬೇತಿಯನ್ನು ಕೊಡುತ್ತಿರುವ ಈ ಸಂಸ್ಥೆಯ ಕಾರ್ಯವು ವಿಶೇಷವಾಗಿ ಗಮನಿಸತಕ್ಕ ಅಂಶವಾಗಿದೆ. ಪ್ರಾಥಮಿಕ ಶಿಕ್ಷಕರಿಗೆ ವಿಜ್ಞಾನ ಶಿಕ್ಷಣದಲ್ಲಿ ತರಬೇತಿಯನ್ನು ಕೊಡುವ ತರಬೇತಿ ಕೇಂದ್ರವನ್ನು ರಾಜ್ಯ ಶಿಕ್ಷಣ ಸಂಸ್ಥೆ ನಡೆಸುತ್ತದೆ. ಇತ್ತೀಚಿನ ದಿನಗಳಲ್ಲಿ ಯೂನಿಸೆಫ್ ಸಂಸ್ಥೆಯು ವಿಜ್ಞಾನ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಾಕಿಕೊಂಡಿರುವ ಕಾರ್ಯಕ್ರಮಗಳಿಂದ ರಾಜ್ಯ ಶಿಕ್ಷಣ ಸಂಸ್ಥೆಯ ಸಹಾಯವನ್ನು ಪಡೆದಿದೆ. ಯೂನಿಸೆಫ್ ಸಂಸ್ಥೆಯ ಸಹಾಯದಿಂದ ರಾಜ್ಯ ವಿಜ್ಞಾನ ಶಿಕ್ಷಣ ಸಂಸ್ಥೆಯೇ ಸುಧಾರಿತ ವಿಜ್ಞಾನ ಪೆಟ್ಟಿಗೆಗಳನ್ನು ('ಸೈನ್ಸ್ ಕಿಟ್ಸ್') ತಯಾರಿಸಿದೆ. ಅವನ್ನು ಶಿಕ್ಷಣ ಸಂಸ್ಥೆಗಳಿಗೆ ಒದಗಿಸಿದೆ. ಇದರ ಇತರ ಚಟುವಟಿಕೆಗಳೆಂದರೆ, ವಿಜ್ಞಾನ ಮೇಳಗಳನ್ನೂ, ಕಾರ್ಯಾಗಾರಗಳನ್ನೂ, ಕೆಲಸದಲ್ಲಿರುವ ಶಿಕ್ಷಕರಿಗೆ ತರಬೇತಿ ಶಿಬಿರಗಳನ್ನು ವ್ಯವಸ್ಥೆ ಮಾಡುವುದು ; ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಬೋಧನೆ ಮಾಡುತ್ತಿರುವ ಶಿಕ್ಷಕರಿಗೆ ಮತ್ತು ಪ್ರೌಢಶಾಲಾ ಶಿಕ್ಷಕರಿಗೆ ಬೋಧನಾ ಕ್ರಮದ ತಿಳುವಳಿಕೆಯನ್ನು ಕೊಡುವ ಕಾರ್ಯಕ್ರಮವನ್ನು, ಮತ್ತು ಜಿಲ್ಲಾ ಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ (ವಿಶ್ವವಿದ್ಯಾಲಯ ಮತ್ತು ವಿಶ್ವೇಶ್ವರಯ್ಯ ಕೈಗಾರಿಕಾ ಪ್ರದರ್ಶನಾಲಯದ ನೆರವಿನಿಂದ) ವಿಚಾರ ಸಂಕಿರಣಗಳನ್ನು ವ್ಯವಸ್ಥೆ ಮಾಡುವುದು. ಈ ಸಂಸ್ಥೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಒಬ್ಬ ಉಪನಿರ್ದೇಶಕರು ಮುಖ್ಯಸ್ಥರಾಗಿದ್ದಾರೆ. ಅವರಿಗೆ ಸಹಾಯಕರಾಗಿ ಉಪಪ್ರಾಧ್ಯಾಪಕರೂ, ರೀಡರುಗಳೂ, ವಿಜ್ಞಾನ ಶಿಕ್ಷಣದ ಮೇಲ್ವಿಚಾರಕರೂ ಇದ್ದಾರೆ.

ರಾಜ್ಯ ಶಿಕ್ಷಣ ಸಂಸ್ಥೆಯು (ಸ್ಟೇಟ್ ಇನ್ಸ್‌ಟಿಟ್ಯೂಟ್ ಆಫ್ ಎಜುಕೇಷನ್) 1964ರಲ್ಲಿ ಧಾರವಾಡದಲ್ಲಿ ಆರಂಭವಾಯಿತು. ಇದೂ ಒಂದು ಕೇಂದ್ರ ಸರ್ಕಾರದ ಯೋಜನೆಗೆ ಅನುಗುಣವಾಗಿ ಸ್ಥಾಪಿತವಾದ ಸಂಸ್ಥೆ. ಅದಕ್ಕಾಗುವ ಖರ್ಚನ್ನು ಕೇಂದ್ರ ಸರ್ಕಾರದಿಂದ ಪಡೆಯಬಹುದಾಗಿತ್ತು. ಈ ಸಂಸ್ಥೆಯು ಮುಂದೆ ಬೆಂಗಳೂರಿಗೆ ಸ್ಥಳಾಂತರ ಹೊಂದಿತು. ಈ ಸಂಸ್ಥೆಯ ಮುಖ್ಯ ಉದ್ದೇಶವು ಶಿಕ್ಷಣದ ಗುಣಮಟ್ಟವನ್ನು ಉತ್ತಮಪಡಿಸುವುದಾಗಿತ್ತು. ಈ ಉದ್ದೇಶಕ್ಕಾಗಿ ಸೇವೆಯಲ್ಲಿದ್ದ ಶಿಕ್ಷಕರಿಗೆ ತರಬೇತಿಯನ್ನು ಕೊಡುವುದು, ಸಂಶೋಧನೆ ಮಾಡುವುದು, ಅಗತ್ಯವಾದ ಸಾಹಿತ್ಯವನ್ನು ಪ್ರಕಟಿಸುವುದು ಮತ್ತು ವಿಸ್ತರಣಾ ಕಾರ್ಯವನ್ನು ವ್ಯವಸ್ಥೆ ಮಾಡುವುದು ಮುಂತಾದ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ಈ ಕಾರ್ಯಕ್ರಮಗಳೆಲ್ಲವು ಶಿಕ್ಷಕರಿಗೆ ಅವರ ಅನುದಿನದ ಕಾರ್ಯದಲ್ಲಿ ನೆರವಾಗುವಂಥವುಗಳೇ ಆಗಿವೆ. ಆರಂಭದಲ್ಲಿ, ಈ ಸಂಸ್ಥೆಯ ಕಾರ್ಯಕ್ರಮಗಳು ಪ್ರಾಥಮಿಕ ಶಿಕ್ಷಣಕ್ಕಷ್ಟೇ ಸೀಮಿತವಾಗಿದ್ದವು. ಅನಂತರ ಸಾಕಷ್ಟು ತಜ್ಞರು ದೊರೆತಂತೆ ಸಂಪನ್ಮೂಲಗಳು ಹೆಚ್ಚಿದಂತೆ, ಸೆಕೆಂಡರಿ ಶಿಕ್ಷಣಕ್ಕೂ ಈ ಕಾರ್ಯಕ್ರಮಗಳನ್ನು ವಿಸ್ತರಿಸಲಾಯಿತು. ಮೇಲಿನ ತರಗತಿ ಕೆಳಗಿನ ತರಗತಿ ಎಂಬುದಾಗಿ ಭೇದ ಮಾಡದೆ ಮಕ್ಕಳನ್ನು ಬೇರೆ ಕ್ರಮದಲ್ಲಿ ವರ್ಗೀಕರಿಸುವುದು, ತರಬೇತಿಹೊಂದದ ಶಿಕ್ಷಕರಿಗೆ ಅಂಚೆಯ ಮೂಲಕ ತರಬೇತಿ ಕೊಡುವುದು, ಜನಸಂಖ್ಯಾ ಶಿಕ್ಷಣ ('ಪಾಪ್ಯುಲೇಶನ್ ಎಜುಕೇಶನ್') ಯೋಜನೆಗಳನ್ನು ತಯಾರಿಸುವುದು, ಅನೌಪಚಾರಿಕ ಶಿಕ್ಷಣವನ್ನು ವ್ಯವಸ್ಥೆ ಮಾಡುವುದು, ಮುಂತಾದ ಕಾರ್ಯಗಳನ್ನು ರಾಜ್ಯ ಶಿಕ್ಷಣ ಸಂಸ್ಥೆಯು ವಹಿಸಿಕೊಂಡಿದೆ.

ವಾಕ್ ದೃಶ್ಯ ಶಿಕ್ಷಣವು (ಆಡ್ಯೊ-ವಿಜುವಲ್) ರಾಜ್ಯ ಪುನರ್ವ್ಯವಸ್ಥೆಗೆ ಮೊದಲೇ ಅಸ್ತಿತ್ವದಲ್ಲಿತ್ತು. ಇದು ಶಿಕ್ಷಣ ಕಾರ್ಯಕ್ರಮಗಳಲ್ಲಿ ಒಂದಾಗಿತ್ತು. ಬೆಳಗಾವಿ ಮತ್ತು ಮದ್ರಾಸು ಕರ್ನಾಟಕ ವಲಯಗಳಲ್ಲಿ ಸರ್ಕಾರಕ್ಕೆ ವಾಕ್-ದೃಶ್ಯ ಶಿಕ್ಷಣದ ಬಗೆಗೆ ಸಲಹೆ ಮಾಡಲು ವಾಕ್-ದೃಶ್ಯ ಶಿಕ್ಷಣ ವಿಭಾಗವು 1947-48ರಲ್ಲಿ ಅಸ್ತಿತ್ವಕ್ಕೆ ಬಂದಿತ್ತು. ಉಪಕರಣಗಳನ್ನು ಕೊಳ್ಳಲು ಸಹಾಯಧನ ಕೊಡುವುದು, ವಾಕ್-ದೃಶ್ಯ ಶಿಕ್ಷಣದ ಅನುಭವ ಪಡೆಯಲು ವಿದ್ಯಾರ್ಥಿಗಳಿಂದ ಶುಲ್ಕ ವಸೂಲಿ ಮಾಡುವುದು, ಸೆಕೆಂಡರಿ ಶಾಲೆಗಳ ಶಿಕ್ಷಕರಿಗೆ ತರಬೇತಿಯನ್ನು ಕೊಡುವುದು, ಮುಂತಾದವು ಈ ಸಂಸ್ಥೆಯ ಕಾರ್ಯವಾಗಿದ್ದು, ಇವು 1956ರ ಮಧ್ಯದಲ್ಲಿ ಅಸ್ತಿತ್ವದಲ್ಲಿದ್ದವು. ಹಳೇ ಮೈಸೂರು ವಲಯದಲ್ಲಿ 1953ರಲ್ಲಿ ಶಿಕ್ಷಣ ನಿರ್ದೇಶಕರ ಕಚೇರಿಯಲ್ಲಿ ಒಂದು ವಾಕ್-ದೃಶ್ಯ ಶಿಕ್ಷಣ ವಿಭಾಗವನ್ನು ಆರಂಭಿಸಲಾಯಿತು. ಇದರ ಉದ್ದೇಶ ಬೋಧನ ಸಲಕರಣೆಗಳನ್ನು ನಿರ್ಮಿಸುವುದು ಮತ್ತು ಭೂಪಟ, ಚಿತ್ರಪಟ, ಮಾದರಿ ಮುಂತಾದವುಗಳನ್ನು ತಯಾರಿಸುವುದೇ ಆಗಿತ್ತು. ವಾಕ್-ದೃಶ್ಯ ಶಿಕ್ಷಣಕ್ಕೆ ಬೇಕಾದ ಬೋಧನ ಸಾಮಗ್ರಿಗಳ ಸಂಗ್ರಹಾಲಯವನ್ನು ಅಭಿವೃದ್ಧಿಪಡಿಸಲಾಗಿದ್ದು, 1968-69ರಲ್ಲಿ 16 ಎಂ.ಎಂ.ನ 1,674 ಫಿಲ್ಮ್‌ಗಳೂ, 400 ಫಿಲ್ಮ್ ತುಕಡಿಗಳೂ ಇದ್ದವು. ಈ ವಿಭಾಗವು ಮಕ್ಕಳಿಗಾಗಿ ಚಲನಚಿತ್ರ ಕಾರ್ಯಕ್ರಮವನ್ನು ಏರ್ಪಡಿಸುತ್ತದೆ. 1980-81ರಲ್ಲಿ 4.3 ಲಕ್ಷ ರೂಪಾಯಿಯ ವಾಕ್-ದೃಶ್ಯ ಉಪಕರಣಗಳನ್ನು ಕೊಳ್ಳಲು ಈ ವಿಭಾಗವು 150 ಸಂಸ್ಥೆಗಳಿಗೆ ಅನುಮತಿ

ಕೊಟ್ಟಿತು. ವಾಕ್‌ದೃಶ್ಯ ಬೋಧಕರಿಗೂ, ಸೆಕೆಂಡರಿ ಶಿಕ್ಷಣಕ್ಕೆ ಸಂಬಂಧಿಸಿದ ಇತರ ಬೋಧಕರಿಗೂ, ಶಾಲಾ ಇನ್ಸ್‌ಪೆಕ್ಟರುಗಳಿಗೂ ತರಬೇತಿ ತರಗತಿಗಳನ್ನು ಈ ವಿಭಾಗ ನಡೆಸುತ್ತದೆ. ಶಾಲೆಗಳಿಗೆ ಶೈಕ್ಷಣಿಕ ಚಲನಚಿತ್ರಗಳನ್ನು ಈ ಸಂಸ್ಥೆಯು ಒಂದು ನಿಯೋಜಿತ ರೀತಿಯಲ್ಲಿ ಒದಗಿಸುತ್ತದೆ. 1982-83ರಲ್ಲಿ 350 ಸಂಸ್ಥೆಗಳಲ್ಲಿ 16 ಎಂ.ಎಂ.ನ ಪ್ರೊಜೆಕ್ಟರುಗಳಿದ್ದವು. ಈ ವಿಭಾಗದಲ್ಲಿ 2,200 ಶೈಕ್ಷಣಿಕ ಚಲನಚಿತ್ರಗಳಿದ್ದವು. ಇದರಿಂದ ಒಂದು ವರ್ಷದಲ್ಲಿ ಎರಡು ಲಕ್ಷ ಮಕ್ಕಳಿಗೆ ಅನುಕೂಲವಾಗುತ್ತಿತ್ತು.

ಶಿಕ್ಷಕರ ತರಬೇತಿ ವಿಭಾಗವು (ಟೀಚರ್ ಎಜುಕೇಶನ್ ಯುನಿಟ್) ತರಬೇತಿ ಸಂಸ್ಥೆಗಳಿಗೆ ಸಂಬಂಧಿಸಿದ ಆಡಳಿತ ವಿಷಯಗಳನ್ನು ನೋಡಿಕೊಳ್ಳುತ್ತಿದೆ. 1980-81ರಲ್ಲಿ ಈ ವಿಭಾಗವು ನೋಡಿಕೊಳ್ಳುತ್ತಿದ್ದ ವಿಷಯಗಳೆಂದರೆ, ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ತರಬೇತಿ ಸಂಸ್ಥೆಗಳು, ಬಿ.ಎಡ್. ಕಾಲೇಜುಗಳು, ಸೇವಾನಿರತ ಪ್ರಾಥಮಿಕ ಶಾಲೆಗಳಿಗೆ ಶಿಕ್ಷಕರ ತರಬೇತಿ, ಧಾರವಾಡ ಮತ್ತು ವಿದ್ಯಾನಗರಗಳಲ್ಲಿರುವ ಶಿಕ್ಷಕರ ಕೇಂದ್ರಗಳಿಗೆ ಸಂಬಂಧಿಸಿದ ವಿಷಯಗಳು, ಮುಂತಾದವು. ಈ ಶಿಕ್ಷಕರ ಕೇಂದ್ರಗಳು ಪ್ರಾಥಮಿಕ ಶಾಲಾ ಶಿಕ್ಷಕರು ವಿಜ್ಞಾನ, ಗಣಿತ, ಕನ್ನಡ, ಸಮಾಜ ವಿಜ್ಞಾನ ಮುಂತಾದ ವಿಷಯಗಳನ್ನು ಆಧುನಿಕ ಮತ್ತು ಉತ್ತಮ ರೀತಿಯಲ್ಲಿ ಬೋಧಿಸಲು ಅವರಿಗೆ ತರಬೇತಿ ಕೊಡುತ್ತಿದ್ದವು. ಈ ವಿಭಾಗವು ನೈತಿಕ ಶಿಕ್ಷಣ ಮತ್ತು ಕಾಯಕಾನುಭವಕ್ಕೆ ಸಂಬಂಧಿಸಿದ ಬೋಧನ ಸಾಮಗ್ರಿಗಳನ್ನು ಸಿದ್ಧಪಡಿಸುತ್ತಿದೆ.

ರಾಜ್ಯ ಶಿಕ್ಷಣ ಮೌಲ್ಯಮಾಪನ ಸಂಸ್ಥೆಯು ('ಎಜುಕೇಶನ್ ಇವಾಲ್ಯುಯೇಶನ್ ಯುನಿಟ್') 1963ರಿಂದ ಕಾರ್ಯನಿರತವಾಗಿದೆ. ಇದರ ಉದ್ದೇಶ ಪ್ರಾಥಮಿಕ ಮತ್ತು ಸೆಕೆಂಡರಿ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವುದು. ಪ್ರಾಥಮಿಕ ಮತ್ತು ಪ್ರೌಢಶಾಲೆಯ ಶಿಕ್ಷಕರಿಗೆ ನೂತನ ರೀತಿಯ ತರಬೇತಿಯನ್ನು ('ಓರಿಯಂಟೇಶನ್') ಕೊಡುವ ಕಾರ್ಯಕ್ರಮವನ್ನು ಈ ಸಂಸ್ಥೆ ಹಾಕಿಕೊಂಡಿದೆ. ಕಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರಿಗೆ ವಿವಿಧ ಭಾಷೆಗಳಲ್ಲಿ ಮಾದರಿ ಪ್ರಶ್ನೆಪತ್ರಿಕೆಗಳನ್ನು ಸಿದ್ಧಪಡಿಸುವ ಕಾರ್ಯಾಗಾರಗಳನ್ನು ಈ ಸಂಸ್ಥೆ ವ್ಯವಸ್ಥೆ ಮಾಡುತ್ತದೆ. ಪ್ರೌಢಶಾಲಾ ಮುಖ್ಯೋಪಾಧ್ಯಾಯರು, ಶಿಕ್ಷಕರ ತರಬೇತಿ ಸಂಸ್ಥೆಗಳ ಮುಖ್ಯಸ್ಥರು, ವಿಷಯ ತನಿಖಾಧಿಕಾರಿಗಳು—ಇವರುಗಳಿಗೆ ಸಹಾಯಕವಾಗುವ ಪರೀಕ್ಷಾ ಸಾಧನಗಳನ್ನು ಈ ಸಂಸ್ಥೆಯು ತಯಾರಿಸುತ್ತದೆ. ಈ ಸಾಧನೆಗಳಿಂದ ವಿದ್ಯಾರ್ಥಿಗಳಲ್ಲಿರುವ ವಿಷಯ ಜ್ಞಾನದ ಕೊರತೆಯನ್ನು ತಿಳಿಯಲು ಸಾಧ್ಯವಾಗುತ್ತದೆ.

ಶಿಕ್ಷಣ ತಂತ್ರ ಕುಟೀರವು (ಎಜುಕೇಶನ್ ಟೆಕ್ನಾಲಜಿ ಸೆಲ್) 1975ರಲ್ಲಿ ಕೇಂದ್ರ ಸರ್ಕಾರದ ಸಲಹೆಯಂತೆ ಅಸ್ತಿತ್ವಕ್ಕೆ ಬಂದಿತು. ಎಲ್ಲ ಮಟ್ಟಗಳಲ್ಲೂ ಶಿಕ್ಷಣದ ಬಗೆಗೆ ಆಸಕ್ತಿಯನ್ನು ಹೆಚ್ಚು ಮಾಡುವುದು, ಶಿಕ್ಷಣದ ಗುಣಮಟ್ಟವನ್ನು ಉತ್ತಮಪಡಿಸುವುದು ಮತ್ತು ವಾಕ್‌ದೃಶ್ಯ ಬೋಧಕ ಸಾಧನಗಳ ಸಹಾಯದಿಂದ ಮತ್ತು ಸೇವಾನಿರತ ಶಿಕ್ಷಕರಿಗೆ ತಕ್ಕ ತರಬೇತಿಯನ್ನು ಕೊಡುವುದರ ಮೂಲಕ ಶಾಲಾ ಶಿಕ್ಷಣವು ಪರಿಣಾಮಕಾರಿಯೂ ಸ್ವಾರಸ್ಯಕರವೂ ಆಗಿರುವಂತೆಯೂ ಮಾಡಿ ಪ್ರಾಥಮಿಕ ಮಟ್ಟದಲ್ಲಿ ಆಗುತ್ತಿರುವ "ಅಪವ್ಯಯ ಮತ್ತು ಜಡತೆ"ಯನ್ನು ಕಡಿಮೆ ಮಾಡುವುದು ಈ ವಿಭಾಗದ ಕಾರ್ಯಗಳಾಗಿವೆ. ಕುಟೀರವು ಆಕಾಶವಾಣಿಗೂ ಮತ್ತು ಶಾಲೆಗಳಿಗೂ ನಡುವಿನ ಸಂಪರ್ಕ ಸಂಸ್ಥೆಯಾಗಿದೆ. ಈ ಸಂಪರ್ಕದಿಂದ ಶಾಲಾ ಪ್ರಸಾರಕ್ಕೆ ಬೇಕಾದ ತಾಂತ್ರಿಕತೆಯನ್ನು ಬೆಳೆಸಲು ಪ್ರಯತ್ನಿಸಲಾಗುತ್ತಿದೆ. 1980-81ರಲ್ಲಿ ಈ ಕುಟೀರವು ರೇಡಿಯೋ ಪಠ್ಯ ವಸ್ತುವನ್ನು ತಯಾರಿಸುವುದು, ಎಲ್ಲ ಶಾಲೆಗಳಿಗೂ ಒಂದೇ ವಿಧವಾದ ಪ್ರಸಾರ ಕಾರ್ಯಕ್ಕೆ ಬೇಕಾದ ವಸ್ತುವನ್ನು ಸಿದ್ಧಪಡಿಸುವುದು, ಶಾಲಾ ಪ್ರಸಾರವನ್ನು ಪರಿಣಾಮಕಾರಿಯಾಗಿ ಉಪಯೋಗಿಸುವ ಸಾಮರ್ಥ್ಯ ಬರುವಂತೆ ಶಾಲಾಶಿಕ್ಷಕರಿಗೆ ತರಬೇತಿ ಕೊಡುವುದು, ರೇಡಿಯೋ ಸಾಹಿತ್ಯ ನಿರ್ಮಾಣ ಕಾರ್ಯಾಗಾರಗಳನ್ನು ವ್ಯವಸ್ಥೆ ಮಾಡುವುದು, ಮುಂತಾದ ಕಾರ್ಯಗಳನ್ನು ಮಾಡಿತು. ತಜ್ಞರ ಭಾಷಣಗಳನ್ನು ಮುದ್ರಿಸಿಕೊಂಡು ಕ್ಯಾಸೆಟ್‌ಗಳನ್ನು ತಯಾರು ಮಾಡಿ ಅಂಥ ಕ್ಯಾಸೆಟ್ಟುಗಳ ಸಂಗ್ರಹವನ್ನು ಈ ಕುಟೀರ ಮಾಡುತ್ತಿದೆ. 1975-76ರಲ್ಲಿ ಆಕಾಶವಾಣಿ, ರಾಜ್ಯ ಸರ್ಕಾರ, ಮತ್ತು ಭಾರತೀಯ ಬಾಹ್ಯಾಕಾಶ ಸಂಸ್ಥೆ ('ಇಸ್ರೋ') ಇವುಗಳ ಸಹಕಾರದಿಂದ ಉಪಗ್ರಹದಮೂಲಕ ದೂರದರ್ಶನ ಶಿಕ್ಷಣ ಪ್ರಯೋಗ ('ಸೈಟ್') ಕಾರ್ಯಕ್ರಮವನ್ನಿಟ್ಟುಕೊಂಡಿತ್ತು. ಈ ಕಾರ್ಯಕ್ರಮದ ವ್ಯಾಪ್ತಿಗೆ ಕಲ್ಬುರ್ಗಿ, ರಾಯಚೂರು ಮತ್ತು ವಿಜಾಪುರ ಜಿಲ್ಲೆಗಳ 400 ಗ್ರಾಮಗಳು ಸೇರಿದ್ದವು. ಮಕ್ಕಳಿಗೆ ಮತ್ತು ವಯಸ್ಕರಿಗೆ ಶಿಕ್ಷಣ ಕಾರ್ಯಕ್ರಮಗಳನ್ನು ಹೈದರಾಬಾದ್ ನಗರದಿಂದ ಟೆಲಿಪ್ರಸಾರ ಮಾಡಲಾಗುತ್ತಿತ್ತು. ಮೂಲೆಯ ಹಳ್ಳಿಗಳ ಶಾಲೆಗಳು ಒಂದು ಅತ್ಯಂತ ಆಧುನಿಕ ಮಾಧ್ಯಮದ ಲಾಭವನ್ನು ಈ ಸೈಟ್ (ಎಸ್ ಐ ಟಿ ಇ) ಕಾರ್ಯಕ್ರಮದಿಂದ ಪಡೆಯುವಂತಾಯಿತು. ಕುಟೀರವು ಸೇವಾನಿರತ ಶಿಕ್ಷಕರಿಗೆ ಕೊಡುವ ತರಬೇತಿಯಲ್ಲಿ ವಿವಿಧ ಮಾಧ್ಯಮಗಳನ್ನು ಬಳಸಿಕೊಳ್ಳುವ ತಾಂತ್ರಿಕತೆಯನ್ನು ಇತಿಹಾಸದಲ್ಲಿಯೇ ಪ್ರಪ್ರಥಮವಾಗಿ ಸೇರಿಸಿತು. ಸದ್ಯದಲ್ಲಿ ಕುಟೀರವು ಪ್ರೌಢಶಾಲೆ ಮತ್ತು ಪ್ರಾಥಮಿಕ ಶಾಲೆಗಳಿಗೆ ಬೇಕಾದ ರೇಡಿಯೋ ಪ್ರಸಾರಕ್ಕೆ ಹೆಚ್ಚು ಗಮನವನ್ನು ಕೊಡುತ್ತಿದೆ.

ಪಠ್ಯ ಪುಸ್ತಕ ವಿಭಾಗವು (ಟೆಕ್ಸ್ಟ್ ಬುಕ್ ವಿಂಗ್) ಪಠ್ಯಪುಸ್ತಕ ನಿರ್ದೇಶನಾಲಯದ ಉತ್ತರಾಧಿಕಾರಿಯಾಗಿದೆ. ಇದು

ಮೊದಲು ಪಠ್ಯಪುಸ್ತಕ ಬ್ಯೂರೋ ಆಗಿತ್ತು. ಇದು ಅಸ್ತಿತ್ವಕ್ಕೆ ಬಂದದ್ದು 1958-59 ರಲ್ಲಿ. ನಿರ್ದೇಶನಾಲಯವು ಅಸ್ತಿತ್ವಕ್ಕೆ ಬಂದದ್ದು 1969 ರಲ್ಲಿ ; ನಿರ್ದೇಶನಾಲಯಕ್ಕೆ ಪಠ್ಯ ವಸ್ತುವನ್ನು ಉತ್ತಮಪಡಿಸುವುದು, ಶಿಕ್ಷಕರ ಕೈಪಿಡಿಗಳನ್ನು ಸಿದ್ಧಪಡಿಸಿ ಪ್ರಕಟಿಸುವುದು, ಪಠ್ಯಪುಸ್ತಕಗಳನ್ನು ತಯಾರಿಸುವುದು (ಮತ್ತು ಮಾರಾಟಕ್ಕೆ ವ್ಯವಸ್ಥೆ ಮಾಡುವುದು) ಮತ್ತು ಆರಿಸಿದ ಶಿಕ್ಷಣದ ವಿಷಯಗಳಲ್ಲಿ ಸಂಶೋಧನೆ ಮಾಡುವುದು ಇವೇ ಮುಂತಾದ ಹೊಣೆಗಾರಿಕೆಗಳು ಇದ್ದವು. ಪ್ರಾಥಮಿಕ ಶಾಲೆಗಳ ಮತ್ತು ತರಬೇತಿ ಸಂಸ್ಥೆಗಳ ಪಠ್ಯ ವಸ್ತುವನ್ನು ಈ ನಿರ್ದೇಶನಾಲಯವು ಸುಧಾರಿಸಿತು. ಪಠ್ಯಪುಸ್ತಕ ರಾಷ್ಟ್ರೀಕರಣ ಕಾರ್ಯಕ್ರಮದಂತೆ ಬಹು ದೊಡ್ಡ ಪ್ರಮಾಣದಲ್ಲಿ ಪಠ್ಯಪುಸ್ತಕಗಳನ್ನು ರಚಿಸಿ ಮುದ್ರಿಸಬೇಕಾಗಿತ್ತು. ಕೆಲವು ಅಲ್ಪಸಂಖ್ಯಾತ ಭಾಷೆಗಳಿಗೆ ಸಂಬಂಧಿಸಿದ ಪಠ್ಯಪುಸ್ತಕಗಳನ್ನು ಬಿಟ್ಟರೆ, ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳಿಗೆ ಬೇಕಾಗುವ ಎಲ್ಲ ಪಠ್ಯಪುಸ್ತಕಗಳೂ ಇಂದು ರಾಷ್ಟ್ರೀಕರಣವಾಗಿವೆ. ಈ ನಿರ್ದೇಶನಾಲಯವು ಕಾಲಕಾಲಕ್ಕೆ ಪಠ್ಯಪುಸ್ತಕವನ್ನು ಸುಧಾರಿಸುವ ಕಾರ್ಯವನ್ನು ಮಾಡುತ್ತಿತ್ತು. ಕೆಲಕಾಲವಾದ ಮೇಲೆ, ಈ ನಿರ್ದೇಶನಾಲಯವನ್ನು ವಿಸರ್ಜಿಸಿ, ಅದರ ಕೆಲಸವನ್ನು ಶೈಕ್ಷಣಿಕ ತರಬೇತಿ ಮತ್ತು ಸಂಶೋಧನ ಇಲಾಖೆಯ ಅಧೀನದಲ್ಲಿರುವ ಪಠ್ಯಪುಸ್ತಕ ವಿಭಾಗಕ್ಕೆ ವಹಿಸಿ ಕೊಡಲಾಗಿದೆ. ಪಠ್ಯಪುಸ್ತಕಗಳನ್ನು ಇಂದು ಈ ವಿಭಾಗವು ತಯಾರಿಸುತ್ತಿದೆ.

## ಗಣ್ಯ ಸಂಸ್ಥೆಗಳು

ಸರ್ಕಾರವೇ ನೇರವಾಗಿ ನಡೆಸುತ್ತಿರುವ ಮತ್ತು ಸರ್ಕಾರದ ಮಾನ್ಯತೆ ಪಡೆದಿರುವ ಪ್ರೌಢ ಶಾಲೆಗಳ ಜೊತೆಗೆ ಸೆಕೆಂಡರಿ ಶಿಕ್ಷಣವನ್ನು ಉತ್ತಮಪಡಿಸುವ ಕಾರ್ಯದಲ್ಲಿ ನಿರತವಾಗಿರುವ ಕೆಲವು ವಿಶೇಷ ಸಂಸ್ಥೆಗಳಿವೆ. ಅವುಗಳ ಸಮೀಕ್ಷೆಯನ್ನು ಈ ಕೆಳಗೆ ಕೊಡಲಾಗಿದೆ.

ಸೈನಿಕ ಶಾಲೆ, ವಿಜಾಪುರ: ವಿಜಾಪುರದಲ್ಲಿರುವ ಸೈನಿಕ ಶಾಲೆಯು ಒಂದು ನಿವಾಸಿ ಶಾಲೆಯಾಗಿದೆ. ಇದು ಕರ್ನಾಟಕ ಸರ್ಕಾರದಿಂದ 1963 ರಲ್ಲಿ ಆರಂಭವಾಯಿತು. ಇದು ಸಾಮಾನ್ಯ ಶಾಲೆಗಳಲ್ಲಿ ದೊರಕುವ ಶಿಕ್ಷಣವನ್ನು ಕೊಡುವುದರ ಜೊತೆಗೆ ಸೈನಿಕ ಶಿಕ್ಷಣವನ್ನೂ ಕೊಡುತ್ತಿದೆ. ಖಡಕವಾಸ್ಲಾದಲ್ಲಿರುವ ನ್ಯಾಷನಲ್ ಡಿಫೆನ್ಸ್ ಅಕ್ಯಾಡೆಮಿಗೆ ಸೇರಲು ಅರ್ಹವಾಗುವಂಥ ಶಾರೀರಿಕ ಮತ್ತು ಬೌದ್ಧಿಕ ಶಿಕ್ಷಣವನ್ನು ಇಲ್ಲಿ ಕೊಡಲಾಗುತ್ತಿದೆ. ವೈಯಕ್ತಿಕ ಮತ್ತು ಸಾಮೂಹಿಕ ಶೀಲವನ್ನು ಬೆಳೆಸುವುದು ಈ ಸಂಸ್ಥೆಯ ಮತ್ತೊಂದು ಗುರಿಯಾಗಿದೆ. ಶಾಲೆಯು ನವದೆಹಲಿಯಲ್ಲಿರುವ ಕೇಂದ್ರೀಯ ಸೆಕೆಂಡರಿ ಶಿಕ್ಷಣ ಮಂಡಲಿಯಿಂದ ಅಂಗೀಕೃತವಾಗಿರುವ ಶಾಲೆಯಾಗಿದೆ. ಅಖಿಲ ಭಾರತ ಪ್ರವೇಶ ಪರೀಕ್ಷೆಯಲ್ಲಿ ಆರಿಸಿ ಬಂದ 10 ಮತ್ತು 12 ವರ್ಷದ ಮಕ್ಕಳನ್ನು ಶಾಲೆಯ ಆರನೇಯ ಸ್ಟ್ಯಾಂಡರ್ಡಿಗೆ ಸೇರಿಸಿಕೊಳ್ಳಲಾಗುತ್ತಿದೆ. ಕೇಂದ್ರ ಲೋಕ ಸೇವಾ ಆಯೋಗವು ಖಡಕವಾಸ್ಲಾ ನ್ಯಾಷನಲ್ ಡಿಫೆನ್ಸ್ ಅಕ್ಯಾಡಮಿಯ ಪ್ರವೇಶಕ್ಕೆ ನಡೆಸುವ ಪರೀಕ್ಷೆಗೂ ಕೇಂದ್ರ ಸೆಕೆಂಡರಿ ಶಿಕ್ಷಣ ಮಂಡಲಿಯು ನಡೆಸುವ ಅಖಿಲ ಭಾರತ ಸೀನಿಯರ್ ಸರ್ಟಿಫಿಕೇಟ್ ಪರೀಕ್ಷೆಗೂ ಅದೇ ಮಂಡಲಿಯ ಅಖಿಲ ಭಾರತ ಸೆಕೆಂಡರಿ ಸ್ಕೂಲ್ ಪರೀಕ್ಷೆಗೂ ಈ ಶಾಲೆಯು ವಿದ್ಯಾರ್ಥಿಗಳನ್ನು ತಯಾರಿಸುತ್ತಿದೆ. 1980-81 ರಲ್ಲಿ 30 ಶಾಲಾ ಶಿಕ್ಷಕರ ನೇತೃತ್ವದಲ್ಲಿ 528 ವಿದ್ಯಾರ್ಥಿಗಳು ಓದುತ್ತಿದ್ದರು.

ಕಿತ್ತೂರು ಚೆನ್ನಮ್ಮ ನಿವಾಸಿ ಶಾಲೆ: ಕಿತ್ತೂರು ವೀರ ರಾಣಿ ಚೆನ್ನಮ್ಮನವರ ಸ್ಮರಣಾರ್ಥವಾಗಿ 1969 ರಲ್ಲಿ ಬೆಳಗಾವಿ ಜಿಲ್ಲೆಯ ಕಿತ್ತೂರಿನಲ್ಲಿ ಕಿತ್ತೂರು ಚೆನ್ನಮ್ಮ ಬಾಲಕಿಯರ ನಿವಾಸಿ ಶಾಲೆಯನ್ನು ಆರಂಭಿಸಲಾಯಿತು. ಇದನ್ನು ಆರಂಭಿಸಿದವರು ಕರ್ನಾಟಕ ಸರ್ಕಾರದವರು. ಆದರೆ ಈಗ ಕಿತ್ತೂರು ರಾಣಿ ಚೆನ್ನಮ್ಮ ಸ್ಮಾರಕ ಸಮಿತಿಯು ಇದನ್ನು ನಡೆಸುತ್ತಿದೆ. ಎಲ್ಲ ಶಾಲೆಗಳಲ್ಲಿ ಸಾಮಾನ್ಯವಾದ ಶಿಕ್ಷಣವನ್ನು ಕೊಡುವುದರ ಜೊತೆಗೆ ಸರ್ವಾಂಗೀಣ ವಿಕಾಸ, ಶಿಸ್ತು ಮತ್ತು ನಾಯಕಿಗೆ ಬೇಕಾದ ಗುಣಗಳನ್ನು ಬೆಳೆಸುವ ಗುರಿಯನ್ನು ಈ ಸಂಸ್ಥೆ ಇಟ್ಟುಕೊಂಡಿದೆ. ಶಾಲೆಯ ಮಕ್ಕಳನ್ನು ಆರನೇಯ ಸ್ಟ್ಯಾಂಡರ್ಡಿಗೆ ಸೇರಿಸಿಕೊಳ್ಳುತ್ತದೆ. ಅವರನ್ನು ಹತ್ತನೇಯ ತರಗತಿಯ ಪರೀಕ್ಷೆಗೂ ಮತ್ತು ಎರಡನೇಯ ಪಿ.ಯು.ಸಿ. ಪರೀಕ್ಷೆಗೂ ತಯಾರು ಮಾಡಲಾಗುತ್ತದೆ. ಪಠ್ಯ ವಿಷಯಗಳ ಜೊತೆಗೆ, ಪಠ್ಯೇತರ ವಿಷಯಗಳಾದ ವ್ಯಾಯಾಮ, ಕ್ರೀಡೆಗಳು, ಕಾಯಕಾನುಭವ, ಸಂಗೀತ, ನೃತ್ಯ, ರೇಖಾ ಚಿತ್ರಗಳ ರಚನೆ, ಚಿತ್ರ ಕಲೆ, ಎಲೆಕ್ಟ್ರಾನಿಕ್ಸ್, ಮಣ್ಣಿನ ಕೆಲಸ, ಛಾಯಾಚಿತ್ರ ಗ್ರಹಣ, ನಾಟಕ ಕಲೆ, ಪ್ರವಾಸ, ಮುಂತಾದ ಹವ್ಯಾಸಗಳಿಗೂ ಪ್ರಾಶಸ್ತ್ಯ ಕೊಡಲಾಗುತ್ತಿದೆ. 1980-81 ರಲ್ಲಿ ಇಲ್ಲಿ ಒಟ್ಟು 374 ವಿದ್ಯಾರ್ಥಿನಿಯರಿದ್ದರು.

ಇವಲ್ಲದೆ, ಬೆಂಗಳೂರಿನಲ್ಲಿಯೂ, ಬೆಳಗಾವಿಯಲ್ಲಿಯೂ ಒಂದೊಂದು ಸೈನಿಕ ಶಾಲೆಗಳಿವೆ. ಇವೆರಡನ್ನೂ (ಭಾರತ ಸರ್ಕಾರದ) ರಕ್ಷಣಾ ಇಲಾಖೆ ನಡೆಸುತ್ತಿದೆ. ಸೈನಿಕ ಶಾಲೆಗಳಲ್ಲದೆ, ರಾಜ್ಯದಲ್ಲಿರುವ ರಾಮಕೃಷ್ಣ ಮಠದವರು ಮೈಸೂರಿನಲ್ಲಿ ನಡೆಸುತ್ತಿರುವ ರಾಮಕೃಷ್ಣ ವಿದ್ಯಾಶಾಲೆ, ಬೆಂಗಳೂರಿನ ಹತ್ತಿರದ ಚನ್ನೇನಹಳ್ಳಿಯಲ್ಲಿ ಜನಸೇವಾ ಟ್ರಸ್ಟಿನವರು ನಡೆಸುತ್ತಿರುವ ನಿವಾಸಿ ಶಾಲೆ, ಬಿದರೆಯ ಮಾಣಿಕ್ ಪಬ್ಲಿಕ್ ಸ್ಕೂಲ್, ಕೋಲಾರ ಜಿಲ್ಲೆಯ ಮುದ್ದೇನಹಳ್ಳಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಅಳಿಕೆಯಲ್ಲಿ ಸತ್ಯಸಾಯಿ ಟ್ರಸ್ಟಿನವರು ನಡೆಸುತ್ತಿರುವ ನಿವಾಸಿ ಶಾಲೆಗಳು ರಾಜ್ಯದಲ್ಲಿರುವ ಇತರ ನಿವಾಸಿ ಶಾಲೆಗಳು. ಇವುಗಳಲ್ಲಿ ಪ್ರತಿಯೊಂದಕ್ಕೂ ತನ್ನದೇ ಆದ ವೈಶಿಷ್ಟ್ಯವಿದೆ.

## ಕೇಂದ್ರೀಯ ವಿದ್ಯಾಲಯಗಳು

ಕೇಂದ್ರೀಯ ವಿದ್ಯಾಲಯದ ಯೋಜನೆಯು 1962 ರಲ್ಲಿ ಜಾರಿಗೆ ಬಂದಿತು. ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವರ್ಗವಾಗುತ್ತಿದ್ದ ಕೇಂದ್ರ ಸರ್ಕಾರದ ನೌಕರರ ಮಕ್ಕಳಿಗೆ ಅವಶ್ಯಕವಾದ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುವುದು ಇವನ್ನು ಸ್ಥಾಪಿಸಿದುದರ ಒಂದು ಉದ್ದೇಶವಾಗಿತ್ತು. ಆದುದರಿಂದ ಈ ಶಾಲೆಗಳಲ್ಲೆಲ್ಲಾ ಒಂದೇ ಪಠ್ಯವಸ್ತು ಇರುತ್ತಿತ್ತು. ರಾಷ್ಟ್ರೀಯ ಶಿಕ್ಷಣ ಮತ್ತು ತರಬೇತಿ ಸಮಿತಿ (ಎನ್.ಸಿ.ಇ.ಅರ್.ಟಿ.) ಕೇಂದ್ರ ಸೆಕೆಂಡರಿ ಶಿಕ್ಷಣ ಮಂಡಲಿ ಮುಂತಾದ ಸಂಸ್ಥೆಗಳ ಸಹಕಾರದಿಂದ ಶೈಕ್ಷಣಿಕ ಪ್ರಯೋಗಗಳನ್ನು ಆರಂಭಿಸಿ ಅಂಥ ಪ್ರಯೋಗಗಳಿಗೆ ಪ್ರೋತ್ಸಾಹವನ್ನು ಕೊಡುವುದು ಸ್ಥಾಪನೆಯ ಮತ್ತೊಂದು ಉದ್ದೇಶವಾಗಿದೆ; ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸುವುದು ಮತ್ತೊಂದು ಉದ್ದೇಶ. 1963-64ರಲ್ಲಿ ಕರ್ನಾಟಕದಲ್ಲಿ ರಾಜ್ಯದ ಮೊದಲನೇಯ ಕೇಂದ್ರೀಯ ವಿದ್ಯಾಲಯವು ಬೆಂಗಳೂರಿನ ಅರ್ಮಿ ಸೌತ್ ಸೆಂಟರ್‌ನಲ್ಲಿ ಆರಂಭವಾಯಿತು. ಒಂದರಿಂದ ಹನ್ನೊಂದನೇಯ ಸ್ಟ್ಯಾಂಡರ್ಡಿನವರೆಗೆ ಇಲ್ಲಿ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುತ್ತಾರೆ. ಐದರಿಂದ ಒಂಬತ್ತನೇಯ ಸ್ಟ್ಯಾಂಡರ್ಡಿನವರೆಗೆ ಸಂಸ್ಕೃತವನ್ನು ಕಡ್ಡಾಯವಾಗಿ ಕಲಿಸಲಾಗುತ್ತದೆ.

ಕೇಂದ್ರೀಯ ವಿದ್ಯಾಲಯಕ್ಕೆ ಮಕ್ಕಳನ್ನು ಸೇರಿಸಿಕೊಳ್ಳುವುದಕ್ಕೆ ತಂದೆ ತಾಯಿಯರ ವರ್ಗಾವರ್ಗಿಗಳೊಂದೇ ಆಧಾರವಾಗಿದೆ. ಹೆಚ್ಚು ಬೇಗ ವರ್ಗವಾಗುವ ತಂದೆ-ತಾಯಿಯರ ಮಕ್ಕಳಿಗೆ ಉಳಿದ ಮಕ್ಕಳಿಗಿಂತ ಹೆಚ್ಚಿನ ಆದ್ಯತೆಯನ್ನು ಕೊಡಲಾಗುತ್ತದೆ. ಒಂದೂರಿಂದ ಮತ್ತೊಂದೂರಿಗೆ ವರ್ಗವಾಗುವ ಕೇಂದ್ರ ಸರ್ಕಾರಿ ನೌಕರರು, ಸ್ವಾಯತ್ತ ಸಂಸ್ಥೆಗಳ ನೌಕರರು, ಸಂಪೂರ್ಣ ಸರ್ಕಾರಿ ಸ್ವಾಮ್ಯದ ಕೈಗಾರಿಕಾ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ಉದ್ಯೋಗಿಗಳ ಮತ್ತು ರಕ್ಷಣಾ ಇಲಾಖೆಯ ನೌಕರರ ಮಕ್ಕಳ ಜೊತೆಗೆ ವರ್ಗಾವರ್ಗಿಗಳಿಲ್ಲದ ಕೇಂದ್ರ ಸರ್ಕಾರದ ನೌಕರರ ಮಕ್ಕಳೂ, ಮತ್ತೆ ಊರಿಂದೂರಿಗೆ ಹೋಗಬೇಕಾದವರ ಇತರರ ಮಕ್ಕಳೂ ಈ ಕೇಂದ್ರೀಯ ವಿದ್ಯಾಲಯಗಳಿಗೆ ಸೇರಲು ಅರ್ಹರಾಗಿದ್ದಾರೆ. ಒಂದರಿಂದ ಎಂಟನೇಯ ಸ್ಟ್ಯಾಂಡರ್ಡ್‌ವರೆಗೆ ಶಿಕ್ಷಣವು ಉಚಿತವಾಗಿರುತ್ತದೆ. ಆಮೇಲೆ ಶಿಕ್ಷಣ ಶುಲ್ಕವು ಇರುತ್ತದೆ. ಕೇಂದ್ರೀಯ ಸೆಕೆಂಡರಿ ಶಿಕ್ಷಣ ಮಂಡಲಿಯು ನಡೆಸುವ ಅಖಿಲ ಭಾರತ ಸೆಕೆಂಡರಿ ಸ್ಕೂಲ್ ಮತ್ತು ಅಖಿಲ ಭಾರತ ಸೀನಿಯರ್ ಸರ್ಟಿಫಿಕೇಟ್ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸಲಾಗುತ್ತದೆ. 1980-81ರಲ್ಲಿ ಕರ್ನಾಟಕದಲ್ಲಿ 14 ಕೇಂದ್ರೀಯ ವಿದ್ಯಾಲಯಗಳಿದ್ದವು. ಅವುಗಳಲ್ಲಿ 10,107 ವಿದ್ಯಾರ್ಥಿಗಳೂ 539 ಬೋಧಕರೂ, 160 ಬೋಧಕೇತರ ಉದ್ಯೋಗಿಗಳೂ ಇದ್ದರು. ಬೆಳಗಾವಿ ಮತ್ತು ಹುಬ್ಬಳ್ಳಿಯಲ್ಲಿನ ಕೇಂದ್ರೀಯ ವಿದ್ಯಾಲಯಗಳು ಮುಂಬೈ ಪ್ರಾದೇಶಿಕ ಕಚೇರಿಯ ಅಧೀನದಲ್ಲಿಯೂ, ಕರ್ನಾಟಕದಲ್ಲಿನ ಉಳಿದ ಕೇಂದ್ರೀಯ ವಿದ್ಯಾಲಯಗಳು ಹೈದರಾಬಾದ್ ಪ್ರಾದೇಶಿಕ ಕಚೇರಿಯ ಅಧೀನದಲ್ಲಿಯೂ ಇವೆ.

ದಿ ಕೌನ್ಸಿಲ್ ಫಾರ್ ಇಂಡಿಯನ್ ಸ್ಕೂಲ್ ಸರ್ಟಿಫಿಕೇಟ್ ಎಕ್ಸಾಮಿನೇಷನ್ ಸಂಸ್ಥೆಯು 1958ರಲ್ಲಿ ಸ್ಥಾಪಿತವಾಯಿತು. ಇದು ಮೊದಲು ಯೂನಿವರ್ಸಿಟಿ ಆಫ್ ಕೇಂಬ್ರಿಜ್ ಲೋಕಲ್ ಎಕ್ಸಾಮಿನೇಷನ್ ಸಿಂಡಿಕೇಟ್ ಸಂಸ್ಥೆಯಿಂದ ಸ್ಥಾಪಿತವಾಗಿತ್ತು. ಆಗ ಇಂಟರ್-ಸ್ಟೇಟ್ ಬೋರ್ಡ್ ಫಾರ್ ಆ್ಯಂಗ್ಲೋ-ಇಂಡಿಯನ್ ಎಜುಕೇಷನ್ ಸಂಸ್ಥೆಯು ಕೇಂಬ್ರಿಜ್ ಸಂಸ್ಥೆಗೆ ನೆರವಾಗಿತ್ತು. ಇಂಡಿಯನ್ ಸ್ಕೂಲ್ ಸರ್ಟಿಫಿಕೇಟ್ ಪರೀಕ್ಷಾ ಸಮಿತಿ ಇಂಡಿಯನ್ ಸರ್ಟಿಫಿಕೇಟ್ ಆಫ್ ಸೆಕೆಂಡರಿ ಎಜುಕೇಷನ್ ಪರೀಕ್ಷೆ ಮತ್ತು ಇಂಡಿಯನ್-ಸ್ಕೂಲ್ ಸರ್ಟಿಫಿಕೇಟ್ ಪರೀಕ್ಷೆ ಎಂಬ ಎರಡು ಪರೀಕ್ಷೆಗಳನ್ನು ನಡೆಸುತ್ತದೆ. ಈ ಸಮಿತಿಯ ಅಂಗೀಕೃತ ಸಂಸ್ಥೆಗಳಾಗಿ ಕರ್ನಾಟಕದಲ್ಲಿ 20 ಶಾಲೆಗಳಿವೆ. 1982ರಲ್ಲಿ, ಈ ಶಾಲೆಗಳು 809 ವಿದ್ಯಾರ್ಥಿಗಳನ್ನು ಇಂಡಿಯನ್ ಸರ್ಟಿಫಿಕೇಟ್ ಆಫ್ ಸೆಕೆಂಡರಿ ಎಜುಕೇಷನ್ ಪರೀಕ್ಷೆಗೂ ಮತ್ತು 73 ವಿದ್ಯಾರ್ಥಿಗಳನ್ನು ಇಂಡಿಯನ್ ಸ್ಕೂಲ್ ಸರ್ಟಿಫಿಕೇಟ್ ಪರೀಕ್ಷೆಗೂ ತಯಾರು ಮಾಡಿತ್ತು.

ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಮಿತಿ (ದಿ ಕೌನ್ಸಿಲ್ ಫಾರ್ ಇಂಡಿಯನ್ ಸ್ಕೂಲ್ ಸರ್ಟಿಫಿಕೇಟ್ ಎಕ್ಸಾಮಿನೇಶನ್)ಯು ಭಾರತ ಸರ್ಕಾರದ ಶಿಕ್ಷಣ ಸಚಿವಾಲಯದ ತಜ್ಞ ಮತ್ತು ತಾಂತ್ರಿಕ ವಿಭಾಗವಾಗಿದೆ. ಶಾಲಾ ಶಿಕ್ಷಣವನ್ನು ಉತ್ತಮಪಡಿಸುವ ಉದ್ದೇಶದಿಂದ ಅದು ದೇಶದ ವಿವಿಧ ಭಾಗಗಳಲ್ಲಿ 18 ಕ್ಷೇತ್ರ ಕಚೇರಿಗಳನ್ನು ಸ್ಥಾಪಿಸಿದೆ. ಈ ಕ್ಷೇತ್ರಾಧಿಕಾರಿಗಳು ರಾಜ್ಯ ಶಿಕ್ಷಣ ಇಲಾಖೆಗಳೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಅವುಗಳ ಜೊತೆ ಸೇರಿಕೊಂಡು ಕೆಲಸ ಮಾಡುತ್ತಾರೆ. ಮೊದಲು ಈ ಕ್ಷೇತ್ರಾಧಿಕಾರಿಗಳ ಕಚೇರಿಯನ್ನು ಮೈಸೂರಿನಲ್ಲಿ 1970ರಲ್ಲಿ ಆರಂಭಿಸಲಾಯಿತು. ಆದರೆ ಅದೇ ವರ್ಷ ಅದನ್ನು ಬೆಂಗಳೂರಿಗೆ ವರ್ಗಾಯಿಸಲಾಯಿತು. ಈ ಕಚೇರಿಯು ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ, ಭಾರತ ಸರ್ಕಾರದ ಶಿಕ್ಷಣ ಸಚಿವಾಲಯ–ಇವೆರಡರ ಮತ್ತು ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯ ನಡುವಿನ ಸಂಪರ್ಕ ಸಂಸ್ಥೆಯಾಗಿದೆ. ಎನ್.ಸಿ.ಇ.ಆರ್.ಟಿ. ಮತ್ತು ಭಾರತ ಸರ್ಕಾರದ ಶಿಕ್ಷಣ ಸಚಿವಾಲಯಗಳು ತಮ್ಮ ಧೋರಣೆ, ಕಾರ್ಯಕ್ರಮ ಮತ್ತು ಶಿಕ್ಷಣ ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳನ್ನು ರಾಜ್ಯ ಸರ್ಕಾರದ ಗಮನಕ್ಕೆ ತರುತ್ತವೆ. ಕರ್ನಾಟಕದಲ್ಲಿನ ಶೈಕ್ಷಣಿಕ ಅಭಿವೃದ್ಧಿಯನ್ನು ರಾಜ್ಯ ಶಿಕ್ಷಣ ಇಲಾಖೆಯು ಎನ್.ಸಿ.ಇ.ಆರ್.ಟಿ. ಮತ್ತು ಭಾರತ ಸರ್ಕಾರದ ಶಿಕ್ಷಣ ಸಚಿವಾಲಯಕ್ಕೆ ವರದಿ ಮಾಡುತ್ತದೆ. ಬೆಂಗಳೂರಿನ

ಕ್ಷೇತ್ರ ಕಚೇರಿಗೆ ರಾಜ್ಯಸರ್ಕಾರವು 3.70 ಎಕರೆ ಜಮೀನನ್ನು ಉಚಿತವಾಗಿ ಕೊಟ್ಟಿದೆ. ಈ ನಿವೇಶನದಲ್ಲಿ ಎನ್. ಸಿ. ಇ. ಆರ್. ಟಿ.ಯ ದಕ್ಷಿಣ ಪ್ರಾದೇಶಿಕ ಕಚೇರಿಯು ಬರುತ್ತದೆ ಎಂದು ನಿರೀಕ್ಷಿಸಲಾಗಿದೆ.

### ಶುಲ್ಕ ರದ್ದತಿ ಮತ್ತು ವಿದ್ಯಾರ್ಥಿ ವೇತನಗಳು

ಬುದ್ಧಿವಂತ ಬಡ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಮುಂದುವರಿಸಲು ಅನುಕೂಲವಾಗುವಂತೆ ವಿವಿಧ ರೀತಿಯ ವಿದ್ಯಾರ್ಥಿವೇತನಗಳು ಹಳೆಯ ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿದ್ದವು. ಜೊತೆಗೆ ಶುಲ್ಕ ರಿಯಾಯಿತಿಗಳೂ ಇದ್ದವು. ವಿದ್ಯಾರ್ಥಿವೇತನಗಳು ಯಾವುವೆಂದರೆ–ಹಿಂದುಳಿದ ಪಂಗಡಗಳ ವಿದ್ಯಾರ್ಥಿವೇತನ, ನಿಮ್ನ ವರ್ಗದ (ಮಕ್ಕಳ) ವಿದ್ಯಾರ್ಥಿವೇತನ, ಬಾಲಕಿಯರ ವಿದ್ಯಾರ್ಥಿವೇತನ, ಮುಸಲ್ಮಾನ್ ಮಕ್ಕಳ ವಿದ್ಯಾರ್ಥಿವೇತನ, ಎಲ್ಲ ವರ್ಗಕ್ಕೂ ಸೇರಿದ ಬಡ ಮಕ್ಕಳಿಗೆ ಕೊಡುತ್ತಿದ್ದ ವಿದ್ಯಾರ್ಥಿವೇತನ, ಸಂಸ್ಕೃತ ವಿದ್ಯಾರ್ಥಿಗಳ ವಿದ್ಯಾರ್ಥಿವೇತನ, ಸೈನ್ಯದಲ್ಲಿದ್ದವರ ಮಕ್ಕಳ ವಿದ್ಯಾರ್ಥಿವೇತನ, ಪ್ರತಿಭಾವಂತ ವಿದ್ಯಾರ್ಥಿಗಳ ವಿದ್ಯಾರ್ಥಿವೇತನ, ವಿಶೇಷ ವಿದ್ಯಾರ್ಥಿವೇತನ, ಮಲೆನಾಡು ಮಕ್ಕಳ ವಿದ್ಯಾರ್ಥಿವೇತನ ಮತ್ತು ಪಾಳೇಗಾರರ ಮಕ್ಕಳ ವಿದ್ಯಾರ್ಥಿವೇತನ. ಇವಲ್ಲದೆ, ಪಾಶ್ಚಿಮಾತ್ಯ ವಿಶ್ವವಿದ್ಯಾಲಯಗಳಲ್ಲಿ ಮತ್ತು ಕಾಲೇಜುಗಳಲ್ಲಿ ವಿಜ್ಞಾನ ಮತ್ತು ತಾಂತ್ರಿಕಶಾಸ್ತ್ರಗಳಲ್ಲಿ ಉನ್ನತ ವ್ಯಾಸಂಗ ನಡೆಸಲು 'ವಿದೇಶಿ' ವಿದ್ಯಾರ್ಥಿವೇತನಗಳನ್ನು ಕೊಡಲಾಗುತ್ತಿತ್ತು. 1955-56ರಲ್ಲಿ 45 ದತ್ತಿಗಳಿಂದ 279ರಷ್ಟು ವಿದ್ಯಾರ್ಥಿವೇತನಗಳನ್ನೂ ಕೊಡಲಾಯಿತು. ಈ ವಿದ್ಯಾರ್ಥಿಗಳಲ್ಲದೆ, ಶೇಕಡಾ 20ರಷ್ಟು ಬಾಲಕರಿಗೆ ಮತ್ತು ಶೇಕಡಾ 50ರಷ್ಟು ಬಾಲಕಿಯರಿಗೆ ಶುಲ್ಕ ರಿಯಾಯಿತಿ ಇತ್ತು. ನಿಮ್ನ ವರ್ಗದ ವಿದ್ಯಾರ್ಥಿಗಳಿಗೆ ಶುಲ್ಕದಲ್ಲಿ ಪೂರ್ಣ ರಿಯಾಯಿತಿ ಇತ್ತು. ಮುಸಲ್ಮಾನ್ ಬಾಲಕಿಯರು ಮತ್ತು ಸೈನ್ಯದಲ್ಲಿದ್ದ ಮರಾಠಾ ಕುಟುಂಬಗಳಿಗೆ ಸೇರಿದ ವಿದ್ಯಾರ್ಥಿಗಳು ಇತರ ಬಾಲಕರು ಕೊಡುತ್ತಿದ್ದುದರ ಅರ್ಧ ಭಾಗವನ್ನು ಮಾತ್ರ ಶುಲ್ಕವಾಗಿ ಕೊಡುತ್ತಿದ್ದರು. 1955-56ರಲ್ಲಿ, 18,038 ವಿದ್ಯಾರ್ಥಿಗಳು ವಿದ್ಯಾರ್ಥಿವೇತನವನ್ನು ಪಡೆಯುತ್ತಿದ್ದರು. ಇದಕ್ಕಾದ ಒಟ್ಟು ವೆಚ್ಚ 24.27 ಲಕ್ಷ ರೂಪಾಯಿಗಳು.

ಬೆಳಗಾವಿ ವಲಯದಲ್ಲಿ, ಬಾಂಬೆ ಸ್ಟೇಟ್ ಎಜುಕೇಷನ್ ಸೊಸೈಟಿಯವರು ಬಡವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಕೊಡುತ್ತಿದ್ದರು. ವುಡ್ ಪ್ರಣೀತ ವರದಿಯು ಅರ್ಹ ಬಡ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ಅನುಕೂಲವಾಗುವಂತೆ ವಿದ್ಯಾರ್ಥಿ ವೇತನಗಳನ್ನು ನೀಡಬೇಕೆಂದು ನಿರ್ದೇಶನವನ್ನಿತ್ತಿತ್ತು. ಮುಂಬೈ ಸರ್ಕಾರವು 1887-88ರಲ್ಲಿ ಸ್ಪರ್ಧಾ ಪರೀಕ್ಷೆಯನ್ನು ನಡೆಸಿ, ಮಿಡ್ಲ್ ಮತ್ತು ಹೈಸ್ಕೂಲ್‌ಗಳಲ್ಲಿನ ವಿದ್ಯಾರ್ಥಿಗಳಿಗೆ, ವಿದ್ಯಾರ್ಥಿವೇತನವನ್ನು ಕೊಡುವ ಪದ್ಧತಿಯನ್ನು ಜಾರಿಗೆ ತಂದಿತು. ಈ ವಿದ್ಯಾರ್ಥಿವೇತನಗಳು ಮೂರು ವಿಧವಾಗಿದ್ದವು. ಒಂದು ಬಗೆಯ ವಿದ್ಯಾರ್ಥಿವೇತನವು ಎಲ್ಲ ವರ್ಗದ ಮಕ್ಕಳಿಗೂ ದೊರೆಯುತ್ತಿತ್ತು. ಉಳಿದ ಎರಡು ವಿದ್ಯಾರ್ಥಿವೇತನಗಳು, ಮುಸಲ್ಮಾನ್ ವಿದ್ಯಾರ್ಥಿಗಳಿಗೆ ಮತ್ತು ಮಧ್ಯ ಸ್ಥರದ ಜಾತಿಗಳ ಹಿಂದೂ ವಿದ್ಯಾರ್ಥಿಗಳಿಗೆ ಮಾತ್ರ ದೊರೆಯುತ್ತಿದ್ದವು. ಉತ್ತರ ಕನ್ನಡ ಜಿಲ್ಲೆಯ ಕೊಂಕಣ ಮರಾಠರು ಮೊದಲನೇಯ ಜಾಗತಿಕ ಯುದ್ಧದಲ್ಲಿ ಮಾಡಿದ ಸೇವೆಯ ಪ್ರಶಂಸಾರೂಪವಾಗಿ ಸೆಕೆಂಡರಿ ಶಾಲೆಗಳಲ್ಲಿ ಓದುತ್ತಿದ್ದ ಆ ಜಾತಿಯ ಮಕ್ಕಳೆಲ್ಲರಿಗೂ ಶುಲ್ಕದಲ್ಲಿ ಪೂರ್ಣ ರಿಯಾಯಿತಿ ಇತ್ತು. 1885-86ರಷ್ಟು ಹಿಂದೆಯೇ, ಧಾರವಾಡದ ಲಿಂಗಾಯಿತ ಸಂಘವು ಕೆಲವು ವಿದ್ಯಾರ್ಥಿವೇತನಗಳನ್ನು ಕೊಡುತ್ತಿತ್ತು. 1887-1888ರಲ್ಲಿ ಸಂಘವು 80,000 ರೂಪಾಯಿಯ ನಿಧಿಯನ್ನು ಹೊಂದಿತ್ತು. ಇದರಂತೆಯೇ, ಮದ್ರಾಸ್ ಕರ್ನಾಟಕ ಮತ್ತು ಕಲ್ಬುರ್ಗಿ ಪ್ರದೇಶಗಳಲ್ಲಿಯೂ, ಅರ್ಹರಾದ ಬಡವಿದ್ಯಾರ್ಥಿಗಳಿಗೆ ಮತ್ತು ಪರಿಶಿಷ್ಟವರ್ಗ ಮತ್ತು ಬುಡಕಟ್ಟುಗಳಿಗೆ ವಿದ್ಯಾರ್ಥಿವೇತನಗಳೂ ಮತ್ತು ಶುಲ್ಕ ರಿಯಾಯಿತಿಗಳೂ ದೊರಕುತ್ತಿದ್ದವು.

ರಾಜ್ಯ ಪುನರ್ವ್ಯವಸ್ಥೆಯ ಸಮಯದಲ್ಲಿ, ಶುಲ್ಕದ ಮೊಬಲಗೂ ಶುಲ್ಕದ ರಿಯಾಯಿತಿಗಳೂ ಮತ್ತು ವಿದ್ಯಾರ್ಥಿ ವೇತನಗಳೂ ವಿವಿಧ ವಲಯಗಳಲ್ಲಿ ಬೇರೆ ಬೇರೆಯಾಗಿದ್ದವು. 1960-61ರಲ್ಲಿ, ವಾರ್ಷಿಕ ಆದಾಯ 1,200 ರೂ. ಗಿಂತ ಕಡಿಮೆ ಇದ್ದ ಕುಟುಂಬಗಳಿಗೆ ಪ್ರೌಢಶಾಲಾ ಶಿಕ್ಷಣವು ಉಚಿತವಾಯಿತು. 1966-67ರಲ್ಲಿ, ಎಲ್ಲರಿಗೂ ಪ್ರೌಢಶಾಲಾ ಶಿಕ್ಷಣವು ಉಚಿತವಾಯಿತು. ಪದವಿಪೂರ್ವ ತರಗತಿಯಲ್ಲಿ ಬಾಲಕರಲ್ಲಿ ಶೇಕಡ 25 ವಿದ್ಯಾರ್ಥಿಗಳಿಗೂ ಮತ್ತು ಬಾಲಕಿಯರಲ್ಲಿ ಶೇಕಡಾ 50 ವಿದ್ಯಾರ್ಥಿನಿಯರಿಗೂ ಶುಲ್ಕ ರಿಯಾಯತಿ ಇತ್ತು. 1961-62ರಲ್ಲಿ ವಿದ್ಯಾರ್ಥಿವೇತನಗಳನ್ನು ಕೊಡುವುದರಲ್ಲಿ ಏಕತೆಯನ್ನು ತರಲು, ನಿಮ್ನ ವರ್ಗದ ಮಕ್ಕಳಿಗೆ, ಸೈನಿಕ ಕುಟುಂಬಗಳಿಗೆ ಸೇರಿದ ಮಕ್ಕಳಿಗೆ, ಪಾಳೇಗಾರ್ ಕುಟುಂಬಗಳಿಗೆ ಸೇರಿದ ಮಕ್ಕಳಿಗೆ, ರಾಜಕೀಯ ಸಂತ್ರಸ್ತರ ಮಕ್ಕಳಿಗೆ ಮತ್ತು ಸೇವೆಯಲ್ಲಿದ್ದಾಗ ಮರಣ ಹೊಂದಿದ ಸರ್ಕಾರಿ ನೌಕರರ ಮಕ್ಕಳಿಗೆ ದೊರೆಯುತ್ತಿದ್ದ ವಿದ್ಯಾರ್ಥಿವೇತನಗಳನ್ನು ಬಿಟ್ಟು ಉಳಿದೆಲ್ಲ ವಿದ್ಯಾರ್ಥಿವೇತನಗಳು ರದ್ದಾಗಿ ಅವುಗಳ ಬದಲಿಗೆ ಬಡತನ ಮತ್ತು ಅರ್ಹತೆಗಳ ಆಧಾರದ ಮೇಲೆ ನೀಡುವ ವಿದ್ಯಾರ್ಥಿವೇತನ ಯೋಜನೆ ಜಾರಿಗೆ ಬಂತು. ಈ ವಿದ್ಯಾರ್ಥಿವೇತನಗಳು ಪ್ರೌಢಶಾಲೆಗಳ ವಿದ್ಯಾರ್ಥಿಗಳಿಗೆ 1966-67ರ ವರೆಗೆ ದೊರೆಯುತ್ತಿದ್ದವು ; ಆ ವರ್ಷ ಇವೂ ರದ್ದಾದುವು. ಕಾಲೇಜು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ, ಅನೇಕ ವಿದ್ಯಾರ್ಥಿ

ವೇತನಗಳೂ ಮತ್ತು ಶುಲ್ಕ ರಿಯಾಯತಿಗಳೂ ಇವೆ. ಬಡತನ ಮತ್ತು ಅರ್ಹತೆಯ ಮೇಲೆ ದೊರೆಯುವ ವಿದ್ಯಾರ್ಥಿ ವೇತನಗಳು, ವಿಶೇಷ ವಿದ್ಯಾರ್ಥಿವೇತನಗಳು, ರಾಜ್ಯವು ಸಾಲದ ರೂಪದಲ್ಲಿ ಕೊಡುವ, ಭಾರತ ಸರ್ಕಾರವು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಕೊಡುವ, ಭಾರತ ಸರ್ಕಾರವು ಸಾಲದ ರೂಪದಲ್ಲಿ ಕೊಡುವ, ಬಡತನ ಮತ್ತು ಅರ್ಹತೆಗಳ ಮೇಲೆ ಭಾರತ ಸರ್ಕಾರವು ಕೊಡುವ, ವಿಜ್ಞಾನದಲ್ಲಿ ಪ್ರತಿಭೆಯನ್ನು ತೋರಿಸುವ ವಿದ್ಯಾರ್ಥಿಗಳಿಗೆ ಭಾರತ ಸರ್ಕಾರವು ನೀಡುವ, ಪ್ರಾದೇಶಿಕ ಭಾಷೆಯು ಹಿಂದಿಯಲ್ಲದ ಭಾಗಗಳಲ್ಲಿ ಹಿಂದಿಯನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಕೊಡುವ, ಹೀಗೆ ವಿವಿಧ ವಿದ್ಯಾರ್ಥಿವೇತನಗಳು, ಶಾಲಾ ಶಿಕ್ಷಕರ ಮಕ್ಕಳಿಗೆ ದೊರೆಯುವ ವಿದ್ಯಾರ್ಥಿವೇತನಗಳು ಇಂತಹವಾಗಿವೆ.

### ಮಧ್ಯಾಹ್ನದ ಊಟದ ವ್ಯವಸ್ಥೆ

ರಾಜರ ಆಡಳಿತದಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ 1946-47 ರಷ್ಟು ಹಿಂದೆಯೇ ಮಧ್ಯಾಹ್ನದ ಊಟದ ವ್ಯವಸ್ಥೆ ಇತ್ತು. 1951-52ರಲ್ಲಿ ವಿದ್ಯಾ ಇಲಾಖೆಯು ಮಧ್ಯಾಹ್ನದ ಊಟದ ವ್ಯವಸ್ಥೆಗಾಗಿ ರೂ. 37,000 ಗಳನ್ನು ಮಂಜೂರು ಮಾಡಿತು. 57 ಮಾಧ್ಯಮಿಕ ಶಾಲೆಗಳೂ, 25 ಪ್ರೌಢಶಾಲೆಗಳೂ ಈ ಯೋಜನೆಯ ವ್ಯಾಪ್ತಿಯಲ್ಲಿದ್ದವು. 9,366 ವಿದ್ಯಾರ್ಥಿಗಳು ಈ ಯೋಜನೆಯ ಪ್ರಯೋಜನವನ್ನು ಹೊಂದುತ್ತಿದ್ದರು. ಈ ಕಾರ್ಯಕ್ರಮದ ಉದ್ದೇಶವೆಂದರೆ ಪುಷ್ಟಿಕರ ಆಹಾರವಿಲ್ಲದೆ ನರಳುತ್ತಿರುವ ದುರ್ಬಲವರ್ಗದ ಮಕ್ಕಳಿಗೆ ಪುಷ್ಟಿಕರವಾದ ಆಹಾರವನ್ನೊದಗಿಸುವುದಾಗಿದೆ. ಪುಷ್ಟಿಕರವಾದ ಆಹಾರವಿಲ್ಲದೆ ಬಳಲುವವರು ಸಾಮಾನ್ಯವಾಗಿ ಬಡವರ್ಗವೇ. ಶಾಲೆಗಳಲ್ಲಿ ಹಾಜರಾತಿಯನ್ನು ಉತ್ತಮ ಪಡಿಸುವುದು ಈ ಯೋಜನೆಯ ಮತ್ತೊಂದು ಗುರಿ. ಕಡ್ಡಾಯ ಶಿಕ್ಷಣವನ್ನು ಯಶಸ್ವಿಗೊಳಿಸುವ ಉದ್ದೇಶವೂ ಈ ಯೋಜನೆಗಿದೆ. 1963-64 ರಿಂದ 'ಕೇರ್' ಸಂಸ್ಥೆಯು ('ಕೊ ಅಪರೇಟಿವ್ ಅಮೆರಿಕನ್ ರಿಲೀಫ್ ಎವೆರಿವ್ಹೆರ್') ಮಾಡುತ್ತಿರುವ ಸಹಾಯವು ಈ ಕಾರ್ಯಕ್ರಮಕ್ಕೆ ಒತ್ತಾಸೆ ಕೊಡುತ್ತಿದೆ. 1981-82 ರಲ್ಲಿ ಕೇರ್ ಕಾರ್ಯಕ್ರಮದ ವ್ಯಾಪ್ತಿಯಲ್ಲಿ 144 ರೇಂಜುಗಳು ಬರುತ್ತಿದ್ದವು. ಸುಮಾರು 12,68,000 ಬಾಲಕ ಬಾಲಕಿಯರು ಈ ಕಾರ್ಯಕ್ರಮದಿಂದ ಪ್ರಯೋಜನ ಹೊಂದುತ್ತಿದ್ದರು. ರಾಜ್ಯ ಸರ್ಕಾರ ಹಾಕಿಕೊಂಡಿದ್ದ ಕಾರ್ಯಕ್ರಮದಿಂದ 2.40 ಲಕ್ಷ ಶಾಲಾ ಮಕ್ಕಳು ಜೊತೆಗೆ 8,060 ಆದಿವಾಸಿ ಮಕ್ಕಳೂ ಪುಷ್ಟಿಕರವಾದ ಆಹಾರವನ್ನು ಪಡೆಯುತ್ತಿದ್ದರು.

ಪ್ರತ್ಯೇಕ ಪ್ರತ್ಯೇಕವಾಗಿ ನಡೆಯುತ್ತಿದ್ದ ಆಹಾರ ಕೇಂದ್ರಗಳಲ್ಲಾಗುತ್ತಿದ್ದ ಕಾಲವ್ಯಯವನ್ನು ತಪ್ಪಿಸುವ ಉದ್ದೇಶದಿಂದ ಕೇಂದ್ರ ಪಾಕಶಾಲಾ ವ್ಯವಸ್ಥೆಯನ್ನು ('ಸೆಂಟ್ರಲ್ ಕಿಚನ್ ಸ್ಕೀಂ') ಈ ಯೋಜನೆಯಡಿಯಲ್ಲಿ ತರಲಾಯಿತು. ಇದರಿಂದ ಶಾಲಾ ಶಿಕ್ಷಕರು ತಮ್ಮ ಬೋಧನ ಕಾರ್ಯಕ್ಕೆ ಹೆಚ್ಚು ಗಮನ ಕೊಡಲು ಸಾಧ್ಯವಾಯಿತು. ಈ ಕಾರ್ಯಕ್ರಮದಂತೆ ಕೇಂದ್ರ ಪಾಕಶಾಲೆಯಲ್ಲಿ ಆಹಾರವು ತಯಾರಾಗುತ್ತದೆ. ಅಲ್ಲಿಂದ ಆಹಾರವನ್ನು ಹಂಚುವ ಕೇಂದ್ರಗಳಿಗೆ ಆಹಾರವು ಸರಬರಾಜಾಗುತ್ತದೆ. ಮೊತ್ತಮೊದಲಿಗೆ 1977-78 ರಲ್ಲಿ ಹತ್ತು ರೇಂಜುಗಳಲ್ಲಿ ಹತ್ತು ಇಂಥ ಕೇಂದ್ರ ಪಾಕಶಾಲೆಗಳನ್ನು ಆರಂಭಿಸಲಾಯಿತು. 1978-79 ರಲ್ಲಿ 50 ರೇಂಜುಗಳಲ್ಲಿ 50 ಇಂಥ ಕೇಂದ್ರ ಪಾಕಶಾಲೆಗಳನ್ನು ಆರಂಭಿಸಲಾಯಿತು. 1980-81 ರಲ್ಲಿ ಗ್ರಾಮಾಂತರ ಪ್ರದೇಶದಲ್ಲಿ 50 ಚಿಕ್ಕ ಕೇಂದ್ರ ಪಾಕಶಾಲೆಗಳನ್ನು ಆರಂಭಿಸಲಾಯಿತು. ಒಂದು ಕೇಂದ್ರ ಪಾಕಶಾಲೆಯು 6,000 ಮಕ್ಕಳಿಗೆ ಆಹಾರವನ್ನೊದಗಿಸಿದರೆ ಚಿಕ್ಕ ಕೇಂದ್ರ ಪಾಕಶಾಲೆಯು 3,000 ಮಕ್ಕಳಿಗೆ ಆಹಾರವನ್ನೊದಗಿಸುತ್ತದೆ. 1981-82 ರಲ್ಲಿ ಎಲ್ಲ ಕೇಂದ್ರ ಪಾಕಶಾಲೆಗಳನ್ನೂ ಮತ್ತು ಚಿಕ್ಕ ಕೇಂದ್ರ ಪಾಕಶಾಲೆಗಳನ್ನೂ ಮುಂದುವರಿಸಲಾಯಿತು. 4.80 ಲಕ್ಷ ಮಕ್ಕಳು ಇವುಗಳ ಪ್ರಯೋಜನವನ್ನು ಪಡೆಯುತ್ತಿದ್ದರು. ಇದಕ್ಕಾಗಿ ತಗಲಿದ ವೆಚ್ಚ 43.25 ಲಕ್ಷ ರೂಪಾಯಿಗಳು.

### ಜಾಗತಿಕ ಆಹಾರ ಯೋಜನೆ

ಮಧ್ಯಾಹ್ನ ಆಹಾರ ಯೋಜನೆಯ ಪೂರಕವಾಗಿ ಕರ್ನಾಟಕ ರಾಜ್ಯವು ಜಾಗತಿಕ ಆಹಾರ ಯೋಜನೆ ('ವರ್ಲ್ಡ್ ಫುಡ್ ಪ್ರೊಗ್ರಾಮ್') ಯನ್ನು ಆರಂಭಿಸಿದೆ. ಇದು 1972 ರಲ್ಲಿ ಆರಂಭವಾಗಿ ಐದು ವರ್ಷಗಳಷ್ಟು ಕಾಲ ಜಾರಿಯಲ್ಲಿರಬೇಕಾಗಿತ್ತು. ಇದು ಒಂದು ಅಂತರರಾಷ್ಟ್ರೀಯ ಯೋಜನೆ. ಸಂಯುಕ್ತ ರಾಷ್ಟ್ರ ಸಂಸ್ಥೆಯ ಆಹಾರ ಮತ್ತು ಕೃಷಿ ಸಂಸ್ಥೆಯು (ಎಫ್.ಎ.ಓ.) ಇದನ್ನು ನಡೆಸುತ್ತದೆ. ಅದು ಬೇರೆ ಬೇರೆ ರಾಷ್ಟ್ರಗಳಿಂದ ಆಹಾರವನ್ನು ಉಚಿತವಾಗಿ ಪಡೆಯುತ್ತದೆ. ಅನಂತರ, ಅಭಿವೃದ್ಧಿ ಹೊಂದುತ್ತಿರುವ ಮತ್ತು ಅಭಿವೃದ್ಧಿ ಹೊಂದಿರದ ರಾಷ್ಟ್ರಗಳಿಗೆ ಹಂಚುತ್ತದೆ. ಕರ್ನಾಟಕದಲ್ಲಿ ಇದಕ್ಕೆ ಸಂಬಂಧಿಸಿದ ಎರಡು ಯೋಜನೆಗಳು ಜಾರಿಯಲ್ಲಿವೆ. 90,000 ಮಕ್ಕಳು ಇದರ ಪ್ರಯೋಜನವನ್ನು ಪಡೆಯುವರೆಂದು ನಿರೀಕ್ಷಿಸಲಾಗಿದೆ. ಆದರೆ ದೊರೆತ ಆಹಾರ ಪದಾರ್ಥಗಳನ್ನು ಪೂರ್ಣವಾಗಿ ಐದು ವರ್ಷಗಳಲ್ಲಿ ಉಪಯೋಗಿಸಿಕೊಳ್ಳಲು ಸಾಧ್ಯವಾಗದುದರಿಂದ ಪ್ರಯೋಜನ ಹೊಂದುವ ಮಕ್ಕಳ ಸಂಖ್ಯೆಯನ್ನು 1,25,000 ಕ್ಕೆ ಏರಿಸಲಾಯಿತು. ಒಂದು ಯೋಜನೆಯ ಪ್ರಕಾರ 1,29,483 ಜನರು ಇದರ ಪ್ರಯೋಜನ ಪಡೆಯುತ್ತಾರೆ. ಇವರು ಕಾಲೇಜುಗಳಲ್ಲಿ, ಪ್ರೌಢ ಶಾಲೆಗಳಲ್ಲಿ, ಸರ್ಕಾರಿ ವಿದ್ಯಾರ್ಥಿ ನಿಲಯಗಳಲ್ಲಿ, ಸರ್ಟಿಫೈಡ್ ಶಾಲೆಗಳಲ್ಲಿ, ರಿಮಾಂಡ್

ಹೋಂ ಗಳಲ್ಲಿ ಇರುತ್ತಾರೆ. ಇನ್ನೊಂದು ಯೋಜನೆಯಡಿಯಲ್ಲಿ, ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ಮತ್ತು ಹಿಂದುಳಿದ ಜಾತಿಗಳ, ರಿಮಾಂಡ್ ಹೋಂ ಗಳ, ಸರ್ಟಿಫೈಡ್ ಶಾಲೆಗಳ, ಅನಾಥ ಮಕ್ಕಳು ಮತ್ತು ಗತಿಯಿಲ್ಲದ ಸ್ತ್ರೀಯರನ್ನು ದಾಖಲು ಮಾಡಿಕೊಳ್ಳುವ ('ರಿಸೆಪ್ಶನ್ ಸೆಂಟರ್') ಕೇಂದ್ರ ಗಳಲ್ಲಿರುವ ಅನಾಥೆಯರು ಮತ್ತು ಅನಾಥಾಲಯಗಳ ಮತ್ತು ನಿರ್ಗತಿಕರ ಆಶ್ರಯ-ಸ್ಥಾನಗಳಲ್ಲಿರುವ 42,451 ಜನರು ಅನುಕೂಲ ಪಡೆಯುತ್ತಿದ್ದಾರೆ. ಒಟ್ಟು 2,103 ಆಹಾರ ಕೇಂದ್ರಗಳಿವೆ. ಜಾಗತಿಕ ಆಹಾರ ಯೋಜನೆಯಿಂದಾಗಿ ಆಹಾರ ಕೇಂದ್ರಗಳ ಮಾಸಿಕ ವೆಚ್ಚದಲ್ಲಿ ಉಳಿತಾಯವಾಗುವ ಹಣವನ್ನು ಒಂದು ನಿಧಿಯನ್ನಾಗಿ ಮಾಡಿ, ಅದರಲ್ಲಿರುವ ಹಣವನ್ನು ಶಾಲೆಯ ಅಭಿವೃದ್ಧಿಯ ಉದ್ದೇಶಗಳಿಗಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ. ಈ ನಿಧಿಯ ಹೆಸರು ಜಾಗತಿಕ ಆಹಾರ ಯೋಜನೆಯ ಅಭಿವೃದ್ಧಿ ನಿಧಿ ('ವರ್ಲ್ಡ್ ಫುಡ್ ಪ್ರೊಗ್ರ್ಯಾಂ ಡೆವಲಪ್‌ಮೆಂಟ್ ಫಂಡ್').

### ಬೋಧಕರ ಶಿಕ್ಷಣ

ಉತ್ತಮ ಶಿಕ್ಷಣ ಪದ್ಧತಿಯೊಂದರ ಬಹು ಅಗತ್ಯವಾದ ಅಂಶವೆಂದರೆ ಬೋಧಕರ ತರಬೇತಿಗಾಗಿ ಮಾಡಿರುವ ಸಮರ್ಪಕ ವ್ಯವಸ್ಥೆ. ರಾಜರ ಆಡಳಿತದಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ 1860 ರಷ್ಟು ಹಿಂದೆಯೇ ಮೈಸೂರು ನಗರದಲ್ಲಿ ಒಂದು ತರಬೇತಿ ಶಾಲೆಯನ್ನು ಸ್ಥಾಪಿಸಲಾಗಿತ್ತು. ಇದು ಶಿಕ್ಷಕರ ತರಬೇತಿಗಾಗಿ ಅಂದಿನ ಸರಕಾರ ತೆಗೆದುಕೊಂಡಿದ್ದ ಕಾರ್ಯಕ್ರಮ. ಹೋಬಳಿ ಶಾಲೆಗಳು ಸ್ಥಾಪಿತವಾದ ಮೇಲೆ, ಶಿಕ್ಷಕರಿಗೆ ತಕ್ಕ ತರಬೇತಿಯನ್ನು ಕೊಡಲು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿಯೂ ನಾರ್ಮಲ್ ಸ್ಕೂಲುಗಳನ್ನು ಸ್ಥಾಪಿಸಲಾಯಿತು. 1877 ರಲ್ಲಿ ಬಂದೊದಗಿದ ಭೀಕರ ಕ್ಷಾಮದ ಕಾರಣದಿಂದ, ಎಲ್ಲ ನಾರ್ಮಲ್ ಶಾಲೆಗಳನ್ನೂ ರದ್ದು ಮಾಡಬೇಕಾಯಿತು. ಆದರೆ 1893-94 ರಲ್ಲಿ ಮೈಸೂರು ನಗರದಲ್ಲಿ ಒಂದು ನಾರ್ಮಲ್ ಶಾಲೆಯನ್ನು ಸ್ಥಾಪಿಸಲಾಯಿತು. ಇದರಲ್ಲಿ ಅಪ್ಪರ್ ಸೆಕೆಂಡರಿ ಮತ್ತು ಪಂಡಿತ ತರಗತಿಗಳೂ ಇದ್ದವು. 1897 ರಲ್ಲಿ ತುಮಕೂರು ಮತ್ತು ಕೋಲಾರಗಳಲ್ಲಿಯೂ, ಸ್ವಲ್ಪಕಾಲದ ನಂತರ ಬೆಂಗಳೂರು, ಚಿತ್ರದುರ್ಗ ಮತ್ತು ಹಾಸನ ಗಳಲ್ಲಿಯೂ ನಾರ್ಮಲ್ ಸ್ಕೂಲುಗಳನ್ನು ಸ್ಥಾಪಿಸಲಾಯಿತು. ತುಮಕೂರಿನಲ್ಲಿ ವೆಸ್ಲಿಯನ್ ಮಿಷನ್ನಿನವರು ಒಂದು ಖಾಸಗಿ ನಾರ್ಮಲ್ ಸ್ಕೂಲನ್ನು ಆರಂಭಿಸಿದರು. ಕೋಲಾರದ ನಾರ್ಮಲ್ ಸ್ಕೂಲನ್ನು ಮತ್ತೊಮ್ಮೆ 1931-32 ರಲ್ಲಿ ಮುಚ್ಚಲಾಯಿತು. ಉಪಾಧ್ಯಾಯಿನಿಯರಿಗೆ ತರಬೇತಿ ಕೊಡಲು 1888-89 ರಲ್ಲಿ ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಒಂದು ಶಿಕ್ಷಕ ತರಬೇತಿ ತರಗತಿಯನ್ನು ತೆರೆಯಲಾಯಿತು. ಉರ್ದು ಉಪಾಧ್ಯಾಯಿನಿಯರ ತರಬೇತಿಗಾಗಿ 1916-17 ರಲ್ಲಿ ಜನಾನಾ ನಾರ್ಮಲ್ ಸ್ಕೂಲನ್ನು ಮೈಸೂರಿನಲ್ಲಿ ತೆರೆಯಲಾಯಿತು. ಬೆಂಗಳೂರಿನಲ್ಲಿ ವೆಸ್ಲಿಯನ್ ಮಿಷನ್ನಿನವರು ಮಹಿಳೆಯರಿಗಾಗಿ ತರಬೇತಿ ಶಾಲೆಯನ್ನು ಪ್ರಾರಂಭಿಸಿದರು. ಮಿಡ್ಲ್ ಸ್ಕೂಲ್ ಉಪಾಧ್ಯಾಯರಿಗಾಗಿ ಮೈಸೂರಿನಲ್ಲಿ 1912-13 ರಲ್ಲಿ ಒಂದು ತರಗತಿಯನ್ನು ಆರಂಭಿಸಲಾಯಿತು. ಮಹಾರಾಣಿ ಶಿಕ್ಷಕಿಯರ ಕಾಲೇಜಿನಲ್ಲಿ 1928-29 ರಲ್ಲಿ ಇಂಥದೇ ಒಂದು ತರಗತಿಯನ್ನು ಆರಂಭಿಸಲಾಯಿತು. 1931-32 ರಲ್ಲಿ ಹಳೇ ಮೈಸೂರು ರಾಜ್ಯದಲ್ಲಿ 11 ತರಬೇತಿ ಸಂಸ್ಥೆಗಳಿದ್ದವು. ಇವುಗಳಲ್ಲಿ ಒಂಬತ್ತು ಸರ್ಕಾರಿ ಸಂಸ್ಥೆಗಳು, ಒಂದು ಅನುದಾನ ಪಡೆಯುತ್ತಿದ್ದ ಸಂಸ್ಥೆಯೂ ಇನ್ನೊಂದು ಅನುದಾನ ಪಡೆಯದ ಸಂಸ್ಥೆಯೂ ಆಗಿದ್ದವು. ಇವುಗಳಲ್ಲಿ ಎಂಟು ಉಪಾಧ್ಯಾಯರ ತರಬೇತಿ ಸಂಸ್ಥೆಗಳೂ ಮತ್ತು ಮೂರು ಉಪಾಧ್ಯಾಯಿನಿಯರ ಸಂಸ್ಥೆಗಳೂ ಆಗಿದ್ದವು. 1943-44 ರಲ್ಲಿ, ಕೋಲಾರ ಮತ್ತು ಚಿಕ್ಕಮಗಳೂರು ಹೊರತು ಮಿಕ್ಕೆಲ್ಲ ಜಿಲ್ಲಾ ಕೇಂದ್ರಗಳಲ್ಲಿಯೂ ತರಬೇತಿ ಸಂಸ್ಥೆಗಳಿದ್ದವು. 1931-32 ರಲ್ಲಿ, ನಾಲ್ಕು ದರ್ಜೆಯ ತರಬೇತಿಗಳಿದ್ದವು. 1) ಪದವೀಧರರಲ್ಲದ (ಅಂಡರ್ ಗ್ರ್ಯಾಜುಯೇಟ್) ಶಿಕ್ಷಕರಿಗೆ ಇದ್ದ ತರಬೇತಿ, 2) ಅಪ್ಪರ್ ಸೆಕೆಂಡರಿ ತರಬೇತಿ, 3) ಲೋಯರ್ ಸೆಕೆಂಡರಿ ತರಬೇತಿ ಮತ್ತು 4) ಸುಧಾರಿತ ವರ್ನ್ಯಾಕ್ಯುಲರ್ ಟ್ರೈನಿಂಗ್. ಇವುಗಳಲ್ಲಿ ನಾಲ್ಕನೇಯದರ ಅವಧಿ ಎರಡು ವರ್ಷವಾಗಿತ್ತು. ಉಳಿದವೆಲ್ಲವೂ ಒಂದು ವರ್ಷದ ತರಬೇತಿಗಳಾಗಿದ್ದವು. ಇವಲ್ಲದೆ ಕಲಿತುದನ್ನು ನೆನಪಿಗೆ ತಂದುಕೊಡುವಂಥ ಶಿಕ್ಷಕರ ಅಲ್ಪಾವಧಿ ತರಬೇತಿ ಕೋರ್ಸುಗಳು ಬೇಸಿಗೆ ರಜಾದಲ್ಲಿ ನಡೆಯುತ್ತಿದ್ದವು. 1933-34 ರಲ್ಲಿ ಅಪ್ಪರ್ ಸೆಕೆಂಡರಿ, ಲೋಯರ್ ಸೆಕೆಂಡರಿ ಮತ್ತು ವರ್ನ್ಯಾಕ್ಯುಲರ್ ಟ್ರೈನಿಂಗ್ ತರಗತಿಗಳ ಪಠ್ಯವಸ್ತುವನ್ನು ಸುಧಾರಿಸಲಾಯಿತು. ಪ್ರಾಥಮಿಕ ಶಿಕ್ಷಕರಿಗೆಲ್ಲಾ ಒಂದೇ ರೀತಿಯ ತರಬೇತಿಯು ಆಚರಣೆಗೆ ಬಂದಿತು. ಇದರ ಅವಧಿಯು ಮೂರು ವರ್ಷ ಆಗಿತ್ತು. ಆದರೆ 1950 ರಲ್ಲಿ ಈ ಅವಧಿಯನ್ನು ಎರಡು ವರ್ಷಕ್ಕೆ ಇಳಿಸಲಾಯಿತು. ಇದರ ಹೆಸರನ್ನು ಶಿಕ್ಷಕರ ಸರ್ಟಿಫಿಕೇಟ್ ಕೋರ್ಸ್ (ಸಾಧಾರಣ ಮಟ್ಟ ಅಥವಾ ಲೋಯರ್) ಎಂದು ಬದಲಾಯಿಸಲಾಯಿತು. ಪದವೀಧರರಲ್ಲದ ಶಿಕ್ಷಕರಿಗಿದ್ದ ಅಂಡರ್ ಗ್ರ್ಯಾಜುಯೇಟ್ ತರಬೇತಿಯು ಶಿಕ್ಷಕರ ಸರ್ಟಿಫಿಕೇಟ್ (ಉನ್ನತ ಅಥವಾ ಹೈಯರ್) ಟಿ.ಸಿ.ಹೆಚ್. ಎಂದು ಬದಲಾವಣೆ ಹೊಂದಿತು. ಇದರ ಅವಧಿಯು ಒಂದು ವರ್ಷವಾಗಿತ್ತು. 1955-56 ರಲ್ಲಿ, ಏಳು ಟಿ.ಸಿ.ಎ.ಎಲ್. ಸಂಸ್ಥೆಗಳೂ ಏಳು ಟಿ.ಸಿ.ಎಚ್. ಸಂಸ್ಥೆಗಳೂ ಇದ್ದವು. ಇವುಗಳಲ್ಲಿ ತರಬೇತಿ ಹೊಂದುತ್ತಿದ್ದ 2,431 ಉಪಾಧ್ಯಾಯರೂ ಮತ್ತು 983 ಉಪಾಧ್ಯಾಯಿನಿಯರೂ ಇದ್ದರು.

1914ಕ್ಕೆ ಹಿಂದೆ, ಪದವೀಧರ ಉಪಾಧ್ಯಾಯರ ತರಬೇತಿಗಾಗಿ ರಾಜ್ಯದಲ್ಲಿ ಯಾವ ವ್ಯವಸ್ಥೆಯೂ ಇರಲಿಲ್ಲ. ಪದವೀಧರ

ರನ್ನು ಮದ್ರಾಸಿನ ಸೈದಾಪೇಟೆಯ ಕಾಲೇಜಿಗೆ ಎಲ್.ಟಿ. ಪರೀಕ್ಷೆಗಾಗಿ ಕಳಿಸಲಾಗುತ್ತಿತ್ತು. 1914ರಲ್ಲಿ, ಮೈಸೂರಿನ ನಾರ್ಮಲ್ ಸ್ಕೂಲ್‌ನಲ್ಲಿ ಪದವೀಧರರಿಗಾಗಿ ಒಂದು ತರಬೇತಿ ತರಗತಿಯನ್ನು ಆರಂಭಿಸಲಾಯಿತು. 1925-26ರಲ್ಲಿ ಮೈಸೂರು ವಿಶ್ವವಿದ್ಯಾಲಯವು ಬಿ.ಟಿ. ತರಗತಿಯನ್ನು ಆರಂಭಿಸಿತು. ಇದರ ಪರಿಣಾಮವಾಗಿ, ನಾರ್ಮಲ್ ಸ್ಕೂಲಿನಲ್ಲಿದ್ದ ತರಗತಿಯು ಮಹಾರಾಜಾ ಕಾಲೇಜಿಗೆ ವರ್ಗಾವಣೆ ಹೊಂದಿತು. ಇದು 1947ರವರೆಗೆ ಅಲ್ಲಿಯೇ ಇತ್ತು. ಆ ವರ್ಷ ಸರ್ಕಾರವು ಪ್ರತ್ಯೇಕ ವಾದ ಒಂದು ಶಿಕ್ಷಕರ ಕಾಲೇಜನ್ನು ಆರಂಭಿಸಿತು. ಜೊತೆಗೆ ಒಂದು ಅಭ್ಯಾಸೀ ಶಾಲೆ ಅಥವಾ ಪ್ರಾಕ್ಟೀಸಿಂಗ್ ಶಾಲೆಯನ್ನು ಆರಂಭಿಸಲಾಯಿತು. ಮೈಸೂರು ವಿಶ್ವವಿದ್ಯಾಲಯವು 1952ರಲ್ಲಿ ಶಿಕ್ಷಣ ಫ್ಯಾಕಲ್ಟಿಯನ್ನು ಆರಂಭಿಸಿತು. 1956ರಲ್ಲಿ ಮಹಾ ಪ್ರಬಂಧವನ್ನು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿ ಎಂ.ಎಡ್. ಪದವಿ ಯನ್ನು ಕೊಡುವ ವ್ಯವಸ್ಥೆಯು ಜಾರಿಗೆ ಬಂತು.

1842-43ರ ಮುಂಬೈ ಶಿಕ್ಷಣ ಮಂಡಲಿಯ ವರದಿಯಂತೆ ಆ ವೇಳೆಗೆ ಧಾರವಾಡದಲ್ಲಿ ಒಂದು ನಾರ್ಮಲ್ ಸ್ಕೂಲ್ ಅಸ್ತಿತ್ವಕ್ಕೆ ಬಂದಿತ್ತು. ಕನ್ನಡ ಶಿಕ್ಷಕರ ಕೊರತೆಯನ್ನು ಪರಿಹರಿ ಸುವ ಸಲುವಾಗಿ 1856ರಲ್ಲಿ ಧಾರವಾಡದಲ್ಲಿ ಒಂದು ತರಗತಿ ಯನ್ನು ತೆರೆಯಲಾಯಿತು. ಇದು ಒಬ್ಬ ಡೆಪ್ಯುಟಿ ಇನ್‌ಸ್ಪೆಕ್ಟರ್‌ನ ನೇರ ಅಧೀನದಲ್ಲಿತ್ತು. 1860-61ರಲ್ಲಿ, ಇದನ್ನು ಬೆಳಗಾವಿಗೆ ವರ್ಗಾಯಿಸಲಾಯಿತು. ಇದು ಬೆಳಗಾವಿಯ ಸರ್ದಾರ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರ ಅಧೀನದಲ್ಲಿತ್ತು. 1869-70ರಲ್ಲಿ ಇದು ಒಂದು ಶಿಕ್ಷಣ ಕಾಲೇಜಾಗಿ ಮಾರ್ಪಾಟು ಹೊಂದಿತು. ಸ್ವಲ್ಪಕಾಲದ ನಂತರ, ಇದು ಮತ್ತೊಮ್ಮೆ ಧಾರವಾಡಕ್ಕೆ ಬಂದಿತು. 1865ರವರೆವಿಗೆ ಕನ್ನಡ ಶಿಕ್ಷಕರ ಕೊರತೆಯಿತ್ತು. ಇಡೀ ಪ್ರದೇಶದ ಮುಖ್ಯ ಅವಶ್ಯಕತೆಯು ಕನ್ನಡ ಶಿಕ್ಷಕರ ಕೊರತೆಯೇ ಆಗಿತ್ತು. ಇದನ್ನು ಈ ಕಾಲೇಜು ಪರಿಹರಿಸಿತು. ಈ ರೀತಿಯಲ್ಲಿ, ಇದು ಕನ್ನಡ ಶಿಕ್ಷಕರ ತರಬೇತಿ ಯಲ್ಲಿ ಒಂದು ಮುಖ್ಯ ಪಾತ್ರವನ್ನು ವಹಿಸಿತ್ತು. ಧಾರವಾಡದ ಸ್ಥಳೀಯ ಮಂಡಲಿಯು (ಲೋಕಲ್ ಬೋರ್ಡ್) 1895ರಲ್ಲಿ ಉಪಾಧ್ಯಾಯಿನಿಯರಿಗಾಗಿ ಒಂದು ತರಬೇತಿ ಶಾಲೆಯನ್ನು ಆರಂಭಿಸಿತು. 1903-04ರಲ್ಲಿ ಇದನ್ನು ಸರ್ಕಾರವು ವಹಿಸಿ ಕೊಂಡಿತು. 1924ರ ಹೊತ್ತಿಗೆ ಶಿಕ್ಷಣದ ಅವಧಿಯನ್ನು ಮೂರು ವರ್ಷದಿಂದ ಒಂದು ವರ್ಷಕ್ಕೆ ಇಳಿಸಲಾಯಿತು; ಆದರೆ 1935ಕ್ಕೆ ಮೊದಲಿನ ಸ್ಥಿತಿಗೆ ಬಂತು. ಅನಂತರ, ಮುಂಬೈ ಪ್ರಾಥಮಿಕ ಶಿಕ್ಷಕರ ತರಬೇತಿ ಸಮಿತಿಯ ಶಿಫಾರಸ್ಸಿಗೆ ಅನುಗುಣವಾಗಿ 1938ರಲ್ಲಿ ಈ ಅವಧಿಯು ಎರಡು ವರ್ಷಕ್ಕೆ ಇಳಿಯಿತು. 1946-47ರಲ್ಲಿ ಎಂಟು ಪ್ರಾಥಮಿಕ ಶಿಕ್ಷಕರ ತರಬೇತಿ ಸಂಸ್ಥೆ ಗಳಿದ್ದವು. ಅವುಗಳಲ್ಲಿ ನಾಲ್ಕು ಸರ್ಕಾರಿ ಸಂಸ್ಥೆಗಳು (ಇವು ಗಳನ್ನೆಲ್ಲಾ ಕಾಲೇಜುಗಳು ಎಂದು ಕರೆಯಲಾಗುತ್ತಿತ್ತು). ಇವು ಗಳಲ್ಲದೆ, ಸೆಕೆಂಡರಿ ಶಿಕ್ಷಕರ ಸರ್ಟಿಫಿಕೇಟ್ ಮತ್ತು ಶಿಕ್ಷಕರ ಡಿಪ್ಲೋಮ ತರಗತಿಗಳೂ ಇದ್ದವು. 1949ರಲ್ಲಿ ಎಲ್ಲ ಪ್ರಾಥಮಿಕ ಶಿಕ್ಷಕರ ತರಬೇತಿ ಸಂಸ್ಥೆಗಳೂ ಮೂಲ ('ಬೇಸಿಕ್') ಶಿಕ್ಷಣ ತರಬೇತಿ ಸಂಸ್ಥೆಗಳಾಗಿ ಪರಿವರ್ತನೆ ಹೊಂದಿದವು. ಅದೇ ವರ್ಷ ಧಾರವಾಡದಲ್ಲಿ ಒಂದು ಪದವೀಧರ ಶಿಕ್ಷಕರ ಮೂಲ ಶಿಕ್ಷಣ ತರಬೇತಿ ಕೇಂದ್ರವು ಆರಂಭವಾಯಿತು. ಇದು ಪದವೀಧರ ಶಿಕ್ಷಕರಿಗೂ ಇನ್‌ಸ್ಪೆಕ್ಟರ್‌ಗಳಿಗೂ ತರಬೇತಿಯನ್ನು ಕೊಡು ತ್ತಿತ್ತು.

ಸೆಕೆಂಡರಿ ಶಾಲೆಗಳ ಶಿಕ್ಷಕರಿಗೆ ತರಬೇತಿಯು ಅನವಶ್ಯಕ ವೆಂಬ ಭಾವನೆಯು ಅಂದಿನ ಮುಂಬೈ ಸರ್ಕಾರಕ್ಕೆ ಇತ್ತು. ಇದಕ್ಕೆ ಮುಖ್ಯ ಕಾರಣವು, ಪ್ರೌಢಶಾಲೆಗಳಲ್ಲಿ ಶಿಕ್ಷಕರಾಗಿದ್ದವರು ವಿಶ್ವವಿದ್ಯಾಲಯದ ಪದವೀಧರರಾಗಿದ್ದು ಅನುಭವಸ್ಥರಾದ ಮುಖ್ಯೋಪಾಧ್ಯಾಯರ ನೇತೃತ್ವದಲ್ಲಿ ಕೆಲಸ ಮಾಡುವವರು ಎಂಬ ನಂಬಿಕೆಯೇ ಆಗಿತ್ತು. 1892ರ ಭಾರತೀಯ ಶಿಕ್ಷಣ ಆಯೋಗವು ಇಂಥ ಶಿಕ್ಷಕರಿಗಾಗಿ ಒಂದು ಪರೀಕ್ಷೆಯನ್ನು ಆರಂಭಿಸ ಬೇಕೆಂದೂ, ಈ ಪರೀಕ್ಷೆಗೆ ಕುಳಿತುಕೊಳ್ಳಲು ಕಾಲೇಜುಗಳಲ್ಲಿಯೇ ಓದಬೇಕಾದ ಅವಶ್ಯಕತೆ ಇರಬೇಕಾಗಿಲ್ಲವೆಂದೂ ಶಿಫಾರಸು ಮಾಡಿತು. ಮುಂಬೈ ಸರ್ಕಾರವು 1891-92ರಲ್ಲಿ ಸೆಕೆಂಡರಿ ಟೀಚರ್ಸ್ ಸರ್ಟಿಫಿಕೇಟ್ ಪರೀಕ್ಷೆಯನ್ನು ಆರಂಭಿಸಿತು. 1906 ರಲ್ಲಿ ಮುಂಬೈಯಲ್ಲಿ ಸೆಕೆಂಡರಿ ಟ್ರೈನಿಂಗ್ ಕಾಲೇಜು ಆರಂಭ ವಾಯಿತು. ಇದು ಡಿಪ್ಲೋಮಾವನ್ನು ನೀಡುತ್ತಿತ್ತು. 1939 ರಲ್ಲಿ ಕರ್ನಾಟಕದ ಭಾಗದಲ್ಲಿ, ಮೊದಲ ಸೆಕೆಂಡರಿ ಟ್ರೈನಿಂಗ್ ಕಾಲೇಜು ಬೆಳಗಾವಿಯಲ್ಲಿ ಆರಂಭವಾಯಿತು. 1949ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಮಾನ್ಯತೆ ಪಡೆದು ಅದರ ಅಂಗೀಕೃತ ಸಂಸ್ಥೆಯಾಯಿತು. 1962ರಲ್ಲಿ ಕರ್ನಾಟಕ ವಿಶ್ವ ವಿದ್ಯಾಲಯವು ಧಾರವಾಡದಲ್ಲಿ ತನ್ನದೇ ಆದ ಕಾಲೇಜನ್ನು ಆರಂಭಿಸಿತು. 1965ರಲ್ಲಿ ಜಮಖಂಡಿಯಲ್ಲಿ ಸರ್ಕಾರವು ಶಿಕ್ಷಣ ಕಾಲೇಜನ್ನು ಆರಂಭಿಸಿತು.

ಬಳ್ಳಾರಿಯಲ್ಲಿ ಸ್ಥಳೀಯ ಸರ್ಕಾರವು ತನ್ನ ನಿಧಿಯಿಂದಲೇ ಒಂದು ನಾರ್ಮಲ್ ಸ್ಕೂಲನ್ನು ನಡೆಸುತ್ತಿತ್ತು. ಇಲ್ಲಿ ಕೊಡುತ್ತಿದ್ದ ಶಿಕ್ಷಣದ ಅವಧಿ ಒಂದು ವರ್ಷ. ವರ್ಷದಲ್ಲಿ ಎರಡು ಟರ್ಮ್‌ಗಳಿದ್ದವು. ಇದು 1891ರಲ್ಲಿ ಸರ್ಕಾರದ ವಶಕ್ಕೆ ಬಂದಿತು. 1921-22ರಲ್ಲಿ ಮೂರು ಉಪಾಧ್ಯಾಯರ ತರಬೇತಿ ಶಾಲೆಗಳೂ ಮತ್ತು ಉಪಾಧ್ಯಾಯಿನಿಯರ ಒಂದು ತರಬೇತಿ ಶಾಲೆಯೂ ಇದ್ದವು. ಇವುಗಳಲ್ಲಿ 268 ಉಪಾಧ್ಯಾಯರೂ ಮತ್ತು 79 ಉಪಾಧ್ಯಾಯಿನಿಯರು ಇದ್ದರು. ಮುಸಲ್ಮಾನ್ ಉಪಾಧ್ಯಾಯಿನಿಯರಿಗೆ 1928-29ರಲ್ಲಿ ಒಂದು ತರಬೇತಿ ಸಂಸ್ಥೆಯನ್ನು ಆರಂಭಿಸಲಾಯಿತು. 1953 ರಲ್ಲಿ ಹೊಸಪೇಟೆ ಯಲ್ಲಿ ಒಂದೇ ಒಂದು ತರಬೇತಿ ಶಾಲೆಯಿತ್ತು.

ಬಳ್ಳಾರಿಯಲ್ಲಿದ್ದ ಎರಡು ಮೂಲ ಶಿಕ್ಷಣ ಸಂಸ್ಥೆಗಳೂ ಆಂಧ್ರ ಸರ್ಕಾರದ ವಶಕ್ಕೆ ಹೋದವು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1881-82ರಲ್ಲಿ ಸ್ಥಳೀಯ ಸಂಸ್ಥೆ ನಡೆಸುತ್ತಿದ್ದ ಒಂದು ನಾರ್ಮಲ್ ಸ್ಕೂಲ್ ಇತ್ತು. ಇದರಲ್ಲಿ 19 ಜನರು ತರಬೇತಿ ಹೊಂದುತ್ತಿದ್ದರು. ಇದು 1892ರಲ್ಲಿ ಸರ್ಕಾರಿ ನಾರ್ಮಲ್ ಸ್ಕೂಲಾಗಿ ಪರಿವರ್ತನೆ ಹೊಂದಿತು. ಸೇಂಟ್ ಆ್ಯನ್ಸ್ ನಾರ್ಮಲ್ ಸ್ಕೂಲಿನಲ್ಲಿ 1885-86ರಲ್ಲಿ ಹನ್ನೆರಡು ಉಪಾಧ್ಯಾಯಿನಿಯರು ತರಬೇತಿ ಪಡೆಯುತ್ತಿದ್ದರು. 1887-88ರಲ್ಲಿ ಅಲ್ಪಾವಧಿ ತರಬೇತಿಯ ನ್ಯಾಷನಲ್ ಸ್ಕೂಲುಗಳೆಂಬ ನಾಲ್ಕು ಸಂಸ್ಥೆಗಳಿದ್ದವು. ಇವು ಗ್ರಾಮಾಂತರ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರಿಗೆ ಶಾಲೆಗಳಲ್ಲಿ ಬೋಧಿಸಬೇಕಾದ ವಿಷಯಗಳನ್ನು ಬೋಧಿಸುತ್ತಿದ್ದವು; ಅನಂತರ ಇವರು ನಾರ್ಮಲ್ ಸ್ಕೂಲಿನಲ್ಲಿ ತರಬೇತಿಯನ್ನು ಪಡೆಯುತ್ತಿದ್ದರು. 1931-32ರಲ್ಲಿ ಎರಡು ಉಪಾಧ್ಯಾಯರ ಸರ್ಕಾರಿ ತರಬೇತಿ ಶಾಲೆಗಳೂ ಮತ್ತು ಉಪಾಧ್ಯಾಯಿನಿಯರ ಮೂರು ನಾರ್ಮಲ್ ಸ್ಕೂಲುಗಳೂ ಇದ್ದವು. ಉಪಾಧ್ಯಾಯರ ತರಬೇತಿ ಸಂಸ್ಥೆಗಳಲ್ಲಿ ಒಂದು ಸೆಕೆಂಡರಿ (ಮಿಡ್ಲ್ ಸ್ಕೂಲ್ ತರಗತಿಗಳು) ಶಾಲೆಗಳಲ್ಲಿ ಕೆಲಸ ಮಾಡುವ ಉಪಾಧ್ಯಾಯರಿಗಾಗಿಯೂ ಮತ್ತೊಂದು ಪ್ರಾಥಮಿಕ ಶಾಲೆಗಳ ಉಪಾಧ್ಯಾಯರಿಗಾಗಿಯೂ ಇದ್ದವು. ಉಪಾಧ್ಯಾಯಿನಿಯರ ನಾರ್ಮಲ್ ಸ್ಕೂಲುಗಳ ಪೈಕಿ ಎರಡು ಸರ್ಕಾರಿ, ಒಂದು ಖಾಸಗೀ ಸಂಸ್ಥೆಗಳು, ಎರಡು ಸರ್ಕಾರಿ ಸ್ಕೂಲುಗಳು ಪ್ರಾಥಮಿಕ ಶಾಲಾ ಶಿಕ್ಷಕಿಯರಿಗಾಗಿ ಇದ್ದು ಅವು ಉಡುಪಿ ಮತ್ತು ಮಂಗಳೂರುಗಳಲ್ಲಿದ್ದವು. 1956-57ರಲ್ಲಿ ಹತ್ತು ತರಬೇತಿ ಶಾಲೆಗಳಿದ್ದವು; ಅವುಗಳಲ್ಲಿ ಐದು ಉಪಾಧ್ಯಾಯರ ತರಬೇತಿ ಶಾಲೆಗಳು; ಉಳಿದವು ಐದು ಉಪಾಧ್ಯಾಯಿನಿಯರ ತರಬೇತಿ ಶಾಲೆಗಳು. ಇವುಗಳ ಪೈಕಿ ಆರು ಸರ್ಕಾರಿ ಶಾಲೆಗಳು, ನಾಲ್ಕು ಖಾಸಗೀ ಶಾಲೆಗಳು; ಹತ್ತು ತರಬೇತಿ ಶಾಲೆಗಳಲ್ಲಿ ಮೂರು ಮೂಲ ಶಿಕ್ಷಣ ತರಬೇತಿ ಶಾಲೆಗಳು ; ಏಳು ಸಾಧಾರಣ ತರಬೇತಿ ಶಾಲೆಗಳು. ಜಿಲ್ಲೆಯಲ್ಲಿ ಶಿಕ್ಷಕರ ಕಾಲೇಜು ಸ್ಥಾಪಿತವಾಗುವುದಕ್ಕೆ ಮುಂಚೆ ಪದವೀಧರ ಉಪಾಧ್ಯಾಯರನ್ನು ಮದ್ರಾಸಿನ ಸೈದಾಪೇಟೆಯಲ್ಲಿದ್ದ ಶಿಕ್ಷಕರ ತರಬೇತಿ ಕಾಲೇಜಿಗೆ ಕಳಿಸಲಾಗುತ್ತಿತ್ತು. 1956-57ರಲ್ಲಿ ಸೆಕೆಂಡರಿ ಶಾಲೆಗಳ ಶಿಕ್ಷಕರಿಗೆ ತರಬೇತಿ ಕೊಡಲು ಎರಡು ತರಬೇತಿ ಕಾಲೇಜುಗಳಿದ್ದವು. ಇವು ಯಾವುವೆಂದರೆ, ಮಂಗಳೂರಿನ ಸೇಂಟ್ ಆ್ಯನ್ಸ್ ಶಿಕ್ಷಕರ ಕಾಲೇಜು ಮತ್ತು ಅದೇ ಊರಿನ ಸರ್ಕಾರಿ ಕಾಲೇಜು ; ಇದು 1950ರಲ್ಲಿ ಅಸ್ತಿತ್ವಕ್ಕೆ ಬಂದಿತು.

ಕಲ್ಬುರ್ಗಿಯಲ್ಲಿ 1889-90ರಲ್ಲಿ ಉರ್ದು ಶಿಕ್ಷಕರಿಗಾಗಿ ಒಂದು ನಾರ್ಮಲ್ ಸ್ಕೂಲನ್ನು ಆರಂಭಿಸಲಾಯಿತು. ಕೆಲಕಾಲದ ನಂತರ ಇದನ್ನು ಹೈದರಾಬಾದಿಗೆ ವರ್ಗಾಯಿಸಲಾಯಿತು. ಅಲ್ಲಿದ್ದ ನಾರ್ಮಲ್ ಸ್ಕೂಲಿನಲ್ಲಿ ಐಕ್ಯಗೊಳಿಸಲಾಯಿತು. 1899ರಲ್ಲಿ ಈ ಸ್ಕೂಲಿನಲ್ಲಿ ಕನ್ನಡ ಶಿಕ್ಷಕರಿಗಾಗಿ ಒಂದು ತರಗತಿಯನ್ನು ಆರಂಭಿಸಲಾಯಿತು. ಕಲ್ಬುರ್ಗಿಯಲ್ಲಿ ಒಂದು ಉಪಾಧ್ಯಾಯಿನಿಯರ ತರಬೇತಿ ಶಾಲೆಯನ್ನು ಆರಂಭಿಸಲಾಯಿತು. ಅನಂತರ 1928ರಲ್ಲಿ ಅದು ಒಂದು ಮಿಡ್ಲ್ ಸ್ಕೂಲ್ ಆಗಿ ಪರಿವರ್ತನೆ ಹೊಂದಿತು. 1928ರಲ್ಲಿ ಶಿಕ್ಷಕರ ತರಬೇತಿ ಯೋಜನೆಯನ್ನು ಸುಧಾರಿಸಲಾಯಿತು. ಇದರ ಫಲವಾಗಿ ಮೆಟ್ರಿಕ್ಯುಲೇಷನ್ ಪಾಸಾಗಿದ್ದವರಿಗಾಗಿ ಇದ್ದ ಎರಡು ವರ್ಷದ ಅವಧಿಯು ಒಂದು ವರ್ಷಕ್ಕೆ ಇಳಿಯಿತು. ಬೋಧನಶಾಸ್ತ್ರವನ್ನು ಬಿಟ್ಟು ಉಳಿದ ವಿಷಯಗಳನ್ನು ಕೈಬಿಡಲಾಯಿತು. ಮಿಡ್ಲ್ ಸ್ಕೂಲ್ ಪರೀಕ್ಷೆಯಲ್ಲಿ ಪಾಸಾಗಿದ್ದ ಶಿಕ್ಷಕರ ತರಬೇತಿ ಅವಧಿಯನ್ನು ಒಂದೂವರೆ ವರ್ಷದಿಂದ ಒಂದು ವರ್ಷಕ್ಕೆ ಇಳಿಸಲಾಯಿತು. ಇಂಟರ್‌ಮೀಡಿಯೆಟ್ ಪರೀಕ್ಷೆಯನ್ನು ಪಾಸು ಮಾಡಿದ್ದ ಶಿಕ್ಷಕರಿಗಾಗಿ ಒಂದು ವರ್ಷದ ತರಬೇತಿ ವ್ಯವಸ್ಥೆಯನ್ನು ಮಾಡಲಾಯಿತು. 1930ರಲ್ಲಿ ಕಲ್ಬುರ್ಗಿಯಲ್ಲಿ ಒಂದು ಕನ್ನಡ ನಾರ್ಮಲ್ ಸ್ಕೂಲನ್ನು ಆರಂಭಿಸಲಾಯಿತು. ಅದರಲ್ಲಿ ಉರ್ದು ಮಾಧ್ಯಮವೂ ಇತ್ತು. ಅನಂತರ ಈ ಉರ್ದು-ಕನ್ನಡ ನಾರ್ಮಲ್ ಸ್ಕೂಲು ರಾಯಚೂರಿಗೆ ಸ್ಥಳಾಂತರವಾಯಿತು. 1955ರಲ್ಲಿ ಇದು ಮೂಲ ಶಿಕ್ಷಣ ಶಾಲೆಯಾಗಿ ಪರಿವರ್ತನೆ ಹೊಂದಿತು. 1956ರಲ್ಲಿ ರಾಯಚೂರು, ಕಲ್ಬುರ್ಗಿ ಮತ್ತು ಬಿದರೆಗಳಲ್ಲಿ ಮತ್ತೆ ಮೂರು ಮೂಲ ಶಿಕ್ಷಣ ತರಬೇತಿ ಸಂಸ್ಥೆಗಳನ್ನು ಆರಂಭಿಸಲಾಯಿತು. 1955ರಲ್ಲಿ ಕಲ್ಬುರ್ಗಿಯಲ್ಲಿ ಸರ್ಕಾರವು ಒಂದು ಬಿ. ಎಡ್. ಶಿಕ್ಷಣ ಕಾಲೇಜನ್ನು ಆರಂಭಿಸಿತು. ಇದು ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದ ಮಾನ್ಯತೆ ಪಡೆದು ಅದರ ಅಂಗಸಂಸ್ಥೆಯಾಗಿತ್ತು. ಕರ್ನಾಟಕದ ಏಕೀಕರಣದ ನಂತರ, ಈ ಕಾಲೇಜು ಕರ್ನಾಟಕ ವಿಶ್ವವಿದ್ಯಾಲಯದ ಅಂಗ ಸಂಸ್ಥೆಯಾಯಿತು.

ಕೊಡಗಿನ ಪ್ರಾಥಮಿಕ ಶಿಕ್ಷಕರ ತರಬೇತಿಯು 1861ರಲ್ಲಿ ಮಡಿಕೇರಿಯ ಸರ್ಕಾರಿ ಸೆಂಟ್ರಲ್ ಸ್ಕೂಲಿನ ಪ್ರಾಚಾರ್ಯದಿಂದ ಆರಂಭವಾಯಿತು. ಅವರು ಮೂರು ನಾಲ್ಕು ತಿಂಗಳ ಅವಧಿಯಲ್ಲಿ ನಾಲ್ಕು ಶಿಕ್ಷಕರಿಗೆ ತರಬೇತಿಯನ್ನು ಕೊಡುವ ಹೊಣೆಗಾರಿಕೆಯನ್ನು ಹೊತ್ತುಕೊಂಡರು. 1872ರಲ್ಲಿ, ಭಾರತ ಸರ್ಕಾರವು ಒಂದು ನಾರ್ಮಲ್ ಸ್ಕೂಲನ್ನು ಆರಂಭಿಸಿತು. ಆದರೆ ಈ ನಾರ್ಮಲ್ ಸ್ಕೂಲು 1923ರಲ್ಲಿ ರದ್ದಾಯಿತು. ಬೆಂಗಳೂರಿನ ದಂಡಿನ ಪ್ರದೇಶದ ಶಿಕ್ಷಕರಿಗೂ ಮತ್ತು ಕೊಡಗಿನ ಶಿಕ್ಷಕರಿಗೂ ತರಬೇತಿಯನ್ನು ಕೊಡುವ ಎರಡು ಪ್ರದೇಶಕ್ಕೂ ಸೇರಿದಂತೆ ಒಂದು ತರಬೇತಿ ಶಾಲೆಯನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದುದೇ ಕೊಡಗಿನ ತರಬೇತಿ ಶಾಲೆಯು ರದ್ದಾಗಲು ಕಾರಣ. 1912ರಿಂದ 1923ರವರೆಗೆ ಎಸ್. ಎಸ್. ಎಲ್. ಸಿ. ಪಾಸಾದ ವಿದ್ಯಾರ್ಥಿಗಳನ್ನು ಮಂಗಳೂರಿನ ಸೆಕೆಂಡರಿ ಶಾಲೆಯ (ಮಿಡ್ಲ್ ತರಗತಿಗಳು) ಶಿಕ್ಷಕರ ತರಬೇತಿ ಶಾಲೆಗೆ ಕಳಿಸಲಾಗುತ್ತಿತ್ತು.

1942ರಲ್ಲಿ ಬೆಂಗಳೂರು ದಂಡಿನಲ್ಲಿದ್ದ ತರಬೇತಿ ಶಾಲೆಯನ್ನು ಮುಚ್ಚಲಾಯಿತು. 1944ರಲ್ಲಿ ಕೊಡಗು ಸರ್ಕಾರವು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ಒಂದು ಶಿಕ್ಷಕರ ತರಬೇತಿ ತರಗತಿಯನ್ನು ಆರಂಭಿಸಿತು. ಈ ತರಗತಿಯು 1950ರವರೆಗೆ ಆ ಶಾಲೆಯಲ್ಲೇ ಇತ್ತು. ಆ ವರ್ಷ ಅದನ್ನು ವೀರರಾಜಪೇಟೆಯ ಸರ್ಕಾರಿ ಪ್ರೌಢಶಾಲೆಗೆ ವರ್ಗಾಯಿಸಲಾಯಿತು. ಅದನ್ನು ಮೂಲ ಶಿಕ್ಷಣ ತರಬೇತಿಯ ತರಗತಿಯಾಗಿ ಪರಿವರ್ತನೆ ಮಾಡಲಾಯಿತು. 1955-56ರಲ್ಲಿ, ಕುಶಾಲನಗರದ ಹತ್ತಿರ ವಿರುವ ಕೂಡಿಗೆಗೆ ಇದನ್ನು ವರ್ಗಾಯಿಸಲಾಯಿತು. ಕೊಡಗಿನ ಪದವೀಧರ ಶಿಕ್ಷಕರು ಮಂಗಳೂರಿನ ಸರ್ಕಾರಿ ತರಬೇತಿ ಕಾಲೇಜಿನಲ್ಲಿಯೋ ಅಥವಾ ಮೈಸೂರಿನಲ್ಲಿಯೋ ತರಬೇತಿ ಪಡೆಯುತ್ತಿದ್ದರು.

ಹಿಂದೆ ಹೇಳಿದಂತೆ, ಕರ್ನಾಟಕ ಏಕೀಕರಣದ ಸಮಯದಲ್ಲಿ ಶಿಕ್ಷಕರ ತರಬೇತಿ ವ್ಯವಸ್ಥೆಯು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಸ್ವರೂಪದ್ದಾಗಿ ಇತ್ತು. 1955-56ರಲ್ಲಿ ಶಿಕ್ಷಕರ ತರಬೇತಿ ಶಾಲೆಗಳ ಸಂಖ್ಯೆಯನ್ನೂ ಅವು ಇದ್ದ ಪ್ರದೇಶಗಳನ್ನು ಮುಂದಿನ ಪಟ್ಟಿಯಲ್ಲಿ* ತೋರಿಸಲಾಗಿದೆ.

1982-83ರಲ್ಲಿ ಕರ್ನಾಟಕ ರಾಜ್ಯದಲ್ಲಿ ಒಟ್ಟು 91 ತರಬೇತಿ ಸಂಸ್ಥೆಗಳಿದ್ದವು. ಇದರಲ್ಲಿ ತರಬೇತಿ ಹೊಂದುತ್ತಿದ್ದ ಉಪಾಧ್ಯಾಯರ ಸಂಖ್ಯೆ 5,960. ಉಪಾಧ್ಯಾಯಿನಿಯರ ಸಂಖ್ಯೆ 7,583. ಸೇವಾನಿರತ ಶಿಕ್ಷಕ ಶಿಕ್ಷಕಿಯರಿಗೆ ತರಬೇತಿ ಕೊಡುವ ಉದ್ದೇಶದಿಂದ ಮೈಸೂರು, ಬೆಂಗಳೂರು ಮತ್ತು ಧಾರವಾಡಗಳಲ್ಲಿ ಸಂಜೆ ತರಗತಿಗಳನ್ನು ತೆರೆಯಲಾಯಿತು. ಜೊತೆಗೆ ಶಿಕ್ಷಣದ ಮಟ್ಟವನ್ನು ಉತ್ತಮಪಡಿಸುವ ಉದ್ದೇಶದಿಂದ ಅನೇಕ ತರಬೇತಿ ಮತ್ತು ಪುನಶ್ಚೇತನ ಕಾರ್ಯಕ್ರಮಗಳನ್ನು ಆರಂಭಿಸಲಾಯಿತು. ಈ ಕಾರ್ಯಕ್ರಮವನ್ನು ಶಿಕ್ಷಕರ ತರಬೇತಿ ಸಂಸ್ಥೆಗಳೂ ತರಬೇತಿ ಕಾಲೇಜುಗಳೂ ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಇಲಾಖೆಯೂ ವ್ಯವಸ್ಥೆ ಮಾಡುತ್ತಿವೆ. 1982-83ರ ಹೊತ್ತಿಗೆ, ರಾಜ್ಯದಲ್ಲಿದ್ದ ಸುಮಾರು 10,000 ತರಬೇತಿ ಹೊಂದದ ಪ್ರಾಥಮಿಕ ಶಿಕ್ಷಕ ಶಿಕ್ಷಕಿಯರ ಪೈಕಿ 5,324 ಶಿಕ್ಷಕರು ಈ ಕೇಂದ್ರಗಳಲ್ಲಿ ತರಬೇತಿಯನ್ನು ಹೊಂದಿದ್ದರು.

**ಪೂರ್ವ ಪ್ರಾಥಮಿಕ ಶಾಲೆಗಳ ಶಿಕ್ಷಕರ ತರಬೇತಿ :** ಮೈಸೂರು ವಲಯದಲ್ಲಿ, ಮೈಸೂರಿನ ಮಹಾರಾಣಿ ತರಬೇತಿ ಕಾಲೇಜಿನಲ್ಲಿ 1946-47 ರಲ್ಲಿಯೇ ಶಿಶುವಿಹಾರ ಶಿಕ್ಷಕಿಯರನ್ನು ತರಬೇತಿಗೊಳಿಸಲು ಒಂದು ತರಗತಿಯನ್ನು ತೆರೆಯಲಾಯಿತು. ಈ ಶಿಕ್ಷಣದ ಅವಧಿಯು ಒಂದು ವರ್ಷ. ಇಲ್ಲಿ ಪ್ರತೀವರ್ಷವೂ 30 ಶಿಕ್ಷಕಿಯರನ್ನು ತರಬೇತಿಗೊಳಿಸುವ ಅವಕಾಶವನ್ನು ಕಲ್ಪಿಸ ಲಾಯಿತು. ಕೆಲ ಕಾಲದ ನಂತರ ಇದನ್ನು ಮುಚ್ಚಲಾಯಿತು. ರಾಜ್ಯದ ಬೇರೆ ಪ್ರದೇಶಗಳಲ್ಲಿ ಈ ಶಿಕ್ಷಕರ ತರಬೇತಿಗೆ ಯಾವ ಸಂಸ್ಥೆಯೂ ಇರಲಿಲ್ಲ. ರಾಜ್ಯ ಪುನರ್ಘಟನೆಯ ಸಮಯದಲ್ಲಿ ಮದ್ರಾಸ್ ಮತ್ತು ಹೈದರಾಬಾದ್ ಮತ್ತು ಮುಂಬೈಯ ಕೆಲವು ಕಡೆಗಳಲ್ಲಿ ಶಿಶುವಿಹಾರದ ಶಿಕ್ಷಕಿಯರ ತರಬೇತಿಗೆ ಸೌಲಭ್ಯ ಗಳಿದ್ದವು. 1966-67ರ ಹೊತ್ತಿಗೆ ರಾಜ್ಯದಲ್ಲಿ ಒಂಬತ್ತು ಪೂರ್ವ-ಪ್ರಾಥಮಿಕ ಶಿಕ್ಷಕಿಯರ ತರಬೇತಿ ಸಂಸ್ಥೆಗಳಿದ್ದವು. ಅವುಗಳಲ್ಲಿ ಆರು ಖಾಸಗಿ ಸಂಸ್ಥೆಗಳು ; ಮೂರು ಸರ್ಕಾರ ನಡೆಸುತ್ತಿದ್ದ ಸಂಸ್ಥೆಗಳು. ಅವುಗಳಲ್ಲಿನ ಶಿಕ್ಷಣದ ಅವಧಿ ಒಂದು

*

| ವಲಯ | ತರಬೇತಿ ಸಂಸ್ಥೆಗಳ ಸಂಖ್ಯೆ | | | ತರಬೇತಿ ಪಡೆಯುತ್ತಿದ್ದವರ ಸಂಖ್ಯೆ | | |
|---|---|---|---|---|---|---|
| | ಸಾಧಾರಣ | ಮೂಲ ಶಿಕ್ಷಣ | ಒಟ್ಟು | ಶಿಕ್ಷಕರು | ಶಿಕ್ಷಕಿಯರು | ಒಟ್ಟು |
| ಮೈಸೂರು ಪ್ರದೇಶ | 14 | 1 | 15 | 1,511 | 286 | 1,797 |
| ಬೆಳಗಾವಿ ಪ್ರದೇಶ | 5 | 13 | 18 | 1,670 | 295 | 1,965 |
| ಕಲ್ಬುರ್ಗಿ ಪ್ರದೇಶ | — | 3 | 3 | 136 | — | 136 |
| ಮದ್ರಾಸು ಪ್ರದೇಶ | 6 | 4 | 10 | 504 | 479 | 983 |
| ಕೊಡಗು ಪ್ರದೇಶ | — | 1 | 1 | 75 | — | 75 |
| ಒಟ್ಟು | 25 | 22 | 47 | 3,896 | 1,060 | 4,956 |

ವರ್ಷ. ಅವನ್ನು ಸೇರಲು ಬೇಕಾಗಿದ್ದ ಕನಿಷ್ಠ ವಿದ್ಯಾರ್ಹತೆ ಎಸ್.ಎಸ್.ಎಲ್.ಸಿ. 1969 ರಿಂದೀಚೆಗೆ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿಯು ಶಿಶುವಿಹಾರದ ಶಿಕ್ಷಕಿಯರ ತರಬೇತಿಯ ಅಂತ್ಯದಲ್ಲಿ ಒಂದು ಪಬ್ಲಿಕ್ ಪರೀಕ್ಷೆಯನ್ನು ನಡೆಸುತ್ತಿದೆ. 1982-83ರಲ್ಲಿ 30 ಪೂರ್ವ ಪ್ರಾಥಮಿಕ ಶಿಕ್ಷಕರ ತರಬೇತಿ ಸಂಸ್ಥೆಗಳಿದ್ದವು. ಅವುಗಳಲ್ಲಿ ಐದು ಉರ್ದು ಮಾಧ್ಯಮದ ತರಬೇತಿ ಸಂಸ್ಥೆಗಳು. ಒಂದು ಮರಾಠಿ ಮಾಧ್ಯಮದ ತರಬೇತಿ ಸಂಸ್ಥೆ. ಉಳಿದವೆಲ್ಲಾ ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮದ ಸಂಸ್ಥೆಗಳು. ಇವುಗಳಲ್ಲಿ ಒಟ್ಟು 1,370 ಮಹಿಳಾ ಶಿಕ್ಷಕರು ತರಬೇತಿ ಪಡೆಯುತ್ತಿದ್ದರು.

ಭಾಷಾ ಭೋಧಕರ ತರಬೇತಿ : 1956-57ರಲ್ಲಿ ಹಿಂದಿ ವಿದ್ವಾಂಸರನ್ನೂ, ಕನ್ನಡ ಪಂಡಿತರನ್ನೂ ಮತ್ತು ಉರ್ದು ಮೌಲ್ವಿಗಳನ್ನೂ ತರಬೇತು ಮಾಡುತ್ತಿದ್ದ ಸಂಸ್ಥೆ ಇಡೀ ರಾಜ್ಯದಲ್ಲಿ ಒಂದೇ ಆಗಿತ್ತು. ಅದು ಮೈಸೂರಿನ ಸರ್ಕಾರಿ ಶಿಕ್ಷಕರ ತರಬೇತಿ ಕಾಲೇಜು. (ವಿಶ್ವವಿದ್ಯಾಲಯದ ಶಿಕ್ಷಕರ ಕಾಲೇಜು ಅಲ್ಲ). ಇಲ್ಲಿಯ ತರಬೇತಿಯ ಅವಧಿ ನಾಲ್ಕು ವರ್ಷ. ಅನಂತರ ಮೈಸೂರು, ರಾಯಚೂರು ಮತ್ತು ಬಾಗಲ್ಕೋಟೆಗಳಲ್ಲಿ ಹಿಂದಿ ಶಿಕ್ಷಕರ ತರಬೇತಿ ಸಂಸ್ಥೆಗಳನ್ನು ಆರಂಭಿಸಲಾಯಿತು. ಇಲ್ಲಿಯ ಶಿಕ್ಷಣದ ಅವಧಿ ಒಂದು ವರ್ಷ. 1961-62 ರಲ್ಲಿ, ಚಿತ್ರಕಲೆಯ ಶಿಕ್ಷಕರಿಗೆ ತರಬೇತಿ ಕೊಡಲು ಒಂದು ಸಂಸ್ಥೆಯನ್ನು ಅರಂಭಿಸಲಾಯಿತು. ಅಲ್ಲಿಯ ತರಬೇತಿಯ ಅವಧಿ ಒಂದು ವರ್ಷ. ತರಬೇತಿಯು ಮುಗಿದ ನಂತರ ಡಿಪ್ಲೋಮಾ ಕೊಡಲಾಗುತ್ತಿತ್ತು. 1957-58 ರಲ್ಲಿ, ಜಮುಖಂಡಿ ಮತ್ತು ಕಾರವಾರಗಳಲ್ಲಿದ್ದ ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ ಉರ್ದು ಮತ್ತು ಮರಾಠಿ ಶಿಕ್ಷಕರಿಗೆ ತರಬೇತಿ ಕೊಡಲು ಒಂದೊಂದು ತರಗತಿಯನ್ನು ಆರಂಭಿಸಲಾಯಿತು. ಧಾರವಾಡದ ಶಿಕ್ಷಕರ ಮತ್ತು ಶಿಕ್ಷಕಿಯರ ತರಬೇತಿ ಸಂಸ್ಥೆಗಳಲ್ಲಿ 1959-60 ರಲ್ಲಿ ಮತ್ತೆ ಎರಡು ಉರ್ದು ತರಗತಿಗಳನ್ನು ತೆರೆಯಲಾಯಿತು. 1963-64 ರಲ್ಲಿ ಬೆಂಗಳೂರಿನಲ್ಲಿ ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲೀಷ್ (ಇಂಗ್ಲೀಷ್ ಬೋಧಕರ ಪ್ರಾದೇಶಿಕ ಸಂಸ್ಥೆ) ಆರಂಭಿಸಲಾಯಿತು. ಇದರ ಮುಖ್ಯ ಉದ್ದೇಶ ಪ್ರಾಥಮಿಕ (ಮಿಡ್ಲ್ ತರಗತಿಗಳು) ಮತ್ತು ಪ್ರೌಢಶಾಲೆಗಳಲ್ಲಿ ಇಂಗ್ಲೀಷ್ ಬೋಧನೆಯ ಮಟ್ಟವನ್ನು ಉತ್ತಮಪಡಿಸುವುದೇ ಆಗಿತ್ತು. ಈ ಸಂಸ್ಥೆಯು ಕರ್ನಾಟಕ ಮತ್ತು ದಕ್ಷಿಣ ಭಾರತದ ಉಳಿದ ರಾಜ್ಯಗಳ ಸಹಕಾರದಿಂದ ಆರಂಭವಾಯಿತು. ಈ ಯೋಜನೆಯಲ್ಲಿ ಬ್ರಿಟಿಷ್ ಕೌನ್ಸಿಲ್ ಪಾಲುಗೊಂಡಿದೆ. ಈ ಸಂಸ್ಥೆಯು ಶಾಲಾ ತನಿಖಾಧಿಕಾರಿಗಳು ಮತ್ತು ಇತರ ಅಧಿಕಾರಿಗಳಿಗೆ ಅಲ್ಪಾವಧಿಯ ತರಬೇತಿಯನ್ನು ವ್ಯವಸ್ಥೆ ಮಾಡುತ್ತಿದೆ.

ಬಿ.ಎಡ್. ಶಿಕ್ಷಣ : 1956-57ರಲ್ಲಿ ರಾಜ್ಯದಲ್ಲಿ ಏಳು ಶಿಕ್ಷಕರ ಕಾಲೇಜುಗಳಿದ್ದವು. ಬೆಳಗಾವಿ, ಬೆಂಗಳೂರು ಮತ್ತು ಕಲ್ಬುರ್ಗಿಗಳಲ್ಲಿ ಒಂದೊಂದು, ಮೈಸೂರು ಮತ್ತು ಮಂಗಳೂರುಗಳಲ್ಲಿ ಎರಡೆರಡು ಕಾಲೇಜುಗಳು ಇದ್ದವು. ಇವುಗಳಲ್ಲಿ 616 ಜನರು ತರಬೇತಿ ಪಡೆಯುತ್ತಿದ್ದರು. ಈ ಪೈಕಿ ಸ್ತ್ರೀಯರ ಸಂಖ್ಯೆ 121. 1956-57 ಮತ್ತು 1968-69ರ ಅವಧಿಯಲ್ಲಿ ಹತ್ತು ಶಿಕ್ಷಕರ ಕಾಲೇಜುಗಳನ್ನು ತೆರೆಯಲಾಯಿತು. ಅಂದರೆ ಆಗ ಇದ್ದ ಈ ಕಾಲೇಜುಗಳ ಒಟ್ಟು ಸಂಖ್ಯೆ ಹದಿನೇಳು. ಇವುಗಳಲ್ಲಿ, ಮೈಸೂರಿನ ಪ್ರಾದೇಶಿಕ ಶಿಕ್ಷಕರ ಕಾಲೇಜು (ರೀಜನಲ್ ಕಾಲೇಜ್ ಆಫ್ ಎಜುಕೇಷನ್) ಸೇರಿದೆ. 1982-83ರ ಹೊತ್ತಿಗೆ ಇವುಗಳ ಸಂಖ್ಯೆ 48ಕ್ಕೆ ಏರಿತು. (ಇವುಗಳಲ್ಲಿ 4,687 ಅಭ್ಯರ್ಥಿಗಳಿದ್ದರು). ಈ ಕಾಲೇಜುಗಳ ಪೈಕಿ ಮೈಸೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದು ಅದರ ಅಂಗಸಂಸ್ಥೆಗಳಾಗಿದ್ದ ಕಾಲೇಜುಗಳ ಸಂಖ್ಯೆ 16, ಕರ್ನಾಟಕ ವಿಶ್ವವಿದ್ಯಾಲಯ ಏಳು, ಬೆಂಗಳೂರು ವಿಶ್ವವಿದ್ಯಾಲಯ 15, ಮಂಗಳೂರು ವಿಶ್ವವಿದ್ಯಾಲಯ ನಾಲ್ಕು ಮತ್ತು ಕಲ್ಬುರ್ಗಿ ವಿಶ್ವವಿದ್ಯಾಲಯ ಆರು. ಇವುಗಳಲ್ಲದೆ, ಕೆಲವು ಶಿಕ್ಷಣ ಕಾಲೇಜುಗಳಲ್ಲಿ ಸಂಜೆ ತರಗತಿಗಳಿವೆ. ಇವುಗಳಿಗೆ ಸೇವಾನಿರತ ಶಿಕ್ಷಕರು ಮಾತ್ರ ಪ್ರವೇಶ ಪಡೆಯಲು ಅರ್ಹರಾಗಿರುತ್ತಾರೆ. ಇವುಗಳಲ್ಲಿನ ಶಿಕ್ಷಣದ ಅವಧಿ ಎರಡು ವರ್ಷ. ಈ ಯೋಜನೆಯ ಜೊತೆಗೆ, ತರಬೇತಿ ಪಡೆಯದ ಪದವೀಧರರಿಗೆ ತರಬೇತಿ ಕೊಡಲು ಮೈಸೂರಿನ ಪ್ರಾದೇಶಿಕ ಶಿಕ್ಷಣ ಕಾಲೇಜು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳು ಶಾಲೆಗಳ ಸಹಕಾರದೊಂದಿಗೆ ಅಂಚೆ ಶಿಕ್ಷಣಕ್ಕೆ ವ್ಯವಸ್ಥೆ ಮಾಡಿವೆ. ಧಾರವಾಡ ಮತ್ತು ವಿದ್ಯಾನಗರ (ಬೆಂಗಳೂರು ಜಿಲ್ಲೆ) ಗಳಲ್ಲಿ ಎರಡು ಸ್ನಾತಕೋತ್ತರ ತರಬೇತಿಯ ಕಾಲೇಜುಗಳಿದ್ದು ಇವೆರಡೂ ಮೂಲ ಶಿಕ್ಷಣದಲ್ಲಿ ಪದವೀಧರ ಉಪಾಧ್ಯಾಯರುಗಳಿಗೂ ಮತ್ತು ಶಾಲಾ ತನಿಖಾಧಿಕಾರಿಗಳಿಗೂ ತರಬೇತಿಯನ್ನು ಕೊಡುತ್ತಿದ್ದವು. ವಿದ್ಯಾನಗರದ ಕಾಲೇಜು ಅಲ್ಲಿಯ ಮೂಲ ಶಿಕ್ಷಣ ತರಬೇತಿ ಕೇಂದ್ರಕ್ಕೆ ಸೇರಿಕೊಂಡಿತ್ತು. 1956-57ರಲ್ಲಿ ಈ ಕಾಲೇಜನ್ನು ಮುಚ್ಚಲಾಯಿತು. ಅದೇ ವರ್ಷ ದೊಡ್ಡಬಳ್ಳಾಪುರದಲ್ಲಿ ಒಂದು ಪ್ರತ್ಯೇಕ ಸ್ನಾತಕೋತ್ತರ ಶಿಕ್ಷಕರ ಕಾಲೇಜನ್ನು ತೆರೆಯಲಾಯಿತು. ಆದರೆ 1959-60ರಲ್ಲಿ ಇದನ್ನು ಧಾರವಾಡ ಕಾಲೇಜಿನೊಂದಿಗೆ ಐಕ್ಯಗೊಳಿಸಲಾಯಿತು. ಧಾರವಾಡದ ಈ ಕಾಲೇಜು ಬೆಳಗಾವಿಯ ಶಿಕ್ಷಕರ ಕಾಲೇಜಿನ ಒಂದು ಅಂಗವಾಗಿ 1947ರಲ್ಲಿ ಆರಂಭವಾಗಿ, 1948ರಲ್ಲಿ ಧಾರವಾಡಕ್ಕೆ ಸ್ಥಳಾಂತರಗೊಂಡಿತ್ತು. ಅನಂತರ ಪ್ರತ್ಯೇಕ ಸ್ವತಂತ್ರ ಸಂಸ್ಥೆಯಾಯಿತು. ಇದು ಭಾಗಶಃ ನಿವಾಸಿ ಸಂಸ್ಥೆಯಾಗಿತ್ತು. ಮೂಲ ಶಿಕ್ಷಣದಲ್ಲಿ ಸ್ನಾತಕೋತ್ತರ ಡಿಪ್ಲೋಮಾವನ್ನು ನೀಡುತ್ತಿತ್ತು. 1953ರವರೆಗೆ ಇದಕ್ಕೆ ಪ್ರವೇಶವನ್ನು ತರಬೇತಿ ಹೊಂದಿದ ಪದವೀಧರರ ಶಿಕ್ಷಕರಿಗೆ ಮಾತ್ರ ಸೀಮಿತಗೊಳಿಸಲಾಗಿತ್ತು. 1953ರಿಂದ 1959ರವರೆಗೆ ತರಬೇತಿ ಪಡೆದ ಮತ್ತು ತರಬೇತಿ ಪಡೆಯದ ಪದವೀಧರ ಶಿಕ್ಷಕರೆಲ್ಲರಿಗೂ ತಕ್ಕುದಾದ ಒಂದು ಕೋರ್ಸನ್ನು ಈ ಕಾಲೇಜಿನಲ್ಲಿ ನಡೆಸಲಾಗುತ್ತಿತ್ತು.

ತರಬೇತಿ ನಂತರ ಮೂಲ ಶಿಕ್ಷಣದಲ್ಲಿ ಡಿಪ್ಲೋಮಾವನ್ನು ನೀಡ ಲಾಗುತ್ತಿತ್ತು. ಇದನ್ನು ಬಿ.ಎಡ್.ಗೆ ಸಮ ಎಂದು ಪರಿಗಣಿಸ ಲಾಗುತ್ತಿತ್ತು.

ಮೈಸೂರಿನ ಪ್ರಾದೇಶಿಕ ಶಿಕ್ಷಣ ಕಾಲೇಜು : ವಿವಿದೋದ್ದೇಶ ಪ್ರೌಢಶಾಲೆಗಳ ಶಿಕ್ಷಕರಿಗೆ ತರಬೇತಿ ಕೊಡುವ ಮುಖ್ಯ ಉದ್ದೇಶದಿಂದ ಭಾರತ ಸರ್ಕಾರದ ಶಿಕ್ಷಣ ಸಚಿವಾಲಯವು 1963 ರಲ್ಲಿ ದೇಶದಲ್ಲಿ ನಾಲ್ಕು ಪ್ರಾದೇಶಿಕ ಶಿಕ್ಷಣ ಕಾಲೇಜುಗಳನ್ನು ಸ್ಥಾಪಿಸಿತು. ಇವುಗಳಲ್ಲಿ ಮೈಸೂರು ಕಾಲೇಜೂ ಒಂದು. ಸಾಧಾರಣ ಹೈಸ್ಕೂಲಿನ ಶಿಕ್ಷಕರಿಗೆ ತರಬೇತಿ ಕೊಡುವುದೂ ಇದರ ಇನ್ನೊಂದು ಉದ್ದೇಶವಾಗಿತ್ತು. ವಿಜ್ಞಾನ, ವಾಣಿಜ್ಯ, ಕಲೆ, ಕೃಷಿ, ಗೃಹವಿಜ್ಞಾನ, ಚಿತ್ರಕಲೆ, ಇಂಗ್ಲೀಷ್ ಮತ್ತು ತಾಂತ್ರಿಕ ವಿಜ್ಞಾನ ಇವುಗಳನ್ನು ಬೋಧಿಸಲು ತಕ್ಕುದಾದ ಬೋಧನ ಕ್ರಮವನ್ನು ಬೆಳೆಸುವ ಕಾರ್ಯಕ್ರಮವನ್ನು ಈ ಕಾಲೇಜುಗಳು ಹೊಂದಿದ್ದವು. ಮೈಸೂರು ಕಾಲೇಜು, ಕೇರಳ, ಕರ್ನಾಟಕ, ತಮಿಳುನಾಡು ಮತ್ತು ಆಂಧ್ರ ಪ್ರದೇಶಗಳ ಅವಶ್ಯಕತೆಗಳನ್ನು ಪೂರೈಸುತ್ತಿದೆ. ಈ ಕಾಲೇಜು ಮೈಸೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದು ಅದರ ಅಂಗಸಂಸ್ಥೆಯಾಗಿದೆ. ವಿಜ್ಞಾನ, ವಾಣಿಜ್ಯ, ಕಲೆ, ಕೃಷಿ ಮತ್ತು ಗೃಹವಿಜ್ಞಾನದ ಪದವೀಧರರಿಗೆ ಒಂದು ವರ್ಷದ ಬಿ.ಎಡ್. ತರಬೇತಿ ವ್ಯವಸ್ಥೆಯು ಈ ಕಾಲೇಜಿನಲ್ಲಿದೆ. ಜೊತೆಗೆ ಪದವೀಪೂರ್ವ ಪರೀಕ್ಷೆಯಲ್ಲಿ ಅಥವಾ ಹೈಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಪಾಸಾದವರಿಗೆ ನಾಲ್ಕು ವರ್ಷಗಳ ಬಿ.ಎಸ್‌ಸಿ. ಎಡ್., ಬಿ.ಕಾಂ.ಎಡ್., ಬಿ.ಟೆಕ್.ಎಡ್., ಮತ್ತು ಬಿ.ಎ.ಎಡ್., ಡಿಗ್ರಿಗಳ ವ್ಯವಸ್ಥೆ ಇದೆ. 1969ರಲ್ಲಿ ಐದು ವಿಸ್ತರಣಾ ಸೇವಾ ಕೇಂದ್ರಗಳಿದ್ದವು. ಮತ್ತು ಎರಡು ವಿಸ್ತರಣಾ ಘಟಕಗಳಿದ್ದವು. ಇವೆಲ್ಲವೂ ಸೆಕೆಂಡರಿ ಶಿಕ್ಷಣದ ವಿಸ್ತರಣಾ ಕಾರ್ಯಕ್ರಮಗಳ ನಿರ್ದೇಶನಾಲಯದ ಅಧೀನದಲ್ಲಿದ್ದು ಶಿಕ್ಷಕರ ಕಾಲೇಜಿಗೆ ಹೊಂದಿಕೊಂಡಿದ್ದವು. 1982-83ರಲ್ಲಿ ಎಂಟು ಸೆಕೆಂಡರಿ ಶಿಕ್ಷಣ ವಿಸ್ತರಣಾ ಕೇಂದ್ರಗಳೂ ಮತ್ತು ನಾಲ್ಕು ಪ್ರಾಥಮಿಕ ಶಿಕ್ಷಣ ವಿಸ್ತರಣಾ ಕೇಂದ್ರಗಳೂ ಇದ್ದವು. ಇವುಗಳನ್ನು ಕ್ರಮವಾಗಿ ಬಿ.ಎಡ್. ಕಾಲೇಜುಗಳಿಗೂ ಮತ್ತು ಶಿಕ್ಷಕರ ತರಬೇತಿ ಕೇಂದ್ರಗಳಿಗೂ ಸೇರಿಸಲಾಗಿತ್ತು.

ಕರ್ನಾಟಕ ವಿಶ್ವವಿದ್ಯಾಲಯವು 1953ರಲ್ಲಿ ಬೆಳಗಾವಿಯ ಸೆಕೆಂಡರಿ ಶಿಕ್ಷಕರ ಕಾಲೇಜಿನಲ್ಲಿ ಶಿಕ್ಷಣದ ಸ್ನಾತಕೋತ್ತರ ಮತ್ತು ಪಿಎಚ್.ಡಿ. ಕೋರ್ಸನ್ನು ಆರಂಭಿಸಿತು. ಇವೆರಡೂ ರಜದ ದಿನಗಳಲ್ಲಿ ನಡೆಯುತ್ತಿದ್ದ ಕೋರ್ಸುಗಳಾಗಿದ್ದವು. 1962ರಲ್ಲಿ, ಕರ್ನಾಟಕ ವಿಶ್ವವಿದ್ಯಾಲಯವು ಎಂ.ಎಡ್. ಕೋರ್ಸನ್ನು ಮಿಕ್ಕೆಲ್ಲ ಕೋರ್ಸ್‌ಗಳಂತೆ ಸಾಧಾರಣ ದಿನಗಳಲ್ಲಿ ನಡೆಯುವ (ರೆಗ್ಯುಲರ್) ಕೋರ್ಸ್ ಆಗಿ ಮಾರ್ಪಾಡು ಮಾಡಿತು. ಇದರಿಂದ ಶಿಕ್ಷಣ ಶಾಸ್ತ್ರವು ಒಂದು ಅಧ್ಯಯನ ಇಲಾಖೆಯ ಅಂತಸ್ತನ್ನು ಪಡೆಯಿತು. 1981-82ರಲ್ಲಿ, ಅನುದಿನ ನಡೆಯುತ್ತಿದ್ದ ಎಂ.ಎಡ್. ತರಗತಿಯಲ್ಲಿ ನಲವತ್ತು ವಿದ್ಯಾರ್ಥಿಗಳೂ ರಜದ ದಿನಗಳಲ್ಲಿನ ಎಂ.ಎಡ್. ತರಗತಿಯಲ್ಲಿ ಐವತ್ತು ವಿದ್ಯಾರ್ಥಿಗಳೂ ಇದ್ದರು. ಪಿಎಚ್.ಡಿ. ಪದವಿಗಾಗಿ 23 ಜನರು ತಮ್ಮ ಹೆಸರುಗಳನ್ನು ನೋಂದಾಯಿಸಿಕೊಂಡಿದ್ದರು. ಮೈಸೂರು ವಿಶ್ವವಿದ್ಯಾಲಯ 1958ರಲ್ಲಿ ಶಿಕ್ಷಣದ ಸ್ನಾತಕೋತ್ತರ ತರಗತಿ (ಎಂ.ಎಡ್.) ಯನ್ನು ಆರಂಭಿಸಿತು. 1960ರಲ್ಲಿ ಪಿಎಚ್.ಡಿ. ಯನ್ನು ಆರಂಭಿಸಿತು. 1981-82ರಲ್ಲಿ 48 ಅಭ್ಯರ್ಥಿಗಳು ಎಂ.ಎಡ್. ತರಗತಿಯಲ್ಲಿದ್ದರು. 1982ರವರೆಗೆ, 18 ಜನರು ಶಿಕ್ಷಣದ ಪಿಎಚ್.ಡಿ. ಪದವಿಯನ್ನು ಪಡೆದಿದ್ದರು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ, 1967ರಲ್ಲಿ ಶಿಕ್ಷಣ ವಿಭಾಗವು ಆರಂಭವಾಯಿತು. ಆಗ ಎಂ.ಎಡ್. ಮತ್ತು ಪಿಎಚ್.ಡಿ. ಕೋರ್ಸ್‌ಗಳು ಆರಂಭವಾದವು. 1981-82ರಲ್ಲಿ ಎಂ.ಎಡ್. ತರಗತಿಯಲ್ಲಿ 39 ಸ್ನಾತಕರಿದ್ದರು. ಶಿಕ್ಷಣದ ಎಂ.ಫಿಲ್. ಕೋರ್ಸು 1982-83ರಿಂದ ಆರಂಭವಾಗಿದೆ.

### ಸಂಸ್ಕೃತ ಶಿಕ್ಷಣ

1856ರ ರಾಜ್ಯದ ಶಿಕ್ಷಣ ನೀತಿಯು ಮೈಸೂರು ಸಂಸ್ಥಾನದಲ್ಲಿ ಆಚರಣೆಗೆ ಬಂದ ಮೇಲೆ, ಮುಖ್ಯವಾಗಿ ಪಂಡಿತರು ನಡೆಸುತ್ತಿದ್ದ ಅನೇಕ ಪಾಠಶಾಲೆಗಳು ಅನುದಾನಕ್ಕೆ ಅರ್ಜಿ ಸಲ್ಲಿಸಿದುವು. ಈ ಪಾಠಶಾಲೆಗಳು ಛತ್ರಗಳಲ್ಲಿಯೂ ಮತ್ತು ದೇವಾಲಯಗಳಲ್ಲಿಯೂ ನಡೆಯುತ್ತಿದ್ದವು. ಇವುಗಳಿಗೆ ಅನುದಾನವೊಂದೇ ಮುಖ್ಯವಾದ ಆದಾಯವಾಗಿತ್ತು. ಶಿಕ್ಷಕರಲ್ಲಿ ಬಹುಜನರು ಬ್ರಾಹ್ಮಣರಾಗಿದ್ದರು. ವೇದಗಳು, ಕಾವ್ಯಗಳು ಮತ್ತು ಶಾಸ್ತ್ರಗಳು ಇತ್ಯಾದಿಗಳಲ್ಲಿ ಪಾಠವಾಗುತ್ತಿತ್ತು. 1875 ರಲ್ಲಿ ಹಳೆಯ ಮೈಸೂರು ವಿಭಾಗದಲ್ಲಿ ಅನುದಾನ ಪಡೆಯುತ್ತಿದ್ದ ಕೇವಲ 12 ಸಂಸ್ಕೃತ ಶಾಲೆಗಳಿದ್ದವು. ಕ್ರಮೇಣ ಲೌಕಿಕ ವಿಷಯಗಳಾದ ಗಣಿತ ಮತ್ತು ದೇಶ ಭಾಷೆಗಳ ಬೋಧನೆಯನ್ನು ಈ ಶಾಲೆಗಳಲ್ಲಿ ಆರಂಭಿಸಲಾಯಿತು. 1889-90ರಲ್ಲಿ, ಮೇಲ್ಕೋಟೆಯಲ್ಲಿದ್ದ ಸಂಸ್ಕೃತ ಶಾಲೆ ಮತ್ತು ಮೈಸೂರಿನ ಸದ್ವಿದ್ಯಾಪಾಠಶಾಲೆಗಳನ್ನು ಮುಖ್ಯ ಶಾಲೆಗಳೆಂದು ಪರಿಗಣಿಸಿ, ಅವುಗಳನ್ನು ಪ್ರೌಢಶಾಲೆಗಳ ವರ್ಗದಲ್ಲಿ ಸೇರಿಸಲಾಯಿತು. ಕರ್ನಾಟಕ ಭಾಷೋಜ್ಜೀವಿನಿ ಸಭೆಯು 1886–87ರಲ್ಲಿ ಮೈಸೂರಿನಲ್ಲಿ ಒಂದು ಸಂಸ್ಕೃತ ಶಾಲೆಯನ್ನು ಆರಂಭಿಸಿತು. ಸಂಸ್ಕೃತದಲ್ಲಿ ಪಾಂಡಿತ್ಯ ಪಡೆಯಲು ಸಾಕಷ್ಟು ಪ್ರೋತ್ಸಾಹವನ್ನು ಕೊಟ್ಟು ಅದರ ಮೂಲಕ ಕನ್ನಡವನ್ನು ಬೆಳೆಸುವುದು ಇದರ ಆಸೆಯಾಗಿತ್ತು. 1894 ಜನವರಿಯಲ್ಲಿ ಈ ಸಭೆಯು ಮುಚ್ಚಿಹೋಯಿತು. ಆಗ ಇದರ ತರಗತಿಗಳನ್ನು ನಾರ್ಮಲ್ ಸ್ಕೂಲಿಗೆ ವರ್ಗಾಯಿಸಲಾಯಿತು. 1915-16ರಲ್ಲಿ ಮೂರು ಸಂಸ್ಕೃತ

ಮಹಾಪಾಠಶಾಲೆಗಳೂ ಮತ್ತು ಸಂಸ್ಕೃತ ಶಾಲೆಗಳೂ ಇದ್ದವು. ಅವುಗಳಲ್ಲಿ ಕ್ರಮವಾಗಿ 188 ಮತ್ತು 2,078 ವಿದ್ಯಾರ್ಥಿಗಳಿದ್ದರು. 1943-44ರಲ್ಲಿ. ಸಂಸ್ಕೃತವನ್ನು ಪ್ರಧಾನವಾಗಿ ಬೋಧಿಸುತ್ತಿದ್ದ 89 ಸಂಸ್ಥೆಗಳಿದ್ದವು. ಇವುಗಳಲ್ಲಿ ಆರು ಸಂಸ್ಕೃತ ಮಹಾಪಾಠಶಾಲೆಗಳೂ ಮತ್ತು 83 ಪಾಠಶಾಲೆಗಳೂ ಆಗಿದ್ದವು. ಬಹುಸಂಖ್ಯೆಯು ಇಂಥ ಶಾಲೆಗಳಲ್ಲಿ ಪ್ರಾಥಮಿಕ ಹಂತದ ಬೋಧನೆಯು ನಡೆಯುತ್ತಿತ್ತು. ಮೈಸೂರಿನ ಮಹಾರಾಜಾ ಸಂಸ್ಕೃತ ಮಹಾಪಾಠಶಾಲೆ, ಮೇಲ್ಕೋಟೆಯ ಸಂಸ್ಕೃತ ಮಹಾಪಾಠಶಾಲೆ, ಬೆಂಗಳೂರಿನ ಶ್ರೀ ಚಾಮರಾಜೇಂದ್ರ ವೇದ ಮಹಾಪಾಠಶಾಲೆ, ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆ, ಸಿದ್ಧಗಂಗೆಯ ಸಂಸ್ಕೃತ ಮಹಾಪಾಠಶಾಲೆ ಮತ್ತು ಪಂಡಿತ ತರಗತಿಗಳಿದ್ದ ಮೈಸೂರಿನ ಶಿಕ್ಷಕ ತರಬೇತಿ ಕಾಲೇಜು ಈ ಆರು ಅಂಥ ಮಹಾಪಾಠಶಾಲೆಗಳಾಗಿದ್ದವು. ಈ ಮಹಾಪಾಠಶಾಲೆಗಳಲ್ಲಿ ಮತ್ತು ಪಾಠಶಾಲೆಗಳಲ್ಲಿ 2,556 ವಿದ್ಯಾರ್ಥಿಗಳಿದ್ದರು. 1953ರಲ್ಲಿ, ಬೆಂಗಳೂರಿನ ಶ್ರೀ ಚಾಮರಾಜೇಂದ್ರ ವೇದ ಮಹಾಪಾಠಶಾಲೆಯು ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಅಂತರ್ಗತವಾಯಿತು. 1955-56ರಲ್ಲಿ ನಾಲ್ಕು ಸಂಸ್ಕೃತ ಮಹಾಪಾಠಶಾಲೆಗಳು ಮಾತ್ರ ಅಸ್ತಿತ್ವದಲ್ಲಿದ್ದವು. ಇವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 1,205. ಮೈಸೂರಿನ ಶಿಕ್ಷಕರ ತರಬೇತಿ ಕಾಲೇಜಿನಲ್ಲಿದ್ದ ಪಂಡಿತ ತರಗತಿಯೂ ಅಸ್ತಿತ್ವದಲ್ಲಿತ್ತು. ಆ ವರ್ಷದಲ್ಲಿ, 80 ವೇದ ಪಾಠಶಾಲೆಗಳು ಮತ್ತು ಸಂಸ್ಕೃತ ಶಾಲೆಗಳು ಇದ್ದವು. ಇವುಗಳಲ್ಲಿ 1,943 ಬಾಲಕರೂ, 338 ಬಾಲಕಿಯರೂ ವ್ಯಾಸಂಗ ಮಾಡುತ್ತಿದ್ದರು. ಹಳೇ ಮೈಸೂರು ವಲಯದಲ್ಲಿ ಆ ವರ್ಷ ಸಂಸ್ಕೃತ ಶಿಕ್ಷಣಕ್ಕಾಗಿ 1.89 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಯಿತು. ಸಂಸ್ಕೃತ ಪಾಠಶಾಲೆಗಳಿಗೆ ಶಿಕ್ಷಣ ಇಲಾಖೆಯೂ ಮತ್ತು ವೇದ ಪಾಠಶಾಲೆಗಳಿಗೆ ಮುಜರಾಯಿ ಇಲಾಖೆಯೂ ಧನ ಸಹಾಯ ಮಾಡುತ್ತಿದ್ದವು. ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಹಿಂದೆ ಒಂದು ಪಂಡಿತ ತರಗತಿ ಇತ್ತು. ಅದು 1914ರ ಜುಲೈನಲ್ಲಿ ರದ್ದಾಯಿತು.

ಸಂಸ್ಕೃತ ವ್ಯಾಸಂಗಕ್ಕಾಗಿ ಬಳ್ಳಾರಿಯಲ್ಲಿ ಸನ್ಮಾರ್ಗ ತತ್ತ್ವಜ್ಞಾನ ಸಮಾಜಧರ್ಮ ಸಂಸ್ಕೃತ ಪಾಠಶಾಲೆಯು 1887 ರಲ್ಲಿ ಆರಂಭವಾಯಿತು. 1892ರಲ್ಲಿ, ಬಳ್ಳಾರಿ ಜಿಲ್ಲೆಯಲ್ಲಿ ನಾಲ್ಕು ಸಂಸ್ಕೃತ ಪಾಠಶಾಲೆಗಳಿದ್ದವು. ಅವುಗಳಲ್ಲಿ ಸರ್ಕಾರದಿಂದ ನಿಯಮಿತವಾದಂತೆ ಪಾಠಕ್ರಮಗಳು ನಡೆಯುತ್ತಿದ್ದವು. ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಗಳಲ್ಲಿ ಸರ್ಕಾರದಿಂದ ಮಾನ್ಯ ಮಾಡಲ್ಪಟ್ಟ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ತರಬೇತಿ ಮಾಡಲಾಗುತ್ತಿತ್ತು. ಅವುಗಳಲ್ಲಿ ಮೂರು ಬಳ್ಳಾರಿಯಲ್ಲೂ ಮತ್ತು ಒಂದು ಹೊಸಪೇಟೆಯಲ್ಲೂ ಇದ್ದವು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂರು ಸಂಸ್ಕೃತ ಕಾಲೇಜುಗಳಿದ್ದವು. ಇವು ಉಡುಪಿ, ಕಾರ್ಕಳ ಮತ್ತು ಪೆರ್ಡಾಲ (ಇದು ಈಗ ಕೇರಳದಲ್ಲಿದೆ) ಗಳಲ್ಲಿದ್ದವು. ಉಡುಪಿಯಲ್ಲಿನ ಕಾಲೇಜು ಅಷ್ಟಮಠದ ಯತಿಗಳಿಂದ 1904ರಲ್ಲಿ ಆರಂಭವಾಯಿತು. ಆದರೆ ಮುಂದೆ, 1913 ರಲ್ಲಿ ಇದರ ಆಡಳಿತವು ಶ್ರೀಮನ್ ಮಾಧ್ವ ಸಿದ್ಧಾಂತ ಪ್ರಬೋಧಿನಿ ಸಭಾ ಎಂಬ ಸಂಸ್ಥೆಯ ವಶಕ್ಕೆ ಹೋಯಿತು. ಅದೇ ವರ್ಷವೇ ಕಾಲೇಜು ಮಟ್ಟಕ್ಕೆ ಬಂತು. ಅನಂತರ ಮದ್ರಾಸ್ ವಿಶ್ವವಿದ್ಯಾಲಯವು ಇದನ್ನು ಶಿರೋಮಣಿ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತರಬೇತು ಮಾಡಲು ಅರ್ಹವಾದ ಸಂಸ್ಥೆ ಎಂದು ಪರಿಗಣಿಸಿತು. ಕಾರ್ಕಳ ಭುವನೇಂದ್ರ ಸಂಸ್ಕೃತ ಮಹಾವಿದ್ಯಾಲಯವು 1869 ರಲ್ಲಿ ಆರಂಭವಾಯಿತು. ಈ ಸಂಸ್ಥೆಯನ್ನು ಜನಪ್ರಿಯವನ್ನಾಗಿ ಮಾಡುವ ಪ್ರಯತ್ನವಾಗಿ ಇಂಗ್ಲೀಷ್ ಮತ್ತು ಇತರ ವಿಷಯಗಳ ಬೋಧನೆಯು ಇಲ್ಲಿ ಆರಂಭಿಸಲಾಯಿತು. ಇದು ಮದ್ರಾಸ್ ವಿಶ್ವವಿದ್ಯಾಲಯವು ನಡೆಸುತ್ತಿದ್ದ ಪ್ರಾಚ್ಯಶಾಸ್ತ್ರಗಳ ಪರೀಕ್ಷೆಗಳಿಗೆ ('ಓರಿಯಂಟಲ್ ಟೈಟಲ್ಸ್') ವಿದ್ಯಾರ್ಥಿಗಳನ್ನು ತರಬೇತು ಮಾಡುತ್ತಿತ್ತು. 1946-47ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಏಳು ಉನ್ನತ ಸಂಸ್ಕೃತ ಶಾಲೆಗಳಿದ್ದವು. ಇವುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ 610. ಈ ಸಂಸ್ಥೆಗಳಲ್ಲಿ ಆರು ಅನುದಾನ ಪಡೆಯುತ್ತಿದ್ದವು. ಒಂದಕ್ಕೆ ಯಾವ ಧನಸಹಾಯವೂ ಇರಲಿಲ್ಲ. ಈ ಶಾಲೆಗಳನ್ನು ಪ್ರಾಚ್ಯಶಾಲೆಗಳ ವಿಶೇಷ ತನಿಖಾಧಿಕಾರಿಯು ಮೇಲ್ವಿಚಾರಣೆ ಮಾಡುತ್ತಿದ್ದನು. ಕಲ್ಬುರ್ಗಿ ವಲಯದಲ್ಲಿ ಅನುದಾನ ಪಡೆಯುತ್ತಿದ್ದ ಧಾರ್ಮಿಕ ಶಾಲೆಗಳಿದ್ದವು. ಇವುಗಳಲ್ಲಿ ಧಾರ್ಮಿಕ ಸಂಸ್ಥೆಗಳ ಇಲಾಖೆಯಿಂದ ಧನ ಸಹಾಯ ಪಡೆಯುತ್ತಿದ್ದವು. ಮತ್ತೆ ಕೆಲವು ಶಿಕ್ಷಣ ಇಲಾಖೆಯ ಹತೋಟಿಯಲ್ಲಿದ್ದು ಅದರಿಂದ ಅನುದಾನ ಪಡೆಯುತ್ತಿದ್ದವು. 1935ರಲ್ಲಿ ಆರು ಸಂಸ್ಕೃತ ಮತ್ತು ವೇದ ಪಾಠಶಾಲೆಗಳಿದ್ದವು. ಇವೆಲ್ಲವೂ ಖಾಸಗೀ ಶಾಲೆಗಳೇ ಆಗಿದ್ದವು.

ರಾಜ್ಯ ಪುನರ್ವ್ಯವಸ್ಥೆಯಾದ ನಂತರ ದಕ್ಷಿಣ ಕನ್ನಡ ಜಿಲ್ಲೆಯ ಸಂಸ್ಕೃತ ಪಾಠಶಾಲೆಗಳು ಮೈಸೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯು ನಡೆಸುತ್ತಿದ್ದ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ತರಬೇತಿ ಮಾಡುತ್ತಿವೆ. ಮೊದಲು ಮುಂಬೈ ಕರ್ನಾಟಕ ಪ್ರದೇಶದಲ್ಲಿದ್ದ ಸಂಸ್ಕೃತ ಪಾಠಶಾಲೆಗಳು ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಪುಣೆಯ ಸಂಸ್ಕೃತ ವಿದ್ಯಾಪೀಠಗಳೆರಡೂ ನಡೆಸುತ್ತಿದ್ದ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ತರಬೇತು ಮಾಡುತ್ತಿದ್ದವು. ಕಲ್ಬುರ್ಗಿ ಪ್ರದೇಶದಲ್ಲಿದ್ದ ಒಂದೇ ಒಂದು ಪಾಠಶಾಲೆಯು ಮುಂಬೈಯ ಭಾರತೀಯ ವಿದ್ಯಾಭವನವು ನಡೆಸುತ್ತಿದ್ದ ಪರೀಕ್ಷೆಗೆ ತನ್ನ ವಿದ್ಯಾರ್ಥಿಗಳನ್ನು ಕಳಿಸುತ್ತಿತ್ತು. 1956-57ರಲ್ಲಿ ಆರು ಸಂಸ್ಕೃತ ಮಹಾಪಾಠಶಾಲೆಗಳೂ 95 ಸಂಸ್ಕೃತ ಪಾಠಶಾಲೆಗಳೂ ರಾಜ್ಯದಲ್ಲಿದ್ದವು. ಅವುಗಳಲ್ಲಿ ಕ್ರಮವಾಗಿ 1,168 ಮತ್ತು 3,275 ವಿದ್ಯಾರ್ಥಿಗಳಿದ್ದರು.

1982-83ರಲ್ಲಿ, ಏಳು ಸಂಸ್ಕೃತ ಮಹಾಪಾಠಶಾಲೆಗಳಿದ್ದವು. ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ಸುಮಾರು 700. ಆ ವರ್ಷ ಇದ್ದ ಸಂಸ್ಕೃತ ಪಾಠಶಾಲೆಗಳ ಸಂಖ್ಯೆ 200 ಮತ್ತು ವೇದ ಪಾಠಶಾಲೆಗಳ ಸಂಖ್ಯೆ 42. ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ಕ್ರಮವಾಗಿ 30,000 ಮತ್ತು 450. ಇವೆಲ್ಲವೂ ಸರ್ಕಾರದಿಂದ ಅನುದಾನ ಪಡೆಯುತ್ತಿದ್ದ ಶಾಲೆಗಳು. ಇವಲ್ಲದೆ ಸರ್ಕಾರದಿಂದ ಮಾನ್ಯತೆ ಪಡೆಯದಿದ್ದ ಶಾಲೆಗಳಿದ್ದವು. ಇವುಗಳನ್ನು ಮಠಗಳು ನಡೆಸುತ್ತಿದ್ದವು. ಅನುದಾನ ಪಡೆಯುವ ಶಾಲೆಗಳು ಇತ್ತೀಚೆಗೆ ಆಚರಣೆಗೆ ಬಂದ ಅನುದಾನ ಸಂಹಿತೆಯ ಪ್ರಕಾರ, ವೆಚ್ಚದ ಶೇಕಡಾ ನೂರರಷ್ಟನ್ನು ಅನುದಾನವಾಗಿ ಪಡೆಯುತ್ತಿವೆ.

1976-77ರಲ್ಲಿ, ಪ್ರಾಥಮಿಕ ಒಂದನೇಯ ತರಗತಿಯಿಂದ ಆರಿಸಿದ 50 ಶಾಲೆಗಳಲ್ಲಿ ಸಂಸ್ಕೃತ ಬೋಧನೆಯನ್ನು ಆರಂಭಿಸಲಾಯಿತು. ಎರಡನೇಯ ವರ್ಷ ಇನ್ನೂ 130 ಶಾಲೆಗಳಿಗೆ ವಿಸ್ತರಿಸಲಾಯಿತು. ಎಲ್ಲ ವಿದ್ಯಾರ್ಥಿಗಳಿಗೂ ಉಚಿತವಾಗಿ ಪಠ್ಯ ಪುಸ್ತಕವನ್ನು ಪೂರೈಸಲಾಗುತ್ತಿದೆ. 1982-83ರಲ್ಲಿ, 401 ಪ್ರಾಥಮಿಕ ಶಾಲೆಗಳಲ್ಲಿ ಸಂಸ್ಕೃತವನ್ನು ಒಂದು ವಿಷಯವಾಗಿ ಬೋಧಿಸಲಾಗುತ್ತಿದೆ. ಇವುಗಳಲ್ಲಿ 16,000ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಸಂಸ್ಕೃತವನ್ನು ಕಲಿಯುತ್ತಿದ್ದಾರೆ. ಸಂಸ್ಕೃತ ಮಹಾಪಾಠಶಾಲೆಗಳು ಮತ್ತು ಪಾಠಶಾಲೆಗಳಲ್ಲದೆ, ಅನೇಕ ಸ್ವಯಂ ಸಹಾಯಕ ಸಂಸ್ಥೆಗಳು ಸಂಸ್ಕೃತ ಭಾಷೆ ಮತ್ತು ಸಾಹಿತ್ಯದ ಅಭಿವೃದ್ಧಿಗಾಗಿ ರಾಜ್ಯದಲ್ಲಿ ಕೆಲಸ ಮಾಡುತ್ತಿವೆ. ಇವುಗಳ ಪೈಕಿ, ಶೃಂಗೇರಿಯ ಸುರಸರಸ್ವತಿ ಸಭೆ ಮತ್ತು ಭಾರತೀಯ ವಿದ್ಯಾಭವನಗಳು ತಮ್ಮದೇ ಆದ ವಿವಿಧ ದರ್ಜೆಯ ಪರೀಕ್ಷೆಗಳನ್ನು ನಡೆಸುತ್ತಿವೆ. ಶೃಂಗೇರಿಯ ಸುರಸರಸ್ವತಿ ಸಭೆಯವರು ಐದು ಬೇರೆ ಬೇರೆ ದರ್ಜೆಯ ಪರೀಕ್ಷೆಗಳನ್ನು ವರ್ಷಕ್ಕೆ ಎರಡು ಸಾರಿ ರಾಜ್ಯದ 80 ಕೇಂದ್ರಗಳಲ್ಲಿ ನಡೆಸುತ್ತಿದ್ದಾರೆ. ಈ ಪರೀಕ್ಷೆಗಳು ಫೆಬ್ರವರಿ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ನಡೆಯುತ್ತವೆ. ಈ ಪರೀಕ್ಷೆಗೆ 4,000ದಿಂದ 5,000 ವಿದ್ಯಾರ್ಥಿಗಳು ಕುಳಿತುಕೊಳ್ಳುತ್ತಾರೆ. ಭಾರತೀಯ ವಿದ್ಯಾಭವನವೂ ವಿವಿಧ ದರ್ಜೆಯ ಸಂಸ್ಕೃತ ಪರೀಕ್ಷೆಗಳನ್ನು ಪ್ರತಿವರ್ಷವೂ ನಡೆಸುತ್ತಿದೆ. ಹಳೇಮೈಸೂರು ಸಂಸ್ಥಾನದಲ್ಲಿ ಸಂಸ್ಕೃತ ಶಿಕ್ಷಣ ಮತ್ತು ಪರೀಕ್ಷಾ ಮಂಡಲಿಯು 1925ರಲ್ಲಿ ಆರಂಭವಾಯಿತು. ಈ ಮಂಡಲಿಯು ಕರ್ನಾಟಕದಲ್ಲಿ ಮುಂದುವರಿಯಿತು. ಇತ್ತೀಚೆಗೆ ಇದು ರದ್ದಾಯಿತು. ಸರ್ಕಾರವು 1982ರವರೆಗೆ, 25 ವೇದ ವಿದ್ವಾಂಸರಿಗೂ 40 ಸಂಸ್ಕೃತ ಪಂಡಿತರಿಗೂ ಸನ್ಮಾನ ಮಾಡಿದೆ. ಇದು ಇಂದು ಒಂದು ಕ್ರಮಬದ್ಧವಾಗಿ ನಡೆಯುತ್ತಿರುವ ಕಾರ್ಯಕ್ರಮವಾಗಿದೆ.

### ಹಿಂದೀ ಶಿಕ್ಷಣ

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಅದರಲ್ಲೂ, ತ್ರಿಭಾಷಾ ಸೂತ್ರವು ಆಚರಣೆಗೆ ಬಂದಮೇಲೆ ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳಲ್ಲಿ, ಹಿಂದೀ ಶಿಕ್ಷಣ ವಿಷಯವು ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಿದೆ. ಈಗ ಸರ್ಕಾರಿ ಮತ್ತು ಖಾಸಗಿ ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳಲ್ಲೆಲ್ಲಾ ಹಿಂದಿಯನ್ನು ಕಲಿಸಲಾಗುತ್ತಿದೆ. ಆರನೇಯ ಸ್ಟ್ಯಾಂಡರ್ಡಿನಿಂದ ಹತ್ತನೇಯ ಸ್ಟ್ಯಾಂಡರ್ಡ್‌ವರೆಗೆ ಅದನ್ನು ಕಡ್ಡಾಯವಾಗಿ ಕಲಿಸಲಾಗುತ್ತಿದೆ. ಜೊತೆಗೆ, ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ಅಭ್ಯಾಸ ಮಾಡಬೇಕಾದ ಭಾಷೆಗಳಲ್ಲಿ ಹಿಂದಿಯು ಒಂದಾಗಿದೆ. ಪದವಿಪೂರ್ವ ತರಗತಿಗಳಲ್ಲಿ ಮತ್ತು ಅನಂತರ ಅದನ್ನು ಒಂದು ಐಚ್ಛಿಕ ವಿಷಯವಾಗಿ ಕಲಿಯಲೂ ಅವಕಾಶವಿದೆ. ಕರ್ನಾಟಕ, ಮೈಸೂರು, ಬೆಂಗಳೂರು ಮತ್ತು ಗುಲ್ಬರ್ಗ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಹಿಂದೀ ವಿಭಾಗಗಳಿವೆ. ಸಾರ್ವಜನಿಕ ಶಿಕ್ಷಣ ನಿರ್ದೇಶನಾಲಯದಲ್ಲಿ ಹಿಂದೀ ಶಿಕ್ಷಣವನ್ನು ನೋಡಿಕೊಳ್ಳಲು ಒಬ್ಬ ವಿಶೇಷಾಧಿಕಾರಿ ಇದ್ದಾರೆ. ಈ ನಿರ್ದೇಶನಾಲಯವೂ ಹಿಂದೀ ಶಿಕ್ಷಕರ ತರಬೇತಿಗೆ ತಕ್ಕ ವ್ಯವಸ್ಥೆ ಮಾಡಿದೆ. ಮೈಸೂರು, ರಾಯಚೂರು ಮತ್ತು ಬಾಗಲ್ಕೋಟೆಗಳಲ್ಲಿ ಈ ನಿರ್ದೇಶನಾಲಯವು ಹಿಂದೀ ಶಿಕ್ಷಕರ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿತು. ಇವು 1981ರವರೆಗೆ ಅಸ್ತಿತ್ವದಲ್ಲಿದ್ದವು. ಮೈಸೂರು ಸರ್ಕಾರಿ ಶಿಕ್ಷಕರ ತರಬೇತಿ ಕಾಲೇಜಿನಲ್ಲಿ ಮಾತ್ರ ಹಿಂದೀ ವಿದ್ವಾನ್ ತರಗತಿಗಳು ನಡೆಯುತ್ತಿವೆ. ಹಿಂದಿಯು ಪ್ರಾದೇಶಿಕ ಭಾಷೆಯಾಗಿಲ್ಲದ ಪ್ರದೇಶಗಳಲ್ಲಿ ಹಿಂದೀ ಅಧ್ಯಯನವನ್ನು ಪ್ರೋತ್ಸಾಹಿಸಲು, ಭಾರತ ಸರ್ಕಾರವು ಸ್ನಾತಕ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಕೊಡುತ್ತಿದೆ.

ಹಿಂದೀ ಬೋಧನೆ ಯೋಜನೆ: ಭಾರತ ಸರ್ಕಾರದ ಶಿಕ್ಷಣ ಸಚಿವಾಲಯವು ಹಿಂದೀ ಪ್ರಾದೇಶಿಕ ಭಾಷೆಯಾಗಿರದ ಭಾಗಗಳಲ್ಲಿ ಕೆಲಸ ಮಾಡುತ್ತಿರುವ ಕೇಂದ್ರ ಸರ್ಕಾರದ ನೌಕರರಿಗೆ 1952ರಲ್ಲಿ ಹಿಂದಿಯನ್ನು ಕಲಿಸುವ ಯೋಜನೆಯನ್ನು ಆರಂಭಿಸಿತು. 1956ರಲ್ಲಿ ಈ ಯೋಜನೆಯನ್ನು ಗೃಹ ಸಚಿವಾಲಯಕ್ಕೆ ವರ್ಗಾಯಿಸಲಾಯಿತು. ವಿವಿಧ ಸಚಿವಾಲಯದವರಿದ್ದ ಒಂದು ಸಮಿತಿಯು ಕಚೇರಿಯ ವೇಳೆಯಲ್ಲಿಯೇ ಹಿಂದಿಯನ್ನು ಕಲಿಸಬಹುದೆಂಬ ಸಲಹೆಯನ್ನು ಕೇಂದ್ರ ಸರ್ಕಾರಕ್ಕೆ ಮಾಡಿತು. ಇದು ಸೇವಾನಿರತ ನೌಕರರಿಗೆ ಕೊಡಬಹುದಾದ ಒಂದು ತರಬೇತಿಯಾಗಿತ್ತು. ಬೆಂಗಳೂರು ಕೇಂದ್ರವನ್ನು ನೋಡಿಕೊಳ್ಳಲು ಒಬ್ಬ ಸಹಾಯಕ ನಿರ್ದೇಶಕರಿದ್ದಾರೆ. ಇವರು ಮದ್ರಾಸ್‌ನಲ್ಲಿರುವ ದಕ್ಷಿಣ ಪ್ರದೇಶ ಕಚೇರಿಯ ಅಧೀನದಲ್ಲಿದ್ದಾರೆ. ಕೇಂದ್ರ ಸರ್ಕಾರದಿಂದ ಅದಕ್ಕೆ ಒಳಪಟ್ಟಿರುವ ಸಾರ್ವಜನಿಕ ಕೈಗಾರಿಕಾ ಸಂಸ್ಥೆಗಳಲ್ಲಿ, ರಾಷ್ಟ್ರೀಕರಣವಾದ ಬ್ಯಾಂಕುಗಳಲ್ಲಿ ಮತ್ತು ಇಂಥವೇ ಸ್ವಾಯತ್ತ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ನೌಕರರಿಗೆ ಹಿಂದೀ ತರಗತಿಗಳನ್ನು ನಡೆಸಲಾಗುತ್ತಿದೆ. ಪ್ರಬೋಧ, ಪ್ರವೀಣ ಮತ್ತು ಪ್ರಾಜ್ಞ ಎಂಬ ಮೂರು ದರ್ಜೆಯ ಕೋರ್ಸ್‌ಗಳಿವೆ. ಹಿಂದೀ ಶೀಘ್ರಲಿಪಿ ಮತ್ತು

ಬೆರಳಚ್ಚಿನ ಕೋರ್ಸುಗಳೂ ಇವೆ. ಪ್ರಾಜ್ಞ ಮತ್ತು ಹಿಂದೀ ಬೆರಳಚ್ಚು ಪರೀಕ್ಷೆಗಳನ್ನು ಪಾಸು ಮಾಡಿದವರಿಗೆ ಒಂದು ಹೆಚ್ಚುವರಿ ಬಡ್ತಿ (ಇಂಕ್ರಿಮೆಂಟ್) ಕೊಡಲಾಗುತ್ತಿದೆ. ಶೀಘ್ರಲಿಪಿ ಪರೀಕ್ಷೆಯಲ್ಲಿ ಪಾಸಾದವರಿಗೆ ಎರಡು ಬಡ್ತಿಗಳನ್ನು ಕೊಡಲಾಗುತ್ತಿದೆ. ಈ ಯೋಜನೆಯ ಪ್ರಕಾರ 1,500 ಅಧಿಕಾರಿಗಳು ಮತ್ತು ನೌಕರರು ಹಿಂದಿಯನ್ನು ಕಲಿಯುತ್ತಿದ್ದಾರೆ.

ಸ್ವಾತಂತ್ರ್ಯಪೂರ್ವದಲ್ಲಿಯೇ, ಸ್ವಯಂಸೇವಾ ಸಂಸ್ಥೆಗಳು ರಾಜ್ಯದಲ್ಲಿ ಹಿಂದೀ ಪ್ರಸಾರಕ್ಕೆ ಸಾಕಷ್ಟು ಪೂರ್ವಭಾವಿ ಕೆಲಸವನ್ನು ಮಾಡಿವೆ. ಇಂದೂ ಕೂಡ ಈ ಸಂಸ್ಥೆಗಳು ಹಿಂದೀ ಪ್ರಸಾರಕ್ಕೆ ವಿಶೇಷ ಸೇವೆಯನ್ನು ಮಾಡುತ್ತಿವೆ. ಈಗ ಇಡೀ ರಾಜ್ಯದ ಮೂಲೆ ಮೂಲೆಗಳಲ್ಲಿ ಕೆಲಸ ಮಾಡುತ್ತಿರುವ ನಾಲ್ಕು ಮುಖ್ಯ ಸ್ವಯಂಸೇವಾ ಸಂಸ್ಥೆಗಳಿವೆ.

ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಕರ್ನಾಟಕ ಶಾಖೆಯು 1935ರಲ್ಲಿ ಬೆಂಗಳೂರಿನಲ್ಲಿ ಆರಂಭವಾಯಿತು. ಆ ವರ್ಷ ಸಭೆಯು ನಡೆಸುತ್ತಿದ್ದ ವಿವಿಧ ಪರೀಕ್ಷೆಗಳಿಗೆ ಸುಮಾರು 1,000 ಅಭ್ಯರ್ಥಿಗಳು ಕುಳಿತುಕೊಂಡರು. ಈ ಸಭೆಯ ಕರ್ನಾಟಕ ಶಾಖೆಯ ಮುಖ್ಯ ಕಚೇರಿಯು ಧಾರವಾಡದಲ್ಲಿದೆ. ಸಭೆಯು ಪ್ರಥಮಾ, ಮಧ್ಯಮಾ, ರಾಷ್ಟ್ರಭಾಷಾ, ಪ್ರವೇಶಿಕಾ, ರಾಷ್ಟ್ರಭಾಷಾ ವಿಶಾರದಾ ಮತ್ತು ರಾಷ್ಟ್ರಭಾಷಾ ಪ್ರವೀಣ ಪರೀಕ್ಷೆಗಳನ್ನು ನಡೆಸುತ್ತಿವೆ. ಇವುಗಳಲ್ಲಿ ಮೊದಲಿನ ಮೂರು ನಿಮ್ನಮಟ್ಟದ ಪರೀಕ್ಷೆಗಳು. ಉಳಿದ ಮೂರು ಉನ್ನತ ಪರೀಕ್ಷೆಗಳು. ಇವಲ್ಲದೆ ಎಂ.ಎ. ಮತ್ತು ಪಿ.ಎಚ್‌ಡಿ.ಗೆ ಸಮವಾದ ಪ್ರಗತ್ ಮತ್ತು ಸಾಹಿತ್ಯಾಚಾರ್ಯ ಪರೀಕ್ಷೆಗಳನ್ನು ಸಭೆ ನಡೆಸುತ್ತಿದೆ. ಜೊತೆಗೆ ಹಿಂದೀ ಬೆರಳಚ್ಚು ಪರೀಕ್ಷೆಯನ್ನು ನಡೆಸುತ್ತಿದೆ. ಕರ್ನಾಟಕದಲ್ಲಿ ಸಭೆಯ ಮಾನ್ಯತೆ ಪಡೆದ 1,180 ಪ್ರಚಾರಕರಿದ್ದಾರೆ. ಪರೀಕ್ಷೆಗಳು ವರ್ಷಕ್ಕೆರಡು ಸಲ ಫೆಬ್ರವರಿ ಮತ್ತು ಆಗಸ್ಟ್ ತಿಂಗಳಿನಲ್ಲಿ ನಡೆಯುತ್ತವೆ. 1982ರ ಆಗಸ್ಟ್ ತಿಂಗಳಿನಲ್ಲಿ ನಡೆದ ವಿವಿಧ ಪರೀಕ್ಷೆಗಳಿಗೆ ಕರ್ನಾಟಕದ 80 ಕೇಂದ್ರಗಳಲ್ಲಿ 5,395 ಅಭ್ಯರ್ಥಿಗಳು ಕುಳಿತಿದ್ದರು. ಪ್ರೌಢಶಾಲೆಗಳಿಗೆ ಪ್ರಚಾರಕ ತರಬೇತಿ ತರಗತಿಗಳನ್ನು ಬೆಂಗಳೂರು, ಮೈಸೂರು, ಧಾರವಾಡಗಳಲ್ಲಿ 1951ರಿಂದ 1968ರವರೆಗೆ ನಡೆಸಲಾಯಿತು ಮತ್ತು 1971-72 ಮತ್ತು 1972-73ರಲ್ಲಿ ಬೆಂಗಳೂರಿನ ಹಿಂದೀ ಬಿ.ಎಡ್. ಕಾಲೇಜಿನಲ್ಲಿ ನಡೆಸಲಾಯಿತು.

ಕರ್ನಾಟಕ ಹಿಂದೀ ಪ್ರಚಾರ ಸಮಿತಿಯು 1939ರಲ್ಲಿ ಬೆಂಗಳೂರಿನಲ್ಲಿ ಹಿಂದೀಯ ಅಭಿವೃದ್ಧಿಗಾಗಿ ಸ್ಥಾಪಿತವಾಯಿತು. ಇದಕ್ಕೆ ಹಿಂದೆ ರಿಯಾಸತ್ ಹಿಂದೀ ಪ್ರಚಾರ ಸಮಿತಿ ಎಂಬ ಹೆಸರಿತ್ತು. ಸಮಿತಿಯು ಹಿಂದೀ ತರಗತಿಗಳನ್ನು ನಡೆಸುವುದು, ಪರೀಕ್ಷೆಗಳ ವ್ಯವಸ್ಥೆ ಮಾಡುವುದು, ಹಿಂದೀ ಗ್ರಂಥಾಲಯಗಳನ್ನು ನಡೆಸುವುದು, ಮಾಸಿಕ ಪತ್ರಿಕೆಗಳನ್ನು ಪ್ರಕಟಿಸುವುದು, ಮುಂತಾದ ಕಾರ್ಯಕ್ರಮಗಳನ್ನಿಟ್ಟುಕೊಂಡಿದೆ. ಇದು ವಿವಿಧ ಮಟ್ಟದ ಐದು ಪರೀಕ್ಷೆಗಳನ್ನು ನಡೆಸುತ್ತಿದೆ. ಇದರ ಅಂತಿಮ ಪರೀಕ್ಷೆಯು ವಿಶ್ವವಿದ್ಯಾಲಯಗಳ ಬಿ.ಎ. ಪರೀಕ್ಷೆಗೆ ಸಮವಾಗಿದೆ. ಸಮಿತಿಯು ಉಚಿತವಾಗಿ ನಡೆಸುವ 110 ಹಿಂದೀ ತರಗತಿಗಳಿಗೆ ಆಗುವ ವೆಚ್ಚದ ಶೇಕಡಾ 75ರಷ್ಟು ಸರ್ಕಾರದಿಂದ ಅನುದಾನವಾಗಿ ಪಡೆಯುತ್ತಿದೆ.

ಮೈಸೂರು ಹಿಂದೀ ಪ್ರಚಾರ ಪರಿಷತ್ತು (ಬೆಂಗಳೂರು) 1943ರಲ್ಲಿ ಸ್ಥಾಪಿತವಾಯಿತು. ಇದರ ಉದ್ದೇಶವೂ ಹಿಂದೀ ಪ್ರಸಾರವೇ ಆಗಿದೆ. ಜೊತೆಗೆ ಕನ್ನಡೇತರರಲ್ಲಿ ಕನ್ನಡ ಭಾಷಾ ಪ್ರಸಾರವನ್ನು ಮಾಡುವ ಗುರಿಯನ್ನೂ ಇಟ್ಟುಕೊಂಡಿದೆ. ಪರಿಷತ್ತು ಪ್ರಥಮಾ, ಮಧ್ಯಮಾ, ಪ್ರವೇಶ, ಉತ್ತಮ 1, ಉತ್ತಮ 2, ರತ್ನ 1, ರತ್ನ 2 ಮತ್ತು ರತ್ನ 3 ಎಂಬ ಪರೀಕ್ಷೆಗಳನ್ನು ನಡೆಸುತ್ತಿವೆ. ಇವು ಪ್ರಾಥಮಿಕ, ಎಸ್.ಎಸ್.ಎಲ್.ಸಿ., ಪಿ.ಯು.ಸಿ. ಮತ್ತು ಬಿ.ಎ. ಪರೀಕ್ಷೆಗೆ ಸಮನಾಗಿವೆ. ಈ ಸಂಸ್ಥೆಯಿಂದ ಮಾನ್ಯತೆ ಪಡೆದ 3,337 ಹಿಂದೀ ಪಂಡಿತರಿದ್ದಾರೆ. ಇವರಲ್ಲಿ 700 ಪಂಡಿತರು ರಾಜ್ಯದ ವಿದ್ಯಾರ್ಥಿಗಳನ್ನು ಹಿಂದೀ ಪರೀಕ್ಷೆಗಳಿಗೆ ತಯಾರು ಮಾಡುತ್ತಿದ್ದಾರೆ. ಹಿಂದೀ ಪರೀಕ್ಷೆಗಳನ್ನಲ್ಲದೆ ಕನ್ನಡೇತರರಿಗೆ ಕನ್ನಡ ಪರೀಕ್ಷೆಗಳನ್ನೂ 1977ರಿಂದ ನಡೆಸುತ್ತಿದೆ. ಈ ಪರೀಕ್ಷೆಗಳನ್ನು ವರ್ಷಕ್ಕೆರಡು ಸಾರಿ ಫೆಬ್ರವರಿ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ನಡೆಸಲಾಗುತ್ತಿದೆ. ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳನ್ನೂ ಪರಿಷತ್ತು ನಡೆಸುತ್ತಿದೆ. 1981-82ರಲ್ಲಿ ಪರಿಷತ್ತು ನಡೆಸಿದ ವಿವಿಧ ಹಿಂದಿ ಪರೀಕ್ಷೆಗಳಿಗೆ 21,282 ಅಭ್ಯರ್ಥಿಗಳೂ ಮತ್ತು ಕನ್ನಡ ಪರೀಕ್ಷೆಗಳಿಗೆ 2,164 ಅಭ್ಯರ್ಥಿಗಳೂ ಕುಳಿತಿದ್ದರು.

ಕರ್ನಾಟಕ ಮಹಿಳಾ ಹಿಂದೀ ಸೇವಾ ಸಮಿತಿಯು (ಬೆಂಗಳೂರು) 1953ರಲ್ಲಿ ಸ್ಥಾಪಿತವಾಯಿತು. ಈ ಸಮಿತಿಯು ಹಿಂದೀ ಸುಬೋಧ, ಪ್ರಥಮಾ, ಮಧ್ಯಮಾ, ಉತ್ತಮ, ಭಾಷಾ ಭೂಷಣ ಮತ್ತು ಭಾಷಾ ಪ್ರವೀಣ ಎಂಬ ಹಿಂದೀ ಪರೀಕ್ಷೆಗಳನ್ನು ನಡೆಸುತ್ತಿದೆ. ರಾಜ್ಯದಲ್ಲಿ ಈ ಪರೀಕ್ಷೆಗೆ ಅಭ್ಯರ್ಥಿಗಳನ್ನು ತಯಾರು ಮಾಡುವ 600 ಪ್ರಚಾರಕರು ಇದ್ದಾರೆ. 1982ರಲ್ಲಿ ನಡೆದ ವಿವಿಧ ಪರೀಕ್ಷೆಗಳಿಗೆ 600 ಕೇಂದ್ರಗಳಲ್ಲಿ 13,676 ಅಭ್ಯರ್ಥಿಗಳು ಕುಳಿತಿದ್ದರು.

ಬಳ್ಳಾರಿ ಜಿಲ್ಲಾ ಹಿಂದೀ ಪ್ರೇಮಿ ಸಮಿತಿ, ವಿಜಾಪುರದ ಹಿಂದೀ ಪ್ರಚಾರಕ ಸಂಘ, ಮಹಿಳಾ ಸಮಾಜಗಳು ಮುಂತಾದ ಪುಟ್ಟ ಪುಟ್ಟ ಸಂಸ್ಥೆಗಳು ಹಿಂದೀ ಪ್ರಸಾರ ಕಾರ್ಯದಲ್ಲಿ ತೊಡಗಿವೆ. ಬಳ್ಳಾರಿಯ ಸಮಿತಿಯು 1930ರಲ್ಲಿಯೂ ಮತ್ತು ವಿಜಾಪುರದ ಸಂಘವು 1931ರಲ್ಲಿಯೂ ಸ್ಥಾಪಿತವಾದವು.

## ವಾಣಿಜ್ಯ ಶಿಕ್ಷಣ

ಮಹಾರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಮೊಟ್ಟಮೊದಲನೇಯ ವಾಣಿಜ್ಯ ಶಿಕ್ಷಣ ಸಂಸ್ಥೆಯು 1897ರಲ್ಲಿ ಆರಂಭವಾಯಿತು. ಇದು ಅನುದಾನ ಪಡೆಯುತ್ತಿದ್ದ ಖಾಸಗಿ ಸಂಸ್ಥೆ. ಇದರಲ್ಲಿ ಪತ್ರ ವ್ಯವಹಾರ, ಲೆಕ್ಕಪಟ್ಟಿ ಬರೆಯುವುದು ('ಬುಕ್ ಕೀಪಿಂಗ್') ಮತ್ತು ಶೀಘ್ರಲಿಪಿಗಳನ್ನು ಬೋಧಿಸಲಾಗುತ್ತಿತ್ತು. 1901-02ರಲ್ಲಿ ಇವುಗಳ ಜೊತೆಗೆ ವಾಣಿಜ್ಯ ಭೂಗೋಳ ಮತ್ತು ಬ್ಯಾಂಕಿಂಗ್ ವಿಷಯಗಳು ಸೇರಿದವು. 1906ರಲ್ಲಿ ಹಾರ್ಡ್‌ವಿಕ್ ಮಿಷನ್ ವಾಣಿಜ್ಯ ಶಾಲೆಯು ಮೈಸೂರಿನಲ್ಲಿ ಆರಂಭವಾಯಿತು. 1913ರಲ್ಲಿ ಬೆಂಗಳೂರಿನಲ್ಲಿ ಮತ್ತು ಮೈಸೂರಿನಲ್ಲಿ ತಲಾ ಒಂದೊಂದು ಸರ್ಕಾರಿ ವಾಣಿಜ್ಯ ಶಾಲೆಗಳು ಆರಂಭವಾದವು. ಈ ಶಾಲೆಗಳಲ್ಲಿ ಬ್ಯಾಂಕಿಂಗ್ ಮತ್ತು ನಾಣ್ಯ ಚಲಾವಣೆ ಶಾಸ್ತ್ರ ('ಕರೆನ್ಸಿ'), ಲೆಕ್ಕ ಬರೆಯುವುದು, ಮತ್ತು ಲೆಕ್ಕಶಾಸ್ತ್ರ, ('ಎಕೌಂಟೆನ್ಸಿ') ವಾಣಿಜ್ಯ ಪತ್ರ ವ್ಯವಹಾರ, ಕಚೇರಿಗಳ ವ್ಯವಹಾರ, ಶೀಘ್ರಲಿಪಿ, ಬೆರಳಚ್ಚು ಮಾಡುವುದು, ರಾಜ್ಯ ಅರ್ಥಶಾಸ್ತ್ರ, ಮರಾಠಿ ಮತ್ತು ಕನ್ನಡ ಈ ವಿಷಯಗಳನ್ನು ಬೋಧಿಸಲಾಗುತ್ತಿತ್ತು. ಬೆಂಗಳೂರಿನಲ್ಲಿ ಕನ್ನಡದಲ್ಲಿ ತರಗತಿಯು ಆರಂಭವಾಯಿತು. ಮುಂದಿನ ಹೆಜ್ಜೆಯೆಂದರೆ, ಪ್ರೌಢಶಾಲೆಗಳಲ್ಲಿ ವಾಣಿಜ್ಯ ಶಿಕ್ಷಣ ತರಗತಿಗಳನ್ನು ತೆರೆಯುವುದು. ವಾಣಿಜ್ಯ ಮತ್ತು ಬ್ಯಾಂಕಿಂಗ್ ಸಂಬಂಧಪಟ್ಟ ವಿಸ್ತರಣಾ ಉಪನ್ಯಾಸಗಳೂ ಇದೇ ಸಮಯದಲ್ಲಿ ಅರಂಭವಾದವು. ಆ ಕಾಲದಲ್ಲಿ ಬಹುಸಂಖ್ಯೆಯ ವ್ಯಾಪಾರಸ್ಥರು ಕನ್ನಡದಲ್ಲಿ ವ್ಯವಹಾರ ಮಾಡುತ್ತಿರಲಿಲ್ಲ. ಈ ಭಾಷೆಯಲ್ಲಿ ಲೆಕ್ಕವನ್ನು ಬರೆಯುತ್ತಿರಲಿಲ್ಲ. ಆದುದರಿಂದ 1921-22ರಲ್ಲಿ ಕನ್ನಡ ತರಗತಿಗಳೂ ಮತ್ತು ವಿಸ್ತರಣಾ ಉಪನ್ಯಾಸಗಳೂ ರದ್ದಾದವು. 1921-22ರಲ್ಲಿ ಮೂರು ವಾಣಿಜ್ಯ ಶಿಕ್ಷಣ ಸಂಸ್ಥೆಗಳಿದ್ದವು. ಆ ವರ್ಷ ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 185. ಆದರೆ ಅದರ ಹಿಂದಿನ ವರ್ಷ 332 ವಿದ್ಯಾರ್ಥಿಗಳಿದ್ದರು.

ಈ ಶಾಲೆಗಳು ಮತ್ತು ಅವುಗಳಲ್ಲಿ ಕಲಿಸುತ್ತಿರುವ ವಿಷಯಗಳು ಮುಖ್ಯವಾಗಿ ಸರ್ಕಾರಿ ಕಛೇರಿಗಳಲ್ಲಿ ಮತ್ತು ವಾಣಿಜ್ಯ ಸಂಸ್ಥೆಗಳಲ್ಲಿ ಕೆಲಸ ಮಾಡುವ ಕಿರಿಯ ಗುಮಾಸ್ತರಿಗೆ ಒಳ್ಳೆಯ ತರಬೇತಿ ವಿಷಯವಾಗಿದ್ದವು. ಬೆಂಗಳೂರಿನ ವಾಣಿಜ್ಯ ಶಾಲೆಯು 1930ರಲ್ಲಿ ವಾಣಿಜ್ಯ ಶಿಕ್ಷಣದ ಕೇಂದ್ರ ಸಂಸ್ಥೆಯಾಗಿ ಪರಿವರ್ತಿತವಾಯಿತು. ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ (ಮೈಸೂರು) 1913ರಲ್ಲಿ ಆರಂಭವಾಗಿದ್ದ ವಾಣಿಜ್ಯ ಶಿಕ್ಷಣ ತರಗತಿಯು ರದ್ದಾಯಿತು. ವಾಣಿಜ್ಯ ಶಿಕ್ಷಣವನ್ನು ಅಭಿವೃದ್ಧಿಗೊಳಿಸುವ ಕಾರ್ಯವನ್ನು ಖಾಸಗೀ ಸಂಸ್ಥೆಗಳಿಗೆ ಬಿಡಲಾಯಿತು. ಇದರ ಫಲವಾಗಿ ಅನೇಕ ಮಾನ್ಯತೆ ಪಡೆದ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಮೈಸೂರು ವಿಶ್ವವಿದ್ಯಾಲಯವು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಎಲ್. ಕಾಂ. ತರಗತಿಯನ್ನು ತೆರೆಯಿತು. ಇದರಿಂದ ಸರ್ಕಾರಿ ವಾಣಿಜ್ಯ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಯಿತು. ಇದರ ಪರಿಣಾಮವಾಗಿ ಆ ಶಾಲೆಯನ್ನು 1941-42ರಲ್ಲಿ ಮುಚ್ಚಬೇಕಾಯಿತು. ಈ ಡಿಪ್ಲೋಮಾ ತರಗತಿಯು ಕೆಲವು ವರ್ಷಗಳ ನಂತರ ರದ್ದಾಯಿತು. ಅದರ ಬದಲಾಗಿ ಬಿ. ಕಾಂ. ಡಿಗ್ರಿಯು ಅಸ್ತಿತ್ವಕ್ಕೆ ಬಂತು. ಹಿಂದೆ ಈ ಕೋರ್ಸು ಮಹಾರಾಜಾ ಕಾಲೇಜಿನಲ್ಲಿ ಅಸ್ತಿತ್ವದಲ್ಲಿತ್ತು. ಆಮೇಲೆ ಅದು ರದ್ದಾಗಿತ್ತು. ಬೆಂಗಳೂರಿನ ಬಿ. ಕಾಂ. ತರಗತಿಯಿಂದ ಮೈಸೂರು ಮಹಾರಾಜಾ ಕಾಲೇಜಿನಲ್ಲಿದ್ದ ಬಿ.ಕಾಂ. ತರಗತಿಯು ಪುನರುಜ್ಜೀವನ ಹೊಂದಿದಂತಾಯಿತು. 1941ರಲ್ಲಿ ವಾಣಿಜ್ಯ ಶಾಲೆಗಳ ತನಿಖಾಧಿಕಾರಿಯ ಹುದ್ದೆಯೊಂದನ್ನು ಮಂಜೂರು ಮಾಡಲಾಯಿತು. ಇದು ಶಿಕ್ಷಣ ನಿರ್ದೇಶನಾಲಯದಲ್ಲೇ ಇತ್ತು. ಈ ಅಧಿಕಾರಿಯು ವಾಣಿಜ್ಯ ಪರೀಕ್ಷೆಗಳ ಮಂಡಲಿಯ ಕಾರ್ಯದರ್ಶಿಯೂ ಆಗಿದ್ದರು. 1955-56ರಲ್ಲಿ ವಾಣಿಜ್ಯ ಶಿಕ್ಷಣವು 41 ಪ್ರೌಢಶಾಲೆಗಳಲ್ಲಿ ನಡೆಯುತ್ತಿತ್ತು. ಇವುಗಳಲ್ಲಿ 1,985 ವಿದ್ಯಾರ್ಥಿಗಳು ಓದುತ್ತಿದ್ದರು. ಉನ್ನತ ಶಿಕ್ಷಣವನ್ನು ಕೊಡುವ ಎರಡು ವಾಣಿಜ್ಯ ಕಾಲೇಜುಗಳಿದ್ದವು. ಜೊತೆಗೆ ಕೆಲವು ವಿಜ್ಞಾನ ಮತ್ತು ಕಲಾಕಾಲೇಜುಗಳಲ್ಲಿ ವಾಣಿಜ್ಯಕ್ಕೆ ಸಂಬಂಧಿಸಿದ ವಿಷಯಗಳ ಬೋಧನೆಯ ವ್ಯವಸ್ಥೆ ಇತ್ತು. ಆ ವರ್ಷ, ಖಾಸಗಿ ವಾಣಿಜ್ಯ ಶಾಲೆಗಳ ಸಂಖ್ಯೆಯು 72ಕ್ಕೆ ಏರಿತು. ಇವುಗಳ ಪೈಕಿ 25 ಅನುದಾನ ಪಡೆಯುತ್ತಿದ್ದ ಸಂಸ್ಥೆಗಳೂ 47 ಅನುದಾನ ಪಡೆಯದ ಸಂಸ್ಥೆಗಳೂ ಆಗಿದ್ದವು. ಈ 72 ಸಂಸ್ಥೆಗಳಲ್ಲಿ ಒಟ್ಟು 7,087 ವಿದ್ಯಾರ್ಥಿಗಳೂ 763 ವಿದ್ಯಾರ್ಥಿನಿಯರೂ ಇದ್ದರು. ಪ್ರೊಫೀಷಿಯನ್ಸಿ, ಸೀನಿಯರ್ ಮತ್ತು ಜೂನಿಯರ್ ಎಂಬ ಮೂರು ದರ್ಜೆಯ ಪರೀಕ್ಷೆಗಳು ನಡೆಯುತ್ತಿದ್ದವು. ರಾಜ್ಯದ ಬೆಳಗಾವಿ ಪ್ರದೇಶದಲ್ಲಿ, ರಾಜ್ಯ ಪುನರ್ಘಟನೆಯ ಸಮಯದಲ್ಲಿ ಹತ್ತು ವಾಣಿಜ್ಯ ಶಾಲೆಗಳಿದ್ದವು. ದಕ್ಷಿಣ ಕನ್ನಡ ಜಿಲ್ಲೆಯ ನಗರ ಪ್ರದೇಶಗಳಲ್ಲಿ ಬೆರಳಚ್ಚು ಮತ್ತು ಶೀಘ್ರಲಿಪಿಗಳಲ್ಲಿ ಶಿಕ್ಷಣವನ್ನು ಕೊಡುತ್ತಿದ್ದ ಅನೇಕ ಸಂಸ್ಥೆಗಳಿದ್ದವು. ಜೊತೆಗೆ ವಿದ್ಯಾರ್ಥಿಗಳಿಗೆ ವಾಣಿಜ್ಯ ಶಿಕ್ಷಣವನ್ನು ಕೊಡುತ್ತಿದ್ದ ಕೆಲವು ಪ್ರೌಢಶಾಲೆಗಳಿದ್ದವು. 1956ಕ್ಕೆ ಹಿಂದೆ, ಕೊಡಗು ಮತ್ತು ಕಲ್ಬುರ್ಗಿ ಪ್ರದೇಶಗಳಲ್ಲಿ ಯಾವ ವಾಣಿಜ್ಯ ಶಿಕ್ಷಣ ಸಂಸ್ಥೆಯೂ ಇರಲಿಲ್ಲ.

ರಾಜ್ಯದ ವಿವಿಧ ಭಾಗಗಳಲ್ಲಿ ನಡೆಯುತ್ತಿದ್ದ ವಾಣಿಜ್ಯ ಶಿಕ್ಷಣದ ಪಠ್ಯ ಕ್ರಮ ಮತ್ತು ಪರೀಕ್ಷೆಗಳು ಬೇರೆ ಬೇರೆಯಾಗಿದ್ದುದರಿಂದ, ಎಲ್ಲ ಭಾಗಗಳಲ್ಲಿಯೂ ಒಂದೇ ವಿಧವಾದ ಶಿಕ್ಷಣವನ್ನೂ ಒಂದೇ ವಿಧವಾದ ಪರೀಕ್ಷೆಯನ್ನೂ ಜಾರಿಗೆ ತರಬೇಕಾಯಿತು. 1959-60 ರಲ್ಲಿ, ರಾಜ್ಯದ ಎಲ್ಲ ವಾಣಿಜ್ಯ ಶಾಲೆಗಳಲ್ಲಿಯೂ ಒಂದೇ ಪಠ್ಯಕ್ರಮವನ್ನು ಆಚರಣೆಗೆ ತರಲಾಯಿತು. ಸಾರ್ವಜನಿಕ ಶಿಕ್ಷಣ ನಿರ್ದೇಶಕರನ್ನು ಅಧ್ಯಕ್ಷರಾಗುಳ್ಳ ಮತ್ತು ಅಧಿಕಾರಿ ಮತ್ತು ಖಾಸಗೀ ಸದಸ್ಯರನ್ನು ಒಳಗೊಂಡಿದ್ದ ವಾಣಿಜ್ಯ ಶಿಕ್ಷಣ ಮಂಡಲಿಯು ವರ್ಷದಲ್ಲಿ ಎರಡು ಸಾರಿ ಪರೀಕ್ಷೆಗಳನ್ನು ನಡೆಸು

ತ್ತಿದೆ. 1964-65 ರಲ್ಲಿ, ವಾಣಿಜ್ಯ ಪರೀಕ್ಷೆಗಳನ್ನು ನಿರ್ದೇಶನಾಲಯದ ಅಧೀನದಲ್ಲಿದ್ದ ಪರೀಕ್ಷಾ ವಿಭಾಗಕ್ಕೆ ವರ್ಗಾಯಿಸಲಾಯಿತು. 1956-57 ರಲ್ಲಿ, ರಾಜ್ಯದಲ್ಲಿ 96 ವಾಣಿಜ್ಯ ಶಿಕ್ಷಣ ಸಂಸ್ಥೆಗಳಿದ್ದವು. ಇವುಗಳಲ್ಲಿ ಒಟ್ಟು 11,360 ವಿದ್ಯಾರ್ಥಿಗಳಿದ್ದರು. 1968-69 ರ ಹೊತ್ತಿಗೆ ಸಂಸ್ಥೆಗಳ ಸಂಖ್ಯೆ 286 ಕ್ಕೆ—ಅಂದರೆ 12 ವರ್ಷಗಳಲ್ಲಿ ಶೇಕಡ 198 ರಷ್ಟು ಏರಿತು. 1966 ರಿಂದ, ಇಂಗ್ಲಿಷ್ ಬೆರಳಚ್ಚು ಮತ್ತು ಶೀಘ್ರಲಿಪಿಯನ್ನು ಕಲಿಯುತ್ತಿದ್ದ ವಿದ್ಯಾರ್ಥಿಗೆ ಮೂರು ರೂಪಾಯಿಯಂತೆಯೂ ಮತ್ತು ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿಗಳನ್ನು ಕಲಿಯುತ್ತಿದ್ದ ವಿದ್ಯಾರ್ಥಿಗೆ ಐದು ರೂಪಾಯಿಯಂತೆಯೂ ವಾರ್ಷಿಕ ಅನುದಾನವನ್ನು ವಾಣಿಜ್ಯ ಶಿಕ್ಷಣ ಸಂಸ್ಥೆಗಳು ಪಡೆಯುತ್ತಿದ್ದವು. ಆದರೆ ಈ ಅನುದಾನವು ಕೆಲ ಕಾಲದ ನಂತರ ರದ್ದಾಯಿತು. 1981-82 ರಲ್ಲಿ, ರಾಜ್ಯದಲ್ಲಿ 814 ವಾಣಿಜ್ಯ ಶಿಕ್ಷಣ ಸಂಸ್ಥೆಗಳಿದ್ದವು. (ಇವುಗಳ ಪೈಕಿ, ಧಾರವಾಡದಲ್ಲಿದ್ದ ವಾಣಿಜ್ಯ ಶಾಲೆಯೊಂದು ಸರ್ಕಾರಿ ಸಂಸ್ಥೆಯಾಗಿತ್ತು. ಇದು 1956-57 ರಲ್ಲಿ ಅಸ್ತಿತ್ವಕ್ಕೆ ಬಂದಿತು). ಸಮಾಜ ಕಲ್ಯಾಣ ಇಲಾಖೆಯು ಪರಿಶಿಷ್ಟ ವರ್ಗ ಮತ್ತು ಬುಡಕಟ್ಟುಗಳಿಗೆ ಸೇರಿದ 200 ವಿದ್ಯಾರ್ಥಿಗಳಿಗೆ ಕನ್ನಡ ಮತ್ತು ಇಂಗ್ಲಿಷ್ ಬೆರಳಚ್ಚು ಮತ್ತು ಶೀಘ್ರಲಿಪಿಯಲ್ಲಿ ತರಬೇತು ಪಡೆಯಲು ದ್ರವ್ಯ ಸಹಾಯವನ್ನು ಮಾಡುತ್ತಿತ್ತು. ವಾಣಿಜ್ಯ ಶಿಕ್ಷಣ ಸಂಸ್ಥೆಗಳು ಕನ್ನಡ ಬೆರಳಚ್ಚಿನಲ್ಲಿ ತರಬೇತಿ ಕೊಡುವುದನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಕನ್ನಡ ಬೆರಳಚ್ಚು ಯಂತ್ರಗಳನ್ನು ಕೊಳ್ಳಲು ಪ್ರೋತ್ಸಾಹ ಧನವನ್ನು ಕೊಡುವ ಯೋಜನೆಯು 1971-72 ರಿಂದ ಆರಂಭವಾಯಿತು. ಕನ್ನಡ ಶೀಘ್ರಲಿಪಿಯಲ್ಲಿ ತರಬೇತಿ ಕೊಡುವ ವಾಣಿಜ್ಯ ಶಿಕ್ಷಣ ಸಂಸ್ಥೆಗಳಿಗೆ ಶೀಘ್ರಲಿಪಿಯಲ್ಲಿ ಉತ್ತೀರ್ಣನಾದ ಪ್ರತೀಯೊಬ್ಬ ವಿದ್ಯಾರ್ಥಿಗೂ 250 ರೂ. ನಂತೆ ದ್ರವ್ಯ ಸಹಾಯವು ದೊರೆಯುತ್ತಿತ್ತು. ಈ ಯೋಜನೆಯಲ್ಲಿ ವಾಣಿಜ್ಯ ಶಾಲೆಯು ಪಡೆಯುವ ಗರಿಷ್ಠ ಧನ ಸಹಾಯವು ವರ್ಷಕ್ಕೆ 1,000 ರೂ ಆಗಿತ್ತು. ಆ ವರ್ಷ 37 ಸಂಸ್ಥೆಗಳಲ್ಲಿ ಕಲಿಯುತ್ತಿದ್ದ 275 ವಿದ್ಯಾರ್ಥಿಗಳಿಗೆ ಈ ದ್ರವ್ಯ ಸಹಾಯ ದೊರೆಯಿತು. ಇದಕ್ಕಾದ ಒಟ್ಟು ವೆಚ್ಚ 30,756 ರೂ.

1956-57 ರಲ್ಲಿ, ಇಡೀ ಕರ್ನಾಟಕ ರಾಜ್ಯದಲ್ಲಿ ವಿಶ್ವವಿದ್ಯಾಲಯದ ಮಟ್ಟದಲ್ಲಿ ವಾಣಿಜ್ಯ ಶಿಕ್ಷಣವನ್ನು ನೀಡುತ್ತಿದ್ದ ಕಾಲೇಜುಗಳ ಸಂಖ್ಯೆ ಕೇವಲ ಆರು ಆಗಿತ್ತು. 1979-80 ರಲ್ಲಿ ಇಂಥ ಕಾಲೇಜುಗಳು 30 ಇದ್ದವು. ಇವುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ 27,710. ಇವರಲ್ಲಿ 1,233 ವಿದ್ಯಾರ್ಥಿಗಳು ಪರಿಶಿಷ್ಟ ವರ್ಗಗಳಿಗೂ ಮತ್ತು 127 ಪರಿಶಿಷ್ಟ ಬುಡಕಟ್ಟುಗಳಿಗೂ ಸೇರಿದ್ದರು. ಇವಲ್ಲದೆ, ಭಾರತೀಯ ವಿದ್ಯಾಭವನದ ಬೆಂಗಳೂರು ಶಾಖೆ, ಐ.ಸಿ.ಎ. ಸಂಸ್ಥೆಗಳು, ಡೇಟಾಮ್ಯಾಟಿಕ್ಸ್ ಕಾರ್ಪೊರೇಷನ್, ದಾವರ್ಸ್ ಕಾಲೇಜು (ಇವೆಲ್ಲವೂ ಬೆಂಗಳೂರಿನಲ್ಲಿವೆ), ಮುಂಬೈಯ ಬ್ರಿಟಿಷ್ ಇನ್‌ಸ್ಟಿಟ್ಯೂಟ್, ವಾಣಿಜ್ಯ ಶಿಕ್ಷಣದ ವಿವಿಧ ಭಾಗಗಳಲ್ಲಿ ಶಿಕ್ಷಣ ಪಡೆಯಲು ಅನುಕೂಲಗಳನ್ನೊದಗಿಸಿವೆ.

### ಕೃಷಿ ಶಿಕ್ಷಣ

ಮಹಾರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಕೃಷಿ ಶಿಕ್ಷಣವನ್ನು ನೀಡಲು ಹೆಬ್ಬಾಳಿನಲ್ಲಿ 1913ರಲ್ಲಿ ಹೆಬ್ಬಾಳ ಕೃಷಿ ಶಾಲೆಯು ಆರಂಭವಾಯಿತು. ರಾಜ್ಯದಲ್ಲಿ ಇದು ಕೃಷಿ ಶಿಕ್ಷಣದ ಪ್ರಥಮ ಶಾಲೆ. ಇದರ ಉದ್ದೇಶ ವೈಜ್ಞಾನಿಕ ಕೃಷಿಯನ್ನು ಬೇಸಾಯಗಾರರಿಗೆ ತಿಳಿಸುವುದೇ ಆಗಿತ್ತು. ಚಿಕ್ಕನಹಳ್ಳಿಯ ಶ್ರೀ ಕೃಷ್ಣರಾಜೇಂದ್ರ ವ್ಯವಸಾಯ ಧರ್ಮಪಾಠಶಾಲೆಯು 1916ರಲ್ಲಿ ಆರಂಭವಾಯಿತು. 1930ರಲ್ಲಿ ಮತ್ತೆರಡು ಶಾಲೆಗಳು ಆರಂಭವಾದವು. ಇವುಗಳಲ್ಲಿ ಒಂದು ಆನೇಕಲ್ಲಿನ ಹತ್ತಿರದ ರಾಮಕೃಷ್ಣಾಪುರದಲ್ಲಿಯೂ ಮತ್ತೊಂದು ಹಾಸನದಲ್ಲಿಯೂ ಇತ್ತು. ಇವೆರಡರಲ್ಲಿ ಶಿಕ್ಷಣದ ಅವಧಿಯು ಒಂದು ವರ್ಷ ಆಗಿತ್ತು. ಹೆಬ್ಬಾಳದ ಕೃಷಿ ಶಾಲೆಯಲ್ಲಿ ಶಿಕ್ಷಣದ ಅವಧಿ ಮೂರು ವರ್ಷ. ಈ ಶಾಲೆಯಲ್ಲಿ ಶಿಕ್ಷಣ ಮುಗಿದ ನಂತರ ಡಿಪ್ಲೋಮ ಸಿಗುತ್ತಿತ್ತು. 1956ರಲ್ಲಿ, ಒಂದು ವರ್ಷದ ಶಿಕ್ಷಣ ನೀಡುತ್ತಿದ್ದ (ಇದರಲ್ಲಿ ಹೆಬ್ಬಾಳ ಶಾಲೆಯು ಸೇರಿರಲಿಲ್ಲ.) ಐದು ಕೃಷಿ ಶಾಲೆಗಳಿದ್ದವು. 1956-57ರಲ್ಲಿ ಮತ್ತೆರಡು ಶಾಲೆಗಳನ್ನು ತೆರೆಯಲಾಯಿತು. ಅಂದರೆ, ಆಗ ಇದ್ದ ಒಂದು ವರ್ಷ ಅವಧಿಯ ಶಾಲೆಗಳ ಸಂಖ್ಯೆ ಏಳು. ಆ ವರ್ಷ ಇವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 497. 1946ರಲ್ಲಿ ಹೆಬ್ಬಾಳದಲ್ಲಿ ಕೃಷಿ ಕಾಲೇಜು ಆರಂಭವಾಯಿತು. ಇದು ಮೈಸೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಅಂಗಸಂಸ್ಥೆಯಾಗಿತ್ತು. ಇದರಲ್ಲಿ ಶಿಕ್ಷಣದ ಅವಧಿ ಮೂರು ವರ್ಷ. ಶಿಕ್ಷಣ ಮುಗಿದ ಮೇಲೆ ಬಿ.ಎಸ್ಸಿ.(ಎಜಿ) ಡಿಗ್ರಿಯು ಸಿಗುತ್ತಿತ್ತು.

ಬೆಳಗಾವಿ ಪ್ರದೇಶದಲ್ಲಿ, 1879ರಲ್ಲಿ ಬೆಳಗಾವಿ ನಗರದ ಸರ್ದಾರ ಹೈಸ್ಕೂಲಿನಲ್ಲಿ ಒಂದು ಕೃಷಿ ತರಗತಿಯನ್ನು ತೆರೆಯಲಾಯಿತು. ಇದರ ಉದ್ದೇಶ, ಬೇಸಾಯ ಕಸಬಿನಲ್ಲಿ ಶಿಕ್ಷಣವನ್ನು ಕೊಡುವುದು. ಅದೇ ವರ್ಷ ಪುಣೆಯಲ್ಲಿ ಕೃಷಿ ಕಾಲೇಜು ಆರಂಭವಾಯಿತು. ಮುಂಬೈ ಪ್ರಾಂತ್ಯದ ವಿದ್ಯಾರ್ಥಿಗಳಿಗೆ ಕೃಷಿ ಶಿಕ್ಷಣವನ್ನು ಕೊಡುವುದೇ ಈ ಕಾಲೇಜಿನ ಉದ್ದೇಶವಾಗಿತ್ತು. ಬೆಳಗಾವಿ ಶಾಲೆಗೆ ಸೇರಿದ್ದ ವ್ಯವಸಾಯದ ಜಮೀನನ್ನು 1890-91ರಲ್ಲಿ ಅಂತಿಮವಾಗಿ ಸ್ಥಳೀಯ ಸಂಸ್ಥೆ ಮಂಡಲಿಗೆ ವಹಿಸಲಾಯಿತು. ಕೆಲ ಕಾಲಾನಂತರ ಪ್ರೌಢಶಾಲೆಗಳಲ್ಲಿ ಕೃಷಿ ಶಿಕ್ಷಣವನ್ನು ಆರಂಭಿಸಲಾಯಿತು. 1938-39ರಲ್ಲಿ ಅಂತಹ ಮೂರು ಪ್ರೌಢಶಾಲೆಗಳಿದ್ದವು. ಇವುಗಳಲ್ಲಿ ವಿಜಾಪುರ ಪ್ರೌಢಶಾಲೆಯು ಒಂದು. 1939-40ರಲ್ಲಿ ಕೃಷಿ ಶಾಸ್ತ್ರ

ಬೋಧನೆಯನ್ನು ಕೆಲವು ಆಯ್ದ ಪ್ರಾಥಮಿಕ ಶಾಲೆಗಳಲ್ಲಿ ಆರಂಭಿಸಲಾಯಿತು. ಧಾರವಾಡ ಜಿಲ್ಲೆಯ ದೇವೀಹೊಸೂರಿನಲ್ಲಿ ಈ ಶಾಲೆಗಳ ಬೋಧಕರಿಗೆ ತರಬೇತಿ ದೊರೆಯುತ್ತಿತ್ತು. ಧಾರವಾಡದಲ್ಲಿ 1947ರಲ್ಲಿ ಒಂದು ಕೃಷಿ ಕಾಲೇಜನ್ನು ಸ್ಥಾಪಿಸ ಲಾಯಿತು.

ಕರ್ನಾಟಕ ಏಕೀಕರಣದ ಸಮಯದಲ್ಲಿ ಎಂಟು ಕೃಷಿ ಶಾಲೆಗಳಿದ್ದವು. ಇಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 497. 1958-59ರಲ್ಲಿ, ಹೆಬ್ಬಾಳದ ಕೃಷಿ ಶಾಲೆಯನ್ನು ಮುಚ್ಚ ಲಾಯಿತು. ಉಳಿದ ಶಾಲೆಗಳನ್ನು ಪುನರ್ವ್ಯವಸ್ಥೆಗೊಳಿಸ ಲಾಯಿತು. ಇದರ ಫಲವಾಗಿ ಕೆಲವು ಶಾಲೆಗಳು ಇನ್ನುಳಿದ ಶಾಲೆಗಳಲ್ಲಿ ಅಂತರ್ಗತವಾದವು. 1979-80ರಲ್ಲಿ 13 ಕೃಷಿ ಪಾಠಶಾಲೆಗಳಿದ್ದವು. ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 495.

## ಕೃಷಿ ವಿಶ್ವವಿದ್ಯಾಲಯ

1964-65ರಲ್ಲಿ ಬೆಂಗಳೂರಿನಲ್ಲಿ ಕೃಷಿ ವಿಜ್ಞಾನ ವಿಶ್ವ ವಿದ್ಯಾಲಯವು ಅಸ್ತಿತ್ವಕ್ಕೆ ಬಂದಿತು. ವಿಶ್ವವಿದ್ಯಾಲಯವನ್ನು ಆರಂಭಿಸುವಾಗ, ರಾಜ್ಯದಲ್ಲಿ ಎರಡು ಕೃಷಿ ಕಾಲೇಜುಗಳಿದ್ದವು. ಒಂದು ಕಾಲೇಜು ಧಾರವಾಡದಲ್ಲಿಯೂ ಮತ್ತೊಂದು ಕಾಲೇಜು ಬೆಂಗಳೂರಿನಲ್ಲಿಯೂ ಇತ್ತು. ಇವಲ್ಲದೆ ಪಶುವೈದ್ಯ ಕಾಲೇಜು ಬೆಂಗಳೂರಿನಲ್ಲಿ 1958-59ರಲ್ಲಿ ಸ್ಥಾಪಿತವಾಯಿತು. ಕೃಷಿ ವಿಜ್ಞಾನದ ವಿವಿಧ ಶಾಖೆಗಳು ಮತ್ತು ಅದಕ್ಕೆ ಸಂಬಂಧಿಸಿದ ಶಾಸ್ತ್ರಗಳ ಬೋಧನೆಗೆ ಅನುಕೂಲ ಮಾಡಿಕೊಡುವುದು, ಅವುಗಳ ಅಧ್ಯಯನವನ್ನು ಉತ್ತಮಪಡಿಸುವುದು, ವಿಶೇಷವಾಗಿ ಕೃಷಿಶಾಸ್ತ್ರ ಮತ್ತು ಸಂಬಂಧಿಸಿದ ಶಾಸ್ತ್ರಗಳಲ್ಲಿ ಸಂಶೋಧನೆಗೆ ಅನುಕೂಲ ಮಾಡಿಕೊಡುವುದು, ಮತ್ತು ಗ್ರಾಮಾಂತರ ಜನರಿಗೆ ಕೃಷಿ ಮತ್ತು ಸೋದರ ಶಾಸ್ತ್ರಗಳ ತಿಳುವಳಿಕೆಯನ್ನು ಮಾಡಿಕೊಡುವುದು, ಈ ವಿಶ್ವವಿದ್ಯಾಲಯದ ಗುರಿಗಳಾಗಿವೆ. ವಿಶ್ವವಿದ್ಯಾಲಯದ ವಿವಿಧ ಕಾರ್ಯಾಂಗಗಳು ಈ ರೀತಿ ಇವೆ: ಕುಲಪತಿ, ಯುವ ಕುಲಪತಿ ('ಪ್ರೊಚಾನ್ಸಲರ್'), ಉಪ ಕುಲಪತಿ ನಿಯೋಜಿತ ಮಂಡಲಿ (ರೀಜಂಟರ ಮಂಡಲಿ), ವಿದ್ವತ್ ಮಂಡಲಿ ('ಅಕ್ಯಾಡಮಿಕ್ ಕೌನ್ಸಿಲ್'), ಅಧ್ಯಯನ ವಿಷಯಗಳ ಮಂಡಲಿ ('ಬೋರ್ಡ್ ಆಫ್ ಸ್ಟಡೀಸ್'), ಡೀನರು, ಸಂಶೋಧನೆ, ಮೂಲ ವಿಜ್ಞಾನ ಶಾಸ್ತ್ರಗಳ ಮತ್ತು ಮಾನವಶಾಸ್ತ್ರಗಳ ವಿಸ್ತರಣಾ ಕಾರ್ಯದ ನಿರ್ದೇಶಕರು, ಪಶುವೈದ್ಯಶಾಸ್ತ್ರ, ಕೃಷಿವಿಜ್ಞಾನ, ಮತ್ಸ್ಯ ಶಾಸ್ತ್ರ, ಗೃಹವಿಜ್ಞಾನ ಮತ್ತು ಸ್ನಾತಕೋತ್ತರ ಶಿಕ್ಷಣ ವಿಭಾಗಗಳ ನಿರ್ದೇಶಕರುಗಳು.

ವಿಶ್ವವಿದ್ಯಾಲಯವು ಅಸ್ತಿತ್ವಕ್ಕೆ ಬಂದ ಸಮಯದಲ್ಲಿ, ಕೃಷಿ ವಿಜ್ಞಾನ ಮತ್ತು ಪಶುವೈದ್ಯಶಾಸ್ತ್ರಗಳಲ್ಲಿ ಮಾತ್ರ ಪದವಿ ತರಗತಿಗಳಿದ್ದವು. ಈಗ ಮತ್ಸ್ಯಶಾಸ್ತ್ರ, ತೋಟಗಾರಿಕೆ, ಗ್ರಾಮೀಣ ಗೃಹವಿಜ್ಞಾನ, ವ್ಯವಸಾಯೋತ್ಪನ್ನ ವಿಕ್ರಯ, ಸಹಕಾರ ಶಾಸ್ತ್ರ, ಮತ್ತು ಕ್ಷೀರಶಾಸ್ತ್ರಗಳಲ್ಲಿ ಪದವಿ ತರಗತಿಗಳನ್ನು ಆರಂಭಿಸಲಾಗಿದೆ. ಜೊತೆಗೆ ಕೃಷಿ ಇಂಜಿನಿಯರಿಂಗ್‌ನಲ್ಲಿ ಡಿಪ್ಲೋಮಾ ತರಗತಿಗಳನ್ನು ತೆರೆಯಲಾಗಿದೆ. ಇಷ್ಟಲ್ಲದೆ ಸಸ್ಯವಿಜ್ಞಾನ, ಪಶುವೈದ್ಯವಿಜ್ಞಾನ, ಮತ್ಸ್ಯವಿಜ್ಞಾನ ಮತ್ತು ಸಾಮಾಜಿಕ ವಿಜ್ಞಾನಗಳ ವಿವಿಧ ಸ್ನಾತಕೋತ್ತರ ಕೋರ್ಸುಗಳನ್ನು ತೆರೆಯಲಾಗಿದೆ. ಇವುಗಳ ಡಾಕ್ಟರೇಟ್ ಡಿಗ್ರಿಗಳಿಗೆ ಅನುಕೂಲವಾಗುವ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಬೆಳೆ ಮತ್ತು ಕುಕ್ಕುಟ ವಿಜ್ಞಾನಗಳಿಗೆ ಸಂಬಂಧಿಸಿದ ಸ್ನಾತಕೋತ್ತರ ಡಿಪ್ಲೋಮಾ ತರಗತಿಗಳನ್ನು ಆರಂಭಿಸಲಾಗಿದೆ. ಬೋಧನ ವಿಧಾನಗಳನ್ನು ಸುಧಾರಿಸಿ ಅವನ್ನು ಕಾರ್ಯರೂಪಕ್ಕೆ ತರುವುದಕ್ಕೂ ಮತ್ತು ಸಾಧಾರಣ ಜನರಿಗೆ ವಿಶೇಷ ರೀತಿಯ ತಾಂತ್ರಿಕ ಜ್ಞಾನವನ್ನು ನೀಡುವುದಕ್ಕೂ ಕೃಷಿ ವಿಶ್ವವಿದ್ಯಾಲಯವು ಅನೇಕ ರೀತಿಯ ತರಬೇತಿ ಕಾರ್ಯಕ್ರಮ ಗಳನ್ನಿಟ್ಟುಕೊಂಡಿದೆ. 1968ರಲ್ಲಿ ಜನರು ಸ್ವಾವಲಂಬಿಗಳಾಗು ವುದಕ್ಕೆ ಸಹಾಯಕವಾದ ಬ್ರೆಡ್ ಮಾಡುವುದಕ್ಕೆ ಬೇಕಾದ ತರಬೇತಿಯನ್ನು ವ್ಯವಸ್ಥೆ ಮಾಡಿತು. ಈ ಕಾರ್ಯಕ್ರಮದ ಒಟ್ಟು ಅವಧಿ 20 ವಾರಗಳು. ಗೃಹಿಣಿಯರಿಗೆ ಕೊಡುತ್ತಿರುವ ಮೂರರಿಂದ ಐದು ದಿನಗಳ ಬ್ರೆಡ್-ಬಿಸ್ಕತ್ ತಯಾರಿಕೆಯ ತರಬೇತಿಯು ತುಂಬ ಜನಪ್ರಿಯವಾಗಿದೆ. ಕೃಷಿ ವಿಶ್ವವಿದ್ಯಾಲಯವು ಬೇಸಾಯಗಾರರಿಗೆ ಅವರ ಸ್ತ್ರೀಯರಿಗೆ ಮತ್ತು ಯುವಕರಿಗೆ ಉತ್ತಮ ಬೇಸಾಯ ವಿಧಾನಗಳನ್ನು ಬೋಧಿಸುತ್ತಿದೆ.

ವಿಶ್ವವಿದ್ಯಾಲಯವು ಇಂದು ಸ್ನಾತಕ ತರಗತಿಗಳನ್ನು ಮತ್ತು ಸ್ನಾತಕೋತ್ತರ ತರಗತಿಗಳನ್ನೂ ವರ್ಷಕ್ಕೆ ಮೂರು ಟರ್ಮ್ ಇರುವ (ಅಂದರೆ ಟ್ರಿಮೆಸ್ಟರ್) ತರಗತಿಗಳನ್ನಾಗಿ ಮಾಡಿದೆ. ಇದು ವಿಶ್ವವಿದ್ಯಾಲಯದ ವೈಶಿಷ್ಟ್ಯ. ಇದು ವಿದ್ಯಾರ್ಥಿಗಳು ಗಳಿಸಿರುವ ಜ್ಞಾನದ ಮೌಲ್ಯಮಾಪನೆಯನ್ನು ಬೋಧಕರೇ ಮಾಡಬಲ್ಲ ವ್ಯವಸ್ಥೆಗೆ ಅನುಕೂಲವಾಗಿದೆ. ಇದರಿಂದ ಬೋಧಕರೂ ವಿದ್ಯಾರ್ಥಿಗಳೂ ತಮ್ಮತಮ್ಮಲ್ಲಿರುವ ಕೊರತೆಗಳನ್ನು ಸರಿಪಡಿಸಿಕೊಳ್ಳಲು ಒಳ್ಳೆಯ ಅವಕಾಶವನ್ನು ಕೊಡುತ್ತದೆ. ವಿಶ್ವವಿದ್ಯಾಲಯ ತನ್ನ ವಾರ್ಷಿಕ ಆಯವ್ಯಯದ ಶೇಕಡ 40ರಷ್ಟನ್ನು ಸಂಶೋಧನೆಗಾಗಿ ವಿನಿಯೋಗಿಸುತ್ತಿದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಹರಡಿರುವ 40 ಸಂಶೋಧನಾ ಕೇಂದ್ರಗಳು ವಿಶ್ವವಿದ್ಯಾಲಯದ ಸಂಶೋಧನೆಯ ವ್ಯಾಪ್ತಿ ಯೊಳಗೆ ಬರುತ್ತವೆ. ಅಖಿಲ ಭಾರತ ಮಟ್ಟದಲ್ಲಿ ಆಗುತ್ತಿರುವ ಭಾರತೀಯ ಕೃಷಿ ಸಂಶೋಧನಾ ಮಂಡಲಿಯವರು (ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರೀಸರ್ಚ್) ನಡೆಸುವ ಸಂಶೋಧನೆಗಳು, ಅಲ್ಲಲ್ಲೇ ಆಗುತ್ತಿರುವ ಸಂಶೋಧನಾ ಯೋಜನೆಗಳು, ರಾಷ್ಟ್ರೇತರ ಸಂಸ್ಥೆಗಳಾದ ಫೋರ್ಡ್

ಫ ೌಂಡೇಷನ್ ಮತ್ತು ಸಂಯುಕ್ತರಾಷ್ಟ್ರ ಅಭಿವೃದ್ಧಿ ಸಂಸ್ಥೆ ('ಯುನೈಟೆಡ್ ನೇಶನ್ಸ್ ಡೆವಲಪ್‌ಮೆಂಟ್ ಪ್ರೊಗ್ರ್ಯಾಂ') ಮಾಡುತ್ತಿರುವ ಸಂಶೋಧನೆಗಳು, ಸ್ನಾತಕೋತ್ತರ ತರಗತಿಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳು— ಇವುಗಳನ್ನೆಲ್ಲಾ ಸಮನ್ವಯಗೊಳಿಸುವಂಥ ಕಾರ್ಯವನ್ನು ವಿಶ್ವವಿದ್ಯಾಲಯ ಮಾಡುತ್ತಿದೆ. ಇವುಗಳ ಜೊತೆಗೆ ವ್ಯವಸಾಯಕ್ಕೆ ಸಂಬಂಧಿಸಿದ ವಿವಿಧ ಹವಾಮಾನವಿರುವ ರಾಜ್ಯದ ಹತ್ತು ಭಾಗಗಳ ಬಗೆಗೆ ನಡೆಯುತ್ತಿರುವ ಸಂಶೋಧನೆಗಳಲ್ಲಿರಬಹುದಾದ ಕೊರತೆಗಳನ್ನು ತುಂಬುವ ಕಾರ್ಯವನ್ನೂ ತನ್ನ ಸಂಶೋಧನೆಯನ್ನಾಗಿ ವಿಶ್ವವಿದ್ಯಾಲಯವು ತೆಗೆದುಕೊಂಡಿದೆ. ಇದು ಜಾಗತಿಕ ಬ್ಯಾಂಕ್ ಸ್ಥಾಪಿಸಿರುವ ರಾಷ್ಟ್ರೀಯ ಕೃಷಿ ಸಂಶೋಧನೆಯ ಒಂದು ಯೋಜನೆಯಾಗಿದೆ.

ವಿಶ್ವವಿದ್ಯಾಲಯದ ವಿಸ್ತರಣ ಕಾರ್ಯವು ಎಂಟು ಅಂಗಗಳಿಂದ ಕೂಡಿದೆ. ವಿಸ್ತರಣಾ ಶಿಕ್ಷಣಕ್ಕೆ ಸಂಬಂಧಿಸಿದ ಘಟಕಗಳು, ಕಸುಬಿಗೆ ಸಂಬಂಧಿಸಿದ ವಿಷಯಗಳನ್ನು ತಿಳಿಸುವ ಘಟಕಗಳು, ಪತ್ರ ವ್ಯವಹಾರದ ಮೂಲಕ ಮತ್ತು ಕೃಷಿ ಕ್ಷೇತ್ರಗಳಿಗೆ ಏರ್ಪಡಿಸುವ ಸಂದರ್ಶನಗಳ ಮೂಲಕ ನೀಡುವ ಕೃಷಿ ಸಲಹಾ ಕಾರ್ಯ, ಬೇಸಾಯಗಾರರ ತರಬೇತಿ ಸಂಸ್ಥೆ, ಅಧಿಕಾರಿಗಳ ತರಬೇತಿ ಸಂಸ್ಥೆ, ಸಂಶೋಧನ ಕೇಂದ್ರಗಳಿಂದ ಗ್ರಾಮಗಳ ದತ್ತಿಸ್ವೀಕಾರ ಕಾರ್ಯ, 'ಪ್ರಯೋಗಾಲಯದಿಂದ ಪ್ರದೇಶಕ್ಕೆ' ಕಾರ್ಯಕ್ರಮ ('ಲ್ಯಾಬ್ ಟು ಲ್ಯಾಂಡ್') ಮತ್ತು ರಾಷ್ಟ್ರೀಯ ಪ್ರಾತ್ಯಕ್ಷಿಕೆ ಕಾರ್ಯಕ್ರಮ, ಇವೇ ಆ ಎಂಟು ಅಂಗಗಳು. 1980-81ರಲ್ಲಿ ಆರು ಕಾಲೇಜುಗಳು ವಿಶ್ವವಿದ್ಯಾಲಯದ ಅಂಗ ಸಂಸ್ಥೆಗಳಾಗಿದ್ದವು. ಅವು ಯಾವುವೆಂದರೆ, ಹೆಬ್ಬಾಳಿನ ಕೃಷಿ ಕಾಲೇಜು, ಧಾರವಾಡದ ಕೃಷಿ ಕಾಲೇಜು, ಹೆಬ್ಬಾಳಿನ ಪಶುವೈದ್ಯ ಕಾಲೇಜು, ಮಂಗಳೂರಿನ ಮತ್ಸ್ಯಶಾಸ್ತ್ರದ ಕಾಲೇಜು, ಧಾರವಾಡದ ಗೃಹವಿಜ್ಞಾನ ಕಾಲೇಜು ಮತ್ತು ರಾಯಚೂರಿನ ಕೃಷಿ ತಾಂತ್ರಿಕ ಸಂಸ್ಥೆ. ಮೂಲವಿಜ್ಞಾನ ಮತ್ತು ಮಾನವೀಯ ಶಾಸ್ತ್ರಗಳಲ್ಲಿ ಎರಡು, ಕೃಷಿ ಶಾಸ್ತ್ರದಲ್ಲಿ ಹದಿಮೂರು, ಪಶುವೈದ್ಯ ಶಾಸ್ತ್ರದಲ್ಲಿ ಒಂಬತ್ತು, ಮತ್ಸ್ಯ ಶಾಸ್ತ್ರದಲ್ಲಿ ಮೂರು ಮತ್ತು ಗೃಹ ವಿಜ್ಞಾನದಲ್ಲಿ ಎರಡು ವಿಭಾಗಗಳು 1980-81ರಲ್ಲಿ ಅಸ್ತಿತ್ವದಲ್ಲಿದ್ದವು. ವಿವಿಧ ಶಾಖೆಗಳಿಗೆ 1,211 ವಿದ್ಯಾರ್ಥಿಗಳು ಆ ವರ್ಷ ಸೇರಿಕೊಂಡಿದ್ದರು. ಇವುಗಳ ಪೈಕಿ 422 ವಿದ್ಯಾರ್ಥಿಗಳು ಸ್ನಾತಕೋತ್ತರ ತರಗತಿಗಳಲ್ಲೂ 749 ವಿದ್ಯಾರ್ಥಿಗಳು ಸ್ನಾತಕ ತರಗತಿಗಳಲ್ಲೂ ಉಳಿದವರು ಕೃಷಿ ತಾಂತ್ರಿಕ ಡಿಪ್ಲೋಮಾ ತರಗತಿಗಳಲ್ಲೂ ಇದ್ದರು.

## ಶಾರೀರಿಕ ಶಿಕ್ಷಣ

ಶಾರೀರಿಕ ಶಿಕ್ಷಣದ ಪ್ರಾಮುಖ್ಯತೆಯನ್ನು ಅರಿತಿದ್ದ ಅಂದಿನ ಅಧಿಕಾರಸ್ಥರು ಹಳೆಯ ಮೈಸೂರು ಸಂಸ್ಥಾನದಲ್ಲಿ ಈ ಶಿಕ್ಷಣವನ್ನು 1937ರ ಹೈಸ್ಕೂಲ್ ಶಿಕ್ಷಣದ ಸುಧಾರಿತ ಯೋಜನೆಯಲ್ಲಿ ಕಡ್ಡಾಯವನ್ನಾಗಿ ಮಾಡಿದ್ದರು. ಇದಕ್ಕೆ ಮೊದಲು, ಬಹು ಸಂಖ್ಯೆಯ ಪ್ರೌಢಶಾಲೆಗಳಲ್ಲಿ ಕ್ರಿಕೆಟ್, ಫುಟ್‌ಬಾಲ್ ಮತ್ತು ವಾಲಿಬಾಲ್ ಮುಂತಾದ ಕ್ರೀಡೆಗಳಲ್ಲಿ ವಿದ್ಯಾರ್ಥಿಗಳಿಗೆ ತರಬೇತಿಯನ್ನು ಕೊಡಲಾಗುತ್ತಿತ್ತು. ಬೆಂಗಳೂರಿನ ವೈ.ಎಂ.ಸಿ.ಎ. ಶಾರೀರಿಕ ಶಿಕ್ಷಣದ ತರಬೇತಿ ಕೇಂದ್ರಕ್ಕೆ 1939-40ರಿಂದ ಹೈಸ್ಕೂಲ್ ಶಿಕ್ಷಕರನ್ನು ತರಬೇತಿಗಾಗಿ ಶಿಕ್ಷಣ ಇಲಾಖೆಯು ಕಳಿಸುತ್ತಿತ್ತು. ಇದರಿಂದ ತರಬೇತಿ ಹೊಂದಿದ ಶಿಕ್ಷಕರು ವ್ಯವಸ್ಥಿತವಾಗಿ ಶಾರೀರಿಕ ಶಿಕ್ಷಣ ಚಟುವಟಿಕೆಗಳನ್ನು ನಡೆಸಬಹುದಾಗಿತ್ತು. ಡ್ರಿಲ್, ಕ್ರೀಡೆಗಳು, ಓಟ ಮುಂತಾದ ಆಟಗಳು, ಯೋಗಾಸನ, ಕುಸ್ತಿ, ವ್ಯಾಯಾಮ ಮುಂತಾದ ಚಟುವಟಿಕೆಗಳು ಅನೇಕ ಶಾಲೆಗಳಲ್ಲಿ ನಡೆಯುತ್ತಿದ್ದವು. 1943-44ರಲ್ಲಿ, ಸರ್ಕಾರದಿಂದ ಅನುದಾನ ಪಡೆಯುತ್ತಿದ್ದ ಐದು ಶಾರೀರಿಕ ಶಿಕ್ಷಣ ಸಂಸ್ಥೆಗಳಿದ್ದವು. ಬೆಂಗಳೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಫಿಸಿಕಲ್ ಎಜುಕೇಷನ್, ವ್ಯಾಯಾಮಶಾಲೆ, ವೈ.ಎಂ.ಸಿ.ಎ. (ಇವೆಲ್ಲ ಬೆಂಗಳೂರಿನವು) ಚಿತ್ರದುರ್ಗದ ಯೋಗ ಮತ್ತು ಶಾರೀರಿಕ ಶಿಕ್ಷಣ ಸಂಸ್ಥೆ ಮತ್ತು ಮೈಸೂರಿನ ನಾಯುಡು ಶಾರೀರಿಕ ಶಿಕ್ಷಣ ಸಂಸ್ಥೆ—ಇವೇ ಆ ಶಿಕ್ಷಣ ಕೇಂದ್ರಗಳು. ಇವುಗಳಲ್ಲಿ 1955-56ರ ಕೊನೆಯಲ್ಲಿ 612 ವಿದ್ಯಾರ್ಥಿಗಳಿದ್ದರು.

1913-14ಕ್ಕೆ ಹಿಂದೆ ಬೆಳಗಾವಿ ವಲಯದಲ್ಲಿ ಶಾಲೆಯಲ್ಲಿನ ಎಲ್ಲ ವಿದ್ಯಾರ್ಥಿಗಳಿಗೂ ವ್ಯವಸ್ಥಿತವಾದ ಶಾರೀರಿಕ ಶಿಕ್ಷಣ ಕೊಡುವ ಪದ್ಧತಿ ಇರಲಿಲ್ಲ. 1913-14ರಲ್ಲಿ ಶಾಲೆಗಳಲ್ಲಿ ಶಾರೀರಿಕ ಶಿಕ್ಷಣವನ್ನು ಉತ್ತಮಪಡಿಸುವ ಸಲುವಾಗಿ ಒಬ್ಬ ಶಿಕ್ಷಣ ತನಿಖಾಧಿಕಾರಿಯನ್ನು ವಿಶೇಷಾಧಿಕಾರಿಯನ್ನಾಗಿ ಮಾಡಲಾಯಿತು. ಮುಂಬೈನ ಪೆಟಿಟ್ ಜಿಮ್ನ್ಯಾಷಿಯಂನಲ್ಲಿ ತರಬೇತಿ ಪಡೆದವರನ್ನು ಕೆಲವು ಶಾಲೆಗಳ ವ್ಯಾಯಾಮ ಶಿಕ್ಷಕರನ್ನಾಗಿ ನೇಮಿಸಲಾಯಿತು. 1937ರಲ್ಲಿ ಮುಂಬೈಯ ಕಾಂದಿವಲಿಯಲ್ಲಿ ಸ್ಥಾಪಿತವಾದ ವ್ಯಾಯಾಮ ಶಿಕ್ಷಣ ಕೇಂದ್ರಕ್ಕೆ ಪದವೀಧರ ಶಿಕ್ಷಕರನ್ನು ಶಾರೀರಿಕ ಶಿಕ್ಷಣದ ತರಬೇತಿಗೆ ಕಳಿಸಲಾಗುತ್ತಿತ್ತು. ಈ ಸಂಸ್ಥೆಯು ಡಿಪ್ಲೋಮಾವನ್ನು ಕೊಡುತ್ತಿತ್ತು. ಈ ಡಿಪ್ಲೋಮಾ ತರಗತಿಯಲ್ಲದೆ ಈ ಸಂಸ್ಥೆಯು ಸೆಕೆಂಡರಿ ಶಾಲೆಯ ಶಿಕ್ಷಕರಿಗೆ ಮೂರು ತಿಂಗಳ ಅಲ್ಪಾವಧಿ ತರಬೇತಿಯನ್ನು ಮತ್ತು ಸೆಕೆಂಡರಿ ಶಾಲೆಯ ಮುಖ್ಯೋಪಾಧ್ಯಾಯರಿಗೆ ಒಂದು ತಿಂಗಳ ಅಲ್ಪಾವಧಿ ತರಬೇತಿಯನ್ನು ವ್ಯವಸ್ಥೆ ಮಾಡುತ್ತಿತ್ತು. ಪ್ರೌಢ ಶಾಲೆಗಳಲ್ಲಿ ನಡೆಯುತ್ತಿದ್ದ ವ್ಯಾಯಾಮ ಶಿಕ್ಷಣ ತರಗತಿಗಳಲ್ಲದೆ ಜಿಲ್ಲಾ ಕೇಂದ್ರಗಳಲ್ಲಿ ಅನೇಕ ವ್ಯಾಯಾಮ ಶಿಕ್ಷಣ ಶಾಲೆಗಳು ಆರಂಭವಾದವು. ಇವು ಸರ್ಕಾರದಿಂದ ಅನುದಾನ ಪಡೆಯುತ್ತಿದ್ದವು. ಶಾಲೆಗಳಲ್ಲಿ ಶಾರೀರಿಕ ಶಿಕ್ಷಣದಲ್ಲಾದ ಪ್ರಗತಿಯನ್ನು ಪರೀಕ್ಷಿಸಲು ಮತ್ತು ವ್ಯಾಯಾಮಶಾಲೆಗಳು, ಕ್ರೀಡಾ ಮಂಡಲಿ

ಗಳು ಮುಂತಾದವುಗಳ ಉಸ್ತುವಾರಿ ಮಾಡಲು ಪ್ರತಿಯೊಂದು ವಿಭಾಗಕ್ಕೂ ಇಬ್ಬಿಬ್ಬರು ಶಾರೀರಿಕ ಶಿಕ್ಷಣ ಸಹಾಯಾಧಿಕಾರಿಗಳನ್ನು ನೇಮಿಸಲಾಯಿತು. 1946-47ರಲ್ಲಿ ಬೆಳಗಾವಿ ಪ್ರದೇಶದಲ್ಲಿ ಮಾನ್ಯತೆ ಪಡೆದ 25 ವ್ಯಾಯಾಮ ಶಾಲೆಗಳಿದ್ದವು. ಶಾರೀರಿಕ ಶಿಕ್ಷಣದ ಡಿಪ್ಲೋಮಾವನ್ನು ಹೊಂದಿದ್ದ ಸೆಕೆಂಡರಿ ಶಾಲೆಗಳ ಶಿಕ್ಷಕರಿಗೆ, ಪ್ರೋತ್ಸಾಹ ರೂಪದಲ್ಲಿ ಒಂದು ಹೆಚ್ಚುವರಿ ಬಡ್ತಿಯನ್ನು ಮತ್ತು ಹತ್ತು ರೂ. ವಿಶೇಷ ವೇತನವನ್ನೂ ಕೊಡಲಾಗುತ್ತಿತ್ತು. ಇದು ಶಾರೀರಿಕ ಶಿಕ್ಷಣದ ಭಾರವನ್ನು ಹೊತ್ತ ಶಿಕ್ಷಕರಿಗೆ ಸರ್ಕಾರ ನೀಡುತ್ತಿದ್ದ ಉತ್ತೇಜನವಾಗಿತ್ತು.

ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ, ಶಾರೀರಿಕ ಶಿಕ್ಷಣವು ಪಠ್ಯೇತರ ಚಟುವಟಿಕೆಗಳ ಒಂದು ಮುಖ್ಯವಾದ ಅಂಶವಾಗಿತ್ತು. ಶಾರೀರಿಕ ಶಿಕ್ಷಣದ ಹೈಯರ್ ಗ್ರೇಡ್ ಸರ್ಟಿಫಿಕೇಟ್‌ನ್ನು ಹೊಂದಿದ್ದ ಶಿಕ್ಷಕರಿಗೆ 1943-44 ರಿಂದ ಹತ್ತು ರೂ. ವಿಶೇಷ ವೇತನವೂ ಮತ್ತು ಲೋಯರ್ ಗ್ರೇಡ್ ಸರ್ಟಿಫಿಕೇಟ್ ಪಡೆದವರಿಗೆ ಐದು ರೂ. ವಿಶೇಷ ವೇತನವೂ ದೊರಕುತ್ತಿತ್ತು. ಸ್ವಾತಂತ್ರ್ಯ ಚಳುವಳಿಯ ಸಮಯದಲ್ಲಿ, ಅಂದರೆ 1930ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ವ್ಯಾಯಾಮ ಶಾಲೆಗಳು ಪ್ರಾಮುಖ್ಯತೆಯನ್ನು ಪಡೆದವು. ಇವುಗಳಲ್ಲಿ, 1933ರಲ್ಲಿ ಆರಂಭವಾದ ಮಲ್ಲಸಜ್ಜನ ಶಾಲೆಯ ಹೆಸರನ್ನು ವಿಶೇಷವಾಗಿ ಉಲ್ಲೇಖಿಸಬೇಕಾಗಿದೆ. ಈ ವ್ಯಾಯಾಮ ಶಾಲೆಯು 1939ರಲ್ಲಿ ಜಿಲ್ಲಾ ವ್ಯಾಯಾಮ ಪರಿಷತ್ತನ್ನು ನಡೆಸಿತು. ಕೊಡಗಿನಲ್ಲಿ ಮಿಡ್ಲ್ ಮತ್ತು ಹೈಸ್ಕೂಲುಗಳೆರಡಲ್ಲೂ ಶಾರೀರಿಕ ಶಿಕ್ಷಣವು ಕಡ್ಡಾಯವಾಗಿತ್ತು. ಕ್ರೀಡಾ ಚಟುವಟಿಕೆಗೆ ವಿಶೇಷ ಪ್ರೋತ್ಸಾಹವಿತ್ತು. 1929ರಲ್ಲಿಯೇ ಪ್ರಾಥಮಿಕ ಶಾಲೆಗಳಲ್ಲಿ ಶಾರೀರಿಕ ಶಿಕ್ಷಣವು ಕಡ್ಡಾಯವಾಗಿತ್ತು. ಪ್ರತಿಯೊಂದು ಹೈಸ್ಕೂಲು ಮತ್ತು ಪ್ರಥಮದರ್ಜೆಯ ಮಿಡ್ಲ್ ಸ್ಕೂಲಿನಲ್ಲಿ ಒಬ್ಬ ಶಾರೀರಿಕ ಶಿಕ್ಷಣದ ಉಪಾಧ್ಯಾಯನಿರುತ್ತಿದ್ದ. ಈತನು ಮಕ್ಕಳಿಗೆ ವ್ಯಾಯಾಮವನ್ನೂ ಹೇಳಿಕೊಡುತ್ತಿದ್ದನು. 1921ರ ಹೊತ್ತಿಗೆ ಎಲ್ಲ ಸರ್ಕಾರಿ ಮಿಡ್ಲ್ ಸ್ಕೂಲುಗಳಲ್ಲಿಯೂ ಶಾರೀರಿಕ ಶಿಕ್ಷಣದ ಉಪಾಧ್ಯಾಯರಿದ್ದರು. 1931ರಲ್ಲಿ ಹೈಸ್ಕೂಲ್‌ಗಳಲ್ಲಿ ಸಾಮೂಹಿಕ ಡ್ರಿಲ್ ಆಚರಣೆಗೆ ಬಂದಿತು.

ರಾಜ್ಯ ಪುನರ್ಘಟನೆಯಾದ ಮೇಲೆ, ಸುಧಾರಿತ ಪಠ್ಯಕ್ರಮದಲ್ಲಿ ಶಾರೀರಿಕ ಶಿಕ್ಷಣಕ್ಕೆ ಒಂದು ಮುಖ್ಯಸ್ಥಾನವನ್ನು ಕೊಡಲಾಯಿತು. ಶಾರೀರಿಕ ಶಿಕ್ಷಣವು ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳಲ್ಲಿ ಶಾಲಾ ವೇಳೆಯಲ್ಲಿಯೇ ಶಾಲೆಯ ಎಲ್ಲ ಮಕ್ಕಳೂ ಕಲಿಯಲೇಬೇಕಾದ ಪಠ್ಯ ವಿಷಯವಾಯಿತು. ವೇಳಾ ಪತ್ರಿಕೆಯಲ್ಲೇ ಶಾರೀರಿಕ ಶಿಕ್ಷಣದ ಪೀರಿಯಡ್ಡುಗಳನ್ನು ಸೇರಿಸಲಾಯಿತು. ಇದರಿಂದ ಶಾರೀರಿಕ ಶಿಕ್ಷಣವು ಎಲ್ಲ ವಿದ್ಯಾರ್ಥಿಗಳೂ ಸಕ್ರಮವಾಗಿ ಕಲಿಯಬೇಕಾದ ವಿಷಯಗಳಲ್ಲೊಂದಾಯಿತು. ಅದು ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿಯೂ ಪಠ್ಯಕ್ರಮದಲ್ಲಿಯೇ ಸೇರಿತು. ರಾಜ್ಯಮಟ್ಟ, ವಿಭಾಗಮಟ್ಟ ಮತ್ತು ಜಿಲ್ಲಾಮಟ್ಟಗಳಲ್ಲಿ ಶಾರೀರಿಕ ಶಿಕ್ಷಣಾಧಿಕಾರಿಗಳನ್ನು ನೇಮಿಸಲಾಯಿತು. ಇದರಿಂದ ಶಾರೀರಿಕ ಶಿಕ್ಷಣ ಯೋಜನೆಗೆ ಮತ್ತಷ್ಟು ಬಲ ಬಂದಂತಾಯಿತು. 1956-57ರಲ್ಲಿ, ಪ್ರೌಢಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದ ವ್ಯಾಯಾಮ ಶಿಕ್ಷಕರ ಸಂಖ್ಯೆ ಸುಮಾರು 700. 1981-82ರಲ್ಲಿ ಇದು 2,500ಕ್ಕೆ ಏರಿತು.

ಸರ್ಕಾರಿ ಶಾರೀರಿಕ ಶಿಕ್ಷಣ ಕಾಲೇಜು ಆರಂಭವಾಗುವುದಕ್ಕೆ ಮೊದಲು, ಹಳೆಯ ಮೈಸೂರು ಸಂಸ್ಥಾನದಲ್ಲಿ ಶಾರೀರಿಕ ಶಿಕ್ಷಣದ (ಯಾವುದಾದರೊಂದು) ಸರ್ಟಿಫಿಕೇಟನ್ನು ಪಡೆದಿದ್ದವರು ಅಥವಾ ಸೇವಾದಳದಲ್ಲಿ ತರಬೇತಿ ಹೊಂದಿದವರು ಪ್ರೌಢ ಶಾಲೆಗಳ ಶಾರೀರಿಕ ಶಿಕ್ಷಣದ ಉಪಾಧ್ಯಾಯರಾಗುತ್ತಿದ್ದರು. ಒಂದು ವರ್ಷದ ಸ್ನಾತಕೋತ್ತರ ಡಿಪ್ಲೋಮ ಕೋರ್ಸನ್ನು 1959-60ರಲ್ಲಿ ಆರಂಭವಾದ ಸರ್ಕಾರಿ ಶಾರೀರಿಕ ಶಿಕ್ಷಣದ ಕಾಲೇಜಿನಲ್ಲಿ ಪ್ರಾರಂಭಿಸಲಾಯಿತು. 1972-73ರಲ್ಲಿ ಈ ಕಾಲೇಜಿನಲ್ಲಿ ಸ್ನಾತಕೋತ್ತರ ತರಗತಿ ಆರಂಭವಾಯಿತು. ಆಗ 1967ರಿಂದ ಇದ್ದ ಸರ್ಟಿಫಿಕೇಟ್ ಕೋರ್ಸನ್ನು ರದ್ದು ಮಾಡಲಾಯಿತು. ಈ ಕಾಲೇಜನ್ನು 1976ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ವಹಿಸಲಾಯಿತು. ಮೈಸೂರು ವಿಶ್ವವಿದ್ಯಾಲಯವು ಬಿ.ಪಿ.ಎಡ್. ಮತ್ತು ಎಂ.ಪಿ.ಎಡ್. ಕೋರ್ಸುಗಳನ್ನು 1972-73ರಲ್ಲಿ ಆರಂಭಿಸಿತು. ಶಾರೀರಿಕ ಶಿಕ್ಷಣದ ತರಬೇತಿಯ ಸೌಲಭ್ಯವನ್ನೊದಗಿಸುವುದು ಇದರ ಉದ್ದೇಶವಾಗಿತ್ತು. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಎರಡು ಶಾರೀರಿಕ ಶಿಕ್ಷಣದ ಕಾಲೇಜುಗಳಿವೆ. ಬೆಳಗಾವಿಯಲ್ಲಿರುವ ಬೆನ್ನೆನ್‌ಸ್ಮಿತ್ ಶಾರೀರಿಕ ಶಿಕ್ಷಣದ ಕಾಲೇಜು ಮತ್ತು ಧಾರವಾಡದಲ್ಲಿರುವ ಮಲ್ಲಸಜ್ಜನ ವ್ಯಾಯಾಮ ಶಾಲೆ ಮತ್ತು ಆರೋಗ್ಯ ಸಂಸ್ಥೆ— ಇವೇ ಆ ಎರಡು ಕಾಲೇಜುಗಳು. 1974-75ರಿಂದ (ಕರ್ನಾಟಕ) ವಿಶ್ವವಿದ್ಯಾಲಯವು ಬಿ.ಪಿ.ಎಡ್. (ಶಾರೀರಿಕ ಶಿಕ್ಷಣದ ಬ್ಯಾಚುಲರ್ ಡಿಗ್ರಿ) ಪರೀಕ್ಷೆಯನ್ನು ನಡೆಸುತ್ತಿದೆ. 1981-82ರಲ್ಲಿ, ಶಾರೀರಿಕ ಶಿಕ್ಷಣದ ಸರ್ಟಿಫಿಕೇಟ್ ಕೋರ್ಸು ಇರುವ 27 ಶಾರೀರಿಕ ಶಿಕ್ಷಣ ಶಾಲೆಗಳು ರಾಜ್ಯದಲ್ಲಿದ್ದವು. ಇವುಗಳಲ್ಲಿ ಎಸ್.ಎಸ್.ಎಲ್.ಸಿ. ಪಾಸಾದವರಿಗೆ ಒಂದು ವರ್ಷದ ತರಬೇತಿಯನ್ನು ನೀಡಲಾಗುತ್ತಿದೆ.

ಶಾರೀರಿಕ ಶಿಕ್ಷಣದ ಚಟುವಟಿಕೆಗಳನ್ನು ಶಾಲೆಗಳಲ್ಲಿ ನಡೆಸುವುದರ ಜೊತೆಗೆ, ಶಿಕ್ಷಣ ಇಲಾಖೆಯು ವಿದ್ಯಾರ್ಥಿಗಳಿಗೆ ತಾಲೂಕು, ಜಿಲ್ಲಾ, ವಿಭಾಗ ಮತ್ತು ರಾಜ್ಯಮಟ್ಟಗಳಲ್ಲಿ ಕ್ರೀಡೆ, ವ್ಯಾಯಾಮ ಮುಂತಾದ ಚಟುವಟಿಕೆಗಳಲ್ಲಿ ಸ್ಪರ್ಧೆಗಳನ್ನೂ, ಮೇಲಾಟಗಳನ್ನು ಏರ್ಪಡಿಸುತ್ತಿದೆ.

### ಸ್ತ್ರೀ ಶಿಕ್ಷಣ

ಹಿಂದಿನ ಕಾಲದಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸವು ಮನೆಗೆಲಸ ಮತ್ತು ಕಸುಬುಗಳಿಗೆ ಸಂಬಂಧಿಸಿದ ತರಬೇತಿಗಷ್ಟಕ್ಕೇ ಸೀಮಿತವಾಗಿತ್ತು. ರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಸ್ತ್ರೀ ಶಿಕ್ಷಣವು ಇತ್ತೀಚಿನ ದಿನಗಳಲ್ಲಿ ಆರಂಭ ವಾಯಿತು. ಲಂಡನ್ ಮಿಷನ್‌ನವರು ಬೆಂಗಳೂರಿನಲ್ಲಿ 1840 ರಲ್ಲಿ ಸ್ಥಾಪಿಸಿದ ಕನ್ನಡ ಶಾಲೆಯು ಆರಂಭವಾದ ಮೇಲೆ ಹೆಣ್ಣು ಮಕ್ಕಳ ಶಿಕ್ಷಣ ಮೊದಲಾಯಿತು. ಅನಂತರ, ಹಿಂದೂ ಹೆಣ್ಣು ಮಕ್ಕಳ ಶಾಲೆಯು ಬೆಂಗಳೂರಿನಲ್ಲಿ ಆರಂಭವಾಯಿತು. 1867 ರಲ್ಲಿ, ಹೆಣ್ಣು ಮಕ್ಕಳ ಮೂರು ಸರ್ಕಾರಿ ಶಾಲೆಗಳೂ ಮತ್ತು ಕೆಲವು ಅನುದಾನ ಪಡೆಯುತ್ತಿದ್ದ ಹೆಣ್ಣು ಮಕ್ಕಳ ಶಾಲೆಗಳೂ ಇದ್ದವು. 1879-80ಕ್ಕೆ ಇವುಗಳ ಸಂಖ್ಯೆ 12 ಆಯಿತು. ರಾಜಮನೆತನದ ವಶಕ್ಕೆ ರಾಜ್ಯದ ಆಡಳಿತ ಮತ್ತೊಮ್ಮೆ ಬಂದ ಮೇಲೆ, ಸ್ತ್ರೀ ಶಿಕ್ಷಣವು ಸ್ವಲ್ಪ ಉತ್ತಮಗೊಂಡಿತು. 1881ರಲ್ಲಿ ಮೈಸೂರಿನಲ್ಲಿ ಮಹಾರಾಣಿ ಹೆಣ್ಣು ಮಕ್ಕಳ ಶಾಲೆಯು ಸ್ಥಾಪಿತ ವಾಯಿತು. ಇದು 1891ರಲ್ಲಿ ಸರ್ಕಾರಿ ಶಾಲೆಯಾಗಿ ಪರಿವರ್ತಿತ ವಾಯಿತು. 1918ರಲ್ಲಿ, ಸುಮಾರು 24,000 ಹೆಣ್ಣು ಮಕ್ಕಳು ಶಾಲೆಗಳಲ್ಲಿ ಓದುತ್ತಿದ್ದರು. ಇದು ಶಾಲೆಗೆ ಹೋಗ ಬೇಕಾದ ವಯಸ್ಸಿನ ಒಟ್ಟು ಹೆಣ್ಣು ಮಕ್ಕಳ ಶೇಕಡ 4.8 ಆಗಿತ್ತು. ಮಿಡ್ಲ್ ಮತ್ತು ಹೈಸ್ಕೂಲುಗಳ ಪಠ್ಯವಸ್ತುವು 1922ರಲ್ಲಿ ಸುಧಾರಣೆಗೊಂಡಿತಷ್ಟೆ. ಆಗ ಗೃಹ ವಿಜ್ಞಾನ, ಚಿತ್ರಕಲೆ, ಬ್ರಷ್ ಕೆಲಸ, ಸಂಗೀತ, ಹೊಲಿಗೆ, ಕಸೂತಿ, ರೋಗಿ ಗಳ ಶುಶ್ರೂಷೆ ಮುಂತಾದ ಹೆಣ್ಣು ಮಕ್ಕಳಿಗೆ ವಿಶೇಷವಾಗಿ ಒಲವಿರುವ ವಿಷಯಗಳನ್ನು ಪಠ್ಯವಿಷಯಗಳನ್ನಾಗಿ ಸೇರಿಸ ಲಾಯಿತು. 1937ರಲ್ಲಿ ಎಸ್.ಎಸ್.ಎಲ್.ಸಿ. ಯೋಜನೆಯು ಸುಧಾರಿತವಾಯಿತು. ಆಗ ಪಾಕಶಾಸ್ತ್ರ, ಬಟ್ಟೆಯನ್ನು ಒಗೆಯುವ ಕಲೆ, ಗೃಹಿಣಿಯಾದವಳು ಮನೆಯನ್ನು ಚೆನ್ನಾಗಿ ನೋಡಿಕೊಳ್ಳುವ ಕಲೆ, ಕಸೂತಿ ಕೆಲಸ, ಸಂಗೀತ ಮತ್ತು ಚಿತ್ರ ಕಲೆಗಳನ್ನು ಗೃಹ ಕಲೆಯ ವಿಭಾಗದ ವಿಷಯಗಳನ್ನಾಗಿ ಸೇರಿಸಿ ಇವೆಲ್ಲ ವಿಷಯಗಳನ್ನೂ ಐಚ್ಛಿಕ ವಿಷಯಗಳನ್ನಾಗಿ ಮಾಡ ಲಾಯಿತು. ಪದವೀಧರ ಉಪಾಧ್ಯಾಯರನ್ನು ಹೊಸದಿಲ್ಲಿಯ ಲೇಡಿ ಇರ್ವಿನ್ ಕಾಲೇಜಿಗೆ ಗೃಹವಿಜ್ಞಾನದ ತರಬೇತಿಗಾಗಿ ಕಳಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಗೃಹ ವಿಜ್ಞಾನವನ್ನು ಪ್ರೌಢಶಾಲೆಗಳಲ್ಲಿ ಒಂದು ಐಚ್ಛಿಕ ವಿಷಯವನ್ನಾಗಿಯೂ ಮಾಡಲಾಯಿತು. 1940ರವರೆಗೆ, ಮಿಡ್ಲ್ ಸ್ಕೂಲ್ ಪಬ್ಲಿಕ್ ಪರೀಕ್ಷೆಯು ಬಾಲಕ ಬಾಲಕಿಯರಿಬ್ಬರಿಗೂ ಒಂದೇ ಆಗಿತ್ತು. ಆ ವರ್ಷ ಹೆಣ್ಣುಮಕ್ಕಳಿಗೆ ತಮ್ಮದೇ ಪರೀಕ್ಷೆಯನ್ನು ಮಿಡ್ಲ್ ಸ್ಕೂಲಿನ ಅಂತ್ಯದಲ್ಲಿ ನಡೆಸಲು ಶಾಲೆಗಳಿಗೆ ಅನುಮತಿಯನ್ನು ಕೊಡಲಾಯಿತು. ಹೆಣ್ಣುಮಕ್ಕಳಿಗೆ ಪಬ್ಲಿಕ್ ಪರೀಕ್ಷೆ ಅಥವಾ ಶಾಲಾ ಪರೀಕ್ಷೆಗಳಲ್ಲಿ ಒಂದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ ವನ್ನು ಕೊಡಲಾಯಿತು.

1948-49ರಲ್ಲಿ ಒಟ್ಟು 1,90,841 ಹೆಣ್ಣುಮಕ್ಕಳು ಶಾಲೆಗಳಲ್ಲಿ ಕಲಿಯುತ್ತಿದ್ದರು. ಇದು ಶಾಲೆಗೆ ಹೋಗಬೇಕಾದ ವಯಸ್ಸಿನ ಒಟ್ಟು ಹೆಣ್ಣುಮಕ್ಕಳ ಶೇಕಡಾ 5.4ರಷ್ಟಾಗಿತ್ತು. 1951-52ರಲ್ಲಿ 2,71,172 ಹೆಣ್ಣುಮಕ್ಕಳು ಶಾಲೆಗಳಲ್ಲಿ ಓದುತ್ತಿದ್ದರು. ಒಂದೇ ತರಗತಿಯಲ್ಲಿ ಕೊಳೆಯುತ್ತಿದ್ದ ಮತ್ತು ಮಧ್ಯಕಾಲದಲ್ಲಿ ಶಾಲೆಯನ್ನು ಬಿಡುತ್ತಿದ್ದ ಹೆಣ್ಣುಮಕ್ಕಳ ಸಂಖ್ಯೆಯು ಗಂಡುಮಕ್ಕಳ ಸಂಖ್ಯೆಗಿಂತ ಹೆಚ್ಚಾಗಿತ್ತು; 1948-49ರಿಂದ 1951-52ರವರೆಗೆ ಒಂದನೇಯ ತರಗತಿಯಿಂದ ನಾಲ್ಕ ನೇಯ ತರಗತಿಗಳಲ್ಲಿ ಇಂಥ ಹೆಣ್ಣುಮಕ್ಕಳ ಶೇಕಡವಾರು ಸಂಖ್ಯೆ 75.8; ಅದೇ ಕಾಲದಲ್ಲಿ ಗಂಡುಮಕ್ಕಳ ಈ ಸಂಖ್ಯೆ ಶೇಕಡಾ 67.5. 1951-52ರಲ್ಲಿ, ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕವಾಗಿ ಮೂವತ್ತಾರು ಪ್ರೌಢಶಾಲೆಗಳಿದ್ದವು. ಇವುಗಳಲ್ಲಿ ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ 12,195. ಇವರಲ್ಲದೆ 2,398 ಹೆಣ್ಣು ಮಕ್ಕಳು ಸಹ ವಿದ್ಯಾಭ್ಯಾಸವಿದ್ದ ('ಕೊ-ಎಜುಕೇಶನ್') ಪ್ರೌಢ ಶಾಲೆಗಳಲ್ಲಿ ಓದುತ್ತಿದ್ದರು. 1951-52ರಲ್ಲಿ ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕವಾದ ಮೂರು ಕಾಲೇಜುಗಳಿದ್ದವು. ಕಾಲೇಜುಗಳಲ್ಲಿದ್ದ ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ 2,346. ಇವರಲ್ಲಿ 142 ಸ್ತ್ರೀ ಯರು ವೃತ್ತಿ ಶಿಕ್ಷಣವನ್ನು ಪಡೆಯುತ್ತಿದ್ದರು. ಆ ವರ್ಷ, ಮೂರು ಶಿಕ್ಷಕಿಯರ ತರಬೇತಿ ಸಂಸ್ಥೆಗಳಿದ್ದವು. ಅವು ಯಾವುವೆಂದರೆ, ಮೈಸೂರಿನ ಶಿಕ್ಷಕಿಯರ ಕಾಲೇಜು (1888), ಅದೇ ಊರಿನ ಜೆನಾನಾ ನಾರ್ಮಲ್ ಶಾಲೆ (1916) ಮತ್ತು ಬೆಂಗಳೂರಿನ ಸೇಕ್ರೆಡ್ ಹಾರ್ಟ್ಸ್ ಹೆಣ್ಣು ಮಕ್ಕಳ ತರಬೇತಿ ಶಾಲೆ (1947). ಜೆನಾನಾ ನಾರ್ಮಲ್ ಶಾಲೆಯಲ್ಲಿ ಉರ್ದು ಶಿಕ್ಷಕಿಯರಿಗೆ ತರಬೇತು ಕೊಡಲಾಗುತ್ತಿತ್ತು. ಮಹಾರಾಣಿ ಶಿಕ್ಷಕಿಯರ ತರಬೇತಿ ಸಂಸ್ಥೆ ಯಲ್ಲಿ ಶಿಶುವಿಹಾರಗಳ ಶಿಕ್ಷಕಿಯರಿಗೆ ತರಬೇತಿಯನ್ನು ಕೊಡುತ್ತಿದ್ದ ಒಂದು ತರಗತಿ ಇತ್ತು. ಇದು 1946-47ರಲ್ಲಿ ಆರಂಭವಾಯಿತು. ಆದರೆ 1953ರಲ್ಲಿ ಇದನ್ನು ಮುಚ್ಚಲಾಯಿತು. 1951-52ರಲ್ಲಿ ಸ್ತ್ರೀಯರಿಗೆ ವೃತ್ತಿ ಶಿಕ್ಷಣವನ್ನು ಕೊಡುತ್ತಿದ್ದ ಮೂರು ಕೈಗಾರಿಕಾ ಶಾಲೆಗಳಿದ್ದವು. ಅವು ಯಾವುವೆಂದರೆ ಮೈಸೂರಿನ ಸ್ತ್ರೀಯರ ವೃತ್ತಿ ಶಿಕ್ಷಣ ಶಾಲೆ ('ವೊಕೇಶನಲ್ ಇನ್ಸ್‌ಟಿಟ್ಯೂಟ್ ಫಾರ್ ವಿಮೆನ್') ಹಾಸನದ ಮೆಥಡಿಸ್ಟ್ ಮಿಷನ್ ಅನಾಥಾಲಯ ಮತ್ತು ಚನ್ನಪಟ್ಟಣದ ಕೈಗಾರಿಕಾ ಶಾಲೆ. ಹೆಚ್ಚು ವಯಸ್ಸಾದ ಹೆಂಗಸರಿಗೆ ಅವರ ಮನೆಯಲ್ಲೇ ಶಿಕ್ಷಣವನ್ನು ಕೊಡಲು ಒಂದು ಯೋಜನೆಯನ್ನು ತಯಾರಿಸಲಾಯಿತು. ಇಂಥ ತರಗತಿಗಳನ್ನು ನಡೆಸುತ್ತಿದ್ದ ಬೋಧಕರಿಗೆ ಉದಾರವಾದ ಅನುದಾನವನ್ನು ನೀಡಲಾಗುತ್ತಿತ್ತು. ಸಂಬಂಧಪಟ್ಟ ಅನುದಾನ ಸಂಹಿತೆಯಲ್ಲಿ ಅಂಥ ಅವಕಾಶವನ್ನು ಕಲ್ಪಿಸಲಾಯಿತು. ಇದು ತುಮಕೂರಿನಲ್ಲಿ ಕೆಲವು ವರ್ಷ ಜಾರಿಯಲ್ಲಿತ್ತು. 1914-15ರಲ್ಲಿ ಇದು ನಿಂತು ಹೋಯಿತು. ಈ ಯೋಜನೆಯನ್ನು ಚಿಕ್ಕಮಗಳೂರಿನಲ್ಲಿ 1911-16ರ ಅವಧಿಯಲ್ಲಿ ಜಾರಿಗೆ ತಂದು ಪರೀಕ್ಷಿಸಲಾಯಿತು. 1915-16ರಲ್ಲಿ, ನಾಲ್ಕು ಕಡೆ ತರಗತಿಗಳನ್ನು ನಡೆಸಲಾಯಿತು.

ಆಗ 87 ಸ್ತ್ರೀಯರು ಶಿಕ್ಷಣ ಪಡೆಯುತ್ತಿದ್ದರು. 1918-19ರ ವೇಳೆಗೆ ಇವರ ಸಂಖ್ಯೆ ಕ್ರಮವಾಗಿ 17 ಮತ್ತು 297 ಆಗಿ ಅನಂತರ ಕ್ಷೀಣವಾಗುತ್ತಾ ಹೋಯಿತು.

ರಾಜ್ಯದಲ್ಲಿ ಹೆಣ್ಣು ಮಕ್ಕಳಿಗೆ ವಿವಿಧವಾದ ರಿಯಾಯತಿ ಗಳಿದ್ದವು. ಪ್ರಾಥಮಿಕ ಮತ್ತು ಮಿಡ್ಲ್ ಸ್ಕೂಲು ಮಟ್ಟದಲ್ಲಿ ಶಿಕ್ಷಣವು ಉಚಿತವಾಗಿತ್ತು. ಪ್ರೌಢ ಶಾಲೆಗಳಲ್ಲಿ ಹೆಣ್ಣು ಮಕ್ಕಳಿಗೆ ಶುಲ್ಕದಲ್ಲಿ ಅರ್ಧ ರಿಯಾಯಿತಿ ಇತ್ತು. ಜೊತೆಗೆ ಪೂರ್ತಿ ರಿಯಾಯತಿ ಪಡೆಯುವವರ ಶೇಕಡಾವಾರು ಸಂಖ್ಯೆಯೂ ಹೆಚ್ಚಾಗಿತ್ತು. 1925ರಲ್ಲಿ ಮೈಸೂರು ಮಹಿಳಾ ಸಮ್ಮೇಳನವು ನಡೆಯಿತು. ಅದು ಸ್ತ್ರೀ ಶಿಕ್ಷಣಕ್ಕಾಗಿ ಸಾಕಷ್ಟು ಪ್ರಚಾರವನ್ನು ಮಾಡಿತು. ಸ್ತ್ರೀ ಶಿಕ್ಷಣ ಮತ್ತು ಕಲ್ಯಾಣ ಚಟುವಟಿಕೆಗಳನ್ನು ನಡೆಸಲು ಒಂದು ವಾತಾವರಣ ಇದರಿಂದ ನಿರ್ಮಿತವಾಯಿತು. ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಮೈಸೂರಿನ ವನಿತಾ ಸಮಾಜ ಮುಂತಾದವು ಸ್ತ್ರೀ ಶಿಕ್ಷಣಕ್ಕಾಗಿ ಅತ್ಯುತ್ತಮವಾದ ಮಾರ್ಗದರ್ಶನ ಕಾರ್ಯವನ್ನು ಮಾಡಿದವು. ಮೈಸೂರು ವಯಸ್ಕರ ಶಿಕ್ಷಣ ಸಮಿತಿಯು ಮಹಿಳೆಯರಿಗಾಗಿ ನಂಜನಗೂಡು ಮತ್ತು ಕೆಂಗೇರಿಗಳಲ್ಲಿ ಎರಡು ವಿದ್ಯಾಪೀಠಗಳನ್ನು ನಡೆಸುತ್ತಿದೆ. ಸಮಿತಿಯು ಹೆಚ್ಚು ವಯಸ್ಸಿನ ಸ್ತ್ರೀಯರಿಗೆ ಅಕ್ಷರವನ್ನು ಕಲಿಸುವ ತರಗತಿಗಳನ್ನೂ ನಡೆಸುತ್ತಿವೆ. 1931-32 ರಿಂದ 1955-56 ರವರೆಗೆ, ಮೈಸೂರು ವಲಯದಲ್ಲಿ ವಿವಿಧ ಕಾಲಗಳಲ್ಲಿ ಹೆಣ್ಣು ಮಕ್ಕಳಿಗಾಗಿ ಇದ್ದ ಪ್ರತ್ಯೇಕ ಶಾಲೆಗಳ ಸಂಖ್ಯೆಯನ್ನು ಕೆಳಗಿನ ಪಟ್ಟಿಯಲ್ಲಿ* ಕೊಟ್ಟಿದೆ.

ಬೆಳಗಾವಿ ವಲಯದಲ್ಲಿ 1855ಕ್ಕೆ ಹಿಂದೆ ಲಂಡನ್ ಮಿಷನ್ ಸಂಸ್ಥೆಯವರು ನಡೆಸುತ್ತಿದ್ದ ಕೆಲವು ಬಾಲಕಿಯರ ಶಾಲೆಗಳಿದ್ದವು. ದೇಶಭಾಷಾ ಶಾಲೆಗಳ ಶಿಕ್ಷಕರು ತಮ್ಮ ಶಾಲೆಗಳಲ್ಲಿ ಬಾಲಕಿಯರ ತರಗತಿಗಳನ್ನು ನಡೆಸಲು ಯಶಸ್ವಿಯಾದರೆ ಅಂಥವರಿಗೆ ಬಹುಮಾನ ವನ್ನು ಕೊಡುವ ಒಂದು ಯೋಜನೆಯನ್ನು 1857-58ರಲ್ಲಿ ಮುಂಬೈ ಸರ್ಕಾರವು ಆಚರಣೆಗೆ ತಂದಿತು. 1866-67ರಲ್ಲಿ ಧಾರವಾಡ ಜಿಲ್ಲೆಯಲ್ಲಿ ಐದು ಬಾಲಕಿಯರ ಶಾಲೆಗಳನ್ನೂ, ಕಲಾದಗಿ (ಈಗಿನ ವಿಜಾಪುರ) ಜಿಲ್ಲೆಯಲ್ಲಿ ಐದು ಬಾಲಕಿಯರ ಶಾಲೆಗಳನ್ನೂ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಎರಡು ಬಾಲಕಿಯರ ಶಾಲೆಗಳನ್ನೂ ಆರಂಭಿಸಲಾಯಿತು. ಇವುಗಳಲ್ಲಿ ಕ್ರಮವಾಗಿ 213, 134 ಮತ್ತು 45 ವಿದ್ಯಾರ್ಥಿನಿಯರಿದ್ದರು. ಮುಂದಿನ ವರ್ಷ, ಅಂದರೆ 1867-68ರಲ್ಲಿ ಮತ್ತೆ ಕೆಲವು ಶಾಲೆ ಗಳನ್ನು ದಕ್ಷಿಣ ವಿಭಾಗದಲ್ಲಿ (ಅಂದರೆ ಕರ್ನಾಟಕ ವಿಭಾಗದಲ್ಲಿ) ಮುಂಬೈ ಸರ್ಕಾರವು ಸ್ಥಾಪಿಸಿದ್ದು ಆಗ 23 ಶಾಲೆಗಳಿದ್ದು, ಅವುಗಳಲ್ಲಿ 774 ವಿದ್ಯಾರ್ಥಿನಿಯರಿದ್ದರು. 1881-82ರಲ್ಲಿ, ಈ ವಿಭಾಗದಲ್ಲಿ ಶಾಲೆಗಳ ಸಂಖ್ಯೆ 47, ವಿದ್ಯಾರ್ಥಿನಿಯರ ಸಂಖ್ಯೆ 2,595 ಆಯಿತು. ಹೆಣ್ಣು ಮಕ್ಕಳು ಶಾಲೆಗಳಿಗೆ ಸರಿಯಾಗಿ ಬರುವಂತೆ ಮಾಡಲು ವಿಶೇಷ ಪ್ರೋತ್ಸಾಹವನ್ನು ಕೊಡಬೇಕಾಯಿತು. ಸರ್ಕಾರದ ಅಧಿಕಾರಿಯಾಗಿದ್ದ ಜಾರ್ಡೈನ್ ಎಂಬುವನು, 1,000 ರೂ ದತ್ತಿಯನ್ನು ಕೊಟ್ಟು, ಅದರಿಂದ ಬರುವ ಬಡ್ಡಿಯನ್ನು ಹೆಣ್ಣು ಮಕ್ಕಳಿಗೆ ಬಹುಮಾನವನ್ನಾಗಿ ಕೊಡುವಂತೆ ಮಾಡಿದನು. 1895-96ರಲ್ಲಿ, ಧಾರವಾಡದ ಸ್ಥಳೀಯ ಮಂಡಲಿಯು ಆ ನಗರದಲ್ಲಿ ಮಹಿಳೆಯರ ಶಿಕ್ಷಣ ತರಬೇತಿ ಸಂಸ್ಥೆಯನ್ನು ತೆರೆಯಿತು. ಇದನ್ನು ಸರ್ಕಾರಕ್ಕೆ

*

| | ಶಾಲೆಗಳ ಸಂಖ್ಯೆ | | | | ವಿದ್ಯಾರ್ಥಿನಿಯರ ಸಂಖ್ಯೆ | | | |
|---|---|---|---|---|---|---|---|---|
| | 1931–32 | 44–45 | 51–52 | 55–56 | 31–32 | 44–45 | 51–52 | 55–56 |
| ಪ್ರಾಥಮಿಕ ಶಾಲೆಗಳು | 523 | 503 | 610 | 606 | 31,297 | 45,658 | 69,606 | 75,572 |
| ಮಾಧ್ಯಮಿಕ ಶಾಲೆಗಳು | 30 | 79 | 109 | 118 | 2,158 | 11,522 | 21,615 | 25,173 |
| ಪ್ರೌಢ ಶಾಲೆಗಳು | 5 | 19 | 36 | 47 | 383 | 2,270 | 12,195 | 16,638 |
| ಕಾಲೇಜುಗಳು | 2 | 3 | 3 | 3 | 81 | 560 | 1,644 | 2,356 |
| ಇತರರ ಸಂಸ್ಥೆಗಳು | (ಲಭ್ಯವಿಲ್ಲ) | 6 | 127 | 206 | (ಲಭ್ಯವಿಲ್ಲ) | 321 | 3,861 | 3,669 |

1907-08ರಲ್ಲಿ ಇದು ಪೂರ್ಣ ಪ್ರಮಾಣದ ಶಿಕ್ಷಣ ಕಾಲೇಜಾಯಿತು. 1913ರ ಹೊತ್ತಿಗೆ, ಮುಂಬೈ ಪ್ರಾಂತ್ಯದ ನಾಲ್ಕು ಕನ್ನಡ ಜಿಲ್ಲೆಗಳಲ್ಲಿ ಒಟ್ಟು 189 ಹೆಣ್ಣುಮಕ್ಕಳ ಶಾಲೆಗಳಿದ್ದವು. ಅವುಗಳಲ್ಲಿ ಒಟ್ಟು 11,490 ವಿದ್ಯಾರ್ಥಿನಿಯರಿದ್ದರು. ಎಲ್ಲ ಶಾಲೆಗಳಲ್ಲಿದ್ದ ವಿದ್ಯಾರ್ಥಿನಿಯರ ಒಟ್ಟು ಸಂಖ್ಯೆ 17,000ಕ್ಕೂ ಮೀರಿತ್ತು. 1921-22ರ ವೇಳೆಗೆ ಒಟ್ಟು ಶಾಲೆಗಳ ಸಂಖ್ಯೆ 229 ಇದ್ದು 16,926 ಹೆಣ್ಣುಮಕ್ಕಳು ಇವುಗಳಲ್ಲಿ ಓದುತ್ತಿದ್ದರು. 1947ರ ಮಾರ್ಚಿ 31ನೇಯ ತಾರೀಕಿನಲ್ಲಿ 402 ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಗಳಿದ್ದು ಅವುಗಳಲ್ಲಿ 44,285 ಹೆಣ್ಣುಮಕ್ಕಳು ಓದುತ್ತಿದ್ದರು. ಇವರಲ್ಲಿ 3,443 ಹೆಣ್ಣುಮಕ್ಕಳು ಮೇಲಿನ ತರಗತಿಗಳಲ್ಲಿದ್ದರು.

1924ರಲ್ಲಿ ಹೆಣ್ಣು ಮಕ್ಕಳಿಗಾಗಿ ಒಂದು ಪ್ರತ್ಯೇಕ ವರ್ನ್ಯಾಕ್ಯುಲರ್ ಫೈನಲ್ ಪರೀಕ್ಷೆಯನ್ನು ನಡೆಸುವ ವ್ಯವಸ್ಥೆಯನ್ನು ಮಾಡಲಾಯಿತು. ಇದರಲ್ಲಿ ವಿಶೇಷ ವಿಷಯಗಳಿದ್ದವು. ಸರ್‌ದಾ ಕಾನೂನು ಹೆಣ್ಣುಮಕ್ಕಳಿಗೆ ಮದುವೆ ಮಾಡಬೇಕಾದ ವಯಸ್ಸನ್ನು ಹೆಚ್ಚಿಸಿತು. ಇದರ ಪರಿಣಾಮವಾಗಿ ಶಾಲೆಗಳಿಗೆ ಬರುವ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಯಿತು. 1938-39ರಲ್ಲಿ ಅಸಿಸ್ಟೆಂಟ್ ಡೆಪ್ಯುಟಿ ಎಜುಕೇಷನಲ್ ಇನ್ಸ್‌ಪೆಕ್ಟೆಸ್ ಹುದ್ದೆಯೊಂದನ್ನು ನಿರ್ಮಿಸಲಾಯಿತು. ಈಕೆ ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಗಳನ್ನು ತನಿಖೆ ಮಾಡುತ್ತಿದ್ದರು. 1940-41 ರಿಂದ, ಗಂಡುಮಕ್ಕಳಿಗಿದ್ದಂತೆಯೇ ಹೆಣ್ಣುಮಕ್ಕಳಿಗೂ ಪ್ರಾಥಮಿಕ ಶಿಕ್ಷಣದ ಅವಧಿಯು ಎಂಟು ವರ್ಷ ಆಯಿತು. ಶಿಕ್ಷಣದ ಅಂತ್ಯದಲ್ಲಿ ಗಂಡು ಹೆಣ್ಣುಮಕ್ಕಳಿಬ್ಬರಿಗೂ ಒಂದೇ ಪರೀಕ್ಷೆ ಇರುವಂತಾಯಿತು. ಈ ಪರೀಕ್ಷೆಯ ಹೆಸರು ಪ್ರೈಮರಿ ಸ್ಕೂಲ್ ಲೀವಿಂಗ್ ಸರ್ಟಿಫಿಕೇಟ್ (ಮುಲ್ಕಿ). ಹೆಣ್ಣುಮಕ್ಕಳಿಗಾಗಿ ಇದ್ದ ಪ್ರತ್ಯೇಕ ಪರೀಕ್ಷಾ ವ್ಯವಸ್ಥೆಯು 1948ರಲ್ಲಿ ರದ್ದಾಯಿತು. ಎಲ್ಲ ಹೆಣ್ಣುಮಕ್ಕಳ ಶಾಲೆಗಳಲ್ಲಿಯೂ ಹೊಲಿಗೆ ಮತ್ತು ಚಿತ್ರಕಲೆಗಳನ್ನು ಕಲಿಸುವ ವ್ಯವಸ್ಥೆಯಾಯಿತು. ಈ ವಿಷಯಗಳನ್ನು ಉಳಿದ ಸಾಮಾನ್ಯ ವಿಷಯಗಳಾದ ಭಾಷೆ, ಗಣಿತ ಮುಂತಾದುವುಗಳ ಜೊತೆಗೆ ಕಲಿಸಲಾಗುತ್ತಿತ್ತು. ಕೆಲವು ಶಾಲೆಗಳಲ್ಲಿ ಗೃಹವಿಜ್ಞಾನ ಮತ್ತು ಹಿಂದೂಸ್ಥಾನಿ ಸಂಗೀತಗಳನ್ನು ಕಲಿಸುವ ವ್ಯವಸ್ಥೆ ಮಾಡಲಾಯಿತು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳ ಸಂಖ್ಯೆಯು ಸಾಕಷ್ಟು ಹೆಚ್ಚಾದವು.

ಬಳ್ಳಾರಿಯಲ್ಲಿ ಲಂಡನ್ ಮಿಷನ್ ಸಂಸ್ಥೆಯು 1833ರಲ್ಲಿ ಮೊತ್ತಮೊದಲು ಒಂದು ಹೆಣ್ಣುಮಕ್ಕಳ ಶಾಖೆಯನ್ನು ಆರಂಭಿಸಿತು. 1882-83ರಲ್ಲಿ, ರೋಮನ್ ಕ್ಯಾಥೊಲಿಕ್ ಕಾನ್ವೆಂಟ್ ಹೆಣ್ಣುಮಕ್ಕಳ ಶಾಲೆಯು ಒಂದು ಪ್ರೌಢಶಾಲೆಯಾಗಿ ಪರಿವರ್ತಿತವಾಯಿತು. ಬಳ್ಳಾರಿ ನಗರಸಭೆಯು ನಡೆಸುತ್ತಿದ್ದ ಪ್ರಾಥಮಿಕ ಶಾಲೆಯನ್ನು 1903ರಲ್ಲಿ ಸರ್ಕಾರಕ್ಕೆ ವಹಿಸಲಾಯಿತು. ಇದು 1928ರಲ್ಲಿ ಮಿಡ್ಲ್ ಸ್ಕೂಲ್ ಆಗಿಯೂ 1931ರಲ್ಲಿ ಪ್ರೌಢಶಾಲೆಯಾಗಿಯೂ ಪರಿವರ್ತಿತವಾಯಿತು. ಮುಸ್ಲಿಂ ಮಹಿಳೆಯರಿಗಾಗಿ ಬಳ್ಳಾರಿಯಲ್ಲಿದ್ದ ಸರ್ಕಾರಿ ಶಿಕ್ಷಕಿಯರ ತರಬೇತಿ ಶಾಲೆಗೆ ಸೇರಿದಂತೆ ಒಂದು ಮಿಡ್ಲ್ ಸ್ಕೂಲ್ ಇತ್ತು. ಇದು 1942ರಲ್ಲಿ ಸೆಕೆಂಡರಿ ಸ್ಕೂಲ್ ಆಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ತ್ರೀ ಶಿಕ್ಷಣವು ಸಾಕಷ್ಟು ಜನಪ್ರಿಯವಾಗಿತ್ತು. 1881-82ರಲ್ಲಿಯೇ ಏಳು ಹೆಣ್ಣುಮಕ್ಕಳ ಶಾಲೆಗಳಿದ್ದವು. ಇವುಗಳಲ್ಲಿಯೇ 460 ವಿದ್ಯಾರ್ಥಿನಿಯರು ಓದುತ್ತಿದ್ದರು. ಪ್ರಥಮದರ್ಜೆ ಕಾಲೇಜಿನಲ್ಲಿ 92 ವಿದ್ಯಾರ್ಥಿನಿಯರು ಓದುತ್ತಿದ್ದರು. ಪ್ರಥಮದರ್ಜೆ ಕಾಲೇಜಿನಲ್ಲಿ 92 ವಿದ್ಯಾರ್ಥಿನಿಯರಿದ್ದರು. ಅಂದಿನ ಮದ್ರಾಸು ಪ್ರಾಂತ್ಯದಲ್ಲಿ ಮದ್ರಾಸು ನಗರವನ್ನು ಬಿಟ್ಟರೆ ಮತ್ತಾವ ಜಿಲ್ಲೆಯಲ್ಲಿಯೂ ಇಷ್ಟು ವಿದ್ಯಾರ್ಥಿನಿಯರಿರಲಿಲ್ಲ. ಸೇಂಟ್ ಆಗ್ನೆಸ್ ಕಾಲೇಜನ್ನು ಕಾರ್ಮಲೈಟ್ ಸನ್ಯಾಸಿನಿಯರು ಆರಂಭಿಸಿದರು. ಜಿಲ್ಲೆಯಲ್ಲಿದ್ದುದು ಇದೊಂದೇ ಮಹಿಳೆಯರ ಕಾಲೇಜು. ಸರ್ಕಾರವು 1912ರಲ್ಲಿ ಮಂಗಳೂರಿನಲ್ಲಿ ಒಂದು ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಯನ್ನು ಆರಂಭಿಸಿತು. (ಅದೇ ಇಂದಿನ ಸರ್ಕಾರಿ ಹೆಣ್ಣುಮಕ್ಕಳ ಸೆಕೆಂಡರಿ ಶಾಲೆ). ಮುಂದಿನ ವರ್ಷ, ಪ್ರಾಥಮಿಕ ಶಿಕ್ಷಕಿಯರ ತರಬೇತಿ ತರಗತಿಯನ್ನು ಇದಕ್ಕೆ ಸೇರಿಸಲಾಯಿತು. 1919ರಲ್ಲಿ ಇದು ಪ್ರೌಢಶಾಲೆಯಾಯಿತು. ಈ ಕಾಲದಲ್ಲಿದ್ದ ಇತರ ಪ್ರೌಢಶಾಲೆಗಳೆಂದರೆ ಮಂಗಳೂರಿನ ಸೇಂಟ್ ಆಗ್ನೆಸ್ ಪ್ರೌಢಶಾಲೆ ಮತ್ತು ಉಡುಪಿಯ ಸೇಂಟ್ ಸಿಸಿಲಿಯ ಹೆಣ್ಣುಮಕ್ಕಳ ಪ್ರೌಢಶಾಲೆ. 1931-32ರಲ್ಲಿ, ಜಿಲ್ಲೆಯಲ್ಲಿ ಏಳು ಹೆಣ್ಣುಮಕ್ಕಳ ಪ್ರೌಢಶಾಲೆಗಳಿದ್ದವು. ಇವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ 2,474. ಆ ವರ್ಷದಲ್ಲಿದ್ದ ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಗಳ ಸಂಖ್ಯೆ 134. ಇವುಗಳಲ್ಲಿದ್ದ ಹೆಣ್ಣುಮಕ್ಕಳ ಸಂಖ್ಯೆ 10,539. ಇವರಲ್ಲದೆ 19,078 ಹೆಣ್ಣುಮಕ್ಕಳು ಬಾಲಕರ ಶಾಲೆಯಲ್ಲಿ ಓದುತ್ತಿದ್ದರು. 1946-47ರಲ್ಲಿ ಹೆಣ್ಣುಮಕ್ಕಳ ಪ್ರೌಢಶಾಲೆಗಳ ಸಂಖ್ಯೆ 16ಕ್ಕೆ ಏರಿತು. ಅವುಗಳಲ್ಲಿದ್ದ ವಿದ್ಯಾರ್ಥಿನಿಯರ ಸಂಖ್ಯೆ 4,703. ಕಲ್ಬುರ್ಗಿ ಪ್ರದೇಶದಲ್ಲಿ ಹೆಣ್ಣುಮಕ್ಕಳ ಶಿಕ್ಷಣವು ಮುಖ್ಯವಾಗಿ, ಮಿಷನರಿ ಸಂಸ್ಥೆಗಳ ಸಾಮಾಜಿಕ ಸೇವೆಯ ಫಲ ಎನ್ನಬಹುದು. ರಾಯಚೂರಿನಲ್ಲಿ 1887ರಲ್ಲಿ ಸೇಂಟ್ ಮೇರಿ ಕಾನ್ವೆಂಟ್ ಆರಂಭವಾಯಿತು. ಇದು ಒಂದು ಮಿಡ್ಲ್ ಸ್ಕೂಲ್ ಆಗಿತ್ತು. 1957ರಲ್ಲಿ ಇದು ಬಾಲಕ ಮತ್ತು ಬಾಲಕಿಯರಿಬ್ಬರಿಗೂ ಪ್ರವೇಶವಿದ್ದ ಪ್ರೌಢಶಾಲೆಯಾಯಿತು. 1930ರಲ್ಲಿ, ಬಿದರೆಯಲ್ಲಿದ್ದ ಹೆಣ್ಣುಮಕ್ಕಳ ಶಾಲೆಯು ಮಿಡ್ಲ್ ಸ್ಕೂಲ್ ಆಯಿತು. ಕಲ್ಬುರ್ಗಿಯಲ್ಲಿ ಸ್ತ್ರೀಯರಿಗೆ ಒಂದು ಶಿಕ್ಷಕಿಯರ ತರಬೇತಿ ಶಾಲೆ ಇತ್ತು.

ಬಹುಕಾಲದವರೆಗೆ ಕೊಡಗಿನಲ್ಲಿ ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳಿರಲಿಲ್ಲ. 1869ರಲ್ಲಿ ಮಡಿಕೇರಿಯ ಸೆಂಟ್ರಲ್

ಸ್ಕೂಲಿನಲ್ಲಿ 12 ಮಕ್ಕಳು ಇದ್ದರು. ಹೆಣ್ಣುಮಕ್ಕಳ ಪ್ರತ್ಯೇಕ ಶಾಲೆಗಳನ್ನು ಆರಂಭಿಸುವ ಪ್ರಯತ್ನಗಳೆಲ್ಲಾ ವಿಫಲಗೊಂಡವು. ಮಿಷನರಿಗಳು ಆರಂಭಿಸಿದ ಕೆಲವು ಶಾಲೆಗಳೂ ಮಕ್ಕಳು ಬರದಿದ್ದುದರಿಂದ ಮುಚ್ಚಿಹೋದವು. ಬಾಲಕರ ಶಾಲೆಯಲ್ಲಿ ಬಾಲಕಿಯರ ಹಾಜರಾತಿಯು ಚೆನ್ನಾಗಿಯೇ ಇತ್ತು. 1884-85ರಲ್ಲಿ, ಬಾಲಕರ ಶಾಲೆಯಲ್ಲಿ 519 ಬಾಲಕಿಯರು ಓದುತ್ತಿದ್ದರು. 1904ರಲ್ಲಿ, ಭಾರತ ಸರ್ಕಾರವು ಸ್ತ್ರೀ ಶಿಕ್ಷಣ ಪ್ರೋತ್ಸಾಹಕ್ಕಾಗಿ ಮಾಡಿದ ಯೋಜನೆಯಂತೆ, 1908-10ರ ಅವಧಿಯಲ್ಲಿ ವೀರರಾಜಪೇಟೆ, ಅಮ್ಮತ್ತಿ, ಎಳಕೇರಿ, ಕುಂದ ಮತ್ತು ಪಾರಾಣೆಗಳಲ್ಲಿ ಬಾಲಕಿಯರ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಯಿತು. 1910-11ರಲ್ಲಿ, 1,922 ಹೆಣ್ಣುಮಕ್ಕಳು ಓದುತ್ತಿದ್ದರು. ಶಾಲೆಗೆ ಹೋಗಬೇಕಾದ ವಯಸ್ಸಿನ ಹೆಣ್ಣುಮಕ್ಕಳ ಒಟ್ಟು ಸಂಖ್ಯೆಯಲ್ಲಿ ಇದು ಶೇಕಡಾ 2.47 ಆಗಿತ್ತು. ಅದೇ ವರ್ಷ ಇಡೀ ಭಾರತದಲ್ಲಿ ಇದೇ ಸಂಖ್ಯೆ 0.69 ಆಗಿತ್ತು. 1909ರಲ್ಲಿ, ಮಡಿಕೇರಿಯಲ್ಲಿ ಒಂದು ಅನುದಾನ ಪಡೆಯುವ ಶಾಲೆಯು ಆರಂಭವಾಯಿತು. ಅದೇ ವರ್ಷ ನಾಪೊಕ್ಲು, ಹುದಿಕೇರಿ, ಪೊನ್ನಂಪೇಟೆ, ಸೋಮವಾರ ಪೇಟೆಗಳಲ್ಲಿ ಹೆಣ್ಣುಮಕ್ಕಳ ಶಾಲೆಗಳು ಆರಂಭವಾದವು. ಆರ್ಥಿಕ ಮುಗ್ಗಟ್ಟಿನಿಂದಾಗಿ 1939ರಲ್ಲಿ ಒಂಭತ್ತು ಸರ್ಕಾರಿ ಶಾಲೆಗಳನ್ನು ಮುಚ್ಚಲಾಯಿತು. 1923ರಲ್ಲಿ ಮಡಿಕೇರಿಯಲ್ಲಿದ್ದ ಹೆಣ್ಣುಮಕ್ಕಳ ಲೋಯರ್ ಸೆಕೆಂಡರಿ ಶಾಲೆಯು ಸೆಕೆಂಡರಿ ಶಾಲೆಯಾಗಿ ಪರಿವರ್ತಿತವಾಯಿತು. 1961ರಲ್ಲಿ ಇಡೀ ರಾಜ್ಯಕ್ಕೆ ಸ್ತ್ರೀ ಶಿಕ್ಷಣದಲ್ಲಿ ಕೊಡಗು ಭಾಗವು ಅಗ್ರಸ್ಥಾನದಲ್ಲಿತ್ತು. ಅಲ್ಲಿ ಹೆಣ್ಣುಮಕ್ಕಳ ಸಾಕ್ಷರತೆಯು ಶೇ. 28ರಷ್ಟು ಇತ್ತು. 1956-57ರಲ್ಲಿ ಇಡೀ ಕರ್ನಾಟಕ ರಾಜ್ಯದಲ್ಲಿದ್ದ ಮಹಿಳಾ ಶಿಕ್ಷಣ ಸಂಸ್ಥೆಗಳ ಸಂಖ್ಯೆ ಮತ್ತು ಅವುಗಳಲ್ಲಿದ್ದ ವಿದ್ಯಾರ್ಥಿನಿಯರ ಸಂಖ್ಯೆಯನ್ನು ಕೆಳಗಿನ ಪಟ್ಟಿ* ಯಲ್ಲಿ ಕೊಟ್ಟಿದೆ.

1980-81ರಲ್ಲಿ, ರಾಜ್ಯದಲ್ಲಿ 505 ಹೆಣ್ಣುಮಕ್ಕಳ ಕಿರಿಯ ಪ್ರಾಥಮಿಕ ಶಾಲೆಗಳೂ, 760 ಹೆಣ್ಣುಮಕ್ಕಳ ಹಿರಿಯ ಪ್ರಾಥಮಿಕ ಶಾಲೆಗಳೂ, 77 ಬಾಲಕಿಯರ ಪ್ರೌಢಶಾಲೆಗಳೂ ಮತ್ತು 11 ಮಹಿಳಾ ಜೂನಿಯರ್ ಕಾಲೇಜುಗಳೂ ಇದ್ದವು. ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಗಳಲ್ಲಿ 3.01 ಲಕ್ಷ ಬಾಲಕಿಯರೂ, ಸಹ ಶಿಕ್ಷಣವಿದ್ದ ಪ್ರಾಥಮಿಕ ಶಾಲೆಗಳಲ್ಲಿ 18.39 ಲಕ್ಷ ಬಾಲಕಿಯರೂ ಇದ್ದರು. ಪ್ರೌಢಶಾಲೆಗಳ ಎಂಟು, ಒಂಭತ್ತು ಮತ್ತು ಹತ್ತನೇಯ ಸ್ಟ್ಯಾಂಡರ್ಡ್‌ಗಳಲ್ಲಿ ಒಟ್ಟು 2,47,039 ವಿದ್ಯಾರ್ಥಿನಿಯರಿದ್ದರು. 1979-80ರಲ್ಲಿ ಕಲೆ, ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳ ಸ್ನಾತಕ, ಸ್ನಾತಕೋತ್ತರ ಮತ್ತು ಡಾಕ್ಟರೇಟ್ ತರಗತಿಗಳಲ್ಲಿ 39,253 ಮಹಿಳೆಯರು ಇದ್ದರು. ಶಿಕ್ಷಣ, ಇಂಜಿನಿಯರಿಂಗ್, ವೈದ್ಯಕೀಯ ಮುಂತಾದ ವೃತ್ತಿ ಕಾಲೇಜುಗಳಲ್ಲಿ 24,691 ಮಹಿಳೆಯರಿದ್ದರು.

### ಆಡಳಿತ ವ್ಯವಸ್ಥೆ

ಶಿಕ್ಷಣ ಇಲಾಖೆಯು ಮೈಸೂರು ಸಂಸ್ಥಾನದಲ್ಲಿ 1857-58 ರಲ್ಲಿ ಸ್ಥಾಪಿತವಾಯಿತು. ಆಗ ಒಬ್ಬರು ನಿರ್ದೇಶಕರೂ, ಇಬ್ಬರು ತನಿಖಾಧಿಕಾರಿಗಳೂ, ನಾಲ್ಕು ಉಪ ತನಿಖಾಧಿಕಾರಿಗಳು ಮತ್ತು 30 ಸಹಾಯಕ ಉಪತನಿಖಾಧಿಕಾರಿಗಳೂ ಇದ್ದರು. ಸುಮಾರು ನಾಲ್ಕು ತಾಲೂಕುಗಳಿಗೆ ಒಬ್ಬ ಸಹಾಯಕ ಉಪತನಿಖಾಧಿಕಾರಿ ಇದ್ದರು. 1881ರಲ್ಲಿ ಶಿಕ್ಷಣ ನಿರ್ದೇಶಕರ ಹುದ್ದೆಯ ಹೆಸರು ಬದಲಾವಣೆಯಾಯಿತು. ಅವರನ್ನು ದಿವಾನರ ಶಿಕ್ಷಣ ಕಾರ್ಯದರ್ಶಿ

*

| ಸಂಸ್ಥೆಗಳ ಬಗೆ | ಸಂಸ್ಥೆಗಳ ಸಂಖ್ಯೆ | ವಿದ್ಯಾರ್ಥಿನಿಯರ ಸಂಖ್ಯೆ | ಸಹ ಶಿಕ್ಷಣ ಸಂಸ್ಥೆಗಳಲ್ಲಿದ್ದ ವಿದ್ಯಾರ್ಥಿನಿಯರ ಸಂಖ್ಯೆ |
|---|---|---|---|
| ಕಾಲೇಜುಗಳು (ಸಾಮಾನ್ಯ ಮತ್ತು ವೃತ್ತಿ) | 4 | 3,037 | 2,164 |
| ವೃತ್ತಿ ಶಾಲೆಗಳು ಮತ್ತು ವಿಶಿಷ್ಟ ಶಾಲೆಗಳು | — | — | 3,969 |
| ಶಿಕ್ಷಕಿಯರ ತರಬೇತಿ ಶಾಲೆಗಳು | 13 | 665 | 386 |
| ಪ್ರೌಢಶಾಲೆಗಳು | 90 | 29,800 | 13,141 |
| ಪ್ರಾಥಮಿಕ ಶಾಲೆಗಳು | 1,441 | 1,70,178 | 4,66,333 |
| ವಯಸ್ಕರ ತರಗತಿಗಳು | — | — | 3,249 |

ಎಂದು ಕರೆಯಲಾಯಿತು. 1895ರವರೆಗೂ ಇದೇ ಹೆಸರು ಆ ಹುದ್ದೆಗಿತ್ತು. 1895ರಿಂದ 1927ರವರೆಗೆ ಇದೇ ಹುದ್ದೆಯನ್ನು (ಶಿಕ್ಷಣದ ಮಹಾವೀಕ್ಷಕ) ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜುಕೇಷನ್ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಮತ್ತೊಮ್ಮೆ, 1927ರಲ್ಲಿ ಹುದ್ದೆಗೆ ಶಿಕ್ಷಣ ಇಲಾಖೆಯ ನಿರ್ದೇಶಕ ಅಥವಾ ಡೈರಕ್ಟರ್ ಆಫ್ ಪಬ್ಲಿಕ್ ಇನ್ಸ್‌ಟ್ರಕ್ಷನ್ ಎಂಬ ಹೆಸರೇ ಜಾರಿಗೆ ಬಂತು. 1927ರಲ್ಲಿ ಶಿಕ್ಷಣ ಇಲಾಖೆಯು ಪುನರ್ವ್ಯವಸ್ಥೆಗೊಂಡಿತು. ಇದರಂತೆ ಕೇಂದ್ರ ಕಚೇರಿಯಲ್ಲಿ ಒಬ್ಬ ಉಪ ನಿರ್ದೇಶಕರು (ಡೆಪ್ಯುಟಿ ಡೈರೆಕ್ಟರ್) ವಿಭಾಗ ಕೇಂದ್ರಗಳಾದ ಮೈಸೂರು ಮತ್ತು ಶಿವಮೊಗ್ಗಗಳಲ್ಲಿ ಒಬ್ಬೊಬ್ಬ ಉಪ ನಿರ್ದೇಶಕರೂ – ಅಂದರೆ, ಇಲಾಖೆಯಲ್ಲಿ ಮೂವರು ಉಪ ನಿರ್ದೇಶಕರು-ಇದ್ದರು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ವಿದ್ಯಾಧಿಕಾರಿಗಳು (ಡಿಸ್ಟ್ರಿಕ್ಟ್ ಎಜುಕೇಷನಲ್ ಆಫೀಸರ್) ಇದ್ದರು. ಇವರು ಪ್ರಾಥಮಿಕ ಮಿಡ್ಲ್ ಮತ್ತು ನಾರ್ಮಲ್ ಸ್ಕೂಲ್‌ಗಳ ಮೇಲೆ ಹತೋಟಿಯನ್ನು ಹೊಂದಿದ್ದರು. ತಾಲೂಕು ಮಟ್ಟದಲ್ಲಿ ಸಹಾಯಕ ತನಿಖಾಧಿಕಾರಿಗಳು (ಅಸಿಸ್ಟೆಂಟ್ ಇನ್ಸ್‌ಪೆಕ್ಟರ್ ಆಫ್ ಎಜುಕೇಷನ್) ಇದ್ದರು. ರೇಂಜಿನ ಪ್ರಾಥಮಿಕ ಶಾಲೆಗಳ ಮೇಲೆ ಇವರು ಹತೋಟಿಯನ್ನು ಹೊಂದಿದ್ದರು. (ಕೆಲವು ತಾಲೂಕುಗಳು ಸೇರಿ ಒಂದು ರೇಂಜ್ ಆಗುತ್ತಿತ್ತು.) ಇವಲ್ಲದೆ ಉರ್ದು ಶಾಲೆಗಳಿಗಾಗಿ ಉಪ ಮತ್ತು ಸಹಾಯಕ ತನಿಖಾಧಿಕಾರಿಗಳೂ ಬಾಲಕಿಯರ ಶಾಲೆಗಳಿಗಾಗಿ ಸಹಾಯಕ ತನಿಖಾಧಿಕಾರಿಣಿಯರೂ ಇದ್ದರು. 1946ರಲ್ಲಿ ಮತ್ತೊಮ್ಮೆ ಶಿಕ್ಷಣ ಇಲಾಖೆಯು ಪುನರ್ವ್ಯವಸ್ಥೆಗೊಂಡಿತು. ಉಪನಿರ್ದೇಶಕರ ವ್ಯಾಪ್ತಿಯಲ್ಲಿ ಬದಲಾವಣೆಯಾಗಿ ಅವರೆಲ್ಲರೂ ನಿರ್ದೇಶಕರ ಕಚೇರಿಗೆ ಹೋದರು. ರಾಜ್ಯದ ಎಲ್ಲ ಪ್ರಾಥಮಿಕ, ಮಿಡ್ಲ್ ಮತ್ತು ಪ್ರೌಢಶಾಲೆಗಳಿಗೆ ಬೇರೆ ಬೇರೆ ಉಪನಿರ್ದೇಶಕರು ಇರುವಂತಾಯಿತು. 1955ರಲ್ಲಿ, ಪುನಃ ಇಲಾಖೆಯು ಪುನರ್ವ್ಯವಸ್ಥೆಯಾಯಿತು. ಹಿಂದಿನಂತೆ ವಿಭಾಗಗಳ ಉಪನಿರ್ದೇಶಕರು ಬೇರೆ ಬೇರೆ ವಿಭಾಗಗಳ ಅಧಿಕಾರಿಗಳಾದರು. ಬೆಂಗಳೂರು, ಮೈಸೂರು ಮತ್ತು ಚಿತ್ರದುರ್ಗಗಳು ಈ ವಿಭಾಗಗಳ ಕೇಂದ್ರಗಳಾಗಿದ್ದವು. 1950ರಲ್ಲಿ ರಾಜ್ಯ ಪುನರ್ಘಟನೆಯ ಸಮಯದಲ್ಲಿ ರಾಜರ ಆಳ್ವಿಕೆಯಲ್ಲಿದ್ದ ಹಳೆಯ ಮೈಸೂರು ಸಂಸ್ಥಾನದಲ್ಲಿ ಒಬ್ಬ ನಿರ್ದೇಶಕರೂ, ಮೂರು ಉಪನಿರ್ದೇಶಕರೂ, ಹನ್ನೊಂದು ಶಿಕ್ಷಣಾಧಿಕಾರಿಗಳೂ ಇದ್ದರು. ಜೊತೆಗೆ ಒಂದೊಂದು ರೇಂಜಿಗೂ ಒಬ್ಬೊಬ್ಬ ಶಾಲಾ ತನಿಖಾಧಿಕಾರಿ (ಇನ್ಸ್‌ಪೆಕ್ಟರ್ ಆಫ್ ಸ್ಕೂಲ್ಸ್) ಇದ್ದರು.

1953ಕ್ಕೆ ಹಿಂದೆ, ಮುಂಬೈ ಪ್ರಾಂತದ ದಕ್ಷಿಣ ವಿಭಾಗದ ಕೇಂದ್ರವು ಬೆಳಗಾವಿಯಲ್ಲಿ ಇತ್ತು. ಎಲ್ಲ ಕನ್ನಡ ಜಿಲ್ಲೆಗಳು ಈ ವಿಭಾಗದಲ್ಲಿದ್ದವು. ವಿಭಾಗದ ಮುಖ್ಯಾಧಿಕಾರಿಯು ಶಿಕ್ಷಣ ತನಿಖಾಧಿಕಾರಿ (ಎಜುಕೇಷನ್ ಇನ್ಸ್‌ಪೆಕ್ಟರ್) ಆಗಿದ್ದರು. ಈತನಿಗೆ ಇಬ್ಬರು ಸಹಾಯಕ ಶಿಕ್ಷಣ ತನಿಖಾಧಿಕಾರಿಗಳು (ಅಸಿಸ್ಟೆಂಟ್ ಎಜುಕೇಷನಲ್ ಇನ್ಸ್‌ಪೆಕ್ಟರುಗಳು) ಸಹಾಯಕರಾಗಿದ್ದರು. 1953ರಲ್ಲಿ, ಈ ಜಿಲ್ಲೆಗಳು ಒಬ್ಬೊಬ್ಬ ಶಿಕ್ಷಣ ತನಿಖಾಧಿಕಾರಿಯ ಆಡಳಿತಕ್ಕೆ ಬಂದವು. ಈತನಿಗೆ ಒಬ್ಬ ಉಪ ಶಿಕ್ಷಣ ತನಿಖಾಧಿಕಾರಿಯು ಸಹಾಯಕನಾಗಿದ್ದನು. ಸುಮಾರು 50-60 ಪ್ರಾಥಮಿಕ ಶಾಲೆಗಳನ್ನು ತನಿಖೆ ಮಾಡಲು ಒಬ್ಬ ಸಹಾಯಕ ಉಪತನಿಖಾಧಿಕಾರಿ ಇದ್ದರು. ಪ್ರಾಥಮಿಕ ಶಾಲೆಗಳು ಸರ್ಕಾರದಿಂದ ಶಾಸನಬದ್ಧ ಸ್ಥಳೀಯ ಸಂಸ್ಥೆಗಳ ವಶದಲ್ಲಿದ್ದವು. ಸೆಕೆಂಡರಿ ಶಾಲೆಗಳೂ ಶಿಕ್ಷಕರ ತರಬೇತಿ ಸಂಸ್ಥೆಗಳೂ ಸ್ಥಳೀಯ ಶಾಲಾ ಮಂಡಲಿಯ ಆಡಳಿತಾಧಿಕಾರಿಗಳೂ ಜಿಲ್ಲಾ ಶಿಕ್ಷಣ ತನಿಖಾಧಿಕಾರಿಯ ಹತೋಟಿಗೆ ಒಳಪಟ್ಟಿದ್ದವು.

1953ಕ್ಕೆ ಹಿಂದೆ, ಬಳ್ಳಾರಿ ಜಿಲ್ಲೆಯು ಬಳ್ಳಾರಿ, ಅನಂತಪುರ, ಕಡಪಾ, ಕರ್ನೂಲ್, ಕೃಷ್ಣಾ ಜಿಲ್ಲೆಗಳನ್ನು ಒಳಗೊಂಡ ಶಾಲಾ ವಿಭಾಗದ ತನಿಖಾಧಿಕಾರಿಯ (ಇನ್ಸ್‌ಪೆಕ್ಟರ್ ಆಫ್ ಸ್ಕೂಲ್ ಡಿವಿಜನ್) ಅಧೀನದಲ್ಲಿತ್ತು. ವಿಭಾಗ ತನಿಖಾಧಿಕಾರಿಯು ಪ್ರೌಢಶಾಲೆಗಳನ್ನು ಮತ್ತು ಶಿಕ್ಷಣಾಧಿಕಾರಿಗಳು (ಎಜುಕೇಷನಲ್ ಆಫೀಸರ್ಸ್) ಮತ್ತು ಉಪ ತನಿಖಾಧಿಕಾರಿಗಳು (ಡೆಪ್ಯುಟಿ ಇನ್ಸ್‌ಪೆಕ್ಟರ್‌ಗಳು) ಪ್ರಾಥಮಿಕ ಶಾಲೆಗಳನ್ನು ತನಿಖೆ ಮಾಡುತ್ತಿದ್ದರು. 1953ರಲ್ಲಿ ಈ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರಿಕೊಂಡಾಗ, ಜಿಲ್ಲೆಯಲ್ಲಿ ಒಬ್ಬ ಜಿಲ್ಲಾ ಶಿಕ್ಷಣಾಧಿಕಾರಿಯೂ ಮತ್ತು ಆರು ಶಾಲೆಗಳ ಉಪ ತನಿಖಾಧಿಕಾರಿಗಳೂ ಇದ್ದರು. 1860-61ರಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯು ಒಬ್ಬ ಉಪಶಿಕ್ಷಣ ತನಿಖಾಧಿಕಾರಿಯ (ಡೆಪ್ಯುಟಿ ಇನ್ಸ್‌ಪೆಕ್ಟರ್ ಆಫ್ ಎಜುಕೇಷನ್) ಅಧೀನದಲ್ಲಿತ್ತು. ಮಲಬಾರ್ ಜಿಲ್ಲೆಯೂ ಮತ್ತು ಉತ್ತರ ಕನ್ನಡ ಜಿಲ್ಲೆಯೂ ಈತನ ಅಧೀನದಲ್ಲಿಯೇ ಇದ್ದವು. 1908-09ರಲ್ಲಿ, ಜಿಲ್ಲೆಗೇ ಒಬ್ಬ ಪ್ರತ್ಯೇಕ ಉಪತನಿಖಾಧಿಕಾರಿಯು (ಅಸಿಸ್ಟೆಂಟ್ ಇನ್ಸ್‌ಪೆಕ್ಟರ್) ನೇಮಕವಾದನು. ಎಲಿಮೆಂಟರಿ ಶಾಲೆಗಳನ್ನು ಸಹಾಯಕ ತನಿಖಾಧಿಕಾರಿಯೂ ಮತ್ತು ಸೆಕೆಂಡರಿ ಶಾಲೆಗಳನ್ನು ಶಿಕ್ಷಣ ತನಿಖಾಧಿಕಾರಿಯೂ ತನಿಖೆ ಮಾಡುತ್ತಿದ್ದರು. ಕೊಳ್ಳೇಗಾಲ ತಾಲೂಕು ಕೂನೂರಿನಲ್ಲಿದ್ದ ಉತ್ತರ ವಲಯ (ನಾರ್ತ್ ಸರ್ಕಲ್) ದ ವ್ಯಾಪ್ತಿಗೆ ಸೇರಿತ್ತು. ಇದು ಮೊದಲನೇಯ ವಿಭಾಗಕ್ಕೆ (ಫಸ್ಟ್ ಡಿವಿಜನ್) ಸೇರಿತ್ತು. 1938ರಲ್ಲಿ ಇದೇ ಒಂದು ಪ್ರತ್ಯೇಕ ರೇಂಜ್ ಆಯಿತು. ಒಬ್ಬ ಕಿರಿಯ ಉಪತನಿಖಾಧಿಕಾರಿಯು (ಜ್ಯೂನಿಯರ್ ಡೆಪ್ಯುಟಿ ಇನ್ಸ್‌ಪೆಕ್ಟರ್) ಇದರ ಮೇಲ್ವಿಚಾರಕನಾಗಿದ್ದನು. ದಕ್ಷಿಣ ಕನ್ನಡ-ಕೊಳ್ಳೇಗಾಲ ಪ್ರದೇಶದ ಎಲಿಮೆಂಟರಿ ಮತ್ತು ಸೆಕೆಂಡರಿ ಶಿಕ್ಷಣವನ್ನೂ ಮುಖ್ಯವಾಗಿ ಜಿಲ್ಲಾ ಮಂಡಲಿ (ಡಿಸ್ಟ್ರಿಕ್ಟ್ ಬೋರ್ಡ್) ನಗರಸಭೆಗಳು, ಮತ್ತು ಖಾಸಗಿ ಸಂಸ್ಥೆಗಳು ನಡೆಸುತ್ತಿದ್ದವು.

1912ರಲ್ಲಿ ಕಲ್ಬುರ್ಗಿಯಲ್ಲಿ ವಿಭಾಗ ಕೇಂದ್ರವಿತ್ತು. ಇದಕ್ಕೆ ಒಬ್ಬ ವಿಭಾಗ ಶಿಕ್ಷಣ ತನಿಖಾಧಿಕಾರಿ (ಡಿವಿಜನಲ್

ಇನ್ಸ್‌ಪೆಕ್ಟರ್ ಆಫ್ ಎಜುಕೇಷನ್) ಇದ್ದರು. ಈತನ ಕೈಕೆಳಗೆ ನಾಜರ್ ಅಥವಾ ಉಪಸಹಾಯಕ ತನಿಖಾಧಿಕಾರಿಗಳು ಇದ್ದರು. ಇವರು ಜಿಲ್ಲೆಯ ಅಧಿಕಾರಿಗಳಾಗಿದ್ದರು. 1914ರಲ್ಲಿ ಪ್ರತೀಯೊಂದು ಜಿಲ್ಲೆಗೂ ಒಬ್ಬ ತನಿಖಾಧಿಕಾರಿಯ ಹುದ್ದೆಯನ್ನು ಮಂಜೂರು ಮಾಡಲಾಯಿತು. ಶಿಕ್ಷಣ ರೇಂಜುಗಳು ಉಪಶಿಕ್ಷಣ ತನಿಖಾಧಿಕಾರಿಗಳ ಅಧೀನದಲ್ಲಿದ್ದವು. ಜಿಲ್ಲೆಯ ಆಡಳಿತಾಧಿಕಾರವು ಜಿಲ್ಲಾ ತನಿಖಾಧಿಕಾರಿಗಳಿಗಿತ್ತು. ಪ್ರಾಥಮಿಕ ಶಿಕ್ಷಣದ ಹೊಣೆಯನ್ನು ಸಂಪೂರ್ಣವಾಗಿ ಸರ್ಕಾರವೇ ಹೊತ್ತುಕೊಂಡಿತ್ತು.

1857ರಲ್ಲಿ ಕೊಡಗಿನಲ್ಲಿ ಶಿಕ್ಷಣ ಇಲಾಖೆಯು ಆರಂಭವಾಯಿತು. ಆಗ ಅದು ಬೆಂಗಳೂರಿನ ಶಿಕ್ಷಣ ಇಲಾಖೆಯ ನಿರ್ದೇಶಕರ ಅಧೀನದಲ್ಲೇ ಇತ್ತು. 1903ರಿಂದ 1924ರವರೆಗೆ ಅದು ಮದ್ರಾಸಿನ ಶಿಕ್ಷಣ ಇಲಾಖೆಯ ನಿರ್ದೇಶಕರ ಅಧೀನದಲ್ಲಿತ್ತು. 1939ರಲ್ಲಿ ಜಿಲ್ಲಾ ಶಿಕ್ಷಣ ತನಿಖಾಧಿಕಾರಿಯ ಹುದ್ದೆಯು ಮಂಜೂರಾಯಿತು. 1954ರಲ್ಲಿ ರಾಜ್ಯ ಶಿಕ್ಷಣಾಧಿಕಾರಿಯೆಂದು ಈ ಹುದ್ದೆಯ ಹೆಸರು ಬದಲಾಯಿತು.

ರಾಜ್ಯ ಪುನರ್ಘಟನೆಯಾದ ಮೇಲೆ, ಐದು ಶಿಕ್ಷಣ ವಿಭಾಗಗಳು ಅಸ್ತಿತ್ವಕ್ಕೆ ಬಂದವು. ಇವುಗಳ ಕೇಂದ್ರಗಳು ಬೆಂಗಳೂರು, ಮೈಸೂರು, ಚಿತ್ರದುರ್ಗ, ಧಾರವಾಡ ಮತ್ತು ಕಲ್ಬುರ್ಗಿ ಆಗಿದ್ದವು. ಪ್ರತೀಯೊಂದು ವಿಭಾಗವೂ ಒಬ್ಬ ಉಪನಿರ್ದೇಶಕರ ಅಧೀನದಲ್ಲಿತ್ತು. ಜೊತೆಗೆ ಕೇಂದ್ರ ಕಚೇರಿಯಲ್ಲಿಯೂ ಒಬ್ಬ ಉಪನಿರ್ದೇಶಕರಿದ್ದರು. 1960ರಲ್ಲಿ, ಕೇಂದ್ರ ಕಚೇರಿಗೆ ಮೂರು ಸಹ ನಿರ್ದೇಶಕರ ಹುದ್ದೆಗಳು ಮಂಜೂರಾದವು. ಜಿಲ್ಲಾ ಕೇಂದ್ರಗಳಲ್ಲಿ ಕೆಲಸದ ಹೊರೆ ಅತಿಯಾಗಿದ್ದುದರಿಂದ ಅದನ್ನು ಹಗುರಗೊಳಿಸಲು ಮೂವತ್ತನಾಲ್ಕು ಸಹಾಯಕ ಶಿಕ್ಷಣಾಧಿಕಾರಿಗಳ ಹುದ್ದೆಗಳನ್ನು 1960-61 ಮತ್ತು 1961-62ರಲ್ಲಿ ಮಂಜೂರು ಮಾಡಲಾಯಿತು. ಇವುಗಳಲ್ಲಿ, ಕೆಲವು ಜಿಲ್ಲಾ ಕೇಂದ್ರಗಳಲ್ಲಿಯೂ ಕೆಲವು ಉಪವಿಭಾಗದ ಕೇಂದ್ರ ಸ್ಥಾನಗಳಲ್ಲಿಯೂ ಇದ್ದವು. ಶಾಲಾ ಉಪತನಿಖಾಧಿಕಾರಿಗಳ ಹುದ್ದೆಗಳನ್ನು ಮಂಜೂರು ಮಾಡಿ ತಾಲೂಕು ಮಟ್ಟದ ತನಿಖೆ ವ್ಯವಸ್ಥೆಯನ್ನು ಬಲಗೊಳಿಸಲಾಯಿತು. ಉಪನಿರ್ದೇಶಕರಿಗೆ ಸಹಾಯಕರಾಗಿ ವಿಷಯಗಳ ತನಿಖಾಧಿಕಾರಿಗಳನ್ನು (ಸಬ್ಜೆಕ್ಟ್ ಇನ್ಸ್‌ಪೆಕ್ಟರ್) ನೇಮಿಸಲಾಯಿತು. ಇವರು ವಿಭಾಗದ ಪ್ರೌಢಶಾಲೆಗಳಲ್ಲಿನ ವಿವಿಧ ವಿಷಯಗಳ ಮಟ್ಟವನ್ನು ಕಾಪಾಡಲು ಉಪನಿರ್ದೇಶಕರಿಗೆ ಸಹಾಯಕರಾಗಿದ್ದರು. ಪ್ರೌಢಶಾಲಾ ಶಿಕ್ಷಕರಿಗೆ ಇವರು ಮಾರ್ಗದರ್ಶಕರಾಗಿದ್ದರು. 1970ರಲ್ಲಿ ಇಲಾಖೆಯು ಇನ್ನೊಂದು ಸಾರಿ ಪುನರ್‌ವ್ಯವಸ್ಥೆಗೊಂಡಿತು. ಆಗ ವಿಭಾಗಗಳ ಸಂಖ್ಯೆಯನ್ನು ಐದರಿಂದ ನಾಲ್ಕಕ್ಕೆ ಇಳಿಸಲಾಯಿತು. ಆಗ ಶಿಕ್ಷಣ ವಿಭಾಗದ ವ್ಯಾಪ್ತಿಯೂ ರೆವಿನ್ಯೂ ವಿಭಾಗದ ವ್ಯಾಪ್ತಿಯೂ ಒಂದೇ ಆದವು. ಪ್ರತೀಯೊಂದು ವಿಭಾಗಕ್ಕೂ ಒಬ್ಬ ಸಹನಿರ್ದೇಶಕರು ಮುಖ್ಯಾಧಿಕಾರಿಯಾದರು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಶಿಕ್ಷಣಾಧಿಕಾರಿಗಳ ಬದಲು ಉಪನಿರ್ದೇಶಕರು ಬಂದರು. ಇವರಿಗೆ ಶಿಕ್ಷಣಾಧಿಕಾರಿಗಳೂ ಮತ್ತು ವಿಷಯ ತನಿಖಾಧಿಕಾರಿಗಳ ತಂಡವೂ ಸಹಾಯಕವಾಗಿದ್ದವು. ಎಲ್ಲಾ ಪ್ರೌಢಶಾಲೆಗಳೂ ಜಿಲ್ಲಾ ಉಪನಿರ್ದೇಶಕರ ಅಧೀನಕ್ಕೆ ಬಂದವು. ಶಿಕ್ಷಣದ ರೇಂಜುಗಳ ಸಹಾಯಕ ಶಿಕ್ಷಣಾಧಿಕಾರಿಗಳ ಅಧೀನಕ್ಕೆ ಬಂದವು. ಇವರಿಗೆ 75 ಶಾಲೆಗಳಿಗೆ ಒಬ್ಬರಂತೆ ಪದವೀಧರ ಶಾಲಾ ತನಿಖಾಧಿಕಾರಿಗಳು ಸಹಾಯಕರಾಗಿದ್ದಾರೆ. 1983ರಲ್ಲಿ ಆಡಳಿತ ವ್ಯವಸ್ಥೆಯು ರಾಜ್ಯಮಟ್ಟದಲ್ಲಿ ಹೀಗಿದ್ದಿತು: ಇಲಾಖೆಯ ಮುಖ್ಯಾಧಿಕಾರಿ ಶಿಕ್ಷಣ ಆಯುಕ್ತರು; 1979ರಲ್ಲಿ ನಿರ್ಮಿತವಾದ ಈ ಹುದ್ದೆಗೆ ಸಹಾಯಕರಾಗಿ ಪ್ರಾಥಮಿಕ ಶಿಕ್ಷಣದ ನಿರ್ದೇಶಕರು, ಸೆಕೆಂಡರಿ ಶಿಕ್ಷಣ ನಿರ್ದೇಶಕರು, ಪರೀಕ್ಷೆಗಳ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ನಿರ್ದೇಶಕರು, ವೃತ್ತಿಶಿಕ್ಷಣ ನಿರ್ದೇಶಕರು ಮತ್ತು ಶಿಕ್ಷಣ ತರಬೇತಿ ಮತ್ತು ಸಂಶೋಧನಾ ನಿರ್ದೇಶಕರೂ ಇದ್ದಾರೆ. ಜೊತೆಗೆ ಒಬ್ಬ ಅಧಿಕ (ಅಡಿಷನಲ್) ನಿರ್ದೇಶಕರೂ ಒಬ್ಬ ಆಡಳಿತ ಮತ್ತು ಯೋಜನೆಯ ಸಹ ನಿರ್ದೇಶಕರೂ, ಶಾರೀರಿಕ ಶಿಕ್ಷಣ ಉಪನಿರ್ದೇಶಕರೂ, ಒಬ್ಬ ಪ್ರಧಾನ ಲೆಕ್ಕಾಧಿಕಾರಿಯೂ ಸಹಾಯಕರಾಗಿದ್ದಾರೆ. ಆಯುಕ್ತರಿಗೆ ಇತರ ಸಿಬ್ಬಂದಿಯೂ ಇದೆ.

## ಪದವಿಪೂರ್ವ ಶಿಕ್ಷಣ

1956-57ರಲ್ಲಿ ಎರಡು ವರ್ಷದ ಇಂಟರ್‌ಮೀಡಿಯಟ್ ಶಿಕ್ಷಣ ವ್ಯವಸ್ಥೆಯು ರದ್ದಾಯಿತು. ಅದಕ್ಕೆ ಬದಲಾಗಿ ಒಂದು ವರ್ಷದ ಪದವಿಪೂರ್ವ ಶಿಕ್ಷಣ ವ್ಯವಸ್ಥೆಯನ್ನು ಆಚರಣೆಗೆ ತರಲಾಯಿತು. 11ನೇಯ ಸ್ಟ್ಯಾಂಡರ್ಡನ್ನು ಕೆಲವು ಆರಿಸಿದ ಪ್ರೌಢಶಾಲೆಗಳಲ್ಲಿ ತೆರೆಯಲಾಯಿತು. ಅಂದರೆ ಈ ಪ್ರೌಢಶಾಲೆಗಳು ಉನ್ನತ ಪ್ರೌಢಶಾಲೆಗಳು ಅಥವಾ ಹೈಯರ್ ಸೆಕೆಂಡರಿ ಶಾಲೆಗಳಾಗಿ ಪರಿವರ್ತಿತವಾದವು. ಈ ಉನ್ನತ ಪ್ರೌಢಶಾಲೆಗಳ ಆಡಳಿತವು ಶಿಕ್ಷಣ ಇಲಾಖೆಯ ಅಧೀನದಲ್ಲಿತ್ತು. ಜೊತೆಗೆ ಹಳೆಯ ಇಂಟರ್‌ಮೀಡಿಯಟ್ ಕಾಲೇಜುಗಳಲ್ಲೂ ಈ ತರಗತಿಯು ಇತ್ತು. ಅಷ್ಟಲ್ಲದೆ ಕೆಲವು ಪ್ರಥಮ ದರ್ಜೆ ಕಾಲೇಜುಗಳಲ್ಲಿಯೂ ಈ ಸ್ಟ್ಯಾಂಡರ್ಡನ್ನು ತೆರೆಯಲಾಯಿತು. ಇವು ವಿಶ್ವವಿದ್ಯಾಲಯಗಳ ಅಧೀನದಲ್ಲಿದ್ದವು. ಕಾಲೇಜು ಶಿಕ್ಷಣ ಇಲಾಖೆಯು ಸ್ಥಾಪಿತವಾದ ಮೇಲೆ ಈ ಕಾಲೇಜುಗಳು ಆ ಇಲಾಖೆಯ ಅಧೀನಕ್ಕೆ ಬಂದವು. ಒಂದು ವರ್ಷದ ಪದವಿಪೂರ್ವ ಶಿಕ್ಷಣ ತರಗತಿ ಅಥವಾ 11ನೇಯ ಸ್ಟ್ಯಾಂಡರ್ಡ್ ಅಂತ್ಯದಲ್ಲಿ ಮೈಸೂರು, ಕರ್ನಾಟಕ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳು ಒಂದು ಪಬ್ಲಿಕ್ ಪರೀಕ್ಷೆಯನ್ನು ತಮ್ಮ ತಮ್ಮ ವ್ಯಾಪ್ತಿಗೆ ಬರುವ ಪ್ರದೇಶಗಳಲ್ಲಿ ನಡೆಸುತ್ತಿದ್ದವು. ರಾಷ್ಟ್ರೀಯ ಶಿಕ್ಷಣ ನೀತಿಯ ಪ್ರಕಾರ ಶಿಕ್ಷಣ ವ್ಯವಸ್ಥೆಯು 10+2+3 ಆಗಿತ್ತು.

ಇದನ್ನು ರಾಜ್ಯ ಸರ್ಕಾರವು ಅಂಗೀಕರಿಸಿತು. 71-72ರಿಂದ ಎರಡು ವರ್ಷದ ಪದವಿಪೂರ್ವ ಶಿಕ್ಷಣವು ಜಾರಿಗೆ ಬಂತು. ಈ ಕೋರ್ಸಿನ ಪ್ರಕಾರ ಎರಡು ಭಾಷೆಗಳನ್ನೂ ಮತ್ತು ನಾಲ್ಕು ಐಚ್ಛಿಕ ವಿಷಯಗಳನ್ನೂ ಕಲಿಯಬೇಕಾಗುತ್ತದೆ. ಈ ಐಚ್ಛಿಕ ವಿಷಯಗಳನ್ನು ಅನೇಕ ವಿಷಯಗಳನ್ನೊಳಗೊಂಡ ಒಂದು ದೊಡ್ಡ ಪಟ್ಟಿಯಿಂದ ಆರಿಸಿಕೊಳ್ಳಬಹುದು.

ಸರ್ಕಾರವು 1970ರಲ್ಲಿ ಪದವಿಪೂರ್ವ ಶಿಕ್ಷಣ ಮಂಡಲಿಯನ್ನು ರಚಿಸಿತು. ಇದಕ್ಕೆ ರಾಜ್ಯ ವಿಶ್ವವಿದ್ಯಾಲಯ ಒಂದರ ಉಪಕುಲಪತಿಗಳು ಮುಖ್ಯಸ್ಥರಾಗಿರುತ್ತಾರೆ. ಉಪಕುಲಪತಿಗಳ ಅಧಿಕಾರವು ಪರ್ಯಾಯ ಕ್ರಮದ್ದಾಗಿರುತ್ತದೆ. ಅಂದರೆ ಒಬ್ಬರ ಅವಧಿಯು ಮುಗಿದ ಮೇಲೆ ಮತ್ತೊಬ್ಬ ಉಪಕುಲಪತಿ ಅಧಿಕಾರಕ್ಕೆ ಬರುತ್ತಾರೆ. (1985ರಲ್ಲಿ ಪ್ರತ್ಯೇಕ ಪೂರ್ಣ ಕಾಲೀನ ನಿರ್ದೇಶಕರನ್ನು ನೇಮಿಸಲಾಗಿದೆ). ಅದರಲ್ಲಿ ಪದ ನಿಮಿತ್ತ ಸದಸ್ಯರೂ ಮತ್ತು ಬೇರೆ ಬೇರೆ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ನಾಮಕರಣ ಸದಸ್ಯರೂ ಇರುತ್ತಾರೆ. ಪದವಿ ಪೂರ್ವ ಶಿಕ್ಷಣದ ನಿರ್ದೇಶಕರು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ. ಈ ಮಂಡಲಿಯು ಕೇವಲ ಸಲಹಾ ಮಂಡಲಿ, ಶಾಸನವೊಂದಕ್ಕನುಗುಣವಾಗಿ ರಚಿತವಾದದ್ದಲ್ಲ. ಆದರೆ ಪರೀಕ್ಷೆಯನ್ನು ನಡೆಸುವುದು ಮುಂತಾದ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಅದಕ್ಕೆ ಸಂಪೂರ್ಣ ಸ್ವಾತಂತ್ರ್ಯ ('ಆಟಾನಮಿ')ವಿದೆ. ಈ ನಿರ್ದೇಶಕರ ಅಧೀನದಲ್ಲಿ ಕೇಂದ್ರ ಕಚೇರಿ ಮಾತ್ರ ಇದೆ. ವಿಭಾಗ ಮತ್ತು ಜಿಲ್ಲಾ ಮಟ್ಟಗಳಲ್ಲಿ ಯಾವ ಅಧಿಕಾರಿಯಾಗಲೀ ಅಥವಾ ಕಚೇರಿಯಾಗಲೀ ಇಲ್ಲ. ಈ ಕೇಂದ್ರ ಕಚೇರಿಯಲ್ಲಿ ನಿರ್ದೇಶಕರಿಗೆ ಸಹಾಯಕರಾಗಿ ಒಬ್ಬ ಉಪನಿರ್ದೇಶಕರೂ ಮತ್ತು ಒಬ್ಬ ಸಹಾಯಕ ನಿರ್ದೇಶಕರೂ ಇದ್ದಾರೆ.

ಪದವಿಪೂರ್ವ ಶಿಕ್ಷಣದ ಪಠ್ಯವಸ್ತು, ಪಠ್ಯಪುಸ್ತಕಗಳು ಮತ್ತು ಪರೀಕ್ಷೆಗಳು ರಾಜ್ಯದಲ್ಲೆಲ್ಲಾ ಒಂದೇ ಆಗಿದ್ದರೂ, ಈ ತರಗತಿಗಳಿರುವ ಕಿರಿಯ ಕಾಲೇಜುಗಳು ಬೇರೆ ಬೇರೆ ಅಧಿಕಾರಿಗಳ ಅಧೀನಕ್ಕೆ ಒಳಪಟ್ಟಿವೆ. ಸಂಯುಕ್ತ ಕಿರಿಯ ಕಾಲೇಜುಗಳ ಸಂಖ್ಯೆ ಅತಿ ಹೆಚ್ಚು. ಇವುಗಳಲ್ಲಿ ಪ್ರೌಢಶಾಲೆಯ ತರಗತಿಗಳೂ ಇವೆ. ಇವೆಲ್ಲವು ಸಾರ್ವಜನಿಕ ಶಿಕ್ಷಣ ನಿರ್ದೇಶಕರ ಅಧೀನದಲ್ಲಿವೆ. ಪ್ರಥಮ ದರ್ಜೆ ಕಾಲೇಜಿನಲ್ಲಿರುವ ಪದವಿಪೂರ್ವ ಶಿಕ್ಷಣ ತರಗತಿಗಳು ಕಾಲೇಜು ಶಿಕ್ಷಣ ನಿರ್ದೇಶಕರ ಅಧೀನದಲ್ಲಿವೆ. ಪದವಿಪೂರ್ವ ಶಿಕ್ಷಣ ತರಗತಿಗಳು ಮಾತ್ರ ಇರುವ ಕಿರಿಯ ಕಾಲೇಜುಗಳು ಪದವಿಪೂರ್ವ ಶಿಕ್ಷಣ ನಿರ್ದೇಶಕರ ನೇರ ಆಡಳಿತಕ್ಕೆ ಒಳಪಟ್ಟಿವೆ. ಈ ಕೆಳಗಿನ ಪಟ್ಟಿಯಲ್ಲಿ* 1981-82ರಲ್ಲಿದ್ದ ಕಿರಿಯ ಕಾಲೇಜುಗಳ ಸಂಖ್ಯೆಯನ್ನೂ ಮತ್ತು ಅವುಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆಯನ್ನೂ ತೋರಿಸಿದೆ.

ತೀರ ಇತ್ತೀಚಿನವರೆಗೆ, ಪದವಿಪೂರ್ವ ಶಿಕ್ಷಣ ಮಂಡಲಿಯು ಒಂದು ಮತ್ತು ಎರಡನೇಯ ವರ್ಷದ ಅಂತ್ಯದಲ್ಲಿ ಪಬ್ಲಿಕ್ ಪರೀಕ್ಷೆಯನ್ನು ನಡೆಸುತ್ತಿತ್ತು. 49ನೇ ಪುಟದ ಪಟ್ಟಿಯಲ್ಲಿ ಪರೀಕ್ಷೆಗಳ ಅಂಕಿ ಅಂಶಗಳನ್ನು ಕೊಡಲಾಗಿದೆ.

1978ರಲ್ಲಿ ಮೊದಲನೇಯ ವರ್ಷದ ಪರೀಕ್ಷೆಯನ್ನು ರದ್ದು ಮಾಡಲಾಯಿತು. ಇದು ಪದವಿ ಪರೀಕ್ಷೆಯನ್ನೊಳಗೊಂಡು ಮೂರು ಪರೀಕ್ಷೆಗಳು ಮಾತ್ರ ಡಿಗ್ರಿ ಮಟ್ಟದವರೆಗೆ ಇರಬೇಕು, ಎಂಬ ರಾಷ್ಟ್ರದ ನೀತಿಗೆ ಅನುಗುಣವಾಗಿ ಮಾಡಿದ ನಿರ್ಧಾರ. ಹೊಸ ಪಠ್ಯವಸ್ತುವನ್ನು 1981-82ರಲ್ಲಿ ಮೊದಲನೇಯ ವರ್ಷದ ತರಗತಿಯಲ್ಲಿ ಜಾರಿಗೆ ತರಲಾಯಿತು.

*

| ಕಿರಿಯ ಕಾಲೇಜುಗಳು | ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| ಸಂಯುಕ್ತ ಕಿರಿಯ ಕಾಲೇಜುಗಳು (ಉನ್ನತ ಪ್ರೌಢಶಾಲೆಗಳು) | 379 | ಒಂದನೇಯ ವರ್ಷ 1,73,000 |
| ಪದವಿಪೂರ್ವ ಶಿಕ್ಷಣ ತರಗತಿಗಳು ಮಾತ್ರ ಇರುವ ಜೂನಿಯರ್ ಕಾಲೇಜುಗಳು | 78 | ಎರಡನೇಯ ವರ್ಷ 1,11,800 |
| ಸಂಯುಕ್ತ ಕಿರಿಯ ಕಾಲೇಜುಗಳು (ಪದವಿಪೂರ್ವ ಶಿಕ್ಷಣ ತರಗತಿಗಳನ್ನುಳ್ಳ ಪ್ರಥಮ ದರ್ಜೆ ಕಾಲೇಜುಗಳು) | 194 | |
| ಒಟ್ಟು | 651 | |

| ವರ್ಷ (ಏಪ್ರಿಲ್ ಪರೀಕ್ಷೆ) | ಮೊದಲನೇಯ ವರ್ಷ | | | ಎರಡನೇಯ ವರ್ಷ | | |
|---|---|---|---|---|---|---|
| | ಪರೀಕ್ಷೆಗೆ ಕುಳಿತವರ ಸಂಖ್ಯೆ | ಪಾಸಾದವರ ಸಂಖ್ಯೆ | ಶೇಕಡ | ಪರೀಕ್ಷೆಗೆ ಕುಳಿತವರ ಸಂಖ್ಯೆ | ಪಾಸಾದವರ ಸಂಖ್ಯೆ | ಶೇಕಡ |
| 1976 | 1,12,388 | 34,097 | 30.3 | 76,094 | 36,182 | 47.5 |
| 1977 | 1,11,448 | 38,778 | 34.8 | 77,900 | 40,904 | 52.5 |
| 1978 | 1,16,643 | 41,377 | 35.6 | 81,119 | 40,130 | 49.5 |
| 1979 | 1,38,638 | 42,149 | 30.4 | 90,631 | 44,572 | 49.2 |
| 1980 | — | — | — | 1,00,885 | 49,181 | 48.2 |
| 1981 | — | — | — | 1,17,807 | 56,891 | 48.2 |

### ಶಿಕ್ಷಕರ ಕಲ್ಯಾಣ ಯೋಜನೆಗಳು

ಕರ್ನಾಟಕ ರಾಜ್ಯದ ಶಿಕ್ಷಕರ ಸಹಾಯ ನಿಧಿಯು 1963-64ರಲ್ಲಿ ಸ್ಥಾಪಿತವಾಯಿತು. ಇದರ ಉದ್ದೇಶ ಶಿಕ್ಷಕರಿಗಾಗಲೀ ಅವರನ್ನು ಅವಲಂಬಿಸಿರುವ ಕುಟುಂಬ ವರ್ಗಕ್ಕಾಗಲೀ ತೊಂದರೆಯಾದಾಗ, ಶಿಕ್ಷಕರ ಮಕ್ಕಳ ಮತ್ತು ಆಶ್ರಿತರ ಉನ್ನತ ಶಿಕ್ಷಣಕ್ಕೆ ಬೇಕಾದಾಗ ಅಥವಾ ಬಹಳ ದಿನ ಖಾಯಿಲೆ ಬಿದ್ದಾಗ, ಮರಣ ಸಂಭವಿಸಿದಾಗ ಅಥವಾ ಆಕಸ್ಮಿಕಗಳಿಗೆ ಗುರಿಯಾದಾಗ ಅವರ ನೆರವಿಗೆ ಹಾಗೂ ಶಿಕ್ಷಕರು ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ದ್ರವ್ಯ ಸಹಾಯವನ್ನು ಮಾಡುವುದು. ತಾಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ಗುರುಭವನಗಳನ್ನು ಕಟ್ಟುವುದಕ್ಕೆ ಮತ್ತು ಮುಖ್ಯ ಆಸ್ಪತ್ರೆಗಳಲ್ಲಿ ಶಿಕ್ಷಕರ ವಾರ್ಡ್‌ಗಳಿಗೆ ಈ ನಿಧಿಯಿಂದ ದ್ರವ್ಯ ಸಹಾಯವನ್ನು ಮಾಡಲಾಗುತ್ತಿದೆ. ಬಹು ಉತ್ತಮ ಸೇವೆ ಸಲ್ಲಿಸಿದ ಆರಿಸಿದ ಶಿಕ್ಷಕರಿಗೆ ಅವರು ನಿವೃತ್ತರಾದ ಮೇಲೆ ಯಾವ ಷರತ್ತೂ ಇಲ್ಲದೆ ಉಚಿತವಾಗಿ ಧನಸಹಾಯವನ್ನು ಮಾಡಲಾಗುತ್ತಿದೆ. ಈ ನಿಧಿಯು ಸರ್ಕಾರದಿಂದ ಬರುವ ಅನುದಾನ, ಸ್ಥಳೀಯ ಸಂಸ್ಥೆಗಳು ನೀಡುವ ಸಹಾಯ, ಇತರ ದಾನಗಳು, ಸಹಾಯಾರ್ಥ ಮನರಂಜನಾ ಕಾರ್ಯಕ್ರಮಗಳಿಂದ ಬರುವ ಆದಾಯ, ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಂದ ಬರುವ ಚಂದಾ ಮುಂತಾದವುಗಳಿಂದ ರೂಪಿತವಾಗುವುದು.

1981ರ ಡಿಸೆಂಬರ್‌ವರೆಗೆ, ಆ ವರ್ಷ ಒಟ್ಟು ಸಂಗ್ರಹವಾದ ಮೊಬಲಗು ರೂ. 6,02,080. ಅಲ್ಲಿಯವರೆಗೆ ವಿನಿಯೋಗವಾದ ಮೊಬಲಗು ರೂ. 1,76,000. ಇದನ್ನು ಶಿಕ್ಷಕರು ಮತ್ತು ಅವರ ಆಶ್ರಿತರ ಔಷಧೋಪಚಾರಕ್ಕೆ ಕೊಡಲಾಯಿತು. ಈ ಸಹಾಯವನ್ನು ಪಡೆದ ಶಿಕ್ಷಕರ ಮತ್ತು ಅವರ ಆಶ್ರಿತರ ಸಂಖ್ಯೆ 566. ಹುಮನಾಬಾದಿನಲ್ಲಿ ತಾಲೂಕು ಶಿಕ್ಷಕರ ಭವನವನ್ನು ಕಟ್ಟಿಸಲು 85,000 ರೂಪಾಯಿಗಳನ್ನೂ, ತರೀಕೆರೆಯಲ್ಲಿ ತಾಲೂಕು ಶಿಕ್ಷಕರ ಭವನವನ್ನು ಕಟ್ಟಿಸಲು 25,000 ರೂಪಾಯಿಗಳನ್ನೂ, ರಾಣೆಬೆನ್ನೂರು ತಾಲೂಕು ಶಿಕ್ಷಕರ ಸಂಘಕ್ಕೆ 1,41,075 ರೂಪಾಯಿಗಳನ್ನೂ ಕೊಡಲಾಯಿತು. ಸುಳ್ಯ, ತಿಪಟೂರು ಮತ್ತು ಕುಣಿಗಲ್‌ಗಳಲ್ಲಿ ಗುರುಭವನಗಳನ್ನು ಕಟ್ಟಲು ಹೆಚ್ಚಿನ ಅನುದಾನವನ್ನೂ ಕೊಡಲಾಯಿತು. ಶಿಕ್ಷಕರ ಮಕ್ಕಳ ಉನ್ನತ ವಿದ್ಯಾಭ್ಯಾಸಕ್ಕಾಗಿ ಒಬ್ಬೊಬ್ಬರಿಗೆ ಒಮ್ಮೆಗೇ 100 ರೂ. ನಿಂದ 1,500 ರೂ. ಗಳವರೆಗೆ ದ್ರವ್ಯಸಹಾಯವನ್ನು ಮಾಡಲಾಗುತ್ತಿವೆ. ಕುಟುಂಬದ ಯಜಮಾನನನ್ನು ಕಳೆದುಕೊಂಡು ನಿರಾಶ್ರಿತವಾದ ಕುಟುಂಬಕ್ಕೆ ತಿಂಗಳಿಗೆ 30 ರೂ. ನಿಂದ 100 ರೂ. ವರೆಗೆ ಧನ ಸಹಾಯ ಮಾಡಲಾಗುತ್ತಿದೆ. ಇವೆರಡು ಇನ್ನಿತರ ರೂಪದ ಸಹಾಯಗಳು.

ಶಿಕ್ಷಕರ ರಾಷ್ಟ್ರೀಯ ಕಲ್ಯಾಣ ನಿಧಿಯು 1962ರಲ್ಲಿ ಸ್ಥಾಪಿತವಾಯಿತು. ಇದರ ಉದ್ದೇಶ ಶಿಕ್ಷಕರ ಕಲ್ಯಾಣವನ್ನು ಸಾಧಿಸುವುದು ಮತ್ತು ಮುಗ್ಗಟ್ಟಿನಲ್ಲಿರುವ ಶಿಕ್ಷಕರ ಮತ್ತು ಅವರ ಆಶ್ರಿತರ ತೊಂದರೆಗಳನ್ನು ಪರಿಹರಿಸುವುದು. ಶಿಕ್ಷಕರ ದಿನಾಚರಣೆಯಿಂದ ಅಂದರೆ ಆ ದಿನ ಮಾರಾಟವಾಗುವ ಚಿಕ್ಕ ಬಾವುಟಗಳಿಂದ ಬರುವ ಮೊಬಲಗೇ ಇದರ ಮುಖ್ಯ ಆದಾಯದ ಮೂಲವಾಗಿದೆ. 1981ರ ಡಿಸೆಂಬರ್‌ವರೆಗೆ, ಆ ವರ್ಷ ಸಂಗ್ರಹವಾದ ನಿಧಿಯ ಮೊತ್ತ ರೂ. 43,000. ಈ ಅವಧಿಯಲ್ಲಿ ಶಿಕ್ಷಕರಿಗೆ ವಿನಿಯೋಗವಾದ ಮೊತ್ತ 2,42,490 ರೂ. ಸಹಾಯ ಪಡೆದ ಶಿಕ್ಷಕರು ಮತ್ತು ಅವರ ಆಶ್ರಿತರ ಸಂಖ್ಯೆ 724.

ಶಿಕ್ಷಕರಿಗೆ ನೀಡುವ ಪ್ರಶಸ್ತಿಗಳು: 1958-59ರಲ್ಲಿ ಶಿಕ್ಷಕರಿಗೆ ಕೊಡುವ ರಾಷ್ಟ್ರೀಯ ಪ್ರಶಸ್ತಿಗಳು ಆರಂಭವಾದವು. 1962-63ರಲ್ಲಿ ರಾಜ್ಯ ಪ್ರಶಸ್ತಿಗಳು ಆರಂಭವಾದವು.

ಅತ್ಯುತ್ತಮ ಸೇವೆಯನ್ನು ಮಾಡಿದ ಶಿಕ್ಷಕರಿಗೆ ಪ್ರತೀವರ್ಷವೂ ಈ ಪ್ರಶಸ್ತಿಗಳನ್ನು ನೀಡಲಾಗುತ್ತಿದೆ. ರಾಷ್ಟ್ರೀಯ ಪ್ರಶಸ್ತಿಯು 500 ರೂ. ನಗದು ಮತ್ತು ಒಂದು ಪ್ರಶಂಸಾಪತ್ರ ರೂಪದಲ್ಲಿರುತ್ತವೆ. ಇದನ್ನು ರಾಷ್ಟ್ರಪತಿಯವರು ಹೊಸದಿಲ್ಲಿಯಲ್ಲಿ ಕೊಡುತ್ತಾರೆ. ರಾಜ್ಯಪ್ರಶಸ್ತಿಯು 300 ರೂ. ನಗದು ಮತ್ತು ಕರ್ನಾಟಕ ಸರ್ಕಾರದ ಪ್ರಶಂಸಾಪತ್ರದ ರೂಪದಲ್ಲಿರುತ್ತದೆ. ಮೂವರು ಪ್ರಾಥಮಿಕ ಶಾಲಾ ಶಿಕ್ಷಕರೂ ಮತ್ತು ಇಬ್ಬರು ಸೆಕೆಂಡರಿ ಶಾಲಾ ಶಿಕ್ಷಕರೂ ರಾಷ್ಟ್ರಪ್ರಶಸ್ತಿಯನ್ನು ಪ್ರತೀವರ್ಷವೂ ಪಡೆಯುತ್ತಾರೆ. ಪ್ರತೀಯೊಂದು ವಿಭಾಗದ ಇಬ್ಬರೂ ಪ್ರಾಥಮಿಕ ಶಿಕ್ಷಕರೂ, ಒಬ್ಬರು ಸೆಕೆಂಡರಿ ಶಿಕ್ಷಕರೂ ಪ್ರತೀವರ್ಷವೂ ರಾಜ್ಯ ಪ್ರಶಸ್ತಿಗಳನ್ನು ಪಡೆಯುತ್ತಾರೆ. ಈ ಪ್ರಶಸ್ತಿಗಳಿಗೆ ಶಿಕ್ಷಕರನ್ನು ಆರಿಸಲು ಜಿಲ್ಲಾ ಮತ್ತು ರಾಜ್ಯಮಟ್ಟದ ಸಮಿತಿಗಳಿವೆ.

**ಕರ್ನಾಟಕ ರಾಜ್ಯದ ವಿದ್ಯಾರ್ಥಿ ಕಲ್ಯಾಣ ನಿಧಿ:** ಕರ್ನಾಟಕ ರಾಜ್ಯದ ವಿದ್ಯಾರ್ಥಿ ಕಲ್ಯಾಣ ನಿಧಿಯು 1963-64 ರಲ್ಲಿ ಆರಂಭವಾಯಿತು. ಇದರ ಉದ್ದೇಶ ವಿದ್ಯಾರ್ಥಿಗಳ ಕಲ್ಯಾಣವನ್ನು ಸಾಧಿಸುವುದು, ಶುಲ್ಕ ಕಟ್ಟಲು ಸಹಾಯ ಮಾಡುವುದು, ಪುಸ್ತಕ, ಸಮವಸ್ತ್ರವನ್ನು ಕೊಳ್ಳಲು ಸಹಾಯ ಮಾಡುವುದು, ವಿದ್ಯಾರ್ಥಿಗಳ ಊಟ ವಸತಿಗಳಿಗಾಗುವ ಖರ್ಚಿಗೆ ಸಹಾಯ ನೀಡುವುದು, ಔಷಧೋಪಚಾರಗಳಿಗೆ ನೆರವಾಗುವುದು, ವಿದ್ಯಾಸಂಸ್ಥೆಗಳಿಗೆ ಅವರು ಇರುವ ಸ್ಥಳಗಳಿಂದ ಹೋಗಿ ಬರುವ ಖರ್ಚು ಕೊಡುವುದು, ಮುಂತಾದವು. ಮಧ್ಯಾಹ್ನದ ಊಟ, ಆರೋಗ್ಯ ರಕ್ಷಣೆ ಮುಂತಾದ ಕಾರ್ಯಕ್ರಮಗಳನ್ನು ನಡೆಸಲು ವಿದ್ಯಾಸಂಸ್ಥೆಗಳಿಗೆ ನೆರವು ನೀಡುವುದೂ ಇದರ ಕಾರ್ಯಗಳಲ್ಲಿ ಒಂದಾಗಿದೆ. ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳು ಕೊಡುವ ಅನುದಾನ, ಇತರ ದಾನಗಳು, ಸಹಾಯಾರ್ಥವಾಗಿ ನಡೆಸುವ ಮನರಂಜನಾ ಕಾರ್ಯಕ್ರಮಗಳಿಂದ ಬರುವ ಆದಾಯ, ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಕೊಡುವ ಚಂದಾ ಮುಂತಾದವುಗಳಿಂದ ಈ ನಿಧಿಯನ್ನು ಕೂಡಿಸಲಾಗಿದೆ. 1981ನೇಯ ಡಿಸೆಂಬರ್ ವರೆಗೆ, ಆ ವರ್ಷ 6,29,298 ರೂ.ಗಳನ್ನು ಸಂಗ್ರಹಿಸಲಾಯಿತು. ಈ ಹಣದಲ್ಲಿ 71,520 ರೂ.ಗಳನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಲೂ, 34,500 ರೂ.ಗಳನ್ನು ಬಡವಿದ್ಯಾರ್ಥಿಗಳು ಪ್ರವಾಸ ಹೋಗಲೂ, 34,944 ರೂ.ಗಳನ್ನು ಬಡವಿದ್ಯಾರ್ಥಿಗಳು ತಮ್ಮ ಕಾಲೇಜು ಅಥವಾ ತಾಂತ್ರಿಕ ಶಾಲೆಗಳ ಶುಲ್ಕವನ್ನು ಕಟ್ಟಲೂ, 1,81,480 ರೂ.ಗಳನ್ನು ಪರೀಕ್ಷೆಗಳಲ್ಲಿ ಹೆಚ್ಚು ಅಂಕ ಪಡೆದ ವಿದ್ಯಾರ್ಥಿಗಳಿಗೆ ಬಹುಮಾನ ಕೊಡಲೂ, 5,100 ರೂ.ಗಳನ್ನು ಚಿತ್ರಕಲಾ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಬಹುಮಾನ ನೀಡಲೂ ವೆಚ್ಚ ಮಾಡಲಾಯಿತು.

## ಪಠ್ಯೇತರ ಚಟುವಟಿಕೆಗಳು

**ಭಾರತ ಸ್ಕೌಟ್ ಮತ್ತು ಗೈಡುಗಳು:** 1909ರಲ್ಲಿ ಕ್ಯಾಪ್ಟನ್ ಟಿ. ಎಚ್. ಬೇಕರ್ ಎಂಬ ನಿವೃತ್ತ ಸೈನ್ಯಾಧಿಕಾರಿಯು ಬೆಂಗಳೂರಿನ ಬಿಷಪ್ ಕಾಟನ್ ಗಂಡುಮಕ್ಕಳ ಶಾಲೆಯಲ್ಲಿ ರಾಷ್ಟ್ರದ ಮೊದಲನೇಯ ಸ್ಕೌಟ್ ದಳವನ್ನು ಆರಂಭಿಸಿದರು. ಅನಂತರ ಆ ಚಳವಳಿಯು ದೇಶದ ಇತರ ಭಾಗಗಳಿಗೆ ಪ್ರಸಾರವಾಯಿತು. ಆದರೆ ಈ ದಳಗಳು ಯೂರೋಪಿಯನ್ ಮತ್ತು ಆ್ಯಂಗ್ಲೋ-ಇಂಡಿಯನ್ ಬಾಲಕರಿಗೆ ಮಾತ್ರ ಮೀಸಲಾಗಿದ್ದವು. ಮೈಸೂರು ದೇಶೀಯ ಸಂಸ್ಥಾನದಲ್ಲಿ ಸ್ಕೌಟ್ ಚಳವಳಿಯು 1918ರಲ್ಲಿಯೂ ಮತ್ತು ಗೈಡ್ ಚಳವಳಿಯು 1927ರಲ್ಲಿಯೂ ಆರಂಭವಾದವು. ಅದರ ಮೊದಲ ದಿನಗಳಲ್ಲಿಯೇ ಚಳವಳಿಯು ರಾಜಮನೆತನದ ಪ್ರೋತ್ಸಾಹವನ್ನು ಪಡೆಯಿತು. ಜೊತೆಗೆ ಸರ್ಕಾರದ ಮತ್ತು ಸಾರ್ವಜನಿಕರ ಸಹಾಯವನ್ನು ಪಡೆಯಿತು. ಬೆಳಗಾವಿಯಲ್ಲಿ ಸರ್ದಾರ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಮಿ. ಮಿಲ್ಲರ್ ಈ ಚಳವಳಿಗೆ ತುಂಬಾ ಒತ್ತಾಸೆಯನ್ನು ಕೊಟ್ಟರು. ಇವರನ್ನು ಮುಂಬೈ ಪ್ರಾಂತ್ಯದ ಸ್ಕೌಟ್ ಚಳವಳಿಯ ಜನಕನೆನ್ನಬಹುದು. ಮಿಲ್ಲರರ ಸ್ಕೌಟ್ ಚಟುವಟಿಕೆಗಳ ದೆಸೆಯಿಂದಾಗಿ ಮತ್ತು ಅದು ಗಳಿಸಿದ ಒಳ್ಳೆಯ ಹೆಸರಿನಿಂದಾಗಿ ಆ ಭಾಗದಲ್ಲಿ ಚಳವಳಿಯು ತುಂಬ ಜನಪ್ರಿಯವಾಯಿತು. ಕರ್ನಾಟಕದ ಬೆಳಗಾವಿಯಲ್ಲಿ ಸ್ಕೌಟ್ ಚಳವಳಿಯು ಆರಂಭವಾದದ್ದರಿಂದ ಇಡೀ ಪ್ರಾಂತ್ಯದಲ್ಲಿ ಕರ್ನಾಟಕ ಭಾಗವೇ ಈ ಚಳವಳಿಯಲ್ಲಿ ಮುಂದಾಗಿತ್ತು. 1919-20ರಲ್ಲಿ ಮಿ. ಮಿಲ್ಲರ್ ಅವರನ್ನು ಸ್ಕೌಟ್ ಚಳವಳಿಯನ್ನು ವಿಸ್ತರಿಸಲೂ ವಿವಿಧ ಚಟುವಟಿಕೆಗಳನ್ನು ಸಮನ್ವಯಗೊಳಿಸಲೂ ಇಡೀ (ಮುಂಬೈ) ಪ್ರಾಂತ್ಯಕ್ಕೆ ವಿಶೇಷಾಧಿಕಾರಿಯನ್ನಾಗಿ ನೇಮಿಸಲಾಯಿತು. ಹೈದರಾಬಾದ್ ಸಂಸ್ಥಾನದಲ್ಲಿ 1923ರಲ್ಲಿ ಸ್ಕೌಟ್ ಚಳವಳಿಯು ಆರಂಭವಾಯಿತು. 1927-35ರ ಅವಧಿಯಲ್ಲಿ ಅದು ಬಹು ಬೇಗ ಪ್ರಗತಿಹೊಂದಿತು. 1928ರಲ್ಲಿ ಆ ಸಂಸ್ಥಾನದಲ್ಲಿ ಗೈಡ್ ಚಳವಳಿಯು ಆರಂಭವಾಯಿತು. ಕೊಡಗಿನಲ್ಲಿ 1930ರಿಂದ 50ರ ಅವಧಿಯಲ್ಲಿ ಸ್ಕೌಟ್ ಚಳವಳಿಯು ಬಲವಾಗಿತ್ತು. ಆದರೆ ಶಾಲೆಗಳಲ್ಲಿ ಕಡ್ಡಾಯ ಆಕ್ಸಿಲರಿ ಕೇಡೆಟ್ ಕೋರನ್ನು ಆರಂಭಿಸಿದ ಮೇಲೆ ಈ ಚಳವಳಿಯ ಚಟುವಟಿಕೆಗಳು ಸ್ತಬ್ಧಗೊಂಡವು. ಮದ್ರಾಸ್ ಭಾಗದಲ್ಲಿ ಕೂಡ ಸ್ವಾತಂತ್ರ್ಯಕ್ಕೆ ಮುಂಚೆ ಚಳವಳಿಯು ಬಲವಾಗಿಯೇ ಇತ್ತು.

1921ರಲ್ಲಿ, ಭಾರತ ಸ್ಕೌಟ್ ಸಂಘವು (ಬಾಯ್ಸ್ ಸ್ಕೌಟ್ ಎಸೋಸಿಯೇಷನ್ ಆಫ್ ಇಂಡಿಯಾ) ಅಸ್ತಿತ್ವಕ್ಕೆ ಬಂದಿತು. ಇದು ದೇಶದ ಅನೇಕ ಸ್ಕೌಟ್ ಸಂಘಗಳ ಮಿಲನದ ಫಲ. ಹೀಗೆ ಮಿಲನವಾದವುಗಳಲ್ಲಿ ಡಾ|| ಅನಿಬೆಸೆಂಟರ ಇಂಡಿಯನ್ ಬಾಯ್ಸ್ ಸ್ಕೌಟ್ ಎಸೋಸಿಯೇಷನ್ ಕೂಡ ಸೇರಿತ್ತು. ಇದು ಲಂಡನ್ನಿನ ಬಾಯ್ಸ್ ಸ್ಕೌಟ್

ಇಂಟರ್‌ನ್ಯಾಷನಲ್ ಬ್ಯೂರೋದ ಅಂಗಸಂಸ್ಥೆಯಾಯಿತು. ಆದರೆ ಹಿಂದೂಸ್ಥಾನ್ ಸ್ಕೌಟ್ ಅಸೋಸಿಯೇಷನ್ ಎಂಬ ಹೆಸರನ್ನೂ ಪಡೆದು ಸೇವಾ ಸಮಿತಿ ಅಸೋಸಿಯೇಷನ್ ಪ್ರತ್ಯೇಕ ಸಂಸ್ಥೆಯಾಗಿಯೇ ಉಳಿಯಿತು. 1950ರ ನವೆಂಬರ್‌ನಲ್ಲಿ, ಬಾಯ್ಸ್ ಸ್ಕೌಟ್ ಅಸೋಸಿಯೇಷನ್ ಮತ್ತು ಹಿಂದೂಸ್ಥಾನ್ ಸ್ಕೌಟ್ ಅಸೋಸಿಯೇಷನ್ ಪರಸ್ಪರ ಮಿಲನ ಹೊಂದಿದವು. (1950ರಲ್ಲಿ) ಇಂಡಿಯಾದ ಗರ್ಲ್ ಗೈಡ್ಸ್ ಅಸೋಸಿಯೇಷನ್ 1951ರ ಆಗಸ್ಟ್‌ನಲ್ಲಿ ಮಿಲನ ಹೊಂದಿ ಸಂಘದಲ್ಲಿ ಐಕ್ಯವಾಯಿತು. ಸಂಘದ ಹೊಸ ಹೆಸರು ಭಾರತ್ ಸ್ಕೌಟ್ಸ್ ಆ್ಯಂಡ್ ಗೈಡ್ಸ್. ಇದು ಜಾಗತಿಕ ಸಂಸ್ಥೆಗಳಾದ ವರ್ಲ್ಡ್ ಸ್ಕೌಟ್ಸ್ ಬ್ಯೂರೋ ಮತ್ತು ವರ್ಲ್ಡ್ ಬ್ಯೂರೋ ಆಫ್ ಗರ್ಲ್ ಗೈಡ್ಸ್ ಅಂಗ ಸಂಸ್ಥೆಯಾಯಿತು. ಇವೆರಡು ಜಾಗತಿಕ ಸಂಸ್ಥೆಗಳೂ ಬೇರೆ ಬೇರೆ ಸಂಸ್ಥೆಗಳು. ಕೆಳಗಿನ ಪಟ್ಟಿಯಲ್ಲಿ* 1956-57, 1960-61 ಮತ್ತು 1965-66ರಲ್ಲಿ ಸ್ಕೌಟ್ ಮತ್ತು ಗೈಡ್‌ಗಳ ಸಂಖ್ಯೆಗಳನ್ನು ಕೊಟ್ಟಿದೆ.

1965-66ರಲ್ಲಿ ಸಂಖ್ಯೆಯು ಇಳಿಮುಖವಾದುದಕ್ಕೆ ಶಾಲೆ ಮತ್ತು ಕಾಲೇಜುಗಳಲ್ಲಿ ಆ್ಯಕ್ಸಿಲರಿ ಕ್ಯಾಡೆಟ್ ಕೋರ್ ಮತ್ತು ನ್ಯಾಷನಲ್ ಕ್ಯಾಡೆಟ್ ಕೋರ್‌ಗಳನ್ನು ಆರಂಭಿಸಿದುದೇ ಮುಖ್ಯ ಕಾರಣವಾಗಿದೆ. 1982ರಲ್ಲಿ 54,872, ಕಬ್ ಸ್ಕೌಟ್ಸ್, ಸ್ಕೌಟರ್ ಮತ್ತು ಕಮಿಷನರ್‌ಗಳು ಇದ್ದರು. ಅದೇ ವರ್ಷ 16,203 ಬುಲ್ ಬುಲ್ ಫ್ಲಾಕ್ಸ್ ಗೈಡ್ಸ್ ಗೈಡರ್ ಮತ್ತು ಕಮೀಷನರ್‌ಗಳು ಇದ್ದರು. 1982 ಫೆಬ್ರವರಿಯಿಂದ 1983ರ ಜುಲೈವರೆಗಿನ ಅವಧಿಯನ್ನು "ಸ್ಕೌಟ್‌ಗಳ ವರ್ಷ" ವೆಂದು ಕರೆಯಲಾಗಿದೆ. ರಾಜ್ಯದ ರಾಜ್ಯಪಾಲರು ರಾಜ್ಯದ ಸ್ಕೌಟ್ ಸಂಘದ ಪೋಷಕರಾಗಿದ್ದಾರೆ. ರಾಜ್ಯ ಸಂಘಕ್ಕೆ ಒಬ್ಬ ಅಧ್ಯಕ್ಷರೂ, ಒಬ್ಬ ಉಪಾಧ್ಯಕ್ಷರೂ ಇದ್ದಾರೆ. ರಾಜ್ಯದ ಚೀಫ್ ಕಮೀಷನರ್ ಸ್ಕೌಟ್ ಚಳವಳಿಯ ಮುಖ್ಯಾಧಿಕಾರಿಯಾಗಿದ್ದಾರೆ. ಇವರಿಗೆ ಸ್ಕೌಟ್ ಮತ್ತು ಗೈಡ್‌ಗಳ ಸ್ಟೇಟ್ ಕಮೀಷನರೂ, ಜಿಲ್ಲಾ ಕಮೀಷನರುಗಳೂ ಚಳವಳಿಯ ಇತರ ಚಟುವಟಿಕೆಗಳ ಅಧಿಕಾರಿಗಳೂ ಸಹಾಯಕರಾಗಿದ್ದಾರೆ. ಕರ್ನಾಟಕದಲ್ಲಿ ಸ್ಟೇಟ್ ಅಸೋಸಿಯೇಷನ್ ಅಷ್ಟೇ ಅಲ್ಲದೆ, ಸ್ಟೇಟ್ ಅಸೋಸಿಯೇಷನ್ ಆಫ್ ಇಂಡಿಯನ್ ರೈಲ್ವೇಸ್ (ರೈಲ್ವೆ ರಾಜ್ಯ ಸಂಘ), ಸ್ಟೇಟ್ ಅಸೋಸಿಯೇಷನ್ ಆಫ್ ಸೆಂಟ್ರಲ್ ಸ್ಕೂಲ್ಸ್ (ಕೇಂದ್ರೀಯ ವಿದ್ಯಾಶಾಲೆಗಳ ರಾಜ್ಯ ಸಂಘ), ವಿಶ್ವವಿದ್ಯಾಲಯಗಳ ರಾಜ್ಯ ಸಂಘ ಮುಂತಾದ ಇತರ ಸಂಘಗಳೂ ಇವೆ. ಈ ಎಲ್ಲ ರಾಜ್ಯ ಸಂಘಗಳಿಗೂ ಚಟುವಟಿಕೆಗಳನ್ನು ನಡೆಸುವುದರಲ್ಲಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರಲ್ಲಿ ಹಣಕಾಸಿನ ಆಡಳಿತವನ್ನು ನಡೆಸುವುದರಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದೆ. ಆದರೆ ಇವುಗಳೆಲ್ಲದರ ನೀತಿ, ಉದ್ದೇಶ ಮತ್ತು ಗುರಿಗಳು ಒಂದೇ ಆಗಿವೆ. ಅವೇ ಚಳವಳಿಯ ನೀತಿ, ಗುರಿ ಮತ್ತು ಉದ್ದೇಶಗಳು.

ಮೊದಲನೇಯ ಬೆಂಗಳೂರು ಜಿಲ್ಲಾ ಮೇಳವೂ ಮತ್ತು ಸಿಟಿ ಸ್ಕೌಟ್ ಸಪ್ತಾಹವೂ 1929ರ ಜನವರಿ 27 ರಿಂದ ಫೆಬ್ರವರಿ 3 ರವರೆಗೆ ನಡೆದವು. 1960ರಲ್ಲಿ ಅಖಿಲ ಭಾರತ ತೃತೀಯ ರಾಷ್ಟ್ರೀಯ ಜಂಬೂರಿಯು ಬೆಂಗಳೂರಿನಲ್ಲಿ ನಡೆಯಿತು. ಹತ್ತು ಸಾವಿರ ಸ್ಕೌಟ್ ಮತ್ತು ಗೈಡುಗಳು ರಾಷ್ಟ್ರದ ವಿವಿಧ ಭಾಗಗಳಿಂದಲೂ ಪ್ರಪಂಚದ ನಾನಾ ಕಡೆಗಳಿಂದಲೂ ಬಂದಿದ್ದರು. ಜಾಗತಿಕ ಮುಖ್ಯ ಗೈಡ್ ಆದ ಲೇಡಿ ಬೇಡನ್ ಪಾವೆಲ್ ಈ ಜಂಬೂರಿಯಲ್ಲಿ ಉಪಸ್ಥಿತರಿದ್ದರು. ಸ್ಕೌಟ್ ಮತ್ತು ಗೈಡ್ ರಾಜ್ಯ ಸಂಘವು ಜಾಗತಿಕ ಜಂಬೂರಿಗಳು, ಜಾಗತಿಕ ರೋವರ್ ಮೂಟ್‌ಗಳು, ಮುಂತಾದ ಎಲ್ಲ ಜಾಗತಿಕ ಸಮಾರಂಭಗಳಲ್ಲಿಯೂ ಭಾಗವಹಿಸುತ್ತಿದೆ. ಸ್ಟೇಟ್ ಅಸೋಸಿಯೇಷನ್‌ನ ಅನೇಕ ಕ್ರಿಯಾಶೀಲ ಸದಸ್ಯರೂ ಮತ್ತು ಅನೇಕ ಕಮೀಷನರ್‌ಗಳೂ ಜಾಗತಿಕ ಸಮಾರಂಭಗಳಲ್ಲಿ ಮತ್ತು ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ಇವರಲ್ಲಿ ಕೆಲವರು ಅಂತರ್‌ರಾಷ್ಟ್ರೀಯ ಕೇಂದ್ರವಾದ

*

| ವರ್ಷ | ಪ್ಯಾಕ್ ಟ್ರೂಪ್ ಮತ್ತು ಕ್ರೂಗಳ ಒಟ್ಟು ಸಂಖ್ಯೆ | ಕಬ್ ಸ್ಕೌಟ್, ರೋವರ್ ಮುಂತಾದವರ ಒಟ್ಟು ಸಂಖ್ಯೆ | ಫ್ಲಾಕ್ಸ್ ಕಂಪನಿ ಮತ್ತು ಟ್ರೈನಿಂಗ್ | ಬುಲ್ ಬುಲ್ ಗೈಡರ್, ರೇಂಜರ್ ಮುಂತಾದವರ ಒಟ್ಟು ಸಂಖ್ಯೆ |
|---|---|---|---|---|
| 1956-57 | 1,982 | 45,512 | 175 | 4,418 |
| 1960-61 | 1,443 | 35,048 | 261 | 6,986 |
| 1965-66 | 543 | 17,195 | 246 | 3,927 |

ಬ್ರಿಟನ್ನಿನ ಗಿಲ್‌ವೆಲ್ ಪಾರ್ಕ್ ಅಂತರ್‍ರಾಷ್ಟ್ರೀಯ ತರಬೇತಿ ತಂಡದ ಸದಸ್ಯರೂ ಆಗಿದ್ದರು.

ಜೂನಿಯರ್ ರೆಡ್‌ಕ್ರಾಸ್ : ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಬಾಲಕರ ಶಾಖೆಯೇ ಜೂನಿಯರ್ ರೆಡ್‌ಕ್ರಾಸ್. ಇದೊಂದು ಅಂತರ್‍ರಾಷ್ಟ್ರೀಯ ಸಂಸ್ಥೆ. ಜನರಿಗಾಗಬೇಕಾದ ಆರೋಗ್ಯ ಸೇವೆಯನ್ನು ಉತ್ತಮ ಪಡಿಸುವುದನ್ನೇ ಗುರಿಯಾಗಿ ಟ್ಟುಕೊಂಡು ಆ ಗುರಿಯನ್ನು ಮುಟ್ಟಲು ಈ ಸಂಸ್ಥೆಯು ಶ್ರಮಿಸುತ್ತಿದೆ. ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ಗೆಳೆತನವನ್ನು ಕುದುರಿಸುವುದು ಇದರ ಮತ್ತೊಂದು ಗುರಿ. ಭಾರತೀಯ ರೆಡ್‌ಕ್ರಾಸ್‌ನ ಜೂನಿಯರ್ ವಿಭಾಗವು 1925ರಲ್ಲಿ ಆರಂಭ ವಾಯಿತು. ಮೊದಲು ರೆಡ್‌ಕ್ರಾಸ್ ಚಟುವಟಿಕೆಗಳಲ್ಲಿ 200 ಶಾಲೆಗಳು ಭಾಗವಹಿಸಿದ್ದವು. ವಿದ್ಯಾರ್ಥಿಗಳು ಜೂನಿಯರ್ ರೆಡ್‌ಕ್ರಾಸ್‌ನ ಸದಸ್ಯರು. ಉಪಾಧ್ಯಾಯರು ಸಲಹೆಗಾರರೂ ಮತ್ತು ತಿಳುವಳಿಕೆ ಕೊಡುವವರೂ ಆಗಿದ್ದಾರೆ. 1970ರಲ್ಲಿ 77 ಸದಸ್ಯರಿದ್ದರು; 1982ರಲ್ಲಿ ಈ ಸಂಖ್ಯೆ 70 ಇಳಿಯಿತು. ಪ್ರತೀ ವರ್ಷ ಡಿಸೆಂಬರ್‌ನಲ್ಲಿ ರೆಡ್‌ಕ್ರಾಸ್ ಪರೀಕ್ಷೆಗಳು ನಡೆಯುತ್ತವೆ. 1981ರಲ್ಲಿ 6,209 ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು; 4,720 ವಿದ್ಯಾರ್ಥಿಗಳು ತೇರ್ಗಡೆಯಾದರು. 1972ರಲ್ಲಿ 13,943 ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು; ಇವರಲ್ಲಿ 7,013 ವಿದ್ಯಾರ್ಥಿಗಳು ಪಾಸಾದರು. ವೈಯಕ್ತಿಕ ಮತ್ತು ಶಾಲಾ ಆರೋಗ್ಯ, ಸಾಮುದಾಯಿಕ ಆರೋಗ್ಯ, ಸೇವೆ ಮತ್ತು ಅಂತರ್‍ರಾಷ್ಟ್ರೀಯ ಮೈತ್ರಿ ಎಂದು ಜೂನಿಯರ್ ರೆಡ್‌ಕ್ರಾಸ್‌ನ ಚಟುವಟಿಕೆಗಳನ್ನು ವರ್ಗೀಕರಿಸಿದೆ.

## ಉನ್ನತ ಶಿಕ್ಷಣ

ಕರ್ನಾಟಕವು ಮದ್ರಾಸು, ಮುಂಬೈಗಳಂಥ ವಿಶ್ವವಿದ್ಯಾಲಯದ ಕೇಂದ್ರಗಳಿಂದ ಬಹು ದೂರವಿದ್ದುದರಿಂದ ಆಧುನಿಕ ವಿಶ್ವವಿದ್ಯಾಲಯದ ಶಿಕ್ಷಣ ಸೌಲಭ್ಯವು ಅದಕ್ಕೆ ವಿಶ್ವವಿದ್ಯಾಲಯಗಳ ಮೊದಲ ದಿನಗಳಲ್ಲಿ (1857) ದೊರಕಲಿಲ್ಲ. ಈ ಕಾರಣದಿಂದ 19ನೇಯ ಶತಮಾನದಲ್ಲಿ ಕರ್ನಾಟಕಕ್ಕೆ ಸಾಕಷ್ಟು ಅನನುಕೂಲವಾಯಿತು. ಬೆಂಗಳೂರು, ಬೆಳಗಾವಿ, ಮೈಸೂರು, ಮತ್ತು ಧಾರವಾಡದಂಥಹ ಪ್ರಧಾನ ನಗರಗಳೂ ಒಂದು ವಿಶ್ವವಿದ್ಯಾಲಯಕ್ಕೆ ಒಳಪಟ್ಟ ಶಿಕ್ಷಣ ಸಂಸ್ಥೆಯನ್ನು ಪಡೆಯಲು ಹತ್ತಾರು ವರ್ಷಗಳಷ್ಟು ಕಾಲ ಕಾಯಬೇಕಾಯಿತು.

ಮಂಗಳೂರಿನಲ್ಲಿ ಮದ್ರಾಸ್ ಸರ್ಕಾರವು ಸ್ಥಾಪಿಸಿದ ದ್ವಿತೀಯ ದರ್ಜೆಯ ಕಾಲೇಜು ಇಡೀ ಕರ್ನಾಟಕ ಪ್ರದೇಶದಲ್ಲಿ ಆರಂಭವಾದ ಕಾಲೇಜುಗಳಲ್ಲಿ ಮೊದಲನೇಯದು. 1868-69ರಲ್ಲಿ ಎಫ್.ಎ. ತರಗತಿಯು ಆಗಲೇ ಅಸ್ತಿತ್ವದಲ್ಲಿದ್ದ ಸರ್ಕಾರಿ ಪ್ರೌಢಶಾಲೆಯಲ್ಲಿ ಆರಂಭವಾಯಿತು. 1879ರಲ್ಲಿ ಈ ಸಂಸ್ಥೆಯ ಹೆಸರನ್ನು 'ಸರ್ಕಾರಿ ಕಾಲೇಜು' ಎಂದು ಬದಲಾಯಿಸಲಾಯಿತು. ಬೆಂಗಳೂರಿನಲ್ಲಿದ್ದ ಸರ್ಕಾರಿ ಪ್ರೌಢಶಾಲೆಯು 1875ರಲ್ಲಿ ಸರ್ಕಾರಿ ಕಾಲೇಜಾಗಿ ಪರಿವರ್ತನೆ ಹೊಂದಿತು. ಇದಕ್ಕೆ "ಸೆಂಟ್ರಲ್ ಕಾಲೇಜು" ಎಂದು ಹೆಸರಿಡಲಾಯಿತು. ಎರಡು ವರ್ಷಗಳ ನಂತರ ಅದು ಬಿ.ಎ. ಪರೀಕ್ಷೆಗೆ ವಿದ್ಯಾರ್ಥಿಗಳನ್ನು ಕಳಿಸುವ ಅವಕಾಶವನ್ನು ಪಡೆಯಿತು. ಮೈಸೂರಿನ ಮಹಾರಾಜ ಪ್ರೌಢ ಶಾಲೆಯೂ ಶಿವಮೊಗ್ಗೆಯ ಸರ್ಕಾರಿ ಪ್ರೌಢಶಾಲೆಯೂ ಮದ್ರಾಸಿನ ಎಫ್.ಎ. ಪರೀಕ್ಷೆಗೆ ವಿದ್ಯಾರ್ಥಿಗಳನ್ನು ಕಳಿಸುವ ಅವಕಾಶವನ್ನು 1879ರಲ್ಲಿ ಪಡೆದವು. ಮೈಸೂರಿನ ಮಹಾರಾಜಾ ಕಾಲೇಜನ್ನು 1864ರಲ್ಲಿ ಪ್ರಾರಂಭಿಸಿದ್ದು 1894ರಲ್ಲಿ ಅದು ಪ್ರಥಮ ದರ್ಜೆ ಕಾಲೇಜಾಯಿತು.

1880ರಲ್ಲಿ ಕ್ರಿಶ್ಚಿಯನ್ ಸಂಸ್ಥೆಗಳು ಕರ್ನಾಟಕ ಪ್ರದೇಶದ ಉನ್ನತ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದವು. ಜೆಸುಯಿಟ್ ಪಾದ್ರಿಗಳು ತಮ್ಮ ಶೈಕ್ಷಣಿಕ ಚಟುವಟಿಕೆಗಳಿಗೆ ಮಂಗಳೂರಿನಲ್ಲಿ ಒಂದು ಅನುಕೂಲವಾದ ವಾತಾವರಣವಿದೆ ಎಂಬುದನ್ನು ಕಂಡುಕೊಂಡರು. 1879ರಲ್ಲಿ ಅವರು ಮಂಗಳೂರಿನಲ್ಲಿ ಸೇಂಟ್ ಎಲೋಸಿಯಸ್ ಕಾಲೇಜನ್ನು ಸ್ಥಾಪಿಸಿದರು. ಬೆಂಗಳೂರಿನ ದಂಡಿನ ಪ್ರದೇಶದಲ್ಲಿ ಪ್ರಾಟಸ್ಟೆಂಟ್ ಮತ್ತು ಕ್ಯಾಥೋಲಿಕ್ ಸಂಸ್ಥೆಗಳೆರಡೂ ಕಾಲೇಜುಗಳನ್ನು ಈ ಕಾಲದಲ್ಲಿ ಆರಂಭಿಸಿದವು. ಪ್ರಾಟೆಸ್ಟೆಂಟ್ ಪಾದ್ರಿಗಳು ಬಿಷಪ್ ಕಾಟನ್ ಕಾಲೇಜುಗಳನ್ನು ಆರಂಭಿಸಿದರು. ಕ್ಯಾಥೋಲಿಕ್ ಸಂಸ್ಥೆಯೊಂದು 1882ರಲ್ಲಿ ಸೇಂಟ್ ಜೋಸೆಫ್ ಕಾಲೇಜನ್ನು ಆರಂಭಿಸಿತು. ಆದರೆ ಕೆಲ ಕಾಲ ನಂತರ ಬಿಷಪ್ ಕಾಟನ್ ಕಾಲೇಜುಗಳು ಮುಚ್ಚಿಹೋದವು. ಬೆಳಗಾವಿ ಮತ್ತು ಕಲ್ಬುರ್ಗಿ ಪ್ರದೇಶಗಳಂತೂ ಅಸಡ್ಡೆಗೆ ಗುರಿಯಾಗಿದ್ದವು. 19ನೇಯ ಶತಮಾನದ ಕೊನೆಯಲ್ಲೂ, ಅಲ್ಲಿ ಯಾವ ಉನ್ನತ ಶಿಕ್ಷಣ ಸಂಸ್ಥೆಯೂ ಇರಲಿಲ್ಲ. ಈ ಸಮಯದಲ್ಲಿ ಹಳೆಯ ಮೈಸೂರು ಸಂಸ್ಥಾನದ ಪ್ರದೇಶದಲ್ಲಿ (ದಂಡೂ ಸೇರಿದಂತೆ) ನಾಲ್ಕು ಕಾಲೇಜುಗಳೂ, ಮಂಗಳೂರು ಪ್ರದೇಶದಲ್ಲಿ ಎರಡು ಕಾಲೇಜುಗಳೂ ಇದ್ದವು. ಜೊತೆಗೆ ಮೈಸೂರು ಪ್ರದೇಶದಲ್ಲಿ ಮದ್ರಾಸಿನ ಎಫ್.ಎ. ಪರೀಕ್ಷೆಗೆ ವಿದ್ಯಾರ್ಥಿಗಳನ್ನು ಕಳಿಸುತ್ತಿದ್ದ ಒಂದು ಪ್ರೌಢಶಾಲೆ ಇತ್ತು.

### ರಾಜ್ಯ ಪುನರ್ಘಟನೆಗೆ ಮೊದಲು

ಮೈಸೂರು ವಲಯ : ಹಿಂದೆ ಹೇಳಿದಂತೆ ಮೈಸೂರು ಸಂಸ್ಥಾನದ ಭಾಗದಲ್ಲಿ 1900ರಲ್ಲಿ ನಾಲ್ಕು ಕಾಲೇಜುಗಳಿದ್ದವಷ್ಟೆ. 1881ರಲ್ಲಿ ಆರಂಭವಾದ ಮೈಸೂರು ಮಹಾರಾಣಿ ಪ್ರೌಢ ಶಾಲೆಯು 1902ರಲ್ಲಿ ದ್ವಿತೀಯ ದರ್ಜೆಯ ಕಾಲೇಜಾಯಿತು.

ಇದು ಮದ್ರಾಸು ವಿಶ್ವವಿದ್ಯಾಲಯದ ಅಂಗಸಂಸ್ಥೆಯಾಗಿತ್ತು. ಇದು ದಕ್ಷಿಣ ಭಾರತದಲ್ಲಿ ಆರಂಭವಾದ ಅತ್ಯಂತ ಹಳೆಯ ಹೆಣ್ಣು ಮಕ್ಕಳ ಕಾಲೇಜುಗಳಲ್ಲಿ ಒಂದು. ಕೆಲವು ಕಾಲದ ನಂತರ ಅಂದರೆ, 19ನೇಯ ಶತಮಾನದ ಅತ್ಯಂತ ಕೊನೆಯ ವರ್ಷಗಳಲ್ಲಿ ಶಿವಮೊಗ್ಗೆಯ ಪ್ರೌಢಶಾಲೆಯಲ್ಲಿದ್ದ ವಿಶ್ವವಿದ್ಯಾಲಯದ ತರಗತಿಯನ್ನು ಮುಚ್ಚಲಾಯಿತು. ಸಂಸ್ಥಾನಿಕ ಶೈಕ್ಷಣಿಕ ಇತಿಹಾಸದಲ್ಲಿಯೇ ಪ್ರಮುಖ ಎನ್ನಬಹುದಾದ ಒಂದು ಘಟನೆಯು 1916ರಲ್ಲಿ ನಡೆಯಿತು. ಅದೇ ಮೈಸೂರು ವಿಶ್ವವಿದ್ಯಾಲಯದ ಸ್ಥಾಪನೆ. ರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನವು ಮದ್ರಾಸು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿತ್ತು. ಶೈಕ್ಷಣಿಕ ವಿಷಯಗಳಲ್ಲಿ ಸಂಸ್ಥಾನದ ಮಹಾರಾಜರು ಯಾವ ಅಂತಿಮ ತೀರ್ಮಾನವನ್ನೂ ತೆಗೆದುಕೊಳ್ಳುವಂತಿರಲಿಲ್ಲ. ಮದ್ರಾಸು ಸರ್ಕಾರವಾಗಲೀ, ಮದ್ರಾಸು ವಿಶ್ವವಿದ್ಯಾಲಯವಾಗಲೀ ಮೈಸೂರು ಸಂಸ್ಥಾನದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕೆ ಸಂಸ್ಥಾನದ ಸರ್ಕಾರಕ್ಕೆ ಯಾವ ರೀತಿಯಲ್ಲಿಯೂ ಸಹಾಯಕವಾಗಿರಲಿಲ್ಲ. ಏನೇನೂ ಸಹಾನುಭೂತಿಯಿಲ್ಲದ ಕೇಂದ್ರ ಸರ್ಕಾರ ಒಂದು ಕಡೆ, ಕೇವಲ ಎರಡೇ ಕಾಲೇಜುಗಳಿದ್ದ ಪ್ರದೇಶ ಇನ್ನೊಂದು ಕಡೆ—ಈ ಎರಡು ಅನನುಕೂಲಗಳನ್ನು ಬಿಡಿಸಿಕೊಂಡು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕೆ ಒಂದು ಭಗೀರಥ ಪ್ರಯತ್ನವೇ ಬೇಕಾಗಿತ್ತು. ಇಷ್ಟಾದರೂ ಮೈಸೂರು ವಿಶ್ವವಿದ್ಯಾಲಯ ಸ್ಥಾಪನೆ ಆಗಿಯೇ ಆಯಿತು. ಇದಕ್ಕೆ, ಅಂದು ದಿವಾನರಾದ ಸರ್ ಎಂ. ವಿಶ್ವೇಶ್ವರಯ್ಯನವರ ದೂರದೃಷ್ಟಿ, ಅವರ ನಿರಂತರ ಪ್ರಯತ್ನ ಮತ್ತು ಅವರಿಗಿದ್ದ ಪ್ರತಿಷ್ಠೆಯೇ ಕಾರಣಗಳು. ಇಡೀ ಭರತಖಂಡದಲ್ಲಿನ ವಿಶ್ವವಿದ್ಯಾಲಯಗಳಲ್ಲಿ ಇದು ಆರನೇಯದು. ರಾಜರ ಆಳ್ವಿಕೆಯಲ್ಲಿದ್ದ ಸಂಸ್ಥಾನಗಳಲ್ಲಿ ಆರಂಭವಾದ ವಿಶ್ವವಿದ್ಯಾಲಯಗಳಲ್ಲಿ ಮೊದಲನೆಯದು. ವಿಶ್ವವಿದ್ಯಾಲಯದ ಸ್ಥಾಪನೆಗೆ ಕಾರಣರಾದ ಸರ್ ಎಂ. ವಿಶ್ವೇಶ್ವರಯ್ಯ ಮುಂತಾದವರು. "ವಿಶ್ವವಿದ್ಯಾಲಯವು ಏಕಸಂಸ್ಥೀಯ ಬೋಧಕ ವಿಶ್ವವಿದ್ಯಾಲಯವಾಗಿರಬೇಕು" ('ಟೀಚಿಂಗ್ ಯೂನಿವರ್ಸಿಟಿ ಆಫ್ ಯುನಿಟರಿ ಟಾಯಿಪ್') ಮತ್ತು ತನ್ನ ಸಂಸ್ಥೆಗಳನ್ನಷ್ಟಲ್ಲದೆ ಮತ್ತಾವ ಶೈಕ್ಷಣಿಕ ಸಂಸ್ಥೆಯನ್ನೂ ಅಂಗಸಂಸ್ಥೆಯನ್ನಾಗಿ ಸ್ವೀಕರಿಸಬಾರದು, ಎಂಬ ಭಾವನೆಯನ್ನು ಹೊಂದಿದ್ದರು. ಈ ಒಂದು ತಾತ್ವಿಕ ಹಿನ್ನೆಲೆಯಿದ್ದುದರಿಂದ, ಸರ್ಕಾರದ ಆಡಳಿತದಲ್ಲಿದ್ದ ಎರಡು ಕಾಲೇಜುಗಳೂ ಮೈಸೂರು ವಿಶ್ವವಿದ್ಯಾಲಯದ ವಶಕ್ಕೇ ಬಂದವು. ಮದ್ರಾಸು ವಿಶ್ವವಿದ್ಯಾಲಯವು ಮೆಟ್ರಿಕ್ ಮುಗಿದ ನಂತರ ಡಿಗ್ರಿಗಾಗಿ ಓದಬೇಕಾದ ನಾಲ್ಕು ವರ್ಷಗಳ ಅವಧಿಯನ್ನು ಎರಡು ಹಂತಗಳನ್ನಾಗಿ ವಿಭಾಗಿಸಿತ್ತು. ಎರಡು ವರ್ಷಗಳ ಇಂಟರ್‌ಮೀಡಿಯಟ್ ಅವಧಿ ಮತ್ತು ಎರಡು ವರ್ಷಗಳ ಡಿಗ್ರಿ ಪರೀಕ್ಷೆಯ ಅವಧಿ. ಆದರೆ ಮೈಸೂರು ವಿಶ್ವವಿದ್ಯಾಲಯವು ಈ ಅವಧಿಯನ್ನು ಒಂದು ವರ್ಷದ ಪ್ರವೇಶ ಹಂತವನ್ನಾಗಿಯೂ ಮತ್ತು ಮೂರು ವರ್ಷದ ಡಿಗ್ರಿ ಹಂತವನ್ನಾಗಿಯೂ ವಿಭಾಗಿಸಿತು. (ಮೈಸೂರು ವಿಶ್ವವಿದ್ಯಾಲಯವು ತನ್ನ ಮೊದಲಿನ ದಿನಗಳಲ್ಲಿ ಹೆಸರಾಂತ ವಿದ್ವಾಂಸರಾದ ಎಸ್. ರಾಧಾಕೃಷ್ಣನ್, ಎ.ಆರ್. ವಾಡಿಯಾ, ಬ್ರಜೇಂದ್ರನಾಥ್ ಸೀಲ್, ಸಿ.ಆರ್. ರೆಡ್ಡಿ, ಕೆ.ಟಿ. ಷಾ, ಆರ್.ಕೆ. ಮುಖರ್ಜಿ ಮುಂತಾದವರನ್ನು ಅಧ್ಯಾಪಕರನ್ನಾಗಿ ನೇಮಿಸಿಕೊಂಡಿತು).

ವಿಶ್ವವಿದ್ಯಾಲಯವು ಆರಂಭವಾದ ಕೆಲವು ವರ್ಷಗಳ ನಂತರ, ಮೈಸೂರು ಮಹಾರಾಜಾ ಕಾಲೇಜು ಮತ್ತು ಬೆಂಗಳೂರು ಸೆಂಟ್ರಲ್ ಕಾಲೇಜುಗಳಂತೆ ಮೈಸೂರಿನಲ್ಲಿದ್ದ ದ್ವಿತೀಯ ದರ್ಜೆ ಕಾಲೇಜು—ಸರ್ಕಾರಿ ಮಹಾರಾಣಿ ಕಾಲೇಜು ಮೈಸೂರು ವಿಶ್ವವಿದ್ಯಾಲಯದ ವಶಕ್ಕೆ ಬಂದಿತು. ಸರ್ಕಾರವು, ಹಳ್ಳಿಗರಿಗೆ ಉನ್ನತ ಶಿಕ್ಷಣದ ಸೌಲಭ್ಯಗಳನ್ನೊದಗಿಸುವ ಮತ್ತು ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿಗೆ ಈ ಸೌಲಭ್ಯವನ್ನೊದಗಿಸುವ ಉದ್ದೇಶದಿಂದ ಸೂಕ್ತ ಕ್ರಮವನ್ನು ತೆಗೆದುಕೊಂಡಿತು. 1916ರಲ್ಲಿ, ಮೈಸೂರಿನ ಮಹಾರಾಜಾ ಪ್ರೌಢಶಾಲೆ, ಬೆಂಗಳೂರಿನ ಸರ್ಕಾರಿ ಪ್ರೌಢಶಾಲೆ ಮತ್ತು ತುಮಕೂರಿನ ಸರ್ಕಾರಿ ಪ್ರೌಢಶಾಲೆಗಳಲ್ಲಿ ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷಾ ತರಗತಿಗಳನ್ನು ತೆರೆಯಲಾಯಿತು. ಸ್ವಲ್ಪ ಕಾಲದ ನಂತರ ಮತ್ತೆ ಐದು ಸ್ಥಳಗಳಲ್ಲಿ ಇದೇ ತರಗತಿಗಳನ್ನು ಆರಂಭಿಸಲಾಯಿತು. ಇವುಗಳಲ್ಲಿ ಹೆಸರಿಸಬೇಕಾದದ್ದು ಶಿವಮೊಗ್ಗ. ವಿಶ್ವವಿದ್ಯಾಲಯವು 1917ರಲ್ಲಿ ಇಂಜಿನಿಯರಿಂಗ್ ಕಾಲೇಜನ್ನು ಮತ್ತು 1924ರಲ್ಲಿ ಮೆಡಿಕಲ್ ಕಾಲೇಜನ್ನೂ ಬೆಂಗಳೂರಿನಲ್ಲಿ ತೆರೆಯಿತು. ಈ ಮೆಡಿಕಲ್ ಕಾಲೇಜನ್ನು ಕೆಲವು ಕಾಲದ ಮೇಲೆ ಮೈಸೂರಿಗೆ ವರ್ಗಾಯಿಸಲಾಯಿತು.

ಸ್ಯಾಡ್ಲರ್ ಸಮಿತಿಯು ಶಿಕ್ಷಣದ ವಿಚಾರವಾಗಿ ಮಾಡಿದ ಸಲಹೆಗಳನ್ನು ಪರಿಶೀಲಿಸಿ 1939ರಲ್ಲಿ ಒಂದು ವರ್ಷದ ಪ್ರವೇಶ ಪರೀಕ್ಷಾ ತರಗತಿಯನ್ನು ರದ್ದು ಮಾಡಲಾಯಿತು. ಅವುಗಳ ಬದಲು ಎರಡು ವರ್ಷದ ಇಂಟರ್‌ಮೀಡಿಯಟ್ ತರಗತಿಗಳನ್ನು ಆರಂಭಿಸಲಾಯಿತು. 1932-33ರವರೆಗೆ ಸಂಸ್ಥಾನದಲ್ಲಿ ಆರು ಇಂಟರ್‌ಮೀಡಿಯಟ್ ಕಾಲೇಜುಗಳಿದ್ದವು. ಆ ವರ್ಷ, ತುಮಕೂರು ಮತ್ತು ಶಿವಮೊಗ್ಗಗಳಲ್ಲಿದ್ದ ಇಂಟರ್‌ಮೀಡಿಯಟ್ ತರಗತಿಗಳನ್ನು ಮುಚ್ಚಲಾಯಿತು. ಆದರೆ 1940ರಲ್ಲಿ ಇವನ್ನು ಮತ್ತೆ ಪ್ರಾರಂಭಿಸಲಾಯಿತು. ಮೈಸೂರು ವಿಶ್ವವಿದ್ಯಾಲಯವು ಆರಂಭವಾದ ಮೇಲೆ ಮಹಾರಾಣಿ ಕಾಲೇಜು ಮೊದಲನೇಯ ದರ್ಜೆಯ ಕಾಲೇಜಾಗಿ ಪರಿವರ್ತಿತವಾಯಿತು. ಆಗ ಹೆಣ್ಣು ಮಕ್ಕಳಿಗಾಗಿ ಇದ್ದ ಕಾಲೇಜು ಇದೊಂದೇ. ಆದರೆ ಇದರಲ್ಲಿ ಓದುತ್ತಿದ್ದವರ ಸಂಖ್ಯೆ ತುಂಬ ಕಮ್ಮಿ ಇದ್ದು, ಇದನ್ನೊಂದು ಪ್ರತ್ಯೇಕ ಸಂಸ್ಥೆಯಾಗಿ ಮುಂದುವರಿಸಲು ಕಷ್ಟವಾಯಿತು. ಆದುದರಿಂದ ಇದನ್ನು 1939ರಲ್ಲಿ ಬೆಂಗಳೂರಿಗೆ ವರ್ಗಾಯಿಸಲಾಯಿತು. ಆದರೆ, ಇದಕ್ಕೆ ಬದಲಾಗಿ ಮೈಸೂರಿನಲ್ಲಿ ಹೆಣ್ಣು

ಮಕ್ಕಳ ಇಂಟರ್‌ಮೀಡಿಯಟ್ ಕಾಲೇಜನ್ನು ಆರಂಭಿಸಲಾಯಿತು. 1916ರ ಮೈಸೂರು ವಿಶ್ವವಿದ್ಯಾಲಯ ಶಾಸನವನ್ನು 1933ರಲ್ಲಿ ತಿದ್ದುಪಡಿ ಮಾಡಲಾಯಿತು. ಇದರಂತೆ ಅಕೆಡೆಮಿಕ್ ಕೌನ್ಸಿಲ್ ಅಸ್ತಿತ್ವಕ್ಕೆ ಬಂದಿತು. 1938ರಲ್ಲಿ ಇನ್ನೊಂದು ತಿದ್ದುಪಡಿಯನ್ನು ಮಾಡಲಾಯಿತು. ಇದರಿಂದ ವಿಶ್ವವಿದ್ಯಾಲಯವು ಇತರ ಸಂಸ್ಥೆಗಳನ್ನು ಅಂಗಸಂಸ್ಥೆಗಳನ್ನಾಗಿ ಅಂಗೀಕರಿಸಲು ಸಾಧ್ಯವಾಯಿತು. ಆದರೆ ಇದು ಆಚರಣೆಗೆ ಬಂದದ್ದು 1945ರಲ್ಲಿಯೇ. ಆ ವರ್ಷ ಬೆಂಗಳೂರಿನಲ್ಲಿ ಎರಡು ಖಾಸಗೀ ಕಾಲೇಜುಗಳನ್ನೂ (ಬಸಪ್ಪ ಮತ್ತು ನ್ಯಾಷನಲ್) ಮತ್ತು ಮೈಸೂರಿನಲ್ಲಿ ಒಂದು ಖಾಸಗೀ (ಶಾರದಾ ವಿಲಾಸ) ಕಾಲೇಜು ಸ್ಥಾಪಿತವಾದವು.

1945ನೇ ವರ್ಷವು ಸಂಸ್ಥಾನದ ಶೈಕ್ಷಣಿಕ ಇತಿಹಾಸದಲ್ಲಿ ಮತ್ತೊಂದು ಪ್ರಮುಖ ವರ್ಷ. ಆ ವರ್ಷ ಸರ್ಕಾರವೂ ಉನ್ನತ ಶಿಕ್ಷಣ ಕ್ಷೇತ್ರವನ್ನು (ಖಾಸಗೀ ಸಂಸ್ಥೆಗಳ ಜೊತೆಗೆ) ಪ್ರವೇಶಿಸಿತು. ಅನೇಕ ಖಾಸಗಿ ಕಾಲೇಜುಗಳೂ ಆ ವರ್ಷ ಪ್ರಾರಂಭಿಸಲ್ಪಟ್ಟವು. 1947-56ರ ಅವಧಿಯಲ್ಲಿ ಶಿಕ್ಷಣ ಕ್ಷೇತ್ರವು ಒಂದೇ ಸಮನೆ ವಿಸ್ತಾರವಾಗುತ್ತಾ ಹೋಯಿತು. ಈ ಅವಧಿಯಲ್ಲಿ, ಐದು ಪ್ರಥಮ ದರ್ಜೆಯ ಕಾಲೇಜುಗಳೂ ಮೂರು ಇಂಟರ್‌ಮೀಡಿಯಟ್ ಕಾಲೇಜುಗಳೂ, ಒಂದು ಮೆಡಿಕಲ್ ಕಾಲೇಜೂ, ಒಂದು ಇಂಜಿನಿಯರಿಂಗ್ ಕಾಲೇಜೂ, ಒಂದು ಲಾ ಕಾಲೇಜೂ, ಎರಡು ಶಿಕ್ಷಣ ಕಾಲೇಜುಗಳೂ ಆರಂಭವಾದವು. ಇವೆಲ್ಲವೂ ಖಾಸಗೀ ಸಂಸ್ಥೆಗಳು ಆರಂಭಿಸಿದ ಕಾಲೇಜುಗಳು. ವಿಶ್ವವಿದ್ಯಾಲಯವು ಎರಡು ಇಂಟರ್‌ಮೀಡಿಯಟ್ ಕಾಲೇಜುಗಳನ್ನು ಪ್ರಥಮ ದರ್ಜೆ ಕಾಲೇಜನ್ನಾಗಿ ಪರಿವರ್ತನೆ ಮಾಡಿತು. ಜೊತೆಗೆ ನಾಲ್ಕು ಇಂಟರ್‌ಮೀಡಿಯಟ್ ಕಾಲೇಜುಗಳನ್ನೂ ಮತ್ತು ಒಂದು ಶಿಕ್ಷಣ ಕಾಲೇಜನ್ನು ಆರಂಭಿಸಿತು. ಸರ್ಕಾರವು ದಾವಣಗೆರೆಯಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜನ್ನು ಆರಂಭಿಸಿತು. ಈ ಅವಧಿಯಲ್ಲಿ ಸೇಂಟ್ ಜೋಸಫ್ಸ್ ಕಾಲೇಜು ಮೈಸೂರು ವಿಶ್ವವಿದ್ಯಾಲಯದ ಅಂಗ ಸಂಸ್ಥೆಯಾಯಿತು. 1956ರಲ್ಲಿ, ಹಳೆಯ ಮೈಸೂರು ಸಂಸ್ಥಾನದಲ್ಲಿ 14 ಪ್ರಥಮ ದರ್ಜೆ ಕಾಲೇಜುಗಳು, 14 ಇಂಟರ್‌ಮೀಡಿಯಟ್ ಕಾಲೇಜುಗಳು, 14 ವೃತ್ತಿ ಶಿಕ್ಷಣ ಕಾಲೇಜುಗಳು ಇದ್ದವು.

ಮದ್ರಾಸು ಕನ್ನಡ ಪ್ರದೇಶ : 20ನೇಯ ಶತಮಾನದ ಆದಿಯಲ್ಲಿ ದಕ್ಷಿಣ ಕನ್ನಡ–ಕೊಳ್ಳೇಗಾಲ ಪ್ರದೇಶಗಳಲ್ಲಿ ಎರಡು ಕಾಲೇಜುಗಳಿದ್ದವು. ಇವೆರಡೂ ಇದ್ದದ್ದು ಮಂಗಳೂರಿನಲ್ಲಿ. 1921ರಲ್ಲಿ, ಕಾರ್ಮೆಲೈಟ್ (ಸನ್ಯಾಸಿನಿಯರು) ಹೆಣ್ಣುಮಕ್ಕಳಿಗಾಗಿ ಒಂದು ಕಾಲೇಜನ್ನು ಸ್ಥಾಪಿಸಿದರು. ಇದರ ಹೆಸರು ಸೇಂಟ್ ಆ್ಯನ್ಸ್ ಕಾಲೇಜ್. ಇದು 1924ರಲ್ಲಿ ಸೇಂಟ್ ಆ್ಯಗ್ನೆಸ್ ಕಾಲೇಜು ಎಂಬ ಬೇರೊಂದು ಹೆಸರನ್ನು ಪಡೆಯಿತು. 1940ರಲ್ಲಿ ಸ್ತ್ರೀಯರಿಗಾಗಿ ಒಂದು ಶಿಕ್ಷಣ ಕಾಲೇಜು ಆರಂಭವಾಯಿತು. ಬಳ್ಳಾರಿ ಜಿಲ್ಲೆಯಂತೂ ಹಿಂದುಳಿದೇ ಇತ್ತು. 1945ರವರೆಗೆ ಆ ಪ್ರದೇಶದಲ್ಲಿ ಯಾವ ಕಾಲೇಜೂ ಇರಲಿಲ್ಲ. ಆ ವರ್ಷ ವೀರಶೈವ ವಿದ್ಯಾವರ್ಧಕ ಸಂಘವು ಬಳ್ಳಾರಿಯಲ್ಲಿ ಒಂದು ದ್ವಿತೀಯ ದರ್ಜೆ ಕಾಲೇಜನ್ನು ಆರಂಭಿಸಿತು. ಇದಕ್ಕೆ ಮೊದಲು, 1869ರಲ್ಲಿ ವಡ್ಲಾರ್ ಪ್ರೌಢಶಾಲೆಯಲ್ಲಿ ಎಫ್.ಎ. ತರಗತಿಯೇನೋ ಆರಂಭವಾಗಿತ್ತು. ಆದರೆ 1909ರಲ್ಲಿಯೇ ಅದು ಮುಚ್ಚಿಹೋಗಿತ್ತು. ಹಾಗೆಯೇ ಬಳ್ಳಾರಿಯ ಜಿಲ್ಲಾ ಪ್ರೌಢಶಾಲೆಯು 1857-85ರ ವರೆಗೆ ಎಫ್.ಎ. ತರಗತಿಗಳನ್ನು ನಡೆಸುತ್ತಿತ್ತು. 1948ರಲ್ಲಿ, ಮಂಗಳೂರಿನ ಸರ್ಕಾರಿ ಕಾಲೇಜು ಪ್ರಥಮ ದರ್ಜೆ ಕಾಲೇಜಾಗಿ ಪರಿವರ್ತನೆ ಹೊಂದಿತು. ಆ ವರ್ಷ ಬಿ.ಎ., ಬಿ.ಎಸ್‌ಸಿ., ಬಿ.ಕಾಂ. ತರಗತಿಗಳು ಅಲ್ಲಿ ಆರಂಭವಾದವು. 1950ರಲ್ಲಿ ಅಲ್ಲಿ ಒಂದು ಶಿಕ್ಷಕರ ಕಾಲೇಜೂ ಆರಂಭವಾಯಿತು. ಮಣಿಪಾಲದ ಜನರಲ್ ಅಕ್ಯಾಡೆಮಿ ಆಫ್ ಎಜುಕೇಷನ್, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣವನ್ನು ವ್ಯಾಪಕವಾಗಿ ಬೆಳೆಸುವ ಪ್ರಯತ್ನದಲ್ಲಿ ಪ್ರಮುಖ ಪಾತ್ರ ವಹಿಸಿತು. ಸ್ವಾತಂತ್ರ್ಯೋತ್ತರ, ಆದರೆ ರಾಜ್ಯ ಪುನರ್ಘಟನೆಯ ಪೂರ್ವದ ಅವಧಿಯಲ್ಲಿ ಅದು ಅನೇಕ ಸಾಧಾರಣ ಕಾಲೇಜುಗಳನ್ನೂ, ವೃತ್ತಿ ಶಿಕ್ಷಣ ಕಾಲೇಜುಗಳನ್ನೂ ಆರಂಭಿಸಿತು. ಬಳ್ಳಾರಿ ಜಿಲ್ಲೆಯು ಹಳೆಯ ಮೈಸೂರು ಸಂಸ್ಥಾನದಲ್ಲಿ ವಿಲೀನವಾದ ನಂತರ, ವೀರಶೈವ ಕಾಲೇಜು ಪ್ರಥಮ ದರ್ಜೆ ಕಾಲೇಜಾಗಿ ಪರಿವರ್ತಿತವಾಯಿತು.

ಬೆಳಗಾವಿ ಪ್ರದೇಶ : 1917ರವರೆಗೆ, ಬೆಳಗಾವಿ ಪ್ರದೇಶದಲ್ಲಿ ಯಾವ ಉನ್ನತ ಶಿಕ್ಷಣ ಸಂಸ್ಥೆಯೂ ಇರಲಿಲ್ಲ. ಆ ಪ್ರದೇಶದ ವಿದ್ಯಾರ್ಥಿಗಳು ತಮ್ಮ ಉನ್ನತ ಶಿಕ್ಷಣಕ್ಕಾಗಿ ಪುಣೆಗೋ, ಮುಂಬೈಗೋ ಹೋಗಬೇಕಾಗಿತ್ತು. ಪ್ರಮುಖರಾದ ಎಸ್. ಆರ್. ರೊದ್ದ ಮುಂತಾದವರು 1912ರಲ್ಲಿಯೇ ಧಾರವಾಡದಲ್ಲಿ ಒಂದು ಕಾಲೇಜನ್ನು ಆರಂಭಿಸಲು ಪ್ರಯತ್ನಿಸಿದರು. ಸಾಕಷ್ಟು ಹಣವನ್ನೂ ಸಂಗ್ರಹಿಸಿದರು. ಆದರೆ ಮೊದಲನೇಯ ಜಾಗತಿಕ ಯುದ್ಧವು 1914ರಲ್ಲಿ ಆರಂಭವಾದದ್ದರಿಂದ 1917ರವರೆಗೆ ಅಲ್ಲಿ ಕಾಲೇಜನ್ನು ಸ್ಥಾಪಿಸಲು ಆಗಲೇ ಇಲ್ಲ. ಆಗ ಆರಂಭವಾದ ಕರ್ನಾಟಕ ಕಾಲೇಜು ಕೇವಲ ಆರ್ಟ್ಸ್ ಕಾಲೇಜೇ ಆಗಿತ್ತು. 1922-23ರಲ್ಲಿ ಸರ್ಕಾರವು ಇಂಟರ್‌ಮೀಡಿಯಟ್ ಮಟ್ಟದವರೆಗೆ ಮಾತ್ರ ವಿಜ್ಞಾನವನ್ನು ಬೋಧಿಸುವ ವ್ಯವಸ್ಥೆ ಮಾಡಿತು. ಹತ್ತು ವರ್ಷಗಳ ನಂತರ, ಈ ಕಾಲೇಜಿನಲ್ಲಿ ಬಿ.ಎಸ್‌ಸಿ. ತರಗತಿಗಳು ಆರಂಭವಾದವು. ಧಾರವಾಡದ ಕರ್ನಾಟಕ ಎಜುಕೇಷನ್ ಬೋರ್ಡ್ 1920ರಲ್ಲಿ ಕಾಲೇಜನ್ನು ಆರಂಭಿಸುವ ಧೈರ್ಯ ಮಾಡಿತು. ಇದೇ ವಿಕ್ಟೋರಿಯಾ ಕಾಲೇಜು. ಆದರೆ ಇದು ಬಹುಕಾಲ ಉಳಿಯಲಿಲ್ಲ. 1920-21 ಶಿಕ್ಷಣ ವರ್ಷದ ಅಂತ್ಯದಲ್ಲಿ ಅದು ಮುಚ್ಚಿಹೋಯಿತು. ಬೆಳಗಾವಿಯ ಕೆ.ಎಲ್.ಇ. ಸೊಸೈಟಿಯು ಜನ

ಸಾಮಾನ್ಯರಲ್ಲಿ ವಿದ್ಯಾಪ್ರಸಾರ ಮಾಡುವ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸಿತು. ಅದು 1933ರಲ್ಲಿ ಬೆಳಗಾವಿಯಲ್ಲಿ ಲಿಂಗರಾಜ ಕಾಲೇಜನ್ನು ಆರಂಭಿಸಿತು. 1939-40ರಲ್ಲಿ ರಾಜಾ ಲಖಮನ್‌ಗೌಡ ಲಾ ಕಾಲೇಜನ್ನು ಕರ್ನಾಟಕ ಲಾ ಸೊಸೈಟಿಯು ಆರಂಭಿಸಿತು. ಕರ್ನಾಟಕ ಎಜುಕೇಷನ್ ಬೋರ್ಡ್, ಕಾಲೇಜನ್ನು ಸ್ಥಾಪಿಸಲು ಮತ್ತೊಮ್ಮೆ ಪ್ರಯತ್ನಿಸಿ 1940ರಲ್ಲಿ ಧಾರವಾಡದಲ್ಲಿ ಆರ್ಟ್ಸ್ ಕಾಲೇಜನ್ನು ಆರಂಭಿಸಿತು. ಬಾಗಲಕೋಟೆಯ ಬಸವೇಶ್ವರ ವಿದ್ಯಾವರ್ಧಕ ಸಂಘವು ಆ ಪಟ್ಟಣದಲ್ಲಿ 1944ರಲ್ಲಿ ಬಸವೇಶ್ವರ ಆರ್ಟ್ಸ್ ಕಾಲೇಜನ್ನು ಸ್ಥಾಪಿಸಿತು. ವಿಜಾಪುರದಲ್ಲಿ ವಿಜಯಾ ಕಾಲೇಜನ್ನೂ ಆರಂಭಿಸಲಾಯಿತು (1945). ಇದು ವಿಜಾಪುರ ಜಿಲ್ಲೆಯಲ್ಲಾದ ಶೈಕ್ಷಣಿಕ ಪ್ರಗತಿ. 1946-47ರ ಹೊತ್ತಿಗೆ ಬೆಳಗಾವಿ ಪ್ರದೇಶದಲ್ಲಿ ಐದು ಆರ್ಟ್ಸ್ ಕಾಲೇಜೂ (ಒಂದು ಸೈನ್ಸ್ ಮತ್ತು ಆರ್ಟ್ಸ್ ಕಾಲೇಜೂ) ಒಂದು ಲಾ ಕಾಲೇಜೂ ಮತ್ತು ಒಂದು ಶಿಕ್ಷಣ ಕಾಲೇಜೂ ಇದ್ದವು.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ನಡೆದ ಪ್ರಮುಖ ಘಟನೆ ಎಂದರೆ ಧಾರವಾಡದಲ್ಲಿ ಆದ ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆ. ಬಳ್ಳಾರಿ ಜಿಲ್ಲೆ ಆಂಧ್ರ ವಿಶ್ವವಿದ್ಯಾಲಯದ ವ್ಯಾಪ್ತಿಯೊಳಗಿರಬೇಕೆಂಬ ಸೂಚನೆ ಮತ್ತು ಪುಣೆಯಲ್ಲಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಮರಾಠಿ ಮಾತನಾಡುವ ಜನರು ಮಾಡುತ್ತಿದ್ದ ನಿರಂತರ ಯತ್ನ ಇವು ಬೆಳಗಾವಿ ಪ್ರದೇಶದ ಜನರು ತಮ್ಮ ಪ್ರದೇಶದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಬೇಕೆಂಬ ಯತ್ನವನ್ನು ಬಲಗೊಳಿಸಿದವು. ವಿಶ್ವವಿದ್ಯಾಲಯ ಸ್ಥಾಪನೆಯ ಪ್ರಶ್ನೆಯನ್ನು ಪರಿಶೀಲಿಸಲು ಮುಂಬೈ ಸರ್ಕಾರವು ಜಸ್ಟಿಸ್ ಎನ್.ಎಸ್. ಲೋಕೂರರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿಯು 1947ರಲ್ಲಿ ತನ್ನ ವರದಿಯನ್ನು ಒಪ್ಪಿಸಿತು. ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಅದು ಶಿಫಾರಸ್ಸು ಮಾಡಿತು. 1950ನೇ ಮಾರ್ಚ್ ಒಂದನೇಯ ತಾರೀಖು ಕರ್ನಾಟಕ ವಿಶ್ವವಿದ್ಯಾಲಯವು ಕಾನೂನುಬದ್ಧವಾದ ಸಂಸ್ಥೆಯಾಗಿ ಸಂಘಟಿತವಾಯಿತು.

1946-47 ಮತ್ತು 1956ರ ನಡುವಿನ ಅವಧಿಯಲ್ಲಿ ಈ ಪ್ರದೇಶದಲ್ಲಿ ಹಲವು ಕಾಲೇಜುಗಳು ಆರಂಭವಾದವು. ಕುಮುಟಾದಲ್ಲಿ 1949ರಲ್ಲಿ ಕೆನರಾ ಕಾಲೇಜು, 1945ರಲ್ಲಿ ಬೆಳಗಾವಿಯಲ್ಲಿ ರಾಣಿ ಪಾರ್ವತಿದೇವಿ ಕಾಲೇಜು, 1952ರಲ್ಲಿ ಹುಬ್ಬಳ್ಳಿಯಲ್ಲಿ ಕಾಡಸಿದ್ಧೇಶ್ವರ ಕಾಲೇಜು, 1947ರಲ್ಲಿ ಧಾರವಾಡದಲ್ಲಿ ಸರ್ಕಾರಿ ಕೃಷಿ ಕಾಲೇಜು, 1946ರಲ್ಲಿ ಹುಬ್ಬಳ್ಳಿಯಲ್ಲಿ ಭೂಮರೆಡ್ಡಿ ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ ಕಾಲೇಜು, 1947ರಲ್ಲಿ ಹುಬ್ಬಳ್ಳಿಯಲ್ಲಿ ಜೆ. ಜಿ. ಕಾಮರ್ಸ್ ಕಾಲೇಜು, 1955ರಲ್ಲಿ ಬೆಳಗಾವಿಯಲ್ಲಿ ಕರ್ನಾಟಕ ಲಾ ಸೊಸೈಟಿಯ ಕಾಮರ್ಸ್ ಕಾಲೇಜು ಮತ್ತು ಧಾರವಾಡದಲ್ಲಿ ಜೆ. ಎಸ್. ಎಸ್. ಲಾ ಕಾಲೇಜು ಆರಂಭವಾದವು. 1956-57ರಲ್ಲಿ, ಎಂಟು ಸಾಮಾನ್ಯ ಕಾಲೇಜುಗಳೂ, ಏಳು ವೃತ್ತಿಶಿಕ್ಷಣ ಕಾಲೇಜುಗಳೂ ಇದ್ದವು. ಇವುಗಳಲ್ಲಿ ಒಂದು ಶಿಕ್ಷಣ ಕಾಲೇಜು, ಒಂದು ಇಂಜಿನಿಯರಿಂಗ್ ಕಾಲೇಜು, ಒಂದು ಕೃಷಿ ಕಾಲೇಜು, ಎರಡು ಕಾಮರ್ಸ್ ಕಾಲೇಜು ಮತ್ತು ಎರಡು ಲಾ ಕಾಲೇಜು ಆಗಿದ್ದವು. ಇವೆಲ್ಲವೂ ಕರ್ನಾಟಕ ವಿಶ್ವವಿದ್ಯಾಲಯದ ಅಂಗೀಕೃತ ಸಂಸ್ಥೆಗಳಾಗಿದ್ದವು.

ಕಲ್ಬುರ್ಗಿ ಪ್ರದೇಶ : ಬಹುಕಾಲದವರೆಗೆ ಕಲ್ಬುರ್ಗಿ ಪ್ರದೇಶದಲ್ಲಿ ಉನ್ನತ ಶಿಕ್ಷಣದ ಸೌಲಭ್ಯವೇ ಇರಲಿಲ್ಲ. ವಿದ್ಯಾರ್ಥಿಗಳು ಕಾಲೇಜಿನಲ್ಲಿ ಓದಬೇಕಾದರೆ ಹೈದರಾಬಾದಿಗೋ, ಪುಣೆಗೋ, ಮದ್ರಾಸಿಗೋ ಹೋಗಬೇಕಾಗಿತ್ತು. 1917ರಲ್ಲಿ ಉಸ್ಮಾನಿಯ ವಿಶ್ವವಿದ್ಯಾಲಯವೇನೋ ಸ್ಥಾಪನೆಯಾಯಿತು. ಆದರೆ ಈ ಭಾಗದ ವಿದ್ಯಾರ್ಥಿಗಳಿಗೆ ಅದರಿಂದ ಅಂತಹ ಪ್ರಯೋಜನವೇನೂ ಆಗಲಿಲ್ಲ. 1930ರಲ್ಲಿ ಮಾತ್ರ ಕಲ್ಬುರ್ಗಿಯಲ್ಲಿ ಇಂಟರ್‌ಮೀಡಿಯೆಟ್ ಕಾಲೇಜು ಆರಂಭವಾಯಿತು. ಆ ನಗರದಲ್ಲಿದ್ದ ಸರ್ಕಾರಿ ಇಂಗ್ಲಿಷ್ ಪ್ರೌಢಶಾಲೆ ಮತ್ತು ಉಸ್ಮಾನಿಯ ಪ್ರೌಢಶಾಲೆಗಳೆರಡನ್ನೂ ಒಟ್ಟುಗೂಡಿಸಿ ಈ ಕಾಲೇಜನ್ನು ಆರಂಭಿಸಲಾಯಿತು. ಈ ಕಾಲೇಜಿನಲ್ಲಿ 1950-51ರವರೆಗೆ ಉರ್ದುವೇ ಶಿಕ್ಷಣ ಮಾಧ್ಯಮವಾಗಿತ್ತು. ಆ ವರ್ಷ ಅದು ಇಂಗ್ಲೀಷ್ ಆಯಿತು. 1952ರಲ್ಲಿ ಅದು ಪ್ರಥಮ ದರ್ಜೆಯ ಕಾಲೇಜಾಯಿತು. 1953ರಲ್ಲಿ ಯಾದಗಿರಿಯಲ್ಲಿ ಶಂಕರ್ ಆರ್ಟ್ಸ್ ಕಾಲೇಜು ಆರಂಭವಾಯಿತು. 1954ರಲ್ಲಿ ರಾಯಚೂರು ಎಜುಕೇಷನ್ ಸೊಸೈಟಿಯು ಆ ಊರಿನಲ್ಲಿ ಲಕ್ಷ್ಮೀ ವೆಂಕಟೇಶ ದೇಸಾಯಿ ಕಾಲೇಜನ್ನು ಆರಂಭಿಸಿತು. 1956ರಲ್ಲಿ ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘವು ಕಲ್ಬುರ್ಗಿಯಲ್ಲಿ ಶರಣ ಬಸವೇಶ್ವರ ಕಾಲೇಜನ್ನು ಸ್ಥಾಪಿಸಿತು. ಈ ಪ್ರದೇಶದ ಪದವೀಧರ ಶಿಕ್ಷಕರಿಗೆ ತರಬೇತಿ ಕೊಡಲು 1955ರಲ್ಲಿ ಕಲ್ಬುರ್ಗಿಯಲ್ಲಿ ಒಂದು ಶಿಕ್ಷಕರ ಕಾಲೇಜು ಆರಂಭವಾಯಿತು. 1956ಕ್ಕೆ ಪೂರ್ವದಲ್ಲಿ ಈ ಕಾಲೇಜುಗಳೆಲ್ಲವೂ ಉಸ್ಮಾನಿಯ ವಿಶ್ವವಿದ್ಯಾಲಯದ ಅಂಗಸಂಸ್ಥೆಗಳಾಗಿದ್ದವು. ಅನಂತರ ಇವೆಲ್ಲವೂ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯೊಳಕ್ಕೆ ಬಂದವು.

ಕೊಡಗು : 1949ಕ್ಕೆ ಮುಂಚೆ ಕೊಡಗಿನಲ್ಲಿ ಯಾವ ಕಾಲೇಜೂ ಇರಲಿಲ್ಲ. ಆ ವರ್ಷ ಮಡಿಕೇರಿಯಲ್ಲಿ ಸರ್ಕಾರವು ಒಂದು ದ್ವಿತೀಯ ದರ್ಜೆ ಕಾಲೇಜನ್ನು ಆರಂಭಿಸಿತು. 1953-54ರಲ್ಲಿ ಇದು ಪ್ರಥಮ ದರ್ಜೆ ಕಾಲೇಜು ಆಯಿತು. 1956ರವರೆಗೆ ಈ ಕಾಲೇಜು ಮದ್ರಾಸು ವಿಶ್ವವಿದ್ಯಾಲಯದ ಅಂಗಸಂಸ್ಥೆಯಾಗಿತ್ತು. ಆ ವರ್ಷ ಅದು ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯೊಳಕ್ಕೆ ಬಂದಿತು. 1949ಕ್ಕೆ ಮುಂಚೆ, ಈ ಜಿಲ್ಲೆಯಲ್ಲಿ

ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಮೈಸೂರು, ಬೆಂಗಳೂರು, ಮಂಗಳೂರು, ಮದ್ರಾಸು ಮತ್ತಿತರ ಪಟ್ಟಣಗಳಲ್ಲಿದ್ದ ಕಾಲೇಜುಗಳಿಗೆ ಸೇರಿಕೊಳ್ಳುತ್ತಿದ್ದರು. ಅವರಲ್ಲಿ ಅನೇಕರಿಗೆ ತಮ್ಮ ಉನ್ನತ ವ್ಯಾಸಂಗವನ್ನು ಮುಂದುವರಿಸಲು ಉದಾರವಾಗಿ ವಿದ್ಯಾರ್ಥಿವೇತನವನ್ನು ಕೊಡಲಾಗುತ್ತಿತ್ತು.

ಈ ಕೆಳಗಿನ ಪಟ್ಟಿಯಲ್ಲಿ* ಸ್ವಾತಂತ್ರ್ಯಗಳಿಸಿದ ಸಮಯದಲ್ಲಿ ಮತ್ತು ರಾಜ್ಯ ಪುನರ್ಘಟನೆಯ ಸಮಯದಲ್ಲಿ ರಾಜ್ಯದ ವಿವಿಧ ಭಾಗಗಳಲ್ಲಿದ್ದ ಕಾಲೇಜುಗಳ ಸಂಖ್ಯೆಯನ್ನು ತೋರಿಸಲಾಗಿದೆ.

ರಾಜ್ಯ ಪುನರ್ಘಟನೆಯ ಪರಿಣಾಮವಾಗಿ, ರಾಜ್ಯದಲ್ಲಿನ ಎರಡು ವಿಶ್ವವಿದ್ಯಾಲಯಗಳ ವ್ಯಾಪ್ತಿಯನ್ನು ಹೆಚ್ಚಿಸಬೇಕಾಯಿತು. ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಪ್ತಿಯನ್ನು ಕಲ್ಬುರ್ಗಿ ವಿಭಾಗದ ಮೂರು ಜಿಲ್ಲೆಗಳಿಗೆ ವಿಸ್ತರಿಸಿತು. ಕೆಲ ಕಾಲದ ನಂತರ, ಬಳ್ಳಾರಿ ಜಿಲ್ಲೆಯನ್ನು ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯಿಂದ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬದಲಾಯಿಸಲಾಯಿತು. ಮೈಸೂರು ವಿಶ್ವವಿದ್ಯಾಲಯವು ತನ್ನ ವ್ಯಾಪ್ತಿಯನ್ನು ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳಿಗೂ ಮತ್ತು ಕೊಳ್ಳೇಗಾಲ ತಾಲೂಕಿಗೂ ವಿಸ್ತರಿಸಿತು. ಕೆಲವು ವರ್ಷಗಳ ಕಾಲ ಮಣಿಪಾಲದ ಇಂಜಿನಿಯರಿಂಗ್, ವೈದ್ಯಕೀಯ ಮತ್ತು ಕಾನೂನು ಕಾಲೇಜುಗಳು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯೊಳಗೇ ಉಳಿದಿದ್ದವು. ಅನಂತರ ಇವೂ ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯೊಳಕ್ಕೆ ಬಂದವು. ಆ ಮೊದಲೇ ಜಿಲ್ಲೆಯ ಇತರ ಕಾಲೇಜುಗಳು ಮೈಸೂರು ವಿಶ್ವವಿದ್ಯಾಲಯದ ಅಂಗಸಂಸ್ಥೆಗಳಾಗಿದ್ದವು.

ಇಡೀ ರಾಜ್ಯದಲ್ಲಿ ರಾಜ್ಯ ಪುನರ್ಘಟನೆಯ ಸಮಯದಲ್ಲಿ 70 ಕಾಲೇಜುಗಳು ಮಾತ್ರ ಇದ್ದವು. 1975-76ರ ಹೊತ್ತಿಗೆ ಈ ಸಂಖ್ಯೆಯು 319 ಆಯಿತು. ಕಲ್ಬುರ್ಗಿ ಪ್ರದೇಶದಲ್ಲಿ ಈ ಪ್ರಗತಿಯು ಎದ್ದು ಕಾಣುತ್ತದೆ. ರಾಜ್ಯ ಪುನರ್ಘಟನೆಯ ಕಾಲದಲ್ಲಿ ಈ ಭಾಗದಲ್ಲಿ ಐದು ಕಾಲೇಜುಗಳು ಮಾತ್ರ ಇದ್ದವು. ಇವೆಲ್ಲವೂ ಸಾಧಾರಣ ಕಾಲೇಜುಗಳೇ. 1975-76ರ ಹೊತ್ತಿಗೆ ಇವುಗಳ ಸಂಖ್ಯೆ 27ಕ್ಕೆ ಏರಿತು. ಮುಖ್ಯವಾದ ಅಂಶವೆಂದರೆ ವೃತ್ತಿ ಶಿಕ್ಷಣ ಕಾಲೇಜುಗಳಾದ ವೈದ್ಯಕೀಯ, ಇಂಜಿನಿಯರಿಂಗ್, ಕಾನೂನು ಮತ್ತು ಶಿಕ್ಷಣ ಕಾಲೇಜುಗಳು ಈ ಅವಧಿಯಲ್ಲಿ ಈ ಭಾಗದಲ್ಲಿ ಆರಂಭವಾದವು. ಸಂಸ್ಥೆಗಳ ಸಂಖ್ಯೆ ಬೆಳೆದಂತೆ ವಿದ್ಯಾರ್ಥಿಗಳ ಸಂಖ್ಯೆಯೂ ಶೀಘ್ರವಾಗಿ ಬೆಳೆಯಿತು.

*

| ಪ್ರದೇಶ | ಸ್ವಾತಂತ್ರ್ಯ ಗಳಿಸಿದಾಗ | | | | ರಾಜ್ಯ ಪುನರ್ಘಟನೆಯ ಕಾಲಕ್ಕೆ | | | |
|---|---|---|---|---|---|---|---|---|
| | ಪ್ರಥಮ ದರ್ಜೆಯ ಕಾಲೇಜುಗಳು | ದ್ವಿತೀಯ ದರ್ಜೆಯ ಕಾಲೇಜುಗಳು | ವಿಶಿಷ್ಟ ವೃತ್ತಿ ಶಿಕ್ಷಣ ಕಾಲೇಜುಗಳು | ಒಟ್ಟು | ಪ್ರಥಮ ದರ್ಜೆಯ ಕಾಲೇಜುಗಳು | ದ್ವಿತೀಯ ದರ್ಜೆಯ ಕಾಲೇಜುಗಳು | ವಿಶಿಷ್ಟ ವೃತ್ತಿ ಶಿಕ್ಷಣ ಕಾಲೇಜುಗಳು | ಒಟ್ಟು |
| ಮೈಸೂರು | 8 | 14 | 6 | 28 | 14 | 14 | 14 | 42 |
| ಬೆಳಗಾವಿ | 5 | 1 | 1 | 7 | 10* | — | 5 | 15 |
| ಮದ್ರಾಸು ಕರ್ನಾಟಕ | 2 | 2 | 1 | 5 | 4 | — | 3 | 7 |
| ಕಲ್ಬುರ್ಗಿ | — | 1 | — | 1 | 4 | — | 1 | 5 |
| ಕೊಡಗು | — | — | — | — | 1 | — | — | 1 |
| ಒಟ್ಟು | 15 | 18 | 8 | 41 | 33 | 14 | 23 | 70 |

*(ಕಾಮರ್ಸ್ ಕಾಲೇಜು ಸೇರಿ)

## ಕಾಲೇಜು ಶಿಕ್ಷಣ ನಿರ್ದೇಶನಾಲಯ

ರಾಜ್ಯ ಪುನರ್ಘಟನೆಗೆ ಮುಂಚೆ, ಮೈಸೂರು ವಲಯದ ಎಲ್ಲ ಕಾಲೇಜುಗಳೂ ಮೈಸೂರು ವಿಶ್ವವಿದ್ಯಾಲಯದ ಅಂಗ ಸಂಸ್ಥೆಗಳಾಗಿಯೂ, ದಕ್ಷಿಣ ಕನ್ನಡ ಮತ್ತು ಕೊಡಗು ಪ್ರದೇಶದ ಕಾಲೇಜುಗಳು ಮದ್ರಾಸು ವಿಶ್ವವಿದ್ಯಾಲಯದ ಅಂಗೀಕೃತ ಸಂಸ್ಥೆಗಳಾಗಿಯೂ, ಬೆಳಗಾವಿ ಪ್ರದೇಶದ ಕಾಲೇಜುಗಳು ಕರ್ನಾಟಕ ವಿಶ್ವವಿದ್ಯಾಲಯದ ಅಂಗೀಕೃತ ಸಂಸ್ಥೆಗಳಾಗಿಯೂ, ಕಲ್ಬುರ್ಗಿ ಪ್ರದೇಶದ ಕಾಲೇಜುಗಳು ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದ ಅಂಗಸಂಸ್ಥೆಗಳಾಗಿಯೂ ಇದ್ದುವಷ್ಟೆ. ಇವುಗಳ ಆಡಳಿತ ಮಾತ್ರ ಬೇರೆ ಬೇರೆ ರೀತಿಯಾಗಿತ್ತು. ಮೈಸೂರು ಪ್ರದೇಶದಲ್ಲಿದ್ದ ಎಲ್ಲ ಕಾಲೇಜುಗಳೂ-ಪ್ರಾಚ್ಯ ಭಾಷಾ ಕಾಲೇಜುಗಳ ಹೊರತು–ಮೈಸೂರು ವಿಶ್ವವಿದ್ಯಾಲಯದ ಆಡಳಿತಕ್ಕೆ ಒಳಪಟ್ಟಿದ್ದುವು. ಪ್ರಾಚ್ಯ ಭಾಷಾ ಕಾಲೇಜುಗಳು ಸಾರ್ವಜನಿಕ ಶಿಕ್ಷಣ ನಿರ್ದೇಶಕರ ಅಧೀನದಲ್ಲಿದ್ದುವು. ದಕ್ಷಿಣ ಕನ್ನಡ, ಕೊಡಗು ಮತ್ತು ಬೆಳಗಾವಿ ಪ್ರದೇಶಗಳಲ್ಲಿ ಸಾಮಾನ್ಯ ಕಾಲೇಜುಗಳು ಆಯಾ ಸರ್ಕಾರದ ಶಿಕ್ಷಣ ಇಲಾಖೆಯ ಆಡಳಿತಕ್ಕೆ ಒಳಪಟ್ಟಿದ್ದುವು. ಕಲ್ಬುರ್ಗಿ ವಲಯದ ಕಾಲೇಜುಗಳು ಉಸ್ಮಾನಿಯ ವಿಶ್ವವಿದ್ಯಾಲಯದ ಆಡಳಿತಕ್ಕೆ ಒಳಪಟ್ಟಿದ್ದುವು. ಅಲ್ಲಿಯ ಖಾಸಗೀ ಕಾಲೇಜುಗಳಿಗೆ ಉಸ್ಮಾನಿಯ ವಿಶ್ವವಿದ್ಯಾಲಯವು ತನ್ನ ನಿಧಿಯಿಂದಲೇ ಅನುದಾನವನ್ನು ಕೊಡುತ್ತಿತ್ತು. ಹೈದರಾಬಾದ್ ಸರ್ಕಾರವು ಉಸ್ಮಾನಿಯ ವಿಶ್ವವಿದ್ಯಾಲಯಕ್ಕೆ ಅಗತ್ಯವಾದ ಹಣವನ್ನೊದಗಿಸುತ್ತಿತ್ತು. ಆದರೆ ರಾಜ್ಯ ಪುನರ್ಘಟನೆಗೆ ಸ್ವಲ್ಪ ಮುಂಚೆ, ಈ ಕಾಲೇಜುಗಳನ್ನು ಶಿಕ್ಷಣ ಇಲಾಖೆಯ ಆಡಳಿತಕ್ಕೆ ವರ್ಗಾಯಿಸಲಾಯಿತು. ರಾಜ್ಯ ಪುನರ್ಘಟನೆಯಾದ ಮೇಲೆ, ಈ ಪ್ರದೇಶಗಳ ಕಾಲೇಜುಗಳೆಲ್ಲವೂ ಹೊಸ ರಾಜ್ಯದ ಶಿಕ್ಷಣ ನಿರ್ದೇಶಕರ ಆಡಳಿತಕ್ಕೆ ಬಂದವು. ಮೈಸೂರು ವಲಯದಲ್ಲಿದ್ದ ಕಾಲೇಜುಗಳು ಮಾತ್ರ ಮೈಸೂರು ವಿಶ್ವವಿದ್ಯಾಲಯದ ಆಡಳಿತದಲ್ಲೇ ಉಳಿದವು.

1960ರಲ್ಲಿ, ಕಾಲೇಜು ಶಿಕ್ಷಣ ನಿರ್ದೇಶನಾಲಯವು ಅಸ್ತಿತ್ವಕ್ಕೆ ಬಂತು. ಇದರ ಸ್ಥಾಪನೆಯ ಉದ್ದೇಶ ಸಾಮಾನ್ಯ ಕಾಲೇಜುಗಳ ಆಡಳಿತದಲ್ಲಿ ಏಕತೆಯನ್ನು ತರುವುದಾಗಿತ್ತು. ಈ ನಿರ್ದೇಶನಾಲಯವು ಅಸ್ತಿತ್ವಕ್ಕೆ ಬಂದ ಮೇಲೆ ರಾಜ್ಯದ ಎಲ್ಲ ಸಾಮಾನ್ಯ ಕಾಲೇಜುಗಳೂ 1961-62ರ ವೇಳೆಗೆ ಒಂದೇ ಇಲಾಖೆಯ ಆಡಳಿತಕ್ಕೆ ಬಂದಂತಾಯಿತು. ಶಿಕ್ಷಣ ಕಾಲೇಜುಗಳು ಮಾತ್ರ ಶಿಕ್ಷಣ ನಿರ್ದೇಶಕರ ವ್ಯಾಪ್ತಿಯಲ್ಲೇ ಉಳಿದವು. ವಿಶ್ವವಿದ್ಯಾಲಯದ ಕಾಲೇಜುಗಳು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಉಳಿದವು. ಕಾಲೇಜು ಶಿಕ್ಷಣ ಇಲಾಖೆಯು ಪ್ರಾರಂಭವಾದಾಗ 42 ಕಾಲೇಜುಗಳು ಅದರ ವ್ಯಾಪ್ತಿಯಲ್ಲಿದ್ದುವು. ಅವುಗಳಲ್ಲಿ 17 ಸರ್ಕಾರಿ ಕಾಲೇಜುಗಳು, 25 ಖಾಸಗೀ ಕಾಲೇಜುಗಳು. ಅವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಂಖ್ಯೆ 27,338. ಕಾಲೇಜುಗಳ ಸಂಖ್ಯೆ 1968-69ರಲ್ಲಿ 136ಕ್ಕೆ ಏರಿತು. ಅಂದರೆ ಶೇಕಡಾ 324ರಷ್ಟು ಹೆಚ್ಚಿದಂತಾಯಿತು. ಇವುಗಳಲ್ಲಿನ ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಂಖ್ಯೆ 99,630. (ಈ ಸಂಖ್ಯೆಯಲ್ಲಿ ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಓದುತ್ತಿದ್ದವರ ಸಂಖ್ಯೆಯೂ ಸೇರಿದೆ). 1982-83ರಲ್ಲಿ, 37 ಸರ್ಕಾರಿ ಕಾಲೇಜುಗಳೂ, 256 ಖಾಸಗೀ ಕಾಲೇಜುಗಳೂ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿದ್ದುವು. 1981-82ರಲ್ಲಿ ಅಭಿವೃದ್ಧಿ ಯೋಜನೆಗಳಿಗಾಗಿ 2.60 ಕೋಟಿ ರೂಪಾಯಿ, ಇಲಾಖೆಯ ಇತರ ಕಾರ್ಯ ಚಟುವಟಿಕೆಗಳಿಗಾಗಿಯೂ 22.27 ಕೋಟಿ ರೂಪಾಯಿ ವೆಚ್ಚವಾದುವು. ಈ ಇಲಾಖೆಗೆ ನಿರ್ದೇಶಕರೇ ಮುಖ್ಯಸ್ಥರು. ಇವರಿಗೆ ಸಹಾಯಕರಾಗಿ ಮೂವರು ಉಪನಿರ್ದೇಶಕರೂ, ಇಬ್ಬರು ಸಹಾಯಕ ನಿರ್ದೇಶಕರೂ, ಇಬ್ಬರು ಲೆಕ್ಕಾಧಿಕಾರಿಗಳೂ, ಒಬ್ಬ ವ್ಯವಸ್ಥಾಪಕರೂ ಇದ್ದಾರೆ; ತಕ್ಕ ಸಿಬ್ಬಂದಿಯೂ ಇದೆ. ಬೆಂಗಳೂರು, ಮೈಸೂರು ಮತ್ತು ಧಾರವಾಡಗಳಲ್ಲಿ ಪ್ರಾದೇಶಿಕ ಕಚೇರಿಗಳಿವೆ. ಇವುಗಳಿಗೆ ಉಪನಿರ್ದೇಶಕರು ಮುಖ್ಯಸ್ಥರಾಗಿದ್ದಾರೆ. ಸಹಾಯಕ ನಿರ್ದೇಶಕರೂ, ಲೆಕ್ಕಾಧಿಕಾರಿಗಳೂ, ಸಿಬ್ಬಂದಿ ವರ್ಗದವರೂ ಇವರಿಗೆ ಸಹಾಯಕರಾಗಿದ್ದಾರೆ.

## ನ್ಯಾಷನಲ್ ಕ್ಯಾಡೆಟ್ ಕೋರ್

ಮೈಸೂರು ಸಂಸ್ಥಾನದಲ್ಲಿ 1948ರಲ್ಲಿ ನ್ಯಾಷನಲ್ ಕ್ಯಾಡೆಟ್ ಕೋರ್ (ಎನ್. ಸಿ. ಸಿ.) ಯೋಜನೆಯು ಅಸ್ತಿತ್ವಕ್ಕೆ ಬಂದಿತು. ಅದರಲ್ಲಿ 10 ಅಧಿಕಾರಿಗಳೂ ಭೂ ಸೈನ್ಯಕ್ಕೆ ಸೇರಿದ 315 ವಿದ್ಯಾರ್ಥಿ ಸೈನಿಕರೂ ಅದರ ಲಘುರೂಪದ ಆರಂಭದ ಕಾಲದಲ್ಲಿ ಇದ್ದರು. ಇದು ಎಚ್ ಕ್ಯೂ 10ನೇ ವೃತ್ತದ ಕ್ಯಾಡೆಟ್ ಕೋರ್ ಅಧೀನದಲ್ಲಿತ್ತು. ಅನಂತರ, ವಾಯು ಸೇನಾ ಶಾಖೆಯನ್ನೂ ಮತ್ತು ನಾವಿಕ ಶಾಖೆಯನ್ನೂ ಆರಂಭಿಸಲಾಯಿತು. ಆಮೇಲೆ ಹೆಣ್ಣುಮಕ್ಕಳು ಸೇರಿಕೊಳ್ಳುವ ವ್ಯವಸ್ಥೆಯನ್ನೂ ಮಾಡಲಾಯಿತು. ಈಗ ಅದು ರಾಜ್ಯದಲ್ಲಿನ ಅತ್ಯಂತ ದೊಡ್ಡ ಯುವ ಸಂಸ್ಥೆಗಳಲ್ಲಿ ಒಂದಾಗಿದೆ. ಇದರಲ್ಲಿ 70,000 ವಿದ್ಯಾರ್ಥಿ ಸೈನಿಕರು ಇದ್ದಾರೆ. ಬೆಂಗಳೂರಿನಲ್ಲಿ ಎರಡು, ಮೈಸೂರು, ಮಂಗಳೂರು, ಬೆಳಗಾವಿ ಮತ್ತು ಬಳ್ಳಾರಿಗಳಲ್ಲಿ ಒಂದೊಂದು ಹೀಗೆ ಆರು ತಂಡಗಳಿವೆ. 315 ಕಾಲೇಜು ಮತ್ತು 310 ಶಾಲೆಗಳು ಯೋಜನೆಯ ಪ್ರಯೋಜನವನ್ನು ಪಡೆಯುತ್ತಿವೆ. ನ್ಯಾಷನಲ್ ಕ್ಯಾಡೆಟ್ ಕೋರ್‌ನ ಉದ್ದೇಶಗಳೇನೆಂದರೆ, ಮುಖಂಡನಿಗೆ ಬೇಕಾದ ಗುಣಗಳನ್ನೂ, ಸಚ್ಚಾರಿತ್ರ್ಯವನ್ನೂ, ಕ್ರೀಡಾ ಭಾವನೆಯನ್ನೂ, ಸೇವೆಯನ್ನೂ ಮಾಡಬೇಕೆಂಬ ಆದರ್ಶವನ್ನೂ ಬೆಳೆಸುವುದೇ ಅಲ್ಲದೆ ಆಪತ್ಕಾಲದಲ್ಲಿ ದೇಶಕ್ಕೆ ಬೇಕಾದ ಶಿಸ್ತಿನ ಯುವಕ ತಂಡವನ್ನೂ, ಕೌಶಲ್ಯ ಪೂರಿತ ನುರಿತ ಯುವಕ ಪಡೆಯನ್ನೂ ತಯಾರಿಸುವುದು, ಮುಂತಾದವು. ಎನ್. ಸಿ. ಸಿ. ಚಟುವಟಿಕೆಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು: ಸೈನಿಕ ತರಬೇತಿ, ಸಾಹಸ ಪ್ರವೃತ್ತಿಯನ್ನು ಬೆಳೆಸುವ

ಕಾರ್ಯಕ್ರಮಗಳು ಮತ್ತು ಸಮಾಜ ಸೇವೆ. ಸೈನಿಕ ತರಬೇತಿಯ ಯೋಜನೆಯಲ್ಲಿ ಶೈಕ್ಷಣಿಕ ವರ್ಷದಲ್ಲಿ 120 ಪೀರಿಯಡ್ಡುಗಳಷ್ಟು ಕಾಲ ಸಂಸ್ಥೆಯಲ್ಲೇ ಶಿಕ್ಷಣ ಕೊಡುವ ವ್ಯವಸ್ಥೆ ಇದೆ. ಜೊತೆಗೆ 132 ಪೀರಿಯಡ್ಡುಗಳಷ್ಟು ಹೊರಗಡೆ ಶಿಬಿರಗಳಲ್ಲಿ ಶಿಕ್ಷಣ ಕೊಡಲಾಗುತ್ತದೆ. 1980-81ರಲ್ಲಿ, 24 ಶಿಬಿರಗಳನ್ನು ನಡೆಸಲಾಯಿತು. ಆ ವರ್ಷ ಜ್ಯೂನಿಯರ್ ಡಿವಿಷನ್ (ಕಿರಿಯರ ವಿಭಾಗ) ನಲ್ಲಿ 18,079 ವೃತ್ತಿ ಶ್ರೇಷ್ಠತೆಗೆ ಸಂಬಂಧಿಸಿದ ಅರ್ಹತಾ ಪತ್ರಗಳನ್ನೂ ಸೀನಿಯರ್ ಡಿವಿಷನ್ (ಹಿರಿಯರ ವಿಭಾಗ) ದಲ್ಲಿ 3,393 ಅಂತಹ ಅರ್ಹತಾ ಪತ್ರಗಳನ್ನೂ ಕೊಡಲಾಯಿತು. ಸಾಹಸ ಪ್ರವೃತ್ತಿಯನ್ನು ಬೆಳೆಸುವ ಕಾರ್ಯಕ್ರಮದಲ್ಲಿ ಸೈಕಲ್ ಸವಾರಿಯೂ, ಕಾಡುದಾರಿಯಲ್ಲಿ ನಡೆಯುವುದೂ, ಬಸ್ ಪ್ರಯಾಣ, ನೌಕಾಯಾನ, ಯೋಗ ಶಿಕ್ಷಣ ಮತ್ತು ಸೈನಿಕ ತರಬೇತಿಯನ್ನು ಹೋಲುವ ಶಿಕ್ಷಣ ಮುಂತಾದವು ಸೇರಿವೆ. 1980-81ರಲ್ಲಿ, 49 ಸೈಕಲ್ ಪ್ರವಾಸಗಳನ್ನೂ, 48 ಕಾಡುದಾರಿಯಲ್ಲಿ ಹೋಗಬೇಕಾದ ಪ್ರವಾಸಗಳನ್ನೂ, ಒಂದು ನೌಕಾಯಾನವನ್ನೂ ವ್ಯವಸ್ಥೆ ಮಾಡಲಾಗಿತ್ತು. ರಸ್ತೆ ನಿರ್ಮಾಣ, ರಸ್ತೆ ದುರಸ್ತಿ, ರಸ್ತೆಗಳನ್ನು ಸರಿಯಾದ ರೀತಿಯಲ್ಲಿ ಇಡುವುದು, ಮರಗಳನ್ನು ನೆಡುವುದು, ಆಸ್ಪತ್ರೆಗಳಲ್ಲಿ ರೋಗಿಗಳ ಯೋಗಕ್ಷೇಮವನ್ನು ವಿಚಾರಿಸುವುದು, ತಮ್ಮ ಸಂಸ್ಥೆಗಳ ಆವರಣಗಳನ್ನು ಚೊಕ್ಕಟವಾಗಿಡುವುದು, ಗ್ರಾಮಗಳನ್ನು ದತ್ತಿ ಮಾಡಿಕೊಳ್ಳುವುದು, ಕೊಳಚೆ ಪ್ರದೇಶಗಳನ್ನು ಸಂಸ್ಥೆಗಳನ್ನೂ ತಮ್ಮದೆಂದೇ ಸ್ವೀಕರಿಸಿ ಅವುಗಳನ್ನು ವೃದ್ಧಿಪಡಿಸುವುದು, ಮುಂತಾದ ಸಮಾಜ ಸೇವಾ ಕಾರ್ಯಗಳು ಎನ್. ಸಿ. ಸಿ. ಚಟುವಟಿಕೆಗಳಾಗಿವೆ. 1983 ಸೇರಿದಂತೆ ಇತ್ತೀಚಿನ ನಾಲ್ಕು ವರ್ಷಗಳಲ್ಲಿ ಕರ್ನಾಟಕ ರಾಜ್ಯದ ಎನ್. ಸಿ. ಸಿ. ದಳವನ್ನು ದಿಲ್ಲಿಯಲ್ಲಿ ನಡೆಯುವ ಗಣರಾಜ್ಯೋತ್ಸವ ಶಿಬಿರದಲ್ಲಿ ಅತ್ಯುತ್ತಮವಾದದ್ದೆಂದು ಘೋಷಿಸಲಾಗಿದೆ. ಎನ್.ಸಿ.ಸಿ. ವಿದ್ಯಾರ್ಥಿಗಳಿಗೆ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕೆಲವು ಸ್ಥಾನಗಳನ್ನು ಕಾದಿರಿಸಲಾಗಿದೆ.

## 1976ರ ಕರ್ನಾಟಕ ವಿಶ್ವವಿದ್ಯಾಲಯಗಳ ಶಾಸನ

ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳ ಶಾಸನಗಳಲ್ಲಿದ್ದ ಕೆಲವು ಭಾಗಗಳಿಗೆ ತಿದ್ದುಪಡಿ ಅತ್ಯಗತ್ಯವಾಗಿತ್ತು. ಆ ಸಮಯದಲ್ಲಿ ಕರ್ನಾಟಕದ ಎಲ್ಲ ವಿಶ್ವವಿದ್ಯಾಲಯಗಳಿಗೂ ಅನ್ವಯಿಸಬಹುದಾದ ಸಾಮಾನ್ಯ ಶಾಸನವೊಂದನ್ನು ಜಾರಿಗೆ ತರಲು ಸರ್ಕಾರವು ಆಲೋಚಿಸಿತು. ಇದರ ಪರಿಣಾಮವೇ 1976ರ ಕರ್ನಾಟಕ ವಿಶ್ವವಿದ್ಯಾಲಯಗಳ ಶಾಸನ. ಈ ಶಾಸನದ ಪ್ರಕಾರ, ವಿಶ್ವವಿದ್ಯಾಲಯಗಳ ಕುಲಪತಿಯು ಕೇವಲ ಅಲಂಕಾರ ಸ್ಥಾನದಲ್ಲಿರುವ ಒಬ್ಬ ವ್ಯಕ್ತಿಯಲ್ಲ. ಅಧ್ಯಾಪಕರ ನೇಮಕ, ಅವರ ಮೇಲೆ ತೆಗೆದುಕೊಳ್ಳಬಹುದಾದ ಶಿಸ್ತಿನ ಕ್ರಮ, ಹೊಸದಾಗಿ ಜಾರಿಗೆ ತರಬೇಕೆಂದಿರುವ ನಿಯಮಗಳು, ನಿಬಂಧನೆಗಳು, ಮುಂತಾದವುಗಳ ಬಗೆಗೆ ಅಂತಿಮ ನಿರ್ಧಾರ ತೆಗೆದುಕೊಳ್ಳುವ ಅಧಿಕಾರವನ್ನು ಅವರು ಪಡೆದಿದ್ದಾರೆ. ಹಣಕಾಸಿನ ವಿಷಯಗಳಲ್ಲಿ ಸರ್ಕಾರವು ವಿಶ್ವವಿದ್ಯಾಲಯಗಳ ಮೇಲೆ ಹೆಚ್ಚಿನ ಹತೋಟಿ ಪಡೆಯಿತು.

ಆಗಿಂದಾಗ್ಗೆ, ವಿಶ್ವವಿದ್ಯಾಲಯಗಳ ಕಾರ್ಯವನ್ನು ಪರಿಶೀಲಿಸಲು ಒಂದು (ಪ್ರಭಾವಿ) ಆಯೋಗವನ್ನು ನೇಮಿಸುವ ಅವಕಾಶವು ಈ ಶಾಸನದಲ್ಲಿದೆ. ಇದು ಒಂದು ಶಾಸನದ ವೈಶಿಷ್ಟ್ಯಪೂರ್ಣವಾದ ಅಂಶ. ಈ ಆಯೋಗದಲ್ಲಿ ಇಡೀ ರಾಷ್ಟ್ರದಲ್ಲೇ ಹೆಸರುವಾಸಿಯಾದ ಕನಿಷ್ಠ ಮೂರು ಜನ ಶಿಕ್ಷಣ ತಜ್ಞರಾದರೂ ಇರಬೇಕಾಗುತ್ತದೆ. ಮೊದಲನೇಯ ಆಯೋಗವು 1979ರಲ್ಲಿ ರಚಿತವಾಯಿತು. ಇದರ ಅಧ್ಯಕ್ಷರು ದೆಹಲಿ ವಿಶ್ವವಿದ್ಯಾಲಯದಲ್ಲಿ ಹಿಂದೆ ಉಪಕುಲಪತಿಗಳಾಗಿದ್ದ ಮತ್ತು ಹೆಸರಾಂತ ಆರ್ಥಿಕ ತಜ್ಞರಾದ ಕೆ. ಎನ್. ರಾಜ್ ಅವರು; ಡಾ|| ಜಗನ್ನಾಥ ರೆಡ್ಡಿ, ಪ್ರೊ|| ಸಿ. ಎನ್. ಆರ್. ರಾವ್ ಉಳಿದ ಇಬ್ಬರು ಸದಸ್ಯರು. ಡಾ|| ಜಗನ್ನಾಥರೆಡ್ಡಿಯವರು ಹಿಂದೆ ತಿರುಪತಿ ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದರು; ಮತ್ತು ಹೆಸರಾಂತ ರೋಗಲಕ್ಷಣ ಶಾಸ್ತ್ರಜ್ಞರಾಗಿದ್ದಾರೆ. ಪ್ರೊ|| ಸಿ. ಎನ್. ಆರ್. ರಾವ್‌ರವರು ಭಾರತೀಯ ವಿಜ್ಞಾನ ಸಂಸ್ಥೆಯ ಸುಪ್ರಸಿದ್ಧ ವಿಜ್ಞಾನಿಗಳು.

## ಕರ್ನಾಟಕದಲ್ಲಿನ ವಿಶ್ವವಿದ್ಯಾಲಯಗಳು

ಮೈಸೂರು ವಿಶ್ವವಿದ್ಯಾಲಯ: 1916ರಲ್ಲಿ ಅಸ್ತಿತ್ವಕ್ಕೆ ಬಂದ ಮೈಸೂರು ವಿಶ್ವವಿದ್ಯಾಲಯವು ಆರಂಭವಾದಾಗ ಕೇವಲ ಎರಡು ಶಾಖೆಗಳನ್ನು ಅಂದರೆ ಕಲೆ ಮತ್ತು ವಿಜ್ಞಾನ ಶಾಖೆಗಳನ್ನು ಹೊಂದಿತ್ತು. ಆಗ ಅದರಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ಕೇವಲ 593. ನಂತರ, ಇಂಜಿನಿಯರಿಂಗ್ ವಿಭಾಗವೂ (1917) ವೈದ್ಯಕೀಯ ವಿಭಾಗವೂ (1924) ಆರಂಭವಾದವು. 1980ರಲ್ಲಿ ಏಳು ವಿಭಾಗಗಳಿದ್ದವು. ಕಲೆ, ವಿಜ್ಞಾನ, ಇಂಜಿನಿಯರಿಂಗ್, ವೈದ್ಯ, ಕಾನೂನು, ಶಿಕ್ಷಣಶಾಸ್ತ್ರ ಮತ್ತು ವಾಣಿಜ್ಯ ಶಾಸ್ತ್ರ ಇವೇ ಆ ಏಳು ವಿಭಾಗಗಳು. ಜನರ ಭಾಷೆಯಲ್ಲಿಯೇ ವ್ಯಾಸಂಗ ವಿಸ್ತರಣಾ ಕಾರ್ಯವನ್ನು ಆರಂಭಿಸಿದ ವಿಶ್ವವಿದ್ಯಾಲಯಗಳಲ್ಲಿ ಇದೇ ಮೊದಲನೇಯದು. ಇದು ಯಶಸ್ವಿಯಾಯಿತು. ಆದುದರಿಂದ, 1934ರಲ್ಲಿ ಆಕ್ಸ್‌ಫರ್ಡ್‌ನಲ್ಲಿ ಸೇರಿದ್ದ ಅಂತರ್‌ರಾಷ್ಟ್ರೀಯ ವಿಶ್ವವಿದ್ಯಾಲಯಗಳ ಸಮ್ಮೇಳನದಲ್ಲಿ ಇದನ್ನು 'ಮೈಸೂರು ಪ್ರಯೋಗ'ವೆಂದು ಶ್ಲಾಘಿಸಲಾಯಿತು. ಕನ್ನಡದಲ್ಲಿ ಅದು ಪ್ರಕಟಿಸುತ್ತಿರುವ ಪ್ರಚಾರೋಪನ್ಯಾಸ ಮಾಲೆಯ ಪುಸ್ತಕಗಳು ಸಾಕಷ್ಟು ಜನಪ್ರಿಯವಾಗಿವೆ. 1956 ರಲ್ಲಿ ವಿಶ್ವವಿದ್ಯಾಲಯವು ಸ್ವಾಯತ್ತತೆಯನ್ನು ಪಡೆಯಿತು. 1960ರಲ್ಲಿ ಸ್ನಾತಕ ಮತ್ತು ಸ್ನಾತಕೋತ್ತರ ವಿಭಾಗಗಳು ಬೇರೆ

ಬೇರೆ ಬೇರೆಯಾದವು. ಆಗ ವಿಶ್ವವಿದ್ಯಾಲಯವು ಅದರ ಇಂದಿನ ಮುಖ್ಯ ಸ್ಥಾನವಾದ 'ಮಾನಸಗಂಗೋತ್ರಿ'ಗೆ ಸ್ಥಳಾಂತರಿಸಲ್ಪಟ್ಟಿತು. 1964ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಮತ್ತು 1980ರಲ್ಲಿ ಮಂಗಳೂರು ವಿಶ್ವವಿದ್ಯಾಲಯಗಳು ಆರಂಭವಾದ ಮೇಲೆ ಅದರ ವ್ಯಾಪ್ತಿಯು ಬಹುಮಟ್ಟಿಗೆ ಕಡಿಮೆಯಾಯಿತು. ಇದರಿಂದ ಆಡಳಿತ ನಡೆಸಲು ಅನುಕೂಲವಾಗುವಷ್ಟು ಮಟ್ಟಿಗೆ ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯು ಸೀಮಿತವಾಯಿತು. 1981-82ರಲ್ಲಿ ಅದರ ವ್ಯಾಪ್ತಿಯಲ್ಲಿ 105 ಕಾಲೇಜುಗಳಿದ್ದವು. ಅವುಗಳಲ್ಲಿ 69,258 ವಿದ್ಯಾರ್ಥಿ-ವಿದ್ಯಾರ್ಥಿನಿಯರಿದ್ದರು. ಈ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಶಿವಮೊಗ್ಗ ಜಿಲ್ಲೆಯ ಭದ್ರಾ ಜಲಾಶಯದ ಹತ್ತಿರ ಇದರ ಒಂದು ಸ್ನಾತಕೋತ್ತರ ಕೇಂದ್ರವಿದೆ.

ಕರ್ನಾಟಕ ವಿಶ್ವವಿದ್ಯಾಲಯ : ಕರ್ನಾಟಕ ವಿಶ್ವವಿದ್ಯಾಲಯವು ಆರಂಭವಾದ ಹೊಸದರಲ್ಲಿ ಅದಕ್ಕೆ ಹಲವಾರು ಅಂಗೀಕೃತವಾದ ಕಾಲೇಜುಗಳೂ, ಒಂದು ಸಂಶೋಧನ ಸಂಸ್ಥೆಯೂ ಸೇರಿದ್ದವು. ಮುಂಬೈ ಕರ್ನಾಟಕ ಪ್ರದೇಶದ ಕನ್ನಡ ಸಂಶೋಧನ ಸಂಸ್ಥೆಯೇ ಕರ್ನಾಟಕ ವಿಶ್ವವಿದ್ಯಾಲಯದ ಅಧೀನದಲ್ಲಿದ್ದ ಒಂದೇ ಸಂಶೋಧನ ಸಂಸ್ಥೆ. ವಿಶ್ವವಿದ್ಯಾಲಯದ ಕಚೇರಿಯೂ ಅದರ ವಿಭಾಗಗಳೂ ವಿಸ್ತಾರವಾದ ಪ್ರದೇಶದಲ್ಲಿವೆ. ಅದೇ ಧಾರವಾಡದ ಛೋಟಾ ಮಹಾಬಲೇಶ್ವರ. 'ಪಾವಟೆ ನಗರ'ವೆಂದು ಅದರ ಇಂದಿನ ಹೆಸರು. ವಿಶ್ವವಿದ್ಯಾಲಯದ ಶಿಲ್ಪಿ ಎನ್ನಿಸಿಕೊಂಡ ಪಾವಟೆಯವರ ಹೆಸರನ್ನು ಈ ಪ್ರದೇಶಕ್ಕೆ ಇಡಲಾಗಿದೆ. ರಾಜ್ಯ ಪುನರ್ಘಟನೆಯಾದ ಮೇಲೆ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯನ್ನು ಬಳ್ಳಾರಿ, ರಾಯಚೂರು, ಕಲ್ಬುರ್ಗಿ ಮತ್ತು ಬಿದರೆ ಜಿಲ್ಲೆಗಳಿಗೆ ವಿಸ್ತರಿಸಲಾಯಿತು. ಆದರೆ 1980ರಲ್ಲಿ ಕಲ್ಬುರ್ಗಿ ವಿಶ್ವವಿದ್ಯಾಲಯವು ಅಸ್ತಿತ್ವಕ್ಕೆ ಬಂದ ಮೇಲೆ ಈ ನಾಲ್ಕು ಜಿಲ್ಲೆಗಳೂ ಕಲ್ಬುರ್ಗಿ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬಂದವು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮೊದಲು ಆರಂಭವಾದ ಸ್ನಾತಕೋತ್ತರ ವಿಭಾಗಗಳೆಂದರೆ ಸಂಖ್ಯಾಶಾಸ್ತ್ರ ಮತ್ತು ಕನ್ನಡ. ಇವು ಆರಂಭವಾದದ್ದು 1952ರಲ್ಲಿ. 1980ರ ಹೊತ್ತಿಗೆ ವಿಶ್ವವಿದ್ಯಾಲಯದಲ್ಲಿ 35 ಸ್ನಾತಕೋತ್ತರ ವಿಭಾಗಗಳೂ, ವಿಶ್ವವಿದ್ಯಾಲಯವೇ ನಡೆಸುವ ನಾಲ್ಕು ಕಾಲೇಜುಗಳೂ, 143 ಅಂಗೀಕೃತವಾದ ಕಾಲೇಜುಗಳೂ, ಒಂದು ಮಾದರಿ ಪಬ್ಲಿಕ್ ಪಾಠಶಾಲೆಯೂ, ಒಂದು ಪ್ರಾಥಮಿಕ ಶಾಲೆಯೂ ಇವೆ. ಪ್ರಕಟನ ವಿಭಾಗವು ವಿವಿಧ ವಿಷಯಗಳನ್ನೊಳಗೊಂಡ 600 ಪುಸ್ತಕಗಳನ್ನು ಪ್ರಕಟಿಸಿದೆ. 1971ರಲ್ಲಿ ಈ ವಿಶ್ವವಿದ್ಯಾಲಯವು ಕಲ್ಬುರ್ಗಿಯಲ್ಲಿ ಒಂದು ಸ್ನಾತಕೋತ್ತರ ಕೇಂದ್ರವನ್ನು ಆರಂಭಿಸಿತು. 1980ರಲ್ಲಿ ಇದು ವಿಶ್ವವಿದ್ಯಾಲಯವಾಯಿತು. 1972ರಲ್ಲಿ ವಿಶ್ವವಿದ್ಯಾಲಯವು ಸಾಗರ ಜೀವ ಶಾಸ್ತ್ರ ಸಂಶೋಧನೆ ಕೇಂದ್ರವನ್ನು ಕಾರವಾರದಲ್ಲಿ ಆರಂಭಿಸಿತು. ಇದು ಮತ್ಸ್ಯಶಾಸ್ತ್ರದಲ್ಲಿ ಸಂಶೋಧನೆಯನ್ನು ನಡೆಸುತ್ತಿದೆ. ಅದೇ ವರ್ಷ, ಸಂಡೂರಿನ ಹತ್ತಿರವಿರುವ ನಂದಿಹಳ್ಳಿಯಲ್ಲಿ ತಾಂತ್ರಿಕ ಅಧ್ಯಯನಕ್ಕಾಗಿ ಒಂದು ಸ್ನಾತಕೋತ್ತರ ಕೇಂದ್ರವನ್ನು ಆರಂಭಿಸಲಾಯಿತು. ಇದು ಈಗ ಕಲ್ಬುರ್ಗಿ ವಿಶ್ವವಿದ್ಯಾಲಯದ ಒಂದು ಸಂಸ್ಥೆಯಾಗಿದೆ. ಕರ್ನಾಟಕ ವಿಶ್ವವಿದ್ಯಾಲಯವು ಬೆಳಗಾವಿಯಲ್ಲಿ ಒಂದು ಸ್ನಾತಕೋತ್ತರ ಕೇಂದ್ರವನ್ನು ತೆರೆದಿದೆ.

ಬೆಂಗಳೂರು ವಿಶ್ವವಿದ್ಯಾಲಯ : ಬೆಂಗಳೂರು ವಿಶ್ವವಿದ್ಯಾಲಯವು 1964ರಲ್ಲಿ ಆರಂಭವಾದಾಗ ಅದರ ವ್ಯಾಪ್ತಿಯಲ್ಲಿ 30 ಕಾಲೇಜುಗಳಿದ್ದವು. ಜೊತೆಗೆ ಹದಿನಾಲ್ಕು ಸ್ನಾತಕೋತ್ತರ ವಿಭಾಗಗಳಿದ್ದವು. ಮೊದಲು, ಬೆಂಗಳೂರು ನಗರ ಪ್ರದೇಶ ಮಾತ್ರ ಈ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟಿತ್ತು. ಆದರೆ ಕರ್ನಾಟಕ ವಿಶ್ವವಿದ್ಯಾಲಯಗಳ ಶಾಸನ ಜಾರಿಗೆ ಬಂದ ಮೇಲೆ ಇದರ ವ್ಯಾಪ್ತಿಗೆ ಬೆಂಗಳೂರು, ಕೋಲಾರ ಮತ್ತು ತುಮಕೂರು ಜಿಲ್ಲೆಗಳು ಒಳಪಟ್ಟವು. 1980ರಲ್ಲಿ ವಿಶ್ವವಿದ್ಯಾಲಯದ ಅಧೀನದಲ್ಲಿ 95 ಕಾಲೇಜುಗಳಿದ್ದವು. ಇವುಗಳಲ್ಲಿ ನಾಲ್ಕು ವಿಶ್ವವಿದ್ಯಾಲಯವೇ ನಡೆಸುತ್ತಿದ್ದ ಕಾಲೇಜುಗಳು; ಇನ್ನುಳಿದ 91 ಅಂಗೀಕೃತ ಕಾಲೇಜುಗಳು. ವಿಶ್ವವಿದ್ಯಾಲಯದ ಅಧೀನದಲ್ಲಿ 29 ಸ್ನಾತಕೋತ್ತರ ವಿಭಾಗಗಳಿದ್ದವು. 1964ರಲ್ಲಿ ಸುಮಾರು 20,000 ಇದ್ದ ವಿದ್ಯಾರ್ಥಿಗಳ ಸಂಖ್ಯೆಯು 1980ರಲ್ಲಿ 60,000ಕ್ಕೆ ಏರಿತು.

ವಿಶ್ವವಿದ್ಯಾಲಯವು ಇರುವ ಪ್ರದೇಶವು ಬೆಂಗಳೂರಿಗೆ 13 ಕಿ.ಮೀ. ದೂರದಲ್ಲಿ ಬೆಂಗಳೂರು-ಮೈಸೂರು ರಸ್ತೆಯ ಬಳಿ 1,100 ಎಕರೆಯಷ್ಟು ವಿಸ್ತಾರವಾಗಿದೆ. ಬೆಂಗಳೂರು ವಿಶ್ವವಿದ್ಯಾಲಯವು ಇರುವ ಪ್ರದೇಶದ ಹೆಸರು 'ಜ್ಞಾನ ಭಾರತಿ'. ನಾಲ್ಕನೇಯ ಯೋಜನೆಯ ಅವಧಿಯಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ರಾಜ್ಯ ಸರ್ಕಾರವು 75 ಲಕ್ಷ ರೂ. ಗಳನ್ನೂ ಅದೇ ಉದ್ದೇಶಕ್ಕೆ ವಿಶ್ವವಿದ್ಯಾಲಯಗಳ ಅನುದಾನ ಆಯೋಗವು 95 ಲಕ್ಷ ರೂ. ಗಳನ್ನೂ ಅನುದಾನವಾಗಿ ಕೊಟ್ಟವು. ಆರನೇಯ ಯೋಜನೆಯ ಅವಧಿಯಲ್ಲಿ ವಿಶ್ವವಿದ್ಯಾಲಯಗಳ ಅನುದಾನ ಆಯೋಗ (ಯು.ಜಿ.ಸಿ.) ಮತ್ತು ರಾಜ್ಯ ಸರ್ಕಾರಗಳು ತಲಾ ಎರಡು ಕೋಟಿ ರೂಪಾಯಿಗಳನ್ನು ಅಭಿವೃದ್ಧಿ ಕಾರ್ಯಗಳಿಗಾಗಿ ಕೊಟ್ಟವೆ.

ಕಲ್ಬುರ್ಗಿ ವಿಶ್ವವಿದ್ಯಾಲಯ : ಕರ್ನಾಟಕ ವಿಶ್ವವಿದ್ಯಾಲಯಗಳ ಶಾಸನಕ್ಕೆ ಒಂದು ತಿದ್ದುಪಡಿಯನ್ನು ಮಾಡುವುದರ ಮೂಲಕ ಕಲ್ಬುರ್ಗಿ ವಿಶ್ವವಿದ್ಯಾಲಯವು 1980ರಲ್ಲಿ ಆರಂಭಿಸಲ್ಪಟ್ಟಿತು. ಬಳ್ಳಾರಿ, ಬಿದರೆ, ಕಲ್ಬುರ್ಗಿ ಮತ್ತು ರಾಯಚೂರು ಜಿಲ್ಲೆಗಳ ಮೇಲೆ ಅದರ ವ್ಯಾಪ್ತಿ ಇದೆ. 58 ಅಂಗೀಕೃತ ಕಾಲೇಜುಗಳು ಅದರ ವ್ಯಾಪ್ತಿಯೊಳಗೆ ಬರುತ್ತವೆ.

ಇಂಗ್ಲೀಷ್, ಕನ್ನಡ, ಹಿಂದಿ, ವಾಣಿಜ್ಯ, ಗಣಿತಶಾಸ್ತ್ರ, ರಾಜ್ಯ ಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ, ರಸಾಯನ ಶಾಸ್ತ್ರ, ಸೂಕ್ಷ್ಮ ಜೀವ ವಿಜ್ಞಾನ, ಅನ್ವಯ ಎಲೆಕ್ಟ್ರಾನಿಕ್ಸ್, ಗ್ರಂಥಾಲಯ ವಿಜ್ಞಾನ, ಉರ್ದು ಮತ್ತು ಪಾರ್ಸಿ ಭಾಷೆಗಳು, ಈ ಸ್ನಾತಕೋತ್ತರ ವಿಭಾಗಗಳು ಈ ವಿಶ್ವವಿದ್ಯಾಲಯದಲ್ಲಿದೆ. ಬಳ್ಳಾರಿ ಜಿಲ್ಲೆಯ ನಂದಿ ಹಳ್ಳಿಯಲ್ಲಿರುವ ಸ್ನಾತಕೋತ್ತರ ಕೇಂದ್ರವೂ ಭೂವಿಜ್ಞಾನ, ಖನಿಜ ಸಂಸ್ಕರಣ ಶಾಸ್ತ್ರ, ಖನಿಜ ಪರೀಕ್ಷಾ ವಿಜ್ಞಾನಗಳ ಸ್ನಾತಕೋತ್ತರ ಮಟ್ಟದ ಬೋಧನೆ ಯನ್ನು ವ್ಯವಸ್ಥೆ ಮಾಡಿದೆ. ಈ ವಿಷಯಗಳ ಬೋಧನೆಗೆ ರಾಜ್ಯದ ಮತ್ತಾವ ವಿಶ್ವವಿದ್ಯಾಲಯದಲ್ಲೂ ಅವಕಾಶವಿಲ್ಲ. ವಿಶ್ವವಿದ್ಯಾಲಯದಲ್ಲಿ 21 ವಿಭಾಗಗಳಿವೆ. ಇವುಗಳಲ್ಲಿ 1981-82 ರಲ್ಲಿ ಸುಮಾರು 30,000 ವಿದ್ಯಾರ್ಥಿ ವಿದ್ಯಾರ್ಥಿನಿಯರಿದ್ದರು. ಹಿಂದೆ ಹೇಳಿದಂತೆ, ವಿಶ್ವವಿದ್ಯಾಲಯವು ಅನ್ವಯ ಎಲೆಕ್ಟ್ರಾನಿಕ್ಸ್ ಮತ್ತು ಸೂಕ್ಷ್ಮಜೀವ ವಿಜ್ಞಾನಗಳ ಬೋಧನೆಯನ್ನು ಸ್ನಾತ ಕೋತ್ತರ ಮಟ್ಟದಲ್ಲಿ ವ್ಯವಸ್ಥೆ ಮಾಡಿದೆ. ಇತರ ವಿಶ್ವವಿದ್ಯಾ ಲಯಗಳಲ್ಲಿ ಈ ವಿಭಾಗಗಳು ಇನ್ನೂ ಆರಂಭವಾಗಬೇಕಾಗಿದೆ. ವಿಶ್ವವಿದ್ಯಾಲಯವು ಆರಂಭವಾದಂದಿನಿಂದ 31-3-1982ರವರೆಗೆ 1,13,72,000 ರೂಪಾಯಿಗಳು ವೆಚ್ಚವಾಗಿದೆ.

ಮಂಗಳೂರು ವಿಶ್ವವಿದ್ಯಾಲಯ : ಮಂಗಳೂರು ವಿಶ್ವವಿದ್ಯಾಲಯವು 1980ನೇ ಇಸವಿ ಸೆಪ್ಟೆಂಬರ್ ಹತ್ತರಂದು ಆರಂಭವಾಯಿತು. ಅದರ ವ್ಯಾಪ್ತಿಯು ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗು ಜಿಲ್ಲೆಗಳಿಗೆ ಮಾತ್ರ ಸೀಮಿತವಾಗಿದೆ. ವಿಶ್ವ ವಿದ್ಯಾಲಯದ ಅಧೀನದಲ್ಲಿ 43 ಅಂಗೀಕೃತ ಕಾಲೇಜುಗಳಿವೆ. ಇವುಗಳಲ್ಲಿ ಐದು ಸರ್ಕಾರಿ ಕಾಲೇಜುಗಳಿದ್ದು ಉಳಿದವುಗಳು ಖಾಸಗೀ ಕಾಲೇಜುಗಳಾಗಿವೆ. ಮೈಸೂರು ವಿಶ್ವವಿದ್ಯಾಲಯವು ಮಂಗಳೂರಿನಲ್ಲಿ 1968ರಲ್ಲಿ ಮಂಗಳ ಗಂಗೋತ್ರಿ ಎಂಬ ಸ್ನಾತ ಕೋತ್ತರ ಕೇಂದ್ರವನ್ನು ಆರಂಭಿಸಿತು. ಇದರಲ್ಲಿ ಭೌತಶಾಸ್ತ್ರ, ಗಣಿತಶಾಸ್ತ್ರ, ಜೀವಶಾಸ್ತ್ರ, ವಾಣಿಜ್ಯಶಾಸ್ತ್ರ ಮತ್ತು ಕನ್ನಡ ವಿಷಯಗಳ ಅಧ್ಯಯನಕ್ಕೆ ವ್ಯವಸ್ಥೆ ಮಾಡಿತ್ತು. ಈ ಕೇಂದ್ರವೇ ಮುಂದೆ ವಿಶ್ವವಿದ್ಯಾಲಯವಾಗಿ ಬೆಳೆಯಿತು. ವಿಶ್ವವಿದ್ಯಾಲಯವು ಮಂಗಳೂರಿಗೆ 20 ಕಿ.ಮೀ. ದೂರದಲ್ಲಿರುವ ಕೊಣಾಜೆಯಲ್ಲಿದೆ. 1981-82ರಲ್ಲಿ 47 ಅಂಗೀಕೃತ ಕಾಲೇಜುಗಳು ಅದರ ವ್ಯಾಪ್ತಿ ಯಲ್ಲಿದ್ದವು. ಇವುಗಳಲ್ಲಿ ಎರಡು ಎಂಜಿನಿಯರಿಂಗ್ ಕಾಲೇಜು ಗಳು, ಎರಡು ವೈದ್ಯಕೀಯ, ಎರಡು ಕಾನೂನು, ನಾಲ್ಕು ಶಿಕ್ಷಣ ಕಾಲೇಜುಗಳಿದ್ದವು. ಮತ್ತು ಅದೇ ವರ್ಷ ಅಲ್ಲಿ ಹದಿನಾಲ್ಕು ಸ್ನಾತಕೋತ್ತರ ವಿಭಾಗಗಳಿದ್ದವು. ಅವು ಯಾವುವೆಂದರೆ ಭೌತ ಶಾಸ್ತ್ರ, ಜೀವವಿಜ್ಞಾನ ಶಾಸ್ತ್ರ, ಸಮುದ್ರ ತೀರದ ಭೂ ಭಾಗ ವಿಜ್ಞಾನ, ಗಣಿತ ಶಾಸ್ತ್ರ, ಕನ್ನಡ, ಅರ್ಥ ಶಾಸ್ತ್ರ, ವಾಣಿಜ್ಯ, ಆಡಳಿತ ವಿಜ್ಞಾನ, ರಸಾಯನ ಶಾಸ್ತ್ರ, ಇಂಗ್ಲೀಷ್, ಇತಿಹಾಸ, ಸಮಾಜ ಶಾಸ್ತ್ರ, ಸಂಖ್ಯಾ ಶಾಸ್ತ್ರ ಮತ್ತು ರಾಜ್ಯ ಶಾಸ್ತ್ರ. ಒಂದು ಅಂಗೀಕೃತ ಕಾಲೇಜಿನಲ್ಲಿ ಸಾಮಾಜಿಕ ಕಾರ್ಯದಲ್ಲಿ ಸ್ನಾತ ಕೋತ್ತರ ಶಿಕ್ಷಣ ನಡೆಯುತ್ತಿದೆ. 1981-82ರಲ್ಲಿ ವಿಶ್ವವಿದ್ಯಾ ಲಯವು 20 ಸ್ನಾತಕೋತ್ತರ ಸಂಶೋಧನಾ ವೇತನಗಳನ್ನು ನೀಡಿತು. ಕರ್ನಾಟಕ ಸರ್ಕಾರವು 1981-82ರಲ್ಲಿ 70 ಲಕ್ಷ ರೂಪಾಯಿಗಳನ್ನು ಅಭಿವೃದ್ಧಿ ಕಾರ್ಯಗಳಿಗೆ ಅನುದಾನವನ್ನಾಗಿ ಕೊಟ್ಟಿತು.

ಅಂಚೆ ಶಿಕ್ಷಣ : 1964-65ರ ಭಾರತೀಯ ಶಿಕ್ಷಣ ಆಯೋಗವು, ವಿಶ್ವವಿದ್ಯಾಲಯಗಳು ಅಂಚೆ ಶಿಕ್ಷಣವನ್ನು ಆರಂಭಿಸ ಬೇಕೆಂದು ಸಲಹೆ ಮಾಡಿತು. ಇದು ವಿದ್ಯಾರ್ಥಿಯೊಬ್ಬನಿಗಾಗಿ ಆಗುವ ವೆಚ್ಚವನ್ನು ಸಾಕಷ್ಟು ಕಡಿಮೆ ಮಾಡುತ್ತದೆ. ಈ ಯೋಜನೆಯಲ್ಲಿನ ಒಂದೇ ಕೊರತೆ ಎಂದರೆ, ವಿದ್ಯಾರ್ಥಿಯಾದವನು ಕಲೆ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ವಿಷಯಗಳನ್ನು ಮಾತ್ರ ಆರಿಸಿಕೊಳ್ಳಬಹುದು. ಪ್ರಯೋಗಗಳನ್ನು ಮಾಡಬೇಕಾದ ವಿಜ್ಞಾನದ ವಿಷಯಗಳನ್ನು ಆರಿಸಿಕೊಳ್ಳುವಂತಿಲ್ಲ.

ಕರ್ನಾಟಕದಲ್ಲಿ ಅಂಚೆ ಶಿಕ್ಷಣವನ್ನು ಮೊದಲು ಆರಂಭಿಸಿದ ವಿಶ್ವವಿದ್ಯಾಲಯವೆಂದರೆ ಮೈಸೂರು ವಿಶ್ವವಿದ್ಯಾಲಯ. ಶಾಲಾ ಶಿಕ್ಷಕರೂ, ಸರ್ಕಾರಿ ನೌಕರರೂ, ವಯಸ್ಸಾದವರು ತಮ್ಮ ಯೌವನದಲ್ಲಿ ಹಲವಾರು ಅಡಚಣೆಗಳಿಂದ ತಮ್ಮ ಶಿಕ್ಷಣವನ್ನು ಮುಂದುವರಿಸುವುದಕ್ಕೆ ಸಾಧ್ಯವಾಗದೆ, ಆದರೆ ಜ್ಞಾನವನ್ನು ಗಳಿಸಬೇಕೆಂಬ ಉತ್ಕಟ ಅಪೇಕ್ಷೆಯಿದ್ದವರೂ, ಗೃಹಿಣಿಯರೂ ಅಂಚೆ ಶಿಕ್ಷಣದ ಅಭ್ಯರ್ಥಿಗಳಾದರು. 1975-76ರಲ್ಲಿ ಬಿ.ಎ., ಎಂ.ಎ., ಬಿ.ಕಾಂ., ಎಂ.ಕಾಂ., ಬಿ.ಜಿ.ಎಲ್. ಮತ್ತು ಬಿ.ಎಲ್. ಪದವಿಗಳಿಗೆ 9,615 ಅಭ್ಯರ್ಥಿಗಳಿದ್ದರು. ಅಭ್ಯರ್ಥಿ ಗಳು, ಅಧ್ಯಾಪಕ-ಪ್ರಾಧ್ಯಾಪಕರ ಸಂಪರ್ಕವನ್ನು ಪಡೆಯುವ ಸೌಲಭ್ಯವನ್ನು ವಿಶ್ವವಿದ್ಯಾಲಯವು ಏರ್ಪಡಿಸಿದೆ. ಯೋಜನೆಯ ಪ್ರಶಂಸಾರ್ಹ ಅಂಶಗಳಲ್ಲಿ ಇದೂ ಒಂದು. ಕರ್ನಾಟಕ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳು ಅಂಚೆ ಶಿಕ್ಷಣವನ್ನು ಆಚರಣೆಗೆ ತರಲಿಲ್ಲ. ಆದರೆ ಅಭ್ಯರ್ಥಿಗಳನ್ನು ತಾವು ನಡೆಸುವ ಪರೀಕ್ಷೆಗಳಿಗೆ ಸ್ವೀಕರಿಸುವ ಮತ್ತೊಂದು ಯೋಜನೆಯನ್ನು ಆಚರಣೆಗೆ ತಂದಿವೆ. ಇಂಥ ಅಭ್ಯರ್ಥಿಗಳು 'ಬಾಹ್ಯ ಅಭ್ಯರ್ಥಿಗಳು' ('ಎಕ್ಸ್ ಟರ್ನಲ್') ಎನ್ನಿಸಿಕೊಳ್ಳುತ್ತಾರೆ. ಈ ಅಭ್ಯರ್ಥಿಗಳು ಪ್ರಯೋಗ ಗಳ ಅವಶ್ಯಕತೆ ಇಲ್ಲದ ವಿಷಯಗಳು, ಅಂದರೆ ಕಲೆ ಮತ್ತು ವಾಣಿಜ್ಯ ವಿಜ್ಞಾನ ಮುಂತಾದ ವಿಷಯಗಳನ್ನು ಮಾತ್ರ ಪರೀಕ್ಷೆಗೆ ತೆಗೆದುಕೊಳ್ಳಬಹುದು. 1975-76ರಲ್ಲಿ, ಕರ್ನಾಟಕ ವಿಶ್ವ ವಿದ್ಯಾಲಯದಲ್ಲಿ 9,353 ಅಂತಹ ಅಭ್ಯರ್ಥಿಗಳೂ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ 23,953 ಅಭ್ಯರ್ಥಿಗಳೂ ಇದ್ದರು.

## ಸಂಶೋಧನಾ ಸಂಸ್ಥೆಗಳು

ಅನೇಕಾನೇಕ ವಿಜ್ಞಾನಿಗಳನ್ನೂ, ತಂತ್ರಶಾಸ್ತ್ರಜ್ಞರನ್ನೂ

ವೃತ್ತಿತರ ವೃತ್ತಿಪರಿಣತರನ್ನು ತಯಾರು ಮಾಡಿರುವ ವಿಶ್ವವಿದ್ಯಾಲಯಗಳಷ್ಟೇ ಅಲ್ಲದೆ, ರಾಜ್ಯದಲ್ಲಿ ಇತರ ಸಂಶೋಧನಾ ಸಂಸ್ಥೆಗಳೂ ಇವೆ. ಶುದ್ಧ ಮತ್ತು ಅನ್ವಯ ಶಾಸ್ತ್ರಗಳ ಬೆಳವಣಿಗೆಗಾಗಿಯೇ ಇರುವ ಈ ಸಂಸ್ಥೆಗಳಲ್ಲಿ ಅತ್ಯುತ್ತಮ ಸಂಶೋಧನಾ ಕಾರ್ಯವೂ ನಡೆಯುತ್ತಿದೆ. ದಕ್ಷಿಣ ಭಾರತದಲ್ಲಿ, ಬೆಂಗಳೂರಿನಲ್ಲಿಯೇ ಎಲ್ಲ ಸಂಶೋಧನಾ ಸಂಸ್ಥೆಗಳೂ ಕೇಂದ್ರೀಕೃತವಾಗಿವೆ ಎಂಬುದು ಉತ್ಪ್ರೇಕ್ಷೆಯಲ್ಲ. ಇವುಗಳಲ್ಲಿ ಕೆಲವು ಸ್ವಾಯತ್ತ ಸಂಸ್ಥೆಗಳು, ಕೆಲವು ಖಾಸಗೀ ಸಂಸ್ಥೆಗಳು, ಕೆಲವು ಅನುದಾನ ಪಡೆಯುತ್ತಿರುವ ಸಂಸ್ಥೆಗಳು ಮತ್ತು ಕೆಲವು ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ನೇರವಾಗಿ ನಡೆಸುತ್ತಿರುವ ಸಂಸ್ಥೆಗಳು. ಪ್ರಮುಖ ಸಂಸ್ಥೆಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಭಾರತೀಯ ವಿಜ್ಞಾನ ಸಂಸ್ಥೆ : ಭಾರತೀಯ ವಿಜ್ಞಾನ ಸಂಸ್ಥೆ ಅಥವಾ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್ ಇಡೀ ದೇಶದಲ್ಲಿಯೇ ಅತಿ ಪ್ರಮುಖವಾದ ಸಂಶೋಧನಾ ಸಂಸ್ಥೆ ಎಂದು ಹೇಳಬಹುದು. ಇದು ಅತ್ಯಂತ ಹಳೆಯ ಸಂಸ್ಥೆಯೂ ಹೌದು. ಜೆ. ಎನ್. ಟಾಟಾರವರ ಉದಾರ ಕೊಡುಗೆಯಿಂದ ಇದು ಸ್ಥಾಪಿತವಾಯಿತು. ಮೈಸೂರು ಸರ್ಕಾರವು 400 ಎಕರೆ ಭೂಮಿಯನ್ನು ಸಂಸ್ಥೆಗೆ ದತ್ತಿಯಾಗಿ ಕೊಟ್ಟಿತು. ಸಿ. ವಿ. ರಾಮನ್ ಮತ್ತು ಎಚ್. ಜೆ. ಭಾಭಾರಂತಹ ವಿಜ್ಞಾನಿಗಳು ಈ ಸಂಸ್ಥೆಯ ಅಧ್ಯಾಪಕವರ್ಗದಲ್ಲಿದರು. ಮ್ಯಾಕ್ಸ್ ಬಾರ್ನ್‌ರಂತಹ ಪ್ರಖ್ಯಾತ ವಿಜ್ಞಾನಿ ಇಲ್ಲಿಯೇ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. 1911ರ ಜುಲೈನಲ್ಲಿ ಇದು ಆರಂಭವಾಯಿತು. ಆಗ ಇದರಲ್ಲಿದ್ದ ಶಾಖೆಗಳು ಸಾಮಾನ್ಯ ಮತ್ತು ಅನ್ವಯ ರಸಾಯನಶಾಸ್ತ್ರ ಮತ್ತು ವಿದ್ಯುತ್ ತಾಂತ್ರಿಕ ಶಾಸ್ತ್ರ; ಮುಂದೆ ಅನೇಕ ಹೊಸ ವಿಭಾಗಗಳನ್ನು ತೆರೆಯಲಾಗಿದೆ. 1979ರಲ್ಲಿ ಸಂಸ್ಥೆಯಲ್ಲಿ 22 ವಿಭಾಗಗಳಿದ್ದವು. ವಿಜ್ಞಾನ ವಿಭಾಗಗಳ ಪ್ರಮುಖ ಕಾರ್ಯ ಸಂಶೋಧನೆ. ಸಂಶೋಧನೆಗೆ ಎಷ್ಟು ಬೇಕೋ ಅಷ್ಟು ಮಾತ್ರ ಬೋಧನಾ ಕಾರ್ಯವು ನಡೆಯುತ್ತದೆ. ಆದರೆ ಇಂಜಿನಿಯರಿಂಗ್ ವಿಭಾಗಗಳು ಬೋಧನ ಮತ್ತು ಸಂಶೋಧನ ಕಾರ್ಯಗಳೆರಡನ್ನೂ ಮಾಡುತ್ತಿವೆ. ಬೋಧನೆಯು ಬಹುಮಟ್ಟಿಗೆ ಸ್ನಾತಕೋತ್ತರ ಮಟ್ಟದಲ್ಲಿ ನಡೆಯುತ್ತಿದೆ; ಮೂರು ವಿಭಾಗಗಳಲ್ಲಿ ಮಾತ್ರ ಸ್ನಾತಕ ಮಟ್ಟದಲ್ಲಿ ನಡೆಯುತ್ತಿದೆ. ಸಂಸ್ಥೆಯು ಕೈಗಾರಿಕಾಡಳಿತ, ಅಣು ಜೀವಶಾಸ್ತ್ರ ಮತ್ತು ಎಲೆಕ್ಟ್ರಾನಿಕ್ಸ್ ವಿನ್ಯಾಸ ತಂತ್ರಶಾಸ್ತ್ರಗಳಲ್ಲಿ ಸ್ನಾತಕೋತ್ತರ ಡಿಪ್ಲೋಮಾವನ್ನು ನೀಡುತ್ತಿದೆ. ಸದ್ಯಕ್ಕೆ ಸಂಸ್ಥೆಯಲ್ಲಿ ಬೋಧನ ಸಂಶೋಧನೆಗಳಷ್ಟೇ ಅಲ್ಲದೆ ವೃತ್ತಿನಿರತರಿಗೆ ಶಿಕ್ಷಣವನ್ನು ಕೊಡಲಾಗುತ್ತಿದೆ. ಸಲಹಾ ಕಾರ್ಯವನ್ನು ಸಂಸ್ಥೆಯು ಮಾಡುತ್ತಿದೆ. ವೃತ್ತಿನಿರತರಾಗಿರುವವರಿಗೆ ಕೊಡುವ ಶಿಕ್ಷಣ ಯೋಜನೆಯಡಿಯಲ್ಲಿ ಅಲ್ಪ ಕಾಲಾವಧಿ ಮತ್ತು ದೀರ್ಘ ಕಾಲಾವಧಿ ತರಗತಿಗಳನ್ನು ನಡೆಸಲಾಗುತ್ತಿದೆ. ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗಳಲ್ಲಿ ಕೆಲಸ ಮಾಡುವವರಿಗೆ ಬೇಕಾದ ತರಬೇತಿಯನ್ನು ಕೊಡಲಾಗುತ್ತಿದೆ. ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳ ಸಂಪರ್ಕವನ್ನಿಟ್ಟುಕೊಂಡು ಅವುಗಳಿಗೆ ಅಗತ್ಯವಾದ ಸಲಹೆಗಳನ್ನು ನೀಡುವುದೇ ಸಲಹಾ ಕಾರ್ಯಕ್ರಮ. ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿರುವ ತಜ್ಞರು ಈ ಸಲಹೆಗಳನ್ನು ನೀಡುತ್ತಾರೆ. ಜೊತೆಗೆ ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಸಾರಮಾಡಿ ಅದರ ಉಪಯೋಗವನ್ನು ಅವುಗಳಿಗೆ ದೊರಕಿಸುವಂತಹ ಕಾರ್ಯಕ್ರಮವನ್ನು ಸಂಸ್ಥೆಯು ಇಟ್ಟುಕೊಂಡಿದೆ. ವಿಜ್ಞಾನಸಂಸ್ಥೆಯಲ್ಲಿರುವ ಬೋಧಕವರ್ಗದಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ಅಗತ್ಯವಾಗಿ ಬೇಕಾಗುವ ತಂತ್ರಜ್ಞಾನವನ್ನು ಬೆಳೆಸುವ ಕಾರ್ಯವನ್ನು ಪ್ರಚೋದಿಸುವ ಉದ್ದೇಶವನ್ನು ಸಂಸ್ಥೆಯು ಇಟ್ಟುಕೊಂಡಿದೆ. ಸಂಸ್ಥೆಯಲ್ಲಿ ಸಿದ್ಧವಾದ ತಾಂತ್ರಿಕ ಕ್ರಮಗಳನ್ನು ಬೆಂಗಳೂರಿನ ಹತ್ತಿರವಿರುವ ಹಳ್ಳಿಗಳಲ್ಲಿ ಪ್ರಸಾರಮಾಡಲು ಒಂದು ವಿಸ್ತರಣಾ ಕೇಂದ್ರವನ್ನು ಸ್ಥಾಪಿಸಲಾಗಿದೆ. ಈ ಕೇಂದ್ರದ ಮೂಲಕ ಆರ್ಥಿಕಾಭಿವೃದ್ಧಿಗಾಗಿ ಶ್ರಮಿಸುತ್ತಿರುವ ಇತರ ಸಂಸ್ಥೆಗಳಿಗೆ ಇಲ್ಲಿ ಸಿದ್ಧಪಡಿಸಿದ ತಾಂತ್ರಿಕ ಕ್ರಮಗಳನ್ನು ತಿಳಿಸಲಾಗುತ್ತಿದೆ. ಸಂಸ್ಥೆಯ ವಿವಿಧ ಭಾಗಗಳು ಸಂಶೋಧನೆ ಮತ್ತು ತರಬೇತಿ ಕಾರ್ಯಗಳನ್ನು ನಡೆಸುತ್ತಿವೆ. ಇಂಥ ಮುಖ್ಯವಾದ ವಿಭಾಗಗಳೆಂದರೆ, ಭೌತ ಮತ್ತು ಗಣಿತಶಾಸ್ತ್ರಗಳ ವಿಭಾಗಗಳು, ರಸಾಯನ ಮತ್ತು ಜೀವಶಾಸ್ತ್ರಗಳ ವಿಭಾಗಗಳು, ವಿದ್ಯುತ್ ಶಾಸ್ತ್ರ, ಯಂತ್ರಜ್ಞಾನಶಾಸ್ತ್ರ, ವಿಜ್ಞಾನ ಮತ್ತು ತಾಂತ್ರಿಕ ಜ್ಞಾನವನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಅನ್ವಯಿಸಲು ಬೇಕಾದ ಕಾರ್ಯಕ್ರಮವನ್ನು ರೂಪಿಸುವ ವಿಭಾಗ, ರಾಷ್ಟ್ರೀಯ ಉಷ್ಣಶಾಸ್ತ್ರ ಸ್ವರೂಪ ಕಾರ್ಯಕ್ರಮವನ್ನು ನೋಡಿಕೊಳ್ಳುವ ವಿಭಾಗ, ವಿಜ್ಞಾನ ಮತ್ತು ಕೈಗಾರಿಕಾ ಸಲಹಾ ಕೇಂದ್ರ ಮತ್ತು ವೃತ್ತಿನಿರತರಿಗೆ ಶಿಕ್ಷಣ ಕೊಡುವ ಕೇಂದ್ರ, ಇವುಗಳು. ಭಾರತೀಯ ತಾಂತ್ರಿಕ ಸಂಸ್ಥೆಗಳಿಗೆ ಮತ್ತು ಐ.ಐ.ಟಿ.ಗಳಿಗೆ ಇಂಜಿನಿಯರಿಂಗ್ ಮತ್ತು ಸ್ನಾತಕೋತ್ತರ ವಿಭಾಗಗಳಿಗೆ ವಿದ್ಯಾರ್ಥಿಗಳನ್ನು ಆರಿಸಲು ನಡೆಸುವ ಪ್ರವೇಶ ಪರೀಕ್ಷೆಯನ್ನೂ (ಜಿ.ಎ.ಟಿ.ಇ.) ಈ ಸಂಸ್ಥೆಯೇ ವ್ಯವಸ್ಥೆ ಮಾಡುತ್ತಿದೆ. 1956ರಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯಗಳ ಅನುದಾನ ಆಯೋಗವು, ಈ ಸಂಸ್ಥೆಯನ್ನು ಒಂದು ವಿಶ್ವವಿದ್ಯಾಲಯದ ಮಟ್ಟದ ಸಂಸ್ಥೆಯೆಂದು ಮಾನ್ಯ ಮಾಡಿದೆ.

ಭಾರತೀಯ ಖಗೋಳ ಭೌತಶಾಸ್ತ್ರ ಸಂಸ್ಥೆ : 1792ರಲ್ಲಿ, ಈಸ್ಟ್ ಇಂಡಿಯಾ ಕಂಪೆನಿಯು ಮದ್ರಾಸಿನಲ್ಲಿ ಒಂದು ಖಗೋಳ ವೀಕ್ಷಣಾಲಯವನ್ನು ('ಅಬ್ಸರ್ವೇಟರಿ') ಆರಂಭಿಸಿತು. ಸುಮಾರು ಒಂದು ಶತಮಾನ ಕಾಲ ಇಡೀ ದೇಶದಲ್ಲಿದ್ದ ಇಂಥ ಸಂಸ್ಥೆಯು ಇದೊಂದೇ ಆಗಿತ್ತು. ಹತ್ತೊಂಬತ್ತನೇಯ ಶತಮಾನದಲ್ಲಿ ಸಂಪೂರ್ಣ ಮತ್ತು ಸಾಧಾರಣ ಸೂರ್ಯಗ್ರಹಣಗಳ

ಸಮಯದಲ್ಲಿ ಅನೇಕ ಮುಖ್ಯ ಘಟನೆಗಳನ್ನು ವೀಕ್ಷಿಸಿ ಅವನ್ನು ಈ ಸಂಸ್ಥೆಯು ದಾಖಲು ಮಾಡಿಕೊಂಡಿತು. 1868ರ ಏಪ್ರಿಲ್ 18ರಂದು ಅದು ಸಂಪೂರ್ಣ ಸೂರ್ಯಗ್ರಹಣದ ಸಮಯದಲ್ಲಿ ವೀಕ್ಷಿಸಿದ ಘಟನೆಗಳು ಭೌತಶಾಸ್ತ್ರದ ಒಂದು ಹೊಸ ಶಾಖೆಯ ಹುಟ್ಟಿಗೆ ಕಾರಣವಾದವು. ಹೀಲಿಯಂ ಅನಿಲವನ್ನು ಕಂಡು ಹಿಡಿಯಲು ಸಾಧ್ಯವಾದುದು ಈ ವೀಕ್ಷಣೆಗಳಿಂದಲೇ. ಲಾರ್ಡ್ ಕೆಲ್ವಿನ್ ಅಧ್ಯಕ್ಷರಾಗಿದ್ದ ಒಂದು ಸಮಿತಿಯು ಕೊಡೈಕೆನಾಲ್‌ನಲ್ಲಿ ಒಂದು ಸೌರಭೌತಶಾಸ್ತ್ರದ ವೀಕ್ಷಣಾಲಯವನ್ನು ಸ್ಥಾಪಿಸಲು ಸಲಹೆ ಮಾಡಿತು. ಅದರಂತೆ 1893ರಲ್ಲಿ ಅಲ್ಲಿ ಒಂದು ವೀಕ್ಷಣಾಲಯವನ್ನು ಸ್ಥಾಪಿಸಲಾಯಿತು. ಮದ್ರಾಸು ಮತ್ತು ಕೊಡೈಕೆನಾಲ್‌ಗಳ ಎರಡು ವೀಕ್ಷಣಾಲಯಗಳು ಭಾರತ ಸರ್ಕಾರದ ಒಂದೇ ಆಡಳಿತದ ಅಧೀನಕ್ಕೆ ಬಂದವು. ಸ್ವಾತಂತ್ರ್ಯೋತ್ತರ ಕಾಲದಲ್ಲಿ, ಕೊಡೈಕೆನಾಲ್‌ನ ವೀಕ್ಷಣಾಲಯಕ್ಕೆ ಅನೇಕ ನೂತನ ಸೂಕ್ಷ್ಮ ಉಪಕರಣಗಳನ್ನು ಕೊಡಲಾಯಿತು. 1960ರಲ್ಲಿ ಕೋವಲೂರಿನಲ್ಲಿ ಖಗೋಳ ಘಟನೆಗಳನ್ನು ವೀಕ್ಷಿಸಲು ಎರಡನೇಯ ಕೇಂದ್ರವನ್ನು ಸ್ಥಾಪಿಸಲಾಯಿತು. 1972ರಲ್ಲಿ ವೀಕ್ಷಣಾಲಯವು ಒಂದು ಸ್ವಾಯತ್ತ ಸಂಶೋಧನಾ ಸಂಸ್ಥೆಯಾಯಿತು. ಇದಕ್ಕೆ ಬೇಕಾಗುವ ವೆಚ್ಚವೆಲ್ಲವನ್ನೂ ಭಾರತ ಸರ್ಕಾರವೇ ವಹಿಸುತ್ತಿದೆ. ಈ ಸ್ವಾಯತ್ತ ಸಂಸ್ಥೆಯ ಹೆಸರು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋಫಿಸಿಕ್ಸ್ ಅಥವಾ ಭಾರತೀಯ ಖಗೋಳ ಭೌತಶಾಸ್ತ್ರ ಸಂಸ್ಥೆ. ಇದರ ಮುಖ್ಯ ಕಚೇರಿಯನ್ನು 1976ರಲ್ಲಿ ಬೆಂಗಳೂರಿಗೆ ವರ್ಗಾಯಿಸಲಾಯಿತು. ಈ ವರ್ಗಾವಣೆಯ ಉದ್ದೇಶ ಬೆಂಗಳೂರಿನಲ್ಲಿ ಸಂಶೋಧನೆಗೆ ಉತ್ತಮ ವಾತಾವರಣವಿರುವುದು. ಅನೇಕ ಸಂಶೋಧನಾ ಸಂಸ್ಥೆಗಳು ಬೆಂಗಳೂರಿನಲ್ಲಿದ್ದು ಅವುಗಳ ಸಹಕಾರ ವೀಕ್ಷಣಾಲಯಕ್ಕೆ ಅವಶ್ಯಕವಾಗಿರುವುದರಿಂದ ಬೆಂಗಳೂರಿನಲ್ಲಿ ಸಂಶೋಧನೆಗೆ ಸಾಕಷ್ಟು ಅನುಕೂಲಗಳಿವೆ. ಆದರೆ ಕೋವಲೂರು ಮತ್ತು ಕೊಡೈಕೆನಾಲ್‌ಗಳೆರಡೂ ಖಗೋಳ ಘಟನೆಗಳನ್ನು ವೀಕ್ಷಿಸುವ ಕೇಂದ್ರಗಳಾಗಿ ಮುಂದುವರಿದಿವೆ.

ರಾಮನ್ ಸಂಶೋಧನಾ ಸಂಸ್ಥೆ : 1943ರಲ್ಲಿ, ಇಂಡಿಯನ್ ಅಕಾಡೆಮಿ ಆಫ್ ಸೈನ್ಸಸ್ ಅಥವಾ ಭಾರತೀಯ ವಿಜ್ಞಾನ ಪರಿಷತ್ತು ಬೆಂಗಳೂರಿನಲ್ಲಿ ರಾಮನ್ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸಿತು. ಇದರ ಸ್ಥಾಪನೆಗೆ ಕಾರಣರಾದವರು ಸರ್ ಸಿ. ವಿ. ರಾಮನ್ ಅವರು. ಅದನ್ನು ಪೋಷಿಸಿದವರೂ ಅವರೇ. ಅವರೇ ಅದರ ಪ್ರಥಮ ನಿರ್ದೇಶಕರೂ ಆಗಿದ್ದರು. ಅವರು ತಮ್ಮಲ್ಲಿದ್ದ ಹಣವನ್ನೂ ಮತ್ತು ಇತರ ಆಸ್ತಿಯನ್ನೂ ಈ ಸಂಸ್ಥೆಗೆ ದತ್ತಿಯಾಗಿ ಕೊಟ್ಟುಬಿಟ್ಟರು. ರಾಜ್ಯ ಸರ್ಕಾರವು ಈ ಸಂಸ್ಥೆಗೆ ಹನ್ನೊಂದು ಎಕರೆ ಜಮೀನನ್ನು ದತ್ತಿಯಾಗಿ ಕೊಟ್ಟಿತು. 1970ರಲ್ಲಿ ರಾಮನ್‌ರವರು ನಿಧನರಾದ ಮೇಲೆ ಈ ಸಂಸ್ಥೆಯನ್ನು ನಡೆಸಲು ಒಂದು ಸಾರ್ವಜನಿಕ ಧಾರ್ಮಿಕ ಮತ್ತು ಶೈಕ್ಷಣಿಕ ವಿಶ್ವಸ್ಥ ಮಂಡಲಿಯನ್ನು ರಚಿಸಲಾಯಿತು. ಮೂಲ ವಿಜ್ಞಾನ ಶಾಸ್ತ್ರಗಳಲ್ಲಿ ಈ ಸಂಸ್ಥೆಯು ಸಂಶೋಧನೆಯನ್ನು ನಡೆಸುತ್ತಿದೆ. ದ್ರವ ಸ್ಫಟಿಕಶಾಸ್ತ್ರ, ರೇಡಿಯೋ ಖಗೋಳಶಾಸ್ತ್ರ, ತಾತ್ವಿಕ ಭೌತಶಾಸ್ತ್ರ ಮತ್ತು ಖಗೋಳ ಭೌತಶಾಸ್ತ್ರಗಳ ಕ್ಷೇತ್ರದಲ್ಲಿ ಇದು ಸಂಶೋಧನೆ ನಡೆಸುತ್ತಿದೆ.

ಕೇಂದ್ರ ಆಹಾರ ವಿಜ್ಞಾನ ಸಂಶೋಧನಾಲಯ : ಕೇಂದ್ರ ಆಹಾರ ವಿಜ್ಞಾನ ಸಂಶೋಧನಾಲಯವು ಮೈಸೂರಿನಲ್ಲಿ 1950ರಲ್ಲಿ ಸ್ಥಾಪಿತವಾಯಿತು. ದೇಶದಲ್ಲಿದ್ದ ಆಹಾರ ವಸ್ತುಗಳ ಕೊರತೆಯನ್ನು ಸರಿಪಡಿಸುವ ಉದ್ದೇಶದಿಂದ ಆಹಾರ ಸಾಮಗ್ರಿಗಳನ್ನು ಉತ್ತಮ ರೀತಿಯಲ್ಲಿ ಇಡುವ ಕ್ರಮಗಳ, ಆಹಾರ ಕೈಗಾರಿಕೆಗಳ ಸಮಸ್ಯೆಗಳ ಪರಿಹಾರ ಕ್ರಮಗಳ, ಪೌಷ್ಟಿಕ ಆಹಾರ ಮತ್ತು ಉತ್ತಮ ಆಹಾರ ಪದಾರ್ಥಗಳನ್ನು ದೇಶದಲ್ಲಿ ದೊರೆಯುವ ವಸ್ತುಗಳಿಂದಲೇ ತಯಾರಿಸುವ ಕ್ರಮಗಳ ಸಂಶೋಧನೆಯನ್ನು ಸಂಸ್ಥೆಯು ನಡೆಸುತ್ತಿದೆ. ಆಹಾರ ವಸ್ತುಗಳ ಆಮದನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸುವ ಬಗೆಯನ್ನು ಕುರಿತು ಸಂಶೋಧನೆಯನ್ನು ಈ ಸಂಸ್ಥೆ ನಡೆಸುತ್ತಿದೆ. ಆಹಾರ ವಸ್ತುಗಳ ಸಾಗಣೆ, ಧಾನ್ಯಗಳನ್ನು ಒಣಗಿಸುವುದು, ಅವನ್ನು ಸಂಗ್ರಹಿಸಿ ಇಡುವುದು, ಅವನ್ನು ಹಸನು ಮಾಡುವುದು ಮತ್ತು ಅವುಗಳನ್ನು ಪೊಟ್ಟಣಗಳಲ್ಲಿಡುವುದಕ್ಕೆ ಬೇಕಾದ ತಾಂತ್ರಿಕತೆಯನ್ನು ವೃದ್ಧಿಪಡಿಸುವುದು ಸಂಸ್ಥೆಯ ಕಾರ್ಯಕ್ರಮವಾಗಿದೆ. ಸುಗ್ಗಿಯ ಕಾಲದ ನಂತರದ ಇಂಥ ಸಮಸ್ಯೆಗಳನ್ನು ಕುರಿತು ಸಂಶೋಧನೆ ನಡೆಸುವುದು ಈ ಸಂಸ್ಥೆಯ ಕಾರ್ಯಕ್ರಮ. ವ್ಯವಸಾಯೋತ್ಪನ್ನ ವಸ್ತುಗಳನ್ನು ಮತ್ತು ಅವುಗಳಿಂದ ಬರುವ ಉಪಪದಾರ್ಥಗಳನ್ನು ಮನುಷ್ಯನ ಹಿತಕ್ಕೆ ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದರ ಬಗೆಗೆ ಹಾಗೂ ಸ್ಥಳಗಳಲ್ಲಿ ದೊರಕುವ ವಸ್ತುಗಳಿಂದ ಪೌಷ್ಟಿಕ ಪದಾರ್ಥಗಳನ್ನು ಹೇಗೆ ತಯಾರಿಸಬೇಕೆಂಬುದರ ಬಗೆಗೆ ತಿಳುವಳಿಕೆಯನ್ನು ನೀಡುತ್ತದೆ. ಆಹಾರ ಪದಾರ್ಥಗಳ ವಿಶ್ಲೇಷಣೆ ಮತ್ತು ಗುಣಮಟ್ಟವನ್ನು ಕಾಪಾಡುವುದು, ಈ ಕ್ಷೇತ್ರಕ್ಕೆ ಬೇಕಾದ ಜನರಿಗೆ ಸೂಕ್ತವಾದ ತರಬೇತಿಯನ್ನು ಕೊಡುವುದು, ಈ ಬಗ್ಗೆ ಸೂಕ್ತವಾದ ಮಾಹಿತಿಯನ್ನು ಜನರಲ್ಲಿ ಪ್ರಸಾರ ಮಾಡುವುದು, ಸಮಸ್ಯೆಗಳನ್ನು ಗುರುತಿಸುವುದು ಮತ್ತು ಗಳಿಸಿದ ತಂತ್ರಜ್ಞಾನವನ್ನು ಜನರಿಗೆ ತಿಳಿಯಪಡಿಸುವುದು ಸಂಸ್ಥೆಯ ಇತರ ಕಾರ್ಯಗಳಾಗಿವೆ.

ಸಂಸ್ಥೆಯ ಮುಖ್ಯ ಪ್ರಯೋಗಾಲಯವು ಮೈಸೂರು ನಗರದಲ್ಲಿದೆ. ಅದರ ಇತರ ಆರು ಪ್ರಯೋಗಾಲಯಗಳು ಲೂಧಿಯಾನಾ, ಲಕ್ನೋ, ನಾಗಪುರ, ಮುಂಬೈ, ಹೈದರಾಬಾದ್ ಮತ್ತು ಮಂಗಳೂರುಗಳಲ್ಲಿವೆ. ರೋಗಗಳ ಹತೋಟಿ ಮತ್ತು ಕ್ರಿಮಿನಾಶಕಗಳು, ಭತ್ತ ಮತ್ತು ದ್ವಿದಳ ಧಾನ್ಯಗಳಿಗೆ ಸಂಬಂಧಿಸಿದ ತಂತ್ರಜ್ಞಾನ ಅಧ್ಯಯನ, ಧಾನ್ಯಗಳನ್ನು ಹಿಟ್ಟು ಮಾಡುವ

ಮತ್ತು ರೊಟ್ಟಿ ಮಾಡುವ ವಿಧಾನ, ಸಸಾರಜನಕ, ಕೊಬ್ಬು, ಹಣ್ಣು ಮತ್ತು ತರಕಾರಿ, ಮೀನು ಮತ್ತು ಕೋಳಿ ಸಾಕಾಣಿಕೆ, ಮೊಟ್ಟೆ, ಪ್ಲಾಂಟೇಷನ್ ವಸ್ತುಗಳು, ಸುವಾಸನಾ ದ್ರವ್ಯಗಳ ಸಂಸ್ಕರಣದ ಬಗೆಗಳನ್ನು ರೂಢಿಸುವುದು ಮತ್ತು ರೂಪಿಸುವುದು, ಗುಣಮಟ್ಟಗಳ ವಿಶ್ಲೇಷಣೆ ಮತ್ತು ಹತೋಟಿ, ಹಾಗೂ ಆಹಾರ ವಸ್ತುಗಳನ್ನು ಪೊಟ್ಟಣಗಳಲ್ಲಿಡುವ ಕ್ರಮಗಳು, ಈ ಸಂಗತಿಗಳ ಅಧ್ಯಯನದಲ್ಲಿ ಸಂಸ್ಥೆಯ ಇತರ ಘಟಕಗಳು ನಿರತವಾಗಿವೆ. ಇಂಜಿನಿಯರಿಂಗ್ ಮತ್ತು ಉಪಕರಣಗಳನ್ನು ಸರಿಯಾಗಿಟ್ಟು ಕೊಳ್ಳುವ ರೀತಿಗಳು, ಇಂದ್ರಿಯಗಳ ಮೇಲಾಗುವ ಪ್ರತಿಕ್ರಿಯೆಗಳ ಮೌಲ್ಯಮಾಪನ, ಜೀವರಸಾಯನಶಾಸ್ತ್ರ ಮತ್ತು ಅನ್ವಯಿಕ ಪೌಷ್ಟಿಕ ವಿಜ್ಞಾನವನ್ನು ಜೀವನಕ್ಕೆ ಅಳವಡಿಸುವ ರೀತಿ ಮುಂತಾದವು ಇತರ ಘಟಕಗಳು ನಿರತವಾಗಿರುವ ವಿಷಯಗಳಿಗೆ ಸೇರಿವೆ. 1964ರಲ್ಲಿ, ಸಂಶೋಧನೆ ಮತ್ತು ಅಭಿವೃದ್ಧಿ ವಿಭಾಗಕ್ಕೆ ಸಂಬಂಧಿಸಿದ ಉದ್ಯೋಗಿಗಳನ್ನು ಪುನರ್ವಿಂಗಡಣೆ ಮಾಡಲಾಯಿತು. ಯೋಜನೆಗೆ ಒಂದು ಹೊಸ ತಿರುವು ಕೊಡಲು ವಿವಿಧ ಕಾರ್ಯಗಳನ್ನು ಸಮನ್ವಯಗೊಳಿಸಲು ಮಾತ್ರ ಹಾಕಿಕೊಂಡ ಕಾರ್ಯಕ್ರಮಗಳನ್ನು ಆಚರಣೆಗೆ ತರಲು ಇದ್ದ ಉದ್ಯೋಗಿಗಳನ್ನು ಅವರು ಯಾವ ಆಹಾರ ವಸ್ತುಗಳ ಬಗೆಗೆ ತಜ್ಞತೆಯನ್ನು ಗಳಿಸಿದ್ದರೋ ಅದಕ್ಕೆ ಅನುಗುಣವಾಗಿ ವಿಂಗಡಿಸಲಾಯಿತು. 1950ರಲ್ಲಿ ಈ ಸಂಶೋಧನಾ ಸಂಸ್ಥೆಯು ಕೇವಲ 30 ಜನರಿಂದ ಆರಂಭಿಸಿತು. 1980ರಲ್ಲಿ ಈ ಸಂಖ್ಯೆ 915ಕ್ಕೆ ಏರಿತು. ವೈಜ್ಞಾನಿಕ ಮತ್ತು ತಾಂತ್ರಿಕ ಸಿಬ್ಬಂದಿಯು 1963ರಲ್ಲಿ 501 ಆಗಿತ್ತು. 1980ರಲ್ಲಿ 638 ಆಯಿತು.

1966ರಲ್ಲಿ ಸಿ. ಎಫ್. ಟಿ. ಆರ್. ಐ. ನಲ್ಲಿ ಒಂದು ಅಂತರ್ರಾಷ್ಟ್ರೀಯ ತರಬೇತಿ ಕೇಂದ್ರವು ಆರಂಭವಾಯಿತು. ಇದು ಭಾರತ ಸರ್ಕಾರ ಮತ್ತು ಸಂಯುಕ್ತ ರಾಷ್ಟ್ರ ಸಂಸ್ಥೆಯ ಆಹಾರ ಮತ್ತು ವ್ಯವಸಾಯ ಸಂಸ್ಥೆಯ (ಎಫ್. ಎ. ಓ.) ನಡುವೆ ಆದ ಒಪ್ಪಂದದ ಫಲ. ಈ ಕೇಂದ್ರದ ಉದ್ದೇಶ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಬೇಕಾದ ಅವಶ್ಯಕತೆಗಳನ್ನು ಪೂರೈಸುವುದು. ಈ ಕೇಂದ್ರವು ಆಹಾರ ವಿಜ್ಞಾನದಲ್ಲಿ ಎರಡು ವರ್ಷದ ಎಂ. ಎಸ್‌ಸಿ. ಪರೀಕ್ಷೆಗೆ ಅಭ್ಯರ್ಥಿಗಳನ್ನು ತಯಾರು ಮಾಡುತ್ತದೆ. ಮೈಸೂರು ವಿಶ್ವವಿದ್ಯಾಲಯ ಪದವಿಯನ್ನು ಕೊಡುತ್ತದೆ. ರಾಷ್ಟ್ರೀಯ ಮತ್ತು ಅಂತರ್ರಾಷ್ಟ್ರೀಯ ಅಭ್ಯರ್ಥಿಗಳಿಗೆ ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ ಅಲ್ಪಾವಧಿ ತರಗತಿಗಳನ್ನು ಪ್ರತೀವರ್ಷವೂ ವ್ಯವಸ್ಥೆ ಮಾಡಲಾಗುತ್ತದೆ. ಇಷ್ಟಲ್ಲದೆ, ಆಹಾರ ಕಶ್ಮಲಗಳನ್ನು ವಿಶ್ಲೇಷಿಸುವುದಕ್ಕೆ ಬೇಕಾದ ತಜ್ಞತೆಯಲ್ಲಿ ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೇರಿಕದ ರಾಷ್ಟ್ರಗಳಲ್ಲಿನ ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರಿಗೆ ತರಬೇತಿ ಕೊಡಲು ವಿಶೇಷ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡುತ್ತಿದೆ. ಈ ಸಂಸ್ಥೆಯು 1976ರಲ್ಲಿ ಸಂಯುಕ್ತರಾಷ್ಟ್ರ ವಿಶ್ವವಿದ್ಯಾಲಯದ ಸಹಸಂಸ್ಥೆ ಎಂದು ಮಾನ್ಯತೆ ಪಡೆದಿದೆ. ಇದರಿಂದ ಅಭಿವೃದ್ಧಿಶೀಲ ರಾಷ್ಟ್ರಗಳ ವಿಜ್ಞಾನಿಗಳಿಗೆ ಉನ್ನತ ತರಬೇತಿ ಕೊಡುವ ಮತ್ತು ಸಂಶೋಧನೆಗಳನ್ನು ನಡೆಸಲು ಅಗತ್ಯವಾದ ಸೌಲಭ್ಯಗಳನ್ನು ಈ ಸಂಸ್ಥೆಯು ಒದಗಿಸುವಂತಾಗಿದೆ. ಸುಗ್ಗಿಯು ಮುಗಿದಾಗ ಉದ್ಭವಿಸುವ ಸಮಸ್ಯೆಗಳಾದ ಆಹಾರ ವಸ್ತುಗಳನ್ನು ಕೂಡಿಡುವ ಕ್ರಮ ಮತ್ತು ಆಹಾರ ವಸ್ತುಗಳ ಸಂಸ್ಕರಣ ಮುಂತಾದವುಗಳ ವಿಚಾರವಾಗಿ ತರಬೇತು ಮತ್ತು ಸಂಶೋಧನೆಗಳ ಸೌಲಭ್ಯಗಳನ್ನು ಸಂಸ್ಥೆ ಒದಗಿಸುತ್ತಿದೆ.

1962 ಮತ್ತು 1966ರಲ್ಲಿ ಅನುಕ್ರಮವಾಗಿ ಸಂಶೋಧನಾ ಲೇಖನಗಳ ಶೀರ್ಷಿಕೆ ನೀಡುವ ಮತ್ತು ಲೇಖನಗಳ ಸಾರಾಂಶವನ್ನು ಕೊಡುವ ಕಾರ್ಯಕ್ರಮಗಳು ಆರಂಭವಾದವು. 1975ರವರೆಗೆ ಸಂಶೋಧನಾ ಸಂಸ್ಥೆಗಳಿಗೆ, ಸರ್ಕಾರಿ ಸಂಸ್ಥೆಗಳಿಗೆ ಮತ್ತು ಕೈಗಾರಿಕೆಗಳಿಗೆ ಈ ಕಾರ್ಯಕ್ರಮಗಳಿಂದ ಅಗತ್ಯವಾದ ಮಾಹಿತಿಗಳು ದೊರೆಯುತ್ತಿದ್ದವು. ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನಗಳ ರಾಷ್ಟ್ರೀಯ ಸಮಾಚಾರ ಕೇಂದ್ರವು 1977ರಿಂದ ಆಹಾರ ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳ ಸಾರಾಂಶಗಳನ್ನೂ ಆಹಾರ ವಿಜ್ಞಾನಕ್ಕೆ ಸಂಬಂಧಿಸಿದ ಸಂಕ್ಷಿಪ್ತ ವರದಿಗಳನ್ನೂ, ಆಹಾರ ವಸ್ತುಗಳ ಸ್ವಾಮ್ಯತೆ, ಸನ್ನದು ಮತ್ತು ಆ ವಿಜ್ಞಾನದ ಸಾಹಿತ್ಯ ಮುಂತಾದ ವಿಚಾರವನ್ನು ಸಂಬಂಧಪಟ್ಟವರಿಗೆ ಒದಗಿಸುತ್ತಿದೆ. ಭಾರತ ಮತ್ತು ಡೆನ್ಮಾರ್ಕ್ ದೇಶಗಳೆರಡರ ಸಹಕಾರದಿಂದ 1978ರಲ್ಲಿ ಒಂದು ಸಂಶೋಧನೆ ಮತ್ತು ತರಬೇತಿ ಸಂಸ್ಥೆಯು 'ಎಬಟಾಯರ್' ಸ್ಥಾಪಿತವಾಯಿತು. ಭಾರತ ಮತ್ತು ಸ್ವಿಜರ್ಲೆಂಡ್‌ಗಳ ಪರಸ್ಪರ ವೈಜ್ಞಾನಿಕ ಮತ್ತು ತಾಂತ್ರಿಕ ಸಹೋದ್ಯಮದ ಫಲವಾಗಿ ಒಂದು ಅಂತರ್ರಾಷ್ಟ್ರೀಯ ಆಹಾರ ಸಂಸ್ಕರಣ ('ಮಿಲ್ಲಿಂಗ್') ತಾಂತ್ರಿಕ ಶಾಲೆಯು ಅಸ್ತಿತ್ವಕ್ಕೆ ಬಂದಿದೆ.

ರಾಷ್ಟ್ರೀಯ ವೈಮಾನಿಕಯಾನ ವಿಜ್ಞಾನ ಪ್ರಯೋಗಾಲಯ: ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಮಂಡಲಿಯು 1960ರಲ್ಲಿ ಬೆಂಗಳೂರಿನಲ್ಲಿ ರಾಷ್ಟ್ರೀಯ ವೈಮಾನಿಕ ಯಾನ ವಿಜ್ಞಾನ ಪ್ರಯೋಗಾಲಯವನ್ನು ಸ್ಥಾಪಿಸಿತು. ಇದು ಭಾರತ ಸರ್ಕಾರಕ್ಕೆ ಸೇರಿದ ಸಂಸ್ಥೆ. ಇದರ ಮುಖ್ಯ ಉದ್ದೇಶವು ವಿಮಾನಯಾನಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಪರೀಕ್ಷಿಸುವುದು. ಅದರಿಂದ ಗೊತ್ತಾದ ಅಂಶಗಳು ವಿಮಾನ ನಕ್ಷೆಗಳನ್ನು ತಯಾರಿಸುವುದರಲ್ಲಿ ಮತ್ತು ವಿಮಾನಗಳ ತಯಾರಿಕೆಯಲ್ಲಿ ಸಹಾಯಕವಾಗುತ್ತವೆ. ಈ ಪ್ರಯೋಗಾಲಯದಲ್ಲಿ ಅನೇಕ ವಿಭಾಗಗಳಿವೆ. ಒಂದೊಂದು ವಿಭಾಗವೂ ಒಂದೊಂದು ನಿರ್ದಿಷ್ಟ ಕ್ಷೇತ್ರಕ್ಕೆ ಸಂಬಂಧಿಸಿದ ಸಮಸ್ಯೆಗಳ ಅಧ್ಯಯನವನ್ನು ನಡೆಸುತ್ತಿದೆ. ಎನ್.ಎ.ಎಲ್. ಎರಡು ಘಟಕಗಳನ್ನು ಹೊಂದಿದೆ. ಮುಖ್ಯ ಭಾಗವು ಬೆಂಗಳೂರು ವಿಮಾನ ನಿಲ್ದಾಣದ ಹತ್ತಿರವಿರುವ

ಕೋಡಿಹಳ್ಳಿಯಲ್ಲಿದೆ. ಎರಡನೇಯ ಭಾಗವು ಮುಖ್ಯ ಭಾಗದಿಂದ ಐದು ಕಿ. ಮೀ. ದೂರದಲ್ಲಿದೆ. ಇದರಲ್ಲಿ ಪ್ರೇರಕ ವಿಭಾಗವೂ ('ಪ್ರೊಪಲ್ಶನ್ ಡಿವಿಜನ್') ಮತ್ತು ವಾಯು ಚಲನಶಾಸ್ತ್ರ ವಿಭಾಗವೂ (ವಾಯು ಸುರಂಗ ವಿಭಾಗ) ಇವೆ. ಮಿಕ್ಕೆಲ್ಲ ವಿಭಾಗಗಳೂ ಮುಖ್ಯ ಭಾಗದಲ್ಲಿವೆ.

ಈ ಪ್ರಯೋಗಾಲಯದಲ್ಲಿರುವ ಸೌಲಭ್ಯಗಳನ್ನು ರಕ್ಷಣಾ ಇಲಾಖೆಯ ಸಂಸ್ಥೆಗಳು, ಸರ್ಕಾರಿ ಕೈಗಾರಿಕೆಗಳು ಮತ್ತು ಕೆಲವು ಖಾಸಗೀ ಸಂಸ್ಥೆಗಳು ಉಪಯೋಗ ಮಾಡಿಕೊಳ್ಳುತ್ತಿವೆ.

**ಸೈನಿಕ ಆಹಾರ ಸಂಶೋಧನ ಪ್ರಯೋಗಾಲಯ :** ಸೈನಿಕ (ಡಿಫೆನ್ಸ್) ಆಹಾರ ಸಂಶೋಧನ ಪ್ರಯೋಗಾಲಯವು 1961ರಲ್ಲಿ ಮೈಸೂರಿನಲ್ಲಿ ಸ್ಥಾಪಿತವಾಯಿತು. ಬೇಯಿಸಿ ಜಲ ಹರಣಮಾಡಿದ ಆಹಾರ ಪದಾರ್ಥಗಳು, ಡಬ್ಬಗಳಲ್ಲಿ ಇಡುವ ಆಹಾರ ಪದಾರ್ಥಗಳು, ಪೊಟ್ಟಣಗಳಲ್ಲಿಡುವ ಆಹಾರ ವಸ್ತುಗಳು, ಮುಂತಾದ ಸೈನಿಕರಿಗೆ ಅನುಕೂಲವಾದ ಆಹಾರ ಪದಾರ್ಥಗಳ ಬಗೆಗೆ ಸಂಶೋಧನೆ ನಡೆಸುವುದು ಇದರ ಮುಖ್ಯ ಗುರಿ. ಅದಕ್ಕೆ ಅಗತ್ಯವಾದ ಆಹಾರ ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಬೆಳೆಸುವ ಕಾರ್ಯಕ್ರಮವನ್ನು ಸಂಸ್ಥೆಯು ಇಟ್ಟುಕೊಂಡಿದೆ. ಈ ಪ್ರಯೋಗಾಲಯವು ಬಹು ವಿಭಾಗಗಳುಳ್ಳ ಸಂಸ್ಥೆಯಾಗಿದೆ. ಆಹಾರ ವಿಜ್ಞಾನದ ವಿವಿಧ ಕ್ಷೇತ್ರಗಳು, ಆಹಾರ ತಾಂತ್ರಿಕ ವಿಷಯಗಳು, ಆಹಾರ ಇಂಜಿನಿಯರಿಂಗ್ ವಿಷಯಗಳು, ಆಹಾರ ಕೆಡದಂತೆ ಇಡುವ ಮತ್ತು ಆಹಾರದ ಪೊಟ್ಟಣಗಳನ್ನು ತಯಾರಿಸುವ ಕ್ರಮಗಳು, ಜೀವ ರಸಾಯನಶಾಸ್ತ್ರ ಪೌಷ್ಟಿಕ ಪದಾರ್ಥಗಳ ವಿಜ್ಞಾನ, ಮತ್ತು ಆಹಾರ ಸೂಕ್ಷ್ಮಜೀವ ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸುತ್ತಿದೆ. ಸೈನಿಕ ಆಹಾರ ವಿಜ್ಞಾನ ಪ್ರಯೋಗಾಲಯವನ್ನು ಡಾಕ್ಟರೇಟ್ ಪದವಿಗೆ ಅಭ್ಯರ್ಥಿಗಳನ್ನು ತಯಾರಿಸಬಲ್ಲ ಉನ್ನತ ಶಿಕ್ಷಣ ಸಂಸ್ಥೆ ಎಂದು ಮೈಸೂರು ವಿಶ್ವವಿದ್ಯಾಲಯ ಮತ್ತು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗಳು ಮಾನ್ಯ ಮಾಡಿವೆ. ಈ ಸಂಸ್ಥೆಯು ಕಾಮನ್‌ವೆಲ್ತ್ ರಕ್ಷಣಾ ವಿಜ್ಞಾನ ಸಂಸ್ಥೆಯ ಆಹಾರ ಅಧ್ಯಯನ ತಂಡದ ಒಂದು ಸಕ್ರಿಯ ಸದಸ್ಯ ಸಂಸ್ಥೆಯಾಗಿದೆ. ರಕ್ಷಣಾ ಸಚಿವಾಲಯಕ್ಕೆ ಸೇರಿದ ಸಾಗಾಣಿಕೆ ಮತ್ತು ಪೂರೈಕೆ, ನಿರ್ದೇಶನಾಲಯಗಳ ಸೈನ್ಯಾಧಿಕಾರಿ ಮತ್ತು ಇತರ ಅಧಿಕಾರಿಗಳಿಗೆ ಮತ್ತು ವಿಜ್ಞಾನಿಗಳಿಗೆ ಈ ಪ್ರಯೋಗಾಲಯವು ತರಬೇತಿ ತರಗತಿಗಳನ್ನು ವ್ಯವಸ್ಥಿತ ರೀತಿಯಲ್ಲಿ ನಡೆಸುತ್ತಿದೆ.

**ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ :** 1962ರಲ್ಲಿ ಭಾರತದ ಬಾಹ್ಯಾಕಾಶ ಕಾರ್ಯಕ್ರಮವು ಆರಂಭವಾಯಿತು. ಕೇಂದ್ರ ಪರಮಾಣು ವಿಜ್ಞಾನ ನಿರ್ದೇಶನಾಲಯವು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಮಿತಿಯನ್ನು ರಚಿಸಿತು. 1969ರಲ್ಲಿ ಈ ಸಮಿತಿಯು ಪುನರ್‌ರಚನೆಗೊಂಡಿತು. ಇದು ಭಾರತೀಯ ರಾಷ್ಟ್ರೀಯ ವಿಜ್ಞಾನ ಪರಿಷತ್ತಿನ ಒಂದು ಭಾಗವಾಯಿತು. ಭಾರತೀಯ ಬಾಹ್ಯಾಕಾಶ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಯೋಜನೆಗಳನ್ನು ತಯಾರಿಸುವುದಕ್ಕಾಗಿ ಮತ್ತು ಹಾಕಿಕೊಂಡ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಪರಮಾಣುಶಕ್ತಿ ನಿರ್ದೇಶನಾಲಯದ ಅಧೀನದಲ್ಲಿ 'ಇಸ್ರೋ' ಅಸ್ತಿತ್ವಕ್ಕೆ ಬಂದಿತು. ಬಾಹ್ಯಾಕಾಶ ನಿರ್ದೇಶನಾಲಯವು 'ಇಸ್ರೋ' ಮೂಲಕ ಬಾಹ್ಯಾಕಾಶ ಕಾರ್ಯಕ್ರಮಗಳನ್ನು ನಡೆಸುವ ಹೊಣೆಗಾರಿಕೆಯನ್ನು ಹೊತ್ತುಕೊಂಡಿದೆ. ಬಾಹ್ಯಾಕಾಶ ನಿರ್ದೇಶನಾಲಯದ ಮತ್ತು 'ಇಸ್ರೋ'ದ ಮುಖ್ಯ ಕಚೇರಿಯು ಬೆಂಗಳೂರಿನಲ್ಲಿದೆ. 'ಇಸ್ರೋ'ದ ನಾಲ್ಕು ಕೇಂದ್ರಗಳಲ್ಲಿರುವ ತಾಂತ್ರಿಕ, ವೈಜ್ಞಾನಿಕ ಮತ್ತು ಆಡಳಿತಕ್ಕೆ ಸಂಬಂಧಿಸಿದ ಅಧಿಕಾರಿಗಳಿಗೆ ಇದು ಸೂಕ್ತ ನಿರ್ದೇಶನವನ್ನು ನೀಡುತ್ತಿದೆ. ಆ ನಾಲ್ಕು ಕೇಂದ್ರಗಳು ಯಾವುವೆಂದರೆ ಅಹಮದಾಬಾದಿನಲ್ಲಿರುವ ಬಾಹ್ಯಾಕಾಶ ಉಪಯೋಗ ಕೇಂದ್ರ (ಸ್ಪೇಸ್ ಎಪ್ಲಿಕೇಶನ್ ಸೆಂಟರ್), ಬೆಂಗಳೂರಿನಲ್ಲಿರುವ 'ಇಸ್ರೋ' ಉಪಗ್ರಹ ಕೇಂದ್ರ, ತಿರುವನಂತಪುರದಲ್ಲಿರುವ ವಿಕ್ರಮ್ ಸಾರಾಭಾಯ್ ಬಾಹ್ಯಾಕಾಶ ಕೇಂದ್ರ ಮತ್ತು ಆಂಧ್ರಪ್ರದೇಶದಲ್ಲಿನ ಶ್ರೀಹರಿಕೋಟದಲ್ಲಿರುವ ಎಸ್.ಎಚ್.ಎ. ಆರ್. ಕೇಂದ್ರ. ಅಹಮದಾಬಾದಿನಲ್ಲಿರುವ ಭೌತಶಾಸ್ತ್ರ ಸಂಶೋಧನಾ ಪ್ರಯೋಗಾಲಯವು ಬಾಹ್ಯಾಕಾಶ ವಿಜ್ಞಾನ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಸಂಶೋಧನೆಗಳನ್ನು ನಡೆಸುತ್ತಿದೆ. ಇದಕ್ಕೆ ಅನುದಾನ ದೊರೆಯುತ್ತಿದೆ. ಅನುದಾನದ ಬಹುಭಾಗವು ಬಾಹ್ಯಾಕಾಶ ನಿರ್ದೇಶನಾಲಯದಿಂದ ಬರುತ್ತಿದೆ. ಬಾಹ್ಯಾಕಾಶ ನಿರ್ದೇಶನಾಲಯವು ಇನ್‌ಸಾಟ್-1 ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಬೆಂಗಳೂರಿನಲ್ಲಿಯೇ ಕಚೇರಿಯನ್ನು ಸ್ಥಾಪಿಸಿದೆ. ಇನ್‌ಸಾಟ್‌ನ ಪೂರ್ತಿ ಹೆಸರು 'ಇಂಡಿಯನ್ ನ್ಯಾಷನಲ್ ಸ್ಯಾಟಲೈಟ್ ಸಿಸ್ಟಮ್' ಅಂದರೆ 'ಭಾರತೀಯ ರಾಷ್ಟ್ರೀಯ ಉಪಗ್ರಹ ವ್ಯವಸ್ಥೆ'. ಇಸ್ರೋ ಉಪಗ್ರಹ ಕೇಂದ್ರವು (ಇಸಾಕ್; ಇಂಡಿಯನ್ ಸೆಟಲೈಟ್ ಸೆಂಟರ್), ಉಪಗ್ರಹ ತಾಂತ್ರಿಕತೆಯ ಮುಖ್ಯ ಸಂಶೋಧನಾ ಮತ್ತು ಅಭಿವೃದ್ಧಿ ಕೇಂದ್ರವಾಗಿದೆ. ಭಾರತದ ಮೊದಲನೇಯ ಉಪಗ್ರಹ ಆರ್ಯಭಟ, ಎರಡನೇಯ ಉಪಗ್ರಹ ಭಾಸ್ಕರ, ರೋಹಿಣಿ ಮತ್ತು ಭಾರತದ ಮೊದಲನೇಯ ಪ್ರಾಯೋಗಿಕ ಸಂಸರ್ಗ ಉಪಗ್ರಹವಾದ ಆಪಲ್ (ಏರೈನ್ ಪ್ಯಾಸೆಂಜರ್ ಪೇಲೋಡ್ ಎಕ್ಸ್‌ಪೆರಿಮೆಂಟ್), ಇವೆಲ್ಲವೂ ಈ ಕೇಂದ್ರದಲ್ಲಿಯೇ ರಚಿತವಾದವು. ಭಾರತದ ಮುಂದಿನ ಅಂತರಿಕ್ಷ ಸಂಪರ್ಕ ಉಪಗ್ರಹಗಳ ರಚನೆಗೆ 'ಆಪಲ್' ನಾಂದಿರೂಪದಲ್ಲಿದೆ. ಇಸ್ರೋದ ಮುಖ್ಯ ಯೋಜನೆಗಳೆಂದರೆ, ಎಸ್.ಎಲ್.ವಿ.—3 (ಸೆಟಲೈಟ್ ಲಾಂಚ್ ವೆಹಿಕಲ್) ಉಪಗ್ರಹಗಳನ್ನು ಬಾಹ್ಯಾ

ಕಾಶದಲ್ಲಿ ಬಿಡುವ ವಾಹನ) ಇನ್‌ಸಾಟ್–1 ಮತ್ತು ದೂರ ಸಂವೇದನಾ ಉಪಕರಣಗಳ ನಿರ್ಮಾಣ. ಬಾಹ್ಯಾಕಾಶ ಯೋಜನೆಯು ಅನೇಕ ರೀತಿಯಲ್ಲಿ ದೇಶದ ಆರ್ಥಿಕ ಮತ್ತು ಕೈಗಾರಿಕಾ ಪ್ರಗತಿಗೆ ಕಾರಣವಾಗಿದೆ. ಎಲೆಕ್ಟ್ರಿಕ್ ಮತ್ತು ಎಲೆಕ್ಟ್ರಾನಿಕ್ಸ್ ಕೈಗಾರಿಕೆಗಳಲ್ಲಿ ಉಪಯೋಗಕ್ಕೆ ಬರುವ ಫೈಬರ್ ಗ್ಲಾಸ್ ತಾಂತ್ರಿಕತೆ, ವಿಮಾನಗಳ ಆಕಾಶ ಚಲನೆಯನ್ನು ಪರೀಕ್ಷಿಸಲು ಸಹಾಯಕವಾದ ಟೆಲಿಮಿಟ್ರಿ (ದೂರದ ಘಟನೆಗಳನ್ನು ಅಳತೆ ಮಾಡುವ ಕ್ರಮ), ಅನೇಕ ಕೈಗಾರಿಕೆಗಳಲ್ಲಿ ಪ್ರಯೋಜನಕ್ಕೆ ಬರುವ ಪ್ರೆಷರ್ ಟ್ರಾನ್ಸ್‌ಡ್ಯೂಯರ್ಸ್, ಜಲಚಕ್ರ ಅಲಗು ಕಂಪನ ಶಾಸ್ತ್ರಕ್ಕೆ ಸಂಬಂಧಿಸಿದ (ಟರ್ಬೈನ್ ಬ್ಲೇಡ್ ವೈಬ್ರೇಶನ್ ಟೆಕ್ನಾಲಜಿ) ಸಮಸ್ಯೆಗಳನ್ನು ಬಿಡಿಸಲು ಸಹಾಯಕವಾದ ಗಣಕ ವಿಶ್ಲೇಷಣಾ ತಂತ್ರ, ಮುಂತಾದವುಗಳ ಬೆಳವಣಿಗೆಗೆ ಬಾಹ್ಯಾಕಾಶ ಕಾರ್ಯಕ್ರಮಗಳು ಸಹಾಯಕವಾಗಿವೆ. ವಾಯುಗುಣ ವಿಜ್ಞಾನ, ಸಂಪರ್ಕ ಸಾಧನಗಳ ತಯಾರಿಕೆ, ಲೋಹ ವಿಜ್ಞಾನ, ರಾಸಾಯನಿಕ ವಸ್ತುಗಳ ಉತ್ಪಾದನೆ, ಇಲೆಕ್ಟ್ರಾನಿಕ್ಸ್ ಉಪಕರಣ ವಿಜ್ಞಾನ ಮತ್ತು ಗಣಕ ವಿಜ್ಞಾನ, ಇವುಗಳ ಬೆಳವಣಿಗೆಗೆ ಇತ್ತೀಚಿನ ವರ್ಷಗಳಲ್ಲಿ 'ಇಸ್ರೋ' ಮಾಡಿರುವ ಸಂಶೋಧನೆಗಳು ತುಂಬ ಪ್ರಯೋಜನಕಾರಿಯಾಗಿವೆ. ಸಂಪರ್ಕ ಉಪಗ್ರಹಗಳ ಮೂಲಕ ಪ್ರಸಾರ ಮಾಡುವ ಟೆಲಿವಿಷನ್ ಪ್ರಸಾರವು ಶೈಕ್ಷಣಿಕ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ಬಹು ಪರಿಣಾಮಕಾರಿಯಾದ ಫಲವನ್ನು ಕೊಡಬಲ್ಲದು; ಬಹು ಶೀಘ್ರವಾಗಿ ಇಡೀ ರಾಷ್ಟ್ರಕ್ಕೆ ಇದರಿಂದ ವಿಚಾರಗಳನ್ನು ತಿಳಿಸಬಹುದು. ಹವಾಮಾನವನ್ನು ತಿಳಿಯಲು ಆಕಾಶಕ್ಕೆ ಹಾರಿಸುವ ಉಪಗ್ರಹಗಳ ಸಹಾಯದಿಂದ ಹವಾ ಮುನ್ಸೂಚನೆ ಕೊಡಬಹುದು. ಇದರಿಂದ ಕೃಷಿಗೆ ಸಂಬಂಧಿಸಿದ ಕೆಲಸಗಳನ್ನು ರೈತನು ಚೆನ್ನಾಗಿ ಮಾಡಲು ಅನುಕೂಲವಾಗುತ್ತದೆ.

ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ : ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ ಅಥವಾ ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಇನ್‌ಸ್ಟಿಟ್ಯೂಟ್ ಕಲ್ಕತ್ತದಲ್ಲಿ 1932ರಲ್ಲಿ ಸ್ಥಾಪಿತವಾಯಿತು. ಅದರ ಬೆಂಗಳೂರು ಶಾಖೆಯು 1978ರಲ್ಲಿ ಆರಂಭವಾಯಿತು. ಸಂಖ್ಯಾಶಾಸ್ತ್ರ, ಅರ್ಥಶಾಸ್ತ್ರ ಮತ್ತು ಇತರ ಸಾಮಾಜಿಕ ವಿಜ್ಞಾನಗಳಲ್ಲಿ ಸಂಶೋಧನೆ ನಡೆಸುವುದು, ಪದವಿ ಪರೀಕ್ಷೆಗಳಿಗೆ ಸಂಖ್ಯಾಶಾಸ್ತ್ರದ ತರಗತಿಗಳನ್ನು ನಡೆಸುವುದು, ಅಧಿಕಾರಿಗಳಿಗೆ ಬೇಕಾದ ತರಬೇತಿಯನ್ನು ಕೊಡುವುದು, ಮಾದರಿ ಸಮೀಕ್ಷೆಯನ್ನು ನಡೆಸುವುದು, ಮುಂತಾದವು ಈ ಸಂಸ್ಥೆಯ ಉದ್ದೇಶವಾಗಿದೆ. 1959ರ ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಆ್ಯಕ್ಟ್ ಪ್ರಕಾರ ಡಿಗ್ರಿ ಮತ್ತು ಡಿಪ್ಲೋಮಾಗಳನ್ನು ಸಂಸ್ಥೆಯಲ್ಲಿ ತಯಾರಾದ ಅಭ್ಯರ್ಥಿಗಳಿಗೆ ಕೊಡುವ ಅಧಿಕಾರ ಈ ಸಂಸ್ಥೆಗಿದೆ. ಬೆಂಗಳೂರು ಕೇಂದ್ರವು ಸ್ಥಾಪಿತವಾಗುವುದಕ್ಕೆ ಮುಂಚೆಯೂ, ಡಾಕ್ಯುಮೆಂಟೇಷನ್ ಸಂಶೋಧನೆ ಮತ್ತು ತರಬೇತಿ ಕೇಂದ್ರ, ಸ್ಟ್ಯಾಟಿಸ್ಟಿಕಲ್ ಕ್ವಾಲಿಟಿ ಕಂಟ್ರೋಲ್ ಘಟಕ ಎಂಬ ಎರಡು ಸಂಸ್ಥೆಗಳು ಬೆಂಗಳೂರಿನಲ್ಲಿದ್ದವು. ಇವುಗಳಲ್ಲಿ ಮೊದಲನೇಯದು 1962 ರಲ್ಲಿಯೂ ಎರಡನೇಯದು 1954ರಲ್ಲಿಯೂ ಆರಂಭವಾದವು. ಬೆಂಗಳೂರಿನಲ್ಲಿ ಸಂಸ್ಥೆಯ ಶಾಖೆಯು ಪ್ರಾರಂಭವಾದ ಮೇಲೆ ಮತ್ತೆರಡು ಘಟಕಗಳು ಆರಂಭವಾದವು. ಇವೆರಡು ಯಾವುವೆಂದರೆ ಸ್ಟ್ಯಾಟಿಸ್ಟಿಕ್ಸ್ ಮ್ಯಾಥಮ್ಯಾಟಿಕ್ಸ್ ಘಟಕ ಮತ್ತು ಇಕೊನಾಮಿಕ್ ಅನಾಲಿಸಿಸ್ ಘಟಕ. ಬೆಂಗಳೂರಿನಲ್ಲಿರುವ ಶಾಖೆಯ ಚಟುವಟಿಕೆಗಳು ದಿಲ್ಲಿ ಮತ್ತು ಕಲ್ಕತ್ತ ಕೇಂದ್ರಗಳಿಗೆ ಪೂರಕವಾಗಿವೆ. ಸಂಖ್ಯಾಶಾಸ್ತ್ರೀಯ ಗುಣ ನಿಯಂತ್ರಣ, ಡಾಕ್ಯುಮೆಂಟೇಷನ್ ಮತ್ತು ತಜ್ಞರಿಗೆ ಬೇಕಾದ ಸಂಖ್ಯಾಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಇದು ಒದಗಿಸುತ್ತದೆ. ಪಿಎಚ್.ಡಿ. ಪದವಿಗೆ ತಯಾರಾಗುತ್ತಿರುವ ಅಭ್ಯರ್ಥಿಗಳಿಗೆ ತಕ್ಕ ಸೂಚನೆ, ಸಹಾಯಗಳನ್ನು ನೀಡುತ್ತಿದೆ. ಸಂಸ್ಥೆಯು ಕೇಂದ್ರ ಸರ್ಕಾರವೇ ನಡೆಸುತ್ತಿರುವ ಕಾಯಿದೆಯ ಪ್ರಕಾರ ರಿಜಿಸ್ಟರ್ ಆಗಿರುವ ಒಂದು ಸೊಸೈಟಿಯಾಗಿದೆ.

ಭಾರತೀಯ ಆಡಳಿತ ಸಂಸ್ಥೆ : ಬೆಂಗಳೂರಿನ ಭಾರತೀಯ ಆಡಳಿತ (ವಿಜ್ಞಾನ) ಸಂಸ್ಥೆ ಅಥವಾ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ 1972ರಲ್ಲಿ ಸ್ಥಾಪಿತವಾಯಿತು. ಭಾರತ ಸರ್ಕಾರದ ಶಿಕ್ಷಣ ಮತ್ತು ಸಮಾಜ ಕಲ್ಯಾಣ ಸಚಿವಾಲಯದ ಅಧೀನದಲ್ಲಿರುವ ಈ ಸಂಸ್ಥೆಯ ಔಪಚಾರಿಕ ಉದ್ಘಾಟನೆಯು 1973ರಲ್ಲಿ ಆಯಿತು. ರಾಷ್ಟ್ರೀಯ ಆಡಳಿತ (ವಿಜ್ಞಾನ) ಸಂಸ್ಥೆಗಳಲ್ಲಿ ಇದು ಮೂರನೇಯದು, ದಕ್ಷಿಣ ಭಾರತದಲ್ಲಿ ಮೊದಲನೇಯದು. ಕೈಗಾರಿಕಾ ಸಂಸ್ಥೆಗಳು ಮತ್ತು ಸಂಘಗಳಿಗೆ ಆಡಳಿತ ವಿಜ್ಞಾನ ಮತ್ತು ಸಂಬಂಧಿಸಿದ ವಿಷಯಗಳಲ್ಲಿ ಅಗತ್ಯವಾದ ವೃತ್ತಿಶಿಕ್ಷಣವನ್ನು ಕೊಡುವುದು, ತರುಣರನ್ನು ಆರಿಸಿ ಅವರಿಗೆ ತಕ್ಕ ಶಿಕ್ಷಣವನ್ನು ಕೊಟ್ಟು ಆಡಳಿತ (ವಿಜ್ಞಾನ) ದಲ್ಲಿ ನುರಿತವರ ತಂಡವನ್ನು ನಿರ್ಮಿಸುವುದು, ಕೈಗಾರಿಕಾ ಮತ್ತು ವಾಣಿಜ್ಯ ಸಂಸ್ಥೆಗಳಿಗೆ ಅಗತ್ಯವಾದ ಆಡಳಿತ ವಿಜ್ಞಾನದ ಅತ್ಯಾಧುನಿಕ ವಿಷಯಗಳನ್ನೊದಗಿಸುವುದು, ಇದೇ ಉದ್ದೇಶವನ್ನು ಹೊಂದಿರುವ ಶೈಕ್ಷಣಿಕ ಮತ್ತಿತರ ಸಂಸ್ಥೆಗಳೊಡನೆ ಸಹಕರಿಸುವುದು, ಸರ್ಕಾರದ ಸಂಸ್ಥೆಗಳಿಗೆ ಮತ್ತು ಜನಗಳಿಗೆ ಸಲಹೆಗಳನ್ನು ಕೊಡಬಲ್ಲ ವ್ಯವಸ್ಥೆಯನ್ನು ಮಾಡುವುದು—ಇವು ಸಂಸ್ಥೆಯ ಉದ್ದೇಶಗಳಾಗಿವೆ. ಸಂಸ್ಥೆಯು ಮುಂದೆ ನಮೂದಿಸಿರುವ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಸಾಮಾನ್ಯ ಆಡಳಿತ (ವಿಜ್ಞಾನ) ಮತ್ತು ನಿರ್ದಿಷ್ಟ ಕ್ಷೇತ್ರಗಳಿಗೆ ಸಂಬಂಧಿಸಿದ ಆಡಳಿತ (ವಿಜ್ಞಾನ) ದ ಎರಡು ವರ್ಷದ ಸ್ನಾತಕೋತ್ತರ ತರಗತಿಗಳನ್ನು ನಡೆಸುವುದು, ಡಾಕ್ಟರೇಟ್ ಪದವಿಗೆ ಅಗತ್ಯವಾದ ಕಾರ್ಯಕ್ರಮವನ್ನು ವ್ಯವಸ್ಥೆ ಮಾಡುವುದು, ಶಿಕ್ಷಕರಿಗೆ ಬೇಕಾದ ತರಬೇತಿ, ವೃತ್ತಿ ಸಂವರ್ಧನೆಯ ಕಾರ್ಯಕ್ರಮಗಳನ್ನು ನಡೆಸುವುದು, ಅಭಿವೃದ್ಧಿ ಚಟುವಟಿಕೆಗಳಿಗೆ ಅಗತ್ಯವಾದ ವ್ಯವಸ್ಥೆಯ

ಬಗೆಗೆ ತಕ್ಕ ತರಬೇತಿಯನ್ನು ಕೊಡುವುದು, ಸಂಶೋಧನೆ ಮತ್ತು ಪ್ರಕಟಣೆಗಳಿಗೆ ವ್ಯವಸ್ಥೆ ಮಾಡುವುದು, ಸಂಸ್ಥೆಗಳಿಗೆ ತಕ್ಕಂಥ ಕಾರ್ಯಕ್ರಮಗಳನ್ನು ನಡೆಸುವುದು, ಆಡಳಿತಕ್ಕೆ ಬೇಕಾದ ಸಲಹೆಗಳನ್ನು ಕೊಡಬಲ್ಲ ಸಂಸ್ಥೆಗಳನ್ನು ವ್ಯವಸ್ಥೆ ಮಾಡುವುದು, ವಿಶಿಷ್ಟ ಉದ್ದೇಶಗಳಿರುವ ಸಂಕಿರಣಗಳನ್ನೂ, ಕಾರ್ಯಾಗಾರಗಳನ್ನೂ ವ್ಯವಸ್ಥೆ ಮಾಡುವುದು ಮತ್ತು ನಿರ್ದಿಷ್ಟ ಕಾರ್ಯಕ್ರಮಗಳನ್ನು ನಡೆಸುವುದು.

ನಿರ್ದಿಷ್ಟ ಉದ್ಯೋಗಗಳ ಮತ್ತು ವೃತ್ತಿಗಳ ಸಂವರ್ಧನೆಗೆ ಸಂಬಂಧಿಸಿದ ಸಮಸ್ಯೆಗಳ ಬಗೆಗೆ ತರಬೇತಿಯನ್ನು ಕೊಡುವುದು ಮತ್ತು ಅವುಗಳ ಬೋಧನೆಗೆ ವ್ಯವಸ್ಥೆ ಮಾಡುವ ಆರು ಕೇಂದ್ರಗಳಿವೆ. ಸಾರ್ವಜನಿಕ ಉದ್ಯಮಗಳಿಗೆ ಸಂಬಂಧಿಸಿದ ಯೋಜನೆಗಳ ಸಂಶೋಧನೆಯನ್ನು ಈ ಕೇಂದ್ರಗಳು ನಡೆಸುತ್ತಿವೆ. ಅವು ಯಾವುವೆಂದರೆ : 1) ಕೃಷಿ ಮತ್ತು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿ ಕೇಂದ್ರ, 2) ಶಕ್ತಿ ವಿತರಣೆಗೆ ಸಂಬಂಧಿಸಿದ ಆಡಳಿತ ತರಬೇತಿಯ ಕೇಂದ್ರ, 3) ಸಸ್ಯ ಮತ್ತು ಪ್ರಾಣಿಗಳ ಸ್ವಾಭಾವಿಕ ಸ್ಥಾನಗಳ ಪರಿಸರಗಳಿಗೆ ಸಂಬಂಧಿಸಿದ ಆಡಳಿತ ಸಮಸ್ಯೆಗಳ ಅಧ್ಯಯನ ಕೇಂದ್ರ, 4) ಜನಸಂಖ್ಯಾ ಹತೋಟಿ ಮತ್ತು ಆರೋಗ್ಯ ಕ್ಷೇತ್ರಗಳ ಆಡಳಿತ ಸಮಸ್ಯೆಗಳನ್ನು ಕುರಿತ ಅಧ್ಯಯನ ಕೇಂದ್ರ, 5) ಶೈಕ್ಷಣಿಕ ಆಡಳಿತ ಸಮಸ್ಯೆಗಳನ್ನು ಕುರಿತು ಅಧ್ಯಯನ ಕೇಂದ್ರ ಮತ್ತು 6) ಸಾರಿಗೆ ಸೇವೆಗಳ ಕುರಿತು ಸಮಸ್ಯೆಗಳ ಅಧ್ಯಯನ ಕೇಂದ್ರ. ಬೆಂಗಳೂರಿನ ಹತ್ತಿರ ಬನ್ನೇರುಘಟ್ಟ ರಸ್ತೆಯಲ್ಲಿರುವ 100 ಎಕರೆ ಪ್ರದೇಶದಲ್ಲಿ ಸಂಸ್ಥೆಯ ಕಟ್ಟಡಗಳನ್ನು ಕಟ್ಟಲಾಗುತ್ತಿದೆ. ಸಂಸ್ಥೆಯು ಒಂದು ರಿಜಿಸ್ಟರ್ಡ್ ಸಂಸ್ಥೆಯಾಗಿದೆ. ನಿರ್ದೇಶಕರ ಮಂಡಲಿಯು ಇದರ ಆಡಳಿತವನ್ನು ನಡೆಸುತ್ತಿದೆ.

**ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳ ಅಧ್ಯಯನ ಸಂಸ್ಥೆ :** ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳ ಅಧ್ಯಯನ ಸಂಸ್ಥೆ ಅಥವಾ ದಿ ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಇಕೊನಾಮಿಕ್ ಚೇಂಜ್ ಬೆಂಗಳೂರಿನಲ್ಲಿ 1972ರಲ್ಲಿ ಆರಂಭವಾಯಿತು. ವಿವಿಧ ಸಾಮಾಜಿಕ ಶಾಸ್ತ್ರಗಳಿಗೆ ಪರಸ್ಪರ ಸಂಬಂಧಿಸಿದ ವಿಷಯಗಳನ್ನು ಕುರಿತ ಸಂಶೋಧನೆ ಮತ್ತು ಬೋಧನೆಗಳಲ್ಲಿ ಈ ಸಂಸ್ಥೆ ನಿರತವಾಗಿದೆ. ಇದು ಪ್ರೊ|| ವಿ. ಕೆ. ಆರ್. ವಿ. ರಾವ್‌ರ ದೂರದೃಷ್ಟಿಯ ಫಲವಾಗಿದೆ. 1) ಸಾಮಾಜಿಕ ವಿಜ್ಞಾನಗಳ ಸಮಸ್ಯೆಗಳ ಬಗೆಗೆ ಸಂಶೋಧನೆಗಳನ್ನು ನಡೆಸುವುದು, ಇಂಥ ಸಂಶೋಧನೆಗಳನ್ನು ಪ್ರಾರಂಭಿಸಲು ಸಹಾಯ ಮಾಡುವುದು ಮತ್ತು ಅಂಥ ಸಂಶೋಧನೆಗಳಿಗೆ ದ್ರವ್ಯ ಸಹಾಯ ಮಾಡುವುದು. 2) ವ್ಯವಸ್ಥಿತವಾದ ಅಧ್ಯಯನ ಮಾಡಿ ರಾಜ್ಯ ಸರ್ಕಾರಕ್ಕೆ ಸೂಕ್ತ ವಿಷಯಗಳಲ್ಲಿ ಸಲಹೆ ನೀಡುವುದು, 3) ವಿಶ್ವವಿದ್ಯಾಲಯಗಳ ಸಹಕಾರದಿಂದ ಡಾಕ್ಟರೇಟ್ ಪದವಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನಡೆಸುವುದು ಮತ್ತು 4) ಸಾಮಾಜಿಕ ಶಾಸ್ತ್ರಗಳ ಬೋಧನೆಗೆ ವ್ಯವಸ್ಥೆ ಮಾಡುವುದು ಈ ಸಂಸ್ಥೆಯ ಮುಖ್ಯ ಉದ್ದೇಶಗಳಾಗಿವೆ. ಗವರ್ನರುಗಳ ಮಂಡಲಿಯು ಸಂಸ್ಥೆಯನ್ನು ನಡೆಸುತ್ತದೆ. ಸಂಸ್ಥೆಯ ನಿರ್ದೇಶಕನೇ ಅದರ ಮುಖ್ಯಾಧಿಕಾರಿ. ಆಡಳಿತ ಸಂಶೋಧನೆ ಮತ್ತು ಬೋಧನೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಸಲಹೆ ಕೊಡಲು ಮೂರು ಸಹಾಯಕ ಸಮಿತಿಗಳಿವೆ. ಆಚಾರ್ಯ-ಪ್ರಾಚಾರ್ಯರ ಸಮಿತಿ (ಅಕ್ಯಾಡೆಮಿಕ್ ಕಮಿಟಿ), ಸಂಶೋಧನೆ ಸಮಿತಿ ಮತ್ತು ಗ್ರಂಥಾಲಯ ಸಮಿತಿ. ಸಂಸ್ಥೆಯ ಎಲ್ಲ ಚಟುವಟಿಕೆಗಳೂ ವಿಭಾಗಗಳೂ ಮತ್ತು ಘಟಕಗಳಿಂದ ನಡೆಯುತ್ತವೆ. ಇದರಲ್ಲಿ ಅರ್ಥಶಾಸ್ತ್ರ, ಗ್ರಾಮಾಂತರ ಪ್ರದೇಶಕ್ಕೆ ಸಂಬಂಧಿಸಿದ ಅರ್ಥಶಾಸ್ತ್ರ, ಪರಿಸರಗಳಿಗೆ ಸಂಬಂಧಿಸಿದ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಶಿಕ್ಷಣಶಾಸ್ತ್ರ, ಅಭಿವೃದ್ಧಿ ಕಾರ್ಯಕ್ರಮಗಳ ಆಡಳಿತ, ಕೃಷಿ ಕ್ಷೇತ್ರ ಮತ್ತು ಗ್ರಾಮ ಜೀವನ ಪರಿವರ್ತನೆ, ಜನಸಾಂದ್ರತೆಗೆ ಸಂಬಂಧಿಸಿದ ಸಂಶೋಧನೆ, ಸಾಮಾಜಿಕ ಸೇವೆಗಳ ಆಡಳಿತ ಮತ್ತು ಹೊಸ ನೀರಾವರಿ ಪ್ರದೇಶಗಳನ್ನು ಕುರಿತು ಸಮಸ್ಯೆಗಳ ಅಧ್ಯಯನ ಇವುಗಳಿಗೆ ಸಂಬಂಧಿಸಿದ ಘಟಕಗಳಿವೆ. ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು ಈ ಸಂಸ್ಥೆಯು ಪಿಎಚ್. ಡಿ. ಪದವಿಗೆ ಅಭ್ಯರ್ಥಿಗಳನ್ನು ತರಬೇತಿ ಮಾಡಲು ಮಾನ್ಯತೆ ನೀಡಿವೆ. ಸಂಸ್ಥೆಯು ಬೆಂಗಳೂರಿನಲ್ಲಿ ವೃತ್ತಿನಿರತ ಶಿಕ್ಷಕರಿಗೆ ಸಮಾಜ ಶಾಸ್ತ್ರಗಳ ಬೋದನಾ ಕ್ರಮದಲ್ಲಿ ತರಬೇತಿಯನ್ನು ಕೊಡುತ್ತದೆ. ಜಿಲ್ಲಾ ಯೋಜನಾಧಿಕಾರಿಗಳು, ಪ್ರೊಬೇಷನರ್‌ರಾಗಿರುವ ಶಿಕ್ಷಣಾಧಿಕಾರಿಗಳು, ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಅಂಕಿ ಅಂಶಗಳಿಗೆ ಸಂಬಂಧಿಸಿದ ಕೇಂದ್ರ (ಕರ್ನಾಟಕ ಬ್ಯೂರೋ ಆಫ್ ಎಕನಾಮಿಕ್ಸ್ ಅಂಡ್ ಸ್ಟ್ಯಾಟಿಸ್ಟಿಕ್ಸ್)ದ ಅಧಿಕಾರಿಗಳು ಮತ್ತು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ಅಭಿವೃದ್ಧಿ ಇಲಾಖೆಗಳ ಅಧಿಕಾರಿಗಳಿಗೂ ಇದು ತಕ್ಕ ತರಬೇತಿಯನ್ನು ಕೊಡುತ್ತಿದೆ.

**ಜೆ. ಎಸ್. ಎಸ್. ಆರ್ಥಿಕ ಸಂಶೋಧನಾ ಸಂಸ್ಥೆ :** ಜೆ. ಎಸ್. ಎಸ್. ಆರ್ಥಿಕ ಸಂಶೋಧನಾ ಸಂಸ್ಥೆಯು 1957ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾಯಿತು. ಆರ್ಥಿಕ ಸಮಸ್ಯೆಗಳ ಮತ್ತು ಅದರಲ್ಲೂ ಗ್ರಾಮಾಂತರ ಪ್ರದೇಶಗಳಿಗೆ ಸಂಬಂಧಿಸಿದ ಆರ್ಥಿಕ ಸಮಸ್ಯೆಗಳ ಬಗೆಗೆ ಸಂಶೋಧನೆ, ನಿರ್ದಿಷ್ಟವಾದ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳ ಪರೀಕ್ಷೆ, ಸಂಸ್ಥೆಯು ನಡೆಸಿದ ಸಂಶೋಧನೆಗಳಿಂದ ತಿಳಿದು ಬಂದ ಅಂಶಗಳನ್ನು ಕುರಿತ ವರದಿಗಳ ಮತ್ತು ಪುಸ್ತಕಗಳ ಪ್ರಕಟಣೆ ಮತ್ತು ಹೆಸರಾಂತ ತಜ್ಞರಿಂದ ಆರ್ಥಿಕ ಮತ್ತು ಸಾಮಾಜಿಕ ವಿಷಯಗಳ ಮೇಲೆ ಉಪನ್ಯಾಸಗಳನ್ನು ವ್ಯವಸ್ಥೆ ಮಾಡುವುದು ಈ ಸಂಸ್ಥೆಯ ಉದ್ದೇಶಗಳು. ಧಾರವಾಡದಲ್ಲಿರುವ ಜನತಾ ಶಿಕ್ಷಣ ಸಮಿತಿಯು ಈ ಸಂಸ್ಥೆಯನ್ನು ನಡೆಸುತ್ತಿದೆ. ಅದಕ್ಕೆ 8,000 ಪುಸ್ತಕಗಳ ಒಂದು ಗ್ರಂಥ

ಭಂಡಾರವಿದೆ. 1961ರಲ್ಲಿ ಆರಂಭವಾದ ಜನಾಂಗಸ್ಥಿತಿ ಶಾಸ್ತ್ರ ಸಂಶೋಧನಾ ಕೇಂದ್ರಕ್ಕೆ ಭಾರತ ಸರ್ಕಾರದಿಂದ ಅನುದಾನ ದೊರೆಯುತ್ತಿದೆ. ಗ್ರಾಮಾಂತರ ಪ್ರದೇಶಗಳ ಅನೇಕ ಆರ್ಥಿಕ ವಿಷಯಗಳ ಬಗೆಗೆ ಸಂಸ್ಥೆಯು ಸಮೀಕ್ಷೆ ನಡೆಸಿದೆ. ಜೊತೆಗೆ ಬೇರೆ ಬೇರೆ ಪ್ರದೇಶಗಳಲ್ಲಿ ಈ ಸಂಸ್ಥೆಯು ಜನಾಂಗ ಸ್ಥಿತಿಯನ್ನು ಕುರಿತು ಸಂಶೋಧನೆಗಳನ್ನು ನಡೆಸಿದೆ. 1966 ರಿಂದ ಈ ಸಂಸ್ಥೆಯು ಒಂದು ದ್ವೈವಾರ್ಷಿಕ ನಿಯತಕಾಲಿಕ ಪತ್ರಿಕೆಯನ್ನು ಪ್ರಕಟಿಸುತ್ತಿದೆ. ಅದರ ಹೆಸರು 'ಜರ್ನಲ್ ಆಫ್ ಇನ್‌ಸ್ಟಿಟ್ಯೂಟ್ ಆಫ್ ಇಕೊನಾಮಿಕ್ ರಿಸರ್ಚ್'.

ಭಾರತೀಯ ಆರ್ಥಿಕ ಸಾಮಾಜಿಕ ಸಮಸ್ಯೆಗಳ ಅಧ್ಯಯನ ಸಂಸ್ಥೆ: ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೋಷಿಯೋ-ಇಕೊನಾಮಿಕ್ ಸ್ಟಡೀಸ್ ಅಥವಾ ಭಾರತೀಯ ಸಾಮಾಜಿಕ ಆರ್ಥಿಕ ಸಮಸ್ಯೆಗಳ ಅಧ್ಯಯನ ಸಂಸ್ಥೆಯು ಬೆಂಗಳೂರಿನಲ್ಲಿ 1965ರಲ್ಲಿ ಸ್ಥಾಪಿತವಾಯಿತು. ಸಾಮಾಜಿಕ ಆರ್ಥಿಕ ಸಮಸ್ಯೆಗಳ ವಿಶ್ಲೇಷಣೆ ನಡೆಸಿ ಅವುಗಳ ಬಗೆಗೆ ಸಂಶೋಧನೆಯನ್ನು ಮಾಡುವುದು ಈ ಸಂಸ್ಥೆಯ ಒಂದು ಉದ್ದೇಶ. ಉತ್ಪನ್ನಕಾರರ ಮತ್ತು ಬಳಕೆದಾರರ ಸಮಸ್ಯೆಗಳ ಬಗೆಗೆ ಸಂಶೋಧನೆ ನಡೆಸುವುದು ಮತ್ತೊಂದು ಉದ್ದೇಶ. ಆಡಳಿತ (ವಿಜ್ಞಾನ)ದ ಅಲ್ಪಾವಧಿ ತರಬೇತಿ ತರಗತಿಗಳನ್ನು ನಡೆಸುವುದೂ, ಆರ್ಥಿಕ, ಸಾಮಾಜಿಕ ಮತ್ತು ಸಂಬಂಧಿಸಿದ ವಿಷಯಗಳನ್ನು ಕುರಿತ ಮತ್ತು ಅಂತಹ ವಿಷಯಗಳ ಸಂಶೋಧನೆಗೆ ಅನುಕೂಲವಾದ ಗ್ರಂಥಭಂಡಾರವನ್ನು ನಿರ್ಮಿಸುವುದೂ, ಸಂಶೋಧನಾ ಕ್ರಮಗಳನ್ನು ಕುರಿತ ಪುನಶ್ಚೇತನ ವರ್ಗ ಮತ್ತು ಸಂಕಿರಣಗಳನ್ನು ನಡೆಸುವುದೂ, ಉನ್ನತ ಶಿಕ್ಷಣಕ್ಕೆ ಮತ್ತು ಸ್ನಾತಕೋತ್ತರ ಶಿಕ್ಷಣಕ್ಕೆ ಮತ್ತು ಆ ಮಟ್ಟದ ಸಂಶೋಧನೆಗಳಿಗೆ ಅನುಕೂಲವಾದ ವಾತಾವರಣವನ್ನು ನಿರ್ಮಿಸುವುದೂ ಈ ಸಂಸ್ಥೆಯ ಉದ್ದೇಶಗಳಾಗಿವೆ. ಇದು ಒಂದು ಸ್ನಾತಕೋತ್ತರ ಶಿಕ್ಷಣ ಸಂಸ್ಥೆ. ಸಹಕಾರ, ಮಾರಾಟ, ನೀರಾವರಿ, ಮಾನವಶಕ್ತಿಯ ಬಳಕೆ, ಕೈಗಾರಿಕೆ ಮುಂತಾದ ಕ್ಷೇತ್ರಗಳಲ್ಲಿನ ಅನೇಕ ಸಮಸ್ಯೆಗಳ ಅಧ್ಯಯನವನ್ನು ಈ ಸಂಸ್ಥೆ ಮಾಡುತ್ತಿದೆ. 1977ರಿಂದ ಇದು ವಿಶ್ವೇಶ್ವರಯ್ಯ ಸ್ಮಾರಕ ಉಪನ್ಯಾಸಗಳನ್ನು ವ್ಯವಸ್ಥೆ ಮಾಡುತ್ತಿದೆ. 1980 ರಿಂದ ಪ್ರತಿವರ್ಷವೂ 'ವಿಶ್ವೇಶ್ವರಯ್ಯ ಆರ್ಥಿಕ ಸಮ್ಮೇಳನ' ಗಳನ್ನು ನಡೆಸುತ್ತಿದೆ. ಸಂಸ್ಥೆಯು ಬಹುಮುಖ್ಯವಾದ ಆಹಾರ ಪದಾರ್ಥಗಳ ಚಿಲ್ಲರೆ ಬೆಲೆಗಳನ್ನು ಕುರಿತು ತ್ರೈಮಾಸಿಕ ವರದಿಗಳನ್ನು ಪ್ರಕಟಿಸುತ್ತಿದೆ. 'ಕೃಷಿ ವಾರ್ತೆ' ಎಂಬ ಕನ್ನಡ ಮಾಸ ಪತ್ರಿಕೆಯನ್ನೂ ಪ್ರಕಟಿಸುತ್ತಿದೆ.

ಪ್ರಾಚ್ಯಶಾಸ್ತ್ರ ಸಂಶೋಧನಾ ಸಂಸ್ಥೆ: 1881ರಲ್ಲಿ ಅಂದಿನ ಮೈಸೂರು ಮಹಾರಾಜರಾಗಿದ್ದ ಚಾಮರಾಜ ಒಡೆಯರ್ ಅವರು ಮೈಸೂರಿನಲ್ಲಿ ಪ್ರಾಚ್ಯ ಗ್ರಂಥ ಭಂಡಾರ ಅಥವಾ ಓರಿಯಂಟಲ್ ಲೈಬ್ರರಿಯನ್ನು ಸ್ಥಾಪಿಸಿದರು. ಅದರ ಉದ್ದೇಶ ಭಾರತೀಯ ಸಾಹಿತ್ಯ, ಕಲೆ, ಸಂಗೀತ, ತತ್ವಶಾಸ್ತ್ರಗಳನ್ನು ಕುರಿತ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳನ್ನು ಸಂಗ್ರಹಿಸಿ ಅವುಗಳನ್ನು ರಕ್ಷಿಸುವುದು. ರಾಜ್ಯದ ಎಲ್ಲ ಕಡೆಗಳಿಂದಲೂ ಇಂತಹ ಗ್ರಂಥಗಳನ್ನು ಸಂಗ್ರಹಿಸಲಾಯಿತು. ಈ ಗ್ರಂಥ ಭಂಡಾರವು ಶಿಕ್ಷಣ ಇಲಾಖೆಯ ಅಧೀನದಲ್ಲಿದ್ದ ಒಂದು ಪ್ರತ್ಯೇಕ ಸಂಸ್ಥೆಯಾಗಿತ್ತು. ಪ್ರಾಚೀನಶಾಸ್ತ್ರ ಶೋಧನ ಇಲಾಖೆಯು ಸಂಗ್ರಹಿಸಿದ ಗ್ರಂಥಗಳನ್ನೂ ಈ ಗ್ರಂಥ ಭಂಡಾರಕ್ಕೆ ಸೇರಿಸಲಾಯಿತು. ಆ ಇಲಾಖೆಯು ಈ ಗ್ರಂಥ ಭಂಡಾರವೂ ಒಂದೇ ಕಟ್ಟಡದಲ್ಲಿದ್ದುದು ಇದಕ್ಕೆ ಕಾರಣವಾಗಿತ್ತು. ಬಿಬ್ಲಿಯೋಥಿಕ ಸಂಸ್ಕೃತ ಮತ್ತು ಬಿಬ್ಲಿಯೋಥಿಕ ಕರ್ನಾಟಕ ಅಂದರೆ ಸಂಸ್ಕೃತದ ಮತ್ತು ಕನ್ನಡ ಗ್ರಂಥಗಳ ಪ್ರತ್ಯೇಕ ಮಾಲೆಗಳನ್ನು ಈ ಗ್ರಂಥ ಭಂಡಾರವು ಆರಂಭಿಸಿತು. 1916ರ ಹೊತ್ತಿಗೆ 50 ಸಂಸ್ಕೃತ ಗ್ರಂಥಗಳೂ ಮತ್ತು ಏಳು ಕನ್ನಡ ಗ್ರಂಥಗಳೂ ಪ್ರಕಟವಾದವು. 1909ರಲ್ಲಿ ಆರ್. ಶಾಮಾಶಾಸ್ತ್ರಿಗಳು ಕೌಟಿಲ್ಯನ ಅರ್ಥಶಾಸ್ತ್ರವನ್ನು ಪ್ರಕಟಿಸಿದರು. ಇಡೀ ಪ್ರಪಂಚದಲ್ಲಿ ಮೊತ್ತಮೊದಲಿಗೆ ಈ ಗ್ರಂಥವು ಪ್ರಕಟವಾಯಿತು. 1916ರಲ್ಲಿ ಮೈಸೂರು ವಿಶ್ವವಿದ್ಯಾಲಯವು ಸ್ಥಾಪಿತವಾದಾಗ ಈ ಗ್ರಂಥ ಭಂಡಾರವು ಅದರ ಅಧೀನಕ್ಕೆ ಬಂದಿತು. 1943ರಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ನೇಮಕವಾದ ಸಮಿತಿಯು ಈ ಗ್ರಂಥ ಭಂಡಾರದ ಹೆಸರನ್ನು ಪ್ರಾಚ್ಯಶಾಸ್ತ್ರ ಸಂಶೋಧನಾ ಸಂಸ್ಥೆ ಎಂದು ಬದಲಾಯಿಸಬೇಕೆಂದು ಸಲಹೆ ಮಾಡಿತು. ಅದರಂತೆ ಇದರ ಹೆಸರು ಬದಲಾವಣೆ ಹೊಂದಿತು. 1954ರಲ್ಲಿ ಸಂಸ್ಥೆಗೆ ಮೈಕ್ರೋಫಿಲ್ಮಿಂಗ್ ಸೌಲಭ್ಯವು ದೊರೆಯಿತು. ಇದರಿಂದ ಸುಮಾರು 2,000 ಹಸ್ತಪ್ರತಿಗಳನ್ನು ಮೈಕ್ರೋಫಿಲ್ಮ್ ಮಾಡಲಾಗಿದೆ. 1966ರಲ್ಲಿ ಕನ್ನಡ ಹಸ್ತಪ್ರತಿಗಳನ್ನು ಕನ್ನಡ ಅಧ್ಯಯನ ಸಂಸ್ಥೆಗೆ ಕೊಡಲಾಯಿತು. ಇಡೀ ಭಾರತದಲ್ಲಿ ಅತ್ಯಧಿಕ ಸಂಖ್ಯೆಯ ಸಂಸ್ಕೃತ ಹಸ್ತಪ್ರತಿಗಳನ್ನು ಹೊಂದಿರುವ ಸಂಸ್ಥೆಗಳಲ್ಲಿ ಇದು ಎರಡನೇಯದಾಗಿದೆ.

ಕರ್ನಾಟಕ ಇತಿಹಾಸ ಸಂಶೋಧನಾ ಸಂಸ್ಥೆ: 1916ರ ಸೆಪ್ಟೆಂಬರ್‌ನಲ್ಲಿ ಕರ್ನಾಟಕ ಇತಿಹಾಸ ಸಂಶೋಧನಾ ಸಂಸ್ಥೆಯು (ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿ) ಧಾರವಾಡದಲ್ಲಿ ಸ್ಥಾಪಿತವಾಯಿತು. ಇದರ ಹಿಂದಿನ ಹೆಸರು ಕರ್ನಾಟಕ ಇತಿಹಾಸ ಸಂಘ (ಕರ್ನಾಟಕ ಹಿಸ್ಟಾರಿಕಲ್ ಎಸೋಸಿಯೇಷನ್). ಇತಿಹಾಸದ ಶಾಸ್ತ್ರೀಯ ಅಧ್ಯಯನಕ್ಕೆ ಬೇಕಾದ ಪ್ರಮುಖ ವಸ್ತುಗಳ ದೀರ್ಘ ಅಧ್ಯಯನದಿಂದ ದೊರಕಿದ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ಅಂಶಗಳನ್ನು ನಿಯತಕಾಲಿಕಗಳ ಮೂಲಕ ಮತ್ತು ಉಪನ್ಯಾಸಗಳ ಮೂಲಕ ಜನರಿಗೆ ತಿಳಿಸಿ ಕರ್ನಾಟಕದ ಇತಿಹಾಸದ ಬಗೆಗೆ ಆಸಕ್ತಿಯನ್ನುಂಟುಮಾಡುವುದು ಈ ಸಂಸ್ಥೆಯ ಉದ್ದೇಶ. ಈ ಸಂಸ್ಥೆಯು ಅನೇಕ ಸಂಶೋಧನಾ ಲೇಖನ

ಗಳನ್ನು ಪ್ರಕಟಿಸಿದೆ. 'ಕರ್ನಾಟಕ ಹಿಸ್ಟಾರಿಕಲ್ ಕ್ವಾರ್ಟರ್ಲಿ' ಎಂಬ ಪತ್ರಿಕೆಗಳನ್ನು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಪ್ರಕಟಿಸಿದೆ. ಈ ಪತ್ರಿಕೆಯು ಭಾರತೀಯ ಮತ್ತು ವಿದೇಶೀಯ ಇತಿಹಾಸ ಪತ್ರಿಕೆಗಳ ಜೊತೆಗೆ ನಿಕಟಸಂಬಂಧವನ್ನು ಹೊಂದಿತ್ತು, ಮತ್ತು ವಿಚಾರ ವಿನಿಮಯ ಮಾಡಿಕೊಳ್ಳುತ್ತಿತ್ತು. ಈ ಸಂಸ್ಥೆಯು 1916, 1917, 1918, 1936, 1938ರಲ್ಲಿ ಇತಿಹಾಸ ಸಮ್ಮೇಳನವನ್ನು ನಡೆಸಿತು. ಅದು ಇತಿಹಾಸ, ಕಲೆ, ಧರ್ಮ, ಸಾಹಿತ್ಯ, ಶಾಸನ, ವ್ಯಾಸಂಗ ಮತ್ತು ಸಂಸ್ಕೃತಿಗಳನ್ನು ಕುರಿತ ಅನೇಕ ಗ್ರಂಥಗಳನ್ನು ಪ್ರಕಟಿಸಿದೆ.

ಗೋವಿಂದ ಪೈ ಸಂಶೋಧನಾ ಕೇಂದ್ರ : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರವು 1965ರಲ್ಲಿ ಉಡುಪಿಯ ಎಂ.ಜಿ.ಎಂ. ಕಾಲೇಜಿನಲ್ಲಿ ಸ್ಥಾಪಿತವಾಯಿತು. ಇದು ಪ್ರಸಿದ್ಧ ಸಂಶೋಧಕರಾಗಿದ್ದ ಡಾ|| ಎಂ. ಗೋವಿಂದ ಪೈಯವರ ಸ್ಮಾರಕವಾಗಿ ಆರಂಭವಾದ ಸಂಸ್ಥೆ. ಪ್ರಾದೇಶಿಕ ಇತಿಹಾಸ, ಸಂಸ್ಕೃತಿ, ಸಮಾಜ ಜೀವನ ಮುಂತಾದವುಗಳ ಬಗೆಗೆ ಸಂಶೋಧನೆ ನಡೆಸುವುದೂ, ಜಾನಪದ ಕಲೆ, ಹಾಡು ಮುಂತಾದವುಗಳನ್ನು ಕುರಿತು ಅಧ್ಯಯನ ಮಾಡುವುದೂ, ಕಲೆ, ಸಾಹಿತ್ಯ ಮುಂತಾದವುಗಳನ್ನು ಕುರಿತ ಪುಸ್ತಕಗಳನ್ನು ಪ್ರಕಟಿಸುವುದೂ ಈ ಸಂಸ್ಥೆಯ ಉದ್ದೇಶಗಳಾಗಿವೆ. ಇದು ಮೈಸೂರು ವಿಶ್ವವಿದ್ಯಾಲಯದ (ಈಗ ಮಂಗಳೂರು ವಿಶ್ವವಿದ್ಯಾಲಯದ) ಮಾನ್ಯತೆಯನ್ನು ಪಡೆದ ಸ್ನಾತಕೋತ್ತರ ಶಿಕ್ಷಣ ಸಂಸ್ಥೆಯಾಗಿದೆ. ಇದು ಕೊಂಕಣಿ ಮತ್ತು ತುಳು ನಿಘಂಟುಗಳನ್ನು ತಯಾರಿಸುವ ಯೋಜನೆಯನ್ನು ಕಾರ್ಯಗತ ಮಾಡುತ್ತಿದೆ. ಇದಕ್ಕೆ ರಾಜ್ಯದ ಅನುದಾನವು ದೊರೆಯುತ್ತಿದೆ. ಕೇಂದ್ರಕ್ಕೆ ಹೊಂದಿಕೊಂಡು ಒಂದು ಪುರಾತನ ವಸ್ತು ಸಂಗ್ರಹಾಲಯವಿದೆ.

ಕನ್ನಡ ಸಾಹಿತ್ಯ ಪರಿಷತ್ತು : ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನಾ ಶಾಖೆಯು 1974ರಲ್ಲಿ ಆರಂಭವಾಯಿತು. ಕನ್ನಡ ಸಾಹಿತ್ಯ ಮತ್ತು ಭಾಷೆಗಳಲ್ಲಿ ಸಂಶೋಧನೆ ನಡೆಸುವುದೂ, ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಪುರಾತನ ಅವಶೇಷಗಳನ್ನು ಸಂಗ್ರಹಿಸುವುದೂ, ಶಾಸನಗಳ ಅಧ್ಯಯನವನ್ನು ಮಾಡುವುದೂ ಈ ಶಾಖೆ ಅಥವಾ ವಿಭಾಗದ ಮುಖ್ಯ ಉದ್ದೇಶಗಳು. ಕಾವ್ಯ ಮತ್ತು ಲಲಿತಕಲೆಗಳ ಕನ್ನಡ, ತೆಲುಗು, ತಮಿಳು, ತಿಗಳಾರಿ ಲಿಪಿಗಳಲ್ಲಿರುವ ನೂರಾರು ಓಲೆಗರಿ ಪುಸ್ತಕಗಳನ್ನು ಈ ಶಾಖೆಯು ಸಂಗ್ರಹಿಸಿದೆ. ಜೊತೆಗೆ ಈ ಶಾಖೆಯು ಶಾಸನಶಾಸ್ತ್ರದ ತರಗತಿಯನ್ನೂ ನಡೆಸುತ್ತಿದೆ. ಇದಕ್ಕೆ ಸಂಬಂಧಿಸಿದಂತೆ ಒಂದು ಸಣ್ಣ ಪ್ರಮಾಣದ ವಸ್ತು ಸಂಗ್ರಹಾಲಯವೂ ಇದೆ.

ಮಿಥಿಕ್ ಸೊಸೈಟಿ : ಮಿಥಿಕ್ ಸೊಸೈಟಿಯು 1909ರಲ್ಲಿ ಸ್ಥಾಪಿತವಾಯಿತು. ಭಾರತೀಯ ಕಲೆ ಮತ್ತು ಶಾಸ್ತ್ರಗಳನ್ನು ಕುರಿತ ಅಧ್ಯಯನವನ್ನು ನಡೆಸಲು ಆರಂಭಿಸಿದ ಖಾಸಗೀ ಸಂಸ್ಥೆ ಇದು. ದಕ್ಷಿಣ ಭಾರತದಲ್ಲಿ ಆರಂಭವಾದ ಹಳೆಯ ಸಂಸ್ಥೆಗಳಲ್ಲಿ ಇದು ಒಂದು. ಇದನ್ನು ಪ್ರಾರಂಭಿಸಿದವನು ರೆವರೆಂಡ್ ತಾಬರ್ಡ್ ಎಂಬ ಫ್ರೆಂಚ್ ವಿದ್ವಾಂಸ. ರಾಷ್ಟ್ರದ, ಅದರಲ್ಲೂ ಕರ್ನಾಟಕದ ಮಾನವಶಾಸ್ತ್ರ, ಪುರಾತತ್ವಶಾಸ್ತ್ರ, ವಾಸ್ತುಶಿಲ್ಪ, ಕಲೆ, ಮಾನವಕುಲ ಶಾಸ್ತ್ರ, ಜಾನಪದ ಸಾಹಿತ್ಯ, ಇತಿಹಾಸ, ಪುರಾತತ್ವ ಶಾಸ್ತ್ರ, ಪುರಾಣತತ್ವ ಶಾಸ್ತ್ರ, ಧರ್ಮ ಮತ್ತು ಇವುಗಳಿಗೆ ಸಂಬಂಧಿಸಿದ ಇತರ ಶಾಸ್ತ್ರಗಳ ಅಧ್ಯಯನಕ್ಕೆ ಪ್ರೋತ್ಸಾಹ ನೀಡುವುದು ಈ ಸಂಸ್ಥೆಯ ಮುಖ್ಯ ಉದ್ದೇಶ. ಮಿಥಿಕ್ ಸೊಸೈಟಿಯು ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆಯಾದ 'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ'ಯು ಇಡೀ ಭಾರತದಲ್ಲಿನ ಹೆಸರಾಂತ ಪತ್ರಿಕೆಗಳಲ್ಲೊಂದು. ಅದರ ವಿದ್ವತ್ಪೂರ್ಣ ಸಂಶೋಧನ ಲೇಖನಗಳು ಪ್ರಸಿದ್ಧಿ ಪಡೆದಿವೆ. ಈ ಪತ್ರಿಕೆಗೆ ಅಂತರರಾಷ್ಟ್ರೀಯ ಮಾನ್ಯತೆ ಇದೆ. ಸೊಸೈಟಿಯ ಗ್ರಂಥಾಲಯದಲ್ಲಿ ಇತಿಹಾಸದ ಅಧ್ಯಯನಕ್ಕೆ ಆಧಾರಗಳಾಗಬಲ್ಲ ಅಮೂಲ್ಯವಾದ ಗ್ರಂಥಗಳಿವೆ. ಭೌತವಿಜ್ಞಾನಗಳು, ಸಮಾಜವಿಜ್ಞಾನ, ಧರ್ಮ, ತತ್ವಶಾಸ್ತ್ರ, ಲಲಿತಕಲೆ, ಸಾಹಿತ್ಯ, ಇತಿಹಾಸ, ಜನಪದ ಸಾಹಿತ್ಯ ಮತ್ತು ಮಾನವ ಶಾಸ್ತ್ರಗಳ ಅಧ್ಯಯನಕ್ಕೆ ಇದು ಸಹಾಯಕವಾಗಿದೆ. ದೇಶೀಯ ಮತ್ತು ವಿದೇಶೀಯ ಸಂಶೋಧನ ವಿದ್ವಾಂಸರು ಈ ಗ್ರಂಥಾಲಯದ ಉಪಯೋಗವನ್ನು ಪಡೆಯುತ್ತಿದ್ದಾರೆ. ಸೊಸೈಟಿಯು ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತದೆ. ಉಪನ್ಯಾಸಗಳನ್ನು ನಡೆಸುತ್ತದೆ. ಕರ್ನಾಟಕ ಇತಿಹಾಸದ ಬಗೆಗೆ ತರಗತಿಗಳನ್ನು ನಡೆಸಿ ಸರ್ಟಿಫಿಕೇಟುಗಳನ್ನು ಕೊಡುತ್ತಿದೆ. ಬೆಂಗಳೂರಿನಲ್ಲಿ ಭಾರತೀಯ ಶಾಸ್ತ್ರಗಳ ಅಧ್ಯಯನ ಮತ್ತು ಸಂಶೋಧನೆ ನಡೆಸಲು ಬೇಕಾದ ಎಲ್ಲ ಸೌಲಭ್ಯಗಳೂ ಈ ಸೊಸೈಟಿಯಲ್ಲಿವೆ. ಹೀಗೆ ಇದು ಬೆಂಗಳೂರಿನ ಒಂದು ಕ್ರಿಯಾಶೀಲ ಸಂಸ್ಥೆಯಾಗಿದೆ.

ಗೋಖಲೆ ಸಾರ್ವಜನಿಕ ಸಂಸ್ಥೆ : ಗೋಖಲೆ ಸಾರ್ವಜನಿಕ ಸಂಸ್ಥೆ ಅಥವಾ ಗೋಖಲೆ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಫೇರ್ಸ್ 1915ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಅದರ ಹಿಂದಿನ ಹೆಸರು, ಮೈಸೂರು ಸೋಷಿಯಲ್ ಸರ್ವೀಸ್ ಲೀಗ್. ಇದರ ಮುಖ್ಯ ಉದ್ದೇಶ ಸಾರ್ವಜನಿಕ ಜೀವನದ ಆಧ್ಯಾತ್ಮಿಕತೆ ಮತ್ತು ರಾಷ್ಟ್ರೀಯ ಮನೋಭಾವವನ್ನು ಉನ್ನತಗೊಳಿಸುವುದು. ಆರಂಭವಾದ ಮೊದಲ ವರ್ಷಗಳಲ್ಲಿ, ಈ ಸಂಸ್ಥೆಯು ರಾತ್ರಿ ಶಾಲೆಗಳನ್ನೂ ಹಗಲು ಶಾಲೆಗಳನ್ನೂ ನಡೆಸುತ್ತಿತ್ತು. ಮುಂದಿನ ಹತ್ತುವರ್ಷಗಳು ಅಂದರೆ 1920ರಿಂದ 1930ರವರೆಗೆ ಅದು ನಿಷ್ಕ್ರಿಯವಾಗಿತ್ತು. 1930ರಲ್ಲಿ ಡಿ. ವಿ. ಗುಂಡಪ್ಪನವರು ಅದನ್ನು ಪುನಶ್ಚೇತನಗೊಳಿಸಿದರು. 1945ರಲ್ಲಿ, ಸಂಸ್ಥೆಯ ಉದ್ದೇಶಗಳನ್ನು ಮತ್ತಷ್ಟು ಸ್ಪಷ್ಟಗೊಳಿಸಲಾಯಿತು. ಗೋಖಲೆ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್

ಎಫೇರ್ಸ್ ಎಂಬ ಹೆಸರಿನಲ್ಲಿ ಅದು ರಿಜಿಸ್ಟರ್ ಆಯಿತು. ಕ್ರಮ ಬದ್ಧವಾದ ವೈಜ್ಞಾನಿಕ ಅಧ್ಯಯನವನ್ನು ನಡೆಸಿ ಪ್ರಜಾ ರಾಜ್ಯದ ಒಬ್ಬ ಸಭ್ಯ ಪ್ರಜೆಗೆ ಬೇಕಾದ ನಿರಂಕುಶ ವಿಚಾರಶೀಲತೆ ಮತ್ತು ಪ್ರಜ್ಞೆಗಳನ್ನು ಬೆಳೆಸುವುದು ಈ ಸಂಸ್ಥೆಯ ಮುಖ್ಯ ಉದ್ದೇಶ ವಾಗಿದೆ.

ಬೇರೆ ಬೇರೆ ಗೋಷ್ಠಿಗಳಿಂದ ಜನಗಳ ಹಿತ ಮತ್ತು ಪ್ರಗತಿಗೆ ಸಂಬಂಧಿಸಿದ ಎಲ್ಲ ವಿಷಯಗಳ ರಾಜಕೀಯ ವಿಚಾರಗಳ ಅಧ್ಯಯನ ಮತ್ತು ಪರಿಶೀಲನೆ, ಯುವಕರು ಉತ್ತಮ ಪ್ರಜೆಗಳಾಗಿ ಬೆಳೆಯಲು ಮತ್ತು ಸಾರ್ವಜನಿಕ ಕಾರ್ಯಗಳಲ್ಲಿ ನಿರತರಾಗಲು ಬೇಕಾದ ಶಿಕ್ಷಣವನ್ನು ಪಡೆಯಲು ಅವಕಾಶವನ್ನು ಕಲ್ಪಿಸಲು ಅಧ್ಯಯನಕೂಟಗಳನ್ನೇರ್ಪಡಿಸುವುದು, ಸಂಸ್ಕೃತ ತರಗತಿಗಳನ್ನು ಏರ್ಪಡಿಸುವುದು, ಸಾರ್ವಜನಿಕ ಶಿಕ್ಷಣ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನೇರ್ಪಡಿಸುವುದು ಈ ಸಂಸ್ಥೆಯ ಕಾರ್ಯ ಕ್ರಮಗಳಾಗಿವೆ. ಈ ಕಾರ್ಯಕ್ರಮಗಳನ್ನು ಕಾರ್ಯಗತ ಮಾಡಲು ಶಿಕ್ಷಣ ಸಮಿತಿ, ಸಾರ್ವಜನಿಕ ಉಪಯುಕ್ತ ಸಾಧನಗಳ ಸಮಿತಿ, ಮುಂತಾದ ಸಮಿತಿಗಳನ್ನು ಸಂಸ್ಥೆಯು ರಚಿಸಿದೆ. ಸಂಶೋಧನೆಗೆ ಅನುಕೂಲವಾಗಿರುವ ಒಂದು ಉತ್ತಮ ಗ್ರಂಥಾಲ ಯವೂ ಇದೆ.

ಭಾರತೀಯ ಭಾಷಾ ಸಂಸ್ಥೆ: ಮೈಸೂರಿನಲ್ಲಿರುವ ಕೇಂದ್ರೀಯ ಭಾಷಾ ಸಂಸ್ಥೆಯು 1969ನೇ ಜುಲೈನಲ್ಲಿ ಭಾರತ ಸರ್ಕಾರದಿಂದ ಸ್ಥಾಪಿತವಾಯಿತು. ಭಾರತೀಯ ಭಾಷೆಗಳ ಅಭಿವೃದ್ಧಿಗೆ ಸಹಾಯ ಮಾಡುವುದು, ಭಾಷೆಗಳ ಶುದ್ಧ ಮತ್ತು ಅನ್ವಯಿತ ಸಂಶೋಧನೆಯನ್ನು ವೃದ್ಧಿಗೊಳಿಸುವುದು, ಮತ್ತು ಅಂಥ ಕಾರ್ಯಕ್ರಮಗಳನ್ನು ಸಮನ್ವಯಗೊಳಿಸುವುದು, ಭಾಷೆಗಳಿಗೆ ಸಂಬಂಧಿಸಿದ ವಿಷಯಗಳ ಬಗೆಗೆ ಶೋಧನೆ ನಡೆಸುವುದು, ವೈಜ್ಞಾನಿಕ ಅಧ್ಯಯನ ಮತ್ತು ಭಾರತೀಯ ಭಾಷೆಗಳಿಗಿರುವ ಅನ್ಯೋನ್ಯತೆಯನ್ನು ಕುರಿತು ಸಂಶೋಧನೆ ನಡೆಸಿ ಅವುಗಳಲ್ಲಿರುವ ಏಕತೆಯನ್ನು ಪುಷ್ಟಿಗೊಳಿಸುವುದು, ಆದಿವಾಸಿಗಳ ಮತ್ತು ದೇಶದ ಗಡಿ ಪ್ರದೇಶಗಳ ಭಾಷೆಗಳ ಅಧ್ಯಯನವನ್ನು ನಡೆಸುವುದು, ಬೋಧನ ಸಾಮಗ್ರಿಗಳನ್ನು ರೂಪಿಸುವುದು ಮುಂತಾದವು ಈ ಸಂಸ್ಥೆಯ ಗುರಿ ಮತ್ತು ಉದ್ದೇಶಗಳಾಗಿವೆ. ಈ ಸಂಸ್ಥೆಗೆ ಸೇರಿದಂತೆ ನಾಲ್ಕು ಪ್ರಾದೇಶಿಕ ಕೇಂದ್ರಗಳಿವೆ. ಇವು ಮೈಸೂರು, ಭುವನೇಶ್ವರ, ಪುಣೆ ಮತ್ತು ಪಾಟಿಯಾಲಗಳಲ್ಲಿವೆ. ಹಿಮಾಚಲ ಪ್ರದೇಶದ ಸೋಲನ್‌ನಲ್ಲಿ ಒಂದು ವಿಶೇಷ ಕೇಂದ್ರವಿದೆ. ಮೈಸೂರಿನಲ್ಲಿರುವ ಪ್ರಾದೇಶಿಕ ಭಾಷಾ ಕೇಂದ್ರವು 1980-81ರಲ್ಲಿ 59 ಶಿಕ್ಷಕರಿಗೆ ತರಬೇತಿಯನ್ನು ಕೊಟ್ಟಿತು. 1970-71 ರಿಂದ 1980-81 ರವರೆಗೆ ಕನ್ನಡ, ತೆಲುಗು, ತಮಿಳು ಮತ್ತು ಮಲೆಯಾಳಿ ಭಾಷೆಗಳ ಬೋಧನೆಗೆ ಬೇಕಾದ ತರಬೇತಿಯನ್ನು 894 ಶಿಕ್ಷಕರಿಗೆ ವ್ಯವಸ್ಥೆ ಮಾಡಿತು. ಸಂಸ್ಥೆಯು ಮೈಸೂರು ವಿಶ್ವವಿದ್ಯಾಲಯದ ಕೇಂದ್ರವಾದ ಮಾನಸ ಗಂಗೋತ್ರಿಯಲ್ಲಿದೆ.

ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ: ಕರ್ನಾಟಕದ ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ, ಮತ್ತು ಸಾಹಿತ್ಯ ಚಟುವಟಿಕೆಗಳ ಸ್ಫೂರ್ತಿಯ ಬುಗ್ಗೆಯಾದ ಈ ಸಂಸ್ಥೆಯು 1889ರಲ್ಲಿ ಸ್ಥಾಪಿತವಾಯಿತು. ಗ್ರಂಥಾಲಯವನ್ನು ಸ್ಥಾಪಿಸು ವುದು, ಕನ್ನಡ ಗ್ರಂಥಕರ್ತರಿಗೆ ಬಹುಮಾನಗಳನ್ನು ನೀಡಿ ಅವರನ್ನು ಪ್ರೋತ್ಸಾಹಿಸುವುದು ಮತ್ತು ಕನ್ನಡದ ಪದಗಳಲ್ಲಿ ಒಂದು ಏಕತೆಯನ್ನು ತರುವುದು ಈ ಸಂಸ್ಥೆಯ ಉದ್ದೇಶಗಳು. ಕನ್ನಡ ಪುಸ್ತಕಗಳಿಗೆ ಬರವಿದ್ದ ಕಾಲದಲ್ಲಿ, ಒಳ್ಳೆಯ ಗ್ರಂಥ ಕರ್ತರಿಗೆ ಬಹುಮಾನಗಳನ್ನು ನೀಡುವ ಮತ್ತು ಕೆಲವಾದರೂ ಗ್ರಂಥಗಳನ್ನು ಪ್ರಕಟಿಸುವ ಕಾರ್ಯವನ್ನು ಹೊತ್ತುಕೊಂಡಿತು. 1896ರಲ್ಲಿ 'ವಾಗ್ಭೂಷಣ' ವೆಂಬ ಒಂದು ಮಾಸಪತ್ರಿಕೆಯನ್ನು ಸಂಘವು ಪ್ರಾರಂಭಿಸಿತು. 1946ರಲ್ಲಿ ಇದು ನಿಂತುಹೋಯಿತು. 1907ರಲ್ಲಿ ಕನ್ನಡ ಬರಹಗಾರರ ಪ್ರಥಮ ಸಮ್ಮೇಳನವನ್ನು ಇದು ಏರ್ಪಡಿಸಿತು. ಕರ್ನಾಟಕ ಇತಿಹಾಸ ಸಂಶೋಧನೆ ಸಂಸ್ಥೆಯ ಸ್ಥಾಪನೆಗೆ ಇದೂ ಸ್ಫೂರ್ತಿ ಕೊಟ್ಟಿತು. ಸಂಘಕ್ಕೆ ಒಂದು ಗ್ರಂಥ ಭಂಡಾರವಿದೆ.

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್: ಇದು 1945ರಲ್ಲಿ ಬೆಂಗಳೂರಿನಲ್ಲಿ ಆರಂಭವಾಯಿತು. ಪುರುಷರು, ಸ್ತ್ರೀಯರು ಮತ್ತು ಮಕ್ಕಳು ತಮ್ಮ ಸ್ವಯಂ ಪ್ರಯತ್ನದಿಂದ ಆತ್ಮವಿಕಾಸ ಮಾಡಿಕೊಳ್ಳಲು ಬೇಕಾದ ಸೌಲಭ್ಯ ಗಳನ್ನೊದಗಿಸುವ ಸಾಂಸ್ಕೃತಿಕ, ನೈತಿಕ ಮತ್ತು ಅಧ್ಯಾತ್ಮಿಕ ಕೇಂದ್ರವನ್ನಾಗಿ ಮಾಡಬೇಕೆಂಬುದು ಇದರ ಸ್ಥಾಪಕರಾದ ಬಿ.ಪಿ. ವಾಡಿಯಾ ಮತ್ತು ಸೋಫಿಯಾ ವಾಡಿಯಾರವರ ಉದ್ದೇಶ ವಾಗಿತ್ತು. ಸಂಸ್ಥೆಯು ಒಂದು ಒಳ್ಳೆಯ ಗ್ರಂಥಾಲಯವನ್ನು ನಡೆಸುತ್ತಿದೆ. ಇದರಲ್ಲಿ ಸಾಧಾರಣ ಜನರಿಗೆ ಬೇಕಾದ ಪುಸ್ತಕ ವಿಭಾಗವೂ, ಮಕ್ಕಳ ಪುಸ್ತಕ ವಿಭಾಗವೂ, ಮಾಸಿಕ ಪತ್ರಿಕೆಗಳ ವಿಭಾಗವೂ ಇವೆ. ಸೂಚನಾ ಗ್ರಂಥಗಳ ವಿಭಾಗವೂ ಇದೆ. ಗ್ರಂಥಾಲಯದಲ್ಲಿ ಸುಮಾರು 30,000 ಪುಸ್ತಕಗಳಿವೆ. ಅದಕ್ಕೆ 400 ನಿಯತಕಾಲಿಕ ಪತ್ರಿಕೆಗಳು ಬರುತ್ತವೆ. ವಾರಕ್ಕೆರಡು ಅಥವಾ ಮೂರು ಸಾರ್ವಜನಿಕ ಸಭೆಗಳನ್ನು ನಡೆಸಲಾಗುತ್ತದೆ. ಸಂಸ್ಕೃತಿಯನ್ನು ಕುರಿತು ಉತ್ತಮ ಗ್ರಂಥಗಳನ್ನು ಸಂಸ್ಥೆಯು ಪ್ರಕಟಿಸುತ್ತದೆ.

### ಶಿಕ್ಷಣ ಸಂಘಗಳು

ಆರಂಭಕಾಲದಿಂದಲೂ ಖಾಸಗೀ ಸಂಸ್ಥೆಗಳು ಶಿಕ್ಷಣಕ್ಕೆ ತಕ್ಕ ಸಹಾಯವನ್ನು ಕೊಡುತ್ತಾ ಬಂದಿವೆ. ಶಿಕ್ಷಣದಲ್ಲಿ ಪ್ರಗತಿ ಯಾಗಲು ಇದು ಮುಖ್ಯ ಕಾರಣ. ಭಾರತದ ಇತರ ಪ್ರದೇಶಗಳಂತೆ

ಕ್ರೈಸ್ತ ಪಾದ್ರಿಗಳು ಕರ್ನಾಟಕದಲ್ಲಿ ಶಾಲೆಗಳನ್ನು ಸ್ಥಾಪಿಸಿದವರಲ್ಲಿ ಮೊದಲಿಗರು. ಹತ್ತೊಂಬತ್ತನೇಯ ಶತಮಾನದ ಪೂರ್ವಾರ್ಧದಲ್ಲಿ, ಲಂಡನ್ ಮಿಷನ್, ವೆಸ್ಲಿಯನ್ ಮಿಷನ್, ಬಾಸೆಲ್ ಮಿಷನ್, ಮಂಗಳೂರಿನ ಜೆಸುಯಿಟ್ ಮುಂತಾದ ಸಂಸ್ಥೆಗಳು ಶಾಲೆಗಳನ್ನು ಸ್ಥಾಪಿಸಿದವು. ಲಂಡನ್ ಮಿಷನ್ ಬೆಂಗಳೂರಿನಲ್ಲಿ 1824ರಲ್ಲಿ ಒಂದು ಕಾಲೇಜನ್ನು ಆರಂಭಿಸಲು ಪ್ರಯತ್ನಿಸಿತು. ಆದರೆ ಈ ಪ್ರಯತ್ನವು ವಿಫಲವಾಯಿತು.

1834ರಲ್ಲಿ ವೆಸ್ಲಿಯನ್ ಮಿಷನ್ ಸಂಸ್ಥೆಯು ಬೆಂಗಳೂರಿನಲ್ಲಿ ಒಂದು ಇಂಗ್ಲೀಷ್ ಶಾಲೆಯನ್ನು ಆರಂಭಿಸಿತು. 1877ರ ಹೊತ್ತಿಗೆ ವೆಸ್ಲಿಯನ್ ಮಿಷನ್ ಸಂಸ್ಥೆಯು 60ಕ್ಕಿಂತ ಹೆಚ್ಚು ಪ್ರಾಥಮಿಕ ಮತ್ತು ಮಾಧ್ಯಮಿಕ (ಮಿಡ್ಲ್) ಶಾಲೆಗಳನ್ನು ನಡೆಸುತ್ತಿತ್ತು. ಬಾಸಲ್ ಮಿರ್ಷ ಸಂಸ್ಥೆಯು 1836ರಲ್ಲಿ ಮಂಗಳೂರಿನಲ್ಲಿ ಮೊದಲನೇಯ ಶಾಲೆಯನ್ನು ಆರಂಭಿಸಿತು. 1853ರ ಹೊತ್ತಿಗೆ, ಈ ಸಂಸ್ಥೆಯು ಐವತ್ತು ಪ್ರಾಥಮಿಕ ಶಾಲೆಗಳನ್ನೂ ಮತ್ತು ಎಂಟು ಪ್ರೌಢಶಾಲೆಗಳನ್ನೂ ನಡೆಸುತ್ತಿತ್ತು. ಹೆಣ್ಣುಮಕ್ಕಳ ವಸತಿ ಶಾಲೆಗಳನ್ನು ಪ್ರಾರಂಭಿಸುವುದರ ಮೂಲಕ ಸ್ತ್ರೀ ಶಿಕ್ಷಣಕ್ಕೆ ಈ ಸಂಸ್ಥೆಯು ಪ್ರೋತ್ಸಾಹವನ್ನು ಕೊಟ್ಟಿತು. ಇತ್ತೀಚೆಗೆ ಧಾರವಾಡದಲ್ಲಿ ಈ ಸಂಸ್ಥೆಯು ಕಿಟಲ್ ಕಾಲೇಜನ್ನು ಆರಂಭಿಸಿದೆ. ಹಿಂದೆ ಅದು ಕೈಗಾರಿಕಾ ಶಾಲೆಗಳನ್ನು ಆರಂಭಿಸಿತ್ತು. ಹತ್ತೊಂಬತ್ತನೇಯ ಶತಮಾನದ ಉತ್ತರಾರ್ಧದಲ್ಲಿ ಜೆಸುಯಿಟ್ ಸೊಸೈಟಿಯು ಮಂಗಳೂರು ಮತ್ತು ಬೆಂಗಳೂರುಗಳಲ್ಲಿ ಕಾಲೇಜುಗಳನ್ನು ಆರಂಭಿಸಿತು. ಕ್ರೈಸ್ತ ಸನ್ಯಾಸಿನಿಯರ ಸಂಘಗಳು ಶಿಕ್ಷಣ ಪ್ರಸಾರವನ್ನು ಮಾಡಲು ಆರಂಭಿಸಿದವು. ಈ ಸಂಘಗಳಲ್ಲಿ ಕೆಲವು ದೇಶೀಯ, ಕೆಲವು ವಿದೇಶೀಯ ಸಂಘಗಳು. ಮಂಗಳೂರಿನ ಕಾರ್ಮೆಲೈಟ್ ಸಂಸ್ಥೆ, ಅಪೋಸ್ಟಾಲಿಕ್ ಕಾರ್ಮೆಲ್ ಹಾಗೂ ಬೆಥನಿ ಸನ್ಯಾಸಿನಿಯರು ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದ್ದೇ ಅಲ್ಲದೆ ಬೆಂಗಳೂರು, ಮೈಸೂರು ಮತ್ತು ಮಂಗಳೂರುಗಳಲ್ಲಿದ್ದ ತಮ್ಮ ಕಾಲೇಜುಗಳನ್ನು ದಕ್ಷತೆಯಿಂದ ನಡೆಸುತ್ತಿದ್ದುವು. ವಿಶೇಷವಾದ ಮಹಿಳೆಯರ ಕಾಲೇಜುಗಳನ್ನು ಈ ಸಂಸ್ಥೆಗಳು ನಡೆಸುತ್ತಿದ್ದವು.

ಅನೇಕ ಮತೀಯ ಮತ್ತು ಪ್ರಾದೇಶಿಕ ಸಂಸ್ಥೆಗಳು ಕರ್ನಾಟಕದಲ್ಲಿ ಶಿಕ್ಷಣ ಪ್ರಸಾರವನ್ನು ಮಾಡುತ್ತಿವೆ. ಅವುಗಳಲ್ಲಿ ಕೆಲವು ಸಂಸ್ಥೆಗಳ ಪರಿಚಯಮಾಡಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ದಿ ಅಕ್ಯಾಡೆಮಿ ಆಫ್ ಜನರಲ್ ಎಜುಕೇಷನ್ ಸಂಸ್ಥೆಯನ್ನು ಮಣಿಪಾಲ ಮತ್ತು ಉಡುಪಿಗಳ ಕೆಲವು ಪ್ರಮುಖರ ಸಹಾಯದಿಂದ ಡಾ॥ ಟಿ. ಎಂ. ಎ. ಪೈಯವರು 1942ರಲ್ಲಿ ಸ್ಥಾಪಿಸಿದರು. ವಿವಿಧ ರೀತಿಯ ಮತ್ತು ಬಹುಬಗೆಯ ತಾಂತ್ರಿಕ ವಾಣಿಜ್ಯ ಶಿಕ್ಷಣ ಕೊಡುವುದು ಈ ಸಂಸ್ಥೆಯ ಉದ್ದೇಶವಾಗಿತ್ತು. ಆರಂಭದಲ್ಲಿ ಅಕ್ಯಾಡೆಮಿಯು ಕಾನೂನು ಮತ್ತು ಬ್ಯಾಂಕಿಂಗ್, ಇನ್ಶೂರೆನ್ಸ್, ರೋಗಿಗಳ ಉಪಚಾರ ಮುಂತಾದ ವೃತ್ತಿಶಿಕ್ಷಣವನ್ನು ಸಾರ್ವಜನಿಕ ಪರೀಕ್ಷೆಗಳಲ್ಲಿ ಅಷ್ಟೇನೂ ಚೆನ್ನಾಗಿ ಅಂಕಗಳನ್ನು ಪಡೆಯದ ವಿದ್ಯಾರ್ಥಿಗಳಿಗೆ ನೀಡುತ್ತಿತ್ತು. ಮುಂದಿನ ಹೆಜ್ಜೆಯೆಂದರೆ, ಗ್ರಾಮಾಂತರ ನಿವಾಸಿಗಳಿಗೆ ಉನ್ನತ ಶಿಕ್ಷಣ ಸೌಲಭ್ಯವನ್ನು ಕಲ್ಪಿಸುವ ದೃಷ್ಟಿಯಿಂದ ಶಾಲೆ ಮತ್ತು ಕಾಲೇಜುಗಳನ್ನು ಅಂತಹ ಸ್ಥಳಗಳಲ್ಲಿ ಸ್ಥಾಪಿಸಿದ್ದು. 1949ರಲ್ಲಿ ಅಕ್ಯಾಡೆಮಿಯು ಉಡುಪಿಯಲ್ಲಿ ಮಹಾತ್ಮಾಗಾಂಧಿ ಸ್ಮಾರಕ ಕಾಲೇಜನ್ನು, 1958ರಲ್ಲಿ ಮಣಿಪಾಲದಲ್ಲಿ ಕಸ್ತೂರಿ ಬಾ ಮೆಡಿಕಲ್ ಕಾಲೇಜನ್ನು ಆರಂಭಿಸಿತು. 1957ರಲ್ಲಿ ಇಂಜಿನಿಯರಿಂಗ್ ಕಾಲೇಜನ್ನು ಸ್ಥಾಪಿಸಿತು. 1980ರ ಹೊತ್ತಿಗೆ, ಅಕ್ಯಾಡೆಮಿಯು 34 ಸಂಸ್ಥೆಗಳನ್ನು ನಡೆಸುತ್ತಿತ್ತು. ಅವುಗಳಲ್ಲಿ ಆರು ಕಲೆ ಮತ್ತು ವಿಜ್ಞಾನ ಕಾಲೇಜುಗಳು, ಏಳು ವೃತ್ತಿಶಿಕ್ಷಣ ಕಾಲೇಜುಗಳು ಮತ್ತು ಎರಡು ಲಲಿತ ಮತ್ತು ಕುಶಲ ಕಲೆಗಳ ಸಂಸ್ಥೆಗಳು.

ಮಲ್ಲಾಡಿಹಳ್ಳಿಯ ಅನಾಥ ಸೇವಾಶ್ರಮವು ಶ್ರೀ ರಾಘವೇಂದ್ರಸ್ವಾಮೀಜಿಯವರಿಂದ 1943ರಲ್ಲಿ ಆರಂಭವಾಯಿತು. ಅನಾಥ ಸೇವಾಶ್ರಮ ವಿಶ್ವಸ್ಥ ಮಂಡಲಿಯು ಅನೇಕ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದೆ. ಈ ಅನಾಥ ಸೇವಾಶ್ರಮವು ಒಂದು ಕಿರಿಯ ಕಾಲೇಜು, ಒಂದು ಮುದ್ರಣಾಲಯ, ಒಂದು ಶಿಕ್ಷಕರ ತರಬೇತಿ ಸಂಸ್ಥೆ, ಒಂದು ದೈಹಿಕ ಶಿಕ್ಷಣ ಕಾಲೇಜು, ಒಂದು ಆಯುರ್ವೇದ ಆಸ್ಪತ್ರೆ, ಒಂದು ಅನಾಥಾಲಯ, ಒಂದು ವಿದ್ಯಾರ್ಥಿನಿಲಯ ಮತ್ತು ಕೆಲವು ಪ್ರೌಢಶಾಲೆಗಳು ಮುಂತಾದವನ್ನು ನಡೆಸುತ್ತಿದೆ. ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದಿರುವ ಒಂದು ಯೋಗ ಕೇಂದ್ರವನ್ನು ಈ ಸಂಸ್ಥೆಯು ನಡೆಸುತ್ತಿದೆ.

ವಿಜಾಪುರದ ಅಂಜುಮಾನ್-ಏ-ಇಸ್ಲಾಂ ಸಂಸ್ಥೆಯು 1932ರಲ್ಲಿ ಸ್ಥಾಪಿತವಾಯಿತು. ಮುಸಲ್ಮಾನ ಧಾರ್ಮಿಕ ಮತ್ತು ಸಾಮಾಜಿಕ ಉನ್ನತಿಗಾಗಿ ಕೆಲಸಮಾಡುವುದು ಈ ಸಂಸ್ಥೆಯ ಉದ್ದೇಶವಾಗಿದೆ. ಈ ಸಂಸ್ಥೆಯು ಒಂದು ಕಲೆ, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜನ್ನೂ ಒಂದು ಸಂಯುಕ್ತ ಕಿರಿಯ ಕಾಲೇಜನ್ನೂ, ಕೆಲವು ಹೆಣ್ಣುಮಕ್ಕಳ ಮತ್ತು ಕೆಲವು ಗಂಡುಮಕ್ಕಳ ಪ್ರೌಢಶಾಲೆಗಳನ್ನೂ ಆರು ಅರಬ್ಬಿ ಶಾಲೆಗಳನ್ನೂ, ಒಂದು ಪ್ರಾಚೀನ ಭಾಷೆಗಳ ಮತ್ತು ಇಸ್ಲಾಂ ಸಾಂಸ್ಕೃತಿಕ ಸಂಶೋಧನಾ ಸಂಸ್ಥೆಯನ್ನೂ, ಒಂದು ಉಚಿತ ವಿದ್ಯಾರ್ಥಿನಿಲಯವನ್ನೂ 1980ರಲ್ಲಿ ನಡೆಸುತ್ತಿತ್ತು.

ಬಾಪೂಜಿ ಎಜುಕೇಷನಲ್ ಅಸೋಸಿಯೇಷನ್ 1958ರಲ್ಲಿ ದಾವಣಗೆರೆಯಲ್ಲಿ ಆರಂಭವಾಯಿತು. ಅದರ ಉದ್ದೇಶ

ಶಿಕ್ಷಣ ಪ್ರಸಾರ. ಚುನಾಯಿತ ಸದಸ್ಯರನ್ನುಳ್ಳ ಒಂದು ಸಮಿತಿಯು ಸಂಸ್ಥೆಯ ಆಡಳಿತವನ್ನು ನಡೆಸುತ್ತಿದೆ. 1981ರಲ್ಲಿ ಸಂಸ್ಥೆಯು, ಒಂದು ಶಿಕ್ಷಣ ಕಾಲೇಜನ್ನೂ ಒಂದು ದಂತ ವಿಜ್ಞಾನ ಕಾಲೇಜನ್ನೂ, ಎರಡು ಕಲೆ-ವಿಜ್ಞಾನ-ವಾಣಿಜ್ಯ ಕಾಲೇಜುಗಳನ್ನೂ, ಒಂದು ಮಹಿಳೆಯರ ಕಾಲೇಜನ್ನೂ, ಒಂದು ಕಾನೂನು ಕಾಲೇಜನ್ನೂ ಒಂದು ದಾದಿಯರ ತರಬೇತಿ ಶಾಲೆಯನ್ನೂ ಒಂದು ಔಷಧವಸ್ತುಶಾಸ್ತ್ರದ (ಫಾರ್ಮಸಿ) ಶಾಲೆಯನ್ನೂ ಒಂದು ವೈದ್ಯಕೀಯ ಕಾಲೇಜನ್ನೂ, ಒಂದು ಇಂಜಿನಿಯರಿಂಗ್ ಕಾಲೇಜನ್ನೂ ನಡೆಸುತ್ತಿದ್ದುದಷ್ಟೇ ಅಲ್ಲದೆ ಇನ್ನೂ ಹಲವು ಸಂಸ್ಥೆಗಳನ್ನು ನಡೆಸುತ್ತಿತ್ತು.

ಬನುಮಯ್ಯ ಎಜುಕೇಷನ್ ಟ್ರಸ್ಟ್ 1919ರಲ್ಲಿ ಮೈಸೂರಿನಲ್ಲಿ ಸ್ಥಾಪಿತವಾಯಿತು. ಇದರ ಉದ್ದೇಶ ಅಂದಿನ ಮೈಸೂರು ಸಂಸ್ಥಾನದಲ್ಲಿನ ಹಿಂದುಳಿದ ವರ್ಗಗಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವುದು. 1982-83ರಲ್ಲಿ ವಿಶ್ವಸ್ಥ ಸಂಸ್ಥೆಯು ಒಂದು ಶಿಶುವಿಹಾರವನ್ನೂ, ಒಂದು ಪ್ರಾಥಮಿಕ ಶಾಲೆಯನ್ನೂ, ಒಂದು ಬಾಲಕಿಯರ ಪ್ರೌಢಶಾಲೆಯನ್ನೂ, ಒಂದು ಬಾಲಕರ ಪ್ರೌಢಶಾಲೆಯನ್ನೂ, ಒಂದು ಕಲೆ—ವಾಣಿಜ್ಯ ಕಾಲೇಜನ್ನೂ, ಮತ್ತು ಒಂದು ಸಂಜೆ ಕಾಲೇಜನ್ನೂ ನಡೆಸುತ್ತಿತ್ತು. ಈ ಎಲ್ಲ ಸಂಸ್ಥೆಗಳೂ ಮೈಸೂರಿನಲ್ಲಿಯೇ ಇವೆ.

ಬಸವೇಶ್ವರ ವಿದ್ಯಾವರ್ಧಕ ಸಂಘವು 1906ರಲ್ಲಿ ಬಾಗಲಕೋಟೆಯಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಉದ್ದೇಶ ಆ ಪ್ರದೇಶದ ವಿದ್ಯಾರ್ಥಿಗಳಿಗೆ ಕಾಲೇಜು ಶಿಕ್ಷಣ, ತಾಂತ್ರಿಕ ಶಿಕ್ಷಣ ಮತ್ತು ಕೃಷಿ ಶಿಕ್ಷಣಗಳ ಸೌಲಭ್ಯಗಳನ್ನೊದಗಿಸುವುದು. ಸಂಘವು ಮುಧೋಳದ ಕಿಂಗ್ ಜಾರ್ಜ್ ಪ್ರೌಢಶಾಲೆ ಮತ್ತು ರಾಮದುರ್ಗದ ಸರ್ಕಾರಿ ಪ್ರೌಢಶಾಲೆಗಳ ಆಡಳಿತವನ್ನು ವಹಿಸಿಕೊಂಡಿತು. ಸಂಘವು ಒಂದು ಇಂಜಿನಿಯರಿಂಗ್ ಕಾಲೇಜು, ನಾಲ್ಕು ಕಲೆ-ವಿಜ್ಞಾನ-ವಾಣಿಜ್ಯ ಕಾಲೇಜುಗಳು, ಒಂದು ಶಿಕ್ಷಕರ ತರಬೇತಿ ಸಂಸ್ಥೆ, ಮೂರು ಕಿರಿಯ ಕಾಲೇಜುಗಳು, ನಾಲ್ಕು ಪ್ರೌಢಶಾಲೆಗಳು (ಅವುಗಳಲ್ಲಿ ಮೂರು ಹೆಣ್ಣುಮಕ್ಕಳ ಶಾಲೆಗಳು), ಒಂದು ತಾಂತ್ರಿಕ ಶಿಕ್ಷಣ ಶಾಲೆ, ಒಂದು ಔಷಧ ವಿಜ್ಞಾನಶಾಲೆ, ಒಂದು ದೈಹಿಕ ಶಿಕ್ಷಣ ಕಾಲೇಜು, ಒಂದು ಮುದ್ರಣಾಲಯ, ಒಂದು ಸಂಸ್ಕೃತ ಪಾಠಶಾಲೆ, ಒಂದು ವಿದ್ಯಾರ್ಥಿನಿಲಯ ಇಷ್ಟನ್ನೂ ನಡೆಸುತ್ತಿದೆ. ಜೊತೆಗೆ ವೈದ್ಯಕೀಯ ಪ್ರಯೋಗ ಶಾಲಾ ತಂತ್ರ (ಮೆಡಿಕಲ್ ಲ್ಯಾಬೊರೆಟರಿ ಟೆಕ್ನಾಲಜಿ) ಶಿಕ್ಷಣದ ಒಂದು ಕೋರ್ಸನ್ನು ಸಂಘವು ನಡೆಸುತ್ತಿದೆ.

ದೇಶೀಯ ವಿದ್ಯಾಶಾಲೆಯು 1948ರಲ್ಲಿ ಶಿವಮೊಗ್ಗೆಯಲ್ಲಿ ಆರಂಭವಾಯಿತು. ಇದರ ಉದ್ದೇಶ ಶಿಕ್ಷಣಾಭಿವೃದ್ಧಿ. ಈ ವರದಿಯನ್ನು ಬರೆಯುವ ಸಮಯದಲ್ಲಿ ಅದು ಒಂದು ಪ್ರಾಥಮಿಕ ಶಾಲೆಯನ್ನೂ, ಒಂದು ಮಾಧ್ಯಮಿಕ ಶಾಲೆಯನ್ನೂ, ಒಂದು ಪ್ರೌಢಶಾಲೆಯನ್ನೂ, ಒಂದು ಕಿರಿಯ ಕಾಲೇಜನ್ನೂ, ಒಂದು ಪ್ರಥಮ ದರ್ಜೆಯ ಕಾಲೇಜನ್ನೂ ನಡೆಸುತ್ತಿತ್ತು. ಜೊತೆಗೆ ಇದು ಕೆಲವು ಗೃಹ ಕೈಗಾರಿಕಾ ಘಟಕಗಳನ್ನೂ ನಡೆಸುತ್ತಿದೆ.

ವಿಜಾಪುರ ಡಿಸ್ಟ್ರಿಕ್ಟ್ ಲಿಂಗಾಯತ್ ಎಸೋಸಿಯೇಷನ್ 1910ರಲ್ಲಿ ಅಸ್ತಿತ್ವಕ್ಕೆ ಬಂತು. ಇದರ ಉದ್ದೇಶ ಜಿಲ್ಲೆಯಲ್ಲಿ ಶಿಕ್ಷಣವನ್ನು ಪ್ರಸಾರ ಮಾಡುವುದು. ಜಿಲ್ಲೆಯ ಎಲ್ಲ ಭಾಗಗಳಲ್ಲಿಯೂ ಈ ಸಂಘದ ಶಿಕ್ಷಣ ಸಂಸ್ಥೆಗಳಿವೆ. 1982ರಲ್ಲಿ, ಈ ಸಂಘವು ಐದು ಕಲೆ-ವಿಜ್ಞಾನ-ವಾಣಿಜ್ಯ ಕಾಲೇಜುಗಳನ್ನೂ, ಒಂದು ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ ಕಾಲೇಜನ್ನೂ ಒಂದು ಶಿಕ್ಷಣ ಕಾಲೇಜನ್ನೂ, ಒಂದು ಡಿ-ಫಾರ್ಮ ಶಾಲೆಯನ್ನೂ, ಒಂದು ವಾಣಿಜ್ಯ ಆಡಳಿತ ಶಾಲೆಯನ್ನೂ, ಎಂಟು ಕಿರಿಯ ಕಾಲೇಜುಗಳನ್ನೂ, ಹನ್ನೊಂದು ಪ್ರೌಢಶಾಲೆಗಳನ್ನೂ ವಿಜಾಪುರ ಜಿಲ್ಲೆಯಲ್ಲಿ ನಡೆಸುತ್ತಿದೆ.

ಹೈದರಾಬಾದ್ ಕರ್ನಾಟಕ ಎಜುಕೇಷನ್ ಸೊಸೈಟಿಯು 9158ರಲ್ಲಿ ಕಲ್ಬುರ್ಗಿಯಲ್ಲಿ ಆರಂಭವಾಯಿತು. ಹಿಂದುಳಿದ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಉನ್ನತ ಶಿಕ್ಷಣದ ಸೌಲಭ್ಯಗಳನ್ನೊದಗಿಸುವುದು ಈ ಸಂಸ್ಥೆಯ ಉದ್ದೇಶ. ಈ ಸಂಘವು ಒಂದು ಇಂಜಿನಿಯರಿಂಗ್ ಕಾಲೇಜನ್ನು, ಒಂದು ವೈದ್ಯಕೀಯ ಕಾಲೇಜನ್ನು, ಒಂದು ಕಾನೂನು ಕಾಲೇಜನ್ನು, ಒಂದು ಮಹಿಳೆಯರ ಕಲೆ ವಿಜ್ಞಾನ ಕಾಲೇಜನ್ನು, ಕಲ್ಬುರ್ಗಿಯಲ್ಲಿಯೂ, ಒಂದು ಕಲೆ-ವಿಜ್ಞಾನ ಕಾಲೇಜನ್ನು ಬಿದರೆಯಲ್ಲಿಯೂ, ಒಂದು ಕಾಲೇಜನ್ನು ಬೆಂಗಳೂರಿನಲ್ಲಿಯೂ ನಡೆಸುತ್ತಿದೆ. ದಿ॥ ಮಹಾದೇವಪ್ಪ ರಾಂಪುರೆಯವರು ಈ ಸಂಘದ ಚೈತನ್ಯ ಸ್ವರೂಪಿಯಾಗಿದ್ದರು.

ಇನ್‌ಸ್ಟಿಟ್ಯೂಟ್ ಆಫ್ ಸೋಷಿಯಲ್ ಸರ್ವೀಸ್ ಮಂಗಳೂರಿನಲ್ಲಿ 1960ರಲ್ಲಿ ಸ್ಥಾಪಿತವಾಯಿತು. ತರಬೇತಿ ಹೊಂದಿದ ಸಮಾಜ ಸೇವಾಕಾರ್ಯಕರ್ತರ ತಂಡವೊಂದನ್ನು ಕಟ್ಟುವುದು, ಜನರಿಗೆ ಸರಿಹೊಂದುವ ಸಾರ್ವಜನಿಕ ಹಿತ ಯೋಜನೆಗಳನ್ನು ರೂಪಿಸುವುದು ಮತ್ತು ವಿಶೇಷ ಶಿಕ್ಷಣದ ಮೂಲಕ ಕುಟುಂಬ ಜೀವನವನ್ನು ಭದ್ರಪಡಿಸುವುದು ಈ ಸಂಸ್ಥೆಯ ಉದ್ದೇಶಗಳು. ರೋಷಿನಿ ನಿಲಯವೆಂಬ ಒಂದು ಸಾರ್ವಜನಿಕ ಕಾರ್ಯ ತರಬೇತಿ ಶಾಲೆಯನ್ನು ಈ ಸಂಸ್ಥೆಯು 1960ರಲ್ಲಿ ಆರಂಭಿಸಿತು. 1961ರವರೆಗೆ ಅದು ಡಿಪ್ಲೋಮಾ ತರಗತಿಗಳನ್ನು ನಡೆಸುತ್ತಿತ್ತು. ಆ ವರ್ಷ ಈ ಡಿಪ್ಲೋಮಾ ತರಗತಿಗೆ ಬದಲಾಗಿ ಎರಡು ವರ್ಷದ ಸ್ನಾತಕೋತ್ತರ ಪದವಿ ತರಗತಿಯನ್ನು ಮತ್ತು ಸ್ನಾತಕ ಪರೀಕ್ಷೆಗೆ ತರಬೇತಿ ಕೊಡುವ

ಇನ್ನೊಂದು ಕೋರ್ಸನ್ನು ಆರಂಭಿಸಲಾಯಿತು. ಇವೆರಡು ಕೋರ್ಸ್‌ಗಳ ವಿಷಯು ಸಾರ್ವಜನಿಕ ಕಾರ್ಯವೇ ಆಗಿತ್ತು. 1966ರಲ್ಲಿ ಒಂದು ಕುಟುಂಬ ಸಲಹಾ ಸಂಸ್ಥೆಯನ್ನು ಆರಂಭಿಸಲಾಯಿತು. ಅಗತ್ಯ ಬಿದ್ದಾಗ, ಕುಟುಂಬಗಳಿಗೆ ಸೂಕ್ತ ಸಲಹೆಗಳನ್ನು ಈ ಸಂಸ್ಥೆಯು ನೀಡುತ್ತಿದೆ. 1968ರಲ್ಲಿ ಅಂಧರಿಗೆ ಒಂದು ಶಾಲೆಯನ್ನು ತೆರೆಯಲಾಯಿತು.

ಜಗದ್ಗುರು ರೇಣುಕಾಚಾರ್ಯ ಎಜುಕೇಷನ್ ಸೊಸೈಟಿಯು ಬೆಂಗಳೂರಿನಲ್ಲಿ 1945ರಲ್ಲಿ ಸ್ಥಾಪಿತವಾಯಿತು. ಆಗ ಇದಕ್ಕಿದ್ದ ಹೆಸರು ವೀರಶೈವ ಎಜುಕೇಷನ್ ಸೊಸೈಟಿ ಅಥವಾ ವೀರಶೈವ ಶಿಕ್ಷಣ ಸಂಘ. ಇದರ ಕಾರ್ಯಕಾರೀ ಸಮಿತಿಯಲ್ಲಿ ನಾಮಕರಣ ಮಾಡಲ್ಪಟ್ಟ ಸದಸ್ಯರೂ, ಚುನಾಯಿತ ಸದಸ್ಯರೂ ಇದ್ದಾರೆ. ಈ ಕಾರ್ಯಕಾರಿ ಸಮಿತಿಯು ಸಂಸ್ಥೆಯ ಆಡಳಿತವನ್ನು ನಡೆಸುತ್ತದೆ. ಸಂಘವು, ಒಂದು ಕಲೆ-ವಿಜ್ಞಾನ ಕಾಲೇಜನ್ನೂ, ಒಂದು ಕಾನೂನು ಕಾಲೇಜನ್ನೂ, ಒಂದು ಔಷಧ ವಿಜ್ಞಾನ ಶಾಲೆಯನ್ನೂ, ಒಂದು ಸಂಜೆ ವಾಣಿಜ್ಯ ಕಾಲೇಜನ್ನೂ, ಕಾನೂನು ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಒಂದು ವಿದ್ಯಾರ್ಥಿನಿಲಯವನ್ನೂ ನಡೆಸುತ್ತಿದೆ. ರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿನ, ಮೈಸೂರು ವಿಶ್ವವಿದ್ಯಾಲಯದ ಒಂದು ಅಂಗೀಕೃತ ಮೊತ್ತಮೊದಲನೆಯ ಖಾಸಗೀ ಕಾಲೇಜು ಈ ಸಂಸ್ಥೆಯಿಂದ ಸ್ಥಾಪಿಸಲ್ಪಟ್ಟಿತು.

ಧಾರವಾಡದ ಜನತಾ ಶಿಕ್ಷಣ ಸಮಿತಿಯು 1957ರಲ್ಲಿ ಒಂದು ರಿಜಿಸ್ಟರ್ಡ್ ಸಂಘವಾಗಿ ಆರಂಭವಾಯಿತು. ಇದು ಕರ್ನಾಟಕ ಎಜುಕೇಷನ್ ಬೋರ್ಡ್‌ನ ಸೋದರ ಸಂಸ್ಥೆ. ಈ ಸಂಘವು 11 ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿತ್ತು. ಕಲೆ ಮತ್ತು ವಿಜ್ಞಾನದ ಕಾಲೇಜುಗಳನ್ನೂ, ಒಂದು ಇಂಜಿನಿಯರಿಂಗ್ ಶಿಕ್ಷಣ ಸಂಸ್ಥೆಯನ್ನೂ, ಒಂದು ಕಾನೂನು ಕಾಲೇಜನ್ನೂ, ಒಂದು ಆರ್ಥಿಕ ಸಂಶೋಧನಾ ಸಂಸ್ಥೆಯನ್ನೂ, ಕಲೆ ಮತ್ತು ಕುಶಲ ಕಲೆಗಳ ಔದ್ಯೋಗಿಕ ಶಿಕ್ಷಣ ಸಂಸ್ಥೆಯೊಂದನ್ನೂ, ಕರಕುಶಲ ವಸ್ತುಗಳ ಉತ್ಪಾದನ ಕೇಂದ್ರವೊಂದನ್ನೂ, ಒಂದು ಮುದ್ರಣಾಲಯವನ್ನೂ, ಒಂದು ಗ್ರಾಮೋದ್ಯೋಗ ಕೇಂದ್ರವನ್ನೂ, ಕಾರ್ಯನಿರತರಾದ ಸ್ತ್ರೀಯರಿಗಾಗಿ ಒಂದು ವಸತಿ ನಿಲಯವನ್ನೂ ಈ ಸಂಘ ನಡೆಸುತ್ತಿದೆ.

ಕರ್ನಾಟಕ ಶಿಕ್ಷಣ ಮಂಡಲಿ ಅಥವಾ ಕರ್ನಾಟಕ ಎಜುಕೇಷನ್ ಬೋರ್ಡ್ ಧಾರವಾಡದಲ್ಲಿ 1919ರಲ್ಲಿ ಸ್ಥಾಪಿತವಾಯಿತು. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳನ್ನು ಸೂಕ್ತ ರೀತಿಯಲ್ಲಿ ನಡೆಸಿ ಶಿಕ್ಷಣ ಸೌಲಭ್ಯಗಳನ್ನು ಕಲ್ಪಿಸುವುದು ಮಂಡಲಿಯ ಉದ್ದೇಶಗಳಲ್ಲೊಂದು. ಸ್ಥಳೀಯ ಅವಶ್ಯಕತೆಗಳಿಗೆ ತಕ್ಕಂತೆ ಬೋಧನ ಕ್ರಮಗಳನ್ನು ಅಳವಡಿಸಿಕೊಳ್ಳುವುದು ಅದರ ಇನ್ನೊಂದು ಉದ್ದೇಶ. ಇದು 1919ರಲ್ಲಿ ತನ್ನ ಮೊದಲನೇಯ ಪ್ರೌಢಶಾಲೆಯನ್ನು ಆರಂಭಿಸಿತು. ಅದೇ ಕರ್ನಾಟಕ ಹೈಸ್ಕೂಲು. ಅದೇ ವರ್ಷ ಅದು ಒಂದು ಕಾಲೇಜನ್ನೂ ಪ್ರಾರಂಭಿಸಿತು. ಸ್ವಲ್ಪ ಕಾಲದ ನಂತರ ಅದನ್ನು ಮುಚ್ಚಲಾಯಿತು. ಈ ಸಂಸ್ಥೆಗೆ ಸೇರಿದಂತೆ, ಎರಡು ಉನ್ನತ ಪ್ರೌಢಶಾಲೆಗಳೂ (ಕಿರಿಯ ಕಾಲೇಜುಗಳು), ನಾಲ್ಕು ಪ್ರೌಢಶಾಲೆಗಳೂ (ಇದರಲ್ಲಿ ಒಂದು ಹೆಣ್ಣುಮಕ್ಕಳ ಶಾಲೆ), ಒಂದು ಗೃಹ ಕೈಗಾರಿಕಾ ಮಹಿಳಾ ತರಬೇತಿ ಕೇಂದ್ರವೂ ಇವೆ. ಇಲೆಕ್ಟ್ರಿಕ್ ಸರ್ವಿಸಿಂಗ್, ಮುದ್ರಣ ಮತ್ತು ಪುಸ್ತಕ ಬೈಂಡಿಂಗ್, ಹೈನುಗಾರಿಕೆ, ಕೀಟನಾಶಕ, ಕಳೆನಾಶಕ ಮತ್ತು ರಸಗೊಬ್ಬರ ವಿಜ್ಞಾನ ಮುಂತಾದ ಔದ್ಯೋಗಿಕ ತರಗತಿಗಳು ಕಿರಿಯ ಕಾಲೇಜಿನಲ್ಲಿದೆ.

ಕರ್ನಾಟಕ ಜೆಸುಯಿಟ್ ಎಜುಕೇಷನ್ ಸೊಸೈಟಿಯು 1878ರಲ್ಲಿ ಮಂಗಳೂರಿನಲ್ಲಿ ಆರಂಭವಾಯಿತು. ಇದರ ಹಿಂದಿನ ಹೆಸರು ಕೋಳಿಕೋಡ್ ಜೆಸುಯಿಟ್ ಮಿಷನ್ ಸೊಸೈಟಿ. ಈ ಸಂಘಕ್ಕೆ ಒಂದು ಚುನಾಯಿತ ಸದಸ್ಯರ ಕಾರ್ಯಕಾರೀ ಸಮಿತಿ ಇದೆ. ಸಂಘದ ಕೆಲಸವೆಲ್ಲವನ್ನೂ ಈ ಸಮಿತಿಯೇ ನಿರ್ವಹಿಸುತ್ತದೆ. ಮಂಗಳೂರು ಮತ್ತು ಬೆಂಗಳೂರಿನಲ್ಲಿರುವ ಜೆಸುಯಿಟ್ ಎಜುಕೇಷನ್ ಸೊಸೈಟಿಯು ಇದರ ಸಂಪೂರ್ಣ ಹತೋಟಿಗೆ ಒಳಪಟ್ಟಿದೆ. ಈ ಸಂಘವು ಬೆಂಗಳೂರಿನಲ್ಲಿ ಸೇಂಟ್ ಜೋಸೆಫ್ಸ್ ಕಲಾ ವಿಜ್ಞಾನ ಕಾಲೇಜು, ಸೇಂಟ್ ಜೋಸೆಫ್ಸ್ ವಾಣಿಜ್ಯ ಕಾಲೇಜು, ಸೇಂಟ್ ಜೋಸೆಫ್ಸ್ ಸಂಜೆ ಕಾಲೇಜು, ಸೇಂಟ್ ಜೋಸೆಫ್ಸ್ ವಾಣಿಜ್ಯ ಆಡಳಿತ ವಿಜ್ಞಾನ ಕಾಲೇಜು, ಸೇಂಟ್ ಜೋಸೆಫ್ಸ್ ಪ್ರೌಢಶಾಲೆ, ಸೇಂಟ್ ಜೋಸೆಫ್ಸ್ ಇಂಡಿಯನ್ ಪ್ರೌಢಶಾಲೆ, ಕಾಲೇಜು ವಿದ್ಯಾರ್ಥಿನಿಲಯಗಳು, ಮತ್ತು ಪ್ರೌಢಶಾಲೆಗಳ ವಿದ್ಯಾರ್ಥಿನಿಲಯ ಇವೆಲ್ಲವನ್ನೂ, ಮಂಗಳೂರಿನಲ್ಲಿ ಸೇಂಟ್ ಎಲೋಷಿಯಸ್ ಕಾಲೇಜು, ಸೇಂಟ್ ಎಲೋಷಿಯಸ್ ಪ್ರೌಢಶಾಲೆ ಹಾಗೂ ಕಾಲೇಜು ವಿದ್ಯಾರ್ಥಿನಿಲಯವನ್ನೂ, ಹಾಸನದಲ್ಲಿ ಸೇಂಟ್ ಜೋಸೆಫ್ಸ್ ಪ್ರೌಢಶಾಲೆಯನ್ನೂ ತಮಿಳುನಾಡಿನ ಉದಕಮಂಡಲದಲ್ಲಿ ಸೇಂಟ್ ಜೋಸೆಫ್ಸ್ ಕೈಗಾರಿಕಾ ಶಾಲೆಯನ್ನು, ನಾಗಾಲ್ಯಾಂಡಿನ ಜಖುಮಾದಲ್ಲಿ ಲಯೋಲ ಶಾಲೆಯನ್ನು ಮತ್ತು ಬೆಂಗಳೂರು ಮೌಂಟ್ ಸೇಂಟ್ ಜೋಸೆಫ್ಸ್ ತರಬೇತಿ ಕಾಲೇಜನ್ನೂ ನಡೆಸುತ್ತಿದೆ. ಸಂಘವು ಬೆಂಗಳೂರಿನ ಆನೇಕಲ್ ತಾಲೂಕಿನಲ್ಲಿ ವಯಸ್ಕರ ಶಿಕ್ಷಣ ಮತ್ತು ಸ್ವಾವಲಂಬನ ಕಾರ್ಯಕ್ರಮವನ್ನು ನಡೆಸುತ್ತಿದೆ.

ಕರ್ನಾಟಕ ಲಿಬರಲ್ ಎಜುಕೇಷನ್ ಸೊಸೈಟಿಯ ಉಗಮಸ್ಥಾನ ಬೆಳಗಾವಿ. ಅದು ಆರಂಭವಾದುದ್ದು 1916ರಲ್ಲಿ. ವಿದ್ಯಾವಂತ ಲಿಂಗಾಯತ ತರುಣರ ತಂಡವೊಂದು ಆ ವರ್ಷ ಒಂದು ಖಾಸಗೀ ಶಾಲೆಯನ್ನು ಆರಂಭಿಸಿತು. ಇದರ ಉದ್ದೇಶ ಆ ಭಾಗದಲ್ಲಿ ಹಿಂದುಳಿದಿದ್ದ ಮತಬಾಂಧವರಿಗೆ ಶಿಕ್ಷಣ ಸೌಲಭ್ಯ

ವನ್ನೊದಗಿಸುವುದಾಗಿತ್ತು. ಶಿಕ್ಷಣವು ಅತಿ ದುಬಾರಿಯಾಗಿದ್ದ ಆ ಕಾಲದಲ್ಲಿ ಮತ್ತು ಶಿಕ್ಷಣವು ಜೀವನಕ್ಕೆ ಅನಗತ್ಯವಾದ ಸುಖ ಸಾಮಗ್ರಿ ಎಂಬ ಭಾವನೆಯಿದ್ದ ಆ ಕಾಲದಲ್ಲಿ ಉತ್ತಮವಾದ ಶಿಕ್ಷಣವನ್ನು ಅತಿ ಕಡಿಮೆ ವೆಚ್ಚದಲ್ಲಿ, ಪಟ್ಟಣ ಮತ್ತು ಗ್ರಾಮಾಂತರ ಪ್ರದೇಶಗಳ ಮಕ್ಕಳೆಲ್ಲರಿಗೂ ಈ ಸಂಘವು ಕೊಡುತ್ತಿತ್ತು. ಈ ಸಂಘವು ತನ್ನ ಮೊದಲನೇಯ ಆ್ಯಂಗ್ಲೋ ವರ್ನಾಕ್ಯುಲರ್ ಪ್ರೌಢಶಾಲೆಯನ್ನು 1916ರಲ್ಲಿ ಆರಂಭಿಸಿತು. ತನ್ನ ಮೊದಲನೇಯ ಕಾಲೇಜನ್ನು 1933ರಲ್ಲಿ ಆರಂಭಿಸಿತು. ಇದೇ ಲಿಂಗರಾಜ ಕಾಲೇಜು. ಸಂಘವು ಅತಿ ಶೀಘ್ರಗತಿಯಲ್ಲಿ ಬೆಳೆಯಿತು. 1947ರ ಹೊತ್ತಿಗೆ ಅದರ ಕಾರ್ಯ ಚಟುವಟಿಕೆಗಳು, ಶಿಶು ಶಿಕ್ಷಣದಿಂದ ಸ್ನಾತಕೋತ್ತರ ಶಿಕ್ಷಣದವರೆಗೆ ನಡೆಯುತ್ತಿದ್ದವು. 1980ರಲ್ಲಿ, ಈ ಸಂಘವು 38 ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿತ್ತು. ಇವುಗಳಲ್ಲಿ 22 ಕಾಲೇಜುಗಳು ಮತ್ತು ಒಂದು ಮುದ್ರಣಾಲಯ; 11 ಸಂಸ್ಥೆಗಳು ಗ್ರಾಮಾಂತರ ಪ್ರದೇಶಗಳಲ್ಲಿದ್ದವು. ಇವುಗಳ ಪೈಕಿ ಆರು ಕಾಲೇಜುಗಳು. ಇಡೀ ರಾಜ್ಯದಲ್ಲಿರುವ ಅತಿ ದೊಡ್ಡ ಖಾಸಗೀ ಶಿಕ್ಷಣ ಸಂಸ್ಥೆಗಳಲ್ಲಿ ಇದು ಒಂದಾಗಿದೆ.

ಕರ್ನಾಟಕ ಶಿಕ್ಷಣ-ಪ್ರಚಾರಕ ಸಂಘವು ಬಸವನ ಬಾಗೇವಾಡಿಯಲ್ಲಿ 1941ರಲ್ಲಿ ಆರಂಭವಾಯಿತು. ಶಿಕ್ಷಣ ಸಂಸ್ಥೆಗಳನ್ನು ನಡೆಸಿ ಜನಸಾಮಾನ್ಯರಲ್ಲಿ ಅಕ್ಷರ ಪ್ರಸಾರ ಮಾಡುವುದು ಈ ಸಂಸ್ಥೆಯ ಗುರಿ. ಈ ಸಂಘವು ಯಾರ ಗಮನಕ್ಕೂ ಬಾರದಿದ್ದ ಗ್ರಾಮಗಳಲ್ಲಿ 25 ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನು ಆರಂಭಿಸಿತು. ಶಿಕ್ಷಕರಿಗಾಗಿ ಒಂದು ಚರಪುಸ್ತಕ ಭಂಡಾರವನ್ನೂ ವಿದ್ಯಾರ್ಥಿ ತಂಡದ ಗ್ರಂಥ ಭಂಡಾರಗಳನ್ನೂ ವ್ಯವಸ್ಥೆ ಮಾಡಿತು. 1964ರಲ್ಲಿ ಸಂಘವು ತಾನು ನಡೆಸುತ್ತಿದ್ದ ಎಲ್ಲ ಶಾಖೆಗಳನ್ನೂ ಜಿಲ್ಲಾ ಶಾಲಾ ಮಂಡಲಿಗೆ ವಹಿಸಿಕೊಟ್ಟಿತು. ಬಸವನ ಬಾಗೇವಾಡಿ ತಾಲೂಕಿನ ಹಂಚಿನಾಳ, ಉಣ್ಣೆಭಾವಿ ಮತ್ತು ಮತ್ತಿಹಾಳ ಗ್ರಾಮಗಳಲ್ಲಿ ಸರ್ವಾಂಗೀಣ ಗಾಮಾಭಿವೃದ್ಧಿ ಕಾರ್ಯವನ್ನೂ ಈ ಸಂಸ್ಥೆ ಮಾಡಿತು. ಅಂದಿನ ಮುಂಬೈ ಸರ್ಕಾರದ ಪ್ರಶಂಸೆ ಇದಕ್ಕೆ ದೊರಕಿತ್ತು.

ಕೆನರಾ ವೆಲ್ಫೇರ್ ಟ್ರಸ್ಟ್: 1953ರಲ್ಲಿ ಅಂಕೋಲೆಯಲ್ಲಿ ಆರಂಭವಾಯಿತು. ಇದರ ಉದ್ದೇಶಗಳು, ಹಿಂದುಳಿದ ಗ್ರಾಮಾಂತರ ಪ್ರದೇಶಗಳಲ್ಲಿ ಶಿಕ್ಷಣ ಸೌಕರ್ಯಗಳನ್ನೊದಗಿಸುವುದು, ಹಿಂದುಳಿದ ವರ್ಗಗಳಿಗೆ, ಸ್ತ್ರೀಯರಿಗೆ ಮತ್ತು ಮಕ್ಕಳಿಗೆ ವೈದ್ಯಕೀಯ ಸಹಾಯ ಮಾಡುವುದು, ಅವರ ಹಿತವನ್ನು ಸಾಧಿಸುವುದು, ಗ್ರಾಮವಾಸಿಗಳು ಪರಸ್ಪರ ಸಹಾಯ ಕಾರ್ಯಗಳಲ್ಲಿ ನಿರತರಾಗುವಂತೆ ಪ್ರೋತ್ಸಾಹಿಸುವುದು. ಹೊಸದೆಹಲಿಯಲ್ಲಿರುವ ಗ್ರಾಮಾಭಿವೃದ್ಧಿ ನಿರತ ಸಂಸ್ಥೆಗಳ ಸಂಘದಿಂದ ಅಂಗೀಕೃತವಾದ ಸಂಸ್ಥೆ ಇದು. ಈ ಕ್ಷೇತ್ರದ ಹಾಲಕ್ಕಿ ಒಕ್ಕಲುಗಳು, ಮುಕ್ರಿಗಳು, ಅಗೇರರು, ಸಿದ್ಧಿಗಳು ಮುಂತಾದ ಹಿಂದುಳಿದ ವರ್ಗಗಳ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಗತಿಗಾಗಿ ತನ್ನ ಶ್ರಮವೆಲ್ಲವನ್ನೂ ವಿನಿಯೋಗಿಸುವ ಇಚ್ಛೆಯೂ ಈ ಸಂಸ್ಥೆಗಿದೆ. 1980ರಲ್ಲಿ, ಈ ವಿಶ್ವಸ್ಥ ಮಂಡಲಿಯು 29 ಸಂಸ್ಥೆಗಳನ್ನು ನಡೆಸುತ್ತಿತ್ತು. ಅವುಗಳಲ್ಲಿ ಎರಡು ಪದವಿ ಕಾಲೇಜುಗಳು, ಎರಡು ಕಿರಿಯ ಕಾಲೇಜುಗಳು, ಹದಿನೈದು ಪ್ರೌಢಶಾಲೆಗಳು, ನಾಲ್ಕು ಪ್ರಾಥಮಿಕ ಮತ್ತು ಶಿಶುವಿಹಾರಗಳು, ಒಂದು ವಿದ್ಯಾರ್ಥಿ ನಿಲಯ ಮತ್ತು ಒಂದು ಹೊಲಿಗೆ ಶಾಲೆ. ಜೊತೆಗೆ ಗ್ರಾಮಾಂತರ ಆಸ್ಪತ್ರೆಗಳು, ಮತ್ತು ಮಾತೃ-ಶಿಶು ಹಿತ ಕೇಂದ್ರಗಳು ಮುಂತಾದ ನಾಲ್ಕು ಸಾಮಾಜಿಕ ಸೇವಾ ಸಂಸ್ಥೆಗಳಿವೆ.

ಮಲೆನಾಡ್ ಎಜುಕೇಷನ್ ಸೊಸೈಟಿಯು ಹಾಸನದಲ್ಲಿ 1959ರಲ್ಲಿ ಆರಂಭವಾಯಿತು. ಇದರ ಉದ್ದೇಶ ರಾಜ್ಯದ ಮಲೆನಾಡು ಪ್ರದೇಶದಲ್ಲಿ ತಾಂತ್ರಿಕ ಶಿಕ್ಷಣವನ್ನು ಪ್ರಸಾರ ಮಾಡುವುದು. ಚುನಾಯಿತ ಮತ್ತು ಪದನಿಮಿತ್ತ ಸದಸ್ಯರನ್ನೊಳಗೊಂಡ ಒಂದು ಸಮಿತಿಯು ಈ ಸಂಘವನ್ನು ನಡೆಸುತ್ತಿದೆ. ಸಂಘವು ಒಂದು ಇಂಜಿನಿಯರಿಂಗ್ ಕಾಲೇಜು, ಒಂದು ಕಾನೂನು ಕಾಲೇಜು ಮತ್ತು ಮಹಿಳಾ ಕಾಲೇಜುಗಳನ್ನು ನಡೆಸುತ್ತಿದೆ.

ನ್ಯಾಷನಲ್ ಎಜುಕೇಷನ್ ಸೊಸೈಟಿ ಆಫ್ ಕರ್ನಾಟಕ 1918ರಲ್ಲಿ ಬೆಂಗಳೂರಿನಲ್ಲಿ ಅಸ್ತಿತ್ವಕ್ಕೆ ಬಂದಿತು. ಆಗ, ಮದ್ರಾಸಿನ ಥಿಯಾಸಫಿಕಲ್ ಸೊಸೈಟಿಯು (1917ರಿಂದ) ನಡೆಸುತ್ತಿದ್ದ ನ್ಯಾಷನಲ್ ಹೈಸ್ಕೂಲನ್ನು ಅದು ತನ್ನ ಆಡಳಿತಕ್ಕೆ ತೆಗೆದುಕೊಂಡಿತು. ಸಂಘವು 1934ರಲ್ಲಿ ಪ್ರಾಥಮಿಕ ಮತ್ತು ಮಿಡ್ಲ್ ತರಗತಿಗಳನ್ನೂ, 1945ರಲ್ಲಿ ಕಾಲೇಜು ವಿಭಾಗವನ್ನು ಆರಂಭಿಸಿತು. 1982ರಲ್ಲಿ ಸಂಘವು ನಾಲ್ಕು ಕಲೆ ವಿಜ್ಞಾನ ವಾಣಿಜ್ಯ ಕಾಲೇಜುಗಳನ್ನೂ, ನಾಲ್ಕು ಪ್ರೌಢಶಾಲೆಗಳನ್ನೂ, ಒಂದು ಪ್ರಾಥಮಿಕ ಶಾಲೆಯನ್ನೂ, ಒಂದು ಮಾಧ್ಯಮಿಕ ಶಾಲೆಯನ್ನೂ ನಡೆಸುತ್ತಿದೆ. ಈ ಸಂಘದ ಸಂಸ್ಥೆಗಳು ಅನೇಕ ಪಬ್ಲಿಕ್ ಪರೀಕ್ಷೆಗಳಲ್ಲಿ ರ್‍ಯಾಂಕ್‌ಗಳನ್ನು ಪಡೆದು ಶಿಕ್ಷಣಕ್ಷೇತ್ರದಲ್ಲಿ ಒಳ್ಳೆಯ ಹೆಸರನ್ನು ಗಳಿಸಿದೆ.

ನ್ಯಾಷನಲ್ ಎಜುಕೇಷನ್ ಸೊಸೈಟಿ (ಶಿವಮೊಗ್ಗ)ಯು 1946ರಲ್ಲಿ ಆರಂಭವಾಯಿತು. ಸಂಘವು ಜಿಲ್ಲೆಯ ವಿವಿಧ ಭಾಗಗಳಲ್ಲಿ ಪ್ರೌಢಶಾಲೆಗಳನ್ನು ಆರಂಭಿಸಿದೆ. ಒಂದು ಶಿಕ್ಷಣ ಕಾಲೇಜು, ಒಂದು ಕಲಾ ಕಾಲೇಜು, ಒಂದು ವಾಣಿಜ್ಯ ಕಾಲೇಜು, ಒಂದು ಕಾನೂನು ಕಾಲೇಜು, ಹಲವಾರು ಕಿರಿಯ ಕಾಲೇಜುಗಳು ಮತ್ತು ತೀರ್ಥಹಳ್ಳಿಯಲ್ಲಿ ಒಂದು ಕಾಲೇಜು ಇವಿಷ್ಟನ್ನೂ ಸಂಘವು ನಡೆಸುತ್ತಿತ್ತು.

ಪೀಪಲ್ಸ್ ಎಜುಕೇಷನ್ ಸೊಸೈಟಿಯು 1958ರಲ್ಲಿ ಮಂಡ್ಯದಲ್ಲಿ ಆರಂಭವಾಯಿತು. ಸಂಘದ ಅಧ್ಯಕ್ಷರೇ ನೇಮಿಸಿದ

ಒಂದು ಕಾರ್ಯಕಾರಿ ಸಮಿತಿಯು ಈ ಸಂಘವನ್ನು ನಡೆಸುತ್ತದೆ. ಈ ಸಂಘವು ಒಂದು ವಿಜ್ಞಾನ ಕಾಲೇಜನ್ನೂ ಒಂದು ಶಿಕ್ಷಣ ಕಾಲೇಜನ್ನೂ, ಒಂದು ಇಂಜಿನಿಯರಿಂಗ್ ಕಾಲೇಜನ್ನೂ, ಒಂದು ಬಾಲಕರ ವಿದ್ಯಾರ್ಥಿನಿಲಯವನ್ನೂ ನಡೆಸುತ್ತಿತ್ತು.

ರಾಷ್ಟ್ರೀಯ ಶಿಕ್ಷಣ ಸಮಿತಿ ಟ್ರಸ್ಟ್ ಬೆಂಗಳೂರಿನಲ್ಲಿ 1940ರಲ್ಲಿ ಆರಂಭವಾಯಿತು. ಆಗ ಇದು ರಾಷ್ಟ್ರೀಯ ವಿದ್ಯಾಲಯವನ್ನು ಸ್ಥಾಪಿಸಿತು. ಇದು ಮುಂದೆ ಒಂದು ವಿಶ್ವಸ್ಥ ಮಂಡಲಿಯಾಗಿ ಬೆಳೆದು ಅನೇಕ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದೆ. ಪೂರ್ವ ಪ್ರಾಥಮಿಕ ಶಾಲಾ ಮಟ್ಟದಿಂದ ಸ್ನಾತಕೋತ್ತರ ಶಿಕ್ಷಣದ ಮಟ್ಟದವರೆಗಿನ ವಿವಿಧ ವಿದ್ಯಾರ್ಥಿವರ್ಗಗಳಿಗೆ ಇದು ಅನುಕೂಲ ಮಾಡಿಕೊಡುತ್ತಿದೆ. ವಿಶ್ವಸ್ಥ ಮಂಡಲಿಯು ಶಿಶುವಿಹಾರಗಳನ್ನೂ, ಪ್ರಾಥಮಿಕ ಶಾಲೆಗಳನ್ನೂ, ಮಾಧ್ಯಮಿಕ ಶಾಲೆಗಳನ್ನೂ, ಬಾಲಕರು ಮತ್ತು ಬಾಲಕಿಯರ ಪ್ರೌಢಶಾಲೆಗಳನ್ನೂ, ಒಂದು ಶಿಕ್ಷಕರ ತರಬೇತಿ ಸಂಸ್ಥೆಯನ್ನೂ, ಒಂದು ಮಹಿಳೆಯರ ಕಿರಿಯ ಕಾಲೇಜನ್ನೂ, ಒಂದು ಮಹಿಳೆಯರ ಕಾಲೇಜನ್ನೂ, ಒಂದು ಇಂಜಿನಿಯರಿಂಗ್ ಕಾಲೇಜನ್ನೂ ನಡೆಸುತ್ತಿದೆ. ಜೊತೆಗೆ ಸ್ನಾತಕೋತ್ತರ ಶಿಕ್ಷಣ ಕಾಲೇಜನ್ನೂ ನಡೆಸುತ್ತಿದೆ. ಇದೊಂದು ಸಂಜೆ ಕಾಲೇಜು.

ರೂರಲ್ ಎಜುಕೇಷನ್ ಸೊಸೈಟಿಯು 1931ರಲ್ಲಿ ಕನಕಪುರದಲ್ಲಿ ತನ್ನ ಚಟುವಟಿಕೆಗಳನ್ನು ಆರಂಭಿಸಿತು. ಆಗ ಆರಂಭವಾದದ್ದು ಒಂದು ಚಿಕ್ಕ ವಿದ್ಯಾರ್ಥಿನಿಲಯ. 1939ರಲ್ಲಿ ಈ ವಿದ್ಯಾರ್ಥಿನಿಲಯವು ಒಂದು ನಿವಾಸಿ ಮಾಧ್ಯಮಿಕ ಶಾಲೆಯಾಗಿ ಪರಿವರ್ತಿತವಾಯಿತು. ನೂಲುವುದು, ಜೇನು ಸಾಕಣೆ, ಕೋಳಿ ಸಾಕಣೆ, ಹೈನುಗಾರಿಕೆ, ಕಾಗದ ತಯಾರಿಕೆ, ತೋಟಗಾರಿಕೆ ಮುಂತಾದ ಚಟುವಟಿಕೆಗಳನ್ನು ಸಂಘವು ಆರಂಭಿಸಿತು. ಹೀಗಾಗಿ ಸಂಘದ ಆವರಣವು ಒಂದು ಶಿಕ್ಷಣ ಕೇಂದ್ರವೂ ಒಂದು ವೃತ್ತಿಶಿಕ್ಷಣ ಕೇಂದ್ರವೂ ಆಯಿತು. ಅನಂತರ, 1942ರಲ್ಲಿ ಒಂದು ಪ್ರೌಢಶಾಲೆಯನ್ನು ಆರಂಭಿಸಲಾಯಿತು. ಕ್ರಮೇಣ ಒಂದು ಪ್ರಥಮದರ್ಜೆಯ ಕಾಲೇಜೂ ಸೇರಿದಂತೆ ಅನೇಕ ಸಂಸ್ಥೆಗಳನ್ನು ಇದು ಪ್ರಾರಂಭಿಸಿತು. ಈ ಸಂಸ್ಥೆಯು ಒಂದು ಶಿಶುವಿಹಾರವನ್ನೂ, ಮೂರು ಗ್ರಾಮಾಂತರ ಪ್ರೌಢಶಾಲೆಗಳನ್ನೂ ಒಂದು ಗ್ರಾಮಾಂತರ ಕಾಲೇಜನ್ನೂ, ಒಂದು ಸಂಜೆ ಕಾಲೇಜನ್ನೂ, ಒಂದು ವ್ಯವಸಾಯ ಕ್ಷೇತ್ರವನ್ನೂ, ಮೂರು ವಿದ್ಯಾರ್ಥಿನಿಲಯಗಳನ್ನೂ, ಒಂದು ಕಾರ್ಯಾಗಾರವನ್ನೂ ಇನ್ನಿತರ ಸಂಸ್ಥೆಗಳನ್ನೂ ನಡೆಸುತ್ತಿತ್ತು.

ಸಂಡೂರ್ ಎಜುಕೇಷನ್ ಸೊಸೈಟಿಯು 1958ರಲ್ಲಿ ಆ ಪ್ರದೇಶದ ಶೈಕ್ಷಣಿಕ ಅವಶ್ಯಕತೆಗಳನ್ನು ಪೂರೈಸುವ ಉದ್ದೇಶದಿಂದ ಆರಂಭವಾಯಿತು. ಒಂದು ಕಲೆ ಮತ್ತು ಒಂದು ವಿಜ್ಞಾನ ಕಾಲೇಜನ್ನೂ, ಒಂದು ಕಿರಿಯ ಕಾಲೇಜನ್ನೂ, ಒಂದು ಪ್ರೌಢಶಾಲೆಯನ್ನೂ, ಒಂದು ಪ್ರಾಥಮಿಕ ಶಾಲೆಯನ್ನೂ ಈ ಸಂಸ್ಥೆಯು ನಡೆಸುತ್ತಿತ್ತು.

ಶಾರದಾ ವಿಲಾಸ ಎಜುಕೇಷನ್ ಸೊಸೈಟಿಯು 1861ರಲ್ಲಿ ಮೈಸೂರಿನಲ್ಲಿ ಅಂಕುರಿಸಿತು. ಆಗ ಈ ಸಂಘವು ತೆರೆದಿದ್ದ ಒಂದು ಸಂಸ್ಕೃತ ಪಾಠಶಾಲೆಯನ್ನು. ಕಾಲ ಕಳೆದಂತೆ, ಒಂದು ಬಾಲಕರ ಪ್ರೌಢಶಾಲೆಯೂ, ಒಂದು ವಾಣಿಜ್ಯ ಸಂಸ್ಥೆಯೂ, ಒಂದು ವಿಜ್ಞಾನ ಕಾಲೇಜೂ, ಒಂದು ಕಾನೂನು ಕಾಲೇಜೂ, ಒಂದು ಬಾಲಕಿಯರ ಪ್ರೌಢಶಾಲೆಯೂ, ಒಂದು ಶಿಕ್ಷಕರ ಕಾಲೇಜೂ ಅಸ್ತಿತ್ವಕ್ಕೆ ಬಂದವು. ಸಂಘದ ಸದಸ್ಯರು ಆರಿಸಿದ ಒಂದು ಆಡಳಿತ ಸಮಿತಿಯು ಸಂಘವನ್ನು ನಡೆಸುತ್ತದೆ.

ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘವು ಕಲ್ಬುರ್ಗಿಯ ಒಂದು ಶತಮಾನದಷ್ಟು ಹಳೆಯ ಸಂಸ್ಥೆ. ಇದನ್ನು ಸ್ಥಾಪಿಸಿದವರು ಶ್ರೀ ಶರಣ ಬಸವೇಶ್ವರರು. ಇದರ ಉದ್ದೇಶ ಶಾಲೆ, ಕಾಲೇಜು, ಮತ್ತಿತರ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸುವುದು. ಈ ಸಂಘವು ಒಂದು ಕಲೆ-ವಿಜ್ಞಾನ ಕಾಲೇಜನ್ನೂ ಒಂದು ಮಹಿಳಾ ಕಾಲೇಜನ್ನೂ, ಒಂದು ವಾಣಿಜ್ಯ ಕಾಲೇಜನ್ನೂ, ಬಾಲಕರ, ಬಾಲಕಿಯರ ಪ್ರೌಢಶಾಲೆಗಳನ್ನೂ, ಒಂದು ಗ್ರಂಥ ಭಂಡಾರವನ್ನು, ಒಂದು ವಿದ್ಯಾರ್ಥಿನಿಲಯವನ್ನೂ ನಡೆಸುತ್ತಿತ್ತು.

ಶೇಷಾದ್ರಿಪುರಂ ಎಜುಕೇಶನ್ ಟ್ರಸ್ಟ್ 1930ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಇದರ ಉದ್ದೇಶವು ಬಾಲಕಿಯರಿಗೆ ಮತ್ತು ಬಾಲಕರಿಗೆ ಶಿಕ್ಷಣವನ್ನು ಕೊಡುವುದು. ಇದು ಒಂದು ಸಂಸ್ಥೆಯಾಗಿ ಆರಂಭವಾಯಿತು. 1980ರಲ್ಲಿ ಒಂದು ವಿಶ್ವಸ್ಥ ಮಂಡಲಿಯಾಗಿ (ಟ್ರಸ್ಟ್) ಪರಿವರ್ತಿತವಾಯಿತು. 1982ರಲ್ಲಿ ಈ ವಿಶ್ವಸ್ಥ ಮಂಡಲಿ ಒಂದು ಶಿಶುವಿಹಾರವನ್ನೂ, ಒಂದು ಹಿರಿಯ ಪ್ರಾಥಮಿಕ ಶಾಲೆಯನ್ನೂ, ಒಂದು ಬಾಲಕಿಯರ ಮತ್ತು ಬಾಲಕರ ಪ್ರೌಢಶಾಲೆಯನ್ನೂ, ಒಂದು ಕಿರಿಯ ಕಾಲೇಜನ್ನೂ, ಒಂದು ಸಂಜೆ ಕಲೆ-ವಾಣಿಜ್ಯ ಕಾಲೇಜನ್ನೂ, ಮತ್ತು ಒಂದು ಪ್ರಥಮ ದರ್ಜೆ ಕಲೆ ವಿಜ್ಞಾನ-ವಾಣಿಜ್ಯ ಕಾಲೇಜನ್ನೂ ನಡೆಸುತ್ತಿತ್ತು.

ಬಿ. ಎಂ. ಶ್ರೀನಿವಾಸಯ್ಯ ಎಜುಕೇಷನ್ ಟ್ರಸ್ಟ್ 1957ರಲ್ಲಿ ಸ್ಥಾಪಿತವಾಯಿತು. ಅದರ ಉದ್ದೇಶಗಳೆಂದರೆ, ಬಿ. ಎಂ. ಶ್ರೀನಿವಾಸಯ್ಯ ಇಂಜಿನಿಯರಿಂಗ್ ಕಾಲೇಜನ್ನು ನಡೆಸುವುದು, ಸಾಮಾನ್ಯ ಮತ್ತು ತಾಂತ್ರಿಕ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಕೊಡುವುದು, ಮತ್ತು ಇಂಜಿನಿಯರಿಂಗ್ ಮತ್ತಿನ್ನಿತರ ತಾಂತ್ರಿಕ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸಲು ತಕ್ಕ ಸೌಲಭ್ಯಗಳನ್ನು ಕಲ್ಪಿಸುವುದು. ಈ ವಿಶ್ವಸ್ಥ ಮಂಡಲಿಯು ಅಸ್ತಿತ್ವಕ್ಕೆ

ಬರುವುದಕ್ಕೆ ಮುಂಚೆಯೇ, 1946ರಲ್ಲಿ ಬಿ. ಎಂ. ಶ್ರೀನಿವಾಸಯ್ಯ ಇಂಜಿನಿಯರಿಂಗ್ ಕಾಲೇಜು ಆರಂಭವಾಗಿತ್ತು. 1982-83 ರಲ್ಲಿ, ಈ ವಿಶ್ವಸ್ಥ ಮಂಡಲಿಯು ಒಂದು ಇಂಜಿನಿಯರಿಂಗ್ ಕಾಲೇಜನ್ನೂ, ಒಂದು ಮಹಿಳೆಯರ ಕಾಲೇಜನ್ನೂ, ಒಂದು ಕಾನೂನು ಕಾಲೇಜನ್ನೂ, ಒಂದು ಸಂಜೆ ಇಂಜಿನಿಯರಿಂಗ್ ಕಾಲೇಜನ್ನೂ ನಡೆಸುತ್ತಿತ್ತು. ಇಂಜಿನಿಯರಿಂಗ್ ಕಾಲೇಜು ಬೇರೆ ಬೇರೆ ದೇಶಗಳಿಂದ ಬರುವ ವಿದ್ಯಾರ್ಥಿಗಳ ಅಧ್ಯಯನ ಕೇಂದ್ರವೆಂದು ಸಂಯುಕ್ತ ರಾಷ್ಟ್ರ ಸಂಘದ ಸಂಸ್ಥೆಗಳಿಂದ (ಯುನೈಟೆಡ್ ನೇಷನ್ಸ್ ಏಜನ್ಸೀಸ್) ಮಾನ್ಯತೆ ಪಡೆದಿದೆ. ಟಾನ್ಜಾನಿಯ ಮುಂತಾದ ಅಭಿವೃದ್ಧಿಶೀಲ ರಾಷ್ಟ್ರಗಳಿಂದ ಇಲ್ಲಿಗೆ ವಿದ್ಯಾರ್ಥಿಗಳು ಬರುತ್ತಾರೆ. ನಿರ್ಮಾಣ ವಿಜ್ಞಾನದ ಸ್ನಾತಕೋತ್ತರ ಕೋರ್ಸನ್ನು ತೆರೆಯುವ ಉದ್ದೇಶವನ್ನು ವಿಶ್ವಸ್ಥ ಮಂಡಲಿಯು ಹೊಂದಿದೆ. ದೇಶ ಮತ್ತು ವಿದೇಶದ ವಿದ್ಯಾರ್ಥಿಗಳಿಗಾಗಿ ವಿಶ್ವಸ್ಥ ಮಂಡಲಿಯು ವಿದ್ಯಾರ್ಥಿನಿಲಯಗಳನ್ನು ನಡೆಸುತ್ತಿದೆ.

ಶ್ರೀ ಆದಿ ಚುಂಚನಗಿರಿ ಶಿಕ್ಷಣ ಟ್ರಸ್ಟ್ 1973ರಲ್ಲಿ ಆದಿಚುಂಚನಗಿರಿಯ ಶ್ರೀ ರಮಾನಂದನಾಥ ಸ್ವಾಮೀಜಿಯವರಿಂದ ಸ್ಥಾಪಿಸಲ್ಪಟ್ಟಿತು. ಗ್ರಾಮಾಂತರ ಪ್ರದೇಶಗಳ ಹಿಂದುಳಿದ ಮತ್ತು ಅಲ್ಪಸಂಖ್ಯಾತ ವರ್ಗಗಳ ಬಡಮಕ್ಕಳಿಗೆ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸುವುದರ ಮೂಲಕ ವಿದ್ಯಾ ಸೌಕರ್ಯವನ್ನೊದಗಿಸುವುದು ಈ ಮಂಡಲಿಯ ಉದ್ದೇಶ. 1980-81ರಲ್ಲಿ, ವಿಶ್ವಸ್ಥ ಮಂಡಲಿಯು ಒಂದು ಹಿರಿಯ ಪ್ರಾಥಮಿಕ ಶಾಲೆಯನ್ನೂ, ಒಂದು ಕಿರಿಯ ಕಾಲೇಜನ್ನೂ, ಒಂದು ಕಲೆ- ವಾಣಿಜ್ಯ ಕಾಲೇಜನ್ನೂ, ಚಿಕ್ಕಮಗಳೂರಿನಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜನ್ನೂ, ಸಂಸ್ಕೃತ, ವೇದ ಮತ್ತು ಆಗಮ ಮಹಾಪಾಠ ಶಾಲೆಗಳನ್ನು ನಡೆಸುತ್ತಿತ್ತು. ಜೊತೆಗೆ ವಿಶ್ವಸ್ಥಮಂಡಲಿಯು ಹಳ್ಳಿಗಾಡಿನ ಸುಮಾರು 1,000 ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿಗಳನ್ನು ಉಚಿತವಾಗಿ ಒದಗಿಸುತ್ತಿದೆ.

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಟ್ರಸ್ಟ್ ಧರ್ಮಸ್ಥಳದ ಶ್ರೀ ವೀರೇಂದ್ರಹೆಗ್ಗಡೆಯವರ ನೇತೃತ್ವದಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದೆ. ಉಜಿರೆಯಲ್ಲಿ ಒಂದು ಕಾಲೇಜನ್ನು ನಡೆಸುತ್ತಿದೆ. ಇದಲ್ಲದೆ ಧರ್ಮಸ್ಥಳದಲ್ಲಿ ಒಂದು ಪ್ರಾಚ್ಯ ಶಾಸ್ತ್ರಗಳ (ಓರಿಯಂಟಲ್ ಲರ್ನಿಂಗ್) ಪಾಠಶಾಲೆಯನ್ನೂ ಒಂದು ಶಿಕ್ಷಕರ ತರಬೇತಿ ಸಂಸ್ಥೆಯನ್ನೂ ನಡೆಸುತ್ತಿದೆ. ಇದರ ವಶದಲ್ಲಿರುವ ಸಂಸ್ಥೆಗಳ ಒಟ್ಟು ಸಂಖ್ಯೆ 20. ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉಜಿರೆಯಲ್ಲಿ ಒಂದು ಉಚಿತ ವಿದ್ಯಾರ್ಥಿನಿಲಯವನ್ನೂ ಮಂಗಳೂರಿನಲ್ಲಿ ಒಂದು ಕಾನೂನು ಕಾಲೇಜನ್ನೂ, ಉಡುಪಿಯಲ್ಲಿ ಒಂದು ಆಯುರ್ವೇದ ಕಾಲೇಜನ್ನೂ, ಧಾರವಾಡದಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜನ್ನೂ ಈ ಸಂಸ್ಥೆಯು ನಡೆಸುತ್ತಿದೆ.

ಶ್ರೀ ಸತ್ಯಸಾಯಿ ಲೋಕ ಸೇವಾ ಟ್ರಸ್ಟ್ 1978ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಅಳಿಕೆಯಲ್ಲಿ ಸ್ಥಾಪಿತವಾಯಿತು. ಇದು ಅಸ್ತಿತ್ವಕ್ಕೆ ಬರುವ ಮೊದಲು, ಅನೇಕ ಸಂಸ್ಥೆಗಳನ್ನು ಲೋಕ ಸೇವಾವೃಂದವು ನಡೆಸುತ್ತಿತ್ತು. ಈ ಸಂಸ್ಥೆಯು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಅಳಿಕೆಯಲ್ಲಿದೆ. ಈ ವಿಶ್ವಸ್ಥ ಮಂಡಲಿಯು ಬಾಲಕರು ಮತ್ತು ಬಾಲಕಿಯರಿಗಾಗಿ ವಿದ್ಯಾರ್ಥಿ ನಿಲಯಗಳನ್ನೂ, ಒಂದು ಅನಾಥಾಲಯವನ್ನೂ, ಬಾಲಮಂದಿರಗಳನ್ನೂ, ಒಂದು ಪ್ರಾಥಮಿಕ ಶಾಲೆಯನ್ನೂ, ಒಂದು ಪ್ರೌಢ ಶಾಲೆಯನ್ನೂ, ಒಂದು ಕಿರಿಯ ಕಾಲೇಜನ್ನೂ ನಡೆಸುತ್ತಿದೆ. ಒಂದು ಮುದ್ರಣಾಲಯ, ಒಂದು ಯಕ್ಷಗಾನ ಸಭೆ, ಒಂದು ಗೋಶಾಲೆ, ಒಂದು ಆರೋಗ್ಯ ಕೇಂದ್ರ, ಇವನ್ನೂ ಈ ಸಂಸ್ಥೆಯು ಅಳಿಕೆಯಲ್ಲಿ ನಡೆಸುತ್ತಿದೆ. ಜೊತೆಗೆ ಚಿಕ್ಕಬಳ್ಳಾಪುರ ತಾಲೂಕಿನ ಮುದ್ದೇನಹಳ್ಳಿಯಲ್ಲಿ ಒಂದು ಪ್ರೌಢಶಾಲೆಯನ್ನೂ, ಒಂದು ಬಾಲಕರ ವಿದ್ಯಾರ್ಥಿನಿಲಯವನ್ನೂ, ಒಂದು ಆರೋಗ್ಯ ಕೇಂದ್ರವನ್ನೂ, ಒಂದು ವ್ಯವಸಾಯ ಕ್ಷೇತ್ರವನ್ನೂ ನಡೆಸುತ್ತಿದೆ.

ಶ್ರೀ ಸಿದ್ಧಗಂಗಾ ಎಜುಕೇಶನ್ ಸೊಸೈಟಿಯು ತುಮಕೂರಿನಲ್ಲಿ 1917ರಲ್ಲಿ ಸ್ಥಾಪಿತವಾಯಿತು. ಆಗ ಸಿದ್ಧಗಂಗಾ ಮಠದಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಲಾಯಿತು. ಮುಂದೆ ಇದು ಕಾಲೇಜಾಯಿತು. ಈ ಭಾಗದ ಶಿಕ್ಷಣದ ಪ್ರಗತಿಗಾಗಿ ಸಂಘವು ಅನೇಕ ವಿದ್ಯಾ ಸಂಸ್ಥೆಗಳನ್ನು ಆರಂಭಿಸಿದೆ. 1981ರಲ್ಲಿ ಸಂಘದ ಅಧೀನದಲ್ಲಿ 62 ಸಂಸ್ಥೆಗಳಿದ್ದವು. ಶಿಶುವಿಹಾರದಿಂದ ಹಿಡಿದು ಇಂಜಿನಿಯರಿಂಗ್ ಕಾಲೇಜಿನವರೆಗೆ ವಿವಿಧ ಮಟ್ಟದ ಸಂಸ್ಥೆಗಳು ಸಂಘದ ಅಧೀನದಲ್ಲಿವೆ. ಸಂಘವು ಅನಾಥಾಲಯಗಳನ್ನೂ, ಉಚಿತ ವಿದ್ಯಾರ್ಥಿನಿಲಯಗಳನ್ನೂ ನಡೆಸುತ್ತಿದೆ. ಒಂದು ಶಿಕ್ಷಕರ ತರಬೇತಿ ಸಂಸ್ಥೆಯನ್ನೂ, ಒಂದು ಶಿಕ್ಷಕರ ಕಾಲೇಜನ್ನೂ ಅದು ನಡೆಸುತ್ತಿದೆ. ಸಿದ್ಧಗಂಗಾ ಮಠದಲ್ಲಿರುವ ಅನಾಥಾಲಯವು ಅತೀ ಹಳೆಯ ಅನಾಥಾಲಯಗಳಲ್ಲಿ ಒಂದು. ಇದು 1917ರಲ್ಲಿಯೇ ಆರಂಭವಾಯಿತು. ಕರ್ನಾಟಕದ ಅತೀ ದೊಡ್ಡ ಉಚಿತ ವಿದ್ಯಾರ್ಥಿನಿಲಯವೊಂದನ್ನು ಸಂಘವು ನಡೆಸುತ್ತಿದೆ.

ಶ್ರೀ ಸಿದ್ಧಾರ್ಥ ಎಜುಕೇಷನ್ ಸೊಸೈಟಿಯು ತುಮಕೂರು ಜಿಲ್ಲೆಯ ಗೊಲ್ಲಹಳ್ಳಿಯಲ್ಲಿ ಆರಂಭವಾಯಿತು. ಇದರ ಉದ್ದೇಶವು ಸಮಾಜದಲ್ಲಿನ ಬಡವರಿಗೆ ಹಾಗೂ ದಲಿತರಿಗೆ ಶಿಕ್ಷಣ ಸೌಲಭ್ಯಗಳನ್ನೊದಗಿಸುವುದು ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟು ಮತ್ತು ಇತರ ಹಿಂದುಳಿದ ಬುಡಕಟ್ಟುಗಳಿಗೆ ಸೇರಿದ ಜನರಲ್ಲಿ ಶಿಕ್ಷಣದ ಬಗೆಗೆ ಆಸಕ್ತಿಯನ್ನು ಬೆಳೆಸುವುದು. ಸಂಘವು ಹದಿಮೂರು ನಿವಾಸಿ ಪ್ರೌಢಶಾಲೆಗಳನ್ನೂ, ಮೂರು ಶಿಕ್ಷಕರ ತರಬೇತಿ ಸಂಸ್ಥೆಗಳನ್ನೂ ಒಂದು ಕಿರಿಯ ಕಾಲೇಜನ್ನೂ, ಒಂದು ಶಿಕ್ಷಕರ ಕಾಲೇಜನ್ನೂ, ಒಂದು ಇಂಜಿನಿಯರಿಂಗ್ ಕಾಲೇಜನ್ನೂ, ಏಳು ಸಂಸ್ಕೃತ ಪಾಠಶಾಲೆಗಳನ್ನೂ ನಡೆಸುತ್ತಿದೆ.

ತರಳಬಾಳು ಶಿಕ್ಷಣ ಸಂಘವು ಚಿತ್ರದುರ್ಗ ಜಿಲ್ಲೆಯ ಸಿರಿಗೆರೆಯಲ್ಲಿ ತನ್ನ ಚಟುವಟಿಕೆಯನ್ನು 1946ರಲ್ಲಿ ಒಂದು ಪ್ರೌಢ ಶಾಲೆಯನ್ನು ಪ್ರಾರಂಭಿಸುವುದರ ಮೂಲಕ ಆರಂಭಿಸಿತು. ಸಿರಿಗೆರೆ ಮಠದ ಮಹಾಸ್ವಾಮೀಜಿಯವರು 1962ರಲ್ಲಿ ತರಳಬಾಳು ಶಿಕ್ಷಣ ಸಂಘವನ್ನು ರಚಿಸಿದರು. ಆಗ ಅದು ನೋಂದಣಿಯಾಯಿತು. ಗ್ರಾಮಾಂತರ ಜನಗಳಲ್ಲಿನ ಅನಕ್ಷರತೆಯ ನಿರ್ಮೂಲನ, ಕಾಯಕದ ಬಗೆಗೆ ಗೌರವ, ಸಮಾನತೆ, ಸಹಕಾರ ಮತ್ತು ವಿಶ್ವಭ್ರಾತೃತ್ವ ಭಾವನೆಗಳನ್ನು ಬೆಳೆಸುವುದು ಸಂಘದ ಗುರಿಯಾಗಿದೆ. 1980ರಲ್ಲಿ ಸಂಘವು 145 ವಿದ್ಯಾ ಸಂಸ್ಥೆಗಳನ್ನು ನಡೆಸುತ್ತಿತ್ತು. ಒಂದು ಶಿಕ್ಷಣ ಕಾಲೇಜು, ಐದು ಪ್ರಥಮದರ್ಜೆ ಕಾಲೇಜುಗಳು, ಎಂಟು ಕಿರಿಯ ಕಾಲೇಜುಗಳು, 66 ಪ್ರೌಢಶಾಲೆಗಳು, ಮೂರು ಶಿಶು ವಿಹಾರಗಳು, ಮೂರು ಸಂಸ್ಕೃತ ಶಾಲೆಗಳು, ಎರಡು ವೇದ ಪಾಠ ಶಾಲೆಗಳು, ಒಂದು ಪ್ರಾಥಮಿಕ ಶಾಲೆ ಮತ್ತು 56 ವಿದ್ಯಾರ್ಥಿ ನಿಲಯಗಳು ಇವಿಷ್ಟನ್ನೂ ಸಂಘವು ನಡೆಸುತ್ತಿದೆ.

ವೀರಶೈವ ವಿದ್ಯಾವರ್ಧಕ ಸಂಘವು ಬಳ್ಳಾರಿಯಲ್ಲಿ 1916ರಲ್ಲಿ ಅಸ್ತಿತ್ವಕ್ಕೆ ಬಂದಿತು. ಬಳ್ಳಾರಿ ಜಿಲ್ಲೆಯ ಶಿಕ್ಷಣದ ಪ್ರಗತಿಗಾಗಿ ದುಡಿಯುತ್ತಿರುವ ಸಂಸ್ಥೆ ಇದು. ಇಡೀ ರಾಜ್ಯದಲ್ಲಿನ ಹಳೆಯ ಸಂಸ್ಥೆಗಳಲ್ಲೊಂದು. ಇದು ಶಾಲೆಗಳನ್ನು, ಕಾಲೇಜುಗಳನ್ನು, ವಿದ್ಯಾರ್ಥಿನಿಲಯಗಳನ್ನು ನಡೆಸುತ್ತಿರುವುದಷ್ಟೇ ಅಲ್ಲದೆ ಬಡವರಿಗೆ ವಿದ್ಯಾರ್ಥಿವೇತನವನ್ನೂ ನೀಡುತ್ತಿದೆ. 1918ರಲ್ಲಿ ಬಳ್ಳಾರಿಯಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಿ ಕ್ರಮೇಣ ತನ್ನ ಕಾರ್ಯಕ್ಷೇತ್ರವನ್ನು ಅದು ವಿಸ್ತಾರ ಮಾಡಿಕೊಂಡಿತು. 1982-83ರಲ್ಲಿ, ಸಂಘವು ಒಂದು ಇಂಜಿನಿಯರಿಂಗ್ ಕಾಲೇಜನ್ನೂ, ಆರು ಕಲೆ-ವಿಜ್ಞಾನ-ವಾಣಿಜ್ಯ ಕಾಲೇಜುಗಳನ್ನೂ, ಒಂದು ಮಹಿಳಾ ಕಾಲೇಜನ್ನೂ, ಒಂದು ಕಾನೂನು ಕಾಲೇಜನ್ನೂ, ಒಂದು ಶಿಕ್ಷಣ ಕಾಲೇಜನ್ನೂ, ಮೂರು ಪ್ರೌಢ ಶಾಲೆಗಳನ್ನೂ, ಎರಡು ಹಿರಿಯ ಪ್ರಾಥಮಿಕ ಶಾಲೆಗಳನ್ನೂ ನಡೆಸುತ್ತಿತ್ತು. ಶಿಕ್ಷಣ ಸಂಸ್ಥೆಗಳನ್ನೂ ನಡೆಸುವುದಷ್ಟೇ ಅಲ್ಲದೆ, ಸಂಘವು ಬಳ್ಳಾರಿಯ ವೀರಶೈವ ತರುಣ ಸಂಘದ ವಿದ್ಯಾರ್ಥಿ ನಿಲಯಕ್ಕೆ ಪ್ರತೀತಿಂಗಳೂ 1,000 ರೂ. ದಾನವಾಗಿ ಕೊಡುತ್ತಿದೆ. ಅದೇ ಸಂಘಕ್ಕೆ, ಸಾಮೂಹಿಕ ವಿವಾಹಗಳನ್ನು ನಡೆಸುವುದಕ್ಕೆ ವರ್ಷಕ್ಕೆ 1,500 ರೂ.ಗಳನ್ನು ದಾನವಾಗಿ ನೀಡುತ್ತಿದೆ.

ಕರ್ನಾಟಕ ಲಾ ಸೊಸೈಟಿಯು ಬೆಳಗಾವಿಯಲ್ಲಿ 1939 ರಲ್ಲಿ ಸ್ಥಾಪನೆಗೊಂಡು ಆ ನಗರದಲ್ಲಿ 1939-40ರಲ್ಲಿ ಒಂದು ಕಾನೂನು ಕಾಲೇಜನ್ನೂ 1954ರಲ್ಲಿ ಒಂದು ಕಾಮರ್ಸ್ ಕಾಲೇಜನ್ನೂ, 1977ರಲ್ಲಿ ಬಿಸಿನೆಸ್ ಮ್ಯಾನೇಜ್‌ಮೆಂಟ್ ಶಾಲೆಯನ್ನೂ ಮತ್ತು 1979ರಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜನ್ನೂ ಸ್ಥಾಪಿಸಿ ನಡೆಸಿಕೊಂಡು ಬರುತ್ತಿದೆ.

ಮೇಲೆ ತಿಳಿಸಿರುವುದರ ಜೊತೆಗೆ, ಅನೇಕ ಸಂಘಗಳೂ ವಿಶ್ವಸ್ಥ ಮಂಡಲಿಗಳೂ, ಸಂಸ್ಥೆಗಳೂ, ಶಿಕ್ಷಣ ಕಾರ್ಯದಲ್ಲಿ ನಿರತವಾಗಿವೆ. ಬೆಂಗಳೂರಿನ ಭಾರತ್ ಎಜುಕೇಶನ್ ಸೊಸೈಟಿ, ಭದ್ರಾವತಿಯ ಭದ್ರಾ ಎಜುಕೇಶನ್ ಸೊಸೈಟಿ, ಶಿವಮೊಗ್ಗೆಯ ಚಿಲ್ಡ್ರನ್ಸ್ ಎಜುಕೇಶನ್ ಸೊಸೈಟಿ, ಬೆಂಗಳೂರಿನ ದೀನ ಸೇವಾ ಸಂಘ, ಬೆಂಗಳೂರಿನ ಗೋಕುಲ ಎಜುಕೇಶನ್ ಫೌಂಡೇಶನ್, ಶ್ರವಣಬೆಳಗೊಳದ ಗೋಮಟೇಶ್ವರ ಎಜುಕೇಶನ್ ಸೊಸೈಟಿ, ಬೆಂಗಳೂರಿನ ಹೊಂಬೇಗೌಡ ಎಜುಕೇಶನ್ ಸೊಸೈಟಿ, ಹುನಗುಂದದ ಎಚ್. ಎಂ. ವಿ. ವಿ. ಎಜುಕೇಶನ್ ಎಸೋಸಿಯೇಶನ್, ಮೈಸೂರಿನ ಜಗದ್ಗುರು ಶಿವರಾತ್ರೀಶ್ವರ ಎಜುಕೇಶನ್ ಸೊಸೈಟಿ, ಬೆಂಗಳೂರಿನ ಜ್ಯೋತಿನಿವಾಸ ಎಜುಕೇಶನ್ ಸೊಸೈಟಿ, ಬೆಂಗಳೂರಿನ ಮಹಾತ್ಮಾಗಾಂಧಿ ವಿದ್ಯಾಪೀಠ, ಬೆಂಗಳೂರಿನ ಮಲ್ಲೇಶ್ವರಂ ಎಜುಕೇಶನ್ ಸೊಸೈಟಿ, ಸಾಗರದ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನ, ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಮೈಸೂರಿನ ಮೈಸೂರು ಡಯೋಸಿಸನಲ್ ಎಜುಕೇಶನ್ ಸೊಸೈಟಿ, ಬೆಂಗಳೂರಿನ ಮಲ್ಲೇಶ್ವರಂ ಲೇಡೀಸ್ ಎಸೋಸಿಯೇಶನ್, ಕೊಣನೂರಿನ ರೂರಲ್ ನ್ಯಾಷನಲ್ ಎಜುಕೇಶನ್ ಸೊಸೈಟಿ, ಬಸವಾಪಟ್ಟಣದ ರಾಘವೇಂದ್ರ ಗುರುಕುಲ ವಿದ್ಯಾಪೀಠ, ಸಿಂಧಗಿಯ ಶಿಕ್ಷಣ ಪ್ರಸಾರಕ ಮಂಡಲಿ, ಸಾತನೂರಿನ ಎಸ್.ಎನ್.ಕೆ. ರೂರಲ್ ಎಜುಕೇಶನ್ ಸೊಸೈಟಿ, ಭದ್ರಾವತಿಯ ತರುಣ ಭಾರತಿ, ಬೆಂಗಳೂರಿನ ತಮರಾಯಿ ಕಣ್ಣನ್ ಮೆಮೋರಿಯಲ್ ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್ಸ್ಟಿಟ್ಯೂಟ್, ಬೆಂಗಳೂರಿನ ದಿ ಯುನೈಟೆಡ್ ಲಾಡ್ಜ್ ಆಫ್ ಥಿಯಾಸಫಿಸ್ಟ್, ಬೆಂಗಳೂರಿನ ಒಕ್ಕಲಿಗರ ಸಂಘ, ವಿಜಾಪುರದ ವಿದ್ಯಾವರ್ಧಕ ಸಂಘ, ತಾಳಿಕೋಟೆಯ ವೀರಶೈವ ವಿದ್ಯಾವರ್ಧಕ ಸಂಘ, ಮುದ್ದೇಬಿಹಾಳದ ವಿ. ವಿ. ಸಂಘ, ಬೆಂಗಳೂರಿನ ವಿದ್ಯಾರ್ಥಿ ಸಹಾಯ ಸಂಘ, ಇಂಥವು ಶಿಕ್ಷಣ ಕಾರ್ಯದಲ್ಲಿ ನಿರತರಾಗಿರುವ ಖಾಸಗಿ ಸಂಸ್ಥೆಗಳು. ಇಂಥವು ಇನ್ನೂ ಹಲವಾರಿವೆ. ಮೇಲೆ ಕೊಟ್ಟಿರುವುದು ಸಂಪೂರ್ಣ ಪಟ್ಟಿಯಲ್ಲ.

ರಾಜ್ಯದ ಬೇರೆ ಬೇರೆ ಭಾಗಗಳಲ್ಲಿನ ಶಾಲೆಗಳಲ್ಲಿ ದಾಖಲಾಗಿರುವ ವಿವಿಧ ವಯಸ್ಸುಗಳ (ಒಟ್ಟು ಸಂಖ್ಯೆಯಲ್ಲಿ) ಶೇಖಡಾವಾರು ಪ್ರಮಾಣ
ಇದು **1955-56**ರಲ್ಲಿ ಇದ್ದ ಸಂಖ್ಯೆ

| ವಲಯ | ವಯೋಮಿತಿ 6—11 | | | ವಯೋಮಿತಿ 11—14 | | | ವಯೋಮಿತಿ 14—17 | | |
|---|---|---|---|---|---|---|---|---|---|
| | ಹುಡುಗರು | ಹುಡುಗಿಯರು | ಒಟ್ಟು | ಹುಡುಗರು | ಹುಡುಗಿಯರು | ಒಟ್ಟು | ಹುಡುಗರು | ಹುಡುಗಿಯರು | ಒಟ್ಟು |
| ಹಳೆ ಮೈಸೂರು | 60.5 | 36.9 | 48.9 | 38.5 | 15.1 | 27.0 | 15.8 | 4.2 | 10.2 |
| ಬೆಳಗಾವಿ ಪ್ರದೇಶ | 93.9 | 64.1 | 79.2 | 44.5 | 10.4 | 27.8 | 11.6 | 2.2 | 7.2 |
| ಕಲ್ಬುರ್ಗಿ ಪ್ರದೇಶ | 42.6 | 11.3 | 27.2 | 22.8 | 2.9 | 13.0 | 8.1 | 0.6 | 4.4 |
| ಮುದ್ರಾಸ್ ಪ್ರದೇಶ | 84.7 | 64.5 | 74.8 | 38.0 | 23.3 | 30.8 | 15.8 | 6.5 | 11.3 |
| ಕೊಡಗು | 93.4 | 73.9 | 83.8 | 66.3 | 41.5 | 54.2 | 20.6 | 7.5 | 14.2 |
| ನವ ರಾಜ್ಯ (ಒಟ್ಟು) | 68.5 | 43.0 | 56.2 | 38.0 | 13.2 | 25.7 | 13.6 | 3.4 | 8.6 |

**1955–56ರಲ್ಲಿ (ರಾಜ್ಯ ಪುನರ್ಘಟನೆಯ ಹಿಂದಿನ ವರ್ಷದಲ್ಲಿ) ರಾಜ್ಯದ ವಿವಿಧ ಪ್ರದೇಶದಲ್ಲಿದ್ದ ಶಿಕ್ಷಣದ ಸೌಲಭ್ಯಗಳು**

| ವಿವಿಧ ಪ್ರದೇಶಗಳನ್ನು ಕುರಿತ ಅಂಶಗಳು | ಹಳೇ ಮೈಸೂರು | ಬೆಳಗಾವಿ | ಕಲ್ಬುರ್ಗಿ | ಮದ್ರಾಸ್ | ಕೊಡಗು | ಒಟ್ಟು |
|---|---|---|---|---|---|---|
| ವಿಸ್ತೀರ್ಣ (ಚದರ ಮೈಲಿಗಳಲ್ಲಿ) | 32,881 | 20,981 | 13,764 | 4,314 | 1,590 | 73,530 |
| ಜನಸಂಖ್ಯೆ (ಲಕ್ಷಗಳಲ್ಲಿ) (1955-56) | 108.73 | 56.70 | 30.01 | 16.23 | 2.53 | 214.20 |
| ಉನ್ನತ ಪ್ರಾಥಮಿಕ ಶಾಲೆಗಳು (ಒಂದರರಿಂದ ಏಳನೇಯ ತರಗತಿಯವರೆಗೆ) | 12,553 | 6,086 | 2,092 | 1,298 | 221 | 22,250 |
| ಎಷ್ಟು ಚದರ ಮೈಲಿಗೆ ಒಂದು ಶಾಲೆ ಇತ್ತು | 2.6 | 3.4 | 6.6 | 3.0 | 7.2 | 3.3 |
| ಶಾಲೆಯ ಸೌಲಭ್ಯ ಪಡೆಯಬಹುದಾಗಿದ್ದ ಒಟ್ಟು ಜನಸಂಖ್ಯೆ | 865 | 931 | 1,434 | 1,250 | 1,146 | 962 |
| ಪ್ರೌಢಶಾಲೆಗಳು (IX ರಿಂದ XI) | 266 | 128 | 18 | 63 | 11 | 486 |
| ಎಷ್ಟು ಚದರ ಮೈಲಿಗೆ ಒಂದು ಪೌಢಶಾಲೆ ಇತ್ತು | 124 | 164 | 765 | 68 | 145 | 151 |
| ಪ್ರೌಢಶಾಲೆಯ ಸೌಲಭ್ಯ ಪಡೆಯಬಹುದಾಗಿದ್ದ ಜನಸಂಖ್ಯೆ | 40,876 | 44,290 | 1,66,629 | 25,761 | 23,026 | 44,074 |
| ಸಾಧಾರಣ ಕಾಲೇಜುಗಳು | 26 | 8 | 3 | 4 | 1 | 42 |
| ಎಷ್ಟು ಚದರ ಮೈಲಿಗೆ ಒಂದು ಕಾಲೇಜಿತ್ತು | 1,265 | 2,623 | 4,588 | 1,079 | 1,590 | 1,751 |
| ಕಾಲೇಜಿನ ಸೌಲಭ್ಯ ಪಡಯಬಹುದಾಗಿದ್ದ ಜನಸಂಖ್ಯೆ (ಲಕ್ಷಗಳಲ್ಲಿ) | 4.2 | 7.1 | 10.0 | 4.1 | 2.5 | 5.1 |

ಜನಸಂಖ್ಯೆ : 1951ರ ಜನಗಣತಿಯ ಆಧಾರದ ಮೇಲೆ ಜನಸಂಖ್ಯೆಯನ್ನು ಅಂದಾಜು ಮಾಡಲಾಗಿದೆ.

ವಿಸ್ತೀರ್ಣ : ಈ ಅಂಕಿಗಳಿಗೆ ತಹಸೀಲ್ದಾರರುಗಳಿಂದ ಬಂದ ವರದಿಗಳೇ ಆಧಾರವಾಗಿವೆ. ಆದರೆ ಭಾರತದ ಸರ್ವೇಯರ್ ಜನರಲ್ ಪ್ರಕಾರ ಹೊಸ ರಾಜ್ಯದ ವಿಸ್ತೀರ್ಣ 74,861 ಚದರ ಮೈಲಿಗಳು.

ಆಧಾರ : 'ಪ್ರೊಗ್ರೆಸ್ ಆಫ್ ಎಜುಕೇಶನ್ ಇನ್ ಮೈಸೂರ್ ಸ್ಟೇಟ್ ಫ್ರಂ 1956-57 ಟು 1968-69'

ರಾಜ್ಯದಲ್ಲಿ **1-7-1981**ರಲ್ಲಿದ್ದ ಜಿಲ್ಲಾವಾರು ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಸಂಖ್ಯೆಗಳನ್ನು ಮತ್ತು ವಿದ್ಯಾರ್ಥಿಗಳ ಮತ್ತು ಶಿಕ್ಷಕರ ಸಂಖ್ಯೆಗಳನ್ನು ತೋರಿಸುವ ತಖ್ತೆ:

| ಜಿಲ್ಲೆ | ಪ್ರಾಥಮಿಕ ಶಾಲೆಗಳು | | | | ಪ್ರೌಢಶಾಲೆಗಳು | | | |
|---|---|---|---|---|---|---|---|---|
| | | ವಿದ್ಯಾರ್ಥಿಗಳ ಸಂಖ್ಯೆ | | | | ವಿದ್ಯಾರ್ಥಿಗಳ ಸಂಖ್ಯೆ | | |
| | ಶಾಲೆಗಳ ಸಂಖ್ಯೆ | ಗಂಡು ಮಕ್ಕಳು | ಹೆಣ್ಣು ಮಕ್ಕಳು | ಶಿಕ್ಷಕರ ಸಂಖ್ಯೆ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | ವಿದ್ಯಾರ್ಥಿನಿಯರ ಸಂಖ್ಯೆ | ಶಿಕ್ಷಕರ ಸಂಖ್ಯೆ |
| 1 | 2 | 3 | 4 | 5 | 6 | 7 | 8 | 9 |
| ಉತ್ತರ ಕನ್ನಡ | 1,614 | 84,723 | 70,717 | 3,974 | 123 | 16,246 | 11,960 | 1,054 |
| ಕಲ್ಬುರ್ಗಿ | 1,711 | 1,37,495 | 71,942 | 5,216 | 100 | 20,175 | 6,146 | 1,147 |
| ಕೊಡಗು | 377 | 30,762 | 24,708 | 1,678 | 52 | 7,443 | 6,551 | 526 |
| ಕೋಲಾರ | 2,394 | 1,53,809 | 1,12,754 | 6,132 | 101 | 28,822 | 12,336 | 958 |
| ಚಿಕ್ಕಮಗಳೂರು | 1,279 | 62,074 | 51,280 | 3,358 | 74 | 8,735 | 6,777 | 638 |
| ಚಿತ್ರದುರ್ಗ | 1,835 | 1,27,775 | 96,340 | 7,565 | 144 | 22,255 | 10,611 | 1,133 |
| ತುಮಕೂರು | 2,681 | 1,64,312 | 1,25,521 | 6,656 | 163 | 33,820 | 13,880 | 1,369 |
| ದಕ್ಷಿಣ ಕನ್ನಡ | 1,702 | 2,08,943 | 1,66,477 | 8,766 | 154 | 40,540 | 11,462 | 1,569 |
| ಧಾರವಾಡ | 1,984 | 2,45,231 | 1,94,375 | 8,653 | 222 | 30,907 | 21,580 | 1,632 |
| ಬಳ್ಳಾರಿ | 1,260 | 1,02,889 | 70,974 | 3,861 | 79 | 10,203 | 5,624 | 734 |
| ಬಿದರೆ | 789 | 94,951 | 62,231 | 2,755 | 65 | 12,261 | 3,800 | 620 |
| ಬೆಳಗಾವಿ | 2,239 | 2,48,146 | 1,76,505 | 8,677 | 198 | 40,203 | 16,999 | 2,177 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| ಬೆಂಗಳೂರು | 3,716 | 3,72,147 | 3,30,080 | 15,128 | 241 | 79,328 | 56,739 | 3,782 |
| ಮೈಸೂರು | 2,365 | 1,73,367 | 1,34,114 | 6,347 | 123 | 29,087 | 16,033 | 1,344 |
| ಮಂಡ್ಯ | 1,614 | 1,15,132 | 86,958 | 4,207 | 81 | 19,747 | 7,974 | 811 |
| ರಾಯಚೂರು | 1,353 | 1,03,948 | 59,430 | 3,746 | 54 | 13,049 | 4,615 | 582 |
| ವಿಜಾಪುರ | 1,989 | 1,87,610 | 1,21,957 | 7,012 | 122 | 30,564 | 10,024 | 921 |
| ಶಿವಮೊಗ್ಗ | 2,023 | 1,29,901 | 1,04,143 | 5,361 | 115 | 24,330 | 14,434 | 914 |
| ಹಾಸನ | 2,045 | 84,740 | 83,510 | 4,517 | 105 | 11,130 | 7,463 | 963 |
| ಒಟ್ಟು | 34,970 | 28,27,955 | 21,44,016 | 1,13,609 | 2,416 | 4,76,846 | 2,45,008 | 22,865 |

## 1980–81ರಲ್ಲಿ ರಾಜ್ಯದಲ್ಲಿದ್ದ ವಿವಿಧ ಶಿಕ್ಷಕರ ತರಬೇತಿ ಸಂಸ್ಥೆಗಳ ಸಂಖ್ಯೆಯನ್ನು ತೋರಿಸುವ ತಃಖ್ತೆ

| ಜಿಲ್ಲೆ | ಪೂರ್ವ ಪ್ರಾಥಮಿಕ ಶಾಲೆಗಳ ಶಿಕ್ಷಕಿಯರ ತರಬೇತಿ ಸಂಸ್ಥೆ | | | | ಶಿಕ್ಷಕರ ತರಬೇತಿ ಸಂಸ್ಥೆ | | | | ಬಿ. ಎಡ್. ಕಾಲೇಜುಗಳು | | | |
|---|---|---|---|---|---|---|---|---|---|---|---|---|
| | ಸಂಸ್ಥೆಗಳ ಸಂಖ್ಯೆ | ವಿದ್ಯಾರ್ಥಿಗಳು: ಹುಡುಗರು | ವಿದ್ಯಾರ್ಥಿಗಳು: ಹುಡುಗಿಯರು | ಶಿಕ್ಷಕರ ಸಂಖ್ಯೆ | ಸಂಸ್ಥೆಗಳ ಸಂಖ್ಯೆ | I ಮತ್ತು II ವರ್ಷಗಳಲ್ಲಿನ ವಿದಾರ್ಥಿಗಳ ಸಂಖ್ಯೆ: ಹುಡುಗರು | I ಮತ್ತು II ವರ್ಷಗಳಲ್ಲಿನ ವಿದಾರ್ಥಿಗಳ ಸಂಖ್ಯೆ: ಹುಡುಗಿಯರು | ಶಿಕ್ಷಕರ ಸಂಖ್ಯೆ | ಕಾಲೇಜುಗಳ ಸಂಖ್ಯೆ | ಅಭ್ಯರ್ಥಿಗಳ ಸಂಖ್ಯೆ: ಹುಡುಗರು | ಅಭ್ಯರ್ಥಿಗಳ ಸಂಖ್ಯೆ: ಹುಡುಗಿಯರು | ಶಿಕ್ಷಕರ ಸಂಖ್ಯೆ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ಉತ್ತರ ಕನ್ನಡ | 2 | — | 99 | 8 | 2 | 91 | 210 | 26 | 2 | 138 | 80 | 14 |
| ಕಲ್ಬುರ್ಗಿ | 3 | — | 131 | 11 | 5 | 357 | 352 | 59 | 1 | 60 | 40 | 11 |
| ಕೊಡಗು | — | — | — | — | 3 | 123 | 473 | 30 | 1 | 12 | 88 | 7 |
| ಕೋಲಾರ | 3 | — | 82 | 17 | 7 | 676 | 1,113 | 82 | 3 | 171 | 154 | 21 |
| ಚಿಕ್ಕಮಗಳೂರು | — | — | — | — | 1 | 140 | 147 | 20 | — | — | — | — |
| ಚಿತ್ರದುರ್ಗ | 1 | — | 65 | 4 | 5 | 248 | 453 | 40 | 4 | 249 | 127 | 30 |
| ತುಮಕೂರು | 3 | — | 150 | 11 | 6 | 786 | 436 | 81 | 3 | 146 | 182 | 22 |
| ದಕ್ಷಿಣ ಕನ್ನಡ | — | — | — | — | 7 | 195 | 595 | 84 | 3 | 98 | 202 | 28 |
| ಧಾರವಾಡ | 3 | — | 149 | 10 | 8 | 549 | 500 | 93 | 2 | 102 | 92 | 16 |
| ಬಳ್ಳಾರಿ | — | — | — | — | 3 | 367 | 203 | 35 | 2 | 113 | 107 | 17 |
| ಬಿದರೆ | 1 | — | 100 | 4 | 2 | 205 | 178 | 26 | 1 | 71 | 49 | 8 |
| ಬೆಳಗಾವಿ | 1 | — | 60 | 5 | 5 | 354 | 443 | 55 | 1 | 53 | 46 | 10 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| ಬೆಂಗಳೂರು | 6 | — | 319 | 30 | 15 | 1,071 | 2,493 | 156 | 9 | 433 | 624 | 65 |
| ಮೈಸೂರು | 4 | — | 151 | 9 | 8 | 726 | 719 | 121 | 6 | 382 | 294 | 48 |
| ಮಂಡ್ಯ | — | — | — | — | 2 | 81 | 208 | 22 | 1 | 37 | 62 | 9 |
| ರಾಯಚೂರು | 1 | — | 50 | 3 | 3 | 231 | 155 | 42 | 2 | 134 | 98 | 14 |
| ವಿಜಾಪುರ | — | — | — | — | 6 | 653 | 236 | 65 | 2 | 152 | 48 | 18 |
| ಶಿವಮೊಗ್ಗ | 3 | — | 122 | 11 | 3 | 78 | 213 | 26 | 1 | 63 | 36 | 8 |
| ಹಾಸನ | — | — | — | — | 1 | 47 | 105 | 17 | 3 | 186 | 164 | 25 |
| ಒಟ್ಟು | 31 | — | 1,478 | 123 | 92 | 6,978 | 9,232 | 1,080 | 47 | 2,600 | 2,493 | 371 |

**1981-82ರಲ್ಲಿದ್ದ ಜಿಲ್ಲಾವಾರು ಡಿಗ್ರಿ ಕಾಲೇಜುಗಳು, ಅವುಗಳಲ್ಲಿದ್ದ ವಿದ್ಯಾರ್ಥಿಗಳು ಮತ್ತು ಶಿಕ್ಷಕರುಗಳ ಸಂಖ್ಯೆಯನ್ನು ತೋರಿಸುವ ತಃಖ್ತೆ**

| ಜಿಲ್ಲೆ | ಕಾಲೇಜುಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | | | ಶಿಕ್ಷಕರ ಸಂಖ್ಯೆ |
|---|---|---|---|---|---|
| | | ಗಂಡು ಮಕ್ಕಳು | ಹೆಣ್ಣು ಮಕ್ಕಳು | ಒಟ್ಟು | |
| ಉತ್ತರ ಕನ್ನಡ | 13 | 5,776 | 3,068 | 8,844 | 313 |
| ಕಲ್ಬುರ್ಗಿ | 12 | 8,003 | 1,334 | 9,337 | 198 |
| ಕೊಡಗು | 4 | 1,186 | 1,067 | 2,253 | 9 |
| ಕೋಲಾರ | 9 | 7,195 | 1,776 | 8,971 | 279 |
| ಚಿಕ್ಕಮಗಳೂರು | 5 | 2,741 | 1,141 | 3,882 | 91 |
| ಚಿತ್ರದುರ್ಗ | 13 | 9,157 | 3,120 | 12,277 | 346 |
| ತುಮಕೂರು | 7 | 7,450 | 2,025 | 9,475 | 189 |
| ದಕ್ಷಿಣ ಕನ್ನಡ | 28 | 12,474 | 9,526 | 21,940 | 680 |
| ಧಾರವಾಡ | 21 | 13,063 | 4,164 | 17,227 | 549 |
| ಬಳ್ಳಾರಿ | 8 | 4,717 | 1,567 | 6,284 | 258 |
| ಬಿದರೆ | 8 | 4,587 | 755 | 5,342 | 155 |
| ಬೆಳಗಾವಿ | 21 | 11,484 | 3,235 | 14,719 | 567 |
| ಬೆಂಗಳೂರು | 49 | 28,947 | 19,556 | 48,503 | 1,280 |
| ಮೈಸೂರು | 14 | 8,982 | 6,700 | 15,682 | 467 |
| ಮಂಡ್ಯ | 8 | 5,531 | 1,152 | 6,683 | 136 |
| ರಾಯಚೂರು | 7 | 3,160 | 904 | 4,064 | 148 |
| ವಿಜಾಪುರ | 19 | 9,992 | 1,608 | 11,550 | 432 |
| ಶಿವಮೊಗ್ಗ | 12 | 7,327 | 3,140 | 10,467 | 256 |
| ಹಾಸನ | 7 | 3,884 | 2,073 | 5,957 | 109 |
| ಒಟ್ಟು | 265 | 1,55,546 | 67,911 | 2,23,457 | 6,462* |

ಟಿಪ್ಪಣಿ : ಬಿ.ಎ. ಬಿ.ಎಸ್‌ಸಿ., ಮತ್ತು ಬಿ.ಕಾಂ. ತರಗತಿಗಳು ಮಾತ್ರವಿದ್ದು ಕಾಲೇಜುಗಳ ಸಂಖ್ಯೆಯನ್ನು ಕೊಡಲಾಗಿದೆ.

*ಈ ಸಂಖ್ಯೆಯಲ್ಲಿ ಸರ್ಕಾರಿ ಕಾಲೇಜುಗಳಲ್ಲಿದ್ದ ಶಿಕ್ಷಕರ ಸಂಖ್ಯೆಯು ಸೇರಿಲ್ಲ. 1981-82ರಲ್ಲಿ ಎಲ್ಲಾ ಸರಕಾರಿ ಕಾಲೇಜುಗಳಲ್ಲಿ 1,273 ಶಿಕ್ಷಕರಿದ್ದರು.

## ವಯಸ್ಕರ ಶಿಕ್ಷಣ

ಹಳೆಯ ಮೈಸೂರು ರಾಜ್ಯದಲ್ಲಿ ದಿವಾನ್ ಶೇಷಾದ್ರಿ ಅಯ್ಯರ್ ಅವರಿಂದ ವಯಸ್ಕರ ಶಿಕ್ಷಣದ ಕಾರ್ಯಕ್ರಮವು ಪ್ರಾರಂಭವಾಯಿತು. ಆದರೆ ಈ ಕಾರ್ಯಕ್ರಮವು ಮುಂದು ವರಿಯಲಿಲ್ಲ. 1905ರಲ್ಲಿ ಪುನಃ ಪ್ರಾರಂಭವಾದರೂ, 1910ರಲ್ಲಿ ವಯಸ್ಕರ ಶಿಕ್ಷಣದ ಶಾಲೆಗಳು ಪ್ರಾರಂಭವಾದಾಗ ಸರ್ಕಾರವು ಈ ಕಾರ್ಯಕ್ರಮಕ್ಕೆ ಮಾನ್ಯತೆ ನೀಡಿತು. ಹಗಲಿನ ಶಾಲೆಗಳಿಗೆ ಹಾಜರಾಗಲು ಸಾಧ್ಯವಾಗದ 15 ವರ್ಷಗಳಿಗೆ ಮೀರಿದ ಕುಶಲ ಕರ್ಮಿಗಳು, ರೈತರು, ಮತ್ತಿತರರನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ರಾತ್ರಿ ಶಾಲೆಗಳನ್ನು ತೆರೆಯ ಲಾಯಿತು. ಈ ರಾತ್ರಿ ಶಾಲೆಗಳನ್ನು ಹಗಲು ಶಾಲೆಯ ಉಪಾಧ್ಯಾಯರು ಪ್ರಾಥಮಿಕ ಶಾಲಾ ಕಟ್ಟಡದಲ್ಲಿ ನಡೆಸುತ್ತಿದ್ದರು. ಇವುಗಳಿಗೆ ಮೂರರಿಂದ ಎಂಟು ರೂ.ಗಳವರೆಗೆ ಗ್ರಾಮಾಂತರ ಪ್ರದೇಶದಲ್ಲೂ 14 ರೂ.ಗಳಂತೆ ತಾಲೂಕು ಸ್ಥಳಗಳಲ್ಲೂ ಅನುದಾನ ನೀಡಲಾಗುತ್ತಿತ್ತು. ಈ ಶಾಲೆಗಳಲ್ಲಿ ಎರಡು ಬೇರೆ ಬೇರೆ ವರ್ಗಗಳಿದ್ದು, ಮೊದಲನೇಯದರಲ್ಲಿ ಓದು ಬರಹ ಮತ್ತು ಗಣಿತದ ಮೂಲ ಶಿಕ್ಷಣವೂ, ಇನ್ನೊಂದರಲ್ಲಿ ಸ್ವಲ್ಪ ಹೆಚ್ಚಿನ ಮಟ್ಟದ ಶಿಕ್ಷಣವೂ ಕೊಡಲ್ಪಡುತ್ತಿತ್ತು.

ವಯಸ್ಕರ ಶಿಕ್ಷಣದ ಪ್ರಾಮುಖ್ಯತೆಯು 1911ರಲ್ಲಿ ನಡೆದ ಆರ್ಥಿಕ ಸಮ್ಮೇಳನದಲ್ಲಿ ಅದರ ಅಂಗವಾದ ವಿದ್ಯಾ ಸಮಿತಿಯಲ್ಲಿ ಚರ್ಚಿಸಲ್ಪಟ್ಟಿತು. ಸರ್ಕಾರವು 1913-14ರ ಸಾಲಿಗೆ ವಯಸ್ಕರ ಶಿಕ್ಷಣಕ್ಕಾಗಿ ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ರೂಪಿಸಿತು. 1914ರಲ್ಲಿ ಸರ್ಕಾರವು ಒಂದು ಘೋಷಣೆಯನ್ನು ಹೊರಡಿಸಿತು. ಅದರಂತೆ ಪ್ರಾಥಮಿಕ ವಿದ್ಯಾಭ್ಯಾಸದ ಯಾವುದೇ ಕಾರ್ಯಕ್ರಮದಲ್ಲಿ ಶಾಲಾ ಶಿಕ್ಷಣ, ರಾತ್ರಿಯ ಶಾಲೆಗಳು, ಶಾಲೆಗಳ ಸುಧಾರಣೆ ಮತ್ತು ಭಾಷಣಗಳ ಏರ್ಪಾಟು ಹಾಗೂ ವಯಸ್ಕರಿಗೆ ಶಿಕ್ಷಣ ಕೊಡಲು ಸಂಚಾರಿ ಉಪಾಧ್ಯಾಯವರ್ಗವನ್ನು ಹೊಂದಿರುವಂತೆ ತಿಳಿಸಲಾಯಿತು. ಸರ್ಕಾರವು ಉದಾರವಾದ ಧನ ಸಹಾಯವನ್ನು ನೀಡಿದುದರಿಂದ 1914-15ರಲ್ಲಿ 245 ಸಂಖ್ಯೆಯಲ್ಲಿದ್ದ ಶಾಲೆಗಳು 1918-19ರಲ್ಲಿ 2,671ಕ್ಕೆ ಹೆಚ್ಚಿ ಆ ವರ್ಷ 43,205 ವಯಸ್ಕರು ಈ ಶಿಕ್ಷಣವನ್ನು ಪಡೆಯುವುದಕ್ಕೆ ಅನುಕೂಲವಾಯಿತು. ಆದರೆ ಈ ಕಾರ್ಯಕ್ರಮದಲ್ಲಿ ಒಂದು ಹಿನ್ನಡೆ ಪ್ರಾರಂಭವಾಯಿತು. ಈ ಕಾರ್ಯಕ್ರಮದಲ್ಲಿದ್ದ ಮೂರು ವರ್ಷದ ಸತತ ವಿದ್ಯಾಭ್ಯಾಸವು ಸಾಹಿತ್ಯ ರೂಪದಲ್ಲಿದ್ದು ವಯಸ್ಕರಿಗೆ ತಮ್ಮ ವೃತ್ತಿಯನ್ನು ಸುಧಾರಿಸುವುದಕ್ಕೆ ಇದರಿಂದ ಉಪಯೋಗವಿರಲಿಲ್ಲ. ಹಾಜರಿಯು ತುಂಬಾ ಕಡಿಮೆ ಇರುತ್ತಿತ್ತು. ನಿರ್ದಿಷ್ಟವಾದ ಪಠ್ಯಪುಸ್ತಕಗಳಾಗಲೀ ಅಥವಾ ಪರೀಕ್ಷೆಗಳಾಗಲೀ ಇರಲಿಲ್ಲ. ಶಾಲೆಗಳು ಸರಿಯಾಗಿ ಕೆಲಸ ಮಾಡುತ್ತಿವೆಯೋ ಇಲ್ಲವೋ ಎಂದು ಮೇಲ್ವಿಚಾರಣೆ ಮಾಡಲು ಸರಿಯಾದ ತನಿಖಾ ಸಿಬ್ಬಂದಿ ಇರಲಿಲ್ಲ. ಇವೆಲ್ಲ ಕಾರಣಗಳಿಂದ ಅನೇಕ ವಯಸ್ಕರ ಶಾಲೆಗಳು ತುಂಬಾ ಹೀನಾಯ ಸ್ಥಿತಿಗೆ ಬಂದು ಶೇಕಡ 50ರಷ್ಟು ಶಾಲೆಗಳು ಮುಚ್ಚಲ್ಪಟ್ಟವು. 1921-22ರ ಸುಮಾರಿಗೆ 1,259 ಶಾಲೆಗಳು ಮಾತ್ರ ಇದ್ದು ಅದರಲ್ಲಿ 29,646 ವಯಸ್ಕರು ಶಿಕ್ಷಣ ಪಡೆಯುತ್ತಿದ್ದರು. ಇವುಗಳ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತಾ ಬಂದು 1931-32ರ ಹೊತ್ತಿಗೆ 1,729 ವಯಸ್ಕರಿದ್ದ 69 ಶಾಲೆಗಳೂ, 1940ರಲ್ಲಿ 70 ಶಾಲೆಗಳೂ ಉಳಿದಿದ್ದವು. ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಅನೇಕ ಕಾಂಗ್ರೆಸ್ ಮುಖಂಡರು ತಮ್ಮ ಸ್ವಂತ ಆಸಕ್ತಿಯಿಂದಲೇ ವಯಸ್ಕರ ಶಿಕ್ಷಣ ತರಗತಿಗಳನ್ನು ವ್ಯವಸ್ಥೆ ಮಾಡಿದ್ದರು.

1939-40ರ ಸುಮಾರಿಗೆ ದೇಶದಲ್ಲೆಲ್ಲಾ ಜನಸಾಮಾನ್ಯರಲ್ಲಿ ಹೆಚ್ಚಿನ ಪ್ರಜ್ಞೆ ಮೂಡಿ, ತತ್ಪರಿಣಾಮವಾಗಿ ಅಖಂಡ ಸಾಕ್ಷರತಾ ಚಳವಳಿಯನ್ನು ಹಳೇ ಮೈಸೂರು ಸಂಸ್ಥಾನದಲ್ಲೂ ಪ್ರಾರಂಭಿಸಿದರು. ಮೈಸೂರು ಸಂಸ್ಥಾನವು ಈ ದಿಸೆಯಲ್ಲಿ ಶ್ಲಾಘನೀಯವಾದ ಕಾರ್ಯವನ್ನು ಮಾಡಿ ಎನ್. ಭದ್ರಯ್ಯನವರಂತಹ ಅಂತರ್ರಾಷ್ಟ್ರೀಯ ಖ್ಯಾತಿ ಗಳಿಸಿದ ವ್ಯಕ್ತಿಗಳು ಈ ಕ್ಷೇತ್ರಕ್ಕೆ ಕಾಲಿರಿಸುವಂತೆ ಮಾಡಿತು. 1940ರಲ್ಲಿ ಮೈಸೂರು ವಿಶ್ವವಿದ್ಯಾಲಯ ಮತ್ತು ಮೈಸೂರು ಪುರಸಭೆಯ ಸಹಾಯದಿಂದ ವಿಶ್ವವಿದ್ಯಾಲಯದ ಸಂಘದವರು ಮೈಸೂರಿನಲ್ಲಿ ಒಂದು ಸುರಕ್ಷತಾ ಚಳುವಳಿಯನ್ನೇ ಪ್ರಾರಂಭಿಸಿದರು. ವಿಶ್ವವಿದ್ಯಾಲಯದ ಸಂಘದ ವತಿಯಿಂದ ಒಂದು ಸಮಾಜ ಸೇವಾ ಸಮಿತಿಯು ಪ್ರಾರಂಭವಾಗಿ, ಮೈಸೂರಿನ ಸುತ್ತಮುತ್ತ ಕಾರ್ಯ ಶಿಬಿರಗಳನ್ನು ಏರ್ಪಡಿಸಿ ಸಾಕ್ಷರತಾ ತರಗತಿಗಳನ್ನು ನಡೆಸಿತು. ಸಮಾಜ ಸೇವೆಯಲ್ಲಿ ತರಬೇತಿ ನೀಡಲು ವಿಶ್ವವಿದ್ಯಾಲಯದ ವತಿಯಿಂದ ಬೆಂಗಳೂರಿನಲ್ಲಿ ಒಂದು ನೆಲೆಯನ್ನು ನಿರ್ಮಿಸಿ ಅದರ ಮೂಲಕ ಸಮಾಜದ ದುರ್ಬಲ ವರ್ಗದವರಿಗೆ ಅನುಕೂಲವಾಗುವಂತೆ ರಾತ್ರಿ ಶಾಲೆಗಳನ್ನು ನಡೆಸಲಾಯಿತು. ಇದೇ ಸಮಯದಲ್ಲಿ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾದ ಜೆ. ಬಿ. ಮಲ್ಲಾರಾಧ್ಯ ಅವರಿಂದ ಪ್ರಾರಂಭಿಸಲ್ಪಟ್ಟ ಒಂದು ವಯಸ್ಕರ ಶಿಕ್ಷಣ ಯೋಜನೆಯನ್ನು ಕೋಲಾರ ಪುರಸಭೆಯು ಪ್ರಾರಂಭಿಸಿತು. ದೇವುಡು ನರಸಿಂಹಶಾಸ್ತ್ರಿಗಳಂತಹ ಗಣ್ಯವ್ಯಕ್ತಿಗಳು ವಯಸ್ಕರ ಶಿಕ್ಷಣ ತರಗತಿಗಳನ್ನು ಕೆಲವು ಹಳ್ಳಿಗಳಲ್ಲಿ ನಡೆಸುತ್ತಿದ್ದರು. ರಾಜ್ಯ ಶಿಕ್ಷಣ ಸಂಘವು (ಸ್ಟೇಟ್ ಎಜುಕೇಷನ್ ಲೀಗ್) ಕೆಲವು ಕೇಂದ್ರಗಳಲ್ಲಿ ವಯಸ್ಕರ ಶಿಕ್ಷಣ ಕಾರ್ಯವನ್ನು ನಡೆಸುತ್ತಿತ್ತು. ಇದೇ ಸಮಯದಲ್ಲಿ ಜಾಗತಿಕ ಸಾಕ್ಷರತಾ ಆಂದೋಲನದ ನೇತಾರರಾಗಿದ್ದ ಡಾಕ್ಟರ್ ಲೌಬಾಕ್ ಅವರು ಮೈಸೂರಿಗೆ ಭೇಟಿಯನ್ನು ನೀಡಿದಾಗ ಇವರ ಮಾರ್ಗದರ್ಶನ ಮೇರೆಗೆ ಮೈಸೂರಿನ ವೆಸ್ಲಿಯನ್ ಪ್ರೆಸ್ ಸಂಸ್ಥೆಯು ವಯಸ್ಕರ ಶಿಕ್ಷಣ ಪಟಗಳನ್ನು ತಯಾರಿಸಿ ಪ್ರಚಾರ ಮಾಡಿತು. ಮೈಸೂರು ವಿಶ್ವವಿದ್ಯಾಲಯ

ಯೂನಿಯನ್ ನಡೆಸಿದ ಪ್ರಯೋಗಗಳ ಯಶಸ್ಸಿನಿಂದಾಗಿ ಮೈಸೂರು ಸಾಕ್ಷರತಾ ಸಮಿತಿಯು ಸ್ಥಾಪಿತವಾಗಿ ಬೆಂಗಳೂರಿನಲ್ಲಿ ಒಂದು ವಿಶ್ವವಿದ್ಯಾಲಯದ ನೆಲೆಯು ಸ್ಥಾಪನೆಯೂ ಆಯಿತು. 1941ರ ಅಕ್ಟೋಬರ್ ತಿಂಗಳಿನಲ್ಲಿ ಹಳೇ ಮೈಸೂರಿನ ಶಿಕ್ಷಣ ಮಂತ್ರಿಗಳು ರಾಜ್ಯಾದ್ಯಂತ ಸಾಕ್ಷರತಾ ಕಾರ್ಯಕ್ರಮದ ಯೋಜನೆಯ ಉದ್ಘಾಟನೆಗಾಗಿ ಕರೆದಿದ್ದ ಸಭೆಯು ಮೈಸೂರು ರಾಜ್ಯ ಸಾಕ್ಷರತಾ ಸಮಿತಿಯಾಗಿ ರೂಪಗೊಂಡು ವಾರ್ಷಿಕವಾಗಿ 12,000 ರೂ.ಗಳ ಅನುದಾನವನ್ನು ಪಡೆಯಿತು. ಮುಂದೆ 1945ರಲ್ಲಿ ಈ ಸಂಸ್ಥೆಯ ಹೆಸರು "ವಯಸ್ಕರ ಶಿಕ್ಷಣ ಸಮಿತಿ" ಎಂದು ಬದಲಾಯಿಸಲ್ಪಟ್ಟಿತು.

1942ರ ಜನವರಿಯಿಂದ ಈ ಸಂಸ್ಥೆಯು ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ತನ್ನ ಕಾರ್ಯವನ್ನು ಅಸ್ಥೆಯಿಂದ ಪ್ರಾರಂಭಿಸಿತು. ಸಾಕ್ಷರತಾ ತರಗತಿಗಳನ್ನು ನಡೆಸುವುದು ಮತ್ತು ವಯಸ್ಕರ ಶಿಕ್ಷಣ ಕೇಂದ್ರಗಳನ್ನು ನಡೆಸುವುದು, ಸಾಕ್ಷರತಾ ತರಗತಿಗಳಿಗೆ ಬೇಕಾದ ವಯಸ್ಸಿಗೆ ತಕ್ಕ ಪುಸ್ತಕಗಳನ್ನು ಪ್ರಕಾಶನಗೊಳಿಸುವುದು ಮತ್ತು ಅಕ್ಷರಸ್ಥರ ಹಾಗೂ ವಯಸ್ಕರ ಶಿಕ್ಷಣ ಪದ್ಧತಿಗಳಲ್ಲಿ ಸಂಶೋಧನೆಗಳನ್ನು ನಡೆಸುವುದು ಮೊದಲಾದ ಚಟುವಟಿಕೆಗಳನ್ನು ಈ ಸಮಿತಿಯು ಏರ್ಪಾಡು ಮಾಡುತ್ತಿತ್ತು. ಈ ಸಾಕ್ಷರತಾ ಕಾರ್ಯವು ಮೂರು ಹಂತಗಳಾದ್ದಾಗಿದ್ದು ಮೊದಲನೇಯದರಲ್ಲಿ ಸಾಕ್ಷರತಾಪೂರ್ವ ಪ್ರಚಾರ ಯೋಜನೆ, ಎರಡನೇಯ ಹಂತದಲ್ಲಿ 10 ವಾರಗಳ ಅವಧಿಯ ಒಂದು ಪ್ರಾಥಮಿಕ ಸಾಕ್ಷರತಾ ತರಗತಿ, ಮೂರನೇಯ ಹಂತದಲ್ಲಿ ಮೂರು ತಿಂಗಳ ಅವಧಿಯ ಸಾಕ್ಷರತಾ ಅವಧಿಯ ತರಗತಿಯನ್ನು ಮತ್ತೆ ಮುಂದುವರಿಸುವುದು ಆಗಿತ್ತು. ಸಾಕ್ಷರತಾ ಚಳವಳಿಯನ್ನು ಪ್ರತಿನಿತ್ಯದ ರಾತ್ರಿ ಮತ್ತು ಹಗಲು ಶಾಲೆಗಳ ಮೂಲಕವೂ ಮತ್ತು 'ನಿಮ್ಮ ಮನೆಯವರೆಲ್ಲಾ ಅಕ್ಷರಸ್ಥರಾಗಿರಿ' ಎಂಬ ಪ್ರಚಾರ ಗುಂಪುಗಳ ಮೂಲಕವೂ ವ್ಯವಸ್ಥೆಗೊಳಿಸಲಾಗಿತ್ತು. ಒಂದು ಅಂದಾಜಿನಂತೆ ಸಾಧಾರಣ ಬುದ್ಧಿವಂತನಾಗಿರುವ ಒಬ್ಬ ವಯಸ್ಕನು ಸುಮಾರು ಐದು ತಿಂಗಳ ಅವಧಿಯಲ್ಲಾಗಲೀ 108 ಗಂಟೆಗಳ ತರಬೇತಿಯಿಂದಾಗಲೀ ಅಕ್ಷರಸ್ಥನಾಗುತ್ತಿದ್ದನು. ಒಬ್ಬ ಪುರುಷನನ್ನು ಅಕ್ಷರಸ್ಥನನ್ನಾಗಿ ಮಾಡುವುದಕ್ಕೆ ಮೂರು ರೂಪಾಯಿ ಸಂಭಾವನೆಯನ್ನೂ ಮತ್ತು ಒಬ್ಬ ಮಹಿಳೆಯನ್ನು ಅಕ್ಷರಸ್ಥಳಾಗಿ ಮಾಡುವುದಕ್ಕೆ ನಾಲ್ಕು ರೂಪಾಯಿ ಸಂಭಾವನೆಯನ್ನೂ ಉಪಾಧ್ಯಾಯರು ಪಡೆಯುತ್ತಿದ್ದರು. ಕಮಿಟಿಯ ಜಿಲ್ಲಾ ವ್ಯವಸ್ಥಾಪಕರು ಮತ್ತು ಮೇಲ್ವಿಚಾರಕರು ಇವರ ಸಹಕಾರದಿಂದ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹಾಯಕ ಇನ್ಸ್‌ಪೆಕ್ಟರರು ತರಗತಿಗಳನ್ನು ಪರಿಶೀಲಿಸುತ್ತಿದ್ದರು.

1943-44ರ ಕೊನೆಯವರೆಗೆ ಸಮಿತಿಯು 1,893 ತರಗತಿಗಳನ್ನು ನಡೆಸಿ 31,693 ವಯಸ್ಕರನ್ನು ಅಕ್ಷರಸ್ಥರನ್ನಾಗಿ ಮಾಡಿ 1,00,700 ಪಠ್ಯಪುಸ್ತಕಗಳನ್ನು ವಿತರಿಸಿ 252 ಗ್ರಂಥಾಲಯಗಳನ್ನು ತೆರೆಯಿತು. ಸರ್ಕಾರದಿಂದ ಈ ಕಾರ್ಯಕ್ಕೆ ಕೊಡಲ್ಪಟ್ಟ ಅನುದಾನವು 1,32,500 ರೂಪಾಯಿಗಳು. ಇದರ ಜೊತೆಗೆ ಪುನಃ ಸಾರ್ವಜನಿಕ ಶಿಕ್ಷಣ ಇಲಾಖೆಯು 82 ರಾತ್ರಿ ಶಾಲೆಗಳನ್ನು ತೆರೆದು 2,161 ವಯಸ್ಕರಿಗೆ ಶಿಕ್ಷಣವನ್ನು ನೀಡಿತು. ಈ 82 ಶಾಲೆಗಳಲ್ಲಿ 53 ಶಾಲೆಗಳು ಕನ್ನಡ ಮಾಧ್ಯಮದವಾಗಿದ್ದು ಅವುಗಳಲ್ಲಿ 1,387 ವಯಸ್ಕರೂ, 26 ಶಾಲೆಗಳು ಉರ್ದು ಮಾಧ್ಯಮದವಾಗಿದ್ದು ಅವುಗಳಲ್ಲಿ 730 ವಯಸ್ಕರೂ, ಮೂರು ಶಾಲೆಗಳು ಪರಿಶಿಷ್ಟ ಜಾತಿಯವರವಾಗಿದ್ದು ಅವುಗಳಲ್ಲಿ 44 ವಯಸ್ಕರೂ ಇದ್ದರು. 1944-45ರಲ್ಲಿ, 2,073 ಕೇಂದ್ರಗಳ ಮೂಲಕ 29,257 ವಯಸ್ಕರನ್ನು ಅಕ್ಷರಸ್ಥರನ್ನಾಗಿ ಮಾಡಲಾಯಿತು. 1956-57ರಲ್ಲಿ ಸಮಿತಿಯು 1,396 ತರಗತಿಗಳನ್ನು ನಡೆಸಿ 3,234 ಮಹಿಳೆಯರೂ ಸೇರಿದಂತೆ 25,754 ವಯಸ್ಕರನ್ನು ಅಕ್ಷರಸ್ಥರನ್ನಾಗಿ ಮಾಡಿತು.

ಯುನೆಸ್ಕೊ ಚರ್ಚಾಗೋಷ್ಠಿ : ರಾಜ್ಯದ ವಯಸ್ಕರ ಶಿಕ್ಷಣದಲ್ಲಿ ಎದ್ದು ಕಾಣುವ ಒಂದು ಘಟನೆಯೆಂದರೆ ಮೈಸೂರಿನ ಬೃಂದಾವನದಲ್ಲಿ, 1949ರಲ್ಲಿ ನಡೆದ 'ಗ್ರಾಮೀಣ ವಯಸ್ಕರ ಶಿಕ್ಷಣ' ಎಂಬ ಯುನೆಸ್ಕೊ ಚರ್ಚಾಗೋಷ್ಠಿ. ಇದು ವಯಸ್ಕರ ಶಿಕ್ಷಣದ ಬಗ್ಗೆ ಯುನೆಸ್ಕೋವಿನ ನೆರವಿನಿಂದ ನಡೆದ ಎರಡನೇಯ ಪ್ರಾಂತೀಯ ಚರ್ಚಾಗೋಷ್ಠಿಯಾಗಿದ್ದು ಇದರಲ್ಲಿ ಗ್ರಾಮೀಣ ವಯಸ್ಕರ ಶಿಕ್ಷಣದ ಸಮಸ್ಯೆಗಳನ್ನು ಅದರಲ್ಲೂ ವಿಶೇಷವಾಗಿ ಏಷ್ಯಾ ಖಂಡದ ಸಮಸ್ಯೆಗಳನ್ನು ಚರ್ಚಿಸಲಾಯಿತು. ವಯಸ್ಕರ ಶಿಕ್ಷಣ ಸಮಿತಿಯು ಸಮೀಪದ ಒಂದು ಸಣ್ಣ ಹಳ್ಳಿಯಲ್ಲಿ ಒಂದು ಗ್ರಾಮಾಂತರ ವಯಸ್ಕರ ಶಿಕ್ಷಣ ಮಾರ್ಗದರ್ಶಿ ಯೋಜನೆಯೊಂದನ್ನು ಆರಂಭಿಸಿತ್ತು. ಸಮಸ್ಯೆಗಳನ್ನು ಸ್ಥಳದಲ್ಲೇ ಅಧ್ಯಯನ ಮಾಡಲು ಯುನೆಸ್ಕೋ ಚರ್ಚಾಗೋಷ್ಠಿಯ ಸದಸ್ಯರು ಆ ಗ್ರಾಮದಲ್ಲಿ ಸಮೀಕ್ಷೆ ನಡೆಸಿದರು. 1951ರಲ್ಲಿ ವಯಸ್ಕರ ಶಿಕ್ಷಣ ಸಮಿತಿಯು ಯುನೆಸ್ಕೋದ ಸಹ ಯೋಜನೆಯಾಗಿ ಅಂಗೀಕಾರವಾಯಿತು. ಜೊತೆಗೆ ಅದರ ಬಳುವಳಿ ಪತ್ರ ('ಗಿಫ್ಟ್ ಕೂಪನ್') ಪದ್ಧತಿಯಿಂದ ಸಮಿತಿಗೆ ಸಹಾಯವೂ ದೊರೆಯಿತು. 1953-54ರಲ್ಲಿ ಯುನೆಸ್ಕೋ ಸಂಸ್ಥೆಯು ಮೈಸೂರಿನಲ್ಲಿ ಈ ಸಮಿತಿಯ ನೆರವಿನೊಂದಿಗೆ ಒಂದು ಶ್ರವಣ-ದೃಕ್ ಸಾಧನಗಳ (ಆಡಿಯೋ ವಿಜುಯಲ್ ಏಡ್ಸ್) ಮೇಲೆ ಚರ್ಚಾಗೋಷ್ಠಿಯನ್ನು ನಡೆಸಿತು. ನಾನಾ ದೇಶದ ತಜ್ಞರಿಗೆ ಮೂಲಭೂತ ಶಿಕ್ಷಣದ ಕ್ಷೇತ್ರದಲ್ಲಿ ಸರಿಯಾದ ತರಬೇತಿಯನ್ನು ಕೊಡುವುದಕ್ಕೆ ಒಂದು ಶೈಕ್ಷಣಿಕ ಕಾರ್ಯಕ್ರಮವನ್ನು ಏರ್ಪಾಟು ಮಾಡಲಾಗಿತ್ತು.

ವಯಸ್ಕರ ಶಿಕ್ಷಣ ಸಮಿತಿಯು ಮುಖ್ಯ ಚಟುವಟಿಕೆಗಳಲ್ಲಿ ಸಾಕ್ಷರತಾ ತರಗತಿಗಳನ್ನು ನಡೆಸುವುದರ ಜೊತೆಗೆ ಗ್ರಂಥಾಲಯಗಳನ್ನು ನಡೆಸುವುದು, ವಿದ್ಯಾಪೀಠಗಳನ್ನು ನಡೆಸುವುದು,

ಶ್ರವಣ-ದೃಶ್ಯ (ಆಡಿಯೋ ವಿಜುಯಲ್) ಶಿಕ್ಷಣದ ಕಾರ್ಯಕ್ರಮಗಳನ್ನು ನಡೆಸುವುದು, ವಿದ್ಯಾರ್ಥಿಗಳ ಸಾಮಾಜಿಕ ಸೇವಾ ಶಿಬಿರಗಳನ್ನು ಏರ್ಪಾಟು ಮಾಡುವುದು, ಜಾನಪದ ಕಲೆಗಳನ್ನು ಪುನರುಜ್ಜೀವನಗೊಳಿಸಿ ಅದಕ್ಕೆ ಉತ್ತೇಜನ ಕೊಡುವುದು, ವಯಸ್ಸಿಗೆ ತಕ್ಕ ಪಠ್ಯಪುಸ್ತಕಗಳನ್ನು ಪ್ರಕಟಿಸುವುದು, ಸಾಕ್ಷರತಾ ತರಗತಿಗೆ ಬೇಕಾದ ಪೀಠೋಪಕರಣಗಳನ್ನು ಮತ್ತು ಗ್ರಂಥಾಲಯವನ್ನು ಒದಗಿಸುವುದು, ಸಾಕ್ಷರತೆ ಮತ್ತು ವಯಸ್ಕರ ಶಿಕ್ಷಣದಲ್ಲಿ ಸಂಶೋಧನೆ ನಡೆಸುವುದು, ಮತ್ತು ಕೆಲಸಗಾರರಿಗೆ, ಶಿಕ್ಷಕರಿಗೆ ಹಾಗೂ ಮೇಲ್ವಿಚಾರಕರಿಗೆ ತರಬೇತಿಯನ್ನು ಕೊಡುವುದು ಇವೇ ಮುಂತಾದವು ಸೇರಿವೆ. ವಿವಿಧ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಬೇಕೆಂಬ ಉದ್ದೇಶದಿಂದ ಭೈರನಹಳ್ಳಿ, ದೇವಲಾಪುರ ಮತ್ತು ದಣ್ಣಾಯಕನಪುರಗಳಲ್ಲಿ 1950ರಲ್ಲಿ ವ್ಯಾಪಕವಾದ ವಯಸ್ಕರ ಶಿಕ್ಷಣ ಕೇಂದ್ರಗಳನ್ನು ತೆರೆಯಲಾಯಿತು. ಮುಂದೆ 1952ರಲ್ಲಿ ಪ್ರಯೋಗಾತ್ಮಕವಾಗಿ 15 ವ್ಯಾಪಕ ವಯಸ್ಕರ ವಿದ್ಯಾಕೇಂದ್ರಗಳನ್ನು ಮಂಡ್ಯ ಜಿಲ್ಲೆಯಲ್ಲಿ ತೆರೆಯಲಾಯಿತು. ಈ ಸಮಿತಿಯ ಮತ್ತೊಂದು ಯೋಜನೆಯೆಂಥರೆ ಕೆಲವು ಆರಿಸಲ್ಪಟ್ಟ ಗ್ರಾಮಗಳಲ್ಲಿ ಸಮುದಾಯ ಕೇಂದ್ರಗಳನ್ನು ಪ್ರಾರಂಭಿಸಿದ್ದು. ಈ ಕೇಂದ್ರಗಳಲ್ಲಿ ತಾಂತ್ರಿಕ ವಿಷಯಗಳ ಮೇಲೆ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿತ್ತು. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕಾರ್ಯಕ್ರಮಗಳು ಕೂಡಾ ಈ ಕೇಂದ್ರಗಳಲ್ಲಿ ನಡೆಸಲ್ಪಡುತ್ತಿದ್ದವು. 1956-57ರ ವೇಳೆಗೆ ರಾಜ್ಯದಲ್ಲಿ ಒಟ್ಟು 108 ಸಮುದಾಯ ಕೇಂದ್ರಗಳು ಇದ್ದವು.

ವಯಸ್ಕರ ಶಿಕ್ಷಣ ಸಮಿತಿಯು ವಯಸ್ಕರಿಗಾಗಿ ಪಠ್ಯ ಪುಸ್ತಕಗಳನ್ನು ಮತ್ತು ಇನ್ನು ಹೆಚ್ಚಿಗೆ ಓದಿದ ವಯಸ್ಕರಿಗಾಗಿ ಇತರ ಅಧ್ಯಯನ ಸಾಮಗ್ರಿಗಳನ್ನು ಪ್ರಕಟಿಸುತ್ತದೆ. ಇದಲ್ಲದೆ 'ಬೆಳಕು' ಎಂಬ ವಾರಪತ್ರಿಕೆಯನ್ನು 'ಪುಸ್ತಕ ಪ್ರಪಂಚ' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸುತ್ತಿದೆ. ವಯಸ್ಕರ ಶಿಕ್ಷಣಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಮತ್ತು ಜನತಾ ಗ್ರಂಥಾಲಯಕ್ಕೆ ಬೇಕಾದ ದೊಡ್ಡ ಪುಸ್ತಕಗಳನ್ನು ಪ್ರಕಟಿಸುತ್ತಿತು. ಜನಪ್ರಿಯ ಪುರಾಣಗಳಿಂದ ಮತ್ತು ಜನಪ್ರಿಯ ವಿಜ್ಞಾನಗಳಿಂದಲೂ ಆಯ್ದ ಅನೇಕ ವಿಷಯಗಳನ್ನು ಈ ಪುಸ್ತಕಗಳಲ್ಲಿ ಸೇರಿಸಲಾಗುತ್ತಿತ್ತು.

ಶ್ರವಣ ಮತ್ತು ದೃಶ್ಯ ಸಾಧನಗಳು ವಯಸ್ಕರ ಶಿಕ್ಷಣ ಕಾರ್ಯಕ್ರಮದ ಒಂದು ಭಾಗವಾಗಿದೆ. ಈ ಯೋಜನೆಯು 1948ರಲ್ಲಿ ಪ್ರಾರಂಭವಾದಾಗ ಸಮಿತಿಯ ಬಳಿ 12 ಚಲನಚಿತ್ರಗಳು ಮತ್ತು ಒಂದು ಧ್ವನಿ ಪ್ರೊಜೆಕ್ಟರ್ ಮಾತ್ರವಿತ್ತು. 1952ರಲ್ಲಿ ವಯಸ್ಕರ ಶಿಕ್ಷಣ ಸಂಸ್ಥೆಯು 68 ಚಲನಚಿತ್ರಗಳುಳ್ಳ ಮೂರು ಚಲಿಸುವ ದೃಶ್ಯ ಘಟಕಗಳನ್ನು ಹೊಂದಿದ್ದಿತು. ಇವುಗಳ ಜೊತೆಗೆ ನಾಲ್ಕು ಚಿತ್ರಗಳು ಈ ಕೌನ್ಸಿಲ್‌ನಿಂದಲೇ ತಯಾರಿಸಲ್ಪಟ್ಟಿದ್ದವು. ಸಮಿತಿಯು ಜಾನಪದ ಕಲೆ, ಜಾನಪದ ನೃತ್ಯ, ನಾಟಕಗಳು, ಜಾನಪದ ಗೀತೆಗಳು ಮುಂತಾದ ಕಲೆಗಳ ಪುನರುಜ್ಜೀವನಕ್ಕಾಗಿ ರಾಜ್ಯಾದ್ಯಂತ ಒಂದು ಸಮೀಕ್ಷೆಯನ್ನು 1945ರಷ್ಟು ಮೊದಲೇ ನಡೆಸಿತ್ತು. ಜಾನಪದ ಕಲೆಗಳಲ್ಲಿ ಬಳಸುವ ಸಾಮಾಗ್ರಿಗಳನ್ನು ಸಂಗ್ರಹಿಸಿ ಒಂದು ಶಾಶ್ವತ ವಸ್ತುಪ್ರದರ್ಶನವನ್ನು ಏರ್ಪಡಿಸಲಾಗಿದೆ.

ಹೊಸದಾಗಿ ಅಕ್ಷರವನ್ನು ಕಲಿತವರು ಮತ್ತೆ ಅನಕ್ಷರಸ್ಥರಾಗುವುದನ್ನು ತಪ್ಪಿಸುವುದಕ್ಕಾಗಿ ಗ್ರಾಮೀಣ ಗ್ರಂಥಾಲಯ ಯೋಜನೆಯನ್ನು ಸಮಿತಿಯು ಪ್ರಾರಂಭಿಸಿತು. ಪ್ರಾರಂಭದಲ್ಲಿ ವಿದ್ಯಾಮಂದಿರಗಳು ಅಥವಾ ಬುಕ್ ಕ್ಲಬ್‌ಗಳಿದ್ದು ಕ್ರಮೇಣ ಗ್ರಂಥಾಲಯ ಆಂದೋಲನವು ಪ್ರಾರಂಭವಾಯಿತು. ಪ್ರಥಮ ಗ್ರಾಮೀಣ ಗ್ರಂಥಾಲಯವು 1941ರಲ್ಲಿ ಪ್ರಾರಂಭವಾಯಿತು. 1944-45ರ ಕೊನೆಯ ವೇಳೆಗೆ 430 ಗ್ರಂಥಾಲಯಗಳಿದ್ದು 1951-52ರ ವೇಳೆಗೆ ಅವುಗಳ ಸಂಖ್ಯೆ 2,116ಕ್ಕೆ ಹೆಚ್ಚಿತು. 1956-57ರ ವೇಳೆಗೆ 2,344 ಗ್ರಾಮೀಣ, ಹತ್ತು ಕೇಂದ್ರೀಯ, ನಾಲ್ಕು ವೃತ್ತ ಮತ್ತು 500 ಶಾಖಾ ಗ್ರಂಥಾಲಯಗಳು ಇದ್ದವು. 1979ರ ವೇಳೆಗೆ 2,714 ಗ್ರಾಮೀಣ ಗ್ರಂಥಾಲಯಗಳು, 44 ವೃತ್ತ ಗ್ರಂಥಾಲಯಗಳು, 12 ಕೇಂದ್ರೀಯ ಗ್ರಂಥಾಲಯಗಳು ಇದ್ದವು.

1937ಕ್ಕೆ ಮುಂಚೆ ಮುಂಬೈ ಕರ್ನಾಟಕ ವಲಯದಲ್ಲಿ, ಹಗಲಿನಲ್ಲಿ ಬೇರೆ ಉದ್ಯೋಗಗಳಲ್ಲಿ ನಿರತರಾಗಿದ್ದ ವಯಸ್ಕರಿಗೂ ಮತ್ತು ಬಾಲಕರಿಗೂ ಸರ್ಕಾರ, ಸ್ಥಳೀಯ ಸಂಸ್ಥೆಗಳು ಹಾಗೂ ಖಾಸಗೀ ಸಂಸ್ಥೆಗಳು ಕೆಲವು ರಾತ್ರಿಶಾಲೆಗಳನ್ನು ನಡೆಸುತ್ತಿದ್ದವು. ಸಾಮಾನ್ಯವಾಗಿ ಈ ಶಾಲೆಗಳನ್ನು ಶಾಲಾ ಉಪಾಧ್ಯಾಯರುಗಳೇ ನಡೆಸುತ್ತಿದ್ದರು. ಬರಬರುತ್ತಾ ಸರಿಯಾದ ಹಾಜರಾತಿ ಇಲ್ಲವಾದ್ದರಿಂದ ಕರ್ನಾಟಕ ಪ್ರದೇಶದಲ್ಲಿ ಅನೇಕ ಶಾಲೆಗಳು ಮುಚ್ಚಲ್ಪಟ್ಟವು. 1921ರಲ್ಲಿ ಜವಾಬ್ದಾರಿಯುತ ವಿಧಾನಸಭೆಯ ಮಂತ್ರಿಗಳ ಸ್ವಾಧೀನಕ್ಕೆ ವಿದ್ಯಾ ಇಲಾಖೆಯು ಬಂದ ಮೇಲೆ ವಿಶೇಷ ರಾತ್ರಿಶಾಲೆಗಳು ವಯಸ್ಕರಿಗಾಗಿ ಪ್ರಾರಂಭವಾದವು. ವಯಸ್ಕರ ಶಿಕ್ಷಣದ ಸಮಸ್ಯೆಯನ್ನು ಪರಿಶೀಲಿಸುವುದಕ್ಕಾಗಿ 1937ರಲ್ಲಿ ಒಂದು ವಯಸ್ಕರ ಶಿಕ್ಷಣ ಸಮಿತಿಯೆಂಬ ವಿಶೇಷ ಸಮಿತಿಯ ಏರ್ಪಾಟಾಯಿತು. ಈ ಸಮಿತಿಯ ಶಿಫಾರಸ್ಸಿನ ಮೇರೆಗೆ ಒಂದು ವಯಸ್ಕರ ಶಿಕ್ಷಣ ಮಂಡಳಿಯು ಸ್ಥಾಪಿತವಾಯಿತು. ಈ ಮಂಡಳಿಯಿಂದ ಅನುದಾನ ಯೋಜನೆಯ ಅಂಗವಾಗಿಯೂ ವಯಸ್ಕರ ಶಿಕ್ಷಣ ತರಗತಿಗಳನ್ನು ನಡೆಸಲಾಗುತ್ತಿತ್ತು. ಡೆಪ್ಯುಟಿ ಎಜುಕೇಷನಲ್ ಇನ್ಸ್‌ಪೆಕ್ಟರ್ 15ಕ್ಕಿಂತ ಕಡಿಮೆ ಹಾಜರಾತಿಯಿಲ್ಲದ ಕಡೆಗಳಲ್ಲಿ ತಿಂಗಳಿಗೆ ಐದು ರೂ. ನಂತೆ ಪ್ರತಿ ತರಗತಿಗೆ 40 ರೂಪಾಯಿಯನ್ನು ಅನಾವರ್ತಕ ವೆಚ್ಚವನ್ನು ಮಂಜೂರು ಮಾಡುತ್ತಿದ್ದು ಇವರೇ ಈ ತರಗತಿಗಳ ತನಿಖೆ ಮತ್ತು ಬರವಣಿಗೆಯ ಪರೀಕ್ಷೆಯನ್ನು ಮಾಡುತ್ತಿದ್ದರು. 1939-40

ರಲ್ಲಿ ಅನೇಕ ಕಡೆ ಈ ತರಗತಿಗಳು ಪ್ರಾರಂಭವಾದುದರಿಂದ ಈ ಶಾಲೆಗಳಿಗೆ ಕೊಡುತ್ತಿದ್ದ ಅನುದಾನವನ್ನು ಕಡಿಮೆ ಮಾಡಬೇಕಾಗಿ ಬಂತು. ಇದರ ಫಲವಾಗಿ ವರ್ಷಾಂತ್ಯದ ವೇಳೆಗೆ ಅರ್ಧದಷ್ಟು ತರಗತಿಗಳು ಮುಚ್ಚಲ್ಪಟ್ಟವು. ಒಂದು ತೀವ್ರತರವಾದ ಸಮೂಹ ಸಾಕ್ಷರತಾ ಚಳವಳಿಯನ್ನು ಪ್ರಾಯೋಗಿಕವಾಗಿ ನಡೆಸುವುದಕ್ಕೆ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕನ್ನು 1945-46ರಲ್ಲಿ ಆರಿಸಿ, ಈ ತರಗತಿಗಳನ್ನು ನಡೆಸಲು, ಸಂಘಟಿಸಲು ಮತ್ತು ಮೇಲ್ವಿಚಾರಣೆ ನಡೆಸಲು, ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಹಾಕಿಕೊಳ್ಳಲು ವಿಶೇಷ ಶಿಕ್ಷಣಾಧಿಕಾರಿಗಳನ್ನು ನೇಮಿಸಲಾಯಿತು. ಇತರ ಕಡೆಗಳಲ್ಲಿ ಮಾಮೂಲಿನಂತೆ ವಯಸ್ಕರ ಶಿಕ್ಷಣ ತರಗತಿಗಳು ನಡೆಯುತ್ತಿದ್ದವು. 1946-47ರ ವೇಳೆಗೆ ಕೇಂದ್ರೀಕೃತವಲ್ಲದ ಈ ಪ್ರದೇಶಗಳಲ್ಲಿ 13,899 ವಯಸ್ಕರಿದ್ದ 435 ತರಗತಿಗಳು ನಡೆಯುತ್ತಿದ್ದವು, ಮತ್ತು 1,000 ವಾಚನಾಲಯಗಳು ಮತ್ತು ಗ್ರಾಮೀಣ ಗ್ರಂಥಾಲಯಗಳು ಈ ಸುಮಾರಿನಲ್ಲಿ ಇದ್ದವು. ವಯಸ್ಕರಿಗೆ ಶಿಕ್ಷಣವನ್ನು ಕೊಡುವುದು ಬರಿಯ ಅಕ್ಷರಸ್ಥರನ್ನಾಗಿ ಮಾಡುವುದಕ್ಕಲ್ಲ, ಆದರೆ ಸಾಮಾಜಿಕವಾಗಿ ಉತ್ತಮ ಪೌರನನ್ನಾಗಿ ಮಾಡುವುದಕ್ಕೆಂಬ ಬದಲಾದ ಉದ್ದೇಶದಿಂದ 'ವಯಸ್ಕರ ಶಿಕ್ಷಣ' ವೆಂಬ ಪರಿಭಾಷೆಯನ್ನು 'ಸಮಾಜ ಶಿಕ್ಷಣ' ಎಂಬುದಾಗಿ ಬದಲಾಯಿಸಲಾಯಿತು. 1947ರಿಂದ 1956ರ ಅವಧಿಯಲ್ಲಿ ಸಮಾಜ ಶಿಕ್ಷಣವು ವಿದ್ಯಾ ಇಲಾಖೆಯಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿತು. ಈ ಯೋಜನೆಯು ಮುಂದೆ ಕಡ್ಡಾಯ ಪ್ರಾಥಮಿಕ ವಿದ್ಯಾಭ್ಯಾಸಕ್ಕೂ ಬುನಾದಿಯಾಯಿತು. ವಿಶೇಷಾಧಿಕಾರಿಗಳ ಹುದ್ದೆಯನ್ನು ತೆಗೆದು ಆ ಕೆಲಸವನ್ನು ಸಹಾಯಕ ಉಪವಿದ್ಯಾ ತನಿಖಾಧಿಕಾರಿಗಳಿಗೆ ವಹಿಸಲಾಯಿತು. ಸಾಕ್ಷರತೆಯನ್ನು ಹರಡುವುದರ ಜೊತೆಗೆ ಸಾಮಾನ್ಯ ಜ್ಞಾನ ಶಿಕ್ಷಣವನ್ನು ನೀಡುವುದಕ್ಕಾಗಿ ಪ್ರಾದೇಶಿಕ ಹಾಗೂ ಸಾಮಾಜಿಕ ಶಿಕ್ಷಣ ಸಮಿತಿಗಳು ಸ್ಥಾಪಿತವಾದವು. ಈ ಸಮಿತಿಗಳಲ್ಲಿ ಸರ್ಕಾರಿ ಅಧಿಕಾರಿಗಳು ಮತ್ತು ಇತರ ಗಣ್ಯ ವ್ಯಕ್ತಿಗಳು ಸದಸ್ಯರಾಗಿದ್ದು ಮಾರ್ಗದರ್ಶನ ಮಾಡುತ್ತಿದ್ದರು. ಸಾಕ್ಷರತಾ ತರಗತಿಗಳಲ್ಲಿ ಎರಡು ಬಗೆಯಾಗಿದ್ದು ಮೊದಲನೇಯದರಲ್ಲಿ ನಾಲ್ಕು ತಿಂಗಳ ಅವಧಿಯ ತರಗತಿಗಳು ಮತ್ತು ಎರಡನೇಯದರಲ್ಲಿ ಆರು ತಿಂಗಳ ಅವಧಿಯ ತರಗತಿಗಳು ಇದ್ದವು. 1953-54ರಲ್ಲಿ ಮುಂಬೈ ಕರ್ನಾಟಕದ ನಾಲ್ಕು ಕನ್ನಡ ಜಿಲ್ಲೆಗಳಲ್ಲಿ 2,179 ಮೊದಲನೇಯ ಪರೀಕ್ಷಾ ತರಗತಿಗಳೂ, 1,764 ಎರಡನೇಯ ಪರೀಕ್ಷಾ ತರಗತಿಗಳೂ ನಡೆದು ಅವುಗಳಲ್ಲಿ ಕ್ರಮವಾಗಿ 39,466 ಮತ್ತು 30,002 ವಯಸ್ಕರು ದಾಖಲಾಗಿದ್ದು ಈಪೈಕಿ ಒಟ್ಟು 41,587 ವಯಸ್ಕರು ಸಾಕ್ಷರರಾದರು. ಅದೇ ವರ್ಷದಲ್ಲಿ ಈ ನಾಲ್ಕು ಕನ್ನಡ ಜಿಲ್ಲೆಗಳು 22,875 ರೂ. ಗಳ ಅನುದಾನವನ್ನೂ ಹಾಗೂ 1,672 ಗ್ರಾಮೀಣ ಶಿಕ್ಷಣದ ಕೊಠಡಿಗಳನ್ನೂ ಪಡೆದಿದ್ದವು. 1955-56ರಲ್ಲಿ 22,573 ವಿದ್ಯಾರ್ಥಿಗಳಿದ್ದ 1,073 ತರಗತಿಗಳು ನಡೆಯುತ್ತಿದ್ದು, ಅದರಲ್ಲಿ ಹತ್ತು ತರಗತಿಗಳಲ್ಲಿ ಕಲಿಯುತ್ತಿದ್ದ 390 ಮಹಿಳೆಯರೂ ಸೇರಿದ್ದರು. ಇದಷ್ಟೇ ಅಲ್ಲದೆ ಸಮಿತಿಯು ಸಮಾಜ ಶಿಕ್ಷಣ ಕಾರ್ಯಕರ್ತರಿಗೆ ಅಲ್ಪಾವಧಿಯ ತರಬೇತಿಯನ್ನು ಕೊಡುವುದಕ್ಕಾಗಿ ಒಂದು ಅಲ್ಪಾವಧಿಯ ತರಬೇತಿಯನ್ನು ನಡೆಸಿ ಅದರಲ್ಲಿ ಸಾಮಾಜಿಕ ಶಿಕ್ಷಣದಲ್ಲಿ ಹೊಸ ಭಾವನೆಗಳನ್ನು ಮತ್ತು ವಯಸ್ಕರ ಶಿಕ್ಷಣದಲ್ಲಿ ಹೊಸ ವಿಧಾನವನ್ನು ಬೋಧಿಸಲಾಗುತ್ತಿತ್ತು.

ರಾಷ್ಟ್ರೀಯ ವಿಸ್ತರಣಾ ಘಟಕಗಳು ಮತ್ತು ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು ಪ್ರಾರಂಭವಾದ ಕಾರಣ ಸಾಮಾಜಿಕ ಶಿಕ್ಷಣವು ಈ ಯೋಜನೆಯ ಒಂದು ಅಂಗವಾಗಿ ಮಾರ್ಪಟ್ಟಿತು. ಭಜನೆಗಳು, ಕೀರ್ತನೆಗಳು, ಜಾನಪದ ಗೀತೆಗಳು ಮತ್ತು ಮಾಯಾಲಾಂದ್ರವನ್ನು ಬಳಸಿ ಉಪನ್ಯಾಸಗಳು, ಇವೇ ಮುಂತಾದ ಅನೇಕ ಕಾರ್ಯಕ್ರಮಗಳನ್ನು ಜನಸಾಮಾನ್ಯರಿಗೆ ಶಿಕ್ಷಣ ಕೊಡುವುದಕ್ಕೂ ಮತ್ತು ಸಾಮಾಜಿಕ ಶಿಕ್ಷಣವನ್ನು ಜನಪ್ರಿಯಗೊಳಿಸುವುದಕ್ಕೂ ಸಂಘಟಿಸಲಾಯಿತು. ಈ ಎಲ್ಲಾ ಕಾರಣಗಳಿಂದ ಸಾಕ್ಷರತಾ ಚಳವಳಿ ಮತ್ತು ಸಾಮಾಜಿಕ ಶಿಕ್ಷಣದ ಆಂದೋಳನವು ಜನಗಳಲ್ಲಿ ಒಂದು ಜಾಗೃತಿಯನ್ನು ಉಂಟುಮಾಡಿ ಜನತೆಯ ಅನಕ್ಷರತೆಯನ್ನು ಹೋಗಲಾಡಿಸುವ ಯೋಜನೆಯಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸುವಂತೆ ಮಾಡಿದವು.

ಬಳ್ಳಾರಿ ಜಿಲ್ಲೆಯಲ್ಲಿ ವಯಸ್ಕರ ಶಿಕ್ಷಣ ಯೋಜನೆಯು 1941ರಲ್ಲಿ ಪ್ರಾರಂಭವಾಯಿತು. 1950-51ರ ವೇಳೆಗೆ 27 ವಯಸ್ಕರ ಶಾಲೆಗಳು ಇದ್ದು, ಅವುಗಳಲ್ಲಿ ಜಿಲ್ಲಾ ಮಂಡಲಿಯು ಏಳು ಶಾಲೆಗಳನ್ನೂ ಪುರಸಭೆಯು ಎರಡು ಶಾಲೆಗಳನ್ನೂ ಮತ್ತು ಕೆಲವು ಖಾಸಗಿ ಸಂಸ್ಥೆಗಳು ಎಂಟು ಶಾಲೆಗಳನ್ನೂ ನಡೆಸುತ್ತಿದ್ದು 18 ಜನ ಮಹಿಳೆಯರೂ ಸೇರಿದಂತೆ 605 ವಯಸ್ಕರು ಈ ಶಾಲೆಗಳಲ್ಲಿ ಓದುತ್ತಿದ್ದರು. ಅಲ್ಲದೆ ಬಳ್ಳಾರಿಯ ಪ್ರಾಥಮಿಕ ಶಾಲೆಯಲ್ಲಿ ಮಹಿಳೆಯರಿಗಾಗಿ ಒಂದು ಸಾಕ್ಷರತಾ ತರಬೇತಿ ಕೇಂದ್ರವು ಸಹಾ ಇದ್ದಿತು. 1953ರಲ್ಲಿ 30 ಶಾಲೆಗಳಲ್ಲಿ 32 ಮಹಿಳೆಯರೂ ಸೇರಿದಂತೆ 865 ವಯಸ್ಕರು ಓದುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 36 ವಯಸ್ಕರ ಶಾಲೆಗಳಿದ್ದು ಇವುಗಳಲ್ಲಿ 937 ಪುರುಷರು ಮತ್ತು ಮಹಿಳೆಯರು ಓದುತ್ತಿದ್ದರು. ಕೊಳ್ಳೇಗಾಲ ತಾಲೂಕಿನಲ್ಲಿ 1948-49ರಲ್ಲಿ ವಯಸ್ಕರಲ್ಲಿ ಸಾಕ್ಷರತೆಯನ್ನು ಹೆಚ್ಚಿಸುವ ಗುರಿಯಿಂದ ಒಂದು ವಯಸ್ಕರ ಶಿಕ್ಷಣ ಕಾರ್ಯಕ್ರಮವು ಮೊತ್ತಮೊದಲಿಗೆ ಪ್ರಾರಂಭವಾಯಿತು. ನಾಲ್ಕು ತಿಂಗಳ ಅವಧಿಯ ಈ ಕೋರ್ಸಿನಲ್ಲಿ 13ರಿಂದ 40 ವರ್ಷ ವಯಸ್ಸಿನ ವ್ಯಕ್ತಿಗಳನ್ನು ಸೇರಿಸಿಕೊಳ್ಳಲಾಯಿತು. ಈ ಯೋಜನೆಯ ಹಿಂದೆಯೇ ಎರಡು ವರ್ಷ ಎಂಟು ತಿಂಗಳ ಒಂದು ತೀವ್ರತರದ ತರಬೇತಿ ಶಿಕ್ಷಣವನ್ನು ಮುಂದುವರಿಸಲಾಯಿತು. ವಾರ್ತಾ ಪತ್ರಿಕೆಗಳನ್ನು ಓದುವುದು ಮತ್ತು ಅವುಗಳನ್ನು ಅರ್ಥ ಮಾಡಿಕೊಳ್ಳುವುದು ಈ ತರಬೇತಿ

ಶಿಕ್ಷಣದ ಮುಖ್ಯ ಉದ್ದೇಶವಾಗಿತ್ತು. ತರಬೇತಿ ಪಡೆದ ಉಪಾಧ್ಯಾಯರುಗಳಿಗೆ ತಿಂಗಳಿಗೆ 12 ರೂ.ನಂತೆಯೂ, ತರಬೇತಿ ಪಡೆಯದ ಉಪಾಧ್ಯಾಯರುಗಳಿಗೆ ತಿಂಗಳಿಗೆ ಎಂಟು ರೂ.ಗಳಂತೆಯೂ ಸಂಭಾವನೆ ದೊರೆಯುತ್ತಿತ್ತು. ಅಲ್ಲದೆ ಭಾಷಾ ದೈನಿಕಗಳಿಗೆ ವರ್ಷಕ್ಕೆ 42 ರೂಪಾಯಿಗಳು ಮತ್ತು ಸಾದಿಲ್ವಾರು ವೆಚ್ಚಕ್ಕಾಗಿ ತಿಂಗಳಿಗೆ ನಾಲ್ಕು ರೂ.ಗಳನ್ನು ಕೊಡಲಾಗುತ್ತಿತ್ತು. ರಾಜ್ಯ ಪುನರ್‌ಘಟನೆಯ ಸಮಯದಲ್ಲಿ ಮದ್ರಾಸು ಕರ್ನಾಟಕ ಪ್ರದೇಶದಲ್ಲಿ 66 ಮಹಿಳೆಯರು ಸೇರಿದಂತೆ 1,926 ವಯಸ್ಕರ 77 ಶಾಲೆಗಳಿದ್ದವು.

ಹೈದರಾಬಾದಿನಲ್ಲಿ 1925ರಲ್ಲಿ ಪ್ರಾರಂಭವಾದ ವಯಸ್ಕರ ಶಿಕ್ಷಣ ಚಳವಳಿಯು ಆ ರಾಜ್ಯದ ಇತರ ಜಿಲ್ಲೆಗಳಿಗೂ 1930ರ ವೇಳೆಗೆ ಹಬ್ಬಿತು. 1933ರಲ್ಲಿ ವಿಶೇಷ ಕಾನೂನುಗಳು ಮತ್ತು ನಿಯಮಾವಳಿಗಳು ಮತ್ತು ಹೊಸ ಪಠ್ಯಕ್ರಮಗಳು ವಯಸ್ಕರ ಶಾಲೆಗಳಿಗಾಗಿ ಮಂಜೂರಾದವು. ಪಠ್ಯಕ್ರಮದಲ್ಲಿ 'ಮೂರು ಆರ್'ಗಳು (ಓದುವುದು, ಬರೆಯುವುದು ಮತ್ತು ಗಣಿತ) ಇದ್ದವಲ್ಲದೆ ಮುಸ್ಲಿಮರಿಗಾಗಿ ಧಾರ್ಮಿಕ ಬೋಧನೆಗಳನ್ನು ಅಳವಡಿಸಲಾಗಿತ್ತು. ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಅರ್ಹತಾ ಪತ್ರಗಳನ್ನು ಕೊಡಲಾಗುತ್ತಿತ್ತು. ಹೈದರಾಬಾದಿನ ಉಸ್ಮಾನಿಯಾ ಶಿಕ್ಷಕರ ತರಬೇತಿ ಕಾಲೇಜು ವಯಸ್ಕರ ಶಿಕ್ಷಣ ಚಳವಳಿಯಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸಿತ್ತು. ಉರ್ದು ಸಾಹಿತ್ಯ ಸಂಸ್ಥೆಯು ಕೂಡ ಈ ದಿಸೆಯಲ್ಲಿ ಹೆಚ್ಚು ಕೆಲಸವನ್ನು ಮಾಡಿತು. ಈ ಕೆಲಸಕ್ಕೆ ಕಟ್ಟಡಗಳನ್ನು ಮತ್ತು ಪೀಠೋಪಕರಣಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯು ಒದಗಿಸಿದರೆ ಸ್ಥಳೀಯ ಸಂಸ್ಥೆಗಳು ಶಿಕ್ಷಕರಿಗೆ ವೇತನಗಳನ್ನು ನೀಡುತ್ತಿದ್ದವು. ಸರ್ಕಾರವು ತೆಗೆದುಕೊಂಡ ಎಲ್ಲಾ ಕ್ರಮಗಳೂ ಉರ್ದು ಸಾಕ್ಷರತೆಯನ್ನು ಹೆಚ್ಚಿಸಲು ಮಾತ್ರ ಪ್ರಾಮುಖ್ಯತೆಯನ್ನು ಕೊಟ್ಟಿದ್ದವು. ಇಡೀ ರಾಜ್ಯದಲ್ಲಿ 82 ವಯಸ್ಕರ ಶಾಲೆಗಳು ಇದ್ದು ಅವುಗಳಲ್ಲಿ ಮಹಿಳೆಯರಿಗಾಗಿ ಎರಡು ಮಾತ್ರ ಮೀಸಲಾಗಿದ್ದವು.

ಕೊಡಗಿನಲ್ಲಿ ಈ ಕಾರ್ಯಕ್ರಮವು 1952ರಲ್ಲಿ ಮಾತ್ರ ಜಾರಿಗೆ ಬಂದಿತು. ಇದಕ್ಕೆ ಮುಂಚಿತವಾಗಿ ಅಂದರೆ 1940-47ರ ಅವಧಿಯಲ್ಲಿ ಹೆಬ್ಬಾಳ್ ಗ್ರಾಮದಲ್ಲಿ ಹರಿಜನ ಪುರುಷ ವಯಸ್ಕರಿಗಾಗಿ ಒಂದೇ ಒಂದು ರಾತ್ರಿ ಶಾಲೆ ಮಾತ್ರ ಇತ್ತು. ಶಿಕ್ಷಣದಲ್ಲಿ ಹಿಂದುಳಿದ ಸೋಮವಾರಪೇಟೆ ತಾಲೂಕಿನಲ್ಲಿ ವಯಸ್ಕರ ಸಾಕ್ಷರತಾ ತರಗತಿಗಳು ನಡೆಸಲ್ಪಡುತ್ತಿದ್ದವು. 1953ರಲ್ಲಿ ಮೊದಲ ಬಾರಿ ಪ್ರಾರಂಭವಾದ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಫಲವಾಗಿ ವಯಸ್ಕರ ಶಿಕ್ಷಣ ತರಬೇತಿಗಳು ಜಿಲ್ಲಾದ್ಯಂತ ಪ್ರಾರಂಭವಾದವು. ಮೊದಲನೇಯ ಪಂಚವಾರ್ಷಿಕ ಯೋಜನೆಯಲ್ಲಿ 217 ತರಗತಿಗಳು ನಡೆದು 1,669 ವಯಸ್ಕರು ಅಕ್ಷರಾಭ್ಯಾಸವನ್ನು ಪಡೆದರು. ಕಲಿತವರು ಅದನ್ನು ಮರೆಯದಿರಲು ಕೆಲವು ಕಾರ್ಯಕ್ರಮಗಳನ್ನು ಸಂಘಟಿಸಿದರು. ಇದೇ ಅವಧಿಯಲ್ಲಿ 36 ಕೇಂದ್ರಗಳಲ್ಲಿ ವಾಚನಾಲಯಗಳನ್ನು ಮತ್ತು 85 ಗ್ರಾಮೀಣ ಗ್ರಂಥಾಲಯಗಳನ್ನು ತೆರೆಯಲಾಯಿತು. ಈ ಗ್ರಂಥಾಲಯಗಳಲ್ಲಿ ಸುಮಾರು 8,000 ಪುಸ್ತಕಗಳು ಇದ್ದವು. ಸಂಚಾರಿ ಗ್ರಂಥಾಲಯವನ್ನು ಒಳಗೊಂಡು ಒಂದು ಸರ್ಕ್ಯುಲೇಟಿಂಗ್ ಲೈಬ್ರರಿ ಆರಂಭವಾಯಿತು. ಸಮಾಜ ಶಿಕ್ಷಣ ಕಾರ್ಯಕರ್ತರಿಗೆ ಸಮಾಜ ಸೇವಾ ಶಿಬಿರಗಳನ್ನು ತೆರೆಯಲಾಯಿತು. 1953 ಮತ್ತು 1956ರ ಅವಧಿಯಲ್ಲಿ ಇಂತಹ ಒಂಬತ್ತು ಕೇಂದ್ರಗಳಲ್ಲಿ 312 ಜನರು ತರಬೇತಿಯನ್ನು ಹೊಂದಿದ್ದರು. ಮೈಸೂರು ರಾಜ್ಯದೊಳಗೆ ವಿಲೀನವಾದಾಗ ಅಲ್ಲಿ 83 ವಯಸ್ಕರ ವರ್ಗಗಳು ಇದ್ದು ಅವುಗಳಲ್ಲಿ ಆರು ಮಹಿಳೆಯರಿಗಾಗಿ ಮೀಸಲಾಗಿದ್ದವು. 1,289 ಪುರುಷರು ಮತ್ತು 161 ಮಹಿಳೆಯರು ಇವುಗಳಲ್ಲಿ ಶಿಕ್ಷಣವನ್ನು ಪಡೆದರು.

ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿಯು 1970ರ ಅಕ್ಟೋಬರ್ ಎರಡರಿಂದ ತನ್ನ ಚಟುವಟಿಕೆಯನ್ನು ರಾಜ್ಯಾದ್ಯಂತ ವಿಸ್ತರಿಸಿದೆ. ತನ್ನ ಕಾರ್ಯಕ್ರಮಗಳನ್ನು ಸಂಘಟಿಸುವುದಕ್ಕಾಗಿ ಅದು ಪ್ರತೀ ಜಿಲ್ಲೆಗೂ ಒಬ್ಬ ಜಿಲ್ಲಾಧಿಕಾರಿಯನ್ನು ನೇಮಿಸಿದೆ.

ಡೇನಿಷ್ ಜಾನಪದ ಪ್ರೌಢಶಾಲಾ ಪದ್ಧತಿ ಮತ್ತು ಭಾರತದ ಪುರಾತನ ಆಶ್ರಮ ಮತ್ತು ಗುರುಕುಲಗಳ ಮಾದರಿಯಲ್ಲಿ ವಿದ್ಯಾಪೀಠದ ಯೋಜನೆಯು ರೂಪಿಸಲ್ಪಟ್ಟಿದೆ. ಈ ಯೋಜನೆಯ ಮುಖ್ಯ ಉದ್ದೇಶವೆಂದರೆ ಗ್ರಾಮೀಣ ಯುವಕರಿಗೆ ಸರಿಯಾದ ಮಾರ್ಗದರ್ಶನ ನೀಡುವುದು, ಹಳ್ಳಿಯ ಕೈಗಾರಿಕೆಗಳಿಗೆ ಮತ್ತು ವ್ಯವಸಾಯಗಳಿಗೆ ಸಂಬಂಧಿಸಿದಂತೆ ಸಾಂಸ್ಕೃತಿಕ ಶಿಕ್ಷಣವನ್ನು ಕೊಡುವುದು ಮತ್ತು ಗ್ರಾಮೀಣ ಮುಂದಾಳುತನದ ತರಬೇತಿ, ಇತ್ಯಾದಿ. ಈ ಯೋಜನೆಯು ಅನನ್ಯಸ್ವರೂಪದ್ದಾಗಿದ್ದು ಇಡೀ ಭಾರತದಲ್ಲೇ ಅದ್ವಿತೀಯವಾದುದಾಗಿದೆ. 1947ರಲ್ಲಿ ನಂಜನಗೂಡಿನಲ್ಲಿ ಮೊಟ್ಟಮೊದಲ ವಿದ್ಯಾಪೀಠವು ಆರಂಭವಾಯಿತು. ಈಗ ನಮ್ಮ ರಾಜ್ಯದಲ್ಲಿ ಅಂತಹ 13 ವಿದ್ಯಾಪೀಠಗಳಿವೆ. ಅವು ನಂಜನಗೂಡು (ಮಹಿಳೆಯರಿಗಾಗಿ), ಶಿವಾರಗುಡ್ಡ (ಮಂಡ್ಯ ಜಿಲ್ಲೆ), ಯಗಚಿ (ಹಾಸನ ಜಿಲ್ಲೆ), ಕೆಂಗೇರಿ (ಮಹಿಳೆಯರಿಗಾಗಿ, ಬೆಂಗಳೂರ ಜಿಲ್ಲೆ), ತುಂಗಾ (ಗಾಜನೂರು, ಶಿವಮೊಗ್ಗ ಜಿಲ್ಲೆ), ಪಂಪಾ (ಬಳ್ಳಾರಿ ಜಿಲ್ಲೆ), ಯಣೆಗಡಲೆ (ಕೋಲಾರ ಜಿಲ್ಲೆ), ಬಂಥನಾಳ್ (ವಿಜಾಪುರ ಜಿಲ್ಲೆ), ಕತ್ರಾಳ್ (ಚಿತ್ರದುರ್ಗ ಜಿಲ್ಲೆ), ಶಿರಸಿ (ಉತ್ತರ ಕನ್ನಡ ಜಿಲ್ಲೆ), ಬಸವಕಲ್ಯಾಣ (ಬಿದರೆ ಜಿಲ್ಲೆ), ನೆಗಳೂರು (ಧಾರವಾಡ ಜಿಲ್ಲೆ) ಮತ್ತು ಚಾರ (ದಕ್ಷಿಣ ಕನ್ನಡ ಜಿಲ್ಲೆ) ಇಲ್ಲಿ ಇವೆ. 18ರಿಂದ 30 ವರ್ಷ ವಯಸ್ಸಿನ ಮಹಿಳೆಯರು ಮತ್ತು ಪುರುಷರು ಯಾವ ಪ್ರಾರಂಭಿಕ ವಿದ್ಯಾರ್ಹತೆಗಳು ಇಲ್ಲದೆ ಅಥವಾ ಯಾವ ನಿಬಂಧನೆಯೂ ಇಲ್ಲದೆ ಈ ವಿದ್ಯಾಪೀಠಗಳಿಗೆ ಸೇರಿಕೊಳ್ಳ

ಬಹುದು. ಐದು ತಿಂಗಳ ಈ ತರಬೇತಿಯನ್ನು ಉಚಿತವಾಗಿ ಕೊಡಲಾಗುತ್ತದೆ. ಇದಲ್ಲದೆ 3ರಿಂದ 15 ದಿನಗಳ ಅವಧಿಯ ಅಲ್ಪಾವಧಿ ತರಬೇತಿಯನ್ನು ಕೊಡಲಾಗುತ್ತಿದೆ. ಪ್ರತೀ ತಂಡದಲ್ಲಿಯೂ ಸುಮಾರು 25 ಜನರಿಗೆ ಅವಕಾಶವಿದೆ. ಈ ದೀರ್ಘಾವಧಿ ಮತ್ತು ಅಲ್ಪಾವಧಿ ಶಿಕ್ಷಣದಲ್ಲಿ 1979ರ ಅಂತ್ಯದ ವೇಳೆಗೆ 9,898 ಪುರುಷರು ಹಾಗೂ ಮಹಿಳೆಯರು ತರಬೇತಿ ಪಡೆದಿದ್ದಾರೆ.

ತರಬೇತಿಯ ಅವಧಿಯಲ್ಲಿ ಶಿಸ್ತು, ಸಮುದಾಯ ಜೀವನ ಮತ್ತು ದೈಹಿಕ ಶ್ರಮದ ಕೆಲಸಗಳಿಗೆ ಹೆಚ್ಚು ಮಹತ್ವ ನೀಡಲಾಗುತ್ತದೆ. ಭಾಷಣಗಳು, ಚರ್ಚೆಗಳು, ಅಧ್ಯಯನ ಗೋಷ್ಠಿಗಳು ಮತ್ತು ಪ್ರಾಯೋಗಿಕ ಕೆಲಸಗಳ ಮೂಲಕ ಶಿಕ್ಷಣ ನೀಡಲಾಗುತ್ತದೆ. ಶ್ರಮದಾನವು ತರಬೇತಿಯ ಒಂದು ಮುಖ್ಯ ಅಂಗವಾಗಿದೆ. ಪಠ್ಯಕ್ರಮದಲ್ಲಿ ನಮ್ಮ ಭಾರತದ ಪರಂಪರೆ, ಕನ್ನಡ ಸಾಹಿತ್ಯದ ಚರಿತ್ರೆ, ಆಧುನಿಕ ಭಾರತದ ಬೆಳವಣಿಗೆಯ ರೂಪರೇಷೆಗಳು, ಸ್ವಾಭಾವಿಕ ಸಂಪನ್ಮೂಲಗಳು, ನಾಗರಿಕರ ಕರ್ತವ್ಯಗಳು, ಸಾಮಾನ್ಯ ಜನರಿಗೆ ಬೇಕಾದ ಕಾನೂನು ಜ್ಞಾನ, ಸಮುದಾಯ ಸೇವೆಗಳು, ಆರೋಗ್ಯ ಮತ್ತು ನೈರ್ಮಲ್ಯ ಮತ್ತು ವಯಸ್ಕರ ಶಿಕ್ಷಣ ಮುಂತಾದವು ಒಳಗೊಂಡಿರುತ್ತವೆ. ಇವಲ್ಲದೆ ಕಮ್ಮಾರಿಕೆ, ಬಡಗಿತನ, ನೇಯ್ಗೆ, ಹೈನುಗಾರಿಕೆ, ಕೋಳಿ ಸಾಕಣೆ, ವ್ಯವಸಾಯ ಯಂತ್ರಗಳ ನಿರ್ವಹಣೆ, ಮಣ್ಣಿನ ವಿಜ್ಞಾನ, ಕ್ರಿಮಿಕೀಟಗಳ ಹಾವಳಿ ತಡೆಗಟ್ಟುವಿಕೆ, ರೋಗ ನಿರೋಧಕ ಕ್ರಮ, ಇವುಗಳಿಗೆ ಹೆಚ್ಚಿನ ಗಮನ ನೀಡಲಾಗುತ್ತದೆ. ಮಹಿಳೆಯರಿಗಾಗಿ ಇರುವ ವಿದ್ಯಾಪೀಠದಲ್ಲಿ ಕುಟುಂಬ ಯೋಜನೆ ಮತ್ತು ಕ್ಷೇಮಾಭಿವೃದ್ಧಿ, ಕಸೂತಿ ಕೆಲಸ, ಮನೆಯನ್ನು ಅಂದವಾಗಿಡುವುದು, ಜಾನಪದಗೀತೆಗಳು, ಪೌಷ್ಟಿಕ ಆಹಾರದ ಜ್ಞಾನ, ಇತ್ಯಾದಿಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಲಾಗಿದೆ.

ಶ್ರಮಿಕ ವಿದ್ಯಾಪೀಠ : ವಯಸ್ಕರ ಶಿಕ್ಷಣ ಇಲಾಖೆಯು ನಗರದ ಹಾಗೂ ಕೈಗಾರಿಕಾ ಕಾರ್ಮಿಕರಿಗಾಗಿ ಬೆಂಗಳೂರಿನಲ್ಲಿ ಒಂದು ಬಹುಮುಖ ವಯಸ್ಕರ ಶಿಕ್ಷಣ ನೀಡುವ ಶ್ರಮಿಕ ವಿದ್ಯಾಪೀಠವನ್ನು ತೆರೆದಿದೆ. 1979ರಿಂದ ಆರಂಭವಾಗಿರುವ ಈ ಸಂಸ್ಥೆಯು ಗಾರೆ ಕೆಲಸ, ಮರ ಕೆಲಸ ಹಾಗೂ ಕೊಳಾಯಿ ರಿಪೇರಿ ಕೆಲಸ ಮುಂತಾದವುಗಳಲ್ಲಿ ತರಬೇತಿಯನ್ನು ಕೊಡುತ್ತಿದೆ. ಇಲ್ಲಿಯ ತನಕ ಐದು ಬಹುಮುಖ ವಯಸ್ಕರ ಶಿಕ್ಷಣ ತರಬೇತಿ ತರಗತಿಗಳನ್ನು ಇದರಿಂದ ನಡೆಸಲಾಗಿದೆ. 1981-82ರಲ್ಲಿ ಕೊಳಚೆ ಪ್ರದೇಶದ ಮಹಿಳೆಯರಿಗೆ ಹಾಗೂ ದಾರಿ ಬದಿಯ ಮೋಚಿಗಳಿಗೆ ತರಬೇತಿ ತರಗತಿಗಳನ್ನು ನಡೆಸಲಾಗಿತ್ತು.

ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯಕ್ರಮ : ರಾಷ್ಟ್ರದಲ್ಲಿ ಅನಕ್ಷರತೆಯನ್ನು ನಿರ್ಮೂಲ ಮಾಡುವುದಕ್ಕಾಗಿ ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯಕ್ರಮವನ್ನು ಭಾರತ ಸರಕಾರವು ರೂಪಿಸಿದ್ದು ನಮ್ಮ ರಾಜ್ಯವೂ ಅದನ್ನು ಜಾರಿಗೆ ತರುತ್ತಿದೆ. ಆರನೇಯ ಯೋಜನೆಯಲ್ಲಿ 29 ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ 67 ಲಕ್ಷ ಜನರನ್ನು ಅಕ್ಷರಸ್ಥರನ್ನಾಗಿ ಮಾಡುವ ಗುರಿಯನ್ನು ಅದು ಹೊಂದಿದೆ. ಈ ಯೋಜನೆಯ ಪ್ರಕಾರ ಸಾಕ್ಷರತಾ ತರಗತಿಗಳನ್ನು ಪ್ರತೀದಿನ ಎರಡು ಗಂಟೆಯ ಬೋಧನೆಯಂತೆ ಮೂರು ಹಂತದಲ್ಲಿ ಒಟ್ಟು ಒಂಬತ್ತು ತಿಂಗಳ ಕಾಲ ನಡೆಸಲಾಗುತ್ತದೆ. ಮೊದಲ ಮೂರು ತಿಂಗಳು ಪ್ರಾಥಮಿಕ ಸಾಕ್ಷರತಾ ಅವಧಿಯೆಂದೂ, ಮಧ್ಯದ ಮೂರು ತಿಂಗಳು ಮಧ್ಯಾವಧಿಯ ಅಕ್ಷರ ಜ್ಞಾನಾನಂತರದ ತರಬೇತಿ ಶಿಕ್ಷಣವೆಂದೂ ಮತ್ತು ಕೊನೆಯ ಮೂರು ತಿಂಗಳು ಈ ಕೋರ್ಸನ್ನು ಅನುಸರಣೆಯ ತರಬೇತಿ ಶಿಕ್ಷಣವೆಂದೂ ಪರಿಗಣಿಸಲಾಗಿದೆ. ಇಲ್ಲಿ ಕೊಡುವ ಶಿಕ್ಷಣವು ಪ್ರಾಥಮಿಕ ನಾಲ್ಕನೇಯ ತರಗತಿಯ ಶಿಕ್ಷಣಕ್ಕೆ ಸಮನಾಗಿರುತ್ತದೆ. ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳೆರಡೂ ಈ ಮಹತ್ಕಾರ್ಯವನ್ನು ಸಾಧಿಸುವುದಕ್ಕೆ ಪ್ರಯತ್ನ ಪಡುತ್ತಿವೆ.

ವಯಸ್ಕರ ಶಿಕ್ಷಣ ಸಮಿತಿ : ವಯಸ್ಕರ ಶಿಕ್ಷಣ ಸಮಿತಿಯು ಹತ್ತು ಜನ ಸರ್ಕಾರದಿಂದ ನೇಮಕಗೊಂಡ ಸದಸ್ಯರೂ ಸೇರಿದಂತೆ 30 ಸದಸ್ಯರಿಗೆ ಕಡಿಮೆ ಇಲ್ಲದ ಸದಸ್ಯರನ್ನು ಹೊಂದಿದೆ. ಈ ಸಮಿತಿಯು ನಾಲ್ಕು ವರ್ಷಗಳಿಗೊಮ್ಮೆ ಪುನರ್‌ರಚಿತವಾಗುತ್ತದೆ. ಸಾಮಾನ್ಯ ನಿಯಮಾವಳಿಗಳನ್ನು ಈ ಸಮಿತಿಯು ಕಾಲಕಾಲಕ್ಕೆ ರೂಪಿಸುತ್ತದೆ. ಅಲ್ಲದೆ ತನ್ನ ಅಧ್ಯಕ್ಷರನ್ನು, ಪದಾಧಿಕಾರಿಗಳನ್ನು ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರುಗಳನ್ನು ಈ ಸಮಿತಿಯು ಚುನಾಯಿಸುತ್ತದೆ.

ವಯಸ್ಕರ ಶಿಕ್ಷಣ ಇಲಾಖೆ : ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯಕ್ರಮದ ಉದ್ದೇಶವನ್ನು ಸಾಧಿಸುವ ಸಲುವಾಗಿ ವಯಸ್ಕರ ಶಿಕ್ಷಣ ಇಲಾಖೆಯು 1978ರಲ್ಲಿ ರಚಿತವಾಯಿತು. ಈ ಇಲಾಖೆಯು ಶಿಕ್ಷಣ ಮತ್ತು ಸಮಾಜ ಕಲ್ಯಾಣ ಇಲಾಖೆಯ ಆಧೀನದಲ್ಲಿ ಕೆಲಸ ಮಾಡುತ್ತದೆ. ಶಿಕ್ಷಣ ಮಂತ್ರಿಗಳು ಅಧ್ಯಕ್ಷರಾಗಿರುವ ರಾಜ್ಯ ಸಲಹಾ ಮಂಡಳಿಯ ಮಾರ್ಗದರ್ಶನದಲ್ಲಿ ಇದು ಕೆಲಸ ಮಾಡುತ್ತದೆ. ವಿಧಾನ ಸೌಧದಲ್ಲಿರುವ ವಯಸ್ಕರ ಶಿಕ್ಷಣ ಸೆಲ್‌ನ ಸಹಾಯದಿಂದ ಮುಖ್ಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ಒಂದು ಸಮಿತಿಯು ಸಹ ಈ ಇಲಾಖೆಯನ್ನು ನಿರ್ದೇಶಿಸುತ್ತದೆ. ಇಬ್ಬರು ಉಪನಿರ್ದೇಶಕರುಗಳು, ಮೂವರು ಸಹಾಯಕ ನಿರ್ದೇಶಕರು, ಒಬ್ಬರು ಲೆಕ್ಕಪತ್ರ ಅಧೀಕ್ಷಕರು ಮತ್ತು ಇತರ ಕಚೇರಿ ಸಿಬ್ಬಂದಿ ಇರುವ ರಾಜ್ಯದ ಕೇಂದ್ರ ಕಚೇರಿಯಲ್ಲಿ ವಯಸ್ಕರ ಶಿಕ್ಷಣ ನಿರ್ದೇಶಕರು ಕಾರ್ಯ ನಿರ್ವಹಿಸುತ್ತಾರೆ. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ವಯಸ್ಕರ ಶಿಕ್ಷಣ ಅಧಿಕಾರಿಯು ತಮ್ಮ ಸಿಬ್ಬಂದಿಯ ಸಹಾಯದಿಂದ ನಿರ್ದೇಶಕರಿಗೆ ಕಾರ್ಯಕ್ರಮಗಳನ್ನು ಜಾರಿಗೊಳಿಸುವಲ್ಲಿ ಸಹಾಯ ಮಾಡು

ತ್ತಾರೆ. ಯೋಜನಾಧಿಕಾರಿಯು, ಕೆಲವು ಸಹಾಯಕ ಯೋಜನಾಧಿಕಾರಿಗಳು, ಅಧೀಕ್ಷಕರು ಹಾಗೂ ಆಫೀಸು ಸಿಬ್ಬಂದಿಯ ಸಹಾಯದಿಂದ ಯೋಜನಾ ಕಾರ್ಯವನ್ನು ನಿರ್ವಹಿಸುತ್ತಾರೆ. ಇದಲ್ಲದೆ ಕಾರ್ಯಕ್ರಮವು ಪರಿಣಾಮಕಾರಿಯಾಗಿ ನಡೆಸಲ್ಪಡಲು ಜಿಲ್ಲೆಯ, ತಾಲೂಕಿನ ಹಾಗೂ ಗ್ರಾಮೀಣ ಮಟ್ಟದಲ್ಲಿ ವಯಸ್ಕರ ಶಿಕ್ಷಣ ಸಮಿತಿಗಳು ಇರುತ್ತವೆ. ವಯಸ್ಕರ ಶಿಕ್ಷಣ ನಿರ್ದೇಶಕರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಇಬ್ಬರು ಉಪ ನಿರ್ದೇಶಕರು, ಜಿಲ್ಲಾ ಶಿಕ್ಷಣ ಅಧಿಕಾರಿಗಳು, ಯೋಜನಾಧಿಕಾರಿಗಳು, ಅಧೀಕ್ಷಕರು, ಬೋಧಕರು ಮತ್ತು ಗ್ರಾಮ ಮಟ್ಟದ ಶಿಕ್ಷಣ ಸಮಿತಿಗಳ ಸಹಾಯದಿಂದ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾರೆ.

ರಾಜ್ಯ ಸಂಪನ್ಮೂಲ ಕೇಂದ್ರ : ಭಾರತ ಸರಕಾರವು ರಾಜ್ಯ ಸರಕಾರದ ಧನಸಹಾಯದಿಂದ ಮೈಸೂರಿನಲ್ಲಿ ರಾಜ್ಯ ಸಂಪನ್ಮೂಲ ಕೇಂದ್ರವನ್ನು 1979ರಲ್ಲಿ ಪ್ರಾರಂಭಿಸಿತು. ಇದು ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಅಂಗವಾಗಿದ್ದು ತಾಂತ್ರಿಕವಾಗಿ ತಿಳುವಳಿಕೆ ನೀಡಲು ಮತ್ತು ಕಾರ್ಯಕ್ರಮವನ್ನು ಜಾರಿಗೊಳಿಸಲು ವ್ಯಕ್ತಿಗಳಿಗೆ ಬೇಕಾದ ತರಬೇತಿಯನ್ನು ಒದಗಿಸುತ್ತದೆ. ಇದರ ಮುಖ್ಯ ಕಾರ್ಯಗಳೆಂದರೆ ಶಿಕ್ಷಣಕ್ಕೆ ಬೇಕಾದ ಸಾಮಗ್ರಿಗಳನ್ನು ತಯಾರಿಸಿ ಒದಗಿಸುವುದು, ಹೊಸದಾಗಿ ಅಕ್ಷರಸ್ಥರಾದವರಿಗೆ ಓದುವ ಸಾಮಗ್ರಿಗಳನ್ನು ಒದಗಿಸುವುದು, ಈ ಕ್ಷೇತ್ರದ ಸಿಬ್ಬಂದಿಗೆ ತರಬೇತಿ ಕೊಡುವುದು, ಹಾಗೂ ಸಂಶೋಧನೆ ಮತ್ತು ಕಾರ್ಯಕ್ರಮಗಳನ್ನು ರೂಪಿಸುವುದು ಆಗಿವೆ. ಖ್ಯಾತ ಶಿಕ್ಷಣ ತಜ್ಞರು ಇರುವ ಒಂದು ಸಲಹಾ ಸಮಿತಿಯ ಮಾರ್ಗದರ್ಶನದಲ್ಲಿ ಈ ಸಂಪನ್ಮೂಲ ಕೇಂದ್ರವು ತನ್ನ ಯೋಜನೆಗಳನ್ನು ಮತ್ತು ಕಾರ್ಯಕ್ರಮವನ್ನು ರೂಪಿಸಿ ಕಾರ್ಯ ನಿರ್ವಹಣೆಯನ್ನು ಮಾಡುತ್ತದೆ.

### ರೈತರ ಸಾಕ್ಷರತಾ ಕಾರ್ಯಕ್ರಮ

ರೈತರಲ್ಲಿರುವ ಅನರಕ್ಷರತೆಯನ್ನು ನಿರ್ಮೂಲ ಮಾಡಲು 1969-70ರಲ್ಲಿ ರೈತರ ಸಾಕ್ಷರತಾ ಕಾರ್ಯಕ್ರಮವು ಪ್ರಾರಂಭವಾಯಿತು. 1978ರ ವೇಳೆಗೆ ಒಂಭತ್ತು ಜಿಲ್ಲೆಗಳನ್ನು ಈ ಕಾರ್ಯಕ್ರಮದಡಿಯಲ್ಲಿ ತರಲಾಯಿತು. ಶಾಲೆಯನ್ನು ಬಿಟ್ಟ 15 ರಿಂದ 30 ವರ್ಷ ವಯಸ್ಸಿನ ಗ್ರಾಮೀಣ ಸಮುದಾಯಕ್ಕೆ ಪ್ರಾಥಮಿಕ ಜ್ಞಾನವನ್ನು ನೀಡಲು 1975-76ರಲ್ಲಿ ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮವು ಪ್ರಾರಂಭವಾಯಿತು. 1978ರ ವೇಳೆಗೆ ಎಂಟು ಜಿಲ್ಲೆಗಳನ್ನು ಈ ಕಾರ್ಯಕ್ರಮದಡಿಯಲ್ಲಿ ತರಲಾಯಿತು. ರೈತರ ಔಪಚಾರಿಕ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣವೆಂಬ ಎರಡೂ ಯೋಜನೆಗಳನ್ನು ಗ್ರಾಮೀಣ ಕಾರ್ಯಾತ್ಮಕ ಸಾಕ್ಷರತಾ ಕಾರ್ಯಕ್ರಮದಲ್ಲಿ ವಿಲೀನಗೊಳಿಸಲಾಯಿತು. ಮತ್ತು 1979-80ರಲ್ಲಿ ಅದನ್ನು ರಾಷ್ಟ್ರೀಯ ಶಿಕ್ಷಣ ಕಾರ್ಯಕ್ರಮದ ಭಾಗವಾಗಿ ಮಾಡಲಾಯಿತು. ಈ ಕಾರ್ಯಕ್ರಮದಡಿಯಲ್ಲಿ 300 ವಯಸ್ಕರ ಸಾಕ್ಷರತಾ ಕೇಂದ್ರಗಳನ್ನು ಬೆಂಗಳೂರು, ಬೆಳಗಾವಿ, ಬಳ್ಳಾರಿ, ವಿಜಾಪುರ, ಕೊಡಗು, ಮಂಡ್ಯ, ರಾಯಚೂರು, ಶಿವಮೊಗ್ಗ, ತುಮಕೂರು, ಮೈಸೂರು, ಹಾಸನ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಅದೇ ವರ್ಷ ಪ್ರಾರಂಭಿಸಲಾಯಿತು. ಮತ್ತು 1981-82ರಲ್ಲಿ ಈ ತರಗತಿಗಳನ್ನು ಮುಂದುವರಿಸಲಾಯಿತು. ಮೈಸೂರು, ಹಾಸನ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಯ ಈ ಯೋಜನೆಗಳು ಕರ್ನಾಟಕ ರಾಜ್ಯದ ವಯಸ್ಕರ ಶಿಕ್ಷಣ ಸಮಿತಿಯ ಆಶ್ರಯದಲ್ಲಿ ಕಾರ್ಯನಿರ್ವಹಿಸುತ್ತಿವೆ. ಮತ್ತು ಉಳಿದ ಜಿಲ್ಲೆಗಳ ಯೋಜನೆಗಳು ವಯಸ್ಕರ ಶಿಕ್ಷಣ ಇಲಾಖೆಯ ಆಶ್ರಯದಲ್ಲಿ ಕೆಲಸ ನಿರ್ವಹಿಸುತ್ತಿವೆ. 13 ಜಿಲ್ಲೆಗಳಲ್ಲಿನ ಈ 13 ಯೋಜನೆಗಳ ಒಟ್ಟು ವೆಚ್ಚ 76.7 ಲಕ್ಷ ರೂ.ಗಳಾಗಿದ್ದು, ಇದನ್ನು ಭಾರತ ಸರ್ಕಾರವು ಭರಿಸಿತು. ಗ್ರಾಮೀಣ ಔಪಚಾರಿಕ ಸಾಕ್ಷರತಾ ಕಾರ್ಯಕ್ರಮದಡಿಯಲ್ಲಿ 1981-82ರಲ್ಲಿ 3,884 ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದ್ದು, ಅವುಗಳಲ್ಲಿ 21,12,297 ವಯಸ್ಕರು ದಾಖಲಾತಿ ಪಡೆದಿದ್ದರು. ರಾಜ್ಯ ಸಂಪನ್ಮೂಲ ಕೇಂದ್ರವು ನೇರವಾಗಿ ತರಬೇತಿ ಕಾರ್ಯಕ್ರಮದಲ್ಲಿ ತಾನಾಗಿ ಭಾಗವಹಿಸದಿದ್ದರೂ 1980-81ರ ಅವಧಿಯಲ್ಲಿ ಬೋಧಕರಿಗೆ ವಿಶೇಷವಾಗಿ ತರಬೇತು ಕಾರ್ಯಕ್ರಮವನ್ನು ಎಲ್ಲಾ ಜಿಲ್ಲೆಗಳಲ್ಲೂ ಸಂಘಟಿಸಿತು. ಸ್ಥಳೀಯವಾಗಿ ದೊರೆಯಬಹುದಾದ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಳ್ಳಬೇಕೆಂಬ ಉದ್ದೇಶದಿಂದ ವಿದ್ಯಾ ಇಲಾಖೆಯಲ್ಲಿ ಮತ್ತು ಇತರ ಅಭಿವೃದ್ಧಿ ಇಲಾಖೆಗಳಲ್ಲಿನ ಸೂಕ್ತ ವ್ಯಕ್ತಿಗಳನ್ನು ಒಳಗೊಂಡ ಜಿಲ್ಲಾ ಸಂಪನ್ಮೂಲ ಕೇಂದ್ರಗಳನ್ನು ಸ್ಥಾಪಿಸಿ ಅಲ್ಪಕಾಲೀನ ತರಬೇತಿಯನ್ನು ರಾಜ್ಯ ಸಂಪನ್ಮೂಲ ಕೇಂದ್ರವು ನೀಡಿತು.

ಪ್ರತಿಯೊಂದರಲ್ಲಿಯೂ 100 ವಯಸ್ಕರ ಶಿಕ್ಷಣ ಕೇಂದ್ರಗಳಿದ್ದ 27 ಯೋಜನೆಗಳು 1980-82ರಲ್ಲಿ ಮಂಜೂರಾದವು. ಅವುಗಳಲ್ಲಿ 19 ಯೋಜನೆಗಳನ್ನು ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಮಂಡಳಿಯೂ ಎಂಟು ಯೋಜನೆಗಳನ್ನು ವಯಸ್ಕರ ಶಿಕ್ಷಣ ಇಲಾಖೆಯೂ ವಹಿಸಿಕೊಂಡವು. 1981-82ರಲ್ಲಿ 7,219 ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದ್ದು ಅವುಗಳಲ್ಲಿ 2,12,447 ವಯಸ್ಕರು ದಾಖಲಾತಿ ಪಡೆದಿದ್ದರು. ಇವುಗಳಲ್ಲಿ 3,884 ಕೇಂದ್ರಗಳು ಗ್ರಾಮೀಣ ಔಪಚಾರಿಕ ಸಾಕ್ಷರತಾ ಕಾರ್ಯಕ್ರಮದಲ್ಲೂ, 2,894 ಕೇಂದ್ರಗಳು ರಾಜ್ಯ ಯೋಜನಾ ಕಾರ್ಯಕ್ರಮದಲ್ಲೂ ಮತ್ತು ಉಳಿದ 441 ಕೇಂದ್ರಗಳು ನೆಹರು ಯುವಕ ಕೇಂದ್ರ, ಮಹಿಳಾ ಮತ್ತು ಶಿಶು ಕಲ್ಯಾಣ ಇಲಾಖೆ ಮತ್ತು ವಿಶ್ವವಿದ್ಯಾಲಯಕ್ಕೆ ಸೇರಿದ ಕಾಲೇಜುಗಳು, ಮುಂತಾದ ಸಂಸ್ಥೆಗಳ ಮೂಲಕ ನಡೆಸಲ್ಪಡುತ್ತಿದ್ದವು. ಇವಲ್ಲದೆ ಬಿಪರೆ

ಜಿಲ್ಲೆಯ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ ಮೂರು ಯೋಜನೆಗಳಲ್ಲಿ, ಪ್ರತೀಯೊಂದರಲ್ಲಿ 100 ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದ್ದವು.

## ತಾಂತ್ರಿಕ ಶಿಕ್ಷಣ

ಕರ್ನಾಟಕ ರಾಜ್ಯದ ವಾಸ್ತುಶಿಲ್ಪದ ದೃಶ್ಯ ಪರಂಪರೆಯ ಸೌಂದರ್ಯವು ಚಾಳುಕ್ಯರ ಹಾಗೂ ಹೊಯ್ಸಳರ ಕಾಲದ ತಾಂತ್ರಿಕ ನಿಪುಣತೆ ಮತ್ತು ತಾಂತ್ರಿಕ ಜ್ಞಾನವನ್ನು ಪ್ರತಿಬಿಂಬಿಸುತ್ತದೆ. ನರಸೊಬ್ಬ, ಅನಿವಾರಿತ ಗುಂಡ, ರೇವಡಿ ಓವಜ್ಜ ಇವರನ್ನು ಚಾಳುಕ್ಯರ ಕಾಲದ ಐಹೊಳೆ ಮತ್ತು ಪಟ್ಟದ ಕಲ್ಲಿನ ಶಿಲ್ಪಗಳ ನಿರ್ಮಾಪಕರೆಂದು ವರ್ಣಿಸಲಾಗಿದೆ. ಶಿಲ್ಪ ನಿಪುಣ ದಾಸೋಜ ಮತ್ತು ಅವನ ಮಗನಾದ ಚಾವಣ ಇವರುಗಳು ಬೇಲೂರು ದೇವಸ್ಥಾನದ ಶಿಲ್ಪಿಗಳಾಗಿದ್ದರೆಂದು, ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯಿಂದ ಬಂದವರೆಂದೂ, ಹೊಯ್ಸಳರ ಶಾಸನಗಳು ಹೇಳುತ್ತವೆ. ಹಳೇಬೀಡಿನಲ್ಲಿರುವ ಹೊಯ್ಸಳೇಶ್ವರ ದೇವಸ್ಥಾನವು ಕೇದಾರೋಜನೆಂಬ ಪ್ರಖ್ಯಾತ ಶಿಲ್ಪಿಯಿಂದ ಕಟ್ಟಲ್ಪಟ್ಟಿತು. ಇದರ ಒಂದು ಮುಖ್ಯದ್ವಾರವು ಕಾಳಿದಾಸಿಯಿಂದ ರಚಿತವಾದುದಾಗಿದೆ. ಈ ಶಿಲ್ಪಿಗಳು ತಮ್ಮದೇ ಆದ ವೃತ್ತಿ ಸಂಘವನ್ನು ಹೊಂದಿದ್ದು ತಮ್ಮ ಕರಕುಶಲ ಕಲೆಗಳಿಗೆ ಹೆಚ್ಚು ಉತ್ತೇಜನವನ್ನು ಕೊಡುತ್ತಿದ್ದುದಲ್ಲದೆ ಯುವ ಶಿಲ್ಪಿಗಳಿಗೆ ತರಬೇತಿಯನ್ನೂ ನೀಡುತ್ತಿದ್ದರು. ಸಾಮಾನ್ಯವಾಗಿ ಈ ಶಿಲ್ಪಿಗಳು ತಮ್ಮ ಮಕ್ಕಳಿಗೆ ತರಬೇತಿಯನ್ನು ಕೊಡುತ್ತಿದ್ದುದರಿಂದ ತಾಂತ್ರಿಕ ಶಿಕ್ಷಣವು ಹೆಚ್ಚು ಕಡಿಮೆ ಆನುವಂಶಿಕವಾಗಿ ಬಂದಿದ್ದುದಾಗಿತ್ತು. ಅಭ್ಯಾಸಿ ತರಬೇತಿ ವ್ಯವಸ್ಥೆಯು ಇಂತಹ ಕಲಾ ಕೈಗಾರಿಕೆಗಳಲ್ಲಿ ಬಹಳ ಹಿಂದಿನಿಂದಲೂ ತರಬೇತಿ ನೀಡುವ ಸಾಮಾನ್ಯ ವಿಧಾನವಾಗಿತ್ತು. ಯಂತ್ರಕಲಾ ವಿದ್ಯೆಯನ್ನು ಕಲಿಯುವ ಇಚ್ಛೆಯುಳ್ಳವನನ್ನು 'ಅಂತೇವಾಸ' ಎಂದು ಮಿತಾಕ್ಷರಕಾರನು ಕರೆದಿದ್ದಾನೆ. ಶಿಲ್ಪಶಾಸ್ತ್ರ, ಲೋಹಶಾಸ್ತ್ರ, ಮತ್ತಿತರ ತಾಂತ್ರಿಕ ವಿದ್ಯಾಭ್ಯಾಸವನ್ನು ಬೋಧಿಸುವ ಗ್ರಂಥಗಳ ಅಭ್ಯಾಸವನ್ನು ಪ್ರಮುಖ ವಿದ್ಯಾಕೇಂದ್ರಗಳಾಗಿದ್ದ ಅಗ್ರಹಾರಗಳಲ್ಲಿ ಮಾಡಿಸಲಾಗುತ್ತಿತ್ತು. ಕೆಲವು ಶಾಸನಗಳಲ್ಲಿ ಈ ಕುಶಲಗಾರರು ಉಪಯೋಗಿಸುತ್ತಿದ್ದ ಕೆಲವು ಉಪಕರಣಗಳ ವಿವರಣೆ ಇದೆ; ಕೆಲವನ್ನು ಶಾಸನ ಶಿಲೆಯ ಮೇಲೆ ಕೆತ್ತಲಾಗಿದೆ. ಕೆಲಸಿಗರು ಉಪಯೋಗಿಸುತ್ತಿದ್ದ ಕತ್ತರಿಗಳು, ಕತ್ತಿಗಳು ಮುಂತಾದ ಉಪಕರಣಗಳೂ ಕಮ್ಮಾರರು ಉಪಯೋಗಿಸುತ್ತಿದ್ದ ಸುತ್ತಿಗೆ, ಹಿಡಿ, ಮೂಸೆ, ಇಕ್ಕುಳ, ಅಡಿಗಲ್ಲು ಮುಂತಾದವನ್ನು ಶಾಸನಗಳ ಮೇಲೆ ಬಿಡಿಸಿರುವುದು ಆಗಿನ ಕಾಲದ ತಾಂತ್ರಿಕ ಸ್ಥಿತಿಯ ಬಗ್ಗೆ ತಿಳಿಯಲು ನೆರವಾಗುತ್ತದೆ.

ವೀರಶೈವ ಶರಣರ ವಚನಗಳಲ್ಲಿಯೂ ನೇಯ್ಗೆ, ಹಿಂಜುವುದು ಮತ್ತಿತರ ಕುಶಲ ಕರ್ಮಿಗಳ ಕೆಲಸದ ಬಗ್ಗೆ ವಿವರವಾದ ವರ್ಣನೆಗಳು ಕಂಡುಬರುತ್ತವೆ. ಉಕ್ಕಿನ ತಯಾರಿಕೆಯಲ್ಲಿ ಕರ್ನಾಟಕವು ಪ್ರಥಮ ಸ್ಥಾನವನ್ನು ಪಡೆದಿದ್ದಿರಬಹುದು. ಇಂಗ್ಲೀಷ್‌ನಲ್ಲಿ ಉಪಯೋಗಿಸುವ 'ವೂಟ್ಜ್' ಎಂಬ ಪದವು ಕನ್ನಡದ ಉಕ್ಕು ಎಂಬ ಪದದಿಂದ ಬಂದಿದ್ದಿರಬೇಕೆಂದು ಸ್ಪಷ್ಟ ಸೂಚನೆ ಇದೆ. ನ್ಯೂಯಾರ್ಕಿನ ಮೆಟ್ರೋಪಾಲಿಟನ್ ಮ್ಯೂಸಿಯಂನಲ್ಲಿ ಇರುವ ಕೇಶವ ವಿಗ್ರಹವು ದಾಸೋಜನಿಂದ ಕಡೆಯಲ್ಪಟ್ಟಿದೆ ಎಂಬುದು ಹೆಮ್ಮೆಯ ವಿಚಾರ. ಇದು ಮೂಲತಃ ಕಿಕ್ಕೇರಿಯಲ್ಲಿ ಇರುವ ಹಳೆಯ ವಿಷ್ಣು ದೇವಸ್ಥಾನಕ್ಕೆ ಸೇರಿದುದೆಂದು ಗುರುತಿಸಲಾಗಿದೆ.

### ತಾಂತ್ರಿಕ ಶಾಲೆಗಳು

1862ರಲ್ಲಿ ಬೆಂಗಳೂರಿನಲ್ಲಿ ಪ್ರಪ್ರಥಮ ತಾಂತ್ರಿಕ ಶಾಲೆ ಸ್ಕೂಲ್ ಆಫ್ ಇಂಜಿನಿಯರಿಂಗ್‌ನ ಪ್ರಾರಂಭದೊಂದಿಗೆ ಶಾಲೆಯ ತಾಂತ್ರಿಕ ಶಿಕ್ಷಣದ ಪ್ರಾರಂಭವು 19ನೇಯ ಶತಮಾನದ ಉತ್ತರಾರ್ಧದಲ್ಲಿ ನಮ್ಮ ರಾಜ್ಯದಲ್ಲಿ ಆಯಿತು. ಈ ತಾಂತ್ರಿಕ ಶಾಲೆಯು ಎರಡು ತರಗತಿಗಳನ್ನು ಹೊಂದಿದ್ದು ಅಧೀನ ತಾಂತ್ರಿಕ ಸೇವೆಗಳಿಗೋಸ್ಕರ ಜನರಿಗೆ ತರಬೇತು ನೀಡುವ ಉದ್ದೇಶವನ್ನು ಹೊಂದಿತ್ತು. ಪ್ರಾರಂಭದಲ್ಲಿ ಈ ತಾಂತ್ರಿಕ ಶಾಲೆಯು ಮದ್ರಾಸ್ ವಿಶ್ವವಿದ್ಯಾಲಯದ ಅಂಗಸಂಸ್ಥೆಯಾಗಿತ್ತು. ಆದರೆ ಸ್ವಲ್ಪ ಸಮಯದ ನಂತರ, ಅಂದರೆ 1880ರಲ್ಲಿ ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ ವಿದ್ಯಾರ್ಥಿಗಳಿಗೆ ತರಬೇತಿ ಕೊಡುವುದನ್ನು ನಿಲ್ಲಿಸಿ ತನ್ನ ಶಾಲೆಯಲ್ಲೇ ಅಧೀನ ತಾಂತ್ರಿಕ ಸೇವೆಗಳಿಗಾಗಿ ತರಬೇತಿ ಕೊಡುವುದನ್ನು ಈ 'ಇಂಜಿನಿಯರಿಂಗ್ ಸ್ಕೂಲ್' ಮುಂದುವರಿಸಿತು. 1883-84ರಲ್ಲಿ ಈ ಶಾಲೆಯನ್ನು ಕೂಡಾ ರದ್ದುಗೊಳಿಸಲಾಯಿತು. ಮುಂದೆ ರಾವ್ ಬಹದ್ದೂರ್ ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರರಿಂದ ಬೆಂಗಳೂರಿನ ಸಿವಿಲ್ ಮತ್ತು ಮಿಲಿಟರಿ ಸ್ಟೇಷನ್‌ನಲ್ಲಿ 1873ರಲ್ಲಿ ಸ್ಥಾಪಿತವಾದ ಒಂದೇ ಒಂದು ಶಾಲೆಯು ಮೈಸೂರಿನ ಲೋಕೋಪಯೋಗಿ ಇಲಾಖೆಯ ಸೇವೆಯಲ್ಲಿ ನೌಕರಿಗೆ ಸೇರಲು ಬೇಕಾದ ತರಬೇತಿಯನ್ನು ಕೊಡುತ್ತಿತ್ತು.

ಮೊದಲನೇಯ ಹೆಜ್ಜೆಯಾಗಿ 1889ರಲ್ಲಿ ಹಾಸನದಲ್ಲಿ ಒಂದು ಕೈಗಾರಿಕಾ ಶಾಲೆ ಮತ್ತು 1892ರಲ್ಲಿ ಮೈಸೂರಿನಲ್ಲಿ ಅದೇ ರೀತಿಯ ಇನ್ನೊಂದು ಶಾಲೆ ಸ್ಥಾಪಿತವಾದವು. ಬಡಗಿತನ, ಕುಂಬಾರಿಕೆ, ಬೆತ್ತದ ಹೆಣಿಗೆ, ಮತ್ತು ಲೋಕೋಪಯೋಗಿ ಇಲಾಖೆಗಳಿಗಾಗಿ ಮೇಸ್ತ್ರಿಗಳನ್ನು ತರಬೇತಿಗೊಳಿಸುತ್ತಿದ್ದ ಈ ಶಾಲೆಗಳು ಒಂದು ಆಡಳಿತ ಸಮಿತಿಯ ಮೇಲ್ವಿಚಾರಣೆಯಲ್ಲಿ ನಡೆಯುತ್ತಿದ್ದವು. 1890-91ರಲ್ಲಿ ಒಂದು ಸರ್ಕಾರಿ ಶಾಲೆ ಮತ್ತು ಒಂದು ಅನುದಾನ ಪಡೆಯುತ್ತಿದ್ದ ಶಾಲೆಯಿದ್ದು ಅವು

ಗಳಲ್ಲಿ ಕ್ರಮವಾಗಿ 16 ಮತ್ತು 9 ವಿದ್ಯಾರ್ಥಿಗಳು ಕಲಿಯುತ್ತಿದ್ದರು. 1900-01ರಲ್ಲಿ ಎರಡು ಸರ್ಕಾರಿ ಶಾಲೆಗಳು, ನಾಲ್ಕು ಅನುದಾನ ಪಡೆಯುತ್ತಿದ್ದ ಶಾಲೆಗಳು ಮತ್ತು ಒಂದು ಅನುದಾನ ಪಡೆಯದ ಶಾಲೆಯು ಇದ್ದು ಅವುಗಳಲ್ಲಿ ಕ್ರಮವಾಗಿ 147, 203 ಮತ್ತು 72 ವಿದ್ಯಾರ್ಥಿಗಳು ಕಲಿಯುತ್ತಿದ್ದರು. 1910-11ರಲ್ಲಿ ಒಂದು ಸರ್ಕಾರಿ ಶಾಲೆ, 17 ಅನುದಾನ ಪಡೆಯುತ್ತಿದ್ದ ಶಾಲೆಗಳು ಮತ್ತು ಎರಡು ಅನುದಾನ ಪಡೆಯದ ಶಾಲೆಗಳು ಇದ್ದು ಅವುಗಳಲ್ಲಿ ಕ್ರಮವಾಗಿ 208, 970 ಹಾಗೂ 56 ವಿದ್ಯಾರ್ಥಿಗಳಿದ್ದರು. ಬೆಂಗಳೂರಿನಲ್ಲಿದ್ದ ಇಂಜಿನಿಯರಿಂಗ್ ಶಾಲೆಯು ಅಧೀನ ಸೇವಾ ನೌಕರರಿಗಾಗಿ ತರಬೇತಿ ನೀಡುತ್ತಿದ್ದ ಕಾರಣ, ರಾಜ್ಯದ ಹೊರಗೆ ಇದ್ದ ತಾಂತ್ರಿಕ ಕಾಲೇಜುಗಳಲ್ಲಿ ತರಬೇತಿ ಪಡೆಯಲು ಮತ್ತು ಅದರ ಮೂಲಕ ತಾಂತ್ರಿಕ ಶಿಕ್ಷಣಕ್ಕೆ ಉತ್ತೇಜನ ಕೊಡಲು ಅನೇಕ ವಿದ್ಯಾರ್ಥಿವೇತನಗಳು ಕೊಡಲ್ಪಡುತ್ತಿದ್ದವು. 1880-81ರಲ್ಲಿ 8,000 ರೂ.ಗಳಿದ್ದ ಈ ವಿದ್ಯಾರ್ಥಿ ವೇತನದ ಮೊತ್ತವು 1890-91ರಲ್ಲಿ 11,829 ರೂ.ಗಳಿಗೆ ಏರಿತು. ಈ ಅವಧಿಯಲ್ಲಿ ಎರಡು ಸರ್ಕಾರಿ ಕೈಗಾರಿಕಾ ಶಾಲೆಗಳು, ಐದು ಖಾಸಗಿ ಕೈಗಾರಿಕಾ ಶಾಲೆಗಳು ಮತ್ತು ರಾಜ್ಯದ ಹೊರಗಡೆ ಇದ್ದ ಕಾಲೇಜುಗಳಲ್ಲಿ ಕೊಡಬೇಕಾಗಿದ್ದ ವಿದ್ಯಾರ್ಥಿವೇತನಗಳು ಮತ್ತು ಒಂದು ತರಗತಿ—ಇವೆಲ್ಲವುಗಳನ್ನು ಒಳಗೊಂಡಂತೆ ಹಿಂದಿನ ಮೈಸೂರು ರಾಜ್ಯದಲ್ಲಿ ತಾಂತ್ರಿಕ ಶಿಕ್ಷಣವು ಇತ್ತು. 1903ರಲ್ಲಿ ಪಿ. ಎನ್. ಕೃಷ್ಣಮೂರ್ತಿಯವರು ಆಗಿನ ಪ್ರಜಾಪ್ರತಿನಿಧಿ ಸಭೆಯಲ್ಲಿ ತಾಂತ್ರಿಕ ಶಿಕ್ಷಣದ ಬಗ್ಗೆ ವಿಶೇಷವಾಗಿ ಒತ್ತಾಯಿಸಿದುದರಿಂದ ಸರ್ಕಾರವು ತಾಂತ್ರಿಕ ಶಿಕ್ಷಣಕ್ಕಾಗಿ ಒಂದು ಯೋಜನೆಯನ್ನು ಮಂಜೂರು ಮಾಡಿತು.

ಕೈಗಾರಿಕಾ ಶಿಕ್ಷಣವನ್ನು ಒಂದು ನಿಗದಿತ ಪದ್ಧತಿಯಲ್ಲಿ ರೂಪುಗೊಳಿಸುವುದಕ್ಕಾಗಿ ಮತ್ತು ಆಗಿನ ದಿವಾನರ ಉತ್ತೇಜನದಿಂದ ಸರ್ಕಾರವು ಮುಖ್ಯ ಇಂಜಿನಿಯರ್ ಆಗಿದ್ದ ಸರ್ ಎಂ. ವಿಶ್ವೇಶ್ವರಯ್ಯರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಅನುಭವಸ್ಥ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳು ಮತ್ತು ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ಇದರ ಸದಸ್ಯರನ್ನಾಗಿ ನೇಮಿಸಿತು.

ಈ ಸಮಿತಿಯ ಸಲಹೆಗಳು ಈ ರೀತಿ ಇದ್ದವು: 1) ತಾಂತ್ರಿಕ, ಕೈಗಾರಿಕಾ ಮತ್ತು ವಾಣಿಜ್ಯ ವಿಷಯದಲ್ಲಿ ಉನ್ನತ ಶಿಕ್ಷಣ ಕೊಡುವುದಕ್ಕಾಗಿ ಬೆಂಗಳೂರಿನಲ್ಲಿ ಒಂದು ತಾಂತ್ರಿಕ ಮಹಾವಿದ್ಯಾಲಯವನ್ನು ಪ್ರಾರಂಭಿಸುವುದು. 2) ಮೈಸೂರಿನಲ್ಲಿ ತೆರೆಯಲು ಉದ್ದೇಶಿಸಲಾಗಿದ್ದ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ (ಚಾಮರಾಜೇಂದ್ರ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್) ತಾಂತ್ರಿಕ, ಕೈಗಾರಿಕಾ, ವಾಣಿಜ್ಯ ವಿಭಾಗಗಳಲ್ಲಿ ಒಂದೊಂದು ತರಗತಿಯನ್ನು ತೆರೆಯುವುದು. 3) ಕೈಗಾರಿಕಾ ಶಾಲೆಗಳಿಗೆ ಪೂರ್ಣಾವಧಿಯ ಅಧೀಕ್ಷಕರನ್ನು ನೇಮಕ ಮಾಡುವುದು. 4) ಇನ್ನೂ ಮೂರು ಕೈಗಾರಿಕಾ ಶಾಲೆಗಳನ್ನು ಪ್ರಾರಂಭಿಸುವುದು. 5) ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿ ವೇತನಗಳನ್ನು ಕೊಡುವುದು ಮತ್ತು 6) ತಾಂತ್ರಿಕ ವಿಷಯಗಳಲ್ಲಿ ಹೆಚ್ಚಿನ ವ್ಯಾಸಂಗಕ್ಕೋಸ್ಕರ ವಿದೇಶಗಳಿಗೆ ಹೋಗುವುದಕ್ಕೆ ಪ್ರೋತ್ಸಾಹಿಸಲು ಹೆಚ್ಚು ವಿದ್ಯಾರ್ಥಿವೇತನಗಳನ್ನು ಕೊಡುವುದು.

ಈ ಮೇಲ್ಕಂಡ ಶಿಫಾರಸುಗಳನ್ನು ಮತ್ತು ಅವುಗಳ ಮೇಲೆ ಮಾಡಿದ ಆರ್ಥಿಕ ಸಮ್ಮೇಳನದ ಶಿಫಾರಸುಗಳನ್ನು ಪರಿಶೀಲಿಸಿ 1913ರ ಮೇ ತಿಂಗಳಲ್ಲಿ ಸರ್ಕಾರವು ಬೆಂಗಳೂರಿನಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಶಾಲೆ, ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಮತ್ತು ಬೆಂಗಳೂರಿನಲ್ಲಿ ಸರ್ಕಾರಿ ವಾಣಿಜ್ಯ ಶಾಲೆ ಇವುಗಳ ಸ್ಥಾಪನೆಗೆ ಮಂಜೂರಾತಿ ನೀಡಿತು. ವಿದ್ಯಾರ್ಥಿವೇತನಗಳ ಯೋಜನೆಯನ್ನು ಪುನರ್ವಿಮರ್ಶಿಸಿ ದಾಮೋದರ ದಾಸ್ ಧರ್ಮಾದಾಯ ನಿಧಿಯಿಂದ ಎರಡು, ಮೈಸೂರು ಸರ್ಕಾರದಿಂದ ನಾಲ್ಕು, ಋಣ ರೂಪದ್ದೆನ್ನಲಾದ ಸಾಲದ ರೂಪದಲ್ಲಿ ಐದು, ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಮತ್ತು ಪ್ರತಿಭಾನ್ವಿತ ಪದವೀಧರರಿಗೆ ವಿಜ್ಞಾನ ವಿಷಯಗಳಲ್ಲಿ ಸಂಶೋಧನೆಗಾಗಿ ನಾಲ್ಕು ಮತ್ತು ತಾಂತ್ರಿಕ, ವಾಣಿಜ್ಯ ಹಾಗೂ ಕೈಗಾರಿಕಾ ತರಬೇತಿಗಾಗಿ ನಾಲ್ಕು, ಹೀಗೆ ವಿವಿಧ ವಿದ್ಯಾರ್ಥಿ ವೇತನಗಳನ್ನು ನೀಡಲಾಯಿತು. ಅಮೇರಿಕದಲ್ಲಾಗಲೀ ಅಥವಾ ಯುರೋಪಿನಲ್ಲಾಗಲೀ ಉನ್ನತ ವ್ಯಾಸಂಗಕ್ಕಾಗಿ ಇತರ ಮೂರು ವಿದ್ಯಾರ್ಥಿವೇತನಗಳನ್ನು ಪಡೆಯಬಹುದಾಗಿತ್ತು.

1911-12ರಲ್ಲಿ ಪ್ರತ್ಯೇಕವಾದ ಅಸ್ತಿತ್ವವನ್ನು ಹೊಂದಿದ್ದ ಮೈಸೂರಿನ ಕೈಗಾರಿಕಾ ಶಾಲೆಯು 1913-14ರಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯ ಒಂದು ಅಂಗವಾಗಿ ಪರಿಗಣಿಸಲ್ಪಟ್ಟಿತು. ಕಿರಿಯ ಮತ್ತು ಹಿರಿಯ ತರಗತಿಗಳಿದ್ದ ಈ ಸಂಸ್ಥೆಯು ಲೋಕೋಪಯೋಗಿ ಇಲಾಖೆಯ ಒಬ್ಬರು ಸಹಾಯಕ ಇಂಜಿನಿಯರ್‌ರ ಅಧೀನದಲ್ಲಿತ್ತು. ಸಿವಿಲ್ ಇಂಜಿಯರಿಂಗ್ ವಿಷಯಗಳಲ್ಲಿ ಇಲ್ಲಿ ತರಬೇತಿಯನ್ನು ಕೊಡಲಾಗುತ್ತಿತ್ತು. 1951ರವರೆಗೂ ವಿದ್ಯಾರ್ಥಿಗಳು ಮದರಾಸು ತಾಂತ್ರಿಕ ಪರೀಕ್ಷೆಗಳಿಗೆ ಕುಳಿತುಕೊಳ್ಳುವುದಕ್ಕೆ ತರಬೇತಿ ಪಡೆಯುತ್ತಿದ್ದರು. 1915ರ ನಂತರ ಮಂಡಳಿಯ ಕೊನೆಯ ವರ್ಷದ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ಸಬ್ ಓವರ್ಸಿಯರ್‌ಗಳಾಗಿ ಕೆಲಸ ಪಡೆಯಲು ಅರ್ಹರಾಗುತ್ತಿದ್ದರು. ಮತ್ತು ಈ ಪರೀಕ್ಷೆಯಲ್ಲಿ ನಿಗದಿತ ಅಂಕಕ್ಕಿಂತ ಕಡಿಮೆ ಪಡೆದ ವಿದ್ಯಾರ್ಥಿಗಳು ಮೇಸ್ತ್ರಿಗಳ ಕೆಲಸ ಪಡೆಯಲು ಅರ್ಹರಾಗಿರುತ್ತಿದ್ದರು. ಕಂದಾಯ ಇಲಾಖೆಯಲ್ಲಿ ಶೇಕ್‌ದಾರರಾಗಿ ನೇಮಕಗೊಳ್ಳುವುದಕ್ಕಾಗಿ ಶೇಕ್‌ದಾರರ ತರಗತಿಗಳನ್ನು ನಡೆಸುತ್ತಿದ್ದರು. 1910-11ರಲ್ಲಿ

ಕಿರಿಯ, ಹಿರಿಯ ಮತ್ತು ಶೇಕ್‌ದಾರ್ ತರಗತಿಗಳಿಗೆ ತರಬೇತಿ ಹೊಂದಿದವರು ಕ್ರಮವಾಗಿ 23, 16 ಮತ್ತು ಏಳು ಇದ್ದು 1915-16ರಲ್ಲಿ ಕ್ರಮವಾಗಿ 25, 31 ಮತ್ತು 19 ಆಗಿತ್ತು.

1913ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾದ ಮೆಕ್ಯಾನಿಕಲ್ ಇಂಜಿನಿಯರಿಂಗ್ ಸ್ಕೂಲ್ ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಷಯದಲ್ಲಿ ಶಿಕ್ಷಣವನ್ನು ಕೊಡುತ್ತಿತ್ತು. ಅದಕ್ಕೆ ಮೊದಲು ಬೊಂಬಾಯಿಯಲ್ಲಿದ್ದ ವಿಕ್ಟೋರಿಯಾ ಜೂಬಿಲೀ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್ ಎಂಬ ಸಂಸ್ಥೆಯಲ್ಲಿ ನಮ್ಮ ರಾಜ್ಯದವರು ಕೆಲವು ವಿದ್ಯಾರ್ಥಿವೇತನಗಳನ್ನು ಪಡೆಯಬಹುದಾಗಿತ್ತು. ಮೊದಲ ವರ್ಷದಲ್ಲಿ ಆಡಳಿತ ಶಿಕ್ಷಣ, ಉಗಿ ಯಂತ್ರಗಳು ಮತ್ತು ತೈಲ ಯಂತ್ರಗಳ ಮೇಲ್ವಿಚಾರಣೆ, ಯಂತ್ರಗಳ ಜೋಡಣೆ ಮತ್ತು ಯಂತ್ರಗಳು ಮತ್ತು ಗಿರಣಿಗಳನ್ನು ನಡೆಸುವುದು ಹಾಗೂ ವಿದ್ಯುಚ್ಛಕ್ತಿಗೆ ಸಂಬಂಧಪಟ್ಟ ವಿಷಯಗಳಲ್ಲಿ ತರಬೇತಿ ಕೊಡಲಾಗುತ್ತಿತ್ತು. 1914-15ರಲ್ಲಿ ಕೈಗಾರಿಕಾ ಶಾಲೆಯ ಶಿಕ್ಷಕರುಗಳಿಗೆ, ಪರ್ಮನೆಂಟ್ ವೇ ಇನ್ಸ್‌ಪೆಕ್ಟರ್‌ಗಳಿಗೆ ಮತ್ತು ದೂರ ತಂತಿ ಸೂಚಕರು (ಟೆಲಿಗ್ರಾಫಿಕ್ ಸಿಗ್ನಲರ್)ಗಳಿಗೆ ತರಬೇತಿಯನ್ನು ಕೊಡಲಾಗುತ್ತಿತ್ತು. ಇದೂ ಅಲ್ಲದೆ ಸಂಚಾರ ನಿಯಂತ್ರಣ ಇಲಾಖೆಯ ಅಧೀನ ಸೇವೆಗಳಿಗೂ ಮತ್ತು ಮೋಟಾರ್ ಚಾಲಕರಿಗೂ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಹಗಲಿನಲ್ಲಿ ಬೇರೆ ಕಡೆ ಕೆಲಸ ಮಾಡುವ ಉದ್ಯೋಗಿಗಳಿಗಾಗಿ ತಾಂತ್ರಿಕ ರೇಖಾಕೃತಿ, ವಿದ್ಯುತ್ ತಂತಿ ಜೋಡಣೆ ಮತ್ತು ಮೋಟಾರ್ ಮೆಕ್ಯಾನಿಕ್‌ಗಳ ತರಬೇತಿಯನ್ನು ಸಂಜೆ ತರಗತಿಗಳಲ್ಲಿ ನಡೆಸಲಾಗುತ್ತಿತ್ತು. ಮೂರು ತಿಂಗಳಿನಿಂದ ಒಂದು ವರ್ಷದ ವಿವಿಧ ಅವಧಿಯವರೆಗೆ ಕಾರ್ಯಾಗಾರಗಳಲ್ಲಿ ಪ್ರಾಯೋಗಿಕ ಕೆಲಸವನ್ನು ಕಲಿಯಲು ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲಾಗುತ್ತಿತ್ತು. 1915-16ರಲ್ಲಿ ಸೂಚಕರಿಗೆ ಮತ್ತು ಪರ್ಮನೆಂಟ್ ವೇ ಇನ್ಸ್‌ಪೆಕ್ಟರ್ ತರಬೇತಿ ಶಾಲೆಗಳನ್ನು ರೈಲ್ವೇ ಇಲಾಖೆಗೆ ವರ್ಗಾಯಿಸಲಾಯಿತು. 1913-14ರಲ್ಲಿ 42 ಜನ ವಿದ್ಯಾರ್ಥಿಗಳು, 1914-15ರಲ್ಲಿ 120 ಜನ ವಿದ್ಯಾರ್ಥಿಗಳು ಮತ್ತು 1915-16ರಲ್ಲಿ 130 ಜನ ವಿದ್ಯಾರ್ಥಿಗಳು ತರಬೇತಿಯನ್ನು ಪಡೆದರು. ಈ ತರಬೇತಿ, ಶಿಕ್ಷಣವನ್ನು ಮುಗಿಸಿದ ವಿದ್ಯಾರ್ಥಿಗಳು ಲೋಕೋಪಯೋಗಿ ಇಲಾಖೆಯ ಯೋಜನೆಗಳಿಗೂ ಮತ್ತು ಖಾಸಗಿ ಕಾರ್ಖಾನೆಗಳಿಗೂ ತರಬೇತಿಗಾಗಿ ಕಳುಹಿಸಲ್ಪಡುತ್ತಿದ್ದರು.

1915-16ರಲ್ಲಿ 29 ಕೈಗಾರಿಕಾ ಶಾಲೆಗಳಿದ್ದು ಒಟ್ಟು 1,554 ವಿದ್ಯಾರ್ಥಿಗಳು ಕಲಿಯುತ್ತಿದ್ದರು. ಅವರಲ್ಲಿ ನೇಯ್ಗೆ ವಿಭಾಗದಲ್ಲಿ 153, ಬೆತ್ತದ ಹೆಣಿಗೆ ಕೆಲಸದಲ್ಲಿ 369, ಬಡಗಿತನದಲ್ಲಿ 893, ಕಮ್ಮಾರಿಕೆಯಲ್ಲಿ 109, ಹೊಲಿಗೆ ಮತ್ತು ಹೆಣಿಕೆಯಲ್ಲಿ 65, ಮರದ ಬೊಂಬೆ ಕೆಲಸದಲ್ಲಿ 10, ಪಾದರಕ್ಷಾ ವಿಭಾಗದಲ್ಲಿ ಒಂಬತ್ತು, ಮುದ್ರಣ ವಿಭಾಗದಲ್ಲಿ 13, ಕಲ್ಲಿನ ಕೆತ್ತನೆಯ ಕೆಲಸದಲ್ಲಿ 10, ಹುದುಗು ಕಲೆಯಲ್ಲಿ ಒಂಬತ್ತು, ಮರದ ಕೆತ್ತನೆ ವಿಭಾಗದಲ್ಲಿ 11, ಲೋಹ ಕಾರ್ಯದಲ್ಲಿ 10, ಮತ್ತು ಕಸೂತಿ ವಿಭಾಗದಲ್ಲಿ ಎಂಟು, ವಿದ್ಯಾರ್ಥಿಗಳು ಕಲಿಯುತ್ತಿದ್ದರು. ಶಿಕ್ಷಣ ಇಲಾಖೆಯ ಒಂದು ಆಜ್ಞಾಪತ್ರದ ಪ್ರಕಾರ ಈ ತಾಂತ್ರಿಕ ಶಿಕ್ಷಣ ಯೋಜನೆಯನ್ನು ಮೂರು ಹಂತಗಳಲ್ಲಿ ಪುನರ್ಘಟಿಸಲಾಯಿತು. 1) ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಸಾಮಾನ್ಯ ವಿದ್ಯಾಭ್ಯಾಸದ ಜೊತೆಗೆ ಪ್ರಯೋಗಾತ್ಮಕ ಶಿಕ್ಷಣವನ್ನು ಕೊಡುವುದು. 2) ಜಿಲ್ಲಾ ಕೇಂದ್ರಗಳಲ್ಲಿ ಪ್ರಾಥಮಿಕ ಕೈಗಾರಿಕಾ ಶಾಲೆಗಳನ್ನು ಸ್ಥಾಪಿಸುವುದು. 3) ಕೈಗಾರಿಕೆಗಳನ್ನೇ ವೃತ್ತಿಯಾಗಿ ಹೊಂದಿರುವ ಸಮುದಾಯಗಳಿಗೆ ವಿಶೇಷ ತರಬೇತಿ ನೀಡಲು ವೃತ್ತಿ ಶಾಲೆಗಳನ್ನು ಕೆಲವು ಆಯ್ಕೆಯಾದ ಸ್ಥಳಗಳಲ್ಲಿ ಪ್ರಾರಂಭಿಸುವುದು. ಎಬ್ಬಟ್ ಮತ್ತು ವುಡ್‌ರವರ ಭಾರತದಲ್ಲಿ ವೃತ್ತಿಪರ ಶಿಕ್ಷಣ ಸಮಿತಿ ನೀಡಿದ ವರದಿಯನ್ನು ಆಗಿನ ಮೈಸೂರು ಸರ್ಕಾರವು ತಾತ್ವಿಕವಾಗಿ ಅಂಗೀಕರಿಸಿತು ಮತ್ತು ಯುವಕರಲ್ಲಿರುವ ವೃತ್ತಿಕೌಶಲ್ಯವನ್ನು ವಿಕಸಿಸಲು ತಾಂತ್ರಿಕ ಶಿಕ್ಷಣದ ಅವಶ್ಯಕತೆ ಇದೆ ಎಂಬುದನ್ನು ಪರಿಗಣಿಸಿತು. ಹೀಗೆ 1937ರಲ್ಲಿ ಎಸ್.ಎಸ್.ಎಲ್.ಸಿ. ಪಠ್ಯಾವಳಿಯಲ್ಲಿ ವೃತ್ತಿಪರ ಶಿಕ್ಷಣವನ್ನು ಸೇರಿಸಿ ಬದಲಾವಣೆ ಮಾಡಲಾಯಿತು.

ಈ ಅವಧಿಯಲ್ಲಿನ ತಾಂತ್ರಿಕ ಶಿಕ್ಷಣದ ವಿಧಾನವನ್ನು ಈ ಕೆಳಗಿನ ಶೀರ್ಷಿಕೆಗಳಲ್ಲಿ ಪರಿಗಣಿಸಬಹುದು: 1) ಕೈಗಾರಿಕಾ ಶಾಲೆಗಳು, 2) ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜುಬಿಲಿ ಟೆಕ್ನಾಲಜಿಕಲ್ ಸಂಸ್ಥೆ, 3) ಶ್ರೀ ಜಯಚಾಮರಾಜೇಂದ್ರ ಔದ್ಯೋಗಿಕ ಸಂಸ್ಥೆ ಮತ್ತು ಇಂಜಿನಿಯರಿಂಗ್ ಶಾಲೆ.

ಕೈಗಾರಿಕಾ ಶಾಲೆಗಳು: ಈ ಶಾಲೆಗಳು ಮೊದಲು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅಧೀನದಲ್ಲಿ ಇದ್ದವು. ಶಾಲೆಯಲ್ಲಿ ಕಲಿಸುತ್ತಿದ್ದ ಪ್ರತಿಯೊಂದು ಕೈಗಾರಿಕಾ ವಿಷಯಕ್ಕೂ ಒಂದು ಕಾರ್ಯಾಗಾರದ ವಿಭಾಗವನ್ನು ಸೇರಿಸಲಾಗಿತ್ತು. 1929ರಲ್ಲಿ ಇದರ ಪಠ್ಯಕ್ರಮವನ್ನು ನವೀಕರಿಸಿ ಸಾಮಾನ್ಯ ಶಿಕ್ಷಣಕ್ಕೆ ವಾರಕ್ಕೆ ಒಂಬತ್ತು ಗಂಟೆಗಳಂತೆಯೂ ಮತ್ತು ರೇಖಾಕೃತಿ ಶಿಕ್ಷಣಕ್ಕೆ ವಾರಕ್ಕೆ ಆರೂವರೆ ಗಂಟೆಗಳಂತೆಯೂ ಅವಧಿಯನ್ನು ಗೊತ್ತುಮಾಡಲಾಯಿತು. ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ, ಮೈಸೂರು ಮತ್ತು ನೇಯ್ಗೆ ಸಂಸ್ಥೆ, ಬೆಂಗಳೂರು—ಈ ಎರಡು ಪ್ರಮುಖ ಸಂಸ್ಥೆಗಳಲ್ಲದೆ ಮೈಸೂರು, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ಚನ್ನಪಟ್ಟಣ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಸಾಗರ ಹಾಗೂ ನೆಲಮಂಗಲಗಳಲ್ಲಿ ಸರ್ಕಾರಿ ಕೈಗಾರಿಕಾ ಶಾಲೆಗಳು ಮತ್ತು ಗೃಹಕೈಗಾರಿಕೆಗಳು ನಡೆಸುತ್ತಿದ್ದ ಶಾಲೆಗಳು ಇದ್ದವು. ಕೆಲವು ಖಾಸಗಿ ಕೈಗಾರಿಕಾ ಶಾಲೆಗಳು ಮತ್ತು ಗೃಹ

ಕೈಗಾರಿಕೆಗಳು ನಡೆಸುತ್ತಿದ್ದ ಶಾಲೆಗಳು ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿದ್ದವು. 1943-44ರಲ್ಲಿ ಈ ಎಲ್ಲಾ ಕೈಗಾರಿಕಾ ಶಾಲೆಗಳಲ್ಲಿ ಮತ್ತು ವೃತ್ತಿ ತರಬೇತಿಗಳಲ್ಲಿ ಒಟ್ಟು 311 ವಿದ್ಯಾರ್ಥಿಗಳ ಹಾಜರಾತಿಯಿತ್ತು.

ಚನ್ನಪಟ್ಟಣದಲ್ಲಿ ಇದ್ದ ಜನಾನಾ ಗೃಹಕೈಗಾರಿಕಾ ಸಂಸ್ಥೆ ಎಂಬ ಶಾಲೆಯು ಮಹಿಳೆಯರಿಗೆ ಕೈಗಾರಿಕಾ ತರಬೇತಿಯನ್ನು ನೀಡುತ್ತಿದ್ದ ಹಾಗೂ ಅನುದಾನ ಪಡೆಯುತ್ತಿದ್ದ ಏಕೈಕ ಶಾಲೆಯಾಗಿತ್ತು. 1940ರಲ್ಲಿ ಈ ಶಾಲೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ವಹಿಸಿಕೊಂಡಿತು. ಮಹಿಳೆಯರಿಗೆ ಈ ಸಂಸ್ಥೆಯಲ್ಲಿ ಹೊಲಿಗೆ, ಜರಿ ಕೆಲಸ, ಕಸೂತಿ, ಊದುಕಡ್ಡಿಯ ತಯಾರಿಕೆ ಮತ್ತು ಮರದ ಬೊಂಬೆ ತಯಾರಿಕೆ ಕೆಲಸದಲ್ಲಿ ತರಬೇತಿಯನ್ನು ಕೊಡಲಾಗುತ್ತಿತ್ತು. 1931-32ರಲ್ಲಿ ಏಳು ಖಾಸಗಿ ಕೈಗಾರಿಕಾ ಶಾಲೆಗಳು ಇದ್ದದ್ದು, 1940ರ ವೇಳೆಗೆ ಎರಡಕ್ಕೆ ಇಳಿದವು. ಬೆಂಗಳೂರಿನಲ್ಲಿದ್ದ ಎಸ್.ಎಲ್.ಎನ್. ಧರ್ಮ ಸಂಸ್ಥೆಯವರು ಕೈಗಾರಿಕಾ ಶಾಲೆ ಮತ್ತು ತುಮಕೂರಿನಲ್ಲಿದ್ದ ಮೆಥಡಿಸ್ಟ್ ಮಿಶನ್ ಕೈಗಾರಿಕಾ ಶಾಲೆ ಇವೇ ಆ ಶಾಲೆಗಳು. 1943-44ರಲ್ಲಿ 21 ಅನುದಾನ ಪಡೆಯುತ್ತಿದ್ದ ಗೃಹಕೈಗಾರಿಕಾ ತರಬೇತಿಗಳಲ್ಲಿ 1,073 ಮಹಿಳೆಯರು ತರಬೇತಿ ಪಡೆಯುತ್ತಿದ್ದರು.

ಮೈಸೂರಿನಲ್ಲಿದ್ದ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯು ಮೂರು ವಿಭಾಗಗಳಲ್ಲಿ ತರಬೇತಿಯನ್ನು ಕೊಡುತ್ತಿತ್ತು. ಅವುಗಳು ಯಾವುವೆಂದರೆ ಲಲಿತಕಲಾ ವಿಭಾಗ (ವಿನ್ಯಾಸ, ರಚನೆ, ಚಿತ್ರ ಬರೆಯುವುದು, ಮುದ್ರಿಸುವುದು ಮತ್ತು ಮಾದರಿ ರಚನೆ), ಕೈಗಾರಿಕಾ ಕಲಾ ವಿಭಾಗ (ಮರದ ಕೆತ್ತನೆ ಕೆಲಸ, ಗಂಧದ ಹಾಗೂ ದಂತದ ಕೆತ್ತನೆ, ಜೋಡಣೆ, ಕೊರೆಯುವುದು ಮತ್ತು ಲೋಹಕ್ಕೆ ಬಣ್ಣ ಹಾಕುವುದು) ಹಾಗೂ ವೃತ್ತಿಗಳು (ಬಡಗಿತನ ಮತ್ತು ಪೆಟ್ಟಿಗೆಗಳನ್ನು ಮಾಡುವುದು, ಕುಲುಮೆ ಕೆಲಸ, ಬೆತ್ತದ ಕೆಲಸ, ಹಿತ್ತಾಳೆಯ ತಗಡಿನ ಮತ್ತು ಲೋಹದ ಎರಕ ಹೊಯ್ಯುವ ಕೆಲಸ). ಪ್ರತಿಯೊಂದು ಕೋರ್ಸಿನ ಅವಧಿಯು ಐದು ವರ್ಷವಿದ್ದು, ಮರ ಕೆಲಸ ಮತ್ತು ಪೆಟ್ಟಿಗೆ ಕೆಲಸ ಇವುಗಳು ಮಾತ್ರ ಆರು ವರ್ಷದ ಅವಧಿಯವುಗಳಾಗಿದ್ದವು. ಈ ಸಂಸ್ಥೆಯಲ್ಲಿ 1931-32ರಲ್ಲಿ 241 ವಿದ್ಯಾರ್ಥಿಗಳಿದ್ದು 1943-44ರಲ್ಲಿ ಈ ಸಂಖ್ಯೆ 262ಕ್ಕೆ ಏರಿತು.

ಮೈಸೂರಿನಲ್ಲಿದ್ದ ಮಹಾರಾಜ ಪ್ರೌಢಶಾಲೆಯಿಂದ ಮತ್ತು ಸರ್ಕಾರಿ ಮರಿಮಲ್ಲಪ್ಪ ಪ್ರೌಢಶಾಲೆಯಿಂದ 'ಮೆಷಿನ್ ಷಾಪ್ ತರಬೇತಿ' ಹಾಗೂ ಜೋಡಣೆ ತರಬೇತಿಗಳನ್ನು ಐಚ್ಛಿಕವಾಗಿ ಆರಿಸಿಕೊಂಡಿದ್ದ ವಿದ್ಯಾರ್ಥಿಗಳಿಗಾಗಿ ಈ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ವೃತ್ತಿ ಶಿಕ್ಷಣವನ್ನು ನೀಡಲಾಗುತ್ತಿತ್ತು. 1943-44ರಲ್ಲಿ 90 ವಿದ್ಯಾರ್ಥಿಗಳು ಈ ತರಗತಿಗಳಿಗೆ ಹಾಜರಾಗಿದ್ದರು. ಬೆಂಗಳೂರಿನಲ್ಲಿ ಸರ್ಕಾರದಿಂದ 1912ರಲ್ಲಿ ಸ್ಥಾಪಿತವಾದ ನೆಯ್ಗೆ ಗಿರಣಿಯು ಸರ್ಕಾರಿ ನೆಯ್ಗೆ ಸಂಸ್ಥೆ (ವೀವಿಂಗ್ ಇನ್‌ಸ್ಟಿಟ್ಯೂಟ್) ಯಾಗಿ ಮಾರ್ಪಾಟಾಗಿ ಸರ್ಟಿಫಿಕೇಟ್ ತರಗತಿ ಮತ್ತು ಕಸಬುದಾರರ ಶಿಕ್ಷಣವನ್ನು ಒಳಗೊಂಡಿತ್ತು. ಮದರಾಸಿನಲ್ಲಿ ನಡೆಸುತ್ತಿದ್ದ ಲಂಡನ್ನಿನ ಸಿಟಿ ಮತ್ತು ಗಿಲ್ಡ್ಸ್ ಪರೀಕ್ಷೆಗೆ ಕುಳಿತುಕೊಳ್ಳಲು ಈ ಸಂಸ್ಥೆಯು ತರಬೇತಿ ಕೊಡುತ್ತಿತ್ತು. 1938-39ರಲ್ಲಿ ಶ್ರೀ ಕೃಷ್ಣರಾಜೇಂದ್ರ ತಾಂತ್ರಿಕ ಸಂಸ್ಥೆ ಪ್ರಾರಂಭವಾದಾಗ ಈ ನೇಯ್ಗೆ ಸಂಸ್ಥೆಯು ಅದರೊಂದಿಗೆ ವಿಲೀನಗೊಂಡಿತು.

ಹಳೆಯ ಮೈಸೂರು ರಾಜ್ಯದಲ್ಲಿ ರಾಜ್ಯ ಪುನರ್ವಿಂಗಡನಾ ಸಮಯದಲ್ಲಿ 14 ಕೈಗಾರಿಕಾ ಶಾಲೆಗಳು ಇದ್ದವು. ಮುಂದೆ ಅವುಗಳಲ್ಲಿ ಕೆಲವು ಕೈಗಾರಿಕಾ ತರಬೇತಿ ಸಂಸ್ಥೆಗಳಾಗಿ ಮಾರ್ಪಟ್ಟವು ಮತ್ತು ಇನ್ನೂ ಕೆಲವನ್ನು ಮುಚ್ಚಲಾಯಿತು.

ಔದ್ಯೋಗಿಕ ವಿಜ್ಞಾನ ಸಂಸ್ಥೆ : ಶ್ರೀ ಕೃಷ್ಣರಾಜೇಂದ್ರ ಒಡೆಯರ್‌ರವರ ಆಳ್ವಿಕೆಯ ರಜತ ಮಹೋತ್ಸವದ ನೆನಪಿಗಾಗಿ ಶ್ರೀ ಕೃಷ್ಣರಾಜೇಂದ್ರ ರಜತ ಮಹೋತ್ಸವ ಔದ್ಯೋಗಿಕ ವಿಜ್ಞಾನ ಸಂಸ್ಥೆ (ಟೆಕ್ನಾಲಾಜಿಕಲ್ ಇನ್‌ಸ್ಟಿಟ್ಯೂಟ್) ಯನ್ನು 1938ರಲ್ಲಿ ಬೆಂಗಳೂರಲ್ಲಿ ಸ್ಥಾಪಿಸಲಾಯಿತು. ನೇಯ್ಗೆಯ ವಿಜ್ಞಾನವು ಇದರ ಮುಖ್ಯ ವಿಷಯವಾಗಿದ್ದು ದಿವಾನ್ ಮಿರ್ಜಾ ಅವರು ಈ ಸಂಸ್ಥೆಯ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದ್ದರು. ಇದರಲ್ಲಿ ಮೂರು ವಿಧದ ಕೋರ್ಸುಗಳಿದ್ದು ಮೊದಲನೇಯದು ಮೂರು ವರ್ಷದ ಡಿಪ್ಲೊಮಾ ಶಿಕ್ಷಣವಾಗಿದ್ದು, ಶಿಕ್ಷಣದ ನಂತರ ಯಾವುದಾದರೂ ಮಾನ್ಯ ಮಾಡಲ್ಪಟ್ಟ ಬಟ್ಟೆ ಕಾರ್ಖಾನೆಯಲ್ಲಿ ಆರು ತಿಂಗಳ ತರಬೇತಿ ಪಡೆಯಬೇಕಾಗಿತ್ತು. ಎರಡನೇಯ ವಿಧದ ಕೋರ್ಸು ಎರಡು ವರ್ಷದ ಅವಧಿಯ ಸರ್ಟಿಫಿಕೇಟ್ ಶಿಕ್ಷಣವಾಗಿದ್ದು ಕೋರ್ಸಿನ ನಂತರ ಯಾವುದಾದರೂ ಮಾನ್ಯತೆ ಪಡೆದ ಬಟ್ಟೆ ಗಿರಣಿಯಲ್ಲಿ ಆರು ತಿಂಗಳ ತರಬೇತಿ ಪಡೆಯಬೇಕಾಗಿತ್ತು. ಮತ್ತು ಮೂರನೇಯದು ಒಂದು ವರ್ಷ ಅವಧಿಯ ಕುಶಲ ಕಲಾ ಶಿಕ್ಷಣ. ಅದರಲ್ಲಿ ಈ ಕೆಳಕಂಡ ಯಾವುದಾದರೂ ಒಂದು ವಿಭಾಗದಲ್ಲಿ ತರಬೇತಿ ನೀಡಲಾಗುತ್ತಿತ್ತು. 1) ಕೈಮಗ್ಗದಲ್ಲಿ ನೇಯುವುದು, 2) ವಿದ್ಯುಚ್ಚಾಲಿತ ಮಗ್ಗದ ನೇಯ್ಗೆ, 3) ಬಣ್ಣ ಹಾಗೂ ಅಚ್ಚು ಹಾಕುವುದು ಮತ್ತು 4) ಜವಳಿಯ ಮಾರಾಟ ಮತ್ತು ತಯಾರಿಕೆಯ ಸರ್ಟಿಫಿಕೇಟ್ ಶಿಕ್ಷಣ ಮತ್ತು ಡಿಪ್ಲೊಮಾ ಶಿಕ್ಷಣ. ಇದರ ಅಂತಿಮ ವರ್ಷದ ವಿದ್ಯಾರ್ಥಿಗಳನ್ನು ದಾವಣಗೆರೆ, ಸೊಲ್ಲಾಪುರ, ಮುಂಬಯಿ, ಬರೋಡ ಮತ್ತು ಅಹ್ಮದಾಬಾದ್‌ಗಳಿಗೆ ಶೈಕ್ಷಣಿಕ ಪ್ರವಾಸಕ್ಕೆ ಕರೆದುಕೊಂಡು ಹೋಗಲಾಗುತ್ತಿತ್ತು. ಈಗ ಈ ಸಂಸ್ಥೆಯು ನೇಯ್ಗೆಯ ಔದ್ಯಮಿಕ ವಿಜ್ಞಾನದಲ್ಲಿ ಪದವಿ ವಿಭಾಗದಲ್ಲೂ

ಸ್ನಾತಕೋತ್ತರ ವಿಭಾಗದಲ್ಲೂ ಶಿಕ್ಷಣವನ್ನು ಕೊಡುತ್ತಿದೆ. ಮತ್ತು 1978ರಿಂದ ನೇಯ್ಗೆಯ ಔದ್ಯಮಿಕ ವಿಜ್ಞಾನದಲ್ಲಿ ಪ್ರತ್ಯೇಕವಾದ ಡಿಪ್ಲೋಮಾ ಶಿಕ್ಷಣವನ್ನು ತೆರೆಯಲಾಗಿದೆ.

ವೃತ್ತಿ ಶಿಕ್ಷಣ ಸಂಸ್ಥೆ : ಶ್ರೀ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣ ಸಂಸ್ಥೆಯನ್ನು (ಆಕ್ಯುಪೇಶನಲ್ ಇನ್ಸ್‌ಟಿಟ್ಯೂಟ್) (ಈಗ ಅದನ್ನು ಶ್ರೀ ಜಯಚಾಮರಾಜೇಂದ್ರ ಪಾಲಿಟೆಕ್ನಿಕ್ ಎಂದು ಕರೆಯುತ್ತಾರೆ). ಯುವಕರಿಗೆ ತಾಂತ್ರಿಕ ಶಿಕ್ಷಣ ತರಬೇತಿಯನ್ನು ಕೊಡುವುದಕ್ಕಾಗಿ 1943ರಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು ಉದಾರವಾಗಿ ನೀಡಿದ ಎರಡು ಲಕ್ಷ ರೂ. ಗಳ ಧನ ಸಹಾಯದಿಂದ ಬೆಂಗಳೂರಿನಲ್ಲಿ ಪ್ರಾರಂಭಿಸಲಾಯಿತು. ಈ ಸಂಸ್ಥೆಯು ಒಟ್ಟು 12 ಬಗೆಯ ಶಿಕ್ಷಣದಲ್ಲಿ ತರಬೇತಿಯನ್ನು ಕೊಡುತ್ತಿತ್ತು. ಅವು ಯಾವುವೆಂದರೆ : 1) ಯಂತ್ರ ತಾಂತ್ರಿಕ ವಿಜ್ಞಾನ ವಿಭಾಗ (ಯಂತ್ರ ಕೌಶಲ್ಯ, ಉಪಕರಣಗಳ ಕೌಶಲ್ಯ ಮತ್ತು ಬೆಸುಗೆ ಹಾಕುವುದು), 2) ಆಟೊಮೊಬೈಲ್ ತಾಂತ್ರಿಕ ವಿಜ್ಞಾನ, 3) ಬಾಯಲರ್ಸ್ ಮತ್ತು ಎಂಜಿನ್ಸ್ ವಿಭಾಗ, 4) ಸಿವಿಲ್ ಮತ್ತು ಮೆಕ್ಯಾನಿಕಲ್ ಡ್ರಾಫ್ಟ್ಸ್‌ಮೆನ್ ಶಿಪ್ ವಿಭಾಗ, 5) ವಿದ್ಯುತ್ ತಂತಿ ಜೋಡಣೆ, 6) ರೇಡಿಯೋ ತಾಂತ್ರಿಕತೆ, 7) ಚಲನಚಿತ್ರ ತಾಂತ್ರಿಕತೆ, 8) ಹೊಲಿಗೆ, 9) ಮುದ್ರಣ, 10) ಲೋಹ ಶಾಸ್ತ್ರ, 11) ಪಿಂಗಾಣಿ ಮತ್ತು ಗಾಜಿನ ತಾಂತ್ರಿಕತೆ ಮತ್ತು 12) ಗಣಿಗಾರಿಕೆ. ಸರ್ಕಾರಿ ಕಾರ್ಖಾನೆಗಳು ಮತ್ತು ಕಾರ್ಯಾಗಾರಗಳಲ್ಲಿ ಪ್ರಯೋಗಾತ್ಮಕ ತರಬೇತಿಯನ್ನು ನೀಡಲಾಗುತ್ತಿತ್ತು.

1943-44ರಲ್ಲಿ ಇದರಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 165. ಮೈಸೂರು ಅರಮನೆಯಿಂದ, ಕೆಲವು ಜಿಲ್ಲಾ ಮಂಡಳಿಗಳಿಂದ ಹಾಗೂ ಪುರಸಭೆಗಳಿಂದ ವಿದ್ಯಾರ್ಥಿ ವೇತನಗಳನ್ನು ಕೊಡಲಾಗುತ್ತಿತ್ತು. ನಿಸ್ತಂತು ವಿಭಾಗದಲ್ಲಿ ಸೈನಿಕ ಸೂಚಕ ದಳದಿಂದ ಒಂದು ತಂಡಕ್ಕೆ ಒಂಭತ್ತು ವಿದ್ಯಾರ್ಥಿಗಳಂತೆ ಎರಡು ತಂಡಗಳನ್ನು ತರಬೇತಿಗಾಗಿ ನಿಯೋಜನೆಗೊಳಿಸಲಾಗುತ್ತಿತ್ತು. 1944-45ರಲ್ಲಿ ಒಟ್ಟು 19 ಡಿಪ್ಲೋಮಾ ಮತ್ತು ಏಳು ಸರ್ಟಿಫಿಕೇಟ್ ಕೋರ್ಸುಗಳು ಇದ್ದವು. 1983ರಲ್ಲಿ ಇದು ಆಗ್ನೇಯ ಏಷ್ಯಾದಲ್ಲೇ ಅತೀ ದೊಡ್ಡ ಪಾಲಿಟೆಕ್ನಿಕ್ ಎನಿಸಿತು. ಪಿಂಗಾಣಿ ಮತ್ತು ಚಲನಚಿತ್ರ ತಾಂತ್ರಿಕತೆ ತರಬೇತಿ ಶಿಕ್ಷಣ ಇಲ್ಲಿಯ ವೈಶಿಷ್ಟ್ಯವಾಗಿದೆ.

ಇಂಜಿನಿಯರಿಂಗ್ ಶಾಲೆ : 1922ಕ್ಕೆ ಮುಂಚೆ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ಒಂದು ವಾಸ್ತುಶಿಲ್ಪ ಶಾಸ್ತ್ರದ ವಿಭಾಗವಿದ್ದು, ಅದರಲ್ಲಿ ವಾಸ್ತುಶಿಲ್ಪ ಶಾಸ್ತ್ರ ಹಾಗೂ ಯಂತ್ರಕೌಶಲ ವಿಜ್ಞಾನ ವಿಭಾಗಗಳಲ್ಲಿ ತರಬೇತಿಯನ್ನು ನೀಡುತ್ತಿದ್ದರು. ಬೆಂಗಳೂರಿನಲ್ಲಿದ್ದ ಯಾಂತ್ರಿಕ ಶಾಲೆಯಲ್ಲಿ ವಿದ್ಯುತ್ ಮತ್ತು ಯಾಂತ್ರಿಕಕೌಶಲ ವಿಜ್ಞಾನ ವಿಭಾಗಗಳಲ್ಲಿ ಶಿಕ್ಷಣವನ್ನು ಕೊಡಲಾಗುತ್ತಿತ್ತು. 1922ರ ಜುಲೈ ಒಂದರಿಂದ ಮೈಸೂರಿನ ವಾಸ್ತುಶಿಲ್ಪ ಶಾಸ್ತ್ರದ ವಿಭಾಗವು ಬೆಂಗಳೂರಿಗೆ ವರ್ಗಾಯಿಸಲ್ಪಟ್ಟು, ಬೆಂಗಳೂರಿನ ಶಾಲೆಯನ್ನು 'ಸ್ಕೂಲ್ ಆಫ್ ಇಂಜಿನಿಯರಿಂಗ್' ಎಂದು ಬದಲಿಸಲಾಯಿತು. 1934ರಿಂದ ಈ ಇಂಜಿನಿಯರಿಂಗ್ ಶಾಲೆಯಿಂದ ತೇರ್ಗಡೆಯಾಗುತ್ತಿದ್ದ ವಿದ್ಯಾರ್ಥಿಗಳಿಗೆ ಎಲ್. ಎಂ. ಇ. ಮತ್ತು ಎಲ್. ಇ. ಇ. ಎಂದು ಡಿಪ್ಲೋಮಾಗಳನ್ನು ಕೊಡಲಾಗುತ್ತಿತ್ತು. 1939ರಲ್ಲಿ ಈ ಸಂಸ್ಥೆಯನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಲಾಯಿತು. ಇದರಲ್ಲಿ ಮೂರು ವರ್ಷದ ಡಿಪ್ಲೋಮಾದ ಜೊತೆಗೆ ವಾಸ್ತುಶಿಲ್ಪ, ಯಂತ್ರ ಕೌಶಲ ಮತ್ತು ವಿದ್ಯುತ್ ಯಂತ್ರ ಶಿಕ್ಷಣದಲ್ಲಿ ಎರಡು ವರ್ಷದ ಸರ್ಟಿಫಿಕೇಟ್ ತರಬೇತಿ ಶಿಕ್ಷಣವೂ ಇತ್ತು. ಯಂತ್ರಕೌಶಲ ಮತ್ತು ವಿದ್ಯುತ್ ಯಂತ್ರ ತರಬೇತಿ ಶಿಕ್ಷಣಗಳ ಅವಧಿ ನಾಲ್ಕು ವರ್ಷಗಳಾಗಿದ್ದು, ಕೊನೆಯ ವರ್ಷವು ಸಂಪೂರ್ಣವಾಗಿ ಪ್ರಾಯೋಗಿಕ ಶಿಕ್ಷಣಕ್ಕಾಗಿ ಮೀಸಲಾಗಿರುತ್ತಿತ್ತು. ವಾಸ್ತುಶಿಲ್ಪ ವಿಜ್ಞಾನದ ಡಿಪ್ಲೋಮಾವು ಮೂರು ವರ್ಷಗಳ ಅವಧಿಯದಾಗಿದ್ದು ಅದರಲ್ಲಿ ಮೂರನೇಯ ವರ್ಷವು ಪ್ರಾಯೋಗಿಕ ತರಬೇತಿಗಾಗಿ ಮೀಸಲಾಗಿತ್ತು. 1943-44ರಲ್ಲಿ ಈ ಶಾಲೆಯಲ್ಲಿ ಒಟ್ಟು 292 ವಿದ್ಯಾರ್ಥಿಗಳು ಇದ್ದರೆ 1931-32ರಲ್ಲಿ 304 ಇದ್ದರು. ಮೈಸೂರು ಸಂಸ್ಥಾನದವರಿಗೆ 1925-26ರವರೆಗೆ ಉಚಿತ ಶಿಕ್ಷಣವಿತ್ತು. ನಂತರದಲ್ಲಿ ಮೈಸೂರಿನವರಿಗೆ ವರ್ಷಕ್ಕೆ 45 ರೂ. ಮತ್ತು ಹೊರಗಿನವರಿಗೆ ವರ್ಷಕ್ಕೆ 100 ರೂ. ಶುಲ್ಕವಿತ್ತು.

ಯುದ್ಧದ ಸಮಯದಲ್ಲಿ ಹಾಗೂ ಯುದ್ಧಾನಂತರದ ಕಾಲದಲ್ಲಿ ವಿಸ್ತರಿಸಲಾದ ಕೈಗಾರಿಕೆಯಿಂದಾಗಿ ಎಲ್ಲಾ ಬಗೆಯ ತಂತ್ರಜ್ಞರ ಬೇಡಿಕೆ ಹೆಚ್ಚಾದ್ದರಿಂದ ಕೊರತೆ ತುಂಬಲು ಇದ್ದ ತಾಂತ್ರಿಕ ಶಾಲೆಗಳನ್ನು ವಿಸ್ತರಿಸಿದ್ದೇ ಅಲ್ಲದೆ ಹೊಸ ವೃತ್ತಿಶಿಕ್ಷಣ ಸಂಸ್ಥೆಗಳನ್ನು ತೆರೆಯಬೇಕಾಗಿಬಂತು. 1955-56ರ ವೇಳೆಗೆ ಕೈಗಾರಿಕಾ ಹಾಗೂ ವೃತ್ತಿಶಿಕ್ಷಣ ಶಾಲೆಗಳು ಒಟ್ಟು 15ಕ್ಕೆ ಏರಿದ್ದು ಅದರಲ್ಲಿ 200 ಮಹಿಳೆಯರು ಸೇರಿದಂತೆ 1,938 ವಿದ್ಯಾರ್ಥಿಗಳು ಕಲಿಯುತ್ತಿದ್ದರು. ಈ ಅವಧಿಯಲ್ಲಿ ಬೆಂಗಳೂರಿನ ಕೃಷ್ಣರಾಜೇಂದ್ರ ಟೆಕ್ನಾಲಾಜಿಕಲ್ ಸಂಸ್ಥೆಯು, ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಗೆ ಸೇರಿ ಬಿ.ಎಸ್‌ಸಿ. (ನೇಯ್ಗೆ) ಡಿಗ್ರಿಯನ್ನು ಪ್ರಾರಂಭಿಸಿತು. ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಇದ್ದ ಕೋರ್ಸುಗಳ ಸಂಖ್ಯೆಯನ್ನು ಹೆಚ್ಚಿಸಲಾಯಿತು. 1949ರಲ್ಲಿ ಹಾಸನ ಮತ್ತು ದಾವಣಗೆರೆಯಲ್ಲಿಯೂ 1950ರಲ್ಲಿ ಚಿಂತಾಮಣಿ ಮತ್ತು ಭದ್ರಾವತಿಯಲ್ಲೂ ವೃತ್ತಿಶಿಕ್ಷಣ ಸಂಸ್ಥೆಗಳು ಪ್ರಾರಂಭವಾದವು. 1951-52ರಲ್ಲಿ ಹಾಸನದಲ್ಲಿ 198 ವಿದ್ಯಾರ್ಥಿಗಳೂ, ದಾವಣಗೆರೆಯಲ್ಲಿ 117 ವಿದ್ಯಾರ್ಥಿಗಳೂ, ಚಿಂತಾಮಣಿಯಲ್ಲಿ 17, ಭದ್ರಾವತಿಯಲ್ಲಿ 84 ವಿದ್ಯಾರ್ಥಿಗಳೂ ಇದ್ದರು. ಇವರಲ್ಲದೆ ಬೆಂಗಳೂರಿನಲ್ಲಿ 25 ವಿದ್ಯಾರ್ಥಿನಿಯರು,

ಹಾಸನದಲ್ಲಿ 30 ವಿದ್ಯಾರ್ಥಿನಿಯರು, ದಾವಣಗೆರೆಯಲ್ಲಿ ಆರು ವಿದ್ಯಾರ್ಥಿನಿಯರು ಇದ್ದರು. ಮೈಸೂರಿನ ಸಿ.ಪಿ.ಸಿ. ಪಾಲಿಟೆಕ್ನಿಕ್ 1954ರಲ್ಲಿ ಪ್ರಾರಂಭವಾಯಿತು. ಹಿಂದಿನ ಮೈಸೂರು ರಾಜ್ಯದಲ್ಲಿ 1955-56ರ ವೇಳೆಗೆ ಒಂಬತ್ತು ಸಂಸ್ಥೆಗಳಿದ್ದು ಅವುಗಳಲ್ಲಿ 84 ವಿದ್ಯಾರ್ಥಿನಿಯರೂ ಸೇರಿದಂತೆ 2,850 ವಿದ್ಯಾರ್ಥಿಗಳಿದ್ದರು. ಬಳ್ಳಾರಿ ಜಿಲ್ಲೆಯು ಮೈಸೂರು ರಾಜ್ಯದಲ್ಲಿ ವಿಲೀನಗೊಂಡಾಗ ಬಳ್ಳಾರಿಯಲ್ಲಿದ್ದ ರಾಯಲ್‌ಸೀಮಾ ಪಾಲಿಟೆಕ್ನಿಕ್ ಸೇರಿ ಈ ಒಂಬತ್ತು ಸಂಸ್ಥೆಗಳಾದುವು.

ತಾಂತ್ರಿಕ ಶಿಕ್ಷಣದ ಪುನರ್ವ್ಯವಸ್ಥೆ : ಹೊಸ ತಾಂತ್ರಿಕ ಸಂಸ್ಥೆಗಳು ಪ್ರಾರಂಭವಾಗಿದ್ದುದರಿಂದ ಎಲ್ಲಾ ಸಂಸ್ಥೆಗಳ ಕಾರ್ಯಾಚರಣೆಯ ಮೇಲ್ವಿಚಾರಣೆಗೂ ಮತ್ತು ಕೆಲಸದ ಪುನರಾವರ್ತನೆಗಳನ್ನು ತಪ್ಪಿಸುವುದಕ್ಕೂ ಒಂದು ಕೇಂದ್ರ ವ್ಯವಸ್ಥೆಯ ಅವಶ್ಯಕತೆ ಉಂಟಾಯಿತು. 1952ರಲ್ಲಿ ಒಂದು ತಾಂತ್ರಿಕ ಶಿಕ್ಷಣ ಮಂಡಳಿ ಮತ್ತು ಪಠ್ಯವಿಷಯ ಮಂಡಳಿಗಳನ್ನು ಮೈಸೂರು ಸರ್ಕಾರವು ರಚಿಸಿತು. ಈ ಪಠ್ಯವಿಷಯ ಮಂಡಳಿಯು ಎಲ್ಲ ಕೋರ್ಸುಗಳ ಪಠ್ಯಕ್ರಮಗಳನ್ನು ಪರಿಷ್ಕರಿಸಿ ಅವನ್ನು ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿಯ ಪಠ್ಯಕ್ರಮದ ಮಟ್ಟಕ್ಕೆ ತಂದಿತು. ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರು ಮೈಸೂರು ರಾಜ್ಯದ ತಾಂತ್ರಿಕ ಶಿಕ್ಷಣ ಇಲಾಖೆಯ ಪದನಿಮಿತ್ತ ನಿರ್ದೇಶಕರಾಗಿದ್ದರು. ಈ ಇಲಾಖೆಯ ಪುನರ್ಸಂಘಟನೆಯ ಮೊದಲು ತಾಂತ್ರಿಕ ಶಿಕ್ಷಣ ಸಂಸ್ಥೆಗಳು ತಮ್ಮದೇ ಆದ ರೀತಿಯಲ್ಲಿ ಪರೀಕ್ಷೆಗಳನ್ನು ನಡೆಸುತ್ತಿದ್ದವು. ಪರೀಕ್ಷಾ ಪದ್ಧತಿಯನ್ನು ಏಕರೂಪತೆಗೆ ತರುವುದಕ್ಕೂ ಮತ್ತು ಈ ವ್ಯವಸ್ಥೆಯ ಕೇಂದ್ರೀಕರಣಕ್ಕೂ ತಾಂತ್ರಿಕ ಶಿಕ್ಷಣ ನಿರ್ದೇಶಕರ ಅಧ್ಯಕ್ಷತೆಯಲ್ಲಿ ಒಂದು ರಾಜ್ಯತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯೇ 1952ರಲ್ಲಿ ರಚಿತವಾಯಿತು. ಈ ಮಂಡಳಿಯು 1953-54ರಿಂದ ಡಿಪ್ಲೋಮಾ ಪದವಿಗಳನ್ನು ಕೊಡುವುದಕ್ಕೆ ಪ್ರಾರಂಭಿಸಿತು. ವೃತ್ತಿಶಿಕ್ಷಣ ಸಂಸ್ಥೆಗಳ ಮೇಲ್ವಿಚಾರಣೆಯನ್ನು ಮಾತ್ರ ತಾಂತ್ರಿಕ ಶಿಕ್ಷಣ ನಿರ್ದೇಶಕರು ನೋಡಿಕೊಳ್ಳುತ್ತಿದ್ದರು. ಆದರೆ ಕೈಗಾರಿಕಾ ಶಾಲೆಗಳ ಹಾಗೂ ಇತರ ವೃತ್ತಿಪರ ಶಾಲೆಗಳ ಮೇಲ್ವಿಚಾರಣೆಯು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ಆಧೀನದಲ್ಲೇ ಮುಂದುವರಿಯಿತು.

ಮುಂಬೈ ಕರ್ನಾಟಕ ಪ್ರದೇಶ : ಧಾರವಾಡ ಜಿಲ್ಲಾಧಿಕಾರಿಯಾಗಿದ್ದ ರಾಬರ್ಟ್‌ಸನ್ ಇವರಿಂದ 1873ರಲ್ಲಿ ಪ್ರಾರಂಭಿಸಲ್ಪಟ್ಟ ಧಾರವಾಡ ಕೈಗಾರಿಕಾ ಶಾಲೆಯು ಮುಂಬೈ ಕರ್ನಾಟಕ ಪ್ರದೇಶದಲ್ಲಿ ಪ್ರಾರಂಭಿಸಲ್ಪಟ್ಟ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ಮೊದಲನೇಯದು. ಕಾರ್ಖಾನೆಗಳಲ್ಲಿ ತರಬೇತಿ ಪಡೆಯಲು ಇಚ್ಛೆಯುಳ್ಳ ವಿದ್ಯಾರ್ಥಿಗಳಿಗೆ ಈ ಶಾಲೆಯು ಶಿಕ್ಷಣವನ್ನು ಕೊಡುತ್ತಿತ್ತು. 1875ರ ವೇಳೆಗೆ ಈ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ 57 ಇತ್ತು. ಈ ಕೈಗಾರಿಕಾ ಶಾಲೆಯಲ್ಲಿ ಐದು ಬಗೆಯ ಪರೀಕ್ಷೆಗಳನ್ನು ನಡೆಸಲಾಗುತ್ತಿತ್ತು. ಐದನೇಯ ಮತ್ತು ಕಡೆಯ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ಯಾವ ಮರಗೆಲಸವನ್ನು ಬೇಕಾದರೂ ತೃಪ್ತಿಕರವಾಗಿ ಮಾಡುವಷ್ಟು ತರಬೇತಿಯನ್ನು ಹೊಂದಿರುತ್ತಿದ್ದರು. ತಿರುಗಣೆ ಶಿಕ್ಷಣದಲ್ಲಿ (ಟರ್ನಿಂಗ್) ತಿರುಪುಮೊಳೆಯನ್ನು ಹಲ್ಲಿನ ಯಂತ್ರದ ಸಹಾಯದಿಂದ ಕತ್ತರಿಸುವ ಕೆಲಸವೂ ಸೇರಿದಂತೆ ಎಲ್ಲಾ ಬಗೆಯ ಕೈತಿರುಗಣೆ ಕೆಲಸ ಮತ್ತು ಮರ ಕತ್ತರಿಸುವ ಕೆಲಸಗಳನ್ನು ಮಾಡಲು ವಿದ್ಯಾರ್ಥಿಗಳು ಸಮರ್ಥರಾಗುತ್ತಿದ್ದರು. ಲೋಹದ ಕೆಲಸದಲ್ಲಿ ಎರಕ ಹೊಯ್ಯುವ ಕೆಲಸವನ್ನು ತೃಪ್ತಿಕರವಾಗಿ ಈ ವಿದ್ಯಾರ್ಥಿಗಳು ಮಾಡುತ್ತಿದ್ದರು.

ಲಾರ್ಡ್ ಕರ್ಜನ್ ಭಾರತದ ವೈಸರಾಯಿ ಆಗಿದ್ದಾಗ ಮುಂಬೈ ಕರ್ನಾಟಕ ಪ್ರದೇಶದ ತಾಂತ್ರಿಕ ಶಿಕ್ಷಣದ ಮುಂಗಡ ಪತ್ರವು 1906 ರಿಂದ 1910ರ ಅವಧಿಯಲ್ಲಿ 1,67,000 ರೂಗಳಷ್ಟು ಇತ್ತು. ಬೆಳಗಾವಿಯ ಸರ್‌ದಾರ್ ಪ್ರೌಢಶಾಲೆ ಹಾಗೂ ಕಾರವಾರದ ಸರಕಾರಿ ಪ್ರೌಢಶಾಲೆಗಳಿಗೆ ಹೊಂದಿಕೊಂಡಂತೆ ಕೈಕೆಲಸ ತರಬೇತಿ ತರಗತಿಗಳನ್ನು ನಡೆಸಲಾಗುತ್ತಿತ್ತು. ಬೆಳಗಾವಿ, ಧಾರವಾಡ ಮತ್ತು ವಿಜಾಪುರಗಳಲ್ಲಿದ್ದ ಸರ್ಕಾರಿ ಪ್ರೌಢಶಾಲೆಗಳಲ್ಲಿ 1919-20ರಲ್ಲಿ ಕಾಗದ ಹಾಗೂ ಮರದ ಕೈಗೆಲಸದ 'ಸ್ಲಾಯ್ಡ್' ತರಗತಿಗಳು ನಡೆಸಲ್ಪಡುತ್ತಿದ್ದವು. ಸರ್ ಜಾನ್ ಸಾರ್ಜಂಟ್‌ರವರ ಅಧ್ಯಕ್ಷತೆಯಲ್ಲಿ ಪುನರ್ರೂಪಿಸಲ್ಪಟ್ಟ ಯೋಜನೆಯ ಪ್ರಕಾರ 1943-44ರಲ್ಲಿ ಮುಂಬೈ ಸರ್ಕಾರವು ಶಾಲೆಗಳಲ್ಲಿ ಮೂಲ ಶಿಕ್ಷಣವನ್ನು ಅಳವಡಿಸಿತು. ಇದರ ಪ್ರಕಾರ ಕೈತೋಟ, ನೂಲುವುದು, ಕಾಗದದ ಕೆಲಸ, ರಟ್ಟಿನ ಆಕೃತಿಗಳನ್ನು ಮಾಡುವುದು ಮೊದಲಾದ ಕೈಗಾರಿಕಾ ಕಲೆಗಳನ್ನು ಸಾಮಾನ್ಯ ಪ್ರಾಥಮಿಕ ಶಾಲೆಗಳಲ್ಲಿ ಹೇಳಿಕೊಡುತ್ತಿದ್ದರು. ಈ ರೀತಿ ಸಾಮಾನ್ಯ ಪ್ರಾಥಮಿಕ ಶಾಲೆಗಳಲ್ಲಿ ಕೈ ಕೆಲಸಗಳ ಬೋಧನೆಯನ್ನು ಅಳವಡಿಸಿದ ಮೇಲೆ ಎಲ್ಲಾ ಪ್ರಥಮ ದರ್ಜೆಯ ಪ್ರಾಥಮಿಕ ಶಾಲೆಗಳು ಕೈಕೆಲಸದ ಶಾಲೆಗಳಾಗಿ ಪರಿವರ್ತಿತವಾಗಬೇಕೆಂದು ನಿರ್ಧರಿಸಲಾಯಿತು. ಆದರೆ ಈ ಪ್ರಯೋಗವು ತೃಪ್ತಿಕರವಾಗಿಲ್ಲದಿದ್ದ ಕಾರಣ ಎಲ್ಲಾ ಕುಶಲ ಕಸಬು ಶಾಲೆಗಳನ್ನು ಪುನಃ ಮೂಲ ಶಿಕ್ಷಣ ಶಾಲೆಗಳನ್ನಾಗಿ ಪರಿವರ್ತಿಸಲು ನಿರ್ಧರಿಸಲಾಯಿತು.

ಮುಂಬೈ ಕರ್ನಾಟಕ ಪ್ರದೇಶದ ವಿವಿಧ ಶಾಲೆಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆಯನ್ನು 97ನೇ ಪುಟದ ಪಟ್ಟಿಯಲ್ಲಿ ಕೊಡಲಾಗಿದೆ.

1946ರಲ್ಲಿ ಗದಗಿನಲ್ಲಿ ಬಿ. ವಿ. ಬಿ. ತಾಂತ್ರಿಕ ಕಾಲೇಜು ಪ್ರಾರಂಭಿಸಲ್ಪಟ್ಟು ನಂತರ ಅದನ್ನು ಹುಬ್ಬಳ್ಳಿಗೆ ವರ್ಗಾಯಿಸಲಾಯಿತು.

| ಶಾಲೆಯ ಹೆಸರು | ವಿದ್ಯಾರ್ಥಿಗಳ ಹಾಜರಿ | ಇಸವಿ |
|---|---|---|
| ಕೈಗಾರಿಕಾ ಶಾಲೆ ಧಾರವಾಡ | 69 | 31-3-1882 |
| ಅಪರಾಧಿ ಬುಡಕಟ್ಟುಗಳ ಪುನರ್ವಸತಿ ತಾಂತ್ರಿಕ ಶಾಲೆ, ಗದಗ | 18 | 31-3-1922 |
| ಅಪರಾಧಿ ಬುಡಕಟ್ಟುಗಳ ಪುನರ್ವಸತಿ ತಾಂತ್ರಿಕ ಶಾಲೆ, ವಿಜಾಪುರ ಮತ್ತು ಬಾಲಗಕೋಟೆ (ಎರಡು ಶಾಲೆಗಳು) | 137 | 31-3-1922 |
| ಕೈಗಾರಿಕಾ ಪುನರ್ವಸತಿ ರಾತ್ರಿ ಶಾಲೆ, ಗದಗ | 23 | 1946-47 |
| ಪುನರ್ವಸತಿ ರಾತ್ರಿ ಶಾಲೆ, ಹುಬ್ಬಳ್ಳಿ | 34 | 1946-47 |
| ಕೈಗಾರಿಕಾ ಪುನರ್ವಸತಿ ರಾತ್ರಿ ಶಾಲೆ, ವಿಜಾಪುರ | 18 | 1946-47 |
| ಕೈಗಾರಿಕಾ ಪುನರ್ವಸತಿ ರಾತ್ರಿ ಶಾಲೆ, ಬಾಗಲಕೋಟೆ | 18 | 1946-47 |
| ಫ್ರೀ ಕಾಲನಿ ಕೈಗಾರಿಕಾ ಪುನರ್ವಸತಿ ಶಾಲೆ, ಇಂಡಿ | 18 | 1946-47 |

ಹೈದರಾಬಾದ್ ಕರ್ನಾಟಕ ಪ್ರದೇಶ: ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ 1905-06ರ ವೇಳೆಗೆ ಬಿದರೆಯ ಕೈಗಾರಿಕಾ ಶಾಲೆಗಳಲ್ಲಿ ಬಿದರಿ ಕೆಲಸ ಕಲಿಸುತ್ತಿದ್ದರು. 1929 ರಲ್ಲಿ ಕೈಗಾರಿಕಾ ಶಾಲೆಗಳನ್ನು ವೃತ್ತಿಪರ ಶಾಲೆಗಳೆಂದು ಕರೆದುದರಿಂದ ತಾಂತ್ರಿಕ ಶಾಲೆಗಳನ್ನು ಪ್ರತ್ಯೇಕವಾಗಿ ವಿಂಗಡಿಸಲಾಯಿತು. ಕೈಗಾರಿಕಾ ಶಾಲೆಗಳಲ್ಲಿ ವೃತ್ತಿ ಶಿಕ್ಷಣದ ಜೊತೆಗೆ ಸಾಕ್ಷರತಾ ಶಿಕ್ಷಣವನ್ನು ಕೊಡಲಾಗುತ್ತಿತ್ತು. 1932ರ ವೇಳೆಗೆ ಬಿದರೆಯಲ್ಲಿದ್ದ ವೃತ್ತಿಪರ ಶಿಕ್ಷಣ ಶಾಲೆಯಲ್ಲಿ ಮರಕೆಲಸ ಹಾಗೂ ಬಿದರಿ ಕೆಲಸದಲ್ಲಿ 63 ವಿದ್ಯಾರ್ಥಿಗಳು, ರಾಯಚೂರಿನಲ್ಲಿದ್ದ ವೃತ್ತಿಪರ ಶಿಕ್ಷಣ ಶಾಲೆಯಲ್ಲಿ ಮರಕೆಲಸ ಹಾಗೂ ಹೊಲಿಗೆ ವಿಭಾಗದಲ್ಲಿ 212 ವಿದ್ಯಾರ್ಥಿಗಳು ಕಲಿಯುತ್ತಿದ್ದರು.

1935ರ ವೇಳೆಗೆ ಇಡೀ ಹೈದರಾಬಾದ್ ಸಂಸ್ಥಾನದಲ್ಲಿ 21 ಪ್ರೌಢಶಾಲೆಗಳಲ್ಲಿ, 35 ಮಾಧ್ಯಮಿಕ ಶಾಲೆಗಳಲ್ಲಿ ಮತ್ತು ಕೆಲವು ಪ್ರಾಥಮಿಕ ಶಾಲೆಗಳಲ್ಲಿ ವೃತ್ತಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಹೊಲಿಗೆ, ಬಡಗಿತನ, ಪುಸ್ತಕಗಳಿಗೆ ರಟ್ಟು ಕಟ್ಟುವುದು, ಜಮಖಾನೆ ನೇಯುವುದು, ಶತರಂಜಿ ನೇಯ್ಗೆ, ರಟ್ಟಿನ ಕೆಲಸ, ಪಾಲಿಶ್ ಮಾಡುವುದು, ಬಿದರಿ ಕೆಲಸ, ಬಟನ್ ತಯಾರಿಸುವುದು ಮೊದಲಾದ ವೃತ್ತಿಗಳಲ್ಲಿ ತರಬೇತಿ ಕೊಡಲಾಗುತ್ತಿತ್ತು. ಇವಲ್ಲದೆ ಕೆಲವು ಪ್ರಾಥಮಿಕ ಶಾಲೆಗಳಲ್ಲಿ ವಿವಿಧ ವೃತ್ತಿಗಳಲ್ಲಿ ತರಬೇತಿ ಕೊಟ್ಟು ಶಿಕ್ಷಣವನ್ನು ವೃತ್ತಿಪರವಾಗಿ ಮಾಡುವುದಕ್ಕೆ ಪ್ರೇರಣೆ ಇತ್ತು. 1937ರಲ್ಲಿ ತಾಂತ್ರಿಕ ಹಾಗೂ ವೃತ್ತಿ ಶಿಕ್ಷಣ ಇಲಾಖೆಯನ್ನು ಪ್ರಾರಂಭಿಸಲಾಯಿತು. ಪ್ರಾಥಮಿಕ ಶಿಕ್ಷಣ ಮಂಡಳಿಯು ಸಾಮಾನ್ಯ ಶಿಕ್ಷಣ ಹಾಗೂ ವೃತ್ತಿ ಶಿಕ್ಷಣ ತರಬೇತಿಯನ್ನು ಬೇರ್ಪಡಿಸುವುದಕ್ಕಾಗಿ ಒಂದು ವ್ಯವಸ್ಥೆಯನ್ನು ಮಾಡಿತು. ಇದರ ಪ್ರಕಾರ ವೃತ್ತಿ ಶಿಕ್ಷಣ ಹಾಗೂ ಕೈಗಾರಿಕಾ ಶಾಲೆಗಳನ್ನು ಪ್ರತ್ಯೇಕವಾಗಿ ತೆರೆಯಲಾಯಿತು. ಅಲ್ಲದೆ ಉನ್ನತ ಪ್ರಾಥಮಿಕ ಪರೀಕ್ಷೆ ಅಥವಾ ಕಿರಿಯ ಪ್ರಾಥಮಿಕ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರನ್ನು ಅಂತಹ ಸಂಸ್ಥೆಗಳಲ್ಲಿ ಸೇರಿಸಿಕೊಳ್ಳುವ ಏರ್ಪಾಟು ಇತ್ತು. ತಾಂತ್ರಿಕ ತರಬೇತಿಯ ಹೆಚ್ಚಿನ ಬೇಡಿಕೆಯನ್ನು ತುಂಬುವ ಸಲುವಾಗಿ ಸರ್ಕಾರವು 1955ರಲ್ಲಿ ಕಲ್ಬುರ್ಗಿಯಲ್ಲಿ ಒಂದು ಪಾಲಿಟೆಕ್ನಿಕನ್ನು ಪ್ರಾರಂಭಿಸಿತು. ಇದರಲ್ಲಿ ಪ್ರಾರಂಭದಲ್ಲಿ ವಾಸ್ತುಶಿಲ್ಪ ಶಿಕ್ಷಣದಲ್ಲಿ ಡಿಪ್ಲೋಮಾ ತರಬೇತಿಯನ್ನು ಕೊಡಲಾಗುತ್ತಿತ್ತು.

ಮದ್ರಾಸ್ ಕರ್ನಾಟಕ ಪ್ರದೇಶ: ಮದ್ರಾಸು ಪ್ರಾಂತ್ಯದ ಅಧೀನದಲ್ಲಿದ್ದ ವಿದ್ಯಾ ಇಲಾಖೆಯು ನಿಯಮಗಳನ್ನು ಪುನರ್ವಿಮರ್ಶಿಸಿ 1891ರ ಮದರಾಸು ಶಿಕ್ಷಣ ಇಲಾಖೆ ನಿಯಮಗಳನ್ನು ಜಾರಿಗೆ ತರಲಾಯಿತು. 1879ರಲ್ಲಿ ಪ್ರಾರಂಭವಾದ ಮಾಧ್ಯಮಿಕ ಶಾಲಾ ಪರೀಕ್ಷೆಯನ್ನು 1885-86ರಲ್ಲಿ ಮಾರ್ಪಡಿಸಲಾಯಿತು. ಮತ್ತು ಕೈಗಾರಿಕಾ ಹಾಗೂ ವಾಣಿಜ್ಯ ಶಾಖೆಗಳನ್ನು ಅಳವಡಿಸಲಾಯಿತು. ಅಲ್ಲದೆ ವಿದ್ಯಾರ್ಥಿಗಳು ಬಡಗಿತನ (ಮರ ಕೊಯ್ಯುವುದು), ಮರಗಳ ತಾಂತ್ರಿಕತೆ, ಕಬ್ಬಿಣದ ಕುಲುಮೆ ಕೆಲಸ, ಮುದ್ರಣ, ಹೊಲಿಗೆ ಕೆಲಸ, ಪಾದರಕ್ಷೆ ತಯಾರಿಕೆ ಮತ್ತು ತಂತಿ ವಾಹಕ ಇವುಗಳಲ್ಲಿ ಯಾವುದಾದರೂ ಒಂದು ವಿಷಯವನ್ನು ಐಚ್ಛಿಕವಾಗಿ ಆರಿಸಿಕೊಳ್ಳಬೇಕಾಗಿತ್ತು. 1909-10ರಲ್ಲಿ ಕೈಗಾರಿಕಾ ಇಲಾಖೆಯು ಪ್ರಾರಂಭವಾದುದರಿಂದ ಎಲ್ಲಾ ಕೈಗಾರಿಕಾ ಶಾಲೆಗಳು ಈ ಇಲಾಖೆಯ ಅಧೀನಕ್ಕೆ ವರ್ಗಾ

ಯಿಸಲ್ಪಟ್ಟವು. ಆದರೆ 1911ರಲ್ಲಿ ಈ ಇಲಾಖೆಯು ರದ್ದಾದಾಗ ಕೈಗಾರಿಕಾ ಶಿಕ್ಷಣದ ಅಧೀಕ್ಷಕರೇ ನೇಮುಕಗೊಂಡರು. ಪುನಃ ಈ ಅಧೀಕ್ಷಕರಿಂದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಈ ಶಾಲೆಗಳು ವರ್ಗಾಯಿಸಲ್ಪಟ್ಟವು. 14ನೇಯ ಜುಲೈ 1947ರಲ್ಲಿ ಸರ್ಕಾರವು ಹೊರಡಿಸಿದ ಆಜ್ಞೆಯ ಪ್ರಕಾರ 50 ಪ್ರೌಢ ಶಾಲೆಗಳಲ್ಲಿ ತಾಂತ್ರಿಕ ಶಿಕ್ಷಣ, ವ್ಯವಸಾಯ ಶಿಕ್ಷಣ, ಚಿತ್ರಕಲೆ, ಕಚೇರಿ ಕೆಲಸದ ತರಬೇತಿ ಮೊದಲಾದವುಗಳನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಸೇರಿಸಲು ನಿರ್ಧರಿಸಲಾಯಿತು.

ಬಳ್ಳಾರಿಯ ಸೇಂಟ್ ಜೋಸೆಫ್ಸ್ ವಿದ್ಯಾರ್ಥಿನಿಯರ ಕೈಗಾರಿಕಾ ಶಾಲೆಯಲ್ಲಿ 31-3-1927ರ ವೇಳೆಗೆ 71 ವಿದ್ಯಾರ್ಥಿನಿಯರು ಇದ್ದರು. ಬಳ್ಳಾರಿ ಮತ್ತು ಹೊಸಪೇಟೆಯ ಸರ್ಕಾರಿ ತರಬೇತಿ ಶಾಲೆಗೆ ಹೊಂದಿಕೊಂಡಿದ್ದ ಕೈಕೆಲಸದ ತರಗತಿಗಳಲ್ಲಿ ಕ್ರಮವಾಗಿ 156 ಹಾಗೂ 47 ವಿದ್ಯಾರ್ಥಿಗಳು ಪೆಟ್ಟಿಗೆಗಳ ತಯಾರಿಕೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದರು. ಹರಪನಹಳ್ಳಿಯ ಸ್ಥಳೀಯ ಮಂಡಳಿ ಪ್ರೌಢಶಾಲೆಯಲ್ಲಿ ಮತ್ತು ಕೊಟ್ಟೂರಿನ ಮಾಧ್ಯಮಿಕ ಶಾಲೆಯಲ್ಲಿ ಕ್ರಮವಾಗಿ 172 ಹಾಗೂ 65 ವಿದ್ಯಾರ್ಥಿಗಳು ನೂಲುವುದು, ನೇಯ್ಗೆ, ಹಾಗೂ ಪೆಟ್ಟಿಗೆಗಳ ತಯಾರಿಕೆಗಳಲ್ಲಿ ತರಬೇತಿಯನ್ನು ಪಡೆಯುತ್ತಿದ್ದರು. 1932ನೇ ಮಾರ್ಚ್ 31ರ ವೇಳೆಗೆ ಎರಡು ಕೈಗಾರಿಕಾ ಶಾಲೆಗಳಿದ್ದು ಒಂದನ್ನು ಕೈಗಾರಿಕಾ ಇಲಾಖೆಯೂ ಮತ್ತೊಂದನ್ನು ಕ್ರೈಸ್ತ ಮಿಶನರಿಗಳೂ ನಡೆಸುತ್ತಿದ್ದರು. ತಾಂತ್ರಿಕ ಶಿಕ್ಷಣದ ಕಕ್ಷೆಯಲ್ಲಿ 1932ರ 31ನೇಯ ಮಾರ್ಚ್ ವೇಳೆಗೆ ಇದ್ದ ಹಾಜರಾತಿ ಸಂಖ್ಯೆ, ಸರ್ಕಾರಿ ಕೈಗಾರಿಕಾ ಶಾಲೆಯಲ್ಲಿ 69, ಮಿಷನರಿ ಶಾಲೆಯಲ್ಲಿ 82, ಬಳ್ಳಾರಿ ಮತ್ತು ಹೊಸಪೇಟೆಯ ತರಬೇತಿ ಶಾಲೆಗೆ ಹೊಂದಿಕೊಂಡಿದ್ದ ಕೈಕೆಲಸ ತರಬೇತಿ ತರಗತಿಗಳಲ್ಲಿ ಕ್ರಮವಾಗಿ 203 ಹಾಗೂ 94, ಬಳ್ಳಾರಿ ಮತ್ತು ಹೊಸಪೇಟೆಯ ಪುರಸಭಾ ಪ್ರೌಢಶಾಲೆಗಳಲ್ಲಿ ಕ್ರಮವಾಗಿ 533 ಹಾಗೂ 124 ಹಾಗೂ ವಾರ್ಡ್‌ಲಾ ಮತ್ತು ಸೇಂಟ್ ಜೋಸೆಫ್ಸ್ ಪ್ರೌಢಶಾಲೆಗಳಲ್ಲಿ ಕ್ರಮವಾಗಿ 426 ಹಾಗೂ 187. ಸರ್ಕಾರಿ ಕೈಗಾರಿಕಾ ಶಾಲೆಗಳಲ್ಲಿ ಶಿಕ್ಷಣ ಶುಲ್ಕವನ್ನು ವಿಧಿಸುತ್ತಿರಲಿಲ್ಲ. 1950-51ರಲ್ಲಿ ಬಳ್ಳಾರಿಯಲ್ಲಿ ಪಾಲಿಟೆಕ್ನಿಕ್ ಪ್ರಾರಂಭವಾಗಿ ಒಟ್ಟು 182 ವಿದ್ಯಾರ್ಥಿಗಳಿಗೆ ಪೆಟ್ಟಿಗೆ ತಯಾರಿಕೆ, ಮರಕೆಲಸ, ಕುಲುಮೆ ಕೆಲಸ ಮತ್ತು ಹೊಲಿಗೆಗಳಲ್ಲಿ ತರಬೇತಿಯನ್ನು ಕೊಡಲಾಗುತ್ತಿತ್ತು. 1951-52ರಲ್ಲಿ ಆಟೋಮೊಬೈಲ್‌ಗಳ ರಿಪೇರಿ ಮತ್ತು ಕಾಪಾಡುವುದರ ಅರ್ಹತಾ ಪತ್ರ ತರಬೇತಿ ಶಿಕ್ಷಣವನ್ನು ಸೇರಿಸಲಾಯಿತು.

ದಕ್ಷಿಣ ಕನ್ನಡದ ಮಂಗಳೂರಿನಲ್ಲಿ, 1850ರ ವೇಳೆಗೆ ಮಿಷನ್ ಶಾಲೆಯಲ್ಲಿ ಬ್ರದರ್ ಮುಲ್ಲರ್ ಮತ್ತು ಬ್ರದರ್ ಬೂಸಿಂಜರ್ ಇವರುಗಳು ಬಟ್ಟೆ ನೇಯ್ಗೆ, ವಾಚು ರಿಪೇರಿ ಮಾಡುವುದು ಮತ್ತು ಯಂತ್ರ ವಿದ್ಯೆಯಲ್ಲಿ ಒಲವುಳ್ಳ ಯುವಕರಿಗೆ ಸಣ್ಣ ಸಣ್ಣ ಯಂತ್ರಗಳನ್ನು ರಿಪೇರಿ ಮಾಡುವ ಶಿಕ್ಷಣವನ್ನು ಕೊಡುತ್ತಿದ್ದರು. 1929ರ ವೇಳೆಗೆ ಮರಗೆಲಸ ಹಾಗೂ ಯಾಂತ್ರಿಕ ವೃತ್ತಿಗಳಲ್ಲಿ ಶಿಕ್ಷಣ ಕೊಡುತ್ತಿದ್ದ ಮಂಗಳೂರಿನ ಈ ವೃತ್ತಿ ಶಿಕ್ಷಣ ಶಾಲೆಯು ಜಿಲ್ಲೆಯಲ್ಲೇ ಏಕೈಕ ಸರ್ಕಾರಿ ತಾಂತ್ರಿಕ ಸಂಸ್ಥೆಯಾಗಿತ್ತು. ಐದು ವರ್ಷದ ಅವಧಿಯ ಒಪ್ಪೊತ್ತಿನ ತಾಂತ್ರಿಕ ತರಬೇತಿ ಶಿಕ್ಷಣ ಮತ್ತು ಎರಡು ವರ್ಷದ ಪೂರ್ಣಾಕಾಲೀನ ವಿದ್ಯುತ್ ತಂತಿ ಜೋಡಣೆ ಮತ್ತು ಮರ ಕೆಲಸದ ತರಬೇತಿ ಶಿಕ್ಷಣದ ವ್ಯವಸ್ಥೆಯನ್ನು ಅದು ಹೊಂದಿತ್ತು. ಆಯಾ ವೃತ್ತಿಗಳಲ್ಲಿ ನಿರತರಾಗಿದ್ದ ಕೆಲಸಗಾರರಿಗೆ ಹಾಗೂ ತರಬೇತಿ ಪಡೆಯುತ್ತಿದ್ದವರಿಗೆ ಮಾತ್ರ ಯಾಂತ್ರಿಕ ತರಬೇತಿ ಶಿಕ್ಷಣದಲ್ಲಿ ಪ್ರವೇಶವನ್ನು ಸಾಮಾನ್ಯವಾಗಿ ನಿಗದಿಗೊಳಿಸಲಾಗಿತ್ತು. ಶಿಕ್ಷಣ ಶುಲ್ಕವು ಇರಲಿಲ್ಲ. 1934ರಲ್ಲಿ ವಿದ್ಯಾರ್ಥಿಗಳ ಸಂಖ್ಯೆ 56 ಇತ್ತು. ಮಂಗಳೂರಿನಲ್ಲಿದ್ದ 'ಕಾಮನ್‌ವೆಲ್ತ್ ಟ್ರಸ್ಟ್ ಇಂಜಿನಿಯರಿಂಗ್ ವರ್ಕ್ಸ್' ಸಂಸ್ಥೆಯು ಅಪ್ರೆಂಟಿಸ್‌ಗಳಿಗಾಗಿ ತರಬೇತಿಗಳನ್ನು ನಡೆಸುತ್ತಿದ್ದು, ಈ ತರಗತಿಗಳು ಇಲಾಖೆಯಿಂದ ಅಂಗೀಕೃತವಾಗಿದ್ದವು. ಇವಲ್ಲದೆ ಮಂಗಳೂರಿನ ಕಂಕನಾಡಿಯಲ್ಲಿದ್ದ ಸೈಂಟ್ ಜೋಸೆಫ್ ಪುರುಷರ ಅನಾಥಾಲಯದ ಕೈಗಾರಿಕೆಗಳು ಕೂಡಾ ಕೈಗಾರಿಕಾ ಶಾಲೆಗಳನ್ನು ನಡೆಸುತ್ತಿದ್ದವು. ಆದರೆ ಅವು ಸರ್ಕಾರದಿಂದ ಅಂಗೀಕೃತವಾಗಿರಲಿಲ್ಲ.

ದಕ್ಷಿಣ ಕನ್ನಡದಲ್ಲಿ 1926-27ರಲ್ಲಿ ಹಾಗೂ 1931-32ರಲ್ಲಿ ತಾಂತ್ರಿಕ ಹಾಗೂ ಕೈಗಾರಿಕಾ ಶಿಕ್ಷಣವನ್ನು ಪಡೆಯುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆಯು ಈ ಕೆಳಕಂಡ ಪಟ್ಟಿಯಲ್ಲಿ ತೋರಿಸಿದಂತೆ ಇತ್ತು.

ಕೈಗಾರಿಕಾ ನಿರ್ದೇಶಕರ ಅಧೀನದಲ್ಲಿ 1946–47ರ ವೇಳೆಗೆ ಈ ಜಿಲ್ಲೆಯಲ್ಲಿ ನಾಲ್ಕು ಕೈಗಾರಿಕಾ ಶಾಲೆಗಳು ಇದ್ದವು. ಅವು ಯಾವುವೆಂದರೆ ಸರಕಾರೀ ವೃತ್ತಿ ಶಾಲೆ, ಮಂಗಳೂರು (ಇದು 1946ರ ಆಗಸ್ಟ್‌ರ ನಂತರ ಕರ್ನಾಟಕ ಪಾಲಿಟೆಕ್ನಿಕ್ ಆಗಿ ಪರಿವರ್ತಿತವಾಯಿತು ; 31 ವಿದ್ಯಾರ್ಥಿಗಳು); ಕಾಮನ್‌ವೆಲ್ತ್ ಟ್ರಸ್ಟ್ ಇಂಜಿನಿಯರಿಂಗ್ ಶಾಲೆ, ಮಂಗಳೂರು ('ಏಡೆಡ್' 11 ವಿದ್ಯಾರ್ಥಿಗಳು); ಬೆತನಿ ಸೈಂಟ್ ಮಾರ್ತಾಸ್ ಕೈಗಾರಿಕಾ ಶಾಲೆ ('ಏಡೆಡ್'), ಮಂಗಳೂರು (69 ವಿದ್ಯಾರ್ಥಿಗಳು); ಮತ್ತು ಬೆತನಿ ಸೈಂಟ್ ಜೋಸೆಫ್ಸ್ ಕೈಗಾರಿಕಾ ಶಾಲೆ, ಮಂಗಳೂರು ('ಏಡೆಡ್' ; 33 ವಿದ್ಯಾರ್ಥಿಗಳು). 1950-51ರ ವೇಳೆಗೆ 257 ವಿದ್ಯಾರ್ಥಿಗಳು ಇದ್ದ ಒಂದು ಪಾಲಿಟೆಕ್ನಿಕ್ ಸಂಸ್ಥೆ, 30 ವಿದ್ಯಾರ್ಥಿಗಳು ಮತ್ತು ಒಬ್ಬ ವಿದ್ಯಾರ್ಥಿನಿ ಕಲಿಯುತ್ತಿದ್ದ ಎರಡು ಖಾಸಗಿ ಕೈಗಾರಿಕಾ ಶಾಲೆಗಳು ಮತ್ತು ಇಬ್ಬರು ವಿದ್ಯಾರ್ಥಿಗಳು 54 ವಿದ್ಯಾರ್ಥಿನಿಯರು ಕಲಿಯುತ್ತಿದ್ದ ಎರಡು ಖಾಸಗಿ ಕಲಾ ಮತ್ತು ಕುಶಲಕಲಾ ಶಾಲೆಗಳು ಮಂಗಳೂರಿನಲ್ಲಿ ಇದ್ದವು.

| ಶಾಲೆಯ ಹೆಸರು | ವಿದ್ಯಾರ್ಥಿಗಳ ಸಂಖ್ಯೆ | |
|---|---|---|
| | 1926-27 | 1931-32 |
| ಕಾಮನ್‌ವೆಲ್ತ್ ಟ್ರಸ್ಟ್ ಇಂಜಿನಿಯರಿಂಗ್ ವರ್ಕ್ಸ್ ತರಗತಿಗಳು | 16 | 8 |
| ಕೈಕೆಲಸ ತರಬೇತಿಯ ತರಗತಿಗಳು (ಕೆಳಗಿನವುಗಳಿಗೆ ಹೊಂದಿಕೊಂಡಂತೆ) | | |
| ಅ) ಸರಕಾರಿ ತರಬೇತಿ ಶಾಲೆ, ಮಂಗಳೂರು | 28 | 81 |
| ಆ) ಉನ್ನತ ಪ್ರಾಥಮಿಕ ತರಬೇತಿ ಶಾಲೆ, ಮಂಗಳೂರು | 162 | 235 |
| ಇ) ಬೋರ್ಡ್ ಪ್ರೌಢಶಾಲೆ, ಕಾರ್ಕಳ | 136 | 135 |
| ಈ) ಗಣಪತಿ ಪ್ರೌಢಶಾಲೆ, ಮಂಗಳೂರು | 243 | 285 |
| ಉ) ಕೋರ್ಟ್ ಹಿಲ್ ಆದಿ ದ್ರಾವಿಡ ಶಾಲೆ, ಮಂಗಳೂರು | 26 | 85 |
| ಸರಕಾರಿ ವೃತ್ತಿ ಶಾಲೆ, ಮಂಗಳೂರು | 26 | 85 |
| ಆಲ್ ಸೈಂಟ್ಸ್ ಕೈಗಾರಿಕಾ ಶಾಲೆ, ಪುತ್ತೂರು | — | 34 |
| ಸಸಿಹಿತ್ಲು ಬೋರ್ಡ್ ಪ್ರಾಥಮಿಕ ಶಾಲೆ, ಮಂಗಳೂರು | — | 23 |

1921ರವರೆಗೆ ಕೊಡಗಿನಲ್ಲಿ ತಾಂತ್ರಿಕ ಶಾಲೆಗಳು ಯಾವುವೂ ಇರಲಿಲ್ಲವಾದ್ದರಿಂದ ತಾಂತ್ರಿಕ ವಿಷಯಗಳನ್ನು ಕಲಿಯುಲು ವಿದ್ಯಾರ್ಥಿವೇತನಗಳನ್ನು ಕೊಡಲಾಗುತ್ತಿತ್ತು. ಆದರೆ ಪೊನ್ನಂಪೇಟೆಯ ಉನ್ನತ ಪ್ರಾಥಮಿಕ ಶಾಲೆಯಲ್ಲಿ ವಿದ್ಯಾರ್ಥಿಗಳು ವ್ಯವಸಾಯದಲ್ಲಿ ಪ್ರಾಯೋಗಿಕ ಶಿಕ್ಷಣ ಪಡೆಯುತ್ತಿದ್ದರು. ವೀರರಾಜಪೇಟೆ ಮತ್ತು ಮಡಿಕೇರಿಯ ಪುರಸಭಾ ಶಾಲೆಗಳಲ್ಲಿ 1926-27ರಲ್ಲಿ ಹೊಲಿಗೆ ಮತ್ತು ಬಡಗಿತನ ವಿಭಾಗಗಳು ಪ್ರಾರಂಭಿಸಲ್ಪಟ್ಟವು. ವೀರರಾಜಪೇಟೆಯಲ್ಲಿ ಸರಕಾರವು 1927 ರಲ್ಲಿ ಒಂದು ಕೈಗಾರಿಕಾ ಶಾಲೆಯನ್ನು ಪ್ರಾರಂಭಿಸಿತಾದರೂ ಫಲಿತಾಂಶಗಳು ತೀರ ಕಡಿಮೆಯಾಗುತ್ತಿದ್ದ ಕಾರಣ ಈ ಶಾಲೆಯನ್ನು 1938ರಲ್ಲಿ ಮುಚ್ಚಲಾಯಿತು. 1936-37ರಲ್ಲಿ ಶನಿವಾರಸಂತೆಯ ಉನ್ನತ ಪ್ರಾಥಮಿಕ ಶಾಲೆಯಲ್ಲಿ ನೇಯ್ಗೆಯ ತರಗತಿಯನ್ನು ಪ್ರಾರಂಭಿಸಲಾಯಿತು. ಭಾರತ ಸರ್ಕಾರವು 1950ರಲ್ಲಿ ವೀರರಾಜಪೇಟೆಯಲ್ಲಿ ಒಂದು ಕೈಗಾರಿಕಾ ತರಬೇತಿ ಸಂಸ್ಥೆಯನ್ನು ತೆರೆಯಿತು. ಅದರಲ್ಲಿ ಹೊಲಿಗೆ, ಬಡಗಿತನ, ಜೋಡಣೆ ವಿಭಾಗ ಮತ್ತು ರೇಖಾನಕ್ಷೆಗಾರರ ವೃತ್ತಿಗಳಲ್ಲಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಇದನ್ನು 1954ರಲ್ಲಿ ಮಡಿಕೇರಿಗೆ ವರ್ಗಾಯಿಸಿದರು. 1955-56ರಲ್ಲಿ ಮಡಿಕೇರಿಯ ಸೆಂಟ್ರಲ್ ಪ್ರೌಢ ಶಾಲೆಯಲ್ಲಿ ತಾಂತ್ರಿಕ ವಿಷಯಗಳನ್ನು ಐಚ್ಛಿಕ ವಿಷಯಗಳಾಗಿ ಪಠ್ಯಕ್ರಮದಲ್ಲಿ ಸೇರಿಸಲಾಯಿತು.

ರಾಜ್ಯಗಳ ಪುನರ್ಘಟನೆಯ ನಂತರ: ರಾಜ್ಯ ಪುನರ್ಘಟನೆಯ ನಂತರ ಇಂಜಿನಿಯರಿಂಗ್ ಪದವಿ ತರಬೇತಿ ಶಿಕ್ಷಣವನ್ನು ಹೊಂದಿದ್ದ ಅನುದಾನ ಪಡೆಯುತ್ತಿದ್ದ ಒಂದು ಇಂಜಿನಿಯರಿಂಗ್ ಕಾಲೇಜು ಎರಡು ಪಾಲಿಟೆಕ್ನಿಕ್ ಸಂಸ್ಥೆಗಳು, ಒಂದು ತಾಂತ್ರಿಕ ತರಬೇತಿ ಕೇಂದ್ರ, ಒಂದು ಮಹಿಳೆಯರ ವೃತ್ತಿ ಶಿಕ್ಷಣ ಕೇಂದ್ರ, ಮತ್ತು ನಾಲ್ಕು ಕೈಗಾರಿಕಾ ಹಾಗೂ ತಾಂತ್ರಿಕ ಪ್ರೌಢಶಾಲೆಗಳು, ತಾಂತ್ರಿಕ ಶಿಕ್ಷಣ ಸಂಸ್ಥೆಯ ಆಡಳಿತಕ್ಕೆ ಬಂದವು. ಹದಿನೆಂಟು ಸರಕಾರಿ ಮತ್ತು ಆರು ಅನುದಾನ ಪಡೆಯುತ್ತಿದ್ದ ಹೀಗೆ 24 ತಾಂತ್ರಿಕ ಸಂಸ್ಥೆಗಳು ರಾಜ್ಯ ಪುನರ್ವಿಂಗಡನೆಯ ಕಾಲದಲ್ಲಿ ರಾಜ್ಯದಲ್ಲಿದ್ದವು. ಪುರುಷರಿಗಾಗಿ 42 ಕೈಗಾರಿಕಾ ಶಾಲೆಗಳು ಮತ್ತು ಮಹಿಳೆಯರ ಐದು ಕೈಗಾರಿಕಾ ಶಾಲೆಗಳು, ಹೀಗೆ 47 ಕೈಗಾರಿಕಾ ಶಾಲೆಗಳು ಆ ಸಮಯದಲ್ಲಿ ಇದ್ದವು. 1955-56ರಲ್ಲಿ, ಈ ಕೈಗಾರಿಕಾ ಶಾಲೆಗಳಲ್ಲಿ 319 ವಿದ್ಯಾರ್ಥಿನಿಯರು ಸೇರಿದಂತೆ ಒಟ್ಟು 2,242 ವಿದ್ಯಾರ್ಥಿಗಳು ಇದ್ದರು. 1959ರಲ್ಲಿ ಒಂದು ಪ್ರತ್ಯೇಕವಾದ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯವನ್ನು ರಚಿಸಲಾಯಿತು. ಈ ನಿರ್ದೇಶನಾಲಯದ ಅಧೀನದಲ್ಲಿ ಮೂರು ಸರಕಾರಿ ತಾಂತ್ರಿಕ ಕಾಲೇಜುಗಳು, ಐದು ಖಾಸಗಿ ತಾಂತ್ರಿಕ ಕಾಲೇಜುಗಳು, 14 ಸರಕಾರಿ ಪಾಲಿಟೆಕ್ನಿಕ್‌ಗಳು, ಐದು ಖಾಸಗಿ ಪಾಲಿಟೆಕ್ನಿಕ್‌ಗಳು (ಇವುಗಳನ್ನು ವೃತ್ತಿ ಶಿಕ್ಷಣ ಸಂಸ್ಥೆಗಳೆಂದು ಕರೆಯಲಾಗುತ್ತಿತ್ತು) ಇದ್ದವು. 1961 ಮತ್ತು 1963ರಲ್ಲಿ ಬೆಂಗಳೂರು ಮತ್ತು ಹುಬ್ಬಳ್ಳಿಯಲ್ಲಿ ಮಹಿಳೆಯರಿಗಾಗಿ ಪಾಲಿಟೆಕ್ನಿಕನ್ನು ತೆರೆಯಲಾಯಿತು. 1964-65ರಲ್ಲಿ

ಸೇರ್ಪಡೆಯಾದ ಪ್ರದೇಶಗಳಲ್ಲಿ ಇದ್ದ ತಾಂತ್ರಿಕ ಪ್ರೌಢಶಾಲೆಗಳನ್ನು ಮುಚ್ಚಿ, ಬಾಗಲಕೋಟೆ, ಭದ್ರಾವತಿ, ಬಳ್ಳಾರಿ, ಕಲ್ಬುರ್ಗಿ, ಹುಬ್ಬಳ್ಳಿ ಮತ್ತು ಮಂಗಳೂರುಗಳಲ್ಲಿ ಕಿರಿಯ ತಾಂತ್ರಿಕ ಶಾಲೆಗಳನ್ನು ತೆರೆಯಲಾಯಿತು. ಎರಡನೇಯ ಪಂಚವಾರ್ಷಿಕ ಯೋಜನೆಯಲ್ಲಿ ತಾಂತ್ರಿಕ ಶಿಕ್ಷಣದ ವಿವಿಧ ಯೋಜನೆಗಳಿಗಾಗಿ ಒಟ್ಟು ಆಯವ್ಯಯ ಈ ರೀತಿ ಇದ್ದಿತು. ಕಲ್ಬುರ್ಗಿ ಪಾಲಿಟೆಕ್ನಿಕ್ ಮತ್ತು ರಾಯಚೂರಿನ ತಾಂತ್ರಿಕ ತರಬೇತಿ ಕೇಂದ್ರ ಇವುಗಳ ಅಭಿವೃದ್ಧಿಗಾಗಿ 20 ಲಕ್ಷ ರೂ. ಬೆಳಗಾವಿಯಲ್ಲಿದ್ದ ಪಾಲಿಟೆಕ್ನಿಕ್‌ನ ಅಭಿವೃದ್ಧಿಗಾಗಿ ಮತ್ತು ಹೊಸ ತಾಂತ್ರಿಕ ಶಾಲೆಯನ್ನು ತೆರೆಯಲು ಹಾಗೂ ಖಾಸಗಿ ತಾಂತ್ರಿಕ ಕಾಲೇಜುಗಳಿಗೆ ಅನುದಾನ ಕೊಡುವುದಕ್ಕಾಗಿ 29.17ಲಕ್ಷ ರೂ. ಮಂಗಳೂರಿನ ಕರ್ನಾಟಕ ಪಾಲಿಟೆಕ್ನಿಕ್ ಅಭಿವೃದ್ಧಿಗಾಗಿ 3.37 ಲಕ್ಷ ರೂ. ಮತ್ತು ಬೆಂಗಳೂರು, ಹಾಸನ, ದಾವಣಗೆರೆ, ಮೈಸೂರು, ಬಳ್ಳಾರಿ ಹಾಗೂ ಭದ್ರಾವತಿಯಲ್ಲಿನ ವೃತ್ತಿ ಶಿಕ್ಷಣ ಸಂಸ್ಥೆಗಳ ಅಭಿವೃದ್ಧಿಗಾಗಿ 67.31 ಲಕ್ಷ ರೂ. 1955-56ರಲ್ಲಿ ಕುಶಲ ತರಬೇತಿದಾರರ ಶಿಕ್ಷಣದ ಯೋಜನೆಯ ಪ್ರಕಾರ 300 ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಉಪಾಧ್ಯಾಯರುಗಳನ್ನು ಈ ವೃತ್ತಿಶಿಕ್ಷಣ ಸಂಸ್ಥೆಗಳಲ್ಲಿ ತರಬೇತಿ ಮಾಡಲಾಯಿತು. ಇದೇ ವರ್ಷದಲ್ಲಿ ಡಿಪ್ಲೋಮಾ ಪರೀಕ್ಷೆಗಳನ್ನು ಮೊದಲನೇಯ, ಎರಡನೇಯ ಹಾಗೂ ಮೂರನೇಯ ವರ್ಷದ ಎಲ್ಲಾ ವಿದ್ಯಾರ್ಥಿಗಳಿಗೂ ನಡೆಸುವ ಯೋಜನೆಯು ಪ್ರಾರಂಭವಾಯಿತು. ಮತ್ತು ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಕೈಗಾರಿಕಾ ಕೆಲಸಗಾರರಿಗಾಗಿ ಸಂಜೆ ತರಗತಿಗಳನ್ನು ನಡೆಸಲು ಏರ್ಪಾಡಾಯಿತು. ಬಳ್ಳಾರಿಯ ಪಾಲಿಟೆಕ್ನಿಕ್‌ನಲ್ಲಿ ಹೊಲಿಗೆಯಲ್ಲಿ ಎರಡು ವರ್ಷದ ಅರ್ಹತಾ ಪತ್ರ ನೀಡುವ ಶಿಕ್ಷಣವನ್ನು ಪ್ರಾರಂಭಿಸಲಾಯಿತು.

ಈ ಕೆಳಕಂಡ ಸಂಸ್ಥೆಗಳಲ್ಲಿ 1956-57ರಲ್ಲಿ ವಿಶ್ವವಿದ್ಯಾಲಯದವರು ಕೊಡುತ್ತಿದ್ದ ತಾಂತ್ರಿಕ ಶಿಕ್ಷಣವನ್ನು ಬಿಟ್ಟು ಇತರ ವಿಷಯಗಳಲ್ಲಿ ಶಿಕ್ಷಣವನ್ನು ಕೊಡಲಾಗುತ್ತಿತ್ತು : ಕೈಗಾರಿಕಾ ಶಾಲೆಗಳು, ಕಲಾ ಮತ್ತು ಕುಶಲ ಕಲಾ ಶಾಲೆಗಳು, ಮಹಿಳೆಯರಿಗಾಗಿ ವೃತ್ತಿ ಶಿಕ್ಷಣ ಸಂಸ್ಥೆಗಳು, ಕೈಗಾರಿಕಾ ತರಬೇತಿ ಸಂಸ್ಥೆಗಳು, ವೃತ್ತಿಶಿಕ್ಷಣ ಸಂಸ್ಥೆಗಳು, ಪಾಲಿಟೆಕ್ನಿಕ್‌ಗಳು ಮತ್ತು ತಾಂತ್ರಿಕ ಶಾಲೆಗಳು, ಚನ್ನಪಟ್ಟಣದ ಮಹಿಳಾ ಕೈಗಾರಿಕಾ ಶಾಲೆ ಸೇರಿದಂತೆ ಒಟ್ಟು 652 ವಿದ್ಯಾರ್ಥಿಗಳಿದ್ದ (ಈ ಪೈಕಿ 129 ವಿದ್ಯಾರ್ಥಿನಿಯರು) 14 ಕೈಗಾರಿಕಾ ಶಾಲೆಗಳು ಆಗ ಇದ್ದವು. ಈ ಕೈಗಾರಿಕಾ ಶಾಲೆಗಳು ಮತ್ತು ಮೈಸೂರಿನಲ್ಲಿದ್ದ ಶ್ರೀ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯು ಕೈಗಾರಿಕಾ ಮತ್ತು ವಾಣಿಜ್ಯ ನಿರ್ದೇಶಕರ ಅಧೀನದಲ್ಲಿ ಇದ್ದವು. ಗ್ರಾಮೀಣ ಅಭಿವೃದ್ಧಿ ಇಲಾಖೆಯ ಅಧೀನದಲ್ಲಿ 126 ವಿದ್ಯಾರ್ಥಿನಿಯರನ್ನು ಒಳಗೊಂಡಂತೆ 367 ವಿದ್ಯಾರ್ಥಿಗಳಿದ್ದ 19 ಕಲಾ ಮತ್ತು ಕುಶಲ ಕಲಾ ಶಾಲೆಗಳು ಇದ್ದವು. ಅವುಗಳಲ್ಲಿ ಐದು ವಿದ್ಯಾರ್ಥಿನಿಯರಿಗಾಗಿ ಇದ್ದವು. ಈ ಶಾಲೆಗಳು ಬಹುತೇಕ ಮುಂಬೈ ಕರ್ನಾಟಕ ಪ್ರದೇಶದಲ್ಲಿ ಇದ್ದವು. ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿ ಇಂತಹ ಎರಡು ಸಂಸ್ಥೆಗಳಿದ್ದು ಒಂದು ಮೈಸೂರಿನಲ್ಲಿ ಹಾಗೂ ಇನ್ನೊಂದು ಕಲ್ಬುರ್ಗಿಯಲ್ಲಿ ಇತ್ತು. ಇವುಗಳಲ್ಲಿ ಒಟ್ಟು 117 ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ಭಾರತ ಸರ್ಕಾರದ ಕಾರ್ಮಿಕರ ಇಲಾಖೆಯು ತಾಂತ್ರಿಕ ವೃತ್ತಿ ಶಿಕ್ಷಣದಲ್ಲಿ ಅಲ್ಪಾವಧಿ ತರಬೇತಿಯನ್ನು ಕೊಡುವುದಕ್ಕಾಗಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಪ್ರಾರಂಭಿಸಿತು. ಈ ತರಬೇತಿ ಶಿಕ್ಷಣದ ಅವಧಿ 18 ತಿಂಗಳಾಗಿತ್ತು. 24 ವಿದ್ಯಾರ್ಥಿನಿಯರು ಸೇರಿದಂತೆ 437 ವಿದ್ಯಾರ್ಥಿಗಳು, ಬೆಂಗಳೂರು, ರಾಯಚೂರು ಮತ್ತು ಮಡಿಕೇರಿಯಲ್ಲಿದ್ದ ಈ ಸಂಸ್ಥೆಗಳಲ್ಲಿ ಕಲಿಯುತ್ತಿದ್ದರು.

ಎಂಬತ್ತನಾಲ್ಕು ವಿದ್ಯಾರ್ಥಿನಿಯರೊಳಗೊಂಡಂತೆ 3,450 ವಿದ್ಯಾರ್ಥಿಗಳು ಒಟ್ಟು 10 ವೃತ್ತಿಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ಪಾಲಿಟೆಕ್ನಿಕ್‌ಗಳಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಎರಡು ತಾಂತ್ರಿಕ ಶಾಲೆಗಳ ಪೈಕಿ ಒಂದು ಬೆಂಗಳೂರಿನ ಸರ್ಕಾರಿ ಶಾಲೆ ಮತ್ತೊಂದು ಧಾರವಾಡದ ಕಬ್ಬೂರು ಸಂಸ್ಥೆ. ಇವೆರಡು ಸಂಸ್ಥೆಗಳ ವಿದ್ಯಾರ್ಥಿಗಳ ಸಂಖ್ಯೆ 674. ವೃತ್ತಿಶಿಕ್ಷಣ ಸಂಸ್ಥೆಗಳು ಮತ್ತು ತಾಂತ್ರಿಕ ಶಾಲೆಗಳ ಆಡಳಿತವನ್ನು ತಾಂತ್ರಿಕ ಶಿಕ್ಷಣ ಇಲಾಖೆಯು ನಡೆಸುತ್ತಿದೆ. ಇದಲ್ಲದೆ ಪ್ರೌಢಶಾಲೆಗಳಲ್ಲಿ ಐಚ್ಛಿಕ ವಿಷಯಗಳ ಜೊತೆಗೆ ತಾಂತ್ರಿಕ ವಿಷಯಗಳನ್ನು ಬೋಧಿಸುವುದಕ್ಕೆ ಅವಕಾಶ ಇತ್ತು. 1956-57ರಲ್ಲಿ 16 ವಿದ್ಯಾರ್ಥಿನಿಯರನ್ನು ಒಳಗೊಂಡಂತೆ 1,995 ವಿದ್ಯಾರ್ಥಿಗಳು 50 ಸೇವಾ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಯೋಗಿಕ ತರಬೇತಿಯನ್ನು ಪಡೆಯುತ್ತಿದ್ದರು.

ತಾಂತ್ರಿಕ ಶಿಕ್ಷಣಕ್ಕಾಗಿ ಉಂಟಾದ ಭಾರೀ ಒತ್ತಡವು ಸರಕಾರ ಮತ್ತು ಖಾಸಗಿ ಸಂಸ್ಥೆಗಳು ಹೊಸ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭ ಮಾಡಲು ಪ್ರೇರೇಪಣೆ ನೀಡಿತು. 1957-58ರಲ್ಲಿ ಕೋಲಾರದ ಚಿನ್ನದಗಣಿ ಪ್ರದೇಶದಲ್ಲಿ ಸ್ಕೂಲ್ ಆಫ್ ಮೈನ್ಸ್ (ಗಣಿ ತಾಂತ್ರಿಕ ಶಾಲೆ) ಅನ್ನು ಪ್ರಾರಂಭಿಸಲಾಯಿತು. ಮತ್ತು ಭಾರತ ಸರಕಾರವು ರಾಜ್ಯದ ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಮೂರು ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ವರ್ಗಾಯಿಸಿತು. 1959-60ರಲ್ಲಿ ಕೈಗಾರಿಕಾ ಕಲೆ ಮತ್ತು ಕುಶಲಕಲಾ ಶಾಲೆಗಳು ಪುನರ್ವ್ಯವಸ್ಥೆ ಮಾಡಲ್ಪಟ್ಟು ಗ್ರಾಮೀಣ ಕುಶಲ ಕರ್ಮಿಗಳ ಕೇಂದ್ರಗಳೆಂದು ಪುನರ್ನಾಮಕರಣಗೊಂಡಾಗ ಅವುಗಳ ಸಂಖ್ಯೆ 64ರಿಂದ 19ಕ್ಕೆ ಇಳಿಯಿತು. (ಅವುಗಳಲ್ಲಿ 17 ಪುರುಷರವು ಮತ್ತು ಎರಡು ಮಹಿಳೆಯರವು). ಮೈಸೂರಿನ ಶ್ರೀ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯನ್ನು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯಿಂದ

ಗ್ರಾಮೀಣ ಔದ್ಯೋಗೀಕರಣ ಇಲಾಖೆಗೆ ವರ್ಗಾಯಿಸಲಾಯಿತು. ಮಹಿಳೆಯರಿಗಾಗಿ ಇದ್ದ ಎರಡು ಸಂಸ್ಥೆಗಳು ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿ ಇದ್ದವು. 1960-61ರಲ್ಲಿ ಬೆಂಗಳೂರಿನಲ್ಲಿದ್ದ ತಾಂತ್ರಿಕ ಶಾಲೆಯನ್ನು ಮುಚ್ಚಿ ಆರು ಕಿರಿಯ ತಾಂತ್ರಿಕ ಶಾಲೆಗಳನ್ನು ಪ್ರಾರಂಭಿಸಲಾಯಿತು. ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿ ಮೂರು ಯುವ ವೃತ್ತಿಪೂರ್ವ ತರಬೇತಿ ಕೇಂದ್ರಗಳನ್ನು (ಅವುಗಳನ್ನು ವೃತ್ತಿಪೂರ್ವ ತರಬೇತಿ ಕೇಂದ್ರಗಳೆಂದು ಕರೆಯುತ್ತಿದ್ದಾರೆ) ಪ್ರಾರಂಭಿಸಲಾಯಿತು. 1968-69ರಲ್ಲಿ ಭಾರತ ಸರ್ಕಾರ ಹಾಗೂ ಕರ್ನಾಟಕ ಸರ್ಕಾರಗಳ ಜಂಟಿ ಆಶ್ರಯದಲ್ಲಿ ಬೆಂಗಳೂರಿನಲ್ಲಿ ಆಹಾರ ಕುಶಲ ವೃತ್ತಿ ಸಂಸ್ಥೆಯು ಪ್ರಾರಂಭವಾಯಿತು.

ಪದವಿ ಕಾಲೇಜುಗಳು

ಮೈಸೂರು ಸರಕಾರವು 1917ರಲ್ಲಿ ಬೆಂಗಳೂರಿನಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜನ್ನು ಪ್ರಾರಂಭಿಸಿತು. 1946ರವರೆಗೆ ಇಡೀ ರಾಜ್ಯಕ್ಕೆ ಇದು ಒಂದೇ ಇಂಜಿನಿಯರಿಂಗ್ ಕಾಲೇಜಾಗಿತ್ತು. 1946ರ ನಂತರ ಸರಕಾರದಿಂದ ಒಂದು ಕಾಲೇಜು ಮತ್ತು ಖಾಸಗೀ ಸಂಸ್ಥೆಯಿಂದ ಎರಡು ಕಾಲೇಜುಗಳು—ಒಟ್ಟು ಮೂರು ಕಾಲೇಜುಗಳು ಪ್ರಾರಂಭವಾದವು. ರಾಜ್ಯ ಪುನರ್ವಿಂಗಡಣೆಯ ಸಮಯದಲ್ಲಿ ಮೈಸೂರು ಪ್ರಾಂತದಲ್ಲಿ ನಾಲ್ಕು ತಾಂತ್ರಿಕ ಕಾಲೇಜುಗಳಿದ್ದು, ಮುಂಬೈ ಕರ್ನಾಟಕ ಪ್ರದೇಶದ ಒಂದು ತಾಂತ್ರಿಕ ಕಾಲೇಜು (ಹುಬ್ಬಳ್ಳಿಯಲ್ಲಿ) ಇತ್ತು. ಅವು ಯಾವುವೆಂದರೆ ಬೆಂಗಳೂರಿನ ಸರ್ಕಾರಿ ತಾಂತ್ರಿಕ ಕಾಲೇಜು, ಬೆಂಗಳೂರಿನ ಬಿ.ಎಂ.ಎಸ್. ತಾಂತ್ರಿಕ ಕಾಲೇಜು (ಖಾಸಗಿ), ಮೈಸೂರಿನ ನ್ಯಾಶನಲ್ ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್ (ಖಾಸಗಿ), ದಾವಣಗೆರೆಯ ಸರ್ಕಾರಿ ಬಿ.ಡಿ.ಟಿ. ತಾಂತ್ರಿಕ ಕಾಲೇಜು ಮತ್ತು ಹುಬ್ಬಳ್ಳಿಯ ಬಿ.ವಿ.ಬಿ. ತಾಂತ್ರಿಕ ಕಾಲೇಜು (ಖಾಸಗಿ).

ಕಾಲೇಜ್ ಆಫ್ ಇಂಜಿನಿಯರಿಂಗ್ : ಮೈಸೂರಿನಲ್ಲಿ ಮೈಸೂರು ವಿಶ್ವವಿದ್ಯಾಲಯವು ಪ್ರಾರಂಭವಾದ ಒಂದು ವರ್ಷದ ನಂತರ ಬೆಂಗಳೂರಿನಲ್ಲಿ ಜುಲೈ 1917ರಲ್ಲಿ ಈ ಸರ್ಕಾರಿ ತಾಂತ್ರಿಕ ಕಾಲೇಜು ಸ್ಥಾಪಿತವಾಯಿತು. ಮೊಟ್ಟಮೊದಲಿಗೆ ಸಿವಿಲ್ ಮತ್ತು ಯಾಂತ್ರಿಕ ಇಂಜಿನಿಯರಿಂಗ್ ವಿಭಾಗದಲ್ಲಿ ವಿದ್ಯಾರ್ಥಿಗಳನ್ನು ತರಬೇತಿಗೊಳಿಸಲು ಸೌಕರ್ಯಗಳನ್ನು ಇದು ಹೊಂದಿತ್ತು. ಯಾಂತ್ರಿಕ ಇಂಜಿನಿಯರಿಂಗ್ ಶಾಲೆ (ಮೆಕ್ಯಾನಿಕಲ್ ಇಂಜಿನಿಯರಿಂಗ್ ಸ್ಕೂಲ್) ಇದ್ದ ಕಟ್ಟಡದಲ್ಲೇ ಈ ತಾಂತ್ರಿಕ ಕಾಲೇಜು ನಡೆಯುತ್ತಿತ್ತು. 1917-18ರಲ್ಲಿ ಪ್ರತೀ ವಿಭಾಗದಲ್ಲೂ 48 ವಿದ್ಯಾರ್ಥಿಗಳನ್ನು ಸೇರಿಸಿಕೊಂಡಿದ್ದರು. 1921ರ ವೇಳೆಗೆ ಈ ಇಂಜಿನಿಯರಿಂಗ್ ಕಾಲೇಜು ತನ್ನದೇ ಕಾರ್ಯಾಗಾರ ಮತ್ತು ಯಾಂತ್ರಿಕ ಪ್ರಯೋಗಶಾಲೆಯನ್ನು ಹೊಂದಿತು. 1925ರಲ್ಲಿ ವಿದ್ಯುತ್ ತಾಂತ್ರಿಕ ಕೋರ್ಸನ್ನು ಪ್ರಾರಂಭಿಸಲಾಯಿತು; ವಿದ್ಯುತ್ ಪ್ರಯೋಗಶಾಲೆಯೂ ಸಿದ್ಧವಾಗಿತ್ತು. ಈ ತಾಂತ್ರಿಕ ಕಾಲೇಜು ಇಡೀ ರಾಷ್ಟ್ರದಲ್ಲೇ ಆರನೇಯದು. ಇದಕ್ಕೆ ಮುಂಚೆ ರೂರ್ಕಿಯಲ್ಲಿ, ಶಿವಪುರ (ಬಂಗಾಳದಲ್ಲಿ), ಗಿಂಡಿ (ಮದ್ರಾಸ್), ಪುಣೆ ಮತ್ತು ವಾರಾಣಸಿಗಳಲ್ಲಿ ಈ ಬಗೆಯ ಕಾಲೇಜುಗಳು ಇದ್ದವು. ಕಾಶ್ಮೀರ, ಒರಿಸ್ಸಾ ಮುಂತಾದ ಇತರ ರಾಜ್ಯಗಳ ವಿದ್ಯಾರ್ಥಿಗಳಿಗಾಗಿ ಕೆಲವು ಸ್ಥಾನಗಳನ್ನು ಕಾದಿರಿಸಲಾಗುತ್ತಿತ್ತು. ಸಿವಿಲ್ ಪರೀಕ್ಷಾ ಪ್ರಯೋಗಶಾಲೆ, ಜಲಸಾಮರ್ಥ್ಯದ ಪ್ರಯೋಗಶಾಲೆ ಮತ್ತು ವಸ್ತುಗಳ ಪರೀಕ್ಷಾ ಪ್ರಯೋಗಶಾಲೆಗಳನ್ನು ನಂತರ ಪ್ರಾರಂಭಿಸಲಾಯಿತು. ನಾಲ್ಕು ವರ್ಷಗಳ ತಾಂತ್ರಿಕ ತರಬೇತಿ ಶಿಕ್ಷಣವು ಮುಗಿದ ನಂತರ ಒಂದು ವರ್ಷದ ಪ್ರಾಯೋಗಿಕ ತರಬೇತಿಯನ್ನು ವಿದ್ಯಾರ್ಥಿಗಳು ಹೊಂದಬೇಕಾಗಿತ್ತು. 1934-35ರಲ್ಲಿ ಪಠ್ಯಕ್ರಮ ಹಾಗೂ ಪರೀಕ್ಷಾ ಪದ್ಧತಿಗಳನ್ನು ಪೂರ್ಣವಾಗಿ ಮಾರ್ಪಾಟು ಮಾಡಲಾಯಿತು. ಯಂತ್ರತಾಂತ್ರಿಕ ತರಬೇತಿ ಶಿಕ್ಷಣದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಒಂದು ವರ್ಷ ಹೆಚ್ಚಿನ ವಿದ್ಯಾಭ್ಯಾಸ ಮಾಡಿದರೆ ವಿದ್ಯುತ್ ತಾಂತ್ರಿಕ ಶಿಕ್ಷಣ ಪದವಿ ಮತ್ತು ವಿದ್ಯುತ್ ತಾಂತ್ರಿಕ ತರಬೇತಿ ಶಿಕ್ಷಣದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ಒಂದು ವರ್ಷ ಹೆಚ್ಚಿಗೆ ವ್ಯಾಸಂಗ ಮಾಡಿದರೆ ಯಂತ್ರತಾಂತ್ರಿಕ ಪದವಿಯನ್ನು ಕೊಡಲಾಗುತ್ತಿತ್ತು. 1939-40ರಲ್ಲಿ ಪರೀಕ್ಷಾ ಕ್ರಮವನ್ನು ಪುನಃ ಮಾರ್ಪಡಿಸಿ ಪ್ರತೀವರ್ಷವೂ ಸಾರ್ವತ್ರಿಕ ಪರೀಕ್ಷೆ ಇರುವಂತೆ ವ್ಯವಸ್ಥೆ ಮಾಡಲಾಯಿತು. ಇದಕ್ಕೆ ಮುಂಚೆ ಇಡೀ ತರಬೇತಿ ಶಿಕ್ಷಣದಲ್ಲಿ ಮೂರು ಸಾರ್ವತ್ರಿಕ ಪರೀಕ್ಷೆಗಳನ್ನು ಮಾತ್ರ ನಡೆಸುತ್ತಿದ್ದರು. ಈ ತಾಂತ್ರಿಕ ಕಾಲೇಜನ್ನು 1960-61ರಲ್ಲಿ ವಿಶ್ವವಿದ್ಯಾಲಯದ ತಾಂತ್ರಿಕ ಕಾಲೇಜಾಗಿ ಮಾರ್ಪಾಟು ಮಾಡಿ, 1969ರಲ್ಲಿ ಈ ಕಾಲೇಜಿಗೆ ಸರ್ ಎಂ. ವಿಶ್ವೇಶ್ವರಯ್ಯನವರ ಹೆಸರನ್ನು ಇಡಲಾಯಿತು. 1966 ಮತ್ತು 1968ರಲ್ಲಿ ಕ್ರಮವಾಗಿ ವಾಸ್ತುಶಿಲ್ಪ ಮತ್ತು ಇಲೆಕ್ಟ್ರಾನಿಕ್ಸ್ ವಿಭಾಗಗಳನ್ನು ತೆರೆಯಲಾಯಿತು. 1960ರಲ್ಲಿ ಸ್ನಾತಕೋತ್ತರ ಪದವಿ ವಿಭಾಗವನ್ನು ಮತ್ತು 1968ರಲ್ಲಿ ಪಿಎಚ್.ಡಿ. ಪದವಿಯನ್ನು ಪ್ರಾರಂಭಿಸಲಾಯಿತು.

ಬಿ.ಡಿ.ಟಿ. ಇಂಜಿನಿಯರಿಂಗ್ ಕಾಲೇಜು, ದಾವಣಗೆರೆ: ಬ್ರಹ್ಮಪ್ಪ ದೇವೇಂದ್ರಪ್ಪ ತವನಪ್ಪನವರ್ ಇವರ ಹೆಸರಿನಲ್ಲಿ ಟಿ. ಚಂದ್ರಣ್ಣನವರು ಉದಾರವಾಗಿ ನೀಡಿದ ಒಂದೂವರೆ ಲಕ್ಷ ರೂ.ಗಳ ಧನಸಹಾಯದಿಂದ ಮೈಸೂರು ಸರಕಾರವು ದಾವಣಗೆರೆಯಲ್ಲಿ 1950-51ರಲ್ಲಿ ಬಿ.ಡಿ.ಟಿ. ಇಂಜಿನಿಯರಿಂಗ್ ಕಾಲೇಜನ್ನು ಸ್ಥಾಪಿಸಿ ಅದಕ್ಕೆ ದಾನಿಗಳ ಹೆಸರನ್ನೇ ಇಟ್ಟಿತು. ಪ್ರಾರಂಭದಲ್ಲಿ 80 ವಿದ್ಯಾರ್ಥಿಗಳಿದ್ದ ಈ ಕಾಲೇಜಿನಲ್ಲಿ ಸಿವಿಲ್, ತಾಂತ್ರಿಕ ವಿಭಾಗ ಮಾತ್ರ ಇತ್ತು. 1957ರಲ್ಲಿ ಯಾಂತ್ರಿಕ ಮತ್ತು

ಇಂಜಿನಿಯರಿಂಗ್ ತರಬೇತಿ ಶಿಕ್ಷಣವನ್ನು ತೆರೆಯಲಾಯಿತು. ಮೂರು ವಿಭಾಗಗಳಲ್ಲಿ ಆಗ 180 ವಿದ್ಯಾರ್ಥಿಗಳು ಓದುತ್ತಿದ್ದರು. 1965-66ರಲ್ಲಿ ಇದರಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 610 ಆಗಿತ್ತು. ಈಗ ಇಡೀ ರಾಜ್ಯದಲ್ಲಿ ಇದು ರಾಜ್ಯಸರಕಾರದ ಏಕೈಕ ತಾಂತ್ರಿಕ ಕಾಲೇಜಾಗಿದೆ.

**ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್, ಮೈಸೂರು :** ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್ ಸೊಸೈಟಿಯು ಕಾನೂನಿನಂತೆ ನೋಂದಾವಣೆಯಾಗಿ 1950ರಲ್ಲಿ ಈ ಕಾಲೇಜನ್ನು ಪ್ರಾರಂಭಿಸಿತು. ಸಿವಿಲ್, ವಿದ್ಯುತ್ ಮತ್ತು ಯಾಂತ್ರಿಕ ವಿಭಾಗದಲ್ಲಿ ಪದವಿ ಶಿಕ್ಷಣವನ್ನು ಒದಗಿಸಲಾಯಿತು. 1951ರಲ್ಲಿ ಈ ಕಾಲೇಜಿನ ಹಾಜರಾತಿ 216 ಇತ್ತು. ಮುಂದೆ ಇಲೆಕ್ಟ್ರಾನಿಕ್ ಇಂಜಿನಿಯರಿಂಗ್ ಮತ್ತು ಕೈಗಾರಿಕೆ ಮತ್ತು ಉತ್ಪಾದನಾ ಇಂಜಿನಿಯರಿಂಗ್ ಶಿಕ್ಷಣವನ್ನು ಪ್ರಾರಂಭಿಸಿತು. ಈಗ ಈ ಕಾಲೇಜಿನಲ್ಲಿ ಸ್ನಾತಕೋತ್ತರ ಇಂಜಿನಿಯರಿಂಗ್ ವಿಭಾಗದಲ್ಲೂ ಶಿಕ್ಷಣವನ್ನು ನೀಡಲಾಗುತ್ತಿದೆ.

**ಬಿ. ಎಂ. ಶ್ರೀನಿವಾಸಯ್ಯ ಇಂಜಿನಿಯರಿಂಗ್ ಕಾಲೇಜು, ಬೆಂಗಳೂರು :** ಹಿಂದಿನ ಮೈಸೂರು ರಾಜ್ಯದಲ್ಲಿ ಪ್ರಾರಂಭಿಸಲಾದ ಅನುದಾನ ಪಡೆಯುತ್ತಿದ್ದ ಖಾಸಗೀ ತಾಂತ್ರಿಕ ಕಾಲೇಜುಗಳಲ್ಲಿ, 1946ರಲ್ಲಿ ಪ್ರಾರಂಭಿಸಲಾದ ಬಿ. ಎಂ. ಶ್ರೀನಿವಾಸಯ್ಯ ಇಂಜಿನಿಯರಿಂಗ್ ಕಾಲೇಜು ಮೊದಲನೇಯದು. ಈ ಕಾಲೇಜನ್ನು ಸ್ಥಾಪಿಸಿದ ಬಿ. ಎಂ. ಶ್ರೀನಿವಾಸಯ್ಯನವರ ಹೆಸರನ್ನೇ ಅನಂತರ ಈ ಕಾಲೇಜಿಗೆ ಇಡಲಾಯಿತು. ಇದು ಪ್ರಾರಂಭವಾದ ಹೊಸತರಲ್ಲಿ ಸಿವಿಲ್, ಯಾಂತ್ರಿಕ ಮತ್ತು ವಿದ್ಯುತ್ ಇಂಜಿನಿಯರಿಂಗ್‌ಗಳಲ್ಲಿ ಪದವಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಮತ್ತು 250 ವಿದ್ಯಾರ್ಥಿಗಳು ಹಾಜರಾತಿಯಲ್ಲಿದ್ದರು. ಒಂದು ಸಣ್ಣ ಕಟ್ಟಡದಲ್ಲಿದ್ದ ಈ ಕಾಲೇಜನ್ನು ಖಾಸಗಿ ವಿಶ್ವಸ್ಥ ಆಡಳಿತ ಮಂಡಳಿಯೊಂದು ನಡೆಸುತ್ತಿತ್ತು. ನಂತರ ಇಲೆಕ್ಟ್ರಾನಿಕ್ಸ್, ವಾಸ್ತುಶಿಲ್ಪ, ಕೈಗಾರಿಕೆ ಮತ್ತು ಉತ್ಪಾದನೆ ತಾಂತ್ರಿಕ ವಿಭಾಗಗಳನ್ನು ಸೇರಿಸಲಾಯಿತು. 1972ರಲ್ಲಿ ಸಂಜೆ ಕಾಲೇಜನ್ನು ಸಿವಿಲ್, ವಿದ್ಯುತ್ ಮತ್ತು ಯಾಂತ್ರಿಕ ವಿಭಾಗಗಳಲ್ಲಿ ತೆರೆಯಲಾಯಿತು.

**ಬಿ. ವಿ. ಬಿ. ಇಂಜಿನಿಯರಿಂಗ್ ಕಾಲೇಜು, ಹುಬ್ಬಳ್ಳಿ :** ಬೆಳಗಾವಿಯ ಕೆ. ಎಲ್. ಇ. ಸೊಸೈಟಿಯವರು ಗದಗಿನಲ್ಲಿ 1946ರ ಜೂನ್ ನಲ್ಲಿ ಬಿ. ವಿ. ಭೂಮರೆಡ್ಡಿಯವರು ಉದಾರವಾಗಿ ನೀಡಿದ 3 ಲಕ್ಷ ರೂ.ಗಳ ಕೊಡುಗೆಯೊಂದಿಗೆ ಬಿ. ವಿ. ಬಿ. ಇಂಜಿನಿಯರಿಂಗ್ ಕಾಲೇಜನ್ನು ಪ್ರಾರಂಭಿಸಿದರು. 1947ರಲ್ಲಿ ಈ ಕಾಲೇಜನ್ನು ಹುಬ್ಬಳ್ಳಿಗೆ ವರ್ಗಾಯಿಸಲಾಯಿತು. ಪ್ರಾರಂಭದಲ್ಲಿ ಸಿವಿಲ್ ಮತ್ತು ಯಾಂತ್ರಿಕ ವಿಭಾಗ ಮಾತ್ರ ಈ ಕಾಲೇಜಿನಲ್ಲಿ ಲಭ್ಯವಿತ್ತು. 1947-48ರಲ್ಲಿ ವಿದ್ಯುತ್ ತಾಂತ್ರಿಕ ವಿಭಾಗವನ್ನು ತೆರೆಯಲಾಯಿತು. ರಾಜ್ಯ ಪುನರ್ವಿಂಗಡಣೆಯ ಮೊದಲು ಮುಂಬೈ ಪ್ರಾಂತ್ಯದಲ್ಲಿ ಇದ್ದ ಖಾಸಗಿ ತಾಂತ್ರಿಕ ಕಾಲೇಜುಗಳಲ್ಲಿ ಈ ಕಾಲೇಜು ಒಂದಾಗಿತ್ತು. ಈಗ ವಾಸ್ತುಶಿಲ್ಪ ಇಲೆಕ್ಟ್ರಾನಿಕ್ಸ್, ಕೈಗಾರಿಕೆ ಮತ್ತು ಉತ್ಪಾದನೆ ಇಂಜಿನಿಯರಿಂಗ್ ಈ ವಿಭಾಗಗಳಲ್ಲಿ ಕೂಡ ಶಿಕ್ಷಣವನ್ನು ಕೊಡಲಾಗುತ್ತಿದೆ.

ಈ ಮೇಲ್ಕಂಡ ಎಲ್ಲಾ ಐದು ತಾಂತ್ರಿಕ ಕಾಲೇಜುಗಳಲ್ಲಿ 1956-57ರಲ್ಲಿ ಇಬ್ಬರು ವಿದ್ಯಾರ್ಥಿನಿಯರು ಸೇರಿದಂತೆ 2,924 ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. 1956-57ರಿಂದ 1968-69ರ ದಶಕದಲ್ಲಿ ಒಟ್ಟು ಹತ್ತು ಇಂಜಿನಿಯರಿಂಗ್ ಕಾಲೇಜುಗಳು ಪ್ರಾರಂಭವಾದವು. ಅವುಗಳಲ್ಲಿ ಒಂದು ಸರ್ಕಾರಿ (ಕರ್ನಾಟಕ ರೀಜನಲ್ ಇಂಜಿನಿಯರಿಂಗ್ ಕಾಲೇಜು, ಸುರತ್ಕಲ್) ಮತ್ತು ಒಂಬತ್ತು ಖಾಸಗಿ ಕಾಲೇಜುಗಳಾಗಿದ್ದವು. ಸುರತ್ಕಲ್ ಪ್ರಾಂತೀಯ ತಾಂತ್ರಿಕ ಕಾಲೇಜನ್ನು 1960ರಲ್ಲಿ ಭಾರತ ಸರಕಾರವು ಪ್ರಾರಂಭಿಸಿತು. ಎರಡು ವರ್ಷಗಳ ಇಂಟರ್ ಮೀಡಿಯಟ್ ಶಿಕ್ಷಣವನ್ನು ರದ್ದುಪಡಿಸಿದ ಮೇಲೆ ತಾಂತ್ರಿಕ ಶಿಕ್ಷಣದ ಅವಧಿಯನ್ನು ನಾಲ್ಕು ವರ್ಷದಿಂದ ಐದು ವರ್ಷಕ್ಕೆ ಹೆಚ್ಚಿಸಲಾಯಿತು. 1967-68ರಲ್ಲಿ ಕರ್ನಾಟಕ ರಾಜ್ಯದಲ್ಲಿದ್ದ ಮೂರು ವಿಶ್ವವಿದ್ಯಾಲಯಗಳೂ ಸೆಮಿಸ್ಟರ್ ಪದ್ಧತಿಯ ಶಿಕ್ಷಣವನ್ನು ಪ್ರಾರಂಭಿಸಿದವು. ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜುಬಿಲಿ ಸಂಸ್ಥೆಯು ಬಿ. ಎಸ್ಸಿ. ಟೆಕ್ಸ್‌ಟೈಲ್ಸ್‌ನಲ್ಲಿ ಶಿಕ್ಷಣವನ್ನು ನೀಡುತ್ತಿತ್ತು. 1956-57ರಲ್ಲಿ ಇದರಲ್ಲಿ 60 ವಿದ್ಯಾರ್ಥಿಗಳಿದ್ದದ್ದು 1968-69ರಲ್ಲಿ ಈ ಸಂಖ್ಯೆ 138ಕ್ಕೆ ಏರಿತು. ಇದರಲ್ಲಿ ಎಲ್ಲರೂ ಪುರುಷರೇ.

**ಕರ್ನಾಟಕ ರೀಜನಲ್ ಇಂಜಿನಿಯರಿಂಗ್ ಕಾಲೇಜು, ಸುರತ್ಕಲ್ :** ಫೆಬ್ರವರಿ 1960ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸುರತ್ಕಲ್‌ನಲ್ಲಿ ಸ್ಥಾಪಿಸಲಾದ ಪ್ರಾದೇಶಿಕ ತಾಂತ್ರಿಕ ಕಾಲೇಜಿನಲ್ಲಿ ಮೊದಲನೇಯ ವರ್ಷದ ಸಿವಿಲ್, ಯಾಂತ್ರಿಕ ಮತ್ತು ವಿದ್ಯುತ್ ತಾಂತ್ರಿಕ ವಿಭಾಗಗಳಲ್ಲಿ 250 ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. 1968-69ರಲ್ಲಿ ರಾಸಾಯನಿಕ ಮತ್ತು ಲೋಹಶಾಸ್ತ್ರ ಶಿಕ್ಷಣವನ್ನೂ 1972ರಲ್ಲಿ ಇಲೆಕ್ಟ್ರಾನಿಕ್ಸ್ ಮತ್ತು ಸಂಪರ್ಕ (ಕಮ್ಯುನಿಕೇಶನ್) ತಾಂತ್ರಿಕ ಶಿಕ್ಷಣವನ್ನು ಪ್ರಾರಂಭಿಸಲಾಯಿತು. ಸ್ನಾತಕೋತ್ತರ ಶಿಕ್ಷಣವನ್ನೂ ಈ ಕಾಲೇಜು ನೀಡುತ್ತಿದೆ. 1981-82ರಲ್ಲಿ 24 ವಿದ್ಯಾರ್ಥಿನಿಯರೂ ಸೇರಿದಂತೆ ಈ ಕಾಲೇಜಿನಲ್ಲಿ 1,405 ವಿದ್ಯಾರ್ಥಿಗಳು ಕಲಿಯುತ್ತಿದ್ದರು. ಈ ಸಂಸ್ಥೆಯು ಒಂದು ವಸತಿ ಸಂಸ್ಥೆಯಾಗಿದ್ದು, ಸ್ವಯಂ ಆಡಳಿತ ಮಂಡಳಿಯಿಂದ ಇದರ ವ್ಯವಸ್ಥೆಯು ನಡೆಸಲ್ಪಡುತ್ತಿದೆ.

ಈ ಮಂಡಳಿಯಲ್ಲಿ ರಾಜ್ಯ ಮತ್ತು ಕೇಂದ್ರ ಸರಕಾರ, ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿ, ಮೈಸೂರು ವಿಶ್ವವಿದ್ಯಾಲಯ, ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ ಹಾಗೂ ವಿಶ್ವವಿದ್ಯಾಲಯದ ಧನಸಹಾಯ ಆಯೋಗ ಈ ಸಂಸ್ಥೆಗಳು, ನಾಮಕರಣ ಮಾಡಿದವರು ಹಾಗೂ ಇತರ ಸದಸ್ಯರು ಇದ್ದಾರೆ.

ರಾಜ್ಯದ ತಾಂತ್ರಿಕ, ಕೈಗಾರಿಕಾ, ಮತ್ತು ಕುಶಲ ಕಲಾ ಸಂಸ್ಥೆಗಳಲ್ಲಿ 1956-57* ಮತ್ತು 1966-67**ರ ಸಾಲಿನಲ್ಲಿ ಇದ್ದ ವಿದ್ಯಾರ್ಥಿಗಳ ಪಟ್ಟಿಯನ್ನು ಇಲ್ಲಿ ನೀಡಿದೆ.

***1956–57**

| ಸಂಸ್ಥೆಗಳು | ಸಂಖ್ಯೆ | ವಿದ್ಯಾರ್ಥಿಗಳು | ವಿದ್ಯಾರ್ಥಿನಿಯರು | ಒಟ್ಟು |
|---|---|---|---|---|
| ಇಂಡಸ್ಟ್ರೀಯಲ್ ಶಾಲೆಗಳು (ಮಹಿಳೆಯರಿಗಾಗಿ) | 14 | 523 | 129 | 652 |
| ಕಲಾ ಮತ್ತು ಕುಶಲ ಕಲಾ ಶಾಲೆಗಳು (ಮಹಿಳೆಯರಿಗಾಗಿ-5) | 19 | 241 | 126 | 367 |
| ಮಹಿಳಾ ವೃತ್ತಿ ಶಿಕ್ಷಣ ಸಂಸ್ಥೆಗಳು | 2 | — | 113 | 113 |
| ಕೈಗಾರಿಕಾ ತರಬೇತಿ ಸಂಸ್ಥೆಗಳು | 3 | 415 | 22 | 437 |
| ವಿಶಿಷ್ಟ ವೃತ್ತಿ ಸಂಸ್ಥೆ ಮತ್ತು ಪಾಲಿಟೆಕ್ನಿಕ್‌ಗಳು | 10 | 3,366 | 84 | 3,450 |
| ತಾಂತ್ರಿಕ ಶಾಲೆಗಳು | 2 | 674 | — | 674 |
| ಒಟ್ಟು | 50 | 5,219 | 474 | 5,693 |
| ತಾಂತ್ರಿಕ ಕಾಲೇಜುಗಳು | 5 | 2,922 | 2 | 2,924 |

ಇದಲ್ಲದೆ 60 ವಿದ್ಯಾರ್ಥಿಗಳಿರುವ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್‌ಜುಬಿಲಿ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್ ಕೂಡ ಇತ್ತು.

****1966–67**

| 1 | 2 | 3 | 4 | 5 |
|---|---|---|---|---|
| ಪುರುಷರ ಕೈಗಾರಿಕಾ ತರಬೇತಿ ಸಂಸ್ಥೆಗಳು | 15 | 2,945 | 67 | 3,012 |
| ಮಹಿಳಾ ವಿಶಿಷ್ಟ ವೃತ್ತಿ ಮತ್ತು ಶಿಕ್ಷಣ ಸಂಸ್ಥೆಗಳು | 3 | — | 162 | 162 |
| ಗ್ರಾಮೀಣ ಪುರುಷ ಕುಶಲ ಕರ್ಮಿಗಳ ಕೇಂದ್ರಗಳು | 24 | 1,496 | 172 | 1,668 |
| ಮಹಿಳಾ ಕಲಾ ಮತ್ತು ಕುಶಲ ಕಲಾ ಕೇಂದ್ರ | 1 | — | 150 | 150 |
| ಕಿರಿಯ ತಾಂತ್ರಿಕ ಶಾಲೆಗಳು | 6 | 667 | — | 667 |
| ವಿಶಿಷ್ಟ ವೃತ್ತಿ ಶಿಕ್ಷಣ ಕೇಂದ್ರಗಳು | 3 | 218 | — | 218 |
| ಪುರುಷರ ಪಾಲಿಟೆಕ್ನಿಕ್‌ಗಳು | 23 | 8,719 | 132 | 8,851 |
| ಮಹಿಳಾ ಪಾಲಿಟೆಕ್ನಿಕ್‌ಗಳು | 2 | — | 296 | 296 |
| ತಾಂತ್ರಿಕ ಶಾಲೆಗಳು | 2 | 339 | — | 339 |
| ತಾಂತ್ರಿಕ ಕಾಲೇಜುಗಳು | 10 | 10,804 | 50 | 10,854 |
| ಎಸ್. ಕೆ. ಎಸ್. ಜೆ. ಟಿ. ಇನ್ಸ್‌ಟಿಟ್ಯೂಟ್ | — | 138 | — | 138 |
| ಒಟ್ಟು | 90 | 25,337 | 1,029 | 26,365 |

## ಯೋಜನೆಗಳ ಪ್ರಗತಿ

ಮೊದಲನೇಯ ಪಂಚವಾರ್ಷಿಕ ಯೋಜನೆಯಲ್ಲಿ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿಯ ಶಿಫಾರಸಿನ ಮೇರೆಗೆ ಆಯಾ ತರಬೇತಿ ಶಿಕ್ಷಣಗಳಲ್ಲಿ ಶೈಕ್ಷಣಿಕ ತರಬೇತಿ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸಲು ಪ್ರಾಮುಖ್ಯತೆ ನೀಡಲಾಯಿತು. 1968-69 ರಲ್ಲಿ ಕಚೇರಿ ಕಾರ್ಯ ವಿಧಾನದಲ್ಲಿ ಡಿಪ್ಲೋಮಾ ಮಟ್ಟದಲ್ಲಿ ತರಬೇತಿ ಕೊಡಲು ರಾಮನಾರಾಯಣ ಚೆಲ್ಲಾರಾಮ ವಿಶ್ವಸ್ಥ ನಿಧಿಯವರು ದಾನವಾಗಿ ಕೊಟ್ಟ ಒಂದು ಲಕ್ಷ ರೂ.ಗಳನ್ನು ವಿನಿಯೋಗಿಸಿಕೊಂಡು ಬೆಂಗಳೂರಿನಲ್ಲಿ ಸಂಸ್ಥೆಯೊಂದು ಪ್ರಾರಂಭವಾಯಿತು. ಅಲ್ಲದೆ ಎರಡು ಖಾಸಗಿ ಕಾಲೇಜುಗಳಾದ ಮಂಡ್ಯದ ಪಿ. ಇ. ಎಸ್. ಕಾಲೇಜು, ಮತ್ತು ಬಾಗಲಕೋಟೆಯ ಬಸವೇಶ್ವರ ತಾಂತ್ರಿಕ ಕಾಲೇಜು ಇವುಗಳಿಗೆ ಧನ ಸಹಾಯ ನೀಡಲಾಯಿತು. ನಾಲ್ಕನೇಯ ಯೋಜನೆಯಲ್ಲಿ ತಾಂತ್ರಿಕ ಶಿಕ್ಷಣದ ಅಭಿವೃದ್ಧಿಗಾಗಿ ಎರಡು ಕೋಟಿ ರೂ.ಗಳನ್ನು ಕಾದಿರಿಸಲಾಯಿತು. ಮತ್ತು ಕುಶಲ ಕಲೆಗಾರರ ತರಬೇತಿಗಾಗಿ 72 ಲಕ್ಷ ರೂ.ಗಳನ್ನು ಕಾದಿರಿಸಲಾಯಿತು. ಈ 72 ಲಕ್ಷ ರೂ.ಗಳಲ್ಲಿ 66 ಲಕ್ಷ ರೂ.ಗಳನ್ನು ಕುಶಲ ಕಲೆಗಾರರ ತರಬೇತಿ ಯೋಜನೆಗೂ ಐದು ಲಕ್ಷ ರೂ.ಗಳನ್ನು ಅನನುಭವಿಗಳ (ಎಪ್ರೆಂಟಿಸ್) ಕಾನೂನಿನ ಪ್ರಕಾರ ಅನನುಭವಿಗಳ ತರಬೇತಿಗೂ ಒಂದು ಲಕ್ಷ ರೂ.ಗಳನ್ನು ಕೈಗಾರಿಕಾ ಕೆಲಸಗಾರರಿಗೆ ಒಪ್ಪತ್ತಿನ ತರಗತಿಗಳಿಗಾಗಿಯೂ ನಿಗದಿಗೊಳಿಸಲಾಗಿತ್ತು. ಐದನೇಯ ಪಂಚವಾರ್ಷಿಕ ಯೋಜನೆಯಲ್ಲಿ ಕಲ್ಬುರ್ಗಿ ಮತ್ತು ಬೆಂಗಳೂರಿನ ತಾಂತ್ರಿಕ ಕಾಲೇಜಿನಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಪ್ರಾರಂಭಿಸಲಾಯಿತು. ನಂದಿಹಳ್ಳಿಯಲ್ಲಿ ಒಂದು ಸ್ನಾತಕೋತ್ತರ ಕೇಂದ್ರವನ್ನು ತೆರೆಯಲಾಯಿತು. ಅಲ್ಲದೆ ಅನೇಕ ತಾಂತ್ರಿಕ ವಿಷಯಗಳಲ್ಲಿ ಸ್ನಾತಕೋತ್ತರ ಡಿಪ್ಲೋಮಾವನ್ನು ಪ್ರಾರಂಭಿಸಲಾಯಿತು. ಐದನೇಯ ಯೋಜನೆಯಲ್ಲಿ ಒಂದು ಮುದ್ರಣ ಶಾಲೆಯನ್ನು ಮತ್ತು ಒಂದು ಇನ್‌ಸ್ಟಿಟ್ಯೂಟ್ ಆಫ್ ಮಿಡ್ಲ್ ಮ್ಯಾನೇಜ್‌ಮೆಂಟ್ ಸಂಸ್ಥೆಯನ್ನು ಪ್ರಾರಂಭಿಸಲಾಯಿತು. ನಾಲ್ಕನೇಯ ಯೋಜನೆಯ ಕೊನೆಯ ವೇಳೆಗೆ ಬೇರೆ ಬೇರೆ ಹಂತಗಳಲ್ಲಿದ್ದ ವಿದ್ಯಾರ್ಥಿಗಳ ಪ್ರವೇಶದ ಸಂಖ್ಯೆ ಈ ರೀತಿ ಇದ್ದಿತು.

| | |
|---|---|
| ಸ್ನಾತಕೋತ್ತರ ತರಗತಿಗಳಲ್ಲಿ | 134 |
| ಪದವಿ ತರಗತಿಗಳಲ್ಲಿ | 2,230 |
| ಡಿಪ್ಲೋಮಾ ತರಗತಿಗಳಲ್ಲಿ | 3,500 |
| ಕಿರಿಯ ತಾಂತ್ರಿಕ ಶಾಲೆ ತರಗತಿಗಳಲ್ಲಿ | 360 |
| ಕೈಗಾರಿಕಾ ತರಬೇತಿ ಮತ್ತು ಇತರ ಸಂಸ್ಥೆಗಳಲ್ಲಿ | 6,800 |

1980ರ ವೇಳೆಗೆ ಇಡೀ ರಾಜ್ಯದಲ್ಲಿ ಮತ್ತು ರಾಷ್ಟ್ರದಲ್ಲಿ ಕೈಗಾರಿಕಾ ಚಟುವಟಿಕೆಗಳಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದುದರಿಂದ ಸೂಕ್ತ ತರಬೇತಿ ಹೊಂದಿದ ಇಂಜಿನಿಯರುಗಳು, ಡಿಪ್ಲೋಮಾ ಪದವೀಧರರು ಹಾಗೂ ಸ್ನಾತಕೋತ್ತರ ಪದವೀಧರರಿಗೆ ಸಾಕಷ್ಟು ಬೇಡಿಕೆ ಬಂತು. ಪಿ. ಯು. ಸಿ. ಯಲ್ಲಿ ತೇರ್ಗಡೆ ಹೊಂದಿ ಹೆಚ್ಚಿನ ಅಂಕಗಳನ್ನು ಪಡೆದು ತಾಂತ್ರಿಕ ತರಬೇತಿ ಪಡೆಯಲು ಅರ್ಹರಾದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. 1983ರಲ್ಲಿ ರಾಜ್ಯದಲ್ಲಿ ಪದವಿ ಹಂತದಲ್ಲಿ 41 ತಾಂತ್ರಿಕ ಕಾಲೇಜುಗಳು ಮತ್ತು ಒಂದು ಟೆಕ್ಸ್‌ಟೈಲ್ ಸಂಸ್ಥೆ ಇದ್ದುವು. ಅವುಗಳಲ್ಲಿ ಎರಡು ಸರ್ಕಾರಿ ಕಾಲೇಜುಗಳು, ಒಂದು ರೀಜನಲ್ ಕಾಲೇಜು, ಒಂದು ವಿಶ್ವವಿದ್ಯಾಲಯ ಕಾಲೇಜು, ಎಂಟು ಅನುದಾನ ಪಡೆಯುತ್ತಿದ್ದ ಕಾಲೇಜುಗಳು ಮತ್ತು ಉಳಿದವು (ಖಾಸಗಿ) ಅನುದಾನ ಪಡೆಯದ ಕಾಲೇಜುಗಳು. ನಾಲ್ಕು ತಾಂತ್ರಿಕ ಕಾಲೇಜುಗಳಲ್ಲಿ ಒಪ್ಪೊತ್ತಿನ ಶಿಕ್ಷಣ ತರಗತಿಗಳನ್ನು ನಡೆಸುತ್ತಿದ್ದರು ಮತ್ತು ನಾಲ್ಕು ಕಾಲೇಜುಗಳಲ್ಲಿ ಸ್ನಾತಕೋತ್ತರ ಶಿಕ್ಷಣ ತರಗತಿಗಳನ್ನು ನಡೆಸುತ್ತಿದ್ದರು. ರಾಜ್ಯದಲ್ಲಿ ಒಟ್ಟು 26 ಸರ್ಕಾರಿ ಪಾಲಿಟೆಕ್ನಿಕ್‌ಗಳು ಇದ್ದು ಅವುಗಳಲ್ಲಿ 18 ಪಾಲಿಟೆಕ್ನಿಕ್‌ಗಳು ತಾಂತ್ರಿಕ ಶಿಕ್ಷಣ ತರಗತಿಗಳನ್ನು ನಡೆಸುತ್ತಿದ್ದವು. ಮೂರು ಪಾಲಿಟೆಕ್ನಿಕ್‌ಗಳು ಮಹಿಳೆಯರಿಗಾಗಿ ಇದ್ದು ಉಳಿದವುಗಳಲ್ಲಿ ಒಂದು ನೇಯ್ಗೆ ತರಬೇತಿಗಾಗಿಯೂ (ಟೆಕ್ಸ್‌ಟೈಲ್ಸ್) ಇನ್ನೊಂದು ಕಲೆ ಮತ್ತು ಕರಕುಶಲ ಕಲೆಗಳ ಶಾಲೆಯಾಗಿಯೂ ಇದ್ದುವು; ಇದಲ್ಲದೆ ಒಂದು ಮುದ್ರಣ ತಾಂತ್ರಿಕ ಶಾಲೆಯಾಗಿಯೂ ಒಂದು ವಾಣಿಜ್ಯ ಕಲಿಕೆ ಸಂಸ್ಥೆಯಾಗಿಯೂ ಮತ್ತೂ ಒಂದು ಮಿಡ್ಲ್ ಮ್ಯಾನೇಜ್‌ಮೆಂಟ್ ಸಂಸ್ಥೆಯಾಗಿಯೂ ನಡೆಯುತ್ತಿದ್ದವು. ಆರು ಅನುದಾನ ಪಡೆಯುತ್ತಿದ್ದ ಪಾಲಿಟೆಕ್ನಿಕ್‌ಗಳು ಇದ್ದು ಅವುಗಳಲ್ಲಿ ಒಂದು 'ಹೊರಾಲಜಿ'ಯದು. ಆರು ಪ್ರೌಢಶಾಲೆಗಳಲ್ಲಿ ತಾಂತ್ರಿಕ ತರಬೇತಿ ಇತ್ತು. ತಾಂತ್ರಿಕ ಶಿಕ್ಷಣಕ್ಕಾಗಿ 15.5 ಕೋಟಿ ರೂ.ಗಳನ್ನು 6ನೇಯ ಯೋಜನೆಯಲ್ಲಿ ನಿಗದಿಗೊಳಿಸಲಾಗಿದೆ. ಕುಶಲ ಕರ್ಮಿಗಳ ತರಬೇತಿಗಾಗಿ ಮಂಡ್ಯ ಮತ್ತು ಚಿಕ್ಕಮಗಳೂರು ಜಿಲ್ಲೆಗಳನ್ನು ಬಿಟ್ಟು ಉಳಿದ 17 ಜಿಲ್ಲೆಗಳಲ್ಲಿ 18 ಕೈಗಾರಿಕಾ ತರಬೇತಿ ಸಂಸ್ಥೆಗಳು ಇದ್ದವು. ಅಲ್ಲದೆ ಇದೇ ಯೋಜನೆಯಲ್ಲಿ ಬೆಂಗಳೂರು, ಮೈಸೂರು, ಭದ್ರಾವತಿ, ಬಳ್ಳಾರಿ ಮತ್ತು ದಾವಣಗೆರೆಗಳಲ್ಲಿ ಚಾಲಕರನ್ನು ತರಬೇತಿಗೊಳಿಸಲು ಮೋಟಾರ್ ಚಾಲಕ ಶಾಲೆಗಳನ್ನು ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಹೊಂದಿಕೊಂಡಂತೆ ಪ್ರಾರಂಭಿಸುವ ಯೋಜನೆ ಇದ್ದಿತು. 1981ರ ವೇಳೆಗೆ ರಾಜ್ಯದಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ತರಬೇತಿ ಸೌಲಭ್ಯವನ್ನು ಪಡೆಯುತ್ತಿದ್ದ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಸುಮಾರು 7,000 ಇತ್ತು. ಬೆಂಗಳೂರು ಮತ್ತು ಕೋಲಾರ ಚಿನ್ನದ ಗಣಿ ಪ್ರದೇಶದ ಕೈಗಾರಿಕಾ ತರಬೇತಿ ಶಾಲೆಗಳಲ್ಲಿ ತಲಾ 40 ಸ್ಥಾನಗಳಂತೆ ಸಂಜೆ ತರಗತಿಗಳನ್ನು ಕೈಗಾರಿಕಾ ಕೆಲಸಗಾರರಿಗಾಗಿ

ತೆರೆಯಲಾಗಿದೆ. ಸದ್ಯಕ್ಕೆ ಅಂದರೆ 1-1-1983ರ ವೇಳೆಗೆ ಈ ಕೆಳಕಂಡ ಇಲಾಖೆಗಳು ರಾಜ್ಯದಲ್ಲಿ ತಾಂತ್ರಿಕ ಹಾಗೂ ಕೈಗಾರಿಕಾ ಶಿಕ್ಷಣವನ್ನು ನೀಡುತ್ತಿವೆ.

1) ತಾಂತ್ರಿಕ ಶಿಕ್ಷಣ ಇಲಾಖೆ, 2) ಉದ್ಯೋಗ ಮತ್ತು ತರಬೇತಿ ಇಲಾಖೆ, 3) ವೃತ್ತಿ ಶಿಕ್ಷಣ ಇಲಾಖೆ, 4) ಗಣಿ ಶಿಕ್ಷಣ ಇಲಾಖೆ, 5) ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, 6) ಸಾರ್ವಜನಿಕ ಶಿಕ್ಷಣ ಇಲಾಖೆ, ಮತ್ತು 7) ರಾಜ್ಯದಲ್ಲಿನ ಐದು ವಿಶ್ವವಿದ್ಯಾನಿಲಯಗಳು. ಇವಲ್ಲದೆ ಕೈಗಾರಿಕಾ ಮತ್ತು ತಾಂತ್ರಿಕ ಶಿಕ್ಷಣಕ್ಕಾಗಿ ರಾಜ್ಯದಲ್ಲಿ ಇನ್ನು ಹಲವಾರು ಸಂಸ್ಥೆಗಳು ನೆರವಾಗುತ್ತಿವೆ. ಫೋರ್‌ಮೆನ್ ತರಬೇತಿ ಸಂಸ್ಥೆ, ಪವರ್ ಸಿಸ್ಟಮ್ಸ್ ತರಬೇತಿ ಸಂಸ್ಥೆ ರೀಜನಲ್ ವೊಕೇಶನಲ್ ಇನ್ಸ್‌ಟಿಟ್ಯೂಟ್ ಫಾರ್ ವಿಮೆನ್, ಹಾಟ್‌ಲೈನ್ ಟ್ರೈನಿಂಗ್ ಸೆಂಟರ್ ಇವೆಲ್ಲವೂ ಬೆಂಗಳೂರಿನಲ್ಲಿದ್ದು ಭಾರತ ಸರ್ಕಾರದ್ದಾಗಿವೆ. ಭಾರತೀಯ ವಿಜ್ಞಾನ ಸಂಸ್ಥೆ, ರಾಷ್ಟ್ರೀಯ ಉತ್ಪಾದನಾ ಮಂಡಳಿ ಮತ್ತು ಇನ್ಸ್‌ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಬೆಂಗಳೂರು, ಖಾಸಗೀ ಸಂಸ್ಥೆಗಳಾದ ಧಾರವಾಡದ ಸೆಟ್ಟೂರು ತಾಂತ್ರಿಕ ತರಬೇತಿ ಪ್ರತಿಷ್ಠಾನ, ಮಂಗಳೂರಿನ ಹೆಬಿಕ್ ತಾಂತ್ರಿಕ ತರಬೇತಿ ಸಂಸ್ಥೆ, ಬೆಂಗಳೂರಿನಲ್ಲಿರುವ ಭಾರತೀಯ ತಾಂತ್ರಿಕ ಸಂಸ್ಥೆ (ಟೆಕ್ನಿಕಲ್ ಇನ್ಸ್‌ಟಿಟ್ಯೂಟ್) ಮತ್ತು ಅಂಕಿ ಅಂಶಗಳ ನಿಗಮ ಇವು ಮುಂತಾದವನ್ನು ಹೆಸರಿಸಬಹುದು.

### ತಾಂತ್ರಿಕ ಶಿಕ್ಷಣ ಇಲಾಖೆ

1981-82ರಲ್ಲಿದ್ದಂತೆ ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನಕ್ಕೆ ಒಟ್ಟು 98 ಸಂಸ್ಥೆಗಳು ಒಳಪಟ್ಟಿದ್ದು, ಅವುಗಳಲ್ಲಿ 43 ಪದವಿ ತರಗತಿಗಳಿಗಾಗಿಯೂ ಮಹಿಳೆಯರಿಗಾಗಿ ಇದ್ದ ನಾಲ್ಕೂ ಸೇರಿ 49 ಡಿಪ್ಲೋಮಾ ತರಬೇತಿ ಶಿಕ್ಷಣಗಳಿಗಾಗಿಯೂ ಮತ್ತು ಆರು ಹೈಸ್ಕೂಲು ಮಟ್ಟದವಾಗಿಯೂ ಇದ್ದವು. ಇದೇ ವರ್ಷ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ದಾಖಲಾಗಿದ್ದ ವಿದ್ಯಾರ್ಥಿಗಳ ಸಂಖ್ಯೆ ಈ ರೀತಿ ಇತ್ತು : ಪದವಿ ತರಗತಿಗಳಲ್ಲಿ 30,242, ಸ್ನಾತಕ ಡಿಪ್ಲೋಮಾ ತರಗತಿಗಳಲ್ಲಿ 89, ಡಿಪ್ಲೋಮಾ ತರಗತಿಗಳಲ್ಲಿ ಮತ್ತು 13,502 ಮತ್ತು ಕಿರಿಯ ತಾಂತ್ರಿಕ ಶಾಲೆಗಳಲ್ಲಿ 934. ಮೊದಲ ನೇಯ ವರ್ಷದಲ್ಲಿ ಈ ತರಗತಿಗಳಲ್ಲಿ ಒಟ್ಟು ಪ್ರವೇಶದ ಸಂಖ್ಯೆ ಈ ರೀತಿ ಇದ್ದಿತು : ಡಿಗ್ರಿ ತರಗತಿಗಳಲ್ಲಿ 8,753, ಡಿಪ್ಲೋಮಾ ತರಗತಿಗಳಲ್ಲಿ 5,650 ಮತ್ತು ಕಿರಿಯ ತಾಂತ್ರಿಕ ಶಾಲೆಗಳಲ್ಲಿ 260. ಈ ಇಲಾಖೆಯು ತಾಂತ್ರಿಕ ಶಿಕ್ಷಣ ನಿರ್ದೇಶಕರ ಅಧೀನದಲ್ಲಿದ್ದು ಇದೊಂದು ಹಿರಿಯ ಇಲಾಖೆಯು (ಮೇಜರ್ ಹೆಡ್). ಅವರ ಕಛೇರಿಯಲ್ಲಿ ಇಬ್ಬರು ಜಂಟಿ ನಿರ್ದೇಶಕರಿದ್ದು ಒಬ್ಬರು ಆಡಳಿತ ವಿಭಾಗದಲ್ಲೂ, ಮತ್ತೊಬ್ಬರು ಅನನುಭವಿ (ಎಪ್ರೆಂಟಿಸ್) ತರಬೇತಿ ಯೋಜನೆಯಲ್ಲೂ ಸಹಾಯ ಮಾಡುತ್ತಾರೆ. ನಾಲ್ವರು ಉಪನಿರ್ದೇಶಕರಿದ್ದು ಒಬ್ಬರು ಯೋಜನಾ ವಿಭಾಗಕ್ಕೂ, ಒಬ್ಬರು ತನಿಖಾ ವಿಭಾಗಕ್ಕೂ, ಒಬ್ಬರು ಪರೀಕ್ಷಾ ವಿಭಾಗಕ್ಕೂ, ಮತ್ತು ಇನ್ನೊಬ್ಬರು 'ಮ್ಯಾನ್ಯುವಲ್' ವಿಭಾಗಕ್ಕೂ ಇರುತ್ತಾರೆ. ಇದಲ್ಲದೆ ಒಬ್ಬರು ಆಡಳಿತಾಧಿಕಾರಿ, ಒಬ್ಬರು ತಾಂತ್ರಿಕ ಸಂಪರ್ಕಾಧಿಕಾರಿ, ನಾಲ್ವರು ಸಹಾಯಕ ನಿರ್ದೇಶಕರು, ಮೂರು ಜನ ಲೆಕ್ಕ ಪತ್ರಾಧಿಕಾರಿಗಳು ಮತ್ತು ಇತರ ಸಿಬ್ಬಂದಿ ವರ್ಗದವರು ಇಲ್ಲಿ ಇರುತ್ತಾರೆ. ಪ್ರತೀಯೊಂದು ಪಾಲಿಟೆಕ್ನಿಕ್‌ನಲ್ಲೂ ಒಬ್ಬರು ಪ್ರಿನ್ಸಿಪಾಲರಿದ್ದು ಅವರಿಗೆ ಸಹಾಯಕರಾಗಿರುವಂತೆ ಪ್ರತೀಯೊಂದು ವಿಭಾಗದಲ್ಲೂ ವಿಭಾಗ ಮುಖ್ಯಸ್ಥರು ಮತ್ತು ನೋಂದಣಿ ಅಧಿಕಾರಿ (ರಿಜಿಸ್ಟ್ರಾರ್) ಮತ್ತು ಇತರ ಆಡಳಿತ ಸಿಬ್ಬಂದಿಯವರು ಇರುತ್ತಾರೆ. 1981-82ರಲ್ಲಿ ಪದವಿ ಶಿಕ್ಷಣದ ಮಟ್ಟದಲ್ಲಿ ಒಟ್ಟು 1,289 ಉಪಾಧ್ಯಾಯರುಗಳೂ, ಡಿಪ್ಲೋಮಾ ಮಟ್ಟದಲ್ಲಿ 755 ಉಪಾಧ್ಯಾಯರುಗಳೂ, ಕಿರಿಯ ತಾಂತ್ರಿಕ ಶಾಲಾ ಮಟ್ಟದಲ್ಲಿ 51 ಉಪಾಧ್ಯಾಯರುಗಳೂ, 635 ಸಿಬ್ಬಂದಿ ವರ್ಗದವರು ಮತ್ತು 412 ಇತರ ನೌಕರರೂ ಇದ್ದರು. ರಾಜ್ಯದಲ್ಲಿನ ವಿವಿಧ ಸರಕಾರೀ ಹಾಗೂ ಅನುದಾನ ಪಡೆಯುವ ತಾಂತ್ರಿಕ ಕಾಲೇಜುಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿರ್ಧರಿಸುವುದು ಈ ಇಲಾಖೆಯ ಜವಾಬ್ದಾರಿಯಾಗಿದೆ. ಆದರೆ ಖಾಸಗಿ ತಾಂತ್ರಿಕ ಕಾಲೇಜುಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿರ್ಧರಿಸುವುದನ್ನು ಅವುಗಳಿಗೇ ಬಿಡಲಾಗಿದೆ. (ಇತ್ತೀಚೆಗೆ ಇವುಗಳಲ್ಲೂ ಸಾಕಷ್ಟು ಸಂಖ್ಯೆಯಲ್ಲಿ ಇಲಾಖೆ ಆಯ್ಕೆ ಮಾಡಿದ ವಿದ್ಯಾರ್ಥಿಗಳಿಗೆ ಅವಕಾಶ ನೀಡುವಂತೆ ನಿಯಮ ಮಾಡಲಾಗಿದೆ).

ತಾಂತ್ರಿಕ ಶಿಕ್ಷಣ ಇಲಾಖೆ ಕಚೇರಿಯಲ್ಲಿ ಒಂದು 'ಮಾನವ ಶಕ್ತಿಯ' ವಿಭಾಗ ('ಮ್ಯಾನ್ ಪವರ್ ಸೆಲ್') ಎಂಬ ಅಂಗವಿದೆ. ತಾಂತ್ರಿಕ ಸಂಸ್ಥೆಗಳ ಪ್ರವೇಶ ಸಂಖ್ಯೆಯ ಮಾಹಿತಿಯನ್ನು ಸಂಗ್ರಹಿಸುವುದು, ಶಿಕ್ಷಣ ಸಂಸ್ಥೆಗಳಲ್ಲಿ ಸೇರಿರುವ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ಹಾಗೂ ತೇರ್ಗಡೆಹೊಂದಿರುವ ವಿದ್ಯಾರ್ಥಿಗಳ ಸಂಖ್ಯೆ ಇವುಗಳ ವಿವರಗಳನ್ನು ಸಂಗ್ರಹಿಸುವುದು ಮತ್ತು ಶಿಕ್ಷಣ ಸಂಸ್ಥೆಗಳಿಂದ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ತರಬೇತಿ ಹಾಗೂ ಉದ್ಯೋಗ ಇವು ದೊರಕುವುದಕ್ಕೆ ಮಾರ್ಗದರ್ಶನ ಮಾಡುವುದು, ಈ ಉದ್ದೇಶಗಳಿಂದ ಅದು ಕಾರ್ಯ ನಿರ್ವಹಿಸುತ್ತಿದೆ. ಅಲ್ಲದೆ ವಿವಿಧ ಕ್ಷೇತ್ರಗಳಲ್ಲಿ ಬೇಕಾಗಬಹುದಾದ ಮನುಷ್ಯ ಶಕ್ತಿಯನ್ನು ಅಂದಾಜು ಮಾಡುವುದು ಈ ವಿಭಾಗದ ಒಂದು ಕೆಲಸವಾಗಿದೆ. ವಿವಿಧ ಡಿಪ್ಲೋಮಾ ಪರೀಕ್ಷೆಗಳನ್ನು ಮತ್ತು ಹೊಲಿಗೆ ಪರೀಕ್ಷೆಯನ್ನು ನಡೆಸುವುದು ರಾಜ್ಯದ ತಾಂತ್ರಿಕ ಶಿಕ್ಷಣ ಮಂಡಳಿಯ ಜವಾಬ್ದಾರಿಯಾಗಿದೆ. ಆದರೆ ಪದವಿ ತರಗತಿಗಳಿಗೆ ವಿಶ್ವವಿದ್ಯಾಲಯಗಳು ಪರೀಕ್ಷೆಗಳನ್ನು ನಡೆಸುತ್ತವೆ ಮತ್ತು ಕಿರಿಯ ತಾಂತ್ರಿಕ ಶಾಲೆಗಳಿಗೆ ಕರ್ನಾಟಕ ರಾಜ್ಯ ಸೆಕೆಂಡರಿ ಶಿಕ್ಷಣ ಪರೀಕ್ಷಾ ಮಂಡಳಿ ಪರೀಕ್ಷೆಗಳನ್ನು ನಡೆಸುತ್ತದೆ. ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಲಿಯ ಅಧ್ಯಕ್ಷ

ರಾಗಿ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರೇ ಕಾರ್ಯ ನಿರ್ವಹಿಸುತ್ತಾರೆ.

ಗಣಿ ಶಿಕ್ಷಣ ಇಲಾಖೆ : 1957-58ರಲ್ಲಿ ಗಣಿ ಶಿಕ್ಷಣ ಇಲಾಖೆಯ ವತಿಯಿಂದ ಪ್ರಾರಂಭವಾದ ಗಣಿ ಶಾಲೆಯು ಗಣಿ ಶಿಕ್ಷಣದಲ್ಲಿ ತರಬೇತಿಯನ್ನು ಕೊಡುತ್ತಿದೆ. ಮೊದಲು ಈ ಶಾಲೆಯು ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿ ಇತ್ತು. 1974ರಲ್ಲಿ ಈ ಇಲಾಖೆಯು ಪ್ರತ್ಯೇಕವಾಗಿ ಈಗ ಗಣಿ ಶಾಲೆಯು ಡೆಪ್ಯುಟಿ ಡೈರೆಕ್ಟರ್ ಒಬ್ಬರ ಅಧೀನದಲ್ಲಿ ಇದೆ. 1981-82ರಲ್ಲಿ ಈ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ಡಿಪ್ಲೋಮಾ ತರಗತಿಯಲ್ಲಿ ಸ್ನಾತಕ ಡಿಪ್ಲೋಮಾದ ಎಂಟು ವಿದ್ಯಾರ್ಥಿಗಳೂ ಸೇರಿ 245 ಇತ್ತು. ಗಣಿ ಶಿಕ್ಷಣ ಶಾಲೆಯು ಗಣಿಗಾರಿಕೆ ಮತ್ತು ಗಣಿ ಪರಿವೀಕ್ಷಣೆಯಲ್ಲಿ ಮೂರು ವರ್ಷದ ಡಿಪ್ಲೋಮಾ ಶಿಕ್ಷಣವನ್ನು ನೀಡುವುದಲ್ಲದೆ ಸ್ನಾತಕ ಡಿಪ್ಲೋಮಾ ಕೋರ್ಸುಗಳನ್ನು ನಡೆಸು ತ್ತದೆ. ಗಣಿ ತಾಂತ್ರಿಕತೆಯಲ್ಲಿ ಪದವಿ ತರಬೇತಿ ಶಿಕ್ಷಣವನ್ನು ಪ್ರಾರಂಭಿಸುವ ಒಂದು ಯೋಜನೆ ಇದೆ.

ರಾಜ್ಯದಲ್ಲಿನ ಕರಕುಶಲ ತರಬೇತಿ ಸಂಸ್ಥೆಯನ್ನು ಕೈಗಾರಿಕಾ ಹಾಗೂ ವಾಣಿಜ್ಯ ಇಲಾಖೆಯು ನಡೆಸುತ್ತದೆ. ಬಡಗಿತನ, ಕಮ್ಮಾರಿಕೆ, ಕುಂಬಾರಿಕೆ, ಚಮ್ಮಾರಿಕೆ, ಲೋಹಗಾರಿಕೆ, ನೇಯ್ಗೆ ಮತ್ತು ಮರದ ಗೊಂಬೆ ತಯಾರಿ ಮುಂತಾದ ವೃತ್ತಿಗಳಲ್ಲಿ ಈ ಕರಕುಶಲ ಶಾಲೆಗಳಲ್ಲಿ ತರಬೇತಿ ನೀಡಲಾಗುತ್ತದೆ. ಈಗ (1983) ರಾಜ್ಯದಲ್ಲಿ 21 ಕೇಂದ್ರಗಳು, ಎಂಟು ಶಾಖೆಗಳು ಮತ್ತು 24 ಇತರ ಕೇಂದ್ರಗಳು ಸೇರಿದಂತೆ 53 ಕರಕುಶಲ ತರಬೇತಿ ಸಂಸ್ಥೆಗಳು ಇವೆ. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯು 24 ಇತರ ಕೇಂದ್ರಗಳಲ್ಲಿ ಒಂದಾಗಿದೆ. ಆಯಾ ವೃತ್ತಿಯ ಮೇಲೆ ಅವಲಂಬಿತವಾಗಿ ಒಂದು, ಎರಡು ಹಾಗೂ ಐದು ವರ್ಷಗಳ ತರಬೇತಿ ಶಿಕ್ಷಣ ನೀಡಲಾಗುತ್ತದೆ. ಶಿಕ್ಷಣ ಪಡೆಯುವ ಅಭ್ಯರ್ಥಿಗಳಿಗೆ ತಿಂಗಳಿಗೆ 40 ರೂ.ಗಳಂತೆ ಸ್ಟೈಪೆಂಡ್ ನೀಡಲಾಗುವುದು. ಏಳು ವೃತ್ತಿಪೂರ್ವ ಶಿಕ್ಷಣ ತರಬೇತಿ ಕೇಂದ್ರಗಳನ್ನು ವಿಜ್ಞಾನ ಶಿಕ್ಷಣ ಸಂಶೋಧನೆ ಹಾಗೂ ತರಬೇತಿ ಇಲಾಖೆಯು ಆನೇಕಲ್, ಚಳ್ಳಕೆರೆ, ಕೋಟ, ಕೊಪ್ಪಳ, ಆಲಮಟ್ಟಿ, ಮಳವಳ್ಳಿ ಮತ್ತು ಹಂಸಬಾವಿಗಳಲ್ಲಿ ನಡೆಸುತ್ತಿವೆ. ಹಂಸಬಾವಿಯ ಕೇಂದ್ರವು ವಿದ್ಯಾರ್ಥಿನಿಯರಿಗಾಗಿ ಮೀಸಲಾಗಿದೆ. ಈ ಶಾಲೆಗಳು 10ರಿಂದ 16 ವರ್ಷಗಳೊಳಗಿನ ಶಾಲೆ ಬಿಟ್ಟ ವಿದ್ಯಾರ್ಥಿಗಳಿಗಾಗಿ ಕೈಕೆಲಸ ಹಾಗೂ ಸಾಮಾನ್ಯ ಶಿಕ್ಷಣವನ್ನು ನೀಡಲು ಮೀಸಲಾಗಿವೆ. ಮೂರನೇಯ ವರ್ಷದ ಕೊನೆಯಲ್ಲಿ ಪಬ್ಲಿಕ್ ಪರೀಕ್ಷೆಯನ್ನು ನಡೆಸುತ್ತದೆ. ಕೇಂದ್ರ ಸರ್ಕಾರದಿಂದ ಯುನಿಸೆಫ್‌ನ ನೆರವಿನೊಂದಿಗೆ 1963-64ರಲ್ಲಿ ಈ ಕೇಂದ್ರಗಳನ್ನು ಪ್ರಾರಂಭಿಸಲಾಯಿತು. ನಂತರ ರಾಜ್ಯ ಶಿಕ್ಷಣ ಇಲಾಖೆಯು ಈ ಕೇಂದ್ರಗಳನ್ನು ತನ್ನ ವಶಕ್ಕೆ ಪಡೆಯಿತು. 1981-82ರಲ್ಲಿ ಈ ಕೇಂದ್ರಗಳಲ್ಲಿದ್ದ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ 265.

ಕರ್ನಾಟಕದಲ್ಲಿ ಇರುವ ಐದು ವಿಶ್ವವಿದ್ಯಾಲಯಗಳು ಪದವಿ ಮಟ್ಟದಲ್ಲಿ ಹಾಗೂ ಸ್ನಾತಕೋತ್ತರ ಪದವಿ ಮಟ್ಟದಲ್ಲಿ ತಾಂತ್ರಿಕ ಶಿಕ್ಷಣವನ್ನು ನೀಡುತ್ತಿವೆ. ಕಲ್ಬುರ್ಗಿ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿರುವ ನಂದಿಹಳ್ಳಿಯಲ್ಲಿರುವ ಸ್ನಾತಕೋತ್ತರ ಕೇಂದ್ರಕ್ಕಾಗಿ 50 ಲಕ್ಷ ರೂ.ಗಳನ್ನು ಮೀಸಲಾಗಿರಿಸಿದೆ. ಆರನೇಯ ಯೋಜನೆಯಲ್ಲಿ ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ ತಾಂತ್ರಿಕ ಶಿಕ್ಷಣದ ಅಭಿವೃದ್ಧಿಗಾಗಿ ಎರಡು ಲಕ್ಷ ರೂ.ಗಳನ್ನು ಮೀಸಲಿಡಲಾಗಿದೆ. ಹಾಗೆಯೇ ಬೆಂಗಳೂರಿನ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯುಬಿಲಿ ತಾಂತ್ರಿಕ ಸಂಸ್ಥೆಯಲ್ಲಿ ಟೆಕ್ಸ್‌ಟೈಲ್ಸ್ ವಿಭಾಗದಲ್ಲಿ ಸ್ನಾತಕೋತ್ತರ ವಿಭಾಗವನ್ನು ಪ್ರಾರಂಭಿಸುವುದಕ್ಕಾಗಿ 15 ಲಕ್ಷ ರೂ.ಗಳನ್ನು ಒದಗಿಸಲಾಗಿದೆ. ಅಲ್ಲದೆ ಚೆನ್ನಾಗಿ ಅಭಿವೃದ್ಧಿ ಹೊಂದಿದ ತಾಂತ್ರಿಕ ಕಾಲೇಜುಗಳಲ್ಲಿ ಸ್ನಾತಕೋತ್ತರ ವಿಭಾಗ ವನ್ನು ತೆರೆಯುವುದಕ್ಕಾಗಿ 40 ಲಕ್ಷ ರೂ. ಒದಗಿಸಲಾಗಿದೆ.

ಫೋರ್‌ಮನ್ ತರಬೇತಿ ಸಂಸ್ಥೆ, ಬೆಂಗಳೂರು : ಕಿರಿಯ ಹಾಗೂ ಮಧ್ಯಮಮಟ್ಟದ ಉಸ್ತುವಾರಿ ಸಿಬ್ಬಂದಿ ಯನ್ನು ತರಬೇತಿಗೊಳಿಸುವುದಕ್ಕಾಗಿ ಬೆಂಗಳೂರಿನ ಫೋರ್‌ಮೆನ್ ತರಬೇತಿ ಸಂಸ್ಥೆಯು ಭಾರತದಲ್ಲಿ ಏಕಮಾತ್ರ ಸಂಸ್ಥೆಯಾಗಿದೆ. ಫೆಡರಲ್ ರಿಪಬ್ಲಿಕ್ ಆಫ್ ಜರ್ಮನಿಯಲ್ಲಿನ ಬೇಡನ್ ವುರ್ಟೆಂಬರ್ಗ್ ರಾಜ್ಯದ ಸಹಯೋಗದೊಂದಿಗೆ, ಕಾರ್ಮಿಕ ಇಲಾಖೆಯ ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದಡಿ ಯಲ್ಲಿ ಭಾರತ ಸರ್ಕಾರವು 1971ರಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಿತು. ಈ ಸಂಸ್ಥೆಯಲ್ಲಿ ಸಾಮರ್ಥ್ಯದ ಅಭಿವೃದ್ಧಿ, ತಾಂತ್ರಿಕ ನಿಪುಣತೆ ಮತ್ತು ಜನರೊಡನೆ ವ್ಯವಹರಿಸುವುದು, ಫೋರ್‌ಮೆನ್‌ಗಳಿಗೆ ತರಬೇತಿ ಕೊಡುವುದು, ಇವೇ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ತರಬೇತಿ ಕೊಡಲಾಗುತ್ತದೆ. ಒಂದು ವರ್ಷದ ರಾಷ್ಟ್ರೀಯ ಫೋರ್‌ಮೆನ್‌ಶಿಪ್ ತರಬೇತಿ ಮತ್ತು ಎರಡು ವರ್ಷದ ರಾಷ್ಟ್ರೀಯ ಫೋರ್‌ಮೆನ್‌ಶಿಪ್ ತರಬೇತಿಯ ಜೊತೆಗೆ ಒಂದು ವರ್ಷದಲ್ಲಿ ಸುಮಾರು 25 ಅಲ್ಪಾವಧಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಈ ತರಬೇತಿ ಅನುಕೂಲತೆಗಳನ್ನು ಅನೇಕ ಸರ್ಕಾರಿ ವಲಯದ ಕೈಗಾರಿಕೆಗಳು ಪಡೆಯುತ್ತಿವೆ.

ಕೇಂದ್ರ ವಿದ್ಯುತ್ ಸಂಶೋಧನಾ ಸಂಸ್ಥೆ, ಬೆಂಗಳೂರು: 1960ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಈ ಸಂಸ್ಥೆಯು ವಿದ್ಯುತ್‌ಶಕ್ತಿಯ ಉಪಯೋಗ ಹಾಗೂ ವಿದ್ಯುತ್‌ಶಕ್ತಿಯು ಕೈಗಾರಿಕೆಗಳಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಅಭ್ಯಾಸ ಮಾಡಲು ಹಾಗೂ ಅವುಗಳ ನಿವಾರಣೆಗೆ ಸಂಶೋಧನೆ ನಡೆಸಲು

ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಕೇಂದ್ರ ಸರಕಾರದ ನೀರಾವರಿ ಹಾಗೂ ವಿದ್ಯುತ್ ಮಂತ್ರಾಲಯದ ಆಡಳಿತಕ್ಕೆ ಸೇರಿದ ಕೇಂದ್ರ ಜಲ ಮತ್ತು ವಿದ್ಯುತ್ ಆಯೋಗದ ಆಡಳಿತದ ವ್ಯಾಪ್ತಿಗೆ ಈ ಸಂಸ್ಥೆಯು ಬರುತ್ತದೆ. ವಿಶ್ವಸಂಸ್ಥೆಯ ವಿಶೇಷ ನಿಧಿಯಿಂದ ಯುನೆಸ್ಕೋ ಮೂಲಕ ಈ ಯೋಜನೆ ನಡೆಯುತ್ತಿದೆ. ಈ ಸಂಸ್ಥೆಯು ಕೊಡುತ್ತಿರುವ ಸೌಲಭ್ಯಗಳನ್ನು ಅನೇಕ ಕಾರ್ಖಾನೆಗಳು ಈಗಾಗಲೇ ಉಪಯೋಗಿಸಿಕೊಳ್ಳುತ್ತಿವೆ.

ಹಾಟ್‌ಲೈನ್ ತರಬೇತಿ ಕೇಂದ್ರ : ವಿದ್ಯುತ್‌ಶಕ್ತಿ ಮಂಡಳಿ ಹಾಗೂ ಇತರ ಸರಬರಾಜು ಸಂಸ್ಥೆಗಳ ಸಿಬ್ಬಂದಿಗೆ ಸಜೀವ ವಿದ್ಯುತ್‌ತಂತಿ ಮಾರ್ಗಗಳ ನಿರ್ವಹಣೆ ವಿಧಾನಗಳನ್ನು ತಿಳಿಸುವುದಕ್ಕಾಗಿ ಕೇಂದ್ರ ಸರಕಾರದ ಕೇಂದ್ರ ವಿದ್ಯುತ್ ಪ್ರಾಧಿಕಾರವು ಬೆಂಗಳೂರಿನಲ್ಲಿ 1975ರಲ್ಲಿ ಹಾಟ್‌ಲೈನ್ ತರಬೇತಿ ಕೇಂದ್ರವನ್ನು ಪ್ರಾರಂಭಿಸಿತು. 1975ರ ಆಗಸ್ಟ್-ನವೆಂಬರ್ ಅವಧಿಯಲ್ಲಿ ಹಾಟ್‌ಸ್ಟಿಕ್ ವಿಧಾನದಿಂದ ಸಜೀವ ಮಾರ್ಗಗಳ ತಂತ್ರಗಳನ್ನರಿಯುವ ಮೊದಲನೇಯ ತರಬೇತಿ ಶಿಕ್ಷಣವನ್ನು ನಡೆಸಲಾಯಿತು. ಈ ತರಬೇತಿಯನ್ನು ವಿದ್ಯುತ್‌ಮಂಡಳಿಗಳ ಮತ್ತು ಇತರ ಸರಬರಾಜು ಸಂಸ್ಥೆಗಳ ಸಿಬ್ಬಂದಿಗೆ ನೀಡಲಾಯಿತು. 1981ರ ವೇಳೆಗೆ 244 ಸಿಬ್ಬಂದಿ ವರ್ಗದವರಿಗೆ ತರಬೇತಿ ಕೊಡಲಾಯಿತು.

ವಿದ್ಯುಜ್ಜಾಲ ತರಬೇತಿ ಸಂಸ್ಥೆ, ಬೆಂಗಳೂರು : ಅತಿ ಶೀಘ್ರ ವೇಗದಲ್ಲಿ ವಿಸ್ತಾರಗೊಳ್ಳುತ್ತಿರುವ ವಿದ್ಯುಜ್ಜಾಲ ವ್ಯವಸ್ಥೆಗೆ ಜನರನ್ನು ತಯಾರುಗೊಳಿಸಲು ಈ ಸಂಸ್ಥೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಲಾಯಿತು. 1972ರಲ್ಲಿ ಪ್ರಾರಂಭಿಸಲಾದ ಈ ಸಂಸ್ಥೆಗೆ ಒತ್ತಡ ಹಂಚಿಕೆ ತರಬೇತಿ ಸಂಸ್ಥೆ (ಲೋಡ್ ಡಿಸ್‌ಪ್ಯಾಚ್ ಟ್ರೈನಿಂಗ್ ಇನ್ಸ್‌ಟಿಟ್ಯೂಟ್) ಎಂದು ಹೆಸರಿತ್ತು, ಮತ್ತು 1975ರಲ್ಲಿ ವಿದ್ಯುಜ್ಜಾಲ ತರಬೇತಿ ಕೇಂದ್ರ ಎಂದು ಪುನರ್ನಾಮಕರಣ ಮಾಡಲಾಯಿತು. ವಿದ್ಯುತ್‌ಶಕ್ತಿ ಸರಬರಾಜು ಇಲಾಖೆಗಳ ಅವಶ್ಯಕತೆಗಳನ್ನು ಪೂರೈಸುವುದಕ್ಕಾಗಿ ಈ ಸಂಸ್ಥೆಯು ಅನೇಕ ತರಬೇತಿ ಕೋರ್ಸ್‌ಗಳನ್ನು ನಡೆಸುತ್ತಿದೆ.

ಮಹಿಳೆಯರ ಪ್ರಾದೇಶಿಕ ವೃತ್ತಿ ಶಿಕ್ಷಣ ತರಬೇತಿ ಸಂಸ್ಥೆ : ಸ್ವೀಡಿಷ್ ಅಂತರರಾಷ್ಟ್ರೀಯ ಅಭಿವೃದ್ಧಿ ಏಜನ್ಸಿ ಮತ್ತು ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ ಇವುಗಳ ಜಂಟಿ ಸಹಯೋಗದೊಂದಿಗೆ ಕೇಂದ್ರ ಸರಕಾರದ ಉದ್ಯೋಗ ಮತ್ತು ತರಬೇತಿ ಇಲಾಖೆಯು ರೀಜನಲ್ ವೊಕೇಶನಲ್ ಟ್ರೇನಿಂಗ್ ಇನ್ಸ್‌ಟಿಟ್ಯೂಟ್ ಫಾರ್ ವಿಮೆನ್ ಅನ್ನು 1977ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭಿಸಿದೆ. ಮಹಿಳೆಯರಿಗೆ ಕುಶಲ ಕಲೆಗಳಲ್ಲಿ ಮೂಲ ಹಾಗೂ ಉನ್ನತ ಕುಶಲ ತರಬೇತಿಯನ್ನು ಕೊಡುವುದಕ್ಕಾಗಿ ಈ ಸಂಸ್ಥೆ ಪ್ರಾರಂಭವಾಗಿದೆ. ಇದರಲ್ಲಿ ಎರಡು ವರ್ಷಾವಧಿಯ ಯಾಂತ್ರಿಕ (ಸಾಮಾನ್ಯ), ಎಲೆಕ್ಟ್ರಾನಿಕ್ಸ್ ಯಾಂತ್ರಿಕ ಉಪಕರಣ ತರಬೇತಿ ಶಿಕ್ಷಣ, ಒಂದು ವರ್ಷದ ಕಚೇರಿ ಸಹಾಯಕರ ಶಿಕ್ಷಣ ಮತ್ತು ಸಿದ್ಧ ಉಡುಪು ತಯಾರಿಕೆ—ಇವೇ ಮೊದಲಾದ ತರಬೇತಿ ಶಿಕ್ಷಣವನ್ನು ಈ ಸಂಸ್ಥೆಯಲ್ಲಿ ನಡೆಸುತ್ತಾರೆ. ಈ ತರಬೇತಿ ಶಿಕ್ಷಣಕ್ಕೆ ಯಾವ ಶುಲ್ಕವೂ ಇರುವುದಿಲ್ಲ. ಖಾಸಗಿ ಹಾಗೂ ಸರಕಾರೀ ಕ್ಷೇತ್ರದ ಆಡಳಿತಗಾರರು ತಮ್ಮ ಉದ್ಯೋಗಿಗಳಿಗೆ ಈ ತರಬೇತಿಯನ್ನು ಕೊಡಿಸಬಹುದು. ಈ ತರಬೇತಿಯನ್ನು ಯಶಸ್ವಿಯಾಗಿ ಮುಗಿಸಿದ ನಂತರ ವೃತ್ತಿ ಶಿಕ್ಷಣ ತರಬೇತಿಯ ರಾಷ್ಟ್ರೀಯ ಮಂಡಳಿ (ನ್ಯಾಷನಲ್ ಕೌನ್ಸಿಲ್ ಆಫ್ ಟ್ರೈನಿಂಗ್ ಇನ್ ವೊಕೇಷನಲ್ ಟ್ರೇಡ್ಸ್) ವಿಭಾಗವು ಇವರಿಗೆ ಪ್ರಮಾಣ ಪತ್ರಗಳನ್ನು ನೀಡುತ್ತದೆ. 1981-82ರಲ್ಲಿ 148 ಮಹಿಳೆಯರು ಈ ತರಬೇತಿಯನ್ನು ಪಡೆದರು.

ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ : 1920ರಲ್ಲಿ ರಾಯಲ್ ಚಾರ್ಟರ್‌ನಿಂದ ಒಪ್ಪಿಗೆ ಪಡೆದು ಪ್ರಾರಂಭಿಸಲ್ಪಟ್ಟ ಈ ಸಂಸ್ಥೆಯು ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದೆ. ಸರ್ಕಾರ, ಕೈಗಾರಿಕೆ, ಶಿಕ್ಷಣ ಸಂಸ್ಥೆಗಳು ಹಾಗೂ ಖಾಸಗಿ ವ್ಯಕ್ತಿಗಳಿಗೆ ತಾಂತ್ರಿಕ ಸಹಾಯ ಹಾಗೂ ಸೇವೆಯನ್ನು ಕೊಡುವುದರಲ್ಲಿ ಈ ಸಂಸ್ಥೆಯು ಮುಂದಾಗಿದೆ. ಭಾರತದಲ್ಲಿ ಇರುವ 18 ಕೇಂದ್ರದಲ್ಲಿ ಕರ್ನಾಟಕ ರಾಜ್ಯದ ಕೇಂದ್ರವು ಒಂದಾಗಿದ್ದು, 1934ರಲ್ಲಿ ಈ ಕೇಂದ್ರವನ್ನು ಸ್ಥಾಪಿಸಲಾಯಿತು. ತಾಂತ್ರಿಕ ಕ್ಷೇತ್ರಗಳ 12 ವಿಷಯಗಳಲ್ಲಿ ಇದು ಕಾರ್ಯ ಚಟುವಟಿಕೆಗಳನ್ನು ನಡೆಸುತ್ತದೆ. ಚರ್ಚಾಗೋಷ್ಠಿ, ಉಪನ್ಯಾಸಗಳು, ಚಲನಚಿತ್ರ ಪ್ರದರ್ಶನಗಳು, ತಾಂತ್ರಿಕ ಕ್ಷೇತ್ರಗಳಿಗೆ ಭೇಟಿ ಮತ್ತು ವಿದ್ಯಾಭ್ಯಾಸವನ್ನು ಮುಂದುವರಿಸುವುದಕ್ಕಾಗಿ ಕಾರ್ಯಕ್ರಮಗಳು ಇವೇ ಮೊದಲಾದವುಗಳನ್ನು ಈ ಸಂಸ್ಥೆಯು ವ್ಯವಸ್ಥೆ ಮಾಡುತ್ತದೆ. ಇನ್ಸ್‌ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಸಂಸ್ಥೆಯಿಂದ ನಡೆಸುವ ಎ. ಎಂ. ಐ. ಇ. ಪರೀಕ್ಷೆಗಳನ್ನು ನಡೆಸುವುದಕ್ಕಾಗಿ ಕರ್ನಾಟಕದ ಈ ಕೇಂದ್ರವು ಒಂದಾಗಿದೆ. ಈ ಪರೀಕ್ಷೆಗಳಿಗೆ 1,000ಕ್ಕೂ ಮೇಲ್ಪಟ್ಟು ವಿದ್ಯಾರ್ಥಿಗಳು ಕುಳಿತುಕೊಳ್ಳುತ್ತಾರೆ. ಧಾರವಾಡ, ಕಲ್ಬುರ್ಗಿ, ಮಂಗಳೂರು, ಮುನಿರಾಬಾದ್ ಹಾಗೂ ಮೈಸೂರು ಇವುಗಳಲ್ಲಿ ಕರ್ನಾಟಕ ರಾಜ್ಯದ ಐದು ಶಾಖೆಗಳಿವೆ. ಮತ್ತು ಬೆಳಗಾವಿ ಹಾಗೂ ಕುದುರೆಮುಖ ಇವುಗಳಲ್ಲಿ ಈ ಸಂಸ್ಥೆಯ ಎರಡು ಕೇಂದ್ರಗಳಿವೆ. ತಾಂತ್ರಿಕ ಉದ್ಯೋಗದಲ್ಲಿ ಪರಿಣತಿ ಪಡೆಯಲು ತಾಂತ್ರಿಕ ಕಾಲೇಜುಗಳಲ್ಲಿ ಹಾಗೂ ಈ ಸಂಸ್ಥೆಯ ಎಲ್ಲಾ ಕೇಂದ್ರಗಳಲ್ಲಿ ವಿದ್ಯಾರ್ಥಿ ಗೋಷ್ಠಿಗಳನ್ನು ತೆರೆಯಲಾಗಿದೆ. ಕರ್ನಾಟಕ ಕೇಂದ್ರದ ಸದಸ್ಯರ ಸಂಖ್ಯೆ 3,500 ಇದೆ. ಮತ್ತು ಸಂಸ್ಥೆಗೆ ಸೇರದ ('ನಾನ್-ಕಾರ್ಪರೇಟ್') ಸದಸ್ಯರಾದ ತಾಂತ್ರಿಕರ ಮತ್ತು ವಿದ್ಯಾರ್ಥಿಗಳ ಸಂಖ್ಯೆ 3,000ಕ್ಕೂ ಮೀರಿದೆ. ರಾಷ್ಟ್ರೀಯ ವಿನ್ಯಾಸ ಮತ್ತು ಸಂಶೋಧನಾ ವೇದಿಕೆ (ನ್ಯಾಷನಲ್

ಡಿಸೈನ್ ಅಂಡ್ ರಿಸರ್ಚ್ ಫೋರಂ) ಈ ಸಂಸ್ಥೆಯ ಒಂದು ಅಂಗವಾಗಿದ್ದು ಇದು ಬೆಂಗಳೂರಿನಲ್ಲಿ ಇದೆ. ಈ ವೇದಿಕೆಯು ರಾಷ್ಟ್ರೀಯ ವಿನ್ಯಾಸ ಪ್ರಶಸ್ತಿಗಳಿಗಾಗಿ ಸ್ಪರ್ಧಿಗಳನ್ನು ಆರಿಸಿ ಸ್ಥಳೀಯ ವಿನ್ಯಾಸಗಳನ್ನು ವಿವಿಧ ವಿಷಯಗಳಲ್ಲಿ ಪ್ರೋತ್ಸಾಹಿಸಲು ಕ್ರಮಕೈಕೊಳ್ಳುತ್ತದೆ.

## ಕಾನೂನು ಶಿಕ್ಷಣ

ಕರ್ನಾಟಕ ರಾಜ್ಯವೂ ಸೇರಿದಂತೆ, ಅಭಿವೃದ್ಧಿ ಹೊಂದುತ್ತಿರುವ ಭಾರತದಲ್ಲಿ ಕಾನೂನು ಶಿಕ್ಷಣ, ಕಾನೂನು ಅಧ್ಯಯನ ಮತ್ತು ಕಾನೂನು ತರಬೇತಿಗಳ ಪ್ರಾಮುಖ್ಯತೆಗೆ ಹೆಚ್ಚು ಒತ್ತು ಕೊಡದೆ ಇರಲಾಗದು. ಕಾನೂನಿನ ಶಿಕ್ಷಣವು ಉದಾರವಾದಿ ಶಿಕ್ಷಣವೂ ಹೌದು; ವೃತ್ತಿ ಶಿಕ್ಷಣವೂ ಹೌದು. ಪ್ರಭುತ್ವದ ವಿವಿಧ ಚಟುವಟಿಕೆಗಳು, ಅನೇಕ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳು ಮತ್ತು ಅವುಗಳಿಂದ ಉಂಟಾಗುವ ಪ್ರತಿಕ್ರಿಯೆಗಳು, ಇವೆಲ್ಲವೂ ಕ್ರಿಯಾಪೂರ್ಣ ಹಾಗೂ ಉದ್ದೇಶಭರಿತ ಕಾನೂನು ವ್ಯವಸ್ಥೆಯನ್ನು ಅಪೇಕ್ಷಿಸುತ್ತವೆ. ಕಾನೂನನ್ನು ಎಲ್ಲರೂ ತಿಳಿದಿರಬೇಕೆಂದು ಭಾವಿಸಲಾಗಿದೆ; ಮತ್ತು ಕಾನೂನಿನ ಅಜ್ಞಾನವು ಅಕ್ಷಮ್ಯ. ಅದನ್ನು ಒಂದು ವ್ಯವಸ್ಥೆ ಎಂದು ತಿಳಿಯಲಾಗಿದೆ; ಅದು ಕ್ರಮಬದ್ಧ ಮತ್ತು ರಚನಾತ್ಮಕ ಬದಲಾವಣೆಯ ಕ್ರಮವಾಗಿದೆ. ಅಲ್ಲದೆ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಯ ಸಾಧನವೆಂದು ಕಾನೂನನ್ನು ಪರಿಗಣಿಸಲಾಗಿದೆ. ಕಾನೂನು ಶಿಕ್ಷಣವನ್ನು ಅಭ್ಯಾಸ ಮಾಡುವವರು ಸಾಮಾನ್ಯ ಶಿಕ್ಷಣದ ವಿಶಾಲವಾದ ತಳಹದಿಯನ್ನು ಹೊಂದಿರಬೇಕಾಗಿರುತ್ತದೆ. ಕಾನೂನು ಶಿಕ್ಷಣದ ಅಂತಿಮ ಉದ್ದೇಶ ವಕೀಲರನ್ನು, ಆಡಳಿತಗಾರರನ್ನು, ಶಾಸಕರನ್ನು, ನ್ಯಾಯಾಧೀಶರನ್ನು ಮತ್ತು ರಾಜಕೀಯ ಮುಖಂಡರನ್ನೂ ತಯಾರು ಮಾಡುವುದೇ ಆಗಿದೆ.

ಕಾನೂನು ಕಾಲೇಜುಗಳು : 1956-57ರಲ್ಲಿ ರಾಜ್ಯದಲ್ಲಿ ನಾಲ್ಕು ಕಾನೂನು ಕಾಲೇಜುಗಳಿದ್ದವು; ಮೈಸೂರು ಪ್ರದೇಶದಲ್ಲಿ ಎರಡು, ಬೆಳಗಾವಿ ಪ್ರದೇಶದಲ್ಲಿ ಎರಡು ಕಾಲೇಜುಗಳಿದ್ದು, ಇಬ್ಬರು ವಿದ್ಯಾರ್ಥಿನಿಯರೂ ಸೇರಿದಂತೆ ಒಟ್ಟು 758 ವಿದ್ಯಾರ್ಥಿಗಳು ಆಗ ಅಭ್ಯಾಸ ಮಾಡುತ್ತಿದ್ದರು. ಈ ಕಾನೂನು ಶಿಕ್ಷಣವು ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಎರಡು ವರ್ಷದ ಅವಧಿಯ ಬಿ. ಎಲ್. ಪದವಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಎರಡು ವರ್ಷದ ಅವಧಿಯ ಎಲ್. ಎಲ್. ಬಿ. ಪದವಿ ಶಿಕ್ಷಣವನ್ನೂ ಹೊಂದಿತ್ತು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇಂಟರ್‌ಮೀಡಿಯಟ್ ಶಿಕ್ಷಣದ ತರುವಾಯ ಮೂರು ವರ್ಷದ ಕಾನೂನು ಪದವಿಯನ್ನು ಪಡೆಯುವ ಅವಕಾಶವಿತ್ತು. ಮೂರು ವರ್ಷದ ಶಿಕ್ಷಣದಲ್ಲಿ ಮೊದಲ ವರ್ಷವು ಲಾ-ಪ್ರಿಲಿಮಿನರಿ ಕೋರ್ಸ್ ಎನಿಸಿತ್ತು. ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯವು ಕಾನೂನು ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿ (ಎಲ್. ಎಲ್. ಎಂ.) ಯನ್ನು ಕೊಡುತ್ತಿತ್ತು.

1968-69ರ ಕೊನೆಯ ವೇಳೆಗೆ ರಾಜ್ಯದಲ್ಲಿ 13 ಕಾನೂನು ಕಾಲೇಜುಗಳು ಇದ್ದವು. ಮೈಸೂರು ಪ್ರದೇಶದಲ್ಲಿ ಎಂಟು, ಬೆಳಗಾವಿ ಪ್ರದೇಶದಲ್ಲಿ ಮೂರು, ಮಂಗಳೂರು ಪ್ರದೇಶದಲ್ಲಿ ಒಂದು ಮತ್ತು ಕಲ್ಬುರ್ಗಿ ಪ್ರದೇಶದಲ್ಲಿ ಒಂದು ಕಾಲೇಜು ಇದ್ದವು. ಈ 13 ಕಾಲೇಜುಗಳಲ್ಲಿ ಒಟ್ಟು 147 ಮಹಿಳೆಯರು ಸೇರಿದಂತೆ 4,080 ವಿದ್ಯಾರ್ಥಿಗಳು ದಾಖಲಾಗಿದ್ದರು. ಹೊಸದಾಗಿ ಆರಂಭವಾದ ಒಂಬತ್ತು ಕಾಲೇಜುಗಳ ಪೈಕಿ 1962-63ರಲ್ಲಿ ಧಾರವಾಡದಲ್ಲಿ ಪ್ರಾರಂಭವಾದ ವಿಶ್ವವಿದ್ಯಾಲಯದ ಕಾನೂನು ಕಾಲೇಜೂ ಒಂದಾಗಿತ್ತು. ಉಳಿದ ಎಂಟು ಖಾಸಗಿಯವಾಗಿದ್ದವು. 1968-69ರಲ್ಲಿ ಬೆಂಗಳೂರಿನಲ್ಲಿದ್ದ ಒಂದೇ ಒಂದು ಸರ್ಕಾರಿ ಕಾನೂನು ಕಾಲೇಜು, ಧಾರವಾಡದ ಒಂದು ವಿಶ್ವವಿದ್ಯಾಲಯದ ಕಾನೂನು ಕಾಲೇಜು ಮತ್ತು 11 ಖಾಸಗಿ ಕಾನೂನು ಕಾಲೇಜುಗಳು ಇದ್ದವು. 1968-69ರಲ್ಲಿ ಎರಡು ವರ್ಷದ ಕಾನೂನು ಶಿಕ್ಷಣವನ್ನು ಮೂರು ವರ್ಷದ ಶಿಕ್ಷಣವಾಗಿ ರಾಜ್ಯಾದ್ಯಂತ ಪರಿವರ್ತಿಸಲಾಯಿತು. ಇದು ಎಲ್.ಎಲ್.ಬಿ. ಪದವಿಗೆ ದಾರಿಯಾಯಿತು. ಧಾರವಾಡದಲ್ಲಿದ್ದ ವಿಶ್ವವಿದ್ಯಾಲಯದ ಕಾನೂನು ಕಾಲೇಜಿನಲ್ಲಿ 52 ವಿದ್ಯಾರ್ಥಿಗಳು ಮಾಸ್ಟರ್ ಆಫ್ ಲಾ ಪದವಿಗೆ, ಐವರು ವಿದ್ಯಾರ್ಥಿಗಳು ಪಿಎಚ್.ಡಿ. ಪದವಿಗೆ, ಹಾಗೂ ಬೆಂಗಳೂರಿನ ಸರಕಾರಿ ಕಾನೂನು ಕಾಲೇಜಿನಲ್ಲಿ 72 ವಿದ್ಯಾರ್ಥಿಗಳು ಎಂ.ಎಲ್. ಪದವಿಗೆ ತಮ್ಮ ಹೆಸರನ್ನು ನೋಂದಾಯಿಸಿದ್ದರು. ಇಡೀ ರಾಜ್ಯದಲ್ಲಿ ಮೂವರು ಮಹಿಳೆಯರು ಸೇರಿದಂತೆ ಒಟ್ಟು 124 ಜನ ಎಂ.ಎಲ್. ವಿದ್ಯಾರ್ಥಿಗಳು, ಮತ್ತು ಪಿಎಚ್.ಡಿ. ಪದವಿಗಾಗಿ ಐದು ಜನ ವಿದ್ಯಾರ್ಥಿಗಳೂ ಪರೀಕ್ಷೆಗೆ ಕುಳಿತಿದ್ದರು. 1956-57ರಿಂದ 1968-69ರ ಅವಧಿಯಲ್ಲಿ ಕಾಲೇಜುಗಳ ಸಂಖ್ಯೆ ಮೂರು ಪಟ್ಟು ಹೆಚ್ಚಿದೆ ಮತ್ತು ಕಾನೂನು ಅಭ್ಯಾಸಮಾಡುವ ಮಹಿಳೆಯರ ಸಂಖ್ಯೆ ಎರಡರಿಂದ 147ಕ್ಕೆ ಏರಿತ್ತು.

1980-82ರಲ್ಲಿ ಒಟ್ಟು 32 ಕಾನೂನು ಕಾಲೇಜುಗಳು ನಮ್ಮ ರಾಜ್ಯದಲ್ಲಿ ಇದ್ದು ಅವುಗಳಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಒಂಬತ್ತು, ಮೈಸೂರು ವಿಶ್ವವಿದ್ಯಾಲಯದ ಏಳು, ಕರ್ನಾಟಕ ವಿಶ್ವವಿದ್ಯಾಲಯದ ಒಂಬತ್ತು, ಕಲ್ಬುರ್ಗಿ ವಿಶ್ವವಿದ್ಯಾಲಯದ ಐದು, ಹಾಗೂ ಮಂಗಳೂರು ವಿಶ್ವವಿದ್ಯಾಲಯದ ಎರಡು ಕಾಲೇಜುಗಳು ಇದ್ದವು. ಅವುಗಳಲ್ಲಿ ಬೆಂಗಳೂರು ಹಾಗೂ ಧಾರವಾಡದಲ್ಲಿದ್ದ ವಿಶ್ವವಿದ್ಯಾಲಯದ ಕಾನೂನು ಕಾಲೇಜುಗಳನ್ನು ಬಿಟ್ಟರೆ ಉಳಿದವುಗಳೆಲ್ಲವೂ ಖಾಸಗೀ ಕಾಲೇಜುಗಳಾಗಿದ್ದವು. ಇವುಗಳಲ್ಲಿ ಅನೇಕ ಕಾಲೇಜುಗಳು ಉದ್ಯೋಗಿಗಳಿಗೆ

**1976–77 ರಿಂದ 1981–82 ಅವಧಿಗೆ ಪ್ರವೇಶಕ್ಕಾಗಿ ದಾಖಲಾದ ಹಾಗೂ ವ್ಯಾಸಂಗ ಮುಗಿಸಿರುವ ಅಭ್ಯರ್ಥಿಗಳ ಪಟ್ಟಿ**

| ವರ್ಷ | ದಾಖಲಾತಿ | | | ಮೊದಲನೇಯ ವರ್ಷದ ಪ್ರವೇಶ | | | ಉತ್ತೀರ್ಣರಾದ ಅಭ್ಯರ್ಥಿಗಳು | |
|---|---|---|---|---|---|---|---|---|
| | ಪದವಿ | ಡಿಪ್ಲೋಮಾ | ಕಿರಿಯ ತಾಂತ್ರಿಕ ಶಾಲೆ | ಪದವಿ | ಡಿಪ್ಲೋಮಾ | ಕಿರಿಯ ತಾಂತ್ರಿಕ ಶಾಲೆ | ಪದವಿ | ಡಿಪ್ಲೋಮಾ |
| 1976–77 | 12,358 | 9,255 | 774 | 3,265 | 3,364 | 319 | 1,781 | 1,387 |
| 1977–78 | 14,627 | 9,269 | 815 | 3,398 | 3,742 | 340 | 1,537 | 1,857 |
| 1978–79 | 16,394 | 9,982 | 893 | 4,328 | 4,128 | 355 | 1,825 | 2,335 |
| 1979–80 | 21,916 | 10,936 | 876 | 7,405 | 4,711 | 342 | 1,969 | 2,688 |
| 1980–81 | 26,725 | 13,282 | 932 | 8,466 | 5,791 | 356 | 2,285 | 4,039 |
| 1981–82 | 27,882 | 13,368 | 900 | 8,749 | 5,332 | 350 | 2,341 | 3,571 |

ಸೂಚನೆ : ಕಿರಿಯ ತಾಂತ್ರಿಕ ಶಾಲೆಗಳ ಉತ್ತೀರ್ಣರಾದ ವಿದ್ಯಾರ್ಥಿಗಳ ಮಾಹಿತಿಯು ಸಧ್ಯಕ್ಕೆ ಲಭ್ಯವಿಲ್ಲದ ಕಾರಣ ಮೇಲಿರುವ ದಾಖಲೆಗಳಲ್ಲಿ ಸೇರಿರುವುದಿಲ್ಲ.

## 1-1-1983ರ ವೇಳೆಗೆ ರಾಜ್ಯದಲ್ಲಿದ್ದ ತಾಂತ್ರಿಕ ಸಂಸ್ಥೆಗಳ ಜಿಲ್ಲಾವಾರು ಪಟ್ಟಿ

| ಜಿಲ್ಲೆ | ಸ್ನಾತಕೋತ್ತರ ಬೋಧನೆಯಿರುವ ಕಾಲೇಜುಗಳು (ಪಿ.ಹೆಚ್‌ಡಿ. ಸೇರಿ) | ಪದವಿ ಹಂತ | | ಡಿಪ್ಲೋಮಾ ಹಂತ | | ಕೈಗಾರಿಕಾ ತರಬೇತಿ ಸಂಸ್ಥೆಗಳು | | ಸೆಕೆಂಡರಿ ಹಂತ | |
|---|---|---|---|---|---|---|---|---|---|
| | | ಸರಕಾರಿ | ಖಾಸಗಿ | ಸರಕಾರಿ | ಖಾಸಗಿ | ಸರಕಾರಿ | ಖಾಸಗಿ | ಸರಕಾರಿ | ಖಾಸಗಿ |
| 1 | 2 | 3 | 4 | 5 | 6 | 7 | 8 | 9 | 10 |
| ಉತ್ತರ ಕನ್ನಡ | — | — | 1 | 1 | — | 2 | — | — | — |
| ಕಲ್ಬುರ್ಗಿ | — | — | 2 | 1 | 1 | 1 | 1 | 1 | — |
| ಕೊಡಗು | — | — | — | 1 | — | 1 | — | — | — |
| ಕೋಲಾರ | — | — | — | 1 | — | 1 | 1 | — | — |
| ಚಿಕ್ಕಮಗಳೂರು | — | — | 1 | 1 | — | 1 | — | — | — |
| ಚಿತ್ರದುರ್ಗ | — | 1 | 2 | 2 | — | 1 | 1 | — | — |
| ತುಮಕೂರು | — | — | 2 | 1 | 1 | 1 | 1 | — | — |
| ದಕ್ಷಿಣ ಕನ್ನಡ | 1 | — | 2** | 2 | 1 | 1 | 2 | 1 | — |
| ಧಾರವಾಡ | — | — | 4 | 1 | 4 | 1 | 2 | 1 | — |
| ಬಳ್ಳಾರಿ | 1 | — | 1 | 1 | 1 | 1 | — | 1 | — |
| ಬಿದರೆ | — | — | 2 | 1 | 1 | 1 | — | — | — |
| ಬೆಳಗಾವಿ | — | — | 2 | 1 | 2 | 1 | — | — | — |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ಬೆಂಗಳೂರು | 3 | 1* | 12 | 9 | 6 | 2 | 7 | — | — |
| ಮೈಸೂರು | 2 | — | 4 | 1 | 1 | 1 | 3 | — | — |
| ಮಂಡ್ಯ | — | — | 1 | 1 | — | 1 | — | — | — |
| ರಾಯಚೂರು | — | — | 1 | 1 | — | 1 | — | — | — |
| ವಿಜಾಪುರ | — | — | 2 | 1 | 1 | 1 | 1 | 1 | — |
| ಶಿವಮೊಗ್ಗ | — | — | 1 | — | 2 | 1 | – | 1 | — |
| ಹಾಸನ | — | — | 1 | 1 | — | 1 | — | — | — |
| ಒಟ್ಟು | 7 | 2 | 41 | 28 | 21 | 21 | 19 | 6 | — |

*ವಿಶ್ವವಿದ್ಯಾಲಯ ಕಾಲೇಜು **ರೀಜನಲ್ ಕಾಲೇಜು, ಸುರತ್ಕಲ್ ಸೇರಿದೆ.

ತಮ್ಮ ಅಧ್ಯಯನಕ್ಕೆ ಅನುಕೂಲವಾಗಲು ಬೆಳಗ್ಗಿನ ಅಥವಾ ಸಂಜೆಯ ಶಿಕ್ಷಣವನ್ನು ಕೊಡುತ್ತಿದ್ದವು. 1981-82ರ ಎಲ್.ಎಲ್.ಬಿ. ಓದುತ್ತಿದ್ದ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ 12,540 ಆಗಿತ್ತು. 1968-69ರಲ್ಲಿ 13 ಇದ್ದ ಕಾನೂನು ಕಾಲೇಜುಗಳ ಸಂಖ್ಯೆ 1981-82ರ ವೇಳೆಗೆ 32ಕ್ಕೆ ಏರಿತು. ಅದೇ ರೀತಿ ಕಾನೂನು ಶಿಕ್ಷಣವನ್ನು ಪಡೆಯುತ್ತಿರುವವರ ಸಂಖ್ಯೆಯು (1968-69ರಿಂದ 1981-82ರ ವರೆಗೆ) ಮೂರರಷ್ಟು ಹೆಚ್ಚಾಯಿತು. 1948ರಲ್ಲಿ ಸ್ಥಾಪನೆಯಾಗಿದ್ದ ಬೆಂಗಳೂರಿನ ಸರಕಾರಿ ಕಾನೂನು ಕಾಲೇಜು 1976ರಲ್ಲಿ ವಿಶ್ವವಿದ್ಯಾಲಯದ ಕಾನೂನು ಕಾಲೇಜಾಗಿ ಪರಿವರ್ತನೆಗೊಂಡಿತು. ಅದರಲ್ಲಿ ಎಲ್.ಎಲ್.ಬಿ., ಎಲ್.ಎಲ್.ಎಂ. ಮತ್ತು ಪಿಎಚ್.ಡಿ. ತರಗತಿಗಳು ನಡೆಸಲ್ಪಡುತ್ತಿವೆ. 1981-82ರಲ್ಲಿ 408 ವಿದ್ಯಾರ್ಥಿಗಳು ಎಲ್.ಎಲ್.ಬಿ. ತರಗತಿಗಳಲ್ಲಿ, 12 ವಿದ್ಯಾರ್ಥಿಗಳು ಎಲ್.ಎಲ್.ಎಂ. ಮತ್ತು ಇಬ್ಬರು ವಿದ್ಯಾರ್ಥಿಗಳು ಪಿಎಚ್.ಡಿ. ಶಿಕ್ಷಣವನ್ನು ಪಡೆಯುತ್ತಿದ್ದರು. 1963ರಲ್ಲಿ ಸ್ಥಾಪಿತವಾದ ಬೆಂಗಳೂರಿನ ಬಿ.ಎಂ.ಎಸ್. ಕಾನೂನು ಕಾಲೇಜು, ಎಂ.ಎಲ್. ಶಿಕ್ಷಣ ಕ್ರಮವನ್ನೂ ಸಹ ಹೊಂದಿದೆ. ಅಲ್ಲದೆ ತೆರಿಗೆ ವಿಧಿಸುವ ('ಟ್ಯಾಕ್ಸೆಶನ್') ಕಾನೂನು ವಿಭಾಗದಲ್ಲಿ ಒಂದು ವರ್ಷದ ಶಿಕ್ಷಣವನ್ನು ಈ ಕಾಲೇಜಿನಲ್ಲಿ ಕೊಡಲಾಗುತ್ತಿದೆ. ಎಲ್.ಎಲ್.ಬಿ. ಪದವಿ ಶಿಕ್ಷಣವನ್ನೇ ಅಲ್ಲದೆ ಕಂಪೆನಿ ಕಾನೂನು ಮತ್ತು ಕಾರ್ಮಿಕ ಕಾನೂನಿನಲ್ಲಿ ಸ್ನಾತಕೋತ್ತರ ಡಿಪ್ಲೋಮಾ ಶಿಕ್ಷಣವನ್ನು ಬೆಂಗಳೂರು ಶ್ರೀ ಜಗದ್ಗುರು ರೇಣುಕಾಚಾರ್ಯ ಕಾನೂನು ಕಾಲೇಜು ನಡೆಸುತ್ತಿದೆ. ಅಲ್ಲದೆ ಇದೇ ಕಾಲೇಜು ಒಂದು ಕಾನೂನು ಪ್ರಯೋಗ ಶಿಕ್ಷಣವನ್ನು (ಲಾ ಕ್ಲಿನಿಕ್) ನಡೆಸುತ್ತಿದೆ. ವೃತ್ತಿಯಲ್ಲಿರುವ ನ್ಯಾಯವಾದಿಗಳಿಗಾಗಿ ಮತ್ತು ಕಾನೂನು ಶಿಕ್ಷಣ ಪಡೆಯುವ ಇತರರಿಗಾಗಿ ಕಾನೂನು ಶಿಕ್ಷಣ ಮುಂದುವರಿಸುವ ಧ್ಯೇಯದ ಅಭಿವೃದ್ಧಿ ಕೇಂದ್ರವಾಗಿ ಕಾಲೇಜು ಕಾರ್ಯ ನಿರ್ವಹಿಸುತ್ತಿದೆ.

ಹೊಸ ಕೋರ್ಸು: ಇಲ್ಲಿಯವರೆಗೆ ಪದವಿಯ ಶಿಕ್ಷಣದ ನಂತರವೇ ನಡೆಸಲ್ಪಡುತ್ತಿದ್ದ ಎಲ್. ಎಲ್. ಬಿ. ಶಿಕ್ಷಣವು ಈಗ ಹತ್ತು ವರ್ಷದ ಎಸ್. ಎಸ್. ಎಲ್. ಸಿ. ಮತ್ತು ಎರಡು ವರ್ಷದ ಪಿ. ಯು. ಸಿ. ಮಟ್ಟದ ವಿದ್ಯಾರ್ಥಿಗಳಿಗೆ ಐದು ವರ್ಷಗಳವರೆಗಿನ ಅವಧಿಯದಾಗಿ ಭಾರತದಲ್ಲೆಲ್ಲಾ ಹೊಸ ಕ್ರಮದಂತೆ ವಿಸ್ತರಿಸಲ್ಪಟ್ಟಿದೆ. ಭಾರತ ಸರ್ಕಾರದ ಬಾರ್ ಕೌನ್ಸಿಲ್ ಸಂಸ್ಥೆಯು ಕಾನೂನು ಶಿಕ್ಷಣವನ್ನು ವೈದ್ಯಕೀಯ ಹಾಗೂ ಇಂಜಿನಿಯರಿಂಗ್ ಶಿಕ್ಷಣದ ಮಟ್ಟಕ್ಕೆ ತರಲು ಬಹಳ ಚುರುಕಾದ ಬದಲಾವಣೆಯನ್ನು ರೂಪಿಸಿದೆ. ಮತ್ತು ಇದರಿಂದ ಉನ್ನತ ಮಟ್ಟದ ಕಾನೂನು ಶಿಕ್ಷಣ ರೂಪಿಸಿದಂತಾಗಿದೆ. ನ್ಯಾಯಾಲಯಗಳಿಗೆ ಭೇಟಿ ನೀಡುವುದು, ದಸ್ತಾವೇಜುಗಳ ಅಭ್ಯಾಸ, ನ್ಯಾಯಾಲಯಗಳ ಕಾನೂನು, ವಕೀಲರ ಕಛೇರಿಯಲ್ಲಿ ಒಕ್ಕಣೆ ತಯಾರಿಸುವುದು, ಪ್ರತಿಪಾದನಾ ಕಾರ್ಯ, ಇವುಗಳ ಅಭ್ಯಾಸ, ವೃತ್ತಿಯ ನೀತಿ ಶಾಸ್ತ್ರದ ಬಗ್ಗೆ ಉಪನ್ಯಾಸಗಳಿಗೆ ಹಾಜರಾಗುವುದು, ಇವೇ ಮುಂತಾದ ಪ್ರಾಯೋಗಿಕ ತರಬೇತಿಯನ್ನು ಐದು ವರ್ಷದ ಶಿಕ್ಷಣದ ನಂತರ ಆರು ತಿಂಗಳ ಅವಧಿಯವರೆಗೆ ರೂಪಿಸಲಾಗಿದೆ. ಪೂರ್ವಸಿದ್ಧತೆಯ ಅಭ್ಯಾಸ ಕ್ರಮವಾದ ಮೊದಲನೇಯ ಎರಡು ವರ್ಷದಲ್ಲಿ ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯನೀತಿ ಶಾಸ್ತ್ರ, ಚರಿತ್ರೆ, ಸಾಮಾನ್ಯ ಇಂಗ್ಲಿಷ್, ಕಾನೂನು ಬರವಣಿಗೆಯನ್ನೊಳಗೊಂಡಂತೆ ಕಾನೂನು ಭಾಷೆ, ನ್ಯಾಯಾಲಯಗಳ ಚರಿತ್ರೆಗಳು, ಭಾರತದ ಶಾಸಕ ವೃತ್ತಿ ಹಾಗೂ ನ್ಯಾಯವಾದಿ ವೃತ್ತಿ ಇವುಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಶಾಸಕಾಂಗಕ್ಕೆ ಕರಡುಕಾನೂನು ತಯಾರಿ, ತುಲನಾತ್ಮಕ ಕಾನೂನು, ಕಾನೂನು ಮತ್ತು ಆಸ್ತಿ, ಕಂದಾಯಕ್ಕೆ ಸಂಬಂಧಿಸಿದ ಕಾನೂನು, ಗ್ರಾಮಾಭಿವೃದ್ಧಿ ಹಾಗೂ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದ ಕಾನೂನು ಮುಂತಾದ ಹೊಸ ಐಚ್ಛಿಕ ವಿಷಯಗಳನ್ನು ಅಳವಡಿಸಲಾಗಿದೆ. ಇವಲ್ಲದೆ ಆಡಳಿತಾತ್ಮಕ ಕಾನೂನು ಹಾಗೂ ಸಾರ್ವಜನಿಕ ಅಂತರರಾಷ್ಟ್ರೀಯ ಕಾನೂನುಗಳ ಅಧ್ಯಯನವೂ ಇದರಲ್ಲಿ ಸೇರಿವೆ. ಕರ್ನಾಟಕವೂ ಸೇರಿದಂತೆ ಭಾರತಾದ್ಯಂತ ಕಾನೂನು ಶಿಕ್ಷಣದ ಹೊಸ ಪದ್ಧತಿಯು ಏಕರೂಪದ್ದಾಗಿರುತ್ತದೆ. 1984-85ರ ಶೈಕ್ಷಣಿಕ ವರ್ಷದಿಂದ ಕರ್ನಾಟಕದಲ್ಲಿನ ಎಲ್ಲಾ ವಿಶ್ವವಿದ್ಯಾಲಯಗಳು ಈ ಹೊಸ ಪಠ್ಯಕ್ರಮವನ್ನು ಜಾರಿಗೆ ತರುವ ನಿರೀಕ್ಷೆ ಇದೆ. ಈ ಹೊಸ ದಿಶೆಯಲ್ಲಿ ಬೆಂಗಳೂರಿನಲ್ಲಿ ಒಂದು ರಾಷ್ಟ್ರೀಯ ಕಾನೂನು ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸುವ ಉದ್ದೇಶವಿದೆ.

## ವೈದ್ಯಕೀಯ ಶಿಕ್ಷಣ

1917ರಲ್ಲಿ ಬೆಂಗಳೂರಿನಲ್ಲಿ ವಿಶ್ವವಿದ್ಯಾಲಯ ವೈದ್ಯಕೀಯ ಶಾಲೆಯನ್ನು ಸ್ಥಾಪಿಸುವ ಮೂಲಕ ಮೈಸೂರು ಅರಸರ ಸರ್ಕಾರವು ವೈದ್ಯಕೀಯ ಶಿಕ್ಷಣ ಕ್ಷೇತ್ರದ ಬಗ್ಗೆ ತನ್ನ ತೀವ್ರ ಆಸಕ್ತಿಯನ್ನು ತೋರಿಸಿತು. ಈ ಶಾಲೆಯು ವೈದ್ಯಕೀಯ ಇಲಾಖೆಯ ಹಿರಿಯ ಶಸ್ತ್ರವೈದ್ಯರ ನಿಯಂತ್ರಣಕ್ಕೊಳಪಟ್ಟಿತ್ತು. ಅಲ್ಲಿ ನೀಡುತ್ತಿದ್ದ ತರಬೇತಿಯ ಅವಧಿ ನಾಲ್ಕು ವರ್ಷದ್ದಾಗಿದ್ದು, ಅದಕ್ಕೆ 'ಲೈಸೆನ್ಸಿಯೇಟ್ ಇನ್ ಮೆಡಿಕಲ್ ಪ್ರಾಕ್ಟೀಸ್' (ಎಲ್. ಎಂ. ಪಿ.) ಎನ್ನುತ್ತಿದ್ದರು. ಮುಂದೆ 1924ರಲ್ಲಿ ಎಂ. ಬಿ. ಬಿ. ಎಸ್. ಪದ್ಧತಿಯ ಮೊದಲ ವೈದ್ಯಕೀಯ ಕಾಲೇಜನ್ನು ಆರಂಭಿಸಲಾಯಿತು. ಸುಮಾರು ಆರು ವರ್ಷಗಳ ಕಾಲದವರೆಗೆ ವೈದ್ಯಕೀಯ ಕಾಲೇಜು ಮತ್ತು ವಿಶ್ವವಿದ್ಯಾಲಯ ವೈದ್ಯಕೀಯ ಶಾಲೆ ಇವೆರಡೂ ಒಂದೇ ಸಂಯೋಜಿತ ಸಂಸ್ಥೆಯಾಗಿ ನಡೆದವು. ಎರಡರ ಪಾಠಕ್ರಮಗಳಿಗೂ ಬೋಧಕ ಸಿಬ್ಬಂದಿ ಒಂದೇ ಆಗಿತ್ತು. 1930ರಲ್ಲಿ ವೈದ್ಯಕೀಯ ಕಾಲೇಜನ್ನು ಮೈಸೂರಿಗೆ ವರ್ಗಾಯಿಸಲಾಯಿತು. ಮತ್ತು ವಿಶ್ವವಿದ್ಯಾಲಯ

ವೈದ್ಯಕೀಯ ಶಾಲೆ ಬೆಂಗಳೂರಿನಲ್ಲೇ ಉಳಿಯಿತು. ಸಾರ್ವತ್ರಿಕ ನೀತಿಗನುಗುಣವಾಗಿ ಏಕರೂಪದ ವೈದ್ಯಕೀಯ ಶಿಕ್ಷಣ ಕ್ರಮ ವಿರಬೇಕೆಂಬ ದೃಷ್ಟಿಯಿಂದ ವಿಶ್ವವಿದ್ಯಾಲಯ ವೈದ್ಯಕೀಯ ಶಾಲೆಯನ್ನು ರದ್ದುಗೊಳಿಸಲು ನಿರ್ಧರಿಸಿ, 1956ರಲ್ಲಿ ಅದನ್ನು ಮುಚ್ಚಲಾಯಿತು. 1940-41ರಲ್ಲಿ ಮೈಸೂರು ವೈದ್ಯಕೀಯ ಕಾಲೇಜನ್ನು ವಿಸ್ತರಿಸಲಾಯಿತು.

ಕಳೆದ ಮೂರು ದಶಕಗಳಲ್ಲಿ ವೈದ್ಯಕೀಯ ಶಿಕ್ಷಣದ ತೀವ್ರ ವಿಸ್ತರಣೆಯಾಗಿದೆ. ಪ್ರಸ್ತುತ (1983) ರಾಜ್ಯದಲ್ಲಿರುವ ನಾಲ್ಕು ಸರ್ಕಾರಿ ವೈದ್ಯಕೀಯ ಕಾಲೇಜುಗಳು ಬೆಂಗಳೂರು, ಬಳ್ಳಾರಿ, ಹುಬ್ಬಳ್ಳಿ ಮತ್ತು ಮೈಸೂರಿನಲ್ಲಿವೆ. ಇವುಗಳ ಜೊತೆಗೆ ಎಂಟು ಖಾಸಗಿ ವೈದ್ಯಕೀಯ ಕಾಲೇಜುಗಳಿದ್ದು ಅವು ಬೆಂಗಳೂರಿನಲ್ಲಿರುವ 1) ಸೆಯಿಂಟ್ ಜಾನ್ಸ್ ಮೆಡಿಕಲ್ ಕಾಲೇಜು (1962), 2) ಎಂ. ಎಸ್. ರಾಮಯ್ಯ ಮೆಡಿಕಲ್ ಕಾಲೇಜು (1979), 3) ಡಾ|| ಅಂಬೇಡ್ಕರ್ ಮೆಡಿಕಲ್ ಕಾಲೇಜು (1980), ಮತ್ತು 4) ಕೆಂಪೇಗೌಡ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (1979), 5) ಬೆಳಗಾವಿಯ ಜವಾಹರ್‌ಲಾಲ್ ನೆಹರು ಮೆಡಿಕಲ್ ಕಾಲೇಜು (1963), 6) ದಾವಣಗೆರೆಯ ಜೆ. ಜೆ. ಎಂ. ಮೆಡಿಕಲ್ ಕಾಲೇಜು (1965), 7) ಮಣಿಪಾಲದ ಕಸ್ತೂರ್ ಬಾ ಮೆಡಿಕಲ್ ಕಾಲೇಜು (1953) ಹಾಗೂ 8) ಕಲ್ಬುರ್ಗಿ ಮಹದೇವಪ್ಪ ರಾಂಪುರೆ ಮೆಡಿಕಲ್ ಕಾಲೇಜು (1964). ಬಹುತೇಕ ಖಾಸಗಿ ವೈದ್ಯಕೀಯ ಕಾಲೇಜುಗಳಿಗೆಲ್ಲ ಸರ್ಕಾರವೇ ತನ್ನ ಆಸ್ಪತ್ರೆಗಳಲ್ಲಿ ಪ್ರಯೋಗ ಶಿಕ್ಷಣ ಸೌಲಭ್ಯವನ್ನು ಒದಗಿಸುತ್ತಿದೆ.

ಬೆಂಗಳೂರು ವೈದ್ಯಕೀಯ ಕಾಲೇಜು ರಚನೆಯಾದದ್ದು 1954ರಲ್ಲಿ. ವೈದ್ಯಕೀಯ ಮತ್ತು ವೈದ್ಯಕೀಯೇತರ ಸಿಬ್ಬಂದಿಗೆ ತರಬೇತಿ ನೀಡುವ ಸಲುವಾಗಿ ವಿಕ್ಟೋರಿಯಾ ಆಸ್ಪತ್ರೆ, ವಾಣಿ ವಿಲಾಸ ಆಸ್ಪತ್ರೆ, ಮಿಂಟೋ ಕಣ್ಣಾಸ್ಪತ್ರೆ, ಎಸ್.ಡಿ.ಎಸ್. ಕ್ಷಯರೋಗದ ಆಸ್ಪತ್ರೆ, ಬೌರಿಂಗ್ ಆಸ್ಪತ್ರೆ ಮತ್ತು ಜಯದೇವ ಹೃದ್ರೋಗ ಸಂಸ್ಥೆಗಳನ್ನು ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಸೇರಿಸಲಾಗಿದೆ. ಈ ಕಾಲೇಜು ವೈದ್ಯಕೀಯ ವಿಜ್ಞಾನದಲ್ಲಿ ಪದವಿ, ಸ್ನಾತಕೋತ್ತರ ಪದವಿ ಮತ್ತು ಡಿಪ್ಲೊಮಾ ಶಿಕ್ಷಣವನ್ನು ನೀಡುತ್ತಿದೆ.

ಕಸ್ತೂರ್ ಬಾ ವೈದ್ಯಕೀಯ ಕಾಲೇಜು ಮಣಿಪಾಲ ದಲ್ಲಿ 1953ರಲ್ಲಿ ಒಂದು ಸಹಕಾರಿ ಪ್ರಯತ್ನವಾಗಿ ಮಣಿಪಾಲದ ಅಕ್ಯಾಡಮಿ ಆಫ್ ಜನರಲ್ ಎಜುಕೇಷನ್ ಸಂಸ್ಥೆಯ ಆಶ್ರಯ ದಲ್ಲಿ ಸ್ಥಾಪನೆಯಾಯಿತು. ಔಷಧ ಶಾಸ್ತ್ರ ಮತ್ತು ಶಸ್ತ್ರವೈದ್ಯದ ವಿವಿಧ ಶಾಖೆಗಳಲ್ಲಿ ಪದವಿ ಶಿಕ್ಷಣ ನೀಡುವುದರ ಜೊತೆಗೆ ಈ ಕಾಲೇಜು ವಿವಿಧ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣ ವನ್ನೂ ನೀಡುತ್ತದೆ ಮತ್ತು ವಿಜ್ಞಾನ ಪದವೀಧರರಿಗೆ ಜೀವ ರಸಾಯನ ವಿಜ್ಞಾನ ಹಾಗೂ ಸೂಕ್ಷ್ಮಜೀವ ವಿಜ್ಞಾನ ವಿಷಯ ಗಳಲ್ಲಿ ಸ್ನಾತಕೋತ್ತರ ಎಂ.ಎಸ್‌ಸಿ. ಶಿಕ್ಷಣವನ್ನು ಒದಗಿಸುತ್ತದೆ. ಈ ಎರಡು ವಿಷಯಗಳಲ್ಲೂ ಪಿಎಚ್.ಡಿ.ಗೆ ಅವಕಾಶವಾಗುವ ಸಂಶೋಧನೆ ಮತ್ತು ತರಬೇತಿ ಸೌಲಭ್ಯಗಳನ್ನು ಇಲ್ಲಿ ಕಲ್ಪಿಸ ಲಾಗಿದೆ. ಕಾಲೇಜಿನ ಒಂದು ಶಾಖೆಯಾಗಿರುವ ಫಾರ್ಮಸಿ ಕಾಲೇಜು ಔಷಧ ಶಾಸ್ತ್ರದಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳಿಗೆ ತರಬೇತಿ ನೀಡುತ್ತದೆ. ಈ ಕಾಲೇಜಿಗೆ ಹೊಂದಿಕೊಂಡಂತೆ ಒಂದು ಸಾರ್ವಜನಿಕ ಆಸ್ಪತ್ರೆ, ಒಂದು ಸಣ್ಣ ಸಸ್ಯ ವೈಜ್ಞಾನಿಕ ವನ, ಒಂದು ಮೃಗಾಲಯ, ಶೈತ್ಯಾಗಾರ ಕೊಠಡಿಗಳು ಇತ್ಯಾದಿಗಳಿವೆ. ಈ ಕಾಲೇಜಿನ ಒಂದು ಸಮುಚ್ಚಯ ಮಂಗಳೂರಿನಲ್ಲೂ ಇದೆ.

ಕರ್ನಾಟಕ ವೈದ್ಯಕೀಯ ಕಾಲೇಜು ಹುಬ್ಬಳ್ಳಿ ಯಲ್ಲಿದ್ದು ಮುಂಬೈ ಕರ್ನಾಟಕ ಭಾಗದ ಜನತೆಯು ಬೆಳಗಾವಿಗೆ ವೈದ್ಯಕೀಯ ಶಾಲೆಯೊಂದನ್ನು ಪಡೆಯಲು ನಡೆಸಿದ ಪ್ರಯತ್ನದ ಫಲ. ವೈದ್ಯಕೀಯ ಶಾಲೆಯ ಬಗ್ಗೆ ಅಲ್ಲಿನ ಜನರ ಬೇಡಿಕೆ ಬಹಳ ದಿನಗಳಿಂದ ಈಡೇರಿರಲಿಲ್ಲ. ನಂತರ ಹುಬ್ಬಳ್ಳಿಯಲ್ಲಿ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಬೇಕೆಂದು ಪ್ರಯತ್ನ ಮುಂದುವರಿಸ ಲಾಯಿತು. ಅದರ ಫಲವಾಗಿ ಎರಡನೇಯ ಪಂಚವಾರ್ಷಿಕ ಯೋಜನೆಯಲ್ಲಿ ಅದು ಸೇರ್ಪಡೆಯಾಯಿತು. ರಾಜ್ಯಗಳ ಪುನರ್ವಿಂಗಡಣೆಯ ನಂತರ, ರಾಜ್ಯ ಸರ್ಕಾರವು ಈ ಯೋಜನೆ ಯನ್ನು ಕೈಗೆತ್ತಿಕೊಂಡು ವೈದ್ಯಕೀಯ ಇಲಾಖೆಯ ನಿಯಂತ್ರಣ ದಲ್ಲಿ ಕರ್ನಾಟಕ ವೈದ್ಯಕೀಯ ಕಾಲೇಜನ್ನು (1956) ಸ್ಥಾಪಿಸಿತು. ಈ ಕಾಲೇಜು ಕರ್ನಾಟಕ ವಿಶ್ವವಿದ್ಯಾಲಯದ ಅಂಗಸಂಸ್ಥೆಯಾಗಿ ಅಂಗೀಕೃತವಾಗಿದ್ದು, ಎಂ.ಬಿ.ಬಿ.ಎಸ್. ಪದವಿ, ಸ್ನಾತಕೋತ್ತರ ಪದವಿ ಮತ್ತು ಡಿಪ್ಲೊಮಾ ಶಿಕ್ಷಣಕ್ಕೆ ಈ ಕಾಲೇಜಿನಲ್ಲಿ ಸೌಲಭ್ಯಗಳಿವೆ.

ರಾಜ್ಯದಲ್ಲಿರುವ ಎಲ್ಲ ಹನ್ನೆರಡು ವೈದ್ಯಕೀಯ ಕಾಲೇಜು ಗಳೂ ಎಂ.ಬಿ.ಬಿ.ಎಸ್. ಪದವಿಗೆ ಬೇಕಾದ ವೈದ್ಯಕೀಯ ಶಿಕ್ಷಣ ದಲ್ಲಿ ತರಬೇತಿ ನೀಡುತ್ತವೆ. ಬೆಂಗಳೂರು ವೈದ್ಯಕೀಯ ಕಾಲೇಜು, ಮೈಸೂರು ವೈದ್ಯಕೀಯ ಕಾಲೇಜು, ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಕಾಲೇಜು, ದಾವಣಗೆರೆಯ ಜೆ.ಜೆ.ಎಂ. ವೈದ್ಯ ಕೀಯ ಕಾಲೇಜು, ಮಣಿಪಾಲದ ಕಸ್ತೂರ್ ಬಾ ವೈದ್ಯಕೀಯ ಕಾಲೇಜು, ಬೆಳಗಾವಿಯ ಜೆ. ಎನ್. ವೈದ್ಯಕೀಯ ಕಾಲೇಜು ಮತ್ತು ಕಲ್ಬುರ್ಗಿಯ ಎಂ. ಆರ್. ವೈದ್ಯಕೀಯ ಕಾಲೇಜು ಗಳಲ್ಲಿ ಸ್ನಾತಕೋತ್ತರ ಪದವಿಯ ವೈದ್ಯಕೀಯ ಶಿಕ್ಷಣವನ್ನೂ ನೀಡುವ ವ್ಯವಸ್ಥೆಯಿದೆ. ರಾಜ್ಯದಲ್ಲಿ ನೀಡಲಾಗುತ್ತಿರುವ ಸ್ನಾತಕೋತ್ತರ ಪದವಿ ಶಿಕ್ಷಣದಲ್ಲಿ ಬಹುಮಟ್ಟಿಗೆ ವೈದ್ಯಕೀಯ ವಿಜ್ಞಾನದ ಎಲ್ಲ ಶಾಖೆಗಳೂ ಸೇರಿವೆ. ಈ ವೈದ್ಯಕೀಯ

ಕಾಲೇಜುಗಳ ಜೊತೆಗೆ ಬೆಂಗಳೂರಿನಲ್ಲಿ ಅಖಿಲ ಭಾರತ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ('ನಿಮ್ಹಾನ್ಸ್') ಸಂಸ್ಥೆಯಲ್ಲಿ ಎಂ.ಡಿ. (ಮನೋರೋಗ ಔಷಧ) ಮತ್ತು ಎಂ.ಸಿ.ಎಚ್. (ನರಶಾಸ್ತ್ರ ವೈದ್ಯ) ವಿಷಯಗಳೂ ಸೇರಿದಂತೆ ಅನೇಕ ಸ್ನಾತಕೋತ್ತರ ವಿಷಯಗಳಲ್ಲಿ ಶಿಕ್ಷಣ ದೊರೆಯುತ್ತದೆ. ಈ ಸಂಸ್ಥೆಯ ಹಣಕಾಸು ವೆಚ್ಚವನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ನೋಡಿಕೊಳ್ಳುತ್ತಿವೆ. ಮೈಸೂರಿನಲ್ಲಿ ಅಖಿಲ ಭಾರತ ವಾಕ್ ಮತ್ತು ಶ್ರವಣ ಸಂಸ್ಥೆಯಿದೆ. ಈ ಸಂಸ್ಥೆಯು ಮೈಸೂರು ವೈದ್ಯಕೀಯ ಕಾಲೇಜಿನ ಅಂಗರಚನಾ ಶಾಸ್ತ್ರ (ಎನಾಟಮಿ) ಶರೀರ ವಿಜ್ಞಾನ (ಫಿಸಿಯಾಲಜಿ) ಮತ್ತು ರೋಗಲಕ್ಷಣ ಶಾಸ್ತ್ರ (ಪೆಥಾಲಜಿ) ಇಲಾಖೆಗಳಲ್ಲಿ ಪ್ರಯೋಗೇತರ ಶಿಕ್ಷಣ ಸೌಲಭ್ಯಗಳನ್ನೂ, ಮೈಸೂರಿನ ಕೆ.ಆರ್. ಆಸ್ಪತ್ರೆಯ ಕಿವಿ, ಮೂಗು, ಗಂಟಲು ವಿಭಾಗ ಮತ್ತು ನರವೈದ್ಯ ಶಾಸ್ತ್ರ ವಿಭಾಗಗಳಲ್ಲಿ ಪ್ರಯೋಗ ಶಿಕ್ಷಣ ಸೌಲಭ್ಯಗಳನ್ನೂ ಬಳಸಿಕೊಳ್ಳುತ್ತದೆ. ಕರ್ನಾಟಕದಲ್ಲಿರುವ ವೈದ್ಯಕೀಯ ಕಾಲೇಜುಗಳಲ್ಲಿ ಇತ್ತೀಚಿನ ಕೆಲವು ವರ್ಷಗಳಿಂದ ಎಂ. ಬಿ. ಬಿ. ಎಸ್. ಶಿಕ್ಷಣಕ್ಕೆ ಇರುವ ಪ್ರವೇಶಾವಕಾಶದ ಸಾಮರ್ಥ್ಯವನ್ನೂ ಕೆಳಕಾಣಿಸಿರುವ ಪಟ್ಟಿಯಿಂದ ತಿಳಿಯಬಹುದು.

| ಕಾಲೇಜಿನ ಹೆಸರು | 1975–76 | 1976–77 | 1977–78 | 1978–79 | 1979–80 | 1980–81 |
|---|---|---|---|---|---|---|
| ಸರ್ಕಾರಿ | | | | | | |
| ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | 100 | 100 | 99 | 100 | 100 | 150 |
| ಬಳ್ಳಾರಿ ವೈದ್ಯಕೀಯ ಕಾಲೇಜು ಬಳ್ಳಾರಿ | 49 | 53 | 53 | 53 | 100 | 100 |
| ಕರ್ನಾಟಕ ವೈದ್ಯಕೀಯ ಕಾಲೇಜು ಹುಬ್ಬಳ್ಳಿ | 100 | 98 | 100 | 100 | 100 | 100 |
| ಮೈಸೂರು ವೈದ್ಯಕೀಯ ಕಾಲೇಜು ಮೈಸೂರು | 99 | 85 | 101 | 98 | 104 | 98 |
| ಖಾಸಗಿ | | | | | | |
| ಸೆಯಿಂಟ್ ಜಾನ್ಸ್ ವೈದ್ಯಕೀಯ ಕಾಲೇಜು ಬೆಂಗಳೂರು | 60 | 58 | 60 | 60 | 60 | 60 |
| ಎಂ. ಎಸ್. ರಾಮಯ್ಯ ವೈದ್ಯಕೀಯ ಕಾಲೇಜು ಬೆಂಗಳೂರು | — | — | — | — | 100 | 100 |
| ಡಾ॥ ಅಂಬೇಡ್ಕರ್ ವೈದ್ಯಕೀಯ ಕಾಲೇಜು ಬೆಂಗಳೂರು | — | — | — | — | 100 | 100 |
| ಕೆಂಪೇಗೌಡ ವೈದ್ಯಕೀಯ ವಿಜ್ಞಾನ ಸಂಸ್ಥೆ ಬೆಂಗಳೂರು | — | — | — | — | — | 100 |
| ಜೆ. ಎನ್. ವೈದ್ಯಕೀಯ ಕಾಲೇಜು ಬೆಳಗಾವಿ | 73 | 75 | 75 | 100 | 105 | 105 |
| ಜೆ. ಜೆ. ಎಂ. ವೈದ್ಯಕೀಯ ಕಾಲೇಜು ದಾವಣಗೆರೆ | 40 | 75 | 75 | 75 | 125 | 125 |
| ಕಸ್ತೂರಿ ಬಾ ವೈದ್ಯಕೀಯ ಕಾಲೇಜು ಮಣಿಪಾಲ | 150 | 150 | 175 | 175 | 175 | 228 |
| ಎಂ. ಆರ್. ವೈದ್ಯಕೀಯ ಕಾಲೇಜು ಕಲ್ಬುರ್ಗಿ | 67 | 66 | 67 | 101 | 100 | 100 |

## ದಂತವೈದ್ಯ ಕಾಲೇಜುಗಳು

ರಾಜ್ಯದಲ್ಲಿರುವ ಮೂರು ದಂತವೈದ್ಯ ಕಾಲೇಜುಗಳಲ್ಲಿ ಒಂದು ಸರ್ಕಾರಿ ಕಾಲೇಜು; ಇನ್ನೆರಡು ಖಾಸಗಿ ಕಾಲೇಜುಗಳು. ಅವುಗಳೆಂದರೆ 1) ಸರ್ಕಾರಿ ದಂತವೈದ್ಯ ಕಾಲೇಜು, ಬೆಂಗಳೂರು, 2) ದಂತವೈದ್ಯ ಕಾಲೇಜು, ಮಣಿಪಾಲ ಮತ್ತು 3) ದಂತವೈದ್ಯ ಕಾಲೇಜು, ದಾವಣಗೆರೆ. ಈ ಕಾಲೇಜುಗಳಲ್ಲಿ ಬಿ. ಡಿ. ಎಸ್. ಪದವಿ ಜೊತೆಗೆ ಸ್ನಾತಕೋತ್ತರ ಪದವಿ ಶಿಕ್ಷಣವೂ ದೊರೆಯುತ್ತದೆ. ಕೆಳಕಾಣಿಸಿರುವ *ಪಟ್ಟಿಯು ರಾಜ್ಯದ ಮೂರು ದಂತವೈದ್ಯ ಕಾಲೇಜುಗಳಲ್ಲಿರುವ ಪ್ರವೇಶಾವಕಾಶಕ್ಕೆ ಸಂಬಂಧಿಸಿದ ವಿವರಗಳನ್ನು ತೋರಿಸುತ್ತದೆ.

## ಔಷಧ ವಿಜ್ಞಾನ ಕಾಲೇಜುಗಳು

ರಾಜ್ಯದಲ್ಲಿ ಒಟ್ಟು 11 ಔಷಧ ವಿಜ್ಞಾನ (ಫಾರ್ಮಸಿ) ಕಾಲೇಜುಗಳಿವೆ. ಬೆಂಗಳೂರಿನಲ್ಲಿರುವ ಔಷಧ ವಿಜ್ಞಾನ ಕಾಲೇಜು ಮಾತ್ರ ಸರ್ಕಾರಿ ಕಾಲೇಜು. ಉಳಿದ ಖಾಸಗಿ ಕಾಲೇಜುಗಳು ಇರುವ ಸ್ಥಳಗಳೆಂದರೆ ಮಣಿಪಾಲ, ಬೆಳಗಾವಿ, ಕಲ್ಬುರ್ಗಿ, ರಾಯಚೂರು, ದಾವಣಗೆರೆ, ಹರಪನಹಳ್ಳಿ, ಚಿಕ್ಕಬಳ್ಳಾಪುರ, ಮೈಸೂರು, ಶಿವಮೊಗ್ಗ ಮತ್ತು ಬೆಂಗಳೂರು. ಎಲ್ಲಾ ಕಾಲೇಜುಗಳಲ್ಲಿ ಫಾರ್ಮಸಿಯ ಡಿಪ್ಲೋಮಾ ಶಿಕ್ಷಣದ ಸೌಲಭ್ಯವಿದೆ. ಮಣಿಪಾಲ, ಬೆಳಗಾವಿ, ಹರಪನಹಳ್ಳಿ ಮತ್ತು ರಾಯಚೂರು—ಈ ನಾಲ್ಕು ಕಾಲೇಜುಗಳಲ್ಲಿ ಔಷಧ ವಿಜ್ಞಾನದ ಪದವಿ ಶಿಕ್ಷಣ ದೊರೆಯುತ್ತದೆ. ಬೆಂಗಳೂರಿನಲ್ಲಿರುವ ಸರ್ಕಾರಿ ಫಾರ್ಮಸಿ ಕಾಲೇಜು ಮತ್ತು ಮಣಿಪಾಲದಲ್ಲಿರುವ ಕಸ್ತೂರ್ ಬಾ ಫಾರ್ಮಸಿ ಕಾಲೇಜುಗಳಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣವನ್ನು ನೀಡಲಾಗುತ್ತದೆ. 1948ರ ಫಾರ್ಮಸಿ ಶಾಸನದ ಪ್ರಕಾರ ರಚನೆಯಾಗಿರುವ ಕರ್ನಾಟಕ ರಾಜ್ಯ ಫಾರ್ಮಸಿ ಮಂಡಳಿಯು ನೋಂದಾಯಿಸಲ್ಪಟ್ಟ ಔಷಧ ತಜ್ಞರುಗಳನ್ನು ದಾಖಲೆ ಮಾಡಿಕೊಳ್ಳುತ್ತದೆ. ಈ ಮಂಡಳಿಗೆ ಸರ್ಕಾರಿ ಫಾರ್ಮಸಿ ಕಾಲೇಜಿನ ಪ್ರಾಚಾರ್ಯರು ಅಧ್ಯಕ್ಷರಾಗಿರುತ್ತಾರೆ.

ಸರ್ಕಾರಿ ಔಷಧ ವಿಜ್ಞಾನ ಕಾಲೇಜು, ಬೆಂಗಳೂರು ಸ್ಥಾಪನೆಯಾದದ್ದು 1964-65ರಲ್ಲಿ. ಸಾರ್ವಜನಿಕ ಹಾಗೂ ಖಾಸಗಿ ಕ್ಷೇತ್ರಗಳ ಅಗತ್ಯಗಳನ್ನು ಪೂರೈಸಲಿಕ್ಕಾಗಿ ಫಾರ್ಮಸಿ ಪದವೀಧರರು ಹಾಗೂ ಡಿಪ್ಲೋಮಾ ವಿದ್ಯಾರ್ಥಿಗಳನ್ನು ತರಬೇತಿಗೊಳಿಸಲು ಔಷಧಶಾಸ್ತ್ರ ಶಿಕ್ಷಣ ಕೊಡುವ ಉದ್ದೇಶದಿಂದ ಔಷಧಗಳ ನಿಯಂತ್ರಣ ಇಲಾಖೆಯ ಆಡಳಿತಾಧೀನದಲ್ಲಿ ಈ ಕಾಲೇಜನ್ನು ಸ್ಥಾಪಿಸಲಾಯಿತು. ಕೇಂದ್ರ ಸರ್ಕಾರದ ಆರ್ಥಿಕ ನೆರವಿನಿಂದ ಕಾಲೇಜಿನ ವಿಸ್ತರಣಾ ಕಾರ್ಯದ ಅಂಗವಾಗಿ 1978ರಲ್ಲಿ ಔಷಧ ಶಾಸ್ತ್ರ ವಿಜ್ಞಾನಗಳಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣವನ್ನೂ ಜಾರಿಗೆ ತರಲಾಯಿತು. 1973-78 ಮತ್ತು 1980-81ರ ಮಧ್ಯದ ಅವಧಿಯಲ್ಲಿ ಆರೋಗ್ಯ ಸೇವೆಗಳ ನಿರ್ದೇಶನಾಲಯದಿಂದ ನಿಯೋಜಿಸಲ್ಪಟ್ಟ ಸೇವಾನಿರತ ಔಷಧ ತಜ್ಞರುಗಳಿಗೆ ಡಿಪ್ಲೋಮಾದ ಪುನಜ್ಞಾಪನ ತರಬೇತಿ ಕಾರ್ಯಕ್ರಮವನ್ನು ಈ ಕಾಲೇಜು ಜಾರಿಗೆ ತಂದಿತು. ತೀವ್ರ ಕಾರ್ಯಕ್ರಮದನ್ವಯ ಆರೋಗ್ಯ ಇಲಾಖೆಯ ಹುದ್ದೆಗಳಲ್ಲಿ ಕೆಲಸ ಮಾಡಲು 150 ಡಿಪ್ಲೋಮಾ ಪದವೀಧರರನ್ನು ತರಬೇತಿಗೊಳಿಸಲಾಯಿತು. ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾಲಯದ ಅಂಗಸಂಸ್ಥೆಯಾಗಿ ಅಂಗೀಕೃತವಾಗಿದೆ. ಇಲ್ಲಿ ಎರಡು ವರ್ಷಗಳ ಅವಧಿಯ ಡಿ.ಫಾರ್ಮಾ (ಡಿಪ್ಲೋಮಾ), ನಾಲ್ಕು ವರ್ಷಗಳ ಅವಧಿಯ ಬಿ.ಫಾರ್ಮಾ (ಪದವಿ) ಮತ್ತು ಎರಡು ವರ್ಷಗಳ ಅವಧಿಯ

*

| ವರ್ಷ | ಸರ್ಕಾರಿ ದಂತವೈದ್ಯ ಕಾಲೇಜು ಬೆಂಗಳೂರು | ದಂತವೈದ್ಯ ಕಾಲೇಜು ಮಣಿಪಾಲ | ದಂತವೈದ್ಯ ಕಾಲೇಜು ದಾವಣಗೆರೆ* |
|---|---|---|---|
| 1975-76 | 30 | 40 | — |
| 1976-77 | 40 | 44 | — |
| 1977-78 | 19 | 44 | — |
| 1978-79 | 30 | 45 | — |
| 1979-80 | 30 | 45 | 30 |
| 1980-81 | 35 | 45 | 30 |

*1979ರ ಜುಲೈ ತಿಂಗಳಲ್ಲಿ ಆರಂಭವಾಯಿತು.

(ಸ್ನಾತಕೋತ್ತರ) ಎಂ.ಫಾರ್ಮ ಶಿಕ್ಷಣ ದೊರೆಯುತ್ತದೆ. 1981-82ರಲ್ಲಿ ಡಿ.ಫಾರ್ಮ ಶಿಕ್ಷಣಕ್ಕೆ 60 ವಿದ್ಯಾರ್ಥಿಗಳಿಗೂ, ಬಿ.ಫಾರ್ಮ ಶಿಕ್ಷಣಕ್ಕೆ 30 ವಿದ್ಯಾರ್ಥಿಗಳಿಗೂ, ಎಂ.ಫಾರ್ಮ ಶಿಕ್ಷಣಕ್ಕೆ 18 ವಿದ್ಯಾರ್ಥಿಗಳಿಗೂ ಈ ಕಾಲೇಜಿನಲ್ಲಿ ಪ್ರವೇಶಾವಕಾಶವಿತ್ತು.

ಆಯುರ್ವೇದ ಶಿಕ್ಷಣ

ಕರ್ನಾಟಕದಲ್ಲಿ ಆಯುರ್ವೇದ ಪದ್ಧತಿಯ ಚಿಕಿತ್ಸಾ ಕ್ರಮ ಸಾಕಷ್ಟು ಜನಪ್ರಿಯವಾಗಿದೆ. ಈ ಪದ್ಧತಿಯ ಕಾರಣಪುರುಷರಾದ ಚರಕ, ಸುಶ್ರುತ ಮತ್ತಿತರ ಆಯುರ್ವೇದ ತಜ್ಞರ ಕೃತಿಗಳನ್ನು ಅಗ್ರಹಾರಗಳಲ್ಲಿ ಅಧ್ಯಯನ ಮಾಡಲಾಗುತ್ತಿತ್ತು. ಆಯುರ್ವೇದ ಚಿಕಿತ್ಸಾ ಪದ್ಧತಿಯ ಬಗ್ಗೆ ಕನ್ನಡದಲ್ಲೂ ಸಹ ಅನೇಕ ಕೃತಿಗಳಿವೆ. ಆಯುರ್ವೇದ ಕಾಲೇಜುಗಳನ್ನು ತೆರೆಯುವ ಮೂಲಕ ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳು ಈ ಪದ್ಧತಿಯ ಜ್ಞಾನ ಪ್ರಸಾರದಲ್ಲಿ ತೀವ್ರ ಆಸಕ್ತಿ ವಹಿಸಿವೆ.

ಭಾರತೀಯ ವೈದ್ಯದ ಸರಕಾರಿ ಕಾಲೇಜು, ಮೈಸೂರು : 1908ರಲ್ಲಿ ಆರಂಭವಾದ ಈ ಕಾಲೇಜಿನ ಹೊಸ ಕಟ್ಟಡದ ಉದ್ಘಾಟನೆಯು 1930ರಲ್ಲಿ ಆಗಿನ ದಿವಾನರಾಗಿದ್ದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರಿಂದ ನಡೆಯಿತು. ವಿದ್ಯಾರ್ಥಿಗಳಿಗೆ ಆಯುರ್ವೇದ ಮತ್ತು ಯುನಾನಿ ಪದ್ಧತಿಗಳಲ್ಲಿ ತರಬೇತಿ ನೀಡುವುದು ಮತ್ತು ಈ ಎರಡೂ ಪದ್ಧತಿಗಳ ಪ್ರಕಾರ ರೋಗಿಗಳಿಗೆ ಚಿಕಿತ್ಸೆ ನೀಡುವುದು ಈ ಕಾಲೇಜಿನ ಸ್ಥಾಪನೆಯ ಉದ್ದೇಶವಾಗಿತ್ತು. 1962-63ರವರೆಗೆ ಎಲ್.ಎ.ಎಂ.ಎಸ್. (ಲೈಸೆನ್ಸಿಯೇಟ್ ಇನ್ ಆಯುರ್ವೇದಿಕ್ ಮೆಡಿಸಿನ್ ಆ್ಯಂಡ್ ಸರ್ಜರಿ), ಎಲ್.ಯು.ಎಂ.ಎಸ್. (ಲೈಸೆನ್ಸಿಯೇಟ್ ಇನ್ ಯುನಾನಿ ಮೆಡಿಸಿನ್ ಆ್ಯಂಡ್ ಸರ್ಜರಿ), ಮತ್ತು ಇತರ ಸಂಯೋಜಿತ ವಿಷಯಗಳ ಶಿಕ್ಷಣಕ್ಕೆ ಇಲ್ಲಿ ವ್ಯವಸ್ಥೆಯಿತ್ತು. ಆಯುರ್ವೇದ ಔಷಧ ಪದ್ಧತಿಯನ್ನು ಅಭಿವೃದ್ಧಿಗೊಳಿಸುವ ಆಶಯದಿಂದ ಕೇಂದ್ರ ಸರ್ಕಾರ ಕೈಗೊಂಡ ನಿರ್ಧಾರಕ್ಕನುಗುಣವಾಗಿ 1963-64ರಿಂದ ಡಿ.ಎ.ಎಂ. (ಡಿಪ್ಲೋಮಾ ಇನ್ ಆಯುರ್ವೇದಿಕ್ ಮೆಡಿಸಿನ್) ಶಿಕ್ಷಣವನ್ನು ಜಾರಿಗೊಳಿಸಲಾಯಿತು. 1967-68ರಿಂದ ಬಿ.ಎಸ್.ಎ.ಎಂ. (ಬ್ಯಾಚಲರ್ ಆಫ್ ಶುದ್ಧ ಆಯುರ್ವೇದಿಕ್ ಮೆಡಿಸಿನ್) ಪದವಿ ಶಿಕ್ಷಣವನ್ನು ಪ್ರಾರಂಭಿಸಲಾಯಿತು. 1968-69ರಲ್ಲಿ ಡಿಪ್ಲೋಮಾದಾರರಿಗೆ ವಿಸ್ತರಿತ ಬಿ.ಎಸ್.ಎ.ಎಂ. ಪದವಿ ಶಿಕ್ಷಣವನ್ನು ಜಾರಿಗೆ ತರಲಾಯಿತು. 1978ರಿಂದ ಐದೂವರೆ ವರ್ಷಗಳ ಅವಧಿಯ ಬಿ.ಎ.ಎಂ.ಸ್. ಪದವಿ ಶಿಕ್ಷಣವನ್ನು ಅನುಷ್ಠಾನಕ್ಕೆ ತರಲಾಯಿತು. 1968ರ ನಂತರ ಮೈಸೂರು ವಿಶ್ವವಿದ್ಯಾಲಯದ ಅಂಗೀಕೃತ ಅಂಗಸಂಸ್ಥೆಯಾಗಿರುವ ಈ ಕಾಲೇಜಿನಲ್ಲಿ ಮೂರು ವರ್ಷಗಳ ಅವಧಿಯ ಸ್ನಾತಕೋತ್ತರ ಪದವಿ ಶಿಕ್ಷಣದ ವ್ಯವಸ್ಥೆಯೂ ಇದೆ. ವಿದ್ಯಾರ್ಥಿಗಳಿಗೆ ಪ್ರಯೋಗ ಚಿಕಿತ್ಸಾ ಸೌಲಭ್ಯ ಒದಗಿಸಲು ಮತ್ತು ಸಾರ್ವಜನಿಕ ಒಳ-ಹೊರ ರೋಗಿಗಳ ಅಗತ್ಯವನ್ನು ಪೂರೈಸಲು ಅನುಕೂಲವಾಗುವಂತೆ ಈ ಕಾಲೇಜಿಗೆ ಹೊಂದಿಕೊಂಡಂತೆ 165 ಹಾಸಿಗೆಗಳ ಒಂದು ಆಸ್ಪತ್ರೆಯಿದೆ. ಈ 165 ಹಾಸಿಗೆಗಳ ಯುನಾನಿ ಪದ್ಧತಿ ಚಿಕಿತ್ಸೆ ಪಡೆಯುವ ರೋಗಿಗಳಿಗಾಗಿಯೇ ಪ್ರಸ್ತುತ 28 ಹಾಸಿಗೆಗಳನ್ನು ಪ್ರತ್ಯೇಕವಾಗಿ ಇಡಲಾಗಿದೆ. ಭಾರತ ಸರ್ಕಾರದ ಶಿಕ್ಷಣ ಮತ್ತು ಸಂಸ್ಕೃತಿ ಸಚಿವಾಲಯದ ಆಶ್ರಯದಲ್ಲಿ ಮೈಸೂರು ವಿಶ್ವವಿದ್ಯಾಲಯವು ಈ ಕಾಲೇಜಿನಲ್ಲಿ ರಾಷ್ಟ್ರೀಯ ಸೇವಾ ಯೋಜನೆಯ ಘಟಕವನ್ನು ಜಾರಿಗೆ ತಂದಿದೆ. ಸಮಾಜ ಸೇವೆಯಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸುವುದು ಈ ಯೋಜನೆಯ ಉದ್ದೇಶ. ಈ ಕಾಲೇಜಿನಲ್ಲಿ 1981-82ರಲ್ಲಿ 25 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವಿತ್ತು.

ಭಾರತೀಯ ವೈದ್ಯದ ಸರ್ಕಾರಿ ಕಾಲೇಜು, ಬೆಂಗಳೂರು : ಇದು ಕರ್ನಾಟಕ ಸರ್ಕಾರದಿಂದ 1967-68ರಲ್ಲಿ ಸ್ಥಾಪನೆಯಾದ ಸಂಸ್ಥೆ. ಈ ಕಾಲೇಜಿನಲ್ಲಿ 5½ ವರ್ಷಗಳ ಅವಧಿಯ ಬಿ.ಎ.ಎಂ.ಎಸ್. ಪದವಿ ಶಿಕ್ಷಣದ ಜೊತೆಗೆ 1974-75ರಿಂದ ಮೂರು ವರ್ಷಗಳ ಸ್ನಾತಕೋತ್ತರ ಪದವಿ ಶಿಕ್ಷಣವನ್ನು ನೀಡಲಾಗುತ್ತಿದೆ. ಬಿ. ಎಸ್. ಎ. ಎಂ. ಮತ್ತು ಬಿ.ಎ.ಎಂ.ಎಸ್. ಪದವಿಗಳಿಗೆ ಬೇಕಾಗುವ 1½ ವರ್ಷದ ಅಲ್ಪಾವಧಿಯ ಅಥವಾ ಸಂಕ್ಷಿಪ್ತ ಶಿಕ್ಷಣಕ್ರಮವೂ ಇಲ್ಲಿದೆ. ಬೆಂಗಳೂರು ವಿಶ್ವವಿದ್ಯಾಲಯದ ಅಂಗೀಕಾರ ಪಡೆದಿರುವ ಈ ಕಾಲೇಜಿನಲ್ಲಿ 1981-82ರಲ್ಲಿದ್ದ ಪ್ರವೇಶಾವಕಾಶ 27. ಇಲ್ಲಿ ಸುಮಾರು 5,000 ಪುಸ್ತಕಗಳಿರುವ ಒಂದು ಒಳ್ಳೆಯ ಗ್ರಂಥ ಭಂಡಾರವಿದೆ. ಆಯುರ್ವೇದ ಪದ್ಧತಿಗೆ ಉತ್ತೇಜನವಾಗಿ 1982-83ರಲ್ಲಿ ಶಲ್ಯತಂತ್ರ (ಶಸ್ತ್ರವೈದ್ಯ) ದಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣ ಕ್ರಮವನ್ನು ಆರಂಭಿಸಲಾಗಿದೆ. ಅಷ್ಟೇ ಅಲ್ಲದೆ, ಕೇಂದ್ರ ಯೋಜನೆಯೊಂದರ ಆಶ್ರಯದಲ್ಲಿ 1983-84ರಿಂದ ರಸಶಾಸ್ತ್ರಕ್ಕಾಗಿಯೇ ಪ್ರತ್ಯೇಕ ಸ್ನಾತಕೋತ್ತರ ಶಿಕ್ಷಣಕ್ರಮ ಆರಂಭಿಸಲು ಯೋಜಿಸಲಾಗಿದೆ. ಇಲ್ಲಿ ಪ್ರಸಿದ್ಧ ವಿದ್ವಾಂಸರಿಂದ ವಿಸ್ತರಣಾ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತದೆ. ವಿದ್ಯಾರ್ಥಿಗಳ ಪ್ರಾತ್ಯಕ್ಷಿಕ ತರಬೇತಿಗೆ ಅನುಕೂಲವಾಗುವಂತೆ ಕಾಲೇಜು ಗಿಡಮೂಲಿಕೆಗಳ ತೋಟವೊಂದನ್ನು ನಿರ್ವಹಿಸುತ್ತಿದೆ. ಜೊತೆಗೆ, ರೋಗಿಗಳ ಪ್ರಯೋಜನಕ್ಕಾಗಿ ಆಸ್ಪತ್ರೆಯಲ್ಲಿ ಪ್ರತಿದಿನ ಹೊಸ ಕಷಾಯ ತಯಾರಿಕೆಗೆ ಬೇಕಾಗುವ ಹಸಿರು ಮೂಲಿಕೆಗಳ ಅಗತ್ಯವನ್ನು ಈ ತೋಟ ಪೂರೈಸುತ್ತದೆ.

ತಾರಾನಾಥ ಸರ್ಕಾರಿ ಆಯುರ್ವೇದ ಕಾಲೇಜು, ಬಳ್ಳಾರಿ : ಇದು ಪ್ರಖ್ಯಾತ ವೈದ್ಯರಾಗಿದ್ದ ಪಂಡಿತ ತಾರಾ

ನಾಥರ ಕೆಲವು ಅನುಯಾಯಿಗಳು 1947ರಲ್ಲಿ ಬಳ್ಳಾರಿ ಬಳಿ ಇರುವ ಸಂಗನಕಲ್ ಗ್ರಾಮದಲ್ಲಿ ಸ್ಥಾಪಿಸಿದ ಸಂಸ್ಥೆ. ಈ ಕಾಲೇಜನ್ನು 1976ರ ಜುಲೈ ತಿಂಗಳಿನಲ್ಲಿ ರಾಜ್ಯ ಸರ್ಕಾರ ವಹಿಸಿಕೊಂಡಿತು. ಬಿ.ಎಸ್.ಎ.ಎಂ. ಪದವಿ ಶಿಕ್ಷಣ ನೀಡುತ್ತಿರುವ ಈ ಕಾಲೇಜು ಕಲ್ಬುರ್ಗಿ ವಿಶ್ವವಿದ್ಯಾಲಯದಿಂದ ಅಂಗೀಕೃತ ವಾಗಿದೆ.

ರಾಜ್ಯದಲ್ಲಿ ಅನೇಕ ಖಾಸಗಿ ಆಯುರ್ವೇದ ಕಾಲೇಜು ಗಳಿದ್ದು ಅವುಗಳ ಸಂಕ್ಷಿಪ್ತ ಸಮೀಕ್ಷೆಗಳನ್ನು ಇಲ್ಲಿ ಕೊಡ ಲಾಗಿದೆ.

ಆಯುರ್ವೇದ ಕಾಲೇಜು, ಉಡುಪಿ: ಇದು ಸ್ಥಾಪನೆಯಾದದ್ದು 1958ರಲ್ಲಿ. ಕರ್ನಾಟಕ ಆಯುರ್ವೇದ ಸೇವಾ ಸಂಘ, ಉಡುಪಿ ಎಂಬ ನೋಂದಾಯಿತ ಸಂಸ್ಥೆಯು ಈ ಕಾಲೇಜನ್ನು ಉಡುಪಿಯ ಬಳಿ ಕುತ್ಪಾಪ್ಪಾಡಿ ಎಂಬಲ್ಲಿ ಸ್ಥಾಪಿ ಸಿತು. ಈ ಕಾಲೇಜಿಗೆ ಹೊಂದಿಕೊಂಡ ಆಸ್ಪತ್ರೆಯಲ್ಲಿ ಸಂಧಿ ವಾತ, ಮಧುಮೂತ್ರ, ಅಸ್ತಮಾ, ತೀವ್ರಹುಣ್ಣು, ಕಾಮಾಲೆ, ಜಠರ ಹುಣ್ಣು, ಇತ್ಯಾದಿ ರೋಗಗಳಿಗೆ ಯಶಸ್ವಿ ಚಿಕಿತ್ಸೆ ದೊರೆಯು ತ್ತದೆ. ಕಾಲೇಜಿನ ಆಡಳಿತ ನೋಡಿಕೊಳ್ಳುತ್ತಿದ್ದ ಉಡುಪಿಯ ಕರ್ನಾಟಕ ಆಯುರ್ವೇದ ಸೇವಾ ಸಂಘವು 1979ರಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಟ್ರಸ್ಟ್ (ರಿ), ಉಜಿರೆ—ಈ ಸಂಸ್ಥೆಯೊಡನೆ ವಿಲೀನಗೊಂಡಿತು. ಮಂಗಳೂರು ವಿಶ್ವವಿದ್ಯಾಲಯದ ಅಂಗೀಕಾರ ಪಡೆದಿರುವ ಈ ಕಾಲೇಜಿನಲ್ಲಿ ಬಿ.ಎ.ಎಂ.ಎಸ್. ಪದವಿ ಶಿಕ್ಷಣದ ವಿದ್ಯಾರ್ಥಿಗಳಿಗೆ ತರಬೇತಿ ದೊರೆಯುತ್ತಿದೆ.

ಶ್ರೀ ದಾನಪ್ಪ ಗುರುಸಿದ್ದಪ್ಪ ನೀಲಮಾಳಗಿ ಆಯು ರ್ವೇದ ವೈದ್ಯಕೀಯ ಕಾಲೇಜು, ಗದಗ: ಈ ಕಾಲೇಜು ಶ್ರೀ ಜಗದ್ಗುರು ಶಿವಾನಂದ ವಿದ್ಯಾವರ್ಧಕ ಸಂಸ್ಥೆಯಿಂದ 1979 ರಲ್ಲಿ ಗದಗಿನಲ್ಲಿ ಸ್ಥಾಪಿತವಾಯಿತು. ಭಾರತೀಯ ಔಷಧ ಪದ್ಧತಿಗಳನ್ನು ಸುಧಾರಿಸುವ ಮತ್ತು ಅಗತ್ಯವಿರುವವರಿಗೆ ಆಯುರ್ವೇದ ಔಷಧಗಳನ್ನು ಉಚಿತವಾಗಿ ಒದಗಿಸುವ ಆಶಯ ವನ್ನಿಟ್ಟುಕೊಂಡು ಈ ಕಾಲೇಜನ್ನು ಸ್ಥಾಪಿಸಲಾಯಿತು. ಕಾಲೇಜಿಗೆ ಹೊಂದಿಕೊಂಡಂತೆ ಇರುವ 25 ಹಾಸಿಗೆಗಳ ಆಸ್ಪತ್ರೆಯು ಉಚಿತ ಔಷಧಿ ಹಾಗೂ ಉಚಿತ ಚಿಕಿತ್ಸಾ ಸೇವೆ ಯನ್ನು ಒದಗಿಸುತ್ತಿದೆ. ಕರ್ನಾಟಕ ವಿಶ್ವವಿದ್ಯಾಲಯದ ಅಂಗೀಕಾರ ಪಡೆದಿರುವ ಈ ಕಾಲೇಜು ಬಿ. ಎ. ಎಂ. ಎಸ್. ಪದವಿ ಶಿಕ್ಷಣ ನೀಡುತ್ತಿದೆ. 1981-82ರಲ್ಲಿ ಈ ಕಾಲೇಜಿನಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಸಂಖ್ಯೆ 20.

ಆಯುರ್ವೇದ ಮಹಾವಿದ್ಯಾಲಯ, ವಿಜಾಪುರ: ಇದು ಸ್ಥಾಪನೆಯಾದದ್ದು 1955ರಲ್ಲಿ. ಕರ್ನಾಟಕ ವಿಶ್ವವಿದ್ಯಾ ಲಯದ ಬಿ. ಎಸ್. ಎ. ಎಂ. ಪದವಿ ಶಿಕ್ಷಣ ನೀಡುತ್ತಿರುವ ಈ ಕಾಲೇಜಿನಿಂದ ಪದವಿ ಶಿಕ್ಷಣ ಪಡೆದು ಮೊದಲ ತಂಡ ಹೊರ ಬಂದುದು 1974ರಲ್ಲಿ. ಇದಕ್ಕೆ ಮೊದಲು ಬಿ. ಎ. ಎಂ. ಎಸ್. (ಆಯುರ್ವೇದ ಆಚಾರ್ಯ) ಪದವಿ ಶಿಕ್ಷಣ ನೀಡಲಾಗುತ್ತಿತ್ತು. ಈ ಕಾಲೇಜಿನಲ್ಲಿ 25 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವಿದ್ದು, ಇದಕ್ಕೆ ಹೊಂದಿಕೊಂಡಂತೆ 60 ಹಾಸಿಗೆಗಳ ಒಂದು ಆಸ್ಪತ್ರೆ ಹಾಗೂ ಒಂದು ಮೂಲಿಕೆ ತೋಟವಿದೆ.

ಬಿ. ಎಂ. ಕಂಕಣವಾಡಿ ಆಯುರ್ವೇದ ಮಹಾ ವಿದ್ಯಾಲಯ: ಬೆಳಗಾವಿಯಲ್ಲಿ 1933ರಲ್ಲಿ ಸ್ಥಾಪಿತವಾದ ಈ ಸಂಸ್ಥೆಯಲ್ಲಿ ಆರಂಭದಲ್ಲಿ ನೀಡಲಾಗುತ್ತಿದ್ದ ಶಿಕ್ಷಣ ಕ್ರಮಗಳೆಂದರೆ– ಭಿಷಗ್ವರ, ಡಿ. ಎಸ್. ಎ. ಸಿ., ಜಿ. ಸಿ. ಐ. ಎಂ. ಮತ್ತು ಡಿ. ಎ. ಎಂ. ಕರ್ನಾಟಕ ವಿಶ್ವವಿದ್ಯಾಲಯದ ಅಂಗೀಕೃತ ಸಂಸ್ಥೆಯಾದ ಈ ಕಾಲೇಜಿನಲ್ಲಿ 1968-69ರ ಶೈಕ್ಷಣಿಕ ವರ್ಷದಿಂದ ಬಿ. ಎಸ್. ಎ. ಎಂ. ಎಂಬ ಹೊಸ ಪದವಿ ಶಿಕ್ಷಣ ಕ್ರಮವನ್ನು ಜಾರಿಗೆ ತರಲಾಯಿತು. ಮತ್ತು 1978-79ರಿಂದ ಬಿ. ಎ. ಎಂ. ಎಸ್. ಪದವಿ ಶಿಕ್ಷಣವನ್ನು ಜಾರಿಗೆ ತಂದಿದೆ. ಕಾಲೇಜಿಗೆ ಔಷಧ ವಿಜ್ಞಾನ (ಫಾರ್ಮಸಿ) ವಿಭಾಗವಿರುವ ತನ್ನದೇ ಆದ ಒಂದು ಆಸ್ಪತ್ರೆ ಮತ್ತು ಗಿಡಮೂಲಿಕೆಗಳ ಎರಡು ತೋಟ ಗಳಿವೆ. ಪ್ರಸಿದ್ಧ ನೇತ್ರ ಶಸ್ತ್ರವೈದ್ಯ ಡಾ|| ಎಂ. ಸಿ. ಮೋದಿ ಅವರು ಈ ಕಾಲೇಜಿನ ವಿದ್ಯಾರ್ಥಿಯಾಗಿದ್ದರು.

ಆಯುರ್ವೇದ ಮಹಾವಿದ್ಯಾಲಯ, ಹುಬ್ಬಳ್ಳಿ: ಪ್ರಸಿದ್ಧ ವೈದ್ಯಗುರು ಡಾ|| ಡಿ. ಎ. ಹಲಸೀಕರ ಅವರು 1954 ರಲ್ಲಿ ಸ್ಥಾಪಿಸಿದ ಈ ಸಂಸ್ಥೆಯನ್ನು ಡಾ|| ಎನ್. ಎಸ್. ಹರ್ಡೀಕರ ಅವರ ಮಾರ್ಗದರ್ಶನದಲ್ಲಿ ಹುಬ್ಬಳ್ಳಿ ಆಯುರ್ವೇದ ಸೇವಾ ಸಮಿತಿಯು 1961ರಲ್ಲಿ ವಹಿಸಿಕೊಂಡಿತು. ಈ ಕಾಲೇಜಿಗೆ ಹೊಂದಿಕೊಂಡಂತೆ ಒಂದು ಆಸ್ಪತ್ರೆಯಿದೆ. ಕರ್ನಾಟಕ ವಿಶ್ವ ವಿದ್ಯಾಲಯದ ಅಂಗೀಕಾರ ಪಡೆದಿರುವ ಈ ಕಾಲೇಜಿನಲ್ಲಿ ಬಿ. ಎ. ಎಂ. ಎಸ್. ಮತ್ತು 5½ ವರ್ಷಗಳ ಅವಧಿಯ 'ಆಯು ರ್ವೇದ ಆಚಾರ್ಯ' ಎಂಬ ಇನ್ನೊಂದು ಪದವಿ ಶಿಕ್ಷಣವನ್ನು ನೀಡಲಾಗುತ್ತಿದೆ. 1981-82ರಲ್ಲಿ ಈ ಕಾಲೇಜಿನಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಸಂಖ್ಯೆ 122.

ಸರ್ಕಾರಿ ಕೇಂದ್ರ ಔಷಧಾಗಾರ, ಬೆಂಗಳೂರು: ಆಯುರ್ವೇದ ಮತ್ತು ಯುನಾನಿ ಔಷಧಿಗಳನ್ನು ತಯಾರಿಸುವ ಉದ್ದೇಶದಿಂದ ಈ ಸಂಸ್ಥೆ 1958ರಲ್ಲಿ ಆರಂಭವಾಯಿತು. ಈ ಔಷಧಾಗಾರವು ಬೆಂಗಳೂರು ಮತ್ತು ಮೈಸೂರಿನಲ್ಲಿರುವ ದೊಡ್ಡ ಆಸ್ಪತ್ರೆಗಳಿಗೆ ಆಯುರ್ವೇದ ಮತ್ತು ಯುನಾನಿ ಔಷಧಗಳನ್ನು ಪೂರೈಸುವುದರ ಜೊತೆಗೆ ರಾಜ್ಯದ ಸರ್ಕಾರಿ ಹಾಗೂ ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿರುವ ಎಲ್ಲ ಆಯುರ್ವೇದ ಮತ್ತು ಯುನಾನಿ

ಆಸ್ಪತ್ರೆಗಳಿಗೂ ಔಷಧಗಳನ್ನು ಪೂರೈಸುತ್ತದೆ. ಈ ಔಷಧಾಗಾರಕ್ಕೆ ಧನ್ವಂತರಿ ವನ ಎಂಬ ಗಿಡಮೂಲಿಕಾ ವನವಿದೆ. ಈ ಸಂಸ್ಥೆಗೆ ಒಬ್ಬ ಮುಖ್ಯ ಮೇಲ್ವಿಚಾರಣಾಧಿಕಾರಿಯಿದ್ದು ಔಷಧ ವಿಜ್ಞಾನದ ಎಲ್ಲಾ ಮೇಲ್ವಿಚಾರಣೆ ಇವನದೇ ಆಗಿರುತ್ತದೆ. ಅಸಿದ್ಧ ಔಷಧಗಳು, ಆಯುರ್ವೇದ ಸಿದ್ಧೌಷಧ, ಯುನಾನಿ ಸಿದ್ಧೌಷಧ ಮತ್ತು ಭಾಂಗಿ ಹಾಗೂ ರವಾನೆ—ಹೀಗೆ ಈ ಔಷಧಾಗಾರದಲ್ಲಿ ನಾಲ್ಕು ವಿಭಾಗಗಳಿವೆ. ಇಲ್ಲಿ ಕೇಂದ್ರ ಸರ್ಕಾರದ ಆರ್ಥಿಕ ನೆರವಿನಿಂದ 1979-80ರಲ್ಲಿ ಸ್ಥಾಪಿಸಿದ ಔಷಧ ಪರೀಕ್ಷಾ ಪ್ರಯೋಗಾಲಯವೊಂದಿದೆ. ಔಷಧಾಗಾರದಲ್ಲಿ ತಯಾರಾದ ಔಷಧಗಳನ್ನು ವಿಶ್ಲೇಷಿಸಿ, ಅವುಗಳ ಗುಣಮಟ್ಟವನ್ನು ರಕ್ಷಿಸಲು ಸಹಾಯಕವಾಗುವಂತೆ ವರದಿ ಮಾಡುವುದು ಈ ಪ್ರಯೋಗಾಲಯದ ಮುಖ್ಯ ಕಾರ್ಯ. ಸರ್ಕಾರಿ ಕೇಂದ್ರ ಔಷಧಾಗಾರದಲ್ಲಿ 1980–81ರಲ್ಲಿ 23.03 ಲಕ್ಷ ರೂ. ಬೆಲೆಯ ಔಷಧಗಳನ್ನು ತಯಾರಿಸಿದ್ದರೆ 1981–82ರಲ್ಲಿ 26.01 ಲಕ್ಷ ರೂ. ಬೆಲೆಯ ಔಷಧಗಳನ್ನು ತಯಾರಿಸಲಾಯಿತು. 1979ರಿಂದ ಈ ಔಷಧಾಗಾರದಲ್ಲಿ ಆಯುರ್ವೇದ ಮತ್ತು ಯುನಾನಿ ವಿದ್ಯಾರ್ಥಿಗಳಿಗೆ ಔಷಧ ತಜ್ಞರ (ಫಾರ್ಮಸಿಸ್ಟ್) ತರಬೇತಿಯನ್ನೂ ನೀಡಲಾಗುತ್ತಿದೆ. ಇಲ್ಲಿ ತಯಾರಾಗುವ ಔಷಧಗಳಿಗೆ ಪೊರೆಚೀಲದ ಗುಳಿಗೆಗಳು, ಲೇಪಿತ ಮಾತ್ರೆಗಳು ಮತ್ತು ಪಾಕಗಳ ರೂಪ ಕೊಡುವ ಪದ್ಧತಿಯನ್ನು ಜಾರಿಗೆ ತರುವ ಯೋಜನೆಯಿದೆ.

ಆಯುರ್ವೇದ ಅಕ್ಯಾಡಮಿ : 1981ರಲ್ಲಿ 35 ಜನರ ಒಂದು ತಂಡವು ಆರಂಭಿಸಿದ ಆಯುರ್ವೇದ ಅಕ್ಯಾಡಮಿಯು 1982ರಲ್ಲಿ ನೋಂದಾಯಿತ ಸಂಸ್ಥೆಯಾಯಿತು. ಅಕ್ಯಾಡಮಿಯ ಮುಖ್ಯ ಉದ್ದೇಶಗಳೆಂದರೆ—1) ಆಯುರ್ವೇದದ ಬಗ್ಗೆ ಅಧ್ಯಯನ ನಡೆಸುವುದು, ಪ್ರಸಾರ ಮತ್ತು ಪ್ರಚಾರ ಮಾಡುವುದು ; 2) ಆಯುರ್ವೇದ ಮತ್ತು ಸಂಬಂಧಪಟ್ಟ ವಿಷಯಗಳಲ್ಲಿ ತರಬೇತಿ ಕಾರ್ಯಕ್ರಮಗಳನ್ನು ನಡೆಸುವುದು ಅಥವಾ ಅಂತಹ ಕಾರ್ಯಗಳಿಗೆ ಸಹಾಯಧನ ನೀಡುವುದು; 3) ಆರೋಗ್ಯ ಹಾಗೂ ವೈದ್ಯಕೀಯ ರಕ್ಷಣಾ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ಅಂತಹ ಕೇಂದ್ರಗಳಿಗೆ ನೆರವಾಗುವುದು, ಅವುಗಳ ಜವಾಬ್ದಾರಿ ಹೊರುವುದು ಅಥವಾ ವಹಿಸಿಕೊಳ್ಳುವುದು ; 4) ಆಯುರ್ವೇದಕ್ಕೆ ಸಂಬಂಧಿಸಿದಂತೆ ಉಪನ್ಯಾಸಗಳು, ವಿಚಾರಗೋಷ್ಠಿಗಳು ಮತ್ತು ಸಮ್ಮೇಳನಗಳನ್ನು ಏರ್ಪಡಿಸುವುದು ; ಮತ್ತು 5) ಅಕ್ಯಾಡಮಿಯ ಉದ್ದೇಶಕ್ಕೆ ಸಂಬಂಧಿಸಿದಂತಹ ಅಥವಾ ಉಪಯುಕ್ತವಾದ ಇತರ ಯಾವುದೇ ಪ್ರಾಸಂಗಿಕ ಚಟುವಟಿಕೆಗಳನ್ನು ನಡೆಸುವುದು. 1982ರ ನವೆಂಬರ್‌ನಲ್ಲಿದ್ದಂತೆ ಈ ಅಕ್ಯಾಡಮಿಯು ಆಡಳಿತ 42 ಜನರ ಒಂದು ಮಂಡಳಿಯಿಂದ ನಿರ್ವಹಿಸಲ್ಪಡುತ್ತಿತ್ತು. ತೀವ್ರ ಶೀತ, ನೆಗಡಿ, ಮೂಗು ಕಟ್ಟುವುದು, ಅಪಸ್ಮಾರ ಮತ್ತು ಸಾಮಾನ್ಯ ಚರ್ಮರೋಗ—ಇಂತಹ ರೋಗಿಗಳಿಗಾಗಿ ಅಕ್ಯಾಡಮಿಯು ಬೆಂಗಳೂರಿನ ಬೇರೆ ಬೇರೆ ಕಡೆ ಮೂರು ಆರೋಗ್ಯ ಶಿಬಿರಗಳನ್ನು ನಡೆಸಿದೆ. ಸಾಮಾಜಿಕ ಪ್ರಜ್ಞೆಯಿರುವ, ವಿಶೇಷವಾಗಿ ಆರೋಗ್ಯ ಸಂಬಂಧ ನಿಷ್ಠೆಯಿರುವ ವಿವಿಧ ಪದ್ಧತಿಗಳ ವೈದ್ಯರು, ವಿವಿಧ ಶಿಕ್ಷಣ ವಿಷಯಗಳ ತಜ್ಞರು ಮತ್ತು ಆಯುರ್ವೇದದಲ್ಲಿ ಆಸಕ್ತಿಯುಳ್ಳ ವೈದ್ಯಕೀಯ ಪ್ರಮುಖರಲ್ಲಿ ಅಕ್ಯಾಡಮಿಯು ಆಸಕ್ತಿ ಹೊಂದಿದೆ.

ಕೇಂದ್ರ ಭಾರತೀಯ ಔಷಧ ಗಿಡಗಳ ಸಂಸ್ಥೆ, ಬೆಂಗಳೂರು : ಉತ್ತರ ಪ್ರದೇಶದ ಲಕ್ನೋದಲ್ಲಿರುವ ಸೆಂಟ್ರಲ್ ಇಂಡಿಯನ್ ಮೆಡಿಸಿನಲ್ ಪ್ಲ್ಯಾಂಟ್ಸ್ ಆರ್ಗನೈಜೇಶನ್ ಸಂಸ್ಥೆಯ ಮೂರು ಪ್ರಾದೇಶಿಕ ಕೇಂದ್ರಗಳಲ್ಲಿ ಇದು ಒಂದಾಗಿದೆ. ಅಗತ್ಯ ಎಣ್ಣೆಗಳ ತಯಾರಿಕೆಗೆ ಸೂಕ್ತವಾದ ಕಾರ್ಯವಿಧಾನ, ಕೃಷಿತಂತ್ರ, ಬಟ್ಟಿ ತಂತ್ರ ಮತ್ತು ಲಾಭದಾಯಕ ವಿಧಾನಗಳನ್ನು ಕಂಡುಕೊಳ್ಳುವ ಉದ್ದೇಶದಿಂದ 1960ರಲ್ಲಿ ಬೆಂಗಳೂರು ಶಾಖೆಯು ಆರಂಭಗೊಂಡಿತು. ಕೆಲವೊಂದು ಔಷಧ ಗಿಡಗಳು ಇಲ್ಲಿ ಬೆಳೆಸುವುದರ ಸಾಧ್ಯತೆಯು ಪ್ರಾಯೋಗಿಕ ಹಂತದಲ್ಲಿವೆ. ಗಿಡಗಳ ಜಾತಿ ಮತ್ತು ಬೆಳೆಯುವ ಸ್ಥಳಗಳ ಸಾಧ್ಯಾಸಾಧ್ಯತೆಗಳ ಬಗ್ಗೆ ಇಲ್ಲಿ ರೈತರಿಗೆ ಉಚಿತ ತಾಂತ್ರಿಕ ಸಲಹೆಗಳನ್ನು ನೀಡಲಾಗುತ್ತದೆ.

ಕರ್ನಾಟಕ ಆಯುರ್ವೇದ ಮತ್ತು ಯುನಾನಿ ನೋಂದಾವಣೆ ಮಂಡಲಿ : 1961ರಲ್ಲಿ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿಯವರ ನೊಂದಾವಣೆ ಮತ್ತು ವೈದ್ಯಕೀಯ ವೃತ್ತಿಯವರ ವಿವಿಧ ನಿಬಂಧನೆಗಳ ಶಾಸನ ಮಂಜೂರಾಯಿತು. ಇದನ್ನು 1964ರಲ್ಲಿ ತಿದ್ದುಪಡಿ ಮಾಡಲಾಯಿತು. 1) ಆಯುರ್ವೇದ ಔಷಧ ಪದ್ಧತಿ ಮತ್ತು 2) ಯುನಾನಿ ಔಷಧ ಪದ್ಧತಿ ಹಾಗೂ ಸಂಯೋಜಿತ ಔಷಧ ಪದ್ಧತಿಗಳ ಅಧ್ಯಯನ ಮತ್ತು ಪ್ರಸಾರಕ್ಕೆ ಉತ್ತೇಜನ ಕೊಡುವ ದೃಷ್ಟಿಯಿಂದ, ಆ ಪದ್ಧತಿಗಳ ವೈದ್ಯರುಗಳ ನೋಂದಾವಣೆ ಮತ್ತು ಅವರ ವಿದ್ಯಾರ್ಹತೆಗಳನ್ನು ನಿಬಂಧನೆಗೊಳಪಡಿಸಲು ಮತ್ತು ಕರ್ನಾಟಕದಲ್ಲಿ ವೃತ್ತಿ ವೈದ್ಯರಿಗೆ ಸಂಬಂಧಿಸಿದ ಕಾನೂನನ್ನು ತಿದ್ದುಪಡಿ ಮಾಡಲು ಈ ಶಾಸನವನ್ನು ಜಾರಿಗೆ ತರಲಾಯಿತು. ಈ ಶಾಸನದ ಪ್ರಕಾರ, 1965ರ ಏಪ್ರಿಲ್‌ನಲ್ಲಿ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೃತ್ತಿವೈದ್ಯರ ಮಂಡಳಿಯನ್ನು ರಚಿಸಲಾಯಿತು. ಮಂಡಳಿಯ ಅಧಿಕಾರಾವಧಿ ಅದು ಪ್ರಥಮ ಸಭೆ ಸೇರಿದ 1965ರ ಜೂನ್ 7 ರಿಂದ ಮೂರು ವರ್ಷಗಳಾಗಿತ್ತು. ಈ ಅವಧಿಯಲ್ಲಿ ಶಾಸನದ ಪ್ರಕಾರ, ತಮ್ಮ ಹೆಸರುಗಳನ್ನು ನೋಂದಾಯಿಸಲು ಅರ್ಹರಾದ ವೃತ್ತಿವೈದ್ಯರನ್ನು ಮಂಡಳಿಯು ನೋಂದಾಯಿಸಿತು. 1977ರಲ್ಲಿ ಕರ್ನಾಟಕ ಸರ್ಕಾರವು ಈ ಶಾಸನದ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಿ, ಯಾವುದೇ ಕಾರಣದಿಂದ ಮಂಡಳಿಯ ಪುನರ್ರಚನೆಯಾಗದ ಸಂದರ್ಭದಲ್ಲಿ ಆಡಳಿತಗಾರರನ್ನು ನೇಮಿಸಲು ಅವಕಾಶ

ಕಲ್ಪಿಸಿತು. ಆರಂಭದಲ್ಲಿ ಒಂದು ವರ್ಷದ ಅವಧಿಗೆ ಆಡಳಿತಾಧಿಕಾರಿಗಳನ್ನು ನೇಮಿಸಲಾಯಿತು. ನಂತರ 1980ರಲ್ಲಿ ಕರ್ನಾಟಕ ಸರ್ಕಾರವು, ಮುಂದಿನ ಆಜ್ಞೆ ಹೊರಡುವವರೆಗೂ ಬೆಂಗಳೂರಿನ ಕೇಂದ್ರ ಔಷಧ ವಿಜ್ಞಾನ ಕಾಲೇಜಿನ ಮುಖ್ಯ ಮೇಲ್ವಿಚಾರಕರನ್ನೇ ಮಂಡಳಿಯ ಆಡಳಿತಾಧಿಕಾರಿಗಳನ್ನಾಗಿ ಮಾಡಿತು.

### ಹೋಮಿಯೋಪತಿಕ್ ಕಾಲೇಜುಗಳು

ಎ. ಎಂ. ಶೇಕ್ ಹೋಮಿಯೋಪತಿಕ್ ವೈದ್ಯಕೀಯ ಕಾಲೇಜು, ಬೆಳಗಾವಿ: 1967ರಲ್ಲಿ ಸ್ಥಾಪನೆಯಾದ ಈ ಕಾಲೇಜು ಯಾವುದೇ ವಿಶ್ವವಿದ್ಯಾಲಯದ ಸ್ವೀಕೃತ ಸಂಸ್ಥೆಯಲ್ಲದಿದ್ದರೂ, ಪರೀಕ್ಷೆಗಳನ್ನು ನಡೆಸುವ ವಿಷಯದಲ್ಲಿ ಬೆಂಗಳೂರಿನಲ್ಲಿರುವ ಕರ್ನಾಟಕ ರಾಜ್ಯ ಹೋಮಿಯೋಪತಿಕ್ ಮಂಡಳಿ ಮತ್ತು ಪರೀಕ್ಷಕರ ಮಂಡಳಿಗಳ ನಿಯಂತ್ರಣಕ್ಕೆ ಒಳಪಟ್ಟಿದೆ. ಕಾಲೇಜಿಗೆ ಸ್ವಂತ ಆಸ್ಪತ್ರೆಯೊಂದಿದ್ದು, ಅದರಲ್ಲಿ ಸುಮಾರು 200 ಒಳ ರೋಗಿಗಳಿಗೆ ಸ್ಥಳಾವಕಾಶ ಕಲ್ಪಿಸಲಾಗಿದೆ. ಈ ಕಾಲೇಜು ನಾಲ್ಕು ವರ್ಷಗಳ ಅವಧಿಯ ಎಲ್. ಸಿ. ಇ. ಎಚ್. ಎಂದು ಕರೆಯಲ್ಪಡುವ ಡಿಪ್ಲೋಮಾ ಶಿಕ್ಷಣವನ್ನೂ, ಐದು ವರ್ಷಗಳ ಅವಧಿಯ ಜಿ. ಸಿ. ಇ. ಎಚ್. ಎಂಬ ಪದವಿ ಶಿಕ್ಷಣವನ್ನೂ ನೀಡುತ್ತಿದೆ. ಈ ಕಾಲೇಜಿನಲ್ಲಿ 1981-82ರಲ್ಲಿ ಡಿಪ್ಲೋಮಾ ಮತ್ತು ಪದವಿ ಶಿಕ್ಷಣಕ್ಕೆ ಸೇರಿಸಿಕೊಳ್ಳಲಾದ ವಿದ್ಯಾರ್ಥಿಗಳ ಸಂಖ್ಯೆ ಅನುಕ್ರಮವಾಗಿ 117 ಮತ್ತು 76. ಈ ಸಂಖ್ಯೆ 1980-81ರಲ್ಲಿ ಅನುಕ್ರಮವಾಗಿ 41 ಮತ್ತು ಒಂಬತ್ತು ಆಗಿತ್ತು.

ಹೋಮಿಯೋಪತಿಕ್ ವೈದ್ಯಕೀಯ ಕಾಲೇಜು, ಕಲ್ಬುರ್ಗಿ: ಇದು 1967ರಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸ್ಥಾಪಿತವಾದ ಮೊದಲ ಸಂಸ್ಥೆ. ಹೈದರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆಯವರು ಸ್ಥಾಪಿಸಿದ ಈ ಕಾಲೇಜಿನ ಉದ್ದೇಶ—ಹೋಮಿಯೋಪತಿ ಔಷಧ ಪದ್ಧತಿಯನ್ನು ಜನಪ್ರಿಯಗೊಳಿಸುವುದಾಗಿತ್ತು. ಈ ಕಾಲೇಜು ಕರ್ನಾಟಕ ಹೋಮಿಯೋಪತಿ ಶಿಕ್ಷಣ ಮಂಡಳಿಯಿಂದ ಅಂಗೀಕಾರ ಪಡೆದಿದೆ. ಒಂದು ವರ್ಷದ ಅಂತರಿಕ ಸೇವೆಯೂ ಸೇರಿದಂತೆ 5½ ವರ್ಷಗಳ ಅವಧಿಯ ಬಿ. ಎಚ್. ಎಂ. ಎಸ್. (ಬ್ಯಾಚಲರ್ ಆಫ್ ಹೋಮಿಯೋಪತಿಕ್ ಮೆಡಿಸನ್ ಅ್ಯಂಡ್ ಸರ್ಜರಿ) ಎಂಬ ಪದವಿ ಶಿಕ್ಷಣ ನೀಡಲಾಗುತ್ತದೆ. ಈ ಕಾಲೇಜಿನಲ್ಲಿ 1980-81ರಲ್ಲಿ 46 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವಿದ್ದರೆ 1981-82ರಲ್ಲಿ 42 ಜನಕ್ಕೆ ಅವಕಾಶವಿತ್ತು.

ಹಹ್ನೆಮೇನಿಯನ್ ಹೋಮಿಯೋಪತಿಕ್ ಔಷಧಿ ಕಾಲೇಜು, ಬೆಂಗಳೂರು: ಇದು ಕರ್ನಾಟಕಕ್ಕೆ ಹೋಮಿಯೋಪತಿ ಪದ್ಧತಿಯನ್ನು ತಂದ ಮೊಟ್ಟಮೊದಲ ಸಂಸ್ಥೆ. ಸಮರ್ಥ ಹೋಮಿಯೋಪತಿ ವೈದ್ಯರುಗಳನ್ನು ತರಬೇತಿಗೊಳಿಸುವ ಉದ್ದೇಶದಿಂದ 1955ರಲ್ಲಿ ಈ ಕಾಲೇಜನ್ನು ಆರಂಭಿಸಲಾಯಿತು. 1971-72ನೇ ಶೈಕ್ಷಣಿಕ ವರ್ಷದಿಂದ ನಾಲ್ಕು ವರ್ಷಗಳ ಅವಧಿಯ ಎಲ್. ಸಿ. ಇ. ಎಚ್. ಎಂಬ ಡಿಪ್ಲೋಮಾ ಶಿಕ್ಷಣವನ್ನೂ, ಐದು ವರ್ಷಗಳ ಅವಧಿಯ ಜಿ. ಸಿ. ಇ. ಎಚ್. ಎಂಬ ಪದವಿ ಶಿಕ್ಷಣವನ್ನೂ ನೀಡಲು ಕರ್ನಾಟಕ ಸರ್ಕಾರವು ಈ ಕಾಲೇಜಿಗೆ ಮನ್ನಣೆ ನೀಡಿದೆ. ಸ್ವಂತ ಆಸ್ಪತ್ರೆಯನ್ನು ಹೊಂದಿರುವ ಈ ಕಾಲೇಜು ಕರ್ನಾಟಕ ಹೋಮಿಯೋಪತಿ ಮಂಡಳಿಯಿಂದ ಅಂಗೀಕಾರ ಪಡೆದಿವೆ. 1981-82ರಲ್ಲಿ ಈ ಕಾಲೇಜಿನ ಡಿಪ್ಲೋಮಾ ಮತ್ತು ಪದವಿ ಶಿಕ್ಷಣಕ್ಕೆ ಪ್ರವೇಶ ಪಡೆದ ವಿದ್ಯಾರ್ಥಿಗಳ ಸಂಖ್ಯೆ ಅನುಕ್ರಮವಾಗಿ 25 ಮತ್ತು 18.

ಸರ್ಕಾರಿ ಯುನಾನಿ ವೈದ್ಯಕೀಯ ಕಾಲೇಜು, ಬೆಂಗಳೂರು: ಯುನಾನಿ ಔಷಧ ಪದ್ಧತಿಯನ್ನು ಪುನರುಜ್ಜೀವನಗೊಳಿಸುವ ಉದ್ದೇಶದಿಂದ 1965-66ರಲ್ಲಿ ಸ್ಥಾಪಿತವಾದ ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾಲಯದಿಂದ ಅಂಗೀಕೃತವಾಗಿದೆ. ಇಲ್ಲಿ 5½ ವರ್ಷಗಳ ಅವಧಿಯ ಬಿ. ಯು. ಎಂ. ಎಸ್. (ಬ್ಯಾಚಲರ್ ಆಫ್ ಯುನಾನಿ ಮೆಡಿಸಿನ್ ಅ್ಯಂಡ್ ಸರ್ಜರಿ) ಪದವಿ ಶಿಕ್ಷಣ ನೀಡಲಾಗುತ್ತದೆ. 1981-82ರಲ್ಲಿ ಈ ಕಾಲೇಜಿಗೆ ಪ್ರವೇಶ ಪಡೆದ ವಿದ್ಯಾರ್ಥಿಗಳ ಸಂಖ್ಯೆ 13. 1982-83ರಲ್ಲಿ ಈ ಕಾಲೇಜನ್ನು ಬೆಂಗಳೂರಿನಿಂದ ಕಲ್ಬುರ್ಗಿಗೆ ಸ್ಥಳಾಂತರಿಸಲಾಯಿತು. (ಈಗ ಮತ್ತೆ ಬೆಂಗಳೂರಿಗೆ ಅದನ್ನು ತರಲಾಗಿದೆ). ಈಗಾಗಲೇ ತಿಳಿಸಿರುವಂತೆ ಮೈಸೂರಿನಲ್ಲಿರುವ ಭಾರತೀಯ ಔಷಧ ಪದ್ಧತಿಯ ಸರ್ಕಾರಿ ಕಾಲೇಜಿನಲ್ಲೂ ಯುನಾನಿ ಶಿಕ್ಷಣವನ್ನು ನೀಡಲಾಗುತ್ತದೆ.

## ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ ಸೇವೆಗಳು

ದೇಶದ ಇತರ ಭಾಗಗಳಂತೆ, ರಾಜ್ಯದಲ್ಲಿ ಬಹಳ ಹಿಂದಿನ ಕಾಲದಿಂದಲೂ ಆಯುರ್ವೇದ ಔಷಧ ಪದ್ಧತಿ ಬಳಕೆಯಲ್ಲಿತ್ತು. ವೈದ್ಯರೆಂದು ಕರೆಯಲಾಗುತ್ತಿದ್ದ ಆಯುರ್ವೇದ ಪಂಡಿತರು ಗಿಡಮೂಲಿಕೆಗಳ ಔಷಧಗುಣ, ವರ್ಗಗುಣಗಳ ಜ್ಞಾನಕ್ಕೆ ಪ್ರಸಿದ್ಧರಾಗಿದ್ದರು. ಈ ಗಿಡ ಮೂಲಿಕೆಗಳು ರಾಜ್ಯದ ಮಲೆನಾಡು ಮತ್ತು ಗುಡ್ಡಗಾಡುಗಳಲ್ಲಿ ದೊರೆಯುತ್ತವೆ. ಕೆಲವು ಪ್ರಕರಣಗಳಲ್ಲಿ ಆಯುರ್ವೇದ ಜ್ಞಾನದ ತತ್ತ್ವ ಮತ್ತು ವೃತ್ತಿಗಳು ತಂದೆಯಿಂದ ಮಗನಿಗೆ ವರ್ಗಾಯಿಸಲ್ಪಟ್ಟವೆ. ಇವರೇ ಸ್ವತಃ ಅನೇಕ ಔಷಧಗಳನ್ನು ತಯಾರಿಸುತ್ತಿದ್ದರು. ಆದರೆ ಈಗಿನ ಕಾಲದಲ್ಲಿ ಆಯುರ್ವೇದ ವೈದ್ಯರೂ ಸಹ ಸಂಘಟಿತ ಆಯುರ್ವೇದೀಯ ಔಷಧ ತಯಾರಿಕಾ ಸಂಸ್ಥೆಗಳು ತಯಾರಿಸಿದ ಔಷಧಗಳನ್ನೇ ಸಲಹೆ ಮಾಡುತ್ತಾರೆ. ಯೋಗ್ಯ ಆಯುರ್ವೇದದ ವೃತ್ತಿ ವೈದ್ಯನಾದ

ವನಿಗೆ, ಯಾವುದೇ ವೆಚ್ಚದ ಔಷಧಗಳನ್ನು ಅವಲಂಬಿಸದೆ, ಗ್ರಾಮಾಂತರ ಪ್ರದೇಶದಲ್ಲಿ ಸಾಮಾನ್ಯವಾಗಿ ದೊರೆಯುವ ಗಿಡ ಮೂಲಿಕೆಗಳ ಸಹಾಯದಿಂದಲೇ ತನ್ನ ರೋಗಿಗಳಿಗೆ ಕ್ಷಿಪ್ರ ಪರಿಹಾರ ದೊರಕಿಸುವ ಸಾಮರ್ಥ್ಯವಿರುತ್ತಿತ್ತು. ಅನೇಕ ಆಯುರ್ವೇದೀಯ ಔಷಧಗಳು ಸಾಮಾನ್ಯ ಕಾಯಿಲೆಗಳಿಗೆ ಸಾಕಷ್ಟು ಪರಿಣಾಮಕಾರಿಯಾಗಿದ್ದವು. ಪ್ರಸಿದ್ಧರಾದ ಅನೇಕ ಆಯುರ್ವೇದ ಪಂಡಿತರು ಹಿಂದೆ ರಾಜಾಶ್ರಯ ಪಡೆದಿದ್ದರು. ಅನೇಕ ಹಳ್ಳಿಗಳಲ್ಲಿ ಕನಿಷ್ಠ ಒಂದೆರಡು ಕುಟುಂಬಗಳಾದರೂ ಆಯುರ್ವೇದ ವೈದ್ಯ ಪದ್ಧತಿಗಳ ಪರಿಜ್ಞಾನ ಪಡೆದಿರುತ್ತಿದ್ದವು. ಆಯುರ್ವೇದ ಪದ್ಧತಿಯಲ್ಲಿ ಸಾಂಸ್ಥಿಕ ಶಿಕ್ಷಣ ಪಡೆದ ಕೆಲವು ವೈದ್ಯರು ತಮ್ಮ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ರಾಜ್ಯಕ್ಕೆ ಆಯುರ್ವೇದ ಪದ್ಧತಿಯ ದೊಡ್ಡ ಪರಂಪರೆಯಿದೆ ಮತ್ತು ಇಲ್ಲಿ ಅನೇಕ ಪ್ರಸಿದ್ಧರಾದ ಆಯುರ್ವೇದ ಪಂಡಿತರಿದ್ದಾರೆ.

ಯುನಾನಿ ಪದ್ಧತಿ: 14ನೇಯ ಶತಮಾನದಲ್ಲಿ ಕರ್ನಾಟಕ ಪ್ರದೇಶವು ಮುಸ್ಲಿಂ ಆಡಳಿತಕ್ಕೆ ಒಳಪಟ್ಟಾಗ ರೂಢಿಗೆ ಬಂದ ಯುನಾನಿ ಪದ್ಧತಿಗೆ ಹಲವಾರು ವರ್ಷಗಳ ಕಾಲ ರಾಜಾಶ್ರಯ ದೊರೆಯಿತು. ಆದರೆ ಇದು ಆಯುರ್ವೇದ ಪದ್ಧತಿಯನ್ನೇನೂ ಬದಲಾಯಿಸಲಿಲ್ಲ. ಹಕೀಮರೆಂದು ಕರೆಯಲ್ಪಡುತ್ತಿದ್ದ ಯುನಾನಿ ವೈದ್ಯರು ಗ್ರಾಮಾಂತರ ಪ್ರದೇಶಗಳಿಗೆ ಪ್ರವೇಶಿಸಲಿಲ್ಲ. ಸಾಮಾನ್ಯವಾಗಿ ಅವರ ಚಿಕಿತ್ಸಾ ಕ್ರಮ ಪಟ್ಟಣಗಳಿಗೇ ಸೀಮಿತವಾಗಿತ್ತು. ಅವರು ಮುಸ್ಲಿಂ ಶ್ರೀಮಂತ ಷಾಹಿಯ ಆಶ್ರಯವನ್ನಷ್ಟೇ ಅಲ್ಲದೆ ಗಣನೀಯ ಪ್ರಮಾಣದ ಹಿಂದುಗಳ ಪ್ರೋತ್ಸಾಹವನ್ನೂ ಸಹ ಪಡೆದಿದ್ದರು. ಬಹುಮನಿ ದೊರೆಯಾದ ಎರಡನೇಯ ಅಹಮದನು (1436-1453) ಬಿದರೆಯಲ್ಲಿ ಒಂದು ಭವ್ಯವಾದ 'ಷಾಫಖಾನಾ' (ಆಸ್ಪತ್ರೆ) ವನ್ನು ನಿರ್ಮಿಸಲು ಆಜ್ಞೆ ಮಾಡಿದಾಗ, ಅದರ ನಿರ್ಮಾಣ ವೆಚ್ಚವನ್ನು ಭರಿಸಲು ಅನೇಕ ಹಳ್ಳಿಗಳನ್ನು ದತ್ತಿಯಾಗಿ ಬಿಡಲಾಯಿತು. ಈ ಆಸ್ಪತ್ರೆ ನೋಡಿಕೊಳ್ಳಲು ಹಿಂದೂ ಮತ್ತು ಮುಸ್ಲಿಂ ವೈದ್ಯರುಗಳನ್ನು ನೇಮಿಸಲಾಗಿತ್ತು, ಹಾಗೂ ಇಲ್ಲಿ ಎಲ್ಲ ಜನಾಂಗಕ್ಕೆ ಸೇರಿದ ರೋಗಿಗಳಿಗೂ ಚಿಕಿತ್ಸಾ ಸೇವೆ ಒದಗಿಸಲಾಗುತ್ತಿತ್ತು. ಈ 'ಷಾಫಖಾನ'ದಲ್ಲಿ ಯುನಾನಿ ಜೊತೆಗೆ ಆಯುರ್ವೇದ ಔಷಧ ಪದ್ಧತಿಯ ಚಿಕಿತ್ಸೆಗೂ ಅವಕಾಶವಿತ್ತು. ಇದಕ್ಕಾಗಿ ವೈದ್ಯರುಗಳನ್ನು ನೇಮಿಸಲಾಗಿತ್ತಲ್ಲದೆ ಇಲ್ಲಿ ರೋಗಿಗಳಿಗೆ ಔಷಧ ಮತ್ತು ಊಟವನ್ನು ಉಚಿತವಾಗಿ ಕೊಡಲಾಗುತ್ತಿತ್ತು.

ಅಲೋಪತಿಯ ಆಗಮನ: ನಾಲ್ಕನೇಯ ಮೈಸೂರು ಯುದ್ಧವಾದ ನಂತರ, 1799ರಲ್ಲಿ, ಹಿಂದಿನ ಮೈಸೂರು ರಾಜ್ಯದಲ್ಲಿ ವಿದ್ಯುಶಕ್ರಿಯಾ ಚಿಕಿತ್ಸಾ (ಅಲೋಪತಿ) ಪದ್ಧತಿ ಆರಂಭವಾಯಿತು. 1831ರಲ್ಲಿ ಬ್ರಿಟಿಷರು ಸಂಸ್ಥಾನ ಸರ್ಕಾರವನ್ನು ವಹಿಸಿಕೊಂಡ ನಂತರ ಮೈಸೂರು ನಿಯೋಜಿತಾಧಿಕಾರಿಗಳ ಶಸ್ತ್ರವೈದ್ಯರಿಗೆ ಲಸಿಕೆ ಹಾಕುವ ಕಾರ್ಯದ ಸಾರ್ವತ್ರಿಕ ನಿಯಂತ್ರಣವನ್ನು ವಹಿಸಲಾಯಿತು. ಸ್ವಲ್ಪ ಕಾಲದ ಮೇಲೆ ವಿಭಾಗ ಮಟ್ಟದಲ್ಲಿ ಆಸ್ಪತ್ರೆಗಳನ್ನು ಆರಂಭಿಸುವುದರ ಜೊತೆಗೆ ಪ್ರತೀಯೊಂದು ವಿಭಾಗೀಯ ಕೇಂದ್ರಕ್ಕೂ ಒಬ್ಬ ಸಿವಿಲ್ ಶಸ್ತ್ರವೈದ್ಯರನ್ನು ನೇಮಿಸಲಾಯಿತು. ಈ ಅಧಿಕಾರಿಯು ಸ್ಥಳೀಯ ಸೆರೆಮನೆಗಳ ಮೇಲ್ವಿಚಾರಕರೂ ಆಗಿದ್ದರಲ್ಲದೆ, ಆಯಾ ವಿಭಾಗದ ವ್ಯಾಪ್ತಿಯಲ್ಲಿ ಬರುವ ಎಲ್ಲ ವೈದ್ಯಕೀಯ ಸಂಸ್ಥೆಗಳ ನಿರೀಕ್ಷಕರೂ ಆಗಿದ್ದರು. ಜೊತೆಗೆ ಮೈಸೂರು ರಾಜ್ಯ ಮತ್ತು ಮದರಾಸು ಅಧಿಪತ್ಯದ ಅಧೀನ ಜಿಲ್ಲೆಗಳ ಹೊಣೆ ಹೊತ್ತಿದ್ದ ಭಾರತೀಯ ವೈದ್ಯಕೀಯ ಇಲಾಖೆಯ ಡೆಪ್ಯುಟಿ ಸರ್ಜನ್ ಜನರಲ್ ಅವರೂ ಸಹ ಹಳೆಯ ಮೈಸೂರಿನ ಜಿಲ್ಲೆಗಳ ವೈದ್ಯಕೀಯ ಸಂಸ್ಥೆಗಳನ್ನು ತನಿಖೆ ಮಾಡುತ್ತಿದ್ದರು. ಡೆಪ್ಯುಟಿ ಸರ್ಜನ್ ಜನರಲ್ ಅವರು ಸ್ಯಾನಿಟರಿ ಕಮಿಷನರ್ ಅವರ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುದರ ಜೊತೆಗೆ ಜನನ-ಮರಣ ದಾಖಲೆಗಳ ರಿಜಿಸ್ಟ್ರಾರ್ ಅವರ ಕಾರ್ಯವನ್ನೂ ನೋಡಿಕೊಳ್ಳುತ್ತಿದ್ದರು. 1870ರ ವರೆಗೆ, ಇತರ ಭಾಗಗಳಲ್ಲಿದ್ದಂತೆ, ಭಾರತ ಮತ್ತು ಮೈಸೂರು ರಾಜ್ಯ ಸರ್ಕಾರದ ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ ಸೇವೆಗಳು ಪ್ರಧಾನವಾಗಿ ಸೈನಿಕ ಸಿಬ್ಬಂದಿಯ ಆರೋಗ್ಯ ಸುಧಾರಣೆಗಷ್ಟೇ ಸಂಬಂಧಿಸಿದ್ದವು. 1880ರಲ್ಲಿ ಸರ್ಕಾರದ ಡೆಪ್ಯುಟಿ ಸರ್ಜನ್ ಜನರಲ್ ಅವರನ್ನು ಹಿಂತೆಗೆದುಕೊಳ್ಳಲಾಯಿತು. ಮೈಸೂರು ರಾಜ್ಯಕ್ಕೆ ಸಂಬಂಧಿಸಿದ ಅವರ ಕರ್ತವ್ಯಗಳನ್ನು ಮೈಸೂರು ಕಮಿಷನ್ನಿನ ಹಿರಿಯ ಶಸ್ತ್ರ ವೈದ್ಯರಿಗೆ ವರ್ಗಾಯಿಸಲಾಯಿತು.

ಈ ಅಧಿಕಾರ ಹಸ್ತಾಂತರವಾದ ಮೂರು ವರ್ಷಗಳ ನಂತರ, ಯೋಗ್ಯ ಅರ್ಹತೆಯುಳ್ಳ ಸಿಬ್ಬಂದಿಯಿರುವ ಒಂದು ಸ್ಥಳೀಯ ವೈದ್ಯಕೀಯ ಸೇವಾ ವ್ಯವಸ್ಥೆಯನ್ನು ಸ್ಥಾಪಿಸುವ ಹೊಸ ಯೋಜನೆಯೊಂದನ್ನು ಜಾರಿಗೆ ತರಲಾಯಿತು. ಈ ಹೊಸ ಯೋಜನೆಯಲ್ಲಿ ಹಿರಿಯ ಶಸ್ತ್ರವೈದ್ಯರ ಅಧೀನದಲ್ಲಿ ಶಸ್ತ್ರವೈದ್ಯರು, ಕಿರಿಯ ಶಸ್ತ್ರವೈದ್ಯರು ಮತ್ತು ಆಸ್ಪತ್ರೆ ಸಹಾಯಕರಿದ್ದರು. 1887ರಲ್ಲಿ ಸರ್ಕಾರದ ಈ ಹಿರಿಯ ಶಸ್ತ್ರವೈದ್ಯರನ್ನು ಪದನಿಮಿತ್ತ ಆರೋಗ್ಯಾಧಿಕಾರಿ (ಸ್ಯಾನಿಟರಿ ಕಮಿಷನರ್) ಗಳನ್ನಾಗಿ ಮಾಡಿ, ಅವರಿಗೆ ಜನನ ಮರಣ ವರದಿಗಳ ಪರಿಶೀಲನೆ, ದೇವಿ (ದಾಕು) ಹಾಕುವ ಕಾರ್ಯದ ಮೇಲ್ವಿಚಾರಣೆ, ಪ್ಲೇಗು, ಕಾಲರಾ, ಸಿಡುಬು ಮೊದಲಾದ ಸಾಂಕ್ರಾಮಿಕ ರೋಗಗಳ ನಿಯಂತ್ರಣ ಮತ್ತು ಜನರ ಆರೋಗ್ಯ ಸ್ಥಿತಿ ಸುಧಾರಣೆ ಈ ಕರ್ತವ್ಯಗಳನ್ನು ವಹಿಸಲಾಯಿತು. 1888ರಲ್ಲಿ ಉಪ ಸಹಾಯಕ ವೈದ್ಯಾಧಿಕಾರಿಗಳ ಹೊಸದೊಂದು ವರ್ಗವನ್ನು ಸೃಷ್ಟಿಸಲಾಯಿತು. 1898ರಿಂದ 1902ರವರೆಗೆ ಪ್ಲೇಗು ರೋಗಕ್ಕೆ ಸಂಬಂಧಿಸಿದಂತೆ

ಒಬ್ಬ ವಿಶೇಷ ಕಮಿಷನರ್ ಅವರನ್ನು ನೇಮಿಸಲಾಗಿತ್ತು. 1907ರಲ್ಲಿ ಆರೋಗ್ಯ ಇಲಾಖೆಯ ಪುನರ್ರಚನೆಯಾಗಿ ಪ್ರತ್ಯೇಕ ಆರೋಗ್ಯ ಸೇವಾ ವ್ಯವಸ್ಥೆಯನ್ನೇ ಜಾರಿಗೆ ತರಲಾಯಿತು. ಜಿಲ್ಲಾ ಆಸ್ಪತ್ರೆಗಳ ಮುಖ್ಯರಾಗಿದ್ದ ಜಿಲ್ಲಾ ವೈದ್ಯಾಧಿಕಾರಿಗಳು ಜಿಲ್ಲೆಗಳಲ್ಲಿ ಪದನಿಮಿತ್ತ ಜಿಲ್ಲಾ ನೈರ್ಮಲ್ಯಾಧಿಕಾರಿಗಳಾಗಿ ಮುಂದುವರಿದರು. 1909-10ರಲ್ಲಿ ವಿಭಾಗೀಯ ನೈರ್ಮಲ್ಯಾಧಿಕಾರಿಗಳ ಹುದ್ದೆಗಳನ್ನು ರದ್ದುಗೊಳಿಸಿ ಜಿಲ್ಲಾ ನೈರ್ಮಲ್ಯಾಧಿಕಾರಿಗಳ ಒಂದು ಹೊಸ ಸೇವಾ ಶ್ರೇಣಿಯನ್ನು ರಚಿಸಲಾಯಿತು. 1913ರಲ್ಲಿ ವೈದ್ಯಕೀಯ ಇಲಾಖೆಯ ಮುಖ್ಯರನ್ನು ಸ್ಯಾನಿಟರಿ ಕಮಿಷನರ್ ಎಂದು ಹೆಸರಿಸಲಾಯಿತು. ಅದೇ ವರ್ಷ ಪ್ರತೀ ಜಿಲ್ಲೆಗೊಂದರಂತೆ ಸಂಚಾರಿ ಚಿಕಿತ್ಸಾಲಯಗಳನ್ನು ಆರಂಭಿಸಲಾಯಿತು. ಮತ್ತು ಸಹಾಯಕ ಶಸ್ತ್ರವೈದ್ಯರನ್ನು ಅವುಗಳ ಪದನಿಮಿತ್ತ ಮುಖ್ಯರನ್ನಾಗಿ ನೇಮಕ ಮಾಡಲಾಯಿತು. 1917ರಲ್ಲಿ ಓರ್ವ ಪೂರ್ಣಾವಧಿಯ ಸ್ಯಾನಿಟರಿ ಕಮಿಷನರನ್ನು ವೈದ್ಯಕೀಯ ಇಲಾಖೆಯ ಮುಖ್ಯಾಧಿಕಾರಿಗಳನ್ನಾಗಿ ನೇಮಿಸಲಾಯಿತು. 1922ರಲ್ಲಿ ರಚಿತವಾದ ಸಾರ್ವಜನಿಕ ಆರೋಗ್ಯ ಇಲಾಖೆಯನ್ನು 1929ರಲ್ಲಿ ಒಂದು ಪ್ರತ್ಯೇಕ ಹಾಗೂ ಸ್ವತಂತ್ರ ಘಟಕವನ್ನಾಗಿ ಮಾಡಿ, ಓರ್ವ ಪೂರ್ಣಾವಧಿಯ ಸಾರ್ವಜನಿಕ ಆರೋಗ್ಯ ನಿರ್ದೇಶಕರ ನಿಯಂತ್ರಣದಲ್ಲಿರುವಂತೆ ಪುನರ್ರಚಿಸಲಾಯಿತು. ಅದೇ ವರ್ಷ, ಅಂದರೆ 1929ರಲ್ಲಿ ಸಾರ್ವಜನಿಕ ಆರೋಗ್ಯ ವಿಷಯಗಳಲ್ಲಿ ಸಲಹೆ ನೀಡಲು ಆರೋಗ್ಯ ಸಲಹಾ ಮಂಡಳಿಯೊಂದರ ನೇಮಕವಾಯಿತು. ಆಗ ಅಂತರರಾಷ್ಟ್ರೀಯ ಆರೋಗ್ಯ ವಿಭಾಗದ ಸಲಹೆಗಾರರಾಗಿದ್ದ ಡಾ|| ಸ್ವೀಟ್ ಅವರ ತಜ್ಞ ಸೇವೆಯನ್ನು ರಾಜ್ಯಕ್ಕೆ ಪಡೆದುಕೊಳ್ಳಲಾಯಿತು. ರಾಜ್ಯದ ಆರೋಗ್ಯ ಸೇವೆಗಳ ಇತಿಹಾಸದಲ್ಲಿ ಮತ್ತೊಂದು ಹೆಗ್ಗುರುತೆಂದರೆ, ಅನೇಕ ಗ್ರಾಮೀಣ ಆರೋಗ್ಯ ಕೇಂದ್ರಗಳ ಸ್ಥಾಪನೆ. ಅಂತಹ ಗ್ರಾಮೀಣ ಕೇಂದ್ರಗಳ ಸ್ಥಾಪನೆಯಲ್ಲಿ ಹಳೆಯ ಮೈಸೂರು ರಾಜ್ಯವು ಇಡೀ ರಾಷ್ಟ್ರದಲ್ಲೇ ಮೊದಲನೇಯದಾಗಿದೆ. ಈ ಗ್ರಾಮೀಣ ಆರೋಗ್ಯ ಕೇಂದ್ರಗಳ ಕಾರ್ಯ ಚಟುವಟಿಕೆಗಳು ಆಗ ಗ್ರಾಮನೈರ್ಮಲ್ಯ ಸುಧಾರಣೆ, ಕುಡಿಯುವ ನೀರಿನ ಮೂಲಗಳ ಶುದ್ಧೀಕರಣ, ಸಾಂಕ್ರಾಮಿಕ ರೋಗ ತಲೆದೋರಿಕೆಯ ಪರೀಕ್ಷೆ ಮತ್ತು ನಿಯಂತ್ರಣ, ರಕ್ಷಣಾ ಚಿಕಿತ್ಸಾ ಸೇವೆಗಳು, ಆರೋಗ್ಯ ಶಿಕ್ಷಣ ಮತ್ತು ಜನನ-ಮರಣಗಳ ವರದಿ ಮಾಡುವುದು ಇಷ್ಟಕ್ಕೆ ಸೀಮಿತವಾಗಿದ್ದವು. 1934ರಲ್ಲಿ ಒಂದು ಪ್ರಸೂತಿ ಹಾಗೂ ಶಿಶು ಆರೋಗ್ಯ ಕಾರ್ಯಾಲಯ ಮತ್ತು ಒಂದು ಮಲೇರಿಯಾ ವಿಜ್ಞಾನ ವಿಭಾಗವನ್ನು ಸ್ಥಾಪಿಸಲಾಯಿತು. 1936ರಲ್ಲಿ ರಾಕ್‌ಫೆಲರ್ ಪ್ರತಿಷ್ಠಾನದ ಆರ್ಥಿಕ ಮತ್ತು ತಾಂತ್ರಿಕ ನೆರವಿನಿಂದ ರಾಮನಗರಂನಲ್ಲಿ ಆರೋಗ್ಯ ತರಬೇತಿ ಹಾಗೂ ಪ್ರಾತ್ಯಕ್ಷಿಕೆ ಕೇಂದ್ರವೊಂದನ್ನು ಆರಂಭಿಸಲಾಯಿತು. ನಂತರ ರಾಜ್ಯದ ಇತರ ಭಾಗಗಳಲ್ಲೂ ಇಂತಹ ಕೇಂದ್ರಗಳನ್ನು ಸ್ಥಾಪಿಸಲಾಯಿತು.

ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ ಹೈದರಾಬಾದಿನ ಆರನೇಯ ನಿಜಾಮ ನಾಸಿರ್-ಉದ್-ದೌಲಾ ಅವರು ಅಲೋಪತಿಕ್ ಅಥವಾ ಪಾಶ್ಚಿಮಾತ್ಯ ಔಷಧ ಪದ್ಧತಿಯನ್ನು ರೂಢಿಗೆ ತಂದರು. ಪೂರ್ಣ ರೋಗ ಪರಿಹಾರ ಕಾರ್ಯವನ್ನೇ ನಡೆಸುತ್ತಿದ್ದ ಸರ್ಕಾರೀ ವೈದ್ಯಕೀಯ ಇಲಾಖೆ 1844ರಲ್ಲಿ ಅಸ್ತಿತ್ವಕ್ಕೆ ಬಂದಿತು. ಸಿಡುಬು ರೋಗದ ವಿರುದ್ಧ ದೇವಿ ಹಾಕುವುದನ್ನು ಬಿಟ್ಟರೆ 1912ರವರೆಗೂ ರೋಗ ನಿರೋಧಕ ಔಷಧ ಕ್ರಮಕ್ಕೆ ಯಾವುದೇ ವ್ಯವಸ್ಥೆಯಿರಲಿಲ್ಲ. 1913ರಲ್ಲಿ ಸರ್ಕಾರವು ವೈದ್ಯಕೀಯ ಇಲಾಖೆಯ ಮುಖ್ಯರನ್ನು ಸ್ಯಾನಿಟರಿ ಕಮೀಷನರನ್ನಾಗಿಯೂ ನೇಮಿಸಲಾಯಿತು. ಆರು ತಿಂಗಳಿಂದ 12 ತಿಂಗಳ ವರ್ಷ ವಯಸ್ಸಿನ ಮಕ್ಕಳಿಗೆ ಕಡ್ಡಾಯವಾಗಿ ದೇವಿ ಹಾಕುವುದನ್ನು ಆಗಿನ ಹೈದರಾಬಾದ್ ಸರ್ಕಾರ 1922ರಲ್ಲಿ ಜಾರಿಗೆ ತಂದಿತು. ಅದೇ ವರ್ಷವೇ ಸಾರ್ವಜನಿಕ ಆರೋಗ್ಯ ಇಲಾಖೆಯ ರಚನೆಯಾಯಿತು. ಪ್ರತೀ ಜಿಲ್ಲೆಗೊಂದರಂತೆ ಸಂಚಾರಿ ಔಷಧಶಾಲೆಗಳನ್ನು ಒದಗಿಸಲಾಯಿತು. 1934ರ ಅಂತ್ಯದಲ್ಲಿ ಸಾರ್ವಜನಿಕ ಆರೋಗ್ಯ ಇಲಾಖೆಯನ್ನು ಪುನರ್ರಚಿಸಿ, ಓರ್ವ ಸಾರ್ವಜನಿಕ ಆರೋಗ್ಯ ಉಪನಿರ್ದೇಶಕರನ್ನು ಇಲಾಖೆಯ ಮುಖ್ಯರನ್ನಾಗಿ ಮಾಡಲಾಯಿತು. ಜಿಲ್ಲೆಗಳಲ್ಲಿ 'ಹಕೀಮ' ರಿಂದ ನಡೆಸುತ್ತಿದ್ದ ಯುನಾನಿ ಘಟಕಗಳನ್ನು ರಾಜ್ಯ ಯುನಾನಿ ವೈದ್ಯಕೀಯ ಇಲಾಖೆಯ ಅಧೀನಕ್ಕೆ ಒಳಪಡಿಸಲಾಯಿತು.

ಇಲಾಖೆಯ ಪುನರ್ರಚನೆ : ಏಕೀಕರಣದ ಸಂದರ್ಭದಲ್ಲಿ ಇಬ್ಬರು ನಿರ್ದೇಶಕರಿದ್ದರು. ಒಬ್ಬರು ನೈರ್ಮಲ್ಯ ಕಾರ್ಯವನ್ನೂ ನೋಡಿಕೊಳ್ಳುತ್ತಿದ್ದ ಸಾರ್ವಜನಿಕ ಆರೋಗ್ಯ ಸೇವೆಗಳ ನಿರ್ದೇಶಕರು, ಮತ್ತೊಬ್ಬರು ವೈದ್ಯಕೀಯ ಸೇವೆಗಳ ನಿರ್ದೇಶಕರು. 1965ರಲ್ಲಿ ವೈದ್ಯಕೀಯ ಮತ್ತು ಆರೋಗ್ಯ ಇಲಾಖೆಗಳನ್ನು ಒಟ್ಟುಗೂಡಿಸಿ ಆರೋಗ್ಯ ಸೇವೆಗಳ ನಿರ್ದೇಶಕರನ್ನು ಇಲಾಖೆಯ ಮುಖ್ಯಾಧಿಕಾರಿಗಳನ್ನು ನೇಮಿಸಲಾಯಿತು. 1977ರಲ್ಲಿ 'ಕುಟುಂಬ ಯೋಜನೆ' ಎಂಬ ಪದಪ್ರಯೋಗವು 'ಕುಟುಂಬ ಕಲ್ಯಾಣ' ಎಂದು ತಿದ್ದುಪಡಿಯಾದ ಪರಿಣಾಮವಾಗಿ ಸಂಬಂಧಪಟ್ಟ ಅಧಿಕಾರಿಗಳ ಹುದ್ದೆಗಳ ಹೆಸರಿನಲ್ಲೂ ಬದಲಾವಣೆ ಉಂಟುಮಾಡಲಾಯಿತು. 1978ರ ನವೆಂಬರ್‌ನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯನ್ನು ನಿರ್ದೇಶಕರ ಮಟ್ಟದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಎಂದು ಎರಡು ಕಾರ್ಯ ಶಾಖೆಗಳನ್ನಾಗಿ ವಿಂಗಡಿಸಲಾಯಿತು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕರು ಸಾರ್ವಜನಿಕ ಆರೋಗ್ಯ, ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಸೇರದ ಎಲ್ಲಾ ವೈದ್ಯಕೀಯ ಸಂಸ್ಥೆಗಳು, ಕುಟುಂಬ ಕಲ್ಯಾಣ, ಸಹಾಯಕ ಶುಶ್ರೂಷಣಾ ದಾದಿಯರು, ಆರೋಗ್ಯ ಸಹಾಯಕರು ಮತ್ತಿತರ ವೈದ್ಯಕೀಯೇತರ ಸಿಬ್ಬಂದಿಯ ತರಬೇತಿ, ವೈದ್ಯಕೀಯ

ಶಿಕ್ಷಣ ಇಲಾಖೆಗೆ ಸಂಬಂಧಿಸದ ಎಲ್ಲಾ ಯೋಜನಾ ಪ್ರಸ್ತಾಪಗಳು ಹಾಗೂ ಕಾರ್ಯಕ್ರಮಗಳು, ಆರೋಗ್ಯ ಶಿಕ್ಷಣ ಮತ್ತು ಪ್ರಚಾರ, ರೆಡ್‌ಕ್ರಾಸ್ ಮತ್ತಿತರ ಸಂಬಂಧಿಸಿದ ಕೆಲಸಗಳನ್ನು ನೋಡಿಕೊಳ್ಳುವರಲ್ಲದೆ ಸಂಬಂಧಪಟ್ಟ ಎಲ್ಲ ಸಮಿತಿಗಳಲ್ಲೂ ಸದಸ್ಯರಾಗಿರುತ್ತಾರೆ. ಇವರು ವೈದ್ಯಕೀಯಕ್ಕೆ ಸಂಬಂಧಿಸಿದ ಇತರ ವಿಷಯಗಳನ್ನು ನೋಡಿಕೊಳ್ಳುವುದಲ್ಲದೆ, ಭಾರತೀಯ ಜನಸಂಖ್ಯಾ ಯೋಜನಾ ಸಹಾಯಕರೂ ಆಗಿರುತ್ತಾರೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ಕಾರ್ಯನಿರ್ವಹಣೆಯಲ್ಲಿ ಓರ್ವ ಅಧಿಕ ನಿರ್ದೇಶಕರು, ಆರು ಜನ ಜಂಟಿ ನಿರ್ದೇಶಕರು, 12 ಜನ ಉಪನಿರ್ದೇಶಕರು, 15 ಜನ ಒಂದನೇಯ ದರ್ಜೆ ಅಧಿಕಾರಿಗಳು, 24 ಜನ ಎರಡನೇಯ ದರ್ಜೆ ಅಧಿಕಾರಿಗಳು ಮತ್ತಿತರ ಸಿಬ್ಬಂದಿ ನಿರ್ದೇಶಕರಿಗೆ ನೆರವಾಗುತ್ತಾರೆ. ಪ್ರತೀಯೊಂದು ಕಂದಾಯ ವಿಭಾಗದಲ್ಲಿ ಇಲಾಖೆಯ ನಿರ್ದೇಶಕರಿಗೆ ಸಹಾಯಕರಾಗಿ ಓರ್ವ ಜಂಟಿ ನಿರ್ದೇಶಕರು ಮತ್ತು ಇಬ್ಬರು ಉಪನಿರ್ದೇಶಕರಿರುತ್ತಾರೆ. ಒಬ್ಬ ಆರೋಗ್ಯಾಧಿಕಾರಿ ಹಾಗೂ ಸಹಾಯಕ ಶಸ್ತ್ರವೈದ್ಯ, ಒಂದನೇಯ ದರ್ಜೆಯ 35 ಸಹಾಯಕರು, ಎರಡನೇಯ ದರ್ಜೆಯ 12 ಇತರ ಅಧಿಕಾರಿಗಳು ಇರುತ್ತಾರೆ. ಜಿಲ್ಲಾ ಕೇಂದ್ರ ಮಟ್ಟದಲ್ಲಿ ಪ್ರಥಮ ದರ್ಜೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಓರ್ವ ಮಹಿಳಾ ವೈದ್ಯಾಧಿಕಾರಿ, ಓರ್ವ ಜಿಲ್ಲಾ ಸರ್ಜನ್, ಓರ್ವ ಜಿಲ್ಲಾ ಮಲೇರಿಯಾ ಅಧಿಕಾರಿ, ಮತ್ತು ದ್ವಿತೀಯ ದರ್ಜೆಯ ಸಾಕಷ್ಟು ಸಂಖ್ಯೆಯ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಾರೆ. ಜಿಲ್ಲಾ ಮಟ್ಟದಲ್ಲಿ ಎರಡು ಸ್ವತಂತ್ರ ಕಾರ್ಯ ವಿಭಾಗಗಳಿವೆ. ಒಂದು ಜಿಲ್ಲಾ ಆಸ್ಪತ್ರೆಯ ಜವಾಬ್ದಾರಿಯಿರುವ ಜಿಲ್ಲಾ ಸರ್ಜನ್, ಇನ್ನೊಂದು ವಿಭಾಗದ ಮುಖ್ಯಸ್ಥರಾದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ. ಕುಟುಂಬ ಕಲ್ಯಾಣ ಕಾರ್ಯಕ್ರಮಕ್ಕೆ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಮಹತ್ವ ಕೊಡಲಾಗಿದ್ದು ಜಿಲ್ಲಾ ಆರೋಗ್ಯಾಧಿಕಾರಿಗಳ ಹೆಸರನ್ನು 1978ರ ಆಗಸ್ಟ್‌ನಿಂದ 'ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ' ಎಂದು ಬದಲಾಯಿಸಲಾಯಿತು. ಜಿಲ್ಲೆಯ ಪ್ರತೀಯೊಂದು ಕಂದಾಯ ಉಪವಿಭಾಗದ ಜವಾಬ್ದಾರಿಗೂ ಒಬ್ಬೊಬ್ಬ ಸಹಾಯಕ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಇರುತ್ತಾರೆ.

ವೈದ್ಯಕೀಯ ಶಿಕ್ಷಣದ ನಿರ್ದೇಶಕರು ಸರ್ಕಾರಿ ಮತ್ತು ಖಾಸಗಿ ಕ್ಷೇತ್ರಗಳ ವೈದ್ಯಕೀಯ ಶಿಕ್ಷಣ, ವೈದ್ಯಕೀಯ ವಿದ್ಯಾರ್ಥಿ ನಿಲಯಗಳು, ನೇತ್ರ ವೈದ್ಯ ಸಂಸ್ಥೆ, ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ಕಿದ್ವಾಯಿ ಸ್ಮಾರಕ ಗಂತಿ (ಕ್ಯಾನ್ಸರ್) ಸಂಸ್ಥೆ, ರಾಷ್ಟ್ರೀಯ ಮಾನಸಿಕ ಹಾಗೂ ನರವಿಜ್ಞಾನ ಸಂಸ್ಥೆ ಹಾಗೂ ಮಾನಸಿಕ ಆರೋಗ್ಯದ ಆಸ್ಪತ್ರೆಗಳನ್ನು ನೋಡಿಕೊಳ್ಳುತ್ತಾರೆ. ಮೇಲ್ಕಂಡ ಕಾರ್ಯನಿರ್ವಹಣೆಗೆ ಸಂಬಂಧಿಸಿದ ಸಮಿತಿಗಳ ಸದಸ್ಯರಾಗಿರುವ ವೈದ್ಯಕೀಯ ಶಿಕ್ಷಣದ ನಿರ್ದೇಶಕರು ಸಂಬಂಧಪಟ್ಟ ಸಲಹೆಗಳು ಮತ್ತು ಕಾರ್ಯಕ್ರಮಗಳನ್ನು ಯೋಜಿಸುತ್ತಾರಲ್ಲದೆ, ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದ ವಿಶ್ವವಿದ್ಯಾಲಯ ಸಮಿತಿಗಳಲ್ಲೂ ಸದಸ್ಯರಾಗಿರುತ್ತಾರೆ. ಬೆಂಗಳೂರಿನಲ್ಲಿ ಅವರ ಕಾರ್ಯಾಲಯದಲ್ಲಿ ನೇತ್ರವೈದ್ಯ ಶಾಸ್ತ್ರ ಹಾಗೂ ವೈದ್ಯಕೀಯ ಶಿಕ್ಷಣ ವಿಭಾಗಗಳಿಗೆ ತಲಾ ಒಬ್ಬೊಬ್ಬರಂತೆ ಇಬ್ಬರು ಜಂಟಿ ನಿರ್ದೇಶಕರೂ, ಶುಶ್ರೂಷಣ ವಿಭಾಗದ ಒಬ್ಬ ಉಪನಿರ್ದೇಶಕರೂ, ವೈದ್ಯಕೀಯ ಶಿಕ್ಷಣದ ಒಬ್ಬ ಉಪನಿರ್ದೇಶಕರು, ಓರ್ವ ಆಡಳಿತಾಧಿಕಾರಿ, ಓರ್ವ ಯೋಜನಾಧಿಕಾರಿ ಮತ್ತು ಓರ್ವ ಹಣ ಕಾಸು ನಿರ್ವಹಣಾ ಸಹಾಯಕರು ಹಾಗೂ ಇತರ ಸಿಬ್ಬಂದಿ ವರ್ಗದವರು ನಿರ್ದೇಶಕರಿಗೆ ಆಡಳಿತ ನಿರ್ವಹಣೆಯಲ್ಲಿ ನೆರವಾಗುತ್ತಾರೆ.

## ಜನನ–ಮರಣ ದಾಖಲೆಗಳು

ಜನನ ಮತ್ತು ಮರಣಗಳ ನೋಂದಾವಣೆಯನ್ನು ಕಡ್ಡಾಯಗೊಳಿಸಿದ್ದರೂ ಕೆಲವು ಸಂದರ್ಭಗಳಲ್ಲಿ ಕೊರತೆಗಳು ಕಂಡು ಬರುತ್ತವೆ. ಈ ಜನನ-ಮರಣಗಳ ನೋಂದಾವಣೆ ವ್ಯವಸ್ಥೆಯನ್ನು ಉತ್ತಮಗೊಳಿಸಲು 1915-16ರಲ್ಲಿ ನಿಯಮಗಳನ್ನು ಪುನರ್ರಚಿಸಲಾಗಿದೆ. ಆ ನಿಯಮಗಳ ಪ್ರಕಾರ, ಕಂದಾಯ ಇಲಾಖೆಯ ತನಿಖಾಧಿಕಾರಿಗಳು, ಗ್ರಾಮಾಧಿಕಾರಿಗಳು ಇಡುವ ಜನನ-ಮರಣ ದಾಖಲೆ ಪುಸ್ತಕದಲ್ಲಿ ಆಗಿರುವ ದಾಖಲೆಗಳನ್ನು ಪರಿಶೀಲಿಸಬೇಕಾಗಿತ್ತು. ಈ ವ್ಯವಸ್ಥೆಯನ್ನು ಮತ್ತಷ್ಟು ಸುಧಾರಿಸಲು 1918ರಲ್ಲಿ ಹೊಸ ನಿಬಂಧನೆಯೊಂದನ್ನು ಹೊರಡಿಸಲಾಯಿತು. ಅದರ ಪ್ರಕಾರ, ಜನನ-ಮರಣಗಳಿಗೆ ಸಂಬಂಧಿಸಿದ ದಾಖಲೆಗಳು ಸಂಬಂಧಿಸಿದ ಕ್ಷೇತ್ರದಲ್ಲಿ ಒಂದು ಮಾದರಿ ಪರಿಶೀಲನೆ ನಡೆಸಿದ ನಂತರ ತಾಂತ್ರಿಕ ಅಧಿಕಾರಿಯೊಬ್ಬರಿಂದ ದೃಢೀಕರಣಗೊಳ್ಳಬೇಕೆಂದು ವಿಧಿಸಲಾಗಿದೆ.

ಜನನ-ಮರಣಗಳ ನೋಂದಾವಣೆ ಹಾಗೂ ಜನನ-ಮರಣ ವರದಿಗಳ ಪರಿಷ್ಕರಣಾ ಕಾರ್ಯ 1915ರವರೆಗೆ ಆರೋಗ್ಯ ಸೇವೆಗಳ ನಿರ್ದೇಶನಾಲಯದಲ್ಲಿ ನಡೆಯುತ್ತಿತ್ತು. ಅನಂತರ ಈ ಜವಾಬ್ದಾರಿಯನ್ನು ಅಂಕಿ-ಅಂಶಗಳ ಇಲಾಖೆಗೆ ವಹಿಸಲಾಯಿತು. 'ಜನನ ಮತ್ತು ಮರಣಗಳ ನೋಂದಾವಣೆ ಶಾಸನ, 1969' ಎಂಬ ಹೊಸ ಕಾನೂನು ಕ್ರಮವನ್ನು ಜಾರಿಗೆ ತರಲಾಯಿತು. ಈಗ ಬೆಂಗಳೂರಿನಲ್ಲಿರುವ ಆರ್ಥಿಕ ಹಾಗೂ ಅಂಕಿ-ಅಂಶಗಳ ನಿರ್ದೇಶಕರು ಜನನ-ಮರಣಗಳು ಮತ್ತು ವಿವಾಹಗಳ ನೋಂದಾವಣೆಯ ಶಾಸನದ ವಿಧಿಗಳನ್ನು ನಿರ್ವಹಿಸುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ಸಜೀವ ಜನನಗಳು, ಮೃತ ಜನನಗಳು, ಮರಣಗಳು ಮತ್ತು ಸಂಬಂಧಪಟ್ಟ ಇತರ ಅಂಕಿ-ಅಂಶಗಳ ದಾಖಲೆಗಳನ್ನು ಹಿಂದೆ ಗ್ರಾಮದ ಪಟೇಲರುಗಳು ಇಡುತ್ತಿದ್ದರು. ಈಗ ಗ್ರಾಮ

ಲೆಕ್ಕಿಗರು ಈ ಕೆಲಸವನ್ನು ನೋಡಿಕೊಳ್ಳುತ್ತಾರೆ. ಈ ಉದ್ದೇಶಕ್ಕಾಗಿ ಅವರು ಜನನ-ಮರಣಗಳ ಸ್ಥಳೀಯ ರಿಜಿಸ್ಟ್ರಾರರುಗಳಾಗಿರುತ್ತಾರೆ. ಅವರು ಸಂಬಂಧಪಟ್ಟ ತಹಸೀಲ್ದಾರ್ ಅವರಿಗೆ ಮಾಸಿಕ ವರದಿಗಳನ್ನು ಕಳುಹಿಸಬೇಕಾಗುತ್ತದೆ. ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಜನನ-ಮರಣ ಮತ್ತು ವಿವಾಹಗಳ ಪದನಿಮಿತ್ತ ಜಿಲ್ಲಾ ರಿಜಿಸ್ಟ್ರಾರ್ ಆಗಿಯೂ, ಜಿಲ್ಲಾ ಅಂಕಿ-ಅಂಶಗಳ ಅಧಿಕಾರಿಗಳು ಜನನ-ಮರಣ ಹಾಗೂ ವಿವಾಹಗಳ ಹೆಚ್ಚುವರಿ ಜಿಲ್ಲಾ ನೋಂದಾವಣೆ ಅಧಿಕಾರಿ ಆಗಿಯೂ ಇರುತ್ತಾರೆ. ಈ ಎಲ್ಲ ಅಂಕಿ-ಅಂಶಗಳೂ ತಹಸೀಲ್ದಾರರ ಮೂಲಕ ಬೆಂಗಳೂರಿನಲ್ಲಿರುವ ಜನನ-ಮರಣ ಮತ್ತು ವಿವಾಹಗಳ ಪದನಿಮಿತ್ತ ನೋಂದಣಿ ಅಧಿಕಾರಿ ಅವರೂ ಆಗಿರುವ ಆರ್ಥಿಕ ಮತ್ತು ಅಂಕಿ-ಅಂಶಗಳ ಇಲಾಖೆಯ ನಿರ್ದೇಶಕರಿಗೆ ಕಳುಹಿಸಲ್ಪಡುತ್ತವೆ. ನಗರ ಪ್ರದೇಶಗಳಲ್ಲಿ ಆಯಾ ಪುರಸಭೆಗಳ ಆರೋಗ್ಯ ಮತ್ತು ನೈರ್ಮಲ್ಯ ಪರೀಕ್ಷಕರನ್ನು ಜನನ-ಮರಣಗಳ ರಿಜಿಸ್ಟ್ರಾರರುಗಳನ್ನಾಗಿ ನಾಮಕರಣ ಮಾಡಲಾಗಿದ್ದು ಅವರು ಈ ಅಂಕಿ-ಅಂಶಗಳನ್ನು ಸಂಗ್ರಹಿಸಿ ಪ್ರಧಾನ ರಿಜಿಸ್ಟ್ರಾರರಿಗೆ ಕಳುಹಿಸುತ್ತಾರೆ. ಆರೋಗ್ಯ ಘಟಕ ಪ್ರದೇಶಗಳಿಗೆ ಸಂಬಂಧಿಸಿದಂತೆ, ಆರೋಗ್ಯ ಮತ್ತು ನೈರ್ಮಲ್ಯ ಪರೀಕ್ಷಕರು ಗ್ರಾಮಾಧಿಕಾರಿಗಳು ದಾಖಲು ಮಾಡಿದ ಅಂಕಿ-ಅಂಶಗಳನ್ನು ಪಡೆದು ಅವುಗಳನ್ನು ಪರಿಶೀಲಿಸುತ್ತಾರೆ.

ಗ್ರಾಮಾಂತರ ಪ್ರದೇಶದಲ್ಲಿ ಜನನ-ಮರಣಗಳ ನೋಂದಾವಣೆಯ ಕೆಲಸವನ್ನು ಗ್ರಾಮಲೆಕ್ಕಿಗರಿಗೆ ಗೊತ್ತುಮಾಡಿದ್ದರೂ, ಜನನ-ಮರಣಗಳ ನೋಂದಾವಣೆ ಕಾರ್ಯ ಸುಧಾರಿಸಿದಂತೆ ಕಾಣುತ್ತಿಲ್ಲ. ಜನನ-ಮರಣಗಳ ನೋಂದಾವಣೆ ಮತ್ತು ಅವುಗಳ ನಿಯಮಿತ ದಾಖಲೆಗಳ ಕೆಲಸವನ್ನು ಸುಧಾರಿಸುವ ಸಲುವಾಗಿ ತೀವ್ರ ಪ್ರಚಾರ ಕೈಗೊಳ್ಳಲಾಗಿದೆ. ಈ ನೋಂದಾವಣೆ ಯೋಜನೆಯನ್ನು ಪರಿಶೀಲಿಸಿ, ಹೆಚ್ಚಿನ ಸುಧಾರಣೆಗೆ ಅಗತ್ಯವಾದ ಮಾರ್ಗ ಕ್ರಮವನ್ನು ಕಂಡುಕೊಳ್ಳಲು ಅಭಿವೃದ್ಧಿ ಕಮಿಷನರ್‌ರ ಅಧ್ಯಕ್ಷತೆಯಲ್ಲಿ ಪ್ರತೀ ಮೂರು ತಿಂಗಳಿಗೊಮ್ಮೆ ಸಭೆ ಸೇರುವ ಅಂತರ ಇಲಾಖಾ ಸಮನ್ವಯ ಸಮಿತಿಯೊಂದನ್ನು ರಚಿಸಲಾಗಿದೆ.

ಮಾದರಿ ನೋಂದಾವಣೆ ವ್ಯವಸ್ಥೆ: 1964ರಲ್ಲಿ 24 ಪ್ರಾಥಮಿಕ ಮಾದರಿ ಘಟಕಗಳಲ್ಲಿ ಮಾರ್ಗದರ್ಶಕ ಅಧ್ಯಯನವೊಂದನ್ನು ನಡೆಸಿದ ಐದು ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ರಾಜ್ಯದ ಗ್ರಾಮಾಂತರ ಪ್ರದೇಶಗಳಲ್ಲಿ 1966ರಲ್ಲೂ, ನಗರ ಪ್ರದೇಶಗಳಲ್ಲಿ 1968ರಲ್ಲೂ ಈ ಜನನ-ಮರಣ ದಾಖಲೆಗಳ ಸಂಬಂಧ ಮಾದರಿ ನೋಂದಾವಣೆ ವ್ಯವಸ್ಥೆಯೊಂದನ್ನು ಜಾರಿಗೆ ತರಲಾಯಿತು. 1961ನೇ ವರ್ಷವನ್ನು ಆಧಾರ ವರ್ಷವಾಗಿಟ್ಟುಕೊಂಡು ರಾಜ್ಯದ ಜನಸಂಖ್ಯೆಯಲ್ಲಿ ಶೇಕಡ 0.81 ಭಾಗ ಗ್ರಾಮಾಂತರ ಜನಸಂಖ್ಯೆಯನ್ನೂ, ಶೇಕಡ 0.69 ಭಾಗ ನಗರ ಜನಸಂಖ್ಯೆಯನ್ನೂ ಈ ವ್ಯವಸ್ಥೆಗೆ ಒಳಪಡಿಸಲಾಯಿತು. ಗ್ರಾಮಾಂತರ ಹಾಗೂ ನಗರ ಪ್ರದೇಶಗಳಿಗೆ ಪ್ರಚಲಿತ ಹಾಗೂ ನಿರಂತರ ಆಧಾರದ ಮೇಲೆ ಜನನ-ಮರಣಗಳಿಗೆ ಸಂಬಂಧಿಸಿದಂತೆ ವಿಶ್ವಸನೀಯ ವಾರ್ಷಿಕ ಅಂದಾಜುಗಳನ್ನು ಒದಗಿಸುವ ಉದ್ದೇಶದಿಂದ ಈ ಯೋಜನೆಯು ಭಾರತದ ರಿಜಿಸ್ಟ್ರಾರ್ ಜನರಲ್ ಅವರಿಂದ ಆರಂಭಿಸಲ್ಪಟ್ಟಿತು. ರಾಜ್ಯದ ಜನನ-ಮರಣ ದಾಖಲೆಗಳು ಮರಣದ ಕಾರಣಕ್ಕೆ ಸಂಬಂಧಿಸಿದಂತೆ ನಿಷ್ಕೃಷ್ಟ ಮಾಹಿತಿಯನ್ನು ಒದಗಿಸುವುದಿಲ್ಲ. ಪರಿಣಾಮಕಾರಿ ಆರೋಗ್ಯ ಕಾರ್ಯಕ್ರಮಗಳನ್ನು ಜಾರಿಗೆ ತರಲು ಬಹಳ ಮುಖ್ಯವಾದ ಈ ಮರಣ ಕಾರಣಕ್ಕೆ ಸಂಬಂಧಿಸಿದ ನಂಬಲರ್ಹವಾದ ಮಾಹಿತಿ ಪಡೆಯಲು 'ಜನನ-ಮರಣಗಳ ಮಾದರಿ ('ಸ್ಯಾಂಪಲ್') ನೋಂದಾವಣೆ' ಎಂಬ ಪದ್ಧತಿಯನ್ನು ಜಾರಿಗೆ ತರಲಾಗಿದೆ. ಈ ಯೋಜನೆಯಲ್ಲಿ ಪ್ರತೀ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ ಒಂದೊಂದರಂತೆ ಮಾದರಿ ಹಳ್ಳಿಯನ್ನು ಆರಿಸಿಕೊಳ್ಳಲಾಗಿದೆ. ಈ ಹಳ್ಳಿಗಳಲ್ಲಿ ನಿಯತಕಾಲಿಕವಾಗಿ ಕುಟುಂಬಗಳನ್ನು ನೋಂದಾಯಿಸಲಾಗುತ್ತದೆ. ಮರಣಗಳು ಸಂಭವಿಸಿದಾಗ ಸ್ಥಳೀಯ ವೈದ್ಯರು ಮತ್ತಿತರ ವೈದ್ಯೇತರ ಸಿಬ್ಬಂದಿ, ಮೃತರ ನಿಕಟವರ್ತಿಗಳು ಮತ್ತು ಸಂಬಂಧಿಗಳನ್ನು ಕೇಳಿ ಮೃತರಿಗಿದ್ದ ರೋಗ ಲಕ್ಷಣಗಳು ಹಾಗೂ ಚಿಹ್ನೆಗಳು, ರೋಗದ ಅವಧಿ ಮತ್ತು ಮರಣಕ್ಕೆ ಸಂಭವನೀಯ ಕಾರಣ, ಇವುಗಳ ಬಗ್ಗೆ ದೃಢಪಡಿಸಿಕೊಳ್ಳಲಾಗುತ್ತದೆ.

ಯಾವುದೇ ಒಂದು ವರ್ಷದ ಮಧ್ಯ ವಾರ್ಷಿಕ ಜನಸಂಖ್ಯೆಯಲ್ಲಿ ಪ್ರತೀ ಸಾವಿರಕ್ಕೆ ಆಗುವ ಸಜೀವ ಜನನಗಳ ಸಂಖ್ಯೆಯನ್ನೇ ಸ್ಥೂಲ ಜನನ ಪ್ರಮಾಣವೆಂದೂ ಅದೇ ರೀತಿ, ಯಾವುದೇ ಒಂದು ವರ್ಷದ ಮಧ್ಯ ವಾರ್ಷಿಕ ಜನಸಂಖ್ಯೆಯಲ್ಲಿ ಪ್ರತೀ ಸಾವಿರಕ್ಕೆ ಆಗುವ ಮರಣಗಳ ಸಂಖ್ಯೆಯನ್ನು ಸ್ಥೂಲ ಮರಣ ಪ್ರಮಾಣವೆಂದೂ ನಿರ್ಣಯಿಸಲಾಗಿದೆ.

ಇತ್ತೀಚಿನ ಕೆಲವು ವರ್ಷಗಳಲ್ಲಿ ರಾಜ್ಯದಲ್ಲಿ ವರದಿಯಾಗಿರುವ ಜನನ ಮತ್ತು ಮರಣಗಳ ಸಂಖ್ಯೆ ಹೀಗಿದೆ

| ವರ್ಷ | ಜನನಗಳು | ಮರಣಗಳು |
|---|---|---|
| 1971 | 4,69,226 | 1,76,160 |
| 1972 | 4,84,616 | 1,79,593 |
| 1973 | 4,63,130 | 1,93,725 |
| 1974 | 4,35,353 | 1,66,102 |
| 1975 | 4,53,444 | 1,71,857 |
| 1976 | 4,54,851 | 1,76,061 |
| 1977 | 4,39,473 | 1,75,524 |
| 1978 | 4,27,336 | 1,55,489 |
| 1979 | 4,56,668 | 1,63,296 |

ಶಿಶು ಮರಣ ಪ್ರಮಾಣ : ಮೃತ ಶಿಶು ಜನನ, ಪ್ರಸವ ಪೂರ್ವ ಶಿಶು ಮರಣ, ಪ್ರಸವ ಸಂದರ್ಭ ಶಿಶು ಮರಣ, ಮತ್ತು ಪ್ರಸವೋತ್ತರ ಶಿಶು ಮರಣ ಇವು ಶಿಶು ಮರಣ ಪ್ರಮಾಣದ ಅಂಕಿ ಅಂಶಗಳು ಮತ್ತು ಉಪಯುಕ್ತ ಸೂಚಕಗಳು. ರಾಜ್ಯದಲ್ಲಿ ಶಿಶು ಮರಣ ಪ್ರಮಾಣವು ಈ ಶತಮಾನದ ಆರಂಭದಲ್ಲಿ ಗಣನೀಯವಾಗಿ ಹೆಚ್ಚಾಗಿತ್ತು. ಅಂತಹ ಮರಣಗಳಿಗೆ ಮುಖ್ಯ ಕಾರಣಗಳೆಂದರೆ ಅಕಾಲ ಜನನ, ಶ್ವಾಸನಾಳದ ಊತ, ಅತಿಸಾರ, ಆಮಶಂಕೆ, ಜ್ವರ, ಅಂಗ ಸೆಳೆತ, ಕೀವುನಂಜು ಮತ್ತು ಉಸಿರಾಟಕ್ಕೆ ಸಂಬಂಧಿಸಿದ ರೋಗಗಳು. ಏನೇ ಇದ್ದರೂ ಯೋಜನಾ ಕಾರ್ಯಕ್ರಮಗಳಲ್ಲಿ ಪ್ರಸೂತಿ ಹಾಗೂ ಮಕ್ಕಳ ಯೋಗಕ್ಷೇಮ ಸೇವೆಗಳನ್ನು ತೀವ್ರವಾಗಿ ಜಾರಿಗೊಳಿಸಿದುದು ಮತ್ತು ಆಧುನಿಕ ಪ್ರಸೂತಿ ಸೇವಾ ಪದ್ಧತಿಯನ್ನು ರೂಢಿಗೆ ತಂದುದರಿಂದಾಗಿ ಇತ್ತೀಚಿನ ವರ್ಷಗಳಲ್ಲಿ ಶಿಶು ಮರಣ ಪ್ರಮಾಣ ಗಮನಾರ್ಹವಾಗಿ ಕಡಿಮೆಯಾಗಿದೆ.

ಕೆಳಗೆ ಕೊಟ್ಟಿರುವ ಪಟ್ಟಿಯು ರಾಜ್ಯದಲ್ಲಿ ಇತ್ತೀಚಿನ ವರ್ಷಗಳಲ್ಲಿ ದಾಖಲಾಗಿರುವ ಮೃತ ಶಿಶು ಜನನಗಳು ಹಾಗೂ ಶಿಶು ಮರಣಗಳ ಸಂಖ್ಯೆಯನ್ನು ತೋರಿಸುತ್ತದೆ

| ವರ್ಷ | ಮೃತ ಶಿಶು ಜನನಗಳು | ಶಿಶು ಮರಣಗಳು |
|---|---|---|
| 1971 | 9,966 | 23,392 |
| 1972 | 13,312 | 23,399 |
| 1973 | 11,970 | 21,453 |
| 1974 | 10,612 | 18,937 |
| 1975 | 10,689 | 20,486 |
| 1976 | 10,713 | 19,538 |
| 1977 | 9,828 | 20,445 |
| 1978 | 4,991 | 16,733 |
| 1979 | 7,714 | 17,982 |

ಬಾಣಂತಿ ಮರಣಗಳು : ಬಾಣಂತಿ ಮರಣಗಳಿಗೆ ಮುಖ್ಯ ಕಾರಣಗಳೆಂದರೆ—ರಕ್ತಹೀನತೆ, ರಕ್ತಸ್ರಾವ ಮತ್ತು ಪ್ರಸವ ವೇದನೆ ತೊಂದರೆಗಳು. ಶಿಶು ಮರಣದ ಪ್ರಮಾಣದಂತೆ ಬಾಣಂತಿಯರ ಮರಣ ಪ್ರಮಾಣವೂ ಇತ್ತೀಚಿನ ವರ್ಷಗಳಲ್ಲಿ ಕಡಿಮೆಯಾಗಿದೆ. ಇದಕ್ಕೆ ಬಹುಮಟ್ಟಿನ ಕಾರಣ—ಪ್ರಸವಪೂರ್ವ ಹಾಗೂ ಪ್ರಸವೋತ್ತರ ಚಿಕಿತ್ಸೆಗಾಗಿ ಒದಗಿಸಿದ ವಿಸ್ತೃತ ಸೇವೆಗಳು. ಜನನಗಳು, ಮರಣಗಳು ಹಾಗೂ ವಿವಾಹಗಳ ಮುಖ್ಯ ನೋಂದಣಿ ಅಧಿಕಾರಿ ಅವರು ಇತ್ತೀಚಿನ ಕೆಲವು ವರ್ಷಗಳಲ್ಲಿ ವರದಿ ಮಾಡಿರುವ ವರ್ಷವಾರು ಬಾಣಂತಿಯರ ಮರಣ ಸಂಖ್ಯೆಯನ್ನು ಕೆಳಗೆ ಕಂಡ ಪಟ್ಟಿಯಿಂದ ತಿಳಿಯಬಹುದು.

| ವರ್ಷ | ಬಾಣಂತಿ ಮರಣಗಳು |
|---|---|
| 1971 | 780 |
| 1972 | 1,174 |
| 1973 | 732 |
| 1974 | 659 |
| 1975 | 697 |
| 1976 | 820 |
| 1977 | 912 |
| 1978 | 780 |
| 1979 | 774 |

## ಸಾಮಾನ್ಯ ರೋಗಗಳು

ರಾಜ್ಯದಲ್ಲಿ ಚಿಕಿತ್ಸೆ ನೀಡಲಾಗುವ ಬಹುತೇಕ ರೋಗಿಗಳಲ್ಲಿ ಕಂಡುಬರುವ ಸಾಮಾನ್ಯ ರೋಗಗಳೆಂದರೆ ಜ್ವರ, ಮಲೇರಿಯಾ, ಆಮಶಂಕೆ, ಅತಿಭೇದಿ, ಉಸಿರಾಟದ ತೊಂದರೆ, ವಿಷಮಶೀತಜ್ವರ, ಜೀರ್ಣಾಂಗಗಳ ತೊಂದರೆ, ಕರುಳುಬೇನೆ, ಜಂತುಗಳು, ಹುಣ್ಣುಗಳು, ರಕ್ತಹೀನತೆ, ಚರ್ಮರೋಗಗಳು, ನರಮಚ್ಚೆ (ಪೋಲಿಯೋ), ಇತ್ಯಾದಿ. ರಾಜ್ಯದಲ್ಲಿ ಇತ್ತೀಚಿನ ವರ್ಷಗಳಲ್ಲಿ ವರದಿಯಾಗಿರುವಂತೆ ನಾನಾ ಕಾಯಿಲೆ ಮತ್ತಿತರ ಕಾರಣಗಳಿಂದ ಸಂಭವಿಸಿರುವ ಮರಣ ಸಂಖ್ಯೆಯನ್ನು ಮುಂದಿನ ಪುಟಗಳಲ್ಲಿರುವ ಪಟ್ಟಿಯಿಂದ ತಿಳಿಯಬಹುದು.

ಪ್ಲೇಗು : 19ನೇಯ ಶತಮಾನದ ಕೊನೆಯಲ್ಲಿ ಕಾಣಿಸಿಕೊಂಡ ಪ್ಲೇಗು ರೋಗವು ಈಗ ನಿಯಂತ್ರಣದಲ್ಲಿದೆ. 1898ರ ಆಗಸ್ಟ್ ತಿಂಗಳಲ್ಲಿ ಬೆಂಗಳೂರಿನಲ್ಲಿ ಕಾಣಿಸಿಕೊಂಡ ಈ ರೋಗಕ್ಕೆ ಮೊದಲು ತುತ್ತಾದವರು ರೈಲ್ವೇ ಗೂಡ್ಸ್‌ಶೆಡ್‌ನ ಕೆಲಸಗಾರರು. ಆಗ ಧಾರವಾಡ ಮತ್ತು ಹುಬ್ಬಳ್ಳಿಯಲ್ಲೂ ರೋಗ ಕಾಣಿಸಿಕೊಂಡಿತು. ಬೆಂಗಳೂರು ಜಿಲ್ಲೆಯೊಂದರಲ್ಲೇ 4,992 ರೋಗ ಪ್ರಕರಣಗಳು ಕಾಣಿಸಿಕೊಂಡು 4,472 ಮರಣಗಳು ಸಂಭವಿಸಿದವು. ರೋಗಕ್ಕೆ ಹೆಚ್ಚಾಗಿ ತುತ್ತಾದ ಕೋಲಾರ ಜಿಲ್ಲೆಯಲ್ಲಿ 1,706, ತುಮಕೂರು ಜಿಲ್ಲೆಯಲ್ಲಿ 745, ಮತ್ತು ಮೈಸೂರು ಜಿಲ್ಲೆಯಲ್ಲಿ 503 ಜನ ಮರಣ ಹೊಂದಿದರು. ರಾಷ್ಟ್ರವ್ಯಾಪಿಯಾಗಿ ಕಂಡುಬಂದ ಹಿಂದಿನ ಪ್ಲೇಗು ಪ್ರಕರಣಗಳೆಂದರೆ

| ಮರಣ ಕಾರಣ | 1971 | 1972 | 1973 | 1974 | 1975 | 1976 | 1977 | 1978 | 1979 |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| ಪ್ಲೇಗು | 18 | 46 | — | 93 | — | — | 14 | 19 | — |
| ಕಾಲರಾ | 405 | 817 | 739 | 423 | 333 | 483 | — | — | — |
| ಮಲೇರಿಯಾ | 7,693 | 4,678 | 4,441 | 2,517 | 2,522 | 3,107 | 3,611 | 2,103 | 1,905 |
| ಸಿಡುಬು | 1,810 | 658 | 1,804 | 1,499 | — | — | — | — | — |
| ವಿಷಮ ಶೀತಜ್ವರ | 3,148 | 2,659 | 2,274 | 1,279 | 1,395 | 1,137 | 782 | 535 | 338 |
| ಇತರ ಜ್ವರ | 42,299 | 42,056 | 50,148 | 34,490 | 33,303 | 15,186 | 8,632 | 7,520 | 9,917 |
| ಆಮಶಂಕೆ ಮತ್ತು ಅತಿಭೇದಿ | 7,237 | 6,539 | 7,719 | 5,806 | 5,096 | 5,569 | 7,291 | 5,626 | 3,421 |
| ಉಸಿರಾಟದ ತೊಂದರೆ | 17,431 | 17,661 | 19,755 | 18,172 | 20,891 | 20,965 | 20,929 | 19,239 | 17,715 |
| ಕ್ಷಯ | 6,587 | 5,699 | 5,746 | 5,419 | 6,181 | 6,538 | 6,912 | 6,162 | 5,690 |
| ಕುಷ್ಠ | 613 | 409 | 258 | 175 | 188 | 146 | 202 | 130 | 109 |
| ಹುಚ್ಚುನಾಯಿ ಕಡಿತ | 103 | 131 | 86 | 92 | 142 | 68 | 76 | 73 | 56 |
| ಧನುರ್ವಾಯು | 667 | 318 | 152 | 162 | 487 | 534 | 766 | 481 | 295 |
| ಗಂಟಲು ಬೇನೆ | 116 | 75 | 14 | 15 | 62 | 46 | 60 | 32 | 49 |
| ನಾಯಿಕೆಮ್ಮು | 17 | 381 | 199 | 358 | 41 | 32 | 23 | 70 | 21 |
| ನರಮಜ್ಜೆ (ಪೋಲಿಯೋ) | 5 | 35 | 3 | 16 | 15 | 17 | 13 | 15 | 137 |
| ಶ್ವಾಸಕೋಶ ಸಂಬಂಧ ರೋಗಗಳು | 59 | 111 | 56 | 71 | 61 | 61 | 98 | 62 | 45 |
| ಇತರ ರೋಗಗಳು | 82,510 | 91,519 | 95,255 | 86,240 | 91,597 | 1,12,075 | 1,15,538 | 1,04,005 | 1,12,524 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ಆತ್ಮಹತ್ಯೆ | 616 | 598 | 560 | 487 | 528 | 594 | 632 | 805 | 743 |
| ನೀರಿನಲ್ಲಿ ಮುಳುಗಿ | 1,076 | 967 | 922 | 1,109 | 1,164 | 922 | 946 | 771 | 713 |
| ಗಾಯಗಳು ಮತ್ತು ಅಪಘಾತಗಳು | 1,052 | 1,041 | 834 | 963 | 1,150 | 1,461 | 1,462 | 1,539 | 1,379 |
| ಕಾಡುಪ್ರಾಣಿಗಳಿಂದ ಸಾವು | 114 | 67 | 52 | 29 | 16 | 20 | 8 | 12 | 22 |
| ಹಾವು ಕಡಿತ | 267 | 282 | 290 | 357 | 367 | 384 | 363 | 272 | 439 |
| ಕಾರಣ ತಿಳಿಯದಿರುವುದು | 1,477 | 1,872 | 1,686 | 5,735 | 5,621 | 5,895 | 6,401 | 5,289 | 7,817 |

ಮಾಹಿತಿ : ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯ ನಿರ್ದೇಶಕರು.

1948-52ರ ಮಧ್ಯದ ಅವಧಿಯಲ್ಲಿ. ಆಗ ಭಾರತದ ನಾನಾ ಭಾಗಗಳಲ್ಲಿ ಸಾರ್ವತ್ರಿಕವಾಗಿ ಹರಡಿಕೊಂಡಿದ್ದ ಈ ರೋಗವು ಕರ್ನಾಟಕದ ತುಮಕೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ವಿಶೇಷ ವಾಗಿ ಕಂಡುಬಂದಿತು. ರಾಷ್ಟ್ರೀಯ ಮಲೇರಿಯಾ ನಿರ್ಮೂಲನ ಕಾರ್ಯಕ್ರಮದಲ್ಲಿ ಕೈಗೊಂಡ ಕ್ರಿಮಿನಾಶಕ ಸಿಂಪಡಣೆ ಕಾರ್ಯ ಹಾಗೂ ಇತರ ರೋಗ ನಿಯಂತ್ರಣ ಕಾರ್ಯಕ್ರಮಗಳ ಪರಿಣಾಮವಾಗಿ ಮನುಷ್ಯರಿಗೆ ತಗಲುವ ಪ್ಲೇಗು ರೋಗ ಗಣನೀಯವಾಗಿ ಇಳಿಮುಖವಾಯಿತು. ದೆಹಲಿಯಲ್ಲಿರುವ ರಾಷ್ಟ್ರೀಯ ಸಾಂಕ್ರಾಮಿಕ ರೋಗಗಳ ಸಂಸ್ಥೆಯು ನಡೆಸಿದ ಅಗತ್ಯ ಪರಿಶೋಧನೆಗಳ ನಂತರ ಎಲ್ಲ ರೋಗ ಪೀಡಿತ ರಾಜ್ಯಗಳಲ್ಲೂ ಸೂಕ್ತ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಯಿತು. ನಂತರ ಪ್ಲೇಗು ರೋಗವು ಮತ್ತೆ ಇಳಿಮುಖವಾಗಿ 1978ರ ನಂತರ ಮನುಷ್ಯರಿಗೆ ಪ್ಲೇಗು ರೋಗ ತಗಲಿದ ಯಾವ ಪ್ರಕರಣವೂ ಕಂಡುಬಂದಿಲ್ಲ. 1975ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಪ್ಲೇಗು ಜಾಗೃತಿ ಘಟಕವು 1976ರಲ್ಲಿ ಕಾರ್ಯಾರಂಭ ಮಾಡಿತು. ಇದು ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಆರೋಗ್ಯ ಸೇವೆಗಳ ಪ್ರಧಾನ ನಿರ್ದೇಶನಾಲಯದ ಅಧೀನದಲ್ಲಿ ದೆಹಲಿಯಲ್ಲಿರುವ ರಾಷ್ಟ್ರೀಯ ಸಂಸ್ಥೆಯ ಒಂದು ಶಾಖೆಯಾಗಿದೆ. ಈ ಘಟಕದ ಸ್ಥೂಲ ಉದ್ದೇಶಗಳೆಂದರೆ—ಪ್ಲೇಗು ರೋಗದ ಪತ್ತೆ ಮತ್ತು ನಿಯಂತ್ರಣಕ್ಕೆ ತಜ್ಞತೆಯನ್ನು ಅಭಿವೃದ್ಧಿಗೊಳಿಸುವುದು, ಮನುಷ್ಯನ ಪ್ಲೇಗು ರೋಗದ ಸ್ಥಳೀಯತೆ, ಮರುಕಳಿಕೆ ಹಾಗೂ ಹಿಂಜರಿತದ ಅಂಶಗಳ ಅಧ್ಯಯನ, ರಾಜ್ಯ ಹಾಗೂ ದೇಶದಲ್ಲಿ ಸೋಂಕಿನ ಕ್ಷೇತ್ರವನ್ನು ಗುರುತಿಸುವುದು ಮತ್ತು ಪ್ಲೇಗು ಜಾಗೃತಿ ಕಾರ್ಯದಲ್ಲಿ ನಾನಾ ರಾಜ್ಯಗಳ ಸಿಬ್ಬಂದಿಗೆ ತರಬೇತಿ ನೀಡುವುದಾಗಿದೆ.

ಕಾಲರಾ : ಇದು ಅತ್ಯಂತ ಭೀಕರ ಸಾಂಕ್ರಾಮಿಕ ರೋಗಗಳಲ್ಲಿ ಒಂದು. ಇದು ಇದ್ದಕ್ಕಿದ್ದಂತೆ ವಿಪರೀತ ನೀರಾದ ಭೇದಿ, ವಾಂತಿ, ತೀವ್ರ ನಿರ್ಜಲತೆ, ರಕ್ತಾಮ್ಲತೆ ಮತ್ತು ರಕ್ತ ಪರಿಚಲನೆಯ ಕುಸಿತ—ಈ ಲಕ್ಷಣಗಳು ಕಾಣಿಸಿಕೊಳ್ಳುವ ಒಂದು ತೀವ್ರ ಕರುಳುರೋಗ. ಮರಣ ಪ್ರಮಾಣ ಶೇಕಡ ಒಂದರಿಂದ 50ರಷ್ಟಿರುತ್ತದೆ. ಯೋಗ್ಯ ಹಾಗೂ ಸಕಾಲಿಕ ಚಿಕಿತ್ಸೆ ನೀಡಿದರೆ ಯಾವುದೇ ಸಾವಿನ ಸಂಭವವಿರುವುದಿಲ್ಲ. ಇತ್ತೀಚಿನ ವರ್ಷಗಳಲ್ಲಿ ಕಾಲರಾದ ಹಾವಳಿ ಗಣನೀಯವಾಗಿ ಕಡಿಮೆಯಾಗಿದೆ. ಕಾಲರಾ ರೋಗ ಕಾಣಿಸಿಕೊಂಡ ಕೂಡಲೇ ಅಂತಹ ಸ್ಥಳಗಳಿಗೆ ಹೋಗಿ ಕಾಲರಾ ನಿರೋಧಕ ಚುಚ್ಚುಮದ್ದು ಹಾಕಲು ಅಗತ್ಯ ಆರೋಗ್ಯ ಸಿಬ್ಬಂದಿಯನ್ನು ಕಳುಹಿಸಲಾಗುತ್ತದೆ. ಕಾಲರಾ ರೋಗವನ್ನು ಪೂರ್ಣವಾಗಿ ನಿರ್ಮೂಲನ ಮಾಡುವುದು ಬಹಳ ಕಷ್ಟವೆಂದು ಕಂಡುಬಂದಿದೆ. ಒಳ್ಳೆಯ ಪರಿಸರ ನೈರ್ಮಲ್ಯದ ಕೊರತೆಯಿರುವುದು ಮತ್ತು ಜನರು ಅರಕ್ಷಿತ ನೀರನ್ನು ಬಳಸುವುದು ಇದಕ್ಕೆ ಕಾರಣ. ಕರ್ನಾಟಕ ರಾಜ್ಯದಲ್ಲಿರುವ 19 ಜಿಲ್ಲೆಗಳಲ್ಲಿ 8 ಜಿಲ್ಲೆಗಳು ಸಾಮಾನ್ಯವಾಗಿ ಕಾಲರಾ ರೋಗಕ್ಕೆ ತುತ್ತಾಗುವ ಜಿಲ್ಲೆಗಳೆಂದು ಘೋಷಿಸಲಾಗಿದೆ. ಆ ಜಿಲ್ಲೆಗಳೆಂದರೆ—ಬೆಳಗಾವಿ, ಬಳ್ಳಾರಿ, ವಿಜಾಪುರ, ಚಿತ್ರದುರ್ಗ, ಧಾರವಾಡ, ಕಲ್ಬುರ್ಗಿ, ಮೈಸೂರು ಮತ್ತು ರಾಯಚೂರು. ಬಳ್ಳಾರಿ, ವಿಜಾಪುರ, ಚಿತ್ರದುರ್ಗ, ಕಲ್ಬುರ್ಗಿ ಮತ್ತು ಮೈಸೂರು ಜಿಲ್ಲೆಗಳಲ್ಲಿ ಸ್ಥಳದಲ್ಲೇ ರೋಗ ಪರಿಶೋಧನೆ, ಚಿಕಿತ್ಸೆ ಮತ್ತು ರೋಗಪ್ರಸಾರವನ್ನು ತಡೆಹಿಡಿಯಲು ಪ್ರತೀ ಜಿಲ್ಲೆಗೊಂದರಂತೆ ಕಾಲರಾ ನಿಯಂತ್ರಣ ತಂಡಗಳಿವೆ. ಮುಂದಿನ ಪುಟದ ಪಟ್ಟಿಯು ಇತ್ತೀಚಿನ ಕೆಲವು ವರ್ಷಗಳಲ್ಲಿ ಕಂಡುಬಂದ ರೋಗ ಪ್ರಕರಣಗಳು, ಸಾವುಗಳು ಮತ್ತು ರೋಗ ನಿರೋಧಕ ಚುಚ್ಚುಮದ್ದು ಹಾಕಲ್ಪಟ್ಟ ಜನರ ಸಂಖ್ಯೆಗಳನ್ನು ತಿಳಿಸುತ್ತದೆ.

ಮಲೇರಿಯಾ : ಮಲೆನಾಡು ಪ್ರದೇಶದಲ್ಲಿ ಜನರ ಕಾರ್ಯಶಕ್ತಿಯನ್ನೇ ಹಾಳು ಮಾಡಿದ್ದ ಒಂದು ತೀವ್ರ ರೋಗ ಮಲೇರಿಯಾ. ಮಂಡ್ಯ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ನೀರಾವರಿ ಸೌಲಭ್ಯಗಳನ್ನು ವಿಸ್ತರಿಸಿದಾಗ ಅಲ್ಲೂ ಈ ರೋಗ ಕಂಡುಬಂದಿತು. ಕಾಲರಾ ಬಿಟ್ಟರೆ ಮಲೇರಿಯಾವೂ ಒಂದು ಸಾಂಕ್ರಾಮಿಕ ರೋಗ. ನಿರ್ದಿಷ್ಟ ಜಾತಿಯ ಹೆಣ್ಣು ಅನಾಫಿಲಿಸ್ ಸೊಳ್ಳೆ ಕಚ್ಚುವುದರಿಂದ ಈ ರೋಗವು ಜನಸಮುದಾಯದಲ್ಲಿ ಹರಡುತ್ತದೆ. ಮೈ ನಡುಗಿಸುವ ಚಳಿ, ಜೊತೆಯಲ್ಲೇ ತೀವ್ರ ಪ್ರಮಾಣದ ಜ್ವರವೇರಿಕೆ, ಆಗಿಂದಾಗ ತಲೆನೋವು, ಪಿತ್ತೋದ್ರೇಕ ಹಾಗೂ ಅತಿಯಾದ ಬೆವರಿನೊಂದಿಗೆ ಜ್ವರ—ಇವು ರೋಗದ ಲಕ್ಷಣಗಳು. ಈ ಮೈನಡುಕ, ಜ್ವರ ಮತ್ತು ಬೆವರು ಪ್ರತಿದಿನ ಎರಡು ಅಥವಾ ಮೂರು ದಿನಕ್ಕೊಮ್ಮೆ ಮತ್ತೆ ಮತ್ತೆ ಕಾಣಿಸಿಕೊಳ್ಳಬಹುದು. ಇದು ಮಲೇರಿಯಾ ಪರೋಪಜೀವಿಯ ಜಾತಿಯನ್ನು ಅವಲಂಬಿಸಿದೆ. ರೋಗಪೀಡಿತ ವ್ಯಕ್ತಿಯ ದೇಹದಲ್ಲಿರುವ ಕೆಂಪು ರಕ್ತಕಣಗಳಿಗೆ ಭಾರಿ ಪ್ರಮಾಣದಲ್ಲಿ ನಷ್ಟವುಂಟಾಗುವುದರಿಂದ, ರೋಗಿಯು ರಕ್ತಹೀನನಾಗಿ ನಿತ್ಯದ ಕೆಲಸ ಮಾಡಲು ಅಸಮರ್ಥನಾಗುತ್ತಾನೆ. ರೋಗಿಯ ಪ್ಲೀಹ (ಸ್ಪ್ಲೀನ್) ವು ದೊಡ್ಡದಾಗುತ್ತದೆ. ರಾಜ್ಯದಲ್ಲಿ 1953ರಲ್ಲಿ ಆರಂಭವಾದ ರಾಷ್ಟ್ರೀಯ ಮಲೇರಿಯಾ ನಿಯಂತ್ರಣ ಕಾರ್ಯಕ್ರಮವು 1958ರಲ್ಲಿ ರಾಷ್ಟ್ರೀಯ ಮಲೇರಿಯಾ ನಿರ್ಮೂಲನ ಕಾರ್ಯಕ್ರಮವಾಗಿ ಬದಲಾವಣೆಯಾಯಿತು. ಕೆಳಗೆ ಕಂಡ ವಿವಿಧ ಹಂತದ ಕಾರ್ಯಕ್ರಮಕ್ಕೆ ರಾಜ್ಯದ 19 ಜಿಲ್ಲೆಗಳನ್ನು ಒಳಪಡಿಸಲಾಗಿದೆ.

ರಾಷ್ಟ್ರೀಯ ಮಲೇರಿಯಾ ನಿಯಂತ್ರಣ ಕಾರ್ಯಕ್ರಮದಲ್ಲಿ ಅಗತ್ಯವಾದ ಮೂಲ ಮಾಹಿತಿ ಹಾಗೂ ಅಂಕಿ ಅಂಶಗಳು ಆಗಲೇ ದೊರೆಯುತ್ತಿದ್ದುದರಿಂದ ರಾಷ್ಟ್ರೀಯ ಮಲೇರಿಯಾ ನಿರ್ಮೂಲನ ಕಾರ್ಯಕ್ರಮದಲ್ಲಿ ಸಿದ್ಧತಾ ಹಂತವನ್ನು ಕೈಬಿಡಲಾಯಿತು. ಎರಡನೇಯದು ಆಕ್ರಮಣ ಹಂತ. ಮಲೇರಿಯಾ ರೋಗವು

| ವರ್ಷ | ರೋಗ ತಗಲಿದ ಪ್ರಕರಣಗಳು | ಸಂಭವಿಸಿದ ಸಾವುಗಳು | ಚುಚ್ಚುಮದ್ದು ಹಾಕಿದವರ ಸಂಖ್ಯೆ |
|---|---|---|---|
| 1971 | 244 | 14 | 1,78,776 |
| 1972 | 414 | 58 | 18,30,152 |
| 1973 | 955 | 100 | 25,39,685 |
| 1974 | 667 | 65 | 10,19,904 |
| 1975 | 411 | 37 | 7,86,653 |
| 1976 | 321 | 30 | 7,46,248 |
| 1977 | 168 | 31 | 11,45,574 |
| 1978 | 377 | 25 | 12,10,227 |
| 1979 | 118 | 12 | 11,32,287 |
| 1980 | 121 | 7 | 18,72,554 |
| 1981 | 1.424 | 84 | 21,60,460 |

ಮಾಹಿತಿ : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ನಿರ್ದೇಶಕರು.

ಹರಡುವುದನ್ನು ತಪ್ಪಿಸಲು ಡಿ. ಡಿ. ಟಿ. ಕ್ರಿಮಿನಾಶಕವನ್ನು ಎಲ್ಲ ಕಟ್ಟಡಗಳಿಗೂ ಸಿಂಪಡಣೆ ಮಾಡುವುದು ಇದರ ಉದ್ದೇಶ ವಾಗಿತ್ತು. ಈ ಕಾರ್ಯಕ್ರಮವನ್ನು 3-4 ವರ್ಷಗಳ ಕಾಲ ಮುಂದುವರಿಸಲಾಯಿತು. ಜನರಿಂದ ಒಳ್ಳೆಯ ಸಹಕಾರ ದೊರೆತುದರಿಂದ ಕ್ರಿಮಿನಾಶಕ ಸಿಂಪಡಣೆಯಲ್ಲಿ ಇಟ್ಟುಕೊಂಡಿದ್ದ ಗುರಿಯನ್ನು ಸಾಧಿಸಲಾಯಿತು. ಜ್ವರದ ಪ್ರಕರಣಗಳಲ್ಲಿ ರಕ್ತ ಲೇಪಗಳನ್ನು ತೆಗೆದುಕೊಂಡು ಅವುಗಳನ್ನು ಸೂಕ್ಷ್ಮದರ್ಶಕಗಳಿಂದ ಪರೀಕ್ಷಿಸಿ, ಮಲೇರಿಯಾ ರೋಗದ ವಿರಳ ಪ್ರಕರಣಗಳನ್ನು ಪತ್ತೆ ಹಚ್ಚುವುದು ಮತ್ತು ಹಾಗೆ ಪತ್ತೆ ಹಚ್ಚಲ್ಪಟ್ಟ ಮಲೇರಿಯಾ ರೋಗ ಪ್ರಕರಣಗಳಲ್ಲಿ ತೀವ್ರ ಚಿಕಿತ್ಸೆ ನೀಡುವುದು ನಂತರದ ಕ್ರೋಢೀಕರಣ ಅಥವಾ ಸಂಘಟನಾ ಹಂತ. ಈ ಹಂತದಲ್ಲಿ ಸೋಂಕಿನ ಮೂಲವನ್ನು ಪರಿಶೋಧಿಸಿ, ಅವನ್ನು ನಾಶಪಡಿಸ ಲಾಯಿತು. ನಿರ್ಣಾಯಕ ಸ್ಥಿತಿ ಸಾಧನೆಯಾಗುವವರೆಗೂ ಈ ಹಂತವನ್ನು ಮುಂದುವರಿಸಲಾಯಿತು. ನಿರ್ವಹಣಾ ಹಂತದಲ್ಲಿ ಮಲೇರಿಯಾ ನಿರ್ಮೂಲನ ಮಾಡಲಾಗುವುದು. ಈ ಹಂತವು ರಾಜ್ಯದಲ್ಲಿ ಮಲೇರಿಯಾ ಪೀಡೆ ಇರುವವರೆಗೂ ಮುಂದು ವರಿಯುತ್ತದೆ.

ರೋಗದ ವಿರುದ್ಧ ಜಾಗೃತಿ ಕಾರ್ಯವನ್ನು ಮುಂದು ವರಿಸಲಾಗುತ್ತಿದೆ. ಈ ಕೆಲಸವನ್ನು ಆರೋಗ್ಯ ಕಾರ್ಯಕರ್ತರಿಗೆ ವಹಿಸಲಾಗಿದ್ದು, ಅವರು ಎರಡು ವಾರಕ್ಕೊಮ್ಮೆ ಮನೆ ಮನೆಗೆ ಭೇಟಿ ನೀಡಿ, ಜ್ವರದ ಪ್ರಕರಣಗಳಿದ್ದಲ್ಲಿ ರಕ್ತಲೇಪಗಳನ್ನು ಸಂಗ್ರಹಿಸುತ್ತಾರೆ ಮತ್ತು ಸಂಭವನೀಯ ಚಿಕಿತ್ಸೆಗಾಗಿ ಒಂದು ಪ್ರಮಾಣದ ಕ್ಲೋರೋಕ್ವಿನ್ ಮಾತ್ರೆಗಳನ್ನು ನೀಡುತ್ತಾರೆ. ಸಂಗ್ರಹಿಸಿದ ರಕ್ತಲೇಪಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರ ಗಳಿಗೆ ಕಳುಹಿಸಿ, ಅಲ್ಲಿರುವ ರೋಗಲಕ್ಷಣ ಶಾಸ್ತ್ರ ಪ್ರಯೋಗಾ ಲಯದಲ್ಲಿ ಪರೀಕ್ಷಿಸಲಾಗುತ್ತದೆ. ಇದು ಸಕ್ರಿಯ ಜಾಗೃತಿಯ ಕೆಲಸ. ಯಥಾಸ್ಥಿತಿ ಜಾಗೃತಿ ಕೆಲಸವು ಎಲ್ಲ ಸರ್ಕಾರಿ ಹಾಗೂ ಖಾಸಗಿ ವೈದ್ಯಕೀಯ ಸಂಸ್ಥೆಗಳಲ್ಲಿ ಪ್ರತಿದಿನವೂ ನಡೆಯುತ್ತದೆ. ಅಗತ್ಯಕ್ಕೆ ಅನುಗುಣವಾಗಿ ರೋಗ ಪ್ರಕರಣಗಳಲ್ಲಿ ಒಳ ಮತ್ತು ಹೊರ ರೋಗಿಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. ಎಲ್ಲಾದರೂ ಸ್ಪಷ್ಟ ರೋಗಲಕ್ಷಣದ ಪ್ರಕರಣ ಪತ್ತೆಯಾದಲ್ಲಿ ಸೂಕ್ತ ವೈದ್ಯಕೀಯ ಚಿಕಿತ್ಸೆಗೆ ತಕ್ಷಣದ ಕ್ರಮ ಕೈಗೊಳ್ಳುವ ವ್ಯವಸ್ಥೆ ಮಾಡಲಾಗಿದೆ. ಹಾಗೆಯೇ, ರೋಗ ಹರಡುವುದನ್ನು ತಡೆ ಗಟ್ಟಲು ಸಮುದಾಯ ಸಂಪರ್ಕ, ರಕ್ತಸಮೀಕ್ಷೆ ಮತ್ತು ಡಿ. ಡಿ. ಟಿ. ಸಿಂಪಡಣೆ ಕಾರ್ಯವನ್ನು ಕೈಗೊಳ್ಳಲಾಗುತ್ತದೆ. ಎಲ್ಲ ಹಂತಗಳಲ್ಲೂ ಮಲೇರಿಯಾ ರೋಗದ ಸಕಾಲಿಕ ತೀವ್ರ ಚಿಕಿತ್ಸಾ ಸೌಲಭ್ಯವನ್ನು ಕಲ್ಪಿಸಲಾಗಿದೆ. ಗೊತ್ತುಮಾಡಿದ ಪ್ರದೇಶಗಳಲ್ಲಿ ಡಿ. ಡಿ. ಟಿ.. ಬಿ. ಹೆಚ್. ಸಿ. ಹಾಗೂ ಮೆಲಾಥಿಯಾನ್ ಕ್ರಿಮಿನಾಶಕ ಸಿಂಪಡಣೆ ಮಾಡಲಾಗುತ್ತದೆ.

ಒಳನಾಡು ಹಾಗೂ ಸಾರಿಗೆ ಸಂಪರ್ಕವಿಲ್ಲದಂತಹ ಸ್ಥಳಗಳಲ್ಲಿ ಜ್ವರದ ಪ್ರಕರಣಗಳಿಗೆ ಸಂಭವನೀಯ ಚಿಕಿತ್ಸಾ ಸೌಲಭ್ಯ ದೊರಕುವಂತೆ ಮಾಡಲು ಸ್ವಯಂಸೇವಾ ಸಂಸ್ಥೆಗಳ ಸಹಕಾರದಿಂದ ರಾಜ್ಯದಲ್ಲಿ 12,534 ಔಷಧ ಹಂಚಿಕೆ ಕೇಂದ್ರಗಳನ್ನೂ 5,144 ಜ್ವರ ಚಿಕಿತ್ಸಾ ಕೇಂದ್ರಗಳನ್ನೂ ತೆರೆಯಲಾಗಿದೆ. ಈ ಸ್ವಯಂಸೇವಾ ಸಂಸ್ಥೆಗಳಿಗೆ ನಿಯತಕಾಲಿಕವಾಗಿ ಔಷಧಗಳು ಮತ್ತು ಮಾತ್ರೆಗಳನ್ನು ಒದಗಿಸಲಾಗುತ್ತದೆ.

ಭಾರತ ಸರ್ಕಾರವು ನೀಡಿದ ಮಾರ್ಗ ಸೂತ್ರಗಳ ಪ್ರಕಾರ 1977ರ ಏಪ್ರಿಲ್ ತಿಂಗಳಿಂದ ಆರಂಭವಾದ ಸುಧಾರಿತ ಕಾರ್ಯಯೋಜನೆಯು ಜಾರಿಗೆ ಬರುವ ಮುನ್ನ ರಾಜ್ಯದಲ್ಲಿ ಮಲೇರಿಯಾ ಪ್ರಕರಣಗಳ ಸಂಖ್ಯೆ ಹೆಚ್ಚಾಗಿತ್ತು. ಬದಲಾವಣೆಗೊಂಡ ಕಾರ್ಯಯೋಜನೆಯ ಉದ್ದೇಶವೆಂದರೆ 1) ಮಲೇರಿಯಾ ರೋಗದಿಂದಾಗುವ ಮರಣಗಳನ್ನು ತಪ್ಪಿಸುವುದು; 2) ನಿಯಂತ್ರಣ ಕ್ರಮಗಳನ್ನು ತೀವ್ರಗೊಳಿಸುವುದು; 3) ಮಲೇರಿಯಾ ನಿಯಂತ್ರಣದಿಂದ ಕೃಷಿ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿ ಸಾಧಿಸಿರುವ ಸಾಧನೆಯನ್ನು ಉಳಿಸಿಕೊಳ್ಳುವುದು. ಬದಲಾವಣೆಗೊಂಡ ಕಾರ್ಯಯೋಜನೆಯನ್ನು ಜಾರಿಗೆ ತಂದಮೇಲೆ 1980ನೇ ಸಾಲಿನ ಪರಿಸ್ಥಿತಿಗೆ ಹೋಲಿಸಿದರೆ 1981ರಲ್ಲಿ ರಾಜ್ಯದ ಮಲೇರಿಯಾ ಸ್ಥಿತಿ ಶೇಕಡ 30ರಷ್ಟು ಕಡಿಮೆಯಾಗಿರುವುದು ಕಂಡುಬಂದಿದೆ. 1982ರಲ್ಲಿ ಮಲೇರಿಯಾ ಮತ್ತಷ್ಟು ಕಡಿಮೆಯಾಗಿದೆ.

ಮಲೇರಿಯಾ ಪ್ರಕರಣಗಳು ಇನ್ನೂ ಹೆಚ್ಚಾಗಿ ಕಂಡುಬರುತ್ತಿರುವ ಕೆಲವು ಜಿಲ್ಲೆಗಳೆಂದರೆ—ಚಿತ್ರದುರ್ಗ, ಹಾಸನ, ಕೋಲಾರ, ಮೈಸೂರು ಮತ್ತು ತುಮಕೂರು ಜಿಲ್ಲೆಗಳು. ರಾಜ್ಯದಲ್ಲಿ ದಾಖಲಾಗುವ ಒಟ್ಟು ರೋಗ ಪ್ರಕರಣಗಳಲ್ಲಿ ಶೇಕಡ 70ರಷ್ಟು ಭಾಗ ಈ ಜಿಲ್ಲೆಗಳ ಕೊಡುಗೆಯಾಗಿದೆ. ಇನ್ನೂ ವಿಶ್ಲೇಷಿಸಿ ನೋಡಿದಾಗ, ಈ ಜಿಲ್ಲೆಗಳಲ್ಲಿರುವ ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳು ಗರಿಷ್ಠ ಸಂಖ್ಯೆಯ ಮಲೇರಿಯಾ ರೋಗಿಗಳಿಗೆ ಚಿಕಿತ್ಸೆ ನೀಡುತ್ತಿರುವುದು ಕಂಡುಬರುತ್ತದೆ. ಅಂತಹ ಕೇಂದ್ರಗಳನ್ನು ಗೊತ್ತುಮಾಡಲಾಗಿದ್ದು ಅಲ್ಲಿ ರೋಗನಿರೋಧಕ ಕ್ರಮಗಳನ್ನು ತೀವ್ರಗೊಳಿಸಲಾಗಿದೆ. ಈಗಿರುವ ರಾಷ್ಟ್ರೀಯ ಮಲೇರಿಯಾ ನಿರ್ಮೂಲನ ಕಾರ್ಯಕ್ರಮವನ್ನು 1986ರ ವೇಳೆಗೆ ಪೂರ್ಣಗೊಳಿಸುವ ಉದ್ದೇಶವಿದೆ. ಇಷ್ಟೆಲ್ಲಾ ಪ್ರಯತ್ನಗಳಿದ್ದರೂ ಕ್ರಮೇಣ ರೋಗ ಪ್ರಕರಣಗಳು ಹೆಚ್ಚಾಗುತ್ತಿರುವುದು ಕಂಡುಬಂದಿದೆ. ಆದ್ದರಿಂದ ಇಂದಿನ ಕಾರ್ಯಕ್ರಮ ಎರಡು ನಿರ್ದಿಷ್ಟ ಜವಾಬ್ದಾರಿಗಳನ್ನು ತೋರಿಸುತ್ತದೆ. ಅವೆಂದರೆ, ಅಂತಹ ಪ್ರದೇಶಗಳನ್ನು ರೋಗದ ಸೋಂಕಿನಿಂದ ಹೇಗೆ ದೂರ ಮಾಡುವುದು ಮತ್ತು ಜನವಸತಿ ಪ್ರದೇಶಗಳಲ್ಲಿ ರೋಗದ ಸೋಂಕನ್ನು ಹೇಗೆ ಅಡಗಿಸುವುದು ಎನ್ನುವುದು. ಕಳೆದ ಕೆಲವು ವರ್ಷಗಳ ರಾಜ್ಯದ ಮಲೇರಿಯಾ ಪರಿಸ್ಥಿತಿಯನ್ನು ಪುಟ 130ರಲ್ಲಿನ ಕೋಷ್ಟಕವು ಚಿತ್ರಿಸುತ್ತದೆ.

ವಿಷಮ ಶೀತಜ್ವರ: ವಿಷಮ ಶೀತಜ್ವರ (ಟಾಯಿಫಾಯಿಡ್) ದಿಂದ ಆಗಾಗ ಕೆಲವು ಮರಣಗಳು ಸಂಭವಿಸುತ್ತವೆ. ಈ ರೋಗ ಪ್ರಕರಣ ವರದಿಯಾದಾಗ ಆರೋಗ್ಯಾಧಿಕಾರಿಗಳು ಸ್ಥಳದಲ್ಲೇ ಚಿಕಿತ್ಸೆ ನೀಡಿ, ಟಿ.ಎ.ಬಿ. ಚುಚ್ಚುಮದ್ದು ನೀಡುವುದು, ಕುಡಿಯುವ ನೀರಿನ ಮೂಲಗಳನ್ನು ಕ್ರಿಮಿನಾಶಕಗಳಿಂದ ಸಂಸ್ಕರಿಸುವುದು ಮತ್ತು ಸೋಂಕಿನ ಮನೆಗಳಲ್ಲಿ ಸೋಂಕು ನಿವಾರಿಸುವುದು ಮೊದಲಾದ ರೋಗನಿರೋಧಕ ಕ್ರಮಗಳನ್ನು ಕೈಗೊಳ್ಳುತ್ತಾರೆ.

ಆನೆಕಾಲು ರೋಗ (ಫೈಲೇರಿಯಾ) : ಇದು ಸೋಂಕಿರುವ ವ್ಯಕ್ತಿಯ ದುಗ್ಧರಸ ಗ್ರಂಥಿಗಳಲ್ಲಿ ನೆಲೆಗೊಳ್ಳುವ ತಂತುವಿನಾಕಾರದ ಕ್ರಿಮಿಗಳಿಂದಾಗಿ ಉಂಟಾಗುವ ಒಂದು ಸಾಂಕ್ರಾಮಿಕ ರೋಗ. ಈ ರೋಗದ ಆರಂಭದ ಹಂತದ ಮುಖ್ಯ ಲಕ್ಷಣಗಳೆಂದರೆ—ಜ್ವರ, ಲಿಂಫಾಂಜಿಟಿಸ್, ಲಿಂಫಾಂಡೆನಿಟಿಸ್, ಇತ್ಯಾದಿ. ನಂತರದ ಹಂತಗಳಲ್ಲಿ ಕಾಣಿಸಿಕೊಳ್ಳುವ, ಪೂರ್ವಸ್ಥಿತಿಗೆ ಬರಲಾಗದಂತಹ ತೀವ್ರ ಲಕ್ಷಣಗಳೆಂದರೆ—ಕಾಲುಗಳು ಆನೆಕಾಲಿನಂತೆ ಊದಿಕೊಳ್ಳುವುದು, ಇತ್ಯಾದಿ. ಇದು ಅಂತಹ ಮಾರಕರೋಗವಲ್ಲದಿದ್ದರೂ, ಸಾಮಾಜಿಕ ಸಂಕೋಚವನ್ನು ಉಂಟುಮಾಡುತ್ತದೆ. ಅದರಲ್ಲೂ ಯುವಜನರು, ವಯಸ್ಕರು ಮತ್ತು ಅವಿವಾಹಿತ ಹೆಣ್ಣುಮಕ್ಕಳಿಗೆ ಇದು ಸಾಮಾಜಿಕ ಕಳಂಕವೆನಿಸುತ್ತದೆ. ಅನೇಕ ಜನ ತಪ್ಪಾಗಿ ಭಾವಿಸಿರುವಂತೆ ಈ ಆನೆಕಾಲು ರೋಗ ವಂಶಪರಂಪರೆಯಿಂದ ಬರುವುದಿಲ್ಲ. ಅದು ಬಂಜೆತನಕ್ಕೆ ಕಾರಣವಾಗುವುದೂ ಇಲ್ಲ. ಮುಂಚೆಯೇ ಪತ್ತೆ ಹಚ್ಚಿದಲ್ಲಿ ಈ ರೋಗವನ್ನು ಗುಣಪಡಿಸಬಹುದು. ರಾಜ್ಯದಲ್ಲಿ ಬಿದರೆ, ವಿಜಾಪುರ, ದಕ್ಷಿಣ ಕನ್ನಡ, ಕಲ್ಬುರ್ಗಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಈ ರೋಗವಿರುವುದನ್ನು ಕಾಣಬಹುದು. ಆನೆಕಾಲು ರೋಗದ ಸೋಂಕಿರುವ ಪ್ರದೇಶವನ್ನು ಗುರುತಿಸಲು ಇದುವರೆಗೆ 14 ಜಿಲ್ಲೆಗಳಲ್ಲಿ, ಅದರಲ್ಲೂ ನಗರ ಹಾಗೂ ಪಟ್ಟಣಗಳಲ್ಲಿ ಮೂಲ ಫೈಲೇರಿಯಾ ಸಮೀಕ್ಷೆಯನ್ನು ನಡೆಸಲಾಗಿದೆ. ರಾಜ್ಯದ ನಗರ ಪ್ರದೇಶಗಳಲ್ಲಿ ವಾಸಮಾಡುವ ಸುಮಾರು ಆರು ದಶಲಕ್ಷದಷ್ಟು ಜನ ಈ ಆನೆಕಾಲು ರೋಗಕ್ಕೆ ತುತ್ತಾಗುವ ಸಂಭವವಿದೆಯೆಂದು ಅಂದಾಜು ಮಾಡಲಾಗಿದೆ. ಇವರಲ್ಲಿ 0.6 ದಶಲಕ್ಷ ಜನಸಂಖ್ಯೆಗೆ ರಕ್ಷಣೆ ಒದಗಿಸಲಾಗಿದೆ. ಬಿದರೆ, ಕಲ್ಬುರ್ಗಿ, ಗುಳೇದಗುಡ್ಡ, ಮಂಗಳೂರು, ಷೋರಾಪುರ ಮತ್ತು ಉಡುಪಿ ಈ ಸ್ಥಳಗಳಲ್ಲಿ ಆನೆಕಾಲು ರೋಗ ನಿಯಂತ್ರಣ ಘಟಕಗಳಿದು ಭಟಕಳ, ಬಿದರೆ, ಗೋಕರ್ಣ, ಕಲ್ಬುರ್ಗಿ, ಹುಮ್ನಾಬಾದ್ ಮತ್ತು ಷೋರಾಪುರಗಳಲ್ಲಿ ಆನೆಕಾಲು ರೋಗ ಚಿಕಿತ್ಸಾಲಯಗಳಿವೆ. ರಾಷ್ಟ್ರೀಯ ಆನೆಕಾಲು ರೋಗ ನಿಯಂತ್ರಣ ಘಟಕಗಳು

| ವರ್ಷ | ಪರೀಕ್ಷಿಸಿದ ರಕ್ತಲೇಪಗಳು | ಪತ್ತೆಹಚ್ಚಿದ ಒಟ್ಟು ರೋಗ ಪ್ರಕರಣಗಳು | ಪ್ಲಾಸ್ಮೋಡಿಯಂ ಫಾಲ್ಸಿಪಾನಂ ಪ್ರಕರಣಗಳು | ನೀಡಿದ ತೀವ್ರ ಚಿಕಿತ್ಸಾ ಪ್ರಕರಣಗಳು | ವಾರ್ಷಿಕ ರಕ್ತ ಪರೀಕ್ಷೆ ಪ್ರಮಾಣ | ರಕ್ತಲೇಪ ಸ್ಪಷ್ಟ ಲಕ್ಷಣ ಪ್ರಮಾಣ | ವಾರ್ಷಿಕ ಪರೋಪಜೀವಿ ಸೂಚಕ |
|---|---|---|---|---|---|---|---|
| 1976 | 32,11,373 | 6,29,977 | 75,718 | 2,39,402 | 11.38 | 19.62 | 22.3 |
| 1977 | 39,77,342 | 5,36,404 | 41,295 | 9,36,436 | 13.77 | 13.49 | 18.6 |
| 1978 | 39,53,475 | 3,68,210 | 20,479 | 2,50,317 | 13.41 | 9.31 | 12.5 |
| 1979 | 41,08,543 | 2,76,832 | 12,473 | 2,44,802 | 13.11 | 6.74 | 8.8 |
| 1980 | 44,91,002 | 2,24,634 | 7,633 | 2,04,733 | 13.93 | 5.00 | 7.0 |
| 1981 | 51,61,625 | 1,58,008 | 7,416 | 1,44,182 | 15.59 | 3.06 | 4.8 |

ಮುಖ್ಯವಾಗಿ ಸಮುದಾಯದ ಆರೋಗ್ಯವಂತ ವ್ಯಕ್ತಿಗಳಿಗೆ ಸೋಂಕುಂಟಾಗುವ ಅವಕಾಶವನ್ನು ಕಡಮೆ ಮಾಡಲು ರೋಗಾಣುಸಾಂದ್ರತೆಯನ್ನು ನಿಯಂತ್ರಿಸುವುದಕ್ಕಾಗಿ ವಾರ ಕ್ಕೊಮ್ಮೆ ತೀವ್ರ ಕ್ರಿಮಿನಾಶಕ ಕ್ರಮಗಳನ್ನು ಕೈಗೊಳ್ಳುತ್ತವೆ. ಫೈಲೇರಿಯಾ ಚಿಕಿತ್ಸಾಲಯಗಳು ಸೂಕ್ಷ್ಮ ಫೈಲೇರಿಯಾ ಪ್ರಕರಣ ಗಳನ್ನು ಪತ್ತೆಹಚ್ಚಲು ಕ್ರಮವಾಗಿ ಪರೋಪಜೈವಿಕ ಸಮೀಕ್ಷೆ ನಡೆಸಿ, 12 ದಿನಗಳ ಕಾಲ ಅಂತಹ ರೋಗಿಗಳಿಗೆ ಡಿ.ಇ.ಸಿ. ಮಾತ್ರೆಗಳಿಂದ ಚಿಕಿತ್ಸೆ ನೀಡುತ್ತದೆ. ಕೊಳಚೆನೀರು ಮತ್ತು ಬಿಸಿ ನೀರು ಸಲೀಸಾಗಿ ಹೊರ ಹೋಗುವಂತಹ ಒಳಚರಂಡಿ ವ್ಯವಸ್ಥೆ, ಸೊಳ್ಳೆಗಳು ನೀರಿನಲ್ಲಿ ಬೆಳೆಯುವ ಹಂತಗಳ ಜೈವಿಕ ಮತ್ತು ರಾಸಾಯನಿಕ ನಿಯಂತ್ರಣ ಮತ್ತು ಪರೋಪಜೀವಿ ನಿರೋಧಕ ಔಷಧಗಳ ಬಳಕೆ—ಇವು ಈ ರೋಗವನ್ನು ನಿಯಂತ್ರಿಸಲು ಇರುವ ಕ್ರಮಗಳಲ್ಲಿ ಕೆಲವು.

ಕ್ಷಯ : ನಮ್ಮ ದೇಶದಲ್ಲಿ ಕ್ಷಯರೋಗವು ಒಂದು ಪ್ರಮುಖ ಆರೋಗ್ಯ ಸಮಸ್ಯೆಯಾಗಿದೆ. ಈ ರೋಗವು 'ಮೈಕ್ರೋಬ್ಯಾಕ್ಟೀರಿಯಾ' ಎಂಬ ಕ್ಷಯರೋಗ ಕ್ರಿಮಿಯಿಂದ ಉಂಟಾಗುತ್ತದೆ. ರಕ್ತಹೀನತೆ, ಅಪೌಷ್ಟಿಕತೆ, ಆರೋಗ್ಯ ಹೀನತೆಗಳಿಗೆ ಕಾರಣವಾಗುವ ಬಡತನ ಮತ್ತು ಕ್ಷಯರೋಗಿಗಳ ಅಜ್ಞಾನ—ಇವು ರೋಗವು ತೀವ್ರ ಉಲ್ಬಣಗೊಳ್ಳಲು ಮುಖ್ಯ ಕಾರಣಗಳಾಗಿವೆ. ರಾಜ್ಯದಲ್ಲಿ 18 ಜಿಲ್ಲಾ ಕ್ಷಯರೋಗ ಕೇಂದ್ರ ಗಳೂ, ಬೆಂಗಳೂರಿನಲ್ಲಿ ರಾಜ್ಯ ಕ್ಷಯರೋಗ ಕೇಂದ್ರವೂ ಇದೆ. ಕ್ಷಯರೋಗ ಚಿಕಿತ್ಸೆಗಾಗಿಯೇ ಮೀಸಲಾಗಿರುವ ಆರು ಕ್ಷಯ ರೋಗ ಆಸ್ಪತ್ರೆಗಳು ರಾಜ್ಯದಲ್ಲಿವೆ. ಈ ಎಲ್ಲ ಕಾರ್ಯಘಟಕಗಳು ಬೆಂಗಳೂರಿನಲ್ಲಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಆಡಳಿತಕ್ಕೆ ಒಳಪಟ್ಟಿವೆ. ಕ್ಷಯರೋಗ ಆಸ್ಪತ್ರೆಗಳು ಕೆಲಸ ಮಾಡುತ್ತಿರುವ ಸ್ಥಳಗಳೆಂದರೆ—ಬೆಂಗಳೂರು, ಬಳ್ಳಾರಿ, ಗದಗ, ಕೋಲಾರ, ಮಂಡ್ಯ ಮತ್ತು ಮಂಗಳೂರು. ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಕಾರ್ಯಕ್ರಮಕ್ಕೆ ಪುನ ಶ್ಚೇತನ ಕೊಡುವ ದೃಷ್ಟಿಯಿಂದ ಬೆಂಗಳೂರಿನಲ್ಲಿರುವ ಲೇಡಿ ವಿಲ್ಲಿಂಗ್‌ಡನ್ ಕ್ಷಯರೋಗ ಪ್ರಾತ್ಯಕ್ಷಿಕೆ ಹಾಗೂ ತರಬೇತಿ ಕೇಂದ್ರವನ್ನು ಸಂಶೋಧನೆ, ತರಬೇತಿ ಮತ್ತು ಕಾರ್ಯಕ್ರಮ ಮೇಲ್ವಿಚಾರಣೆ ಹಾಗೂ ಮೌಲ್ಯಮಾಪನಕ್ಕಾಗಿ ರಾಜ್ಯಕ್ಷಯ ರೋಗ ಕೇಂದ್ರವನ್ನಾಗಿ ಪರಿವರ್ತಿಸಲಾಗಿದೆ. ಈ ಉದ್ದೇಶಕ್ಕಾಗಿ ಜಂಟಿ ನಿರ್ದೇಶಕ ದರ್ಜೆಯ ಒಂದು ಪ್ರತ್ಯೇಕ ಹುದ್ದೆಯನ್ನು ರಚಿಸಲಾಗಿದೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಹೊಂದಿ ಕೊಂಡಿರುವ ಬಿ. ಸಿ. ಜಿ. ತಂಡಗಳು ಕ್ಷಯರೋಗ ಪ್ರಕರಣಗಳನ್ನು ಜಿಲ್ಲಾ ಕ್ಷಯರೋಗ ಕೇಂದ್ರಗಳಿಗೆ ಕಳುಹಿಸುತ್ತವೆ. ಕ್ರಮೇಣ ನಿತ್ಯದಂತೆ ಕೆಲಸ ನಿರ್ವಹಿಸಲು ಅನುಕೂಲವಾಗುವಂತೆ ಬಿ. ಸಿ. ಜಿ. ಲಸಿಕೆ ಮದ್ದು ಕೊಡುವ ತಂತ್ರದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಕೀಯೇತರ ಸಿಬ್ಬಂದಿಗೆ ತರಬೇತಿಯನ್ನು ನೀಡಲಾಗಿದೆ. ಬೆಂಗಳೂರು, ಬಳ್ಳಾರಿ, ಮಂಗಳೂರು ಮತ್ತು ಮೈಸೂರು—ಈ ನಾಲ್ಕು ಜಿಲ್ಲೆಗಳಲ್ಲಿ ಬೀಡಿ ಕೆಲಸಗಾರರಿಗಾಗಿಯೇ ಪ್ರತ್ಯೇಕವಾಗಿ 10 ಕ್ಷಯರೋಗ ಹಾಸಿಗೆಗಳ ಸೌಲಭ್ಯವನ್ನು ಕಲ್ಪಿಸಲಾಗಿದೆ. ಬೆಂಗಳೂರಿನಲ್ಲಿರುವ ಕ್ಷಯರೋಗ ಸಂಸ್ಥೆಯ ಕರ್ನಾಟಕ ಶಾಖೆಯು, ಬೆಂಗಳೂರು ನಗರದ ಕೊಳಚೆ ಪ್ರದೇಶ ಮತ್ತು ಇತರ ಜಿಲ್ಲಾ ಕೇಂದ್ರಗಳಲ್ಲಿ ಕ್ಷಯರೋಗ ಪತ್ತೆ ಹಚ್ಚುವ ಮತ್ತು ಬಿ. ಸಿ. ಜಿ. ಚುಚ್ಚುಮದ್ದು ಕೊಡುವ ಶಿಬಿರಗಳನ್ನು ಏರ್ಪಡಿಸುವಲ್ಲಿ ತೀವ್ರ ಆಸಕ್ತಿವಹಿಸುತ್ತಿದೆ. ಕೆಳಗೆ ಕಂಡ ಪಟ್ಟಿಯು ಕ್ಷಯರೋಗಕ್ಕೆ ಸಂಬಂಧಿಸಿದಂತೆ ಇತ್ತೀಚಿನ ಕೆಲವು ವರ್ಷಗಳ ಮುಖ್ಯ ವಿವರಗಳನ್ನು ನೀಡುತ್ತದೆ

| ವರ್ಷ | ಕ್ಷಯರೋಗ ಪ್ರಕರಣಗಳು | ಲಸಿಕೆ ಮದ್ದು ಹಾಕಲ್ಪಟ್ಟ ಪ್ರಕರಣಗಳು | ಸಂಭವಿಸಿದ ಮರಣಗಳು |
|---|---|---|---|
| 1978 | 1,22,318 | 8,57,695 | 1,796 |
| 1979 | 1,21,181 | 10,81,947 | 1,784 |
| 1980 | 1,79,741 | 7,55,563 | 562 |

1981-82ರಲ್ಲಿ 7,92,491 ಬಿ. ಸಿ. ಜಿ. ಚುಚ್ಚುಮದ್ದು ಗಳನ್ನು ಹಾಕಲಾಯಿತು.

ನಾಲ್ಕನೇಯ ಪಂಚವಾರ್ಷಿಕ ಯೋಜನೆಯ ಅಂತ್ಯದ ವರೆಗೂ ಕ್ಷಯರೋಗ ನಿಯಂತ್ರಣ ಕಾರ್ಯವು ನೂರಕ್ಕೆ ನೂರರಷ್ಟು ಕೇಂದ್ರ ನೆರವಿನ ಯೋಜನೆಯಾಗಿತ್ತು. ಐದನೇಯ ಯೋಜನೆಯ ಆರಂಭದಿಂದ ಮತ್ತು ಆರನೇಯ ಯೋಜನೆಯಿಂದ ಮುಂದೆ ಭಾರತ ಸರ್ಕಾರವು ಬಿ. ಸಿ. ಜಿ. ಲಸಿಕೆ ಮತ್ತು ಕ್ಷಯ ನಿರೋಧಕ ಔಷಧ ರೂಪದಲ್ಲಿ ಮಾತ್ರ ನೆರವು ಒದಗಿಸುತ್ತಿದೆ. ಬೆಂಗಳೂರಿನಲ್ಲಿರುವ ಚಿಕಿತ್ಸೋತ್ತರ ಆರೈಕೆ ಮತ್ತು ಪುನರ್ನಿವೇಶನ ಕೇಂದ್ರವು ಕ್ಷಯರೋಗಿಗಳಿಗೆ ನೇಯ್ಗೆ, ಚಾಪೆ ಹೆಣಿಕೆ, ಕಸೂತಿ, ಬಣ್ಣ ಹಾಕುವುದು ಮತ್ತು ಲಕೋಟೆ ಮಾಡುವುದು ಮೊದಲಾದ ಕೈಕಸಬುಗಳಲ್ಲಿ ತರಬೇತಿ ನೀಡುವ ಮೂಲಕ ಆಶ್ರಯವನ್ನು ಒದಗಿಸುವ ಕಾರ್ಯವನ್ನು ಕೈಗೊಳ್ಳುತ್ತಿದೆ.

ಸಿಡುಬು : ಸಿಡುಬು ಒಂದು ತೀವ್ರ ಪರಿಣಾಮದ ರೋಗ ವಾಗಿದ್ದು, 'ವೇರಿಯೋಲ ವೈರಸ್' ನಿಂದ ಉಂಟಾಗುವ ನಂಜು ರೋಗದ ಲಕ್ಷಣಗಳನ್ನು ಹೊಂದಿರುತ್ತದೆ. ಸಾಮಾನ್ಯವಾಗಿ ಉಸಿರಾಟದಲ್ಲಿ ಹೊರಬರುವ ಗಾಳಿ, ಚರ್ಮದ ಗಾಯಗಳು

ಹಾಗೂ ನಯಚರ್ಮಗಳು ಮತ್ತು ಇತ್ತೀಚೆಗೆ ಕಲುಷಿತಗೊಳಿಸಿದ ಪದಾರ್ಥಗಳ ಮೂಲಕ ರೋಗಿಗಳ ಸಂಪರ್ಕದಿಂದ ಈ ರೋಗ ಪ್ರಸಾರವಾಗುತ್ತದೆ. ಸಿಡುಬು ನಿರ್ಮೂಲನಕ್ಕಾಗಿ 1961ರಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರೀಯ ಸಿಡುಬು ನಿರ್ಮೂಲನ ಕಾರ್ಯ ಕ್ರಮವನ್ನು ಆರಂಭಿಸಿತು. ಹುಟ್ಟಿದ ಎಲ್ಲ ಮಕ್ಕಳಿಗೂ ನೂರಕ್ಕೆ ನೂರರಷ್ಟು ಪ್ರಾಥಮಿಕ ದೇವಿ (ದಾಕು) ಹಾಕುವುದು, ನಂತರ ನಾಲ್ಕು ವರ್ಷಗಳಿಗೊಮ್ಮೆ ಎಲ್ಲರಿಗೂ ಮರುದೇವಿ ಹಾಕುವುದು ಮೊದಲಿನ ಕ್ರಮವಾಗಿತ್ತು. ನೂರಕ್ಕೆ ನೂರರಷ್ಟು ದೇವಿ ಹಾಕುವ ಪ್ರಯತ್ನ ಆಗ ನಡೆಯಿತು. ಏನೇ ಇದ್ದರೂ, ಸಣ್ಣ ಪ್ರಮಾಣದಲ್ಲಿ ಸಿಡುಬು ರೋಗ ಅಲ್ಲಲ್ಲಿ ಕಂಡುಬರುತ್ತಲೇ ಇತ್ತು. ಆದ್ದರಿಂದ ಮಾರ್ಗಕ್ರಮವನ್ನು ಬದಲಾಯಿಸಿ, ರೋಗ ನಿರ್ಮೂಲನ ಚಳುವಳಿಯನ್ನು ತೀವ್ರಗೊಳಿಸಲಾಯಿತು. ಸಿಡುಬು ರೋಗದ ಪತ್ತೆಗಾಗಿ ಮತ್ತು ರೋಗಪ್ರಸಾರ ತಡೆಗಟ್ಟುವುದಕ್ಕಾಗಿ ವಿಶ್ವ ಆರೋಗ್ಯ ಸಂಸ್ಥೆಯ ರೋಗಾಣುತಜ್ಞರ ಸಹಯೋಗ ದೊಂದಿಗೆ ರಾಜ್ಯದಲ್ಲಿ ವಿಶೇಷ ಜಾಗೃತ ಯೋಜನೆಗಳನ್ನು ಕೈಗೊಳ್ಳಲಾಯಿತು. ರಾಜ್ಯದ ಎಲ್ಲ ಗ್ರಾಮಾಂತರ ಮತ್ತು ನಗರ ಪ್ರದೇಶಗಳಲ್ಲಿ ಅನೇಕ ಸಲ ವಿಶೇಷ ಶೋಧನ ಕಾರ್ಯ ನಡೆಸಲಾಯಿತು. ಈ ಬಗ್ಗೆ ಮನೆ ಮನೆಗೆ ಮಾತ್ರವಲ್ಲದೆ, ಇತರ ಮಾಧ್ಯಮಗಳ ಮೂಲಕವೂ ಭಾರಿ ಪ್ರಚಾರ ನೀಡಲಾಯಿತು. 1975ರ ಜನವರಿಯಲ್ಲಿ ಸಿಡುಬು ರೋಗದ 'ಶೂನ್ಯತಾ ಗುರಿ' ಕಾರ್ಯಕ್ರಮವನ್ನು ರಾಷ್ಟ್ರಾದ್ಯಂತ ಆರಂಭಿಸಲಾಯಿತು. ವಿಶ್ವ ಆರೋಗ್ಯ ಸಂಸ್ಥೆ ಮತ್ತು ಭಾರತ ಸರ್ಕಾರದ ಪ್ರಯತ್ನದ ಫಲವಾಗಿ ಸಿಡುಬು ರೋಗದ ನಿರ್ಮೂಲನವಾಗಿದ್ದು, 1978ರ ಏಪ್ರಿಲ್ ತಿಂಗಳಲ್ಲಿ ಭಾರತವು ಸಿಡುಬು ರೋಗದಿಂದ ಮುಕ್ತ ವಾಗಿದೆಯೆಂದು ಘೋಷಿಸಲಾಯಿತು. 0-1 ವಯೋಮಾನದ ಮಕ್ಕಳಿಗೆ ದೇವಿ ಹಾಕುವ ಕಾರ್ಯವನ್ನು ವೈದ್ಯಕೀಯ ಸಂಸ್ಥೆಗಳ ವೈದ್ಯಕೀಯ ಹಾಗೂ ವೈದ್ಯಕೀಯೇತರ ಸಿಬ್ಬಂದಿ ನೋಡಿ ಕೊಳ್ಳುತ್ತಾರೆ. ಆದರೆ ರೋಗ ನಿರ್ಮೂಲನದ ಪರಿಣಾಮವಾಗಿ, ಹಿಂದೆ ನಡೆಯುತ್ತಿದ್ದ ಪ್ರಾಥಮಿಕ ದೇವಿ ಹಾಗೂ ಮರುದೇವಿ ಹಾಕುವ ಪದ್ಧತಿಯನ್ನು ನಿಲ್ಲಿಸಲಾಗಿದೆ. ಆದರೂ ಜ್ವರ ಮತ್ತು ಗಂಥೆ ಪ್ರಕರಣಗಳ ಸಂಬಂಧ ಇನ್ನೂ ಜಾಗೃತ ವ್ಯವಸ್ಥೆಯನ್ನು ನಿರ್ವಹಿಸಲಾಗುತ್ತಿದ್ದು, ಸಿಡುಬು ರೋಗ ಪ್ರಕರಣಗಳ ಬಗ್ಗೆ ಅತ್ಯಂತ ಎಚ್ಚರದ ಕಾವಲು ಇಟ್ಟುಕೊಳ್ಳಲಾಗಿದೆ. ಸಿಡುಬು ರೋಗ ಪ್ರಕರಣಗಳನ್ನು ಪತ್ತೆ ಹಚ್ಚಿ ವರದಿ ಮಾಡಿದವರಿಗೆ 1,000 ರೂ. ಬಹುಮಾನ ಕೊಡುವುದಾಗಿ ಸರ್ಕಾರ ಪ್ರಕಟಿಸಿದೆ. ಆರೋಗ್ಯ ಇಲಾಖೆಯ ವರದಿಯಂತೆ ಇತ್ತೀಚಿಗಿನ ವರ್ಷಗಳಲ್ಲಿ ರಾಜ್ಯದಲ್ಲಿ ಸಿಡುಬಿನ ಪ್ರಕರಣಗಳು ಇಲ್ಲ. ಸಿಡುಬುರೋಗಕ್ಕೆ ಸಂಬಂಧಿಸಿದಂತೆ ಇತ್ತೀಚಿನ ವರ್ಷಗಳ ಅಂಕಿ-ಸಂಖ್ಯೆಗಳು ಹೀಗಿವೆ :

| ವರ್ಷ | ಮರಣ | ಪ್ರಾಥಮಿಕ ದೇವಿ | ಮರುದೇವಿ |
|---|---|---|---|
| 1971 | 1,810 | 13,45,839 | 40,48,024 |
| 1972 | 658 | 18,18,062 | 78,08,771 |
| 1973 | 1,804 | 15,03,380 | 52,45,492 |
| 1974 | 1,499 | 15,68,959 | 59,07,372 |
| 1975 | — | 14,55,140 | 52,21,361 |
| 1976 | — | 13,16,948 | 47,51,251 |
| 1977 | — | 13,87,963 | 34,24,924 |
| 1978 | — | 11,58,590 | 4,96,579 |
| 1979 | — | 12,54,719 | 2,63,875 |
| 1980 | — | 8,45,746 | 79,001 |
| 1981 | — | 2,41,240 | 7,213 |

ಕುಷ್ಠರೋಗ : ಈ ರೋಗವು 'ಮೈಕ್ರೋ ಬ್ಯಾಕ್ಟೀರಿಯ ಲೆಪ್ರೇ' ಎಂಬ ಕುಷ್ಠರೋಗ ಕ್ರಿಮಿಯಿಂದ ಉಂಟಾಗುತ್ತದೆ. ರೋಗ ಹೇಗೆ ಹರಡುತ್ತದೆಂಬ ಬಗ್ಗೆ ನಿರ್ದಿಷ್ಟವಾಗಿ ತಿಳಿದಿಲ್ಲ ವಾದರೂ, ಕೆಳಗೆ ಕಂಡ ರೀತಿಯಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ಹರಡುವುದೆಂದು ನಂಬಲಾಗಿದೆ : 1) ಚರ್ಮದಿಂದ ಚರ್ಮಕ್ಕೆ ಮತ್ತೆ ಮತ್ತೆ ಆಗುವ ಸಂಪರ್ಕ ಮತ್ತು 2) ಸಣ್ಣ ಹನಿ ಸೋಂಕಿನ ಮೂಲಕ. ಬಹುತೇಕ ರೋಗ ಪ್ರಕರಣಗಳಲ್ಲಿ ಇದು ಚರ್ಮದ ಮೇಲಿನ ಕಂದು ಕಲೆಗಳ ರೂಪದಲ್ಲಿರುತ್ತದೆ. ಕೆಲವು ರೋಗಿಗಳು ಇರುವೆ ಹರಿಯುವುದು ಅಥವಾ ಪಿನ್ನು ಹಾಗೂ ಸೂಜಿಯ ಸಂವೇದನೆಯನ್ನು ಅನುಭವಿಸಿದರೂ, ರೋಗ ಮತ್ತಷ್ಟು ಬೆಳೆದಾಗ ರೋಗಿಗಳು ಆ ಕಲೆಗಳಿರುವ ಸ್ಥಳಗಳಲ್ಲಿ ಅಥವಾ ಕೈ ಕಾಲುಗಳಲ್ಲಿ ಸ್ಪರ್ಶ, ನೋವು ಅಥವಾ ಶಾಖಗಳ ಸಂವೇದನೆ ಯನ್ನು ಕಳೆದುಕೊಳ್ಳುತ್ತಾರೆ. ಕುಷ್ಠರೋಗವು ದೇಹದ ಯಾವುದೇ ಭಾಗಗಳಿಗೂ ತಗಲಬಹುದು. ಕಂದು ಕಲೆಯ ಸ್ಥಳ ದಲ್ಲಿ ಸಂವೇದನೆಯನ್ನು ಕಳೆದುಕೊಂಡಿರುವುದು ಸ್ಪಷ್ಟವಾದರೆ, ಅದು ಕುಷ್ಠರೋಗವೆಂದು ಬಹುಮಟ್ಟಿಗೆ ನಿಶ್ಚಿತವಾದಂತೆ.

ಈ ಅಪಾಯಕಾರಿ ರೋಗವು ಜನಸಮುದಾಯದಲ್ಲಿ ಹರಡ ದಂತೆ ತಡೆಗಟ್ಟಲು ರೋಗಿಗಳು, ಅವರ ಸಂಪರ್ಕಕ್ಕೆ ಬರುವವರು ಮತ್ತು ಹೊರಗಿನ ಸಾರ್ವಜನಿಕರಿಗೆ ಕುಷ್ಠರೋಗಕ್ಕೆ ಸಂಬಂಧಿಸಿದ

ವಾಸ್ತವ ಸಂಗತಿಗಳ ಬಗ್ಗೆ ತಿಳುವಳಿಕೆ ನೀಡುವುದರ ಜೊತೆಗೆ ಆರಂಭದಲ್ಲೇ ರೋಗ ಪತ್ತೆ ಹಚ್ಚುವುದು ಮತ್ತು ಗೊತ್ತಿರುವ ರೋಗ ಪ್ರಕರಣಗಳಿಗೆ ಕ್ರಮವಾದ ಚಿಕಿತ್ಸೆ ನೀಡುವುದು ಮೊದಲಾದ ಕ್ರಮಗಳ ಮೂಲಕ ಸರ್ಕಾರವು ಎಲ್ಲ ಪ್ರಯತ್ನಗಳನ್ನು ಮಾಡುತ್ತಿದೆ. ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮವು ಎರಡನೇಯ ಪಂಚವಾರ್ಷಿಕ ಯೋಜನೆಯ ಆರಂಭದ ಅವಧಿಯಿಂದಲೇ ಜಾರಿಯಲ್ಲಿದೆ. 1976-77ರಿಂದೀಚೆಗೆ, ಕ್ರಿ.ಶ. 2000ದ ವೇಳೆಗೆ ಕುಷ್ಠರೋಗವನ್ನು ನಿರ್ಮೂಲನ ಮಾಡುವ ಉದ್ದೇಶದಿಂದ, ಕಾರ್ಯಕ್ರಮವನ್ನು ಗುರಿ ಮತ್ತು ಅವಧಿ ನಿರ್ದೇಶಿತ ಕಾರ್ಯಕ್ರಮವನ್ನಾಗಿ ಮಾಡಲಾಗಿದೆ.

ಜನಸಮುದಾಯದಲ್ಲಿ ಕುಷ್ಠರೋಗ ಪರಿಹಾರ ಒದಗಿಸಲು ಸರ್ಕಾರವು ನಾನಾ ವಿಧದ ಕುಷ್ಠರೋಗ ಘಟಕಗಳು ಹಾಗೂ ಕೇಂದ್ರಗಳನ್ನು ಸ್ಥಾಪಿಸಿದೆ. ಅನೇಕ ಸ್ವಯಂಸೇವಾ ಸಂಸ್ಥೆಗಳು ಈ ಪ್ರಯತ್ನದಲ್ಲಿ ಸರ್ಕಾರಿ ಸಂಸ್ಥೆಗಳೊಡನೆ ಸಹಭಾಗಿಗಳಾಗಿ ಸಹಕಾರ ನೀಡುತ್ತವೆ. ಇಲ್ಲಿಯವರೆಗೆ ಕುಷ್ಠರೋಗಿಗಳ ಚಿಕಿತ್ಸೆಗಾಗಿ 'ಡಾಪ್‌ಸೋನ್' ಎಂಬ ಮಾತ್ರೆ ಹೆಚ್ಚಾಗಿ ಬಳಸಲ್ಪಡುತ್ತಿದ್ದ ಔಷಧಿಯಾಗಿತ್ತು. ಆದರೆ ಅದು ಸ್ವಭಾವತಃ ಜೀವಾಣು ಜನಕ ಸ್ವರೂಪದ್ದಾಗಿದೆ. ಕುಷ್ಠರೋಗಿಗಳ ಚಿಕಿತ್ಸೆಗೆ ಈಗ ಬಳಸಲ್ಪಡುತ್ತಿರುವ ಹೆಚ್ಚು ಸಮರ್ಥ ಔಷಧಿಗಳೆಂದರೆ ಸ್ವಭಾವತಃ ಜೀವಾಣು ಮಾರಕವಾದ 'ಲ್ಯಾಂಪ್ರಿನ್', 'ರೈಫಾಂಪಿಸಿನ್', ಇತ್ಯಾದಿ.

ಈ ರೋಗ ಹೆಚ್ಚಾಗಿ ಕಾಣಿಸಿಕೊಂಡಿರುವ ಜಿಲ್ಲೆಗಳೆಂದರೆ— ತೀವ್ರ ಸೋಂಕಿನ ಪ್ರದೇಶಗಳಾದ ಬಳ್ಳಾರಿ, ಬಿದರೆ, ದಕ್ಷಿಣ ಕನ್ನಡ, ಕಲ್ಬುರ್ಗಿ, ಮೈಸೂರು ಮತ್ತು ರಾಯಚೂರು ಜಿಲ್ಲೆಗಳು. ಬೆಂಗಳೂರು, ಬೆಳಗಾವಿ, ವಿಜಾಪುರ, ಚಿತ್ರದುರ್ಗ, ಧಾರವಾಡ, ಕೋಲಾರ, ಮಂಡ್ಯ ಮತ್ತು ತುಮಕೂರು ಜಿಲ್ಲೆಗಳಲ್ಲಿ ರೋಗವು ಸಾಧಾರಣವಾಗಿ ಕಂಡು ಬರುತ್ತದೆ. ಚಿಕ್ಕಮಗಳೂರು, ಹಾಸನ, ಕೊಡಗು, ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕುಷ್ಠರೋಗದ ಸೋಂಕಿಲ್ಲ. ರಾಜ್ಯಾದ್ಯಂತ ಒಟ್ಟು 21 ಕುಷ್ಠರೋಗ ನಿಯಂತ್ರಣ ಕೇಂದ್ರಗಳು, 665 ಸಮೀಕ್ಷೆ, ಶಿಕ್ಷಣ ಹಾಗೂ ಚಿಕಿತ್ಸಾ ಕೇಂದ್ರಗಳು, 41 ನಗರ ಕುಷ್ಠರೋಗ ಕೇಂದ್ರಗಳು, ಐದು ಪುನರ್ರಚನಾ ಶಸ್ತ್ರ ಚಿಕಿತ್ಸಾ ಘಟಕಗಳು, 20 ಹಾಸಿಗೆಗಳಿರುವ 19 ತಾತ್ಕಾಲಿಕ ಆಸ್ಪತ್ರೆ ವಾರ್ಡುಗಳು ಮತ್ತು ನಾಲ್ಕು ಕುಷ್ಠರೋಗ ತರಬೇತಿ ಕೇಂದ್ರಗಳು ಈಗ ಕಾರ್ಯ ನಿರ್ವಹಿಸುತ್ತಿವೆ. ಕೆಳಕಾಣಿಸಿರುವ ಪಟ್ಟಿಯು *ಕುಷ್ಠ ರೋಗಕ್ಕೆ ಸಂಬಂಧಿಸಿದಂತೆ ಇತ್ತೀಚಿನ ವರ್ಷಗಳಲ್ಲಿ ರಾಜ್ಯದ ಕೆಲವು ಅಂಕಿ-ಸಂಖ್ಯೆಗಳನ್ನು ತೋರಿಸುತ್ತದೆ.

ಕುಷ್ಠರೋಗ ಪ್ರಸಾರವನ್ನು ತಡೆಗಟ್ಟುವುದು ಮತ್ತು ಕುಷ್ಠರೋಗಿಗಳಿಗೆ ಪರಿಣಾಮಕಾರಿಯಾದ ವ್ಯಾಪಕ ಚಿಕಿತ್ಸಾ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ, ಕರ್ನಾಟಕದಲ್ಲಿ, ಎರಡನೇಯ ಪಂಚವಾರ್ಷಿಕ ಯೋಜನಾವಧಿಯಲ್ಲಿ ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು. ಕರ್ನಾಟಕದ 29.29 ದಶಲಕ್ಷ ಜನಸಂಖ್ಯೆ (1971ರ ಜನಗಣತಿ)ಯಲ್ಲಿ ಸುಮಾರು 21 ದಶಲಕ್ಷ ಜನ ಕುಷ್ಠರೋಗ ಸೋಂಕಿನ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆಂದು ಅಂದಾಜು ಮಾಡಲಾಗಿದೆ. ಪ್ರತೀ ಸಾವಿರ ಜನಸಂಖ್ಯೆಗೆ ಆರು ಜನ ಕುಷ್ಠರೋಗಿಗಳಿರುವ ಕರ್ನಾಟಕವನ್ನು ಸಾಧಾರಣ ಸೋಂಕಿನ ಪ್ರದೇಶವೆಂದು ಪರಿಗಣಿಸಲಾಗಿದೆ.

*

| ವಿವರಗಳು | 1979 | 1980 | 1981 |
|---|---|---|---|
| ವರ್ಷದಲ್ಲಿ ಪತ್ತೆ ಹಚ್ಚಲ್ಪಟ್ಟ ಕುಷ್ಠರೋಗ ಪ್ರಕರಣಗಳ ಸಂಖ್ಯೆ | 16,202 | 11,721 | 13,354 |
| ವರ್ಷದ ಕೊನೆಯಲ್ಲಿದ್ದ ಒಟ್ಟು ಕುಷ್ಠರೋಗ ಪ್ರಕರಣಗಳ ಸಂಖ್ಯೆ (ಆಸ್ಪತ್ರೆಯಿಂದ ಬಿಡುಗಡೆಯಾದ ಪ್ರಕರಣಗಳನ್ನು ಬಿಟ್ಟು) | 1,11,760 | 1,18,626 | 1,27,123 |
| ವರ್ಷದ ಕೊನೆಯಲ್ಲಿದ್ದಂತೆ ಚಿಕಿತ್ಸೆಗೊಳಪಟ್ಟ ಪ್ರಕರಣಗಳ ಸಂಖ್ಯೆ | 1,09,077 | 1,15,618 | 1,23,100 |
| ವರ್ಷದಲ್ಲಿ ವಾಸ್ತವವಾಗಿ ಗುಣಪಡಿಸಲ್ಪಟ್ಟವರು | 83,478 | 68,906 | 83,149 |

ಕಡಮೆ ಪ್ರಮಾಣದ, ಅಂದರೆ ಶೇಕಡ 0.1 ರಿಂದ 0.5 ರಷ್ಟು ಸೋಂಕಿರುವ ಪ್ರದೇಶದಲ್ಲಿ ಕುಷ್ಠರೋಗ ಸಮೀಕ್ಷೆ, ಶಿಕ್ಷಣ ಮತ್ತು ಚಿಕಿತ್ಸಾ ಕೇಂದ್ರಗಳನ್ನು ತೆರೆಯಲಾಗಿದೆ. ಪ್ರತೀ 20,000 ದಿಂದ 25,000 ಜನಸಂಖ್ಯೆಗೆ ಒಬ್ಬರಂತೆ, ಕುಷ್ಠ ರೋಗಕ್ಕೆ ಸಂಬಂಧಿಸಿದಂತೆ ಸಮೀಕ್ಷೆ ನಡೆಸಲು, ಆರೋಗ್ಯ ಶಿಕ್ಷಣ ನೀಡಲು ಮತ್ತು ರೋಗಿಗಳಿಗೆ ಚಿಕಿತ್ಸೆ ಒದಗಿಸಲು ಕುಷ್ಠರೋಗದ ಬಗ್ಗೆ ವಿಶೇಷ ತರಬೇತಿ ಪಡೆದ ವೈದ್ಯಕೀಯೇತರ ಕಾರ್ಯಕರ್ತರು ಗಳನ್ನು ಒದಗಿಸಲಾಗಿದೆ. ಜನಸಂಖ್ಯೆಯ ಶೇಕಡ 0.5 ರಷ್ಟಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಕುಷ್ಠರೋಗಿಗಳಿರುವಂತಹ ಹೆಚ್ಚು ಸೋಂಕಿನ ಪ್ರದೇಶಗಳಲ್ಲಿ ಕುಷ್ಠರೋಗ ನಿಯಂತ್ರಣ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ನಗರ ಕುಷ್ಠರೋಗ ಕೇಂದ್ರ ಗಳನ್ನು ಸಾಮಾನ್ಯವಾಗಿ ಕುಷ್ಠರೋಗ ಸಮಸ್ಯೆ ಕಂಡುಬರು ವಂತಹ ಪಟ್ಟಣಗಳು ಮತ್ತು ನಗರಗಳಲ್ಲಿ ಸ್ಥಾಪಿಸಲಾಗಿದೆ. ಕುಷ್ಠರೋಗ ತರಬೇತಿ ಕೇಂದ್ರಗಳು, ಮುಖ್ಯವಾಗಿ, ವೈದ್ಯಕೀ ಯೇತರ ಕಾರ್ಯಕರ್ತರಿಗೆ ನಿರ್ದಿಷ್ಟ ಪಠ್ಯಕ್ರಮ ಮತ್ತು ಪ್ರಾತ್ಯಕ್ಷಿಕೆಗಳೊಡನೆ ತರಬೇತಿ ನೀಡುತ್ತವೆ. ಆರು ತಿಂಗಳ ಅವಧಿಯ ಪ್ರತೀಯೊಂದು ತಂಡದಲ್ಲಿ 20-30 ಕಾರ್ಯಕರ್ತರನ್ನು ತರಬೇತಿಗಾಗಿ ತೆಗೆದುಕೊಳ್ಳಲಾಗುತ್ತದೆ. ರಾಜ್ಯದಲ್ಲಿರುವ ನಾಲ್ಕು ಕುಷ್ಠರೋಗ ತರಬೇತಿ ಕೇಂದ್ರಗಳು ಬೆಂಗಳೂರು, ಧಾರವಾಡ, ಕಲ್ಬುರ್ಗಿ ಮತ್ತು ಕೊಳ್ಳೇಗಾಲದಲ್ಲಿವೆ.

## ಜಠರ ಮತ್ತು ಕರುಳಿನ ರೋಗಗಳು

ಇದೊಂದು ('ಗೆಸ್ಟ್ರೊ ಎಂಟರಿಟಿಸ್') ತೀವ್ರವಾದ ಅತಿಸಾರ ರೋಗ; ಜ್ವರ ಅಥವಾ ಜ್ವರವಿಲ್ಲದ ಸಡಿಲ ಭೇದಿ ಯೊಡನೆ ಕಾಣಿಸಿಕೊಳ್ಳುವ ವ್ಯತ್ಯಾಸಗಳಿಂದಾಗಿ ಕೆಲವು ವೇಳೆ ಇದರ ಲಕ್ಷಣಗಳನ್ನು ಗುರುತಿಸಲಾಗುವುದಿಲ್ಲ. ಕಾಲರಾ, ಷಿಗೆಲಾಸಿಸ್, ಸಾಲ್ಮೊನೆಲಾಸಿಸ್, ಅಮೀಬಿಯಾಸಿಸ್, ಎಂಟ್ರೋ ಪ್ಯಾತೋಜನಿಕ್ 'ಇ' ಕೋಲಿ ಇನ್‌ಫೆಕ್ಷನ್ ಅಥವಾ ತೀವ್ರ ನಂಜಿನ ಕರುಳು ರೋಗ—ಇವೆಲ್ಲ ಜಠರ ಮತ್ತು ಕರುಳು ಬೇನೆಗೆ ಸಂಬಂಧಿಸಿದ ರೋಗಗಳು. ಈ ರೋಗಗಳು ನಂಜು ಅಥವಾ "ಪ್ರೋಟೋಜೋವಾ"ಗಳಿಂದ ಉಂಟಾಗಬಹುದು. ಸರಿಯಾದ ಪೌಷ್ಟಿಕಾಹಾರವಿಲ್ಲದಿರುವುದು, ಸಂಗತವಾದ ಕಾಯಿಲೆ ಅಥವಾ ಸರಿ ಹೊಂದದ ಪರಿಸರ ಒತ್ತಡಗಳಂತಹ ಬದಲಾವಣೆಯ ಪರಿಸ್ಥಿತಿ ಇರುವುದು ರೋಗಕ್ಕೆ ಕಾರಣವಾಗುತ್ತದೆ. ರೋಗೋತ್ಪತ್ತಿಯ ಇತರ ಜೀವಿಗಳೂ ಸಹ ರೋಗ ನಿಧಾನಕ್ಕೆ ಸಂಬಂಧಿಸಿರಬಹುದು. ರೋಗ ತಗಲಿದ ವ್ಯಕ್ತಿಯ ಪಾಯಖಾನೆಯಿಂದ ರೋಗೋತ್ಪಾದಕ ತಳಿಗಳನ್ನು ಬೇರ್ಪಡಿಸುವುದು ನಿರ್ದಿಷ್ಟವಾದ ರೋಗ ನಿದಾನವೆಂದು ಹೇಳಬಹುದು. ಈ ರೋಗ ಪ್ರಸಾರಕ್ಕೆ ಆಹಾರ ಮತ್ತು ನೀರು ಕಲುಷಿತವಾಗುವುದು ದೊಡ್ಡ ಮೂಲವಾಗು ತ್ತದೆ. ರೋಗಿಯನ್ನು ಸಂಪರ್ಕಿಸಿದ ನಂತರ ಸರಿಯಾಗಿ ಕೈ ತೊಳೆದುಕೊಳ್ಳದಿರುವುದು, ದೈಹಿಕ ಸ್ವಚ್ಛತೆಯನ್ನು ಸರಿಯಾಗಿ ನೋಡಿಕೊಳ್ಳದಿರುವುದು ಮತ್ತು ಸರಿಯಾದ ಪರಿಸರ ನೈರ್ಮಲ್ಯದ ಕೊರತೆ—ಇವು ರೋಗ ಹರಡಲು ಕಾರಣವಾಗುತ್ತವೆ. ಮಕ್ಕಳು, ಅದರಲ್ಲೂ ಎಳೆ ಮಕ್ಕಳು ಬಹಳ ಮಟ್ಟಿಗೆ ಈ ರೋಗಕ್ಕೆ ಸುಲಭ ವಾಗಿ ತುತ್ತಾಗುತ್ತಾರೆ. ಎದೆಹಾಲು ಕೊಡುವುದು ಕೆಲಮಟ್ಟಿಗೆ ರಕ್ಷಣೆ ನೀಡಬಹುದು. ಕರುಳಿನ ನಂಜುಗಳಿಗೆ ಗಡಸುಗುಣ ಕಂಡು ಬಂದಿದ್ದರೂ ಅದರ ಅವಧಿ ಬಗ್ಗೆ ತಿಳಿದುಬಂದಿಲ್ಲ.

ರಾಜ್ಯದಲ್ಲಿ ಬೆಳಗಾವಿ, ಬಳ್ಳಾರಿ, ವಿಜಾಪುರ, ಚಿತ್ರದುರ್ಗ, ಧಾರವಾಡ, ಕಲ್ಬುರ್ಗಿ, ಮೈಸೂರು ಮತ್ತು ರಾಯಚೂರು ಜಿಲ್ಲೆಗಳು ಈ ರೋಗದ ಸೋಂಕಿನ ಪ್ರದೇಶಗಳೆಂದು ಗುರುತಿಸ ಲಾಗಿದೆ. ಈ ಎಂಟು ಜಿಲ್ಲೆಗಳ ಪೈಕಿ ಐದು ಜಿಲ್ಲೆಗಳಲ್ಲಿ ಜಠರ ಮತ್ತು ಕರುಳ ಬೇನೆಗಳ ಪ್ರಸಾರವನ್ನು ತಡೆಗಟ್ಟಲು ಕೈಗೊಳ್ಳ ಬೇಕಾದ ಪೂರ್ವಭಾವಿ ನಿರೀಕ್ಷಾ ಕ್ರಮಗಳನ್ನು ಗುರಿಯಲ್ಲಿಟ್ಟು ಕೊಂಡು, ಸಕಾಲಿಕ ಚಿಕಿತ್ಸೆ, ನಿಯಂತ್ರಣ ಮತ್ತು ಅನುಸರಣಾ ಕ್ರಮಗಳನ್ನು ಕೈಗೊಳ್ಳಲು ಕಾಲರಾ ನಿಯಂತ್ರಣ ತಂಡಗಳಿವೆ. 1971ರಲ್ಲಿ ರಾಜ್ಯದಲ್ಲಿ 378 ಕರುಳು ಬೇನೆಯ ರೋಗ ಪ್ರಕರಣ ಗಳು ಕಂಡುಬಂದಿದ್ದವು. ಆಗ 88 ಮರಣಗಳು ಸಂಭವಿಸಿದವು. 1976ರಲ್ಲಿ ರೋಗ ಪ್ರಕರಣಗಳ ಸಂಖ್ಯೆ 481 ಮತ್ತು ಮರಣ ಸಂಖ್ಯೆ 368ರಷ್ಟಿತ್ತು. 1980ರಲ್ಲಿ ರೋಗಪ್ರಕರಣಗಳ ಸಂಖ್ಯೆ 3,791 ಇದ್ದರೆ ಮರಣ ಸಂಖ್ಯೆ 559ರಷ್ಟಿತ್ತು. ಅದೇ 1981 ರಲ್ಲಿ 9,022 ರೋಗ ಪ್ರಕರಣಗಳೂ, 746 ಮರಣ ಪ್ರಕರಣ ಗಳೂ ವರದಿಯಾಗಿದ್ದವು.

ಗಂಟಲು ಬೇನೆ: ಗಲಗ್ರಂಥಿ, ಗಂಟಲ ಕುಹರ, ಧ್ವನಿ ಪೆಟ್ಟಿಗೆ ಅಥವಾ ಮೂಗಿನ ತೀವ್ರ ಸೋಂಕಿನ ರೋಗ ಗಂಟಲು ಬೇನೆ ('ಡಿಫ್ತೀರಿಯಾ'). ಇದು ಕೆಲವು ಸಂದರ್ಭಗಳಲ್ಲಿ ಲೋಳೆ ಗೂಡಿದ ನಯಚರ್ಮಕ್ಕೂ ತಗಲುತ್ತದೆ. ಇದರ ಗಾಯವನ್ನು ಒಂದು ಕಲೆಯ ರೂಪದಲ್ಲಿ ಅಥವಾ ಉರಿಯೂತದ ಮಂಕಾದ ಒಂದು ಕೆಂಪು ವಲಯದಿಂದ ಸುತ್ತುವರಿಯಲ್ಪಟ್ಟ ಬಣ್ಣದ ಕಲೆಗಳಿಂದ ಗುರುತಿಸಲಾಗುತ್ತದೆ. ಇದರ ಮುಖ್ಯ ಚಿಹ್ನೆ ಮತ್ತು ಲಕ್ಷಣಗಳೆಂದರೆ—ಗಂಟಲು ಹುಣ್ಣು, ಎಳತಾದ ಮತ್ತು ದೊಡ್ಡ ದಾದ ಕಂಠಸ್ರಾವದ ಗಂಟುಗಳು, ಜ್ವರ ಕಾಣಿಸಿಕೊಳ್ಳುವುದು, ನುಂಗಲು ತೊಂದರೆಯಾಗುವುದು, ಇತ್ಯಾದಿ. ಉಷ್ಣವಲಯದ ಪ್ರದೇಶಗಳಲ್ಲಿ ಈ ಸೋಂಕು ಹೆಚ್ಚು ಸ್ಪಷ್ಟವಾಗಿ ಕಾಣಿಸಿ ಕೊಳ್ಳುತ್ತದೆ. ರೋಗದ ಅವಧಿಯಲ್ಲಿ ವ್ಯತ್ಯಾಸವಿರುತ್ತದಾದರೂ ಸಾಮಾನ್ಯವಾಗಿ ಅದರ ಅವಧಿ ಎರಡು ವಾರಗಳು. ಅಪರೂಪದ ಪ್ರಕರಣಗಳಲ್ಲಿ ಅದು ನಾಲ್ಕು ವಾರಗಳ ಕಾಲವೂ ಇರಬಹುದು. ಆರು ತಿಂಗಳವರೆಗೆ ಸೋಂಕುವಾಹಕಗಳ ವಿಸರ್ಜನೆ ಮುಂದು ವರಿಸುವುದು ಕ್ಷೇಮ. ಒಮ್ಮೆ ಗಂಟಲು ಬೇನೆ ಬಂದಿತೆಂದರೆ ರೋಗದ ವಿರುದ್ಧ ರಕ್ಷಣೆಯನ್ನು ಅದು ಬಹಳ ಕಾಲ ಉಳಿಸುವುದಿಲ್ಲ.

ಬಹುತೇಕ ಸಂದರ್ಭಗಳಲ್ಲಿ ನಿಷ್ಕ್ರಿಯ ರಕ್ಷಣ ಚಿಕಿತ್ಸೆ ಮತ್ತು ಸಕ್ರಿಯ ರಕ್ಷಣ ಚಿಕಿತ್ಸೆಗಳ ಸಾಧ್ಯತೆಯಿದ್ದು ಅವನ್ನು ಅನುಸರಿಸಲಾಗುತ್ತದೆ.

ಈ ಗಂಟಲು ಬೇನೆಯ ಹಾವಳಿಯ ವಿರುದ್ಧ ಜನ ಸಮುದಾಯಕ್ಕೆ ರಕ್ಷಣೆ ಒದಗಿಸಲು, 3 ರಿಂದ 12 ತಿಂಗಳ ವರೆಗಿನ ಎಲ್ಲ ಮಕ್ಕಳಿಗೂ ಸಕ್ರಿಯ ರಕ್ಷಣಾ ಚಿಕಿತ್ಸೆ ಒದಗಿಸುವುದು ಅತ್ಯಂತ ಉತ್ತಮ ಮಾರ್ಗ. ಮಕ್ಕಳಿಗೆ ಗಂಟಲು ಬೇನೆ ತಗಲುವುದನ್ನು ಕಡಿಮೆ ಮಾಡಲು ಎರಡು ವರ್ಷದೊಳಗಿನ ಎಲ್ಲ ಮಕ್ಕಳಿಗೂ ಪರಿಣಾಮಕಾರಿ ರಕ್ಷಣ ಚಿಕಿತ್ಸೆ ಕೊಡಿಸುವ ಬಗ್ಗೆ ಸಾರ್ವತ್ರಿಕವಾಗಿ ಜನಸಮುದಾಯಕ್ಕೆ, ವಿಶೇಷವಾಗಿ ತಾಯಂದಿರಿಗೆ ತಿಳುವಳಿಕೆ ನೀಡಬೇಕಾಗುತ್ತದೆ.

ಧನುರ್ವಾಯು : ಇದೊಂದು ತೀಕ್ಷ್ಣರೋಗ. ಗಾಯವಾದ ಸ್ಥಳದಲ್ಲಿ ಆಮ್ಲಜನಕವಿಲ್ಲದೆಯೇ ಬೆಳೆಯುವ ಟಿಟಾನಸ್ ಬ್ಯಾಸಿಲಿಸ್ ಎಂಬ ರೋಗಾಣುಗಳ ನಂಜಿನಿಂದ ಇದು ಉಂಟಾಗುತ್ತದೆ. ಆರಂಭದಲ್ಲಿ ಸ್ನಾಯುಗಳು ಮತ್ತು ಕೊರಳ ಮಾಂಸ ಖಂಡಗಳನ್ನು, ನಂತರ ಮುಂಡದ ಮಾಂಸಖಂಡಗಳನ್ನು ಒಳಗೊಂಡು ಬಾಧೆಯುಂಟು ಮಾಡುವ ಸ್ನಾಯು ಸಂಕೋಚನದ ಪರಿಣಾಮವಾಗಿ, ಭಿನ್ನ ಪ್ರಮಾಣದಲ್ಲಿ ಬಿಗುವು ಉಂಟಾಗುವುದು ಈ ರೋಗದ ಲಕ್ಷಣ. ಎಲ್ಲ ವಯಸ್ಸಿನವರಿಗೂ ತಗಲುವ ಈ ರೋಗದಿಂದ ಕೃಷಿ ಹಾಗೂ ಕೈಗಾರಿಕಾ ಕೆಲಸಗಾರರು ನರಳುವುದು ಹೆಚ್ಚು. ರಕ್ಷಣಾ ('ಇಮ್ಯುನಿಟಿ') ಚಿಕಿತ್ಸೆಯಿಲ್ಲದಿದ್ದರೆ ಮರಣ ಪ್ರಮಾಣ ಶೇಕಡ 70ರಷ್ಟು ಹೆಚ್ಚಾಗಿರುತ್ತದೆ. ಈ ರೋಗವು ತೀವ್ರಗತಿಯಲ್ಲಿ ಹರಡುವುದನ್ನು ತಪ್ಪಿಸಲು ಮಾಮೂಲು ರಕ್ಷಣಾ ಚಿಕಿತ್ಸೆಯ ಮಹತ್ವದ ಬಗ್ಗೆ ತಿಳುವಳಿಕೆ ನೀಡುವುದು ಅವಸರದ ಅಗತ್ಯವಾಗಿದೆ. ಮಕ್ಕಳಿಗೆ ಸಕ್ರಿಯ ರಕ್ಷಣಾ ಚಿಕಿತ್ಸೆ ಕೊಡಿಸುವುದು ಮತ್ತು ನಿಯತಕಾಲಿಕ ಅಂತರದಲ್ಲಿ ಮುಂದುವರಿಸಿದ ರಕ್ಷಣಾ ಚಿಕಿತ್ಸೆ ಕೊಡಿಸುವುದು ಸಮುದಾಯದ, ಹಾಗೆಯೇ ಆರೋಗ್ಯ ಇಲಾಖೆಯ ಮುಖ್ಯ ಜವಾಬ್ದಾರಿ. ಕರ್ನಾಟಕದಲ್ಲಿ ಧನುರ್ವಾಯುವಿನ ವಿರುದ್ಧ ರಕ್ಷಣಾ ಚಿಕಿತ್ಸೆ ನೀಡುವ ಕಾರ್ಯವನ್ನು ಆರಂಭದಿಂದಲೇ ತೆಗೆದುಕೊಳ್ಳಲಾಗಿದೆ. ಮೂರು ತಿಂಗಳಿಂದ ಎರಡು ವರ್ಷಗಳೊಳಗಿನ ಪ್ರತಿಯೊಂದು ಮಗುವಿಗೂ ಮೂರು ಪ್ರಮಾಣ ಡಿ. ಪಿ. ಟಿ. (ಡಿಫ್ತೀರಿಯಾ, ಪರ್ಟಸಿಸ್, ಟಿಟನಸ್—ಗಂಟಲು ಬೇನೆ, ನಾಯಿಕೆಮ್ಮು, ಧನುರ್ವಾಯು) ಯೊಂದಿಗೆ ಪ್ರಾಥಮಿಕ ರಕ್ಷಣಾ ಚಿಕಿತ್ಸೆ ಕೊಡಲಾಗುತ್ತದೆ.

ನಾಯಿಕೆಮ್ಮು : ಸೂಕ್ಷ್ಮ ಶ್ವಾಸನಾಳಗಳನ್ನು ಘಾಸಿಗೊಳಿಸುವ ಒಂದು ತೀವ್ರ ಏಕಾಣುಜೀವಿಯ ರೋಗ ನಾಯಿಕೆಮ್ಮು. ಇದು ಒಂದರಿಂದ ಎರಡು ತಿಂಗಳವರೆಗೆ ನಿರಂತರವಾಗಿ ಕೆಮ್ಮಿರುವ ರೋಗ. ಈ ಕೆಮ್ಮು ಮತ್ತೆ ಮತ್ತೆ ಬಂದು ನಾಯಿಕೆಮ್ಮಿನೊಂದಿಗೆ ಕೊನೆಯಾಗುತ್ತದೆ. ಸಾಮಾನ್ಯವಾಗಿ ಎಳೆ ಮಕ್ಕಳಲ್ಲಿ ಮರಣ ಪ್ರಮಾಣ ಹೆಚ್ಚಾಗಿರುತ್ತದೆ. ಚಳಿಗಾಲದಲ್ಲಿ ಈ ರೋಗ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಇದು ರೋಗಿಗಳ ನೇರ ಸಂಪರ್ಕದಿಂದ, ಉಸಿರಾಟದಿಂದ ಹೊರಬರುವ ಲೋಳೆಯಿಂದ ಸೂಕ್ಷ್ಮ ಚರ್ಮಗಳ ಮೂಲಕ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ. ಇದಕ್ಕೆ ನಿರೋಧಕ ಲಸಿಕೆಯಿದೆ. ಇದರಿಂದ ಸಕ್ರಿಯ ರಕ್ಷಣಾ ಚಿಕಿತ್ಸೆ ಕೊಡಿಸುವುದು ಅಗತ್ಯವಾದುದು. ನಾಯಿಕೆಮ್ಮು ಲಸಿಕೆಯನ್ನು ಗಂಟಲುಬೇನೆ ಮತ್ತು ಧನುರ್ವಾಯು ಲಸಿಕೆಗಳೊಂದಿಗೆ ಮಿಶ್ರ ಮಾಡಿದ್ದು ಅದಕ್ಕೆ ತ್ರಿಸಂಯೋಗ ನಿರೋಧಕ ಲಸಿಕೆ ('ಟ್ರಿಪ್ಲ ಎಂಟಿಜನ್') ಎಂದು ಕರೆಯಲಾಗುತ್ತದೆ. ಇದನ್ನು ಮೂರು ತಿಂಗಳಿಂದ ಎರಡು ವರ್ಷಗಳವರೆಗಿನ ಎಲ್ಲ ಮಕ್ಕಳಿಗೂ ಕೊಡಲಾಗುತ್ತದೆ.

ಸಿಡುಬುರೋಗ ನಿರ್ಮೂಲನವಾದ ನಂತರ ಗಂಟಲು ಬೇನೆ, ನಾಯಿಕೆಮ್ಮು ಮತ್ತು ಧನುರ್ವಾಯು ರೋಗಗಳ ನಿಯಂತ್ರಣದ ಮೇಲೆ ಗಮನವನ್ನು ಕೇಂದ್ರೀಕರಿಸಲಾಗಿದೆ. ಈ ದೆಸೆಯಲ್ಲಿ ರಾಜ್ಯದ ಎಲ್ಲ ಭಾಗಗಳಲ್ಲೂ ಈ ರೋಗಗಳ ವಿರುದ್ಧ ಚುಚ್ಚುಮದ್ದು ಕೊಡುವ ಕಾರ್ಯವನ್ನು ಕೈಗೊಳ್ಳಲಾಗಿದೆ. ರೋಗಕ್ಕೆ ತುತ್ತಾಗುವ ಜನಸಂಖ್ಯೆ ಅಂದರೆ ಮಕ್ಕಳಿಗೆ ರಕ್ಷಣೆ ಒದಗಿಸುವುದು ಮತ್ತು ರೋಗಿಗಳಿಗೆ ಸತ್ವವುಳ್ಳ ಲಸಿಕೆಯನ್ನು ಒದಗಿಸುವುದು— ಈ ಕಾರ್ಯವನ್ನು ವ್ಯವಸ್ಥಿತ 'ಶೀತಲ ಸರಪಳಿ' ವ್ಯವಸ್ಥೆಯ ಮೂಲಕ ನಿರ್ವಹಿಸಲಾಗುತ್ತಿದೆ.

ಹಂದಿಗನೂರು ರೋಗ : ಇದು 1975ರಲ್ಲಿ ಮೊದಲ ಬಾರಿಗೆ ಶಿವಮೊಗ್ಗ ಜಿಲ್ಲಾ ಸಾಗರ ತಾಲೂಕಿನ ಹಂದಿಗೋಡು ಎಂಬ ಹಳ್ಳಿಯಲ್ಲಿ ಮತ್ತು ಚಿಕ್ಕಮಗಳೂರು ಜಿಲ್ಲೆಯ ಕೆಲವು ಭಾಗಗಳಲ್ಲಿ, ಅದರಲ್ಲೂ ಕೊಪ್ಪದ ಸುತ್ತಮುತ್ತ ಕಾಣಿಸಿಕೊಂಡ ಒಂದು ವಿಶಿಷ್ಟ, ವಿಚಿತ್ರ ಹಾಗೂ ನಿಗೂಢವಾದ ರೋಗ. ಆಗ ಚಿಕ್ಕಮಗಳೂರು ತಾಲೂಕಿನ ಜಾನಗದ್ದೆಯಲ್ಲಿ 21 ರೋಗ ಪ್ರಕರಣಗಳೂ, ಬಸಾಪುರದಲ್ಲಿ 22, ಹೇರಂಬಿಯಲ್ಲಿ 16 ಮತ್ತು ತಂಬಳ್ಳಿಯಲ್ಲಿ ಒಂದು, ನರಸಿಂಹರಾಜಪುರ ತಾಲೂಕಿನ ಹಲಸೂರು, ಬಾಳೆಹೊನ್ನೂರುಗಳಲ್ಲಿ ತಲಾ ಮೂರು ರೋಗ ಪ್ರಕರಣಗಳೂ, ಬೈರನಮಕ್ಕಿ ಮತ್ತು ಸರಗೋಡಿನಲ್ಲಿ ತಲಾ ಒಂದೊಂದು ರೋಗ ಪ್ರಕರಣಗಳೂ ಕಾಣಿಸಿಕೊಂಡವು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಂಡುಬಂದ ರೋಗ ಪ್ರಕರಣಗಳು ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿದ್ದ ರೋಗ ಪ್ರಕರಣಗಳಂತೆಯೇ ಇದ್ದವು. ಕೆಲವು ತಜ್ಞರ ಪ್ರಕಾರ ಈ ರೋಗಕ್ಕೆ ಕಾರಣ ಸಸಾರಜನಕದ ಕೊರತೆ ('ಮಯೊಪತಿ'). ರೋಗ ನಿಧಾನದ ಬಗ್ಗೆ ಪರಿಶೋಧನೆಯು ನಡೆಯುತ್ತಿದೆ. ಅನೇಕ ರೋಗ ಪ್ರಕರಣಗಳಲ್ಲಿ ಕಂಡುಬಂದಿರುವಂತೆ ವಿಶೇಷವಾಗಿ, ಚಿಕ್ಕ ವಯಸ್ಸಿನವರಿಗೇ ತಗಲುವ ಈ

ರೋಗದ ಅವಧಿ ಕೆಲವು ವಾರಗಳಿಂದ ಐದು ವರ್ಷಗಳವರೆಗೆ ಇರುತ್ತದೆ. ಸೊಂಟ, ಮಂಡಿ ಮತ್ತು ಮೊಣಕಾಲು ಸಂದುಗಳಲ್ಲಿ ನೋವು ಕಾಣಿಸಿಕೊಳ್ಳುವುದು ಈ ರೋಗದ ಲಕ್ಷಣ. ದೀರ್ಘ ಕಾಲದ ಪ್ರಕರಣಗಳಲ್ಲಿ ಮಂಡಿಗಳು ಅಥವಾ ಮೊಣಕಾಲು ಸಂದುಗಳಲ್ಲಿ ಬಿಗಿತ ಕಾಣಿಸಿಕೊಳ್ಳುತ್ತದೆ. ಬಹುತೇಕ ಪ್ರಕರಣಗಳಲ್ಲಿ ಜ್ವರವಾಗಲೀ, ನರಸಂಬಂಧ ಅವ್ಯವಸ್ಥೆಯಾಗಲೀ ಕಂಡುಬಂದಿಲ್ಲ. ತೀವ್ರವಾದ ರೀತಿಯಲ್ಲಿ ರೋಗಕ್ಕೆ ತುತ್ತಾದ ಪ್ರಕರಣಗಳನ್ನು ಶಸ್ತ್ರವೈದ್ಯದ ಮೂಲಕ ಸರಿಪಡಿಸಬೇಕಾಗುತ್ತದೆ. ವಾಸ್ತವವಾಗಿ, ಇದು ಕೆಳಗಣ ಕೈಕಾಲುಗಳ ಎಲುಬು, ಸಂದುಗಳು ಮತ್ತು ಮಾಂಸಖಂಡಗಳ ರೋಗವೆಂದು ಕಂಡುಬಂದಿದೆ; ಮತ್ತು ಕೆಲವು ಪ್ರಕರಣಗಳಲ್ಲಿ ರೋಗಿಗಳು ಚಲಿಸಲು ಅಸಮರ್ಥರಾಗುತ್ತಾರೆ. ತಾಂತ್ರಿಕವಾಗಿ, ಈ ರೋಗವು ಭಾರ ಹೊರುವ ಸಂದುಗಳಿಗೆ ತಗಲುವ ತೀವ್ರ ಸೂಕ್ಷ್ಮವಾದ ಸಂಧಿವಾತದ ಬಗೆಯ ರೋಗವೆಂದು ಹೇಳಲಾಗುತ್ತದೆ. ಅಪರೂಪವಾಗಿ, ರೋಗ ಲಕ್ಷಣಗಳನ್ನು ಮೊಳಕೈ ಮತ್ತು ಮೊಳಕಾಲು ಸಂದುಗಳಲ್ಲಿ ಕಾಣಬಹುದು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಂಡುಬಂದ ಎಲ್ಲ 68 ರೋಗಿಗಳಿಗೂ ದೈಹಿಕ ಚಿಕಿತ್ಸೆಯನ್ನು ನೀಡಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಬಂದ 47 ರೋಗ ಪ್ರಕರಣಗಳ ಬಗ್ಗೆ ಬೆಂಗಳೂರಿನ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವೈದ್ಯ ವಿಜ್ಞಾನ ಸಂಸ್ಥೆಯಿಂದ ನಿಯೋಗಿಸಲ್ಪಟ್ಟ ವಿಶೇಷ ತಂಡವೊಂದು ಪರಿಶೀಲಿಸಿದೆ. (ಡಿ.ಡಿ.ಟಿ. ಮುಂತಾದ ಕ್ರಿಮಿನಾಶಕ ಸಿಂಪಡಿಸಿದ್ದ ಗದ್ದೆಗಳಲ್ಲಿನ ಏಡಿಯಂಥ ಜಲಚರಗಳನ್ನು ಆಹಾರವಾಗಿ ಸೇವಿಸಿದಾಗ ಈ ರೋಗ ಬರುವುದೆಂಬುದು ಒಂದು ಅಧ್ಯಯನದ ಅಭಿಪ್ರಾಯ).

ಮಿದುಳು ಜ್ವರ: 'ಜಪಾನಿಸ್ ಬಿ ಎನ್‌ಸೆಫಲಿಟಿಸ್' ಎಂದು ಕರೆಯಲಾಗುವ ಮಿದುಳು ಜ್ವರ 1979ರ ಸೆಪ್ಟೆಂಬರ್ ಕೊನೆಯ ವಾರದಲ್ಲಿ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳಿಂದ ವರದಿಯಾಯಿತು. ಈ ರೋಗವು ಹೆಚ್ಚಾಗಿ 15 ವರ್ಷಗಳೊಳಗಿನ ಮಕ್ಕಳಿಗೆ ಸೀಮಿತವಾಗಿತ್ತು. ನೆರೆಯ ಜಿಲ್ಲೆಗಳಾದ ತುಮಕೂರು, ಮಂಡ್ಯ, ಮೈಸೂರು ಮತ್ತು ಚಿತ್ರದುರ್ಗ ಜಿಲ್ಲೆಗಳಿಗೂ ಹರಡಿತು. ಒಟ್ಟಿನಲ್ಲಿ ರಾಜ್ಯದ 13 ಜಿಲ್ಲೆಗಳು ಈ ರೋಗಕ್ಕೆ ತುತ್ತಾದವು. ಅವುಗಳಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ರೋಗ ತೀವ್ರವಾಗಿತ್ತು. ಉಳಿದ ಜಿಲ್ಲೆಗಳಲ್ಲಿ ಕೆಲವು ಪ್ರಕರಣಗಳು ಮಾತ್ರ 1979ರ ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ವರದಿಯಾದವು. 1981ರ ಅಂತ್ಯದವರೆಗೆ ರಾಜ್ಯದಲ್ಲಿ ವರದಿಯಾದ ಒಟ್ಟು 1,783 ರೋಗ ಪ್ರಕರಣಗಳಲ್ಲಿ 477 ಮರಣಗಳು ಸಂಭವಿಸಿದವು. 1980ರ ಮಾರ್ಚಿ ತಿಂಗಳಿಂದ ಡಿಸೆಂಬರ್ ಕೊನೆಯವರೆಗೆ ಕೋಲಾರ ಜಿಲ್ಲೆಯಿಂದ ಕೇವಲ 12 ಪ್ರಕರಣಗಳು ವರದಿಯಾಗಿದ್ದು ಏಳು ಸಾವುಗಳು ಸಂಭವಿಸಿವೆ. ಅದರಲ್ಲಿ ಮಿದುಳು ಜ್ವರದ ಲಕ್ಷಣವಿದ್ದ ಎರಡು ಮರಣೋತ್ತರ ಪರೀಕ್ಷೆ ಪ್ರಕರಣಗಳೂ ಸೇರಿವೆ. 1980-81ರಲ್ಲಿ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳಿಂದ ಕೇವಲ ಕೆಲವೇ ಅನುಮಾನಿತ ಪ್ರಕರಣಗಳು ಮಾತ್ರ ವರದಿಯಾಗಿವೆ. 1981-82ರಲ್ಲಿ ವರದಿಯಾದ ರೋಗ ಪ್ರಕರಣಗಳ ಸಂಖ್ಯೆ 837; ಸಾವಿನ ಸಂಖ್ಯೆ 236. ಇವು ವರದಿಯಾದ ಜಿಲ್ಲೆಗಳೆಂದರೆ ಬೆಂಗಳೂರು, ಬಳ್ಳಾರಿ, ಮಂಡ್ಯ ಮತ್ತು ತುಮಕೂರು. ಆ ವರ್ಷ ಬೆಳಗಾವಿ, ವಿಜಾಪುರ, ಚಿಕ್ಕಮಗಳೂರು, ಕಲ್ಬುರ್ಗಿ, ಹಾಸನ ಮತ್ತು ರಾಯಚೂರು ಜಿಲ್ಲೆಗಳಿಂದಲೂ ಕೆಲವು ರೋಗ ಪ್ರಕರಣಗಳು ವರದಿಯಾಗಿದ್ದವು. 1981ರ ಅಕ್ಟೋಬರ್ ಮೊದಲ ವಾರದಲ್ಲಿ ಆರಂಭವಾಗಿ ಆ ವರ್ಷದ ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಅತ್ಯಂತ ತೀವ್ರ ಸ್ಥಿತಿಯನ್ನು ಮುಟ್ಟಿದ ಈ ಸಾಂಕ್ರಾಮಿಕ ರೋಗ 1982ರ ಜನವರಿ ಅಂತ್ಯದ ವೇಳೆಗೆ ಇಳಿಮುಖವಾಯಿತು. ಹಂದಿಗಳಲ್ಲಿ ಬೆಳೆಯುವ ಸೋಂಕಿನ ಸೊಳ್ಳೆಗಳು ಕಚ್ಚುವುದರಿಂದ ಈ ರೋಗ ಹರಡುತ್ತದೆ.

ಈ ರೋಗ ಹರಡುವುದನ್ನು ತಡೆಗಟ್ಟಲು ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಜಪಾನಿನಿಂದ ಆಮದು ಮಾಡಿಕೊಳ್ಳಬೇಕಾದ ನಿರೋಧಕ ಲಸಿಕೆ ಬಹಳ ದುಬಾರಿಯಾಗಿದ್ದು, ಅದರ ಸಾಮರ್ಥ್ಯವಿನ್ನೂ ಪೂರ್ಣವಾಗಿ ದೃಢಪಟ್ಟಿಲ್ಲ. ಹಂದಿಗಳನ್ನು ಜನವಸತಿಗಳಿಂದ ಬೇರ್ಪಡಿಸುವುದಕ್ಕೆ ಸಂಬಂಧಿಸಿದಂತೆ ಪಶುವೈದ್ಯ ಇಲಾಖೆಯ ನಿರ್ದೇಶಕರು ಗ್ರಾಮ, ಪಟ್ಟಣ ಮತ್ತು ನಗರ—ಈ ಮೂರು ಪ್ರದೇಶಗಳಲ್ಲಿ ಅಂತಹ ಪ್ರತ್ಯೇಕತಾ ಘಟಕಗಳನ್ನು ನಿರ್ಮಿಸಲು ಬೇಕಾದ ಅಗತ್ಯಗಳ ಬಗ್ಗೆ ವಿವರಗಳನ್ನು ನೀಡಿದ್ದಾರೆ. ಕ್ರಿಮಿನಾಶಕ ಕ್ರಮಕ್ಕೆ ಸಂಬಂಧಿಸಿದಂತೆ ಎಲ್ಲ ಪುರಸಭಾ ಪ್ರದೇಶಗಳಲ್ಲೂ ಕ್ರಮವಾದ ಸಿಂಪಡಣೆ ಕಾರ್ಯವನ್ನು ಕೈಗೊಳ್ಳಲಿಕ್ಕಾಗಿ ಅಗತ್ಯ ಸಾಧನಗಳನ್ನು ಕೊಳ್ಳಲು ಮತ್ತು ಕ್ಷೇತ್ರ ಕೆಲಸಗಾರರನ್ನು ನೇಮಿಸಿಕೊಳ್ಳಲು ಹಣಕಾಸನ್ನು ಒದಗಿಸುವಂತೆ ಸರ್ಕಾರವನ್ನು ಕೇಳಲಾಗಿದೆ. ಕ್ರಿಮಿನಾಶಕ ಸಿಂಪಡಣೆಯನ್ನು ಕೈಗೊಳ್ಳಲು ಸಾಕಷ್ಟು ಅವಕಾಶ ಕಲ್ಪಿಸುವಂತೆ ಪುರಸಭೆಯ ಅಧಿಕಾರಿಗಳನ್ನು ಕೋರಲಾಗಿದೆ. ಕ್ರಿಮಿನಾಶನದ ಒಂದು ಅಂಗವಾಗಿ, ಬಚ್ಚಲು, ಚರಂಡಿ ಮತ್ತಿತರ ಕಡೆ ನೀರು ಮಡುಗಟ್ಟಿ ನಿಲ್ಲುವುದನ್ನು ತಪ್ಪಿಸಲು ಅದು ಸುಗಮವಾಗಿ ಹರಿದು ಹೋಗುವಂತೆ ಅಗಲವಾದ ಮತ್ತು ಸೂಕ್ತ ಇಳಿಜಾರು ಇರುವ ಇಂಗ್ಲೀಷ್ 'ವಿ' ಅಕ್ಷರದ ಮಾದರಿಯ ಚರಂಡಿಗಳ ನಿರ್ಮಾಣದಂತಹ ಶಾಶ್ವತ ಕಾಮಗಾರಿಗಳನ್ನು ಕೈಗೊಳ್ಳಬೇಕಾಗುತ್ತದೆ.

ಕ್ಯಾಸನೂರು ಅರಣ್ಯ ರೋಗ: ಕ್ಯಾಸನೂರು ಅರಣ್ಯ ರೋಗ ಅಥವಾ 'ಮಂಗನ ಕಾಯಿಲೆ'ಯು ಒಂದು ಹೊಸ ಬಗೆಯ ರೋಗವಾಗಿದ್ದು, ಅದು ಮೊದಲ ಬಾರಿಗೆ ಕಾಣಿಸಿಕೊಂಡಿದ್ದು 1956ರಲ್ಲಿ. ಈ ರೋಗವು ದಟ್ಟವಾದ ಕಾಡು ಪ್ರದೇಶದಲ್ಲಿ, ವಿಶೇಷವಾಗಿ, ಶಿವಮೊಗ್ಗ ಜಿಲ್ಲೆಯ ಸಾಗರ,

ಸೊರಬ, ಶಿಕಾರಿಪುರ ಮತ್ತು ಹೊಸನಗರ ತಾಲೂಕುಗಳು, ಉತ್ತರ ಕನ್ನಡ ಜಿಲ್ಲೆಯ ಶಿರಸಿ ಹಾಗೂ ಹೊನ್ನಾವರ ತಾಲುಕುಗಳು ಮತ್ತು ಚಿಕ್ಕಮಗಳೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಮೊದಲು ಕಂಡುಬಂದಿತು. ಈ ರೋಗವು ದನಗಳು ಮತ್ತಿತರ ಪ್ರಾಣಿಗಳಲ್ಲಿ ಪರಾವಲಂಬಿಗಳಾಗಿರುವ ಗಟ್ಟಿ ಉಣ್ಣೆಗಳಿಂದ ಉಂಟಾಗುತ್ತದೆ. ಇದು 'ಕ್ಯಾಸನೂರು ಅರಣ್ಯ ರೋಗ' ಎಂಬ ಜ್ವರವನ್ನು ಹರಡುತ್ತದೆ. ಈ ರೋಗಾಣು ಸ್ವರೂಪದಲ್ಲಿ ರಷ್ಯಾದ 'ಸ್ಪ್ರಿಂಗ್ ಸಮ್ಮರ್ ಎನ್‌ಸೆಫಲಿಟಿಸ್' ಜಾತಿಯ ಸಂಕೀರ್ಣ ವರ್ಗಕ್ಕೆ ಸಂಬಂಧಿಸಿದ್ದು. ಇದು ಬಹುಮಟ್ಟಿಗೆ ಕಾಡಿನ ಪ್ರಾಣಿಗಳ ಒಂದು ರೋಗವಾದರೂ, ಆಕಸ್ಮಿಕವಾಗಿ ಮನುಷ್ಯನೂ ಇದಕ್ಕೆ ತುತ್ತಾಗುತ್ತಾನೆ. ಮನುಷ್ಯ ಕಾಡಿಗೆ ಹೋದಾಗ, ಸೋಂಕಿರುವ ಪ್ರಾಣಿಗಳಿಂದ, ಅದರಲ್ಲೂ ಮಂಗಗಳಿಂದ ಈ ರೋಗ ತಗಲುತ್ತದೆ. ಇದು ಒಂದು ಹಂಗಾಮಿನ ರೋಗವಾಗಿದ್ದು ಬಹುತೇಕ ಬೇಸಗೆಯಲ್ಲಿ ಕಾಣಿಸಿಕೊಳ್ಳುತ್ತದೆ. ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುವ ಈ ರೋಗದ ಅವಧಿ ಸಾಮಾನ್ಯವಾಗಿ ಮೂರರಿಂದ ಎಂಟು ದಿನಗಳು. ನಿರಂತರ ಜ್ವರ, ತೀರ ಹೆಚ್ಚಾದ ನಿತ್ರಾಣ ಮತ್ತು ನಿರ್ಜಲತೆ, ತಲೆ ಹಾಗೂ ಕೈಕಾಲುಗಳಲ್ಲಿ ತೀವ್ರ ನೋವು, ಕಣ್ಣು ಕೆಂಪಗಾಗುವುದು, ಸಾಮಾನ್ಯ ದೈಹಿಕ ದುರ್ಬಲತೆ, ರಕ್ತ ಸ್ರಾವ ಹಾಗೂ ಮಿದುಳು-ಬಳ್ಳಿಗಳ ವ್ಯವಸ್ಥಿತ ಅಪಾಯ, ಇತ್ಯಾದಿಗಳು ಈ ರೋಗದ ಸಾಮಾನ್ಯ ಲಕ್ಷಣಗಳು. ಕೆಲವು ವೇಳೆ ಅತಿರೇಕದ ಅರೆ ಪಾರ್ಶ್ವವಾಯು, 'ಫೋಟೋಫೋಬಿಯಾ' ಮತ್ತು ಕಣ್ಣು, ಕಿವಿ, ಮೂಗು ಹಾಗೂ ಗಂಟಲು ಉರಿತಗಳು ಉಂಟಾಗುತ್ತವೆ.

1956 ರಿಂದ 1973ರವರೆಗೆ ಈ ರೋಗವು 378 ಹಳ್ಳಿಗಳಲ್ಲಿ 4,539 ಜನರಿಗೆ ತಗಲಿ 121 ಜನರನ್ನು ಸಾವಿಗೆ ತುತ್ತಾಗಿಸಿದೆ. ಈ ಅವಧಿಯಲ್ಲಿ ಈ ರೋಗದಿಂದಾಗಿ ಸುಮಾರು, 2,202 ಮಂಗಗಳು ಸತ್ತುಹೋದವೆಂದು ಅಂದಾಜು ಮಾಡಲಾಗಿದೆ. 1983ರಲ್ಲಿ ರೋಗವು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಮತ್ತು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕುಗಳಲ್ಲೂ ಕಾಣಿಸಿಕೊಂಡಿತು. ಬೆಳ್ತಂಗಡಿ ತಾಲೂಕಿನಲ್ಲಿ ಆ ವರ್ಷ ಮಾರ್ಚ್ ವೇಳೆಗೆ 700 ಜನಕ್ಕೆ ಈ ರೋಗ ತಗಲಿ 60 ಜನ ಸಾವನ್ನಪ್ಪಿದರು. ಸ್ಥಳದಲ್ಲೇ ಸರಿಯಾದ ಚಿಕಿತ್ಸೆಯನ್ನು ನೀಡಲು ಅನುಕೂಲವಾಗುವಂತೆ ಆ ಭಾಗದ ಎಲ್ಲ ವೈದ್ಯಕೀಯ ಹಾಗೂ ಸಾರ್ವಜನಿಕ ಆರೋಗ್ಯ ಸಂಸ್ಥೆಗಳಿಗೂ ಅಗತ್ಯ ಔಷಧಗಳನ್ನು ಒದಗಿಸಲಾಗಿದೆ. ಪ್ರಾಯೋಗಿಕವಾಗಿ ತೀರ್ಥಹಳ್ಳಿ ತಾಲೂಕಿನಲ್ಲಿ ರೋಗದ ಎರಡು ಕೇಂದ್ರಬಿಂದುಗಳಾದ ಮಹಿಷಿ ಹಾಗೂ ಜಂಬೆತ್ತಲ್ಲೂರು ಪ್ರದೇಶದಲ್ಲಿ ಅರಣ್ಯ ಭೂಮಿಗೆ ಬಿ.ಎಚ್.ಸಿ. ಪುಡಿ ಸಿಂಪಡಣೆ ಕಾರ್ಯ ಕೈಗೊಳ್ಳಲಾಗಿದೆ. ಸೋಂಕಿನ ಹಂಗಾಮಿನಲ್ಲಿ ರೋಗ ತಗಲಿದ ಹಳ್ಳಿಗಳ ನಿವಾಸಿಗಳ ಬಳಕೆಗಾಗಿ ಕೀಟ ನಿರೋಧಕ ಔಷಧಗಳ ಸೀಸೆಗಳನ್ನು ಹಂಚಲಾಗಿದೆ. ರೋಗದ ಬಗ್ಗೆ ಸರಿಯಾಗಿ ವರದಿ ಮಾಡುವುದು, ರೋಗಿಯನ್ನು ಸಕಾಲದಲ್ಲಿ ಆಸ್ಪತ್ರೆಗೆ ಸೇರಿಸುವುದು ಮತ್ತು ಚಿಕಿತ್ಸೆ ನೀಡುವುದರ ಬಗ್ಗೆ ಆರೋಗ್ಯ ಶಿಕ್ಷಣ ಚಟುವಟಿಕೆಗಳನ್ನು ತೀವ್ರಗೊಳಿಸಲಾಗಿದೆ. ಶಿವಮೊಗ್ಗದಲ್ಲಿರುವ ರೋಗಾಣು ವಿಶ್ಲೇಷಣ ಪ್ರಯೋಗಾಲಯವು ತೀವ್ರ ಜಾಗರಣೆಯ ಮೂಲಕ ರೋಗ ಪ್ರಕರಣಗಳನ್ನು ಪತ್ತೆ ಹಚ್ಚುವ ಕಾರ್ಯವನ್ನು ಕೈಗೊಂಡಿದೆ.

ರೋಗಾಣು ವಿಶ್ಲೇಷಣಾ ಪ್ರಯೋಗಾಲಯ : 1958 ರಲ್ಲಿ ಕ್ಷೇತ್ರ ಪರಿಶೋಧನೆ, ಕೀಟಶಾಸ್ತ್ರ ಅಧ್ಯಯನ, ರೋಗ ಚಿಕಿತ್ಸಾ ಹಾಗೂ ಪ್ರಯೋಗಾಲಯ ಪರಿಶೀಲನೆಗಳ ಉದ್ದೇಶಕ್ಕಾಗಿ ಶಿವಮೊಗ್ಗದಲ್ಲಿ ರಾಕ್‌ಫೆಲ್ಲರ್ ಪ್ರತಿಷ್ಠಾನದ ಸಹಭಾಗಿತ್ವದೊಂದಿಗೆ ಒಂದು ವಿಶೇಷ ರೋಗಾಣು ವಿಶ್ಲೇಷಣಾ ಪ್ರಯೋಗಾಲಯವನ್ನು ಸ್ಥಾಪಿಸಲಾಯಿತು. ಇದು ಭಾರತೀಯ ವೈದ್ಯಕೀಯ ಸಂಶೋಧನ ಸಂಸ್ಥೆಯ ಸಹಭಾಗಿತ್ವದೊಂದಿಗೆ ಕರ್ನಾಟಕ ರಾಜ್ಯ ಸರ್ಕಾರವು ಕೈಗೊಂಡಿರುವ ಒಂದು ಹೊಸ ಹಾಗೂ ವಿಶಿಷ್ಟ ಪರಿಶೋಧನಾ ಕಾರ್ಯವಾಗಿದ್ದು ರಾಜ್ಯದಲ್ಲಿ ರೋಗಾಣು ಮತ್ತು ಅದಕ್ಕೆ ಸಂಬಂಧಿಸಿದ ಸೋಂಕುಗಳ ಪರಿಶೋಧನೆ, ಸಂಶೋಧನೆ ಹಾಗೂ ನಿಯಂತ್ರಣ ಸಮಸ್ಯೆಗಳನ್ನು ಪರಿಹರಿಸಲು ಇದನ್ನು ಪೂರ್ಣ ಸುಸಜ್ಜಿತ ಸಂಸ್ಥೆಯಾಗಿ ಅಭಿವೃದ್ಧಿಗೊಳಿಸಲು ಅವಕಾಶ ಕಲ್ಪಿಸಲಾಗಿದೆ.

ಆಡಳಿತೋದ್ದೇಶಕ್ಕಾಗಿ ಈ ರೋಗಾಣು ವಿಶ್ಲೇಷಣಾ ಪ್ರಯೋಗಾಲಯವನ್ನು ಎರಡು ಶಾಖೆಗಳಾಗಿ ವಿಂಗಡಿಸಲಾಗಿದೆ– ಒಂದು ಶಿವಮೊಗ್ಗದಲ್ಲಿರುವ ರೋಗಾಣು ವಿಶ್ಲೇಷಣಾ ಪ್ರಯೋಗಾಲಯ; ಮತ್ತೊಂದು ಸಾಗರದಲ್ಲಿರುವ ಕ್ಯಾಸನೂರು ಅರಣ್ಯ ರೋಗ ಕ್ಷೇತ್ರ ಕೇಂದ್ರ. ಶಿವಮೊಗ್ಗದಲ್ಲಿರುವ ರೋಗಾಣು ವಿಶ್ಲೇಷಣಾ ಪ್ರಯೋಗಾಲಯದ ಮುಖ್ಯ ಕಾರ್ಯಗಳೆಂದರೆ— 1) ಇಲಿಗಳ ಚುಚ್ಚುಮದ್ದು, ವಿಧಾನದ ಮೂಲಕ ಮಾನವ, ಮಂಗ, ಕೀಲುಗಳುಳ್ಳ ಪ್ರಾಣಿ ಅಥವಾ ಬೇರಾವುದೇ ಮಾದರಿಗಳಿಂದ ಸೋಂಕಿನ ರೋಗಾಣುಗಳನ್ನು ಬೇರ್ಪಡಿಸುವುದು; 2) ಸಮೀಕ್ಷಾ ಮಾದರಿಗಳಲ್ಲಿ ನಿರ್ದಿಷ್ಟ ಕ್ಯಾಸನೂರು ಅರಣ್ಯ ರೋಗದ ತಟಸ್ಥ ರೋಗಾಣುಗಳನ್ನು ಪತ್ತೆ ಹಚ್ಚುವುದು; 3) ಇಲಿಗಳ ವಸತಿಯ ನಿರ್ವಹಣೆ; 4) ಪ್ರಾಣಿಗೃಹದ ನಿರ್ವಹಣೆ ಮತ್ತು 5) ಕ್ಯಾಸನೂರು ಅರಣ್ಯರೋಗ ಪ್ರದೇಶದಲ್ಲಿರುವ ವೈದ್ಯಕೀಯ ಹಾಗೂ ವೈದ್ಯಕೀಯೇತರ ಸಿಬ್ಬಂದಿಗೆ ಕ್ಯಾಸನೂರು ಅರಣ್ಯರೋಗದ ಚಿಕಿತ್ಸೆ ಬಗ್ಗೆ ತರಬೇತಿ ನೀಡುವುದು, ಇತ್ಯಾದಿ.

ಕ್ಯಾಸನೂರು ಅರಣ್ಯರೋಗದ ಕ್ಷೇತ್ರ ಕೇಂದ್ರ : ಇತರ ಚಟುವಟಿಕೆಗಳ ಜೊತೆಗೆ ಸಾಗರದಲ್ಲಿರುವ ಕ್ಯಾಸನೂರು ಅರಣ್ಯರೋಗ ಕ್ಷೇತ್ರ ಕೇಂದ್ರದ ಮುಖ್ಯ ಚಟುವಟಿಕೆಗಳೆಂದರೆ– ವಿಶೇಷವಾಗಿ, ಕ್ಯಾಸನೂರು ಅರಣ್ಯ ರೋಗ ಮತ್ತು ಸಾಮಾನ್ಯ

ವಾಗಿ ಇತರ ಕೀಲು ಮೂಳೆಯು ಪ್ರಾಣಿಗಳಿಂದಾಗುವ ನಂಜು ರೋಗಗಳ ಜಾಗರಣೆ ಮತ್ತು ಕ್ಯಾಸನೂರು ಅರಣ್ಯರೋಗ ಪ್ರದೇಶದಲ್ಲಿ ಸಂಗ್ರಹಿಸಿದ ಮಾದರಿಗಳನ್ನು ಒಂದೆಡೆ ಸೇರಿಸಿ ಶಿವಮೊಗ್ಗದಲ್ಲಿರುವ ರೋಗಾಣು ವಿಶ್ಲೇಷಣಾ ಪ್ರಯೋಗಾಲಯಕ್ಕೆ ಕಳುಹಿಸುವುದು. ಇತ್ತೀಚೆಗೆ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ಒಂದು ಪ್ರತ್ಯೇಕ ಕ್ಯಾಸನೂರು ಅರಣ್ಯರೋಗ ಕ್ಷೇತ್ರ ಕೇಂದ್ರವನ್ನು ತೆರೆಯಲಾಗಿದೆ. ಸಾಗರ ಮತ್ತು ಹೊನ್ನಾವರ ಕ್ಷೇತ್ರ ಕೇಂದ್ರಗಳ ಕಾರ್ಯಾಲಯ ಸಿಬ್ಬಂದಿಯು ಶಿವಮೊಗ್ಗದಲ್ಲಿರುವ ರೋಗಾಣು ವಿಶ್ಲೇಷಣ ಪ್ರಯೋಗಾಲಯದ ಉಪನಿರ್ದೇಶಕರ ಅಧೀನದಲ್ಲಿರುತ್ತಾರೆ. ಪ್ರಯೋಗಾಲಯವು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಇಲಾಖೆಯ ಒಂದು ಘಟಕವಾಗಿದ್ದು ಇದರ ಉಪನಿರ್ದೇಶಕರು, ಬೆಂಗಳೂರು ವಿಭಾಗದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ನೇರ ಅಧೀನದಲ್ಲಿರುತ್ತಾರೆ.

ಅಲೋಪತಿ ಸಂಸ್ಥೆಗಳು : 1884ಕ್ಕೆ ಮುಂಚೆ ಬ್ರಿಟಿಷ್ ಆಡಳಿತದಲ್ಲಿದ್ದ ನಾಲ್ಕು ಆಸ್ಪತ್ರೆಗಳು ಮತ್ತು 24 ಚಿಕಿತ್ಸಾಲಯಗಳನ್ನು 1884ರಲ್ಲಿ ಅಂದಿನ ಮೈಸೂರು ಸರ್ಕಾರಕ್ಕೆ ವಹಿಸಿ ಕೊಡಲಾಯಿತು. ಅಂದಿನಿಂದ, ಅದರಲ್ಲೂ ಸ್ವಾತಂತ್ರ್ಯಾನಂತರ ಮತ್ತು ಯೋಜನಾ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ ಮೇಲೆ ರಾಜ್ಯದಲ್ಲಿ ವೈದ್ಯಕೀಯ ಸೌಲಭ್ಯಗಳು ಗಮನಾರ್ಹವಾಗಿ ಹೆಚ್ಚುತ್ತ ಬಂದಿವೆ. ವೈದ್ಯಕೀಯ ರಕ್ಷಣೆಯಲ್ಲಿ ವಿಸ್ತಾರಗೊಂಡ ಕ್ಷೇತ್ರಗಳೆಂದರೆ, 1) ಸಂಸ್ಥೆಗಳ ಸಂಖ್ಯೆಯ ಹೆಚ್ಚಳ, 2) ಈಗಾಗಲೇ ಇದ್ದ ಸಂಸ್ಥೆಗಳ ವಿಸ್ತರಣೆ, 3) ವೈದ್ಯಕೀಯ ರಕ್ಷಣಾ ವಿಧಾನದ ಬದಲಾವಣೆ ಮತ್ತು 4) ಸೇವೆಯ ಗುಣಮಟ್ಟ.

215 ಆಸ್ಪತ್ರೆಗಳು, 268 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಈಗ ಪ್ರಾಥಮಿಕ ಆರೋಗ್ಯ ಘಟಕಗಳೆಂದು ಕರೆಯಲ್ಪಟ್ಟಿರುವ 1,313 ಚಿಕಿತ್ಸಾಲಯಗಳ ಮೂಲಕ ಜನಸಾಮಾನ್ಯರಿಗೆ ವೈದ್ಯಕೀಯ ರಕ್ಷಣೆ ಮತ್ತು ಸಾರ್ವಜನಿಕ ಆರೋಗ್ಯ ಸೇವೆಗಳನ್ನು ಒದಗಿಸಲಾಗುತ್ತಿದೆ. ರಾಜ್ಯದಲ್ಲಿ ಅಲೋಪಥಿ ವೈದ್ಯ ಪದ್ಧತಿಯ 1,796 ವೈದ್ಯಕೀಯ ಸಂಸ್ಥೆಗಳಿದ್ದು ಇವುಗಳಲ್ಲಿ 31,533 ಹಾಸಿಗೆಗಳ ಸೌಲಭ್ಯವಿದ್ದು, ಇದು ಹೆಚ್ಚುಕಡಿಮೆ ರಾಷ್ಟ್ರೀಯ ಗುರಿಯಾದ ಪ್ರತೀ ಸಾವಿರ ಜನಸಂಖ್ಯೆಗೆ ಒಂದು ಹಾಸಿಗೆಯ ಪ್ರಮಾಣಕ್ಕೆ ಬರುತ್ತದೆ. ಈಗ ಪ್ರತೀ 18,000 ಜನಸಂಖ್ಯೆಗೆ ಒಂದು ವೈದ್ಯಕೀಯ ಸಂಸ್ಥೆಯೂ ಪ್ರತೀ 2,000 ಜನಸಂಖ್ಯೆಗೆ ಒಬ್ಬ ಅಲೋಪತಿ ನೋಂದಾಯಿತ ವೈದ್ಯರೂ ಇದ್ದಾರೆ. ಜೊತೆಗೆ ಪ್ರತೀ 10 ಹಾಸಿಗೆಗಳಿಗೆ ಒಬ್ಬ ದಾದಿಯೂ, ಪ್ರತೀ 6,030 ಜನರಿಗೆ ಒಬ್ಬ ಸಹಾಯಕ ದಾದಿಯೂ ಇದ್ದಾರೆ.

ಪ್ರಾಥಮಿಕ ಆರೋಗ್ಯ ಘಟಕಗಳು ಮತ್ತು ಕೇಂದ್ರಗಳು : ರಾಜ್ಯದಲ್ಲಿ ಈಗ ಒದಗಿಸಲಾಗುತ್ತಿರುವ ಆರೋಗ್ಯ ರಕ್ಷಣಾ ಸೇವೆಗಳನ್ನು ಬೋಧನಾ ಆಸ್ಪತ್ರೆಗಳು, ವಿಶೇಷ ತಜ್ಞತೆಯ ಆಸ್ಪತ್ರೆಗಳು, ಜಿಲ್ಲಾ ಆಸ್ಪತ್ರೆಗಳು, ತಾಲೂಕು ಮಟ್ಟದ ಸಾರ್ವಜನಿಕ ಆಸ್ಪತ್ರೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಪ್ರಾಥಮಿಕ ಆರೋಗ್ಯ ಘಟಕಗಳ ಅಡಿಯಲ್ಲಿ ವರ್ಗೀಕರಿಸಬಹುದು. ಗ್ರಾಮಾಂತರ ಪ್ರದೇಶದಲ್ಲಿ 1,543 ಪ್ರಾಥಮಿಕ ಆರೋಗ್ಯ ಘಟಕಗಳಿವೆ. ಇವುಗಳ ಜೊತೆಗೆ 1981-82ರಲ್ಲಿ 59 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡಲಾಯಿತು. 1978ರ ಆಗಸ್ಟ್ 31ರಿಂದ ಅದುವರೆಗೆ ತಾಲೂಕು ಮಟ್ಟಕ್ಕಿಂತ ಕೆಳಗಿದ್ದ ಸ್ಥಳೀಯ ನಿಧಿ ಆಸ್ಪತ್ರೆ, ಸ್ಥಳೀಯ ನಿಧಿ ಡಿಸ್ಪೆನ್ಸರಿ, ಸಂಯೋಜಿತ ಆಸ್ಪತ್ರೆ, ಸಂಯೋಜಿತ ಡಿಸ್ಪೆನ್ಸರಿ, ರೆಡ್ಯೂಸ್ಡ್ ಸ್ಕೇಲ್ ಸ್ಥಳೀಯ ನಿಧಿ ಡಿಸ್ಪೆನ್ಸರಿ, ಸರ್ಕಾರಿ ಚಿಕಿತ್ಸಾಲಯ, ಮಲೆನಾಡು ಸುಧಾರಣಾ ಚಿಕಿತ್ಸಾಲಯ, ವೈದ್ಯಕೀಯ ಉಪಕೇಂದ್ರಗಳು ಮತ್ತು ಆರೋಗ್ಯ ಘಟಕ ಮಾದರಿ ಚಿಕಿತ್ಸಾಲಯ ಈ ಎಲ್ಲಾ ಸಂಸ್ಥೆಗಳನ್ನೂ "ಪ್ರಾಥಮಿಕ ಆರೋಗ್ಯ ಘಟಕ" ಗಳೆಂದು ನಾಮಕರಣ ಮಾಡಲಾಯಿತು. ಅದೇ ರೀತಿ ತಾಲೂಕು ಮಟ್ಟದಲ್ಲಿದ್ದ ನಾಗರಿಕ ಆಸ್ಪತ್ರೆಗಳು, ಕುಟೀರ ಆಸ್ಪತ್ರೆಗಳು, ಮತ್ತಿತರ ಹೆಸರುಗಳಿಂದ ಕರೆಯಲ್ಪಡುತ್ತಿದ್ದ ಸರ್ಕಾರಿ ಆಸ್ಪತ್ರೆಗಳನ್ನು ಸಾರ್ವಜನಿಕ ಆಸ್ಪತ್ರೆಗಳೆಂದು ಕರೆಯಲಾಯಿತು. ಚಿಕಿತ್ಸಾ ಸೇವೆಗಳನ್ನು ಒದಗಿಸುವ ಈ ಆಸ್ಪತ್ರೆಗಳಲ್ಲಿ ಪ್ರಸೂತಿ ಸೇವೆ, ಒಳರೋಗಿ ಚಿಕಿತ್ಸೆ ಮತ್ತು ಕಿರು ಶಸ್ತ್ರ ಚಿಕಿತ್ಸೆಯ ಸೌಲಭ್ಯಗಳೂ ಇವೆ.

ಜನರಿಗೆ ಹೆಚ್ಚು ಮತ್ತು ಉತ್ತಮ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಬೇಕೆಂಬ ಸರ್ಕಾರದ ನೀತಿಗನುಗುಣವಾಗಿ ನಂತರದ ಯೋಜನಾವಧಿಗಳಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಪ್ರಾಥಮಿಕ ಆರೋಗ್ಯ ಘಟಕಗಳನ್ನು ಸ್ಥಾಪಿಸಲಾಗಿದೆ. ರಾಜ್ಯದಲ್ಲಿ ಭಾರತ ಸರ್ಕಾರ ಮಾದರಿಯ 268 ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದು, ಅವುಗಳ ಜಿಲ್ಲಾವಾರು ಹಂಚಿಕೆ ಹೀಗಿದೆ. ಬೆಂಗಳೂರು 19, ಬೆಳಗಾವಿ 21, ಬಳ್ಳಾರಿ 12, ಬಿದರೆ 9, ವಿಜಾಪುರ 21, ಚಿಕ್ಕಮಗಳೂರು 7, ಚಿತ್ರದುರ್ಗ 13, ದಕ್ಷಿಣ ಕನ್ನಡ 17, ಧಾರವಾಡ 24, ಕಲ್ಬುರ್ಗಿ 17, ಹಾಸನ 11, ಕೊಡಗು 3, ಕೋಲಾರ 15, ಮಂಡ್ಯ 9, ಮೈಸೂರು 18, ರಾಯಚೂರು 15, ಶಿವಮೊಗ್ಗ 10, ತುಮಕೂರು 18 ಮತ್ತು ಉತ್ತರ ಕನ್ನಡ 11. ರಾಜ್ಯಾದ್ಯಂತ ಕರ್ನಾಟಕ ಮಾದರಿಯ ಒಟ್ಟು 1,798 ಪ್ರಾಥಮಿಕ ಆರೋಗ್ಯ ಘಟಕಗಳಿವೆ. ಭಾರತ ಸರ್ಕಾರ ಮಾದರಿಯ ಪ್ರಾಥಮಿಕ ಆರೋಗ್ಯ ಕೇಂದ್ರಗಳು ತಲಾ 80,000 ದಿಂದ 1,20,000 ಜನಸಂಖ್ಯೆಯನ್ನು ಒಳಗೊಂಡರೆ, ರಾಜ್ಯ ಸರ್ಕಾರಿ ಮಾದರಿಯ ಪ್ರಾಥಮಿಕ ಆರೋಗ್ಯ ಘಟಕಗಳು ತಲಾ 10 ರಿಂದ 15 ಸಾವಿರ ಜನಸಂಖ್ಯೆಗೆ

ಸೇವೆ ಸಲ್ಲಿಸುತ್ತವೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಕನಿಷ್ಠ ಇಬ್ಬರು ವೈದ್ಯಾಧಿಕಾರಿಗಳು ಇರುತ್ತಾರೆ. ಅವರಲ್ಲಿ ಒಬ್ಬರು ಮಹಿಳಾ ವೈದ್ಯಾಧಿಕಾರಿ, ಜೊತೆಗೆ ಒಬ್ಬ ಔಷಧ ವಿತರಕ, ಓರ್ವ ಆರೋಗ್ಯ ನಿರೀಕ್ಷಕ, ಮೂಲ ಆರೋಗ್ಯ ಕಾರ್ಯಕರ್ತರು, ಸಹಾಯಕ ದಾದಿಯರು, ಕರಣಿಕ ಸಿಬ್ಬಂದಿ ಮತ್ತು ನಾಲ್ಕನೇಯ ದರ್ಜೆಯ ನೌಕರರು ಇರುತ್ತಾರೆ. ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಸರಾಸರಿ ಆರರಿಂದ ಎಂಟು ಹಾಸಿಗೆಗಳ ಸೌಲಭ್ಯಕ್ಕೆ ಅವಕಾಶವಿದೆ. ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ನೋಡಿಕೊಳ್ಳಲು ಒಬ್ಬ ವಿಸ್ತರಣಾ ಕಾರ್ಯಕರ್ತ, ಪ್ರತೀ 20,000 ದಿಂದ 30,000 ಜನಸಂಖ್ಯೆಗೆ ಓರ್ವ ಆರೋಗ್ಯ ಸಹಾಯಕರು ಮತ್ತು ಪ್ರತೀ 10,000 ಜನ ಸಂಖ್ಯೆಗೆ ಓರ್ವ ಸಹಾಯಕ ಶುಶ್ರೂಷಣಾ ದಾದಿ ಇರುತ್ತಾರೆ. ಭಾರತ ಸರ್ಕಾರ ಮಾದರಿಯ ಈ ಪ್ರಾಥಮಿಕ ಆರೋಗ್ಯ ಕೇಂದ್ರ ಗಳ ಮೂಲಕ ಸಲ್ಲಿಸುವ ಪ್ರಮುಖ ಮೂಲ ಆರೋಗ್ಯ ಸೇವೆ ಗಳೆಂದರೆ, 1) ಚಿಕಿತ್ಸಾ ಸೇವೆಗಳು, 2) ಮಲೇರಿಯಾ, ಕಾಲರಾ, ಕ್ಷಯ ಮೊದಲಾದ ಸಾಂಕ್ರಾಮಿಕ ರೋಗಗಳ ನಿಯಂತ್ರಣ, 3) ಕುಟುಂಬ ಕಲ್ಯಾಣ, 4) ಪ್ರಸೂತಿ ಹಾಗೂ ಶಿಶು ಆರೋಗ್ಯ ಸೇವೆಗಳು, 5) ಆರೋಗ್ಯ ಶಿಕ್ಷಣ, 6) ಶಾಲಾ ಆರೋಗ್ಯ ಸೇವೆಗಳು, 7) ಪರಿಸರ ನೈರ್ಮಲ್ಯ ಮತ್ತು 8) ಜನನ ಮರಣ ದಾಖಲೆ ಸಂಗ್ರಹ. ಪ್ರಾಥಮಿಕ ಆರೋಗ್ಯ ಕೇಂದ್ರ ಗಳು ತಮ್ಮ ವ್ಯಾಪ್ತಿಯಲ್ಲಿರುವ ಎಲ್ಲ ಪ್ರಾಥಮಿಕ ಆರೋಗ್ಯ ಘಟಕಗಳ ಕಾರ್ಯವನ್ನು ಎಲ್ಲಾ ಕ್ಷೇತ್ರಗಳಲ್ಲೂ, ವಿಶೇಷವಾಗಿ ರಾಷ್ಟ್ರೀಯ ಕಾರ್ಯಕ್ರಮಗಳ ಪರಿಣಾಮಕಾರಿ ನಿರ್ವಹಣೆಯಲ್ಲಿ, ಸಮನ್ವಯಗೊಳಿಸುತ್ತವೆ. ಕರ್ನಾಟಕ ಮಾದರಿ ಪ್ರಾಥಮಿಕ ಆರೋಗ್ಯ ಘಟಕಕ್ಕೆ ಹೊಂದಿಕೊಂಡಿರುವ ಸಿಬ್ಬಂದಿ ಬಹುಮಟ್ಟಿಗೆ ಪ್ರಾಥಮಿಕ ಆರೋಗ್ಯ ಕೇಂದ್ರದಂತೆಯೇ ಇರುತ್ತದೆ.

ಸಾರ್ವಜನಿಕ ಆಸ್ಪತ್ರೆಗಳು : ಎಲ್ಲಾ ಜಿಲ್ಲಾ ಕೇಂದ್ರ ಗಳು, ಉಪವಿಭಾಗ ಕೇಂದ್ರಗಳು ಮತ್ತು ಕೆಲವು ಮುಖ್ಯ ತಾಲೂಕು ಕೇಂದ್ರಗಳಲ್ಲಿ ಸಾರ್ವಜನಿಕ ಆಸ್ಪತ್ರೆಗಳಿವೆ. ಈ ಆಸ್ಪತ್ರೆಗಳಲ್ಲಿ 25ರಿಂದ 400ರವರೆಗೆ ಹಾಸಿಗೆ ಸೌಲಭ್ಯವಿರುತ್ತದೆ. ಜಿಲ್ಲಾ ಆಸ್ಪತ್ರೆಗಳಲ್ಲೂ ಹಾಸಿಗೆ ಸೌಲಭ್ಯ 250ಕ್ಕೂ ಹೆಚ್ಚಾ ಗಿರುತ್ತದೆ. ಈ ಆಸ್ಪತ್ರೆಗಳಲ್ಲಿ ವಿಶೇಷ ತಜ್ಞರ ಸೇವೆಗಳನ್ನು ಒದಗಿಸಲಾಗಿದೆ. ಇಲ್ಲಿ ರೋಗಿಗಳಿಗೆ ಒದಗಿಸುವ ಕನಿಷ್ಠ ವಿಶೇಷ ಸೇವೆಗಳೆಂದರೆ ಔಷಧ, ಶಸ್ತ್ರ ಚಿಕಿತ್ಸೆ, ಸ್ತ್ರೀರೋಗ ಮತ್ತು ಪ್ರಸೂತಿ ಸೇವೆ. ಅನೇಕ ಸಾರ್ವಜನಿಕ ಆಸ್ಪತ್ರೆಗಳು ಮತ್ತು ಎಲ್ಲ ಜಿಲ್ಲಾ ಆಸ್ಪತ್ರೆಗಳಲ್ಲಿ ನೇತ್ರರೋಗ, ಕಿವಿ, ಗಂಟಲು, ಮೂಗಿಗೆ ಸಂಬಂಧಿಸಿದ ರೋಗಗಳು, ಮಕ್ಕಳ ರೋಗಗಳು ಮೊದಲಾದ ರೋಗಗಳ ಚಿಕಿತ್ಸೆಗೂ ವಿಶೇಷ ಸೇವಾ ವ್ಯವಸ್ಥೆ ಯಿದೆ. ಜೊತೆಗೆ ಕ್ಷ-ಕಿರಣ ಮತ್ತು ಪ್ರಯೋಗಾಲಯ ಸೌಲಭ್ಯ ಗಳೂ ಇರುತ್ತವೆ. ರಾಜ್ಯದಲ್ಲಿರುವ 12 ವೈದ್ಯಕೀಯ ಕಾಲೇಜು ಗಳಿಗೆ ಹೊಂದಿಕೊಂಡಂತೆ 22 ಬೋಧಕ ಆಸ್ಪತ್ರೆಗಳಿವೆ. ಎಂ. ಎಸ್. ರಾಮಯ್ಯ ವೈದ್ಯಕೀಯ ಕಾಲೇಜು, ಮಲ್ಲೇಶ್ವರದ ಕೆ. ಸಿ. ಜನರಲ್ ಆಸ್ಪತ್ರೆಗೆ ಹೊಂದಿಕೊಂಡಿದೆ. ಇವುಗಳಲ್ಲಿ 265 ಹಾಸಿಗೆ ಸೌಲಭ್ಯವಿರುವ ಬೆಂಗಳೂರಿನ ಮಿಂಟೋ ಕಣ್ಣಾಸ್ಪತ್ರೆ, ತಲಾ 470 ಹಾಸಿಗೆ ಸೌಲಭ್ಯವಿರುವ ಬೆಂಗಳೂರಿನ ಎಸ್. ಡಿ. ಎಸ್. ಕ್ಷಯದ ಆಸ್ಪತ್ರೆ ಮತ್ತು ಮೈಸೂರಿನ ಪಿ. ಕೆ. ಕ್ಷಯದ ಆಸ್ಪತ್ರೆ, 283 ಹಾಸಿಗೆ ಸೌಲಭ್ಯವಿರುವ ಬಳ್ಳಾರಿಯ ವೆಲ್ಲೆಸ್ಲಿ ಕ್ಷಯದ ಆಸ್ಪತ್ರೆ, 375 ಹಾಸಿಗೆ ಸೌಲಭ್ಯವಿರುವ ಧಾರವಾಡದ ಮಾನಸಿಕ ಆರೋಗ್ಯದ ಆಸ್ಪತ್ರೆ—ಮೊದಲಾದ ವಿಶೇಷ ಚಿಕಿತ್ಸಾ ಸೌಲಭ್ಯದ ಸಂಸ್ಥೆಗಳೂ ಸೇರಿವೆ. ಇತರ ಎಲ್ಲ ಆಸ್ಪತ್ರೆಗಳೂ ಸ್ತ್ರೀರೋಗ, ಪ್ರಸೂತಿ ಸೇವೆ ಮತ್ತು ಮಕ್ಕಳ ರೋಗ ಚಿಕಿತ್ಸೆಗಳೂ ಸೇರಿದಂತೆ ಎಲ್ಲ ಔಷಧ ವಿಭಾಗಗಳಲ್ಲೂ ವಿಶೇಷ ತಜ್ಞರ ಸೇವೆಯನ್ನು ಒದಗಿಸುತ್ತವೆ. ವೈದ್ಯಕೀಯ ಕಾಲೇಜುಗಳಿಗೆ ಹೊಂದಿಕೊಂಡ ಆಸ್ಪತ್ರೆಗಳ ಹಾಸಿಗೆ ಸೌಲಭ್ಯದ ಪ್ರಮಾಣದಲ್ಲಿ ಕಲ್ಬುರ್ಗಿಯ ಎಂ. ಆರ್. ವೈದ್ಯಕೀಯ ಕಾಲೇಜು ಆಸ್ಪತ್ರೆಯಲ್ಲಿರುವ 600 ಹಾಸಿಗೆಗಳ ಕನಿಷ್ಠ ಪ್ರಮಾಣ ದಿಂದ ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಹೊಂದಿಕೊಂಡಿರುವ ಆಸ್ಪತ್ರೆಯ 2,705 ಹಾಸಿಗೆಗಳ ಗರಿಷ್ಠ ಪ್ರಮಾಣದವರೆಗೆ ವ್ಯತ್ಯಾಸವಿದೆ. ಈ ಆಸ್ಪತ್ರೆಗಳು ಪದವಿಪೂರ್ವ ಮತ್ತು ಪದವಿ ತರಗತಿಗಳ ವಿದ್ಯಾರ್ಥಿಗಳಿಗೆ ಚಿಕಿತ್ಸಾ ಸೌಲಭ್ಯಗಳನ್ನು ಒದಗಿ ಸುತ್ತವೆ. ಜಿಲ್ಲಾ ಮತ್ತು ಇತರ ಆಸ್ಪತ್ರೆಗಳಿಗೆ ಈ ಬೋಧನ ಆಸ್ಪತ್ರೆಗಳು ಕ್ಲಿಷ್ಟರೋಗಿಗಳನ್ನು ಮೇಲು ಪರಿಶೀಲನೆಗೆ ಕಳುಹಿ ಸುವ ('ರೆಫರಲ್') ಕೇಂದ್ರಗಳಾಗಿವೆ. ಈ ಕೇಂದ್ರಗಳಲ್ಲಿ ಹೃದ್ರೋಗ ಚಿಕಿತ್ಸೆ ಮತ್ತು ಮೂತ್ರರೋಗ ಸಂಬಂಧ ಚಿಕಿತ್ಸೆಗಳ ಅತಿ ವಿಶೇಷ ತಜ್ಞರಸೇವೆಯೂ ದೊರೆಯುತ್ತದೆ. ಜೊತೆಗೆ ಈ ಕೇಂದ್ರಗಳು ಸಂಶೋಧನಾ ಕಾರ್ಯವನ್ನೂ ನಡೆಸುತ್ತವಲ್ಲದೆ ಅವು ಇರುವ ಜಿಲ್ಲೆಗಳಲ್ಲಿ ಸಮುದಾಯ ಆರೋಗ್ಯ ರಕ್ಷಣೆ ಒದಗಿಸುವ ಕಾರ್ಯದಲ್ಲೂ ಪಾಲುಗೊಳ್ಳುತ್ತವೆ. ಬೆಂಗಳೂರಿ ನಲ್ಲಿರುವ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನಗಳ ರಾಷ್ಟ್ರೀಯ ಸಂಸ್ಥೆಯು ಮಾನಸಿಕ ರೋಗಗಳು ಮತ್ತು ನರ ರೋಗ ಶಸ್ತ್ರ ವೈದ್ಯ ಚಿಕಿತ್ಸೆಗಳ ಸೌಲಭ್ಯ ಒದಗಿಸುತ್ತದೆ. ಬೆಂಗಳೂರಿನಲ್ಲಿರುವ ಕಿದ್ವಾಯಿ ಸ್ಮಾರಕ ಕ್ಯಾನ್ಸರ್ ಸಂಸ್ಥೆ ಮತ್ತು ಹುಬ್ಬಳ್ಳಿಯಲ್ಲಿರುವ ಮಹದೇವಪ್ಪ ಕ್ಯಾನ್ಸರ್ ಆಸ್ಪತ್ರೆ ಗಳು ಕ್ಯಾನ್ಸರ್ ಚಿಕಿತ್ಸೆಯಲ್ಲಿ ವಿಶೇಷ ಸೇವೆಯನ್ನು ಒದಗಿಸು ತ್ತವೆ. ಮೈಸೂರಿನಲ್ಲಿರುವ ಅಖಿಲ ಭಾರತ ವಾಕ್‌ಶ್ರವಣ ಸಂಸ್ಥೆಯಲ್ಲಿ ವಾಕ್ ಚಿಕಿತ್ಸೆ ಮತ್ತು ಪುನರ್ನಿವೇಶಗಳ ವ್ಯವಸ್ಥೆ ಯಿದೆ.

ರಾಷ್ಟ್ರೀಯ ಕ್ಷಯರೋಗ ಸಂಸ್ಥೆ : 1959ರಲ್ಲಿ ಆರಂಭ ವಾದ ಈ ಸಂಸ್ಥೆಗೆ ಕಾರಣರಾದವರು ಕ್ಷಯರೋಗ ಚಿಕಿತ್ಸಾ

ಕ್ಷೇತ್ರದಲ್ಲಿ ಆರಂಭದ ಕಾರ್ಯಕರ್ತರೂ, ಕೇಂದ್ರ ಸರ್ಕಾರದ ಅಂದಿನ ಕ್ಷಯರೋಗ ಸಲಹೆಗಾರರೂ ಆಗಿದ್ದ ಡಾ|| ಪಿ. ವಿ. ಬೆಂಜಮಿನ್ ಅವರು. ಈ ಸಂಸ್ಥೆ 1960ರಲ್ಲಿ ಉದ್ಘಾಟಿತ ವಾಯಿತು. ಕ್ಷಯರೋಗದ ವಿರುದ್ಧ ಪರಿಣಾಮಕಾರಿಯಾದ ಚುಚ್ಚುಮದ್ದು ಹಾಕುವ ಅನುಭವಿ ಸಿಬ್ಬಂದಿಗಳ ಕೊರತೆ ಯಿಂದಾಗಿ ಭಾರಿ ಪ್ರಮಾಣದ ಕ್ಷಯರೋಗಪೀಡಿತ ರೋಗಿಗಳಿಗೆ ಚಿಕಿತ್ಸೆ ನೀಡುವುದು ಯೋಜಕರಿಗೆ ಒಂದು ಸಮಸ್ಯೆಯೇ ಆಯಿತು. ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯು ನಡೆಸಿದ ಒಂದು ಅಧ್ಯಯನದಿಂದ ಕ್ಷಯರೋಗಿಗಳ ಚಿಕಿತ್ಸೆಗಾಗಿ ಆಸ್ಪತ್ರೆ ಗಳಲ್ಲಿ ಮಾಡುತ್ತಿದ್ದ ಭಾರಿ ಪ್ರಮಾಣದ ವೆಚ್ಚ ಅನೇಕ ಪ್ರಕರಣ ಗಳಲ್ಲಿ ವಾಸ್ತವವಾಗಿ ಅಗತ್ಯವಿಲ್ಲವೆಂಬುದು ಕಂಡುಬಂದಿತು. ಕ್ಷಯರೋಗಿಗಳನ್ನು ಆಸ್ಪತ್ರೆಯಷ್ಟೇ ಪರಿಣಾಮಕಾರಿಯಾಗಿ ಮನೆಗಳಲ್ಲೇ ಗುಣಪಡಿಸಬಹುದೆಂಬುದು ಅದರಿಂದ ತಿಳಿದು ಬಂದಿತು. ಈ ಎರಡು ಪ್ರಮುಖ ಅಗತ್ಯಗಳನ್ನು ಪೂರೈಸಲು ಬೆಂಗಳೂರಿನಲ್ಲಿ ರಾಷ್ಟ್ರೀಯ ಕ್ಷಯರೋಗ ಸಂಸ್ಥೆಯು ಸ್ಥಾಪಿತ ವಾಯಿತು.

ಈ ಸಂಸ್ಥೆಯ ಪ್ರಮುಖ ಸಾಧನಗಳೆಂದರೆ : 1) 1962 ರಲ್ಲಿ ಜಿಲ್ಲಾ ಕ್ಷಯರೋಗ (ಚಿಕಿತ್ಸಾ) ಕಾರ್ಯಕ್ರಮವನ್ನು ರೂಪಿಸಿದ್ದು; ಇದು ರಾಷ್ಟ್ರೀಯ ಕ್ಷಯರೋಗ (ಚಿಕಿತ್ಸಾ) ಕಾರ್ಯಕ್ರಮದ ಕಾರ್ಯಘಟಕವಾಗಿತ್ತು. 2) ದೇಶದ ನಾನಾ ಕ್ಷಯರೋಗ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸತಕ್ಕ ಮತ್ತು ರಾಜ್ಯದಲ್ಲಿ ಕ್ಷಯರೋಗ ನಿರೋಧ ಕಾರ್ಯದಲ್ಲಿ ನೇರವಾಗಿ ಸಂಬಂಧಿಸಿದ ಭಾರೀ ಪ್ರಮಾಣದ ಹಿರಿಯ ಸಿಬ್ಬಂದಿಗೆ ತರಬೇತಿ ನೀಡಿದುದು, ಮತ್ತು 3) ಕ್ಷಯರೋಗ ಮತ್ತು ಅದಕ್ಕೆ ಸಂಬಂಧಿ ಸಿದ ಅಂಶಗಳ ಬಗ್ಗೆ ಸಂಶೋಧನೆ ನಡೆಸಿದುದು. ಸಂಸ್ಥೆಯ ವತಿಯಿಂದ ಕೈಗೊಂಡ ಕೆಲವು ಅಧ್ಯಯನಗಳಿಗಾಗಿ ಆರಿಸಿಕೊಂಡ ಗ್ರಾಮಗಳು ಅಥವಾ ಪಟ್ಟಣಗಳ ಇಡೀ ಜನಸಂಖ್ಯೆಯನ್ನು ವ್ಯವಸ್ಥಿತವಾಗಿ ಪರೀಕ್ಷಿಸಲಾಯಿತು ಮತ್ತು ಉಳಿದ ಅಧ್ಯಯನ ಗಳು ಕ್ಷಯರೋಗ ಚಿಕಿತ್ಸಾಲಯಗಳಿಗೇ ಸೀಮಿತವಾಗಿದ್ದುವು.

ಕಿದ್ವಾಯಿ ಸ್ಮಾರಕ ಗಂತಿ ಸಂಸ್ಥೆ : 1957ರಷ್ಟು ಹಿಂದೆಯೇ ಖಾಸಗಿ ಪ್ರಯತ್ನವಾಗಿ 50 ಹಾಸಿಗೆಗಳ ಒಂದು (ಕ್ಯಾನ್ಸರ್) ಆಸ್ಪತ್ರೆಯನ್ನು ಸ್ಥಾಪಿಸುವ ಬಗ್ಗೆ ನಗರದ ಹಿರಿಯರು ವಿಚಾರ ಮಾಡಿದ್ದರು. ಈ ಯೋಜನೆಯನ್ನು ಕರ್ನಾಟಕ ಸರ್ಕಾರವು ವಹಿಸಿಕೊಂಡಾಗ ಅದು ಮೂರ್ತಸ್ವರೂಪ ತಾಳಿ 1973ರಲ್ಲಿ ಕಿದ್ವಾಯಿ ಸ್ಮಾರಕ ಗಂತಿ ಪರಿಹಾರ, ಸಂಶೋಧನೆ ಮತ್ತು ತರಬೇತಿ ಸಂಸ್ಥೆಯು ಆರಂಭವಾಯಿತು. ಆಗ ಕೇಂದ್ರ ಸಚಿವರಾಗಿದ್ದು ಈ ಸಂಸ್ಥೆಯ ಸ್ಥಾಪನೆಗೆ ಕಾರಣ ರಾದ ರಫಿ ಅಹ್ಮದ್ ಕಿದ್ವಾಯಿ ಅವರ ಹೆಸರನ್ನೇ ಸಂಸ್ಥೆಗೆ ಇಡಲಾಯಿತು. 50 ಹಾಸಿಗೆಗಳಿಂದ ಆರಂಭವಾದ ಈ ಸಂಸ್ಥೆ ಯಲ್ಲಿ ಈಗ 190 ಹಾಸಿಗೆಗಳಿದ್ದು 'ರೆಫರಲ್' ಸಂಸ್ಥೆಯಾಗಿ ಸೇವೆ ಒದಗಿಸುತ್ತಿದೆ. ಈ ಸಂಸ್ಥೆಯು 1980ರಲ್ಲಿ ಸ್ವಾಯತ್ತ ಸಂಸ್ಥೆಯಾಯಿತು. ಇಲ್ಲಿರುವ ಸೌಲಭ್ಯಗಳು ಮತ್ತು ಇಲ್ಲಿ ನಡೆದಿರುವ ಸಾಧನೆಗಳನ್ನು ಪರಿಗಣಿಸಿ ಈ ಸಂಸ್ಥೆಗೆ ಭಾರತ ಸರ್ಕಾರವು ಗಂತಿ ಸಂಶೋಧನೆ ಮತ್ತು ಚಿಕಿತ್ಸೆಯ ಪ್ರಾದೇಶಿಕ ಕೇಂದ್ರದ ಸ್ಥಾನವನ್ನು ನೀಡಿದೆ. ಈಗ ಭಾರತದಲ್ಲಿರುವ ಇಂತಹ ಒಂಬತ್ತು ಪ್ರಾದೇಶಿಕ ಕೇಂದ್ರಗಳಲ್ಲಿ ಇದೂ ಒಂದಾಗಿದೆ.

ಇಲ್ಲಿ ಚಿಕಿತ್ಸೆ ಪಡೆಯಲು ಕರ್ನಾಟಕದ ಗ್ರಾಮಾಂತರ ಹಾಗೂ ನಗರ ಪ್ರದೇಶದ ರೋಗಿಗಳಷ್ಟೇ ಅಲ್ಲದೆ ಆಂಧ್ರ ಪ್ರದೇಶ, ತಮಿಳುನಾಡು ಮತ್ತು ಕೇರಳದಂತಹ ನೆರೆಯ ರಾಜ್ಯ ಗಳಿಂದಲೂ ರೋಗಿಗಳು ಬರುತ್ತಾರೆ. ಇಲ್ಲಿ ರೋಗಿಗಳಿಗಷ್ಟೇ ಅಲ್ಲದೆ ಸಂಶೋಧಕರಿಗೂ ಅನುಕೂಲವಾಗುವಂತಹ ಸುವ್ಯವಸ್ಥಿತ ವಾದ ವೈದ್ಯಕೀಯ ದಾಖಲೆಗಳ ಘಟಕವೊಂದು ಕೆಲಸ ಮಾಡು ತ್ತಿದೆ. ಸಂಸ್ಥೆಯು 'ವೆಲ್ ಮೆನ್' ಮತ್ತು 'ವೆಲ್ ವಿಮೆನ್' ಗಳಿಗಾಗಿ ಚಿಕಿತ್ಸಾಲಯಗಳನ್ನು ನಡೆಸುತ್ತಿದೆ. ಸಂಪೂರ್ಣ ಆರೋಗ್ಯ ಪರೀಕ್ಷೆಗಾಗಿ ಸುಮಾರು 20 ಜನಗಳನ್ನು ಮುಂಗಡ ವಾಗಿ ದಾಖಲೆ ಮಾಡಿಕೊಳ್ಳಲಾಗುತ್ತದೆ. ಕರ್ನಾಟಕದ ಕ್ಯಾನ್ಸರ್ ಸೊಸೈಟಿಯ ಸಹಯೋಗದಿಂದ ಕ್ಯಾನ್ಸರ್ ಪತ್ತೆ ಶಿಬಿರಗಳನ್ನು ನಡೆಸಲಾಗುತ್ತಿದ್ದು, ಪ್ರತೀ ವರ್ಷ ಸುಮಾರು 5,000 ಜನ ಇದರ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ. ವಯಸ್ಸಾದ ತೀವ್ರ ಕ್ಯಾನ್ಸರ್ ರೋಗಿಗಳಿಗಾಗಿ 'ಹಾಸ್‌ಪೈಸ್' ಯೋಜನೆಯನ್ನು ಆರಂಭಿಸಲಾಗಿದೆ. ಈ ಕಾರ್ಯಕ್ರಮದ ಉದ್ದೇಶ ರೋಗಿಯ ಜೀವನದ ಗುಣಮಟ್ಟವನ್ನು ಕಾಪಾಡಿ, ರೋಗಿಯು ತನ್ನ ಸಾಮರ್ಥ್ಯದ ಗರಿಷ್ಠ ಮಟ್ಟದಲ್ಲಿ ಕೆಲಸ ನಿರ್ವಹಿಸುವಂತೆ ಮಾಡುವುದಾಗಿದೆ. ಸುಮಾರು 100 ರೋಗಿ ಗಳಿಗೆ ಸ್ಥಳಾವಕಾಶ ಕಲ್ಪಿಸಿ ಕೊಡುವ ಧರ್ಮಶಾಲೆಯ ನಿರ್ಮಾಣ ಯೋಜನೆಯೊಂದನ್ನು 25 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ. ಸಂಸ್ಥೆಯ ಎಲ್ಲ ವಿಶೇಷ ವಿಭಾಗಗಳಲ್ಲಿ ಸುಮಾರು 42 ಸಂಶೋಧನಾ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳ ಲಾಗುತ್ತಿದೆ. ಬೆಂಗಳೂರು ವೈದ್ಯಕೀಯ ಕಾಲೇಜಿನ ಗಂತಿ ಶಾಸ್ತ್ರದ ಪದವಿಪೂರ್ವ ಮತ್ತು ಪದವಿ ತರಗತಿಯ ವಿದ್ಯಾರ್ಥಿ ಗಳಿಗೆ ತರಬೇತಿ ಸಂಸ್ಥೆಯಾಗಿ ಈ ಸಂಸ್ಥೆಗೆ ಮನ್ನಣೆ ನೀಡಲಾಗಿದೆ. ಈ ಸಂಸ್ಥೆಯ ಒಳರೋಗಿಗಳು ಮತ್ತು ಹೊರರೋಗಿಗಳ ಸಂಖ್ಯೆ 1980ರಲ್ಲಿ ಅನುಕ್ರಮವಾಗಿ 2,128 ಮತ್ತು 1,574 ಹಾಗೂ 1981ರಲ್ಲಿ 2,317 ಮತ್ತು 1,761 ಇತ್ತು.

ಮಾನಸಿಕ ರೋಗದ ಆಸ್ಪತ್ರೆ : ಬೆಂಗಳೂರಿನಲ್ಲಿ ಸ್ಥಾಪಿತ ವಾದ ಮಾನಸಿಕ ರೋಗದ ಆಸ್ಪತ್ರೆ ಈಗ 'ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ—ನಿಮ್ಹಾನ್ಸ್' ಆಗಿದೆ.

19ನೇಯ ಶತಮಾನದ ಕೊನೆಯ ಭಾಗದಲ್ಲಿ ಆರಂಭವಾದ ಈ ಸಂಸ್ಥೆ ಮೊದಲು 'ಲ್ಯೂನಾಟಿಕ್ ಅಸೈಲಮ್' ಎಂದು ಹೆಸರಾಗಿತ್ತು. 1925ರಲ್ಲಿ ಆ ಹೆಸರನ್ನು ಬದಲಾಯಿಸಿ 'ಮಾನಸಿಕ ಆರೋಗ್ಯದ ಆಸ್ಪತ್ರೆ' ಎಂದು ಕರೆಯಲಾಯಿತು. ಆಸ್ಪತ್ರೆಯ ಮೊದಲ ಮೇಲ್ವಿಚಾರಣಾಧಿಕಾರಿಯಾಗಿದ್ದ ಡಾ॥ ನಾರ್ಚಾ ಅವರು 1922ರಿಂದ 1935ರವರೆಗೆ ಸೇವೆ ಸಲ್ಲಿಸಿಸಿದರು. ಕೃಷ್ಣರಾಜ ಒಡೆಯರ್ ಅವರ ದೂರದೃಷ್ಟಿ ಮತ್ತು ಸಮರ್ಥ ದಿವಾನ್ ಮಿರ್ಜಾ ಎಂ. ಇಸ್ಮಾಯಿಲ್ ಅವರ ತೀವ್ರ ಆಸಕ್ತಿಯ ಫಲವಾಗಿ ಸರ್ಕಾರವು 1936ರಲ್ಲಿ ಆಸ್ಪತ್ರೆಗೆ ಕಟ್ಟಡವನ್ನು ಮಂಜೂರು ಮಾಡಿತು. 1937ರ ನವೆಂಬರ್ ತಿಂಗಳಲ್ಲಿ ಆಸ್ಪತ್ರೆಯು ಈಗಿರುವ ಸ್ಥಳಕ್ಕೆ ಬದಲಾವಣೆಗೊಂಡಿತು. ಆಸ್ಪತ್ರೆಯನ್ನು ಆ ಕಾಲದ ಮಾನಸಿಕ ರೋಗದ ಆಸ್ಪತ್ರೆಗಳ ಅತ್ಯಾಧುನಿಕ ವಿನ್ಯಾಸವಾದ 'ವಿಲ್ಲಾ' ವಿಧಾನದ ಮೇಲೆ ಯೋಜಿಸಲಾಗಿದೆ. ಅಗ 200 ಪುರುಷರು ಮತ್ತು 100 ಮಹಿಳೆಯರು —ಹೀಗೆ ಒಟ್ಟು 300 ರೋಗಿಗಳಿಗೆ ಸ್ಥಳಾವಕಾಶ ಕಲ್ಪಿಸಲಾಗಿತ್ತು. ಆಸ್ಪತ್ರೆಯ ಒಂದು ವಿಭಾಗದಲ್ಲಿ ಇತರ ಸೌಲಭ್ಯಗಳ ಜೊತೆಗೆ ಶಸ್ತ್ರಚಿಕಿತ್ಸಾ ವಿಭಾಗವನ್ನು ಯೋಜಿಸಲಾಗಿತ್ತು. ಆರಂಭದಲ್ಲಿ ದೈನಂದಿನ ವೈದ್ಯಕೀಯ ರಕ್ಷಣೆಯ ಜೊತೆಗೆ ಕೆಳಗೆ ಕಂಡ ಚಿಕಿತ್ಸಾ ಸೌಲಭ್ಯಗಳನ್ನೂ ಈ ಆಸ್ಪತ್ರೆ ಪಡೆದಿತ್ತು. 1) ವೃತ್ತಿ ಚಿಕಿತ್ಸೆ, 2) ಮನರಂಜನಾ ಚಟುವಟಿಕೆಗಳು, 3) ಮನಶ್ಶಾಸ್ತ್ರ ಪ್ರಯೋಗಾಲಯ ಮತ್ತು 4) ಸುಸಜ್ಜಿತ ಪ್ರಯೋಗಾಲಯ ಹಾಗೂ 5) ವೈದ್ಯಕೀಯ ಗ್ರಂಥ ಭಂಡಾರ. ಈ ಆಸ್ಪತ್ರೆಯು ಎಂ.ಬಿ.ಬಿ.ಎಸ್., ಮನಶ್ಶಾಸ್ತ್ರದ ಬಿ.ಎ. (ಆನರ್ಸ್), ಮತ್ತು ಎಲ್.ಎಂ.ಪಿ. ವಿದ್ಯಾರ್ಥಿಗಳಿಗೆ ಬೋಧನಾ ಸಂಸ್ಥೆಯಾಗಿ ಅಂಗೀಕರಿಸಲ್ಪಟ್ಟಿತು. ಹಾಗೆಯೇ ವೈದ್ಯಕೀಯ ಉದ್ಯೋಗಿಗಳಿಗೆ ಸ್ನಾತಕೋತ್ತರ ತರಬೇತಿಯ ಉದ್ದೇಶಕ್ಕೂ ಈ ಆಸ್ಪತ್ರೆ ಅಂಗೀಕೃತವಾಯಿತು.

ಇಡೀ ದೇಶದಲ್ಲಿ ಮಾನಸಿಕ ರೋಗಿಯ ಮೇಲೆ ಪ್ರಪ್ರಥಮ ಶಸ್ತ್ರ ಚಿಕಿತ್ಸೆ ಈ ಆಸ್ಪತ್ರೆಯಲ್ಲಿ 1942ರಲ್ಲಿ ನಡೆಯಿತು. ಶಸ್ತ್ರ ಚಿಕಿತ್ಸೆ ನಡೆಸಿದವರು ಡಾ॥ ಎಂ. ವಿ. ಗೋವಿಂದಸ್ವಾಮಿ ಮತ್ತು ಡಾ॥ ಬಾಲಕೃಷ್ಣರಾವ್. ಭಾರತದಲ್ಲಿ ಮನೋಶಾಸ್ತ್ರ ವೈದ್ಯ ಆರಂಭವಾದ ಮೊದಲ ಕೇಂದ್ರವಿದು. ಆರಂಭದಿಂದಲೇ ದೀರ್ಘ ಮನೋರೋಗಿಗಳಿಗೆ ಇಲ್ಲಿ ಪ್ರತ್ಯೇಕ ವಿಭಾಗವೊಂದನ್ನು ಕಲ್ಪಿಸಿದ್ದು ಈ ರೋಗಿಗಳು ಔದ್ಯೋಗಿಕ ಚಿಕಿತ್ಸೆ ಮತ್ತು ತೋಟಗಾರಿಕೆಯಂತಹ ನಾನಾ ವಿಭಾಗಗಳಲ್ಲಿ ಕೆಲಸ ಮಾಡುವಂತೆ ವ್ಯವಸ್ಥೆ ಮಾಡಲಾಗಿತ್ತು. ಸರ್ ಜೋಸೆಫ್ ಬೋರ್ ಅವರ ಅಧ್ಯಕ್ಷತೆಯ ಆರೋಗ್ಯ ಸಮೀಕ್ಷೆ ಮತ್ತು ಅಭಿವೃದ್ಧಿ ಸಮಿತಿಯು 1946ರಲ್ಲಿ ಸಲ್ಲಿಸಿದ ವರದಿಯ ಆಧಾರದ ಮೇಲೆ ಮಾನಸಿಕ ಆರೋಗ್ಯ ಕ್ಷೇತ್ರದಲ್ಲಿ ಸಾಕಷ್ಟು ಸಂಖ್ಯೆಯ ವೈದ್ಯಕೀಯ ಮತ್ತು ಸಹಾಯಕ ಸಿಬ್ಬಂದಿಗೆ ತರಬೇತಿ ನೀಡುವ ಅಗತ್ಯ ಬಹಳವಿದೆಯೆಂಬುದನ್ನು ಭಾರತ ಸರ್ಕಾರ ಮನಗಂಡಿತು. ಮಾನಸಿಕ ಆರೋಗ್ಯ ಕಾರ್ಯಕ್ಕೆ ನೇಮಕವಾದ ಮತ್ತು ನೇಮಕಗೊಳ್ಳಬಹುದಾದ ಎಲ್ಲ ವೈದ್ಯಕೀಯ ಸಿಬ್ಬಂದಿಯವರೂ ಮಾನಸಿಕ ಔಷಧ ಶಾಸ್ತ್ರದ ಅಧಿಕೃತ ಡಿಪ್ಲೋಮಾ ಹೊಂದಿರಬೇಕೆಂದು ಸಮಿತಿಯು ಶಿಫಾರಸು ಮಾಡಿತು. ತರಬೇತಿಗೊಳ್ಳಬೇಕಾದ ಇತರ ಕಾರ್ಯಕರ್ತರೆಂದರೆ ಮನಶ್ಶಾಸ್ತ್ರಜ್ಞರು, ಮನೋರೋಗದ ಶುಶ್ರೂಷಕರು, ಮನಶ್ಶಾಸ್ತ್ರದ ಸಾಮಾಜಿಕ ಕಾರ್ಯಕರ್ತರು, ಮತ್ತಿತರರು. ಸಮಿತಿಯ ಅಭಿಪ್ರಾಯದಂತೆ ಮಾನಸಿಕ ಆರೋಗ್ಯ ಸೇವೆಗಳ ವಿಸ್ತರಣೆಯ ಜೊತೆಯಲ್ಲೇ ತೀವ್ರ ತರಬೇತಿ ಕಾರ್ಯಕ್ರಮವನ್ನು ಕೈಗೊಳ್ಳಬೇಕಾಯಿತು.

ಸಿಬ್ಬಂದಿಯ ತರಬೇತಿಗೆ ಅಗತ್ಯವಾದ ಸೌಲಭ್ಯಗಳನ್ನು ಒದಗಿಸಲು ಭಾರತ ಸರ್ಕಾರ ಆಸಕ್ತಿಯಿಂದಿತ್ತು. ಅಂತೆಯೇ 1938 ರಿಂದ ಪದವಿ-ಪೂರ್ವ ಮತ್ತು ಪದವಿ ವಿದ್ಯಾರ್ಥಿಗಳ ಮನಶ್ಶಾಸ್ತ್ರದ ಬೋಧನಾ ಕ್ಷೇತ್ರದಲ್ಲಿ ಕೆಲವೊಂದು ಪದ್ಧತಿಗಳನ್ನು ಅಭಿವೃದ್ಧಿಗೊಳಿಸಿದ್ದ ಬೆಂಗಳೂರಿನ ರಾಜ್ಯ ಸರ್ಕಾರಿ ಮಾನಸಿಕ ಆಸ್ಪತ್ರೆಯನ್ನು ಭಾರತ ಸರ್ಕಾರದವರು ತರಬೇತಿ ಕೇಂದ್ರವನ್ನಾಗಿ ಆರಿಸಿದರು. 1954ರಲ್ಲಿ ಆಗ ಅಸ್ತಿತ್ವದಲ್ಲಿದ್ದ ಮಾನಸಿಕ ಆಸ್ಪತ್ರೆಯ ಸಹಯೋಗದೊಂದಿಗೆ ಭಾರತ ಸರ್ಕಾರವು ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆಗೆ ಮಂಜೂರಾತಿ ನೀಡಿತು. ಇದು ಸ್ವಾತಂತ್ರ್ಯಾನಂತರ ಸ್ಥಾಪಿತವಾದ ಮೊಟ್ಟಮೊದಲ ಸಂಸ್ಥೆಯಾಗಿತ್ತು. ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ನೋಡಿಕೊಳ್ಳಲು ಭಾರತ ಸರ್ಕಾರ, ರಾಜ್ಯ ಸರ್ಕಾರ ಮತ್ತು ಮೈಸೂರು ವಿಶ್ವವಿದ್ಯಾಲಯದ ಪ್ರತಿನಿಧಿಗಳುಳ್ಳ ಒಂದು ಆಡಳಿತ ಸಮಿತಿಯನ್ನು ರಚಿಸಲಾಯಿತು. 1955ರ ಜನವರಿಯಿಂದ ಮಾನಸಿಕ ಔಷಧ ಶಾಸ್ತ್ರದ ಡಿಪ್ಲೋಮಾ ಮತ್ತು ವೈದ್ಯಕೀಯ ಮನಶ್ಶಾಸ್ತ್ರದ ಡಿಪ್ಲೋಮಾ ಎಂಬ ಎರಡು ಸ್ನಾತಕೋತ್ತರ ಡಿಪ್ಲೋಮಾ ಶಿಕ್ಷಣಗಳನ್ನು ಆರಂಭಿಸಲಾಯಿತು. ಸಂಸ್ಥೆಯು ಮೈಸೂರು ವಿಶ್ವವಿದ್ಯಾಲಯದ ಅಂಗಸಂಸ್ಥೆಯಾಯಿತು. 1956ರ ಜನವರಿಯಲ್ಲಿ 20 ವಿದ್ಯಾರ್ಥಿಗಳೊಂದಿಗೆ ಮಾನಸಿಕ ಶುಶ್ರೂಷೆಯಲ್ಲಿ ಸ್ನಾತಕೋತ್ತರ ಸರ್ಟಿಫಿಕೇಟ್ ಶಿಕ್ಷಣವನ್ನು ಆರಂಭಿಸಲಾಯಿತು. ಸಂಸ್ಥೆಯು ಅಸ್ತಿತ್ವದಲ್ಲಿದ್ದ ಮಾನಸಿಕ ಆಸ್ಪತ್ರೆಗಳ ಸುಧಾರಣೆ ಮತ್ತು ಹೊಸ ಆಸ್ಪತ್ರೆಗಳ ಸ್ಥಾಪನೆ ಇವುಗಳ ಬಗ್ಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಸಲಹೆ ನೀಡಬೇಕಾಯಿತು. ಈ ಸಂಸ್ಥೆಯಲ್ಲಿ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯ ಜೀವ ರಸಾಯನಶಾಸ್ತ್ರ, ಜೀವಭೌತಶಾಸ್ತ್ರ, ನರವೈದ್ಯಶಾಸ್ತ್ರ ಮತ್ತು ಮನಶ್ಶಾಸ್ತ್ರಗಳ ಇಲಾಖೆಗಳಲ್ಲಿ ಆಗಿಂದಾಗ ನಾನಾ ಸಂಶೋಧನಾ ಯೋಜನೆಗಳನ್ನು ಕೈಗೊಳ್ಳಲಾಗಿದೆ. ಸಂಸ್ಥೆಯ ಆರಂಭದ ಹಂತಗಳಲ್ಲಿ ವಿಶ್ವ ಆರೋಗ್ಯ ಸಂಸ್ಥೆಯೂ ಮನಶ್ಶಾಸ್ತ್ರ, ವಿದ್ಯುತ್ ಭೌತಶಾಸ್ತ್ರ, ಮಾನಸಿಕ ಶುಶ್ರೂಷಣೆ ಮತ್ತು ನರವೈದ್ಯದ ಬಗ್ಗೆ ತಜ್ಞ ಸಮಾಲೋಚಕರನ್ನು

ಒದಗಿಸಿತ್ತು. ಮೊದಲು ಆಸ್ಪತ್ರೆಯಲ್ಲೇ ನೆಲೆಗೊಂಡ ಸಂಸ್ಥೆಯನ್ನು 1964ರಲ್ಲಿ ಸ್ವಂತ ಕಟ್ಟಡಕ್ಕೆ ವರ್ಗಾಯಿಸಲಾಯಿತು. 1966ರಲ್ಲಿ ಸಂಸ್ಥೆಯು ಮನಶ್ಶಾಸ್ತ್ರ, ನರವೈದ್ಯ, ನರಶಸ್ತ್ರ ಚಿಕಿತ್ಸೆ ಮತ್ತು ಮನಶ್ಶಾಸ್ತ್ರದ ಸಾಮಾಜಿಕ ಕಾರ್ಯದಲ್ಲಿ ಸ್ನಾತಕೋತ್ತರ ಪದವಿ ತರಗತಿಗಳನ್ನು ಆರಂಭಿಸಿತು. ಸಂಸ್ಥೆಗೆ ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳಿಂದ ಪೂರ್ಣ ಆರ್ಥಿಕ ನೆರವು ದೊರೆಯುತ್ತಿದೆ. 1974ರಲ್ಲಿ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ ಸ್ಥಾಪಿತವಾಗಿ ಸಂಘಗಳ ನೋಂದಾವಣೆ ಶಾಸನದ ಪ್ರಕಾರ ಈ ಸಂಸ್ಥೆಯು ನೋಂದಾಯಿಸಲ್ಪಟ್ಟಿತು. ಆಗ ಆಡಳಿತ ವ್ಯವಸ್ಥೆಯಲ್ಲಿಯೂ ಬದಲಾವಣೆಯಾಯಿತು. ಈಗ ಒಂದು ಸ್ವಾಯತ್ತ ಸಂಸ್ಥೆಯಾಗಿ ಕೆಲಸ ಮಾಡುತ್ತಿರುವ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಯು (ನಿಮ್ಹಾನ್ಸ್) ತನ್ನ ನಿರ್ವಹಣೆ ಹಾಗೂ ಅಭಿವೃದ್ಧಿ ಚಟುವಟಿಕೆಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ನೆರವು ಪಡೆಯುತ್ತಿದೆ.

ನರಭೌತಶಾಸ್ತ್ರ ಮತ್ತು ನರಜೀವಶಾಸ್ತ್ರಗಳ ಎಲ್ಲ ಅಂಗಗಳಲ್ಲೂ ಸ್ನಾತಕೋತ್ತರ ಶಿಕ್ಷಣ, ತರಬೇತಿ ಮತ್ತು ಸಂಶೋಧನೆಗಳನ್ನು ನಡೆಸಲು ಮತ್ತು ಆಸ್ಪತ್ರೆಯಲ್ಲಿ ನರಭೌತ ಚಿಕಿತ್ಸೆಯ ಸೌಲಭ್ಯಗಳಲ್ಲಿ ಆಧುನಿಕ ಪರಿಶೋಧನೆಗೆ ಅವಕಾಶ ಕಲ್ಪಿಸಲು 1976ರಲ್ಲಿ ಸಂಸ್ಥೆಗೆ ನರಭೌತಶಾಸ್ತ್ರ ಇಲಾಖೆಯನ್ನು ಸೇರಿಸಲಾಯಿತು. 1981ರಲ್ಲಿ ಸಂಸ್ಥೆಯ ಒಳರೋಗಿಗಳ ಸಂಖ್ಯೆ 8,352 ಇದ್ದರೆ ಹೊರ ರೋಗಿಗಳ ಸಂಖ್ಯೆ 88,665 ಇತ್ತು. 1980ರಲ್ಲಿ 984 ದೊಡ್ಡ ಶಸ್ತ್ರ ಚಿಕಿತ್ಸೆಗಳನ್ನೂ, 313 ಸಣ್ಣ ಶಸ್ತ್ರಚಿಕಿತ್ಸೆಗಳನ್ನೂ ನಡೆಸಿದ್ದರೆ, 1981ರಲ್ಲಿ ಈ ಸಂಖ್ಯೆ ಅನುಕ್ರಮವಾಗಿ 1,006 ಮತ್ತು 137 ಆಗಿತ್ತು.

### ದೊಡ್ಡ ಆಸ್ಪತ್ರೆಗಳು

ಬೌರಿಂಗ್ ಮತ್ತು ಲೇಡಿ ಕರ್ಜನ್ಸ್ ಆಸ್ಪತ್ರೆ : ಈ ಆಸ್ಪತ್ರೆಯನ್ನು 1866ರಲ್ಲಿ ಆಗಿನ ಮೈಸೂರು ಕಮಿಷನರ್ ಆಗಿದ್ದ ಬೌರಿಂಗ್ ಅವರು ಪ್ಯಾರಿಸ್ಸಿನ 'ಲೆಬಾಬೊಯಿಸೀರ್ಸ್' ಆಸ್ಪತ್ರೆಯ ಮಾದರಿಯಲ್ಲಿ ಸ್ಥಾಪಿಸಿದರು. 1900ರವರೆಗೆ ಈ ಆಸ್ಪತ್ರೆ ಏಕಮಾತ್ರ ನಾಗರಿಕ ವೈದ್ಯಕೀಯ ಸಂಸ್ಥೆಯಾಗಿತ್ತು. ಅಲ್ಲಿದ್ದ 104 ಹಾಸಿಗೆಗಳಲ್ಲಿ 80 ಹಾಸಿಗೆಗಳು ಪುರುಷರಿಗೂ 24 ಮಹಿಳಾ ಒಳರೋಗಿಗಳಿಗೂ ಮೀಸಲಾಗಿದ್ದವು. ಆಸ್ಪತ್ರೆಯ ಮಹಿಳಾ ವಿಭಾಗವನ್ನು ಲೇಡಿ ಕರ್ಜನ್ ಆಸ್ಪತ್ರೆ ಎಂದು ಕರೆಯಲಾಯಿತು. ಈ ಎರಡು ಆಸ್ಪತ್ರೆಗಳಲ್ಲಿ ಕ್ಷ-ಕಿರಣ ಮತ್ತು ರೋಗ ಲಕ್ಷಣ ಶಾಸ್ತ್ರ ಪ್ರಯೋಗಾಲಯಗಳ ಸೌಲಭ್ಯವಿದ್ದು 1911ರಲ್ಲಿ ಒಬ್ಬ ಸೂಪರಿಂಟೆಂಡೆಂಟ್ ಅವರು ಮುಖ್ಯಸ್ಥರಾಗಿದ್ದರು. ನೇರ ಬ್ರಿಟಿಷ್ ಆಡಳಿತದಲ್ಲಿದ್ದ ಈ ಆಸ್ಪತ್ರೆಗಳನ್ನು 1947ರಲ್ಲಿ ಮೈಸೂರು ಸರ್ಕಾರಕ್ಕೆ ವಹಿಸಿಕೊಡಲಾಯಿತು. ನಂತರದ ದಿನಗಳಲ್ಲಿ ನೇತ್ರ ಚಿಕಿತ್ಸಾ ವಿಭಾಗ, ಕಿವಿ, ಮೂಗು, ಗಂಟಲು ಚಿಕಿತ್ಸಾ ವಿಭಾಗ ಹಾಗೂ 20 ಹಾಸಿಗೆ ಸೌಲಭ್ಯಗಳ ಮಕ್ಕಳ ವಾರ್ಡು ಅಸ್ತಿತ್ವಕ್ಕೆ ಬಂದು ವಿಶೇಷ ಸೇವೆ ನೀಡುವಂತಾಯಿತು. ಶಸ್ತ್ರಚಿಕಿತ್ಸಾ ವಿಭಾಗಕ್ಕೆ ಹೊಂದಿಕೊಂಡಂತೆ 40 ಹಾಸಿಗೆ ಸೌಲಭ್ಯವುಳ್ಳ ಒಂದು ಪ್ರತ್ಯೇಕ ವಿಭಾಗದೊಂದಿಗೆ ಈ ಆಸ್ಪತ್ರೆಯ ಹಾಸಿಗೆ ಸೌಲಭ್ಯ 1983ರ ವೇಳೆಗೆ 686ಕ್ಕೆ ಏರಿತು. ಕ್ಷಯರೋಗ ಮತ್ತು ಗಂತಿ ಚಿಕಿತ್ಸೆಯ ಹೊರತು 16 ವಿವಿಧ ವಿಭಾಗಗಳನ್ನೊಳಗೊಂಡ ಈ ಆಸ್ಪತ್ರೆ 1968ರ ನಂತರ ಸ್ನಾತಕೋತ್ತರ ವೈದ್ಯರ ಶಿಕ್ಷಣ ಹಾಗೂ ಸಂಶೋಧನಾ ಸಂಸ್ಥೆಯಾಯಿತು. ಏಳು ಶಸ್ತ್ರ ವೈದ್ಯರು, ಮೂವರು ವೈದ್ಯರು, ಇಬ್ಬರು ದಂತ ವೈದ್ಯರು, ಇಬ್ಬರು ಔಷಧ ವಿತರಕರೊಂದಿಗೆ ಇತರ ಸಿಬ್ಬಂದಿ ವರ್ಗವು ಈ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. 1980ರಲ್ಲಿ ಕ್ರಮವಾಗಿ 21,410 ಒಳರೋಗಿಗಳಿಗೂ 3,08,989 ಹೊರ ರೋಗಿಗಳಿಗೂ ಸೇವೆ ಸಲ್ಲಿಸಿದ ಈ ಸಂಸ್ಥೆ 1981ರಲ್ಲಿ ಕ್ರಮವಾಗಿ 22,740 ಒಳರೋಗಿಗಳಿಗೂ 3,69,899 ಹೊರ ರೋಗಿಗಳಿಗೂ ಸೇವೆ ನೀಡಿದೆ.

ಕೆ. ಆರ್. ಆಸ್ಪತ್ರೆ : 1876ರಲ್ಲಿ ಔಷಧಾಲಯವಾಗಿ ಪ್ರಾರಂಭಿಸಲಾದ ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆಯನ್ನು 1918ರಲ್ಲಿ ಮೇಲ್ದರ್ಜೆಗೇರಿಸಿ ಸಾರ್ವಜನಿಕ ಆಸ್ಪತ್ರೆಯಾಗಿ ಮಾಡಲಾಯಿತು. ನಂತರ ಈ ಆಸ್ಪತ್ರೆಯಲ್ಲಿ ವಿವಿಧ ವಿಷಯಗಳಲ್ಲಿ ವಿಶೇಷ ಸೇವಾ ವ್ಯವಸ್ಥೆಯನ್ನು ಕಲ್ಪಿಸಿ ಬೋಧಕ ಆಸ್ಪತ್ರೆಯಾಗಿ ಪರಿವರ್ತಿಸಿ ಮೈಸೂರು ವೈದ್ಯಕೀಯ ಕಾಲೇಜಿಗೆ ಸೇರಿಸಲಾಯಿತು. ಆರಂಭದಲ್ಲಿ ಕೇವಲ 20 ಹಾಸಿಗೆ ಸೌಲಭ್ಯಗಳಿದ್ದ ಈ ಆಸ್ಪತ್ರೆಯ ಇಂದಿನ (1983) ಹಾಸಿಗೆ ಸೌಲಭ್ಯ 1,070 ಆಗಿದೆ. ಕ್ಷಯರೋಗದ ಹೊರತು ಉಳಿದ ಎಲ್ಲಾ ರೋಗಗಳಿಗೂ ಚಿಕಿತ್ಸೆ ನೀಡುವ ಈ ಆಸ್ಪತ್ರೆಯಲ್ಲಿ 18 ವಿವಿಧ ವಿಭಾಗಗಳಿವೆ. 1980ರಲ್ಲಿ ಕ್ರಮವಾಗಿ 21,596 ಒಳರೋಗಿಗಳಿಗೂ 2,54,170 ಹೊರ ರೋಗಿಗಳಿಗೂ ಚಿಕಿತ್ಸೆ ನೀಡಿದ ಈ ಆಸ್ಪತ್ರೆ 1981ರಲ್ಲಿ ಕ್ರಮವಾಗಿ 22,877 ಒಳರೋಗಿಗಳಿಗೂ ಮತ್ತು 2,87,580 ಹೊರರೋಗಿಗಳಿಗೂ ಚಿಕಿತ್ಸೆ ನೀಡಿದೆ. ಹೆರಿಗೆ ಹಾಗೂ ಸಮಸ್ಯಾತ್ಮಕ ರೋಗಿಗಳನ್ನು ಇದೇ ಆಸ್ಪತ್ರೆಯ ಆವರಣದಲ್ಲಿರುವ ಚೆಲುವಾಂಬಾ ಆಸ್ಪತ್ರೆಗೆ ಕಳುಹಿಸಲಾಗುವುದು.

ಚೆಲುವಾಂಬಾ ಆಸ್ಪತ್ರೆ: ಮಹಾರಾಣಿ ಕೆಂಪರಾಜಮ್ಮಣ್ಣಿಯವರ ಹೆಸರಿನಲ್ಲಿ 1880ರಲ್ಲಿ ಮೈಸೂರಿನ ಈ ಆಸ್ಪತ್ರೆಯನ್ನು ಆರಂಭಿಸಲಾಯಿತು. 1939ರಲ್ಲಿ 21 ಹಾಸಿಗೆ ಸೌಲಭ್ಯವಿದ್ದ ಈ ಆಸ್ಪತ್ರೆಗೆ 200 ಹಾಸಿಗೆ ಸೌಲಭ್ಯಗಳನ್ನೊದಗಿಸಿ ನೂತನ ಎರಡಂತಸ್ತಿನ ಕಟ್ಟಡದ ಈ ಆಸ್ಪತ್ರೆಯನ್ನು 'ಚೆಲುವಾಂಬಾ ಆಸ್ಪತ್ರೆ' ಎಂದು ಕರೆಯಲಾಯಿತು. ಈಗಿನ ಚೆಲುವಾಂಬಾ

ಮತ್ತು ಮಕ್ಕಳ ಆಸ್ಪತ್ರೆಯ ಸಂಕೀರ್ಣದ ಹಾಸಿಗೆಗಳ ಸಂಖ್ಯೆ 400. 1983ರಲ್ಲಿ ಇದು ಮೈಸೂರು ವೈದ್ಯಕೀಯ ಕಾಲೇಜಿಗೆ ಹೊಂದಿಕೊಂಡ ಒಂದು ಬೋಧಕ ಆಸ್ಪತ್ರೆ.

ಫಾದರ್ ಮುಲ್ಲರ್ ಧರ್ಮಾರ್ಥ ಸಂಸ್ಥೆಗಳು: ಫಾದರ್ ಮುಲ್ಲರ್ ಅವರ ಧರ್ಮಾರ್ಥ ಸಂಸ್ಥೆಗಳು ಆರಂಭವಾದುದು ಮಂಗಳೂರಿನ ಕಂಕನಾಡಿಯಲ್ಲಿ. ಜರ್ಮನ್ ಧರ್ಮ ಪ್ರಚಾರಕ ಫಾದರ್ ಮುಲ್ಲರ್ ಅವರು 1880ರಲ್ಲಿ ಸ್ಥಾಪಿಸಿದ ಹೋಮಿಯೋಪತಿ ಬಡವರ ಆಸ್ಪತ್ರೆಯು ಸಾರ್ವಜನಿಕರ ಪೋಷಣೆಯಿಂದ 1895ರಲ್ಲಿ ಪುರುಷರ ಮತ್ತು ಸ್ತ್ರೀಯರ ಒಂದೊಂದು ವಾರ್ಡುಗಳಿರುವ ಸಾರ್ವಜನಿಕ ಆಸ್ಪತ್ರೆಯಾಯಿತು. 1902ರಲ್ಲಿ ಮಂಗಳೂರಿನಲ್ಲಿ ಪ್ಲೇಗು ರೋಗವು ಬಂದಾಗ ಈ ರೋಗಿಗಳ ಚಿಕಿತ್ಸೆ ಹಾಗೂ ಶುಶ್ರೂಷೆಗಾಗಿ ಫಾದರ್ ಮುಲ್ಲರ್ ಒಂದು ಪ್ಲೇಗ್ ಆಸ್ಪತ್ರೆಯನ್ನು ಪ್ರಾರಂಭಿಸಿದರು. 1940ರ ವೇಳೆಗೆ ಸಾರ್ವಜನಿಕ ಆಸ್ಪತ್ರೆಗೆ ಒಂದು ಶಸ್ತ್ರ ಚಿಕಿತ್ಸಾ ವಿಭಾಗ ಮತ್ತು ಪ್ರಸೂತಿ ಸೇವಾ ವಿಭಾಗವನ್ನು ಸೇರಿಸಿ ಹಾಸಿಗೆ ಸೌಲಭ್ಯವನ್ನು ವಿಸ್ತರಿಸಲಾಯಿತು. 1951ರಲ್ಲಿ ಹೊರರೋಗಿಗಳ ವಿಭಾಗ ಮತ್ತು ಕ್ಷ-ಕಿರಣ ವಿಭಾಗಗಳನ್ನು ತೆರೆಯಲಾಯಿತು. ಕ್ಷಯರೋಗಿಗಳ ಆಸ್ಪತ್ರೆ ಹಾಗೂ ಕುಷ್ಠರೋಗಿಗಳಿಗಾಗಿ ಡೇವಿಯನ್ ಹೋಂ ಅನ್ನು ಸೇರಿಸಲಾಯಿತು. 1962ರಲ್ಲಿ ಮಕ್ಕಳ ಆಸ್ಪತ್ರೆಯನ್ನೂ 1966ರಲ್ಲಿ ಮಾನಸಿಕ ರೋಗ ಚಿಕಿತ್ಸಾ ವಿಭಾಗವನ್ನು ಸೇರಿಸಲಾಯಿತು. 1980ರಲ್ಲಿ ಕ್ಷಯರೋಗ ವಿಭಾಗದಲ್ಲಿ ಕ್ರಮವಾಗಿ ಒಳರೋಗಿಗಳ ಸಂಖ್ಯೆ 459 ಹಾಗೂ ಹೊರರೋಗಿಗಳ ಸಂಖ್ಯೆ 784 ಇದ್ದುದು 1981ರಲ್ಲಿ ಇದೇ ಸಂಖ್ಯೆ ಕ್ರಮವಾಗಿ 334 ಹಾಗೂ 776 ಆಗಿತ್ತು. ಕ್ಷಯರೋಗದ ಹೊರತು ಪರೀಕ್ಷೆಗೊಳಗಾದ ರೋಗಿಗಳ ಸಂಖ್ಯೆ ಈ ಆಸ್ಪತ್ರೆಯಲ್ಲಿ 1980ರಲ್ಲಿ ಕ್ರಮವಾಗಿ 14,629 (ಒಳರೋಗಿಗಳು) ಹಾಗೂ 92,112 (ಹೊರ ರೋಗಿಗಳು) ಇದ್ದುದು 1981ರಲ್ಲಿ 15,690 ಹಾಗೂ 95,536ಕ್ಕೆ ಏರಿತು.

ಸೈಂಟ್ ಮಾರ್ಥಾಸ್ ಆಸ್ಪತ್ರೆ: ಇಂದು 600 ಹಾಸಿಗೆ ಸೌಲಭ್ಯ ಪಡೆದಿರುವ ಬೆಂಗಳೂರಿನ ಸೈಂಟ್ ಮಾರ್ಥಾಸ್ ಆಸ್ಪತ್ರೆ 1886ರಲ್ಲಿ 40 ಹಾಸಿಗೆ ಸೌಲಭ್ಯಗಳನ್ನು ಪಡೆದಿದ್ದು ಗುಡ್ ಷಫರ್ಡ್ ಸೋದರಿಯರಿಂದ ಪ್ರಾರಂಭಿಸಲ್ಪಟ್ಟಿತು. ಬೆಂಗಳೂರಿನಲ್ಲಿ 1965ರಲ್ಲಿ ನೂತನವಾಗಿ ಆರಂಭಿಸಲಾದ ಸೈಂಟ್ ಜಾನ್ ವೈದ್ಯಕೀಯ ಕಾಲೇಜಿಗೆ ಚಿಕಿತ್ಸಾ ಸೇವೆ ಹಾಗೂ ವೈದ್ಯಕೀಯ ವಿದ್ಯಾರ್ಥಿಗಳಿಗೆ ಬೋಧನಾ ಸೌಲಭ್ಯಕ್ಕಾಗಿ ಈ ಸಂಸ್ಥೆಯನ್ನು ಮೀಸಲಿಡಲಾಯಿತು. ವೈದ್ಯ ಶಾಸ್ತ್ರದ 14 ವಿವಿಧ ವಿಭಾಗಗಳು ಈ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. 1933ರಲ್ಲಿ ಈ ಸಂಸ್ಥೆಯಲ್ಲಿ ಶುಶ್ರೂಷಣಾ ಸೇವೆಯ ಶಾಲೆಯೊಂದನ್ನು ಪ್ರಾರಂಭಿಸಲಾಯಿತು. ಎಲ್ಲಾ ರೀತಿಯ ರೋಗಗಳಿಗೂ ಈ ಸಂಸ್ಥೆಯಲ್ಲಿ ಚಿಕಿತ್ಸಾ ಸೌಲಭ್ಯಗಳಿವೆ. 1980ರಲ್ಲಿ ಈ ಆಸ್ಪತ್ರೆಯಲ್ಲಿ ಕ್ಷಯರೋಗ ಚಿಕಿತ್ಸೆ ಪಡೆದ ರೋಗಿಗಳ ಸಂಖ್ಯೆ ಕ್ರಮವಾಗಿ 27 ಒಳರೋಗಿಗಳು ಹಾಗೂ 301 ಹೊರರೋಗಿಗಳು. ಆದರೆ 1981ರಲ್ಲಿ ಆ ಸಂಖ್ಯೆ ಕ್ರಮವಾಗಿ 31 (ಒಳರೋಗಿಗಳು) ಹಾಗೂ 289 (ಹೊರರೋಗಿಗಳು) ಆಗಿತ್ತು. ಈ ಸಂಸ್ಥೆಯಲ್ಲಿ ಕ್ಷಯರೋಗದ ಹೊರತು ಇತರ ರೋಗಿಗಳಿಗಾಗಿ 1980ರಲ್ಲಿ ಚಿಕಿತ್ಸೆ ಪಡೆದ ಒಳರೋಗಿಗಳ ಸಂಖ್ಯೆ 16,982 ಹಾಗೂ ಹೊರರೋಗಿಗಳ ಸಂಖ್ಯೆ 1,63,235. ಆದರೆ ಈ ಸಂಖ್ಯೆ 1981ರಲ್ಲಿ ಕ್ರಮವಾಗಿ 16,659 ಹಾಗೂ 1,62,082 ಆಗಿತ್ತು.

ವಿಕ್ಟೋರಿಯಾ ಆಸ್ಪತ್ರೆ: ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯು 1900ರ ಡಿಸೆಂಬರ್ 8ರಂದು ಲಾರ್ಡ್ ಕರ್ಜನ್ ಅವರಿಂದ ಸಾಂಕೇತಿಕವಾಗಿ ಉದ್ಘಾಟಿಸಲ್ಪಟ್ಟಿತು. ಆರಂಭದಲ್ಲಿ 100 ಒಳರೋಗಿಗಳಿಗೆ ಅನುಕೂಲವಾಗುವಂತೆ ಆಡಳಿತ ವಿಭಾಗದೊಂದಿಗೆ ಎಂಟು ವಿಸ್ತರಣಗಳಿದ್ದು, ಒಂದು ಶಸ್ತ್ರ ಚಿಕಿತ್ಸಾ ವಿಭಾಗ ಹಾಗೂ ಒಂದು ಪ್ರಯೋಗಾಲಯವನ್ನು ಒಳಗೊಂಡಿದ್ದ ಈ ಸಂಸ್ಥೆಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಗಳು ಚಿಕಿತ್ಸಾ ಶಿಕ್ಷಣ ಪಡೆಯಲು ಅವಕಾಶ ಕಲ್ಪಿಸಲಾಯಿತು. ಈ ಸಂಸ್ಥೆಯಲ್ಲಿ ಪದವಿಪೂರ್ವ ಹಾಗೂ ಸ್ನಾತಕೋತ್ತರ ವೈದ್ಯಕೀಯ ವಿದ್ಯಾರ್ಥಿಗಳಿಗೆ ಚಿಕಿತ್ಸಾ ಶಿಕ್ಷಣ ನೀಡುವುದಲ್ಲದೆ, ಮೂತ್ರಶಾಸ್ತ್ರ, ಅಸ್ಥಿ ಚಿಕಿತ್ಸೆ, ಹೃದ್ರೋಗ ಮುಂತಾದ ವಿಶೇಷ ವಿಭಾಗಗಳನ್ನು ಒಳಗೊಂಡಿದೆ. ಪ್ರಸೂತಿ ಶಾಸ್ತ್ರ, ನೇತ್ರಶಾಸ್ತ್ರ, ಕ್ಷಯರೋಗ, ಕುಷ್ಠರೋಗ, ಮಕ್ಕಳ ರೋಗಗಳು ಮತ್ತು ಸಾಂಕ್ರಾಮಿಕ ರೋಗಗಳ ಹೊರತು ಎಲ್ಲ ರೀತಿಯ ರೋಗಗಳಿಗೂ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಲಾಗುವುದು. ಐದು ಮಂದಿ ಶಸ್ತ್ರ ವೈದ್ಯರು, 14 ಮಂದಿ ಔಷಧ ವಿತರಕರು, 199 ಶುಶ್ರೂಷಣಾ ದಾದಿಯರು, 132 ವೈದ್ಯರು, 22 ಸಹಾಯಕ ಶಸ್ತ್ರವೈದ್ಯರು, 10 ಪ್ರಯೋಗ ಶಾಲಾ ಸಹಾಯಕರು, ನಾಲ್ವರು ಕ್ಷಕಿರಣ ತಂತ್ರಜ್ಞರು, ಇಬ್ಬರು ರೇಡಿಯೋಗ್ರಾಫರುಗಳು, ಹಾಗೂ ಇತರ ಆಡಳಿತ ಮತ್ತು ನಾಲ್ಕನೇಯ ದರ್ಜೆಯ ಸಿಬ್ಬಂದಿಯು ಈ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. 1980ರಲ್ಲಿ ಈ ಸಂಸ್ಥೆಯಲ್ಲಿ ಚಿಕಿತ್ಸೆ ಪಡೆದ ಒಳರೋಗಿಗಳ ಹಾಗೂ ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 24,114 ಹಾಗೂ 6,00,379. ಅದರೆ ಈ ಸಂಖ್ಯೆ 1981ರಲ್ಲಿ ಕ್ರಮವಾಗಿ 23,274 ಹಾಗೂ 5,17,573 ಆಗಿತ್ತು. ಈ ಆಸ್ಪತ್ರೆಗೆ ಹೊಂದಿಕೊಂಡಂತೆ ಸ್ಥಾಪಿಸಲಾದ ಕೃತಕ ಕೈಕಾಲು ಜೋಡಣಾ ವಿಭಾಗವು 1981-82ರಿಂದ ಕಾರ್ಯಾರಂಭ ಮಾಡಿದೆ. ಈ ಆಸ್ಪತ್ರೆಯಲ್ಲಿ 1969ರಿಂದೀಚೆಗೆ ಸುಟ್ಟಗಾಯಗಳ ಹಾಗೂ ಆಕಸ್ಮಿಕ ಕೇಂದ್ರ ಮತ್ತು ಉಪಾಧ್ಯಾಯರ ವಾರ್ಡು ಇದೆ. ಕರ್ನಾಟಕದಲ್ಲಿಯೇ ಇದು ಅತಿ ದೊಡ್ಡ ಆಸ್ಪತ್ರೆಯಾಗಿದೆ. ಈ ಆಸ್ಪತ್ರೆಗೆ ಬೇಕಾಗುವ

ಔಷಧ ಸಾಮಗ್ರಿಗಳನ್ನು ತಯಾರಿಸುವ ಒಂದು ಔಷಧ ತಯಾರಿಕಾ ಘಟಕವು ಈ ಸಂಸ್ಥೆಯ ಅವಶ್ಯಕತೆಗಳನ್ನು ಪೂರೈಸಲು ಕೆಲಸ ನಿರ್ವಹಿಸುತ್ತಿದೆ.

ಮೇರಿ ಕ್ಯಾಲ್ವರ್ಟ್ ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆ : 1906ರಲ್ಲಿ ಮಹಿಳೆಯರು ಹಾಗೂ ಮಕ್ಕಳಿಗಾಗಿ ಮೈಸೂರಿನಲ್ಲಿ ಸ್ಥಾಪಿತವಾದ ಮೇರಿ ಕ್ಯಾಲ್ವರ್ಟ್ ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆಯ ಈಗಿನ ಹಾಸಿಗೆ ಸೌಲಭ್ಯ 280. ಸಾಮಾನ್ಯ ಔಷಧ ಚಿಕಿತ್ಸೆ, ಶಸ್ತ್ರ ಕ್ರಿಯೆ, ಮಕ್ಕಳ ಖಾಯಿಲೆಗಳು, ಪ್ರಸೂತಿ ಹಾಗೂ ಸ್ತ್ರೀರೋಗ ಗಳ ಚಿಕಿತ್ಸೆಗೆ ಬೇಕಾದ ಎಲ್ಲಾ ವೈದ್ಯಕೀಯ ಮತ್ತು ಪ್ರಯೋಗಾಲಯಗಳ ಸೌಲಭ್ಯಗಳನ್ನೂ ಹೊಂದಿರುವ ಈ ಸಂಸ್ಥೆಯಲ್ಲಿ ಕ್ಷ-ಕಿರಣ ಸೌಲಭ್ಯವೂ ಇದೆ. ಗ್ರಾಮೀಣ ವೈದ್ಯಕೀಯ ಸೇವೆಯೊಂದಿಗೆ ಕುಷ್ಠರೋಗಿಗಳಿಗೂ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಲಾಗುವುದು. ಅಂಗವಿಕಲ ಮಕ್ಕಳಿಗೆ ಪುನರ್ವಸತಿ ಚಿಕಿತ್ಸೆ ನೀಡುವಂತಹ ಸುಸಜ್ಜಿತ ಶರೀರ ಶುಶ್ರೂಷಾ ವಿಭಾಗದ ಸೇವೆ ಈ ಆಸ್ಪತ್ರೆಯಲ್ಲಿ ಲಭ್ಯವಿದೆ. 1980ರಲ್ಲಿ ಈ ಸಂಸ್ಥೆಯಲ್ಲಿ ಚಿಕಿತ್ಸೆ ಪಡೆದ ಒಳರೋಗಿಗಳ ಹಾಗೂ ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 8,951 ಮತ್ತು 40,443 ಇದ್ದರೆ 1981ರಲ್ಲಿ ಅನುಕ್ರಮವಾಗಿ 9,069 ಹಾಗೂ 43,286ಕ್ಕೆ ಏರಿದೆ. 1980ರಲ್ಲಿ 2,115 ಹಾಗೂ 1981ರಲ್ಲಿ 2,129 ಮಹಿಳೆಯರಿಗೆ ಈ ಸಂಸ್ಥೆಯಲ್ಲಿ ಪ್ರಸೂತಿ ಸೇವೆಯನ್ನು ಒದಗಿಸಲಾಯಿತು.

ಎಲ್ಲನ್ ತೋಬರ್ನ್ ಕೋವೆನ್ ಮೆಮೋರಿಯಲ್ ಆಸ್ಪತ್ರೆ : ಧರ್ಮಾರ್ಥ ಸಂಸ್ಥೆಯೆಂದು ನೋಂದಾಯಿಸಲ್ಪಟ್ಟಿರುವ ಭಾರತದ ಮೆಥಾಡಿಸ್ಟ್ ಚರ್ಚ್ ಆಶ್ರಯದಲ್ಲಿ 1910ರಲ್ಲಿ ಕೋಲಾರದಲ್ಲಿ ಎಲ್ಲನ್ ತೋಬರ್ನ್ ಕೋವೆನ್ ಮೆಮೋರಿಯಲ್ ಆಸ್ಪತ್ರೆಯನ್ನು ಸ್ಥಾಪಿಸಲಾಯಿತು. ಈಗ 210 ಹಾಸಿಗೆ ಸೌಲಭ್ಯವುಳ್ಳ ಈ ಆಸ್ಪತ್ರೆಯಲ್ಲಿ ಕ್ಷಯರೋಗಿಗಳಿಗಾಗಿ ಪ್ರತ್ಯೇಕ ವಾರ್ಡುಗಳಿವೆ. ಈ ಸಂಸ್ಥೆಯಲ್ಲಿ 1980ರಲ್ಲಿ ಕ್ಷಯರೋಗ ಚಿಕಿತ್ಸೆಗೊಳಗಾದ ಒಳರೋಗಿಗಳ ಹಾಗೂ ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 47 ಹಾಗೂ 7,023 ಆದರೆ, 1981ರಲ್ಲಿ ಈ ಸಂಖ್ಯೆ ಅನುಕ್ರಮವಾಗಿ 445 ಹಾಗೂ 7,355ಕ್ಕೆ ಏರಿತು. ಈ ಸಂಸ್ಥೆಯಲ್ಲಿ ಕ್ಷಯರೋಗದ ಹೊರತು ಇತರ ರೋಗಗಳಿಗೆ ಚಿಕಿತ್ಸೆ ಪಡೆದ ಹೊರರೋಗಿಗಳ ಸಂಖ್ಯೆ 1980ರಲ್ಲಿ 55,622 ಇದ್ದುದು 1981ರಲ್ಲಿ 57,535 ಆಗಿದೆ. ಈ ಆಸ್ಪತ್ರೆಯಲ್ಲಿ ಪ್ರಸೂತಿ ಸೇವೆ ಪಡೆದವರ ಸಂಖ್ಯೆ 1980ರಲ್ಲಿ 499 ಇದ್ದುದು 1981ರಲ್ಲಿ 607ಕ್ಕೆ ಏರಿದೆ.

ಮಿಂಟೋ ನೇತ್ರ ಚಿಕಿತ್ಸಾ ಪ್ರಾದೇಶಿಕ ಸಂಸ್ಥೆ : 1931ರಲ್ಲಿ ಸ್ಥಾಪಿತವಾದ ಬೆಂಗಳೂರಿನ ಮಿಂಟೋ ಕಣ್ಣಾಸ್ಪತ್ರೆಯನ್ನು 1982ರ ಜನವರಿಯಿಂದ ಮಿಂಟೋ ನೇತ್ರ ಚಿಕಿತ್ಸಾ ಪ್ರಾದೇಶಿಕ ಸಂಸ್ಥೆಯಾಗಿ ಮೇಲ್ದರ್ಜೆಗೇರಿಸಲಾಗಿದೆ. ಅಂಧತ್ವ ನಿವಾರಣೆ ಹಾಗೂ ಕಣ್ಣಿನ ರೋಗಗಳ ಹತೋಟಿಯೊಂದಿಗೆ ಈ ಸಂಸ್ಥೆಯಲ್ಲಿ ಉತ್ಕೃಷ್ಟ ರೀತಿಯ ನೇತ್ರ ಚಿಕಿತ್ಸಾ ಸೇವೆಯನ್ನು ಒದಗಿಸಲಾಗುತ್ತಿದೆ. ಈ ಆಸ್ಪತ್ರೆಯ ಹಾಸಿಗೆ ಸೌಲಭ್ಯದ ಸಂಖ್ಯೆ 277. ರಾಜ್ಯದ ಅಷ್ಟೇ ಅಲ್ಲದೆ ನೆರೆಯ ರಾಜ್ಯಗಳಿಂದ ಬರುವ ನೇತ್ರರೋಗಿಗಳೂ ಇಲ್ಲಿ ದೊರೆಯುವ ಚಿಕಿತ್ಸಾ ಸೌಲಭ್ಯಗಳ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ. ಅಂಧತ್ವ ನಿಯಂತ್ರಣ ಹಾಗೂ ನಿರೋಧದ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಭಾರತ ಸರ್ಕಾರವು ಮಂಜೂರು ಮಾಡಿರುವ ಪ್ರಾದೇಶಿಕ ಸಂಚಾರಿ ಘಟಕವು ಪ್ರತೀ ತಿಂಗಳೂ ಮೂರು ಶಿಬಿರಗಳನ್ನು ನಡೆಸಿ ಪ್ರತೀ ಶಿಬಿರದಲ್ಲಿ ಸುಮಾರು 150 ರಿಂದ 200 ರೋಗಿಗಳಿಗೆ ಶಸ್ತ್ರ ಚಿಕಿತ್ಸಾ ಸೇವೆ ಒದಗಿಸುತ್ತದೆ. ಈ ಸಂಸ್ಥೆಯಲ್ಲಿ 1981ರಲ್ಲಿ ನೇತ್ರ ಚಿಕಿತ್ಸೆ ಪಡೆದಿರುವ ಒಳ ಹಾಗೂ ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 1,367 ಮತ್ತು 1,24,680. ಈ ಸಂಖ್ಯೆ 1980ರಲ್ಲಿ 1,830 ಮತ್ತು 1,21,306 ರಷ್ಟಿದ್ದು, 1980ರಲ್ಲಿ 250 ಶಸ್ತ್ರಚಿಕಿತ್ಸೆಗಳನ್ನೂ 1981ರಲ್ಲಿ 468 ಶಸ್ತ್ರ ಚಿಕಿತ್ಸೆಗಳನ್ನೂ ನಡೆಸಲಾಯಿತು.

ಪಿ. ಕೆ. ಟಿ. ಬಿ. ಆಸ್ಪತ್ರೆ : ಮೈಸೂರಿನಲ್ಲಿರುವ ಪ್ರಿನ್ಸೆಸ್ ಕೃಷ್ಣರಾಜಮ್ಮಣ್ಣಿ ಕ್ಷಯ ಆಸ್ಪತ್ರೆಯು 1921ರಲ್ಲಿ ಆರಂಭವಾಯಿತು. ಆಗ ಈ ಆಸ್ಪತ್ರೆಯಲ್ಲಿ ಎಂಟು ಜನ ಶುಲ್ಕ ಕೊಡುವ ರೋಗಿಗಳಿಗೂ 20 ಜನ ಬಡರೋಗಿಗಳಿಗೂ ಅವಕಾಶ ಕಲ್ಪಿಸಲಾಗಿತ್ತು. ಆಸ್ಪತ್ರೆಯ ಸುವರ್ಣ ಮಹೋತ್ಸವ ನೆನಪಾಗಿ 22 ಹಾಸಿಗೆಗಳ ತುರ್ತು ವಿಭಾಗವೊಂದನ್ನು ನಿರ್ಮಿಸಲಾಯಿತು. ಈ ಆಸ್ಪತ್ರೆಯಲ್ಲಿ ಕ್ಷಯ ಮತ್ತು ಇತರ ಶ್ವಾಸಕೋಶದ ರೋಗಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. ಈಗ ಆಸ್ಪತ್ರೆಯ ಹಾಸಿಗೆಗಳ ಸಾಮರ್ಥ್ಯ 470 ಆಗಿದೆ. 1981ರಲ್ಲಿ ಈ ಆಸ್ಪತ್ರೆಯ ಒಳ ಮತ್ತು ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 3,262 ಮತ್ತು 24,339 ರಷ್ಟಿತ್ತು. ಅದರ ಹಿಂದಿನ ವರ್ಷ 2,298 ಮತ್ತು 24,973 ರಷ್ಟಿತ್ತು.

ಕರ್ನಾಟಕ ಆರೋಗ್ಯ ಸಂಸ್ಥೆ : 1929ರಲ್ಲಿ ಈ ಸಂಸ್ಥೆಯು ನೋಂದಾಯಿಸಲ್ಪಟ್ಟಿತು; ಇದರ ಆಶ್ರಯದಲ್ಲಿ 1935ರಲ್ಲಿ ಘಟಪ್ರಭಾದಲ್ಲಿ ಒಂದು ಚಿಕಿತ್ಸಾಲಯವನ್ನು ಆರಂಭಿಸಲಾಯಿತು. ಗ್ರಾಮಾಂತರ ಪ್ರದೇಶದ ಜನತೆಯ ಮನೆ ಬಾಗಿಲಿಗೇ ಆಧುನಿಕ ಆರೋಗ್ಯ ಸೌಲಭ್ಯಗಳನ್ನು ಕೊಂಡೊಯ್ಯುವ ಮುಖ್ಯ ಉದ್ದೇಶದಿಂದ ಈ ಸಂಸ್ಥೆ ರೂಪುಗೊಂಡಿತು. ಈ ಆಸ್ಪತ್ರೆಯು ನೆಲೆಗೊಂಡಿರುವ ಪ್ರದೇಶಕ್ಕೆ ಸ್ವಚ್ಛ ಹವೆ ಹಾಗೂ ಆರೋಗ್ಯಕರ ನೀರಿನ ಆಸರೆ ಇದೆ. ಈ ಸಂಸ್ಥೆಯೊಡನೆ ಡಾ|| ಕೊಕ್ಕಟನೂರ್ ಮತ್ತು ಡಾ|| ಹರ್ಡೀಕರ್

ಅವರ ಸೇವೆಯು ಸಹಕಾರವಿದೆ. ಐವತ್ತು ವರ್ಷಗಳ ಈ ಸಂಸ್ಥೆಯು ಬೆಳವಣಿಗೆಯಲ್ಲಿ 166 ಹಾಸಿಗೆಗಳ ಒಂದು ಸಾರ್ವಜನಿಕ ಆಸ್ಪತ್ರೆ, 55 ಹಾಸಿಗೆಗಳ ಹಾಗೂ ಆರು ಗ್ರಾಮೀಣ ಶಾಖೆಗಳನ್ನುಳ್ಳ ಒಂದು ಹೆರಿಗೆ ಆಸ್ಪತ್ರೆ, 160 ಹಾಸಿಗೆಗಳ ಒಂದು ಕ್ಷಯರೋಗ ಆಸ್ಪತ್ರೆ, 80 ಜನ ದಾದಿಯರು ಹಾಗೂ 100 ಜನ ಸಹಾಯಕ ಶುಶ್ರೂಷಣಾ ದಾದಿಯರಿಗೆ ತರಬೇತಿ ನೀಡುವ ಸಾಮರ್ಥ್ಯವಿರುವ ಒಂದು ದಾದಿಯರ ತರಬೇತಿ ಶಾಲೆ, ಮೊದಲಾದ ಸೇವಾ ಕೇಂದ್ರಗಳು ಮೈದಾಳಿವೆ. ಈ ಸಂಸ್ಥೆಯ ಆಶ್ರಯದಲ್ಲಿ 23 ಗ್ರಾಮೀಣ ಆರೋಗ್ಯ ಕೇಂದ್ರಗಳೂ ಇವೆ. ತೀರ ಉಲ್ಬಣಿಸಿದ ಗಂತಿರೋಗ (ಕ್ಯಾನ್ಸರ್), ಮಾನಸಿಕರೋಗ ಮತ್ತು ಕುಷ್ಠ ರೋಗ ಇವುಗಳನ್ನು ಬಿಟ್ಟರೆ ಈ ಆರೋಗ್ಯ ಸಂಸ್ಥೆಯಲ್ಲಿ ಎಲ್ಲ ರೋಗಗಳಿಗೂ ಚಿಕಿತ್ಸೆ ನೀಡಲಾಗುತ್ತಿದೆ. ಈಗ ಇರುವ 361 ಹಾಸಿಗೆಗಳಲ್ಲಿ 160 ಹಾಸಿಗೆಗಳನ್ನು ಕ್ಷಯರೋಗಿಗಳಿಗಾಗಿ ಮೀಸಲಿಡಲಾಗಿದೆ. 1981ರಲ್ಲಿ ಇಲ್ಲಿನ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 582 ಮತ್ತು 2,481, ಆಗಿದ್ದರೆ, 1980ರಲ್ಲಿ ಈ ಸಂಖ್ಯೆ ಅನುಕ್ರಮವಾಗಿ 4,519 ಮತ್ತು 2,348ರಷ್ಟಿತ್ತು. ಚಿಕಿತ್ಸೆ ಪಡೆದ ಕ್ಷಯರೋಗೇತರ ಒಳ ಮತ್ತು ಹೊರರೋಗಿಗಳ ಸಂಖ್ಯೆ 1981ರಲ್ಲಿ ಅನುಕ್ರಮವಾಗಿ 5,050 ಮತ್ತು 47,525ರಷ್ಟಿತ್ತು. ಈ ಸಂಖ್ಯೆ 1980ರಲ್ಲಿ 5,001 ಮತ್ತು 41,022ರಷ್ಟಿತ್ತು. ಈ ಸಂಸ್ಥೆಯಲ್ಲಿ ಕಾರ್ಯನಿರತವಾಗಿರುವ ಪ್ರಮುಖ ವಿಭಾಗಗಳೆಂದರೆ—ವೈದ್ಯಕೀಯ ಶಸ್ತ್ರ ಚಿಕಿತ್ಸೆ, ಕಿವಿ, ಮೂಗು, ಗಂಟಲುರೋಗ, ನೇತ್ರ ಚಿಕಿತ್ಸೆ, ಪ್ರಸೂತಿ, ಶ್ವಾಸಕೋಶ ರೋಗ ಮತ್ತು ಸ್ತ್ರೀರೋಗ ವಿಭಾಗಗಳು.

ವಾಣೀವಿಲಾಸ ಆಸ್ಪತ್ರೆ : ಬೆಂಗಳೂರಿನಲ್ಲಿರುವ ವಾಣೀವಿಲಾಸ ಆಸ್ಪತ್ರೆ 1935ರಲ್ಲಿ ಕಾರ್ಯಾರಂಭ ಮಾಡಿತು. ಆರಂಭದಲ್ಲಿ ಮಹಿಳೆಯರು ಮತ್ತು ಮಕ್ಕಳಿಗಾಗಿಯೇ ಪ್ರತ್ಯೇಕವಾದ 250 ಹಾಸಿಗೆಗಳ ಸೌಲಭ್ಯವಿತ್ತು. ನಂತರ ಹೆಚ್ಚು ಹಾಸಿಗೆಗಳಿಗೆ ಸ್ಥಳಾವಕಾಶ ಕಲ್ಪಿಸಲು ಅನೇಕ ಕಟ್ಟಡಗಳು ಹಾಗೂ ವಿಭಾಗಗಳನ್ನು ನಿರ್ಮಿಸಲಾಯಿತು. ಪ್ರಸ್ತುತ ಸುಸಜ್ಜಿತ ಶಸ್ತ್ರ ಚಿಕಿತ್ಸೆಯ ಕೊಠಡಿಗಳೊಂದಿಗೆ 536 ಹಾಸಿಗೆಗಳ ಸೌಲಭ್ಯವಿದೆ. ಇದು ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಹೊಂದಿಕೊಂಡಿರುವ ಬೋಧನ ಸಂಸ್ಥೆ. ಇಲ್ಲಿನ ಮಕ್ಕಳ ವಿಭಾಗದಲ್ಲಿ ಆಕಸ್ಮಿಕಗಳು, ಕಾಯಿಲೆಗಳು, ಹಸುಗೂಸುಗಳು, ಕರುಳುರೋಗಗಳು ಮತ್ತು ಅಕಾಲಿಕ ಜನನಗಳಿಗೆ ಸಂಬಂಧಿಸಿದ ಚಿಕಿತ್ಸೆಯ ಸೌಲಭ್ಯವಿದೆ. ಈ ಆಸ್ಪತ್ರೆಯಲ್ಲಿ ಹೃದ್ರೋಗ, ಕ್ಷಯ, ರಕ್ತ ಪರೀಕ್ಷೆ ಹಾಗೂ ಆರೋಗ್ಯವಂತ ಮಕ್ಕಳ ಪರೀಕ್ಷೆಯ ವಿಭಾಗಗಳೂ ಇವೆ. ಇಲ್ಲಿರುವ ಬಾಣಂತನ ಸೇವಾ ಕೇಂದ್ರವು ಪ್ರತೀ ದಿನ ಮಕ್ಕಳು ಮತ್ತು ಗರ್ಭಿಣಿಯರಿಗೆ ರೋಗದ ವಿರುದ್ಧ ರಕ್ಷಣಾ ಚಿಕಿತ್ಸೆಯನ್ನು ಒದಗಿಸುತ್ತದೆ. ಕ್ಷೇತ್ರ ಕಾರ್ಯಕರ್ತರು ಸುತ್ತಮುತ್ತಣ ಪ್ರದೇಶದಲ್ಲಿ ಕುಟುಂಬ ಯೋಜನಾ ಕಾರ್ಯಕ್ರಮವನ್ನು ನಿರ್ವಹಿಸುತ್ತಾರೆ. ಆಸ್ಪತ್ರೆಯ ಸ್ತ್ರೀರೋಗ ವಿಭಾಗದ ಹೊಸ ಕಟ್ಟಡದಲ್ಲಿ 500 ಎಂ. ಎ. ಕ್ಷ ಕಿರಣ ಘಟಕವೊಂದನ್ನು ಸ್ಥಾಪಿಸಲಾಗುತ್ತಿದೆ. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 15,131 ಮತ್ತು 38,119. ಈ ಸಂಖ್ಯೆ 1980ರಲ್ಲಿ ಅನುಕ್ರಮವಾಗಿ 14,626 ಮತ್ತು 25,119ರಷ್ಟಿತ್ತು. 1981ರಲ್ಲಿ ಈ ಆಸ್ಪತ್ರೆಯಲ್ಲಿ ಸಲ್ಲಿಸಿದ ಹೆರಿಗೆ ಸೇವೆಗಳ ಸಂಖ್ಯೆ 8,420 ಆಗಿದ್ದರೆ 1980ರಲ್ಲಿ ಅದು 8,253ರಷ್ಟಿತ್ತು. 1981ರಲ್ಲಿ ಸಂತಾನ ನಿರೋಧ ಶಸ್ತ್ರ ಚಿಕಿತ್ಸೆಗೊಳಗಾದವರ ಸಂಖ್ಯೆ 2,558. 1980ರಲ್ಲಿ ಈ ಸಂಖ್ಯೆ 2,355 ಆಗಿತ್ತು.

ಸೈಂಟ್ ಫಿಲೋಮಿನ ಆಸ್ಪತ್ರೆ : ಬೆಂಗಳೂರಿನಲ್ಲಿರುವ ಸೈಂಟ್ ಫಿಲೋಮಿನಾ ಆಸ್ಪತ್ರೆಯು, 1937ರಲ್ಲಿ ಪ್ರಾರಂಭವಾಯಿತು. ಇದು ನಗರದಲ್ಲಿರುವ ಸುಸಜ್ಜಿತ ಆಸ್ಪತ್ರೆಗಳಲ್ಲೊಂದಾಗಿದೆ. 255 ಹಾಸಿಗೆ ಸೌಲಭ್ಯವುಳ್ಳ ಈ ಆಸ್ಪತ್ರೆಯಲ್ಲಿ ವಿವಿಧ ವೈದ್ಯಕೀಯ ರಕ್ಷಣಾ ವಿಭಾಗಗಳಲ್ಲಿ ಎಲ್ಲ ತಜ್ಞ ಸೇವೆಗಳೂ ದೊರೆಯುತ್ತವೆ. ಈ 40 ವರ್ಷಗಳ ಅವಧಿಯಲ್ಲಿ ಆಸ್ಪತ್ರೆಯು ಗಮನಾರ್ಹವಾಗಿ ಬೆಳೆದು ಈಗ ಬೆಂಗಳೂರು ನಗರಕ್ಕೆ 14 ಕಿ. ಮೀ. ದೂರದ ಗ್ರಾಮಾಂತರ ಪ್ರದೇಶದಲ್ಲಿ ಒಂದು ಆರೋಗ್ಯ ಕೇಂದ್ರವನ್ನು ನಡೆಸುತ್ತಿದೆ. ಈ ಆಸ್ಪತ್ರೆಗೆ ಹೊಂದಿಕೊಂಡಂತೆ ಸಹಾಯಕ ಶುಶ್ರೂಷಣಾ ದಾದಿಯರ ತರಬೇತಿ ಶಾಲೆಯೊಂದಿದೆ. 1981-82ರಲ್ಲಿ ಸಹಾಯಕ ಶುಶ್ರೂಷಣಾ ದಾದಿಯರ ತರಬೇತಿ ಕಾರ್ಯಕ್ರಮವನ್ನು ಸಾಮಾನ್ಯ ದಾದಿ ಮತ್ತು ಪ್ರಸೂತಿ ಸೇವಾ ತರಬೇತಿ ಕಾರ್ಯಕ್ರಮವನ್ನಾಗಿ ಪರಿವರ್ತಿಸಲಾಯಿತು. ವಿವಿಧ ವೈದ್ಯಕೀಯ ರಕ್ಷಣಾ ವಿಭಾಗಗಳನ್ನು ಹೊಂದಿರುವ ಇದರಲ್ಲಿ ಎಲ್ಲಾ ಬಗೆಯ ರೋಗಗಳಿಗೂ ಉಪಚಾರ ಸಿಗುತ್ತದೆ. ಕ್ಷಯರೋಗದ ಹೊರತಾಗಿ 1981ರಲ್ಲಿ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 11,394 ಮತ್ತು 57,386ರಷ್ಟಿತ್ತು. ಈ ಸಂಖ್ಯೆ 1980ರಲ್ಲಿ ಅನುಕ್ರಮವಾಗಿ 11,993 ಮತ್ತು 58,061ರಷ್ಟಿತ್ತು. 1981ರಲ್ಲಿ ಇಲ್ಲಿ ನಡೆದ ಹೆರಿಗೆ ಸೇವೆಗಳ ಸಂಖ್ಯೆ 4,086. ಅದೇ 1980ರಲ್ಲಿ ಈ ಸಂಖ್ಯೆ 3,883 ರಷ್ಟಿತ್ತು.

ಕೆ. ಸಿ. ಸಾರ್ವಜನಿಕ ಆಸ್ಪತ್ರೆ: 1939ರಲ್ಲಿ ಬೆಂಗಳೂರಿನಲ್ಲಿ 40 ಹಾಸಿಗೆಗಳೊಂದಿಗೆ ಹೆರಿಗೆ ಆಸ್ಪತ್ರೆಯಾಗಿ ಆರಂಭವಾದ ಮೊದಲ ಆಸ್ಪತ್ರೆ ಕೆಂಪ ಚೆಲುವಾಂಬಾ ಸಾರ್ವಜನಿಕ ಆಸ್ಪತ್ರೆ. 1962ರಲ್ಲಿ ಇದನ್ನು ಸಾರ್ವಜನಿಕ ಆಸ್ಪತ್ರೆಯಾಗಿ 313 ಹಾಸಿಗೆಗಳೊಂದಿಗೆ ಬದಲಾಯಿಸಲಾಯಿತು. ಈ ಆಸ್ಪತ್ರೆಯಲ್ಲಿ ಆಧುನಿಕ ಸಾಧನ ಸಲಕರಣಗಳುಳ್ಳ ವೈದ್ಯಕೀಯ, ಶಸ್ತ್ರ

ಚಿಕಿತ್ಸೆ, ಅಸ್ಥಿ ಚಿಕಿತ್ಸೆ, ಕಿವಿ-ಮೂಗು-ಗಂಟಲು ಚಿಕಿತ್ಸೆ, ಜೀವ ಕ್ರಿಯಾ ಚಿಕಿತ್ಸೆ, ಸ್ತ್ರೀರೋಗ ಚಿಕಿತ್ಸೆ, ನೇತ್ರರೋಗ, ದಂತ ರೋಗ, ಮತ್ತಿತರ ವಿಭಾಗಗಳಿವೆ. 1981ರಲ್ಲಿ ಈ ಆಸ್ಪತ್ರೆಯಲ್ಲಿ ಅನುಕ್ರಮವಾಗಿ ಚಿಕಿತ್ಸೆ ಪಡೆದ ಒಳ ಮತ್ತು ಹೊರರೋಗಿಗಳ ಸಂಖ್ಯೆ 13,902 ಮತ್ತು 1,64,965. ಈ ಸಂಖ್ಯೆ 1980 ರಲ್ಲಿ 14,570 ಮತ್ತು 77,775ರಷ್ಟಿತ್ತು.

ಎಸ್. ಡಿ. ಎಸ್. ಟಿ. ಬಿ. ಆಸ್ಪತ್ರೆ: ಬೆಂಗಳೂರಿನಲ್ಲಿರುವ ಶಾಂತಾಬಾಯಿ ದೇವರಾವ್ ಶಿವರಾಂ ಕ್ಷಯರೋಗದ ಆಸ್ಪತ್ರೆ ಬೆಂಗಳೂರು ನಗರದ ಓರ್ವ ವಾಣಿಜ್ಯೋದ್ಯಮಿಯಾಗಿದ್ದ ದಿ|| ದೇವರಾವ್ ಶಿವರಾಂ ಅವರ ಕೊಡುಗೆಯಿಂದ 1948ರಲ್ಲಿ ಸ್ಥಾಪಿತವಾಯಿತು. ಈಗ ಇಲ್ಲಿ ಇರುವ ಹಾಸಿಗೆ ಸೌಲಭ್ಯದ ಸಂಖ್ಯೆ 470. ಕ್ಷಯಕ್ಕೆ ಸಂಬಂಧಿಸಿದ ಎಲ್ಲ ರೋಗಗಳಿಗೂ ಇಲ್ಲಿ ಚಿಕಿತ್ಸೆ ನೀಡಲಾಗುತ್ತದೆ. ಈ ಸರ್ಕಾರೀ ಆಸ್ಪತ್ರೆಯಲ್ಲಿ 1981ರಲ್ಲಿ 3,305 ಒಳರೋಗಿಗಳು ಮತ್ತು 6,527 ಹೊರ ರೋಗಿಗಳೂ ಚಿಕಿತ್ಸೆ ಪಡೆದಿದ್ದಾರೆ. ಅದರ ಹಿಂದಿನ ವರ್ಷ ಈ ಸಂಖ್ಯೆ ಅನುಕ್ರಮವಾಗಿ 2,984 ಮತ್ತು 6,643 ರಷ್ಟಿತ್ತು.

ಶ್ರೀ ಜೆ. ಜಿ. ಸಹಕಾರಿ ಆಸ್ಪತ್ರೆ: ಉತ್ತರ ಕರ್ನಾಟಕ ಹಾಗೂ ದಕ್ಷಿಣ ಮಹಾರಾಷ್ಟ್ರ ಪ್ರದೇಶದ ಕೆಲವು ಪ್ರಮುಖ ಸಹಕಾರಿಗಳು ಸೇವಾ ಉದ್ದೇಶದಿಂದ 1951ರಲ್ಲಿ ಸ್ಥಾಪಿಸಿದ ಸಂಸ್ಥೆ ಶ್ರೀ ಜೆ. ಜಿ. ಸಹಕಾರಿ ಆಸ್ಪತ್ರೆ ನಿಯಮಿತ, ಘಟಪ್ರಭಾ, ಇದರ ಪ್ರಮುಖ ಕಟ್ಟಡದಲ್ಲಿ 125 ಹಾಸಿಗೆ ಸೌಲಭ್ಯಕ್ಕೆ ಅವಕಾಶವಿದೆ. ಜೊತೆಗೆ ತುರ್ತು ಚಿಕಿತ್ಸಾ ವಿಭಾಗ, ಶಸ್ತ್ರ ಚಿಕಿತ್ಸೆ ಹಾಗೂ ವೈದ್ಯಕೀಯ ವಿಭಾಗಗಳಿವೆ. ಇಲ್ಲಿ ಸುಸಜ್ಜಿತವಾದ ಶಸ್ತ್ರ ಚಿಕಿತ್ಸಾ ಕೋಣೆಯೊಂದಿಗೆ ಒಳ್ಳೆಯ ಪ್ರಯೋಗಾಲಯ ಮತ್ತು ಕ್ಷ-ಕಿರಣ ವಿಭಾಗಗಳೂ ಇವೆ. ಕರ್ನಾಟಕ ಸರಕಾರದ ಆರ್ಥಿಕ ನೆರವಿನಿಂದ 1974-75ರಲ್ಲಿ 75 ಹಾಸಿಗೆ ಸೌಲಭ್ಯವುಳ್ಳ ಕ್ಷಯರೋಗ ಆಸ್ಪತ್ರೆ ಕಟ್ಟಡವೊಂದನ್ನು ನಿರ್ಮಿಸಲಾಗಿದೆ. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ಕ್ಷಯರೋಗಿಗಳ ಸಂಖ್ಯೆ ಅನುಕ್ರಮವಾಗಿ 76 ಮತ್ತು 588 ರಷ್ಟಿತ್ತು. ಇದು 1980ರಲ್ಲಿ ಅನುಕ್ರಮವಾಗಿ 38 ಮತ್ತು 618 ರಷ್ಟಿತ್ತು. ಕ್ಷಯರೋಗದ ಹೊರತಾಗಿ ಚಿಕಿತ್ಸೆ ಪಡೆದ ಇತರ ಒಳ ಮತ್ತು ಹೊರ ರೋಗಿಗಳ ಸಂಖ್ಯೆ 1981ರಲ್ಲಿ 1,257 ಮತ್ತು 2,610. ಈ ಸಂಖ್ಯೆ 1980ರಲ್ಲಿ 1,719 ಮತ್ತು 2,613 ರಷ್ಟಿತ್ತು.

ಕೆ. ಎನ್. ಟಿ. ಬಿ. ಆಸ್ಪತ್ರೆ: 1958ರಲ್ಲಿ ಕೋಲಾರದಲ್ಲಿ ಆರಂಭವಾದ ಕಮಲಾ ನೆಹರೂ ಕ್ಷಯರೋಗ ಆಸ್ಪತ್ರೆಯ ಹಾಸಿಗೆ ಸೌಲಭ್ಯದ ಸಾಮರ್ಥ್ಯ ಪ್ರಾರಂಭದಲ್ಲಿ 160 ರಷ್ಟಿತ್ತು. ಈಗ ಆ ಸಾಮರ್ಥ್ಯವನ್ನು 264ಕ್ಕೆ ಹೆಚ್ಚಿಸಲಾಗಿದೆ. 1980ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 1,740 ಮತ್ತು 1,587 ರಷ್ಟಿತ್ತು. ಇದು 1981ರಲ್ಲಿ ಅನುಕ್ರಮವಾಗಿ 1,440 ಮತ್ತು 1,660 ಆಯಿತು.

ಐ. ಟಿ. ಐ. ನಿಯಮಿತ ಸಾರ್ವಜನಿಕ ಆಸ್ಪತ್ರೆ: ಬೆಂಗಳೂರಿನ ದೂರವಾಣಿ ನಗರದಲ್ಲಿರುವ ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ನಿಯಮಿತ ಸಾರ್ವಜನಿಕ ಆಸ್ಪತ್ರೆ 1951ರಲ್ಲಿ ಸ್ಥಾಪಿತವಾಯಿತು. ಈಗ ಪೂರ್ಣ ಸುಸಜ್ಜಿತ ಆಸ್ಪತ್ರೆಯಾಗಿರುವ ಈ ಸಂಸ್ಥೆಯಲ್ಲಿ 200 ಹಾಸಿಗೆಗಳ ಸೌಲಭ್ಯವಿದೆ. ಜೊತೆಗೆ ವೈದ್ಯಕೀಯ, ಶಸ್ತ್ರ ಚಿಕಿತ್ಸೆ, ಪ್ರಸೂತಿ ಮತ್ತು ಸ್ತ್ರೀರೋಗ, ಮಕ್ಕಳ ರೋಗ, ಹೃದ್ರೋಗ ಮತ್ತು ತುರ್ತು ಚಿಕಿತ್ಸಾ ವಿಭಾಗಗಳಿವೆ. ಇಲ್ಲಿ ಎರಡು ಹವಾ ನಿಯಂತ್ರಿತ ಶಸ್ತ್ರ ಚಿಕಿತ್ಸಾ ಕೋಣೆಗಳಿವೆ. ವಿಸ್ತೃತ ಸ್ವರೂಪದ ಸೌಲಭ್ಯಗಳು ಇಲ್ಲಿ ದೊರೆಯುತ್ತವೆ. ಇದರಲ್ಲಿ ರೋಗ ನಿರೋಧಕ ಹಾಗೂ ಚಿಕಿತ್ಸಕ ಕ್ರಮಗಳೂ ಸೇರಿವೆ. ಇಲ್ಲಿ ಮೂರು ಜನ ಕೈಗಾರಿಕಾ ಆರೋಗ್ಯ ತಜ್ಞರಿರುವ ಒಂದು ಪೂರ್ಣ ಅವಧಿಯ ಕೈಗಾರಿಕಾ ಆರೋಗ್ಯ ಕೇಂದ್ರವಿದೆ. ಸಂಸ್ಥೆಯ ಎಲ್ಲ ವಿಭಾಗಗಳಲ್ಲೂ ಪ್ರಮುಖವಾದ ಅತ್ಯಾಧುನಿಕ ಸಾಧನ ಸಲಕರಣೆಗಳಿವೆ. ಈ ಆಸ್ಪತ್ರೆಯಲ್ಲಿ ಪ್ರತ್ಯೇಕ ಕುಟುಂಬ ಕಲ್ಯಾಣ ಕೇಂದ್ರವೊಂದನ್ನು ನಡೆಸಲಾಗುತ್ತಿದೆ. ಇಲ್ಲಿ ಕ್ಷಯರೋಗಕ್ಕಾಗಿ 1981ರಲ್ಲಿ 360 ಜನ ಚಿಕಿತ್ಸೆ ಪಡೆದಿದ್ದರೆ ಅದರ ಹಿಂದಿನ ವರ್ಷ 350 ಜನ ಚಿಕಿತ್ಸೆ ಪಡೆದಿದ್ದರು. ಕ್ಷಯರೋಗವಲ್ಲದ ಇತರ ರೋಗಗಳಿಗಾಗಿ 1981 ರಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 52,636 ಮತ್ತು 17,126. ಈ ಸಂಖ್ಯೆ 1980ರಲ್ಲಿ ಅನುಕ್ರಮವಾಗಿ 54,060 ಮತ್ತು 90,290 ರಷ್ಟಿತ್ತು. ಈ ಆಸ್ಪತ್ರೆಯಲ್ಲಿ 1981ರಲ್ಲಿ ನಿರ್ವಹಿಸಿದ ಹೆರಿಗೆ ಸೇವೆಗಳ ಸಂಖ್ಯೆ 8,561. ಅದರ ಹಿಂದಿನ ವರ್ಷ ಈ ಸಂಖ್ಯೆ 9,290 ರಷ್ಟಿತ್ತು.

ಕರ್ನಾಟಕ ವೈದ್ಯಕೀಯ ಕಾಲೇಜು ಆಸ್ಪತ್ರೆ, ಹುಬ್ಬಳ್ಳಿ: ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಕಾಲೇಜಿನ ಬೋಧನ ಆಸ್ಪತ್ರೆಯಾಗಿ 1960ರಲ್ಲಿ ಆರಂಭವಾದ ಸಂಸ್ಥೆ ಕರ್ನಾಟಕ ವೈದ್ಯಕೀಯ ಕಾಲೇಜು ಆಸ್ಪತ್ರೆ. ಆರಂಭದಲ್ಲಿದ್ದ 150 ಹಾಸಿಗೆಗಳ ಸಾಮರ್ಥ್ಯವನ್ನು ಈಗ 770ಕ್ಕೆ ಹೆಚ್ಚಿಸಲಾಗಿದೆ. ತಜ್ಞವೈದ್ಯರು, ಆಧುನಿಕ ಸಲಕರಣೆಗಳು, ಪ್ರಯೋಗಾಲಯ ಸೌಲಭ್ಯಗಳು ಮತ್ತು ತನ್ನದೇ ಆದ ಔಷಧ ಘಟಕವನ್ನು ಹೊಂದಿರುವ ಈ ಆಸ್ಪತ್ರೆಯಲ್ಲಿ ಎಲ್ಲ ಬಗೆಯ ವೈದ್ಯಕೀಯ ಸೇವೆಗಳನ್ನೂ ಒದಗಿಸಲಾಗುತ್ತಿದೆ. ಕ್ಷಯ ರೋಗಿಗಳಿಗಾಗಿ 40 ವಾರ್ಡುಗಳಿರುವ ಈ ಆಸ್ಪತ್ರೆಯಲ್ಲಿ 1981ರಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ಕ್ಷಯರೋಗಿಗಳ ಸಂಖ್ಯೆ 1,052 ಮತ್ತು

5,972 ರಷ್ಟಿತ್ತು. ಈ ಸಂಖ್ಯೆ 1980ರಲ್ಲಿ ಅನುಕ್ರಮವಾಗಿ 1,075 ಮತ್ತು 6,984 ರಷ್ಟಿತ್ತು. 1981ರಲ್ಲಿ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಇತರ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 19,123 ಮತ್ತು 1,67,006 ರಷ್ಟಿತ್ತು. 1980ರಲ್ಲಿ 22,366 ಒಳರೋಗಿಗಳೂ, 2,35,156 ಹೊರರೋಗಿಗಳೂ ಇಲ್ಲಿ ಚಿಕಿತ್ಸೆ ಪಡೆದಿದ್ದರು.

ಅಖಿಲ ಭಾರತ ವಾಕ್‌ಶ್ರವಣ ಸಂಸ್ಥೆ : ಮೈಸೂರಿನಲ್ಲಿರುವ ಅಖಿಲ ಭಾರತ ವಾಕ್-ಶ್ರವಣ ಸಂಸ್ಥೆಯು ಕೇಂದ್ರ ಸರ್ಕಾರದಿಂದ 1965ರಲ್ಲಿ ಸ್ಥಾಪಿತವಾಯಿತು. ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಆರ್ಥಿಕ ನೆರವಿನಿಂದ ಈ ಸಂಸ್ಥೆ ನಡೆಯುತ್ತಿದೆ. ಸಂಸ್ಥೆಯ ಮುಖ್ಯ ಉದ್ದೇಶಗಳೆಂದರೆ : 1) ತರಬೇತಿ, 2) ಚಿಕಿತ್ಸಾ ಸೇವೆ, 3) ಸಂಶೋಧನೆ ಮತ್ತು 4) ಸಾರ್ವಜನಿಕ ಶಿಕ್ಷಣ. ಈ ಸಂಸ್ಥೆಯು ಶೈಕ್ಷಣಿಕ ಕಾರ್ಯಕ್ರಮಕ್ಕಾಗಿ ಮೈಸೂರು ವಿಶ್ವವಿದ್ಯಾಲಯದಿಂದ ಅಂಗೀಕರಿಸಲ್ಪಟ್ಟಿದೆ. ಇಲ್ಲಿನ ಶೈಕ್ಷಣಿಕ ಕಾರ್ಯಕ್ರಮದಲ್ಲಿ ವಾಕ್ ಮತ್ತು ಶ್ರವಣದ ಮೂರು ವರ್ಷಗಳ ಬಿ.ಎಸ್‌ಸಿ. ಪದವಿ ಮತ್ತು ಎರಡು ವರ್ಷಗಳ ಎಂ.ಎಸ್‌ಸಿ. ಪದವಿಗಳು ಸೇರಿವೆ. ಎಂ.ಎಸ್‌ಸಿ. ಆದ ವಿದ್ಯಾರ್ಥಿಗಳು ಪಿಎಚ್‌.ಡಿ.ಗೂ ಹೆಸರನ್ನು ದಾಖಲು ಮಾಡಿಕೊಳ್ಳಬಹುದು. ಮೈಸೂರಿನಲ್ಲಿರುವ ಕೃಷ್ಣರಾಜೇಂದ್ರ ಆಸ್ಪತ್ರೆಯ ಶರೀರಶಾಸ್ತ್ರ, ಮಕ್ಕಳರೋಗ, ನರರೋಗ, ದಂತರೋಗ—ಇವುಗಳ ತಜ್ಞರು ಈ ಸಂಸ್ಥೆಯ ಚಿಕಿತ್ಸಾ ಸೇವೆಗಳಲ್ಲಿ ನೆರವಾಗುತ್ತಾರೆ. ಸಂಸ್ಥೆಯು ತನ್ನ ಹದಿನೇಳು ವರ್ಷಗಳ ಸೇವೆಯಲ್ಲಿ 198 ಬಿ.ಎಸ್‌ಸಿ. ಮತ್ತು 139 ಎಂ.ಎಸ್‌ಸಿ. ಪದವೀಧರರನ್ನು ನೀಡಿದೆಯಲ್ಲದೆ, 1,24,771 ವಾಕ್‌ಶ್ರವಣ ದೋಷ ಪ್ರಕರಣಗಳಲ್ಲಿ ನೆರವಾಗಿದೆ. ಶಿಬಿರಗಳಲ್ಲಿ ಪರೀಕ್ಷಿಸಿದ 46,321 ಪ್ರಕರಣಗಳೂ ಇದರಲ್ಲಿ ಸೇರಿವೆ. ಸಂಸ್ಥೆಯು ಶಾಲಾ ಉಪಾಧ್ಯಾಯರಿಗಾಗಿ ವಿಷಯ ನಿರ್ದೇಶಿತ ಕಾರ್ಯಕ್ರಮಗಳನ್ನೂ, ಸಶಸ್ತ್ರದಳದವರಿಗಾಗಿ ಅಲ್ಪಾವಧಿ ತರಗತಿಗಳನ್ನೂ ವಾಕ್‌ಶ್ರವಣ ಚಿಕಿತ್ಸೆಗಾಗಿ ಸಾಂಪ್ರದಾಯಿಕ ಶ್ರವಣ ಸಾಧನಗಳ ತರಬೇತಿಯನ್ನೂ ವ್ಯವಸ್ಥೆಗೊಳಿಸಿದೆ. ವಾಕ್‌ಶ್ರವಣಕ್ಕೆ ಸಂಬಂಧಿಸಿದಂತೆ ಐದು ರಾಷ್ಟ್ರೀಯ ವಿಚಾರ ಕಾರ್ಯಾಗಾರಗಳನ್ನೂ ನಡೆಸಿದೆ.

ಚಿನ್ಮಯ ಮಿಷನ್ ಆಸ್ಪತ್ರೆ : ಬೆಂಗಳೂರಿನಲ್ಲಿರುವ ಚಿನ್ಮಯ ಮಿಷನ್ ಆಸ್ಪತ್ರೆಯು 1969ರಲ್ಲಿ ಒಂದು ಉಚಿತ ಹೊರರೋಗಿಗಳ ಚಿಕಿತ್ಸಾಲಯವಾಗಿ ಸಣ್ಣ ಪ್ರಮಾಣದಲ್ಲಿ ಆರಂಭವಾಯಿತು. ಬಡಜನರ ರೋಗ ಚಿಕಿತ್ಸಾ ಅಗತ್ಯಗಳನ್ನು ಪೂರೈಸಲು ಯಾವುದೇ ಲಾಭ-ನಷ್ಟಗಳಿಲ್ಲದ ಆಧಾರದ ಮೇಲೆ ಸ್ವಾಮಿ ಚಿನ್ಮಯಾನಂದಜೀ ಅವರ ಭಕ್ತರು ಈ ಚಿಕಿತ್ಸಾಲಯವನ್ನು ಆರಂಭಿಸಿದರು. 1970ರಲ್ಲಿ ಒಳರೋಗಿಗಳ ಸೇವೆಗಾಗಿ ಇಲ್ಲಿ 20 ಹಾಸಿಗೆಗಳ ಸೌಲಭ್ಯವನ್ನು ಕಲ್ಪಿಸಲಾಯಿತು. ಈಗ ಇರುವ ಹಾಸಿಗೆಗಳ ಸಂಖ್ಯೆ 60. ಕ್ಷಯ, ಗಂಟಲು ಬೇನೆ, ಕಾಲರಾ, ಪ್ಲೇಗು, ಸಿಡುಬುಗಳಂತಹ ಸಾಂಕ್ರಾಮಿಕ ರೋಗಗಳ ವಿನಾ ಉಳಿದ ಎಲ್ಲ ರೋಗಗಳಿಗೂ ಈ ಆಸ್ಪತ್ರೆಯಲ್ಲಿ ಚಿಕಿತ್ಸಾ ವ್ಯವಸ್ಥೆ ಇದೆ. ಇಲ್ಲಿ ಕಿವಿ, ಮೂಗು, ಗಂಟಲು ವಿಭಾಗ, ನೇತ್ರ ಚಿಕಿತ್ಸೆ, ಅಸ್ಥಿ ಚಿಕಿತ್ಸೆ, ಶಸ್ತ್ರ ಚಿಕಿತ್ಸೆ, ಮನೋರೋಗ ಚಿಕಿತ್ಸೆ, ಕ್ಷಕಿರಣ ವ್ಯವಸ್ಥೆ, ಸ್ತ್ರೀರೋಗ, ಮಕ್ಕಳರೋಗ ಚಿಕಿತ್ಸೆ, ನರರೋಗ ಚಿಕಿತ್ಸೆ, ಔಷಧ ವಿಭಾಗ—ಹೀಗೆ ನಾನಾ ವಿಭಾಗಗಳು ಕೆಲಸಮಾಡುತ್ತವೆ. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳರೋಗಿಗಳ ಮತ್ತು ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 1,628 ಮತ್ತು 19,564ರಷ್ಟಿತ್ತು. ಈ ಸಂಖ್ಯೆ 1980ರಲ್ಲಿ ಅನುಕ್ರಮವಾಗಿ 1,389 ಮತ್ತು 14,330ರಷ್ಟಿತ್ತು.

ಗುರುನಾನಕ್ ಆಸ್ಪತ್ರೆ : ಬಿದರೆಯಲ್ಲಿರುವ ಗುರುನಾನಕ್ ಆಸ್ಪತ್ರೆಯು 1970ರ ಮಾರ್ಚ್‌ನಲ್ಲಿ ಗುರುದ್ವಾರ ಸಾಹಿಬ್ ನಾನಕ್ ಝೀರಾ ಸಂಸ್ಥೆಯವರಿಂದ ಸ್ಥಾಪಿಸಲ್ಪಟ್ಟಿತು. ಈ ಆಸ್ಪತ್ರೆಯು ಒಂದು ಧರ್ಮಸಂಸ್ಥೆಯಾಗಿದ್ದು ಇಲ್ಲಿ ಜಾತಿ-ಮತ ಬೇಧವಿಲ್ಲದೆ ಉಚಿತ ಚಿಕಿತ್ಸೆ ನೀಡಲಾಗುತ್ತದೆ. ಶಸ್ತ್ರ ಚಿಕಿತ್ಸಾ ಕೋಣೆ, ಕ್ಷ-ಕಿರಣ ಸ್ಥಾವರ, ಇ.ಸಿ.ಜಿ ಮತ್ತು ರೋಗ ಲಕ್ಷಣ ತಪಾಸಣೆ ಸಾಧನಗಳಿಂದ ಸಜ್ಜುಗೊಂಡಿರುವ ಈ ಆಸ್ಪತ್ರೆಯಲ್ಲಿ 25 ಹಾಸಿಗೆಗಳ ಸೌಲಭ್ಯವಿದೆ. 1980ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರರೋಗಿಗಳ ಒಟ್ಟು ಸಂಖ್ಯೆ ಅನುಕ್ರಮವಾಗಿ 175 ಮತ್ತು 49,506.

ಸೇಟ್ ಪರಮಾನಂದ್ ದೀಪಚಂದ್ ಹಿಂದುಜಾ ಸಿಂಧಿ ಧರ್ಮಾರ್ಥ ಆಸ್ಪತ್ರೆ : ಇದು ಬೆಂಗಳೂರಿನಲ್ಲಿ 1971ರಲ್ಲಿ ಹೊರರೋಗಿಗಳ ಒಂದು ಸೇವಾ ವಿಭಾಗವಾಗಿ ಆರಂಭವಾಯಿತು. ಆಗ ವೈದ್ಯಕೀಯ ಸಮಾಲೋಚನೆ ವಿಭಾಗ, ಚಿಕಿತ್ಸಾ ಪ್ರಯೋಗಾಲಯ, ಕ್ಷ-ಕಿರಣ ಮತ್ತು ದಂತ ಚಿಕಿತ್ಸಾ ವಿಭಾಗಗಳು ಕೆಲಸ ಮಾಡುತ್ತಿದ್ದುವು. 1975ರಲ್ಲಿ 50 ಹಾಸಿಗೆಗಳ ಸೌಲಭ್ಯವನ್ನೂ ಕಲ್ಪಿಸಿ, ನಂತರ ಎರಡು ಪೂರ್ಣ ಸುಸಜ್ಜಿತ ಶಸ್ತ್ರಚಿಕಿತ್ಸೆ ಕೋಣೆಗಳು ಹಾಗೂ ಪ್ರಸೂತಿಗೃಹ ಮತ್ತು ಜೀವಕ್ರಿಯಾ ಚಿಕಿತ್ಸೆ ಇತ್ಯಾದಿ ವಿಭಾಗಗಳೊಂದಿಗೆ ವಿಸ್ತರಿಸಲಾಯಿತು. 1978 ರಲ್ಲಿ ಒಳರೋಗಿಗಳ ಸೌಲಭ್ಯವನ್ನೂ 90 ಹಾಸಿಗೆಗೆ ಹೆಚ್ಚಿಸಲು ಮತ್ತೆ ವಿಸ್ತರಿಸಲಾಯಿತು. ಈ ಆಸ್ಪತ್ರೆಯಲ್ಲಿ ಕ್ಷ-ಕಿರಣ ಮತ್ತು ಶರೀರ ತಪಾಸಣಾ ವಿಭಾಗಗಳು, ಎರಡು ಹವಾ ನಿಯಂತ್ರಿತ ಶಸ್ತ್ರ ಚಿಕಿತ್ಸಾ ಕೋಣೆಗಳು, ಒಂದು ಸಂಶೋಧನಾ ವಿಭಾಗ, ಇವುಗಳನ್ನು ಪ್ರಾರಂಭಿಸುವ ಉದ್ದೇಶವಿದೆ. ಜೊತೆಗೆ ಮಕ್ಕಳ ಹೃದ್ರೋಗ ವಿಶ್ಲೇಷಣೆಗೆ ಅಗತ್ಯವಾದ ಪೂರ್ವ ಪರಿಶೀಲನಾ ಸೌಲಭ್ಯಗಳು ಹಾಗೂ ಹೃದಯ ಪರೀಕ್ಷಕ ವಿಭಾಗಗಳನ್ನು ಸೇರಿಸುವ ಯೋಜನೆ ಇದೆ. ಈ ಆಸ್ಪತ್ರೆಗೆ 24 ಜನ ಗೌರವ ವೈದ್ಯರುಗಳ ಸೇವೆ ದೊರೆಯುತ್ತಿದ್ದು ಎಲ್ಲ ಬಗೆಯ ರೋಗಗಳ

ಪರೀಕ್ಷೆ ಹಾಗೂ ಚಿಕಿತ್ಸೆಗೆ ಅಗತ್ಯವಾದ ಸಾಧನ ಸಲಕರಣೆಗಳಿವೆ. 1981ರಲ್ಲಿ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 2,652 ಮತ್ತು 44,880 ರಷ್ಟಿತ್ತು. ಅದರ ಹಿಂದಿನ ವರ್ಷ ಈ ಸಂಖ್ಯೆ ಅನುಕ್ರಮವಾಗಿ 1,736 ಮತ್ತು 46,152ರಷ್ಟಿತ್ತು.

ಶ್ರೀ ವೆಂಕಟೇಶ್ವರ ಕಿವಿ, ಮೂಗು, ಗಂಟಲು ರೋಗ ಚಿಕಿತ್ಸಾ ಸಂಸ್ಥೆ: ಕಿವಿ, ಮೂಗು, ಗಂಟಲಿಗೆ ಸಂಬಂಧಿಸಿದ ರೋಗ ಚಿಕಿತ್ಸೆಗೆ ಪೂರ್ಣಸಜ್ಜಿತ ಕೇಂದ್ರವಾಗಿ ಹಾಗೂ ಬೆಂಗಳೂರು ವೈದ್ಯಕೀಯ ಕಾಲೇಜಿನ ಪದವೀಧರ ಹಾಗೂ ಸ್ನಾತಕ ಪದವೀಧರ ವಿದ್ಯಾರ್ಥಿಗಳಿಗೆ ಬೋಧನಾ ಸಂಸ್ಥೆಯಾಗಿ ಬೆಂಗಳೂರಿನಲ್ಲಿ 1975ರಲ್ಲಿ ಈ ಸಂಸ್ಥೆಯನ್ನು ಆರಂಭಿಸಲಾಯಿತು. ಅದೇ ವರ್ಷ ಈ ಸಂಸ್ಥೆಯ ಕಟ್ಟಡದ ನೆಲ ಅಂತಸ್ತನ್ನು ನಿರ್ಮಿಸಲಾಯಿತಲ್ಲದೆ ಹೊರರೋಗಿಗಳ ವಿಭಾಗವೂ ಕಾರ್ಯಾರಂಭ ಮಾಡಿತು. ಈ ನೆಲ ಅಂತಸ್ತಿನ ನಿರ್ಮಾಣಕ್ಕೆ ಕರ್ನಾಟಕ ಸರಕಾರ, ಬೆಂಗಳೂರು ನಗರ ಕಾರ್ಪೊರೇಷನ್, ಸಾರ್ವಜನಿಕ ದಾನಿಗಳು ಮತ್ತು ಸ್ವಯಂಸೇವಾ ಸಂಸ್ಥೆಗಳು ಉದಾರವಾಗಿ ಕೊಡುಗೆ ನೀಡಿದ್ದಾರೆ. ಇಲ್ಲಿ ಗಲಗ್ರಂಥಿ, ಗಂಟಲ ಕುಹರ, ಮೂಗು ಮತ್ತು ಎಲುಬುಕುಳಿ ಇವುಗಳ ಸೋಂಕುಗಳು, ಕಿವಿ, ಮೂಗು ಮತ್ತು ಗಂಟಲಿನ ಗಂತಿಗಳು, ಗುಳ್ಳೆಗಳು, ಧ್ವನಿಯ ಅವ್ಯವಸ್ಥೆ ಮತ್ತು ಕಿವಿಯ ಸೋಂಕು ಹಾಗೂ ಕಿವುಡು ಇತ್ಯಾದಿ ರೋಗಗಳ ಪರೀಕ್ಷೆ ಹಾಗೂ ಚಿಕಿತ್ಸೆ ನಡೆಯುತ್ತಿದೆ. ಈ ಸಂಸ್ಥೆಯು ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಯ ಒಂದು ಭಾಗವಾಗಿದೆ.

ಸೇಂಟ್ ಜಾನ್ ವೈದ್ಯಕೀಯ ಕಾಲೇಜು ಆಸ್ಪತ್ರೆ: ಬೆಂಗಳೂರಿನಲ್ಲಿರುವ ಸೇಂಟ್ ಜಾನ್ ವೈದ್ಯಕೀಯ ಕಾಲೇಜು ಆಸ್ಪತ್ರೆ 1975ರಲ್ಲಿ ಆರಂಭವಾಯಿತು. ಎಲ್ಲ ಸೌಲಭ್ಯಗಳಿಂದ ಸುಸಜ್ಜಿತವಾಗಿರುವ ಈ ಆಸ್ಪತ್ರೆ ಸೇಂಟ್ ಜಾನ್ ವೈದ್ಯಕೀಯ ಕಾಲೇಜಿಗೆ ಹೊಂದಿಕೊಂಡಿದ್ದು ಇಲ್ಲಿ ಎಲ್ಲ ರೋಗಗಳಿಗೂ ಚಿಕಿತ್ಸೆ ನೀಡಲಾಗುತ್ತದೆ. ಆರಂಭದಲ್ಲಿ 24 ಹಾಸಿಗೆಗಳಿದ್ದ ಈ ಆಸ್ಪತ್ರೆಯಲ್ಲಿ ಈಗ 401 ಹಾಸಿಗೆಗಳ ಸೌಲಭ್ಯ ಇದೆ. ಔಷಧಿ, ಶಸ್ತ್ರ ಚಿಕಿತ್ಸೆ, ಮಕ್ಕಳ ರೋಗ, ಪ್ರಸೂತಿ ಹಾಗೂ ಸ್ತ್ರೀರೋಗ, ಹೃದ್ರೋಗ ಇತ್ಯಾದಿ ವಿವಿಧ ಕಾರ್ಯ ಶಾಖೆಗಳು ಇಲ್ಲಿ ಕೆಲಸ ಮಾಡುತ್ತಿವೆ. 1980ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ಕ್ಷಯರೋಗಿಗಳ ಸಂಖ್ಯೆ ಅನುಕ್ರಮವಾಗಿ 315 ಮತ್ತು 6,698 ಇದ್ದರೆ 1979ರಲ್ಲಿ ಇದು ಅನುಕ್ರಮವಾಗಿ 415 ಮತ್ತು 5,349ರಷ್ಟಾಗಿತ್ತು. ಕ್ಷಯರೋಗವಲ್ಲದ ಇತರ ರೋಗಗಳ ಒಳ ಮತ್ತು ಹೊರರೋಗಿಗಳ ಸಂಖ್ಯೆ 1981ರಲ್ಲಿ ಅನುಕ್ರಮವಾಗಿ 8,209 ಮತ್ತು 85,638 ಆಗಿದ್ದರೆ 1980ರಲ್ಲಿ ಈ ಸಂಖ್ಯೆಗಳು ಅನುಕ್ರಮವಾಗಿ 6,698 ಮತ್ತು 74,010 ಆಗಿತ್ತು. 1981ರ ಅವಧಿಯಲ್ಲಿ ಇಲ್ಲಿ ನಡೆದ ಹೆರಿಗೆ ಸೇವೆಗಳ ಸಂಖ್ಯೆ 616 ಇದ್ದರೆ 1980ರಲ್ಲಿ 540 ಆಗಿತ್ತು.

ಬಸವಾಶ್ರಮ ಉಚಿತ ಆಸ್ಪತ್ರೆ: ಬೆಂಗಳೂರಿನ ಬಸವಾಶ್ರಮ ಉಚಿತ ಆಸ್ಪತ್ರೆ 1979ರಲ್ಲಿ ಸ್ಥಾಪಿತವಾಯಿತು. ನಗರಕ್ಕೆ ಸ್ವಲ್ಪ ದೂರದಲ್ಲಿರುವ ಕೆಂಗೇರಿ ಬಳಿ ಎತ್ತರದ ಪ್ರದೇಶದಲ್ಲಿರುವ ಈ ಆಸ್ಪತ್ರೆ ಪ್ರಶಾಂತ ವಾತಾವರಣದಲ್ಲಿದ್ದು ಪ್ರಕೃತಿ ಚಿಕಿತ್ಸೆಗೆ ಅತ್ಯಂತ ಸೂಕ್ತವಾಗಿದೆ. ಕೆಲವು ಧಾರ್ಮಿಕ ದೃಷ್ಟಿಯ ವೈದ್ಯರು ಈ ಆಸ್ಪತ್ರೆಗೆ ಸಾಕಷ್ಟು ಔಷಧಿಗಳನ್ನು ಉಚಿತವಾಗಿ ಕೊಡುತ್ತಾರೆ. ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದ ಗ್ರಾಮಾಂತರ ಜನರ ಸೇವೆಗಾಗಿ ಈ ಆಸ್ಪತ್ರೆಯನ್ನು ಆರಂಭಿಸಲಾಗಿದೆ. ಎಲ್ಲ ಸಾಮಾನ್ಯ ರೋಗಗಳಿಗೂ ಚಿಕಿತ್ಸೆ ನೀಡುವ ಈ ಆಸ್ಪತ್ರೆಯಲ್ಲಿ 1980ರಲ್ಲಿ 1,674 ಜನ ಹೊರ ರೋಗಿಗಳು ಚಿಕಿತ್ಸೆ ಪಡೆದರು.

ಜಯದೇವ ಹೃದ್ರೋಗ ಸಂಸ್ಥೆ: 1979ರ ಮಾರ್ಚ್ ತಿಂಗಳಲ್ಲಿ ವಿಕ್ಟೋರಿಯಾ ಆಸ್ಪತ್ರೆಯ ಸಂಕೀರ್ಣದಲ್ಲಿ ಒಂದು ಪ್ರತ್ಯೇಕ ಹಾಗೂ ಸ್ವತಂತ್ರ ಹೃದ್ರೋಗ ಚಿಕಿತ್ಸಾಲಯವು ಜಯದೇವ ಹೃದ್ರೋಗ ಸಂಸ್ಥೆ ಎಂಬ ಹೆಸರಿನಲ್ಲಿ ಕಾರ್ಯಾರಂಭ ಮಾಡಿತು. ಇಲ್ಲಿರುವ ಹೃದ್ರೋಗ ಅಪಕರ್ಷಕ ಪ್ರಯೋಗಾಲಯವು ಸುಮಾರು 30 ಲಕ್ಷ ರೂ. ಬೆಲೆ ಬಾಳುವ ಅತ್ಯಾಧುನಿಕ ಸಾಧನ ಸಲಕರಣೆಗಳಿಂದ ಸುಸಜ್ಜಿತಗೊಂಡಿದೆ. ಇಲ್ಲಿ ಪರಿಮಿತ ಹಾಗೂ ತೆರೆದ ಹೃದಯ ಶಸ್ತ್ರ ಚಿಕಿತ್ಸೆಗೆ ಎಂಟು ಲಕ್ಷ ರೂ. ಬೆಲೆ ಬಾಳುವ ಸಾಧನಗಳ ಸೌಲಭ್ಯಗಳನ್ನೂ ಪಡೆದಿರುವ ಹತ್ತು ವಿವಿಧ ಶಾಖೆಗಳಿವೆ. ಈ ಸಂಸ್ಥೆಯನ್ನು ಕೇವಲ ರೋಗ ತಪಾಸಣೆ ಹಾಗೂ ರೋಗ ಚಿಕಿತ್ಸಾ ಕೇಂದ್ರವಾಗಿ ಮಾತ್ರವಲ್ಲದೆ ವೈದ್ಯರು ಮತ್ತು ವೈದ್ಯೇತರ ಸಿಬ್ಬಂದಿಯ ತರಬೇತಿ ಕೇಂದ್ರವಾಗಿಯೂ ಹಾಗೂ ಸಂಶೋಧನಾ ಕೇಂದ್ರವಾಗಿಯೂ ಯೋಜಿಸಲಾಗಿದೆ. ಇದನ್ನು ಒಂದು ಪ್ರಾದೇಶಿಕ ಸಂಸ್ಥೆಯಾಗಿ ಅಭಿವೃದ್ಧಿ ಪಡಿಸಲು ಪ್ರಯತ್ನಗಳು ನಡೆಯುತ್ತಿವೆ. ಇಲ್ಲಿ ಎಲ್ಲ ಬಗೆಯ ಹೃದಯ ರಕ್ತನಾಳಗಳಿಗೆ ಸಂಬಂಧಿಸಿದ ರೋಗಗಳಿಗೂ ಚಿಕಿತ್ಸೆ ನೀಡಲಾಗುತ್ತದೆ. ಆರಂಭದಲ್ಲಿ ಕೇವಲ 20 ಹಾಸಿಗೆ ಸೌಲಭ್ಯವಿದ್ದ ಇಲ್ಲಿ ಈಗ 65 ಹಾಸಿಗೆಗಳ ಸೌಲಭ್ಯವಿದೆ. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದವರ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 1,842 ಮತ್ತು 21,508. ಈ ಸಂಸ್ಥೆಯಲ್ಲಿ 1982ರಲ್ಲಿ 672 ಶಸ್ತ್ರ ಚಿಕಿತ್ಸೆಗಳು ನಡೆದಿದ್ದರೆ 1981ರಲ್ಲಿ 398 ಶಸ್ತ್ರ ಚಿಕಿತ್ಸೆಗಳು ನಡೆದಿವೆ. ಇವುಗಳಲ್ಲಿ 338 ದೊಡ್ಡ ಹೃದಯ ಶಸ್ತ್ರ ಚಿಕಿತ್ಸೆಗಳು, 18 ತೆರೆದ ಹೃದಯ ಚಿಕಿತ್ಸೆಗಳು ಹಾಗೂ ರೋಗಿಗಳಿಗೆ ಶಾಶ್ವತ ಹೃದಯ ಚಲನಗತಿ ಮಾರ್ಗದರ್ಶಿ ('ಪೇಸ್ ಮೇಕರ್')ಗಳನ್ನು ಜೋಡಿಸುವುದೂ ಸೇರಿದೆ.

## ಶುಶ್ರೂಷಾ ಸೇವೆಗಳು

ಶುಶ್ರೂಷಾ ಸೇವೆಗಳು ಆರೋಗ್ಯ ಸೇವೆಗಳ ಅವಿಭಾಜ್ಯ ಅಂಗ. ರಾಜ್ಯದಲ್ಲಿ ಆಸ್ಪತ್ರೆಯ ಶುಶ್ರೂಷಾ ಆರೈಕೆ 1895ರಲ್ಲಿ ಬೆಂಗಳೂರಿನಲ್ಲಿ ಆರಂಭವಾದ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯಷ್ಟು ಹಳೆಯದು. ಆಗ ಈ ಆಸ್ಪತ್ರೆಗೆ ನೇಮಕಗೊಂಡ ದಾದಿಯರ ಮೇಲ್ವಿಚಾರಣೆಯನ್ನು ಫ್ರೆಂಚ್ ಕ್ರಿಸ್ತ ಸನ್ಯಾಸಿನಿಯರು ನೋಡಿಕೊಳ್ಳುತ್ತಿದ್ದರು. ಹತ್ತೊಂಬತ್ತನೇಯ ಶತಮಾನದ ಆದಿಭಾಗದಲ್ಲಿ ದಾದಿಯರು ಮತ್ತು ಸೂಲಗಿತ್ತಿಯರಿಗೆ ಕ್ರಮವಾದ ತರಬೇತಿ ಶಾಲೆಯನ್ನು ಆರಂಭಿಸಲಾಯಿತು. ಇಲ್ಲಿ ತರಬೇತಿ ಪಡೆದ ದಾದಿಯರು ಆರಂಭದಲ್ಲಿ ಮದರಾಸಿನ ದಾದಿಯರ ನೋಂದಾವಣೆ ಮಂಡಳಿಯಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಿಕೊಳ್ಳುತ್ತಿದ್ದರು. ಮೈಸೂರು ದಾದಿಯರು, ಸೂಲಗಿತ್ತಿಯರು ಮತ್ತು ಆರೋಗ್ಯ ಸಂದರ್ಶಕರ ಶಾಸನ 1972ರಲ್ಲಿ ಜಾರಿಗೆ ಬಂತು. ಈ ಕರ್ನಾಟಕ ದಾದಿಯರ ಮಂಡಳಿಯಲ್ಲಿ 1979ರಲ್ಲಿ ನೋಂದಾಯಿಸಲ್ಪಟ್ಟ ದಾದಿಯರು 4,174 ; ಆರೋಗ್ಯ ಸಂದರ್ಶಕರು 364 ; ಸಹಾಯಕ ಶುಶ್ರೂಷಣಾ ದಾದಿಯರು 1,447 ಮತ್ತು ಸೂಲಗಿತ್ತಿಯರು 2,469. ರಾಜ್ಯ ಪುನರ್ವಿಂಗಡಣೆಯಾದಾಗಿನಿಂದ ಶುಶ್ರೂಷಣ ಸೇವೆಯ ಅಭಿವೃದ್ಧಿ ತೀವ್ರಗತಿಯಲ್ಲಿ ನಡೆದಿದೆ. ಆರೋಗ್ಯ ಸೇವೆಗಳ ನಿರ್ದೇಶನಾಲಯದಲ್ಲಿ ಇಲಾಖಾ ಮುಖ್ಯರಿಗೆ ನೆರವಾಗಲು ಉಪನಿರ್ದೇಶಕ (ಶುಶ್ರೂಷೆ) ಹುದ್ದೆಯೊಂದಿದೆ. ವೈದ್ಯಕೀಯ ಕಾಲೇಜು ಆಸ್ಪತ್ರೆಗಳು ಕೆಲಸ ಮಾಡುತ್ತಿರುವ ಪ್ರತೀ ಜಿಲ್ಲೆಯಲ್ಲಿಯೂ ದಾದಿಯರ ಶಾಲೆಗಳಿವೆ. ಈ ಶಾಲೆಗಳ ವಾರ್ಷಿಕ ಪ್ರವೇಶ ಸಾಮರ್ಥ್ಯ 310. ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲಾ ಆಸ್ಪತ್ರೆಗಳಲ್ಲಿರುವ ದಾದಿಯರ ಶಾಲೆಗಳಲ್ಲಿ ಅರ್ಹ ಆರೋಗ್ಯ ಸಂದರ್ಶಕರು ಪೂರ್ಣ ತರಬೇತಿ ಪಡೆದ ದಾದಿಯರಾಗಲು ಸಾಮಾನ್ಯ ಶುಶ್ರೂಷಾ ವಿಷಯದಲ್ಲಿ ಸಂಕ್ಷಿಪ್ತ ತರಬೇತಿಯನ್ನು ನೀಡಲಾಗುತ್ತದೆ. ಕರ್ನಾಟಕದಲ್ಲಿ ಶುಶ್ರೂಷಾ ಸೇವೆಯ ಹೆಚ್ಚಿನ ತರಬೇತಿ 1962ರಷ್ಟು ಮುಂಚೆಯೇ ಆರಂಭವಾಯಿತು. ಆ ವರ್ಷ ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಹೊಂದಿಕೊಂಡಂತೆ ಆಸ್ಪತ್ರೆ ವಾರ್ಡುಗಳ ಆಡಳಿತದಲ್ಲಿ ಹಿರಿಯ ಶುಶ್ರೂಷಾ ಸಿಬ್ಬಂದಿಗೆ ತರಬೇತಿ ನೀಡಲು ಒಂದು ಶಾಲೆಯನ್ನು ಆರಂಭಿಸಲಾಯಿತು; ದಾದಿಯರ ಶಾಲೆಗಳಿಗೆ ಅಗತ್ಯವಾದ ಶುಶ್ರೂಷಾ ಬೋಧಕರನ್ನು ತರಬೇತಿಗೊಳಿಸಲು 1963ರಲ್ಲಿ ಶುಶ್ರೂಷಾ ಶಿಕ್ಷಣದಲ್ಲಿ ಡಿಪ್ಲೋಮಾ ಆರಂಭಿಸಲಾಯಿತು. 1971ರಲ್ಲಿ ಬೆಂಗಳೂರಿನಲ್ಲಿ ದಾದಿಯರ ಕಾಲೇಜೊಂದನ್ನು ಆರಂಭಿಸಲಾಯಿತು. ಈ ಕಾಲೇಜು, ಸೇವೆಯಲ್ಲಿರುವ ದಾದಿಯರಿಗಾಗಿ ಎರಡು ವರ್ಷ ಅವಧಿಯ ಬಿ.ಎಸ್ಸಿ. ನರ್ಸಿಂಗ್ (ಪೋಸ್ಟ್ ಸರ್ಟಿಫಿಕೇಟ್) ಮತ್ತು ವಿಜ್ಞಾನ ವಿಷಯವನ್ನು ಐಚ್ಛಿಕವಾಗಿ ಪಡೆದು ಪದವಿಪೂರ್ವ ಪರೀಕ್ಷೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗಾಗಿ ನಾಲ್ಕು ವರ್ಷಗಳ ಬಿ.ಎಸ್ಸಿ. ನರ್ಸಿಂಗ್ (ಬೇಸಿಕ್) ಹೀಗೆ ಎರಡು ಕಾರ್ಯಕ್ರಮಗಳನ್ನು ನಿರ್ವಹಿಸುತ್ತದೆ. ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಹೊಂದಿಕೊಂಡಿದೆ. ಪ್ರತೀ ವರ್ಷ ಈ ಕಾಲೇಜಿನಲ್ಲಿ ಬಿ.ಎಸ್ಸಿ. ನರ್ಸಿಂಗ್ (ಬೇಸಿಕ್) ಪದವಿಗೆ 35 ಜನರಿಗೂ ಬಿ.ಎಸ್ಸಿ. ನರ್ಸಿಂಗ್ (ಪೋಸ್ಟ್ ಸರ್ಟಿಫಿಕೇಟ್) ಪದವಿಗೆ 30 ಜನರಿಗೂ ಪ್ರವೇಶಾವಕಾಶವಿದೆ. ರಾಜ್ಯದಲ್ಲಿ ಶುಶ್ರೂಷಾ ಶ್ರೇಣಿಯ 102 ಗೆಜೆಟೆಡ್ ಹುದ್ದೆಗಳಿವೆ. ಇವುಗಳಲ್ಲಿ ನಾಲ್ಕು ಪ್ರಥಮ ದರ್ಜೆ ಹುದ್ದೆಗಳು. ಈಗ (1983) ರಾಜ್ಯದಲ್ಲಿ 2,672 ದಾದಿಯರು, 920 ಆರೋಗ್ಯ ಸಂದರ್ಶಕರು ಮತ್ತು 5,690 ಸಹಾಯಕ ಶುಶ್ರೂಷಾ ಸೂಲಗಿತ್ತಿಯರಿದ್ದಾರೆ.

## ಕುಟುಂಬ ಕಲ್ಯಾಣ

ಕುಟುಂಬ ಯೋಜನಾ ಕ್ಷೇತ್ರದಲ್ಲಿ ಕರ್ನಾಟಕವು ವಿಶಿಷ್ಟ ಸ್ಥಾನ ಪಡೆದಿದೆ. ಹಿಂದಿನ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಕುಟುಂಬ ಯೋಜನೆಯ ವಿಚಾರವನ್ನು ಮೊದಲು ಜಾರಿಗೆ ತಂದವರು ಅಂದಿನ ನಾಲ್ವಡಿ ಕೃಷ್ಣರಾಜ ಒಡೆಯರು. ಅವರ ಉದ್ದೇಶದಂತೆ, 1930ರಲ್ಲೇ ಬೆಂಗಳೂರಿನ ವಾಣಿ ವಿಲಾಸ ಆಸ್ಪತ್ರೆಯಲ್ಲಿ ಒಂದು ಮತ್ತು ಮೈಸೂರಿನ ಚೆಲುವಾಂಬಾ ಆಸ್ಪತ್ರೆಯಲ್ಲಿ ಒಂದು—ಹೀಗೆ ಎರಡು ಜನನ ನಿಯಂತ್ರಣ ಕೇಂದ್ರಗಳನ್ನು ಸರ್ಕಾರದ ವತಿಯಿಂದ ಆರಂಭಿಸಲಾಯಿತು. ಕುಟುಂಬ ಯೋಜನೆಯ ಉಪಯುಕ್ತತೆಯ ಮತ್ತು ಪ್ರಾಮುಖ್ಯತೆಯ ಬಗ್ಗೆ ತಾಯಂದಿರಿಗೆ ಸಲಹೆ ಕೊಡುವುದು ಈ ಕೇಂದ್ರಗಳ ಆಶಯವಾಗಿತ್ತು. ಈಗ ಕುಟುಂಬ ಕಲ್ಯಾಣ ಕಾರ್ಯಕ್ರಮವೆಂದು ಕರೆಸಿಕೊಂಡಿರುವ ಕುಟುಂಬ ಯೋಜನೆಗೆ ನಮ್ಮ ರಾಜ್ಯದಲ್ಲಿ ಹೆಚ್ಚಿನ ಚಾಲನೆ ದೊರೆತದ್ದು ಎರಡನೇಯ ಪಂಚವಾರ್ಷಿಕ ಯೋಜನೆಯ ಆರಂಭದಲ್ಲಿ ಎಂದು ಹೇಳಬಹುದು. ಆಗ ರಾಜ್ಯದಲ್ಲಿ ಕುಟುಂಬ ಯೋಜನಾ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡಲಿಕ್ಕಾಗಿಯೇ ಓರ್ವ ಆರೋಗ್ಯಾಧಿಕಾರಿಯನ್ನು ನೇಮಕ ಮಾಡಲಾಯಿತು. ಕುಟುಂಬ ಯೋಜನಾ ಕಾರ್ಯದ ನಾನಾ ಚಟುವಟಿಕೆಗಳ ಉತ್ತಮ ಮೇಲ್ವಿಚಾರಣೆ ಮತ್ತು ಸಮನ್ವಯಗಳಿಗಾಗಿ ಜಿಲ್ಲಾ ಮಟ್ಟದಲ್ಲಿದ್ದ ಜಿಲ್ಲಾ ಆರೋಗ್ಯಾಧಿಕಾರಿಗಳ ಹುದ್ದೆಗಳಿಗೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳೆಂದು ಪುನರ್ನಾಮಕರಣ ಮಾಡಲಾಯಿತು. 1964ರಲ್ಲಿ ಜಿಲ್ಲೆಗಳಲ್ಲಿ ಕುಟುಂಬ ಯೋಜನಾ ಚಟುವಟಿಕೆಗಳನ್ನು ನೋಡಿಕೊಳ್ಳಲು ಮತ್ತು ಅಗತ್ಯ ಮಾರ್ಗದರ್ಶನ ನೀಡಿ ಸಮನ್ವಯ ಸಾಧಿಸಲು ಎಲ್ಲ ಜಿಲ್ಲೆಗಳಲ್ಲೂ ಜಿಲ್ಲಾ ಕುಟುಂಬ ಯೋಜನಾ ಕಾರ್ಯಾಲಯಗಳನ್ನು ರೂಪಿಸಲಾಯಿತು. ಎಲ್ಲ ಸರ್ಕಾರಿ ವೈದ್ಯಕೀಯ ಸಂಸ್ಥೆಗಳೂ ಸಹ ತಮ್ಮ ನಿತ್ಯ ಕೆಲಸಗಳ ಜೊತೆಗೆ ಕುಟುಂಬ ಯೋಜನಾ ಕಾರ್ಯದಲ್ಲೂ ನೆರವಾಗುತ್ತವೆ. ರಾಜ್ಯದಲ್ಲಿರುವ ಎಲ್ಲ

ಅಲೋಪತಿಕ್ ವೈದ್ಯಕೀಯ ಸಂಸ್ಥೆಗಳಲ್ಲೂ ಕುಟುಂಬ ಕಲ್ಯಾಣ ಶಾಖೆಗಳಿವೆ. ಎಲ್ಲ ಹಂತಗಳಲ್ಲೂ ಪ್ರಸೂತಿ ಹಾಗೂ ಸಂತಾನ ನಿರೋಧ ಶಸ್ತ್ರಚಿಕಿತ್ಸಾ ವಿಭಾಗಗಳು ಮತ್ತು ಕಾರ್ಯಕ್ರಮ ಸಿಬ್ಬಂದಿಗೆ ವಸತಿ ಗೃಹಗಳನ್ನು ಒದಗಿಸಲಾಗುತ್ತಿದೆ.

ವಿಸ್ತರಣಾ ಕಾರ್ಯಕ್ರಮ : ಕುಟುಂಬ ಯೋಜನಾ ಕಾರ್ಯಕ್ರಮವನ್ನು ಮೊದಲು ಚಿಕಿತ್ಸಾ ಮಾರ್ಗಕ್ರಮದ ಆಧಾರದ ಮೇಲೆ ಜಾರಿಗೊಳಿಸಲಾಗುತ್ತಿತ್ತು. ಈ ಕ್ರಮ ಗ್ರಾಮಾಂತರ ಪ್ರದೇಶಗಳ ಅಗತ್ಯವನ್ನು ಪೂರೈಸುವಂತಿರಲಿಲ್ಲ. ಆದ್ದರಿಂದ 1964ರಲ್ಲಿ ವಿಸ್ತರಣಾ ಮಾರ್ಗಕ್ರಮವನ್ನು ಅನುಸರಣೆಗೆ ತರಲಾಯಿತು. ಈ ಕ್ರಮದಲ್ಲಿ ಗ್ರಾಮೀಣ ಜನಸಮುದಾಯದ ಮನೆಯ ಬಾಗಿಲಿಗೇ ಶಿಕ್ಷಣ ಮತ್ತು ಸೇವಾ ಸೌಲಭ್ಯಗಳನ್ನು ವಿಸ್ತರಿಸಲಾಯಿತು. ಮತ್ತು ನಗರ ಹಾಗೂ ಗ್ರಾಮೀಣ ಪ್ರದೇಶದ ಇಡೀ ಜನಸಂಖ್ಯೆಯನ್ನು ಈ ಪುನರ್ ವ್ಯವಸ್ಥಿತ ಹಾಗೂ ವಿಸ್ತೃತ ಕಾರ್ಯಕ್ರಮದ ವ್ಯಾಪ್ತಿಗೆ ತರಲಾಯಿತು. ಈ ವಿಸ್ತರಣಾ ಮಾರ್ಗಕ್ರಮದಲ್ಲಿ ಅರ್ಹ ದಂಪತಿಗಳ ಒಂದು ಸಮೀಕ್ಷೆಯನ್ನು ನಡೆಸಲಾಯಿತು ಮತ್ತು ಅವರಿಗೆ ಶಿಕ್ಷಣ ನೀಡಿ ಸಣ್ಣ ಕುಟುಂಬದ ಸೂತ್ರ ಅನುಸರಿಸುವಂತೆ ಮನವೊಲಿಸಲು ಆರಂಭಿಸಲಾಯಿತು. ಆಗ ನಡೆಸಿದ ಸಮೀಕ್ಷೆಯಿಂದ ಪ್ರತೀಯೊಂದು ಜಿಲ್ಲೆಯಲ್ಲೂ ಒಂದು ಲಕ್ಷಕ್ಕೂ ಹೆಚ್ಚು ಅರ್ಹ ದಂಪತಿಗಳಿದ್ದುದು ಕಂಡುಬಂದಿತು. ರಾಜ್ಯ ಕುಟುಂಬ ಕಲ್ಯಾಣ ಕಾರ್ಯಾಲಯವು ಐದು ಕಾರ್ಯನಿರತ ಶಾಖೆಗಳ ನೆರವಿನಿಂದ ಕಾರ್ಯಕ್ರಮವನ್ನು ನಿರ್ವಹಿಸುತ್ತಿದೆ. ಅವುಗಳೆಂದರೆ—1) ಸಂಚಾರೀ ಸಂತಾನ ನಿರೋಧ ಶಸ್ತ್ರ ಚಿಕಿತ್ಸಾ ಘಟಕ, 2) ಸಂಚಾರೀ ವಂಕಿ ಧಾರಣ ಘಟಕ, 3) ಶಿಕ್ಷಣ ಮತ್ತು ವಾರ್ತಾ ವಿಭಾಗ, 4) ಕ್ಷೇತ್ರ ಕಾರ್ಯ ಹಾಗೂ ಮೌಲ್ಯಮಾಪನ ವಿಭಾಗ, ಮತ್ತು 5) ಆಡಳಿತ ವಿಭಾಗ. 1966ರಲ್ಲಿ ಕಾರ್ಯಕ್ರಮವು ಗುರಿಗೆ ಬದ್ಧವಾದುದಾಯಿತು. ಮತ್ತು 4ನೇಯ ಯೋಜನೆಯ ಆರಂಭದಲ್ಲಿ 'ಗುರಿಗೆ ಬದ್ಧ ಮತ್ತು ಕಾಲ ನಿಗದಿತ' ಕಾರ್ಯಕ್ರಮವಾಯಿತು.

ಸಂತಾನ ನಿರೋಧ ಶಸ್ತ್ರ ಚಿಕಿತ್ಸೆ : ರಾಜ್ಯದ ಎಲ್ಲ ದೊಡ್ಡ ವೈದ್ಯಕೀಯ ಸಂಸ್ಥೆಗಳಲ್ಲೂ ಪುರುಷರು (ವ್ಯಾಸೆಕ್ಟಮಿ) ಮತ್ತು ಸ್ತ್ರೀಯರಿಗೆ (ಟ್ಯೂಬಕ್ಟಮಿ) ಸಂತಾನ ನಿರೋಧ ಶಸ್ತ್ರ ಚಿಕಿತ್ಸೆ ಮಾಡಲು ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಅಂತಹ ಶಸ್ತ್ರ ಚಿಕಿತ್ಸೆಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಏರ್ಪಡಿಸುವ ಶಿಬಿರಗಳಲ್ಲೂ ಮಾಡಲಾಗುತ್ತದೆ. ಕುಟುಂಬ ಕಲ್ಯಾಣದ ಈ ಶಸ್ತ್ರ ಚಿಕಿತ್ಸಾ ವಿಧಾನಗಳನ್ನು ಜನಪ್ರಿಯಗೊಳಿಸುವ ಸಲುವಾಗಿ, ತಮ್ಮದೇ ಚಿಕಿತ್ಸಾಲಯ ಅಥವಾ ಶುಶ್ರೂಷಾ ಗೃಹಗಳಲ್ಲಿ ಉಚಿತವಾಗಿ ಅಂತಹ ಸೇವೆ ಸಲ್ಲಿಸುವ ಖಾಸಗೀ ವೈದ್ಯರು ಪುರುಷರಿಗೆ ಸಂತಾನ ನಿರೋಧ ಶಸ್ತ್ರ ಚಿಕಿತ್ಸೆ ಮಾಡಿದರೆ ಪ್ರತೀಯೊಂದು ಶಸ್ತ್ರ ಚಿಕಿತ್ಸೆಗೆ 30 ರೂ. ಗಳಂತೆಯೂ, ಸ್ತ್ರೀಯರಿಗೆ ಸಂತಾನ ನಿರೋಧ ಶಸ್ತ್ರ ಚಿಕಿತ್ಸೆ ಮಾಡಿದರೆ ಪ್ರತೀಯೊಂದು ಶಸ್ತ್ರ ಚಿಕಿತ್ಸೆಗೆ 40 ರೂ. ಗಳಂತೆಯೂ, ಪ್ರತೀಯೊಂದು ವಂಕಿ ಧಾರಣೆಗೆ 11 ರೂ. ನಂತೆಯೂ ಸಂಭಾವನೆಯನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಹಾಗೆಯೇ ಅಂತಹ ವೈದ್ಯರು, ಶಸ್ತ್ರ ಚಿಕಿತ್ಸೆಗೆ ಒಳಗಾದ ವ್ಯಕ್ತಿಯ ಶಸ್ತ್ರ ಚಿಕಿತ್ಸಾ ಪೂರ್ವ ಮತ್ತು ನಂತರದ ಅನುಸರಣಾ ಚಿಕಿತ್ಸೆಯೇ ಅಲ್ಲದೆ ನಂತರ ಕಂಡುಬರಬಹುದಾದ ಮತ್ತಾವುದೇ ತೊಂದರೆಗಳನ್ನು ನೋಡಿಕೊಳ್ಳಬೇಕಾಗುತ್ತದೆ.

ಸರ್ಕಾರಿ ನಿಯಂತ್ರಿತ ಎಲ್ಲ ವೈದ್ಯಕೀಯ ಸಂಸ್ಥೆಗಳೂ ದಂಪತಿಗಳ ಸಮೀಕ್ಷೆ ನಡೆಸಿ, ಅರ್ಹ ದಂಪತಿಗಳಿಗೆ ವೈಯಕ್ತಿಕ ಸಂಪರ್ಕದ ಮೂಲಕ ಕುಟುಂಬ ಕಲ್ಯಾಣದ ತಾತ್ಕಾಲಿಕ ಅಥವಾ ಶಾಶ್ವತ ವಿಧಾನವನ್ನು ಅನುಸರಿಸುವಂತೆ ಸಲಹೆ ಮಾಡಲಾಗುತ್ತದೆ. 1960ರಲ್ಲಿ ವಂಕಿ ('ಲೂಪ್'—ಐ.ಯು.ಡಿ.) ಎಂದು ಜನಪ್ರಿಯವಾದ ಒಂದು ಹೊಸ ಗರ್ಭ ನಿರೋಧಕ ವಿಧಾನವನ್ನು ಬಳಕೆಗೆ ತರಲಾಯಿತು. ವಂಕಿಧಾರಣೆಯನ್ನು ವೈದ್ಯಕೀಯ ಸಂಸ್ಥೆಗಳಲ್ಲಾಗಲೀ, ಚಿಕಿತ್ಸಾಲಯಗಳಲ್ಲಾಗಲೀ ಮಾಡಲಾಗುತ್ತದೆ. ವಂಕಿಧಾರಣೆ ಮಾಡಿಸಿಕೊಂಡವರಿಗೆ ಐದು ರೂ. ಪರಿಹಾರ ಧನವನ್ನೂ, ಮನವೊಲಿಸಿದವರಿಗೆ ಒಂದು ರೂ. ಪ್ರೇರಣಾ ಧನವನ್ನೂ ಕೊಡಲಾಗುತ್ತದೆ. ವೈದ್ಯಕೀಯ ಸಂಸ್ಥೆಗಳಲ್ಲಿ ಮತ್ತು ಆರೋಗ್ಯ ಕಾರ್ಯಕರ್ತರು ಮನೆಗಳಿಗೆ ಭೇಟಿ ನೀಡಿದಾಗ 'ನಿರೋಧ್' ಗಳನ್ನು ಉಚಿತವಾಗಿ ಕೊಡಲಾಗುತ್ತದೆ. ಜೊತೆಗೆ ಅಂಗಡಿ ಮುಂಗಟ್ಟುಗಳಲ್ಲಿ ರಿಯಾಯಿತಿ ದರದಲ್ಲಿ ಮಾರಾಟಕ್ಕೂ ವ್ಯವಸ್ಥೆ ಮಾಡಲಾಗಿದೆ. ಜನಗಳಿಗೆ ಕುಟುಂಬ ಯೋಜನೆಯ ಬಗ್ಗೆ ತಿಳುವಳಿಕೆ ಮೂಡಿಸಲು ಭಾಷಣ, ಚಲನಚಿತ್ರ ಪ್ರದರ್ಶನ, ವಸ್ತುಪ್ರದರ್ಶನ, ಸಾಹಿತ್ಯ ಮೊದಲಾದವುಗಳ ಮೂಲಕ ರಾಜ್ಯಾದ್ಯಂತ ತೀವ್ರ ಪ್ರಚಾರ ಕಾರ್ಯ ಕೈಗೊಳ್ಳಲಾಗಿದೆ. ಇದರ ಜೊತೆಗೆ ಪ್ರತೀ ವರ್ಷ ಕುಟುಂಬ ಕಲ್ಯಾಣ ಪಕ್ಷಾಚರಣೆಗಳು ನಡೆಯುತ್ತವೆ. ಈ ಅವಧಿಯಲ್ಲಿ ಸಾಧ್ಯವಾದಷ್ಟು ಹೆಚ್ಚು ಅರ್ಹ ದಂಪತಿಗಳನ್ನು ಕಾರ್ಯಕ್ರಮದ ವ್ಯಾಪ್ತಿಗೆ ತರಲಾಗುತ್ತದೆ. ಗ್ರಾಮೀಣ ಮುಖಂಡರಿಗೆ ತರಬೇತಿ ನೀಡಲು ಆಯ್ದ ಸ್ಥಳಗಳಲ್ಲಿ ಕುಟುಂಬ ಕಲ್ಯಾಣ ಮುಖಂಡರ ತರಬೇತಿ ಶಿಬಿರಗಳನ್ನು ನಡೆಸಲಾಗುತ್ತದೆ. ಕುಟುಂಬ ಕಲ್ಯಾಣ ಕಾರ್ಯಕ್ರಮಗಳಲ್ಲಿ ಜನಸಾಮಾನ್ಯರು ಈಗ ಮೊದಲಿಗಿಂತ ಹೆಚ್ಚು ಆಸಕ್ತಿ ತಾಳಿದ್ದಾರೆ. 'ವಂಕಿ' ಧಾರಣೆ ಮತ್ತು 'ನಿರೋಧ್' ಬಳಕೆ ಈಗ ಹೆಚ್ಚು ಜನಪ್ರಿಯವಾಗುತ್ತಿದೆ. ಹಾಗೆಯೇ ಪುರುಷರಿಗಿಂತ ಮಹಿಳೆಯರು ಹೆಚ್ಚಾಗಿ ಸಂತಾನ ನಿರೋಧ ಶಸ್ತ್ರಚಿಕಿತ್ಸೆಗೆ ಮುಂದೆ ಬರುತ್ತಿದ್ದಾರೆ. ಇತ್ತೀಚೆಗೆ ಉದರ ದರ್ಶಕ ವಿಧಾನದ (ಲೆಪ್ರೊಸ್ಕೊಪಿಕ್) ಸಂತಾನ ನಿರೋಧ ಶಸ್ತ್ರ ಚಿಕಿತ್ಸೆ ಅತ್ಯಂತ ಜನಪ್ರಿಯಗೊಳ್ಳುತ್ತಿದೆ. ಇದಕ್ಕೆ ಕಾರಣ

ಈ ವಿಧಾನದ ಸರಳತೆ ಮತ್ತು ಸುರಕ್ಷಿತತೆ; ಜೊತೆಗೆ ಈ ವಿಧಾನದಲ್ಲಿ ಆಸ್ಪತ್ರೆಯಲ್ಲಿ ಹೆಚ್ಚು ಕಾಲ ಇರುವ ಅಗತ್ಯವಿಲ್ಲದಿರುವುದು.

ಕೆಳಗೆ ಕಂಡ *ಪಟ್ಟಿ ಇತ್ತೀಚಿನ ಕೆಲವು ವರ್ಷಗಳಲ್ಲಿ ಸಂತಾನ ನಿರೋಧ ಶಸ್ತ್ರಚಿಕಿತ್ಸೆ, ವಂಕಿ ಧಾರಣೆ ಮತ್ತು ಇತರ ಸಂಪ್ರದಾಯಿಕ ಗರ್ಭ ನಿರೋಧಕಗಳ ಬಳಕೆಯಲ್ಲಿ ಆಗಿರುವ ಸಾಧನೆಗಳನ್ನು ತೋರಿಸುತ್ತದೆ.

ರಾಷ್ಟ್ರೀಯ ಕುಟುಂಬ ಕಲ್ಯಾಣ ಕಾರ್ಯಕ್ರಮ: ಇದು ಕೇಂದ್ರ ಜವಾಬ್ದಾರಿಯ ಯೋಜನೆ. ಜನಸಂಖ್ಯಾ ಬೆಳವಣಿಗೆಯ ಪ್ರಮಾಣವನ್ನು ತಗ್ಗಿಸುವ ಮೂಲಕ ಜನ ಸಮುದಾಯದ ಜೀವನ ಮಟ್ಟವನ್ನು ಸುಧಾರಿಸುವುದು ಈ ಕಾರ್ಯಕ್ರಮದ ಗುರಿ. ಜನನ ಪ್ರಮಾಣವನ್ನು ಪ್ರತೀ ಸಾವಿರಕ್ಕೆ 35 ರಿಂದ 30ಕ್ಕೆ ಇಳಿಸಲು ಜನರು ಚಿಕ್ಕ ಸಂಸಾರದ ಸೂತ್ರವನ್ನು ಅನುಸರಿಸುವಂತೆ ಪ್ರೇರೇಪಿಸುವುದು ಈ ಕಾರ್ಯಕ್ರಮದ ಮುಖ್ಯ ಆಶಯ. ರಾಜ್ಯ ಕುಟುಂಬ ಕಲ್ಯಾಣ ಕಾರ್ಯಾಲಯವು ಕಾರ್ಯಕ್ರಮನ್ನು ಜಾರಿಗೊಳಿಸುವ ಮತ್ತು ನಿರ್ದೇಶಿಸುವ ಹೊಣೆಯನ್ನು ಹೊತ್ತಿದೆ. ನಗರ ಪ್ರದೇಶಗಳಲ್ಲಿ ನಾನಾ ನಗರ ಹಾಗೂ ಪಟ್ಟಣಗಳಲ್ಲಿರುವ (ಬಾಣಂತನ ಸೇವಾ ಕೇಂದ್ರಗಳೂ ಸೇರಿದಂತೆ) ನಗರ ಕುಟುಂಬ ಕಲ್ಯಾಣ ಕೇಂದ್ರಗಳು ಕುಟುಂಬ ಕಲ್ಯಾಣ ಸೇವೆಗಳನ್ನು ಒದಗಿಸುತ್ತವೆ. ರಾಜ್ಯದ ಬೆಂಗಳೂರು, ರಾಮನಗರ, ಮಂಡ್ಯ ಮತ್ತು ಹುಬ್ಬಳ್ಳಿಯಲ್ಲಿರುವ ನಾಲ್ಕು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳು ವಿವಿಧೋದ್ದೇಶ ಕಾರ್ಯಕರ್ತರಿಗೆ ತರಬೇತಿಯನ್ನು ಮುಂದುವರಿಸಿಕೊಂಡು ಬರುತ್ತಿವೆ.

ಭಾರತೀಯ ಕುಟುಂಬ ಯೋಜನಾ ಸಂಘ: ಈ ಸಂಘವು 1956ರಲ್ಲಿ ಬೆಂಗಳೂರಿನಲ್ಲಿ ಮೇರಿ ಲಾಂಗ್‌ಫೋರ್ಡ್ ಟೇಲರ್ ಅವರಿಂದ ಸ್ಥಾಪಿಸಲ್ಪಟ್ಟಿತು. ನಂತರ ಕರ್ನಾಟಕ ರಾಜ್ಯ ಕುಟುಂಬ ಯೋಜನಾ ಸಂಘ ಎಂಬ ಹೆಸರಿನಲ್ಲಿ ನೋಂದಾಯಿಸಲ್ಪಟ್ಟು 1972ರಲ್ಲಿ ಭಾರತೀಯ ಕುಟುಂಬ ಯೋಜನಾ ಸಂಘದ ಅಂಗಸಂಸ್ಥೆಯಾಯಿತು. ಇದರ ಕೇಂದ್ರ ಕಾರ್ಯಾಲಯ ಮುಂಬೈಯಲ್ಲಿದೆ. ಸಂಘದ ಗುರಿ ಮತ್ತು ಉದ್ದೇಶಗಳಲ್ಲಿ ಕೆಳಗೆ ಕಂಡ ಅಂಶಗಳು ಸೇರಿವೆ: ಕುಟುಂಬ ನಿಯಂತ್ರಣದ ಅಗತ್ಯದ ಬಗ್ಗೆ ಸಾರ್ವಜನಿಕರಲ್ಲಿ ಮನವರಿಕೆಯುಂಟು ಮಾಡುವುದು, ಅದನ್ನು ಅನುಸರಿಸಲು ನಂಬಲರ್ಹವಾದ ಪದ್ಧತಿಗಳ ಬಗ್ಗೆ ಮಾರ್ಗದರ್ಶನ ನೀಡುವುದು, ಅರ್ಹ ದಂಪತಿಗಳಿಗೆ ಅಗತ್ಯ ಗರ್ಭ ನಿರೋಧ ಸಾಧನಗಳನ್ನೊದಗಿಸುವುದು,

*

| ವರ್ಷ | ಸಂತಾನ ನಿರೋಧ ಶಸ್ತ್ರ ಚಿಕಿತ್ಸೆ | | | ವಂಕಿಧಾರಣೆ | ಸಾಂಪ್ರದಾಯಿಕ ಗರ್ಭ ನಿರೋಧಕಗಳ ಬಳಕೆ |
|---|---|---|---|---|---|
| | ಪುರುಷರು | ಸ್ತ್ರೀಯರು | ಒಟ್ಟು | | |
| 1971-72 | 11,980 | 44,798 | 56,778 | 11,782 | 45,460 |
| 1972-73 | 87,936 | 53,314 | 1,41,250 | 13,270 | 47,913 |
| 1973-74 | 17,454 | 48,817 | 66,271 | 10,816 | 46,625 |
| 1974-75 | 4,335 | 57,355 | 61,690 | 13,671 | 55,490 |
| 1975-76 | 20,997 | 99,674 | 1,20,671 | 27,581 | 81,907 |
| 1976-77 | 2,25,776 | 2,04,293 | 4,30,069 | 30,392 | 91,508 |
| 1977-78 | 8,433 | 85,714 | 94,147 | 23,397 | 82,653 |
| 1978-79 | 4,886 | 91,114 | 96,000 | 33,901 | 75,582 |
| 1979-80 | 5,584 | 1,11,583 | 1,17,167 | 50,776 | 83,285 |
| 1980-81 | 4,785 | 1,38,111 | 1,42,896 | 54,657 | 88,293 |

ಕುಟುಂಬ ಯೋಜನೆಗೆ ಸಂಬಂಧಿಸಿದ ಮಾಹಿತಿ ಮತ್ತು ಅಂಕಿ ಅಂಶಗಳನ್ನು ಸಂಗ್ರಹಿಸುವುದು, ಸೇವೆ, ತರಬೇತಿ, ಶಿಕ್ಷಣ ಮತ್ತು ಜನಸಾಂಖ್ಯಿಕ, ಸಾಮಾಜಿಕ, ಆರ್ಥಿಕ ವೈದ್ಯಕೀಯ ಮತ್ತಿತರ ಸಂತಾನ ಸಾಮರ್ಥ್ಯದ ಬಗ್ಗೆ ಸಂಬಂಧಿಸಿದ ಅಂಶಗಳನ್ನೊಳಗೊಂಡ ಸಂಶೋಧನಾ ಕಾರ್ಯಗಳು ಮೊದಲಾದ ಚಟುವಟಿಕೆಗಳನ್ನು ಕೈಗೊಳ್ಳುವುದು. ಗರ್ಭನಿರೋಧ ವಿಧಾನಗಳು, ಬಂಜೆತನ, ಅರೆಬಂಜೆತನ, ಲೈಂಗಿಕ ಹಾಗೂ ಕುಟುಂಬ ಜೀವನ ಶಿಕ್ಷಣ, ವಿವಾಹ ಸಮಾಲೋಚನೆ, ಜನಸಂಖ್ಯಾ ಶಿಕ್ಷಣ ಮತ್ತು ಮಾನವ ಜೀವ ಪರಿಸರ ಶಾಸ್ತ್ರ— ಇವುಗಳಿಗೆ ಸಂಬಂಧಿಸಿದಂತಹ ಅಧ್ಯಯನ ಹಾಗೂ ಸಂಶೋಧನಾ ಚಟುವಟಿಕೆಗಳೂ ಸೇರಿವೆ. ಸಂಘವು ಕೈಗೊಂಡಿರುವ ಅನೇಕ ಯೋಜನೆಗಳಲ್ಲಿ ಗಮನಾರ್ಹವಾದವುಗಳೆಂದರೆ, ಜನಸಂಖ್ಯಾ ಶಿಕ್ಷಣ, ಕುಟುಂಬ ಯೋಜನಾ ಶಿಕ್ಷಣ ಮತ್ತು ನಗರ ಕುಟುಂಬ ಕಲ್ಯಾಣ ಕೇಂದ್ರಗಳನ್ನು ನಿರ್ವಹಿಸುವುದು. ಈ ಯೋಜನೆಗಳಿಗೆ ಮುಂಬಯಿಯಲ್ಲಿರುವ ಸಂಘದ ಕೇಂದ್ರ ಕಾರ್ಯಾಲಯದಿಂದ ಹಣಕಾಸಿನ ನೆರವು ದೊರೆಯುತ್ತದೆ. ಈ ಕೇಂದ್ರ ಕಾರ್ಯಾಲಯವು ಪ್ರತಿಯಾಗಿ ಲಂಡನ್ನಿನಲ್ಲಿರುವ ಅಂತರರಾಷ್ಟ್ರೀಯ ಯೋಜಿತ ಪೋಷಕ ಮಹಾಮಂಡಲದಿಂದ ನೆರವು ಪಡೆಯುತ್ತದೆ. ಈ ಸಂಘವು ಏಳು ನಗರ ಕುಟುಂಬ ಕಲ್ಯಾಣ ಕೇಂದ್ರಗಳನ್ನು ನಡೆಸುತ್ತಿದೆ. ಕನಿಷ್ಠ 50,000 ಜನಸಂಖ್ಯೆ ಈ ಸೇವಾ ಕೇಂದ್ರಗಳ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೇಂದ್ರಗಳಿಗಾಗಿ ಸಂಘವು ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದಲೂ ಸಹಾಯ ಪಡೆಯುತ್ತದೆ. ಸಂಘವು ಎರಡು ಬಗೆಯ ಪ್ರಧಾನ ಕಾರ್ಯಕ್ರಮಗಳನ್ನು ಹೊಂದಿದೆ. ಅವೆಂದರೆ : 1) ಕುಟುಂಬ ಯೋಜನಾ ಶಿಕ್ಷಣ ಹಾಗೂ ಪ್ರೇರಣೆ ಮತ್ತು ಪ್ರಸೂತಿ ಹಾಗೂ ಮಕ್ಕಳ ಆರೋಗ್ಯ ರಕ್ಷಣೆ; ಮತ್ತು 2) ಕುಟುಂಬ ಯೋಜನಾ ಸೇವೆ ಮತ್ತು ತಾಯಿ ಮಕ್ಕಳ ಆರೋಗ್ಯ ರಕ್ಷಣೆ. ಮೇಲೆ ಹೇಳಿದ ಯೋಜನೆಗಳು ಈ ಎರಡೂ ಬಗೆಯ ಕಾರ್ಯನಿರ್ವಹಿಸಲು ಸಂಘಕ್ಕೆ ನೆರವಾಗುತ್ತವೆ. ನಗರ ಕುಟುಂಬ ಕಲ್ಯಾಣ ಕೇಂದ್ರಗಳು ವಾರಕ್ಕೊಮ್ಮೆ ವಿಶೇಷ ತಜ್ಞರ ನೆರವಿನಿಂದ ಮಕ್ಕಳ ಆರೋಗ್ಯ ಸೇವಾ ಕಾರ್ಯವನ್ನು ಮತ್ತು ಬಂಜೆತನ ನಿವಾರಣಾ ಚಿಕಿತ್ಸೆ ಹಾಗೂ ಸಂತಾನ ನಿರೋಧ ಪ್ರತಿ ಶಸ್ತ್ರಚಿಕಿತ್ಸೆಯ ಕಾರ್ಯವನ್ನು ನಡೆಸುತ್ತವೆ. ಈ ಕೇಂದ್ರಗಳು ಅದಕ್ಕೆ ಹೊಂದಿಕೊಂಡಂತಿರುವ ತಾಯಿ ಮತ್ತು ಮಗುವಿನ ಆರೋಗ್ಯ ಘಟಕದ ಸಹಾಯದಿಂದ ತಾಯಿ ಮತ್ತು ಮಗುವಿನ ಆರೋಗ್ಯದ ರಕ್ಷಣೆಯ ಸೇವೆಯನ್ನು ಒದಗಿಸುತ್ತವೆ. ಭಾರತೀಯ ಕುಟುಂಬ ಯೋಜನಾ ಸಂಘ ಒಂದು ಸ್ವಯಂ ಸೇವಾ ಸಂಸ್ಥೆ. ಪ್ರಸ್ತುತ ಈ ಸಂಘದ ಕರ್ನಾಟಕ ಶಾಖೆಯಲ್ಲಿ 100 ಜನ ಸ್ವಯಂ ಸೇವಾ ಸದಸ್ಯರಿರುತ್ತಾರೆ. ಮತ್ತು 100 ಜನ ಸಿಬ್ಬಂದಿ ಸದಸ್ಯರಿದ್ದಾರೆ. ಸಂಘವು ತರಬೇತಿ ಸಂಸ್ಥೆಯಲ್ಲ; ಒಂದು ಸಾಮಾಜಿಕ ಸೇವಾ ಸಂಸ್ಥೆ.

**ಭಾರತ ಜನಸಂಖ್ಯಾ ಯೋಜನೆ :** ಭಾರತ ಜನಸಂಖ್ಯಾ ಯೋಜನೆಯು 1973ರಲ್ಲಿ ಬೆಂಗಳೂರು ನಗರವೂ ಸೇರಿದಂತೆ ಬೆಂಗಳೂರು ರೆವಿನ್ಯೂ ವಿಭಾಗದ ಐದು ಜಿಲ್ಲೆಗಳಲ್ಲಿ ಜಾರಿಗೆ ಬಂದಿತು. ಗ್ರಾಮಾಂತರ ಪ್ರದೇಶದಲ್ಲಿ ಉತ್ತಮ ಪ್ರಸೂತಿ ಹಾಗೂ ಮಕ್ಕಳ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳನ್ನೂ, ನಗರ ಪ್ರದೇಶದಲ್ಲಿ ಬಾಣಂತನ ಸೇವಾ ಸೌಲಭ್ಯವನ್ನೂ ಒದಗಿಸಲು ಈ ಯೋಜನೆಯಲ್ಲಿ ಹೆಚ್ಚುವರಿ ಸೌಲಭ್ಯಗಳನ್ನು ಕಲ್ಪಿಸಲಾಯಿತು. ಭಾರತ ಜನಸಂಖ್ಯಾ ಯೋಜನೆಯಲ್ಲಿ ಪ್ರಸೂತಿ ಹಾಗೂ ಮಕ್ಕಳ ಆರೋಗ್ಯ ಮತ್ತು ಸಂತಾನ ನಿರೋಧ ಶಸ್ತ್ರಚಿಕಿತ್ಸಾ ಸೇವೆಗಳಿಗೆ ನಗರ ಹಾಗೂ ಗ್ರಾಮೀಣ ಸೌಲಭ್ಯಾವಕಾಶದಲ್ಲಿ 796 ಹೆಚ್ಚುವರಿ ಹಾಸಿಗೆಗಳನ್ನು ಒದಗಿಸಲಾಗಿದೆ. ಜೊತೆಗೆ ಪೌಷ್ಟಿಕಾಹಾರ ಶಾಖೆಯೂ ಕೆಲಸಮಾಡಿದೆ. ನಗರ ಸೌಲಭ್ಯಾವಕಾಶದಲ್ಲಿ ಬಾಣಂತನ ಸೇವಾ ಮಾರ್ಗಕ್ಕೆ ಹೆಚ್ಚು ಒತ್ತು ಕೊಡಲಾಯಿತು. ಅಂತೆಯೇ ಬೆಂಗಳೂರು ನಗರಕ್ಕೆ ಪೂರ್ಣ ಪ್ರಮಾಣದ ಸೇವೆ ಒದಗಿಸುವ ಉದ್ದೇಶದಿಂದ ಭಾರತ ಜನಸಂಖ್ಯಾ ಯೋಜನೆಯ ಆಶ್ರಯದಲ್ಲಿ 14 ಹೆಚ್ಚುವರಿನಗರ ಕುಟುಂಬ ಕಲ್ಯಾಣ ಕೇಂದ್ರಗಳನ್ನು 30 ಹಾಸಿಗೆಗಳ ಆರು ಪ್ರಸೂತಿ ಹಾಗೂ ಸಂತಾನ ನಿರೋಧ ಶಸ್ತ್ರಚಿಕಿತ್ಸಾ ವಿಸ್ತರಣೆಗಳನ್ನು ಒದಗಿಸಲಾಯಿತು. ಗ್ರಾಮೀಣ ಸೌಲಭ್ಯಾಂಶದಲ್ಲಿ ಜಿಲ್ಲಾ ಮಟ್ಟದಲ್ಲಿ 30 ಹಾಸಿಗೆಗಳ ಐದು ಸಂತಾನ ನಿರೋಧ ಶಸ್ತ್ರಚಿಕಿತ್ಸಾ ವಾರ್ಡುಗಳನ್ನೂ, ಒಂಬತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ 24 ಸಂತಾನ ನಿರೋಧ ಶಸ್ತ್ರಚಿಕಿತ್ಸಾ ವಾರ್ಡುಗಳನ್ನೂ ಒದಗಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಪರಶುರಾಂಪುರ ಮತ್ತು ಥಳಕು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಪ್ರಾಯೋಗಿಕವಾಗಿ ಪೌಷ್ಟಿಕಾಹಾರ ಯೋಜನೆಯನ್ನು ಜಾರಿಗೆ ತರಲಾಗಿದೆ.

**ಜನಸಂಖ್ಯಾ ಕೇಂದ್ರ :** ಕುಟುಂಬ ನಿಯಂತ್ರಣದ ಪ್ರಾತ್ಯಕ್ಷಿಕಾ ಯೋಜನೆಯಾದ ಭಾರತ ಜನಸಂಖ್ಯಾ ಯೋಜನೆಯ ಒಂದು ಅಂಗವಾಗಿ 1973ರಲ್ಲಿ ಬೆಂಗಳೂರಿನಲ್ಲಿ ಜನಸಂಖ್ಯಾ ಕೇಂದ್ರವನ್ನು ಸ್ಥಾಪಿಸಲಾಯಿತು. ಭಾರತ ಜನಸಂಖ್ಯಾ ಯೋಜನೆಗೆ ವಿಶ್ವಬ್ಯಾಂಕಿನ ಅಂಗಸಂಸ್ಥೆಯಾದ ಸ್ವೀಡನ್ನಿನ ಅಂತರರಾಷ್ಟ್ರೀಯ ಅಭಿವೃದ್ಧಿ ಪ್ರಾಧಿಕಾರಗಳು ಆರ್ಥಿಕ ನೆರವನ್ನು ಒದಗಿಸಿದುವು. ಆರಂಭದಲ್ಲಿ ಐದು ವರ್ಷಗಳ (1973-78) ಅವಧಿಗೆಂದು ರೂಪಿಸಿದ್ದ ಈ ಯೋಜನೆಯನ್ನು ಮತ್ತೆ ಎರಡು ವರ್ಷ ಕಾಲ ವಿಸ್ತರಿಸಲಾಯಿತು. ಜನಸಂಖ್ಯಾ ಕೇಂದ್ರದ ಮುಖ್ಯರಾಗಿ ಓರ್ವ ನಿರ್ದೇಶಕರಿದ್ದಾರೆ. ಅವರಿಗೆ ಇಬ್ಬರು ಸಹಾಯಕ ನಿರ್ದೇಶಕರು, ಆರು ಜನ ಸಂಶೋಧನಾಧಿಕಾರಿಗಳು, ಓರ್ವ ಪೌಷ್ಟಿಕಾಹಾರ ತಜ್ಞ, 18 ಜನ ಸಂಶೋಧನ ಸಹಾಯಕರು, ಒಬ್ಬ ಸಂಶೋಧಕ ಗ್ರಂಥ ಭಂಡಾರಿ, ಒಬ್ಬ ಆಡಳಿತಾಧಿಕಾರಿ ಹಾಗೂ ಸಹಾಯಕ ಲೆಕ್ಕಪತ್ರಾಧಿಕಾರಿ, ಓರ್ವ

ಲೆಕ್ಕಪತ್ರ ಮೇಲ್ವಿಚಾರಕ ಮತ್ತಿತರ ಸಿಬ್ಬಂದಿ ನೆರವಾಗಿದೆ. ಜನಸಂಖ್ಯಾ ಕೇಂದ್ರವನ್ನು ಮುಖ್ಯವಾಗಿ ಭಾರತ ಜನಸಂಖ್ಯಾ ಯೋಜನೆಯ ಸಂಶೋಧನೆ ಹಾಗೂ ಮೌಲ್ಯಮಾಪನದ ಒಂದು ಅಂಗವಾಗಿ ಸ್ಥಾಪಿಸಲಾಯಿತು. ಇದರ ಪ್ರಮುಖ ಉದ್ದೇಶಗಳೆಂದರೆ—ಯೋಜನೆಯ ಸಮಗ್ರ ಸ್ವರೂಪವನ್ನು ಅಭಿವೃದ್ಧಿಪಡಿಸುವುದು. ಕಾರ್ಯಕ್ರಮದ ನಿರ್ವಹಣೆ ಹಾಗೂ ಮೌಲ್ಯಮಾಪನಕ್ಕೆ ಒಂದು ಪರಿಣಾಮಕಾರಿ ಪದ್ಧತಿಯನ್ನು ರೂಪಿಸುವುದು, ಕಾರ್ಯಕ್ರಮದ ದಕ್ಷತೆ ಮತ್ತು ಪರಿಣಾಮಗಳನ್ನು ಸುಧಾರಿಸಲು ಹೆಚ್ಚುವರಿ ಸೌಲಭ್ಯಗಳು ಹಾಗೂ ಮಾರ್ಗಕ್ರಮದಲ್ಲಿ ಅಗತ್ಯವಾದ ಬದಲಾವಣೆಗಳನ್ನು ಪ್ರಯೋಗಿಸಿ ಪರೀಕ್ಷಿಸುವುದು ಮತ್ತು ಮೂಡಿಬರುವ ಶಿಫಾರಸುಗಳನ್ನು ಜಾರಿಗೆ ತರುವುದು.

ಈ ಕೇಂದ್ರಕ್ಕೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳಿಗೆ ಒಂದು ಅಡಳಿತ ಮಾಹಿತಿ ಹಾಗೂ ಮೌಲ್ಯಮಾಪನ ಪದ್ಧತಿಯನ್ನು ಅಭಿವೃದ್ಧಿಗೊಳಿಸಿ ಸಂಬಂಧಿಸಿದ ಸಂಶೋಧನೆಯನ್ನು ಕೈಗೊಳ್ಳುವ ಮತ್ತು ಕುಟುಂಬ ಕಲ್ಯಾಣದಲ್ಲಿ ಹೊಸ ಹೊಸ ಅಧ್ಯಯನಗಳನ್ನು ನಡೆಸುವ ಜವಾಬ್ದಾರಿಯನ್ನೂ ವಹಿಸಲಾಯಿತು. ಭಾರತ ಜನಸಂಖ್ಯಾ ಯೋಜನೆಯ ಕಾರ್ಯ ಮುಗಿದ ಮೇಲೆ ಜನಸಂಖ್ಯಾ ಕೇಂದ್ರವು ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ತನ್ನ ಕಾರ್ಯವನ್ನು ಮುಂದುವರಿಸಿದೆ.

ಭಾರತ ಜನಸಂಖ್ಯಾ ಯೋಜನೆಯ ಅವಧಿಯಲ್ಲಿ ಜನಸಂಖ್ಯಾ ಕೇಂದ್ರವು ಎರಡು ಪ್ರಮುಖ ಮಾದರಿ ಪರೀಕ್ಷೆಗಳನ್ನು ನಡೆಸಿದೆ. ಒಂದು ಆಧಾರ ಸಮೀಕ್ಷೆ; ಮತ್ತೊಂದು ಮೂರು ವರ್ಷಗಳ ನಂತರ ನಡೆಸಿದ ಪುನರ್‌ಸಮೀಕ್ಷೆ. ಈ ಪುನರ್ ಸಮೀಕ್ಷೆಯನ್ನು ನಡೆಸಿದ ಉದ್ದೇಶ ಭಾರತ ಜನಸಂಖ್ಯಾ ಯೋಜನಾ ಪ್ರದೇಶದಲ್ಲಿ ದಂಪತಿಗಳ ಸಂತಾನ ಸಾಮರ್ಥ್ಯ ಮತ್ತು ಗರ್ಭನಿರೋಧದ ಬಗೆಗಿನ ಒಲವುಗಳ ಮೇಲೆ ಯೋಜನೆಯ ಪರಿಣಾಮವನ್ನು ಅಳೆಯುವುದಾಗಿತ್ತು. 1951ರ ಮೈಸೂರು ಜನಸಂಖ್ಯಾ ಅಧ್ಯಯನ ಮತ್ತು 1975ರ ಆಧಾರ ಸಮೀಕ್ಷೆಗಳು ಬಹುತೇಕ ಇದೇ ಪ್ರದೇಶದಲ್ಲಿ ನಡೆದುದ್ದರಿಂದ ಸಂತಾನ ಸಾಮರ್ಥ್ಯ, ಕುಟುಂಬ ಗಾತ್ರಗಳ ಆದ್ಯತೆ ಮತ್ತು ಕುಟುಂಬ ಯೋಜನೆ ಇವುಗಳಲ್ಲಿ ಒಂದು ತಲೆಮಾರಿನಲ್ಲಿ ಆದ ಬದಲಾವಣೆಗಳನ್ನು ಅಧ್ಯಯನ ಮಾಡಲು ಸಾಧ್ಯವಾಯಿತು. 1980ರ ಮಾರ್ಚ್‌ನಲ್ಲಿ ಭಾರತ ಜನಸಂಖ್ಯಾ ಯೋಜನೆಯು ಮುಕ್ತಾಯವಾದ ನಂತರ, ಜನಸಂಖ್ಯಾ ಕೇಂದ್ರವು ಭಾರತ ಜನಸಂಖ್ಯಾ ಯೋಜನೆಯಲ್ಲಿ ಒದಗಿಸಿದ ಹೆಚ್ಚುವರಿ ಸೌಲಭ್ಯಗಳ ಫಲಿತಾಂಶಗಳ ಮೌಲ್ಯಮಾಪನ ಕಾರ್ಯವನ್ನು ಮುಂದುವರಿಸಿದೆ.

ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು : ಕುಟುಂಬ ಕಲ್ಯಾಣ ಕಾರ್ಯಕ್ರಮವೆಂದರೆ, ಕೇವಲ ಕುಟುಂಬಗಳ ಗಾತ್ರವನ್ನು ಮಿತಗೊಳಿಸುವುದಲ್ಲ. ತಾಯಿ ಮತ್ತು ಬದುಕಿರುವ ಮಕ್ಕಳ ಆರೋಗ್ಯ ಸುಧಾರಣೆಯ ಕಡೆಗೂ ಅದು ಗಮನ ಕೊಡುತ್ತದೆ. ಅರ್ಹ ದಂಪತಿಗಳು ಕುಟುಂಬ ಕಲ್ಯಾಣ ಪದ್ಧತಿಗಳನ್ನು ಒಪ್ಪಿಕೊಳ್ಳಲು ಇದು ಅತ್ಯಂತ ಮುಖ್ಯವಾದ ಅಂಶ. ಈ ದೃಷ್ಟಿಯಿಂದಲೇ ಪ್ರಸೂತಿ ಸೇವೆ, ಮಕ್ಕಳ ಆರೋಗ್ಯ ಸೇವೆ ಮತ್ತು ಪೌಷ್ಟಿಕಾಹಾರ ಸೇವೆಗಳನ್ನು ಕುಟುಂಬ ಕಲ್ಯಾಣ ಕಾರ್ಯಕ್ರಮದೊಂದಿಗೆ ಸಮನ್ವಯ ಮಾಡಲಾಗಿದೆ. ಈ ಕಾರ್ಯಕ್ರಮದಲ್ಲಿ ಮಕ್ಕಳಿಗೆ ಗಂಟಲು ಬೇನೆ, ನಾಯಿಕೆಮ್ಮು, ಧನುರ್ವಾಯು ಮತ್ತಿತರ ಸೋಂಕು ರೋಗಗಳ ವಿರುದ್ಧವೂ, ತಾಯಂದಿರಿಗೆ ಧನುರ್ವಾಯು ರೋಗದ ವಿರುದ್ಧವೂ ರಕ್ಷಣೆ ಒದಗಿಸಲಾಗುತ್ತದೆ. ರಕ್ತದ ಕೊರತೆಯ ಮತ್ತು ಪೌಷ್ಟಿಕತೆಯ ವಿರುದ್ಧ ನಿರೋಧಕ ಚಿಕಿತ್ಸಾಕ್ರಮವಾಗಿ ಗರ್ಭಿಣಿ ಹಾಗೂ ಬಾಣಂತಿಯರು ಮತ್ತು ಮಕ್ಕಳಿಗೆ ಕಬ್ಬಿಣಾಂಶ ಮತ್ತು ಅನ್ನಾಂಗಾಂಶದ ಮಾತ್ರೆಗಳನ್ನು ಕೊಡಲಾಗುತ್ತದೆ.

ಆನ್ವಯಿತ ಪೌಷ್ಟಿಕಾಹಾರ ಕಾರ್ಯಕ್ರಮವು ವಿವಿಧ ಇಲಾಖೆಗಳಿಗೆ ಸಂಬಂಧಿಸಿದ ಕಾರ್ಯಕ್ರಮ. ಯೂನಿಸೆಫ್, ವಿಶ್ವ ಆಹಾರ ಸಂಸ್ಥೆ ಮತ್ತು ವಿಶ್ವ ಆರೋಗ್ಯ ಸಂಸ್ಥೆಗಳಂತಹ ಅಂತರರಾಷ್ಟ್ರೀಯ ಸಂಸ್ಥೆಗಳೇ ಅಲ್ಲದೆ ಸ್ಥಳೀಯ ಸಮಾಜ ಸೇವಾ ಸಂಸ್ಥೆಗಳೂ ಇದರಲ್ಲಿ ಪಾಲುಗೊಳ್ಳುತ್ತವೆ. ಸರ್ಕಾರದ ತೋಟಗಾರಿಕೆ, ಮೀನುಗಾರಿಕೆ, ಪಶುಪಾಲನೆ, ಆರೋಗ್ಯ ಸೇವೆ, ಶಿಕ್ಷಣ, ಸಮಾಜಕಲ್ಯಾಣ ಮತ್ತು ಪಂಚಾಯಿತಿ ರಾಜ್ಯ ಸಂಸ್ಥೆಗಳು ಈ ಕಾರ್ಯಕ್ರಮ ನಿರ್ವಹಣೆಯಲ್ಲಿ ಸಹಕಾರ ನೀಡುತ್ತವೆ. ತರಬೇತಿ ಕಾರ್ಯಕ್ರಮ ಹಾಗೂ ಸಾಧನ ಸಲಕರಣೆಗಳಿಗೆ ಯೂನಿಸೆಫ್ ಸಂಸ್ಥೆಯು ಹಣಕಾಸಿನ ನೆರವು ನೀಡಿದರೆ, ಆ ವಿಶ್ವ ಆಹಾರ ಮತ್ತು ವಿಶ್ವ ಆರೋಗ್ಯ ಸಂಸ್ಥೆಗಳು ತಾಂತ್ರಿಕ ನೆರವನ್ನು ನೀಡುತ್ತವೆ. ಈ ಕಾರ್ಯಕ್ರಮವನ್ನು ತಾಲೂಕು ಅಭಿವೃದ್ಧಿ ಮಂಡಳಿಗಳು ಜಾರಿಗೆ ತರುತ್ತವೆ.

ನಗರ ಕೊಳಚೆ ಪ್ರದೇಶಗಳಲ್ಲಿ ವಿಶೇಷ ಪೌಷ್ಟಿಕಾಹಾರ ಕಾರ್ಯಕ್ರಮ ಜಾರಿಯಲ್ಲಿದೆ. ಈ ಕಾರ್ಯಕ್ರಮದಲ್ಲಿ ಮಕ್ಕಳು ಮತ್ತು ತಾಯಂದಿರಿಗೆ ಗಂಜಿ, ಉಪ್ಪಿಟ್ಟು, ಬಾಲಾಹಾರ, ಇತ್ಯಾದಿಗಳ ರೂಪದಲ್ಲಿ ಧಾನ್ಯಗಳು, ಮೀನು-ಮೊಟ್ಟೆ ಇತ್ಯಾದಿಗಳನ್ನು ಕೊಡಲಾಗುತ್ತದೆ. ಜೊತೆಗೆ ಸುಮಾರು 300 ಕ್ಯಾಲರಿಗಳು ಮತ್ತು 12 ಗ್ರಾಂಗಳಷ್ಟು ಸಸಾರಜನಕವನ್ನು ಪೂರಕವಾಗಿ ಕೊಡಲಾಗುತ್ತದೆ. ವಿಶ್ವ ಆಹಾರ ಕಾರ್ಯಕ್ರಮದಲ್ಲಿ ಹತ್ತಿರದ ಹಳ್ಳಿಗಳಿಂದ ಬರುವ ಗ್ರಾಮಾಂತರ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಊಟವನ್ನು ಕೊಡಲಾಗುತ್ತದೆ. 1981-82ರಲ್ಲಿ ರಾಜ್ಯದ 36 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಜಾರಿಯಲ್ಲಿದ್ದ ಈ ಕಾರ್ಯಕ್ರಮದಿಂದ 32,348 ಮಕ್ಕಳು ಪ್ರಯೋಜನ ಪಡೆದರು.

ಪೌಷ್ಟಿಕಾಹಾರ ಶಿಕ್ಷಣ ಮತ್ತು ಪ್ರಾತ್ಯಕ್ಷಿಕೆಯ ಸಂಚಾರಿ ಘಟಕಗಳು: ಬೆಂಗಳೂರು, ಚಿತ್ರದುರ್ಗ, ಕೋಲಾರ, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಪೌಷ್ಟಿಕಾಹಾರ ಶಿಕ್ಷಣ ಮತ್ತು ಪ್ರಾತ್ಯಕ್ಷಿಕೆಯ ಸಂಚಾರೀ ಘಟಕಗಳು ಕೆಲಸ ಮಾಡುತ್ತಿವೆ. ಉತ್ತಮ ಪೌಷ್ಟಿಕಾಹಾರ ಮತ್ತು ಮಕ್ಕಳಿಗೆ ನಾಲ್ಕಾರು ತಿಂಗಳ ನಂತರ ಪೂರಕ ಪೌಷ್ಟಿಕಾಹಾರ ಕೊಡುವ ಬಗ್ಗೆ ಗ್ರಾಮೀಣ ಜನತೆಗೆ ಸಾರ್ವತ್ರಿಕವಾಗಿ, ತಾಯಂದಿರಿಗೆ ವಿಶೇಷವಾಗಿ ತಿಳಿವಳಿಕೆ ನೀಡುವುದು ಈ ಘಟಕಗಳ ಕಾರ್ಯ. ಈ ಕ್ಷೇತ್ರ ಶಿಕ್ಷಣಕ್ಕಾಗಿ ಮನೆಗಳಲ್ಲಿ ಅಡಿಗೆಯ ಪ್ರಾತ್ಯಕ್ಷಿಕೆಗಳನ್ನೇರ್ಪಡಿಸುವುದು, ಗುಂಪು ಚರ್ಚೆಗಳನ್ನು ನಡೆಸುವುದು, ವಸ್ತು ಹಾಗೂ ಚಲನಚಿತ್ರ ಪ್ರದರ್ಶನಗಳನ್ನೇರ್ಪಡಿಸುವುದು, ಮೊದಲಾದ ಚಟುವಟಿಕೆಗಳನ್ನು ನಡೆಸಲಾಗುತ್ತದೆ.

ರಾಷ್ಟ್ರೀಯ ಪೌಷ್ಟಿಕಾಹಾರ ನಿರ್ದೇಶನ ಘಟಕ: ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯ ಈ ಘಟಕವು ಆಯ್ದ ಹಳ್ಳಿಗಳಲ್ಲಿ ಆಹಾರ ಮತ್ತು ಪೌಷ್ಟಿಕತೆಯ ಸಮೀಕ್ಷೆಯನ್ನು ಕೈಗೊಂಡಿತು. ಈ ಸಮೀಕ್ಷೆಯು ಹೈದರಾಬಾದಿನಲ್ಲಿರುವ ರಾಷ್ಟ್ರೀಯ ಪೌಷ್ಟಿಕ ಆಹಾರ ಸಂಸ್ಥೆಯ ಕೇಂದ್ರ ಪರಾಮರ್ಶನ ಪ್ರಯೋಗಾಲಯವು ಕಳುಹಿಸಿದ ಮಾದರಿಗಳನ್ನು ಆಧರಿಸಿತ್ತು. ಸಮೀಕ್ಷೆಯ ವ್ಯಾಪ್ತಿಗೆ ಚಿಕ್ಕಮಗಳೂರು, ದಕ್ಷಿಣ ಕನ್ನಡ ಮತ್ತು ಧಾರವಾಡ ಜಿಲ್ಲೆಗಳ 450 ಕುಟುಂಬಗಳು ಒಳಪಟ್ಟಿದ್ದುವು.

ವಿಸ್ತೃತ ರಕ್ಷಣಾ ಚಿಕಿತ್ಸಾ ಕಾರ್ಯಕ್ರಮ: ರೋಗಗಳ ವಿರುದ್ಧ ಚಿಕಿತ್ಸೆ ನೀಡುವ ಮೂಲಕ ಮಕ್ಕಳ ರೋಗ ಮತ್ತು ಸಾವಿನ ಪ್ರಕರಣಗಳನ್ನು ಕಡಮೆ ಮಾಡುವುದು ಈ ಕಾರ್ಯಕ್ರಮದ ಉದ್ದೇಶ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ನಿರ್ದೇಶನಾಲಯದಲ್ಲಿ ಈ ಕಾರ್ಯಕ್ರಮ ನಿರ್ವಹಣೆಗೆ ಒಂದು ವಿಭಾಗವನ್ನು ರಚಿಸಲಾಗಿದೆ. 1981-82ರಲ್ಲಿ ಸುಮಾರು ಎಂಟು ಲಕ್ಷ ಮಕ್ಕಳಿಗೆ ರಕ್ಷಣಾ ಚಿಕಿತ್ಸೆಯ ಸೇವೆ ನೀಡಲಾಗಿದೆ.

ಮುನ್ನೆಚ್ಚರಿಕೆ ಚಿಕಿತ್ಸಾ ಕಾರ್ಯಕ್ರಮ: ಒಂದು ವರ್ಷದಿಂದ ಐದು ವರ್ಷದೊಳಗಿನ ಮಕ್ಕಳಲ್ಲಿ ಅಂಧತ್ವವನ್ನು ತಡೆಗಟ್ಟಲು ನೇರವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮೂಲಕ ಜಾರಿಗೊಳ್ಳುತ್ತಿರುವ ಈ ಕಾರ್ಯಕ್ರಮದಲ್ಲಿ ಮಕ್ಕಳಿಗೆ 'ಎ' ಅನ್ನಾಂಗ ಪಾಕವನ್ನು ಕೊಡಲಾಗುತ್ತದೆ. ಎರಡು ಲಕ್ಷ ಐ.ಯು. ಅಂಶಗಳುಳ್ಳ ಈ ಅನ್ನಾಂಗ ಪಾಕವನ್ನು ಆರು ತಿಂಗಳ ಅಂತರದಲ್ಲಿ ಕೊಡಲಾಗುತ್ತದೆ. ಈ ಕಾರ್ಯಕ್ರಮದ ಮೌಲ್ಯಮಾಪನವನ್ನು ವಿಜಾಪುರ ಮತ್ತು ರಾಯಚೂರು ಜಿಲ್ಲೆಗಳ ಆಯ್ದ ಪ್ರಾಥಮಿಕ ಕೇಂದ್ರಗಳಲ್ಲಿ ನಡೆಸಲಾಗಿದೆ. 1981-82ರಲ್ಲಿ 22 ಲಕ್ಷ ಮಕ್ಕಳಿಗೆ ಈ ಅನ್ನಾಂಗ ಪಾಕವನ್ನು ಕೊಡುವ ಗುರಿ ಇಟ್ಟುಕೊಳ್ಳಲಾಗಿತ್ತು. ಮೊದಲನೇಯ ಮತ್ತು ಎರಡನೇಯ ಸುತ್ತಿನಲ್ಲಿ ಆ ವರ್ಷ ಅನುಕ್ರಮವಾಗಿ, 18,87,875 ಮತ್ತು 17,39,380 ಮಕ್ಕಳಿಗೆ 'ಎ' ಅನ್ನಾಂಗ ಪಾಕ ಒದಗಿಸಲಾಯಿತು.

'ಪೋಷಕ್' ಯೋಜನಾ ಕಾರ್ಯಕ್ರಮ: 1975-76ರಲ್ಲಿ ಆರಂಭವಾದ ಈ ಕಾರ್ಯಕ್ರಮ ರಾಜ್ಯದ ಎಂಟು ಜಿಲ್ಲೆಗಳ 32 ಆಯ್ದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಜಾರಿಯಲ್ಲಿದೆ. 0-6 ವರ್ಷ ವಯಸ್ಸಿನ 50 ಸಾವಿರ ಮಕ್ಕಳಿಗೆ ಸೌಲಭ್ಯ ಒದಗಿಸುವುದು ಈ ಕಾರ್ಯಕ್ರಮದ ಗುರಿ. ಈ ಕಾರ್ಯಕ್ರಮದ ಪ್ರಕಾರ ಮಕ್ಕಳಿಗೆ ಪ್ರತೀ ವಾರಕ್ಕೊಮ್ಮೆ ಪ್ರತೀ ಮಗುವಿಗೆ 80 ಗ್ರಾಂ ಪ್ರಮಾಣದಲ್ಲಿ 'ಬಾಲಾಹಾರ' ಎಂದು ಕರೆಯಲಾಗುವ ಅಧಿಕ ಕ್ಯಾಲೋರಿಯ ಸಸಾರಜನಕ ಆಹಾರವನ್ನು ಕೊಡಲಾಗುತ್ತದೆ. 'ಕೇರ್' ಸಂಸ್ಥೆಯ ನೆರವಿನಿಂದ ಉಚಿತವಾಗಿ ಕೊಡಲಾಗುವ ಈ ಆಹಾರವನ್ನು ಮಕ್ಕಳು ಮನೆಗೆ ತೆಗೆದುಕೊಂಡು ಹೋಗಿ ಬಳಸಬಹುದು.

ಆರೋಗ್ಯ ಶಿಕ್ಷಣ ಮತ್ತು ತರಬೇತಿ: 1929ರಷ್ಟು ಹಿಂದೆಯೇ ಆರೋಗ್ಯ ಇಲಾಖೆಯಲ್ಲಿ ಆರೋಗ್ಯ ಶಿಕ್ಷಣ ಕಾರ್ಯಾಲಯವನ್ನು ಸ್ಥಾಪಿಸಿದ ಹಳೆಯ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಜನರು ಆರೋಗ್ಯ ವಿಧಾನಗಳನ್ನು ಅನುಸರಿಸಿ ವೈಯಕ್ತಿಕ ಹಾಗೂ ಸಾಮೂಹಿಕ ಆರೋಗ್ಯಕ್ಕೆ ಮಾರಕವಾಗುವಂತಹ ಪದ್ಧತಿಗಳಿಂದ ದೂರವಿರುವಂತೆ ತಿಳಿವಳಿಕೆ ನೀಡುವುದು, ಆ ಮೂಲಕ ಜನಸಮುದಾಯದಲ್ಲಿ ಆರೋಗ್ಯ ಪ್ರಜ್ಞೆಯನ್ನು ಮೂಡಿಸುವುದು, ಆರೋಗ್ಯ ಶಿಕ್ಷಣ ಕಾರ್ಯಾಲಯದ ಮುಖ್ಯ ಉದ್ದೇಶ. ಆರೋಗ್ಯ ಶಿಕ್ಷಣ ಕಾರ್ಯಾಲಯವನ್ನು ಕೇಂದ್ರ ಸರಕಾರವು ಸಲಹೆಮಾಡಿದ ರೀತಿಯ ಮೇಲೆ 1960ರಲ್ಲಿ ಪುನರ್ವ್ಯವಸ್ಥೆಗೊಳಿಸಲಾಯಿತು. 1965ರಲ್ಲಿ ಈ ಕಾರ್ಯಾಲಯಕ್ಕೆ ಶಾಲಾ ಶಿಕ್ಷಣ ಕಾರ್ಯಕ್ರಮದ ಅನುಷ್ಠಾನ ಕಾರ್ಯವನ್ನು ಸೇರಿಸಲಾಯಿತು. ಎಲ್ಲ ಆರೋಗ್ಯ ಶಿಕ್ಷಣ ಚಟುವಟಿಕೆ ಯೋಜನೆ, ಸಂಘಟನೆ, ಅನುಷ್ಠಾನ, ಆರೋಗ್ಯ ಶಿಕ್ಷಣದ ವೈದ್ಯಕೀಯ ಹಾಗೂ ವೈದ್ಯಕೀಯೇತರ ಸಿಬ್ಬಂದಿ ತರಬೇತಿ, ಶೈಕ್ಷಣಿಕ ಸಾಧನ ಸಲಕರಣೆಗಳ ಸಂಗ್ರಹ, ದಾಸ್ತಾನು ಮತ್ತು ವಿತರಣೆ ಹಾಗೂ ಸಭೆಗಳು, ಗೋಷ್ಠಿಗಳು ಮತ್ತು ವಸ್ತು ಪ್ರದರ್ಶನಗಳ ವ್ಯವಸ್ಥೆ—ಇವು ಪ್ರಸ್ತುತ ಆರೋಗ್ಯ ಶಿಕ್ಷಣ ಕಾರ್ಯಾಲಯದ ಜವಾಬ್ದಾರಿಗಳಾಗಿವೆ. ಈ ಕಾರ್ಯಾಲಯವು ರಾಜ್ಯದ ನಾನಾ ಭಾಗಗಳಲ್ಲಿ ನಡೆಯುವ ದೊಡ್ಡ ವಸ್ತು ಪ್ರದರ್ಶನಗಳಲ್ಲಿ ಪಾಲುಗೊಳ್ಳುವವಷ್ಟೇ ಅಲ್ಲದೆ ಜಿಲ್ಲಾ ಮಟ್ಟದಲ್ಲಿ ಸಣ್ಣ ಪ್ರಮಾಣದ ವಸ್ತುಪ್ರದರ್ಶನಗಳನ್ನೇರ್ಪಡಿಸಲೂ ನೆರವಾಗುತ್ತದೆ.

ರಾಜ್ಯ ಕುಟುಂಬ ಕಲ್ಯಾಣ ಕಾರ್ಯಾಲಯದ ಒಂದು ಅಂಗವಾಗಿ ಸಮೂಹ ಮಾಧ್ಯಮ ಹಾಗೂ ಶಿಕ್ಷಣ ವಿಭಾಗವೊಂದಿದೆ. ಈ ವಿಭಾಗವು ಸಣ್ಣ ಕುಟುಂಬದ ಸೂತ್ರ, ಪ್ರಸೂತಿ ಹಾಗೂ ಮಕ್ಕಳ ಆರೋಗ್ಯಸೇವೆ—ಇವುಗಳ ಬಗ್ಗೆ ರಾಜ್ಯಾದ್ಯಂತ ಶಿಕ್ಷಣ ಚಟುವಟಿಕೆಗಳನ್ನು ನಡೆಸುತ್ತದೆ. ಆರೋಗ್ಯ ಶಿಕ್ಷಣವನ್ನು ನೋಡಿಕೊಳ್ಳುವ ಮೂಲ ಆರೋಗ್ಯ ಕಾರ್ಯಕರ್ತರು ಸಾಮಾನ್ಯವಾಗಿ ತಮಗೆ ದೊರೆತ ಪ್ರತೀಯೊಂದು ಅವಕಾಶದಲ್ಲೂ, ವಿಶೇಷವಾಗಿ, ಹಳ್ಳಿಯ ಜಾತ್ರೆ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಜನರನ್ನು ಸಂಪರ್ಕಿಸಿ ಅವರಿಗೆ ನಾನಾ ಆರೋಗ್ಯ ವಿಷಯಗಳ ಬಗ್ಗೆ ತಿಳಿವಳಿಕೆ ನೀಡುತ್ತಾರೆ. ಜೊತೆಗೆ ವೈಯಕ್ತಿಕ ಸ್ವಚ್ಛತೆ, ಪರಿಸರ ನೈರ್ಮಲ್ಯ, ಕುಡಿಯುವ ನೀರಿನ ಶುದ್ಧೀಕರಣ, ಚುಚ್ಚುಮದ್ದು, ಕ್ರಿಮಿನಾಶಕ ಔಷಧಿಗಳ ಸಿಂಪರಣೆ ಇತ್ಯಾದಿಗಳ ಬಗ್ಗೆ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸುತ್ತಾರೆ. ಇಲಾಖೆಯು ವಿಶ್ವ ಆರೋಗ್ಯ ದಿನ, ನೊಣ ನಿರೋಧ ಸಪ್ತಾಹ, ಕುಟುಂಬ ಕಲ್ಯಾಣ ಪಕ್ಷ, ಮೊದಲಾದ ಆಚರಣೆಗಳನ್ನು ಏರ್ಪಡಿಸುತ್ತದೆ.

**ಶಾಲಾ ಆರೋಗ್ಯ ಸೇವೆಗಳು :** ಶಾಲಾ ಮಕ್ಕಳಿಗೆ ವಿಸ್ತೃತ ಆರೋಗ್ಯ ಸೇವೆಯನ್ನು ಒದಗಿಸುವುದು ಈ ಕಾರ್ಯಕ್ರಮದ ಉದ್ದೇಶ. ಇದರಲ್ಲಿ ವೈದ್ಯಕೀಯ ಪರೀಕ್ಷೆ, ಚಿಕಿತ್ಸೆ ಮತ್ತು ಲೋಪದೋಷ ನಿವಾರಣೆ, ಇತ್ಯಾದಿ ಸೇವೆಗಳು ಸೇರಿವೆ. ಮಕ್ಕಳ ಬೆಳವಣಿಗೆಯ ಉತ್ತೇಜನಕ್ಕೆ ಅಗತ್ಯವಾದ ಆರೋಗ್ಯಕರ ಅಭ್ಯಾಸಗಳು ಮತ್ತು ಪದ್ಧತಿಗಳನ್ನು ರೂಢಿಸಿಕೊಳ್ಳಲು ಶಾಲಾ ಮಕ್ಕಳಿಗೆ ಮಾರ್ಗದರ್ಶನ ನೀಡಲಾಗುತ್ತದೆ. ಈ ಕಾರ್ಯಕ್ರಮದಲ್ಲಿ 6 ರಿಂದ 11 ವರ್ಷ ವಯಸ್ಸಿನ ಮಕ್ಕಳಿಗೆ ಗಂಟಲು ಬೇನೆ, ನಾಯಿಕೆಮ್ಮು, ಪೋಲಿಯೋಗಳಂತಹ ರೋಗಗಳ ವಿರುದ್ಧ ರಕ್ಷಣಾ ಚಿಕಿತ್ಸೆ ಒದಗಿಸಲಾಗುತ್ತದೆ. ಶಾಲಾ ವರ್ಷದಲ್ಲಿ ಕನಿಷ್ಠ ಎರಡು ಬಾರಿ ವಿದ್ಯಾರ್ಥಿಗಳ ವೈದ್ಯಕೀಯ ಪರೀಕ್ಷೆಯನ್ನು ಶಿಕ್ಷಣ ಸಂಸ್ಥೆಗಳ ವೈದ್ಯಕೀಯ ತಪಾಸಣೆಯ ಅಧಿಕಾರಿಗಳು ಸರ್ಕಾರಿ ಅಥವಾ ಖಾಸಗಿ ವೈದ್ಯರ ಸೇವೆಯನ್ನು ಪಡೆದು ನಡೆಸುತ್ತಾರೆ. ಪ್ರತೀ ಕಂದಾಯ ಇಲಾಖೆಯ ವಿಭಾಗದಲ್ಲಿರುವ ವಿದ್ಯಾ ಇಲಾಖೆಯ ಸಹನಿರ್ದೇಶಕರ ಕಛೇರಿಯಲ್ಲಿ ಈ ವೈದ್ಯಾಧಿಕಾರಿ ಕಾರ್ಯನಿರತರಾಗಿರುತ್ತಾರೆ. ಪ್ರೌಢಶಾಲಾ ವಿದ್ಯಾರ್ಥಿಗಳಿಂದ ವೈದ್ಯಕೀಯ ಶುಲ್ಕ ಒಂದು ರೂ. ಪಡೆದರೆ ಅದಕ್ಕೂ ಕೆಳ ಮಟ್ಟದ ಶಾಲಾ ವಿದ್ಯಾರ್ಥಿಗಳಿಗೆ ಉಚಿತ ವೈದ್ಯಕೀಯ ಸೇವೆಯನ್ನು ಒದಗಿಸಿದೆ. ಮಕ್ಕಳನ್ನು ಕಣ್ಣು, ಹಲ್ಲು ಮತ್ತು ಅಪೌಷ್ಟಿಕತೆಗೆ ಸಂಬಂಧಿಸಿದ ರೋಗಗಳ ಬಗ್ಗೆ ವೈದ್ಯಕೀಯವಾಗಿ ಪರೀಕ್ಷಿಸಬೇಕೆಂಬುದನ್ನು ಕಡ್ಡಾಯಗೊಳಿಸಲಾಗಿದೆ. 1981-82 ರಲ್ಲಿ ರಾಜ್ಯದ 48 ತಾಲೂಕುಗಳ 90 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಈ ಸೇವೆ ಜಾರಿಯಲ್ಲಿತ್ತು. ಆಗ 80,270 ಪ್ರಾಥಮಿಕ ಶಾಲೆಗಳು ಈ ಸೇವಾ ವ್ಯಾಪ್ತಿಯಲ್ಲಿದ್ದವು. ಕರ್ನಾಟಕ ಸರ್ಕಾರವು 26 ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮೂಲಕ ರಾಷ್ಟ್ರೀಯ ಶಾಲಾ ಆರೋಗ್ಯ ಕಾರ್ಯಕ್ರಮವನ್ನು ಜಾರಿಗೆ ತರಲು ಮಂಜೂರಾತಿ ನೀಡಿದೆ. ಈ ಕಾರ್ಯಕ್ರಮವನ್ನು ಜಾರಿಗೊಳಿಸಲು ಶಾಲಾ ಆರೋಗ್ಯ ಶಿಕ್ಷಣ ಘಟಕವು ಮಾರ್ಗದರ್ಶಕ ಸೂತ್ರಗಳನ್ನು ರೂಪಿಸಿದೆ.

**ಇ.ಎಸ್.ಐ. ಆಸ್ಪತ್ರೆ :** ಕೆಲಸಗಾರರ ರಾಜ್ಯ ವಿಮಾ ಆಸ್ಪತ್ರೆ 1958ರಲ್ಲಿ ಸ್ಥಾಪಿತವಾಯಿತು. 1961ರಲ್ಲಿ ಇದು 414 ಹಾಸಿಗೆಗಳ ಸಾರ್ವಜನಿಕ ಆಸ್ಪತ್ರೆಯಾಗಿ ಮೇಲ್ದರ್ಜೆಗೇರಿಸಲ್ಪಟ್ಟಿತು. 1981ರಲ್ಲಿ ಈ ಆಸ್ಪತ್ರೆಯ ಹಾಸಿಗೆಗಳ ಸಂಖ್ಯೆ 500ಕ್ಕೇರಿತು. ಕೆಲಸಗಾರರ ರಾಜ್ಯವಿಮಾ ಮಂಡಳಿಯ ನಿರ್ದೇಶನದ ಪ್ರಕಾರ ಕೆಲಸಗಾರರು ಮತ್ತು ಅವರ ಅವಲಂಬಿಗಳಿಗೆ ಇಲ್ಲಿ ಎಲ್ಲ ವೈದ್ಯಕೀಯ ಸೌಲಭ್ಯಗಳನ್ನೂ ಒದಗಿಸಲಾಗುತ್ತದೆ. ವಿಮೆ ಮಾಡಲ್ಪಟ್ಟ ವ್ಯಕ್ತಿಗಳು ಹಾಗೂ ಇ.ಎಸ್.ಐ. ಚಿಕಿತ್ಸಾಲಯಗಳಿಂದ ಕಳುಹಿಸಲ್ಪಟ್ಟ ಅವರ ಕುಟುಂಬದ ಸದಸ್ಯರಿಗೆ ಇಲ್ಲಿ ಒಳ-ಹೊರ ರೋಗಿಗಳ ಸೇವೆಯಷ್ಟೇ ಅಲ್ಲದೆ ವಿಶೇಷ ತಜ್ಞ ಸೇವೆಯನ್ನೂ ಒದಗಿಸಲಾಗುತ್ತದೆ. ಈ ಆಸ್ಪತ್ರೆಯಲ್ಲಿ ವೈದ್ಯಕೀಯ, ಶಸ್ತ್ರ ಚಿಕಿತ್ಸೆ, ಮಕ್ಕಳ ರೋಗ, ಕಿವಿ ಮೂಗು-ಗಂಟಲು, ಕಣ್ಣು, ದಂತ ಚಿಕಿತ್ಸೆ ಮತ್ತಿತರ ವಿಭಾಗಗಳೇ ಅಲ್ಲದೆ ಪೂರ್ಣ ಸುಸಜ್ಜಿತವಾದ ಶಸ್ತ್ರ ಚಿಕಿತ್ಸಾ ಕೋಣೆಗಳು ಇವೆ. ಈ ಆಸ್ಪತ್ರೆಯಲ್ಲಿ ಎಲ್ಲ ರೋಗಗಳಿಗೂ ಚಿಕಿತ್ಸೆ ನೀಡಲಾಗುತ್ತದೆ. ಕ್ಷಯರೋಗ ಚಿಕಿತ್ಸೆಗಾಗಿ ಪ್ರತ್ಯೇಕವಾಗಿ 47 ಹಾಸಿಗೆಗಳನ್ನು ಮೀಸಲಿಡಲಾಗಿದೆ. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ಕ್ಷಯರೋಗಿಗಳ ಸಂಖ್ಯೆ ಅನುಕ್ರಮವಾಗಿ 185 ಮತ್ತು 17,646. ಈ ಸಂಖ್ಯೆ ಅದರ ಹಿಂದಿನ ವರ್ಷ ಅನುಕ್ರಮವಾಗಿ 317 ಮತ್ತು 16,010ರಷ್ಟಿತ್ತು. ಕ್ಷಯರೋಗದ ಹೊರತಾಗಿ ಇಲ್ಲಿ ಚಿಕಿತ್ಸೆ ಪಡೆದ ಇತರ ಒಳ ಮತ್ತು ಹೊರ ರೋಗಿಗಳ ಸಂಖ್ಯೆ 1981ರಲ್ಲಿ ಅನುಕ್ರಮವಾಗಿ 2,29,765 ಮತ್ತು 4,46,849 ರಷ್ಟಿದ್ದರೆ 1980ರಲ್ಲಿ 1,48,569 ಮತ್ತು 4,78,199 ರಷ್ಟಿತ್ತು.

## ನೌಕರರ ರಾಜ್ಯ ವಿಮಾ ಯೋಜನೆ

1948ರ ನೌಕರರ ರಾಜ್ಯ ವಿಮಾ ಯೋಜನೆಯ ಶಾಸನ ಹಾಗೂ ಸಂಬಂಧಪಟ್ಟ ನಿಯಮ ನಿಬಂಧನೆಗಳ ಪ್ರಕಾರ ರಾಜ್ಯದಲ್ಲಿ 1958ರಲ್ಲಿ ನೌಕರರ ರಾಜ್ಯ ವಿಮಾ ಯೋಜನೆಯನ್ನು ಜಾರಿಗೆ ತರಲಾಯಿತು. ಇತ್ತೀಚೆಗೆ ತಿದ್ದುಪಡಿಯಾದ ಈ ಶಾಸನದ ಪ್ರಕಾರ ಹಂಗಾಮೇತರ ಕಾರ್ಖಾನೆ ಕೆಲಸಗಾರರು ಮತ್ತು ಹೋಟೆಲುಗಳು, ರೆಸ್ಟೋರೆಂಟುಗಳು, ಸಿನಿಮಾ ಮಂದಿರಗಳು, ರಸ್ತೆ ಸಾರಿಗೆ ಸಂಸ್ಥೆಗಳು, ಇತ್ಯಾದಿ ಇತರ ಕ್ಷೇತ್ರದ ನೌಕರರು ಈ ಯೋಜನೆಯ ವ್ಯಾಪ್ತಿಗೆ ಸೇರಿದ್ದಾರೆ. ಸಾಮಾಜಿಕ ಭದ್ರತಾ ವ್ಯವಸ್ಥೆಯಾಗಿ ಜಾರಿಗೆ ಬಂದಿರುವ ನೌಕರರ ರಾಜ್ಯ

ವಿಮಾ ಯೋಜನೆಯು ಕೇಂದ್ರ ಕಾರ್ಮಿಕ ಸಚಿವಾಲಯದ ಆಡಳಿತ ನಿಯಂತ್ರಣಕ್ಕೊಳಪಟ್ಟಿದೆ. ಈ ಯೋಜನೆಯಲ್ಲಿ ಕಾಯಿಲೆ, ಗರ್ಭಧಾರಣೆ, ಅಸಾಮರ್ಥ್ಯಗಳಿಂದಾಗಿ ಕೆಲಸ ಮಾಡಲಾಗದ ಸಂದರ್ಭದಲ್ಲಿ ನೌಕರರಿಗೆ ವೇತನ ನಷ್ಟವಾಗುವುದರ ವಿರುದ್ಧ ರಕ್ಷಣೆ ಒದಗಿಸಲು ಮತ್ತು ವಿಮಾ ಯೋಜನೆಗೊಳಪಟ್ಟ ನೌಕರರು ಕರ್ತವ್ಯ ನಿರತರಾಗಿದ್ದಾಗ ಸಾವು ಹೊಂದಿದ್ದರೆ ಅಂತಹವರ ಅವಲಂಬಿಗಳಿಗೆ ಪರಿಹಾರ ಒದಗಿಸಲು ಮತ್ತು ವಿಮೆ ಮಾಡಲ್ಪಟ್ಟ ವ್ಯಕ್ತಿಗಳ ಕುಟುಂಬದ ಸದಸ್ಯರಿಗೆ ವೈದ್ಯಕೀಯ ರಕ್ಷಣೆ ನೀಡಲು ಅವಕಾಶವಿದೆ. 20 ಅಥವಾ ಅದಕ್ಕಿಂತ ಹೆಚ್ಚು ನೌಕರರನ್ನು ನೇಮಿಸಿಕೊಳ್ಳುವ ಹಂಗಾಮೇತರ ಕಾರ್ಖಾನೆಗಳು ಮತ್ತು ತಿಂಗಳಿಗೆ 1,000 ರೂ. ಗರಿಷ್ಠ ವೇತನ ಪಡೆಯುವ ಎಲ್ಲ ನೌಕರರಿಗೂ ಈ ಯೋಜನೆ ಅನ್ವಯವಾಗುತ್ತದೆ.

ನೌಕರರ ರಾಜ್ಯ ವಿಮಾ ಯೋಜನೆಯಿಂದ ಆರು ಪ್ರಯೋಜನಗಳು ದೊರೆಯುತ್ತವೆ. ಅವೆಂದರೆ, 1) ವೈದ್ಯಕೀಯ ಸೇವೆ, 2) ಕಾಯಿಲೆ, 3) ಪ್ರಸೂತಿ, 4) ಅಸಾಮರ್ಥ್ಯ, 5) ಅವಲಂಬನೆ ಹಾಗೂ 6) ಅಂತ್ಯ ಸಂಸ್ಕಾರಗಳಿಗೆ ಸಂಬಂಧಿಸಿದಂತೆ ನಗದು ರೂಪದ ಪರಿಹಾರಗಳು. ವೈದ್ಯಕೀಯ ಪರಿಹಾರವು ವಿಮೆ ಮಾಡಲ್ಪಟ್ಟ ವ್ಯಕ್ತಿಗಳಿಗಲ್ಲದೆ ಅವರ ಕುಟುಂಬಗಳಿಗೂ ವಿಸ್ತರಿಸಲ್ಪಟ್ಟಿದೆ. ನಗದು ಪರಿಹಾರವನ್ನು ನೌಕರರ ವಿಮಾ ಯೋಜನಾ ಮಂಡಳಿಯ ಸ್ಥಳೀಯ ಕಛೇರಿಗಳಲ್ಲಿ ನೀಡಲಾಗುತ್ತದೆ. ಈ ಆಯೋಜನೆಯನ್ವಯ ವೈದ್ಯಕೀಯ ಪರಿಹಾರವನ್ನು ಒದಗಿಸುವ ಹೊಣೆಗಾರಿಕೆ ರಾಜ್ಯ ಸರ್ಕಾರಕ್ಕೆ ಸೇರಿರುತ್ತದೆ. ರಾಜ್ಯ ಸರ್ಕಾರದ ಪರವಾಗಿ ನೌಕರರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ ಸೇವೆಯು) ಆಸ್ಪತ್ರೆ, ಪೂರ್ಣಾವಧಿ ಹಾಗೂ ಭಾಗಶಃ ಅವಧಿಯ ಚಿಕಿತ್ಸಾಲಯಗಳು ಮತ್ತು ನೌಕರ ಸೌಲಭ್ಯ ಚಿಕಿತ್ಸಾಲಯಗಳ ಮೂಲಕ ವೈದ್ಯಕೀಯ ಪರಿಹಾರವನ್ನು ಒದಗಿಸಲಾಗುತ್ತದೆ. ನಗದು ಪರಿಹಾರದ ಹೊರತಾಗಿ ವೈದ್ಯಕೀಯ ಪರಿಹಾರ ನಿರ್ವಹಿಸುವ ಜವಾಬ್ದಾರಿ ಬೆಂಗಳೂರಿನಲ್ಲಿರುವ ನೌಕರರ ರಾಜ್ಯ ವಿಮಾ ಯೋಜನೆಯ (ವೈದ್ಯಕೀಯ) ಸೇವೆಗಳ ನಿರ್ದೇಶಕರ ನಿಯಂತ್ರಣಕ್ಕೆ ಸೇರಿರುತ್ತದೆ. ಈ ನಿರ್ದೇಶಕರು ಪ್ರಧಾನ ನಿಯಂತ್ರಣಾಧಿಕಾರಿಗಳಾಗಿದ್ದು ಅವರಿಗೆ ಎಲ್ಲಾ ಇಲಾಖಾ ಮುಖ್ಯಾಧಿಕಾರಿಗಳಿಗೆ ಇರುವ ಹಣಕಾಸಿನ ಅಧಿಕಾರಗಳನ್ನೂ ಮತ್ತು ಈ ಇಲಾಖೆಗೇ ಸಂಬಂಧಿಸಿದ ಕೆಲವು ವಿಶೇಷ ಅಧಿಕಾರಗಳನ್ನೂ ನೀಡಲಾಗಿದೆ.

ರಾಜ್ಯದಲ್ಲಿ ಎರಡು ಆಯುರ್ವೇದ, ಒಂಬತ್ತು ಅರೆಕಾಲಾವಧಿಯ, 99 ಪೂರ್ಣಾವಧಿಯ, 10 ನೌಕರರ ಸೌಲಭ್ಯ ಚಿಕಿತ್ಸಾಲಯಗಳು ಮತ್ತು ಬೆಂಗಳೂರು, ದಾಂಡೇಲಿ, ಮಂಗಳೂರು ಹಾಗೂ ಮೈಸೂರಿನಲ್ಲಿರುವ ನಾಲ್ಕು ಇ. ಎಸ್. ಐ. ಆಸ್ಪತ್ರೆಗಳೂ ಸೇರಿದಂತೆ ಒಟ್ಟು 124 ಇ. ಎಸ್. ಐ. ವೈದ್ಯಕೀಯ ಸಂಸ್ಥೆಗಳಿವೆ. ಜೊತೆಗೆ ಬೆಂಗಳೂರಿನಲ್ಲಿರುವ ಎಸ್. ಡಿ. ಎಸ್. ಕ್ಷಯ ರೋಗ ಆಸ್ಪತ್ರೆಯಲ್ಲಿ 32 ಹಾಸಿಗೆಗಳ ಇ. ಎಸ್. ಐ. ಸೌಲಭ್ಯ, ಕೆ. ಜಿ. ಎಫ್. ಸಾರ್ವಜನಿಕ ಆಸ್ಪತ್ರೆಯಲ್ಲಿ 32 ಹಾಸಿಗೆಗಳು ಮತ್ತು ಕಲ್ಬುರ್ಗಿಯ ಸಾರ್ವಜನಿಕ ಆಸ್ಪತ್ರೆಯಲ್ಲಿ 206 ಹಾಸಿಗೆಗಳ ಸೌಲಭ್ಯವನ್ನು ಕಲ್ಪಿಸಲಾಗಿದೆ. ಇದಲ್ಲದೆ ಸರ್ಕಾರಿ ಆಸ್ಪತ್ರೆಗಳು ಹಾಗೂ ನೌಕರರ ಸೌಲಭ್ಯ ಚಿಕಿತ್ಸಾಲಯಗಳಲ್ಲಿ ಕ್ಯಾಪಿಟೇಷನ್ ಶುಲ್ಕದ ಆಧಾರದ ಮೇಲೆ 635 ಹಾಸಿಗೆಗಳನ್ನು ಒದಗಿಸಲಾಗಿದೆ. ಬೆಂಗಳೂರು ರಾಜಾಜಿನಗರದಲ್ಲಿರುವ ಇ. ಎಸ್. ಐ. ಆಸ್ಪತ್ರೆ ಮತ್ತು ಬೆಳಗಾವಿ ಪ್ರದೇಶದಲ್ಲಿರುವ ಇ. ಎಸ್. ಐ. ಆಸ್ಪತ್ರೆಗೆ ಹೆಚ್ಚುವರಿ ಸಿಬ್ಬಂದಿ ಮಂಜೂರಾಗಿದೆ. 1981 ಮೇ ತಿಂಗಳಲ್ಲಿ ಮೈಸೂರಿನಲ್ಲಿ 100 ಹಾಸಿಗೆಗಳ ಇ. ಎಸ್. ಐ. ಆಸ್ಪತ್ರೆಯನ್ನು ಆರಂಭಿಸಲಾಯಿತು. ಬೆಳಗಾವಿ ಪ್ರದೇಶಕ್ಕೆ 30 ಹೆಚ್ಚುವರಿ ಹಾಸಿಗೆಗಳನ್ನು ಮಂಜೂರು ಮಾಡಲಾಯಿತು. ಮಂಡ್ಯ ಮತ್ತು ಮೈಸೂರಿನಲ್ಲಿರುವ ಇ. ಎಸ್. ಐ. ಚಿಕಿತ್ಸಾಲಯಗಳನ್ನು 1981ರ ಏಪ್ರಿಲ್‌ನಲ್ಲಿ ಆರಂಭಿಸಲಾಯಿತು. ಆ ವರ್ಷ ಅನೇಕ ಸ್ಥಳಗಳಲ್ಲಿದ್ದ ಅರೆಕಾಲಾವಧಿಯ ಇ. ಎಸ್. ಐ. ಚಿಕಿತ್ಸಾಲಯಗಳನ್ನು ಪೂರ್ಣಾವಧಿಯ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸಲಾಯಿತು. 1982ರಲ್ಲಿ ಈ ಯೋಜನೆಯ ಲಾಭ ಪಡೆವವರ ಸಂಖ್ಯೆ 3,60,000. ಈ ಸಂಖ್ಯೆ 1981ರಲ್ಲಿ 3,28,000 ರಷ್ಟು ಮತ್ತು 1980ರಲ್ಲಿ 3,21,650 ರಷ್ಟಿತ್ತು. ಇ. ಎಸ್. ಐ. ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳಲ್ಲಿ ಬಹುಮಟ್ಟಿನ ಸಾಮಾನ್ಯ ರೋಗಗಳು ಹಾಗೂ ಔದ್ಯೋಗಿಕ ರೋಗಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. 1982ರಲ್ಲಿ ರಾಜ್ಯಾದ್ಯಂತ ಇರುವ ಇ. ಎಸ್. ಐ. ಆಸ್ಪತ್ರೆಗಳು ಮತ್ತಿತರ ವೈದ್ಯಕೀಯ ಸಂಸ್ಥೆಗಳಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 99,043 ಮತ್ತು 1,10,10,680 ರಷ್ಟಿತ್ತು. ಅದರ ಹಿಂದಿನ ವರ್ಷ ಈ ಸಂಖ್ಯೆ 98,403 ಮತ್ತು 1,04,92,248 ರಷ್ಟಿತ್ತು.

ರಾಜ್ಯದಲ್ಲಿ ನೌಕರರ ರಾಜ್ಯ ವಿಮಾ ಯೋಜನೆಯನ್ನು ರಾಜ್ಯ ಸರ್ಕಾರವು ನಿರ್ವಹಿಸುತ್ತಿದೆ. ವೈದ್ಯಕೀಯ ಪರಿಹಾರ ದೊರಕಿಸುವ ವೆಚ್ಚವನ್ನು ರಾಜ್ಯ ಸರ್ಕಾರ ಆರಂಭದಲ್ಲಿ ಭರಿಸುತ್ತದೆ. ನಂತರ ನೌಕರರ ರಾಜ್ಯ ವಿಮಾ ಮಂಡಳಿ ಈ ವೆಚ್ಚದ 7/8 ಭಾಗವನ್ನು ತುಂಬಿಕೊಡುತ್ತದೆ. ಉಳಿದ 1/8 ಭಾಗದ ವೆಚ್ಚವನ್ನು ರಾಜ್ಯ ಸರ್ಕಾರವೇ ಭರಿಸುತ್ತದೆ.

1948ರ ನೌಕರರ ವಿಮಾ ಯೋಜನಾ ಶಾಸನದ ವ್ಯಾಪ್ತಿಗೆ ರಾಜ್ಯದ 16 ಜಿಲ್ಲೆಗಳು ಸೇರಿದ್ದು ಇದನ್ನು ಹಂತ ಹಂತವಾಗಿ ಜಾರಿಗೆ ತರಲಾಗುತ್ತಿದೆ. ಕಾರ್ಯಕ್ರಮದಲ್ಲಿ ರಕ್ಷಣಾ ಚಿಕಿತ್ಸೆಯೂ ಸೇರಿದಂತೆ ಕುಟುಂಬ ಕಲ್ಯಾಣ ಸೇವೆಯನ್ನು ಬೆಂಗಳೂರಿನ ರಾಜಾಜಿನಗರದಲ್ಲಿರುವ ಇ. ಎಸ್. ಐ. ಆಸ್ಪತ್ರೆಗೆ ಹೊಂದಿ

ಕೊಂಡಿರುವ 'ಬಿ' ಮಾದರಿ ಬಾಣಂತನ ಸೇವಾ ಕೇಂದ್ರ ಮತ್ತು ಬೆಂಗಳೂರು ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿರುವ ಇ. ಎಸ್. ಐ. ಆಸ್ಪತ್ರೆಗಳು ಹಾಗೂ ಚಿಕಿತ್ಸಾಲಯಗಳ ಮೂಲಕ ಒದಗಿಸಲಾಗುತ್ತದೆ. ಇ. ಎಸ್. ಐ. ಆಸ್ಪತ್ರೆಗಳಲ್ಲಿ ವಿಮೆ ಮಾಡಲ್ಪಡದ ವ್ಯಕ್ತಿಗಳಿಗೂ ಕುಟುಂಬ ಕಲ್ಯಾಣ ಸೇವೆಯನ್ನು ಒದಗಿಸಲಾಗುತ್ತದೆ.

ಸಾರ್ವಜನಿಕ ಆರೋಗ್ಯ ಸಂಸ್ಥೆ : ಬೆಂಗಳೂರಿನಲ್ಲಿರುವ ಸಾರ್ವಜನಿಕ ಆರೋಗ್ಯ ಸಂಸ್ಥೆ ಆರಂಭವಾದುದು 1895ರಲ್ಲಿ. ಆಗ ಅದರ ಮುಖ್ಯಸ್ಥರಾಗಿ ಒಬ್ಬ ನಿರ್ದೇಶಕರಿದ್ದರು. ಈ ಕೇಂದ್ರವು ಸಾಂಕ್ರಾಮಿಕ ರೋಗಗಳ ಪರಿಶೋಧನೆಗೆ ಸಂಬಂಧಿಸಿದಂತೆ ಪ್ರಯೋಗಾಲಯದ ಆಸರೆಯನ್ನು ಒದಗಿಸುತ್ತಿತ್ತು. ಡಾ|| ಹಾಫ್ಕಿನ್ ಅವರಂತಹ ಪ್ರಸಿದ್ಧ ವೈದ್ಯಕೀಯ ತಜ್ಞರ ಸಹಯೋಗದೊಂದಿಗೆ ಪ್ಲೇಗ್ ಲಸಿಕೆಯ ಪ್ರಾಯೋಗಿಕ ಉತ್ಪಾದನೆಯನ್ನು ಇಲ್ಲಿ ಆರಂಭಿಸಲಾಯಿತು. ಸಾರ್ವಜನಿಕ ಆರೋಗ್ಯ ನಿರ್ದೇಶಕರ ಹುದ್ದೆ ಸೃಷ್ಟಿಯಾದ ಮೇಲೆ ಈ ಹುದ್ದೆಗೆ ಸಾರ್ವಜನಿಕ ಆರೋಗ್ಯ ಕಾರ್ಯಾಲಯದ ಮೇಲ್ವಿಚಾರಕರೆಂಬ ಹೆಸರು ಬಂದಿತು. ನಂತರ 1898ರಲ್ಲಿ ಜಾರಿಗೆ ಬಂದ ಅಪರಾಧ ನಿಧಾನ ನೀತಿಯನ್ವಯ ರಾಸಾಯನಿಕ ಪರೀಕ್ಷಕರ ಕರ್ತವ್ಯಗಳನ್ನು ಇವರಿಗೆ ವಹಿಸಲಾಯಿತು. 1920ರಲ್ಲಿ ಪ್ಲೇಗ್ ಲಸಿಕೆಯೊಂದಿಗೆ ಈ ಪ್ರಯೋಗಾಲಯಗಳ ಶಾಖೆಯು ಕಾಲರ ಮತ್ತು ವಿಷಮಶೀತ ಜ್ವರ ನಿರೋಧಕ ಲಸಿಕೆಗಳನ್ನೂ ಉತ್ಪಾದಿಸಲು ಆರಂಭಿಸಿತು. ಹಳೆಯ ಮೈಸೂರಿನಲ್ಲಿ ಇದು ಎರಡನೇಯ ಅತ್ಯಂತ ದೊಡ್ಡ ಲಸಿಕೆ ಉತ್ಪಾದನಾ ಘಟಕವಾಗಿತ್ತು.

ಸಾರ್ವಜನಿಕ ಆರೋಗ್ಯ ಸಂಸ್ಥೆಯು ಕ್ರಮೇಣ ಪೂರ್ಣ ಅಭಿವೃದ್ಧಿಗೊಂಡ ಏಕಾಣುಜೀವಶಾಸ್ತ್ರದ ಪ್ರಯೋಗಾಲಯ ವಿಭಾಗ, ಆಹಾರ ಮತ್ತು ಜಲ ವಿಶ್ಲೇಷಣಾ ವಿಭಾಗ, ವೈದ್ಯಕೀಯ ಕಾನೂನು ವಿಭಾಗ ಮತ್ತು ಲಸಿಕೆ ತಯಾರಿಕಾ ವಿಭಾಗಗಳೊಂದಿಗೆ ಸಜ್ಜುಗೊಂಡಿತು. ಸಾಂಕ್ರಾಮಿಕ ರೋಗಗಳು ತಲೆದೋರುವುದನ್ನು ಪರಿಶೋಧಿಸುವುದು, ಪ್ರಯೋಗಾಲಯ ರೋಗ ಸಮೀಕ್ಷೆಗಳನ್ನು ನಡೆಸುವುದು ಈ ಸಂಸ್ಥೆಯ ವ್ಯಾಪ್ತಿಗೆ ಒಳಪಟ್ಟವು. ಇದರ ಜೊತೆಗೇ ನಿರ್ವೀರ್ಯೀಕರಣ, ಪ್ರಾಣಿಗೃಹ, ವಿಶ್ಲೇಷಣೆ ಮತ್ತು ಗುಣ ನಿಯಂತ್ರಣ ವಿಭಾಗಗಳೂ ಇದ್ದವು. ರಾಸಾಯನಿಕ ಪರೀಕ್ಷಕರ ವಿಭಾಗವು ಕ್ರಿಮಿನಲ್ ಪ್ರೊಸೀಜರ್ ಕೋಡ್ ಪ್ರಕಾರ ವೈದ್ಯನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದ ಮಾದರಿಗಳು, ಸಾರ್ವಜನಿಕ ಆರೋಗ್ಯ ಅಭ್ಯಾಸಗಳಲ್ಲಿ ಬಳಸಲ್ಪಡುವ ಕ್ರಿಮಿನಾಶಕಗಳು, ರಾಸಾಯನಿಕಗಳು, ಮತ್ತು ನೀರು ಹಾಗೂ ಕೈಗಾರಿಕಾ ಕೊಳಚೆ ನೀರುಗಳನ್ನು ಪರೀಕ್ಷಿಸುತ್ತಿತ್ತು. 1961ರಲ್ಲಿ ಪಾನನಿರೋಧ ಶಾಸನದ ಪ್ರಕಾರ ಪಾನನಿರೋಧ ಪ್ರಕರಣಗಳ ವಿಶ್ಲೇಷಣೆಯನ್ನೂ ಈ ಸಂಸ್ಥೆಗೆ ಸೇರಿಸಲಾಯಿತು. ಅನಂತರ ಪಾನನಿರೋಧ ಪ್ರಕರಣಗಳ ವಿಶ್ಲೇಷಣೆಗೆ ಬದಲಾಗಿ ಅಬಕಾರಿ ಶಾಸನದನ್ವಯ ಮಾದರಿಗಳ ವಿಶ್ಲೇಷಣೆ ಆರಂಭವಾಯಿತು. ಸಾರ್ವಜನಿಕ ಆರೋಗ್ಯ ಸಂಸ್ಥೆಯು 1967ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಅಧೀನದಲ್ಲಿದ್ದ ಪ್ರಯೋಗಾಲಯಗಳ ಸಹನಿರ್ದೇಶಕರ ನೇತೃತ್ವದಲ್ಲಿ ಕೆಲಸ ಮಾಡುತ್ತಿತ್ತು. ರಾಜ್ಯದ ಗೃಹ ಇಲಾಖೆಯ ಅಧೀನದಲ್ಲಿ ವೈದ್ಯನ್ಯಾಯ ಶಾಸ್ತ್ರ ಪ್ರಯೋಗಾಲಯವು ಅಸ್ತಿತ್ವಕ್ಕೆ ಬಂದು ಪೋಲೀಸು ಇಲಾಖೆಯು ಮಾದರಿಗಳನ್ನು ಅಲ್ಲಿಗೆ ಕಳುಹಿಸಲಾರಂಭಿಸಿದುದರಿಂದ 1970ರಲ್ಲಿ ಈ ವೈದ್ಯ ನ್ಯಾಯ ಶಾಸ್ತ್ರಕ್ಕೆ ಸಂಬಂಧಿಸಿದ ಮಾದರಿಗಳು ಸಾರ್ವಜನಿಕ ಆರೋಗ್ಯ ಸಂಸ್ಥೆಗೆ ಬರುವುದು ನಿಂತುಹೋಯಿತು. ಸಿಡುಬುರೋಗ ಲಸಿಕೆಯನ್ನು ತಯಾರಿಸುತ್ತಿದ್ದ ಬೆಳಗಾವಿಯ ಲಸಿಕೆ ಸಂಸ್ಥೆಯನ್ನು ಸಾರ್ವಜನಿಕ ಆರೋಗ್ಯ ಸಂಸ್ಥೆಯ ಸಹನಿರ್ದೇಕರ ತಾಂತ್ರಿಕ ನಿಯಂತ್ರಣಕ್ಕೆ ಒಳಪಡಿಸಲಾಯಿತು. ಜೊತೆಗೆ ಕ್ಯಾಸನೂರ್ ಅರಣ್ಯರೋಗಕ್ಕಾಗಿ ಶಿವಮೊಗ್ಗದಲ್ಲಿ ಸ್ಥಾಪಿತವಾದ ಸಾಂಕ್ರಾಮಿಕ ನಂಜು ವಿಶ್ಲೇಷಣಾ ಪ್ರಯೋಗಾಲಯವನ್ನೂ ಸೇರಿಸಲಾಯಿತು.

ಸಾರ್ವಜನಿಕ ಆರೋಗ್ಯ ಸಂಸ್ಥೆಯು ರಾಜ್ಯದ ಪದವಿ ಹಾಗೂ ಸ್ನಾತಕೋತ್ತರ ಪದವಿಯ ವೈದ್ಯಕೀಯ ವಿದ್ಯಾರ್ಥಿಗಳಿಗೆ ಸಾರ್ವಜನಿಕ ಆರೋಗ್ಯ ಪ್ರಯೋಗಾಲಯ ಸೇವೆಗಳ ಬೋಧನಾ ಮತ್ತು ಪ್ರಾತ್ಯಕ್ಷಿಕೆ ಕೇಂದ್ರವಾಗಿದೆ. ಕಳೆದ ಮೂರು ವರ್ಷಗಳಲ್ಲಿ ಈ ಸಂಸ್ಥೆಯಲ್ಲಿ ಕಾಲರಾ ಮತ್ತು ವಿಷಮ ಶೀತಜ್ವರ ನಿರೋಧ ಲಸಿಕೆಗಳ ಉತ್ಪಾದನೆ ಅನುಕ್ರಮವಾಗಿ ಸರಾಸರಿ 28 ಲಕ್ಷ ಡೋಜುಗಳು ಮತ್ತು 28,83,000 ಮಿ. ಲೀ. ಗಳಷ್ಟಾಗಿದೆ. ಇಲ್ಲಿ ಮುಖ್ಯವಾಗಿ ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳ ಬಳಕೆಗಾಗಿ ಈ ಲಸಿಕೆಗಳನ್ನು ತಯಾರಿಸಲಾಗುತ್ತದೆ. ಜೀವಾಣು ಶಾಸ್ತ್ರ ಪ್ರಯೋಗಾಲಯ ವಿಭಾಗವು 1817 ಮಲದ ಮಾದರಿಗಳನ್ನು ಪರೀಕ್ಷಿಸಿತು. ಅದರಲ್ಲಿ 399 ಪ್ರಕರಣಗಳಲ್ಲಿ ಕಾಲರಾ ಸೋಂಕು ಕಂಡುಬಂದಿತು. ಹಾಗೆಯೇ 5,035 ರಕ್ತ ಮಾದರಿಗಳನ್ನು ಗುಹ್ಯರೋಗ ಸಾಧ್ಯತೆಯ ಬಗ್ಗೆಯೂ, 22 ನಂಜು ಪ್ರತಿಕ್ರಿಯೆಗಾಗಿಯೂ ಪರೀಕ್ಷೆ ಮಾಡಲಾಯಿತು. ಈ ವಿಭಾಗವು ಗುಣ ನಿಯಂತ್ರಣ ಕಾರ್ಯವನ್ನೂ ನೋಡಿಕೊಳ್ಳುತ್ತಿದ್ದು ಬಳಕೆಗೆ ಬಿಡುಗಡೆಯಾಗುವ ಮುನ್ನ 28 ವರ್ಗದ ಕಾಲರಾ ಲಸಿಕೆಗಳನ್ನು ಪರೀಕ್ಷಿಸುತ್ತದೆ. ಅಂತರ ರಾಷ್ಟ್ರೀಯ ನೈರ್ಮಲ್ಯ ನಿಬಂಧನೆಗಳ ಪ್ರಕಾರ ಹೊರದೇಶಕ್ಕೆ ಹೋಗುವ ವ್ಯಕ್ತಿಗಳಿಗೆ 626 ಅಂತರರಾಷ್ಟ್ರೀಯ ಆರೋಗ್ಯ ದೃಢಪತ್ರಗಳನ್ನು ನೀಡಲಾಯಿತು. ಆಹಾರ ಮತ್ತು ಜಲ ವಿಶ್ಲೇಷಣಾ ವಿಭಾಗದಲ್ಲಿ 7,212 ಆಹಾರ ಮಾದರಿಗಳನ್ನೂ 488 ಜಲ ಹಾಗೂ ಕೊಳಚೆ ನೀರಿನ ಮಾದರಿಗಳನ್ನೂ ಪರೀಕ್ಷಿಸಲಾಯಿತು. 1981-82ರಲ್ಲಿ ವೈದ್ಯಕೀಯ ಕಾನೂನು ವಿಭಾಗವು 1,034 ನಕಲಿ ಔಷಧಿ ಮಾದರಿಗಳನ್ನು ಜಾಗೃತ ಆಯೋಗದಿಂದ

ಕಳುಹಿಸಲ್ಪಟ್ಟ-261 ಮಾದರಿಗಳನ್ನೂ, 20 ರಕ್ತ ಹಾಗೂ ಮೂತ್ರ ಮಾದರಿಗಳನ್ನೂ ಪರೀಕ್ಷಿಸಿತು.

**ಲಸಿಕೆ ಸಂಸ್ಥೆ, ಬೆಳಗಾವಿ:** ಈ ಸಂಸ್ಥೆ (ವ್ಯಾಕ್ಸಿನ್ ಇನ್ಸ್‌ಟಿಟ್ಯೂಟ್) ಯು ಸಿಡುಬುರೋಗ ನಿರ್ಮೂಲನಕ್ಕಾಗಿ ರಾಷ್ಟ್ರವು ಕೈಗೊಂಡ ಫ್ರೀಜ್-ಡ್ರೈಡ್ ಸಿಡುಬು ಲಸಿಕೆ ತಯಾರಿಸುವಲ್ಲಿ ವಹಿಸಿದ ಮಹತ್ವದ ಪಾತ್ರದಿಂದಾಗಿ ಇತ್ತೀಚಿನವರೆಗೂ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿತ್ತು. ಇಲ್ಲಿ ತಯಾರಾದ ಲಸಿಕೆಯನ್ನು ಕರ್ನಾಟಕದಲ್ಲಷ್ಟೇ ಅಲ್ಲದೆ ರಾಷ್ಟ್ರದ ಇತರ ರಾಜ್ಯಗಳಿಗೂ ಪೂರೈಸಲಾಗುತ್ತಿತ್ತು. ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಹಾಗೂ ವಿಸ್ತೃತ ರಕ್ಷಣ ಚಿಕಿತ್ಸಾ ಕಾರ್ಯಕ್ರಮದಲ್ಲಿ ಕೇಂದ್ರ ಸರ್ಕಾರದಿಂದ ಬರುವ ಡಿ.ಪಿ.ಟಿ., ಟಿ.ಟಿ. ಮತ್ತು ಡಿ.ಟಿ. ಲಸಿಕೆಗಳ ಸಂಗ್ರಹಣೆ ಹಾಗೂ ಹಂಚಿಕೆಗೆ ಇದು ಅಂಗೀಕೃತ ಹಾಗೂ ಅಧಿಕೃತ ಸಂಸ್ಥೆಯಾಗಿದೆ.

**ರಾಷ್ಟ್ರೀಯ ನಂಜುಶಾಸ್ತ್ರ ಸಂಸ್ಥೆ:** ಈ ಸಂಸ್ಥೆಯ (ಇನ್ಸ್‌ಟಿಟ್ಯೂಟ್ ಆಫ್ ವಿರಾಲಜಿ) ಒಂದು ಕ್ಷೇತ್ರ ಕಾರ್ಯ ಕೇಂದ್ರವು ಸಾಗರದಲ್ಲೂ ಮತ್ತೊಂದು ಬೆಂಗಳೂರಿನಲ್ಲಿಯೂ ಇದೆ. ಈ ಸಂಸ್ಥೆಯು ನಂಜು ಸಂಶೋಧನಾ ಮಂಡಳಿ ಮತ್ತು ರಾಕ್‌ಫೆಲ್ಲರ್ ಪ್ರತಿಷ್ಠಾನದ ಸಂಯುಕ್ತ ಆಶ್ರಯದಲ್ಲಿ 1952ರಲ್ಲಿ ಅಸ್ತಿತ್ವಕ್ಕೆ ಬಂದಿತು. ಆರಂಭದಲ್ಲಿ ಒಬ್ಬ ನಿರ್ದೇಶಕರು ಮುಖ್ಯರಾಗಿದ್ದ ಈ ಕೇಂದ್ರವನ್ನು 1978ರ ಆಗಸ್ಟಿನಲ್ಲಿ ರಾಷ್ಟ್ರೀಯ ನಂಜುಶಾಸ್ತ್ರ ಸಂಸ್ಥೆ ಎಂದು ಪುನರ್‌ನಾಮಕರಣ ಮಾಡಲಾಯಿತು. ನಿರ್ದೇಶಕರು ಸಂಸ್ಥೆಯ ಆಡಳಿತ ಮುಖ್ಯಸ್ಥರಾಗಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿರುವ ಕ್ಷೇತ್ರ ಕಾರ್ಯ ಕೇಂದ್ರವು ಬೆಂಗಳೂರು ವೈದ್ಯಕೀಯ ಕಾಲೇಜು ಆವರಣದಲ್ಲಿ 1971ರಲ್ಲಿ ಆರಂಭವಾಗಿ ಚೆನ್ನಾಗಿ ಅಭಿವೃದ್ಧಿ ಹೊಂದಿದೆ. ಇನ್‌ಫ್ಲೂಯೆಂಜಾ, ನರಮಜ್ಜೆ ರೋಗ, ಯಕೃತ್ತಿನ ರೋಗ, ಡಿಂಗೂ ಮತ್ತು ಸೀತಾಳೆ ಸಿಡುಬು ಮುಂತಾದ ನಂಜುರೋಗಗಳು ದೊಡ್ಡ ಪ್ರಮಾಣದಲ್ಲಿ ಉಂಟಾಗುತ್ತದೆ. ಅಂತಹ ರೋಗಗಳಲ್ಲಿ ಕ್ಯಾಸನೂರ್ ಅರಣ್ಯ ರೋಗ ಮತ್ತು ಮಿದುಳು ರೋಗಗಳು ಇತ್ತೀಚೆಗೆ ಕರ್ನಾಟಕದಲ್ಲಿ ಕಾಣಿಸಿಕೊಂಡವು. ಈ ಎರಡು ನಂಜುರೋಗಗಳಿಗೆ ಯಾವುದೇ ಔಷಧಿಗಳಿಲ್ಲ. ನಂಜು ಮತ್ತು ನಂಜು ಲಸಿಕೆಗಳ ಅನುಭವದ ಆಧಾರದ ಮೇಲೆ ಕೈಗೊಳ್ಳುವ ಮುಂಜಾಗ್ರತಾ ನಿಯಂತ್ರಣ ಕ್ರಮಗಳು ಮಾತ್ರ ರೋಗಿಗಳನ್ನು ಉಳಿಸಲು ನೆರವಾಗಬಲ್ಲವು. ಬೆಂಗಳೂರಿನಲ್ಲಿರುವ ಸಂಸ್ಥೆಯು ಮಿದುಳು ರೋಗಾಣುಗಳ ನೈಸರ್ಗಿಕ ಪರಿಚಕ್ರದ ತಿಳಿವಳಿಕೆಗೆ ನೆರವಾಗುತ್ತಿದೆ.

**ರಕ್ಷಣಾ ಜೀವತಾಂತ್ರಿಕ ಮತ್ತು ವಿದ್ಯುತ್ ವೈದ್ಯಕೀಯ ಪ್ರಯೋಗಾಲಯ, ಬೆಂಗಳೂರು:** ಇದು 1982 ಏಪ್ರಿಲ್‌ನಲ್ಲಿ ಅಸ್ತಿತ್ವಕ್ಕೆ ಬಂದಿತು. ಅದಕ್ಕೆ ಮುಂಚೆ ಬೆಂಗಳೂರಿನಲ್ಲಿದ್ದ ವಿದ್ಯುತ್ ವೈದ್ಯಕೀಯ ಮತ್ತು ಇಲೆಕ್ಟ್ರಾನಿಕ್ಸ್ ಸಾಧನ ಪ್ರಯೋಗ ವಿಭಾಗ, ರೇಡಾರು ಅಭಿವೃದ್ಧಿ ಸಂಸ್ಥೆ (ಎಲ್.ಆರ್.ಡಿ.ಇ.), ವೈಮಾನಿಕ ಜೀವತಾಂತ್ರಿಕ ಘಟಕ ಈ ಮೂರನ್ನು ಒಗ್ಗೂಡಿಸಿ ಈ ಸಂಸ್ಥೆಯನ್ನು ಸ್ಥಾಪಿಸಲಾಯಿತು. 1967ರಲ್ಲಿ ಸಶಸ್ತ್ರ ಪಡೆಗಳ ವೈದ್ಯಕೀಯ ಸೇವೆಗಳ ಮಹಾ ನಿರ್ದೇಶಕರು ಎಲ್.ಆರ್.ಡಿ.ಇ. ಸಂಸ್ಥೆಯ ಸಮಾಲೋಚನೆಯೊಡನೆ ಸಾಧನ ಸಲಕರಣೆಗಳ ಕೆಲವು ಅಭಿವೃದ್ಧಿ ಅಗತ್ಯಗಳನ್ನು ಯೋಚಿಸಿದರು. ಆಗ ಎಂಟು ಪ್ರಮುಖ ಯೋಜನೆಗಳನ್ನು ಕೈಗೊಳ್ಳಲಾಯಿತು. ಈ ಯೋಜನೆಗಳನ್ನು ಕ್ರಮೇಣ ಪೂರ್ಣಗೊಳಿಸಲಾಗಿದ್ದು ಈಗ ಅವು ನವದೆಹಲಿಯ ರಾಷ್ಟ್ರೀಯ ಸಂಶೋಧನಾ ಮಂಡಳಿಯ ಮೂಲಕ ವಾಣಿಜ್ಯೋತ್ಪಾದನೆಯಲ್ಲಿ ತೊಡಗಿವೆ. ಯಶಸ್ವೀ ಚಿಕಿತ್ಸಾ ಪ್ರಯೋಗಗಳ ನಂತರ ಈ ಉತ್ಪಾದನೆಯನ್ನು ಆರಂಭಿಸಲಾಯಿತು. ಈ ಘಟಕದ ಮುಖ್ಯರಾದ ನಿರ್ದೇಶಕರ ಸಹಾಯಕ್ಕೆ ಅಗತ್ಯವಾದ ಕಾರ್ಯಾಲಯ ಸಿಬ್ಬಂದಿ ಇದೆ. ಜೊತೆಗೆ ಇವರಿಗೆ ಪೂರ್ಣ ಹಣಕಾಸು ಮತ್ತು ಆಡಳಿತ ಅಧಿಕಾರವಿದೆ.

ಪ್ರಯೋಗಾಲಯವು ಪ್ರಮುಖ ವೈದ್ಯಕೀಯ ಇಲೆಕ್ಟ್ರಾನಿಕ್ ವ್ಯವಸ್ಥೆಯ ವಿನ್ಯಾಸ ಹಾಗೂ ಅಭಿವೃದ್ಧಿಯನ್ನು ಪೂರ್ಣಗೊಳಿಸಿದೆ. ಬಹಳಷ್ಟು ಸಂಖ್ಯೆಯ ರಕ್ಷಣಾ ಇಲೆಕ್ಟ್ರಾನಿಕ್ ಯೋಜನೆಗಳು ಪೂರ್ಣಗೊಂಡಿದ್ದು ಅನೇಕ ಯೋಜನೆಗಳು ಉತ್ಪಾದನೆಯಲ್ಲಿ ತೊಡಗಿವೆ. ಪ್ರಯೋಗಾಲಯವು ವೈದ್ಯಕೀಯ ಸಾಧನ ಪ್ರಯೋಗಗಳ ಬಗ್ಗೆ ಪ್ರತೀ ವರ್ಷ ವೈದ್ಯಕೀಯ ಹಾಗೂ ವೈದ್ಯಕೀಯೇತರ ಸಿಬ್ಬಂದಿಗೆ ತರಬೇತಿ ತರಗತಿಗಳನ್ನು ನಡೆಸಿದೆ. ವೈದ್ಯಕೀಯ ಇಲೆಕ್ಟ್ರಾನಿಕ್ ಸಾಧನಗಳು, ಅವುಗಳ ಸ್ಥಾಪನೆ, ಇತ್ಯಾದಿ ಕಾರ್ಯಗಳಲ್ಲಿ ಸ್ಥಳೀಯ ಆಸ್ಪತ್ರೆಗಳಿಗೆ ಅವುಗಳ ಕೋರಿಕೆಯಂತೆ ತಾಂತ್ರಿಕ ಮಾರ್ಗದರ್ಶನವನ್ನೂ ಈ ಪ್ರಯೋಗಾಲಯವು ಒದಗಿಸಿದೆ ಮತ್ತು ವೈದ್ಯಕೀಯ ಸಾಧನ ಸಲಕರಣೆಗಳ ದುರಸ್ತಿ ಮತ್ತು ಸಂಸ್ಕರಣಗಳನ್ನು ಉಚಿತವಾಗಿ ಕೈಗೊಂಡಿದೆ. ವಿಮಾನಯಾನದ ದೇಶೀಯ ಸಾಧನಗಳು, ಉಡುಪು ಮತ್ತು ರಕ್ಷಣಾ ಉಡುಪುಗಳ ಸುರಕ್ಷತೆ, ಪ್ರಾಣರಕ್ಷಣೆ ಹಾಗೂ ವೈಜ್ಞಾನಿಕ ವೈದ್ಯಕೀಯ ಸಾಧನಗಳ ವಿನ್ಯಾಸ ಮತ್ತು ಅಭಿವೃದ್ಧಿಯಲ್ಲೂ ಈ ಪ್ರಯೋಗಾಲಯವು ತೊಡಗಿದೆ. ಇಲ್ಲಿ ದೊರೆಯುವ ವಿಶೇಷ ಸಾಧನ ಸಲಕರಣೆಗಳಿಂದಾಗಿ ಇ.ಸಿ.ಜಿ. ಫೋನೋ ಕಾರ್ಡಿಯೋಗ್ರಾಂ ಮತ್ತು ರಕ್ತ ಒತ್ತಡ ಪರೀಕ್ಷಾ ಸೇವೆಗಳನ್ನು ಅಗತ್ಯವಿರುವ ವ್ಯಕ್ತಿಗಳಿಗೆ ಸೀಮಿತ ಆಧಾರದ ಮೇಲೆ ಉಚಿತವಾಗಿ ಒದಗಿಸಲಾಗುತ್ತದೆ. ವೈದ್ಯಕೀಯ ತಾಂತ್ರಿಕತೆಯ ಕ್ಷೇತ್ರದಲ್ಲಿ ವಿಶೇಷ ತಜ್ಞತೆ ಇಲ್ಲಿ ದೊರೆಯುವುದರಿಂದ ಈ ಪ್ರಯೋಗಾಲಯದ ತಜ್ಞತೆಯನ್ನು ವೈದ್ಯಕೀಯ ಸಾಧನಗಳ ಸಂಗ್ರಹಣೆ, ಸ್ಥಾಪನೆ ಮತ್ತು ನಿರ್ವಹಣೆಗಳಿಗೆ ಬಳಸಿಕೊಳ್ಳಬಹುದು.

**ದಕ್ಷಿಣ ಪ್ರಾದೇಶಿಕ ಔದ್ಯೋಗಿಕ ಆರೋಗ್ಯ ಕೇಂದ್ರ :** 1977ರ ಜುಲೈನಲ್ಲಿ ಸ್ಥಾಪಿತವಾದ ಈ ಕೇಂದ್ರದ ಉದ್ದೇಶ ಮೂಲಭೂತ ಮತ್ತು ಅನ್ವಯಿತ ಆರೋಗ್ಯದ ಬಗ್ಗೆ ಸಂಶೋಧನೆಯನ್ನು ಯೋಜಿಸುವುದು ಮತ್ತು ಕಾರ್ಯಗತಗೊಳಿಸುವುದು. ಔದ್ಯೋಗಿಕಾರೋಗ್ಯ ಕ್ಷೇತ್ರದಲ್ಲಿ ಸಂಶೋಧನೆಯನ್ನು ತೀವ್ರಗೊಳಿಸುವ ಆಶಯದಿಂದ ಈ ಕೇಂದ್ರವನ್ನು ಸ್ಥಾಪಿಸಲಾಯಿತು. ಔದ್ಯೋಗಿಕ ಸುರಕ್ಷತೆ, ಆರೋಗ್ಯಕರವಾದ ಹಾಗೂ ಅನುಕೂಲಕರವಾದ ಪರಿಸರದ ಬಗ್ಗೆ ಕೈಗಾರಿಕಾ ಆಡಳಿತಕ್ಕೆ ಈ ಕೇಂದ್ರವು ಸಲಹೆ ನೀಡುತ್ತದೆ.ಈ ಉದ್ದೇಶಗಳನ್ನು ಸಾಧಿಸಲು ಈ ಕೇಂದ್ರವು ಸಂಶೋಧನಾ ತರಬೇತಿ, ಸೇವೆ ಮತ್ತು ಆರೋಗ್ಯ ಶಿಕ್ಷಣಗಳನ್ನು ಅಳವಡಿಸಿಕೊಂಡಿದೆ. ಓರ್ವ ಉಪನಿರ್ದೇಶಕರು ಮುಖ್ಯಸ್ಥರಾಗಿರುವ ಈ ಕೇಂದ್ರದ ಆಡಳಿತವನ್ನು ಅಹಮದಾಬಾದಿನಲ್ಲಿರುವ ರಾಷ್ಟ್ರೀಯ ಔದ್ಯೋಗಿಕ ಆರೋಗ್ಯ ಸಂಸ್ಥೆಯ ಮೂಲಕ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯು ನಿರ್ವಹಿಸುತ್ತದೆ. ಕೇಂದ್ರವು ಬೆಂಗಳೂರಿನಲ್ಲಿ ಒಂದು ಆರೋಗ್ಯ ಚಿಕಿತ್ಸಾಲಯವನ್ನು ಸ್ಥಾಪಿಸಿ ತನ್ನ ಸಂಪರ್ಕಕ್ಕೆ ಬರುವ ಎಲ್ಲರಿಗೂ ಉಚಿತ ಸೇವೆಯನ್ನು ಸಲ್ಲಿಸುವ ಉದ್ದೇಶವನ್ನಿಟ್ಟುಕೊಂಡಿದೆ.

## ಕೇಂದ್ರ ಸರ್ಕಾರದ ಆರೋಗ್ಯ ಯೋಜನೆ

ಕೇಂದ್ರ ಸರಕಾರದ ನೌಕರರು ಹಾಗೂ ಅವರ ಕುಟುಂಬದ ಸದಸ್ಯರು, ಪಿಂಚಣಿದಾರರು ಮತ್ತು ಭಾರತೀಯ ಗುಣಮಟ್ಟಗಳ ಸಂಸ್ಥೆಯ ನೌಕರರಿಗೆ ವೈದ್ಯಕೀಯ ಚಿಕಿತ್ಸೆ ಒದಗಿಸುವ ಕೇಂದ್ರ ಸರಕಾರದ ಆರೋಗ್ಯ ಯೋಜನೆಯು ಬೆಂಗಳೂರು ನಗರದಲ್ಲಿ 1976 ಫೆಬ್ರವರಿಯಿಂದ ಕೆಲಸ ಮಾಡುತ್ತಿದೆ. ಈ ಯೋಜನೆಯು ಏಳು ಎಲೋಪತಿಕ್ ಔಷಧಾಲಯಗಳು, ಆಯುರ್ವೇದ, ಹೋಮಿಯೋಪತಿ ಮತ್ತು ದಂತವೈದ್ಯದ ಒಂದೊಂದು ಘಟಕದ ಮೂಲಕ ಕಾರ್ಯ ನಿರ್ವಹಿಸುತ್ತಿದೆ. ಈ ಯೋಜನೆಯಲ್ಲಿ ಆಸ್ಪತ್ರೆಯ ಅವಕಾಶವಿಲ್ಲದಿರುವುದರಿಂದ ಫಲಾನುಭವಿಗಳನ್ನು ಒಳರೋಗಿಗಳ ಚಿಕಿತ್ಸೆಗಾಗಿ ಅಧೀಕೃತ ಆಸ್ಪತ್ರೆಗಳಿಗೆ ಕಳುಹಿಸಲಾಗುತ್ತದೆ. ಸಂಬಂಧಪಟ್ಟ ವೆಚ್ಚವನ್ನು ಸೇವಾನಿರತ ನೌಕರರ ಮಾಸಿಕ ವೇತನದಿಂದ ಕಡ್ಡಾಯವಾಗಿ ಮುರಿದುಕೊಳ್ಳಲಾಗುತ್ತದೆ. ಈ ಯೋಜನೆಯ ವ್ಯಾಪ್ತಿಗೆ 1982ರಲ್ಲಿ (ಜೂನ್ ವರೆಗೆ) ಒಳಪಟ್ಟವರ ಸಂಖ್ಯೆ 10,358ರಷ್ಟಿದ್ದರೆ 1981ರಲ್ಲಿ ಈ ಸಂಖ್ಯೆ 1,05,324ರಷ್ಟಿತ್ತು. ಈ ಯೋಜನೆಯನ್ವಯ ಕಾಲರಾ, ಸಿಡುಬು, ಮಲೇರಿಯಾ, ಜೀವಕಣಕ್ಕೆ ಸಂಬಂಧಿಸಿದ ಎಲ್ಲ ರೋಗಗಳು, ನಿರ್ನಾಳಸ್ರಾವ, ಮಧುಮೇಹದಂತಹ ರೋಗಗಳು, ರಕ್ತ ಮತ್ತು ರಕ್ತ ರಚನೆಗೆ ಸಂಬಂಧಪಟ್ಟ ರೋಗಗಳು, ಮಾನಸಿಕ ಹಾಗೂ ನರರೋಗಗಳು, ರಕ್ತಚಲನೆ, ಉಸಿರಾಟ, ಚರ್ಮರೋಗಗಳು ಮತ್ತಿತರ ರೋಗಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. ಅಧೀಕೃತ ಆಸ್ಪತ್ರೆಗಳಲ್ಲಿ 1982ರಲ್ಲಿ ಒಳ ಹಾಗೂ ಹೊರ ರೋಗಿಗಳಾಗಿ ಚಿಕಿತ್ಸೆ ಪಡೆದವರ ಸಂಖ್ಯೆ ಅನುಕ್ರಮವಾಗಿ 1,482 ಮತ್ತು 1,46,984ರಷ್ಟಿತ್ತು. ಈ ಸಂಖ್ಯೆ 1981ರಲ್ಲಿ ಅನುಕ್ರಮವಾಗಿ 1,501 ಮತ್ತು 1,63,755 ರಷ್ಟಿತ್ತು.

**ಭಾರತೀಯ ವೈದ್ಯಕೀಯ ಮಂಡಳಿ :** 1912ರಿಂದ 1917ರವರೆಗೆ ವೈದ್ಯಕೀಯ ದಾಖಲೆಗಳ ನಿರ್ವಹಣೆಯ ಮುಖ್ಯ ಉದ್ದೇಶದಿಂದ ಅನೇಕ ಪ್ರಾದೇಶಿಕ ವೈದ್ಯಕೀಯ ಮಂಡಳಿಗಳು ಸ್ಥಾಪನೆಗೊಂಡವು. ಈ ಪ್ರತಿಯೊಂದು ವೈದ್ಯಕೀಯ ಮಂಡಳಿಯೂ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಆಗ ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೇಂದ್ರ ಸಮನ್ವಯ ಸಂಸ್ಥೆಯೊಂದರ ಅಗತ್ಯ ಕಂಡುಬಂದಿತು. ಆದ್ದರಿಂದ 1933ರಲ್ಲಿ ವೈದ್ಯಕೀಯ ಮಂಡಳಿ ಶಾಸನ ಅಂಗೀಕಾರವಾಯಿತು. ಈ ಶಾಸನದ ಆಧಾರದ ಮೇಲೆ 1934ರಲ್ಲಿ ಭಾರತೀಯ ವೈದ್ಯಕೀಯ ಮಂಡಳಿಯನ್ನು ಸ್ಥಾಪಿಸಲಾಯಿತು. ರಾಷ್ಟ್ರದಲ್ಲಿ ವೈದ್ಯಕೀಯ ಏಕರೂಪದ ಮಟ್ಟವನ್ನು ಕಾಪಾಡಿಕೊಂಡು ಬರುವ ಅಧಿಕಾರವನ್ನು ಈ ಮಂಡಳಿಗೆ ನೀಡಲಾಗಿದೆ. ವಿಶ್ವವಿದ್ಯಾಲಯಗಳು ಹಾಗೂ ವೈದ್ಯಕೀಯ ಕಾಲೇಜುಗಳಿಗೆ ಭಾರತೀಯ ವೈದ್ಯಕೀಯ ಮಂಡಳಿಯು ಅತ್ಯಂತ ಸಹಾಯಕವಾಗಿದೆ ಎಂಬುದು ಕಂಡುಬಂದಿದೆ. ಮಂಡಳಿಯು ಬೋಧನ ಸಂಸ್ಥೆಗಳಿಗೆ ಸಂದರ್ಶಕರು ಹಾಗೂ ಪರೀಕ್ಷಕರನ್ನು ನೇಮಿಸುವ ಮೂಲಕ ತನ್ನ ಕಾರ್ಯವನ್ನು ಪರಿಣಾಮಕಾರಿಯಾಗಿ ಮತ್ತು ಸಮರ್ಥವಾಗಿ ನಿರ್ವಹಿಸುತ್ತಿದೆ. ವೈದ್ಯಕೀಯ ಕಾಲೇಜಿಗೆ ಬೇಕಾದ ಗುಣಮಟ್ಟದ ಅಗತ್ಯತೆ, ಪ್ರವೇಶ ಸಾಮರ್ಥ್ಯ, ಉಪಾಧ್ಯಾಯರ ಅನುಭವ ಹಾಗೂ ವಿದ್ಯಾರ್ಹತೆಗಳನ್ನು ನಿಗದಿಮಾಡುವ ಜವಾಬ್ದಾರಿ ಭಾರತೀಯ ವೈದ್ಯಕೀಯ ಮಂಡಳಿಯದಾಗಿದೆ. ರಾಷ್ಟ್ರದಲ್ಲಿ ವೈದ್ಯಕೀಯ ಶಿಕ್ಷಣದ ಒಂದೇ ಗುಣಮಟ್ಟವಿರುವಂತೆ ನೋಡಿಕೊಳ್ಳುವಲ್ಲಿ ಮಂಡಳಿಗೆ ಹೆಚ್ಚಿನ ಜವಾಬ್ದಾರಿ ಇದೆ. ವೈದ್ಯಕೀಯ ಶಾಲೆಗಳ ರದ್ಧತಿಗೆ ಮಂಡಳಿಯದೇ ಹೊಣೆ. ದೇಶದಲ್ಲಿ ವೈದ್ಯಕೀಯ ಸಂಶೋಧನೆಯನ್ನು ಉತ್ತೇಜಿಸುವಲ್ಲಿಯೂ ಮಂಡಳಿಯ ಜವಾಬ್ದಾರಿ ಇದೆ.

**ಕರ್ನಾಟಕ ವೈದ್ಯಕೀಯ ಮಂಡಳಿ :** 1931ರ ಡಿಸೆಂಬರ್ 28ರಂದು, 1931ರ ಮೈಸೂರು ವೈದ್ಯಕೀಯ ನೋಂದಾವಣೆ ಶಾಸನ 5ಕ್ಕೆ ಆಗಿನ ಮೈಸೂರು ಮಹಾರಾಜರ ಅಂಗೀಕಾರ ದೊರೆಯಿತು. ಈ ಶಾಸನದ ಪ್ರಕಾರ 1932ರಲ್ಲಿ ಮೈಸೂರು ವೈದ್ಯಕೀಯ ಮಂಡಳಿ ಸ್ಥಾಪಿತವಾಗಿ 1974ರಲ್ಲಿ 'ಕರ್ನಾಟಕ ವೈದ್ಯಕೀಯ ಮಂಡಳಿ' ಎಂದು ಪುನರ್‌ನಾಮಕರಣಗೊಂಡಿತು. ಅಲೋಪತಿ ಪದ್ಧತಿ, ಶಸ್ತ್ರಚಿಕಿತ್ಸೆ ಮತ್ತು ಪ್ರಸೂತಿ, ಸೇವಾ ವೈದ್ಯರುಗಳ ನೋಂದಾವಣೆಗೆ ಅವಕಾಶ ಕಲ್ಪಿಸುವುದು

ಮಂಡಳಿಯ ಮುಖ್ಯ ಉದ್ದೇಶವಾಗಿದೆ. ಮೈಸೂರು ವೈದ್ಯಕೀಯ ಮಂಡಳಿಯ ದಾಖಲಾದ ವೈದ್ಯರುಗಳಿಗೆ ಕೆಲವೊಂದು ವಿಶೇಷ ಸವಲತ್ತುಗಳಿವೆ. ಅವೆಂದರೆ : 1) ನೋಂದಾಯಿತ ವೈದ್ಯರು ನೀಡಿದ ವೈದ್ಯಕೀಯ ದೃಢಪತ್ರಗಳು ಮಾತ್ರ ಮಾನ್ಯವಾಗುತ್ತವೆ ಮತ್ತು 2) ಸರ್ಕಾರ ಅಥವಾ ಖಾಸಗಿ ಆಸ್ಪತ್ರೆಗಳಲ್ಲಿ ವೈದ್ಯಾಧಿಕಾರಿಗಳಾಗಿ ನೇಮಕಗೊಳ್ಳಲು ನೋಂದಾಯಿತ ವೈದ್ಯರು ಮಾತ್ರ ಅರ್ಹರು. ವೈದ್ಯಕೀಯ ಮಂಡಳಿಯು ವೈದ್ಯಕೀಯ ವೃತ್ತಿ ಸಂಹಿತೆಯೊಂದನ್ನು ಪ್ರಕಟಿಸಿದೆ. ವೈದ್ಯಕೀಯ ವೃತ್ತಿಯ ಘನತೆಗೆ ಧಕ್ಕೆ ತರುವಂತಹ ಅಕ್ಷೇಪಾರ್ಹ ರೀತಿಯ ಕೆಲವು ನಡವಳಿಕೆಗಳ ಬಗ್ಗೆ ಈ ಸಂಹಿತೆಯಲ್ಲಿ ವಿವರವಾಗಿ ತಿಳಿಸಲಾಗಿದೆ. 1982ರ ಡಿಸೆಂಬರ್ ಅಂತ್ಯದ ವೇಳೆಗೆ ಮಂಡಳಿಯಲ್ಲಿದ್ದ ಸದಸ್ಯರ ಸಂಖ್ಯೆ 21,842.

**ಭಾರತೀಯ ವೈದ್ಯಕೀಯ ಸಂಘ :** ಭಾರತೀಯ ವೈದ್ಯಕೀಯ ಸಂಘದ ಕರ್ನಾಟಕ ರಾಜ್ಯ ಶಾಖೆಯು ಬೆಂಗಳೂರಿನಲ್ಲಿ 1928ರಲ್ಲಿ ಆರಂಭವಾಯಿತು. ವೈದ್ಯಕೀಯ ಹಾಗೂ ಸಂಬಂಧಪಟ್ಟ ವಿಜ್ಞಾನಗಳ ಎಲ್ಲ ಶಾಖೆಗಳಲ್ಲೂ ಉತ್ತೇಜನ ಹಾಗೂ ಪ್ರಗತಿ ಸಾಧಿಸುವುದು ಈ ಸಂಘದ ಉದ್ದೇಶ. ಈ ಸಂಘಕ್ಕೆ ಸದಸ್ಯರಾಗಲು ಆಧುನಿಕ ಔಷಧ ಪದ್ಧತಿಯ ಸರ್ಕಾರಿ ಅಥವಾ ಖಾಸಗೀ ಕ್ಷೇತ್ರದ ಎಲ್ಲ ಅರ್ಹ ವೈದ್ಯರಿಗೂ ಅವಕಾಶವಿದೆ. 1981ರ ಸೆಪ್ಟೆಂಬರ್ 30 ರಂದು ಸಂಘದ ಸದಸ್ಯರ ಸಂಖ್ಯೆ 5,018 ಇತ್ತು; ಹಿಂದೆ, 1971ರ ಸೆಪ್ಟೆಂಬರ್ 30 ರಂದು ಈ ಸಂಖ್ಯೆ 2,121 ಇತ್ತು. ರಾಜ್ಯಾದ್ಯಂತ ಸಂಘದ 67 ಶಾಖೆಗಳಿವೆ. ಪೂರ್ಣ ರಾಜಕೀಯೇತರ ಸಂಸ್ಥೆಯಾದ ಈ ಸಂಘವು ಸಾರ್ವಜನಿಕ ಆರೋಗ್ಯ, ಆರೋಗ್ಯ ಶಿಕ್ಷಣ, ಮುಂದುವರಿದ ವೈದ್ಯಕೀಯ ಶಿಕ್ಷಣ ಮತ್ತು ಸಮುದಾಯ ಆರೋಗ್ಯ ಕಾರ್ಯಕ್ರಮಗಳ ಬಗ್ಗೆ ಸಲಹೆ ನೀಡುವುದೇ ಅಲ್ಲದೆ ವೈದ್ಯರುಗಳಲ್ಲಿ ಪರಸ್ಪರ ಸೌಹಾರ್ದವನ್ನು ಬೆಳೆಸುತ್ತದೆ.

**ಕರ್ನಾಟಕ ಗಂತಿ ಸಂಘ :** ಮೈಸೂರು (ಈಗ ಕರ್ನಾಟಕ) ಗಂತಿ (ಕ್ಯಾನ್ಸರ್) ಸಂಘವು 1968ರಲ್ಲಿ ಆರಂಭವಾಯಿತು. 1) ಗಂತಿ ರೋಗದ ಬಗ್ಗೆ ಜನರಿಗೆ ತಿಳಿವಳಿಕೆ ನೀಡುವುದು, 2) ರೋಗದ ಆರಂಭದ ಹಂತದಲ್ಲಿಯೇ ಪತ್ತೆ ಹಚ್ಚುವುದು, ಇತ್ಯಾದಿ ಉದ್ದೇಶಗಳಿಂದ ಈ ಸಂಸ್ಥೆ ಆರಂಭವಾಯಿತು. ಈ ಉದ್ದೇಶಗಳ ಸಾಧನೆಗೆ ಕರ್ನಾಟಕ ಗಂತಿ ಸಂಘವು ಉದಾರ ಕೊಡುಗೆಗಳಿಗಾಗಿ ಸಾರ್ವಜನಿಕ ದಾನಿಗಳನ್ನು ಅವಲಂಬಿಸಬೇಕಾಯಿತು. ಆರಂಭದಲ್ಲಿ ಇದ್ದ ಸಂಘದ ಸದಸ್ಯರ ಸಂಖ್ಯೆ ಒಂಭತ್ತು ಜನ ಮಾತ್ರ. ಈಗ ಆ ಸಂಖ್ಯೆ 802 ಆಗಿದ್ದು ರಾಜ್ಯದಲ್ಲಿ ಸಂಘದ ಏಳು ಶಾಖೆಗಳಿವೆ. ಆರಂಭದ ವರ್ಷಗಳಲ್ಲಿ ಸಂಘವು 1971ರಲ್ಲಿ ನಡೆದ ನಾಲ್ಕನೇಯ ರಾಷ್ಟ್ರೀಯ ಗಂತಿ ರೋಗ ಸಮ್ಮೇಳನ ಆತಿಥೇಯ ಸಂಸ್ಥೆಯಾಗಿತ್ತು. 1973ರಲ್ಲಿ ಗಂತಿರೋಗ ಸಪ್ತಾಹವನ್ನು ಆಚರಿಸಲಾಯಿತು. ಸಂಘವು ಬೆಂಗಳೂರು ನಗರ ಹಾಗೂ ಹೊರಗಡೆ ಗಂತಿ ರೋಗ ಪತ್ತೆ ಶಿಬಿರಗಳನ್ನು ನಡೆಸುತ್ತದೆ.

**ಭಾರತೀಯ ಮನೋರೋಗ ಸಂಸ್ಥೆ :** ಭಾರತೀಯ ಮನೋರೋಗ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯು ಒಂದು ನೋಂದಾಯಿತ ಸಂಸ್ಥೆಯಾಗಿ ಬೆಂಗಳೂರಿನಲ್ಲಿ 1979ರಲ್ಲಿ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಯ ಆವರಣದಲ್ಲಿ ಆರಂಭವಾಯಿತು. 1982ರಲ್ಲಿ ಸಂಘದಲ್ಲಿ 30 ಜನ ಸದಸ್ಯರಿದ್ದರು. ಭಾರತೀಯ ಮನೋರೋಗ ಸಂಸ್ಥೆಯ ಸದಸ್ಯರಿಗೆ ಈ ಸಂಘದ ಸದಸ್ಯತ್ವ ಪಡೆಯಲು ಅವಕಾಶವಿದೆ. ಸರ್ಕಾರಿ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ಮತ್ತು ತಮ್ಮದೇ ಚಿಕಿತ್ಸಾಲಯಗಳನ್ನು ಹೊಂದಿರುವ ಮನೋರೋಗ ಚಿಕಿತ್ಸಕರೂ ಸಹ ಸಂಘದ ಸದಸ್ಯರಾಗಬಹುದು. ಮಾನಸಿಕ ಆರೋಗ್ಯದ ಬಗ್ಗೆ ಜನರಿಗೆ ತಿಳುವಳಿಕೆ ನೀಡಲು ಸಂಘವು ಚರ್ಚೆಗಳು ಹಾಗೂ ಉಪನ್ಯಾಸಗಳನ್ನು ಏರ್ಪಡಿಸುವುದಲ್ಲದೆ ವೃತ್ತ ಪತ್ರಿಕೆಗಳ ಮೂಲಕ ಲೇಖನಗಳನ್ನು ಪ್ರಕಟಿಸುತ್ತದೆ. ಇದರ ಜೊತೆಗೆ ವೃತ್ತಿ ಬಾಂಧವರಲ್ಲಿ ಸರಿಯಾದ ಪ್ರವೃತ್ತಿ ಮತ್ತು ಪ್ರಜ್ಞೆ ಬೆಳೆಸಲು ಚಿಕಿತ್ಸಾ ಚರ್ಚೆಗಳು, ವಿಚಾರಗೋಷ್ಠಿ ಮತ್ತು ಭಾಷಣ ಮಾಲೆಗಳನ್ನು ಏರ್ಪಡಿಸುತ್ತದೆ. ನಾನಾ ಹಂತಗಳಲ್ಲಿ ಮಾನಸಿಕ ಆರೋಗ್ಯ ಶಿಕ್ಷಣದ ತೀವ್ರ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಲು ಮತ್ತು ವೃತ್ತಿಪರರಿಗೆ ಹೆಚ್ಚು ಶೈಕ್ಷಣಿಕ ಮತ್ತು ಚಿಕಿತ್ಸಾ ಕಾರ್ಯಕ್ರಮಗಳನ್ನು ಒದಗಿಸಲು ಸಂಘವು ಉದ್ದೇಶಿಸಿದೆ.

## ಆಯುರ್ವೇದ ಮತ್ತು ಇತರ ಪದ್ಧತಿಗಳು

ಮೈಸೂರು ರಾಜ್ಯದಲ್ಲಿ ಆಯುರ್ವೇದ ಇಲಾಖೆಯು 1908 ರಿಂದ ಕೆಲಸ ಮಾಡುತ್ತಿದೆ. 1956ರಲ್ಲಿ ಆಗಿನ ಸ್ಥಳೀಯ ಸರ್ಕಾರದ ಕಮೀಷನರ್‌ರಿಗೆ ಅವರ ಕೆಲಸದಲ್ಲಿ ನೆರವಾಗಲು ಆಯುರ್ವೇದದಲ್ಲಿ ಅರ್ಹರಾದ ಓರ್ವ ತಾಂತ್ರಿಕ ಸಹಾಯಕರನ್ನು ನೇಮಕ ಮಾಡಲಾಯಿತು. 1957ರಲ್ಲಿ ವೈದ್ಯಕೀಯ ಸೇವೆಗಳ ನಿರ್ದೇಶಕರನ್ನು ಭಾರತೀಯ ವೈದ್ಯ ಇಲಾಖೆಯ ಪದನಿಮಿತ್ತ ಮುಖ್ಯಸ್ಥರನ್ನಾಗಿ ಮಾಡಲಾಯಿತು. ಅದೇ ವರ್ಷ ತಾಂತ್ರಿಕ ಸಹಾಯಕರ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದೆಯನ್ನಾಗಿ ಪರಿವರ್ತಿಸಲಾಯಿತು. 1961ರಲ್ಲಿ ಮುಖ್ಯ ವೈದ್ಯಕೀಯ ಅಧಿಕಾರಿಯ ಹುದ್ದೆಯನ್ನು ಭಾರತೀಯ ವೈದ್ಯ ಪದ್ಧತಿಗಳ ನಿರ್ದೇಶಕರ ಹುದ್ದೆಯೊಂದಿಗೆ ವಿಲೀನಗೊಳಿಸಲಾಯಿತು. 1965ರಲ್ಲಿ ಆರೋಗ್ಯ ವೈದ್ಯಕೀಯ ಮತ್ತು ಭಾರತೀಯ ವೈದ್ಯ ಪದ್ಧತಿಗಳ ಇಲಾಖೆಗಳನ್ನು ಐಕ್ಯಗೊಳಿಸಿದ್ದರಿಂದ ಭಾರತೀಯ ವೈದ್ಯಪದ್ಧತಿಯ ನಿರ್ದೇಶಕರ ಹುದ್ದೆಯನ್ನು ರದ್ದುಗೊಳಿಸಲಾಯಿತು. ಭಾರತೀಯ ವೈದ್ಯಪದ್ಧತಿಗಳ ಸಹಾಯಕ

ನಿರ್ದೇಶಕರೇ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಅಧೀನದಲ್ಲಿ ಆ ಇಲಾಖೆಯ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು. 1966-67ರಲ್ಲಿ ಭಾರತೀಯ ವೈದ್ಯಪದ್ಧತಿಗಳ ಇಲಾಖೆಯ ಅಭಿವೃದ್ಧಿಯನ್ನು ಸಹಾಯಕ ನಿರ್ದೇಶಕರೊಬ್ಬರ ನೆರವುಳ್ಳ ವಿಶೇಷ ಔಷಧ ಪದ್ಧತಿಗಳ ಸಹನಿರ್ದೇಶಕರ ಹುದ್ದೆಯೊಂದನ್ನು ಸೃಷ್ಟಿಸಲಾಯಿತು. ಆಯುರ್ವೇದ, ಯುನಾನಿ, ಹೋಮಿಯೋಪತಿ ಮತ್ತು ಪ್ರಕೃತಿ ಚಿಕಿತ್ಸೆ—ಇವುಗಳಲ್ಲಿ ತರಬೇತಿ, ಶಿಕ್ಷಣ ಸುಧಾರಣೆ ಮತ್ತು ಸಮಗ್ರ ಅಭಿವೃದ್ಧಿಗೆ ಅಗತ್ಯವಾದ ಮಾರ್ಗ ಸೂತ್ರಗಳನ್ನು ಸಲಹೆಮಾಡಲು 1972ರಲ್ಲಿ ಕರ್ನಾಟಕ ಸರ್ಕಾರವು ಡಾ|| ಜಿ. ಎಸ್. ಮೇಲ್ಕೋಟೆ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿತು. ಈ ಸಮಿತಿಯು ಭಾರತೀಯ ವೈದ್ಯಪದ್ಧತಿಗಳಿಗಾಗಿಯೇ ಪ್ರತ್ಯೇಕ ಇಲಾಖೆ ರಚಿಸಬೇಕೆಂದೂ ಅದು ಆಯುರ್ವೇದ, ಯುನಾನಿ, ಸಿದ್ಧಪ್ರಕೃತಿ ಚಿಕಿತ್ಸೆ, ಯೋಗ ಮತ್ತು ಹೋಮಿಯೋಪತಿ—ಈ ಪದ್ಧತಿಗಳನ್ನು ನೋಡಿಕೊಳ್ಳಬೇಕೆಂದೂ, ಹೊಸ ಇಲಾಖೆಗೆ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯೆಂದು ಕರೆಯಬೇಕೆಂದೂ ಶಿಫಾರಸು ಮಾಡಿತು. ಅಂತೆಯೇ 1972ರಲ್ಲಿ ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಎಂಬ ಪ್ರತ್ಯೇಕ ಇಲಾಖೆಯನ್ನು ಆರಂಭಿಸಲಾಯಿತು. ಇಲಾಖೆಯ ವಿಭಜನೆಯನ್ನು ನಿರ್ದೇಶನಾಲಯ ಮಟ್ಟದಲ್ಲಿ ಮಾತ್ರ ಮಾಡಲಾಯಿತು. ಆರೋಗ್ಯ ಇಲಾಖೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳೇ ಜಿಲ್ಲೆಗಳಲ್ಲಿರುವ ಆಯುರ್ವೇದ ಹಾಗೂ ಮತ್ತಿತರ ಪದ್ಧತಿಗಳ ಆಸ್ಪತ್ರೆಗಳ ಮೇಲ್ವಿಚಾರಣೆ ನೋಡುವ ಅಧಿಕಾರಿಗಳು. ಈ ಇಲಾಖೆಯ ಮುಖ್ಯ ಉದ್ದೇಶವೆಂದರೆ, ವೈದ್ಯಕೀಯ ಸೌಲಭ್ಯಗಳಿಲ್ಲದ ಕಡೆ ಗ್ರಾಮಾಂತರ ಜನಸಮುದಾಯಕ್ಕೆ ಗ್ರಾಮೀಣ ಔಷಧಾಲಯಗಳ ಮೂಲಕ ವೈದ್ಯಕೀಯ ನೆರವನ್ನು ಒದಗಿಸುವುದಾಗಿದೆ. ಈ ಪದ್ಧತಿಯ ಆಸ್ಪತ್ರೆಗಳು ನಗರ ಪ್ರದೇಶದಲ್ಲೂ ಇವೆ. ಇತರ ಔಷಧ ಪದ್ಧತಿಗಳು ನಿಫಲವಾಗುವಂತಹ ಸಂದರ್ಭಗಳಲ್ಲಿ ಈ ಪದ್ಧತಿಯ ವಿಶೇಷ ಚಿಕಿತ್ಸೆಗಳನ್ನು ನಗರದ ಜನ ಪಡೆದುಕೊಳ್ಳುವಂತಾಗಬೇಕೆಂಬುದೇ ಇದರ ಆಶಯ.

**ಇಲಾಖೆ :** ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರು ಪ್ರಮುಖ ಆಯುರ್ವೇದಿಕ್ ಹಾಗೂ ಯುನಾನಿ ಕಾಲೇಜುಗಳು, ಸರ್ಕಾರಿ ಗ್ರಾಮೀಣ ಆಯುರ್ವೇದಿಕ್, ಯುನಾನಿ, ಹೋಮಿಯೋಪತಿಕ್ ಮತ್ತು ಪ್ರಕೃತಿ ಚಿಕಿತ್ಸಾ ಔಷಧಾಲಯಗಳು, ಜಿಲ್ಲಾ ಮಟ್ಟದ ಆಸ್ಪತ್ರೆಗಳು ಮತ್ತು ಸಹಾಯಧನ ಪಡೆಯುವ ಸಂಸ್ಥೆಗಳ ಆಡಳಿತವನ್ನು ನೋಡಿಕೊಳ್ಳುತ್ತಾರೆ. ಇವರಿಗೆ ಸಣ್ಣ ಇಲಾಖೆಯ ಮುಖ್ಯಸ್ಥರ ಎಲ್ಲ ಅಧಿಕಾರಗಳೂ ಇರುತ್ತವೆ. ಇವರ ನೆರವಿಗೆ ಓರ್ವ ಸಹಾಯಕ ನಿರ್ದೇಶಕರು,ಓರ್ವ ಆಡಳಿತಾಧಿಕಾರಿಗಳು, ಓರ್ವ ಲೆಕ್ಕಪತ್ರ ಮೇಲ್ವಿಚಾರಕರು ಮತ್ತು ಸಾಮಾನ್ಯ ಕಾರ್ಯಾಲಯ ಸಿಬ್ಬಂದಿ ಇರುತ್ತದೆ. ವೈದ್ಯಕೀಯ ಪರಿಹಾರ ಮತ್ತು ವೈದ್ಯಕೀಯ ಶಿಕ್ಷಣಗಳಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲೂ ವ್ಯವಹರಿಸುವ ಈ ನಿರ್ದೇಶಕರು ಭಾರತೀಯ ವೈದ್ಯಪದ್ಧತಿಗಳು, ಕಾಲೇಜು ಪ್ರವೇಶದ ಆಯ್ಕೆ ಸಮಿತಿ ಹಾಗೂ ಪರೀಕ್ಷಾ ಮಂಡಳಿಗಳ ಅಧ್ಯಕ್ಷರಾಗಿರುತ್ತಾರೆ. ಭಾರತೀಯ ವೈದ್ಯಪದ್ಧತಿ ಹಾಗೂ ಹೋಮಿಯೋಪತಿ ಇಲಾಖೆಯ ನಿರ್ದೇಶಕರ ಮೇಲ್ವಿಚಾರಣಾ ನಿಯಂತ್ರಣದಲ್ಲಿ ನಾನಾ ಪದ್ಧತಿಗಳ 787 ಸಂಸ್ಥೆಗಳಿವೆ. 1982ರಲ್ಲಿ ರಾಜ್ಯದಲ್ಲಿ ನೋಂದಾಯಿಸಲಾದ 8,626 ಆಯುರ್ವೇದಿಕ್ ವೈದ್ಯರು 368 ಯುನಾನಿ ವೈದ್ಯರು ಮತ್ತು 1,113 ಹೋಮಿಯೋಪತಿಕ್ ವೈದ್ಯರಿದ್ದರು.

**ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ :** ಬೆಂಗಳೂರಿನಲ್ಲಿರುವ ಈ ಸಂಸ್ಥೆಯು 1947ರಲ್ಲಿ ಕಾರ್ಯಾರಂಭ ಮಾಡಿತು. ಇದು ಭಾರತೀಯ ವೈದ್ಯಪದ್ಧತಿಯ ದೊಡ್ಡ ಆಸ್ಪತ್ರೆಗಳಲ್ಲಿ ಒಂದಾಗಿದೆ. ಈ ಆಸ್ಪತ್ರೆಯಲ್ಲಿ ಆಯುರ್ವೇದ, ಸಿದ್ಧ, ಯೋಗ, ನೇತ್ರ ಚಿಕಿತ್ಸೆ ಮತ್ತು ಯುನಾನಿ—ಇವುಗಳಿಗೆ ಪ್ರತ್ಯೇಕ ಒಳ ಮತ್ತು ಹೊರರೋಗಿಗಳ ವಿಭಾಗಗಳಿವೆ. ಆಯುರ್ವೇದ ಮತ್ತು ಯುನಾನಿ ಪದ್ಧತಿಗಳಲ್ಲಿ ಪಂಚಕರ್ಮ ಚಿಕಿತ್ಸೆ, ನೇತ್ರ ಚಿಕಿತ್ಸೆ, ಕ್ಷ-ಕಿರಣ, ಸಂಶೋಧನಾ ಘಟಕ ಮತ್ತು ಚಿಕಿತ್ಸಾ ಘಟಕಗಳ ವಿಶೇಷ ವಿಭಾಗಗಳಿವೆ. ಚಿಕಿತ್ಸಾ ಸಂಶೋಧನೆಯ ಆಯುರ್ವೇದ ಘಟಕವು, ಅಸ್ತಮ, ಸಂಧಿವಾತ ಮತ್ತು ಜಠರ ಹುಣ್ಣುಗಳ ಬಗ್ಗೆ ಸಂಶೋಧನೆ ನಡೆಸುತ್ತಿದೆ. ಹಾಗೆಯೇ ಯುನಾನಿ ಪದ್ಧತಿಯ ಕೇಂದ್ರ ಸಂಶೋಧನಾ ಮಂಡಳಿಯಿಂದ ಸ್ಥಾಪಿತವಾದ ಇನ್ನೊಂದು ಚಿಕಿತ್ಸಾ ಸಂಶೋಧನಾ ಘಟಕವು 1980 ರಿಂದ ಕಾರ್ಯ ನಿರ್ವಹಿಸುತ್ತಿದೆ. ಭಾರತೀಯ ವೈದ್ಯಪದ್ಧತಿಯ ಸರ್ಕಾರಿ ಕಾಲೇಜಿನಲ್ಲಿರುವ ಎಲ್ಲ ಬೋಧಕ ಸಿಬ್ಬಂದಿಯೂ ಆಸ್ಪತ್ರೆಯಲ್ಲಿರುವ ಒಂಬತ್ತು ಜನ ವೈದ್ಯರಿಗೆ ಪೂರಕವಾಗಿ ಇಲ್ಲಿ ಸೇವೆ ಸಲ್ಲಿಸುತ್ತಾರೆ. ಇಲ್ಲಿ ಸುಮಾರು 28 ವಿವಿಧ ರೋಗಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. 1947ರಲ್ಲಿ ಈ ಆಸ್ಪತ್ರೆಯಲ್ಲಿದ್ದ 100 ಹಾಸಿಗೆಗಳ ಸಂಖ್ಯೆ ಈಗ 315ಕ್ಕೆ ಏರಿದೆ. ಕಿವಿ, ಮೂಗು, ಗಂಟಲು ರೋಗ, ನೇತ್ರ ಚಿಕಿತ್ಸೆ ಮತ್ತು ಸಾರ್ವತ್ರಿಕ ವಿಭಾಗ—ಇವು ಈ ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿರುವ ಇತರ ವಿಭಾಗಗಳು. 1981ರಲ್ಲಿ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 3,558 ಮತ್ತು 7,51,588 ರಷ್ಟಿದ್ದರೆ ಅದರ ಹಿಂದಿನ ವರ್ಷ ಈ ಸಂಖ್ಯೆ ಅನುಕ್ರಮವಾಗಿ 3,363 ಮತ್ತು 7,78,680 ರಷ್ಟಿತ್ತು.

**ಭಾರತೀಯ ಔಷಧ ಪದ್ಧತಿಯ ವೈದ್ಯಕೀಯ ಕಾಲೇಜು ಆಸ್ಪತ್ರೆ, ಮೈಸೂರು :** ಇದು ರಾಜ್ಯದಲ್ಲಿರುವ

ಎರಡನೇಯ ದೊಡ್ಡ ಬೋಧನ ಆಸ್ಪತ್ರೆ. ಯೋಗ ಚಿಕಿತ್ಸೆಯ ಜೊತೆಗೆ ಆಯುರ್ವೇದ ಮತ್ತು ಯುನಾನಿ ಪದ್ಧತಿ ಚಿಕಿತ್ಸೆಯನ್ನು ಒದಗಿಸುತ್ತಿರುವ ಈ ಆಸ್ಪತ್ರೆಯಲ್ಲಿ 165 ಹಾಸಿಗೆಗಳ ಸೌಲಭ್ಯವಿದೆ.

ತಾರಾನಾಥ ಸರ್ಕಾರಿ ಆಯುರ್ವೇದಿಕ್ ಆಸ್ಪತ್ರೆ, ಬಳ್ಳಾರಿ : ಈ ಅಸ್ಪತ್ರೆಯು 1947ರಲ್ಲಿ ತಾರಾನಾಥ ಆಯುರ್ವೇದ ವಿದ್ಯಾಪೀಠದಿಂದ ಬಳ್ಳಾರಿಯಲ್ಲಿ ಆರಂಭಿಸಲ್ಪಟ್ಟಿತು. ಈ ಸಂಸ್ಥೆಯನ್ನು 1976ರ ಜುಲೈ ತಿಂಗಳಿನಲ್ಲಿ ಕರ್ನಾಟಕ ಸರ್ಕಾರವು ವಹಿಸಿಕೊಂಡಿತು. ಇಲ್ಲಿ ಎಲ್ಲ ವಿಧದ ಜೀವಲಕ್ಷಣ ಶಾಸ್ತ್ರದ ಪರೀಕ್ಷೆಗಳನ್ನೂ ನಡೆಸುವ ಸುಸಜ್ಜಿತ ಪ್ರಯೋಗಾಲಯ ಸೌಲಭ್ಯವಿದೆ. ಹಾಗೆಯೇ ಈ ಆಸ್ಪತ್ರೆಯ ಪಂಚಕರ್ಮ ವಿಭಾಗವೂ ಸುಸಜ್ಜಿತವಾಗಿದ್ದು ನಾನಾ ಬಗೆಯ ವಾತರೋಗದ ಅನೇಕ ರೋಗಿಗಳು ಇಲ್ಲಿಗೆ ಚಿಕಿತ್ಸೆಗೆ ಬರುತ್ತಾರೆ. ಇಲ್ಲಿ ಉಸಿರಾಟ, ಜೀರ್ಣಾಂಗ, ನರ ವ್ಯವಸ್ಥೆ, ಮಾನಸಿಕ ಸಂಬಂಧ ರೋಗಗಳೇ ಅಲ್ಲದೆ ಹೃದ್ರೋಗ, ಹಾಗೂ ಸ್ತ್ರೀರೋಗಗಳಿಗೂ ಚಿಕಿತ್ಸೆ ನೀಡಲಾಗುತ್ತದೆ. 1981ರಲ್ಲಿ ಈ ಅಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 7,189 ಮತ್ತು 91,889 ರಷ್ಟಿದ್ದರೆ 1980ರಲ್ಲಿ 8,273 ಮತ್ತು 1,41,678 ರಷ್ಟಿತ್ತು.

ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ, ಬೆಂಗಳೂರು : 1976ರಲ್ಲಿ ಆರಂಭವಾದ ಈ ಆಸ್ಪತ್ರೆಯ ಹಾಸಿಗೆಗಳ ಸಂಖ್ಯೆ 25. ಪ್ರಸ್ತುತ ಈ ಆಸ್ಪತ್ರೆಯು ಜಯಚಾಮರಾಜೇಂದ್ರ ಭಾರತೀಯ ಔಷಧ ಪದ್ಧತಿ ಸಂಸ್ಥೆಯ ಆವರಣದಲ್ಲಿದೆ. ಇಲ್ಲಿ ಉಸಿರಾಟದ ತೊಂದರೆ, ಹೃದ್ರೋಗ, ಮಿದುಳು ರೋಗ, ಚರ್ಮ ರೋಗ ಮತ್ತು ಕಿವಿ, ಮೂಗು, ಗಂಟಲು ರೋಗಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. 1981ರಲ್ಲಿ ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರ ರೋಗಿಗಳ ಸಂಖ್ಯೆ ಅನುಕ್ರಮವಾಗಿ 337 ಮತ್ತು 40,086 ರಷ್ಟಿತ್ತು. ಈ ಸಂಖ್ಯೆ 1980ರಲ್ಲಿ 336 ಮತ್ತು 42,583 ರಷ್ಟಿತ್ತು.

ಸರ್ಕಾರಿ ಯುನಾನಿ ಆಸ್ಪತ್ರೆ, ರಾಯಚೂರು : ಅಸಫ್ ಝಾ ಸಂತತಿಯ ಆಡಳಿತ ಕಾಲದಲ್ಲಿ ಸ್ಥಾಪಿಸಿದ್ದೆಂದು ಹೇಳಲಾಗಿರುವ ಈ ಆಸ್ಪತ್ರೆ ಮೊದಲು ಒಂದು ಹೊರ ರೋಗಿಗಳ ಔಷಧಾಲಯವಾಗಿತ್ತು. 1980ರ ಜೂನ್‌ನಲ್ಲಿ ಇದನ್ನು ಅಗತ್ಯ ಸಾಧನ ಸಲಕರಣೆಗಳೊಂದಿಗೆ ಆರು ಹಾಸಿಗೆಗಳ ಒಳರೋಗಿಗಳ ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸಲಾಯಿತು. ಕ್ಷಯರೋಗದ ಹೊರತಾಗಿ ಎಲ್ಲ ದೈಹಿಕ ತೊಂದರೆಗಳಿಗೂ ಇಲ್ಲಿ ಚಿಕಿತ್ಸೆ ಒದಗಿಸಲಾಗುತ್ತದೆ. 1980 ಮತ್ತು 1981ರಲ್ಲಿ ಈ ಆಸ್ಪತ್ರೆಯಲ್ಲಿ ವರ್ಷಕ್ಕೆ 18 ಜನರಂತೆ ಕೇವಲ 36 ಜನ ಒಳರೋಗಿಗಳಿಗೆ ಚಿಕಿತ್ಸೆ ನೀಡಲಾಯಿತು. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಹೊರ ರೋಗಿಗಳ ಸಂಖ್ಯೆ 37,814 ರಷ್ಟಿತ್ತು. ಈ ಸಂಖ್ಯೆ 1980ರಲ್ಲಿ 54,829 ರಷ್ಟಿತ್ತು.

ಯೋಗ ಮತ್ತು ಪ್ರಕೃತಿ ಚಿಕಿತ್ಸೆ : ಯೋಗ ವಿಜ್ಞಾನ ಮತ್ತು ಯೋಗ ತಂತ್ರಗಳು ಈಗ ಹೆಚ್ಚಿನ ಮಹತ್ವವನ್ನು ಪಡೆಯುತ್ತಿವೆ. ವೈದ್ಯರು, ವಿಜ್ಞಾನಿಗಳು, ಮನಶಾಸ್ತ್ರಜ್ಞರು, ಮಾನಸಿಕ ಆರೋಗ್ಯ ತಜ್ಞರು ಮೊದಲಾದವರೆಲ್ಲ ಇದರಲ್ಲಿ ತೀವ್ರ ಆಸಕ್ತಿಯನ್ನು ತಳೆದಿದ್ದು, ಯೋಗತಂತ್ರದ ಪದ್ಧತಿಯಿಂದ ದೊರೆಯಬಹುದಾದ ಒಳ್ಳೆಯ ಪರಿಣಾಮಗಳನ್ನು ಪತ್ತೆಹಚ್ಚುವ ಬಗ್ಗೆ ತೀವ್ರ ಸಂಶೋಧನೆ ನಡೆಸುತ್ತಿದ್ದಾರೆ. ವಿಶ್ವದ ನಾನಾ ಭಾಗಗಳಿಂದ ಯೋಗವನ್ನು ಕುರಿತಂತೆ ಗಣನೀಯ ಪ್ರಮಾಣದ ವೈದ್ಯಕೀಯ ಸಾಹಿತ್ಯ ಬಂದು ಬೀಳುತ್ತಿದೆ. ಭಾರತೀಯ ಔಷಧ ಪದ್ಧತಿ ಮತ್ತು ಹೋಮಿಯೋಪತಿಯ ಕೇಂದ್ರ ಸಂಶೋಧನಾ ಮಂಡಳಿಗೆ ಸಲಹೆ ನೀಡಲು ಯೋಗಮಂಡಳಿಯೊಂದನ್ನು ರಚಿಸಲಾಗಿದೆ. ಅಂತಹ ಸಂಶೋಧನಾ ಕಾರ್ಯಕ್ಕೆ ನೆರವಾಗುವುದು ಈ ಮಂಡಳಿಯ ಆಶಯ. ಕರ್ನಾಟಕದಲ್ಲಿ ಅನೇಕ ಯೋಗ ಕೇಂದ್ರಗಳು ಹುಟ್ಟಿಕೊಂಡಿವೆ. ಮೈಸೂರಿನಲ್ಲಿರುವ ಅಷ್ಟಾಂಗ ಯೋಗ ಸಂಶೋಧನ ಸಂಸ್ಥೆ ಅಂತಹ ಕೇಂದ್ರಗಳಲ್ಲಿ ಒಂದು. 1975ರ ಫೆಬ್ರವರಿಯಲ್ಲಿ ಮೈಸೂರಿನಲ್ಲಿರುವ ಭಾರತೀಯ ಔಷಧ ಪದ್ಧತಿಯ ಸರ್ಕಾರಿ ಕಾಲೇಜಿನಲ್ಲಿ ಯೋಗ ತರಬೇತಿ ಶಿಕ್ಷಣವನ್ನು ಆರಂಭಿಸಲಾಗಿದೆ. ಐದು ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವಿರುವ ಈ ಶಿಕ್ಷಣದ ಅವಧಿ ಒಂದು ವರ್ಷ. ಬಿ.ಎಸ್.ಎ.ಎಂ. ಪದವೀಧರರು ಈ ತರಬೇತಿ ಶಿಕ್ಷಣಕ್ಕೆ ಅರ್ಹರಾಗಿರುತ್ತಾರೆ.

ಆಯುರ್ವೇದದ ಒಂದು ಭಾಗವಾದ ಪ್ರಕೃತಿ ಚಿಕಿತ್ಸೆ ಯೂರೋಪ್ ದೇಶಗಳಲ್ಲಿ ವಿಕಾಸಹೊಂದಿದ ಒಂದು ಪದ್ಧತಿ. ಸ್ವಾವಲಂಬನೆಯ ಸೂತ್ರಗಳ ಆಧಾರದ ಮೇಲೆ ಹಳ್ಳಿಗಳಿಂದ ಆರಂಭಿಸಿ ರಾಷ್ಟ್ರ ಪುನರ್ನಿರ್ಮಾಣಕ್ಕಾಗಿ ಮಹಾತ್ಮಾ ಗಾಂಧೀಜಿಯವರು ಪ್ರಕೃತಿ ಚಿಕಿತ್ಸೆಯನ್ನು ಒಂದು ಮಹತ್ವದ ಕಾರ್ಯಕ್ರಮವಾಗಿ ಆರಿಸಿಕೊಂಡರು. ಪ್ರಕೃತಿ ಚಿಕಿತ್ಸೆ ಒಂದು ಸರಳ ವಿಜ್ಞಾನವಾಗಿದ್ದು, ಅದನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಮತ್ತು ಯಾವುದೇ ಹೆಚ್ಚಿನ ವೆಚ್ಚವಿಲ್ಲದೆ ಮನೆಯಲ್ಲೇ ಅಭ್ಯಾಸ ಮಾಡಬಹುದು. ಪ್ರಕೃತಿ ಚಿಕಿತ್ಸಾ ಪದ್ಧತಿಯನ್ನು ರೋಗಗಳನ್ನು ತಡೆಗಟ್ಟುವ ಸ್ವಾಭಾವಿಕ ಚಿಕಿತ್ಸೆ ಮತ್ತು ಔಷಧಿಗಳಲ್ಲದೆ ರೋಗಿಗಳನ್ನು ಗುಣಪಡಿಸುವ ಪ್ರಕೃತಿ ಚಿಕಿತ್ಸೆ-ಎಂದು ಎರಡು ಭಾಗವಾಗಿ ವಿಂಗಡಿಸಬಹುದು. ಈ ಎರಡು ವಿಧಗಳನ್ನು ಸರ್ಕಾರಕ್ಕೆ ಯಾವುದೇ ಹಣಕಾಸಿನ ಹೊರೆಯಿಲ್ಲದೆ ಹಳ್ಳಿಗಳಲ್ಲೂ ಸಹ ಅಭ್ಯಾಸ ಮಾಡಬಹುದು ಮತ್ತು ಜಾರಿಗೆ ತರಬಹುದು.

ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವಿಜ್ಞಾನಗಳ ಸಂಸ್ಥೆ

ಬೆಂಗಳೂರು : 1979ರ ಸೆಪ್ಟೆಂಬರ್‌ನಲ್ಲಿ ಎಸ್. ಜೆ. ಜಿಂದಾಲ್ ಟ್ರಸ್ಟ್‌ನಿಂದ ಸ್ಥಾಪಿತವಾದ ಈ ಸಂಸ್ಥೆಯನ್ನು ಎಸ್. ಜೆ. ವೈದ್ಯಕೀಯ ಪರಿಹಾರ ಸಂಘದವರು ನಡೆಸುತ್ತಿದ್ದಾರೆ. ಬೆಂಗಳೂರು ನಗರದ ಹೊರ ವಲಯದಲ್ಲಿ ಸ್ಥಾಪಿತವಾಗಿರುವ ಈ ಸಂಸ್ಥೆ ಇಡೀ ವರ್ಷ ತನ್ನ ಹಿತಕರ ಹವಾಮಾನಕ್ಕೆ ಹೆಸರಾಗಿದೆ. ಸಂಶೋಧನಾ ಉದ್ದೇಶಕ್ಕಾಗಿ ಈ ಸಂಸ್ಥೆ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯಿಂದ ಅಂಗೀಕೃತವಾಗಿದೆ. ಅದು ರೋಗ ಚಿಕಿತ್ಸೆಯ ಕೇಂದ್ರವಷ್ಟೇ ಅಲ್ಲದೆ ಸಾತ್ವಿಕ ಜೀವನದಿಂದ ಸಹಜ ಆರೋಗ್ಯವನ್ನು ಅನುಭವಿಸಲು ವ್ಯಕ್ತಿಯ ಜೀವನ ಪದ್ಧತಿ ಮತ್ತು ವಿಚಾರಧಾರೆಯನ್ನು ರೂಪಿಸುವ ಒಂದು ಆಶ್ರಮ ಸಂಸ್ಥೆಯಾಗಿದೆ. ಈ ಸಂಸ್ಥೆಯ ಸೂತ್ರಗಳು ಆತ್ಮ ಸಂಯಮ, ಭೋಗವರ್ಜನೆ ಮತ್ತು ಸರಳತೆಯ ಪ್ರಾಚೀನ ಆದರ್ಶಗಳನ್ನು ಆಧರಿಸಿವೆ.

ಈ ಸಂಸ್ಥೆಯ ವಿಶೇಷವೆಂದರೆ ಸಮಾಜದಲ್ಲಿ ಆರ್ಥಿಕವಾಗಿ ಹಿಂದುಳಿದವರಿಗೆ ನೆರವು ನೀಡುವ ಉದ್ದೇಶವಿಟ್ಟುಕೊಂಡಿರುವುದು. ಎಲ್ಲ ಬಗೆಯ ರೋಗಿಗಳಿಗೂ ಸೂಕ್ತವಾದಂತಹ ಆಧುನಿಕ ಹಾಗೂ ಅನುಕೂಲಕರ ಸ್ಥಳಾವಕಾಶವನ್ನು ಇಲ್ಲಿ ಕಲ್ಪಿಸಲಾಗಿದೆ. ಇಲ್ಲಿ ಚಿಕಿತ್ಸೆ ನೀಡಲಾಗುವ ನಾನಾ ರೋಗಗಳಲ್ಲಿ ಮುಖ್ಯವಾದುವೆಂದರೆ-ನೆಗಡಿ, ಮೂಗಿನ ವ್ರಣ, ಚರ್ಮರೋಗ, ಸಂಧಿವಾತ, ಬೆನ್ನೆಲುಬಿನ ರೋಗ, ನರಗಳ ದೋಷ, ಅಸ್ತಮಾ, ಹುಣ್ಣುಗಳು, ಮಧುಮೇಹ, ಅತಿರಕ್ತ ಒತ್ತಡ, ಕುಗ್ಗಿದ ರಕ್ತ ಒತ್ತಡ, ಇತ್ಯಾದಿ ರೋಗಗಳು. ಇಲ್ಲಿ ಮಹಿಳೆಯರು ಮತ್ತು ಪುರುಷರಿಗೆ—ಪ್ರತ್ಯೇಕವಾದ ಆಧುನಿಕ ಹಾಗೂ ವ್ಯವಸ್ಥಿತ ಚಿಕಿತ್ಸಾ ವಿಭಾಗಗಳಿವೆ. ಇಲ್ಲಿ ನೀಡುವ ನಾನಾ ಚಿಕಿತ್ಸೆಗಳಲ್ಲಿ, ಜಲಚಿಕಿತ್ಸೆ, ಮಣ್ಣಿನಚಿಕಿತ್ಸೆ, ಸೂಕ್ಷ್ಮತಂತುಚಿಕಿತ್ಸೆ, ಸೂರ್ಯಸ್ನಾನ ಚಿಕಿತ್ಸೆ, ವಿದ್ಯುತ್ ಚಿಕಿತ್ಸೆ, ಶರೀರ ಲಕ್ಷಣ ಚಿಕಿತ್ಸೆ, ಯೋಗ ಚಿಕಿತ್ಸೆ, ಅಂಗಮರ್ದನ ಚಿಕಿತ್ಸೆ, ಅಸ್ಥಿ ಚಿಕಿತ್ಸೆ ಮತ್ತು ವ್ಯಾಯಾಮ ಇವು ಮುಖ್ಯ ಚಿಕಿತ್ಸೆಗಳು. ಅಸ್ತಮಾ ಮತ್ತು ಮಧುಮೇಹ ಚಿಕಿತ್ಸೆಗಾಗಿ ಈ ಸಂಸ್ಥೆ ನಡೆಸಿರುವ ಸಂಶೋಧನೆ ಒಳ್ಳೆಯ ಫಲಿತಾಂಶಗಳನ್ನು ನೀಡಿದ್ದು, ಸಂಶೋಧನಾ ಚಟುವಟಿಕೆಗಳನ್ನು ವಿಸ್ತರಿಸುವ ಉದ್ದೇಶವಿದೆ. ಆರಂಭದಲ್ಲಿ 80ರಷ್ಟಿದ್ದ ಈ ಸಂಸ್ಥೆಯ ಹಾಸಿಗೆಗಳ ಸಂಖ್ಯೆ ಈಗ 120 ಆಗಿದೆ. 1981ರಲ್ಲಿ ಇಲ್ಲಿ ಚಿಕಿತ್ಸೆ ಪಡೆದ ಒಳರೋಗಿಗಳ ಸಂಖ್ಯೆ 1,473 ಆಗಿದ್ದರೆ 1980ರಲ್ಲಿ 1,002 ಆಗಿತ್ತು.

**ಪ್ರಕೃತಿ ಚಿಕಿತ್ಸಾ ಆಸ್ಪತ್ರೆ, ಜಯನಗರ, ಬೆಂಗಳೂರು:** ಇದು ಕರ್ನಾಟಕ ಪ್ರಕೃತಿ ಚಿಕಿತ್ಸಾ ಪ್ರಚಾರ ಟ್ರಸ್ಟಿನಿಂದ 1966 ರಲ್ಲಿ ಸ್ಥಾಪಿಸಲ್ಪಟ್ಟಿತು. ಪ್ರಸ್ತುತ 25 ಹಾಸಿಗೆಗಳ ಸೌಲಭ್ಯವಿರುವ ಈ ಆಸ್ಪತ್ರೆಯಲ್ಲಿ ಅಂತಿಮವಾಗಿ 50 ಹಾಸಿಗೆಗಳ ಸೌಲಭ್ಯ ಕಲ್ಪಿಸಲು ಅವಕಾಶವಿದೆ. ರಾಜ್ಯದಲ್ಲೇ ಇಂತಹ ಆಸ್ಪತ್ರೆಗಳಲ್ಲಿ ಮೊಟ್ಟ ಮೊದಲನೇಯದೆನಿಸಿರುವ ಈ ಆಸ್ಪತ್ರೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮನ್ನಣೆ ಹಾಗೂ ಸಹಾಯ ಧನ ಪಡೆದಿದೆ. ಇದನ್ನು ಒಂದು ಸೇವಾ ಸಂಸ್ಥೆಯಾಗಿ ರಾಜ್ಯ ಸರ್ಕಾರವು ಮಾನ್ಯ ಮಾಡಿದೆ. ವಿಶೇಷ ಸಾಧನ ಸಲಕರಣೆಗಳಿರುವ ಈ ಆಸ್ಪತ್ರೆಯಲ್ಲಿ ಅಸ್ತಮಾ, ಮಧುಮೇಹ, ಅತಿರಕ್ತ ಒತ್ತಡ, ಶ್ವಾಸನಾಳದ ಊತ, ಸಂಧಿವಾತ, ಜಠರ ದೋಷಗಳು, ತಲೆನೋವು, ಜ್ವರ, ಇತ್ಯಾದಿ ರೋಗಗಳಿಗೆ ಚಿಕಿತ್ಸೆ ನೀಡಲಾಗುತ್ತದೆ. ಒಳರೋಗಿಗಳಿಗೆ ವೈದ್ಯರು ಯೋಗಾಭ್ಯಾಸ ಮಾಡಿಸುತ್ತಾರೆ. ಈ ಆಸ್ಪತ್ರೆಯಲ್ಲಿ 1981ರಲ್ಲಿ ಚಿಕಿತ್ಸೆ ಪಡೆದ ಒಳ ಮತ್ತು ಹೊರರೋಗಿಗಳ ಸಂಖ್ಯೆ ಅನುಕ್ರಮವಾಗಿ 4,769 ಮತ್ತು 5,685 ಆಗಿದ್ದರೆ ಅದರ ಹಿಂದಿನ ವರ್ಷ ಈ ಸಂಖ್ಯೆ ಅನುಕ್ರಮವಾಗಿ 6,173 ಮತ್ತು 5,597 ಆಗಿತ್ತು,

**ವಿವೇಕಾನಂದ ಕೇಂದ್ರ, ಬೆಂಗಳೂರು:** ಈ ಕೇಂದ್ರವನ್ನು ಈಗ ವಿವೇಕಾನಂದ ಕೇಂದ್ರ, ಮದರಾಸು ಎಂದು ಕರೆಯಲ್ಪಡುವ ವಿವೇಕಾನಂದ ಶಿಲಾ ಸ್ಮಾರಕ ಸಮಿತಿಯು 1978ರಲ್ಲಿ ಸ್ಥಾಪಿಸಿತು. ಈ ಕೇಂದ್ರವು ಆರೋಗ್ಯಕ್ಕೆ ಒಂದು ಪರಿಣಾಮಕಾರಿ ಸಾಧನವಾಗಿ ಇತ್ತೀಚೆಗೆ ಯೋಗ ಚಿಕಿತ್ಸೆಯನ್ನು ಕೈಗೊಂಡಿದೆ. ರೋಗಿಗಳಿಗೆ ವೈದ್ಯಕೀಯ ಸೇವೆ ಸಲ್ಲಿಸುವ ಸಮಗ್ರ ಯೋಜನೆಯ ಭಾಗವಾಗಿ ಇಲ್ಲಿ ಯೋಗ ಚಿಕಿತ್ಸೆ ಹಾಗೂ ಸಂಬಂಧಿಸಿದ ಸಂಶೋಧನೆಗಳು ನಡೆಯುತ್ತಿವೆ. ಈ ಕೇಂದ್ರವು ಪ್ರತಿದಿನ ಯೋಗ, ಯೋಗ ಚಿಕಿತ್ಸೆ, ಪ್ರಾಣಾಯಾಮ, ಆಸನ, ಧ್ಯಾನ, ಇತ್ಯಾದಿ ತರಗತಿಗಳನ್ನು ನಡೆಸುತ್ತಿದೆ. ಅಸ್ತಮಾ, ಮಧುಮೇಹ, ಹೃದ್ರೋಗ, ಅತಿ ರಕ್ತದ ಒತ್ತಡ, ಕೆಳಬೆನ್ನಿನ ನೋವು, ಬೆನ್ನಲುಬಿನ ರೋಗ, ಉದ್ವೇಗದಿಂದುಂಟಾಗುವ ತಲೆನೋವು, ನರವ್ಯಾಧಿ ಹಾಗೂ ನೇತ್ರ ದೋಷಗಳ ಚಿಕಿತ್ಸೆಗೆ ಬೆಂಗಳೂರು ಮತ್ತು ಹೊರಗೆ ಯೋಗ ಚಿಕಿತ್ಸಾ (ವಸತಿಯೇತರ) ಶಿಬಿರಗಳನ್ನು ನಡೆಸುತ್ತದೆ. 1982ರಲ್ಲಿ ಮೇಲೆ ಹೇಳಿದ ರೋಗಗಳಲ್ಲಿ ಹೊರರೋಗಿಗಳಾಗಿ ಚಿಕಿತ್ಸೆ ಪಡೆದವರ ಸಂಖ್ಯೆ 2,000 ದಷ್ಟಿದ್ದರೆ 1981 ಮತ್ತು 1980ರಲ್ಲಿ ಈ ಸಂಖ್ಯೆ ಅನುಕ್ರಮವಾಗಿ 1,600 ಮತ್ತು 600 ರಷ್ಟಿತ್ತು. ಇದು ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯಿಂದ ಅಂಗೀಕೃತವಾದ ಸಂಸ್ಥೆ.

## ಔಷಧ ನಿಯಂತ್ರಣ

ಇಡೀ ರಾಜ್ಯದಲ್ಲಿ ಔಷಧ ಶಾಸನವು ಜಾರಿಯಲ್ಲಿದೆ. 1962 ರವರೆಗೂ ಸಾರ್ವಜನಿಕ ಆರೋಗ್ಯ ನಿರ್ದೇಶಕರು ಈ ಶಾಸನ ಜಾರಿಯ ಅಧಿಕಾರಿಗಳಾಗಿದ್ದರು. ಆ ವರ್ಷ ಪ್ರತ್ಯೇಕ ಔಷಧ ನಿಯಂತ್ರಣ ಇಲಾಖೆ ಆರಂಭವಾದ ನಂತರ ಔಷಧ ನಿಯಂತ್ರಣಾಧಿಕಾರಿಗಳು ಇಲಾಖೆಯ ಮುಖ್ಯಸ್ಥರಾದರು. ಎಲ್ಲ ವಿಧದ

ಔಷಧಿಗಳು ಹಾಗೂ ಲಸಿಕೆಗಳ ವಿಶ್ಲೇಷಣೆಗೆ ಅಗತ್ಯವಾದ ಸೌಲಭ್ಯಗಳನ್ನುಳ್ಳ ಪೂರ್ಣ ಸುಸಜ್ಜಿತ ಔಷಧ ಪರೀಕ್ಷಾ ಪ್ರಯೋಗಾಲಯವನ್ನು ಇಲಾಖೆಯು ಹೊಂದಿದೆ. ಈ ಪ್ರಯೋಗಾಲಯವನ್ನು ರಾಷ್ಟ್ರದ ಸುಸಜ್ಜಿತ ಪ್ರಯೋಗಾಲಯಗಳಲ್ಲಿ ಒಂದೆಂದು ಪರಿಗಣಿಸಲಾಗಿದೆ. ಈ ಇಲಾಖೆಯು ಔಷಧಿಗಳಿಗೆ ಸಂಬಂಧಿಸಿದ ಇತರ ಕಾನೂನುಗಳನ್ನು ಜಾರಿಗೆ ತರುವ ಮತ್ತು ಔಷಧಶಾಸ್ತ್ರ ಶಿಕ್ಷಣಕ್ಕೆ ಸಂಬಂಧಿಸಿದ ಕಾರ್ಯಗಳನ್ನು ನೋಡಿಕೊಳ್ಳುತ್ತದೆ. ಔಷಧ ನಿಯಂತ್ರಣ ಇಲಾಖೆಯ ಅತ್ಯಂತ ಮುಖ್ಯ ಗುರಿ ಎಂದರೆ ಔಷಧಗಳ ಸಮಗ್ರ ಗುಣ ನಿಯಂತ್ರಣ ಮತ್ತು ನಕಲಿ ಮತ್ತು ಕೀಳುಮಟ್ಟದ ಔಷಧಗಳ ಕಾಟದ ವಿರುದ್ಧ ಬಳಕೆದಾರರಿಗೆ ಭರವಸೆಯ ರಕ್ಷಣೆ ಒದಗಿಸುವುದು. ಔಷಧಗಳು ಮತ್ತು ಸೌಂದರ್ಯ ಸಾಧನಗಳ ಶಾಸನ ಕೇಂದ್ರ ಶಾಸನವಾಗಿದ್ದು, ಸಂಬಂಧಪಟ್ಟ ನಿಯಮಗಳು ಕೇಂದ್ರ ಸರ್ಕಾರದಿಂದಲೇ ರೂಪಿಸಲ್ಪಟ್ಟಿವೆ. ಈ ಶಾಸನವನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ರಾಜ್ಯ ಸರ್ಕಾರವು ಕಾರ್ಯ ನಿರ್ವಹಣಾ ಸಿಬ್ಬಂದಿಯನ್ನು ಒದಗಿಸುತ್ತದೆ. ಔಷಧ ನಿಯಂತ್ರಣಾಧಿಕಾರಿಗಳು ರಾಜ್ಯದಲ್ಲಿ ರಾಸಾಯನಿಕಗಳು ಹಾಗೂ ಔಷಧಗಳ ಮಾರಾಟಗಾರರಿಗೆ ಪರವಾನಗಿ ನೀಡುವ ಅಧಿಕಾರಿಗಳೂ ಆಗಿರುತ್ತಾರೆ.

1971ರ ಮಾರ್ಚ್ 31ರಲ್ಲಿ 2,515 ಜನ ರಾಸಾಯನಿಕ ಮತ್ತು ಔಷಧಿ ವ್ಯಾಪಾರಿಗಳಿದ್ದರೆ 1981ರ ಡಿಸೆಂಬರ್ ಅಂತ್ಯದಲ್ಲಿ 7,400 ವ್ಯಾಪಾರಿಗಳಿದ್ದರು. 1973ರಲ್ಲಿ 1,555 ಜನ ಫಾರ್ಮಸಿಸ್ಟರುಗಳು ನೋಂದಾಯಿಸಲ್ಪಟ್ಟಿದ್ದರೆ 1981ರ ಡಿಸೆಂಬರ್ ಅಂತ್ಯದಲ್ಲಿ ಈ ಸಂಖ್ಯೆ 5,432 ಆಗಿತ್ತು. 1971ರ ಮಾರ್ಚ್‌ನಲ್ಲಿ 110 ಜನ ರಾಸಾಯನಿಕ ಮತ್ತು ಔಷಧಿ ವ್ಯಾಪಾರಿಗಳ ಅನುಪತ್ರಗಳನ್ನು ರದ್ದುಪಡಿಸಿದರೆ 1981ರ ಡಿಸೆಂಬರ್‌ನಲ್ಲಿ ಆ ಸಂಖ್ಯೆ 488 ಆಗಿತ್ತು.

## ನೈರ್ಮಲ್ಯ

1911ರಲ್ಲಿ ನಡೆದ ಅಖಿಲ ಭಾರತ ಪ್ರಥಮ ವೈದ್ಯಕೀಯ ಸಮ್ಮೇಳನವು ಭಾರತದಲ್ಲಿ ಕೆಲವೇ ಕೆಲವು ಪಟ್ಟಣ ಹಾಗೂ ಹಳ್ಳಿಗಳಲ್ಲಿ ಮಾತ್ರ ಯೋಗ್ಯ ಜನಾರೋಗ್ಯ ವ್ಯವಸ್ಥೆಯಿರುವುದನ್ನು ಗಮನಿಸಿತು. ಸ್ಥಳೀಯ ಸಂಸ್ಥೆಗಳಿಗೆ ಸರಿಯಾದ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯ ಕೊರತೆಯಿಂದಾಗಿ ಅವುಗಳ ಕಾರ್ಯದ ಗುಣಮಟ್ಟಕ್ಕೆ ಧಕ್ಕೆಯುಂಟಾಗಿತ್ತು. ಆರೋಗ್ಯ ಸೇವೆಗಳ ಪರಿಸ್ಥಿತಿ ನಗರ ಪ್ರದೇಶಗಳಲ್ಲೂ ಅತೃಪ್ತಿಕರವಾಗಿತ್ತು. ಗ್ರಾಮಾಂತರ ಭಾಗಗಳಲ್ಲಂತೂ ಈ ಸ್ಥಿತಿ ಇನ್ನೂ ಶಿಥಿಲವಾಗಿತ್ತು. ಕಲುಷಿತ ನೀರಿನ ಬಳಕೆಯು ಕರುಳು ಬೇನೆ, ಆತಿಬೇಧಿ, ಮಲೇರಿಯಾ ಮತ್ತು ಕಾಲರಾದಂತಹ ಅನೇಕ ರೋಗಗಳಿಗೆ ಕಾರಣವಾಗಿತ್ತು. ಗ್ರಾಮಾಂತರ ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಇರುವ ಮೂರು ವಿಶಿಷ್ಟ ಸಮಸ್ಯೆಗಳೆಂದರೆ—1) ಎಲ್ಲೆಂದರಲ್ಲಿ ಹೇಸಿಗೆ ಮಾಡುವುದರಿಂದ ಮಣ್ಣು ಕಲುಷಿತಗೊಳ್ಳುವುದು, 2) ಮನೆಗಳಿಗೆ ಮತ್ತು ಗ್ರಾಮಕ್ಕೆ ಸರಿಯಾದ ಚರಂಡಿ ವ್ಯವಸ್ಥೆಯಿಲ್ಲದಿರುವುದು ಮತ್ತು 3) ಕಲುಷಿತ ನೀರನ್ನು ಬಳಸುವುದು. ಕೆಲವು ಹಳ್ಳಿಗಳಲ್ಲಿ ಜಾತ್ರೆ, ಉರುಸು ಮತ್ತಿತರ ಜನ ಸಮೂಹ ಸೇರುವ ಸಂದರ್ಭಗಳಲ್ಲಿ ನೈರ್ಮಲ್ಯಕ್ಕೆ ಹೆಚ್ಚು ಧಕ್ಕೆಯಾಗುತ್ತದೆ. ಈ ಸಮಸ್ಯೆಯನ್ನು ಪರಿಹರಿಸಲು, ಅಂತಹ ಸಂದರ್ಭಗಳಲ್ಲಿ ವಿಶೇಷ ರೀತಿಯ ಸಾರ್ವಜನಿಕ ಕಕ್ಕಸು ಹಾಗೂ ಮೂತ್ರಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತಾತ್ಕಾಲಿಕವಾಗಿ ನಿರ್ಮಿಸಲಾಗುತ್ತದೆ. ಸಮುದಾಯ ಅಭಿವೃದ್ಧಿ ಯೋಜನೆಗಳು ಜಾರಿಗೆ ಬಂದಮೇಲೆ ಮತ್ತು ಸಮುದಾಯ ಪಂಚಾಯತಗಳು ಪುರಸಭೆ ಹಾಗೂ ನಗರ ಸಭೆಗಳು ಆಸ್ತಿತ್ವಕ್ಕೆ ಬಂದಮೇಲೆ ನೈರ್ಮಲ್ಯಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಗ್ರಾಮಾಂತರ ಪ್ರದೇಶದಲ್ಲಿ ರೋಗ ನಿರೋಧಕ ಹಾಗೂ ನಿವಾರಕ ಸೇವೆಗಳನ್ನು ಒದಗಿಸಲು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲಾಯಿತು. ಗ್ರಾಮ ಹಾಗೂ ಸಮುದಾಯ ಪಂಚಾಯತಿಗಳೂ ಸಹ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಚರಂಡಿ, ಇಂಗು ಗುಂಡಿ ಹಾಗೂ 'ಹ್ಯಾಂಡ್‌ಫ್ಲಶ್' ಕಕ್ಕಸು, ಇತ್ಯಾದಿಗಳನ್ನು ಕಟ್ಟಿಸುವುದರ ಮೂಲಕ ಗ್ರಾಮೀಣ ನೈರ್ಮಲ್ಯ ಕಾರ್ಯಗಳನ್ನು ಕೈಗೊಳ್ಳುತ್ತಿವೆ. ಹಳ್ಳಿಗಳಿಗೆ ಸುರಕ್ಷಿತ ನೀರು ಸರಬರಾಜಿಗಾಗಿ ಗ್ರಾಮೀಣ ನೀರು ಸರಬರಾಜು ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. ನಗರ ಪ್ರದೇಶಗಳಲ್ಲಿ ಸಾರ್ವಜನಿಕ ಕಕ್ಕಸುಗಳು, ಮೂತ್ರಾಲಯಗಳು ಮತ್ತು ಸ್ನಾನ ಗೃಹಗಳನ್ನು ಸ್ಥಳೀಯ ಸಂಸ್ಥೆಗಳು ನೋಡಿಕೊಳ್ಳುತ್ತವೆ. ಹೋಟೇಲುಗಳು ಮತ್ತು ಭೋಜನ ಗೃಹಗಳ ನೈರ್ಮಲ್ಯವನ್ನು ಆರೋಗ್ಯಾಧಿಕಾರಿಗಳು ಪರಿಶೀಲಿಸುತ್ತಾರೆ. ಅನೇಕ ಕಡೆ ಕುಡಿಯುವ ಉದ್ದೇಶಕ್ಕಾಗಿ ಬಳಸುವ ನೀರನ್ನು ಕ್ರಿಮಿನಾಶಕಗಳಿಂದ ಸಂಸ್ಕರಿಸುತ್ತಾರೆ. ಹಳ್ಳಿ ಮತ್ತು ಪಟ್ಟಣಗಳ ಕೊಳಚೆ ಪ್ರದೇಶಗಳಲ್ಲಿ ಡಿ.ಡಿ.ಟಿ. ಮತ್ತಿತರ ಕ್ರಿಮಿನಾಶಕಗಳನ್ನು ಸಿಂಪಡಿಸಲಾಗುತ್ತದೆ.

1950ರಲ್ಲಿ ಕೈಗೊಂಡ ಒಂದು ಯೋಜನೆಯಲ್ಲಿ ಆಲೋಪತಿ ಮತ್ತು ಭಾರತೀಯ ವೈದ್ಯ ಪದ್ಧತಿಯ ಅರ್ಹ ವೈದ್ಯರುಗಳು ಹಳ್ಳಿಗಳಿಗೆ ಹೋಗಿ ನೆಲೆಸಿ, ಖಾಸಗಿ ಚಿಕಿತ್ಸಾಲಯಗಳನ್ನು ತೆರೆಯಲು ಉತ್ತೇಜನ ನೀಡಲಾಗುತ್ತಿದೆ. ಅಂತಹ ಕಡೆ ಔಷಧಿಗಳು ಮತ್ತಿತರ ಸಾದಿಲ್ವಾರು ವೆಚ್ಚಗಳನ್ನು ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳೇ ಭರಿಸುತ್ತವೆ. ಇಂತಹ ಖಾಸಗಿ ವೈದ್ಯರು ಅಗತ್ಯವಿರುವವರಿಗೆ ಉಚಿತ ಚಿಕಿತ್ಸೆ ನೀಡಬೇಕೆಂಬ ಷರತ್ತಿನ ಮೇಲೆ ಅವರಿಗೆ ಸಹಾಯ ಧನ ನೀಡಲಾಗುತ್ತಿತ್ತು. ಜೊತೆಗೆ ಈ ಔಷಧಾಲಯಗಳನ್ನು ಪೂರ್ಣವಾಗಿ ಸ್ಥಳೀಯ ಸಂಸ್ಥೆಗಳ ನಿಧಿಯಿಂದಲೇ ನಿರ್ವಹಿಸಲಾಗುತ್ತಿತ್ತು. 1971-72 ಮತ್ತು 1972-73ರಲ್ಲಿ ಸಂಭವಿಸಿದ ಬರಗಾಲ ಸಂದರ್ಭದಲ್ಲಿ ಕೆಲವು ಕಡೆ

ಆನುಶಂಕೆ, ಕರುಳುಬೇನೆ 'ಎ' ಮತ್ತು 'ಬಿ' ಅನ್ನಾಂಗದ ಕೊರತೆಯಂತಹ ರೋಗಗಳು ಕಂಡುಬಂದುವು. ಸಕಾಲಿಕ ಚಿಕಿತ್ಸೆಯಿಂದಾಗಿ ಈ ರೋಗ ಹರಡುವುದನ್ನು ತಡೆಗಟ್ಟಲಾಯಿತು. ಹೀಗೆ ರೋಗಗಳನ್ನು ತಡೆಗಟ್ಟಲು ಬರಗಾಲಕ್ಕೊಳಗಾದ ತಾಲೂಕು ಸ್ಥಳಗಳಲ್ಲಿ ಸಂಚಾರಿ ವೈದ್ಯಕೀಯ ಘಟಕಗಳನ್ನು ಸ್ಥಾಪಿಸಲಾಯಿತು.

**ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ :** 1964ರಲ್ಲಿ ರಾಜ್ಯ ವಿಧಾನ ಮಂಡಳದ ಶಾಸನದ ಮೂಲಕ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಮಂಡಳಿಯನ್ನು ರಚಿಸಲಾಯಿತು. ಈ ಶಾಸನದ ಪ್ರಕಾರ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜು ಮಾಡುವುದು, ಪ್ರಸ್ತುತ ನೀರು ಸರಬರಾಜನ್ನು ಸುಧಾರಿಸುವುದು, ಚರಂಡಿ ವ್ಯವಸ್ಥೆ ಮತ್ತು ನಗರ ಸಾರ ಹೊರ ಸಾಗಣೆಗೆ ಸಾಕಷ್ಟು ವ್ಯವಸ್ಥೆ ಮಾಡುವುದು—ಈ ಜವಾಬ್ದಾರಿಗಳನ್ನು ಮಂಡಳಿಗೆ ನೀಡಲಾಗಿದೆ. ಮಂಡಳಿಗೆ ತಾಂತ್ರಿಕ ವಿಷಯಗಳಲ್ಲಿ ನೆರವಾಗಲು, ತಾಂತ್ರಿಕ ಸಮಿತಿಯೊಂದಿದೆ. ಈ ಸಮಾಲೋಚನಾ ಸಮಿತಿಯಲ್ಲಿ ಮಂಡಳಿಯ ಎಲ್ಲ ಸದಸ್ಯರು, ಬೆಂಗಳೂರು ನಗರ ಕಾರ್ಪೊರೇಷನ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಮತ್ತು ಬಳಕೆದಾರರ ಪ್ರತಿನಿಧಿಗಳು ಸದಸ್ಯರಾಗಿರುತ್ತಾರೆ. ಈ ಸಮಿತಿಯು ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆಗೆ ಸಂಬಂಧಿಸಿದಂತೆ ಪ್ರಮುಖ ಸಮಸ್ಯೆಗಳು, ಕಾರ್ಯನೀತಿಗಳು ಮತ್ತು ಯೋಜನಾ ನಿರ್ವಹಣೆಗಳ ಬಗ್ಗೆ ಮಂಡಳಿಗೆ ಸಲಹೆ ನೀಡುತ್ತದೆ.

ಬೆಂಗಳೂರು ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆಗೆ ಸಂಬಂಧಿಸಿದ ಶಾಸನದ ಪ್ರಕಾರ ತನ್ನ ಕರ್ತವ್ಯಗಳನ್ನು ನಿರ್ವಹಿಸಲು ಮಂಡಳಿಯ ಆಶ್ರಯದಲ್ಲಿ ಕೆಳಗೆ ಕಂಡ ಕಾರ್ಯಕ್ರಮಗಳು ನಡೆಯುತ್ತವೆ : 1) ನೀರು ಸಂಗ್ರಹ ಮೂಲಗಳ ನಿರ್ವಹಣೆ, 2) ನಗರದಲ್ಲಿ ನೀರು ಹಂಚಿಕೆ, 3) ನೀರು ತೆರಿಗೆ ಸಂಗ್ರಹ, 4) ನಗರ ಸಾರದ ಸಂಗ್ರಹ, ಸಂಸ್ಕರಣ ಮತ್ತು ವಿಲೇವಾರಿ, 5) ಹೊಸದಾಗಿ ರೂಪುಗೊಂಡ ಬಡಾವಣೆಗಳಿಗೆ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಸೌಲಭ್ಯಗಳನ್ನು ಒದಗಿಸುವುದು ಮತ್ತು 6) ನೀರು ಸರಬರಾಜು ಹಾಗೂ ನಗರ ಸಾರ ವಿಲೇವಾರಿ ವ್ಯವಸ್ಥೆಯನ್ನು ಹೆಚ್ಚಿಸುವುದು.

1974ರ ಜನವರಿ ವೇಳೆಗೆ ಮಂಡಳಿಯು 35.72 ಲಕ್ಷ ರೂ. ಗಳ ಕಾವೇರಿ ನೀರು ಸರಬರಾಜಿನ ಮೊದಲ ಹಂತವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿತು. ಇದರಿಂದ ಬೆಂಗಳೂರು ನಗರಕ್ಕೆ ಕಾವೇರಿ ಮೂಲದಿಂದ ಪ್ರತಿದಿನ 64 ದಶಲಕ್ಷ ಗ್ಯಾಲನ್‌ಗಳಷ್ಟು ನೀರು ದೊರೆಯಲು ಅವಕಾಶವಾಯಿತು. ಮಂಡಳಿಯು ಎರಡು ನಗರ ಸಾರ ಸಂಸ್ಕರಣ ಸ್ಥಾವರಗಳನ್ನು ನಿರ್ಮಿಸಿದೆ. 1981-82ರ ಅವಧಿಯಲ್ಲಿ ಚರಂಡಿ ರೊಚ್ಚಿನ ಬಿಲ್ಲೆಗಳ ಮಾರಾಟದಿಂದ 1,27,478 ರೂ. ಆದಾಯ ಬಂದರೆ 1980-81ರಲ್ಲಿ 1,45,257 ರೂ. ಗಳಷ್ಟು ಆದಾಯ ಬಂದಿತು. ಬೆಂಗಳೂರು ನಗರಕ್ಕೆ ಇನ್ನೂ 30 ಎಂ.ಜಿ.ಡಿ.ಯಷ್ಟು ನೀರು ಸರಬರಾಜನ್ನು ಹೆಚ್ಚಿಸಲು 1979ರಲ್ಲಿ ಕಾವೇರಿ ನೀರು ಸರಬರಾಜು ಯೋಜನೆಯ ಎರಡನೇಯ ಹಂತವನ್ನು ಕೈಗೆತ್ತಿಕೊಳ್ಳಲಾಯಿತು. ಹೆಚ್ಚುತ್ತಿರುವ ಬೆಂಗಳೂರು ನಗರದ ನೀರಿನ ಬೇಡಿಕೆಯನ್ನು ಪೂರೈಸಲು ಮಂಡಳಿಯು 1982-83ರಲ್ಲಿ 242 ಕೋಟಿ ರೂ. ವೆಚ್ಚದ ಕಾವೇರಿ ನೀರು ಸರಬರಾಜು ಯೋಜನೆಯ ಮೂರನೇಯ ಹಂತವನ್ನು ಕೈಗೆತ್ತಿಕೊಳ್ಳಲು ಉದ್ದೇಶಿಸಿದೆ. ಈ ಯೋಜನೆಯು 1986-87ರ ವೇಳೆಗೆ ಪೂರ್ಣಗೊಳ್ಳುವ ನಿರೀಕ್ಷೆಯಿದ್ದು ಇದರಿಂದ ನಗರಕ್ಕೆ ಪ್ರತಿದಿನ 60 ದಶಲಕ್ಷ ಗ್ಯಾಲನ್ ಹೆಚ್ಚಿನ ನೀರು ದೊರಕುವಂತಾಗುತ್ತದೆ.

**ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ಮಂಡಳಿ :** 1973ರ ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ಮಂಡಳಿ ಶಾಸನದ ಪ್ರಕಾರ ಈ ಮಂಡಳಿಯನ್ನು 1975ರಲ್ಲಿ ರಚಿಸಲಾಯಿತು. ನೀರು ಸರಬರಾಜು ಮತ್ತು ಒಳ ಚರಂಡಿ ವ್ಯವಸ್ಥೆಗಾಗಿ ರಾಜ್ಯದ ಸ್ಥಳೀಯ ಆಡಳಿತ ಸಂಸ್ಥೆಗಳಿಗೆ ಸಾಲ ಮತ್ತು ಮುಂಗಡಗಳ ಮೂಲಕ ಆರ್ಥಿಕ ನೆರವನ್ನು ಒದಗಿಸುವುದು ಈ ಮಂಡಳಿಯ ಉದ್ದೇಶ. ಬೆಂಗಳೂರು ನಗರವನ್ನು ಬಿಟ್ಟು ಇಡೀ ರಾಜ್ಯದ ಎಲ್ಲ ನಗರ ಪ್ರದೇಶಗಳೂ ಮಂಡಳಿಯ ವ್ಯಾಪ್ತಿಗೆ ಸೇರುತ್ತವೆ. ಅನೇಕ ನಗರ ನೀರು ಸರಬರಾಜು ಮತ್ತು ಚರಂಡಿ ಯೋಜನೆಗಳು ಲೋಕೋಪಯೋಗಿ ಇಲಾಖೆಯಿಂದ ವರ್ಗಾಯಿಸಲ್ಪಟ್ಟಿವೆ. 1981ರ ನವೆಂಬರ್‌ನಲ್ಲಿ ಕರ್ನಾಟಕ ನೀರು ಸರಬರಾಜು ಮತ್ತು ಚರಂಡಿ ಮಂಡಳಿ ಶಾಸನಕ್ಕೆ ತಿದ್ದುಪಡಿ ಮಾಡಲಾಯಿತು. ಇದರ ಪ್ರಕಾರ ನೀರು ಸರಬರಾಜು ಮತ್ತು ಚರಂಡಿ ಯೋಜನೆಗಳ ಕಾರ್ಯ ಹಾಗೂ ನಿರ್ವಹಣೆಗಳನ್ನೆಲ್ಲ ವಹಿಸಿಕೊಂಡು ನೀರಿನ ತೆರಿಗೆ ವಿಧಿಸುವ ಮತ್ತು ಸಂಗ್ರಹಿಸುವ ಅಧಿಕಾರ, ಮಂಡಳಿಗೆ ದೊರೆಯಿತು.

ಮಂಡಳಿಯು ಕೆಳಗೆ ಕಂಡ ವರ್ಗಗಳಲ್ಲಿ ನೀರು ಸರಬರಾಜು ಮತ್ತು ಚರಂಡಿ ಕಾಮಗಾರಿಗಳನ್ನು ನಿರ್ವಹಿಸುತ್ತಿದೆ : ಯೋಜನಾ ಕಾಮಗಾರಿಗಳು (ನೀರು ಸರಬರಾಜು ಯೋಜನೆಗಳು) : 1971ರ ಜನಗಣತಿ ಪ್ರಕಾರ 20,000 ಮತ್ತು ಅದಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಪಟ್ಟಣಗಳಿಗೆ ಕೊಳವೆ ನೀರು ಸರಬರಾಜು ಯೋಜನೆಗಳು. ಚರಂಡಿ ಯೋಜನೆ (ಒಳ ಚರಂಡಿ ಯೋಜನೆಗಳು) : ಜನಸಂಖ್ಯೆ 20,000 ಮತ್ತು ಅದಕ್ಕಿಂತ ಹೆಚ್ಚಿರುವ ಪಟ್ಟಣಗಳು ಮತ್ತು ನಗರಗಳಲ್ಲಿ ಈ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಈ ಕಾಮಗಾರಿ ವೆಚ್ಚ

ವನ್ನು ಪೂರ್ಣವಾಗಿ ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳೇ ವಹಿಸಿಕೊಳ್ಳುತ್ತವೆ.

ಸರ್ಕಾರದ ಪೂರ್ಣ ನೆರವಿನ ಸರಬರಾಜು ಯೋಜನೆಗಳು : ಮಂಡಳಿ ಯೋಜನೆಗಳೆಂದೂ ಕರೆಯಲಾಗುವ ನೀರು ಸರಬರಾಜು ಯೋಜನೆಗಳನ್ನು ಕಾರ್ಯಗತಗೊಳಿಸಲಾಗುತ್ತಿದೆ. ಇವಕ್ಕೆ ಸರ್ಕಾರದ ಪೂರ್ಣ ಆರ್ಥಿಕ ನೆರವಿರುತ್ತದೆ. ಇಂತಹ ಯೋಜನೆಗಳ ಮಂಜೂರಾತಿಯು ಸ್ಥಳೀಯ ಅಗತ್ಯ, ಕೈಗಾರಿಕಾ ಪ್ರಾಮುಖ್ಯತೆ, ಅಭಾವ ಪರಿಸ್ಥಿತಿ ಮತ್ತು ವಿಶೇಷ ಸಮಸ್ಯೆಗಳನ್ನು ಅವಲಂಬಿಸಿದೆ. ಕೊಳಚೆ ಬಸಿ ಬಳಕೆ ಯೋಜನೆ : ನೀರು ಕಲುಷಿತಗೊಳ್ಳುವುದನ್ನು ತಪ್ಪಿಸುವುದು, ನಗರ ಪಟ್ಟಣಗಳನ್ನು ಚೊಕ್ಕಟವಾಗಿಡುವುದು ಮತ್ತು ಕೊಳಚೆ ಬಸಿಯ ಗೊಬ್ಬರದ ಅಂಶಗಳನ್ನು ಬಳಸಿಕೊಳ್ಳುವುದರ ಜೊತೆಗೆ ನೀರಾವರಿ ಸಾಮರ್ಥ್ಯವನ್ನು ಹೆಚ್ಚಿಸುವುದು ಈ ಯೋಜನೆಯ ಮುಖ್ಯ ಉದ್ದೇಶ. ಒಣ ಕಕ್ಕಸುಗಳನ್ನು ನಿರ್ಮಲ ಕಕ್ಕಸುಗಳನ್ನಾಗಿ ಪರಿವರ್ತಿಸುವುದು : ಸಂಕೀರ್ಣವಾದ ಒಳಚರಂಡಿ ಯೋಜನೆಯು ಮಲವನ್ನು ಮನುಷ್ಯರು ಹೊರುವುದನ್ನು ತಪ್ಪಿಸುವುದು; ಮತ್ತು ಬದಲಾಗಿ ಬಳಸಿದ ನೀರು ಹಾಗೂ ಮಾನವನ ಮಲ ಮೂತ್ರಾದಿಗಳನ್ನು ಸುರಕ್ಷಿತವಾಗಿ ಹೊರಸಾಗಿಸುವುದು ಇದರ ಮುಖ್ಯ ಉದ್ದೇಶ. ಯೋಜನೇತರ ಕಾಮಗಾರಿಗಳು–ನೀರು ಸರಬರಾಜು ಯೋಜನೆಗಳ ನಿರ್ವಹಣೆ : ಮಂಡಳಿಯು ರಾಜ್ಯದ ಹನ್ನೊಂದು ನಗರ ಪಟ್ಟಣ ನೀರು ಸರಬರಾಜು ವ್ಯವಸ್ಥೆಗಳನ್ನು ನೋಡಿಕೊಳ್ಳುತ್ತಿದೆ. ಸಂಬಂಧಪಟ್ಟ ನೀರಿನ ತೆರಿಗೆ ವಸೂಲಿ ಕಾರ್ಯ ಆಯಾ ಸ್ಥಳೀಯ ಸಂಸ್ಥೆಗಳಿಂದಲೇ ನಡೆಯುತ್ತದೆ. ಉಳಿದ ಎಲ್ಲಾ ಕಾಮಗಾರಿಗಳನ್ನು ಸಂಬಂದಪಟ್ಟ ಸ್ಥಳೀಯ ಸಂಸ್ಥೆಗಳೇ ನೋಡಿಕೊಳ್ಳುತ್ತವೆ. ಠೇವಣಿ ನೀಡಿಕೆ ಕಾಮಗಾರಿಗಳು : ಸ್ಥಳೀಯ ಸಂಸ್ಥೆಗಳ ಪರವಾಗಿ ಮಂಡಳಿಯು ಅನೇಕ ನೀರು ಸರಬರಾಜು ಮತ್ತು ಒಳಚರಂಡಿ ಕಾಮಗಾರಿಗಳನ್ನು ಕೈಗೊಂಡಿದೆ. ರಾಜ್ಯದಲ್ಲಿ 1981ರ ಏಪ್ರಿಲ್‌ನಲ್ಲಿ ಅಂತರರಾಷ್ಟ್ರೀಯ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯ ದಶಕದ ಕಾರ್ಯಕ್ರಮವನ್ನು ಆರಂಭಿಸಲಾಯಿತು. ಈ ದಶಕದ ಕಾರ್ಯಕ್ರಮ ಪರಿಶೀಲನೆ ಮತ್ತು ಅನುಸರಣ ಕ್ರಮಕ್ಕಾಗಿ ಈ ಕ್ಷೇತ್ರದಲ್ಲಿ ಕಾರ್ಯನಿರತವಾಗಿರುವ 1) ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ಮಂಡಳಿ, 2) ಬೆಂಗಳೂರು ನೀರು ಸರಬರಾಜು ಮತ್ತು ಚರಂಡಿ ಮಂಡಳಿ ಮತ್ತು 3) ಸಾರ್ವಜನಿಕ ಇಂಜಿನಿಯರಿಂಗ್ ಇಲಾಖೆಗಳು ಕಾರ್ಯನಿರತ ಸಮಿತಿಯನ್ನು ರಚಿಸಿಕೊಂಡಿವೆ. ಈ ಮಧ್ಯೆ ನಗರ ಹಾಗೂ ಗ್ರಾಮಾಂತರ ಪ್ರದೇಶಗಳೆರಡಕ್ಕೂ ಅಗತ್ಯವಾದ ನೀರು ಸರಬರಾಜು ಮತ್ತು ನೈರ್ಮಲ್ಯ ಕಾರ್ಯಕ್ರಮದ ಮಹಾ ಯೋಜನೆಯು ಅಂತಿಮಗೊಂಡಿದ್ದು ಭಾರತ ಸರ್ಕಾರದ ಮಂಜೂರಾತಿಗಾಗಿ ಕಾದಿದೆ.

ಕೊಳಚೆ ನಿವಾಸಿಗಳಿಗೆ ತೀವ್ರ ಕಾರ್ಯಕ್ರಮ : 1982ರ ಬೇಸಿಗೆ ಅವಧಿಯಲ್ಲಿ, ರಾಜ್ಯದ ನಾನಾ ಕೊಳಚೆ ಪ್ರದೇಶಗಳಿಗೆ ಆದ್ಯತೆಯ ಆಧಾರದ ಮೇಲೆ ನೀರು ಒದಗಿಸಲು ಸರ್ಕಾರವು ತ್ವರಿತ ಕ್ರಮ ಕೈಗೊಂಡಿತು. ಈ ಉದ್ದೇಶಕ್ಕಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ಮಂಡಳಿಗೆ 35.00 ಲಕ್ಷ ರೂ. ಗಳನ್ನು ಒದಗಿಸಲಾಯಿತು. ಈ ಕಾರ್ಯಕ್ರಮದಲ್ಲಿ 180 ಕೊಳವೆ ಬಾವಿಗಳನ್ನು ತೋಡಲು ಮತ್ತು ರಾಜ್ಯದ ನಾನಾ ಕೊಳಚೆ ಪ್ರದೇಶಗಳಿಗೆ ಪ್ರಚಲಿತ ನೀರಿನ ಹಂಚಿಕೆ ವ್ಯವಸ್ಥೆಯನ್ನು ವಿಸ್ತರಿಸುವ ಮೂಲಕ 131 ನಲ್ಲಿಗಳನ್ನು ಒದಗಿಸಲು ಉದ್ದೇಶಿಸಿದೆ.

ಸಾರ್ವಜನಿಕ ಇಂಜಿನಿಯರಿಂಗ್ ಇಲಾಖೆ : ರಾಜ್ಯದ ನಗರ ಮತ್ತು ಗ್ರಾಮಾಂತರ ಪ್ರದೇಶಗಳೆರಡರಲ್ಲೂ ಕುಡಿಯುವ ನೀರಿನ ಸರಬರಾಜು ಮತ್ತು ನೈರ್ಮಲ್ಯ ಕಾಮಗಾರಿ ಯೋಜನೆಗಳನ್ನು ಕಾರ್ಯಗತಗೊಳಿಸಲು 1967ರಲ್ಲಿ ಸಾರ್ವಜನಿಕ ಇಂಜಿನಿಯರಿಂಗ್ ಇಲಾಖೆಯನ್ನು ರಚಿಸಲಾಯಿತು. ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯ ಕಾಮಗಾರಿ ಯೋಜನೆಗಳೇ ಅಲ್ಲದೆ ಸಣ್ಣ ನೀರಾವರಿ ಕಾಮಗಾರಿಗಳನ್ನು ನೋಡಿಕೊಳ್ಳಲು ಈ ಇಲಾಖೆಯನ್ನು ಸಣ್ಣ ನೀರಾವರಿ ಮತ್ತು ಸಾರ್ವಜನಿಕ ಆರೋಗ್ಯ ಇಂಜಿನಿಯರಿಂಗ್ ಇಲಾಖೆಯೆಂದು ಕರೆಯಲಾಯಿತು. 1981ರ ಏಪ್ರಿಲ್‌ನಿಂದ ಈ ಇಲಾಖೆಯನ್ನು ಎರಡು ವಿಭಾಗಗಳನ್ನಾಗಿ ಪ್ರತ್ಯೇಕಿಸಲಾಯಿತು. ಸಣ್ಣ ನೀರಾವರಿ ಕಾಮಗಾರಿಗಳನ್ನೇ ಪ್ರತ್ಯೇಕವಾಗಿ ನೋಡಿಕೊಳ್ಳಲು ಸಣ್ಣ ನೀರಾವರಿ ವಿಭಾಗವೂ, ಗ್ರಾಮಾಂತರ ಪ್ರದೇಶದಲ್ಲಿ ಸಾರ್ವಜನಿಕ ಇಂಜಿನಿಯರಿಂಗ್ ಕಾಮಗಾರಿಗಳನ್ನೇ ಪ್ರತ್ಯೇಕವಾಗಿ ನೋಡಿಕೊಳ್ಳಲು ಸಾರ್ವಜನಿಕ ಇಂಜಿನಿಯರಿಂಗ್ ವಿಭಾಗವೂ ಅಸ್ತಿತ್ವಕ್ಕೆ ಬಂದವು. ಗ್ರಾಮಾಂತರ ಜನರಿಗೆ ಸುರಕ್ಷಿತ ಕುಡಿಯುವ ನೀರನ್ನು ಒದಗಿಸುವುದು, ನೈರ್ಮಲ್ಯ ಕಾರ್ಯಗಳನ್ನು ನೋಡಿಕೊಳ್ಳುವುದು ಮತ್ತು ದುರ್ಬಲ ಕಾಮಗಾರಿಗಳ ಸಕಾಲಿಕ ದುರಸ್ತಿಗೆ ವ್ಯವಸ್ಥೆ ಮಾಡುವುದು–ಇವು ಈ ವಿಭಾಗದ ಮುಖ್ಯ ಉದ್ದೇಶಗಳಾಗಿವೆ. ಇಲಾಖೆಯ ವ್ಯಾಪ್ತಿಗೆ ಬರುವ ಮುಖ್ಯ ಯೋಜನಾ ಕಾರ್ಯಕ್ರಮಗಳೆಂದರೆ : 1) 282 ಪಿ. ಎಚ್. ಎಸ್. ನೀರು ಸರಬರಾಜು ಮತ್ತು ನೈರ್ಮಲ್ಯ ಮತ್ತು 2) 314 ಸಿ. ಡಿ. ಕೈಪಂಪುಗಳೊಂದಿಗೆ ಕೊಳವೆ ಬಾವಿಗಳು. ಸಾಮಾನ್ಯವಾಗಿ ಒಂದು ಸಾವಿರಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಹಳ್ಳಿಗಳಿಗೆ ಕೊಳವೆ ನೀರು ಸರಬರಾಜು ಯೋಜನೆಗಳನ್ನು ಒದಗಿಸುವುದು ನೀರು ಸರಬರಾಜು ಮತ್ತು ನೈರ್ಮಲ್ಯ ಕಾರ್ಯಕ್ರಮದಲ್ಲಿ ಸೇರಿವೆ.

ಗ್ರಾಮಾಂತರ ನೀರು ಸರಬರಾಜು ಕಾರ್ಯಕ್ರಮ : ಮಾನವ ಜೀವನದ ಮೂಲ ಅಗತ್ಯವಾದ ಸುರಕ್ಷಿತ ಮತ್ತು

ಸಂರಕ್ಷಿತ ಕುಡಿಯುವ ನೀರನ್ನು ಒದಗಿಸುವ ಕಾರ್ಯಕ್ರಮವನ್ನು 1960ರಷ್ಟು ಮೊದಲೇ ಆರಂಭಿಸಲಾಯಿತು. ಆದರೆ 1967 ರಿಂದ, ಪ್ರತೀ ವರ್ಷ ಹಂತ ಹಂತವಾಗಿ ಹಳ್ಳಿಗಳು, ಪಟ್ಟಣಗಳು ಮತ್ತು ನಗರಗಳಿಗೆ ರಾಷ್ಟ್ರೀಯ ಗ್ರಾಮಾಂತರ ನೀರು ಸರಬರಾಜು ಯೋಜನೆಗಳನ್ನು ಜಾರಿಗೊಳಿಸಲು ಪ್ರತ್ಯೇಕ ಇಲಾಖೆಯನ್ನು ರಚಿಸುವ ಮೂಲಕ, ಈ ಕಾರ್ಯಕ್ರಮವನ್ನು ತೀವ್ರಗೊಳಿಸ ಲಾಯಿತು. 1981ರ ಏಪ್ರಿಲ್‌ನಿಂದ ರಾಷ್ಟ್ರದಲ್ಲಿ ಆರಂಭಿಸ ಲಾಗಿರುವ "ಅಂತರರಾಷ್ಟ್ರೀಯ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯ ದಶಕ (1981-90)"ದ ಅವಧಿಯಲ್ಲಿ ರಾಜ್ಯದ ಎಲ್ಲ ಹಳ್ಳಿಗಳಿಗೂ ಸಾಕಷ್ಟು ಸಂರಕ್ಷಿತ ಕುಡಿಯುವ ನೀರನ್ನು ಸರಬರಾಜು ಮಾಡಲು ಬೃಹತ್ ಕಾರ್ಯಕ್ರಮ ವೊಂದನ್ನು ಗುರಿಯಲ್ಲಿಟ್ಟುಕೊಳ್ಳಲಾಗಿದೆ. ಈ ಕಾರ್ಯಕ್ರಮದಲ್ಲಿ ಒಟ್ಟು 209.45 ಲಕ್ಷ ಜನಸಂಖ್ಯೆಯನ್ನೊಳಗೊಂಡ 25,393 ಹಳ್ಳಿಗಳಿಗೆ ಕುಡಿಯುವ ನೀರು ಸರಬರಾಜು ಮಾಡಲು ಉದ್ದೇಶಿಸಿದೆ.

**ಜೀವಿ ಪರಿಸ್ಥಿತಿ ಮತ್ತು ಪರಿಸರ ಇಲಾಖೆ:** ಹೊಸದಾಗಿ ರೂಪುಗೊಂಡ ಜೀವಿ ಪರಿಸ್ಥಿತಿ ಮತ್ತು ಪರಿಸರ ಇಲಾಖೆಯು ('ಇಕಾಲಜಿ ಅ್ಯಂಡ್ ಎನ್‌ವಯರ್ನ್‌ಮೆಂಟ್') 1981ರ ಏಪ್ರಿಲ್‌ನಿಂದ ಕಾರ್ಯಾರಂಭ ಮಾಡಿತು. ವಾಯು ಮತ್ತು ಜಲ ಮಾಲಿನ್ಯಗಳ ನಿರೋಧ ಹಾಗೂ ನಿಯಂತ್ರಣದ ಸಮಸ್ಯೆಗಳು ಮತ್ತು ದೀರ್ಘಾವಧಿಯ ಆಧಾರದ ಮೇಲೆ ಶಾಶ್ವತ ಅಭಿವೃದ್ಧಿಗೆ ಅನುಕೂಲವಾಗುವಂತೆ, ಈಗ ಕಲುಷಿತಗೊಂಡಿರುವ ಪರಿಸರವನ್ನು ಪುನರ್‌ಶುದ್ಧಿಗೊಳಿಸುವ ಕಾರ್ಯದ ಸಮನ್ವಿತ ಮಾರ್ಗಕ್ರಮವೊಂದನ್ನು ಹೊಂದುವುದು ಇಲಾಖೆಯ ಮುಖ್ಯ ಉದ್ದೇಶವಾಗಿದೆ. ಜೀವಿ ಪರಿಸ್ಥಿತಿ ಮತ್ತು ಪರಿಸರ ಸಮ ತೋಲನವನ್ನು ಸಂರಕ್ಷಿಸಲು ಇಲಾಖೆಯು ಕ್ರಮಗಳನ್ನು ಕೈಗೊಳ್ಳುತ್ತಿದೆ ಮತ್ತು ಸರ್ಕಾರೀ ಹಾಗೂ ಸಾರ್ವಜನಿಕ ಮತ್ತು ಖಾಸಗಿ ಸಂಸ್ಥೆಗಳು ಮತ್ತು ವ್ಯಕ್ತಿಗಳು ನಡೆಸುವ ಯೋಜನೆಗಳು ಮತ್ತು ಕಾರ್ಯಕ್ರಮಗಳು ಪರಿಸರದ ಮೇಲೆ ದುಷ್ಪರಿಣಾಮ ವುಂಟು ಮಾಡದಂತೆ ಇಲಾಖೆಯು ಕಾವಲು ನೋಡಿಕೊಳ್ಳುತ್ತದೆ. (ಅಧ್ಯಾಯ IX ನೋಡಿ).

1974ರಲ್ಲಿ ರೂಪುಗೊಂಡ ಕರ್ನಾಟಕ ಜಲಮಾಲಿನ್ಯ ನಿರೋಧ ಹಾಗೂ ನಿಯಂತ್ರಣ ಮಂಡಳಿಯು ಸಂಬಂಧಪಟ್ಟ ಶಾಸನವನ್ನು ಜಾರಿಗೆ ತರುವ ಸಂಸ್ಥೆಯಾಗಿದೆ. ಸರ್ಕಾರಿ ಹಾಗೂ ಖಾಸಗಿ ಕೈಗಾರಿಕೆಗಳು, ಕಾರ್ಪೊರೇಷನ್‌ಗಳು, ಪುರಸಭೆಗಳು, ಇತ್ಯಾದಿ ಸಂಸ್ಥೆಗಳು ಹೊರಬಿಡುವ ಕೊಚ್ಚೆ ನೀರಿಗೆ ಮಾನದಂಡ ಗಳನ್ನು ಗೊತ್ತು ಮಾಡುತ್ತದೆ. ಗೊತ್ತುಮಾಡಿದ ಮಾನದಂಡಕ್ಕೆ ತಕ್ಕಂತೆ ಈ ಕೊಚ್ಚೆ ನೀರನ್ನು ಸರಿಯಾಗಿ ಸಂಸ್ಕರಿಸದಿದ್ದರೆ ಅಂತಹ ಮಲಿನಕಾರರ ವಿರುದ್ಧ ನಿಯಮಗಳಿಗನುಗುಣವಾಗಿ ಸೂಕ್ತ ಕ್ರಮವನ್ನು ಕೈಗೊಳ್ಳುತ್ತದೆ. ಈ ಮಂಡಳಿಗೆ ಸರ್ಕಾರವು ಹಣಕಾಸನ್ನು ಒದಗಿಸುತ್ತದೆ. ಕೈಗಾರಿಕೆಗಳು ಬಳಸಿದ ನೀರಿನ ಮೇಲೆ ಸಂಗ್ರಹಿಸುವ ತೆರಿಗೆಯನ್ನು ಮಂಡಳಿಯು ಭಾರತ ಸರ್ಕಾರಕ್ಕೆ ಜಮಾ ಮಾಡುತ್ತದೆ. ಸಂಸ್ಥೆಯು ಆರಂಭ ವಾದಂದಿನಿಂದ ಅನೇಕ ಸಂಶೋಧನೆ ಮತ್ತು ಅಭಿವೃದ್ಧಿ ಕಾರ್ಯ ಕ್ರಮಗಳನ್ನು ಕೈಗೊಂಡಿದೆಯಲ್ಲದೆ, ವಿಚಾರಗೋಷ್ಠಿಗಳು, ಉಪನ್ಯಾಸಗಳು, ವಸ್ತುಪ್ರದರ್ಶನಗಳು, ಚರ್ಚಾಗೋಷ್ಠಿಗಳು, ಇತ್ಯಾದಿಗಳಿಗೆ ಆರ್ಥಿಕ ನೆರವನ್ನು ಒದಗಿಸಿದೆ. ಪರಿಸರ ಸಂರಕ್ಷಣೆ ಮತ್ತು ಅರಣ್ಯನಾಶ, ಭೂಸವಕಳಿ, ಜಲ ಹಾಗೂ ವಾಯು ಮಾಲಿನ್ಯಗಳ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಸಾಮಾಜಿಕ ಪ್ರಜ್ಞೆ ಬೆಳೆಸುವ ದೃಷ್ಟಿಯಿಂದ ಈ ಚಟುವಟಿಕೆಗಳು ಮಹತ್ವವನ್ನು ಪಡೆದಿವೆ. ಈ ಮಂಡಳಿ ಯೋಜನಾ ನಿಧಿಯಲ್ಲಿ ಮಾತ್ರ ಹಣ ಮಂಜೂರಾಗುವುದರಿಂದ ಇದರ ಕಾರ್ಯಕ್ರಮ ಗಳೆಲ್ಲವೂ ಯೋಜನಾ ಕಾರ್ಯಕ್ರಮಗಳಾಗಿವೆ. ಆ ಕಾರ್ಯ ಕ್ರಮಗಳೆಂದರೆ: 1) ಭಾರತೀಯ ವಿಜ್ಞಾನ ಸಂಸ್ಥೆಯ ವಿಜ್ಞಾನಿ ಗಳ ಒಂದು ತಂಡವು ನಿರ್ವಹಿಸುತ್ತಿರುವ ಉತ್ತರ ಕನ್ನಡ ಜಿಲ್ಲೆಯ ಪರಿಸರ ಅಭಿವೃದ್ಧಿ ಯೋಜನೆ. 2) ಉತ್ತರ ಕನ್ನಡ ಜಿಲ್ಲೆಯಲ್ಲಿ ಗೌಳಿಗರ ಪುನರ್ವಸತಿ ಸಂಯೋಜಿತ ಅಭಿವೃದ್ಧಿ ಯೋಜನೆ ಮತ್ತು 3) ಪರಿಸರ ಸಮತೋಲನ ರಕ್ಷಣೆಗೆ ಯುವಶಕ್ತಿಯನ್ನು ಬಳಸಿ ಕೊಳ್ಳಲು ರಾಜ್ಯದಲ್ಲಿ ನಡೆಸುವ ಪರಿಸರ ಅಭಿವೃದ್ಧಿಯ ಯುವ ಜನ ಶಿಬಿರಗಳು. ರಾಷ್ಟ್ರೀಯ ಸೇವಾ ಯೋಜನೆಯ ಸ್ವಯಂ ಸೇವಕರು ಸಂಬಂಧಪಟ್ಟ ಸಮನ್ವಯಾಧಿಕಾರಿಗಳ ಸಹಾಯದಿಂದ ಹಳ್ಳಿಗರಿಗೆ ತಿಳುವಳಿಕೆ ನೀಡುವ ಮೂಲಕ ಈ ಶಿಬಿರಗಳಲ್ಲಿ ಕ್ರಿಯಾ ತ್ಮಕವಾಗಿ ಪಾಲುಗೊಳ್ಳುತ್ತಿದ್ದಾರೆ.

ಪರಿಸರ ಅಧ್ಯಯನಕ್ಕೆ ಸಂಬಂಧಿಸಿದಂತೆ ನಾನಾ ಸಂಶೋಧನಾ ಯೋಜನೆಗಳನ್ನು ಕೈಗೊಳ್ಳುವ ವಿಶ್ವವಿದ್ಯಾಲಯ ಗಳು ಮತ್ತು ಖಾಸಗಿ ಸಂಸ್ಥೆಗಳಿಗೆ ಮಂಡಳಿಯು ಆರ್ಥಿಕ ನೆರವನ್ನು ನೀಡಿದೆ.

## ಕರ್ನಾಟಕದ ವೈಜ್ಞಾನಿಕ ಪರಂಪರೆ

ಜೀವನ ಶ್ರದ್ಧೆ ಬೆಳೆಸುವ ಧಾರ್ಮಿಕ ಹಾಗೂ ತಾತ್ವಿಕ ಮೌಲ್ಯ-ವ್ಯವಸ್ಥೆಗಳು ಮತ್ತು ಸಾಹಿತ್ಯ, ಉತ್ಕೃಷ್ಟವಾದ ಕಲೆ ಗಳು ಮತ್ತು ವಾಸ್ತುಶಿಲ್ಪ, ಅನೇಕ ಕುಶಲಕಲೆ ಮತ್ತು ತಂತ್ರ ಗಳ ಜೊತೆಗೇ ಜ್ಯೋತಿರ್ವಿಜ್ಞಾನ, ಗಣಿತಶಾಸ್ತ್ರ, ವೈದ್ಯವಿಜ್ಞಾನ ಮತ್ತು ಭೌತಪ್ರಪಂಚ ವೀಕ್ಷಣೆ, ವೈಜ್ಞಾನಿಕ ಸಾಹಸಗಳಿಗೂ ಪ್ರಾಚೀನ ಮತ್ತು ಮಧ್ಯಕಾಲಗಳಲ್ಲಿ ಕರ್ನಾಟಕವು ಮನೆ ಯಾಗಿತ್ತು ಎಂಬುದು ಇಂದಿನವರಿಗೆ ಬಹುಶಃ ತಿಳಿಯದೆ ಇರುವ ಸಂಗತಿ. ಕ್ರಿ. ಪೂ. 3000ದ ಮಧ್ಯಕಾಲದಲ್ಲಿ, ವ್ಯವಸಾಯ

ಆಧಾರಿತ ಜೀವನದ ಪ್ರಾರಂಭವು ಕರ್ನಾಟಕ ಪ್ರಾಂತದಲ್ಲಾಯಿತೆಂದು ತೋರುತ್ತದೆ. ನವಶಿಲಾಯುಗದ ರೈತರು ಉಳಿದ ಧಾನ್ಯಗಳ ಜೊತೆಗೇ ರಾಗಿ ಮತ್ತು ಹುರುಳಿ ಬೆಳೆಗಳನ್ನು ಸಾಗುವಳಿ ಮಾಡಿರಬಹುದಾಗಿದ್ದು ಇವು ಮುಂದೆ ಭಾರತದ ಉಳಿದ ಸ್ಥಳಗಳಿಗೆ ಹರಡಿರಬಹುದು. ಕ್ರಿ.ಪೂ. 2000ದ ನಂತರ ತಾಮ್ರದ ಉಪಯೋಗವಾಗುತ್ತಿತ್ತು—ಎನ್ನುವುದಕ್ಕೆ ಲೋಹಯುಗದ ಸಂಸ್ಕೃತಿಯು ಆಧಾರಗಳನ್ನು ಕೊಡುತ್ತದೆ. ಅನಂತರ ಕ್ರಿ.ಪೂ. ಒಂದನೇಯ ಸಹಸ್ರಮಾನದಲ್ಲಿ ಕಬ್ಬಿಣದ ಪರಿಚಯವಾಗಿ ದಕ್ಷಿಣದಲ್ಲಿ ಈ ಲೋಹ ಕಾಣಿಸಿಕೊಂಡದ್ದಕ್ಕೆ ಅತ್ಯಂತ ಪ್ರಾಚೀನ ದಾಖಲೆಯಿದ್ದು ಇದು ಹೆಚ್ಚು ಕಡಿಮೆ ಉತ್ತರದೊಂದಿಗೆ ಸಮಕಾಲೀನವಾಗಿದೆ. ಕೆಲವು ಶತಮಾನಗಳ ನಂತರ ಪುರಾತತ್ವ ಶೋಧಕರು ಬೃಹತ್ ಶಿಲಾಯುಗದ ಸಂಸ್ಕೃತಿ ಎಂದು ಕರೆಯಲು ಬಯಸುವ ಕಾಲದಲ್ಲಿ ಜನಜೀವನದಲ್ಲಿ ನಿತ್ಯೋಪಯೋಗೀ ವಸ್ತುವಾಗಿ ಕಬ್ಬಿಣದ ಬಳಕೆ ಹೆಚ್ಚಾಗುತ್ತಾ ಬಂದಿತು. ಬೃಹತ್ ಶಿಲಾಯುಗದ ಜನರು ಕರಿಯ ಮತ್ತು ಕೆಂಪು ಬಣ್ಣದ ಮಣ್ಣಿನ ಮಡಕೆಗಳನ್ನು ಉಪಯೋಗಿಸುತ್ತಿದ್ದರು. ಮುಕ್ಕಾಲುಮಣೆ, ಕುಣಿಕೆ, ಚಾಕು, ಹಿಡಿಯಿರುವ ತಟ್ಟೆಗಳು, ಸನಿಕೆ, ಪಿಕಾಸಿ, ಉಳಿಗಳು, ಈಟಿ, ಬಾಣದ ತಲೆ, ಬಾಗಿದ ಕಠಾರಿ, ಹರಿತವಾದ ಕತ್ತಿ, ಕುದುರೆ ಕಡಿವಾಣ ಮುಂತಾದ ಗೃಹ, ವ್ಯವಸಾಯ ಮತ್ತು ಯುದ್ಧಗಳಲ್ಲಿ ಬಳಸುವ ಕಬ್ಬಿಣದ ಸಾಮಾನುಗಳನ್ನು ಅವರು ರೂಪಿಸಿಕೊಂಡರು. ಬೃಹತ್ ಶಿಲಾಯುಗದ ವೈವಿಧ್ಯಮಯ ಸಮಾಧಿಗಳಲ್ಲಿ ಸ್ವಾರಸ್ಯಕರವಾದ ಏಕರೂಪದ ಮತ್ತು ಗೊತ್ತಾದ ಪ್ರಮಾಣದ ಕಬ್ಬಿಣದ ಸಾಮಾನುಗಳು ದೊರೆತಿವೆ. ಅವರು ಕೆರೆಕಟ್ಟೆಗಳನ್ನು ನಿರ್ಮಿಸುವುದರಲ್ಲಿ ಸಿದ್ಧಹಸ್ತರಾಗಿದ್ದರೆಂದು ತೋರುತ್ತದೆ; ಮತ್ತು ಇವುಗಳಿಂದ ಕೇವಲ ಮಳೆಯನ್ನು ಅವಲಂಬಿಸಿದ್ದ ವ್ಯವಸಾಯದ ಬಲವು ವರ್ಧಿಸಿತು. ಒಟ್ಟಿನಲ್ಲಿ ಅವರಿಗೆ ಕಬ್ಬಿಣವು ಹೊಸ ಸಾಮಾಜಿಕ ಆಯಾಮವನ್ನು ಕೊಡುವ ವಸ್ತುವಾಯಿತು. ಅನಂತರದ ಕಾಲದಲ್ಲಿ ಕಂಚಿನ ಪ್ರತಿಮೆಗಳನ್ನು ಕೃತಕವಾಗಿ ತಯಾರಿಸಿದರೂ ತಾಮ್ರ-ಕಂಚಿನ ವಸ್ತುಗಳ ನಿರ್ಮಾಣ ಕಲೆಯಲ್ಲೂ ಕರ್ನಾಟಕವು ಪ್ರಸಿದ್ಧವಾಗಿತ್ತು. ಕಲ್ಯಾಣಿ ಚಾಳುಕ್ಯ ದೊರೆಯಾದ ಮೂರನೇಯ ಸೋಮೇಶ್ವರನು ತನ್ನ ಕೃತಿ 'ಮಾನಸೋಲ್ಲಾಸ'ದಲ್ಲಿ ಸೂಕ್ಷ್ಮ ವಿವರಣೆಗಳೊಡನೆ ಕಬ್ಬಿಣದ ಎರಕ ಹೊಯ್ಯುವುದನ್ನು ವಿಸ್ತಾರವಾಗಿ ವಿವರಿಸಿದ್ದಾನೆ. "ಆಗತಾನೇ ಹತ್ತಿಸಿದ ಇದ್ದಲಿನ ಸಹಾಯದಿಂದ ಹಿತ್ತಾಳೆ ಮತ್ತು ತಾಮ್ರಗಳು ಕರಗುತ್ತವೆ. ಕೆಂಪಾಗಿ ಉರಿಯುವ ಇದ್ದಲಿನ ಸಹಾಯದಿಂದ ಬೆಳ್ಳಿ ಕರಗುತ್ತದೆ ಮತ್ತು ಐದುಪಟ್ಟು ಹೆಚ್ಚಾಗಿ ಉರಿಯುತ್ತಿರುವ ಇದ್ದಲಿನ ಸಹಾಯದಿಂದ ಚಿನ್ನ ಕರಗುತ್ತದೆ", ಹೀಗೆ ಮುಂದುವರಿಯುವ ಅಧ್ಯಾಯವು ಈ ಕ್ರಿಯೆಯನ್ನು ವಿಸ್ತಾರವಾಗಿ ವರ್ಣಿಸುತ್ತದೆ.

ಹಸ್ತಪ್ರತಿಗಳಲ್ಲಿ-ತಾಳೆಗರಿಗಳಲ್ಲಿ ಮತ್ತು ಕಾಗದದ ಮೇಲೆ-ಇಂತಹ ವೈಜ್ಞಾನಿಕ ಬರಹಗಳು ನಮಗೆ ಆಸ್ತಿಯಾಗಿ ಉಳಿದುಕೊಂಡು ಬಂದಿವೆ. ಕೆಲವು ದಾಖಲೆಗಳು ಆಕರ್ಷಕವಾದ ಮತ್ತು ಬಹಳಕಾಲ ಉಳಿಯುವ ನೈಸರ್ಗಿಕ ಬಣ್ಣಗಳ ಮಿಶ್ರಣದ ದೃಷ್ಟಾಂತಗಳಿಂದ ಕೂಡಿವೆ. ಮೈಸೂರು, ಮೂಡಬಿದ್ರಿ, ಧಾರವಾಡ ಮತ್ತು ಇತರ ಪ್ರದೇಶಗಳ ಸಂಗ್ರಹಾಲಯಗಳಲ್ಲಿರುವ ಜ್ಯೋತಿರ್ವಿಜ್ಞಾನ, ಗಣಿತಶಾಸ್ತ್ರ, ವೈದ್ಯವಿಜ್ಞಾನ, ವಾಸ್ತುಶಿಲ್ಪ, ಮುಂತಾದ ವಿಷಯಗಳ ಮೇಲಿನ ಹಸ್ತಪ್ರತಿಗಳ ರಾಶಿಯು, ಬಹಳ ಕಾಲದಿಂದ ಬೆಳೆದುಬಂದಿರುವ ವೈಜ್ಞಾನಿಕ ಪರಂಪರೆಗೆ ವರ್ಣನಾತ್ಮಕ ಸಾಕ್ಷಿಯಾಗಿದೆ. ಕ್ರಿ.ಶ. 14ನೇಯ ಶತಮಾನದ ನಂತರ ಬಹುಶಃ ಕರ್ನಾಟಕದಲ್ಲಿ ಬಳಕೆಗೆ ಬಂದ ಕಾಗದವು (ಮಧ್ಯ ಏಷ್ಯಾ ಅಥವಾ ನೇಪಾಳದಿಂದ ಕ್ರಿ.ಶ. 11 ಅಥವಾ 12ನೇಯ ಶತಮಾನದಲ್ಲಿ ಭಾರತಕ್ಕೆ ಕಾಗದದ ಪ್ರವೇಶವಾಯಿತು) ಹಸ್ತಪ್ರತಿಗಳ ಬರಹದ ಕಲೆಯನ್ನು ಬೆಳೆಸಿತು. ಈಗ ಪ್ರಚಲಿತವಾಗಿರುವ ಕೈಯಲ್ಲಿ ಮಾಡಿದ ಕಾಗದ ತಯಾರಿಕೆಗೆ ಅಷ್ಟೇನೂ ವ್ಯತ್ಯಾಸವಿಲ್ಲದ ಕ್ರಮವನ್ನು ಅನುಸರಿಸುತ್ತಿದ್ದ ಕಾಗದ ತಯಾರಿಕಾ ಕೇಂದ್ರಗಳು ಕರ್ನಾಟಕದಲ್ಲಿದ್ದವು. ಹಾಳೆಯಾಗಿ ಒತ್ತುವುದಕ್ಕೆ ಮುಂಚಿತವಾಗಿ ಪಲ್ಪ್‌ಗೆ ಅಪೇಕ್ಷಿತ ಪ್ರಮಾಣದಲ್ಲಿ ಸಣ್ಣದಾಗಿ ಧೂಳು ಮಾಡಿದ ಚಿನ್ನದಪುಡಿಯನ್ನು ಮಿಶ್ರಮಾಡಿ ಚಿನ್ನದ ಮೇಲ್ಮೈಯಿರುವ ವಿಶೇಷ ಬಗೆಯ ಕಾಗದವನ್ನು ಟಿಪ್ಪುಸುಲ್ತಾನನ ಆಳ್ವಿಕೆಯ ಕಾಲದಲ್ಲಿ ಮೈಸೂರು ನಗರದಲ್ಲಿ ತಯಾರಿಸುತ್ತಿದ್ದರೆಂಬುದಕ್ಕೆ ಲಿಖಿತ ಆಧಾರವಿದೆ.

ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಹೇಗೋ ಹಾಗೆಯೇ ವೈಜ್ಞಾನಿಕ ವಿಚಾರಗಳಿಗೂ ಕರ್ನಾಟಕದ ರಾಜಮನೆತನಗಳು ವಿಶೇಷವಾದ ಉತ್ತೇಜನವನ್ನು ನೀಡಿದವು. ರಾಷ್ಟ್ರಕೂಟ, ಚಾಳುಕ್ಯ ಮತ್ತು ವಿಜಯನಗರದ ದೊರೆಗಳ ಕಾಲದಲ್ಲಿ ಆಯುರ್ವೇದ, ಯುನಾನಿ ವೈದ್ಯ ಮತ್ತು ಆಸ್ಪತ್ರೆಗಳು ಹಾಗೂ ಔಷಧಾಲಯಗಳ ಮೂಲಕ ವೈದ್ಯಕೀಯ ಸೌಲಭ್ಯಗಳಿಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡಲಾಯಿತು. ಸಂಸ್ಕೃತ ಮತ್ತು ಕನ್ನಡಭಾಷೆಗಳಲ್ಲಿ ಸುಂದರವಾದ ದೃಷ್ಟಾಂತಗಳಿರುವ ಅನೇಕ ಪುಸ್ತಕಗಳ ರಚನೆಯಾಯಿತು. ಗಂಗದೊರೆ ಶ್ರೀಪುರುಷನು (ಕ್ರಿ.ಶ. 8ನೇಯ ಶತಮಾನ) ಆನೆಗಳ ಕುರಿತು 'ಗಜಶಾಸ್ತ್ರ'ವೆಂಬ ಸೊಗಸಾದ ಗ್ರಂಥವನ್ನು ರಚಿಸಿದನು. ಮುಂದಿನ 6-8ನೇಯ ಶತಮಾನಗಳಲ್ಲಿ ಚರಕ, ಸುಶ್ರುತ, ವಾಗ್ಭಟ ಮತ್ತು ಮಾಧವರ ಮೇಲೆ ಗ್ರಂಥಗಳು ರಚಿತವಾದವು. ಚಾಳುಕ್ಯ ವಂಶದ ಕೀರ್ತಿವರ್ಮನು ಕನ್ನಡದಲ್ಲಿ 'ಗೋ ವೈದ್ಯ'ವನ್ನು ರಚಿಸಿದನು. 5ನೇಯ ಚಾಮರಾಜ ಒಡೆಯರ ಆಳ್ವಿಕೆಯಲ್ಲಿ, ರಾಮಚಂದ್ರ ಎಂಬುವನು ಶಾಲಿಹೋತ್ರಿಯ ಕುದುರೆಗಳ ಬಗೆಗಿನ ಗ್ರಂಥದ ಆಧಾರದ ಮೇಲೆ 'ಅಶ್ವಶಾಸ್ತ್ರ'ವನ್ನೂ ರಚಿಸಿದನು; ಮತ್ತು ಪದ್ಮಣ್ಣ ಪಂಡಿತ ಎಂಬುವನು ಕುದುರೆಗಳು ಹಾಗೂ ಅವುಗಳ ರೋಗಗಳ ಚಿಕಿತ್ಸೆಗೆ ಅತ್ಯಂತ ವಿಸ್ತಾರವಾದ ಕೃತಿಯೆಂದು

ಪರಿಗಣಿಸಲಾಗಿದ್ದ 'ಹಯಸಾರ ಸಮುಚ್ಚಯ'ವೆಂಬ ಗ್ರಂಥವನ್ನು ರಚಿಸಿದನು.

ಕ್ರಿ.ಶ. 14ನೇಯ ಶತಮಾನದಲ್ಲಿ ಬಹಮನಿಸುಲ್ತಾನರ ಆಳ್ವಿಕೆಯಲ್ಲಿದ್ದ ಮಹಮದ್ ಷಾ ಎಂಬುವನು ಅನೇಕ ಆಯುರ್ವೇದ ಕೃತಿಗಳನ್ನು ಪರ್ಷಿಯನ್ ಭಾಷೆಗೆ 'ತಿಬ್ಬಿ-ಷಿಫಾಯರ್-ಮುಹ್‌ಮುದಿ' ಎಂಬ ಶೀರ್ಷಿಕೆಯಲ್ಲಿ ಅನುವಾದ ಮಾಡಿದನು. ಕ್ರಿ.ಶ. 1590ರಲ್ಲಿ ಫಿರಿಷ್ತಾ ಎಂಬುವನು ಯುನಾನಿ ಮತ್ತು ಆಯುರ್ವೇದ ವೈದ್ಯಕೀಯ ಪದ್ಧತಿಗಳೆರಡನ್ನು ಸೇರಿಸಿ 'ದಸ್ತುರಿಲ್ ಆಲ್ಬಾ' ಎಂಬ ವೈದ್ಯಗ್ರಂಥವನ್ನು ರಚಿಸಿದನು. ಎರಡನೇಯ ಅಲ್ಲಾವುದ್ದೀನ್ ಅಹಮದ್ ಷಾ, ಬಿದರೆಯಲ್ಲಿ ವೈದ್ಯರು ಮತ್ತು ಹಕೀಮರು ಒಟ್ಟಿಗೇ ಕೆಲಸ ಮಾಡುತ್ತಿದ್ದ ದೊಡ್ಡದಾದ ಉಚಿತ ಆಸ್ಪತ್ರೆಯೊಂದನ್ನು ಸ್ಥಾಪಿಸಿದ್ದನು. ಕಾಲಕ್ರಮೇಣ ಕರ್ನಾಟಕವು 'ಯುನಾನಿ-ತಿಬ್'ನ ಪ್ರಮುಖ ಕೇಂದ್ರಗಳಲ್ಲಿ ಒಂದಾಯಿತು. ಮೈಸೂರು ಒಡೆಯರ ಕಾಲದಲ್ಲಿ, ಆಯುರ್ವೇದ ಮತ್ತು ಯುನಾನಿ ವೈದ್ಯಗಳೆರಡೂ ಬಲವಾದ ಉತ್ತೇಜನವನ್ನು ಪಡೆದು ವಿಶಾಲವಾದ ತಳಹದಿಯುಳ್ಳ ವೈದ್ಯಕೀಯ ಪರಂಪರೆಗೆ ಕಾರಣವಾಯಿತು.

ದೇವಸ್ಥಾನಗಳು, ಮಸೀದಿಗಳು ಮತ್ತು ಅರಮನೆಗಳ ವಾಸ್ತುಶಿಲ್ಪ ರಚನೆಗಳಿಗೆ ಕರ್ನಾಟಕವು ಹೆಸರುವಾಸಿಯಾಗಿದೆ. ಆ ರಚನೆಗಳಿಗೆ ಕಾರಣವಾಗಿರುವ ಎಂಜಿನಿಯರಿಂಗ್ ಕುಶಲತೆಗಳ ವಿವರಣಾತ್ಮಕ ವೈಜ್ಞಾನಿಕ ಅಭ್ಯಾಸದ ಕೊರತೆಯಿಂದ, ಅವುಗಳ ತಾಂತ್ರಿಕ ಶ್ರೇಷ್ಠತೆಯನ್ನು ಅಳೆಯುವುದು ಅಸಾಧ್ಯವಾದ ಕೆಲಸವಾಗಿದೆ. ಆದರೆ, ಈಗ ಉಳಿದಿರುವ ಸ್ಮಾರಕಗಳು, ಗಂಗರ ಕಾಲದಿಂದ ಹಿಡಿದು 1,500 ವರ್ಷಗಳವರೆಗಿನ ಉನ್ನತ ಪ್ರಮಾಣದ ಪರಂಪರೆಯೊಂದನ್ನು ಹೇಳುತ್ತವೆ. ಪ್ರಮಾಣಬದ್ಧವಾದ ಇಟ್ಟಿಗೆಗಳ ಉಪಯೋಗ, ಕಲ್ಲುಗೆಲಸ, ಗಾರೆ ಮತ್ತು ಜೋಡಣೆಯ ವಸ್ತುಗಳ ('ಸಿಮೆಂಟಿಂಗ್') ಸಂಯೋಜನೆ, ರಚನಾ ಕಲ್ಪನೆಯಾದ ಮೊನಚಾದ ಕಮಾನುಗಳು, ಗುಮ್ಮಟಗಳು, ನೆಲಮಾಳಿಗೆಗಳು—ತಾಂತ್ರಿಕ ಪರಿಣತಿಯ ಅತ್ಯಂತ ಉನ್ನತವಾದ, ಈಗ ನಮಗೆ ಅಷ್ಟಾಗಿ ತಿಳಿದಿಲ್ಲದ ಮಟ್ಟವನ್ನು ಮುಟ್ಟಿದ್ದವು. ವಿಜಾಪುರದ ಗೋಲ್‌ಗುಂಬಜ್‌ಗೆ ಇರುವ ಗುಮ್ಮಟದ ವ್ಯಾಸವು ರೋಮನ್‌ನಲ್ಲಿರುವ ಪ್ಯಾಂಥಿಯೋನ್‌ನ ವ್ಯಾಸದಷ್ಟಿದೆ. ಮತ್ತು ಫರ್ಗ್ಯೂಸನ್ ಹೇಳುವಂತೆ "ಪ್ರಪಂಚದ ಯಾವ ಗುಮ್ಮಟ ಅಥವಾ ನೆಲಮಾಳಿಗೆಗಿಂತ ಹೆಚ್ಚಿನ ವ್ಯಾಪ್ತಿಯ ಪ್ರದೇಶಕ್ಕೆ ಅದು ಆಸರೆಯಾಗಿದೆ." ಅದೂ ಅಲ್ಲದೆ, ಗುಮ್ಮಟದ ಒಳಭಾಗದಲ್ಲಿ ಧ್ವನಿಶಾಸ್ತ್ರದಲ್ಲಿ ಒಂದು ಅಸಾಧಾರಣ ಸಾಧನೆಯಾಗಿರುವ "ಪಿಸುಗುಟ್ಟುವ ಚಾಚುಪೀಠ" ಇದೆ. ಇದೇ ಸ್ಥಳದಲ್ಲಿರುವ 'ಇಬ್ರಾಹಿಂ ರೋಜಾ' ಕಟ್ಟಡವು ಸುಂದರ ಬರವಣಿಗೆ ಮತ್ತು ರೇಖಾಗಣಿತ ಶಾಸ್ತ್ರದ ನಮೂನೆಯಲ್ಲಿ 'ದಕ್ಷಿಣದ ತಾಜ್‌ಮಹಲ್' ಎನಿಸಿಕೊಂಡಿದೆ. ಆಭರಣಗಳನ್ನು ಕೆತ್ತುವಂತೆ ಶಿಲಾ ಸ್ಮಾರಕಗಳನ್ನು ನಿರ್ಮಿಸುವ ಶಿಲ್ಪಿಗಳ ಅಥವಾ ಸ್ಥಪತಿಗಳ ಒಂದು ಸ್ಥಳೀಯ ಪರಂಪರೆಯೇ ಇಲ್ಲಿ ಬೆಳೆದು ಬಂದಿತು. ದೊಡ್ಡದಾಗಲಿ, ಸಣ್ಣದಾಗಲಿ, ಎಲ್ಲ ಬಗೆಯ ಪ್ರತಿಮೆಗಳ ಸೂಕ್ಷ್ಮ ಕೆತ್ತನೆಗಳಲ್ಲಿ ಅವರು ಪ್ರಸಿದ್ಧರಾಗಿದ್ದರು. ಶ್ರವಣಬೆಳಗೊಳದಲ್ಲಿರುವ ಗೊಮ್ಮಟೇಶ್ವರನ ಏಕಶಿಲಾ ವಿಗ್ರಹವು ಘನಗಂಭೀರವಾದ ಒಂದು ಸ್ಮಾರಕವಾಗಿದೆ. ಈ ಕುಶಲತೆಗಳ ಜೊತೆಗೆ ಚಿತ್ರಕಲಾ ಪರಂಪರೆಯೊಂದು ಸೇರಿತು. ಕೆಲವು ದೇವಸ್ಥಾನಗಳ ಅಲಂಕರಣಗಳಲ್ಲಿ ಕಾಣುವ ಬಣ್ಣಗಳಲ್ಲಿ ಉಪಯೋಗಿಸಿದ್ದ ವನಸ್ಪತಿ ಮತ್ತು ಖನಿಜ ಮೂಲಗಳ ಬಣ್ಣ ಹಾಗೂ ವರ್ಣದ್ರವ್ಯಗಳ ಬಗೆಗಿನ ರಾಸಾಯನಿಕ ಜ್ಞಾನ ಮತ್ತು ತಯಾರಿಕಾ ಪದ್ಧತಿಗಳು ಆ ಕೆಲಸಗಾರರಿಗೆ ಖಂಡಿತವಾಗಿ ತಿಳಿದಿತ್ತು.

ಮೊದಲೇ ಲೆಕ್ಕಾಚಾರ ಹಾಕಿದ ಪ್ರಮಾಣ ಮತ್ತು ಅನುಪಾತಗಳು, ಕ್ರಮವ್ಯತ್ಯಯಗಳು ಮತ್ತು ಸಂಯೋಗಗಳ ಪ್ರಕಾರವಾಗಿ ಕಟ್ಟಿದ ರೇಖಾಗಣಿತ ಶಾಸ್ತ್ರೀಯವಾಗಿ ಜೋಡಿಸಿದ ರಚನೆಗಳಾಗಿರುವುದು ಮತ್ತು ಪ್ರವೇಶ ಭಾಗಗಳಲ್ಲಿ ವಿಶೇಷವಾದ ಸಮರ್ಪಕ ಮಾರ್ಗದರ್ಶಕ ನಿರ್ದೇಶನವಿರುವುದು ದೇವಸ್ಥಾನಗಳ ಗಮನಾರ್ಹ ಲಕ್ಷಣಗಳಾಗಿದ್ದವು. ಕೆಲವು ದೇವಸ್ಥಾನಗಳಲ್ಲಿರುವ ದಿನರಾತ್ರಿ ಸಮನಾಗಿರುವ ದಿನಗಳಲ್ಲಿ ಬೆಳಗಿನ ಸೂರ್ಯನ ಕಿರಣಗಳು ನೇರವಾಗಿ ದೇವರ ಮೂಲವಿಗ್ರಹದ ಮೇಲೆ ಬೀಳುವಂತಿರುವ ವಿಶಿಷ್ಟ ಪ್ರವೇಶದ್ವಾರದ ರಚನೆಗಳು, ಗಣಿತ ಶಾಸ್ತ್ರದ ಲೆಕ್ಕಾಚಾರದ ಮೇಲೆ ಆಧರಿಸಿರುವ ಜ್ಯೋತಿರ್ವಿಜ್ಞಾನ ಜ್ಞಾನದ ಒಂದು ಸಾಧನೆಯಾಗಿದೆ. ಕರ್ನಾಟಕದಲ್ಲಿ ಬೆಳೆದ ಗಣಿತಶಾಸ್ತ್ರ ಮತ್ತು ಜ್ಯೋತಿರ್ವಿಜ್ಞಾನಗಳ ಜೀವಂತ ಪರಂಪರೆಯ ಹೊರತು, ನಿಸ್ಸಂದೇಹವಾಗಿ, ಅಂತಹ ರಚನೆಗಳು ಸಾಧ್ಯವಾಗುತ್ತಿರಲಿಲ್ಲ. ನಮಗೆ ಗೊತ್ತಿರುವುದು ಸ್ವಲ್ಪವಾದರೂ ಕರ್ನಾಟಕವು ಜೈನ ಪರಂಪರೆಯ ಪ್ರಬಲ ಕೇಂದ್ರವಾಗಿದ್ದುದರಿಂದ, ಗಣಿತಶಾಸ್ತ್ರ, ವಿಶೇಷವಾಗಿ ಸಂಖ್ಯಾಶಾಸ್ತ್ರ, ಕ್ರಮವ್ಯತ್ಯಯ ಮತ್ತು ಸಂಯೋಗಗಳಲ್ಲಿ ಜೈನರು ಆಸಕ್ತಿಯನ್ನು ಹೆಚ್ಚಿಸಿಕೊಂಡಿದ್ದಕ್ಕೆ ಕಾರಣವಾಗಿರಬಹುದು. ರಾಷ್ಟ್ರಕೂಟರ ಒಂದನೇಯ ಅಮೋಘವರ್ಷನ ಆಸ್ಥಾನವನ್ನು ಅಲಂಕರಿಸಿದ್ದ ಜೈನಮತಾನುಯಾಯಿಯಾಗಿದ್ದ ಮಹಾವೀರಾಚಾರ್ಯನ (ಕ್ರಿ.ಶ. 9ನೇಯ ಶತ) ಪ್ರತಿಭೆಯಿಂದ ಗಣಿತಶಾಸ್ತ್ರ ಪರಂಪರೆಗೆ ಒಂದು ಹೊಸ ಆಯಾಮ ದೊರತಂತಾಯಿತು. ಆಗಲೇ ಮಹಾವೀರನು ಸಂಸ್ಕೃತ ಭಾಷೆಯಲ್ಲಿ ಒಂಬತ್ತು ಅಧ್ಯಾಯ ಮತ್ತು 1000ಕ್ಕಿಂತ ಹೆಚ್ಚು ಶ್ಲೋಕಗಳಿರುವ 'ಗಣಿತಸಾರಸಂಗ್ರಹ' ವೆಂಬ ಶ್ರೇಷ್ಠ ಗ್ರಂಥವನ್ನು ರಚಿಸಿದನು. ಇವನಿಗಿಂತ ಪೂರ್ವದವರಾದ ಆರ್ಯಭಟ I, ಭಾಸ್ಕರ I ಮತ್ತು ಬ್ರಹ್ಮಗುಪ್ತರು ತಮ್ಮ ಗಣಿತಶಾಸ್ತ್ರ ಕೊಡುಗೆಗಳನ್ನು ಜ್ಯೋತಿರ್ವಿಜ್ಞಾನ ಸಿದ್ಧಾಂತಗಳ ಸಹಾಯದಿಂದ ಸಿದ್ಧಪಡಿಸಿದ್ದರು. ಮಹಾವೀರನು ಗಣಿತಶಾಸ್ತ್ರ

ವೊಂದನ್ನೇ ಅಭ್ಯಾಸ ಮಾಡಿ, ಅಸಂಖ್ಯಾತ ದೃಷ್ಟಾಂತಗಳನ್ನು ರೂಪಿಸಿದುದು ಇವರ ಶ್ರೇಷ್ಠತೆಯನ್ನು ತೋರಿಸುತ್ತದೆ. ಇವನು ಬ್ರಹ್ಮಗುಪ್ತನ ವಿಚಾರಗಳ ಮೇಲೆ ಹೆಚ್ಚು ಒಲವು ತೋರಿಸಿದರೂ, ಆತನ ಗಣಿತಶಾಸ್ತ್ರ ಲೆಕ್ಕಾಚಾರಗಳನ್ನು ಉತ್ತಮಪಡಿಸಲು ಪ್ರಯತ್ನ ಮಾಡಿದನು ಮತ್ತು ಸ್ವತಂತ್ರ ವಿಚಾರಗಳನ್ನು ಮಂಡಿಸಿದನು. ಇವರ ಕೃತಿಯು—ಸಂಖ್ಯೆಗಳ ವರ್ಗ ಮತ್ತು ಘನ ವರ್ಗಮೂಲ ಮತ್ತು ಘನಮೂಲಗಳನ್ನು ಕಂಡು ಹಿಡಿಯುವುದು, ಗಣಿತಶಾಸ್ತ್ರೀಯವಾಗಿ ಮತ್ತು ರೇಖಾಗಣಿತ ಶಾಸ್ತ್ರೀಯವಾಗಿ ಸರಣಿಗಳ ಮೊತ್ತವನ್ನು ಕಂಡುಹಿಡಿಯುವುದು, ಭಿನ್ನರಾಶಿಗಳು, ಅಳತೆ, ಮೊದಲ ಹಂತದ ವರ್ಗ ಸಮೀಕರಣಗಳು ಮತ್ತು ಅನಿಶ್ಚಿತ ಸಮೀಕರಣಗಳು—ಮೊದಲಾದ ವಿಷಯಗಳನ್ನು ಹೇಳುತ್ತದೆ. ಇವನು ಅಕ್ಷರ ಸಂಕೇತಗಳೊಂದಿಗೆ ದಶಮಾಂಶ ಸ್ಥಾನ ಮೌಲ್ಯ ಗಣನೆಯನ್ನೂ ಮಾಡಿರುವ ಅಧಿಕೃತ ನಿರೂಪಣೆ ನಿಜವಾಗಿಯೂ ಅನುಕರಣೀಯವಾಗಿದೆ. ಶೂನ್ಯದಿಂದ (ಸೊನ್ನೆ) ಭಾಗಿಸಲಾಗುವ ಒಂದು ಸಂಖ್ಯೆಯು ಬದಲಾಗುವುದಿಲ್ಲ ಎಂಬ ತಪ್ಪು ತೀರ್ಮಾನಕ್ಕೆ ಬಂದರೂ ಸೊನ್ನೆಯ ಬಗೆಗೆ ಇವನು ವಿಚಾರ ನಡೆಸುವ ಪ್ರಯತ್ನವನ್ನು ಮಾಡಿದನು. ಲಘುತಮ ಸಾಮಾನ್ಯ ಅಪವರ್ತನವನ್ನು ಕಂಡುಹಿಡಿಯುವ ಕ್ರಮವನ್ನು ತರ್ಕಬದ್ಧ ವಾಗಿ ನಿರೂಪಿಸಿದ ಭಾರತದ ಮೊದಲ ಗಣಿತಶಾಸ್ತ್ರಜ್ಞ ಇವನು. ಇವನು ವಿವರಿಸುವ ಅಳತೆಯ ವಿಚಾರಗಳು ಬ್ರಹ್ಮಗುಪ್ತನಿಗಿಂತ ಹೆಚ್ಚು ಮುಂದುವರಿದದ್ದಾಗಿದೆ. 'ಪಾಯ್' ($\pi$) ನ ಬೆಲೆಯನ್ನು 3.0375 ಎಂದು ತೋರಿಸುವ ಗೋಳದ ಗಾತ್ರವನ್ನು ಲೆಕ್ಕ ಹಾಕುವ ಸೂತ್ರವನ್ನು ಇವನು ಸಿದ್ಧಪಡಿಸಿದನು. ಲಂಬಕೋನ, ತ್ರಿಭುಜಗಳ ವಿಚಾರದಲ್ಲಿ ಇವನು ಹೀಗೆ ಹೇಳಿದ್ದಾನೆ: "ಲಂಬಗಳ ಮೇಲಿನ ವರ್ಗಗಳ ವ್ಯತ್ಯಾಸಗಳು ಮತ್ತು ಅವುಗಳ ಗುಣಕದ ಎರಡರಷ್ಟು ಪಾದವನ್ನು ಕೊಡುತ್ತದೆ; ಮತ್ತು ಅವುಗಳ ಮೇಲಿನ ವರ್ಗಗಳ ಮೊತ್ತ ಒಂದು ತಿರುಗುವ ತ್ರಿಭುಜದ ಕರ್ಣವನ್ನು ಕೊಡುತ್ತದೆ". ಇವನು ಐದು ಬಗೆಯ ಬಹುಭುಜಾಕೃತಿಗಳನ್ನು ವಿವರಿಸಿದ್ದಾನೆ: ಸಮಬಹುಭುಜಾಕೃತಿ, ಸಮದ್ವಿಭಾಗ ಬಹು ಭುಜಾಕೃತಿ, ಸಮದ್ವಿಬಹುಭುಜಾಕೃತಿ, ಸಮತ್ರಿಬಹುಭುಜಾಕೃತಿ ಮತ್ತು ಅಸಮ ಬಹುಭುಜಾಕೃತಿ. ದೀರ್ಘವೃತ್ತಕ್ಕೆ ಇವನು 2ಅಬ+ಬ² ಎಂದು ಬೆಲೆ ಕೊಡುತ್ತಾನಾದರೂ ಅದರ ಸರಿಯಾದ ಬೆಲೆ $\pi$ಅಬ ಎಂದಾಗಿದೆ. ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನ ಆಶ್ರಯದಲ್ಲಿದ್ದ ಹಲಾಯುಧನು ಪಿಂಗಳನ (ಕ್ರಿ. ಪೂ. 3ನೇಯ ಶತಮಾನ) 'ಚಂಡಸೂತ್ರ' ದಲ್ಲಿ ನಿರೂಪಿಸಿರುವಂತೆ ಒಂದು ಬಾರಿಗೆ 1, 2, 3,...... ಎನ್ ವರೆಗೂ ತೆಗೆದುಕೊಂಡ ಸಂಖ್ಯೆಗಳ ಸಂಯೋಗವನ್ನು ಕಂಡುಹಿಡಿಯುವ ತ್ರೈಭುಜಾತ್ಮಕ ವಿನ್ಯಾಸ ಪದ್ಧತಿಯನ್ನು ನಿರೂಪಿಸುವ 'ಮೇರುಪ್ರಸ್ತಾರ' ದ ಮೇಲೆ ಸಮರ್ಥವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಇದು 16ನೇಯ ಶತಮಾನದಲ್ಲಿ ಯೂರೋಪಿನಲ್ಲಿ ಬೆಳೆದು ಬಂದ ಪಾಸ್ಕಲನ ತ್ರಿಭುಜಕ್ಕೆ ಸಮನಾದ ಪದ್ಧತಿಯಾಗಿದೆ. ಅಳತೆಯ ರಚನೆಗಳು, ವ್ಯಾಕರಣ ಮತ್ತು ಭಾಷಾಶಾಸ್ತ್ರ ನಿಯಮಗಳ ಸಹಾಯದಿಂದ ಈ ಪದ್ಧತಿಯು (ಅ+ಬ)$^{n}$ ಸರಣಿಯ ಅ$^{n}$, ಅ$^{n}$—1ಬ......ಅಬ$^{n-1}$, ಬ$^{n}$ ದ್ವಿಪದಗಳ ಮೊತ್ತವನ್ನು ಕಂಡು ಹಿಡಿಯುವ ಕ್ರಮದ ಮುನ್ಸೂಚನೆಯನ್ನೂ ನೀಡಿತು.

ಕರ್ನಾಟಕದ ಮತ್ತು ಭಾರತದ ಗಣಿತ ಶಾಸ್ತ್ರಜ್ಞರಲ್ಲಿ ಅತ್ಯಂತ ಶ್ರೇಷ್ಠನಾದ ಕ್ರಿ. ಶ. ಸುಮಾರು 12ನೇಯ ಶತಮಾನ ದಲ್ಲಿದ್ದ ಎರಡನೇಯ ಭಾಸ್ಕರಾಚಾರ್ಯನು ಮಹಾಮೇಧಾವಿ ಯಾಗಿದ್ದ ಜ್ಯೋತಿಶ್ಶಾಸ್ತ್ರಜ್ಞನೂ ಆಗಿದ್ದ. ವಿಜಾಪುರದವನಾದ ಇವನು ಕ್ಲಿಷ್ಟವಾದ ಅಥವಾ ಗಹನವಾದ ಗಣಿತಶಾಸ್ತ್ರ ಮತ್ತು ಜ್ಯೋತಿರ್ವಿಜ್ಞಾನದ ಸಮಸ್ಯೆಗಳನ್ನು ಸ್ಪಷ್ಟವಾದ ಭಾಷೆಯಲ್ಲಿ ಪ್ರೌಢವಾಗಿ ನಿರೂಪಿಸುವ 'ಸಿದ್ಧಾಂತ ಶಿರೋಮಣಿ' ಎಂಬ ಶ್ರೇಷ್ಠ ಕೃತಿಯನ್ನು ತನ್ನ 36ನೇಯ ವಯಸ್ಸಿನಲ್ಲಿಯೇ ರಚಿಸಿ ದನು. ಈ ಕೃತಿಯ ಮೊದಲೆರಡು ಭಾಗಗಳಾದ 'ಲೀಲಾವತಿ' ಮತ್ತು 'ಬೀಜಗಣಿತ' ಅಧ್ಯಾಯಗಳು ಅಂಕಗಣಿತಶಾಸ್ತ್ರ ಮತ್ತು ಬೀಜಗಣಿತ ಶಾಸ್ತ್ರಗಳಿಗೆ ಸಂಬಂಧಿಸಿದರೆ ಉಳಿದೆರಡು ಭಾಗಗಳಾದ 'ಗಣಿತಾಧ್ಯಾಯ ಮತ್ತು ಗೋಳಾಧ್ಯಾಯ'ಗಳು ಜ್ಯೋತಿರ್ವಿ ಜ್ಞಾನದ ವಿಷಯಗಳನ್ನು ಹೇಳುತ್ತವೆ. ಹನ್ನೊಂದು ಭಾಗ ಗಳಲ್ಲಿರುವ 'ಲೀಲಾವತಿ'ಯು ಅಂಕಗಣಿತ ಮತ್ತು ರೇಖಾಗಣಿತದ ಅತ್ಯಂತ ಉತ್ಕೃಷ್ಟ ಕೃತಿಯಾಗಿದೆ. ಸೊನ್ನೆಗೆ ಸಂಬಂಧಿಸಿದ ಇವನ ಲೆಕ್ಕ ಪದ್ಧತಿಗಳು ನಿಷ್ಕೃಷ್ಟವಾಗಿವೆ ಮತ್ತು ಮಹಾವೀರನ ವಿಚಾರಗಳಿಗಿಂತ ಮುಂದುವರಿದದ್ದಾಗಿವೆ. ಸಂಕೇತ ಪದ್ಧತಿಯಲ್ಲಿ ಅವ್ಯಕ್ತಗಳನ್ನು ಸೂಚಿಸಲು ಅಕ್ಷರಗಳನ್ನು ಉಪಯೋಗಿಸಿದುದ ರಲ್ಲಿ, ಮೊದಲ ಮತ್ತು ಎರಡನೇಯ ಹಂತದ ಅನಿಶ್ಚಿತ ಸಮೀ ಕರಣಗಳನ್ನು ಬಿಡಿಸುವುದರಲ್ಲಿ, ಬೀಜಗಣಿತದಲ್ಲಿ ನಿರ್ಬಂಧ ತತ್ತ್ವವನ್ನು ಇವನು ಮುಂದುಗಾಣಿಸಿದುದನ್ನು ನಾವು ನೋಡು ತ್ತೇವೆ. ಇವನು $\pi$ ನ ಬೆಲೆಯನ್ನು 3.14166ಕ್ಕೆ ವಿಸ್ತರಿಸಿ ದನು. ನಕ್ಷ² + 1 = ಯ², ನಕ್ಷ² + ಚ = ಯ² ಸಮೀಕರಣ ಗಳನ್ನು ಬಿಡಿಸಲು ಎರಡನೇಯ ಭಾಸ್ಕರನು ಸಿದ್ಧಪಡಿಸಿದ ಚಕ್ರೀಯ (ಚಕ್ರವಾಳ) ಪದ್ಧತಿಯ ಬಗೆಗೆ ಲಾಗ್ರಾಂಜ್‌ಗಿಂತ ಮುಂಚಿತವಾಗಿ ಪ್ರಕಟವಾದ ಹ್ಯಾಂಕೆಲ್‌ನ ಹೇಳಿಕೆಯೇ ಅಂಕಗಳ ತತ್ತ್ವದ ಮೊದಲ ಸಾಧನೆಯಾಗಿದೆ. ರೇಖಾಂಶಗಳು ಮತ್ತು ಸಮತಲಗಳ ಮೇಲಿನ ಅನಂತ ಸೂಕ್ಷ್ಮ ಬದಲಾವಣೆಗಳಿಗೆ ಭಾಸ್ಕರನು ಹೇಳಿರುವ 'ತಾತ್ಕಾಲಿಕ' ವಿಶ್ಲೇಷಣಾ ಪದ್ಧತಿಯಲ್ಲಿ ಆಧುನಿಕ ಕಲನಶಾಸ್ತ್ರದ ಮೂಲಗಳನ್ನು ಕಾಣಬಹುದೆಂಬ ಅಭಿ ಪ್ರಾಯವೂ ಇದೆ.

ಆರ್ಯಭಟ I, ಭಾಸ್ಕರ I, ಬ್ರಹ್ಮಗುಪ್ತ, ಮಂಜುಳ, ಶ್ರೀಪತಿ, 'ಸೂರ್ಯಸಿದ್ಧಾಂತ'ಕಾರ ಮುಂತಾದವರ ಜ್ಯೋತಿರ್ವಿ ಜ್ಞಾನ ಕೃತಿಗಳನ್ನು ಅವಲಂಬಿಸಿದರೂ ಇವನು ಜ್ಯೋತಿರ್ವಿಜ್ಞಾನ ತತ್ತ್ವದ ಗ್ರಹಗಳ ಚಲನೆಯ ಉಪರಿ ವೃತ್ತೀಯ ವಿಕೇಂದ್ರ

ತತ್ತ್ವವನ್ನು ಸಂಪೂರ್ಣವಾಗಿ ಅಭಿವೃದ್ಧಿ ಪಡಿಸಿ ಹೊಸಬೆಳಕನ್ನು ಚೆಲ್ಲಿದನು. ಮತ್ತು ಅನೇಕ ಜ್ಯೋತಿರ್ವಿಜ್ಞಾನ ಉಪಕರಣಗಳನ್ನು ಸ್ಪಷ್ಟವಾಗಿ ವ್ಯವಸ್ಥಾಪಿಸಿದನು. ಇವನೇ, ತನ್ನ ಕೃತಿಯ ಮೇಲೆ 'ವಾಸನ ಭಾಷ್ಯ' ಎಂಬ ವ್ಯಾಖ್ಯಾನವನ್ನೂ ಮತ್ತು ಗ್ರಹಗಳ ಚಲನೆಯ ಮೇಲಿನ 'ಕರ್ಣ ಕುತೂಹಲ' ಎಂಬ ಕೃತಿಯನ್ನೂ ರಚಿಸಿದನು. ಇವರ ನಿರೂಪಣಾ ಪದ್ಧತಿಗಳು ಮತ್ತು ಸ್ಫುಟವಾದ ಕೃತಿಗಳು ಎಷ್ಟು ಜನಪ್ರಿಯವಾಗಿತ್ತೆಂದರೆ, ಮುಂದಿನ ಶತಮಾನಗಳಲ್ಲಿ ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ಭಾರತದ ಮಧ್ಯ ಮತ್ತು ಪಶ್ಚಿಮ ಭಾಗಗಳಲ್ಲಿ ಆವುಗಳ ಮೇಲೆ ಅನೇಕ ವ್ಯಾಖ್ಯಾನಗಳು ರಚಿತವಾದವು. 'ಲೀಲಾವತಿ ಮತ್ತು ಬೀಜಗಣಿತ'ಗಳನ್ನು ಅಬ್ದುಲ್ ಫೈಜಿ (ಅಕ್ಬರನ ಆಳ್ವಿಕೆಯಲ್ಲಿ) ಮತ್ತು ಅತಾಉಲ್ಲಾ ರೇಷಿದಿ (ಷಹಜಾನನ ಅಪ್ಪಣೆಯಂತೆ) ಪರ್ಶಿಯನ್ ಭಾಷೆಗೆ ಅನುವಾದ ಮಾಡಿದುದು ಇವನ ಕೃತಿಗಳಿಗೆ ಸಂದ ಅಧಿಕೃತ ಗೌರವವಾಗಿದೆ.

ಜ್ಯೋತಿರ್ವಿಜ್ಞಾನ-ಗಣಿತಶಾಸ್ತ್ರೀಯ ಪರಂಪರೆಯು ವಿಶೇಷವಾಗಿ ಪಂಚಾಂಗ ರಚನೆಗಳಲ್ಲಿ ಮುಂದುವರಿಯಿತು. ಈ ಪರಂಪರೆಯು 16ನೇಯ ಶತಮಾನದ ಪ್ರಾರಂಭ ಕಾಲದ ಗಣೇಶ ದೈವಜ್ಞನಿಂದ ಮೊದಲಾಗಿ ಮಹಾರಾಷ್ಟ್ರ ಪಂಥದ ಜ್ಯೋತಿರ್ವಿಜ್ಞಾನಿಗಳ ಮೇಲೆ ತನ್ನ ಪ್ರಭಾವವನ್ನು ವಿಶೇಷವಾಗಿ ಬೀರಿತು. ಉಳಿದ ಭಾಗಗಳೊಂದಿಗೆ ಕರ್ನಾಟಕವನ್ನೂ ಆಳಿದ ಶಾತವಾಹನರೊಂದಿಗೆ ಸೇರುವ ಶಕ ಯುಗವು (ಕ್ರಿ. ಶ. 78) ಕಾಲ ತೀರ್ಮಾನದಲ್ಲಿ ಒಂದು ಮುಖ್ಯ ಘಟ್ಟವಾಗಿ ಪರಿಣಮಿಸಿತು. ಕಾಲಕ್ರಮೇಣ ಅರವತ್ತು ಸಂವತ್ಸರಗಳ ಚಕ್ರೀಯ ಲೆಕ್ಕಾಚಾರವು (ಪ್ರಭವ, ವಿಭವ, ಇತ್ಯಾದಿ) ಬಹುಶಃ ಕರ್ನಾಟಕದಲ್ಲಿ ಸಿದ್ಧವಾಗಿ (ವಿಶೇಷವಾಗಿ ರೂಢಿಗೆ ಬಂದದ್ದೂ ಈ ಪ್ರಾಂತದಲ್ಲಿಯೇ). ಈ ಅರವತ್ತು ವರ್ಷಗಳ ಚಕ್ರದ ಪ್ರತೀ ಸಂವತ್ಸರಕ್ಕೆ ಪ್ರತ್ಯೇಕ ಹೆಸರುಗಳನ್ನು ನೀಡಿದ್ದು ಪಂಚಾಂಗ ರಚನೆಯ ಮತ್ತೊಂದು ಘಟ್ಟವಾಯಿತು. ಹಳೆಯ ಪದ್ಧತಿಯಂತೆ ಪಂಚಾಂಗ ರಚನೆಯನ್ನು ಮಾಡಿದರೂ ಅದನ್ನು ಆಗಾಗ ಉತ್ತಮ ಪಡಿಸುತ್ತಾ ಪಾರಂಪರಿಕ ಜ್ಯೋತಿರ್ವಿಜ್ಞಾನ ಶಾಸ್ತ್ರವನ್ನು ಎತ್ತಿ ಹಿಡಿದಿದ್ದ ಪಂಚಾಂಗ ಪಂಡಿತರು ಹಿಂದೆ ಇದ್ದರು; ಈಗಲೂ ಇದ್ದಾರೆ. ಕರ್ನಾಟಕದ ಪಂಚಾಂಗಗಳು ಸಾಮಾನ್ಯವಾಗಿ 'ಸೂರ್ಯಸಿದ್ಧಾಂತ', 'ಆರ್ಯಭಟೀಯ', 'ದೃಗ್ಗಣಿತ' ಮುಂತಾದ ಪಾರಂಪರಿಕ ಗ್ರಂಥಗಳನ್ನು ಅನುಸರಿಸಿದ ಚಾಂದ್ರ ಸೌರ ಸಂಯೋಜನೆಗಳಿರುವ ಚಾಂದ್ರಮಾನ ಮತ್ತು ಅಧಿಕ ಮಾಸವಿರುವ ರಚನೆಗಳಾಗಿವೆ. ಭಾರತದ ಜನರ ಚರಿತ್ರೆಯಲ್ಲಿ "ಹತ್ತೊಂಬತ್ತನೇಯ ಶತಮಾನವು ಒಂದು ದೊಡ್ಡ ವಿಭಾಜಕ ರೇಖೆಯಾಗಿದೆ ಮತ್ತು ಈ ನೂರು ವರ್ಷಗಳು ಭಾರತವು ಹಿಂದಿನ ಸಾವಿರ ವರ್ಷಗಳಲ್ಲಿ ಪಡೆಯದ ಬದಲಾವಣೆಗಳನ್ನು ಪಡೆಯುವಂತಾಗಿದೆ" ಎಂಬ ಹೇಳಿಕೆ ಉಚಿತವಾಗಿದೆ. ಬದಲಾವಣೆಗಳು ಕಂಡುಬಂದದ್ದು 19ನೇಯ ಶತಮಾನದ ಉತ್ತರಾರ್ಧದಲ್ಲಿಯಾದರೂ ಇದಕ್ಕೆ ಕರ್ನಾಟಕವೇನೂ ಹೊರತಾಗಿಲ್ಲ. ಈ ಶತಮಾನದ ಮೊದಲ ದಶಕದಲ್ಲಿಯೇ ವಿಲಿಯಂ ಲ್ಯಾಂಬ್‌ಟನ್ ಎಂಬುವನು ಮೂರು ಅಡಿ ಉದ್ದದ ಒಂದು ಕೋನ ದೂರದರ್ಶಕ, ಒಂದು 'ಖಮಧ್ಯ' ತ್ರಿಜ್ಯ ಪಟ್ಟಿ, ಮತ್ತು ಒಂದು ಸಂಕ್ರಮ ದೂರದರ್ಶಕಗಳ ಸಹಾಯದೊಂದಿಗೆ ಕರ್ನಾಟಕವೂ ಸೇರಿದಂತೆ ಉಳಿದ ಪ್ರದೇಶಗಳ ವೈಜ್ಞಾನಿಕ ಮೋಜಣಿಯನ್ನು ಪ್ರಾರಂಭ ಮಾಡಿದನು. 1815ರ ಹೊತ್ತಿಗೆ ಅವನು ಭೂಮಧ್ಯ ರೇಖೆಗೆ (ಸಮಭಾಜಕ ವೃತ್ತ) ಅತ್ಯಂತ ಸಮೀಪದ 9°53'45" ಕೋನ ದೂರದ ಇತರ ಯಾವ ದೇಶದಲ್ಲೂ ಅಳೆಯದಿರುವ ಭೂ ವಿಸ್ತೀರ್ಣವನ್ನು ಗೊತ್ತುಪಡಿಸಿದನು. ಅವನ ವ್ಯವಸ್ಥಿತ ಕೆಲಸಗಳು, ಅವನಿಗೆ ಭೂಕ್ಷೇತ್ರ ರೇಖೆಯನ್ನು ಅಳೆಯುವ ಕ್ಷೇತ್ರದಲ್ಲಿ ಶಾಶ್ವತವಾದ ಸ್ಥಾನವನ್ನು ಒದಗಿಸಿಕೊಟ್ಟವು. ವಿಶೇಷವಾಗಿ ಮೋಜಣಿಯ ಕೆಲಸಗಳಿಗೆ ಬಳಸುವ ಗಣಿತ ಶಾಸ್ತ್ರದ ಸಲಕರಣೆಗಳನ್ನು ತಯಾರಿಸುವ ಕಾರ್ಖಾನೆಯೊಂದು ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಈ ಸೌಲಭ್ಯವನ್ನು ಉಪಯೋಗಿಸಿಕೊಂಡ ಮೊಹ್ಸಿನ್ ಹುಸೇನ್ ಎಂಬ ಮೇಧಾವಿ ಮೆಕ್ಯಾನಿಕ್ ಒಬ್ಬನು ತನ್ನ ಪ್ರತಿಭಾಶಕ್ತಿಯಿಂದ ಒಂದು ಕೋನ ದೂರದರ್ಶಕವನ್ನೂ ಜೋಡಿಸಿದನು. ಹಿಮಾಲಯವನ್ನು ಮೋಜಣಿ ಮಾಡಿದ ಆಂಡ್ರ್ಯೂ ವಾಸ್, ಈ ಕೋನ ದೂರದರ್ಶಕವನ್ನು ಬಳಸಿ, ಅತ್ಯಂತ ಎತ್ತರವಾದ ಶಿಖರ ಯಾವುದೆಂದು ಗೊತ್ತುಮಾಡಿ, ತನ್ನ ಹಿಂದಿನ ಮೇಲ್ವಿಚಾರಕನಾಗಿದ್ದ ಮೋಜಣಿದಾರ ಜಾರ್ಜ್ ಎವರೆಸ್ಟ್‌ನ ಹೆಸರನ್ನು ಅದಕ್ಕೆ ಇಟ್ಟನೆಂದೂ ಹೇಳುತ್ತಾರೆ.

ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರಾರಂಭವಾದ ಮಿಷನರಿ ಶಾಲೆಗಳ ಮೂಲಕ ಇಂಗ್ಲಿಷ್‌ನ ಶಿಕ್ಷಣವನ್ನು ಒಳಗೊಂಡ ಪಾಶ್ಚಾತ್ಯ ಶಿಕ್ಷಣ ಪದ್ಧತಿಯು ಕರ್ನಾಟಕದಲ್ಲಿ ಹರಡಿತು. ಇದು ಆಧುನಿಕ ವೈಜ್ಞಾನಿಕ ಶಿಕ್ಷಣದ ಬೆಳವಣಿಗೆಗೆ ಸಹಾಯ ಮಾಡಿತು. ಮತ್ತು ಅನೇಕ ಮೇಧಾವಿ ವಿಜ್ಞಾನಿಗಳನ್ನು ಮುಂದೆ ತಂದಿತು. ಮೈಸೂರು, ಬೆಂಗಳೂರು ಮತ್ತು ಕಲ್ಬುರ್ಗಿಗಳಲ್ಲಿ ಪ್ರಾರಂಭವಾದ ಬಟ್ಟೆ ಗಿರಣಿಗಳು ಮತ್ತು ಕೋಲಾರ ಮತ್ತು ಹಟ್ಟಿಯಲ್ಲಿ (1888) ಪ್ರಾರಂಭವಾದ ಚಿನ್ನದ ಗಣಿಗಳ ಕಾರಣದಿಂದ ಕೈಗಾರಿಕಾ ಚಟುವಟಿಕೆಯು ವೇಗವಾಗಿ ಬೆಳೆಯಿತು. ಶಿವಸಮುದ್ರದಲ್ಲಿ ಜಲವಿದ್ಯುತ್ ಉತ್ಪಾದನಾ ಯೋಜನೆಯನ್ನು ಪ್ರಾರಂಭಿಸಲಾಯಿತು. ಈ ಶತಮಾನದ ಪ್ರಾರಂಭದಿಂದಲೇ ಕೈಗಾರಿಕೆಗಳು ಅನೇಕ ಪ್ರದೇಶಗಳಿಗೆ ಹರಡಿದವು. ಕರ್ನಾಟಕವು ಕೈಗಾರಿಕೆಯಲ್ಲಿ ಅಭಿವೃದ್ಧಿ ಪಡೆದ ರಾಜ್ಯವಾಯಿತು. ವೈಜ್ಞಾನಿಕ ಸಂಶೋಧನೆಗಳ ದೃಷ್ಟಿಯಲ್ಲೂ ಕರ್ನಾಟಕವು ಪ್ರಮುಖ ರಾಜ್ಯವಾಗಿ ಬೆಳೆದುಬಂದಿದೆ. 1911ರ ಸುಮಾರಿನಲ್ಲಿ ಬೆಂಗಳೂರಿನಲ್ಲಿ ಮೇಲ್ದರ್ಜೆಯ ವೈಜ್ಞಾನಿಕ ಸಂಶೋಧನಾ ಸಂಸ್ಥೆಯಾದ ಭಾರತೀಯ ವಿಜ್ಞಾನ ಸಂಸ್ಥೆಯನ್ನು ಸ್ಥಾಪಿಸ

ಲಾಯಿತು. ಇದರಲ್ಲಿ ನೊಬೆಲ್ ಬಹುಮಾನ ವಿಜೇತ ಸಿ. ವಿ. ರಾಮನ್, ಭಾರತಕ್ಕೆ ಅಣುಯುಗವನ್ನು ತಂದಿತ್ತ ಎಚ್. ಜೆ. ಭಾಭಾ ಮುಂತಾದ ಜಗತ್ಪ್ರಸಿದ್ಧ ವಿಜ್ಞಾನಿಗಳು ಕೆಲಸ ಮಾಡಿದ್ದಾರೆ. ಈ ಸಂಸ್ಥೆ, ಹಾಗೂ ರಾಮನ್ ಸಂಶೋಧನಾ ಸಂಸ್ಥೆ ಮತ್ತು ಭಾರತೀಯ ಜ್ಯೋತಿರ್ಭೌತವಿಜ್ಞಾನ ಸಂಸ್ಥೆ ಗಳು ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದಿವೆ.

ಇದುವರೆಗೂ ನಿರೂಪಿಸಿದುದು ಕರ್ನಾಟಕದ ವೈಜ್ಞಾನಿಕ ಪರಂಪರೆಯ ಒಂದು ಸಂಕ್ಷಿಪ್ತ ಚಿತ್ರ ಅಷ್ಟೆ. ಕರ್ನಾಟಕದ ಅನೇಕ ವಿಜ್ಞಾನಿಗಳು ತಮ್ಮ ಕೊಡುಗೆಯಿಂದ ಭಾರತೀಯ ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ಶ್ರೀಮಂತಗೊಳಿಸಿದ್ದಾರೆ. ಪ್ರಾಚೀನ ಮತ್ತು ಮಧ್ಯಕಾಲದಲ್ಲಿದ್ದವರು ಮಾಡಿರುವ ವೈಜ್ಞಾನಿಕ ಸಾಧನೆಯನ್ನು ಅವರ ಸ್ವಭಾವ, ಆಳ, ನಾವಿನ್ಯ, ಪ್ರಾಮಾಣಿಕತೆ ಮತ್ತು ಪ್ರಗತಿಯ ಮಟ್ಟ ಇವುಗಳನ್ನು ಬೆಳಕಿಗೆ ತರುವ ಸಂಶೋಧನೆಯು ಪುರಾತತ್ವ ಮತ್ತು ಸಾಹಿತ್ಯಮೂಲ ಗಳನ್ನು ಬಳಸಿ ತುರ್ತಾಗಿ ಮಾಡಬೇಕಾದ ಕೆಲಸ.

## ಸಾರ್ವಜನಿಕ ಗ್ರಂಥಾಲಯಗಳು

ಗ್ರಂಥಾಲಯಗಳು ವಿದ್ಯಾಕೇಂದ್ರಗಳ ಅಂಗಸಂಸ್ಥೆಗಳಾಗಿ ಸೇವೆ ಸಲ್ಲಿಸುತ್ತಿವೆ. ಪ್ರಾಚೀನ ವಿದ್ಯಾಕೇಂದ್ರಗಳಾದ ಅಗ್ರಹಾರ ಗಳು, ಮಠಗಳು ಮತ್ತು ಘಟಿಕಾಸ್ಥಾನಗಳು ಗ್ರಂಥಾಲಯ ಗಳನ್ನು ಹೊಂದಿದ್ದಿರಬೇಕು. ಪ್ರೌಢವಿದ್ಯಾಕೇಂದ್ರಗಳಾದ ಘಟಿಕಾ ಸ್ಥಾನಗಳಲ್ಲಿ ಉತ್ತಮ ಗ್ರಂಥಾಲಯಗಳಿದ್ದವು. ನಾಗಾ ಯಿಯಲ್ಲಿ ದೊರೆತ (ಕ್ರಿ. ಶ. 1150) ಶಾಸನವೊಂದು ಆ ಸ್ಥಳದ ಘಟಿಕಾಸ್ಥಾನಕ್ಕೆ ಹೊಂದಿಕೊಂಡಿದ್ದ ಗ್ರಂಥಾಲಯದ ಬಗೆಗೆ ವಿವರಣೆ ನೀಡುತ್ತದೆ. ಅದರ ಮೇಲ್ವಿಚಾರಣೆಗೆ ಒಬ್ಬ ಸರಸ್ವತಿ ಭಂಡಾರಿಕ ಅಥವಾ ಗ್ರಂಥಾಲಯಾಧಿಕಾರಿಯಿದ್ದನು. ಚಾಳುಕ್ಯ ವಂಶದ ತ್ರೈಲೋಕ್ಯಮಲ್ಲ ಅರಸನ ಮಂತ್ರಿಯಾದ ಮಾಧವ ಅಥವಾ ಮದುಸೂಧನನಿಂದ ಆ ಸರಸ್ವತಿ ಭಂಡಾರಿಕನ ನೇಮಕ ವಾಗಿತ್ತು. ಅವನ ಕರ್ತವ್ಯ ನಿರ್ವಹಣೆಗಾಗಿ ಖರ್ಚುವೆಚ್ಚಕ್ಕೆ ದತ್ತಿಗಳು ಕೊಡಲ್ಪಟ್ಟಿದ್ದವು. ನಾಗಾಯಿ ಅಲ್ಲದೆ ಸೋಂದ, ಮೂಡಬಿದರೆ, ಲಕ್ಕುಂಡಿ, ಸಾಲೋಟಗಿ, ಬೆಳ್ಗಾವಿ ಮುಂತಾದ ಸ್ಥಳಗಳಲ್ಲಿ ತಾಳೆಗರಿ ಹಸ್ತಪ್ರತಿಗಳ ಸಂಗ್ರಹವುಳ್ಳ ಗ್ರಂಥಾಲಯ ಗಳು ಇದ್ದುವೆಂದು ತಿಳಿದುಬರುತ್ತದೆ. ಬಹುತೇಕವಾಗಿ ಧಾರ್ಮಿಕ ಮಠಗಳಿಗೆ ಹೊಂದಿಕೊಂಡಂತಿದ್ದ ಗ್ರಂಥಾಲಯಗಳಲ್ಲಿ ಹಸ್ತಪ್ರತಿ ಸಂಗ್ರಹಗಳಿದ್ದವು. ಬಸವೇಶ್ವರನ ಕಾಲದಲ್ಲಿ (ಕ್ರಿ. ಶ. 1167) ವಚನ ಭಂಡಾರಿ ಶಾಂತರಸನ ನೇತೃತ್ವದಲ್ಲಿ ತೆರೆಯಲ್ಪಟ್ಟ ಬಸವ ಕಲ್ಯಾಣದಲ್ಲಿಯ ವಚನ ಭಂಡಾರದಲ್ಲಿ ವಿಪುಲ ತಾಳೆಗರಿ ಗ್ರಂಥ ಸಂಗ್ರಹವಿತ್ತೆಂದು ಹೇಳಲಾಗುತ್ತದೆ. ವಚನಭಂಡಾರಿಯೆಂದರೆ ಇಂದಿನ ಅರ್ಥದಲ್ಲಿ ಗ್ರಂಥ ಭಂಡಾರಿಯೆಂದು ಅರ್ಥೈಸಲಾಗುತ್ತದೆ. ಎರಡನೇಯ ಬುಕ್ಕರಾಯನ ಕಾಲದಲ್ಲಿ ಶೃಂಗೇರಿ ಮಠದ ಗ್ರಂಥಾಲಯವನ್ನು ಸುಧಾರಣೆ ಮಾಡಲು ಸಾಕಷ್ಟು ಭೂಮಿ ಯನ್ನು ದತ್ತಿಕೊಡಲಾಗಿತ್ತು. ನರಸಿಂಹ ಭಾರತಿ ಸ್ವಾಮಿಗಳು (ಕ್ರಿ. ಶ. 1389-1408) ಈ ಹಸ್ತಪ್ರತಿಯ ಗ್ರಂಥಾಲಯವನ್ನು ನೋಡಿಕೊಳ್ಳಲು ಶೃಂಗೇರಿಯ ಪುರಾಣಿಕ ಕವಿ ಕೃಷ್ಣಭಟ್ಟರನ್ನು ನಿಯಮಿಸಿದ್ದರು.

ಮದರಸಾಗಳು (ಮಹಮ್ಮದೀಯರ ವಿದ್ಯಾಕೇಂದ್ರಗಳು) ಸಹ ಉತ್ತಮ ಗ್ರಂಥಾಲಯಗಳನ್ನು ಹೊಂದಿದ್ದವು. ಮಹಮೂದ ಗವಾನನಿಂದ ಕ್ರಿ. ಶ. 1470ರ ಸಮಯದಲ್ಲಿ ಬಿದರೆಯಲ್ಲಿ ಸ್ಥಾಪಿಸಲ್ಪಟ್ಟ ಮದರಸಾದಲ್ಲಿ ಗ್ರಂಥಾಲಯವಿದ್ದಿತು. ಆದಿಲಶಾಹಿ ಅರಸರು ವಿಜಾಪುರದಲ್ಲಿ ಗ್ರಂಥಾಲಯವನ್ನು ಸ್ಥಾಪಿಸಿದ್ದರು. ಅಲ್ಲಿಯ ಕಪಾಟುಗಳಲ್ಲಿದ್ದ ಗ್ರಂಥಗಳ ವಿಷಯ ವನ್ನು ಕಪಾಟುಗಳ ಮೇಲೆ ಕಪ್ಪು ಶಾಯಿಯಿಂದ ನಮೂದಿಸ ಲಾಗಿತ್ತು. ಈ ಆದಿಲಶಾಹಿ ಗ್ರಂಥಾಲಯದ ಕಪಾಟುಗಳನ್ನು ವಿಜಾಪುರದ ಅಶಾರಮಹಲಿನಲ್ಲಿ ಇಂದಿಗೂ ನೋಡಬಹುದು. ಟಿಪ್ಪುಸುಲ್ತಾನನ ಗ್ರಂಥಾಲಯವು ಬಹಳಷ್ಟು ಗ್ರಂಥಗಳನ್ನು ಹೊಂದಿತ್ತೆಂದು ಚಾರ್ಲ್ಸ್ ಸ್ಟುವರ್ಟ್ ಸಿದ್ಧಪಡಿಸಿದ ವರ್ಣಾನುಕ್ರಮ ಗ್ರಂಥಸೂಚಿಯಿಂದ ತಿಳಿದುಬರುತ್ತದೆ. ಹರ್ಬೆಲರ್ ಸಿದ್ಧ ಪಡಿಸಿದ ಬಿಬ್ಲಿಯಾಥಿಕ್ ಓರಿಯೆಂಟೀಲ್ ಗ್ರಂಥಾಲಯದ ಮತ್ತು ಪ್ಯಾರಿಸಿನ ಅರಸನು ಸಿದ್ಧಪಡಿಸಿದ ಎಶೂನಿಯಲ್ ಗ್ರಂಥಾಲಯದ ಗ್ರಂಥಸೂಚಿಗಳ ಮಾದರಿಯಲ್ಲಿ ಸ್ಟುವರ್ಟ್ ತನ್ನ ಗ್ರಂಥಸೂಚಿ ಯನ್ನು ಸಿದ್ಧಪಡಿಸಿದ್ದನೆಂಬುದು ಸಂತಸದ ಸಂಗತಿ.

ರಾಜ್ಯದಲ್ಲಿ ಮೈಸೂರು ಅರಮನೆ ಗ್ರಂಥಾಲಯ ಮತ್ತು ಪ್ರಾಚ್ಯ ಸಂಶೋಧನಾ ಸಂಸ್ಥೆಯ ಗ್ರಂಥಾಲಯ ಇವೆರಡು ತಾಳೆಗರಿ ಗ್ರಂಥ ಮತ್ತು ಹಸ್ತಪ್ರತಿಗಳ ಅತ್ಯಂತ ಬೆಲೆಯುಳ್ಳ ನಿಧಿಗಳಾಗಿವೆ. ಕರ್ನಾಟಕದ ಗ್ರಂಥಾಲಯ ಇತಿಹಾಸದಲ್ಲಿ ಮೈಸೂರು ಮಹಾರಾಜರು ಸಲ್ಲಿಸಿದ ವಿಶಿಷ್ಟಸೇವೆ ಚಿರಸ್ಮರಣೀಯ ವಾಗಿದೆ. ತಮ್ಮ ವೈಯಕ್ತಿಕ ಗ್ರಂಥ ಸಂಗ್ರಹದಿಂದ ಮೂರನೇಯ ಕೃಷ್ಣರಾಜ ಒಡೆಯರು ಪ್ರಾರಂಭಿಸಿದ ಮೈಸೂರು ಅರಮನೆಯ ಗ್ರಂಥಾಲಯಕ್ಕೆ ನೂರೈವತ್ತು ವರ್ಷಕ್ಕೂ ಮಿಕ್ಕಿದ ಇತಿಹಾಸವಿದೆ. ಪ್ರಾರಂಭದಲ್ಲಿ ಸರಸ್ವತೀ ಭಂಡಾರವೆಂದು ಹೆಸರು ಪಡೆದ ಈ ಗ್ರಂಥಾಲಯವು ಇಂದಿನ ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜು ಗ್ರಂಥಾಲಯದ ಒಂದು ಭಾಗವಾಗಿದೆ. ಕ್ರಿ.ಶ. 1869ರಷ್ಟು ಮೊದಲೇ ಆರು ಲಿಪಿಗಳಲ್ಲಿ ಬರೆಯಲ್ಪಟ್ಟ ಸಂಸ್ಕೃತ ಗ್ರಂಥಗಳ ಸೂಚಿಯೊಂದನ್ನು ಇದು ಪ್ರಕಟಿಸಿದೆ. ಕೇವಲ ಭಾರತೀಯ ಸಂಸ್ಕೃತಿ, ಕಲೆ, ಇತಿಹಾಸ ಮತ್ತು ಶಿಲ್ಪಕಲೆ ಕುರಿತ ಸಂಸ್ಕೃತ ಮತ್ತು ಕನ್ನಡ ಹಸ್ತಪ್ರತಿಗಳನ್ನು ಸಂಗ್ರಹಿಸುವ ಉದ್ದೇಶದಿಂದ ಚಾಮರಾಜ ಒಡೆಯರು ವಿಶೇಷ ಆಸ್ಥೆಯ

ಮೇರೆಗೆ 1891ರಲ್ಲಿ ಪ್ರಾರಂಭಿಸಿದ ಗ್ರಂಥಾಲಯವು ಇಂದು ಪ್ರಾಚ್ಯ ಸಂಶೋಧನಾ ಸಂಸ್ಥೆಯಾಗಿ ಮೈಸೂರಿನಲ್ಲಿ ಬೆಳೆದು ಬಂದಿದೆ.

### ಆಧುನಿಕ ಕಾಲ

'ನೇಟಿವ್ ಜನರಲ್ ಲಾಯಬ್ರರಿ' ಎಂಬ ತಾತ್ವಿಕ ಆಧಾರದ ಮೇಲೆ 1848ರಲ್ಲಿ ಪ್ರಾರಂಭವಾದ ಬೆಳಗಾವಿಯಲ್ಲಿಯ 'ಸಾರ್ವಜನಿಕ ಗ್ರಂಥಾಲಯ'ವು ಸಾರ್ವಜನಿಕರ ಗಮನವನ್ನು ಸೆಳೆಯಿತು. ಜೆ. ಡಿ. ಇನ್‌ವೆರಾರಿಟಿಯವರಿಂದ ಪ್ರಾರಂಭವಾದ ಈ ಗ್ರಂಥಾಲಯವು ಇಂದಿಗೂ ಸಾರ್ವಜನಿಕ ಸೇವೆಯಲ್ಲಿ ನಿರತ ವಾಗಿದೆ. ಎಲ್. ಎಸ್. ನಾಗಪುರಕರ್‌ರಿಂದ ಧಾರವಾಡದಲ್ಲಿ 1854ರಲ್ಲಿ ಪ್ರಾರಂಭವಾದ ಗ್ರಂಥಾಲಯವು ಎರಡನೇಯದೂ, ತದನಂತರ 1865ರಲ್ಲಿ ಹುಬ್ಬಳ್ಳಿಯಲ್ಲಿ ಪ್ರಾರಂಭವಾದ ಗ್ರಂಥಾ ಲಯವು ಮೂರನೇಯದೂ ಆಗಿದೆ. 1863-64ರ ಅವಧಿಯಲ್ಲಿ ಗೋಕಾಕ್, ಚಿಕ್ಕೋಡಿ, ಬಾಗಲಕೋಟೆ ಮತ್ತು ಹಾವೇರಿಗಳಲ್ಲಿ ಗ್ರಂಥಾಲಯಗಳು ತೆರೆಯಲ್ಪಟ್ಟವು. ಬೆಳಗಾವಿ, ಧಾರವಾಡ, ವಿಜಾಪುರ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ತೆರೆಯಲ್ಪಟ್ಟ ಗ್ರಂಥಾಲಯಗಳು, ಗ್ರಂಥಾಲಯ ಬೆಳವಣಿಗೆಯ ಪ್ರಥಮ ಹಂತ ವೆನ್ನಬಹುದು. ದ್ವಿತೀಯ ಹಂತದಲ್ಲಿ ಈ ಜಿಲ್ಲೆಗಳ ತಾಲೂಕು ಗ್ರಂಥಾಲಯಗಳು ಪ್ರಾರಂಭವಾದವು. ಇವುಗಳಲ್ಲಿ ವಿಜಾಪುರ ಸಾರ್ವಜನಿಕ ವಾಚನಾಲಯ (1890), ಜಮಖಂಡಿಯ ರಮಾಬಾಯಿ ಸಾಹೇಬ ವಾಚನಾಲಯ (1905) ಮತ್ತು ತಿಕೋಟಾ (ವಿಜಾಪುರ ತಾಲೂಕು) ದ ಬಾಲಚಂದ್ರ ವಾಚನ ಮಂದಿರ (1917) ಇವುಗಳನ್ನು ಹೆಸರಿಸಬಹುದು. ಅಥಣಿಯ ಸಿದ್ಧೇಶ್ವರ ಮೊಫತ್ ವಾಚನಾಲಯವನ್ನು ಲೋಕಮಾನ್ಯ ಬಾಲಗಂಗಾಧರ ತಿಲಕರು ಉದ್ಘಾಟಿಸಿದರು. ಕಾರವಾರ ಸಾರ್ವ ಜನಿಕ ಗ್ರಂಥಾಲಯ ಮತ್ತು ವಸ್ತುಸಂಗ್ರಹಾಲಯವು 1864ರ ಮೇ ಒಂದನೇಯ ದಿನಾಂಕದಂದೂ ಗದಗ ಕಾರ್ಡೋಜ್ ಗ್ರಂಥಾ ಲಯವು 1894ರಲ್ಲೂ ಸ್ಥಾಪಿಸಲ್ಪಟ್ಟವು. ವಿಕ್ಟೋರಿಯಾ ಮಹಾರಾಣಿಯ ಆಡಳಿತದ ವಜ್ರಮಹೋತ್ಸವದ ಸ್ಮರಣೆಗಾಗಿ ಮತ್ತು ಕಾಕತಾಳೀಯವೆಂಬಂತೆ 1910ರಲ್ಲಿ 5ನೇಯ ಜಾರ್ಜ್ ಅರಸನು ಭಾರತಕ್ಕೆ ಭೇಟಿಯಿತ್ತ ಸವಿನೆನಪಿಗಾಗಿ ಕರ್ನಾಟಕದಲ್ಲಿ ಅನೇಕ 'ವಜ್ರಮಹೋತ್ಸವ ಗ್ರಂಥಾಲಯ'ಗಳು ಪ್ರಾರಂಭ ವಾದುದು ಈ ದಿಸೆಯಲ್ಲಿ ಮತ್ತೊಂದು ಪ್ರಯತ್ನವೆನ್ನಬಹುದು. ಕಾರವಾರ, ಕುಮಟಾ, ಶಿವಮೊಗ್ಗ, ಹಾಸನ ಮತ್ತು ಚಿಕ್ಕ ಮಗಳೂರು— ಮುಂತಾದ ಸ್ಥಳಗಳನ್ನು ಜುಬಿಲಿ ಮತ್ತು ಕಿರೀಟ ಧಾರಣಾ ಗ್ರಂಥಾಲಯ ಮತ್ತು ವಾಚನಾಲಯ ಪ್ರಾರಂಭಿಸಲು ಆಯ್ಕೆ ಮಾಡಲಾಯಿತು. ಮೈಸೂರು ಸರಕಾರದ ನೇರ ಆಡಳಿತ ಕ್ಕೊಳಪಟ್ಟು ಮೈಸೂರು ಮತ್ತು ಬೆಂಗಳೂರು ನಗರ ಗ್ರಂಥಾ ಲಯಗಳು 1914-15ರಲ್ಲಿ ಪ್ರಾರಂಭಗೊಂಡವು. ಅನಂತರ 1920ರಲ್ಲಿ ಇವುಗಳನ್ನು ಪ್ರತ್ಯೇಕ ಆಡಳಿತ ಮಂಡಳಿಗೆ ಒಪ್ಪಿಸ ಲಾಯಿತು. ಇವು ಸರಕಾರಿ ಧನಸಹಾಯವನ್ನು ಪಡೆಯುವ ಗ್ರಂಥಾಲಯಗಳಾದವು. ಬೆಂಗಳೂರು ಸಾರ್ವಜನಿಕ ಗ್ರಂಥಾ ಲಯವು ಶೇಷಾದ್ರಿ ಸ್ಮಾರಕ ಭವನದಲ್ಲೂ, ಮೈಸೂರು ಸಾರ್ವ ಜನಿಕ ಗ್ರಂಥಾಲಯವು ಚಾಮರಾಜ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ನಲ್ಲೂ ಇವೆ. ಸರಕಾರದ ಧನಸಹಾಯದೊಂದಿಗೆ ಜಿಲ್ಲಾ ಹಾಗೂ ತಾಲೂಕು ಮಟ್ಟದಲ್ಲಿ ಸಾರ್ವಜನಿಕ ಗ್ರಂಥಾಲಯ ಗಳನ್ನು ಪ್ರಾರಂಭಿಸುವ ಯೋಜನೆಯೊಂದನ್ನು 1917ರಲ್ಲಿ ಜಾರಿ ಗೊಳಿಸಲಾಯಿತು. ಅದರನ್ವಯ ಗ್ರಾಮೀಣ ಗ್ರಂಥಾಲಯ ಗಳನ್ನೂ ಪ್ರಾರಂಭಿಸಲಾಯಿತು. 1919 ಫೆಬ್ರವರಿ ತಿಂಗಳಲ್ಲಿ 'ಸಂಚಾರಿ ಗ್ರಂಥಾಲಯ'ಗಳನ್ನು ಪ್ರಾರಂಭಿಸಬೇಕೆಂಬ ಯೋಜ ನೆಯು ಅನೇಕ ಅಡೆತಡೆಗಳಿಂದಾಗಿ ಕಾರ್ಯಗತವಾಗಲಿಲ್ಲ.

ಈ ಪೂರ್ವದಲ್ಲಿ ಅಸ್ಥಿರತೆಯಲ್ಲಿದ್ದ ಕರ್ನಾಟಕದ ಗ್ರಂಥಾ ಲಯ ಚಳವಳಿಯು ಅಂದಿನ ಇನ್ನಿತರ ಸಾಂಸ್ಕೃತಿಕ ಮತ್ತು ವಿದ್ವತ್ ಸಂಘ-ಸಂಸ್ಥೆಗಳಿಗೆ ಹೊಂದಿಕೊಂಡು ಮುಂದುವರಿಯಲು ಪ್ರಯತ್ನಿಸಿತು. ಗ್ರಂಥಾಲಯ ಚಳವಳಿಯನ್ನು ತೀವ್ರಗೊಳಿಸು ವಲ್ಲಿ 1890ರಲ್ಲಿ ಸ್ಥಾಪಿಸಲ್ಪಟ್ಟ ಧಾರವಾಡದ ಕರ್ನಾಟಕ ವಿದ್ಯಾ ವರ್ಧಕ ಸಂಘವು ಪ್ರಮುಖ ಪಾತ್ರವನ್ನು ವಹಿಸಿದೆ. ಸಂಘದ ಮುಖಪತ್ರಿಕೆಯಾದ 'ವಾಗ್ಭೂಷಣ'ವು ಗ್ರಂಥಾಲಯಗಳ ಬೆಳವಣಿಗೆಯನ್ನು ಕುರಿತ ಲೇಖನಗಳನ್ನು ಪ್ರಕಟಿಸಿತು. ಕರ್ನಾಟಕದಲ್ಲಿಯ ಎಲ್ಲ ಗ್ರಂಥಾಲಯಗಳ ಕೈಪಿಡಿಯೊಂದನ್ನು ಸಿದ್ಧಪಡಿಸುವ ಉದ್ದೇಶದಿಂದ ಸಂಘವು ವಿಷಯ ಸಂಗ್ರಹಣೆಗಾಗಿ ಪ್ರಶ್ನಾವಳಿಯನ್ನು ಪ್ರಕಟಿಸಿತು ಮತ್ತು ಕೆಲವು ಗ್ರಂಥಾಲಯ ಗಳ ಬಗೆಗೆ ಮಾಹಿತಿಯನ್ನೂ ಪ್ರಕಟಿಸಿತು. ಹೀಗೆ ಗ್ರಂಥಾಲಯಗಳ ಬಗೆಗೆ ವಿಷಯ ಸಂಗ್ರಹಿಸಿದ್ದು ಪ್ರಥಮ ಪ್ರಯತ್ನವಾಗಿದೆ. ಆಲೂರ ವೆಂಕಟರಾಯರು 1904-05ರಲ್ಲಿ ಗ್ರಂಥಾಲಯಗಳ ಅಭಿವೃದ್ಧಿಗಾಗಿ ಸಮಗ್ರ ಯೋಜನೆಯೊಂದನ್ನು ಸಿದ್ಧಪಡಿಸಿದರು. ಇದೇ ಸಮಯಕ್ಕೆ 1914ರಲ್ಲಿ ಸ್ಥಾಪಿತವಾದ ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿಯು ತನ್ನದೇ ಆದ ಗ್ರಂಥಾಲಯವನ್ನು ಪ್ರಾರಂಭಿಸಿದ್ದು ವಿಶೇಷ ಸಂಗತಿಯಾಗಿದೆ. ರಾಷ್ಟ್ರೀಯ ಮತ್ತು ಪ್ರಾದೇಶಿಕ ಹಂತಗಳಲ್ಲಿ ಜರುಗಿದ ಗ್ರಂಥಾಲಯ ಸಭೆ ಸಮ್ಮೇಳನ ಮೊದಲಾದವುಗಳು ಗ್ರಂಥಾಲಯ ಚಳವಳಿಗೆ ತೀವ್ರ ಚಾಲನೆ ಕೊಡಲು ಸಹಾಯಕವಾದವು. ಧಾರವಾಡದಲ್ಲಿ (1920) ಸೇರಿದ ಅಖಿಲ ಕರ್ನಾಟಕ ರಾಜಕೀಯ ಸಮ್ಮೇಳನವು ನಾಡಿನಾದ್ಯಂತ ಗ್ರಂಥಾಲಯಗಳ ತೋರಣವನ್ನು ಕಟ್ಟಬೇಕೆಂಬಾಶಯದ ಗೊತ್ತು ವಳಿಯನ್ನು ಸ್ವೀಕರಿಸಿದುದು, ಬೆಳಗಾವಿಯಲ್ಲಿ (1924ರಂದು) ಜರುಗಿದ ರಾಷ್ಟ್ರೀಯ ಕಾಂಗ್ರೆಸ್ ಸಮ್ಮೇಳನದ ಅಂಗವಾಗಿ ಅಖಿಲ ಭಾರತ ಗ್ರಂಥಾಲಯ ಸಭೆಯೊಂದು ಸಿ. ಆರ್. ದಾಸ್‌ರ ಅಧ್ಯಕ್ಷತೆ ಯಲ್ಲಿ ಸೇರಿದುದು, ಮಹತ್ವದ ಸಂಗತಿಗಳಾಗಿವೆಯೆಂದು ಹೇಳ ಬಹುದು. ಈ ಎರಡು ಘಟನೆಗಳ ನಂತರ ಅಖಿಲ ಮುಂಬೈ

ಕರ್ನಾಟಕ ಗ್ರಂಥಾಲಯ ಸಮ್ಮೇಳನ ಧಾರವಾಡದಲ್ಲಿ 1929ರಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿಯೇ ಅಖಿಲ ಕರ್ನಾಟಕ ಗ್ರಂಥಾಲಯ ಸಂಘದ ಜನನವಾಯಿತು. ರಾಷ್ಟ್ರೀಯ ಸ್ವಾತಂತ್ರ್ಯಾಂದೋಳನವು ಗ್ರಂಥಾಲಯ ವಾಚನಾಲಯಗಳನ್ನು ವೈಯಕ್ತಿಕವಾಗಿ ತೆರೆಯಲು ಪ್ರೇರೇಪಿಸಿತು. ಹುಬ್ಬಳ್ಳಿ, ಬಳ್ಳಾರಿ ಮತ್ತು ಇನ್ನಿತರ ಸ್ಥಳಗಳಲ್ಲಿ ರಾಷ್ಟ್ರೀಯ ನೇತಾರರಿಂದ ಪ್ರಾರಂಭಿಸಲ್ಪಟ್ಟ ವ್ಯಾಯಾಮ ಶಾಲೆಗಳು ಗ್ರಂಥಾಲಯಗಳನ್ನೂ ಹೊಂದಿದ್ದವು. ಎ. ಎ. ಎ. ಫೈಝಿಯವರ ಅಧ್ಯಕ್ಷತೆಯಲ್ಲಿ ಗ್ರಂಥಾಲಯ ಅಭಿವೃದ್ಧಿಯನ್ನು ಕುರಿತು ವರದಿಯನ್ನು ಸಿದ್ಧಪಡಿಸಲು ಅಂದಿನ ಮುಂಬೈ ಸರಕಾರವು 1939ರಲ್ಲಿ ಸಮಿತಿಯೊಂದನ್ನು ನೇಮಿಸಿತು. ಭಾರತದಲ್ಲಿ ನೇಮಕಗೊಂಡ ಇಂಥ ಸಮಿತಿಗಳಲ್ಲಿ ಬಹುಶಃ ಇದೇ ಮೊದಲನೆಯದೆನ್ನಬಹುದು. ಈ ಸಮಿತಿಯು ಮುಂಬೈ ಪ್ರಾಂತದಲ್ಲಿ ಅಡಕವಾಗಿದ್ದ ಕರ್ನಾಟಕ ವಿಭಾಗಕ್ಕೂ ಸಮಗ್ರ ಗ್ರಂಥಾಲಯ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸಿತು. ಮತ್ತು ಇದರನ್ವಯವಾಗಿ ಧಾರವಾಡದಲ್ಲಿ ಒಂದು ಪ್ರಾದೇಶಿಕ ಕೇಂದ್ರ ಗ್ರಂಥಾಲಯವನ್ನು ತೆರೆಯುವಂತೆ ಸೂಚಿಸಿತು. ಈ ಗ್ರಂಥಾಲಯವನ್ನು ಧಾರವಾಡದಲ್ಲಿ ಸ್ಥಾಪಿಸುವ ಹೊಣೆಯನ್ನು ಕರ್ನಾಟಕ ವಿದ್ಯಾವರ್ಧಕ ಸಂಘವು ಹೊತ್ತುಕೊಂಡು ಅದನ್ನು 1948ರಲ್ಲಿ ಸಾರ್ವಜನಿಕರ ಉಪಯೋಗಕ್ಕಾಗಿ ತೆರೆಯಿತು. ಗ್ರಂಥಸ್ವಾಮ್ಯ ಕಾಯಿದೆಯಂತೆ ('ಕಾಪಿರೈಟ್ ಆ್ಯಕ್ಟ್') ಗ್ರಂಥ ಸಂಗ್ರಹಣೆಯ ಅಧಿಕಾರವನ್ನು ಈ ಗ್ರಂಥಾಲಯಕ್ಕೆ ಕೊಡಲಾಯಿತು. ಇದರಿಂದಾಗಿ ಅಖಿಲ ಕರ್ನಾಟಕ ಗ್ರಂಥಾಲಯ ಸಂಘದ ಚಟುವಟಿಕೆಗಳಿಗೆ ಪ್ರೇರಣೆಯುಂಟಾಯಿತು ಮತ್ತು ಸಂಘವು ಗ್ರಂಥಾಲಯ ವಿಜ್ಞಾನದ ಮೇಲೆ ಒಂದು ಗ್ರಂಥವನ್ನು ಪ್ರಕಟಿಸಿದುದಲ್ಲದೆ 1951-52ರಲ್ಲಿ ಗ್ರಂಥಾಲಯ ಶಾಸ್ತ್ರದಲ್ಲಿ ತರಬೇತಿ ಶಿಬಿರಗಳನ್ನೂ ನಡೆಯಿಸಿತು.

ಮದ್ರಾಸ್ ಸರಕಾರವು 1948ರಲ್ಲಿ ಸಾರ್ವಜನಿಕ ಗ್ರಂಥಾಲಯ ಕಾನೂನನ್ನು ಹೊರಡಿಸಿತು. ಸ್ಥಳೀಯ ಸಂಸ್ಥೆಗಳು ಸಂಗ್ರಹಿಸುವ ಮನೆತೆರಿಗೆ, ಆಸ್ತಿತೆರಿಗೆಯಲ್ಲಿ ಪ್ರತಿಶತ ಮೂರರಷ್ಟು ಹಣವನ್ನು ಗ್ರಂಥಾಲಯ ಕರವನ್ನಾಗಿ ಪ್ರತ್ಯೇಕವಾಗಿ ವಸೂಲು ಮಾಡುವ ಅಧಿಕಾರವುಳ್ಳ ಗ್ರಂಥಾಲಯ ಪ್ರಾಧಿಕಾರ ಮಂಡಳಿಗಳನ್ನು ಪ್ರತಿ ಜಿಲ್ಲೆಗೂ ರಚಿಸುವುದಕ್ಕೆ ಇದರಲ್ಲಿ ಅನುವು ಮಾಡಿಕೊಡಲಾಯಿತು. ಇದರಿಂದ 1,000 ಜನಸಂಖ್ಯೆ ಅಥವಾ ಅದಕ್ಕೂ ಹೆಚ್ಚಿರುವ ಗ್ರಾಮಗಳಿಗೆ ಶಾಖಾ ಗ್ರಂಥಾಲಯ, ಸಂಚಾರಿ ಗ್ರಂಥಾಲಯ ಮತ್ತು ಗ್ರಂಥ ವಿತರಣಾ ಕೇಂದ್ರಗಳನ್ನೊಳಗೊಂಡ ಜಿಲ್ಲಾ ಕೇಂದ್ರ ಗ್ರಂಥಾಲಯಗಳನ್ನು ಸ್ಥಾಪಿಸಲು ಸಾಧ್ಯವಾಯಿತು. ಬಳ್ಳಾರಿಯ ಡಾ|| ಆ್ಯನಿಬೆಸೆಂಟ್ ಸ್ಮಾರಕ ಉಚಿತ ಗ್ರಂಥಾಲಯವು ಇಡೀ ಜಿಲ್ಲೆಯಲ್ಲಿ ಹಳೆಯದು. ಬಳ್ಳಾರಿ ಜಿಲ್ಲಾ ಕೇಂದ್ರ ಗ್ರಂಥಾಲಯವು 1952 ರಿಂದ ಪ್ರಾರಂಭವಾಯಿತು. ವಿಶಾಲ ಮೈಸೂರು ರಾಜ್ಯದಲ್ಲಿ ವಿಲೀನಗೊಳ್ಳುವಾಗ 1953ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ 21 ಗ್ರಾಮೀಣ ಗ್ರಂಥಾಲಯಗಳಿದ್ದವು. 1951ರಲ್ಲಿ ಕಾರ್ನಾಡ್ ಸದಾಶಿವರಾಯರ ಸ್ಮರಣಾರ್ಥವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಈ ಕಾಯಿದೆಗೆ ಅನುಗುಣವಾಗಿ ಸುಸಜ್ಜಿತ ಜಿಲ್ಲಾ ಕೇಂದ್ರ ಗ್ರಂಥಾಲಯವು ಪ್ರಾರಂಭವಾಯಿತು. 1956ರ ಹೊತ್ತಿಗೆ ಆ ಜಿಲ್ಲೆಯ ಉಡುಪಿ, ಬೆಳ್ತಂಗಡಿ, ಕಾರ್ಕಳ, ಕುಂದಾಪುರ ಮತ್ತು ಪುತ್ತೂರುಗಳಲ್ಲಿ ಶಾಖಾ ಗ್ರಂಥಾಲಯಗಳು ಪ್ರಾರಂಭವಾಗಿದ್ದವು. ಕಾರ್ನಾಡ್ ಸದಾಶಿವರಾವ್ ಕೇಂದ್ರ ಗ್ರಂಥಾಲಯವು ಸ್ಥಾಪನೆಗೊಳ್ಳುವ ಮುಂಚೆ, 1911ರಲ್ಲಿ ಪ್ರಾರಂಭಗೊಂಡ 'ಮಹಿಳಾ ಸಭಾ' ಗ್ರಂಥಾಲಯವು ಅಸ್ತಿತ್ವದಲ್ಲಿತ್ತು. ಉಡುಪಿಯ ಶ್ರೀಮನ್ ಮಾಧ್ವಸಿದ್ಧಾಂತ ಪ್ರಬೋಧಿನಿ ಸಂಸ್ಕೃತ ಕಾಲೇಜಿನಲ್ಲಿ 1904ರಲ್ಲಿ ಪ್ರಾರಂಭಗೊಂಡ ಪ್ರಾಚ್ಯ ಹಸ್ತಪ್ರತಿ ಗ್ರಂಥಾಲಯವು ಕರ್ನಾಟಕದ ಅತ್ಯಂತ ಹಳೆಯ ಗ್ರಂಥಾಲಯಗಳಲ್ಲಿ ಒಂದಾಗಿದೆ.

ಭಾಷಾವಾರು ಪ್ರಾಂತ ರಚನೆಯ ನಂತರ (1956) ಕರ್ನಾಟಕದಲ್ಲಿ ಗ್ರಂಥಾಲಯ ಚಳವಳಿಯು ಸುವ್ಯವಸ್ಥಿತ ಮತ್ತು ಸುಸಂಬದ್ಧ ರೂಪವನ್ನು ಪಡೆಯಿತು. ಈ ಮುಂಚಿನ ಮಹತ್ವದ ಚಟುವಟಿಕೆಗಳಿಂದಲ್ಲದೆ, ಸದ್ಯದ ಪ್ರಯತ್ನಗಳಿಂದಾಗಿ ಗ್ರಂಥಾಲಯ ವಿಜ್ಞಾನ ಕ್ಷೇತ್ರದಲ್ಲಿಯೂ ಬದಲಾವಣೆಯ ಪರಿಸ್ಥಿತಿ ನಿರ್ಮಾಣವಾಯಿತು. ಸುಮಾರು ನೂರು ವರುಷಗಳಿಂದ ಅಸ್ತಿತ್ವದಲ್ಲಿದ್ದ ವಿವಿಧ ಪ್ರಕಾರದ ಹಾಗೂ ಮಾದರಿಯ ಗ್ರಂಥಾಲಯಗಳಿಗೆ ಈಗ ವಿಶಿಷ್ಟ ಗೌರವ ಮತ್ತು ಬೆಲೆ ಬರುವಂತಾಯಿತು. ಕರ್ನಾಟಕ ಗ್ರಂಥಾಲಯ ಅಭಿವೃದ್ಧಿಯನ್ನು ಐತಿಹಾಸಿಕವಾಗಿ ಅವಲೋಕಿಸಿದಲ್ಲಿ, ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯ ಕಾನೂನು, 1965 ಒಂದು ಮೈಲಿಗಲ್ಲೆಂದು ಪರಿಗಣಿಸಲಾಗುತ್ತದೆ.

## ಗ್ರಂಥಾಲಯ ಕಾನೂನು

'ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯ ಕಾನೂನು 1965, ಏಪ್ರಿಲ್ ಒಂದು' 1966ರಂದು ಜಾರಿಗೊಳಿಸಲ್ಪಟ್ಟಿತು. ಮತ್ತು ಸಾರ್ವಜನಿಕ ಗ್ರಂಥಾಲಯ ಇಲಾಖೆಯು ಅಸ್ತಿತ್ವದಲ್ಲಿ ಬಂದಿತು. ಇದರ ಪರಿಣಾಮವಾಗಿ 1948ರ ಮದ್ರಾಸ್ ಸಾರ್ವಜನಿಕ ಗ್ರಂಥಾಲಯ ಕಾನೂನು ಮತ್ತು 1955ರ ಹೈದರಾಬಾದ್ ಸಾರ್ವಜನಿಕ ಗ್ರಂಥಾಲಯ ಕಾನೂನು ಇವು ರದ್ದಾದವು. ಹಳೆಯ ಮದ್ರಾಸ್ ಮತ್ತು ಹೈದರಾಬಾದ್ ಪ್ರಾಂತಗಳಲ್ಲಿದ್ದ ಆ ಎರಡು ಕಾಯಿದೆಗಳು ಆ ಪ್ರಾಂತಗಳಿಗೆ ಸೇರಿದ್ದ ಜಿಲ್ಲೆಗಳಲ್ಲಿ ಜಾರಿಯಲ್ಲಿದ್ದವು. 1965ರ ಕರ್ನಾಟಕ ಸಾರ್ವಜನಿಕ ಗ್ರಂಥಾಲಯ ಕಾನೂನು ರಾಜ್ಯದ ಎಲ್ಲ ಶಹರ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಮೂರು ಹಂತಗಳಲ್ಲಿ ಪುಕ್ಕಟೆಯಾಗಿ ಗ್ರಂಥಾಲಯ

ಸೇವೆಯನ್ನು ಸಲ್ಲಿಸುವ ಮುಖ್ಯ ಉದ್ದೇಶವನ್ನು ಹೊಂದಿದೆ. ಸಾರ್ವಜನಿಕ ಗ್ರಂಥಾಲಯ ಇಲಾಖೆಯು ಮೂರು ಪ್ರಾಧಿಕಾರ ಮಾರ್ಗದರ್ಶನದಲ್ಲಿ ಕಾರ್ಯಗೈಯ್ಯುತ್ತಿದೆ. ಅವುಗಳು ಯಾವುವೆಂದರೆ : 1) ರಾಜ್ಯ ಗ್ರಂಥಾಲಯ ಪ್ರಾಧಿಕಾರ, 2) ಜಿಲ್ಲಾ ಗ್ರಂಥಾಲಯ ಪ್ರಾಧಿಕಾರ ಮತ್ತು 3) ನಗರ ಗ್ರಂಥಾಲಯ ಪ್ರಾಧಿಕಾರ. ವಿವಿಧ ಹಂತಗಳಲ್ಲಿಯ ವಿವಿಧ ಬಗೆಯ ಗ್ರಂಥಾಲಯಗಳ ಆಡಳಿತಕ್ಕೆ ಬೇಕಾಗುವ ಆರ್ಥಿಕ ನೆರವಿಗೆ ಕಾನೂನಿನಲ್ಲಿ ಅನುವು ಮಾಡಿಕೊಡಲಾಗಿದೆ. ಅವುಗಳು : 1) ರಾಜ್ಯದಲ್ಲಿ ಸರಕಾರವು ವಿಧಿಸುವ ತೆರಿಗೆಯ ಮೇಲೆ ಹೆಚ್ಚುವರಿ ಗ್ರಂಥಾಲಯ ತೆರಿಗೆಯನ್ನು ವಸೂಲು ಮಾಡುವುದು (ಉದಾ: ಭೂಮಿ ಹಾಗೂ ಕಟ್ಟಡದ ಮೇಲೆ ವಿಧಿಸುವ ಒಂದು ರೂಪಾಯಿ ತೆರಿಗೆ ಮೇಲೆ ಮೂರು ಪೈಸೆ ಹೆಚ್ಚುವರಿ ಗ್ರಂಥಾಲಯ ತೆರಿಗೆಯನ್ನು ವಸೂಲು ಮಾಡಲಾಗುವುದು) ; ಮತ್ತು 2) ಜಿಲ್ಲೆಯಲ್ಲಿ ವಸೂಲಾಗುವ ಭೂಕಂದಾಯದ ಮೊತ್ತದಲ್ಲಿ ಶೇಕಡಾ ಮೂರರಂತೆ ವಸೂಲು ಮಾಡುವದು. ಸಮಗ್ರ ರಾಜ್ಯಕ್ಕೆ ಗ್ರಂಥಾಲಯ ಸೇವೆಯನ್ನು ಒದಗಿಸುವ ಪ್ರಮುಖ ಅಂಗಗಳಾದ ರಾಜ್ಯ, ಜಿಲ್ಲೆ ಮತ್ತು ನಗರ ಗ್ರಂಥಾಲಯ ಪ್ರಾಧಿಕಾರಗಳಿಗೆ, ಹೀಗೆ ಸಂಗ್ರಹವಾದ ಹಣವನ್ನು ಆಡಳಿತ ವ್ಯವಸ್ಥೆಗಾಗಿ ವ್ಯಯಿಸಲಾಗುವುದು.

ರಾಜ್ಯ ಗ್ರಂಥಾಲಯಗಳ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸಲು ಗ್ರಂಥಾಲಯ ಸೇವೆಯ ಸಮಗ್ರ ಯೋಜನೆಯೊಂದನ್ನು ದೂರಾಲೋಚನೆಯಿಂದ ಸಿದ್ಧಪಡಿಸಲಾಗಿದೆ: ಆ ಚೌಕಟ್ಟಿನಲ್ಲಿ ರಾಜಧಾನಿಯಲ್ಲಿಯ ಒಂದು ರಾಜ್ಯ ಕೇಂದ್ರ ಗ್ರಂಥಾಲಯ; ಜಿಲ್ಲಾ ಕೇಂದ್ರ ಗ್ರಂಥಾಲಯಗಳು 19; ನಗರ ಕೇಂದ್ರ ಗ್ರಂಥಾಲಯಗಳು 10; ಶಾಖಾ ಗ್ರಂಥಾಲಯಗಳು 320; ಗ್ರಾಮ ಕೇಂದ್ರಗಳು 1,926 (ರಾಜಾರಾಮ ಮೋಹನರಾಯ ಗ್ರಂಥಾಲಯ ಸಂಸ್ಥೆಯ ಯೋಜನೆಯ ಅನುಸಾರ) ಮತ್ತು ಸಹಾಯಧನ ಪಡೆಯುವ ಗ್ರಂಥಾಲಯಗಳು 204.

ಗ್ರಂಥಾಲಯ ಸೇವಾ ವಿಸ್ತರಣಾ ಯೋಜನೆಯ ಅನ್ವಯ, ಮೇಲ್ಕಾಣಿಸಿದ ಗ್ರಂಥಾಲಯಗಳನ್ನು ಹೊರತುಪಡಿಸಿ, ರಾಜ್ಯದಲ್ಲೆಲ್ಲ ಶಾಖಾ ಗ್ರಂಥಾಲಯಗಳನ್ನು 408ಕ್ಕೆ ಹೆಚ್ಚಿಸಬೇಕೆಂದೂ, ಜೊತೆಗೆ 5,248 ಗ್ರಂಥ ವಿತರಣಾ ಕೇಂದ್ರಗಳನ್ನು ಪ್ರಾರಂಭಿಸಬೇಕೆಂದೂ ಯೋಜಿಸಲಾಗಿದೆ. ರಾಜ್ಯಕ್ಕೆ ರಾಜಾರಾಮ ಮೋಹನರಾಯ ಗ್ರಂಥಾಲಯ ಸಂಸ್ಥೆಯ ನೆರವು ಲಭಿಸಿದೆ. ಈ ಸಂಸ್ಥೆಯ ಯೋಜನೆಯ ಅಡಿಯಲ್ಲಿ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಗ್ರಂಥಗಳ ವಿತರಣೆ ಮಾಡುವುದರ ಮೂಲಕ ಅಧಿಕ ಗ್ರಂಥಾಲಯ ಸೇವೆಯನ್ನು ಪ್ರಾರಂಭಿಸಲಾಗಿದೆ. ಈ ಯೋಜನೆಯನ್ನು 1973-74 ರಿಂದಲೇ ಕಾರ್ಯಾಚರಣೆಯಲ್ಲಿ ತರಲಾಗಿದೆ. ಗ್ರಂಥಾಲಯ ಸೇವೆಯನ್ನು 1,926 ಹಳ್ಳಿಗಳಿಗೆ ವಿಸ್ತರಿಸುವ ಉದ್ದೇಶದಿಂದ ನಿರ್ದಿಷ್ಟಪಡಿಸಿದ ಐದು ವರುಷಗಳ ಅವಧಿಯನ್ನು ಮೀರಿ ಈ ಯೋಜನೆಯನ್ನು ಮುಂದುವರಿಸುವುದರ ಜೊತೆಗೆ ಸುಮಾರು 26.5 ಲಕ್ಷ ರೂ. ಗಳನ್ನು ಖರ್ಚು ಮಾಡಲಾಗಿದೆ.

ರಾಜ್ಯ, ಜಿಲ್ಲಾ ಮತ್ತು ನಗರ ಕೇಂದ್ರ ಗ್ರಂಥಾಲಯಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮಾಡಬೇಕಾದ ಕಾರ್ಯಗಳನ್ನು ಸಮಗ್ರವಾಗಿ ಕಾರ್ಯಾಚರಣೆಯಲ್ಲಿ ತಂದಾಗ ಸಾರ್ವಜನಿಕ ಗ್ರಂಥಾಲಯ ಸೇವೆಯ ಸಂಪೂರ್ಣ ಚಿತ್ರವು ಕಂಡುಬರುತ್ತದೆ. 1914-15ರಲ್ಲಿ ಜರುಗಿದ ಆರ್ಥಿಕ ಸಮ್ಮೇಳನದ ಅಂಗವಾದ ಶಿಕ್ಷಣ ಮುಂಡಳಿಯ ಶಿಫಾರಸಿನ ಮೇರೆಗೆ ಪ್ರಾರಂಭವಾದ ಎರಡು ಸಾರ್ವಜನಿಕ ಗ್ರಂಥಾಲಯದ ಕಾನೂನಿನ ಅನ್ವಯ ಇದು ರಾಜ್ಯ ಕೇಂದ್ರ ಗ್ರಂಥಾಲಯವಾಗಿ ಪರಿಗಣಿಸಲ್ಪಟ್ಟಿದೆ. ಬೆಂಗಳೂರು ಕಬ್ಬನ್ ಪಾರ್ಕಿನಲ್ಲಿರುವ ಸಾಂಪ್ರದಾಯಿಕ ಪದ್ಧತಿಯಲ್ಲಿ ನಿರ್ಮಿಸಿದ ಕಲಾತ್ಮಕವಾದ ಕೆ. ಶೇಷಾದ್ರಿ ಐಯ್ಯರ ಸ್ಮಾರಕ ಭವನದಲ್ಲಿ ಈ ಕೇಂದ್ರ ಗ್ರಂಥಾಲಯವಿದೆ.

## ರಾಜ್ಯ ಕೇಂದ್ರ ಗ್ರಂಥಾಲಯ

ಗ್ರಂಥ ಹಾಗೂ ಇತರ ಓದುವ ಸಾಮಗ್ರಿಗಳ ಸಮಗ್ರ ಸಂಗ್ರಹವೇ ರಾಜ್ಯ ಕೇಂದ್ರ ಗ್ರಂಥಾಲಯ. ಸಾರ್ವಜನಿಕರಿಗೆ ಓದಲು ಮತ್ತು ಎರವಲು ಪಡೆದು ಓದುವ ಸಾಮಗ್ರಿಗಳನ್ನು ಒಯ್ಯಲು ಈ ಗ್ರಂಥಾಲಯ ಅನುವು ಮಾಡಿಕೊಟ್ಟಿದೆ. ರಾಜ್ಯದ ಅತ್ಯುನ್ನತ ಸಂಸ್ಥೆಯಾದ ಇದರಲ್ಲಿ ಕೆಳಗೆ ಕಾಣಿಸಿದ ವಿಭಾಗಗಳಿವೆ : 1) ರಾಜ್ಯ ಗ್ರಂಥ ಸ್ವಾಮಿತ್ವ ಸಂಗ್ರಹ ವಿಭಾಗ, 2) ರಾಜ್ಯ ಕುರುಡರ ಗ್ರಂಥ ಸಂಗ್ರಹ ವಿಭಾಗ, 3) ರಾಜ್ಯ ಗ್ರಂಥ ಸೂಚಿ ವಿಭಾಗ, 4) ರಾಜ್ಯ ಗ್ರಂಥಾಲಯ ತಾಂತ್ರಿಕ ಸೇವಾ ವಿಭಾಗ ಮತ್ತು 5) ರಾಜ್ಯ ಗ್ರಂಥಾಲಯ ಎರವಲು ವಿಭಾಗ.

ಗ್ರಂಥ ಸ್ವಾಮಿತ್ವ ಕಾನೂನಿನ ಪ್ರಕಾರ 1980-81ರವರೆಗೆ ಸಂಗ್ರಹವಾದ ಗ್ರಂಥಗಳ ಸಂಖ್ಯೆ 15,227 ಮತ್ತು ನಿಯತ ಕಾಲಿಕೆಗಳ ಸಂಖ್ಯೆ 6,276 ಮತ್ತು 1981-82ನೇ ವರ್ಷದಲ್ಲಿ ಸಂಗ್ರಹವಾದ ಗ್ರಂಥಗಳ ಸಂಖ್ಯೆ 927; ಮತ್ತು ನಿಯತಕಾಲಿಕೆಗಳ ಸಂಖ್ಯೆ 165.

ರಾಜ್ಯದ ಕುರುಡರ ಗ್ರಂಥ ಸಂಗ್ರಹ ವಿಭಾಗದಲ್ಲಿ 1980-81ರ ಸಾಲಿನ ಅಂತ್ಯದವರೆಗೆ ಸುಮಾರು 650 ಬ್ರೇಲ್ ಗ್ರಂಥಗಳು, 60 ಬ್ರೇಲ್ ನಿಯತಕಾಲಿಕೆಗಳು ಸಂಗ್ರಹಿಸಲ್ಪಟ್ಟಿದ್ದವು. 1980-81ರ ಅಂತ್ಯದವರೆಗೆ ರಾಜ್ಯ ಕೇಂದ್ರ ಗ್ರಂಥಾಲಯದಲ್ಲಿ ಸಂಗ್ರಹವಾದ ಗ್ರಂಥಗಳ ಒಟ್ಟು ಸಂಖ್ಯೆ 1,70,345 ಮತ್ತು ಆದೇ ವರುಷ ಸಂಗ್ರಹವಾದ ಗ್ರಂಥಗಳ ಸಂಖ್ಯೆ 13,374. 1980-81ನೇಯ ವರ್ಷದಲ್ಲಿ ಗ್ರಂಥಾಲಯವು 13,075 ಸದಸ್ಯರನ್ನು (ಓದುಗರನ್ನು) ಹೊಂದಿತ್ತು.

1980-81ರ ಅವಧಿಯಲ್ಲಿ 19 ಜಿಲ್ಲಾ ಕೇಂದ್ರ ಗ್ರಂಥಾಲಯಗಳು, ಹತ್ತು ನಗರ ಕೇಂದ್ರ ಗ್ರಂಥಾಲಯಗಳು ರಾಜ್ಯದಲ್ಲಿ ಗ್ರಾಮೀಣ ಹಾಗೂ ನಗರ ವಿಭಾಗಗಳಲ್ಲಿ ತಮ್ಮ ತಮ್ಮ ಓದುಗರಿಗೆ ಗ್ರಂಥಾಲಯ ಸೇವೆಯನ್ನು ಸಲ್ಲಿಸುತ್ತಿದ್ದವು. ಜಿಲ್ಲಾ ಕೇಂದ್ರ ಗ್ರಂಥಾಲಯಗಳ ಸೇವೆಯು ಮುಖ್ಯವಾಗಿ ಹಳ್ಳಿಗಾಡಿನ ಜನರಿಗೆ ಮೀಸಲಾಗಿದ್ದರೆ, ನಗರ ಕೇಂದ್ರ ಗ್ರಂಥಾಲಯಗಳ ಸೇವೆಯು ಆಯಾ ನಗರವಾಸಿಗಳಿಗೆ ಸೀಮಿತವಾಗಿರುತ್ತದೆ. ಬೆಂಗಳೂರು, ಬೆಳಗಾವಿ, ದಾವಣಗೆರೆ, ಹುಬ್ಬಳ್ಳಿ-ಧಾರವಾಡ, ಮಂಗಳೂರು, ಮೈಸೂರು, ಕಲ್ಬುರ್ಗಿ, ವಿಜಾಪುರ, ಹಾಸನ ಮತ್ತು ಶಿವಮೊಗ್ಗಗಳಲ್ಲಿರುವ ಈ ಹತ್ತು ನಗರ ಕೇಂದ್ರ ಗ್ರಂಥಾಲಯಗಳು 1980-81ರಲ್ಲಿ 75 ಶಾಖಾ ಗ್ರಂಥಾಲಯಗಳು, 58 ಸೇವಾ ಕೇಂದ್ರಗಳು, ಎರಡು ವಾಚನಾಲಯಗಳು ಮತ್ತು ಒಂದು ಸಂಚಾರಿ ಗ್ರಂಥಾಲಯವನ್ನು ಹೊಂದಿತ್ತು. ಜಿಲ್ಲಾ ಕೇಂದ್ರ ಗ್ರಂಥಾಲಯಗಳು 19 ಜಿಲ್ಲಾ ಸ್ಥಳಗಳಲ್ಲಿದ್ದು (ಕೋಲಾರ ಜಿಲ್ಲಾ ಕೇಂದ್ರ ಗ್ರಂಥಾಲಯವು ಮಾತ್ರ ಚಿಂತಾಮಣಿಯಲ್ಲಿದೆ) ಅವು 1980-81ರಲ್ಲಿ 171 ಶಾಖಾ ಗ್ರಂಥಾಲಯಗಳನ್ನು, 71 ಸೇವಾ ಕೇಂದ್ರಗಳನ್ನು, ಆರು ಗ್ರಂಥ ವಿತರಣಾ ಕೇಂದ್ರಗಳನ್ನು ಮತ್ತು ಒಂದು ಮಕ್ಕಳ ಗ್ರಂಥಾಲಯವನ್ನು ಹೊಂದಿದ್ದವು. ಗ್ರಂಥಗಳನ್ನು ಸಂಗ್ರಹಿಸಿಡುವ ಮತ್ತು ಓದಲು ಎರವಲು ಕೊಡುವ ಅನುಕೂಲತೆಗಳಿಲ್ಲದ ಕೆಲವು ಸ್ಥಳಗಳಲ್ಲಿಯ ಓದುಗರಿಗೆ ಸಂಚಾರಿ ಗ್ರಂಥಾಲಯಗಳ ಮೂಲಕ ಸೇವೆಯನ್ನು ಸಲ್ಲಿಸಲಾಗುತ್ತದೆ. 1980-81ರಲ್ಲಿ ಈ ಇಲಾಖೆಯು ಒಟ್ಟು ಸುಮಾರು 400 ನಿಯತಕಾಲಿಕೆಗಳನ್ನು ಚಂದಾ ಮೂಲಕ ತರಿಸಿಕೊಂಡಿದೆ. ಸದ್ಯ ಗ್ರಂಥಾಲಯ ವಿಜ್ಞಾನದಲ್ಲಿ ತರಬೇತಿ ಪಡೆದ 500 ಜನ ಗ್ರಂಥಾಪಾಲರು ಇಲಾಖೆಯಲ್ಲಿರುತ್ತಾರೆ. ಬಡ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಕೆಲವು ಗ್ರಂಥಾಲಯಗಳಲ್ಲಿ ಪಠ್ಯ ಗ್ರಂಥಗಳ ಪ್ರತ್ಯೇಕ ಸಂಗ್ರಹಗಳನ್ನು ಇಡಲಾಗಿದೆ.

ರಾಜ್ಯದಲ್ಲಿ ಕೆಲವು ಪ್ರಮುಖ ಗ್ರಂಥಾಲಯಗಳು ಕೆಳಗಿನಂತಿವೆ :

ರಾಜ್ಯ ಶಾಸಕರ ಗ್ರಂಥಾಲಯ : 1940ರಲ್ಲಿ ವಿಧಾನ ಸೌಧದಲ್ಲಿ ಪ್ರಾರಂಭವಾದ ಈ ಗ್ರಂಥಾಲಯದಲ್ಲಿ 43,000ಕ್ಕೂ ಹೆಚ್ಚು ಗ್ರಂಥಗಳೂ, 8,500ಕ್ಕೂ ಹೆಚ್ಚು ಹೆಚ್ಚು ಶಾಸನಾ ಸಭಾ-ಶಾಸನ ಮಂಡಳಗಳ ಚರ್ಚೆಯ ಟಿಪ್ಪಣಿಗಳೂ ಮತ್ತು ವರದಿಗಳೂ ಇವೆ.

ಸರಸ್ವತಿ ಭಂಡಾರ ಗ್ರಂಥಾಲಯ : 1915ರಲ್ಲಿ ಪ್ರಾರಂಭವಾಗಿದೆ. ಬೆಂಗಳೂರು ಸಾಹಿತ್ಯ ಪರಿಷತ್ತಿನ ಅಧೀನದಲ್ಲಿದೆ.

ಗೋಕರ್ಣದ ಕರ್ನಾಟಕ ಸಂಘ ನಗರ ಗ್ರಂಥಾಲಯ : 1939ರಲ್ಲಿ ಪ್ರಾರಂಭವಾಗಿದ್ದು, 12,000ಕ್ಕೂ ಹೆಚ್ಚು ಗ್ರಂಥಗಳನ್ನು ಹೊಂದಿದೆ.

ಗೋವಿಂದ ಪೈ ಸಂಶೋಧನ ಕೇಂದ್ರ ಗ್ರಂಥಾಲಯ, ಉಡುಪಿ : ಇದು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸೇವೆ ಸಲ್ಲಿಸುತ್ತಿದೆ.

ಮೈಸೂರು, ಕರ್ನಾಟಕ, ಬೆಂಗಳೂರು, ಕಲ್ಬುರ್ಗಿ, ಮಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯಗಳು.

ಕೃಷಿ ವಿಶ್ವವಿದ್ಯಾಲಯ ಗ್ರಂಥಾಲಯ, ಬೆಂಗಳೂರು.

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಗ್ರಂಥಾಲಯ, ಬೆಂಗಳೂರು.

ಭಾರತೀಯ ವಿಜ್ಞಾನ ಸಂಸ್ಥೆ ಗ್ರಂಥಾಲಯ, ಬೆಂಗಳೂರು.

ಹಿಂದೂಸ್ತಾನ ಬಾಹ್ಯಾಕಾಶ ವಿಮಾನ ಕಾರ್ಖಾನೆ ನಿಗಮ, ಬೆಂಗಳೂರು.

ಹಿಂದುಸ್ತಾನ ತಾಂತ್ರಿಕ ಉಪಕರಣ ಸಂಸ್ಥೆ, ಬೆಂಗಳೂರು, ಭಾರತ ಎಲೆಕ್ಟ್ರಾನಿಕ್ಸ್ ಸಂಸ್ಥೆ, ಬೆಂಗಳೂರು, ಮುಂತಾದ ಔದ್ಯಮಿಕ ಸಂಸ್ಥೆಗಳ ಗ್ರಂಥಾಲಯಗಳು.

ಕೇಂದ್ರೀಯ ಆಹಾರ ಮತ್ತು ತಾಂತ್ರಿಕ ಪ್ರಯೋಗಾಲಯ ಸಂಸ್ಥೆ ಮೈಸೂರು, ರಾಷ್ಟ್ರೀಯ ವೈಮಾನಿಕ ಪ್ರಯೋಗಾಲಯ, ಬೆಂಗಳೂರು, ಕೇಂದ್ರ (ಯಂತ್ರ) ಉಪಕರಣ ಸಂಸ್ಥೆ, ಭಾರತೀಯ ಆಡಳಿತ ತರಬೇತಿ ಸಂಸ್ಥೆ, ಇತ್ಯಾದಿ ಸಂಶೋಧನ ಸಂಸ್ಥೆಗಳು ನಿರ್ವಹಿಸುತ್ತಿರುವ ಗ್ರಂಥಾಲಯಗಳು.

ಮಿಥಿಕ್ ಸೊಸೈಟಿ ಗ್ರಂಥಾಲಯ, ಬೆಂಗಳೂರು.

ಗೋಖಲೆ ಸಾರ್ವಜನಿಕ ವ್ಯವಹಾರಗಳ ಸಂಸ್ಥೆ ಗ್ರಂಥಾಲಯ, ಬೆಂಗಳೂರು.

ಮೈಸೂರಿನ ರಾಜ್ಯ ವಯಸ್ಕರ ಶಿಕ್ಷಣ ಮಂಡಳಿಯು ನಡೆಸುತ್ತಿರುವ ಗ್ರಂಥಾಲಯಗಳು.

## ಗ್ರಂಥಾಲಯ ವಿಜ್ಞಾನ ಶಿಕ್ಷಣ

ರಾಜ್ಯದ ವಿಪುಲ ಸಂಖ್ಯೆಯಲ್ಲಿರುವ ಗ್ರಂಥಾಲಯಗಳ ಆಡಳಿತ ನೋಡಿಕೊಳ್ಳುವ ಸಿಬ್ಬಂದಿಗೆ ಗ್ರಂಥಾಲಯ ವಿಜ್ಞಾನದಲ್ಲಿ ಶಿಕ್ಷಣ ಮತ್ತು ತರಬೇತಿ ಕೊಡುವುದು ಅವಶ್ಯವೆನಿಸಿತು. ಕರ್ನಾಟಕ, ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳು ಗ್ರಂಥಾಲಯ ವಿಜ್ಞಾನದಲ್ಲಿ ಸ್ನಾತಕೋತ್ತರ ಮಟ್ಟದ ಶಿಕ್ಷಣವನ್ನು ಕ್ರಮವಾಗಿ 1962, 1969 ಮತ್ತು 1974ರಲ್ಲಿ ಪ್ರಾರಂಭಿಸಿದವು. (ಗುಲಬರ್ಗಾ ವಿಶ್ವವಿದ್ಯಾಲಯವು 1979 ರಲ್ಲೂ, ಮಂಗಳೂರು ವಿಶ್ವವಿದ್ಯಾಲಯವು 1981ರಲ್ಲೂ ಒಂದು ವರ್ಷದ, ಗ್ರಂಥಾಲಯ ವಿಜ್ಞಾನದಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಕೊಡಲು ಪ್ರಾರಂಭಿಸಿದವು). ಈ ಮೊದಲು ಹಳೆಯ

ಮೈಸೂರು ಸಂಸ್ಥಾನದಲ್ಲಿ 1920ರಲ್ಲಿ ಮುಖ್ಯವಾಗಿ 50 ಜನ ಶಿಕ್ಷಕರಿಗೆ ಗ್ರಂಥಾಲಯ ವಿಜ್ಞಾನದಲ್ಲಿ ತರಬೇತಿಯನ್ನು ಕೊಡಲಾಯಿತು. ಆದರೆ ಗ್ರಂಥಾಲಯ ವಿಜ್ಞಾನ ಪ್ರಾಧ್ಯಾಪಕರ ಹುದ್ದೆಯನ್ನು ರದ್ದುಗೊಳಿಸಿದ್ದರಿಂದ ಈ ತರಬೇತಿಯನ್ನು 1921 ರಲ್ಲಿ ನಿಲ್ಲಿಸಲಾಯಿತು. ಕರ್ನಾಟಕ ಸರಕಾರವು ಸಹ 12 ವಾರಗಳ ಅವಧಿಯ ಸರ್ಟಿಫಿಕೇಟ್ ಮಟ್ಟದ ತರಬೇತಿ ಕೊಡಲು ಗ್ರಂಥಾಲಯ ವಿಜ್ಞಾನ ತರಬೇತಿ ಕೇಂದ್ರವನ್ನು ಬೆಂಗಳೂರಿನಲ್ಲಿ ತೆರೆಯಿತು. ಪದವಿಪೂರ್ವ ವಿದ್ಯಾರ್ಥಿನಿಯರಿಗೆ ಗ್ರಂಥಾಲಯ ವಿಜ್ಞಾನದಲ್ಲಿ 15 ತಿಂಗಳ ಅವಧಿಯ ಡಿಪ್ಲೋಮಾ ಮಟ್ಟದ ತರಬೇತಿಯನ್ನು ಬೆಂಗಳೂರು ಮತ್ತು ಮಂಗಳೂರು ಮಹಿಳಾ ಕೈಗಾರಿಕಾ (ಪಾಲಿಟೆಕ್ನಿಕ್) ಸಂಸ್ಥೆಗಳು ಪ್ರಾರಂಭಿಸಿವೆ. ಕಲಕತ್ತೆಯ ಭಾರತ ಸಂಖ್ಯಾಶಾಸ್ತ್ರ ಸಂಸ್ಥೆಯವರು ಬೆಂಗಳೂರಿನಲ್ಲಿ ಗ್ರಂಥಸೂಚಿ ಸಂಶೋಧನೆ ಮತ್ತು ತರಬೇತಿ ಕೇಂದ್ರವನ್ನು (ಡಿ. ಆರ್. ಟಿ. ಸಿ.) 1962ರಲ್ಲಿ ತೆರೆದಿದ್ದು, ಭಾರತದ ಪ್ರಥಮ ರಾಷ್ಟ್ರೀಯ ಪ್ರಾಧ್ಯಾಪಕರಾಗಿದ್ದ ಡಾ|| ಎಸ್. ಆರ್. ರಂಗನಾಥನ್ ಅವರನ್ನು ಪಡೆದ ಕೀರ್ತಿ ಮತ್ತು ಹೆಮ್ಮೆ ಆದರದಾಗಿದೆ. ಇದು ಗ್ರಂಥಸೂಚಿ ಶಾಸ್ತ್ರದಲ್ಲಿ 20 ತಿಂಗಳ ವಿಶೇಷ ತರಬೇತಿಯನ್ನು ನೀಡುತ್ತದೆ. ಈ ಕೇಂದ್ರ ಹಾಗೂ ರಾಜ್ಯ ವಿಶ್ವವಿದ್ಯಾಲಯಗಳಲ್ಲಿ ಗ್ರಂಥಾಲಯ ವಿಜ್ಞಾನದ ಮೇಲೆ ಡಾಕ್ಟರೇಟ್ ಪದವಿ ಪಡೆಯಲು ಬೇಕಾದ ತರಬೇತಿಗೂ ಅನುಕೂಲತೆಯಿದೆ.

ಗ್ರಂಥಾಲಯ ವಿಜ್ಞಾನದ ಕ್ಷೇತ್ರದಲ್ಲಿ ಕಾಣುವ ಸಂಶೋಧಕರ, ವಿಜ್ಞಾನಿಗಳ, ಪ್ರಾಧ್ಯಾಪಕರ ಮತ್ತು ಆಡಳಿತಗಾರರ ಸುದೀರ್ಘವಾದ ಯಾದಿಯು, ಆ ಕ್ಷೇತ್ರಕ್ಕೆ ಕರ್ನಾಟಕವು ನೀಡಿದ ವಿಶೇಷ ಕೊಡುಗೆಯ ದ್ಯೋತಕವಾಗಿದೆ. ಕರ್ನಾಟಕದ ಗ್ರಂಥಾಲಯ ಚಳವಳಿಯ ಹಿನ್ನೆಲೆಯ ಶಕ್ತಿಯಾಗಿದ್ದ ಜಗತ್‌ಪ್ರಸಿದ್ಧ ಡಾ|| ಎಸ್. ಆರ್. ರಂಗನಾಥನ್‌ರು ಶ್ರೇಷ್ಠ ಬರಹಗಾರರೂ ಆಗಿದ್ದರು. ಗ್ರಂಥಾಲಯ ಕ್ಷೇತ್ರದಲ್ಲಿ ಅವರು 50ಕ್ಕೂ ಹೆಚ್ಚು ಗ್ರಂಥಗಳನ್ನೂ 1,800ಕ್ಕೂ ಹೆಚ್ಚು ಲೇಖನಗಳನ್ನೂ ಬರೆದಿರುತ್ತಾರೆ. ಅವರ ನಚ್ಚಿನ ಸಹೋದ್ಯೋಗಿಗಳಾದ ಪ್ರೊ|| ನೀಲಮೇಘಂ, ಡಾ|| ಭಟ್ಟಾಚಾರ್ಯ, ಮತ್ತು ಡಾ|| ಗೋಪಿನಾಥ್ ಮುಂತಾದವರು ತಮ್ಮ ವೈಯಕ್ತಿಕ ಕೊಡುಗೆಯಿಂದಾಗಿ ಡಾ|| ರಂಗನಾಥನ್‌ರ ಕೀರ್ತಿಯಲ್ಲಿ ಭಾಗಿಗಳಾಗಿರುವರು. ಈ ಕ್ಷೇತ್ರದಲ್ಲಿ ಕರ್ನಾಟಕದವರಾದ ಶ್ರೀ ಬಿ. ಎಸ್. ಕೇಶವನ್ ಇನ್ನೊಬ್ಬ ಹೊಳೆವ ನಕ್ಷತ್ರವಾಗಿದ್ದಾರೆ. ಪ್ರೊ|| ಕೆ. ಎಸ್. ದೇಶಪಾಂಡೆ ಮತ್ತು ಡಾ|| ಎಸ್. ಆರ್. ಗುಂಜಾಳ—ಇವರದು ಸಹ ವಿಶಿಷ್ಟ ಕೊಡುಗೆಯಾಗಿದೆ. ಗ್ರಂಥಸೂಚಿ ಸಂಶೋಧನೆ ಮತ್ತು ತರಬೇತಿ ಕೇಂದ್ರ (ಡಿ. ಆರ್. ಟಿ. ಸಿ.) ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ ವಿಭಾಗ ಇವು ಕ್ರಮವಾಗಿ 'ಲಾಯಬ್ರರಿ ಸಾಯನ್ಸ್ ವಿಥ್ ಸ್ಲ್ಯಾಂಟ್ ಟು ಡಾಕ್ಯುಮೆಂಟೇಶನ್' ಮತ್ತು 'ಟಾಯರ್ಮ್ಯಾಲೆಸ್ ಫೆಲೋಶಿಪ್' ಎಂಬ ಎರಡು ನಿಯತಕಾಲಿಕೆಗಳನ್ನು ಇಂಗ್ಲೀಷಿನಲ್ಲಿ ಪ್ರಕಟಿಸುತ್ತಿವೆ. 'ಕರ್ನಾಟಕ ಗ್ರಂಥಾಲಯ' ಎಂಬ ನಿಯತಕಾಲಿಕೆಯನ್ನು ಧಾರವಾಡದ ಗ್ರಂಥಾಲಯ ವಿಜ್ಞಾನ ಪರಿಷತ್ತು ಪ್ರಕಟಿಸುತ್ತಿದೆ. ಓದುವ ಸಾಮಗ್ರಿಗಳನ್ನೊಳಗೊಂಡ ಜನಪ್ರಿಯವಾದ ಸಂಚಾರಿ ಗ್ರಂಥಾಲಯಗಳನ್ನು ಮತ್ತು ಗ್ರಾಮಫೋನ್ ಕ್ಯಾಸೆಟ್ ಗ್ರಂಥಾಲಯಗಳನ್ನು ಸಹ ಕರ್ನಾಟಕ ಗ್ರಂಥಾಲಯಗಳ ಯಾದಿಯಲ್ಲಿ ಸೇರಿಸಬಹುದು. ಮಂಗಳೂರಿನ ದಿವಂಗತ ನಾಡಕರ್ಣಿಯವರ ಖಾಸಗಿ ಗ್ರಂಥಾಲಯವನ್ನು ನೋಡಿದರೆ ಕರ್ನಾಟಕ ಜನತೆಯಲ್ಲಿ ಗ್ರಂಥಾಲಯಗಳ ಬಗೆಗಿದ್ದ ಪ್ರಜ್ಞೆಯ ಅರಿವಾಗುತ್ತದೆ. ವ್ಯಾಪಾರದ ದೃಷ್ಟಿಯನ್ನಿಟ್ಟುಕೊಂಡು ನಗರ, ಪಟ್ಟಣಗಳಲ್ಲಿ ವೈಯಕ್ತಿಕ ಎರವಲು ಗ್ರಂಥಾಲಯ (ಸರ್ಕ್ಯುಲೇಟಿಂಗ್ ಲೈಬ್ರರಿ) ಗಳು ಸಹ ಹೆಚ್ಚುತ್ತಿವೆ. ಹಳ್ಳಿ ಪಟ್ಟಣಗಳಲ್ಲಿ ಗ್ರಂಥಾಲಯವನ್ನು ಅಭಿವೃದ್ಧಿಪಡಿಸುವುದು, ಅವುಗಳಿಗೆ ತಾಂತ್ರಿಕ ಸಲಹೆಯನ್ನು ನೀಡುವುದು ಮುಂತಾದ ಉದ್ದೇಶಗಳನ್ನಿಟ್ಟುಕೊಂಡು 'ಕರ್ನಾಟಕ ಗ್ರಂಥಾಲಯ ಸಂಘ'ವು 1962ರಲ್ಲಿ ಬೆಂಗಳೂರಿನಲ್ಲಿ ರೂಪುಗೊಂಡಿದೆ.

## ವಸ್ತು ಸಂಗ್ರಹಾಲಯಗಳು ಕಲಾಶಾಲೆಗಳು

1956ಕ್ಕೆ ಮುಂಚೆ, ಹಳೆಯ ಮೈಸೂರು ರಾಜ್ಯವು ಕೆಲವು ವಸ್ತು ಸಂಗ್ರಹಾಲಯಗಳನ್ನು ಮಾತ್ರ ಪಡೆದಿತ್ತು. 1956ರಲ್ಲಿ ಕರ್ನಾಟಕದ ಏಕೀಕರಣವಾದಾಗ ಧಾರವಾಡದ ಕನ್ನಡ ಅಧ್ಯಯನ ಕೇಂದ್ರದ ಕಲಾ ಮತ್ತು ಪುರಾತತ್ತ್ವ ವಸ್ತು ಸಂಗ್ರಹಾಲಯ ರಾಜ್ಯಕ್ಕೆ ಸೇರಿತು. ಅಂದಿನಿಂದ, ಸರ್ಕಾರಿ ಮತ್ತು ಖಾಸಗಿ ವಲಯದ ಅನೇಕ ವಸ್ತು ಸಂಗ್ರಹಾಲಯಗಳು ಅಸ್ತಿತ್ವಕ್ಕೆ ಬಂದಿವೆ. 30ಕ್ಕಿಂತ ಹೆಚ್ಚು ವಸ್ತು ಸಂಗ್ರಹಾಲಯಗಳನ್ನು ಪಡೆದಿರುವುದು ಕರ್ನಾಟಕದ ಒಂದು ಹೆಮ್ಮೆಯ ಸಂಗತಿ.

ವಸ್ತು ಸಂಗ್ರಹಾಲಯ (ಮ್ಯುಸಿಯಂ) ವೆಂದರೆ ಕುತೂಹಲ ಹುಟ್ಟಿಸುವ ವಸ್ತುಗಳ ಸಂಗ್ರಹಾಲಯವೆಂಬ ಕಲ್ಪನೆ ಬದಲಾಗಿ ಅದು ಒಂದು ಶೈಕ್ಷಣಿಕ ಸಂಸ್ಥೆ ಎಂಬ ಭಾವನೆ ಈಗ ಬಂದಿದೆ. ವಸ್ತು ಸಂಗ್ರಹಾಲಯಗಳನ್ನು ನೋಡುವುದರಿಂದ ಜನತೆ ಬೇರೆ ಯಾವುದರಿಂದಲೂ ಸಾಧ್ಯವಾಗದುದನ್ನು ತಿಳಿದುಕೊಳ್ಳುತ್ತದೆ ಎಂಬುದು ರಾಜ್ಯಕ್ಕೆ ಈಗ ಅರಿವಾಗಿದೆ. ಆದ್ದರಿಂದ, ಅಸ್ತಿತ್ವದಲ್ಲಿರುವ ವಸ್ತು ಸಂಗ್ರಹಾಲಯಗಳು ಉಳಿದು ಬೆಳೆಯುವುದಕ್ಕೆ ಸಹಾಯ ಮಾಡುವುದರ ಜೊತೆಗೆ ಪ್ರತಿಯೊಂದು ಜಿಲ್ಲೆಯಲ್ಲೂ ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸುವ ಗುರಿಯನ್ನು ರಾಜ್ಯವು ಹೊಂದಿದೆ, ಏಕೆಂದರೆ, ಈ ವಸ್ತು ಸಂಗ್ರಹಾಲಯಗಳು ನಮ್ಮ ಕಲಾ ನಿಕ್ಷೇಪಗಳನ್ನು ಪರಂಪರಾಗತ ಮೌಲ್ಯಗಳನ್ನೂ ಉಳಿಸುವ, ಸಂಗ್ರಹಿಸುವ ಕೆಲಸಕ್ಕೆ ಅತ್ಯಗತ್ಯವಷ್ಟೇ ಅಲ್ಲ, ಶ್ರೀಮಂತವಾದ

ಕಲೆಗಳನ್ನು ಜನತೆಯು ಸಮೀಪಕ್ಕೆ ತಂದು ಅವರು ನೋಡಿ ಸಂತೋಷಪಡುವಂತೆ ಮಾಡುತ್ತವೆ.

ರಾಜ್ಯ ಸರ್ಕಾರದ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆಯ ಮಾರ್ಗದರ್ಶನದಲ್ಲಿ ಒಂದು ಕಲಾಶಾಲೆಯೂ ಸೇರಿದಂತೆ, ವಸ್ತು ಸಂಗ್ರಹಾಲಯಗಳು ಎಂದು ವರ್ಗೀಕರಿಸ ಲಾಗಿರುವ ಹನ್ನೊಂದು ಸಂಸ್ಥೆಗಳಿವೆ. ಭಾರತದ ಪುರಾತತ್ವ ವಿಭಾಗದ ಮೇಲ್ವಿಚಾರಣೆಯಲ್ಲಿ ಐದು ವಸ್ತು ಸಂಗ್ರಹಾಲಯ ಗಳೂ, ಐದು ಶಿಲ್ಪಶಾಲೆ (ಸ್ಕಲ್ಪ್ಚರ್ ಶೆಡ್) ಗಳೂ ಇವೆ. ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನ ಮಂಡಳಿಯು ಬೆಂಗಳೂರಿನಲ್ಲಿ ಮುಖ್ಯ ಕಚೇರಿ ಇರುವ ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ವಸ್ತು ಸಂಗ್ರಹಾಲಯದ ನಾಯಕತ್ವದಲ್ಲಿ ಮೂರು ಸಂಸ್ಥೆಗಳನ್ನು ಹೊಂದಿದೆ.

ರಾಜ್ಯದಲ್ಲಿ ಮೂರು ವಿಶ್ವವಿದ್ಯಾಲಯ ವಸ್ತುಸಂಗ್ರಹಾ ಲಯಗಳೂ, ಅನೇಕ ಖಾಸಗಿ ವಸ್ತುಸಂಗ್ರಹಾಲಯಗಳೂ ಇರುವುದು ಅತ್ಯಂತ ಹೆಮ್ಮೆಯ ವಿಷಯವಾಗಿವೆ.

### ರಾಜ್ಯ ವಸ್ತು ಸಂಗ್ರಹಾಲಯಗಳು

1960ಕ್ಕೆ ಮುಂಚೆ ರಾಜ್ಯದಲ್ಲಿನ ವಸ್ತುಸಂಗ್ರಹಾಲಯ ಗಳು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ಮೇಲ್ವಿಚಾರಣೆ ಯಲ್ಲಿದ್ದವು. 1960ರಲ್ಲಿ ವಸ್ತುಸಂಗ್ರಹಾಲಯಗಳ ಆಡಳಿತ ವನ್ನು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯಿಂದ ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆಗೆ ಬದಲಾಯಿಸ ಲಾಯಿತು.

**ಸರ್ಕಾರಿ ವಸ್ತು ಸಂಗ್ರಹಾಲಯ, ಬೆಂಗಳೂರು :** ಸಾರ್ವಜನಿಕರು ದಾನಮಾಡಿದ ಮಾದರಿಗಳನ್ನು ಇಟ್ಟುಕೊಂಡು 1865ರಲ್ಲಿ ಬಾಡಿಗೆ ಕಟ್ಟಡವೊಂದರಲ್ಲಿ ಬೆಂಗಳೂರಿನ ಸರ್ಕಾರಿ ವಸ್ತು ಸಂಗ್ರಹಾಲಯ ಕಾರ್ಯಾರಂಭ ಮಾಡಿತು. ಪಾಶ್ಚಿಮಾತ್ಯ ದೇಶಗಳಲ್ಲಿ ಅನುಸರಿಸುವ ಮಾದರಿಯಲ್ಲಿ ಸರ್ಕಾರವು ಕಬ್ಬನ್ ಪಾರ್ಕಿನಲ್ಲೊಂದು ಪ್ರತ್ಯೇಕ ಕಟ್ಟಡವನ್ನು ಕಟ್ಟಿಸಿತು. ವಸ್ತು ಸಂಗ್ರಹಾಲಯವು 1879ರಲ್ಲಿ ಹೊಸ ಕಟ್ಟಡಕ್ಕೆ ವರ್ಗಾವಣೆಯಾಗಿ 1880ರಲ್ಲಿ ಕಾರ್ಯಾರಂಭಿಸಿತು. ಪುರಾತತ್ವ ಇಲಾಖೆಯವರು ಉತ್ಖನನ ಮಾಡಿದ ನಾಣ್ಯಗಳು, ಶಿಲ್ಪಗಳು, ಶಾಸನಗಳು, ಇತ್ಯಾದಿ ನಮೂನೆಗಳನ್ನು ಈ ವಸ್ತು ಸಂಗ್ರಹಾಲಯಕ್ಕೆ ಕೊಡಲಾಯಿತು. ಮತ್ತು ಅವುಗಳನ್ನು ಅಲ್ಲಿ ಪ್ರದರ್ಶಿಸಲಾಯಿತು. ಪ್ರಾಕೃತಿಕ ಚರಿತ್ರೆ, ಕಲೆ ಮತ್ತು ಮಾನವಕುಲ ಶಾಸ್ತ್ರಕ್ಕೆ ಸಂಬಂಧಿಸಿದ ಮಾದರಿಗಳನ್ನು ಪಡೆದು ವಸ್ತು ಸಂಗ್ರಹಾಲಯಕ್ಕೆ ಸೇರಿಸ ಲಾಯಿತು. ಜೊತೆಗೆ, ಲೋಕೋಪಕಾರಿಗಳು ವಿಶೇಷ ಮಾದರಿ ಗಳನ್ನು ದಾನಮಾಡಿದರು. ಮಾದರಿಗಳನ್ನು ಆಧುನಿಕ ಪದ್ಧತಿ ಯಲ್ಲಿ ಪ್ರದರ್ಶಿಸಲು ಕಟ್ಟಡದಲ್ಲಿ ಸ್ಥಳಾವಕಾಶ ಸಾಲದಾಯಿತು. ಎರಡನೇಯ ಮತ್ತು ಮೂರನೇಯ ಯೋಜನೆಗಳ ಅವಧಿಯಲ್ಲಿ ಕೇಂದ್ರ ಸರ್ಕಾರವು, ವಸ್ತುಸಂಗ್ರಹಾಲಯದ ವಿಸ್ತರಣೆಗೆ ಪೀಠೋಪಕರಣಗಳಿಗೆ, ಚಿತ್ರಮಯ ಅಂಚೆಕಾರ್ಡುಗಳನ್ನು ಪ್ರಕಾಶನ ಮಾಡುವುದಕ್ಕೆ ಧನಸಹಾಯ ಮಾಡಿತು. ಬೆಂಗಳೂರಿನ ಈ ವಸ್ತುಸಂಗ್ರಹಾಲಯವು ವಿವಿಧೋದ್ದೇಶ ಲಕ್ಷಣಗಳನ್ನು ಹೊಂದಿದೆ. ಪ್ರಾಕೃತಿಕ ಚರಿತ್ರೆ, ಕಲೆ, ವಾಸ್ತುಶಿಲ್ಪ, ಮಾನವ ಕುಲ ಶಾಸ್ತ್ರ, ಮುಂತಾದವುಗಳಿಗೆ ಇಲ್ಲಿ ಬೇರೆ ಬೇರೆ ಸ್ಥಳಗಳನ್ನು ಒದಗಿಸಲಾಗಿದೆ.

ವಸ್ತುಸಂಗ್ರಹಾಲಯಗಳ ಕೇಂದ್ರೀಯ ಸಲಹಾ ಮಂಡಳಿಯು ದೇಶದಲ್ಲಿ ಪ್ರಾದೇಶಿಕ ವಸ್ತುಸಂಗ್ರಹಾಲಯಗಳನ್ನು ಸ್ಥಾಪಿಸುವ ತೀರ್ಮಾನವನ್ನು ಕೈಗೊಂಡಿತು. ಆ ಸಲಹಾ ಮಂಡಳಿಯ ತೀರ್ಮಾನಗಳಿಗೆ ಅನುಗುಣವಾಗಿ ಮೈಸೂರು ರಾಜ್ಯದಲ್ಲಿ ಪ್ರಾದೇಶಿಕ ವಸ್ತುಸಂಗ್ರಹಾಲಯಗಳನ್ನು ಸ್ಥಾಪಿಸುವ ವಿಷಯ ವನ್ನು ಗಂಭೀರವಾಗಿ ತೆಗೆದುಕೊಳ್ಳಲಾಯಿತು. ಅಂದಿನಿಂದ ಈ ಕೆಳಕಂಡ ಪ್ರಾದೇಶಿಕ ವಸ್ತುಸಂಗ್ರಹಾಲಯಗಳನ್ನು ರಾಜ್ಯ ದಲ್ಲಿ ಸ್ಥಾಪಿಸಲಾಗಿದೆ.

**ಮಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯ :** ಮಂಗಳೂರಿನ ಶ್ರೀಮಂತಿನಿಬಾಯಿ ಸ್ಮಾರಕ ವಸ್ತುಸಂಗ್ರಹಾ ಲಯವು ಪ್ರವಾಸಿಗಳಿಗೆ ಒಂದು ಪ್ರಮುಖ ಆಕರ್ಷಣೆಯಾಗಿದೆ. ಅದರ ಕಟ್ಟಡ ಅತ್ಯಂತ ಸುಂದರವಾಗಿದ್ದು ಹಡಗಿನ ಆಕಾರದಲ್ಲಿದೆ. ಆಕರ್ಷಣೀಯವಾದ ಉದ್ಯಾನದಲ್ಲಿರುವ ಈ ಕಟ್ಟಡದಲ್ಲಿ ಒಂದು ನೆಲಅಂತಸ್ತು, ಮೊದಲ ಅಂತಸ್ತು ಮತ್ತು ಒಂದು ಕೊಠಡಿ ಇರುವ ಬಿಡುಮಾಳಿಗೆ ಮತ್ತು ಬೆಲೆಬಾಳುವ ವಸ್ತುಗಳನ್ನು ಶೇಖರಿಸಲು ನೆಲಮಾಳಿಗೆಯಲ್ಲಿ ಒಂದು ಅಭೇದ್ಯ ಕೊಠಡಿಯೂ ಇದೆ. ತಮ್ಮ ಪ್ರೀತಿಯ ತಾಯಿ ಶ್ರೀಮಂತಿನಿಬಾಯಿಯವರ ನೆನಪನ್ನು ಶಾಶ್ವತ ಮಾಡಲು ವಸ್ತುಸಂಗ್ರಹಾಲಯವೊಂದನ್ನು ವ್ಯವಸ್ಥೆ ಮಾಡುವುದಕ್ಕೋಸ್ಕರ, ದಿವಂಗತರಾದ ಕ॥ ವಿ. ಆರ್. ಮಿರಜ್‌ಕರ್ ಅವರು, 1957ರಲ್ಲಿ ಪ್ರಸ್ತುತ ವಸ್ತುಸಂಗ್ರಹಾ ಲಯವಿರುವ ಶ್ರೀಮಂತಿನೀ ಭವನವನ್ನು ಕೊಡುಗೆಯಾಗಿ ನೀಡಿ ದರು. ದಾನಿಗಳು ಕಟ್ಟಡ ಹಾಗೂ ಅದು ನಿಂತಿರುವ ಭೂಮಿ ಯನ್ನು ದಾನಮಾಡುವಾಗ, ಅಮೂಲ್ಯವಾದ ಕಲಾವಸ್ತುಗಳ ಅಪಾರ ಸಂಗ್ರಹವನ್ನು ದಾನಮಾಡಿದರು. ಅದು ವಸ್ತು ಸಂಗ್ರಹಾಲಯದ ಆರಂಭಕ್ಕೆ ಮೂಲವಾಯಿತು. 1960ರಲ್ಲಿ ಆರಂಭವಾದ ಈ ಸಂಗ್ರಹಾಲಯದ ಕಲಾವಸ್ತುಗಳನ್ನು ಕಲೆ, ಪುರಾತತ್ವ, ಮಾನವಕುಲಶಾಸ್ತ್ರ ಮತ್ತು ಪ್ರಾಕೃತಿಕ ವಿಜ್ಞಾನದ ಮಾದರಿಗಳೆಂದು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು. ವಿಶೇಷ ವಸ್ತುಪ್ರದರ್ಶನಗಳನ್ನು ವ್ಯವಸ್ಥೆ ಮಾಡುವುದರ ಜೊತೆ

ಯಲ್ಲಿ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸುವ ಎಲ್ಲ ಅವಕಾಶಗಳನ್ನು ಉಪಯೋಗಿಸಿಕೊಳ್ಳುತ್ತ ಈ ವಸ್ತುಸಂಗ್ರಹಾಲಯವು ಪ್ರಾಂತದಲ್ಲಿ ಇತರ ವಿದ್ಯಾಸಂಸ್ಥೆಗಳು ವ್ಯವಸ್ಥೆ ಮಾಡುವ ವಿಶೇಷ ಪ್ರದರ್ಶನಗಳಲ್ಲಿ ಕಾರ್ಯಾತ್ಮಕವಾಗಿ ಭಾಗ ವಹಿಸುತ್ತಿದೆ. ಸಿ. ಜಿ. ಪದ್ಮನಾಭ ಅವರು ಈ ವಸ್ತುಸಂಗ್ರಹಾಲಯವು ತನ್ನ ಸಂಗ್ರವನ್ನೂ ಹೆಚ್ಚಿಸಿಕೊಳ್ಳಲು ಸಹಾಯ ಮಾಡಿದ್ದಾರೆ.

ಶಿವಮೊಗ್ಗ ಜಿಲ್ಲಾ ವಸ್ತುಸಂಗ್ರಹಾಲಯ : ಜಿಲ್ಲಾ ಕೇಂದ್ರವಾದ ಶಿವಮೊಗ್ಗೆಯಲ್ಲಿ ಒಂದು ವಸ್ತುಸಂಗ್ರಹಾಲಯ ಬೇಕೆಂಬ ಒತ್ತಾಯ ಬಲವಾಗಿತ್ತು. ಅನೇಕ ಸ್ಥಳೀಯ ಜನರ ಮತ್ತು ಅಂದಿನ ಡೆಪ್ಯುಟಿ ಕಮಿಷನರ್ ಆಗಿದ್ದ ಎಚ್. ಎಲ್. ನಾಗೇಗೌಡರ ಸಹಾಯ ಮತ್ತು ಉತ್ಸಾಹಗಳಿಂದ ಶಿವಮೊಗ್ಗ ನಗರದ ಇಂದಿನ ಗ್ರಂಥಭಂಡಾರದ ಕಟ್ಟಡದಲ್ಲಿ 1962ರಲ್ಲಿ ವಸ್ತು ಸಂಗ್ರಹಾಲಯವೊಂದನ್ನು ಪ್ರಾರಂಭಿಸಲಾಯಿತು. ಇಲ್ಲಿನ ಸಂಗ್ರಹದಲ್ಲಿ ವಿಶೇಷವಾಗಿ ಕಲೆ ಮತ್ತು ಪುರಾತತ್ವ ವಸ್ತುಗಳೇ ಹೆಚ್ಚಾಗಿವೆ. ಪ್ರಾಚೀನ ಕದಂಬ ವಂಶದ ಕೇಂದ್ರವಾಗಿದ್ದ ಶಿವಮೊಗ್ಗ ಮತ್ತು ಹತ್ತಿರದ ಉತ್ತರ ಕನ್ನಡ ಜಿಲ್ಲೆಗಳು ಅಪಾರವಾದ ಪುರಾತತ್ವ ವಸ್ತುಗಳನ್ನು ಹೊಂದಿದೆ. ಅವುಗಳನ್ನು ಸಂಗ್ರಹಿಸಿ ವಸ್ತುಸಂಗ್ರಹಾಯವನ್ನು ಅಭಿವೃದ್ಧಿಪಡಿಸುವ ಪ್ರಯತ್ನಗಳು ನಡೆಯುತ್ತಿವೆ.

ಕಲ್ಬುರ್ಗಿ ವಸ್ತುಸಂಗ್ರಹಾಲಯ : ಕಲ್ಬುರ್ಗಿಯ ಸೇಡಂ ರಸ್ತೆಯಲ್ಲಿರುವ ಅವಳಿ ಸಮಾಧಿಗಳನ್ನು ಪ್ರಾಂತೀಯ ವಸ್ತುಸಂಗ್ರಹಾಲಯಕ್ಕೋಸ್ಕರ ನವೀಕರಿಸಲಾಯಿತು. ಚಿತ್ತಾಪುರ ತಾಲೂಕಿನ ಸನ್ನತಿ ನಿವೇಶನವನ್ನು 1965ರಲ್ಲಿ ಕಂಡುಹಿಡಿಯಲಾಯಿತು ಮತ್ತು ಈ ನಿವೇಶನದ ಮೇಲ್ಮೈ ಸಂಶೋಧನೆಯಿಂದ ಜೇಡಿಮಣ್ಣಿನ ಬೊಂಬೆಗಳು, ಶಿಲಾಮೂರ್ತಿಗಳು ಮತ್ತು ಶಾಸನಗಳು ಮುಂತಾದ ಅನೇಕ ಅಮೂಲ್ಯವಾದ ಪ್ರಾಚೀನ ವಸ್ತುಗಳು ದೊರೆತಿವೆ. ಅಮೂಲ್ಯವಾದ ಆ ಪ್ರಾಚೀನ ಅವಶೇಷಗಳನ್ನು ಈ ವಸ್ತುಸಂಗ್ರಹಾಲಯದಲ್ಲಿಡಲಾಗಿದೆ. ಅದರ ಜೊತೆಗೆ ನಾಣ್ಯಗಳು, ಪ್ರಾಗೈತಿಹಾಸಿಕ ಆಯುಧಗಳು ಮುಂತಾದ ವಸ್ತುಗಳ ಸಂಗ್ರಹವೂ ಇಲ್ಲಿದೆ. 1973-74ರ ವರ್ಷಾವಧಿಯಲ್ಲಿ ಕ್ರಿ.ಪೂ. ಎರಡನೇಯ ಶತಮಾನದಿಂದ ಹಿಡಿದು ಕ್ರಿ.ಶ. 11ನೇಯ ಶತಮಾನದವರೆಗಿನ ಅಪಾರವಾದ ಶಿಲ್ಪಗಳನ್ನು ಈ ವಸ್ತುಸಂಗ್ರಹಾಲಯದಲ್ಲಿ ಸೇರಿಸಲಾಯಿತು.

ಬಸವಕಲ್ಯಾಣದ ವಸ್ತುಸಂಗ್ರಹಾಲಯ : ಪ್ರಾಚೀನ ರಾಜಧಾನಿಯಾದ ಬಸವಕಲ್ಯಾಣದಲ್ಲಿ ಹಳೆಯ ಕೋಟೆಯೊಂದಿದೆ. ಆ ಕೋಟೆಯ ಒಳಗೆ ವಸ್ತುಸಂಗ್ರಹಾಲಯವೊಂದನ್ನು ಪ್ರಾರಂಭಿಸಲಾಗಿದೆ. ಈ ವಸ್ತುಸಂಗ್ರಹಾಲಯದಲ್ಲಿ ಶಾಸನಗಳು, ಶಿಲ್ಪಗಳು, ಮುಂತಾದ ವಸ್ತುಗಳ ಮಾದರಿಗಳಿವೆ ಮತ್ತು ಅವುಗಳಲ್ಲಿ ಬಹುಪಾಲು ಸಂಪದ್ಯುಕ್ತ ಸಾಂಸ್ಕೃತಿಕ ಪರಂಪರೆಯನ್ನು ಪಡೆದಿರುವ ಈ ಪ್ರಾಂತದಿಂದಲೇ ಬಂದಿವೆ.

ಮಡಿಕೇರಿ ವಸ್ತುಸಂಗ್ರಹಾಲಯ : 1971ರಲ್ಲಿ ಪ್ರಾರಂಭವಾದ ಮಡಿಕೇರಿ ವಸ್ತುಸಂಗ್ರಹಾಲಯವು ಸದ್ಯದಲ್ಲಿ ಹಳೆಯ ಚರ್ಚ್ ಒಂದರಲ್ಲಿದೆ. ಇಲ್ಲಿ ಸುತ್ತಮುತ್ತಿನ ಪ್ರದೇಶಗಳಿಂದ ಸಂಗ್ರಹಿಸಿದ ಪ್ರಾಚೀನ ಅವಶೇಷಗಳನ್ನು ಇಡಲಾಗಿದೆ. ತೀರ್ಥಂಕರ ವಿಗ್ರಹಗಳು ಹೆಚ್ಚಾಗಿರುವ ಅನೇಕ ಶಿಲ್ಪಗಳು, ಕೊಡಗಿನ ದೊರೆಗಳಿಗೆ ಸೇರಿದ ಅಸಂಖ್ಯವಾದ ನಾಣ್ಯಗಳು ಮತ್ತು ಹಸ್ತಪ್ರತಿಗಳು, ಈ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಿಲಾದ ಪ್ರಾಚೀನ ಅವಶೇಷಗಳಲ್ಲಿ ಮುಖ್ಯವಾಗಿದೆ. 1974-75ರ ವರ್ಷದಲ್ಲಿ ಇಲ್ಲಿನ ಕಲಾವಸ್ತುಗಳನ್ನು ಉತ್ತಮವಾಗಿ ಪ್ರದರ್ಶಿಸುವುದಕ್ಕೋಸ್ಕರ ಬರೋಡದಿಂದ ಹಕ್ಕ ಪ್ರದರ್ಶನ ಸಾಮಗ್ರಿಗಳನ್ನು ಕೊಳ್ಳಲಾಯಿತು. ಅದೇ ವರ್ಷದಲ್ಲಿ ಜನರಲ್ ಕೆ. ಎಂ. ಕಾರಿಯಪ್ಪನವರು ದಾನಮಾಡಿದ ಪ್ರಾಚೀನ ವಸ್ತುಗಳು ಮತ್ತು ಕಲಾವಸ್ತುಗಳು ಸೇರಿದುದರಿಂದ ವಸ್ತುಸಂಗ್ರಹಾಲಯ ಮತ್ತಷ್ಟು ಶ್ರೀಮಂತವಾಯಿತು.

ಚಿತ್ರದುರ್ಗ ವಸ್ತುಸಂಗ್ರಹಾಲಯ : ಚಿತ್ರದುರ್ಗದ ಸ್ಥಳೀಯ ಪ್ರಾಚೀನ ಅವಶೇಷಗಳ ವಸ್ತುಸಂಗ್ರಹಾಲಯವು ದಿ|| ಹುಲ್ಲೂರು ಶ್ರೀನಿವಾಸ ಜೋಯಿಸ್ ಅವರ ವೈಯಕ್ತಿಕ ಪ್ರಯತ್ನಗಳ ಫಲ. ಮೊದಮೊದಲು 1947ರಲ್ಲಿ, ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆಯವರು ಚಂದ್ರವಳ್ಳಿ ನಿವೇಶನದಲ್ಲಿ ಉತ್ಖನನ ನಡೆಸಿದಾಗ ದೊರೆತ ಪ್ರಾಚೀನ ಅವಶೇಷಗಳು ಮಾತ್ರ ಇಲ್ಲಿದ್ದವು. ಅನಂತರ ಸುತ್ತಮುತ್ತಲಿನ ಪ್ರದೇಶಗಳಿಂದ ಅದು ತನ್ನ ಸಂಗ್ರಹವನ್ನು ಹೆಚ್ಚಿಸಿಕೊಂಡಿತು. ವಸ್ತುಸಂಗ್ರಹಾಲಯದ ಗೌರವ ಕ್ಯೂರೇಟರ್ ಆಗಿದ್ದ ಪಾಂಡುರಂಗ ಜೋಯಿಸರು (ದಿವಂಗತ ಹುಲ್ಲೂರು ಶ್ರೀನಿವಾಸಜೋಯಿಸರ ಮಗ) ಅದೇ ಪರಂಪರೆಯನ್ನು ಮುಂದುವರಿಸಿದರು. ಕೆಲವು ಕಾಲದ ನಂತರ ಈ ವಸ್ತುಸಂಗ್ರಹಾಲಯವು ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆಯ ಆಡಳಿತಕ್ಕೆ ಸೇರಿತು. ಚಿತ್ರದುರ್ಗದ ಕೋಟೆಯ ರಂಗಯ್ಯನ ಬಾಗಿಲಿನ ಬಳಿ ಇರುವ ಎರಡು ಕೊಠಡಿಗಳಲ್ಲಿ ಈ ವಸ್ತುಸಂಗ್ರಹಾಲಯವಿದೆ. ಇಲ್ಲಿರುವ ಅನೇಕ ಪ್ರಾಚೀನ ಅವಶೇಷಗಳು ಪ್ರಸಿದ್ಧರಾದ ಚಿತ್ರದುರ್ಗದ ನಾಯಕರಿಗೆ ಸೇರಿದುದಾಗಿವೆ.

ಕಿತ್ತೂರು ವಸ್ತುಸಂಗ್ರಹಾಲಯ : ವಿದ್ಯಾಮಂತ್ರಿಗಳಾಗಿದ್ದ ಎಸ್. ಆರ್. ಕಂಠಿಯವರ ಅಪಾರ ಆಸಕ್ತಿಯ ಕಾರಣ ಕಿತ್ತೂರಿನ ರಾಣಿ ಚೆನ್ನಮ್ಮನ ಸ್ಮಾರಕವಾಗಿ ವಸ್ತುಸಂಗ್ರಹಾಲಯವೊಂದು 1967ರಲ್ಲಿ ಅಸ್ತಿತ್ವಕ್ಕೆ ಬಂದಿತು. ಕಿತ್ತೂರಿನ

ಅರಮನೆಯ ಅವಶೇಷಗಳಿಗೆ ಕೆಲವೇ ಗಜಗಳ ದೂರದಲ್ಲಿ, ಕಿತ್ತೂರಿನ ಪ್ರಾಚೀನ ಕೋಟೆಯೊಳಗೆ ಸ್ವಂತ ಕಟ್ಟಡದಲ್ಲಿ ಈ ವಸ್ತುಸಂಗ್ರಹಾಲಯವಿದೆ. ಇಲ್ಲಿ ಆಯುಧಗಳು, ನಾಣ್ಯಗಳು ಶಿಲ್ಪಗಳು ಮತ್ತು ಶಾಸನಗಳ ಮಾದರಿಗಳಿವೆ. ಕಿತ್ತೂರಿನ ರಾಣಿ ಚೆನ್ನಮ್ಮ ಸ್ಮಾರಕ ಸಮಿತಿಯವರು ಕೋಟೆಯೊಳಗೇ ಹೊಂದಿಕೊಂಡಂತಿರುವ ನಿವೇಶನವೊಂದನ್ನು ವಸ್ತುಸಂಗ್ರಹಾಲಯದ ಕಟ್ಟಡ ನಿರ್ಮಾಣಕ್ಕೆಂದು ದಾನಮಾಡಿದ್ದಾರೆ.

**ಹಾಸನ ವಸ್ತು ಸಂಗ್ರಹಾಲಯ :** ನಗರದ ಮಧ್ಯದ ಮಹಾರಾಜಾ ಪಾರ್ಕ್‌ನಲ್ಲಿರುವ, ನಗರಸಭೆಯವರು ನೀಡಿರುವ ಸಣ್ಣ ಕಟ್ಟಡವೊಂದರಲ್ಲಿ, ಹಾಸನ ಜಿಲ್ಲಾ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲಾಯಿತು. ವಿಶ್ವಪ್ರಸಿದ್ಧವಾದ ಬೇಲೂರು ಮತ್ತು ಹಳೇಬೀಡು ದೇವಸ್ಥಾನಗಳನ್ನು ನೋಡಲು ಹೋಗುವುದಕ್ಕೆ ಮುಂಚಿತವಾಗಿ ಪ್ರವಾಸಿಗಳಿಗೆ ಹೊಯ್ಸಳರ ಕಾಲದ ಕಲೆ ಮತ್ತು ಶಿಲ್ಪಗಳ ಬಗೆಗೆ ಪರಿಚಯವನ್ನು ನೀಡುವುದೇ ಈ ವಸ್ತು ಸಂಗ್ರಹಾಲಯದ ಉದ್ದೇಶ. ಈ ಜಿಲ್ಲೆಯ ಅತ್ಯಂತ ಉತ್ತಮವಾದ ಹೊಯ್ಸಳ ಶಿಲ್ಪಗಳು, ಕರ್ನಾಟಕದ ನಾಣ್ಯಗಳು, ಆಯುಧಗಳು ಇಲ್ಲಿನ ಸಂಗ್ರಹದಲ್ಲಿ ಸೇರಿವೆ.

**ರಾಯಚೂರು ವಸ್ತು ಸಂಗ್ರಹಾಲಯ:** ರಾಯಚೂರಿನ ನಗರ ಸಭೆಯವರು ಒದಗಿಸಿರುವ ನಗರ ಪಾರ್ಕಿನ ಮಧ್ಯೆ ಇರುವ ಹಳೆಯ ಮುನಿಸಿಪಲ್ ವಿಶ್ರಾಂತಿ ಗೃಹದಲ್ಲಿ ಈ ವಸ್ತು ಸಂಗ್ರಹಾಲಯವಿದೆ. ರಾಯಚೂರು ಜಿಲ್ಲೆಯ ಕಲೆ, ಶಿಲ್ಪ ಮತ್ತು ಪುರಾತತ್ವ ವಿಷಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ವಸ್ತು ಸಂಗ್ರಹಾಲಯವನ್ನು ವ್ಯವಸ್ಥೆ ಮಾಡಲಾಯಿತು. ಇದು ಸ್ಥಳೀಯ ವಸ್ತು ಸಂಗ್ರಹಾಲಯವೂ ಆಗಿದ್ದು, ಜಿಲ್ಲೆಯ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡುವ ಕೆಲಸವನ್ನೂ ಮಾಡುತ್ತಿದೆ. ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶಕರ ಅಧೀನದಲ್ಲಿರುವ ಎಲ್ಲಾ ಜಿಲ್ಲಾ ಮತ್ತು ಸ್ಥಳೀಯ ವಸ್ತು ಸಂಗ್ರಹಾಲಯಗಳು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದು, ಶೈಕ್ಷಣಿಕ ಕಾರ್ಯಕ್ರಮಗಳಾದ ವಸ್ತು ಪ್ರದರ್ಶನ, ಉಪನ್ಯಾಸ ಮತ್ತು ಸಾಂಸ್ಕೃತಿಕ ಪರಂಪರೆಯ ಮೇಲೆ ಚಿತ್ರ ಪ್ರದರ್ಶನಗಳನ್ನು ಹೊಂದಿದ್ದು, ನಮ್ಮ ಪರಂಪರೆಯ ಮೌಲ್ಯಗಳ ಬಗ್ಗೆ ಸಾರ್ವಜನಿಕರಲ್ಲಿ ಅರಿವನ್ನು ಮೂಡಿಸುತ್ತವೆ.

**ವೆಂಕಟಪ್ಪ ಕಲಾಶಾಲೆ :** ರಾಜ್ಯದ ರಾಜಧಾನಿಯಲ್ಲಿ, ಒಂದು ಕಲಾ ಶಾಲೆಯನ್ನು ಸ್ಥಾಪಿಸುವುದರ ಬಗ್ಗೆ ರಾಜ್ಯ ಸರ್ಕಾರವು ಗಂಭೀರವಾಗಿ ಯೋಚಿಸುತ್ತಿತ್ತು. ಅಂತರರಾಷ್ಟ್ರೀಯ ಪ್ರಸಿದ್ಧಿ ಪಡೆದ ಕಲಾವಿದರಾದ ದಿವಂಗತ ಕೆ. ವೆಂಕಟಪ್ಪನವರ ಸೋದರಳಿಯ ರಾಮರಾಜು ಅವರು, ವೆಂಕಟಪ್ಪನವರ ಕಲಾಕೃತಿಗಳನ್ನು ರಾಜ್ಯ ಸರ್ಕಾರಕ್ಕೆ ಕೊಡುಗೆಯಾಗಿ ನೀಡಿದಾಗ ಸರ್ಕಾರದ ಯೋಚನೆ—ಆಸೆಗಳು ಕಾರ್ಯ ರೂಪಕ್ಕೆ ಬಂದವು. ಕೆ. ವೆಂಕಟಪ್ಪನವರ ಪ್ರಸಿದ್ಧ ವರ್ಣಚಿತ್ರಗಳ, ಪ್ಲಾಸ್ಟರ್ ಆಫ್ ಪ್ಯಾರಿಸ್ ಕೃತಿಗಳ ಮತ್ತು ಸಂಗೀತ ವಾದ್ಯಗಳ ಸಂಗ್ರಹವನ್ನೂ ಮೂಲವಾಗಿಟ್ಟುಕೊಂಡು, 1966ರಲ್ಲಿ ಒಂದು ಕಲಾ ಶಾಲೆಯನ್ನು ಸ್ಥಾಪಿಸಬೇಕೆಂದು ರಾಜ್ಯ ಸರ್ಕಾರವು ತೀರ್ಮಾನಿಸಿತು. ಅದಕ್ಕಾಗಿ ಹೊಸ ಕಟ್ಟಡವೊಂದನ್ನು ಬೆಂಗಳೂರಿನ ಸರ್ಕಾರಿ ವಸ್ತು ಸಂಗ್ರಹಾಲಯದ ಪಕ್ಕದಲ್ಲಿ ನಿರ್ಮಿಸಲಾಯಿತು. ಸಣ್ಣ ದ್ವೀಪದಲ್ಲಿರುವ ಈ ಹೊಸ ಕಟ್ಟಡಕ್ಕೆ ಕಲಾವಿದ ವೆಂಕಟಪ್ಪನವರ ಹೆಸರನ್ನೇ ಇಡಲಾಗಿದೆ. ಪೂರ್ಣವಾಗಿ ಈ ಕಲಾಶಾಲೆಯನ್ನು ಹವಾ ನಿಯಂತ್ರಿತವಾಗಿ ಮಾಡುವ ಯೋಜನೆ ಇದೆ. ಈ ಕಟ್ಟಡವು ಮುಂದೆ ಐದು ಅಂತಸ್ತುಗಳನ್ನು ಪಡೆಯುವಂತೆ ಯೋಜಿಸಲಾಗಿದೆ. ಆಗಾಗ್ಗೆ ಈ ಕಲಾ ಶಾಲೆಯಲ್ಲಿ ಬೇರೆ ಬೇರೆ ಕಲಾ ಪ್ರದರ್ಶನಗಳನ್ನು ಏರ್ಪಾಡು ಮಾಡಲಾಗುತ್ತದೆ.

### ಪುರಾತತ್ವ ಸರ್ವೇಕ್ಷಣ ವಿಭಾಗದ ಆಡಳಿತದಲ್ಲಿರುವ ವಸ್ತು ಸಂಗ್ರಹಾಲಯಗಳು

ಭಾರತದ ಪುರಾತತ್ವ ಸರ್ವೇಕ್ಷಣವು ದೇಶದ ಎಲ್ಲೆಡೆಯಲ್ಲಿ ಐತಿಹಾಸಿಕ ನಿವೇಶನಗಳಲ್ಲೇ ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸಲು ತೀರ್ಮಾನಿಸಿತು. ಅಂತಹ ನಾಲ್ಕು ವಸ್ತು ಸಂಗ್ರಹಾಲಯಗಳನ್ನು ಕರ್ನಾಟಕ ರಾಜ್ಯದಲ್ಲಿ ಐತಿಹಾಸಿಕವಾಗಿ ಪ್ರಮುಖವಾದ ಹಳೇಬೀಡು, ಹಂಪಿ, ವಿಜಾಪುರ ಮತ್ತು ಶ್ರೀರಂಗಪಟ್ಟಣಗಳಲ್ಲಿ ಸ್ಥಾಪಿಸಲಾಯಿತು. ಈಗ ಶಿಲ್ಪಶಾಲೆಗಳಿರುವ ಬಾದಾಮಿ ಮತ್ತು ಐಹೊಳೆಗಳಲ್ಲಿ ಮತ್ತೆರಡು ನಿವೇಶನ ವಸ್ತು ಸಂಗ್ರಹಾಲಯಗಳನ್ನು ಮುಂದೆ ಸ್ಥಾಪಿಸಲಾಗುವುದು.

ಹಳೇಬೀಡಿನ ವಸ್ತುಸಂಗ್ರಹಾಲಯವು ಹೊಯ್ಸಳೇಶ್ವರ ದೇವಸ್ಥಾನದ ಪ್ರಾಕಾರದೊಳಗೇ ಇದೆ. ದೇವಸ್ಥಾನದ ಪ್ರಾಕಾರದ ಬಯಲಿನ ಮೂಲೆಯೊಂದರಲ್ಲಿ ಶಿಲ್ಪ ವಸ್ತು ಸಂಗ್ರಹಾಲಯವನ್ನು ವ್ಯವಸ್ಥೆ ಮಾಡಲಾಗಿದೆ. ಇಲ್ಲಿ ಹಳೇಬೀಡಿನ ಸುತ್ತುಮುತ್ತ ದೊರಕಿದ ಶಿಲ್ಪಗಳನ್ನು ಸಂಗ್ರಹಿಸಲಾಗಿದೆ. ಈ ಪ್ರಾಂತವೆಲ್ಲ ಶಿಲ್ಪ ಸಂಪತ್ತಿನಿಂದ ಕೂಡಿದ್ದು ಅವುಗಳನ್ನು ಕ್ರಮಬದ್ಧವಾಗಿ ಸಂಗ್ರಹಿಸಿ ಇಲ್ಲಿ ರಕ್ಷಿಸಲಾಗಿದೆ.

ಇನ್ನೊಂದು ನಿವೇಶನ ವಸ್ತು ಸಂಗ್ರಹಾಲಯ ಇರುವುದು ಹಂಪಿ ಅಥವಾ ವಿಜಯನಗರದಲ್ಲಿ. ವಿಜಯನಗರದ ಕಮಲಾಪುರದಲ್ಲಿ ಈ ವಸ್ತು ಸಂಗ್ರಹಾಲಯವಿದೆ. ಅಲ್ಲಿ ನಾಣ್ಯಗಳು, ತಾಮ್ರ ಪಟಗಳು, ಕಲಾ ವಸ್ತುಗಳು, ಆಯುಧಗಳು, ಶಿಲ್ಪಗಳು ಮುಂತಾದವುಗಳನ್ನು ಪ್ರದರ್ಶಿಸಲಾಗಿದೆ.

ಆದಿಲ್‌ಶಾಹಿಗಳ ರಾಜಧಾನಿಯಾಗಿದ್ದ ವಿಜಾಪುರ ನಗರದಲ್ಲಿ ಗೋಲ್‌ಗುಂಬಜ್ ಬಳಿಯಿರುವ ನಗಾರ್‌ಖಾನಾ ಕಟ್ಟಡದಲ್ಲಿ

ವಸ್ತುಸಂಗ್ರಹಾಲಯವೊಂದನ್ನು ವ್ಯವಸ್ಥೆ ಮಾಡಲಾಗಿದೆ. ಇಲ್ಲಿರುವ ಸಂಗ್ರಹದಲ್ಲಿ ಬಾಹುಮುನಿ ಅರಸರ ಕಾಲದ ಸುಂದರವಾದ ಚಿಕಣಿ ವರ್ಣಚಿತ್ರಗಳು, ಹಸ್ತಪ್ರತಿಗಳು, ಶಸ್ತ್ರಗಳು, ಶಿಲ್ಪಗಳು, ಶಾಸನಗಳು ಮತ್ತು ನಾಣ್ಯಗಳು ಇವೆ. ಪ್ರಾಂತೀಯ ಪ್ರಾಚೀನ ಅವಶೇಷಗಳನ್ನು ಸಂಗ್ರಹಿಸುವ ಮತ್ತು ಅವುಗಳನ್ನು ಸಾರ್ವಜನಿಕರ ಉಪಯೋಗಕ್ಕೆಂದು ಪ್ರದರ್ಶಿಸುವ ಉದ್ದೇಶ ಈ ವಸ್ತು ಸಂಗ್ರಹಾಲಯದ್ದು.

ಶ್ರೀರಂಗಪಟ್ಟಣದಲ್ಲಿ 1959ರಲ್ಲಿ ವ್ಯವಸ್ಥೆ ಮಾಡಲಾದ ನಿವೇಶನ ವಸ್ತು ಸಂಗ್ರಹಾಲಯವು, ಟಿಪ್ಪು ಸುಲ್ತಾನನ ಬೇಸಿಗೆ ಅರಮನೆ ದರಿಯಾದೌಲತ್ತಿನಲ್ಲಿದೆ. ವಿಶೇಷವಾಗಿ, ನಾಣ್ಯಗಳು ಮತ್ತು ವರ್ಣಚಿತ್ರಗಳಿರುವ ಇಲ್ಲಿ ಸ್ಥಳೀಯ ಪ್ರಾಚೀನ ಅವಶೇಷಗಳ ಸಂಗ್ರಹವಿದೆ.

ಇತ್ತೀಚೆಗೆ ಕಲಾವಸ್ತು ಸಂಪತ್ತನ್ನು ಕಳವು ಮಾಡುವುದು ಹೆಚ್ಚಾಗುತ್ತಿದೆ. ಆದ ಕಾರಣ ಭಾರತದ ಪುರಾತತ್ವ ಸರ್ವೇಕ್ಷಣವು ಮುಖ್ಯ ನಿವೇಶನಗಳಿಂದ ಶಿಲ್ಪಗಳನ್ನು ಸಂಗ್ರಹಿಸಿ ವಿಶೇಷವಾಗಿ ನಿರ್ಮಿಸಲಾದ ಶಿಲ್ಪ ಶಾಲೆಗಳಲ್ಲಿ ಇಟ್ಟು, ಅವನ್ನು ಪುರಾತತ್ವ ವಿಭಾಗದ ಅಧಿಕಾರಿಯೊಬ್ಬರ ಉಸ್ತುವಾರಿಗೆ ಒಪ್ಪಿಸುವ ಯೋಜನೆಯೊಂದನ್ನು ಮಾಡಿಕೊಂಡಿದೆ. ಕರ್ನಾಟಕ ರಾಜ್ಯದಲ್ಲಿ ಪಟ್ಟದಕಲ್ಲು, ಲಕ್ಕುಂಡಿ, ಬಾಗಳಿ, ಬೆಳ್ಳಾವಿಗಳಲ್ಲಿ ಇಂಥ ಶಿಲ್ಪ ಸಂಗ್ರಹ ಗೃಹಗಳಿವೆ. ಇತ್ತೀಚೆಗೆ ಬನವಾಸಿಯಲ್ಲೂ ಒಂದು ಶಿಲ್ಪ ಸಂಗ್ರಹವನ್ನು ಪ್ರಾರಂಭಿಸಲಾಗಿದೆ. ಈ ನಿವೇಶನಗಳು ಸುತ್ತಮುತ್ತಲ ಪ್ರದೇಶಗಳಿಂದ ಸಂಗ್ರಹಿಸಿದ ಅಮೂಲ್ಯವಾದ ಶಿಲ್ಪಗಳ ಸಂಗ್ರಹವಾಗಿದೆ. ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿ ಭಾರತದ ಪುರಾತತ್ವ ವಿಭಾಗದ ನಿವೃತ್ತ ಪುರಾತತ್ವ ಮುಖ್ಯಸ್ಥರಾದ ಡಾ|| ಎಸ್. ಆರ್. ರಾವ್ ಅವರು ಕೈಗೊಂಡ ಸೊಗಸಾದ ರಕ್ಷಣಾತ್ಮಕ ಕಾರ್ಯಗಳಿಂದ, ಪ್ರಾಚೀನ ಚಾಳುಕ್ಯರ ಕಾಲದ ಅಪೂರ್ವ ಶಿಲ್ಪಗಳು ಬೆಳಕಿಗೆ ಬಂದವು. ಅವುಗಳನ್ನು ಈಗ ಈ ಶಿಲ್ಪ ಸಂಗ್ರಹ ಗೃಹಗಳಲ್ಲಿ ಇಡಲಾಗಿದೆ.

### ವಿಜ್ಞಾನ ವಸ್ತು ಸಂಗ್ರಹಾಲಯಗಳು

ಕೈಗಾರಿಕಾ ಸಂಶೋಧನ ಮಂಡಳಿಯು ಕಲ್ಕತ್ತಾ ಮತ್ತು ಬೆಂಗಳೂರಿನಲ್ಲಿ ಒಂದೊಂದು ವಿಜ್ಞಾನ ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸಿತು. ಸರ್ ಎಂ. ವಿಶ್ವೇಶ್ವರಯ್ಯನವರ ನೆನಪನ್ನು ಶಾಶ್ವತ ಮಾಡುವ ಉದ್ದೇಶದಿಂದ, ವಿಶ್ವೇಶ್ವರಯ್ಯ ಕೈಗಾರಿಕಾ ವಸ್ತು ಸಂಗ್ರಹಾಲಯ ಸಂಘವು ಬೆಂಗಳೂರಿನ ಕಸ್ತೂರ್‌ಬಾ ರಸ್ತೆಯಲ್ಲಿ ವಸ್ತು ಸಂಗ್ರಹಾಲಯ ಕಟ್ಟಡವೊಂದನ್ನು ನಿರ್ಮಿಸಿತು. ಈ ಸಂಘವು, ಕೈಗಾರಿಕೆ ಮತ್ತು ತಾಂತ್ರಿಕ ವಸ್ತು ಸಂಗ್ರಹಾಲಯಗಳನ್ನು ವ್ಯವಸ್ಥೆ ಮಾಡುವುದಕ್ಕೆಂದು 1962ರಲ್ಲಿ ಆ ಕಟ್ಟಡವನ್ನು ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನ ಮಂಡಳಿಗೆ ದಾನ ಮಾಡಿತು. ಇಂದು ಆ ಕಟ್ಟಡದಲ್ಲಿ ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕ ವಸ್ತು ಸಂಗ್ರಹಾಲಯವಿದೆ. ವಿಜ್ಞಾನ, ತಾಂತ್ರಿಕ ವಿಜ್ಞಾನ ಮತ್ತು ಕೈಗಾರಿಕೆಗಳ ಬೆಳವಣಿಗೆಯಲ್ಲಿ ಗಮನಾರ್ಹವಾದ ಹೆಜ್ಜೆಗಳನ್ನು ಪ್ರತಿನಿಧಿಸುವ ಐತಿಹಾಸಿಕ ವಸ್ತುಗಳನ್ನು ಸಂಗ್ರಹಿಸಿ ಜೋಡಿಸಿ, ರಕ್ಷಿಸುವುದು, ವಿಜ್ಞಾನ ಮತ್ತು ತಾಂತ್ರಿಕ ವಿಜ್ಞಾನಗಳ ಬೆಳವಣಿಗೆ, ಕೈಗಾರಿಕೆ ಮತ್ತು ಮಾನವ ಯೋಗಕ್ಷೇಮಗಳ ಮೇಲೆ ಅವುಗಳ ಪ್ರಯೋಗವನ್ನು ಚಿತ್ರಿಸುವುದು—ಇತ್ಯಾದಿ ಈ ವಸ್ತು ಸಂಗ್ರಹಾಲಯದ ಉದ್ದೇಶ ಮತ್ತು ಗುರಿ ಆಗಿದೆ. ಈ ವಸ್ತುಸಂಗ್ರಹಾಲಯದ "ವಿದ್ಯುತ್ ತಂತ್ರ"ದ ಮೊದಲ ಪ್ರದರ್ಶನಾಲಯವನ್ನು 1965ರಲ್ಲೂ "ಚಾಲಕ ಶಕ್ತಿ"ಯ ಎರಡನೇಯ ಶಾಲೆಯನ್ನು 1967ರಲ್ಲೂ, ತೆರೆಯಲಾಯಿತು. ಮೂರನೇಯದಾದ 'ಜನಪ್ರಿಯ ವಿಜ್ಞಾನ' ಶಾಲೆಯನ್ನು 1969ರಲ್ಲಿ ಉದ್ಘಾಟಿಸಲಾಯಿತು. ನಾಲ್ಕನೇಯ 'ಮರ ಮತ್ತು ಕಾಗದ'ದ ಪ್ರದರ್ಶನವನ್ನು 1970ರಲ್ಲಿ ತೆರೆಯಲಾಯಿತು. ಅದಕ್ಕೆ 1978ರಲ್ಲಿ 'ಲೋಹ ವಿಭಾಗ'ವನ್ನು ಸೇರಿಸಲಾಯಿತು. ಈ ನಾಲ್ಕು ಶಾಲೆಗಳ ಜೊತೆಯಲ್ಲಿ ವಿಶ್ವೇಶ್ವರಯ್ಯನವರ ಜೀವನ ಮತ್ತು ಚಟುವಟಿಕೆಗಳ ಚಿತ್ರಗಳು, ವಿವಿಧ ಅದುರು ಮತ್ತು ಖನಿಜಗಳು, ಹಾಗೂ ಬಾಹ್ಯಾಕಾಶ ನೌಕೆಗಳ ಬಗೆಬಗೆಯ ಮಾದರಿಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಎಲ್ಲ ಶಾಲೆಗಳಲ್ಲಿ ಸ್ವಲ್ಪ ಮಟ್ಟಿನ ಐತಿಹಾಸಿಕ ಹಿನ್ನೆಲೆಯನ್ನು ಒದಗಿಸಲಾಗಿದೆ ಮತ್ತು ವಸ್ತುಗಳನ್ನು ಕ್ರಮವಾದ ಕಥೆಯೊಂದನ್ನು ಹೇಳುವ ರೀತಿಯಲ್ಲಿ ಜೋಡಿಸಲಾಗಿದೆ. ಆಧುನಿಕ ವಸ್ತುಸಂಗ್ರಹಾಲಯದ ಮಟ್ಟಕ್ಕೆ ತಕ್ಕಂತೆ ಪ್ರದರ್ಶನ ವಸ್ತುಗಳನ್ನು ರೂಪಿಸಲಾಗಿದೆ. ಮತ್ತು ಅವುಗಳೆಲ್ಲಾ ಸಹಭಾಗಿ ಪ್ರದರ್ಶನ ವಸ್ತುಗಳಾಗಿವೆ. ಬೇಡಿಕೆ ಬಂದರೆ ಗೊತ್ತಾದ ಸಮಯಗಳಲ್ಲಿ ಎಲ್ಲಾ ಶಾಲೆಗಳಿಗೂ ಮಾರ್ಗದರ್ಶಕ ಪ್ರವಾಸ ಮಾಡಿಸಲಾಗುತ್ತದೆ. ಮತ್ತು ಕಾರ್ಯಶೀಲವಾದ ಕೆಲವು ಮುಖ್ಯ ಪ್ರದರ್ಶನ ವಸ್ತುಗಳಿಂದ ಪ್ರದರ್ಶನವನ್ನು ತೋರಿಸಲಾಗುತ್ತದೆ.

1978ರಲ್ಲಿ ದೇಶದ ಎಲ್ಲಾ ವಿಜ್ಞಾನ ವಸ್ತು ಸಂಗ್ರಹಾಲಯಗಳನ್ನು ಭಾರತ ಸರ್ಕಾರದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮಂತ್ರಾಲಯದ ಅಧಿಕಾರಕ್ಕೆ ಒಳಪಟ್ಟಿರುವ, ಸ್ವಯಮಧಿಕಾರವುಳ್ಳ ವಿಜ್ಞಾನ ವಸ್ತುಸಂಗ್ರಹಾಲಯಗಳ ರಾಷ್ಟ್ರೀಯ ಮಂಡಳಿಯ ಅಧಿಕಾರಕ್ಕೆ ಒಳಪಡಿಸಲಾಯಿತು.

### ಪ್ರಾದೇಶಿಕ ವಿಜ್ಞಾನ ಕೇಂದ್ರಗಳು

ವಿಜ್ಞಾನದ ವಿಷಯದಲ್ಲಿ ಸಾರ್ವಜನಿಕರ ತಿಳುವಳಿಕೆಯನ್ನು ಹೆಚ್ಚಿಸಲು ಕ್ರಿಯಾತ್ಮಕವಾಗಿ ಭಾಗವಹಿಸುವ ವಿಶ್ವೇಶ್ವರಯ್ಯ

ಕೈಗಾರಿಕಾ ಮತ್ತು ತಾಂತ್ರಿಕ ವಸ್ತುಸಂಗ್ರಹಾಲಯದ ಅಧಿಕಾರಕ್ಕೆ ಒಳಪಟ್ಟಿರುವ ಎರಡು ಬೇರೆ ಬೇರೆ ಶಾಖೆಗಳಿವೆ. ಒಂದು ಪ್ರಾದೇಶಿಕ ವಿಜ್ಞಾನ ಕೇಂದ್ರ, ಮತ್ತೊಂದು ಸಂಚಾರಿ ವಿಜ್ಞಾನ ವಸ್ತುಪ್ರದರ್ಶನ. "ನಮ್ಮ ಪರಿಚಯದ ವಿದ್ಯುಚ್ಛಕ್ತಿ" ಎಂಬ ವಿಷಯದ 32 ಪ್ರದರ್ಶನ ವಸ್ತುಗಳಿಂದ ಪ್ರಾದೇಶಿಕ ವಿಜ್ಞಾನ ಕೇಂದ್ರ ಕಲ್ಬುರ್ಗಿಯಲ್ಲಿ 1970ರಲ್ಲಿ ಪ್ರಾರಂಭವಾಯಿತು. ಇತ್ತೀಚೆಗೆ, ಆ ವಸ್ತುಗಳನ್ನು ಬದಲಾಯಿಸಿ 'ಜನಪ್ರಿಯ ವಿಜ್ಞಾನ'ದ 32 ಹೊಸ ಪ್ರದರ್ಶನ ವಸ್ತುಗಳನ್ನು ಇಡಲಾಗಿದೆ. ಪ್ರಾದೇಶಿಕ ವಿಜ್ಞಾನ ಕೇಂದ್ರವು ಹವ್ಯಾಸ ಕೇಂದ್ರವೊಂದನ್ನು ನಡೆಸುತ್ತಿರುವುದರ ಜೊತೆಗೆ ವೈಜ್ಞಾನಿಕ ಚಲನಚಿತ್ರಗಳನ್ನು ಪ್ರದರ್ಶಿಸುತ್ತಿದೆ, ಮತ್ತು ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಪ್ರದರ್ಶನ ಭಾಷಣಗಳನ್ನು ಏರ್ಪಡಿಸುತ್ತಿದೆ. ಬಳ್ಳಾರಿ, ಮಂಗಳೂರು, ಹುಬ್ಬಳ್ಳಿ-ಧಾರವಾಡಗಳಲ್ಲಿ ಪ್ರಾದೇಶಿಕ ಕೇಂದ್ರಗಳನ್ನು ಸ್ಥಾಪಿಸಲು ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕ ವಸ್ತುಸಂಗ್ರಹಾಲಯವು ಯೋಜನೆಗಳನ್ನು ಹಾಕಿಕೊಂಡಿದೆ.

ಸಾಮಾನ್ಯ ಮನುಷ್ಯನ ಮನೆ ಬಾಗಿಲಿಗೆ ವಿಜ್ಞಾನವನ್ನು ತೆಗೆದುಕೊಂಡು ಹೋಗಲು ವಿಶ್ವೇಶ್ವರಯ್ಯ ಕೈಗಾರಿಕೆ ಮತ್ತು ತಾಂತ್ರಿಕ ವಸ್ತುಸಂಗ್ರಹಾಲಯವು, ಜನಪ್ರಿಯ ವೈಜ್ಞಾನಿಕ ಪ್ರದರ್ಶನಗಳನ್ನು ಏರ್ಪಾಡು ಮಾಡುತ್ತದೆ. ಮತ್ತು ಆ ಪ್ರದರ್ಶನಗಳನ್ನು ವಿಶೇಷವಾಗಿ ರೂಪಿಸಲಾದ ಸಂಚಾರಿ ತಂಡಗಳ ಮೂಲಕ ಗ್ರಾಮಾಂತರ ಪ್ರದೇಶಗಳಿಗೆ ಕಳುಹಿಸುತ್ತಿದೆ. ಪ್ರತೀಯೊಂದು ಘಟಕದಲ್ಲಿ ಒಂದು ಎಳೆಯುವ ಸಾಧನವಿದ್ದು, ಅದರ ಜೊತೆಯಲ್ಲಿರುವ ಜೋಡಿ ವಾಹನದಲ್ಲಿ ಯಾವುದಾದರೊಂದು ವಿಷಯದ ಮೇಲಿನ 24 ಪ್ರದರ್ಶನ ವಸ್ತುಗಳಿರುತ್ತವೆ. 'ನೀರು, ಜೀವದ ಚಿಲುಮೆ' ಎಂಬ ಮೊದಲನೇಯ ತಂಡವನ್ನು ಏಪ್ರಿಲ್ 1970ರಲ್ಲಿ ಉದ್ಘಾಟಿಸಲಾಯಿತು. ಮತ್ತು ಮೈಸೂರು ರಾಜ್ಯದ ಎಲ್ಲ ಜಿಲ್ಲಾ ತಾಲೂಕುಗಳ 150ಕ್ಕೂ ಹೆಚ್ಚಿನ ಪ್ರದೇಶಗಳಲ್ಲಿ ಅದು ಪ್ರದರ್ಶನ ನೀಡಿತು. "ಮನುಷ್ಯ ಅಳತೆ ಮಾಡಲೇಬೇಕು" ('ಮ್ಯಾನ್ ಮಸ್ಟ್ ಮೆಜರ್') ಎಂಬ ಎರಡನೇಯ ತಂಡ ಈಗ ವ್ಯವಸ್ಥೆಯ ಹಂತದಲ್ಲಿದೆ ಮತ್ತು ಸ್ವಲ್ಪದರಲ್ಲಿಯೇ ಕಾರ್ಯೋನ್ಮುಖವಾಗುತ್ತದೆ.

ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಕಲೆ, ಪುರಾತತ್ವ, ಪ್ರಾಣಿಶಾಸ್ತ್ರ, ಭೂಗರ್ಭಶಾಸ್ತ್ರ, ಸಸ್ಯಶಾಸ್ತ್ರ, ಮುಂತಾದ ವಿಷಯಗಳ ಮೇಲಿನ ದೊಡ್ಡದಾದ ಅಥವಾ ಸಣ್ಣದಾದ ಅನೇಕ ವಿಭಾಗೀಯ ವಸ್ತುಸಂಗ್ರಹಾಲಯಗಳಿವೆ. ಅವುಗಳಲ್ಲಿ ಕೆಲವು ಗಮನಾರ್ಹವಾದವುಗಳನ್ನು ಇಲ್ಲಿ ಪರಿಚಯ ಮಾಡಿಕೊಡಲಾಗಿದೆ.

**ಕನ್ನಡ ಸಂಶೋಧನ ಸಂಸ್ಥೆಯ ವಸ್ತು ಸಂಗಹಾಲಯ:** ಧಾರವಾಡವು ಮೊದಲು ಮುಂಬೈ ಸರ್ಕಾರದ ಆಡಳಿತಕ್ಕೊಳಪಟ್ಟಿತ್ತು. ರಾಜ್ಯಗಳ ಪುನರ್ವಿಂಗಡಣೆಯ ನಂತರ, ಕನ್ನಡ ಸಂಶೋಧನ ಸಂಸ್ಥೆಯು ಮೈಸೂರು ಸರ್ಕಾರದ ಅಧೀನಕ್ಕೆ ಬಂದು, ಆಮೇಲೆ ಕರ್ನಾಟಕ ವಿಶ್ವವಿದ್ಯಾಲಯದ ವಶವಾಯಿತು. ಮುಂಬೈ ಸರ್ಕಾರದ ಆಶ್ರಯದಲ್ಲಿ ಈ ಸಂಸ್ಥೆಯು ಕಲೆ ಮತ್ತು ಪುರಾತತ್ವ ವಸ್ತು ಸಂಗ್ರಹಾಲಯವೊಂದನ್ನು ಪ್ರಾರಂಭಿಸಿತು. ಈ ವಸ್ತು ಸಂಗ್ರಹಾಲಯದಲ್ಲಿ ಶಿಲ್ಪಗಳು, ಲಿಪಿ ಶಾಸ್ತ್ರ ಶಾಲೆಯ ಮಾದರಿಯಲ್ಲಿ ಜೋಡಿಸಿರುವ ಅಪಾರವಾದ ಶಾಸನಗಳ ಸಂಗ್ರಹ ಮತ್ತು ಸಾವಿರಾರು ತಾಳೆಗರಿ ಹಸ್ತಪ್ರತಿಗಳಿವೆ. ಕರ್ನಾಟಕ ವಿಶ್ವವಿದ್ಯಾಲಯದ ಆಡಳಿತದಲ್ಲಿ ಈ ವಸ್ತುಸಂಗ್ರಹಾಲಯಕ್ಕೆ ಪ್ರತ್ಯೇಕ ಕಟ್ಟಡವನ್ನು ರಚಿಸಿದೆ. ಸುವ್ಯವಸ್ಥಿತವಾಗಿ ಇದರಲ್ಲಿ ಒಂದು ಶಿಲ್ಪ ಶಾಲೆ, ಒಂದು ಶಾಸನಗಳ ಪ್ರದರ್ಶನಾಲಯ ಮತ್ತು ಆಧುನಿಕ ಪ್ರದರ್ಶನಗಳ ಪದ್ಧತಿಯಲ್ಲಿ ಪುನರ್‌ರೂಪಿಸಿದ ಒಂದು ದೊಡ್ಡ ಹಜಾರ ಇವುಗಳು ಇವೆ. ಈ ವಸ್ತುಸಂಗ್ರಹಾಲಯವು ಸಂಶೋಧನೆಗೆ ಅನುಕೂಲಕರವಾಗಿದ್ದು, ವಿದ್ಯಾರ್ಥಿಗಳು ಮತ್ತು ಸಂಶೋಧಕರಿಗೆ ಉಪಯುಕ್ತವಾಗಿದೆ. ಇಲ್ಲಿ ಪ್ರತ್ಯೇಕವಾದ ಪುಸ್ತಕ ಭಂಡಾರವೂ ಇದೆ.

ಮೈಸೂರು ವಿಶ್ವವಿದ್ಯಾಲಯದ ಅಧೀನದಲ್ಲಿ ಎರಡು ವಸ್ತು ಪ್ರದರ್ಶನಾಲಯಗಳಿವೆ.

**ಕಲೆ ಮತ್ತು ಪುರಾತತ್ವ ವಸ್ತು ಸಂಗ್ರಹಾಲಯ :** ಇಲ್ಲಿ ಶಿಲ್ಪಗಳ ಒಳ್ಳೆಯ ಸಂಗ್ರಹವಿದೆ. ಇದನ್ನು ಅನೌಪಚಾರಿಕವಾಗಿ ಪ್ರಾರಂಭಿಸಲಾಯಿತು. ಇದು ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯವಾದುದರಿಂದ ಸಂಶೋಧನ ಮಾರ್ಗಿಯಾಗಿದೆ. ಇದು ಮಾನಸ ಗಂಗೋತ್ರಿಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲಿದೆ.

**ಜಾನಪದ ವಸ್ತು ಸಂಗ್ರಹಾಲಯ :** ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನೇರ ಆಡಳಿತದಲ್ಲಿ, ಜಾನಪದ ವಸ್ತುಸಂಗ್ರಹಾಲಯವೊಂದನ್ನು ವ್ಯವಸ್ಥೆ ಮಾಡುವ ಯೋಜನೆಯನ್ನು ಮಾಡಲಾಯಿತು. ಅದರಂತೆ ಇತ್ತೀಚೆಗೆ ಒಂದು ವಸ್ತುಸಂಗ್ರಹಾಲಯವನ್ನು ವ್ಯವಸ್ಥೆ ಮಾಡಲಾಯಿತು. ಕರ್ನಾಟಕ ರಾಜ್ಯದ ಮಾನವ ಕುಲಶಾಸ್ತ್ರ ಮತ್ತು ಜಾನಪದ ಕಲೆಗಳನ್ನು ಪ್ರತಿನಿಧಿಸುವ ಅಪಾರವಾದ ವಸ್ತುಗಳ ಸಂಗ್ರಹ ಇಲ್ಲಿದೆ.

## ಖಾಸಗಿ ವಸ್ತು ಸಂಗ್ರಹಾಲಯಗಳು

ಹಿಂದೆಯೇ ಹೇಳಿರುವಂತೆ ರಾಜ್ಯದಲ್ಲಿ ಏಳು ಖಾಸಗಿ ವಸ್ತು ಪ್ರದರ್ಶನಾಲಯಗಳಿವೆ. ಅವುಗಳೆಂದರೆ ಜಗನ್ಮೋಹನ

ಚಿತ್ರಶಾಲೆ, ಕೆಳದಿ ವಸ್ತುಸಂಗ್ರಹಾಲಯ, ಮುದ್ದೇನಹಳ್ಳಿ ವಿಶ್ವೇಶ್ವರಯ್ಯ ವಸ್ತುಸಂಗ್ರಹಾಲಯ, ಬೆಂಗಳೂರಿನ ಜನಪದ ಅಕ್ಯಾಡೆಮಿ, ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜ್ ವಸ್ತುಸಂಗ್ರಹಾಲಯ, ಶಿರಾಲಿಯ ಚಿತ್ರಾಪುರ ಮಠದ ವಸ್ತು ಸಂಗ್ರಹಾಲಯ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕಲ್ಯಾಣಪುರದ ಇಂಡಾಲಜಿಕಲ್ ವಸ್ತುಸಂಗ್ರಹಾಲಯ.

**ಜಯಚಾಮರಾಜೇಂದ್ರ ಕಲಾಶಾಲೆ :** ಮೈಸೂರಿನ ಜಗನ್ಮೋಹನ ಅರಮನೆಯನ್ನು 1861ರಲ್ಲಿ ಮೊದಲು ರಾಜಗೃಹ ವಾಗಿ ಕಟ್ಟಲಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರು 1915ರಲ್ಲಿ ಇದನ್ನು ವಸ್ತುಸಂಗ್ರಹಾಲಯವಾಗಿ ಬದಲಾಯಿ ಸಿದರು. 1924ರಲ್ಲಿ ವಿವಿಧ ಕಲಾ ಪದ್ಧತಿಗಳ ಅಮೂಲ್ಯವಾದ ವರ್ಣಚಿತ್ರ ಸಂಪತ್ತನ್ನು ಸೇರಿಸುವುದರಿಂದ ದಿವಂಗತ ಮಹಾ ರಾಜರು, ಇದನ್ನು ಭಾರತೀಯ ಕಲೆಗಳು ಮತ್ತು ಕುಶಲ ಕಲೆಗಳ ಗಣ್ಯಶಾಲೆಯನ್ನಾಗಿ ಪರಿವರ್ತಿಸಿದರು. 1932-37ರ ವರ್ಷಾವಧಿಯಲ್ಲಿ ಕೆ. ವೆಂಕಟಪ್ಪ ಮತ್ತು ಇತರ ಗಣ್ಯ ಕಲಾವಿದರ ಸಹಾಯದೊಂದಿಗೆ ಶ್ರೀಮತಿ ಪಿ. ಮೆಟ್‌ಕಾಫ್ ಅವರ ದಕ್ಷ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯಲ್ಲಿ ಈ ಕಲಾಶಾಲೆ ಯನ್ನು ಮತ್ತಷ್ಟು ವಿಸ್ತರಿಸಲಾಯಿತು. ತಿರುವನಂತಪುರದ ಲಲಿತಕಲಾ ಇಲಾಖೆಯ ಡಾ|| ಜೇಮ್ಸ್ ಎಚ್. ಕಸಿನ್ಸ್ ಅವರು 1942ರಲ್ಲಿ ಜಗನ್ಮೋಹನ ಅರಮನೆಯನ್ನು ವಿಸ್ತರಿಸಿ ಪುನ ರ್ವ್ಯವಸ್ಥೆ ಮಾಡಿದರು. 1946ರಲ್ಲಿ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಬಹುಮಾನ ಪಡೆದ ಪ್ರದರ್ಶನ ವಸ್ತುಗಳು ಈ ಕಲಾಶಾಲೆಯನ್ನು ಸೇರಿದಾಗ, ಮತ್ತೆ ಪುನರ್ವ್ಯವಸ್ಥೆ ಮಾಡ ಲಾಯಿತು. ಆಗ ಇಲ್ಲಿನ ವರ್ಣಚಿತ್ರಗಳನ್ನು ವಿವಿಧ ಭಾರತೀಯ ಕಲಾ ಪದ್ಧತಿಗಳಿಗನುಗುಣವಾಗಿ ವರ್ಗೀಕರಿಸಿದಂತೆ, ಪಿಂಗಾಣಿ ಮತ್ತು ಶ್ರೀಗಂಧದ ಕಲಾವಸ್ತುಗಳನ್ನು ವಿಶೇಷವಾಗಿ ಜೋಡಿಸ ಲಾಯಿತು. ವಸಂತ ಮಹಲಿನಲ್ಲಿ ಸಂಗೀತ ವಾದ್ಯಗಳನ್ನೂ ಅಲಂಕಾರಿಕ ಕಲೆಗಳನ್ನೂ ಪ್ರದರ್ಶಿಸಲಾಯಿತು. ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಗೆ ಸಂಬಂಧಿಸಿದ ಕೆತ್ತನೆಗಳನ್ನು ಮತ್ತು ಛಾಯಾ ಚಿತ್ರದ ನಕಲುಗಳನ್ನು 1950ರಲ್ಲಿ ಪ್ರದರ್ಶಿಸ ಲಾಯಿತು. ಜಯಚಾಮರಾಜ ಒಡೆಯರ್ ಅವರು ಕಲೆ ಮತ್ತು ಸಂಸ್ಕೃತಿಯ ಪ್ರಸಾರಕ್ಕೋಸ್ಕರ ಈ ಕಲಾಶಾಲೆಯನ್ನು 1950ರಲ್ಲಿ ಸಾರ್ವಜನಿಕ ಆಸ್ತಿಯಾಗಿ ದೇಶಕ್ಕೆ ಸಂಪೂರ್ಣವಾಗಿ ಅರ್ಪಿಸಿದರು. ಜಯಚಾಮರಾಜ ಒಡೆಯರ್ ಅವರು ದಾನ ಮಾಡಿದ ಪ್ರಸಿದ್ಧ ವಾದ ರವಿವರ್ಮನ ವರ್ಣಚಿತ್ರಗಳು ಈಗ ಕಲಾಶಾಲೆಯಲ್ಲಿವೆ. 1960ರಲ್ಲಿ ಮತ್ತೆ ಈ ಕಲಾಶಾಲೆಯನ್ನು ಪುನರ್ವ್ಯವಸ್ಥೆ ಮಾಡಿ ವಿವಿಧ ಬಗೆಯ ಕಲೆಗಳನ್ನು ಚಿತ್ರಗಳ ಮೂಲಕ ನಿರೂಪಿಸಿ ವಿವರಿಸುವ ವ್ಯವಸ್ಥೆ ಮಾಡಲಾಯಿತು. ಇದರಿಂದ ಪ್ರಪಂಚದ ವಿವಿಧ ಭಾಗಗಳಲ್ಲಿ ಪ್ರಚಲಿತವಿರುವ ಕಲೆ ಮತ್ತು ಸಂಸ್ಕೃತಿಗಳನ್ನು ಉದಾಹರಣೆಗಳ ಮೂಲಕ ಅಭ್ಯಾಸ ಮಾಡಲು ಸಾಧ್ಯ ವಾಗುತ್ತದೆ.

**ಗೋವಿಂದ ಪೈ ವಸ್ತುಸಂಗ್ರಹಾಲಯ, ಉಡುಪಿ :** ಪ್ರೊ|| ಕು. ಶಿ. ಹರಿದಾಸಭಟ್ಟರ ಮತ್ತು ಡಾ|| ಪಿ. ಗುರುರಾಜ ಭಟ್ಟರ ಪ್ರಯತ್ನಗಳಿಂದ ಉಡುಪಿಯ ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜಿನ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ಒಂದು ಮುಖ್ಯ ಕಾರ್ಯಕ್ರಮವಾಗಿ ಈ ಗೋವಿಂದ ಪೈ ಸ್ಮಾರಕ ವಸ್ತುಸಂಗ್ರಹಾಲಯವನ್ನು ಪ್ರಾರಂಭಿಸಲಾಯಿತು. ಒಳ್ಳೆಯ ಆರಂಭವನ್ನು ಮಾಡಿರುವ ಈ ಸಂಸ್ಥೆ ಪ್ರಾರಂಭವಾದ 1972ರಿಂದ ಒಂದು ಆಕರ್ಷಣೀಯ ಸ್ಥಳವಾಗಿದೆ. ಪರಿಸರದ ಇತಿಹಾಸದ ಬಗೆಗೆ ವಿಚಾರಣಾ ಮನೋ ವೃತ್ತಿಯನ್ನು ಬೆಳೆಸುವ ಹಾಗೂ ಆಸಕ್ತಿಯನ್ನು ಹುಟ್ಟಿಸುವ ಅವಶ್ಯಕತೆಯನ್ನು ಮನಗಂಡ ಉಡುಪಿಯ ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು, ಪುರಾತತ್ವ ವಸ್ತುಸಂಗ್ರಹಾಲಯ ವನ್ನು ಸ್ಥಾಪಿಸಿತು. ಇಲ್ಲಿನ ಶಿಲ್ಪಶಾಲೆ ವಿಶೇಷ ಆಕರ್ಷಣೆಗಳಲ್ಲಿ ಒಂದಾಗಿದೆ.

**ಮುದ್ದೇನಹಳ್ಳಿಯ ವಸ್ತು ಸಂಗ್ರಹಾಲಯ :** ಕೋಲಾರ ಜಿಲ್ಲೆಯ ಮುದ್ದೇನ ಹಳ್ಳಿಯಲ್ಲಿರುವ ಈ ವಿಶ್ವೇಶ್ವರಯ್ಯ ರಾಷ್ಟ್ರೀಯ ವಿಶ್ವಸ್ಥ ಸ್ಮಾರಕ ವಸ್ತುಸಂಗ್ರಹಾಲಯ ಒಂದು ವ್ಯಕ್ತಿ ವಸ್ತುಸಂಗ್ರಹಾಲಯವಾಗಿದೆ. ಸರ್. ಎಂ. ವಿಶ್ವೇಶ್ವ ರಯ್ಯನವರಿಗೆ ಯೋಗ್ಯ ಸ್ಮಾರಕವಾಗಿ, ಮುದ್ದೇನಹಳ್ಳಿಯ ಅವರ ಗ್ರಾಮ ನಿವಾಸವನ್ನು ವಿಶ್ವೇಶ್ವರಯ್ಯ ರಾಷ್ಟ್ರೀಯ ವಿಶ್ವಸ್ಥ ಸ್ಮಾರಕವು ಒಂದು ವಸ್ತುಸಂಗ್ರಹಾಲಯವಾಗಿ ಬೆಳೆಸು ತ್ತಿದೆ. ಇದನ್ನು 1972ರಲ್ಲಿ ಆರಂಭ ಮಾಡಲಾಯಿತು. ಈಗ ಇಲ್ಲಿನ ಸಂಗ್ರಹ ವೈಯಕ್ತಿಕ ವಸ್ತುಗಳಾದ ಪೀಠೋಪಕರಣ, ಪುಸ್ತಕ, ಪತ್ರ, ಛಾಯಾಚಿತ್ರಗಳು ಮತ್ತು ಸರ್. ಎಂ. ವಿ. ಅವರ ಕಾಣಿಕೆಗಳಿಗೆ ಮಾತ್ರ ಸೀಮಿತವಾಗಿದೆ. ವಸ್ತುಸಂಗ್ರ ಹಾಲಯವನ್ನು ವಿದ್ಯಾರ್ಥಿಗಳು, ಸಂಶೋಧಕರು, ಸಾಮಾನ್ಯ ಜನತೆಗೆ ಹೆಚ್ಚು ಸ್ವಾರಸ್ಯಕರ ಆಕರ್ಷಣೀಯ ಮತ್ತು ಜನಪ್ರಿಯ ವಾಗಿ ಮಾಡುವ ಉದ್ದೇಶದಿಂದ ಹೊಸ ವಿಭಾಗಗಳನ್ನು, ಶಾಲೆ ಗಳನ್ನು ಯೋಜಿಸಲಾಗುತ್ತಿದೆ. ದಾನಗಳ ಮೂಲಕ ಈಗಾಗಲೇ ಚಿನ್ನ-ಬೆಳ್ಳಿ ನಾಣ್ಯಗಳು, ತಾಳೆಗರಿಯ ಹಸ್ತಪ್ರತಿಗಳು ಮುಂತಾದ ವುಗಳ ಸಂಗ್ರಹ ಹೊಸದಾಗಿ ನಡೆಯುತ್ತಿದೆ.

ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಐತಿಹಾಸಿಕ, ಸಾಂಸ್ಕೃತಿಕ ಮತ್ತು ಶಾಸನಗಳ ವಸ್ತುಸಂಗ್ರಹಾಲಯವನ್ನು ಬೆಳೆಸುವುದಕ್ಕೆ ಈಗಾಗಲೇ ಆರಂಭ ಮಾಡಿದೆ.

## ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿಗಳು

ದೇಶಸೇವೆ ಅಥವಾ ಧಾರ್ಮಿಕ ಕಾರ್ಯಗಳು ಮತ್ತು ಸಾರ್ವಜನಿಕ ಸೇವಾ ಉದ್ದೇಶಗಳಿಗೆ ಹಣ ಅಥವಾ ಜಮೀನು

ಗಳನ್ನು ದತ್ತಿಯಾಗಿ ಕೊಡುವುದು ಬಹಳ ಹಳೆಯ ಪದ್ಧತಿ. ದೇವಾಲಯಗಳಿಗೆ ಕೊಡುವ ದಾನವನ್ನು ದೇವದಾನ ಎಂದೂ, ಬ್ರಾಹ್ಮಣ ವಿದ್ವಾಂಸರುಗಳಿಗೆ ಕೊಡುವುದನ್ನು ಬ್ರಹ್ಮದೇಯ ವೆಂದೂ ಕರೆಯುತ್ತಿದ್ದರು. ಅವು ವ್ಯಕ್ತಿಗತವಾದಲ್ಲಿ ಹೆಚ್ಚಾಗಿ ವಂಶಪಾರಂಪರ್ಯವಾಗಿದ್ದವು.

'ಮುಜರಾಯಿ' ಪದವು ಪರ್ಶಿಯನ್ ಭಾಷೆಯ 'ಮುಜರ್' ಪದದಿಂದ ಬಂದಿದೆ. ಇದರ ಅರ್ಥ ಸಾಮಾನ್ಯವಾಗಿ ಧಾರ್ಮಿಕ ಮತ್ತು ಮತಸಂಬಂಧವಾದ ಉದ್ದೇಶಗಳಿಗೆ ಅನ್ವಯಿಸುವಂತೆ ಭತ್ಯವನ್ನು ಕೊಡುವುದು. ಕ್ರಿ. ಶ. 1788ರ ಮೈಸೂರು ಅರಸರ ಆಳ್ವಿಕೆಯ ಕಾಲದಲ್ಲೇ ಮುಜರಾಯಿ ಇಲಾಖೆಯ ಉಗಮವನ್ನು ಗುರುತಿಸಬಹುದು. ಹುಜೂರು ಸನ್ನದುಗಳ ಆಧಾರವಿಲ್ಲದ ಅಥವಾ ಬೆಂಬಲವಿಲ್ಲದ ಜಮೀನುಗಳನ್ನು ಟಿಪ್ಪುಸುಲ್ತಾನನು ಹಿಂದಕ್ಕೆ ತೆಗೆದುಕೊಂಡನು. ನಿರ್ದಿಷ್ಟ ಮೊತ್ತದ ಹಣವನ್ನು ಒಂದುಗೂಡಿಸಿ ಬಡ್ಡಿಗೆ ಕೊಟ್ಟು, ಆ ಬಡ್ಡಿಯ ಹಣವನ್ನು ಪೂಜಾಕಾರ್ಯಗಳಿಗೆ ಬಳಸುತ್ತಿದ್ದರು. ದೇವಾಲಯಗಳಿಗೆ ಕೊಡುವ ಈ ಹಣವನ್ನು ಪುದುವಟ್ಟು ಹಣ ಎಂದು ಕರೆಯುತ್ತಿದ್ದರು. ಹೈದರ್ ಅಲಿ ಕಾಲದಲ್ಲಿ ಇದ್ದುದೆಂದು ಪೂರ್ಣಯ್ಯನವರು ಮೈಸೂರು ಕಮಿಷನರಿಗೆ ನೀಡಿದ ಮುಜರಾಯಿ ಇಲಾಖೆಯ ಖರ್ಚುವೆಚ್ಚಗಳ ವಿವರ ಈರೀತಿಯಿದೆ: ದೇವಸ್ಥಾನಗಳು ಮತ್ತು ಅಗ್ರಹಾರಗಳಿಗಾಗಿ 1,93,959 ಪಗೋಡಗಳು ಮತ್ತು ಬ್ರಾಹ್ಮಣರ ಮಠಗಳಿಗೆ 20,000 ಪಗೋಡಗಳು ಮತ್ತು ಟಿಪ್ಪುಸುಲ್ತಾನನ ಒಪ್ಪಿಗೆಯಂತೆ ಮುಸಲ್ಮಾನರ ಸಂಸ್ಥೆಗಳಿಗೆ ನೀಡಿದವು 20,000 ಪಗೋಡಗಳು, ಹೀಗೆ ಒಟ್ಟು 2,33,959 ಪಗೋಡಗಳು ವಿನಿಯೋಗವಾಗುತ್ತಿದ್ದವು.

ಮೈಸೂರಿನ ದಿವಾನರಾಗಿದ್ದ ಪೂರ್ಣಯ್ಯನವರು ದತ್ತಿಗಳನ್ನು ಪುನರುಜ್ಜೀವನಗೊಳಿಸಲು ಮತ್ತು ಪರಾಧೀನವಾದ ಅಥವಾ ಅನ್ಯಾಕ್ರಾಂತವಾದ ಎಲ್ಲ ವಿಧವಾದ ದತ್ತಿಗಳ ಜಮೀನುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು, ಹಾಗೂ ಮುಜರಾಯಿ ವಿಷಯಗಳ ಮೇಲ್ವಿಚಾರಣೆಯನ್ನು ಅಮಲ್ದಾರ್ ಮತ್ತು ಫೌಜುದಾರರಿಗೆ ವಹಿಸಲಾಯಿತು. ಹಿಂದೂ ಮತ್ತು ಮುಸಲ್ಮಾನರಿಗೆ ಸೇರಿದ ಧಾರ್ಮಿಕ ಹಾಗೂ ದತ್ತಿ ಸಂಸ್ಥೆಗಳಾದ ದೇವಾಲಯ, ಛತ್ರ, ಮಠ, ದರ್ಗಾ ಮೊದಲಾದವುಗಳ ವರಮಾನದ ಮೇಲ್ವಿಚಾರಣೆಯನ್ನು ಮುಜರಾಯಿ ಇಲಾಖೆಕೆ ವಹಿಸಿಕೊಡಲಾಯಿತು.

ಮುಮ್ಮಡಿ ಕೃಷ್ಣರಾಜ ಒಡೆಯರು ಮುಜರಾಯಿ ಸಂಸ್ಥೆಗಳ ಬಗ್ಗೆ ಹೆಚ್ಚು ಆಸಕ್ತಿ ವಹಿಸಿ, ಈ ಸಂಸ್ಥೆಗಳ ನಿಕಟ ಪರವೀಕ್ಷಣೆಯನ್ನು ತಮ್ಮ ಅಧೀನದಲ್ಲಿಟ್ಟು ಕೊಂಡಿದ್ದರು. 1831ರ ನಂತರ ಈ ಸಂಸ್ಥೆಗಳ ಮೇಲ್ವಿಚಾರಣೆಯನ್ನು ಅಧೀಕ್ಷಕರು ಹಾಗೂ ಅವರ ಅಧೀನ ಜಿಲ್ಲಾಧಿಕಾರಿಗಳಿಗೆ ವಹಿಸಲಾಯಿತು. ಮುಜರಾಯಿ ಸಂಸ್ಥೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು 1852 ರಲ್ಲಿ ಸರ್ ಮಾರ್ಕ್ ಕಬ್ಬನ್ ಅವರು ತಮ್ಮ ಅಧೀನಕ್ಕೆ ವರ್ಗಾವಣೆ ಮಾಡಿಕೊಂಡು, 1861ರವರೆಗೆ ತಮ್ಮ ಹಿಡಿತದಲ್ಲಿಟ್ಟು ಕೊಂಡು ಅನಂತರ ವಿಭಾಗೀಯ ಅಧೀಕ್ಷಕರುಗಳಿಗೆ ವರ್ಗಾಯಿಸಿದರು. 1876ರಲ್ಲಿ ಅದು ಮುಜರಾಯಿ ಸಂಸ್ಥೆಗಳ ಮುಖ್ಯ ಕಮಿಷನರ್‌ರ ಹಿಡಿತಕ್ಕೆ ಬಂದಿತು.

ರಾಜರಿಗೆ ಅಧಿಕಾರ ಹಸ್ತಾಂತರ ಮಾಡಿದ ನಂತರ ಈ ಸಂಸ್ಥೆಗಳ ಮೇಲ್ವಿಚಾರಣೆ ಡೆಪ್ಯುಟಿ ಕಮಿಷನರ್‌ರ ವಶಕ್ಕೆ ಹಿಂದಕ್ಕೆ ಬಂದುದರ ಜೊತೆಗೆ ದಿವಾನರ ಕಚೇರಿಯಲ್ಲಿ ಚಿಕ್ಕ ಪ್ರಮಾಣದ ಸಿಬ್ಬಂದಿಯು ಸ್ಥಾಪಿತವಾಯಿತು. 1891ರಲ್ಲಿ ಸರ್ಕಾರವು ಮುಜರಾಯಿ ಅಧೀಕ್ಷಕನಾಗಿ ವಿಶೇಷ ಅಧಿಕಾರಿಯನ್ನು ನೇಮಿಸಿತು. ಈತನು ಸರ್ಕಾರದ ಪದನಿಮಿತ್ತ ಕಾರ್ಯದರ್ಶಿಯೂ ಆಗಿದ್ದನು. 1921-22ರವರೆಗೆ ಈ ವ್ಯವಸ್ಥೆಯೇ ಮುಂದುವರಿದು ಮುಂದೆ ಮುಜರಾಯಿ ಅಧೀಕ್ಷಕ ಹುದ್ದೆಯನ್ನು ರದ್ದುಗೊಳಿಸಿ ಮೈಸೂರಿನ ಕಂದಾಯ ಕಮಿಷನರ್‌ರನ್ನು ಮುಜರಾಯಿ ಆಯುಕ್ತರನ್ನಾಗಿಯೂ ನೇಮಕ ಮಾಡಲಾಯಿತು. ಮೈಸೂರಿನ ಧಾರ್ಮಿಕ ಮತ್ತು ದತ್ತಿ ಸಂಸ್ಥೆಗಳ ನಿಯಮ 1927 ರಲ್ಲಿ ಜಾರಿಗೆ ಬಂದಿತು; ಮತ್ತು ಆ ನಿಯಮವು ರಾಜರ ಆಳ್ವಿಕೆಯಲ್ಲಿದ್ದ ಮೈಸೂರು ರಾಜ್ಯಕ್ಕೂ ಅನ್ವಯವಾಗತೊಡಗಿತು. ಈ ಕಾನೂನಿನನ್ವಯ ರಾಜ್ಯದ ಮುಜರಾಯಿ ಇಲಾಖೆಗೆ ಕಂದಾಯ ಕಮಿಷನರರೇ ಮುಖ್ಯಸ್ಥರಿದ್ದು, ಇವರ ಕಚೇರಿಯಲ್ಲಿ ಮುಜರಾಯಿ ವಿಭಾಗವು ಬೇರೆಯೇ ಶಾಖೆಯಾಗಿದ್ದು, ಉಪ ಆಯುಕ್ತರುಗಳು, ಉಪ ವಿಭಾಗಾಧಿಕಾರಿಗಳು ಮತ್ತು ತಹಸೀಲ್ದಾರರುಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಮುಜರಾಯಿ ಸಂಸ್ಥೆಗಳನ್ನು ನೋಡಿಕೊಳ್ಳುತ್ತಿದ್ದರು.

ಬೆಳಗಾವಿ ಪ್ರದೇಶದ ಧಾರ್ಮಿಕ ಮತ್ತು ದತ್ತಿ ವಿಶ್ವಸ್ಥ ಸಂಸ್ಥೆಗಳು 1950ಕ್ಕಿಂತ ಮೊದಲು ಧರ್ಮದ ಆಧಾರದ ಮೇಲೆ ರಚಿತವಾದ ಕೇಂದ್ರೀಯ ಹಾಗೂ ಪ್ರಾಂತೀಯವಾದ ವಿವಿಧ ಅಧಿನಿಯಮಗಳನ್ನು ಅನುಸರಿಸುತ್ತಿದ್ದವು. 1920ರ ದತ್ತಿ ಮತ್ತು ಧಾರ್ಮಿಕ ಟ್ರಸ್ಟ್‌ಗಳ ಅಧಿನಿಯಮ; 1935ರ XVIII ನೇಯ ಮುಂಬೈ ಅಧಿನಿಯಮದಿಂದ ತಿದ್ದುಪಡಿಯಾದ 1923ರ ಮುಸಲ್ಮಾನರ ವಕ್ಫ್ ಅಧಿನಿಯಮ; 1935ರ ಮುಂಬೈ ಸಾರ್ವಜನಿಕ ನೋಂದಣಿ ಅಧಿನಿಯಮ; 1936ರ ಪಾರ್ಸಿ ಸಾರ್ವಜನಿಕ ನೋಂದಣಿ ಅಧಿನಿಯಮ; 1890ರಲ್ಲಿ ಜಮಖಂಡಿ ರಾಜ್ಯದಲ್ಲಿ ಬಳಸುತ್ತಿದ್ದ 1863ರ ಧಾರ್ಮಿಕ ದತ್ತಿಗಳ ಅಧಿನಿಯಮ; ಜಮಖಂಡಿ ರಾಜ್ಯದಲ್ಲಿ 1948ರ ಜಮಖಂಡಿ ಅಧಿನಿಯಮ ನಂ. ಒಂದರಂತೆ 1912ರ ದೇವಸ್ಥಾನದ ನಿಯಮಗಳು; ಮತ್ತು 1863ರ ಧಾರ್ಮಿಕ ದತ್ತಿಗಳ ಅಧಿನಿಯಮಗಳು 1950

ಕ್ಕಿಂತ ಮುಂಚೆ ಈ ಪ್ರದೇಶದಲ್ಲಿ ಬಳಕೆಯಲ್ಲಿದ್ದವು. 1950ರ ಸಂಕೀರ್ಣ ವಿಧಿ ರಚನೆಯನ್ನು ಮುಂಬೈ ಸಾರ್ವಜನಿಕ ಟ್ರಸ್ಟ್ ಅಧಿನಿಯಮ (XXIX-1950) ಎಂದು ಕರೆಯಲಾದ ಅಧಿನಿಯಮವನ್ನು ಮತಭೇದಗಳನ್ನು ಪರಿಗಣಿಸದೆ ಎಲ್ಲ ಸಾರ್ವಜನಿಕ ಟ್ರಸ್ಟ್‌ಗಳಿಗೆ ಅನ್ವಯಿಸಲಾಯಿತು. ಈ ಅಧಿನಿಯಮ ಸಾರ್ವಜನಿಕ ಟ್ರಸ್ಟ್ ಅಭಿವ್ಯಕ್ತಗೊಳಿಸಿದ ಅಥವಾ ರಚನಾತ್ಮಕ ಟ್ರಸ್ಟ್‌ನ ಯಾವುದೇ ರೀತಿಯ ಸಾರ್ವಜನಿಕ ಧರ್ಮಗಳು ಇಲ್ಲವೆ ದತ್ತಿಯ ಉದ್ದೇಶ ಅಥವಾ ಎರಡನ್ನೂ ಒಳಗೊಂಡಂತಹ ದೇವಾಲಯ, ಮಠ, ವಕ್ಫ್ ಅಥವಾ ಯಾವುದೇ ಧರ್ಮ ಇಲ್ಲವೆ ಮತಸಂಬಂಧವಾದ ದತ್ತಿ, ಹಾಗೂ ಈ ಎರಡೂ ಉದ್ದೇಶಗಳಿಂದ ರೂಪಗೊಂಡ ಸಂಸ್ಥೆಯನ್ನು ಸಂಘಗಳ ನೋಂದಣಿ ಅಧಿನಿಯಮಕ್ಕೆ (XXI-1869) ಅನುಗುಣವಾಗಿ ನೋಂದಾಯಿಸಬೇಕೆಂದು ಹೇಳುತ್ತದೆ. ಈ ಅಧಿನಿಯಮವು 21ನೇಯ ಜನವರಿ 1952 ರಿಂದ ದೇವಾಲಯ, ಮಠ, ವಕ್ಫ್, ಸಾರ್ವಜನಿಕ ಟ್ರಸ್ಟ್, ಸಂಘಗಳು ಮುಂತಾದವುಗಳಿಗೆ ಅನ್ವಯವಾಗುತ್ತದೆ. ಬೆಳಗಾವಿಯಲ್ಲಿರುವ ಸಹಾಯಕ ದತ್ತಿ ಆಯುಕ್ತರು ಬೆಳಗಾವಿ ವಿಭಾಗಕ್ಕೆ ಸೇರಿದ ಪ್ರದೇಶಗಳ ಜವಾಬ್ದಾರಿಯನ್ನು ಹೊತ್ತಿದ್ದರು.

1939ರ ಹೈದರಾಬಾದ್ ಧಾರ್ಮಿಕ ಮತ್ತು ದತ್ತಿ ಅಧಿನಿಯಮವು ಆಡಳಿತ ಹಾಗೂ ಕಾರ್ಯನಿರ್ವಹಣೆಯ ನಿಯಮಗಳನ್ನು ಗೊತ್ತುಪಡಿಸುತ್ತದೆ. ಧಾರ್ಮಿಕ ಇಲಾಖೆಯ ಕಚೇರಿಯಲ್ಲಿ ದತ್ತಿ ಸಂಬಂಧವಾದ ಆಸ್ತಿ ಮೇಲ್ವಿಚಾರಣೆಯನ್ನು ದತ್ತಿ ಸಂಕಲನ ಪುಸ್ತಕದ ಆಧಾರದಿಂದ ನೋಡಿಕೊಳ್ಳಲಾಗುತ್ತಿತ್ತು. ಮಸೀದಿ, ದೇವಾಲಯ, ಚರ್ಚ್, ಈದ್‌ಗಾಗಳು, ಗೋರಿ, ದರ್ಗಾ, ಕನ್ವಾಗಳು, ರಾಣಿಖಾನಾಗಳು, ಸಮಖಾನಾಗಳು, ಅಶುರ್‌ಖಾನಾಗಳು, ಚಲ್ಲಾಗಳು, ಮಠಗಳು, ಗುರುದ್ವಾರಗಳು, ಸ್ಮಶಾನಭೂಮಿಗಳು, ಗೋರಿ ಮತ್ತು ಸಮಾಧಿ ಸ್ಥಳಗಳು, ಪಾರ್ಸಿಗಳ ರುದ್ರಭೂಮಿ ಹಾಗೂ ಉಳಿದ ಪೂಜಾರ್ಹವಾದ ಸ್ಥಳಗಳು, ಯಾವುದೇ ಮತ ಅಥವಾ ಪಂಗಡಕ್ಕೆ ಸೇರಿದ್ದರೂ ಅದನ್ನು ಸಾರ್ವಜನಿಕ ಉಪಯೋಗದಿಂದಾಗಿ ದತ್ತಿಕಟ್ಟಡಗಳೆಂದು ಗುರುತಿಸಲಾಗುತ್ತದೆ. ಪ್ರತೀಯೊಂದು ಸಂಸ್ಥೆಗೂ ಒಂದು ಸಮಿತಿ ಇದ್ದು ಈ ಸಮಿತಿಯ ಅರ್ಧದಷ್ಟು ಜನ ಅಧಿಕಾರಿಗಳನ್ನೂ ಉಳಿದ ಅರ್ಧದಷ್ಟು ಜನ ಅಧಿಕಾರೇತರ ಸದಸ್ಯರನ್ನೂ ಹೊಂದಿತ್ತು.

ಮದರಾಸ್ ಕರ್ನಾಟಕ ಪ್ರಾಂತ್ಯದ ಮಠೀಯ ಮತ್ತು ಧಾರ್ಮಿಕ ಉಂಬಳಿಗಳ ಆಡಳಿತವನ್ನು 1951ರ ಮದರಾಸಿನ ಮಠೀಯ ಮತ್ತು ಧಾರ್ಮಿಕ ಉಂಬಳಿಗಳ ಅಧಿನಿಯಮದ ಪ್ರಕಾರ ಪರಿಪಾಲಿಸಲಾಗುತ್ತಿತ್ತು. ಅಧಿನಿಯಮಗಳ ನಿಬಂಧನೆಯ ಪ್ರಕಾರ 1956ರ ಅಕ್ಟೋಬರ್ ತಿಂಗಳ ಕೊನೆಯವರೆಗೆ ದಕ್ಷಿಣ ಕನ್ನಡ ಜಿಲ್ಲೆಯು ಕೊಯಮುತ್ತೂರಿನ ಹಿಂದೂ ಮಠೀಯ ಮತ್ತು ಧಾರ್ಮಿಕ ಉಂಬಳಿಗಳ ಉಪಆಯುಕ್ತರ ಅಧಿಕಾರವ್ಯಾಪ್ತಿಗೊಳಪಟ್ಟಿತ್ತು. ಈ ಅಧಿನಿಯಮ ಅನ್ವಯವಾಗುತ್ತಿದ್ದ ಸಂಸ್ಥೆಗಳಲ್ಲಿ 20,000 ರೂ.ಗಳ ಅಥವಾ ಅದಕ್ಕಿಂತ ಹೆಚ್ಚಿನ ವಾರ್ಷಿಕ ಆದಾಯವುಳ್ಳ ಸಂಸ್ಥೆಗಳು ಡೆಪ್ಯುಟಿ ಕಮಿಷನರ್‌ರ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿತ್ತು. ಉಳಿದ ಸಂಸ್ಥೆಗಳು ಸಹಾಯಕ ಕಮಿಷನರ್‌ರ ಕೈಕೆಳಗೆ ಬರುತ್ತಿತ್ತು. ರೂ. 20,000 ಗಳಿಗಿಂತ ಕಡಿಮೆ ವಾರ್ಷಿಕ ಆದಾಯವಿರುವ ಮಠೀಯ ಮತ್ತು ಧಾರ್ಮಿಕ ಸಂಸ್ಥೆಗಳ ಮೇಲ್ವಿಚಾರಣೆಯ ಉಸ್ತುವಾರಿಯನ್ನು ಜಿಲ್ಲೆಗಳಲ್ಲಿರುವ ಪ್ರಾದೇಶಿಕ ಸಮಿತಿ ನೋಡಿಕೊಳ್ಳುತ್ತಿತ್ತು. ಹಳೆಯ ಕೊಡಗು ರಾಜ್ಯದ ದೇವಾಲಯದ ನಿಧಿಯ ಮೇಲ್ವಿಚಾರಣೆಯನ್ನು 1956ರ 'ದಿ ಕೂರ್ಗ್ ಟೆಂಪಲ್ ಫಂಡ್ಸ್ ಅಂಡ್ ಮ್ಯಾನೇಜ್‌ಮೆಂಟ್ ಆ್ಯಕ್ಟ್' ಪ್ರಕಾರ ನಡೆಸಲಾಗುತ್ತಿತ್ತು.

ಮಠೀಯ ಮತ್ತು ಧಾರ್ಮಿಕ ಉಂಬಳಿಗಳ ಆಡಳಿತ ನಡೆಸಲು ಒಂದು ಅಧಿನಿಯಮವಿರದ ಕಾರಣ 1956ರ ನಂತರವೂ ಅದಕ್ಕಿಂತ ಹಿಂದಿನ ಅಧಿನಿಯಮವನ್ನೇ ಬಳಸಬೇಕಾಗಿತ್ತು. ಆದರೆ ಇಂದಿಗೂ ಸಹ ರಾಜ್ಯದಲ್ಲಿನ ಎಲ್ಲ ಮಠೀಯ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಅನ್ವಯವಾಗುವಂತಹ ವ್ಯಾಪಕವಾದ ಒಂದೇ ರೀತಿಯಾದ ಆಡಳಿತಾತ್ಮಕ ಕಾನೂನು ಇಲ್ಲ. 1956ರಲ್ಲಿ ಧಾರ್ಮಿಕ ಧರ್ಮಾರ್ಥಕ ದತ್ತಿಗಳ ಇಲಾಖೆ ಎಂಬ ಪ್ರತ್ಯೇಕವಾದ ಇಲಾಖೆಯೊಂದನ್ನು ತೆರೆಯಲಾಯಿತು.

**ಇಲಾಖೆ :** ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿಗಳ ಇಲಾಖೆಯ ಮುಖ್ಯಸ್ಥರನ್ನು ಆಯುಕ್ತರೆಂದು ಕರೆಯುತ್ತಾರೆ. ಕೇಂದ್ರ ಕಚೇರಿಯ ಸಹಾಯಕರು, ಒಬ್ಬ ಕಚೇರಿ ಸಹಾಯಕರು ಮತ್ತು ನಾಲ್ಕು ಜನ ಅಧೀಕ್ಷಕರು ಉಳಿದ ಸಿಬ್ಬಂದಿ ವರ್ಗದವರು ಆಡಳಿತ ನಡೆಸಲು ಇವರಿಗೆ ಸಹಾಯ ಮಾಡುತ್ತಾರೆ. ಇಂಜಿನಿಯರಿಂಗ್ ವಿಭಾಗದಲ್ಲಿ ಒಬ್ಬ ಸಹಾಯಕ ಕಾರ್ಯನಿರ್ವಾಹಕ ಅಭಿಯಂತ, ಒಬ್ಬ ಸಹಾಯಕ ಅಭಿಯಂತ, ಒಬ್ಬ ನಕ್ಷೆ ರಚನಾಕಾರ ಇವರುಗಳು ಆಯುಕ್ತರಿಗೆ ದೇವಾಲಯ ಮತ್ತು ಕಟ್ಟಡಗಳ ನಿರ್ಮಾಣ ಹಾಗೂ ರಿಪೇರಿ ವಿಷಯಗಳಲ್ಲಿ ಸಹಾಯ ಮಾಡುತ್ತಾರೆ. ಆಗಮ ವಿಭಾಗದಲ್ಲಿ ಒಬ್ಬರು ಹಿರಿಯ ಆಗಮಿಕರ ಜೊತೆಗೆ ಇಬ್ಬರು ಆಗಮಿಕರಿದ್ದು (ವೈಖಾನಸ, ಪಾಂಚರಾತ್ರ ಮತ್ತು ಶೈವಾಗಮಗಳಿಗೆ ಒಬ್ಬೊಬ್ಬರಂತೆ) ಪೂಜೆ, ಪುರಸ್ಕಾರ ದೇವತಾಪ್ರತಿಮೆಗಳ ಪ್ರತಿಷ್ಠಾಪನೆಯಂತಹ ವಿಷಯಗಳ ಬಗ್ಗೆ ಇಲಾಖೆಗೆ ಸಲಹೆಗಳನ್ನು ಕೊಡುತ್ತಾರೆ. ವಿಶೇಷ ಡೆಪ್ಯುಟಿ ಕಮೀಷನರರು ಮತ್ತು ಸಹಾಯಕ ಕಮಿಷನರರು, ತಹಸೀಲ್ದಾರರು ಕ್ರಮವಾಗಿ ತಮ್ಮ ಅಧಿಕಾರ ವ್ಯಾಪ್ತಿಯೊಳಗೆ ಬರುವಂತಹ ಮುಜರಾಯಿ ಸಂಸ್ಥೆಗಳಿಗೆ ಅಧಿಕಾರಿಗಳಾಗಿರುತ್ತಾರೆ. ಬೆಳಗಾವಿ ಪ್ರದೇಶಕ್ಕೆ ಬೆಳಗಾವಿಯಲ್ಲಿ ಧರ್ಮಾರ್ಥ ಆಯುಕ್ತರ

ಇಲಾಖೆಯಿಂದೆ. ಈ ಇಲಾಖೆಯ ಮುಖ್ಯಸ್ಥರಿಗೆ ಸಹಾಯಕ ಧರ್ಮಾರ್ಥ ಆಯುಕ್ತ ಮತ್ತು ಇನ್ಸ್‌ಪೆಕ್ಟರರು ಸಹಾಯ ಮಾಡುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷ ಡೆಪ್ಯುಟಿ ಕಮೀಷನರರು ಹಿಂದೂ ಧಾರ್ಮಿಕ ಮತ್ತು ಧರ್ಮಾರ್ಥ ದತ್ತಿಗಳ ಅಧಿನಿಯಮದ ಕಾನೂನನ್ನು ಜಾರಿಗೊಳಿಸುವವರಾಗಿದ್ದು, ಅವರಿಗೆ ಹಿಂದೂ ಮತೀಯ ಮತ್ತು ಧಾರ್ಮಿಕ ಉಂಬಳಿಗಳ ಸಹಾಯಕ ಆಯುಕ್ತರು ಮತ್ತು ತಾಲೂಕು ಮಟ್ಟದಲ್ಲಿ ಇನ್ಸ್‌ಪೆಕ್ಟರರು ಸಹಾಯ ಮಾಡುತ್ತಾರೆ. ಕಲ್ಬುರ್ಗಿ ಪ್ರದೇಶ ದಲ್ಲಿ ಡೆಪ್ಯುಟಿ ಕಮೀಷನರರು ಮತ್ತು ತಹಸೀಲ್ದಾರರು ತಮ್ಮ ಆಡಳಿತದಲ್ಲಿರುವ ಸಂಸ್ಥೆಗಳ ಮೇಲ್ವಿಚಾರಣೆಯನ್ನು ನೋಡಿ ಕೊಳ್ಳುತ್ತಾರೆ. ಪ್ರಸಕ್ತ ಅಧಿನಿಯಮಕ್ಕನುಸಾರವಾಗಿ ಒಂದೊಂದು ದೇವಾಲಯಕ್ಕೂ ಆಯಾ ಪ್ರದೇಶಕ್ಕೆ ಸೇರಿದಂತೆ ಸಮಿತಿಯನ್ನು ಸೂಕ್ತ ಪ್ರಾಧಿಕಾರದವರು ರಚಿಸುತ್ತಾರೆ.

## ಸಂಸ್ಥೆಗಳು

ಹಳೆಯ ಮೈಸೂರು ಪ್ರದೇಶದ ಮುಜರಾಯಿ ಸಂಸ್ಥೆ ಗಳನ್ನು ಆಡಳಿತ ನಿರ್ವಹಣೆಯ ಉದ್ದೇಶದಿಂದ ಮೂರು ಗುಂಪು ಗಳಾಗಿ ವಿಭಾಗಿಸಲಾಗಿದೆ. ಅವುಗಳನ್ನು ಹಿರಿಯ, ಕಿರಿಯ ಮತ್ತು ಗ್ರಾಮೀಣ ಸಂಸ್ಥೆಗಳೆಂದು ಕರೆಯಲಾಗಿದೆ. ಒಟ್ಟಾರೆ ವರ್ಷಕ್ಕೆ 1,000 ರೂ.ಗಳಿಗಿಂತ ಹೆಚ್ಚು ಆದಾಯವಿರುವ ಸಂಸ್ಥೆ ಗಳು ಹಿರಿಯ ಸಂಸ್ಥೆಗಳಾಗಿದ್ದರೆ ಉಳಿದ ವಿಶೇಷವಾದ ಸಂಸ್ಥೆ ಗಳನ್ನು ಕಾಲಕಾಲಕ್ಕೆ ನಿರ್ದೇಶಿಸಲಾಗುತ್ತಿತ್ತು. ರೂ. 100 ರಿಂದ 1,000 ರೂ. ವರೆಗೆ ವಾರ್ಷಿಕ ಆದಾಯವಿರುವ ಸಂಸ್ಥೆಗಳು ಕಿರಿಯ ಸಂಸ್ಥೆಗಳಾಗಿವೆ. ಗ್ರಾಮೀಣ ಸಂಸ್ಥೆಗಳಲ್ಲಿನ ವಾರ್ಷಿಕ ಆದಾಯ 100 ರೂ.ಗಿಂತ ಕಡಿಮೆ. ಹಳೆಯ ಮೈಸೂರು ಪ್ರದೇಶದಲ್ಲಿ 1930-31 ರಿಂದ 1981-82 ರವರೆಗಿದ್ದ ವಿವಿಧ ರೀತಿಯ ಸಂಸ್ಥೆಗಳನ್ನು *ಕೆಳಗಿನ ವಿಷಯಸೂಚಿಕೆಯಲ್ಲಿ ತೋರಿಸ ಲಾಗಿದೆ

1950ರ ಮುಂಬೈ ಸಾರ್ವಜನಿಕ ಟ್ರಸ್ಟ್ ಅಧಿನಿಯಮದ ಪ್ರಕಾರ ಬೆಳಗಾವಿ ವಿಭಾಗದಲ್ಲಿ 1981ರ ಮಾರ್ಚ್ ಅಂತ್ಯದ ವೇಳೆಗೆ 10,516 ಟ್ರಸ್ಟ್‌ಗಳು ನೋಂದಾಯಿಸಲ್ಪಟ್ಟಿದ್ದವು. ಬಳ್ಳಾರಿ, ದಕ್ಷಿಣ ಕನ್ನಡ ಮತ್ತು ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಸಂಸ್ಥೆಗಳನ್ನು ಪಟ್ಟಿ ಮಾಡಿದ ಮತ್ತು ಪಟ್ಟಿ ಮಾಡದ ಸಂಸ್ಥೆಗಳೆಂದು ವರ್ಗೀಕರಿಸಲಾಗಿತ್ತು. 20,000 ರೂ. ಮತ್ತು ಅದಕ್ಕಿಂತ ಹೆಚ್ಚಿನ ವಾರ್ಷಿಕ ಆದಾಯವಿರುವ ಸಂಸ್ಥೆಗಳು ಪಟ್ಟಿಯಲ್ಲಿ ಸೇರಿದ ಸಂಸ್ಥೆಗಳಾಗಿಯೂ, ಉಳಿದವು ಪಟ್ಟಿ ಮಾಡದ ಸಂಸ್ಥೆಗಳಾಗಿಯೂ ಇದ್ದವು. ಪಟ್ಟಿಯಲ್ಲಿ ಸೇರಿರುವ ಸಂಸ್ಥೆಗಳು ಡೆಪ್ಯುಟಿ ಕಮೀಷನರರ ಅಧೀನದಲ್ಲಿದ್ದವು. ಪಟ್ಟಿ ಮಾಡದ ಸಂಸ್ಥೆಗಳು ಸರ್ಕಾರ ರಚಿಸಿದ ಪ್ರಾದೇಶಿಕ ಸಮಿತಿ ಗಳ ವ್ಯಾಪ್ತಿಯಲ್ಲಿದ್ದು ಇದಕ್ಕೆ ಹಿಂದೂ ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿಗಳ ಅಸಿಸ್ಟೆಂಟ್ ಕಮೀಷನರರೇ ಅಧ್ಯಕ್ಷ ರಾಗಿದ್ದರು. ಈ ಪ್ರದೇಶದಲ್ಲಿ ಮಾರ್ಚ್ 1981ರ ಕೊನೆಗೆ 1,085 ಗಣನೆಗೆ ಯೋಗ್ಯ ಸಂಸ್ಥೆಗಳಿದ್ದವು. ಇವುಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ 386 ಸಂಸ್ಥೆಗಳು, ಬಳ್ಳಾರಿ ಜಿಲ್ಲೆಯ 609 ಸಂಸ್ಥೆಗಳನ್ನು ಬಿಟ್ಟರೆ ಉಳಿದ ಸಂಸ್ಥೆಗಳು ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲೂಕಿನಲ್ಲಿದ್ದವು.

ಕಲ್ಬುರ್ಗಿ ಪ್ರದೇಶದ 10,289 ಸಂಸ್ಥೆಗಳ ಪೈಕಿ (ಕಲ್ಬುರ್ಗಿ ಜಿಲ್ಲೆಯಲ್ಲಿ 3,436 ; ರಾಯಚೂರು ಜಿಲ್ಲೆಯಲ್ಲಿ

*

| ವರ್ಷಗಳು | ದೇವಾಲಯಗಳು | ಬಸದಿಗಳು | ಮಹಮದೀಯ ಸಂಸ್ಥೆಗಳು | ಮಠಗಳು | ಛತ್ರಗಳು ತಂಗುದಾಣಗಳು ಮತ್ತಿತರ ಸಂಸ್ಥೆಗಳು | ಒಟ್ಟು |
|---|---|---|---|---|---|---|
| 1930-31 | 12,488 | 48 | 310 | 220 | 75 | 13,141 |
| 1940-41 | 14,897 | 57 | 372 | 395 | 63 | 15,754 |
| 1950-51 | 14,724 | 75 | 408 | 388 | 61 | 15,656 |
| 1956-57 | 14,781 | 81 | 409 | 373 | 55 | 15,699 |
| 1960-61 | 14,782 | 92 | 418 | 293 | 66 | 15,641 |
| 1980-81 | 14,657 | 55 | — | 137 | 124 | 14,973 |

5,744 ಮತ್ತು ಬಿದರೆ ಜಿಲ್ಲೆಯಲ್ಲಿ 1,109) 6,811 ಸಂಸ್ಥೆಗಳನ್ನು (ಕಲ್ಬುರ್ಗಿ ಜಿಲ್ಲೆಯ 3,012, ರಾಯಚೂರು ಜಿಲ್ಲೆಯ 3,647 ಮತ್ತು ಬಿದರೆ ಜಿಲ್ಲೆಯ 152) ಈಗಾಗಲೇ ನೋಂದಾಯಿಸಲಾಗಿದೆ. 3,478 ಸಂಸ್ಥೆಗಳು 1981ರ ಮಾರ್ಚ್ ಕೊನೆಗೆ ನೋಂದಾವಣೆಯಾಗಬೇಕಿತ್ತು.

### ವಿಶೇಷ ಸಂಸ್ಥೆಗಳು

ವಿಶೇಷ ಅಧಿನಿಯಮ ಮತ್ತು ನಿಯಮಗಳಿಗನುಸಾರವಾಗಿ ಆಡಳಿತಕ್ಕೊಳಪಟ್ಟು ಕೆಲವು ಪ್ರಮುಖ ವಿಶೇಷ ಸಂಸ್ಥೆಗಳು ಈ ಕೆಳಕಂಡಂತಿವೆ.

**ಮಲೆ ಮಹದೇಶ್ವರ ದೇವಾಲಯ :** ಕೊಳ್ಳೇಗಾಲ ತಾಲೂಕಿನಲ್ಲಿರುವ ಮಲೆ ಮಹದೇಶ್ವರಬೆಟ್ಟದ ಮಲೆ ಮಹದೇಶ್ವರ ದೇವಾಲಯವು ಪಟ್ಟಿಯಲ್ಲಿ ಸೇರಿರುವ ಸಂಸ್ಥೆಯಾಗಿದ್ದು, ಮೈಸೂರು ಜಿಲ್ಲೆಯ ಡೆಪ್ಯುಟಿ ಕಮೀಷನರರ ಆಡಳಿತದ ವ್ಯಾಪ್ತಿಗೆ ಬರುತ್ತದೆ. ದೇವಾಲಯದ ಆಡಳಿತವನ್ನು ಕಾರ್ಯನಿರ್ವಾಹಕಾಧಿಕಾರಿಯು ನೋಡಿಕೊಳ್ಳುತ್ತಾರೆ. ಕಾರ್ಯನಿರ್ವಾಹಕ ಸಮಿತಿಯನ್ನು ಸರ್ಕಾರವು ನೇಮಿಸಿದ್ದು, ಅದು ದೇವಾಲಯದ ಮತ್ತು ಅದರ ಆವರಣದ ಅಭಿವೃದ್ಧಿಗಾಗಿ 1968ರಲ್ಲಿ ನಿರ್ಮಾಣ ಯೋಜನೆಯೊಂದನ್ನು ಕೈಗೊಳ್ಳಲಾಗಿದ್ದು ಇದಕ್ಕಾಗಿ ಸರ್ಕಾರವು 91.80 ಲಕ್ಷ ರೂ.ಗಳನ್ನು ಮಂಜೂರು ಮಾಡಿದೆ.

**ರೇಣುಕಾ ಎಲ್ಲಮ್ಮ ದೇವಾಲಯ :** 1974ರ ರೇಣುಕಾ ಎಲ್ಲಮ್ಮ ದೇವಾಲಯ (ಆಡಳಿತದ) ಅಧಿನಿಯಮ ಮತ್ತು ಅದರಿಂದ ರೂಪಿತಗೊಂಡ ನಿಯಮಗಳಿಗನುಸಾರವಾಗಿ ಸದ್ಯಕ್ಕೆ ಸವದತ್ತಿಯ ಶ್ರೀ ರೇಣುಕ ಎಲ್ಲಮ್ಮ ದೇವಾಲಯದ ಆಡಳಿತವನ್ನು ನಡೆಸಲಾಗುತ್ತಿದೆ. 1979ರಲ್ಲಿ ಕರ್ನಾಟಕ ಸರ್ಕಾರವು ಮೂರು ವರ್ಷ ಕಾಲಾವಧಿಗೆ (ಟ್ರಸ್ಟಿಗಳ) ಧರ್ಮದರ್ಶಿಗಳ ಮಂಡಳಿಯೊಂದನ್ನು ರಚಿಸಿತು. ಬೆಳಗಾವಿಯ ವಿಶೇಷ ಡೆಪ್ಯುಟಿ ಕಮೀಷನರರೇ ಈ ಸಮಿತಿಗೆ ಅಧ್ಯಕ್ಷರಾಗಿಯೂ ಇಬ್ಬರು ಅಧಿಕಾರಿಗಳು ಮತ್ತು ನಾಲ್ಕು ಜನ ಅಧಿಕಾರೇತರರು ಇದರ ಸದಸ್ಯರಾಗಿದ್ದಾರೆ. ದೇವಾಲಯದ ದಿನನಿತ್ಯದ ಕಾರ್ಯಕ್ರಮಗಳನ್ನು ನೋಡಿಕೊಳ್ಳಲು ಕಾರ್ಯನಿರ್ವಾಹಕಾಧಿಕಾರಿ ಇರುತ್ತಾರೆ.

**ಶ್ರವಣಬೆಳಗೊಳದ ಸಂಸ್ಥೆಗಳು :** 1967ರ ಶ್ರೀ ದಿಗಂಬರ ಜೈನ ಮುಜರಾಯಿ ಸಂಸ್ಥೆಗಳ ಮೇಲ್ವಿಚಾರಣೆಯ ಅಧಿನಿಯಮದ ಪ್ರಕಾರ ಶ್ರವಣಬೆಳಗೊಳದ ಮುಜರಾಯಿ ಸಂಸ್ಥೆಗಳ ಆಡಳಿತ ನಡೆಸಲಾಗುತ್ತಿದೆ. ಆಡಳಿತ ಸಮಿತಿಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರನ್ನು ಬಿಟ್ಟು ಇನ್ನೂ 24 ಮಂದಿ ಸದಸ್ಯರಿರುತ್ತಾರೆ. ಮತ್ತು ಕರ್ನಾಟಕ ಸರ್ಕಾರವು ಮೂರು ವರ್ಷಗಳ ಕಾಲಾವಧಿಗೆ ಇವರನ್ನು ನೇಮಿಸುತ್ತದೆ. ಶ್ರವಣಬೆಳಗೊಳದ ಜೈನ ಮಠದ ಸ್ವಾಮಿಜಿಯವರು ಈ ಸಮಿತಿಯ ಅಧ್ಯಕ್ಷರು.

**ನಂಜನಗೂಡು ದೇವಾಲಯ :** ನಂಜನಗೂಡಿನ ಶ್ರೀ ಶ್ರೀಕಂಠೇಶ್ವರ ಸ್ವಾಮಿ ದೇವಾಲಯದ ಆಡಳಿತವನ್ನು ಧರ್ಮದರ್ಶಿಗಳ ಸಮಿತಿ ನಡೆಸುತ್ತದೆ. ಈ ಸಮಿತಿಯನ್ನು ಮುಜರಾಯಿ ಕಮೀಷನರರು ಮೂರು ವರ್ಷಗಳ ಕಾಲಾವಧಿಗೆ ನೇಮಿಸಿರುತ್ತಾರೆ. ಮೈಸೂರಿನ ಹಿಂದೂ ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿ ಸಂಸ್ಥೆಗಳ ಅಧಿನಿಯಮದ ಚೌಕಟ್ಟಿನಲ್ಲಿ ರೂಪುಗೊಂಡ ವಿಶೇಷ ನಿಯಮಗಳ ಪ್ರಕಾರ ಇದರ ಆಡಳಿತವನ್ನು ನಡೆಸಲಾಗುತ್ತದೆ.

**ಸಿದ್ಧಲಿಂಗೇಶ್ವರಸ್ವಾಮಿ ದೇವಾಲಯ :** ತುಮಕೂರು ಜಿಲ್ಲೆಯ ಯಡೆಯೂರಿನ ಸಿದ್ಧಲಿಂಗೇಶ್ವರಸ್ವಾಮಿ ದೇವಾಲಯದ ಆಡಳಿತವನ್ನು 1967ರ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುಜರಾಯಿ ಸಂಸ್ಥೆಯ ಆಡಳಿತದ ನಿಯಮಕ್ಕೆ ಅನುಸಾರವಾಗಿ ನಡೆಸಲಾಗುತ್ತಿದೆ. ಈ ನಿಯಮವು 1927ರ ಮೈಸೂರು ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿ ಸಂಸ್ಥೆಗಳ ಅಧಿನಿಯಮದ ಚೌಕಟ್ಟಿನಲ್ಲಿ ರೂಪುಗೊಂಡದ್ದಾಗಿದೆ. ದೇವಾಲಯದ ಆಡಳಿತ ಸಮಿತಿಯು ಐದು ವರ್ಷಕ್ಕೊಮ್ಮೆ ಸರ್ಕಾರದಿಂದ ರಚಿತವಾಗುತ್ತದೆ. ತುಮಕೂರಿನ ಡೆಪ್ಯುಟಿ ಕಮೀಷನರರು ಇದರ ಅಧ್ಯಕ್ಷರಾಗಿರುತ್ತಾರೆ. ಕಾರ್ಯನಿರ್ವಾಹಕಾಧಿಕಾರಿಯು ದೇವಾಲಯದ ದಿನನಿತ್ಯದ ಆಗುಹೋಗುಗಳನ್ನು ನೋಡಿಕೊಳ್ಳುತ್ತಾರೆ.

**ಅರಮನೆಯ ಮುಜರಾಯಿ ಸಂಸ್ಥೆಗಳು :** 1851ರಲ್ಲಿ ಮೈಸೂರಿನ ಮಹಾರಾಜರು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯವನ್ನು ಮುಜರಾಯಿ ಇಲಾಖೆಯಿಂದ ತಮ್ಮ ವಶಕ್ಕೆ ತೆಗೆದುಕೊಂಡರು. ಇದಾದ ನಂತರ ಅರಮನೆ ಇಲಾಖೆ ಕಾಲ ಕಾಲಕ್ಕೆ ಅನೇಕ ಮುಜರಾಯಿ ಸಂಸ್ಥೆಗಳನ್ನು ಮುಜರಾಯಿ ಇಲಾಖೆಯಿಂದ ತನಗೆ ವರ್ಗಾಯಿಸಿಕೊಂಡು ಆಡಳಿತ ನಡೆಸುತ್ತಿತ್ತು. ಮೈಸೂರಿನ ಮಾಜಿ ಅರಸರ ಆಳ್ವಿಕೆಯಲ್ಲಿದ್ದ ಅರಮನೆಯ ಮುಜರಾಯಿ ಸಂಸ್ಥೆಗಳನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು. 1978ರ ಮೈಸೂರು ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿ ಸಂಸ್ಥೆಗಳ ಆಡಳಿತದ ನಿಯಮಕ್ಕೆ ಅನುಸಾರವಾಗಿ ಇದರ ಮೇಲ್ವಿಚಾರಣೆಯನ್ನು ನಡೆಸಲಾಗುತ್ತಿದೆ. ಈ ಸಂಸ್ಥೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಸರ್ಕಾರವು ಸಮಿತಿಯೊಂದನ್ನು ರಚಿಸಿದ್ದು, ಮೈಸೂರಿನ ಡೆಪ್ಯುಟಿ ಕಮೀಷನರರು ಇದರ ಅಧ್ಯಕ್ಷರಾಗಿರುತ್ತಾರೆ. ಮೈಸೂರಿನ ಮಹಾರಾಜರ ಛತ್ರ, ಪ್ರಸನ್ನ ಕುಮಾರಸ್ವಾಮಿ, ಶ್ರೀ ವರಾಹ ಸ್ವಾಮಿ, ಶ್ರೀ ಲಕ್ಷ್ಮೀನಾರಾಯಣ ಸ್ವಾಮಿ, ಶ್ರೀ ತ್ರಿನೇಶ್ವರ ಸ್ವಾಮಿ, ಶ್ರೀ ಚಾಮುಂಡೇಶ್ವರಿ, ಮಹಾಬಲೇಶ್ವರ ಸ್ವಾಮಿ, ನಾರಾಯಣ ಸ್ವಾಮಿ, ಭುವನೇಶ್ವರಿ,

ಗಾಯತ್ರಿ, ವಿಜಯ ವಿಶ್ವೇಶ್ವರ ಮತ್ತು ಕಾಮ ಕಾಮೇಶ್ವರಿ, ಚಮ್ಮನ ಪಟ್ಟಿ ದೇವೇಶ್ವರ, ಉತ್ತನಹಳ್ಳಿ ಜ್ವಾಲಾಮುಖಿ, ಕಿಲ್ಲೆ ವೆಂಕಟೇಶ್ವರ ಸ್ವಾಮಿ, ಸೋಮೇಶ್ವರ ಸ್ವಾಮಿ, ಭೈರವೇಶ್ವರ ಸ್ವಾಮಿ, ದಕ್ಷಿಣ ದ್ವಾರದಲ್ಲಿರುವ ಆಂಜನೇಯ ಸ್ವಾಮಿ, ಕೋಟೆಯ ಪಶ್ಚಿಮ ದ್ವಾರದಲ್ಲಿರುವ ವಿನಾಯಕ ಸ್ವಾಮಿ, ಬಿಸಲೂರು ಮಾರಮ್ಮ, ಬೆಟ್ಟದ ಪಾದದ ಗುಡಿ, ಸಂಜೀವ ರಾಜ ಅರಸ್ ದೇವಾಲಯಗಳು, ಪಂಚಗವಿ ಮಠ ಮತ್ತು ಜಪದ ಕಟ್ಟೆ ಮಠಗಳನ್ನು ಸರ್ಕಾರಕ್ಕೆ ವಹಿಸಿಕೊಡಲಾಯಿತು.

**ದೇವದಾಸಿ ಮತ್ತು ಇತರ ರೂಢಿಗಳ ನಿರ್ಮೂಲನ:** ನಂದಿಯ ಭೋಗನಂದೀಶ್ವರ ಸ್ವಾಮಿ ದೇವಾಲಯದ ರಥೋತ್ಸವ ಸಮಯದಲ್ಲಿ ದೇವಸ್ಥಾನದಲ್ಲಿ ತಾಫೆ ಸೇವೆ ಅಥವಾ ನೃತ್ಯ ಸೇವೆ ಮಾಡುತ್ತಿದ್ದ ವೃತ್ತಿನಿರತ ಮಹಿಳೆಯರನ್ನು ಅವರ ತಾತ್ಕಾಲಿಕ ವಾದ ಈ ಉದ್ಯೋಗದಿಂದ 1892ರ ಫೆಬ್ರವರಿಯಲ್ಲಿ ವಿಮುಕ್ತಿಗೊಳಿಸಲಾಯಿತು. ಇದರಿಂದ ಉಳಿತಾಯವಾದ ಹಣವನ್ನು ಇದಕ್ಕಿಂತ ಹೆಚ್ಚು ಉಪಯುಕ್ತವಾದ ಉದ್ದೇಶಗಳಾದ ನೈರ್ಮಲ್ಯ ವ್ಯವಸ್ಥೆ ಮತ್ತು ದೇವಾಲಯದ ಉಳಿದ ಅಗತ್ಯಗಳಿಗಾಗಿ ಉಪಯೋಗಿಸಲಾಯಿತು. ನಂಜನಗೂಡಿನ ಶ್ರೀ ಶ್ರೀಕಂಠೇಶ್ವರ ಸ್ವಾಮಿ ದೇವಾಲಯದ ತಸದಿಕ್ ಪಟ್ಟಿಯನ್ನು 1899ರಲ್ಲಿ ಪರಿಷ್ಕರಣ ಮಾಡಲಾಯಿತು. ದೇವಾಲಯದ ಸಿಬ್ಬಂದಿಯಾಗಿದ್ದು ನೃತ್ಯಸೇವೆ ಸಲ್ಲಿಸುತ್ತಿದ್ದ ದೇವದಾಸಿಯರು ಇನ್ನು ಮುಂದೆ ದೇವಾಲಯದಲ್ಲಿ ತಾಫೆ ಸೇವೆಯನ್ನು ಆಚರಿಸಲು ಅವಕಾಶ ನೀಡಬಾರದೆಂದು ಮುಜರಾಯಿ ಅಧೀಕ್ಷಕ ಮತ್ತು ಕಾರ್ಯದರ್ಶಿಗಳು ಆದೇಶ ನೀಡಿದರು. ಆದರೆ ಅವರಿಗೆ ಕೊಡುತ್ತಿರುವ ಭತ್ಯವನ್ನು ಅವರ ಜೀವಮಾನ ಪರ್ಯಂತ ಮುಂದುವರಿಸಬೇಕೆಂದೂ, ಆ ಹುದ್ದೆಗಳು ಅವರ ಸಾವಿನಿಂದ ತೆರವಾದ ಪಕ್ಷದಲ್ಲಿ ಅದನ್ನು ಭರ್ತಿ ಮಾಡಬಾರದೆಂದೂ ನಿರ್ದೇಶನವಿತ್ತರು. ಏಪ್ರಿಲ್ 1909ರ ಸರ್ಕಾರಿ ಆಜ್ಞೆಯಲ್ಲಿ ಈ ರೀತಿ ಗಮನಿಸಲ್ಪಟ್ಟಿದೆ—ದೇವದಾಸಿಯರನ್ನು ದೇವಸ್ಥಾನಗಳಲ್ಲಿ ಸೇವೆ ಸಲ್ಲಿಸಲು ನೇಮಿಸಿದ್ದುದರ ಮೂಲ ಉದ್ದೇಶಗಳು ಏನೇ ಇದ್ದರೂ, ಆ ಕಾಲದಲ್ಲಿ ದೇವಸ್ಥಾನಗಳಲ್ಲಿ ಅವರ ಅನೀತಿಯುತವಾದ ನಡುವಳಿಕೆಯಿಂದ ಅವರನ್ನು ದೇವಸ್ಥಾನಗಳ ಎಲ್ಲಾ ರೀತಿಯ ಸೇವೆಗಳಿಂದಲೂ ಮುಕ್ತಗೊಳಿಸಿದ್ದುದು ಸಂಪೂರ್ಣವಾಗಿ ಸಮರ್ಥಿಸಲ್ಪಟ್ಟಿದೆ. ಈ ಸ್ತ್ರೀಯರ ಸೇವೆಯು ಕೆಲವು ಮುಖ್ಯವಾದ ದೇವಸ್ಥಾನಗಳಲ್ಲಿ 15 ವರ್ಷಗಳಿಂದಲೂ ಇಲ್ಲದೇ ಹೋದರೂ ಜನರು ಅಂತಹ ಸೇವೆಯ ಇಲ್ಲದಿರುವಿಕೆಗೆ ಒಗ್ಗಿಕೊಂಡಿರುವುದು ಗಮನಿಸಲ್ಪಟ್ಟಿತು. ದೇವಾಲಯಗಳಲ್ಲಿ ತಾಫೆ ಸೇವೆ ಸಲ್ಲಿಸುತ್ತಿದ್ದ ವ್ಯಕ್ತಿಗಳಿಗೆ ವಿಶೇಷವಾಗಿ ಇನಾಮಾಗಿ ಕೊಟ್ಟ ಭೂಮಿ ಅಥವಾ ಉಳಿದ ಇನಾಮುಗಳನ್ನು ಅವರಿಗೇ ನೀಡಲಾಯಿತು. ಮುಜರಾಯಿ ದೇವಾಲಯಗಳಲ್ಲಿ ಆಚರಿಸುತ್ತಿದ್ದ ಗೆಜ್ಜೆಪೂಜೆಯಂತಹ ಕಾರ್ಯವು ನರ್ತಕಿಯನ್ನು ವೇಶ್ಯಾ ವೃತ್ತಿಯ ಜೊತೆ ಸಂಬಂಧ ಕಲ್ಪಿಸುತ್ತದೆ ಎಂದು ಕಾರಣ ನೀಡಿ ಅದನ್ನು 1910ರಲ್ಲಿ ಸರ್ಕಾರವು ನಿಷೇಧಿಸಿತು. ಇದಕ್ಕೆ ಮೊದಲು 1880ರಲ್ಲಿ ಸಿಡಿ ಕಾರ್ಯಗಳನ್ನು ನಿಷೇಧಿಸಲು ಮುಖ್ಯ ಕಮಿಷನರರು ಜಿಲ್ಲಾ ದಂಡಾಧಿಕಾರಿಗಳಿಗೆ ಅಧಿಕಾರವನ್ನು ಕೊಟ್ಟಿದ್ದರು. 'ಸಿಡಿ' ಎಂದರೆ ಒಂದು ದೊಡ್ಡ ಕಂಬದ ತುದಿಗೆ ಅಡ್ಡಲಾಗಿ ಸುತ್ತಲೂ ತಿರಗಬಲ್ಲ ಇನ್ನೊಂದು ಮರ (ತೊಲೆ) ವನ್ನು ತಿರುಗಣೆಯ ಸಹಾಯದಿಂದ ಸಿಕ್ಕಿಸಿರುತ್ತಾರೆ; ಹರಕೆ ಹೊತ್ತ ವ್ಯಕ್ತಿಯ ಬೆನ್ನಿನ ಮೃದ್ವಸ್ಥಿಯನ್ನು ಅಡ್ಡ ಕಂಬದ ಒಂದು ತುದಿಯಲ್ಲಿರುವ ಕಬ್ಬಿಣದ ಕೊಕ್ಕೆಗೆ ಸಿಕ್ಕಿಸಿ ಹಗ್ಗದ ಸಹಾಯದಿಂದ ತಿರುಗಣೆಯನ್ನು ತಿರುಗಿಸುವುದರ ಮೂಲಕ ವ್ಯಕ್ತಿಯು ತಿರುಗುವಂತೆ ಮಾಡುತ್ತಾರೆ. 1927ರ ಹಿಂದೂ ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿ ಅಧಿನಿಯಮದ ಪ್ರಕಾರ ಮದ್ರಾಸ್-ಕರ್ನಾಟಕ ಪ್ರಾಂತ್ಯದಲ್ಲಿ ದೇವದಾಸಿ ಪದ್ಧತಿಯನ್ನು ಆಚರಿಸುವುದು ಶಿಕ್ಷಾರ್ಹವಾಗಿತ್ತು. ವಿಶಾಲ ಕರ್ನಾಟಕದಲ್ಲಿ ಸೇರಿಕೊಂಡಂತಹ ಪ್ರದೇಶಗಳ ಮೇಲೆ ಅದುವರೆಗೂ ಬಳಕೆಯಲ್ಲಿದ್ದ ಅಧಿನಿಯಮಗಳಿಂದ ಅಷ್ಟೇನೂ ಪರಿಣಾಮ ಉಂಟಾಗಲಿಲ್ಲವಾಗಿ, ಇಡೀ ರಾಜ್ಯಕ್ಕೆ ಅನ್ವಯಿಸುವಂತಹ ವಿಧೇಯಕ ಒಂದನ್ನು 1982ರ ಕರ್ನಾಟಕ ದೇವದಾಸಿ ವಿಧೇಯಕ (ಭಗವತ್ ಕಾರ್ಯಕ್ಕೆ ಅರ್ಪಣೆಯ ನಿಷೇಧ)ವನ್ನು 1982ರ ಫೆಬ್ರವರಿ ವಿಧಾನ ಮಂಡಲದಲ್ಲಿ ಮಂಡಿಸಲಾಯಿತು.

## ಛತ್ರಗಳು

ಹಳೇ ಮೈಸೂರು ರಾಜ್ಯದ ಅನ್ನಛತ್ರಗಳ ಮೇಲ್ವಿಚಾರಣೆಯನ್ನು ಆರಂಭದಿಂದಲೂ ಮುಜರಾಯಿ ಇಲಾಖೆಯು ನಡೆಸುತ್ತಿತ್ತು. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಈ ಛತ್ರಗಳು ಗಟ್ಟಿ ತಳಹದಿಯ ಮೇಲೆ ಸ್ಥಾಪನೆಗೊಂಡವು. ದಿವಾನ್ ಪೂರ್ಣಯ್ಯನವರು ಈ ಸಂಸ್ಥೆಗಳನ್ನು ವ್ಯವಸ್ಥೆಗೊಳಿಸಿ, ಧಾರಾಳವಾಗಿ ಅನುದಾನವನ್ನು ನೀಡಿ, ವರ್ಷದುದ್ದಕ್ಕೂ ಅದು ಸರಿಯಾಗಿ ಕೆಲಸ ಮಾಡುವಂತೆ ಸೂಕ್ತವಾದ ಸಿಬ್ಬಂದಿಯನ್ನು ನೇಮಿಸಿದ್ದುದರಿಂದ ಇವು ಪೂರ್ಣಯ್ಯನವರ ಛತ್ರಗಳೆಂದು ಜನಪ್ರಿಯವಾಗಿದ್ದವು.

ಹಳೇ ಮೈಸೂರು ರಾಜ್ಯದಲ್ಲಿ ಮೊದಲಿಗೆ 68 ಅನ್ನಛತ್ರಗಳೂ ಮತ್ತು ವಿಶ್ರಾಂತಿ ಗೃಹಗಳಿದ್ದವು. ಬ್ರಿಟಿಷ್ ಕಮಿಷನರರ ಆಳ್ವಿಕೆಯ ಕಾಲದಲ್ಲಿ ಮುಜರಾಯಿ ಮತ್ತು ಅರಮನೆಯ ಆಡಳಿತಗಳೆರಡೂ ಸೇರಿ ಈ ಸಂಸ್ಥೆಗಳಿಗೆ 66,960 ರೂ.ಗಳ ಅನುದಾನವನ್ನು ಕೊಡುತ್ತಿದ್ದುವು. ಬ್ರಿಟಿಷ್ ಕಮಿಷನರ ಆಡಳಿತ ಕಾಲದಲ್ಲಿಯೂ ಮತ್ತು ರಾಜರಿಗೆ ಅಧಿಕಾರವನ್ನು ಹಸ್ತಾಂತರ ಮಾಡಿದ ನಂತರವೂ, ಛತ್ರಗಳ ಮೇಲ್ವಿಚಾರಣೆಯನ್ನು ಕ್ರಮಬದ್ಧಗೊಳಿಸಲು ಮತ್ತು ಅರ್ಹರಾದ ಅಂಗವಿಕಲರಿಗೂ ಹಾಗೂ ಅತಿ ವೃದ್ಧರಿಗೂ 'ನೆಹಿಮಿ' ಭತ್ಯವನ್ನು ಕೊಡಲು

ಅನೇಕ ಆದೇಶಗಳನ್ನು ಹೊರಡಿಸಲಾಯಿತು. ಬಡವರಾಗಿದ್ದ ಸಂಸ್ಕೃತ ವಿದ್ಯಾರ್ಥಿಗಳನ್ನು ನೆಹಿಮಿದಾರರಾಗಿ ಸೇರಿಸಿ ಕೊಳ್ಳಲಾಯಿತು.

ಈ ಛತ್ರಗಳಿಗೆ ಕೊಡಲಾಗಿದ್ದ ಅನುದಾನದ ಹೆಚ್ಚಿನ ಭಾಗವೆಲ್ಲಾ ಛತ್ರದ ಸಿಬ್ಬಂದಿಯ ವೇತನಕ್ಕೇ ಖರ್ಚಾಗುತ್ತಿತ್ತು. ಕೆಲವು ಛತ್ರಗಳಲ್ಲಿ ನೆಹಿಮಿದಾರರ ಸಂಖ್ಯೆ ಬಹಳ ಹೆಚ್ಚಾಗಿದ್ದ ಕಾರಣ ಪ್ರತೀ ತಿಂಗಳಲ್ಲಿ ಹಲವಾರು ದಿನ ಛತ್ರಗಳಲ್ಲಿ ಊಟದ ವ್ಯವಸ್ಥೆಯನ್ನು ನಿಲ್ಲಿಸಬೇಕಾಗುತ್ತಿತ್ತು. 1906 ರಿಂದ ಬೈರಾಗಿ ಗಳು ಮತ್ತು ಉಳಿದ ಪ್ರಯಾಣಿಕರಿಗೆ ಅದುವರೆಗೂ ಕೊಡುತ್ತಿದ್ದ ಆಹಾರ ಧಾನ್ಯಗಳ ಸರಬರಾಜನ್ನು ನಿಲ್ಲಿಸಿ ಬೇಯಿಸಿದ ಆಹಾರ ಪದಾರ್ಥಗಳನ್ನು ಒದಗಿಸಲಾಯಿತು. ಯಾತ್ರಾಸ್ಥಳಗಳು ಮತ್ತು ಕೆಲವು ಪ್ರಮುಖ ಸ್ಥಳಗಳಲ್ಲಿನ ಛತ್ರಗಳನ್ನು ಬಿಟ್ಟು ಉಳಿದ ಛತ್ರಗಳನ್ನು ವಿಶ್ರಾಂತಿ ಗೃಹಗಳಾಗಿ ಮಾರ್ಪಡಿಸಲು ಛತ್ರಗಳ ಪರಿಸ್ಥಿತಿಯನ್ನು ಅಧ್ಯಯನ ಮಾಡಲು 1913ರಲ್ಲಿ ರಚಿಸಿದ ವಿಶೇಷ ಸಮಿತಿಯು ಶಿಫಾರಸು ಮಾಡಿತು. ಅನ್ನಛತ್ರಗಳ ಮೇಲ್ವಿಚಾರಣೆ ಯನ್ನು ಗಮನಿಸಲು 1926ರಲ್ಲಿ ಮತ್ತೊಂದು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ಇತರ ಶಿಫಾರಸುಗಳ ಜೊತೆಗೆ ಯಾತ್ರಾಸ್ಥಳಗಳ ಹಾದಿಯಲ್ಲಿ ನಡೆಸುತ್ತಿದ್ದ 29 ಅನ್ನಛತ್ರಗಳನ್ನು ರದ್ದು ಮಾಡಲು ಸೂಚಿಸಿ ಅರಮನೆಯ ಮೇಲ್ವಿಚಾರಣೆಯಲ್ಲಿ ಮೈಸೂರಿನಲ್ಲಿದ್ದ ಉಚಿತ ಭೋಜನಾಲಯದ ವ್ಯವಸ್ಥೆಯನ್ನು ದಸರಾದಂತಹ ವಿಶೇಷ ಸಂದರ್ಭಗಳಿಗೆ ಸೀಮಿತ ಗೊಳಿಸುವಂತೆಯೂ, ಯಾತ್ರಾಸ್ಥಳಗಳಲ್ಲಿ ನಡೆಸುತ್ತಿದ್ದ ಒಂಬತ್ತು ಛತ್ರಗಳನ್ನು ನಿಲ್ಲಿಸುವಂತೆಯೂ, ಆದರೆ ಗೋಪಾಲಸ್ವಾಮಿ ಬೆಟ್ಟದಲ್ಲಿನ ಒಂದು ಛತ್ರ, ತಿರುಪತಿಯಲ್ಲಿನ ಮೂರು ಛತ್ರಗಳು, ವಾರಾಣಸಿಯ ಛತ್ರ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯ ದಲ್ಲಿಯ ಬಾರಾ ಹಜಾರ್ ಸಂತರ್ಪಣೆ ಛತ್ರಗಳನ್ನು ಅಭಿವೃದ್ಧಿ ಪಡಿಸಲು ಶಿಫಾರಸು ಮಾಡಲಾಯಿತು. ಉಳಿತಾಯದ ಅರ್ಧ ಭಾಗದ ಹಣ ರೂ. 16,000 ಗಳ ಅನುದಾನವನ್ನು ನಾಡ ವೈದ್ಯಕ್ಕೆ ಉತ್ತೇಜನ ನೀಡಿ ಅದರ ಬೆಳವಣಿಗೆಗೆ ಕೊಡಬೇಕೆಂದೂ, ಉಳಿದ ಅರ್ಧಭಾಗವನ್ನು ಅಂಗವಿಕಲ ವ್ಯಕ್ತಿಗಳಿಗೆ ಸಹಾಯ ಮಾಡುವ ಸಂಸ್ಥೆಗಳಿಗೆ ಅನುದಾನ ಕೊಡುವುದಕ್ಕೆ ಬಳಸಿಕೊಳ್ಳ ಬೇಕೆಂದೂ ಸೂಚಿಸಿತು. ಈ ಶಿಫಾರಸುಗಳನ್ನು ಸರ್ಕಾರವು 1927ರಲ್ಲಿ ಕಾರ್ಯಗತಗೊಳಿಸಿತು. ವಿವಿಧ ಪ್ರದೇಶಗಳಲ್ಲಿರುವ ಉಚಿತ ಭೋಜನಾಲಯಗಳ ಮೇಲ್ವಿಚಾರಣೆಗಾಗಿ ಮೂರನೇಯ ಸಮಿತಿಯೊಂದನ್ನು 1932ರಲ್ಲಿ ನೇಮಿಸಲಾಯಿತು. ಈ ಸಮಿತಿಯ ಅನೇಕ ಸಲಹೆ ಸೂಚನೆಗಳನ್ನು ಕಾರ್ಯರೂಪಕ್ಕೆ ತರಲಾಯಿತು. 1958ರ ನಂತರ ಎಲ್ಲಾ ಸ್ಥಳಗಳಲ್ಲಿದ್ದ ಉಚಿತ ಭೋಜನಾಲಯಗಳನ್ನು ಸಂಪೂರ್ಣವಾಗಿ ನಿಲ್ಲಿಸಲಾಯಿತು.

## ರಾಜ್ಯದ ಹೊರಗಿನ ದತ್ತಿಗಳು

**ತಿರುಪತಿ :** ಕರ್ನಾಟಕ ರಾಜ್ಯದಿಂದ ತಿರುಪತಿಗೆ ಯಾತ್ರೆ ಹೋಗುವವರ ಅನುಕೂಲತೆಗಾಗಿ ತಿರುಪತಿ–ತಿರುಮಲೈನಲ್ಲಿ ಕರ್ನಾಟಕ ರಾಜ್ಯ ದತ್ತಿಯಿದೆ. 1830ಕ್ಕಿಂತ ಹಿಂದೆಯೇ ಇದು ಅಸ್ತಿತ್ವದಲ್ಲಿತ್ತು. ಆಗಸ್ಟ್ 1980 ರಿಂದ ಇದರ ಆಡಳಿತವನ್ನು ಒಬ್ಬ ವಿಶೇಷ ಅಧಿಕಾರಿಯು ಉಳಿದ 53 ಜನ ಸಿಬ್ಬಂದಿಯೊಡನೆ ನಡೆಸುತ್ತಿದ್ದಾರೆ. ಎಂಟು ಕೊಠಡಿಗಳ ಒಂದು ಅತಿಥಿ ಗೃಹ, 88 ಕೊಠಡಿಗಳ ಒಂದು ಪ್ರವಾಸಿ ಮಂದಿರ, ಒಂದು ಹವಾ ನಿಯಂತ್ರಿತ ಕುಟೀರ, ಹಾಗೂ ಇತರ ಏಳು ಕುಟೀರಗಳು ಮತ್ತು ಹತ್ತು ಕೊಠಡಿಗಳನ್ನು ಉಳ್ಳ ಕೆ. ಆರ್. ಛತ್ರ— ಇದಿಷ್ಟೂ ಅಲ್ಲಿ ಲಭ್ಯವಿರುವ ವಸತಿ ಸೌಕರ್ಯಗಳಾಗಿವೆ. ತಿರುಮಲೆ ಮತ್ತು ತಿರುಚನೂರಿನಲ್ಲಿ ಮುಜರಾಯಿ ಇಲಾಖೆಗೆ ಸೇರಿದ ಎರಡು ಛತ್ರಗಳಿವೆ. ಮದುವೆ ಮತ್ತು ಇತರ ಉದ್ದೇಶಗಳಿಗೆ ಈ ಎರಡೂ ಛತ್ರಗಳನ್ನು ಬಾಡಿಗೆಗೆ ಕೊಡಲಾಗುವುದು. 1982 ರಲ್ಲಿ ಕರ್ನಾಟಕ ಸರ್ಕಾರವು ತಿರುಮಲೆಯಲ್ಲಿ ಮತ್ತೊಂದು ಕಲ್ಯಾಣ ಮಂಟಪವನ್ನು ನಿರ್ಮಿಸಿತು. ಇದಕ್ಕೆ ತಗಲಿದ ವೆಚ್ಚ 33 ಲಕ್ಷ ರೂ. ಗಳು. ಈ ಕಲ್ಯಾಣ ಮಂಟಪವು ಒಂದು ಫಲಹಾರ ಮಂದಿರ ಹಾಗೂ ಉಳಿದಂತೆ 28 ಕೊಠಡಿಗಳನ್ನು ಒಳಗೊಂಡಿದೆ. 1980ರಲ್ಲಿ ಸಲಹಾ ಮಂಡಲಿಯೊಂದನ್ನು ಸರ್ಕಾರವು ರಚಿಸಿದ್ದು, ಧರ್ಮಾದಾಯ ಇಲಾಖೆಯ ಕಮಿಷನರರೇ ಈ ಸಲಹಾ ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. 1957–58ರಲ್ಲಿ 69,060.94 ರೂ. ಆದಾಯವಿದ್ದು, 43,260.04 ರೂ. ಗಳು ಖರ್ಚಾಗಿತ್ತು. ಇದಕ್ಕೆ ಪ್ರತಿಯಾಗಿ 1980–81ರಲ್ಲಿ 4,52,612.50 ರೂ. ಗಳ ಆದಾಯವಿದ್ದು 3,28,507.77 ರೂ. ಗಳು ಖರ್ಚಾಗಿವೆ.

**ವಾರಾಣಸಿ :** ವಾರಾಣಸಿಯಲ್ಲಿರುವ ಕರ್ನಾಟಕ ರಾಜ್ಯದ ಛತ್ರವು ಮುಜರಾಯಿ ಇಲಾಖೆಯ ಆಡಳಿತದಲ್ಲಿದೆ. 1822ರಷ್ಟು ಹಿಂದೆಯೇ ಮುಮ್ಮಡಿ ಕೃಷ್ಣರಾಜ ಒಡೆಯರು ಈ ಛತ್ರವನ್ನು ಸ್ಥಾಪಿಸಿದ್ದರು. 1957ರ ಡಿಸೆಂಬರ್ ಕೊನೆಯವರೆಗೂ ಯಾತ್ರಾರ್ಥಿಗಳಿಗೆ ನಿತ್ಯ ಸಂತರ್ಪಣೆಯನ್ನು ನಡೆಸಲಾಗುತ್ತಿತ್ತು. 1958ರ ಜನವರಿಯಿಂದ ಇದನ್ನು ನಿಲ್ಲಿಸಲಾಯಿತು. ಈ ಛತ್ರ ದಲ್ಲಿ ಎರಡು ದೊಡ್ಡ ಕೊಠಡಿಗಳೂ ಎಂಟು ಸಣ್ಣ ಕೊಠಡಿಗಳೂ ಇವೆ. 1980-81ರ ಆದಾಯ ಮತ್ತು ಖರ್ಚುಗಳು ಕ್ರಮವಾಗಿ 25,437 ರೂ. ಗಳು ಮತ್ತು 16,606 ರೂ. ಗಳಾಗಿವೆ.

**ಶ್ರೀ ಶೈಲ :** ಆಂಧ್ರಪ್ರದೇಶದ ಶ್ರೀಶೈಲದಲ್ಲಿನ ಕರ್ನಾಟಕ ರಾಜ್ಯದ ಛತ್ರವು ಮುಜರಾಯಿ ಇಲಾಖೆಯ ಮೇಲ್ವಿಚಾರಣೆ ಯಲ್ಲಿದ್ದು, ಕಾರ್ಯನಿರ್ವಾಹಕರೊಬ್ಬರು ಇದನ್ನು ನಿರ್ವಹಿಸು

ತ್ತಾರೆ. ಯಾತ್ರಾರ್ಥಿಗಳಿಗಾಗಿ ಇದರಲ್ಲಿ 16 ಕೊಠಡಿಗಳಿವೆ. 1980-81ರಲ್ಲಿ ಈ ಛತ್ರದಲ್ಲಿ ಸುಮಾರು 6,600 ಯಾತ್ರಾರ್ಥಿಗಳು ತಂಗಿದ್ದರು. ಆದಾಯ ಮತ್ತು ಖರ್ಚು ಕ್ರಮವಾಗಿ 30,429 ರೂ. ಮತ್ತು 23,308 ರೂ. ಗಳಾಗಿವೆ.

ಮುಜರಾಯಿ ಇಲಾಖೆಯು ಕಲ್ಯಾಣ ಮಂಟಪ ಹಾಗೂ ಛತ್ರವನ್ನೊಳಗೊಂಡಂತಹ ಸಂಕೀರ್ಣಕಟ್ಟಡವನ್ನು ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ಮಂತ್ರಾಲಯದಲ್ಲಿ 22.90 ಲಕ್ಷ ರೂ. ಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಪ್ರಾರಂಭಿಸಿದೆ.

## ವಿದ್ಯಾಸಂಸ್ಥೆಗಳು

ಧರ್ಮಾದಾಯ ವಿದ್ಯಾನಿಧಿಗಳ ಮೇಲ್ವಿಚಾರಣೆಯನ್ನೂ ಮುಜರಾಯಿ ಇಲಾಖೆಯೇ ನೋಡಿಕೊಳ್ಳುತ್ತಿದೆ. ಅಂತಹ ಸಂಸ್ಥೆಗಳ ಪರಿಶೀಲನೆಯ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ಇಲಾಖೆಯು ವೇದ ಪಾಠಶಾಲೆಗಳನ್ನು ನಡೆಸಲು ಧನ ಸಹಾಯವನ್ನೂ ಸಹ ನೀಡುತ್ತಿದೆ.

**ಮೇಲುಕೋಟೆಯ ಸಂಸ್ಕೃತ ಕಾಲೇಜು :** 1853ರಲ್ಲಿ ಮೇಲುಕೋಟೆಯಲ್ಲಿ ಸಂಸ್ಕೃತ ಕಾಲೇಜನ್ನು ಆರಂಭಿಸಲಾಯಿತು. ಕಾಲೇಜಿನ ಆಡಳಿತವನ್ನು ಸಲಹಾ ಸಮಿತಿಗೆ ವಹಿಸಲಾಯಿತು. ಈ ಸಮಿತಿಗೆ ಪಾಂಡವಪುರದ ಸಹಾಯಕ ಕಮೀಷನರರು ಪದ ನಿಮಿತ್ತ ಅಧ್ಯಕ್ಷರು. 1892ರಲ್ಲಿ ಇದನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡ ನಂತರ ಈ ಕಾಲೇಜಿಗೆ ಮಾನ್ಯತೆಯನ್ನು ನೀಡಲಾಯಿತು. 1980-81ರಲ್ಲಿ ಈ ಸಂಸ್ಥೆಗೆ 1,60,000 ರೂ. ಗಳನ್ನು ಕೊಡಲಾಗಿದ್ದು ಅದರಲ್ಲಿ 96,600 ರೂ.ಗಳು ಮಾತ್ರ ಖರ್ಚು ಮಾಡಲಾಗಿತ್ತು. 1982-83ರಲ್ಲಿ ಆ ಕಾಲೇಜಿನಲ್ಲಿ 176 ಜನ ವಿದ್ಯಾರ್ಥಿಗಳಿದ್ದರು.

**ಕರಣಿಕರ ವೈದಿಕಧರ್ಮ ಪಾಠಶಾಲೆ :** ಬೆಂಗಳೂರಿನಲ್ಲಿರುವ ಕರಣಿಕರ ವೈದಿಕಧರ್ಮ ಪಾಠಶಾಲೆಯನ್ನು ಮಾಗಡಿಯ ಕರಣಿಕ ಕೃಷ್ಣಮೂರ್ತಿರಾವ್ ಅವರು 1930ರಲ್ಲಿ ಸ್ಥಾಪಿಸಿದರು. 1934ರಲ್ಲಿ ಇದರ ಆಡಳಿತವನ್ನು ಸರ್ಕಾರವು ತನ್ನ ವಶಕ್ಕೆ ತೆಗೆದುಕೊಂಡಿತು. ಈ ಸಂಸ್ಥೆಯಲ್ಲಿ ಋಗ್‌ವೇದ ಮತ್ತು ಯಜುರ್ವೇದಗಳನ್ನು ಹೇಳಿಕೊಡಲಾಗುತ್ತದೆ. ಗರಿಷ್ಠ 25 ಜನ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ, ವಸತಿ ಹಾಗೂ ವಸ್ತ್ರಗಳನ್ನು ಒದಗಿಸಲಾಗುತ್ತದೆ. ಈ ಸಂಸ್ಥೆಯ ಆದಾಯದ ಪ್ರಧಾನ ಮೂಲವೆಂದರೆ ಇದರ ಸ್ಥಾಪಕರಾದ ಕರಣಿಕ ಕೃಷ್ಣಮೂರ್ತಿರಾವ್ ಅವರು ಕೊಟ್ಟ ದತ್ತಿಯ ಆಸ್ತಿ ಮೂಲಕ ಬರುವ ಧನ. 1982-83ರಲ್ಲಿ ಇದರಲ್ಲಿ ಹತ್ತು ಜನ ವಿದ್ಯಾರ್ಥಿಗಳಿದ್ದರು.

**ಮೈಸೂರಿನ ಸಂಸ್ಕೃತ ಕಾಲೇಜು :** ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಆಗಮ ವಿಭಾಗದ ಆಡಳಿತವನ್ನು ಮುಜರಾಯಿ ಇಲಾಖೆಯು ನೋಡಿಕೊಳ್ಳುತ್ತಿದೆ. ಈ ಕಾಲೇಜಿನಲ್ಲಿ ವಿವಿಧ ಆಗಮಗಳನ್ನು ಬೋಧಿಸುವಂತಹ ಆರು ಜನ ಪ್ರಾಧ್ಯಾಪಕರು ಮತ್ತು ಆರು ಜನ ಉಪಪ್ರಾಧ್ಯಾಪಕರಿದ್ದಾರೆ. ದೇವಾಲಯಗಳ ಅರ್ಚಕರಿಗೆ ಈ ಕಾಲೇಜಿನಲ್ಲಿ ತರಬೇತಿ ಕೊಡಲಾಗುತ್ತದೆ. ಆಗಮಗಳ ಅಭ್ಯಾಸ ಮತ್ತು ಪರೀಕ್ಷೆಗಳಿಗೆ ಸಲಹಾ ಮಂಡಳಿಯನ್ನು ಸರ್ಕಾರವು 1979ರಲ್ಲಿ ರಚಿಸಿತು. 1980-81ರಲ್ಲಿ ಆಗಮ ವಿಭಾಗಕ್ಕೆ 2,14,000 ರೂ.ಗಳನ್ನು ಕೊಡಲಾಗಿತ್ತು. ಆದರೆ 1,84,535 ರೂ.ಗಳನ್ನು ಮಾತ್ರ ಈ ವಿಭಾಗವು ಖರ್ಚುಮಾಡಿತು. ಜೈನಾಗಮವನ್ನೂ ಇತ್ತೀಚೆಗೆ ಆರಂಭಿಸಲಾಗಿದೆ. 1982-83ರಲ್ಲಿ ಎಲ್ಲಾ ಆರು ಆಗಮಗಳಿಗೆ 111 ಜನ ವಿದ್ಯಾರ್ಥಿಗಳಿದ್ದರು.

**ಎಸ್. ಎಲ್. ಎನ್. ದತ್ತಿಗಳು :** ಜನೋಪಕಾರಿ ದೊಡ್ಡಣ್ಣಶೆಟ್ಟಿ ಅವರ ಶ್ರೀ ಲಕ್ಷ್ಮೀನರಸಿಂಹ ದತ್ತಿಗಳು ಎಸ್. ಎಲ್. ಎನ್. ದತ್ತಿಗಳೆಂದು ಪ್ರಸಿದ್ಧವಾಗಿವೆ. ಈ ದತ್ತಿಗಳು 1905ರಲ್ಲಿ ಬೆಂಗಳೂರಿನಲ್ಲಿ ಆರಂಭವಾಯಿತು. ಮತ್ತು 1920ರಲ್ಲಿ ನೋಂದಣಿಯಾಯಿತು. 1937ರಲ್ಲಿ ಇದು ಸರ್ಕಾರಿ ಆಡಳಿತಕ್ಕೆ ಒಳಪಟ್ಟಿತು. ಈ ಟ್ರಸ್ಟ್ ಅನೇಕ ಶಾಲೆಗಳು, ಕಾಲೇಜುಗಳು, ತರಬೇತಿ ಸಂಸ್ಥೆಗಳು ಹಾಗೂ ವಿದ್ಯಾರ್ಥಿನಿಲಯಗಳನ್ನು ನಡೆಸುತ್ತಿದೆ. ಗಾಣಿಗ ಜಾತಿಗೆ ಸೇರಿದ ಸುಮಾರು 150 ಜನ ವಿದ್ಯಾರ್ಥಿಗಳಿಗೆ ಈ ವಸತಿ ನಿಲಯದಲ್ಲಿ ಉಚಿತ ಊಟ, ವಸತಿಗಳ ಅನುಕೂಲವನ್ನು ಕಲ್ಪಿಸಿಕೊಡಲಾಗಿದೆ. ಇದರ ಮೇಲ್ವಿಚಾರಣೆಗಾಗಿ ಸರ್ಕಾರವು ಪ್ರತೀ ನಾಲ್ಕು ವರ್ಷಕ್ಕೆ ಒಮ್ಮೆ ಆಡಳಿತ ಸಮಿತಿಯೊಂದನ್ನು ನೇಮಿಸುತ್ತದೆ.

ವೇದ ಪಾಠಶಾಲೆಗಳನ್ನು ನಡೆಸಲು ಮುಜರಾಯಿ ಇಲಾಖೆ ಸಹಾಯ ಧನವನ್ನು ಕೊಡುತ್ತಿದ್ದು, ಈ ಶಾಲೆಗಳು ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧೀನಕ್ಕೆ ಒಳಪಟ್ಟಿರುತ್ತದೆ.

## ಧರ್ಮಾರ್ಥ ನಿಧಿಗಳು

ವಿವಿಧ ಮೂಲಗಳ ದಾನದ ಹಣವನ್ನು ಸರ್ಕಾರವು ನಿಶ್ಚಿತ ಉದ್ದೇಶಗಳಿಗಾಗಿ ಕಾಯ್ದಿರಿಸಿದೆ. ಕಾಯ್ದಿರಿಸಿದ ಈ ನಿಧಿಗಳಿಂದ ಬರುವ ಬಡ್ಡಿ ಹಣದಿಂದ ಕೆಲವು ಧರ್ಮಾರ್ಥ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ. ಈ ಗುಂಪಿಗೆ ಸೇರುವ ಕೆಲವು ಪ್ರಮುಖ ನಿಧಿಗಳನ್ನು ಇಲ್ಲಿ ಪರ್ಯಾಲೋಚಿಸಿದೆ.

**ಪುದುವಟ್ಟು ನಿಧಿಗಳು :** ದೇವಾಲಯಗಳಿಗೆ ಸಂಬಂಧಿಸಿದಂತೆ ಶೇವಣಿಯಾಗಿಟ್ಟ ಹಣದಿಂದ ಬರುವ ಬಡ್ಡಿಯನ್ನು ನಿರ್ದಿಷ್ಟ ಉದ್ದೇಶಗಳಿಗೆ ಕೊಡುವುದರಿಂದ ಅದನ್ನು ಪುದುವಟ್ಟು ನಿಧಿಗಳೆಂದು ವರ್ಗೀಕರಿಸಲಾಗಿದೆ. ದೇವಾಲಯದ ಪುದುವಟ್ಟು

ಗಳನ್ನು ನಾಲ್ಕು ಗುಂಪುಗಳಾಗಿ ವಿಭಾಗಿಸಲಾಗಿದೆ. ಅ) ದೇವಾಲಯದ ಕಾರ್ಯನಿರ್ವಾಹಕರ, ಅಥವಾ ರಕ್ಷಕರ ಟ್ರಸ್ಟ್‌ನಲ್ಲಿದ್ದು, ಖಾಸಗಿ ವ್ಯಕ್ತಿಗಳು ಠೇವಣಿಯಾಗಿಟ್ಟ ಹಣದಿಂದ ಬರುವ ಬಡ್ಡಿಯನ್ನು ನಿರ್ದಿಷ್ಟ ಸೇವೆ ಅಥವಾ ಉದ್ದೇಶಕ್ಕೆ ಬಳಕೆ ಮಾಡುವುದು ; ಆ) ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ಬಡ್ಡಿಗೆ ಹಣವನ್ನು ಕೊಟ್ಟಿದ್ದು ಆ ಬಡ್ಡಿಯನ್ನು ದೇವಾಲಯಕ್ಕೆ ಕೊಡುವಂತೆ ಮಾಡಿರುವ ವ್ಯವಸ್ಥೆ; ಇ) ದೇವಾಲಯಗಳಿಗೆ ಹಣವನ್ನು ಕೊಡುವುದಕ್ಕಾಗಿಯೇ ಕೆಲವು ಖಾಸಗಿ ವ್ಯಕ್ತಿಗಳು ಸ್ವಯಂ ಪ್ರೇರಣೆಯಿಂದ ಒಪ್ಪಂದ ಅಥವಾ ಕರಾರುಗಳನ್ನು ಮಾಡಿಕೊಳ್ಳುತ್ತಿದ್ದರು. ಇದರಿಂದ ಬರುವ ಕೆಲಮಟ್ಟಿನ ಬಡ್ಡಿಯ ಹಣವನ್ನು ನಿರ್ದಿಷ್ಟ ಉದ್ದೇಶಗಳಿಗೆ ಬಳಸಲಾಗುತ್ತಿತ್ತು. ಆದರೆ ಉಳಿದ ಹಣ ಅವರ ಕೈಯಲ್ಲೇ ಇರುತ್ತಿತ್ತು. ಈ) ಸರ್ಕಾರದಿಂದ ಬರುವ ಧನ (ಭತ್ಯ) ಸಹಾಯದಿಂದ ಉಳಿಯುವ ಹಣ ಅಥವಾ ತಸದಿಕ್ ಹಣವನ್ನು ದೇವಾಲಯಗಳ ಕಾರ್ಯನಿರ್ವಾಹಕರು ಈ ಸಂಸ್ಥೆಗಳ ಲಾಭಕ್ಕಾಗಿ ಬಡ್ಡಿಗೆ ಕೊಡುತ್ತಿದ್ದರು.

ನೂರು ರೂ.ಗಳಿಗಿಂತ ಕಡಿಮೆ ಹಣವನ್ನು ಸಾರ್ವಜನಿಕರಿಂದ ಪುದುವಟ್ಟು ನಿಧಿಗಾಗಿ ಸ್ವೀಕರಿಸಲಾಗುವುದಿಲ್ಲ. ಆದರೆ ದೇವಾಲಯ ಅಥವಾ ಮುಜರಾಯಿ ಸಂಸ್ಥೆಗೆ ಯಾವುದೇ ನಿಬಂಧನೆಗಳಿಲ್ಲದೆ ಕಾಣಿಕೆಯಾಗಿ ಕೊಡುವ ಹಣ ಅಥವಾ ಉಳಿದ ವಸ್ತುಗಳನ್ನು ಸ್ವೀಕರಿಸಲಾಗುವುದು. ರೂ. 50 ಅಥವಾ ಅದಕ್ಕಿಂತ ಹೆಚ್ಚು ಮೌಲ್ಯದ ಸೇವಾ ವಿವರಗಳ ಲೆಕ್ಕವನ್ನು ದೇವಾಲಯಗಳಲ್ಲಿ ಇಟ್ಟುಕೊಳ್ಳಲಾಗುತ್ತದೆ. 50 ರೂ.ಗಳಿಗಿಂತ ಕಡಿಮೆ ಮೌಲ್ಯದ ಸೇವಾ ಕಾರ್ಯಗಳಲ್ಲಿ ಅದರ ಲೆಕ್ಕಕ್ಕೆ ದಾತೃಗಳೇ ಸ್ವಂತ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು. ದೇವಾಲಯಗಳು ಯಾವ ತಾಲೂಕಿಗೆ ಸೇರಿದೆಯೋ ಆ ತಾಲೂಕು ಕಚೇರಿಗಳು ದೇವಾಲಯಗಳ ಪುದುವಟ್ಟು ನಿಧಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತವೆ. ಹಣವನ್ನು ಸರ್ಕಾರದ ಉಳಿತಾಯ (ಸೇವಿಂಗ್ಸ್) ಬ್ಯಾಂಕುಗಳಲ್ಲಿ ಮತ್ತು ಅಪೆಕ್ಸ್ ಬ್ಯಾಂಕಿನ ಉಳಿತಾಯ ಖಾತೆಗಳಲ್ಲಿ ಠೇವಣಿಯಾಗಿಡಲಾಗಿದೆ.

**ಸಾಮಾನ್ಯ ಮುಜರಾಯಿ ನಿಧಿ :** ರಾಜ್ಯದಲ್ಲಿ ಕೆಲವು ಮುಜರಾಯಿ ಸಂಸ್ಥೆಗಳು ಹೆಚ್ಚು ಉಳಿತಾಯವನ್ನು ಹೊಂದಿದ್ದು ವಾರ್ಷಿಕ ಆದಾಯದಲ್ಲಿಯೂ ಉಳಿತಾಯ ಮಾಡುವ ಸ್ಥಿತಿಯಲ್ಲಿದ್ದುವು. ಆದರೆ ಇನ್ನು ಕೆಲವು ಮುಜರಾಯಿ ಸಂಸ್ಥೆಗಳಿಗೆ ತಮ್ಮದೇ ಆದ ನಿಧಿಗಳಿಲ್ಲದೆ ಅವುಗಳ ವಿಶೇಷ ಅಥವಾ ಸಾಮಾನ್ಯ ದುರಸ್ತಿಗೂ ಸಾಧ್ಯವಿರಲಿಲ್ಲ. ಮುಜರಾಯಿ ಸಂಸ್ಥೆಗಳ ದುರಸ್ತಿ ಹಾಗೂ ನಿರ್ಮಾಣಕ್ಕಾಗಿ ಸರ್ಕಾರವು ವರ್ಷಕ್ಕೆ 10,000 ರೂ.ಗಳ ಅನುದಾನವನ್ನು ತನ್ನ ಆಯವ್ಯಯ ಪತ್ರದಲ್ಲಿ ಒದಗಿಸುತ್ತಿತ್ತು. ಆದರೆ ಈ ರೀತಿ ಒದಗಿಸುವ ಹಣ ಸಾಕಾಗುತ್ತಿರಲಿಲ್ಲ. ಆದ್ದರಿಂದ ಸರ್ಕಾರದ ಮೇಲ್ವಿಚಾರಣೆಯಲ್ಲಿ ಇರುವ ವಿವಿಧ ಮುಜರಾಯಿ ಸಂಸ್ಥೆಗಳಲ್ಲಿ ದೊರಕುವ ಉಳಿತಾಯದ ಹೆಚ್ಚುವರಿ ಹಣವನ್ನು ಒಂದೇ ಕಡೆ ಇಡುವಂತೆ 1817ರಲ್ಲಿ ಸರ್ಕಾರವು ನಿರ್ದೇಶನವನ್ನು ನೀಡಿ, ಒಂದೆಡೆ ಸೇರಿದ ಅಥವಾ ಈ ರೀತಿ ರೂಪುಗೊಂಡ ನಿಧಿಯನ್ನು 'ಸಾಮಾನ್ಯ ಮುಜರಾಯಿ ನಿಧಿ' ಎಂದು ಕರೆಯಲಾಯಿತು. ಇದರಿಂದ ಬರುವ ಬಡ್ಡಿಯನ್ನು ಸಾಧಾರಣವಾಗಿ ಮುಜರಾಯಿ ಸಂಸ್ಥೆಗಳ ಉಪಯೋಗಕ್ಕಾಗಿ ಬಳಸಲಾಗುತ್ತಿತ್ತು. ದತ್ತಿಯ ಮೂಲಭೂತ ಉದ್ದೇಶಗಳಿಗೆ ಭಂಗ ಬರದಂತೆ ಅದನ್ನು ಗಮನದಲ್ಲಿಟ್ಟುಕೊಂಡು ಅದರಲ್ಲಿ ಉಳಿಯುವ ಹಣವನ್ನು ಕಟ್ಟಡಗಳ ದುರಸ್ತಿ ಕಾರ್ಯಗಳಿಗೆ ಉಪಯೋಗಿಸಲಾಗುತ್ತಿತ್ತು. 1980-81ನೇ ವರ್ಷದಲ್ಲಿ ಈ ನಿಧಿಯಲ್ಲಿ 2,39,550 ರೂ. ಗಳಿದ್ದವು.

**ಮುಜರಾಯಿ ಸಿಬ್ಬಂದಿ ನಿಧಿ :** ಹಿರಿಯ ಮತ್ತು ಕಿರಿಯ ಸಂಸ್ಥೆಗಳೆಲ್ಲಾ ತಮ್ಮ ಆದಾಯದಲ್ಲಿ ಗೊತ್ತುಪಡಿಸಿದಂತೆ ಕೆಲವು ಭಾಗದಷ್ಟು ಇಲ್ಲವೆ ತಮ್ಮ ಆದಾಯದಲ್ಲಿ ಶೇಕಡ ಇಂತಿಷ್ಟು ಹಣವನ್ನು ಮುಜರಾಯಿ ಅಧೀಕ್ಷಕರ ಕಚೇರಿ, ನಿಯಂತ್ರಕರ ಕಚೇರಿ, ಜಿಲ್ಲೆಗಳಲ್ಲಿನ ಉಪ ಆಯುಕ್ತರು ಮತ್ತು ಅಮಲ್ದಾರರ ಕಚೇರಿಯಲ್ಲಿಯ ಮುಜರಾಯಿ ಸಿಬ್ಬಂದಿಗಳ ಎಲ್ಲ ವೆಚ್ಚವನ್ನು ಭರಿಸುವ ಉದ್ದೇಶಕ್ಕೆ ನೀಡಬೇಕೆಂದು ಸರ್ಕಾರವು 1917ರ ಏಪ್ರಿಲ್‌ನಲ್ಲಿ ಆದೇಶವನ್ನು ನೀಡಿತು. 'ಮುಜರಾಯಿ ಸಿಬ್ಬಂದಿ ನಿಧಿಯೆಂದು' ಕರೆಯುವ ಈ ನಿಧಿಯು ಅದುವರೆವಿಗೂ ಕೆಲವು ಸಂಸ್ಥೆಗಳು ಮಾತ್ರ ಕೊಡುತ್ತಿದ್ದ ವಂತಿಗೆಗೆ ಬದಲಾಗಿ ಅಸ್ತಿತ್ವಕ್ಕೆ ಬಂದಿತು. ಮುಜರಾಯಿ ಸಂಸ್ಥೆಗಳ ಆದಾಯ ಮತ್ತು ಖರ್ಚನ್ನು ಪೂರ್ವಭಾವಿಯಾಗಿ ತನಿಖೆ ಮಾಡಲು ಮುಜರಾಯಿ ಅಧೀಕ್ಷಕರಿಗೆ ನಿರ್ದೇಶನ ನೀಡಲಾಯಿತು. ಮುಜರಾಯಿ ಅಧೀಕ್ಷಕರು ಸಲ್ಲಿಸಿದ ವರದಿಯ ಆಧಾರದ ಮೇಲೆ ಸರ್ಕಾರವು ಒಟ್ಟು ಆದಾಯದ ಮೇಲೆ ಶೇಕಡ ಐದರಷ್ಟನ್ನು ಹಿರಿಯ ಸಂಸ್ಥೆಗಳು ಮತ್ತು ಶೇಕಡ ಮೂರರಷ್ಟನ್ನು ಕಿರಿಯ ಸಂಸ್ಥೆಗಳು 'ಮುಜರಾಯಿ ಸಿಬ್ಬಂದಿ ನಿಧಿಗೆ' ಕೊಡುಗೆಯಾಗಿ ನೀಡಬೇಕೆಂದು ತೀರ್ಮಾನಿಸಿತು. ಸಂಸ್ಥೆಗಳ ಕೊಡುಗೆಯ ಅನಿರೀಕ್ಷಿತ ಏರಿಳಿತಗಳನ್ನು ಸರಿದೂಗಿಸಲು ಶೇಕಡ ಐದರಷ್ಟು ಹಣವನ್ನು ಯಾವಾಗಲೂ ಈ ನಿಧಿಯಲ್ಲಿ ಕಾದಿರಿಸಲಾಗಿದೆ. ಈ ನಿಧಿಗೆ ಸರ್ಕಾರವು ರಾಜ್ಯದ ನಿಧಿಯಿಂದ ವರ್ಷಕ್ಕೆ ಒಮ್ಮೆ ತನ್ನ ಕೊಡುಗೆಯನ್ನು ನೀಡುತ್ತದೆ. ಆದರೆ ಕಾಯ್ದಿಟ್ಟ ನಿಧಿಯ ಅಂದರೆ ಶೇಕಡ ಐದರ ಆದಾಯದ ಮೊತ್ತವನ್ನು ಮೀರದಂತೆ ಸಹಾಯ ಧನವನ್ನು ಕೊಡುತ್ತದೆ. 1926-27ರಲ್ಲಿ 'ಮುಜರಾಯಿ ಸಿಬ್ಬಂದಿ ನಿಧಿ' ರಚನೆಯಾಯಿತು. ಮೊದಲನೇಯದಾಗಿ ಪ್ರತೀ ಸಂಸ್ಥೆ ಕೊಡುವ ಹಣವನ್ನು ಐದು ವರ್ಷ ಕಾಲಕ್ಕೆ ನಿರ್ಧರಿಸಲಾಯಿತು. 1981ರ ಮಾರ್ಚ್ 31ರಲ್ಲಿ ಮುಜರಾಯಿ ಸಿಬ್ಬಂದಿ ನಿಧಿಯಲ್ಲಿ 35,366 ರೂ. ಗಳಿದ್ದವು. ಇದಲ್ಲದೆ ಇನ್ನೂ ಎರಡು ತೆರನಾದ ಪುದುವಟ್ಟು ನಿಧಿಗಳಿವೆ. ಛತ್ರಗಳ ಉಳಿತಾಯ ನಿಧಿ ಮತ್ತು ಕೇಂದ್ರ

ಕಚೇರಿಯ ಮುಜರಾಯಿ ನಿಧಿಗಳು. 1980-81ರ ಕೊನೆಯ ವೇಳೆಗೆ ಕ್ರಮವಾಗಿ 11,59,093-34 ರೂ. ಮತ್ತು 1,56,589.86 ರೂ. ಗಳು ಅವುಗಳ ಲೆಕ್ಕದಲ್ಲಿತ್ತು.

## ದೇವಾಲಯದ ಆಸ್ತಿಗಳ ಸಂರಕ್ಷಣೆ

ದೇವಾಲಯಗಳಿಗೆ ಸಂಬಂಧಿಸಿದಂತೆ ಅವುಗಳ ಆಸ್ತಿಯನ್ನು ಸಂರಕ್ಷಿಸುವುದಕ್ಕಾಗಿ ಚೀಫ್ ಕಮಿಷನರರು 1876ರಲ್ಲಿ ಆಜ್ಞೆಯೊಂದನ್ನು ಹೊರಡಿಸಿದರು. ಈ ಆಜ್ಞೆಗಳು ಚರ ಆಸ್ತಿಗಳೆನ್ನಿಸುವ ಒಡವೆಗಳು ಅಥವಾ ಹಣ, ದಾಖಲೆಗಳು ಮುಂತಾದ ಬೆಲೆಯುಳ್ಳ ವಸ್ತುಗಳನ್ನು ಸರಿಯಾದ ರಕ್ಷಣೆಯಲ್ಲಿಡುವಂತೆ ಒತ್ತಾಯ ಮಾಡಿತು. ಈ ಒತ್ತಾಯಪೂರ್ವಕವಾದ ಆಜ್ಞೆಗಳು ಮೊದಲನೇಯ ದರ್ಜೆಯ ಎಲ್ಲ ದೇವಾಲಯಗಳಿಗೂ, ಅಂದರೆ ರೂ. 1,000 ಮತ್ತು ಅದಕ್ಕಿಂತ ಹೆಚ್ಚು ಆದಾಯವುಳ್ಳಂತಹ ದೇವಾಲಯಗಳಿಗೆ ಅನ್ವಯಿಸುತ್ತದೆ. ರಕ್ಷಕನು ದೇವಾಲಯದ ಖರ್ಚಿನ ನಿಧಿಯನ್ನು ಇಡಲು ಸೂಕ್ತವಾದ ಕೊಠಡಿ ಅಥವಾ ಲೋಹಕಕ್ಷ ಅಥವಾ ಇನ್ನೂ ಅಗತ್ಯ ಎನಿಸಿದರೆ, ಉಕ್ಕಿನ ತಿಜೋರಿಯನ್ನು ದೇವಸ್ಥಾನದ ನಿಧಿಯ ಖರ್ಚಿನಿಂದಲೇ ನಿರ್ಮಿಸಿಕೊಡುವಂತೆ ತಿಳಿಸಲಾಯಿತು. ಸ್ವತ್ತುಗಳ ವಿವರದ ಪಟ್ಟಿಯನ್ನು ತಾಲೂಕು ಅಮಲ್ದಾರರ ಸಮಕ್ಷಮದಲ್ಲಿ ಮಾಡಿ, ಅದರ ದೃಢೀಕೃತ ನಕಲನ್ನು ದೇವಾಲಯದ ನೌಕರರಿಗೆ ಒದಗಿಸಬೇಕೆಂದು ತಿಳಿಸಲಾಯಿತು. ವರ್ಷಕ್ಕೆ ಒಂದು ಸಾರಿ ನಿಯತವಾಗಿ ತಹಸೀಲ್ದಾರರು ತನಿಖೆ ಮಾಡಬೇಕಾಗಿತ್ತು; ಅಗತ್ಯವಾದರೆ ಪಟ್ಟಿಗೆ ಸೇರ್ಪಡೆ ಅಥವಾ ಬದಲಾವಣೆ ಅಥವಾ ಪಟ್ಟಿಯಲ್ಲಿರುವುದನ್ನು ಕೈಬಿಡಬಹುದಾಗಿತ್ತು. ದೇವಾಲಯಕ್ಕೆ ಸೇರಿದ ಆಸ್ತಿಯ ಜೊತೆಗೆ ಆಭರಣ, ಇತ್ಯಾದಿಗಳೂ ಸೇರಿ ಒಂದು ಸಾವಿರ ರೂ. ಗಳಿಗಿಂತ ಕಡಿಮೆ ಆದಾಯವಿರುವ ದೇವಾಲಯಗಳು ಎರಡನೇಯ ದರ್ಜೆಗೆ ಬರುತ್ತವೆ. ಮೊದಲನೇ ದರ್ಜೆ ದೇವಾಲಯಗಳಂತೆಯೇ ಈ ದೇವಾಲಯಗಳಿಗೂ ಪ್ರತ್ಯೇಕ ಕೋಣೆಯೊಂದನ್ನು ಬಿಟ್ಟು ಎಲ್ಲ ಕ್ರಮಗಳನ್ನು ಕೈಗೊಂಡು, ಅಗತ್ಯವಾದ ಭದ್ರತೆಯನ್ನು ಒದಗಿಸಲಾಗಿತ್ತು.

ದೇವಾಲಯಗಳಿಗೆ ಸೇರಿದ ಹಣ ಅಥವಾ ಉಳಿದ ವಸ್ತುಗಳನ್ನು ಜಿಲ್ಲೆ ಅಥವಾ ತಾಲೂಕು ಖಜಾನೆಯಲ್ಲಿ ಇಡಲಾಗುತ್ತಿತ್ತು. ಇದನ್ನು ಶೇವಣಿಗಳ ಲೆಕ್ಕಕ್ಕೆ ಸೇರಿಸಿ ಒಡವೆಗಳನ್ನು ಅವುಗಳ ತೂಕದೊಂದಿಗೆ ಪಟ್ಟಿ ಮಾಡಿ ಅದರ ಒಂದು ಪ್ರತಿಯನ್ನು ಶೇವಣಿದಾರರಿಗೆ ಕೊಡುತ್ತಿದ್ದರು.

ಕಿರಿಯ ಸಂಸ್ಥೆಗಳ ಆಭರಣಗಳನ್ನು ಪ್ರತೀ ವರ್ಷಕ್ಕೆ ಒಂದು ಸಲ ಅಮಲ್ದಾರರೂ ಮೂರು ವರ್ಷಕ್ಕೆ ಒಂದು ಸಲ ಸಹಾಯಕ ಆಯುಕ್ತರು ತನಿಖೆ ಮಾಡುತ್ತಿದ್ದರು.

ಮುಜರಾಯಿ ಸಂಸ್ಥೆಗಳ ದುರಸ್ತಿ : ಮೈಸೂರು ರಾಜ್ಯದಲ್ಲಿ ರಾಜರ ಆಡಳಿತ ಕಾಲದಲ್ಲಿ 1870ರಷ್ಟು ಹಿಂದೆಯೇ ಮುಜರಾಯಿ ಇಲಾಖೆಗಳ ದುರಸ್ತಿ ಕಾರ್ಯಕ್ಕೆ ಗಮನ ಕೊಡಲಾಗಿತ್ತು. ದುರಸ್ತಿಕಾರ್ಯಕ್ಕೆ ಸಂಬಂಧಿಸಿದಂತೆ, ಮುಖ್ಯ ಹಿಂದೂ ದೇವಾಲಯಗಳು, ಮಹಮದೀಯರ ಮಸೀದಿ ಮತ್ತು ರಾಜಮಾರ್ಗಗಳಲ್ಲಿ ಇರುವ ಛತ್ರಗಳು, ಮೊದಲಾದ ಸಂಸ್ಥೆಗಳ ದುರಸ್ತಿಗೆ ಚೀಫ್ ಕಮೀಷನರರು ಆದ್ಯತೆ ಕೊಟ್ಟಿದ್ದರು. ಈ ಸಂಸ್ಥೆಗಳಿಗೆ ಸರ್ಕಾರವು ನೀಡಿದ್ದ ಸಹಾಯ ಧನದ ಸಾಮಾನ್ಯ ಉಳಿತಾಯದಲ್ಲಿ ಉಳಿಸಿದ್ದ ಹೆಚ್ಚುವರಿ ಹಣವನ್ನು ದೇವಾಲಯ ಮತ್ತು ಛತ್ರಗಳ ದುರಸ್ತಿಗಾಗಿ ಖರ್ಚು ಮಾಡಲಾಗುತ್ತಿತ್ತು. 1871ರಲ್ಲಿ ಈ ಉದ್ದೇಶಗಳಿಗಾಗಿ 24,000 ರೂ.ಗಳನ್ನು ಅನುದಾನವಾಗಿ ಕೊಡಲಾಯಿತು. ಇದಾದ ನಂತರ ಡೆಪ್ಯುಟಿ ಕಮೀಷನರ್ ಸಲ್ಲಿಸುವ ವರದಿಯನ್ನು ಗಮನದಲ್ಲಿಟ್ಟುಕೊಂಡು ಆ ಸಂಸ್ಥೆಗಳ ಪ್ರಾಚೀನತೆ ಮತ್ತು ಪ್ರಾಮುಖ್ಯತೆಗೆ ತಕ್ಕಂತೆ ಅವುಗಳ ದುರಸ್ತಿಗೆ ಅಗತ್ಯವಾದಷ್ಟು ಹಣವನ್ನು ಸರ್ಕಾರವು ವಾರ್ಷಿಕ ಅನುದಾನದಲ್ಲಿ ಬಿಡುಗಡೆ ಮಾಡಲಾರಂಭಿಸಿತು. 1981-82ರಲ್ಲಿ ಮುಜರಾಯಿ ಸಂಸ್ಥೆಗಳ ದುರಸ್ತಿಗಾಗಿ ರಾಜ್ಯವು 50 ಲಕ್ಷ ರೂ.ಗಳ ಸಹಾಯ ಧನವನ್ನು ನೀಡಿತ್ತು; 1982-83ನೇ ವರ್ಷದಲ್ಲಿ ಇದಕ್ಕಾಗಿ 70 ಲಕ್ಷ ರೂ.ಗಳನ್ನು ಅನುದಾನವಾಗಿ ಕೊಟ್ಟಿತು.

## ವಕ್ಫ್ ಸಂಸ್ಥೆಗಳು

1954ರ ಕೇಂದ್ರ ವಕ್ಫ್ ಕಾನೂನನ್ನು ಹಳೆಯ ಮೈಸೂರಿನಲ್ಲಿ 1955ರ 15ನೇ ಜನವರಿಯಿಂದ ಜಾರಿಗೆ ತರಲಾಯಿತು ಮತ್ತು ಕರ್ನಾಟಕ ರಾಜ್ಯಾದ್ಯಂತ 1956ರಿಂದ ಬಳಸಲಾಯಿತು. 1959, 1964 ಮತ್ತು 1968ರಲ್ಲಿ ಇದನ್ನು ತಿದ್ದುಪಡಿ ಮಾಡಲಾಯಿತು. 1954ರ ಕೇಂದ್ರ ವಕ್ಫ್ ಕಾನೂನಿಗಿಂತ ಮೊದಲು ಮೈಸೂರು ಪ್ರದೇಶದ ಮುಸಲ್ಮಾನರ ಮುಜರಾಯಿ ಸಂಸ್ಥೆಗಳ ಆಡಳಿತವು ದತ್ತಿ ಇಲಾಖೆಯ ಕೈಕೆಳಗಿದ್ದು, 1927ರ ಮೈಸೂರು ಮತೀಯ ಮತ್ತು ಧಾರ್ಮಿಕ ಸಂಸ್ಥೆಗಳ ಅಧಿನಿಯಮಗಳಿಗೆ ಒಳಪಟ್ಟಿತ್ತು. ಕಲ್ಬುರ್ಗಿ ಪ್ರದೇಶದಲ್ಲಿ ಪ್ರಾದೇಶಿಕ ಸಮಿತಿಗಳು ವಕ್ಫ್ ಸಂಸ್ಥೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದುವು. ಬೆಳಗಾವಿ ಪ್ರದೇಶದಲ್ಲಿ ಮುಂಬಯಿ ಸಾರ್ವಜನಿಕ ಟ್ರಸ್ಟ್ ಅಧಿನಿಯಮವನ್ನು ಜಾರಿಗೆ ತರಲಾಗಿತ್ತು. 11 ಜನ ಸದಸ್ಯರು ಇರುವ ವಕ್ಫ್ ಮಂಡಲಿಯನ್ನು 1961ರಲ್ಲಿ ಮೊದಲ ಬಾರಿಗೆ ರಚಿಸಲಾಯಿತು. ಇದಾದ ನಂತರ ಹೈದರಾಬಾದ್ ಪ್ರದೇಶದಲ್ಲಿದ್ದ ಎಲ್ಲ ಪ್ರಾದೇಶಿಕ ಸಮಿತಿಗಳನ್ನು ರದ್ದು ಮಾಡಲಾಯಿತು. ಮುಂಬೈ ಸಾರ್ವಜನಿಕ ಟ್ರಸ್ಟ್ ಅಧಿನಿಯಮದ ಪ್ರಕಾರ ಮುಸ್ಲಿಂ ಧರ್ಮದ ನೋದಂಣಿಯಾಗಿರುವ ಎಲ್ಲ ಆಸ್ತಿಗಳೂ ತಾನಾಗಿಯೇ ವಕ್ಫ್ ಮಂಡಳಿಗೆ ವರ್ಗಾಯಿಸಲ್ಪಟ್ಟವು. ಮೈಸೂರು ಪ್ರದೇಶದ ದತ್ತಿ ಇಲಾಖೆಯ ವಶದಲ್ಲಿದ್ದ 452 ಮುಸ್ಲಿಂ

ಮುಜರಾಯಿ ಸಂಸ್ಥೆಗಳನ್ನೂ ಸಹ ವಕ್ಫ್ ಮಂಡಲಿಗೆ ವರ್ಗಾಯಿಸಲಾಯಿತು. 1959ರ ವಕ್ಫ್ ಅಧಿನಿಯಮಕ್ಕೆ ಅನುಸಾರವಾಗಿ ಕರ್ನಾಟಕ ಸರ್ಕಾರವು 1964ರಲ್ಲಿ ನಿಯಮಗಳನ್ನು ರೂಪಿಸಿತು. ಈ ಮಂಡಲಿಯನ್ನು 1966, 1977 ಮತ್ತು 1982ರಲ್ಲಿ ಪುನರ್ರಚಿಸಲಾಯಿತು.

ರಾಜ್ಯದಲ್ಲಿನ ವಕ್ಫ್ ಸಂಸ್ಥೆಗಳ ಸುಲಭವಾದ ಆಡಳಿತ, ಮೇಲ್ವಿಚಾರಣೆ ಮತ್ತು ಅಭಿವೃದ್ಧಿಗಾಗಿ ವಕ್ಫ್ ಮಂಡಳಿಯು ರಾಜ್ಯಮಟ್ಟದಲ್ಲಿ ಮೂರು ಸಮಿತಿಗಳನ್ನು ರಚಿಸಿದೆ. 1) ತನಗೆ ಸಂಬಂಧಪಟ್ಟ ವ್ಯವಹಾರಗಳನ್ನು ತ್ವರಿತವಾಗಿ ಇತ್ಯರ್ಥ ಮಾಡಲು ನ್ಯಾಯ ಸಮಿತಿ. 2) ಆಡಳಿತದಲ್ಲಿ ಅಡೆತಡೆಗಳ ನಿವಾರಣೆಗೆ ಆಡಳಿತ ಸುಧಾರಣಾ ಸಮಿತಿ. 3) ಸಂಪನ್ಮೂಲಗಳನ್ನು ಹೆಚ್ಚಿಸುವುದು ಮತ್ತು ನಗರ ಪ್ರದೇಶದಲ್ಲಿ ಇರುವ ಬೆಲೆ ಬಾಳುವ ವಕ್ಫ್ ಭೂಮಿಗಳನ್ನು ಅಭಿವೃದ್ಧಿಪಡಿಸಲು ಹಣಕಾಸು ಮತ್ತು ಅಭಿವೃದ್ಧಿ ಸಮಿತಿ.

ವಕ್ಫ್ ಮಂಡಲಿಗೆ ತನ್ನದೇ ಆದಂತಹ ಸ್ವಂತ ನಿಧಿಗಳಿಲ್ಲ. 1954ರ ವಕ್ಫ್ ಅಧಿನಿಯಮದ 46ನೇ ಪ್ರಕರಣದ ನಿಬಂಧನೆಯಲ್ಲಿ ಬರುವಂತೆ ರಾಜ್ಯಾದ್ಯಂತ ಇರುವ ಎಲ್ಲ ವಕ್ಫ್ ಸಂಸ್ಥೆಗಳ ಕೊಡುಗೆಯನ್ನು ವಕ್ಫ್ ಮಂಡಲಿ ಅವಲಂಬಿಸಿದೆ. ಪ್ರತೀಯೊಂದು ವಕ್ಫ್ ಸಂಸ್ಥೆಯ ಕೊಡುಗೆಯನ್ನು ಅದರ ಒಟ್ಟು ವಾರ್ಷಿಕ ಆದಾಯವನ್ನು ಅವಲಂಬಿಸಿ ಅಂದಾಜು ಮಾಡಲಾಗುತ್ತಿತ್ತು. ಇದರಿಂದಾಗಿ ರಾಜ್ಯದ ವಕ್ಫ್ ಸಂಸ್ಥೆಗಳ ಸಮೀಕ್ಷೆ ನಡೆಸಬೇಕಾಯಿತು. ರಾಜ್ಯದಲ್ಲಿನ ವಕ್ಫ್ ಆಸ್ತಿಗಳ ಸಮೀಕ್ಷೆಯನ್ನು ಸರ್ಕಾರಿ ಸಾಲ ಮತ್ತು ಕಂದಾಯ ಅಧಿಕಾರಿಗಳ ಸಹಾಯದಿಂದ ವಕ್ಫ್ ಮಂಡಲಿ ಕೈಗೊಂಡಿತು. ಮೈಸೂರು ಪ್ರದೇಶದಲ್ಲಿನ ಸಮೀಕ್ಷೆಯು 1968ರಲ್ಲೂ, ರಾಜ್ಯದ ಉಳಿದ ಭಾಗಗಳಲ್ಲಿನ ಸಮೀಕ್ಷೆಯು 1972ರಲ್ಲೂ ಪೂರ್ಣವಾಯಿತು. ರಾಜ್ಯದಲ್ಲಿ ಸುಮಾರು 19,000 ವಕ್ಫ್ ಸಂಸ್ಥೆಗಳಿದ್ದು ಅವುಗಳಲ್ಲಿ ಸುಮಾರು 1,500 ಸಂಸ್ಥೆಗಳ ವಾರ್ಷಿಕ ಆದಾಯ ರೂ. 1,000 ಮತ್ತು ಅದಕ್ಕೂ ಹೆಚ್ಚಾಗಿದೆ. 100 ರೂ. ನಿಂದ 1,000 ರೂ. ಗಳವರೆಗೆ ವಾರ್ಷಿಕ ಆದಾಯವುಳ್ಳ 15,000 ಸಂಸ್ಥೆಗಳು ಇವೆ. ಉಳಿದ ಸಂಸ್ಥೆಗಳ ವಾರ್ಷಿಕ ಆದಾಯ 100 ರೂ. ಗಳಿಗಿಂತ ಕಡಿಮೆ. ವಾರ್ಷಿಕ ಆದಾಯ 100 ರೂ. ಗಳಿಗಿಂತ ಹೆಚ್ಚಾಗಿರುವ ಸಂಸ್ಥೆಗಳಿಂದ ಮಾತ್ರ ಮಂಡಲಿ ವಕ್ಫ್ ಕೊಡುಗೆಯನ್ನು ಸಂಗ್ರಹಿಸುತ್ತದೆ. ವಕ್ಫ್ ಕೊಡುಗೆಯು ಮಂಡಲಿಯ ದಿನನಿತ್ಯದ ಖರ್ಚಿನ ಶೇಕಡ 30 ಭಾಗದಷ್ಟಕ್ಕೂ ಸಹ ಸಾಕಾಗುತ್ತಿರಲಿಲ್ಲವಾದುದರಿಂದ 1973-74ರಿಂದ ಸರ್ಕಾರವು ಧನ ಸಹಾಯವನ್ನು ಅನುದಾನದ ರೂಪದಲ್ಲಿ ವಿಸ್ತರಿಸಿದೆ. 1980-81ರಲ್ಲಿ ಅನುದಾನವು 20 ಲಕ್ಷ ರೂ. ಗಳಾಗಿದ್ದಿತು.

ಮಂಡಲಿಯು ಆಯಾ ಜಿಲ್ಲೆಗಳಿಗೆ ಸಂಬಂಧಪಟ್ಟ ಜಿಲ್ಲಾ ವಕ್ಫ್ ಸಮಿತಿಯ ಶಿಫಾರಸ್ಸಿನ ಮೇಲೆ ಮುತವಲಿ ಮೇಲ್ವಿಚಾರಣಾ ಸಮಿತಿಯನ್ನು ನೇಮಿಸುತ್ತದೆ. ಪ್ರತೀ ಒಂದು ವಕ್ಫ್ ಸಂಸ್ಥೆಯ ಆಡಳಿತವನ್ನು ಈ ಸಮಿತಿಯು ನೋಡಿಕೊಳ್ಳುತ್ತದೆ. ಸಂಸ್ಥೆಯ ವಾರ್ಷಿಕ ಆದಾಯದಲ್ಲಿ ಶೇಕಡ ಆರರಷ್ಟನ್ನು ಮಂಡಲಿಗೆ ಪ್ರತೀ ವರ್ಷವೂ ಸಲ್ಲಿಸಬೇಕು. ವಕ್ಫ್ ಮಂಡಲಿಯು ನೇಮಿಸಿದ ಜಿಲ್ಲಾ ಸಮಿತಿಗಳೂ ಇವೆ. ವಕ್ಫ್ ಆಸ್ತಿಗಳ ಯಾವುದೇ ರೀತಿಯ ಅಭಿವೃದ್ಧಿ, ಸುಧಾರಣೆ ಮತ್ತು ದುರಸ್ತಿಗಳಿಗೆ ಮಂಡಳಿಯ ಒಪ್ಪಿಗೆ ಬೇಕು. ಜಿಲ್ಲಾ ವಕ್ಫ್ ಸಮಿತಿಯ ಶಿಫಾರಸಿನ ಮೇಲೆ ಮಂಡಲಿಯು ತನ್ನ ಒಪ್ಪಿಗೆಯನ್ನು ಸೂಚಿಸುತ್ತದೆ. ರಾಜ್ಯದ ಎಲ್ಲ ವಕ್ಫ್ ಸಂಸ್ಥೆಗಳಲ್ಲಿನ ಸ್ಥಿರ ಆಸ್ತಿಗಳ ಒಟ್ಟು ಮೌಲ್ಯ ಸುಮಾರು 80 ಕೋಟಿ ರೂ. ಗಳಾಗುತ್ತವೆ ಮತ್ತು 1980-81ನೇ ಸಾಲಿನಲ್ಲಿ ಈ ಆಸ್ತಿಗಳಿಂದ ಅಂದಾಜು ಮಾಡಲಾದ ಆದಾಯ 62.73 ಲಕ್ಷ ರೂ. ಗಳು. 46 ವಕ್ಫ್ ಸಂಸ್ಥೆಗಳು 1980-81ನೇ ವರ್ಷದಲ್ಲಿ ಹೊಸದಾಗಿ ನೋಂದಣಿಯಾದವು.

ನಗರ ಪ್ರದೇಶಗಳಲ್ಲಿ ಮಂಡಲಿಯು ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಂಡಿದೆ. ಬೆಂಗಳೂರಿನ ಕಬ್ಬನ್ ಪೇಟೆಯ ಹಜರತ್ ಸೈಯದ್ ಹಮೀದ್ ಷಾ ದರ್ಗಾದ ಆವರಣದಲ್ಲಿ ಕಚೇರಿ ಮತ್ತು ಅಂಗಡಿಗಳ ಸಂಕೀರ್ಣ ಒಂದರ ನಿರ್ಮಾಣ, ಮತ್ತು ತುಮಕೂರಿನ ಹಜರತ್ ಮದಷಾ ಮಕಾನ್ ಆವರಣದಲ್ಲಿ ಅಂಗಡಿಗಳ (ಪ್ಲಾಜ) ಒಂದು ಸಂಕೀರ್ಣ—ಹೀಗೆ ಎರಡು ಮುಖ್ಯವಾದ ಅಭಿವೃದ್ಧಿ ಯೋಜನೆಯನ್ನು ಮಂಡಲಿ ಕೈಗೆತ್ತಿಕೊಂಡಿತು.

**ವಕ್ಫ್ ಅಭಿವೃದ್ಧಿ ಕಾರ್ಪೊರೇಷನ್ :** ಮಂಡಲಿಯು ಕರ್ನಾಟಕ ಸರ್ಕಾರದ ಅನುಮತಿಯನ್ನು ಪಡೆದು 1978ರಲ್ಲಿ ವಕ್ಫ್ ಅಭಿವೃದ್ಧಿ ಕಾರ್ಪೊರೇಷನ್ ಲಿಮಿಟೆಡ್ ಅನ್ನು ರೂಪಿಸಿತು. ಇದು ಅಧಿಕೃತ ಪಾಲು ಬಂಡವಾಳವು ಒಂದು ಕೋಟಿ ರೂ. ಮತ್ತು 50 ಲಕ್ಷ ರೂ. ಗಳ ಸಂದಾಯವಾದ ಬಂಡವಾಳದಿಂದ ಆರಂಭವಾಯಿತು. ಈ ಕಾರ್ಪೊರೇಷನ್ನಿನಲ್ಲಿ ಅಧ್ಯಕ್ಷರನ್ನೊಳಗೊಂಡಂತೆ ಒಂಬತ್ತು ಜನ ನಿರ್ದೇಶಕರು ಇರುತ್ತಾರೆ. ರಾಜ್ಯದ ವಕ್ಫ್ ಆಸ್ತಿಗಳನ್ನು ಅಭಿವೃದ್ಧಿಪಡಿಸುವುದೇ ಈ ಅಭಿವೃದ್ಧಿ ಕಾರ್ಪೊರೇಷನ್ನಿನ ಉದ್ದೇಶವಾಗಿದೆ. ವಕ್ಫ್ ಸಂಸ್ಥೆಗಳಿಗೆ ಧನ ಸಹಾಯ ನೀಡುವುದು, ವಕ್ಫ್ ಆಸ್ತಿಗಳನ್ನು ಗುತ್ತಿಗೆಗೆ ಪಡೆಯುವುದು, ಸಣ್ಣ ಕೈಗಾರಿಕೆಗಳನ್ನು ಆರಂಭಿಸಲು ವಕ್ಫ್ ಸಂಸ್ಥೆಗಳಿಗೆ ಸಹಾಯ ಮಾಡುವುದು, ಹೌಸಿಂಗ್ ಕೋ-ಆಪರೇಟಿವ್, ಬಳಕೆದಾರರ ಸಹಕಾರ ಸಂಘ, ಕೈಗಾರಿಕಾ ಸಹಕಾರ ಸಂಘ ಮತ್ತು ರೈತರ ಸಹಕಾರ ಸಂಘಗಳ ಸ್ಥಾಪನೆಗೆ ನೆರವು ನೀಡುವುದು, ಯಾತ್ರಾರ್ಥಿಗಳಿಗೆ

ಅನುಕೂಲವನ್ನೊದಗಿಸಲು ವಿಶ್ರಾಂತಿ ಗೃಹಗಳನ್ನು ನಿರ್ಮಾಣ ಮಾಡುವುದು ಮತ್ತು ಸಾರಿಗೆ ವ್ಯವಸ್ಥೆಯನ್ನು ಒದಗಿಸುವುದು, ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುವುದು, ವ್ಯವಸಾಯ ಚಟುವಟಿಕೆಗಳನ್ನು ಕೈಗೊಳ್ಳಲು ಸಹಾಯ ಮಾಡುವುದು, ಇತ್ಯಾದಿ ಇದರ ಉದ್ದೇಶಗಳು. ಕರ್ನಾಟಕ ರಾಜ್ಯದಲ್ಲಿ ಪ್ರತೀ ವರ್ಷ ಸುಮಾರು 172 ಸ್ಥಳಗಳಲ್ಲಿ ಉರುಸ್‌ಗಳನ್ನು ಆಚರಿಸಲಾಗುತ್ತಿದೆ.

**ಕರ್ನಾಟಕ ರಾಜ್ಯ ಹಜ್ ಸಮಿತಿ :** ರಾಜ್ಯದಲ್ಲಿನ ಹಜ್ ಯಾತ್ರಿಕರ ಅವಶ್ಯಕತೆ ಮತ್ತು ಕ್ಷೇಮವನ್ನು ನೋಡಿಕೊಳ್ಳಲು ಕರ್ನಾಟಕ ಸರ್ಕಾರವು ಹಜ್ ಸಮಿತಿಯನ್ನು ರಚಿಸಿದೆ. 49 ಜನ ಖಾಸಗಿ ಸದಸ್ಯರು ಮತ್ತು ಅಧ್ಯಕ್ಷರಾಗಿರುವ ವಕ್ಫ್ ಮಂತ್ರಿಗಳ ಸಮೇತ ಇಬ್ಬರು ಸರ್ಕಾರಿ ಅಧಿಕಾರಿಗಳು ಇರುವ ಸಮಿತಿಯೊಂದನ್ನು 1980ರಲ್ಲಿ ಸರ್ಕಾರ ಪುನರ್ ರಚಿಸಿತು. ಕರ್ನಾಟಕ ರಾಜ್ಯದ ಹಜ್ ಯಾತ್ರಿಕರ ಕ್ಷೇಮಾಭಿವೃದ್ಧಿಯನ್ನು ನೋಡಿಕೊಳ್ಳಲು 1981-82ರಲ್ಲಿ ಇಬ್ಬರು ಖಾದಿಮುಲ್ ಹಜ್ಜಾಜ್‌ರನ್ನು ನಿಯೋಜಿಸಲಾಯಿತು. ಕರ್ನಾಟಕ ಸರ್ಕಾರವು ನೇಮಿಸಿದ ಗೌರವ ಹಜ್ ಅಧಿಕಾರಿಯೊಬ್ಬರು ಮುಂಬೈಯಲ್ಲಿ ಇರುತ್ತಾರೆ. ಇವರು ಮುಂಬೈಗೆ ಬರುವ ಕರ್ನಾಟಕ ರಾಜ್ಯ ಹಾಜಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾರೆ.

## ಕಾರ್ಮಿಕರ ಕಲ್ಯಾಣ

ಕಾರ್ಮಿಕ ಕಲ್ಯಾಣದ ಚಟುವಟಿಕೆಗಳ ಅಭಿವೃದ್ಧಿಯು ಸಹಜವಾಗಿ ಕಾರ್ಮಿಕರ ಕಾರ್ಯನೀತಿ, ಕಾರ್ಮಿಕ ವಿಧಾನ ರಚನೆಯ ಪರಿಪಾಲನೆ ಮತ್ತು ಕಾರ್ಮಿಕ ಕ್ಷೇಮಾಭಿವೃದ್ಧಿ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಕೈಗಾರಿಕಾ ಅಭಿವೃದ್ಧಿ ಸೀಮಿತವಾಗಿದ್ದುದರಿಂದ ಕಾರ್ಮಿಕ ಸಂಘಟನೆಯೂ ಸಹ ಸೀಮಿತವಾಗಿತ್ತು. ಹಾಗೆಯೇ ಕಾರ್ಮಿಕ ಕಾನೂನುಗಳು ಕಡಿಮೆಯಿದ್ದು, ಅದರ ಬಳಕೆಗೆ ಅಷ್ಟು ಒತ್ತಾಯವಿರಲಿಲ್ಲ ಮತ್ತು ಕಾರ್ಮಿಕರ ಕಲ್ಯಾಣದ ಕಡೆಗೂ ಹೆಚ್ಚು ಗಮನ ಕೊಡುತ್ತಿರಲಿಲ್ಲ. ಕಾರ್ಮಿಕರನ್ನು ಹೆಚ್ಚಾಗಿ ನಿರ್ಜೀವ ವಸ್ತುಗಳಂತೆ ನಡೆಸಿಕೊಳ್ಳುತ್ತಿದ್ದರು. ಉದ್ಯೋಗದ ಷರತ್ತುಗಳು ಮತ್ತು ಸೇವಾ ನಿಯಮಗಳೆಲ್ಲಾ ಊಳಿಗಮಾನ್ಯ ಪದ್ಧತಿಯಂತೆಯೇ ಇದ್ದಿತು. ಪ್ಲಾಂಟೇಷನ್ಸ್ (ತೋಟ) ಗಳ ವಿಷಯಗಳಲ್ಲಿನ ಸೇವಾ ನಿಯಮಗಳು ತೃಪ್ತಿಕರವಾಗಿರಲಿಲ್ಲ. ಕಾರ್ಮಿಕರ ಕಲ್ಯಾಣಕ್ಕಾಗಿ ಒದಗಿಸಿದ್ದ ಸೌಲಭ್ಯಗಳೂ ಸಹ ನಿಕೃಷ್ಟವಾಗಿದ್ದವು. 1859ರ ಒಪ್ಪಂದ ಮುರಿಯುವಿಕೆಯ ಅಧಿನಿಯಮದ ಪ್ರಕಾರ ತೋಟಗಳ (ಎಸ್ಟೇಟ್) ಕೆಲಸಗಾರರು ತಾವು ಸೇವೆ ಸಲ್ಲಿಸುತ್ತಿದ್ದ ಸ್ಥಳದಿಂದ ಓಡಿಹೋಗುವಂತೆ ಇರಲಿಲ್ಲ. ಕೆಲಸದಿಂದ ತಪ್ಪಿಸಿಕೊಂಡು ಹೋದ ಕೆಲಸಗಾರರ ಮೇಲೆ ದೋಷಾರೋಪಣೆ ಹೊರೆಸಿ ಆರಕ್ಷಕರು ಬಂಧಿಸುತ್ತಿದ್ದರು. ಒಪ್ಪಂದ ಮುರಿದುದಕ್ಕಾಗಿ ಬಲವಂತವಾಗಿ ನ್ಯಾಯಾಲಯಕ್ಕೆ ಎಳೆದೊಯ್ಯುತ್ತಿದ್ದರು. ಇವುಗಳಿಗೆ ಯಾವುದೇ ವಿಧವಾದ ಕಾರ್ಮಿಕರ ಕಾನೂನು ಅನ್ವಯಿಸುತ್ತಿರಲಿಲ್ಲ. ಕಾರ್ಮಿಕರಿಗೆ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ತಿಳುವಳಿಕೆ ಇರಲಿಲ್ಲ. ಆದಕಾರಣ ಊಳಿಗಮಾನ್ಯ ಪದ್ಧತಿಯ ಯಜಮಾನರುಗಳ ಕೈಹಿಡಿತಕ್ಕೆ ಸಿಕ್ಕಿ ಅವರು ನರಳುತ್ತಿದ್ದರು. ಒಡೆಯ ಮತ್ತು ಸೇವಕನ ಸಂಬಂಧವು ಜೀತ ಪದ್ಧತಿಯ ರೂಪದಲ್ಲಿತ್ತು. ಮುಂಬೈ ಮತ್ತು ಮದರಾಸ್ ಕರ್ನಾಟಕ ಪ್ರದೇಶಗಳಲ್ಲಿ 1926ರ ಕಾನೂನಿನ ಕೇಂದ್ರ ಶಾಸನಗಳು ಜಾರಿಯಲ್ಲಿದ್ದರೂ ಸಹ ಕೆಲಸಗಾರರು ಅದರ ಬಗ್ಗೆ ಹೆಚ್ಚಾಗಿ ಅರಿವಿಲ್ಲದವರಾಗಿದ್ದರು. ಹಾಗೂ ಅವರುಗಳಲ್ಲಿ ಸರಿಯಾದ ಸಂಘಟನೆಯಿರಲಿಲ್ಲ.

ಮೈಸೂರರಸರ ಕಾಲದಲ್ಲಿ ಕೋಲಾರ ಚಿನ್ನದ ಗಣಿಯಲ್ಲಿ ಗಣಿ ಕೆಲಸಗಾರರಿಗೆ ಕ್ಷೇಮಾಭಿವೃದ್ಧಿ ಕೇಂದ್ರಗಳನ್ನು ತೆರೆಯುವುದರ ಮೂಲಕ ಕಾರ್ಮಿಕರ ಕಲ್ಯಾಣದ ಪ್ರಯತ್ನಗಳು ಪ್ರಾರಂಭವಾಯಿತು. ಭದ್ರಾವತಿ ಕಬ್ಬಿಣ ಕಾರ್ಖಾನೆಯ ಕೆಲಸಗಾರರಿಗೆ ಕ್ಷೇಮಾಭಿವೃದ್ಧಿಯ ಕಾರ್ಯಗಳಾದ ವಸತಿ ಮತ್ತು ಮನರಂಜನೆಯನ್ನು ಒದಗಿಸಲಾಯಿತು. ಆದರೆ ಕಾರ್ಮಿಕರ ಕಲ್ಯಾಣಕ್ಕೆ ಹೇಳಿಕೊಳ್ಳುವಂತಹ ಮಾರ್ಗದರ್ಶಕ ಪ್ರಯತ್ನಗಳು ನಡೆಯಲಿಲ್ಲ. ಕಾರ್ಮಿಕ ಇಲಾಖೆಯು 1935ರಲ್ಲಿ ಸಂಸ್ಥಾನದಲ್ಲಿ ಉಗಮವಾಯಿತು. ಇದಕ್ಕಿಂತ ಮೊದಲು ಕಾರ್ಮಿಕ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳು, ಕೈಗಾರಿಕೆಗಳು ಮತ್ತು ಕಂದಾಯ ಇಲಾಖೆಗಳಲ್ಲಿ ನಿರ್ವಹಿಸಲಾಗುತ್ತಿತ್ತು. ಆ ಕಾಲದಲ್ಲಿ ಕಾರ್ಮಿಕ ಆಡಳಿತದ ವ್ಯಾಪ್ತಿಯಲ್ಲಿ ಬರುತ್ತಿದ್ದ ಸಂಗತಿಗಳು ಸಹ ತೀರ ಕಡಿಮೆಯಾಗಿದ್ದು ಕಾರ್ಮಿಕ ಸಂಘಗಳ ಅಧಿನಿಯಮ, 1914ರ ಮೈಸೂರು ಕಾರ್ಖಾನೆಗಳ ಹತೋಟಿಯ ಅಧಿನಿಯಮ, 1923ರ ಕೆಲಸಗಾರರ ಪರಿಹಾರದ ಅಧಿನಿಯಮ ಇವುಗಳನ್ನು ಕಾರ್ಯರೂಪಕ್ಕೆ ತರುವ ಮಟ್ಟಿಗೆ ಸೀಮಿತವಾಗಿದ್ದವು.

**ಸ್ವಾತಂತ್ರ್ಯಾನಂತರ :** ಸ್ವಾತಂತ್ರ್ಯದ ಸಮಯದಲ್ಲಿ ಈ ರಾಜ್ಯಕ್ಕೆ ಅನ್ವಯವಾಗುವಂತಹ ಕಾರ್ಮಿಕ ಕಾನೂನು ರಚನೆಗಳು ಸಾಕಷ್ಟಿದ್ದವು. ಅವು ಯಾವುವೆಂದರೆ 1947ರ ಔದ್ಯಮಿಕ ವಿವಾದಗಳ ಅಧಿನಿಯಮ, 1948ರ ಕನಿಷ್ಠ ವೇತನ ಅಧಿನಿಯಮ, 1936ರ ವೇತನ ಸಂದಾಯದ ಅಧಿನಿಯಮ, ಟ್ರೇಡ್ ಯೂನಿಯನ್ ಅಧಿನಿಯಮ 1926, 1942ರ ವಾರದ ರಜಾ ಅಧಿನಿಯಮ, 1923ರ ಕಾರ್ಮಿಕರ ಪರಿಹಾರ ಅಧಿನಿಯಮ, 1938ರ ಬಾಲ ಕಾರ್ಮಿಕರ ಉದ್ಯೋಗದ ಅಧಿನಿಯಮ, 1946ರ ಔದ್ಯಮಿಕ ಉದ್ಯೋಗದ ಅಧಿನಿಯಮ (ಸ್ಥಾಯೀ ಆದೇಶಗಳು), 1948ರ ಕಾರ್ಖಾನೆಗಳ ಅಧಿನಿಯಮ, ಇತ್ಯಾದಿ. ಆದರೆ 1950 ಮತ್ತು 1960ರ ದಶಕಗಳಲ್ಲಿ ಕಾರ್ಮಿಕರ

ಕಾನೂನುಗಳು ಹೆಚ್ಚಾಗಿ, 1951ರ ನೆಡುತೋಪು (ಪ್ಲಾಂಟೇಷನ್) ಕಾರ್ಮಿಕರ ಅಧಿನಿಯಮ, 1955ರ ಕಾರ್ಯನಿರತ ಪತ್ರಕರ್ತರು ಮತ್ತು ಉಳಿದ ವಿಷಯಗಳ ಅಧಿನಿಯಮ, 1961ರ ಹೆರಿಗೆ ಸೌಲಭ್ಯಗಳ ಅಧಿನಿಯಮ, 1966ರ ಬೀಡಿ ಮತ್ತು ಚುಟ್ಟಾ ಕೆಲಸಗಾರರ (ಉದ್ಯೋಗದ ಷರತ್ತುಗಳ) ಅಧಿನಿಯಮ, 1963ರ ಮೋಟಾರು ಸಾಗಣೆ ಕೆಲಸಗಾರರ ಅಧಿನಿಯಮ ಮತ್ತು 1965ರ ಬೋನಸ್ ಸಂದಾಯದ ಅಧಿನಿಯಮಗಳು ಈ ಪಟ್ಟಿಗೆ ಸೇರ್ಪಡೆಯಾದವು. 1970ರ ದಶಕದಲ್ಲಿ ಮತ್ತೆ ಕೆಲವು ಕಾನೂನುಗಳಾದ 1970ರ ಗುತ್ತಿಗೆ ಕೆಲಸಗಾರರ ಅಧಿನಿಯಮ (ನಿಯಮಗಳು ಮತ್ತು ರದ್ದುಗೊಳಿಸುವಿಕೆ), 1976ರ ಸಮಾನ ವೇತನದ ಅಧಿನಿಯಮ, 1972ರ ಉಪಾದಾನ ಅಧಿನಿಯಮ, 1978ರ ಮಾರಾಟ ಅಭಿವೃದ್ಧಿ ಉದ್ಯೋಗ ಅಧಿನಿಯಮ (ಸೇವಾ ಷರತ್ತುಗಳು), 1979ರ ಅಂತರರಾಜ್ಯ ಕಾರ್ಮಿಕರ ವಲಸೆ ಅಧಿನಿಯಮ, ಇತ್ಯಾದಿಗಳನ್ನು ಜಾರಿಗೆ ತರಲಾಯಿತು. ಸ್ವಾತಂತ್ರ್ಯ ಬಂದ ನಂತರ ಕಾರ್ಮಿಕ ಕಾನೂನುಗಳ ರಚನೆಯು ಗಾತ್ರ ಹಾಗೂ ಗುಣದಲ್ಲಿ ಮಹತ್ತರವಾದ ಕೊಡುಗೆಯನ್ನು ಕೊಟ್ಟಿತು. ರಾಜ್ಯ ಪುನರ್ಘಟನೆಯ ನಂತರ ರಾಜ್ಯ ಸರ್ಕಾರವು 1961ರ ಕರ್ನಾಟಕದ ಅಂಗಡಿಗಳು ಮತ್ತು ವಾಣಿಜ್ಯ ಸ್ಥಾಪನಾ ಅಧಿನಿಯಮ, 1963ರ ಕರ್ನಾಟಕ ಔದ್ಯಮಿಕ ಸಿಬ್ಬಂದಿಗಳ (ರಾಷ್ಟ್ರೀಯ ಮತ್ತು ಹಬ್ಬಗಳ) ರಜಾ ದಿನಗಳ ಅಧಿನಿಯಮ ಮತ್ತು 1965ರ ಕರ್ನಾಟಕ ಕಾರ್ಮಿಕರ ಕಲ್ಯಾಣ ನಿಧಿ ಅಧಿನಿಯಮ ಇತ್ಯಾದಿ ಕೆಲವು ಕಾರ್ಮಿಕ ಕಾನೂನುಗಳನ್ನು ಜಾರಿಗೆ ತಂದಿತು. ರಾಜ್ಯ ಸರ್ಕಾರವು ಸಹ ವಿವಿಧ ಅಧಿನಿಯಮ ಮತ್ತು ನಿಯಮಗಳಿಗೆ ಅನೇಕ ತಿದ್ದುಪಡಿಗಳನ್ನು ಸೇರಿಸಿದೆ.

1979ರವರೆಗೆ ಕಾರ್ಮಿಕರ ಪರಿಹಾರ ಅಧಿನಿಯಮದ ಅಧೀನದಲ್ಲಿ ಬರುವ ವಿಷಯಗಳನ್ನು ಕಂದಾಯ ಇಲಾಖೆಯ ಸಹಾಯಕ ಕಮಿಷನರರೇ ನೋಡಿಕೊಳ್ಳುತ್ತಿದ್ದರು. ಇದೇ ವರ್ಷ ರಾಜ್ಯದ ಕಾರ್ಮಿಕ ಇಲಾಖೆಯು ಹಳೆಯ ಪದ್ಧತಿಗಳನ್ನು ಕೈ ಬಿಡಲು ತೆಗೆದುಕೊಂಡ ದಿಟ್ಟ ನಿರ್ಧಾರದಲ್ಲಿ ಯಶಸ್ವಿಯಾಗಿ, ತನ್ನ ಸ್ವಂತ ಕಚೇರಿಗಳ ಮೂಲಕ ಕೆಲಸಗಳನ್ನು ನಡೆಸಲಾರಂಭಿಸಿತು. ಸರ್ಕಾರಿ ಅಧಿಸೂಚನೆಯ ಪರಿಣಾಮವಾಗಿ 1979ರ ನಂತರ ಜಿಲ್ಲೆಗಳು ಮತ್ತು ಉಪವಿಭಾಗಗಳ 22 ಕಾರ್ಮಿಕ ಅಧಿಕಾರಿಗಳು ಕ್ರಮವಾಗಿ ಕಾರ್ಮಿಕ ಪರಿಹಾರದ ಕಮಿಷನರುಗಳ ವ್ಯಾಪ್ತಿಗೆ ಸೇರುತ್ತಾರೆಂದು ಅಧಿಸೂಚಿತವಾಯಿತು. ಇದರ ಪರಿಣಾಮವಾಗಿ ಅಪಘಾತಗಳು ಮತ್ತು ವೃತ್ತಿಗೆ ಸಂಬಂಧಿಸಿದ ರೋಗಗಳಿಗೆ ತುತ್ತಾದ ಕಾರ್ಮಿಕರ ಸಂಕಟ ನಿವಾರಣೆಗೆ ಶೀಘ್ರವಾಗಿ ಮತ್ತು ಫಲಪ್ರದವಾಗುವಂತಹ ಪರಿಹಾರ ದೊರಕುವಂತಾಯಿತು.

## ಕಾರ್ಮಿಕ ಇಲಾಖೆ

ಕಾರ್ಮಿಕ ಇಲಾಖೆಯು ಆರಂಭದ ವರ್ಷಗಳಲ್ಲಿ ಕೆಲವೇ ಸಿಬ್ಬಂದಿಯೊಡನೆ ಸಾಮಾನ್ಯವಾದ ರೀತಿಯಲ್ಲಿ ಕೆಲಸವನ್ನಾರಂಭಿಸಿತು. ಈಗ ಅದು ಗಮನಾರ್ಹವಾಗಿ ಬೆಳೆದು ತನ್ನ ವಿಶಾಲವಾದ ಶಾಖೋಪಶಾಖೆಗಳಿಂದ ಅನೇಕ ಅಧಿಕಾರಿಗಳನ್ನು ಮತ್ತು ತನಿಖಾಧಿಕಾರಿಗಳನ್ನು ಹೊಂದಿದ್ದು, ಅದರ ಕಾರ್ಯಗಳನ್ನು ಹಿಂದಿನ ಪದ್ಧತಿಗೆ ಹೋಲಿಸಿದರೆ ಅದು ಹೆಚ್ಚಾಗಿ ವಿಕೇಂದ್ರೀಕರಣವಾಗಿದೆ. ಕಾರ್ಮಿಕ ಕಮಿಷನರ (ಆಯುಕ್ತ)ರೇ ಇಲಾಖೆಯ ಮುಖ್ಯಸ್ಥರು. ಇವರಿಗೆ ಸಹಾಯಕರಾಗಿ ಇಬ್ಬರು ಜಂಟಿ ಕಾರ್ಮಿಕ ಕಮಿಷನರರು (ಆಡಳಿತ ಮತ್ತು ಕೆಲವು ಕಾನೂನುಗಳನ್ನು ಜಾರಿಗೆ ತರಲು ಒಬ್ಬರು ಮತ್ತು ಉಳಿದ ಕಾನೂನುಗಳ ಹೊಣೆಗಾರಿಕೆಗೆ ಮತ್ತೊಬ್ಬರು); ಇಬ್ಬರು ಡೆಪ್ಯುಟಿ ಕಾರ್ಮಿಕ ಕಮಿಷನರ್‌ರಲ್ಲಿ ಒಬ್ಬರು ಔದ್ಯಮಿಕ ಸಂಬಂಧಗಳ ಹೊಣೆಗಾರಿಕೆಯನ್ನು ಹೊತ್ತರೆ, ಮತ್ತೊಬ್ಬರು ಪ್ರಚಾರ ಮತ್ತು ಅಂಕಿಅಂಶಗಳ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಮತ್ತು ಒಬ್ಬ ಸಹಾಯಕ ಕಾರ್ಮಿಕ ಕಮಿಷನರರು (ಕಾರ್ಮಿಕರಿಗೆ ಪರಿಸ್ಥಿತಿಯ ಬಗ್ಗೆ ಎಚ್ಚರಿಕೆ ಕೊಡುವ ನಿಯಂತ್ರಣ ಕೊಠಡಿಯ ಅಧಿಕಾರಿ) ಕೇಂದ್ರ ಕಚೇರಿಯಲ್ಲಿ ಇರುತ್ತಾರೆ. ರಾಜ್ಯಾದ್ಯಂತ ಇರುವ ಶಾಖೋಪಶಾಖೆಗಳಲ್ಲಿ ಅಧಿಕಾರಿಗಳು ಮತ್ತು ತನಿಖಾಧಿಕಾರಿಗಳ ಜಾಲವೇ ಇದೆ. ಕಾರ್ಮಿಕ ಕಲ್ಯಾಣದ ಉದ್ದೇಶದಿಂದ ರಾಜ್ಯವನ್ನು ನಾಲ್ಕು ಪ್ರದೇಶಗಳಾಗಿ ವಿಭಾಗಿಸಲಾಗಿದ್ದು, ಡೆಪ್ಯುಟಿ ಕಾರ್ಮಿಕ ಕಮಿಷನರ್‌ರರು ಇದರ ಮುಖ್ಯಸ್ಥರಾಗಿದ್ದು, ಸಾಮಾನ್ಯವಾಗಿ ನಾಲ್ಕರಿಂದ ಐದು ಜಿಲ್ಲೆಗಳನ್ನು ನೋಡಿಕೊಳ್ಳುತ್ತಾರೆ. ಬೆಂಗಳೂರು, ಬೆಳಗಾವಿ, ಹಾಸನ ಮತ್ತು ಕಲ್ಬುರ್ಗಿಗಳೇ ಆ ಪ್ರಾದೇಶಿಕ ಸ್ಥಳಗಳು. ವಿವಿಧ ಕಾರ್ಮಿಕ ಕಾನೂನುಗಳನ್ನು ಕಾರ್ಯರೂಪಕ್ಕೆ ಬರುವಂತೆ ಅವರು ಗಮನಿಸುತ್ತಾರೆ. ಮತ್ತು ತಮ್ಮ ವ್ಯಾಪ್ತಿಯಲ್ಲಿ ಬರುವ ಔದ್ಯಮಿಕ ವಿವಾದಗಳನ್ನು ಸರಿಪಡಿಸುತ್ತಾರೆ. ಅವರುಗಳು ತಮ್ಮ ಪ್ರಾದೇಶಿಕ ಕೇಂದ್ರಗಳಿಗೆ ಆಡಳಿತದ ಮುಖ್ಯಸ್ಥರಾಗಿರುತ್ತಾರೆ. ಒಂದು ಅಥವಾ ಒಂದಕ್ಕಿಂತ ಹೆಚ್ಚು ಕಂದಾಯದ ಜಿಲ್ಲೆಗಳನ್ನೊಳಗೊಂಡ ವಿಭಾಗದ ಅಧಿಕಾರಿಗಳಾದ ಸಹಾಯಕ ಕಾರ್ಮಿಕ ಕಮಿಷನರುಗಳು ಒಬ್ಬರು ಅಥವಾ ಇಬ್ಬರು ಡೆಪ್ಯುಟಿ ಕಾರ್ಮಿಕ ಕಮಿಷನರಿಗೆ ಸಹಾಯಕರಾಗಿರುತ್ತಾರೆ. ಇವರುಗಳು ಬೆಂಗಳೂರು, ಮೈಸೂರು, ದಾವಣಗೆರೆ, ಹುಬ್ಬಳ್ಳಿ, ಕಲ್ಬುರ್ಗಿ, ಮಂಗಳೂರು ಮತ್ತು ಚಿಕ್ಕಮಗಳೂರಿನಲ್ಲಿರುತ್ತಾರೆ. ಪ್ರತಿಯೊಬ್ಬ ಸಹಾಯಕ ಕಾರ್ಮಿಕ ಕಮಿಷನರಿಗೆ ಮೂರರಿಂದ ನಾಲ್ಕು ಜನ ಕಾರ್ಮಿಕ ಅಧಿಕಾರಿಗಳು ಸಹಾಯಕರಾಗಿರುತ್ತಾರೆ. ಇವರು ಒಂದು ಕಂದಾಯದ ಜಿಲ್ಲೆಯ ಅಧಿಕಾರಿಗಳಾಗಿರುತ್ತಾರೆ. ಬೆಂಗಳೂರು ಮತ್ತು ಮಂಗಳೂರಿನಂತಹ ಸ್ಥಳಗಳಲ್ಲಿ ಒಬ್ಬರಿಗಿಂತ ಹೆಚ್ಚು ಕಾರ್ಮಿಕ ಅಧಿಕಾರಿಗಳಿರುತ್ತಾರೆ. ಬಾಲಕರ ವಿಭಾಗವನ್ನು ನೋಡಿಕೊಳ್ಳಲು ಒಬ್ಬ ಕಾರ್ಮಿಕ ಅಧಿಕಾರಿ ಬೆಂಗಳೂರಿ

ನಲ್ಲಿ ಪ್ರತ್ಯೇಕವಾಗಿದ್ದು, ಇಡೀ ರಾಜ್ಯವು ಇವರ ಅಧಿಕಾರಿ ವ್ಯಾಪ್ತಿಯಲ್ಲಿರುತ್ತದೆ. ಈ ಅಧಿಕಾರಿಗಳಿಗೆ ಹಿರಿಯ ಕಾರ್ಮಿಕ ತನಿಖಾಧಿಕಾರಿಗಳೂ, ತಾಲೂಕು ಮಟ್ಟದಲ್ಲಿ ಕಾರ್ಮಿಕ ತನಿಖಾಧಿಕಾರಿಗಳೂ ಸಹಾಯ ಮಾಡುತ್ತಾರೆ. ಪ್ರತೀಯೊಂದು ತಾಲೂಕಿಗೂ ಒಬ್ಬರು ಕಾರ್ಮಿಕ ತನಿಖಾಧಿಕಾರಿಯನ್ನು ಕೊಡಲು ಇಲಾಖೆಯು ಉದ್ದೇಶಿಸಿದೆ.

**ಸಿ. ಐ. ಆರ್. ಎಂ. ಜೊತೆಗೆ ಸಂಪರ್ಕ :** ಕೇಂದ್ರದ ಕ್ಷೇತ್ರಕ್ಕೊಳಪಟ್ಟ ಅಂಚೆ ಮತ್ತು ತಂತಿ, ರೈಲ್ವೆ, ವಿಮಾನ ನಿಲ್ದಾಣಗಳು, ಬಂದರುಗಳು, ಬ್ಯಾಂಕ್ ಮತ್ತು ವಿಮಾ ಕಂಪನಿಗಳು ಹಾಗೂ ಗಣಿಗಳು, ಮೊದಲಾದ ವ್ಯವಸ್ಥೆಗಳಲ್ಲಿ ವಿವಾದಗಳನ್ನು ಬಗೆಹರಿಸಲು ಮತ್ತು ಕಾರ್ಮಿಕ ಕಾಯ್ದೆಗಳನ್ನು ಜಾರಿಗೆ ತರಲು ಪ್ರಾದೇಶಿಕ ಕಮಿಷನರೂ, ಸಹಾಯಕ ಕಾರ್ಮಿಕ ಕಮಿಷನರೂ (ಕೇಂದ್ರ) ಬೆಂಗಳೂರು, ಮಂಗಳೂರು ಮತ್ತು ಚಿತ್ರದುರ್ಗಗಳಲ್ಲಿ ಇದ್ದು ಕಾರ್ಮಿಕರ ಹಕ್ಕುಗಳನ್ನು ಜಾರಿಗೊಳಿಸುವ ಅಧಿಕಾರಿಗಳಿದ್ದಾರೆ. ಕಾರ್ಮಿಕ ಸಮುದಾಯದ ಹಿತದೃಷ್ಟಿಯಿಂದ, ರಾಜ್ಯ ಕಾರ್ಮಿಕ ಇಲಾಖೆಯು ಕೇಂದ್ರ ಔದ್ಯೋಗಿಕ ಸಂಬಂಧಗಳ ವ್ಯವಸ್ಥೆಯೊಂದಿಗೆ (ಸಿ. ಐ. ಆರ್. ಎಂ.) ಪರಿಣಾಮಕಾರಿಯಾದ ಸಂಪರ್ಕವನ್ನು ಹೊಂದಿದೆ.

**ಕಲ್ಯಾಣ ನಿಧಿಯ ಕಾನೂನುಗಳು :** ಬೀಡಿ ಕಾರ್ಮಿಕರ ಕ್ಷೇಮಾಭಿವೃದ್ಧಿ ನಿಧಿಯ ಉಪಕರ ಅಧಿನಿಯಮ, ಕಬ್ಬಿಣದ ಅದುರು ಗಣಿಗಳ ಕಾರ್ಮಿಕ ಕ್ಷೇಮಾಭಿವೃದ್ಧಿ ನಿಧಿಯ ಉಪಕರ ಅಧಿನಿಯಮ, ಡೊಲೋಮೈಟ್ ಗಣಿಗಳ ಕ್ಷೇಮಾಭಿವೃದ್ಧಿ ನಿಧಿಯ ಉಪಕರ ಅಧಿನಿಯಮ, ಮೊದಲಾದ ಕಾರ್ಮಿಕ ಕಲ್ಯಾಣ ನಿಧಿಯ ಕಾನೂನುಗಳನ್ನು ಸರ್ಕಾರವು ಕಾರ್ಯರೂಪಕ್ಕೆ ತಂದಿದೆ. ಕೇಂದ್ರ ಸರ್ಕಾರದಿಂದ ನೇಮಿಸಲ್ಪಟ್ಟ, ಬೆಂಗಳೂರಿನಲ್ಲಿರುವ ಕಲ್ಯಾಣ ಕಮಿಷನರರು (ಕೇಂದ್ರ) ಇವುಗಳ ಆಡಳಿತವನ್ನು ನಡೆಸುತ್ತಾರೆ. ಕರ್ನಾಟಕ ಕಾರ್ಮಿಕರ ಕ್ಷೇಮಾಭಿವೃದ್ಧಿ ಮಂಡಳಿಯು ಕರ್ನಾಟಕ ಕಾರ್ಮಿಕರ ಕ್ಷೇಮಾಭಿವೃದ್ಧಿ ನಿಧಿಯ ಅಧಿನಿಯಮಗಳ ಆಡಳಿತವನ್ನು ನೋಡಿಕೊಳ್ಳುತ್ತದೆ. ಈ ಎಲ್ಲಾ ಕಾನೂನುಗಳ ರಚನೆಗಳ ಉದ್ದೇಶ ಕಾರ್ಮಿಕರ ಕ್ಷೇಮಾಭಿವೃದ್ಧಿ ಚಟುವಟಿಕೆಗಳನ್ನು ವೃದ್ಧಿಗೊಳಿಸುವುದು. ನಿಧಿಗೆ ಸಂಗ್ರಹಣಾ ಮಾರ್ಗಗಳು ನೆಪ ಮಾತ್ರದ ಸೆಸ್ ಅಥವಾ ತೆರಿಗೆ ವಸೂಲಿ, ಇಲ್ಲವೆ ಯಾವುದಾದರೊಂದು ಆಧಾರದ ಮೇಲಿನ ಕರ ಭಾರ ಅಥವಾ ಕೆಲಸಗಾರರ ಸಂಖ್ಯೆಯನ್ನು ಆಧರಿಸಿ ಸುಂಕವನ್ನು ವಿಧಿಸುವುದು, ಮುಂತಾದವು. 1965ರ ಕರ್ನಾಟಕ ಕಾರ್ಮಿಕರ ಕ್ಷೇಮಾಭಿವೃದ್ಧಿ ನಿಧಿಯ ಅಧಿನಿಯಮವನ್ನು 1976ರಲ್ಲಿ ತಿದ್ದುಪಡಿ ಮಾಡಲಾಯಿತು. ಇದರಿಂದಾಗಿ ಕಾರ್ಮಿಕರಿಗೆ ಸಂಬಂಧಪಟ್ಟಂತೆ ಪಾವತಿಯಾಗದೆ ಉಳಿದ ಸಂಬಳ, ಬೋನಸ್, ದಂಡ, ಇತ್ಯಾದಿಗಳನ್ನು ಮಾತ್ರ ನಿಧಿಗೆ ಕಟ್ಟುವುದಲ್ಲದೆ, ನಿಧಿಯನ್ನು ಗಮನಾರ್ಹವಾಗಿ ಹೆಚ್ಚಿಸಲು ಸರ್ಕಾರದ ಹೊರತಾಗಿ ಉದ್ಯೋಗಿಗಳು ಹಾಗೂ ಮಾಲೀಕರಿಂದ ಕೊಡುಗೆಗಳನ್ನು ಸಂಗ್ರಹಿಸಬಹುದು. 1948ರ ಕಾರ್ಖಾನೆಗಳ ಅಧಿನಿಯಮ 2 (ಎಂ) (ಒಂದು)ರ ಪ್ರಕಾರ ನೋಂದಣಿಯಾಗಿರುವ ಕಾರ್ಖಾನೆಗಳ ಉದ್ಯೋಗಿಗಳಿಂದ, 50 ಮತ್ತು ಅದಕ್ಕಿಂತ ಹೆಚ್ಚಿಗೆ ಉದ್ಯೋಗಿಗಳಿರುವ ಅಂಗಡಿಗಳು ಅಥವಾ ವಾಣಿಜ್ಯ ಸಂಸ್ಥೆಗಳಿಂದ, ಪ್ರತೀವರ್ಷ ಡಿಸೆಂಬರ್ 31ರಂದು ಉದ್ಯೋಗಿಗಳ ಪಟ್ಟಿಯಲ್ಲಿ ಸೇರಿಸಲಾಗುವ ಕಾರ್ಮಿಕರು, ಎಲ್ಲ ರೀತಿಯ ತೋಟಗಳ ಕೆಲಸಗಾರರು, ಕಾರ್ಯಾಗಾರಗಳು, ಇತ್ಯಾದಿಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಂದ ಈ ನಿಧಿಗೆ ಕೊಡುಗೆಯನ್ನು ಸಂಗ್ರಹಿಸುವರು. ಮಾಲೀಕರಿಂದ ಎರಡು ರೂಪಾಯಿಗಳನ್ನೂ, ಉದ್ಯೋಗಿಗಳಿಂದ ಒಂದು ರೂಪಾಯಿಯನ್ನೂ ಸಂಗ್ರಹಿಸಿ ಮುಂಬರುವ ಜನವರಿ 15ನೇ ತಾರೀಕಿನೊಳಗಾಗಿ ಕ್ಷೇಮಾಭಿವೃದ್ಧಿ ಕಮಿಷನರರಿಗೆ ಸಂದಾಯ ಮಾಡಲಾಗುವುದು. ತನಗೆ ಒಪ್ಪಿಸಿದ ಲೆಕ್ಕಕ್ಕೆ ಅನುಗುಣವಾಗಿ ಸರ್ಕಾರವು ಸಹ ಒಬ್ಬ ಕಾರ್ಮಿಕನಿಗೆ ಒಂದು ರೂ. ನಂತೆ ತನ್ನ ಕೊಡುಗೆಯನ್ನು ಸಲ್ಲಿಸುತ್ತದೆ. ರಾಜ್ಯದಲ್ಲಿ 28-2-1983ರಲ್ಲಿ ಕಾರ್ಮಿಕ ಕ್ಷೇಮಾಭಿವೃದ್ಧಿ ನಿಧಿಯ ಮೊತ್ತ ಒಂದು ಕೋಟಿ ರೂ. ಗಳಾಗಿತ್ತು. ಈ ನಿಧಿಯ ವಾರ್ಷಿಕ ಸಂಗ್ರಹದ ಅಂದಾಜು ಸುಮಾರು 20 ಲಕ್ಷ ರೂ. ಗಳು.

ಮಂಡಲಿಯು ತನ್ನ ವ್ಯಾಪ್ತಿಯಲ್ಲಿ, ಸಮುದಾಯದ ಅವಶ್ಯಕತೆಗಳಾದ ವಾಚನಾಲಯ, ಮನರಂಜನೆ, ಕ್ರೀಡಾ ಚಟುವಟಿಕೆಗಳನ್ನು ಏರ್ಪಡಿಸುವುದು, ಪ್ರವಾಸ ಮತ್ತು ವಿಹಾರಗಳನ್ನು ಕೈಗೊಳ್ಳುವುದು, ವಿಶ್ರಾಂತಿ ಧಾಮಗಳನ್ನು ಆರಂಭಿಸುವುದು, ಉಪವೃತ್ತಿಗಳಿಗೆ ತರಬೇತಿ, ಮುಂತಾದ ವಿವಿಧ ಕ್ಷೇಮಾಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುತ್ತದೆ. ಇದಲ್ಲದೆ 1981-82 ಮತ್ತು 1982-83ರಲ್ಲಿ ಮಂಡಲಿಯು ವಿದ್ಯಾರ್ಥಿ ವೇತನದ ಯೋಜನೆ ಮತ್ತು ಕ್ಷೇಮಾಭಿವೃದ್ಧಿ ಕೇಂದ್ರ ಯೋಜನೆಗಳನ್ನು ಆರಂಭಿಸಿತು. ವಿದ್ಯಾರ್ಥಿ ವೇತನದ ಯೋಜನೆಯಡಿ 1981-82ನೇಯ ಸಾಲಿನಲ್ಲಿ 25,080 ರೂ. ಮೌಲ್ಯದ 28 ವಿದ್ಯಾರ್ಥಿ ವೇತನವನ್ನೂ, 1982-83ನೇ ಸಾಲಿನಲ್ಲಿ 2,61,690 ರೂ. ಮೌಲ್ಯದ 371 ವಿದ್ಯಾರ್ಥಿ ವೇತನಗಳನ್ನೂ ಅಸಂಘಟಿತ ವಿಭಾಗದ ಅರ್ಹರಾದ ಎಲ್ಲಾ ಕಾರ್ಮಿಕರ ಮಕ್ಕಳಿಗೆ ಕೊಡಲಾಯಿತು. ಕ್ಷೇಮಾಭಿವೃದ್ಧಿ ಕೇಂದ್ರ ಯೋಜನೆಯ ಅಡಿಯಲ್ಲಿ ಕಾರ್ಮಿಕರು ವಾಸಿಸುವ ಪ್ರದೇಶದಲ್ಲಿ 17 ಹೊಸ ಕಾರ್ಮಿಕ ಕ್ಷೇಮಾಭಿವೃದ್ಧಿ ಕೇಂದ್ರಗಳಿಗೆ ಅನುಮತಿ ನೀಡಿ ಅವುಗಳನ್ನು ಕಾರ್ಯಗತಗೊಳಿಸಿತು. ಕಾರ್ಮಿಕ ಇಲಾಖೆಯ ಆಶ್ರಯದಲ್ಲಿರುವ 23 ಕಾರ್ಮಿಕ ಕ್ಷೇಮಾಭಿವೃದ್ಧಿ ಕೇಂದ್ರಗಳಲ್ಲಿ ಕ್ಷೇಮಾಭಿವೃದ್ಧಿ ಕ್ರಮಗಳಾದ ಉಚಿತ ರೇಡಿಯೊ ಮತ್ತು ಮನರಂಜನೆ, ವಾಚನಾಲಯ, ಗ್ರಂಥಭಂಡಾರ, ಕ್ರೀಡಾ

ಚಟುವಟಿಕೆ, ಹೊಲಿಗೆ ತರಗತಿ ಮುಂತಾದ ಸೌಲಭ್ಯಗಳನ್ನು ಕಾರ್ಮಿಕರು ಮತ್ತು ಅವರ ಕುಟುಂಬದವರಿಗೆ ಒದಗಿಸಲಾಯಿತು. ಇವಲ್ಲದೆ ಜ್ಞಾನಾರ್ಜನೆಯ ವಿವಿಧ ವಿಷಯಗಳ ಚಲನಚಿತ್ರವನ್ನು ತೋರಿಸುವಂತೆಯೂ ಮತ್ತು ಆಡಳಿತ ವಿಷಯದಲ್ಲಿ ಕಾರ್ಮಿಕರು ಪಾಲ್ಗೊಳ್ಳುವಂತೆಯೂ ಇಲಾಖೆಯು ವ್ಯವಸ್ಥೆ ಮಾಡಿದೆ.

### ಕನಿಷ್ಠ ವೇತನ

ರಾಜ್ಯ ಸರ್ಕಾರವು ಕೈಗಾರಿಕೆಗಳ ಅನುಸೂಚಿಯಲ್ಲಿ 45 ವಿವಿಧ ರೀತಿಯ ಉದ್ಯೋಗಗಳನ್ನು ಸೇರಿಸಿತು. ಅದರಲ್ಲಿ 27 ಅನುಸೂಚಿತ ಉದ್ಯೋಗಗಳಿಗೆ ಕನಿಷ್ಠ ವೇತನವನ್ನು ನಿರ್ಧರಿಸಲಾಯಿತು ಮತ್ತು ಆಗಿಂದಾಗ್ಗೆ ಪರಿಷ್ಕೃತಗೊಳಿಸಲಾಯಿತು. ಯಾವಾಗಲೂ ಪರಿಷ್ಕೃತ ವೇತನದ ನಿರ್ಧಾರವು ಏರುವ ಪ್ರವೃತ್ತಿಯನ್ನು ತೋರಿಸುವುದಲ್ಲದೆ ಈ ಮೊದಲು ನಿಗದಿತ ದರಗಳು ಶೀಘ್ರವಾಗಿ ಅಪ್ರಯೋಜಕವಾಗುವುವು. ಒಟ್ಟಾರೆ ವಿವಿಧ ಉದ್ಯೋಗ ಶ್ರೇಣಿಗಳಲ್ಲಿನ ಕನಿಷ್ಠ ವೇತನ ಕೆಳಮಟ್ಟದಲ್ಲಿ ದಿನಕ್ಕೆ ಸರಾಸರಿ ರೂ. 6.14 ರಿಂದ ರೂ. 19 ಗಳವರೆಗೆ ಇರುತ್ತದೆ. (ಹೆಚ್ಚಿನ ವಿವರಗಳಿಗೆ ಎಂಟನೇಯ ಅಧ್ಯಾಯ ನೋಡಿ). ಇಲಾಖೆಯು ಇನ್ನೂ ಕೆಲವು ಉದ್ಯೋಗಗಳನ್ನು ಅನುಸೂಚಿಯಲ್ಲಿ ಸೇರಿಸಲು ಸೂಚಿಸಿದೆ. ಇದರ ಪ್ರಕಾರ ಹೆಂಡ ಇಳಿಸುವ, ತಿಂಡಿ ಪದಾರ್ಥ ಮಾರುವ ಅಂಗಡಿ, ಬೇಕರಿ, ಇತ್ಯಾದಿ ಅಸಂಘಟಿತ ವಿಭಾಗಗಳನ್ನು ಸೇರಿಸಬೇಕೆಂದು ಸೂಚಿಸಲಾಯಿತು. ಸರ್ಕಾರ ತನ್ನ ಕಾಲಾವಶ್ಯಕತೆಯ ಪ್ರಕಾರ ಸಮಿತಿ ಮತ್ತು ಅಧಿಸೂಚನೆಯ ಕ್ರಮಗಳೆರಡನ್ನೂ ಅಧಿನಿಯಮದಲ್ಲಿನ ಅವಕಾಶದಂತೆ ಸ್ವೀಕರಿಸುತ್ತದೆ. ವರದಿಯ ಆಧಾರದ ಮೇಲೆ ಅಧಿಸೂಚನೆಯನ್ನು ಬಿಡುಗಡೆ ಮಾಡುವ ಮೊದಲು, ರಾಜ್ಯಮಟ್ಟದ ಸಲಹಾ ಮಂಡಲಿಯ ಜೊತೆಗೆ ಸರ್ಕಾರ ಸಮಾಲೋಚನೆ ನಡೆಸುತ್ತದೆ. ಅಧಿನಿಯಮಗಳನ್ನು ಕಾರ್ಮಿಕ ಇಲಾಖೆಯ ಅಧಿಕಾರಿಗಳು ಕ್ರಮಬದ್ಧವಾದ ತನಿಖೆ, ಕೈಗೊಂಡ ಕಾರ್ಯವನ್ನು ಅನುಸರಿಸಿ ಕೆಲಸ ಮಾಡುವುದು, ಮತ್ತು ಖಟ್ಲೆ ಹಾಕುವ ಮೂಲಕ ಕಾರ್ಯರೂಪಕ್ಕೆ ತರುತ್ತಾರೆ. ಕೈಗಾರಿಕಾ ವಿವಾದಗಳಲ್ಲಿ ರಾಜಿಶೀರ್ಘ ಹೆಚ್ಚುತ್ತಿದ್ದು ಇತ್ಯರ್ಥಗಳ ಸಂಖ್ಯೆಯಲ್ಲೂ ಹೆಚ್ಚಳವಾಗಿದೆ. 1947ರ ಔದ್ಯಮಿಕ ವಿವಾದಗಳ ಅಧಿನಿಯಮದ ಪ್ರಕಾರ ಬೆಂಗಳೂರಿನಲ್ಲಿರುವ ಹಿರಿಯ ಕಾರ್ಮಿಕ ನಿರೀಕ್ಷಕರ ಶ್ರೇಣಿಯಿಂದ ಹಿಡಿದು ಎಲ್ಲ ಅಧಿಕಾರಿಗಳೂ ಸಮನ್ವಯ (ರಾಜಿ ; ಕನ್ಸಿಲಿಯೇಶನ್) ಅಧಿಕಾರಿಗಳೆಂದು ಅಧಿಸೂಚಿತವಾಗಿದೆ. ಕಾರ್ಯರೂಪಕ್ಕೆ ಬಾರದ ತೀರ್ಮಾನ ಮತ್ತು ಒಪ್ಪಂದಗಳಿಗೆ ಸೂಕ್ತ ರಕ್ಷಣೆಯನ್ನು ಒದಗಿಸಲಾಯಿತು. ಇದರಂತೆಯೇ ಕಾರ್ಮಿಕ ನ್ಯಾಯಾಲಯ ಮತ್ತು ನ್ಯಾಯಾಧಿಕರಣದ ವಿಷಯದಲ್ಲೂ ತೀರ್ಮಾನಗಳನ್ನು ಕೈಗೊಳ್ಳಲಾಯಿತು. ನ್ಯಾಯಾಲಯ ಮತ್ತು ನ್ಯಾಯಾಧಿಕರಣದ ಸಂಖ್ಯೆ ಗಮನಾರ್ಹವಾಗಿ ಹೆಚ್ಚಾಯಿತು.

### ಕಾರ್ಮಿಕ ಸಂಘಟನಾ ಚಳವಳಿ

ಮೊದಲ ಮಹಾಯುದ್ಧದ ಅಂತ್ಯದ ವೇಳೆಯಲ್ಲಿಯೇ ಕರ್ನಾಟಕದಲ್ಲಿ ಆಧುನಿಕ ಕೈಗಾರಿಕೆಗಳು ತಲೆದೋರಿದ್ದವಾದರೂ ಕಾರ್ಮಿಕ ಸಂಘಟನೆಯಾಗಿರಲಿಲ್ಲ. 1920ರಲ್ಲಿಯೂ ಕಾರ್ಮಿಕರ ಸಂಘಗಳ ಜಾಗೃತಿಯ ಅವಶ್ಯಕತೆ ಕಂಡುಬಂದಿರಲಿಲ್ಲ. 1926ರಲ್ಲಿ ಕೇಂದ್ರದಲ್ಲಿ ಮನ್ನಣೆ ಪಡೆದ ಕಾರ್ಮಿಕ ಸಂಘಗಳ ಅಧಿನಿಯಮವು ಹಳೆಯ ಮೈಸೂರು ಪ್ರದೇಶಗಳಿಗೆ 1941ರ ವರೆಗೆ ಅನ್ವಯವಾಗಲಿಲ್ಲ. ಹಾಗಾಗಿ ಕಾರ್ಮಿಕ ಸಂಘಗಳು ದತ್ತಿ ಸಂಸ್ಥೆಗಳೆಂದು ನೋಂದಣಿಯಾಗಬೇಕಿತ್ತು. ಮೊದಲ ಬಾರಿಗೆ ಕೆಲಸಗಾರರ ಸಂಘಟನೆಯೊಂದನ್ನು ಕಾಂಗ್ರೆಸ್ ಮುಖಂಡರು ಬೆಂಗಳೂರಿನಲ್ಲಿ ಕೈಗೊಂಡರು. ಇದರ ಆರಂಭದ ಧುರೀಣರುಗಳಾದ ಪತ್ರಕರ್ತರಾಗಿದ್ದ ಎ. ಎಂ. ರಾಮಶರ್ಮ ಹಾಗೂ ಕೆ. ಟಿ. ಭಾಷ್ಯಂ ; 1920ರ ಪ್ರಾರಂಭದಲ್ಲಿ ಬಿನ್ನಿ ಮಿಲ್‌ನ ಕೆಲಸಗಾರರನ್ನು ಇವರು ಒಂದುಗೂಡಿಸಿದರು. 1926ರಲ್ಲಿ ಬಿನ್ನಿ ಮಿಲ್‌ನಲ್ಲಿ ಗುಂಡಿನ ಚಕಮಕಿ ನಡೆದು ನಾಲ್ವರು ಸತ್ತ ಪರಿಣಾಮವಾಗಿ ಕಾಂಗ್ರೆಸ್ ಸಿ. ವಿ. ನರಸಿಂಹಮೂರ್ತಿ ಅವರ ನೇತೃತ್ವದಲ್ಲಿ ಖಾಸಗಿ ವಿಚಾರಣಾ ಸಮಿತಿಯೊಂದನ್ನು ನೇಮಿಸಿತು. ಇದು ಕಾರ್ಮಿಕರು ಒಂದುಗೂಡಲು ನೈತಿಕ ಧೈರ್ಯವನ್ನು ತಂದುಕೊಟ್ಟಿತು. ರಾಜಾ ಮತ್ತು ಮಿನರ್ವ ಮಿಲ್‌ಗಳ ನೌಕರರನ್ನೂ ಸಹ ಕಾಂಗ್ರೆಸ್ ಮಂದಿ ಸಂಘಟಿಸಿದರು. 1929ರಲ್ಲಿ ಬೆಂಗಳೂರು ಬಟ್ಟೆ ಗಿರಣಿ ಕಾರ್ಮಿಕರ ಸಂಘ, ಬೆಂಗಳೂರು ಟೆಕ್ಸ್‌ಟೈಲ್ ಟ್ರೇಡ್ ಯೂನಿಯನ್ (ಬಿ.ಟಿ.ಟಿ.ಯು.) ಅಸ್ತಿತ್ವಕ್ಕೆ ಬಂದು, ಬಲಶಾಲಿಯಾಗಿ, 1938ರಲ್ಲಿ ರಾಜ್ಯಸರ್ಕಾರವು ಆಡಳಿತಾಧಿಕಾರಿಗಳ ಪರವಾಗಿ ನಡುವೆ ಬರುವಂತಾಯಿತು. 1940-41ರ ಡಿಸೆಂಬರ್-ಜನವರಿಯಲ್ಲಿ ಬಿನ್ನಿ ಮಿಲ್, ಹಾಗೂ ಏಪ್ರಿಲ್‌ನಲ್ಲಿ ರಾಜಾ ಮತ್ತು ಮಿನರ್ವ ಮಿಲ್ ಕಾರ್ಮಿಕರು ಮುಷ್ಕರಗಳನ್ನು ನಡೆಸಿ ತಮ್ಮ ಪರವಾಗಿ ಜಯ ಪಡೆದರು. 1941ರಲ್ಲಿ ಮೊದಲ ಬಾರಿಗೆ ಮೈಸೂರು ಕಾರ್ಮಿಕ (ತುರ್ತು ಸೇವೆ) ಅಧ್ಯಾದೇಶ ಒಂದನ್ನು ಹೊರಡಿಸಲಾಯಿತು. ಇದರ ಪ್ರಕಾರ ಕಾರ್ಮಿಕ ಸಂಘಗಳು ನ್ಯಾಯಬದ್ಧವಾದುವೆಂದು ಮೊದಲ ಬಾರಿಗೆ ಪರಿಗಣಿಸಲಾಯಿತು. ಅಲ್ಲದೆ ಅವುಗಳನ್ನು ನೋಂದಣಿ ಮಾಡಿಸಲು ಅವಕಾಶ ಮಾಡಿಕೊಡಲಾಯಿತು. ಇದು ರಾಜ್ಯದ ಕಾರ್ಮಿಕರ ಬಹಳ ದಿನದ ಬೇಡಿಕೆಯನ್ನು ಈಡೇರಿಸಿತಲ್ಲದೆ ಮುಂದೆ ಕೆಲಸಗಾರರು ಒಂದಾಗಿ ಸಂವಿಧಾನಬದ್ಧವಾಗಿ ತಮ್ಮ ಚಟುವಟಿಕೆಗಳನ್ನು ನಡೆಸಲು ನೆರವಾಯಿತು. ಮುಂದಿನ ವರ್ಷದ ವೇಳೆಗೆ ಇದು ಕಾನೂನಾಯಿತು.

1940ರ ವರೆಗೆ ಕಾರ್ಮಿಕ ಚಳವಳಿ ಕೇವಲ ಬಟ್ಟೆ ಗಿರಣಿಗಳಿಗೆ ಮಾತ್ರ ಸೀಮಿತವಾಗಿತ್ತು. ರಾಜ್ಯದಲ್ಲಿ ಎರಡನೇಯ ದೊಡ್ಡ ಉದ್ಯಮವಾದ ಇಂಜಿನಿಯರಿಂಗ್ ಕೈಗಾರಿಕೆಗಳು ಉದಯವಾದದ್ದೂ ಎರಡನೇಯ ಮಹಾಯುದ್ಧದ ಕಾಲದಲ್ಲಿ

ಮತ್ತು ಅನಂತರವಾದುದರಿಂದ, ಈ ಕ್ಷೇತ್ರದಲ್ಲಿ ಕಾರ್ಮಿಕ ಚಟುವಟಿಕೆಗಳು ತಡವಾಗಿ ಸಂಘಟಿಸಲ್ಪಟ್ಟವು. 'ಕ್ವಿಟ್ ಇಂಡಿಯಾ' ಚಳವಳಿಯ ಕಾಲದಲ್ಲಿ ದೊಡ್ಡ ಪ್ರಮಾಣದಲ್ಲಿ ಬೆಂಗಳೂರು ಹಾಗೂ ಇತರ ಕೈಗಾರಿಕಾ ಕೇಂದ್ರಗಳಲ್ಲಿ ಕಾರ್ಮಿಕ ಮುಷ್ಕರಗಳು ತಲೆದೋರಿದ್ದಲ್ಲದೆ ಮುಷ್ಕರ ಹಲವಾರು ದಿನಗಳ ಕಾಲ ನಡೆದು, ತಮ್ಮ ಒಕ್ಕೂಟದ ಬಗ್ಗೆ ಕಾರ್ಮಿಕರ ಮನಸ್ಸಿನಲ್ಲಿ ಧೈರ್ಯ ತುಂಬಿತು. ಹಿಂದೂಸ್ಥಾನ್ ವಿಮಾನ ಕಾರ್ಖಾನೆಯ ಕಾರ್ಮಿಕ ಸಂಘವು 1946ರಲ್ಲಿ ಆರಂಭವಾದಾಗ ಇಂಜಿನಿಯರಿಂಗ್ ಕೈಗಾರಿಕೆಯಲ್ಲಿ ಒಂದು ದೊಡ್ಡ ಕಾರ್ಮಿಕ ಸಂಘಟನೆಗೆ ನಾಂದಿಯಾದಂತೆ ಆಯಿತು. ಬಟ್ಟೆ ಗಿರಣಿಗಳಲ್ಲಿ ಕಾರ್ಮಿಕ ಸಂಘಟನೆ ಮತ್ತು ಮುಂದಾಳತ್ವವನ್ನು ಕಾರ್ಖಾನೆಯ ಹೊರಗಿನವರು ವಹಿಸಿದ್ದರು. ಆದರೆ ತಮ್ಮ ಸಂಘಟನೆಯ ಬೆಳವಣಿಗೆಯಲ್ಲಿ ಇಂಜಿನಿಯರಿಂಗ್ ಕೈಗಾರಿಕೆಗಳ ಉದ್ಯೋಗಿಗಳು ತಾವೇ ತೊಡಗಿಕೊಳ್ಳಬೇಕಾಯಿತು. ಇಂಜಿನಿಯರಿಂಗ್ ಕೈಗಾರಿಕೆಗಳೊಳಗಿನ ಕಾರ್ಮಿಕರ ಮುಖಂಡತ್ವಕ್ಕೆ ಆಡಳಿತ ವರ್ಗದವರು ಕಿರುಕುಳ ಕೊಡತೊಡಗಿದಾಗ ಹೊರಗಿನಿಂದ ತಮ್ಮ ಮುಖಂಡರನ್ನು ಆರಿಸಿಕೊಳ್ಳಬೇಕಾಯಿತು. 1951ರಲ್ಲಿ ಎಚ್.ಎ.ಎಲ್.ನಲ್ಲಿ ಒಬ್ಬ ನೌಕರನು ಕೆಲಸಗಾರರನ್ನು ಸಂಘಟಿಸಿದ್ದಕ್ಕಾಗಿ ಕೆಲಸ ಕಳೆದುಕೊಳ್ಳಬೇಕಾಯಿತು. ಆದರೆ 1954ರಲ್ಲಿ ಹೊರಗಿನ ಮುಖಂಡತ್ವದಿಂದ ಒಕ್ಕೂಟ ಮತ್ತೆ ತಲೆ ಎತ್ತಿತು. ಈ ಬಗೆಯ ಆದರ್ಶವನ್ನು ಉಳಿದ ಇಂಜಿನಿಯರಿಂಗ್ ಘಟಕಗಳೂ ಅನುಸರಣೆಗೆ ತಂದು ನಿಧಾನವಾಗಿ ಬಾಹ್ಯ ಮುಖಂಡರ ಮುಂದಾಳತ್ವವನ್ನು ಕಾರ್ಮಿಕ ಸಂಘಗಳು ಒಪ್ಪಿಕೊಂಡವು.

ಎರಡನೇಯ ಮಹಾಯುದ್ಧಕ್ಕೆ ಮೊದಲೇ ಹುಬ್ಬಳ್ಳಿಯ ಭಾರತ್ ಮಿಲ್ಸ್ ಹಾಗೂ ಗೋಕಾಕ್ ಜಲಪಾತದ ಬಳಿಯ ಗೋಕಾಕ್ ಮಿಲ್ಸ್‌ಗಳ ಕಾರ್ಮಿಕರು ಸಂಘಟನೆಯೊಂದನ್ನು ಮಾಡಿಕೊಂಡಿದ್ದರು. ಮಂಗಳೂರಿನಲ್ಲಿಯೂ ಅದೇ ರೀತಿ 1937 ರಲ್ಲಿ ಹೆಂಚು ಕಾರ್ಖಾನೆ, ಗೋಡಂಬಿ ಕೆಲಸಗಾರರು ಹಾಗೂ ಬೀಡಿ ಕಟ್ಟುವವರೂ ಸಂಘಟಿತರಾಗಿದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಸಾರಿಗೆ ಸಂಪರ್ಕದ ನೌಕರರೂ ಒಂದುಗೂಡಿದ್ದರು.

ಸದಸ್ಯತ್ವ : 1957ಕ್ಕಿಂತ ಮೊದಲಿನ ಕಾರ್ಮಿಕ ಸಂಘಗಳ ಸದಸ್ಯರ ಸಂಖ್ಯೆ ದೊರೆಯುವುದಿಲ್ಲ. 1957ರಲ್ಲಿ 408 ಕಾರ್ಮಿಕ ಸಂಘಗಳು ನೋಂದಾಯಿಸಲ್ಪಟ್ಟಿದ್ದರೆ 1957ರ ವೇಳೆಗೆ, ಎಂದರೆ ಮುಂದಿನ 19 ವರ್ಷಗಳಲ್ಲಿ ಇವುಗಳ ಸಂಖ್ಯೆಯು ದ್ವಿಗುಣವಾಗಿ 955ಕ್ಕೆ ಏರಿತು. ಸದಸ್ಯರ ಸಂಖ್ಯೆಯೂ 1957ರಲ್ಲಿ 1,14,000 ಇದ್ದದ್ದು 1975ರಲ್ಲಿ 2,42,000ಕ್ಕೆ ಏರಿತು. ವರ್ಷದಿಂದ ವರ್ಷಕ್ಕೆ ಕಾರ್ಮಿಕರ ಸದಸ್ಯತ್ವದಲ್ಲಿ ಏರುಪೇರು ಕಂಡುಬರುತ್ತದೆ. ಆದರೂ ಸದಸ್ಯರ ಸರಾಸರಿ ಸಂಖ್ಯೆ ಏರುಮುಖವಾಗಿಯೇ ಕಂಡುಬರುತ್ತದೆ.

ರಾಜ್ಯದಲ್ಲಿ 31ನೇ ಡಿಸೆಂಬರ್ 1980ರಲ್ಲಿ 1,636 ಕಾರ್ಮಿಕ ಸಂಘಗಳಿದ್ದು, ಅವುಗಳ ಜಿಲ್ಲಾವಾರು ಪಟ್ಟಿ ಕೆಳಕಂಡಂತಿದೆ :

| | | | |
|---|---|---|---|
| ಉತ್ತರ ಕನ್ನಡ | 35 | ಬಿದರೆ | 13 |
| ಕಲ್ಬುರ್ಗಿ | 43 | ಬೆಳಗಾವಿ | 81 |
| ಕೊಡಗು | 19 | ಬೆಂಗಳೂರು | 718 |
| ಕೋಲಾರ | 26 | ಮೈಸೂರು | 149 |
| ಚಿಕ್ಕಮಗಳೂರು | 33 | ಮಂಡ್ಯ | 28 |
| ಚಿತ್ರದುರ್ಗ | 46 | ರಾಯಚೂರು | 21 |
| ತುಮಕೂರು | 32 | ವಿಜಾಪುರ | 53 |
| ದಕ್ಷಿಣ ಕನ್ನಡ | 112 | ಶಿವಮೊಗ್ಗ | 39 |
| ಧಾರವಾಡ | 115 | ಹಾಸನ | 25 |
| ಬಳ್ಳಾರಿ | 48 | | |

1980ರಲ್ಲಿ ಅತ್ಯಂತ ಹೆಚ್ಚಿನ ಕಾರ್ಮಿಕರ ಸದಸ್ಯತ್ವವನ್ನು ಹೊಂದಿದ್ದ ಮೊದಲಿನ ಮೂರು ಕಾರ್ಮಿಕ ಸಂಘಗಳೆಂದರೆ : ಕರ್ನಾಟಕ ರಾಜ್ಯ ವಿದ್ಯುಚ್ಛಕ್ತಿ ಮಂಡಲಿಯ ಕಾರ್ಮಿಕ ಸಂಘ: 25,490; ಭಾರತೀಯ ದೂರವಾಣಿ ನೌಕರರ ಸಂಘ : 15,000; ಹಾಗೂ ಹಿಂದೂಸ್ಥಾನ್ ಏರೋನಾಟಿಕ್ಸ್ ನೌಕರರ ಸಂಘ : 12,921.

## ಕಾರ್ಮಿಕರ ವಿದ್ಯಾಭ್ಯಾಸ

ತ್ರಿಪಕ್ಷೀಯ ಸಮೂಹವಾದ ಕೇಂದ್ರ ಕಾರ್ಮಿಕರ ವಿದ್ಯಾಭ್ಯಾಸ ಮಂಡಲಿಯ ಹೊಣೆಗಾರಿಕೆಯನ್ನು ಭಾರತ ಸರ್ಕಾರವು 1958ನೇಯ ವರ್ಷದಲ್ಲಿ ಕಾರ್ಮಿಕ ಮಂತ್ರಾಲಯಕ್ಕೆ ವಹಿಸಿಕೊಟ್ಟಿತು. ಕಾರ್ಮಿಕರ ವಿದ್ಯಾಭ್ಯಾಸದ ಚಟುವಟಿಕೆಗಳನ್ನು ದೇಶಾದ್ಯಂತ ಕಾರ್ಯರೂಪಕ್ಕೆ ತರುವ ಜವಾಬ್ದಾರಿಯನ್ನು ಮಂಡಲಿಗೆ ಕೊಡಲಾಯಿತು. ಕೇಂದ್ರ ಕಾರ್ಮಿಕರ ವಿದ್ಯಾಭ್ಯಾಸ ಮಂಡಲಿಯು ಮೊದಲಿಗೆ ಆಯ್ದ ಕೆಲವು ನಗರಗಳಲ್ಲಿ ಪ್ರಾದೇಶಿಕ ಕಾರ್ಮಿಕರ ವಿದ್ಯಾಭ್ಯಾಸ ಕೇಂದ್ರಗಳನ್ನು ಆರಂಭಿಸಿತು. ಬೆಂಗಳೂರು, ಮಂಗಳೂರು ಮತ್ತು ಹುಬ್ಬಳ್ಳಿಯಲ್ಲಿ ಮೂರು ಪ್ರಾದೇಶಿಕ ಕೇಂದ್ರಗಳಿವೆ. ಪ್ರಸ್ತುತ ಬೆಂಗಳೂರಿನಲ್ಲಿರುವ ಕಾರ್ಮಿಕರ ವಿದ್ಯಾಭ್ಯಾಸ ಕೇಂದ್ರವು ಬೆಂಗಳೂರು, ತುಮಕೂರು, ಚಿತ್ರದುರ್ಗ, ಕೋಲಾರ ಮತ್ತು ಮಂಡ್ಯ ಜಿಲ್ಲೆಗಳಲ್ಲಿನ ಕಾರ್ಮಿಕರ ಅವಶ್ಯಕತೆಗೆ ತಕ್ಕಂತೆ ಕಾರ್ಯಕ್ರಮಗಳನ್ನು ಸಂಘಟಿಸಿ ಒದಗಿಸುತ್ತದೆ. ದಕ್ಷಿಣ ಕನ್ನಡ, ಕೊಡಗು, ಚಿಕ್ಕಮಗಳೂರು, ಹಾಸನ, ಶಿವಮೊಗ್ಗ, ಉತ್ತರ ಕನ್ನಡ ಮತ್ತು ಮೈಸೂರು— ಈ ಏಳು ಜಿಲ್ಲೆಗಳ

ಕಾರ್ಮಿಕರ ಬೇಡಿಕೆಗಳನ್ನು ಮಂಗಳೂರು ಪ್ರಾದೇಶಿಕ ಕೇಂದ್ರ ಪೂರೈಸುತ್ತದೆ. ಹುಬ್ಬಳ್ಳಿ ಕೇಂದ್ರವು ಧಾರವಾಡ, ಬೆಳಗಾವಿ, ವಿಜಾಪುರ, ಬಳ್ಳಾರಿ, ರಾಯಚೂರು, ಕಲ್ಬುರ್ಗಿ ಮತ್ತು ಬಿದರೆ ಜಿಲ್ಲೆಗಳ ಕಾರ್ಮಿಕರ ಅವಶ್ಯಕತೆಗಳನ್ನು ಪೂರೈಸುತ್ತದೆ. ಕಾರ್ಮಿಕರು ರಾಷ್ಟ್ರದ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆ ಯಲ್ಲಿ ವಿಚಾರವಂತಿಕೆಯಿಂದ ಭಾಗವಹಿಸುವಂತೆ ಮಾಡುವುದು, ಪರಸ್ಪರ ತಿಳುವಳಿಕೆ, ನಾಯಕತ್ವದ ಗುಣಗಳ ವರ್ಧನೆ, ಕಾರ್ಮಿಕ ಸಂಘದ ಚಟುವಟಿಕೆಗಳನ್ನು ಪ್ರಜಾಪ್ರಭುತ್ವದ ಕಾರ್ಯ ವಿಧಾನಗಳ ಮೂಲಕ ನಡೆಸಿ ಕಾರ್ಮಿಕ ಸಂಘದ ಬೆಳವಣಿಗೆ ಯನ್ನು ಮುಂದುವರಿಸುವಂತೆ ಮಾಡುವುದು, ಇವು ಕಾರ್ಮಿಕ ಶಿಕ್ಷಣದ ಉದ್ದೇಶಗಳಾಗಿವೆ.

ಕಾರ್ಮಿಕರು ಮತ್ತು ಅವರ ನಾಯಕರುಗಳ ಉಪಯೋಗ ಕ್ಕಾಗಿ ಇರುವ ಕಾರ್ಯಕ್ರಮಗಳು ಸಾಮಾನ್ಯವಾಗಿ ಪ್ರತೀ ಯೊಂದು ಕಾರ್ಮಿಕರ ವಿದ್ಯಾಭ್ಯಾಸ ಕೇಂದ್ರದಲ್ಲಿ ಅಳವಡಿಸ ಲ್ಪಟ್ಟಿವೆ. ಈ ಕಾರ್ಯಕ್ರಮಗಳು ಪೂರ್ಣಾವಧಿ ಕಾಲದ ಕಾರ್ಮಿಕ ಶಿಕ್ಷಕರ ತರಬೇತಿ, ಪ್ಲಾಂಟೇಶನ್ ಕಾರ್ಮಿಕರಲ್ಲಿ ಮತ್ತು ಕಾರ್ಮಿಕ ಸಂಘಗಳ ಸದಸ್ಯರಲ್ಲಿ ನಾಯಕತ್ವದ ಬೆಳವಣಿಗೆ, ವಯಸ್ಕರ ಸಾಕ್ಷರತಾ ತರಗತಿಯನ್ನು ನಡೆಸುವುದು, ಅಸಂಘಟಿತ ವಿಭಾಗಗಳಲ್ಲಿ ಮತ್ತು ಹಳ್ಳಿಗಳ ಮಟ್ಟದಲ್ಲಿನ ಗ್ರಾಮೀಣ ಕೆಲಸ ಗಾರರಿಗೆ ವಿದ್ಯಾಭ್ಯಾಸದ ಶಿಬಿರಗಳನ್ನೇರ್ಪಡಿಸುವುದು, ಇವನ್ನೆಲ್ಲ ಒಳಗೊಂಡಿದೆ. ಇತ್ತೀಚೆಗೆ ಕಾರ್ಮಿಕರ ವಿದ್ಯಾಭ್ಯಾಸದ ಪ್ರಭಾವವನ್ನು ತಿಳಿಯಲು ಕಾರ್ಮಿಕರು ಮತ್ತು ಕಾರ್ಮಿಕರ ವಿದ್ಯಾಭ್ಯಾಸ ಕೇಂದ್ರಗಳಲ್ಲಿ ತರಬೇತಿ ಪಡೆದ ಕಾರ್ಮಿಕ ಸಂಘಗಳ ಪರಿವೀಕ್ಷಣೆಯನ್ನು ನಡೆಸಲು ಸೂಚಿಸಲಾಯಿತು. ಕಾರ್ಮಿಕರ ವಿದ್ಯಾಭ್ಯಾಸದ ಕಾರ್ಯಕ್ರಮಗಳು ಹೆಚ್ಚು ಅರ್ಥಪೂರ್ಣವಾಗ ಬೇಕಾದರೆ ರಾಷ್ಟ್ರೀಯ ವಯಸ್ಕರ ಶಿಕ್ಷಣ ಸೇವೆಯ ಜೊತೆ ಸಂಬಂಧ ಬೆಳೆಸಬೇಕು ಮತ್ತು ಪ್ರಾದೇಶಿಕ ಮಟ್ಟದಲ್ಲಿ ಮತ್ತು ರಾಜ್ಯದ ಮಟ್ಟದಲ್ಲಿನ ಅನೌಪಚಾರಿಕ ತಂಡಗಳ ಮೂಲಕ ಅಭಿಪ್ರಾಯ ಸಂಗ್ರಹಿಸಬೇಕೆಂಬ ಮತ್ತೊಂದು ಸಂಗತಿಯ ಸೂಚಿಯಿದೆ. ಕಾರ್ಮಿಕರ ವಿದ್ಯಾಭ್ಯಾಸದ ಚಟುವಟಿಕೆಗಳನ್ನು ಶೀಘ್ರವಾಗಿ ಕಾರ್ಯರೂಪಕ್ಕೆ ತರಲು ಮತ್ತು ತಕ್ಷಣ ಅದರ ಮೌಲ್ಯ ನಿರ್ಣಯವನ್ನು ಮಾಡುವುದಕ್ಕಾಗಿ ಈಗಾಗಲೇ ರಾಜ್ಯ ಸರ್ಕಾರವು ಪ್ರಾದೇಶಿಕ ಮತ್ತು ರಾಜ್ಯ ಮಟ್ಟದಲ್ಲಿ ಅನೌಪಚಾರಿಕ ತಂಡಗಳನ್ನು ರಚಿಸಿದೆ.

**ಕಾರ್ಮಿಕರ ರಾಜ್ಯ ವಿಮಾ ಯೋಜನೆ:** 1948ರ ಕಾರ್ಮಿಕ ರಾಜ್ಯವಿಮೆ (ಇ.ಎಸ್.ಐ.) ಅಧಿನಿಯಮವನ್ನು ಜಾರಿಗೆ ತಂದು ಕೈಗಾರಿಕಾ ಕೆಲಸಗಾರರಿಗೆ ಮತ್ತೊಂದು ವಿಶೇಷ ರಕ್ಷಣಾತ್ಮಕವಾದ ಯೋಜನೆಯೊಂದನ್ನು ರೂಪಿಸಲಾಯಿತು. ಇದೇ ಕಾರ್ಮಿಕರ ರಾಜ್ಯ ವಿಮಾ ಯೋಜನೆ. ಮೊದಲಿಗೆ ಬೆಂಗಳೂರಿನಲ್ಲಿ 1958ರಲ್ಲಿ ಕಾರ್ಯಾಚರಣೆಗೆ ತಂದು, ನಂತರ ಕನಕಪುರ, ಚಿತ್ರದುರ್ಗ, ದಾಂಡೇಲಿ, ದಾವಣಗೆರೆ, ಹುಬ್ಬಳ್ಳಿ—ಧಾರವಾಡ, ಗೋಕಾಕ, ಕಲ್ಬುರ್ಗಿ, ಹರಿಹರ, ಹಾಸನ, ಹೊಸಪೇಟೆ, ಕೊಳ್ಳೇಗಾಲ, ಕೆ.ಜಿ.ಎಫ್., ನಂಜನಗೂಡು, ಮಂಗಳೂರು, ಮೈಸೂರು ಮತ್ತು ಟಿ. ನರಸೀಪುರಗಳಿಗೆ ಇದನ್ನು ವಿಸ್ತರಿಸಲಾಯಿತು. ಕಾರ್ಮಿಕರ ರಾಜ್ಯ ವಿಮಾ ಯೋಜನೆ ಪ್ರಕರಣ 1(5)ರ ಪ್ರಕಾರ ಫಲಹಾರ ಮಂದಿರ ಮತ್ತು ಭೋಜನ ಗೃಹಗಳು, ಅಂಗಡಿಗಳು, ರಸ್ತೆ ಸಾರಿಗೆ ಉದ್ಯಮ, ಸಿನಿಮಾ ಮಂದಿರಗಳು, ವೃತ್ತ ಪತ್ರಿಕಾ ಕಾರ್ಯಾಲಯಗಳು, 10 ರಿಂದ 19 ಮಂದಿ ಕಾರ್ಮಿಕರಿರುವ ಚಿಕ್ಕ ವಿದ್ಯುತ್ ಚಾಲಿತ ಘಟಕಗಳು, ಹಾಗೂ 20ಕ್ಕಿಂತ ಹೆಚ್ಚು ದೈಹಿಕ ಶ್ರಮಜೀವಿಗಳು ಇರುವ ಕಡೆಗಳಲ್ಲಿ ಈ ಅಧಿನಿಯಮ ಅನ್ವಯಿಸುತ್ತದೆ. ಮೊದಲಿಗೆ ಮಾಹೆಯಾನ 400 ರೂ. ವೇತನ ಪಡೆಯುವ ಕಾರ್ಮಿಕರು ಇದರ ಲಾಭವನ್ನು ಪಡೆಯುತ್ತಿದ್ದು, 1968ರ ತಿದ್ದುಪಡಿಯಲ್ಲಿ ಮಾಹೆಯಾನ 500 ರೂ. ಪಡೆಯುವವರಿಗೂ, 1975ರ ತಿದ್ದು ಪಡಿಯಂತೆ ಮಾಹೆಯಾನ 1,000 ರೂ. ವೇತನ ಪಡೆಯುವ ವರಿಗೂ ಇದು ಅನ್ವಯಿಸಿತು. ಕರ್ನಾಟಕದಲ್ಲಿ 31ನೇ ಡಿಸೆಂಬರ್ 1979ರ ವೇಳೆಗೆ ಪ್ರಕರಣ 2(12)ರ ಮೇರೆಗೆ 1,782 ಕಾರ್ಖಾನೆಗಳು, ಪ್ರಕರಣ 1(5)ರ ಮೇರೆಗೆ 337 ಔದ್ಯಮಿಕ ಘಟಕಗಳು ಈ ಯೋಜನೆಯ ಅಡಿಯಲ್ಲಿ ಬಂದವು.

## ಭವಿಷ್ಯ ನಿಧಿ

ಕಾರ್ಮಿಕರಲ್ಲಿ ಉಳಿತಾಯ ಮಾಡುವ ಮನೋಭಾವವನ್ನು ಬೆಳೆಸಲು ಮತ್ತು ಔದ್ಯಮಿಕ ಕಾರ್ಮಿಕರ ಅನಿರೀಕ್ಷಿತ ಮರಣ ಮುಂತಾದ ಭವಿಷ್ಯದ ಸಂಗತಿಗಳಿಗೆ ಅನುಕೂಲವಾಗುವಂತೆ 1952ರಲ್ಲಿ ನೌಕರರ ಭವಿಷ್ಯ ಮತ್ತು ಉಳಿದ ಅನುಕೂಲಗಳ ಅಧಿನಿಯಮವನ್ನು ಜಾರಿಗೆ ತರಲಾಯಿತು. ಅಧಿನಿಯಮದ ಪ್ರಕರಣ 5ರ ಪ್ರಕಾರ ರೂಪ ತಳೆದ ನೌಕರರ ಭವಿಷ್ಯ ನಿಧಿ ಯೋಜನೆ 1952ರ ನವೆಂಬರ್ ಒಂದರಿಂದ ಜಾರಿಗೆ ಬಂದಿತು. ವೃದ್ಧಾಪ್ಯ ಮತ್ತು ಉತ್ತಮ ಪ್ರಯೋಜನಕ್ಕಾಗಿ ಭವಿಷ್ಯ ನಿಧಿಯಿದೆ. ಆದರೆ ಸೇವೆಯಲ್ಲಿರುವಾಗಲೇ ನೌಕರನು ಮರಣ ಹೊಂದಿದರೆ, ಆತನು ಕೂಡಿಟ್ಟ ಹಣ ಅತ್ಯಲ್ಪವಾಗಿದ್ದು, ಆತನ ಕುಟುಂಬಕ್ಕೆ ಪೂರ್ಣಾವಧಿಯ ರಕ್ಷಣೆಯನ್ನು ಕೊಡುವುದಿಲ್ಲ. ಔದ್ಯಮಿಕ ನೌಕರರ ಅನಿರೀಕ್ಷಿತ ಮರಣದ ಕಾರಣ ಅವರ ಕುಟುಂಬಗಳಿಗೆ ದೀರ್ಘ ಕಾಲದ ಆರ್ಥಿಕ ರಕ್ಷಣೆಯನ್ನು ಒದಗಿಸುವ ದೃಷ್ಟಿಯಿಂದ 1971ರಲ್ಲಿ ಅಧಿನಿಯಮವನ್ನು ತಿದ್ದುಪಡಿ ಮಾಡ ಲಾಯಿತು. ಇದರಿಂದಾಗಿ ಕುಟುಂಬ ವೇತನ ಯೋಜನೆ 1971ರ ಮಾರ್ಚ್ ಒಂದರಿಂದ ಜಾರಿಗೆ ಬಂದಿತು. ಕುಟುಂಬ ವೇತನ ನಿಧಿಯ ಆರಂಭದಿಂದಾಗಿ ನೌಕರರು ಮತ್ತು ಮಾಲೀಕರುಗಳು ನೀಡುವ ಭವಿಷ್ಯ ನಿಧಿಯ ವಂತಿಗೆಯ ಒಂದು ಭಾಗವನ್ನು ಈ

ನಿಧಿಗೆ ವರ್ಗಾಯಿಸುವ ವ್ಯವಸ್ಥೆ ಉಂಟಾಯಿತು. ಅಲ್ಲದೆ ಇದಕ್ಕೆ ಕೇಂದ್ರ ಸರ್ಕಾರವು ಹೆಚ್ಚಿನ ಅನುದಾನವನ್ನು ನೀಡಿದೆ. ನೌಕರರು ನಿವೃತ್ತಿ ವಯಸ್ಸನ್ನು ತಲಪುವ ಮೊದಲೇ ಸೇವಾವಧಿ ಯಲ್ಲಿ ಮರಣ ಹೊಂದಿದರೆ ಅವರ ಉತ್ತರಾಧಿಕಾರಿಗಳಿಗೆ ಈ ನಿಧಿ ಯಿಂದ ನಿರ್ದಿಷ್ಟಗೊಳಿಸಿದ ಕುಟುಂಬ ವೇತನವನ್ನು ಕೊಡ ಲಾಗುವುದು.

1976ರಲ್ಲಿ ಮತ್ತೆ ನೌಕರರ ಭವಿಷ್ಯನಿಧಿ ಸದಸ್ಯರಿಗೆ ವಿಮೆ ಯನ್ನು ಒದಗಿಸುವ ಉದ್ದೇಶದಿಂದ ಭವಿಷ್ಯನಿಧಿ ಠೇವಣಿಗೆ ಸಂಬಂಧಿಸಿದ ವಿಮೆಯನ್ನು ಜಾರಿಗೆ ತರಲಾಯಿತು. ಕಾರ್ಮಿಕರ ಭವಿಷ್ಯನಿಧಿ ಅಧಿನಿಯಮದ 1976ರ (ತಿದ್ದುಪಡಿ) ಅಧ್ಯಾದೇಶದ ಪ್ರಕಾರ 1976ರ ಆಗಸ್ಟ್ ಒಂದರಿಂದ ಠೇವಣಿ ಸಂಪರ್ಕದ ವಿಮಾ ಯೋಜನೆಯೆಂಬ ಹೊಸ ಸಾಮಾಜಿಕ ಭದ್ರತಾ ಯೋಜನೆಯನ್ನು ಜಾರಿಗೆ ತರಲಾಯಿತು. ಇದರ ಮುಖ್ಯ ಗುಣವೆಂದರೆ ನೌಕರರ ಮರಣದಂತಹ ಸಂದರ್ಭದಲ್ಲಿ ಆತನ ಅವಲಂಬಿತರು, ಅವನ ಹೆಸರಿನಲ್ಲಿ ಮೂರು ವರ್ಷಗಳಿಂದ ಇರುವ ಸರಾಸರಿ ಹಣಕ್ಕೆ ಸಮ ನಾದ ಹೆಚ್ಚಿನ ಹಣ ಪಡೆಯಲು ಅರ್ಹರಾಗಿರುತ್ತಾರೆ. ಇದನ್ನು ಗರಿಷ್ಠ 10,000 ರೂ. ಗಳಿಗೆ ಮಿತಿಗೊಳಿಸಲಾಗಿದೆ. ಈ ಯೋಜನೆಯ ಪ್ರಮುಖ ಲಕ್ಷಣ ನೌಕರರು, ಮಾಲಿಕರು ಮತ್ತು ಸರ್ಕಾರ ಆರ್ಥಿಕವಾಗಿ ಭಾಗವಹಿಸುವುದಾಗಿದೆ.

1952ರ ನೌಕರರ ಭವಿಷ್ಯನಿಧಿ ಮತ್ತು ಉಳಿದ ಅನುಕೂಲ ಗಳ ಅಧಿನಿಯಮವು ಕಾರ್ಖಾನೆಗಳು ಇಲ್ಲವೆ ಘಟಕ (ಸಂಸ್ಥೆ) ಗಳಲ್ಲಿನ ಕೆಲಸಗಾರರಿಗೆ ಪ್ರತ್ಯೇಕವಾಗಿ ಅನ್ವಯವಾಗುತ್ತದೆ. ಸದಸ್ಯತ್ವಕ್ಕೆ ಅರ್ಹರಾಗಿರುವ ನೌಕರರು ಇದರ ಲಾಭಕ್ಕೆ ಯೋಗ್ಯ ರಾಗಿರುತ್ತಾರೆ. ಆರು ತಿಂಗಳಲ್ಲಿ 120 ದಿನಗಳು ನಿಖರವಾಗಿ ಕೆಲಸ ಮಾಡಿದ ಅಥವಾ ಆರು ತಿಂಗಳ ನಿರಂತರ ಸೇವೆ ಇಲ್ಲವೆ ಅವರ ಸೇವೆ ಖಾಯಂ ಆದ ದಿನಾಂಕದಿಂದ—ಇವುಗಳಲ್ಲಿ ಯಾವುದು ಮೊದಲಾಗುತ್ತದೊ ಅಲ್ಲಿಂದ—ನೌಕರರು ಭವಿಷ್ಯ ನಿಧಿ ಸದಸ್ಯ ರಾಗಲು ಅರ್ಹರಾಗುತ್ತಾರೆ. 1979ರ ಡಿಸೆಂಬರ್ 31ರಂದು 6,589 ಘಟಕಗಳಲ್ಲಿನ 7.27 ಲಕ್ಷ ಚಂದಾದಾರರು ಈ ಅಧಿನಿ ಯಮದ ಕೈಕೆಳಗೆ ಬರುತ್ತಾರೆ. 1979-80ರಲ್ಲಿ ಈ ನಿಧಿಯಿಂದ ಘೋಷಿಸಲಾದ ಬಡ್ಡಿ ಶೇಕಡ 8.25 ರೂ.ಗಳು. ಈ ಯೋಜನೆ ಯಲ್ಲಿ ನಿವೇಶನ ಕೊಳ್ಳಲು ಅಥವಾ ಮನೆ ಕಟ್ಟಲು, ಸಂಸ್ಥೆಗಳು ತಾತ್ಕಾಲಿಕವಾಗಿ ಮುಚ್ಚಲ್ಪಟ್ಟಾಗ, ಸದಸ್ಯರು ಅಥವಾ ಅವರ ಆಶ್ರಿತರ ಮದುವೆ, ಸದಸ್ಯರ ಕುಟುಂಬದಲ್ಲಿ ಯಾರಿಗಾದರೂ ತೀವ್ರವಾದ ಖಾಯಿಲೆ ಬಂದರೆ, ಸ್ಥಿರ ಅಥವಾ ಚರ ಆಸ್ತಿಗಳಿಗೆ ಅಪಘಾತಗಳಿಂದ ಹಾನಿಯುಂಟಾದಾಗ, ಕಾರ್ಖಾನೆಗಳು ಮತ್ತು ಘಟಕಗಳಲ್ಲಿ ವಿದ್ಯುಚ್ಛಕ್ತಿಯ ಕಡಿತ ಉಂಟಾದಾಗ, ಜೀವ ವಿಮಾ ಪಾಲಿಸಿಗಳಿಗೆ ಹಣ ಕಟ್ಟಬೇಕಾದರೆ ಸದಸ್ಯರಿಗೆ ಮುಂಗಡ ಹಣ ವನ್ನು ಒದಗಿಸಲಾಗುವುದು.

**ಇತರ ಕಾರ್ಮಿಕ ಕಲ್ಯಾಣ ಕ್ರಮಗಳು :** 1951ರ ನೆಡುತೋಪು (ಪ್ಲಾಂಟೇಷನ್) ಕಾರ್ಮಿಕರ ಅಧಿನಿಯಮದ ವ್ಯಾಪ್ತಿಯಲ್ಲಿ ಸಾಕಷ್ಟು ಸಂಖ್ಯೆಯ ನೆಡುತೋಪುಗಳು ಬರುತ್ತವೆ. ರಾಜ್ಯದಲ್ಲಿ ನೆಡುತೋಪು ಕಾರ್ಮಿಕರ ಸಂಖ್ಯೆ ಸಹ ಹೆಚ್ಚಾಗುತ್ತಿದೆ. ಉಳಿದ ಕಾರ್ಮಿಕ ಅಧಿನಿಯಮಗಳ ಜೊತೆಗೆ ಇವರಿಗೆ ಅನ್ವಯ ವಾಗುವ ವಿಶೇಷ ಯೋಜನೆ 'ನೆಡುತೋಪು ಕಾರ್ಮಿಕರ ವಸತಿ ಗೃಹಗಳ ನೆರವು ಯೋಜನೆ'. ಈ ಯೋಜನೆಯಿಂದ ತೋಟ ಗಾರಿಕೆ (ಪ್ಲಾಂಟೇಶನ್) ಉದ್ಯಮಿಗಳು ತಮ್ಮ ಕೆಲಸಗಾರರಿಗೆ ಮನೆಗಳನ್ನು ನಿರ್ಮಾಣ ಮಾಡಿಕೊಡಲು ಅನುಕೂಲವಾಗುವಂತೆ ಕೇಂದ್ರ ಸರ್ಕಾರದ ಸಹಾಯವನ್ನು ಸಾಲ ಮತ್ತು ಧನ ಸಹಾಯದ ರೂಪದಲ್ಲಿ ಒದಗಿಸಲು ಉದ್ದೇಶಿಸಿದೆ. ಜೊತೆಗೆ ತೋಟಗಳ ಕಾರ್ಮಿಕರಲ್ಲಿ ಸ್ವತಂತ್ರವಾಗಿ ತಮ್ಮದೇ ಆದಂತಹ ಮನೆಗಳನ್ನು ಹೊಂದುವ ಬಯಕೆವುಳ್ಳವರಿಗೆ ಗೃಹನಿರ್ಮಾಣ ಸಂಘಗಳು ಸಹಾಯ ನೀಡುತ್ತವೆ. ತೋಟಗಳ ಕಾರ್ಮಿಕರ ಅಧಿನಿಯಮದ ಪ್ರಕರಣ ಎರಡು ಮತ್ತು ನೆಡುತೋಪು ಕಾರ್ಮಿಕರ ಗೃಹ ನಿರ್ಮಾಣ ಸಂಘಗಳು ತಮ್ಮ ಉದ್ದೇಶಕ್ಕೆ ತಕ್ಕಂತೆ ಹಾಗೂ ಈ ಯೋಜನೆಯ ಪ್ರಕಾರ ಉದ್ಯಮಿಗಳಿಗೆ ಆರ್ಥಿಕ ಸಹಾಯ ವನ್ನು ಒದಗಿಸುತ್ತದೆ. ಈ ಯೋಜನೆಗೆ ಮಂಜೂರಾತಿ ಕೊಡುವ ಪ್ರಾಧಿಕಾರಿ ಎಂದರೆ ಕಾರ್ಮಿಕ ಕಮಿಷನರರು.

ರಾಜ್ಯ ಸರ್ಕಾರವು 15ನೇಯ ಸೆಪ್ಟೆಂಬರ್ 1982ರಲ್ಲಿ ಸಂಘಟನೆಗೆ ಒಳಪಡದ ಅಸಂಘಟಿತರಾದ ಕೃಷಿಗಾರರು ಹಾಗೂ ಇತರ ಕೂಲಿಗಾರರ ಶ್ರೇಯೊಭಿವೃದ್ಧಿಗಾಗಿ ಸಾಮೂಹಿಕ ಅಪಘಾತ ವಿಮಾ ಯೋಜನೆಯಾದ "ಆಶಾಕಿರಣ"ವನ್ನು ಪ್ರಾರಂಭಿಸಿತು. (ಹೆಚ್ಚಿನ ವಿವರಗಳಿಗೆ ಭಾಗ-2, ಅಧ್ಯಾಯ 6, ಪುಟ 137 ನೋಡಿ).

## ಸಮಿತಿ ಮತ್ತು ಮಂಡಲಿಗಳು

ರಾಜ್ಯದ ಕಾರ್ಮಿಕ ಇಲಾಖೆಯ ಆಶ್ರಯದಲ್ಲಿ ಹಲವಾರು ಮಂಡಲಿ ಮತ್ತು ಸಮಿತಿಗಳು ಕೆಲಸ ಮಾಡುತ್ತಿವೆ. ಒಂದು ತ್ರಿಪಕ್ಷೀಯ ಸಮಿತಿಯು 10ನೇಯ ಡಿಸೆಂಬರ್ 1980ರಲ್ಲಿ ಸಕ್ಕರೆ ಉದ್ಯಮಕ್ಕಾಗಿ ನಿಯೋಜಿತವಾಯಿತು. ಈ ಸಮಿತಿಯು ಆಡಳಿತ ಪ್ರತಿನಿಧಿ, ಕಾರ್ಮಿಕ ಪ್ರತಿನಿಧಿ ಹಾಗೂ ಖಾಸಗಿ ಸದಸ್ಯ ರುಗಳಿಂದ ಕೂಡಿದ್ದು, ಕಾರ್ಮಿಕ ಕಮಿಷನರರು ಅದರ ಅಧ್ಯಕ್ಷ ರಾಗಿರುತ್ತಾರೆ. ಇವರುಗಳು ವೇತನದ ಅಸಮತೋಲನ, ಸೇವಾ ನಿಯಮಗಳು ಮತ್ತು ಎಲ್ಲ ಕಾರ್ಖಾನೆಗಳಿಗೂ ಅನ್ವಯವಾಗು ವಂತಹ ಏಕರೂಪದ ಸ್ಥಾಯೀ ಆದೇಶಗಳನ್ನು ಗಮನಿಸುತ್ತಾರೆ. ಬಟ್ಟೆ ಗಿರಣಿಗೆ ಸಂಬಂಧಪಟ್ಟಂತೆ ಆಡಳಿತ ಪ್ರತಿನಿಧಿ, ಕಾರ್ಮಿಕ ಪ್ರತಿನಿಧಿಗಳು ಮತ್ತು ಸರಕಾರೀ ಅಧಿಕಾರಿಯೊಬ್ಬನನ್ನು ಒಳ ಗೊಂಡಂತೆ ತ್ರಿಪಕ್ಷೀಯ ಸಮಿತಿ 14ನೇ ಅಕ್ಟೋಬರ್ 1980ರಲ್ಲಿ

ಆರಂಭವಾಯಿತು. ಬೀಡಿ ಉದ್ಯಮಕ್ಕೂ ಅದರ ಕೆಲಸಗಾರರು, ಮಾಲೀಕರು ಮತ್ತು ಸರ್ಕಾರದ ಪ್ರತಿನಿಧಿಯನ್ನು ಒಳಗೊಂಡ ತ್ರಿಪಕ್ಷೀಯ ಸಮಿತಿಯೊಂದನ್ನು ರಚಿಸಲಾಯಿತು. ಅವರುಗಳು 1966ರ ಬೀಡಿ ಮತ್ತು ಸಿಗಾರ್ ಕಾರ್ಮಿಕರ ('ಸಿ' ಅಫ್ 'ಇ') ಅಧಿನಿಯಮ ಹಾಗೂ ಅದರಿಂದ ರೂಪುಗೊಂಡ ನಿಯಮಗಳಿಗೆ ಅನುಸಾರವಾಗಿ ಬೀಡಿ ಮತ್ತು ಚುಟ್ಟಾ (ಸಿಗಾರ್) ಕಾರ್ಮಿಕರ ತೊಂದರೆಗಳನ್ನು ನಿವಾರಿಸುತ್ತಾರೆ.

ಔದ್ಯಮಿಕ ಸಂಬಂಧಗಳ ಕಾರ್ಯಾಚರಣೆ ಮತ್ತು ಮೌಲ್ಯ ಮಾಪನ ಸಮಿತಿಯಲ್ಲಿನ ಕಾರ್ಮಿಕರು, ಮಾಲಿಕರು ಹಾಗೂ ಸರ್ಕಾರದ ಪ್ರತಿನಿಧಿಗಳು ಸರಿಸಮಾನವಾಗಿರುತ್ತಾರೆ. ಈ ಸಮಿತಿ, ಕಾರ್ಮಿಕ ಸಂಘಗಳಿಗೆ ಮಾನ್ಯತೆ ನೀಡುವ ಸಲುವಾಗಿ ಅರ್ಜಿಗಳನ್ನು ಸ್ವೀಕರಿಸುವುದು, ಶಿಸ್ತು ಪರಿಪಾಲನಾ ನಿಯಮ ಗಳನ್ನು ಗಮನಿಸುವುದು, ಇತ್ಯಾದಿಗಳ ಜೊತೆಗೆ ರಾಜ್ಯದಲ್ಲಿ ನೆಲೆಸಿರುವ ಕಾರ್ಮಿಕರ ಪರಿಸ್ಥಿತಿಯನ್ನು ಅಭ್ಯಾಸ ಮಾಡುತ್ತದೆ. ಈ ಸಮಿತಿಗಳ ಜೊತೆಗೆ ಕರ್ನಾಟಕ ಕಾರ್ಮಿಕರ ಕ್ಷೇಮಾಭಿವೃದ್ಧಿ ಮಂಡಲಿ ಮತ್ತು ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಲಿ ಸಹ ಕಾರ್ಯ ನಿರ್ವಹಿಸುತ್ತದೆ.

## ಪಾನ ನಿರೋಧ

ಮತ್ತು ಬರಿಸುವ ವಸ್ತುಗಳು ಹಾಗೂ ಪಾನೀಯಗಳು ಯಾವಾಗಲೂ ಸಮಾಜದ ಒಂದು ಪಿಡುಗಾಗಿದೆಯಲ್ಲದೆ, ಬಡವರು ಮತ್ತು ದುರ್ಬಲ ವರ್ಗದವರು ಈ ಕೆಟ್ಟ ಚಟಕ್ಕೆ ಹೆಚ್ಚಾಗಿ ಬಲಿಯಾಗುತ್ತಾರೆ. ಟಿಪ್ಪುಸುಲ್ತಾನನು ತನ್ನ ರಾಜ್ಯಾದ್ಯಂತ ಸಾರಾಯಿ ಹಾಗೂ ಗಾಂಜಾಗಳ ಮಾರಾಟವನ್ನು ನಿಷೇಧಿಸಿದ್ದನು. ಈ ನಿಷೇಧವು 1786 ಡಿಸೆಂಬರ್‌ನಿಂದ 1788 ರವರೆಗೆ ಜಾರಿ ಯಲ್ಲಿತ್ತು. ತನ್ನ ಸೈನ್ಯದಲ್ಲಿಯೂ ಯುರೋಪಿಯನರನ್ನು ಬಿಟ್ಟು ಉಳಿದವರಿಗೆ ಪಾನಪ್ರತಿಬಂಧವನ್ನು ವಿಧಿಸಿದ್ದನು. ಸ್ವಾತಂತ್ರ್ಯಕ್ಕೆ ಪೂರ್ವದಲ್ಲಿಯೇ ಕುಡಿತದ ದುಷ್ಪರಿಣಾಮಗಳನ್ನು ಭಾರತೀಯ ನ್ಯಾಷನಲ್ ಕಾಂಗ್ರೆಸ್ ಮನಗಂಡಿತ್ತಲ್ಲದೆ ಅದರ ನಿರೋಧಕ್ಕೂ ಗಮನಹರಿಸಿತು. 1930ರಲ್ಲಿ ಅಸಹಕಾರ ಚಳವಳಿಯ ಒಂದು ಅಂಗವಾಗಿ ಮದ್ಯದ ಗಡಂಗುಗಳ ತಡೆಗಾವಲು ('ಪಿಕೆಟಿಂಗ್') ಸಹ ಸೇರಿಕೊಂಡಿತು. ಈ ತಡೆ ಗಾವಲು ಹಳೆಯ ಮೈಸೂರಿನ ನಗರ-ಪಟ್ಟಣಗಳಿಗೂ ವ್ಯಾಪಿಸಿತು. 1937ರಲ್ಲಿ ಕಾಂಗ್ರೆಸ್ ಮಂತ್ರಿಗಳು ಬ್ರಿಟಿಷ್ ಪ್ರಾಂತಗಳಲ್ಲಿ ಅಧಿಕಾರಕ್ಕೆ ಬಂದಾಗ, ಅವು ಪಾನನಿರೋಧವನ್ನು ತಮ್ಮ ಧೋರಣೆಯ ಭಾಗವಾಗಿ ಒಪ್ಪಿಕೊಂಡವು.

ಹಳೆಯ ಮೈಸೂರು ಪ್ರದೇಶದಲ್ಲಿ 1938ರಲ್ಲಿ ಪ್ರಾಯೋಗಿಕ ವಾಗಿ ಪಾನ ಪ್ರತಿಬಂಧವನ್ನು ರಾಮನಗರ ಹಾಗೂ ಚನ್ನಪಟ್ಟಣ ತಾಲೂಕುಗಳಲ್ಲಿ ಕೈಗೊಳ್ಳಲಾಯಿತು. 1940ರ ದಶಕದಲ್ಲಿ ಸರ್ಕಾರ ಹಾಗೂ ಬೆಂಗಳೂರಿನ ದೀನ ಸೇವಾ ಸಂಘದಂತಹ ಖಾಸಗಿ ಸಂಸ್ಥೆಗಳು ಪಾನ ಪ್ರತಿಬಂಧ ಪ್ರಚಾರ ಕಾರ್ಯಕ್ರಮ ವನ್ನು ಹಳೆಯ ಮೈಸೂರು ಪ್ರದೇಶದಲ್ಲೆಲ್ಲಾ ಕೈಗೊಂಡವು. ನಂತರ 1947ರಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲೂಕು ಹಾಗೂ ತುಮಕೂರು ಜಿಲ್ಲೆಯ ಪಾವಗಡ ತಾಲೂಕು ಗಳಲ್ಲಿ ಪಾನ ನಿರೋಧವನ್ನು ಜಾರಿಗೆ ತರಲಾಯಿತು. ಅದೇ ವರ್ಷದಲ್ಲಿ ಶೇಕಡ 20ರಷ್ಟು ಹೆಂಡದಂಗಡಿಗಳನ್ನು ಪ್ರತೀ ವರ್ಷ ಕಡಿತ ಮಾಡುವ ನಿಯಮವೊಂದನ್ನು ರೂಪಿಸಲಾಯಿತು. ಹಂತ ಹಂತವಾಗಿ ಮೈಸೂರು ಪಾನ ನಿರೋಧ ಅಧಿನಿಯಮ 1948 ಅನ್ನು ರಾಜ್ಯದಲ್ಲಿ ಜಾರಿಗೆ ತರಲಾಯಿತು. 1956ರ ವೇಳೆಗೆ ಕೇವಲ ಐದು ಜಿಲ್ಲೆಗಳು (ಚಿತ್ರದುರ್ಗ, ತುಮಕೂರು, ಕೋಲಾರ, ಶಿವಮೊಗ್ಗ ಹಾಗೂ ಚಿಕ್ಕಮಗಳೂರು) ಮತ್ತು ಹಾಸನ ಜಿಲ್ಲೆಯ ನಾಲ್ಕು ತಾಲೂಕುಗಳು ಹಾಗೂ ಬೆಂಗಳೂರು ಜಿಲ್ಲೆಯ ಎರಡು ತಾಲೂಕುಗಳು ಪಾನ ಪ್ರತಿಬಂಧದ ಅಡಿಯಲ್ಲಿ ಬಂದಿದ್ದವು. 1949ರ ಮುಂಬೈ ಪಾನ ನಿರೋಧ ಅಧಿಸೂಚನೆಯ ಪ್ರಕಾರ ಬೆಳಗಾವಿ ಪ್ರದೇಶದಲ್ಲಿ ಏಪ್ರಿಲ್ 1950 ರಿಂದಲೇ ಪೂರ್ಣ ಪ್ರಮಾಣದ ಪಾನ ಪ್ರತಿಬಂಧವನ್ನು ತರಲಾಗಿತ್ತು. ಜಿಲ್ಲಾ ಕಲೆಕ್ಟರ್‌ಗಳಿಗೆ ಇದನ್ನು ಜಾರಿಗೆ ತರಲು ಪೂರ್ಣ ಅಧಿಕಾರವನ್ನು ಕೊಡಲಾಗಿತ್ತು. ಪಾನ ನಿರೋಧ ಹಾಗೂ ಅಬಕಾರಿಯ ಜಿಲ್ಲಾ ಇನ್ಸ್‌ಪೆಕ್ಟರ್ ಹಾಗೂ ಉಪಇನ್ಸ್‌ಪೆಕ್ಟರ್ ಜಿಲ್ಲಾಧಿಕಾರಿಗಳಿಗೆ ಸಹಾಯಕರಾಗಿದ್ದರು. 1937ರ ಮದರಾಸು ಪಾನ ನಿರೋಧ ಅಧಿನಿಯಮದಂತೆ ದಕ್ಷಿಣ ಕನ್ನಡ, ಬಳ್ಳಾರಿ ಹಾಗೂ ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲೂಕುಗಳಲ್ಲಿ ಪಾನನಿರೋಧವನ್ನು ಜಾರಿಗೆ ತರಲಾಗಿತ್ತು. ಅದಕ್ಕೆ ಮೊದಲು ಮತ್ತು ಬರಿಸುವ ವಿವಿಧ ವಸ್ತುಗಳನ್ನು ಅನುಮತಿ ಪಡೆದ ಅಂಗಡಿ ಗಳಲ್ಲಿ ಮಾತ್ರ ಮಾರಬಹುದಾಗಿತ್ತು. ಮೊದಲಿಗೆ ಪಾನ ನಿರೋಧ ಕಾರ್ಯಾಲಯದ ಸಿಬ್ಬಂದಿಗಳೇ ಪ್ರತಿಬಂಧ ಕಾರ್ಯದ ಜವಾಬ್ದಾರಿ ಹೊತ್ತಿದ್ದು 1955ರಲ್ಲಿ ಪೋಲೀಸ್ ಇಲಾಖೆಗೆ ಅದನ್ನು ವರ್ಗಾಯಿಸಲಾಯಿತು. ಹಳೆಯ ಕೊಡಗು ಸಂಸ್ಥಾನದ 1956ರ ಅಧಿನಿಯಮ ಒಂದರ ಪ್ರಕಾರ ಕೊಡಗು ಜಿಲ್ಲೆಯಲ್ಲಿ ಏಪ್ರಿಲ್ 1956 ರಿಂದ ಮೊದಲ ಬಾರಿಗೆ ಪಾನ ಪ್ರತಿಬಂಧವನ್ನು ಅಳವಡಿಸಲಾಯಿತು. ಇದರಿಂದಾಗಿ 1956ರಲ್ಲಿ ವಿಶಾಲ ಕರ್ನಾಟಕ ರೂಪಿಸುವ ವೇಳೆಗೆ ಹಳೆಯ ಮೈಸೂರಿನ ಕೆಲವು ಜಿಲ್ಲೆಗಳು ಹಾಗೂ ಕಲ್ಬುರ್ಗಿ ಪ್ರದೇಶಗಳ ವಿನಾ ಉಳಿದಂತೆ ಪಾನನಿರೋಧವು ಜಾರಿಯಲ್ಲಿತ್ತು. ಹೊಸ ರಾಜ್ಯ ಉದಯಿಸಿದ ಮೇಲೆ ಹಾಸನ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಮತ್ತು ಬಿದರೆ ಜಿಲ್ಲೆಯಲ್ಲಿ 1959ರಲ್ಲೂ, 1960ರಲ್ಲಿ ಮೈಸೂರು ನಗರ ಹಾಗೂ ಅದೇ ತಾಲೂಕನ್ನು ಬಿಟ್ಟು ಉಳಿದಂತೆ ಮೈಸೂರು ಜಿಲ್ಲೆಯಲ್ಲಿ ಪಾನನಿರೋಧವನ್ನು ಜಾರಿಗೆ ತರಲಾಯಿತು. ಜುಲೈ 1961ರಲ್ಲಿ ಮಂಡ್ಯ ಜಿಲ್ಲೆ, ಮೈಸೂರು ತಾಲೂಕು ಹಾಗೂ ಮೈಸೂರು

ನಗರಗಳು ಮದ್ಯರಹಿತವಾದವು. ಕಲ್ಬುರ್ಗಿ, ರಾಯಚೂರು ಜಿಲ್ಲೆಗಳು ಹಾಗೂ ಬೆಂಗಳೂರು ಜಿಲ್ಲೆ (ರಾಮನಗರ, ಚನ್ನಪಟ್ಟಣ ತಾಲೂಕುಗಳ ವಿನಹ)ಯನ್ನು ಬಿಟ್ಟು ಇಡೀ ರಾಜ್ಯಕ್ಕೆ ಅನ್ವಯಿಸುವಂತೆ 1961ರ ಕರ್ನಾಟಕ ಪಾನನಿರೋಧ ಅಧಿನಿಯಮವನ್ನು 1962ರಲ್ಲಿ ಪರಿಷ್ಕರಿಸಿ ಜಾರಿಗೆ ತರಲಾಯಿತು.

ರಾಜ್ಯದ ಆದಾಯದಲ್ಲಿ ನಷ್ಟ, ಹೆಚ್ಚುತ್ತಿದ್ದ ಕಳ್ಳಭಟ್ಟಿ ಸಾರಾಯಿಯ ಉಪಯೋಗ, ಮೊದಲಾದ ಕಾರಣಗಳಿಂದಾಗಿ ಕರ್ನಾಟಕ ಪಾನನಿರೋಧ (ತಿದ್ದುಪಡಿ) ಅಧಿನಿಯಮ 1967 ಅನ್ನು ಜಾರಿಗೆ ತಂದು, ಹಿಂದೆ ಮಾಡಿದ 1961ರ ಕರ್ನಾಟಕ ಪಾನನಿರೋಧ ಅಧಿನಿಯಮ ಸೂಚಿಸಿದ್ದ ಯಾವುದೇ ಸ್ಥಳಗಳಲ್ಲಿ ಪಾನನಿರೋಧವನ್ನು ಸಡಿಲಿಸಬಹುದಾದ ಅನುಕೂಲವನ್ನು ಪಡೆಯಲಾಯಿತು. ಇದರ ಪರಿಣಾಮವಾಗಿ ಅಕ್ಟೋಬರ್ 1967 ರಲ್ಲಿ ಬೆಳಗಾವಿ, ಬಳ್ಳಾರಿ, ಕೊಡಗು, ಚಿಕ್ಕಮಗಳೂರು, ಚಿತ್ರದುರ್ಗ, ಹಾಸನ, ಧಾರವಾಡ, ಕೋಲಾರ, ಮಂಡ್ಯ, ಶಿವಮೊಗ್ಗ, ದಕ್ಷಿಣ ಕನ್ನಡ, ತುಮಕೂರು ಹಾಗೂ ಬೆಂಗಳೂರು ಜಿಲ್ಲೆ (ರಾಮನಗರ ಮತ್ತು ಚನ್ನಪಟ್ಟಣ ತಾಲೂಕುಗಳನ್ನು ಹೊರತುಪಡಿಸಿ) ಮತ್ತು ಜಮಖಂಡಿ ತಾಲೂಕು ವಿನಾ ವಿಜಾಪುರ ಜಿಲ್ಲೆ, ಚಾಮರಾಜನಗರ, ಯಳಂದೂರು ತಾಲೂಕುಗಳ ವಿನಾ ಮೈಸೂರು ಜಿಲ್ಲೆ, ಕುಮಟಾ, ಅಂಕೋಲ, ಹೊನ್ನಾವರ ತಾಲೂಕುಗಳ ವಿನಾ ಉಳಿದ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಪಾನ ಪ್ರತಿಬಂಧವನ್ನು ಸಡಲಿಸಲಾಯಿತು. ಜೂನ್ 1968ರಲ್ಲಿ ಬಿದರೆ ಜಿಲ್ಲೆ ಹಾಗೂ ಉತ್ತರ ಕನ್ನಡ ಜಿಲ್ಲೆಯ ಕುಮಟಾ, ಹೊನ್ನಾವರ ತಾಲೂಕುಗಳಲ್ಲಿ ಪಾನನಿರೋಧವನ್ನು ಸಡಲಿಸಲಾಯಿತು. ಏಪ್ರಿಲ್ 1970ರಲ್ಲಿ ಉತ್ತರ ಕನ್ನಡ ಜಿಲ್ಲೆ ಹಾಗೂ ವಿಜಾಪುರದ ಉಳಿದ ತಾಲೂಕುಗಳಲ್ಲಿ ನಿರ್ಬಂಧವು ರದ್ದಾಯಿತು. ಮೈಸೂರು ಜಿಲ್ಲೆಯ ಚಾಮರಾಜನಗರ ತಾಲೂಕು ಜುಲೈ 1973ರಲ್ಲಿಯೂ ಹಾಗೂ ಅದೇ ಜಿಲ್ಲೆಯ ಯಳಂದೂರು ತಾಲೂಕು ಕೊಟ್ಟಕೊನೆಯದಾಗಿ ಒಂದನೇ ಜುಲೈ 1981 ರಿಂದಲೂ ಪಾನನಿರೋಧದಿಂದ ವಿಮುಕ್ತವಾಯಿತು. (ಅಬಕಾರಿ ಕಂದಾಯದ ಅಂಕೆ-ಸಂಖ್ಯೆಗಳಿಗೆ ಒಂಬತ್ತನೇಯ ಅಧ್ಯಾಯ ನೋಡಿ). ಪಾನನಿರೋಧವನ್ನು ತೆಗೆದುಹಾಕಿದರೂ ಕೂಡ ಕಳ್ಳಭಟ್ಟಿ ಸಾರಾಯಿಯ ತಯಾರಿಕೆ ಹಾಗೂ ವಿತರಣೆ ಮುಂದುವರಿಯುತ್ತಲೇ ಇದೆ. ಈಚಿಗೆ 1981ರಲ್ಲಿ ವಿಷಪೂರಿತ ಕಳ್ಳಭಟ್ಟಿ ಕುಡಿದು ಬೆಂಗಳೂರು ಹಾಗೂ ಮೈಸೂರಿನಲ್ಲಿ ನಡೆದ ಘೋರ ದುರಂತದಿಂದಾಗಿ 336 ಜನ ಹೆಂಗಸರು, ಗಂಡಸರು, ಮಕ್ಕಳು ಸಾವಿಗೀಡಾದರಲ್ಲದೆ ಅನೇಕರು ಶಾಶ್ವತವಾಗಿ ಕಣ್ಣು ಕಳೆದುಕೊಂಡರು. ಇದರ ಬಗ್ಗೆ ನ್ಯಾಯಾಧೀಶ ದೇಸಾಯಿ ಅವರ ನೇತೃತ್ವದಲ್ಲಿ ವಿಚಾರಣಾ ಸಮಿತಿಯೊಂದನ್ನು ಏರ್ಪಡಿಸಿದ್ದು, ಅವರು ನೀಡಿದ ವರದಿಯನ್ನು 1983ನೇ ಮಾರ್ಚ್‌ನಲ್ಲಿ ಸಾರ್ವಜನಿಕರ ಮುಂದೆ ಇಡಲಾಯಿತು.

## ಪಾನ ಸಂಯಮ ಮಂಡಲಿ

ಕರ್ನಾಟಕ ಸರ್ಕಾರದಿಂದ 1971ರಲ್ಲಿ ಕರ್ನಾಟಕ ರಾಜ್ಯ ಪಾನ ಸಂಯಮ ಮಂಡಲಿ ರಚಿತವಾಯಿತು. ಈ ಮಂಡಲಿ, ಕುಡಿತದ ಚಟದಿಂದ ಉಂಟಾಗುವ ಅನಿಷ್ಟಗಳ ಬಗ್ಗೆ ಜನರಲ್ಲಿ ತಿಳುವಳಿಕೆ ಮೂಡಿಸಿ ಕುಡಿತದಿಂದ ದೂರಾಗುವ ಸಲಹೆಯನ್ನು ಕೊಡುತ್ತದೆ. ಸಂಯಮ ಎಂದರೆ ಮದ್ಯದ ಬಳಕೆಯನ್ನು ಹತೋಟಿಗೆ ತಂದುಕೊಳ್ಳುವುದಲ್ಲದೆ ಪೂರ್ತಿಯಾಗಿ ಬಿಟ್ಟುಬಿಡುವಂತೆ ಮನವೊಲಿಸುವುದು : ಮಂಡಲಿಯ ಮುಖ್ಯ ಕಾರ್ಯೋದ್ದೇಶಗಳೆಂದರೆ, ಕುಡಿತದ ದುಷ್ಪರಿಣಾಮದ ಬಗ್ಗೆ ತಿಳುವಳಿಕೆ ನೀಡುವುದು ; ಮಾದಕ ಪಾನೀಯಕ್ಕೆ ಮರುಳಾಗಿರುವವರನ್ನು, ಚಟಕ್ಕೆ ಬಲಿಯಾಗಿರುವವರನ್ನು ಅದರಿಂದ ವಿಮುಖಗೊಳಿಸುವುದು ಹಾಗೂ ಶಾಲಾ ಪಠ್ಯವಿಷಯದಲ್ಲಿ ಈ ವಿಷಯಗಳನ್ನು ಸೇರಿಸಿ ವಿದ್ಯಾರ್ಥಿದೆಸೆಯಲ್ಲಿಯೇ ತಿಳುವಳಿಕೆ ನೀಡುವುದು.

ಸಮಾಜಸೇವಕರು, ಧಾರ್ಮಿಕ ಮುಖಂಡರು ಹಾಗೂ ಮನೋವಿಜ್ಞಾನಿಗಳ ಮೂಲಕ ಈ ವಿಷಯದ ಬಗ್ಗೆ ಚಲನಚಿತ್ರ, ಭಜನೆ, ಉಪನ್ಯಾಸಗಳನ್ನು ಏರ್ಪಡಿಸುವುದೂ ಮಂಡಲಿಯ ಕೆಲಗಳಲ್ಲಿ ಒಂದು. ಮಂಡಲಿಯು ಜನರ ಕುಡಿತ ಮತ್ತು ಆಹಾರದ ಅಭ್ಯಾಸದ ಬಗ್ಗೆ ಸರ್ವೇಕ್ಷಣೆ ನಡೆಸುತ್ತದೆ. ಅಲ್ಲದೆ ಮುಖ್ಯವಾಗಿ ಕೊಳೆಗೇರಿಗಳು ಹಾಗೂ ಕಾರ್ಮಿಕ ವಸತಿ ಇರುವಲ್ಲಿ ಕುಡಿತದ ಕೆಡುಕಿನ ಬಗ್ಗೆ ಕರಪತ್ರಗಳನ್ನು ಹಂಚಿ, ಚಿತ್ರನಿರೂಪಿತ ಭಿತ್ತಿಪತ್ರಗಳನ್ನು ಅಂಟಿಸಿ, ಸಿನಿಮಾ ಪಾರದರ್ಶಿಕೆ ಹಾಗೂ ಕಿರುಚಿತ್ರಗಳ ಮೂಲಕ ಪಾನ ಸಂಯಮ ಪ್ರಚಾರ ಮಾಡುವುದು ಮಂಡಲಿಯ ಇನ್ನೊಂದು ಕಾರ್ಯಕ್ರಮ. ಈ ಮಂಡಲಿಯ ಶಿಫಾರಸಿನಂತೆ ಪ್ರತೀ ತಿಂಗಳ ಒಂದನೇಯ ತಾರೀಕು 'ಪಾನ ಮುಕ್ತ ದಿನ' ಎಂದು ಸರ್ಕಾರ ಘೋಷಿಸಿತಾದರೂ ಇದನ್ನು 1980 ರಿಂದ ಕೈಬಿಡಲಾಯಿತು. ಶಾಲಾ ಕಾಲೇಜುಗಳ ಪಠ್ಯ ಪುಸ್ತಕದಲ್ಲಿ ಮದ್ಯಪಾನದ ಕೆಡುಕಿನ ಬಗ್ಗೆ ಪಾಠಪ್ರವಚನಗಳನ್ನು ಅಳವಡಿಸಲಾಯಿತು. ದುರ್ಬಲವರ್ಗದವರಿಗೆ ಮದ್ಯಪಾನದಿಂದುಂಟಾಗುವ ದುಷ್ಪರಿಣಾಮವನ್ನು ಮಹಿಳೆಯರಿಗೆ ತಿಳಿಸಲು ಬೇಕಾದ ಅಂಕಿಅಂಶಗಳನ್ನು ಸಂಗ್ರಹಿಸಲಾಯಿತು. ಮತ್ತು ಕೊಳಚೆ ಪ್ರದೇಶ ನಿವಾಸಿಗಳ ಕುಡಿತದ ಅಭ್ಯಾಸಗಳನ್ನು ಪರಿವೀಕ್ಷಿಸಲಾಯಿತು. ಮದ್ಯಪಾನವನ್ನು ತ್ಯಜಿಸುವವರಿಗೆ ವೈದ್ಯಕೀಯ ನೆರವು ಹಾಗೂ ಇತರೆ ಸೌಲಭ್ಯವನ್ನು ಕೊಡಲಾಗುತ್ತದೆ. ಕುಡಿತಕ್ಕೆ ಬಲಿಯಾಗಿರುವ ವ್ಯಕ್ತಿಗೆ ಅದರಿಂದ ವಿಮುಖನಾಗಲು ಬೆಂಗಳೂರಿನ ರಾಷ್ಟ್ರೀಯ ಮಾನಸಿಕ ಆರೋಗ್ಯ ಹಾಗೂ ನರ ವಿಜ್ಞಾನ ಸಂಸ್ಥೆಯ (ನಿಮ್ಹಾನ್ಸ್) ಪರಿಣತರಿಂದ ಸಲಹೆಯನ್ನು ಕೊಡಿಸಲಾಗುತ್ತದೆ. ಗಾಂಧಿ ಸ್ಮಾರಕ ನಿಧಿ, ಮಹಾಬೋಧಿ ಸಮಾಜ ಮುಂತಾದ ಸಂಸ್ಥೆಗಳು ಒಂದಾಗಿ ಪಾನ ಸಂಯಮದ ಕುರಿತು ಭಿತ್ತಿಪತ್ರಗಳ ಮೂಲಕ ಜಾಹೀರಾತು ನೀಡಿ ಪ್ರಚಾರ ಮಾಡುತ್ತಿವೆ.

## ಹಿಂದುಳಿದ ವರ್ಗದವರ ಆಂದೋಲನ

ಹನ್ನೆರಡನೇಯ ಶತಮಾನದಲ್ಲಿ ಬಸವೇಶ್ವರರು ಆರಂಭಿಸಿದ ಸಮಾಜ ಸುಧಾರಣೆಯೊಂದಿಗೆ ಕರ್ನಾಟಕದಲ್ಲಿ ಹಿಂದುಳಿದ ವರ್ಗದವರ ಆಂದೋಲನ ಪ್ರಾರಂಭವಾಯಿತು. ಸಮಾಜ ಸುಧಾರಣೆ ಒಂದು ಚಳವಳಿ ಎನಿಸಿ ಜಾತ್ಯತೀತ ಸಮಾಜ ರೂಪಿಸಲು ಹುಟ್ಟಿಕೊಂಡಿತು. ಆದರೆ ಮುಂದಿನ ಶತಮಾನಗಳಲ್ಲಿ ಈ ಆಂದೋಲನದ ಪರಿಣಾಮ ಮಸುಕಾಗಿ, 19ನೇಯ ಶತಮಾನ ದವರೆಗೂ ಇದೇ ಸ್ಥಿತಿ ಮುಂದುವರಿಯಿತು.

ಆಧುನಿಕ ಶಿಕ್ಷಣವನ್ನು ಪಡೆದವರಲ್ಲಿ ಸಾಂಪ್ರದಾಯಿಕವಾಗಿ ಗಣ್ಯರಾದ ಬ್ರಾಹ್ಮಣರು ಮೊದಲಿಗರಾಗಿದ್ದು, ಸರಕಾರದ ಸೇವೆಯಲ್ಲೂ ಅವರೇ ಸಿಂಹಪಾಲು ಪಡೆದಿದ್ದರು. ಆದರೆ ಇತರ ಜಾತಿಯವರಿಗೂ ಶಿಕ್ಷಣ ಸೌಲಭ್ಯ ದೊರೆತಂತೆ, ಅವರೂ ಸಾರ್ವಜನಿಕ ಸೇವೆಯಲ್ಲಿ ಸಮಾನ ಅವಕಾಶಗಳನ್ನು ಪಡೆಯಲು ಹಾತೊರೆಯುವಂತಾಯಿತು. ಇವರಲ್ಲಿ ಹೊಸ ರೀತಿಯ ಶಿಕ್ಷಣ ಪಡೆದ ಬ್ರಾಹ್ಮಣೇತರರೂ ಸಾಮಾಜಿಕ ಸಮಾನತೆಗಾಗಿ ಒತ್ತಾಯಿಸಿದರು. ಇವರ ನಿಲುವನ್ನು ಕ್ರೈಸ್ತ ಧರ್ಮದ ಪ್ರಚಾರ ಮಂಡಲಿಗಳು ಹಾಗೂ ಬ್ರಹ್ಮ ಸಮಾಜವೂ ಬೆಂಬಲಿಸಿದವು. ಸಾರ್ವಜನಿಕ ಸೇವೆಯಲ್ಲಿ ಉತ್ತಮ ಅವಕಾಶಗಳು, ತಮಗೆ ಬೇಕೆಂಬ ಒತ್ತಾಯ ಪೂರ್ವಕ ಮೊದಲ ಪ್ರತಿಕ್ರಿಯೆ ಹಳೆಯ ಮೈಸೂರಿನ 1874ರ ಸರ್ಕಾರಿ ಆಜ್ಞೆಯಲ್ಲಿ ಕಂಡುಬಂದಿತು. ಅದರಂತೆ ಪೋಲೀಸ್ ಇಲಾಖೆಯ ಸ್ಥಾನಗಳನ್ನು ತುಂಬುವಲ್ಲಿ ಪ್ರತೀ ಹತ್ತು ಹುದ್ದೆಗಳಿಗೆ ಎಂಟು ಜನ ಬ್ರಾಹ್ಮಣೇತರರನ್ನು ಆಯ್ಕೆ ಮಾಡಬೇಕೆಂದಾಯಿತು. ಮುಂದೆ ದಿವಾನ್ ವಿ. ಪಿ. ಮಾಧವರಾಯರ ಕಾಲದಲ್ಲಿ ಈ ಆಜ್ಞೆಗೆ ಪುನರ್ಜೀವ ಬಂದಿತು.

1904 ರಿಂದ 1909ರ ಕಾಲದಲ್ಲಿ ಜಾತೀಯ ಹಾಗೂ ಮತೀಯ ಸಂಘಗಳು ಹುಟ್ಟಿಕೊಂಡು ಹಿಂದುಳಿದ ವರ್ಗಗಳ ಬಲಸಂವರ್ಧನೆಗೆ ಕಾರಣವಾದವು. ಇವುಗಳಲ್ಲಿ ಪ್ರಮುಖ ವಾದವು—ವೀರಶೈವ ಮಹಾಸಭೆ (1904), ಒಕ್ಕಲಿಗರ ಸಂಘ (1906) ಮತ್ತು ಕುರುಬರ ಸಂಘ. ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ ಹಾಗೂ ಆರ್ಥಿಕ ಸಮ್ಮೇಳನಗಳ ಸ್ಥಾಪನೆಯೊಂದಿಗೆ ಗ್ರಾಮೀಣ ಗಣ್ಯರಲ್ಲಿ ವಿಚಾರ ವಿನಿಯಮಕ್ಕೆ ಹೆಚ್ಚು ಅವಕಾಶವಾಯಿತು. ಶಾಲೆಗಳಲ್ಲಿ ಶುಲ್ಕ ವಿನಾಯತಿ ಯೊಂದಿಗೆ 1913ರಲ್ಲಿ ಕಡ್ಡಾಯ ಶಿಕ್ಷಣ ಆರಂಭವಾಯಿತು; ಇದು ಜನಸಾಮಾನ್ಯರನ್ನು ಜಾಗೃತಗೊಳಿಸಿ ಕರ್ನಾಟಕ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಚಳವಳಿಗೆ ಪುಷ್ಟಿಕೊಟ್ಟಿತು. ಇವೆಲ್ಲದರ ಪರಿಣಾಮವೆಂದರೆ ಶೈಕ್ಷಣಿಕವಾಗಿ ಹಿಂದುಳಿದ ಜಾತಿ ಗಳಿಗೆ ಸರ್ಕಾರಿ ಸೇವೆಗಳಲ್ಲಿ ಅಧಿಕ ಸ್ಥಾನಗಳನ್ನು ಮೀಸಲಿಡ ಬೇಕೆಂಬ ಹಾಗೂ ಈ ಸೇವೆಗಳಿಗೆ ಬೇಕಾಗಿರುವ ಅರ್ಹತೆಯನ್ನು ಇಳಿಸಬೇಕೆಂಬ ಕೋರಿಕೆಯು ಒಂದು ಹೊಸ ಚಳವಳಿ ರೂಪು ಗೊಂಡಿತು. 1914ರಲ್ಲಿ 'ಶೇಕ್‌ದಾರ್' ಮತ್ತು 'ಅಮಲ್ ದಾರ್' ಹುದ್ದೆಗಳಿಗೆ ಅರ್ಹತೆಯ ಮಿತಿಯನ್ನು ಕಡಿಮೆ ಮಾಡಿ 1916ರಲ್ಲಿ ಶೇ. 25ರಷ್ಟು ಸ್ಥಾನಗಳನ್ನು ಹಿಂದುಳಿದವರಿಗೆ ಸರ್ಕಾರ ಮೀಸಲಿಟ್ಟಿತು. ಶೈಕ್ಷಣಿಕವಾಗಿ ಹಿಂದುಳಿದ ಜಾತಿಗಳು ಹಾಗೂ ಸಮುದಾಯಗಳಲ್ಲಿ ಮತ್ತಷ್ಟು ಜಾಗೃತಿಯನ್ನುಂಟು ಮಾಡಲು 1917ರಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರು ರಾಜ್ಯ ಆಯವ್ಯಯದಿಂದ (ಬಜೆಟ್) ಒಂದು ಲಕ್ಷ ರೂ. ಗಳನ್ನು ಒದಗಿಸಿ, ಅದನ್ನು ಹಿಂದುಳಿದ ವರ್ಗದವರಿಗೆ ವಿದ್ಯಾರ್ಥಿ ವೇತನ ರೂಪದಲ್ಲಿ ದೊರಕಿಸಿಕೊಟ್ಟರು. ಈ ಸಮಯದಲ್ಲೇ (1917) 'ಪ್ರಜಾಮಿತ್ರ ಮಂಡಲಿ' ರೂಪುಗೊಂಡು ಶೇ. 90ರಷ್ಟು ಹುದ್ದೆ ಗಳಲ್ಲಿರುವ ಅಲ್ಪಸಂಖ್ಯಾತ ಸಮುದಾಯದ ವಿರುದ್ಧ ಅದು ಜನಾಭಿಪ್ರಾಯವನ್ನು ಮೂಡಿಸಿತು.

### ಮಿಲ್ಲರ್ ಸಮಿತಿ

ಬ್ರಾಹ್ಮಣೇತರ ಸಮುದಾಯಗಳ ಮುಂದಾಳುಗಳು 1918ರಲ್ಲಿ ಮೈಸೂರು ಅರಸರಿಗೆ ಭಿನ್ನವತ್ತಳೆಯನ್ನು ಅರ್ಪಿಸಿ ತಮ್ಮ ಕುಂದು ಕೊರತೆಗಳನ್ನು ನಿವೇದಿಸಿಕೊಂಡರು. ಈ ಸಮಯದಲ್ಲೇ (1918), ಮುಖ್ಯ ನ್ಯಾಯಾಲಯದ ಪ್ರಮುಖ ನ್ಯಾಯಾಧೀಶ ಸರ್ ಲೆಸ್ಲಿ ಮಿಲ್ಲರ್ ಅವರ ಅಧ್ಯಕ್ಷತೆಯಲ್ಲಿ ಆರು ಜನ ನಾಗರಿಕ ಗಣ್ಯರನ್ನೊಳಗೊಂಡ ಸಮಿತಿಯು ನೇಮಿಸ ಲ್ಪಟ್ಟಿತು. ಅದು ಹಿಂದುಳಿದ ವರ್ಗಗಳ ಕುಂದುಕೊರತೆಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ, ಅವುಗಳ ನಿವಾರಣೆಗೆ ಸಲಹಾಪೂರ್ವಕವಾಗಿ ತರಬಹುದಾದ ಕಾಯಿದೆಗಳ ಬದಲಾವಣೆ ಯನ್ನು ಹುದ್ದೆಗಳ ಆಯ್ಕೆಯ ಕ್ರಮಕ್ಕೆ ಅನ್ವಯಿಸುವಂತೆ ಮಾಡಿತು. 1911ರ ಜನಗಣತಿಯಲ್ಲಿ ಶೇ. ಐದಕ್ಕೂ ಕಡಿಮೆ ಸಾಕ್ಷರತೆ ಹೊಂದಿದ್ದ ಎಲ್ಲಾ ಜಾತಿಗಳನ್ನೂ ಹಿಂದುಳಿದ ಸಮುದಾಯಗಳೆಂದು ಪರಿಗಣಿಸಿತು. ಮಿಲ್ಲರ್ ಸಮಿತಿಯು ಜನಗಣತಿ ವರದಿ ಆಧಾರದ ಮೇಲೆ, ಉನ್ನತ ಹುದ್ದೆಗಳಿಗೆ ಒಟ್ಟು ನೇಮಕಾತಿಯಲ್ಲಿ 1/2 ದಷ್ಟನ್ನೂ ಮತ್ತು ಕೆಳಗಿನ ಹುದ್ದೆಗಳಲ್ಲಿ 2/3 ರಷ್ಟನ್ನೂ ಅಂದಿನಿಂದ ಏಳು ವರ್ಷಗಳ ಕಾಲದೊಳಗೆ ಹಿಂದುಳಿದ ಸಮುದಾಯಗಳಿಗೆ ಕಾದಿರಿಸಿ ತುಂಬಬೇಕೆಂದು ಶಿಫಾರಸು ಮಾಡಿತು. ಅಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನು ತೆರೆಯಲು ಹಾಗೂ ಹಿಂದುಳಿದ ಸಮುದಾಯಗಳಿಗೆ ವಿದ್ಯಾರ್ಥಿವೇತನಕ್ಕೋಸ್ಕರ ಎರಡು ಲಕ್ಷ ರೂ. ಗಳನ್ನು ಆಯವ್ಯಯದಲ್ಲಿ ಒದಗಿಸಬೇಕೆಂಬ ಶಿಫಾರಸನ್ನೂ ಮಿಲ್ಲರ್ ಸಮಿತಿ ಮಾಡಿತು. ರಾಜ್ಯ ಸರ್ಕಾರ ಈ ಶಿಫಾರಸುಗಳನ್ನು ಗಮನಿಸಿ ಸೂಕ್ತ ಆಜ್ಞೆಯನ್ನು 1921ರಲ್ಲಿ ಹೊರಡಿಸಿತು. ಈ ಆಜ್ಞೆಯು ರಾಜ್ಯ ಪುನರ್ಘಟನೆಯ ಕಾಲದವರೆಗೆ ಜಾರಿಯಲ್ಲಿತ್ತು.

ಹರಿಜನರ ಬಗೆಗೆ ಇತರ ಅನೇಕ ಸಂಸ್ಥೆಗಳು ಗಮನ ಹರಿಸದಿದ್ದಾಗ ಆರ್ಯಸಮಾಜ, ಬ್ರಹ್ಮಸಮಾಜ ಮತ್ತು ಕಾಂಗ್ರೆಸ್‌ಗಳು ಕಾರ್ಯಪ್ರವೃತ್ತವಾದವು. 1915ರಲ್ಲಿ ಬೆಂಗಳೂರಿನಲ್ಲಿ ಆರಂಭವಾದ 'ಸಿವಿಕ್ ಎಸೋಸಿಯೇಶನ್' ಈ ದಿಸೆಯಲ್ಲಿ ಕೆಲಸ ಮಾಡಿತು. ಹಳೆಯ ಮೈಸೂರು ರಾಜ್ಯದಲ್ಲಿ ಹರಿಜನ ವಿದ್ಯಾಭ್ಯಾಸದ ಬಗ್ಗೆ ದುಡಿದ ಆರ್. ಗೋಪಾಲಸ್ವಾಮಿ ಅಯ್ಯರ್ ಅವರು ಒಬ್ಬ ಸ್ಮರಣೀಯ ವ್ಯಕ್ತಿಯಾಗಿದ್ದಾರೆ.

ಪುಣೆಯ ಜ್ಯೋತಿರಾವ್ ಫುಲೆಯವರು (1827-90) ಹರಿಜನ ಬಾಲಕರ ಶಾಲೆಯನ್ನು 1848ರಲ್ಲೂ, ಬಾಲಕಿಯರ ಶಾಲೆಯನ್ನು 1851ರಲ್ಲೂ ಆರಂಭಿಸಿ ಮುಂಬೈ ಪ್ರಾಂತ್ಯದಲ್ಲಿ ಹಿಂದುಳಿದ ವರ್ಗದವರ ಚಳವಳಿಗೆ ಕಾರಣರಾದರು. ಅವರು "ಸತ್ಯ ಶೋಧಕ ಸಮಾಜ"ವನ್ನು ಸ್ಥಾಪಿಸಿ, ಅದರ ಮೂಲಕ ತಮ್ಮ ಅಭಿಪ್ರಾಯಗಳನ್ನು ಪ್ರಚಾರ ಮಾಡಿದರು. ಈ ಹಿಂದುಳಿದ ವರ್ಗದವರ ಆಂದೋಳನವನ್ನು ಮುಂಬೈಯ "ಪ್ರಾರ್ಥನಾ ಸಮಾಜ", 'ಆರ್ಯಸಮಾಜ' ಹಾಗೂ ಕೊಲ್ಲಾಪುರದ ಶಾಹುಮಹಾರಾಜ್ ಅವರುಗಳು ಶ್ಲಾಘಿಸಿ ಅದಕ್ಕೆ ತಮ್ಮ ಬೆಂಬಲ ನೀಡಿದರು. 'ವೀರಶೈವ ಮಹಾಸಭೆ' ಮತ್ತು 'ಬ್ರಾಹ್ಮಣೇತರ ಪರಿಷತ್ತು' ಈ ದೆಸೆಯಲ್ಲಿ ಸಾಕಷ್ಟು ಕಾರ್ಯ ನಿರ್ವಹಿಸಿದ್ದವು. ಕಾಂಗ್ರೆಸ್ ಸಂಸ್ಥೆಯಂತೂ ಹರಿಜನರ ಬಗೆಗಿನ ಕಾರ್ಯವನ್ನು ಪ್ರಮುಖವಾಗಿಸಿತು. "ನಿಮ್ನ ವರ್ಗ ಹಾಗೂ ಆದಿವಾಸಿ ಜನಾಂಗಗಳ ಸಮಿತಿ" 1930ರಲ್ಲಿ ಮಾಡಿದ ಶಿಫಾರಸಿನಿಂದಾಗಿ ಬೆಳಗಾವಿ ಪ್ರದೇಶದಲ್ಲಿ 'ಹಿಂದುಳಿದ ವರ್ಗಗಳ ಇಲಾಖೆ' 1931ರಲ್ಲಿ ಸ್ಥಾಪಿಸಲ್ಪಟ್ಟಿತು ; ಅಂತೆಯೇ ಆ ಸಮಿತಿಯು ಹಿಂದುಳಿದ ಜನಾಂಗಗಳ ವರ್ಗೀಕರಣವನ್ನೂ ಶಿಫಾರಸು ಮಾಡಿತು. ಸರ್ಕಾರ ಇದನ್ನು ಅಂಗೀಕರಿಸಿ ಹಿಂದುಳಿದವರ ವರ್ಗಕ್ಕೆ ಮೂರು ಬೇರೆ ಬೇರೆ ಜನಾಂಗಗಳನ್ನು ಸೇರಿಸಿತು—ಅಸ್ಪೃಶ್ಯರು (ಪರಿಶಿಷ್ಟ ಜಾತಿಗಳು), ಆದಿವಾಸಿ ಮತ್ತು ಗುಡ್ಡಗಾಡಿನ ಜನ (ಪರಿಶಿಷ್ಟ ಬುಡಕಟ್ಟು) ಹಾಗೂ ಇತರ ಜನಾಂಗಗಳು (ಸರ್ಕಾರ ಅವರನ್ನು 'ಇತರ ಹಿಂದುಳಿದ ವರ್ಗಗಳೆ'ಂದು ಕರೆದಿದೆ).

ಹಿಂದಿನ ಶತಮಾನದ ಕೊನೆಯ ದಶಕಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಿಂದುಳಿದ ವರ್ಗದವರ ಉನ್ನತಿಗೆ ಕೆಲವು ವ್ಯಕ್ತಿಗಳು ಹಾಗೂ ಸಂಸ್ಥೆಗಳು ಗಣನೀಯ ಕಾರ್ಯ ನಿರ್ವಹಿಸಿದವು. ಕುದ್ಮುಲ್ ರಂಗರಾಯರು ತುಳಿತಕ್ಕೆ ಒಳಗಾದವರ ಏಳಿಗೆಗಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟರು. ಮಹಾತ್ಮಾ ಗಾಂಧಿಯವರು 1927ರಲ್ಲಿ ಮಂಗಳೂರಿಗೆ ಬಂದಾಗ ಈ ಮಹನೀಯರ ಕಾರ್ಯವನ್ನು ಬಹುವಾಗಿ ಪ್ರಶಂಸಿಸಿದರು. ಕಾರ್ನಾಡ್ ಸದಾಶಿವರಾಯರೂ ಸಹ ದಕ್ಷಿಣ ಕನ್ನಡ ಜಿಲ್ಲೆಯ ಹರಿಜನರ ಪ್ರಗತಿಗಾಗಿ ಕೈ ಜೋಡಿಸಿ ಸೇವೆ ಸಲ್ಲಿಸಿದರು. ತುಳಿತಕ್ಕೊಳಗಾದ ವರ್ಗದ ಕ್ಷೇಮಾಭಿವೃದ್ಧಿ ಕಾರ್ಯವನ್ನು 1923ರಲ್ಲಿ ಮದ್ರಾಸ್ ಸರ್ಕಾರವು ಕಾರ್ಮಿಕ ಇಲಾಖೆಗೆ ವಹಿಸಿತು. ಈ ಇಲಾಖೆಯು ಹರಿಜನರಿಗೆ ಶಾಲೆಗಳನ್ನು ತೆರೆಯುವುದರ ಜತೆಗೆ ಅವರಿಗಾಗಿ ಜಮೀನನ್ನೂ ಕಾಯ್ದಿರಿಸಿತು. ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟು ಜನಗಳ ಕ್ಷೇಮ ಮತ್ತು ಅವಶ್ಯಕತೆಗಳನ್ನು ಪೂರೈಸಲು 1949ರಲ್ಲಿ ಹರಿಜನ ಅಭಿವೃದ್ಧಿ ಇಲಾಖೆ ಎಂಬ ಬೇರೆ ಇಲಾಖೆಯನ್ನೇ ತೆರೆಯಿತು.

ಮಹಾತ್ಮಾ ಗಾಂಧಿಯವರು ಹರಿಜನ ಸೇವಕ ಸಂಘವನ್ನು ಸ್ಥಾಪಿಸಿದರು. ಅದರ ಶಾಖೆ ಕರ್ನಾಟಕದಲ್ಲೂ ಉದಯಿಸಿದಾಗ ವೀರಣಗೌಡ ಪಾಟೀಲರು ಅದರ ಪ್ರಥಮ ಅಧ್ಯಕ್ಷರಾದರು. ಗಾಂಧೀಜಿಯವರು 1934 ಮತ್ತು 1936ರಲ್ಲಿ (ಎರಡು ಸಲ) ಕರ್ನಾಟಕದಲ್ಲಿ ಸಂಚರಿಸಿ ಈ ಹೊಸ ಸಂಘಕ್ಕೆ ಹಣ ಕೂಡಿಸಿದರು. ಹಾಗೆಯೇ ಅಸ್ಪೃಶ್ಯತೆಯ ವಿರೋಧವಾಗಿ ವ್ಯಾಪಕ ಪ್ರಚಾರ ಮಾಡಿದರು. ಈ ಸಂಘವು ಹರಿಜನ ಜನತೆಗೆ ವೃತ್ತಿ ತರಬೇತಿ ಕೇಂದ್ರಗಳನ್ನೂ, ನಿರ್ಗತಿಕರಿಗೆ ವಸತಿಯನ್ನೂ ಹಾಗೂ ವಿದ್ಯಾರ್ಥಿಗಳಿಗೆ ವಸತಿ ನಿಲಯಗಳನ್ನೂ ಆರಂಭಿಸಿತು.

ಸ್ವಾತಂತ್ರ್ಯಾನಂತರ ಪರಿಶಿಷ್ಟ ಜಾತಿಗಳ ಹಾಗೂ ಪರಿಶಿಷ್ಟ ಬುಡಕಟ್ಟುಗಳ ಅಭಿವೃದ್ಧಿ ಕಾರ್ಯವು ಒಂದು ಹೊಸ ಆಯಾಮ ಪಡೆಯಿತು. ಸಾಮಾಜಿಕವಾಗಿ ದುರ್ಬಲವಾದ ವರ್ಗಗಳ ಆಸಕ್ತಿ ರಕ್ಷಣೆಗೆ ಭಾರತದ ಸಂವಿಧಾನದಲ್ಲಿ ಗೊತ್ತಾದ ಕಟ್ಟುಪಾಡುಗಳಿವೆ. 1953ರಲ್ಲಿ ನೇಮಕಗೊಂಡ ಕಾಕಾ ಕಾಲೇಲ್ಕರ್ ಆಯೋಗವು ಮಾಡಿದ ಶಿಫಾರಸು ತೃಪ್ತಿಕರವಲ್ಲದ್ದರಿಂದ, ಇತರ ಹಿಂದುಳಿದ ವರ್ಗಗಳಿಗೆ ರಕ್ಷಣೆ ನೀಡಲು ರಾಜ್ಯಗಳು ಸೂಕ್ತ ಆಯೋಗಗಳನ್ನು ರಚಿಸಿಕೊಳ್ಳುವಂತೆ ಭಾರತ ಸರ್ಕಾರವು ಆದೇಶ ನೀಡಿತು.

1958ರಲ್ಲಿ ಕರ್ನಾಟಕ ಸರ್ಕಾರವು ಒಂದು ಆಜ್ಞೆಯನ್ನು ಹೊರಡಿಸಿ, ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟು ಜನಾಂಗಗಳಿಗೆ ಶಿಕ್ಷಣ ಸಂಸ್ಥೆಗಳಲ್ಲಿ ಶೇ. 75ರಷ್ಟು ಸ್ಥಾನಗಳನ್ನು ಮೀಸಲಿಡುವಂತೆ ಆದೇಶ ನೀಡಿತು. ಈ ಆಜ್ಞೆಯನ್ನು ಉಚ್ಚ ನ್ಯಾಯಾಲಯ ಅನೂರ್ಜಿತಗೊಳಿಸಿತು. ಇದರಿಂದಾಗಿ ಪುನಃ 1959ರಲ್ಲಿ ಕರ್ನಾಟಕ ಸರ್ಕಾರ ಈ ವಿಷಯದ ಬಗೆಗೆ ಒಂದು ಆಜ್ಞೆ ಹೊರಡಿಸಿ ವಿದ್ಯಾ ಸಂಸ್ಥೆಗಳಲ್ಲಿ ಹಿಂದುಳಿದವರಿಗೆ ಶೇ. 65ರಷ್ಟು ಮೀಸಲಾತಿ ಇರಬೇಕೆಂದು ಘೋಷಿಸಿತು.

## ಮೈಸೂರು ಹಿಂದುಳಿದ ವರ್ಗಗಳ ಸಮಿತಿ

1959ರ ಸರ್ಕಾರಿ ಆಜ್ಞೆಯನ್ನು ಉಚ್ಚ ನ್ಯಾಯಾಲಯವು ಮತ್ತೊಮ್ಮೆ ಅನೂರ್ಜಿತಗೊಳಿಸಿತು. ಹಿಂದುಳಿದಿರುವಿಕೆಯ ಸಮಸ್ಯೆಯನ್ನು ಅರಿಯಲು ಸರ್ಕಾರ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿ 1960ರಲ್ಲಿ ಡಾ|| ಆರ್. ನಾಗನಗೌಡರ

ಅಧ್ಯಕ್ಷತೆಯಲ್ಲಿ ರೂಪುಗೊಂಡು ಅದನ್ನು 'ಮೈಸೂರು ಹಿಂದುಳಿದ ವರ್ಗಗಳ ಸಮಿತಿ' ಎಂದು ಕರೆಯಲಾಯಿತು. ಹಿಂದುಳಿದಿರುವಿಕೆಯನ್ನು ನಿರ್ಧರಿಸುವ ಮಾನದಂಡವನ್ನು ಸೂಚಿಸಿ ತಾಂತ್ರಿಕ ಸಂಸ್ಥೆಗಳಿಗೆ ಪ್ರವೇಶವನ್ನು ಹಾಗೂ ಸರ್ಕಾರಿ ಹುದ್ದೆಗಳಿಗೆ ಆಯ್ಕೆಯ ಧೋರಣೆ ಮತ್ತು ನಿಯಂತ್ರಿಸುವ ರೀತಿಯನ್ನು ಯಾವ ರೀತಿ ಮಾಡಬೇಕೆಂದು ಸರ್ಕಾರಕ್ಕೆ ಸೂಚಿಸಬೇಕೆಂದು ಈ ಸಮಿತಿಗೆ ತಿಳಿಸಲಾಯಿತು. ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳ ಪ್ರಮಾಣ, ಸರ್ಕಾರಿ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯ ಇಲ್ಲದಿರುವಿಕೆ, ಮತ್ತು ಸಾಮಾಜಿಕವಾಗಿ ಹಿಂದುಳಿದಿರುವಿಕೆ, ಈ ಮೂರು ಅಂಶಗಳನ್ನು ಆಧಾರವಾಗಿಟ್ಟುಕೊಂಡು ಆರ್. ನಾಗನಗೌಡ ಸಮಿತಿ ಇಪ್ಪತ್ತು ಗುಂಪುಗಳ ಒಂದು ಪಟ್ಟಿಯನ್ನು ತಯಾರಿಸಿ, ಅದರಲ್ಲಿ ಒಂಭತ್ತು ಗುಂಪುಗಳನ್ನು ಹಿಂದುಳಿದ ವರ್ಗಗಳೆಂದೂ, ಉಳಿದವುಗಳನ್ನು 'ತೀವ್ರ ಹಿಂದುಳಿದ ಸಮೂಹ' ಗಳೆಂದೂ ವರ್ಗೀಕರಿಸಿತು. ಸಾಮಾಜಿಕವಾಗಿ ಹಿಂದುಳಿದಿರುವಿಕೆಯನ್ನು ಗೊತ್ತುಪಡಿಸಲು ಸಮಿತಿಯು ಎಲ್ಲಾ ಜಾತಿಗಳ ಮತ್ತು ಸಾಮಾಜಿಕವಾಗಿ ಕೆಳಮಟ್ಟದಲ್ಲಿರುವ ಜಾತಿಗಳ ಪಟ್ಟಿಯನ್ನು ಸಿದ್ಧಪಡಿಸಿತು. ಯಾವ ಸಮುದಾಯಗಳ ಶಿಕ್ಷಣ ಮಟ್ಟ ರಾಜ್ಯದ ಸರಾಸರಿ ಶಿಕ್ಷಣ ಮಟ್ಟದ ಶೇ. 50ಕ್ಕಿಂತ ಕಡಿಮೆಯಿದೆಯೋ, ಅವುಗಳನ್ನು 'ತೀವ್ರ ಹಿಂದುಳಿದ ವರ್ಗಗಳೆಂದು ಪರಿಗಣಿಸಲಾಯಿತು. ಇದನ್ನು ಆಧರಿಸಿ ಸಮಿತಿಯು ತಾಂತ್ರಿಕ ಸಂಸ್ಥೆಗಳಲ್ಲಿರುವ ಒಟ್ಟು ಸ್ಥಾನಗಳಲ್ಲಿ ಶೇ. 50ರಷ್ಟನ್ನು ಹಿಂದುಳಿದ ವರ್ಗಗಳ ಪ್ರವೇಶಕ್ಕೆ ಮೀಸಲಿಡಬೇಕೆಂದೂ, ಅದರಲ್ಲಿ ಶೇ. 28ರಷ್ಟು ಹಿಂದುಳಿದ ಸಮೂಹಗಳಿಗೂ, ಉಳಿದ ಶೇ. 22ರಷ್ಟನ್ನು 'ತೀವ್ರ ಹಿಂದುಳಿದ ಸಮೂಹ' ಗಳಿಗೆ ಕಾಯ್ದಿರಿಸಬೇಕೆಂದು ಅಭಿಪ್ರಾಯ ಪಟ್ಟಿತು; ಹಾಗೆಯೇ ಸರ್ಕಾರಿ ಸೇವೆಗಳಿಗೆ ಶೇ. 45ರಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗಗಳ ನೇಮಕಕ್ಕೆ ಕಾಯ್ದಿಡಬೇಕೆಂದೂ, ಇವುಗಳಲ್ಲಿ 21ರಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗಕ್ಕೂ, ಉಳಿದ 24ರಷ್ಟನ್ನು 'ತೀವ್ರ ಹಿಂದುಳಿದ ಸಮೂಹ' ಗಳಿಗೆ ಕಾದಿರಿಸಬೇಕೆಂದು ತಿಳಿಸಿತು. ನಾಗನಗೌಡ ಸಮಿತಿಯ ಶಿಫಾರಸುಗಳನ್ನು ರಾಜ್ಯ ಸರ್ಕಾರ ಒಪ್ಪಿ ಸೂಕ್ತ ಆಜ್ಞೆಯ ಮೂಲಕ 1962ರಲ್ಲಿ ಅವುಗಳನ್ನು ಜಾರಿಗೆ ತಂದಿತು.

### ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ

'ಮೈಸೂರು ಹಿಂದುಳಿದ ವರ್ಗಗಳ ಸಮಿತಿ' ಯ ಶಿಫಾರಸಿನ ಮೇಲೆ ಸರ್ಕಾರಿ ಆಜ್ಞೆಯ ಅನ್ವಯ 1962ರಲ್ಲಿ ಜಾರಿಗೆ ಬಂದ ಮೀಸಲಾತಿ ಕಾನೂನನ್ನು ಶ್ರೇಷ್ಠ ನ್ಯಾಯಾಲಯ 1963ರಲ್ಲಿ ಅನೂರ್ಜಿತಗೊಳಿಸಿತು; ಮತ್ತೆ 1963ರಲ್ಲಿ ಹೊರಡಿಸಿದ ಸರ್ಕಾರಿ ಆಜ್ಞೆಯೂ ಕರ್ನಾಟಕದ ಉಚ್ಚ ನ್ಯಾಯಾಲಯದಲ್ಲಿ ನಿಲ್ಲಲಿಲ್ಲ. ನ್ಯಾಯಾಧೀಶರು ತಮ್ಮ ತೀರ್ಮಾನದಲ್ಲಿ ಬರೆಯುತ್ತಾ ಈ ಸರ್ಕಾರಿ ಆಜ್ಞೆಯು, ಅಪ್ರಾಮಾಣಿಕ ವ್ಯಕ್ತಿಗಳು ಅದನ್ನು ದುರುಪಯೋಗ ಮಾಡಿಕೊಳ್ಳಲು ಹೇರಳ ಅವಕಾಶ ಉಂಟುಮಾಡಿದೆ ಎಂದು ಅಭಿಪ್ರಾಯಪಟ್ಟರು. ಇದರ ಪರಿಣಾಮವಾಗಿ ಸರ್ಕಾರವು 1972ರಲ್ಲಿ ಪ್ರಸಿದ್ಧ ನ್ಯಾಯವಾದಿ ಎಲ್. ಜಿ. ಹಾವನೂರ್ ಅವರ ಅಧ್ಯಕ್ಷತೆಯಲ್ಲಿ 'ಕರ್ನಾಟಕ ಹಿಂದುಳಿದ ವರ್ಗದ ಆಯೋಗ'ವನ್ನು ರಚಿಸಿತು. ಹಿಂದುಳಿದಿರುವಿಕೆಯನ್ನು ನಿರ್ಧರಿಸುವ ಮಾನದಂಡವನ್ನು ಸೂಚಿಸಬೇಕೆಂಬ ಮನವಿಯನ್ನೂ ಸರ್ಕಾರ ಈ ಆಯೋಗದ ಮುಂದಿಟ್ಟಿತು. ಆಯೋಗವು ಅಧ್ಯಯನ ನಡೆಸಿ 1975ರಲ್ಲಿ ವರದಿ ಸಲ್ಲಿಸಿತು. ಅದರ ಪ್ರಕಾರ ಹಿಂದುಳಿದ ವರ್ಗಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಯಿತು : ಅ) ಹಿಂದುಳಿದ ಸಮುದಾಯಗಳು, ಆ) ಹಿಂದುಳಿದ ಜಾತಿಗಳು, ಇ) ಹಿಂದುಳಿದ ಬುಡಕಟ್ಟುಗಳು. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. 14ರಷ್ಟು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜತೆಗೆ ಶೇ. 44.52 ರಷ್ಟು ಜನಸಂಖ್ಯೆಯನ್ನು 'ಇತರ ಹಿಂದುಳಿದ ವರ್ಗ'ಗಳೆಂದು ಆಯೋಗ ನಿರ್ಧರಿಸಿತು. ಆಯೋಗದ ಕೆಲವು ಮುಖ್ಯ ಶಿಫಾರಸುಗಳು ಹೀಗಿವೆ : ಭಾರತೀಯ ಸಂವಿಧಾನದ ವಿಧಿ 15 (4) ಹಾಗೂ 16 (4) ರ ಪ್ರಕಾರ, ಜಾತಿಗಳನ್ನೂ, ಸಮುದಾಯಗಳನ್ನೂ, ಬುಡಕಟ್ಟುಗಳನ್ನೂ ಹಿಂದುಳಿದ ಪಂಗಡಗಳೆಂದು ಪರಿಗಣಿಸಬೇಕು; ಅವುಗಳಿಗೆ ವಿದ್ಯಾಸಂಸ್ಥೆಗಳಲ್ಲಿ ಹಾಗೂ ಸರ್ಕಾರಿ ಹುದ್ದೆಗಳಲ್ಲಿ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳನ್ನು ಬಿಟ್ಟು) ಶೇ. 32 ರಷ್ಟು ಮೀಸಲಾತಿ ದೊರಕಿಸಬೇಕು; ಈ ಮೀಸಲಾತಿಯನ್ನು ಆಯ್ಕೆ ಹಾಗೂ ಬಡ್ತಿಗೂ ಅನ್ವಯಿಸಬೇಕು. ಹುದ್ದೆಗಳ ಮೀಸಲಾತಿಯು ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಗೂ, ನಗರ ಸಭೆಗಳಿಗೂ, ಹಾಗೂ ಅನುದಾನ ಪಡೆಯುವ ವಿದ್ಯಾಸಂಸ್ಥೆಗಳಿಗೂ ಅನ್ವಯಿಸಬೇಕು. ಹಿಂದುಳಿದವರ ನೇಮಕಕ್ಕೆ ಸಂಬಂಧಿಸಿದಂತೆ ಅವರ ಕನಿಷ್ಠ ವಯೋಮಿತಿಯನ್ನು ಇತರರಿಗಿಂತ ಐದು ವರ್ಷಗಳಷ್ಟು ಹೆಚ್ಚಿಸಲ್ಪಡಬೇಕು; ಹಿಂದುಳಿದವರಿಗೇ ವಿಶಿಷ್ಟವಾಗಿ ಬೋಧಿಸುವ ಕಾರ್ಯವನ್ನು ಸರ್ಕಾರ ಕೈಗೊಳ್ಳುವುದರ ಮೂಲಕ, ಅವರು ಇತರರೊಡನೆ ಸ್ಪರ್ಧಿಸುವಂತಾಗಬೇಕು; ಶುಲ್ಕ ರಿಯಾಯತಿ, ವಿದ್ಯಾರ್ಥಿ ನಿಲಯದ ಸೌಲಭ್ಯ ಹಾಗೂ ವಿದ್ಯಾರ್ಥಿ ವೇತನಗಳು ಈ ಜನಗಳಿಗೆ ದೊರಕಬೇಕು; ಹಿಂದುಳಿದ ವರ್ಗಗಳ ಸಲಹಾ ಸಮಿತಿಯೊಂದು ಅಸ್ತಿತ್ವಕ್ಕೆ ಬರಬೇಕು; ಒಂದು ಪ್ರತ್ಯೇಕ ಹಿಂದುಳಿದ ವರ್ಗದ ನಿರ್ದೇಶನಾಲಯ ರಚಿತವಾಗಬೇಕು; ಹಣಕಾಸಿನ ಸಂಸ್ಥೆಯೊಂದು ಈ ಜನಗಳ ಅಭಿವೃದ್ಧಿಗಾಗಿ ಸ್ಥಾಪಿಸಲ್ಪಡಬೇಕು; ಇವೆಲ್ಲದರ ಜತೆಗೆ ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಬುಡಕಟ್ಟುಗಳ ಹಾಗೂ ಇತರ ಹಿಂದುಳಿದ ವರ್ಗಗಳ ಸಮಸ್ಯೆಯ ಅಧ್ಯಯನಕ್ಕೆ ಒಂದು 'ಸಂಶೋಧನಾ ಸಂಸ್ಥೆ'ಯನ್ನು ಆರಂಭಿಸಬೇಕು. ಆಯೋಗದ ಈ ಎಲ್ಲಾ ಶಿಫಾರಸುಗಳನ್ನೂ ಸರ್ಕಾರ ಮಾನ್ಯ ಮಾಡಿತು.

ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ನಿರ್ದೇಶನಾಲಯ : ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಶಿಫಾರಸಿನ ಮೇಲೆ ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖೆಯು 1977ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಇಲಾಖೆ ಹಿಂದುಳಿದ ವರ್ಗಗಳ ಅಭ್ಯುದಯಕ್ಕೆ ಶೈಕ್ಷಣಿಕ ಹಾಗೂ ಆರ್ಥಿಕ ಕಾರ್ಯಕ್ರಮವನ್ನು ಜಾರಿಗೊಳಿಸಲು ಮುಂದಾಯಿತು. ಜಾರಿಗೊಳಿಸಿದ ಹಲವು ಕಾರ್ಯಕ್ರಮಗಳಲ್ಲಿ ಪ್ರೌಢವಿದ್ಯಾಭ್ಯಾಸಕ್ಕೆ ಮುನ್ನ ಹಾಗೂ ತದನಂತರದ ವಿದ್ಯಾಭ್ಯಾಸಕ್ಕಾಗಿ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯವನ್ನು ನಡೆಸುವುದು ಮುಖ್ಯವಾದುದು. ಸಾರ್ವಜನಿಕ ಸಂಸ್ಥೆಗಳು ನಡೆಸುವ ಅಂಥ ವಿದ್ಯಾರ್ಥಿನಿಲಯಗಳಿಗೆ ಹಣ ಸಹಾಯ, ವೃತ್ತಿ ಮಾರ್ಗದರ್ಶನ ಸಂಸ್ಥೆಯನ್ನು ಸ್ಥಾಪಿಸಿ ಹಿಂದುಳಿದ ವರ್ಗದ ಜನರಿಗೆ ತಿಳುವಳಿಕೆ ನೀಡುವುದು, ಸಣ್ಣ ರೈತರಿಗೆ ಪಿ.ಎಲ್.ಡಿ. ಬ್ಯಾಂಕಿನ ಸದಸ್ಯರಾಗಲು ನೆರವು ನೀಡುವುದು, ಇತ್ಯಾದಿಗಳು ಇದರ ಇತರ ಧ್ಯೇಯಗಳು. ಇದರೊಂದಿಗೆ ಇನ್ನೂ ಹಲವು ಕಾರ್ಯಕ್ರಮಗಳು ಇಲಾಖೆಯ ವತಿಯಿಂದ ಮೂಡಿಬಂದವು. ಈ ಕಾರ್ಯಕ್ರಮಗಳಷ್ಟೇ ಅಲ್ಲದೆ ಅಲೆಮಾರಿ ಮತ್ತು ಅರೆ-ಅಲೆಮಾರಿ ಹಾಗೂ ಅನುಸೂಚಿತ ಬುಡಕಟ್ಟುಗಳ ಅಭಿವೃದ್ಧಿ ಕಾರ್ಯವನ್ನು ಏಪ್ರಿಲ್ 1981ರಲ್ಲಿ ಸಮಾಜ ಕಲ್ಯಾಣ ಇಲಾಖೆಯಿಂದ ಈ ಇಲಾಖೆಗೆ ವರ್ಗಾಯಿಸಲಾಯಿತು.

ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯ ಕೇಂದ್ರ ಕಾರ್ಯಾಲಯದಲ್ಲಿ ಹಿರಿಯ ಶ್ರೇಣಿಯ ಐ.ಎ.ಎಸ್. ಅಧಿಕಾರಿಯೊಬ್ಬರಿದ್ದು, ಅವರಿಗೆ ಸಹಾಯಕರಾಗಿ ಒಬ್ಬ ಜಂಟಿ ನಿರ್ದೇಶಕರು, ಒಬ್ಬ ಉಪ ನಿರ್ದೇಶಕರು, ಐದು ಜನ ಸಹಾಯಕ ನಿರ್ದೇಶಕರು, ಒಬ್ಬ ಲೆಕ್ಕ ಪರಿಶೋಧನಾ ಅಧಿಕಾರಿ ಹಾಗೂ ಗೆಜೆಟೆಡ್ ಅಂತಸ್ತಿನ ನಿರ್ವಾಹಕರು ಇರುತ್ತಾರೆ. ಜಿಲ್ಲಾ ಮಟ್ಟದಲ್ಲಿ ಒಬ್ಬ ಅಧಿಕಾರಿಯಿದ್ದು, ಅವರು ಜಿಲ್ಲಾಧಿಕಾರಿ ಹಾಗೂ ವಿಶೇಷ ಆಡಳಿತ ಜಿಲ್ಲಾಧಿಕಾರಿಯವರಿಗೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರಲು ಸಹಾಯ ಮಾಡುತ್ತಾರೆ.

### ಹಿಂದುಳಿದ ವರ್ಗಗಳ ಕಲ್ಯಾಣ ಕಾರ್ಯ

ಎರಡನೇಯ ಪಂಚವಾರ್ಷಿಕ ಯೋಜನೆಯಲ್ಲಿ ಹಿಂದುಳಿದವರ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪ್ರಾಧಾನ್ಯ ಕೊಡಲ್ಪಟ್ಟಿತು. ಈ ಕಾಲದಲ್ಲಿ 1,28,000ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಊಟದ ವ್ಯವಸ್ಥೆ, ಸಲಕರಣೆಗಳು ಹಾಗೂ ವಿದ್ಯಾರ್ಥಿ ವೇತನವನ್ನು ನೀಡಲಾಯಿತು. ಎಪ್ಪತ್ತೊಂದು ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಅನುದಾನವನ್ನು ನೀಡಲಾಯಿತು. ಸುಮಾರು 2,100 ಬಡ ಕೃಷಿಕರಿಗೆ ಹಾಗೂ ಕುಶಲಕರ್ಮಿಗಳಿಗೆ ಬೇಕಾದ ದನಕರು, ಮತ್ತು ಕಚ್ಚಾವಸ್ತುವಿನ ರೂಪದಲ್ಲಿ ಉತ್ತೇಜಕ ಸಹಾಯ ಧನವನ್ನು ಒದಗಿಸಲಾಗಿದೆ. ಮೂರನೇಯ ಯೋಜನೆಯಲ್ಲಿ ವೆಚ್ಚಕ್ಕೆ ಒದಗಿಸಲಾಗಿದ್ದ 28 ಲಕ್ಷ ರೂ.ಗಳಲ್ಲಿ, 18.92 ಲಕ್ಷ ರೂ.ಗಳನ್ನು ಹಿಂದುಳಿದ ವರ್ಗಗಳಿಗೆ ಖರ್ಚು ಮಾಡಲಾಯಿತು. ಎಂಭತ್ತು ವಿದ್ಯಾರ್ಥಿನಿಲಯಗಳ ಮೂಲಕ 2,000 ವಿದ್ಯಾರ್ಥಿಗಳಿಗೆ ಸಹಾಯ ಧನ ಕೊಡಲ್ಪಟ್ಟಿತು. 3,450 ವಿದ್ಯಾರ್ಥಿಗಳಿಗೆ 13 ಸರ್ಕಾರಿ ವಿದ್ಯಾರ್ಥಿನಿಲಯಗಳಲ್ಲಿ ವಸತಿ ನೀಡಲಾಯಿತು; 12,600 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನೂ ಒದಗಿಸಲಾಯಿತು. ವಾರ್ಷಿಕ ಯೋಜನೆಗಳಲ್ಲಿ 25,15 ಲಕ್ಷ ರೂ.ಗಳನ್ನು ಮೇಲೆ ವಿವರಿಸಿರುವ ಉದ್ದೇಶಕ್ಕಾಗಿ ವೆಚ್ಚ ಮಾಡಲಾಯಿತು. ಈ ಅವಧಿಯಲ್ಲಿ 1,457 ಕೈಗಾರಿಕಾ ತರಬೇತಿದಾರರಿಗೆ ನಿಯಮಿತ ವೇತನ ನೀಡಲಾಗಿದೆ. ನೂರ ಹನ್ನೊಂದು ಖಾಸಗಿ ವಿದ್ಯಾರ್ಥಿನಿಲಯಗಳಲ್ಲಿ 3,599 ವಿದ್ಯಾರ್ಥಿಗಳಿಗೆ ಊಟ-ವಸತಿ ವ್ಯವಸ್ಥೆಯ ಖರ್ಚನ್ನು ಸಹಾಯ ಧನದ ರೂಪದಲ್ಲಿ ಸರ್ಕಾರ ಒದಗಿಸಿತು; ಇದರ ಜತೆಗೆ ಇಪ್ಪತ್ತು ಸರ್ಕಾರಿ ವಿದ್ಯಾರ್ಥಿನಿಲಯಗಳನ್ನೂ ಆರಂಭಿಸಲಾಯಿತು. 14,116 ವಿದ್ಯಾರ್ಥಿಗಳಿಗೆ ಪ್ರೌಢ ಶಿಕ್ಷಣಕ್ಕೆ ಮುನ್ನ ನೀಡುವ ವಿದ್ಯಾರ್ಥಿ ವೇತನವನ್ನು ಕೊಡಲಾಗಿದೆ. 1977ರಲ್ಲಿ ಅಸ್ತಿತ್ವಕ್ಕೆ ಬಂದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ನಿರ್ದೇಶನಾಲಯ, ಹೊಸ ಕಾರ್ಯಕ್ರಮಗಳೊಂದಿಗೆ ಆ ಜನಗಳ ಕಲ್ಯಾಣಕಾಗ್ಗಿ ಕಾರ್ಯ ನಿರ್ವಹಿಸುತ್ತಿದೆ. 1980-81ರಲ್ಲಿ 238 ಪ್ರೌಢ ಶಿಕ್ಷಣ ಪೂರ್ವ ಹಾಗೂ 59 ತದನಂತರ ಶಿಕ್ಷಣದ ವಿದ್ಯಾರ್ಥಿನಿಲಯಗಳು ವಿದ್ಯಾರ್ಥಿಗಳಿಗೆ ವಸತಿಯನ್ನೊದಗಿಸುವುದರ ಜೊತೆಗೆ ಇನ್ನೂ ಹನ್ನೊಂದು ಪ್ರೌಢಶಿಕ್ಷಣ ಪೂರ್ವ ಮತ್ತು ಆರು ತದನಂತರ ಶಿಕ್ಷಣ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಒಟ್ಟು 16,325 ವಿದ್ಯಾರ್ಥಿಗಳಿಗೆ ವಸತಿ ಸೌಲಭ್ಯ ಕಲ್ಪಿಸಲಾಗಿದೆ. ಪ್ರೌಢ ಶಿಕ್ಷಣಕ್ಕೆ ಮುಂಚಿನ ವಿದ್ಯಾರ್ಥಿನಿಲಯಗಳ ಬಾಲಕ–ಬಾಲಕಿಯರಿಗೆ ನಾಲ್ಕು ಜೊತೆ ಉಡುಪನ್ನೂ ಮತ್ತು ಅರವತ್ತೈದು ರೂಪಾಯಿ ವೆಚ್ಚದಲ್ಲಿ ಪುಸ್ತಕ, ಬರವಣಿಗೆ ಸಾಮಗ್ರಿ ಮೊದಲಾದ ಸಲಕರಣೆಗಳನ್ನೂ ಒದಗಿಸಲಾಗಿದೆ. ಇಷ್ಟೇ ಅಲ್ಲದೆ ಮೂರು ವರ್ಷಕ್ಕೊಮ್ಮೆ ಹಾಸಿ-ಹೊದೆಯಲು ಬೇಕಾದ ವಸ್ತುಗಳನ್ನು ನೂರು ರೂಪಾಯಿ ವೆಚ್ಚದಲ್ಲಿ ಈ ವಿದ್ಯಾರ್ಥಿಗಳಿಗೆ ಒದಗಿಸಲಾಗಿದೆ. ಒಂದೊಂದು ನಿಲಯಕ್ಕೂ ಅರ್ಧಾವಧಿಯ ಬೋಧಕರನ್ನು ನೇಮಕ ಮಾಡಲಾಗಿದೆ. 1981-82ರ ವರ್ಷದಲ್ಲಿ 47 ಲಕ್ಷ ರೂ.ಗಳನ್ನು ಪ್ರೌಢ ಶಿಕ್ಷಣಾನಂತರ ವಿದ್ಯಾರ್ಥಿಗಳ ವಸತಿಗೂ, 1.16 ಕೋಟಿ ರೂ.ಗಳನ್ನು ಪ್ರೌಢ ಶಿಕ್ಷಣಕ್ಕೆ ಮುಂಚಿನ ವಿದ್ಯಾರ್ಥಿಗಳ ವಸತಿ ಸೌಕರ್ಯಕ್ಕೂ ಸರ್ಕಾರ ಒದಗಿಸಿತು.

1981-82ರ ಸಮಯದಲ್ಲಿ 286 ಖಾಸಗಿ ವಸತಿ ನಿಲಯಗಳು 10,698 ವಿದ್ಯಾರ್ಥಿಗಳಿಗೆ ಊಟ-ವಸತಿ ಏರ್ಪಾಡು ಮಾಡಿದವು. ಅವುಗಳಿಗೆ ಅನುದಾನ ರೂಪವಾಗಿ 72.07 ಲಕ್ಷ

ರೂ.ಗಳನ್ನು ಸರ್ಕಾರ ನೆರವು ನೀಡಿತು. ಇದರ ಜೊತೆಗೆ ಇನ್ನೂ 17 ಲಕ್ಷ ರೂ.ಗಳನ್ನು ಊಟ-ವಸತಿಗೆ ಮಂಜೂರು ಮಾಡಲಾಯಿತು. 5 ರಿಂದ 7ನೇಯ ತರಗತಿಗಳ ಪ್ರತೀ ವಿದ್ಯಾರ್ಥಿಗೆ ವರ್ಷಕ್ಕೆ 50 ರೂಪಾಯಿಯಂತೆ ಹಾಗೂ ಪ್ರೌಢಶಾಲೆಯ ಪ್ರತೀ ವಿದ್ಯಾರ್ಥಿಗೆ ವಾರ್ಷಿಕ 75 ರೂಪಾಯಿಯಂತೆ ಅವರ ಆರ್ಥಿಕ ಮತ್ತು ಪ್ರತಿಭೆಯ ಆಧಾರದ ಮೇಲೆ ವಿದ್ಯಾರ್ಥಿವೇತನವನ್ನು ಕೊಡಲಾಯಿತು. ಪ್ರೌಢಶಾಲಾ ನಂತರದ ಶಿಕ್ಷಣಕ್ಕೆ ಪ್ರತೀ ವಿದ್ಯಾರ್ಥಿಗೆ ವಾರ್ಷಿಕ 500 ರೂ.ಗಳನ್ನು ಖರ್ಚು ಮಾಡಲಾಯಿತು. 1981-82ರಲ್ಲಿ 118.50 ಲಕ್ಷ ರೂ.ಗಳನ್ನು ಪ್ರೌಢಶಾಲಾ ಶಿಕ್ಷಣಾನಂತರ ವಿದ್ಯಾಭ್ಯಾಸಕ್ಕೂ ಹಾಗೂ 101.35 ಲಕ್ಷ ರೂ.ಗಳನ್ನು ಪ್ರೌಢ ಶಿಕ್ಷಣದ ಮುಂಚಿನ ವಿದ್ಯಾಭ್ಯಾಸಕ್ಕೂ ವಿದ್ಯಾರ್ಥಿವೇತನ ರೂಪದಲ್ಲಿ ಸರ್ಕಾರ ವೆಚ್ಚ ಮಾಡಿತು. ಕಾಲೇಜು ವಿದ್ಯಾರ್ಥಿಗಳ ಪೋಷಕರ ಆದಾಯವು ವಾರ್ಷಿಕ 3,600 ರೂ.ಗಳು ಅಥವಾ ಅದಕ್ಕಿಂತ ಕಡಿಮೆ ಯಿದ್ದರೆ, ಅವರಿಗೆ ಬೋಧನಾ ಶುಲ್ಕ ಮತ್ತು ಪರೀಕ್ಷಾ ಶುಲ್ಕವನ್ನು ಮನ್ನಾ ಮಾಡಿತು. ಈ ಉದ್ದೇಶಕ್ಕಾಗಿ 1981-82ರಲ್ಲಿ ಸರ್ಕಾರ ಮೂರು ಕೋಟಿ ರೂ.ಗಳನ್ನು ಒದಗಿಸಿತು.

ಕುಶಲ ಕೈಗಾರಿಕೆಯ ಕೇಂದ್ರಗಳಲ್ಲಿ ಹಾಗೂ ಸಂಸ್ಥೆಗಳಲ್ಲಿ ವೃತ್ತಿತರಬೇತಿ ಪಡೆಯುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಸ್ಟೈಪೆಂಡನ್ನು ಕೊಡಲಾಯಿತು; ಎರಡು ಲಕ್ಷ ರೂ.ಗಳ ಹಣವನ್ನು 333 ತರಬೇತಿ ಪಡೆಯುವ ಯುವಕರಿಗೆ ಕಾದಿರಿಸಲಾಯಿತು. ಬೆರಳಚ್ಚು ಮತ್ತು ಶೀಘ್ರಲಿಪಿ ತರಬೇತಿ ಪಡೆಯುವ ವಿದ್ಯಾರ್ಥಿಗಳಿಗೆ 1981-82ರಲ್ಲಿ ಎರಡು ಲಕ್ಷ ರೂ.ಗಳ ಮೊತ್ತವನ್ನು ಮೀಸಲಿಡಲಾಯಿತು; ಈ ಹಣದಿಂದ 400 ವಿದ್ಯಾರ್ಥಿಗಳು ಸೌಲಭ್ಯ ಪಡೆದರು. ಸ್ವಂತ ಉದ್ಯೋಗಕ್ಕೆ ಪ್ರೋತ್ಸಾಹ ನೀಡುವ ಸಲುವಾಗಿ ಹಿಂದುಳಿದ ವರ್ಗಗಳ ಮಹಿಳೆಯರಿಗೆ ಹೊಲಿಗೆಯ ತರಬೇತಿ ನೀಡಬೇಕೆಂಬ ಉದ್ದೇಶದಿಂದ 1981-82ರಲ್ಲಿ ಆರು ತರಬೇತಿ ಕೇಂದ್ರಗಳು ಅಸ್ತಿತ್ವದಲ್ಲಿದ್ದವು. ಈ ವರ್ಷದಲ್ಲೇ ಮತ್ತೆ ಮೂರು ತರಬೇತಿ ಕೇಂದ್ರಗಳನ್ನು ಸ್ಥಾಪಿಸಿ 180 ಜನರು ತರಬೇತಿ ಪಡೆದರು. ತರಬೇತಿ ಪಡೆದ ಪ್ರತೀ ಮಹಿಳೆಗೂ 75 ರೂ.ಗಳನ್ನು ಸ್ಟೈಪೆಂಡ್ ರೂಪದಲ್ಲಿ ಕೊಡಲಾಯಿತು. ಉದ್ಯೋಗರಹಿತರಿಗೆ ಸ್ವಂತ ಉದ್ಯೋಗ ಕಲ್ಪಿಸಲು ಕಾರು, ಟ್ರ್ಯಾಕ್ಟರ್ ಮತ್ತು ಆಟೋರಿಕ್ಷಾ ನಡೆಸುವ ತರಬೇತಿ ಸೌಲಭ್ಯವನ್ನು ಒದಗಿಸುವುದಲ್ಲದೆ, ಪುಸ್ತಕ ಭಂಡಾರ ಸ್ಥಾಪನೆ ಹಾಗೂ ಶಿಕ್ಷಣ ಪ್ರವಾಸ ಸೌಲಭ್ಯವನ್ನೂ ಹಿಂದುಳಿದವರ ಶಿಕ್ಷಣ ಕಾರ್ಯಕ್ರಮಗಳಲ್ಲಿ ಸೇರಿಸಲಾಯಿತು.

ಯಾವ ವಿಶೇಷ ಕಾರ್ಯಕ್ರಮಗಳಿಂದಲೂ ಅನುಕೂಲ ಪಡೆಯದೇ ಇರುವ ಹಿಂದುಳಿದ ವರ್ಗಗಳ ಸಣ್ಣ ಮತ್ತು ಅತಿ ಸಣ್ಣ ಭೂಹಿಡುವಳಿದಾರರ ಆರ್ಥಿಕ ಕಲ್ಯಾಣಕ್ಕೆಂದು ಆ ಜನಗಳಿಗೆ ಪ್ರಾಥಮಿಕ ಸಹಕಾರ ಸಂಘಗಳಲ್ಲಿ ಹಾಗೂ ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ಸದಸ್ಯತ್ವ ದೊರಕಿಸಿ ಅವುಗಳಿಂದ ಹಣದ ನೆರವು ಪಡೆಯುವಂತೆ ಏರ್ಪಾಡು ಮಾಡಲಾಗಿದೆ. ಈ ಉದ್ದೇಶಕ್ಕಾಗಿಯೇ 1981-82ರ ಸಾಲಿನಲ್ಲಿ 50,000 ರೂ.ಗಳನ್ನು ಪ್ರತ್ಯೇಕವಾಗಿ ಮಂಜೂರು ಮಾಡಲಾಯಿತು.

ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ನಿಗಮ : ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಶಿಫಾರಸಿನಂತೆ ಅಕ್ಟೋಬರ್ 1977ರಲ್ಲಿ ಸರ್ಕಾರದಿಂದ ಅಂಗೀಕೃತವಾದ ಖಾಸಗೀ ಸಂಸ್ಥೆ—"ಕರ್ನಾಟಕದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ನಿಯಮಿತ", ಅಸ್ತಿತ್ವಕ್ಕೆ ಬಂದಿತು; ಒಂದು ಕೋಟಿ ರೂಪಾಯಿ ಪಾಲು ಬಂಡವಾಳವನ್ನು ಈ ಸಂಸ್ಥೆಗೆ ಒದಗಿಸಲು 100 ರೂ.ಗಳ ಷೇರುಗಳಲ್ಲಿ ಹಣ ಕೂಡಿಸಬಹುದೆಂದು ಸರ್ಕಾರ ಅಂಗೀಕಾರ ನೀಡಿತು. ಸಂಸ್ಥೆಯ ಕಾರ್ಯಾರಂಭದಲ್ಲಿ ಸರ್ಕಾರ 23 ಲಕ್ಷ ರೂ.ಗಳ ಪಾಲು ಬಂಡವಾಳವನ್ನು ತೊಡಗಿಸಿತು. ಗ್ರಾಮೀಣ ಮತ್ತು ಗೃಹಕೈಗಾರಿಕೆಗಳನ್ನು ಸ್ಥಾಪಿಸಿ ಬೆಳೆಸುವುದು, ಸಣ್ಣ ಹಾಗೂ ಮಧ್ಯಮ ಪ್ರಮಾಣದ ಉದ್ಯಮಗಳನ್ನು ಪೋಷಿಸುವುದು, ಹಿಂದುಳಿದ ವರ್ಗಗಳ ಯಾವ ವ್ಯಕ್ತಿಯಾದರೂ ಆರಂಭಿಸುವ ವೃತ್ತಿಗೆ ಬೇಕಾಗುವ ಸಾಲವನ್ನು ದೊರಕಿಸಲು ಜಾಮೀನು ಕೊಡುವುದು ಅಥವಾ ವ್ಯವಸಾಯಕ್ಕೆ ಬೇಕಾಗುವ ಬೀಜವನ್ನು ಸಾಲದ ರೂಪದಲ್ಲಿ ಒದಗಿಸುವುದು; ಹಣಕಾಸು ಸಂಸ್ಥೆ, ಕೈಗಾರಿಕಾ ಸಂಸ್ಥೆ ಅಥವಾ ಸರ್ಕಾರ ಕೊಡಬಹುದಾದ ಸಾಲಕ್ಕೆ ಪೂರಕವಾಗಿ ಹೊಂದಿಸಿಕೊಳ್ಳಬೇಕಾಗುವ ಮೂಲ ಬಂಡವಾಳವನ್ನು ಒದಗಿಸಲು ಸಹಾಯ ಮಾಡುವುದು, ಇವೇ ಮೊದಲಾದವು ನಿಗಮದ ಧ್ಯೇಯೋದ್ದೇಶಗಳಾಗಿವೆ. ಈ ನಿಗಮದಿಂದ, ವಾರ್ಷಿಕ ಆದಾಯ 6,000 ರೂ.ಗಳಿಗೆ ಕಡಿಮೆ ಇರುವ ಯಾವ ವ್ಯಕ್ತಿಯೇ ಆಗಲಿ ಸಾಲ ಪಡೆಯಲು ಅರ್ಹನಾಗುತ್ತಾನೆ. ಸಾಲದ ಪ್ರಮಾಣ ಗರಿಷ್ಠ 15,000 ರೂ.ಗಳು ವ್ಯಕ್ತಿಗಳಿಗೂ, 75,000 ರೂ.ಗಳು ಸಹಕಾರ ಸಂಘಗಳಿಗೂ ದೊರೆಯುತ್ತದೆ. ಒಟ್ಟು ಸಾಲದ ನೆರವಿನಲ್ಲಿ 20ರಷ್ಟನ್ನು ನಿಗಮ ಪಾವತಿ ಮಾಡಿದರೆ ಉಳಿದ ಶೇ. 80 ರಷ್ಟನ್ನು ಬ್ಯಾಂಕು ನೀಡುತ್ತದೆ. ಅನೇಕ ರಾಷ್ಟ್ರೀಕೃತ ಬ್ಯಾಂಕುಗಳು ನಿಗಮದೊಂದಿಗೆ ಸಹಭಾಗಿಯಾಗಿವೆ. ಮಾರ್ಚ್ 1980ರ ಹೊತ್ತಿಗೆ 1.60 ಲಕ್ಷ ರೂ.ಗಳನ್ನು ನಿಗಮವು ಬಂಡವಾಳದ ರೂಪದಲ್ಲಿ ಬಿಡುಗಡೆ ಮಾಡಿದಾಗ, ರಾಷ್ಟ್ರೀಕೃತ ಬ್ಯಾಂಕುಗಳು ಪೂರಕ ಮೊತ್ತವಾದ 6.41 ಲಕ್ಷ ರೂ.ಗಳನ್ನು 205 ಜನರಿಗೆ ನೀಡಿದವು. ಹಿಂದುಳಿದ ವರ್ಗದ ಸಣ್ಣ ರೈತರ ಅಭಿವೃದ್ಧಿ ಏಜನ್ಸಿಗೂ ಮತ್ತು ಬರಸಂಭವ ಪ್ರದೇಶ ಕಾರ್ಯಕ್ರಮ ಯೋಜನೆಗಳಿಗೆ ಶೇ. 20ರಷ್ಟು ಬಂಡವಾಳದ ಹಣವನ್ನು ಸಾಲವಾಗಿ ಕೊಡಲು ನಿಗಮ ಮುಂದೆ ಬಂದಿದೆ. ವೃತ್ತಿನಿರತರಿಗೆ ನೇರವಾಗಿ ಸಾಲ ಸೌಲಭ್ಯವನ್ನು ಜಾರಿಗೆ ತರುವ ಕಾರ್ಯವನ್ನು

ನಿಯೋಜಿಸಿದೆ ; ಅಷ್ಟೇ ಅಲ್ಲದೆ ಗ್ರಾಮೀಣ ಕುಶಲಕರ್ಮಿಗಳಿಗೆ ಅಗತ್ಯವಾಗಿ ನೆರವು ನೀಡಲು ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕ್ ನಿಯಮಿತ ಹಾಗೂ ಅದರ ಸದಸ್ಯ ಬ್ಯಾಂಕುಗಳಾದ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ಮತ್ತು ಕೈಗಾರಿಕಾ ಸಹಕಾರಿ ಬ್ಯಾಂಕುಗಳೊಡನೆ ಸಹಭಾಗಿತ್ವ ಏರ್ಪಡಿಸಿ ಶೇ. 20 ರಷ್ಟು ಬಂಡವಾಳದ ಹಣ ಒದಗಿಸುವ ಕಾರ್ಯವನ್ನು ನಿಗಮ ಕೈಗೊಂಡಿದೆ.

ಸರ್ಕಾರ 1982-83ರ ವರೆಗೂ 70 ಲಕ್ಷ ರೂ.ಗಳನ್ನು ಖರ್ಚು ಮಾಡಿದೆ. ಈ ಸಾಲಿನಲ್ಲೇ 11 ಲಕ್ಷ ರೂ.ಗಳ ಪಾಲು ಬಂಡವಾಳವನ್ನು ನಿಗಮಕ್ಕೆ ಒದಗಿಸಿದೆ. 1983-84ರ ಸಾಲಿಗೆ 11 ಲಕ್ಷ ರೂ.ಗಳ ವೆಚ್ಚವನ್ನೂ ನಿಗದಿಪಡಿಸಿದೆ. 1981-82ರ ಕೊನೆಯಲ್ಲಿ ನಿಗಮವು 48.87 ಲಕ್ಷ ರೂ.ಗಳಷ್ಟು ಸಾಲವನ್ನು ಮಂಜೂರು ಮಾಡಿತ್ತು. ಇದಕ್ಕನುಗುಣವಾಗಿ ಬ್ಯಾಂಕುಗಳ ಸಾಲದ ಮೊತ್ತ 103.42 ಲಕ್ಷ ರೂ.ಗಳಷ್ಟು ಹೆಚ್ಚಿತು. ಈ ಕಾರ್ಯದಿಂದ 3,082 ಹಿಂದುಳಿದ ವರ್ಗದ ವ್ಯವಹಾರಸ್ಥರಿಗೆ ಸಹಾಯವಾಯಿತು. 1982-83ನೇ ಸಾಲಿನಲ್ಲಿ ಹಿಂದುಳಿದ ವರ್ಗದ 1,371 ವ್ಯವಹಾರಸ್ಥರಿಗೆ ಬ್ಯಾಂಕುಗಳ ನೆರವಿನೊಂದಿಗೆ 67.07 ರೂ.ಗಳು ಸಾಲವಾಗಿ ದೊರಕಿತ್ತು ; ಅದರಲ್ಲಿ ನಿಗಮದ ಪಾಲು ಹಣ 22.93 ಲಕ್ಷ ರೂ.ಗಳಾಗಿದ್ದವು.

ಗ್ರಾಮೀಣ ಪ್ರದೇಶದಲ್ಲಿರುವ ವಿವಿಧ ಬಗೆಯ ಕುಶಲ ಕರ್ಮಿಗಳ ಪರಿಶೀಲನೆಯನ್ನು ನಿಗಮ ಕೈಗೊಂಡಿದೆ. ಅದರ ಪ್ರಕಾರ ರಾಜ್ಯದಲ್ಲಿ ಸುಮಾರು 5.7 ಲಕ್ಷ ವಿವಿಧ ಬಗೆಯ ಕುಶಲ ಕರ್ಮಿಗಳಿದ್ದಾರೆ. ಇವರ ನೆರವಿಗೆ ತುರ್ತು ಕಾರ್ಯ ಕ್ರಮದ ಮೂಲಕ ಅನುಕೂಲ ಕಲ್ಪಿಸಲು ನಿಗಮ ಮುಂದಾಗಿದೆ. ಆರನೇಯ ಯೋಜನೆ ಮುಗಿಯುವ ಮುನ್ನ ಒಂದು ಲಕ್ಷ ಕುಶಲ ಕರ್ಮಿಗಳ ನೆರವಿಗೆ ಅನುಕೂಲವಾಗುವ ವಿಶೇಷ ಕಾರ್ಯಕ್ರಮ ಗಳನ್ನು ನಿಗಮ ರೂಪಿಸಿತು. 1982-83ರ ಸಾಲಿನಲ್ಲಿ 20,000 ಹಿಂದುಳಿದ ವರ್ಗದ ಕುಶಲ ಕರ್ಮಿಗಳಿಗೆ 138.25 ಲಕ್ಷ ರೂ. ಗಳನ್ನು ವೆಚ್ಚಮಾಡಲು ಅವಕಾಶ ನೀಡಿತು. ಈ ವರ್ಗದ ಜನಗಳಿಗೆ ಸಹಾಯವಾಗುವಂತೆ ಜಾರಿಗೊಳಿಸಿದ ಕೆಲವು ಮುಖ್ಯ ಯೋಜನೆಗಳೆಂದರೆ—ಗ್ರಾಮೀಣ ಕುಶಲ ಕರ್ಮಿಗಳ ತರಬೇತಿ, ಕಚ್ಚಾವಸ್ತುಗಳ ಮಾರಾಟ ಮಳಿಗೆಗಳು, (ಸಿದ್ಧವಾದ ವಸ್ತುಗಳ) ಮಾರುಕಟ್ಟೆ ಸೌಲಭ್ಯ ಮತ್ತು ಕುಶಲಕರ್ಮಿಗಳ ಸಂಘಗಳ ರಚನೆ, ಇವೇ ಮೊದಲಾದವು.

## ಪರಿಶಿಷ್ಟ ಜಾತಿಗಳ ಕಲ್ಯಾಣ

ಕ್ರೈಸ್ತ ಮತ ಪ್ರಚಾರಕರು ಇತರ ವರ್ಗದ ಜನಗಳಿಗೆ ಶಿಕ್ಷಣ ಸೌಲಭ್ಯವನ್ನು ಒದಗಿಸಿದಂತೆ, ಮೊದಲು ಪರಿಶಿಷ್ಟ ಜಾತಿಗಳಿಗೂ ಶಿಕ್ಷಣ ನೀಡಿದರು. ಹುಸ್ಕೂರು ಮತ್ತು ನರಸಾಪುರಗಳಲ್ಲಿ 1889-90ರಲ್ಲಿ ಹೊಲೆಯರಿಗೆ ಸರ್ಕಾರ ಶಾಲೆಗಳನ್ನು ತೆರೆಯಿತು. ಮಾರನೇಯ ವರ್ಷ ಮೈಸೂರು, ಆನೆಕಲ್ ಮತ್ತು ಹಾಸನಗಳಲ್ಲಿ ಕ್ರೈಸ್ತ ಮತ ಪ್ರಚಾರಕರು ಶಾಲೆಗಳನ್ನು ತೆರೆದರು; ಇವೆಲ್ಲವೂ ಅನುದಾನ ಪಡೆಯದ ಸಂಸ್ಥೆಗಳಾಗಿದ್ದವು. 1890-91ರ ಹೊತ್ತಿಗೆ ವಿಶೇಷ ಶಾಲೆಗಳು ಮತ್ತು ಸಾಮಾನ್ಯ ಶಾಲೆಗಳಲ್ಲಿ ಒಟ್ಟು 349 ಬಾಲಕರೂ, 35 ಬಾಲಕಿಯರೂ ಓದುತ್ತಿದ್ದರು. 1900-01ರಲ್ಲಿ ಬಾಲಕರ ಸಂಖ್ಯೆ 2,201 ಮತ್ತು ಬಾಲಕಿಯರ ಸಂಖ್ಯೆ 322 ಇದ್ದದ್ದು, 1910-11ರ ವೇಳೆಗೆ ಬಾಲಕರ ಸಂಖ್ಯೆ 2,492ಕ್ಕೂ ಬಾಲಕಿಯರ ಸಂಖ್ಯೆ 346ಕ್ಕೂ ಏರಿತು.

ಮೇಲ್ವರ್ಗದ ಜಾತಿಗಳವರ ಮನೋಧರ್ಮದಲ್ಲಿ ಉಂಟಾದ ಬದಲಾವಣೆ ಹಾಗೂ ನಿಮ್ನ ವರ್ಗಗಳಲ್ಲಿ ಕಂಡುಬಂದ ತಿಳುವಳಿಕೆಯ ಪರಿಣಾಮವಾಗಿ, ಆ ಜನಗಳ ಸ್ಥಿತಿಗತಿಗಳು 1914-15ರ ಹೊತ್ತಿಗೆ ಉತ್ತಮಗೊಂಡವು. 1913ರಲ್ಲಿ ಮೈಸೂರು ನಗರದಲ್ಲಿ ಆರಂಭವಾದ "ನಿಮ್ನ ವರ್ಗಗಳ ಶಿಕ್ಷಣ ಪ್ರಚಾರ ಸಂಸ್ಥೆ" ಆ ಜನ ಸಮುದಾಯಕ್ಕೆ ತಮ್ಮ ಸ್ಥಿತಿ ಸುಧಾರಿಸಿಕೊಳ್ಳಲು ಸೇವಾಕಾರ್ಯ ಆರಂಭಿಸಿತು. 1915ರ ವೇಳೆಗೆ ಈ ಸಂಸ್ಥೆ 12 ಶಾಲೆಗಳನ್ನು ತೆರೆದಿತ್ತು. 1915-16ರ ವೇಳೆಗೆ ಒಟ್ಟು 287 ಶಾಲೆಗಳು ಆರಂಭವಾಗಿದ್ದವು; ಅವುಗಳಲ್ಲಿ ಸರ್ಕಾರದ ವತಿಯಿಂದ 171 ಶಾಲೆಗಳೂ, 108 ಅನುದಾನ ಪಡೆಯುವ ಶಾಲೆಗಳೂ ಹಾಗೂ ಎಂಟು ಸಹಾಯಧನ ಪಡೆಯದ ಶಾಲೆಗಳೂ ಇದ್ದವು. ಆದರೆ 1910-11ರಲ್ಲಿ ಇದಕ್ಕೆ ಪ್ರತಿ ಯಾಗಿ 67 ಸರ್ಕಾರಿ ಶಾಲೆಗಳೂ, ಮೂರು ಅನುದಾನ ಪಡೆದ ಶಾಲೆಗಳೂ, ಮತ್ತು ನಾಲ್ಕು ಅನುದಾನ ಪಡೆಯದ ಶಾಲೆಗಳೂ ಇದ್ದವು. ಸಾರ್ವಜನಿಕ ಹಣದಿಂದ ನಡೆಯುವ ಶಾಲೆಗಳಲ್ಲಿ ಯಾರಿಗೂ ಪ್ರವೇಶ ನಿರಾಕರಿಸಬಾರದೆಂಬ ತತ್ವದ ಹಿನ್ನೆಲೆಯಲ್ಲಿ 1915ರಲ್ಲಿ ಸರ್ಕಾರವು ಆಜ್ಞೆ ಹೊರಡಿಸಿ ಅಸ್ಪೃಶ್ಯರಿಗೆ ರಾಜ್ಯದ ಎಲ್ಲಾ ಶಾಲೆಗಳಲ್ಲೂ ಪ್ರವೇಶಾವಕಾಶವನ್ನು ನೀಡಬೇಕೆಂದು ಸಾರಿತು. ಈ ಆಜ್ಞೆಗೆ ಪುಷ್ಟಿ ಕೊಡಲೆಂಬಂತೆ ಶೃಂಗೇರಿ ಜಹಗೀರಿನ ಶಾಲೆಯೊಂದರಲ್ಲಿ ಮಡಿವಂತರ ವಿರೋಧವನ್ನು ಲೆಕ್ಕಿಸದೆ ಒಬ್ಬ ಅಸ್ಪೃಶ್ಯ ಬಾಲಕನನ್ನು ಸೇರಿಸಿಕೊಳ್ಳಲಾಯಿತು. ಆದ್ದರಿಂದ 1915ರ ಸರ್ಕಾರಿ ಆಜ್ಞೆಯು "ಶೃಂಗೇರಿ ಆಜ್ಞೆ" ಯೆಂದೇ ಚಿರಪರಿಚಿತವಾಗಿದೆ.

1931-32ರಲ್ಲಿ ನಿಮ್ನ ವರ್ಗದವರಿಗಾಗಿಯೇ ಆರಂಭಿಸ ಲಾಗಿದ್ದ ವಿಶೇಷ ಶಾಲೆಗಳ ಸಂಖ್ಯೆ 670; 1940-41ರಲ್ಲಿ ಅವುಗಳ ಸಂಖ್ಯೆ 419; 1943-44ರ ಸಮಯದಲ್ಲಿ ಆ ಶಾಲೆಗಳ ಸಂಖ್ಯೆ 406 ಆಗಿದ್ದಿತು. ಇದರಿಂದ ತಿಳಿದುಬರುವ ಅಂಶವೆಂದರೆ ಹೆಚ್ಚು ಹೆಚ್ಚು ಸಾರ್ವತ್ರಿಕ ಶಾಲೆಗಳು ತೆರೆಯಲ್ಪಟ್ಟಂತೆ, ನಿಮ್ನ ವರ್ಗಗಳಿಗೇ ಮೀಸಲಾದ ವಿಶೇಷ ಶಾಲೆಗಳ ಸಂಖ್ಯೆ

ಇಳಿಮುಖವಾಯಿತು. 1941ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಸ್ಥಳೀಯ ಸಂಸ್ಥೆಗಳಿಂದ ಬೇರ್ಪಡಿಸಿ ಶಿಕ್ಷಣ ಇಲಾಖೆಯ ನಿಯಂತ್ರಣಕ್ಕೆ ಒಳಪಡಿಸಿದಾಗ ನಿಮ್ನ ವರ್ಗದ ವಿದ್ಯಾರ್ಥಿಗಳಾರೂ ಇಲ್ಲದ ಶಾಲೆಗಳ ಸಂಖ್ಯೆ 1,482 ಆಗಿತ್ತು. 1944ರಲ್ಲಿ ಇಂತಹ ಶಾಲೆಗಳ ಸಂಖ್ಯೆ 174ಕ್ಕೆ ಇಳಿಯಿತು. ಈ ಶಾಲೆಗಳು ದೇವಸ್ಥಾನ ಮತ್ತು ಇತರ ಸ್ಥಳಗಳಲ್ಲಿ ನಡೆಯುತ್ತಿದ್ದವು.

ಹಳೆಯ ಮೈಸೂರಿನಲ್ಲಿ 1955-56ರ ವೇಳೆಗೆ ನಿಮ್ನ ವರ್ಗಗಳ ವಿದ್ಯಾರ್ಥಿಗಳ ಸಂಖ್ಯೆ 96,931 ಇದ್ದರೂ, ಅದು ಒಟ್ಟು ವಿದ್ಯಾರ್ಥಿ ಸಮೂಹದಲ್ಲಿ ಕೇವಲ ಶೇ. 9.5ರಷ್ಟು ಎಂದು ಹೇಳಬಹುದು. ಈ ವಿದ್ಯಾರ್ಥಿಗಳಿಗೆ ಶುಲ್ಕ ರಿಯಾಯತಿ, ಪುಸ್ತಕ, ಸ್ಲೇಟು, ಉಡುಪು, ವಿದ್ಯಾರ್ಥಿವೇತನ, ವಿದ್ಯಾರ್ಥಿ ನಿಲಯ, ಊಟ ವ್ಯವಸ್ಥೆ, ಇನ್ನೂ ಮೊದಲಾದ ಹಲವಾರು ಬಗೆಯ ಸವಲತ್ತುಗಳನ್ನು ಸರ್ಕಾರವೇ ಒದಗಿಸಿತು. 1955-56 ರಲ್ಲಿದ್ದ 91 ವಿದ್ಯಾರ್ಥಿ ನಿಲಯಗಳ ಪೈಕಿ ಹನ್ನೊಂದು ಸರ್ಕಾರದಿಂದ ಆರಂಭಿಸಲ್ಪಟ್ಟವು; ಅವುಗಳಲ್ಲಿ 10 ಬಾಲಕರಿಗೂ, ಉಳಿದ ಒಂದು ಬಾಲಕಿಯರಿಗೂ ಸೇರಿತ್ತು. ಇನ್ನುಳಿದ ನಿಲಯಗಳು ಸಹಾಯ ಧನದಿಂದ ನಡೆಯುತ್ತಿದ್ದವು. ಅವುಗಳಲ್ಲಿ 2,871 ಜನ ಊಟದ ಸೌಲಭ್ಯ ಪಡೆದಿದ್ದರು.

ನಿಮ್ನ ವರ್ಗದವರ ಕಲ್ಯಾಣಕ್ಕೋಸ್ಕರ ಒಂದು 'ಸಲಹಾ ಸಮಿತಿ' ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ಅಧ್ಯಕ್ಷತೆಯಲ್ಲಿ 1935ರಲ್ಲಿ ಅಸ್ತಿತ್ವಕ್ಕೆ ಬಂದಿತು; ನಿಮ್ನ ವರ್ಗದ ಜನಗಳೂ, ಇತರರೂ ಈ ಸಮಿತಿಯ ಸದಸ್ಯರಾಗಿದ್ದರು. ವರ್ಷಕ್ಕೆ ಮೂರು ಬಾರಿ ಈ ಸಲಹಾ ಸಮಿತಿ ಸಭೆ ಸೇರಿ ನಿಮ್ನ ವರ್ಗಗಳ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಿತ್ತು. ರಾಜ್ಯದಲ್ಲಿ ಈ ವರ್ಗಗಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಲಹೆಗಳನ್ನೂ, ಕಾಯಿದೆಗಳನ್ನು ಕುರಿತ ಪ್ರಶ್ನೆಗಳ ಬಗೆಗೆ ಅಭಿಪ್ರಾಯವನ್ನೂ ವ್ಯಕ್ತಪಡಿಸುವ ಕಾರ್ಯ ಸಲಹಾ ಸಮಿತಿಯದಾಗಿತ್ತು, ಹಳ್ಳಿಗಾಡಿನ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆಯಿರುವ ಶಾಲೆಗಳನ್ನು ಮೈಸೂರು, ತುಮಕೂರು, ಚಿಕ್ಕಮಗಳೂರು ಮತ್ತು ಬೆಂಗಳೂರುಗಳಲ್ಲಿ ಆರಂಭಿಸಲಾಯಿತು. ಮೈಸೂರಿನ ಪಂಚಮರ ಮಾಧ್ಯಮಿಕ ಶಾಲೆಯನ್ನು ಊಟದ ವ್ಯವಸ್ಥೆಯ ಶಾಲೆಯನ್ನಾಗಿ ಪರಿವರ್ತಿಸಿ ಚಾಪೆ ಹೆಣೆಯುವುದು, ಪಾದರಕ್ಷೆ ಮಾಡುವುದು, ಬಟ್ಟೆಯ ನೇಯ್ಗೆ, ಹೊಲಿಗೆ, ಚರ್ಮದ ವಸ್ತು ಕೈಗಾರಿಕೆ, ತೋಟಗಾರಿಕೆ, ಮರಗೆಲಸ, ಕಮ್ಮಾರಿಕೆ ಮತ್ತು ಕೃಷಿ ಕೆಲಸದ ಬಗೆಗೆ ತರಬೇತಿ ಕೊಡುವ ಸಂಸ್ಥೆ ಎಂದು ಪರಿಗಣಿಸಲಾಯಿತು.

ತುಮಕೂರು ಮತ್ತು ಚಿಕ್ಕಮಗಳೂರಿನಲ್ಲಿ ಪಂಚಮರ ಊಟದ ವ್ಯವಸ್ಥೆಯನ್ನೊಳಗೊಂಡ ಶಾಲೆಗಳು 1918ರಲ್ಲಿ ತೆರೆಯಲ್ಪಟ್ಟವು. 1931-32ರಲ್ಲಿ ಇಂಥ ಐದು ಶಾಲೆಗಳು ಬಾಲಕರಿಗೂ ಬೆಂಗಳೂರಿನಲ್ಲಿ ಒಂದು ಶಾಲೆಯು ಬಾಲಕಿಯರಿಗೂ ಆರಂಭಿಸಲ್ಪಟ್ಟವು. ಈ ಶಾಲೆಗಳ ನಿರ್ವಹಣೆಯನ್ನು ಮೂರು ವರ್ಷಗಳಿಗೊಮ್ಮೆ ರಚಿಸಲಾಗುವ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡ ಸಮಿತಿ ನಿರ್ವಹಿಸುತ್ತಿತ್ತು. ಊಟದ ವ್ಯವಸ್ಥೆಯನ್ನು ಹೊಂದಿದ್ದ ಶಾಲೆಗಳು ಸಾಮಾನ್ಯ ಶಿಕ್ಷಣ ಹಾಗೂ ಕೈಗಾರಿಕಾ ತರಬೇತಿಯನ್ನು ನೀಡುತ್ತಿದ್ದವು. ಪ್ರತೀ ಜಿಲ್ಲಾ ಕೇಂದ್ರಗಳಲ್ಲಿ (ಮಂಡ್ಯ ಮತ್ತು ಚಿತ್ರದುರ್ಗವನ್ನು ಬಿಟ್ಟು) 1943-44ರ ವೇಳೆಗೆ ಊಟದ ವ್ಯವಸ್ಥೆಯನ್ನು ಹೊಂದಿದ್ದ ಒಂದು ಶಾಲೆಯೋ ಅಥವಾ ಸರ್ಕಾರಿ ವಿದ್ಯಾರ್ಥಿ ನಿಲಯವೋ ಆರಂಭಿಸಲ್ಪಟ್ಟವು. ಈ ಹಿಂದೆಯೇ ಪ್ರತ್ಯೇಕ ಶಾಲೆಗಳನ್ನು ನಿಷೇಧಿಸಲಾಗಿತ್ತು. 1951-52ರಲ್ಲಿ ಹನ್ನೊಂದು ಸರ್ಕಾರಿ ನಿಮ್ನ ವರ್ಗದ ವಿದ್ಯಾರ್ಥಿನಿಲಯಗಳೂ, ಹಾಗೂ 1,81,899 ರೂ.ಗಳ ಅನುದಾನ ಪಡೆವ 56 ಖಾಸಗಿ ವಿದ್ಯಾರ್ಥಿ ನಿಲಯಗಳೂ ಕಾರ್ಯ ನಿರ್ವಹಿಸುತ್ತಿದ್ದವು.

19ನೇಯ ಶತಮಾನದ ಉತ್ತರಾರ್ಧದಲ್ಲಿ ಕೆಳಜಾತಿಯವರಾದ ನಿಮ್ನ ವರ್ಗಗಳ ಜನತೆಯ ಶಿಕ್ಷಣ ಸ್ಥಿತಿಯನ್ನು ಸುಧಾರಿಸುವ ಕಾರ್ಯ ಬೆಳಗಾವಿ ಪ್ರದೇಶದಲ್ಲಿ, ಅಷ್ಟೇನೂ ಉತ್ಸಾಹದಾಯಕವಾಗಿರಲಿಲ್ಲ. ಕೆಳಜಾತಿಯ ವಿದ್ಯಾರ್ಥಿಗಳನ್ನು ಮಂಡಳಿಯ ಶಾಲೆಗಳಿಗೆ (ಬೋರ್ಡ್ ಸ್ಕೂಲ್) ಸೇರಿಸಬಹುದೆಂಬ ವಿಷಯದಲ್ಲಿ ಸಾರ್ವಜನಿಕ ನಿರುತ್ಸಾಹ ಎದ್ದು ಕಾಣುತ್ತಿತ್ತು. ಆ ಜನಗಳ ವಿದ್ಯಾಭ್ಯಾಸಕ್ಕೆ ಪರಂಪರಾನುಗತವಾಗಿ ಅಡ್ಡಿ ಬಂದ ಅಭಿಪ್ರಾಯಗಳನ್ನು ಸರ್ಕಾರ ತೊಡೆದುಹಾಕಲೂ ಪ್ರಯತ್ನಿಸಲಿಲ್ಲ. ಈ ವಿಷಯವು (ಮುಂಬೈ) ಪ್ರಾಂತ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ವರದಿಯಲ್ಲಿ (1856-57) ತಿಳಿಸಲ್ಪಟ್ಟಿದೆ. ಅದರ ಪ್ರಕಾರ ಧಾರವಾಡದ ಸರ್ಕಾರಿ ಶಾಲೆಗೆ ಮಹಾರ್ ಬಾಲಕನೊಬ್ಬ ಇತರರಂತೆ ಶುಲ್ಕ ಕೊಟ್ಟು ಪ್ರವೇಶ ಕೋರಿದರೂ, ಅವನನ್ನು ತಿರಸ್ಕರಿಸಲಾಯಿತು. ಆಗ ಸರ್ಕಾರವೂ ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವ ವಿರೋಧವನ್ನೂ ವ್ಯಕ್ತಪಡಿಸಲಿಲ್ಲ. ಆದರೆ ಕ್ರೈಸ್ತಧರ್ಮದ ಶಾಲೆಗಳು ಹಲವಾರು ಕಾರಣಗಳಿಂದ ಕೆಳವರ್ಗದ ಬಾಲಕರಿಗೆ ಪ್ರವೇಶ ನೀಡಿದವು. ಆಶ್ಚರ್ಯವೆಂದರೆ, ಉತ್ತರ ಕನ್ನಡ ಜಿಲ್ಲೆಯ ಸಿರ್ಸಿಯಲ್ಲಿ ಚಂಭಾರ (ಸಮಗಾರ) ಬಾಲಕರಿಗೆಂದೇ ಒಂದು ಶಾಲೆ ನಡೆಸಲಾಗುತ್ತಿತ್ತು. 1872-73ರಲ್ಲಿ ಎಲ್ಲಾ ನಾಲ್ಕು ಕನ್ನಡ ಜಿಲ್ಲೆಗಳಿಗೆ ಅಂಥದೊಂದೇ ಶಾಲೆಯಿದ್ದು ಕಾರ್ಯ ನಿರ್ವಹಿಸುತ್ತಿತ್ತು. ಸರದಾರ ವೀರಣಗೌಡ ಪಾಟೀಲರ ನೇತೃತ್ವದಲ್ಲಿ ಹುಟ್ಟಿದ "ಹರಿಜನ ಸೇವಾ ಸಂಘ"ವು 1934ರಲ್ಲಿ ಹರಿಜನ ಬಾಲಿಕಾಶ್ರಮವನ್ನೂ, 1949ರಲ್ಲಿ ತರಬೇತಿ ಕಾಲೇಜನ್ನೂ ಹುಬ್ಬಳ್ಳಿಯಲ್ಲಿ ಆರಂಭಿಸಿತು; ವಿಶೇಷ ಶಾಲೆಗಳನ್ನು ಆರಂಭಿಸುವುದರ ಜೊತೆಗೆ ಸರ್ಕಾರವು ಖಾಸಗಿ ವಿದ್ಯಾರ್ಥಿ ನಿಲಯಗಳಿಗೆ ಸಹಾಯ ಧನವನ್ನೂ ಬಿಡುಗಡೆ ಮಾಡಿತು.

1946-47ರ ಸಮಯಕ್ಕೆ ಬೆಳಗಾವಿ ಪ್ರದೇಶದಲ್ಲಿ 18 ಮಾನ್ಯತೆ ಪಡೆದ ಹಾಗೂ ಅನುದಾನ ಪಡೆದ ವಿದ್ಯಾರ್ಥಿನಿಲಯಗಳಿದ್ದವು. ಬೋಧನಾಶುಲ್ಕ ವಿನಾಯಿತಿ, ವಿದ್ಯಾರ್ಥಿವೇತನ, ಪುಸ್ತಕ ಹಾಗೂ ಇತರ ಸಲಕರಣೆಗಳ ವಿತರಣೆ, ಸರ್ಕಾರಿ ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ಪ್ರವೇಶ ಮೀಸಲು, ಇನ್ನೂ ಮುಂತಾದವು ಪರಿಶಿಷ್ಟವರ್ಗದ ವಿದ್ಯಾರ್ಥಿಗಳಿಗೆ ಅಧಿಕ ಉತ್ತೇಜನ ಕೊಟ್ಟವು. ದೇಶವು ಸ್ವಾತಂತ್ರ್ಯ ಪಡೆದ ಮೇಲೆ ಹಿಂದುಳಿದ ವರ್ಗಗಳ ವಿದ್ಯಾ ಸೌಲಭ್ಯಕ್ಕೆ ಹಲವು ಬಗೆಯ ಕಾರ್ಯಕ್ರಮಗಳನ್ನು ರೂಪಿಸಿತು. ಮುಂಬೈ ಪ್ರಾಂತ್ಯದ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಸಾಗರೋತ್ತರ ದೇಶಗಳಿಗೆ ವ್ಯಾಸಂಗಕ್ಕಾಗಿ ಹೋಗಲು, ಅವರಿಗೆ ಸರ್ಕಾರವು 1948-49ರಲ್ಲಿ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿತು. ಅಪರಾಧಿ ಸಮುದಾಯಗಳ ಮೇಲೆ ವಿಧಿಸಲಾಗಿದ್ದ ನಿರ್ಬಂಧವನ್ನು ತೆಗೆದುಹಾಕಿ ಅವುಗಳನ್ನು "ವಿಮುಕ್ತಜಾತಿ"ಗಳೆಂದು ಕರೆಯಲಾಯಿತು. ಈ ಜಾತಿಗಳ ಮಕ್ಕಳ ಅನುಕೂಲಕ್ಕಾಗಿ 1953-54ರಲ್ಲಿ ಹುಬ್ಬಳ್ಳಿ ಹಾಗೂ ಬಾಗಲಕೋಟೆಯಲ್ಲಿ ಆಶ್ರಮ ಶಾಲೆಗಳನ್ನು ಆರಂಭಿಸಿ, ಅವುಗಳಲ್ಲಿಯೇ "ಸಂಸ್ಕಾರ ಕೇಂದ್ರ"ಗಳನ್ನೂ ತೆರೆಯಲಾಯಿತು; ಅಷ್ಟೇ ಅಲ್ಲದೆ ಆ ಮಕ್ಕಳಿಗೆ ಬೆಳಗಾವಿ ಜಿಲ್ಲೆಯ ಖಾನಾಪುರದಲ್ಲಿ ಒಂದು ವಿದ್ಯಾರ್ಥಿನಿಲಯವನ್ನೂ ಸರ್ಕಾರ ಪ್ರಾರಂಭಿಸಿತು.

ಮದ್ರಾಸ್ ಪ್ರಾಂತ್ಯದಲ್ಲೂ ನಿಮ್ನವರ್ಗಗಳ ವಿದ್ಯಾರ್ಥಿಗಳಿಗೋಸ್ಕರ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು. ಕುದ್ಮುಲ್ ರಂಗರಾಯರ ಪ್ರಯತ್ನದಿಂದಾಗಿ 1883ರಲ್ಲಿ ದಕ್ಷಿಣ ಕನ್ನಡದ ಹೊಲೆಯ ಮತ್ತು ಕೊರಗ ಜಾತಿಯವರಿಗೆ ಪ್ರತ್ಯೇಕವಾಗಿ ಏಳು ಶಾಲೆಗಳು ಆರಂಭಿಸಲ್ಪಟ್ಟವು. 1921-47ರ ಕಾಲಾವಧಿಯಲ್ಲಿ ಕಾರ್ಮಿಕ ಇಲಾಖೆಯು ನಿಮ್ನವರ್ಗದ ವಿದ್ಯಾರ್ಥಿಗಳ ಶಿಕ್ಷಣದ ಮೇಲ್ವಿಚಾರಣೆಯ ಹೊಣೆ ಹೊತ್ತಿದ್ದರಿಂದ, ಅದು ಆ ಜನಗಳ ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಿತು. ದಕ್ಷಿಣ ಕನ್ನಡದಲ್ಲಿ ಆರಂಭವಾದ ಇಂಥ 48 ಶಾಲೆಗಳಲ್ಲಿ 1,358 ವಿದ್ಯಾರ್ಥಿಗಳಿದ್ದರು; ಹಾಗೆಯೇ ಬಳ್ಳಾರಿಯ 47 ಶಾಲೆಗಳಲ್ಲಿ 1,269 ವಿದ್ಯಾರ್ಥಿಗಳಿದ್ದರು. ಇದೇ ಕಾಲದಲ್ಲಿ ಖಾಸಗಿಯಾಗಿ ಮತ್ತು ಸ್ಥಳೀಯ ಸಂಸ್ಥೆಗಳ ಆಶ್ರಯದಲ್ಲಿ ಅನೇಕ ಶಾಲೆಗಳು ನಿಮ್ನವರ್ಗದವರಿಗಾಗಿ ಪ್ರಾರಂಭವಾದವು. ಈ ಜಾತಿಯ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ನಿರಾಕರಿಸಿದ ಶಾಲೆಗಳಿಗೆ ಸರ್ಕಾರ ಸಹಾಯ ಧನವನ್ನು ತಡೆಹಿಡಿಯಿತು. ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉದಾರ ವಿದ್ಯಾರ್ಥಿವೇತನ, ಸ್ಟೈಪೆಂಡ್ ಹಾಗೂ ಊಟದ ವೆಚ್ಚವನ್ನು ಸರ್ಕಾರ ಮಂಜೂರು ಮಾಡಿತು. 1949ರಲ್ಲಿ ಪ್ರತ್ಯೇಕ 'ಹರಿಜನ ಕಲ್ಯಾಣ ಇಲಾಖೆ' ರಚಿಸಲ್ಪಟ್ಟು, ಅದು ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ಕಲ್ಯಾಣವನ್ನು, ಜಿಲ್ಲಾ ಕಲ್ಯಾಣ ಅಧಿಕಾರಿಯೇ (ಜಿಲ್ಲೆಯ ಆಡಳಿತ ಅಧಿಕಾರಿಯನ್ನು ಆ ರೀತಿ ಕರೆಯಲಾಗಿದೆ) ನೋಡಿಕೊಳ್ಳುವಂತಾಯಿತು. 1950-51ರ ವೇಳೆಗೆ ಪರಿಶಿಷ್ಟ ಜಾತಿಗಳಿಗಾಗಿ 78 ಶಾಲೆಗಳು ಆರಂಭಿಸಲ್ಪಟ್ಟು ಅವುಗಳಲ್ಲಿ 3,027 ಬಾಲಕರು ಪ್ರವೇಶ ಪಡೆದಿದ್ದರು. ಬಾಲಕಿಯರ ಸಂಖ್ಯೆ ಆ ಶಾಲೆಗಳಲ್ಲಿ 1,656 ಇದ್ದಿತು. ಉಳಿದ ಹಿಂದುಳಿದ ಸಮುದಾಯದ ಮಕ್ಕಳಿಗೆ 12 ಶಾಲೆಗಳು ತೆರೆಯಲ್ಪಟ್ಟವು. ಬಳ್ಳಾರಿ ಜಿಲ್ಲೆಯ ಈ ಶಾಲೆಗಳಲ್ಲಿ 491 ಬಾಲಕರೂ, 202 ಬಾಲಕಿಯರೂ ಪ್ರವೇಶ ಪಡೆದಿದ್ದರು. ಮದ್ರಾಸ್ ಪ್ರಾಂತ್ಯದ ಇತರ ಪ್ರದೇಶಗಳಂತೆ ಕೊಳ್ಳೇಗಾಲ ತಾಲೂಕಿನಲ್ಲಿ 1920ರ ದಶಕದಲ್ಲಿ ಹರಿಜನ ಕೇರಿಗಳಲ್ಲಿ ಹರಿಜನ ಅಧ್ಯಾಪಕರಿರುವ ಪ್ರತ್ಯೇಕ ಶಾಲೆಗಳನ್ನು ಆರಂಭಿಸಲಾಗಿತ್ತು. ಕಾಲಕ್ರಮೇಣ ಈ ಶಾಲೆಗಳು ಮುಚ್ಚಲ್ಪಟ್ಟು, ಅಲ್ಲಿಯ ಹರಿಜನ ವಿದ್ಯಾರ್ಥಿಗಳನ್ನು, ಇತರ ಮೇಲ್ವರ್ಗದ ಜಾತಿಯ ಮಕ್ಕಳು ಕಲಿಯುವ ಶಾಲೆಗಳಲ್ಲಿ ಸೇರಲು ಪ್ರೋತ್ಸಾಹಿಸಲಾಯಿತು.

ಕಲ್ಬುರ್ಗಿ ಜಿಲ್ಲೆಯಲ್ಲಿ 1916 ರವರೆಗೂ ನಿಮ್ನವರ್ಗಗಳವರಿಗೆ ಪ್ರತ್ಯೇಕ ಶಾಲೆಗಳು ಇರದ ಕಾರಣ, ಆ ಜನಗಳ ಮಕ್ಕಳು ಸಾರ್ವತ್ರಿಕ ಪ್ರಾಥಮಿಕ ಶಾಲೆಗೇ ಹೋಗುತ್ತಿದ್ದರು. 1917ರಲ್ಲಿ ಜಾರಿಗೆ ಬಂದ ಸರ್ಕಾರದ ಕಾರ್ಯನೀತಿಯಿಂದಾಗಿ ಪ್ರತ್ಯೇಕ ಪ್ರಾಥಮಿಕ ಶಾಲೆಗಳು ನಿಮ್ನವರ್ಗದ ಮಕ್ಕಳಿಗಾಗಿ ಖಾಸಗಿಯಾಗಿ ತೆರೆಯಲ್ಪಟ್ಟವು; ಅವುಗಳಿಗೆ ಸರ್ಕಾರದಿಂದ ಸಹಾಯ ಧನ ಮಂಜೂರಾಯಿತು. ಹೆಚ್ಚಿನ ಶೈಕ್ಷಣಿಕ ಸೌಲಭ್ಯವನ್ನು ನಿಮ್ನವರ್ಗದ ಬಾಲಕರಿಗೆ ಒದಗಿಸುವ ಸಲುವಾಗಿ 1930ರಲ್ಲಿ ಸಾರ್ವಜನಿಕ ಶಿಕ್ಷಣ ನಿರ್ದೇಶಕರು ಸರ್ಕಾರಕ್ಕೆ ಒಂದು ಮನವಿ ಸಲ್ಲಿಸಿ, ಅದರಲ್ಲಿ ವ್ಯಾಪಕ ಕಾರ್ಯಕ್ರಮ ಸೂಚಿಸಿದ್ದರು. ಆಗ ಕಲ್ಬುರ್ಗಿ ಹೈದರಾಬಾದ್ ಪ್ರಾಂತ್ಯದಲ್ಲಿತ್ತು. ಆರ್ಯಸಮಾಜದ ಸುಧಾರಣ ಕಾರ್ಯಕ್ರಮಗಳಿಂದಾಗಿ ಹೈದರಾಬಾದ್ ಸಂಸ್ಥಾನದಲ್ಲಿ ನಿಮ್ನವರ್ಗ ಹಾಗೂ ಸವರ್ಣೀಯ ಹಿಂದೂಗಳಲ್ಲಿ ಸಾಮರಸ್ಯವಿತ್ತು. ಆದ್ದರಿಂದ ಶಿಕ್ಷಣ ಇಲಾಖೆಯು ಪ್ರತ್ಯೇಕ ಶಾಲೆಗಳ ಆರಂಭಕ್ಕೆ ಉತ್ತೇಜನ ನೀಡಲಿಲ್ಲ.

ಕೊಡಗಿನ ಎರವರು ಮತ್ತು ಕಾಡು ಕುರುಬರ ಮಕ್ಕಳಿಗಾಗಿ 1906ರಲ್ಲಿ ತಿತಿಮತಿಯ ಬುಡಕಟ್ಟು ಜನಾಂಗದ ಪ್ರದೇಶದಲ್ಲಿ ಸರ್ಕಾರವು ಒಂದು ಶಾಲೆಯನ್ನು ತೆರೆಯಿತು; ಸಾಕಷ್ಟು ವಿದ್ಯಾರ್ಥಿಗಳು ಇರದ ಕಾರಣ, ಆರಂಭಿಸಿದ ಮೂರು ವರ್ಷಗಳಲ್ಲೇ ಆ ಶಾಲೆಯನ್ನು ಮುಚ್ಚಲಾಯಿತು. 1927ರಲ್ಲಿ ಪಂಚಮರಿಗೆಂದೇ ತೆರೆಯಲಾಗಿದ್ದ ಆರು ಹಗಲು ಮತ್ತು ನಾಲ್ಕು ರಾತ್ರಿ ಶಾಲೆಗಳಲ್ಲಿ 392 ಬಾಲಕರೂ 80 ಬಾಲಕಿಯರೂ ಇದ್ದರು. 1932ರ ಹೊತ್ತಿಗೆ ಹಗಲು ಶಾಲೆಗಳ ಸಂಖ್ಯೆ ನಾಲ್ಕಕ್ಕೂ, ರಾತ್ರಿ ಶಾಲೆ ಒಂದಕ್ಕೂ ಇಳಿದು, ಅವುಗಳಲ್ಲಿ 180 ಬಾಲಕರೂ 35 ಬಾಲಕಿಯರೂ ಓದುತ್ತಿದ್ದರು. ಇದಕ್ಕೆ ಮುಖ್ಯ ಕಾರಣ ಸಾರ್ವತ್ರಿಕ ಶಾಲೆಗಳಲ್ಲಿ ನಿಮ್ನವರ್ಗದ ಬಾಲಕ

ಬಾಲಕಿಯರ ಮುಕ್ತ ಪ್ರವೇಶಾವಕಾಶ. 1939ರ ವೇಳೆಗೆ ಪಂಚಮರ ಶಾಲೆಗಳೆಲ್ಲಾ ಮುಚ್ಚಿದವು; ಆ ವಿದ್ಯಾರ್ಥಿಗಳೆಲ್ಲಾ ಇತರರಿಗಾಗಿ ನಡೆಸುವ ಶಾಲೆಗಳಲ್ಲೇ ಮುಕ್ತ ಪ್ರವೇಶ ಪಡೆದರು. ಸರ್ಕಾರದಿಂದ ವಿದ್ಯಾರ್ಥಿಗಳಿಗೆ ಉಡುಪು ಮತ್ತು ಪುಸ್ತಕಗಳು ಕೊಡಲ್ಪಟ್ಟವು. ಅವರಲ್ಲಿ ಅರ್ಹರಿಗೆ ವಿದ್ಯಾರ್ಥಿವೇತನವೂ ಮಂಜೂರಾಯಿತು.

### ಸಮಾಜ ಕಲ್ಯಾಣ ಇಲಾಖೆ

ರಾಜ್ಯದಲ್ಲಿರುವ ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಹಾಗೂ ಇತರ ಹಿಂದುಳಿದ ಬುಡಕಟ್ಟುಗಳ ಕಲ್ಯಾಣಕ್ಕೆ ಸಮಾಜ ಕಲ್ಯಾಣ ಇಲಾಖೆಯ ಕಾರ್ಯಕ್ರಮಗಳನ್ನು ರೂಪಿಸುತ್ತದೆ. ರಾಜ್ಯಗಳ ಪುನರ್ವ್ಯವಸ್ಥೆಯ ಮೊದಲು ನಮ್ಮ ರಾಜ್ಯದಲ್ಲಿ ಶಿಕ್ಷಣ ಇಲಾಖೆಯು ಈ ವರ್ಗಗಳ ಕಲ್ಯಾಣ ಕಾರ್ಯವನ್ನು ನಿರ್ವಹಿಸುತ್ತಿತ್ತು. ಆರ್ಥಿಕ ಅಭಿವೃದ್ಧಿ, ಆರೋಗ್ಯ, ವಸತಿ ಮೊದಲಾದ ಕಾರ್ಯಕ್ರಮಗಳನ್ನು ನಿಮ್ನವರ್ಗಗಳ ಕಮೀಷನರ್ ಜಾರಿಗೆ ತರುತ್ತಿದ್ದರು. ಇವರಿಗೆ ಸಹಾಯಕರಾಗಿ ಜಿಲ್ಲೆಯ ಮಟ್ಟದಲ್ಲಿ ಒಬ್ಬ ವಿಶೇಷ ಅಧಿಕಾರಿ ಮತ್ತು ತಾಲೂಕು ಮಟ್ಟದಲ್ಲಿ ಒಬ್ಬ ವಿಶೇಷ ಕಂದಾಯ ತನಿಖಾಧಿಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದರು. ರಾಜ್ಯಗಳ ಪುನರ್ವ್ಯವಸ್ಥೆಯ ನಂತರ ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಬುಡಕಟ್ಟುಗಳ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿಯೇ ಪ್ರತ್ಯೇಕ ನಿರ್ದೇಶನಾಲಯವನ್ನು ಸ್ಥಾಪಿಸಲಾಯಿತು. ಅದು ಕಾರ್ಯಕ್ರಮಗಳನ್ನು ವ್ಯವಸ್ಥಿತವಾಗಿ ಮತ್ತು ಕ್ರಮವಾಗಿ ಕೈಗೊಂಡಿತು. ಎರಡನೇಯ ಯೋಜನೆಯ ಮುಕ್ತಾಯದ ವೇಳೆಗೆ ಇನ್ನೂ ಹೆಚ್ಚಿನ ಅಧಿಕಾರಿಗಳ ನೇಮಕ ಮಾಡಲಾಗಿ, ನಿಮ್ನ ವರ್ಗದ ಕಲ್ಯಾಣಕಾರ್ಯ ಸುವ್ಯವಸ್ಥಿತವಾಯಿತು. ಮೂರು ಜನ ಸಹಾಯಕ ನಿರ್ದೇಶಕರು, ಪರಿಶಿಷ್ಟ ಜಾತಿಗಳವರಿಗಾಗಿ ಒಬ್ಬ ವಿಶೇಷ ಅಧಿಕಾರಿ, ಹಾಗೂ ಮಹಿಳೆಯರು ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ ಕಾರ್ಯಗಳಲ್ಲಿ ಸಮಾಜ ಕಲ್ಯಾಣ ನಿರ್ದೇಶಕರಿಗೆ ಸಹಾಯ ಮಾಡಲು ಒಬ್ಬ ಅಧಿಕಾರಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲೆಯ ಸಮಾಜ ಕಲ್ಯಾಣ ಅಧಿಕಾರಿಗಳೆಂಬ ಗೆಜೆಟೆಡ್ ಅಧಿಕಾರಿಗಳ ನೇಮಕವಾಯಿತು.

ಸಮಾಜ ಕಲ್ಯಾಣ ಇಲಾಖೆಯು 1983ರಲ್ಲಿ ಈ ಕೆಳಗಿನ ಮಾದರಿಯಲ್ಲಿ ರಚಿಸಲ್ಪಟ್ಟಿತು. ರಾಜ್ಯಮಟ್ಟದಲ್ಲಿ ಈ ಇಲಾಖೆಯ ನಿರ್ದೇಶಕರೇ ಮುಖ್ಯಸ್ಥರಾಗಿದ್ದು ಅವರಿಗೆ ನೆರವು ನೀಡಲು ಮೂರು ಜನ ಜಂಟಿ ನಿರ್ದೇಶಕರು, ಐದು ಜನ ಸಹ ನಿರ್ದೇಶಕರು, ಒಬ್ಬ ಸಂಶೋಧನಾ ಅಧಿಕಾರಿ, ನಾಲ್ಕು ಜನ ಸಹಾಯಕ ನಿರ್ದೇಶಕರು, ಒಬ್ಬ ಪ್ರಧಾನ ಲೆಕ್ಕ ಪರಿಶೋಧನಾ ಅಧಿಕಾರಿ, ಒಬ್ಬ ಪ್ರಚಾರ ಅಧಿಕಾರಿ, ಒಬ್ಬ ಸಂಖ್ಯಾ ತಜ್ಞ ಮತ್ತು ಇತರ ಸಹಾಯಕ ಸಿಬ್ಬಂದಿ ಇರುತ್ತಾರೆ. ಬೆಂಗಳೂರಿನಲ್ಲಿರುವ ಪರೀಕ್ಷಾಪೂರ್ವ ತರಬೇತಿ ಕೇಂದ್ರದ ಮುಖ್ಯಸ್ಥರು ಸಮಾಜ ಕಲ್ಯಾಣ ಸಹನಿರ್ದೇಶಕರ ಹುದ್ದೆಯ ಅಂತಸ್ತಿನವರು. ಜಿಲ್ಲೆಯ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ತನ್ನ ಕೆಳವರ್ಗದ ಕಛೇರಿ ನೌಕರರ ಸಹಕಾರದಿಂದ ಕಾರ್ಯನಿರ್ವಹಿಸುತ್ತಾನೆ. ಕ್ಷೇತ್ರಾಭಿವೃದ್ಧಿ ಅಧಿಕಾರಿಯ ಕೈ ಕೆಳಗೆ ಪ್ರತೀ ಕ್ಷೇತ್ರಕ್ಕೂ ಒಬ್ಬ ಸಮಾಜ ಕಲ್ಯಾಣ ಪರಿಶೀಲನಾಧಿಕಾರಿ ಇರುತ್ತಾರೆ. ಹಾಗೆಯೇ ಭಾರತದ ಬುಡಕಟ್ಟು ಅಭಿವೃದ್ಧಿ ಯೋಜನೆಗಳಲ್ಲಿ ಐದು ಜನ ಸಮನ್ವಯ ನಿಯೋಜಕರ ಹುದ್ದೆಗಳು ಬುಡಕಟ್ಟು ಉಪಯೋಜನೆಯ ಅನುಸಾರ ಸೃಷ್ಟಿಯಾಗಿದೆ. ಜೇನು ಕುರುಬರ ಮತ್ತು ಮುಂದುವರಿಯದ ಬುಡಕಟ್ಟುಗಳ ಕಲ್ಯಾಣ ಕಾರ್ಯಕ್ರಮಗಳ ಜಾರಿಗೋಸ್ಕರ ಒಬ್ಬ ವಿಶೇಷಾಧಿಕಾರಿ ಹುಣಸೂರು ಕೇಂದ್ರದಲ್ಲಿರುತ್ತಾರೆ.

ಜಿಲ್ಲೆಯ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಹೊಣೆ ಹೊತ್ತಿದ್ದಾರೆ; ತಾಲೂಕು ಮಟ್ಟದಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಈ ಕಾಯಕ್ರಮಗಳನ್ನು ಜಾರಿಗೊಳಿಸಿ ಮೇಲ್ವಿಚಾರಣೆ ನೋಡಿಕೊಳ್ಳಬೇಕು.

### ಕ್ಷೇಮಾಭಿವೃದ್ಧಿ ಕ್ರಮಗಳು ಮತ್ತು ಯೋಜನೆಗಳು

ಪರಿಶಿಷ್ಟ ಜಾತಿಗಳಿಗಾಗಿ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳನ್ನು ಮೂರು ಪ್ರಮುಖ ಬಗೆಯಲ್ಲಿ ವ್ಯವಸ್ಥೆ ಮಾಡಲಾಗಿದೆ. ಅವು--ಶಿಕ್ಷಣ, ಆರ್ಥಿಕ ಅಭಿವೃದ್ಧಿ ಮತ್ತು ಆರೋಗ್ಯ, ವಸತಿ ಮತ್ತು ಕಾರ್ಯಗಳು. ಈ ಕೆಳಗೆ ಅವುಗಳ ಸಮೀಕ್ಷೆ ಮಾಡಲಾಗಿದೆ.

**ಶಿಕ್ಷಣ :** 1958ರಲ್ಲಿ ಪರಿಶಿಷ್ಟ ಜಾತಿಗಳ ಮಕ್ಕಳ ಕಲ್ಯಾಣಕ್ಕಾಗಿ ಶಿಶುವಿಹಾರವನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳು ಆರಂಭವಾದವು; ಅನಂತರ ಈ ಕಾರ್ಯಕ್ರಮವನ್ನು ಪರಿಶಿಷ್ಟ ಬುಡಕಟ್ಟುಗಳಿಗೂ, ಹಿಂದುಳಿದ ಬುಡಕಟ್ಟು ಜನಾಂಗಗಳಿಗೂ ವಿಸ್ತರಿಸಲಾಯಿತು. ಕಲ್ಯಾಣ ಕೇಂದ್ರಗಳು ಅನುಸೂಚಿತ ಜಾತಿ, ಅಲೆಮಾರಿ ಹಾಗೂ ಅರೆಅಲೆಮಾರಿ ಬುಡಕಟ್ಟು ಮತ್ತು ಪರಿಶಿಷ್ಟ ಜನಾಂಗಗಳು ನೆಲೆಸಿರುವ ಸ್ಥಳಗಳಲ್ಲಿ ಕಾರ್ಯಾರಂಭ ಮಾಡಿದವು; ಮೂರರಿಂದ ಆರು ವರ್ಷದ ಮಕ್ಕಳಿಗೆ ಶಾಲೆಗೆ ಹೋಗುವ ಅಭ್ಯಾಸ ಮತ್ತು ಮಹಿಳೆಯರಿಗೆ ತಾವಿರುವಲ್ಲೇ ಹೊಲಿಗೆ, ಹೆಣಿಗೆ, ಕಸೂತಿ, ಉಡುಪು-ತಯಾರಿಕೆ ಇನ್ನೂ ಮುಂತಾದ ಕೈಕೆಲಸಗಳಲ್ಲಿ ತರಬೇತಿ ನೀಡಲಾಗುತ್ತದೆ. ಪ್ರತೀ ಕಲ್ಯಾಣ ಕೇಂದ್ರಗಳಿಗೆ 50 ಮಕ್ಕಳನ್ನು ಸೇರಿಸಿ ಅವರಿಗೆ ವರ್ಷಕ್ಕೆ ಒಂದು ಜೊತೆ ಉಡುಪು ಹಾಗೂ ಮಧ್ಯಾಹ್ನದ ಊಟವನ್ನೂ ಒದಗಿಸಲಾಗುವುದು. ಇಂಥ ಪ್ರತೀ ಕೇಂದ್ರವೂ ಒಬ್ಬ ಮಹಿಳಾ

ಕಲ್ಯಾಣ ವ್ಯವಸ್ಥಾಪಕಿಯಿಂದ ನಡೆಸಲ್ಪಡುತ್ತದೆ. ಎರಡನೇ ಯೋಜನೆಯಲ್ಲಿ 165 ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನು ಪರಿಶಿಷ್ಟ ಜಾತಿಗಳವರ ಅನುಕೂಲಕ್ಕೆ ತೆರೆಯಲಾಯಿತು. ಇನ್ನೂ 120 ಈ ಬಗೆಯ ಕೇಂದ್ರಗಳನ್ನು ಮೂರನೇಯ ಯೋಜನೆಯಲ್ಲಿ ಆರಂಭಿಸಿತು; ತದನಂತರದ ವಾರ್ಷಿಕ ಯೋಜನೆಯಲ್ಲಿ 13 ಕೇಂದ್ರಗಳನ್ನೂ ನಾಲ್ಕನೇಯ ಯೋಜನೆಯಲ್ಲಿ 36 ಕೇಂದ್ರಗಳನ್ನೂ ತೆರೆಯಲಾಯಿತು. ನಾಲ್ಕನೇಯ ಯೋಜನೆಯ ಮುಕ್ತಾಯದ ವೇಳೆಗೆ 1973-74ರಲ್ಲಿ ರಾಜ್ಯದಲ್ಲಿ 341 ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕೇಂದ್ರಗಳು ಕಾರ್ಯನಿರತವಾಗಿದ್ದವು. 1979-80ರ ವೇಳೆಗೆ ಇವುಗಳ ಸಂಖ್ಯೆ 632ಕ್ಕೆ ಹೆಚ್ಚಿ 1981-82ರಲ್ಲಿ 667ಕ್ಕೆ ಏರಿತು.

ಪರಿಶಿಷ್ಟ ವರ್ಗದವರ ಮಕ್ಕಳಿಗೆ ಒಂದರಿಂದ ನಾಲ್ಕನೇಯ ತರಗತಿಯವರೆಗೆ ಶಿಕ್ಷಣ ನೀಡುವುದಕ್ಕಾಗಿ ಊಟ-ವಸತಿ ಸೌಲಭ್ಯವನ್ನು ಮೂರನೇಯ ಯೋಜನೆಯಲ್ಲಿ ಏರ್ಪಡಿಸಲಾಯಿತು; ಅದೇ 'ವಸತಿ ಶಾಲೆ'ಯ ಕಾರ್ಯಕ್ರಮ. ತಿಂಗಳಿಗೆ 40 ರೂ. ನಂತೆ ಪ್ರತೀ ವಿದ್ಯಾರ್ಥಿಯ ಊಟ ವ್ಯವಸ್ಥೆಗೆ ಸರ್ಕಾರ ವೆಚ್ಚ ಮಾಡುತ್ತಿದೆ. ಮೂರನೇಯ ಯೋಜನೆಯಲ್ಲಿ ಒಟ್ಟು 12 'ವಸತಿ ಶಾಲೆ'ಗಳು ಆರಂಭವಾದವು; ಮುಂದಿನ ಯೋಜನೆಗಳಲ್ಲಿ ಈ ಶಾಲೆಗಳನ್ನು ನಡೆಸಲು ಹಣವನ್ನು ಒದಗಿಸಲಾಗಿದೆ. 1980-81ರಲ್ಲಿ ಹೊಸದಾಗಿ ಎರಡು ಶಾಲೆಗಳು, 1981-82ರಲ್ಲಿ ಇನ್ನೂ ಒಂಭತ್ತು ಶಾಲೆಗಳು ತೆರೆಯಲ್ಪಟ್ಟು, ಒಟ್ಟು 23 ವಸತಿ ಶಾಲೆಗಳು ರಾಜ್ಯದಲ್ಲಿ ಕಾರ್ಯನಿರತವಾಗಿದ್ದವು. ಆಸಕ್ತ ಹಾಗೂ ಪ್ರತಿಭಾವಂತ ಪರಿಶಿಷ್ಟ ವರ್ಗದ ಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಲು ವಿದ್ಯಾರ್ಥಿ ವೇತನ, ಬೋಧನಾ ಶುಲ್ಕ, ನಗದು ಬಹುಮಾನ, ಇವೇ ಮೊದಲಾದ ಸೌಲಭ್ಯಗಳನ್ನು ಪಂಚವಾರ್ಷಿಕ ಯೋಜನೆಗಳಲ್ಲಿ ಸೇರಿಸಲಾಗಿದೆ. ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆಗಳಲ್ಲಿ ಕಲಿಯುವ ಈ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರೌಢ ಶಿಕ್ಷಣದ ಮುಂಚಿನ ವಿದ್ಯಾರ್ಥಿ ವೇತನವನ್ನು ಮೂರನೇಯ ಯೋಜನೆಯನ್ವಯ ನೀಡಲಾಗುತ್ತಿದೆ; ಸಂತಸದ ಸಂಗತಿಯೆಂದರೆ ಪರಿಶಿಷ್ಟ ವರ್ಗಗಳ ಹಾಗೂ ಪರಿಶಿಷ್ಟ ಬುಡಕಟ್ಟುಗಳ ಎಲ್ಲಾ ವಿದ್ಯಾರ್ಥಿಗಳಿಗೂ ವಿದ್ಯಾರ್ಥಿ ವೇತನವಾಗಲೀ ಅಥವಾ ವಸತಿ ಸೌಕರ್ಯವಾಗಲಿ ದೊರಕುವಂತಾಗಿದೆ. ಹೊಸ ರಾಜ್ಯದಲ್ಲಿ ಸೇರ್ಪಡೆಯಾದ ಪ್ರದೇಶಗಳಲ್ಲಿ ಪ್ರೌಢಶಿಕ್ಷಣ ಪೂರ್ವ ವಿದ್ಯಾರ್ಥಿವೇತನಕ್ಕಾಗಿ ನೀಡಲಾಗುತ್ತಿದ್ದ ಹಣದ ಮೊತ್ತವು ಒಂದೇ ಆಗಿರಲಿಲ್ಲ. 1969ರ ನಂತರ ರಾಜ್ಯದಲ್ಲೆಲ್ಲಾ ಪ್ರೌಢಶಿಕ್ಷಣ ಪೂರ್ವ ವಿದ್ಯಾರ್ಥಿವೇತನದ ಹಣದ ಮೊತ್ತವನ್ನು ಏಕರೂಪಕ್ಕೆ ತರಲಾಯಿತು. ಐದರಿಂದ ಹತ್ತರವರೆಗಿನ ತರಗತಿಗಳಲ್ಲಿ ಕಲಿಯುವ ಬಾಲಕರಿಗೆ ವಿದ್ಯಾರ್ಥಿವೇತನ ವ್ಯವಸ್ಥೆ ಜಾರಿಗೆ ಬಂದಿತು. ಆದರೆ ಐದು, ಆರು ಮತ್ತು ಏಳನೇಯ ತರಗತಿಗಳಲ್ಲಿ ಕಲಿಯುವ ಬಾಲಕಿಯರಿಗೆ ವಿದ್ಯಾಥಿವೇತನದ ಬದಲು ಪಠ್ಯಪುಸ್ತಕಕ್ಕಾಗಿ ಹತ್ತು ರೂ.ಗಳು, ಹಾಗೂ ಶಾಲೆಯಲ್ಲಿ ಹಾಜರಿಗೋಸ್ಕರ ಮೀಸಲಿಟ್ಟ ಮೂವತ್ತು ರೂ.ಗಳ ವಾರ್ಷಿಕ ವೇತನ ದೊರೆಯುತ್ತಿತ್ತು. ಎಂಟರಿಂದ ಹತ್ತರವರೆಗಿನ ತರಗತಿಗಳಲ್ಲಿ ವಿದ್ಯಾಭ್ಯಾಸ ಮಾಡುವ ಬಾಲಕಿಯರಿಗೆ ವಿದ್ಯಾರ್ಥಿವೇತನವನ್ನೂ ಒದಗಿಸಲಾಯಿತು. ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕಲಿಯುವ ಬಾಲಕ-ಬಾಲಕಿಯರಿಗೆ 50 ರೂ.ಗಳ ವೇತನವನ್ನೂ, ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ 75 ರೂ.ಗಳ ವೇತನವನ್ನೂ ವರ್ಷಕ್ಕೊಮ್ಮೆ ನೀಡಲಾಗುತ್ತಿದೆ. ವಾರ್ಷಿಕ ಯೋಜನೆಯಲ್ಲಿ 34,754 ವಿದ್ಯಾರ್ಥಿಗಳಿಗೂ, ನಾಲ್ಕನೇಯ ಯೋಜನೆಯ ಕಾಲದಲ್ಲಿ 1,89,797 ವಿದ್ಯಾರ್ಥಿಗಳೂ ಪ್ರೌಢಶಿಕ್ಷಣಪೂರ್ವ ವಿದ್ಯಾರ್ಥಿವೇತನವನ್ನು ಪಡೆದರು. 1978-79ರಲ್ಲಿ 1,11,093 ವಿದ್ಯಾರ್ಥಿಗಳು ಪ್ರೌಢಶಿಕ್ಷಣಪೂರ್ವ ವಿದ್ಯಾರ್ಥಿವೇತನವನ್ನು ಪಡೆದರೆ, 1981-82ರಲ್ಲಿ ಈ ಸೌಲಭ್ಯವನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ 1,63,762.

ಮೂರನೇಯ ಯೋಜನೆಯಲ್ಲಿ 'ಪ್ರತಿಭಾ ವಿದ್ಯಾರ್ಥಿವೇತನ'ವನ್ನು ಆರಂಭಿಸಲಾಯಿತು. ಪರೀಕ್ಷೆಗಳಲ್ಲಿ ಶೇ. 50ಕ್ಕೂ ಹೆಚ್ಚಿನ ಅಂಕಗಳನ್ನು ಪಡೆಯುವ ವಿದ್ಯಾರ್ಥಿಗಳಿಗೆ ಪ್ರತಿಭಾ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಯಿತು. ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಓದುವ ವಿದ್ಯಾರ್ಥಿಗೆ, ಪರೀಕ್ಷೆಯಲ್ಲಿ ಶೇ. 60 ಅಂಕಗಳು ಲಭ್ಯವಾದರೆ, ಹಾಗೂ ಪ್ರೌಢಶಾಲೆಯಲ್ಲಿ ಓದುವ ವಿದ್ಯಾರ್ಥಿಗೆ ಪರೀಕ್ಷೆಯಲ್ಲಿ ಶೇ. 50 ರಿಂದ 60 ಅಂಕಗಳು ದೊರೆತರೆ, ಅವರಿಗಾಗಿ ವಾರ್ಷಿಕ 75 ರೂ.ಗಳನ್ನು ಮಂಜೂರು ಮಾಡಲಾಯಿತು; ಅಂತೆಯೇ ಶೇ. 50 ರಿಂದ 60 ಅಂಕಗಳನ್ನು ಪಡೆಯುವ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ವಾರ್ಷಿಕ 50 ರೂ.ಗಳನ್ನೂ, ಪ್ರೌಢಶಾಲೆಯ ಪರೀಕ್ಷೆಗಳಲ್ಲಿ ಶೇ. 60ಕ್ಕಿಂತ ಹೆಚ್ಚು ಅಂಕಗಳನ್ನು ಪಡೆವ ವಿದ್ಯಾರ್ಥಿಗಳಿಗೆ ವಾರ್ಷಿಕ 100 ರೂ.ಗಳನ್ನು ಮಂಜೂರು ಮಾಡಲಾಯಿತು. 1979-80ರಲ್ಲಿ ಪ್ರತಿಭಾ ವಿದ್ಯಾರ್ಥಿವೇತನವು 23,585 ವಿದ್ಯಾರ್ಥಿಗಳಿಗೆ ದೊರೆತರೆ, 1974-75ರ ಸಾಲಿನಲ್ಲಿ ಈ ವಿದ್ಯಾರ್ಥಿವೇತನವನ್ನು ಪಡೆದವರ ಸಂಖ್ಯೆ 3,050 ಆಗಿದ್ದಿತು. 1981-82ರ ವೇಳೆಗೆ ಪ್ರತಿಭಾ ವಿದ್ಯಾರ್ಥಿವೇತನವನ್ನು ಪಡೆದವರ ಸಂಖ್ಯೆ 18,869ಕ್ಕೆ ಏರಿತು.

ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು, ಅನುಸೂಚಿತ ಬುಡಕಟ್ಟುಗಳು, ಅಲೆಮಾರಿ ಹಾಗೂ ಅರೆ-ಅಲೆಮಾರಿ ಜನಾಂಗಗಳ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ 750 ರೂ.ಗಿಂತ ಕಡಿಮೆಯಿದ್ದರೆ, ಅವರ ಮಕ್ಕಳಿಗೆ ಭಾರತ ಸರ್ಕಾರದಿಂದ ಪ್ರೌಢಶಾಲೆಯ ನಂತರದ ವಿದ್ಯಾರ್ಥಿವೇತನವು ದೊರೆಯುತ್ತದೆ. ಈ ಸೌಲಭ್ಯವನ್ನು ಭಾರತ ಸರ್ಕಾರವು 1944ರಲ್ಲೇ ಜಾರಿಗೆ ತಂದಿತು. ಈ ಕಾರ್ಯಕ್ರಮವನ್ನು ವಿಕೇಂದ್ರೀಕರಿಸಿ

ದುವರಿಂದ 1959-60 ರಿಂದ ರಾಜ್ಯಗಳೇ ಅದನ್ನು ನಿರ್ವಹಿಸುವಂತಾಯಿತು. ಭಾರತ ಸರ್ಕಾರದಿಂದ ಪ್ರೌಢಶಾಲಾನಂತರದ ವಿದ್ಯಾರ್ಥಿವೇತನವನ್ನು ಪಡೆಯದವರ ಅನುಕೂಲಕ್ಕಾಗಿ, ರಾಜ್ಯ ಸರ್ಕಾರವು ವಿದ್ಯಾರ್ಥಿಗಳು ಕಲಿಯುವ ಶಿಕ್ಷಣ ಕ್ರಮವನ್ನು ಅನುಸರಿಸಿ, ಅವರಿಗೆ ತಿಂಗಳಿಗೆ 40 ರಿಂದ 75 ರೂ.ಗಳ ವಿದ್ಯಾರ್ಥಿವೇತನವನ್ನು ಮಂಜೂರು ಮಾಡುತ್ತಿದೆ. 1979-80ರಲ್ಲಿ ರಾಜ್ಯದ 30,380 ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು 258.15 ಲಕ್ಷ ರೂ.ಗಳ ವಿದ್ಯಾರ್ಥಿವೇತನವನ್ನು ಭಾರತ ಸರ್ಕಾರದಿಂದ ಪಡೆದರು; ಇದೇ ಕಾಲದಲ್ಲಿ ರಾಜ್ಯ ಸರ್ಕಾರದಿಂದ 84 ವಿದ್ಯಾರ್ಥಿಗಳು 0.46 ಲಕ್ಷ ರೂ.ಗಳ ವಿದ್ಯಾರ್ಥಿವೇತನವನ್ನು ಪಡೆದರು. 1981-82ರಲ್ಲಿ ಭಾರತ ಸರ್ಕಾರ 225.44 ಲಕ್ಷ ರೂ.ಗಳ ವಿದ್ಯಾರ್ಥಿವೇತನವನ್ನು ಪರಿಶಿಷ್ಟ ಜನಾಂಗಗಳ 24,993 ವಿದ್ಯಾರ್ಥಿಗಳಿಗೆ ದೊರಕಿಸಿತು. ರಾಜ್ಯ ಸರ್ಕಾರದಿಂದ 0.98 ಲಕ್ಷ ರೂ.ಗಳ ವಿದ್ಯಾರ್ಥಿವೇತನವನ್ನು 252 ವಿದ್ಯಾರ್ಥಿಗಳಿಗೆ ನೀಡಲಾಯಿತು. ಐದನೇಯ ಯೋಜನೆಯಲ್ಲಿ ಹೊರದೇಶದಲ್ಲಿ ವ್ಯಾಸಂಗದ ಅವಕಾಶ ಮಾಡಿಕೊಡಲು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗಾಗಿಯೇ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು ಆರಂಭಿಸಲಾಯಿತು. ಅರ್ಹ ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಸೌಲಭ್ಯವನ್ನು ಪಡೆಯಲು ಪ್ರಯತ್ನಿಸಬೇಕಾಗಿದೆ.

ಸರ್ಕಾರಿ ಶಾಲೆಗಳಲ್ಲಿ ಮತ್ತು ಅನುದಾನ ಪಡೆಯುವ ಶಾಲೆಗಳಲ್ಲಿ ವ್ಯಾಸಂಗ ಮಾಡುವ ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಹಾಗೂ ಇತರ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಎಲ್ಲಾ ಬಗೆಯ ಶುಲ್ಕದಿಂದ ವಿನಾಯತಿ ನೀಡಲಾಗಿದೆ. ಸಹಾಯಧನ ಪಡೆಯದ ಖಾಸಗಿ ಶಾಲೆಗಳಲ್ಲಿ ಈ ಜನಾಂಗಗಳ ವಿದ್ಯಾರ್ಥಿಗಳು ಪ್ರವೇಶ ಪಡೆದು ವ್ಯಾಸಂಗ ಮಾಡುತ್ತಿದ್ದಲ್ಲಿ, ಬೋಧನಾ ಶುಲ್ಕದ ಜತೆಗೆ ಇತರ ಶುಲ್ಕವನ್ನೂ, ಹಾಗೂ ಪೋಷಣಾ ವೆಚ್ಚವನ್ನೂ ಸಮಾಜ ಕಲ್ಯಾಣ ಇಲಾಖೆಯ ಮೂಲಕ ರಾಜ್ಯ ಸರ್ಕಾರ ಅವರಿಗೆ ನೀಡಲು ಮುಂದಾಗಿದೆ.

ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಹಾಗೂ ಹಿಂದುಳಿದ ಆದಿವಾಸಿಗಳು ಯಾವ ಕಾರಣಕ್ಕೂ ವ್ಯಾಸಂಗವನ್ನು ನಿಲ್ಲಿಸದಂತೆ ಮುಂದುವರಿಸಲು ಪ್ರೋತ್ಸಾಹಪೂರ್ವಕ ನಗದು ಬಹುಮಾನ ಯೋಜನೆಯನ್ನು ಸರ್ಕಾರ ಪ್ರಾರಂಭಿಸಿದೆ. ಐದನೇಯ ಯೋಜನೆಯಲ್ಲಿ ಈ ಕಾರ್ಯಕ್ರಮ ಆರಂಭವಾಯಿತು. ಪ್ರೌಢ ಶಿಕ್ಷಣದ ಅಂತಿಮ ಪರೀಕ್ಷೆಯಲ್ಲಿ ಮೊದಲ ಬಾರಿಗೆ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದುವ ಈ ಜನಾಂಗಗಳ ವಿದ್ಯಾರ್ಥಿಗೆ 500 ರೂ.ಗಳ ನಗದು ಬಹುಮಾನವನ್ನೂ, ರ್‍ಯಾಂಕ್ ಪಡೆದವರಿಗೆ 1,000 ರೂ.ಗಳ ನಗದು ಬಹುಮಾನ ಅಥವಾ ಚಿನ್ನದ ಪದಕವನ್ನೂ ನೀಡಲು ಸಮಾಜ ಕಲ್ಯಾಣ ಇಲಾಖೆ ಮುಂದೆ ಬಂದಿದೆ. 1981-82ರಲ್ಲಿ 178 ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಪ್ರಯೋಜನವನ್ನು ಪಡೆದಿದ್ದಾರೆ.

ಮೂರನೇಯ ಯೋಜನೆಯಲ್ಲಿ 'ಪುಸ್ತಕ ನಿಧಿ' (ಬುಕ್ ಬ್ಯಾಂಕ್) ಕಾರ್ಯಕ್ರಮ ಆರಂಭಿಸಲ್ಪಟ್ಟು ಕಾಲೇಜು ವ್ಯಾಸಂಗ ಮಾಡುವ ಪರಿಶಿಷ್ಟ ಜಾತಿ, ಬುಡಕಟ್ಟು, ಅನುಸೂಚಿತ ಜನಾಂಗ, ಅಲೆಮಾರಿ ಮತ್ತು ಅರೆ-ಅಲೆಮಾರಿ ಬುಡಕಟ್ಟಿನ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳ ಗ್ರಂಥಾಲಯದ ಸೌಕರ್ಯವನ್ನು ಒದಗಿಸಲಾಗಿದೆ. ಐದನೇಯ ಯೋಜನೆಯಲ್ಲಿ 2,500 ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕ ಒದಗಿಸಲು ಐದು ಲಕ್ಷ ರೂ. ಗಳ ವೆಚ್ಚವನ್ನು ಮಂಜೂರು ಮಾಡಲಾಯಿತು; ಅಷ್ಟೇ ಅಲ್ಲದೆ ತಾಂತ್ರಿಕ ಶಿಕ್ಷಣ ಪಡೆಯುವ ಈ ಜನಾಂಗಗಳ 1,000 ವಿದ್ಯಾರ್ಥಿಗಳ ಪಠ್ಯಪುಸ್ತಕಕ್ಕಾಗಿ ಐದು ಲಕ್ಷ ರೂಪಾಯಿಗಳ ವೆಚ್ಚವನ್ನೂ ಯೋಜನೆಯು ಒಳಗೊಂಡಿತು. ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣದ 1,204 ವಿದ್ಯಾರ್ಥಿಗಳಿಗೆ 1979-80ರಲ್ಲಿ 2.48 ಲಕ್ಷ ರೂ. ಗಳನ್ನು ವೆಚ್ಚ ಮಾಡಲಾಯಿತು; 1981-82ರಲ್ಲಿ ಈ ಬಾಬಿನ ವೆಚ್ಚ 4.31 ಲಕ್ಷ ರೂಪಾಯಿಗಳು.

ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ವಿದ್ಯಾರ್ಥಿಗಳ ಫಲಿತಾಂಶವನ್ನು ಉತ್ತಮ ಪಡಿಸಲು, ಅವರಿಗೆ ವಿಶೇಷ ತರಬೇತಿ ಕಾರ್ಯಕ್ರಮವನ್ನು ರೂಪಿಸಲಾಯಿತು. ಐದನೇಯ ಯೋಜನೆಯಲ್ಲಿ ಈ ಉದ್ದೇಶಕ್ಕೋಸ್ಕರ 5,000 ವಿದ್ಯಾರ್ಥಿಗಳಿಗಾಗಿ 10 ಲಕ್ಷ ರೂ. ಗಳನ್ನು ಒದಗಿಸಲಾಯಿತು. 1979-80ರಲ್ಲಿ 62 ತರಬೇತಿ ಪಡೆದ ವಿದ್ಯಾರ್ಥಿಗಳಿಗೆ ವಿಶೇಷ ಸೌಲಭ್ಯ ಒದಗಿಸಲು 1.49 ಲಕ್ಷ ರೂ. ಗಳನ್ನು ವೆಚ್ಚ ಮಾಡಲಾಯಿತು. ಕಾಲೇಜು ಶಿಕ್ಷಣಕ್ಕಾಗಿ ಭಾರತ ಸರ್ಕಾರದಿಂದ ವಿದ್ಯಾರ್ಥಿವೇತನ ಪಡೆಯುವ ವಿದ್ಯಾರ್ಥಿಗಳಿಗೆ ವರ್ಷಕ್ಕೊಮ್ಮೆ ಶೈಕ್ಷಣಿಕ ಪ್ರವಾಸಕ್ಕೆಂದು ತಲಾ 100 ರೂ. ಗಳನ್ನು ಮಂಜೂರು ಮಾಡಲಾಯಿತು. ಇದನ್ನು ಹೆಚ್ಚಿಸಿ ಪ್ರವಾಸಕ್ಕೆ ವಾಸ್ತವವಾಗಿ ವೆಚ್ಚವಾಗುವ ಹಣ ಅಥವಾ 500 ರೂ. ಗಳು—ಯಾವುದು ಕಡಿಮೆಯೋ ಅದನ್ನು ವಿದ್ಯಾರ್ಥಿಗಳಿಗೆ ನೀಡಲು ಸರ್ಕಾರ ಒಪ್ಪಿಗೆ ನೀಡಿದೆ. ಆರನೇಯ ಯೋಜನೆಯಲ್ಲಿ ಕಾಲೇಜು ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡುವ ಸಲುವಾಗಿ ಕಾರ್ಯಕ್ರಮವೊಂದು ಜಾರಿಯಲ್ಲಿದ್ದರೂ, ಈ ಜನಾಂಗದ ವಿದ್ಯಾರ್ಥಿಗಳು ಇದರ ಪ್ರಯೋಜನವನ್ನು ಪಡೆಯಬೇಕಾಗಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಖಾಸಗಿ ವೈದ್ಯಕೀಯ ಕಾಲೇಜಿನಲ್ಲಿ ಪ್ರವೇಶ ಪಡೆದರೆ ಅದಕ್ಕೆ ತಗಲುವ ಕ್ಯಾಪಿಟೇಷನ್ ಶುಲ್ಕವನ್ನು ಸರ್ಕಾರ ತುಂಬಿ ಕೊಡುವ ಸಲುವಾಗಿ ಐದನೇಯ ಯೋಜನೆಯಲ್ಲಿ 2.05 ಲಕ್ಷ ರೂ. ಗಳ ವೆಚ್ಚವನ್ನು ನಿಗದಿ ಮಾಡಿದೆ. ಈ ಜನಾಂಗದ ತಾಂತ್ರಿಕ ಶಿಕ್ಷಣದ ವಿದ್ಯಾರ್ಥಿಗಳಿಗೆ ವಿಶೇಷ ತರಬೇತಿಯನ್ನೂ ಆರಂಭಿಸಿದೆ. ಐದನೇಯ ಯೋಜನೆಯನ್ವಯ ಅರೆ-ಅವಧಿಯ ಬೋಧಕರಿಗೆ

250 ರೂ. ಗಳ ಗೌರವಧನವನ್ನೂ ಸರ್ಕಾರ ಮಂಜೂರು ಮಾಡಿದೆ.

ಮೇಲೆ ತಿಳಿಸಿರುವ ಎಲ್ಲಾ ಕಾರ್ಯಕ್ರಮಗಳ ಜೊತೆಗೆ ಇನ್ನೂ ಹಲವಾರು ಹೊಸ ಕಾರ್ಯಕ್ರಮಗಳನ್ನು ಆರನೇಯ ಯೋಜನೆಯಲ್ಲಿ (1980-85ರ ಕಾಲದಲ್ಲಿ) ಸೇರಿಸಲಾಗಿದೆ. ಪರಿಶಿಷ್ಟ ಜನಾಂಗಗಳ ವಿದ್ಯಾರ್ಥಿಗಳು ವಸತಿ ನಿಲಯಗಳಲ್ಲಿದ್ದರೆ ಅವರಿಗೆ ಕ್ರೀಡಾ ಸಲಕರಣೆಗಳನ್ನು ಒದಗಿಸುವ ಕಾರ್ಯವನ್ನು 1979-80 ಹಾಗೂ 1981-82ರಲ್ಲಿ 50,000 ರೂ. ಗಳ ವೆಚ್ಚದಲ್ಲಿ ಆರಂಭಿಸಲಾಗಿದೆ. ಪೌರ ಕಾರ್ಮಿಕ ಕಸುಬನ್ನು ಮಾಡುತ್ತಿರುವ ಹಿಂದುಳಿದ ಜಾತಿಗಳ ಮಕ್ಕಳಿಗೆ ಆರನೇಯ ಯೋಜನೆಯಲ್ಲಿ ಪ್ರೌಢ ವಿದ್ಯಾಭ್ಯಾಸಕ್ಕೆ ಮುಂಚಿನ ವಿದ್ಯಾರ್ಥಿ ವೇತನವನ್ನು ದೊರಕಿಸುವ ಹೊಸ ಕಾರ್ಯಕ್ರಮವನ್ನು ನಾಲ್ಕು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಸರ್ಕಾರ ಕೈಗೊಂಡಿದೆ. ಇದರಿಂದಾಗಿ 534 ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ. ಪರಿಶಿಷ್ಟ ಜಾತಿಗಳ ಯುವಕರು ನಿರುದ್ಯೋಗಕ್ಕೆ ಬಲಿಯಾಗ ಬಾರದೆಂದು ಹಾಗೂ ಅವರು ಸ್ವಂತ ಉದ್ಯೋಗ ಆರಂಭಿಸಲು ಅನುಕೂಲವಾಗಬೇಕೆಂದು 1981-82ರಲ್ಲಿ 54 ಲಕ್ಷ ರೂ. ಗಳ ವೆಚ್ಚದಲ್ಲಿ ತರಬೇತಿ ಕೇಂದ್ರವನ್ನು ಸ್ಥಾಪಿಸಲಾಗಿದೆ. ಈ ಕಾರ್ಯಕ್ರಮದಿಂದ 46 ಯುವಕರು ನೆರವು ಪಡೆದಿದ್ದಾರೆ. ಪ್ರೌಢ ವಿದ್ಯಾಭ್ಯಾಸ ಮುಗಿಸಿದ (ಎಸ್. ಎಸ್. ಎಲ್. ಸಿ.) ಈ ಜನಾಂಗಗಳ ಬಾಲಕಿಯರಿಗೆ ಟಿ. ಸಿ. ಎಚ್. ತರಬೇತಿ ಕೊಡಲು ವ್ಯವಸ್ಥೆ ಮಾಡಲಾಗಿದೆ. ಎಸ್. ಎಸ್. ಎಲ್. ಸಿ. ತೇರ್ಗಡೆ ಹೊಂದದ ಬಾಲಕಿಯರಿಗಾಗಿ ಎರಡು ಪರೀಕ್ಷಾ ತರಬೇತಿ ಕೇಂದ್ರಗಳನ್ನು ನಡೆಸಲಾಗುತ್ತಿದೆ. ವಸತಿ ನಿಲಯದಲ್ಲಿ ವಾಸಿಸದ ಪರಿಶಿಷ್ಟ ವಿದ್ಯಾರ್ಥಿಗಳಿಗೂ ಪುಸ್ತಕ ಹಾಗೂ ಉಡುಪನ್ನು ಒದಗಿಸಲು ಆರನೇಯ ಯೋಜನೆಯಲ್ಲಿ ಅವಕಾಶ ಮಾಡಲಾಗಿದೆ. ಹೆಣ್ಣುಮಕ್ಕಳ ವಸತಿನಿಲಯದ ಕಟ್ಟಡ ನಿರ್ಮಾಣ ಕಾರ್ಯವು ಕೇಂದ್ರ ವಿಭಾಗದಲ್ಲಿದ್ದುದನ್ನು ರಾಜ್ಯ ಸರ್ಕಾರ ಸ್ವೀಕರಿಸಿ, ಅದರೊಂದಿಗೆ ಸಹಭಾಗಿತ್ವದಲ್ಲಿ ಈ ಕಾರ್ಯವನ್ನು ಮುಂದು ವರಿಸಿತು. ವಸತಿ ಶಾಲೆಗಳಿಗೆ ಮತ್ತು ಅಧ್ಯಾಪಕರ ವಸತಿಗೆ ಅವಶ್ಯಕವಿರುವ ಮತ್ತೊಂದು ಕಾರ್ಯಕ್ರಮವನ್ನು ಸರ್ಕಾರ ಕೈಗೊಂಡಿತು. ಪರಿಶಿಷ್ಟ ವಿದ್ಯಾರ್ಥಿಗಳ ಸಂಸ್ಕೃತ ಅಧ್ಯಯನ ವನ್ನು ಪ್ರೋತ್ಸಾಹಿಸಲು ಹೊಸ ಕಾರ್ಯಕ್ರಮವೊಂದನ್ನು ರೂಪಿಸಲಾಯಿತು. ಆಸಕ್ತ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡಲು ಸೂಕ್ತ ಕ್ರಮಗಳನ್ನು 0.44 ಲಕ್ಷ ರೂ. ಗಳ ವೆಚ್ಚದಲ್ಲಿ ಆರಂಭಿಸಲಾಗಿದೆ.

ಎರಡನೇಯ ಯೋಜನೆಯ ಕಾರ್ಯಾರಂಭದಿಂದ ಪರಿಶಿಷ್ಟ ಜಾತಿ, ಬುಡಕಟ್ಟು, ಅನುಸೂಚಿತ ಬುಡಕಟ್ಟು, ಅಲೆಮಾರಿ ಹಾಗೂ ಅರೆಅಲೆಮಾರಿ ಜನಾಂಗಗಳ ವಿದ್ಯಾರ್ಥಿಗಳ ಸೌಕರ್ಯ ಕ್ಕಾಗಿ ವಸತಿ ವ್ಯವಸ್ಥೆಯನ್ನು ಹಲವಾರು ಬಗೆಯಲ್ಲಿ ಮಾಡ ಲಾಗಿದೆ. ಹಿರಿಯ ಪ್ರಾಥಮಿಕ ಶಾಲೆಗಳು, ಪ್ರೌಢಶಾಲೆಗಳು ಮತ್ತು ಕಾಲೇಜುಗಳಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ-ವಸತಿಯನ್ನೊದಗಿಸಲು ರಾಜ್ಯದ ಎಲ್ಲಾ ಕಡೆಗಳಲ್ಲೂ ವಸತಿ ನಿಲಯಗಳನ್ನು ಸ್ಥಾಪಿಸಲಾಗಿದೆ; ಇದರ ಜೊತೆಗೆ ಆ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳು, ಉಡುಪುಗಳು ಹಾಗೂ ವೈದ್ಯಕೀಯ ನೆರವನ್ನೂ ಒದಗಿಸಲು ಸರ್ಕಾರ ಮುಂದಾಗಿದೆ. ವಸತಿ ನಿಲಯದ ವಿದ್ಯಾರ್ಥಿಗಳಿಗೆ ಪಾಠಹೇಳಲು ಅರೆಅವಧಿಯ ಅಧ್ಯಾಪಕರ ವ್ಯವಸ್ಥೆಯನ್ನು ಮಾಡಲಾಗಿದೆ. "ವಿಶ್ವ ಆಹಾರ ಕಾರ್ಯಕ್ರಮ"ದನ್ವಯ ಪ್ರತೀ ವಸತಿ ನಿಲಯ ಗಳಿಗೂ ಹೆಚ್ಚು ಆಹಾರ ಒದಗಿಸಲಾಗುತ್ತಿದೆ.

ರಾಜ್ಯಗಳ ಪುನರ್ವ್ಯವಸ್ಥೆಯ ಸಮಯದಲ್ಲಿ ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟು ಜನಾಂಗಗಳ ಬಾಲಕ-ಬಾಲಕಿಯರಿಗಾಗಿ ಕೆಲವೇ ಸರ್ಕಾರಿ ವಸತಿ ನಿಲಯಗಳು ಇದ್ದವು. ಎರಡನೇಯ ಯೋಜನೆಯ ಮಧ್ಯಭಾಗದಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪ್ರಾಧಾನ್ಯ ಕೊಟ್ಟಿದ್ದರಿಂದ ಅನೇಕ ವಸತಿ ನಿಲಯಗಳು ಆರಂಭಿಸಲ್ಪಟ್ಟವು. ಮಾರ್ಚ್ 31, 1974ರ ವೇಳೆಗೆ ಸರ್ಕಾರ 310 ವಸತಿ ನಿಲಯಗಳನ್ನು ಆರಂಭಿಸಿತ್ತು; ಅವುಗಳಲ್ಲಿ 110 ಬಾಲಕಿಯರ ವಸತಿ ನಿಲಯಗಳಾಗಿದ್ದವು. ಎಲ್ಲಾ ವಸತಿ ನಿಲಯಗಳಿಂದ 16,968 ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಯಾಗಿತ್ತು. ಈ ವಸತಿ ನಿಲಯಗಳು ಪ್ರಧಾನವಾಗಿ ಪರಿಶಿಷ್ಟ ಜಾತಿಗಳ ವಿದ್ಯಾರ್ಥಿಗಳಿಗಾಗಿ ತೆರೆಯಲ್ಪಟ್ಟಿದ್ದರೂ 1966-67 ರಲ್ಲಿ, ಇವುಗಳನ್ನು 'ಸಾರ್ವಜನಿಕ ವಸತಿ ನಿಲಯ'ಗಳೆಂದು ಪರಿಗಣಿಸಿ, ಇವುಗಳಲ್ಲಿ ಶೇ. 25ರಷ್ಟು ಪ್ರವೇಶವನ್ನು ಪರಿಶಿಷ್ಟ ಜಾತಿಗಳಲ್ಲದ ಇತರ ಸಮುದಾಯಗಳಿಗೆ, ಅಂದರೆ ಪರಿಶಿಷ್ಟ ಬುಡಕಟ್ಟು, ಅನುಸೂಚಿತ ಬುಡಕಟ್ಟು, ಅಲೆಮಾರಿ ಮತ್ತು ಅರೆಅಲೆಮಾರಿ ಜನಾಂಗಗಳ ವಿದ್ಯಾರ್ಥಿಗಳಿಗೆ ಕಾದಿರಿಸಿತು. ಇದರ ಮುಖ್ಯ ಉದ್ದೇಶ ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಐಕ್ಯವನ್ನು ಬೆಳಸುವುದಾಗಿದೆ. 1959ರ ಮೊದಲಲ್ಲಿ ಹೊಲೆಯ ಮತ್ತು ಭಂಗಿ ಕುಟುಂಬಗಳಿಂದ ಬರುವ ಪರಿಶಿಷ್ಟ ಜಾತಿಗಳ ವಿದ್ಯಾರ್ಥಿಗಳಿಗೆ ಎಲ್ಲಾ ವಸತಿ ನಿಲಯಗಳಲ್ಲೂ ಶೇ. ಐದರಷ್ಟು ಪ್ರವೇಶವನ್ನು ಸರ್ಕಾರವು ಕಾದಿರಿಸಿತ್ತು. ತಮ್ಮ ಆಡಳಿತ ಮಿತಿಯಲ್ಲಿ ಬರುವ ವಸತಿ ಕಾರ್ಯಕ್ರಮವನ್ನು ಪರಿಣಾಮ ಯುತವಾಗಿ ನಿರ್ವಹಿಸಲು ಹಾಗೂ ಜಾರಿಗೊಳಿಸಲು ತಾಲೂಕು ಸಲಹಾ ಸಮಿತಿ ಮತ್ತು ಜಿಲ್ಲಾ ಸಲಹಾ ಸಮಿತಿಗಳ ರಚನೆ ಯಾಯಿತು. ಪ್ರಾರಂಭದಲ್ಲಿ ಪ್ರತೀ ವಿದ್ಯಾರ್ಥಿಯ ವಸತಿ ಮತ್ತು ಊಟಕ್ಕಾಗಿ ತಿಂಗಳಿಗೆ 30 ರೂ.ಗಳನ್ನು ವೆಚ್ಚ ಮಾಡಲಾಗುತ್ತಿತ್ತು; ಅನಂತರ 1973ರಲ್ಲಿ ಈ ಮೊಬಲಗನ್ನು ತಿಂಗಳಿಗೆ 40 ರೂ.ಗಳಿಗೆ ಹೆಚ್ಚಿಸಲಾಯಿತು. ಇದರ ಜತೆಗೆ ಉಡುಪು, ಪುಸ್ತಕ, ವೈದ್ಯಕೀಯ ಸಹಾಯ, ಕ್ಷೌರದ ಖರ್ಚು,

ಪತ್ರಿಕೆಗಳನ್ನು ಒದಗಿಸುವುದು, ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ತಗಲುವ ವೆಚ್ಚವನ್ನೂ ಸರ್ಕಾರ ವಹಿಸಿಕೊಂಡಿತು. ಆ ವಿದ್ಯಾರ್ಥಿಗಳಿಗೆ ಅರೆ-ಅವಧಿಯ ಬೋಧಕರ ಸಹಾಯವನ್ನೂ ಒದಗಿಸಲಾಗಿದೆ.

ಪರಿಶಿಷ್ಟ ಜಾತಿಗಳ, ಬುಡಕಟ್ಟುಗಳ, ಅನುಸೂಚಿತ ಬುಡಕಟ್ಟುಗಳ ಅಲೆಮಾರಿ ಮತ್ತು ಅರೆ-ಅಲೆಮಾರಿ ಹಾಗೂ ಇತರ ಹಿಂದುಳಿದ ವರ್ಗಗಳಿಗಾಗಿ ವಸತಿ ನಿಲಯಗಳನ್ನು ತೆರೆಯಲು ಸ್ವಯಂಪ್ರೇರಿತ ಸಂಘ-ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಲಾಯಿತು. 1956ಕ್ಕೆ ಮುನ್ನ ಸೇರ್ಪಡೆಯಾದ ಪ್ರದೇಶಗಳಲ್ಲಿ ಖಾಸಗಿ ಅನುದಾನ ವಸತಿ ನಿಲಯಗಳಿಗೆ ಸರ್ಕಾರ ಭಿನ್ನ ಪ್ರಮಾಣದಲ್ಲಿ ಧನ ಸಹಾಯ ಮಾಡುತ್ತಿತ್ತು. 1972 ರಿಂದ 30 ರೂ.ಗಳ ಒಂದೇ ಪ್ರಮಾಣದ ತಿಂಗಳ ವೆಚ್ಚವನ್ನು ಪ್ರತೀ ವಿದ್ಯಾರ್ಥಿಯ ಊಟಕ್ಕಾಗಿ, ಹತ್ತು ತಿಂಗಳವರೆಗೆ ಸರ್ಕಾರ ವೆಚ್ಚ ಮಾಡಲು ಮುಂದೆ ಬಂದಿತು. 1973 ರಿಂದ ಈ ತಿಂಗಳ ವೆಚ್ಚವು 40 ರೂ.ಗಳಿಗೆ ಹೆಚ್ಚಿಸಲ್ಪಟ್ಟಿದೆ. ವಸತಿ ನಿಲಯಗಳಲ್ಲಿ ವಿದ್ಯಾರ್ಥಿಗಳ ಊಟದ ವೆಚ್ಚಕ್ಕೆ ಪ್ರತೀ ತಿಂಗಳಿಗೆ 50 ರೂ.ಗಳ ಅನುದಾನ ನೀಡಲು ಸರ್ಕಾರ ಮುಂದಾಯಿತು. ಪೀಠೋಪಕರಣ, ಪಾತ್ರೆಗಳು, ಗ್ರಂಥಾಲಯದ ಪುಸ್ತಕಗಳು, ಮುಂತಾದ ವೆಚ್ಚಕ್ಕೆಂದು ವಾಪಸ್ಸು ಪಡೆಯದ ಸಹಾಯ ಧನವನ್ನು ಐದು ವರ್ಷಕ್ಕೊಮ್ಮೆ ಗರಿಷ್ಠ 1,000 ರೂ.ಗಳಂತೆ ಖಾಸಗಿ ವಸತಿ ನಿಲಯಗಳಿಗೆ ಒದಗಿಸಲಾಯಿತು. ಮಾರ್ಚ್ 31, 1974ರ ವೇಳೆಗೆ ಪರಿಶಿಷ್ಟ ವಿದ್ಯಾರ್ಥಿಗಳಿಗಾಗಿ ಅನುದಾನ ಪಡೆಯುವ 106 ವಸತಿ ನಿಲಯಗಳು ಕಾರ್ಯ ನಿರ್ವಹಿಸಿ 3,623 ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಕೈಗೊಂಡಿದ್ದವು. 1979-80ರಲ್ಲಿ ಇಂಥ 170 ಅನುದಾನ ಪಡೆಯುವ ವಸತಿ ನಿಲಯಗಳಿಗೆ 30.82 ಲಕ್ಷ ರೂ.ಗಳ ಧನ ಸಹಾಯವನ್ನು ಸರ್ಕಾರ ಮಂಜೂರು ಮಾಡಿತು. ವಿದ್ಯಾ ಇಲಾಖೆಯು ಮಾರ್ಚ್ 1974ರಲ್ಲಿ 129 ಅನುದಾನ ಪಡೆಯುವ ವಸತಿ ನಿಲಯಗಳನ್ನು ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಿತು. ಅವುಗಳಲ್ಲಿ 21 ಸಾರ್ವಜನಿಕ ನಿಲಯಗಳು; 103 ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ಹಾಗೂ ಇತರ ಹಿಂದುಳಿದ ಬುಡಕಟ್ಟುಗಳ ನಿಲಯಗಳು; ಐದು ಇತರ ಹಿಂದುಳಿದ ವರ್ಗಗಳಿಗೆ ಸೇರಿದವು. 1981-82ರ ಮುಕ್ತಾಯದ ವೇಳೆಗೆ 137.85 ಲಕ್ಷ ರೂ.ಗಳ ವೆಚ್ಚವನ್ನು 384 ಸರ್ಕಾರಿ ವಸತಿ ನಿಲಯಗಳಿಗೂ, 45.35 ಲಕ್ಷ ರೂ.ಗಳನ್ನು 157 ಅನುದಾನ ಪಡೆಯುವ ಖಾಸಗಿ ವಸತಿ ನಿಲಯಗಳಿಗೂ ಸರ್ಕಾರ ಮಂಜೂರು ಮಾಡಿತು.

ಪರಿಶಿಷ್ಟ ಜಾತಿಗಳ ಕಾಲೇಜು ವಿದ್ಯಾರ್ಥಿಗಳಿಗಾಗಿ ಸರ್ಕಾರ ವಸತಿ ನಿಲಯಗಳನ್ನು ತೆರೆಯಿತು. 77 ಸರ್ಕಾರಿ ವಸತಿ ನಿಲಯಗಳ ನಿರ್ವಹಣೆಗೆ 10.99 ಲಕ್ಷ ರೂ.ಗಳ ವೆಚ್ಚವನ್ನು ಮಂಜೂರು ಮಾಡಿತು. 1980-81ರ ಸಾಲಿನಲ್ಲಿ ಕಾಲೇಜು ವಿದ್ಯಾರ್ಥಿಗಳಿಗೋಸ್ಕರ ಒಂಬತ್ತು ಖಾಸಗಿ ವಸತಿ ನಿಲಯಗಳು ಆರಂಭವಾದವು. ಅವುಗಳಿಗೆ ನೀಡಿದ ಸಹಾಯ ಧನವು 0.42 ಲಕ್ಷ ರೂ.ಗಳು. ವಿದ್ಯಾರ್ಥಿ ನಿಲಯಗಳಿಗೆ 1979-80ರಲ್ಲಿ 8,800 ವಿದ್ಯಾರ್ಥಿಗಳ ಊಟದ ವೆಚ್ಚಕ್ಕಾಗಿ ನೀಡಿದ ಅನುದಾನ 44.00 ಲಕ್ಷ ರೂ.ಗಳಾಗಿದ್ದವು; ಈ ವೆಚ್ಚ 1981-82ರಲ್ಲಿ 52.68 ಲಕ್ಷ ರೂ.ಗಳಿಗೆ ಏರಿತು. ಈ ವರ್ಷದಲ್ಲಿ 10,716 ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ಪ್ರತೀ ವಿದ್ಯಾರ್ಥಿಯ ವೆಚ್ಚ ತಿಂಗಳಿಗೆ 125 ರೂಪಾಯಿಗಳಿಗಿಂತ ಅಧಿಕವಾದರೂ, ಅದನ್ನು ಸರ್ಕಾರವೇ ವಹಿಸಿಕೊಂಡಿತು.

**ವೃತ್ತಿ ತರಬೇತಿ:** 1964ರಲ್ಲಿ ಸಮಾಜ ಕಲ್ಯಾಣ ನಿರ್ದೇಶನಾಲಯದ ಅಂಗವಾಗಿ ಉದ್ಯೋಗ ಘಟಕವೊಂದು ರಚಿತವಾಯಿತು. ಇದು ಸರ್ಕಾರದ ತಿಳುವಳಿಕೆಯ ಪತ್ರ ಹಾಗೂ ಆಜ್ಞೆಗಳನ್ನು ಹುದ್ದೆಗಳ ಮೀಸಲಾತಿಯಲ್ಲಿ ಶಾಖಾ ಕಛೇರಿಗಳಲ್ಲಿ ಯಾವ ರೀತಿ ಅನುಸರಿಸಲಾಗಿದೆ ಎಂಬುದನ್ನು ಪರಿಶೀಲಿಸುತ್ತದೆ. ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಇರುವ ಉದ್ಯೋಗಾವಕಾಶಗಳ ಪ್ರಚಾರವೂ ಈ ಘಟಕದ ಕಾರ್ಯವಾಗಿದೆ. ತರಬೇತು ಹಾಗೂ ಶಿಕ್ಷಣ ಸೌಲಭ್ಯಗಳನ್ನು ಉದ್ಯೋಗಾವಕಾಶಗಳೊಡನೆ ಕೊಡಿಸುವುದೂ ಉದ್ಯೋಗ ಘಟಕದ ಮುಖ್ಯ ಕಾರ್ಯವಾಗಿದೆ. ಪರಿಶಿಷ್ಟ ಜಾತಿಗಳ ಮತ್ತು ಬುಡಕಟ್ಟು ಜನಾಂಗಗಳಿಗೆ ಉದ್ಯೋಗ ಘಟಕವು 'ಉದ್ಯೋಗ ವಿನಿಮಯ ಕೇಂದ್ರ'ವಾಗಿ ಕಾರ್ಯ ನಿರ್ವಹಿಸುತ್ತದೆ. ಮೂರನೇಯ ಯೋಜನೆಯ ಆರಂಭದಿಂದಲೂ ಕೈಗಾರಿಕಾ ತರಬೇತಿ ಕೇಂದ್ರ ಹಾಗೂ ಸಂಸ್ಥೆಗಳಲ್ಲಿ ಶಿಕ್ಷಣ ಪಡೆಯುವ ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಬುಡಕಟ್ಟುಗಳ ಮತ್ತು ಅಲೆಮಾರಿ ಹಾಗೂ ಅರೆ-ಅಲೆಮಾರಿ ಆದಿವಾಸಿ ವಿದ್ಯಾರ್ಥಿಗಳಿಗೆ ಸ್ಟೈಪೆಂಡ್ ದೊರೆಯುತ್ತದೆ; ಅಂಥ ವಿದ್ಯಾರ್ಥಿಗಳಿಗೆ ಮೊದಲು ಮಾಹೆಯಾನ 25 ರೂ.ಗಳು ದೊರೆಯುತ್ತಿತ್ತು; ಅದನ್ನು 45 ರೂ.ಗಳಿಗೆ ಹೆಚ್ಚಿಸಲಾಯಿತು. 1981-82ನೇ ಸಾಲಿನಲ್ಲಿ 2,422 ತರಬೇತಿ ಪಡೆವ ವಿದ್ಯಾರ್ಥಿಗಳು ಸ್ಟೈಪೆಂಡ್ ಪಡೆದರು. ಪರಿಶಿಷ್ಟ ಜಾತಿಗಳ ಮತ್ತು ಹಿಂದುಳಿದ ವರ್ಗಗಳ ಮಹಿಳೆಯರಿಗೆ ಕೈಕಸುಬುಗಳಲ್ಲಿ ಎಂದರೆ, ಉಡುಪು ಹೊಲಿಯುವುದು, ತೆಂಗಿನ ನಾರಿನ ಕಾಲೊರಸುಗಳನ್ನು ಮಾಡುವುದು, ಮರದಗೊಂಬೆ ತಯಾರಿ—ಮೊದಲಾದ ಕೆಲಸಗಳಲ್ಲಿ ವಿಶೇಷ ತರಬೇತಿ ನೀಡುವುದಕ್ಕೋಸ್ಕರ ರಾಜ್ಯದ ಎಲ್ಲೆಡೆಯಲ್ಲಿಯೂ ಕೇಂದ್ರಗಳನ್ನು ತೆರೆಯಲಾಯಿತು. 1959ರಲ್ಲಿ ಪ್ರತೀ ಜಿಲ್ಲೆಗೆ ಒಂದರಂತೆ 19 ಹೊಲಿಗೆಯ ಕೇಂದ್ರಗಳು ಆಯಾ ಜಿಲ್ಲಾ ಕೇಂದ್ರಗಳಲ್ಲಿ ತೆರೆಯಲ್ಪಟ್ಟವು. ಇಂಥ ಕೇಂದ್ರವೊಂದರಲ್ಲಿ 12 ಜನ ಮಹಿಳೆಯರಿಗೆ (ಪ್ರತೀಯೊಬ್ಬರಿಗೆ) 25 ರೂ.ನಂತೆ ಸ್ಟೈಪೆಂಡ್ ನೀಡಿ ಒಂದು

ವರ್ಷ ಕಾಲ ತರಬೇತಿ ನೀಡಲಾಯಿತು. ಇತರ ಹಿಂದುಳಿದ ವರ್ಗಗಳಿಗೂ ಈ ಕೇಂದ್ರಗಳಲ್ಲಿರುವ ಒಟ್ಟು ಸ್ಥಾನಗಳಲ್ಲಿ ಶೇ. 25 ರಷ್ಟನ್ನು ಕಾದಿರಿಸಲಾಯಿತು; 1969 ರಿಂದ ಈ ವರ್ಗದ ಮಹಿಳೆಯರಿಗೂ ಸ್ಟೈಪೆಂಡ್ ಮಂಜೂರು ಮಾಡಲಾಯಿತು. ವರ್ಷದ ಕೊನೆಯಲ್ಲಿ ಏರ್ಪಡಿಸುವ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಮಹಿಳೆಯರಿಗೆ ಉಚಿತವಾಗಿ ಒಂದು ಹೊಲಿಗೆ ಯಂತ್ರವನ್ನು ನೀಡಲಾಗುವುದು. 1973-74ರಲ್ಲಿ ರಾಜ್ಯದಲ್ಲಿ ಒಟ್ಟು 49 ಹೊಲಿಗೆ ಕೇಂದ್ರಗಳಿದ್ದು, ಅವು 590 ಮಹಿಳೆಯರಿಗೆ ತರಬೇತಿ ನೀಡಿದವು. ಅನುಸೂಚಿತ ಬುಡಕಟ್ಟುಗಳ ಮಹಿಳೆಯರಿಗೂ ಹೊಲಿಗೆ ತರಬೇತಿಯ ಸೌಲಭ್ಯವನ್ನು ವಿಸ್ತರಿಸಿದುದರಿಂದ, ಅವರಿಗೋಸ್ಕರ ಬಸವ ಕಲ್ಯಾಣ ತಾಲೂಕಿನ ರಾಜೇಶ್ವರ, ಗೋಕಾಕ್, ಸವದತ್ತಿ, ಹುಬ್ಬಳ್ಳಿ ಹಾಗೂ ಗದುಗಿನಲ್ಲಿ ಐದು ಹೊಲಿಗೆ ಕೇಂದ್ರಗಳನ್ನು ಆರಂಭಿಸಿ 75 ಮಹಿಳೆಯರಿಗೆ ಪ್ರತೀ ವರ್ಷ ತರಬೇತಿ ನೀಡಲಾಗುತ್ತಿದೆ. ಈ ಕೇಂದ್ರಗಳು ಆಯಾ ಸ್ಥಳದಲ್ಲಿ ಪರಿಶಿಷ್ಟ ವರ್ಗದ ಮಹಿಳೆಯರಿಗೆ ತರಬೇತಿ ನೀಡಿ ಮುಂದಿನ ಪ್ರದೇಶಗಳಿಗೆ ಚಲಿಸುತ್ತವೆ. 1981-82ರಲ್ಲಿ 78 ಹೊಲಿಗೆ ಕೇಂದ್ರಗಳಿಂದ ತರಬೇತಿ ಪಡೆದವರಿಗೆ 895 ಹೊಲಿಗೆ ಯಂತ್ರಗಳನ್ನು ವಿತರಣೆ ಮಾಡಲಾಯಿತು. ಈ ಕೇಂದ್ರಗಳಲ್ಲಿ ತರಬೇತಿ ಪಡೆದು ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಮಹಿಳೆಯರಿಗೆ ಉಡುಪು ತಯಾರಿಕಾ ಘಟಕಗಳಲ್ಲಿ ಉದ್ಯೋಗಕ್ಕೆ ಆಯ್ಕೆ ಮಾಡಲಾಗುತ್ತದೆ. ಇಲ್ಲಿ ದುಡಿಯುವ ಮಹಿಳೆಯರಿಗೆ ತಾವು ಸಿದ್ಧಪಡಿಸುವ ಪ್ರತೀ ಉಡುಪಿಗೆ ಮಜೂರಿ ಗೊತ್ತುಪಡಿಸಿ, ಅದರಂತೆ ಅವರು ಸಂಪಾದಿಸುವ ಒಟ್ಟು ಮಜೂರಿಯಲ್ಲಿ ಶೇ. 25 ಭಾಗವನ್ನು ತಯಾರಿಕಾ ಘಟಕದ ನಿರ್ವಹಣೆಗೆ ಹಿಡಿದುಕೊಳ್ಳಲಾಗುತ್ತದೆ. 1980-81 ರಲ್ಲಿ ಏಳು ಉಡುಪು ತಯಾರಿಕಾ ಘಟಕಗಳಿದ್ದು ಅವುಗಳಲ್ಲಿ 400 ಮಹಿಳಾ ಕಾರ್ಮಿಕರು ಕೆಲಸ ಮಾಡುತ್ತಿದ್ದರು. ಈ ಘಟಕಗಳು ಬೆಂಗಳೂರು, ಮಂಗಳೂರು, ಚಿತ್ರದುರ್ಗ, ಮೈಸೂರು, ಬೆಳಗಾವಿ, ಕಲ್ಬುರ್ಗಿ ಹಾಗೂ ಹುಬ್ಬಳ್ಳಿಯಲ್ಲಿ ಒಂದೊಂದರಂತೆ ಕಾರ್ಯ ನಿರ್ವಹಿಸುತ್ತಿವೆ.

ಪರಿಶಿಷ್ಟ ಜಾತಿಯ ಮಹಿಳೆಯರಿಗಾಗಿ ಸಮಾಜ ಕಲ್ಯಾಣ ಇಲಾಖೆಯು ಕೇಂದ್ರ ಕರಕುಶಲ ಅಭಿವೃದ್ಧಿ ಸಂಸ್ಥೆಯ ಜತೆಯಲ್ಲಿ ಸಮಾಲೋಚನೆ ನಡೆಸಿ ಚನ್ನಪಟ್ಟಣದಲ್ಲಿ ಮರದ ಗೊಂಬೆ ತಯಾರಿಯಲ್ಲಿ ತರಬೇತಿ ಕೇಂದ್ರವನ್ನು ಆರಂಭಿಸಿತು. ತರಬೇತಿ ಒಂದು ವರ್ಷ ಕಾಲದ್ದಾಗಿದ್ದು ಈ ತರಬೇತಿ ಸಮಯದಲ್ಲಿ ಈ ಮಹಿಳೆಯರಿಗೆ ತಿಂಗಳಿಗೆ 50 ರೂ. ಗಳ ನಿಗದಿತ ವೇತನವನ್ನು ಕೊಡಲಾಗುತ್ತಿದೆ. 1966ರಲ್ಲಿ ಇಂಥ ಇನ್ನೊಂದು ತರಬೇತಿ ಕೇಂದ್ರವನ್ನು ಅನುಸೂಚಿತ ಬುಡಕಟ್ಟುಗಳ ಮಹಿಳೆಯರಿಗಾಗಿ ಬಿದರೆಯಲ್ಲಿ ಸ್ಥಾಪಿಸಲಾಯಿತು.

ತೆಂಗಿನ ತೋಟಗಳು ಅಧಿಕವಾಗಿರುವ ಪ್ರದೇಶಗಳಲ್ಲಿ ತೆಂಗಿನ ನಾರಿನ ತರಬೇತಿ ಕೇಂದ್ರವನ್ನು ಆರಂಭಿಸಲಾಗಿದೆ. 1965-66ರಲ್ಲಿ ಈ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. 1973-74ರಲ್ಲಿ ಕನಕಪುರ, ಅರಸೀಕೆರೆ, ತಿಪಟೂರು, ಚಾಮರಾಜನಗರ ತಾಲೂಕಿನ ಆಲೂರು, ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿ, ಕಾರವಾರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದೊಂದು ಹೀಗೆ ಏಳು ತೆಂಗಿನ ನಾರಿನ ತರಬೇತಿ ಕೇಂದ್ರವನ್ನು ಸ್ಥಾಪಿಸಲಾಗಿದೆ. ಈ ಒಂದೊಂದು ಕೇಂದ್ರದಲ್ಲೂ 25 ಜನ ತರಬೇತಿ ಪಡೆಯುವವರಿದ್ದು, ಅವರಿಗೆ 12 ತಿಂಗಳ ಕಾಲ ತರಬೇತಿ ನೀಡಲಾಗುತ್ತದೆ. ಈ ಕಾಲದಲ್ಲಿ ಪ್ರತೀ ವ್ಯಕ್ತಿಗೆ ತಿಂಗಳಿಗೆ 50 ರೂ. ಗಳ ಸ್ಟೈಪೆಂಡ್ ನೀಡುತ್ತಾರೆ. ತರಬೇತಿ ಮುಗಿದ ನಂತರ ಪ್ರತೀ ವ್ಯಕ್ತಿಗೆ ಸುಧಾರಿತ ಸಲಕರಣೆಯನ್ನು ಉಚಿತವಾಗಿ ನೀಡಲಾಗುತ್ತದೆ. 1968ರಲ್ಲಿ ಈ ಕೇಂದ್ರಗಳನ್ನು ಸಾರ್ವಜನಿಕ ಸಂಸ್ಥೆಗಳ ಮಾದರಿಯಲ್ಲಿ ಪರಿಗಣಿಸಿ, ಅವುಗಳಲ್ಲಿ ಶೇ. 25ರಷ್ಟು ಪ್ರವೇಶಾವಕಾಶವನ್ನು ಆರ್ಥಿಕವಾಗಿ ಹಿಂದುಳಿದ ವರ್ಗಗಳ ಎಲ್ಲರಿಗೂ ಮೀಸಲಿಡಲಾಗುತ್ತಿದೆ. 1980-81ರಲ್ಲಿ ಈ ಕೇಂದ್ರಗಳಲ್ಲಿ ತರಬೇತಿ ಪಡೆಯುತ್ತಿದ್ದ ವ್ಯಕ್ತಿಗಳ ಸಂಖ್ಯೆ 185.

ರಾಜ್ಯ ಸರ್ಕಾರವು 1961ರಲ್ಲಿ ಗೌರಿಬಿದನೂರು ಮತ್ತು ವಿಜಾಪುರಗಳಲ್ಲಿ ಎರಡು ವೃತ್ತಿ ಶಿಕ್ಷಣ ಸಂಸ್ಥೆಗಳನ್ನು ತೆರೆಯಿತು; ಹಿಂದುಳಿದ ವರ್ಗಗಳ ಗ್ರಾಮೀಣ ಮಹಿಳೆಯರಿಗೆ ಬೆರಳಚ್ಚು, ಶೀಘ್ರಲಿಪಿ, ಹೊಲಿಗೆ ಮುಂತಾದ ವಿಷಯಗಳಲ್ಲಿ ಎರಡು ವರ್ಷ ಕಾಲ ತರಬೇತಿ ನೀಡಲು ಆ ಶಾಲೆಗಳು ನೆರವಾದವು. ಒಂದೊಂದು ಕೇಂದ್ರವೂ 25 ವ್ಯಕ್ತಿಗಳಿಗೆ ತರಬೇತಿ ನೀಡಬಲ್ಲ ಸಾಮರ್ಥ್ಯ ಹೊಂದಿದೆ. ತರಬೇತಿ ಸಮಯದಲ್ಲಿ ಅವರಿಗೆ ನಿಗದಿತ ವೇತನವನ್ನು ಕೊಡಲಾಗುತ್ತದೆ. ಪರಿಶಿಷ್ಟ ಜಾತಿಗಳ ಮತ್ತು ಬುಡಕಟ್ಟುಗಳ ವಿದ್ಯಾರ್ಥಿಗಳನ್ನು ಯು.ಪಿ.ಎಸ್.ಸಿ. ಮತ್ತು ಕೆ.ಪಿ.ಎಸ್.ಸಿ. ಸಂಸ್ಥೆಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡಲು ಭಾರತ ಸರ್ಕಾರವು ಪರೀಕ್ಷೆಗೆ ಮುಂಚಿನ ತರಬೇತಿ ಕೇಂದ್ರವನ್ನು ಆರಂಭಿಸಿತು. ಈ ಕಾರ್ಯಕ್ರಮದನ್ವಯ 1969–70 ರಲ್ಲಿ ರಾಜ್ಯದ ಸರ್ಕಾರಿ ಸೇವೆಯ ಪರೀಕ್ಷೆಗಳಿಗೆ ಪರಿಶಿಷ್ಟ ಜಾತಿಗಳ ವ್ಯಕ್ತಿಗಳನ್ನು ತಯಾರು ಮಾಡಲು ಬೆಂಗಳೂರಿನಲ್ಲಿ "ಪರೀಕ್ಷಾಪೂರ್ವ ಕೇಂದ್ರ"ವನ್ನು ಆರಂಭಿಸಲಾಗಿದೆ. 1969ರಲ್ಲಿ ಆರಂಭವಾದ ಈ ಕೇಂದ್ರ ನ್ಯಾಷನಲ್ ಕಾಲೇಜಿನಲ್ಲಿ ಸೂಕ್ತ ತರಬೇತಿ ಕಾರ್ಯವನ್ನು ಕೈಗೊಂಡಿತು; 1970-71ರ ಸರ್ಕಾರಿ ಸೇವೆಯ ಪರೀಕ್ಷೆಗಳಿಗೆ 50 ವಿದ್ಯಾರ್ಥಿಗಳನ್ನು ಕೂಡಿಸಲಾಯಿತು. ಆಮೇಲೆ 1972ರಲ್ಲಿ ಈ ಕೇಂದ್ರವನ್ನು ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲಾಯಿತು. ವಸತಿ ನಿಲಯದ ಸೌಕರ್ಯವನ್ನೂ ಈ ವಿದ್ಯಾರ್ಥಿಗಳಿಗೆ ಕಲ್ಪಿಸಲಾಗಿದೆ. 1981-82ರಲ್ಲಿ ಕೆ.ಪಿ.ಎಸ್.ಸಿ. ನಡೆಸುವ ಒಂದನೇಯ ಹಾಗೂ ಎರಡನೇಯ ದರ್ಜೆ ಸೇವೆಗಳಿಗೆ ನಡೆಯುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಭಾಗವಹಿಸಲು, ಈ ಕೇಂದ್ರವು ಇಪ್ಪತ್ತೊಂದನೇಯ ತಂಡವನ್ನು ತರಬೇತಿ ಮಾಡಿದೆ.

ಬೆರಳಚ್ಚು ಮತ್ತು ಶೀಘ್ರಲಿಪಿ ತರಬೇತಿ ಪಡೆಯುವ ಪದವೀಧರ ವಿದ್ಯಾರ್ಥಿಗಳಿಗೆ ತಿಂಗಳಿಗೆ 200 ರೂ.ಗಳು, ಪದವೀಧರರಲ್ಲದವರಿಗೆ ತಿಂಗಳಿಗೆ 50 ರೂ.ಗಳನ್ನು ಸ್ಟೈಪೆಂಡ್ ಎಂದು ಪರಿಗಣಿಸಿ, ಈ ಸೌಲಭ್ಯವನ್ನು ಹತ್ತು ತಿಂಗಳ ಕಾಲ ಕೊಡಲಾಗುತ್ತದೆ. ಮುದ್ರಣದಲ್ಲಿ ತರಬೇತಿ ಪಡೆಯಲಿಚ್ಛಿಸುವವರಿಗೆ ತಿಂಗಳಿಗೆ 50 ರೂ.ನಂತೆ 18 ತಿಂಗಳ ಕಾಲ ಸ್ಟೈಪೆಂಡ್ ನೀಡಲಾಗುತ್ತದೆ. ಇದರ ಜೊತೆಗೆ ಆರು ತಿಂಗಳಿಂದ ಹತ್ತು ತಿಂಗಳು ಕಾಲದ ಅಲ್ಪಾವಧಿಯ ವೃತ್ತಿ ತರಬೇತಿ ಕಾರ್ಯಕ್ರಮಗಳೂ ಇವೆ. ಯಂತ್ರ ರಿಪೇರಿ, ವಿದ್ಯುತ್ ಸಲಕರಣೆಗಳ ರಿಪೇರಿ, ಪಂಪು ರಿಪೇರಿ, ತಂತಿ ಎಳೆಯುವ ಕೆಲಸ, ಮರಗೆಲಸ ಮೊದಲಾದ ಉದ್ಯೋಗಗಳು ಅಲ್ಪಾವಧಿಯ ಕಾರ್ಯಕ್ರಮಗಳು; ಇವುಗಳಲ್ಲಿ ತರಬೇತಿ ಪಡೆಯುವ ವ್ಯಕ್ತಿಗಳಿಗೆ 10 ರೂ.ಗಳ ಸ್ಟೈಪೆಂಡ್ ನೀಡಲಾಗುತ್ತದೆ. ಮೈಸೂರಿನ 'ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ'ಯಲ್ಲಿ ತರಬೇತಿ ಪಡೆಯುವ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ವಿದ್ಯಾರ್ಥಿಗಳಿಗೆ ತಿಂಗಳಿಗೆ 40 ರಿಂದ 50 ರೂ.ಗಳ ಸ್ಟೈಪೆಂಡ್ ಅನ್ನು ಸರ್ಕಾರ ನೀಡುತ್ತದೆ. ಕೇಂದ್ರ ಕೈಗಾರಿಕಾ ಕಾರ್ಯಾಗಾರಗಳಲ್ಲಿ ತರಬೇತಿ ಪಡೆಯುವವರಿಗೆ ಮೊದಲ ಆರು ತಿಂಗಳು ತಿಂಗಳಿಗೆ 40 ರೂ.ಗಳನ್ನೂ, ಉಳಿದ ಆರು ತಿಂಗಳು ತಿಂಗಳಿಗೆ 50 ರೂ.ಗಳನ್ನೂ, ಹಾಗೂ ಅನಂತರದ ಹನ್ನೆರಡು ತಿಂಗಳು ತಿಂಗಳಿಗೆ 60 ರೂಪಾಯಿಗಳನ್ನೂ ಸ್ಟೈಪೆಂಡ್ ಆಗಿ ನೀಡಲಾಗುತ್ತದೆ. 1973ರಲ್ಲಿ ಆಟೋರಿಕ್ಷಾ ಹಾಗೂ ಮೋಟಾರು ನಡೆಸುವ ತರಬೇತಿ ಕಾರ್ಯಕ್ರಮವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆರಂಭಿಸಲಾಯಿತು. ಈ ವೃತ್ತಿಗಳಲ್ಲಿ ಎರಡು ತಿಂಗಳ ತರಬೇತಿ ಪಡೆಯುವ ಪ್ರತೀ ವಿದ್ಯಾರ್ಥಿಗೆ 75 ರೂ.ಗಳ ಸ್ಟೈಪೆಂಡ್ ಸೌಲಭ್ಯವಿದೆ. ತೋಟಗಾರಿಕೆ ತರಬೇತಿಯನ್ನು 12 ತಿಂಗಳ ಕಾಲ ನೀಡಲಾಗುವುದು; ತರಬೇತಿ ಸಮಯದಲ್ಲಿ ತಿಂಗಳಿಗೆ 50 ರೂ.ಗಳ ಸ್ಟೈಪೆಂಡ್ ವ್ಯವಸ್ಥೆಯು ಈ ಕಾರ್ಯಕ್ರಮದಲ್ಲಿ ಸೇರಿದೆ. 1981-82ರಲ್ಲಿ 42 ಜನ ಪರಿಶಿಷ್ಟ ಜಾತಿಯ ಯುವಕರು ಈ ತರಬೇತಿ ಪಡೆದರು. ಬೆಂಗಳೂರಿನ ಭಾರತೀಯ ಟೆಲಿಫೋನ್ ಕಾರ್ಖಾನೆಯ ಉಪ ವಿಭಾಗವು ಪರಿಶಿಷ್ಟ ವರ್ಗಗಳ ಮಹಿಳೆಯರಿಗಾಗಿ 'ತರಬೇತಿ ಹಾಗೂ ಉತ್ಪಾದನಾ ಕೇಂದ್ರ'ವನ್ನು ಸ್ಥಾಪಿಸಿ, ಅದರಲ್ಲಿ ಟೆಲಿಫೋನ್ ತಿರುಗಣೆಯನ್ನು (ಡಯಲ್) ತಯಾರಿಸುವ ತರಬೇತಿಯ ಸೌಕರ್ಯ ನೀಡಿದೆ. ಹರಿಜನ ಸೇವಾ ಸಂಘದ ಬೆಂಗಳೂರು ಶಾಖೆಯು ಈ ಕಾರ್ಯವನ್ನು ನಿರ್ವಹಿಸುತ್ತಿದೆ. 1979-80ರಲ್ಲಿ ಎಲ್ಲಾ ವೃತ್ತಿಗಳಲ್ಲಿ ತರಬೇತಿ ಹೊಂದುತ್ತಿದ್ದ ಪರಿಶಿಷ್ಟ ವರ್ಗಗಳಿಗಾಗಿ ವೆಚ್ಚ ಮಾಡಲಾಗುತ್ತಿದ್ದ ಹಣ 4.45 ಲಕ್ಷ ರೂ.ಗಳು.

ಆರ್ಥಿಕ ಅಭಿವೃದ್ಧಿ : ಕೇಂದ್ರ ವಿಭಾಗದ ಕಾರ್ಯಕ್ರಮಗಳನ್ವಯ ಮೊದಲನೇಯ ಮತ್ತು ಎರಡನೇಯ ಯೋಜನೆಗಳಲ್ಲಿ ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಬುಡಕಟ್ಟುಗಳ ಹಾಗೂ ಇತರ ಹಿಂದುಳಿದ ವರ್ಗಗಳ ಭೂರಹಿತ ಜನರನ್ನು ನೆಲೆಗೊಳಿಸಲು 'ಕೃಷಿ ಕಾಲನಿ' ಕಾರ್ಯಕ್ರಮವೊಂದನ್ನು ಆರಂಭಿಸಲಾಯಿತು. ಈ ವರ್ಗದ ಭೂರಹಿತರಿಗೆ (ಪ್ರತೀ ವ್ಯಕ್ತಿಗೆ) ನಾಲ್ಕು ಅಥವಾ ಐದು ಎಕರೆ ವ್ಯವಸಾಯ ಯೋಗ್ಯ ಜಮೀನನ್ನು ನೀಡಲಾಯಿತು. ಅವರು ಮನೆ ಕಟ್ಟಿಕೊಳ್ಳಲು 400 ರೂ.ಗಳನ್ನೂ ಅದರ ಜೊತೆಯಲ್ಲೇ ಮಂಜೂರು ಮಾಡಲಾಯಿತು. ಎರಡನೇಯ ಯೋಜನೆಯಲ್ಲಿ 120 ಕೃಷಿ ಕಾಲನಿಗಳನ್ನು ಸ್ಥಾಪಿಸಲು ಸರ್ಕಾರ ನಿರ್ಧಾರ ಮಾಡಿತು. ಈ ಕಾರ್ಯಕ್ರಮ ಮುಂದಿನ ಎಲ್ಲಾ ಯೋಜನೆಗಳಲ್ಲೂ ಮುಂದುವರೆದು, ನಾಲ್ಕನೇಯ ಯೋಜನೆಯ ಮುಕ್ತಾಯದ ವೇಳೆಗೆ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ, ಅನುಸೂಚಿತ ಬುಡಕಟ್ಟುಗಳ ಅಲೆಮಾರಿ ಹಾಗೂ ಅರೆಅಲೆಮಾರಿಗಳ ಜನಾಂಗಗಳ 201 ಕೃಷಿ ಕಾಲನಿಗಳು ಸ್ಥಾಪಿತವಾಗಿದ್ದವು. ಈ ಜನಗಳಿಗೆ ವ್ಯವಸಾಯ ಸಲಕರಣೆ, ಎತ್ತುಗಳು, ಬೀಜಗಳು, ಮನೆ ಕಟ್ಟಲು ಧನಸಹಾಯ—ಮುಂತಾದ ನೆರವನ್ನು ಸರ್ಕಾರ ನೀಡಿತು. ಇವರಿಗಾಗಿ ಕುಡಿಯುವ ನೀರಿನ ವ್ಯವಸ್ಥೆಗೆ ಬಾವಿಗಳನ್ನು ತೋಡಲಾಯಿತು. ಸಮುದಾಯ ಭವನವನ್ನೂ ಕಟ್ಟಲಾಯಿತು. ಪರಿಣಾಮಕಾರಿ ವಿಸ್ತೃತ ಬೀಡುಗಳನ್ನು ಪರಿವರ್ತನೆಯ ಸಾಧನವೆಂದು ಭಾವಿಸಿ 1965ರಲ್ಲಿ 'ವಿವಿಧೋದ್ದೇಶ ಸಹಕಾರಿ ಪುನರ್ವ್ಯವಸ್ಥೆ ನಿರ್ಮಾಣ ಯೋಜನೆ' ಕಾರ್ಯಕ್ರಮವನ್ನು ಸರ್ಕಾರ ಆರಂಭಿಸಿತು. ಪ್ರಥಮವಾಗಿ ನಾಲ್ಕು ಇಂಥ ನಿರ್ಮಾಣ ಯೋಜನೆಗಳನ್ನು ಮೈಸೂರು, ಹಾಸನ, ಬೆಳಗಾವಿ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಪ್ರಾರಂಭಿಸಲಾಯಿತು. ನಾಲ್ಕನೇಯ ಯೋಜನೆಯು ಮುಗಿಯುವ ವೇಳೆಗೆ 13 ವಿವಿಧೋದ್ದೇಶ ಸಹಕಾರಿ ಪುನರ್ವಸತಿ ನಿರ್ಮಾಣ ಯೋಜನೆಗಳು ಕಾರ್ಯ ನಿರ್ವಹಿಸುತ್ತಿದ್ದವು; ಅವುಗಳಲ್ಲಿ ಒಂಬತ್ತು ಪರಿಶಿಷ್ಟ ಜಾತಿಗಳಿಗೂ, ಎರಡು ಪರಿಶಿಷ್ಟ ಬುಡಕಟ್ಟುಗಳಿಗೂ, ಒಂದು ಅನುಸೂಚಿತ ಬುಡಕಟ್ಟಿಗೂ, ಇನ್ನೊಂದು ಅಲೆಮಾರಿ ಮತ್ತು ಅರೆಅಲೆಮಾರಿ ಜನಾಂಗಕ್ಕೂ ಸೇರಿದವು. 1979-80ರಲ್ಲಿ ರಾಜ್ಯಸರ್ಕಾರ ಈ ಕೃಷಿ ಕಾಲನಿಗಳ ಅಭಿವೃದ್ಧಿ ಹಾಗೂ ಪುನರುದ್ಧಾರಕ್ಕೆ 2.32 ಲಕ್ಷ ರೂ.ಗಳನ್ನು ವೆಚ್ಚಮಾಡಿತು; ಹೊಸದಾಗಿ ವಿವಿಧೋದ್ದೇಶ ಸಹಕಾರಿ ಪುನರ್‌ವಸತಿಯ ನಿರ್ಮಾಣ ಯೋಜನೆಯನ್ನು ಆರಂಭಿಸದಿದ್ದರೂ, ಕಾರ್ಯ ನಿರ್ವಹಿಸುತ್ತಿದ್ದ ಈ ಯೋಜನೆಗಳನ್ನು ಸರ್ಕಾರ ಮುಂದುವರಿಸಿತು. 1981-83ರಲ್ಲಿ ನಾಲ್ಕು ಇಂಥ ಕೃಷಿ ಕಾಲನಿಗಳನ್ನು ಪುನರುದ್ಧಾರಗೊಳಿಸಲು 1.64 ಲಕ್ಷ ರೂ.ಗಳನ್ನು ಯೋಜಿತ ಹಾಗೂ ಯೋಜನೇತರ ವೆಚ್ಚದಲ್ಲಿ ಸೇರಿಸಿ ಧನಸಹಾಯ ಮಾಡಲಾಗಿದೆ.

"ಕೃಷಿ ಕಾಲನಿ" ಕಾರ್ಯಕ್ರಮದ ಅನುಕೂಲ ಪಡೆಯದ ಪರಿಶಿಷ್ಟ ಜಾತಿಗಳು ಹಾಗೂ ಬುಡಕಟ್ಟು ಜನಾಂಗಗಳಿಗೆ

ವೈಯಕ್ತಿಕವಾಗಿ ವ್ಯವಸಾಯ ಅಭಿವೃದ್ಧಿಗೋಸ್ಕರ ಧನಸಹಾಯ ಮಾಡಲಾಗಿದೆ. ಈ ಎಲ್ಲಾ ಜನಾಂಗಗಳಿಗೂ ವ್ಯವಸಾಯಾಭಿವೃದ್ಧಿ, ಕರಕುಶಲ ಅಭಿವೃದ್ಧಿ ಹಾಗೂ ಗುಡಿ ಕೈಗಾರಿಕೆಗಳ ಅಭಿವೃದ್ಧಿಗಾಗಿ ಸರ್ಕಾರವು 1959ರಲ್ಲಿ ಅವಶ್ಯಕವಿರುವ ಹಣವನ್ನು ಮಂಜೂರು ಮಾಡಿತು. ಉಳುಮೆಗೆ ಒಂದು ಜೊತೆ ಎತ್ತುಗಳನ್ನು ಖರೀದಿಸಲು 300 ರೂ.ಗಳನ್ನು ನೀಡಲಾಗುತ್ತಿತ್ತು. 1967ರಲ್ಲಿ ಈ ಮೊತ್ತದ ಹಣವನ್ನು 500 ರೂ.ಗಳಿಗೆ ಹೆಚ್ಚಿಸಲಾಯಿತು. ಪರಿಶಿಷ್ಟ ಜಾತಿಗಳಿಗೆ ವ್ಯವಸಾಯದ ಅವಶ್ಯಕತೆಯನ್ನು ಪೂರೈಸಲು 1981-82ರಲ್ಲಿ 0.95 ಲಕ್ಷ ರೂ.ಗಳನ್ನು ಸರ್ಕಾರ ವೆಚ್ಚ ಮಾಡಿತು.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳವರು ಸಹಕಾರ ಸಂಘಗಳ ಸದಸ್ಯತ್ವ ಪಡೆಯಲು ಇಚ್ಛಿಸಿದರೆ, ಅವರಿಗೆ ಧನ ಸಹಾಯ ನೀಡಲು ರಾಜ್ಯಸರ್ಕಾರ 1972ರಲ್ಲಿ ಒಂದು ಕಾರ್ಯಕ್ರಮವನ್ನು ರೂಪಿಸಿತು. 1981-82ರಲ್ಲಿ ಈ ವರ್ಗಗಳ 600 ಜನರು ಸಹಕಾರ ಸಂಘಗಳ ಸದಸ್ಯತ್ವ ಪಡೆದರು; ಅದಕ್ಕಾಗಿ 15,000 ರೂ.ಗಳನ್ನು ಸರ್ಕಾರ ವೆಚ್ಚ ಮಾಡಿತು.

1971ರಲ್ಲಿ ಕರ್ನಾಟಕ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳವರಿಗೆ ನೇಗಿಲುಗಳನ್ನು ಕೊಳ್ಳಲು ಧನ ಸಹಾಯ ಒದಗಿಸಿತು. ಐದನೇಯ ಯೋಜನೆಯಲ್ಲಿ 4.63 ಲಕ್ಷ ರೂ.ಗಳನ್ನು 3,319 ಜನರಿಗೆ ಸಹಾಯ ನೀಡುವುದರ ಮೂಲಕ ವೆಚ್ಚ ಮಾಡಿತು. 1979-80ರಲ್ಲಿ 3,686 ಕೃಷಿಕರಿಗೆ ನೀಡಿದ ನೆರವು 3.84 ಲಕ್ಷ ರೂ.ಗಳಾಗಿತ್ತು.

ಮೂರನೇಯ ಯೋಜನೆಯಲ್ಲಿ ಆರ್ಥಿಕವಾಗಿ ಮೇಲೆತ್ತುವ ಕಾರ್ಯಕ್ರಮದನ್ವಯ ವೈಯಕ್ತಿಕ ನೆರವನ್ನು ಸಹಕಾರ ಸಂಘಗಳಿಗೆ ಮಂಜೂರು ಮಾಡಲಾಯಿತು. ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟು ಜನಾಂಗಗಳಿಗೆ ಹೈನುಗಾರಿಕೆಯ ಸಂಘಗಳನ್ನು ಸ್ಥಾಪಿಸಲು ಪ್ರೋತ್ಸಾಹ ನೀಡಿ, ಅವರು ನೆಟ ನಿಲ್ಲಲು ಅವಕಾಶ ಮಾಡಲಾಗಿದೆ. ಇತರರು ಪ್ರಧಾನವಾಗಿ ಕೃಷಿಯನ್ನವಲಂಬಿಸಿ, ಜೊತೆಗೆ ಉಪಕಸಬುಗಳನ್ನು ಕೈಕೊಳ್ಳಲು ಉತ್ತೇಜನ ನೀಡಲಾಗಿದೆ. ನಾಲ್ಕನೇಯ ಪಂಚವಾರ್ಷಿಕ ಯೋಜನೆಯ ಮುಕ್ತಾಯದ ವೇಳೆಗೆ ರಾಜ್ಯದಲ್ಲಿ 45 ಹೈನುಗಾರಿಕೆ ಸಂಘಗಳು ಕಾರ್ಯ ನಿರ್ವಹಿಸುತ್ತಿದ್ದವು. 1972 ರಿಂದ ಪರಿಶಿಷ್ಟ ಜಾತಿಗಳ ಹಾಗೂ ಬುಡಕಟ್ಟುಗಳ ಜನರಿಗೆ ಹಂದಿ ಸಾಕಾಣಿಕೆಗಾಗಿ ಪ್ರತೀ ವ್ಯಕ್ತಿಗೆ ಗಂಡು ಹಂದಿ ಹಾಗೂ ಮೂರು ಹೆಣ್ಣು ಹಂದಿಗಳನ್ನು ಖರೀದಿಸಲು ಬೇಕಾಗುವ ಅವಶ್ಯಕ ಧನ ಸಹಾಯವನ್ನು ಸಮಾಜ ಕಲ್ಯಾಣ ಇಲಾಖೆ ಒದಗಿಸುತ್ತದೆ. ಈ ಕಾರ್ಯಕ್ರಮದ ಪ್ರಯೋಜನ ಪಡೆಯುವ ಇಲಾಖೆಗೆ ಜನ ಒಂದು ರೂಪಾಯಿ ಇತ್ತರೆ, ಉಳಿದ ಒಂಬತ್ತು ರೂ.ಗಳನ್ನು ಇಲಾಖೆ ಪೂರಕ ಹಣದ ರೂಪದಲ್ಲಿ ನೀಡುತ್ತದೆ; ಉಚಿತವಾಗಿ ಗಂಡು ಹಂದಿ ಮತ್ತು ಮೂರು ಹೆಣ್ಣು ಹಂದಿಗಳನ್ನು ಒದಗಿಸಲು ಇಲಾಖೆ 99 ರೂ.ಗಳನ್ನು ವೆಚ್ಚ ಮಾಡುತ್ತದೆ. ಪಶುಸಂಗೋಪನಾ ಇಲಾಖೆಯು 12 ರಿಂದ 20 ವಾರಗಳ 50 ಕೋಳಿಮರಿಗಳನ್ನೂ ಐದು ಹುಂಜಗಳನ್ನೂ (ಮರಿಗಳನ್ನೂ) ಹಾಗೂ ಅವುಗಳಿಗೆ ಬೇಕಾಗುವ ಆಹಾರವನ್ನೂ, ಈ ಕಾರ್ಯಕ್ರಮದ ಪ್ರಯೋಜನ ಪಡೆಯುವವರಿಗೆ, ನೀಡಲು ಮುಂದೆ ಬಂದಿದೆ; ಕೋಳಿ ಸಾಕಣೆ ಮನೆಯನ್ನು ಕಟ್ಟಿ ಅವುಗಳನ್ನು ಸಾಕಲೂ 500 ರೂ.ಗಳ ಧನ ಸಹಾಯ ನೀಡುತ್ತದೆ. ಈ ಕಾರ್ಯಕ್ರಮದ ಒಟ್ಟು ವೆಚ್ಚದ ಶೇ. 90 ಭಾಗವನ್ನು ಸಮಾಜ ಕಲ್ಯಾಣ ಇಲಾಖೆ ಭರಿಸುತ್ತದೆ.

1959ರಲ್ಲಿ ಪರಿಶಿಷ್ಟ ಜನಾಂಗಗಳ ಕುಶಲಕಲೆ ಮತ್ತು ಕೈಕಸುಬುಗಳು ಹಾಗೂ ಕೃಷಿ ಅಭಿವೃದ್ಧಿಗಾಗಿ ಆರ್ಥಿಕ ನೆರವು ನೀಡಲು ಅವಶ್ಯಕವಾದ ಹಣದ ಮಂಜೂರಾತಿಯನ್ನು ಸರ್ಕಾರ ಕೈಗೊಂಡಿದೆ. ಕರಕುಶಲ ಸಹಕಾರ ಸಂಘಗಳ ಹೊಸ ಕಾರ್ಯಕ್ರಮವು 1970ರಲ್ಲಿ ಮೈದಾಳಿ ಪರಿಶಿಷ್ಟ ಜಾತಿಗಳು ಮತ್ತು ಬುಡಕಟ್ಟುಗಳಿಗೆ ಹಣ ಒದಗಿಸಲು ಸಿದ್ಧವಾಗಿದೆ. ಹಲವು ಬಗೆಯ ಕೈಕಸುಬುಗಳಲ್ಲಿ ನಿರತರಾದ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟು ಜನಗಳಿಗೆ ಪಾಲು ಬಂಡವಾಳ ಸಹಾಯ, ಕಾರ್ಯಾರಂಭ ಬಂಡವಾಳ, ಯಂತ್ರ ಖರೀದಿಸಲು ಸಹಾಯ, ಕಾರ್ಯ ನಿರ್ವಹಿಸಲು ಜಾಗದ ವ್ಯವಸ್ಥೆ, ಇನ್ನೂ ಅನೇಕ ಬಗೆಯಲ್ಲಿ ನೆರವನ್ನು ನೀಡಲು ಸರ್ಕಾರ ಸಿದ್ಧವಾಗಿದೆ. 1979-80ರಲ್ಲಿ ಐದು ಕರಕುಶಲ ಸಹಕಾರ ಸಂಘಗಳಿಗೆ 0.55 ಲಕ್ಷ ರೂ.ಗಳ ಧನ ಸಹಾಯವನ್ನು ಸರ್ಕಾರ ಮಂಜೂರು ಮಾಡಿತು. ಇಂಥ ಸಂಘಗಳ ಸದಸ್ಯರು ನಡೆಸಬಹುದಾದ ವೃತ್ತಿಗಳಾದ ಕಾಫಿಪುಡಿ ಮಾಡಿ ಮಾರುವ ವ್ಯಾಪಾರ, ಮರಗೆಲಸ ವೃತ್ತಿ, ಹಿಟ್ಟಿನ ಗಿರಣಿ, ರುಬ್ಬುವ ಯಂತ್ರ, ಎಳನೀರು ವ್ಯಾಪಾರ, ಕಬ್ಬಿನ ರಸ ತೆಗೆದು ಮಾರುವ ಅಂಗಡಿ, ಬಟ್ಟೆ ಚೆಲುವು ಮಾಡುವ ವೃತ್ತಿ—ಮುಂತಾದವು ರಾಷ್ಟ್ರೀಕೃತ ಬ್ಯಾಂಕುಗಳಿಂದ ಮಾನ್ಯತೆ ಪಡೆದಿವೆ. ಅವುಗಳನ್ನು ಆರಂಭಿಸಲು ಅವಶ್ಯಕವಿರುವ ಹಣವನ್ನು ಈ ಬ್ಯಾಂಕುಗಳು ಒದಗಿಸುತ್ತವೆ.

**ಆರೋಗ್ಯ, ಗೃಹ ನಿರ್ಮಾಣ ಮತ್ತು ಇತರ ಕಾರ್ಯಕ್ರಮಗಳು :** ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜನ ತಮ್ಮದಲ್ಲದ ಸ್ಥಳಗಳಲ್ಲಿ ಕಟ್ಟಿರುವ ಮನೆಗಳ ಒಡೆತನದ ಹಕ್ಕನ್ನು ಈ ಕೆಳಕಂಡ ಸಂದರ್ಭಗಳನ್ವಯ ಪರಿಶೀಲಿಸಿ, ನೀಡುವ ಕಾರ್ಯವನ್ನು 1959ರಲ್ಲೇ ಸರ್ಕಾರ ಜಾರಿಗೆ ತಂದಿತು. ಅದರಂತೆ—1) ಮನೆ ಕಟ್ಟುವ ಸ್ಥಳ ಸರ್ಕಾರದ್ದಾಗಿರಬೇಕು; 2) ಅಂಥ ಸ್ಥಳ ಸಾರ್ವಜನಿಕ ಉದ್ದೇಶಕ್ಕೆ ಮೀಸಲಾಗಿರ

ಬಾರದು; ಯಾವ ವಿಶೇಷ ಉದ್ದೇಶಕ್ಕೆಂದೂ ಕಾಯ್ದಿಡಲ್ಪಟ್ಟಿರ ಬಾರದು; 3) ಆ ಸ್ಥಳ ವಾಸಕ್ಕೆ ಯೋಗ್ಯವಿರಬೇಕು; ಅಂಥ ಸ್ಥಳದಲ್ಲಿ ಕಟ್ಟಿರುವ ಮನೆ ಜನವರಿ 1, 1957ಕ್ಕಿಂತಲೂ ಹಿಂದಿನದಾಗಿರಬೇಕು. ಈ ಅಂಶಗಳನ್ನಾಧರಿಸಿ ಸಮಾಜ ಕಲ್ಯಾಣ ನಿರ್ದೇಶಕರು 1968ರಲ್ಲಿ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜನರಿಗೆ ಗೃಹ ನಿರ್ಮಾಣದ ಸಲುವಾಗಿ ಜಮೀನನ್ನು ದೊರಕಿಸುವ ಏಕ ರೀತಿಯ ಕಾರ್ಯ ವಿಧಾನಗಳನ್ನು ರೂಪಿಸಿದರು. ಈ ಉದ್ದೇಶಕ್ಕಾಗಿ ನಿಗದಿತ ಕಾಲದಲ್ಲಿ ಜಮೀನು ಪಡೆಯಲು ರಾಜ್ಯ ಸರ್ಕಾರವು 1969ರಲ್ಲಿ ಆಜ್ಞೆಯನ್ನು ಹೊರಡಿಸಿತು. ಈ ಆಜ್ಞೆಯ ಮೇರೆಗೆ ಸಮಾಜ ಕಲ್ಯಾಣ ನಿರ್ದೇಶಕರಿಗೆ ಅಧಿಕಾರ ಕೊಡಲ್ಪಟ್ಟು, ಅವರು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜನಾಂಗ ಗಳಿಗೋಸ್ಕರ ನಿವೇಶನಗಳಿಗೆ ಬೇಕಾಗುವ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ಹಣವನ್ನು 1970ರಲ್ಲಿ ಸರ್ಕಾರ ನೀಡಿತು. 1974ರಲ್ಲಿ ಗ್ರಾಮೀಣ ಮತ್ತು ಪುರ ಪಂಚಾಯಿತಿಗಳಿಗೆ ಅನ್ವಯಿಸುವ ಆಜ್ಞೆಯನ್ನು ಸರ್ಕಾರ ಹೊರಡಿಸಿ, ಅದರಂತೆ ಈ ಪ್ರದೇಶಗಳಲ್ಲಿ ಇರಬಹುದಾದ ಒಟ್ಟು ನಿವೇಶನದಲ್ಲಿ ಶೇ. 20 ರಷ್ಟನ್ನು ಪರಿಶಿಷ್ಟ ವರ್ಗಗಳ ಭೂಹೀನ ಕಾರ್ಮಿಕರಿಗೆ, ನಿರ್ವಸತಿಯ ಆಧಾರದ ಮೇಲೆ ನೀಡಬೇಕೆಂದು ತಿಳಿಸಲಾಯಿತು. ಅಂಥ ಪರಿಶಿಷ್ಟ ಜಾತಿಯ ಕುಟುಂಬಗಳಿಗಾಗಿ 20.11 ಎಕರೆ ಯಷ್ಟು ಜಮೀನನ್ನು ಸ್ವಾಧೀನಪಡಿಸಿಕೊಂಡು ವಿತರಣೆ ಮಾಡಲು 1979-80ರಲ್ಲಿ 0.54 ಲಕ್ಷ ರೂ.ಗಳನ್ನು ಸರ್ಕಾರ ವೆಚ್ಚ ಮಾಡಿತು.

ನಗರ ಪ್ರದೇಶಗಳಲ್ಲಿ ವಾಸಿಸುವ ಪರಿಶಿಷ್ಟ ಜಾತಿಗಳವರಿಗೆ ಅನುಕೂಲವಾಗುವಂತೆ 1972ರಲ್ಲಿ ಒಂದು ಹೊಸ ಕಾರ್ಯಕ್ರಮ ರೂಪುಗೊಂಡಿತು. 30′×45′ ಗೃಹ ನಿವೇಶನವನ್ನು ಅದರ ಒಟ್ಟು ಬೆಲೆಯ ಅರ್ಧದಲ್ಲಿ ಪರಿಶಿಷ್ಟ ವರ್ಗಗಳ ಜನ ಪಡೆದು ಕೊಳ್ಳಲು ಸಹಾಯಧನ ಮಂಜೂರು ಮಾಡುವುದಕ್ಕೆ ಸರ್ಕಾರ ಒಪ್ಪಿತು. 'ನಗರಾಭಿವೃದ್ಧಿ ವಿಶ್ವಸ್ಥ ಮಂಡಲಿ' (ಸಿ.ಐ.ಟಿ.ಬಿ) ಯು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳು, ಅನುಸೂಚಿತ ಬುಡಕಟ್ಟುಗಳು, ಅಲೆಮಾರಿ ಹಾಗೂ ಅರೆಅಲೆಮಾರಿ ಜನಾಂಗಗಳಿಗೆ ಗೃಹ ನಿವೇಶನವನ್ನು ಕಾಯ್ದಿರಿಸುವ ಕಾರ್ಯನೀತಿಗೆ 1972ರಲ್ಲಿ ಬದ್ಧವಾಯಿತು. ಅಂತೆಯೇ 'ಗೃಹ ಮಂಡಲಿ' ಯೂ ಶೇ. 18ರಷ್ಟು ಮನೆಗಳನ್ನು ಪರಿಶಿಷ್ಟ ಜನಾಂಗಗಳಿಗೆ ಮೀಸಲೆಂದು 1972ರಲ್ಲಿ ಘೋಷಿಸಿತು. 1979-80ರಲ್ಲಿ 0.50 ಲಕ್ಷ ರೂ.ಗಳನ್ನು, ಪರಿಶಿಷ್ಟ ವರ್ಗಗಳಿಗೆ ಗೃಹ ನಿವೇಶನಗಳನ್ನು ಒದಗಿಸಲು ಸರ್ಕಾರ ವೆಚ್ಚ ಮಾಡಿತು. "ಮೈಸೂರು ಭೂಮಿ ನೀಡಿಕೆ ನಿಯಮಗಳು–1969ರ" ಪ್ರಕಾರ ಯಾವುದೇ ಗ್ರಾಮದಲ್ಲಿ ಮಾರಾಟಕ್ಕೆಂದು ವರ್ಗೀಕರಿಸಲ್ಪಡುವ ಭೂಮಿಯ ಅರ್ಧಭಾಗ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜನಾಂಗದ ವ್ಯಕ್ತಿಗಳಿಗೆ ಮೀಸಲಿಡಲ್ಪಡಬೇಕು.

1960ರಲ್ಲಿ ಜಾರಿಗೆ ಬಂದ ಕಾರ್ಯಕ್ರಮದ ಪ್ರಕಾರ ಪರಿಶಿಷ್ಟ ಜಾತಿಗಳು ಮತ್ತು ಬುಡಕಟ್ಟಿನವರು ಕಟ್ಟುವ ಮನೆಗಳ ಧನಸಹಾಯಕ್ಕೆ ಅನುಕೂಲ ಮಾಡಿಕೊಡುವ ಯೋಜನೆ ರೂಪು ಗೊಂಡಿತು. ಈ ಉದ್ದೇಶದ ಸಫಲತೆಗೆ ಮನೆ ಕಟ್ಟುವ ಪ್ರತೀ ಪರಿಶಿಷ್ಟ ಜಾತಿಗೆ 400 ರೂ.ಗಳನ್ನೂ, ಪ್ರತೀ ಬುಡಕಟ್ಟು ಜನಾಂಗಕ್ಕೆ 800 ರೂ.ಗಳನ್ನೂ ಮಧ್ಯವರ್ತಿ ಗುತ್ತಿಗೆದಾರನ ಮೂಲಕ ನೀಡಬೇಕೆಂಬ ನಿಯಮವನ್ನು ಸರ್ಕಾರ ಒಪ್ಪಿ ಕೊಂಡಿತು. 1967ರಲ್ಲಿ ಸಹಾಯ ಧನವನ್ನು 900 ರೂ.ಗಳಿಗೆ ಹೆಚ್ಚಿಸಿ, ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಏಕ ರೀತಿಯಲ್ಲಿ ಅನ್ವಯಿಸುವಂತೆ ನಿಯಮವನ್ನು ಬದಲಾವಣೆ ಮಾಡಿತು. ಈ ಮೊತ್ತದ ಹಣದಲ್ಲಿ 700 ರೂ.ಗಳನ್ನು ನಗದು ರೂಪದಲ್ಲೂ, ಉಳಿದ 200 ರೂ. ಬೆಲೆಯ ಕಟ್ಟಡಕ್ಕೆ ಬೇಕಾಗುವ ಮರಮುಟ್ಟುಗಳನ್ನು ಅರಣ್ಯ ಇಲಾಖೆಯಿಂದ ದೊರಕಿಸಲೂ ಸರ್ಕಾರ ಕಾರ್ಯ ನಿರತವಾಯಿತು. 1961ರಲ್ಲಿ ಗೃಹ ನಿರ್ಮಾಣ ಸಂಘಗಳಿಂದ ನಿರ್ಮಾಣ ಕೈಗೊಳ್ಳುವ ಒಂದೇ ಬಗೆಯ ವ್ಯವಸ್ಥೆ ಯನ್ನು ರಾಜ್ಯದಲ್ಲಿ ಏರ್ಪಡಿಸಲಾಯಿತು. ಅದರ ಪ್ರಕಾರ ಗೃಹ ನಿರ್ಮಾಣ ಸಂಘದ ಪ್ರತೀ ಸದಸ್ಯರಿಗೂ 1,500 ರಿಂದ 3,000 ರೂ.ಗಳವರೆಗೆ ಸಾಲ ಪಡೆಯುವ ಅರ್ಹತೆ ಇರುತ್ತದೆ. ಸಾಲದ ಹಣಕ್ಕೆ ಶೇ. ಐದರಷ್ಟು ಬಡ್ಡಿ ನಿಗದಿಯಾಗಿದ್ದರೂ, ಸಾಲ ಪಡೆದವರು ಅದರಲ್ಲಿ ಶೇ. ಎರಡರಷ್ಟು ಮಾತ್ರ ತೆರಬೇಕಾಗಿದ್ದು, ಉಳಿದ ಶೇ. ಮೂರರಷ್ಟು ಬಡ್ಡಿಯನ್ನು ಸಮಾಜ ಕಲ್ಯಾಣ ಇಲಾಖೆಯು ಸಹಾಯ ಧನ ರೂಪದಲ್ಲಿ ನೀಡುತ್ತದೆ. 1979-80 ರಲ್ಲಿ 612 ಮನೆಗಳ ನಿರ್ಮಾಣಕ್ಕೆ 4.29 ಲಕ್ಷ ರೂ.ಗಳನ್ನು ಸರ್ಕಾರ ಖರ್ಚು ಮಾಡಿತು.

1981-82ರ ಸಮಯದಲ್ಲಿ 'ಜನತಾ ಗೃಹ ನಿರ್ಮಾಣ ಕಾರ್ಯಕ್ರಮ'ದ ಪ್ರಕಾರ 1981ರ ಮುಕ್ತಾಯಕ್ಕೆ 16,474 ನಿವೇಶನಗಳನ್ನು ಪರಿಶಿಷ್ಟ ಜಾತಿಗಳು ಹಾಗೂ ಬುಡಕಟ್ಟುಗಳಿಗೆ ಹಂಚಲಾಯಿತು. ಈ ಜನಾಂಗಗಳಿಗೆ ಜನತಾ ಮನೆಗಳನ್ನು ಕಟ್ಟಲು 30 ರೂ.ಗಳ ಬೆಲೆಯ ಮರಮುಟ್ಟನ್ನು ಕೃಷಿ ಮತ್ತು ಅರಣ್ಯ ಇಲಾಖೆಗಳು ಉಚಿತವಾಗಿ ಒದಗಿಸಿದವು. 1962ರಲ್ಲಿ 100 ರೂ. ಬೆಲೆಯ ಮರಮುಟ್ಟನ್ನು ರಾಜ್ಯದ ಎಲ್ಲಾ ಭಾಗದಲ್ಲಿ ರುವ ನಿಮ್ನ ವರ್ಗಗಳಿಗೆ ಗೃಹ ನಿರ್ಮಾಣದ ಸಲುವಾಗಿ ಒದಗಿಸುವ ಕಾರ್ಯ ಜಾರಿಗೆ ಬಂದಿತು; 1963ರಲ್ಲಿ ಅದು 200 ರೂ.ಗೆ ಏರಿತು. ಅನಂತರ ಅರಣ್ಯ ಇಲಾಖೆಯೊಂದೇ 200 ರೂ.ಗಳ ಮರಮುಟ್ಟನ್ನು ಮನೆಗಳ ನಿರ್ಮಾಣಕ್ಕಾಗಿ ಪರಿಶಿಷ್ಟ ವರ್ಗಗಳಿಗೆ ಉಚಿತವಾಗಿ ದೊರಕಿಸಿತು. 1979-80ರಲ್ಲಿ ಈ ಉದ್ದೇಶಕ್ಕಾಗಿಯೇ 3.65 ಲಕ್ಷ ರೂ.ಗಳನ್ನು ವೆಚ್ಚ ಮಾಡ ಲಾಯಿತು.

ಸ್ಥಳೀಯ ಅಭಿವೃದ್ಧಿ ಕಾರ್ಯಗಳ ಕಾರ್ಯಕ್ರಮದನ್ವಯ ಗ್ರಾಮಾಂತರ ಪ್ರದೇಶಗಳಲ್ಲಿ ಕುಡಿಯುವ ನೀರಿನ ಬಾವಿಗಳನ್ನು

ಮಂಜೂರು ಮಾಡಲು ಸಾರ್ವಜನಿಕ ವಂತಿಗೆಯ ಮೊತ್ತವು ಪ್ರತೀ ಒಂದು ಬಾವಿಗೆ ಆಗುವ ಒಟ್ಟು ವೆಚ್ಚದಲ್ಲಿ ಶೇ. 50ರಷ್ಟು ಇರಬೇಕೆಂದು ಸರ್ಕಾರ ನಿರ್ಧರಿಸಿತು. ಈ ಕಾರ್ಯಕ್ರಮ ಯಾವ ರೀತಿಯಲ್ಲೂ ಪರಿಶಿಷ್ಟ ವರ್ಗಗಳಿಗೆ ಪ್ರಯೋಜನವೆನಿಸಲಿಲ್ಲ; ಏಕೆಂದರೆ ಈ ವರ್ಗಗಳ ಜನರು ಬಾವಿ ತೋಡುವ ವೆಚ್ಚದ ಅರ್ಧ ಭಾಗದ ಹಣವನ್ನು ಸಾರ್ವಜನಿಕ ವಂತಿಗೆಯಿಂದ ಕೂಡಿಸ ಲಾಗಲಿಲ್ಲ. ಇದನ್ನರಿತು 1964ರಲ್ಲಿ ಹಿಂದುಳಿದ ಪ್ರದೇಶಗಳಲ್ಲಿ ಬಾವಿಗೆ ತಗಲುವ ಒಟ್ಟು ವೆಚ್ಚದ ಶೇ. ಐದರಷ್ಟು ಹಣವನ್ನು ಸ್ಥಳೀಯ ಸಂಸ್ಥೆಗಳೇ ವಹಿಸಿಕೊಳ್ಳಬೇಕೆಂದು ತೀರ್ಮಾನಿಸ ಲಾಯಿತು. ಬುಡಕಟ್ಟು ಜನಾಂಗಗಳು ಹೆಚ್ಚಾಗಿರುವ ಪ್ರದೇಶ ಗಳಲ್ಲಿ ಸಾರ್ವಜನಿಕರ ಕೊಡುಗೆಯನ್ನೂ ಪೂರ್ಣ ಮನ್ನಾ ಮಾಡಿ, ಬಾವಿಗೆ ವೆಚ್ಚವಾಗುವ ಎಲ್ಲಾ ಹಣವನ್ನೂ ಕೇಂದ್ರ ಸರ್ಕಾರದ ಲೆಕ್ಕಕ್ಕೆ ಸೇರಿಸಲಾಯಿತು. 1979-80ರಲ್ಲಿ 0.43 ಲಕ್ಷ ರೂ. ಗಳನ್ನು ಈ ಕಾರ್ಯಕ್ರಮದ ಅನ್ವಯ ವೆಚ್ಚ ಮಾಡಿ ಏಳು ಬಾವಿಗಳನ್ನು ಪೂರ್ಣಗೊಳಿಸಲಾಯಿತು.

## ಪರಿಶಿಷ್ಟ ಬುಡಕಟ್ಟುಗಳ ಕ್ಷೇಮಾಭಿವೃದ್ಧಿ

ಶಿಕ್ಷಣ : ಪರಿಶಿಷ್ಟ ಬುಡಕಟ್ಟುಗಳ (ಷೆಡ್ಯೂಲ್ಡ್ ಟ್ರೈಬ್ಸ್) ಕಲ್ಯಾಣಕ್ಕೋಸ್ಕರ ಎರಡನೇಯ ಯೋಜನೆಯಲ್ಲಿ ತೀವ್ರ ಅಭಿವೃದ್ಧಿ ಕಾರ್ಯವು ಹಂತ ಹಂತವಾಗಿ ಆರಂಭಿಸಲ್ಪಟ್ಟಿತು. ಈ ಉದ್ದೇಶಕ್ಕಾಗಿ ಶಿಕ್ಷಣ ರಂಗದಲ್ಲಿ ಅನೇಕ ಕಾರ್ಯ ಕ್ರಮಗಳನ್ನು ಸರ್ಕಾರ ಕೈಗೊಂಡಿತು. ಈ ಯೋಜನಾವಧಿಯಲ್ಲಿ 14 ಆಶ್ರಮ ಶಾಲೆಗಳನ್ನೂ ಮತ್ತು ಆರು ವಿದ್ಯಾರ್ಥಿನಿಲಯ ಪ್ರಾರಂಭಿಸಲಾಯಿತು. 2,900 ಮಕ್ಕಳಿಗೆ ಮಧ್ಯಾಹ್ನದ ಊಟವನ್ನೂ, 7,100 ಮಕ್ಕಳಿಗೆ ಉಡುಪು ಮತ್ತು ಲೇಖನ ಸಾಮಗ್ರಿಯನ್ನೂ ಒದಗಿಸಲಾಗಿದೆ, 2,000 ಶಾಲಾ ಬಾಲಕರಿಗೆ ವಿದ್ಯಾರ್ಥಿವೇತನವನ್ನೂ ಮಂಜೂರು ಮಾಡಲಾಗಿದೆ. ಎರಡು ಶಾಲಾ ಕಟ್ಟಡಗಳನ್ನೂ ನಾಲ್ಕು ವಸತಿ ನಿಲಯಗಳನ್ನೂ ಬುಡ ಕಟ್ಟು ಜನರ ಶಿಕ್ಷಣ ಅಭಿವೃದ್ಧಿಗಾಗಿ ಕಟ್ಟಲಾಗಿದೆ. ಮೂರನೇಯ ಯೋಜನೆಯಲ್ಲಿ ಈ ಜನಾಂಗಗಳ ಕಲ್ಯಾಣ ವೆಚ್ಚಕ್ಕೆ ಗೊತ್ತು ಪಡಿಸಲಾದ ಹಣ ರೂ. 13.1 ಲಕ್ಷಗಳಾಗಿದ್ದು ವೆಚ್ಚವಾದ ಹಣ 9.98 ಲಕ್ಷ ರೂ.ಗಳು. ಈ ಸಮಯದಲ್ಲಿ ಆಶ್ರಮ ಶಾಲೆ ಮತ್ತು ಮೂರು ವಸತಿ ನಿಲಯಗಳನ್ನು ಸ್ಥಾಪಿಸಿದುದೇ ಅಲ್ಲದೆ, 24 ಹೊಸ ಶಾಲೆಗಳನ್ನೂ ವಿದ್ಯಾರ್ಥಿನಿಲಯಗಳನ್ನೂ ಬುಡಕಟ್ಟು ಜನರ ಅನುಕೂಲಕ್ಕೆ ಕಟ್ಟಲಾಯಿತು. ಸುಮಾರು 6,000 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ಪುಸ್ತಕ ಹಾಗೂ ಲೇಖನ ಸಾಮಗ್ರಿಯನ್ನು ನೀಡಲಾಯಿತು. ಪರಿಶಿಷ್ಟ ಬುಡಕಟ್ಟುಗಳವರ ಶಿಕ್ಷಣ ರಂಗಕ್ಕಾಗಿ ವಿನಿಯೋಗಿಸಲು ಗೊತ್ತುಪಡಿಸಿದ ವೆಚ್ಚ 12.03 ಲಕ್ಷ ರೂ.ಗಳಾಗಿದ್ದರೂ, ವಾರ್ಷಿಕ ಯೋಜನೆಯ ಕಾಲದಲ್ಲಿ 9.86 ಲಕ್ಷ ರೂ.ಗಳನ್ನು ಮಾತ್ರ ವೆಚ್ಚ ಮಾಡ ಲಾಯಿತು. ಈ ಅವಧಿಯಲ್ಲಿ ನಾಲ್ಕು ಶಿಶುವಿಹಾರಗಳನ್ನೂ, ಎರಡು ಆಶ್ರಮ ಶಾಲೆಗಳನ್ನೂ ಸ್ಥಾಪಿಸಲಾಗಿದೆ. ಸುಮಾರು 9,300 ಮಕ್ಕಳಿಗೆ ಉಡುಪನ್ನೂ ಒದಗಿಸಲಾಗಿದೆ. ಕೈಗಾರಿಕಾ ತರಬೇತಿ ಪಡೆಯುವ 24 ಪರಿಶಿಷ್ಟ ಬುಡಕಟ್ಟು ಯುವಕರಿಗೆ ಸ್ಟೈಪೆಂಡ್ ವೇತನ ಹಂಚಲಾಗಿದೆ. ಪ್ರೌಢಶಾಲಾ ಪೂರ್ವ ಶಿಕ್ಷಣ ವೇತನವನ್ನು ಸುಮಾರು 1,343 ವಿದ್ಯಾರ್ಥಿಗಳಿಗೆ ನೀಡಲಾಗಿದೆ; ಅಲ್ಲದೆ ನಾಲ್ಕು ವಸತಿ ನಿಯಮಗಳನ್ನೂ ಆರಂಭಿಸು ವುದರ ಜತೆಗೆ ಎರಡು ಹೊಸ ಕಟ್ಟಡಗಳನ್ನೂ ಕಟ್ಟಲಾಯಿತು. ಆ ವೇಳೆಗೆ ಅಸ್ತಿತ್ವದಲ್ಲಿದ್ದ ವಸತಿ ನಿಲಯಗಳಲ್ಲಿ 152 ವಿದ್ಯಾರ್ಥಿ ಗಳಿದ್ದರು; ಇವರಲ್ಲಿ 49 ವಿದ್ಯಾರ್ಥಿಗಳಿಗೆ ವಿಶೇಷ ಊಟದ ವೆಚ್ಚವನ್ನು ನೀಡಲಾಯಿತು. 32 ವಿದ್ಯಾರ್ಥಿಗಳಿಗೆ ಪುಸ್ತಕ ಮತ್ತು ಲೇಖನ ಸಾಮಗ್ರಿಯನ್ನು ಒದಗಿಸಲಾಯಿತು. 1973-74ರ ಅಂತ್ಯದಲ್ಲಿ 32 ಶಿಶುವಿಹಾರಗಳನ್ನೊಳಗೊಂಡ ಬುಡಕಟ್ಟು ಮಹಿಳಾ ಕ್ಷೇಮಾಭಿವೃದ್ಧಿ ಕೇಂದ್ರಗಳಿದ್ದವು. ಅವುಗಳನ್ನು 1981-82ರಲ್ಲಿ 11.98 ಲಕ್ಷ ರೂ.ಗಳ ವೆಚ್ಚದಲ್ಲಿ 95 ಕೇಂದ್ರಗಳಿಗೆ ಹೆಚ್ಚಿಸಲಾಯಿತು. ಈ ಸಮಯದಲ್ಲಿ 8.55 ಲಕ್ಷ ರೂ.ಗಳ ವೆಚ್ಚದಲ್ಲಿ 17 ಸರ್ಕಾರಿ ವಿದ್ಯಾರ್ಥಿನಿಲಯಗಳನ್ನು ನಿರ್ವಹಿಸಲಾಯಿತು. ಖಾಸಗಿಯಾಗಿ ನಿರ್ವಹಿಸುತ್ತಿದ್ದ ಐದು ವಿದ್ಯಾರ್ಥಿನಿಲಯಗಳಿಗೆ ಸರ್ಕಾರದಿಂದ ಅನುದಾನ ರೂಪದಲ್ಲಿ 2.37 ಲಕ್ಷ ರೂ.ಗಳನ್ನು ಮಂಜೂರು ಮಾಡಲಾಯಿತು; ವಿಶೇಷ ಊಟದ ವೆಚ್ಚಕ್ಕೆಂದು 370 ವಿದ್ಯಾರ್ಥಿಗಳಿಗೆ 1.99 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲಾಯಿತು. 12,711 ವಿದ್ಯಾರ್ಥಿಗಳಿಗೆ 7.94 ಲಕ್ಷ ರೂ.ಗಳ ಮೊತ್ತದ ಪ್ರೌಢಶಾಲಾ ಪೂರ್ವ ವಿದ್ಯಾರ್ಥಿವೇತನ, ಹಾಗೂ 3,000 ರೂ.ಗಳ ನಗದು ಬಹುಮಾನವನ್ನೂ, 0.52 ಲಕ್ಷ ರೂ.ಗಳನ್ನು 879 ವಿದ್ಯಾರ್ಥಿ ಗಳಿಗೆ ಪ್ರತಿಭಾ ವಿದ್ಯಾರ್ಥಿವೇತನವೆಂತಲೂ, ಪರಿಶಿಷ್ಟ ಬುಡಕಟ್ಟು ಜನಾಂಗಕ್ಕೆ ಸರ್ಕಾರ ವಿತರಣೆ ಮಾಡಿತು. 54 ಆಶ್ರಮ ಶಾಲೆಗಳ ನಿರ್ವಹಣೆಗೆ 28.20 ಲಕ್ಷ ರೂ.ಗಳನ್ನು ವಿನಿಯೋಗಿಸು ವುದರ ಜೊತೆಗೆ ಆ ವಿದ್ಯಾರ್ಥಿಗಳ ಉಡುಪಿಗೆಂದು ಇನ್ನೂ 2.06 ಲಕ್ಷ ರೂ.ಗಳನ್ನು ಸರ್ಕಾರ ಖರ್ಚು ಮಾಡಿತು. ಇದೇ ವರ್ಷದಲ್ಲಿ ಪ್ರೌಢಶಾಲಾ ನಂತರದ ವಿದ್ಯಾರ್ಥಿವೇತನವನ್ನು 17.52 ಲಕ್ಷ ರೂ.ಗಳ ವೆಚ್ಚದಲ್ಲಿ ಭಾರತ ಸರ್ಕಾರ 2,066 ವಿದ್ಯಾರ್ಥಿಗಳಿಗೆ ವಿತರಣೆ ಮಾಡಿತು. ಸ್ವಂತ ಉದ್ಯೋಗ ಕಾರ್ಯಕ್ರಮದ ಅನ್ವಯ ಪ್ರತೀ ವಿದ್ಯಾರ್ಥಿಗೆ ಒಂದು ಸಾವಿರ ರೂಪಾಯಿಯನ್ನೂ 5,000 ರೂ.ಗಳ ಕ್ರೀಡಾ ಸಾಮಗ್ರಿಯನ್ನೂ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ದೊರಕಿಸಲಾಯಿತು.

ಆರ್ಥಿಕಾಭಿವೃದ್ಧಿ : ಎರಡನೇಯ ಯೋಜನೆಯಲ್ಲಿ ಪರಿಶಿಷ್ಟ ಬುಡಕಟ್ಟುಗಳ ಕಲ್ಯಾಣಕ್ಕೆ ಗಮನ ಹರಿಸಲಾಯಿತು. ಈ ಜನಗಳ 2,258 ಕುಟುಂಬಗಳಿಗೆ ಕುಶಲ ಕಲೆಯ ಉದ್ಯೋಗ

ಗಳಿಗೆ ಅವಶ್ಯಕವಿರುವ ಬಿದಿರು ಮತ್ತು ಬಿದಿರುಕಡ್ಡಿ ಹಾಗೂ ಜೇನುಸಾಕಣೆಯ ಕಚ್ಚಾ ಸಾಮಗ್ರಿಯನ್ನು ಸಹಾಯರೂಪದಲ್ಲಿ ನೀಡಲಾಯಿತು. ನಾಲ್ಕು ಅರಣ್ಯ ಕಾರ್ಮಿಕ ಸಹಕಾರ ಸಂಘಗಳಿಗೆ ಧನಸಹಾಯವನ್ನು ದೊರಕಿಸಲಾಯಿತು. ಅಷ್ಟೇ ಅಲ್ಲದೆ ಐದು ಕಾರ್ಮಿಕ ಸಹಕಾರ ಸಂಘಗಳನ್ನು ವ್ಯವಸ್ಥೆ ಮಾಡಲಾಯಿತು. ಕೃಷಿಕಾರ್ಯ ನಿರ್ವಹಣೆಗೋಸ್ಕರ 1,579 ಜೊತೆ ಎತ್ತುಗಳನ್ನೂ, ಕೃಷಿ ಸಾಮಗ್ರಿ, ಬೀಜ, ಹಾಗೂ ಗೊಬ್ಬರವನ್ನೂ ಸುಮಾರು 2,000 ಬುಡಕಟ್ಟು ಸಂಸಾರಗಳಿಗೆ ಒದಗಿಸಲಾಯಿತು. ಮೂರನೇಯ ಯೋಜನೆಯಲ್ಲಿ 10.19 ಲಕ್ಷ ರೂ.ಗಳ ವೆಚ್ಚದಲ್ಲಿ ಬಿದಿರು ಹಾಗೂ ಬಿದಿರುಕಡ್ಡಿಯ ಕುಶಲ ಕಲೆಯ ತರಬೇತಿ ನೀಡಲು ನಾಲ್ಕು ತರಬೇತಿ ಕೇಂದ್ರಗಳನ್ನು ತೆರೆಯಲಾಯಿತು. ಈ ಕಲೆಗಳ ಅಭಿವೃದ್ಧಿಗೆ 900 ಜನಗಳಿಗೆ ಸಹಾಯ ಧನ ಕೊಡಲಾಯಿತು. 2,200 ಕುಟುಂಬಗಳಿಗೆ ಕೃಷಿಕಾರ್ಯಕ್ಕೆಂದು ಅವಶ್ಯಕ ಸಹಾಯವನ್ನು ನೀಡಲಾಯಿತು. ವಿವಿಧೋದ್ದೇಶ ಸಹಕಾರ ಪುನರ್ವಸತಿಯ ಯೋಜನೆಗಳು ಮತ್ತು ಕೃಷಿ ಕಾಲನಿಗಳನ್ನೂ ಸ್ಥಾಪಿಸಲಾಯಿತು. ಹೀಗೆಯೇ ವಾರ್ಷಿಕ ಯೋಜನೆಯಲ್ಲಿ 3.31 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ. ವಿವಿಧ ಕುಶಲತೆಯ ಕಸಬುಗಳಲ್ಲಿ 92 ಮಂದಿಗೆ ತರಬೇತಿಯ ಏರ್ಪಾಡು, ಎರಡು ಕೋಳಿ ಫಾರಂ ಮತ್ತು ಎರಡು ಹೈನುಗಾರಿಕೆಯ ಕೇಂದ್ರಗಳನ್ನು ಆರಂಭಿಸಲು ಸಹಾಯವನ್ನೂ 4,101 ಜೊತೆ ಎತ್ತುಗಳನ್ನೂ ಕೃಷಿ ಕಾರ್ಯಕ್ಕೋಸ್ಕರ ಬುಡಕಟ್ಟು ಸಂಸಾರಗಳಿಗೆ ಒದಗಿಸಲಾಗಿದೆ. ಅಷ್ಟೇ ಅಲ್ಲದೆ 202 ಕುಟುಂಬಗಳಿಗೆ ಕೃಷಿ ಸಹಾಯವನ್ನೂ ನೀಡಿದೆ. ಹದಿಮೂರು ಕೃಷಿ ಕಾಲನಿಗಳಿಗೆ ಸಂಪರ್ಕದ ದಾರಿಗಳನ್ನು ನಿರ್ಮಿಸುವುದರ ಜೊತೆಗೆ ಒಂದು ವಿವಿಧೋದ್ದೇಶ ಸಹಕಾರಿ ಪುನರ್ವಸತಿಯ ಯೋಜನೆಯನ್ನೂ ಸರ್ಕಾರ ಆರಂಭಿಸಿತು. ಒಂದು ಸಾವಿರ ರೂಪಾಯಿ ಸಹಾಯ ಧನದೊಂದಿಗೆ ಬುಡಕಟ್ಟು ಜನಾಂಗದ ಇಬ್ಬರು ಪದವೀಧರ ಯುವಕರಿಗೆ ತಮ್ಮ ಕಸುಬನ್ನು ಮುಂದುವರಿಸಲು ಸರ್ಕಾರ ಏರ್ಪಾಡು ಮಾಡಿತು. ಕೃಷಿ ಕಾರ್ಯಗಳಿಗಾಗಿ ತೊಡಗಿಸಲು ಬೇಕಾಗುವ ಸುಮಾರು 50,000 ರೂ.ಗಳನ್ನು 20 ಕುಟುಂಬಗಳಿಗೆ ಹಂಚಲಾಯಿತು. 1980-81 ರಲ್ಲಿ ಈ ಹಂಚಿಕೆಯ ಹಣ 0.78 ರೂ.ಗಳಿದ್ದು, ಅದನ್ನು 151 ಕುಟುಂಬಗಳಿಗೆ ಹಂಚಲಾಯಿತು. ಹಾಗೆಯೇ ಎರಡು ಕೃಷಿ ಕಾಲನಿಗಳನ್ನು ಪುನಶ್ಚೇತನಗೊಳಿಸಲು 0.35 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಯಿತು. ಕುಶಲಕರ್ಮ ತರಬೇತಿಯ ಕೇಂದ್ರಗಳಿಗೂ 19,000 ರೂ.ಗಳ ವೆಚ್ಚವನ್ನು ಭರಿಸಲಾಯಿತು. ನಾಲ್ಕು ತರಬೇತಿ ಹಾಗೂ ಉತ್ಪಾದನಾ ಕೇಂದ್ರಗಳನ್ನು ತಾಲೂಕಿಗೆ ಒಂದರಂತೆ ಕೊಡಗಿನ ಆದಿನಡೂರ್‌ನಲ್ಲಿಯೂ, ಕನಕಪುರದ ಹುಳ್ಳಿಕಾಲನಿಯಲ್ಲಿಯೂ, ಹೆಗ್ಗಡದೇವನಕೋಟೆಯ ಬೇಗೂರಿನಲ್ಲಿಯೂ, ಪಿರಿಯಾಪಟ್ಟಣದ ಮುತ್ತೂರಿನಲ್ಲಿಯೂ ಸ್ಥಾಪಿಸಲಾಗಿದೆ. ಇಲ್ಲಿ ಬುಡಕಟ್ಟು ಸಮುದಾಯಕ್ಕೆ ಬಿದಿರು ಮತ್ತು ಬಿದಿರುಕಡ್ಡಿಯ ಕುಶಲತೆಯಲ್ಲಿ ತರಬೇತಿ ನೀಡಲಾಗುತ್ತಿದೆ.

**ಆರೋಗ್ಯ, ಗೃಹನಿರ್ಮಾಣ ಮತ್ತು ಇತರ ಯೋಜನೆಗಳು :** ನಿರ್ಗತಿಕ ಬುಡಕಟ್ಟು ಜನರಿಗೆ ಎರಡನೇಯ ಯೋಜನೆಯಲ್ಲಿ 100 ಮನೆಗಳನ್ನು ಕಟ್ಟಿಸಲಾಯಿತು. 34 ಕುಡಿಯುವ ನೀರಿನ ಬಾವಿಗಳನ್ನು ತೋಡುವುದರ ಜೊತೆಗೆ 11 ಸಮುದಾಯ ಕಟ್ಟಡಗಳನ್ನು ನಿರ್ಮಿಸಲಾಯಿತು. ಒಳನಾಡಿನ ಈ ಜನಗಳ ಹಟ್ಟಿಗಳು ಹಾಗೂ ಅತಿ ಹತ್ತಿರದ ಗ್ರಾಮಗಳೊಂದಿಗೆ ಸಂಪರ್ಕ ಏರ್ಪಡಿಸಲು 17 ರಸ್ತೆಗಳನ್ನು ಅಭಿವೃದ್ಧಿಪಡಿಸಲಾಯಿತು. ಇವರಿಗೆ ವೈದ್ಯಕೀಯ ಸೌಲಭ್ಯ ಒದಗಿಸಲು ಮೂರು ಸಂಚಾರಿ ಆಸ್ಪತ್ರೆ ಘಟಕಗಳನ್ನು ಆರಂಭಿಸಲಾಯಿತು. ಮೂರನೇಯ ಯೋಜನೆಯಲ್ಲಿ 750 ಜನಕ್ಕೆ ಮನೆ ಕಟ್ಟಲು ಧನಸಹಾಯವನ್ನೂ, 50 ಕುಡಿಯುವ ನೀರಿನ ಬಾವಿಗಳನ್ನೂ ಮತ್ತು 15 ಶಿಶು ವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನೂ ಆರಂಭಿಸಲು 11.54 ಲಕ್ಷ ರೂ.ಗಳನ್ನೂ ವೆಚ್ಚ ಮಾಡಲಾಯಿತು. ವಾರ್ಷಿಕ ಯೋಜನೆಗಳಲ್ಲಿ 409 ಮನೆಗಳನ್ನು ಕಟ್ಟಲು ಧನಸಹಾಯ, ಎಂಟು ಕುಡಿಯುವ ನೀರಿನ ಬಾವಿಗಳು, ಒಂದು ಸಂಚಾರೀ ಆಸ್ಪತ್ರೆ ಘಟಕ ಹಾಗೂ ಗೃಹ ನಿವೇಶನಗಳಿಗೆಂದು ಒಂದು ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದು, ಇವೇ ಮುಂತಾದ ಕಾರ್ಯಕ್ಕೆಂದು 3.51 ಲಕ್ಷ ರೂ.ಗಳ ಸಹಾಯಧನ ಒದಗಿಸಲಾಯಿತು. 1981-82ರಲ್ಲಿ ಗಿರಿಜನರ ಗೃಹ ನಿರ್ಮಾಣಕ್ಕೋಸ್ಕರ 10,000 ರೂ.ಗಳನ್ನು ವೆಚ್ಚ ಮಾಡಲಾಯಿತು.

ಬುಡಕಟ್ಟು ಜನಾಂಗಗಳನ್ನು ಶೋಷಣೆಯಿಂದ ರಕ್ಷಿಸಲು ಕೇಂದ್ರ ಸರ್ಕಾರದ ಧನಸಹಾಯದೊಂದಿಗೆ ಅರಣ್ಯ ಕಾರ್ಮಿಕ ಸಹಕಾರ ಸಂಘಗಳ ಕಾರ್ಯಕ್ರಮವನ್ನು ಆರಂಭಿಸಲಾಯಿತು. ಅರಣ್ಯ ಕಾರ್ಮಿಕರ ಶೋಷಣೆಯನ್ನು ತಡೆಯಲು ವಿಶೇಷವಾಗಿ ಬುಡಕಟ್ಟು ಕಾರ್ಮಿಕರನ್ನು ಶೋಷಣೆಯಿಂದ ರಕ್ಷಿಸಲು ಹಾಗೂ ಅವರ ಪ್ರಾಥಮಿಕ ಅವಶ್ಯಕತೆಗಳನ್ನು ಈಡೇರಿಸಲು ವಿವಿಧೋದ್ದೇಶ ಕಾರ್ಮಿಕ ಸಹಕಾರಿ ಸಂಘಗಳನ್ನು ವ್ಯವಸ್ಥೆ ಮಾಡಲಾಗಿದೆ. ಈ ಸಂಘಗಳು ಬುಡಕಟ್ಟು ಜನರಿಗೆ ಆರ್ಥಿಕ ಲಾಭ ತರುವಂಥ ಎಲ್ಲಾ ಕಸುಬು ಅಥವಾ ಉದ್ಯೋಗಗಳಿಗೆ ಸಹಾಯ ನೀಡುತ್ತವೆ. ಇಂಥ ಐದು ವಿವಿಧೋದ್ದೇಶ ಅರಣ್ಯ ಕಾರ್ಮಿಕ ಸಹಕಾರಿ ಸಂಘಗಳು, ಸರ್ಕಾರದಿಂದ 40,000 ರೂ.ಗಳನ್ನು ಮಂಜೂರಾತಿ ಪಡೆದವು. ಅವೆಂದರೆ ದಕ್ಷಿಣಕನ್ನಡ ಜಿಲ್ಲೆಯ ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ತಾಲೂಕುಗಳ ಬುಡಕಟ್ಟು ಜನರಿಗೆ ಪುತ್ತೂರು, ಮೈಸೂರು ಜಿಲ್ಲೆಯ ಗುಂಡ್ಲು ಪೇಟೆ ಹಾಗೂ ನಂಜನಗೂಡು ತಾಲೂಕುಗಳ ಬುಡಕಟ್ಟು ಜನರಿಗೆ, ಗುಂಡ್ಲು ಪೇಟೆ, ಬೆಂಗಳೂರು ಜಿಲ್ಲೆಯ ಕನಕಪುರ ಹಾಗೂ

ಆನೇಕಲ್ ತಾಲೂಕುಗಳ ಬುಡಕಟ್ಟು ಜನರಿಗೆ ಕನಕಪುರ, ಕೊಡಗು ಜಿಲ್ಲೆಯ ಸೋಮವಾರ ಪೇಟೆ, ಮಡಿಕೇರಿ ತಾಲೂಕುಗಳ ಬುಡಕಟ್ಟು ಜನರಿಗೆ ಕುಶಾಲನಗರ ಹಾಗೂ ಯಳಂದೂರು ಮತ್ತು ಚಾಮರಾಜನಗರ ತಾಲೂಕಿನ ಬುಡಕಟ್ಟು ಜನರಿಗೆ ಬಿಳಿಗಿರಿರಂಗನ ಬೆಟ್ಟ. 1) ಸಣ್ಣ ಪ್ರಮಾಣದ ಅರಣ್ಯ ಉತ್ಪಾದನಾ ವಸ್ತುಗಳ ಸಂಗ್ರಹಣೆಯನ್ನು ಗುತ್ತಿಗೆಗೆ ತೆಗೆದು ಕೊಳ್ಳುವುದು, 2) ಮರ ಕಡಿಯುವ ಒಪ್ಪಂದ ಮಾಡಿ ಕೊಳ್ಳುವುದು, 3) ಕಾಡನ್ನು ಸವರುವುದು, 4) (ಅರಣ್ಯಗಳ) ದಾಸ್ತಾನನ್ನು ನಿರ್ವಹಿಸುವುದು, 5) ಬಳಕೆದಾರರಿಗಾಗಿ ಅಂಗಡಿಗಳನ್ನು ನಡೆಸುವುದು, 6) ಅರಣ್ಯ ಪ್ರದೇಶದಲ್ಲಿ ಸಾರ್ವಜನಿಕ ಕಾರ್ಯವನ್ನು ನಿರ್ವಹಿಸುವ ಒಪ್ಪಂದ ಮಾಡಿ ಕೊಳ್ಳುವುದು, ಹಾಗೂ 7) ಬುಡಕಟ್ಟು ಜನರಿಗೆ ಗೃಹ ನಿರ್ಮಾಣ ಕಾರ್ಯವನ್ನು ಕೈಗೊಳ್ಳುವುದು, ಇವೇ ಮೊದಲಾದವು ಈ ಸಹಕಾರ ಸಂಘಗಳ ವ್ಯಾಪ್ತಿಗೆ ಬರುತ್ತವೆ. ರಾಜ್ಯದಲ್ಲಿ 1973-74ರ ಸಾಲಿನಲ್ಲಿ ಎಂಟು ವಿವಿಧೋದ್ದೇಶ ಕಾರ್ಮಿಕರ ಸಹಕಾರ ಸಂಘಗಳು ಕೆಲಸ ಮಾಡುತ್ತಿದ್ದವು.

### ಅನುಸೂಚಿತ ಬುಡಕಟ್ಟುಗಳ ಕಲ್ಯಾಣ

ಶಿಕ್ಷಣ : ಅನುಸೂಚಿತ ಬುಡಕಟ್ಟುಗಳ ('ಡಿನೊಟಿ ಫಾಯ್ಡ್ ಟ್ರೈಬ್ಸ್') ಪ್ರತ್ಯೇಕ ಪ್ರಯೋಜನಕ್ಕಾಗಿಯೇ ಎರಡನೇಯ ಯೋಜನೆಯಲ್ಲಿ ಮೂರು ಆಶ್ರಮ ಶಾಲೆಗಳನ್ನೂ, ಹನ್ನೊಂದು ಖಾಸಗಿ ನಿಲಯಗಳನ್ನೂ ಆರಂಭಿಸಲಾಯಿತು. ಅವರಿಗೆ 300 ವಿದ್ಯಾರ್ಥಿವೇತನಗಳನ್ನು ನೀಡುವುದರ ಜೊತೆಗೆ 4,755 ವಿದ್ಯಾರ್ಥಿಗಳಿಗೆ ಪುಸ್ತಕ ಹಾಗೂ ಉಡುಪನ್ನು ಒದಗಿಸಲಾಯಿತು. ಮೂರನೇ ಯೋಜನೆಯಲ್ಲಿ ಬುಡಕಟ್ಟು ಜನಾಂಗಗಳಿಗೆಂದು ಗೊತ್ತುಪಡಿಸಿದ್ದ 15.94 ಲಕ್ಷ ರೂ.ಗಳ ವೆಚ್ಚದ ಮೊತ್ತದಲ್ಲಿ, 14.18 ಲಕ್ಷ ರೂ.ಗಳನ್ನು ಮಾತ್ರ ಖರ್ಚು ಮಾಡಿ 19 ಆಶ್ರಮ ಶಾಲೆಗಳು, 13 ವಸತಿ ನಿಲಯಗಳು, 4,800 ವಿದ್ಯಾರ್ಥಿಗಳಿಗೆ ಪ್ರೌಢಶಾಲಾ ಶಿಕ್ಷಣ ಪೂರ್ವ ವಿದ್ಯಾರ್ಥಿವೇತನಗಳು, 6,000 ವಿದ್ಯಾರ್ಥಿಗಳಿಗೆ ಉಚಿತ ಉಡುಪಿನ ಸಹಾಯ ಮತ್ತು ಲೇಖನ ಸಾಮಗ್ರಿ ನೀಡುವ ಕಾರ್ಯ ಮುಂತಾದವನ್ನು ಸರ್ಕಾರ ಕೈಗೊಂಡಿತು. ವಾರ್ಷಿಕ ಯೋಜನೆಗಳಲ್ಲಿ ಗೊತ್ತುಪಡಿಸಿದ 13.72 ಲಕ್ಷ ರೂ.ಗಳ ವೆಚ್ಚದಲ್ಲಿ, ಕೇವಲ 11.97 ಲಕ್ಷ ರೂ.ಗಳನ್ನು ಶಿಕ್ಷಣದ ಬಾಬ್ತಿಗೆ ಉಪಯೋಗಿಸಿ 12 ಆಶ್ರಮ ಶಾಲೆಗಳನ್ನು ವಿಸ್ತರಿಸಲಾಯಿತು. ಹಾಗೂ ಐದು ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನೂ ತೆರೆಯಲಾಯಿತು. ಅಲ್ಲದೆ ಕೈಗಾರಿಕಾ ತರಬೇತಿ ಯೋಗ್ಯತಾ ಪತ್ರಗಳನ್ನು ಪಡೆಯುವ ಹಾಗೂ ಕೈಗಾರಿಕಾ ತರಬೇತಿ ಸಂಸ್ಥೆಯಲ್ಲಿ ತರಬೇತಿ ಪಡೆಯುವ 114 ಬುಡಕಟ್ಟು ಯುವಕರಿಗೆ ಸ್ಟೈಪೆಂಡ್‌ನ ವ್ಯವಸ್ಥೆಯನ್ನೂ ಮಾಡಲಾಯಿತು; ನಾಲ್ಕು ವಸತಿ ನಿಲಯಗಳನ್ನು ಆರಂಭಿಸಲಾಯಿತು. ಇದರ ಜೊತೆಗೆ ಪ್ರೌಢ ಶಿಕ್ಷಣದ ಮುಂಚಿನ ತರಗತಿಗಳಲ್ಲಿ ವ್ಯಾಸಂಗ ಮಾಡುವ 7,056 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಖಾಸಗಿ ವಸತಿ ನಿಲಯಗಳಲ್ಲಿರುವ 1,475 ವಿದ್ಯಾರ್ಥಿಗಳ ಖರ್ಚನ್ನು ಅನುದಾನ ರೂಪದಲ್ಲಿ ಆ ವಸತಿ ನಿಲಯಗಳಿಗೆ ನೀಡಲಾಯಿತು. ಪುಸ್ತಕ ಹಾಗೂ ಲೇಖನ ಸಾಮಗ್ರಿಯನ್ನು 17 ವಿದ್ಯಾರ್ಥಿಗಳಿಗೆ ಒದಗಿಸುವುದರೊಂದಿಗೆ 34 ವಿದ್ಯಾರ್ಥಿಗಳ ವಿಶೇಷ ಊಟದ ವೆಚ್ಚವನ್ನೂ ಸರ್ಕಾರವೇ ವಹಿಸಿಕೊಂಡಿತು. 1980-81ರಲ್ಲಿ 19.01 ಲಕ್ಷ ರೂ.ಗಳ ವೆಚ್ಚದಲ್ಲಿ 39 ಆಶ್ರಮ ಶಾಲೆಗಳು ಕಾರ್ಯ ನಿರ್ವಹಿಸಲು ನೆರವು ನೀಡಲಾಯಿತು. 1.90 ಲಕ್ಷ ರೂ.ಗಳ ವೆಚ್ಚದಲ್ಲಿ 17 ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನೂ ನಿರ್ವಹಿಸಲಾಯಿತು.

ಆರ್ಥಿಕಾಭಿವೃದ್ಧಿ : 1981-82ರಲ್ಲಿ ಸರ್ಕಾರದಿಂದ ತೆರೆಯಲ್ಪಟ್ಟ 32 ವಸತಿ ನಿಲಯಗಳ ನಿರ್ವಹಣೆಗೆ 14.36 ಲಕ್ಷ ರೂ.ಗಳು ವೆಚ್ಚ ಮಾಡಲ್ಪಟ್ಟರೆ, ಅನುದಾನ ಪಡೆದ 43 ವಸತಿ ನಿಲಯಗಳಲ್ಲಿ 2,119 ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆಗಾಗಿ ಸರ್ಕಾರ 12.29 ಲಕ್ಷ ರೂ.ಗಳನ್ನು ಮಂಜೂರು ಮಾಡಿತು. ಎರಡನೇಯ ಯೋಜನೆಯಲ್ಲಿ ಆರ್ಥಿಕ ಅಭಿವೃದ್ಧಿಯ ಕಾರ್ಯಕ್ರಮದನ್ವಯ 560 ಅನುಸೂಚಿತ ಬುಡಕಟ್ಟು ಜನರಿಗೆ ಕುಶಲ ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಅವಶ್ಯಕ ಕಚ್ಚಾವಸ್ತುಗಳು ಮತ್ತು ಸಾಮಗ್ರಿಗಳನ್ನು ಒದಗಿಸಲಾಯಿತು; ಕೃಷಿ ಕೆಲಸಗಳನ್ನು ನಿರ್ವಹಿಸಲು ಬೇಕಾಗುವ ಬೀಜಗಳು, ಗೊಬ್ಬರ ಮತ್ತು ವ್ಯವಸಾಯ ಸಲಕರಣೆಗಳನ್ನು ಸುಮಾರು 1,972 ಜನರಿಗೆ ನೀಡಲಾಯಿತು. ಸುಮಾರು 340 ಬುಡಕಟ್ಟು ಕುಟುಂಬಗಳಿಗೆ ಹಾಲು ಕರೆಯುವ ಹಸುಗಳನ್ನೂ, ಎಮ್ಮೆಗಳನ್ನೂ ಒದಗಿಸಲಾಗಿದೆ. ಮೂರನೇಯ ಯೋಜನೆಯಲ್ಲಿ ಗೊತ್ತುಪಡಿಸಿದ 15.08 ಲಕ್ಷ ರೂ.ಗಳ ವೆಚ್ಚದಲ್ಲಿ, 8.11 ಲಕ್ಷ ರೂ.ಗಳನ್ನು ಮಾತ್ರ ಖರ್ಚು ಮಾಡಿ ಹಲವು ಬಗೆಯ ವೃತ್ತಿಗಳಲ್ಲಿ ತರಬೇತಿ ನೀಡುವುದಕ್ಕೋಸ್ಕರ ಎರಡು ವಸತಿ ನಿಲಯಗಳನ್ನು ಸ್ಥಾಪಿಸಲಾಯಿತು. 2,800 ಅನುಸೂಚಿತ ಬುಡಕಟ್ಟು ಜನರಿಗೆ ತಾಂತ್ರಿಕ ಹಾಗೂ ಕೃಷಿ ನೆರವು ದೊರಕಿಸಲಾಯಿತು. 6,000 ಜನರಿಗೆ ಕುಶಲ ಕಸುಬುಗಳಲ್ಲಿ ತರಬೇತಿ ಹೊಂದುವ ಸೌಲಭ್ಯವನ್ನು ಒದಗಿಸುವ ಕಾರ್ಯ ಸರ್ಕಾರದ ವೆಚ್ಚದಲ್ಲಿ ಪ್ರಮುಖವಾದುದು; ಇಷ್ಟೇ ಅಲ್ಲದೆ ವಿವಿಧೋದ್ದೇಶ ಸಹಕಾರಿ ಪುನರ್ವಸತಿ ಯೋಜನೆಯೂ ಅದರಲ್ಲಿ ಸೇರಿತ್ತು. ವಾರ್ಷಿಕ ಯೋಜನೆಗಳಲ್ಲಿ ಗೊತ್ತುಪಡಿಸಿದ 5.41 ಲಕ್ಷ ರೂ.ಗಳ ವೆಚ್ಚದಲ್ಲಿ, 5.26 ಲಕ್ಷ ರೂ.ಗಳನ್ನು 184 ಕುಟುಂಬಗಳಿಗೆ ಕೃಷಿ ನೆರವಿಗಾಗಿಯೂ, ನಾಲ್ಕು ಹೈನುಗಾರಿಕಾ ಕೇಂದ್ರಗಳನ್ನು ಮತ್ತು ಎರಡು ಕೋಳಿ ಸಾಕುವ ಘಟಕಗಳನ್ನು ತೆರೆಯುವು

ದಕ್ಕಾಗಿಯೂ, 164 ಕುಶಲ ಕರ್ಮಿಗಳು ತಮ್ಮ ಕಸುಬನ್ನು ಅಭಿವೃದ್ಧಿ ಪಡಿಸುವುದಕ್ಕಾಗಿಯೂ ವಿನಿಯೋಗಿಸಲಾಯಿತು. 1980-81ರಲ್ಲಿ ಅನುಸೂಚಿತ ಬುಡಕಟ್ಟು ಜನಾಂಗದ ವ್ಯವಸಾಯಕ್ಕೋಸ್ಕರ 1.19 ಲಕ್ಷ ರೂ.ಗಳ ನೆರವನ್ನೂ, 12 ಕುಟುಂಬಗಳಿಗೆ ಎತ್ತುಗಳನ್ನು ಒದಗಿಸಲು 30,000 ರೂ.ಗಳನ್ನೂ, ಕುಶಲಕಲಾ ಕೇಂದ್ರಗಳಿಗಾಗಿ 39,000 ರೂ.ಗಳನ್ನೂ ಸರ್ಕಾರ ವೆಚ್ಚ ಮಾಡಿತು. 1981-82ರ ಸಾಲಿನಲ್ಲಿ ಐದು ಹೊಲಿಗೆ ಕೇಂದ್ರಗಳನ್ನು ನಿರ್ವಹಿಸಲು ಹಾಗೂ ಎತ್ತುಗಳನ್ನು ಕೃಷಿಕರಿಗೆ ಒದಗಿಸಲು ಪ್ರತೀ ಬುಡಕಟ್ಟು ಕುಟುಂಬ ನಿವಾಸಿಗೆ 2,500 ರೂ.ಗಳಂತೆ ನೀಡಲು, 25,000 ರೂ.ಗಳನ್ನು ಸರ್ಕಾರ ಮಂಜೂರು ಮಾಡಿತು.

**ಆರೋಗ್ಯ, ಗೃಹ ನಿರ್ಮಾಣ ಮತ್ತು ಇತರ ಕಾರ್ಯಗಳು :** ಮೂರನೇಯ ಯೋಜನಾವಧಿಯಲ್ಲಿ ನಿಗದಿ ಪಡಿಸಿದ್ದ 14.98 ಲಕ್ಷ ರೂ.ಗಳ ಮೊತ್ತದ ವೆಚ್ಚದಲ್ಲಿ 3.82 ಲಕ್ಷ ರೂ.ಗಳನ್ನು ಮಾತ್ರ ಖರ್ಚು ಮಾಡಿ ಅದನ್ನು 90 ಕುಡಿಯುವ ನೀರಿನ ಬಾವಿಗಳನ್ನು ಮತ್ತು ಐದು ಫರ್ಲಾಂಗ್ ಉದ್ದದ ಸಂಪರ್ಕ ರಸ್ತೆಗಳನ್ನು ನಿರ್ಮಿಸಲು ಹಾಗೂ ಗೃಹ ನಿರ್ಮಾಣಕ್ಕೆಂದು 3,000 ಜನರಿಗೆ ಧನಸಹಾಯ ನೀಡಲು ವಿನಿಯೋಗಿಸಲಾಯಿತು. ವಾರ್ಷಿಕ ಯೋಜನೆಗಳ ಕಾಲದಲ್ಲಿ 180 ಮನೆಗಳನ್ನು ಕಟ್ಟಲು ಧನಸಹಾಯ, 11 ಕುಡಿಯುವ ನೀರಿನ ಬಾವಿಗಳನ್ನು ತೋಡಲು ಮಾಡಿದ ಖರ್ಚು, ಗೃಹ ನಿವೇಶನಕ್ಕೆಂದು ಮೂರುವರೆ ಎಕರೆ ಜಮೀನು ಸ್ವಾಧೀನಕಾರ್ಯ, ಇವೇ ಮೊದಲಾದವುಗಳಿಗೆ 1.605 ಲಕ್ಷ ರೂ.ಗಳನ್ನು ಸರ್ಕಾರ ಮಂಜೂರು ಮಾಡಿತು. 1980-81ರಲ್ಲಿ 69 ಕುಟುಂಬಗಳ ಗೃಹ ನಿರ್ಮಾಣಕ್ಕಾಗಿ 48,000 ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. 1981-82ರಲ್ಲಿ ಪ್ರವಾಹ ಹಾಗೂ ಅಗ್ನಿ ಸಂತ್ರಸ್ತ ಬುಡಕಟ್ಟು ಜನ ತಮ್ಮ ಮನೆಗಳನ್ನು ಕಳೆದುಕೊಂಡ ಕಾರಣಕ್ಕಾಗಿ, ಪ್ರತೀ ಕುಟುಂಬಕ್ಕೂ 700 ರೂ.ಗಳಂತೆ ಧನ ಸಹಾಯ ಮಾಡಲು ಸರ್ಕಾರ ಒಂದು ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿತು.

## ಅಲೆಮಾರಿ ಮತ್ತು ಅರೆಅಲೆಮಾರಿ ಬುಡಕಟ್ಟುಗಳ ಕ್ಷೇಮಾಭಿವೃದ್ಧಿ

ಶಿಕ್ಷಣ : ಎರಡನೇಯ ಯೋಜನಾವಧಿಯಲ್ಲಿ ಅಲೆಮಾರಿ ಮತ್ತು ಅರೆಅಲೆಮಾರಿ (ನೊಮೆಡಿಕ್ ಅ್ಯಂಡ್ ಸೆಮಿ ನೊಮೆಡಿಕ್) ಬುಡಕಟ್ಟು ಜನರಿಗಾಗಿ ನಾಲ್ಕು ಆಶ್ರಮ ಶಾಲೆಗಳನ್ನು ತೆರೆಯಲಾಯಿತು. ಖಾಸಗಿ ವಸತಿ ನಿಲಯಗಳಲ್ಲಿ ಪ್ರವೇಶ ಪಡೆದಿದ್ದ 26 ವಿದ್ಯಾರ್ಥಿಗಳಿಗೆ ವಸತಿ ವೆಚ್ಚ ನೀಡಲಾಯಿತು. 250 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನೂ, 625 ವಿದ್ಯಾರ್ಥಿಗಳಿಗೆ ಪುಸ್ತಕ ಹಾಗೂ ಶಾಲಾ ಸಾಮಗ್ರಿಯನ್ನೂ, ಸರ್ಕಾರ ನೀಡಿತು. ಮೂರನೇಯ ಯೋಜನೆಯಲ್ಲಿ ನಿಗದಿಪಡಿಸಿದ್ದ 14.04 ಲಕ್ಷ ರೂ.ಗಳ ಮೊತ್ತದ ವೆಚ್ಚದಲ್ಲಿ ಶಿಕ್ಷಣಕ್ಕೋಸ್ಕರ 6.08 ಲಕ್ಷ ರೂ.ಗಳನ್ನು ವಿನಿಯೋಗಿಸಲಾಯಿತು. ಇದರಲ್ಲಿ 22 ಆಶ್ರಮ ಶಾಲೆಗಳು, ಮೂರು ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳು, 1,000 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಇನ್ನೂರು ವಿದ್ಯಾರ್ಥಿಗಳಿಗೆ ಉಡುಪು ಮತ್ತು ಲೇಖನ ಸಾಮಗ್ರಿಯನ್ನು ನೀಡಲಾಯಿತು. ವಾರ್ಷಿಕ ಯೋಜನೆಯ ಕಾಲದಲ್ಲಿ ಒದಗಿಸಲಾಗಿದ್ದ 7.45 ಲಕ್ಷ ರೂ.ಗಳ ಮೊತ್ತದಲ್ಲಿ, 6.5 ಲಕ್ಷ ರೂ.ಗಳನ್ನು ವ್ಯಯಿಸಿ, ಅದರಲ್ಲಿ ಹದಿನೆಂಟು ಆಶ್ರಮ ಶಾಲೆಗಳ ವಿಸ್ತರಣ ಕಾರ್ಯಕ್ಕೂ, ಒಂದು ಹೊಸ ಆಶ್ರಮ ಶಾಲೆಯನ್ನು ಆರಂಭಿಸುವುದಕ್ಕೂ, 2,796 ಮಕ್ಕಳಿಗೆ ಶಾಲಾ ಸಾಮಗ್ರಿಯನ್ನು ಒದಗಿಸುವುದಕ್ಕೂ, ಕೈಗಾರಿಕಾ ತರಬೇತಿ ಯೋಗ್ಯತಾ ಪತ್ರ ಪಡೆಯುವ ಹಾಗೂ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ತರಬೇತು ಪಡೆಯುವ ಒಂಬತ್ತು ವಿದ್ಯಾರ್ಥಿಗಳಿಗೆ ಸ್ಟೈಪೆಂಡ್ ವೇತನ ನೀಡುವುದಕ್ಕೂ, 1,446 ಪ್ರೌಢಶಿಕ್ಷಣ ಪೂರ್ವದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನದ ನೆರವಿಗೂ, ಖಾಸಗಿ ವಸತಿ ನಿಲಯದಲ್ಲಿರುವ ಈ ಜನಾಂಗದ 152 ವಿದ್ಯಾರ್ಥಿಗಳಿಗೆ ಅನುದಾನ ನೀಡುವುದಕ್ಕೂ, 12 ಜನ ವಿದ್ಯಾರ್ಥಿಗಳಿಗೆ ವಿಶೇಷ ಊಟದ ವೆಚ್ಚವನ್ನು ಭರಿಸುವುದಕ್ಕೂ, 13 ಕಾಲೇಜು ವಿದ್ಯಾರ್ಥಿಗಳಿಗೆ ಪುಸ್ತಕ ಮತ್ತು ಲೇಖನ ಸಾಮಗ್ರಿಯನ್ನು ಒದಗಿಸುವುದಕ್ಕೂ ನೀಡಲಾಯಿತು. ಅಲ್ಲದೆ ಏಳು ಹೊಸ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನೂ ತೆರೆಯಲಾಯಿತು. 1981-82ರಲ್ಲಿ 2,369 ವಿದ್ಯಾರ್ಥಿಗಳಿದ್ದ 47 ಆಶ್ರಮ ಶಾಲೆಗಳನ್ನು 29 ಶಿಶುವಿಹಾರವನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನು ಪೋಷಿಸಲಾಯಿತು. ಇದೇ ಸಮಯದಲ್ಲಿ ಅನುದಾನ ಪಡೆಯುವ ಖಾಸಗಿ ವಸತಿ ನಿಲಯಗಳಲ್ಲಿದ್ದ 158 ವಿದ್ಯಾರ್ಥಿಗಳಿಗೆ ಪ್ರಯೋಜನವಾಗಲೆಂದು ಸರ್ಕಾರ 89,675 ರೂಪಾಯಿಗಳನ್ನು ವೆಚ್ಚ ಮಾಡಿತು.

**ಆರ್ಥಿಕಾಭಿವೃದ್ಧಿ :** ಎರಡನೇಯ ಯೋಜನೆಯಲ್ಲಿ 3,200 ಅಲೆಮಾರಿ ಮತ್ತು ಅರೆಅಲೆಮಾರಿ ಕುಟುಂಬಗಳಿಗೆ ಆರ್ಥಿಕ ನೆರವನ್ನು ನೀಡಲಾಗಿತ್ತು ಮತ್ತು ಕಾರ್ಮಿಕ ಗುತ್ತಿಗೆ ಸಂಘಗಳೂ ಅಸ್ತಿತ್ವಕ್ಕೆ ಬಂದವು. ಈ ಜನಾಂಗಗಳ 500 ಜನರಿಗೆ ಕರಕುಶಲ ಕೈಗಾರಿಕೆಗಳ ಮೂಲಕ ಅಭಿವೃದ್ಧಿ ಹೊಂದಲು ಸಹಾಯಧನವನ್ನೂ, 1,900 ಜನರಿಗೆ ಕೃಷಿಗಾಗಿ ನೆರವನ್ನೂ, 1,500 ಜನರಿಗೆ ಜಾನುವಾರು ನೀಡುವುದಕ್ಕೂ ಸರ್ಕಾರ 8.17 ಲಕ್ಷ ರೂ.ಗಳ ಮೊತ್ತವನ್ನು ಮಂಜೂರು ಮಾಡಿತ್ತು. ವಾರ್ಷಿಕ ಯೋಜನೆಯಲ್ಲಿ ನಿಗದಿಪಡಿಸಿದ್ದ 4.95 ಲಕ್ಷ ರೂಪಾಯಿಗಳ ಮೊತ್ತದ ವೆಚ್ಚದಲ್ಲಿ 4.34 ಲಕ್ಷ ರೂ.ಗಳನ್ನು ಮಾತ್ರ

ನ್ಯಯಿಸಿ ಎರಡು ಜಂಟಿ ಕೃಷಿ-ಸಹಕಾರ ಸಂಘಗಳಿಗೆ ಸಹಾಯಕ ವಾಗುವುದಕ್ಕಾಗಿಯೂ, 310 ಕುಟುಂಬಗಳಿಗೆ ಕೃಷಿಕಾರ್ಯ ನೆರವಿಗೂ, ಎರಡು ಹೈನುಗಾರಿಕೆ ಕೇಂದ್ರ ಮತ್ತು ಕೋಳಿ ಸಾಕಣೆ ಘಟಕಗಳ ನೆರವಿಗೂ ಮತ್ತು 83 ಕುಶಲ ಕರ್ಮಿಗಳ ಕಸುಬು ಅಭಿವೃದ್ಧಿಗೂ ಸರ್ಕಾರ ನೆರವು ನೀಡಿತು. 1981-82 ರಲ್ಲಿ 500 ಕುಟುಂಬಗಳಿಗೆ ಅವಶ್ಯಕವಿರುವ ಕೃಷಿ ಸಲಕರಣೆ, ಬೀಜ ಹಾಗೂ ಗೊಬ್ಬರಕ್ಕಾಗಿ 1.50 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಯಿತು.

**ಆರೋಗ್ಯ, ಗೃಹ ನಿರ್ಮಾಣ ಮತ್ತು ಇತರ ಕಾರ್ಯಗಳು :** ಈ ಕಾರ್ಯಕ್ರಮಗಳನ್ವಯ ಎರಡನೇಯ ಯೋಜನೆಯಲ್ಲಿ 970 ಜನರಿಗೆ ಮನೆ ಕಟ್ಟಿಕೊಳ್ಳಲು ಧನ ಸಹಾಯವನ್ನೂ, ಎಂಟು ಕುಡಿಯುವ ನೀರಿನ ಬಾವಿಗಳನ್ನು ತೋಡಿಸುವ ಕಾರ್ಯವನ್ನೂ, ಮೂರು ಬಾಲವಾಡಿ (ಶಿಶುವಿಹಾರ) ಹಾಗೂ ನಾಲ್ಕು ಸಂಸ್ಕಾರ ಕೇಂದ್ರಗಳನ್ನೂ ಸರ್ಕಾರ ಆರಂಭ ಮಾಡಿತು. ಮೂರನೇಯ ಯೋಜನೆಯಲ್ಲಿ ನಿಗದಿಪಡಿಸಿದ್ದ 9.10 ಲಕ್ಷ ರೂ.ಗಳ ಮೊತ್ತದಲ್ಲಿ, 5.13 ಲಕ್ಷ ರೂ.ಗಳನ್ನು 1,400 ಕುಟುಂಬಗಳಿಗೆ ಗೃಹ ನಿರ್ಮಾಣಕ್ಕೂ, 30 ಕುಡಿಯುವ ನೀರಿನ ಬಾವಿಗಳನ್ನು ತೋಡುವುದಕ್ಕೂ, ಒಂದು ಪ್ರಸೂತಿ ಆರೋಗ್ಯ ಕೇಂದ್ರವನ್ನು ಆರಂಭಿಸುವುದಕ್ಕೂ ಸರ್ಕಾರ ವೆಚ್ಚ ಮಾಡಿತು. ವಾರ್ಷಿಕ ಯೋಜನೆಗಳಲ್ಲಿ 221 ಮನೆಗಳನ್ನು ಕಟ್ಟಲು ಧನ ಸಹಾಯ, ಏಳು ಕುಡಿಯುವ ನೀರಿನ ಬಾವಿಗಳನ್ನು ತೋಡಲು, ಗೃಹ ನಿವೇಶನಗಳಿಗಾಗಿ ಒಂದು ಎಕರೆ ಭೂಸ್ವಾಧೀನ ಕಾರ್ಯ, ಮೊದಲಾದವುಗಳಿಗಾಗಿ ಸರ್ಕಾರ 1.57 ಲಕ್ಷ ರೂ.ಗಳನ್ನು ವಿನಿಯೋಗಿಸಿತು. 1980-81ರಲ್ಲಿ 12 ಕುಟುಂಬಗಳಿಗೆ ಗೃಹ ನಿರ್ಮಾಣಕ್ಕೆ ಧನ ಸಹಾಯ ಮಾಡಲಾಯಿತು. 1981-82ರಲ್ಲಿ ಪ್ರವಾಹ ಹಾಗೂ ಅಗ್ನಿ ಸಂತ್ರಸ್ತ ಅಲೆಮಾರಿ ಬುಡಕಟ್ಟು ಜನರಿಗೆ ತಮ್ಮ ಮನೆಗಳನ್ನು ಕಳೆದುಕೊಂಡ ಕಾರಣಕ್ಕಾಗಿ, ಪ್ರತೀ ಕುಟುಂಬಕ್ಕೂ 700 ರೂ.ಗಳ ಧನಸಹಾಯ ಮಾಡಲು ಸರ್ಕಾರ 50,000 ರೂ.ಗಳನ್ನು ವಿನಿಯೋಗ ಮಾಡಿತು.

**ಕರ್ನಾಟಕ ಪರಿಶಿಷ್ಟ ಜಾತಿಗಳ ಹಾಗೂ ಪರಿಶಿಷ್ಟ ಬುಡಕಟ್ಟುಗಳ ಅಭಿವೃದ್ಧಿ ನಿಗಮ :** ಕರ್ನಾಟಕ ಪರಿಶಿಷ್ಟ ಜಾತಿಗಳ ಹಾಗೂ ಪರಿಶಿಷ್ಟ ಬುಡಕಟ್ಟುಗಳ ನಿಗಮ, ನಿಯಮಿತವು ಮಾರ್ಚ್ 1975ರಲ್ಲಿ ಕರ್ನಾಟಕ ಸರ್ಕಾರದಿಂದ ಸ್ಥಾಪಿಸಲ್ಪಟ್ಟಿತು. ಪರಿಶಿಷ್ಟ ವರ್ಗಗಳ ಸಾಮಾಜಿಕ ಹಾಗೂ ಆರ್ಥಿಕ ಸುಧಾರಣೆಯ ಪ್ರಮುಖ ಉದ್ದೇಶಕ್ಕಾಗಿ ಒಂದು ಕೋಟಿ ರೂಪಾಯಿಗಳ ಮೂಲ ಬಂಡವಾಳ ಹೂಡಿಕೆಗೆ ಸರ್ಕಾರವು ಒಪ್ಪಿಗೆ ನೀಡಿತು. ಈ ವರ್ಗಗಳ ಜನರು ವ್ಯವಸಾಯ, ಕೈಗಾರಿಕೆ ಮತ್ತು ಇತರ ವೃತ್ತಿಗಳನ್ನು ಆರಂಭಿಸುವುದಕ್ಕೆ ಅವಶ್ಯಕವಿರುವ ಸಾಲವನ್ನು ಒದಗಿಸುವುದು ನಿಗಮದ ಪ್ರಮುಖ ಕಾರ್ಯ. ಮಾರ್ಚ್ 1982ರ ಅಂತ್ಯದವರೆಗೆ ಕರ್ನಾಟಕ ಸರ್ಕಾರ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ನಿಗಮಕ್ಕೆ ಒಟ್ಟು 395.30 ಲಕ್ಷ ರೂ.ಗಳ ಷೇರು ಬಂಡವಾಳವನ್ನು ಒದಗಿಸಿದೆ. ಅಲ್ಪ ಮೊತ್ತದ ಸಾಲಗಳಿಗಾಗಿ ನಿಗಮ 143.69 ಲಕ್ಷ ರೂ.ಗಳನ್ನು ನೀಡಿ, 25,192 ಪರಿಶಿಷ್ಟ ಜಾತಿಗಳ ಕುಟುಂಬಗಳು ಕೈಗೊಳ್ಳಬಹುದಾದ ಹಲವು ಬಗೆಯ ಆರ್ಥಿಕ ಅಭಿವೃದ್ಧಿ ಚಟುವಟಿಕೆಗಳಿಗೆ ಬ್ಯಾಂಕುಗಳಿಂದ ಶೇ. 75ರಷ್ಟು ಸಾಲ ಪ್ರಮಾಣ ಪಡೆಯಲು ಅನುಕೂಲವಾಗುವಂತೆ ಮಾರ್ಚ್ 1982ರ ಅಂತ್ಯದವರೆಗೆ 436.33 ಲಕ್ಷ ರೂ.ಗಳನ್ನು ನಿಗಮವು ಪಡೆದುಕೊಂಡಿದೆ. ಹೀಗೆಯೇ ಶೇ. 25ರಷ್ಟು ಪ್ರಮಾಣದಲ್ಲಿ ಅಲ್ಪ ಮೊತ್ತದ ಸಾಲಗಳಿಗೆ ಹಣ ನೀಡಲು 7.90 ಲಕ್ಷ ರೂ.ಗಳನ್ನು ವಿನಿಯೋಗಿಸಿ, ಉಳಿದ ಶೇ. 75ರಷ್ಟು ಸಾಲದ ಹಣವನ್ನು, 1,111 ಪರಿಶಿಷ್ಟ ಜಾತಿಗಳ ಕುಟುಂಬಗಳು ಕೈಗೊಳ್ಳಬಹುದಾದ ಹಲವು ಬಗೆಯ ಆರ್ಥಿಕ ಕಾರ್ಯಗಳಿಗೆ ಹಾಗೂ ಅಭಿವೃದ್ಧಿಗಾಗಿ, 24.76 ಲಕ್ಷ ರೂಪಾಯಿಗಳನ್ನು ಮಾರ್ಚ್ 31, 1982ರ ವೇಳೆಗೆ ಬ್ಯಾಂಕುಗಳಿಂದ ನಿಗಮ ಪಡೆದಿದೆ. ನಿಗಮದ ಕಾರ್ಯಕ್ರಮದಲ್ಲಿ 1982-83ರ ಸಾಲಿಗೆ 25,000 ಪರಿಶಿಷ್ಟ ಜಾತಿಗಳ ಕುಟುಂಬಗಳು ಮತ್ತು 2,000 ಪರಿಶಿಷ್ಟ ಬುಡಕಟ್ಟು ಕುಟುಂಬಗಳು ಆರ್ಥಿಕ ನೆರವು ಪಡೆಯಬೇಕೆಂಬ ಗುರಿ ಇದೆ; ಅದರಂತೆ 1982-83ರಲ್ಲಿ ಪರಿಶಿಷ್ಟ ಜಾತಿಗಳಿಗೆ ನಿಗದಿಪಡಿಸಿದ್ದ ವೆಚ್ಚದ ಮೊತ್ತ 1,112.00 ಲಕ್ಷ ರೂ.ಗಳಾದರೆ, ಪರಿಶಿಷ್ಟ ಬುಡಕಟ್ಟುಗಳಿಗಾಗಿ ನಿಗದಿಪಡಿಸಿದ್ದ ವೆಚ್ಚದ ಮೊತ್ತ 43.04 ಲಕ್ಷ ರೂಪಾಯಿಗಳಾಗಿದ್ದವು. ಈ ಮೊತ್ತದ ಹಣದಲ್ಲಿ ಪರಿಶಿಷ್ಟ ಜಾತಿಗಳಿಗಾಗಿ ಈಗಾಗಲೇ ವೆಚ್ಚ ಮಾಡಿರುವುದು 178.45 ಲಕ್ಷ ರೂಪಾಯಿಗಳು; ಅಂತೆಯೇ ಪರಿಶಿಷ್ಟ ಬುಡಕಟ್ಟುಗಳಿಗಾಗಿ 2.78 ಲಕ್ಷ ರೂಪಾಯಿಗಳು ವೆಚ್ಚವಾಗಿದೆ. ಏಪ್ರಿಲ್ 1, 1982ರಿಂದ ಅಕ್ಟೋಬರ್ 25, 1982ರವರೆಗೆ ನಿಗಮದಿಂದ ನೆರವು ಪಡೆದ ಪರಿಶಿಷ್ಟ ಜಾತಿಗಳ ಹಾಗೂ ಪರಿಶಿಷ್ಟ ಬುಡಕಟ್ಟುಗಳ ಜನರ ಸಂಖ್ಯೆ ಕ್ರಮವಾಗಿ 6,773 ಮತ್ತು 91.

ಮುಂದಿನ ಪುಟದಲ್ಲಿ ಕೊಟ್ಟಿರುವ ಕೋಷ್ಟಕವು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಜನಾಂಗಗಳ ಆರ್ಥಿಕ ಅಭಿವೃದ್ಧಿಗೆ ನೆರವಾಗುವ ಉತ್ಪನ್ನ ಸಾಧನೆಗಳು ಹಾಗೂ ಹಲವಾರು ಉದ್ದೇಶಗಳಿಗೆ ಸಾಲ ಮಂಜೂರು ಮಾಡುವುದಕ್ಕಾಗಿ 1980-81ರಲ್ಲಿ ಸರ್ಕಾರ ನೀಡಿದ 160.04 ಲಕ್ಷ ರೂಪಾಯಿಗಳ ವೆಚ್ಚದ ವಿವರಣೆಯನ್ನೂ ತಿಳಿಯಪಡಿಸುತ್ತದೆ.

ಕರ್ನಾಟಕ ಗ್ರಾಮ ಮತ್ತು ಪಟ್ಟಣಗಳಲ್ಲಿ ವಾಸಿಸುವ ಪರಿಶಿಷ್ಟ ಜಾತಿಗಳ ಸ್ತ್ರೀ ಪುರುಷರ ಸಾಕ್ಷರತೆಯ ಪ್ರಮಾಣ ಮುಂದಿನ ಪುಟದ ಎರಡನೇ ಪಟ್ಟಿಯಲ್ಲಿ ಕೊಡಲಾಗಿದೆ.

| ಉದ್ದೇಶ | ಸಾಲ ಪಡೆದವರ ಸಂಖ್ಯೆ | ನೀಡಿರುವ ಸಾಲದ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| ಕೃಷಿ | 911 | 17.40 |
| ರೇಷ್ಮೆ ವ್ಯವಸಾಯ | 64 | 1.20 |
| ಹೈನುಗಾರಿಕೆ | 2,477 | 60.00 |
| ಕುರಿ ಮತ್ತು ಮೇಕೆ ಸಾಕುವುದು | 1,333 | 17.00 |
| ಹಂದಿ ಸಾಕಣೆ | 46 | 1.00 |
| ಎತ್ತು, ಗಾಡಿ | 1,508 | 49.68 |
| ಚರ್ಮದ ಕೈಗಾರಿಕೆ | 411 | 4.92 |
| ಇತರ ಕುಶಲ ಕೈಗಾರಿಕೆ ಮತ್ತು ವೃತ್ತಿಗಳು | 1,103 | 8.84 |
| ಒಟ್ಟು | 7,853 | 160.04 |

| ವಿವರಗಳು | 1961 | | | 1971 | | |
|---|---|---|---|---|---|---|
| | ಪುರುಷ | ಸ್ತ್ರೀ | ಒಟ್ಟು | ಪುರುಷ | ಸ್ತ್ರೀ | ಒಟ್ಟು |
| ಎಲ್ಲಾ ಪ್ರದೇಶಗಳು | 14.87 | 3.04 | 9.06 | 20.73 | 6.74 | 13.89 |
| ಗ್ರಾಮ | 11.44 | 1.70 | 6.65 | 16.32 | 3.91 | 10.23 |
| ಪಟ್ಟಣ | 32.25 | 10.01 | 21.44 | 42.21 | 21.00 | 31.98 |

*ಮೂಲ : ಭಾರತದ ಜನಗಣತಿ, 1971.

1971ರ ಜನಗಣತಿಯ ಪ್ರಕಾರ ಪ್ರತೀ ಜಿಲ್ಲೆಯಲ್ಲಿ ಕಂಡು ಪುರುಷರ ಶೇಕಡವಾರು ಸಾಕ್ಷರತೆಯ ಪ್ರಮಾಣವನ್ನು ಇಲ್ಲಿ ಬರುವ ಪರಿಶಿಷ್ಟ ಜಾತಿಗಳು ಮತ್ತು ಇತರ ಜಾತಿಗಳ ಸ್ತ್ರೀ ನೀಡಲಾಗಿದೆ.

| ಜಿಲ್ಲೆಯ ಹೆಸರು | ಇತರ ಜಾತಿಗಳು | | | ಪರಿಶಿಷ್ಟ ಜಾತಿಗಳು | | |
|---|---|---|---|---|---|---|
| | ಪುರುಷ | ಸ್ತ್ರೀ | ಒಟ್ಟು | ಪುರುಷ | ಸ್ತ್ರೀ | ಒಟ್ಟು |
| ಉತ್ತರ ಕನ್ನಡ | 50.46 | 32.10 | 41.48 | 29.39 | 12.30 | 21.07 |
| ಕಲ್ಬುರ್ಗಿ | 31.70 | 9.77 | 20.85 | 11.74 | 1.80 | 6.81 |
| ಕೊಡಗು | 53.11 | 40.77 | 47.24 | 23.32 | 10.45 | 17.15 |
| ಕೋಲಾರ | 41.31 | 19.78 | 30.76 | 21.48 | 8.82 | 15.26 |
| ಚಿಕ್ಕಮಗಳೂರು | 49.24 | 29.29 | 22.30 | 16.31 | 5.16 | 10.92 |
| ಚಿತ್ರದುರ್ಗ | 46.82 | 23.58 | 35.57 | 20.31 | 5.07 | 12.92 |
| ತುಮಕೂರು | 44.07 | 20.89 | 32.72 | 19.17 | 5.02 | 12.33 |
| ದಕ್ಷಿಣ ಕನ್ನಡ | 54.10 | 36.39 | 44.99 | 20.71 | 9.47 | 15.07 |
| ಧಾರವಾಡ | 53.13 | 26.42 | 40.15 | 29.77 | 8.75 | 19.55 |
| ಬಳ್ಳಾರಿ | 38.42 | 16.49 | 27.66 | 17.28 | 3.83 | 10.59 |
| ಬಿದರೆ | 33.69 | 9.44 | 21.94 | 15.30 | 2.77 | 9.14 |
| ಬೆಳಗಾವಿ | 43.96 | 19.40 | 32.04 | 27.83 | 7.48 | 17.78 |
| ಬೆಂಗಳೂರು | 55.28 | 37.02 | 46.60 | 28.63 | 12.32 | 20.75 |
| ಮೈಸೂರು | 36.39 | 19.98 | 28.43 | 17.57 | 6.17 | 12.05 |
| ಮಂಡ್ಯ | 33.13 | 13.93 | 23.78 | 20.63 | 6.70 | 13.86 |
| ವಿಜಾಪುರ | 42.58 | 15.41 | 29.20 | 19.84 | 4.60 | 12.17 |
| ರಾಯಚೂರು | 33.10 | 10.16 | 21.76 | 12.07 | 2.45 | 7.22 |
| ಶಿವಮೊಗ್ಗ | 49.88 | 30.30 | 40.44 | 20.23 | 6.38 | 13.57 |
| ಹಾಸನ | 45.58 | 21.98 | 33.90 | 16.96 | 7.16 | 12.21 |
| ಕರ್ನಾಟಕ | 44.78 | 23.12 | 34.19 | 20.73 | 6.74 | 13.89 |

ಭಾರತೀಯ ಸಂವಿಧಾನದ ವಿಧಿ 16(4) ಪ್ರಕಾರ ಹಿಂದುಳಿದ ಸಮುದಾಯಗಳು ಹಾಗೂ ಹಿಂದುಳಿದ ಜಾತಿಗಳ **ಪಟ್ಟಿ** ಇಲ್ಲಿ ಕೊಟ್ಟಿದೆ.

## ಹಿಂದುಳಿದ ಸಮುದಾಯಗಳು

| | | | |
|---|---|---|---|
| ಬಲಿಜ | ಬಲಜಿಗ | ಬಳೆಗಾರ | ಬೋಗಂ ತೆಲಗ |
| ಜನಪ್ಪ | ಕಸಬನ್ | ಮುತ್ರಾಚ | ಮುನ್ನಾರು |
| ಮುಣ್ಣೂರು | ಮುತ್ರಾಸಿ | ನಾಯ್ಡು | ಸೆಟ್ಟಿ ಬಲಿಜ |
| ತೆಲುಗು ಬಲಿಜ | ದರ್ಜಿ | ಭಾವಸಾರ್ ಕ್ಷತ್ರಿಯ | ಚಿಪ್ಪಿ |
| ಚಿಪ್ಪಿಗ | ವೀರಾಯರ್ | ನಾಮದೇವ | ನೀಲಗಾರ್ |
| ನಿಲಾರಿ | ರಂಗೇರ್ | ರಂಗೇರಿ | ರಂಗ್ರೇಜಿ |
| ಸಾಯಿ | ಶಿಂಪಿ | ಸಿಂಪಿ | ದೇವಾಡಿಗ |
| ದೇವಡಿಗ್ | ದೇವಡಿಗರ್ | ದೇವಳಿ | ಮೊಯ್ಲಿ |
| ಮೊಯಿಲಿ | ಸಪ್ಪಲಿಗ | ಸರ್ವೆಗಾರ | ಶೇರೇಗಾರ |
| ಸಪ್ಲಿಗ್ | ದೇವಾಂಗ | ದೇವಾಂಗ್ | ಹಟ್‌ಗಾರ |
| ಹಟಗಾರ | ಹಟ್ಕಾರ್ | ಜೇಡ | ಜುಲಾಹಿ |
| ಕೋಷ್ಟಿ | ವಿಣ್‌ಕಾರ | ಗಾಣಿಗ | ಗಾಂಡ್ಲ |
| ತೇಲಿ | ವಾಣಿಯನ್ | ಈಡಿಗ | ಬಿಲ್ಲವ |
| ದೀವರ್ | ದೀವರ್ | ದೀವರ ಮಕ್ಕಳು | ಈಡಿಗ |
| ಇಳಿಗ | ಗೂಂಡ್ಲ | ಗೌಂಡ್ಲ | ಹಳೇಪೈಕ |
| ಈಳಿಗ | ಕಲಾಲ | ಮಲೆಯಾಳಿ ಬಿಲ್ಲವ | ನಾಮಧಾರಿ |
| ಥೀಯನ್ | ತೀಯನ್ | ಮೇದಾರಿ | ಬುರೂಡ್ |
| ಗೌರಿಗ | ಮೇದಾರ | ನಾಯಿಂದ | ಅಂಬಟ್ಟನ್ |
| ಭಂಡಾರಿ | ಚೌರಿಯ | ಹಜಾಮರ್ | ಕೆಲಸಿ |
| ಕ್ಷೌರದ್ | ಕ್ಷೌರಿಕ್ | ಮಂಗಳ | ನಾಡಿಗರು |
| ನಾಪಿತ | ನಾವಲಿಗ | ನಯನಜ ಕ್ಷತ್ರಿಯ | ನ್ಹಾವಿ |
| ನೇಯ್ಗಿ | ಅವಿರ್ | ಅಯಿರಿ | ಬಿಳಿಮಗ್ಗ |
| ಜಾಡರು | ಜಾಂಡ್ರ | ಜಂಖಾನ | ಕೈಕೋಳನ್ |
| ಕುರುಹಿನಶೆಟ್ಟಿ | ನೇಕಾರ | ಪದ್ಮಸಾಲಿ | ಸಾಲಿ |
| ಸಾಲೇ | ಸೇನಿಗ | ಸ್ವಕುಳಸಾಳಿ | ತೊಗಟ |
| ಪಟ್ಟೇಕಾರಿ | ಪಟೇಗಾರ | ಪಟ್ಟೆಗಾರ | ರಜಪೂತ |
| ಸಾತಾನಿ | ಚಾತ್ತದ | ಶ್ರೀ ವೈಷ್ಣವ | ವಿಶ್ವಕರ್ಮ |
| ಅಕ್ಕಸಾಲಿ | ಔಸಳ | ಬಡವಡ್ಡಿ | ಗೆಜ್ಜೆಗಾರ |
| ಕಂಸಲ | ಕಮ್ಮಾಲನ್ | ಪಂಚಾಳ | ಪತ್ತಾರ |
| ಸೋನಾರ | ಸುತಾರ | ಒಕ್ಕಲಿಗ | ಗೌಂಡರ್ |
| ಹೆಗ್ಗಡೆ | ಕಾಪು | ರೆಡ್ಡಿ | ಸರ್ಪ ಒಕ್ಕಲಿಗ |
| ಮುಸ್ಲಿಮರು | ಆಚಾರಿ | ಅಕ್ಕಸಾಲೆ | ಬಡಗಿ |
| ದೈವಜ್ಞ ಬ್ರಾಹ್ಮಣ | ಕಮಸಾಲ | ಕಮ್ಮಾರ | ಲೋಹಾರ್ (ಕಮ್ಮಾರಿ) |
| ಪಾಂಚಾಳ | ಶಿಲ್ಪಿ | ಸೋನಿ | ವಿಶ್ವ ಬ್ರಾಹ್ಮಣ |
| ಗೌಡ | ಹಳ್ಳಿಕಾರ | ಕಮ್ಮ | ಕುಂಚಿಟಿಗ |
| ರೆಡ್ಡಿ | ವಕ್ಕಲಿಗ | — | — |

## ಹಿಂದುಳಿದ ಜಾತಿಗಳು

| ಯೆರಲು | ಯಕ್ಲರು | ಅಗಸ | ಮಡಿವಾಳ |
|---|---|---|---|
| ರಜಕ | ಸಾಕಲವಾಡು | ತ್ಸಾಕಲ | ಅಘೋರಿ |
| ಅಗ್ನಾನಿ | ಅಂಬಲಕ್ಕಾರನ್ | ಅಂಬಟ್ಟನ್ | ಆಂಡಿ |
| ಆಂಡುರಾನ್ | ಅತಾರಿ | ಬಹುರೂಪಿ | ಬಲ್ಲಾಳ |
| ಬಣ್ಣನ್ | ಬಥಲ್ | ಬಟ್ಟರ್ | ಬಾವ್ಸರ್ |
| ಭಟ್ರಾಜು | ಬೋಹರೋತ್ | ಭಾಟಿಯಾ | ಬಿಸಪಟ್ಟಿ |
| ಬೋಗದ್ | ಬೋಗಾಡಿ | ಬಾಗ್ಡಿ | ಬೋಗೋಡಿ |
| ಚಳಿಯನ್ | ದೋಬಿ | ಪರೀಟ್ | ಸಾಕಲ |
| ಚಾಕಲ | ವಣ್ಣಾನ್ | ಕರ್ಕರಮುಂಡ | ಅಂಬಲವಾಸಿ |
| ಅಂಬಲಕಾರನ್ | ಅನಪ್ಪನ್ | ಆಂಡಿ ಪಂಡಾರವರ್ | ಅರ್ಯನ್ |
| ಅಟಾರಿ | ಬಕಾದ್ರ | ಬಾಲ ಬಲ್ಲಾಳ | ಬಸವಿ |
| ಬಟ್ವಾಲ್ | ಬಟ್ಟೀರ | ಭಾಟ್ | ಭಟ್ರಾಜು |
| ಭಾಟ್ಟಿಯಾ | ಭಾವಿನ್ | ಬಿಂಗಿ | ಬಾಗಾದಿ |
| ಬಾಗೋಡಿ | ಬಾಗಾಡಿ | ಚಕ್ಕನ್ | ಚಲ್ಲಿಯ |
| ತೇರುವನ್ | ಚಂಬುಕುಟ್ಟಿ | ಚಪಟೀಗಾರ್ | ಮೇಸ್ತ |
| ಚುಂಚಾರ | ಜೀನಗಾರ | ಘಾಡಿ | ಘುಡ್‌ಸಿ |
| ಪಿಂಗಳೆ | ಗೋಣಿಗ | ಗೋಸಾವಿ | ಗೋಸಾಯಿನ್ |
| ಗುಜಾರ | ಗೂರ್ಖಾ | ಗುರೋವ್ | ಗುರವ್ |
| ತಂಬಳ್ಳಿ | ಗಾಬಿತ್ | ದಾವತ್ | ಗಬ್ಬೀತ್ |
| ಗಂಗಕುಲ | ಅಂಬಿಗ | ಬೆಸ್ತ | ಬೋಯಿ |
| ಗಂಗಮತ | ಗಂಗೆ ಮಕ್ಕಳು | ಹರಕಂತ್ರ | ಬರ್ಕಿ |
| ಕಬ್ಬೇರ | ಚಂಬೋತಿ | ಚಪ್ಪೇಗಾರ | ಚರೋಡಿ |
| ಚಿತಾರ | ದಿಗ್ವಾನ್ | ದೋಗ್ರ | ಘುಡ್‌ಸಿ |
| ಗಿಡ್ಡಿಡ್ಕಿ | ಪಿಂಗಳೆ | ಸಾದುಸೆಟ್ಟಿ | ಆತೀತ್ |
| ಗೋಸಾಯಿ | ಗುಜಾರ | ಗುರುವ | ಗುರೊವ್ |
| ತಂಬ್ಲಿ | ದಾಲಿಜ | ಗಾಬಿತ್ | ಗಾಪಿತ್ |
| ಅಂಬಿಗ್ | ಭೋಯರ್ | ಭೋಯಿ | ಹರಿಕಾಂತ್ರ |
| ಗಂಗಾಪುತ್ರ | ಗೌರಿಮತ | ಕಬ್ಬಲಿಗ | ಕಬ್ಬೇರ್ |
| ಕಬ್ಬಿಲಿ | ಕಹಾರ್ | ಖಾರ್ವಿ | ಮೀನಗಾರ್ |
| ಪರಿವಾರ | ಸಿವಿಯಾರ್ | ಹಾಲವಕ್ಕಿ ವಕ್ಕಲು | ಗಾವಡ್‌ಗವಡ |
| ಗವಡ | ಹಾಲಕ್ಕಿ ವಕ್ಕಲು | ಕುಂಚಿ ವಕ್ಕಲು | ವಕ್ಕಲು |
| ಅಣಬರು | ಹಣಬರ್ | ಕೃಷ್ಣಗೊಲ್ಲ | ಹಂಡೇರಾವುತ್ |
| ಹೂವಾಡಿಗ | ಹುಗಾರ | ಮಾಲ್‌ಗಾರ | ಫೂಲ್‌ಮಾಲಿ |
| ಫೂಲಾರಿ | ಜಾಟರು | ಕಲಾವಂತ್ | ಗಣಿಕ |
| ಕಣಕನ್ | ಕನಟಿ | ಕರುವ | ಅರೈ |
| ಕಾಟಿಕ್ | ಖಾರಿಯ | ಕೋಳಿ | ಮೊಗವೀರ |
| ಸುಣ್ಣಗಾರ | ತೊರೆಯ | ಅತ್ತೈವಕ್ಕಲು | ಗಾವಡ್‌ಗೌಡ |
| ಗ್ರಾಮ ವಕ್ಕಲು | ಕರೇ ವಕ್ಕಲು | ಶೀಲ ವಕ್ಕಲು | ಹಣಬರು |
| ಆತಣಬರು | ಹಣ್ಬರ್ | ಹಂಡೇವಜೀರ್ | ಹೊನ್ನಿಯಾರ್ |
| ಹೂಗಾರ | ಜೀರ್ | ಮಾಲಿ | ಫೋಲಾರಿ |

| | | | |
|---|---|---|---|
| ಫೂಲಮಾಲಿ | ಕಾಡುಕೊಂಕಣಿ | ಭೋಗಂ | ಕಲಾವಂತಿ |
| ಕಣಕಾರ | ಕರಿ ಕುಡುಂಬಿ | ಕಸಾಯಿ | ಕಸಾಬ್ |
| ಕಟಂಗ | ಕಟುಕ | ಕಸಾರ | ಕಂಚೋರಿ |
| ಕಂಚುಗಾರ | ಕಸ್‌ಬಿನ್ | ಕವುತಿಯಾನ್ | ಕೊಲಯನ್ |
| ಕೊಲಯಿರಿ | ಕೊಲ್ಲ | ಕೊಂಗ | ಕೊಟಾರಿ |
| ಕನಿಸನ್ | ಕನಿಯು | ಕೋಟೆ ಕ್ಷತ್ರಿಯ | ಕೊಯವ |
| ಕಣ್ಬಿ | ಕುಲ್‌ವಾಡಿ | ಕುರ್ಮಿ | ಕುಂಭಾರ |
| ಕುಲಾಲ | ಕುಮ್ಮಾರ | ಕುಸವನ್ | ಕುರುಬ (ಕೊಡಗನ್ನು ಳಿದು) |
| ಧನಗರ್ | ಹಾಲುಮತ | ಕುರುಬನ್ | ಕುರುಂಬ |
| ಕುರುಂಬನ್ | ಲಾಡ್ | ಎಲೆಗಾರ್ | ಖಾಟಿಕ್ |
| ಬೋಗಾರ್ | ಕಂಚ್ಕೋರಿ | ಕಂಸಾರ್ | ಕಾವಡಿ |
| ಕಿಚಗಾರ | ಉರಾಳಿ | ಕೊಲಾರಿ | ಕೊಲ್ಲಾಲ |
| ಕೊಂಗಾಡಿ | ಕೊಟ್ವಾರಿ | ಕಣಿಯ | ಕೋಟೆಗಾರ |
| ಕೊಟ್ಟೆಗಾರ | ಕುಡುಬಿ | ಕುಣ್ಬಿ | ಕುರ್ಮ |
| ಕುಟುಮ | ಖುಂಬಾರ | ಕುಲಾಳರ್ | ಕುಂಬಾರ್ |
| ಮೂಲ್ಯ | ಭರ್ವಾಡ್ | ಗೊರವ | ಕುರಬ್ |
| ಕುರುಬ್ | ಲಾಡರ್ | ಲಾಡರು | ಲೊನಾರಿ |
| ಮಲಯಾಳಿ | ಮಾಳವ | ಮಣಿಯಾಣಿ | ಮನ್ನನ್ |
| ಮಾರಯನ್ | ಮುಧಾರ | ಮುರ್ರಾರಿ | ನಾಡೋರ್ |
| ಉಪ್ಪನಾಡೋರು | ಓಸ್ತಾನ್ | ಪಡೀತ್ | ಪಡಿಯರ್ |
| ಪಣಸ | ಪಣಬ | ಪಂಡಾರ್ | ಪಾಂಡವಕುಲ |
| ಪನ್ನೆಕಾರ ಕೊಂಕಣಿ | ಪತ್ರಮೇಳ | ಪುಲ್ಲವನ್ | ರಾಜಾಪುರಿ |
| ರಾಜಾಪುರ್ | ರಾವಳಿಯ | ರಾವತ್ | ಸನಿಯರ್ |
| ಸತಾರ್‌ಕರ್ | ಸ್ತಾನಿಕ್ | ಮೂಳವ | ಮೂಲೆಯ |
| ಮುದಿಯಾನಿ | ಮೂರ್ತ | ಮಾರವನ್ | ಮುಕ್ಕವನ್ |
| ನಾಡೋರ್ | ತೊರ್ಕೆನಾಡೋರ್ | ಮಾಲ್ಕಿ | ಒತಾರಿ |
| ಪದಾರ್ತಿ | ಪಡಿಯಾರ್ | ಪನ್‌ಸ್ವಾ | ಪಂಡಾರವನ್ |
| ಪಂಡಾರ | ಪಣಿಕ | ಪತ್ರ | ಪಿಚಟಿ |
| ರೈನುದಾಸ್ | ಬಳವಳಿಕಾರ | ರಾವಲ್ | ರಾಉಲ್ |
| ರಾಯರಾವತ್ | ಸನ್ಯಾಸಿ | ಶಾಣನ್ | ಸುದಿರ್ |
| ಶೂದ್ರ | ತಚಾಯಿರಿ | ತಿರಾಳಿ | ತಿಗಳ |
| ಧರ್ಮರಾಜಕಾಪು | ಕುರವನ್ | ಶುಂಭಕುಲಕ್ಷತ್ರಿಯ | ತಿಗ್ಳೇರ್ |
| ತುಳುವ | ಉಪ್ಪಾರ | ಚುನಾರ್ | ಗವಂಡಿ |
| ಗೌಂಡಿ | ಸಾಗರ | ಉಪ್ಪಿಲಿಯನ್ | ಮೆಟ್ಟುವನ್ |
| ಐಗಲಿಕ | ಯಕ್ಕಲಿ | ಕ್ರೈಸ್ತರಾಗಿ ಮತಾಂತರಿತ ಪರಿಶಿಷ್ಟ ಜಾತಿಗಳು | ಸುತ್‌ಸಾಲಿ |
| ತಿಳಾರಿ | ತಿಳ್ವಿ | ಅಗ್ನಿಕುಲ ಕ್ಷತ್ರಿಯ | ಪಳ್ಳಿ |
| ಥಿಗಳ | ವನ್ನಿಕುಲ ಕ್ಷತ್ರಿಯ | ತುಳು | ಬೆಲ್ದಾರ್ |
| ಗಾವಡಿ | ಗೋವಂಡಿ | ಮೇಲು ಸಕ್ಕರೆ | ಉಪ್ಪಾರ್ |
| ವೆಲ್ಲುತೇಡನ್ | ಯೆಕ್ಲಾರ್ | — | — |

## ಹಿಂದುಳಿದ ಬುಡಕಟ್ಟುಗಳು

ಬಲಿಜ ಪತಾರ್
ಬಜನಿಯ
ಗೋರೆ ಅಥವಾ ಗೋರಿಯ
ಬೋಯ
ವಾಲ್ಮೀಕಿ
ಭೋಂಪ್ಪ
ಬುಡ್‌ಬುಡ್‌ಕಲ
ಬೈರಾಗಿ
ಬಂಜಾರಿ
ಬೇಡರು
ನಾಯಕ್ ಮಕ್ಕಳು
ವೇಡನ್
ತಕಾರಿ
ಚಾರ
ದರ್ವೇಸು
ಗಾರಡಿಗ
ಗೌಳಿ
ಗೊಂದಲಿಗ
ಘಸಾಚಾರಿ
ಹಾವಾಡಿಗ
ಜೋಶಿ
ದೊಂಬಿದಾಸ
ಮೋಡಿಕಾರ್
ಗೋಪಾಲಿ
ಹರಣ್ ಶಿಕಾರಿ
ವಗೀರಿ
ಜೋಹಾರಿ
ಕನುತಿ
ಕಾಶಿಕಪಾದಿ
ಕೊರ್‌ವರ್
ಎರಕಲ
ದೌರಿಗೊಸಾವಿ
ಪಿಚ್ಚಿಗುಂಟಲ
ಕಂಜಾರಿ
ಕಟಬರ್
ಕೊರವ
ನಟ್
ಪರಧೀಸ್
ಸಾರೋದಾ
ಬೈಲ್ ಪತಾರ್
ಬಾಲ ಸಂತೋಷಿ
ಬೇಡ
ನಾಯಕ್‌ವಾಡಿ
ವಾಲ್ಮೀಕಿ ಮಕ್ಕಳು
ಪರದೇಶಿ ಭಾಂಪ್ವಾ
ಜೋಶಿ
ಬಾವಾಜಿ
ವಂಜಾರಾ
ಬೇಡರ್
ಪಾಳೇಗಾರ್
ಬೆಸ್ತರ್
ಭರ್ದಿ
ಥಾರ್
ಥೋಲಿ
ಮೋಡಿಕಾರ
ಗೋಪಾಲ
ಗೋಂಧಳಿ
ವಾಗ್ರಿ
ಜವಾರಿ
ಚಪ್ಪರ್‌ಬಂದ
ಬುರ್‌ಬುರ್‌ಚ
ಗೊಲ್ಲ
ಯಾದವ
ಬವೋರಿ
ಹೊಳೆವ
ಜೋಗಾರ್
ಕಂಜೀರ್‌ಭಟ್
ಕೇಲ್ಕಾರಿ
ಕೈಕಾದಿ
ಮುಸಣಿಯಯೋಗಿ
ಪಾಂಗ್ವಾಲ್
ಸಾರಣಿಯ
ಕಾಶಿಕಪದಿ
ಕೊಲ್ಹಾಟಿಗಿ
ಕುಂಚಿ
ನಾಥ್‌ಪಂಥಿ
ಪಿಚ್‌ಗುಂಟಲ
ಶಿಕಾಲಿಗರು
ಬಾವ
ಬ್ರಿಂಜಾರಿ
ಬಾರ್ಕಿ
ಪರಿವಾರ
ಬೆರಿಯ
ಉಚಿಲಿಯನ್
ಥಾರ್
ಬ್ಯಾರಾಗಿ
ಲಂಬಾಯರ್ಡ್ಡ
ಬೆರಡ್
ತಳವಾರ
ಭಾವ್ವು
ಬುಡ್‌ಬುಡ್‌ಕಿ
ಚಪ್ಪರಬಂದ್
ದುರ್ಗಾಮುರ್ಗಾ
ಫೀಸಾದಿ
ಯಾದವ
ಬಾಗ್ರಿ
ಹೆಳವ
ಜೋಗಿ
ದಂಗದಾಸರ್
ಗಾರುಡಿಗ
ಅಡವಿಗೊಲ್ಲ
ಘೊಂದಳಿ
ನೀರ್ ಶಿಕಾರಿ
ಹಾವ್‌ಗಾರ
ಸಂಜೋಗಿ
ಕಂಜೀರ್ ಭಾಟ್
ಕಟಬು
ಕೊರಗರ್
ಫುಲ್‌ಮಾಲಿ
ಪಾಂಗುಸೂಲ್
ಕಾಮನ್
ತಿರುಮಲಿ
ಯರ್‌ಕಲ
ಎರುಕಲ
ಪಾಂಲೋರ್
ಸನ್‌ಸಿಯಾ
ಚಾಕಂಕಾರ್
ಬಾವನಿ
ವಂಜಾರಿ
ಬೇಂಡರ್
ರಾಮೋಶಿ
ಬುಂಡೆ ಬೆಸ್ತರು
ಭರಗಿ
ಬೈಲ್‌ಪತಾರ್
ಬಜೇನಿಯ
ಬಾಜಿಗಾರ್
ನಾಯಕ್
ವಾಲಿಮಿಕ್
ಭೋವ್ವು
ದೇವರಿ
ಚಿತ್ರಕಥಿ ಜೋಶಿ
ಗಾರುಡಿ
ಆಸ್ತಾನಗೊಲ್ಲ
ಗೊಂದಲಿ
ಚಿಗರಿಬೇಟೆಗಾರ್
ಹಾವ್‌ಗಾರ್
ಜೋಗೇರ್
ದಾವೇರಿ
ಮೋಡಿಗ
ಗೋಪಾಲ್
ಗೊಂಧಳಿ
ವಾಘ್ರಿ
ಜಾವೇರಿ
ಸದಾಜೋಶಿ
ಕಂಜಾರ್
ಕೊಲ್ಹಾಟಿ
ಕೊರಮುಸೆಟ್ಟಿ
ನಟುವ
ಪಿಚ್ಚಿಗುಂಟೆ
ಕಂಜರಭಾಟ್
ಖೇಲ್ಕಾರಿ
ಕೊರ್ವಾರಿ
ನಂದಿವಾಲ
ಪಾಂಗೂಲ್
ಸಾರೋದಿ
ವೈದು

| | | | |
|---|---|---|---|
| ವಿರ್ | ವೀರಮಾಸ್ತಿ | ಭೋವಿ | ಗಿರಣಿ ವಡ್ಡರ್ |
| ಮಣ್ಣು ವಡ್ಡರ್ | ತುಡುಗ್ ವಡ್ಡರ್ | ಶಿಕ್ಕಲಿಗಾರ್ | ಸಿಕ್ಕಲಿಗಾರ್ |
| ವಡಿ | ವಸುದೇವ್ | ವೀರ್ | ವಡ್ಡ |
| ಭಂಡಿ ವಡ್ಡರ್ | ಕಲ್ಲು ವಡ್ಡರ್ | — | — |

ಸೂಚನೆ : ಅನುಸೂಚಿತ, ಅಲೆಮಾರಿ ಮತ್ತು ಅರೆಅಲೆಮಾರಿ ಬುಡಕಟ್ಟುಗಳನ್ನು ಹಿಂದುಳಿದ ಬುಡಕಟ್ಟುಗಳೊಂದಿಗೆ ಸೇರಿಸಿದೆ.

## ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ

ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಕಾರ್ಯಕ್ರಮಗಳನ್ನು ಎರಡು ಗುಂಪುಗಳಾಗಿ ವರ್ಗೀಕರಿಸಬಹುದು. ಅವೆಂದರೆ ಸಾಮಾಜಿಕ ಸಂರಕ್ಷಣೆ ಮತ್ತು ಸಮಾಜ ಕಲ್ಯಾಣ ಕಾರ್ಯಕ್ರಮಗಳು.

### ಸಾಮಾಜಿಕ ಸಂರಕ್ಷಣೆ

ಕರ್ನಾಟಕ ಮಕ್ಕಳ ಕಾಯ್ದೆ (ಕರ್ನಾಟಕ ಚಿಲ್ಡ್ರನ್ಸ್ ಆ್ಯಕ್ಟ್), 1964, ಅಪರಾಧಿಗಳ ಪರಿವೀಕ್ಷಣ ಕಾಯ್ದೆ (ಪ್ರೊಬೇಶನ್ ಆಫ್ ಒಫೆಂಡರ್ಸ್ ಆ್ಯಕ್ಟ್), 1958, ರೂಢಾಪರಾಧಿಗಳ ಕಾಯ್ದೆ (ಹೆಬಿಚ್ಯುಅಲ್ ಒಫೆಂಡರ್ಸ್ ಆ್ಯಕ್ಟ್), 1961 ಮತ್ತು ಅನೈತಿಕ ವ್ಯವಹಾರಗಳ ಪ್ರತಿಬಂಧಕ ಕಾಯ್ದೆ (ಸಪ್ರೆಶ್ಶನ್ ಆಫ್ ಇಮ್ಮೊರಲ್ ಟ್ರ್ಯಾಫಿಕ್ ಆ್ಯಕ್ಟ್), 1956 ಇವುಗಳಿಗೆ ಸಂಬಂಧಿಸಿದ ಸಾಮಾಜಿಕ ಶಾಸನಗಳನ್ನು ಹಾಗೂ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಕೆಲಸವನ್ನು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ವಹಿಸಿಕೊಡಲಾಗಿದೆ.

**ರಿಮ್ಯಾಂಡ್ ಹೋಮ್ಸ್ :** ರಾಜ್ಯದಲ್ಲಿ ಸರಕಾರವು ನಿರ್ವಹಿಸುವ 21 ರಿಮ್ಯಾಂಡ್ ಹೋಮುಗಳಿದ್ದು ಅವುಗಳು ಬೆಂಗಳೂರು, ಬಾಗಲಕೋಟೆ, ಬಳ್ಳಾರಿ, ಬಿದರೆ, ವಿಜಾಪುರ, ಚಿಕ್ಕಮಗಳೂರು, ದಾವಣಗೆರೆ, ಧಾರವಾಡ, ಕಲ್ಬುರ್ಗಿ, ಹಾಸನ, ಕಾರವಾರ, ಕೆ. ಜಿ. ಎಫ್., ಮಂಗಳೂರು, ಮಂಡ್ಯ, ಮಡಿಕೇರಿ, ಮೈಸೂರು, ರಾಣಿಬೆನ್ನೂರು, ರಾಯಚೂರು, ಸಿರ್ಸಿ, ಶಿವಮೊಗ್ಗ ಮತ್ತು ತುಮಕೂರುಗಳಲ್ಲಿವೆ. ಇವಲ್ಲದೆ ಪ್ರೊಬೇಶನ್ ಆ್ಯಂಡ್ ಆಫ್ಟರ್ ಕೇರ್ ಅಸೋಸಿಯೇಶನ್ ನಿರ್ವಹಿಸುತ್ತಿರುವ ಒಂದು ಗೃಹವು ಬೆಳಗಾವಿಯಲ್ಲಿದೆ (1981-82). ಮಕ್ಕಳ ಕಾಯ್ದೆಯನ್ವಯ ಈ ಗೃಹಗಳಲ್ಲಿ ಅಲಕ್ಷಿತ ಮಕ್ಕಳು, ಬಾಧೆಗೊಳಗಾದ ಮತ್ತು ನಿಯಂತ್ರಣ ಬಾಹಿರರಾದ ಮಕ್ಕಳು, ಹಾಗೂ ಬಾಲಾಪರಾಧಿಗಳನ್ನು ನಿರೀಕ್ಷಣೆಯಲ್ಲಿಟ್ಟು ಅವರ ವರ್ತನೆ, ನಡತೆ ಮತ್ತು ಪೂರ್ವ ವೃತ್ತಗಳನ್ನು ಕುರಿತು ವಿವರಪೂರ್ಣವಾಗಿ ವಿಚಾರಣೆ ಮಾಡಲಾಗುತ್ತದೆ. ಪರಿವೀಕ್ಷಣಾ ಅಧಿಕಾರಿಗಳು ಈ ಸಂಬಂಧವಾಗಿ ಬಾಲಾಪರಾಧಿ ನ್ಯಾಯಾಲಯಗಳಿಗೆ ತಮ್ಮ ವಿವರವಾದ ವರದಿಯನ್ನು ಒಪ್ಪಿಸಿದ ಮೇಲೆ ಆ ನ್ಯಾಯಾಲಯಗಳು ಅಂಥ ಮಕ್ಕಳ ಮುಂದಿನ ಪುನರ್ವಸತಿಯ ಬಗ್ಗೆ ನಿರ್ಣಯ ತೆಗೆದುಕೊಳ್ಳುವುವು. 1980-81ರಲ್ಲಿ 2,949 ಹುಡುಗರು ಹಾಗೂ 275 ಹುಡುಗಿಯರು ಈ ರಿಮ್ಯಾಂಡ್ ಹೋಮುಗಳಲ್ಲಿದ್ದರೆ 1981-82ರ ಅವಧಿಯಲ್ಲಿ ಈ ರಿಮ್ಯಾಂಡ್ ಹೋಮುಗಳಲ್ಲಿ 2,689 ಹುಡುಗರನ್ನು ಹಾಗೂ 265 ಹುಡುಗಿಯರನ್ನು ಸೇರಿಸಿಕೊಳ್ಳಲಾಗಿತ್ತು.

**ಪ್ರಮಾಣಿತ ಶಾಲೆಗಳು :** ಪ್ರಮಾಣಿತ ಶಾಲೆಗಳು (ಸರ್ಟಿಫೈಡ್ ಸ್ಕೂಲ್ಸ್) ನ್ಯಾಯಾಲಯವು ಸುಪರ್ದಿಗೊಪ್ಪಿಸಿದ ಮಕ್ಕಳಿಗೆ ಪ್ರವೇಶ ನೀಡಿ ಅವರ ಮುಂದಿನ ಪುನರ್ವಸತಿಯನ್ನು ನೋಡಿಕೊಳ್ಳುವುವು. ಈ ಶಾಲೆಗಳು ಮಕ್ಕಳಿಗೆ ಏಳನೆಯ ತರಗತಿಯವರೆಗೆ ತಮ್ಮಲ್ಲಿಯೇ ಶಿಕ್ಷಣವನ್ನು ಒದಗಿಸುವುದರ ಜೊತೆಗೆ ವೃತ್ತಿ ಶಿಕ್ಷಣವನ್ನೂ ಕೊಡುತ್ತವೆ. ಮಕ್ಕಳು ಪ್ರೌಢಶಾಲೆಯ ತರಗತಿಗಳಲ್ಲಿ ಕಲಿಯುವುದಿದ್ದರೆ ಅವರನ್ನು ಹೊರಗಿರುವ ಶಾಲೆಗಳಿಗೆ ಕಳುಹಿಸಲಾಗುತ್ತದೆ. ರಾಜ್ಯದಲ್ಲಿ 16 ಪ್ರಮಾಣಿತ ಶಾಲೆಗಳಿದ್ದು ಅವುಗಳಲ್ಲಿ ನಾಲ್ಕು ಶಾಲೆಗಳು ಕೇವಲ ಹೆಣ್ಣು ಮಕ್ಕಳಿಗೂ ಮತ್ತು ಬೆಂಗಳೂರಿನಲ್ಲಿರುವ ಒಂದು ಶಾಲೆ ಮನೋವಿಕಲರಾದ ಮಕ್ಕಳಿಗಾಗಿಯೇ ಮೀಸಲಾಗಿದೆ. ಹೆಣ್ಣುಮಕ್ಕಳ ಶಾಲೆಗಳು ಬೆಂಗಳೂರು, ಹುಬ್ಬಳ್ಳಿ, ಮೈಸೂರು ಮತ್ತು ಉಡುಪಿಗಳಲ್ಲೂ, ಗಂಡುಮಕ್ಕಳ ಶಾಲೆಗಳು ಬೆಂಗಳೂರು, ಬಾಗಲಕೋಟೆ, ಬಳ್ಳಾರಿ (ಕಿರಿಯ ಬಾಲಕರು ಮತ್ತು ಹಿರಿಯ ಬಾಲಕರು, ಹೀಗೆ ಎರಡು), ಬಿದರೆ, ವಿಜಾಪುರ, ದಾವಣಗೆರೆ, ಕಲ್ಬುರ್ಗಿ, ಹಾಸನ, ಕೆ.ಜಿ.ಎಫ್., ಖಾನಾಪುರ ಮತ್ತು ಶಿವಮೊಗ್ಗದಲ್ಲಿ ಇವೆ. 1980-81ರಲ್ಲಿ 1,214 ಹುಡುಗರನ್ನು ಹಾಗೂ 132 ಹುಡುಗಿಯರನ್ನು ಈ ಶಾಲೆಗಳಲ್ಲಿ ಸೇರಿಸಿಕೊಂಡಿದ್ದರೆ, 1981-82ರ ವರ್ಷದಲ್ಲಿ 1,327 ಹುಡುಗರನ್ನು ಹಾಗೂ 146 ಹುಡುಗಿಯರನ್ನು ಸೇರಿಸಿಕೊಳ್ಳಲಾಗಿತ್ತು.

**ಯೋಗ್ಯ ವ್ಯಕ್ತಿ ಸಂಸ್ಥೆಗಳು :** ಯೋಗ್ಯ ವ್ಯಕ್ತಿ ಸಂಸ್ಥೆಗಳು (ಫಿಟ್ ಪರ್ಸನ್ಸ್ ಇನ್ಸ್‌ಟಿಟ್ಯೂಟ್) ಸಾಮಾನ್ಯವಾಗಿ ಸ್ವಯಂಸೇವಾ ಸಂಸ್ಥೆಗಳಿಂದಲೇ ನಡೆಸಲ್ಪಡುತ್ತಿದ್ದು, ನ್ಯಾಯಾ

ಲಯವು ಸುಪರ್ದಿಗೊಪ್ಪಿಸಿದ ಮಕ್ಕಳನ್ನು ಸ್ವೀಕರಿಸಿ ಆ ಮಕ್ಕಳ ಶಿಕ್ಷಣ, ತರಬೇತಿ ಮತ್ತು ಪುನರ್‌ವಸತಿಯನ್ನು ನೋಡಿಕೊಳ್ಳುವುವು. 1981-82ರಲ್ಲಿ ಅಂಥ 18 ಸಂಸ್ಥೆಗಳಿದ್ದು, ಅವುಗಳಲ್ಲಿ ಮೂರು ಸರಕಾರದ ನಿರ್ವಹಣೆಯಲ್ಲಿದ್ದು ಉಳಿದ 15ನ್ನು ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿದ್ದವು. ಈ ಸಂಸ್ಥೆಗಳಿಗೆ ನಿರ್ವಹಣಾ ವೆಚ್ಚಕ್ಕೆಂದು ಪ್ರತೀ ಮಗುವಿಗೆ ತಿಂಗಳಿಗೆ 25 ರೂ.ನಂತೆಯೂ, ಇತರ ಬಾಬ್ತುಗಳಿಗಾಗಿ ಒಟ್ಟು ವೆಚ್ಚದ ಶೇ. 75ರಷ್ಟನ್ನೂ ಸರಕಾರವು ಅನುದಾನವಾಗಿ ಕೊಡುತ್ತದೆ. 31ನೇ ಮಾರ್ಚ್, 1982ರಲ್ಲಿ ಈ ಸಂಸ್ಥೆಗಳಲ್ಲಿ 260 ಮಕ್ಕಳಿದ್ದರು.

**ಸ್ವೀಕರಣಾ ಕೇಂದ್ರಗಳು :** 1956ರ ಅನೈತಿಕ ವ್ಯವಹಾರಗಳ ಪ್ರತಿಬಂಧಕ ಕಾಯ್ದೆಯನ್ವಯ ಬಂಧನಕ್ಕೊಳಗಾದ ಮಹಿಳೆಯರನ್ನು ಹಾಗೂ ಹುಡುಗಿಯರನ್ನು ತರಬೇತಿಗೊಳಿಸುವ ಹಾಗೂ ಪುನರ್‌ವಸತಿಗೊಳಿಸುವ ಉದ್ದೇಶಕ್ಕಾಗಿ ಸ್ಥಾಪಿತವಾದ 11 ಸ್ವೀಕರಣಾ ಕೇಂದ್ರಗಳು (ರಿಸೆಪ್ಶನ್ ಸೆಂಟರ್ಸ್) ಮತ್ತು ರಾಜ್ಯ ಮಹಿಳಾ ಗೃಹಗಳು ಅಸ್ತಿತ್ವದಲ್ಲಿವೆ. ಈ ಕೇಂದ್ರಗಳು ಮತ್ತು ರಾಜ್ಯ ಗೃಹಗಳು ಮಹಿಳೆಯರನ್ನು ಮತ್ತು ಹುಡುಗಿಯರನ್ನು ಆಶ್ರಯ ಮತ್ತು ಶುಶ್ರೂಷೆಗಾಗಿ ಸ್ವೇಚ್ಛೆಯಿಂದ ಸ್ವೀಕರಿಸಲು ಆಸ್ಪದವಿದೆ. ಬೆಂಗಳೂರಿನಲ್ಲಿ ರಕ್ಷಣಾ ಗೃಹವು ಮಹಿಳೆಯರ ಮತ್ತು ಹುಡುಗಿಯರ ಅನೈತಿಕ ವ್ಯವಹಾರಗಳ ಪ್ರತಿಬಂಧಕ ಕಾಯ್ದೆಯನ್ವಯ ಪ್ರವೇಶ ಪಡೆದವರಿಗಾಗಿಯೇ ಸ್ಥಾಪಿಸಲ್ಪಟ್ಟಿದೆ. ನ್ಯಾಯಾಲಯಗಳು ನೇರವಾಗಿ ಕಳುಹಿಸಿದ ಪ್ರಕರಣಗಳನ್ನು ಹಾಗೂ ಇತರ ರಾಜ್ಯ ಗೃಹಗಳಿಂದ ವರ್ಗಾಯಿಸಲ್ಪಟ್ಟ ಪ್ರಕರಣಗಳನ್ನೂ ಇಲ್ಲಿ ಸ್ವೀಕರಿಸುತ್ತಾರೆ. ಈ ಕೇಂದ್ರದಲ್ಲಿ ಲೋಯರ್ ಸೆಕೆಂಡರಿ ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷೆಗಳಿಗೆ ತರಬೇತಿ ಕೊಡುವ ಸಂಕ್ಷಿಪ್ತ ಕೋರ್ಸುಗಳನ್ನು ಪ್ರಾರಂಭಿಸಲಾಗಿದೆ. ಮೈಸೂರು ಮತ್ತು ಬಳ್ಳಾರಿಗಳಲ್ಲಿರುವ ರಾಜ್ಯ ಸ್ತ್ರೀಗೃಹಗಳಲ್ಲಿ ಅಲ್ಲಿಯ ನಿವಾಸಿಗಳು ಮಾಡಿದ ಕೆಲಸಕ್ಕೆ ಪ್ರೋತ್ಸಾಹಕಾರಕ ಕೂಲಿ ಕೊಡುವ ಪದ್ಧತಿಯನ್ನು ಪ್ರಾರಂಭಿಸಲಾಗಿದೆ. 1980-81ರಲ್ಲಿ ಪ್ರವೇಶ ಪಡೆದವರ ಸಂಖ್ಯೆ 3,468. ಆದರೆ, 1981-82ರಲ್ಲಿ 2,745 ಜನರು ಪ್ರವೇಶ ಪಡೆದಿದ್ದರು.

ಸ್ವೀಕರಣಾ ಕೇಂದ್ರಗಳು ಬೆಂಗಳೂರು, ಬೆಳಗಾವಿ, ವಿಜಾಪುರ, ಬಿದರೆ, ಕಾರವಾರ, ಕೆ.ಜಿ.ಎಫ್., ಮಂಗಳೂರು, ಮಂಡ್ಯ, ರಾಯಚೂರು, ಶಿವಮೊಗ್ಗ ಮತ್ತು ತುಮಕೂರುಗಳಲ್ಲಿವೆ. ರಾಜ್ಯ ಮಹಿಳಾ ಗೃಹಗಳು ಬೆಂಗಳೂರು, ಮೈಸೂರು, ಬಳ್ಳಾರಿ, ದಾವಣಗೆರೆ, ಕಲ್ಬುರ್ಗಿ, ಹುಬ್ಬಳ್ಳಿ ಮತ್ತು ಉಡುಪಿಗಳಲ್ಲಿವೆ.

**ಅಪರಾಧಿಗಳ ಪರಿವೀಕ್ಷಣಾ ಕಾಯ್ದೆ :** ಅಪರಾಧಿಗಳ ಪರಿವೀಕ್ಷಣಾಕಾಯ್ದೆ(ಪ್ರೊಬೇಶನ್ ಆಫ್ ಅಫೆಂಡರ್ಸ್ ಆ್ಯಕ್ಟ್)ಯ ಅನುಷ್ಠಾನಕ್ಕಾಗಿ ಪ್ರತೀ ಜಿಲ್ಲೆಯಲ್ಲೂ ಜಿಲ್ಲಾ ಪರಿವೀಕ್ಷಣಾಧಿಕಾರಿಗಳೂ ಮತ್ತು ಬೆಂಗಳೂರಿನಲ್ಲಿ ಪ್ರಾದೇಶಿಕ ಪ್ರೊಬೇಶನ್ ಅಧೀಕ್ಷಕರಿದ್ದು ಈ ಎಲ್ಲ ಪರಿವೀಕ್ಷಣಾಧಿಕಾರಿಗಳ ಕೆಲಸದ ಮೇಲ್ವಿಚಾರಣೆ ಮಾಡುತ್ತಾರೆ. ಜಿಲ್ಲಾ ಹಾಗೂ ಸೆಶನ್ಸ್ (ಸತ್ರ) ನ್ಯಾಯಾಧೀಶರು ಪರಿವೀಕ್ಷಣಾ ಸಲಹಾ ಸಮಿತಿಯ ಅಧ್ಯಕ್ಷರಾಗಿರುತ್ತಾರೆ. ರಾಜ್ಯಮಟ್ಟದಲ್ಲಿ ಪ್ರೊಬೇಶನ್ ಸಲಹಾ ಸಮಿತಿಯೊಂದಿದ್ದು ಇದಕ್ಕೆ ರಾಜ್ಯದ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರು ಅಧ್ಯಕ್ಷರಾಗಿದ್ದು, ಸಮಿತಿಯು ಪ್ರೊಬೇಶನ್ ಕಾಯ್ದೆಯ ಸೂಕ್ತ ಅನುಷ್ಠಾನಕ್ಕಾಗಿ ಶಿಫಾರಸ್ಸುಗಳನ್ನೂ ಸಲಹೆಗಳನ್ನೂ ಕೊಡುತ್ತದೆ. 1981-82ರಲ್ಲಿ 625 ತನಿಖೆಗಳು ದಾಖಲಾದವು; ಹಾಗೂ 98 ಮೇಲ್ವಿಚಾರಣಾ ಪ್ರಕರಣಗಳು ಬಂದವು.

## ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳು

ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ರಾಜ್ಯದಲ್ಲಿ ಮಹಿಳಾ ಕಲ್ಯಾಣಕ್ಕಾಗಿ ಇರುವ ವಿವಿಧ ಯೋಜನೆಗಳನ್ನು ಅನುಷ್ಠಾನಕ್ಕೆ ತರುತ್ತಿದೆ. ನಿಸ್ಸಹಾಯಕರಾಗಿರುವ ಮಹಿಳೆಯರು ವೃತ್ತಿ ತರಬೇತಿ ಪಡೆಯುವುದಕ್ಕಾಗಿ ವರ್ಷಕ್ಕೆ 500 ರೂ.ಗಳ ಆರ್ಥಿಕ ಸಹಾಯ ಕೊಡಲಾಗುತ್ತಿದೆ. ಹೆಣ್ಣುಮಕ್ಕಳ, ಆದಾಯಗಳಿಸುವ ಕಾರ್ಯ ಚಟುವಟಿಕೆಗಳಿಗೆ ಉತ್ತೇಜನ ಕೊಡುವ ಉದ್ದೇಶ ಹೊಂದಿದ ಸಹಾಯ ಧನ (ಸಬ್ಸಿಡಿ) ಯೋಜನೆಯೊಂದು ಮಹಿಳೆಯರ ಸಹಕಾರಿ ಒಕ್ಕೂಟದ ಅಂಗವಾಗಿ ರಾಜ್ಯದಲ್ಲಿ ಕೆಲಸ ಮಾಡುತ್ತಿದೆ. ಇದನ್ನು ಈ ಹಿಂದೆ ಪ್ರಾರಂಭಿಕ ಬಂಡವಾಳ ಯೋಜನೆಯೆಂದು ಕರೆಯಲಾಗುತ್ತಿತ್ತು. ಎಸ್. ಎಸ್. ಎಲ್. ಸಿ. ವರೆಗೆ ಕಲಿತ ಹೆಣ್ಣುಮಕ್ಕಳು ಗೃಹ ವಿಜ್ಞಾನಗಳಲ್ಲಿ ತರಬೇತಿ ಪಡೆಯಲು ಅನುಕೂಲವಾಗಲೆಂದು ಸರಕಾರವು ಸ್ವ-ಉದ್ಯೋಗ ತರಬೇತಿ ಯೋಜನೆಯನ್ನು ಪ್ರಾರಂಭಿಸಿದೆ. ಇದನ್ನು ಹಿಂದೆ ಗೃಹ ಕಾರ್ಯಕರ್ತೆಯರ ಕಾರ್ಯಕ್ರಮ (ಹೌಸ್ ಕೀಪರ್ಸ್ ಪ್ರೊಗ್ರ್ಯಾಮ್) ಎಂದು ಕರೆಯಲಾಗುತ್ತಿತ್ತು. ಬೆಂಗಳೂರು ಮತ್ತು ತುಮಕೂರುಗಳಲ್ಲಿ ಎರಡು ಸ್ವಯಂ ಸೇವಾ ಸಂಸ್ಥೆಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ನಡೆಸಲು ರೂ. 67,000 ಹಣವನ್ನು ಮಂಜೂರು ಮಾಡಲಾಗಿದೆ. ನಿಸ್ಸಹಾಯಕ ಮಹಿಳೆಯರಿಗಾಗಿ ತರಬೇತಿ ಕೇಂದ್ರಗಳನ್ನು ತೆರೆಯಲು ಸ್ವಯಂ ಸೇವಾ ಸಂಸ್ಥೆಗಳಿಗೆ ಆರ್ಥಿಕ ಸಹಾಯ ಕೊಡಲಾಗುತ್ತಿದೆ. ಈ ಯೋಜನೆಯನ್ವಯ ಆವರ್ತಕ ಹಾಗೂ ಅನಾವರ್ತಕ ವೆಚ್ಚಗಳಿಗಾಗಿ ಭಾರತ ಸರಕಾರವು ಶೇ. 45ರಷ್ಟು ಹಣವನ್ನೂ, ರಾಜ್ಯ ಸರಕಾರವು ಶೇ. 45ರಷ್ಟು ಹಣವನ್ನೂ ಕೊಟ್ಟರೆ, ಉಳಿದ ಶೇ. 10ರಷ್ಟು ವೆಚ್ಚವನ್ನು ಸ್ವಯಂ ಸೇವಾ ಸಂಸ್ಥೆಗಳು ತಾವೇ ಭರಿಸಬೇಕಾಗುತ್ತದೆ. 31 ಮಾರ್ಚ್, 1982ರವರೆಗೆ 13

ಸ್ವಯಂ ಸೇವಾ ಸಂಸ್ಥೆಗಳಿಗೆ 7,76,303 ರೂ.ಗಳನ್ನು ಅನುದಾನವಾಗಿ ಕೊಡಲಾಗಿತ್ತು.

ಸಾರ್ವಜನಿಕ ಸಹಕಾರ ಮತ್ತು ಕುಟುಂಬ ಜೀವನ ಶಿಕ್ಷಣ ಯೋಜನೆ, ವೃದ್ಧರ ಮತ್ತು ನಿರ್ಬಲರ ಗೃಹ, ರಕ್ಷಿತ ಮಹಿಳೆಯರ ಮತ್ತು ಬಾಲಕಿಯರ ವಸತಿ ಗೃಹ–ಈ ಯೋಜನೆಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳಿಗೆ ರಾಜ್ಯ ಸರಕಾರವು ಶೇ. 50ರಷ್ಟು ಹೊಂದಾಣಿಕೆ ಆಧಾರದ ಅನುದಾನ ಕೊಡುತ್ತದೆ. ದಿಕ್ಕಿಲ್ಲದ ವಿಧವೆಯು ಮರು ಮದುವೆ ಯಾಗಿ ಪುನರ್‌ಸ್ಥಾಪನೆಯಾಗುವಂತೆ ಮಾಡಲು ಮರು ಮದುವೆ ಯಾಗುವ ದಂಪತಿಗಳಿಗೆ 3,000 ರೂ. ಆರ್ಥಿಕ ಸಹಾಯ ಕೊಡಲಾಗುತ್ತದೆ. ಅಂಥ ಸಹಾಯವನ್ನು ಪಡೆಯಬೇಕಾದರೆ ಪುನರ್‌ವಿವಾಹದಲ್ಲಿ ವಧುವು ನಿರ್ಗತಿಕ ವಿಧವೆಯಾಗಿದ್ದು 18-35 ವರ್ಷದ ಒಳಗಿನವಳಾಗಿರಬೇಕು; ಕನಿಷ್ಠ ಐದು ವರ್ಷ ಗಳಿಂದ ಕರ್ನಾಟಕದಲ್ಲೇ ವಾಸವಾಗಿದ್ದವಳಾಗಿರಬೇಕು; ಅವಳ ವೈಯಕ್ತಿಕ ಆದಾಯ ತಿಂಗಳಿಗೆ ರೂ. 200ಕ್ಕಿಂತ ಕಡಿಮೆ ಯಾಗಿದ್ದು, ಕುಟುಂಬದ ಆದಾಯ ತಿಂಗಳಿಗೆ ರೂ. 400ಕ್ಕೆ ಮೀರಿರಬಾರದು. ವಿವಿಧ ಸಂಸ್ಥೆಗಳಲ್ಲಿ ಆಶ್ರಯ ಪಡೆದಿರುವ ನಿರ್ಗತಿಕ ಮತ್ತು ಅನಾಥ ಹುಡುಗಿಯರ ಮದುವೆ ಏರ್ಪಾಡು ಮಾಡಲು ಇಲಾಖೆಯಲ್ಲಿ ಇನ್ನೊಂದು ಕಾರ್ಯಕ್ರಮವಿದೆ. ಇದರನ್ವಯ ವಿಧವೆಯ ಮದುವೆಯ ಖರ್ಚಿಗಾಗಿ 1,000 ರೂ. ಕೊಡಲಾಗುತ್ತದೆ. ಇದಲ್ಲದೆ ವಿವಾಹಿತ ದಂಪತಿಗಳ ಹೆಸರಿನಲ್ಲಿ 2,000 ರೂ.ಗಳನ್ನು ಎರಡು ವರ್ಷಗಳ ಅವಧಿಗಾಗಿ ಮುದ್ದತಿ ಠೇವಣಿಯಾಗಿ ಇಡಲಾಗುತ್ತದೆ. 1982 ಮಾರ್ಚ್ ಕೊನೆಯ ವೇಳೆಗೆ ಅಂತಹ ಐವರು ನಿವಾಸಿಗಳಿಗೆ ಧನಸಹಾಯ ಕೊಡ ಲಾಗಿತ್ತು.

**ಮಹಿಳಾ ಮಂಡಳಿಗಳು :** ಮಹಿಳೆಯರು ಅಭಿವೃದ್ಧಿ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದನ್ನು ಪ್ರೋತ್ಸಾಹಿಸಲು, ಕುಟುಂಬ ಕಲ್ಯಾಣ ಕಾರ್ಯಕ್ರಮಗಳಲ್ಲಿ ಅವರು ಕ್ರಿಯಾಶೀಲ ವಾಗಿ ಪಾಲ್ಗೊಳ್ಳುವಂತೆ ಮಾಡಲು ಮತ್ತು ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುವುದನ್ನು ಪ್ರೋತ್ಸಾಹಿ ಸಲು ಸರಕಾರವು 500 ಮತ್ತು ಅದಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಎಲ್ಲ ಗ್ರಾಮಗಳಲ್ಲೂ ಮಹಿಳಾ ಮಂಡಳಿಗಳನ್ನು ಸ್ಥಾಪಿಸುವ ಕೆಲಸ ಕೈಗೊಂಡಿದೆ. ಇಂಥ ಮಹಿಳಾ ಮಂಡಳಿ ಗಳನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಪ್ರತೀ ಮಹಿಳಾ ಮಂಡಳಿಗೆ ಅದು ಸ್ಥಾಪನೆಯಾದ ವರ್ಷ 1,000 ರೂ. ಮತ್ತು ಮುಂದಿನ ನಾಲ್ಕು ವರ್ಷಗಳ ಕಾಲ ಪ್ರತೀ ವರ್ಷ 500 ರೂ. ಗಳನ್ನು ಮಂಜೂರು ಮಾಡಲಾಗುತ್ತಿದೆ. ಮಹಿಳಾ ಮಂಡಳಿ ಗಳು ತಾಲೂಕು ಫೆಡರೇಶನ್ನುಗಳನ್ನು ಕಟ್ಟಿಕೊಂಡು ಎಲ್ಲ ಕಲ್ಯಾಣ ಯೋಜನೆಗಳನ್ನು ಅಭಿವೃದ್ಧಿ ಚಟುವಟಿಕೆಗಳನ್ನೂ ಒಟ್ಟಿಗೆ ಸೇರಿ ಮಾಡುವಂತೆ ಪ್ರೋತ್ಸಾಹ ನೀಡಲಾಗುತ್ತದೆ. ಮಹಿಳಾ ಮಂಡಳಿಗಳನ್ನು ಅವುಗಳ ಸಾಧನೆಯ ಮೇಲಿಂದ ಎ, ಬಿ ಮತ್ತು ಸಿ ವರ್ಗಗಳೆಂದು ವರ್ಗೀಕರಿಸಿ ಪ್ರೋತ್ಸಾಹಕರ ಬಹುಮಾನಗಳನ್ನು ಕೊಡಲಾಗುತ್ತಿದೆ. ಮಂಡ್ಯ, ಗಂಗಾವತಿ ಮತ್ತು ಧಾರವಾಡಗಳಲ್ಲಿರುವ ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರಗಳಲ್ಲಿ ಮಹಿಳಾ ಕೆಲಸಗಾರರಿಗೆ ಮಹಿಳಾ ಮಂಡಳಿಗಳನ್ನು ವ್ಯವಸ್ಥೆಗೊಳಿಸುವ ಬಗ್ಗೆ 15 ದಿನಗಳ ತರಬೇತಿ ಕೊಡಲಾಗುತ್ತಿದೆ. 1980-81ರಲ್ಲಿ 55 ಮಹಿಳಾ ಮಂಡಳಿಗಳಿಗೆ ಆರ್ಥಿಕ ಸಹಾಯ ಕೊಡಲಾಯಿತು. ಏಳು ತಾಲೂಕು ಫೆಡರೇಶನ್ನುಗಳನ್ನು ಸ್ಥಾಪಿಸಲಾಯಿತು. ಹಾಗೂ ಅವುಗಳ ಪೈಕಿ ಮೂರು ಫೆಡರೇಶನ್ನುಗಳಿಗೆ ತಲಾ 7,500 ರೂ.ಗಳ ಸಹಾಯಧನ ಕೊಡ ಲಾಯಿತು. 'ಎ' ವರ್ಗದ ಮೂರು, 'ಬಿ' ವರ್ಗದ ಐದು ಮತ್ತು 'ಸಿ' ವರ್ಗದ 18 ಮಹಿಳಾ ಮಂಡಳಿಗಳಿಗೆ ಪ್ರೋತ್ಸಾಹ ಧನ ವೆಂದು 13,200 ರೂ.ಗಳನ್ನು ಬಿಡುಗಡೆ ಮಾಡಲಾಯಿತು. ಇದಲ್ಲದೆ 39,000 ರೂ. ವೆಚ್ಚದಲ್ಲಿ 999 ಮಹಿಳಾ ಸಹ-ಕಾರ್ಯಕರ್ತರಿಗೆ ತರಬೇತಿ ಕೊಡಲಾಯಿತು. 1981-82ರಲ್ಲಿ ಮಹಿಳಾ ಮಂಡಳಿಗಳಿಗೆ ಸಂಬಂಧಿಸಿದ ಯೋಜನೆಯನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ ಇಲಾಖೆಯು ಮಹಿಳೆ ಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ವರ್ಗಾಯಿಸಿತು. ಅದೇ ವರ್ಷ, ರಾಜ್ಯದಲ್ಲಿ 3,500 ಮಹಿಳಾ ಮಂಡಳಿಗಳೂ 13 ತಾಲೂಕು ಒಕ್ಕೂಟ (ಫೆಡರೇಶನ್) ಗಳೂ ನೋಂದಾಯಿ ಸಲ್ಪಟ್ಟಿದ್ದವು.

**ಉದ್ಯೋಗಸ್ಥ ಮಹಿಳೆಯರ ವಸತಿ ಗೃಹ :** ಭಾರತ ಸರಕಾರವು ಉದ್ಯೋಗಸ್ಥ ಮಹಿಳೆಯರ ವಸತಿ ಗೃಹಗಳ ನಿರ್ಮಾಣ ಅಥವಾ ವಿಸ್ತರಣೆಗಾಗಿ, ಮಹಿಳಾ ಕಲ್ಯಾಣಕ್ಕಾಗಿ ಕೆಲಸ ಮಾಡುತ್ತಿರುವ ನೋಂದಣಿ ಹೊಂದಿದ ಸ್ವಯಂಸೇವಾ ಸಂಸ್ಥೆಗಳಿಗೆ ಅಂದಾಜು ವೆಚ್ಚದ ಶೇ. 75ರಷ್ಟು ಧನಸಹಾಯ ಕೊಡುತ್ತದೆ. 1977-78ರ ವರೆಗೆ ಈ ಯೋಜನೆಯು ಎರಡು ಲಕ್ಷ ಅಥವಾ ಅದಕ್ಕಿಂತ ಹೆಚ್ಚು ಜನಸಂಖ್ಯೆಯಿರುವ ನಗರಗಳಿಗೆ ಮಾತ್ರ ಅನ್ವಯವಾಗುತ್ತಿತ್ತು. ಆದರೆ 1977-78 ರಿಂದ, ವಸತಿ ಗೃಹಗಳ ಅವಶ್ಯಕತೆಯಿರುವ ಮಹಿಳೆಯರು ಕನಿಷ್ಠ 25 ಜನರಾದರೂ ಇದ್ದರೆ, ಅಂಥ ಪಟ್ಟಣ ಮತ್ತು ನಗರಗಳಿಗೆ ಈ ಯೋಜನೆ ಅನ್ವಯವಾಗುತ್ತದೆ. ಕೇಂದ್ರದ ಧನಸಹಾಯವಲ್ಲದೆ ರಾಜ್ಯಸರಕಾರವೂ ವಸತಿ ಗೃಹ ಕಟ್ಟಡದ ನಿರ್ಮಾಣಕ್ಕೆ ತಗಲುವ ಒಟ್ಟು ವೆಚ್ಚದಲ್ಲಿ ಶೇ. 12½ಯಷ್ಟನ್ನು ಸಹಾಯವಾಗಿ ನೀಡು ತ್ತದೆ. ಇದೂ ಅಲ್ಲದೆ, ಯಾವುದೇ ವಸತಿ ಗೃಹವನ್ನು ಹೊಸದಾಗಿ ಪ್ರಾರಂಭಿಸುವಾಗ ಅಲ್ಲಿ ಕನಿಷ್ಠ 25 ನಿವಾಸಿಗಳಿದ್ದರೆ ಅಂಥ ವಸತಿ ಗೃಹಕ್ಕೆ ಸಲಕರಣೆಗಳ ಖರೀದಿಗೆಂದು 10,000 ರೂ. ಸಮೂಹ ಅನುದಾನ ('ಬ್ಲಾಕ್ ಗ್ರಾಂಟ್') ಕೊಡ ಲಾಗುತ್ತದೆ. 1981-82ರಲ್ಲಿ ಏಳು ಉದ್ಯೋಗಸ್ಥ ಮಹಿಳೆಯರ

ವಸತಿ ಗೃಹಗಳಿಗೆ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಕೊಡಲಾಯಿತು.

**ಬಿದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ :** ಇದನ್ನು ಸರಕಾರವು ಯುನಿಸೆಫ್‌ನ ದಕ್ಷಿಣ ಮಧ್ಯ ಪ್ರಾದೇಶಿಕ ಕಚೇರಿ (ಎಸ್.ಸಿ.ಎ.ಆರ್.ಓ.) ಮೂಲಕ ಸಿಕ್ಕಿದ 1.1 ದಶ ಲಕ್ಷ (ಅಮೆರಿಕದ) ಡಾಲರಿನ ಸ್ವಿಸ್ ನೆರವಿನೊಂದಿಗೆ ಪ್ರಾರಂಭಿಸಿದೆ. ಸರಕಾರದ ಗ್ರಾಮೀಣ ಅಭಿವೃದ್ಧಿ ಪ್ರಯತ್ನಗಳಿಗೆ ಪೂರಕವಾಗಿ ಸಲ್ಲಿಸುವುದು ಈ ಯೋಜನೆಯ ಉದ್ದೇಶ. ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳ ಮಹಿಳೆಯರು ಮತ್ತು ಮಕ್ಕಳು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವುದಕ್ಕೆ ಇಲ್ಲಿ ಒತ್ತು ಕೊಡಲಾಗುತ್ತದೆ. ಈ ಯೋಜನೆಯಲ್ಲಿ ಕಲ್ಯಾಣ ಮತ್ತು ಸಾಮಾಜಿಕ ಸೇವೆಗಳೂ ಆರ್ಥಿಕ ಕಾರ್ಯಕ್ರಮಗಳೂ ಸೇರಿವೆ. ಯೋಜನೆಯ ಒಟ್ಟು ವೆಚ್ಚ ರೂ. 663.80 ಲಕ್ಷ.

**ಕುಟುಂಬ ಮತ್ತು ಮಕ್ಕಳ ಕಲ್ಯಾಣ ಯೋಜನೆಗಳು :** ಕುಟುಂಬ ಮತ್ತು ಮಕ್ಕಳ ಕಲ್ಯಾಣ ಯೋಜನೆಗಳನ್ನು ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಳಿಯು ಪ್ರಾರಂಭಿಸಿತು. ಏಪ್ರಿಲ್ 1980ರಲ್ಲಿ ಈ ಯೋಜನೆಗಳನ್ನು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ವರ್ಗಾಯಿಸಲಾಯಿತು. ಕುಟುಂಬ ಕಲ್ಯಾಣ ಯೋಜನೆಗಳು ಮಕ್ಕಳಿಗೆ ಅದರಲ್ಲಿಯೂ ವಿಶೇಷವಾಗಿ ಹಳ್ಳಿಗಳಲ್ಲಿರುವ ಶಾಲಾಪೂರ್ವ ಮಕ್ಕಳಿಗೆ-ಸಮಗ್ರ ಸಮಾಜ ಕಲ್ಯಾಣ ಸೇವೆಗಳನ್ನು ಕೊಡಲು ಪ್ರಯತ್ನಿಸುತ್ತವೆ. ಅಲ್ಲದೆ ಮಹಿಳೆಯರಿಗೆ ಮತ್ತು ಎಳೆಯ ತಾಯಂದಿರಿಗೆ ಮನೆವಾರ್ತೆ ಕೆಲಸ, ತಾಯ್ತನದ ಕಲೆ, ಆರೋಗ್ಯ ಶಿಕ್ಷಣ, ಪೋಷಕಾಹಾರ, ಶಿಶುಪಾಲನೆ, ಮುಂತಾದ ವಿಷಯಗಳ ಬಗ್ಗೆ ಮೂಲಭೂತ ತರಬೇತಿಯನ್ನೂ ಇದರಲ್ಲಿ ಸೇರಿಸಲಾಗಿದೆ. ಪ್ರತಿಯೊಂದು ಯೋಜನೆಯಡಿ ಆರರಿಂದ ಎಂಟು ಗ್ರಾಮಗಳಿಗೆ ಬಾಲವಾಡಿಗಳನ್ನು ಕೊಡುತ್ತಾರೆ. 1981-82ರಲ್ಲಿ ರಾಜ್ಯದ 31 ಅಭಿವೃದ್ಧಿ ಕ್ಷೇತ್ರಗಳಲ್ಲಿ 34 ಕುಟುಂಬ ಮತ್ತು ಮಕ್ಕಳ ಕಲ್ಯಾಣ ಯೋಜನೆಗಳಿದ್ದವು. ಅವುಗಳು ಅಲ್ಲಿಯ ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಯ ನಿಯಂತ್ರಣದಲ್ಲಿವೆ. ಮಹಿಳೆಯರ ಕಲ್ಯಾಣ ಮತ್ತು ಅಭಿವೃದ್ಧಿಯನ್ನು ಪುರಸ್ಕರಿಸಲು ಕರ್ನಾಟಕ ಸರಕಾರವು ರಾಜ್ಯ ಮಟ್ಟದಲ್ಲಿ ಅಂತರ್-ಇಲಾಖಾ ಸಮನ್ವಯ ಸಮಿತಿಯನ್ನು ರಚಿಸಿದ್ದು, ಅದು ಮಹಿಳೆಯರಿಗಾಗಿ ಇರುವ ಕಾರ್ಯಕ್ರಮಗಳನ್ನು ರೂಪಿಸುವುದಲ್ಲದೆ ಅವುಗಳ ಅನುಷ್ಠಾನದ ಬಗ್ಗೆ ಮಾಹಿತಿ ಕೊಡುವುದು.

**ಕ್ಷೇತ್ರಾಭಿವೃದ್ಧಿಯಲ್ಲಿ ಸಾಮಾಜಿಕ ಅಗತ್ಯಗಳು :** ಇದೊಂದು ಬಹು ವ್ಯಾಪಕವಾದ ಯೋಜನೆಯಾಗಿದ್ದು ಇದು ದೇಶದ ಸತತವಾದ ಆರ್ಥಿಕ ಬೆಳವಣಿಗೆಗೆ ಅವಶ್ಯವಿರುವ ಆರೋಗ್ಯ, ಪೋಷಕಾಹಾರ, ಶಿಕ್ಷಣ ಮತ್ತು ಸಮುದಾಯ ವಿಕಾಸವನ್ನು ಒಳಗೊಳ್ಳುತ್ತದೆ. ಈ ಯೋಜನೆಯನ್ನು ಇತರ ಇಲಾಖೆಗಳ ಸಹಕಾರದೊಂದಿಗೆ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಕಾರ್ಯಗತ ಮಾಡುತ್ತದೆ. ಇದರ ಇಡೀ ಖರ್ಚನ್ನು ಯುನಿಸೆಫ್ ವಹಿಸುತ್ತದೆ. ಈ ಯೋಜನೆಯನ್ವಯ ಆಯ್ಕೆ ಮಾಡಿದ ಕ್ಷೇತ್ರಗಳೆಂದರೆ ಕುಂದಾಪುರ, ಉಡುಪಿ, ಕಾರ್ಕಳ, ಅಂಕೋಲಾ, ಕುಮಟಾ, ಹೊನ್ನಾವರ, ಭಟ್ಕಳ, ನರಗುಂದ, ರೋಣ, ಗದಗ, ಮುಂಡರಗಿ, ಯಾದಗಿರಿ, ಶಹಾಪುರ, ಶೋರಾಪುರ, ಲಿಂಗಸುಗೂರು, ಸಿಂಧನೂರು, ಕುಷ್ಟಗಿ, ಅರಸೀಕೆರೆ, ಚನ್ನರಾಯಪಟ್ಟಣ, ಹೊಳೆನರಸೀಪುರ, ತುಮಕೂರು, ಗುಬ್ಬಿ, ಕುಣಿಗಲ್, ಗೌರಿಬಿದನೂರು, ಗುಡಿಬಂಡೆ ಮತ್ತು ಚಿಂತಾಮಣಿ ತಾಲೂಕುಗಳು. ಯೋಜನೆಯ ಸಮರ್ಪಕ ಅನುಷ್ಠಾನದ ಬಗ್ಗೆ ಗಮನವೀಯಲು ಪುಣೆಯ ಟಾಟಾ ಮ್ಯಾನೇಜಮೆಂಟ್ ಆ್ಯಂಡ್ ಟ್ರೈನಿಂಗ್ ಸೆಂಟರಿನಲ್ಲಿ ತರಬೇತಿ ಹೊಂದಿದ ಎಂಟು ಯೋಜನಾಧಿಕಾರಿಗಳಿದ್ದಾರೆ.

**ಸಮಗ್ರ ಶಿಶು ಅಭಿವೃದ್ಧಿ ಸೇವಾ ಯೋಜನೆ :** ಇದು ಭಾರತ ಸರಕಾರದ ಯೋಜನೆಯಾಗಿದ್ದು 0-6 ವರ್ಷದ ಶಿಶುಗಳಿಗೂ ಗರ್ಭಿಣಿ ಮತ್ತು ಬಾಣಂತಿಯರಿಗೂ ರೋಗ ನಿರೋಧನ, ಆರೋಗ್ಯ ಪೌಷ್ಟಿಕಾಹಾರ ಮತ್ತು ಅನೌಪಚಾರಿಕ ಶಿಕ್ಷಣ ಇವೆಲ್ಲವನ್ನು ಕೊಡುವ ಒಂದು ಸಮಗ್ರ ಕಾರ್ಯಕ್ರಮ. ಸಮಗ್ರ ಶಿಶು ಅಭಿವೃದ್ಧಿ ಸೇವಾ ಯೋಜನೆ ಹಾಗೂ ಸಮಗ್ರ ಕುಟುಂಬ ಕಲ್ಯಾಣ ಸೇವೆಗಳ ಯೋಜನೆಗಳಡಿ ಪ್ರತಿಯೊಂದು ಅಭಿವೃದ್ಧಿ ಕ್ಷೇತ್ರದಲ್ಲಿ 100 ಗ್ರಾಮಗಳನ್ನು ಆಯ್ದುಕೊಂಡು ಪ್ರತಿಯೊಂದು ಗ್ರಾಮದಲ್ಲಿ ಒಂದು ಅಂಗನವಾಡಿಯನ್ನು ಪ್ರಾರಂಭಿಸಲಾಗುವುದು. ಪ್ರತಿಯೊಂದು ಅಂಗನವಾಡಿಯು ಸುಮಾರು 100 ಫಲಾನುಭವಿಗಳಿಗೆ ಸಹಾಯ ಮಾಡುತ್ತದೆ. ಅಂಗನವಾಡಿಯನ್ನು ಒಬ್ಬರು ಅಂಗನವಾಡಿ ಕಾರ್ಯಕರ್ತರು ನಿರ್ವಹಿಸುವರು. ಅವರಿಗೆ ಒಬ್ಬ ಸಹಾಯಕರಿರುತ್ತಾರೆ. ಒಬ್ಬ ನಿರೀಕ್ಷಕ ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಯು ಮೇಲ್ವಿಚಾರಣೆ ನೋಡಿಕೊಳ್ಳುವರು. ಅಂಗನವಾಡಿ ಕಾರ್ಯಕರ್ತರು ಮನೆಮನೆಗಳನ್ನು ಸಂದರ್ಶಿಸಿ ಜನಸಂಪರ್ಕ ಇಟ್ಟುಕೊಂಡು ಹಳ್ಳಿಯ ಹೆಂಗಸರಿಗೆ ಆರೋಗ್ಯ ಮತ್ತು ನೈರ್ಮಲ್ಯದ ಮಹತ್ವವನ್ನು ಮನವರಿಕೆ ಮಾಡಿಕೊಡುವರು. ಶಿಶು ಆರೋಗ್ಯ ವಿಷಯದಲ್ಲಿ ಡಿಪ್ಲೋಮಾ ಪಡೆದಿರುವ ಒಬ್ಬ ವೈದ್ಯರು, ಇಬ್ಬರು ಮಹಿಳಾ ಆರೋಗ್ಯ ಸಂದರ್ಶಕರು ಮತ್ತು ಎಂಟು ಜನ ಸಹಾಯಕ ದಾದಿ ಸೂಲಗಿತ್ತಿಯರನ್ನು ಒಳಗೊಂಡ ಪ್ಯಾರಾ ಮೆಡಿಕಲ್ ಸಿಬ್ಬಂದಿಯವರು 0-6 ವಯೋಮಿತಿಯ ಎಲ್ಲ ಮಕ್ಕಳಿಗೆ ರೋಗ ರಕ್ಷಣೆಯ ಉಪಾಯಗಳನ್ನು ಒದಗಿಸುವುದಲ್ಲದೆ ಮಕ್ಕಳ, ಗರ್ಭಿಣಿಯರ ಮತ್ತು ಬಾಣಂತಿ ತಾಯಂದಿರ ಆರೋಗ್ಯ ತಪಾಸಣೆ ನಡೆಸುವರು. ಪೋಷಕಾಂಶದ ಕೊರತೆಯಿಂದ

ಬಳಲುವ ಮಕ್ಕಳಿಗೆ ವಿಶೇಷ ಪೌಷ್ಟಿಕ ಆಹಾರ ಕೊಡಲಾಗುತ್ತದೆ. ಮೂರರಿಂದ ಆರರ ವಯೋಮಿತಿಯ ಮಕ್ಕಳಿಗೆ ಅನೌಪಚಾರಿಕ ವಾದ ಉಚಿತ ಶಿಕ್ಷಣವನ್ನು ಕೊಡಲಾಗುತ್ತದೆ. ಆರಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಿಗೆ ಪೈಲಿಬೇನೆ, ಡಿಫ್ತೀರಿಯಾ, ಧನುರ್ವಾಯು, ನಾಯಿಕೆಮ್ಮು, ವಿಷಮ ಶೀತಜ್ವರ ಮತ್ತು ಕ್ಷಯರೋಗಗಳ ವಿರುದ್ಧ ರೋಗ ನಿರೋಧಕಗಳನ್ನು ನೀಡ ಲಾಗುತ್ತದೆ. 1981-82ರ ಅಂತ್ಯದ ವೇಳೆಗೆ ರಾಜ್ಯದಲ್ಲಿ ಇಂಥ 31 ಯೋಜನೆಗಳಿದ್ದವು. ಇವುಗಳಲ್ಲಿ 15 ಯೋಜನೆಗಳು ರಾಜ್ಯದ ಕಕ್ಷೆಗೂ, ಉಳಿದವು ಕೇಂದ್ರದ ಕಕ್ಷೆಗೂ ಸೇರಿದ್ದವು. ಇವುಗಳಲ್ಲದೆ ಇಲಾಖೆಯು ಆದಿವಾಸಿ ಪ್ರದೇಶಗಳಲ್ಲಿರುವ ಮತ್ತು ಕೊಳೆಗೇರಿಗಳಲ್ಲಿರುವ ಮಕ್ಕಳಿಗಾಗಿ ಹಾಗೂ ಮೊಲೆಯೂಡಿಸುವ ತಾಯಂದಿರಿಗಾಗಿ ವಿಶೇಷ ಪೌಷ್ಟಿಕಾಂಶ ಕಾರ್ಯಕ್ರಮವನ್ನು ಕಾರ್ಯಗತಗೊಳಿಸುತ್ತದೆ.

**ನಿರ್ಗತಿಕ ಮತ್ತು ಅನಾಥ ಮಕ್ಕಳ ಗೃಹ :** ನಿರ್ಗತಿಕ ಮತ್ತು ಅನಾಥ ಮಕ್ಕಳ ಯೋಜನೆಯಡಿಯಲ್ಲಿ ಐದರಿಂದ ಹನ್ನೆರಡು ವರ್ಷದೊಳಗಿನ ಬಾಲಕ ಬಾಲಕಿಯರಿಗೆ ಪ್ರವೇಶ ಕೊಟ್ಟು ಅವರಿಗೆ ಶಿಕ್ಷಣ ಮತ್ತು ಪುನರ್‌ವಸತಿ ಸೌಕರ್ಯ ಒದಗಿಸಲಾಗುತ್ತದೆ. ಇದೊಂದು ಭಾರತ ಸರಕಾರದ ಯೋಜನೆ ಯಾಗಿದ್ದು, ಈ ಯೋಜನೆಯನ್ವಯ ಪ್ರತೀ ಮಗುವಿಗೆ ನಿರ್ವಹಣಾ ವೆಚ್ಚಕ್ಕೆಂದು ತಿಂಗಳಿಗೆ 76.50 ರೂ.ಗಳ ಧನಸಹಾಯ ಕೊಡಲಾಗುವುದಲ್ಲದೆ ಆ ಮಕ್ಕಳಿಗಾಗಿ ಕಟ್ಟುವ ಗೃಹಗಳಿಗೆ ತಗಲುವ ವೆಚ್ಚದಲ್ಲಿ ಶೇ. 90ರಷ್ಟನ್ನು ಸರಕಾರ ಕೊಡುತ್ತದೆ. 1980ರ ಮಾರ್ಚ್ ಕೊನೆಯಲ್ಲಿ 110 ಆಶ್ರಮಗಳಿದ್ದವು. ಅವು ಗಳಲ್ಲಿ 88ನ್ನು ರಾಜ್ಯದ ವಲಯಕ್ಕೆ ವರ್ಗಾಯಿಸಲಾಗಿದೆ. 1979-80ರಲ್ಲಿ ಇನ್ನೂ 22 ಗೃಹಗಳಿಗೆ ಮಂಜೂರಾತಿ ನೀಡ ಲಾಯಿತು. 1979-80ರಲ್ಲಿ ಒಂಬತ್ತು ಹೆಚ್ಚುವರಿ ಗೃಹಗಳು ಸೇರಿದಂತೆ 52ಕ್ಕೆ ಮಂಜೂರಾತಿ ಸಿಕ್ಕಿತು. ಈ ಗೃಹಗಳ ಒಟ್ಟು ವೆಚ್ಚ ಸುಮಾರು 40 ಲಕ್ಷ ರೂಪಾಯಿ. 31 ಮಾರ್ಚ್ 1982 ರವರೆಗೆ ರಾಜ್ಯದಲ್ಲಿ ಭಾರತ ಸರಕಾರವು ಮಂಜೂರಾತಿ ನೀಡಿದ 194 ಗೃಹಗಳಿದ್ದವು.

**ಬಾಲಭವನಗಳು :** ಹಿಂದೆ ರಾಜ್ಯ ಮಕ್ಕಳ ಕಲ್ಯಾಣ ಮಂಡಳಿ ನಡೆಸುತ್ತಿದ್ದ ಜವಾಹರ ಬಾಲಭವನವನ್ನು ರಾಜ್ಯವು ತನ್ನ ವಶಕ್ಕೆ ತೆಗೆದುಕೊಂಡಿದ್ದು, ಅದನ್ನೀಗ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ನಿರ್ವಹಿಸುತ್ತಿದೆ. ಬಾಲಭವನವು ಮಕ್ಕಳ ಸುಪ್ತಪ್ರತಿಭೆಯನ್ನು ಹೊರತರಲು ಸಹಾಯಕವಾಗುವ ಹಲವಾರು ಚಟುವಟಿಕೆಗಳನ್ನು ನಡೆಸುತ್ತಿದೆಯಲ್ಲದೆ ಮಕ್ಕಳಿಗೆ ಪುಟಾಣಿ ರೈಲು ಮುಂತಾದ ಮನರಂಜನೆಯ ಏರ್ಪಾಡನ್ನೂ ಮಾಡಿದೆ. ಕರಕುಶಲಕಲೆ, ಚಿತ್ರಕಲೆ, ಇಲೆಕ್ಟ್ರಾನಿಕ್ಸ್, ಜೇಡಿ ಮಣ್ಣಿನಲ್ಲಿ ಮಾದರಿಗಳ ತಯಾರಿಕೆ, ನಾಟಕ, ನೃತ್ಯ ಮುಂತಾದ ಸೃಜನಾತ್ಮಕ ಕಲೆಗಳ ತರಗತಿಗಳನ್ನು ಬೇಸಿಗೆಯ ರಜಾ ದಿನಗಳಲ್ಲಿ ಅದು ಏರ್ಪಡಿಸುತ್ತದೆ. ಬೆಂಗಳೂರಿನ ರಾಜಾಜಿನಗರ, ಕೋಲ್ಸ್ ಪಾರ್ಕ್, ಜೀವನ ಭೀಮಾನಗರ ಮತ್ತು ಜಯನಗರಗಳಲ್ಲಿ ಕಿರು-ಬಾಲಭವನಗಳಿವೆ. ಬಾಲಭವನದ ಚಟುವಟಿಕೆಗಳನ್ನು ಮೈಸೂರು, ದಾವಣಗೆರೆ, ಉಡುಪಿ, ಮಂಗಳೂರು, ಹಾಸನ, ಕೋಲಾರ, ಶಿವಮೊಗ್ಗ ಮತ್ತು ಮಡಿಕೇರಿಗಳಿಗೆ ವಿಸ್ತರಿಸಲಾಗಿದೆ ಯಲ್ಲದೆ ಬಳ್ಳಾರಿ, ವಿಜಾಪುರ, ಕಲ್ಬುರ್ಗಿ ಮತ್ತು ರಾಯಚೂರು ಗಳಲ್ಲಿ ಜಿಲ್ಲಾ ಬಾಲಭವನಗಳನ್ನು ಸ್ಥಾಪಿಸಲಾಗಿದೆ. ಜವಾಹರ ಬಾಲಭವನದ ಆವರಣದಲ್ಲಿ ಗೊಂಬೆಗಳ ವಸ್ತು ಸಂಗ್ರಹಾಲಯ ವೊಂದನ್ನೂ ಮಕ್ಕಳ ವಿಜ್ಞಾನ ಉಪವನವೊಂದನ್ನೂ ಪ್ರಾರಂಭಿ ಸುವ ಪ್ರಸ್ತಾಪವಿದೆ.

**ಬಾಲ ಸೇವಾ ಬ್ಯೂರೋಗಳು :** ಬಾಲ ಸೇವಾ ಬ್ಯೂರೋಗಳು ಕೊಳಗೇರಿ ಮತ್ತು ಶಾಲೆಗಳಲ್ಲಿ ಕಲಿಯುವ ಮಕ್ಕಳಿಗೆ–ಅದರಲ್ಲೂ ವಿಶೇಷವಾಗಿ ಮಾನಸಿಕ ಹಾಗೂ ಸಾಮಾಜಿಕ ಸಮಸ್ಯೆಗಳಿಂದ ಬಳಲುವ ಮಕ್ಕಳಿಗೆ—ಮಾರ್ಗದರ್ಶನ ಮತ್ತು ಸಲಹೆ ನೀಡುವ ಕೆಲಸ ಮಾಡುತ್ತವೆ. ಬೆಂಗಳೂರು, ದಾವಣಗೆರೆ, ಹುಬ್ಬಳ್ಳಿ-ಧಾರವಾಡ, ಬೆಳಗಾವಿ, ಮೈಸೂರು, ಮಂಗಳೂರು, ಶಿವಮೊಗ್ಗ, ಕೋಲಾರದ ಚಿನ್ನದ ಗಣಿ ಮತ್ತು ಕಲ್ಬುರ್ಗಿಗಳಲ್ಲಿ ಬಾಲ ಸೇವಾ ಬ್ಯೂರೋಗಳಿವೆ. ಆಟದ ಕೇಂದ್ರಗಳ ಮೂಲಕ ಮಕ್ಕಳಿಗೆ ಆರೋಗ್ಯ, ಮನರಂಜನೆ ಮತ್ತು ಪೂರಕ ಪೌಷ್ಟಿ ಕಾಂಶಗಳನ್ನು ಕೊಟ್ಟು, ನಗರದ ಕೊಳೆಗೇರಿಗಳಲ್ಲಿ ಕಂಡುಬರುವ ಬಾಲಾಪರಾಧವನ್ನು ಪ್ರತಿಬಂಧಿಸಲು ಪ್ರಯತ್ನಿಸಲಾಗುತ್ತಿದೆ. 1981-82ರಲ್ಲಿ ಹುಬ್ಬಳ್ಳಿ-ಧಾರವಾಡದಲ್ಲಿ 18, ಬೆಂಗಳೂರಿನಲ್ಲಿ 15, ಬೆಳಗಾವಿ, ಮೈಸೂರು, ಮಂಗಳೂರು, ಶಿವಮೊಗ್ಗ, ಕೋಲಾರದ ಚಿನ್ನದ ಗಣಿ ಮತ್ತು ಕಲ್ಬುರ್ಗಿಗಳಲ್ಲಿ ತಲಾ ನಾಲ್ಕು ಮತ್ತು ದಾವಣಗೆರೆಯಲ್ಲಿ ಮೂರು ಆಟದ ಕೇಂದ್ರ ಗಳಿದ್ದವು.

ಕರ್ನಾಟಕ ಸರಕಾರವು ಮಕ್ಕಳ ಕಲ್ಯಾಣಕ್ಕಾಗಿ ಸಲ್ಲಿಸಿದ ಅತ್ಯುತ್ತಮ ಸೇವೆಗಾಗಿ ರಾಜ್ಯ ಪ್ರಶಸ್ತಿಗಳನ್ನು ಕೊಡುತ್ತಿದೆ. ಈ ಪ್ರಶಸ್ತಿಯು ವ್ಯಕ್ತಿಗೆ ಸಲ್ಲುವಾಗ 5,000 ರೂ. ಮತ್ತು ಒಂದು ಪ್ರಶಸ್ತಿಪತ್ರ, ಹಾಗೂ ಸಂಸ್ಥೆಗೆ ಸಲ್ಲುವಾಗ 15,000 ರೂ. ಮತ್ತು ಒಂದು ಪ್ರಶಸ್ತಿಪತ್ರ ಇರುತ್ತದೆ. 1981-82ರಲ್ಲಿ ಶಿಶುಕಲ್ಯಾಣ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಾಗಿ ಮಂಗಳೂರಿನ ಸ್ವಾಮಿ ಶ್ರದ್ಧಾನಂದ ಸೇವಾಶ್ರಮಕ್ಕೆ ಸಾಂಸ್ಥಿಕ ಪ್ರಶಸ್ತಿಯೂ, ತೀರ್ಥಹಳ್ಳಿ ತಾಲೂಕಿನ ಬಸವಾನಿ ಗ್ರಾಮದ ಶ್ರೀಮತಿ ಪದ್ಮಾ ರಾಮದಾಸ ಅವರಿಗೆ (ಮರಣೋತ್ತರ) ವೈಯಕ್ತಿಕ ಪ್ರಶಸ್ತಿಯೂ ದೊರೆತವು. ಬೆಂಗಳೂರಿನ ಡಿವ್ಯಾನ್ ಲೈಟ್ ಸ್ಕೂಲಿಗೆ 1981-82ರಲ್ಲಿ 10,000 ರೂ.ಗಳ ನಗದು ರೂಪದ ಪ್ರಶಸ್ತಿ ಸಿಕ್ಕಿತು. ಕರ್ನಾಟಕವು ಸರ್ಕಾರವು ಕರ್ನಾಟಕ ರಾಜ್ಯ ಮಕ್ಕಳ

ನಿಧಿಯನ್ನು ಸ್ಥಾಪಿಸಿದ್ದು ಅದರ ಆಡಳಿತ ಮತ್ತು ನಿರ್ವಹಣೆಗಾಗಿ ರಾಜ್ಯಮಟ್ಟದ ಸಮಿತಿಯೊಂದನ್ನು ರಚಿಸಿದೆ. ಈ ನಿಧಿಗೆ ರಾಜ್ಯ ಸರಕಾರವು 10 ಲಕ್ಷ ರೂ.ಗಳನ್ನು ಮಂಜೂರು ಮಾಡಿದೆ.

ಬಂಧಮುಕ್ತ ಕೈದಿಗಳಿಗೆ ಸಹಾಯ: ಬಂಧಮುಕ್ತ ಕೈದಿಗಳು ತಮ್ಮ ಬಿಡುಗಡೆಯ ನಂತರ ಸಮಾಜದಲ್ಲಿ ಪುನರ್‌ವಸತಿಗೊಳ್ಳುವ ಕಾರ್ಯದಲ್ಲಿ ಸಹಾಯ ಮತ್ತು ಮಾರ್ಗದರ್ಶನ ನೀಡುವುದಕ್ಕಾಗಿ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ಸೇರಿದ ಸಂಪರ್ಕಾಧಿಕಾರಿಗಳು ಬೆಂಗಳೂರು, ಬಳ್ಳಾರಿ, ಬೆಳಗಾವಿ ಮತ್ತು ಕಲ್ಬುರ್ಗಿಯ ಕೇಂದ್ರ ಕಾರಾಗೃಹಗಳ ಜೊತೆಗೆ ಕೆಲಸ ಮಾಡುತ್ತಿದ್ದಾರೆ. 1981-82ರಲ್ಲಿ 629 ಕೈದಿಗಳ ಸಂದರ್ಶನ ನಡೆಸಿ, 89 ಕೈದಿಗಳಿಗೆ ಸಹಾಯ ನೀಡಲಾಯಿತು ಮತ್ತು 38 ಮಾಜೀ ಕೈದಿಗಳ ಸ್ಥಿತಿಗತಿಗಳ ಪುನರ್‌ಪರಿಶೀಲನೆ ಮಾಡಲಾಯಿತು. ಸುಧಾರಣಾ ಸಂಸ್ಥೆಗಳಲ್ಲಿ ಹಾಗೂ ಇನ್ನಿತರ ಸಂಸ್ಥೆಗಳಲ್ಲಿದ್ದ ಮಾಜೀ ನಿವಾಸಿಗಳಿಗೆ ಅವರು ಆ ಸಂಸ್ಥೆಗಳಲ್ಲಿ ಪಡೆದ ವೃತ್ತಿ ತರಬೇತಿಯನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಬೇಕಾದ ಉಪಕರಣ ಸಾಮಗ್ರಿಗಳನ್ನು ಕೊಳ್ಳುವುದಕ್ಕಾಗಿ 500 ರೂ.ನಿಂದ ಹಿಡಿದು 800 ರೂ.ವರೆಗೆ ಧನಸಹಾಯ ಕೊಡಲಾಯಿತು. ಹುಬ್ಬಳ್ಳಿಯಲ್ಲಿರುವ ರಾಜ್ಯ ಪುರುಷಗೃಹ ಹಾಗೂ ಬೆಳಗಾವಿ ಮತ್ತು ಮೈಸೂರುಗಳಲ್ಲಿರುವ ಜಿಲ್ಲಾ ಆಶ್ರಯಧಾಮ ('ಶೆಲ್ಟರ್ ಹೋಮ್ಸ್') ಗಳು ಸುಧಾರಣಾ ಸಂಸ್ಥೆಗಳಿಂದಲೂ ಇನ್ನಿತರ ಸಂಸ್ಥೆಗಳಿಂದಲೂ ಬಿಡುಗಡೆಯಾಗಿ ಬಂದ ಪುರುಷ ನಿವಾಸಿಗಳಿಗೆ ಹೊಲಿಗೆ ಮತ್ತು ಬಡಗಿತನಗಳಲ್ಲಿ ತರಬೇತಿ ಸೌಲಭ್ಯಗಳನ್ನು ಕೊಡುತ್ತಿವೆ. ಶಿಕ್ಷಣದಲ್ಲಿ ಆಸಕ್ತಿಯಿರುವ ವ್ಯಕ್ತಿಗಳು ಪ್ರೌಢಶಾಲೆಗಳಲ್ಲಿ ಹಾಗೂ ಔದ್ಯೋಗಿಕ ತರಬೇತಿ ಸಂಸ್ಥೆಗಳಲ್ಲಿ ಶಿಕ್ಷಣವನ್ನು ಮುಂದುವರಿಸಿಕೊಂಡು ಹೋಗಲು ಪ್ರೋತ್ಸಾಹ ಕೊಡಲಾಗುತ್ತದೆ. 1981-82ರಲ್ಲಿ ಈ ಮೂರು ಗೃಹಗಳಲ್ಲಿ 142 ನಿವಾಸಿಗಳಿದ್ದರು. ಪ್ರಮಾಣಿತ ಶಾಲೆಗಳಿಂದ ಹಾಗೂ ರಾಜ್ಯಗೃಹಗಳಿಂದ ಬಿಡುಗಡೆಯಾಗಿ ಬಂದ ಮಹಿಳೆಯರಿಗೆ ಮತ್ತು ಬಾಲಕಿಯರಿಗೆ ಬಳ್ಳಾರಿಯ ರಾಜ್ಯಗೃಹದ ಅನುಪಾಲನಾ ವಿಭಾಗದಲ್ಲಿ ಉಳಿದುಕೊಳ್ಳಲು ಅನುಮತಿಯಿದ್ದು ಅಲ್ಲಿ ಅವರಿಗೆ ಕೈಮಗ್ಗದ ನೇಯ್ಗೆಯ ಕೆಲಸ ಕೊಡುತ್ತಾರೆ.

ಬೆಂಗಳೂರು ಮತ್ತು ಧಾರವಾಡಗಳಲ್ಲಿ ಬುದ್ಧಿಮಾಂದ್ಯದ ಮಹಿಳೆಯರ ಅನುಪಾಲನಾ ಗೃಹಗಳಿದ್ದು ('ಆಫ್ಟರ್ ಕೇರ್ ಹೋಮ್') ಅವುಗಳಲ್ಲಿ ಬುದ್ಧಿಮಾಂದ್ಯವಿರುವ ಮಹಿಳೆಯರಿಗೆ ಮತ್ತು ಹುಡುಗಿಯರಿಗೆ ಪಾಲನೆ, ನಿರ್ವಹಣೆ ಮತ್ತು ತರಬೇತಿ ಸೌಕರ್ಯಗಳು ಲಭ್ಯವಿವೆ. ಮನೋವಿಕಲರಾದ ಮಕ್ಕಳಿಗಾಗಿ ಒಂದು ಅನುಪಾಲನಾ ಗೃಹವು ('ಆಫ್ಟರ್ ಕೇರ್ ಹೋಮ್') ಕೆಲಸ ಮಾಡುತ್ತಿದ್ದು ಅಲ್ಲಿ ಬುದ್ಧಿಮಾಂದ್ಯವುಳ್ಳ ಗಂಡುಮಕ್ಕಳ ಪಾಲನೆ ಮಾಡಲಾಗುತ್ತಿವೆ (ಅಧ್ಯಾಯ 9 ನೋಡಿ). ಬಂಧಮುಕ್ತ ಕೈದಿಗಳ ಪುನರ್‌ಸ್ಥಾಪನಾ ಯೋಜನೆಯಡಿ 1982ರ ಮಾರ್ಚ್ ಕೊನೆಯೊಳಗಾಗಿ 13 ಬಂಧಮುಕ್ತ ಕೈದಿಗಳಿಗೆ ಪುನರ್‌ವಸತಿ ಕಲ್ಪಿಸಲಾಯಿತು. ಈ ಉದ್ದೇಶಕ್ಕಾಗಿ ರೂ. 7,100 ಹಣ ವಿನಿಯೋಗಿಸಲಾಯಿತು.

ಇಲಾಖೆ: ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯನ್ನು 1975ರಲ್ಲಿ ರಚಿಸಲಾಯಿತು. ರಾಜ್ಯಮಟ್ಟದಲ್ಲಿ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ನಿರ್ದೇಶಕರು ಈ ಇಲಾಖೆಯ ಮುಖ್ಯಸ್ಥರಾಗಿದ್ದು ಅವರ ಸಹಾಯಕ್ಕಾಗಿ ಒಬ್ಬರು ಹೆಚ್ಚುವರಿ (ಅಡಿಶನಲ್) ನಿರ್ದೇಶಕರು, ಒಬ್ಬ ಜಂಟಿ ನಿರ್ದೇಶಕರು, ನಾಲ್ವರು ಉಪನಿರ್ದೇಶಕರು, ಆರು ಸಹಾಯಕ ನಿರ್ದೇಶಕರು ಮತ್ತು ಒಬ್ಬ ಲೆಕ್ಕಪತ್ರಾಧಿಕಾರಿ (ಎಕೌಂಟ್ಸ್ ಆಫೀಸರ್) ಇದ್ದಾರೆ. ಬೆಂಗಳೂರು, ಬಳ್ಳಾರಿ, ಬಿದರೆ, ವಿಜಾಪುರ, ಬೆಳಗಾವಿ, ದಾವಣಗೆರೆ, ಧಾರವಾಡ, ಕಾರವಾರ, ಕೋಲಾರ ಚಿನ್ನದ ಗಣಿ, ಮಂಗಳೂರು, ಮೈಸೂರು ಮತ್ತು ಶಿವಮೊಗ್ಗ ಹೀಗೆ 12 ಕಡೆಗಳಲ್ಲಿ ಇಲಾಖೆಯ ಕಚೇರಿಗಳಿದ್ದು ಅವು ಅಲ್ಲಿಯ ಸಹಾಯಕ ನಿರ್ದೇಶಕರ ನೇತೃತ್ವದಲ್ಲಿವೆ. ಈ ಸಹಾಯಕ ನಿರ್ದೇಶಕರಿಗೆ ಸಹಾಯ ಮಾಡಲು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಾಧಿಕಾರಿಗಳೂ ತನಿಖಾಧಿಕಾರಿಗಳೂ ಇದ್ದಾರೆ. ಇವರು ಇಲಾಖೆಯ ಯೋಜನೆಗಳು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ಬರುವಂತೆ ನೋಡಿಕೊಳ್ಳುವರು.

ಕರ್ನಾಟಕ ರಾಜ್ಯ ಮಕ್ಕಳ ಕಲ್ಯಾಣ ಮಂಡಳಿ: ಕರ್ನಾಟಕ ರಾಜ್ಯ ಮಕ್ಕಳ ಕಲ್ಯಾಣ ಮಂಡಳಿಯು ಹೊಸ ದಿಲ್ಲಿಯ ಭಾರತೀಯ ಮಕ್ಕಳ ಕಲ್ಯಾಣ ಮಂಡಳಿಯಿಂದ ಅಂಗೀಕಾರ ಪಡೆದ ಸಂಸ್ಥೆ. ಅದು ಬೆಂಗಳೂರಿನಲ್ಲಿ 1955ರಲ್ಲಿ ಪ್ರಾರಂಭವಾಯಿತು. ಅದರ ಉದ್ದೇಶಗಳು ಹೀಗಿವೆ. ರಾಜ್ಯದಲ್ಲಿ ಮಕ್ಕಳ ಕಲ್ಯಾಣ ಚಳವಳಿಯನ್ನು ಸಮನ್ವಯಗೊಳಿಸಿ ಕ್ರಿಯಾಶೀಲಗೊಳಿಸುವುದು ; ಸರಕಾರಿ ಮತ್ತು ಸರಕಾರೇತರ ಸಂಘ ಸಂಸ್ಥೆಗಳ ನಡುವೆ ಸಂಬಂಧ ಕಲ್ಪಿಸುವುದು; ಸಾರ್ವಜನಿಕಾಭಿಪ್ರಾಯವನ್ನು ಸಂಘಟಿಸುವುದು ; ಸ್ವಯಂಸೇವಾ ಸಂಸ್ಥೆಗಳ ನಡುವೆ ಸೇತುವೆಯಾಗಿ ಕೆಲಸ ಮಾಡುವುದು ; ಸಮ್ಮೇಳನ, ವಿಚಾರಸಂಕಿರಣ, ಅಧ್ಯಯನ ವೃಂದಗಳನ್ನು ಸಂಘಟಿಸುವುದು, ಇತ್ಯಾದಿ. ಪ್ರತೀ ಮೂರು ವರ್ಷಕ್ಕೊಮ್ಮೆ ಮಂಡಳಿಯ ಸಾಮಾನ್ಯ ಸಭೆಯು ತನ್ನ ಕಾರ್ಯಕಾರಿ ಸಮಿತಿಗೆ ಮೂರು ಸದಸ್ಯರನ್ನು ಆಯ್ಕೆ ಮಾಡುವುದು. ಈ ಕಾರ್ಯಕಾರೀ ಸಮಿತಿಯೇ ಮಂಡಳಿಯ ಕಾರ್ಯನಿರ್ವಹಣೆ ಮಾಡುವುದು. ಮಂಡಳಿಯು ಮೈಸೂರು, ಮಂಡ್ಯ, ಕೊಡಗು, ಬೆಳಗಾವಿ, ವಿಜಾಪುರ, ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು, ಧಾರವಾಡ, ಹಾಸನ ಮತ್ತು ಕಲ್ಬುರ್ಗಿಗಳಲ್ಲಿ ತನ್ನ ಜಿಲ್ಲಾ ಶಾಖೆಗಳನ್ನು ತೆರೆದಿದೆ. ಉಳಿದ ಜಿಲ್ಲೆಗಳಲ್ಲೂ ಶಾಖೆಗಳನ್ನು

ಸ್ಥಾಪಿಸುವ ಪ್ರಯತ್ನ ನಡೆದಿದೆ. ಮಕ್ಕಳ ಕಲ್ಯಾಣ ಸೇವೆಗಳನ್ನು ಒದಗಿಸುವುದು, ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ದುಡಿಯುವ ಕಾರ್ಯಕರ್ತರಿಗೆ ತರಬೇತಿ ಕೊಡುವುದು ಹಾಗೂ ಉದ್ಯೋಗಸ್ಥ ಮಹಿಳೆಯರ ವಸತಿಗೃಹಗಳನ್ನು ನಿರ್ವಹಿಸುವುದು ಮಂಡಳಿಯ ಪ್ರಮುಖ ಕಾರ್ಯವಾಗಿದೆ. ಅದು ತನ್ನ ಕಲ್ಯಾಣ ಯೋಜನೆಯಡಿ 55 ಶಿಶುವಿಹಾರಗಳನ್ನು 12 ಬಾಲವಾಡಿಗಳನ್ನೂ ಸ್ಥಾಪಿಸಿದೆ; ಎಂಟು ಜನ ಮಕ್ಕಳ ದತ್ತು ಸ್ವೀಕಾರಕ್ಕೆ ಏರ್ಪಾಟು ಮಾಡಿದೆ ; ಐದು ಮಕ್ಕಳ ಗೃಹಗಳನ್ನು ನಡೆಸುತ್ತಿದೆ. ಹಾಗೂ ಮಕ್ಕಳಿಗಾಗಿ ಮೂರು ಆಟದ ಕೇಂದ್ರಗಳನ್ನು ಸ್ಥಾಪಿಸಿದೆ. ಅಂತರರಾಷ್ಟ್ರೀಯ ಮಕ್ಕಳ ವರ್ಷದಲ್ಲಿ ಕ್ರೈಸ್ತ ಮಕ್ಕಳ ನಿಧಿ (ಕ್ರಿಶ್ಚಿಯನ್ ಚಿಲ್ಡ್ರನ್ಸ್ ಫಂಡ್) ಯ ಸಹಾಯದಿಂದ ಮಕ್ಕಳು ಹಾಗೂ ಅವರ ಕುಟುಂಬಗಳು ತಮ್ಮಲ್ಲಿರುವ ಹಾಗೂ ಸಮುದಾಯದಲ್ಲಿರುವ ಸರ್ವಶಕ್ತಿಯನ್ನು ಕ್ರೋಢೀಕರಿಸುವಂತೆ ನೋಡಿಕೊಳ್ಳುವ ಉದ್ದೇಶದಿಂದ ಶಿಶುರಕ್ಷಾ ಕುಟುಂಬ ಸಹಾಯಕ ಯೋಜನೆಯನ್ನು ಪ್ರಾರಂಭಿಸಿದೆ. 1981ರಲ್ಲಿ 200 ಮಕ್ಕಳು ಈ ಯೋಜನೆಯ ವ್ಯಾಪ್ತಿಯಲ್ಲಿದ್ದರು. ಈ ಮಕ್ಕಳ ನಿಧಿಯ ಇನ್ನುಳಿದ ಚಟುವಟಿಕೆಗಳಲ್ಲಿ ವೈದ್ಯಕೀಯ ತಪಾಸಣೆ, ಪೌಷ್ಟಿಕಾಹಾರದ ಯೋಜನೆ, ಶೈಕ್ಷಣಿಕ ಸಹಾಯ ಯೋಜನೆ, ಹುಟ್ಟುಹಬ್ಬದ ಸಂತೋಷಕೂಟವನ್ನು ಏರ್ಪಡಿಸುವುದು, ಚಿತ್ರ ಬರೆಯುವ ಸ್ಪರ್ಧೆ, ಮಕ್ಕಳ ದಿನಾಚರಣೆ, ಚಲನಚಿತ್ರ ಪ್ರದರ್ಶನ, ಇತ್ಯಾದಿ ಸೇರಿವೆ. ಮಕ್ಕಳ ಕಲ್ಯಾಣ ಕಾರ್ಯಕರ್ತರ ತರಬೇತಿ, ಮಹಿಳಾ ಕಲ್ಯಾಣ ಸಂಘಟಕರ ತರಬೇತಿ, ಅಂಗನವಾಡಿ ಕಾರ್ಯಕರ್ತರ ತರಬೇತಿ, ಮುಂತಾದ ತರಬೇತಿ ಕಾರ್ಯಕ್ರಮಗಳನ್ನು ಮಂಡಳಿ ನಿರ್ವಹಿಸುತ್ತಿದೆ. ಬೆಂಗಳೂರು, ದಾವಣಗೆರೆ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಮಂಡಳಿಯು ಮೂರು ಬಾಲ ಸೇವಿಕಾ ತರಬೇತಿ ಸಂಸ್ಥೆಗಳನ್ನು ನಡೆಸುತ್ತಿದೆ.

ಸಾರ್ವಜನಿಕರ ಸಹಕಾರ ಮತ್ತು ಮಕ್ಕಳ ಅಭಿವೃದ್ಧಿಯ ರಾಷ್ಟ್ರೀಯ ಸಂಸ್ಥೆ : ಈ ರಾಷ್ಟ್ರೀಯ ಸಂಸ್ಥೆಯು ಬೆಂಗಳೂರಿನಲ್ಲಿ ಸೆಪ್ಟೆಂಬರ್ 1980ರಲ್ಲಿ ಒಂದು ಪ್ರಾದೇಶಿಕ ಕೇಂದ್ರವನ್ನು ಪ್ರಾರಂಭಿಸಿದೆ. ಇದು ದಕ್ಷಿಣದ ರಾಜ್ಯಗಳಲ್ಲಿ ಸಾರ್ವಜನಿಕ ಸಹಕಾರ ಮತ್ತು ಮಕ್ಕಳ ಅಭಿವೃದ್ಧಿ ಕ್ಷೇತ್ರದಲ್ಲಿ ಕೆಲಸ ಮಾಡುವ ಅಧಿಕಾರಿಗಳ ಹಾಗೂ ಇತರ ಸಿಬ್ಬಂದಿಯವರ ತರಬೇತಿ ಅಗತ್ಯಗಳನ್ನು ಪೂರೈಸುವುದು. ಭಾರತ ಸರಕಾರದ ಸಮಾಜ ಕಲ್ಯಾಣ ಖಾತೆ ಮತ್ತು ಯುನಿಸೆಫ್ ಇದಕ್ಕೆ ಬೇಕಾದ ಹಣಕಾಸು ಒದಗಿಸುತ್ತದೆ. ಪ್ರಾದೇಶಿಕ ಕೇಂದ್ರದಲ್ಲಿ 18 ಜನ ಕಾಯಂ ಸಿಬ್ಬಂದಿ ಇದ್ದಾರೆ. ಕೇಂದ್ರವು ತರಬೇತಿಯ ಅವಧಿಯಲ್ಲಿ ಒಮ್ಮೆಗೆ 30 ಸದಸ್ಯರ ತಂಡಕ್ಕೆ ತರಬೇತಿ ಕೊಡುತ್ತದೆ.

## ಕ್ಷೇಮಾಭಿವೃದ್ಧಿ ಸಂಘ ಸಂಸ್ಥೆಗಳು

ಸರಕಾರಿ ನಿಯೋಗಗಳಲ್ಲದೆ (ಏಜನ್ಸೀಸ್) ನಮ್ಮ ರಾಜ್ಯದಲ್ಲಿ ಸಂಕಟಪೀಡಿತರಾದ ಮಕ್ಕಳು ಮತ್ತು ಮಹಿಳೆಯರಿಗಾಗಿ ಕಲ್ಯಾಣ ಕ್ರಮಗಳನ್ನು ತೆಗೆದುಕೊಳ್ಳುವ ಸಂಸ್ಥೆಗಳು ('ವೆಲ್ಫೇರ್ ಏಜನ್ಸೀಸ್') ಕೆಲವು ರಾಷ್ಟ್ರಮಟ್ಟದ ಸಂಸ್ಥೆಗಳನ್ನೊಳಗೊಂಡಂತೆ ಹಲವಿವೆ. ಅವುಗಳಲ್ಲಿ ಕೆಲವು ಒಂದು ಶತಮಾನದಷ್ಟು ಅಥವಾ ಅದಕ್ಕಿಂತಲೂ ದೀರ್ಘಕಾಲದಿಂದ ಅಸ್ತಿತ್ವದಲ್ಲಿವೆ. ಅನಾಥಾಲಯಗಳು, ನಿರ್ಗತಿಕರ ಗೃಹಗಳು, ವೃದ್ಧರ ಮತ್ತು ಪರಿತ್ಯಕ್ತ ಸ್ತ್ರೀಯರ ಗೃಹಗಳು, ಇತ್ಯಾದಿ ಸಂಸ್ಥೆಗಳನ್ನು ಸ್ವಯಂ ಸೇವಾ ಸಂಸ್ಥೆಗಳು ದಾನಿಗಳಿಂದ ದಾನ ಪಡೆದು ಅಥವಾ ಸರಕಾರದಿಂದ ಅನುದಾನ ಪಡೆದು ನಡೆಸುತ್ತಿವೆ. ಕೆಲವನ್ನು ಧಾರ್ಮಿಕ ಸಂಗಡದವರು ನಡೆಸುತ್ತಿದ್ದಾರೆ.

ಕಸ್ತೂರ್‌ಬಾ ಗಾಂಧಿ ಟ್ರಸ್ಟ್ : ಕಸ್ತೂರ್‌ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಟ್ರಸ್ಟಿನ ಅಂಗ ಶಾಖೆಗಳನ್ನು 1945-46 ರಲ್ಲಿ ಪ್ರಾರಂಭಿಸಲಾಯಿತು. ಹಳೆಯ ಮೈಸೂರು ರಾಜ್ಯಕ್ಕಾಗಿ ಅರಸೀಕೆರೆಯಲ್ಲಿ ಕೇಂದ್ರ ಕಾರ್ಯಸ್ಥಾನವುಳ್ಳ ಶಾಖೆಯನ್ನು ಶ್ರೀಮತಿ ಯಶೋಧರಾ ದಾಸಪ್ಪನವರೂ, ಕರ್ನಾಟಕದ ಇತರ ಭಾಗಗಳಿಗಾಗಿ ಹುಬ್ಬಳ್ಳಿಯಲ್ಲಿ ಕೇಂದ್ರ ಕಾರ್ಯಸ್ಥಾನವುಳ್ಳ ಶಾಖೆಯನ್ನು ಶ್ರೀಮತಿ ಉಮಾಬಾಯಿ ಕುಂದಾಪುರ ಅವರೂ ಪ್ರಾರಂಭಿಸಿದರು. 1944ರಲ್ಲಿ ಕಸ್ತೂರಬಾ ಗಾಂಧಿಯವರ ಮರಣದ ಸಂದರ್ಭದಲ್ಲಿ ಹಳೆಯ ಮೈಸೂರು ಭಾಗದಲ್ಲಿ ಕೂಡಿಸಿದ ನಿಧಿ ರೂ. 2.84 ಲಕ್ಷದಷ್ಟಿತ್ತು; ಮತ್ತು ಕರ್ನಾಟಕದ ಉಳಿದ ಭಾಗಗಳಲ್ಲಿ ಕೂಡಿಸಿದ ಹಣ ರೂ. 2.27 ಲಕ್ಷದಷ್ಟಿತ್ತು. ಇದರಲ್ಲಿ ಶೇ. 25 ಭಾಗವನ್ನು ಮಧ್ಯಪ್ರದೇಶದ ಇಂದೋರ್ ಜಿಲ್ಲೆಯ ಕಸ್ತೂರ್‌ಬಾ ಗ್ರಾಮದಲ್ಲಿರುವ ಟ್ರಸ್ಟಿನ ಕೇಂದ್ರೀಯ ನಿಧಿಗೆ ವರ್ಗಾಯಿಸಲಾಯಿತು. 1950ರಲ್ಲಿ ಹಳೆಯ ಮೈಸೂರು ಸರಕಾರ ಟ್ರಸ್ಟಿಗಾಗಿ ಅರಸೀಕೆರೆಯ ಹತ್ತಿರದಲ್ಲಿ 87 ಎಕರೆ ಭೂಮಿಯನ್ನು ನೀಡಿತು. 1960ರಲ್ಲಿ ಎರಡೂ ಶಾಖೆಗಳನ್ನು ವಿಲೀನೀಕರಿಸಿ ಒಂದೇ ಆಡಳಿತೆಯಡಿಯಲ್ಲಿ ತಂದು ಅರಸೀಕೆರೆಯ ಹತ್ತಿರದ ಕಸ್ತೂರ್‌ಬಾ ಗ್ರಾಮವನ್ನು ಟ್ರಸ್ಟಿನ ಕೇಂದ್ರ ಕಾರ್ಯಸ್ಥಾನವಾಗಿ ಮಾಡಲಾಯಿತು. ಟ್ರಸ್ಟಿನ ಪ್ರಮುಖ ಉದ್ದೇಶಗಳೆಂದರೆ ಗ್ರಾಮೀಣ ಪ್ರದೇಶಗಳಲ್ಲಿರುವ ಬಡ ಹೆಂಗಸರು ಹಾಗೂ ಮಕ್ಕಳಿಗಾಗಿ ನಡೆಸುವ ಧರ್ಮಾರ್ಥ ಕೆಲಸಗಳನ್ನು ಪ್ರೋತ್ಸಾಹಿಸುವುದು; ಹೆಣ್ಣು ಮಕ್ಕಳಿಗಾಗಿ ಧರ್ಮಾರ್ಥ ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳನ್ನು ಸ್ಥಾಪಿಸಿ ನಿರ್ವಹಿಸುವುದು; ಹೆಣ್ಣು ಮಕ್ಕಳ ಶಿಕ್ಷಣ; ಕುಶಲ ಕೈಗಾರಿಕೆ, ಗುಡಿ ಕೈಗಾರಿಕೆ ಇನ್ನಿತರ ಕುಶಲ ಕಲೆಗಳನ್ನು ಪ್ರೋತ್ಸಾಹಿಸುವುದು; ಸದೃಶ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡಿರುವ ಸಂಘಸಂಸ್ಥೆಗಳಿಗೆ ಅನುದಾನ ಮತ್ತು ದೇಣಿಗೆಗಳನ್ನು ಕೊಟ್ಟು ಸಹಾಯ ಮಾಡುವುದು, ಇತ್ಯಾದಿ. ಟ್ರಸ್ಟಿನ ಕಾರ್ಯಚಟುವಟಿಕೆಗಳಲ್ಲಿ ಎರಡು ಪ್ರಕಾರಗಳನ್ನು

ಗುರುತಿಸಬಹುದು : 1) ಬಾಲವಾಡಿ ಶಿಕ್ಷಕಿಯರು, ಸೂಲಗಿತ್ತಿಯರು, ಕುಶಲಕಲಾಕರ್ಮಿಗಳು, ಗ್ರಾಮ ಸೇವಿಕೆಯರು, ಇತ್ಯಾದಿ ಸಿಬ್ಬಂದಿಯವರನ್ನು ತರಬೇತಿಗೊಳಿಸುವುದು ಮತ್ತು 2) ತರಬೇತಿ ಹೊಂದಿದ ಸಿಬ್ಬಂದಿಯವರು ನಡೆಸುವ ಗ್ರಾಮ ಮಾತೃಮಂದಿರಗಳನ್ನು ಹಳ್ಳಿಗಳಲ್ಲಿ ಪ್ರಾರಂಭಿಸುವುದು. ತರಬೇತಿ ಕಾರ್ಯಕ್ರಮದಡಿ ಟ್ರಸ್ಟು 1946ರಿಂದ 1960ರವರೆಗೆ 660 ಗ್ರಾಮ ಸೇವಿಕೆಯರನ್ನೂ, 1979-80ರಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಎರಡು ತಂಡಗಳನ್ನೂ ತರಬೇತುಗೊಳಿಸಿದೆ. 1963ರಿಂದ ಟ್ರಸ್ಟು ವಯಸ್ಕ ಮಹಿಳೆಯರಿಗೆ ತರಬೇತಿ ಶಿಕ್ಷಣವನ್ನು ನೀಡುತ್ತಿದೆ. ಚಿಕ್ಕಮಗಳೂರು ಜಿಲ್ಲೆಯ ಹೊಸಹಳ್ಳಿಯಲ್ಲಿ ಮತ್ತು ಶಿವಮೊಗ್ಗ ಜಿಲ್ಲೆಯ ಬಸವಾನಿಯಲ್ಲಿ ಹೀಗೆ ಎರಡು ಕಡೆಗಳಲ್ಲಿ ಟ್ರಸ್ಟು ಪ್ರಸೂತಿ ಗೃಹಗಳನ್ನು ನಡೆಸುತ್ತಿದೆ. ಸೂಲಗಿತ್ತಿಯರುಳ್ಳ ಹತ್ತು ವೈದ್ಯಕೀಯ ಕೇಂದ್ರಗಳನ್ನೂ ಅದು ನಡೆಸುತ್ತದೆ. ಅರಸೀಕೆರೆಯ ಹತ್ತಿರದ ಕಸ್ತೂರ್‌ಬಾ ಗ್ರಾಮವು ಒಂದು ರೀತಿಯಲ್ಲಿ ಸಮಾಜ ಸೇವೆಯ ಪ್ರಯೋಗಾಲಯವಾಗಿದೆ. ಟ್ರಸ್ಟ್ ನಿರ್ವಹಿಸುವ 18 ಗ್ರಾಮಸೇವಿಕಾ ಕೇಂದ್ರಗಳ ಪೈಕಿ ಕೆಲವಕ್ಕೆ ತಮ್ಮದೇ ಆದ ಕೃಷಿ ಯೋಗ್ಯ ಭೂಮಿಯಿದೆ. ಈ ಭೂಮಿಯ ಪ್ರಮಾಣ ಒಟ್ಟು ಸುಮಾರು 3,000 ಎಕರೆಯಷ್ಟಿದೆ.

**ಭಾರತೀಯ ಗ್ರಾಮೀಣ ಮಹಿಳಾ ಸಂಘ :** ಬೆಂಗಳೂರಿನ ವಿಭೂತಿಪುರದಲ್ಲಿರುವ ಈ ಸಂಘವು ಅಖಿಲ ಭಾರತ ಸಂಘಟನೆಯಾಗಿದ್ದು ಇದರ ಶಾಖೆಗಳು ದೇಶದ ತುಂಬ ಹರಡಿವೆ. ಕರ್ನಾಟಕ ರಾಜ್ಯ ಶಾಖೆಯು ಶ್ರೀಮತಿ ಯಶೋಧರಾ ದಾಸಪ್ಪನವರಿಂದ 1962ರಲ್ಲಿ ಸ್ಥಾಪಿಸಲ್ಪಟ್ಟಿತು. ಇದು ವಿಜಾಪುರ, ಮಂಡ್ಯ, ಧಾರವಾಡ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಉಪಶಾಖೆಗಳನ್ನು ಹೊಂದಿದೆ. ಸಂಘದ ಮುಖ್ಯ ಉದ್ದೇಶಗಳೆಂದರೆ : ವಿಶೇಷವಾಗಿ ಗ್ರಾಮೀಣ ಮಹಿಳೆಯರಿಗಾಗಿ ಕೆಲಸ ಮಾಡುವ ಈಗಿರುವ ಎಲ್ಲ ಸಂಘಟನೆಗಳನ್ನು ಒಗ್ಗೂಡಿಸುವುದು; ಗ್ರಾಮೀಣ ಮಹಿಳೆಯರ ಸಲುವಾಗಿ ತೀವ್ರತರವಾದ ಹಾಗೂ ಕೇಂದ್ರೀಕೃತವಾದ ಕೆಲಸಕಾರ್ಯ ಕೈಗೆತ್ತಿಕೊಳ್ಳುವುದು; ಶೈಕ್ಷಣಿಕ, ಆರೋಗ್ಯ, ಸಾಮಾಜಿಕ ಮತ್ತು ಆರ್ಥಿಕ ಅಗತ್ಯಗಳನ್ನು ಪೂರೈಸಿ ಅವರ ಸದ್ಯದ ಸ್ಥಿತಿಗತಿಗಳನ್ನು ತೀವ್ರವಾಗಿ ಸುಧಾರಿಸುವುದು; ಸಮುದಾಯ ವಿಕಾಸ ಯೋಜನೆಗಳ ರಚನಾತ್ಮಕ ಕಾರ್ಯಗಳಲ್ಲಿ ಸಹಕರಿಸುವುದು; ಮಹಿಳೆಯರ, ಮಕ್ಕಳ ಮತ್ತು ಅಂಗವಿಕಲರ ಕಲ್ಯಾಣಕ್ಕೆ ಸಂಬಂಧಿಸಿದ ಯಾವುದೇ ಯೋಜನೆಯನ್ನು ಕೈಗೆತ್ತಿಕೊಳ್ಳುವುದು, ಇತ್ಯಾದಿ. ಗ್ರಾಮೀಣ ಮಹಿಳೆಯರಿಗಾಗಿ ಮಾರ್ಗದರ್ಶಕ (ಪೈಲಟ್) ಯೋಜನೆಗಳನ್ನು ತೆಗೆದುಕೊಳ್ಳುವುದೂ ಕೂಡ ಈ ಸಂಘದ ಕಾರ್ಯ ವ್ಯಾಪ್ತಿಯಲ್ಲಿದೆ. 1964ರಲ್ಲಿ ಇದು ಮೈಸೂರಿನಲ್ಲಿ ಕಸ್ತೂರ್‌ಬಾ ನಿಲಯ ಎಂಬ ಒಂದು ಅಂಧರ ಶಾಲೆಯನ್ನು ತೆರೆಯಿತು. ಮುಂದೆ 1969ರಲ್ಲಿ ಇದು ಬೆಂಗಳೂರಿನಲ್ಲಿರುವ ತನ್ನ ಸ್ವಂತ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ಇಲ್ಲಿ 28 ಅಂಧ ಹುಡುಗರು ಮತ್ತು ಅಂಗವಿಕಲರಾದ ಮಕ್ಕಳು ಇದ್ದರು. ಅಂಧ ಬಾಲಿಕೆಯರಿಗಾಗಿ ಗರ್ಲ್ ಗೈಡ್ಸ್‌ನ ಒಂದು ಘಟಕವನ್ನು ತೆರೆಯಲಾಗಿದೆ. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ಬೇಕಾಗುವ ಬಾಲವಾಡಿ ಸಲಕರಣೆಗಳನ್ನು ತಯಾರಿಸಿ ಪೂರೈಸುವ ಒಂದು ಆಶ್ರಮ ಕಾರ್ಯಾಗಾರವಿದ್ದು ಅದರಲ್ಲಿ ಅಂಗವಿಕಲರಾದ ಮಕ್ಕಳು ಕೆಲಸ ಮಾಡುತ್ತಾರೆ. 1972ರಿಂದ ಸಂಘವು ಕೇಂದ್ರ ಸಮಾಜ ಕಲ್ಯಾಣ ಮಂಡಳಿಯ ಪೌಷ್ಟಿಕಾಹಾರ ಕಾರ್ಯಕ್ರಮದಡಿ ಎಂಟು ಬಾಲವಾಡಿಗಳನ್ನು ನಡೆಸುತ್ತಿದೆ. ಈ ಬಾಲವಾಡಿಗಳು ಕೊಳೆಗೇರಿ ಪ್ರದೇಶದಲ್ಲಿದ್ದು, ಇಲ್ಲಿ ಸಂಘವು ಮಕ್ಕಳಿಗೆ ವೈದ್ಯಕೀಯ ಸಹಾಯವನ್ನು ಕೂಡ ಕೊಡುತ್ತಿದೆ. ಸಂಘವು ಬೆಂಗಳೂರು, ಧಾರವಾಡ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ದುಡಿಯುವ ಮಕ್ಕಳು ಹಾಗೂ ಕಾಯಿಲೆ ಬಿದ್ದ ತಾಯಂದಿರ ಸಲುವಾಗಿ ಐದು ಶಿಶುವಿಹಾರಗಳನ್ನು ನಡೆಸುತ್ತಿದೆ. ಇವಲ್ಲದೆ ಭಾರತ ಸರಕಾರದ ಧನ ಸಹಾಯದೊಂದಿಗೆ ಏಳು ನಿರ್ಗತಿಕ ಮಕ್ಕಳ ಗೃಹಗಳನ್ನು ನಡೆಸುತ್ತಿದ್ದು ಅಲ್ಲಿ 128 ಮಕ್ಕಳಿಗೆ ಆಶ್ರಯ ಸಿಕ್ಕಿದೆ (1980). ಮಹಿಳಾ ಕಲ್ಯಾಣ ಕಾರ್ಯಕ್ರಮಗಳಡಿಯಲ್ಲಿ ಸಂಘವು ಮಹಿಳೆಯರಿಗಾಗಿ ವಿವಿಧ ರೀತಿಯ ತರಬೇತಿ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದೆ.

**ಸಂಶೋಧನೆ, ಶಿಕ್ಷಣ, ಸೇವೆ ಮತ್ತು ತರಬೇತಿ ಕೇಂದ್ರ:** ಕುಟುಂಬ ಜೀವನದ ಏಳಿಗೆಗಾಗಿ ಸ್ಥಾಪಿತವಾದ ಈ ಕೇಂದ್ರವು (ದಿ ಸೆಂಟರ್ ಫಾರ್ ರಿಸರ್ಚ್, ಎಜುಕೇಶನ್, ಸರ್ವಿಸ್ ಅ್ಯಂಡ್ ಟ್ರೇನಿಂಗ್) ಬೆಂಗಳೂರಿನಲ್ಲಿ ಪ್ರಾರಂಭವಾಗಿ ಹೊಸದಿಲ್ಲಿಯ ಕುಟುಂಬ ಸಂಘಟನೆಗಳ ಏಷಿಯನ್ ಯೂನಿಯನ್ ಮತ್ತು ಪ್ಯಾರಿಸ್‌ನಲ್ಲಿರುವ ಕುಟುಂಬ ಸಂಘಟನೆಗಳ ಅಂತರರಾಷ್ಟ್ರೀಯ ಯೂನಿಯನ್‌ಗಳ ಸಂಲಗ್ನತೆ ಪಡೆದಿದೆ. ಶಿಕ್ಷಣದ ಮೂಲಕ ಕುಟುಂಬ ಜೀವನದ ಮೌಲ್ಯಗಳನ್ನು ಹೆಚ್ಚಿಸುವುದು ಸಂಘದ ಉದ್ದೇಶ. ಶಿಕ್ಷಣ ಕಾರ್ಯಕ್ರಮಗಳ ಮೂಲಕ ಈ ಕೇಂದ್ರವು ಕುಟುಂಬ ಜೀವನ ಶಿಕ್ಷಣದ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಿದೆ ಹಾಗೂ 'ಪಾಪ್ಯುಲೇಶನ್ ಎಜುಕೇಶನ್' ಮತ್ತು 'ಫ್ಯಾಮಿಲಿ ಲೈಫ್ ಎಜುಕೇಶನ್ ಫಾರ್ ಕಾಲೇಜಸ್' ಗಳಂಥ ಪುಸ್ತಕಗಳನ್ನು ಪ್ರಕಟಿಸಿದೆ. 'ವಿವಾಹಕ್ಕಾಗಿ ಸಿದ್ಧತೆ'ಎಂಬ ವಿಷಯದ ಮೇಲೆ ಕನ್ನಡದಲ್ಲಿ ಕಿರು ಹೊತ್ತಿಗೆಯನ್ನೂ ಪ್ರಕಟಿಸಿದೆ. 1981ರಲ್ಲಿ ಸಂಘವು "ಕುಟುಂಬಕ್ಕಾಗಿ ಸಂಪೂರ್ಣ ಆರೋಗ್ಯ"ಎಂಬ ವಿಷಯದ ಮೇಲೆ ವಿಚಾರ ಸಂಕಿರಣಗಳನ್ನು ಏರ್ಪಡಿಸಿತು. ಇದರಲ್ಲಿ 22 ದೇಶಗಳಿಗೆ ಸೇರಿದ 125 ಪ್ರತಿನಿಧಿಗಳು ಭಾಗವಹಿಸಿದ್ದರು. ಸೇವಾ ಕಾರ್ಯಕ್ರಮಗಳಡಿಯಲ್ಲಿ ಈ ಕೇಂದ್ರವು ಆಸ್ಪತ್ರೆ ಸೇವೆಗಳ ಮೇಲ್ವಿಚಾರಣೆ ಮಾಡುತ್ತದೆ. ಪತ್ರ ವ್ಯವಹಾರ ಮತ್ತು ವೈಯಕ್ತಿಕ ಸಂದರ್ಶನಗಳ ಮೂಲಕ

ವೈಯಕ್ತಿಕ ಸೇವೆಯನ್ನೂ ಅದು ಕೊಡುತ್ತದೆ. ಬೆಂಗಳೂರಿನ ಅಭಯಾಶ್ರಮದಲ್ಲಿ ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ ವಾರಕ್ಕೆರಡು ಬಾರಿ ಅದು ಕುಟುಂಬ ಜೀವನ ಶಿಕ್ಷಣ ತರಗತಿಗಳನ್ನು ನಡೆಸುತ್ತದೆ.

### ಮಹಿಳಾ ಸಮಾಜಗಳು

ಮಹಿಳಾ ಸಮಾಜಗಳು ಶಿಕ್ಷಣ ಮತ್ತು ಸಮಾಜ ಕಲ್ಯಾಣದ ಕೇಂದ್ರಗಳಾಗಿ ಮಹತ್ವಪೂರ್ಣವಾದ ಸೇವೆ ಸಲ್ಲಿಸುವ ಮೂಲಕ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ತಮ್ಮದೇ ಆದ ಕಾಣಿಕೆ ಸಲ್ಲಿಸಿವೆ. ಈ ಸಮಾಜಗಳು ಹಿಂದೆ ಪಟ್ಟಣಗಳಲ್ಲಿ ಜನ್ಮ ತಳೆದಿದ್ದರೂ ನಂತರದ ಕಾಲದಲ್ಲಿ ಅವುಗಳ ಕಾರ್ಯ ಚಟುವಟಿಕೆಗಳು ನಿಧಾನವಾಗಿ ತಾಲೂಕು ಕೇಂದ್ರಗಳಿಗೂ ಮತ್ತು ಹಳ್ಳಿಗಳಿಗೂ ವಿಸ್ತರಿಸಿದವು. ಮಹಿಳಾ ಸಮಾಜಗಳು ಸಲ್ಲಿಸಿದ ಸೇವೆಗಳಲ್ಲಿ ಕೆಲವು ಹೀಗಿವೆ: ಶಾಲೆಗಳನ್ನು ನಡೆಸುವುದು, ಹಿಂದಿ, ಸಂಸ್ಕೃತ ಮತ್ತು ಇಂಗ್ಲಿಷ್ ತರಗತಿಗಳನ್ನು ನಡೆಸುವಂಥ ಶೈಕ್ಷಣಿಕ ಚಟುವಟಿಕೆಗಳು, ಸಂಗೀತ, ಹೆಣಿಗೆ, ಕಸೂತಿ, ಚಿತ್ರ ಕಲೆಗಳೇ ಮೊದಲಾದವುಗಳಲ್ಲದೆ ಸಾಂಸ್ಕೃತಿಕ ಚಟುವಟಿಕೆಗಳು, ಹುಡುಗಿಯರಿಗೆ ಮತ್ತು ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ, ಸಾಮಾಜಿಕ ಮೇಳಗಳನ್ನು ಏರ್ಪಡಿಸುವುದು, ಅನಾಥಾಲಯ ಗಳನ್ನೂ ನಿರ್ಗತಿಕರ ಗೃಹಗಳನ್ನೂ ನಡೆಸುವುದು, ಇತ್ಯಾದಿ. ವಯಸ್ಕ ಮಹಿಳೆಯರಿಗೆ ಅನೌಪಚಾರಿಕ ಶಿಕ್ಷಣ ಹಾಗೂ ಬಿಡುವಿನ ವೇಳೆಯಲ್ಲಿ ಕರಕುಶಲ ತರಬೇತಿ ಕೊಡುವುದರಲ್ಲೂ ಅವು ಮಹತ್ವದ ಪಾತ್ರ ವಹಿಸಿವೆ. ಅವು ನಡೆಸುವ ಕುಟುಂಬ ಯೋಜನಾ ಕಾರ್ಯಕ್ರಮಗಳು, ಕರಕುಶಲ ತರಬೇತಿ, ಮುಂತಾದವುಗಳಿಗೆ ಸರಕಾರದಿಂದ ಅನುದಾನ ಸಿಗುತ್ತದೆ. ರಾಜ್ಯದಲ್ಲಿ ಇಂಥ ಮಹಿಳಾ ಸಮಾಜಗಳು ದೊಡ್ಡ ಸಂಖ್ಯೆಯಲ್ಲಿದ್ದರೂ ಅವುಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು : ವಿಜಾಪುರ ಮತ್ತು ಹಾಸನಗಳಲ್ಲಿರುವ ಅಕ್ಕನ ಬಳಗಗಳು, ಬಳ್ಳಾರಿಯ ಅಕ್ಕಮಹಾದೇವಿ ಮಹಿಳಾ ಸಮಾಜ, ಚಿತ್ರದುರ್ಗದ ಅಕ್ಕಮಹಾದೇವಿ ಸೇವಾ ಸಂಘ, ಧಾರವಾಡದ ಭಗಿನಿ ಸಮಾಜ, ಹುಬ್ಬಳ್ಳಿಯ ಭಗಿನಿ ಮಂಡಳ, ಯಲಬುರ್ಗಿಯ ಭಗಿನಿ ಸಮಾಜ, ಮೈಸೂರಿನ ಭಗಿನಿ ಸೇವಾ ಸಮಾಜ, ಬೆಂಗಳೂರಿನ ಬಸವನಗುಡಿ ಲೇಡೀಸ್ ಕ್ಲಬ್, ಮಂಗಳೂರಿನ ಕ್ಯಾಥೋಲಿಕ್ ವಿಮೆನ್ ವರ್ಕರ್ಸ್ ಅಸೋಸಿಯೇಶನ್ ಮತ್ತು ಕ್ರಿಸೆಂಟ್ ವೆಲ್‌ಫೇರ್ ಸೆಂಟರ್, ಹಾಸನದ ಗಾಯತ್ರಿ ಸೇವಾ ಮಂಡಳಿ, ಚಿಕ್ಕಜೋಗಿಹಳ್ಳಿಯ ಲಕ್ಷ್ಮೀ ಮಹಿಳಾ ಮಂಡಳಿ, ಮಂಗಳೂರಿನ ಲೇಡೀಸ್ ಸೋಶಿಯಲ್ ಸರ್ವಿಸ್ ಲೀಗ್, ಬೆಂಗಳೂರಿನ ಲಲಿತಾ ಲೇಡೀಸ್ ಕ್ಲಬ್, ಚಿತ್ರದುರ್ಗ, ಮಂಡ್ಯ, ತುಮಕೂರು, ಮಧುಗಿರಿ ಮತ್ತು ಚಿಕ್ಕಮಗಳೂರುಗಳಲ್ಲಿರುವ ಮಹಿಳಾ ಸೇವಾ ಸಮಾಜಗಳು, ಬೆಂಗಳೂರಿನ ಮಲ್ಲೇಶ್ವರಂ ಲೇಡೀಸ್ ಅಸೋಸಿಯೇಶನ್, ಮಡಿಕೇರಿಯ ಮಹಾದೇವ ಮಹಿಳಾ ಕೋ-ಆಪರೇಟಿವ್ ಸೊಸೈಟಿ, ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಶಾರದಾ ಸ್ತ್ರೀ ಸಮಾಜ ಮತ್ತು ತಿಲಕ ಮಹಿಳಾ ಸಮಾಜ, ವಿಜಾಪುರದ ವನಿತಾ ಉತ್ಕರ್ಷ ಮಂಡಳಿ, ಧಾರವಾಡದ ವನಿತಾ ಸೇವಾ ಸಮಾಜ, ಕಲ್ಬುರ್ಗಿಯ ವನಿತಾ ವಿಕಾಸ ಮಂಡಳಿ, ಅರಸೀಕೆರೆಯ ವಾಣಿ ಮಹಿಳಾ ಸಮಾಜ, ಇತ್ಯಾದಿ. ಈ ಪಟ್ಟಿ ಪೂರ್ಣವಾದುದಲ್ಲ. ರಾಜ್ಯದಲ್ಲಿ ಮೇಲೆ ಹೇಳಿದ ಮಹಿಳಾ ಸಮಾಜಗಳಲ್ಲದೆ ಸರಕಾರದ ಧನಸಹಾಯ ಪಡೆಯುವ ಮತ್ತು ಪಡೆಯದಿರುವ ಇನ್ನೂ ಹಲವಾರು ಸಮಾಜಗಳಿವೆ.

### ಅನಾಥಾಲಯಗಳು

ರಾಜ್ಯದಲ್ಲಿ ಹಲವಾರು ಅನಾಥಾಲಯಗಳಿದ್ದು, ಅವುಗಳ ಪೈಕಿ ಕೆಲವು ನೂರು ವರ್ಷಗಳಿಗಿಂತಲೂ ಪ್ರಾಚೀನವಾಗಿವೆ. ಅವು ನಿರ್ಗತಿಕ ಹಾಗೂ ಅನಾಥ ಮಕ್ಕಳ ಕಲ್ಯಾಣ ಕಾರ್ಯದಲ್ಲಿ ನಿರತವಾಗಿವೆ. 1981-82ರಲ್ಲಿ ರಾಜ್ಯದಲ್ಲಿ 153 ಅನಾಥಾಲಯಗಳು ಅಸ್ತಿತ್ವದಲ್ಲಿದ್ದು ಅವುಗಳು 16,295 ಅನಾಥ ಮಕ್ಕಳ ಸಲುವಾಗಿ 48,55,794 ರೂ.ಗಳ ಅನುದಾನ ಪಡೆಯುತ್ತಿದ್ದವು. ಮುಂದಿನ ಪುಟದಲ್ಲಿ ಕೊಟ್ಟಿರುವ ಕೋಷ್ಟಕದಲ್ಲಿ ರಾಜ್ಯದಲ್ಲಿರುವ ಅನಾಥಾಲಯಗಳ ಜಿಲ್ಲಾವಾರು ವಿತರಣೆಯನ್ನು ಕೊಟ್ಟಿದೆ. ಅದರೊಂದಿಗೆ 1981-82ರಲ್ಲಿ ಮಂಜೂರಾದ ಅನುದಾನದ ಪ್ರಮಾಣವನ್ನು ಕೊಟ್ಟಿದೆ. ಅನಾಥಾಲಯಗಳಲ್ಲಿ ಕೆಲವು ಹೀಗಿವೆ : ಅಶಕ್ತ ಸಭಾ, ಅಬಲಾಶ್ರಮ, ಅಕ್ಕಮಹಾದೇವಿ ಸೇವಾ ಸಮಾಜ, ಅನಾಥ ಶಿಶು ನಿವಾಸ, ಆನಂದ ನಿಲಯಂ, ಅನಾಥ ಶಿಶು ಸೇವಾಶ್ರಮ, ಅನಾಥ ಆಶ್ರಮ, ಆರ್ಯ ಸೇವಾಶ್ರಮ ಟ್ರಸ್ಟ್, ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್‌ನ ಹೋಮ್ ಫಾರ್ ಡೆಸ್ಟಿಟ್ಯೂಟ್ ಚಿಲ್ಡ್ರನ್, ಎಸೋಸಿಯೇಷನ್ ಫಾರ್ ಮಾರಲ್ ಆ್ಯಂಡ್ ಸೋಶಿಯಲ್ ಹೈಜೀನ್ ಇನ್ ಇಂಡಿಯಾ ಸಂಸ್ಥೆಯು ನಡೆಸುವ ಡೆಸ್ಟಿಟ್ಯೂಟ್ ಹೋಮ್ ಇವೆಲ್ಲವೂ ಬೆಂಗಳೂರಿನಲ್ಲಿವೆ; ಅನಾಥಾಶ್ರಮ, ಮಾಲೂರು, ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ, ಅಶಕ್ತ ಪೋಷಕ ಸಭಾ, ದಾವಣಗೆರೆ, ವಿಜಾಪುರ ಆರ್ಫನೇಜ್, ವಿಜಾಪುರ, ಬಾಸೆಲ್ ಮಿಶನ್ ಬಾಯ್ಸ್ ಆರ್ಫನೇಜ್, ಗದಗ, ಉಡುಪಿಯಲ್ಲಿರುವ ಬಾಯ್ಸ್ ಆರ್ಫನೇಜ್ ಮತ್ತು ದಲಿತ ಸೇವಾಶ್ರಮ ದೀನ ಸೇವಾ ಸಂಘ, ಬೆಂಗಳೂರು, ಈಶ್ವರಾನಂದ ಮಹಿಳಾ ಸೇವಾಶ್ರಮ, ಸೊಸೈಟಿ, ಮತ್ತು ಫಾದರ್ ಮುಲ್ಲರ್ಸ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ (ಈ ಎರಡೂ ಮಂಗಳೂರಿನಲ್ಲಿವೆ), ಕಾವೇರಿ ಭಕ್ತ ಜನಸಂಘ, ವೀರಾಜಪೇಟೆ, ಮುಸ್ಲಿಂ ಆರ್ಫನೇಜ್, ಬೆಂಗಳೂರು ಮತ್ತು ಕಲ್ಬುರ್ಗಿ, ರಾಮಕೃಷ್ಣ ಸೇವಾ ಸಮಾಜ, ಪುತ್ತೂರು, ರಾಘವೇಂದ್ರ ಶಿಶುವಿಹಾರ ಆರ್ಫನೇಜ್, ಬಿದರೆ, ಮಂಗಳೂರಿನಲ್ಲಿರುವ ಸಂಸ್ಥೆಗಳಾದ

**1981-82ರಲ್ಲಿದ್ದಂತೆ ಅನಾಥಾಲಯಗಳು ಮತ್ತು ಮಹಿಳಾ ಸಮಾಜಗಳನ್ನು ಕುರಿತು ಕೆಲವು ಜಿಲ್ಲಾವಾರು ವಿವರಗಳನ್ನು ತೋರಿಸುವ ಕೋಷ್ಟಕ**

| ಜಿಲ್ಲೆ | ಅನಾಥಾಲಯಗಳು | | | ಮಹಿಳಾ ಸಮಾಜಗಳು | |
|---|---|---|---|---|---|
| | ಅನಾಥಾಲಯಗಳ ಸಂಖ್ಯೆ | ಮಂಜೂರಾದ ಪ್ರವೇಶ ಸಂಖ್ಯೆ | ಅನುದಾನ ರೂ.ಗಳಲ್ಲಿ | ಮಹಿಳಾ ಸಮಾಜಗಳ ಸಂಖ್ಯೆ | ಅನುದಾನ ರೂ.ಗಳಲ್ಲಿ |
| ಉತ್ತರ ಕನ್ನಡ | 1 | 19 | 6,000 | 13 | 6,708 |
| ಕಲ್ಬುರ್ಗಿ | 2 | 71 | 34,080 | — | — |
| ಕೊಡಗು | — | — | — | 18 | 15,687 |
| ಕೋಲಾರ | 1 | 123 | 50,000 | 11 | 7,048 |
| ಚಿಕ್ಕಮಗಳೂರು | — | — | — | 9 | 3,330 |
| ಚಿತ್ರದುರ್ಗ | 8 | 744 | 3,51,917 | 30 | 25,267 |
| ತುಮಕೂರು | 12 | 3,054 | 8,21,891 | 13 | 9,186 |
| ದಕ್ಷಿಣ ಕನ್ನಡ | 26 | 2,623 | 7,65,200 | 14 | 9,744 |
| ಧಾರವಾಡ | 18 | 1,462 | 4,06,400 | 10 | 13,112 |
| ಬಳ್ಳಾರಿ | 11 | 1,331 | 1,70,000 | 7 | 4,017 |
| ಬೆಳಗಾವಿ | 4 | 1,389 | 1,11,000 | 7 | 3,476 |
| ಬೆಂಗಳೂರು | 17 | 1,693 | 9,62,786 | 17 | 14,028 |
| ಮೈಸೂರು | 30 | 2,441 | 6,60,000 | 6 | 5,256 |
| ಮಂಡ್ಯ | 2 | 250 | 97,600 | 2 | 792 |
| ವಿಜಾಪುರ | 18 | 870 | 3,51,120 | 3 | 2,148 |
| ಶಿವಮೊಗ್ಗ | 2 | 165 | 50,000 | 3 | 1,668 |
| ಹಾಸನ | 1 | 60 | 18,000 | 4 | 2,304 |

ಬಿದರೆ, ರಾಯಚೂರು ಜಿಲ್ಲೆಯ ವಿವರಗಳು ದೊರೆತಿಲ್ಲ.

ಸೈಂಟ್ ಆಂಟೋನಿಸ್ ಆರ್ಫನೇಜ್, ಸೈಂಟ್ ಪಾಲ್ಸ್ ಆರ್ಫನೇಜ್, ಸೈಂಟ್ ರೀಟಾಸ್ ಆರ್ಫನೇಜ್ ಮತ್ತು ಸೈಂಟ್ ಜೋಸೆಫ್ಸ್ ಅಸೈಲಮ್, ಗುಳೇದಗುಡ್ಡದಲ್ಲಿರುವ ಸೈಂಟ್ ರ್ಝೇವಿಯರ್ಸ್ ಆರ್ಫನೇಜ್, ಬೆಂಗಳೂರಿನಲ್ಲಿರುವ ಸಂಸ್ಥೆಗಳಾದ ಸೈಂಟ್ ಮೇರೀಸ್ ಆರ್ಫನೇಜ್, ಸೈಂಟ್ ಚಾರ್ಲ್ಸ್ ಆರ್ಫನೇಜ್, ಸೈಂಟ್ ಆಗ್ನೇಸ್ ಆರ್ಫನೇಜ್, ಸೈಂಟ್ ಜೋಸೆಫ್ಸ್ ಕಾನ್ವೆಂಟ್ ಆರ್ಫನೇಜ್, ಸೈಂಟ್ ಮೇರೀಸ್ ಆರ್ಫನೇಜ್, ಸೈಂಟ್ ಪ್ಯಾಟ್ರಿಕ್ಸ್ ಆರ್ಫನೇಜ್ ಫಾರ್ ಬಾಯ್ಸ್, ಸೈಂಟ್ ಮೈಕೇಲ್ ಹೋಮ್, ಸೈಂಟ್ ಥಾಮಸ್ ಕಾನ್ವೆಂಟ್ ಆರ್ಫನೇಜ್, ಶಿಶುಭವನ ಮತ್ತು ಸೇವಾ ಸದನ ಅಸೋಸಿಯೇಷನ್, ಶಿವಮೊಗ್ಗೆಯ ಸಿಸ್ಟರ್ಸ್ ಆಫ್ ಚಾರ್ಲ್ಸ್ ಆರ್ಫನೇಜ್, ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರ ಆರ್ಫನೇಜ್, ಮಂಗಳೂರಿನ ಶ್ರೀ ಶ್ರದ್ಧಾನಂದ ಸೇವಾಶ್ರಮ, ಸಿರಿಗೆರೆಯ ತರಳಬಾಳು ಜಗದ್ಗುರು ಆರ್ಫನೇಜ್, ಕುಣಿಗಲ್ ತಾಲೂಕಿನ ಬೆಟ್ಟಹಳ್ಳಿ ಉರಿಗದ್ದಿಗೇಶ್ವರ ಆರ್ಫನೇಜ್, ಇತ್ಯಾದಿ. ಈ ಪಟ್ಟಿ ಪೂರ್ಣ ರೂಪದ್ದಲ್ಲ. ಧನ ಸಹಾಯ ಪಡೆಯುವ ಮತ್ತು ಪಡೆಯದೇ ಇರುವ ಇನ್ನೂ ಅನೇಕ ಅನಾಥಾಲಯಗಳು ಇವೆ. (ಮೇಲಿನ ಪಟ್ಟಿ ನೋಡಿ).

## ಯುವಜನ ಕಲ್ಯಾಣ

ಸಮುದಾಯದ ಸಮಾಜ ಕಲ್ಯಾಣ ಚಟುವಟಿಕೆಗಳಲ್ಲಿ ಯುವಜನ ಕಲ್ಯಾಣದ ಪರಿಕಲ್ಪನೆಯು ಹೊಸದಾಗಿದ್ದು ಅದು ಇತ್ತೀಚೆಗೆ ಜನ್ಮತಾಳಿದೆ. ಆಧುನಿಕ ಸಮಾಜದ ಸಂಕೀರ್ಣತೆ ಹಾಗೂ ಸಾಮಾಜಿಕ ತುಮುಲಗಳು ಸಮಾಜ ಕಲ್ಯಾಣದ ಈ ಹೊಸ ಆಯಾಮದ ಮೇಲೆ ನಮ್ಮ ಗಮನವನ್ನು ಕೇಂದ್ರೀಕರಿಸುವಂತೆ ಮಾಡಿವೆ. ಯುವಜನರ ಅದುಮಿಟ್ಟ ಶಕ್ತಿ ಸಾಮರ್ಥ್ಯಗಳು ಸಾಮಾಜಿಕವಾಗಿ ಉಪಯುಕ್ತವಾದ ದೆಸೆಯಲ್ಲಿ ಪ್ರವಹಿಸುವಂತೆ ಸರಕಾರ ಹಾಗೂ ಖಾಸಗಿ ಸಂಸ್ಥೆಗಳು ಹಲವಾರು ಯೋಜನೆಗಳನ್ನೂ ಚಟುವಟಿಕೆಗಳನ್ನೂ ಹಮ್ಮಿಕೊಂಡಿವೆ. ಈ ಸಂಸ್ಥೆಗಳು ವ್ಯಕ್ತಿಯ ಗರಿಷ್ಠ ಬೆಳವಣಿಗೆಯನ್ನು ಸಾಧಿಸುವ ಉದ್ದೇಶದಿಂದ ಯುವಜನರ ಸಂಭಾವ್ಯ ಸಾಧನಗಳನ್ನು ಸರಿಯಾದ ದಿಕ್ಕಿನಲ್ಲಿ ಹರಿಸಲು ಶ್ರಮಿಸುತ್ತಿವೆ. ಅಂಥ ಕೆಲವು ಸಂಸ್ಥೆಗಳ ಕಿರುಪರಿಚಯವನ್ನು ಇಲ್ಲಿ ನೀಡಿದೆ.

**ಯುವಜನ ಸೇವಾ ಇಲಾಖೆ:** ಯುವಜನ ಸೇವಾ ಇಲಾಖೆಯು 1969ರಲ್ಲಿ ಕಾರ್ಯಾರಂಭ ಮಾಡಿತು. 1980-81ರಲ್ಲಿ ಕರ್ನಾಟಕ ರಾಜ್ಯ ಕ್ರೀಡಾ ಮಂಡಳಿಯನ್ನು ಅದರಲ್ಲಿ ವಿಲೀನಗೊಳಿಸುವುದರೊಂದಿಗೆ ಅದಕ್ಕೆ ಯುವಜನ ಸೇವೆ ಮತ್ತು ಕ್ರೀಡಾ ನಿರ್ದೇಶನಾಲಯ ಎಂದು ಪುನರ್ನಾಮಕರಣ ಮಾಡಲಾಯಿತು. ಇಲಾಖೆಯು ಯುವಜನರಿಗಾಗಿ ಅನೇಕ ಚಟುವಟಿಕೆಗಳನ್ನು ಸಂಘಟಿಸುತ್ತದೆ. ಪದವೀಧರರಾದ ಯುವಜನರ ಶಕ್ತಿ ಕೌಶಲ್ಯಗಳನ್ನು ರಾಜ್ಯದ ಸರ್ವತೋಮುಖ ಬೆಳವಣಿಗೆಗೆ ಉಪಯೋಗಿಸಿಕೊಳ್ಳುವ ದೃಷ್ಟಿಯಿಂದ ಇಲಾಖೆಯು 1971ರಲ್ಲಿ ಕರ್ನಾಟಕ ಯುವಜನ ಸೇವಾದಳ (ಕರ್ನಾಟಕ ಯೂಥ್ ಸರ್ವಿಸಸ್ ಕೋರ್) ಎಂಬ ಯೋಜನೆಯನ್ನು ಪ್ರಾರಂಭಿಸಿತು. ಇದರನ್ವಯ ಆಯ್ಕೆಯಾದ ಪದವೀಧರರು ತಿಂಗಳಿಗೆ 200 ರೂಪಾಯಿ ಸ್ಟೈಪೆಂಡ್ ಪಡೆದು, ಆಸ್ಪತ್ರೆ ಸೇವೆಗಳು, ವಯಸ್ಕರ ಶಿಕ್ಷಣ, ಯುವಜನರ ಸೇವೆಗಳು, ಕೃಷಿ ಸುಧಾರಣಾ ಕೆಲಸ, ಮುಂತಾದ ಚಟುವಟಿಕೆಗಳಲ್ಲಿ ಭಾಗವಹಿಸುವರು. 1977ರಲ್ಲಿ ಸ್ಟೈಪೆಂಡಿಯರಿ ಉದ್ಯೋಗ ಯೋಜನೆ ಪ್ರಾರಂಭವಾದೊಡನೆ ಯುವಜನ ಸೇವಾದಳದ ಯೋಜನೆಯನ್ನು ಕೈಬಿಡಲಾಯಿತು. ಇಲಾಖೆಯು ಬೆಂಗಳೂರು-ಮೈಸೂರು ರಸ್ತೆಯಲ್ಲಿರುವ ಕುಂಬಳಗೋಡಿನಲ್ಲಿ ಯುವಜನ ವಸತಿಗೃಹವೊಂದನ್ನು ನಡೆಸುತ್ತಿದೆ. ಇಲ್ಲಿ ರಾಜ್ಯದ ಯೂತ್ ಕ್ಲಬ್ಬುಗಳ ಪದಾಧಿಕಾರಿಗಳಿಗೆ ಹಾಗೂ ಸಂಘಟಕರಿಗೆ ಯುವಜನ ನಾಯಕತ್ವದ ಬಗ್ಗೆ ತರಬೇತಿ ಕೊಡಲಾಗುತ್ತದೆ. ಯುವಕ ಯುವತಿಯರು ಕ್ರೀಡೆ ಮತ್ತು ಪಂದ್ಯಗಳಲ್ಲಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ, ಸಮಾಜ ಸೇವೆ, ಮುಂತಾದ ಕ್ಷೇತ್ರಗಳಲ್ಲಿ ತಮ್ಮ ಪ್ರತಿಭೆಯನ್ನು ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸುವ ಉದ್ದೇಶದಿಂದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಯುವಕರ ಕ್ಲಬ್ಬುಗಳನ್ನೂ, ಯುವತಿಯರ ಕ್ಲಬ್ಬುಗಳನ್ನೂ ಸಂಘಟಿಸಲಾಗುತ್ತದೆ. 1981-82ರಲ್ಲಿ 13,000 ಕ್ಲಬ್ಬುಗಳು ಅಸ್ತಿತ್ವದಲ್ಲಿದ್ದು, ಅವುಗಳ ಕಟ್ಟಡಗಳ ನಿರ್ಮಾಣ, ಸಲಕರಣೆಗಳ ಖರೀದಿ ಮತ್ತು ವಿಶೇಷ ಯೋಜನೆಗಳ ಅನುಷ್ಠಾನಕ್ಕಾಗಿ ಅವು 4.8 ಲಕ್ಷ ರೂ. ಧನಸಹಾಯ ಪಡೆದವು. ಯುವಜನ ಶಿಬಿರ ಮತ್ತು ರ್‍ಯಾಲಿಗಳನ್ನು ಪ್ರತೀ ವರ್ಷ ರಾಜ್ಯ, ವಿಭಾಗ, ಜಿಲ್ಲೆ ಮತ್ತು ತಾಲೂಕು ಮಟ್ಟಗಳಲ್ಲಿ ಏರ್ಪಡಿಸಲಾಗುತ್ತದೆ. ಯುವಜನರ ಜ್ಞಾನ ಮತ್ತು ಅನುಭವಗಳನ್ನು ಸಮೃದ್ಧಗೊಳಿಸುವ ಉದ್ದೇಶದಿಂದ ಯುವಕ (ಯೂತ್) ಕ್ಲಬ್ಬುಗಳ ಸದಸ್ಯರನ್ನು ರಾಜ್ಯದಲ್ಲಿರುವ ಸಂದರ್ಶನೀಯ ಸ್ಥಳಗಳಿಗೆ ಪ್ರವಾಸಕ್ಕೆ ಕರೆದೊಯ್ಯಲಾಗುತ್ತದೆ. ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಕ್ರೀಡಾಂಗಣವನ್ನು ಕಟ್ಟುವ ಕೆಲಸವನ್ನು ಕೈಗೊಂಡಿದ್ದು, ಬಿದರೆ, ಶಿವಮೊಗ್ಗ, ಮಂಡ್ಯ, ರಾಯಚೂರು, ತುಮಕೂರು, ಕೋಲಾರ, ಹಾಸನ, ಮಂಗಳೂರು ಮತ್ತು ಬೆಳಗಾವಿಯಲ್ಲಿ ಈ ಕೆಲಸ ಮುಕ್ತಾಯದ ಹಂತದಲ್ಲಿದೆ. ಉಳಿದ ಜಿಲ್ಲೆಗಳಲ್ಲಿ ಕೆಲಸ ಪ್ರಗತಿಯಲ್ಲಿದೆ. 35 ಲಕ್ಷ ರೂ. ಅಂದಾಜು ವೆಚ್ಚದ ಕ್ರೀಡಾ ಸಂಕೀರ್ಣ ಮೈಸೂರಿನಲ್ಲಿ ಪ್ರಗತಿಪಥದಲ್ಲಿದೆ. ಗುರುನಾನಕ ಭವನ ಎಂಬ ಹೆಸರಿನ ವಿದ್ಯಾರ್ಥಿ ಸೇವಾ ಸಂಸ್ಥೆಯು ಬೆಂಗಳೂರಿನಲ್ಲಿ ನಿರ್ಮಾಣಗೊಳ್ಳುತ್ತಿದ್ದು ಅದು 850 ಆಸನಗಳನ್ನುಳ್ಳ ಕ್ರೀಡಾಂಗಣವಾಗುವುದು. ಇಲಾಖೆಯು ಕ್ರೀಡೆಗಳನ್ನೂ ಹಾಗೂ ಕ್ರೀಡಾಪಟುಗಳನ್ನೂ ಪ್ರೋತ್ಸಾಹಿಸುವ ಉದ್ದೇಶದಿಂದ ವಿವಿಧ ಕಾರ್ಯಕ್ರಮಗಳನ್ನು ಪ್ರಾರಂಭಿಸಿದೆ. ಕುಂಬಳಗೋಡು ಮತ್ತು ಜೋಗಗಳಲ್ಲಿರುವ ಯುವಜನ ವಸತಿಗೃಹಗಳು, ರಾಯಚೂರು, ಬಳ್ಳಾರಿ, ಬೆಳಗಾವಿ ಮತ್ತಿತರ ಕಡೆಗಳಲ್ಲಿರುವ ವಿದ್ಯಾರ್ಥಿ ವಸತಿಗೃಹಗಳು ಇಲಾಖೆಯ ವಸತಿಗೃಹ ಕಾರ್ಯಕ್ರಮದಡಿ ಬರುತ್ತವೆ. ವಿದ್ಯಾರ್ಥಿ ಕಲ್ಯಾಣ ಕಾರ್ಯಕ್ರಮದನ್ವಯ ಅನೇಕ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಇವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ, ಶ್ರೇಯಾಂಕ (ರ್‍ಯಾಂಕ್) ಪಡೆದ ವಿದ್ಯಾರ್ಥಿಗಳಿಗೆ ಪ್ರಶಸ್ತಿ, ಶ್ರಮದಾನ ಮತ್ತು ಸಮಾಜ ಸೇವಾ ಶಿಬಿರಗಳು, ಕ್ರೀಡಾ ಕೌಶಲ್ಯಕ್ಕಾಗಿ ಶಿಷ್ಯವೇತನ ಕೊಡುವುದು, ನೌಕಾವಿಹಾರ ಕ್ಲಬ್ಬುಗಳು, ಒಳಾಂಗಣ ಕ್ರೀಡಾ ಭವನಗಳ ನಿರ್ಮಾಣ, ಕ್ರೀಡಾಪಟುಗಳಿಗೆ, ಮಹಿಳಾ ಆಟಗಾರರಿಗೆ ಹಾಗೂ ಕುಸ್ತಿಪಟುಗಳಿಗೆ ಧನಸಹಾಯ, ಪ್ರೌಢಶಾಲೆಗಳಲ್ಲಿರುವ ಹವ್ಯಾಸಕೂಟಗಳಿಗೆ (ಹಾಬಿ ಗ್ರೂಪ್ಸ್) ಧನಸಹಾಯ, ಅರಳುವ ಪ್ರತಿಭೆ ಕಾರ್ಯಕ್ರಮ, ಇತ್ಯಾದಿ.

**ರಾಷ್ಟ್ರೀಯ ಸೇವಾ ಯೋಜನೆ:** ರಾಷ್ಟ್ರೀಯ ಸೇವಾ ಯೋಜನೆ (ಎನ್.ಎಸ್.ಎಸ್.) ಎಂಬ ಹೆಸರಿನ ಮಹತ್ವದ ವಿದ್ಯಾರ್ಥಿ-ಯುವಜನ ಕಾರ್ಯಕ್ರಮವನ್ನು ಭಾರತ ಸರಕಾರವು 1969ರಲ್ಲಿ ಪ್ರಾರಂಭಿಸಿತು. ಅದನ್ನು ಕರ್ನಾಟಕದಲ್ಲಿ ಅದೇ ವರ್ಷ 1,500 ವಿದ್ಯಾರ್ಥಿ ಬಲದೊಡನೆ ಅಳವಡಿಸಿಕೊಳ್ಳ

ಲಾಯಿತು. ಈ ಕಾರ್ಯಕ್ರಮವನ್ನು 1973-74ರಲ್ಲಿ ಕೃಷಿ ವಿಶ್ವವಿದ್ಯಾಲಯಕ್ಕೂ, 1977-78ರಲ್ಲಿ ಕಿರಿಯ ಕಾಲೇಜುಗಳಿಗೂ ವಿಸ್ತರಿಸಲಾಯಿತು. ಕಾರ್ಯಕ್ರಮದ ಧ್ಯೇಯೋದ್ದೇಶಗಳೆಂದರೆ ವಿದ್ಯಾರ್ಥಿ ಸಮುದಾಯದ ಮನೋಭಾವದಲ್ಲಿ ಪರಿವರ್ತನೆ ಯನ್ನುಂಟುಮಾಡುವುದು, ವಿದ್ಯಾರ್ಥಿಗಳಲ್ಲಿ, ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸುವುದು, ವಿದ್ಯಾರ್ಥಿಗಳು ಜನ ರೊಡನೆ ಬೆರೆತು ಕೆಲಸ ಮಾಡಲು ಅವಕಾಶ ಕಲ್ಪಿಸಿ ಅವರು ಯುವಜನ ಕಾರ್ಯಕ್ರಮದ ಬೆಳವಣಿಗೆಗೆ ಬೇಕಾದ ಕೌಶಲ್ಯ ಗಳನ್ನು ಬೆಳೆಸಿಕೊಳ್ಳುವಂತೆ ಮಾಡುವುದು ಮತ್ತು ಅವರು ಗಳಿಸಿದ ಜ್ಞಾನ ಮತ್ತು ಶಿಕ್ಷಣಗಳನ್ನು ಸಮಾಜದ ವಾಸ್ತವ ಸನ್ನಿವೇಶಗಳಲ್ಲಿ ಹಾಗೂ ಸಾಮಾಜಿಕ ಸಮಸ್ಯೆಗಳ ಪರಿಹಾರದಲ್ಲಿ ಉಪಯೋಗಿಸುವಂತೆ ಮಾಡುವುದು. ಈ ಕಾರ್ಯಕ್ರಮದಲ್ಲಿ ಅಂತರ್ಗತವಾಗಿರುವ ಚಟುವಟಿಕೆಗಳಲ್ಲಿ ಎರಡು ಪ್ರಕಾರಗಳಿವೆ : 1) ನಿಯಮಿತ ಕಾರ್ಯಕ್ರಮಗಳು ಮತ್ತು 2) ವಿಶೇಷ ಕಾರ್ಯ ಕ್ರಮಗಳು. ನಿಯಮಿತ ಕಾರ್ಯಕ್ರಮಗಳಲ್ಲಿ ಸೇರಿದ ಕಾರ್ಯ ಕ್ರಮಗಳೆಂದರೆ : ಕೊಳೆಗೇರಿಗಳಲ್ಲಿ ಮತ್ತು ದತ್ತು ಸ್ವೀಕಾರ ಮಾಡಿದ ಗ್ರಾಮಗಳಲ್ಲಿ ಕಲ್ಯಾಣ ಸೇವೆಗಳಾದ ಆರೋಗ್ಯ, ನೈರ್ಮಲ್ಯ, ಪೌಷ್ಟಿಕಾಹಾರ, ಶಿಕ್ಷಣ, ಕುಶಲ ಕೈಗಾರಿಕೆಗಳನ್ನು ಒದಗಿಸುವುದು, ನಗರ ಪ್ರದೇಶಗಳಲ್ಲಿ ಆಸ್ಪತ್ರೆ ಸೇವೆಗಳು, ಕಲ್ಯಾಣ ಕಾರ್ಯಕ್ರಮಗಳನ್ನು ನಡೆಸುವ ಸಂಸ್ಥೆಗಳಿಗೆ ಸಹಾಯ ಸಲ್ಲಿಸುವುದು, ಇತ್ಯಾದಿ ; ವಿಶೇಷ ಕಾರ್ಯಕ್ರಮಗಳೆಂದರೆ ವಿದ್ಯಾರ್ಥಿಗಳನ್ನು ಸಾಮಾನ್ಯವಾಗಿ ರಜಾ ಕಾಲದಲ್ಲಿ 10 ದಿವಸ ಗಳ ಕಾಲ ನಿರಂತರವಾಗಿ ಶಿಬಿರಗಳಲ್ಲಿ ಕೆಲಸ ಮಾಡಲು ತೊಡಗಿಸು ವುದು. ಇಂಥ ಅವಧಿಯಲ್ಲಿ ರಸ್ತೆ ಮತ್ತು ಚರಂಡಿಗಳ ನಿರ್ಮಾಣ, ಜನತಾ ಮನೆಗಳ ನಿರ್ಮಾಣ, ಸಮುದಾಯ ಕೇಂದ್ರ ಹಾಗೂ ಕುಡಿಯುವ ನೀರಿನ ಬಾವಿಗಳ ನಿರ್ಮಾಣ, ರೋಗ ನಿರೋಧಕ ಕ್ರಮಗಳು, ಆರೋಗ್ಯ ಶಿಕ್ಷಣ, ಅರಣ್ಯಗಳನ್ನು ಬೆಳೆಸುವುದು, ಸಾಮಾಜಿಕ ಅನಿಷ್ಟಗಳ ನಿವಾರಣೆ, ಪ್ರಾಚೀನ ಸ್ಮಾರಕಗಳ ರಕ್ಷಣೆ, ಇತ್ಯಾದಿ ಕೆಲಸಗಳನ್ನು ಮಾಡಲಾಗುತ್ತದೆ. 1971ರಲ್ಲಿ ಕರ್ನಾಟಕದ ರಾಷ್ಟ್ರೀಯ ಸೇವಾ ಯೋಜನೆಯ ಸ್ವಯಂಸೇವಕರು ಪಶ್ಚಿಮ ಬಂಗಾಲ ಸರಕಾರವು ಸಂಘಟಿಸಿದ ಅಖಿಲ ಭಾರತ ವಿಶ್ವವಿದ್ಯಾಲಯ ಶಿಬಿರಗಳಲ್ಲಿ ಭಾಗವಹಿಸಿ, ಬಾಂಗ್ಲಾದೇಶದಿಂದ ಬಂದ ನಿರ್ವಸಿತರ ದುಃಖ ನಿವಾರಣೆಯಲ್ಲಿ ಪಾಲ್ಗೊಂಡರು. 1973ರಲ್ಲಿ ಈ ವಿದ್ಯಾರ್ಥಿಗಳು ಕಲ್ಬುರ್ಗಿ, ವಿಜಾಪುರ, ಬಿದರೆ ಮತ್ತು ರಾಯಚೂರು ಜಿಲ್ಲೆಗಳ ಬರಪೀಡಿತ ಪ್ರದೇಶಗಳಲ್ಲಿ ಕೆಲಸ ಮಾಡಿ ಬರಪೀಡಿತ ಜನರಿಗೆ ಸಹಾಯ ನೀಡಿದರು. ಈ ವಿದ್ಯಾರ್ಥಿಗಳಿಂದ ಕೆಲವು ವಿಶೇಷ ಚಳವಳಿಗಳು ಕೂಡ ನಡೆದವು. 1974-75ರಲ್ಲಿ "ಕೊಳೆ ಮತ್ತು ರೋಗಗಳ ವಿರುದ್ಧ ಯುವಕರು" ಎಂಬ ಚಳವಳಿ, 1975-76ರಲ್ಲಿ ನಡೆದ "ಅರಣ್ಯ ವೃದ್ಧಿಗೆ ಯುವಕರು" ಮತ್ತು "ಗ್ರಾಮೀಣ ಪುನರ್ ರಚನೆಗೆ ಯುವಕರು" ಎಂಬ ಚಳವಳಿಗಳನ್ನು ಹೆಸರಿಸಬಹುದು. ಈ ರಾಷ್ಟ್ರೀಯ ಸೇವಾ ಯೋಜನೆಗೆ ರಾಜ್ಯ ಮತ್ತು ಕೇಂದ್ರ ಸರಕಾರಗಳು 5 : 7 ಪ್ರಮಾಣದಲ್ಲಿ ಹಣಕಾಸು ಒದಗಿಸುವುವು. ಪ್ರತೀ ವಿದ್ಯಾರ್ಥಿಗೆ ವರ್ಷಕ್ಕೆ ರೂ. 60 ಮತ್ತು ವಾರ್ಷಿಕ ಶಿಬಿರಗಳಿಗಾಗಿ ರೂ. 80 ಅನುದಾನ ಸಿಗುವುದು. 1980-81 ರಲ್ಲಿ 29,000 ವಿದ್ಯಾರ್ಥಿಗಳು ನಿಯಮಿತ ಕಾರ್ಯಕ್ರಮ ಗಳಲ್ಲೂ, 14,500 ವಿದ್ಯಾರ್ಥಿಗಳು ವಿಶೇಷ ಕಾರ್ಯಕ್ರಮ ಗಳಲ್ಲೂ ಭಾಗವಹಿಸಿದರು.

**ಭಾರತ ಸೇವಕ ಸಮಾಜ :** ಭಾರತ ಸೇವಕ ಸಮಾಜವು ಒಂದು ಅಖಿಲ ಭಾರತ ಸಂಸ್ಥೆಯಾಗಿದ್ದು ಅದು ಯೋಜನಾ ಆಯೋಗದ ಶಿಫಾರಸುಗಳಿಗೆ ಅನುಗುಣವಾಗಿ 1952ರಲ್ಲಿ ಪ್ರಾರಂಭವಾಯಿತು. ಭಾರತದ ನಾಗರಿಕರಿಗೆ ಸ್ವಯಂಸೇವಾ ಕಾರ್ಯಕ್ಕಿರುವ ಅವಕಾಶವನ್ನು ಶೋಧಿಸಿ ಅಭಿವೃದ್ಧಿ ಪಡಿಸುವುದು, ರಾಷ್ಟ್ರೀಯ ಕಾರ್ಯಕ್ಷಮತೆ ಹೆಚ್ಚುವಂತೆ ಪ್ರೋತ್ಸಾಹಿಸುವುದು, ವ್ಯರ್ಥವಾಗಿ ಹೋಗಬಹುದಾದ ಸಮಯ, ಶಕ್ತಿ, ಸಂಪನ್ಮೂಲಗಳನ್ನು ಸಾಮಾಜಿಕ ಆರ್ಥಿಕ ಚಟುವಟಿಕೆಯ ವಿವಿಧ ಕ್ಷೇತ್ರಗಳಲ್ಲಿ ಉಪಯೋಗಕ್ಕೆ ಬರುವಂತೆ ಹರಿಯಬಿಡುವುದು, ಇವೆಲ್ಲ ಅದರ ಉದ್ದೇಶಗಳು. ಈ ಸಂಘಟ ನೆಯು ಯುವಜನರಿಗಾಗಿ ನಾಗರಿಕ ರಕ್ಷಣೆಯಲ್ಲಿ ತರಬೇತಿ, ಬೆಂಕಿ ಆರಿಸುವುದರಲ್ಲಿ ತರಬೇತಿ, ಗಂಡಾಂತರಗಳಿಂದ ರಕ್ಷಣೆ, ಗ್ರಾಮೀಣ ಹಾಗೂ ನಗರದ ಯುವಜನರಿಗೆ ನಾಯಕತ್ವದ ತರಬೇತಿ ಮುಂತಾದ ವಿವಿಧ ಚಟುವಟಿಕೆಗಳನ್ನು ನಡೆಸಿದೆ. ಲೋಕ ಕಾರ್ಯಕ್ಷೇತ್ರ ಎಂಬ ಯೋಜನೆಯನ್ವಯ ಈ ಸಂಘಟನೆಯು 32 ಘಟಕಗಳನ್ನು ಹೊಂದಿದೆ. ಆಯ್ದು ಹತ್ತು ಗ್ರಾಮಗಳಲ್ಲಿ ಸ್ಥಳೀಯ ಜನರ ಸಹಕಾರ ಹಾಗೂ ಸರಕಾರದ ನೆರವಿನೊಂದಿಗೆ ಅದು ಅಭಿವೃದ್ಧಿ ಕೆಲಸಗಳನ್ನು ನಡೆಸಿದೆ. ಅದು ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ಕುರಿತು ವಿಶಿಷ್ಟ ತರಬೇತಿ ವರ್ಗಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸುತ್ತಿದೆ. ಪಂಚ ವಾರ್ಷಿಕ ಯೋಜನೆಗಳನ್ನು ಜನತೆಯಲ್ಲಿ ಪ್ರಚಾರ ಮಾಡುವ ಉದ್ದೇಶ ಹೊಂದಿದ ಜನಜಾಗರಣ ಎಂಬ ಯೋಜನೆ, ಕೊಳೆಗೇರಿ ಗಳ ಸುಧಾರಣೆಗೋಸ್ಕರ ನಗರ ಕಲ್ಯಾಣ ಕೇಂದ್ರಗಳು, ಮಾದರಿ ಕೃಷಿ ಕ್ಷೇತ್ರಗಳು, ಅಂತರರಾಷ್ಟ್ರೀಯ ಶ್ರಮ ಶಿಬಿರಗಳು, ಕೊಳೆಗೇರಿ ನಿವಾಸಿಗಳ ಪ್ರಯೋಜನಕ್ಕಾಗಿ ಕುಶಲ ವೃತ್ತಿ ಕೇಂದ್ರಗಳು, ಇತ್ಯಾದಿ ಚಟುವಟಿಕೆಗಳನ್ನು ಭಾರತ ಸೇವಕ ಸಮಾಜ ನಡೆಸಿದೆ. 1980-81ರಲ್ಲಿ ಅದು ಬೆಂಗಳೂರಿನಲ್ಲಿ 21ನೇಯ ಸ್ವಯಂಸೇವಾ ಸಂಘಟನೆಗಳ ಅಂತರರಾಷ್ಟ್ರೀಯ ಸಮ್ಮೇಳನವನ್ನು ನಡೆಸಿತು. ಇದರಲ್ಲಿ 38 ದೇಶಗಳು ಭಾಗ ವಹಿಸಿದ್ದವು. ಭಾರತ ಸೇವಕ ಸಮಾಜವು ಯೋಗಾಸನಗಳನ್ನು ಜನಪ್ರಿಯಗೊಳಿಸುತ್ತಿದೆ ಮತ್ತು ನೈರ್ಮಲ್ಯ ಚಳವಳಿ, ಗೃಹ ವಿಜ್ಞಾನ ಶಿಬಿರ, ಇತ್ಯಾದಿ ಕೆಲಸಗಳನ್ನು ಕೈಗೊಂಡಿದೆ.

**ನೆಹರೂ ಯುವಕ ಕೇಂದ್ರಗಳು :** ನೆಹರೂ ಯುವಕ

ಕೇಂದ್ರಗಳನ್ನು ಸ್ಥಾಪಿಸಿದ ಉದ್ದೇಶವೆಂದರೆ ನಮ್ಮ ಶಿಕ್ಷಣವನ್ನು ಸಮುದಾಯದ ಬದುಕಿಗೆ ಹಾಗೂ ಅವಶ್ಯಕತೆಗಳಿಗೆ ಹತ್ತಿರ ಬರುವಂತೆ ಮಾಡುವುದು, ಯುವಜನರ ವೈಯಕ್ತಿಕ ಉತ್ಕಾಂಕ್ಷೆಗಳ ಈಡೇರಿಕೆಗೆ ರಚನಾತ್ಮಕ ಮಾರ್ಗಗಳನ್ನು ಕಲ್ಪಿಸುವುದು ಮತ್ತು ಯುವಜನರು ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳಲು ಅವಕಾಶಗಳನ್ನು ಕಲ್ಪಿಸುವುದೇ ಆಗಿವೆ. ನೆಹರೂ ಯುವಕ ಕೇಂದ್ರಗಳನ್ನು ಪ್ರಧಾನವಾಗಿ ವೈಜ್ಞಾನಿಕ ಚಟುವಟಿಕೆಗಳಿಗೆ ಒತ್ತುಕೊಡುತ್ತ ಯುವಜನರ ಎಲ್ಲ ವರ್ಗಗಳಿಗೆ ಶಿಕ್ಷಣ ಕೊಡುವುದು, ಸಾಮುದಾಯಿಕ ಹಾಡು ಮತ್ತು ರಂಗಭೂಮಿಗಳನ್ನು ಒಳಗೊಂಡಂತೆ ಪ್ರದರ್ಶಕ ಕಲೆಗಳ ಮೂಲಕ ಸೃಜನಾತ್ಮಕ ಚಟುವಟಿಕೆಗಳಿಗೆ ಅಸ್ಪದ ಕಲ್ಪಿಸುವುದು, ಸ್ಪರ್ಧಾತ್ಮಕ ಕ್ರೀಡಾ ಚಟುವಟಿಕೆಗಳನ್ನೂ ಶಾರೀರಿಕ ಶಿಕ್ಷಣವನ್ನೂ ಸಂಘಟಿಸುವುದು, ಬಿಡುವಿನ ವೇಳೆಯನ್ನು ಸದುಪಯೋಗಗೊಳಿಸುವ ಅವಕಾಶ ಕಲ್ಪಿಸುವುದು ಮತ್ತು ಸಮುದಾಯ ಚಟುವಟಿಕೆಗಳಲ್ಲಿ ಯುವಕರು ಭಾಗಿಗಳಾಗುವಂತೆ ಮಾಡುವ ಕಾರಣಗಳಿಗಾಗಿ ರೂಪಿಸಲಾಗಿದೆ. ಯುವಜನ ಸೇವಾ ನಿರ್ದೇಶಕರ ಆಡಳಿತ ನಿಯಂತ್ರಣದಲ್ಲಿ ರಾಜ್ಯದಲ್ಲಿ 11 ನೆಹರೂ ಯುವಕ ಕೇಂದ್ರಗಳು ಕೆಲಸ ಮಾಡುತ್ತಿವೆ. ಭಾರತ ಸರಕಾರವು ಕೇಂದ್ರಗಳಿಗೆ ಹಣಕಾಸು ಒದಗಿಸುತ್ತದೆ (ಭಾಗ I, ಪು. 411 ವನ್ನೂ ನೋಡಿ).

**ಭಾರತ ಸೇವಾ ದಳ:** ಭಾರತ ಸೇವಾ ದಳವು ಒಂದು ಯುವಜನ ಸಂಘಟನೆ. (ವಿವರಗಳಿಗೆ ಭಾಗ I, ಪು. 412 ನೋಡಿ). ಶರೀರಶ್ರಮ ಮತ್ತು ಸಮಾಜ ಸೇವೆಗಳು ಈ ಸಂಘಟನೆಯ ಆಧಾರ ಶಿಲೆಗಳು. ಸೇವಾದಳವು ಪ್ಯಾರಿಸಿನಲ್ಲಿರುವ ಯುನೆಸ್ಕೋ ಸಂಸ್ಥೆಯ ಅಂತರ್‌ರಾಷ್ಟ್ರೀಯ ಸ್ವಯಂ ಸೇವಾ ಕಾರ್ಯ ಶಿಬಿರಗಳ ಸಮನ್ವಯ ಸಮಿತಿಯ ಸದಸ್ಯ ಸಂಸ್ಥೆಯಾಗಿದೆ. ಹಾಗೆಯೇ 'ಯೂಥ್ ಹಾಸ್ಟೆಲ್ಸ್ ಅಸೋಸಿಯೇಷನ್ ಆಫ್ ಇಂಡಿಯಾ'ದ ಮತ್ತು ಭಾರತ ಸೇವಕ ಸಮಾಜದ ಕಾರ್ಯಕಾರಿ ಸಮಿತಿಗಳ ಸದಸ್ಯ ಸಂಸ್ಥೆಯೂ ಹೌದು. ಇದನ್ನು ರಾಜ್ಯ ಮತ್ತು ಕೇಂದ್ರ ಸರಕಾರಗಳು ಒಂದು ಸ್ವಯಂಸೇವಾ ಸಂಸ್ಥೆಯೆಂದು ಮಾನ್ಯ ಮಾಡಿವೆ.

**ವೈ. ಎಂ. ಸಿ. ಎ.:** ಬೆಂಗಳೂರಿನ ಯಂಗ್ ಮೆನ್ಸ್ ಕ್ರಿಶ್ಚಿಯನ್ ಅಸೋಸಿಯೇಷನ್ ಇದೇ ಹೆಸರಿನ ಅಂತರ್‌ರಾಷ್ಟ್ರೀಯ ಸಂಸ್ಥೆಯ ಶಾಖೆಯಾಗಿದ್ದು ಅದನ್ನು ಬೆಂಗಳೂರಿನಲ್ಲಿ 1885ರಲ್ಲಿ ಪ್ರಾರಂಭಿಸಲಾಯಿತು. ವೈ. ಎಂ. ಸಿ. ಎ. ಸಂಘವು ಕೊಳೆಗೇರಿಗಳಲ್ಲಿರುವ ಮಕ್ಕಳ—ವಿಶೇಷವಾಗಿ ಅವರ ನಾಯಕತ್ವ ಮತ್ತು ಮನರಂಜನೆಯ ಕಾರ್ಯಕ್ರಮಗಳಲ್ಲಿ—ಕೆಲಸ ಮಾಡುತ್ತಿದೆ. ಬೆಂಗಳೂರಿನ ವೈ. ಎಂ. ಸಿ. ಎ. ಗೆ ಕುಂಬಳಗೋಡಿನಲ್ಲಿ 30 ಎಕರೆ ಗ್ರಾಮೀಣ ಶಿಬಿರದ ಜಾಗವಿದೆ. ಇಲ್ಲಿ 30 ಹಳ್ಳಿಗಳು ಗ್ರಾಮೀಣ ಕೆಲಸಗಳಲ್ಲಿ ಭಾಗವಹಿಸುತ್ತಿವೆ. ಬೆಂಗಳೂರು ನಗರದಲ್ಲಿರುವ ವೈ. ಎಂ. ಸಿ. ಎ. ಶಾಖೆಯು ವಿದ್ಯಾರ್ಥಿಗಳಿಗಾಗಿ ವಾಹನ ಸಂಚಾರ ನಿಯಂತ್ರಣ ತರಬೇತಿ, ನಾಗರಿಕ ಹೊಣೆಗಳು ಮತ್ತು ನಾಯಕತ್ವ ಚಟುವಟಿಕೆಗಳನ್ನು ಸಂಘಟಿಸುತ್ತದೆ. ಮಂಗಳೂರು, ಹುಬ್ಬಳ್ಳಿ, ಬೆಳಗಾವಿ ಮತ್ತು ಕಲ್ಬುರ್ಗಿಗಳಲ್ಲಿ ವೈ. ಎಂ. ಸಿ. ಎ. ಸಂಸ್ಥೆಯ ನಾಲ್ಕು ಶಾಖೆಗಳಿವೆ. ವೈ. ಡಬ್ಲ್ಯು. ಸಿ. ಎ. ಎಂಬುದು ಹೆಣ್ಣುಮಕ್ಕಳಿಗಾಗಿ ಸಂಘಟಿತವಾದ ಸದೃಶ ಸಂಸ್ಥೆ.

**ಯುವಜನ ಮತ್ತು ಅಭಿವೃದ್ಧಿ ಸಂಸ್ಥೆ:** ಈ ಸಂಸ್ಥೆಯು (ಇನ್‌ಸ್ಟಿಟ್ಯೂಟ್ ಆಫ್ ಯೂತ್ ಅಂಡ್ ಡೆವೆಲಪ್‌ಮೆಂಟ್) 1978ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಸಂಸ್ಥೆಯ ಉದ್ದೇಶಗಳೆಂದರೆ, ದೇಶದ ಯುವಜನರ ಕಲ್ಯಾಣಕ್ಕಾಗಿ ಶ್ರಮಿಸುವುದು, ಸಾಮಾಜಿಕ ಪ್ರಜ್ಞೆಯುಳ್ಳ ಯುವಜನರಿಗೆ ಅವಕಾಶಗಳನ್ನು ಕಲ್ಪಿಸುವುದು ಮತ್ತು ಅವರು ದೇಶದ ಸಮರ್ಥ ನಾಯಕರಾಗುವಂತೆ ಸಹಾಯ ಮಾಡುವುದು. ಈ ಸಂಸ್ಥೆಯು ಪಶುಸಂಗೋಪನೆ, ಹೊಲಿಗೆ, ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳು, ಕುಶಲ ಕೈಗಾರಿಕೆಗಳು, ಕಬ್ಬು, ಭತ್ತ ಮುಂತಾದ ಆಯ್ದ ಆರ್ಥಿಕ ಬೆಳೆಗಳ ಸಾಗುವಳಿ, ರೇಷ್ಮೆ ಸಾಕಣೆ ಹಾಗೂ ಕೃಷಿ ಯಂತ್ರೋಪಕರಣಗಳಂಥ ವಿಷಯಗಳಲ್ಲಿ ವೃತ್ತಿ ಶಿಕ್ಷಣವನ್ನು ಕೊಡುತ್ತದೆ. ಅನೇಕ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಸಂಘಟನೆಗಳು ತಮ್ಮ ಅಭ್ಯರ್ಥಿಗಳನ್ನು ಇಲ್ಲಿಗೆ ಅವರ ಕ್ಷೇತ್ರಕಾರ್ಯಕ್ಕಾಗಿ ಕಳುಹಿಸಿಕೊಡುತ್ತದೆ. ಸಂಸ್ಥೆಯು ಹಲವಾರು ತರಬೇತಿ ವರ್ಗಗಳನ್ನೂ ವಿಚಾರ ಸಂಕಿರಣಗಳನ್ನೂ, ಸಲಹಾ ಸಭೆಗಳನ್ನೂ ಏರ್ಪಡಿಸಿದೆ.

ರಾಜ್ಯದಲ್ಲಿ ಯುವಜನ ಕಲ್ಯಾಣ ಚಟುವಟಿಕೆಗಳಲ್ಲಿ ತೊಡಗಿರುವ ಹಲವಾರು ಖಾಸಗಿ ಸಂಘ ಸಂಸ್ಥೆಗಳಿವೆ. ಇವುಗಳಲ್ಲಿ 'ಯುವಜನ ಮತ್ತು ಅಭಿವೃದ್ಧಿ ಸಂಸ್ಥೆ' (ಬೆಂಗಳೂರು, 1978) ಎಂಬುದು ಯುವಜನರಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಕುದುರಿಸಲು ಯತ್ನಿಸುವ ಅನೌಪಚಾರಿಕ ಶಿಕ್ಷಣದ ಕೇಂದ್ರವಾಗಿ ಕೆಲಸ ಮಾಡುತ್ತಿದೆ. ಗ್ರಾಮ ವಿಕಾಸ (ಬೆಂಗಳೂರು, 1979) ಎಂಬ ಸಂಸ್ಥೆ ಮುಳಬಾಗಲು ತಾಲೂಕಿನಲ್ಲಿ ಯುವಜನರ ಶಕ್ತಿಯನ್ನು ಗ್ರಾಮೀಣ ಅಭಿವೃದ್ಧಿಗಾಗಿ ಬಳಸುವ ಕೆಲಸದಲ್ಲಿ ತೊಡಗಿದೆ. ಏಷ್ಯನ್ ಇನ್‌ಸ್ಟಿಟ್ಯೂಟ್ ಫಾರ್ ರೂರಲ್ ಡೆವಲಪ್‌ಮೆಂಟ್ (ಬೆಂಗಳೂರು, 1976) ಗ್ರಾಮೀಣ ಅಭಿವೃದ್ಧಿ ವಿಷಯದಲ್ಲಿ ವೈಜ್ಞಾನಿಕ ಸಂಶೋಧನೆ ನಡೆಸುತ್ತದೆಯಲ್ಲದೆ, ಸಮಾಜ ಕಾರ್ಯಕ್ಕಾಗಿ ಯುವಜನರನ್ನು ತರಬೇತುಗೊಳಿಸುತ್ತದೆ. ಕೆನರಾ ಬ್ಯಾಂಕ್ ಪ್ಲಾಟಿನಮ್ ಜುಬಿಲಿ ರೂರಲ್ ಡೆವಲಪ್‌ಮೆಂಟ್ ಟ್ರಸ್ಟ್ (ಬೆಂಗಳೂರು, 1980) ಗ್ರಾಮೀಣ ವಿದ್ಯಾರ್ಥಿಗಳಿಗೆ ಸಹಾಯ ನೀಡುವುದಲ್ಲದೆ

ಅವರಿಗೆ ತರಬೇತಿ ಕೊಡುವ ಮೂಲಕ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸಿದೆ. 'ಸರ್ಚ್' (ಎಸ್. ಇ. ಎ. ಆರ್. ಸಿ. ಎಚ್. ಬೆಂಗಳೂರು, 1978) ಎಂಬುದು ಇನ್ನೊಂದು ಗಮನಾರ್ಹ ಸಂಸ್ಥೆ. ಇದು ಶಾಲೆ ಮತ್ತು ಕಾಲೇಜುಗಳ ವಿದ್ಯಾರ್ಥಿಗಳಿಗೆ ಅಭಿವೃದ್ಧಿ ಕಾರ್ಯಗಳಲ್ಲಿ ತರಬೇತಿ ಕೊಡುತ್ತದೆ.

ಮೈರಾದಾ : 'ಮೈಸೂರು ರಿಸೆಟ್ಲ್‌ಮೆಂಟ್ ಅ್ಯಂಡ್ ಡೆವಲಪ್‌ಮೆಂಟ್ ಏಜನ್ಸಿ' ಎಂಬ ಸಂಸ್ಥೆಯನ್ನು ಟಿಬೇಟಿನಿಂದ ಬಂದ ನಿರಾಶ್ರಿತರಿಗಾಗಿ ಹಮ್ಮಿಕೊಂಡ ಮರುವಸತಿ ಯೋಜನೆಗಳ ಆಡಳಿತ ಮತ್ತು ಅನುಷ್ಠಾನಕ್ಕಾಗಿ 1968ರಲ್ಲಿ ಸ್ಥಾಪಿಸಲಾಯಿತು. 20,000 ನಿರಾಶ್ರಿತರ ಮರುವಸತಿಗಾಗಿ ರಾಜ್ಯಸರಕಾರವು 6,475 ಹೆಕ್ಟೇರ್ ಭೂಮಿಯನ್ನು ಕೊಟ್ಟಿದೆ. ಈ ಏಜನ್ಸಿಯು ಕರ್ನಾಟಕ ಸರಕಾರ ಮತ್ತು 'ಕಾಮನ್ ಪ್ರಾಜೆಕ್ಟ್ ಆಫ್ ದಿ ಯೂರೋಪಿಯನ್ ರೆಫ್ಯೂಜಿ ಕ್ಯಾಂಪೇನ್' ಎಂಬ ಸಂಘಟನೆಯ ವಿಶ್ವಸ್ಥ ಮಂಡಳಿ ಇವರಿಬ್ಬರ ನಡುವೆ ಆದ ಒಂದು ಒಪ್ಪಂದದಿಂದ ಹುಟ್ಟಿಕೊಂಡಿತು. ಟಿಬೇಟನರ ಮರುವಸತಿ ಯೋಜನೆ ಪೂರ್ಣ ವಾಗುತ್ತಲೇ 'ಮೈರಾದಾ' ಸಂಸ್ಥೆಯು ಭೂರಹಿತ ಕಾರ್ಮಿಕರು ಮತ್ತು ಆದಿವಾಸಿಗಳನ್ನು ನೆಲೆ ನಿಲ್ಲಿಸುವ ಕೆಲಸವನ್ನು, ಅಂತೆಯೇ ಸಮಗ್ರ ಗ್ರಾಮೀಣ ಅಭಿವೃದ್ಧಿಯಂಥ ಸಮುದಾಯ ಅಭಿವೃದ್ಧಿಯ ಕೆಲಸವನ್ನು ಭಾರತಾದ್ಯಂತ ತೆಗೆದುಕೊಂಡಿತು. ಹೀಗೆ 'ಮೈರಾದಾ' ಸಂಸ್ಥೆಯ ಉದ್ದೇಶಗಳೆಂದರೆ ಭೂರಹಿತ ಕಾರ್ಮಿಕರ ಮರುವಸತಿ ಯೋಜನೆಗಳನ್ನು ಗುರುತಿಸಿ ಪೋಷಿಸು ವುದು, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ಯೋಜಿಸಿ ಕಾರ್ಯಗತಗೊಳಿಸುವುದು, ಸರಕಾರಕ್ಕೂ ಮತ್ತು ಗ್ರಾಮೀಣ ಅಭಿವೃದ್ಧಿಯ ಕಾರ್ಯದಲ್ಲಿ ತೊಡಗಿರುವ ಖಾಸಗಿ ಸಂಸ್ಥೆಗಳ ಮರುವಸತಿ ಕಾರ್ಯಗಳಿಗೂ ಸಲಹಾ ಸಂಸ್ಥೆಯಾಗಿ ಕಾರ್ಯ ಮಾಡುವುದು, ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ಯುಕ್ತಜ್ಞಾನ ಮತ್ತು ತಂತ್ರಜ್ಞಾನಕ್ಕೆ ಅವಶ್ಯವಿರುವ ದಾಖಲೆ ಸಂಗ್ರಹಣದ ಕೇಂದ್ರವಾಗಿ ಕೆಲಸ ಮಾಡುವುದು. 'ಮೈರಾದಾ' ಸಂಸ್ಥೆಯ ಆಡಳಿತವು ಭಾರತ ಸರಕಾರ ಮತ್ತು ಕರ್ನಾಟಕ ಸರಕಾರಗಳ ಪ್ರತಿನಿಧಿಗಳನ್ನುಳ್ಳ ಒಂದು ನಿರ್ದೇಶಕ ಮಂಡಳಿಯ ಆಡಳಿತೆಯಲ್ಲಿದೆ. ಹಳ್ಳಿಗಳಲ್ಲಿ ಸದ್ಯ ಅಸ್ತಿತ್ವದಲ್ಲಿರುವ ಸಾಮಾಜಿಕ ಆರ್ಥಿಕ ಶಕ್ತಿಗಳಿಂದ ಉಂಟಾಗಿರುವ ಅನ್ಯಾಯಗಳನ್ನು ಸರಿ ಪಡಿಸುವ, ಹಾಗೂ ಕಡಿಮೆ ಆದಾಯದ ಜನಸಮೂಹದ ಬಲವನ್ನು ವರ್ಧಿಸಿ ಸಮತೋಲನವನ್ನು ತರುವ ದೃಷ್ಟಿಕೋನ ವನ್ನು ಈ ಸಂಸ್ಥೆ ಹೊಂದಿದೆ.

ಸಂಸ್ಥೆಯು ಕೈಗೊಂಡ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಗಳಲ್ಲಿ ಕನಕಪುರ ಯೋಜನೆ, ಥಳ್ಳಿ ಯೋಜನೆ, ಮಂಡೂರು ಯೋಜನೆ, ಪೆನುಗೊಂಡ ಯೋಜನೆ, ತಾಳವಾಡಿ ಯೋಜನೆ, ಹುತ್ತೂರು ಯೋಜನೆ ಮತ್ತು ಗೂಡಲೂರು ಯೋಜನೆಗಳು ಸೇರಿವೆ. ಇವುಗಳ ಪ್ರಮುಖ ಅಂಗಗಳೆಂದರೆ ವಿಸ್ತರಣಾ ಸೇವೆಗಳು, ಸಹಕಾರ ಚಳವಳಿಗಳು, ಕೃಷಿ ಅಭಿವೃದ್ಧಿ, ನೀರಾವರಿ, ಪಶುಸಂಗೋಪನೆ, ಗ್ರಾಮೀಣ ಕೈಗಾರಿಕೆಗಳು ಮತ್ತು ಸಾರ್ವಜನಿಕ ಆರೋಗ್ಯ ಹಾಗೂ ಸಮುದಾಯ ಸೇವೆಗಳು.

## ಇತರ ಕಲ್ಯಾಣ ಯೋಜನೆಗಳು

ವೃದ್ಧಾಪ್ಯ ವೇತನ ಯೋಜನೆಯನ್ನು ಕರ್ನಾಟಕ ಸರಕಾರವು 1964-65ರಲ್ಲಿ ಪ್ರಾರಂಭಿಸಿತು. ಈ ವೃದ್ಧಾಪ್ಯ ವೇತನ ಪಡೆಯಲು ಬೇಕಾದ ಷರತ್ತುಗಳೆಂದರೆ ವ್ಯಕ್ತಿಯು 70 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಪ್ರಾಯದವನಾಗಿರಬೇಕು ಮತ್ತು ವ್ಯಕ್ತಿಗೆ 20 ಅಥವಾ ಅದಕ್ಕಿಂತ ಹೆಚ್ಚು ಪ್ರಾಯದ ಮಕ್ಕಳು ಅಥವಾ ಮೊಮ್ಮಕ್ಕಳು ಇರಬಾರದು. ವ್ಯಕ್ತಿಯು ಅಂಗವಿಕಲನಾಗಿದ್ದರೆ ಅರ್ಹತೆಯ ವಯೋಮಿತಿಯಾದ 70ನ್ನು ಐದು ವರ್ಷಗಳಷ್ಟು ಸಡಿಲು ಮಾಡಲಾಗುತ್ತಿತ್ತು. ಜೂನ್ 1972 ರಿಂದ ಕನಿಷ್ಠ ವಯೋಮಿತಿಯನ್ನು ನಿರ್ಗತಿಕರಾಗಿದ್ದಲ್ಲಿ 65ಕ್ಕೂ, ಅಂಗವಿಕಲರಾಗಿದ್ದಲ್ಲಿ 60ಕ್ಕೂ ಇಳಿಸಲಾಯಿತು. ಏಪ್ರಿಲ್ 1974 ರಿಂದ ಅಂಗವಿಕಲರಿಗೆ ಈ 60ರ ಕನಿಷ್ಠ ವಯೋಮಿತಿಯನ್ನು 45ಕ್ಕೆ ಇಳಿಸಲಾಯಿತು. ಹಾಗೂ ನವೆಂಬರ್ 1977ರಿಂದ ಇನ್ನೊಮ್ಮೆ ಇಳಿಸಿ 16 ವರ್ಷಕ್ಕೆ ತರಲಾಯಿತಲ್ಲದೆ ಅಂಥವರ ಕುಟುಂಬದ ವಾರ್ಷಿಕ ಆದಾಯ ರೂ. 3,000ಕ್ಕಿಂತ ಕಡಿಮೆ ಇರಬೇಕೆಂದು ನಿಗದಿಗೊಳಿಸ ಲಾಯಿತು. 1979ರ ಅಕ್ಟೋಬರ್‌ನಲ್ಲಿ ಅಂಗವಿಕಲರ ವಿಷಯ ದಲ್ಲಿ ವಯಸ್ಸಿನ ನಿರ್ಬಂಧವನ್ನು ಸಂಪೂರ್ಣವಾಗಿ ತೆಗೆದುಹಾಕ ಲಾಯಿತು. ಅದಲ್ಲದೆ ಈ ಸೌಲಭ್ಯಗಳ ಲಾಭವನ್ನು ಮನೋ ವಿಕಲ ವ್ಯಕ್ತಿಗಳಿಗೂ ಅನ್ವಯಿಸಲಾಯಿತು.

ಪ್ರಾರಂಭದಲ್ಲಿ ವೃದ್ಧಾಪ್ಯ ವೇತನದ ಮೊಬಲಗು ತಿಂಗಳಿಗೆ ಕೇವಲ ರೂ. 15 ಮಾತ್ರ ಇತ್ತು. ಅದನ್ನು ನಂತರ 30 ರೂ. ಗಳಿಗೂ, ಅನಂತರ ಏಪ್ರಿಲ್ 1975ರಿಂದ 40 ರೂ.ಗಳಿಗೂ ಏರಿಸಲಾಯಿತು. ವೃದ್ಧಾಪ್ಯ ವೇತನವನ್ನು ಮಂಜೂರು ಮಾಡುವ ಅಧಿಕಾರವನ್ನು ಮೊದಲು ಜಿಲ್ಲಾಧಿಕಾರಿಗಳಿಗೆ ನೀಡಲಾಗಿತ್ತು. 1974ರಲ್ಲಿ ಇದನ್ನು ಸಹಾಯಕ ಕಮಿಷನರು ಗಳಿಗೆ ವಹಿಸಿಕೊಡಲಾಯಿತು. ಮುಂದೆ ಆಗಸ್ಟ್ 1979ರಲ್ಲಿ ಇದನ್ನು ತಹಸೀಲ್ದಾರರಿಗೆ ಹಸ್ತಾಂತರಿಸಲಾಯಿತು. (1-4-1983 ರಿಂದ ವೃದ್ಧಾಪ್ಯ ವೇತನದ ಹಣವನ್ನು 50 ರೂ.ಗಳಿಗೆ ಹೆಚ್ಚಿಸ ಲಾಗಿದೆ).

**ಪಿಂಚಣಿದಾರರ ಸಂಖ್ಯೆ (ವರ್ಷವಾರು) ಮತ್ತು 1973–74 ರಿಂದ 1980–81ರವರೆಗೆ ವೆಚ್ಚ ಮಾಡಿದ ಹಣ**

| ವರ್ಷ | ಡಿಸೆಂಬರ್ 31ರಂದು ಇದ್ದ ಪಿಂಚಣಿದಾರರ ಸಂಖ್ಯೆ | ವೆಚ್ಚ (ಲಕ್ಷ ರೂ.ಗಳಲ್ಲಿ) (ಆರ್ಥಿಕ ವರ್ಷದಲ್ಲಿ) |
|---|---|---|
| 1973-74 | 49,193 | 89.50 |
| 1974-75 | 92,073 | 154.75 |
| 1975-76 | 1,53,438 | 332.12 |
| 1976-77 | 1,79,803 | 647.44 |
| 1977-78 | 2,01,811 | 841.02 |
| 1978-79 | 2,62,118 | 925.40 |
| 1979-80 | 3,07,454 | 1,181.35 |
| 1980-81 | 3,42,895 | 1,460.00 |

ರಾಜ್ಯದಲ್ಲಿ ವ್ಯಾಧಿಗ್ರಸ್ಥರ ಹಾಗೂ ವೃದ್ಧರ ಯೋಗಕ್ಷೇಮವನ್ನು ನೋಡಿಕೊಳ್ಳುವ ಅನೇಕ ಸಂಘಟನೆಗಳಿವೆ. ಬೆಂಗಳೂರಿನ ಫ್ರೆಂಡ್ಸ್–ಇನ್–ನೀಡ್ ಎಂಬ ಸಂಸ್ಥೆಯು 1830ರಲ್ಲಿ ಪ್ರಾರಂಭವಾಗಿದ್ದು ಅದು ವೃದ್ಧರಿಗಾಗಿ ಕಾಬ್ ಹೋವರ್ ಎಂಬ ವೃದ್ಧರ ಗೃಹವನ್ನು ನಡೆಸುತ್ತಿದೆ. ಇಲ್ಲಿ 60 ವರ್ಷಗಳನ್ನು ಮೀರಿದ ಅಶಕ್ತರನ್ನೂ ನಿರ್ಗತಿಕರನ್ನೂ ಇಟ್ಟುಕೊಂಡು ಸಾಕಲಾಗುತ್ತದೆ. ಇಲ್ಲಿರುವ 'ಕಾಬ್ ಹೋವರ್ ಎನೆಕ್ಸ್' ಎಂಬ ವಿಸ್ತರಣೆಯಲ್ಲಿ ಆರ್ಥಿಕ ಅನುಕೂಲವಿರುವ, ಆದರೆ ನೋಡಿಕೊಳ್ಳುವ ಬಂಧು-ಬಳಗವಿಲ್ಲದ, ವೃದ್ಧರು ಆಶ್ರಯ ಪಡೆದಿರುತ್ತಾರೆ. 1982ರಲ್ಲಿ ಈ ಎರಡು ಗೃಹಗಳಲ್ಲಿ ಒಟ್ಟಿಗೆ 24 ಗಂಡಸರೂ, 44 ಹೆಂಗಸರು ಇದ್ದರು. ಬೆಂಗಳೂರಿನ ವೃದ್ಧಾಶ್ರಮವನ್ನು ರಾಘವೇಂದ್ರ ಗೋ-ಆಶ್ರಮ ಟ್ರಸ್ಟ್ ಮತ್ತು ವಲ್ಲಭ ನಿಕೇತನಗಳು 1970ರಲ್ಲಿ ಪ್ರಾರಂಭಿಸಿದವು. ಇದು ವೃದ್ಧರ ಆರೈಕೆ ಮಾಡುವ ಸಂಸ್ಥೆಯಾಗಿದ್ದು 1982ರಲ್ಲಿ ಇಲ್ಲಿ ಹನ್ನೊಂದು ನಿವಾಸಿಗಳಿಗೆ ಅನ್ನ ಮತ್ತು ಆಶ್ರಯಗಳನ್ನು ನೀಡಿದ್ದಿತು. ಇದೇ ಪ್ರಕಾರ ಇತರ ಸಂಘಟನೆಗಳೆಂದರೆ 'ಲಿಟ್ಲ್ ಸಿಸ್ಟರ್ಸ್ ಆಫ್ ದಿ ಪುವರ್' ನಡೆಸುವ ವೃದ್ಧಾಶ್ರಮ, ಜೂಲಿಯಾ ಕ್ರಾಫ್ಟ್ ಈವನ್ ಟೈಡ್ ಹೋಮ್, ಅಶಕ್ತ ಪೋಷಕ ಸಭಾ ಮತ್ತು ಮಾತೃಛಾಯಾ. ಇವೆಲ್ಲವೂ ಬೆಂಗಳೂರಿನಲ್ಲಿವೆ. ರಾಜ್ಯದಲ್ಲಿ ಇಂಥ ಸಂಘಟನೆಗಳು ಇನ್ನೂ ಅನೇಕ ಇವೆ.

ರಾಜಕೀಯ ವಿಶ್ರಾಂತಿ ವೇತನ : ಸ್ವಾತಂತ್ರ್ಯ ಯೋಧರಿಗೆ ಮತ್ತು ಸ್ವಾತಂತ್ರ್ಯ ಯೋಧರ ವಿಧವೆಯರಿಗೆ ಪಿಂಚಣಿ ಕೊಡುವ ಯೋಜನೆಯನ್ನು ಕರ್ನಾಟಕ ಸರಕಾರವು ರಾಜ್ಯ ಸ್ವಾತಂತ್ರ್ಯ ಯೋಧರ ಕಲ್ಯಾಣ ನಿಯಮಗಳು, 1967 ಇದರನ್ವಯ 1968ರಲ್ಲಿ ಜಾರಿಗೆ ತಂದಿತು ಮತ್ತು 1969ರಲ್ಲಿ ಅದನ್ನು ತಿದ್ದುಪಡಿ ಮಾಡಲಾಯಿತು. ಈ ವಿಶ್ರಾಂತಿ ವೇತನಕ್ಕೆ ಅರ್ಹನಾಗಲು ಸ್ವಾತಂತ್ರ್ಯಯೋಧನಿಗೆ ಕನಿಷ್ಠ ಮೂರು ತಿಂಗಳುಗಳ ಕಾಲ ಶಿಕ್ಷೆ ವಿಧಿಸಿರಬೇಕು, ಅಥವಾ ಆತನು ಮೂರು ತಿಂಗಳುಗಳ ಕಾಲ ಸೆರೆಮನೆ ಕಂಡಿರಬೇಕು, ಮತ್ತು ಆತನ ವಾರ್ಷಿಕ ಆದಾಯವು ರೂ. 2,400 ಮೀರಿರಬಾರದು. ಪ್ರಾರಂಭದಲ್ಲಿ ಮಾಸಿಕ ಪಿಂಚಣಿಯು 50 ರೂ. ಎಂದು ನಿಗದಿಯಾಗಿತ್ತಾದರೂ ಮುಂದೆ ಜೂನ್ 1971ರಿಂದ ಅದನ್ನು 75ರೂ.ಗೆ ಏರಿಸಲಾಯಿತು. ಜೂನ್ 1978ರಲ್ಲಿ ಪಿಂಚಣಿಯ ಮೊಬಲಗನ್ನು 90ರೂ.ಗೆ ಏರಿಸಿದ ನಂತರ ಅದೇ ವರ್ಷ ಸೆಪ್ಟೆಂಬರ್‌ನಲ್ಲಿ ಅದನ್ನು ಮತ್ತೆ 125 ರೂ.ಗಳಿಗೆ ಏರಿಸಲಾಯಿತು. 1978ರ ಜೂನ್‌ನಲ್ಲಿ ಸರ್ಕಾರವು ಸ್ವಾತಂತ್ರ್ಯ ಯೋಧರ ವಿಧವೆಯರಿಗೆ ಸ್ವಾತಂತ್ರ್ಯಯೋಧರು ಸತ್ತಂದಿನಿಂದ ಮಾಸಾಶನವನ್ನು ನೀಡುವ ಅಧಿಕಾರವನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ವರ್ಗಾಯಿಸಿತು. ಸೆಪ್ಟೆಂಬರ್ 1980ರ ನಂತರ ಗುರುತಿಸಲ್ಪಟ್ಟ ಸ್ವಾತಂತ್ರ್ಯಯೋಧರು 125 ರೂ.ಗಳ ಬದಲಿಗೆ 100 ರೂ.ಗಳ ವಿಶ್ರಾಂತಿ ವೇತನಕ್ಕೆ ಅರ್ಹರಾದರು. ಸೆಪ್ಟೆಂಬರ್ 1980ರಿಂದ ಅರ್ಹತೆಯ ನಿಯಮಗಳನ್ನು ಸಡಿಲುಗೊಳಿಸಿ ಶಿಕ್ಷೆ ಅಥವಾ ಸೆರೆವಾಸದ ಅವಧಿ ಮೂರು ತಿಂಗಳುಗಳಿಗಿಂತ ಕಡಿಮೆಯಿದ್ದರೂ ನಡೆದೀತು, ಎಂದು ಹೇಳಲಾಯಿತು. ಹಾಗೆಯೇ ನವೆಂಬರ್ 1980ರಿಂದ ಯೋಧರ ಗರಿಷ್ಠ ಆದಾಯದ ಮಿತಿ 2,400 ರೂ. ಮೀರಿರಬಾರದು ಎಂಬ ನಿಯಮವನ್ನು ಕೈಬಿಡಲಾಯಿತು. ಇದೂ ಅಲ್ಲದೆ ರಾಜಕೀಯ ವಿಶ್ರಾಂತಿ ವೇತನದ ಲಾಭವನ್ನು 1947ರ ಅಕ್ಟೋಬರ್‌ವರೆಗೆ ನಡೆದ ಮೈಸೂರು ಚಲೋ ಚಳುವಳಿಯಲ್ಲಿ ಮತ್ತು ಕಲ್ಬುರ್ಗಿ ಪ್ರದೇಶದಲ್ಲಿ ಹೈದರಾಬಾದ್ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಯೋಧರಿಗೂ, ಅಂಥ ಯೋಧರ ವಿಧವೆಯರಿಗೂ ವಿಸ್ತರಿಸಲಾಯಿತು.

ಭಾರತ ಸರಕಾರವು 1972ರಲ್ಲಿ ಸ್ವಾತಂತ್ರ್ಯ ಯೋಧರಿಗೆ ಮಾಸಿಕವಾಗಿ 200 ರೂ. ವಿಶ್ರಾಂತಿ ವೇತನ ಕೊಡುವ ಯೋಜನೆಯನ್ನು ಜಾರಿಗೆ ತಂದಿತು. ಹೀಗೆ ಕೊಡುವ 200 ರೂ. ನಲ್ಲಿ ರಾಜ್ಯ ಸರಕಾರದ 75 ರೂ. ವಿಶ್ರಾಂತಿವೇತನವೂ ಸೇರಿರುತ್ತದೆ. ಅಕ್ಟೋಬರ್ 1976ರಿಂದ ಭಾರತ ಸರಕಾರವು ರಾಜ್ಯ ಸರಕಾರಗಳು ಕೊಡುವ ವಿಶ್ರಾಂತಿವೇತನವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ 200 ರೂ.ಗಳನ್ನು ಕೊಡಲು ಪ್ರಾರಂಭಿಸಿತು. 1977ರಲ್ಲಿ ರಾಜ್ಯ ಸರಕಾರವು ಕೇಂದ್ರ ಸರಕಾರದ 200 ರೂ. ಪಿಂಚಣಿ

ಪಡೆಯುವ ಪಿಂಚಣಿದಾರರಿಗೆ ತಾನು ಕೊಡುತ್ತಿದ್ದ 75 ರೂ. ಪಿಂಚಣಿ ಹಣವನ್ನು ನಿಲ್ಲಿಸಿಬಿಟ್ಟಿತು. ಆದರೆ ನಂತರ 1979ರಲ್ಲಿ ಅದನ್ನು ಮತ್ತೆ ಹಿಂದಿನಂತೆಯೇ ಕೊಡಲು ಪ್ರಾರಂಭಿಸಿತು. ಆದರೆ ಪಿಂಚಣಿದಾರರ ಆದಾಯ ಕೇಂದ್ರ ಸರಕಾರದ ಪಿಂಚಣಿಯನ್ನು ಹೊರತುಪಡಿಸಿ ವಾರ್ಷಿಕವಾಗಿ 2,400 ರೂ.ಗಳಿಗೆ ಮೀರಿರಬಾರದು ಎಂಬ ನಿರ್ಬಂಧವನ್ನು ಹಾಕಿತು. 1ನೇಯ ಆಗಸ್ಟ್, 1980ರಿಂದ ಭಾರತ ಸರಕಾರವು ಸ್ವಾತಂತ್ರ್ಯ ಯೋಧರ ಪಿಂಚಣಿ ಯೋಜನೆಯನ್ನು 'ಸ್ವತಂತ್ರತಾ ಸೈನಿಕ ಸನ್ಮಾನ ಪಿಂಚಣಿ' ಯೋಜನೆ ಎಂದು ಪುನರ್ನಾಮಕರಣ ಮಾಡಿ, ಮಾಸಿಕ ಪಿಂಚಣಿಯ ಮೊತ್ತವನ್ನು 300 ರೂ.ಗಳಿಗೆ ಏರಿಸಿತು. ಸ್ವಾತಂತ್ರ್ಯ ಯೋಧರ ವಿಧವೆಯರಿಗೆ ಕೊಡುವ ಪಿಂಚಣಿಯನ್ನು 200 ರೂ.ಗಳಿಗೆ ಏರಿಸಿದ್ದಲ್ಲದೆ, ಅಂಥ ವಿಧವೆಯರಿಗೆ ಅವಿವಾಹಿತರಾದ ಹೆಣ್ಣುಮಕ್ಕಳಿದ್ದರೆ ಪ್ರತೀ ಹೆಣ್ಣುಮಗಳಿಗೆ 50 ರೂ.ಗಳಂತೆ ಅಧಿಕ ಪಿಂಚಣಿ ದೊರೆಯುತ್ತದೆ. ಆದರೆ ಆ ವಿಧವೆಗೆ ಸಿಗುವ ಪಿಂಚಣಿ 300 ರೂ. ಮೀರಬಾರದು ಎಂಬ ನಿರ್ಬಂಧವಿದೆ. ಪಿಂಚಣಿ ಪಡೆಯಲು ಅರ್ಹರಾಗಲು ಪಿಂಚಣಿದಾರರ ವಾರ್ಷಿಕ ಆದಾಯ ರೂ. 5,000ಕ್ಕಿಂತ ಕಡಿಮೆ ಇರಬೇಕೆಂಬ ನಿರ್ಬಂಧವನ್ನೂ ತೆಗೆದು ಹಾಕಲಾಗಿದೆ. ಸೆಪ್ಟೆಂಬರ್ 1979ರಲ್ಲಿ 7,355 ಸ್ವಾತಂತ್ರ್ಯಯೋಧರು ರಾಜ್ಯ ಸರಕಾರದ ಪಿಂಚಣಿ ಪಡೆಯುತ್ತಿದ್ದರು. 1978-79ರಲ್ಲಿ ರಾಜ್ಯವು ತನ್ನ ಸ್ವಾತಂತ್ರ್ಯ ಯೋಧರಿಗೆ ಪಿಂಚಣಿ ಕೊಡುವುದಕ್ಕಾಗಿ ರೂ. 53,53,715 ಖರ್ಚು ಮಾಡಿತು.

## ಕೊಳಗೇರಿ ನಿವಾಸಿಗಳ ಕಲ್ಯಾಣ

ಕರ್ನಾಟಕದಲ್ಲಿ ನಗರೀಕರಣದ ಗತಿಯು ಬಹಳ ತೀವ್ರವಾಗಿದೆ ಮತ್ತು 1981ರ ಜನಗಣತಿಯು ತೋರಿಸುವ ಹಾಗೆ ಬೆಂಗಳೂರು ನಗರವು ದೇಶದಲ್ಲಿಯೇ ಅತಿ ಹೆಚ್ಚಿನ ಬೆಳವಣಿಗೆಯ ಗತಿಯನ್ನು ಕಂಡಿದೆ. ರಾಜ್ಯದ ಈ ತೀವ್ರಗತಿಯ ನಗರೀಕರಣವು ನಗರಗಳಲ್ಲಿ ಕೊಳಗೇರಿಗಳನ್ನು ಸೃಷ್ಟಿಸಿದೆ. ಸಣ್ಣ ಪಟ್ಟಣಗಳೂ ಈ ಕೊಳಗೇರಿಗಳಿಂದ ಮುಕ್ತವಾಗಿಲ್ಲ. ನಮ್ಮ ನಗರ ಪಾಲಿಕೆಗಳು ಮತ್ತು ನಗರಾಭಿವೃದ್ಧಿ ಟ್ರಸ್ಟುಗಳಂಥ ಪ್ರಾಧಿಕಾರಗಳು ಕೊಳಗೇರಿಗಳು ಬೆಳೆಯುವುದನ್ನು ತಡೆಯಲು, ಜನದಟ್ಟಣೆಯನ್ನು ನಿವಾರಿಸಲು, ಹಾಗೂ ಕೊಳಗೇರಿ ನಿವಾಸಿಗಳಿಗೆ ಮೂಲ ಸೌಲಭ್ಯಗಳನ್ನು ಒದಗಿಸಲು ಅಲ್ಲಲ್ಲಿ ತಮ್ಮದೇ ಆದ ಪ್ರಯತ್ನಗಳನ್ನು ಮಾಡಿದ್ದುಂಟು. ಈ ಸಂಸ್ಥೆಗಳ ಕಷ್ಟಗಳನ್ನು ಪರಿಹರಿಸಲು ಕರ್ನಾಟಕ ಸರಕಾರವು 1973ರಲ್ಲಿ ಕರ್ನಾಟಕ ಕೊಳಗೇರಿ ಪ್ರದೇಶಗಳ (ಸುಧಾರಣೆ ಮತ್ತು ನಿರ್ಮೂಲನೆ) ಕಾಯ್ದೆಯನ್ನು ಜಾರಿಗೆ ತಂದಿತು. ಈ ಕಾಯ್ದೆಯ ಪರಿಣಾಮವಾಗಿ ಕರ್ನಾಟಕ ಕೊಳಗೇರಿ ಸುಧಾರಣೆ ಮತ್ತು ನಿರ್ಮೂಲನ ಮಂಡಳಿಯನ್ನು ಸೃಷ್ಟಿಸಲಾಯಿತು.

ಕರ್ನಾಟಕ ಕೊಳಗೇರಿ ಸುಧಾರಣಾ ಮತ್ತು ನಿರ್ಮೂಲನಾ ಮಂಡಳಿಯನ್ನು 1975ರಲ್ಲಿ ರಚಿಸಲಾಯಿತು. ಅದರ ಮುಖ್ಯ ಉದ್ದೇಶಗಳು : ಪರಿಸರದ ಸುಧಾರಣೆ ಮಾಡುವುದು, ಕೊಳಗೇರಿಗಳನ್ನು ನಿರ್ಮೂಲನೆ ಮಾಡಿ ಅಲ್ಲಿಯ ನಿವಾಸಿಗಳ ನೈರ್ಮಲ್ಯ ಪರಿಸ್ಥಿತಿಯನ್ನು ಸುಧಾರಿಸುವುದು, ನಿಜವಾದ ಕೊಳಗೇರಿ ನಿವಾಸಿಗಳನ್ನು ಭೂಮಾಲಿಕರು ಓಡಿಸದಂತೆ ರಕ್ಷಿಸುವುದು, ಹೊರಗಿನ ಮೂಲಗಳಿಂದ ಸಾಲದ ಸಹಾಯ ಪಡೆದು ಆ ನಿವಾಸಿಗಳಿಗೆ ವಸತಿಗಳನ್ನು ನಿರ್ಮಿಸುವುದು, ಅನಧಿಕೃತ ಜೋಪಡಿಗಳನ್ನು ಕೆಡಹುವುದು, ಹೊಸ ಕೊಳಗೇರಿಗಳು ಹುಟ್ಟಿಕೊಳ್ಳದಂತೆ ನೋಡುವುದು, ಇತ್ಯಾದಿ. ಮಂಡಳಿಯನ್ನು ರಚಿಸುವ ಮೊದಲು ಕೊಳಗೇರಿಗಳನ್ನು ಸುಧಾರಿಸುವ ಅಥವಾ ನಿರ್ಮೂಲನೆ ಮಾಡುವ ಕೆಲಸವನ್ನು ಆಯಾಯಾ ನಗರದ ಪುರಸಭೆಗಳೋ ನಗರ, ಸಭೆಗಳೋ ಮಾಡುತ್ತಿದ್ದವು.

ಕರ್ನಾಟಕದಲ್ಲಿ ಸುಮಾರು 792 ಕೊಳಗೇರಿಗಳಿವೆಯೆಂದು ಗುರುತಿಸಿದ್ದಾರೆ. ಅವುಗಳಲ್ಲಿ ಬೆಂಗಳೂರು ನಗರವೊಂದರಲ್ಲೇ 290 ಕೊಳಗೇರಿಗಳಿವೆ (1982). ಈ ಕೊಳಗೇರಿಗಳ ಅಂದಾಜು ಜನಸಂಖ್ಯೆ ಐದು ಲಕ್ಷಕ್ಕಿಂತ ಹೆಚ್ಚು. ಇವುಗಳ ಪೈಕಿ ಬೆಂಗಳೂರಿನಲ್ಲಿರುವ 110 ಕೊಳಗೇರಿಗಳನ್ನು ಹಾಗೂ ಬೆಂಗಳೂರಿನ ಹೊರಗಿರುವ 441 ಕೊಳಗೇರಿಗಳನ್ನು 1973ರ ಕರ್ನಾಟಕ ಕೊಳಗೇರಿ ಪ್ರದೇಶಗಳ (ಸುಧಾರಣೆ ಮತ್ತು ನಿರ್ಮೂಲನೆ) ಕಾಯ್ದೆಯ ಸೆಕ್ಷನ್ 3 ರನ್ವಯ ಕೊಳಗೇರಿ ಪ್ರದೇಶಗಳೆಂದು ಸಾರಲಾಗಿದೆ. ಬೆಂಗಳೂರಿನಲ್ಲಿರುವ 290 ಕೊಳಗೇರಿಗಳ ಪೈಕಿ 64 ಕೊಳಗೇರಿಗಳು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧಿಕಾರ ಕ್ಷೇತ್ರದಲ್ಲಿ ಬರುತ್ತವೆ; 64 ಕೊಳಗೇರಿಗಳು ಬೆಂಗಳೂರು ನಗರ ಮಹಾನಗರಸಭೆಯ ವ್ಯಾಪ್ತಿಗೂ, ಉಳಿದ 162 ಕೊಳಗೇರಿಗಳು ಸರಕಾರೀ ಹಾಗೂ ಖಾಸಗಿ ಸ್ವಾಮ್ಯದ ಭೂಮಿಯಲ್ಲಿದ್ದು ಅವು ಕೊಳಗೇರಿ ನಿರ್ಮೂಲನಾ ಮಂಡಳಿಯ ಅಧಿಕಾರ ಕ್ಷೇತ್ರಕ್ಕೆ ಸೇರುತ್ತವೆ. ಬೆಂಗಳೂರು ನಗರದಲ್ಲಿರುವ ಕೊಳಗೇರಿಗಳ ಸುಧಾರಣೆ ಮತ್ತು ನಿರ್ಮೂಲನೆಯ ಬಗ್ಗೆ ಹೇಳುವುದಾದರೆ, ಈ ಕೆಲಸವನ್ನು ಕೊಳಗೇರಿ ನಿರ್ಮೂಲನಾ ಮಂಡಳಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಮತ್ತು ಬೆಂಗಳೂರು ನಗರ ಮಹಾನಗರಸಭೆ ಹೀಗೆ ಮೂರು ಅಧಿಕಾರಗಳು ನಿರ್ವಹಿಸುತ್ತವೆ.

ಕೊಳಗೇರಿ ನಿವಾಸಿಗಳಿಗೆ ಕಲ್ಯಾಣ ಕ್ರಮಗಳನ್ನು ಒದಗಿಸುವುದಕ್ಕಾಗಿ ಮಂಡಳಿಯು ಕೊಳಗೇರಿಗಳ ಸಾಮಾಜಿಕ ಆರ್ಥಿಕ ಸರ್ವೇಕ್ಷಣೆಯೊಂದನ್ನು ಕೈಗೆತ್ತಿಕೊಂಡಿದೆ. ಸುಮಾರು 130 ಕೊಳಗೇರಿಗಳ ಈ ಸಮೀಕ್ಷಾ ಕಾರ್ಯ ಮುಗಿದಿದ್ದು, ಕೊಳಗೇರಿಗಳಲ್ಲಿ ವಾಸಿಸುವ ಐದು ಲಕ್ಷ ನಿವಾಸಿಗಳ ಪೈಕಿ ಶೇಕಡಾ 50ಕ್ಕಿಂತ ಹೆಚ್ಚು ನಿವಾಸಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಸೇರಿದವರೆಂದು ಅಂದಾಜು ಮಾಡಲಾಗಿದೆ.

ಕೊಳೆಗೇರಿ ನಿವಾಸಿಗಳಿಗೆ ಸಿಗುತ್ತಿರುವ ಕಲ್ಯಾಣ ಕ್ರಮಗಳು ಎರಡು ರೀತಿಯವು 1) ಕೊಳೆಗೇರಿಗಳ ಪರಿಸರ ಸುಧಾರಣೆ ಮತ್ತು 2) ಮರು ವಸತಿಯೊಂದಿಗೆ ಕೊಳೆಗೇರಿಗಳ ನಿರ್ಮೂಲನೆ ಮತ್ತು ಪುನರಭಿವೃದ್ಧಿ.

ಪರಿಸರ ಸುಧಾರಣೆಯ ಯೋಜನೆಯನ್ವಯ ನೀರಿನ ಪೂರೈಕೆ, ಒಳಚರಂಡಿ ವ್ಯವಸ್ಥೆ, ದಾರಿ ದೀಪ, ಕಕ್ಕಸುಗಳು, ಓಣಿದಾರಿಗಳಿಗೆ ಕಲ್ಲುಚಪ್ಪಡಿ ಹಾಸುವುದು, ಚರಂಡಿ ನೀರು ಹರಿದು ಹೋಗುವಂತೆ ಬದಿ ಚರಂಡಿ ವ್ಯವಸ್ಥೆ, ಇತ್ಯಾದಿ ಅತ್ಯವಶ್ಯಕ ಸೌಕರ್ಯಗಳನ್ನು ಒದಗಿಸಲಾಗಿದೆ. ಡಿಸೆಂಬರ್ 1981ರ ಕೊನೆಯೊಳಗಾಗಿ ಮಂಡಳಿಯು 86 ಕೊಳೆಗೇರಿಗಳಿಗೆ 155.75 ಲಕ್ಷ ರೂ. ಖರ್ಚು ಮಾಡಿ ಅತ್ಯವಶ್ಯಕ ಸೌಕರ್ಯಗಳನ್ನು ಒದಗಿಸಿತ್ತು. ಬೆಂಗಳೂರು ನಗರದಲ್ಲಿ ಮಂಡಳಿಯ ವ್ಯಾಪ್ತಿಗೆ ಬರುವ 162 ಕೊಳೆಗೇರಿಗಳಲ್ಲಿ 77 ಕೊಳೆಗೇರಿಗಳ ಸುಧಾರಣಾ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. ಇವುಗಳಲ್ಲಿ 44ರಲ್ಲಿ ಕೆಲಸ ಮುಗಿದಿದೆ. 1980-81ರ ಅವಧಿಯಲ್ಲಿ ಮಂಡಳಿಯು ಈ ಸುಧಾರಣಾ ಕಾರ್ಯಗಳಿಗಾಗಿ 90 ಲಕ್ಷ ರೂ. ಖರ್ಚು ಮಾಡಿದೆ. ಮಂಡಳಿ ರಚನೆಯಾದಂದಿನಿಂದ 1981ರ ಡಿಸೆಂಬರ್ ಕೊನೆಯವರೆಗೆ ಅದು ಹಲವು ಪುರಸಭೆ ಮತ್ತು ನಗರಸಭೆಗಳಲ್ಲಿರುವ ಕೊಳೆಗೇರಿಗಳ ಸುಧಾರಣೆ ಮತ್ತು ನಿರ್ಮೂಲನೆಗಾಗಿ 2.82 ಕೋಟಿ ರೂ.ಗಳಷ್ಟು ಖರ್ಚು ಮಾಡಿದೆ. ಹುಡ್ಕೊ ಸಹಾಯದಿಂದ ಅದು 16 ಗೃಹ ನಿರ್ಮಾಣ ಯೋಜನೆಗಳನ್ನು ತೆಗೆದುಕೊಂಡಿದೆ. 1981-82ರ ಕೊನೆಯೊಳಗಾಗಿ 86 ಕೊಳೆಗೇರಿಗಳಲ್ಲಿ ಅತ್ಯವಶ್ಯಕ ಸೌಕರ್ಯಗಳನ್ನು ಒದಗಿಸಲಾಗಿದ್ದು, 676 ವಾಸದ ಮನೆಗಳನ್ನು ಕಟ್ಟಿ, ಅವುಗಳನ್ನು ಕೊಳೆಗೇರಿ ನಿವಾಸಿಗಳಿಗೆ ಹಂಚಲಾಗಿದೆ. ತ್ವರಿತ ನಗರೀಕರಣ ಸೌಲಭ್ಯಗಳು ಎಂಬ ಕಾರ್ಯಕ್ರಮದನ್ವಯ ಕರ್ನಾಟಕ ಕೊಳೆಗೇರಿ ಪ್ರದೇಶ ನಿರ್ಮೂಲನಾ ಮಂಡಳಿಯು ಪ್ರತೀಯೊಂದು ಜಿಲ್ಲೆಯಲ್ಲಿ ಒಂದು, ಹಾಗೂ ಬೆಂಗಳೂರು ನಗರದಲ್ಲಿ ನಾಲ್ಕು ಕೊಳಚೆ ಪ್ರದೇಶಗಳಲ್ಲಿ ಪರಿಸರ ಸುಧಾರಣಾ ಕಾರ್ಯವನ್ನು ಕೈಗೊಂಡು ಅಲ್ಲಿಯ ನಿವಾಸಿಗಳಿಗೆ ತಕ್ಷಣದ ಅತ್ಯವಶ್ಯಕ ಸೌಕರ್ಯಗಳನ್ನು ಒದಗಿಸಲು ಯೋಚಿಸಿದೆ.

ಯಾವ ಕೊಳೆಗೇರಿಗಳನ್ನು ಸುಲಭವಾಗಿ ಚೊಕ್ಕ ಕಾಲನಿಗಳಾಗಿ ಮಾರ್ಪಡಿಸುವುದು ಅಸಾಧ್ಯವೋ ಅಂಥವುಗಳನ್ನು ನಿರ್ಮೂಲನಾ ಯೋಜನೆಯಲ್ಲಿ ತೆಗೆದುಕೊಳ್ಳಲಾಗುವುದು. ಈ ಯೋಜನೆಯಂತೆ ಕೊಳೆಗೇರಿಗಳಲ್ಲಿ ಈಗಿರುವ ಗುಡಿಸಲುಗಳನ್ನೂ ಕಟ್ಟಡಗಳನ್ನೂ ನೆಲಸಮ ಮಾಡಿ ಪ್ರತ್ಯೇಕ ವಾಸದ ಮನೆಗಳನ್ನು ಕಟ್ಟಿ ಅವುಗಳನ್ನು ಕೊಳೆಗೇರಿ ನಿವಾಸಿಗಳಿಗೆ ವಿತರಿಸಲಾಗುವುದು. 1979ರಲ್ಲಿ ಬೆಂಗಳೂರು ನಗರದಲ್ಲಿ 46.50 ಲಕ್ಷ ರೂ. ಅಂದಾಜು ವೆಚ್ಚದಲ್ಲಿ ಇಂಥ ಯೋಜನೆಗಳನ್ನು ತೆಗೆದುಕೊಳ್ಳಲಾಗಿತ್ತು. ಕೆಲವು ಪ್ರಕರಣಗಳಲ್ಲಿ ಕಾಯ್ದೆಯ ಅಡೆತಡೆ ಮತ್ತು ಸಮಸ್ಯೆಗಳಿಂದಾಗಿ ಪ್ರಗತಿ ಬಹಳ ನಿಧಾನವಾಗಿತ್ತು. 1980ರಲ್ಲಿ ಹುಡ್ಕೋ ಸಂಸ್ಥೆಯು ಬೆಂಗಳೂರು ನಗರದಲ್ಲಿ 3,456 ಮನೆಗಳನ್ನು ಕಟ್ಟುವ ಸಲುವಾಗಿ 268.20 ಲಕ್ಷ ರೂ. ಅಂದಾಜು ವೆಚ್ಚದ ಆರು ಯೋಜನೆಗಳಿಗೆ ಮಂಜೂರಾತಿ ನೀಡಿತು. ಮಂಡಳಿಯು ಕಲ್ಬುರ್ಗಿ, ಬಿದರೆ, ಬಳ್ಳಾರಿ, ರಾಯಚೂರು, ಮೈಸೂರು, ಮಂಡ್ಯ, ಹಾಸನ ಮತ್ತು ಶಿವಮೊಗ್ಗಗಳಲ್ಲಿ 167.49 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಕೊಳೆಗೇರಿ ನಿವಾಸಿಗಳಿಗಾಗಿ 2,276 ವಾಸದ ಮನೆಗಳನ್ನು ಕಟ್ಟುವ ಯೋಜನೆಯನ್ನು ಹೊಂದಿದೆ. 1981-82ರಲ್ಲಿ ಮಂಡಳಿಯು ಕೊಳೆಗೇರಿಗಳಿಗೆ ಕುಡಿಯುವ ನೀರು ಪೂರೈಸುವ ಒಂದು ತ್ವರಿತ ಕಾರ್ಯಕ್ರಮವನ್ನು ಪ್ರಾರಂಭಿಸಿ ಅದನ್ನು ಯಶಸ್ವಿಯಾಗಿ ಮುಗಿಸಿದೆ. 1982-83ರಲ್ಲಿ ರಾಜ್ಯದ ಕೊಳೆಗೇರಿಗಳಲ್ಲಿ ಬೀದಿ ದೀಪಗಳನ್ನು ಹಾಕುವ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು.

ಅನಧಿಕೃತ ಕಟ್ಟಡಗಳು ಹುಟ್ಟಿಕೊಂಡು ಕೊಳೆಗೇರಿಗಳು ನಿರ್ಮಾಣವಾಗುವುದನ್ನು ತಡೆಯಲು ಸರಕಾರವು 1973ರ ಕರ್ನಾಟಕ ಕೊಳೆಗೇರಿ ಪ್ರದೇಶ (ಸುಧಾರಣೆ ಮತ್ತು ನಿರ್ಮೂಲನೆ) ಕಾಯ್ದೆಯ ಸೆಕ್ಷನ್ 5ನ್ನು ತಿದ್ದುಪಡಿ ಮಾಡಿದೆ. ಬೆಂಗಳೂರು ನಗರದಲ್ಲಿ 2,466 ಗುಡಿಸಿಲುಗಳನ್ನು ಮಂಡಳಿಯು ನೆಲಸಮ ಮಾಡಿದೆ (1981). ಮಾರ್ಚ್ 1981ರಿಂದ ಅಂಥ ಗುಡಿಸಲುಗಳನ್ನು ನಿರ್ಮೂಲನೆ ಮಾಡಲು ಮಂಡಳಿಯು ಒಬ್ಬ ಸಹಾಯಕ ಕಾರ್ಯನಿರ್ವಾಹಕ (ಎಕ್ಸಿಕ್ಯೂಟೀವ್) ಇಂಜಿನಿಯರ್‌ನ ನೇತೃತ್ವದಲ್ಲಿ ಒಂದು ವಿಶೇಷ ದಳವನ್ನು ರಚಿಸಿದೆ.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ತನ್ನ ಅಧಿಕಾರದ ಕಕ್ಷೆಯಲ್ಲಿ ಬರುವ ಸುಮಾರು 50,000 ಜನಸಂಖ್ಯೆಯಿರುವ 64 ಕೊಳೆಗೇರಿಗಳನ್ನು ಸುಧಾರಣೆಗಾಗಿ ತೆಗೆದುಕೊಂಡಿದೆ. ಅದು ಐದು ಶಾಲೆಗಳ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಂಡಿದೆಯಲ್ಲದೆ ನೀರಿನ ಸರಬರಾಜಿಗಾಗಿ ಹನ್ನೆರಡು ಕೊಳವೆ ಬಾವಿಗಳನ್ನು ತೋಡಿಸಿದೆ. 1980-81ನೇಯ ವರ್ಷದಲ್ಲಿ ಪ್ರಾಧಿಕಾರವು ಕೊಳೆಗೇರಿ ನಿವಾಸಿಗಳಿಗಾಗಿ 4.81 ಲಕ್ಷ ರೂ.ಗಳನ್ನು ಖರ್ಚು ಮಾಡಿದೆ. 1981-82ನೇಯ ವರ್ಷದ ಅಂತ್ಯದ ವೇಳೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಕೊಳೆಗೇರಿಗಳ ಸುಧಾರಣೆಗಾಗಿ 55 ಲಕ್ಷ ರೂ.ಗಳನ್ನು ಖರ್ಚು ಮಾಡಿತ್ತು. 1981-82ರ ಅಂತ್ಯದವರೆಗೆ ಕೊಳೆಗೇರಿ ನಿವಾಸಿಗಳಿಗಾಗಿ 5,080 ನಿವೇಶನಗಳನ್ನು ಹಂಚಲಾಗಿತ್ತು. ಕೊಳೆಗೇರಿ ನಿವಾಸಿಗಳಿಗೋಸ್ಕರ ಮನೆಗಳನ್ನು ಕಟ್ಟಲು ಪ್ರಾಧಿಕಾರವು ನಗರದ ಪರಿಮಿತಿಯ ಹೊರಗೆ 250 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದು, 55 ಎಕರೆ ಭೂಮಿಯನ್ನು ಮನೆಗಳ ನಿರ್ಮಾಣಕ್ಕಾಗಿ ಈಗಾಗಲೇ

ಕರ್ನಾಟಕ ಕೊಳೆಗೇರಿ ನಿರ್ಮೂಲನಾ ಮಂಡಳಿಗೆ ಒಪ್ಪಿಸಿ ಕೊಳ್ಳಲಾಗಿದೆ.

### ಭಿಕ್ಷುಕರ ಪರಿಹಾರ

ಭಿಕ್ಷಾಟನೆಯ ಸಮಸ್ಯೆಯನ್ನು ಪರಿಹರಿಸಲು ಅರಸ ರಾಜ್ಯಾಡಳಿತೆಯ ಮೈಸೂರು ಸಂಸ್ಥಾನದಲ್ಲಿ 1944ರಷ್ಟು ಹಿಂದೆಯೇ ಪ್ರಯತ್ನ ಮಾಡಲಾಗಿತ್ತು. ಆ ವರ್ಷ ಮೈಸೂರು ಭಿಕ್ಷಾಟನಾ ನಿಷೇಧ ಕಾಯ್ದೆಯನ್ನು ಜಾರಿಗೊಳಿಸಿ ಅದನ್ನು ಬೆಂಗಳೂರು ಮತ್ತು ಮೈಸೂರು ನಗರಗಳ ನಗರಸಭೆಯ ಪರಿಮಿತಿಯೊಳಗೆ ಅನ್ವಯಿಸಲಾಗಿತ್ತು. ಆ ಕಾಯ್ದೆಯನ್ವಯ ಭಿಕ್ಷುಕರ ನಿಯಂತ್ರಣ ಮತ್ತು ಪರಿಹಾರಕ್ಕಾಗಿ ಕೇಂದ್ರ ಭಿಕ್ಷುಕರ ಪರಿಹಾರ ಸಮಿತಿಯನ್ನು ರಚಿಸಲಾಗಿತ್ತು.

1975ರ ಕರ್ನಾಟಕ ನಿಷೇಧ ಕಾಯ್ದೆಯು ರಾಜ್ಯದಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶಗಳಲ್ಲಿ ಯಾವುದೇ ರೂಪದ ಭಿಕ್ಷಾಟನೆಯನ್ನು ನಿಷೇಧಿಸುತ್ತದೆ. ಕೆಲವು ತಿದ್ದುಪಡಿಗಳೊಡನೆ 1981ರಲ್ಲಿ ಈ ಕಾಯ್ದೆಯನ್ನು ಹಾಸನ, ದಾವಣಗೆರೆ, ಬೆಳಗಾವಿ, ವಿಜಾಪುರ, ಬಳ್ಳಾರಿ, ಬೆಂಗಳೂರು, ಕಲ್ಬುರ್ಗಿ, ಹುಬ್ಬಳ್ಳಿ-ಧಾರವಾಡ, ಮಂಗಳೂರು, ಮೈಸೂರು ಮತ್ತು ಶಿವಮೊಗ್ಗ ಪುರಸಭೆ ಮತ್ತು ನಗರಸಭಾ ಪ್ರದೇಶಗಳಿಗೆ ವಿಸ್ತರಿಸಲಾಗಿದೆ. ಆದರೆ ಈ ಕಾಯ್ದೆಯನ್ನು ರಾಜ್ಯದ ಯಾತ್ರಾಸ್ಥಳಗಳಿಗೂ ಪ್ರವಾಸಿ ಕೇಂದ್ರಗಳಿಗೂ ಈವರೆಗೆ ವಿಸ್ತರಿಸಲಾಗಿಲ್ಲ. ಈಗ ಇದನ್ನು ಪ್ರವಾಸಿ ಕೇಂದ್ರವಾದ ಹಂಪೆಗೆ ವಿಸ್ತರಿಸುವ ಪ್ರಯತ್ನ ಮಾಡಲಾಗುತ್ತಿದೆ. ಭಿಕ್ಷಾಟನಾ ನಿಷೇಧ ಕಾಯ್ದೆ ಜಾರಿಯಲ್ಲಿರುವ ಪುರಸಭೆಯ ಪ್ರದೇಶಗಳಲ್ಲಿ ಭಿಕ್ಷುಕರ ಕಲ್ಯಾಣ ಕ್ರಮಗಳಿಗಾಗಿ ವಿನಿಯೋಗಿಸಲು ಪ್ರತಿಯೊಂದು ರೂಪಾಯಿ ತೆರಿಗೆಗೆ ಮೂರು ಪೈಸೆಗಳಷ್ಟು ಭಿಕ್ಷಾಟನಾ ಉಪಕರ (ಸೆಸ್) ವನ್ನು ವಸೂಲು ಮಾಡಲಾಗುತ್ತಿದೆ. ಭಿಕ್ಷಾಟನಾ ಪರಿಹಾರ ಕಾರ್ಯಕ್ರಮದನ್ವಯ ಬೆಂಗಳೂರು, ಮೈಸೂರು ಮತ್ತು ದಾವಣಗೆರೆಗಳಲ್ಲಿ ಮೂರು ಪರಿಹಾರ ಕೇಂದ್ರಗಳು ಕೆಲಸ ಮಾಡುತ್ತಿವೆ. ಬೆಂಗಳೂರಿನ ಪುನರ್‌ವಸತಿ ಕೇಂದ್ರದಲ್ಲಿ ಭಿಕ್ಷುಕರಿಗೆ ಯಾವುದಾದರೊಂದು ಉಪಯುಕ್ತ ಕಸುಬಿನಲ್ಲಿ ತರಬೇತಿ ಕೊಡಬೇಕೆಂಬ ಉದ್ದೇಶದಿಂದ ಒಂದು ಔದ್ಯೋಗಿಕ ತರಬೇತಿ ಕೇಂದ್ರವನ್ನು ತೆರೆಯಲಾಗಿದೆ. ಅಲ್ಲಿ ತರಬೇತಿ ಪಡೆಯುವ ಭಿಕ್ಷುಕರಿಗೆ ತಾವು ಮಾಡಿದ ಕೆಲಸಕ್ಕಾಗಿ ದಿನಕ್ಕೆ ಎರಡು ರೂಪಾಯಿ ಕೂಲಿಯನ್ನು ಕೊಡುತ್ತಾರೆ. ಭಿಕ್ಷುಕರು ಕ್ಷಯರೋಗ ಅಥವಾ ಕುಷ್ಠರೋಗದಿಂದ ಬಳಲುತ್ತಿರುವುದು ಕಂಡುಬಂದರೆ ಅವರನ್ನು ಚಿಕಿತ್ಸೆಗಾಗಿ ಆರೋಗ್ಯಧಾಮಗಳಿಗೆ ಕುಷ್ಠರೋಗ ಚಿಕಿತ್ಸಾಲಯಗಳಿಗೆ ಕಳುಹಿಸಿಕೊಡಲಾಗುತ್ತದೆ. 1982ನೇಯ ವರ್ಷದಲ್ಲಿ ಬೆಂಗಳೂರಿನಲ್ಲಿರುವ ರಾಜ್ಯ ನಿರಾಶ್ರಿತರ ಪರಿಹಾರ ಕೇಂದ್ರದಲ್ಲಿ 430 ನಿವಾಸಿಗಳೂ, ಮೈಸೂರಿನಲ್ಲಿರುವ ಕೇಂದ್ರದಲ್ಲಿ 84 ನಿವಾಸಿಗಳೂ ಮತ್ತು ದಾವಣಗೆರೆ ಕೇಂದ್ರದಲ್ಲಿ 23 ನಿವಾಸಿಗಳೂ ಇದ್ದರು.

### ಜೀತದಾಳುಗಳ ಪುನರ್‌ವಸತಿ

ಗ್ರಾಮೀಣ ದುರ್ಬಲವರ್ಗಗಳ ಜನರಿಗಾಗಿ ಯೋಜಿಸಿದ ಕಲ್ಯಾಣ ಕಾರ್ಯಕ್ರಮಗಳಲ್ಲಿ ಜೀತದಾಳುಗಳ ಬಿಡುಗಡೆ ಹಾಗೂ ಪುನರ್ವಸತಿಯೂ ಸೇರಿವೆ. ಇದು ಕೇಂದ್ರ ಸರಕಾರವು ಪುರಸ್ಕರಿಸಿದ ಯೋಜನೆ. 1976ರಲ್ಲಿ ಜಾರಿಗೆ ಬಂದ ಜೀತ ಪದ್ಧತಿ (ನಿರ್ಮೂಲನೆ) ಕಾಯ್ದೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಜೀತದಾಳುಗಳನ್ನು ಬಂಧಮುಕ್ತರನ್ನಾಗಿ ಮಾಡಲು ಅವಕಾಶವಿದೆ. ರಾಜ್ಯದಲ್ಲಿ ಈ ಕಾಯ್ದೆಯನ್ನು ಜಿಲ್ಲಾ ದಂಡಾಧಿಕಾರಿಗಳು/ಜಿಲ್ಲಾಧಿಕಾರಿಗಳು ಅನುಷ್ಠಾನಕ್ಕೆ ತರುತ್ತಾರೆ. ಡಿಸೆಂಬರ್ 1979ರ ಅಂತ್ಯದವರೆಗೆ 62,689 ಜೀತದಾಳುಗಳನ್ನು ಗುರುತಿಸಿ ಬಿಡುಗಡೆ ಮಾಡಲಾಗಿತ್ತು. ಅವರಲ್ಲಿ 9,403 ಜೀತದಾಳುಗಳಿಗೆ 56·32 ಲಕ್ಷ ರೂ. ಧನಸಹಾಯದಿಂದ ಪುನರ್ವಸತಿ ಕಲ್ಪಿಸಲಾಗಿತ್ತು. ಅವರು ಈಗ ಕೃಷಿ ಕೂಲಿಗಾರರಾಗಿ, ಲೋಕೋಪಯೋಗಿ ಮತ್ತು ಅರಣ್ಯ ಇಲಾಖೆಗಳ ಕೆಲಸಗಾರರಾಗಿ ದುಡಿಯುತ್ತಿದ್ದಾರೆ. 1979-80ರ ಅಂತ್ಯದವರೆಗೆ ಚಿತ್ರದುರ್ಗ, ಕೋಲಾರ, ಶಿವಮೊಗ್ಗ, ಬೆಳಗಾವಿ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಜೀತಮುಕ್ತರ ಪುನರ್ವಸತಿಗಾಗಿ ವಿವಿಧ ಯೋಜನೆಗಳನ್ನು ಕೈಗೊಳ್ಳಲಾಗಿತ್ತು.

### ಅಂಗವಿಕಲರ ಕಲ್ಯಾಣ

ಭೌತಿಕ ಹಾಗೂ ಮಾನಸಿಕ ಅಂಗವಿಕರ ಕಲ್ಯಾಣವು ಈ ಶತಮಾನದಲ್ಲಿ ಹಿಂದೆಂದಿಗಿಂತಲೂ ಹೆಚ್ಚು ಮಹತ್ವವನ್ನು ಪಡೆದಿದೆ. ಅಂಗವಿಕಲರು ಎಂಥ ವೈಕಲ್ಯದಿಂದ ಬಳಲುತ್ತಿದ್ದಾರೆ, ಎಂಬುದನ್ನು ಲಕ್ಷಿಸಿ, ಹಾಗೂ ಯಾವ ವೃತ್ತಿಯಲ್ಲಿ ಅವರಿಗೆ ಅಭಿರುಚಿ ಮತ್ತು ಸಾಮರ್ಥ್ಯಗಳಿವೆ ಎಂಬುದನ್ನು ಆಧರಿಸಿ, ಯುಕ್ತವಾದ ಶಿಕ್ಷಣ ಹಾಗೂ ತರಬೇತಿ ಕೊಡುವುದು ಯಾವುದೇ ಪುನರ್ವಸತಿ ಕ್ರಮಗಳಲ್ಲಿ ಅಗತ್ಯವಾದ ಮಾರ್ಗವಾಗಿದೆ. ಈ ಕ್ಷೇತ್ರದಲ್ಲಿ ಕರ್ನಾಟಕವು ದೇಶದ ಬೇರೆ ಯಾವುದೇ ಭಾಗಕ್ಕಿಂತ ಹಿಂದೆ ಬಿದ್ದಿಲ್ಲ. ರಾಜ್ಯದಲ್ಲಿ ಇದಕ್ಕೆ ಸರಕಾರಿ ಹಾಗೂ ಸ್ವಯಂ ಸೇವಾ ಸಂಘಟನೆಗಳೆರಡೂ ಸಾಕಷ್ಟು ಅವಕಾಶ ಕಲ್ಪಿಸಿವೆ. 1956ರಲ್ಲಿ ರಾಜ್ಯಗಳ ಪುನರ್ಘಟನೆಯ ಹೊತ್ತಿಗೆ ಅಂಗವಿಕಲ ಮಕ್ಕಳಿಗಾಗಿ ಮೈಸೂರಿನಲ್ಲಿ ಒಂದು, ಹುಬ್ಬಳ್ಳಿಯಲ್ಲಿ ಇನ್ನೊಂದು, ಹೀಗೆ ಕೇವಲ ಎರಡು ಶಾಲೆಗಳು ಮಾತ್ರ ಇದ್ದವು. 1920ರ ದಶಕದ ನಂತರವೇ ಅಂಗವಿಕಲರ ಶಿಕ್ಷಣ ಮತ್ತು ಕಲ್ಯಾಣಕ್ಕೆ ಹೆಚ್ಚು ಗಮನ ಕೊಡಲಾಯಿತು. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಅನೇಕ ಸ್ವಯಂಸೇವಾ ಸಂಸ್ಥೆಗಳ ಜೊತೆ

ಗೂಡಿ ರಾಜ್ಯದಲ್ಲಿ ಅಂಗವಿಕಲರ ಕಲ್ಯಾಣಕ್ಕಾಗಿ ಹಲವಾರು ಯೋಜನೆಗಳನ್ನು ಕೈಗೊಂಡಿದೆ.

ಹಿಂದೆ ಅರಸರ ಆಳ್ವಿಕೆಯು ಮೈಸೂರು ಸಂಸ್ಥಾನವು ಕೈಗೊಂಡ ವಿವಿಧ ಕಲ್ಯಾಣಕಾರ್ಯಗಳಲ್ಲಿ ಅಶಕ್ತರು, ಕುರುಡರು, ಮತ್ತಿತರ ಅಂಗವಿಕಲ ಜನರಿಗೆ ಧರ್ಮದ ಊಟ ಉಣ್ಣಿಸುತ್ತಿದ್ದ ಅನ್ನಛತ್ರಗಳನ್ನೂ, ಮೈಸೂರಿನಲ್ಲಿ ಅಶಕ್ತರಿಗೆ, ಕುರುಡರಿಗೆ, ನಿರ್ಗತಿಕ ಮತ್ತು ವಿಧವೆಯರಿಗೆ, ಮತ್ತಿತರರಿಗೆ ಅರಮನೆಯು ಕೊಡುತ್ತಿದ್ದ ಕಂಗಾಲರ ಅಕ್ಕಿ ಯೋಜನೆಯನ್ನು ಎತ್ತಿ ಹೇಳಬಹುದು. 1926ರಲ್ಲಿ ಕೆಲವು ಅನ್ನಛತ್ರಗಳನ್ನು ಮುಚ್ಚಲಾಯಿತು. ಇದರಿಂದ ಉಳಿದ ಹಣವನ್ನು ಕಿವುಡ, ಮೂಕ ಮತ್ತು ಕುರುಡರಿಗೆ ಪರಿಹಾರ ಕೊಡುವ ಸಂಸ್ಥೆಗಳಿಗೂ, ಅನಾಥಾಲಯಗಳಿಗೂ ಸಹಾಯಧನವೆಂದು ಕೊಡಲಾಯಿತು. ದಟ್ಟಪರಿದ್ರರಿಗೆ ಹಾಗೂ ದೈಹಿಕ ಅಸಾಮರ್ಥ್ಯವುಳ್ಳ ಜನರಿಗೆ ಹಿಂದಿನಂತೆಯೇ ನೆಹಿಮಿ ಹಣ ಕೊಡುವುದನ್ನು ಮುಂದುವರಿಸಲಾಯಿತು.

ನಮ್ಮ ಜನಗಣತಿಯಲ್ಲಿ ದೈಹಿಕ ಅಸಾಮರ್ಥ್ಯಗಳಿಂದ ಬಳಲುವ ಜನರ ಬಗ್ಗೆ ಅಂಕಿ ಸಂಖ್ಯೆಗಳನ್ನು ಸಂಗ್ರಹಿಸುವುದನ್ನು 1981ರಲ್ಲಿ ಮತ್ತೆ ಪ್ರಾರಂಭಿಸಲಾಗಿದೆ. ಇಂಥ ಮಾಹಿತಿ ನಂಬಲರ್ಹವಲ್ಲ ಎಂಬುದಕ್ಕಾಗಿಯೂ, ಬೇರೆ ಕೆಲವು ಕಾರಣಗಳಿಂದಲೂ ಆ ಬಗ್ಗೆ ಮಾಹಿತಿ ಸಂಗ್ರಹಿಸುವುದನ್ನು 1941 ರಿಂದ ಕೈಬಿಡಲಾಗಿತ್ತು. 1981ರ ಜನಗಣತಿಯಲ್ಲಿ ಈ ಮಾಹಿತಿಯನ್ನು ಮನೆಗಳ ಪಟ್ಟಿ ಮಾಡುವ ಕಾಲದಲ್ಲಿ ಸಂಗ್ರಹಿಸಲಾಯಿತು. ಆದರೆ ಅಂಗವಿಕಲ ವ್ಯಕ್ತಿಯು ಗಂಡೋ ಹೆಣ್ಣೋ ಎಂಬುದನ್ನು ಮಾತ್ರ ನಮೂದಿಸಲಾಗಲಿಲ್ಲ. ಪೂರ್ಣ ಕುರುಡರು, ಪೂರ್ಣ ಕುಂಟರು ಮತ್ತು ಮೂಗರು ಎಷ್ಟಿದ್ದಾರೆ ಎಂಬ ಮಾಹಿತಿಯನ್ನು ಕಲೆ ಹಾಕಲಾಗಿದೆ. ಗಣತಿದಾರನು ಗಣತಿಯ ಸಮಯದಲ್ಲಿ ಅಂಗವಿಕಲರು ಎಷ್ಟರಮಟ್ಟಿಗೆ ಅಸಮರ್ಥರಿದ್ದಾರೆ ಎಂಬುದನ್ನು ನಿರ್ಣಯಿಸುವುದು ಸಾಧ್ಯವಾಗದೇ ಹೋಗಿ, ಪೂರ್ಣ ಅಂಗವಿಕಲರ ಅಂಕೆಸಂಖ್ಯೆಗಳನ್ನು ಮಾತ್ರ ಸಂಗ್ರಹಿಸಲಾಗಿದೆ. 1981ರ ಜನಗಣತಿಯ ಒಂದು ಮುಖ್ಯವಾದ ನ್ಯೂನತೆಯೆಂದರೆ ಅದರಲ್ಲಿ ಮನೆಯಿಲ್ಲದ ಜನರ ಬಗ್ಗೆ ಇಂಥ ಮಾಹಿತಿ ಇಲ್ಲ. ಹಾಗೆ ನೋಡಿದರೆ ಈ ಜನರಲ್ಲಿಯೇ ಇಂಥ ಅಂಗವಿಕಲತೆ ಬಹು ದೊಡ್ಡ ಪ್ರಮಾಣದಲ್ಲಿರುತ್ತದೆ. ಮನೆಗಳ ಗಣತಿ ಮಾಡುವಾಗ ಬೀದಿಯ ಬದಿಗಳಲ್ಲಿರುವ, ಬಸ್ ಮತ್ತು ರೈಲು ನಿಲ್ದಾಣಗಳಲ್ಲಿರುವ, ದೇವಸ್ಥಾನ, ಮಂಟಪ, ಇತ್ಯಾದಿ ಜಾಗಗಳಲ್ಲಿ ಕಂಡುಬರುವ ಭಿಕ್ಷುಕರು, ಕುಷ್ಠರೋಗಿಗಳು, ಮತ್ತಿತರರು ಈ ಗಣತಿಯಲ್ಲಿ ಸಿಗುವುದಿಲ್ಲ. ಹಿಂದಿನ ಜನಗಣತಿಗಳನ್ನು ಹೋಲಿಸಿ ನೋಡಿದರೆ 1981ರ ಜನಗಣತಿಯಲ್ಲಿ ಕುರುಡರ ಮತ್ತು ಕಿವುಡರ ಸಂಖ್ಯೆ ಬಹು ದೊಡ್ಡ ಪ್ರಮಾಣದಲ್ಲಿ ಏರಿರುವುದನ್ನು ನೋಡುತ್ತೇವೆ. ನಾವು ಈ ಪ್ರಮಾಣಕ್ಕೂ ಆ ವರ್ಷದಲ್ಲಿದ್ದ ಒಟ್ಟು ಜನಸಂಖ್ಯೆಗೂ ಇರುವ ಸಂಬಂಧವನ್ನು ಗಮನದಲ್ಲಿಟ್ಟುಕೊಂಡರೆ ಈ ಹೆಚ್ಚಳ ಸ್ಪಷ್ಟವಾಗುತ್ತದೆ. ಇದೂ ಅಲ್ಲದೆ, ವಾಸ್ತವ ಸಂಗತಿಗಳನ್ನು ಕಂಡುಹಿಡಿಯುವುದರಿಂದ ಕಲ್ಯಾಣ ಕಾರ್ಯದಲ್ಲಿ ತೊಡಗಿದ ಸಂಸ್ಥೆಗಳು ಅಂಗವಿಕಲರ ಪುನರ್‌ವಸತಿ ಮುಂತಾದ ಕ್ರಮಗಳನ್ನು ಕೈಕೊಳ್ಳಲು ಅನುಕೂಲವಾಗುವುದೆಂಬುದನ್ನು ಜನರು ಈಗ ಮನಗಂಡಿದ್ದಾರೆ (ಅಂಗವಿಕಲರ ಬಗ್ಗೆ ಇರುವ ಅಂಕಿ ಸಂಖ್ಯೆಗಳಿಗಾಗಿ ಭಾಗ I, ಪುಟ 325 ನೋಡಿ).

ಅಂಗವಿಕಲ ಮಕ್ಕಳಿಗೆ ಕಲ್ಯಾಣ ಕಾರ್ಯಕ್ರಮಗಳನ್ನು ಒದಗಿಸುವ ಜವಾಬ್ದಾರಿಯನ್ನು ರಾಜ್ಯದ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ಒಪ್ಪಿಸಲಾಗಿದೆ. ಅದು ಮೈಸೂರು, ಹುಬ್ಬಳ್ಳಿ, ಕಲ್ಬುರ್ಗಿ, ದಾವಣಗೆರೆ, ಬೆಳಗಾವಿ ಮತ್ತು ಬಳ್ಳಾರಿಗಳಲ್ಲಿ ಕುರುಡ ಮತ್ತು ಕಿವುಡ ಮಕ್ಕಳಿಗಾಗಿ ಎಂಟು ವಸತಿ ಶಾಲೆಗಳನ್ನು ನಡೆಸುತ್ತಿದೆ. ವೃತ್ತಿ ತರಬೇತಿಗಳಾದ ಸಂಗೀತ, ಬೆತ್ತದ ಹೆಣಿಗೆ, ಕಸೂತಿ, ಹೊಲಿಗೆ, ಹೆಣಿಗೆಗಳನ್ನೊಳಗೊಂಡಂತೆ ಏಳನೇಯ ತರಗತಿಯವರೆಗೆ ಶಿಕ್ಷಣ ನೀಡಲಾಗುತ್ತದೆ. ಮೈಸೂರು ಮತ್ತು ಕಲ್ಬುರ್ಗಿಗಳಲ್ಲಿ ಎಸ್.ಎಸ್.ಎಲ್.ಸಿ.ವರೆಗೆ ತರಗತಿಗಳನ್ನು ಪ್ರಾರಂಭಿಸಲಾಗಿದೆ. ಮಾರ್ಚ್ 31, 1982ರ ವೇಳೆಗೆ ಈ ಸಂಸ್ಥೆಗಳಲ್ಲಿ 405 ಮಕ್ಕಳಿದ್ದರು. ಈ ಶಾಲೆಗಳನ್ನು ನಡೆಸುವುದರ ಜೊತೆಗೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಸ್ವಯಂಸೇವಾ ಸಂಸ್ಥೆಗಳಿಗೆ ಕುರುಡ, ಕಿವುಡ ಮತ್ತು ಮನೋ ವಿಕಲ ವ್ಯಕ್ತಿಗಳಿಗಾಗಿ ವಾಕ್‌ಶ್ರವಣ ಕೇಂದ್ರಗಳನ್ನು ತೆರೆಯಲು ಹಣಕಾಸಿನ ನೆರವನ್ನು ನೀಡುತ್ತದೆ. ಶಾಲೆಗಳ ಶಿಕ್ಷಕರಿಗೆ ಕೊಡುವ ಸಂಬಳದ ಮಟ್ಟಿಗೆ ನೂರಕ್ಕೆ ನೂರರಷ್ಟು ಧನ ಸಹಾಯವನ್ನೂ, ಅನಾವರ್ತ ಖರ್ಚಿನ ಪ್ರತಿಶತ ಐವತ್ತರಷ್ಟನ್ನೂ ಅನುದಾನವಾಗಿ ಕೊಡಲಾಗುತ್ತದೆ. ಸ್ವಯಂಸೇವಾ ಸಂಘಟನೆಗಳು ಮಾನಸಿಕ ಮತ್ತು ಶಾರೀರಿಕವಾಗಿ ವಿಕಲರಾದ ಮಕ್ಕಳಿಗೋಸ್ಕರ ನಡೆಸುವ ವಸತಿಗೃಹ, ಅನಾಥಾಲಯ ಮತ್ತಿತರ ಸಂಸ್ಥೆಗಳಿಗೂ ಧನ ಸಹಾಯ ಕೊಡಲಾಗುತ್ತದೆ. 1981-82ರಲ್ಲಿ 30 ಸ್ವಯಂಸೇವಾ ಸಂಸ್ಥೆಗಳು ಎಂಟು ಲಕ್ಷ ರೂ.ಗಳ ಹಣ ಕಾಸಿನ ನೆರವನ್ನು ಪಡೆದಿವೆ. ಅಂಗವಿಕಲರ ಕುಟುಂಬದ ಆದಾಯ ವಾರ್ಷಿಕವಾಗಿ ರೂ. 6000ಕ್ಕಿಂತ ಕಡಿಮೆ ಇದ್ದರೆ ಅಂಥವರು ಶ್ರವಣ ಸಾಧನಗಳನ್ನು, ತ್ರಿಚಕ್ರವಾಹನಗಳನ್ನು ಕೃತಕ ಅವಯವಗಳನ್ನು ಮತ್ತು ಊರುಗೋಲು (ಕ್ಯಾಲಿಪರ್ಸ್)ಗಳನ್ನು ಕೊಳ್ಳುವಾಗ ನೂರಕ್ಕೆ ನೂರರಷ್ಟು ಧನ ಸಹಾಯ ಸಿಗುತ್ತದೆ. ಕುಟುಂಬದ ವಾರ್ಷಿಕ ಆದಾಯ ರೂ. 6,000 ದಿಂದ ರೂ. 12,000 ದವರೆಗೆ ಇರುವ ಪ್ರಕರಣಗಳಲ್ಲಿ ಅವರು ಕೊಳ್ಳುವ ಉಪಕರಣದ ಬೆಲೆಯು ಶೇ. 75ರಷ್ಟು ಧನ ಸಹಾಯ ಸಿಗುತ್ತದೆ. 1981-82ರಲ್ಲಿ ಅಂಗವಿಕಲರಪಾ

266 ಜನರಿಗೆ 3,03,276 ರೂ. ಧನ ಸಹಾಯ ಮಂಜೂರಾಗಿತ್ತು.

ಎಂಟನೇಯ ತರಗತಿಯವರೆಗೆ ಓದುತ್ತಿರುವ ಅಂಗವಿಕಲ ವಿದ್ಯಾರ್ಥಿಗಳಿಗೆ ಅವರ ಕುಟುಂಬದ ವಾರ್ಷಿಕ ಆದಾಯ ರೂ. 10,000ಕ್ಕಿಂತ ಕಡಿಮೆಯಿದ್ದರೆ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಶಿಷ್ಯ ವೇತನಗಳನ್ನು ಕೊಡುತ್ತದೆ. ಆರರಿಂದ ಎಂಟನೇಯ ತರಗತಿಯವರೆಗಿನ ಮಕ್ಕಳಿಗೆ ಕೊಡುವ ಶಿಷ್ಯವೇತನದ ಮೊಬಲಗು ತಿಂಗಳಿಗೆ ರೂ. 25 ಇರುತ್ತದೆ. ಈ ಶಿಷ್ಯವೇತನಗಳ ಜೊತೆಗೆ ಕುರುಡ ವಿದ್ಯಾರ್ಥಿಗಳಿಗೆ ಓದಿನ ಭತ್ಯೆಯನ್ನೂ, ಅಂಗವಿಕಲರಿಗೆ ಸಾರಿಗೆ ಭತ್ಯವನ್ನೂ ಕೊಡಲಾಗುತ್ತದೆ. ಒಂಬತ್ತು ಮತ್ತು ಅದರ ಮೇಲಿನ ತರಗತಿಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ಭಾರತ ಸರಕಾರದ ಶಿಷ್ಯ ವೇತನಗಳು ಸಿಗುತ್ತವೆ. ಅವುಗಳ ಮೊಬಲಗು 40 ರೂ.ನಿಂದ 125 ರೂ. ಇರುತ್ತದೆ. 1981-82ರಲ್ಲಿ ಸುಮಾರು 5,000 ವಿದ್ಯಾರ್ಥಿಗಳು 20 ಲಕ್ಷ ರೂ.ಗಳನ್ನು ರಾಜ್ಯ ಸರಕಾರದಿಂದ ಶಿಷ್ಯವೇತನದ ರೂಪದಲ್ಲಿ ಪಡೆದರು; ಸುಮಾರು 1,200 ವಿದ್ಯಾರ್ಥಿಗಳು ಕೇಂದ್ರ ಸರ್ಕಾರದಿಂದ ಏಳು ಲಕ್ಷ ರೂ.ಗಳ ಶಿಷ್ಯವೇತನ ಪಡೆದರು.

ದೈಹಿಕವಾಗಿ ಮತ್ತು ಮಾನಸಿಕವಾಗಿ ವಿಕಲಾಂಗರಾದ ವ್ಯಕ್ತಿಗಳಿಗೆ, ಅವರ ಕುಟುಂಬದ ಆದಾಯ ವಾರ್ಷಿಕವಾಗಿ 3,600 ರೂ. ಗಿಂತ ಕಡಿಮೆ ಇದ್ದರೆ, ತಿಂಗಳಿಗೆ 40 ರೂ. ನಿರ್ವಹಣಾ ಭತ್ಯೆ ಕೊಡಲಾಗುತ್ತದೆ. 1981-82ರಲ್ಲಿ ದೈಹಿಕವಾಗಿ ಹಾಗೂ ಮಾನಸಿಕವಾಗಿ ವಿಕಲರಾದ ಸುಮಾರು 35,000 ಜನರು ಇಂಥ ನಿರ್ವಹಣಾ ಭತ್ಯೆಯನ್ನು ಪಡೆಯುತ್ತಿದ್ದರು. ಇದರ ಒಟ್ಟು ಮೊತ್ತ ಎರಡು ಕೋಟಿ ರೂ.ಗಳು.

ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಬೆಂಗಳೂರು, ಬೆಳಗಾವಿ ಮತ್ತು ಕಲ್ಬುರ್ಗಿಗಳಲ್ಲಿ ಅಂಗವಿಕಲರಿಗಾಗಿ ಮೂರು ಪ್ರಯಾಣ ಗೃಹಗಳನ್ನು (ಟ್ರಾನ್ಸಿಟ್ ಹೋಮ್ಸ್) ಪ್ರಾರಂಭಿಸಿದೆ. ಇವು ನಗರಗಳಲ್ಲಿ ಮಾತ್ರ ಲಭ್ಯವಿರುವ ವಿಶೇಷ ರೀತಿಯ ಚಿಕಿತ್ಸೆ, ಸಲಹಾ ಸೌಲಭ್ಯ ಮತ್ತು ಪುನರ್ವ್ಯವಸ್ಥೆಯ ಸೇವೆಗಳನ್ನು ಗ್ರಾಮೀಣ ಪ್ರದೇಶಗಳಿಂದ ಬರುವ ಅಂಗವಿಕಲರಿಗೆ ಒದಗಿಸುವುವು. ಗ್ರಾಮಾಂತರ ಪ್ರದೇಶದಿಂದ ಚಿಕಿತ್ಸೆಗೆಂದು ಬರುವ ಅಂಗವಿಕಲರಿಗೆ ಉಚಿತ ವಸತಿ ಮತ್ತು ಊಟವನ್ನು ಇವು ಒದಗಿಸುವುವು. ಇಲಾಖೆಯು ಬೆಂಗಳೂರಿನಲ್ಲಿ ಅಂಗವಿಕಲ ಕಾರ್ಮಿಕರಿಗಾಗಿ ಪುರುಷರಿಗೆ ಒಂದು, ಮತ್ತು ಸ್ತ್ರೀಯರಿಗೆ ಒಂದು, ಹೀಗೆ ಪ್ರತೀಯೊಂದರಲ್ಲಿಯೂ 50 ಸಂಖ್ಯಾಬಲದ ಎರಡು ವಸತಿಗೃಹಗಳನ್ನು ತೆರೆದಿದೆ. ಇವು ತರಬೇತಿ ಪಡೆಯುತ್ತಿರುವ ಅಥವಾ ನೌಕರಿ ಮಾಡುತ್ತಿರುವ ಅಂಗವಿಕಲರಿಗೆ ವಸತಿಗೃಹ ಸೌಕರ್ಯಗಳನ್ನು ಒದಗಿಸುತ್ತವೆ. ಕುರುಡರಿಗೆ ಬೇಕಾದ ಓದಿನ ಸಾಮಗ್ರಿಗಳನ್ನು ಮುದ್ರಿಸಲು ಅನುಕೂಲವಾಗುವಂತೆ ಮೈಸೂರಿನಲ್ಲಿ 'ಯುನಿಸೆಫ್' ಸಹಾಯದೊಂದಿಗೆ ಒಂದು ಬ್ರೈಲ್ ಲಿಪಿ ಮುದ್ರಣಾಲಯವನ್ನು ಸ್ಥಾಪಿಸಲಾಗಿದೆ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಶಿಕ್ಷಣ ಇಲಾಖೆಯೊಂದಿಗೆ ಸಮಾಲೋಚಿಸಿ ಅಂಗವಿಕಲರಿಗೆಂದು ಒಂದು ಸಮಗ್ರ ಶಿಕ್ಷಣ ಯೋಜನೆಯನ್ನು ಪ್ರಾರಂಭ ಮಾಡಿದೆ. ಇದನ್ನು ಐವತ್ತು ಹತ್ತು ಸಾಮಾನ್ಯ ಶಿಕ್ಷಣ ಕೊಡುವ ಶಾಲೆಗಳಲ್ಲಿ ಅನುಷ್ಠಾನಕ್ಕೆ ತರುವ ಯೋಜನೆಯಿದೆ. 'ಸೋಶಿಯಲ್ ಸರ್ವೀಸ್ ಕಾಂಪ್ಲೆಕ್ಸ್' ಎಂಬ ಸಂಸ್ಥೆಯು ಬೆಂಗಳೂರಿನಲ್ಲಿ ಕೆಲಸ ಮಾಡುತ್ತಿದ್ದು, ಅದು ವೃದ್ಧ ಮತ್ತು ಅಶಕ್ತರಿಗೆ, ಭೌತಿಕ ಮತ್ತು ಮಾನಸಿಕ ಅಂಗವಿಕಲರಿಗೆ ಚಿಕಿತ್ಸೆ, ಆಶ್ರಯ ಮತ್ತು ಕಲ್ಯಾಣ ಸೇವೆಗಳನ್ನು ಕೊಡುತ್ತಿದೆ. 1981-82ರಲ್ಲಿ ಈ ಸಂಸ್ಥೆಯಲ್ಲಿ ಆರು ವೃದ್ಧರು, 46 ಮನೋವಿಕಲರು, ಇಬ್ಬರು ಅಂಗವಿಕಲರೂ ಆಶ್ರಯ ಪಡೆಯುತ್ತಿದ್ದರು.

**ಕಿವುಡರ ಮತ್ತು ಕುರುಡರ ಶಾಲೆ, ಮೈಸೂರು:** ಮೈಸೂರಿನಲ್ಲಿನ ಕಿವುಡರ ಮತ್ತು ಕುರುಡರ ಶಾಲೆಯು ರಾಜ್ಯದಲ್ಲಿ ಅಂಗವಿಕಲರಿಗಾಗಿ ಈ ಶತಮಾನದಲ್ಲಿ ಪ್ರಾರಂಭವಾದ ಮೊಟ್ಟ ಮೊದಲ ಶಾಲೆ. ಇದು ಎಂ. ಶ್ರೀನಿವಾಸ ರಾವ್ ಎಂಬ ನಿವೃತ್ತ ಶಿಕ್ಷಣಾಧಿಕಾರಿಯ ಖಾಸಗಿ ದತ್ತಿ ಸಹಾಯದಿಂದ ಸ್ಥಾಪನೆಗೊಂಡಿತು. ಸರಕಾರವು ಇದನ್ನು 1927ರಲ್ಲಿ ತನ್ನ ವಶಕ್ಕೆ ತೆಗೆದುಕೊಂಡಿತು. 1948ರಲ್ಲಿ ಇಲ್ಲಿ 47 ಕುರುಡ ಮಕ್ಕಳೂ 39 ಕಿವುಡ ಮಕ್ಕಳೂ ಇದ್ದರು. ಈ ಶಾಲೆಯಲ್ಲಿ ಓದು ಬರಹದೊಂದಿಗೆ ವೃತ್ತಿ ಶಿಕ್ಷಣವನ್ನೂ ನೀಡುತ್ತಾರೆ. ಕುರುಡರಿಗೆ ಬ್ರೈಲ್ ಲಿಪಿಯ ಮೂಲಕ ಕಲಿಸುತ್ತಾರೆ. ಇವರ ಶಿಕ್ಷಣದಲ್ಲಿ ಸಂಗೀತವು ಒಂದು ಮಹತ್ವದ ಬೋಧನೆಯ ವಿಷಯ. ಆದರೆ ಇದರೊಂದಿಗೆ ನೇಯುವುದು, ಬುಟ್ಟಿ ಹೆಣೆಯುವುದು, ಹಗ್ಗ ಹೊಸೆಯುವುದು ಮುಂತಾದ ಕರಕುಶಲ ತರಬೇತಿ ಕೊಡುತ್ತಾರೆ. ಈ ಶಾಲೆಯಲ್ಲಿ ಒಂದು ಬ್ರೈಲ್ ಮುದ್ರಣಾಲಯವಿದೆ. ಕಿವುಡ ಮಕ್ಕಳಿಗೆ ಬ್ರೈಲ್ ಪುಸ್ತಕಗಳಿಗೆ ರಟ್ಟು ಹೊದಿಸುವುದನ್ನು ಕಲಿಸುತ್ತಾರೆ. ಇತ್ತೀಚೆಗೆ, ಅಂದರೆ 1981-82ರಲ್ಲಿ, ಈ ಶಾಲೆಯನ್ನು ಕುರುಡರ ಶಾಲೆ ಮತ್ತು ಕಿವುಡರ ಶಾಲೆಗಳೆಂದು ಪ್ರತ್ಯೇಕಿಸಲಾಯಿತು. (ಅಖಿಲ ಭಾರತ ವಾಕ್ ಮತ್ತು ಶ್ರವಣ ಸಂಸ್ಥೆಯ ಬಗ್ಗೆ ನೋಡಿ, ಭಾಗ III ಪುಟ 147).

**ಶಾರೀರಿಕ ಅಂಗವಿಕಲರ ವೃತ್ತಿಪರ ಪುನರ್ವಸತಿ ಕೇಂದ್ರ:** ಶಾರೀರಿಕ ಅಂಗವಿಕಲರ ವೃತ್ತಿಪರ ಪುನರ್ವಸತಿ ಕೇಂದ್ರವು ಭಾರತ ಸರಕಾರದಿಂದ 1981ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಅಂಗವಿಕಲ ವ್ಯಕ್ತಿಗಳ ವಿಶೇಷ ಶಕ್ತಿ

ಸಾಮರ್ಥ್ಯಗಳ ಮೌಲ್ಯಮಾಪನ ಮಾಡುವುದು, ಅವರಿಗೆ ಉದ್ಯೋಗ ದೊರಕಿಸುವಲ್ಲಿ ಸಹಾಯ ಮಾಡುವುದು, ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಪುನರ್‌ವಸತಿ ಸಂಸ್ಥೆಗಳ ಕೆಲಸ ಕಾರ್ಯಗಳನ್ನು ಸಮನ್ವಯಗೊಳಿಸುವುದೇ ಮೊದಲಾದ ಉದ್ದೇಶ ಗಳಿಗಾಗಿ ಅದು ಸ್ಥಾಪಿತವಾಯಿತು. ಈ ಕೇಂದ್ರವು ಪರಾಮರ್ಶೆಯ ಕಾರ್ಯ, ಮೌಲ್ಯಮಾಪನ ಸೇವೆ, ಹೊಂದಾಣಿಕೆ, ತರಬೇತಿ ಮತ್ತು ಸಲಹೆ, ಸ್ಥಾವರಾಂತರ್ಗತ ತರಬೇತಿ, ಉದ್ಯೋಗ ಸಂಬಂಧದ ಸೇವೆ, ಇತ್ಯಾದಿ ಪುನರ್‌ವಸತಿ ಸೇವೆಗಳನ್ನು ನಿರ್ವಹಿಸುತ್ತದೆ. ಕೌಶಲ್ಯಗಳಲ್ಲಿ ತರಬೇತಿ ನೀಡಲು ಕೌಶಲ್ಯ ತರಬೇತಿ ಕಾರ್ಯಾಗಾರದ ಹೊಸ ಯೋಜನೆಯೊಂದನ್ನು ಕೇಂದ್ರದಲ್ಲಿ ಜೋಡಿಸಲಾಗಿದೆ. ಅಂಗವಿಕಲ ವ್ಯಕ್ತಿಗಳಿಗೆ ಅವರ ಮಾನಸಿಕ ಸಾಮರ್ಥ್ಯಗಳನ್ನು ಅಳೆಯಲು 30 ದಿನಗಳ ಅವಧಿಯ ಮಾನಸಿಕ ಮೌಲ್ಯಮಾಪನ ನಡೆಸುತ್ತಾರೆ. ಈ ಅವಧಿಯಲ್ಲಿ ಅವರಿಗೆ 70 ರೂಪಾಯಿಗಳ ಸ್ಟೈಪೆಂಡ್ ದೊರೆಯುತ್ತದೆ. ಈ ಕೇಂದ್ರವು ದೂರದೂರದ ಸ್ಥಳಗಳಲ್ಲಿರುವ ಅಂಗವಿಕಲ ಜನರ ಲಾಭಕ್ಕಾಗಿ ಜಿಲ್ಲಾ ಕೇಂದ್ರಗಳಲ್ಲಿ ಸಂಚಾರಿ ಶಿಬಿರಗಳನ್ನು ಏರ್ಪಡಿಸುತ್ತದೆ.

ಅಂಗವಿಕಲರಿಗೆ ಸಮಾನಾವಕಾಶಕ್ಕಾಗಿರುವ ರಾಷ್ಟ್ರೀಯ ಸಂಸ್ಥೆ : ದಿ ನ್ಯಾಷನಲ್ ಸೊಸೈಟಿ ಫಾರ್ ಈಕ್ವಲ್ ಒಪೋರ್ಚುನಿಟಿ ಫಾರ್ ದಿ ಹ್ಯಾಂಡಿಕ್ಯಾಪ್ಡ್ ಈ ಸಂಸ್ಥೆಯ ಬೆಂಗಳೂರು ಶಾಖೆಯು 1974ರಲ್ಲಿ ಪ್ರಾರಂಭ ವಾಯಿತು. ಅಂಗವಿಕಲರಿಗೆ ಪುನರ್‌ವಸತಿ, ಪುನರ್‌ಸ್ಥಾಪನೆ ಮತ್ತು ಕಲ್ಯಾಣವನ್ನು ಒದಗಿಸುವುದೂ ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ವಿವಿಧ ಸಂಘ ಸಂಸ್ಥೆಗಳ ಕೆಲಸವನ್ನು ಸಂಯೋಜಿ ಸುವುದೂ ಇದರ ಉದ್ದೇಶ. ಈ ಸಂಸ್ಥೆಯು ಬೆಂಗಳೂರಿನಲ್ಲಿ 1975 ಮತ್ತು 1981ರಲ್ಲಿ ಅಂಗವಿಕಲರ ಪ್ರಥಮ ಮತ್ತು ತೃತೀಯ ರಾಷ್ಟ್ರೀಯ ಒಲಿಂಪಿಕ್ ಕ್ರೀಡಾ ಕೂಟಗಳನ್ನು ನಡೆಸಿತು. ಇದೂ ಅಲ್ಲದೆ 1981ರಲ್ಲಿ ಬೆಂಗಳೂರಿನಲ್ಲಿ ಏಷ್ಯಾ ಪ್ರಾದೇಶಿಕ ಮತ್ತು ಕಾಮನ್‌ವೆಲ್ತ್ ರಾಷ್ಟ್ರಗಳ ಮಾನಸಿಕ ದೌರ್ಬಲ್ಯಗಳ ಮೇಲಿನ ಪ್ರಥಮ ಸಂಯುಕ್ತ ವೈಜ್ಞಾನಿಕ ಅಧ್ಯಯನವನ್ನು ಸಂಘಟಿಸಿತು. ಬೆಂಗಳೂರಿನಲ್ಲಿ ಈ ಸಂಸ್ಥೆ ಅಂಗವಿಕಲರಿಗಾಗಿ ಒಂದು ಪ್ರಯಾಣ ಗೃಹ (ಟ್ರಾನ್ಸಿಟ್ ಹೋಮ್) ವನ್ನು 1981 ರಿಂದ ನಡೆಸುತ್ತಿದೆಯಲ್ಲದೆ, 1982 ರಿಂದ ಶ್ರವಣದೋಷ ಇರುವವರಿಗೆ ಒಂದು ಶಾಲೆಯನ್ನು ಕೂಡಾ ಪ್ರಾರಂಭಿಸಿದೆ. 1982ರವರೆಗೆ ಈ ಸಂಸ್ಥೆಯು 400 ವ್ಯಕ್ತಿ ಗಳಿಗೆ ನೆಲೆ ನೀಡುವ ಕಾರ್ಯಕ್ರಮದನ್ವಯ ಸಹಾಯ ಮಾಡಿದೆ. ಈ ಸಂಸ್ಥೆಯ ಶಿಶು ಮಾರ್ಗದರ್ಶನ ಕೇಂದ್ರವು 1978ರಲ್ಲಿ ಪ್ರಾರಂಭವಾಗಿ ಅದು ಅಂಗವಿಕಾರಗಳನ್ನು ಕುರಿತು ಸಲಹೆ, ವೈದ್ಯಕೀಯ ಹಾಗೂ ಶಸ್ತ್ರಚಿಕಿತ್ಸೆಯನ್ನು ಕೊಟ್ಟು ಪುನರ್ ವಸತಿಗೆ ಯತ್ನಿಸುತ್ತಿದೆ. ಮೇಲೆ ಹೇಳಿದ ಸೇವೆಗಳಲ್ಲದೆ ಅಂಗ ವಿಕಲರಿಗೆ ವೈದ್ಯಕೀಯ ಸೇವೆ, ಗಾಲಿಯ ಕುರ್ಚಿಗಳ ಸಂಗ್ರಹ (ವೀಲ್ ಚೇರ್ ಬ್ಯಾಂಕ್), ಇತ್ಯಾದಿಗಳು ಸೇರಿವೆ.

ಅಂಗವಿಕಲರ ಸಂಘ : ಇದು (ದಿ ಎಸೋಸಿಯೇಷನ್ ಆಫ್ ದಿ ಫಿಸಿಕಲಿ ಹ್ಯಾಂಡಿಕ್ಯಾಪ್ಡ್) 1959ರಲ್ಲಿ ಬೆಂಗಳೂರಿ ನಲ್ಲಿ ಪ್ರಾರಂಭವಾಯಿತು. ಇದು ಅಂಗವಿಕಲತೆಯನ್ನು ಹೊಂದಿದ ವ್ಯಕ್ತಿಗಳಿಗೆ ತರಬೇತಿ ಕೊಟ್ಟು, ಅವರ ಪುನರ್‌ವಸತಿಯನ್ನು ಕಲ್ಪಿಸುತ್ತಿದೆ. ಒಂದು ಸಮಗ್ರ ಶಾಲೆ, ಒಂದು ಕೈಗಾರಿಕಾ ತರಬೇತಿ ಸಂಸ್ಥೆ, ಒಂದು ಉನ್ನತ ತರಬೇತಿ ಹಾಗೂ ಉತ್ಪಾದನಾ ಕೇಂದ್ರ, ಒಂದು ಗೃಹಬದ್ಧ (ಹೋಮ್ ಬೌಂಡ್) ಕಾರ್ಯ ಕ್ರಮ ಮತ್ತು ಒಂದು ತೋಟಗಾರಿಕೆಯ ತರಬೇತಿ ಯೋಜನೆ ಇವೆಲ್ಲ ಚಟುವಟಿಕೆಗಳನ್ನು ಈ ಸಂಘ ಕೈಕೊಂಡಿದೆ. ಡಿಸೆಂಬರ್ 1982ರ ಕೊನೆಯೊಳಗಾಗಿ ಸಂಘವು 425 ಅಂಗವಿಕಲ ವ್ಯಕ್ತಿ ಗಳನ್ನು ತರಬೇತುಗೊಳಿಸಿದೆ. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ದಿ ರೆಡ್‌ಕ್ರಾಸ್ ಹೋಮ್ ಅಂಗವಿಕಲರಾದ ಮಾಜಿ ಯೋಧ ರಿಗೆ ವಿಶೇಷ ಚಿಕಿತ್ಸೆ ಮತ್ತು ವೃತ್ತಿ ತರಬೇತಿ ಕೊಡುವ ಉದ್ದೇಶ ದಿಂದ 1946ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಆ ಗೃಹದಲ್ಲಿ 1946ರಲ್ಲಿ 75 ನಿವಾಸಿಗಳಿದ್ದರು. 1980ರಲ್ಲಿ ಎಂಟು ನಿವಾಸಿಗಳಿದ್ದರು. ದಿ ಚೆಷಾಯರ್ ಹೋಮ್ಸ್ ಇಂಡಿಯಾ ಸಂಘದ ಶಾಖೆಗಳು ಮಂಗಳೂರು ಮತ್ತು ಬೆಂಗ ಳೂರುಗಳಲ್ಲಿ ಇದ್ದು ಅವು ಅಂಗವಿಕಲರಾದ ಜನರಿಗೆ ಇರಲು ವಸತಿ ಸೌಕರ್ಯವನ್ನು ಒದಗಿಸುತ್ತವೆ. ಇದರ ಮಂಗಳೂರು ಶಾಖೆಯು 1965ರಲ್ಲಿ ಸ್ಥಾಪಿತವಾಗಿದ್ದು, ಅಲ್ಲಿ 1980ರಲ್ಲಿ ಮೈಸುಟ್ಟುಕೊಂಡ 14 ಜನರಿಗೂ ಪೋಲಿಯೋ ರೋಗದ ಪರಿಣಾಮಗಳಿಂದ ಬಳಲುವ ಐವರು ಹುಡುಗಿಯರಿಗೂ ಆಶ್ರಯ ನೀಡಿತ್ತು. ದಿ ರೋಹಿಣಿ ಫಿಸಿಕಲಿ ಹ್ಯಾಂಡಿಕ್ಯಾಪ್ಡ್ ಸೊಸೈಟಿಯು ಬೆಂಗಳೂರಿನಲ್ಲಿ 1979ರಲ್ಲಿ ಸ್ಥಾಪಿಸಲ್ಪಟ್ಟಿತು. ಇದೂ ಕೂಡಾ ಅಂಗವಿಕಲರ ಪುನರ್‌ವಸತಿಗೆ ಶ್ರಮಿಸುತ್ತದೆ. ಇದು ನ್ಯೂ ಗವರ್ನಮೆಂಟ್ ಇಲೆಕ್ಟ್ರಿಕ್ ಫ್ಯಾಕ್ಟರಿಯ ಒಂದು ಅಧೀನ ಸಂಸ್ಥೆಯಾಗಿದೆ.

ಕರ್ನಾಟಕ ಅಂಧರ ಕಲ್ಯಾಣ ಸಂಘ : ಕರ್ನಾಟಕ ವೆಲ್‌ಫೇರ್ ಎಸೋಸಿಯೇಷನ್ ಫಾರ್ ದಿ ಬ್ಲೈಂಡ್ ಇದು 1967ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಅಂಧರ ಶಿಕ್ಷಣ ಮತ್ತು ಆರ್ಥಿಕ ಸುಭದ್ರತೆಯನ್ನು ಪುರಸ್ಕರಿಸುವುದು, ಅಂಧತ್ವ ವನ್ನು ಪ್ರತಿಬಂಧಿಸುವುದು, ಇತ್ಯಾದಿ ಉದ್ದೇಶಗಳಿಗಾಗಿ ಅದು ಹುಟ್ಟಿತು. ಸಂಘವು ಹಲವಾರು ಯೋಜನೆಗಳನ್ನು ಹಮ್ಮಿ ಕೊಂಡಿದೆ. ಮನೆಯಲ್ಲೇ ಕಲಿಸುವ ಯೋಜನೆ ಎಂಬುದು 1975ರಲ್ಲಿ ಪ್ರಾರಂಭವಾಯಿತು. ಎಲ್ಲ ವಯಸ್ಸಿನ ಅಂಧರು ತಮ್ಮ ಮನೆಗಳಲ್ಲಿ ಬ್ರೈಲ್ ಲಿಪಿಯ ಸಹಾಯದಿಂದ ಓದುವಂತೆ ಮಾಡುವುದು ಇದರ ಉದ್ದೇಶ. ದಿಕ್ಕು, ಪರಿಚಯ ಹಾಗೂ

ಚಲನೆ ತರಬೇತಿ ಯೋಜನೆ 1974ರಲ್ಲಿ ಪ್ರಾರಂಭವಾಯಿತು. ಈ ಯೋಜನೆಯಂತೆ ಅಂಧರ ಅಂತರರಾಷ್ಟ್ರೀಯ ಸಂಕೇತವಾದ ಬಿಳಿಯ ಕೋಲೊಂದನ್ನು ಹಿಡಿದು ಅದರ ಸಹಾಯದಿಂದ ಅಂಧರು ಓಡಾಡುವಂತೆ ಮಾಡಲಾಗುವುದು. ಹಾಗೆಯೇ ಅಂಧರಿಗಾಗಿರುವ ಉದ್ಯೋಗಾವಕಾಶಗಳನ್ನು ಗುರುತಿಸಿ ಅವರಿಗೆ ಯೋಗ್ಯ ಸ್ಥಾನಗಳನ್ನು ದೊರಕಿಸುವುದರಲ್ಲಿ ಸಹಾಯ ಮಾಡಲಾಗುವುದು. ಸಂಘವು ಬ್ರೈಲ್ ಲಿಪಿಯ ಗ್ರಂಥಗಳಿರುವ ಒಂದು ಗ್ರಂಥ ಭಂಡಾರವನ್ನೂ ನಡೆಸುತ್ತಿದೆ. ಕರ್ನಾಟಕ ರಾಜ್ಯ ಅಂಧರ ಸಂಘಕ್ಕೆ ಸಂಲಗ್ನಲತೆ ಪಡೆದ ಬೆಳಗಾವಿ ಜಿಲ್ಲಾ ಅಂಧರ ಸಂಘವು ಬೆಳಗಾವಿಯಲ್ಲಿ 1970ರಲ್ಲಿ ಪ್ರಾರಂಭವಾಯಿತು. ಈ ಸಂಘವು ಅಂಧ ಮಕ್ಕಳಿಗಾಗಿ ಒಂದು ಶಾಲೆಯನ್ನು ನಡೆಸುತ್ತಿದ್ದು, 1980 ರಲ್ಲಿ ಅಲ್ಲಿ 30 ವಿದ್ಯಾರ್ಥಿಗಳು ಕಲಿಯುತ್ತಿದ್ದರು. ದೃಷ್ಟಿ ದೋಷದಿಂದ ಬಳಲುವ ಜನರಿಗೆ ಶೈಕ್ಷಣಿಕ, ವೃತ್ತಿಪರ ಹಾಗೂ ಉದ್ಯೋಗದ ಸವಲತ್ತುಗಳನ್ನು ಕೊಡುವ ಉದ್ದೇಶದಿಂದ ಬೆಂಗಳೂರಿನಲ್ಲಿ ರಮಣ ಮಹರ್ಷಿ ಅಂಧಜನರ ಅಕ್ಯಾಡೆಮಿಯು (ರಮಣ ಮಹರ್ಷಿ ಅಕಾಡೆಮಿ ಫಾರ್ ದಿ ಬ್ಲೈಂಡ್) 1969ರಲ್ಲಿ ಸ್ಥಾಪಿತವಾಯಿತು. ಇದು ಹತ್ತನೇಯ ತರಗತಿಯವರೆಗೆ ಶಿಕ್ಷಣ ಕೊಡುವುದಲ್ಲದೆ ಅಂಧರಿಗೆ ಸಲಹೆ ಮತ್ತು ಕುಶಲ ಕೈಗಾರಿಕೆಗಳಲ್ಲಿ ವೃತ್ತಿ ಶಿಕ್ಷಣವನ್ನು ಕೊಡುತ್ತದೆ. ಅಕ್ಯಾಡೆಮಿಯ ಇತರ ಯೋಜನೆಗಳ ಪೈಕಿ ಮನೆಯಲ್ಲೇ ಕಲಿಸುವ ಯೋಜನೆ, ಅಂಚೆ ಪಾಠ ಯೋಜನೆ, ಮುಂತಾದುವುಗಳನ್ನು ಹೆಸರಿಸಬಹುದು. ದಾವಣಗೆರೆಯ ಡಾ॥ ಎಂ. ಸಿ. ಮೋದಿ ಸಂಚಾರಿ ಉಚಿತ ಕಣ್ಣಿನ ಆಸ್ಪತ್ರೆ ಹಲವು ರೀತಿಗಳಲ್ಲಿ ವೈಶಿಷ್ಟ್ಯಪೂರ್ಣವಾಗಿದೆ. ಡಾ॥ ಎಂ. ಸಿ. ಮೋದಿಯವರು ನಾಲ್ಕು ಲಕ್ಷಕ್ಕಿಂತ ಹೆಚ್ಚಿಗೆ ಶಸ್ತ್ರಚಿಕಿತ್ಸೆಗಳನ್ನು ಉಚಿತವಾಗಿ ಮಾಡಿದ್ದು, ನಲವತ್ತು ಲಕ್ಷಕ್ಕಿಂತಲೂ ಹೆಚ್ಚಿಗೆ ರೋಗಿಗಳನ್ನು ಪರೀಕ್ಷಿಸಿದ್ದಾರೆ. ಇದು ವೈದ್ಯಕೀಯ ಇತಿಹಾಸದಲ್ಲಿಯೇ ಅಭೂತಪೂರ್ವವಾದ ದಾಖಲೆಯೆನ್ನಬಹುದು. ಅವರು ಒಂದೇ ದಿನದಲ್ಲಿ 833 ಕಣ್ಣಿನ ಶಸ್ತ್ರಚಿಕಿತ್ಸೆ ಮಾಡಿದ ದಾಖಲೆ ಇದೆ. 1968ರಲ್ಲಿ ಅವರಿಗೆ 'ಪದ್ಮಭೂಷಣ' ಪ್ರಶಸ್ತಿ ಕೊಡಲಾಯಿತು. ಹಾಗೂ 1974ರಲ್ಲಿ ನ್ಯೂಯಾರ್ಕಿನ ರೋಟರಿ ಕ್ಲಬ್ ಅವರಿಗೆ 'ವಿಶಿಷ್ಟ ಸೇವಾ ಪ್ರಶಸ್ತಿ' (ಡಿಸ್ಟಿಂಗ್ವಿಷ್ಡ್ ಸರ್ವಿಸ್ ಅವಾರ್ಡ್) ಕೊಟ್ಟು ಗೌರವಿಸಿತು.

ಶೀಲಾ ಕೊಥವಾಲರ ಕಿವುಡರ ಸಂಸ್ಥೆ: ಇದು ಬೆಂಗಳೂರಿನಲ್ಲಿ 1967ರಲ್ಲಿ ಅಸ್ತಿತ್ವಕ್ಕೆ ಬಂತು. ಕಿವುಡ ಮಕ್ಕಳಿಗೆ ಒಂದು ಹಗಲುಶಾಲೆಯನ್ನು ನಡೆಸುವ ಉದ್ದೇಶದಿಂದ ಇದು ಸ್ಥಾಪನೆಯಾಯಿತು. 1980-81ರಲ್ಲಿ ಈ ಶಾಲೆಯಲ್ಲಿ ಕಿಂಡರ್ ಗಾರ್ಟನ್ ತರಗತಿಯಿಂದ ಎಸ್.ಎಸ್.ಎಲ್.ಸಿ.ವರೆಗೆ 203 ಕಿವುಡ ಮಕ್ಕಳು ಕಲಿಯುತ್ತಿದ್ದರು. ಇಲ್ಲಿ ಹುಡುಗರಿಗೆ ಕುಶಲ ಕಲೆಗಳಲ್ಲಿ ಹಾಗೂ ವೃತ್ತಿಗಳಲ್ಲಿ ತಾಂತ್ರಿಕ ತರಬೇತಿ ಕೊಡಲಾಗುತ್ತದೆ. ಬೆಂಗಳೂರಿನ ವಾಕ್ ಮತ್ತು ಶ್ರವಣ ಸಂಸ್ಥೆಯು 1977ರಲ್ಲಿ ಲಯನ್ಸ್ ಕ್ಲಬ್ಬಿನಿಂದ ಪ್ರಾರಂಭವಾಯಿತು. ಅದು ವಾಕ್ ಮತ್ತು ಶ್ರವಣ ಬಾಧೆಯಿರುವ ಮಕ್ಕಳಿಗೂ ವಯಸ್ಕರಿಗೂ ಪುನರ್‌ವಸತಿ ಕಲ್ಪಿಸುತ್ತದೆ. ವಾಕ್ ಚಿಕಿತ್ಸೆ, ಶ್ರವಣ ಸಾಧನಗಳನ್ನು ಕಿವಿಗೆ ಅಳವಡಿಸುವುದು ಹಾಗೂ ಸಲಹೆ ಕೊಡುವುದು, ಉಚಿತ ವಾಕ್ ಹಾಗೂ ಶ್ರವಣ ಶಿಬಿರಗಳನ್ನು ಏರ್ಪಡಿಸುವುದು, ಇತ್ಯಾದಿ ಕಾರ್ಯಚಟುವಟಿಕೆಗಳನ್ನು ಈ ಸಂಸ್ಥೆ ನಡೆಸುತ್ತದೆ. 'ಎಸೋಸಿಯೇಷನ್ ಫಾರ್ ದಿ ಡೆಫ್' ಸಂಘವು ಪ್ರವರ್ತಕರಾಗಿರುವ ಕಿವುಡರಿಗಾಗಿ ತಾಂತ್ರಿಕ ತರಬೇತಿ ಕೇಂದ್ರ ಎಂಬ ಸಂಸ್ಥೆ (1982) ಬೆಂಗಳೂರಿನಲ್ಲಿದೆ. ಅದು ಕಿವುಡರಿಗೆ ಮಾನ್ಯತೆ ಪಡೆದ ವೃತ್ತಿಗಳಲ್ಲಿ ಎರಡು ವರ್ಷಗಳ ತಾಂತ್ರಿಕ ತರಬೇತಿ ಕೊಡುತ್ತದೆ.

ಬುದ್ಧಿಮಾಂದ್ಯರ ಹಾಗೂ ಮನೋವಿಕಲರ ಶಿಕ್ಷಣ ಮತ್ತು ಕಲ್ಯಾಣಕ್ಕೋಸ್ಕರ ಸ್ಥಾಪಿತವಾದ ಅನೇಕ ಸಂಘ ಸಂಸ್ಥೆಗಳು ರಾಜ್ಯದಲ್ಲಿ ಅಸ್ತಿತ್ವದಲ್ಲಿವೆ. ಇವುಗಳಲ್ಲಿ ಧಾರವಾಡದಲ್ಲಿರುವ ಡಾಕ್ಟರ್ ಸ್ಟೀನರ್ಸ್ ಕ್ಯುರೇಟಿವ್ ಎಜ್ಯುಕೇಷನ್ ಇನ್‌ಸ್ಟಿಟ್ಯೂಟ್ ಒಂದು. ಇದು 1971ರಿಂದ ಕಾರ್ಯ ಮಾಡುತ್ತಿದ್ದು ಜನರು ಉಪಯೋಗಿಸದೇ ಇರುವ, ಆದರೆ ಲಭ್ಯವಿರುವ, ಸಮಯ ಮತ್ತು ಶಕ್ತಿಗಳನ್ನು ಶೋಧಿಸಿ, ವೃದ್ಧಿಸಿ, ಹೊರತರುವಲ್ಲಿ ಇದು ಸಹಕಾರಿಯಾಗಿದೆ. ಈ ಸಂಸ್ಥೆಯು ಅರೆಬುದ್ಧಿಯ ಮಕ್ಕಳನ್ನು ತರಬೇತುಗೊಳಿಸುತ್ತದೆ ಹಾಗೂ ಚಿಕಿತ್ಸಾತ್ಮಕ ಶಿಕ್ಷಣ ಮತ್ತು ಚಿತ್ರಕಲೆ ಕಲಿಸುವ ಮೂಲಕ ಮನೋವಿಕಲರಿಗೆ ಪುನರ್‌ವಸತಿ ಕಲ್ಪಿಸುತ್ತದೆ. 1980-81ರಲ್ಲಿ ವಿವಿಧ ಬಗೆಯ ಮಾನಸಿಕ ಹಿಂಬೀಳಿಕೆಯಿಂದ ಬಳಲುತ್ತಿದ್ದ 25 ನಿವಾಸಿಗಳು ಇಲ್ಲಿದ್ದರು. ಸಂತ ಅಗ್ನೆಸ್ ಮಂದಮತಿ ಮಕ್ಕಳ ವಿಶೇಷ ಶಾಲೆ (ಸೈಂಟ್ ಅಗ್ನೆಸ್ ಸ್ಪೆಶಲ್ ಸ್ಕೂಲ್ ಫಾರ್ ದಿ ಮೆಂಟಲಿ ರಿಟಾರ್ಡೆಡ್ ಚಿಲ್ಡ್ರನ್) ಬೆಂಗಳೂರಿನಲ್ಲಿ 'ಅಪೋಸ್ಟೊಲಿಕ್ ಕಾರ್ಮೆಲ್' ಶತಮಾನೋತ್ಸವದ ಸ್ಮಾರಕವಾಗಿ 1970ರಲ್ಲಿ ಪ್ರಾರಂಭವಾಯಿತು. ಇದೂ ಕೂಡ ಬುದ್ಧಿಮಾಂದ್ಯದ ಮಕ್ಕಳಿಗೆ ಶಿಕ್ಷಣ ಒದಗಿಸುತ್ತದೆ. ಈ ಶಾಲೆ ಸಾಮಾನ್ಯ ಶಿಕ್ಷಣ ಮತ್ತು ಕರಕುಶಲ ಕಲೆಗಳಲ್ಲಿ ತರಬೇತಿ ಕೊಡುವುದಲ್ಲದೆ ಮಕ್ಕಳ ಭಾವನಾತ್ಮಕ ಹೊಂದಾಣಿಕೆಗೆ ಸಹಕಾರಿಯಾದ ಕಾರ್ಯಕ್ರಮಗಳನ್ನು ಕೂಡ ಯೋಜಿಸುತ್ತದೆ. 1979ರಲ್ಲಿ ಈ ಶಾಲೆಯಲ್ಲಿ 80 ವಿದ್ಯಾರ್ಥಿಗಳಿದ್ದರು. 'ದಿ ಸೋಫಿಯಾ ಅಪೋರ್ಚುನಿಟಿ ಸ್ಕೂಲ್' ಎಂಬುದು ಸೋಫಿಯಾ ಹೈಸ್ಕೂಲಿನ ಒಂದು ಭಾಗವಾಗಿದ್ದು ಅದು 5 ರಿಂದ 16 ವರ್ಷ ಪ್ರಾಯದೊಳಗಿನ ಬುದ್ಧಿಮಾಂದ್ಯದ ಮಕ್ಕಳಿಗೆ ಸಹಾಯ ಮಾಡುತ್ತದೆ. ಈ ಶಾಲೆ ಸಾಮಾನ್ಯ ಶಿಕ್ಷಣದ ಜೊತೆಗೆ ಕರಕುಶಲ ಕಲೆಗಳಲ್ಲಿ ತರಬೇತಿಯನ್ನೂ ಯೋಗಾಭ್ಯಾಸವನ್ನೂ ಕೊಡುತ್ತದೆ. 1980ರಲ್ಲಿ ಇಲ್ಲಿ 104 ವಿದ್ಯಾರ್ಥಿಗಳಿದ್ದರು.

ಬೆಂಗಳೂರಿನ ಮಲ್ಲೇಶ್ವರಂ 'ಗಾಂಧೀ ಸಾಹಿತ್ಯ ಸಂಘವು' ನಡೆಸುವ ಬಾಲ ಮನೋವಿಕಾಸ ಕೇಂದ್ರವು ಬುದ್ಧಿಮಾಂದ್ಯದ ಮಕ್ಕಳಿಗಾಗಿ ನಡೆಸುವ ಹಗಲು ಶಾಲೆಯಾಗಿದ್ದು ಅದು 1965 ರಲ್ಲಿ ಪ್ರಾರಂಭವಾಯಿತು. ಬೆಂಗಳೂರಿನಲ್ಲಿ 1978ರಲ್ಲಿ ಪ್ರಾರಂಭವಾದ 'ನಿರೀಕ್ಷಣಾ' ಎಂಬ ಶಾಲೆಯೂ ಕೂಡ ಬುದ್ಧಿಮಾಂದ್ಯದ ಮಕ್ಕಳಿಗೆ ತರಬೇತಿ ಕೊಡುತ್ತದೆ. ಸಾಮಾನ್ಯ ವಿಷಯಗಳ ಬೋಧನೆಯ ಜೊತೆಗೆ ಕನ್ನಡ, ತೆಲುಗು ಮತ್ತು ತಮಿಳು ಮಾಧ್ಯಮಗಳ ಮೂಲಕ ವೃತ್ತಿ ಶಿಕ್ಷಣವನ್ನು ಒದಗಿಸುವುದೇ ಮುಂತಾದ ಕಾರ್ಯಚಟುವಟಿಕೆಗಳನ್ನು ಇದು ಇಟ್ಟುಕೊಂಡಿದೆ. 1982-83ರಲ್ಲಿ ಈ ಶಾಲೆಯಲ್ಲಿ 11 ಹುಡುಗರಿದ್ದರು. ಮೆಡಿಕೋ-ಪ್ಯಾಸ್ಟೋರಲ್ ಅಸೋಸಿಯೇಷನ್ ಅ್ಯಂಡ್ ಹಾಫ್-ವೇ ಹೋಮ್ ಎಂಬ ಸಂಘ 1964ರಲ್ಲಿ ಪ್ರಾರಂಭವಾಯಿತು. ವೈದ್ಯರು, ಧರ್ಮಾಧಿಕಾರಿಗಳು ಮತ್ತಿತರ ವೃತ್ತಿಪರರ ಸಹಯೋಗದೊಡನೆ ಮಾನಸಿಕ ಮತ್ತು ಶಾರೀರಿಕ ಸಮಸ್ಯೆಗಳನ್ನು ಶೋಧಿಸುವ ಮತ್ತು ಅರಿಯುವ ಮೂಲಕ ಸಮುದಾಯಕ್ಕೆ ಸೇವೆ ಸಲ್ಲಿಸುವ ಉದ್ದೇಶದಿಂದ ಇದು ಪ್ರೇರಿತವಾಯಿತು. ಆತ್ಮಹತ್ಯೆಯನ್ನು ತಪ್ಪಿಸುವುದು, ಮದ್ಯಪಾನ ಹಾಗೂ ಮಾದಕ ದ್ರವ್ಯಗಳ ವ್ಯಸನಿಗಳಿಗೆ ಸಹಾಯ ಒದಗಿಸುವುದು, ವಿವಿಧ ಸಮಸ್ಯೆಗಳ ಬಗ್ಗೆ ಸಲಹೆ ನೀಡುವುದು, ಶಾಲೆಗಳಲ್ಲಿ ಮಾನಸಿಕ ಸ್ವಾಸ್ಥ್ಯ ಕಾರ್ಯಕ್ರಮಗಳನ್ನು ನಡೆಸುವುದು, ಇತ್ಯಾದಿ ಕಾರ್ಯಗಳನ್ನು ಈ ಸಂಘ ಹಮ್ಮಿಕೊಂಡಿದೆ. 'ಹಾಫ್ ವೇ ಹೋಮ್' ಮಾನಸಿಕವಾಗಿ ಬಳಲುವವರಿಗೆ ವಸತಿ ಸೌಕರ್ಯವನ್ನು ಒದಗಿಸುತ್ತದೆ. ಇಲ್ಲಿ ವೃತ್ತಿಮೂಲ ಚಿಕಿತ್ಸೆ ಕೊಡುವ ವಿಭಾಗವಿದ್ದು ನಿವಾಸಿಗಳಿಗೆ ವಿವಿಧ ಕರಕುಶಲ ಕಲೆಗಳನ್ನು ಕಲಿಸಲಾಗುತ್ತದೆ. 1982ರ ವರೆಗೆ ಈ ಸಂಘವು 200 ಜನರನ್ನು ಆತ್ಮಹತ್ಯೆ ನಿರೋಧಕ ಸ್ವಯಂ ಸೇವಕರನ್ನಾಗಿ ತರಬೇತುಗೊಳಿಸಿದೆ. ಇಲ್ಲಿಯ ಹಾಫ್ ವೇ ಹೋಮ್‌ನಲ್ಲಿ 70 ನಿವಾಸಿಗಳು ಇದ್ದು ಹೋಗಿದ್ದಾರೆ. ಬುದ್ಧಿಮಾಂದ್ಯರಿಗಾಗಿ ಮನೆಗಳನ್ನೂ ಶಾಲೆಗಳನ್ನೂ ಕಾರ್ಯಾಗಾರಗಳನ್ನೂ ಒದಗಿಸುವ ಉದ್ದೇಶದಿಂದ ಆಶಾ ನಿಕೇತನ ಎಂಬ ಸಂಸ್ಥೆಯು ಬೆಂಗಳೂರಿನಲ್ಲಿ 1970ರಲ್ಲಿ 'ಫೆಲೋಶಿಪ್ ವಿಥ್ ದಿ ಮೆಂಟಲಿ ರಿಟಾರ್ಡೆಡ್' (ಎಫ್. ಎಂ. ಆರ್. ಇಂಡಿಯಾ) ಸಂಸ್ಥೆಯಿಂದ ಸ್ಥಾಪಿಸಲ್ಪಟ್ಟಿತು.

ಕುಷ್ಠರೋಗಿಗಳ ಕಲ್ಯಾಣಕ್ಕಾಗಿ ರಾಜ್ಯದಲ್ಲಿ ಸರಕಾರಿ ಸಂಸ್ಥೆಗಳ ಜೊತೆಗೆ ಇತರ ಅನೇಕ ಸಂಘ ಸಂಸ್ಥೆಗಳೂ ಕೆಲಸ ಮಾಡುತ್ತಿವೆ. ಬೆಳಗಾವಿಯ ಹಿಂಡಲಗಾದಲ್ಲಿರುವ 'ಬೆಳಗಾವಿ ಕುಷ್ಠರೋಗ ಆಸ್ಪತ್ರೆಯು' 1912ರಲ್ಲಿ ಕುಷ್ಠರೋಗಿಗಳಿಗೆ ಸಹಾಯ ಮಾಡಲೆಂದು ಸ್ಥಾಪಿತವಾಯಿತು. ಈ ಆಸ್ಪತ್ರೆಯು ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದೆ. ಹಾಗೂ ಬೆಳಗಾವಿ ಮತ್ತು ಹುಕ್ಕೇರಿ ತಾಲೂಕುಗಳಲ್ಲಿ ಕೆಲಸ ಮಾಡುತ್ತಿದೆ. 1951ರಲ್ಲಿ ಮಂಗಳೂರಿನಲ್ಲಿ ಪ್ರಾರಂಭವಾದ ದಕ್ಷಿಣ ಕನ್ನಡ ಜಿಲ್ಲಾ 'ಹಿಂದೂ ಕುಷ್ಠ ನಿವಾರಣ ಸಂಘವು' ಆ ಜಿಲ್ಲೆಯಲ್ಲಿ ಕುಷ್ಠರೋಗವನ್ನು ನಿಯಂತ್ರಿಸುವ ಮತ್ತು ನಿರ್ಮೂಲನ ಮಾಡುವ ಉದ್ದೇಶ ಹೊಂದಿದೆ. ಅದು ಒಂದು ಪುನರ್ವಸತಿ ಕೇಂದ್ರವನ್ನೂ, ಒಂದು ಗೇರು ತೋಟವನ್ನೂ, ಕುಷ್ಠರೋಗಿಗಳಿಗಾಗಿ ಹಲವು ಚಿಕಿತ್ಸಾಲಯಗಳನ್ನೂ ನಡೆಸುತ್ತಿದೆ. ಬೆಂಗಳೂರಿನಲ್ಲಿರುವ ನವಜೀವನ ನಿಲಯ, 1959ರಲ್ಲಿ ಪ್ರಾರಂಭವಾಗಿದ್ದು ಅದು ಕುಷ್ಠರೋಗದ ಋಣ ಪ್ರಕರಣಗಳನ್ನು ಪುನರ್ ಸ್ಥಾಪಿಸಲು ಹಾಗೂ ವೃತ್ತಿ ಉದ್ಯೋಗಗಳಿಗೆ ಬೇಕಾದ ತರಬೇತಿಯನ್ನು ಕೊಡಲು ಪ್ರಯತ್ನಿಸುತ್ತಿದೆ. 1978ರಲ್ಲಿ ಇಲ್ಲಿ 131 ನಿವಾಸಿಗಳಿದ್ದರು. ಬೆಂಗಳೂರಿನ 'ಸೇವಾ ನಿಲಯ'ವು 1970ರಲ್ಲಿ ಆಸ್ಪತ್ರೆಗಳನ್ನು ಅನಾಥಾಶ್ರಮಗಳನ್ನೂ ಶಾಲೆ ಮತ್ತಿತರ ಸಂಸ್ಥೆಗಳನ್ನೂ ಸ್ಥಾಪಿಸುವ, ನಿರ್ವಹಿಸುವ ಹಾಗೂ ಪ್ರವರ್ತಿಸುವ ಉದ್ದೇಶಗಳಿಂದ ಪ್ರಾರಂಭವಾಯಿತು. ಶಾಲೆ, ಕಾರ್ಖಾನೆ ಮೊದಲಾದ ಕಡೆಗಳಲ್ಲಿ ಕುಷ್ಠರೋಗವನ್ನು ಪತ್ತೆಹಚ್ಚಿ, ಅದನ್ನು ನಿಯಂತ್ರಿಸುವುದೇ ಮೊದಲಾದ ಕಾರ್ಯ ಚಟುವಟಿಕೆಗಳನ್ನು ಅದು ನಡೆಸುತ್ತಿದೆ. ನಿಲಯವು ನಿರ್ಗತಿಕ ಮಕ್ಕಳ ಧಾಮವೊಂದನ್ನು ನಡೆಸುತ್ತಿದೆಯಲ್ಲದೆ ಬೆಂಗಳೂರಿನ ಅಂಗವಿಕಲರ ಸಂಸ್ಥೆಯಲ್ಲಿ ಸ್ವಯಂಪ್ರೇರಣೆಯಿಂದ ಸೇವೆ ಸಲ್ಲಿಸುತ್ತಿದೆ.

ದೈಹಿಕ ಹಾಗೂ ಮಾನಸಿಕ ವಿಕಲರ ಒಳಿತಿಗಾಗಿ ಶ್ರಮಿಸುವ ಮೇಲೆ ಹೇಳಿದ ಸಂಘ ಸಂಸ್ಥೆಗಳಲ್ಲದೆ ಇಂಥವೇ ಗುರಿಯನ್ನು ಹೊಂದಿದ ಇತರ ಅನೇಕ ಸಂಸ್ಥೆಗಳೂ ಇವೆ. ಗದಗಿನಲ್ಲಿ 1944 ರಲ್ಲಿ ಸ್ಥಾಪಿತವಾದ 'ಸಂಗೀತ ಸಾಹಿತ್ಯ ಮಹಾವಿದ್ಯಾಲಯ'ದಲ್ಲಿ ಕುರುಡರಿಗೆ ಸಂಗೀತ ಶಿಕ್ಷಣ ಕೊಡಲಾಗುತ್ತಿದೆ; ಧಾರವಾಡ ಜಿಲ್ಲೆಯ ಶಿಗ್ಗಿಯ ಗ್ರಾಮ ಭಾರತಿ ಶಿಕ್ಷಣ ಸಮಿತಿಯು ಕುರುಡರಿಗಾಗಿ ಒಂದು ಶಾಲೆಯನ್ನು ನಡೆಸುತ್ತಿದೆ; ಮೇಲುಕೋಟೆಯ 'ಜನಪದ ಸೇವಾ ಟ್ರಸ್ಟ್' ಅಂಗವಿಕಲರಿಗೆ ಶಿಕ್ಷಣ ಕೊಡುತ್ತಿದೆ; 'ನವಜ್ಯೋತಿ ಟ್ರಸ್ಟ್' ಬುದ್ಧಿ ಮಾಂದ್ಯದವರಿಗೆ ಶಿಕ್ಷಣ ಕೊಡುತ್ತಿದೆ. 'ಡಿವ್ಯಾನ್ ಲೈಟ್ ಸ್ಕೂಲ್ ಫಾರ್ ದಿ ಬ್ಲೈಂಡ್', 'ಸ್ಪೆಶಲ್ ಎಸೋಸಿಯೇಶನ್ ಫಾರ್ ದಿ ಪ್ರೀ-ಸ್ಕೂಲ್ ಎಜ್ಯುಕೇಶನ್', 'ದಿ ಚೈಲ್ಡ್ ಗೈಡೆನ್ಸ್ ಸೆಂಟರ್', ನ್ಯಾಶನಲ್ ಇನ್ಸ್‌ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್ ಅ್ಯಂಡ್ ನ್ಯೂರೋ ಸೈನ್ಸಸ್‌ನ ಅಂಗಸಂಸ್ಥೆಯಾದ 'ಆಕ್ಯುಪೇಶನಲ್ ಥೆರಾಪಿ ರಿಹೆಬಿಲಿಟೇಷನ್ ಸೆಂಟರ್', 'ರಹಸ್ಯ ಟ್ರಸ್ಟ್' ಮತ್ತು 'ಎಸೋಸಿಯೇಷನ್ ಆಫ್ ದಿ ಡೆಫ್' ಇವೆಲ್ಲ ಬೆಂಗಳೂರಿನಲ್ಲಿರುವ ಸ್ವಯಂಸೇವಾ ಸಂಸ್ಥೆಗಳಾಗಿದ್ದು, ಅಂಗವಿಕಲ ಮಕ್ಕಳ ಕಲ್ಯಾಣ ಮತ್ತು ಅವರನ್ನು ಸಮಾಜದಲ್ಲಿ ಪುನರ್ವಸತಿಗೊಳಿಸುವ ಕಾರ್ಯದಲ್ಲಿ ತೊಡಗಿವೆ. ಅಂಗವಿಕಲರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸುವ ಉದ್ದೇಶದಿಂದ 1975ರಲ್ಲಿ ಬೆಂಗಳೂರಿನಲ್ಲಿ ಅಂಗವಿಕಲರ

ವಿಶೇಷ ಉದ್ಯೋಗ ವಿನಿಮಯ ಕೇಂದ್ರವೊಂದನ್ನು ತೆರೆಯಲಾಗಿದೆ.

## ಅಂತರ ರಾಷ್ಟ್ರೀಯ ಸಂಘಟನೆಗಳು

**ಸೈಂಟ್ ಜಾನ್ ಎಂಬುಲನ್ಸ್ ಎಸೋಸಿಯೇಶನ್ :** ಕರ್ನಾಟಕ ರಾಜ್ಯದ ಸೈಂಟ್ ಜಾನ್ ಎಂಬುಲನ್ಸ್ ಎಸೋಸಿಯೇಶನ್ ಆಗಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ 1910ರಲ್ಲಿ ಮೈಸೂರಿನಲ್ಲಿ ಸ್ಥಾಪಿತವಾಯಿತು. ಸಾರ್ವಜನಿಕರಿಗೆ ಪ್ರಥಮ ಚಿಕಿತ್ಸೆಯ ಬಗ್ಗೆ ಶಿಕ್ಷಣ ಕೊಡುವುದು, ರೋಗಿಗಳನ್ನೂ, ಗಾಯಾಳುಗಳನ್ನೂ ಉಪಚರಿಸುವ ಬಗ್ಗೆ ಮತ್ತು ನೈರ್ಮಲ್ಯದ ಬಗ್ಗೆ ಇರುವ ಪ್ರಾಥಮಿಕ ಸೂತ್ರಗಳು ಮತ್ತು ಆಚರಣೆಗಳನ್ನು ಕುರಿತು ಶಿಕ್ಷಣ ಕೊಡುವುದು, ಇತ್ಯಾದಿ ಧ್ಯೇಯೋದ್ದೇಶಗಳನ್ನು ಈ ಸಂಘ ಹೊಂದಿದೆ. ಇದು ಹೊಸದಿಲ್ಲಿಯಲ್ಲಿರುವ ಸೈಂಟ್ ಜಾನ್ ಎಂಬುಲನ್ಸ್ ಎಸೋಸಿಯೇಶನ್ನಿಗೆ ಸಂಲಗ್ನತೆ ಪಡೆದಿದೆ. ಸಂಘವು ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ತನ್ನ ಜಿಲ್ಲಾ/ಸ್ಥಳೀಯ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದೆ. ಪ್ರಥಮ ಚಿಕಿತ್ಸೆ ಮತ್ತು ಗೃಹ ಶುಶ್ರೂಷೆಯ ವಿಷಯಗಳಲ್ಲಿ ಬಹಳಷ್ಟು ನಾಗರಿಕರಿಗೆ ತರಬೇತಿ ಕೊಡುವುದರಲ್ಲಿ ಕರ್ನಾಟಕ ರಾಜ್ಯ ಕೇಂದ್ರವು ಇಡೀ ದೇಶದಲ್ಲಿ ಎರಡನೇಯ ಸ್ಥಾನ ಪಡೆದಿದೆ. ಸಾರಿಗೆ ಸಿಬ್ಬಂದಿಯವರಿಗೆ ಪ್ರಥಮ ಚಿಕಿತ್ಸೆ ತರಬೇತಿ ಏರ್ಪಡಿಸುವ ವಿಷಯದಲ್ಲಂತೂ ಅದು ದೇಶದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ. 1973ರಲ್ಲಿ ರಾಜ್ಯ ಕೇಂದ್ರವು ಅಖಿಲ ಭಾರತ ಮಟ್ಟದ ಚಿಕಿತ್ಸೆ ಮತ್ತು ಗೃಹ ಶುಶ್ರೂಷೆ ಸ್ಪರ್ಧೆಗಳಿಗೆ ಅತಿಥೇಯ ಸಂಸ್ಥೆಯಾಗಿ ಅವುಗಳನ್ನು ನಡೆಸಿಕೊಟ್ಟಿತು.

**ಭಾರತೀಯ ರೆಡ್‌ಕ್ರಾಸ್ ಸಂಸ್ಥೆ :** ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯು 1921ರಲ್ಲಿ ಪ್ರಾರಂಭವಾಯಿತು. ರಾಜ್ಯಗಳ ಪುನರ್ಘಟನೆಯ ಮೊದಲು ಇದರ ಕಾರ್ಯವ್ಯಾಪ್ತಿ ಅರಸರ ಆಳ್ವಿಕೆಯ ಮೈಸೂರಿಗೆ ಮಾತ್ರ ಸೀಮಿತವಾಗಿತ್ತು- ಆದರೆ 1956ರ ನಂತರ ಅದರ ಕಾರ್ಯ ಚಟುವಟಿಕೆಗಳು ಸಮಗ್ರ ಕರ್ನಾಟಕಕ್ಕೆ ವಿಸ್ತರಿಸಿವೆ. ರೆಡ್‌ಕ್ರಾಸ್ ಸಂಸ್ಥೆಯು ಎರಡು ರೀತಿಯ ಕಾರ್ಯಗಳಲ್ಲಿ ಮಗ್ನವಾಗಿದೆ. ಮೊದಲನೆಯದು ಶಾಂತಿ ಕಾಲದ ಕಾರ್ಯಗಳು; ಎರಡನೆಯದು ಯುದ್ಧ ಕಾಲದ ಕಾರ್ಯಗಳು. ಸಂಸ್ಥೆಯ ಶಾಂತಿಕಾಲದ ಕಾರ್ಯಗಳಲ್ಲಿ ಕೆಲಸವೆಂದರೆ ಮಾತೃತ್ವ ಮತ್ತು ಶಿಶುಕಲ್ಯಾಣ, ಬರಗಾಲ, ನೆರೆಹಾವಳಿ, ಅಗ್ನಿಪ್ರಕೋಪ, ಭೂಕಂಪ ಮೊದಲಾದ ಸಂಕಟಕಾಲದ ಪರಿಹಾರ ಕೆಲಸ, ವ್ಯಕ್ತಿಗಳಿಗೆ ಪರಿಹಾರ, ಸಂಸ್ಥೆಗಳಿಗೆ ಸೇವೆ, ರಕ್ತದಾನ ಚಳುವಳಿ, ಇತ್ಯಾದಿ. ಅದರ ಯುದ್ಧಕಾಲದ ಚಟುವಟಿಕೆಗಳಲ್ಲಿ ಯುದ್ಧ ಭೂಮಿಯಲ್ಲಿ ಬಿದ್ದ ಗಾಯಾಳುಗಳನ್ನು ತೆಗೆದುಕೊಂಡು ಬರುವುದು, ಅವರನ್ನು ಸೈನ್ಯ ಶಿಬಿರದ ಆಸ್ಪತ್ರೆಗಳಿಗೆ ಸಾಗಿಸುವುದು, ಅವರಿಗೆ ಪ್ರಥಮ ಚಿಕಿತ್ಸೆ ಕೊಡುವುದು, ಇತ್ಯಾದಿ ಎಂದು ಹೇಳಬಹುದು. 1947ರಲ್ಲಿ ರೆಡ್‌ಕ್ರಾಸ್ ಸಂಸ್ಥೆಯು ಕೋಲಾರ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಬರಗಾಲ ಪರಿಹಾರ ಕಾರ್ಯಗಳನ್ನು ಕೈಗೊಂಡಿತು. 1952-53ರಲ್ಲಿ ಮೈಸೂರು ಭಾಗದ ಎಲ್ಲ ಜಿಲ್ಲೆಗಳಲ್ಲಿ ಆಹಾರ ಮತ್ತು ಮೇವಿನ ಕೊರತೆ ಬಾಧಿಸಿತ್ತು. ಆಗ ರೆಡ್‌ಕ್ರಾಸ್ ಸಂಸ್ಥೆಯು ಹಾಲು ಮತ್ತು ಆಹಾರ ಸಾಮಗ್ರಿಗಳನ್ನು ಪುಕ್ಕಟೆಯಾಗಿ ವಿತರಣೆ ಮಾಡಿತು. 1955 ಮತ್ತು 1959ರ ನಡುವಿನ ಅವಧಿಯಲ್ಲಿ ಮೈಸೂರು, ತುಮಕೂರು, ಮಂಡ್ಯ, ವಿಜಾಪುರ, ಬೆಳಗಾವಿ, ಧಾರವಾಡ, ಕಲ್ಬುರ್ಗಿ ಮತ್ತು ಬಿದರೆ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಬರಗಾಲ ಪರಿಹಾರ ಕಾರ್ಯಗಳನ್ನು ಕೈಗೊಳ್ಳಲಾಯಿತು. ಈ ಎಲ್ಲ ಮತ್ತು ಇಂಥ ಅನೇಕ ಸಂಕಟದ ಪರಿಸ್ಥಿತಿಗಳಲ್ಲಿ ರೆಡ್‌ಕ್ರಾಸ್ ಸಂಸ್ಥೆಯು ಪರಿಹಾರ ಸೇವೆಗಳನ್ನು ಆದರ್ಶ ರೀತಿಯಲ್ಲಿ ಸಲ್ಲಿಸಿದೆ.

**ರೌಂಡ್ ಟೇಬಲ್ಲುಗಳು :** 1957ರಲ್ಲಿ ಮದ್ರಾಸಿನಲ್ಲಿ ಪ್ರಥಮ ರೌಂಡ್ ಟೇಬಲ್ ರಚನೆಯಾಗುವುದರೊಂದಿಗೆ ಭಾರತದಲ್ಲಿ ರೌಂಡ್ ಟೇಬಲ್ ಚಳುವಳಿ ಪ್ರಾರಂಭವಾಯಿತೆನ್ನಬಹುದು. ಅದು 1964ರಲ್ಲಿ ಬೆಂಗಳೂರಿಗೂ ಹರಡಿತು. ಸದ್ಯಕ್ಕೆ ನಮ್ಮ ರಾಜ್ಯದಲ್ಲಿ ಏಳು ರೌಂಡ್ ಟೇಬಲ್ಲುಗಳಿವೆ. ಅವುಗಳಲ್ಲಿ ನಾಲ್ಕು ಬೆಂಗಳೂರಿನಲ್ಲೂ, ಮೈಸೂರು, ಹುಬ್ಬಳ್ಳಿ ಮತ್ತು ಧಾರವಾಡಗಳಲ್ಲಿ ತಲಾ ಒಂದೊಂದು ಇದ್ದು, ಅವುಗಳ ಒಟ್ಟು ಸದಸ್ಯ ಸಂಖ್ಯೆ 125. ರೌಂಡ್ ಟೇಬಲ್ ಹದಿನೆಂಟರಿಂದ ನಲವತ್ತು ವರ್ಷ ಪ್ರಾಯದೊಳಗಿನ ಜವಾಬ್ದಾರಿಯುತ ಯುವಕರ ಸಂಘಟನೆ. ಅದು ವ್ಯಕ್ತಿತ್ವದ ಬೆಳವಣಿಗೆಗೆ ವ್ಯಾವಹಾರಿಕ ಮಾರ್ಗವನ್ನು ಕಲ್ಪಿಸುವುದು, ಸ್ನೇಹವನ್ನು ವರ್ಧಿಸುವುದು, ಸಮುದಾಯ ಸೇವೆಗಳಲ್ಲಿ ಭಾಗವಹಿಸುವಂತೆ ಮಾಡುವುದು ಮತ್ತು ಅಂತರ್‌ರಾಷ್ಟ್ರೀಯ ತಿಳುವಳಿಕೆ ಮತ್ತು ಸದ್ಭಾವಗಳನ್ನು ಹೆಚ್ಚಿಸುವುದು, ರೌಂಡ್ ಟೇಬಲ್ಲುಗಳ ಕಾರ್ಯಚಟುವಟಿಕೆಗಳಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು, ನಿರ್ಗತಿಕರ ಗೃಹಗಳಿಗೆ ಸಹಾಯ ಮಾಡುವುದು, ಬುದ್ಧಿ ಮಾಂದ್ಯದ ಮಕ್ಕಳಿಗೆ ಸಹಾಯ ಮಾಡುವುದು, ವೈದ್ಯಕೀಯ ಹಾಗೂ ಶಸ್ತ್ರ ಚಿಕಿತ್ಸೆ, ಅಗತ್ಯವಾಗುವ ತುರ್ತು ಸಂದರ್ಭಗಳಲ್ಲಿ ವ್ಯಕ್ತಿಗಳಿಗೆ ಪರಿಹಾರ ಒದಗಿಸುವುದು, ಆಸ್ಪತ್ರೆಗಳಿಗೆ ಅಪಘಾತ ಪರಿಹಾರ, ವ್ಯಾನುಗಳನ್ನು ಕೊಡುವುದು, ಇತ್ಯಾದಿ, ಸೇರಿವೆ.

**ರೋಟರಿ ಕ್ಲಬ್ಬುಗಳು :** ಕರ್ನಾಟಕದಲ್ಲಿ ಪ್ರಥಮ ರೋಟರಿ ಕ್ಲಬ್ಬನ್ನು ಮದ್ರಾಸಿನ ರೋಟರಿ ಕ್ಲಬ್ಬಿನ ಅನುಮೋದನೆಯೊಡನೆ ಬೆಂಗಳೂರಿನಲ್ಲಿ 1934ರಲ್ಲಿ ಪ್ರಾರಂಭಿಸಲಾಯಿತು. ರೋಟರಿಯ ಉದ್ದೇಶಗಳೆಂದರೆ ಸೇವೆಯ ಆದರ್ಶ

ವನ್ನು ಪ್ರೋತ್ಸಾಹಿಸಿ ಪೋಷಿಸುವುದು, ವೃತ್ತಿ ವ್ಯವಹಾರಗಳಲ್ಲಿ ಅತ್ಯುಚ್ಚ ನೈತಿಕ ಮಟ್ಟವನ್ನು ಬೆಳೆಸುವುದು, ಮತ್ತು ಅಂತರ್‌ರಾಷ್ಟ್ರೀಯ ತಿಳುವಳಿಕೆ, ಸದ್ಭಾವನೆ ಮತ್ತು ಶಾಂತಿಯನ್ನು ವರ್ಧಿಸುವುದು. ಕರ್ನಾಟಕದ ರೋಟರಿ ಕ್ಲಬ್ಬುಗಳು ಅಂತರ್‌ರಾಷ್ಟ್ರೀಯ ರೋಟರಿಯ 317, 318 ಮತ್ತು 319ನೇಯ ರೋಟರಿ ಜಿಲ್ಲೆಗಳಿಗೆ ಸೇರಿವೆ. ರೋಟರಿ ಕ್ಲಬ್ಬುಗಳ ಚಟುವಟಿಕೆಗಳು ಹೆಚ್ಚಾಗಿ ಸೇವಾ ಕಾರ್ಯಗಳಾಗಿವೆ. ಈ ಕ್ಲಬ್ಬುಗಳು ಕಾಲೇಜುಗಳನ್ನು ಕಟ್ಟಿವೆ; ಆಸ್ಪತ್ರೆಯ ವಾರ್ಡುಗಳನ್ನು ಕಟ್ಟಿಕೊಟ್ಟಿವೆ; ಮಕ್ಕಳ ಚಿಕಿತ್ಸಾಲಯ, ಗ್ರಂಥಾಲಯ ಸಭಾಂಗಣ, ಈಜುಕೊಳ, ಪುಸ್ತಕನಿಧಿ, ರಕ್ತನಿಧಿ, ನೇತ್ರ ನಿಧಿ, ಫಿಜಿಯೋಥೆರಪಿ ಕೇಂದ್ರಗಳು, ಇತ್ಯಾದಿಗಳನ್ನು ಸ್ಥಾಪಿಸಿವೆ. ಈ ಕ್ಲಬ್ಬುಗಳು ಕಿವುಡರ ಮತ್ತು ಮೂಕರ ಶಾಲೆಗಳನ್ನು ಪ್ರಾರಂಭಿಸಿವೆ; ಸಮುದಾಯ ಭವನಗಳನ್ನು ನಿರ್ಮಿಸಿವೆ; ಮಕ್ಕಳ ಉಪವನಗಳನ್ನು ರಚಿಸಿವೆ; ನೇತ್ರ ಚಿಕಿತ್ಸಾ ಶಿಬಿರಗಳನ್ನೂ ದಂತ ಚಿಕಿತ್ಸಾ ಶಿಬಿರಗಳನ್ನೂ ಕುಟುಂಬ ಯೋಜನಾ ಶಿಬಿರಗಳನ್ನೂ ಸಾಮಾನ್ಯ ಆರೋಗ್ಯ ತಪಾಸಣೆಯ ಶಿಬಿರಗಳನ್ನೂ ಏರ್ಪಡಿಸಿವೆ. ಅವು ಬಸ್ ಪ್ರಯಾಣಿಕರಿಗೆ ತಂಗುದಾಣಗಳನ್ನೂ, ವಾಹನ ಸಂಚಾರಿ ವೇದಿಕೆಗಳನ್ನೂ ಕಟ್ಟಿಕೊಟ್ಟಿದ್ದಲ್ಲದೆ ಬಡವರಿಗೆ ಉಚಿತ ಪುಸ್ತಕ, ಬಟ್ಟೆಬರೆಗಳನ್ನು ವಿತರಿಸಿವೆ; ಔಷಧ ಮದ್ದು, ಟ್ರಿಪಲ್ ಆ್ಯಂಟಿಜೆನ್, ಪೋಲಿಯೋ ಲಸಿಕೆಗಳನ್ನೂ ಹಂಚಿವೆ. ಅಂತರ್‌ರಾಷ್ಟ್ರೀಯ ರೋಟರಿಯಲ್ಲಿ ಮಹಿಳೆಯರಿಗಾಗಿ ಇನ್ನರ್ ವೀಲ್ ಮತ್ತು ಎಳೆಯರಿಗಾಗಿ ರೋಟರ್ಯಾಕ್ಟ್ ಎಂಬ ಎರಡು ಅಂಗಸಂಸ್ಥೆಗಳಿವೆ.

**ಲಯನ್ಸ್ ಕ್ಲಬ್ಬುಗಳು :** ಮುಂಬೈಯ ಲಯನ್ಸ್ ಕ್ಲಬ್ಬು 1957ರಲ್ಲಿ ಬೆಂಗಳೂರಿನಲ್ಲಿ ಲಯನ್ಸ್ ಕ್ಲಬ್ಬನ್ನು ಪ್ರಾರಂಭಿಸುವುದರೊಂದಿಗೆ ಕರ್ನಾಟಕದಲ್ಲಿ ಲಯನ್ಸ್ ಚಳುವಳಿ ಪ್ರಾರಂಭವಾಯಿತು. ರಾಜ್ಯದಲ್ಲಿರುವ ಎಲ್ಲ ಲಯನ್ಸ್ ಕ್ಲಬ್ಬುಗಳು ಲಯನ್ಸ್ ಇಂಟರ್‌ನ್ಯಾಷನಲ್‌ದ 324 ಡಿ1 ಮತ್ತು 324 ಡಿ2 ಜಿಲ್ಲೆಗಳಿಗೆ ಸೇರುತ್ತವೆ. ಕ್ಲಬ್ಬು ಕೈಗೊಳ್ಳುವ ಪರಿಹಾರ ಕಾರ್ಯಗಳಲ್ಲಿ ಶಿಶು ಆರೈಕೆ ಕಾರ್ಯಕ್ರಮ, ಶಿಶುರೋಗ ಪ್ರತಿಬಂಧಕ ಕಾರ್ಯಕ್ರಮ, ಕುಟುಂಬ ಯೋಜನಾ ಶಸ್ತ್ರಚಿಕಿತ್ಸೆ ಶಿಬಿರಗಳು, ನೇತ್ರದಾನ ಚಳುವಳಿ, ಕುಷ್ಠರೋಗ ನಿವಾರಣಾ ಕಾರ್ಯಕ್ರಮ, ಗ್ರಾಮೀಣ ಆರೋಗ್ಯ ತಪಾಸಣಾ ಶಿಬಿರಗಳು, ಸಾರ್ವಜನಿಕ ಭಾಷಣ ಸ್ಪರ್ಧೆ, ನಾಯಕತ್ವ ಬೆಳವಣಿಗೆ ಮುಂತಾದ ಶೈಕ್ಷಣಿಕ ಕಾರ್ಯಕ್ರಮಗಳು, ಇತ್ಯಾದಿ ಸೇರಿವೆ. ಅಂಗವಿಕಲರ ಪುನರ್‌ವಸತಿ, ಮಹಿಳಾ ಕಲ್ಯಾಣ ಕಾರ್ಯಕ್ರಮ, ಸಾಮೂಹಿಕ ವಿವಾಹಗಳು, ವಿಧವಾ ವಿವಾಹಗಳು, ಬಸ್ ತಂಗುದಾಣಗಳು ಮತ್ತು ಮಕ್ಕಳ ಉಪವನಗಳ ನಿರ್ಮಾಣ ಮುಂತಾದ ಚಟುವಟಿಕೆಗಳೂ ನಡೆಯುತ್ತವೆ.

**ಆಮ್ನೆಸ್ಟಿ ಇಂಟರ್‌ನ್ಯಾಷನಲ್ :** ಆಮ್ನೆಸ್ಟಿ ಇಂಟರ್‌ನ್ಯಾಷನಲ್‌ನ ಬೆಂಗಳೂರು ಶಾಖೆಯು 1978ರಲ್ಲಿ ಪ್ರಾರಂಭವಾಯಿತು. ಇದರ ಮಾತೃಸಂಸ್ಥೆಯನ್ನು ಬ್ರಿಟಿಷ್ ನ್ಯಾಯವಾದಿ ಪೀಟರ್ ಬೆನೆನ್ಸನ್ ಎಂಬವನು ಇಂಗ್ಲೆಂಡಿನಲ್ಲಿ 1961ರಲ್ಲಿ ಸ್ಥಾಪಿಸಿದ. ಇದರ ಭಾರತೀಯ ವಿಭಾಗ 1968ರಲ್ಲಿ ಪ್ರಾರಂಭವಾಯಿತು. ಈ ಸಂಸ್ಥೆಯು ಸೆರೆಯಾಳುಗಳ ಆತ್ಮಸಾಕ್ಷಿಗಾಗಿ ಕೆಲಸ ಮಾಡುತ್ತದೆ ; ಎಲ್ಲ ರಾಜಕೀಯ ಕೈದಿಗಳ ನ್ಯಾಯಯುತ ಹಾಗೂ ತೀವ್ರ ನ್ಯಾಯ ವಿಚಾರಣೆಯನ್ನು ಪ್ರತಿಪಾದಿಸುತ್ತದೆ ; ಮರಣದಂಡನೆ, ಚಿತ್ರಹಿಂಸೆ, ಕ್ರೂರ ಅಮಾನುಷ ಶಿಕ್ಷೆಗಳನ್ನು ವಿರೋಧಿಸುತ್ತದೆ ಮತ್ತು ಮಾನವ ಹಕ್ಕುಗಳನ್ನು ರಕ್ಷಿಸಲು ಹೋರಾಡುತ್ತದೆ. ಸಂಸ್ಥೆಯನ್ನು ನಡೆಸಲು ಸಂಘದ ಸದಸ್ಯರು ಸ್ವಯಂಪ್ರೇರಣೆಯಿಂದ ಕೊಡುವ ಚಂದಾ ಹಣವನ್ನು ಸ್ವೀಕರಿಸುತ್ತಾರೆ.

**ಅಂತರರಾಷ್ಟ್ರೀಯ ಭ್ರಾತೃತ್ವ ಸಂಘ :** 'ಇಂಡೋ ಇಂಟರ್‌ನ್ಯಾಷನಲ್ ಬ್ರದರ್ ಹುಡ್' ಎಂಬ ಸಂಘವು 1964 ರಲ್ಲಿ ಸ್ಥಾಪಿತವಾಯಿತು. ವಿವಿಧ ದೇಶಗಳ ಜನರ ನಡುವೆ ಉತ್ತಮ ಹಾಗೂ ಗಾಢವಾದ ಸಂಬಂಧಗಳನ್ನು ಬೆಳೆಸುವ ಅವಕಾಶಗಳನ್ನು ಹೆಚ್ಚಿಸುವ ಉದ್ದೇಶಕ್ಕಾಗಿ, ಸ್ವಯಂಪ್ರೇರಣೆಯಿಂದ ಬರುವ ಎಲ್ಲ ವ್ಯಕ್ತಿ ಮತ್ತು ವಸ್ತು ಸಂಪನ್ಮೂಲಗಳನ್ನೂ, ಪ್ರಯತ್ನ ಮತ್ತು ಸೇವೆಗಳನ್ನೂ ಕ್ರೋಢೀಕರಿಸಲು ಇದನ್ನು ಸ್ಥಾಪಿಸಲಾಯಿತು. ಇದು ಸಮಾಜ ಸೇವಾ ಶಿಬಿರಗಳನ್ನು ಸಂಘಟಿಸುವುದು, ಕೊಳೆಗೇರಿಗಳಲ್ಲಿ ಶಾಲೆಗಳನ್ನು ತೆರೆಯುವುದು, ಕಿರಿಯರಿಗಾಗಿ ತರಬೇತಿ ಶಿಬಿರಗಳನ್ನು ಸಂಘಟಿಸುವುದು, ಇವೇ ಮುಂತಾದ ಕಾರ್ಯಚಟುವಟಿಕೆಗಳನ್ನು ನಡೆಸುತ್ತದೆ.

# ಅಧ್ಯಾಯ 11

# ಸಂಸ್ಕೃತಿ

ಕರ್ನಾಟಕದ ಸಾಂಸ್ಕೃತಿಕ ಪರಂಪರೆಯು ಶ್ರೀಮಂತವೂ ವೈವಿಧ್ಯಮಯವೂ ಆಗಿದೆ. ಸಾಂಸ್ಕೃತಿಕ ಪರಂಪರೆಯ ಕೆಲವು ಅಂಗಗಳಾದ ಧರ್ಮಗಳು, ಸಾಮಾಜಿಕ ಸಂಸ್ಥೆಗಳು, ಜಾನಪದ ಕಲೆಗಳು, ವೈಜ್ಞಾನಿಕ ಪರಂಪರೆ, ಇತ್ಯಾದಿಗಳ ಬಗೆಗೆ ಈಗಾಗಲೇ ವಿವೇಚಿಸಲಾಗಿದೆ. ಈಗ ಕರ್ನಾಟಕದಲ್ಲಿ ಪ್ರಚಲಿತವಿರುವ ಭಾಷೆಗಳು ಮತ್ತು ಅವುಗಳ ಪರಿಣಾಮ, ಸಾಹಿತ್ಯಿಕ ಪರಂಪರೆ ಮತ್ತು ವಾಸ್ತುಶಿಲ್ಪ, ಮೂರ್ತಿಶಿಲ್ಪ, ವರ್ಣ ಚಿತ್ರಕಲೆ, ನೃತ್ಯ, ನಾಟಕ, ಸಂಗೀತ, ಜಾನಪದ ಸಾಹಿತ್ಯ ಮತ್ತು ಇತರ ವಿಷಯಗಳಲ್ಲಿ ಕರ್ನಾಟಕವು ಮಾಡಿದ ಸಾಧನೆಗಳನ್ನು ಕುರಿತು ಇಲ್ಲಿ ವಿವೇಚಿಸಿ—ಆ ವಿಷಯ ನಿರೂಪಣೆಯನ್ನು ಪೂರ್ಣಗೊಳಿಸಲು ಯತ್ನಿಸಲಾಗಿದೆ.

## ಸಾಂಸ್ಕೃತಿಕ ಪರಂಪರೆ: ಒಂದು ಸಂಕ್ಷಿಪ್ತ ನೋಟ

ಭಾರತೀಯ ಸಂಸ್ಕೃತಿಯು ಕರ್ನಾಟಕದ ಸಂಸ್ಕೃತಿ, ಆಂಧ್ರದ ಸಂಸ್ಕೃತಿ ಅಥವಾ ಮಹಾರಾಷ್ಟ್ರದ ಸಂಸ್ಕೃತಿ ಮೊದಲಾದ ಸಂಸ್ಕೃತಿಗಳ ಅಥವಾ ಉಪಸಂಸ್ಕೃತಿಗಳ ಸಂಗಮವಾಗಿದೆ. ಈ ರೀತಿ ವಿಭಜಿಸಲು ಆ ಭಾಗದ ಭಾಷೆ ಮತ್ತು ಸಾಹಿತ್ಯವೇ ಮೂಲ ಕಾರಣವಾಗಿವೆ. ಕರ್ನಾಟಕ ಸಂಸ್ಕೃತಿಯನ್ನು ಕನ್ನಡ ಭಾಷೆಯ ಮತ್ತು ಸಾಹಿತ್ಯದ ಆಧಾರದ ಮೇಲೆ ಇತರ ಭಾಷಾ ಸಂಸ್ಕೃತಿಗಳಿಂದ ವಿಂಗಡಿಸಿ ಹೇಳಬೇಕು; ಉದಾಹರಣಾರ್ಥವಾಗಿ ತಮಿಳು ಸಂಸ್ಕೃತಿ, ಇತ್ಯಾದಿ. ಭಾಷೆ ಮತ್ತು ಸಾಹಿತ್ಯಗಳು ಯಾವುದೇ ಸಂಸ್ಕೃತಿಯ ಮುಖ್ಯ ಅಂಗಗಳಾಗಿವೆ. ಒಂದು ಜನರ ಆಚಾರ ವಿಚಾರಗಳನ್ನು ಎಲ್ಲರಿಗೂ ಬರುವಂಥ ಭಾಷೆಯ ಮುಖಾಂತರ, ಸುಲಭವಾಗಿ ವ್ಯಕ್ತಮಾಡಲು ಬರುವುದರಿಂದ ಆ ಭಾಷೆಯ ಜನರು ಒಂದು ಸಂಸ್ಕೃತಿಯವರೆಂದು ಗುರುತಿಸಲಾಗಿದೆ.

ಕರ್ನಾಟಕ ಸಂಸ್ಕೃತಿಯನ್ನು ಕಂಡುಹಿಡಿಯಲು ಭಾಷೆಯೊಂದೇ ಸಹಾಯಕವಾಗುವುದಿಲ್ಲ. ಕರ್ನಾಟಕ ಸಂಸ್ಕೃತಿಯನ್ನು ಉಳಿದ ಸಂಸ್ಕೃತಿಗಳಿಂದ ಬೇರ್ಪಡಿಸಲು ಬೇರೆ ಮಹತ್ವದ ಲಕ್ಷಣಗಳು ಇವೆ. ಈ ಲಕ್ಷಣಗಳು ಭಾರತದ ಬೃಹತ್ ಸಂಸ್ಕೃತಿಗೆ ಗಣನೀಯವಾದ ಕೊಡುಗೆಗಳಾಗಿವೆ. ಈ ಕೊಡುಗೆಗಳು ಭಾರತೀಯ ಸಂಸ್ಕೃತಿಯ ಪರಂಪರೆಯನ್ನು ಶ್ರೀಮಂತಗೊಳಿಸಿವೆ. ಉದಾಹರಣಾರ್ಥವಾಗಿ, ಉತ್ತರ ಕರ್ನಾಟಕದವರ ಉಡುಗೆ ತೊಡುಗೆ ಮತ್ತು ಊಟೋಪಚಾರಗಳು ಮಹಾರಾಷ್ಟ್ರದವರ ಉಡುಗೆ ತೊಡುಗೆ ಮತ್ತು ಊಟೋಪಚಾರಗಳನ್ನು ಹೆಚ್ಚಾಗಿ ಹೋಲುತ್ತವೆ. ಅದೇ ರೀತಿ ದಕ್ಷಿಣ ಕನ್ನಡ ಜಿಲ್ಲೆಯ ಜನರ ಆಚಾರವಿಚಾರಗಳು ಅವರ ಸಮೀಪವರ್ತಿಗಳಾಗಿರುವ ಮಲೆಯಾಳೀ ಜನರ ಆಚಾರವಿಚಾರಗಳನ್ನು ವಿಶೇಷವಾಗಿ ಹೋಲುವವು. ಪೋಷಾಕು, ಆಹಾರದ ಸಂಪ್ರದಾಯ, ಇತ್ಯಾದಿಗಳು ಪ್ರಾದೇಶಿಕವಾಗಿ ಬೇರೆ ಬೇರೆಯಾದರೂ ಸಾಮಾನ್ಯ ಭಾಷೆ ಮತ್ತು ಸಾಮಾನ್ಯ ಸಾಂಸ್ಕೃತಿಕ ಪರಂಪರೆಗಳು ಮೂರು ಕೋಟಿಗಿಂತಲೂ ಅಧಿಕ ಸಂಖ್ಯೆಯಲ್ಲಿರುವ ಕನ್ನಡಿಗರನ್ನು ಒಗ್ಗೂಡಿಸಿರುತ್ತವೆ.

ಇಲ್ಲಿ ಕರ್ನಾಟಕದ ಭೌಗೋಳಿಕ ಪರಿಸ್ಥಿತಿಯನ್ನು ತೀವ್ರವಾಗಿ ಗಮನಿಸುವುದು ಅವಶ್ಯವಿದೆ. ಅದು ಮೂರು ಕಡೆಗೆ ದ್ರಾವಿಡ ಭಾಷೆಗಳ (ತಮಿಳು, ಮಲಯಾಳಂ, ಮತ್ತು ತೆಲುಗು) ನ್ನಾಡುವ ಪ್ರದೇಶಗಳಿಂದಲೂ ಮತ್ತು ಉತ್ತರ ಮತ್ತು ವಾಯುವ್ಯಕ್ಕೆ ಅನುಕ್ರಮವಾಗಿ ಆರ್ಯ ಭಾಷೆಗಳಾದ ಮರಾಠಿ

ಮತ್ತು ಕೊಂಕಣಿ ಭಾಷೆಗಳನ್ನಾಡುವ ಕ್ಷೇತ್ರಗಳಿಂದ ಸುತ್ತು ವರಿಯಲ್ಪಟ್ಟಿದೆ. ಇದು ದ್ರಾವಿಡರ ಮತ್ತು ಆರ್ಯರ ಸಂಸ್ಕೃತಿಗಳು ಸೇರುವ ಪ್ರದೇಶವಾಗಿದೆ. ಮೂಲತಃ ಕನ್ನಡಿಗರಾದ ಬಾದಾಮಿಯ ಚಲುಕ್ಯರು, ರಾಷ್ಟ್ರಕೂಟರು, ದೇವಗಿರಿಯ ಸೇಉಣರು ಮತ್ತು ವಿಜಯನಗರದ ಅರಸರು ಈಗಿನ ಕರ್ನಾಟಕ ಮತ್ತು ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳು ನಾಡಿನ ಹಲವು ಭಾಗಗಳನ್ನು ಆಳಿದ್ದಾರೆ. (ದಕ್ಷಿಣ ಮತ್ತು ಮಧ್ಯಮಹಾರಾಷ್ಟ್ರ, ಪೂರ್ವದಲ್ಲಿ ಕನ್ನಡ ನೆಲವಾಗಿತ್ತೆಂದು ಆ ಪ್ರದೇಶಗಳ ಸ್ಥಳ ನಾಮಗಳಿಂದ ಮತ್ತು ಶಾಸನಗಳಿಂದ ವಿಧಿತವಾಗುತ್ತದೆ). ಈ ಭೌಗೋಲಿಕ ಪ್ರದೇಶವು ಕರ್ನಾಟಕದ ಕಲೆ ಮತ್ತು ಸಾಹಿತ್ಯಗಳ ಆಳವಾದ ಪ್ರಭಾವಕ್ಕೆ ಒಳಗಾಗಿದೆ. ಚಲುಕ್ಯ ವಾಸ್ತುಶಿಲ್ಪವು ದ್ರಾವಿಡ ಮತ್ತು ನಾಗರ ಪದ್ಧತಿಗಳ ಮಿಶ್ರಣವೆಂಬುದು ಕ್ರಿ. ಶ. ಏಳನೇಯ ಮತ್ತು ಎಂಟನೇಯ ಶತಮಾನಗಳಿಗೆ ಸೇರಿದ ಐಹೊಳೆ ಮತ್ತು ಪಟ್ಟದಕಲ್ಲುಗಳ ದೇವಾಲಯಗಳಲ್ಲಿ ನಿದರ್ಶಿತ ವಾಗುವುದು. ಕನ್ನಡ ಭಾಷೆಯು ದೇಶೀಯ ಮತ್ತು ಆರ್ಯ ಭಾಷೆಗಳ ಸಮತೂಕದ ಮಿಶ್ರಣವಾಗಿದ್ದರೆ, ತೆಲುಗು ಭಾಷೆಯು ಬಹುವಾಗಿ ಸಂಸ್ಕೃತ ಭಾಷೆಯ ಅತೀ ಪ್ರಭಾವಕ್ಕೆ ಒಳಗಾದುದಾಗಿದೆ. ಸಂಸ್ಕೃತದ ಪ್ರಭಾವಕ್ಕೊಳಗಾಗದೆ ತಮಿಳು ಮತ್ತೊಂದು ತುದಿಯಲ್ಲಿದೆ. ಸಂಸ್ಕೃತ ಶಬ್ದಗಳನ್ನು ಮತ್ತು ಸಾಹಿತ್ಯಿಕ ಮಾದರಿಗಳನ್ನು ಬಳಸಿ ಕನ್ನಡವು ಒಂದು ಸುವರ್ಣ ಮಧ್ಯರೇಖೆಯನ್ನಿಟ್ಟುಕೊಂಡಿದೆ. ಅದೇ ಕಾಲಕ್ಕೆ ಅದು ದೇಶೀ ಶಬ್ದಗಳನ್ನು ಮತ್ತು ಛಂದಸ್ಸುಗಳನ್ನು ಪ್ರಜ್ಞಾಪೂರ್ವಕವಾಗಿ ಉಳಿಸಿಕೊಂಡಿದೆ. ಸಾಹಿತ್ಯಿಕ ವಿಷಯಗಳಲ್ಲಿ ಮತ್ತು ಶೈಲಿಯಲ್ಲಿಯೂ ಈ ಸಮತೋಲನವನ್ನಿಟ್ಟುಕೊಂಡಿದೆ. ತನ್ನ ದೇಶೀ ಸತ್ವವನ್ನು ಬಲಿ ಕೊಡದೆ ಅದು ಪರಭಾಷೆಯ ಪ್ರಭಾವವನ್ನು ಬೇಕಾದಷ್ಟು ಬಳಸಿಕೊಳ್ಳಬಲ್ಲದು. ಚಂಪೂ ರೀತಿಯ ಕಾವ್ಯದಲ್ಲಿ ಕನ್ನಡ ಪದ್ಯಗಳು ಮತ್ತು ಮಂದಾಕ್ರಾಂತ, ಉತ್ಪಲ ಮಾಲಾ, ಮುಂತಾದ ಸಮವೃತ್ತಗಳಲ್ಲಿರುತ್ತವೆ. ಈ ಪದ್ಯಾತ್ಮಕ ರಚನೆಗಳು ಅನುಕ್ರಮವಾಗಿ ಪ್ರಾಕೃತ ಮತ್ತು ಸಂಸ್ಕೃತ ಸಾಹಿತ್ಯಗಳಿಂದ ಎರವಲಾಗಿ ಪಡೆದುಕೊಂಡವುಗಳಾಗಿವೆ. ಆದರೆ ಚಂಪೂ ಶೈಲಿಯ ಉಗಮವು ಮೂಲತಃ ಕನ್ನಡ ಸಾಹಿತ್ಯದಲ್ಲಿದ್ದಂತೆ ಕಾಣುತ್ತದೆ. ಅದನ್ನು ಅನಂತರ ಸಂಸ್ಕೃತ ಮತ್ತು ತೆಲುಗು ಕವಿಗಳು ಸ್ವೀಕರಿಸಿದ್ದಾರೆ. ಕಥನ ಕಾವ್ಯಗಳನ್ನು ಬರೆಯುವಾಗ ಕನ್ನಡ ಕವಿಗಳು ಎರವಲಾಗಿ ಪಡೆದ ಛಂದಸ್ಸಿನ ಜೊತೆಗೆ ಕನ್ನಡ ಛಂದಸ್ಸುಗಳೇ ಆದ ತ್ರಿಪದಿ ಮತ್ತು ಷಟ್ಪದಿಗಳನ್ನು ಬಳಸಲು ಅಲಕ್ಷ್ಯಮಾಡಿಲ್ಲ. ರಾಘವಾಂಕ ಮತ್ತು ಕುಮಾರವ್ಯಾಸ ಮೊದಲಾದ ಸುಪ್ರಸಿದ್ಧ ಕವಿಗಳು ದೇಶೀ ಛಂದಸ್ಸಾದ ಷಟ್ಪದಿಯನ್ನೇ ಉಪಯೋಗಿಸಿದ್ದಾರೆ. ಭಾಷೆಯ ಹೊರಗಿನ ಮತ್ತು ದೇಶೀ ಅಂಶಗಳನ್ನು ಬಳಸುವುದರಲ್ಲಿ ಸಾಧಿಸಿದ ಸಮತೋಲವನ್ನು ಮಾತ್ರ ಇದು ನಿದರ್ಶಿಸುತ್ತದೆ.

ಕರ್ನಾಟಕವು ಭಾರತದ ಪ್ರಾಯಶಃ ಎಲ್ಲ ಧರ್ಮಗಳ ಮತ್ತು ಧಾರ್ಮಿಕ ಪಂಥಗಳ ಸಂಗಮಸ್ಥಾನವಾಗಿದೆ. ಅದು ಪುಷ್ಪದಂತನೇ ಮೊದಲಾದ ಅನೇಕ ಪ್ರಾಕೃತ ಕವಿಗಳನ್ನು ಪೋಷಿಸಿದೆ. ಧಾರ್ಮಿಕ ಮತ್ತು ಭಾಷಾ ವಿಷಯಗಳಲ್ಲಿ ತಳೆದ ತಾಳ್ಮೆಯು ಕರ್ನಾಟಕ ಸಂಸ್ಕೃತಿಯ ಮಹತ್ವದ ಸಂಗತಿಯಾಗಿದೆ. ಹೀಗೆ ಅದು ನೆರೆಹೊರೆಯ ಜನರೊಡನೆ ಸಂಪರ್ಕ ಬೆಳೆಸಲು ಅದರ ಭೌಗೋಲಿಕ ಸ್ಥಾನವು ಸಹಾಯಕವಾಗಿದೆ. ಇತಿಹಾಸದುದ್ದಕ್ಕೂ ನೋಡಿದರೆ ಅದರ ರಾಜರ ಧಾರ್ಮಿಕ ನೀತಿಯು ಸಹಿಷ್ಣುತೆ ಮತ್ತು ಉದಾರತೆಯಿಂದ ಕೂಡಿದ್ದಿತ್ತು. ಫಲವತ್ತಾದ ಭೂಮಿ, ಸುಖಕರವಾದ ಹವೆ ಮತ್ತು ವರ್ಷದಲ್ಲೆಲ್ಲ ಬೇಕಾದಷ್ಟು ಬೀಳುವ ಮಳೆ ಇದ್ದುದರಿಂದ ಕರ್ನಾಟಕದ ರಾಜರು ಮತ್ತು ಅಲ್ಲಿಯ ಜನರು ವಿಶಾಲ ಮನಸ್ಸುಳ್ಳವರಾಗಲು ಕಾರಣವಾಗಿದೆ.

### ಭಾರತೀಯತೆ

ರಾಜ್ಯದ ಸಂಸ್ಕೃತಿಯು ಉಳಿದ ಸಂಸ್ಕೃತಿಗಳೊಡನೆ ಕೂಡಿಕೊಂಡು ಒಂದು ಸಮಗ್ರ ಭಾರತೀಯ ಸಂಸ್ಕೃತಿಯನ್ನು ಹೊಂದಲು ಅನೇಕ ಕಾರಣಗಳಿವೆ. ಅವೆಲ್ಲವುಗಳನ್ನೂ ಇಲ್ಲಿ ವಿವರವಾಗಿ ವರ್ಣಿಸುವ ಅವಶ್ಯಕತೆಯಿಲ್ಲ. ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ಭಾರತೀಯತ್ವ ಹಾಸುಹೊಕ್ಕಾಗಿದೆ. ಕಲೆ ಮತ್ತು ಸಾಹಿತ್ಯಗಳಲ್ಲಿ ಮೂಡಿಬಂದ ಸನ್ನಿವೇಶಗಳನ್ನು ಮಹಾಭಾರತ, ರಾಮಾಯಣ ಮತ್ತು ಮಹಾಪುರಾಣಗಳಂಥ ಪ್ರಾಚೀನ ಪೌರಾಣಿಕ ಗ್ರಂಥಗಳಿಂದ ಎತ್ತಿಕೊಳ್ಳಲಾಗಿದೆ. ಇವುಗಳಲ್ಲಿ ವ್ಯಕ್ತಪಡಿಸಿದ ಮೌಲ್ಯಗಳು ಆಧ್ಯಾತ್ಮಿಕವಾಗಿವೆ. ಈ ಪ್ರಕಾರವಾಗಿರುವುದು ಸಾಮಾಜಿಕ ಮೌಲ್ಯಗಳಾದ ಗೆಳೆತನ, ಭ್ರಾತೃತ್ವ, ಶೂರತನ, ದೇಶಾಭಿಮಾನ ಅಥವಾ ಆತ್ಮಗೌರವ ಮುಂತಾದವುಗಳನ್ನು ವ್ಯಕ್ತಪಡಿಸಲು ಕವಿಗಳ ಮಾರ್ಗದಲ್ಲಿ ಅಡ್ಡ ಬಂದಿಲ್ಲ. ಈ ಜಗತ್ತು ಒಂದು ಕಮ್ಮಟದಂತಿದ್ದು ಮನುಷ್ಯನು ನಾಣ್ಯದಂತೆ, ಇಲ್ಲಿ ಸಲ್ಲುವ ಮನುಷ್ಯನು ಪರಲೋಕದಲ್ಲಿಯೂ ಸಲ್ಲುವನೆಂದು ಬಸವಣ್ಣನವರು ಹೇಳಿದ್ದಾರೆ. ಈ ಜಗತ್ತು ಮತ್ತು ಅದರಲ್ಲಿ ಉಂಟಾಗುವ ಸುಖಗಳು ಕ್ಷಣಿಕ ಮತ್ತು ದುರ್ಮಾರ್ಗಕ್ಕೆ ಹಚ್ಚುವವೆಂದು ಸಿದ್ಧಾಂತದ ಮಟ್ಟಿಗಾದರೂ ನಂಬಿದ ಜೈನಕವಿಗಳು ಜೀವನವನ್ನು ಎಲ್ಲ ವಿಧದಲ್ಲಿಯೂ ಅವಲೋಕಿಸಿದ್ದಾರೆ. ತ್ಯಾಗ, ಭೋಗ, ಅಕ್ಕರ, ಗೇಯ ಮತ್ತು ಗೋಷ್ಠಿ ಈ ಸುಂದರ ಗುಣಗಳನ್ನು ಅಳವಡಿಸಿಕೊಂಡಾಗ ಮಾತ್ರ ಮನುಷ್ಯನು ಪೂರ್ಣನಾಗುತ್ತಾನೆಂಬ ಜೀವನ ಸಿದ್ಧಾಂತವನ್ನು ಪಂಪನು (10ನೇಯ ಶತಮಾನ) ವ್ಯಕ್ತಪಡಿಸಿದ್ದಾನೆ. ಜೀವನದಿಂದ ಓಡಿಹೋಗುವುದರ ಬದಲು ಜೀವನವನ್ನು ಎದುರಿಸಬೇಕು, ಸುಖಭೋಗಗಳನ್ನು ಬಿಟ್ಟುಬಿಡಬಾರದು. ಅವುಗಳನ್ನು ಭೋಗಿಸುವುದಕ್ಕೇ ಜೀವನ ಇರುವುದೆಂದು ಒತ್ತುಕೊಟ್ಟು ಅಭಿಪ್ರಾಯಪಟ್ಟ ಕನ್ನಡ ಕವಿಗಳು ಕೇವಲ ಸುಖಪಡುವುದೇ ಜೀವನದ ಧ್ಯೇಯವಾಗಿರಬಾರದೆಂದು ಹೇಳಿ, ಆಧ್ಯಾತ್ಮಿಕ ಮುಕ್ತಿಯನ್ನು ಪಡೆಯು

ವುದೇ ಮನುಷ್ಯನ ನಿಜವಾದ ಗುರಿಯಾಗಿದೆಯೆಂದು ಬೋಧಿಸಿದ್ದಾರೆ.

ಕವಿತೆಯಲ್ಲಿ ಸಾಂಪ್ರದಾಯಿಕವಾದದ್ದು, ಸಂಸ್ಕೃತದ್ದು ಮತ್ತು ಯಾವುದು ಸಮಗ್ರ ಭಾರತಕ್ಕೆ ಸಂಬಂಧಿಸಿದುದಾಗಿದೆಯೋ ಅದಕ್ಕೆ 'ಮಾರ್ಗ'ವೆಂದೂ ಮತ್ತು ಯಾವುದು ಸ್ಥಳೀಯವೂ ಇಲ್ಲಿನ ನೆಲಕ್ಕೆ ಅನುಗುಣವಾದದ್ದು ಇದೆಯೋ ಅದಕ್ಕೆ 'ದೇಶ್ಯ' ವೆಂದೂ ಹೇಳುತ್ತಾರೆ. ಮಹಾಕಾವ್ಯವು ಮಾರ್ಗ ಮತ್ತು ದೇಶ್ಯಗಳ ಮಿಶ್ರಣವೆಂದು ಭಾವಿಸಲಾಗಿತ್ತು. ಸಂಸ್ಕೃತಿಯ ಕ್ಷೇತ್ರದಲ್ಲಿಯೂ ಕರ್ನಾಟಕವು ತನ್ನ ಆಳವಾದ ಬೇರುಗಳನ್ನು 'ಮಾರ್ಗ'ದಲ್ಲಿ ಹೊಂದಿದೆ. ಅದೇ ಪ್ರಕಾರ ವಿಶಾಲವಾದ ಭಾರತೀಯ ಸಂಸ್ಕೃತಿಯಲ್ಲಿಯೂ ಕರ್ನಾಟಕವು ತನ್ನ ವಿಶಿಷ್ಟವಾದ 'ದೇಶ್ಯ'ಗುಣವನ್ನಿಟ್ಟುಕೊಂಡಿದೆ. ಇದನ್ನು ನಾವು ಸಮನ್ವಯ ವೆಂದು ಕರೆಯಬಹುದು ; ಪ್ರತಿಯೊಂದು ಅಂಶವೂ ತನ್ನ ತನ್ನ ಸ್ಥಾನದಲ್ಲಿದ್ದು ಸಮಗ್ರ ಜೀವನದ ಸಾಮರಸ್ಯವುಳ್ಳದ್ದಾಗಿರುವುದು. ಈ ಪ್ರಕಾರದ ಸಮನ್ವಯ ಗುಣವೇ ಕರ್ನಾಟಕ ಸಂಸ್ಕೃತಿಯ ಮುಖ್ಯ ಲಕ್ಷಣವಾಗಿದೆ.

ಕರ್ನಾಟಕದ ಸಾಂಸ್ಕೃತಿಕ ಇತಿಹಾಸವು ಕ್ರಿ.ಪೂ. 3ನೇಯ ಶತಮಾನದಲ್ಲಿ, ಅಶೋಕನ ಕಾಲದಿಂದ ಪ್ರಾರಂಭವಾಗಿದೆ. ಈ ಸಮ್ರಾಟನ ಹತ್ತು ಧರ್ಮಲಿಪಿಗಳು ಒಂದಕ್ಕೊಂದು ಹೊಂದಿಕೊಂಡಿದ್ದ ಚಿತ್ರದುರ್ಗ, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಸಿಕ್ಕಿವೆ. ವಿಶಾಲವಾದ ಅಶೋಕನ ಸಾಮ್ರಾಜ್ಯದ ದಕ್ಷಿಣದ ರಾಜಕೀಯ ಗಡಿಯು ಮಧ್ಯ ಕರ್ನಾಟಕದಲ್ಲಿ ಹಾದುಹೋಗಿತ್ತೆಂದು ಸರಿಯಾಗಿ ಗುರುತಿಸಲಾಗಿದೆ. ಅಶೋಕನ ಧರ್ಮಲಿಪಿಗಳು ಬನವಾಸಿ ನಾಡಿನಲ್ಲಿ ಸಿಕ್ಕದಿದ್ದರೂ (ಅಲ್ಲಿ ಸಿಕ್ಕರೆ ಏನೂ ಆಶ್ಚರ್ಯವಿಲ್ಲ) ಅಶೋಕನು ತನ್ನ ಧರ್ಮಪ್ರಸಾರಕರನ್ನು ಅಲ್ಲಿಗೆ ಕಳಿಸಿದ್ದನೆಂದು ಶ್ರೀಲಂಕಾದ ಐತಿಹಾಸಿಕ ದಾಖಲೆಗಳು ತಿಳಿಸುತ್ತವೆ. ಅಶೋಕನ ಪೂರ್ವಕಾಲದಿಂದಲೂ ಬನವಾಸಿಯು ಒಂದು ಮಹತ್ವದ ಕೇಂದ್ರವಾಗಿತ್ತೆಂದು ಸೂಚಿತವಾಗುತ್ತದೆ. ಅನಂತರದ ಕಾಲಗಳಲ್ಲಿಯೂ ಸಹ ಹತ್ತನೇಯ ಶತಮಾನದವರೆಗೆ ಬನವಾಸಿ ಮತ್ತು ಬನವಾಸಿಯಿಂದ ಕೇವಲ ಸುಮಾರು 25 ಮೈಲುಗಳ ಅಂತರದಲ್ಲಿದ್ದ ಬೆಳ್ಗಾವಿಯು ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹತ್ವದ ಪಾತ್ರಗಳನ್ನು ವಹಿಸಿವೆ.

ಕರ್ನಾಟಕದ ಸಾಕಷ್ಟು ಭಾಗಗಳನ್ನಾಳಿದ ಮೌರ್ಯರು, ಶಾತವಾಹನರು ಮತ್ತು ಪಲ್ಲವರು ಹೊರಗಿನವರಾಗಿದ್ದರು. ನಮಗೆ ತಿಳಿದಂತೆ ಬನವಾಸಿಯ ಕದಂಬರು ನಾಲ್ಕನೇಯ ಶತಮಾನದ ಮಧ್ಯಭಾಗದಲ್ಲಿ ತಮ್ಮ ಹೊಸ ರಾಜ್ಯವನ್ನು ಸ್ಥಾಪಿಸುವವರೆಗೂ ಪ್ರಖ್ಯಾತವಾದ ಯಾವ ಕನ್ನಡ ರಾಜನೂ ಕರ್ನಾಟಕವನ್ನು ಆಳಿಲ್ಲ. ಕರ್ನಾಟಕವನ್ನು ಆಳಿದ ಮೊದಲನೇಯ ಕನ್ನಡ ರಾಜಮನೆತನವೆಂದರೆ ಕದಂಬರದು. ಕದಂಬರ ರಾಜ್ಯಭಾರವು ಪ್ರಾರಂಭವಾದಾಗಲೂ ಕೂಡ ಅವರಿಗಿಂತ ಮೊದಲು ಆಳಿದ ಮೌರ್ಯ ಮತ್ತು ಶಾತವಾಹನ ರಾಜರು ಉಪಯೋಗಿಸುತ್ತಿದ್ದ ಪ್ರಾಕೃತವೇ ಆಡಳಿತಭಾಷೆಯಾಗಿತ್ತು. ಈ ಕಾರಣದಿಂದಲೇ ಕದಂಬ ಮಯೂರಶರ್ಮನ ಚಂದ್ರವಳ್ಳಿ ಶಾಸನದ (ಕ್ರಿ.ಶ. 350) ಭಾಷೆಯು ಕನ್ನಡದಲ್ಲಿರದೇ ಪ್ರಾಕೃತದಲ್ಲಿದೆ. (ಇದು ಸಂಸ್ಕೃತ ಶಾಸನವೆಂದು ಇತ್ತೀಚೆಗೆ ಅಭಿಪ್ರಾಯಪಡಲಾಗಿದೆ). ಮಯೂರವರ್ಮನ ತರುವಾಯ ಪಟ್ಟಕ್ಕೆ ಬಂದ ರಾಜರು ಪ್ರಾಕೃತ ಬಿಟ್ಟು ಕನ್ನಡವನ್ನು ಬಳಸಲು ಪ್ರಾರಂಭಿಸಿದರು. ಕದಂಬರ ಕಾಲಕ್ಕೆ ಸೇರಿದ ಸುಮಾರು ಕ್ರಿ.ಶ. 450 ರಲ್ಲಿ ರಚಿತವಾದ ಸುಪ್ರಸಿದ್ಧ ಹಲ್ಮಿಡಿ ಶಾಸನವು ಮೊಟ್ಟಮೊದಲಿನ ಕನ್ನಡ ಶಾಸನವಾಗಿರುವುದು ಒಂದು ಆಕಸ್ಮಿಕವೇನಲ್ಲ. ಅಲ್ಲಿಂದ ಮುಂದೆ ಕನ್ನಡ ಶಾಸನಗಳು ಅಲ್ಲಲ್ಲಿ ತಲೆದೋರಹತ್ತಿದವು ಮತ್ತು ಕನ್ನಡ ಸಂಸ್ಕೃತಿಯ ಏಳಿಗೆಯ ಸ್ಪಷ್ಟ ದ್ಯೋತಕವಾಗಿ ಕನ್ನಡ ಶಾಸನಗಳ ಒಂದು ಪ್ರವಾಹವೇ ಹರಿದುಬಂತು. ಶಾಸನಗಳು ರಾಜಕೀಯ ದಾಖಲೆಗಳಾಗಿರುವುದರಿಂದ ಮತ್ತು ಕನ್ನಡ ಶಾಸನಗಳು ವಿಪುಲವಾಗಿ ಸಿಗಹತ್ತಿರುವುದರಿಂದ ಆಡಳಿತದಲ್ಲಿ ಕನ್ನಡವನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಬಳಸಲಾಗುತ್ತಿತ್ತೆಂಬುದೂ ಸೂಚಿತವಾಗುತ್ತದೆ.

ಕದಂಬರು ಆಡಳಿತದಲ್ಲಿ ಕನ್ನಡಕ್ಕೆ ಪ್ರಪ್ರಥಮವಾಗಿ ಬಳಸುವ ಸ್ಥಾನಮಾನವನ್ನು ತಂದುಕೊಟ್ಟಿದ್ದರೆ, ಬಾದಾಮಿಯ ಚಲುಕ್ಯರು ಅದಕ್ಕೆ ಸಾಂಸ್ಕೃತಿಕ ಸ್ಥಾನಮಾನವನ್ನು ಕಲ್ಪಿಸಿದ್ದಾರೆ. ಚಲುಕ್ಯರ ಕಾಲದಲ್ಲಿ ಕನ್ನಡ ಸಾಹಿತ್ಯವು ಅರಳಿ ಬೆಳೆಯಿತು. ಕದಂಬರ ಕಾಲದಲ್ಲಿ ರಚಿತವಾದ ಕನ್ನಡ ಶಾಸನಗಳು ಗದ್ಯಶೈಲಿಯಲ್ಲಿವೆ ಮತ್ತು ಅವು ಕೇವಲ ಸಂಗತಿಗಳನ್ನಷ್ಟೇ ವಿವರಿಸುತ್ತವೆ. ಚಲುಕ್ಯರ ಕಾಲದಲ್ಲಿ ಶಾಸನಗಳು ಬಂಧುರ ಶೈಲಿಯನ್ನು ಹೊಂದಿದ್ದು ಆ ಕಾಲದಲ್ಲಿ ವಿಶೇಷವಾಗಿ ನಡೆದ ಸಾಹಿತ್ಯಿಕ ಚಟುವಟಿಕೆಗಳ ದ್ಯೋತಕವಾಗಿದೆ. ಚಲುಕ್ಯರ ಕಾಲದಲ್ಲಿ ರಚಿತವಾದ ಯಾವ ಸಾಹಿತ್ಯವೂ ನಮಗೆ ದೊರೆತಿಲ್ಲವಾದರೂ ಬಾದಾಮಿ ಮತ್ತು ಶ್ರವಣಬೆಳಗೊಳಗಳಲ್ಲಿ ಸುಮಾರು ಕ್ರಿ.ಶ. 700ರ ಕಾಲಕ್ಕೆ ಹುಟ್ಟಿದ ಸಾಹಿತ್ಯಮಯ ಶಾಸನಗಳು ಆಗಿನ ಕಾಲದಲ್ಲಿ ಹೆಚ್ಚಿನ ಸಾಹಿತ್ಯವು ಮೌಲ್ಯವನ್ನು ಹೊಂದಿತ್ತೆಂಬುದನ್ನು ತೋರಿಸುತ್ತವೆ.

ಚಲುಕ್ಯರು 'ಕರ್ನಾಟ'ರೆಂದು ಹೊರಗಿನ ಜಗತ್ತಿನವರಿಂದ ಸಂಬೋಧಿಸಲ್ಪಡುತ್ತಿದ್ದರು. ಈ ಸಂಗತಿಯು ಕರ್ನಾಟಕ ಸಂಸ್ಕೃತಿಯು ರೂಪಗೊಂಡಿತ್ತೆಂಬುದನ್ನು ಮತ್ತು ಅದರ ಅಸ್ತಿತ್ವವು ಪರ ಪ್ರಾಂತೀಯರಿಗೂ ಮುಟ್ಟಿತೆಂಬುದನ್ನೂ ಖಚಿತವಾಗಿ ತಿಳಿಸುತ್ತದೆ. ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನ

ಗುಡಿಗಳಲ್ಲಿ ಚಲುಕ್ಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಉಗಮವನ್ನು ಕಾಣಬಹುದು. ಈ ಗುಡಿಗಳಲ್ಲಿ ಔತ್ತರೇಯ ನಾಗರ ಮತ್ತು ದಾಕ್ಷಿಣಾತ್ಯ ದ್ರಾವಿಡ ವಾಸ್ತುಶಿಲ್ಪಗಳ ಮಿಶ್ರಣವಿದೆ. ದೇವ ದೇವತೆಗಳ ಮೂರ್ತಿಗಳು, ದಂಪತಿಗಳ ವಿಗ್ರಹಗಳು ದೈನಂದಿನ ಜೀವನದ ವಿವಿಧ ಕಾರ್ಯಗಳಲ್ಲಿ ತೊಡಗಿದ ಮನುಷ್ಯ ವಿಗ್ರಹಗಳು ಜೀವಂತ ಕಳೆಯಿಂದ ಕೂಡಿಕೊಂಡು ಅಂದವಾಗಿವೆ. ವಾಸ್ತುಶಿಲ್ಪ ಗ್ರಂಥಗಳಲ್ಲಿ ಹೇಳಿದ ನಿಯಮಾ ವಳಿಗಳನ್ನು ಈ ಕಲಾವಿದರು ಅನೂಚಾನವಾಗಿ ಅನುಸರಿಸಿದ್ದಾರೆ. ಆದರೆ ಅದೇ ಕಾಲಕ್ಕೆ ಅವರು ಭಕ್ತಿ, ಶೂರತನ, ಉಲ್ಲಾಸ, ದುಃಖ ಮತ್ತು ಅಂಜಿಕೆ, ಇತ್ಯಾದಿ ಭಾವಗಳನ್ನು ಅಭಿವ್ಯಕ್ತ ಗೊಳಿಸಿದ್ದಾರೆ. ಅನಂತರ ಹನ್ನೆರಡು, ಹದಿಮೂರನೇಯ ಶತಮಾನಗಳಲ್ಲಿ ನಿರ್ಮಾಣ ಹೊಂದಿದ ಕೆಲವು ಹೊಯ್ಸಳ ಮೂರ್ತಿಗಳಂತು ಕಲೆಯು ಕೇವಲ ನಿಯಮಗಳ ಪರಿಪಾಲನೆ ಯಾಗಿರದೆ ಜೀವಂತವಾಗಿವೆ. ಏಳನೇಯ ಶತಮಾನದಲ್ಲಿ ಹ್ಯುಯೆನ್ ತ್ಸಾಂಗನು ಚಲುಕ್ಯ ರಾಜ್ಯದ ಉತ್ತರ ಭಾಗಗಳಲ್ಲಿ ಸಂಚರಿಸಿ, ಎರಡನೇಯ ಪುಲಿಕೇಶಿಯ ಕಾಲದಲ್ಲಿದ್ದ ವೀರರ ಪರಾಕ್ರಮವನ್ನು ವರ್ಣಿಸಿದ್ದಾನೆ. ಪುಲಿಕೇಶಿಯು ಆರ್ಯಾ ವರ್ತದ ಸಾರ್ವಭೌಮನಾದ ಹರ್ಷನನ್ನು ಯುದ್ಧದಲ್ಲಿ ಸೋಲಿಸಿದನೆಂಬ ಸಂಗತಿಯು ಸರ್ವವಿಧಿತವಾದದ್ದಾಗಿದೆ. ಆಗಿನ ಕಾಲದ ಶಾಸನಗಳು ಮತ್ತು ಅನಂತರ ಬಾದಾಮಿಯ ಚಲುಕ್ಯರ ವಂಶಸ್ಥರೇ ಆದ ಕಲ್ಯಾಣಿ ಚಾಳುಕ್ಯರ ಶಾಸನಗಳು ಪದೇ ಪದೇ ಈ ವಿಷಯವನ್ನು ಅಭಿಮಾನದಿಂದ ಹೇಳುತ್ತವೆ. ಇಂಥ ಮಹತ್ವದ ಜಯದಿಂದ ಕನ್ನಡಿಗರಲ್ಲಿ ಆತ್ಮ ವಿಶ್ವಾಸವ ಮತ್ತು ತಮ್ಮ ಬಲದ ಕಲ್ಪನೆಯನ್ನು ತಂದುಕೊಡಲು ಸಾಧ್ಯವಾಯಿತು. ಇದರಿಂದ ಭಾರತದ ಇತಿಹಾಸದಲ್ಲಿ ಕನ್ನಡಿಗರಿಗೆ ಒಂದು ಸ್ಥಾನ ದೊರೆಯಿತು. ಈ ಜಯವು ಆತ್ಮವಿಶ್ವಾಸವನ್ನು ತಂದು ಕೊಟ್ಟಿರಬೇಕು. ಆ ಸಾರ್ವಭೌಮರು ಜನರ ಕಲ್ಯಾಣದಲ್ಲಿ ಆಸಕ್ತಿಯುಳ್ಳ ಶ್ರೇಷ್ಠ ಆಡಳಿತಗಾರರಾಗಿದ್ದರು. ಚಲುಕ್ಯರ ಕಾಲದಲ್ಲಿ ಕರ್ನಾಟಕ ಸಂಸ್ಕೃತಿಯು ಚೆನ್ನಾಗಿ ರೂಪುಗೊಂಡಿತು, ಎಂದು ಹೇಳಿದರೆ ಅತಿಶಯೋಕ್ತಿಯಾಗದು.

### ಅಧೀಕೃತ ಕನ್ನಡ

ಎಂಟನೇಯ ಶತಮಾನದಲ್ಲಿ ಚಲುಕ್ಯರ ತರುವಾಯ ಪಟ್ಟಕ್ಕೆ ಬಂದ ರಾಷ್ಟ್ರಕೂಟರು ಕನ್ನಡಿಗರಾಗಿದ್ದರು. ಅವರ ಆಳ್ವಿಕೆಯಲ್ಲಿ ಕರ್ನಾಟಕ ಸಂಸ್ಕೃತಿಯು ಕಲೆ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಉನ್ನತ ಶಿಖರವನ್ನು ಮುಟ್ಟಿತು. ಇದುವರೆಗೂ ದೊರೆತ ಕನ್ನಡ ಭಾಷೆಯ ಪ್ರಪ್ರಥಮ ಗ್ರಂಥವಾದ ಕವಿರಾಜ ಮಾರ್ಗವು ಕರ್ನಾಟಕವು ಉತ್ತರದಲ್ಲಿ ಗೋದಾವರಿಯಿಂದ ಹಿಡಿದು ದಕ್ಷಿಣದಲ್ಲಿ ಕಾವೇರಿಯವರೆಗಿದ್ದ ವಿಶಾಲ ಪ್ರದೇಶವನ್ನು ವ್ಯಾಪಿಸಿತ್ತೆಂದು ಉಲ್ಲೇಖಿಸಿದೆ. ಈ ಪ್ರದೇಶದಲ್ಲಿ ಈಗಿನ ಮಹಾರಾಷ್ಟ್ರದ ದಕ್ಷಿಣದ ಕೆಲವು ಭಾಗಗಳು ಅಡಕವಾಗಿದ್ದವು. ಈ ಕಾಲದಲ್ಲಿ ಭಾಷೆಯು ಬೆಳೆದು ಒಂದು ಗಣ್ಯ ಮಟ್ಟವನ್ನು ಮುಟ್ಟಿತ್ತು. ಬಾದಾಮಿಯ ಸುತ್ತಮುತ್ತಲಿನ ನಾಡಿನಲ್ಲಿದ್ದ ಉಪಭಾಷೆಯು ತಿರುಳ್ಗನ್ನಡ ಭಾಷೆಯೆಂದು ಬಗೆಯಲಾಗಿತ್ತು ಮತ್ತು ಇಂಥ ತಿರುಳ್ಗನ್ನಡ ಭಾಷೆಯಲ್ಲಿ ಕವಿಗಳು ಗದ್ಯಪದ್ಯ ರಚನೆಗಳನ್ನು ಮಾಡಿದ್ದಾರೆ. ತನ್ನ ರಚನೆಯ ಕಾಲಕ್ಕಿಂತಲೂ ಮೊದಲ್ಲಿದ್ದ, ಈಗ ಉಪಲಬ್ಧವಿಲ್ಲದ ಕವಿಗಳನ್ನು ಕುರಿತು ಈ ಗ್ರಂಥವು ಉಲ್ಲೇಖಿಸುತ್ತದೆ. ಜನರು ಸ್ವಭಾವತಃ ಶೂರರು, ಉದಾರಿಗಳು ಮತ್ತು ಕುರಿತೋದದೆಯೂ ಕಾವ್ಯಪರಿಣತಮತಿ ಗಳಾಗಿದ್ದರು. ವಿದ್ವಾಂಸರಲ್ಲದವರೂ ಕೂಡ ಯಾವುದು ಉತ್ತಮ ಸಾಹಿತ್ಯ ಮತ್ತು ಯಾವುದು ಗೌಣಸಾಹಿತ್ಯ ಮತ್ತು ಅದರಲ್ಲಿದ್ದ ದೋಷಗಳನ್ನು ಕಂಡುಹಿಡಿಯುವಷ್ಟು ಜಾಣ ರಾಗಿದ್ದರೆಂದು ಅದರಲ್ಲಿ ಹೇಳಿದೆ. ಈ ಮಾತು ಅತಿಶಯೋಕ್ತಿ ಯಿಂದ ಕೂಡಿರಬಹುದಾದರೂ ಆಗಿನ ಜನರು ಯಾವ ರೀತಿಯ ಶ್ರೇಷ್ಠ ಮಟ್ಟದ ಸಂಸ್ಕೃತಿಯುಳ್ಳವರಾಗಿದ್ದರೆಂಬುದನ್ನು ತಿಳಿಸಲು ಸಾಧ್ಯವಾಗುತ್ತದೆ.

ಚಲುಕ್ಯರು ಮುಖ್ಯವಾಗಿ ಕರ್ನಾಟಕ ಸಂಸ್ಕೃತಿಗೆ ಕಲೆ ಯನ್ನು ಮುಖ್ಯ ಕೊಡುಗೆಯಾಗಿ ಕೊಟ್ಟಿದ್ದಾರೆ; ರಾಷ್ಟ್ರಕೂಟರು ಕಲೆ ಮತ್ತು ಸಾಹಿತ್ಯಗಳೆರಡನ್ನೂ ಕೊಡುಗೆಯಾಗಿ ನೀಡಿದ್ದಾರೆ. ಕನ್ನಡದಲ್ಲಿಯ ಮೊದಲನೇಯ ಗದ್ಯ ಕೃತಿಯಾದ ವಡ್ಡಾ ರಾಧನೆಯು (ಸು. ಕ್ರಿ. ಶ. 920) ಒಂದು ಉತ್ತಮ ಗ್ರಂಥ ವಾಗಿದ್ದು, ಅದು ಶಿವಕೋಟಿಯು ಪ್ರಾಕೃತದಲ್ಲಿ ರಚಿಸಿದ ಟೀಕೆಯ ಕನ್ನಡ ಅನುವಾದವಾಗಿರುತ್ತದೆ. ಇದರಲ್ಲಿ ಬಳಸಿದ ಗದ್ಯಶೈಲಿಯು ಸರಳ, ಸಹಜ ಮತ್ತು ಮನಸ್ಸಿಗೆ ಹಿಡಿಯುವಂಥ ದ್ದಾಗಿದೆ. ನಿರೂಪಣೆಯಲ್ಲಿ ಕನ್ನಡ ಅಭಿಜಾತ ಸಾಹಿತ್ಯದಲ್ಲಿಯೇ ಇದನ್ನು ಮೀರುವ ಮತ್ತೊಂದು ಗ್ರಂಥವಿಲ್ಲ. ಹತ್ತನೇಯ ಶತಮಾನದಲ್ಲಿ ಪಂಪ, ಪೊನ್ನ, ರನ್ನ ಮತ್ತು ಒಂದನೇಯ ನಾಗ ವರ್ಮರಂತಹ ಶ್ರೇಷ್ಠ ಕವಿಗಳು ಜೀವಿಸಿದ್ದರು. ಈ ಶತಮಾನ ದಲ್ಲಿ ಹುಟ್ಟಿದ ಸಾಹಿತ್ಯ ಕೃತಿಗಳು ಕನ್ನಡದ ಮೊದಲ ಸುವರ್ಣ ಯುಗದವುಗಳೆಂದು ಕರೆದಿರುವುದು ಯಥಾಯೋಗ್ಯವಾಗಿದೆ. ಈ ಕಾಲದ ಸಾಹಿತ್ಯಕ್ಕೆ ಹಿನ್ನೆಲೆಯಾಗಿದ್ದ ಆಗಿನ ಸಮಾಜವು ಒಂದು ಸ್ಥಿರರೂಪವನ್ನು ಪಡೆದಿತ್ತು. ಅಂದರೆ ಆಗ ಪಾರಂಪರಿಕ ಮೌಲ್ಯಗಳು ಸ್ಥಿರೀಕರಿಸಲ್ಪಟ್ಟು ಬಹು ಜನರ ಮನ್ನಣೆ ಪಡೆ ದಿದ್ದವು. ಸಮಾಜಕ್ಕೆ ಪೋಷಕವಾದ ವೀರ, ತ್ಯಾಗ, ಅಭಿಮಾನ, ಕೀರ್ತಿ ಮತ್ತು ಸತ್ಯ ಅಥವಾ ನನ್ನಿ ಎಂಬ ಗುಣಗಳು ಸಾಮಾಜಿಕ ಜೀವನದ ಆದರ್ಶಗಳಾಗಿದ್ದವು. ಆಗಿನ ಕಾವ್ಯಗಳು ವೀರರಸ ಪೂರಿತವಾಗಿದ್ದು ಸಂಪೂರ್ಣವಾಗಿ ಆ ಕಾಲದ ಜನರ ಭಾವನೆ ಗಳನ್ನು ನಿದರ್ಶಿಸುತ್ತವೆ. ಮರ್ಯಾದೆ ಮತ್ತು ಆತ್ಮಗೌರವದಿಂದ ಬಾಳುವುದು ಜೀವನದ ಮುಖ್ಯ ಗುರಿಯಾಗಿತ್ತೆಂದು ಕಾಣುವದು. ಕರ್ನಾಟಕವು ಪಂಪ ಮತ್ತು ಕುಮಾರವ್ಯಾಸರಂಥ ಮಹಾಕವಿ

ಗಳನ್ನು ನೀಡಿ ಮಿಲ್ಟನ್, ಹೋಮರ್ ಅಥವಾ ವ್ಯಾಸರ ಕೃತಿಗಳಿಗೆ ಹೋಲಿಸಬಹುದಾಗಿದೆ.

ಹತ್ತನೇಯ ಶತಮಾನದ ಕೊನೆಯ ಭಾಗದಲ್ಲಿ ರಾಷ್ಟ್ರಕೂಟರ ತರುವಾಯ ಕಲ್ಯಾಣದ ಚಾಲುಕ್ಯರು ರಾಜ್ಯಭಾರ ಮಾಡಿದರು. ರಾಷ್ಟ್ರಕೂಟರ ಕಾಲದಲ್ಲಿ ಪಡೆದಂಥ ಸಾಂಸ್ಕೃತಿಕ ವೌಲ್ಯಗಳನ್ನು ಅವರು ಕಾಯ್ದುಕೊಂಡರು. ಅವರ ರಾಜಧಾನಿಯಾದ ಕಲ್ಯಾಣವು ಅವರ ಕಾಲಕ್ಕೆ ಮತ್ತು ವಿಶೇಷವಾಗಿ ಆರನೇಯ ವಿಕ್ರಮಾದಿತ್ಯನ ಕಾಲದಲ್ಲಿ ದಕ್ಷಿಣ ಭಾರತದ ರಾಜಕೀಯ ಮತ್ತು ಸಾಂಸ್ಕೃತಿಕ ಕೇಂದ್ರಬಿಂದುವಾಗಿತ್ತು. ಈ ವಿಕ್ರಮಾದಿತ್ಯನು ಕ್ರಿ.ಶ. 1076ರಲ್ಲಿ ಚಾಲುಕ್ಯ ವಿಕ್ರಮವರ್ಷವೆಂಬ ಸ್ವಂತ ಕಾಲಗಣತಿಯನ್ನು ಬಳಕೆಗೆ ತಂದನು. ಇವನು ವಿಜ್ಞಾನೇಶ್ವರ ಮತ್ತು ಬಿಲ್ಹಣರೆಂಬ ಮಹಾ ವಿದ್ವಾಂಸರಿಗೆ ಪೋಷಕನಾಗಿದ್ದನು. ಚಾಲುಕ್ಯ ವಾಸ್ತು ಶೈಲಿಯಲ್ಲಿ ನಿರ್ಮಾಣ ಹೊಂದಿದ ಇಟಗಿಯ ಮಹಾದೇವ ದೇವಸ್ಥಾನಗಳಂಥ ಹಲವು ದೇವಾಲಯಗಳು ಕಟ್ಟಲ್ಪಟ್ಟವೆ. ಈ ಕಾಲದಲ್ಲಿ ಕರ್ನಾಟಕವು ಪಡೆದಂಥ ವೈಭವವು ಅನಂತರ ಆಳಿದ ವಿಜಯನಗರದ ಸಾರ್ವಭೌಮನಾದ ಕೃಷ್ಣದೇವರಾಯನ ಕಾಲದಲ್ಲಿ ಪುನರುಜ್ಜೀವನಗೊಂಡಿತು.

ಈ ವೈಭವವೇ ಹನ್ನೆರಡನೇಯ ಶತಮಾನದಲ್ಲಿ ಬಸವೇಶ್ವರರ ನೇತೃತ್ವದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯನ್ನು ಎದುರಿಸಬೇಕಾದುದು ಒಂದು ಮಹತ್ವದ ಘಟನೆ. ಶ್ರೀಮಂತಿಕೆ ಮತ್ತು ಧಾರ್ಮಿಕ ಅಧಿಕಾರಗಳು ರಾಜ್ಯಭಾರ ಮಾಡುತ್ತಿದ್ದವರ ಮತ್ತು ಧಾರ್ಮಿಕ ಮುಖಂಡರ ಸೊತ್ತಾಗಿತ್ತು. ಅವರು ದೇವಾಲಯದ ಮುಖಾಂತರ ತಮ್ಮ ಉದ್ದೇಶಗಳನ್ನು ಸಾಧಿಸಿಕೊಳ್ಳುತ್ತಿದ್ದರು. ವಿಕ್ರಮಾದಿತ್ಯನ ಕಾಲದ ಶಾಸನಗಳನ್ನವಲೋಕಿಸಿದರೆ ಇದ್ದಕ್ಕಿದ್ದಂತೆ ಬ್ರಾಹ್ಮಣರಿಗೆ ಅಗ್ರಹಾರಗಳನ್ನು ದಾನ ಮಾಡಿದ ಉದಾಹರಣೆಗಳು ಬಹಳ ದೊರೆಯುತ್ತವೆ. ರಾಜಕೀಯ ಕ್ಷೇತ್ರದಲ್ಲಿ ಬ್ರಾಹ್ಮಣರು ಮಹತ್ವದ ಸ್ಥಾನಗಳನ್ನು ಪಡೆದಿದ್ದನ್ನು ಅವು ನಿದರ್ಶಿಸುತ್ತವೆ. ಇಂಥ ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ಅಸಮಾನತೆಯ ಪರಿಸ್ಥಿತಿಗಳಲ್ಲಿ ಬ್ರಾಹ್ಮಣ ಸಮಾಜದಲ್ಲಿಯೇ ಕ್ರಾಂತಿಯುಂಟಾದುದು ಸ್ವಾಭಾವಿಕ. ಜನ್ಮತಃ ಬ್ರಾಹ್ಮಣನೇ ಆಗಿದ್ದ ಬಸವಣ್ಣನು ಜೇಡರ ದಾಸಿಮಯ್ಯ, ಅಲ್ಲಮಪ್ರಭು ಮತ್ತು ಅಂಬಿಗರ ಚೌಡಯ್ಯ ಮುಂತಾದವರೊಡನೆ ಕೂಡಿಕೊಂಡು ಬ್ರಾಹ್ಮಣರಿಂದ ಉಂಟಾದ ಸಾಮಾಜಿಕ ಅನ್ಯಾಯದ ವಿರುದ್ಧ ಬಂಡೆದ್ದು ಸಾಮಾನ್ಯ ಮನುಷ್ಯರ ಕಲ್ಯಾಣಕ್ಕಾಗಿ ಹೋರಾಡಿದನು. ಅವರು ದೇವಾಲಯದಲ್ಲಿಯ ಪೂಜೆಯನ್ನು ಅಲ್ಲಗಳೆದು ಇಷ್ಟಲಿಂಗದ ಪೂಜೆಯನ್ನು ಬೋಧಿಸಿದರು. ಪ್ರತೀಯೊಬ್ಬ ಭಕ್ತನು ತನ್ನ ದೇಹದ ಮೇಲೆ ಒಂದು ಚಿಕ್ಕ ಲಿಂಗವನ್ನು ಧರಿಸಿ ಮನೆಯಲ್ಲಿ ಪೂಜಿಸಬೇಕೆಂದು ಸಾರಿದರು. ಧಾರ್ಮಿಕವಾಗಿ ಒಂದೇ ಧ್ವಜದ ಕೆಳಗೆ ಜನ ಸಾಮಾನ್ಯರು ಕೂಡುವಂತೆ ಈ ಮುಖಂಡರು ಮಾಡಿದರು. ಈ ಧರ್ಮದಲ್ಲಿ ಕೇಂದ್ರಬಿಂದು ಶಿವನಲ್ಲಿ ಅನನ್ಯ ಭಕ್ತಿ ಹೊಂದಿ ದೇಹದ ಮೇಲೆ ಲಿಂಗವನ್ನು ಧರಿಸಿದ ಭಕ್ತರೆಲ್ಲರೂ ಬ್ರಾಹ್ಮಣರಿರಲಿ, ಅಂತ್ಯಜರಿರಲಿ ಸರಿಸಮಾನರೆಂದು ಸಾರಲಾಯಿತು. ಮನುಷ್ಯ ಕುಲವನ್ನು ಉಚ್ಚ ಜಾತಿಯವ, ನೀಚಜಾತಿಯವ, ಗಂಡು ಹೆಣ್ಣು ಎಂದು ವಿಂಗಡಿಸದೆ ಶಿವನಲ್ಲಿ ಭಕ್ತಿಯುಳ್ಳವ ಭಕ್ತನಾದ, ಆವನಲ್ಲಿ ನಂಬಿಕೆಯಿಲ್ಲದವ ಭವಿಯಾದ. ಸಾಮಾನ್ಯ ಜನತೆಯಲ್ಲಿ ತಲೆದೋರಿದ ಈ ಆಂದೋಲನವು ಸಾಹಿತ್ಯಕ್ಕೆ ಒಂದು ಹೊಸ ರೂಪವನ್ನು ತಂದುಕೊಟ್ಟಿತು. ಅದೇ ವಚನವಾಙ್ಮಯ.

ಹನ್ನೆರಡನೇಯ ಶತಮಾನದಲ್ಲಿ ಚಲುಕ್ಯ ಸಾಮ್ರಾಜ್ಯವು ಚೂರಾಯಿತು. ಉತ್ತರದಲ್ಲಿ ಸೇವುಣರು (ಯಾದವರು) ಮತ್ತು ದಕ್ಷಿಣದಲ್ಲಿ ಹೊಯ್ಸಳರು ಆ ರಾಜ್ಯವನ್ನು ಹಂಚಿಕೊಂಡರು. ಹೊಯ್ಸಳರಾಜ್ಯವು, ವ್ಯಾಪ್ತಿಯಲ್ಲಿ ಬಹಳ ಚಿಕ್ಕದಾಗಿದ್ದರೂ ಸಂಗೀತ, ನೃತ್ಯ, ಮೂರ್ತಿಶಿಲ್ಪ, ವಾಸ್ತುಶಿಲ್ಪ ಮತ್ತು ಸಾಹಿತ್ಯ ಮುಂತಾದ ಕುಶಲಕಲೆಗಳ ಅಭಿವೃದ್ಧಿಗೆ ಕಾರಣವಾಯಿತು. ವಿಷ್ಣುವರ್ಧನನ ರಾಣಿಯಾದ ಶಾಂತಲಾ ಕರ್ನಾಟಕ ಸಂಸ್ಕೃತಿಯಲ್ಲಿಯ ಉನ್ನತ ಗುಣಗಳ ಸಂಕೇತವಾಗಿದ್ದಳು. ಅವಳ ತಾಯಿಯು ಜೈನ, ತಂದೆಯು ಶೈವ ಮತ್ತು ಗಂಡನು ಶ್ರೀವೈಷ್ಣವನಾಗಿದ್ದನು. ಈ ಧಾರ್ಮಿಕ ಸಹಿಷ್ಣುತೆಯು ಇತಿಹಾಸದುದ್ದಕ್ಕೂ ಕರ್ನಾಟಕ ಸಂಸ್ಕೃತಿಯ ಹೆಗ್ಗುರುತಾಗಿದೆ. ಅವಳು ಸ್ವತಃ ಒಬ್ಬ ನರ್ತಕಿ ಮತ್ತು ಸಂಗೀತಗಾರ್ತಿಯೂ ಆಗಿದ್ದಳು. ಮಹತ್ವದ ರಾಜಕೀಯ ವಿಷಯಗಳಲ್ಲಿ ಅವಳು ತನ್ನ ಗಂಡನಿಗೆ ಸಲಹೆಗಳನ್ನು ಕೊಡುತ್ತಿದ್ದಳು. ಆವಳ ಗಂಡನಾದ ವಿಷ್ಣುವರ್ಧನನು ಬೇಲೂರಿನಲ್ಲಿ ಒಂದು ಸುಂದರವಾದ ದೇವಾಲಯವನ್ನು ಕಟ್ಟಿಸಿದ್ದಾನೆ. ಬೇಲೂರು, ಹಳೇಬೀಡು, ಸೋಮನಾಥಪುರದ ದೇವಾಲಯಗಳು ಮತ್ತು ಅವುಗಳಿಗಿಂತ ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಪ್ರಸಿದ್ಧವಾದ ದೇವಾಲಯಗಳು ಹೊಯ್ಸಳ ರಾಜರ ಮತ್ತು ಅವರ ಪ್ರಜೆಗಳಲ್ಲಿದ್ದ ಸೌಂದರ್ಯದ ಸಾಧನೆಯನ್ನು ಅಭಿವ್ಯಕ್ತಗೊಳಿಸುತ್ತವೆ. ಭಾರತೀಯ ಕಲಾ ಪರಂಪರೆಯಲ್ಲಿ ಅವುಗಳಿಗೆ ಉನ್ನತ ಸ್ಥಾನವಿದೆ.

ಹದಿಮೂರನೆಯ ಶತಮಾನದ ಕೊನೆಗೆ ಮುಸಲ್ಮಾನರು ದಕ್ಷಿಣದ ಮೇಲೆ ದಂಡೆತ್ತಿ ಬಂದಾಗ ಹೊಯ್ಸಳ ಮತ್ತು ಯಾದವ ಮನೆತನಗಳು ನಾಶವಾದವು. ಅನೇಕ ದೇವಾಲಯಗಳು ನೆಲಸಮ ಮಾಡಲ್ಪಟ್ಟವು. ಹಿಂದೂಧರ್ಮವು ಅಳಿದು ಹೋಗುವ ಪರಿಸ್ಥಿತಿಯುಂಟಾಯಿತು. ಅನೇಕ ಮಹತ್ವದ ಗ್ರಂಥಗಳ ಹಸ್ತಪ್ರತಿಗಳು ಸುಡಲ್ಪಟ್ಟವು. ಅಥವಾ ನಾಶ ಮಾಡಲ್ಪಟ್ಟವು. ಸುಮಾರು 1270ರಿಂದ 1336ರವರೆಗಿನ ಕಾಲದಲ್ಲಿ ಕನ್ನಡ ಸಾಹಿತ್ಯದಲ್ಲಿ ಯಾವ ಕೃತಿಗಳೂ ಹುಟ್ಟಿದಂತೆ ಕಾಣು

ವುದಿಲ್ಲ. ಈ ಕಾಲವು ಮುಸ್ಲಿಮರ ದಾಳಿ ಮತ್ತು ಅದರ ನಂತರದ ಪರಿಣಾಮಗಳ ದ್ಯೋತಕವಾಗಿದೆ. ಭಾರತೀಯ ಸಂಸ್ಕೃತಿಯು ಆತ್ಮರಕ್ಷಣೆಗಾಗಿ ಹೊಡೆದಾಡುವ ಕಾಲ ಅದಾಗಿತ್ತು. ಕ್ರಿ.ಶ. 1336ರಲ್ಲಿ ನಾಶಹೊಂದುತ್ತಿದ್ದ ಸನಾತನ ಧರ್ಮವನ್ನು ಸಂರಕ್ಷಿಸುವ ಉದ್ದೇಶದಿಂದಲೇ ಎಂಬಂತೆ ವಿಜಯನಗರ ರಾಜಮನೆತನವು ಅಸ್ತಿತ್ವಕ್ಕೆ ಬಂದಿತು. ಈ ಮನೆತನದ ಉದಯವನ್ನು ದೇವರು ತಂದುಕೊಟ್ಟ ವರವೆಂದು ಭಾವಿಸಲಾಯಿತು. ಪರಕೀಯ ಮತ್ತು ವಿರುದ್ಧ ಸಂಸ್ಕೃತಿಯ ಆಘಾತಗಳಿಂದ ಜರ್ಝರಿತವಾದ ಕರ್ನಾಟಕ ಸಂಸ್ಕೃತಿಯು ಮತ್ತೆ ತಲೆಯೆತ್ತಲು ಸಾಧ್ಯವಾಯಿತು. ವಿಜಯನಗರ ಸಾಮ್ರಾಜ್ಯದ ನಿರ್ಮಾಪಕರಿಗೆ ಎಲ್ಲ ಧರ್ಮಗಳ ಸಮನ್ವಯ ಬೇಕಾಗಿತ್ತು. ಈ ಸಂದರ್ಭದಲ್ಲಿ ಕ್ರಿ.ಶ. 1368ರಲ್ಲಿ ಹುಟ್ಟಿದ ಬುಕ್ಕರಾಜನ ಶ್ರವಣಬೆಳಗೊಳದ ಶಾಸನವು ಬಹಳ ಮಹತ್ವದ್ದೆಂದು ಹೇಳಬಹುದು. ಆಗ ಜೈನರು ಮತ್ತು ವೈಷ್ಣವರಲ್ಲಿ ಬಡಿದಾಟಗಳು ನಡೆಯುತ್ತಿದ್ದವು. ಬುಕ್ಕನು ಎರಡೂ ಪಕ್ಷದವರನ್ನು ಕರೆಯಿಸಿ ಆ ಎರಡೂ ಧರ್ಮಗಳಲ್ಲಿ ತಾತ್ವಿಕವಾಗಿ ಏನೂ ಭಿನ್ನತೆಯಿಲ್ಲವೆಂದು ಹೇಳಿ ಒಂದು ಧರ್ಮದವರು ಮತ್ತೊಂದು ಧರ್ಮದವರ ರಕ್ಷಣೆಯ ಹೊರೆಯನ್ನು ಹೊರಬೇಕೆಂದು ತೀರ್ಪಿತ್ತನು. ಇದರಿಂದ ಧರ್ಮಗಳಲ್ಲಿ ಏಕತೆಯನ್ನು ತರುವದು ಆ ರಾಜರ ಕರ್ತವ್ಯವಾಗಿತ್ತೆಂದು ಸಿದ್ಧವಾಗುತ್ತದೆ. ಏಕೆಂದರೆ ಆ ಕಷ್ಟದ ಸಮಯದಲ್ಲಿ ಏಕತೆಯನ್ನುಂಟುಮಾಡಿ ಸಾಮರ್ಥ್ಯವನ್ನು ಹೆಚ್ಚಿಸುವ ಉದ್ದೇಶವಿತ್ತು. ಸಾಯಣರಂಥ ಸಂಸ್ಕೃತ ವಿದ್ವಾಂಸರು ಪುರಾತನ ಗ್ರಂಥಗಳಿಗೆ ಭಾಷ್ಯಗಳನ್ನು ಬರೆಯುವುದರಲ್ಲಿ ತಮ್ಮ ಪಾಂಡಿತ್ಯವನ್ನು ಬಳಸಿದರು. ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ಕನ್ನಡ ಸಾಹಿತ್ಯವು ಅರಳಲಾರಂಭಿಸಿತು. ದಾಳಿಯ ಕಾಲಕ್ಕೆ ಧಕ್ಕೆ ಹೊಂದಿದ್ದ ವಚನ ಸಾಹಿತ್ಯವು ಸಂಗ್ರಹರೂಪಕ್ಕೆ ಬಂದಿತ್ತು ಮತ್ತು ಅದರ ಮೇಲೆ ಟೀಕೆ, ಟಿಪ್ಪಣಿಗಳು ಬರೆಯಲ್ಪಟ್ಟವು. ವಿಜಯನಗರಕ್ಕೆ ಭೇಟಿ ಕೊಟ್ಟ ಪರದೇಶಿ ಯಾತ್ರಿಕರು ಆ ಸಾಮ್ರಾಜ್ಯದ ಘನತೆಯನ್ನು, ಸಂಪತ್ತನ್ನು, ಅದು ಸಾಧಿಸಿದ ಸೌಂದರ್ಯದ ಸಾಧನೆಗಳನ್ನು ಮತ್ತು ಅದರ ರಾಜ್ಯಪದ್ಧತಿಯನ್ನು ಮುಕ್ತಕಂಠದಲ್ಲಿ, ಅತಿಶಯವಾಗಿ ಕೊಂಡಾಡಿದ್ದಾರೆ. ಹರಿದಾಸರ ಕೀರ್ತನೆಗಳ ಮೂಲಕ ಭಕ್ತಿಯ ಆಂದೋಲನವು ಸಾಮಾನ್ಯ ಜನರಿಗೂ ಮುಟ್ಟುವಂತಾಯಿತು.

ವಿಜಯನಗರ ಸಾಮ್ರಾಜ್ಯ ಮತ್ತು ಒಕ್ಕೂಡಿದ ಮುಸಲ್ಮಾನ ರಾಜರ ನಡುವೆ ಕ್ರಿ.ಶ. 1565ರಲ್ಲಿ ನಡೆದ ರಕ್ಕಸತಂಗಡಿ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯವು ಮಣ್ಣುಪಾಲಾಯಿತು. 1565ರ ತರುವಾಯ ಕರ್ನಾಟಕ ಸಂಸ್ಕೃತಿಯನ್ನು ಸಂರಕ್ಷಿಸಿಕೊಂಡು ಹೋಗುವ ಭಾರವು ಕೆಳದಿ ಮತ್ತು ಮೈಸೂರು ಅರಸರ ಮೇಲೆ ಬಿದ್ದಿತು. 1799ರಲ್ಲಿ ಇಂಗ್ಲೀಷರು ಟಿಪ್ಪೂಸುಲ್ತಾನನನ್ನು ಸೋಲಿಸಿ ಮೈಸೂರನ್ನು ಗೆದ್ದುಕೊಳ್ಳುವವರೆಗೆ ಇದೇ ಪರಿಸ್ಥಿತಿಯಿತ್ತು.

ಕರ್ನಾಟಕ ಸಂಸ್ಕೃತಿಯು ಈ ಪಕ್ಷಿನೋಟದಿಂದ ಕೆಲವು ಸ್ಫುಟಲಕ್ಷಣಗಳು ಗೋಚರಿಸುತ್ತವೆ. ಯಾವುದೇ ಸಂಸ್ಕೃತಿಯನ್ನು ಗುರುತಿಸಲು ಭಾಷೆಯು ಮುಖ್ಯ ಸಾಧನವಾಗಿದೆ. ಸದ್ಯ ಪ್ರಚಲಿತವಿದ್ದ ಭಾರತೀಯ ಭಾಷೆಗಳಲ್ಲಿ ಪ್ರಾಯಶಃ ತಮಿಳಿಗೆ ಮೊದಲ ಸ್ಥಾನವನ್ನು ಕಲ್ಪಿಸಿದರೆ ಕನ್ನಡ ಭಾಷೆಯು ಎರಡನೇಯ ಸ್ಥಾನವನ್ನು ಪಡೆಯುತ್ತದೆ. ಅದು ಆದಿದ್ರಾವಿಡ ಭಾಷೆಯಿಂದ ಕ್ರಿ.ಪೂ. ಎಂಟು ಅಥವಾ ಏಳನೇಯ ಶತಮಾನದಲ್ಲಿ ಕವಲೊಡೆಯಿತು. ಹಲ್ಮಿಡಿ ಶಾಸನದಿಂದ ಈಗಿನ ಕಾಲದವರೆಗೆ ಅಂದರೆ ಹದಿನೈದುನೂರು ವರ್ಷಗಳಿಗೂ ಮೇಲ್ಪಟ್ಟ ಲಿಖಿತ ಇತಿಹಾಸವುಳ್ಳ ಈ ಸುದೀರ್ಘ ಅವಧಿಯಲ್ಲಿ ಸೂಕ್ಷ್ಮ ವಿಚಾರ ಮತ್ತು ಉದಾತ್ತ ಭಾವನೆಗಳನ್ನು ಮಾತನಾಡುವ ಭಾಷೆಯ ಮೂಲಕ ಸಮರ್ಥ ರೀತಿಯಲ್ಲಿ ಅಭಿವ್ಯಕ್ತಗೊಳಿಸುವ ಸಾಮರ್ಥ್ಯವನ್ನು ಕನ್ನಡ ಹೊಂದಿದೆ. ಸಾಹಿತ್ಯಿಕ ಮತ್ತು ಸೌಂದರ್ಯಾತ್ಮಕ ರಚನೆಗೆ ಧರ್ಮವು ಸಾಮರ್ಥ್ಯವನ್ನು ತಂದುಕೊಟ್ಟಿದೆ. ಆದರೆ ಪಂಪ, ರನ್ನ, ಪೊನ್ನ ಮೊದಲಾದ ಜೈನಕವಿಗಳು ತಮ್ಮ ಕೃತಿ ರಚನೆಯಲ್ಲಿ ಆಗಮಿಕ ಮತ್ತು ಲೌಕಿಕ ಎಂಬ ಎರಡು ರೀತಿಯನ್ನೂ ಅನುಸರಿಸಿದ್ದಾರೆ. ಆಗಮಿಕ ಕಾವ್ಯಗಳು ಧಾರ್ಮಿಕ ಸಿದ್ಧಾಂತಗಳನ್ನು ಮತ್ತು ಮೋಕ್ಷದ ಮಾರ್ಗವನ್ನು ಬೋಧಿಸುತ್ತಿದ್ದವು ಮತ್ತು ಲೌಕಿಕ ಕಾವ್ಯಗಳು ಐಹಿಕ ಜಗತ್ತು ಮತ್ತು ಜೀವನದ ಬಗೆಗೆ ವಿವೇಚಿಸುತ್ತಿದ್ದವು. ಈ ರೀತಿಯಲ್ಲಿ ಸಾಹಿತ್ಯವನ್ನು ಕಟ್ಟುನಿಟ್ಟಾಗಿ ವಿಭಾಗಿಸಲು ಎಂದೂ ಸಾಧ್ಯವಿಲ್ಲ ಮತ್ತು ಅದು ಸ್ವಲ್ಪಮಟ್ಟಿಗೆ ಅಸ್ವಾಭಾವಿಕವೆಂದು ತೋರುವುದು. ಆದರೆ, ಆದೇ ಕಾಲಕ್ಕೆ ಹೀಗೆ ಮಾಡುವುದರಿಂದ ನಿಸ್ತೇಜವಾದ ಧಾರ್ಮಿಕ ಕಟ್ಟುನಿಟ್ಟುಗಳನ್ನು ದಾಟಿ ಹೊಸ ವಿಷಯ ಮತ್ತು ಹೊಸ ಅನುಭವಗಳನ್ನು ಹೊಂದಲು ಕವಿಗಳಿಗೆ ಅನುಕೂಲವಾಯಿತು. ಉದಾಹರಣಾರ್ಥವಾಗಿ ಪಂಪನು ತನ್ನ ಆದಿಪುರಾಣವನ್ನು ಒಂದು ಆಗಮಿಕ ಕೃತಿಯೆಂದು ಕಂಡಿದ್ದಾನೆ. ಆದಿಪುರಾಣವು ಜಿನಸೇನನು ಸಂಸ್ಕೃತದಲ್ಲಿ ರಚಿಸಿದ ಜೈನಕೃತಿಯಾದ ಪೂರ್ವಪುರಾಣದ ಕನ್ನಡ ರೂಪಾಂತರವಾಗಿದೆ. ಪಂಪನು ವ್ಯಾಸ ರಚಿತವಾದ ಮಹಾಭಾರತವನ್ನು ಪದ್ಯರೂಪದಲ್ಲಿ ಬರೆದು ಅದು ಲೌಕಿಕ ಕಾವ್ಯವೆಂದು ಹೇಳಿಕೊಂಡಿದ್ದಾನೆ. ಆದಿಪುರಾಣದಂಥ ಧಾರ್ಮಿಕ ಕಾವ್ಯದಲ್ಲಿ ವಿಷಯ ನಿರೂಪಣೆಯಲ್ಲಿ ಯಾವ ಬದಲಾವಣೆಗಳನ್ನು ಮಾಡಲು ಅವನು ಧೈರ್ಯ ಮಾಡಿಲ್ಲ. ಆದರೆ ಅವನೇ ಬರೆದ ಲೌಕಿಕ ಕಾವ್ಯದಲ್ಲಿ ತನ್ನ ಕಾರ್ಯಕ್ಕೆ ಅನುಗುಣವಾದ ಮಾರ್ಪಾಡುಗಳನ್ನು ಮಾಡಿಕೊಂಡಿರುವನು. ಇದರ ಪರಿಣಾಮವಾಗಿ, ಅವನ ವಿಕ್ರಮಾರ್ಜುನ ವಿಜಯದಲ್ಲಿ ಹತ್ತನೇಯ ಶತಮಾನದ ಜನರ ಮನೋಭಾವವನ್ನು ಪ್ರತಿಬಿಂಬಿಸಿದೆ. ವಿಷಯನಿರೂಪಣೆಯಲ್ಲಿ ಈ ಪ್ರಕಾರವಾಗಿ ವಿಂಗಡಿಸುವುದು ಕನ್ನಡ ಸಾಹಿತ್ಯದ ವಿಶಿಷ್ಟ ಗುಣವೆಂದು ತೋರುವುದು. ಅನಂತರ ರನ್ನ, ಪೊನ್ನ ಮತ್ತು ಉಳಿದವರು ಇದೇ ಮಾದರಿಯನ್ನು ಅನುಸರಿಸಿದರು.

ಈ ಕಾಲದ ಪ್ರಾಯಶಃ ಎಲ್ಲ ಪುರಾತನ ಕನ್ನಡ ಕೃತಿಗಳು ಗದ್ಯ ಪದ್ಯ ಮಿಶ್ರಿತವಾದ ಚಂಪೂ ಶೈಲಿಯಲ್ಲಿದ್ದು ಇದರಲ್ಲಿ ಸರಳ ಕಥಾನಿರೂಪಣಕ್ಕೆ ಗದ್ಯ ಮತ್ತು ಮಹತ್ವದ ಸನ್ನಿವೇಶಗಳನ್ನು ವರ್ಣಿಸಲು ಪದ್ಯಗಳನ್ನು ಬಳಸಲಾಗಿದೆ. ವಿದ್ವಾಂಸರು ಚಂಪೂ ಶೈಲಿಯ ಉಗಮದ ಬಗ್ಗೆ ಮಂಥನ ನಡೆಸಿ ಅದು ಭಾರತೀಯ ಸಾಹಿತ್ಯಕ್ಕೆ ಹಳೆಗನ್ನಡ ಸಾಹಿತ್ಯವು ನೀಡಿದ ಕೊಡುಗೆಯೆಂದು ನಿರ್ಣಯಿಸಿದ್ದಾರೆ.

ಭಕ್ತಿಯ ಆಂದೋಲನವು ಭಾರತಾದ್ಯಂತ ನಡೆದಿದೆ. ಆದರೆ ಮಧ್ಯಯುಗೀನ ಕರ್ನಾಟಕದಲ್ಲಿ ಈ ಆಂದೋಲನವು ಒಂದು ಸಾಮಾಜಿಕ ಸ್ವರೂಪವನ್ನು ತಾಳಿತೆಂಬುದನ್ನು ನಾವು ಈ ಮೊದಲೇ ನೋಡಿದ್ದೇವೆ. ಲಿಂಗಾಯಿತರ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನವು ಪುರೋಹಿತ ಪ್ರಧಾನವಾದ ವರ್ಣಾಶ್ರಮಧರ್ಮವನ್ನು ಅಮಾನ್ಯ ಮಾಡಿತು. ವೀರಶೈವ ಅಥವಾ ಲಿಂಗಾಯತ ಧರ್ಮವು ಯಾವುದೇ ವ್ಯಕ್ತಿಯನ್ನು ಮತದೀಕ್ಷೆ ಕೊಟ್ಟು ತನ್ನ ಧರ್ಮದಲ್ಲಿ ಸ್ವೀಕರಿಸುತ್ತಿತ್ತು. ಅಸ್ಪೃಶ್ಯರೂ ಸೇರಿದಂತೆ ಎಲ್ಲ ಜಾತಿಯವರಿಗೂ ಈ ಧರ್ಮದಲ್ಲಿ ಪ್ರವೇಶ ಸಿಕ್ಕಿತು. ಈ ಆಂದೋಲನದ ಮುಖ್ಯಸ್ಥರಾದ ಮತ್ತು ಕಲ್ಯಾಣದಲ್ಲಿ ಬಿಜ್ಜಳ ಚಕ್ರವರ್ತಿಯ ಭಂಡಾರಿಯಾದ ಬಸವೇಶ್ವರರು ಅಂತ್ಯಜರ ಮನೆಗಳಿಗೆ ಹೋಗಲು ಮತ್ತು ಅವರೊಡನೆ ಊಟ ಮಾಡಲು ಹಿಂಜರಿಯಲಿಲ್ಲ. ಹಿಂದೂಧರ್ಮದಲ್ಲಿ ಗೌಣಸ್ಥಾನ ಹೊಂದಿದ ಸ್ತ್ರೀಗೆ ಗಣ್ಯಸ್ಥಾನ ದೊರೆಯುವಂತೆ ಅವರು ಮಾಡಿದರು. ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಸಮಾನ ರೀತಿಯಲ್ಲಿ ತಮ್ಮ ತಮ್ಮ ಗಂಡಂದಿರಿಗಿದ್ದ ಸ್ಥಾನಮಾನವು ಅವಳಿಗೂ ದೊರೆಯುವಂತೆ ಅವರು ಯತ್ನಿಸಿದರು. ಈಗಿನ ಕಾಲವನ್ನು ಹೊರತುಪಡಿಸಿ, ಭಾರತದಲ್ಲಿ ನಡೆದ ಈ ಸಾಮಾಜಿಕ ಆಂದೋಲನವು ಅದ್ವಿತೀಯವಾಗಿದೆ. ಪ್ರತಿಯೊಂದು ಸಾಮಾಜಿಕ ಸ್ತರಗಳಿಗೆ ಸಂಬಂಧಿಸಿದಂಥ ಇಂಥ ಮೂಲಸ್ವರೂಪದ ಬದಲಾವಣೆಯು ಭಾರತದಲ್ಲಿ ಎಲ್ಲಿಯೂ ಆಗಿದ್ದಿಲ್ಲ.

ಈ ಕ್ರಾಂತಿಯ ಫಲಿತವಾಗಿ ಕನ್ನಡ ಸಾಹಿತ್ಯವು ಹೊಸ ತಿರುವನ್ನು ಪಡೆಯಿತು. ಈ ಆಂದೋಲನದ ಶರಣರು ರಚಿಸಿದ ವಚನಗಳು ಪದ್ಯರೂಪದಲ್ಲಿಯೂ ಇಲ್ಲ, ಗದ್ಯರೂಪದಲ್ಲಿಯೂ ಇಲ್ಲ. ಅವು ನೇರವಾಗಿ ಮುಟ್ಟುವಂಥ ರೀತಿಯ ಕಾವ್ಯಮಯವಾದ ಗದ್ಯಶೈಲಿಯಲ್ಲಿವೆ. ಶರಣರು ಈ ವಚನಗಳಲ್ಲಿ ತಮ್ಮ ಹೃದಯದ ಅನಿಸಿಕೆಗಳನ್ನು ಬಿಚ್ಚುಮನಸ್ಸಿನಿಂದ ಹಾಡಿದ್ದಾರೆ. ಜನಸಾಮಾನ್ಯರಿಗೆ ಬೋಧಿಸಲು ಮತ್ತು ಅವರಿಗೆ ಇದ್ದ ಹಕ್ಕುಗಳನ್ನು ತಿಳಿಯಲು ವಚನಗಳು ಮಾಧ್ಯಮವಾದವು. ಮೂವತ್ತು ವರ್ಷಗಳ ಅವಧಿಯಲ್ಲಿ ಸಮಾಜದ ವಿವಿಧ ಅಂತಸ್ತುಗಳಿಗೆ ಸೇರಿದ ಮತ್ತು ನಾನಾ ರೀತಿಯ ಕಾಯಕಗಳನ್ನು ಮಾಡುತ್ತಿದ್ದ 300 ಪುರುಷರು ಮತ್ತು 30 ಸ್ತ್ರೀಯರು ವಚನಗಳನ್ನು ರಚಿಸಿದ್ದಾರೆ. ಅವರು ಈ ವಚನಗಳಲ್ಲಿ ತಮ್ಮ ಸುತ್ತಮುತ್ತಲಿನ ಸಾಮಾಜಿಕ ರೀತಿನೀತಿಗಳ ಬಗೆಗೆ ಬೆಳಕು ಚೆಲ್ಲಿದ್ದಾರೆ. ವಚನಸಾಹಿತ್ಯವು ಭಾರತೀಯ ಮತ್ತು ವಿಶ್ವಸಾಹಿತ್ಯಕ್ಕೆ ಕನ್ನಡಭಾಷೆಯು ನೀಡಿದ ವಿಶಿಷ್ಟ ಕೊಡುಗೆಯಾಗಿದೆ.

ವಿಜಯನಗರದ ಕಾಲದಲ್ಲಿ ಪುರಂದರದಾಸ ಮತ್ತು ಕನಕದಾಸರಂಥ ಹರಿದಾಸರ ಸಂಗೀತ ಕೀರ್ತನೆಗಳಲ್ಲಿ ಭಕ್ತಿಯ ಆಂದೋಲನವು ಪುನರುಜ್ಜೀವನಗೊಂಡಿತು. ಕರ್ನಾಟಕ ಸಂಗೀತವೆಂದು ಕರೆಯಲಾಗುವ ದಕ್ಷಿಣ ಭಾರತ ಸಂಗೀತಕ್ಕೆ ಪುರಂದರದಾಸರು ಪಿತಾಮಹರೆಂದು ಪರಿಗಣಿತವಾಗಿದ್ದಾರೆ. ಕರ್ನಾಟಕ ಪದ್ಧತಿಯ ಸಂಗೀತವು ಕರ್ನಾಟಕದಲ್ಲಿ ಹುಟ್ಟಿದೆ. ಅನೇಕ ಮಹಾ ಸಂಗೀತಶಾಸ್ತ್ರಜ್ಞರು, ಉದಾಹರಣಾರ್ಥವಾಗಿ ಸಂಗೀತ ರತ್ನಾಕರವನ್ನು ಬರೆದ ಶಾರ್ಙ್ಗದೇವ (ಕ್ರಿ. ಶ. 13ನೇಯ ಶತಮಾನ), ಸಂಗೀತಸಾರದ ಕರ್ತೃವಾದ ವಿದ್ಯಾರಣ್ಯ, ಶಾರ್ಙ್ಗದೇವನ ಗ್ರಂಥಕ್ಕೆ ಟೀಕೆ ಬರೆದ ಚತುರ ಕಲ್ಲಿನಾಥ (15ನೇಯ ಶತಮಾನ), ಸ್ವರಮೇಳ ಕಳಾನಿಧಿಯನ್ನು ರಚಿಸಿದ ರಾಮಾಮಾತ್ಯ (16ನೇಯ ಶತಮಾನ) ಇವರೆಲ್ಲರೂ ಕರ್ನಾಟಕದವರೇ.

ಕರ್ನಾಟಕವು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನಿತ್ತಿದೆ. ದೇವಾಲಯ ವಾಸ್ತುಶಾಸ್ತ್ರದ ಉಗಮಸ್ಥಾನಗಳಲ್ಲಿ ಒಂದೆಂದು ಪರಿಗಣಿತವಾದ ಐಹೊಳೆಯು ಬಾದಾಮಿ ಚಲುಕ್ಯರ ಕಾಲದಲ್ಲಿ ದೇವಾಲಯಗಳ ರಚನೆಯಲ್ಲಿ ಅನೇಕ ಪ್ರಯೋಗಗಳನ್ನು ಕಂಡಿತು. ಇಲ್ಲಿಯ ಹುಚ್ಚಿಮಲ್ಲಿ ಗುಡಿಯಲ್ಲಿ ಪ್ರಪ್ರಥಮವಾಗಿ ಅಂತರಾಳ ಅಥವಾ ಶುಕನಾಸವು ಕಾಣಿಸಿಕೊಂಡಿತು. ಚಲುಕ್ಯ ವಾಸ್ತು ಪದ್ಧತಿಯು ನಂತರದ ವಾಸ್ತುಶಿಲ್ಪದ ಮೇಲೆ ಪ್ರಭಾವ ಬೀರಿತ್ತಲ್ಲದೆ ನೆರೆಹೊರೆಯ ಪ್ರಾಂತಗಳಾದ ಆಂಧ್ರ, ಒರಿಸ್ಸಾ, ಮಹಾರಾಷ್ಟ್ರ, ಗುಜರಾತ್ ಮತ್ತು ಮಧ್ಯಭಾರತದ ರಾಜ್ಯಗಳ ಮೇಲೆಯೂ ತನ್ನ ಪ್ರಭಾವ ಬೀರಿತು. ಬಂಡೆಗಲ್ಲಿನಲ್ಲಿ ಕೊರೆದ ಹಿಂದೂ ದೇವಾಲಯಗಳು ಇಲ್ಲಿ ಪ್ರಾರಂಭವಾದವು. ಕದಂಬರು ಗೋವಾದಲ್ಲಿಯ ಅರ್ವಾಲೇಮ್ ಎಂಬ ಸ್ಥಳದಲ್ಲಿ ಕಲ್ಲಿನಲ್ಲಿ ಕೊರೆದು ದೇವಾಲಯ ನಿರ್ಮಿಸಲು ಮೊದಲು ಪ್ರಯತ್ನಿಸಿದರು. ಅನಂತರ ಚಲುಕ್ಯರ ಕಾಲದಲ್ಲಿ ಐಹೊಳೆ ಮತ್ತು ಬಾದಾಮಿಗಳಲ್ಲಿ ಅಂತಹ ಗುಹಾಂತರ ದೇವಾಲಯಗಳು ನಿರ್ಮಾಣ ಹೊಂದಿದವು. ಈಗ ಮಹಾರಾಷ್ಟ್ರದಲ್ಲಿರುವ ಎಲ್ಲೋರಾದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣಗೊಂಡ ಕೈಲಾಸ ದೇವಾಲಯವು ಕಲ್ಲಿನಲ್ಲಿ ಕೊರೆದ ದೇವಾಲಯಗಳ ಪರಾಕಾಷ್ಠತೆಯನ್ನು ಪ್ರದರ್ಶಿಸುತ್ತವೆ. ಚಲುಕ್ಯ ಶೈಲಿ ಮತ್ತು ಅನಂತರ ಬೆಳೆದ ಹೊಯ್ಸಳರ ವಿಶೇಷ ಅಲಂಕಾರಮಯ ಶೈಲಿಯಲ್ಲಿ ನಿರ್ಮಾಣಗೊಂಡ ಕಟ್ಟಡಗಳು ಸೌಂದರ್ಯದ ಖಣಿಗಳಾಗಿವೆ. ಒಂದೇ ಕಲ್ಲಿನಲ್ಲಿ ನಿರ್ಮಿಸಲಾದ ಶ್ರವಣಬೆಳಗೊಳದ ಗೊಮ್ಮಟ ಅಥವಾ ಬಾಹುಬಲಿಯ ಬೃಹದಾಕಾರದ ವಿಗ್ರಹ

ಮತ್ತು ಅದೇ ರೀತಿಯ ಕಾರ್ಕಳ, ವೇಣೂರು ಮತ್ತು ಧರ್ಮಸ್ಥಳದ ಮೂರ್ತಿಗಳು ಕರ್ನಾಟಕಕ್ಕಷ್ಟೇ ವಿಶಿಷ್ಟವಾಗಿವೆ; ಇಂಥ ಬೃಹದಾಕಾರದ ಮೂರ್ತಿಗಳು ಸಾಮಾನ್ಯವಾಗಿ ಬೇರೆ ಕಡೆಗಳಲ್ಲಿ ಕಂಡುಬರುವುದಿಲ್ಲ. ಹೊಯ್ಸಳ ದೇವಾಲಯಗಳು ಆಕಾರದಲ್ಲಿ ಚಿಕ್ಕವಿದ್ದರೂ ವ್ಯವಸ್ಥಿತ ರೀತಿಯಲ್ಲಿ ಕಟ್ಟಿದವುಗಳಾಗಿವೆ. ಇವುಗಳಲ್ಲಿಯ ಸೂಕ್ಷ್ಮ ಕೆತ್ತನೆಯ ಕೆಲಸಕ್ಕೆ ಜಗತ್ತಿನಲ್ಲಿಯ ಯಾವ ಕೆತ್ತನೆಯ ಕೆಲಸವೂ ಸಾಟಿಯಾಗಲಾರದು. ವಿಜಯನಗರ ಶೈಲಿಯ ಕಟ್ಟಡಗಳು ಬೃಹದಾಕಾರದಲ್ಲಿದ್ದು ಅವುಗಳಲ್ಲಿಯ ಮೂರ್ತಿಗಳು ಚೈತನ್ಯಯುತವಾಗಿವೆ, ಕಂಭಗಳು ಸುಭದ್ರವಾಗಿವೆ. ದಕ್ಷಿಣ ಭಾರತದಲ್ಲಿ ಹಿಂದಿನಿಂದಲೂ ಅಸ್ತಿತ್ವದಲ್ಲಿರುವ ಎಲ್ಲ ದೇವಾಲಯಗಳಿಗೂ ದೊಡ್ಡ ಪ್ರಾಕಾರಗಳನ್ನು ಮತ್ತು ಪ್ರವೇಶಿಸುವ ಮಾರ್ಗದಲ್ಲಿ ಗೋಪುರಗಳನ್ನು ವಿಜಯನಗರ ರಾಜರು ಕಟ್ಟಿಸಿದ್ದಾರೆ. ಈ ಗೋಪುರಗಳನ್ನು ರಾಯಗೋಪುರಗಳೆಂದು ಕರೆಯುತ್ತಾರೆ. ಅವರು ವಿಶಿಷ್ಟವಾದ ಕಲ್ಯಾಣಮಂಟಪ ಮತ್ತು ಸಭಾಮಂಟಪಗಳನ್ನು ಕಟ್ಟಿಸಿದ್ದು ಅವು ಕಗ್ಗಲ್ಲಿನಲ್ಲಿ ಮೂಡಿದ ಸಂಗೀತದಂತೆ ಕಂಗೊಳಿಸುತ್ತವೆ. ಇಂಥ ಮಂಟಪಗಳು ಹಂಪೆಯಲ್ಲಿ ಮಾತ್ರವಷ್ಟೇ ಅಲ್ಲ ದಕ್ಷಿಣ ಹಿಂದೂಸ್ಥಾನದ ಅನೇಕ ಸ್ಥಳಗಳಲ್ಲಿವೆ. ರಾಮೇಶ್ವರದಲ್ಲಿಯ ಸಾವಿರ ಕಂಬದ ಮಂಟಪವು ವಿಜಯನಗರ ಕಾಲಕ್ಕೆ ಕಟ್ಟಿದ ಮಂಟಪಗಳಲ್ಲಿ ಒಂದಾಗಿದೆ.

ಮುಸಲ್ಮಾನರು ಸಹ ಕರ್ನಾಟಕದಲ್ಲಿ ಇಂಡೋ-ಸಾರ್ಸೆನಿಕ್ ಪದ್ಧತಿಯಲ್ಲಿ ಕೆಲವು ವಿಶಿಷ್ಟ ಕಟ್ಟಡಗಳನ್ನು ನಿರ್ಮಿಸಿರುತ್ತಾರೆ. ಅಂಥ ಕಟ್ಟಡಗಳು ಕಲ್ಬುರ್ಗಿ, ಬಿದರೆ ಮತ್ತು ವಿಜಾಪುರಗಳಲ್ಲಿದ್ದು, ವಿಜಾಪುರದಲ್ಲಿಯ ಇಬ್ರಾಹಿಂ ರೋಜಾ ಮತ್ತು ಗೋಳಗುಮ್ಮಟಗಳು ಬಹು ಮಹತ್ವದ ಕಟ್ಟಡಗಳಾಗಿವೆ.

ಶಾಸನಗಳನ್ನು ಹೊಂದಿರುವುದರಲ್ಲಿ ಕರ್ನಾಟಕವು ಇಡೀ ಭಾರತದಲ್ಲಿಯೇ ಎರಡನೇಯ ಸ್ಥಾನವನ್ನು ಗಳಿಸಿದೆ. (ಮೊದಲನೇಯ ಸ್ಥಾನವು ತಮಿಳುನಾಡಿಗೆ ಸಲ್ಲುತ್ತದೆ). ಸಂಖ್ಯೆಯಲ್ಲಿ ಮಾತ್ರ ಈ ಶಾಸನಗಳು ಹೆಚ್ಚಾಗಿವೆಯೆಂದು ಹೇಳುವ ಕಾರಣವಿಲ್ಲ. ಅವು ಸಾಹಿತ್ಯದ ಅಂಶಗಳಲ್ಲಿಯೂ ಮತ್ತು ಸುಂದರವಾದ ರಚನೆಯಲ್ಲಿಯೂ ವಿಶಿಷ್ಟವಾಗಿವೆ. ಈವರೆಗೆ 25,000ಕ್ಕಿಂತ ಹೆಚ್ಚು ಶಾಸನಗಳು ಕರ್ನಾಟಕದಲ್ಲಿ ದೊರೆತು ಪ್ರಕಟಗೊಂಡಿವೆ. ಅವುಗಳಲ್ಲಿ ಅಡಕವಾದ ಅಂಶಗಳ ಮೇಲಿಂದ ಅವುಗಳನ್ನು ಮುಂದಿನಂತೆ ವಿಂಗಡಿಸಬಹುದು: ದಾನಶಾಸನಗಳು, ಪ್ರಶಸ್ತಿ ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ನಿಷಿಧಿ ಕಲ್ಲುಗಳು, ಇತ್ಯಾದಿ. ಈ ಪ್ರಕಾರದ ವೈವಿಧ್ಯವು ಭಾರತದ ಉಳಿದ ಭಾಷೆಗಳಲ್ಲಿ ಕಂಡುಬರುವುದಿಲ್ಲ. ಆ ಭಾಷೆಗಳಲ್ಲಿಯ ಶಾಸನಗಳು ಹೆಚ್ಚಾಗಿ ದಾನಶಾಸನಗಳು ಅಥವಾ ಪ್ರಶಸ್ತಿ ಶಾಸನಗಳಾಗಿವೆ. ವೀರಗಲ್ಲುಗಳು ಕರ್ನಾಟಕದ ವೈಶಿಷ್ಟ್ಯವಾಗಿವೆ. ಕರ್ನಾಟಕದಲ್ಲಿಯ ಶೇಕಡಾ 25ರಷ್ಟು ಶಾಸನಗಳು ವೀರಗಲ್ಲು ಶಾಸನಗಳಾಗಿವೆ. ಕಲ್ಲಿನ ಮೇಲೆ ಶಾಸನಗಳನ್ನು ಕೆತ್ತುವುದು ಒಂದು ಉತ್ತಮ ಕಲಾವಮೌಲ್ಯವನ್ನು ತಲುಪಿದೆ. ಸೋಮನಾಥಪುರ, ಶ್ರವಣಬೆಳಗೊಳ (ಅಕ್ಕನ ಬಸದಿ) ಮತ್ತು ಅಮೃತಾಪುರ ಈ ಊರುಗಳಲ್ಲಿಯ ದಾನ ಶಾಸನಗಳು, ಬೇಗೂರು ಮತ್ತು ಇತರ ಕಡೆಯ ವೀರಗಲ್ಲು ಮುಂತಾದವುಗಳನ್ನು ಶಿಲ್ಪ ಕೆತ್ತನೆಯ ಉತ್ತಮ ಕಲಾವಂತಿಕೆಗೆ ಮತ್ತು ಅಲಂಕಾರಿಕ ಬರಹಕ್ಕಾಗಿ ಅಭ್ಯಾಸಿಸಬಹುದು.

ಕನ್ನಡದಲ್ಲಿಯ ಶಾಸನ ಸಂಪದವು ಅಷ್ಟೇ ಮಹತ್ವದ್ದಿದೆ. ಶಾಸನ ಕವಿಗಳು ಕನ್ನಡ ಸಾಹಿತ್ಯವನ್ನು ತಮ್ಮ ಮುಂದೆ ಆದರ್ಶವನ್ನಾಗಿ ಇಟ್ಟುಕೊಂಡಿದ್ದರು. ಕೆಲವೆಡೆ ಶಾಸನವನ್ನು ಒಂದು ಚಿಕ್ಕ ಚಂಪೂ ಕಾವ್ಯವನ್ನಾಗಿ ಮಾಡಲು ಪ್ರಯತ್ನಿಸಲಾಗಿದೆ. ಶಾಸನಗಳಲ್ಲಿರುವ ಸಾಹಿತ್ಯಿಕ ಮೌಲ್ಯವನ್ನು ಕಡೆಗಣಿಸುವಂತಿಲ್ಲ. ಅವುಗಳಲ್ಲಿಯ ಉತ್ತಮ ಸಾಹಿತ್ಯಿಕ ಅಂಶಗಳು ಗ್ರಂಥಸ್ಥ ಸಾಹಿತ್ಯದ ಮಟ್ಟವನ್ನು ಪಡೆದಿರುತ್ತವೆ. ದಯೆ, ಪ್ರೀತಿ, ಕರುಣೆ, ಭಯ, ಶೂರತನ, ದುಃಖ, ಸ್ವಾಭಿಮಾನ ಮುಂತಾದ ಭಾವಗಳು ಸ್ಫುಟವಾಗಿ ಕಾಣುವಂತೆ ಶಾಸನಗಳಲ್ಲಿ ವ್ಯಕ್ತಪಡಿಸಲಾಗಿವೆ.

ಕರ್ನಾಟಕವು ಹಲವು ಧರ್ಮಗಳ ಕೂಡುಸ್ಥಾನವಾಗಿತ್ತು. ಕರ್ನಾಟಕವು 'ಸರ್ವಧರ್ಮ ಧೇನುನಿವಹಕ್ಕೆ ಅಡುಂಬೊಲಮ್' (ಕರ್ನಾಟಕವು ಎಲ್ಲ ಧರ್ಮಗಳೆಂಬ ಧೇನುಗಳು ಆಡುವ ಪ್ರದೇಶ) ಎಂದು ಶಾಸನಗಳು ವರ್ಣಿಸುತ್ತವೆ. ಕ್ರಿ. ಪೂರ್ವ. 3ನೇಯ ಶತಮಾನದಲ್ಲಿ ಬೌದ್ಧ ಧರ್ಮವು ಕರ್ನಾಟಕಕ್ಕೆ ಬಂದು ಕ್ರಿ. ಶ. 15ನೇಯ ಶತಮಾನದವರೆಗೂ ಅಸ್ತಿತ್ವದಲ್ಲಿದ್ದು, ಬನವಾಸಿ, ಸನ್ನತಿ, ಕದಿರೆ, ಬಳ್ಳಿಗಾವೆ ಮತ್ತು ಡಂಬಳಗಳಲ್ಲಿ ತನ್ನ ಕೇಂದ್ರಗಳನ್ನು ಹೊಂದಿತ್ತು. ಕೇವಲ ಕೆಲವು ಶಾಸನ ಮತ್ತು ವಿಗ್ರಹಗಳ ಹೊರತಾಗಿ ಬೌದ್ಧ ಅವಶೇಷಗಳು ಈಗ ಹೆಚ್ಚಾಗಿ ಉಳಿದು ಬಂದಿಲ್ಲ. ಬೌದ್ಧಧರ್ಮಕ್ಕೆ ಒಂದು ಶತಮಾನದ ತರುವಾಯ ಬಂದ ಜೈನ ಧರ್ಮವು ಶಾಶ್ವತವಾಗಿ ನಿಂತು, ಬೆಳೆಯಿತು. ಕಲೆ ಮತ್ತು ಸಾಹಿತ್ಯಕ್ಕೆ ಜೈನ ಧರ್ಮವು ನೀಡಿದ ಕೊಡುಗೆಗಳು ವಿಪುಲವಾಗಿದ್ದು ಅವುಗಳನ್ನು ಇಲ್ಲಿ ವಿವರಿಸಲು ಸಾಧ್ಯವಿಲ್ಲ. ಪ್ರಾರಂಭದ ಕನ್ನಡ ಸಾಹಿತ್ಯವೆಲ್ಲವೂ ಜೈನ ವಾಙ್ಮಯವಾಗಿತ್ತು. ಜೈನ ವಿದ್ವಾಂಸರು ವ್ಯಾಕರಣ, ಛಂದಸ್ಸು, ನಿಘಂಟು, ಖಗೋಲಶಾಸ್ತ್ರ, ಗಣಿತ, ತತ್ವಜ್ಞಾನ, ವೈದ್ಯ, ಇತ್ಯಾದಿ ಕ್ಷೇತ್ರಗಳಲ್ಲಿ ಗ್ರಂಥಗಳನ್ನು ಬರೆದು ತಮ್ಮ ಉತ್ತಮ ಬೌದ್ಧಿಕ ಶಕ್ತಿಯನ್ನು ಪ್ರದರ್ಶಿಸಿದ್ದಾರೆ. ಜೈನ ಧರ್ಮವು ಹನ್ನೊಂದು ಅಥವಾ ಹನ್ನೆರಡನೇಯ ಶತಮಾನದಷ್ಟು ಪ್ರಸಿದ್ಧಿಯನ್ನು ಈಗ ಪಡೆದಿಲ್ಲವಾದರೂ ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ಈವರೆಗೂ ಅದು

ಸ್ಥಿರವಾಗಿ ನಿಂತಿದೆ. ಪಾಶುಪತ, ಕಾಳಾಮುಖ ಮತ್ತು ನಾಥ ಮುಂತಾದ ಶೈವ ಪಂಥಗಳು, ಸೌರ, ಕೌಳ, ಗಾಣಪತ್ಯ, ಮೊದಲಾದ ತಾಂತ್ರಿಕ ಪಂಥಗಳು ಕರ್ನಾಟಕದಲ್ಲಿ ಹೆಚ್ಚಿನ ರೀತಿಯಲ್ಲಿ ಬೆಳೆದಿದ್ದು, ಅವುಗಳಲ್ಲಿ ಕೆಲವು ಮಧ್ಯಯುಗದಲ್ಲಿ ವೀರಶೈವ ಧರ್ಮದಲ್ಲಿ ಬೆರೆತುಹೋಗಿವೆ. ಈಗಲೂ ಸಹ ಪ್ರಭಾವಿಯಾದ ವೀರಶೈವ ಧರ್ಮವು ಕರ್ನಾಟಕದಲ್ಲಿಯೇ ಹುಟ್ಟಿದೆ. ಎಲ್ಲ ಪ್ರಸಿದ್ಧ ತತ್ವಜ್ಞಾನಿಗಳು ಕರ್ನಾಟಕಕ್ಕೆ ಒಂದಿಲ್ಲೊಂದು ರೀತಿಯಲ್ಲಿ ಸಂಬಂಧ ಹೊಂದಿರುತ್ತಾರೆ. ಶಂಕರರು ಎಂಟನೇಯ ಶತಮಾನದಲ್ಲಿ ಶೃಂಗೇರಿಯ ಮಠವನ್ನು ಸ್ಥಾಪಿಸಿರುವುದಾಗಿ ನಂಬಲಾಗಿದೆ. ಹೊಯ್ಸಳ ರಾಜನಾದ ವಿಷ್ಣುವರ್ಧನನ ಕಾಲದಲ್ಲಿ ಕೆಲವು ಕಾಲ ಆಶ್ರಯ ಪಡೆಯಲು ರಾಮಾನುಜರು ಕರ್ನಾಟಕಕ್ಕೆ ಬಂದಿದ್ದರು. ಮಧ್ವಾಚಾರ್ಯರಂತೂ ಕರ್ನಾಟಕದಲ್ಲಿಯೇ ಜನ್ಮವೆತ್ತಿದ್ದಾರೆ. ಅವರ ಅನುಯಾಯಿಗಳಿಗೆ ಮಾಧ್ವರೆಂದು ಕರೆಯುತ್ತಾರೆ. ಮಾಧ್ವರು ಈಗಲೂ ಸಹ ಕರ್ನಾಟಕದಲ್ಲಿ ಪ್ರಭಾವಿ ಸಮಾಜದವರಾಗಿದ್ದಾರೆ.

ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ಕರ್ನಾಟಕದಲ್ಲಿ ಮತೀಯ ಧಾರ್ಮಿಕ ಗಲಭೆಗಳು ತಲೆದೋರಿದವು. ವೀರಶೈವರು ಬಿಜ್ಜಳನ ಕೈಯಲ್ಲೂ ಜೈನರು ಏಕಾಂತದ ರಾಮಯ್ಯನಿಂದಲೂ ಹಿಂಸೆಗೊಳಗಾದರು. ಮತ್ತೆ ಶ್ರೀವೈಷ್ಣವರಿಂದ ಜೈನರಿಗೆ ಪೀಡೆಯುಂಟಾಯಿತು. ಈ ಪ್ರಕಾರದ ಘಟನೆಗಳು ನಡೆದುದು ಕೆಲವೇ ಹೊರತು ಯಾವಾಗಲೂ ಹಾಗೇ ಪರಿಸ್ಥಿತಿ ಇರಲಿಲ್ಲ. ಕರ್ನಾಟಕದಲ್ಲಿ ಧರ್ಮ ಸಹಿಷ್ಣುತೆ ಇದ್ದುದು ಸಾಮಾನ್ಯವಾಗಿ ಕಂಡುಬರುತ್ತದೆ. ಅವುಗಳಲ್ಲಿ ಉದಾಹರಣಾರ್ಥವಾಗಿ ಉಲ್ಲೇಖನೀಯವಾದವೆಂದರೆ ಅತ್ತಿಮಬ್ಬೆಯು ಲಕ್ಕುಂಡಿಯಲ್ಲಿ ಕಟ್ಟಿಸಿದ ಬ್ರಹ್ಮ ಜಿನಾಲಯಕ್ಕೆ ಬ್ರಾಹ್ಮಣರು ದತ್ತಿಯನ್ನು ಬಿಟ್ಟಿದ್ದಾರೆ. ಪಂಪನು ತನ್ನ ಆದಿಪುರಾಣದಲ್ಲಿ 'ಮನುಷ್ಯ ಜಾತಿ ತಾನೊಂದೆ ವಲಂ' (ಮನುಷ್ಯ ಜಾತಿ ಒಂದೇ) ಎಂದು ಹೇಳಿದ್ದಾನೆ. 'ದಯವಿಲ್ಲದ ಧರ್ಮವಾವುದಯ್ಯ' ಎಂದು ಉಲ್ಲೇಖಿಸಿ ಧರ್ಮದಲ್ಲಿ ಕರುಣಾ ಭಾವವಿರಬೇಕೆಂದು ಬಸವಣ್ಣ ಒತ್ತಿ ಹೇಳಿದ್ದಾರೆ. ಶೈವರು ಅವನನ್ನು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ಮೀಮಾಂಸಕರು ಕರ್ಮವೆಂದೂ ಮತ್ತು ಜೈನರು ಅರ್ಹತ್ ಎಂದೂ ಕರೆಯುವ ದೇವನು ಶ್ರೀ ಕೇಶವನೇ ಆಗಿದ್ದಾನೆಂದು ಬೇಲೂರು ಶಾಸನವು ಸಾರುತ್ತದೆ. ಬುಕ್ಕನು ಜೈನ ಮತ್ತು ವೈಷ್ಣವರಲ್ಲಿ ಯಾವ ತಾತ್ವಿಕ ಅಂತರವೂ ಇಲ್ಲೆಂದೂ ಘೋಷಿಸಿರುವನು. ಮಾಧ್ವ ಗುರುವಾದ ವ್ಯಾಸರಾಯರು ಕರ್ಮಠರಿಂದ ವಿರೋಧವಿದ್ದರೂ ಕುರುಬನಾದ ಕನಕದಾಸನನ್ನು ತಮ್ಮ ಶಿಷ್ಯರಲ್ಲೊಬ್ಬನನ್ನಾಗಿ ಸ್ವೀಕರಿಸಿದ್ದಾರೆ. ವೀರಶೈವರು ಒಂದು ಬಸದಿಯು ತಮ್ಮದೆಂದು ಹೇಳಿಕೊಂಡಾಗ ಹಳೇಬೀಡಿನಲ್ಲಿದ್ದ ವೀರಶೈವರು ಜೈನರ ಪರವಾಗಿ ತೀರ್ಪು ಕೊಟ್ಟಿದ್ದಾರೆ. ಕರ್ನಾಟಕದಲ್ಲಿದ್ದ ಬಾದಾಮಿಯಲ್ಲಿ ಹರಿಹರ ಮತ್ತು ಅರ್ಧನಾರೀಶ್ವರರ ಪ್ರಾಚೀನ ಮೂರ್ತಿಗಳಿವೆ. ಮತ್ತು ತ್ರಿಮೂರ್ತಿಗಳಿಗಾಗಿ ರಚಿತವಾದ ದೇವಾಲಯಗಳು ಕರ್ನಾಟಕದಲ್ಲಿ ಬಹಳ ಇವೆ. ಧರ್ಮಗಳು ಪೂರ್ಣ ಸಾಮರಸ್ಯದಿಂದ ಒಂದರ ಬದಿಗೆ ಒಂದಾಗಿ ಹೊಂದಿಕೊಂಡಿದ್ದವು. ಈ ತೆರನಾದ ಧಾರ್ಮಿಕ ಸಾಮರಸ್ಯವು ಕರ್ನಾಟಕ ಸಂಸ್ಕೃತಿಯ ವೈಶಿಷ್ಟ್ಯವೆಂದು ಹೇಳಬಹುದು.

## ಸ್ತ್ರೀಯರ ಸ್ಥಾನ ಮಾನ

ಪ್ರಾಚೀನ ಕಾಲದಲ್ಲಿ ಕರ್ನಾಟಕದಲ್ಲಿಯ ಸ್ತ್ರೀಯರ ಸ್ಥಾನಮಾನವು ಭಾರತದ ಉಳಿದ ಕಡೆಗಳಲ್ಲಿದ್ದಂತೆಯೇ ಇತ್ತು. ಸಾಮಾಜಿಕವಾಗಿ ಹಿಂದೇಟು ಬೀಳುತ್ತಿದ್ದರೂ ಕೆಲವು ಸುಸಂಸ್ಕೃತ ಸ್ತ್ರೀಯರು ಸಾಮಾಜಿಕ ಮತ್ತು ಧಾರ್ಮಿಕ ಅಂತಸ್ತನ್ನು ತಮ್ಮ ಸಾಮರ್ಥ್ಯದಿಂದ ಗಳಿಸಿಕೊಂಡರು. ಹತ್ತನೇಯ ಶತಮಾನದಲ್ಲಿ ಚಾಳುಕ್ಯರ ದಂಡನಾಯಕರಲ್ಲೊಬ್ಬನ ಹೆಂಡತಿಯಾಗಿದ್ದ ಅತ್ತಿಮಬ್ಬೆ ಎಂಬ ವಿಧವೆಯು ತಾನು ಮಾಡಿದ ತಪಸ್ಸಿನಿಂದ ದಾನಗಳಿಂದ, ದೇವಾಲಯಗಳನ್ನು ಕಟ್ಟಿಸುವುದರಿಂದ ಮತ್ತು ಮೂವರು ಕವಿ ಚಕ್ರವರ್ತಿಗಳಲ್ಲೊಬ್ಬನಾದ ರನ್ನನಂಥ ಶ್ರೇಷ್ಠ ಕವಿಯನ್ನು ಪೋಷಿಸಿ ತನ್ನ ಕಾಲದಲ್ಲಿಯೇ ಪವಾಡ ಸ್ತ್ರೀಯಾಗಿದ್ದಾಳೆ. ಅಕ್ಕಾದೇವಿಯೆಂಬ ಚಾಳುಕ್ಯ ರಾಜ ಪುತ್ರಿಯು ಹನ್ನೊಂದನೇಯ ಶತಮಾನದಲ್ಲಿ ಕರ್ನಾಟಕದ ಕೆಲವು ಭಾಗಗಳನ್ನು ಸ್ವಸಾಮರ್ಥ್ಯದಿಂದ ರಾಜ್ಯಭಾರ ಮಾಡಿದಳು. ಅವಳು ಪುರಾಣಗಳಲ್ಲಿ ಉಕ್ತವಾದ ದುರ್ಗೆಯಂತೆ ಸ್ವತಃ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದಳು. ಅದೇ ಪ್ರಕಾರ ಹೊಯ್ಸಳ ಉಮಾದೇವಿಯೂ ಕೂಡ ಯುದ್ಧ ಮಾಡಿದಳು. ಯುದ್ಧದಲ್ಲಿ ಮಡಿದ ವೀರಸ್ತ್ರೀಯರ ನೆನಪಿಗಾಗಿ ಹಲವು ಕನ್ನಡ ಶಾಸನಗಳನ್ನು ನಿಲ್ಲಿಸಲಾಗಿದೆ. ಹನ್ನೆರಡನೇಯ ಶತಮಾನದಲ್ಲಿ ನಡೆದ ವಚನ ರಚನೆಯ ಕಾಲದಲ್ಲಿ ಉತ್ತಮ ಸಾಹಿತ್ಯಿಕ ಕೃತಿಗಳನ್ನು ರಚಿಸಿದವರಲ್ಲಿ ಒಬ್ಬಳಾದ ಅಕ್ಕಮಹಾದೇವಿ ಮೊದಲಾದ ಮೂವತ್ತು ಸ್ತ್ರೀ ಲೇಖಕರು ಕಾಣಿಸಿಕೊಂಡಿರುವರು. ಏಳನೇಯ ಶತಮಾನದ ವಿಜ್ಜಿಕಾ ಮತ್ತು ಹದಿನಾಲ್ಕನೇಯ ಶತಮಾನದ ಗಂಗಾದೇವಿ ಸಂಸ್ಕೃತ ಕೃತಿಗಳನ್ನು ರಚಿಸಿ ಪ್ರಸಿದ್ಧಿ ಪಡೆದಿರುವರು. ಸರ್ವಶಾಸ್ತ್ರ ಪ್ರಸಿದ್ಧಿ ಪಡೆದ ಸಾವಿಮಿನಮ್ಮಡಿ ಯೆಂಬ ಸ್ತ್ರೀ ವಿದುಷಿಯನ್ನು ಕೋಲಾರ ಜಿಲ್ಲೆಯ ಒಂದು ಶಾಸನವು ಪ್ರಶಂಸಿಸುತ್ತದೆ. ಕರ್ನಾಟಕದ ಹಲವು ರಾಣಿಯರು ಅಭಿಜಾತ ಕಲೆಗಳಲ್ಲಿ ಮತ್ತು ಪಾಂಡಿತ್ಯದಲ್ಲಿ ನಿಷ್ಣಾತರಿದ್ದರು. ಅವರಲ್ಲಿ ಶಾಂತಲಾ, ಚಾಳುಕ್ಯ ಚಂದಲದೇವಿ ಮತ್ತು ಕಲಚೂರಿ ಸಾವಳದೇವಿಯಂಥವರು, ಸಾರ್ವಜನಿಕವಾಗಿ ನೃತ್ಯ ಮಾಡಿದವರು. ವಿಜಯನಗರ ಕಾಲದ ಸ್ತ್ರೀಯರು, ಸ್ವತಃ ವ್ಯಾಪಾರ ಮಾಡಿದ್ದಾರೆ. ಮತ್ತು ಅರಮನೆಯ ರಕ್ಷಕರಾಗಿ ಕೆಲಸ ಮಾಡಿದ್ದಾರೆ.

ಕರ್ನಾಟಕದಲ್ಲಿ ಕೆಳಜಾತಿಯ ಬರಹಗಾರರು ಬರೆದಂತೆ ಉಳಿದ ಯಾವ ರಾಜ್ಯದವರೂ ಗ್ರಂಥ ರಚಿಸಿಲ್ಲ. ಮೇಲೆ ಉಲ್ಲೇಖಿಸಿದ ಮೂರುನೂರು ವಚನಕಾರರಲ್ಲಿ ಅನೇಕರು ಬ್ರಾಹ್ಮಣೇತರರಾಗಿದ್ದರು. ಚನ್ನಯ್ಯ, ಧೂಳಯ್ಯ, ಕಕ್ಕಯ್ಯ ಮತ್ತು ನಾಗಿಮಯ್ಯ ಎಂಬುವರು ಅಂತ್ಯಜರಾಗಿದ್ದರು. ಅವರು ವಚನಗಳ ಮುಖಾಂತರ ಸಾಮಾಜಿಕ ಸಮಸ್ಯೆಗಳನ್ನೂ ಮತ್ತು ತಮ್ಮ ಅನುಭವಗಳನ್ನೂ ವ್ಯಕ್ತಪಡಿಸಿದ್ದಾರೆ. ಜಾತಿಯಿಂದ ಕುರುಬನಾದ ಕನಕದಾಸನು ರಾಮಧಾನ್ಯಚರಿತೆಯೆಂಬ ಗೂಢಾರ್ಥದ್ಯೋತಕ ಕಥೆಯನ್ನು ರಚಿಸಿ ವರ್ಣಗಳ ತಿಕ್ಕಾಟವನ್ನು ಬಣ್ಣಿಸಿದ್ದಾನೆ. ಅದು ಭತ್ತ ಮತ್ತು ರಾಗಿ ಇವುಗಳ ನಡುವೆ ನಡೆದ ಸಂವಾದವನ್ನು ಹೇಳುತ್ತದೆ. ಈ ಚರಿತೆಯಲ್ಲಿ ಭತ್ತವು ಉತ್ತಮ ಜಾತಿ ಮತ್ತು ರಾಗಿಯೂ ಕೆಳಮಟ್ಟದ ಜಾತಿಯನ್ನು ಪ್ರತಿನಿಧಿಸುತ್ತದೆ. ಭತ್ತವು ತಾನು ದೇವರು, ಅರಸರು ಮತ್ತು ಉತ್ತಮ ದರ್ಜೆಯ ಜನರಿಗೆ ತಿನ್ನಲು ಬೇಕಾಗಿರುವುದರಿಂದ ರಾಗಿಗಿಂತಲೂ ಶ್ರೇಷ್ಠವೆಂದೂ, ಯಜ್ಞ ಯಾಗಾದಿಗಳಿಗೆ ಬೇಕಾಗಿರುವದರಿಂದ ಅಂಥ ಕಾರ್ಯಗಳಲ್ಲಿ ರಾಗಿಯು ಗೌಣವಾಗಿರುವ ಕಾರಣದಿಂದ ತಾನು ಹೆಚ್ಚಿನದೆಂದು ಜಂಭ ಕೊಚ್ಚಿಕೊಳ್ಳುವುದು. ಅದಕ್ಕೆ ಉತ್ತರ ರೂಪವಾಗಿ ನಾನು ಬಡ ಜನರ ಆಹಾರವೇನೋ ನಿಜ, ಆದರೆ ಬರಗಾಲದ ಸಮಯಕ್ಕೆ ಶ್ರೀಮಂತರೂ ಸಹ ನನ್ನ ಕಡೆಗೆ ಬರುತ್ತಾರೆಂದು ರಾಗಿಯು ಹೇಳುತ್ತದೆ. ಈ ಸಂವಾದವನ್ನು ಕೇಳಿದ ರಾಮನು ಆ ಎರಡೂ ಪಕ್ಷಗಳನ್ನು ಒರೆಗೆ ಹಚ್ಚುತ್ತಾನೆ. ಅವೆರಡನ್ನೂ ಒಂದು ವರ್ಷದ ಕಾಲ ಸೆರೆ ಹಿಡಿದಿಡುವನು. ಆ ಕಾಲದಲ್ಲಿ ಭತ್ತವು ಹುಳಹತ್ತಿ ನಾಶವಾಗಿ ತಿನ್ನಲು ಅಯೋಗ್ಯವಾಗುವುದು. ಆದರೆ ರಾಗಿಯು ಮೂಲ ಬಣ್ಣವನ್ನು ಕಳೆದುಕೊಳ್ಳದೆ ಸತ್ವಯುತವಾಗಿ ಉಳಿಯುವುದು. ರಾಗಿಯು ಹೆಚ್ಚು ಬಲಿಷ್ಠವಾದದ್ದೆಂದೂ ಬಡವರ ಆಧಾರವೆಂದೂ ರಾಮನು ನಿರ್ಣಯ ಕೊಡುವನು. ಜಯಶಾಲಿಯಾದ ರಾಗಿಯು ರಾಮನಿಂದಲೇ ರಾಮಧಾನ್ಯವೆಂಬ ಹೆಸರನ್ನು ಪಡೆಯಿತು.

ರಾಮಾನುಜರು ಹರಿಜನರಿಗೆ 'ತಿರುಕುಲದವರು' (ಅಂದರೆ ಶ್ರೇಷ್ಠ ಜಾತಿಯವರೆಂದು) ಕರೆದರು. ಈ ಮಾತು ಕರ್ನಾಟಕದಲ್ಲಿಯೇ ನಡೆಯಿತು. ಮೇಲ್ಕೋಟೆಯಲ್ಲಿ ಈ ಶಬ್ದವು ಈಗಲೂ ಸಹ ಅಸ್ತಿತ್ವದಲ್ಲಿದೆ. ಮತ್ತು ಇಲ್ಲಿ ಹರಿಜನರು ವರ್ಷದಲ್ಲಿ ಮೂರು ದಿನಗಳವರೆಗೆ ದೇವಾಲಯಗಳ ಆವರಣ ಮತ್ತು ರಂಗ ಮಂಟಪಕ್ಕೆ ಪ್ರವೇಶಿಸುವ ಪದ್ಧತಿಯಿದೆ. ಕರ್ಮಠ ಸಮಾಜದಲ್ಲಿ ಹೀಗೆ ಮಾಡಿದುದು ಮೊದಲನೇಯ ಸುಧಾರಣಾ ಹೆಜ್ಜೆಯಾಗಿದೆ.

ರಾಮಾನುಜರ ಕಾಲಕ್ಕೆ ಸೇರಿದ ಬಸವ ಮತ್ತು ಇತರ ಸಮಕಾಲೀನರು ಹರಿಜನರಿಗೆ 'ಹಿರಿಯ ಮಾಹೇಶ್ವರರು' (ಉದಾತ್ತ ಭಕ್ತರು) ಮತ್ತು 'ಪಿರಿಯ ಕುಲದವರು' (ಮೇಲ್ತರಗತಿಯ ಜಾತಿಯವರು) ಎಂದು ಕರೆದರು. ಕರ್ನಾಟಕದಲ್ಲಿ, ಹನ್ನೆರಡನೇಯ ಶತಮಾನದಲ್ಲಿ ನಡೆದಂಥ ಅಸ್ಪೃಶ್ಯೋದ್ಧಾರ ಕಾರ್ಯವು, ಮಹಾತ್ಮಾಗಾಂಧಿಯವರು ಮಾಡುವ ಮೊದಲು, ಭಾರತದ ಇತರ ಭಾಗಗಳಲ್ಲಿ ಎಲ್ಲಿಯೂ ನಡೆಯಲಿಲ್ಲ.

ಭಾರತೀಯ ಸಂಸ್ಕೃತಿಗೆ ಕರ್ನಾಟಕವು ಮಾಡಿದ ಕೊಡುಗೆಯನ್ನು ವಿವರಿಸುವಾಗ ಸೋಮದೇವ ಸೂರಿ ಮತ್ತು ಬಿಲ್ಹಣ ಮೊದಲಾದ ಸಂಸ್ಕೃತ ಬರಹಗಾರರನ್ನು, ವಿಜ್ಞಾನೇಶ್ವರನಂಥ ನ್ಯಾಯದರ್ಶಿಗಳನ್ನು, ಮಹಾವೀರ ಮತ್ತು ಭಾಸ್ಕರರಂಥ ಗಣಿತಜ್ಞರನ್ನು ಜಿನಸೇನ, ವೀರಸೇನ ಮತ್ತು ಗುಣಭದ್ರರಂಥ ದೊಡ್ಡ ಜೈನ ಮತ್ತು ಧರ್ಮಶಾಸ್ತ್ರಜ್ಞರನ್ನು ಹೆಸರಿಸಲೇ ಬೇಕಾಗುತ್ತದೆ. ಸಾಯಣರು ವೇದಗಳ ಮೇಲೆ ಬರೆದ ಟೀಕಾಗ್ರಂಥ ವೇದಾರ್ಥ ಪ್ರಕಾಶ ಮತ್ತು ಭಾರತೀಯ ಪರಂಪರೆಯಲ್ಲಿ ಅವರಿಂದಲೇ ಬರೆಯಲಾಗಿದೆಯೆಂದು ನಂಬಲಾದ ಸರ್ವದರ್ಶನ ಸಂಗ್ರಹ, ಯಜ್ಞತಂತ್ರ ಸುಧಾನಿಧಿ, ಆಯುರ್ವೇದ ಸುಧಾನಿಧಿ, ಮತ್ತು ಸುಭಾಷಿತ ಸುಧಾನಿಧಿಯೆಂಬ ಸಂಗ್ರಹ ಗ್ರಂಥಗಳನ್ನು ಇಲ್ಲಿ ಉಲ್ಲೇಖಿಸಲೇಬೇಕು. ದ್ವೈತಮತವನ್ನು ಪ್ರತಿಪಾದಿಸಿ ಮಧ್ವಾಚಾರ್ಯರು ರಚಿಸಿದ ವಿದ್ವತ್ಪೂರ್ಣ ಗ್ರಂಥಗಳು ಕರ್ನಾಟಕದಲ್ಲಿ ಭಕ್ತಿ ಸಂಪ್ರದಾಯಕ್ಕೆ ಪ್ರೋತ್ಸಾಹ ನೀಡಿದವಲ್ಲದೆ ಬಂಗಾಲದ ಚೈತನ್ಯರಂಥವರ ಮೇಲೆಯೂ ಪರಿಣಾಮ ಬೀರಿವೆ.

## ಸಾಂಸ್ಕೃತಿಕ ಸಮನ್ವಯ

ಕೇವಲ ಧಾರ್ಮಿಕವಾಗಿಯೇ ಅಲ್ಲ ಇತರ ವಿಷಯಗಳಲ್ಲೂ ಕರ್ನಾಟಕವು ತನ್ನ ಸಾಂಸ್ಕೃತಿಕ ಸಂಘಟನೆಯನ್ನು ತೋರಿಸಿದೆ. ಕಲೆಯಲ್ಲಿ ನಾಗರ ಮತ್ತು ದ್ರಾವಿಡ ರೀತಿಗಳು ಸೇರಿವೆ; ಮತ್ತು ವೇಸರವೆಂಬ ರೀತಿ ವಿಕಸನವಾಗಿದೆ. ಸಂಗೀತದಲ್ಲಿ ಹಿಂದೂಸ್ಥಾನಿ ಮತ್ತು ದಕ್ಷಿಣಾದಿ ರೀತಿಗಳೆರಡೂ ವಿಜೃಂಭಿಸಿವೆ. (ಹಿಂದೂಸ್ಥಾನಿ ಪದ್ಧತಿಯ ಪ್ರತಿಪಾದಕನಾಗಿದ್ದ ಪುಂಡರೀಕ ವಿಠಲನು ಕರ್ನಾಟಕದವನು). ವಿಜಾಪುರದ ಅರಸು ಮನೆತನದವರೂ ಹಿಂದೂಸ್ಥಾನಿ ಪದ್ಧತಿಯನ್ನು ಪೋಷಿಸಿದರು. ಕರ್ನಾಟಕವು ಉತ್ತರಾದಿ ಮತ್ತು ದಕ್ಷಿಣಾದಿ ಸಂಸ್ಕೃತಿಯ ಅಲೆಗಳ ಮಿಲನ ಪ್ರದೇಶವಾಗಿದೆ.

ಕರ್ನಾಟಕದ ಸಾಂಸ್ಕೃತಿಕ ಪರಂಪರೆಯು ಪ್ರಾಚೀನವಾದದ್ದು, ಶ್ರೀಮಂತವಾದದ್ದು ಮತ್ತು ವೈವಿಧ್ಯಮಯವಾದದ್ದು. ಈ ಲೇಖನದ ಪ್ರಾರಂಭದಲ್ಲಿ ಸೂಚಿಸಿರುವಂತೆ ಕರ್ನಾಟಕದ ಸಂಸ್ಕೃತಿಯು ಭಾರತೀಯ ಸಂಸ್ಕೃತಿಯ ಭಾಗವೇ ಆಗಿದೆ. ಭಾರತದ ಸಂಸ್ಕೃತಿಗಿಂತ ವಿಭಿನ್ನವಾದ ಲಕ್ಷಣಗಳುಳ್ಳದ್ದನ್ನು ಪ್ರಾರಂಭದ ಘಟಗಳಲ್ಲಿ ಹೇಳಿದೆ. ಪುನಃ ಈ ವಿಷಯದಲ್ಲಿ

ತಪ್ಪು ಅಭಿಪ್ರಾಯಕ್ಕೆ ಸ್ಥಳವಿಲ್ಲ. ಅಂದರೆ ಯಾವ ಗುಣಲಕ್ಷಣ ಗಳನ್ನು ಕರ್ನಾಟಕದವೆಂದು ಹೇಳುತ್ತೇವೆಯೋ ಅವು ಇತರೆಡೆ ಕಾಣಬಾರದೆಂದೇನೂ ಇಲ್ಲ. ಅನೇಕ ಸಂದರ್ಭಗಳಲ್ಲಿ ಈ ಲಕ್ಷಣಗಳು ಇತರ ಸಂಸ್ಕೃತಿಗಳಲ್ಲಿದ್ದಿರಬಹುದಾದರೂ ಆ ಲಕ್ಷಣಗಳು ಕರ್ನಾಟಕದಲ್ಲಿ ಇತರೆಡೆಗಳಿಗಿಂತ ಚೆನ್ನಾಗಿ ಎದ್ದು ಕಾಣು ವಂತಹವಾಗಿವೆ. ಹೆಚ್ಚು ಕಾರ್ಯಶೀಲವಾಗಿವೆ. ಒಂದು ನಿದರ್ಶನವನ್ನು ತೆಗೆದುಕೊಳ್ಳುವುದಾದಲ್ಲಿ ಇತರ ರಾಜ್ಯಗಳಲ್ಲೂ ಹರಿಜನರ ಬಗ್ಗೆ ಕರುಣೆಯ ದೃಷ್ಟಿಯನ್ನು ಹೊಂದಿದ್ದರು; ಭಕ್ತಿ ಪಂಥವು ಅಸ್ಪೃಶ್ಯತೆಯನ್ನು ಮಾನ್ಯಮಾಡಿಲ್ಲ ಮತ್ತು ಇದು ಭಾರತಾದ್ಯಂತ ಇತ್ತು. ಆದರೆ ಈ ಸಂಗತಿಗಳು 12ನೇಯ ಶತಮಾನದಲ್ಲಿ ಸಾಮಾಜಿಕ ಕ್ರಾಂತಿಯಾಗಿ ಗಮನಾರ್ಹ ಫಲ ದೊಂದಿಗೆ ಕರ್ನಾಟಕದಲ್ಲಿ ರೂಪಗೊಂಡಿತು.

ಮತ್ತೆ ಮೇಲಿನ ಸಂಗತಿಗಳು ಕರ್ನಾಟಕ ಸಂಸ್ಕೃತಿಗೂ ಇತರ ಸಂಸ್ಕೃತಿಗಳಿಗೂ ಇರುವ ಸ್ಪಷ್ಟವಾದ ವ್ಯತ್ಯಾಸವನ್ನು ತೋರಿಸುತ್ತವೆ. ಇತರೆ ಸಾಮಾನ್ಯ ಬಟ್ಟೆಗಳಲ್ಲಿ ಬಣ್ಣದ ಬಟ್ಟೆಯು ಅನೇಕ ಬಣ್ಣಗಳನ್ನು ಹೊಂದಿರುವಂತೆ ಇದೆ. ಆದರೆ ಇತರ ಬಟ್ಟೆಗಳಿಂದ ಬಣ್ಣದ ದಾರಗಳ ವಿಶಿಷ್ಟ ಸಂಯೋಜನೆಯಿಂದ ಬಟ್ಟೆಯು ತಾನಾಗಿ ವಿಶಿಷ್ಟ ಲಕ್ಷಣಗಳನ್ನು ಹೊಂದಿರುವಂತೆ ಇದೆ. ಸಂಸ್ಕೃತಿಯ ಸಂಗತಿಯಲ್ಲೂ ಇದೇ ಮಾತನ್ನು ಹೇಳ ಬಹುದು.

## ಕನ್ನಡ ಭಾಷೆಯ ಹುಟ್ಟು ಹಾಗೂ ಬೆಳವಣಿಗೆ

ಭಾರತದಲ್ಲಿಯ ಭಾಷೆಗಳೆಲ್ಲವೂ ಅಂತೆಯೆ ಕನ್ನಡವೂ ಸಂಸ್ಕೃತದಿಂದ ಹುಟ್ಟಿದ ಭಾಷೆಗಳು ಎಂಬ ಭಾವನೆ ಕಳೆದ ಶತಮಾನದಲ್ಲಿ ಹಾಗೂ ಈ ಶತಮಾನದ ಪೂರ್ವಾರ್ಧದವರೆಗೂ ನಮ್ಮವರಲ್ಲಿ ರೂಢವಾಗಿತ್ತು. ಸಂಸ್ಕೃತ ಭಾಷೆ ದೈವಮೂಲದ್ದು ಎಂಬ ಭಾವನೆ, ವಿಪುಲ ಸಾಹಿತ್ಯದಿಂದಾಗಿ ಹಾಗೂ ಧಾರ್ಮಿಕ ಭಾಷೆಯಾಗಿದ್ದರಿಂದಾಗಿ ಸಂಸ್ಕೃತಕ್ಕೆ ದೊರೆತ ಮಾನ್ಯತೆ, ಭಾಷೆಗಳ ಪರಸ್ಪರ ಸಂಬಂಧಗಳ ಬಗೆಗೆ ವಸ್ತುನಿಷ್ಠವಾಗಿ ನೋಡುವ ದೃಷ್ಟಿಯ ಅಭಾವ, ಇವೆಲ್ಲವೂ ಈ ರೀತಿಯ ಅಭಿಪ್ರಾಯಕ್ಕೆ ಕಾರಣವಾಗಿರಬಹುದು. 19ನೇಯ ಶತಮಾನದಲ್ಲಿ ಭಾಷೆಗಳನ್ನು ಕುರಿತ ತೌಲನಿಕ ಹಾಗೂ ಐತಿಹಾಸಿಕ-ಅಧ್ಯಯದ ವಿಧಾನಗಳು ರೂಪಿತವಾಗಿ ಅವಕ್ಕೆ ಮನ್ನಣೆ-ಪ್ರೋತ್ಸಾಹಗಳು ದೊರೆತ ನಂತರ ಭಾಷೆಗಳ ಮೂಲವನ್ನು ನೋಡುವ ದೃಷ್ಟಿ ಬದಲಾಗಿ ದೈವ ಮೂಲ ಭಾಷಾವಾದಕ್ಕೆ ಪೆಟ್ಟುಬಿದ್ದಿತು. ಭಾಷೆಗಳಲ್ಲಿಯ ಪರಸ್ಪರ ಸಂಬಂಧವನ್ನು ಕಂಡುಕೊಳ್ಳುವಾಗ ಕೆಲವು ನಿತ್ಯಾವಶ್ಯಕ ಶಬ್ದಗಳೂ ಅದಕ್ಕಿಂತ ಮುಖ್ಯವಾಗಿ ವ್ಯಾಕರಣವೂ ಗಮನಿಸ ಬೇಕಾದ ಸಂಗತಿಗಳು ಎಂಬ ತಿಳುವಳಿಕೆಯುಂಟಾಯಿತು. ಈ ದಿಸೆಯಲ್ಲಿ ಭಾರತೀಯ ಭಾಷೆಗಳಿಗೆ ಸಂಬಂಧಿಸಿದಂತೆ ಗಮನಾರ್ಹ ಸೇವೆ ಸಂದುದು ಪಾಶ್ಚಾತ್ಯ ವಿದ್ವಾಂಸರಿಂದ. ರೆವರೆಂಡ್ ಕಾಲ್ಡ್‌ವೆಲ್ ಎಂಬವರು ಕ್ರಿ.ಶ. 1856ರಲ್ಲಿ ಪ್ರಕಟಿಸಿದ ತಮ್ಮ 'ದಕ್ಷಿಣ ಭಾರತದ ಭಾಷೆಗಳ ತೌಲನಿಕ ಅಧ್ಯಯನ' ಎಂಬ ಇಂಗ್ಲೀಷಿನಲ್ಲಿ ರಚಿತವಾದ ಕೃತಿಯಲ್ಲಿ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಮೊದಲಾದ ಹನ್ನೆರಡು ಭಾಷೆಗಳು ಒಂದೇ ಮೂಲದಿಂದ ಬಂದಿವೆಯೆಂಬುದನ್ನೂ ಅವು ಸಂಸ್ಕೃತ ಅಥವಾ ಇಂಡೋ ಆರ್ಯನ್ ಮೂಲಕ್ಕೆ ಸೇರುವುದಿಲ್ಲವೆಂಬುದನ್ನೂ ಮೊಟ್ಟ ಮೊದಲು ಸಾಧಾರವಾಗಿ ಪ್ರತಿಪಾದಿಸಿದರು. ಇದಕ್ಕೂ ಮೊದಲೇ ಫ್ರಾನ್ಸಿಸ್ ಎಲ್ಲಿಸ್ ಮುಂತಾದ ವಿದ್ವಾಂಸರು ತಮಿಳು-ಕನ್ನಡಾದಿ ಗಳು ಸಂಸ್ಕೃತಕ್ಕಿಂತ ಭಿನ್ನವಾದ ಮೂಲಕ್ಕೆ ಸೇರಿವೆಯೆಂಬುದನ್ನು ಊಹಿಸಿದರೂ ಇದನ್ನು ಸಾಧಾರವಾಗಿ ಖಚಿತಗೊಳಿಸಿದವನು ಕಾಲ್ಡ್‌ವೆಲ್. ಅಲ್ಲಿಂದೀಚೆಗೆ ಕನ್ನಡವು ಒಂದು ದ್ರಾವಿಡ ಭಾಷೆ ಯೆಂದು ಪರಿಗಣಿತವಾಗಿದೆ. ತಮಿಳು, ಕನ್ನಡ, ತೆಲುಗು, ಮಲೆಯಾಳಂ—ಈ ನಾಲ್ಕು ಲಿಪಿಯುಕ್ತ ಭಾಷೆಗಳಲ್ಲದೇ ತುಳು, ಕೊಡಗ (ಕೊಡವ), ತೊದ, ಕೋತ, ಇರುಳ, ಕುಯಿ, ಕುವಿ, ಗೋಂಡಿ, ಮುಂಡ, ಪೆಂಗೊ, ನಾಯ್ಕಿ, ಗದಬ, ವಲ್ಲಾರಿ, ಮಾಲ್ತೊ, ಕುರುಖ್, ಬ್ರಾಹುಈ, ಮುಂತಾದ ಲಿಪಿಯಿಲ್ಲದ ಗುಡ್ಡಗಾಡು ಜನರ ಭಾಷೆಗಳೂ ಸೇರಿ ಸುಮಾರು ಇಪ್ಪತ್ತು-ಇಪ್ಪತ್ತೈದು ಭಾಷೆಗಳು ದ್ರಾವಿಡ ಭಾಷೆಯಿಂದ ಹುಟ್ಟಿವೆ ಎಂಬುದು ಈಗ ಸರ್ವಸಮ್ಮತವಾದ ಸಂಗತಿಯಾಗಿದೆ. ಇವಲ್ಲದೇ ಭಾರತದ ತುಂಬೆಲ್ಲ ಹರಡಿದ ಇನ್ನೂ ಅನೇಕ ಗುಡ್ಡಗಾಡಿನ ಭಾಷೆ ಗಳು ದ್ರಾವಿಡ ಮೂಲಕ್ಕೆ ಸೇರಿದವಾಗಿರಬಹುದೆಂಬ ಅಭಿಪ್ರಾಯ ವಿದೆ. ಆದರೆ ಆಯಾ ಭಾಷೆಗಳನ್ನು ಕುರಿತ ವ್ಯಾಕರಣ-ನಿಘಂಟು ಗಳು ಸಿದ್ಧವಾಗುವವರೆಗೆ ಈ ಸಂಗತಿ ಖಚಿತವಾಗಲಾರದು. ಈ ದ್ರಾವಿಡ ಭಾಷೆಗಳೆಲ್ಲ ಭಾರತ ಹಾಗೂ ಅದರ ಸರಹದ್ದಿನ ಅಫಘಾನಿಸ್ತಾನಕ್ಕೆ ಸೇರಿದ ಭಾಗದಲ್ಲಿ ಮಾತ್ರ ಕಂಡು ಬರುತ್ತಿವೆ.

ಕನ್ನಡಕ್ಕೆ ಮೂಲವಾದ ದ್ರಾವಿಡ ಭಾಷೆಯನ್ನಾಡುವ ಜನರು ಅನೇಕ ಸಾವಿರ ವರ್ಷಗಳ ಹಿಂದೆ ಭಾರತಕ್ಕೆ ಹೊರಗಿನಿಂದ ಬಂದವರೆಂದು ಭಾವಿಸಲಾಗಿದೆ. ಭಾರತದ ದ್ರಾವಿಡರ ಸಾಮಾನ್ಯ ಪರಂಪರೆಯನ್ನು ನೀಗ್ರೊ-ಆಫ್ರಿಕನ್, ಎಲಮೈಟ್ಸ್, ಆಸ್ಟ್ರಾ ಲಾಯಿಡ್ಸ್, ಇತ್ಯಾದಿಯವರೊಂದಿಗೆ ಸಂಬಂಧವನ್ನು ಕಂಡು ಕೊಳ್ಳುವ ಪ್ರಯತ್ನ ಕಾಲ್ಡ್‌ವೆಲ್ಲರ ಕಾಲದಿಂದಲೇ ನಡೆಯುತ್ತಿದೆ. ಈ ಭಾಷೆಗಳೊಳಗೆ ವ್ಯಾಕರಣ, ಜಾನಪದ ನಡವಳಿಕೆ ಮತ್ತು ಶಬ್ದಕೋಶಗಳಲ್ಲಿ ಕಂಡುಬರುವ ಹೋಲಿಕೆಗಳತ್ತ ಗಮನ ಸೆಳೆಯ ಲಾಗಿದೆ. ದ್ರಾವಿಡ ಭಾಷೆಗಳು ಹಾಗೂ ಮೇಲೆ ಹೇಳಿದ ಇತರ ಭಾಷೆಗಳ ನಡುವೆ ಜನ್ಯ-ಜನಕ ಸಂಬಂಧವಿಲ್ಲದಿದ್ದರೂ ಅವು ಒಂದು ಕಾಲದಲ್ಲಿ ಒಟ್ಟಿಗೆ ಕೆಲವು ಕಾಲ ಪರಸ್ಪರ ಹತ್ತಿರವಾಗಿ,

ಸಂಪರ್ಕದಲ್ಲಿದ್ದುವೆಂದು ತರ್ಕಿಸಲಾಗುತ್ತಿದೆ. ಒಟ್ಟಿನಲ್ಲಿ ಭಾರತಕ್ಕೆ ಮಂಗೋಲಿಯನ್ನರೂ ಆಸ್ಟ್ರೋ-ಏಶಿಯಾಟಿಕ್ ಭಾಷಾ ಜನಾಂಗದವರೂ ಬಂದ ತರುವಾಯ ದ್ರಾವಿಡ ಜನಾಂಗದವರೂ ಅವರ ನಂತರ ಸಿನೋ-ಟಿಬೇಟಿಯನ್ನರೂ ನಂತರ ಆರ್ಯನ್ನರೂ ಬಂದರೆಂಬುದು ಒಪ್ಪಿತವಾದ ವಿಚಾರ. ನೆಲ-ಜಲಮಾರ್ಗಗಳೆರಡರಿಂದಲೂ ದ್ರಾವಿಡಪೂರ್ವಜರು ಭಾರತಕ್ಕೆ ಬಂದಿರಬೇಕೆಂದು ನಂಬಲಾಗಿದೆ.

## ಕನ್ನಡದ ಹುಟ್ಟು

ಕನ್ನಡವು ದ್ರಾವಿಡದ ನಾಲ್ಕು ಮುಖ್ಯವಾದ ಭಾಷೆಗಳಲ್ಲಿ ಒಂದಾಗಿದೆ. ವಿಪುಲವಾದ ಶಾಸನ, ಸಾಹಿತ್ಯ ಕೃತಿಗಳಿಂದ ಕೂಡಿದ ಭಾಷೆಯಾಗಿದೆ. ಕನ್ನಡ ಎಂಬುದು ಈಗ ಭಾಷೆಯ ಹೆಸರಾಗಿಯೇ ಇಂದು ಬಳಕೆಯಾಗುತ್ತಿದ್ದರೂ ಮೂಲತಃ ಇದು ಪ್ರದೇಶವನ್ನು ಹೇಳುವ ಶಬ್ದ. ಕನ್ನಡ ಎಂಬ ಶಬ್ದದ ಮೊದಲ ಶಬ್ದ ಕನ್ ಅಥವಾ ಕಲ್ ಎಂಬುದು ಒಂದು ಗುಂಪನ್ನು ಹೇಳುತ್ತದೆಯೇ ವಿನಾ ಒಂದು ದೇಶವನ್ನಲ್ಲ. ಇತರ ಭಾಷಾ ಸಮುದಾಯಗಳಾದ ತಮಿಳು, ಒಡಿಸ್ಸ, ಆಂಧ್ರ, ಗುಜರಾತ್, ಅಸ್ಸಾಮ್, ಇತ್ಯಾದಿಗಳ ಮೂಲವು ಆ ಗುಂಪಿನ ಹೆಸರಿನಿಂದಿರುವುದು ಈ ವಾದವನ್ನು ಸಮರ್ಥಿಸುತ್ತದೆ.

ಕನ್ನಡವು ದೇಶವಾಚಕವಾಗಿ ಸಾಕಷ್ಟು ಹಿಂದಿನಿಂದಲೂ ಬಳಕೆಯಾಗಿದ್ದಿರಬಹುದಾದರೂ ಇದು ಒಂದು ಪ್ರತ್ಯೇಕವಾದ ಭಾಷೆಯಾಗಿ ರೂಪುಗೊಂಡಿದ್ದು ಅಲ್ಲಿಂದ ಅನೇಕ ವರ್ಷಗಳ ತರುವಾಯವೇ ಎಂದು ತೋರುತ್ತದೆ. ಇದು ಯಾವಾಗ ಎಂದು ಖಚಿತವಾಗಿ ಹೇಳುವಂತಿಲ್ಲ. ಕನ್ನಡವು ಒಂದು ಸ್ವತಂತ್ರ ಭಾಷೆಯಾಗಿ ದಕ್ಷಿಣ ದ್ರಾವಿಡದಿಂದ ಪ್ರತ್ಯೇಕವಾದ ಮೇಲೆ ಅನೇಕ ಶತಮಾನಗಳ ಕಾಲ ಕೇವಲ ಆಡುನುಡಿಯಾಗಿಯೇ ಬಳಕೆಯಲ್ಲಿದ್ದಿರಬೇಕು. ಭಾಷೆಗಳು ಪ್ರತ್ಯೇಕಗೊಳ್ಳುವ ಕಾಲವನ್ನು ಕಂಡು ಹಿಡಿಯುವ ಭಾಷಾವಿಜ್ಞಾನದ ಒಂದು ವಿಧಾನದ ('ಗ್ಲೊಟ್ಟೊ ಕ್ರೊನಾಲಜಿ') ಪ್ರಕಾರ ಕನ್ನಡವು ತಮಿಳು-ಕನ್ನಡ-ತುಳು, ಇತ್ಯಾದಿಗಳಿಗೆ ಮೂಲವಾದ ಭಾಷೆಯಿಂದ ಪ್ರತ್ಯೇಕವಾದದ್ದು ಸುಮಾರು ಕ್ರಿ.ಶ. 400ರ ಸುಮಾರಿಗೆ. ದಿನ ನಿತ್ಯದಲ್ಲಿ ಬಳಸುವ ಅತ್ಯವಶ್ಯಕ ಶಬ್ದಗಳು ('ಬೇಸಿಕ್ ವರ್ಡ್ಸ್') ಕಾಲ ಕಳೆದಂತೆ ಒಂದು ನಿರ್ದಿಷ್ಟವಾದ ಪ್ರಮಾಣದಲ್ಲಿ ನಶಿಸಿಹೋಗುತ್ತವೆ, ಹಾಗೂ ಈಗ ಉಳಿದಿರುವ ಇಂಥ ಶಬ್ದಗಳಿಂದ ಕಳೆದುಹೋದ ಶಬ್ದಗಳನ್ನು ಲೆಕ್ಕಹಾಕಿ ಅವುಗಳ ಆಧಾರದಿಂದ ಒಂದು ಭಾಷೆ ಹುಟ್ಟಿದ ಕಾಲವನ್ನು ತಿಳಿಯಬಹುದೆಂಬುದು ಭಾಷಾ ವಿಜ್ಞಾನಿಗಳ ಎಣಿಕೆ. ಆದರೆ ಈ ಲೆಕ್ಕಾಚಾರ ಸರ್ವಸಮ್ಮತವಾದುದಲ್ಲ. ಕನ್ನಡ ಭಾಷೆಯಲ್ಲಿ ಬರೆದ ಮೊಟ್ಟಮೊದಲ ಶಾಸನವಾದ ಹಲ್ಮಿಡಿ ಶಾಸನವೇ ಕ್ರಿ.ಶ. 450ರ ಕಾಲದ್ದು. ಅದಕ್ಕೂ ಹಿಂದೆ ಕನ್ನಡಭಾಷೆ ಇದ್ದಿತೆಂಬುದಕ್ಕೆ ಆಧಾರಗಳಿವೆ. ಇದಕ್ಕೂ ಹಿಂದಿನ ಸಂಸ್ಕೃತ, ಪ್ರಾಕೃತ ಶಾಸನಗಳಿಂದಲೂ, ಕಾವ್ಯಗಳಿಂದಲೂ ಹಾಗೂ ಕೆಲವು ವಿದೇಶೀ ಮೂಲಗಳಿಂದಲೂ ಕನ್ನಡದ ಕೆಲವಾದರೂ ರೂಪಗಳನ್ನು ಪಡೆಯುವುದು ಸಾಧ್ಯವಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕ್ರಿ.ಶ. 100ರಲ್ಲಿದ್ದ ಹಾಲರಾಜನ 'ಗಾಥಾಸಪ್ತಶತಿ'ಯಲ್ಲಿ ಪೊಟ್ಟೆ, ಪಿಟ್ಟೆ, ತುಪ್ಪ ಮೊದಲಾದ ಕನ್ನಡ ಪದಗಳು ಬಳಕೆಯಾಗಿವೆ, ಎಂದು ಅಭಿಪ್ರಾಯಪಡಲಾಗಿದೆ. 19ನೇಯ ಶತಮಾನದ ಕೊನೆಯಲ್ಲಿ ಈಜಿಪ್ಟಿನ ಆಕ್ಸಿರಿಂಖಸ್ ಎಂಬ ಸ್ಥಳದಲ್ಲಿ ನಡೆದ ಸಂಶೋಧನೆಗಳ ಫಲವಾಗಿ 'ಆಕ್ಸಿರಿಂಖಸ್ ಪಾಪಿರಿ' ಎಂದು ಕರೆಯಲಾಗುವ ಕೆಲವು ಹಸ್ತಪ್ರತಿಗಳು ಬೆಳಕಿಗೆ ಬಂದವು. ಇವುಗಳಲ್ಲಿ ಒಂದು ಹಸ್ತಪ್ರತಿಯಲ್ಲಿ (ಕ್ರಿ. ಶ. 2ನೇಯ ಶತಮಾನದಲ್ಲಿ ರಚಿತವಾದ) ಗ್ರೀಕ್ ಪ್ರಹಸನವೊಂದಿದ್ದು ಅದರಲ್ಲಿ ವಿದೇಶೀ ಭಾಷೆಯೊಂದರ ತುಣುಕುಗಳಿವೆ. ಪ್ರಖ್ಯಾತ ಲಿಪಿಶಾಸ್ತ್ರಜ್ಞರಾದ ಡಾ॥ ಹುಲ್ಷ್ ಅವರು 1904ರಲ್ಲಿ ಇಲ್ಲಿಯ ವಾಕ್ಯಗಳನ್ನು ಕನ್ನಡದ ವಾಕ್ಯಗಳಾಗಿ ಓದಿದಾಗಿನಿಂದ ವಿದ್ವಾಂಸರು ಈ ಪ್ರಹಸನದ ಬಗೆಗೆ ಹಾಗೂ ಅದರಲ್ಲಿಯ ವಿದೇಶೀ ವಾಕ್ಯಗಳ ಬಗೆಗೆ ವಿಶೇಷ ಆಸಕ್ತಿ ತೋರಿಸಿದ್ದಾರೆ. ಎಂ. ಗೋವಿಂದ ಪೈ ಅವರು ಈ ವಾಕ್ಯಗಳು ಕನ್ನಡದವೇ ಎಂದು ತೋರಿಸಲು ಪ್ರಯತ್ನಿಸಿದ್ದು ಅವರ ಅಧ್ಯಯನ ಬೆಲೆಯುಳ್ಳದ್ದಾಗಿದೆ. ಆದರೆ ಈ ವಾಕ್ಯಗಳು ಕನ್ನಡದ್ದೆಂಬುದರ ಬಗೆಗೆ ಭಿನ್ನಾಭಿಪ್ರಾಯವಿದೆ. ಪ್ರಹಸನದಲ್ಲಿ ಬಳಕೆಯಾಗಿರುವ "ಆ ಅನ್ಯಭಾಷೆ ಭಾರತೀಯ ಭಾಷೆಯೇ ಆಗಿದ್ದರೆ ಅದು ಪ್ರಾಚೀನ ಕನ್ನಡವಾಗಿರುವುದಕ್ಕಿಂತ ಪ್ರಾಚೀನ ತುಳುವಾಗಿರುವ ಸಂಭವವೇ ಜಾಸ್ತಿ ಎಂಬ ಸಾಹಸದ ಅಭಿಪ್ರಾಯವೂ ಸಾಧ್ಯವಿದೆ" ಎಂದು ತೀ. ನಂ. ಶ್ರೀಕಂಠಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಈ ಪ್ರಯೋಗವನ್ನುಳಿದರೂ ಇದಕ್ಕಿಂತ ಸಾಕಷ್ಟು ಹಿಂದಿನದಾದ ಕ್ರಿಸ್ತಪೂರ್ವ ಮೂರನೇಯ ಶತಮಾನಕ್ಕೆ ಸೇರಿದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿಯೇ ಕನ್ನಡ ಶಬ್ದವೊಂದು ದೊರೆಯುತ್ತದೆ. ಅಲ್ಲಿ ಬಳಕೆಯಾದ 'ಇಸಿಲ' ಎನ್ನುವುದು ಈಗ ಕನ್ನಡ ಆಡುನುಡಿಯಾಗಿರುವ ಪ್ರದೇಶದಲ್ಲಿಯೇ ಇದ್ದ ಒಂದು ಸ್ಥಳದ ಹೆಸರು. ತಮಿಳಿನ 'ಎಯಿಲ್' ಎಂಬ ಶಬ್ದಕ್ಕೆ ಕೋಟೆ ಎಂಬರ್ಥವಿದ್ದು ಅದರ ಜ್ಞಾತಿ ಶಬ್ದವಾದ ಕನ್ನಡದ ಎಸಿಲ್ ಶಬ್ದವೇ ಆರ್ಯೀಕರಣಗೊಂಡು 'ಇಸಿಲ' ಎಂಬ ರೂಪ ತಾಳಿದೆ ಹಾಗೂ ಅದೇ ನಮಗೆ ದೊರೆತಿರುವ ಪ್ರಾಚೀನತಮ ಕನ್ನಡ ಶಬ್ದ ಎಂದು ಡಿ. ಎಲ್. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿದ್ದಾರೆ. ಇದರಿಂದಾಗಿ ಕ್ರಿಸ್ತಶಕಕ್ಕೆ ಕೆಲವು ಶತಮಾನಗಳ ಮೊದಲೇ ಕನ್ನಡ ರೂಪುಗೊಂಡಿದ್ದಿತೆಂದು ಹೇಳಬಹುದು. ಆದ್ದರಿಂದ "ತಮಿಳು ಕನ್ನಡಗಳು ಯಾವಾಗ ಬೇರ್ಪಟ್ಟು ಪ್ರತ್ಯೇಕ ಭಾಷೆಗಳಾದುವು ಎನ್ನುವುದು ತಿಳಿದಿಲ್ಲ. ಆದರೆ ಕ್ರಿ.ಪೂ. ಮೊದಲ ಸಹಸ್ರ ವರ್ಷಗಳ ಮಧ್ಯಭಾಗ ತೀರ ದೂರವೆನ್ನುವಂತಿಲ್ಲ" ಎಂಬ ತೀ. ನಂ. ಶ್ರೀಕಂಠಯ್ಯನವರ ಮಾತು ಒಪ್ಪಿಕೊಳ್ಳುವಂಥಾದ್ದೇ ಆಗಿದೆ.

## ಕನ್ನಡ ಭಾಷೆಯ ಬೆಳವಣಿಗೆ

ಈ ಹಿಂದೆಯೇ ತಿಳಿಸಿದಂತೆ ಸದ್ಯಕ್ಕೆ ಲಭ್ಯವಿರುವ ಕನ್ನಡದ ಪ್ರಾಚೀನ ಲೇಖನವೆಂದರೆ ಕ್ರಿ. ಶ. 450ರ ಹಲ್ಮಿಡಿ ಶಾಸನ. ಅಲ್ಲಿಂದೀಚೆಗೆ ಸುಮಾರು ಒಂದೂವರೆ ಸಾವಿರ ವರ್ಷಗಳ ಕಾಲದಲ್ಲಿ ಕನ್ನಡ ಭಾಷೆ ಬದಲಾಗುತ್ತಲೇ ಬಂದಿದೆ. ಕನ್ನಡದಲ್ಲಿ ನಡೆದ ಈ ಬದಲಾವಣೆ ಅಥವಾ ಬೆಳವಣಿಗೆ ಅದರ ಎಲ್ಲ ಅಂಗಗಳಲ್ಲಿ ಧ್ವನಿವ್ಯವಸ್ಥೆ, ಪದರಚನೆ, ವಾಕ್ಯರಚನೆ ಹಾಗೂ ಶಬ್ದಕೋಶ ಇವೆಲ್ಲವುಗಳಲ್ಲಿ ಗಮನಾರ್ಹವಾದ ಬದಲಾವಣೆಯಾಗಿದೆ. ಭಾಷೆಯಲ್ಲಿ ನಡೆದ ಈ ಎಲ್ಲ ಪರಿವರ್ತನೆಗಳಿಂದಾಗಿ, ಮುಖ್ಯವಾಗಿ ಶಬ್ದಕೋಶದಲ್ಲಾದ ಪರಿವರ್ತನೆಯಿಂದಾಗಿ ಕನ್ನಡಿಗರು ಆಲೋಚಿಸುವ ರೀತಿ ಕೂಡ ಬದಲಾಗಿದೆ. ಈ ಪರಿವರ್ತನೆಗೆ ಒಂದು ಕಾರಣ ಕನ್ನಡ ಭಾಷೆಯೊಳಗೇ, ಆಂತರಿಕವಾಗಿಯೇ ನಡೆದ ಸಾಂಸ್ಕೃತಿಕ ಮತ್ತು ಸಾಮಾಜಿಕ-ರಾಜಕೀಯ ಬದಲಾವಣೆಗಳು. ಅನುಭವಗಳು ವಿಸ್ತಾರಗೊಂಡಂತೆ ಹೊಸ ಶಬ್ದಗಳು ಹುಟ್ಟಿರಬಹುದು. ಹಳೆಯ ಶಬ್ದಗಳೇ ಮಾರ್ಪಾಟುಗೊಂಡಿರಬಹುದು. ಉಚ್ಚಾರಣೆಯ ರೂಢಿ ವ್ಯತ್ಯಾಸವಾದಂತೆ ಧ್ವನಿ ವ್ಯವಸ್ಥೆಯಲ್ಲಿ, ಅನಂತರ ಪದರಚನೆಯಲ್ಲಿ ವ್ಯತ್ಯಾಸವಾಯಿತು. ಇದರ ಜೊತೆಗೆ ಕನ್ನಡ ಭಾಷೆಯ ಜನರು ಗುಂಪುಗುಂಪುಗಳಾಗಿ ಒಡೆದಾಗ ಕನ್ನಡದ ಬೇರೆ ಬೇರೆ ಪ್ರಭೇದಗಳಾದವು. ಇದಲ್ಲದೇ ಕನ್ನಡ ಭಾಷೆ ಪರಿವರ್ತನೆ ಹೊಂದಲು ಇನ್ನೊಂದು ಪ್ರಮುಖ ಕಾರಣವೆಂದರೆ ಕನ್ನಡವು ಬೇರೆ ಬೇರೆ ಕಾಲಘಟ್ಟಗಳಲ್ಲಿ ಇತರ ಭಾಷೆಗಳೊಡನೆ ಪಡೆದ ಸಂಪರ್ಕ. ಮೊದಮೊದಲು ಸಂಸ್ಕೃತ–ಪ್ರಾಕೃತಗಳು, ಅನಂತರದಲ್ಲಿ ಪರ್ಶಿಯನ್, ಅರೇಬಿಕ್, ಹಿಂದೂಸ್ಥಾನಿ, ಪೋರ್ತುಗೀಸ್, ಇಂಗ್ಲಿಷ್ ಭಾಷೆಗಳು, ಜೊತೆಗೆ ನೆರೆಯ ಸೋದರ ಭಾಷೆಗಳಾದ ತಮಿಳು, ತೆಲುಗುಗಳು ಕನ್ನಡದ ಮೇಲೆ ಪ್ರಭಾವ ಬೀರಿವೆ. ಕನ್ನಡದಲ್ಲಾದ ಪರಿವರ್ತನೆಗಳನ್ನು ತಿಳಿದುಕೊಳ್ಳಲು ಶಾಸನಗಳು, ಕಾವ್ಯಗಳು ಹಾಗೂ ಇತರ ದಾಖಲೆಗಳು ಸಹಾಯಕವಾಗುತ್ತವೆ.

ಕನ್ನಡದಲ್ಲಾದ ಪರಿವರ್ತನೆಗಳನ್ನು ನಾಲ್ಕು ಕಾಲ ಘಟ್ಟಗಳಾಗಿ ವಿಂಗಡಿಸಿಕೊಂಡು ವಿವರಿಸುವುದು ರೂಢಿ. ಕ್ರಿ. ಶ. 850ರ ವರೆಗಿನ ಕನ್ನಡವನ್ನು ಪೂರ್ವದ ಹಳಗನ್ನಡವೆಂದೂ, 850ರಿಂದ 1200ರ ನಡುವಿನ ಕನ್ನಡವನ್ನು ಹಳಗನ್ನಡವೆಂದೂ, 1200ರಿಂದ 1700ರ ವರೆಗಿನ ಕನ್ನಡವನ್ನು ನಡುಗನ್ನಡವೆಂದೂ, ಅನಂತರದ ಕನ್ನಡವನ್ನು ಹೊಸಗನ್ನಡವೆಂದೂ ಕರೆಯಲಾಗಿದೆ. ಈ ಕಾಲದ ಗಡುವಿನ ಬಗೆಗೆ ಭಿನ್ನಾಭಿಪ್ರಾಯವಿರುವುದಾದರೂ ಸ್ಥೂಲವಾಗಿ ಈ ವಿಂಗಡಣೆಯನ್ನೇ ಹೋಲುತ್ತದೆ.

ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಅಲಂಕಾರ ಗ್ರಂಥವಾದ ಕವಿರಾಜಮಾರ್ಗ. ರಾಷ್ಟ್ರಕೂಟ ಚಕ್ರವರ್ತಿಯಾಗಿದ್ದ ನೃಪತುಂಗನ ಆಸ್ಥಾನಕವಿ ಶ್ರೀವಿಜಯನು ಇದನ್ನು ಬರೆದನೆಂದು ಹೇಳಲಾಗಿದೆ. ಕವಿರಾಜಮಾರ್ಗವು ತನಗೆ ಹಿಂದೆ ಇದ್ದ, ಗದ್ಯಪದ್ಯಗಳಲ್ಲಿ ರಚಿತವಾದ ಅನೇಕ ಕೃತಿಗಳನ್ನು ಹೆಸರಿಸುವುದಾದರೂ ಅವುಗಳಲ್ಲಿ ಒಂದೂ ಈವರೆಗೆ ದೊರೆತಿಲ್ಲ. ಕವಿರಾಜಮಾರ್ಗಕ್ಕಿಂತ ಹಿಂದೆ ರಚಿತವಾದ ಕೃತಿಗಳು ದೊರೆತಿಲ್ಲವಾದರೂ ಕ್ರಿ. ಶ. 450ರ ಹಲ್ಮಿಡಿ ಶಾಸನದಿಂದ ಈಚೆಗೆ ವಿಪುಲವಾದ ಸಂಖ್ಯೆಯಲ್ಲಿ ಶಾಸನಗಳು ದೊರೆತಿದ್ದು ಅವು ಆ ಕಾಲದ, ಪೂರ್ವದ ಹಳಗನ್ನಡದ ಸ್ವರೂಪವನ್ನು ತಿಳಿದುಕೊಳ್ಳಲು ಸಹಾಯಮಾಡುತ್ತವೆ. ಆ ಕಾಲದ ಕೆಲವು ವಿಶಿಷ್ಟ ಲಕ್ಷಣಗಳನ್ನು ಇಲ್ಲಿ ಹೇಳಬಹುದು. ಮೂಲ ದ್ರಾವಿಡಭಾಷೆಯಲ್ಲಿಯ ವ, ಪ, ಱ, ೞ ಕಾರಗಳು ಈ ಕಾಲದ ಭಾಷೆಯಲ್ಲಿ ಹಾಗೆಯೇ ಉಳಿದಿವೆ. ಸಾಮಾನ್ಯವಾಗಿ ಶಾಸನಗಳ ಅಂತ್ಯದಲ್ಲಿ ಇರುವ 'ವಿತ್ತಿದಲ್ಲಿ ವೆಳೆಯಾದೆ ಕೆಡುಗೆ' ಎಂಬ ಶಾಪವಾಕ್ಯಗಳಲ್ಲಿ ಇದನ್ನು ನೋಡಬಹುದು. ಹಾಗೆಯೇ ಇತರ ಶಬ್ದಗಳಾದ ಪೊಲವ್, ಪತ್ತು, ಬಾೞಿ, ಇಲಿ, ಪಱಿ, ಇತ್ಯಾದಿ ಪದಗಳೂ ದೊರಕುತ್ತವೆ. ಪೂರ್ವದ ಹಳಗನ್ನಡದಲ್ಲಿಯ ವಿಭಕ್ತಿ ಪ್ರತ್ಯಯಗಳಲ್ಲಿ ಹಾಗೂ ಕ್ರಿಯಾಪದದ ಕೊನೆಯಲ್ಲಿಯ ಪುರುಷ ಪ್ರತ್ಯಯಗಳಲ್ಲಿ ದೀರ್ಘಸ್ವರಸಹಿತವಾದ ರೂಪಗಳು ಕಂಡು ಬರುತ್ತವೆ. ಸಂದಾರ್, ಕೊಟ್ಟಾರ್, ಅದರಾ, ಅದಾನ್, ದೇಗುಲಮಾನ್, ಮಂಗಳೀಶನಾ, ಇತ್ಯಾದಿ ರೂಪಗಳಲ್ಲಿ ಇದನ್ನು ನೋಡಬಹುದು. ಹೊಸಗನ್ನಡದ ಅಲ್ಲಿ ಎಂಬರ್ಥದಲ್ಲಿ ಉಳ್ ಎಂಬ ಪ್ರತ್ಯಯವಿದೆ. ವೆಟ್ಟದುಳ್ (ಬೆಟ್ಟದಲ್ಲಿ), ಅದರುಳ್ ಎಂಬಂತಹ ರೂಪಗಳು ಬಳಕೆಯಾಗಿವೆ. ಮಾಡಿದವನು, ನೋಡಿದವರು ಎಂಬಂತಹ ಪದಗಳಿಗೆ ಬದಲಾಗಿ ಈ ಕಾಲದಲ್ಲಿ ಮಾಡಿದೋನ್, ಮಾಡಿದೋವ್, ನೋಡಿದೋರ್, ಎಂಬಿತ್ಯಾದಿ ರೂಪಗಳಿವೆ. ನಿಷೇಧಾರ್ಥದಲ್ಲಿ ನೋಡಾದೆ, ಕಾಣಾದೆ, ಎಂಬಿತ್ಯಾದಿ ರೂಪಗಳಿವೆ. ಈ ಸಂಗತಿಗಳನ್ನು ಗಮನಿಸಿದಲ್ಲಿ ಪೂರ್ವದ ಹಳಗನ್ನಡವು ತಮಿಳಿಗೆ ಹೆಚ್ಚು ಹತ್ತಿರವಾಗಿರುವುದು ತೋರುತ್ತದೆ. ತಮಿಳಿನೊಡನಿರುವ ಈ ಹೋಲಿಕೆ ತಮಿಳು ಮತ್ತು ಕನ್ನಡಗಳು ಒಂದೇ ಭಾಷೆಯ ಎರಡು ಪ್ರಾದೇಶಿಕ ಭೇದಗಳಾಗಿದ್ದ ಕಾಲವೊಂದನ್ನು ಸೂಚಿಸುತ್ತದೆ. ಪೂರ್ವದ ಹಳಗನ್ನಡ ಭಾಷೆಗೆ ನಿದರ್ಶನಾರ್ಥವಾಗಿ ಕ್ರಿ. ಶ. ಸುಮಾರು 675ರ ಕೊಪ್ಪದ ಶಾಸನದ ಪಾಠವನ್ನು ಇಲ್ಲಿ ಉಲ್ಲೇಖಿಸಬಹುದು.

"ಸ್ವಸ್ತಿ ಶ್ರೀಮತ್ ಚಿತ್ರವಾಹನ ಪೊಂಬುಳ್ಚಾಳೆ

ಕಿಳ್ಳುವರ್ ನಾಗೆಣ್ಣನ್ ಅಧಿಕಾರಿಗಳಾಗೆ ಕಿಱ್ಸಾನೇಶ್ವರದ

ದೇವರ ಪರಿವರಿಯ(ಎ) ಭಂಟೆಮುಂ ಕವಿಲಿಯ ಪಾಲುಂ
ಎಱ್ಱುವರ್...

ದೇವಾಂದೇವನ ಪರಿಜನಮಲ್ಲಾಡೆ ಪೆಜನೋರ್ಪ್ಪನಾರು
ಮುಂಡೊಮೊಂಡುಕಂ

ಇಂತುಣವೋರುಂ ಉಣಿಯಕೊಡುವೋರುಂ
ದೇವೆಡಿತ್ತಿಯೆರಿಂದುಂ ಸಾಏರಿಂದುಂ

ಅಭರವೆತ್ತಿ ಆಯೆತಿಏ ಕೊಳ್ವೋರುಂ ಮೂವೆತ್ಮೂರಾ
ವಿಸೆಲ್ಮಿಡೆಯುಂ

ಪೊಗೆವೋಗಿ ಕೊಳ್ವೊರುಂ ಕೊಂಡು ಉಣ್ವೋರುಂ

ಪಂಚಮಹಾಪಾತಕ ಸಂಯುತ್ತನಾಗಿ ಪೂತಿ ಎನ್ಪ
ನರಗಕ್ಕೆ ಸಲ್ಗೆ..."ಇತ್ಯಾದಿ.

ಎಂಟನೇಯ ಶತಮಾನದ ಕೊನೆಯ ಹೊತ್ತಿಗೆ ಪೂರ್ವದ ಹಳಗನ್ನಡ ಸ್ಥಿತಿಯು ಬಹುಮಟ್ಟಿಗೆ ಬದಲಾಗತೊಡಗಿತು. ಅನಂತರದ ಸುಮಾರು ನಾಲ್ಕು ಶತಮಾನಗಳ ಕಾಲದ ಹಳಗನ್ನಡದಲ್ಲಿ ಕನ್ನಡದ ಕೆಲವು ಉತ್ಕೃಷ್ಟ ಕೃತಿಗಳು ರಚಿತವಾದವು. ಪಂಪ (902) ರನ್ನ (949) ರಂಥ ಶ್ರೇಷ್ಠ ಕವಿಗಳು ಕಾವ್ಯ ರಚಿಸಿದರು. ವಡ್ಡಾರಾಧನೆಯಂಥ ಉತ್ತಮವಾದ ಗದ್ಯಕೃತಿ ಸು. 930ರಲ್ಲಿ ರಚಿತವಾಯಿತು.

ಈ ಮೂರು-ನಾಲ್ಕು ಶತಮಾನಗಳ ಅವಧಿಯಲ್ಲಿ ಅದರಲ್ಲಿಯೂ ಮುಖ್ಯವಾಗಿ ಒಂಭತ್ತನೇಯ ಶತಮಾನದ ಉತ್ತರ, ಹತ್ತನೇಯ ಶತಮಾನದ ಆದಿಯಲ್ಲಿ ಕನ್ನಡಕ್ಕೆ ಸಂಬಂಧಿಸಿದಂತೆ ಕೆಲವು ಮುಖ್ಯವಾದ ಧ್ವನಿವ್ಯತ್ಯಾಸಗಳು ನಡೆದಿವೆ. ಕನ್ನಡ ಪದಗಳಲ್ಲಿ ಈವರೆಗೆ ಕಾಣಿಸಿಕೊಳ್ಳುತ್ತಿದ್ದ ೞ, ಱ, ವ, ಪ ಧ್ವನಿಗಳು ಕ್ರಮವಾಗಿ ಳ, ರ, ಬ, ಹ, ಧ್ವನಿಗಳಾಗಿ ಬದಲಾದವು. ೞ ಎಂಬುದು ಳ ಕ್ಕೆ ಹೋಲುವ ಒಂದು ಮೂಲದ್ರಾವಿಡ ಧ್ವನಿಯಾಗಿದ್ದು ಳ ದಿಂದ ಬೇರೆಯಾದ, ಅರ್ಥವ್ಯತ್ಯಾಸ ಮಾಡಬಲ್ಲ ಧ್ವನಿಯಾಗಿದ್ದು ಹಳಗನ್ನಡದಲ್ಲಿಯೂ ಉಳಿದುಕೊಂಡು ಬಂದುದು ಕಂಡುಬರುತ್ತದೆ. ಹಳಗನ್ನಡದಲ್ಲಿ ಬಾೞೆ ಹಾಗೂ ಬಾಳೆ ಇವೆರಡೂ ಭಿನ್ನಾರ್ಥಕ ಶಬ್ದಗಳಾಗಿವೆ. ಮೊದಲನೇಯದಕ್ಕೆ ಸಸ್ಯಜಾತಿಯ ಬಾಳೆ ಎಂದೂ ಎರಡನೇಯದಕ್ಕೆ ಒಂದು ಜಾತಿಯ ಮೀನು ಎಂದೂ ಅರ್ಥ. ಆದರೆ ಈ ೞ ಧ್ವನಿ ಮುಂದೆ 10ನೇ ಶತಮಾನದ ಆದಿಯಲ್ಲಿ ಒಂದೆಡೆ ರ ಆಗಿಯೂ ಇನ್ನೊಂದೆಡೆ ಳ ಆಗಿಯೂ ಬದಲಾಯಿತು. ಗೞ್ದೆ, ಎೞ್ತು ಎಂಬಿವಾದಿ (ವ್ಯಂಜನದ ಹಿಂದೆ ೞ ಇರುವ) ಪದಗಳು ಗರ್ದೆ, ಎತ್ರ್ತು ಎಂದು ಬದಲಾದವು. ಹಾಗೂ ಮುಂದೆ ಇವು ಗದ್ದೆ, ಎತ್ತು ಎಂದಾದವು. ಇದೇ ರೀತಿ 'ರ'ವನ್ನು ಹೋಲುವ ಱ ಎಂಬ ಧ್ವನಿಯೂ (ಇನ್ನೂ ಸ್ವಲ್ಪ ಹಿಂದೆಯೇ) ರ ಆಗಿ ಬದಲಾಯಿತು. ಸುಮಾರು 750ರ ಕಾಲಕ್ಕೆ ಈ ಬದಲಾವಣೆಗೆ ವಿರಳವಾಗಿ ಯಾದರೂ ಕೆಲವು ಉದಾಹರಣೆಗಳು ಸಿಗುವುದರಿಂದ ಆಗಲೇ ಇದು ಪ್ರಾರಂಭವಾಗಿರಬೇಕು. ಅದಱ ಎಂಬುದಕ್ಕೆ ಬದಲಾಗಿ ಅದರ ಎಂಬ ಹೊಸರೂಪ ಸಿಗುತ್ತದೆ. ಪದಾದಿಯಲ್ಲಿ ಬರುತ್ತಿದ್ದ ವ ಮತ್ತು ಪ ಕಾರವು ಬ ಕಾರ ಮತ್ತು ಹ ಕಾರವಾಗಿ ಬದಲಾಯಿತು. ವಯಲ್, ವೆಟ್ಟ, ಪೊಲ, ಪತ್ತು ಮುಂತಾದ ಪದಗಳು ಕ್ರಮವಾಗಿ ಬಯಲು, ಬೆಟ್ಟ, ಹೊಲ, ಹತ್ತು ಎಂದು ಬದಲಾದವು. ಸಂದಾನ್, ಕಾಣ್ಬದೆ, ದೇಗುಲಮಾನ್ ಮುಂತಾದ ಪದಗಳಲ್ಲಿನ ದೀರ್ಘಪ್ರತ್ಯಯಗಳು ಮುಂದೆ ಸಂದನ್, ಕಾಣದೆ, ದೇಗುಲಮನ್ ಎಂದು ಹ್ರಸ್ವವಾದವು. ಸಪ್ತಮೀ ವಿಭಕ್ತಿ ಪ್ರತ್ಯಯವಾದ 'ಉಳ್' 'ಒಳ್' ಆಗಿದೆ. ಸಮುಚ್ಚಯ ಸೂಚಕ ಪ್ರತ್ಯಯಗಳಾದ ಊಂ, ಊ ಗಳು ಉಂ, ಉ ಗಳಾಗಿವೆ. ದೇವರಿಙೆ, ಸಲಿಪಙೆ ಎಂಬಲ್ಲಿದ್ದ ಅನುನಾಸಿಕಗಳು ಹೋಗಿ ದೇವರಿಗೆ, ಸಲಿಪಗೆ ಎಂದಾದವು. ಇನ್ನೊಂದು ಪ್ರಮುಖ ಬದಲಾವಣೆಯೆಂದರೆ ಎಱೆ, ಎಳಿ, ತೊರು, ಪೊಗು ಎಂಬ ಪದಗಳಲ್ಲಿನ 'ಎ' ಮತ್ತು 'ಒ' ಸ್ವರಗಳಿಗೆ ಬದಲಾಗಿ ಇಱೆ, ಇಳಿ, ತುರು, ಪುಗು, ಎಂದು ಬದಲಾದವು. ಇವು ಮತ್ತೆ ಪ್ರಾರಂಭದ 'ಎ' ಮತ್ತು 'ಒ'ಗಳಾಗಿ ಬದಲಾದವು.

ಹಳಗನ್ನಡದ ಕಾಲದಲ್ಲಾದ ಈ ಧ್ವನಿವ್ಯತ್ಯಾಸಗಳು ಕನ್ನಡದ ಶಾಸನಗಳಲ್ಲಿ ಕಂಡುಬರುವುದಲ್ಲದೇ ಅನಂತರ ಹುಟ್ಟಿಕೊಂಡ ಕನ್ನಡದ ವ್ಯಾಕರಣ ಗ್ರಂಥಗಳಿಂದಲೂ ಸ್ಪಷ್ಟವಾಗುತ್ತವೆ. ಹಳಗನ್ನಡ ನಡುಗನ್ನಡವಾಗಿ ತಿರುಗುವುದಕ್ಕೆ ಮುಂಚೆ, ಅಂದರೆ 12ನೇಯ ಶತಮಾನದವರೆಗೆ ಕನ್ನಡದಲ್ಲಿ ಒಂದಾದರೂ ವ್ಯಾಕರಣಗ್ರಂಥ ರಚನೆಯಾದಂತೆ ತಿಳಿದುಬಂದಿಲ್ಲ. 12ನೇ ಶತಮಾನದಲ್ಲಿ ಕವಿ, ವೈಯ್ಯಾಕರಣಿ, ಛಂದಶ್ಶಾಸ್ತ್ರಜ್ಞ ಎಲ್ಲವೂ ಆಗಿದ್ದ ನಾಗವರ್ಮ ಮೊದಲ ಬಾರಿಗೆ ತನ್ನ ಕಾವ್ಯಾವಲೋಕನ ಗ್ರಂಥದ ಶಬ್ದಸ್ಮೃತಿ ಎಂಬ ಅಧ್ಯಾಯದಲ್ಲಿ ಹಾಗೂ ಕರ್ಣಾಟಕ ಭಾಷಾಭೂಷಣ ಎಂಬ ಇನ್ನೊಂದು ಕೃತಿಯಲ್ಲಿ ಹಳಗನ್ನಡದ ವ್ಯಾಕರಣವನ್ನು ನಿರೂಪಿಸಿದ್ದಾನೆ. ಅವನ ನಂತರ ಒಂದು ಶತಮಾನದ ತರುವಾಯ ಕೇಶೀರಾಜನೆಂಬ ವೈಯ್ಯಾಕರಣಿ ಸೂತ್ರವೃತ್ತಿ ರೀತಿಯಲ್ಲಿ ಶಬ್ದಮಣಿದರ್ಪಣ ಎಂಬ ವ್ಯಾಕರಣ ಗ್ರಂಥವನ್ನು ರಚಿಸಿದ. ಇದಾದಮೇಲೆ ಕ್ರಿ.ಶ. 1604ರಲ್ಲಿ ಭಟ್ಟಾಕಳಂಕನೆಂಬವನಿಂದ ಪಾಣಿನಿಯ ಸಂಸ್ಕೃತ ವ್ಯಾಕರಣದ ಮಾದರಿಯಲ್ಲಿ ಸಂಸ್ಕೃತದಲ್ಲಿ ಶಬ್ದಾನುಶಾಸನ ಎಂಬ ಕನ್ನಡ ವ್ಯಾಕರಣದ ರಚನೆಯಾಯಿತು. ಇವೆಲ್ಲವೂ ಹಳೆಗನ್ನಡವನ್ನು ಕುರಿತ ವ್ಯಾಕರಣ ಗ್ರಂಥಗಳು. ಇವುಗಳಲ್ಲಿ ಹಳಗನ್ನಡದ ಸ್ವರೂಪ ಹಾಗೂ ಸಮಕಾಲೀನ ಭಾಷೆಯಲ್ಲಾಗುತ್ತಿದ್ದ ಪರಿವರ್ತನೆಗಳನ್ನು ತಿಳಿಯುವ ದೃಷ್ಟಿಯಿಂದ ಶಬ್ದಮಣಿದರ್ಪಣವು ಬಹಳ ಮುಖ್ಯವಾದ ಕೃತಿ. ಕೇವಲ ಕನ್ನಡದಲ್ಲಿ ಆದ ಒಳವ್ಯತ್ಯಾಸ ಮಾತ್ರವಲ್ಲ ಸಂಸ್ಕೃತ ಪ್ರಾಕೃತಗಳು ಕನ್ನಡದ ಮೇಲೆ ಬೀರಿರುವ ಪ್ರಭಾವವನ್ನು ತಿಳಿಯುವ ದೃಷ್ಟಿಯಿಂದಲೂ ಕೇಶಿರಾಜನ ಕೃತಿ ಪ್ರಮುಖವಾಗುತ್ತದೆ.

ಒಂದು ಭಾಷೆಯ ಆಡುನುಡಿಯಲ್ಲಿ ಅನೇಕ ವ್ಯತ್ಯಾಸಗಳಾದರೂ ಬರಹದಲ್ಲಿ, ಅದರಲ್ಲಿಯೂ ಕಾವ್ಯಗಳಲ್ಲಿ, ಹಿಂದಿನ ರೂಪ

ಶತಮಾನಗಳವರೆಗೆ ಹಾಗೆಯೇ ಉಳಿದುಕೊಂಡು ಬರಬಹುದು. ಕನ್ನಡದ ವಿಷಯದಲ್ಲಿಯೂ ಹೀಗೆಯೇ ಆಯಿತು. ಈ ಹಿಂದೆ ತಿಳಿಸಿದ ಧ್ವನಿವ್ಯತ್ಯಾಸಗಳು ಹತ್ತನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಬಹುಮಟ್ಟಿಗೆ ಸಂಪೂರ್ಣವಾಗಿ ನಡೆದುಹೋದರೂ ಕಾವ್ಯಗಳಲ್ಲಿ ಕವಿಗಳು ಹಿಂದೆ ಇದ್ದ ಧ್ವನಿಗಳನ್ನೇ ಬಹುಮಟ್ಟಿಗೆ ಉಳಿಸಿಕೊಂಡು ಬಂದರು. ಇವುಗಳನ್ನೆಲ್ಲ ಗಮನಿಸಿದ್ದ ಕೇಶಿರಾಜ ಅನುಸ್ವಾರ, ಱ (ಶಕಟ ರೇಫ), ೞ ಇತ್ಯಾದಿಗಳು ಎಲ್ಲೆಲ್ಲಿ ಕಾಣಿಸಿಕೊಳ್ಳುತ್ತವೆಯೆಂದು ವಿಸ್ತಾರವಾಗಿ ಹೇಳಿ ಅವುಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದಾನೆ. ಬೆರಲ್, ಕೊರಲ್ ಮುಂತಾದ ಶಬ್ದಗಳಲ್ಲಿ ಆಗಿನ ಕಾಲದಲ್ಲಿ ಳ ಕಾರವನ್ನು ಬಳಸುವ ಪ್ರವೃತ್ತಿ ತಲೆದೋರಿದ್ದು (ಬೆರಳ್, ಕೊರಳ್) ಅದು ಸಲ್ಲದೆಂದು ಹೇಳಿದ್ದಾನೆ. ಬಾವಿ, ಮಯಣ ಮುಂತಾದ ಶಬ್ದಗಳಲ್ಲಿಯ ವ, ಯ ಕಾರಗಳು ವಯಲ್, ಸಾಯಲ್ ಮುಂತಾದವುಗಳಲ್ಲಿ ಕಾಣಿಸಿಕೊಳ್ಳುವ ವ, ಯಗಳಂತಿರದೆ ಅವಕ್ಕೆ ನಾಸಿಕೋಚ್ಚಾರಣೆ ಇತ್ತೆಂದು ಹೇಳಿದ್ದಾನೆ. ಕೇಶಿರಾಜನಿಗಿಂತ ಸಾಕಷ್ಟು ಹಿಂದೆಯೇ, ಪೂರ್ವದ ಹಳಗನ್ನಡದ ಸ್ಥಿತಿ ಕಣ್ಮರೆಯಾಗುತ್ತಿದ್ದಂತೆಯೇ ಆದ ಇನ್ನೊಂದು ಗಮನಾರ್ಹ ವ್ಯತ್ಯಾಸವೆಂದರೆ ಆ ವರೆಗೆ ಕಂಡು ಬರುತ್ತಿದ್ದ ವ್ಯಂಜನಾಂತ ಪದಗಳು ಕೊನೆಯಲ್ಲಿ ಸ್ವರವನ್ನು, ವಿಶೇಷವಾಗಿ 'ಉ' ಕಾರವನ್ನು ಸೇರಿಸಿಕೊಂಡು ಕಣ್—ಕಣ್ಣು, ಮೀನ್—ಮೀನು, ಏಳ್—ಏಳು, ಕಾಲ್—ಕಾಲು ಎಂದಿತ್ಯಾದಿಯಾಗಿ ಬದಲಾದವು. ವ್ಯಾಕರಣಕ್ಕೆ ಸಂಬಂಧಿಸಿದಂತೆ ಹೆಸರಿಸಬೇಕಾದ ಒಂದು ಪರಿವರ್ತನೆಯೂ ಇದೆ. ಅದು ಉತ್ತಮ ಪುರುಷ ಬಹುವಚನವನ್ನು ಹೇಳಲು ನಾವು್ ಮತ್ತು ಅಮ್ ಎಂಬ ಎರಡು ಪ್ರತ್ಯೇಕ ರೂಪಗಳಿದ್ದವೆಂಬುದು. ಇವೆರಡೂ ಬೇರೆ ಬೇರೆ ಅರ್ಥವನ್ನು ಹೇಳುತ್ತಿದ್ದವು. ಮೊದಲನೇಯದು ಹೇಳುಗನು ಕೇಳುಗನನ್ನೂ ಒಳಗೊಂಡಂತೆ ಬಳಸುವ ಬಹುವಚನ (ಸಮಾವೇಶಕ) ರೂಪ; ಎರಡನೇಯದು ಹೇಳುಗನು ಕೇಳುಗನನ್ನು ಅಂದರೆ ಯಾರನ್ನು ಉದ್ದೇಶಿಸಿ ಮಾತನಾಡುತ್ತಿದ್ದಾನೆಯೋ ಅವನನ್ನುಳಿದು ಇತರರನ್ನು ಮಾತ್ರ ಒಳಗೊಳ್ಳುವ (ಅಸಮಾವೇಶಕ) ರೂಪ. ಈ ಭೇದವನ್ನು ಹೇಳುವ ವ್ಯವಸ್ಥೆ ಮೂಲ ದ್ರಾವಿಡದಲ್ಲಿಯೇ ಇದ್ದಿತ್ತು. ತೆಲುಗಿನಲ್ಲಿ ಇಂದಿಗೂ ಈ ಅರ್ಥದಲ್ಲಿ ಮನಮು, ಮೇಮು ಎಂಬ ಶಬ್ದಗಳ ಬಳಕೆಯಿದೆ. ಕನ್ನಡದ ಒಂದು ಪ್ರಭೇದವಾದ ಹವ್ಯಕ ಕನ್ನಡದಲ್ಲಿ ಮಾತ್ರ ಈ ಅರ್ಥಭೇದವನ್ನು ನಾವು, ಎಂಗೊ ಎಂಬ ಪದಗಳ ಮೂಲಕ ಸೂಚಿತವಾಗುತ್ತದೆ. ಕನ್ನಡದಲ್ಲಿ ಮಾತ್ರ ಅದು ಪೂರ್ವ ಕನ್ನಡ ಕಾಲದಲ್ಲೇ ಮರೆಯಾಯಿತು.

ಇಲ್ಲಿಯವರೆಗೆ ನೋಡಿದಂತೆ ಪೂರ್ವದ ಹಳಗನ್ನಡವು ಹಳಗನ್ನಡವಾಗಿ ಆನಂತರ ನಡುಗನ್ನಡಕ್ಕೆ ತಿರುಗಿದಂತೆ ಆದ ಅನೇಕ ಪರಿವರ್ತನೆಗಳಿಗೆ ಕಾರಣ ಕೆಲಮಟ್ಟಿಗೆ ಆಂತರಿಕವೇ ಆಗಿದ್ದರೆ ಇನ್ನು ಕೆಲವುಗಳಿಗೆ ಸಂಸ್ಕೃತ ಪ್ರಾಕೃತದಂತಹ ಭಾಷೆಗಳ ಪ್ರಭಾವವೂ ಕಾರಣವಾಗಿದೆ. ಕನ್ನಡದ ಮೇಲೆ ಈ ಭಾಷೆಗಳ ಪ್ರಭಾವವಾಗಿರುವುದು ಆಶ್ಚರ್ಯದ ವಿಷಯವೇನೂ ಅಲ್ಲ. ಧರ್ಮ, ಶಾಸ್ತ್ರ, ಪುರಾಣ, ಕಾವ್ಯ—ಎಲ್ಲದರಲ್ಲಿಯೂ ಮೇಲ್ಮೆಯನ್ನು ಹೊಂದಿದ್ದ ಆರ್ಯರು ದ್ರಾವಿಡರಿಗಿಂತ ತಾವು ಮೇಲೆನಿಸಿಕೊಂಡರು. ಕರ್ನಾಟಕದ ಇತಿಹಾಸದ ಪ್ರಾರಂಭದಿಂದಲೂ ರಾಜರು ಸಂಸ್ಕೃತ-ಪ್ರಾಕೃತಗಳನ್ನು ಗೌರವಿಸಿದರು. ಕ್ರಿಸ್ತಶಕದ ಮೊದಲ ಶತಮಾನಗಳಲ್ಲಿ ಆಳಿದ ಶಾತವಾಹನರು ಜೈನ, ಬೌದ್ಧ, ವೈದಿಕ ಧರ್ಮಗಳಿಗೆ ಪ್ರೋತ್ಸಾಹ ನೀಡಿದರು. ಇವರ ಕಾಲದಲ್ಲಿ ಬೆಳಕಿಗೆ ಬಂದಿರುವ ಎಲ್ಲಾ ಶಾಸನಗಳೂ ಪ್ರಾಕೃತವೇ ರಾಜ್ಯದ ಅಧಿಕೃತ ಭಾಷೆಯಾಗಿದ್ದಂತೆ ತಿಳಿಸುತ್ತವೆ. ರಾಜರು ಮತ್ತು ಕವಿಗಳು ಸಂಸ್ಕೃತ ಮತ್ತು ಪ್ರಾಕೃತದಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಹಾಲನು ಸಂಕಲಿಸಿದ ಗಾಥಾಸಪ್ತಶತಿ ಎಂಬ ಕಾವ್ಯ ಅನೇಕ ಪ್ರಾಕೃತಗ್ರಂಥಗಳಿಂದಾಯ್ದ ಪದ್ಯಗಳ ಸಂಗ್ರಹ. ಸಂಸ್ಕೃತದಲ್ಲಿ ಕಾತಂತ್ರ ವ್ಯಾಕರಣವನ್ನು ಬರೆದ ಶರ್ವವರ್ಮ ಎಂಬವನು ಶಾತವಾಹನ ದೊರೆಯೊಬ್ಬನ ಆಶ್ರಿತ. ನಾಗಾರ್ಜುನ ಎಂಬ ಸಂಸ್ಕೃತ ಕವಿಯೂ ಶಾತವಾಹನರ ಆಶ್ರಯ ಪಡೆದವನೇ. ಶಾತವಾಹನರ ನಂತರ ಕದಂಬರ ಕಾಲದಲ್ಲಿಯೂ ಪ್ರಾಕೃತಕ್ಕೆ ಆಡಳಿತ ಭಾಷೆಯ ಸ್ಥಾನಮಾನ ದೊರೆತಿತ್ತು. ರಾಷ್ಟ್ರಕೂಟರ ಕಾಲದವರೆಗೆ ಇದೇ ಸ್ಥಿತಿ ಮುಂದುವರೆದಿತ್ತು. ರಾಷ್ಟ್ರಕೂಟರ ಕಾಲಕ್ಕೆ ಕನ್ನಡಕ್ಕೆ ಹೆಚ್ಚಿನ ಮನ್ನಣೆ ಪ್ರೋತ್ಸಾಹ ದೊರೆತಂತೆ ಕಂಡುಬರುತ್ತದೆ. ಆದರೂ ಸಂಸ್ಕೃತ-ಪ್ರಾಕೃತಗಳಿಗೆ ಮನ್ನಣೆ ಇದ್ದೇ ಇತ್ತು. ಕನ್ನಡದಲ್ಲಿ ಮೊದಮೊದಲು ಕೃತಿರಚನೆ ಮಾಡಿದ ಪ್ರಸಿದ್ಧ ಕವಿಗಳೆಲ್ಲರೂ ಈ ಎರಡೂ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಇವುಗಳಿಂದಾಗಿ ಭಾಷೆ, ಆಚಾರ-ವಿಚಾರಗಳಲ್ಲಿ ಸಂಸ್ಕೃತ ಹಾಗೂ ಪ್ರಾಕೃತಗಳ ಪ್ರಭಾವ ಆಳವಾಗಿ ವ್ಯಾಪಿಸಿತು. ಶಬ್ದಕೋಶದ ಮಟ್ಟಿಗೆ ಈ ಮಾತು ಹೆಚ್ಚು ನಿಜ. ಕನ್ನಡದ ಮೊದಲನೇಯ ಲೇಖನವಾದ ಹಲ್ಮಿಡಿ ಶಾಸನದಲ್ಲಿಯ ಪ್ರಾರ್ಥನಾ ಪದ್ಯವಿರುವುದು ಸಂಸ್ಕೃತದಲ್ಲಿ. ಕೆಲವೇ ಕೆಲವು ಕನ್ನಡ ಪದಗಳನ್ನು ಬಿಟ್ಟರೆ ಶಾಸನದ ಹೆಚ್ಚಿನ ಭಾಗ ಸಂಸ್ಕೃತವೇ. ಇಲ್ಲಿ ಶಬ್ದಗಳಲ್ಲಿ ಮಾತ್ರವಲ್ಲ ವಾಕ್ಯ ರಚನೆಯ ಮೇಲೂ ಸಂಸ್ಕೃತದ ಪ್ರಭಾವ ಸ್ಪಷ್ಟವಾಗಿದೆ. ಈ ಶಾಸನದಲ್ಲಿ "(ದಾನ) ಪಶುಪತಿಯೆಂದು ಪೊಗಳೆಪ್ಪೊಟ್ಟನ" ಎಂಬ ಮಾತಿದ್ದು, ಅದರಲ್ಲಿಯ ಪೊಗಳೆಪ್ಪೊಟ್ಟನ (ಹೊಗಳಲ್ಪಟ್ಟವನ) ಎಂಬ ಕರ್ಮಣೀ ಪ್ರಯೋಗವಿರುವುದನ್ನು ಗಮನಿಸಬೇಕು. ಇಂದಿಗೂ ದ್ರಾವಿಡದ ಯಾವ ಭಾಷೆಯಲ್ಲಿಯೂ ಆಡುನುಡಿಯಲ್ಲಿ ಕರ್ಮಣೀ ಪ್ರಯೋಗವಿಲ್ಲ. ಪ್ರಾರ್ಥನಾ ಪದ್ಯಗಳು ಮತ್ತು ಶಾಪಾಶಯ ಪದ್ಯಗಳು ಸಾಮಾನ್ಯವಾಗಿ ಸಂಸ್ಕೃತದಲ್ಲಿರುತ್ತವೆ. ಒಂದೇ ವಾಕ್ಯದಲ್ಲಿ ಸಂಸ್ಕೃತ ರಚನೆಗಳೂ ಕನ್ನಡ ರಚನೆಗಳೂ ಒಂದರ ಪಕ್ಕದಲ್ಲಿ ಒಂದು ಬರುತ್ತವೆ. ಮಲೆಯಾಳಂ ಭಾಷೆಯಲ್ಲಿ ಇಂತಹ ಸಂಸ್ಕೃತಯುಕ್ತವಾದ ಮಿಶ್ರಶೈಲಿಯನ್ನು 'ಮಣಿಪ್ರವಾಳ' ಎಂದು ಕರೆಯಲಾಗಿದೆ. ಕನ್ನಡದಲ್ಲಿಯೂ ಈ ಹೆಸರು ಅಷ್ಟೊಂದು

ಪ್ರಚುರವಾಗಿರದಿದ್ದರೂ ಬಳಕೆಯಲ್ಲಿತ್ತೆಂಬುದು ತಿಳಿದುಬರುತ್ತದೆ. ಸುಮಾರು 17ನೇಯ ಶತಮಾನದಲ್ಲಿದ್ದ ಶ್ರೀರಂಗಪಟ್ಟಣದ ಸುಬ್ಬಾಶಾಸ್ತ್ರಿ ಎಂಬ ಲಿಪಿಕಾರನಿಗೆ ಮಣಿಪ್ರವಾಳ ಸುಬ್ಬಾಶಾಸ್ತ್ರಿ ಎಂಬ ಬಿರುದಿದ್ದಂತೆ. ವೃತ್ತರತ್ನಾಕರವೆಂಬ ಛಂದಶ್ಶಾಸ್ತ್ರ ಗ್ರಂಥಕ್ಕೆ ಬರೆದ ಧೀಶೋಧಿನೀ ಎಂಬ ವ್ಯಾಖ್ಯಾನದ ಹಸ್ತ ಪ್ರತಿಯೊಂದರಿಂದ ಇದು ತಿಳಿದುಬರುತ್ತದೆ. ಇಂತಹ ಸಂಸ್ಕೃತಮಿಶ್ರ ಶೈಲಿಗೆ ಶಾಸನಗಳಿಂದ ಕೆಲವು ಭಾಗಗಳನ್ನು ನಿದರ್ಶನಾರ್ಥವಾಗಿ ಇಲ್ಲಿ ಉದ್ಧರಿಸಬಹುದು:

"...ತಸ್ಯ ಸೀಮಾಂತರೇ ಪೂರ್ವ ನೋಡಿ ಕೊಲತೂರ
ದ್ವಿಸನ್ಧಿ ಕೊಲದಗುಂಡಿಯೋ ತೆಂಕ ನೋಡಿ ಕಿಱಿರ ತಿಂಣ್ಣೆ
ಪೆಂಡಿಗಗಾಲನಿ ಎರೆಕಟ್ಟಿ ಸಞ್ಞಾರಿಭೂಮಿನ್ದ..."

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖವರುಷ
೧೭೪೮ನೇ ಸಂದ ವರ್ತ್ತಮಾನಕ್ಕೆ ಸಲುವ ವ್ಯಯನಾಮ
ಸಂವತ್ಸರದ ಫಾಲ್ಗುಣ ಬ. ೫ ಭಾನುವಾರದಲ್ಲು
ಕಾಸ್ಯಪಗೋತ್ರೇ ಅಹನೀಯ ಸೂತ್ರೇ ವೃಷಭಪ್ರವರೇ
ಪ್ರಥಮಾನುಯೋಗ ಶಾಖಾಯಾಂ ಶ್ರೀ ಚಾವುಂಡರಾಜ
ವಂಶಸ್ಥರಾದ ಬಿಳಿಕೆರೆ ಅನಂತರಾಜೈ ಅರಸಿನವರ
ಪ್ರಪೌತ್ರ......"

ಈ ರೀತಿಯ ಬರಹಗಳು ಸಾಕಷ್ಟು ಸಂಖ್ಯೆಯಲ್ಲಿ ಶಾಸನ ಹಾಗೂ ಬರವಣಿಗೆಯಲ್ಲಿ ದೊರೆಯುತ್ತವೆಯಾದರೂ ಆಡುನುಡಿ ಯಲ್ಲಿಲ್ಲ. ಇದಲ್ಲದೇ ಶಬ್ದಕೋಶಕ್ಕೆ ಸಂಸ್ಕೃತದ ಅನೇಕ ಶಬ್ದ ಗಳು, ಸಮಾಸ ಪದಗಳು ತೀರ ಮೊದಲಿನಿಂದಲೂ ಸೇರಿವೆ. ಪೂಜೆ, ಸೀಮೆ, ಪೂರ್ವ, ಅಮಾಸೆ, ಕುಲ, ಗೋತ್ರ, ಗಾಮುಂಡ, ಇತ್ಯಾದಿ ಲೆಕ್ಕವಿಲ್ಲದಷ್ಟು ಸಂಸ್ಕೃತಶಬ್ದಗಳು ಪ್ರಾಕೃತದ ಮೂಲಕವಾಗಿಯೋ ನೇರವಾಗಿಯೋ ಅಥವಾ ರೂಪ ವ್ಯತ್ಯಾಸವಾಗಿಯೋ ಕನ್ನಡವನ್ನು ಸೇರಿವೆ. ವ್ಯಕ್ತಿಯ ಹೆಸರು, ಊರ ಹೆಸರುಗಳು ಸಂಸ್ಕೃತದ ಹೆಸರುಗಳಾಗಿ ಜನ್ಮತಾಳಿದವು. ಇಲ್ಲವೇ ಇರುವ ದೇಶೀಯ ಹೆಸರುಗಳು ಸಂಸ್ಕೃತೀಕರಣಗೊಂಡವು. ಬಸಂತಕುಮಾರ, ಗುಣಕೀರ್ತಿ, ಕುಂದಾಚಾರ್ಯ, ರಣವಿಕ್ರಮ, ಅಮೋಘವರ್ಷ, ಕಾಮೇಶ್ವರ, ಶ್ರೀಪುರುಷ, ಇತ್ಯಾದಿ ವ್ಯಕ್ತಿ ನಾಮಗಳು, ಹೆಸರುಗಳು ಪೂರ್ವದ ಹಳಗನ್ನಡದ ಕಾಲದಲ್ಲಿಯೇ ದೊರೆಯುತ್ತವೆ. ಈ ಸಂಸ್ಕೃತದ ಶಬ್ದಗಳು, ಸಮಾಸಗಳು ಸಾಮಾನ್ಯರ ಕನ್ನಡವನ್ನೂ ಪ್ರವೇಶಿಸಿ ಅನೇಕ ಪರಿವರ್ತನೆಗಳಿಗೆ ಕಾರಣವಾದವು. ಅನೇಕ ಧ್ವನಿಗಳು ಕನ್ನಡವನ್ನು ಹೊಕ್ಕವು. ಈ ಹಿಂದೆ ಹೇಳಿದ ಹಕಾರ ಅವುಗಳಲ್ಲೊಂದು ಶ, ಷ, ವಿಸರ್ಗ ಗಳು, ಮಹಾಪ್ರಾಣಾಕ್ಷರಗಳು ಇವೆಲ್ಲ ಸಂಸ್ಕೃತದ ಪ್ರಭಾವ ದಿಂದಾಗಿ ಬಂದವುಗಳು. ದ್ರಾವಿಡಭಾಷೆಗಳಲ್ಲಿ ವಿಜಾತೀಯ ವ್ಯಂಜನ ಸಂಯುಕ್ತಗಳುಳ್ಳ ಶಬ್ದಗಳು ಇರಲಿಲ್ಲ. ಕಷ್ಟ, ಅಗ್ನಿ, ಗೋತ್ರ, ಪೂರ್ವ ಮುಂತಾದ ಶಬ್ದಗಳ ಉಚ್ಚಾರಣೆಯು ರೂಢಿಯೇ ಸ್ವಲ್ಪಮಟ್ಟಿಗೆ ಬದಲಾದಂತಾಯಿತು. ಆದರೂ ಸಂಪೂರ್ಣವಾಗಿ ಹಾಗೂ ಎಲ್ಲರಲ್ಲಿಯೂ ಒಂದೇ ರೀತಿಯಾಗಿ ಬದಲಾಗುವುದನ್ನು ನಿರೀಕ್ಷಿಸುವಂತಿಲ್ಲ. ಆದ್ದರಿಂದ ಮುಕ್ತಿ, ಪ್ರೀತಿ, ಮುಂತಾದ ಅನೇಕ ಶಬ್ದಗಳು ಒಂದೆಡೆ ಕೆಲವರಿಂದ ಮೂಲರೂಪದಲ್ಲಿಯೂ ಇನ್ನೊಂದೆಡೆ ಇನ್ನು ಕೆಲವರಿಂದ ಮುಕುತಿ, ಪಿರೀತಿ, ಮೊದಲಾದ ವಿಕೃತರೂಪದಲ್ಲಿಯೂ ಸ್ವೀಕೃತ ವಾದವು. ವ್ಯಾಕರಣಕ್ಕೆ ಸಂಬಂಧಿಸಿದಂತೆ ಜನಸಾಮಾನ್ಯರ ಆಡುಗನ್ನಡದ ಮೇಲೆ ಸಂಸ್ಕೃತದ ಪ್ರಭಾವ ಹೇಳಿಕೊಳ್ಳು ವಷ್ಟೇನೂ ಆಗಿರದಿದ್ದರೂ ಗ್ರಾಂಥಿಕ ಕನ್ನಡದಲ್ಲಿ ಇದರ ಪ್ರಭಾವ ಕೇಶಿರಾಜನಂತಹ ಕನ್ನಡ ವೈಯ್ಯಾಕರಣರನ್ನು ಇಕ್ಕಟ್ಟಿಗೆ ಸಿಲುಕಿ ಸಿತು. ಶಬ್ದಶಬ್ದಗಳು ಒತ್ತಟ್ಟಿಗೆ ಬಂದು ಸಂಧಿಯಾಗುವಾಗ ಕನ್ನಡ ಶಬ್ದಗಳಿಗೆ ಅನ್ವಯಿಸಿದಂತೆ ಒಂದು ನಿಯಮ ಹಾಗೂ ಸಂಸ್ಕೃತ ಶಬ್ದಗಳಿಗೇ ಇನ್ನೊಂದು ನಿಯಮವನ್ನು ಹೇಳ ಬೇಕಾಯಿತು. ಸಂಸ್ಕೃತ ಶಬ್ದಗಳಾದ ರವಿ, ಚಂದ್ರ, ಮಹಾಜನ, ಸಜ್ಜನ, ಸಿರಿ, ಸರಸ್ವತಿ, ಮೊದಲಾದವು ಮೂಲದಲ್ಲಿ ಯಾವುದೋ (ಪುಲ್ಲಿಂಗ, ಸ್ತ್ರೀಲಿಂಗ, ಅಥವಾ ನಪುಂಸಕಲಿಂಗ) ಒಂದೇ ಲಿಂಗಕ್ಕೆ ಸೇರಿದ್ದರೂ ಕನ್ನಡಕ್ಕೆ ಬಂದಾಗ ಸಂಸ್ಕೃತ ಹಾಗೂ ಕನ್ನಡಗಳ ಲಿಂಗ ವ್ಯವಸ್ಥೆಯಲ್ಲಿ ಹೊಂದಾಣಿಕೆಯಿಲ್ಲವಾದ್ದರಿಂದ ಅವು ಕನ್ನಡದಲ್ಲಿ ಎರಡೆರಡು ಲಿಂಗಗಳಲ್ಲಿ ಬಳಕೆಯಾಗಿ ದ್ವಿಲಿಂಗ ಗಳಾದವು. ಒಂದು ಕಡೆ 'ರವಿ ಮೂಡಿದಂ' ಎಂದೂ ಇನ್ನೊಂಡೆಗೆ 'ರವಿ ಮೂಡಿತು' ಎಂಬ ರೀತಿಯಲ್ಲಿ ಬಳಕೆಯಾಗತೊಡಗಿದ್ದರಿಂದ ಇಂತಹ ಶಬ್ದಗಳನ್ನು ಪುಲ್ಲಿಂಗ ನಪುಂಸಕವೆಂದೋ, ಸ್ತ್ರೀ ನಪುಂಸಕ ವೆಂದೋ ಕನ್ನಡದಲ್ಲಿ ಇಲ್ಲದ ರೀತಿಯಲ್ಲಿ ಹೊಸದಾಗಿ ವರ್ಗೀಕರಿಸ ಬೇಕಾಯಿತು.

ನಡುಗನ್ನಡದ ಅವಸ್ಥೆಯ ಪ್ರಾರಂಭದವರೆಗೆ ಸಂಸ್ಕೃತ-ಪ್ರಾಕೃತಗಳು ಮಾತ್ರ ವಿಶೇಷವಾಗಿ ಕನ್ನಡವನ್ನು ಪ್ರಭಾವಿ ಸುತ್ತಿದ್ದರೆ ಅನಂತರದ ಕಾಲದಲ್ಲಿ ಇತರ ದೇಶೀಯ ಹಾಗೂ ಅನ್ಯದೇಶೀಯ ಭಾಷೆಗಳು ಕನ್ನಡವನ್ನು ಪ್ರಭಾವಿಸತೊಡಗಿದವು. ಎಂಟನೇಯ ಶತಮಾನದಲ್ಲಿಯೇ ರಾಷ್ಟ್ರಕೂಟರಿಗೂ ಅರಬ್ ದೊರೆಗಳಿಗೂ ಸ್ನೇಹವಿದ್ದು ಇವರ ಮಧ್ಯೆ ವ್ಯಾಪಾರಗಳು ನಡೆಯುತ್ತಿದ್ದವು. ಮುಂದೆ ಕ್ರಿ.ಶ. 1193ರಲ್ಲಿ ಮಹಮ್ಮದ್ ಗೋರಿಯ ದಾಳಿ ಭಾರತದ ಮೇಲೆ ಆಯಿತು. ಅಲ್ಲಿಂದ 19ನೇಯ ಶತಮಾನದವರೆಗೂ ದಿಲ್ಲಿಯ ಸಿಂಹಾಸನ ಮುಸ್ಲಿಮರ ಕೈಯ್ಯಲ್ಲಿಯೇ ಇತ್ತು. ಮಲಿಕ್‌ಕಾಫರನು 1310ರಲ್ಲಿ ಹೊಯ್ಸಳರ ಮೇಲೆ ದಾಳಿ ಮಾಡಿ ಮೂರನೇಯ ವೀರಬಲ್ಲಾಳನನ್ನು ಸೋಲಿಸಿದ ಮೇಲೆ ಮುಸ್ಲಿಮರ ಸಂಪರ್ಕ ನೇರವಾಗಿಯೇ ಆಗ ತೊಡಗಿತು. ವಿಜಯನಗರ ಕಾಲದಲ್ಲೂ ಮುಸ್ಲಿಮರ ಸತತ

ದಾಳಿ ತಪ್ಪಲಿಲ್ಲ. ಈ ಮುಸ್ಲಿಂ ದೊರೆಗಳ ಕಾಲದಲ್ಲಿ ಪರ್ಶಿಯನ್ ಭಾಷೆ ಆಡಳಿತ ಭಾಷೆಯಾಗಿ ಹೆಚ್ಚಿನ ಸ್ಥಾನಮಾನ ಪಡೆಯಿತು. ಇವೆಲ್ಲವುಗಳ ಫಲವಾಗಿ ಕನ್ನಡಭಾಷೆಗೆ ಅನೇಕ ಪರ್ಶಿಯನ್ ಹಾಗೂ ಅರೇಬಿಕ್ ಶಬ್ದಗಳು, ವಿಶೇಷವಾಗಿ ಆಡಳಿತ, ನ್ಯಾಯ, ಸೈನ್ಯ, ವ್ಯವಸಾಯ, ಸಂಗೀತಕ್ಕೆ ಸಂಬಂಧಿಸಿದ ಶಬ್ದಗಳು ಸೇರಿದುವು. ಇವುಗಳಲ್ಲಿ ತಾಯಿತ, ತಸ್ತೀಕು, ಗೋರಿ, ದಫನ್, ಬಂದೂಕು, ಸಿಪಾಯಿ, ತೋಪು, ಕಂದಕ, ಜಿಲ್ಲೆ, ತಾಲೂಕು, ಜಾಗೀರು, ಖಜಾನೆ, ಫಿರ್ಯಾದೆ, ದಸ್ತಾವೇಜು, ತಬಲಾ, ಸಿತಾರ್, ವಸ್ತಾದ, ರೈತ, ಜಮೀನು, ಗುಲಾಬಿ, ಬಾಕಿ, ಮೇಜು, ಕಾಗದ, ಇತ್ಯಾದಿ ಇನ್ನಿತರ ಅನೇಕ ಶಬ್ದಗಳೂ ಸೇರಿವೆ. ಆದರೆ ಈ ಭಾಷೆಗಳಿಂದಾಗಿ ಕನ್ನಡದ ಶಬ್ದಕೋಶ ಬೆಳೆಯಿತೇ ಹೊರತು ಭಾಷೆಯ ರಚನೆಯ ಮೇಲೆ ಅಂತಹ ಪರಿಣಾಮವೇನೂ ಆಗಲಿಲ್ಲ. ಈ ಭಾಷೆಗಳು ಮಿಶ್ರಗೊಂಡ ಕನ್ನಡದ ಶೈಲಿಗೆ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು :

"ಭಾಗಾಯುತಕ್ಕೆ ಜಮೀನು ಅಳತೆಮಾಡೋದು.
ತೆಂಗಿನಮರ ಭಾಗಾಯಿತಿಗೆ ಮರಯೆಣಿಶಿ ಗ್ರಾಮ
ರಿವಾಜು ಪ್ರಕಾರ ಕೋಲು ಅಳತೆಯಿಂದ-ರಿವಾಜು
ಪ್ರಕಾರ ಗೇಣಿಕಾಣಿಶಿ ನಮೂದು ಮಾಡಬೇಕು.
ಹತ್ತುಕುಳ ಅಜಮಾಯಿಷೀ ಆದ ಹಾಂಗೆ ಕುಳವಾರ
ಚಿಠ್ಠೀನಿಶೀ ಮೇಲೆ ಅಪ್ಪಣೇಕೊಟ್ಟೆ ಪ್ರಕಾರ
ಯಿತ್ತಿಲ್ಲಾ ಮಾಡೋದು"

ಪರ್ಶಿಯನ್, ಅರೇಬಿಕ್ ಪದಗಳಂತೆಯೇ ವಿಜಯನಗರದ ಕಾಲದಲ್ಲಿ ಪೋರ್ತುಗೀಜರ ಸಂಪರ್ಕದಿಂದಾಗಿ ಕೆಲವು ಪೋರ್ತುಗೀಜ್ ಪದಗಳೂ ಕನ್ನಡಕ್ಕೆ ಸೇರಿದರೂ ಅವುಗಳ ಸಂಖ್ಯೆ ಅತ್ಯಲ್ಪ. ಕಾಡತೂಸು, ನಾತಾಳ, ಪಪ್ಪಾಯಿ, ಮೊದಲಾದವು ಹೀಗೆ ಬಂದ ಶಬ್ದಗಳು.

12ನೇಯ ಶತಮಾನದ ಸರಿಸುಮಾರಿಗೆ ಸಾಹಿತ್ಯಿಕ ಭಾಷೆಗೆ ಸಂಬಂಧಿಸಿದಂತೆ ಹಳಗನ್ನಡದ ಮುಂದುವರೆದ ರೂಪವೆಂದು ಹೇಳಲಾಗದ ಕ್ಷಿಪ್ರ ಬದಲಾವಣೆಯೊಂದು ವಚನಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಇದಕ್ಕಿಂತ ಹಳಗನ್ನಡಕ್ಕೆ ಹೆಚ್ಚು ಹತ್ತಿರವಾದ ಭಾಷೆ ವಚನಸಾಹಿತ್ಯದ ಯುಗ ಮುಗಿದ ನಂತರದಲ್ಲಿಯ ಕಾವ್ಯಗಳಲ್ಲಿ ಕಾಣಿಸಿಕೊಳ್ಳುತ್ತದೆ. ವಚನಗಳ ಭಾಷೆ ಆಗಿನ ಆಡುನುಡಿಗೆ ಹತ್ತಿರವಾಗಿದ್ದು, ಸರಳವಾಗಿರುವುದಕ್ಕೆ ಕಾರಣ ಈ ವಚನಗಳ ಕರ್ತೃಗಳು ಸಂಪ್ರದಾಯಶರಣತೆಯನ್ನು ವಿರೋಧಿಸಿದುದು. ಹಾಗೂ ಸಮಾಜದ ಬೇರೆಬೇರೆ ವರ್ಗಗಳಿಂದ ಬಂದ ಪಂಡಿತರಲ್ಲದ ಅನೇಕರು ವಚನಗಳ ಕರ್ತೃಗಳಾದುದು. ಈ ಕಾರಣಗಳಿಂದಾಗಿ ಸಂಸ್ಕೃತ ಕಾವ್ಯಗಳ ನೇರ ಪ್ರಭಾವದಿಂದ ಈ ವಚನಗಳು ದೂರ ಉಳಿದುವು. ಈ ವಚನಗಳು ಅತ್ತ ಗದ್ಯವೂ ಅಲ್ಲ, ಇತ್ತ ಪದ್ಯವೂ ಅಲ್ಲದ ರಚನೆಗಳಾಗಿ ಕಾವ್ಯಾಂಶವನ್ನೊಳಗೊಂಡ ಆ ಕಾಲದ ಭಾಷೆಯಲ್ಲಿವೆ.

ಕನ್ನಡದ ಶಾಸನಗಳ ಪಾಠದಲ್ಲಿ ಸಂಸ್ಕೃತದ ಶಬ್ದಗಳೂ ಸಮಾಸಗಳೂ ವಾಕ್ಯ ಭಾಗಗಳೂ ಸೇರಿರುವ ಸಂಗತಿ ಹಾಗೂ ಅನೇಕ ಶಾಸನಗಳು ಪೂರ್ಣ ಸಂಸ್ಕೃತದಲ್ಲಿಯೇ ಇವೆಯೆಂಬುದು ಈ ಹಿಂದೆಯೇ ನಿರೂಪಿತವಾಗಿದೆ. ಈ ಸ್ಥಿತಿ 19ನೇಯ ಶತಮಾನದವರೆಗೂ ಮುಂದುವರಿದಿತ್ತು. ಇದರಂತೆಯೇ ಕನ್ನಡದ ಬರಹಗಳ ಮಧ್ಯೆಮಧ್ಯೆ ತಮಿಳು ನುಡಿಗಟ್ಟುಗಳು ಸೇರಿ ಮಿಶ್ರವಾದ ಭಾಷೆ ಹಾಗೂ ಕೇವಲ ತಮಿಳಿನಲ್ಲಿಯೇ ಬರೆದ ಶಾಸನಗಳೂ ನಡುಗನ್ನಡದ ಕಾಲದಲ್ಲಿ, ವಿಶೇಷವಾಗಿ ಚೋಳರ ಮತ್ತು ಹೊಯ್ಸಳರ ಕಾಲದಲ್ಲಿ ದೊರೆಯುತ್ತವೆ. ಇಂತಹ ಮಿಶ್ರಶೈಲಿಯನ್ನು ಒಂದೆರಡು ನಿದರ್ಶನಗಳ ಮೂಲಕ ಪರಿಚಯಿಸಬಹುದು.

1. ಹೆಗ್ಗಡದೇವನಕೋಟೆ ತಾಲೂಕಿನ ಅಂಕನಾಥಪುರದಲ್ಲಿಯ ಒಂದು ಶಾಸನದ ಪಾಠ ಹೀಗಿದೆ :

"..........ಸೊಮ್ಮ
ವರದ ಅಸ್ದು ಶ್ರೀಮುಮ್ಮಡಿಗೊಣ್ಡಗಚ್ಗಿ ಗೊಣ್ಡ
ರಾಶೈೀನ್ದ್ರ ಚೋೞದೇವರ್ಕ್ಕಿಯಾಣ್ಡು ಇಪ್ಪತು
ಅಜಿಪ್ಪದು......"

2. ನಂಜನಗೂಡಿನ ಸುತ್ತೂರು ಗ್ರಾಮದಲ್ಲಿ ಶಾಸನ ಹೀಗಿದೆ :

"......ಶ್ರೀ ರಾಜೇನ್ದ್ರ ಚೋೞದೇವ(ರ್ಕ್ಕ)ಯಾಣ್ಡು
೩೧ ಆವದು ಸ್ವಸ್ತಿ...... ಒಡೆಯಾರ್
ಶ್ರೀರಾಜೇನ್ದ್ರ ಚೋೞದೇವಗುರುಕ್ಕಳ್ ಅರುಳಿಚ್ಚೆಯ್ಯುದ
ದಾವದು ಕೆಱಿಗೆ ಬಿತ್ತುವಟ್ಟಮುಂ ದೇವರ್ಗ್ಗೆ, ತಿರುವ
ಮುದಿಜ್ಗೆ ಬಿಟ್ಟ ಭೂಮಿಯುಮಂ ಕಲ್ವೆಟ್ಟಿಕೊಡುವುದಕ್ಕೆ
ತಿರುವಾಯಿಮೋೞಿ ಪಡಿಯಿನಾಲ್
ಒಡೆಯಾ(ರ್ಕ್ಕರ್ಮ) ಧಾರಾವರ್ಷಕಕ್ಕುಮಂ..."

ನಡುಗನ್ನಡದ ಕೊನೆಯ ಹಂತದಲ್ಲಿ ಕನ್ನಡಕ್ಕೆ ಇಂಗ್ಲೀಷಿನ ಸಂಪರ್ಕವಾದ ಮೇಲೆ (ಸು. 18ನೇ ಶತಮಾನದಿಂದ) ಕನ್ನಡ ಭಾಷೆಯ ಬದಲಾವಣೆಗೆ ಮತ್ತೆ ತೀವ್ರ ಚಾಲನೆ ದೊರೆಯಿತು. ಸಂಸ್ಕೃತ-ಪ್ರಾಕೃತ ಭಾಷೆಗಳ ನಂತರ ಕನ್ನಡವನ್ನು ತೀವ್ರವಾಗಿ

ಪ್ರಭಾವಿಸಿರುವ ಹಾಗೂ ಇಂದಿಗೂ ಪ್ರಭಾವಿಸುತ್ತಿರುವ ಭಾಷೆ ಇಂಗ್ಲೀಷ್. ಹಿಂದೆ ಬದಲಾಗಿದ್ದ ಕುಡು-ಕೊಡು, ಕಿಡು-ಕೆಡು ಎಂಬ ಶಬ್ದಗಳಲ್ಲಿರುವ ಉ, ಒ, ಇ ಸ್ವರಗಳಲ್ಲಿ ವ್ಯತ್ಯಾಸವಾಗಿ ಹೊಸಗನ್ನಡದ ವ್ಯಾಕರಣದಲ್ಲೂ ಬದಲಾವಣೆಗಳಾದವು. ಪ್ರಾರಂಭದಲ್ಲಿ ಉನ್ನತ ಶಿಕ್ಷಣಗಳಲ್ಲಿ ಇಂಗ್ಲೀಷ್ ಮಾಧ್ಯಮದ ವಿದ್ಯಾಭ್ಯಾಸ ಮತ್ತು ಇತ್ತೀಚೆಗೆ ಪ್ರಾಥಮಿಕ ಹಂತದಲ್ಲೂ ಸಮಾಜದ ಒಂದು ವರ್ಗದ ಶಿಕ್ಷಣ ಮಾಧ್ಯಮವಾಗಿದೆ. ಇದನ್ನು ರಾಜ್ಯದ ಅಧಿಕೃತ ಭಾಷೆಯಾಗಿ ಪರಿಗಣಿಸಲಾಗಿತ್ತು. ಅನೇಕ ಕ್ಷೇತ್ರಗಳಲ್ಲಿ ಹೊಸತನ ಪಡೆಯಲು ಇಂಗ್ಲೀಷ್ ದಾರಿ ಮಾಡಿ ಕೊಟ್ಟಿತು. ವೈದ್ಯಕೀಯ, ತಾಂತ್ರಿಕ ಹಾಗೂ ಇನ್ನಿತರ ಅನೇಕ ವಿಜ್ಞಾನ ಶಾಖೆಗಳಲ್ಲಿಯ ಆವಿಷ್ಕಾರಗಳ ಪರಿಚಯವಾದದ್ದು ಇಂಗ್ಲೀಷ್ ಶಿಕ್ಷಣದ ಮೂಲಕ. ಇದರಿಂದಾಗಿ ಆಯಾ ಕ್ಷೇತ್ರಗಳಿಗೆ ಸಂಬಂಧಿಸಿದ ಪಾರಿಭಾಷಿಕ ಪದಗಳು ಹಾಗೂ ಇತರೇ ಹೊಸ ವಸ್ತುಗಳನ್ನು ಹೆಸರಿಸುವ ವಿಚಾರಗಳನ್ನು ಹೇಳುವ ಪದಗಳು ಇಂಗ್ಲೀಷಿನಿಂದ ಕನ್ನಡಕ್ಕೆ ಸ್ವಲ್ಪ ಬದಲಾವಣೆಯೊಂದಿಗೆ ಅಥವಾ ನೇರವಾಗಿ ಆಮದಾದವು. ವಾಕ್ಯರಚನೆಯಲ್ಲೂ ಬದಲಾವಣೆಯಾಗಿದೆ. ಹಿಂದೆ 'ರಾಮನೂ, ಕೃಷ್ಣನೂ' ಎಂದು ಬರೆಯುತ್ತಿದ್ದ ಕಡೆ ಇಂಗ್ಲೀಷಿನ ಪ್ರಭಾವದಿಂದಾಗಿ 'ರಾಮ ಮತ್ತು ಕೃಷ್ಣ' ಎಂದೇ ಬರೆಯುತ್ತಿದ್ದಾರೆ. ರೇಡಿಯೋ, ಫ್ಯಾನು, ಕಾಲೇಜು, ಇತ್ಯಾದಿಯಾಗಿ ನೇರ ಸ್ವೀಕರಣದಿಂದಾಗಿ ಕೆಲವು ಬಂದರೆ, ಟಾರೆಣ್ಣೆ, ಅಣುಬಾಂಬ್, ಇತ್ಯಾದಿ ಅರ್ಧ ಮರ್ಧ ಇಂಗ್ಲೀಷ್ ರೂಪಗಳೊಡನೆ ಕೆಲವು ಬಂದಿವೆ; ಶೀತಲ ಸಮರ, ವಿಷವರ್ತುಲ, ಇತ್ಯಾದಿಯಾಗಿ ಭಾಷಾಂತರ ರೂಪದಲ್ಲಿ ಕೆಲವು ಹುಟ್ಟಿಕೊಂಡಿವೆ; ವಿಮಾನ, ಆಕಾಶವಾಣಿ ಎಂದು ಕೆಲವು ಹಳೆಯ ಪದಗಳು ಪುನರುಜ್ಜೀವನಗೊಂಡಿವೆ; ಕಾಲುಚೀಲ, ಗುಂಡುಸೂಜಿ, ಇತ್ಯಾದಿ ಅನೇಕ ಹೊಸಪದಗಳೂ ಸೃಷ್ಟಿಯಾಗಿವೆ. ಹೀಗೆ ಹೊಸವಸ್ತು, ಹೊಸಕಲ್ಪನೆಗಳನ್ನು ಹೆಸರಿಸಲು ಎಲ್ಲ ಸಾಧ್ಯತೆಗಳನ್ನೂ ಬಳಸಿಕೊಂಡಿದ್ದೇವೆ. ಹಾಗೆ ಮಾಡುವಂತೆ ಇಂಗ್ಲೀಷಿನ ಮೂಲಕವಾಗಿ ಪರಿಚಿತವಾಗುತ್ತಿರುವ ಜಗತ್ತು ಕನ್ನಡ ಭಾಷೆಯನ್ನು ಒತ್ತಾಯಿಸುತ್ತಿದೆ.

ಕನ್ನಡವು ಪೂರ್ವದ ಹಳಗನ್ನಡದ ಸ್ಥಿತಿಯಿಂದ ಇಪ್ಪತ್ತನೇಯ ಶತಮಾನದವರೆಗೆ ಹೀಗೆ ಬೇರೆ ಭಾಷೆಗಳ ನೇರವಾದ ಅಥವಾ ಪರೋಕ್ಷವಾದ ಪ್ರಭಾವದಿಂದಾಗಿ ಬದಲಾಗುತ್ತ, ಬೆಳೆಯುತ್ತ ಬಂದಿದೆಯಲ್ಲದೇ ಎಲ್ಲ ಭಾಗದ ಕನ್ನಡಿಗರಲ್ಲಿಯೂ ಒಂದೇ ರೀತಿಯಾದ ಸಂಪರ್ಕದ ಅಭಾವದಿಂದಾಗಿ, ಜಾತಿ-ವರ್ಗಗಳು ಬೇರೆ ಬೇರೆಯಾಗಿ ಸಂಪರ್ಕಿಸುವುದರಿಂದಾಗಿ ಹಾಗೂ ಸುತ್ತಮುತ್ತಲ ಭಾಷೆಗಳೊಡನೆ ಸಂಪರ್ಕ ಪಡೆಯುತ್ತ ಬೇರೆ ಬೇರೆ ಪ್ರಮಾಣದಲ್ಲಿ ಬದಲಾಗುತ್ತ ಕನ್ನಡದೊಳಗೇ ಕೆಲವು ಪ್ರಾದೇಶಿಕ ಪ್ರಭೇದಗಳೂ ಸಾಮಾಜಿಕ ಪ್ರಭೇದಗಳೂ ಉಂಟಾದವು. ಈ ಪ್ರಭೇದಗಳು ಹಿಂದಿನಿಂದಲೂ ಇದ್ದವು. ಕನ್ನಡದಲ್ಲಿಯ ಪ್ರಭೇದಗಳನ್ನು ಕುರಿತು ಕವಿರಾಜಮಾರ್ಗಕಾರನೇ ಅವು ಅನೇಕ, ಎಂದು ಹೇಳುತ್ತಾನೆ. ಪಂಪಕವಿಯು 'ತಿರುಳ್ಗನ್ನಡ' ಪ್ರದೇಶವನ್ನು ಗುರುತಿಸಿ ಹೇಳುತ್ತಾನೆ. ಈ ಇಪ್ಪತ್ತನೇಯ ಶತಮಾನದಲ್ಲಿಯೂ ಮೈಸೂರು, ಮಂಗಳೂರು, ಧಾರವಾಡ, ಗುಲ್ಬರ್ಗಾ ಎಂಬ ನಾಲ್ಕು ಬಗೆಯ ಪ್ರಮುಖ ಉಪಭಾಷೆಗಳಿವೆ.

## ಕನ್ನಡ ಸಾಹಿತ್ಯ

ಯಾವ ಬ್ರಾಹ್ಮೀಲಿಪಿಯ ಮೂಲದ ಬಗ್ಗೆ ವಿಭಿನ್ನ ಅಭಿಪ್ರಾಯಗಳಿವೆಯೋ ಆ ಬ್ರಾಹ್ಮೀಲಿಪಿಯೇ ಭಾರತದ ಎಲ್ಲಾ ಲಿಪಿಗಳಿಗೆ ಆಧಾರವಾಗಿದೆ. ಕ್ರಿ. ಪೂ. ಮೂರನೇಯ ಶತಮಾನದಲ್ಲಿಯೇ ಕರ್ನಾಟಕವು ಅಶೋಕನ ಶಿಲಾ ಶಾಸನಗಳ ಮೂಲಕ ಬ್ರಾಹ್ಮೀಲಿಪಿಯ ದಕ್ಷಿಣ ಪ್ರಭೇದದ ಸಂಪರ್ಕಕ್ಕೆ ಒಳಪಟ್ಟಿತ್ತು. ಲಲಿತ ವಿಸ್ತರದಲ್ಲಿ ಹೆಸರುಗೊಂಡಿರುವ 64 ಲಿಪಿಗಳಲ್ಲಿ 'ಕನರಿ' ಲಿಪಿ ಒಂದೆಂದು ಹೇಳಿದ್ದರೂ ಅದಕ್ಕಿಂತಲೂ ಮೊದಲೇ ಅಂದರೆ ಕ್ರಿ. ಶ. ಮೂರನೇ ಶತಮಾನದಲ್ಲಿಯೇ ಕನ್ನಡ ಲಿಪಿ ಪ್ರಚಲಿತದಲ್ಲಿತ್ತೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಕನ್ನಡ ಲಿಪಿಯ ಲಿಖಿತ ದಾಖಲೆಯು ಹಲ್ಮಿಡಿ ಶಾಸನದಲ್ಲಿ ದೊರೆಯುತ್ತದೆ. ಒಂಬತ್ತನೇಯ ಶತಮಾನದ ನಂತರದಿಂದ ಅದು ಅನೇಕ ಬದಲಾವಣೆಗೊಳಗಾಗಿದೆ. ಈ ಕನ್ನಡ ಬರವಣಿಗೆ ಬ್ರಾಹ್ಮೀ ಮೂಲದಿಂದ ಕ್ರಮೇಣ ಬೇರೆಯಾಗಿ ದುಂಡಾಗಿ ಮತ್ತು ಸುಂದರವಾಗಿ ರೂಪುತಳೆಯಲು ಬಹುಶಃ ಬರವಣಿಗೆಗೆ ತಾಳೆಗರಿಯನ್ನು ಉಪಯೋಗಿಸಿದ್ದು ಕಾರಣವಾಗಿರಬಹುದು. 14ನೇಯ ಶತಮಾನದ ಕೊನೆಯವರೆಗೂ ಕನ್ನಡ ಮತ್ತು ತೆಲುಗು ಲಿಪಿಗಳು ಬಹುತೇಕ ಒಂದೇ ರೀತಿಯವಾಗಿದ್ದು, ಅಲ್ಲಿಂದ ಮುಂದೆ ಅವು ಒಂದರಿಂದ ಇನ್ನೊಂದು ಬೇರೆಯಾಗಲು ಪ್ರಾರಂಭಿಸಿದವು. ಇಂದಿಗೂ ಕನ್ನಡ ಮತ್ತು ತೆಲುಗು ಲಿಪಿಗಳ ಮಧ್ಯೆ ವ್ಯತ್ಯಾಸ ಬಹುಕಡಿಮೆ.

ಸಂಸ್ಕೃತದೊಂದಿಗೆ ಹೆಚ್ಚಿನ ಸಂಪರ್ಕವನ್ನು ಕನ್ನಡ ಮತ್ತು ತೆಲುಗು ಭಾಷೆಗಳು ಹೊಂದಿದ್ದುದರಿಂದ ಉಚ್ಚಾರಣೆಯಲ್ಲೂ ಅವು ಒಂದೇ ರೀತಿಯವಾಗಿವೆ. ತಮಿಳು ವರ್ಣಮಾಲೆ ಕನ್ನಡ ವರ್ಣಮಾಲೆಯನ್ನನುಸರಿಸಲಿಲ್ಲ. ಕಾರಣ ತಮಿಳಿನಲ್ಲಿ ಹ್ರಸ್ವ 'ಎ' 'ಒ' ಗಳಿಲ್ಲ; ಮತ್ತು ಹ್ರಸ್ವ ಸ್ವರಗಳಾದ ಋ ಮತ್ತು ಲೃ ಗಳಿಲ್ಲ; ಮತ್ತು ಮಹಾಪ್ರಾಣಗಳನ್ನು, ಘರ್ಷಧ್ವನಿಗಳನ್ನು ತಮಿಳಿನಲ್ಲಿ ಅಪರೂಪಕ್ಕೆ ಉಪಯೋಗಿಸುತ್ತಾರೆ. ಈ ಬಳಕೆಯಲ್ಲಿ ತಮಿಳು ಕನ್ನಡಕ್ಕಿಂತ ಭಿನ್ನವಾಗಿದೆ ಮತ್ತು ಅದರಲ್ಲಿ ಒಂದೇ ಚಿಹ್ನೆಯನ್ನು ಪುರುಷಾಕ್ಷರಗಳಿಗೆ ಮತ್ತು ವ್ಯಂಜನಗಳಿಗೆ ಬಳಸುತ್ತಾರೆ. 'ನ' ಕಾರವನ್ನು ಸೂಚಿಸಲು ಎರಡು ಚಿಹ್ನೆಗಳನ್ನು ಬಳಸುತ್ತಾರೆ.

## ಕನ್ನಡ ಸಾಹಿತ್ಯ ಪ್ರಾರಂಭ

ಕನ್ನಡ ಸಾಹಿತ್ಯದ ತಾಯಿಬೇರು ಭೂತಕಾಲದ ಗರ್ಭದಲ್ಲಿ ಹುದುಗಿಕೊಂಡಿದೆ. ಶಿಷ್ಟ ಅಥವಾ ಲಿಖಿತ ಸಾಹಿತ್ಯ ತಲೆಯೆತ್ತುವ ಮುನ್ನ ಜಾನಪದ ಸಾಹಿತ್ಯ ಸಾಕಷ್ಟು ಪ್ರಮಾಣದಲ್ಲಿ ಚಾಲ್ತಿಯಲ್ಲಿತ್ತೆಂಬ ವಿಚಾರದಲ್ಲಿ ಸಂದೇಹವಿಲ್ಲ. ಸಯ್ಗೊಟ್ಟ ಶಿವಮಾರನ ಗಜಾಷ್ಟಕವೊಂದು ಓವನಿಗೆಯಾಗಿತ್ತೆಂದು ಹೇಳಲಾಗಿದೆ. ಆ ಓವನಿಗೆ ಜಾನಪದ ಸಾಹಿತ್ಯದ ಒಂದು ಪ್ರಕಾರವಾಗಿದ್ದಿರಬೇಕು. ಲಿಖಿತ ಸಾಹಿತ್ಯದ ಕೃಷಿ ಮುಂದೆ ಮುಂದೆ ಸಾಗಿ, ಅದು ವಿಕಾಸಗೊಳ್ಳುತ್ತಿರುವಾಗಲೇ ಜಾನಪದ ಸಾಹಿತ್ಯ ಕಣ್ಮರೆಯಾಗುವುದಿಲ್ಲ. ವಾಸ್ತವವಾಗಿ ಈ ಎರಡು ಸಾಹಿತ್ಯ ವಾಹಿನಿಗಳೂ ಸಮಾನಾಂತರವಾಗಿ ಸಾಗುತ್ತ, ಪೋಷಕ ದ್ರವ್ಯ, ಸಂಜೀವನ ಶಕ್ತಿ ಮತ್ತು ಸ್ಫೂರ್ತಿಗಳನ್ನು ಪರಸ್ಪರವಾಗಿ ಪಡೆಯುತ್ತ, ಯಾವುದಾದರೂ ಒಂದು ಅವನತಿಯ ದಾರಿ ಹಿಡಿದಾಗ ಮತ್ತೊಂದರಿಂದ ಪ್ರಾಣಶಕ್ತಿಯನ್ನು ಹೀರಿಕೊಂಡು, ಪುನರುಜ್ಜೀವನಗೊಳ್ಳುತ್ತಿರುತ್ತವೆ.

ಕನ್ನಡದಲ್ಲಿ ಮೊಟ್ಟಮೊದಲ ಉಪಲಬ್ಧ ಗ್ರಂಥವೆಂದರೆ ಕವಿರಾಜಮಾರ್ಗ. ಆ ಗ್ರಂಥದಲ್ಲಿ ಗೋಚರಿಸುವ ಸುಳುಹುಗಳಿಂದಲೇ ಅದಕ್ಕಿಂತ ಹಿಂದೆ ಸಾಹಿತ್ಯ ಅಸ್ತಿತ್ವದಲ್ಲಿದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಅದು ಕಾವ್ಯದತ್ತ ವಿವರಣೆಗೆ ಮೀಸಲಾದ ಗ್ರಂಥ. ಅಲಂಕಾರಗಳ ಲಕ್ಷಣಗಳನ್ನು ಉದ್ದೀಪನಗೊಳಿಸುವ ಸಲುವಾಗಿ ಪೂರ್ವಕೃತಿಗಳಿಂದ ಲಕ್ಷ್ಯಗಳನ್ನು ಉದ್ಧರಿಸಲಾಗಿದೆ ಎಂಬ ವಿಷಯದಲ್ಲಿ ಸಂದೇಹವಿಲ್ಲ. ಪೂರ್ವದ ಕವಿ ಮತ್ತು ಗದ್ಯ ಲೇಖಕರನ್ನು ಅದು ಸ್ಮರಿಸುವುದಲ್ಲದೆ ಕೆಲವು ಹೆಸರುಗಳನ್ನೂ ಉಲ್ಲೇಖಿಸುತ್ತವೆ. ಕನ್ನಡನಾಡಿನ ಜನ 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದು ಅದು ಸಾರುತ್ತದೆ. ವೈಯಾಕರಣಿ ಭಟ್ಟಾಕಳಂಕನ ಹೇಳಿಕೆಯ ಆಧಾರದಿಂದ ಏಳನೇಯ ಶತಮಾನದ ತುಂಬಲೂರಾಚಾರ್ಯ ಎಂಬುವನು ತತ್ತ್ವಶಾಸ್ತ್ರವೊಂದಕ್ಕೆ ಚೂಡಾಮಣಿ ಎಂಬ ವ್ಯಾಖ್ಯಾನವನ್ನು ರಚಿಸಿದಂತೆ ತೋರುತ್ತದೆ. ಕನ್ನಡದ ಮೊಟ್ಟಮೊದಲ ಗದ್ಯಗ್ರಂಥವೆಂದು ಹೇಳಲಾದ ವಡ್ಡಾರಾಧನೆಯ ಶೈಲಿ ಎಷ್ಟು ತೇಜೋನ್ವಿತವಾಗಿದೆಯೆಂದರೆ ಅದು ಆ ಕಾಲಕ್ಕಾಗಲೇ ಪರಿಪಕ್ವವಾಗಿತ್ತೆಂದೂ ದೀರ್ಘ ಕಾಲದ ಸತತ ಕೃಷಿಯಿಂದ ಮಾತ್ರ ಅಂಥ ಪರಿಪಕ್ವತೆ ಸಾಧ್ಯವೆಂದೂ ಸ್ಪಷ್ಟಪಡಿಸಬಹುದಾಗಿದೆ. ಕಾವ್ಯ ಕ್ಷೇತ್ರದಲ್ಲಿಯೂ ಬಹು ಹಿಂದೆಯೇ ಚೈತನ್ಯದಾಯಿಯಾದ ಚಟುವಟಿಕೆಗಳು ನಡೆಯುತ್ತಿದ್ದಿರಬಹುದೆಂಬುದಕ್ಕೆ ಕನ್ನಡದ ಆದಿ ಕಾವ್ಯವಾದ ಪಂಪನ ವಿಕ್ರಮಾರ್ಜುನವಿಜಯವೇ ಜ್ವಲಂತ ನಿದರ್ಶನವಾಗಿದೆ. ಅವನು ಹೆಸರಿಸದ ಹಿಂದಿನ ಕೆಲವು ಕೃತಿಗಳ ಉಲ್ಲೇಖಗಳಿಂದ, ಅಂತೆಯೇ ಪೊನ್ನ, ನಾಗವರ್ಮ, ಜನ್ನ, ಕೇಶಿರಾಜ, ಮೊದಲಾದ ಪ್ರಸಿದ್ಧ ಕವಿಗಳು ಮಾಡಿರುವ ಪೂರ್ವಕವಿಗಳ ಸಂಸ್ತವನದಿಂದ ಒಂಬತ್ತನೇಯ ಶತಮಾನಕ್ಕಿಂತ ಹಿಂದಿನಿಂದ ಸಾಹಿತ್ಯದ ಬೆಳಸು ಹುಲುಸಾಗಿದ್ದಿರಬೇಕೆಂದು ಊಹಿಸಬಹುದಾಗಿದೆ. ಕ್ರಿಸ್ತ ಶಕದ ಆದಿಯಲ್ಲಿಯೇ ಬೌದ್ಧಧರ್ಮದ ಕವಿಗಳು ಸಾಹಿತ್ಯವನ್ನು ಸೃಷ್ಟಿ ಮಾಡಿರಬೇಕೆಂಬ ಟಿ. ಎಸ್. ವೆಂಕಣ್ಣಯ್ಯನವರ ಊಹೆಯನ್ನು ಈ ಮೇಲಣ ವಾದದ ಹಿನ್ನೆಲೆಯಲ್ಲಿ ಗಮನಿಸಿದಾಗ ಆ ಊಹೆ ಆಧಾರರಹಿತವೆಂದು ನಿರ್ಲಕ್ಷಿಸುವುದು ಕಷ್ಟವಾಗುತ್ತದೆ.

## ಸಾಹಿತ್ಯ ಚರಿತ್ರೆಯ ಘಟ್ಟಗಳು

ಕನ್ನಡ ಸಾಹಿತ್ಯಕ್ಕೆ ಒಂದು ಸಾವಿರದ ಐನೂರು ವರ್ಷಗಳ ಇತಿಹಾಸವಿದೆಯೆಂದೂ, ಅದು ಶ್ರೀಮಂತವೂ, ವೈಭವೋಪೇತವೂ ಆಗಿದೆಯೆಂದೂ ಈಗ ಸಂದೇಹಕ್ಕವಕಾಶವಿಲ್ಲದಂತೆ ನಿರ್ಣಯಿಸಬಹುದಾಗಿದೆ. ಕಾವ್ಯಗಳ ವಸ್ತು ಸ್ವರೂಪ ಲಕ್ಷಣಗಳ, ಸಾಹಿತ್ಯದ ಗತಿ ಗುರಿ ಧಾತುಗಳ, ಐತಿಹಾಸಿಕ ಘಟನೆಗಳ ಮತ್ತು ಯುಗಶಕ್ತಿ ಧರ್ಮಗಳ ಆಧಾರದ ಮೇಲೆ ಸಾಹಿತ್ಯ ಚರಿತ್ರೆಯನ್ನು ಬೇರೆಬೇರೆ ಯುಗಗಳನ್ನಾಗಿ ವಿಂಗಡಿಸಲು ಹಲವು ಪ್ರಯತ್ನಗಳು ನಡೆದಿವೆ. ಭಾರತೀಯ ಬದುಕಿನ ಒಂದು ಭಾಗವಾಗಿರುವ ಮತ ಜೀವನವು ಸರ್ವಕ್ಷೇತ್ರಗಳಲ್ಲಿಯೂ ಸಾರ್ವಭೌಮತನವನ್ನು ನಡೆಸಿದೆ. ಪಂಪ, ಹರಿಹರ, ನಾರಣಪ್ಪ, ರತ್ನಾಕರವರ್ಣಿ ಅಥವಾ ಬೇರಾವ ಕವಿಯೇ ಆಗಲಿ, ಅವರ ಮಹಾ ಕೃತಿಗಳಿಗೆ ಸ್ಫೂರ್ತಿಯ ಸೆಲೆ ಆತ್ಮ ಕಲ್ಯಾಣಕಾರಿಯಾದ ಧಾರ್ಮಿಕ ಭಾವನೆಗಳಲ್ಲಿ ನೆಲೆಗೊಂಡಿದೆಯೆಂಬುದು ಸ್ಪಷ್ಟ. ಆದ್ದರಿಂದ ಇ. ಪಿ. ರೈಸರು ಸಾಹಿತ್ಯ ಚರಿತ್ರೆಯನ್ನು ಜೈನ, ವೀರಶೈವ ಮತ್ತು ಬ್ರಾಹ್ಮಣಯುಗಗಳೆಂದು ಮೂರು ಖಂಡಗಳಾಗಿ ವಿಭಜಿಸಿದರು. ತಿ. ತಾ. ಶರ್ಮರು ಯುಗಧರ್ಮವನ್ನವಲಂಬಿಸಿ, ಕ್ಷಾತ್ರಯುಗ, ಮತಪ್ರಚಾರಕ ಯುಗ, ಸಾರ್ವಜನಿಕ ಯುಗ ಮತ್ತು ಆಧುನಿಕ ಯುಗವೆಂದು ಅದನ್ನು ನಾಲ್ಕು ಭಾಗವಾಗಿ ವಿಂಗಡಿಸಿದರು. ಛಂದಸ್ಸ್ವರೂಪ ಲಕ್ಷಣಗಳ ಆಧಾರದ ಮೇಲೆ ಚಂಪೂಯುಗ, ವಚನ ಯುಗ, ಷಟ್ಪದಿ ಯುಗ ಮತ್ತು ಸಾಂಗತ್ಯ ಯುಗಗಳೆಂದು ಕೆಲವರು ಸಾಹಿತ್ಯ ಚರಿತ್ರೆಯ ವಿಭಾಗಗಳನ್ನು ವಿಂಗಡಿಸಿದರೆ, ಮತ್ತೆ ಕೆಲವರು ರಾಜರ ಮನೆತನಗಳಿಗೆ ಹೊಂದಿಕೊಳ್ಳುವಂತೆ ಗಂಗ ಯುಗ, ಚಾಲುಕ್ಯ ಯುಗ, ರಾಷ್ಟ್ರಕೂಟ ಯುಗ, ಹೊಯ್ಸಳ ಯುಗ, ವಿಜಯನಗರ ಯುಗ ಮತ್ತು ಮೈಸೂರು ಯುಗಗಳೆಂದು ಹೆಸರಿಸಿದ್ದಾರೆ. ಯುಗಪುರುಷರೆನ್ನಬಹುದಾದ ಮಹಾಕವಿಗಳ ಹೆಸರುಗಳನ್ನು ಯುಗಗಳಿಗೆ ಇಡಬಹುದೆನ್ನುವುದು ಕೆಲವು ವಿದ್ವಾಂಸರ ಮತ. ಯಾವ ಮಹಾಕವಿಯ ಹೆಸರಿನಲ್ಲಿ ಹೊಸದೊಂದು ಪೀಳಿಗೆ ಪ್ರಾರಂಭವಾಗಿ, ಅನಂತರ ಬಂದ ಕವಿಗಳು ಭಕ್ತಿಯಿಂದ ಅವನ ಮಾದರಿಯನ್ನನುಸರಿಸಿ ಅವನೆತ್ತರಕ್ಕೇರಲಾಗದಿದ್ದರೂ ಅನುಕರಣದ ಮೂಲಕ ಅವನಿಗೆ ಗೌರವ ಸಲ್ಲಿಸುವ ಪರಿಪಾಠವಿರುವುದರಿಂದ ಅವನ ಪರಂಪರೆಯ ಹೆಸರನ್ನು ಒಂದು ಯುಗಕ್ಕೆ ಕೊಡುವುದೇ ಯೋಗ್ಯವೆಂದು ಅವರ ವಾದ. ಭಾಷೆಯ ಅವಸ್ಥೆಗಳ ಆಧಾರದ ಮೇಲೂ ಸಾಹಿತ್ಯ ಚರಿತ್ರೆಯನ್ನು ಯುಗ

ಗಳಾಗಿ ಪ್ರತ್ಯೇಕಗೊಳಿಸುವ ಸಾಧ್ಯತೆಯೂ ಉಂಟು. ಈ ಎಲ್ಲ ಬಗೆಯ ವಿಂಗಡಣೆಗಳಲ್ಲಿ ಅನೇಕ ಸಮಸ್ಯೆ ಮತ್ತು ನ್ಯೂನತೆ ಕೂಡಿರುವುದರಿಂದ, ಇಲ್ಲಿ ಸ್ಥೂಲವಾಗಿ ಕನ್ನಡ ಸಾಹಿತ್ಯ ಚರಿತ್ರೆಯ ಗತಿಯನ್ನು ಕಾಲಾನುಕ್ರಮವಾಗಿ ಗುರುತಿಸಲು ಪ್ರಯತ್ನಿಸಲಾಗಿದೆ. ಅವಶ್ಯವೆಂದು ತೋರಿದಾಗ, ಹಿರಿಯ ಕವಿಗಳನ್ನನುಸರಿಸುವ ಸಣ್ಣಪುಟ್ಟ ಕವಿಗಳ ವಿಚಾರವನ್ನು ಅಲ್ಲಲ್ಲಿಯೇ ಪ್ರಸ್ತಾಪಿಸಲಾಗಿದೆ.

### ಕವಿರಾಜಮಾರ್ಗ

ಕವಿಪರಮೇಷ್ಠಿ, ಪೂಜ್ಯಪಾದ ಮತ್ತು ಸಮಂತಭದ್ರರೆಂಬ ಮೂವರು ಕವಿಗಳು ಕ್ರಿ.ಶ. 4ನೇಯ ಮತ್ತು 7ನೇಯ ಶತಮಾನಗಳ ಮಧ್ಯಾವಧಿಯಲ್ಲಿ ಬದುಕಿದ್ದವರು. ಈಚಿನ ಜೈನ ಕವಿಗಳು ಅವರ ಆಶೀರ್ವಾದಕ್ಕಾಗಿ ತಪ್ಪದೆ ಅವರನ್ನು ಸ್ತುತಿಸುತ್ತಾರೆ. ಅವರು ಕನ್ನಡದಲ್ಲಿ ಕೃತಿ ರಚನೆ ಮಾಡಿರುವ ವಿಷಯ ಗೊತ್ತಿಲ್ಲ. ಅವರು ಸಂಸ್ಕೃತದಲ್ಲಿ ರಚಿಸಿರುವ ಕಾವ್ಯಗಳಂತೂ ದೊರಕಿವೆ. ಕವಿರಾಜಮಾರ್ಗ ಪ್ರಧಾನವಾಗಿ ಅಲಂಕಾರಗ್ರಂಥ. ಅದರ ಕರ್ತೃತ್ವದ ಬಗ್ಗೆ ಸಾಕಷ್ಟು ವಾದ ವಿವಾದಗಳೆದ್ದಿವೆ. ಅದರ ಕರ್ತೃ ರಾಷ್ಟ್ರಕೂಟ ದೊರೆ ನೃಪತುಂಗನಲ್ಲ, ಶ್ರೀ ವಿಜಯನಿದ್ದಿರಬೇಕೆಂದು ಬಹುಜನ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅದನ್ನು ಯಾರೇ ರಚಿಸಲಿ, ರಸಾಲಂಕಾರ, ಧ್ವನಿ ಮತ್ತು ರೀತಿಗಳ ಜತೆಗೆ, ಕನ್ನಡ, ಕರ್ನಾಟಕ ಮತ್ತು ಕನ್ನಡ ಜನಪದವೇ ಮೊದಲಾದ ಅನೇಕ ವಿಷಯಗಳನ್ನು ಕುರಿತು ಸಮೃದ್ಧವಾದ ಮಾಹಿತಿಗಳನ್ನೊಳಗೊಂಡಿರುವುದರಿಂದ ಅದು ಅತ್ಯಂತ ಅಮೂಲ್ಯ ಗ್ರಂಥವಾಗಿದೆ. ಸಂದೇಹ ಊಹೆಗಳಿಗವಕಾಶವಿಲ್ಲದಂತೆ ಪ್ರಾಚೀನ ಕರ್ನಾಟಕದ ಗಡಿ ರೇಖೆಗಳನ್ನು ಅದರಲ್ಲಿ ಗುರುತಿಸಲಾಗಿದೆ. ಕನ್ನಡದ ಜನರ ಗುಣಗಳ ವರ್ಣನೆಯಲ್ಲಿ ಕರ್ನಾಟಕ ಸಂಸ್ಕೃತಿಯ ಪ್ರತಿಬಿಂಬವಿದೆ. ಅವರು ಸುಭಟರು, ಕವಿಗಳು, ಸುಪ್ರಭುಗಳು, ಚೆಲುವರು, ಅಭಿಜನರು, ಗುಣಿಗಳು, ಅಭಿಮಾನಿಗಳು, ಅತ್ಯುಗ್ರರು, ಗಂಭೀರ ಚಿತ್ತರು, ವಿವೇಕಿಗಳು, ಪದದ ಅರ್ಥವನ್ನು ಗ್ರಹಿಸಿ ಮಾತಾಡುವ, ಆಲೋಚಿಸುವ ಜಾಣರವರು. ಓದದ ಜನ ಸಹ ಕಾವ್ಯಶಕ್ತಿಯುಳ್ಳವರು. ಮಕ್ಕಳು, ಮೂಗರು ಕೂಡ ವಿವೇಕಿಗಳು. ಈ ಕೃತಿಯಲ್ಲಿ ಬಳಕೆಗೊಂಡಿರುವ ಭಾಷೆ ಸುಸ್ಪಷ್ಟವಾಗಿದೆ. ಶುದ್ಧವಾದ ಕನ್ನಡ ನುಡಿಗಟ್ಟು ಮತ್ತು ಗಾದೆಗಳಿಂದ ಸಮೃದ್ಧವಾಗಿದೆ. ಕನ್ನಡ ಸಂಸ್ಕೃತ ಪದಗಳ ಮಿಶ್ರೀಕರಣದ ಬಗ್ಗೆ ಉಲ್ಲೇಖಗೊಂಡಿರುವ ನಿಯಮಗಳು ಕನ್ನಡ ಭಾಷೆಯ ಜಾಯಮಾನಕ್ಕೆ ಹೊಂದಿಕೊಳ್ಳುತ್ತವೆ.

ಪಂಪಪೂರ್ವಯುಗದ ಕವಿಗಳಲ್ಲಿ ಅಸಗ, ಒಂದನೇಯ ಗುಣವರ್ಮ ಮತ್ತು ಶಿವಕೋಟ್ಯಾಚಾರ್ಯರ ಹೆಸರು ವಿಶೇಷವಾಗಿ ಎದ್ದು ಕಾಣುತ್ತದೆ. ಕಾಳಿದಾಸನ ಕುಮಾರ ಸಂಭವವನ್ನು ಭಾಷಾಂತರ ಮಾಡಿರಬಹುದಾದ ಅಸಗನ ಹೆಸರನ್ನು ಈಚಿನ ಕವಿಗಳು ಗೌರವದಿಂದ ನನೆಯುತ್ತಾರೆ. ಅವನು 9ನೇಯ ಶತಮಾನದಲ್ಲಿ ಇದ್ದಿರಬಹುದೆಂದು ಊಹಿಸಲಾಗಿದೆ. ಅವನ ಒಂದು ಕೃತಿಯೂ ಉಪಲಬ್ಧವಿಲ್ಲ. ಗಂಗರಾಜರ ಪೋಷಣೆಯಲ್ಲಿದ್ದ ಗುಣವರ್ಮ ಹರಿವಂಶ, ಶೂದ್ರಕ ಎಂಬೆರಡು ಕೃತಿಗಳನ್ನು ರಚಿಸಿದ್ದಾನೆ. ಅವು ಸಿಕ್ಕಿಲ್ಲ. ಶಿವಕೋಟ್ಯಾಚಾರ್ಯ ಹೆಚ್ಚು ಕಡಿಮೆ ಅದೇ ಕಾಲದಲ್ಲಿದ್ದವನು. ವಡ್ಡಾರಾಧನೆ ಎಂಬ ಅವನ ಗದ್ಯಗ್ರಂಥ ಹದಿನಾರು ಜೈನ ಧಾರ್ಮಿಕ ಕಥನಗಳನ್ನೊಳಗೊಂಡ ಸಂಗ್ರಹ. ಜೈನ ಧರ್ಮದ ತತ್ತ್ವ ಬೋಧನೆಯೇ ಅದರ ಉದ್ದೇಶ. ಧಾರ್ಮಿಕ ಭಾವನೆ ಅದರಲ್ಲಿ ಹಾಸುಹೊಕ್ಕಾಗಿ ಹರಿದಿದ್ದರೂ, ಜೈನೇತರರೂ ಅದನ್ನು ಓದಿ ಆನಂದಿಸಬಹುದು. ಭಗವತೀ ಆರಾಧನ ಎಂಬ ಪೂರ್ವದ ಪ್ರಾಕೃತ ವ್ಯಾಖ್ಯಾನ ಗ್ರಂಥವನ್ನಾಧರಿಸಿ ಆ ಕಥೆಗಳು ರಚನೆಗೊಂಡಿವೆಯಾದರೂ ಅವುಗಳಲ್ಲಿ ಕನ್ನಡ ಕೃತಿಕಾರನ ಪ್ರತಿಭೆಯ ಮುದ್ರೆಯನ್ನು ಗುರುತಿಸಬಹುದು.

ಪ್ರತೀಯೊಂದು ಕಥೆಯೂ ಬೇಗ ಬೇಗ ತನ್ನ ಗುರಿಯನ್ನು ಮುಟ್ಟಲು ಸಾಧ್ಯವಾಗುವಂತೆ ವಸ್ತುವನ್ನು ಜಾಣ್ಮೆಯಿಂದ ನಿರೂಪಿಸಲಾಗಿದೆ. ಪಾತ್ರರಚನೆಯನ್ನು ಜೀವಂತಗೊಳಿಸಲಾಗಿದೆ. ಸುಪ್ರಸನ್ನವೂ, ಸಂಕ್ಷಿಪ್ತವೂ, ಮನೋಹರವೂ, ತೇಜೋನ್ವಿತವೂ, ಸರಸವೂ, ಅನನುಕರಣೀಯವೂ ಆದ ಶೈಲಿಗಾಗಿ ಈ ಕಥೆಗಳನ್ನು ವಿಶೇಷವಾಗಿ ಓದಬೇಕಾಗಿದೆ. ಅನ್ಯಭಾಷೆಯ ಪದ ಮತ್ತು ವಾಕ್ಸಂಪ್ರದಾಯಗಳನ್ನು ಹೇಗೆ ಕನ್ನಡೀಕರಿಸಿ, ಸ್ವದೇಶೀ ಶಬ್ದ ಮತ್ತು ವಾಕ್ಪದ್ಧತಿಗಳೊಡನೆ ಮಿಲನಗೊಳಿಸಿ, ಸ್ವಭಾಷಾ ಜಾಯಮಾನಕ್ಕೆ ತಕ್ಕಂತೆ ಸಂಪೂರ್ಣವಾಗಿ ಹೊಂದಿಸಿಕೊಳ್ಳಬಹುದೆಂಬುದಕ್ಕೆ ಈ ಕೃತಿ ಜ್ವಲಂತ ನಿದರ್ಶನವಾಗಿದೆ. ಆಡುನುಡಿ, ನುಡಿಗಟ್ಟು ಮತ್ತು ಗಾದೆಗಳ ಸಲೀಸು ಬಳಕೆಯಿಂದಾಗಿ ಅದರ ರಚನೆ ಮತ್ತು ಶೈಲಿಗಳಲ್ಲಿ ಮಣ್ಣಿನ ವಾಸನೆ ಪರಿಮಳಿಸುತ್ತದೆ. ನಡುನಡುವೆ ಬಳಕೆಗೊಂಡಿರುವ ಪೂರ್ವದ ಹಳಗನ್ನಡ ಪದಗಳು ಭಾಷೆಯ ಪರಿವರ್ತನಾವಸ್ಥೆಯನ್ನು ಸೂಚಿಸುತ್ತವೆ. ಈ ಎಲ್ಲ ಗುಣಸಮೃದ್ಧಿಯಿಂದ ವಡ್ಡಾರಾಧನೆ ಮುಂದಿನ ಪೀಳಿಗೆಯವರು ಅನುಕರಿಸಲಾಗದ ಗದ್ಯಕಲೆಯ ಅಪೂರ್ವ ಮಹಾಕೃತಿಯೆಂದು ಧಾರಾಳವಾಗಿ ಹೇಳಬಹುದು.

ಶ್ರವಣಬೆಳ್ಗೊಳದಲ್ಲಿ ಗೊಮ್ಮಟೇಶ್ವರನ ಭವ್ಯ ಪ್ರತಿಮೆಯ ನಿರ್ಮಾಣಕ್ಕೆ ಕಾರಣನಾದವನೂ ಗಂಗರಸ ರಾಚಮಲ್ಲನ ಮುಖ್ಯ ಮಂತ್ರಿಯೂ ಆದ ಚಾಮುಂಡರಾಯ ನಿರಾಭರಣ ಸುಂದರವೂ ಸರಳವೂ ನಿರರ್ಗಳವೂ ಆದ ಶೈಲಿಯಲ್ಲಿ ತ್ರಿಷಷ್ಟಿ ಲಕ್ಷಣ ಮಹಾಪುರಾಣ ಎಂಬ ಗದ್ಯಕೃತಿಯನ್ನು ರಚಿಸಿದ್ದಾನೆ. ಇದು ಹೆಚ್ಚು ಕಡಿಮೆ ಜಿನಸೇನ ಮತ್ತು ಗುಣಭದ್ರರು ಸಂಸ್ಕೃತದಲ್ಲಿ ರಚಿಸಿದ ಮಹಾಪುರಾಣದ ಸಂಗ್ರಹಾನುವಾದವೆಂದು ಹೇಳ

ಬಹುದು. ಈ ಸಂಸ್ಕೃತ ಮಹಾಪುರಾಣ ಮುಂದಿನ ಎಲ್ಲ ಜೈನಕವಿಗಳಿಗೆ ಸ್ಫೂರ್ತಿಯ ಸೆಲೆಯಾಯಿತೆಂಬುದು ಗಮನಾರ್ಹ ವಾದ ಅಂಶ.

## ಸುವರ್ಣಯುಗ

ಪಂಪ ಕನ್ನಡದ ಆದಿಕವಿ ಮಾತ್ರವಲ್ಲ, ಕವಿಕುಲಗುರುವೂ ಅಹುದು. ಅವನ ಪ್ರಭಾವ ಎಷ್ಟು ತೀಕ್ಷ್ಣವಾದದ್ದು ಹಾಗೂ ವ್ಯಾಪಕವಾದದ್ದು ಎಂದರೆ, ಇಪ್ಪತ್ತನೇಯ ಶತಮಾನದ ಕೃತಿಗಳೂ ಅದರ ಸಚೇತಕ ಪರಿಣಾಮದಿಂದ ತಪ್ಪಿಸಿಕೊಳ್ಳುವಂತಿಲ್ಲ. ಈ ಸಹಸ್ರ ವರ್ಷಗಳ ದೀರ್ಘಾವಧಿಯ ಸಮೀಕ್ಷೆ ಪರೀಕ್ಷೆ ಪರಿವರ್ತನೆಗಳಲ್ಲಿಯೂ ಸ್ಥಿರವಾಗಿ ಬೇರೂರಿರುವ ಕಾವ್ಯ ಪರಂಪರೆ, ಮಾದರಿ ಮತ್ತು ಮೌಲ್ಯಗಳನ್ನು ಸಂಸ್ಥಾಪಿಸಿದ ವಿಶಿಷ್ಟ ಯಶಸ್ಸು ಅವನಿಗೆ ಸಲ್ಲಬೇಕಾಗಿದೆ. ಅವನು ಚಂಪೂ ಶೈಲಿಯ ಆಚಾರ್ಯ ಪುರುಷ. ಕರ್ನಾಟಕ ಅದರ ಜನ್ಮಸ್ಥಾನವಲ್ಲದೆ, ಪಾಲನಕೇಂದ್ರವೂ ಆಗಿದೆಯೆಂಬುದು ಹೆಮ್ಮೆಯ ಸಂಗತಿ. ಅವನ ಅದ್ಭುತವಾದ ಪ್ರತಿಭಾಸಂಸ್ಪರ್ಶದಿಂದ, ಮಾರ್ಗ ಮತ್ತು ದೇಶಿ ಶೈಲಿಗಳ ಸುಮಧುರ ಸಮ್ಮಿಲನದಿಂದ ಶ್ರೇಷ್ಠ ಭಾಷೆಯ ಸಲ್ಲಕ್ಷಣಗಳಾದ ಸಮೃದ್ಧಿ, ನಮನಶೀಲ, ತೇಜಸ್ಸು ಮತ್ತು ಪಕ್ವತೆಗಳನ್ನು ಕನ್ನಡ ಪಡೆಯುವಂತಾಗಿದೆ. ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯಗಳು ಈ ಋಷಿಕವಿ ಸೃಷ್ಟಿಸಿದ ಎರಡು ಮಹಾಕಾವ್ಯಗಳು. ಆಕರವಸ್ತುವಿಗಾಗಿ ಅವು ಜಿನಸೇನನ ಮಹಾಪುರಾಣಕ್ಕೂ ವ್ಯಾಸ ಭಾರತಕ್ಕೂ ಋಣಿಯಾಗಿವೆ ನಿಜ. ಆದರೆ ಕಾವ್ಯದುದ್ದಕ್ಕೂ ಸ್ಪಂದಿಸುತ್ತಿರುವ ಜೀವಂತಿಕೆಯಿಂದ, ಸ್ವೋಪಜ್ಞತೆಯ ಸಂಪತ್ತಿನಿಂದ, ಭವ್ಯಾದ್ಭುತವಾದ ಕಲ್ಪನಾ ಸಾಮರ್ಥ್ಯದಿಂದ ಅವು ಕವಿಯ ನಿನೂತನ ಸೃಷ್ಟಿಗಳೆಂದೇ ಹೇಳಬಹುದು. ಹತ್ತನೇಯ ಶತಮಾನದ ಪೂರ್ವಾರ್ಧದಲ್ಲಿ, ರಾಷ್ಟ್ರಕೂಟ ಚಕ್ರವರ್ತಿಗಳ ಸಾಮಂತನಾಗಿ ವೇಮುಲವಾಡದಲ್ಲಿ ಆಳುತ್ತಿದ್ದ ಅರಿಕೇಸರಿಯ ಆಪ್ತ ಸ್ನೇಹಿತನಾಗಿ, ಮಂತ್ರಿಯಾಗಿ, ಮಹಾದಂಡನಾಯಕನಾಗಿ ಪಡೆದ ಅನುಭವ ಸಂಪತ್ತನ್ನೂ, ದೈವದತ್ತವಾದ ಅಪೂರ್ವ ಕಾವ್ಯ ಶಕ್ತಿಯನ್ನೂ ಪಂಪ ಈ ಕೃತಿಗಳಿಗೆ ಧಾರೆಯೆರೆದಿದ್ದಾನೆ. ವೃಷಭನಾಥ ತೀರ್ಥಂಕರತ್ವವನ್ನು ಸಾಧಿಸಿದ ಸಾಹಸದ ಕಥೆಯೇ ಆದಿಪುರಾಣದ ವಸ್ತು. ಭರತ ಬಾಹುಬಲಿಯರ ಕಥೆಯಂತು ಅತ್ಯಂತ ಮನೋಜ್ಞವಾಗಿದೆ. ಲೌಕಿಕ ಸುಖದ ಕ್ಷಣಭಂಗುರತ್ವವನ್ನು ಆಧ್ಯಾತ್ಮಿಕ ಸಿದ್ಧಿಯ ಹಿರಿಮೆಯನ್ನೂ ಅದರ ಶಾಶ್ವತಮೌಲ್ಯವನ್ನೂ ಸಂಸ್ಥಾಪಿಸುವುದೇ ಈ ಕಾವ್ಯದ ಮೂಲೋದ್ದೇಶ. ಮಹಾಭಾರತವನ್ನು ಹದಿನಾಲ್ಕು ಆಶ್ವಾಸಗಳ ವಿಕ್ರಮಾರ್ಜುನ ವಿಜಯವನ್ನಾಗಿ ಪರಿವರ್ತಿಸುವಲ್ಲಿ ಪಂಪ ಮೂಲದಲ್ಲಿ ತನಗೆ ಅನವಶ್ಯವೆಂದು ತೋರಿದ ವಿವರಗಳನ್ನು ಬಿಟ್ಟಿದ್ದಾನೆ; ದೀರ್ಘವಾದ ಭಾಗಗಳನ್ನು ಸಂಗ್ರಹಿಸಿದ್ದಾನೆ; ಅನೇಕ ಸಂದರ್ಭಗಳನ್ನು ಮಾರ್ಪಡಿಸಿದ್ದಾನೆ. ತನ್ನ ಉದ್ದೇಶಕ್ಕೆ ಪೋಷಕವಾಗುವ ಸನ್ನಿವೇಶ ಸಂದರ್ಭಗಳನ್ನು ಹೊಸದಾಗಿ ಸೃಷ್ಟಿಸಿಕೊಂಡಿದ್ದಾನೆ. ಅವನು ಕನ್ನಡದ ಕಾಳಿದಾಸನೆಂಬ ತೀ. ನಂ. ಶ್ರೀಕಂಠಯ್ಯನವರ ಮಾತು ನೂರಕ್ಕೆ ನೂರು ಪಾಲು ಸತ್ಯ. 'ಮನುಷ್ಯ ಜಾತಿಯೊಂದೆ ವಲಂ' ಎಂದು ಪಂಪ ತನ್ನ ಕಾವ್ಯದಲ್ಲೊಂದು ಕಡೆ ನುಡಿದಿದ್ದಾನೆ. ತನ್ನ ನಾಯಕರನ್ನು ಚಿತ್ರಿಸುವಾಗ ಪಂಪ ವಿಶ್ವಮಾನವನ ಗುಣವನ್ನು ಗಮನದಲ್ಲಿರಿಸಿಕೊಂಡಿದ್ದಾನೆ.

ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಕಾವ್ಯ ರಚನೆ ಮಾಡಿದ ಪೊನ್ನ ರಾಷ್ಟ್ರಕೂಟ ಚಕ್ರವರ್ತಿ (939-980) ಮೂರನೇಯ ಕೃಷ್ಣನಿಂದ ಉಭಯ ಕವಿ ಚಕ್ರವರ್ತಿ ಎಂಬ ಬಿರುದನ್ನು ಪಡೆದನು. ಶಾಂತಿಪುರಾಣ, ಜಿನಾಕ್ಷರಮಾಲೆ ಮತ್ತು ಭುವನೈಕ ರಾಮಾಭ್ಯುದಯ ಅವನು ರಚಿಸಿದ ಮೂರು ಕೃತಿಗಳು. ಕೊನೆಯ ಕೃತಿ ಉಪಲಬ್ಧವಿಲ್ಲ. ಗದಾಯುದ್ಧವೆಂದು ಪ್ರಸಿದ್ಧವಾದ ಸಾಹಸಭೀಮ ವಿಜಯ ಮತ್ತು ಅಜಿತಪುರಾಣ ರನ್ನನ ಎರಡು ಕೃತಿಗಳು. ಅವನು ಚಾಲುಕ್ಯ ದೊರೆ ಸತ್ಯಾಶ್ರಯನ ಸಮಕಾಲೀನ. ಎರಡನೇಯ ತೀರ್ಥಂಕರನ ಕಥೆಯನ್ನೊಳಗೊಂಡ ಅಜಿತ ಪುರಾಣಕ್ಕೆ ಪಂಪನ ಆದಿಪುರಾಣವೇ ಸ್ಫೂರ್ತಿ. ಆದರೆ ಅದು ಆದಿಪುರಾಣದಂಥ ಮಹತ್ಕೃತಿಯಲ್ಲ. ನಡುನಡುವೆ ಕಾವ್ಯ ಪ್ರತಿಭೆಯ ಕಿಡಿಗಳು ಮಿಂಚುತ್ತವೆಂಬ ಸಂಗತಿಯನ್ನು ಅಲ್ಲಗಳೆಯುವಂತಿಲ್ಲ. ಸುಮಾರು 982ರಲ್ಲಿ ರಚನೆಗೊಂಡ ಗದಾಯುದ್ಧ ಅವನಿಗೆ ಶಾಶ್ವತ ಕೀರ್ತಿಯನ್ನೂ ಕಲಾಕ್ಷೇತ್ರದಲ್ಲಿ ಪ್ರಮುಖ ಸ್ಥಾನವನ್ನೂ ಗಳಿಸಿಕೊಟ್ಟಿರುವ ಮಹಾಸತ್ತ್ವವುಳ್ಳ ಶ್ರೇಷ್ಠ ಕೃತಿ.

ಇತ್ತೀಚೆಗೆ ತಾನೆ ದೊರೆತ ವರ್ಧಮಾನ ಪುರಾಣಕ್ಕಿಂತ, ಅಲಂಕಾರಶಾಸ್ತ್ರ ಮತ್ತು ವ್ಯಾಕರಣಗಳಿಗೆ ಸಂಬಂಧಿಸಿದ ಕಾವ್ಯಾವಲೋಕನ ಮತ್ತು ಕರ್ನಾಟಕ ಭಾಷಾ ಭೂಷಣಗಳಿಂದ ಎರಡನೇಯ ನಾಗವರ್ಮ (1042) ಸುಪ್ರಸಿದ್ಧನಾಗಿದ್ದಾನೆ. ಕರ್ನಾಟಕ ಭಾಷಾ ಭೂಷಣ ಸಂಸ್ಕೃತ ಭಾಷೆಯಲ್ಲಿ ಬರೆದ ಕನ್ನಡ ವ್ಯಾಕರಣ. ಶಾಂತಿನಾಥ (1065) ತನ್ನ ಸುಕುಮಾರ ಚರಿತ್ರೆಯನ್ನು ರಚಿಸುವಲ್ಲಿ ಹರಿಷೇಣನ ಸಂಸ್ಕೃತ ಭಾಷೆಯ ಬೃಹತ್ಕಥಾ ಕೋಶಕ್ಕೂ, ವಡ್ಡಾರಾಧನೆಗೂ ಋಣಿಯಾಗಿದ್ದಾನೆ. ಅಭಿನವ ಪಂಪ ಎಂದು ಕರೆದುಕೊಂಡ ನಾಗಚಂದ್ರ ಹನ್ನೆರಡನೇಯ ಶತಮಾನದವನು. ಮಲ್ಲಿನಾಥ ಪುರಾಣ ಮತ್ತು ಪಂಪ ರಾಮಾಯಣವೆಂದು ಹೆಸರಾದ ರಾಮಚಂದ್ರಚರಿತ ಪುರಾಣಗಳು ಅವನ ಎರಡು ಕೃತಿಗಳು. ಇವುಗಳಲ್ಲಿ ಎರಡನೇಯದು ರಾಮಾಯಣ ಕಥಾ ಸರಣಿಯ ಜೈನ ಪರಂಪರೆಯಲ್ಲಿ ಪ್ರಾತಿನಿಧಿಕವಾಗಿ ಅಗ್ರಗಣ್ಯವಾದ ಕೃತಿಯಾಗಿ, ಹೃದಯಂಗಮವೂ ಲಲಿತಸುಭಗವೂ ಆದ ಅದರ ವಿಶಿಷ್ಟ ಶೈಲಿಗಾಗಿ ಅದಕ್ಕೆ ಹೆಚ್ಚು ಬೆಲೆ ಇದೆ. ಚಂಪೂಶೈಲಿಗೆ ಅಪೂರ್ವ ಸರಳತೆ ಮನೋಹರತೆಗಳನ್ನೊದಗಿಸಿದ

ಜಾನಪದ ಮೆರಗಿನ ಆಡುನುಡಿ ನುಡಿಗಟ್ಟುಗಳ, ಗಾದೆಗಳ ಮತ್ತು ಉಪಮೆಗಳ ಶ್ರೀಮಂತಿಕೆಯು ಉಕ್ಕಂಡವೇ ನಯಸೇನನ (1112) ಧರ್ಮಾಮೃತದ ವೈಶಿಷ್ಟ್ಯ. ನೇಮಿನಾಥನ ಕಥೆಯನ್ನು ನೇಮಿಚಂದ್ರ (1190) ಮತ್ತು ಕರ್ಣಪಾರ್ಯ (1140) ಇಬ್ಬರೂ ತಮ್ಮ ಕಾವ್ಯಗಳಿಗೆ ಬಳಸಿಕೊಂಡಿದ್ದರೂ, ರಸನಿರೂಪಣಾ ಸಾಮರ್ಥ್ಯ ಮತ್ತು ಕಲಾನೈಪುಣ್ಯಗಳ ದೃಷ್ಟಿಯಿಂದ ನೇಮಿಚಂದ್ರನೇ ಮೇಲು. ನೇಮಿಚಂದ್ರನ ಮತ್ತೊಂದು ಕೃತಿ ಲೀಲಾವತಿ. ಸುಬಂಧುವಿನ ವಾಸವದತ್ತಾ ಅದಕ್ಕೆ ಆಕರ. ವೀರಶೈವ ಅಂದೋಲನ ನಾಡಿನ ಸಂದಿಗೊಂದಿಗಳಲ್ಲಿ ಹರಡಿದ್ದ ಸಮಯದಲ್ಲಿ ಜನ್ನ ಬದುಕಿದ್ದ. ಆದರೂ ಅದರ ಪ್ರಭಾವಕ್ಕೊಳಗಾಗದೆ ಸಾಂಪ್ರದಾಯಕವಾದ ಚಂಪೂಪದ್ಧತಿಯಲ್ಲಿ ತನ್ನೆರಡು ಕಾವ್ಯಗಳಾದ ಯಶೋಧರ ಚರಿತ್ರೆ ಮತ್ತು ಅನಂತನಾಥ ಪುರಾಣಗಳನ್ನು ರಚಿಸಿದ್ದಾನೆ. ಕಥೆಯ ಆಕರ್ಷಣೆಯಿಂದಾಗಿ ಯಶೋಧರ ಚರಿತೆ ಅವನ ಮತ್ತೊಂದು ಕೃತಿಗಿಂತ ಹೆಚ್ಚು ಜನಪ್ರಿಯವಾಗಿದೆ. ಈ ಎರಡೂ ಕಾವ್ಯಗಳಲ್ಲಿ ಬರುವ ಕಾಮವಿಕಾರದ ಘಟನೆಗಳ ವಿಶಿಷ್ಟವೂ ಅಪೂರ್ವವೂ ಆದ ಚಿತ್ರಣ ಅವನ ಕಥನಕೌಶಲಕ್ಕೂ, ಕಲ್ಪನಾ ಪ್ರತಿಭೆಗೂ ಸಾಕ್ಷಿಯಾಗಿವೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬ್ರಾಹ್ಮಣರು ಕಾಣಿಸಿಕೊಂಡದ್ದು ತುಸು ತಡವಾಗಿ. ಆ ಹೊತ್ತಿಗೆ ಹಿಂದಿನಿಂದ ಬಂದ ಚಂಪೂ ಪದ್ಧತಿ ಅವನತಿಯ ಹಾದಿಯಲ್ಲಿತ್ತು. ಜೈನಧರ್ಮದ ಪ್ರಭಾವವೂ ಕುಂದುತ್ತಿತ್ತು. ಧಾರ್ಮಿಕ ತತ್ವಗಳ ಪ್ರತಿಪಾದನೆ ಈ ಬ್ರಾಹ್ಮಣ ಕವಿಗಳ ಉದ್ದೇಶವಾಗಿರಲಿಲ್ಲ. ಅವರಲ್ಲಿ ಮೊಟ್ಟಮೊದಲನೇಯವನಾದ ನಾಗವರ್ಮ (984) ವೆಂಗಿಪಳುವಿನವನು. ಕರ್ಣಾಟಕ ಕಾದಂಬರಿ ಅವನ ಮಹತ್ವದ ಕೃತಿಯಾಗಿದೆ. ಸಂಸ್ಕೃತ ಗದ್ಯದಲ್ಲಿದ್ದ ಬಾಣನ ಕಾದಂಬರಿಯನ್ನು ಅವನು ಕನ್ನಡದ ಚಂಪೂ ಶೈಲಿಗೆ ತಿರುಗಿಸಿದ್ದಾನೆ. ಸಂಸ್ಕೃತ ಭಾಷೆಯ ಪ್ರಭಾವಕ್ಕೊಳಗಾಗಿದ್ದರೂ ಅದು ಭಾಷಾಂತರವಲ್ಲ, ಮೂಲ ಕನ್ನಡ ಕೃತಿಯೆಂಬಂತೆ ಮೂಡಿಬಂದಿದೆ. ಅದರ ಶೈಲಿ ವಾಗ್ವೈಭವದಿಂದ ಹಾಗೂ ಓಜಸ್ಸಿನಿಂದ ಕೂಡಿದ್ದರೂ, ಕ್ಲಿಷ್ಟತೆ, ಕಾಠಿನ್ಯ ಮತ್ತು ಸುತ್ತು ಬಳಸುಗಳಿಂದ ಮುಕ್ತವಾಗಿದೆ. ಅವನ ಮತ್ತೊಂದು ಕೃತಿ ಛಂದೋಂಬುಧಿ. ಓದುಗನ ಕಲ್ಪನೆಯನ್ನು ಕೆರಳಿಸುವ ಗುಣವಿಶೇಷದಿಂದಾಗಿ, ನೇರವೂ, ಸರಳವೂ ಆದ ಕಥನ ಕಲೆಯಿಂದಾಗಿ ದುರ್ಗಸಿಂಹನ ಪಂಚತಂತ್ರ (1030) ಬಹು ಜನಪ್ರಿಯವಾಗಿದೆ. ಅದು ವಸುಭಾಗಭಟ್ಟನ ಸಂಸ್ಕೃತ ಕೃತಿಯ ಆಧಾರದ ಮೇಲೆ ರಚಿತವಾದುದಾಗಿದೆ. ವೀರಬಲ್ಲಾಳನ (1172–1219) ಕಾಲದಲ್ಲಿದ್ದ ರುದ್ರಭಟ್ಟ ವಿಷ್ಣುಪುರಾಣದ ಕಥೆಯನ್ನು ಚಂಪೂ ಶೈಲಿಯಲ್ಲಿ ಬರೆದಿದ್ದಾನೆ. ಬ್ರಹ್ಮಶಿವ, ವೃತ್ತವಿಲಾಸರಂಥ ವಿಡಂಬನೆಯ ಕವಿಗಳನ್ನು, ಆಂಡಯ್ಯನಂಥ ಅಚ್ಚಗನ್ನಡದ ಭಕ್ತರನ್ನೂ ಬಿಟ್ಟರೆ, ಉಳಿದ ಚಂಪೂ ಕವಿಗಳು ಅನುಕರಣಶೀಲರು, ಅಥವಾ ಅಲ್ಪ ಸಮರ್ಥರು ಇಲ್ಲವೆ ಆಡಂಬರ ಪ್ರಿಯರು.

## ವಚನ ಸಾಹಿತ್ಯ

ವೀರಶೈವ ಧರ್ಮ ಮತ್ತು ಭಕ್ತಿಪಂಥಗಳ ಪ್ರಸರಣದಿಂದಾಗಿ ಯುಗಧರ್ಮ ದೃಷ್ಟಿಲಕ್ಷಣಗಳು ಹನ್ನೆರಡನೇಯ ಶತಮಾನದ ಪ್ರಾರಂಭದಿಂದಲೇ ಪರಿವರ್ತನೆ ಹೊಂದುತ್ತವೆ. ವೀರಶೈವ ಕೇವಲ ಧಾರ್ಮಿಕ ಪ್ರಚಾರ ಸಾಧನವಾಗಿರದೆ ಶಕ್ತಿಯುಕ್ತವಾದ ಪುನರುಜ್ಜೀವನದ ಆಂದೋಲನವಾಗಿತ್ತು. ಅದರ ಗುರಿ ಸ್ವತಂತ್ರಾಲೋಚಕರ ನಿರ್ಜಾತೀಯ, ವರ್ಗರಹಿತ, ಸರ್ವಸುಖೀ ಸಮಾಜದ ಸ್ಥಾಪನೆಯಾಗಿತ್ತು. ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ನಿರ್ಮೂಲ ಮಾಡುವ ಮತ್ತು ಸ್ತ್ರೀಯರನ್ನು ಎಲ್ಲ ಸಾಮಾಜಿಕ ಅನರ್ಹತೆಗಳಿಂದ ಮುಕ್ತಗೊಳಿಸುವ ಪ್ರಯತ್ನ ಆ ಆಂದೋಲನದ ಉದ್ದೇಶವಾಗಿತ್ತು. ಈ ನೂತನವೂ ಕ್ರಾಂತಿಕಾರಕವೂ ಆದ ಭಾವನೆಗಳು ಅಜ್ಞಾನದ ಅಂಧಕಾರದಲ್ಲಿ ಸಂಪ್ರದಾಯದ ದಾಸ್ಯದಲ್ಲಿ ತಡವರಿಸಿ ಕಂಗಾಲಾಗಿದ್ದ ಇಡೀ ಸಮಾಜವನ್ನು ಜಾಗೃತಗೊಳಿಸಿ, ಆಲೋಚನಾಭಿಮುಖವಾಗಿಸಿದುವು. ರಾಜಾಸ್ಥಾನಗಳಲ್ಲಿ ಬಂದಿಯಾಗಿದ್ದ ಕಾವ್ಯ ಶ್ರೀಸಾಮಾನ್ಯ ಜನತೆಯ ನಡುವೆ ಸ್ವತಂತ್ರವಾಗಿ ಉಸಿರಾಡುವಂತಾಯಿತು. ಹಿಡಿಮಂದಿ ಉತ್ತಮವರ್ಗದ ಜನರ ಏಕಸ್ವಾಮ್ಯಕ್ಕೆ ವಶವಾಗಿದ್ದ ಸಂಸ್ಕೃತದ ಆಧಿಪತ್ಯಕ್ಕೆ ಸವಾಲೊಡ್ಡಿದಂತಾಯಿತು. ದೇಸಿ ಅಥವಾ ಸ್ವದೇಶೀಯ ಶೈಲಿ ಮತ್ತು ಛಂದಸ್ಸುಗಳು, ಸಾರ್ವಭೌಮತ್ವವನ್ನು ಪಡೆದವು. ಸಮಾಜವನ್ನು ಪುನಶ್ಚೇತನಗೊಳಿಸುವಲ್ಲಿ ಭಕ್ತಿಪಂಥವೂ ಪ್ರಚೋದಕಶಕ್ತಿಯಾಯಿತು. ಕಳಚೂರ್ಯ ಬಿಜ್ಜಳ ರಾಜನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಬಸವೇಶ್ವರರು ಆ ಆಂದೋಳನದ ಪ್ರಾಣಶಕ್ತಿಯಾಗಿದ್ದು, ದೀನದಲಿತರ ಉದ್ಧಾರಕ್ಕಾಗಿ ಕಂಕಣ ತೊಟ್ಟ ಆತ, ಕಾರ್ಯಮಗ್ನನಾಗಿರುವಾಗ ಪೂರ್ವವಯಸ್ಸಿನಲ್ಲಿಯೇ ಹುತಾತ್ಮನಾಗುತ್ತಾರೆ. ಅಲ್ಲಮ, ಚೆನ್ನಬಸವಣ್ಣ, ಸಿದ್ಧರಾಮೇಶ್ವರ ಮತ್ತು ಮಡಿವಾಳ ಮಾಚಯ್ಯರ ನೆರವಿನಿಂದ ಬಸವಣ್ಣ ಆ ಆಂದೋಳನದ ನೇತಾರರಾಗುತ್ತಾರೆ. ಅಲ್ಲಮಾದಿ ಪ್ರಮಥರು ಸಹ ಗುರಿಯ ಈಡೇರಿಕೆಗೆ ಶಕ್ತಿ ಮೀರಿ ಶ್ರಮಿಸುತ್ತಾರೆ.

ಬಸವಣ್ಣ ಧಾರ್ಮಿಕ ನಾಯಕ ಮಾತ್ರವಲ್ಲ, ಸಾಮಾಜಿಕ ಸುಧಾರಕರೂ ಅಹುದು. ಸಮಾಜದ ಮೇಲ್ಮೆಗಾಗಿ ತನ್ನನ್ನು ತಾನು ಸಮರ್ಪಿಸಿಕೊಂಡಾಗ ಮಾತ್ರ ಮತದ ಅಸ್ತಿತ್ವ ಸಮರ್ಥನೀಯವಾಗುತ್ತದೆಂಬುದನ್ನು ಅವರು ತಿಳಿದಿದ್ದರು. ಧರ್ಮದ ನೆರವಿಲ್ಲದೆ ಸಮಾಜ ಸುಧಾರಣೆ ಸಾಧ್ಯವಾಗಲಾರದೆಂಬ ಸಂಗತಿಯೂ ಅವರಿಗೆ ಗೊತ್ತು. ಮತ ಮತ್ತು ಅಧ್ಯಾತ್ಮಗಳಿರುವುದು ಮಾನವನ ಶ್ರೇಯಸ್ಸಿಗಾಗಿ, ಸಮಾಜದ ಏಳ್ಗೆಗಾಗಿ. ಅವುಗಳಿಂದ ದೂರ ಸರಿದ ಸಮಾಜದ ಬುಡವೇ ಅಭದ್ರವಾಗುತ್ತದೆ. ಅಧ್ಯಾತ್ಮದಿಂದ ಬೇರ್ಪಟ್ಟ ವೈಚಾರಿಕತೆಯ ತಳಹದಿಯಿಲ್ಲದ ಮತವು ವಿಧಿನಿಷೇಧಗಳ ಮತ್ತು ಮೌಢ್ಯಗಳ ಕಂತೆಯಾಗುತ್ತದೆ. ಮರ್ತ್ಯಲೋಕದಲ್ಲಿದ್ದುಕೊಂಡೇ ಮಾನುಷ

ಕ್ರಿಯೆಗಳ ಮೂಲಕ ಮೋಕ್ಷ ಅಥವಾ ಲಿಂಗಾಂಗ ಸಾಮರಸ್ಯ ವನ್ನು ಸಾಧಿಸಬಹುದು. ಪಂಚಾಚಾರಗಳು ಮತ್ತು ಅಷ್ಟಾವರಣ ಗಳು ಕೇವಲ ಸಾಧನ ಮಾತ್ರ ; ಷಟ್ಸ್ಥಲ ಮಾರ್ಗದ ರೀತ್ಯ ಈ ಸಾಧನಗಳು ಮನುಷ್ಯನು ತನ್ನ ಪರಮಗುರಿ ತಲುಪಲು ಸಹಾಯ ಮಾಡುತ್ತವೆ. ನೈತಿಕ ಮೌಲ್ಯಗಳನ್ನಾಧರಿಸಿದ ಜೀವನ ವಿಧಾನ ಆಧ್ಯಾತ್ಮ ಸಾಧನೆಯ ಯಶಸ್ಸಿಗೆ ಅನಿವಾರ್ಯ. ಇದೇ ಬಸವೇಶ್ವರರ ಮತ್ತು ಅವರ ಅನುಯಾಯಿ ಶರಣರ ಉಪದೇಶದ ತಿರುಳು.

ಸಾಮಾನ್ಯರ ಮತ್ತು ದಲಿತರ ಉದ್ಧಾರವೇ ಬಸವಣ್ಣನವರ ಜೀವನ ಧ್ಯೇಯವಾದ್ದರಿಂದ ಅವರಿಗೆ ಅರ್ಥವಾಗುವ ಸರಳವೂ ನೇರವೂ ಅಲಂಕಾರಮುಕ್ತವೂ ಆದ ಭಾಷೆಯ ಮೂಲಕ ತಮ್ಮ ಭಾವನೆಗಳನ್ನು ಅವರ ಹೃದಯಕ್ಕೆ ಮುಟ್ಟಿಸಲು ಅವರು ಪ್ರಯತ್ನಿಸುತ್ತಾರೆ. ಅಜ್ಞಾನಾಂಧಕಾರ ಎಲ್ಲಿಯೇ ಇರಲಿ, ಅದನ್ನೋಡಿಸುವ ಕರ್ತವ್ಯ ಸೂರ್ಯನಿಗೆ, ಸೂರ್ಯನಂಥ ಸತ್ಯಕ್ಕೆ ಸೇರಿದ್ದು ; ಸದಾ ಸತ್ಯಶೋಧನಾಸಕ್ತವಾದ ಆತ್ಮನ ಆಧ್ಯಾತ್ಮಿಕ ಅನುಭವಗಳ ಭಾವಾತ್ಮಕ ಅಸ್ಫೋಟಗಳೇ ವಚನಗಳು. ಅಸತ್ಯ ಮತ್ತು ಅಜ್ಞಾನಗಳ ದಾಸ್ಯದಿಂದ ಮಾನವನನ್ನು ಮುಕ್ತ ಗೊಳಿಸಿ, ಇಲ್ಲಿ ಮಾತ್ರವಲ್ಲ ಎಲ್ಲೆಲ್ಲಿಯೂ ಅವನಿಗೆ ಸುಖ ವನ್ನೊದಗಿಸುವುದೇ ಸತ್ಯದ ಸರ್ವೋದ್ದೇಶ. ಸತ್ಯ ಸರಳ ವಾದದ್ದು; ಅದನ್ನು ಕೃತ್ರಿಮರಹಿತ ರೀತಿಯಲ್ಲಿ ವಿವರಿಸಿದ್ದಾದರೆ ಓದುಬರಹ ಬಾರದವರಿಗೂ ಅರ್ಥವಾಗುತ್ತದೆಂಬುದು ಶರಣರ ಮತ. ಸತ್ಯವನ್ನು ಮರೆಮಾಚುವ, ಭಾವಾರ್ಥ ಗ್ರಹಣಕ್ಕೆ ಅಡ್ಡಿ ಯಾಗುವ, ಸಂವಹನ ಸಾಮರ್ಥ್ಯವಿಲ್ಲದ, ಕೇವಲ ಮನರಂಜಕ ವಾದ ಭಾಷೆ ವರ್ಜನೀಯವಾದದ್ದು. ಭೌತಿಕ ಮತ್ತು ಪಾರ ಮಾರ್ಥಿಕ ಮೌಲ್ಯಗಳನ್ನು ಸಮನ್ವಯಗೊಳಿಸುವಲ್ಲಿ, ಬೌದ್ಧಿಕ ಸಂಗತಿಗಳನ್ನು ಭಾವಾಂತರಗೊಳಿಸುವಲ್ಲಿ ವಚನಗಳ ಪಾತ್ರ ಹಿರಿದಾದದ್ದು. ಪ್ಲೇಟೊ ಕನಸು ಕಂಡ, ವರ್ತಮಾನದ ಭರವಸೆ ಯಂತಿರುವ ಗಣತಂತ್ರ ಯುಗದ ಪ್ರಾದುರ್ಭಾವಕ್ಕೆ ಅವು ನಾಂದಿ ಹಾಡುತ್ತವೆ.

ತಂತಮ್ಮ ಆಡುನುಡಿಯ ಮೂಲಕ ಆತ್ಮಾಭಿವ್ಯಕ್ತಿ ಸಾಧ್ಯ ವಾಗುವಂತೆ ಪಂಡಿತ ಪಾಮರರಿಂದ ಹಿಡಿದು ಸ್ತ್ರೀಯರವರೆಗೆ ವಚನಗಳು ಸಮಾನಾವಕಾಶ ಕಲ್ಪಿಸುತ್ತವೆ. ನಾನಾ ವೃತ್ತಿಗಳ, ವಿವಿಧ ಪಂಥಗಳ ಶರಣರು ಬಸವಣ್ಣನವರ ಉಪದೇಶಾಮೃತದಿಂದ ಆಕರ್ಷಿತರಾಗಿ ತಮ್ಮ ಮನೆ ಮಠಗಳನ್ನು ಹಿಂದೆಯೇ ಬಿಟ್ಟು, ಭಾರತದ ಮೂಲೆ ಮೂಲೆಗಳಿಂದ ಕಲ್ಯಾಣಕ್ಕೆ ಬರುತ್ತಾರೆ. ಆ ಮಹಾಂದೋಲನ ಅವರ ಬದುಕಿನ ಸರ್ವಸ್ವವಾಗುತ್ತದೆ. ಪ್ರತೀಯೊಬ್ಬನೂ ತನ್ನ ಪ್ರಾಮಾಣಿಕ ಅನುಭವಗಳನ್ನು ಸತ್ಪ್ರೋತ್ತೇಜಿತವಾದ ಪದ ಸಮುದಾಯ ಮತ್ತು ನುಡಿಗಟ್ಟು ಗಳನ್ನು ದಾನ ಮಾಡುವ ಮೂಲಕ ಬಹುವರ್ಣ ರಂಜಿತವಾದ ವಚನಗಳ ವಿಕಾಸಕ್ಕೆ ತನ್ನ ಕಾಣಿಕೆಯನ್ನು ಸಲ್ಲಿಸುತ್ತಾನೆ. ಜನಪದ ಸಾಹಿತ್ಯ ಮತ್ತು ಧಾಟಿಗಳಿಂದ ವಚನಗಳಿಗೆ ಮೋಹಕತೆಯೂ ನಾವೀನ್ಯವೂ ನವ್ಯತೆಯೂ ತೀವ್ರತೆಯೂ ಸ್ವಚ್ಛಂದಲಯವೂ ಸಮನಿಸುತ್ತವೆ. ಅಲಂಕಾರಗಳ ಭಾರ ವಿಲ್ಲದೆಯೂ ಅವು ಕಾವ್ಯಮಯವಾಗಿವೆ. ಹಲವು ವಚನಗಳಲ್ಲಿ ಭಾವಗೀತೆಗಳ ಲಕ್ಷಣಗಳು ಹೊರವಾಗಿವೆ. ಸಮಗ್ರ ಸಾಹಿತ್ಯ ಕ್ಷೇತ್ರ ನೂತನ ದರ್ಶನದಿಂದ ಅಪೂರ್ವ ಉತ್ಸಾಹದಿಂದ, ಅನೂನ ಚೈತನ್ಯದಿಂದ ಸ್ಪಂದಿಸುತ್ತದೆ. ಒಟ್ಟಿನಲ್ಲಿ ನವಯುಗ ಮತ್ತು ನವಸಮಾಜದ ವಾಣಿ ಅವುಗಳ ಮೂಲಕ ಹೊರಹೊಮ್ಮುತ್ತದೆ. ಈ ವಚನಗಳು ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲ, ಭಾರತೀಯ ಸಾಹಿತ್ಯಕ್ಕಷ್ಟೇ ಅಲ್ಲ, ಇಡೀ ಜಗತ್ತಿನ ಸಾಹಿತ್ಯಕ್ಕೆ ಅಮೂಲ್ಯ ವಾದ ಕೊಡುಗೆಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ಕಲ್ಯಾಣದಲ್ಲಿ ನಡೆದ ದುರಂತ ಘಟನೆಗಳ ನಂತರ ಎಲ್ಲ ಶರಣರು ಚದರುತ್ತಾರೆ. ಅದರಿಂದಾಗಿ ವೀರಶೈವ ಆಂದೋಳನ ಸ್ಥಗಿತ ಗೊಳ್ಳುತ್ತದೆ. ಸಾಹಿತ್ಯಿಕ ಚಟುವಟಿಕೆಗಳು ಮಂದವಾಗುತ್ತವೆ.

ಎರಡು ಶತಮಾನಗಳ ನಂತರ, ವಿಜಯನಗರ ಸಾಮ್ರಾಜ್ಯದ ಪರ್ವಕಾಲದಲ್ಲಿ, ಇಬ್ಬರು ದಂಡಾಧಿಪತಿಗಳಾದ ಜಕ್ಕಣಾರ್ಯ ಮತ್ತು ಲಕ್ಕಣ್ಣ ದಂಡೇಶರ ಆಶ್ರಯದಲ್ಲಿ ವೀರಶೈವ ಆಂದೋಳನ ಪುನರುಜ್ಜೀವನಗೊಳ್ಳುತ್ತದೆ. ಈ ಇಬ್ಬರೂ ಕವಿಗಳೇ. ಶಿವ ತತ್ತ್ವ ಚಿಂತಾಮಣಿಯೆಂಬ ಬೃಹದ್ಗ್ರಂಥದ ಕರ್ತೃ ಲಕ್ಕಣ್ಣ ದಂಡೇಶ. ಜಕ್ಕಣಾರ್ಯನ ಪ್ರೋತ್ಸಾಹದಿಂದ ಆರ್ಯರ ವಚನ ಗಳನ್ನು ಉತ್ಸಾಹದಿಂದ ಸಂಗ್ರಹಿಸುವ, ಸಂಪಾದಿಸುವ ಮತ್ತು ರಕ್ಷಿಸುವ ಕಾರ್ಯ ಶೀಘ್ರವಾಗಿ ಜರುಗುತ್ತದೆ. ಹದಿನೈದನೇಯ ಶತಮಾನದಲ್ಲಿ ಯಡಿಯೂರು ಸಿದ್ಧಲಿಂಗಯತಿಯ ಆಧ್ಯಾತ್ಮಿಕ ಸ್ಫೂರ್ತಿ ಮತ್ತು ಮಾರ್ಗದರ್ಶನದಲ್ಲಿ ಕಠಿನವೂ ನಿಗೂಢವೂ ಆದ ವಚನಗಳಿಗೆ ವ್ಯಾಖ್ಯಾನಗಳನ್ನು ರಚಿಸುವ ಕಾರ್ಯ ಪ್ರಾರಂಭವಾಗುತ್ತದೆ. ಆದರೆ ಜತೆ ಜತೆಯಲ್ಲಿಯೇ ವಚನ ಸಾಹಿತ್ಯದ ಸೃಷ್ಟಿಯೂ ಮತ್ತೆ ಪ್ರಾರಂಭವಾಗುತ್ತದೆ. ಸಿದ್ದಲಿಂಗ ಯತಿಯೂ ಸ್ವಯಂವಚನಕಾರನೇ. ಹನ್ನೆರಡನೇಯ ಶತಮಾನದ ವಚನಗಳಂತೆ ಅವನ ವಚನಗಳು ಲಲಿತವಾಗಿಲ್ಲ ದಿದ್ದರೂ ಗಹನ ತತ್ವಗಳಿಂದ ಮತ್ತು ಆಧ್ಯಾತ್ಮಿಕ ಅನುಭವ ಗಳಿಂದ ಪರಿಪ್ಲುತವಾಗಿವೆ. ಆ ಕಾಲದ ಇತರ ವಚನಕಾರರ ಪ್ರತಿಭೆ ಮಹತ್ತರವಾದದ್ದಲ್ಲ; ವಚನ ರಚನೆಯ ಉತ್ಸಾಹವೂ ಬಹುದಿನ ಉಳಿಯಲಿಲ್ಲ.

ಹಳಗನ್ನಡ ನಡುಗನ್ನಡವಾಗಿ, ಸಂಸ್ಕೃತ ಛಂದಸ್ಸು ಕನ್ನಡ ಛಂದಸ್ಸಾಗಿ ಪರಿವರ್ತನೆ ಹೊಂದಿದ್ದು ವಚನಯುಗದ ಎರಡು ವಿಶಿಷ್ಟ ಲಕ್ಷಣಗಳು. ಜಗತ್ತಿನ ಪ್ರಪ್ರಥಮ ಕಥನ ಕವನಕಾರ ಹರಿಹರ ರಗಳೆಯನ್ನು ವ್ಯಾಪಕವಾಗಿ ಕೃಷಿ ಮಾಡಿ, ಅದರ ಸಾಮರ್ಥ್ಯವನ್ನು ಸಂಪೂರ್ಣವಾಗಿ ಸೂರೆಗೊಂಡು, ಕಥನ

ಕಾವ್ಯದ ವಿನೂತನ ಸಮರ್ಥವಾಹಕವನ್ನಾಗಿ ಬೆಳೆಸಿದ್ದು ಅವನ ಸ್ವತಂತ್ರ ಪ್ರತಿಭೆಗೆ ದ್ಯೋತಕವಾಗಿದೆ, ಪ್ರವಾದೀ ದರ್ಶನಕ್ಕೆ ಸಾಕ್ಷಿಯಾಗಿದೆ. ಪೂರ್ವ ವಯಸ್ಸಿನಲ್ಲಿಯೇ ಸಂಸಾರವನ್ನೂ ಐಹಿಕ ಭೋಗಗಳನ್ನೂ ತ್ಯಜಿಸಿ, ಹಂಪೆಯ ವಿರೂಪಾಕ್ಷನ ಮಹಾ ಭಕ್ತನಾಗುತ್ತಾನೆ. ತನ್ನ ಕಾವ್ಯ ಪ್ರತಿಭೆಯನ್ನು ದೊರೆಗಳ ಮತ್ತು ಮರ್ತ್ಯದ ಸಂಸ್ತುತಿಗಾಗಿ ಬಳಸುವುದಿಲ್ಲವೆಂದು ಅವನು ಸಂಕಲ್ಪಿಸಿಕೊಳ್ಳುತ್ತಾನೆ; ಶರಣ ಸಂತರ ಸಾಧನೆ ಸಿದ್ಧಿಗಳನ್ನು ಕುರಿತು ಕಾವ್ಯ ರಚಿಸುತ್ತಾನೆ. ನೂರಕ್ಕಿಂತಲೂ ಮಿಗಿಲಾದ ಕಥನಕಾವ್ಯಗಳನ್ನು ಅವನ ಹೆಸರಿಗೆ ಸೇರಿಸಲಾಗಿದೆ. ಅವನು ಅರವತ್ತೊಂದು ಕಾವ್ಯಗಳನ್ನು ಮಾತ್ರ ರಚಿಸಿದ್ದಾನೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅದೇನೇ ಇರಲಿ ಅವನು ಚಾಸರ್‌ನಿಗಿಂತ ಪೂರ್ವದಲ್ಲಿದ್ದ ಮಹಾಕಥನಕಾವ್ಯಕಾರ ನೆಂಬುದರಲ್ಲಿ ಸಂಶಯವಿಲ್ಲ. ಬಸವರಾಜದೇವರ ರಗಳೆ, ನಂಬಿಯಣ್ಣನ ರಗಳೆ, ಮಲುಹಣನ ರಗಳೆ, ಪಂಪಾಶತಕ, ಮತ್ತು ರಕ್ಷಾ ಶತಕ ಅವನ ಕಥನ ಕಾವ್ಯಗಳಲ್ಲಿ ಕೆಲವು. ಅವನ ಜೀವನ ವ್ಯಾಪಾರಗಳನ್ನೆಲ್ಲ ಆಳುವ ಏಕಮಾತ್ರ ಶಕ್ತಿಯೆಂದರೆ ಭಕ್ತಿ. ಭಕ್ತಿಯ ಉನ್ಮಾದದಲ್ಲಿದ್ದಾಗ ಅವನ ಪ್ರತಿಭೆಗೆ ಅಮಲೇರುತ್ತದೆ. ರಗಳೆಯ ಕವಿಯೆಂಬ ಕುಚೇಷ್ಟೆಯ ಮಿಥ್ಯಾಪವಾದ ರೂಪದ ಪಂಡಿತರ ಲೇವಡಿಯನ್ನು ಸುಳ್ಳು ಮಾಡುವ ಸಲುವಾಗಿ ಅವನು ಚಂಪೂ ಶೈಲಿಯಲ್ಲಿ ಸತ್ವಪೂರ್ಣದಾದ ಗಿರಿಜಾಕಲ್ಯಾಣವನ್ನು ರಚಿಸಿದನೆಂಬ ಕಥೆಯೊಂದು ಪ್ರಚಲಿತವಾಗಿದೆ.

ಹರಿಹರ ಷಟ್ಪದಿಯ ವಿಕಾಸಕ್ಕೆ ನೀಡಿದ ಪರೋಕ್ಷ ಕಾಣಿಕೆ ಮರೆಯುವಂಥದಲ್ಲ. ರಗಳೆಯ ಗರ್ಭದಲ್ಲಿಯೇ ಷಟ್ಪದಿ ಮೊಳಕೆ ಯೊಡೆದಿತ್ತೆಂಬುದು ನಿಜ. ತನ್ನ ಸೋದರಮಾವ ಹರಿಹರನಿಂದ ಸ್ಫೂರ್ತಿ ಪಡೆದ ರಾಘವಾಂಕ ನೂತನ ಮಾರ್ಗಪ್ರವರ್ತಕನೂ ಅಹುದು, ಪ್ರತಿಭಾವಂತ ಕನಸುಗಾರನೂ ಅಹುದು. ಅವನು ಹೊಸದೊಂದು ಛಂದಃಪ್ರಕಾರವನ್ನು ಕೈಗೆತ್ತಿಕೊಂಡು, ಅದನ್ನು ಶ್ರೇಷ್ಠ ಸಂವಹನ ಮಾಧ್ಯಮವನ್ನಾಗಿ ಮಾಡಲು ತನ್ನೆಲ್ಲ ಶಕ್ತಿ ಕೌಶಲ್ಯ ಪ್ರತಿಭೆಗಳನ್ನು ಧಾರೆಯೆರೆದು, ತಿದ್ದಿ, ತೀಡಿ, ರೂಪಿ ಸುತ್ತಾನೆ. ಧರ್ಮೋತ್ಸಾಹ ಅವನ ಸೃಜನ ಸಾಮರ್ಥ್ಯದ ಚಾಲಕಶಕ್ತಿಯಾದರೂ, ಕಾವ್ಯಪ್ರತಿಭೆಯ ಮೇರೆತಕ್ಕೆ ಅದು ಅಡ್ಡಿಯಾಗದಂತೆ ಎಚ್ಚರಿಕೆ ವಹಿಸುತ್ತಾನೆ. ಸೋಮನಾಥ ಚರಿತೆ ಮತ್ತು ಸಿದ್ಧರಾಮ ಚರಿತ್ರೆಗಳು ಅಂಥ ಕಾವ್ಯಸರಣಿಯಲ್ಲಿ ಮೊಟ್ಟಮೊದಲ ಕೊಂಡಿಗಳಾಗುತ್ತವೆ. ಪೌರಾಣಿಕ ವಸ್ತುವನ್ನು ಬಳಸಿಕೊಂಡು ಅವನು ರಚಿಸಿದ ಕಾವ್ಯಗಳಲ್ಲಿ ಹರಿಶ್ಚಂದ್ರ ಕಾವ್ಯ ಆದರ ಕಲ್ಪನಾಪ್ರತಿಭೆಯಿಂದಾಗಿ ಘಟನೆಗಳ ನಿರೂಪಣಾ ಕೌಶಲ ದಿಂದಾಗಿ ವಿಶಿಷ್ಟ ವಿಶ್ವವರೌಲ್ಯಗಳಿಂದಾಗಿ ಮಹತ್ಕೃತಿಯಾಗಿದೆ. ವಾಸ್ತವವಾಗಿ ಅವನ ಪ್ರತಿಭೆ ಶಿಖರಸ್ಪರ್ಶಿಯಾದದ್ದು ಈ ಕಾವ್ಯ ದಲ್ಲಿಯೇ. ವಿಭ್ರಾಜಮಾನವೂ ಸ್ಫೂರ್ತಿದಾಯಕವೂ ಆದ ಅವನ ವ್ಯಕ್ತಿತ್ವ ಮುಂದಿನ ಪೀಳಿಗೆಯ ಕವಿಗಳಿಗೆ ಆಕರ್ಷಕ ವಸ್ತು ವಾಗುತ್ತದೆ.

ಈ ಜನಪ್ರಿಯ ಛಂದಃ ಪ್ರಕಾರದ ಮಹಿಮೆಯನ್ನು ಬಹು ಗುಣಗೊಳಿಸಿದ ವೀರಶೈವ ಕವಿಗಳಲ್ಲಿ ಚಾಮರಸನಿಗೆ ವಿಶೇಷ ಗೌರವ ಸಲ್ಲುತ್ತದೆ. ಜೈನ ಬ್ರಾಹ್ಮಣ ಕವಿಗಳಂತೆ ವೀರಶೈವರೂ ಸ್ವಧರ್ಮ ಪ್ರಸರಣಕ್ಕನುಕೂಲವಾಗುವಂತೆ ಪೌರಾಣಿಕ ಸಂಪ್ರ ದಾಯವನ್ನು ಪ್ರಾರಂಭಿಸಿ, ಬೆಳೆಸಿ, ಪೋಷಿಸಿ, ದೇದೀಪ್ಯಗೊಳಿಸು ತ್ತಾರೆ. ಈ ಶ್ರೀಮಂತ ಸಂಪ್ರದಾಯ ಕಾವ್ಯಸಿದ್ಧಿಯ ರಜತ ಚಿಹ್ನೆಯೆನ್ನಬಹುದಾದರೂ, ಪೂರ್ವಕವಿಗಳ ಅನುಕರಣ ಮತ್ತು ಪುನರಾವೃತ್ತಿಗಳು ಸಮೃದ್ಧಿಯಾಗಿ ಪ್ರಕಟಗೊಂಡುವೆಂದೇ ಹೇಳ ಬೇಕು. ಆಯಾಯ ಕಾಲದ ಮನೋಧರ್ಮಕ್ಕೆ ತಕ್ಕಂತೆ ಷಟ್ಪದಿ ಅಥವಾ ಸಾಂಗತ್ಯಗಳನ್ನು ಬಳಸಿಕೊಂಡು, ಕುಮಾರ ಪದ್ಮರಸ, (1180), ಬೊಮ್ಮರಸ (1430), ಸುರಂಗ (1500), ಗುಬ್ಬಿಯ ಮಲ್ಲಣಾರ್ಯ (1513), ಭೀಮಕವಿ (1360), ಪದ್ಮಣಾಂಕ (1385), ಚನ್ನಬಸವಾಂಕ (1550), ವಿರಕ್ತ ತೋಂಟದಾರ್ಯ (1560), ವಿರೂಪಾಕ್ಷ ಪಂಡಿತ (1585) ಮೊದಲಾದ ಹಲವು ಕವಿಗಳು ಈ ಸಂಪ್ರದಾಯವನ್ನು ವ್ಯಾಪಕ ವಾಗಿ ಬೆಳೆಸಿದ್ದಾರೆ.

ನಿಜಗುಣ ಶಿವಯೋಗಿ ಮತ್ತು ಸರ್ವಜ್ಞರ ಮಹತ್ಕಾರ್ಯ ವನ್ನು ಗಮನಿಸದಿದ್ದರೆ ವೀರಶೈವ ಆಂದೋಲನದ ಕಥೆ ಪೂರ್ಣ ವಾಗುವುದಿಲ್ಲ. ನಿಜಗುಣ ಶಿವಯೋಗಿ ದೊರೆಯಾಗಿ, ಸಂತನಾಗಿ, ವಿದ್ವಾಂಸನಾಗಿ ಆ ಯುಗದಲ್ಲಿ ಮಾತ್ರವಲ್ಲ, ಈ ಯುಗದಲ್ಲಿಯೂ ಸರ್ವರ ಗೌರವಾದರಗಳಿಗೆ ಪಾತ್ರನಾದವನು. ಅವನು ರಚಿಸಿರುವ ಅನೇಕ ಹಾಡುಗಳು ಕರ್ನಾಟಕ ಸಂಗೀತದ ಪುರಸ್ಕರ್ತನೆಂಬ ಬಿರುದನ್ನು ಅವನಿಗೆ ತಂದುಕೊಟ್ಟಿವೆ. ಅವನು ತನ್ನ ಕೃತಿಗಳಲ್ಲಿ ಸಾಂಗತ್ಯ, ರಗಳೆ ಮತ್ತು ತ್ರಿಪದಿ ಛಂದಸ್ಸುಗಳನ್ನು ಬಳಸಿದ್ದಾನೆ. ಪ್ರಪ್ರಥಮ ವಿಶ್ವಕೋಶವೆಂಬ ಅಭಿದಾನಕ್ಕೆ ಪಾತ್ರವಾದ ಅವನ ವಿವೇಕಚೂಡಾಮಣಿ ಗದ್ಯದಲ್ಲಿದೆ. ಪಂಪ, ಬಸವೇಶ್ವರ ಮತ್ತು ಕುಮಾರವ್ಯಾಸರಂತೆ ಸರ್ವಜ್ಞನೂ ವಿಶ್ವಮಾನವ. ಅವನಿಗೆ ಮನೆಯೆಂಬುದಿಲ್ಲ ; ಲೋಕವೇ ಅವನ ಮನೆ. ಅವನು ನಿರ್ಮತೀಯ ; ಮನುಜನ ಮತವೇ ಅವನ ಮತ. ಕೌಪೀನದ ವಿನಾ ಅವನು ದಿಗಂಬರ. ಅವನಲ್ಲಿ ದುಗ್ಗಾಣಿಯೂ ಇಲ್ಲ ; ಅಧ್ಯಾತ್ಮಿಕ ಶಕ್ತಿಯೇ ಅವನ ಸಂಪತ್ತು. ಅವನೊಬ್ಬ ಸಹಜ ಬೈರಾಗಿ. ಸಮಾಜವನ್ನು ಸಹಾನುಭೂತಿಯುಳ್ಳ ಪ್ರೇಕ್ಷಕನಂತೆ ವೀಕ್ಷಿಸುತ್ತಾನಾದರೂ ಅವನು ಪೂರ್ಣ ನಿರ್ಲಿಪ್ತ. ಮನೋ ಧರ್ಮದಿಂದ ಗ್ರಾಮಿಣಿಣನಂತೆ ತೋರಿದರೂ, ವರ್ತನೆಯಿಂದ ಅಧ್ಯಾತ್ಮಸಿಂಹ. ರಾಜಮಹಾರಾಜರೂ ಅವನಿಗೆ ಲಕ್ಷ್ಯವಿಲ್ಲ. ಅತನು ದುರ್ಗುಣ, ದೌರ್ಜನ್ಯ, ಗರ್ವ ಮತ್ತು ವಂಚನೆಗಳನ್ನು ಸಹಿಸಿದವನಲ್ಲ. ಅವನು ನಿಷ್ಕಪಟಿ. ಕಟುವಾದರೂ ಸತ್ಯವನ್ನೇ ನುಡಿಯುವ ಛಲ ಅವನದು. ಸಂದಿಗ್ಧ ಶೀಲದ ಜನರ ಕುಕರ್ಮ ಗಳನ್ನು ಬಯಲಿಗೆಳೆಯುವಲ್ಲಿ ಅವನ ಮಾತು ಸಿಡಿಲ ಕುಂಡವಾಗು ತ್ತದೆ. ಸಮಾಜಕ್ಕೆ ಸವಾಲಾಗಿದ್ದ ಕೆಡುಕುಗಳನ್ನು ನಿರ್ಮೂಲ

ಗೊಳಿಸುವ ಜಂಗಮ ವೈದ್ಯ ಅವನು. ಅವನ ಲೋಕಾನುಭವ ಹಾಗೂ ನೈಜ ವಿವೇಕಗಳು ವಚನಗಳಿಗೆ ಹತ್ತಿರವಾದ ತ್ರಿಪದಿಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಅವನ ಸೂಕ್ಷ್ಮದೃಷ್ಟಿಗೆ ಬೀಳದ ಸಾಮಾಜಿಕ ವಿಷಯವೇ ಇಲ್ಲ. ಅವನ ವೀಕ್ಷಣ ಸಾಮರ್ಥ್ಯ ಅದ್ಭುತವಾದದ್ದು. ಆಡಂಬರ, ಅಸ್ಪಷ್ಟತೆ ಮತ್ತು ಕ್ಲಿಷ್ಟತೆ ಗಳಿಂದ ಅವನ ತ್ರಿಪದಿಗಳು ಮುಕ್ತವಾಗಿವೆ. ಅವು ಸತ್ಯದಂತೆ ಸರಳ, ತಂಗಾಳಿಯಂತೆ ಉಲ್ಲಾಸಕರ, ಬೆಳಕಿನಂತೆ ಸುಸ್ಪಷ್ಟ, ಚುಂಬಕಶಕ್ತಿಯಂತೆ ಆಕರ್ಷಕ. ಅವು ಚುಚ್ಚಿದರೂ ಶರೀರಕ್ಕೆ ಅಮೃತವನ್ನೊದಗಿಸುತ್ತವೆ. ವಿಡಂಬನೆ ಮತ್ತು ವಿವೇಕ ಅವನ ತ್ರಿಪದಿಗಳ ಸಾರಗುಣ.

## ವೈಷ್ಣವ ಸಾಹಿತ್ಯ

ವೀರಶೈವಕ್ಕೆ ಸವಾಲೆಂಬಂತೆ, ಬ್ರಾಹ್ಮಣ್ಯದ ಪುನರುಜ್ಜೀವನಕ್ಕೆ ಪ್ರೇರಕಶಕ್ತಿಯೆಂಬಂತೆ ಹದಿನಾರನೇಯ ಶತಮಾನದಲ್ಲಿ ದಾಸಕೂಟ ವ್ಯಾಸಕೂಟಗಳನ್ನೊಳಗೊಂಡ ವೈಷ್ಣವಾಂದೋಳನ ಮೊಗದೋರುತ್ತದೆ. ದಾಸಕೂಟದ ಕವಿಗಳ ಕೃತಿಗಳಲ್ಲಿ ಮಾತ್ರವಲ್ಲ, ಅನಂತರ ಕವಿಗಳ ಕಾವ್ಯಗಳಲ್ಲಿಯೂ ವೀರಶೈವ ಸಾಹಿತ್ಯದ ಪ್ರಭಾವ ಮುದ್ರೆಯನ್ನು ಸುಸ್ಪಷ್ಟವಾಗಿ ಗುರುತಿಸಬಹುದು. ನರಹರಿ ಮತ್ತು ಶ್ರೀಪಾದರಾಯರು ಈ ಪಂಥದ ಮೂಲಪುರುಷರೆಂದು ಹೇಳಬಹುದು. ವ್ಯಾಸರಾಯರ ಶಿಷ್ಯರಾದ ಪುರಂದರದಾಸ, ಕನಕದಾಸರು ಈ ಆಂದೋಲನ ಸಮುಜ್ವಲ ನಕ್ಷತ್ರಗಳೆಂಬುದು ಸರ್ವವೇದ್ಯ ಸಂಗತಿ. ಕರ್ನಾಟಕ ಸಂಗೀತದ ಪಿತಾಮಹರೆಂದು ಮೊದಲನೇಯವರು ಪ್ರಸಿದ್ಧರಾದರೆ ಶ್ರೀಸಾಮಾನ್ಯನ ಆಧ್ಯಾತ್ಮಿಕ ಅಭೀಪ್ಸದ ಮತ್ತು ಅದ್ಭುತ ಸಿದ್ಧಿಗಳ ಸಂಕೇತವೆಂದು ಎರಡನೇಯವರು ವಿಖ್ಯಾತರಾಗಿದ್ದಾರೆ. ಕೀರ್ತನೆ ಹಾಗೂ ಕಾವ್ಯಗಳ ಜತೆಗೆ ಕನಕದಾಸರು ರಾಮಧಾನ್ಯ ಚರಿತ್ರೆಯೆಂಬ ಅಣಕು ಮಹಾಕಾವ್ಯವನ್ನು ರಚಿಸಿದ್ದಾರೆ. ಈ ಪಂಥದ ಕೀರ್ತನಕಾರರ ಮತ್ತು ಕವಿಗಳ ಪ್ರಧಾನೋದ್ದೇಶ ದ್ವೈತ ಮತದ ತಾತ್ತ್ವಿಕ ಸಿದ್ಧಾಂತಗಳ ಬೋಧನೆಯಾದರೂ, ಸಾಮಾಜಿಕ ಚಿತ್ರಣದ ಹಾಗೂ ಜನರ ನಡೆನುಡಿಗಳ ವಿಮರ್ಶೆಗಳ ಕಡೆಗೂ ಅವರು ಗಮನ ಹರಿಸುತ್ತಾರೆ. ಹಿಂದಿನ ಜೈನ ಮತ್ತು ಬ್ರಾಹ್ಮಣ ಕವಿಗಳು ಪಂಡಿತರಾಗಿದ್ದು, ಮುಖ್ಯವಾಗಿ ಪಂಡಿತರಿಗಾಗಿಯೇ ಕಾವ್ಯ ರಚನೆ ಮಾಡಿದ್ದುಂಟು. ದಾಸಕೂಟದ ಕವಿಗಳು ಬಹುತೇಕವಾಗಿ ಬ್ರಾಹ್ಮಣರಾದರೂ, ಪ್ರಾಯಶಃ ವೀರಶೈವ ಪ್ರಭಾವ ವಲಯದಿಂದ ಸಾಮಾನ್ಯರನ್ನು ಅವಚುವ ಸಲುವಾಗಿ ಎಂದು ಕಾಣುತ್ತದೆ, ಅವರಿಗಾಗಿ ಕೀರ್ತನೆ ಕಾವ್ಯ ರಚಿಸುತ್ತಾರೆ. ಆದ್ದರಿಂದ ಜನಪದ ಸಂಗೀತವೂ ಸೇರಿಕೊಂಡು, ಅನೇಕ ಜಾನಪದೀಯಾಂಶಗಳನ್ನು ತಮ್ಮ ಕೃತಿಗಳಲ್ಲಿ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ವಚನ ಮತ್ತು ಕೀರ್ತನೆಗಳ ಉಗಮದ ಹಿನ್ನಲೆ ಹೆಚ್ಚು ಕಡಿಮೆ ಒಂದೇಯಾದ್ದರಿಂದ, ಅವುಗಳಲ್ಲಿ ಹಲವು ಸಾಮ್ಯಗಳು ಗೋಚರಿಸುತ್ತವೆ. ಪ್ರತೀಯೊಂದು ವಚನದ ಅಥವಾ ಕೀರ್ತನೆಯ ಮೊದಲ ವಾಕ್ಯ ಅಥವಾ ವಾಕ್ಯಾಂಶ ಬೀಜ ವಾಕ್ಯದಂತಿದ್ದು, ಇಡೀ ವಚನದ ಅಥವಾ ಹಾಡಿನ ಸಾರಸತ್ವವನ್ನು ಹೊಂದಿರುತ್ತದೆ.

ದಾಸಕೂಟ ಸಾಹಿತ್ಯದ ದೃಷ್ಟಿಯಿಂದ ಹದಿನೇಳನೇಯ ಶತಮಾನ ಬರಡೆಂದೇ ಹೇಳಬಹುದು. ಹದಿನೆಂಟನೇಯ ಶತಮಾನದಲ್ಲಿ ಅದು ಪ್ರಸನ್ನ ವೆಂಕಟದಾಸ, ಮಹೀಪತಿದಾಸ, ವಿಜಯ ದಾಸ, ಗೋಪಾಲ ದಾಸ ಮತ್ತು ಜಗನ್ನಾಥ ದಾಸರೇ ಮುಂತಾದ ಮಾಧ್ವ ಧರ್ಮದ ಅನುಯಾಯಿಗಳಿಂದ ಪುನರುಜ್ಜೀವನಗೊಳ್ಳುತ್ತದೆ. ಅವರಲ್ಲಿ ಜಗನ್ನಾಥ ದಾಸರು ಒಳ್ಳೆಯ ಕವಿಗಳೆಂದು ಪ್ರಸಿದ್ಧರಾಗಿದ್ದಾರೆ. ಅವರು ಕೀರ್ತನೆ ಮಾತ್ರವಲ್ಲ, ಇತರ ದೇಶೀಯ ಛಂದಸ್ಸುಗಳಲ್ಲಿಯೂ ಕೃತಿಗಳನ್ನು ರಚಿಸಿದ್ದಾರೆ.

## ವಿಜಯನಗರ ಕಾಲ

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕರ್ನಾಟಕ ಸಂಸ್ಕೃತಿ ಅತ್ಯುನ್ನತ ಶಿಖರವನ್ನು ಮುಟ್ಟುತ್ತದೆಯಷ್ಟೆ? ಭರತ ಖಂಡದ ಆಚೆಯ ದೂರದೂರದ ದೇಶಗಳಲ್ಲಿಯೂ ಅದರ ಕೀರ್ತಿಯು ಹರಡುತ್ತದೆ. ಪ್ರಾಯಶಃ ಜಗತ್ತಿನ ನಾಗರಿಕತೆಯ ಆಗಿನ ಇತಿಹಾಸದಲ್ಲಿ ಅದಕ್ಕೆ ಸರಿಸಾಟಿಯಾದ ಸಂಸ್ಕೃತಿ ವೈಭವದ ಸಾಮ್ರಾಜ್ಯವೇ ಇರಲಿಲ್ಲವೆನ್ನಬಹುದು. ಆ ಯುಗದ ಶಕ್ತಿ ಸಾಮರ್ಥ್ಯಗಳ ಉಜ್ವಲ ಸಂಕೇತವಾಗಿ ಸಾಹಿತ್ಯ ಕ್ಷೇತ್ರದಲ್ಲಿ ನಾರಣಪ್ಪ ರಾರಾಜಿಸುತ್ತಾನೆ. ಗದುಗಿನ ಭಾರತವೆಂದು ಜನಪ್ರಿಯವಾಗಿರುವ ಅವನ ಕರ್ನಾಟಕ ಭಾರತ ಕಥಾ ಮಂಜರಿ ಎಂಬ ಮಹಾಕಾವ್ಯದಲ್ಲಿ ಆ ಯುಗದ ಶ್ರೀಮಂತ ವೈಭವವೂ ಸಮಾಜದ ರಮ್ಯೋಜ್ವಲ ಭವ್ಯ ವ್ಯಕ್ತಿತ್ವವೂ ಆದರ್ಶೀಕೃತ ರೂಪದಲ್ಲಿ ಪ್ರತಿಬಿಂಬಗೊಂಡಿವೆ. ಕವಿಯ ವ್ಯಕ್ತಿತ್ವ ಕಾವ್ಯದಲ್ಲೆಲ್ಲಿಯೂ ಸಾಮಾನ್ಯವಾಗಿ ತಲೆಯೆತ್ತುವುದಿಲ್ಲ. ಅವನು ಹುಟ್ಟಿನಿಂದ ಆಕಸ್ಮಿಕವಾಗಿ ಬ್ರಾಹ್ಮಣನಾದರೂ, ಮನೋಧರ್ಮ ಸತ್ವಗಳ ದೃಷ್ಟಿಯಿಂದ ಅವನು ವಿಶ್ವಮಾನವ; ಪ್ರವೃತ್ತಿ ಮತ್ತು ಸಾಧನೆಗಳ ದೃಷ್ಟಿಯಿಂದ ಅವನು ಜಾಜ್ವಲ್ಯಮಾನನಾದ ಮಹಾಕವಿ. ಸುಮಾರು ಐವತ್ತು ವರ್ಷಗಳಿಂದಲೂ ಅವನ ಮತ ಸಮಸ್ಯೆಯ ವಿಚಾರವಾಗಿ ವಿದ್ವಾಂಸರಲ್ಲಿ ವಿಪುಲವಾದ ಚರ್ಚೆ ನಡೆದಿದೆ. ಅವನು ಮಾಧ್ವನೆಂದು, ಸ್ಮಾರ್ತನೆಂದು, ಭಾಗವತ ಸಂಪ್ರದಾಯದವನೆಂದು ತಮತಮಗೆ ತೋಚಿದಂತೆ ಭಿನ್ನಭಿನ್ನಮತೀಯರು ವಾದ ವಿವಾದಗಳನ್ನು ಮಂಡಿಸಿದ್ದಾರೆ. ಆದರೂ ಇದೇ ಸರಿಯೆಂದು ನಿರ್ಣಯಿಸುವುದು ಕಷ್ಟ. ಸತ್ಯಾನ್ವೇಷಣೆ ಹಾಗೂ ಅಧ್ಯಾತ್ಮಕ ಸಾಧನೆಯೇ ಪ್ರಧಾನೋದ್ದೇಶವಾದ ವಿಷ್ಣುಮತಕ್ಕೆ ಅವನು ಸೇರಿದವನಾಗಿರಬೇಕೆಂದು

ಊಹಿಸಲು ವಿದ್ವಾಂಸರ ಸೋಲೇ ಕಾರಣವಾಗಿದೆ. ಕಾವ್ಯದಲ್ಲಿ ಕೆಲವೆಡೆ ಅಪರೂಪವಾಗಿ ಬ್ರಾಹ್ಮಣೋತ್ಕರ್ಷ ಎದ್ದು ಕಾಣುವುದುಂಟು. ಹೋಮರ್ ಸಹ ತೂಕಡಿಸುತ್ತಾನೆಂಬ ಹಳೆಯ ಗಾದೆಯನ್ನು ನೆನಪಿಗೆ ತಂದುಕೊಂಡು, ಈ ಸಣ್ಣ ದೌರ್ಬಲ್ಯವನ್ನು ನಿರ್ಲಕ್ಷಿಸಬಹುದಾಗಿದೆ. ಪೂರ್ವದ ಬ್ರಾಹ್ಮಣ ಕವಿಗಳು ಸಂಪ್ರದಾಯ ನಿಷ್ಠರಾಗಿದ್ದು ತಮಗಾಗಿ ತಮ್ಮ ವರ್ಗದವರಿಗಾಗಿ ಕಾವ್ಯ ರಚನೆ ಮಾಡಿದ್ದೆಂಬುದನ್ನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ. ಆದರೆ ಕುಮಾರವ್ಯಾಸ ರಚನೆ ಮಾಡಿದ್ದು ಮನುಕುಲದ ಉತ್ಥಾನಕ್ಕಾಗಿ. ಕವಿ ಮತ್ತು ಶ್ರೀಸಾಮಾನ್ಯನ ನಡುವಣ ಸಂವಹನ ಕಂದರವನ್ನು ಕೂಡಿಸಿ, ಹೃದಯ ಸಂವಾದವನ್ನು ಬೆಸೆಯುವ ಸಲುವಾಗಿ ಅವನು ಜಾನಪದ ಸತ್ವಸಾರವನ್ನೂ, ಆಡುಮಾತಿನ ಬನಿಮೋಡಿಗಳನ್ನು ಸಾರ್ಥಕವಾಗಿ ಬಳಸಿಕೊಳ್ಳುತ್ತಾನೆ. ಹಾಗೆ ಬಳಸಿಕೊಳ್ಳುವಾಗ ತಾನು ಮಹಾಕಾವ್ಯವನ್ನು ಸೃಷ್ಟಿಸುತ್ತಿರುವ ಸಂಗತಿಯನ್ನು ಮರೆಯುವುದಿಲ್ಲ. ಅವನ ಪ್ರತಿಭಾ ಜ್ಯೋತಿಯ ಅದ್ಭುತ ಸಂಸ್ಪರ್ಶದಿಂದ ಸಂಸ್ಕೃತ ಸಂಪ್ರದಾಯವೂ ಜಾನಪದ ಸಂಸ್ಕೃತಿಯೂ ಎಷ್ಟು ಗಾಢವಾಗಿ ಸಮ್ಮಿಲನಗೊಂಡಿವೆಯೆಂದರೆ, ಅವನ್ನು ಪ್ರತ್ಯೇಕಿಸಲಾರದ ಏಕಾಖಂಡ ಆಕೃತಿಯಾಗಿ ರೂಪುಗೊಂಡಿದೆ.

ಗದುಗಿನ ಭಾರತ ಮೂಲದ ನಿಕಟಾನುವರ್ತಿಯಾದ ಭಾಷಾಂತರವಲ್ಲ; ಕವಿಯ ಸ್ವೋಪಜ್ಞತೆಯ ಕಲ್ಪನಾ ವಿಲಾಸಕ್ಕೆ ಅವಕಾಶವಿರುವ ರೂಪಾಂತರ. ಕೃಷ್ಣನನ್ನು ದೇವದೇವೋತ್ತಮನೆಂದು ಉದಾತ್ತೀಕರಿಸಿ ಹೊಗಳಿ ಆರಾಧಿಸುವುದೇ ಕವಿಯ ಮುಖ್ಯೋದ್ದೇಶ. ಕೃಷ್ಣನೇ ಕಾವ್ಯದ ಸೂತ್ರಧಾರ. ಅವನ ಗಮನಕ್ಕೆ ಬರದೆ, ಅವನ ಅನುಮತಿಯಿಲ್ಲದೆ ಏನೂ ಸಂಭವಿಸುವುದಿಲ್ಲ. ವೀರನಾರಾಯಣನೆ ನಿಜವಾದ ಕವಿಯೆಂದೂ ತಾನು ಲಿಪಿಕಾರನೆಂದೂ ಕವಿ ಹೇಳಿಕೊಳ್ಳುತ್ತಾನೆ. ಅವನು ಸ್ಫೂರ್ತಿಗೆ ವಶನಾದಾಗ ಆಲೋಚನೆ, ಮತ್ತು ಭಾವಗಳು ಅವನ ಲೇಖನಿಯಿಂದ ನಿರರ್ಗಳವಾಗಿ ಹರಿಯುತ್ತವೆ. ವಾಸ್ತವವಾಗಿ ಅವು ಉಪಮೆ ಮತ್ತು ರೂಪಕಗಳಾಗಿ ರೂಪಾಂತರ ಹೊಂದುತ್ತವೆ. ಅವನ ಸೃಜನಾತ್ಮಕ ಪ್ರತಿಭಾ ಗಂಗೆಯಲ್ಲಿ ಮಿಂದ ಕನ್ನಡ ಎಲ್ಲ ರೀತಿಯಿಂದಲೂ ಸಿದ್ಧಿಯನ್ನು ಪಡೆಯುತ್ತದೆ. ಅವನ ಮಾಂತ್ರಿಕ ಸಂಸ್ಪರ್ಶದಿಂದಾಗಿ ಷಟ್ಪದಿ ಮಹಾಕಾವ್ಯದ ಸಶಕ್ತ ಮಾಧ್ಯಮವಾಗಬಹುದಾದ ಯಶೋದುಂದುಭಿಯನ್ನು ಮೊಳಗಿಸಿತಲ್ಲದೆ, ಎಲ್ಲ ಯುಗಳಿಗೂ ಕಲಶಪ್ರಾಯವಾಗಿ ವಿರಾಜಿಸುತ್ತಿದೆ. ಅವನು ಸಮಕಾಲೀನ ಯುಗದ ಪ್ರತಿನಿಧಿ ಮಾತ್ರವಲ್ಲ ಒಂದು ಸಹಸ್ರ ಮಾನದ ಸಂಸ್ಕಾರದಿಂದ ಸಂಲಬ್ಧವಾದ ಅಪೂರ್ವ ಫಲ. ಪಂಪನಿಂದ ಹಿಡಿದು ಬಸವೇಶ್ವರ ಹರಿಹರರ ತನಕ ಅನೇಕ ಶತಮಾನಗಳಲ್ಲಿ ಸಂಗ್ರಹಗೊಂಡ ಅನರ್ಘ್ಯ ಸಾಂಸ್ಕೃತಿಕ ಸಂಪತ್ತಿಗೆ ಅವನು ಉತ್ತರಾಧಿಕಾರಿಯಾಗಿದ್ದಾನೆ.

ಗದುಗಿನ ಭಾರತದ ಕಥೆ ಮಹಾಭಾರತದ ಮೊದಲ ಹತ್ತು ಪರ್ವಗಳಿಗೆ ಮಾತ್ರ ಸೀಮಿತಗೊಳ್ಳುತ್ತದೆ. ಉಳಿದ ಪರ್ವಗಳನ್ನು ತಿಮ್ಮಣ್ಣಕವಿ ಮುಕ್ತಾಯಗೊಳಿಸುತ್ತಾನೆ. ನಾರಣಪ್ಪನಿಗೂ ತೊರವೆ ರಾಮಾಯಣದ ಕವಿ ಕುಮಾರ ವಾಲ್ಮೀಕಿಗೂ (1500) ಅಜಗಜಾಂತರ. ಭಾಗವತವನ್ನು ರಚಿಸಿದ ಕವಿ ಸದಾನಂದಯೋಗಿ (1530). ಹೃದ್ಯವಾದ ಕಥೋಪಕಥೆಗಳ ಬಾಹುಳ್ಯದಿಂದಾಗಿ, ಅಲ್ಲಿ ಬಳಕೆಗೊಂಡಿರುವ ಭಾಷೆಯ ಪ್ರೌಢಿಮೆಯಿಂದಾಗಿ ಲಕ್ಷ್ಮೀಶನ (1550) ಜೈಮಿನಿ ಭಾರತ ಗದುಗಿನ ಭಾರತದಂತೆಯೇ ಬಹುಜನ ಪ್ರಿಯವಾಗಿದೆ. ಕೊನೆ ಕೊನೆಗೆ ಬಂದ ಜೈನಕವಿಗಳು ಸಹ ಯುಗಧರ್ಮಕ್ಕನುಗುಣವಾಗಿ ಹೊಸ ಹೊಸ ಛಂದೋಪ್ರಕಾರ ಬಳಸಲಾರಂಭಿಸುತ್ತಾರೆ.

## ಸಾಂಗತ್ಯ ಯುಗ

ಸಾಂಗತ್ಯ ಹಾಡಲನುಕೂಲವಾದ ನಾಲ್ಕು ಪಾದಗಳ ಜಾನಪದ ಛಂದೋಪ್ರಕಾರ. ಇತರ ಜಾನಪದ ಪ್ರಕಾರಗಳಂತೆ ಸಾಂಗತ್ಯವೂ ಪಂಡಿತರ ಅವಹೇಳನೆಗೆ ಗುರಿಯಾಗುತ್ತದೆ. ಪುನರುಜ್ಜೀವನ ಯುಗದ ನಂತರ ಬಂದ ಶಿಶುಮಾಯಣ (1500) ಮತ್ತು ದೇಪರಾಜ (1410) ರಂಥ ಕವಿಗಳು ಸಾಂಗತ್ಯದಲ್ಲಿ ಕೃತಿ ರಚನೆ ಮಾಡುವ ಸಾಹಸಕ್ಕೆ ತೊಡಗುತ್ತಾರೆ. ನಂಜುಂಡ ಕವಿ ಮತ್ತು ರತ್ನಾಕರ ವರ್ಣಿಯರು ಸಾಹಿತ್ಯರಂಗದಲ್ಲಿ ತಲೆಹಾಕುವ ಹೊತ್ತಿಗೆ, ಸಾಂಗತ್ಯ ಪರಿಪಕ್ವಸ್ಥಿತಿಯನ್ನು ಮುಟ್ಟಿತ್ತಲ್ಲದೆ, ಅದರ ಸಂಭವನೀಯ ಶಕ್ತಿ ಸಾಮರ್ಥ್ಯಗಳನ್ನೆಲ್ಲ ಸಂಪೂರ್ಣವಾಗಿ ಸೂರೆಗೊಳ್ಳಲಾಗುತ್ತದೆ. ವಿಜಯಣ್ಣ (1448), ಆದಿಯಪ್ಪ (1461), ತೆರಕಣಾಂಬಿ ಬೊಮ್ಮರಸ (1485) ಮತ್ತು ಮೂರನೇಯ ಮಂಗರಸ (1508) ಸಾಂಗತ್ಯದಲ್ಲಿ ಪಳಗಿದ ಕವಿಗಳಲ್ಲಿ ಕೆಲವರು. ನಂಜುಂಡ ಕವಿ (1525)ಯ ಕೈಯಲ್ಲಿ ಅದು ಸರ್ವಾಂಗ ಸುಂದರವಾಗಿ ಹದಗೊಂಡು, ಮಹಾಕಾವ್ಯ ಛಂದಸ್ಸುಗಳಿಗೆ ಸರಿಸಮನಾಗಿ ನಿಲ್ಲುವಂತಾಗುತ್ತದೆ. ಅದು ಶೃಂಗಾರರಸದ ಅಭಿವ್ಯಕ್ತಿಗೆ ಮಾತ್ರವೇ ಯೋಗ್ಯವಾದದ್ದೆಂಬ ಅಭಿಪ್ರಾಯವನ್ನು ಭಂಗಗೊಳಿಸಿ ಅದನ್ನು ವೀರಭಯಾನಕಾದಿ ರಸಗಳ ಅಭಿವ್ಯಕ್ತಿಗೂ ಸಲೀಸಾಗಿ ಬಳಸಬಹುದೆಂಬುದಕ್ಕೆ ತನ್ನ ಐತಿಹಾಸಿಕ ಕಾವ್ಯವಾದ ಕುಮಾರ ರಾಮುಕಥೆಯಲ್ಲಿ ಸಾಕಷ್ಟು ಸಾಕ್ಷ್ಯವನ್ನೊದಗಿಸುತ್ತಾನೆ. ಇನ್ನೂ ಮಹತ್ವಪೂರ್ಣವಾದ ಉದ್ದೇಶವನ್ನೀಡೇರಿಸಿಕೊಳ್ಳಲು ಅದು ರತ್ನಾಕರ ವರ್ಣಿಯಂಥ ಪ್ರತಿಭಾವಂತ ಕವಿಯ ಆಗಮನಕ್ಕಾಗಿ ಕಾಯುತ್ತದೆ. ಅದೆಷ್ಟು ಕೋಮಲವಾಗಿದೆ, ನವುರಾಗಿದೆ, ಸೂಕ್ಷ್ಮವಾಗಿದೆಯೆಂದರೆ, ಕಲ್ಪನಾ ನಿಪುಣನೂ ಸೂಕ್ಷ್ಮಸಂವೇದನಾ ಶೀಲನೂ ಆದ ಕವಿ ಮಾತ್ರ ಅದನ್ನು ಸಮರ್ಥವಾಗಿ ಬಳಸಬಲ್ಲವನಾಗುತ್ತಾನೆ; ತನ್ನ ಆಶಯಗಳ ಪೂರೈಕೆಗೆ, ತನಗೆ ಬೇಕಾದಂತೆ, ಅದನ್ನು ದುಡಿಸಿಕೊಳ್ಳುತ್ತಾನೆ. ಅವನ ಭರತೇಶ ವೈಭವ

ಅದ್ಭುತ ಕಲಾವಂತಿಕೆಯ ಅತ್ಯುತ್ಕೃಷ್ಟ ಕಾವ್ಯ. ಬರಬರುತ್ತ ಈ ಸಂಪ್ರದಾಯದ ಗುಣ ಇಳಿಮುಖವಾದರೂ ದೊಡ್ಡಯ್ಯ (1550), ಪಾಯಣ್ಣವ್ರತಿ (1600), ಚಿಕುಪಾಧ್ಯಾಯ (1672), ಹೆಳವನಕಟ್ಟೆ ಗಿರಿಯಮ್ಮ (1750) ಮೊದಲಾದವರು ಅದನ್ನು ಮುಂದುವರಿಸುತ್ತಾರೆ.

### ಸಾಹಿತ್ಯೇತರ ಕೃತಿಗಳು

ಕನ್ನಡ ಸಾಹಿತ್ಯದ ಪ್ರಾದುರ್ಭಾವ ಕಾಲದಿಂದ ಅಲಂಕಾರ ಶಾಸ್ತ್ರ, ಛಂದಶ್ಶಾಸ್ತ್ರ, ವ್ಯಾಕರಣ, ವೈದ್ಯವಿಜ್ಞಾನ, ಪಾಕಕಲೆ ಮೊದಲಾದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಪದ್ಯ ರೂಪದ ಸಾಹಿತ್ಯೇತರ ಕೃತಿಗಳು ಅಪಾರ ಸಂಖ್ಯೆಯಲ್ಲಿ ಹೊರಬಂದಿವೆ. ಉದಯಾದಿತ್ಯನ (1150) ಉದಯಾಲಂಕಾರ, ಮಾಧವನ (1500) ಮಾಧವಾಲಂಕಾರ, ತಿರುಮಲಾರ್ಯನ (1645-1706) ಅಪ್ರತಿಮವೀರ ಚರಿತೆ, ಅಳಿಯ ಲಿಂಗರಾಜನ (1823-1874) ನರಪತಿ ವಿಜಯ, ಸಾಳ್ವನ (1550) ರಸರತ್ನಾಕರ, ಜಾಯ ಗೌಂಡನ (1716-1758) ಕನ್ನಡ ಕುವಲಯಾನಂದ, ಈಶ್ವರ ಕವಿಯ (1500) ಕವಿಜಿಹ್ವಾ ಬಂಧನ, ಕೇಶಿರಾಜನ (1250) ಶಬ್ದಮಣಿದರ್ಪಣ, ಬೊಮ್ಮರಸನ (1450) ಚತುರಾಸ್ಯ ನಿಘಂಟು, ಲಿಂಗಮಂತ್ರಿಯ (1530) ಕಬ್ಬಿಗರ ಕೈಪಿಡಿ, ನಾಗ ವರ್ಮನ ವಸ್ತುಕೋಶ, ಎರಡನೇಯ ಮಂಗರಾಜನ (1398) ಮಂಗರಾಜ ನಿಘಂಟು, ಎರಡನೇಯ ಚಾವುಂಡರಾಯನ (1025) ಲೋಕೋಪಕಾರ, ಆಯುತವರ್ಮನ (1400) ರತ್ನಕ ರಂಡಕ, ಮಹಲಿಂಗರಂಗನ (1675) ಅನುಭವಾಮೃತ, ಕೀರ್ತಿವರ್ಮನ (1100) ಗೋವೈದ್ಯ, ಜಗದಳ ಸೋಮನಾಥನ (1175) ಕಲ್ಯಾಣಕಾರಕ, ಮೂರನೇಯ ಮಂಗರಸನ (1508) ಸೂಪಶಾಸ್ತ್ರ, ಚಂದ್ರರಾಜನ (1040) ಮದನತಿಲಕವೇ ಮುಂತಾದುವು ನಿದರ್ಶನಾರ್ಥವಾಗಿ ಉಲ್ಲೇಖಿಸಬಹುದಾದ ಕೆಲವೇ ಕೆಲವು ಗ್ರಂಥಗಳು.

### ಒಡೆಯರ ಕಾಲ

ಮೈಸೂರು ಒಡೆಯರು ನೀಡಿದ ಪ್ರೋತ್ಸಾಹ ಉತ್ತೇಜನ ಗಳಿಂದಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸುಸಮೃದ್ಧವಾದ ಬೆಳೆ ಯನ್ನು ಕಾಣಬಹುದಾಗಿದೆ. ಕೆಲವು ರಾಜರಂತೂ ಸ್ವಯಂ ಸಾಹಿತಿಗಳು. ಆಸ್ಥಾನದಲ್ಲಿ ಸಾಹಿತ್ಯ ಕೃಷಿಗೆ ಮನ್ನಣೆ ದೊರೆ ತದ್ದರಿಂದ ಪಂಡಿತ ಪ್ರಿಯವಾದ ಚಂಪೂ ಪದ್ಧತಿ ಪುನರುಜ್ಜೀವನ ಗೊಳ್ಳುತ್ತದೆ. ಚಂಪೂ ಶೈಲಿಗೆ ಹಳಗನ್ನಡ ಅತ್ಯನಿವಾರ್ಯವೆಂಬಂತೆ ಅದನ್ನು ವ್ಯಾಪಕವಾಗಿ ಬಳಸಲಾಗುತ್ತದೆ. 1672ರಿಂದ 1709ರ ವರೆಗೆ ಮೈಸೂರನ್ನಾಳಿದ ಚಿಕ್ಕದೇವರಾಜ ಒಡೆಯರು ಮಹಾಯೋಧರಾಗಿದ್ದಂತೆ ಸಮರ್ಥ ಆಡಳಿತಗಾರರೂ ಅಹುದು, ಶ್ರೇಷ್ಠ ವಿದ್ವಾಂಸರೂ ಅಹುದು. ಅವರ ಸಾಹಿತ್ಯ ಪ್ರೇಮ ನಿಚ್ಚಳವಾದುದು. ಚಿಕ್ಕದೇವರಾಜ ಬಿನ್ನಪ, ಗೀತಗೋಪಾಲ, ಭಾರತ ಮತ್ತು ಭಾಗವತ ಅವರ ಕೆಲವು ಕೃತಿಗಳು. ಅವರ ಆಸ್ಥಾನದಲ್ಲಿದ್ದ ಸಾಹಿತ್ಯ ದಿಗ್ಗಜಗಳೆಂದು ಹೆಸರಾದವರಲ್ಲಿ ತಿರುಮಲಾರ್ಯ, ಸಿಂಗರಾರ್ಯ ಮತ್ತು ಚಿಕ್ಕುಪಾಧ್ಯಾಯರು ಮುಖ್ಯರು. ಚಂಪೂ ಶೈಲಿಯಲ್ಲಿರುವ ತಿರುಮಲಾರ್ಯನ ಚಿಕ್ಕ ದೇವರಾಜ ವಿಜಯದ ವಸ್ತು ಮೈಸೂರು ಚರಿತ್ರೆ. ಸಿಂಗರಾರ್ಯನ ಮಿತ್ರವಿಂದಾ ಗೋವಿಂದ ಕನ್ನಡದ ಮೊಟ್ಟಮೊದಲ ನಾಟಕ. ಅದು ಹರ್ಷನ ರತ್ನಾವಳಿ ನಾಟಕದ ಭಾಷಾಂತರ. ಮಹಾತ್ಮೆ ಗಳು ಮತ್ತು ವ್ಯಾಖ್ಯಾನಗಳು ಸೇರಿದಂತೆ ಚಿಕ್ಕುಪಾಧ್ಯಾಯ ಮೂವತ್ತು ಗ್ರಂಥಗಳನ್ನು ಬರೆದಿದ್ದಾನೆ. ಹೊನ್ನಮ್ಮ ಸಾಂಗತ್ಯದ ಧಾಟಿಯಲ್ಲಿ ಹದಿಬದೆಯ ಧರ್ಮವನ್ನು ರಚಿಸಿದ್ದಾಳೆ. ಶೃಂಗಾರಮ್ಮ ಪದ್ಮಿನಿ ಕಲ್ಯಾಣದ ಕರ್ತೆಯಾಗಿದ್ದಾಳೆ.

ರಾಜಾಸ್ಥಾನದ ಹೊರಗಿದ್ದ ಹಲವು ಕವಿಗಳ ಕೊಡುಗೆ ಹೇರಳವಾಗಿದೆ, ಅಮೂಲ್ಯವಾಗಿದೆ. ಅವರಲ್ಲಿ ಷಡಕ್ಷರದೇವನೂ ಒಬ್ಬ. ಅಪೂರ್ವ ವಿದ್ವತ್ತು ಮತ್ತು ಕಾವ್ಯ ಪ್ರತಿಭೆಗಳು ಸಂಲಗ್ನಗೊಂಡಿದ್ದ ಅಪರೂಪದ ಕವಿ ಅವನು. ಚಂಪೂ ಶೈಲಿಯ ಬಳಕೆಯಲ್ಲಿ ಅವನು ತೋರಿರುವ ಪ್ರೌಢಿಮೆ ಅದ್ಭುತವಾದುದು. ಅವನ ಶೈಲಿ ಬಾಣನನ್ನು ನೆನಪಿಗೆ ತರುತ್ತದೆ. ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ ಮತ್ತು ಶಬರಶಂಕರ ವಿಲಾಸಗಳು ಅವನ ಕೃತಿಗಳು. ಸಮಕಾಲೀನ ಸಾಹಿತ್ಯದ ಇತಿಹಾಸದಲ್ಲಿ ಅವನಿಗೆ ಅಗ್ರಸ್ಥಾನ ದೊರಕುತ್ತದೆಂಬುದರಲ್ಲಿ ಅನುಮಾನವಿಲ್ಲ. ಹೆಳವನಕಟ್ಟೆ ಗಿರಿಯಮ್ಮ (1750) ಒಂದು ಸಾಂಗತ್ಯ ಕೃತಿಯ ಜತೆಗೆ ಹಲವು ಹಾಡುಗಳನ್ನು ರಚಿಸಿದ್ದಾಳೆ. ಕನ್ನಡ ಗದ್ಯದ ಪುನರುತ್ಥಾನ ಈ ಯುಗದ ಪ್ರಮುಖ ಲಕ್ಷಣ.

ಆ ಕಾಲದ ಸಾಹಿತ್ಯಾಕಾಶದ ಪ್ರಕಾಶಮಾನವಾದ ಮತ್ತೊಂದು ನಕ್ಷತ್ರವೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರು. ಅವರು ಸದಭಿರುಚಿಯ ಸುಪ್ರಸಿದ್ಧ ಅಭಿಜ್ಞ ಕವಿ. ಅವರು ಕಲೆ ವಿದ್ವತ್ತುಗಳ ಮಹಾಪೋಷಕರು. ಅನೇಕ ಕವಿಗಳಿಗೆ ಆಶ್ರಯ ದಾತರಾಗಿದ್ದರು. ಅವರಿಂದ ರಚಿತವಾದ ಕೃತಿಗಳ ಸಂಖ್ಯೆಯೇ ಬೆರಗುಗೊಳಿಸುವಂಥದು. ರಾಜಮನೆತನಕ್ಕೆ ಸೇರಿದ ಅಳಿಯ ಲಿಂಗರಾಜ ಬಹುಕೃತಿ ಸಂತಾನವುಳ್ಳವನು. ಅಭಿನವ ಕಾಳಿದಾಸ ನೆಂದು ಪ್ರಸಿದ್ಧನಾದ ಬಸಪ್ಪಶಾಸ್ತ್ರೀ, ದೇವಲಾಪುರದ ನಂಜುಂಡ, ಮುದ್ರಾಮಂಜೂಷದ ಕರ್ತೃವಾಗಿ ಯಾರೂ ಮರೆಯಲಾಗದ ಕೆಂಪುನಾರಾಯಣರು ಆ ಕಾಲದ ಕವಿಗಳ ಪೈಕಿ ವಿಶೇಷ ಗಮನಕ್ಕೆ ಪಾತ್ರರಾದವರಲ್ಲಿ ಕೆಲವರು.

ಆಧುನಿಕಪೂರ್ವ ಕನ್ನಡ ಸಾಹಿತ್ಯದ ಅರುಣೋದಯದ ಕಾರಣದಿಂದಾಗಿ ಈ ಕಾಲದ ಮಹತ್ವವನ್ನು ನಿರ್ಲಕ್ಷಿಸುವಂತಿಲ್ಲ.

ಸಾಹಿತ್ಯಕ್ಷೇತ್ರದಲ್ಲಿ ಗದ್ಯ ಕೃತಿಗಳು ಪ್ರಧಾನಪಾತ್ರ ವಹಿಸುತ್ತವೆ. ಭಾಷಾ ರೂಪ ಸ್ವರೂಪಗಳಲ್ಲಿಯೂ ಎದ್ದುಕಾಣುವ ಪರಿವರ್ತನೆಗಳು ಸಂಭವಿಸುತ್ತವೆ. ಯುಗಧರ್ಮದಲ್ಲೆಂತೊ ಅಂತೆಯೆ ಜನರ ರುಚಿ ಮನೋಧರ್ಮಗಳಲ್ಲಿಯೂ ವ್ಯತ್ಯಾಸಗಳು ಗೋಚರಿಸುತ್ತವೆ. ಪಾಶ್ಚಾತ್ಯ ನಾಗರಿಕತೆಯ ಪ್ರಭಾವದಿಂದಾಗಿ, ಕ್ರಿಶ್ಚಿಯನ್ ಪಾದ್ರಿಗಳ ಕಾರ್ಯಕ್ಷೇತ್ರದ ವಿಸ್ತಾರದಿಂದಾಗಿ, ಮುದ್ರಣ ವ್ಯವಸ್ಥೆಯ ಸೌಕರ್ಯದಿಂದಾಗಿ ಸಾಹಿತ್ಯದ ರೂಪಾಂಶದಲ್ಲಿ ದೃಷ್ಟಿ ಧೋರಣೆ, ಜೀವದ್ರವ್ಯ ಮತ್ತು ವಿಸ್ತಾರಗಳಲ್ಲಿ ಶೀಘ್ರ ಪರಿವರ್ತನೆ ನಡೆಯುತ್ತದೆ.

ಚಾಮರಾಜ ಒಡೆಯರು ತಮ್ಮ ತಂದೆ ಪ್ರಾರಂಭಿಸಿದ್ದ ಪದ್ಧತಿಯನ್ನು ಮುಂದುವರಿಸಿ, ಕವಿಗಳನ್ನೂ, ಪಂಡಿತರನ್ನೂ ಹೆಚ್ಚು ಸಂಖ್ಯೆಯಲ್ಲಿ ಕಲೆಹಾಕಿ, ಸಾಹಿತ್ಯದ ಕೈಂಕರ್ಯದಲ್ಲಿ ಅವರನ್ನು ತೊಡಗಿಸಿ, ನಾನಾ ರೀತಿಯಲ್ಲಿ ಪ್ರೋತ್ಸಾಹಿಸುತ್ತಾರೆ. ಆ ಕಾಲದ ಸಾಹಿತ್ಯಕ್ಷೇತ್ರದ ಕಡೆಗೆ ಕಣ್ಣು ಹಾಯಿಸಿದಾಗ, ಲೇಖಕರ, ಕವಿಗಳ, ಭಾಷಾಂತರಕಾರರ, ಸಂಪಾದಕರ, ಸಂಶೋಧಕರ ಮತ್ತು ಬಗೆಬಗೆಯ ಸಾಹಿತ್ಯಾರಾಧಕರ ಭಾರಿ ಮೆರವಣಿಗೆ ಮನೋನೇತ್ರದ ಮುಂದೆ ಸರಿಯುತ್ತದೆ. ಪ್ರಾತಿನಿಧಿಕವಾಗಿ ಕೆಲವೇ ಕೆಲವು ಸಾಹಿತಿಗಳನ್ನು ಹೆಸರಿಸುವುದಾದರೂ ಪಟ್ಟಿ ಅನಿವಾರ್ಯವಾಗಿ ದೀರ್ಘವಾಗುತ್ತದೆ : ಬಸಪ್ಪಶಾಸ್ತ್ರೀ, ಪಂಡಿತ ಜಯರಾಯಾಚಾರ್ಯ, ಅನಂತನಾರಾಯಣಶಾಸ್ತ್ರೀ, ಬಿ. ಮಲ್ಲಪ್ಪ, ಲೂಯಿಸ್ ರೈಸ್, ಆರ್. ನರಸಿಂಹಾಚಾರ್ಯ, ಎಂ. ಎಸ್. ಪುಟ್ಟಣ್ಣ, ಬಿ. ವೆಂಕಟಾಚಾರ್ಯ, ಗಳಗನಾಥ, ಶ್ರೀಕಂಠೇಗೌಡ, ಚ. ವಾಸುದೇವಯ್ಯ, ಕಿಟ್ಟೆಲ್, ಜೀಗ್ಲರ್, ಮೊಗ್ಲಿಂಗ್, ಪಿ. ಜಿ. ಹಳಕಟ್ಟಿ, ಮುಂತಾದವರು.

## ಆಧುನಿಕಪೂರ್ವ ಯುಗ

ಇಪ್ಪತ್ತನೇಯ ಶತಮಾನದ ಮೊದಲ ಮೂರು ದಶಕಗಳ ಅವಧಿಯನ್ನು ಆಧುನಿಕ ಕನ್ನಡ ಸಾಹಿತ್ಯದ ಪೂರ್ವಸಿದ್ಧತೆಯ ಅಥವಾ ಪ್ರಾರಂಭದ ಕಾಲವೆಂದು ಕರೆಯಬಹುದು. ಆಂಗ್ಲ ವಿದ್ಯಾಭ್ಯಾಸದ ವಿಸ್ತರಣೆಯಿಂದಾಗಿ, ಪಾಶ್ಚಾತ್ಯ ಭಾವನೆಗಳು, ಪಾಶ್ಚಾತ್ಯ ಸಾಹಿತ್ಯ, ಪಾಶ್ಚಾತ್ಯ ವಿಜ್ಞಾನ ಮತ್ತು ಪಾಶ್ಚಾತ್ಯ ಆಲೋಚನೆ ಹಾಗೂ ಜೀವನ ವಿಧಾನಗಳು ಯುವಕರ ಮೇಲೆ ಅಪ್ರತಿಹತವಾದ ಪ್ರಭಾವವನ್ನು ಬೀರುತ್ತವೆ. ಸ್ವಾತಂತ್ರ್ಯ ಚಳವಳಿ ಜನರನ್ನು ದೀರ್ಘ ನಿದ್ರೆಯಿಂದೆಚ್ಚರಿಸಿ, ದಾಸ್ಯದ ವಿರುದ್ಧವಾಗಿ ಅವರ ಭಾವನೆಗಳನ್ನು ಕೆರಳಿಸಿ, ಅವರಲ್ಲಿ ಕ್ರಿಯಾಸಕ್ತಿಯನ್ನು ಪ್ರಚೋದಿಸಿ, ಇಡೀ ಸಮಾಜವನ್ನು ಪುನಶ್ಚೇತನಗೊಳಿಸುತ್ತದೆ. ಮುದ್ರಣವೇ ಮೊದಲಾದ ಸಂಪರ್ಕ ಮಾಧ್ಯಮಗಳು, ಸಮಾಜದ ಆಧುನೀಕರಣವನ್ನು ಶೀಘ್ರಗೊಳಿಸಿ ಬೌದ್ಧಿಕ ಮಟ್ಟವನ್ನು ವಿಸ್ಮಯಕಾರಿಯಾದ ರೀತಿಯಲ್ಲಿ ಎತ್ತರಿಸುತ್ತದೆ. ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ, ಸತ್ಯಶೋಧಕ ಸಮಾಜವೇ, ಮುಂತಾದ ಸಂಸ್ಥೆಗಳು ನವಜೀವನ ವಿಧಾನದ ಕಡೆಗೆ ಜನಮನವನ್ನು ಸೆಳೆಯಲು ಸಮಾಜವನ್ನು ಪ್ರಚೋದಿಸಲು ಪ್ರಯತ್ನಿಸುತ್ತವೆ. ರಾಜಾರಾವ್ ಮೋಹನ್‌ರಾಯ್, ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಶ್ರೀ ಅರವಿಂದ, ಜ್ಯೋತಿರಾವ್ ಫುಲೆ, ಮಹಾತ್ಮಾಗಾಂಧಿ, ಎಂ. ಎನ್. ರಾಯ್, ಬಿ. ಆರ್. ಅಂಬೇಡ್ಕರ್, ರಾಮಸ್ವಾಮಿ ನಾಯಕರ್, ಮೊದಲಾದ ವಿವಿಧ ತತ್ತ್ವಾಲೋಚನೆಯ, ಭಿನ್ನ ಭಿನ್ನ ಆದರ್ಶಗಳ ಧೀಮಂತ ನಾಯಕರು ಯುವಪೀಳಿಗೆಯ ವಿಚಾರಧಾರೆಯ ಮೇಲೆ ಆಶ್ಚರ್ಯಕರವಾದ ರೀತಿಯಲ್ಲಿ ಪ್ರಭಾವ ಬೀರುತ್ತಾರೆ. ವಿಶ್ವದ ಬಗೆಗಿನ, ಪರಿಸರಕ್ಕೆ ಸಂಬಂಧಿಸಿದ ಮತ್ತು ರೂಢಿ ಸಂಪ್ರದಾಯಗಳನ್ನು ಕುರಿತ ಜನ ಮನೋಧರ್ಮ ರೂಢ ಮೂಲವಾಗಿ ಪರಿವರ್ತನೆ ಹೊಂದುತ್ತದೆ. ಕುತೂಹಲದ, ಜಿಜ್ಞಾಸೆಯ ಮತ್ತು ಅನ್ವೇಷಣದ ಪರಿಭಾವನೆಗೆ ಅವರ ಮನಸ್ಸು ವಶವಾಗುತ್ತದೆ. ಯಾವ ವಿಚಾರವಾಗಲಿ, ಸಮಸ್ಯೆಯಾಗಲಿ, ಜಾಗತಿಕ ದೃಷ್ಟಿಯಿಂದ ಅದನ್ನು ಸಮೀಕ್ಷಿಸುವ ಜಾಣ್ಮೆ ಚಿಗುರುತ್ತದೆ. ಈ ಎಲ್ಲ ಘಟನೆಗಳು ಸಾಹಿತ್ಯದ ದಿಕ್ಕನ್ನೇ ಬದಲಾಯಿಸುತ್ತವೆ. ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಾಯೋಗಿಕತೆಯನ್ನು ಪ್ರೇರಿಸುತ್ತವೆ; ಆತನಕ ಕೇಳರಿಯದ ಹಲವು ರೂಪಗಳಿಗೆ ಜೀವದಾನ ಮಾಡುತ್ತವೆ ; ನೂತನ ದರ್ಶನಾಕಾಂಕ್ಷೆ ಉತ್ಸಾಹಗಳಿಗೆ ಇಂಬು ಕೊಡುತ್ತವೆ. ಹಿಂದೆಂದೂ ಕಂಡರಿಯದ ಪರಿವರ್ತನೆಯ ಮಾರ್ಗದಲ್ಲಿ ಭಾಷೆ ಸಹ ಸಾಗುತ್ತದೆ.

ಸಾಹಿತ್ಯ ದಿಗಂತದಲ್ಲಿ ಪರಿಣಾಮಕಾರಿಯೂ ಶುಭ ಸೂಚಕವೂ ಆದ ವ್ಯತ್ಯಾಸಗಳು ತಲೆದೋರುತ್ತಿದ್ದ ಸಂಧಿ ಸಮಯದಲ್ಲಿ ಮುದ್ದಣ ಸಾಹಿತ್ಯಕೃಷಿಗೆ ತೊಡಗುತ್ತಾನೆ. ಅವನ ರಾಮಾಶ್ವಮೇಧ ಮಹಾ ಕಾವ್ಯದ ಅಂತಸ್ಸತ್ವವುಳ್ಳ ಘಟನೆಯನ್ನೊಳಗೊಂಡ ಗದ್ಯಕೃತಿ. ಗದ್ಯದ ಭಾಷೆ ಹಳಗನ್ನಡವಾದರೂ ಆಧುನಿಕತೆಯ ಸಂಸ್ಪರ್ಶವಿದೆ. ಎಸ್. ಜಿ. ನರಸಿಂಹಾಚಾರ್ಯ, ಜಯರಾಯಾಚಾರ್ಯ, ಹಟ್ಟಿಂಗಡಿ ನಾರಾಯಣರಾವ್, ಶ್ರೀಕಂಠೇಶಗೌಡ ಮತ್ತು ಗೋವಿಂದ ಪೈಗಳು ಇಂಗ್ಲಿಷ್ ಮಾದರಿಗಳನ್ನು ಕಣ್ಮುಂದಿರಿಸಿಕೊಂಡು, ತಮತಮಗೆ ತೋಚಿದಂತೆ ಕಾವ್ಯಕ್ಷೇತ್ರದಲ್ಲಿ ಅನೇಕ ಪ್ರಯೋಗಗಳನ್ನು ನಡೆಸುತ್ತಾರೆ. 1924ರಲ್ಲಿ 'ಇಂಗ್ಲಿಷ್ ಗೀತೆಗಳು' ಎಂಬ ಆಂಗ್ಲ ಭಾವಗೀತೆಗಳ ಕನ್ನಡ ಅನುವಾದವನ್ನು ಪ್ರಕಟಿಸಿದ ಬಿ. ಎಂ. ಶ್ರೀಕಂಠಯ್ಯನವರು ನವೋದಯ ಪಂಥದ ನೇತಾರರಾಗುತ್ತಾರೆ. ಅವರು ಆಂಗ್ಲಭಾಷೆಯ ಪ್ರಾಧ್ಯಾಪಕರು. ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಆ ಕೃತಿಯ ಪ್ರಕಟಣೆ ಮಹತ್ವಪೂರ್ಣವಾದ ಘಟನೆಯೆಂಬುದರಲ್ಲಿ ಅನುಮಾನವಿಲ್ಲ. ಬಿ. ಎಂ. ಶ್ರೀಕಂಠಯ್ಯನವರ ಅನುವಾದ ಕಾರ್ಯದ ಅರಿವಿಲ್ಲದಿದ್ದಾಗಲೇ, ಮೊದಲು ಇಂಗ್ಲಿಷಿನಲ್ಲಿ ಭಾವಗೀತೆಗಳನ್ನು ರಚಿಸುತ್ತಿದ್ದು, ಅನಂತರ ಕನ್ನಡದಲ್ಲಿ ರಚಿಸಲು

ತೊಡಗಿ, ಬೃಹತ್ಪ್ರಮಾಣದಲ್ಲಿ ಪ್ರಯೋಗಗಳನ್ನು ನಡೆಸಿದ ಕುವೆಂಪು ಎಂದು ಪ್ರಸಿದ್ಧರಾಗಿರುವ ಕೆ. ವಿ. ಪುಟ್ಟಪ್ಪನವರ ಕೊಡುಗೆಯನ್ನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ.

ನವೋದಯ ಪಂಥದ ಮುನ್ನಡೆಯಲ್ಲಿ 'ಇಂಗ್ಲೀಷ್ ಗೀತೆಗಳು' ನಿರ್ವಹಿಸಿದ ಪಾತ್ರ, ಬೀರಿದ ಪ್ರಭಾವ ಚಿರಸ್ಮರಣೀಯವಾದದ್ದು. ಡಿ. ವಿ. ಗುಂಡಪ್ಪ, ಮಾಸ್ತಿವೆಂಕಟೇಶ ಅಯ್ಯಂಗಾರ್, ದ. ರಾ. ಬೇಂದ್ರೆ, ವಿ. ಸೀತಾರಾಮಯ್ಯ, ಶಾಂತ ಕವಿ ಮೊದಲಾದ ದೈವದತ್ತ ಪ್ರತಿಭೆಯ ಜ್ಯೇಷ್ಠ ಕವಿಗಳ ಪಾಲನೆ ಪೋಷಣೆಗಳಿಂದಾಗಿ ನವೋದಯ ಕಾವ್ಯ ಹುಲುಸಾಗಿ ಬೆಳೆಯುತ್ತದೆ. ಭಾವುಕತೆ, ಕಲ್ಪನಾ ಶ್ರೀಮಂತಿಕೆ, ಅತೀಂದ್ರಿಯಾನುಭವ ಮತ್ತು ಆದರ್ಶ ಪ್ರಜ್ಞೆ ನವೋದಯ ಸಾಹಿತ್ಯದ ಪ್ರಮುಖ ಲಕ್ಷಣಗಳೆಂದು ಭಾವಿಸಲಾಗಿದೆ. ಅದರಲ್ಲಿ ಸಿನಿಕತೆ, ನಿರಾಶೆ ಮತ್ತು ವಿಷಾದಗಳಿಗೆ ಸ್ಥಾನವಿಲ್ಲ. ನವೋದಯ ಕವಿಗಳು ಲೋಕವನ್ನು ದೂಷಿಸುವುದಿಲ್ಲ. ಅವರ ದೃಷ್ಟಿಯಲ್ಲಿ ಬದುಕು ಅಪೇಕ್ಷಣೀಯವೇ ಹೊರತು ತಿರಸ್ಕರಣೀಯವಲ್ಲ. ಸೌಂದರ್ಯವೇ ಸತ್ಯವೆಂಬುದು ಅವರ ಮತ.

ಈ ಕೆಲವು ಭಾವನೆಗಳು ನವೋದಯ ಸಾಹಿತ್ಯವನ್ನಾಳುತ್ತವೆಂಬ ಕಾರಣಕ್ಕಾಗಿ, ಸಮಾಜವನ್ನೂ ಮನುಕುಲವನ್ನೂ ಎದುರಿಸುತ್ತಿರುವ ಸಮಸ್ಯೆಗಳ ಕಡೆಗೆ ಲಕ್ಷ್ಯಕೊಡದ ಅವಾಸ್ತವವಾದಿಗಳೆಂಬ ಅಪಪ್ರಥೆಗೆ ಆ ಕವಿಗಳು ಗುರಿಯಾಗಿದ್ದಾರೆ. ಸಮಾಜವನ್ನು ಕ್ಷಣ ಕ್ಷಣಕ್ಕೂ ಹಿಂಡುತ್ತಿರುವ, ನಿರ್ಜೀವಗೊಳಿಸುತ್ತಿರುವ ಅಜ್ಞಾನ, ದಾರಿದ್ರ್ಯ, ಮೌಢ್ಯ, ಶೋಷಣೆಯೇ ಮೊದಲಾದ ಅಸಂಖ್ಯಾತ ಪಿಡುಗುಗಳಿಗೆ ಅವರ ಕಾವ್ಯಗಳಲ್ಲಿ ಅವಕಾಶವಿಲ್ಲವೆಂಬುದೇ ಕೆಲವು ವಿಮರ್ಶಕರ ಅಭಿಪ್ರಾಯವಾಗಿದೆ. ಅವರು ಅಂತರ್ವಾಣಿಯನ್ನು ನಂಬುತ್ತಾರೆ, ನಿಜ; ದೇವರಲ್ಲಿ ಮತ್ತು ಆಧ್ಯಾತ್ಮಿಕ ಶ್ರದ್ಧೆಯಲ್ಲಿ ಅವರಿಗೆ ಶ್ರದ್ಧೆಯಿದೆ ಎನ್ನುವುದೂ ನಿಜ; ಆದರೆ ಅವರು ಸಮಾಜದ ಅಂಧಕಾರದ ಬಗ್ಗೆ ನಿರ್ಲಕ್ಷ್ಯದಿಂದಿದ್ದಾರೆಂಬುದಂತೂ ಸತ್ಯವಲ್ಲ. ಕಲ್ಕಿ, ಕುರುಡು ಕಾಂಚಾಣದಂಥ ಕವಿತೆಗಳು ಅವರ ಸಾಮಾಜಿಕ ಪ್ರಜ್ಞೆಗೆ ಸಾಕ್ಷಿಗಳಾಗಿವೆ. ಕುವೆಂಪು, ಶಿವರಾಮಕಾರಂತ, ಕೈಲಾಸಂ, ಶ್ರೀರಂಗರಂಥ ಸಾಹಿತಿಗಳು ಸಮಾಜದ ದೋಷ ದೌಷ್ಟ್ಯ ಕ್ರೌರ್ಯಗಳನ್ನು ಬಯಲಿಗೆಳೆಯುವಲ್ಲಿ ಎಂದೂ ಹಿಂದೆ ಮುಂದೆ ನೋಡಿದವರಲ್ಲ. ಕುವೆಂಪು, ಕಾರಂತರಂತೂ ಸೈದ್ಧಾಂತಿಕವಾಗಿ ಮಾತ್ರವಲ್ಲ, ಅನುಷ್ಠಾನದ ದೃಷ್ಟಿಯಿಂದಲೂ ಮಹಾ ವಿಚಾರವಾದಿಗಳು. ಸ್ವಾತಂತ್ರ್ಯ ಚಳುವಳಿಯ ಪ್ರಚೋದನೆಯಿಂದ ಉತ್ತೇಜಿತರಾದ ಅನೇಕ ಸಾಹಿತಿಗಳು ಜನರ ಆಶೆ ಆಕಾಂಕ್ಷೆಗಳನ್ನು ತಮ್ಮ ಕೃತಿಗಳಲ್ಲಿ ಪ್ರತಿಬಿಂಬಿಸಿ, ಅವರು ಕ್ರಿಯಾ ಶೀಲರಾಗುವಂತೆ ಜಾಗೃತಗೊಳಿಸುತ್ತಾರೆ.

ಅದ್ಭುತ ಕಲ್ಪನಾ ಪ್ರತಿಭೆ, ಲೋಕಾನುಭವ ಸಂಪತ್ತುಳ್ಳ ಸಾಹಿತಿಗಳು ಕನ್ನಡ ಸಾಹಿತ್ಯಕ್ಕೆ ಆ ಮೊದಲು ತೀರ ಅಪರಿಚಿತವಾಗಿದ್ದ ಸಾಹಿತ್ಯ ಪ್ರಕಾರಗಳನ್ನು ನಾಟಿ, ಕಸಿಕಟ್ಟಿ, ವ್ಯಾಪಕವಾಗಿ ಹಾಗೂ ಸಮೃದ್ಧವಾಗಿ ಬೆಳೆಸುತ್ತಾರೆ. ಬೇಂದ್ರೆ, ಕುವೆಂಪು, ಪುತಿನ ಅವರುಗಳು ತಮ್ಮ ಭಾವಗೀತೆಗಳ ವಸ್ತು, ಛಂದಸ್ಸು, ಭಾವರಸಾನುಭವ ಮತ್ತು ಸಂವೇದನಾತ್ಮಕತೆಗಳಲ್ಲಿ ವೈವಿಧ್ಯ ಮತ್ತು ಸಮೃದ್ಧಿಯನ್ನು ಸಾಧಿಸಿದ್ದಾರೆ. ಕುವೆಂಪು ಮತ್ತು ಮಾಸ್ತಿಯರು ಚಿತ್ತಾಕರ್ಷಕವೂ ಉತ್ಕೃಷ್ಟವೂ ಆದ ಕಥನಕವನಗಳನ್ನು ರಚಿಸಿದ್ದಾರೆ. ಎಂ. ಎನ್. ಕಾಮತ್ ಮತ್ತು ಪಂಜೆ ಮಂಗೇಶರಾಯರು ಸಣ್ಣ ಕಥೆಗಳ ಮೊದಲ ಆರಂಭಗಾರರಾಗಿದ್ದಾರೆ. ಆದರೂ ಸಣ್ಣ ಕತೆಗಳ ಜನಕರೆಂಬ ಬಿರುದು ಮಾಸ್ತಿಯವರಿಗೆ ಸಮುಚಿತವಾಗಿ ಅನ್ವಯಿಸುತ್ತದೆ. ಅವರು ಸೃಷ್ಟಿಸಿರುವ ಕತೆಗಳ ಸಂಖ್ಯೆ ಅಪಾರ. ವಸ್ತು ವೈವಿಧ್ಯ, ಕಥನ ಕೌಶಲ, ಪಾತ್ರರಚನೆ, ಸಾಮಾಜಿಕ ಪ್ರಜ್ಞೆಯ ಅಭಿವ್ಯಕ್ತಿ, ಭಾವರಸಾನುಭವಗಳ ಶ್ರೀಮಂತಿಕೆ—ಇವೇ ಮೊದಲಾದ ಗುಣಗಳಿಂದ ಅವರ ಹಲವು ಕತೆಗಳು ವಿಶ್ವ ಕಥೆಗಳ ಮಟ್ಟಕ್ಕೇರುತ್ತವೆನ್ನುವುದರಲ್ಲಿ ಸಂದೇಹವಿಲ್ಲ. ಅವರ ಸರಳವೂ ಹೃದ್ಯವೂ ಅನನುಕರಣೀಯವೂ ಆದ ಶೈಲಿಯಿಂದ ಅವುಗಳ ಘನತೆ ಹೆಚ್ಚಿದೆ. ಟಿ. ಪಿ. ಕೈಲಾಸಂ, ಶಿವರಾಮ ಕಾರಂತ, ಶ್ರೀರಂಗ ಮತ್ತು ಪರ್ವತವಾಣಿಯವರು ನಾಟಕದಲ್ಲಿ, ಗೋಕಾಕರು ಕಾವ್ಯದಲ್ಲಿ ಹೊಸ ತಂತ್ರ ರೀತಿ ವಿಧಾನಗಳನ್ನು ಪ್ರಯೋಗಿಸಿ ಯಶಸ್ವಿಗಳಾಗಿದ್ದಾರೆ.

### ಆಧುನಿಕ ಕಾಲ

ಆಧುನಿಕ ಕನ್ನಡ ಸಾಹಿತ್ಯವು ಕೆಲವು ಗಮನಾರ್ಹ ಗಳಿಕೆಗಳನ್ನೂ ಪಡೆದಿದೆ. ಕುವೆಂಪು, ಬೇಂದ್ರೆ, ಶಿವರಾಮ ಕಾರಂತ ಮಾಸ್ತಿಯವರು ಅತ್ಯುನ್ನತ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದಿದ್ದಾರೆ. ನಾಟಕಕಾರರಾದ ಕಾರ್ನಾಡ್ ಮತ್ತು ಕಂಬಾರರು ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿಯನ್ನೂ ಗಳಿಸಿದ್ದಾರೆ. ಕಂಬಾರರು ತಮ್ಮ ಕಾವ್ಯ ರಚನೆಗಾಗಿ ಕೇರಳ ಸಾಹಿತ್ಯ ಅಕಾಡಮಿಯ ಆಶನ್ ಪ್ರಶಸ್ತಿಯನ್ನು ಪಡೆದಿದ್ದಾರೆ. ಇದಕ್ಕೂ ಮೊದಲು ಈ ಪ್ರಶಸ್ತಿಯನ್ನು ಗೋಪಾಲಕೃಷ್ಣ ಅಡಿಗರು ಪಡೆದಿದ್ದರು. ಭಿಲ್‌ವಾರ ಪ್ರಶಸ್ತಿ ಸ್ಥಾಪಿಸಿದ ಆರಂಭದಲ್ಲೇ 'ಕಾವ್ಯಾನಂದ' ಎಂಬ ಕಾವ್ಯನಾಮಧಾರಿಗಳಾದ ಶ್ರೀ ಸಿದ್ದಯ್ಯ ಪುರಾಣಿಕರು ಗಳಿಸಿದ್ದಾರೆ. ಜಾನಪದ ಕಲೆಯಾದ 'ಯಕ್ಷಗಾನ'ವನ್ನು ಅಭ್ಯಸಿಸಿ ಅದರ ಮೇಲೆ ಶಿವರಾಮ ಕಾರಂತರು ಬರೆದ ಯಕ್ಷಗಾನ ಕೃತಿಗೆ ಸ್ವೀಡಿಷ್ ಅಕಾಡಮಿಯ ಪ್ರಶಸ್ತಿ ಬಂದಿದೆ. ಕನ್ನಡದ ಕವಿ ಹಾಗೂ ವಿಮರ್ಶಕರಾಗಿರುವ ಡಾ|| ವಿ. ಕೆ. ಗೋಕಾಕರು ಜ್ಞಾನಪೀಠ ಪ್ರಶಸ್ತಿ ನ್ಯಾಯ ಸಮಿತಿಯ ಅಧ್ಯಕ್ಷರಾಗಿರುವುದಲ್ಲದೆ ಕೇಂದ್ರ ಸಾಹಿತ್ಯ ಅಕಾಡಮಿಯ ಅಧ್ಯಕ್ಷರೂ ಆಗಿರುತ್ತಾರೆ. ಅಂತರ್ ರಾಷ್ಟ್ರೀಯ ಸಾಹಿತ್ಯ ಸಂಘವಾದ ಪಿ. ಇ. ಎನ್. ನ ಭಾರತೀಯ ಶಾಖೆಗೆ ಮಾಸ್ತಿ ವೆಂಕಟೇಶ

ಅಯ್ಯಂಗಾರ್ ಅವರು ಅಧ್ಯಕ್ಷರಾಗಿದ್ದಾರೆ. ಈ ಎಲ್ಲಾ ಕನ್ನಡ ಲೇಖಕರ ಗಳಿಕೆಗಳು ತೋರಿಸುತ್ತಿರುವುದೇನೆಂದರೆ, ಯಾರು ಬೇಕಾದರೂ ಕನ್ನಡ ಸಾಹಿತ್ಯವು ಶ್ರೀಮಂತವಾಗಿದೆಯೆಂದು ಹೇಳಬಹುದು.

ಇಪ್ಪತ್ತನೇಯ ಶತಮಾನದ ಮೂರನೇಯ ದಶಕದಲ್ಲಿ ಪುನರುಜ್ಜೀವನದ ಸುವರ್ಣಯುಗ ಪ್ರಾರಂಭವಾಯಿತೆನ್ನಬಹುದು. ಗುಣಗಾತ್ರಗಳಲ್ಲಿ ಮಾತ್ರವಲ್ಲ, ವೈವಿಧ್ಯದಲ್ಲಿಯೂ ಕನ್ನಡ ಸಾಹಿತ್ಯ ಶ್ರೀಮಂತ ವೈಭವದಿಂದ ಮೆರೆಯುತ್ತದೆ. ಭಾವಗೀತೆಗಳ ಕ್ಷೇತ್ರದಲ್ಲಿ ತ್ರಿಮೂರ್ತಿಗಳೆನಿಸಿಕೊಂಡಿರುವ ಕುವೆಂಪು, ಬೇಂದ್ರೆ, ಪುತಿನ ಅವರದೇ ಅದ್ದೂರಿಯ ಮೆರೆತ ಸರ್ವತ್ರ. ಒಂದು ಹೊಸ ಶಕೆಯನ್ನೇ ನಿರ್ಮಿಸಿತೆನ್ನಲಾದ ಶ್ರೀ ರಾಮಾಯಣ ದರ್ಶನಂ ಮಹಾ ಕಾವ್ಯ ಇಡೀ ಶತಮಾತನದ ಶಿಖರಪ್ರಾಯದ ಮೇರುಕೃತಿಯೆಂಬಂತೆ ಆವಿರ್ಭವಿಸುತ್ತದೆ. ನೈತಿಕ ಮೌಲ್ಯಗಳ, ತಾತ್ವಿಕ ವಿಚಾರಗಳ ಮತ್ತು ಜೀವಂತಾನುಭವಗಳ ಖನಿಯೆನ್ನಲಾದ ಡಿ. ವಿ. ಗುಂಡಪ್ಪನವರ 'ಮಂಕುತಿಮ್ಮನ ಕಗ್ಗ' ಎಲ್ಲ ಬಗೆಯಿಂದಲೂ ವಿಶಿಷ್ಟವಾದ ಕೃತಿ. ಮಾಸ್ತಿ ಮತ್ತು ವಿ. ಸೀತಾ ರಾಮಯ್ಯನವರು ಕಾವ್ಯ ರಚನೆಯಲ್ಲಿ ಸಿದ್ಧಿ ಪಡೆದಿರುವ ಹಿರಿಯರು. ಜಾನಪದ ಸತ್ವವನ್ನು ಹೀರಿಕೊಂಡಿರುವ ಬೇಂದ್ರೆ ಮತ್ತು ಮಧುರಚೆನ್ನರು ಕಾಲನ ಪರೀಕ್ಷೆಯಲ್ಲಿ ತೇರ್ಗಡೆಯಾಗುವಂಥ ರೋಮಾಂಚಕಾರಕ ಭಾವಗೀತೆಗಳನ್ನು ಸೃಷ್ಟಿಸಿದ್ದಾರೆ. ರಾಜರತ್ನಂ ಅವರ 'ರತ್ನನ ಪದಗಳು' ಭಾರತೀಯ ಸಾಹಿತ್ಯದಲ್ಲಿಯೇ ಅಪರೂಪವೆನ್ನಬಹುದಾದ ಅನನ್ಯ ಕೊಡುಗೆ. 'ಮಹಾಕವಿ ಪುರುಷ ಸರಸ್ವತಿ' ಅವರ ಅಣಕು ಮಹಾಕಾವ್ಯ, ಕಡೇಂಗೋಡ್ಲು ಶಂಕರಭಟ್ಟ, ಗೋಪಾಕೃಷ್ಣ ಅಡಿಗ, ಬೆಟಗೇರಿ ಕೃಷ್ಣಶರ್ಮ, ಎಸ್. ಡಿ. ಇಂಚಲ, ಡಿ. ಎಸ್. ಕರ್ಕಿ, ತೀ.ನಂ.ಶ್ರೀ, ಮೊದಲಾದ ಕವಿಗಳು ತಮ್ಮ ರಚನೆಗಳಿಂದ ನವೋದಯ ಪಂಥಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಕೆ. ಎಸ್. ನರಸಿಂಹಸ್ವಾಮಿಯವರ ಪ್ರೇಮಗೀತೆಗಳಲ್ಲಿ ಯುವ ಜನಾಂಗವನ್ನು ವಶೀಕರಣ ಮಾಡಿಕೊಳ್ಳುವಂಥ ಮಾದಕತೆಯಿದೆ.

ಇದೇ ಸಮಯದಲ್ಲಿಯೇ ಸಮಾಜದ ಎಲ್ಲ ಮುಖಗಳನ್ನು, ಅದರಲ್ಲಿಯೂ ಮಧ್ಯಮ ವರ್ಗದ ಜನಜೀವನವನ್ನು ಮೂಲ ಚೂಲವಾಗಿ ಕಂಡಿದ್ದ ಪ್ರತಿಭಾವಂತ ಮೇಧಾವಿಗಳ ಲೇಖನಿಯಿಂದ ಕಾದಂಬರಿಗಳ ಹೊಸ ಸುಗ್ಗಿಯೇ ಕಾಣಿಸಿಕೊಳ್ಳುತ್ತದೆ. ಅ. ನ. ಕೃಷ್ಣರಾವ್, ಗೋಕಾಕ್, ಮಾಸ್ತಿ, ಗೊರೂರು, ಕೆ. ವಿ. ಅಯ್ಯರ್, ಮಿರ್ಜಿ ಅಣ್ಣಾರಾವ್, ಸಿ. ಕೆ. ನಾಗರಾಜ ರಾವ್, ರಾವ್ ಬಹದ್ದೂರ್, ಮುಗಳಿ, ಕೊರಟ ಶ್ರೀನಿವಾಸ ರಾವ್, ಕೃಷ್ಣಮೂರ್ತಿ ಪುರಾಣಿಕ, ಭಾರತೀಸುತ, ಅಶ್ವತ್ಥ, ಬಿ. ಪುಟ್ಟಸ್ವಾಮಯ್ಯ, ಇನಾಂದಾರ್, ಬೆಟಗೇರಿ, ಎಚ್. ತಿಪ್ಪೇರುದ್ರಸ್ವಾಮಿ, ದೇವುಡು, ಎಚ್. ಎಲ್. ನಾಗೇಗೌಡ, ಚದುರಂಗ, ತ.ರಾ.ಸು, ಎಂ. ವಿ. ಸೀತಾರಾಮಯ್ಯ, ಟಿ. ಕೆ. ರಾಮರಾವ್ ಮುಂತಾದವರು ಪ್ರಶಂಸಾಭಿಮಾನಗಳಿಗೆ ಪಾತ್ರರಾದವರು. ಕುವೆಂಪು ಮತ್ತು ಕಾರಂತರಿಂದ ಸೃಷ್ಟಿಯಾದ ಮಹಾಕಾವ್ಯ ಪ್ರಮಾಣದ ಕೃತಿಗಳಲ್ಲಿ ಕಾದಂಬರಿ ಕೀರ್ತಿಶಿಖರವನ್ನು ಮುಟ್ಟುತ್ತದೆ. ಕಾದಂಬರಿಯ ಜತೆಜತೆಯಲ್ಲಿಯೇ ಕಥಾ ಪ್ರವಾಹವೂ ಅವಿಚ್ಛಿನ್ನವಾಗಿ ಸಾಗಿದೆ. ಆನಂದ, ಕೆ. ಗೋಪಾಲ ಕೃಷ್ಣರಾವ್, ಗೊರೂರು, ಎ. ಆರ್. ಕೃಷ್ಣಶಾಸ್ತ್ರೀ, ಕಟ್ಟೀಮನಿ, ಚದುರಂಗ, ಸದಾಶಿವ, ಬೆಸಗರಹಳ್ಳಿ ರಾಮಣ್ಣ, ಜಿ. ಎಸ್. ಪರಮಶಿವಯ್ಯ, ಕೋ. ಚೆನ್ನಬಸಪ್ಪ, ಸುಧಾಕರ, ಮೊದಲಾದವರು ಸತ್ವಪೂರ್ಣವಾದ ಕೊಡುಗೆಗಳನ್ನು ನೀಡಿದ್ದಾರೆ.

ಕಥೆ ಕಾದಂಬರಿಗಳಷ್ಟು ವಿಸ್ತಾರವಾಗಿ ವೈವಿಧ್ಯಪೂರ್ಣವಾಗಿ ನಾಟಕ ಬೆಳೆಯದಿದ್ದರೂ, ಉತ್ತಮ ನಾಟಕಗಳ ಕೊರತೆಯಿಲ್ಲ. ಪ್ರಾಚೀನ ಮಹಾ ಕಾವ್ಯಗಳಿಂದ ತಮಗೆ ಸರಿಯೆಂದು ತೋರಿದ ಪ್ರಸಂಗಗಳನ್ನಾಯ್ದುಕೊಂಡು ತಮ್ಮ ನಾಟಕಗಳ ಮೂಲಕ ನವೀನ ವ್ಯಾಖ್ಯಾನವನ್ನೊದಗಿಸುವಲ್ಲಿ ಕುವೆಂಪು ಮತ್ತು ಪು. ತಿ. ನರಸಿಂಹಾಚಾರ್ ಅವರು ತಮ್ಮ ದೈತ್ಯ ಪ್ರತಿಭೆಯನ್ನು ಮೆರೆದಿದ್ದಾರೆ. ಬೆರಳ್‌ಗೆ ಕೊರಳ್, ಶೂದ್ರ ತಪಸ್ವಿ, ಅಹಲ್ಯೆ ಯಾವ ದೇಶದ ಸಾಹಿತ್ಯಕ್ಕಾದರೂ ಗೌರವ ತರುವಂಥ ಆತ್ಮೋಲ್ಲಾಸಕರವೂ ಆತ್ಮೋದ್ಧಾರಕಾರಿಯೂ ಆದ ನಾಟಕಗಳು. ಉತ್ಕೃಷ್ಟ ಗೀತ ನಾಟಕಗಳನ್ನು ಯಶಸ್ವಿಯಾಗಿ ರಚಿಸಿರುವವರು ಪ್ರಾಯಶಃ ಪುತಿನ ಅವರೊಬ್ಬರೆಂದೇ ತೋರುತ್ತದೆ. ಸಂಸ ಮತ್ತು ಸಮೇತನಹಳ್ಳಿ ರಾಮರಾಯರು ತಮ್ಮ ನಾಟಕಗಳಿಗೆ ಕರ್ನಾಟಕ ಇತಿಹಾಸದಿಂದ ಧಾರಾಳವಾಗಿ ವಸ್ತುವನ್ನಾರಿಸಿಕೊಂಡಿದ್ದಾರೆ. ತಮ್ಮ ಸಾಮಾಜಿಕ ನಾಟಕಗಳಲ್ಲಿ ಪರ್ವತವಾಣಿಯವರು ಹಾಸ್ಯ ಮುರುಕುಗಳನ್ನು ಹಿತವಾಗಿ ಹದವಾಗಿ ಬೆರೆಸುವ ಮೂಲಕ ಜಾಣ್ಮೆಯನ್ನು ಮೆರೆದಿದ್ದಾರೆ. ಕೈವಾರ ರಾಜಾರಾವ್ ಅನೇಕ ಏಕಾಂಕಗಳನ್ನು ರಚಿಸಿದ್ದಾರೆ. ನಾಟಕವನ್ನೊಳಗೊಂಡಂತೆ ಯಾವ ಸಾಹಿತ್ಯ ಪ್ರಕಾರವನ್ನೂ ಬಿಡದೆ ಕೃಷಿ ಮಾಡಿರುವ ಇಬ್ಬರು ಕನ್ನಡದ ಶ್ರೇಷ್ಠ ಸಾಹಿತಿಗಳಲ್ಲಿ ಮಾಸ್ತಿಯವರೂ ಒಬ್ಬರು. ನಾಟಕ ಪ್ರಕಾರವನ್ನು ನಾನಾ ರೀತಿಯಲ್ಲಿ ಬೆಳೆಸಿ, ಅದಕ್ಕೆ ಕೀರ್ತಿಯನ್ನು ತಂದವರಲ್ಲಿ ಬೇಂದ್ರೆ, ಬಿ.ಎಂ.ಶ್ರೀ, ಗೋಕಾಕ, ಸಿ. ಕೆ. ವೆಂಕಟರಾಮಯ್ಯ, ಎಂ. ಆರ್. ಶ್ರೀನಿವಾಸ ಮೂರ್ತಿ, ಕಾವ್ಯಾನಂದ, ಬಿ. ಸಿ. ರಾಮಚಂದ್ರಶರ್ಮ, ಗಿರೀಶ್ ಕಾರ್ನಾಡ, ಚಂದ್ರಶೇಖರ ಪಾಟೀಲ, ಆರ್. ಡಿ. ಕಾಮತ್, ಪಿ. ಲಂಕೇಶ್, ಚಂದ್ರಶೇಖರ ಕಂಬಾರ, ಪೂರ್ಣಚಂದ್ರ ತೇಜಸ್ವಿಯವರು ಮುಖ್ಯರು.

ಉಚಿತ ಪ್ರಮಾಣದಲ್ಲಿ ಪ್ರತಿಭಾವಂತ ಸಾಹಿತಿಗಳ ಗಮನವನ್ನು ಸೆಳೆಯದ ಸಾಹಿತ್ಯ ಪ್ರಕಾರವೆಂದರೆ ಪ್ರಬಂಧ. ಈ

ಪ್ರಕಾರವನ್ನು ಸಾರವತ್ತಾಗಿ ಬಂಧುರವಾಗಿ ಬೆಳೆಸಿದ ಸತ್ವಶಾಲಿ ಸಾಹಿತಿಗಳೆಂದರೆ ಎ. ಎನ್. ಮೂರ್ತಿರಾಯರು ಮತ್ತು ಪು.ತಿ.ನ. ಅವರು. ತೀ.ನಂ.ಶ್ರೀ, ವೀ.ಸೀ, ನಾ. ಕಸ್ತೂರಿ, ಗೊರೂರು, ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಅ. ರಾ. ಮಿತ್ರರ ಪ್ರಬಂಧಗಳಲ್ಲಿ ಕಲ್ಪನಾವಿಲಾಸವಿದೆ. ಭಾವಭಾವನೆಗಳ ಉತ್ಕರ್ಷವಿದೆ, ಹೃದ್ಯತೆಯ ಗುಣವಿದೆ. ಎಸ್. ಮಂಜುನಾಥ್, ದೇ.ಜ.ಗೌ, ಹಾ.ಮಾ.ನಾಯಕ, ರಾಕು ಮತ್ತು ಸಿಂಪಿ ಲಿಂಗಣ್ಣನವರ ಹೆಸರುಗಳು ಈ ಸಂದರ್ಭದಲ್ಲಿ ಮರೆಯು ವಂಥವಲ್ಲ.

ಸಾಹಿತ್ಯವಿಮರ್ಶೆ ಕನ್ನಡ ಸಾಹಿತ್ಯ ಕ್ಷೇತ್ರದೊಳಗೆ ತಡವಾಗಿ ಪ್ರವೇಶಿಸಿದರೂ, ಅದರ ನಾಗಾಲೋಟ ಆಶ್ಚರ್ಯಕರ ವಾಗಿದೆ. ಕೋಲರಿಡ್ಜ್, ಬ್ರಾಡ್ಲೆ, ಹಡ್ಸನ್, ಫ್ರಾಯ್ಡ್, ಯೂಂಗ್, ಐ. ಎ. ರಿಚರ್ಡ್ಸ್, ಟಿ. ಎಸ್. ಇಲಿಯಟ್, ಮೊದಲಾದ ಪಾಶ್ಚಾತ್ಯ ವಿಮರ್ಶೆಯ ದಿಗ್ಗಜಗಳು ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಅಸಾಧಾರಣ ಪ್ರಭಾವವನ್ನು ಬೀರಿದ್ದಾರೆನ್ನುವ ಸಂಗತಿಯನ್ನು ಮರೆಯಲಾಗದು. ಕನ್ನಡ ವಿಮರ್ಶೆಯ ಸಾಧನೆ ಸಿದ್ಧಿಗಳ ವಿವರಣೆ ಇಲ್ಲಿ ಸಾಧ್ಯವಲ್ಲ ವಾದ್ದರಿಂದ ಕೆಲವು ಪ್ರಮುಖ ವಿಮರ್ಶಕರ ನಾಮೋಲ್ಲೇಖನ ದಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ: ಎಸ್. ವಿ. ರಂಗಣ್ಣ, ಕುವೆಂಪು, ಮಾಸ್ತಿ, ಡಿ. ವಿ. ಜಿ., ಎ. ಆರ್. ಕೃಷ್ಣಶಾಸ್ತ್ರೀ, ತೀನಂಶ್ರೀ, ಡಿ. ಎಲ್. ನರಸಿಂಹಾಚಾರ್, ಗೋಕಾಕ್, ಮುಗಳಿ, ವಿ. ಸೀತಾರಾಮಯ್ಯ, ಎಲ್. ಎಸ್. ಶೇಷಗಿರಿರಾವ್, ದೇ. ಜವರೇಗೌಡ, ಆರ್. ಸಿ. ಹಿರೇಮಠ, ಜಿ. ಎಸ್. ಶಿವರುದ್ರಪ್ಪ, ಎಂ. ಆರ್. ಶ್ರೀನಿವಾಸಮೂರ್ತಿ, ಎಸ್. ಎಸ್. ಭೂಸನೂರಮಠ, ಹಾ. ಮಾ. ನಾಯಕ, ಎಂ. ಚಿದಾನಂದ ಮೂರ್ತಿ, ಸಿ. ಪಿ. ಕೃಷ್ಣಕುಮಾರ್, ಎಚ್. ತಿಪ್ಪೇರುದ್ರ ಸ್ವಾಮಿ, ಸುಜನಾ, ಕೆ. ಡಿ. ಕುರ್ತಕೋಟಿ, ಎಂ. ಎಂ. ಕಲ್ಬುರ್ಗಿ, ಗಿರಡ್ಡಿ ಗೋವಿಂದರಾಜ, ಜಿ. ವರದರಾಜರಾವ್, ಎಚ್. ಎಂ. ಚನ್ನಯ್ಯ, ಮುಂತಾದವರು.

ಗ್ರಂಥ ಸಂಪಾದನೆಯ ಮೂಲಕ ಕನ್ನಡ ವಿದ್ವತ್ತಿನ ಮತ್ತು ಸಂಶೋಧನೆಯ ಪ್ರಗತಿಗೆ ಅಸ್ತಿಭಾರ ಹಾಕಿದವರು ಕಿಟ್ಟೆಲ್, ರೈಸ್‌ರಂಥ ಪಾಶ್ಚಾತ್ಯ ವಿದ್ವಾಂಸರು; ಅವರು ತೋರಿದ ಮಾರ್ಗ ದಲ್ಲಿ ಮುನ್ನಡೆದು ಅವರಿಗೂ ಕನ್ನಡಕ್ಕೂ ಗೌರವ ತಂದವರು ರಾ. ನರಸಿಂಹಾಚಾರ್ಯ, ಎ. ವೆಂಕಟಸುಬ್ಬಯ್ಯ, ಎಸ್. ಜಿ. ನರಸಿಂಹಾಚಾರ್, ರಾಮಾನುಜ ಅಯ್ಯಂಗಾರ್, ಮತ್ತು ಟಿ. ಎಸ್. ವೆಂಕಣ್ಣಯ್ಯನವರು. ಆ ಪರಂಪರೆಯನ್ನು ಉಜ್ವಲವಾಗಿ ಬೆಳೆಸಿದವರು ಡಿ. ಎಲ್. ನರಸಿಂಹಾಚಾರ್, ತೀ. ನಂ. ಶ್ರೀಕಂಠಯ್ಯ, ಎಚ್. ದೇವೀರಪ್ಪ, ಆರ್. ಸಿ. ಹಿರೇಮಠ್, ಎಸ್. ಎಸ್. ಬಸವನಾಳ್, ಎಂ. ಮರಿಯಪ್ಪ ಭಟ್ಟ, ದೇ. ಜವರೇಗೌಡ, ಎನ್. ಬಸವಾರಾಧ್ಯ, ಎಲ್. ಬಸವ ರಾಜು ಮುಂತಾದ ವಿಶ್ವವಿದ್ಯಾಲಯಗಳ ವಿದ್ವಾಂಸರು.

ಜೀವನಚರಿತ್ರೆಯು ಪ್ರಕಾರವೂ ವೈವಿಧ್ಯಮವಾಗಿ, ವ್ಯಾಪಕವಾಗಿ, ಶ್ರೀಮಂತವಾಗಿ, ಇತರ ಪ್ರಕಾರಗಳಿಗೆ ಸರಿಸಾಟಿಯಾಗಿ ಬೆಳೆಯುತ್ತಿದೆ. ಕೆಲವು ವೇಳೆ ಸಂಕುಚಿತ ಉದ್ದೇಶಗಳಿಂದ ರಚನೆಯಾಗಿ ಗುಣಮಟ್ಟಕ್ಕೆ ಅವು ಎರ ವಾದುದೂ ಇದೆ. ಕುವೆಂಪು, ಡಿ. ವಿ. ಜಿ., ರಾಜರತ್ನಂ, ಮಾಸ್ತಿ, ದೇಜಗೌ, ಎನ್. ಎಸ್. ವೀರಪ್ಪ, ಎಚ್ಚೆಸ್ಕೆ, ಸಿ. ಕೆ. ವೆಂಕಟರಾಮಯ್ಯ, ಶ್ರೀರಂಗರಾಜು ಇವರು ಪ್ರಮುಖ ಜೀವನಚರಿತ್ರಕಾರರಲ್ಲಿ ಕೆಲವರು. ಅವು ಸಂಖ್ಯೆಯಲ್ಲಿ ಕಡಿಮೆ ಇದ್ದರೂ ದೊರೆಯುವ ಕೃತಿಗಳೆಲ್ಲವೂ ವ್ಯಕ್ತಿನಿಷ್ಠವಾಗಿದ್ದು ಓದಲು ಅರ್ಹವಾಗಿವೆ. ಒಂದು ಜೀವನದ ಕೆಲವು ಕ್ಷಣ ಗಳನ್ನೋ, ಮುಖಗಳನ್ನೋ, ಭಾವನೆಗಳನ್ನೋ, ಘಟನೆ ಗಳನ್ನೋ, ಕುರಿತು ಬರೆದ ವ್ಯಕ್ತಿಚಿತ್ರಗಳು ಅಪಾರವಾಗಿವೆ. ಆತ್ಮಕಥೆಗಳ ಸಂಖ್ಯೆ ಕಡಿಮೆ. ಪ್ರಕಟವಾಗಿರುವ ಮಾಸ್ತಿಯವರ 'ಭಾವ', ದೇಜಗೌ ಅವರ 'ಹೋರಾಟದ ಬದುಕು', ಶಿವರಾಮ ಕಾರಂತರ 'ಹುಚ್ಚು ಮನಸ್ಸಿನ ಹತ್ತು ಮುಖಗಳು', ಕಟ್ಟೀಮನಿಯವರ 'ಕುಂದರ ನಾಡಿನ ಕಂದ', ವಾಚಕರ ಮನ ಸೆಳೆದಿರುವ ಪ್ರಸಿದ್ಧ ಕೃತಿಗಳಾಗಿವೆ. ಈ ಶ್ರೇಣಿಯಲ್ಲಿ ಕುವೆಂಪು ಅವರ 'ನೆನಪಿನ ದೋಣಿಯಲ್ಲಿ' ಗುಣ, ಗಾತ್ರಗಳಲ್ಲಿ ದೊಡ್ಡದಿದ್ದು, ಮಹಾಕಾವ್ಯದಂತಿದೆಯೆಂದೇ ಹೇಳಬಹುದು. ಕನ್ನಡದ ವಿಶಿಷ್ಟ ಸಾಹಿತ್ಯವಾಗಿ ರಾಶಿಗೊಳ್ಳುತ್ತಿರುವ ಸಂಭಾವನಾ ಗ್ರಂಥಗಳು ಸಂಬಂಧಿಸಿದ ವ್ಯಕ್ತಿಗಳ ಸಾಧನೆ ಸಿದ್ಧಿಗಳನ್ನೊಳಗೊಂಡಿವೆಯೆಂಬ ಸಂಗತಿ ಗಮನಾರ್ಹವಾದದ್ದು.

## ಪ್ರಗತಿಶೀಲ ಸಾಹಿತ್ಯ

1945ರ ಸುಮಾರಿನಲ್ಲಿ ಹೊಸ ಅಲೆಯೊಂದು ಕೆಲವು ಕಾಲ ಸಾಹಿತ್ಯ ಕ್ಷೇತ್ರವನ್ನು ಅಲುಗಾಡಿಸುತ್ತದೆ. ಕಮ್ಯೂನಿಸ್ಟ್ ಚಳವಳಿಯಿಂದ ಸ್ಫೂರ್ತಿ ಪಡೆದ ಪ್ರಗತಿಶೀಲ ಲೇಖಕರ ಗುಂಪೊಂದು ಅ. ನ. ಕೃಷ್ಣರಾಯರ ನೇತೃತ್ವದಲ್ಲಿ ಹೊಸ ಹಾದಿ ತುಳಿಯಲು ಪ್ರಯತ್ನಿಸುತ್ತದೆ. ಆ ಪಂಥದ ಅನುಯಾಯಿಗಳು ಭಾವುಕತೆಯನ್ನು ಶಪಿಸುತ್ತಾರೆ. ವಾಸ್ತವತೆ ಅವರ ಗುರುತು; ಮಾನವೀಯತೆ ಅವರ ಕೂಗು; ಸಾಹಿತಿಗಳು ತಮ್ಮ ದಂತ ಗೋಪುರಗಳಿಂದ ಹೊರಬಂದು, ಶ್ರೀಸಾಮಾನ್ಯರೊಡನೆ ಬೆರೆತು, ಅವರ ಸಮಸ್ಯೆಗಳನ್ನರಿತುಕೊಂಡು, ಸಮಾಜದ ನಿಜವಾದ ಬಣ್ಣ ವನ್ನು ಬಯಲು ಮಾಡಬೇಕೆಂದು ಅವರು ಘೋಷಿಸುತ್ತಾರೆ. ನವೋದಯ ಸಾಹಿತಿಗಳ ಕಲ್ಪನೆಯ ಸ್ವರ್ಗಾದರ್ಶಗಳನ್ನು ಅವರು ದ್ವೇಷಿಸುತ್ತಾರೆ. ಅವರ ಪ್ರಕಾರ ದೇವರ ನಿರ್ಲಕ್ಷ್ಯಕ್ಕೆ ಗುರಿ ಯಾದವರು ದೀನದಲಿತರೇ ಹೊರತು ಶ್ರೀಮಂತರಲ್ಲ; ಇಂದಿನ

ಸಾಮಾಜಿಕ ರೋಗರುಜಿನಗಳಿಗೆ, ಆರ್ಥಿಕ ಕಷ್ಟನಷ್ಟಗಳಿಗೆ ಶ್ರೀಮಂತರೇ ಜವಾಬ್ದಾರರಾಗಬೇಕು. ಆ ಹೊಸ ಅಲೆಯ ಅವಧಿ ಎಷ್ಟೇ ಹ್ರಸ್ವವಾದುದಾಗಿರಲಿ, ಬಸವರಾಜ ಕಟ್ಟೀಮನಿ, ನಿರಂಜನ, ತರಾಸು, ಚದುರಂಗರಂಥ ಶ್ರೇಷ್ಠ ದರ್ಜೆಯ ಕಾದಂಬರಿಕಾರರನ್ನು, ಸಣ್ಣ ಕತೆಗಾರರನ್ನು ಅದು ಸೃಷ್ಟಿಸಿತೆಂಬುದು ನಿಜ. ಈ ಸಾಹಿತ್ಯ ಮುಂದಿನ ಪೀಳಿಗೆಗೆ ಶಕ್ತಿಯುತವೂ ಹರಿತವೂ ಆದ ಶೈಲಿಯನ್ನು ಒದಗಿಸಿತೆಂಬುದನ್ನು ಒಪ್ಪಬೇಕಾಗುತ್ತದೆ. ಆ ಪಂಥ ನವೋದಯ ಸಾಹಿತ್ಯದ ಮೇಲೆಯೂ ಪರಿಣಾಮಕಾರಿಯಾದ ಪ್ರಭಾವ ಬೀರಿತೆಂಬುದನ್ನು ಮರೆಯುವಂತಿಲ್ಲ.

## ನವ್ಯ ಪಂಥ

ದ್ವಿತೀಯ ಮಹಾಯುದ್ಧದ ಪರಿಣಾಮವಾಗಿ ಫಲಿಸಿ, ಇಂಗ್ಲಿಷ್ ಸಾಹಿತ್ಯದ ಮೇಲೆ ಅದಮ್ಯ ಪ್ರಭಾವ ಬೀರಿದ ನಿರಾಶೆಯ ಕೊರಗು ಟಿ. ಎಸ್. ಇಲಿಯಟ್, ಆಡೆನ್, ಎಜ್ರಾ ಪೌಂಡ್ ಮೊದಲಾದವರ ಬರವಣಿಗೆಗಳಲ್ಲಿ ಪ್ರಕಾಶಕ್ಕೆ ಬರುತ್ತದೆ. ಬರ್ನಾರ್ಡ್ ಶಾ, ಡಿ. ಎಚ್. ಲಾರೆನ್ಸ್, ಮತ್ತು ಎಚ್. ಜಿ. ವೆಲ್ಸ್ ಸಾಹಿತಿಗಳಿಗೆ ಅಚ್ಚುಮೆಚ್ಚು. ಅವರು ಹೊಸ ಪೀಳಿಗೆಯ ಬರಹಗಾರರಿಗೆ ಉತ್ತೇಜನ ನೀಡುತ್ತಾರೆ. ವಿ. ಕೃ. ಗೋಕಾಕರು ವಿದೇಶದಿಂದ ಹಿಂದಿರುಗಿದ ಕೂಡಲೇ ನವ್ಯದ ಹೆಸರಿನಲ್ಲಿ ಹೊಸ ಚಳುವಳಿಯನ್ನು ಆರಂಭಿಸುತ್ತಾರೆ. ಅದನ್ನು ಪೋಷಿಸಿ, ಬೆಳೆಸಿದವರು ಎಂ. ಗೋಪಾಲಕೃಷ್ಣ ಅಡಿಗರು. ಅಡಿಗರ ಗೊಂದಲಪುರ ಇಲಿಯಟ್‌ರ ವೇಸ್ಟ್ ಲ್ಯಾಂಡ್ ಅನ್ನು ನೆನಪಿಗೆ ತರುತ್ತದೆ. ಬಿ. ಸಿ. ರಾಮಚಂದ್ರ ಶರ್ಮರು ಅವರನ್ನು ಹಿಂಬಾಲಿಸುತ್ತಾರೆ. ಅವರು ಹೊಸತಂತ್ರ, ನುಡಿಗಟ್ಟು, ಉಪಮೆ, ರೂಪಕ ಮತ್ತು ಪ್ರತಿಮೆಗಳನ್ನು ಟಂಕಿಸುತ್ತಾರೆ. ಆ ಪಂಥ ತಲೆಯೆತ್ತದಿದ್ದರೆ, ಈ ಹೊಸ ಸರಕುಗಳಿಂದ ವಂಚಿತವಾದ ಭಾಷೆ ಅಪಾರ ನಷ್ಟಕ್ಕೆ ಗುರಿಯಾಗುತ್ತಿತ್ತೆಂಬುದರಲ್ಲಿ ಸಂಶಯವಿಲ್ಲ. 'ಈ ಎಲ್ಲ ವಿಷಯಗಳಲ್ಲಿ ಅತಿಮುಖ್ಯವಾಗಿರುವ ಕವಿಯ ಮಾನಸಿಕ ಪರಿಸ್ಥಿತಿ ಮತ್ತು ಸೃಜನಾತ್ಮಕ ಪ್ರೇರಣೆಗಳು ಉಚಿತ ಪ್ರತಿಮೆಗಳ, ವಸ್ತುವಿನ, ಲಯದ ಮತ್ತು ಶೈಲಿಯ ಮೂಲಕ ತೃಪ್ತಿಕರವಾದ ಅಭಿವ್ಯಕ್ತಿಯನ್ನು ಪಡೆಯುತ್ತವೆ' ಎಂದು ಗೋಕಾಕ್ ನುಡಿಯುತ್ತಾರೆ. ಪಿ. ಲಂಕೇಶ್, ತಿರುಮಲೇಶ್, ಚಂದ್ರಶೇಖರ ಕಂಬಾರ, ಯು. ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ ಪಾಟೀಲ್, ನಿಸಾರ್ ಅಹಮದ್ ಮತ್ತು ಕೃಷ್ಣ ಆಲನಹಳ್ಳಿ ಈ ಚಳವಳಿಯ ಗರ್ಭದಿಂದ ಮೂಡಿದ ಕವಿಗಳಲ್ಲಿ ಕೆಲವರು.

ಜಿ. ಎಸ್. ಶಿವರುದ್ರಪ್ಪ ಮತ್ತು ಕಣವಿಯರದೇ ಒಂದು ಬಗೆ. ಯಾವ ಗುಂಪಿನ ಹೆಸರಿನ ಚೀಟಿಯನ್ನು ಹಣೆಯ ಮೇಲೆ ಅಂಟಿಸಿಕೊಳ್ಳುವುದಿಲ್ಲ. ಅವರು ನವೋದಯ ಸಂಪ್ರದಾಯದಲ್ಲಿ ಬೆಳೆದವರು. ಇತರ ಪಂಥಗಳಲ್ಲಿ ಕಂಡುಬರುವ ಉತ್ತಮಾಂಶಗಳನ್ನು ಅವರು ರಕ್ತಗತಮಾಡಿಕೊಂಡಿದ್ದಾರೆ. ಅವರು ನೂತನ ಭಾವಾಲೋಚನೆಗಳನ್ನು ನಿರ್ಲಕ್ಷಿಸುವುದಿಲ್ಲ. ಶಿವರುದ್ರಪ್ಪನವರು ತಮ್ಮೆದುರು ಕುವೆಂಪು ಅವರಂತೆ ಹಳತು ಹೊಸತುಗಳ ಸುಸಂಗತ ಸಮ್ಮಿಲನವಾಗಿದ್ದಾರೆ. ಆವರಿಬ್ಬರೂ ಆಧುನಿಕ ಯುಗದ ಮೂರನೇಯ ಪೀಳಿಗೆಯ ಕೆನೆಯೆಂದೇ ಹೇಳಬಹುದು. ಭಾವಗೀತೆಗಳ ರಚನೆಯಲ್ಲಿ ಅವರು ಅತ್ಯುನ್ನತಿಯನ್ನು ಸಾಧಿಸಿದ್ದಾರೆ. ಅಪಾರ ವಿದ್ವತ್ತಿನಿಂದ, ಕಾವ್ಯ ಸಾಮರ್ಥ್ಯದಿಂದ, ಪೂರ್ವಗ್ರಹ ದೂರವಾದ ಯಶೋಧರ್ಮದಿಂದ, ಸಂಯಮದಿಂದ ಕೂಡಿದ ಸಮತೂಕದ ಅಭಿಪ್ರಾಯಗಳಿಂದ ಶಿವರುದ್ರಪ್ಪನವರು ಆಧುನಿಕ ಯುಗದ ಶ್ರೇಷ್ಠ ವಿಮರ್ಶಕರಲ್ಲೊಬ್ಬರೆಂದು ಹೇಳಿದರೆ ಅತಿಶಯೋಕ್ತಿಯಾಗದು.

ಒಬ್ಬಾನೊಬ್ಬ ಕವಿ ಯಾವುದೇ ಪಂಥಕ್ಕೆ ಸೇರಿದವರೆಂದು ಚೀಟಿ ಅಂಟಿಸುವುದೇ ವಿಚಿತ್ರದ ಸಂಗತಿಯಾಗಿದೆ. ಕ್ರಿಯಾಶೀಲವಾದ ಒಂದು ಅವಧಿಯ ಅಥವಾ ಒಂದು ಯುಗದ ಸಾಮಾಜಿಕ ಪರಿಸ್ಥಿತಿಯ ಪರಿಣಾಮವಾಗಿ ಒಂದು ಚಳವಳಿ ಉಗಮಗೊಳ್ಳುತ್ತದೆ. ಕವಿ ತಾನು ಬದುಕಿರುವ ಯುಗದ ಶಿಶು. ಆದ್ದರಿಂದ ಆಧುನಿಕ ಯುಗದ ಎಲ್ಲ ಪಂಥಗಳ ವೈಶಿಷ್ಟ್ಯಗಳು ಶ್ರೇಷ್ಠತಮ ಕವಿಗಳ ಕೃತಿಗಳಲ್ಲಿ ಪ್ರತಿಬಿಂಬಿಸುವುದನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಸೂಕ್ಷ್ಮಗ್ರಾಹಿಯ ಶಕ್ತಿಯ ಪೂರ್ವಗ್ರಹ ದೂರನಾದ ವಿಮರ್ಶಕ ಬೇಂದ್ರೆ, ಕುವೆಂಪು ಅವರ ಕೃತಿಗಳಲ್ಲಿ ಸರ್ವ ಸಮಕಾಲೀನ ಪಂಥಗಳ ಸಲ್ಲಕ್ಷಣಗಳನ್ನೆಲ್ಲ ಗೊತ್ತುಹಚ್ಚಬಹುದು. ಶ್ರೇಷ್ಠ ಕವಿ ಎಲ್ಲ ಕಾಲದೇಶಗಳಿಗೂ ಸೇರಿದವನು. ಅದೇನೇ ಇರಲಿ, ಯಾವ ಗುಂಪಿಗೂ ಸೇರದ ಸಾಹಿತಿಗಳು ಹಲವರಿದ್ದಾರೆ. ಬಹು ಜನಪ್ರಿಯರಾದ ಎಸ್. ಎಲ್. ಭೈರಪ್ಪನವರು ಅಂಥವರಲ್ಲೊಬ್ಬರು. ಸನದಿ, ಅಕ್ಬರ್ ಅಲಿ ಅವರೂ ಅಷ್ಟೇ. ಎಕ್ಕುಂಡಿ, ವ್ಯಾಸರಾಯ ಬಲ್ಲಾಳ, ಕಯ್ಯಾರ ಕಿಞ್ಞಣ್ಣ ರೈ, ಬೀಚಿ, ಕುಸುಮಾಕರ, ಗಿರೀಶ್ ಕಾರ್ನಾಡ್, ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ, ಸಿ. ಕೆ. ನಾಗರಾಜರಾವ್, ವೈಕುಂಠ ರಾಜು, ಹರಿದಾಸ ಭಟ್ಟ ಮೊದಲಾದವರು ಕನ್ನಡ ಸಾಹಿತ್ಯದ ದಿವಂಗತಗಳನ್ನು ಗಣನೀಯವಾಗಿ ವಿಸ್ತರಿಸಿದ್ದಾರೆ.

ಮಹಿಳಾ ಲೇಖಿಕೆಯರು ಅತ್ಯಾಸಕ್ತಿ, ಅತ್ಯುತ್ಸಾಹಗಳಿಂದ ಸಾಹಿತ್ಯ ಕೃಷಿಯಲ್ಲಿ ತೊಡಗಿರುವುದು ಈ ಯುಗದ ಮುಖ್ಯ ಲಕ್ಷಣಗಳಲ್ಲೊಂದಾಗಿದೆ. ಅವರಲ್ಲಿ ಬಹುಮಂದಿ ಕಾದಂಬರಿಕಾರ್ತಿಯರು. ಸಣ್ಣಕತೆಯಲ್ಲಿಯೂ ಪಳಗಿದವರಿದ್ದಾರೆ. ಒಟ್ಟಿನಲ್ಲಿ ಅವರು ಗದ್ಯ ಲೇಖಿಕೆಯರು. ಎಂ. ಕೆ. ಇಂದಿರಾ, ಅನುಪಮಾ ನಿರಂಜನ, ತ್ರಿವೇಣಿಯರು ಚಿತ್ತಾಕರ್ಷಕವಾದ ಸಾಮಾಜಿಕ ಮತ್ತು ಮನಶ್ಶಾಸ್ತ್ರೀಯ ಕಾದಂಬರಿಗಳನ್ನು ಪ್ರಕಟ

ಸಿದ್ದಾರೆ. ಶಾಂತಾದೇವಿ ಮಾಳವಾಡ, ತಿರುಮಲೆ ರಾಜಮ್ಮ, ಆರ್ಯಾಂಬಾ ಪಟ್ಟಾಭಿ, ಶಾಂತಾದೇವಿ ಕಣವಿ, ಎಚ್. ಎಸ್. ಪಾರ್ವತಿ, ಪ್ರೇಮಾ ಭಟ್ ತಮ್ಮ ಕೃತಿಗಳಿಂದ ಕನ್ನಡಿಗರ ಮೆಚ್ಚುಗೆಯನ್ನು ಸಂಪಾದಿಸಿರುವ ಲೇಖಿಕೆಯರು.

## ನವ್ಯೋತ್ತರ ಸಾಹಿತ್ಯ

ನವ್ಯೋತ್ತರ ಸಾಹಿತ್ಯದ ಪ್ರಸ್ತಾಪವಿಲ್ಲದೆ ಕನ್ನಡ ಸಾಹಿತ್ಯದ ಈ ಸಂಕ್ಷಿಪ್ತ ಸವಿಾಕ್ಷೆ ಪೂರ್ಣವಾಗಲಾರದು. ಅದನ್ನು ಬಂಡಾಯ ಸಾಹಿತ್ಯ ಅಥವಾ ದಲಿತ ಸಾಹಿತ್ಯ ಎಂಬ ಪರ್ಯಾಯನಾಮ ಗಳಿಂದಲೂ ಕರೆಯುವುದುಂಟು. ಅವುಗಳಿಗೆ ಸಂವಾದಿಯಾದ ಪಂಥಗಳು ರಾಷ್ಟ್ರದ ಬೇರೆಬೇರೆ ಕಡೆಗಳಲ್ಲಿ ಅಸ್ತಿತ್ವದಲ್ಲಿವೆ. ಸಾಹಿತ್ಯ ಕ್ಷೇತ್ರದ ಈ ಹೊಸ ಪ್ರವೇಶಗಳ ಬರಹಗಳಲ್ಲಿ ಸಾಂದ್ರ ಸಾಮಾಜಿಕ ಪ್ರಜ್ಞೆಯು, ಹಾಗೂ ವಾಮಪಂಥೀಯ ಒಲವುಗಳ ಒತ್ತಡವನ್ನು ಗುರುತಿಸಬಹುದಾಗಿದೆ. ನವ್ಯೋತ್ತರ ಶಾಖೆಯ ಪ್ರವರ್ತಕ ರಲ್ಲೊಬ್ಬರೆನ್ನಲಾದ ಪೂರ್ಣಚಂದ್ರ ತೇಜಸ್ವಿಯವರು ಪಳಗಿದ ಕಾದಂಬರಿಕಾರರೂ ಅಹುದು, ಸಣ್ಣ ಕತೆಗಾರರೂ ಅಹುದು. ಎಲ್ಲ ಸಾಮಾಜಿಕ ಕೇಡುಗಳಿಗೆ ದಲಿತವರ್ಗದ ಶೋಷಣೆಗೆ ಮತ್ತು ಅವರ ಧಾರುಣವಾದ ಜೀವನ ಪರಿಸ್ಥಿತಿಗೆ ಕಾರಣವಾದ ಪ್ರಾಚೀನ ಶುಷ್ಕ ಸಂಪ್ರದಾಯಗಳ ಮತ್ತು ಮೂಢನಂಬಿಕೆಗಳ ವಿರುದ್ಧ ವಾಗಿ ಬಂಡೆದ್ದಿರುವ ಯುವಪೀಳಿಗೆಯ ಲೇಖಕರ ಶ್ರೇಷ್ಠ ಪ್ರತಿನಿಧಿ ದೇವನೂರು ಮಹಾದೇವ ಅವರು. ಚಂದ್ರಶೇಖರ ಪಾಟೀಲರು ಸಹ ಬಂಡಾಯಗಾರರು. ಅವರು ಆಷಾಢಭೂತಿತನ ವನ್ನು ಸಹಿಸರು. ಸಮಾಜವನ್ನು ಮಲಿನಗೊಳಿಸಿರುವ ಕೇಡು ಗಳನ್ನು ಖಂಡತುಂಡವಾಗಿ ಖಂಡಿಸುವಲ್ಲಿ ಅವರು ಹಿಂಜರಿಯು ವುದಿಲ್ಲ. ಅವರ ಕವಿತೆ ಮತ್ತು ನಾಟಕಗಳಲ್ಲಿ ಕಟು ವಿಡಂಬನೆ ಯಿದೆ, ತಿಕ್ತ ವ್ಯಂಗ್ಯವಿದೆ. ಅಸ್ಪೃಶ್ಯರ ಘೋರ ಪರಿಸ್ಥಿತಿಗೆ ಕಾರಣವಾದ ಸಾಮಾಜಿಕ ವ್ಯವಸ್ಥೆಯನ್ನು ಹಳಿಯುವಲ್ಲಿ ಸಹಜ ವಾಗಿಯೇ ರುದ್ರಾವತಾರ ತಾಳುವ ಸಿದ್ಧಲಿಂಗಯ್ಯನವರು ಮೊಳೆ ಯುತ್ತಿರುವ ಭರವಸೆಯ ಕವಿ. ಭ್ರಷ್ಟಾಚಾರ ತುಂಬಿತುಳು ಕಾಡುತ್ತಿರುವ ಸಮಾಜ ಉಳಿಯುವ ಹಕ್ಕನ್ನು ಕಳೆದುಕೊಂಡಿದೆ ಯೆಂದು ಪ್ರಾಮಾಣಿಕವಾಗಿ ನಂಬಿರುವ ಬರಗೂರು ರಾಮ ಚಂದ್ರಪ್ಪ ಕವಿಯೂ ಅಹುದು, ಕಾದಂಬರಿಕಾರರೂ ಅಹುದು. ಇಂದೂಧರ ಹೊನ್ನಾಪುರ ಅವರು ಅಸಮಾನತೆಯೆಂದರೆ ಉಗ್ರ ರಾಗುತ್ತಾರೆ, ಯಾರೇನೇ ಹೇಳಲಿ, ನವೋದಯವೋ, ನವ್ಯವೋ, ಬಂಡಾಯವೋ, ಯಾವುದೇ ಆಗಿರಲಿ, ಅದು ಜೀವನದಿಂದ ಹೊರ ಹೊಮ್ಮಿದುದಾದರೆ ಸಮಾಜವನ್ನು ಯಥಾವತ್ತಾಗಿ ಕನ್ನಡಿಸು ವುದಾದರೆ, ಸಾಹಿತ್ಯದ ಪರಿಮಳದಲ್ಲಿ ಮಿಂದಿದ್ದಾದರೆ, ಅದು ಕಾವ್ಯವಾಗುತ್ತದೆ. ಉಳಿದದ್ದು ಅಕಾವ್ಯವಾಗುತ್ತದೆ.

ಪ್ರಾಚೀನ ರೂಪ ಹಾಗೂ ಛಂದಃ ಪ್ರಕಾರಗಳು ಈ ಶತಮಾನದಲ್ಲಿ ಪುನರುಜ್ಜೀವನಗೊಂಡದ್ದು ಸ್ವಾರಸ್ಯದ ಸಂಗತಿ ಯಾಗಿದೆ. ವಚನವಂತೂ ಅನೇಕ ಪ್ರತಿಭಾವಂತ ವಿದ್ವನ್ಮಣಿಗಳನ್ನು ತನ್ನ ತೆಕ್ಕೆಗೆ ಸೆಳೆದುಕೊಂಡಿದೆ. ಎಸ್. ವಿ. ರಂಗಣ್ಣನವರು ಶ್ರೇಷ್ಠ ವಿಮರ್ಶಕರು ಮಾತ್ರವಲ್ಲ, ಕನ್ನಡಲೋಕಕ್ಕೆ ಇಂಗ್ಲಿಷ್ ಸಾಹಿತ್ಯವನ್ನು ಸಮರ್ಥ ರೀತಿಯಲ್ಲಿ ಪರಿಚಯಿಸಿಕೊಟ್ಟ ಪ್ರಕಾಂಡ ವ್ಯಾಖ್ಯಾನಕಾರರು. ವಚನ ರಚನೆಯಲ್ಲಿ ಅಪೂರ್ವ ಸಿದ್ಧಿಯನ್ನು ಪಡೆದ ಅವರನ್ನು ಆಧುನಿಕ ವಚನ ಸಾಹಿತ್ಯದ ಅಧ್ವರ್ಯುರೆಂದೇ ಹೇಳಬಹುದು. ರಂಗಬಿನ್ನಪ ಅವರ ವಚನಗಳ ಸಂಕಲನ. ಕಾವ್ಯಾ ನಂದರ ಅಂತರ್ದೃಷ್ಟಿ, ಲೋಕಾನುಭವ ಸಂಪತ್ತು, ಸೂಕ್ಷ್ಮ ಸಂವೇದನಾ ಶಕ್ತಿ, ಬಹುಭಾಷಾ ಪಾಂಡಿತ್ಯ ಪ್ರಜ್ಞೆ, ಒಟ್ಟಿನಲ್ಲಿ ಅವರ ಪೂರ್ಣ ವ್ಯಕ್ತಿತ್ವ ಅವರ ವಚನಗಳಲ್ಲಿ ಮಾರ್ಮೊಳೆದಿವೆ. ಅವರ ಸಂಕಲನ 'ವಚನೋದ್ಯಾನ' ಪೂರ್ವಯುಗದ ವಚನಗಳನ್ನು ನೆನಪಿಗೆ ತಂದುಕೊಡುತ್ತದೆ. ಎಸ್. ವಿ. ಪರಮೇಶ್ವರ ಭಟ್ಟರು ರಚಿಸಿರುವ ಬಹುಸಂಖ್ಯೆಯ ವಚನಗಳಲ್ಲಿ ಕೆಲವು ಸಿದ್ಧಿಯ ಶಿಖರ ವನ್ನು ಮುಟ್ಟಿವೆ. ಅವರು ವಚನಗಳ ಜೊತೆಗೆ ಸಾಂಗತ್ಯ, ಏಳೆ ಮೊದಲಾದ ಹಳೆಯ ದೇಶೀ ಛಂದಸ್ಸಿನಲ್ಲಿ ಕೈಯಾಡಿಸಿ, ಪ್ರಸಿದ್ಧಿ ಯನ್ನು ಪಡೆದಿದ್ದಾರೆ. ಜಯದೇವಿ ತಾಯಿ ಲಿಗಾಡೆಯವರು ತ್ರಿಪದಿ ಛಂದಸ್ಸಿನಲ್ಲಿ ಸಿದ್ಧರಾಮನ ಕಥೆಯನ್ನು ಪುನರ್ನಿರ್ಮಿಸಿ ದ್ದಾರೆ. ಈಚೀಚೆಗಂತೂ ವಚನಕಾರರ ಸಂಖ್ಯೆ ಬೆಳೆಯುತ್ತಿದೆ. ಸದ್ಯಕ್ಕೆ ಆರ್. ಆರ್. ದಿವಾಕರ್ (ಅಂತರಾತ್ಮನಿಗೆ), ಸಿ. ಪಿ. ಕೃಷ್ಣಕುಮಾರ್ (ಅಂತರಾತ್ಮ), ಚಂದ್ರಶೇಖರ ಐತಾಳ್ ಗುಂಡ್ಮಿ (ಮಾತೃ ಸಂಹಿತೆ), ಕುಮಾರ ಕಕ್ಕಯ್ಯ (ಪೋಳ; ಕುಮಾರ ಕಕ್ಕಯ್ಯನ ವಚನಗಳು), ಜೋಳದ ರಾಶಿ ದೊಡ್ಡಣ್ಣಗೌಡ, ಈ ಹೆಸರುಗಳನ್ನು ನೆನೆಯಬಹುದಾಗಿದೆ.

## ಭಾಷಾಂತರ ಸಾಹಿತ್ಯ

ಯಾವ ಭಾಷೆಯಾಗಲಿ ಸಾಹಿತ್ಯವಾಗಲಿ ಏಕಾಂಗಿತನದಲ್ಲಿ ಹುಲುಸಾಗಲಾರದು. ಹೊಸಗಾಳಿ ಬೆಳಕುಗಳನ್ನು ಪಡೆಯುವ ಸಲುವಾಗಿ ಎಲ್ಲ ಕಿಟಕಿ ಬಾಗಿಲುಗಳನ್ನು ಸದಾ ತೆರೆದಿಟ್ಟು ಕೊಂಡಿರುವ ಭಾಷಾ ಸಾಹಿತ್ಯಗಳು ಮಾತ್ರ ನಾನಾ ಮುಖವಾಗಿ ಸೊಂಪಾಗಿ ಬೆಳೆಯುವುದಲ್ಲದೆ, ಯಾವಾಗಲೂ ಹರಿದ್ವರ್ಣದಿಂದ ತುಂಬಿ ತುಳುಕುತ್ತಿರುತ್ತವೆ. ಈ ದಿಶೆಯಲ್ಲಿ ಭಾಷಾಂತರ ಸಚೇತಕ ಶಕ್ತಿಯಾಗಿ ಕೆಲಸ ಮಾಡುತ್ತದೆ. ಅದು ಎಲ್ಲ ಭಾಷಾ ಸಾಹಿತ್ಯಗಳ ಮಿಲನವೇದಿಕೆಯಾಗಿ ಪರಿಣಮಿಸುತ್ತದೆ; ಭಿನ್ನ ಭಿನ್ನ ಭಾಷೆಗಳ, ವಿವಿಧ ಸಂಸ್ಕೃತಿಗಳ ಜನರ ನಡುವೆ ಅದು ಸಾಮರಸ್ಯ ವನ್ನು ಕುದುರಿಸುತ್ತದೆ. ಒಂದು ಸಾಹಿತ್ಯ ಸಂಪತ್ಸಮೃದ್ಧವಾಗಿ ಕಂಗೊಳಿಸಬೇಕಾದರೆ, ಸ್ವತಂತ್ರ ಕೃತಿಗಳ ನಿರ್ಮಾಣವೊಂದೇ ಸಾಲದು, ಬೇರೆ ಬೇರೆ ಭಾಷೆಗಳಿಂದ ಭಾಷಾಂತರ ರೂಪಾಂತರ ಅನುವಾದಗಳು ನಿರಂತರವಾಗಿ ಹರಿದು ಬರಬೇಕು. ಈ ದೃಷ್ಟಿಯಲ್ಲಿ ಕನ್ನಡವೊಂದೇ ಭಾಗ್ಯಶಾಲೀ ಭಾಷೆಯೆಂದು

ತೋರುತ್ತದೆ. ಕನ್ನಡ ಸಾಹಿತ್ಯ ಪ್ರಾರಂಭ ಕಾಲದಿಂದ ಸಂಸ್ಕೃತ ಪ್ರಾಕೃತ ಭಾಷೆಗಳ ಉತ್ತಮಾಂಶಗಳನ್ನೆಲ್ಲ ಜೀರ್ಣಿಸಿಕೊಂಡಿದೆ. ಈ ಅಕ್ಷಯ ನಿಧಿಗಳ ಮಾಯಾ ಸಂಸ್ಪರ್ಶದಿಂದ ಕನ್ನಡ ಭಾಷಾ ಸಾಹಿತ್ಯಗಳ ಯಾವ ಮುಖವೂ ಮುಕ್ತವಾಗಿಲ್ಲ. ವೀರಶೈವ ಕವಿಗಳನ್ನು ಬಿಟ್ಟರೆ ಹೆಚ್ಚುಕಡಿಮೆ ಪ್ರಾಚೀನ ಮತ್ತು ಮಧ್ಯ ಯುಗಗಳ ಕವಿಗಳೆಲ್ಲರೂ ಈ ಮೂಲ ಖನಿಗಳನ್ನು ಸಂಪೂರ್ಣ ವಾಗಿ ಸೂರೆಗೊಂಡಿದ್ದಾರೆ. ಸಂಸ್ಕೃತ ಕೃತಿಗಳ ಭಾಷಾಂತರ ಇಂದಿಗೂ ನಿರಂತರವಾಗಿ ಸಾಗುತ್ತಿದೆ. ಚುರಮರಿ ಶೇಷಗಿರಿ ರಾವ್, ಗಂಗಾಧರ ಮಡಿವಾಳೇಶ್ವರ ತುರಮರಿ, ಧೊಂಡೋ ನರಸಿಂಹ ಮುಳಬಾಗಿಲ, ಸೀತಾರಾಮಶಾಸ್ತ್ರಿ, ನಂಜನಗೂಡು ಶ್ರೀಕಂಠಶಾಸ್ತ್ರಿ ಮತ್ತು ಎಂ. ಜಿ. ನಂಜುಂಡಾರಾಧ್ಯರೇ ಮೊದಲಾದ ಹಲವು ವಿದ್ವಾಂಸರು ಈ ಪರಂಪರೆಯನ್ನು ಮುಂದು ವರಿಸಿದ್ದಾರೆ. ಕೆ. ಕೃಷ್ಣಮೂರ್ತಿ ಮತ್ತು ಎಸ್. ವಿ. ಪರಮೇಶ್ವರ ಭಟ್ಟರಿಗೆ ಸರಿಸಾಟಿಯಾದ ಸಾಹಸಾಂಕಮಲ್ಲರು ಸಮಕಾಲೀನ ಯುಗದಲ್ಲಂತು ವಿರಳ. ಕಾವ್ಯಮೀಮಾಂಸೆಗೆ ಸಂಬಂಧಿಸಿದ ಪ್ರಮುಖ ಕೃತಿಗಳನ್ನೂ, ಭಾಸ, ಕಾಳಿದಾಸ, ಅಶ್ವಘೋಷರ ಎಲ್ಲ ಕೃತಿಗಳನ್ನು ಭಾಷಾಂತರಿಸಿ, ಕನ್ನಡ ಸಾಹಿತ್ಯ ವನ್ನು ಶ್ರೀಮಂತಗೊಳಿಸಿದ್ದಾರೆ. ಎನ್. ಬಾಲಸುಬ್ರಹ್ಮಣ್ಯ ಅವರು ಅರಿಸ್ಟಾಟಲ್ ಮತ್ತು ಹೋರೇಸರ ಕೃತಿಗಳನ್ನು ಕನ್ನಡಕ್ಕೆ ಭಟ್ಟಿಯಿಳಿಸಿದ್ದಾರೆ. ಸಂಸ್ಕೃತ ಮತ್ತು ಆಂಗ್ಲ ಭಾಷೆಗಳಿಂದ ಅನೇಕ ಕೃತಿರತ್ನಗಳನ್ನು ಕನ್ನಡಕ್ಕೆ ತಂದಿರುವ ಸಾಹಸಿಗಳಲ್ಲಿ ಸಿ. ಪಿ. ಕೃಷ್ಣಕುಮಾರರೂ ಒಬ್ಬರು.

ಆಂಗ್ಲ ಮತ್ತು ಯುರೋಪೀಯ ಸಾಹಿತ್ಯಕೃತಿಗಳ ಭಾಷಾಂತರ ಮತ್ತು ಅನುವಾದಗಳು ನಿಜಕ್ಕೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನೂತನ ಮಾರ್ಗರಚನೆಗೆ ಹಾಗೂ ನವೀನಾಯಾಮುಗಳ ಜೋಡಣೆಗೆ ತುಂಬ ಸಹಾಯಕವಾಗಿವೆ. ಸಿ. ಸುಬ್ಬರಾವ್, ಎ. ಆನಂದರಾವ್ ಮತ್ತು ಬಸಪ್ಪ ಶಾಸ್ತ್ರಿಗಳು ಶೇಕ್ಸ್‌ಪಿಯರನ ಒಥೆಲೊ, ರೋಮಿಯೋ ಆ್ಯಂಡ್ ಜ್ಯೂಲಿಯಟ್, ಮರ್ಚೆಂಟ್ ಆಫ್ ವೆನಿಸ್ ಮತ್ತು ಹ್ಯಾಮ್ಲೆಟ್ ನಾಟಕಗಳನ್ನು ಶೂರಸೇನ ಚರಿತ್ರೆ, ರಾಮವರ್ಮ ಲೀಲಾವತಿ, ಪಾಂಚಾಲಿಪರಿಣಯ ಮತ್ತು ಹೇಮಂತ ರಾಜ ವಿಲಾಸಗಳೆಂಬ ಶೀರ್ಷಿಕೆಗಳಿಂದ ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಶ್ರೀಕಂಠೇಶ ಗೌಡರು ಪ್ರತಾಪರುದ್ರದೇವ ಮತ್ತು ಪ್ರಮೀಳಾರ್ಜುನೀಯ ಎಂಬ ಹೆಸರು ಕೊಟ್ಟು, ಮ್ಯಾಕ್‌ಬೆತ್ ಮತ್ತು ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ಎಂಬ ನಾಟಕಗಳನ್ನು ತರ್ಜುಮೆ ಮಾಡಿದ್ದಾರೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಶೇಕ್ಸ್‌ಪಿಯರನ ಹಲವು ನಾಟಕಗಳನ್ನು ಪೂರ್ಣವಾಗಿಯೋ ಖಂಡವಾಗಿಯೋ ಸುಲಭ ಕನ್ನಡಕ್ಕೆ ತಿರುಗಿಸಿ ದ್ದಾರೆ. ಕೆ. ವಿ ಪುಟ್ಟಪ್ಪನವರ ಬಿರುಗಾಳಿ ಟೆಂಪೆಸ್ಟ್ ನಾಟಕದ ಭಾವಾನುವಾದ. ಅಲೆಕ್ಸಿ ಕೆರೋಲ್, ಥಾಮಸ್ ಹಾರ್ಡಿ, ಲಿಯೋ ಟಾಲ್‌ಸ್ಟಾಯ್, ಜೇನ್ ಆಸ್ಟೀನ್, ಇಬ್ಸೆನ್, ಮೋಲಿಯರ್, ಗಯಟೆ, ಎಡ್ವರ್ಡ್ ಫಿಟ್ಜೆರಾಲ್ಡ್, ಮುಂತಾದ ಬಹುಸಂಖ್ಯೆಯ ಯುರೋಪೀಯ ಮಹಾ ಸಾಹಿತಿಗಳು, ಕು. ಶಿ. ಹರಿದಾಸ ಭಟ್ಟ, ದೇ. ಜವರೇಗೌಡ, ಎ. ಎನ್. ಮೂರ್ತಿರಾವ್, ಪರ್ವತವಾಣಿ, ಪು. ತಿ. ನರಸಿಂಹಾಚಾರ್, ಡಿ. ವಿ. ಗುಂಡಪ್ಪ, ಮೊದಲಾದ ಸಮರ್ಥ ಭಾಷಾಂತಕಾರರ ಮೂಲಕ ಕನ್ನಡ ಲೋಕ ವನ್ನು ಪ್ರವೇಶಿಸಿದ್ದಾರೆ. ಸ್ವಾಮಿ ಸೋಮನಾಥಾನಂದರು, ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ ಸಾಹಿತ್ಯವನ್ನೂ, ಕೋ. ಚನ್ನಬಸಪ್ಪನವರು, ಶ್ರೀ ಅರವಿಂದರ ಲೈಫ್ ಡಿವೈನ್ ಕೃತಿಯನ್ನೂ ಅಭೂತಪೂರ್ವವೆನ್ನುವಂತೆ ಕನ್ನಡಕ್ಕೆ ಒದಗಿಸಿ ದ್ದಾರೆ. ಕೆ. ವಿ. ಶಂಕರೇಗೌಡರು ಪ್ಯಾರೇಲಾಲರ 'ಮಹಾತ್ಮಾ ಗಾಂಧಿ—ದಿ ಲಾಸ್ಟ್ ಫೇಸ್' ಎಂಬ ಬೃಹತ್ಕೃತಿಯನ್ನು ಸುಸಮರ್ಥವಾಗಿ ಭಾಷಾಂತರಿಸಿದ್ದಾರೆ.

ಇತ್ತೀಚಿನ ವರ್ಷಗಳಲ್ಲಿ ಭಾರತೀಯ ಭಾಷೆಗಳ ಭಾಷಾಂತರ ಗಳು ಕನ್ನಡದ ಸಿರಿ ಸುಗ್ಗಿಗೆ ಕಾರಣವಾಗಿದೆ. ಅವುಗಳಲ್ಲಿ ಹೆಚ್ಚಿನ ಸಂಖ್ಯೆ ಹಿಂದಿಯಿಂದ ಬಂದವಾಗಿವೆ. ಕನ್ನಡ ಸಾಹಿತ್ಯ ಲೋಕಕ್ಕೆ ಅಲ್ಲಿಯ ಸುಪ್ರಸಿದ್ಧ ಸಾಹಿತಿಗಳ ಪರಿಚಯವಿದೆ. ಗುರುನಾಥ ಜೋಶಿ, ಎಚ್. ಎಸ್. ಪಾರ್ವತಿ, ಎಂ. ಎಸ್. ಕೃಷ್ಣಮೂರ್ತಿ, ತಿಪ್ಪೇಸ್ವಾಮಿ ಮತ್ತು ಬಿ. ನಂ. ಚಂದ್ರಯ್ಯ ನವರು ಕ್ರಮವಾಗಿ ಪ್ರೇಮಚಂದರ ಗಬನ್, ಶ್ರೀಲಾಲ್‌ಶುಕ್ಲ ಅವರ ರಾಗ್‌ದರ್ಬಾರಿ, ವೃಂದಾವನ ಲಾಲ್‌ವರ್ಮರ ಮೃಗ ನಯನೀ, ಮೋಹನ್‌ಲಾಲ್ ಮೆಹ್ರೊ ವಿಯೋಗಿಯವರ ಮಹಾ ಮಂತ್ರಿ, ಭಗವತಿ ಚರಣ ವರ್ಮರ ಚಿತ್ರಲೇಖ ಕೃತಿಗಳನ್ನು ಸೊಗಸಾಗಿ ಸಲೀಲವಾಗಿ ಭಾಷಾಂತರಿಸಿದ್ದಾರೆ. ಸಿದ್ಧಲಿಂಗ ಪಟ್ಟಣಶೆಟ್ಟರು ಮೋಹನ್ ರಾಕೇಶರ ನಾಟಕಗಳನ್ನು ಕನ್ನಡಿಸಿ ದ್ದಾರೆ. ಇದು ಪ್ರಾತಿನಿಧಿಕ ಪಟ್ಟಿ ಮಾತ್ರ. ಅಸ್ಸಾಮಿ, ಒರಿಯಾ, ಕಾಶ್ಮೀರಿ ಮತ್ತು ಗುಜರಾತಿ, ಭಾಷೆಗಳ ಕೆಲವು ಕೃತಿಗಳು ಹಿಂದಿಯ ಮೂಲಕ ಕನ್ನಡಕ್ಕೆ ಬಂದಿವೆ. ತಮಿಳು ತೆಲುಗುಗಳು ಸಹ ಕನ್ನಡಕ್ಕೆ ಸಾಕಷ್ಟು ಕಾಣಿಕೆ ಸಲ್ಲಿಸಿವೆ. ಬಿ. ಕೆ. ತಿಮ್ಮಪ್ಪ, ಕರುಣಾಕರನ್ ಮತ್ತು ಎಂ. ಎಸ್. ಲಕ್ಷ್ಮಣಾ ಚಾರ್ ಅವರು ಹಲವು ಮಲಯಾಳೀ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಕಾರಂತ, ಕುವೆಂಪು, ಮಾಸ್ತಿ, ಡಿ. ವಿ. ಗುಂಡಪ್ಪ, ರಾವ್ ಬಹದ್ದೂರ್, ಮಿರ್ಜಿ ಅಣ್ಣಾರಾಯರ ಕೆಲವು ಕೃತಿಗಳು ಹಿಂದಿ ತಮಿಳು ತೆಲುಗುಗಳಿಗೆ ಪರಿವರ್ತನೆಗೊಂಡಿವೆ.

ಆಧುನಿಕ ಯುಗದ ಮೊದಲ ಹಂತಗಳಲ್ಲಿ ಆಂಗ್ಲ ಕಾದಂಬರಿ ಗಳ ನಮೂನೆಗಳು ಬಂಗಾಳಿ ಭಾಷೆಯ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪದಾರ್ಪಣೆ ಮಾಡುತ್ತವೆ. ಬಿ. ವೆಂಕಟಾಚಾರ್ ಅವರು ಕನ್ನಡಿಸಿದ ಬಂಕಿಂಚಂದ್ರ ಚಟರ್ಜಿಯವರ ಕಾದಂಬರಿಗಳು ವಾಚಕವೃಂದದ ಮೆಚ್ಚುಗೆಗೆ ಪಾತ್ರವಾಗಿವೆ. ರವೀಂದ್ರನಾಥ ಟಾಗೋರರ ಕೃತಿಗಳನ್ನು ತಮ್ಮ ಭಾಷೆಗೆ ತಂದುಕೊಳ್ಳುವುದರ

ಲ್ಲಿಯೂ ಕನ್ನಡಿಗರು ಮುಂದಾಗಿದ್ದಾರೆ. ಕನ್ನಡ ಲೇಖಕರ ಮೇಲೆ ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ರವೀಂದ್ರರು ಬೀರಿರುವ ಪ್ರಭಾವ ಅದ್ವಿತೀಯವಾದದ್ದು. ತುಸು ತಡವಾದರೂ ಶರತ್‌ಚಂದ್ರರ ಕಾದಂಬರಿಗಳು ಕನ್ನಡಕ್ಕೆ ಬಂದದ್ದು ಅಭಿಮಾನದ ಸಂಗತಿ. ಸುಪ್ರಸಿದ್ಧ ಮರಾಠಿ ಲೇಖಕರಾದ ಹರಿ ನಾರಾಯಣ ಆಪ್ಟೆಯವರನ್ನು ಭಾಷಾಂತರ ಕೃತಿಗಳ ಮೂಲಕ ಕನ್ನಡಿಗರಿಗೆ ಪರಿಚಯಿಸಿಕೊಟ್ಟ ಗಳಗನಾಥರ ಸ್ವಯಂಕೃತ ಗ್ರಂಥಗಳ ಪಟ್ಟಿ ದೊಡ್ಡದು. ಖಾಂಡೇಕರ್ ಅವರಿಗೆ ಜ್ಞಾನಪೀಠ ಬಹುಮಾನವನ್ನು ಗಳಿಸಿಕೊಟ್ಟ ಯಯಾತಿ ಕಾದಂಬರಿಯನ್ನು ವಿ. ಎಂ. ಇನಾಂದಾರರು ಭಾಷಾಂತರಿಸಿದ್ದಾರೆ. ಮೂಲತಃ ಕನ್ನಡ ಜಾನಪದ ನಾಟಕಗಳಿಂದ ಪ್ರಭಾವಿತವಾದ ಮರಾಠಿ ರಂಗಭೂಮಿ ಕನ್ನಡ ಲೇಖಕರಲ್ಲಿ ಉತ್ಸಾಹಾಸಕ್ತಿಗಳನ್ನು ಕೆರಳಿಸುತ್ತಿದೆ.

ನೆರೆಹೊರೆಯ ತೆಲುಗು, ತಮಿಳು, ಮರಾಠಿ ಸಾಹಿತ್ಯಗಳ ಮೇಲೆ ಕನ್ನಡ ಸಾಹಿತ್ಯ ಮುದ್ರಿಸಿರುವ ಪ್ರಭಾವದ ಬಗ್ಗೆ ಒಂದೆರಡು ಮಾತು ಹೇಳಿದರೆ ಅಸಂಗತವಾಗಲಾರದು. ತೆಲುಗಿನ ಪ್ರಪ್ರಥಮ ಮಹಾಕವಿ ನನ್ನಯ್ಯನಿಗೆ ಪಂಪಭಾರತವೇ ಆದರ್ಶ. ಪಾಲ್ಕುರಿಗೆ ಸೋಮನಾಥ ಮತ್ತು ಶಿವಪ್ರಕಾಶರ ಬಸವಪುರಾಣ ಮತ್ತು ಪ್ರಭುಲಿಂಗಲೀಲೆಗಳ ಮೂಲಕ ವೀರಶೈವ ಸಾಹಿತ್ಯ ತನ್ನ ತತ್ತ್ವ, ಭಾವನೆ, ವಿಚಾರಧಾರೆಗಳನ್ನು ತೆಲುಗು ತಮಿಳು ಸಾಹಿತ್ಯಗಳಿಗೆ ದಾನ ಮಾಡಿದೆ. ಕರ್ನಾಟಕದ ಅನುಭಾವಿಗಳು ಮಹಾರಾಷ್ಟ್ರದ ಸಂತರ ಮೇಲೆ ಮೋಡಿ ಹಾಕಿದ್ದಾರೆ. ಜ್ಞಾನೇಶ್ವರಿಯಲ್ಲಿ ನುಸುಳಿಕೊಂಡಿರುವ ಕನ್ನಡ ನುಡಿ ಮತ್ತು ನುಡಿಗಟ್ಟುಗಳು ಯಾರನ್ನಾದರೂ ಬೆರಗುಗೊಳಿಸದಿರಲಾರವು. ಸಂಸ್ಕೃತ ಮಹಾಪುರಾಣದ ಕರ್ತೃಗಳಾದ ಜಿನಸೇನ, ಗುಣಭದ್ರರಲ್ಲದೆ, ಪುಷ್ಪದಂತನಂಥ ಕೆಲವು ಅಪಭ್ರಂಶ ಕವಿಗಳಿಗೆ ಕನ್ನಡ ದೊರೆಗಳು ಆಶ್ರಯದಾತರಾಗಿದ್ದರೆಂಬ, ಅವರು ಕರ್ನಾಟಕ ಸಂಸ್ಕೃತಿಯ ಪ್ರಭಾವದಿಂದ ಪಾರಾಗಿರಲಾರರೆಂಬ ಸಂಗತಿಯನ್ನು ಮರೆಯುವಂತಿಲ್ಲ. ಯಶಸ್ತಿಲಕ ಚಂಪೂವನ್ನು ರಚಿಸಿದ ಸೋಮದೇವ ರಾಷ್ಟ್ರಕೂಟ ಚಕ್ರವರ್ತಿಗಳ ರಾಜ್ಯದಲ್ಲಿದ್ದ ಸಂಗತಿಯೂ ಗಮನಾರ್ಹವಾದದ್ದು.

## ಪ್ರವಾಸ ಸಾಹಿತ್ಯ

ಈಗೀಗ ಪ್ರವಾಸ ಕಥೆ ಕನ್ನಡ ಸಾಹಿತ್ಯದ ಆಕರ್ಷಕ ಪ್ರಕಾರವಾಗಿದೆ. ಕನ್ನಡದಲ್ಲಿ ಪ್ರಪ್ರಥಮ ಪ್ರಯತ್ನವೆನ್ನಬಹುದಾದ ವೀಸೀಯವರ ಪಂಪಾಯಾತ್ರೆ ಕಣ್ಣಿಗೆ ಕಟ್ಟುವ ವರ್ಣನೆಯಿಂದಾಗಿ ವಾಚಕರ ಪ್ರಶಂಸೆಗೆ ಪಾತ್ರವಾಗಿದೆ. ಕಾರಂತರ ಅಪೂರ್ವ ಪಶ್ಚಿಮ, ಅಬೂವಿಂದ ಬರಾಮಕ್ಕೆ, ಪಾತಾಳಕ್ಕೆ ಪ್ರಯಾಣ, ದೇಜಗೌ ಅವರ ವಿದೇಶದಲ್ಲಿ ನಾಲ್ಕು ವಾರ, ಆಫ್ರಿಕಾ ಯಾತ್ರೆ, ಮತ್ತು ಯೇಸುವಿಭೀಷಣರ ನಾಡಿನಲ್ಲಿ, ಅಂತೆಯೇ ಹರಿದಾಸ ಭಟ್ಟರ ನಾಕಂಡ ಇಟಾಲಿಯಾ ಮತ್ತು ಜಗದಗಲ, ಕೃಷ್ಣಾನಂದ ಕಾಮತರ ನಾನೂ ಅಮೇರಿಕಾಕ್ಕೆ ಹೋಗಿದ್ದೆ, ಎ. ಎನ್. ಮೂರ್ತಿರಾಯರ ಅಪರ ವಯಸ್ಸಿನ ಅಮೇರಿಕಾ ಯಾತ್ರೆ, ಗೊರೂರರ ಅಮೇರಿಕಾದಲ್ಲಿ ಗೊರೂರು, ಮುಂತಾದವು ಅವರು ಕಂಡ ನಾಡು ಸಮಾಜಗಳ ಸ್ಥಿತಿಗತಿಗಳನ್ನು ವಾಚಕರ ಮನೋರಂಗದಲ್ಲಿ ಚಿತ್ರೀಕರಣಗೊಳ್ಳುವಂತೆ ಸ್ಪಷ್ಟವಾಗಿ ನಿರೂಪಿಸುತ್ತವೆ. ಎಚ್. ಎಲ್. ನಾಗೇಗೌಡರ ಪ್ರವಾಸಿ ಕಂಡ ಇಂಡಿಯಾ ಎಂಬ ಹಲವು ಸಂಪುಟಗಳ ಮಹಾಕೃತಿ ವಿದೇಶೀಯರ ಕಣ್ಣು ಕಂಡಂತೆ ಭಾರತೀಯ ಸಮಾಜದ ಚಿತ್ರವನ್ನು ಒದಗಿಸುತ್ತದೆ. ವಿ. ಕೃ. ಗೋಕಾಕ, ಸ್ವಾಮಿ ಸೋಮನಾಥಾನಂದ, ನವರತ್ನ ರಾಂ, ಕೋ. ಚೆನ್ನಬಸಪ್ಪ, ಹಿತ್ತಲಮನಿ, ಎಚ್. ವಿ. ಶ್ರೀರಂಗರಾಜು, ಎಚ್. ಶ್ರೀನಿವಾಸಯ್ಯ, ಎಂ. ವೀರಪ್ಪ, ಜಿ. ಎಸ್ ಶಿವರುದ್ರಪ್ಪ, ಬಿ. ಜಿ. ಎಲ್. ಸ್ವಾಮಿ ಮತ್ತು ಪ್ರಭುಶಂಕರರು ಕನ್ನಡಕ್ಕೆ ಉತ್ತಮ ಪ್ರವಾಸ ಸಾಹಿತ್ಯವನ್ನು ಕೊಟ್ಟಿರುವ ಲೇಖಕರಲ್ಲಿ ಕೆಲವರು.

## ಶಿಶು ಸಾಹಿತ್ಯ

ಶಿಶು ಸಾಹಿತ್ಯ ಶ್ರೇಷ್ಠ ಲೇಖಕರ ಪೋಷಣೆಯಲ್ಲಿ ಬೆಳೆದರೂ, ಆ ಕ್ಷೇತ್ರದಲ್ಲಿ ಆಗಬೇಕಾದ ಕೆಲಸ ಸಾಗರದಷ್ಟಿದೆ. ಶಿಶುಸಾಹಿತ್ಯ ಕ್ಷೇತ್ರದ ಬೇಸಾಯಗಾರರ ಪೈಕಿ ರಾಜರತ್ನಂ ಅವರ ಹೆಸರು ಮುಂಚೂಣಿಯಲ್ಲಿ ನಿಲ್ಲುತ್ತದೆ. ಕುವೆಂಪು, ಕಾರಂತ ಮತ್ತು ಹೊಯ್ಸಳರು ಈ ಕ್ಷೇತ್ರಕ್ಕೆ ಸಲ್ಲಿಸಿರುವ ಕಾಣಿಕೆ ಮಹತ್ತರವಾದದ್ದು. ಪಂಜೆ, ಭಾರತೀಸುತ, ಕಾವ್ಯಾನಂದ, ಎಲ್. ಗುಂಡಪ್ಪ, ಸಿಸು ಸಂಗಮೇಶ, ದಿನಕರ ದೇಸಾಯಿ ಮತ್ತು ಇತರರು ಈ ದಿಕ್ಕಿನಲ್ಲಿ ಕಾರ್ಯತತ್ಪರರಾಗಿ, ಶಿಶುಸಾಹಿತ್ಯದ ಕಣಜವನ್ನು ತಕ್ಕ ಮಟ್ಟಿಗೆ ತುಂಬಿದ್ದಾರೆ.

ಕುವೆಂಪು, ಪುತಿನ, ಮಾಸ್ತಿ ಮತ್ತು ಬೇಂದ್ರೆಯವರ ಲೇಖನಿಗಳಲ್ಲಿ ಸಾನೆಟ್ಟು ರೂಪ ಪರಿಪಕ್ವತೆಯನ್ನು ವೈವಿಧ್ಯವನ್ನೂ ಸಾಧಿಸಿದೆ. ಡಿ. ವಿ. ಗುಂಡಪ್ಪ, ಬಿ. ಎಂ. ಶ್ರೀಕಂಠಯ್ಯ, ಕುವೆಂಪು ಮತ್ತು ಗೋವಿಂದ ಪೈಗಳನ್ನು ಬಿಟ್ಟರೆ ಮಹಾಪ್ರಗಾಥ ಬೇರಾವ ಕವಿಗಳ ಮನ್ನಣೆಗೂ ಪಾತ್ರವಾಗದಿರುವುದು ಸೋಜಿಗದ ಸಂಗತಿ. ವ್ಯಂಗ್ಯ ವಿಡಂಬನೆಗಳನ್ನೊಳಗೊಂಡ ಮುಕ್ತಕ ಮತ್ತು ಚುಟುಕಗಳ ರಚನೆಗೆ ದಿನಕರ ದೇಸಾಯಿಯರು ಖ್ಯಾತನಾಮರಾಗಿದ್ದಾರೆ. ಅವರನ್ನನುಕರಿಸುತ್ತಿರುವ ಚುಟುಕಕಾರರ ಸಂಖ್ಯೆ ದಿನೇ ದಿನೇ ಬೆಳೆಯುತ್ತಿದೆ. ರಾಜರತ್ನಂ, ಕಾರಂತ, ಶ್ರೀರಂಗ, ಕುವೆಂಪುರವರಲ್ಲದೆ ಕನ್ನಡದಲ್ಲಿ ವಿಡಂಬನಕಾರರು ವಿರಳ. ಪತ್ರ ಮತ್ತು ದಿನಚರಿ ಸಾಹಿತ್ಯ ಅಪರೂಪವಸ್ತುವಾಗಿರುವುದಂತು ಕನ್ನಡದ ದುರ್ದೈವ.

ಜ್ಞಾನ ವಿಜ್ಞಾನ ಸಾಹಿತ್ಯ : ಭಾಷಾ ಸಾಹಿತ್ಯಗಳ ಪ್ರಗತಿ ವಿಕಾಸಗಳು ಅನುಕೂಲ ವಾತಾವರಣವನ್ನೂ ಕಸುವುಳ್ಳ ಸಮಾಜವನ್ನೂ ಅವಲಂಬಿಸುತ್ತವೆ. ಯಾವುದಾದರೂ ಭಾಷೆ ಜೀವನದ ಸಕಲ ವ್ಯವಹಾರಗಳಲ್ಲಿ ಅಗ್ರಗಣ್ಯ ಸ್ಥಾನವನ್ನು ಪಡೆದಾಗ, ಆ ಭಾಷೆಯ ಬೆಳವಣಿಗೆಗೆ ಅನುಕೂಲವಾತಾವರಣ ಅಸ್ತಿತ್ವದಲ್ಲಿದೆಯೆನ್ನಬಹುದು. ಎರಡು ಶತಕಗಳಿಗಿಂತ ಹೆಚ್ಚಾಗಿ ಆಡಳಿತ ಕ್ಷೇತ್ರದಲ್ಲಿ ಮಾತ್ರವಲ್ಲ, ಶೈಕ್ಷಣಿಕ ಕ್ಷೇತ್ರದಲ್ಲಿಯೂ ಕನ್ನಡಕ್ಕೆ ನ್ಯಾಯವಾಗಿ ಸಿಗಬೇಕಾದ ಸ್ಥಾನ ಸಿಕ್ಕಿಲ್ಲ. ನಿಜಕ್ಕೂ ಅದು ಯುಗಧರ್ಮಕ್ಕನುಗುಣವಾಗಿ, ಜನತೆಯ ಆಶೆ ಆಕಾಂಕ್ಷೆಗಳಿಗೆ ತಕ್ಕಂತೆ ವಿಕಾಸ ಹೊಂದಲು ಸಾಧ್ಯವಾಗಿಲ್ಲ. ಅನ್ಯಭಾಷೆಗಳ ನಾನಾ ಬಗೆಯ ಅಸಹ್ಯ ದಾಳಿಗಳನ್ನು ಎದುರಿಸಬೇಕಾದ ಅಪಾಯಕರ ಪರಿಸ್ಥಿತಿ ಇದ್ದಾಗಲೂ ಕನ್ನಡ ತನ್ನ ಜೀವಧಾತುವನ್ನಾಗಲಿ ಕಸುವನ್ನಾಗಲಿ ಕಳೆದುಕೊಳ್ಳದಿದ್ದದ್ದು ಸೋಜಿಗದ ಸಂಗತಿಯಾಗಿದೆ. ಸರ್ವಮಾಧ್ಯಮದಿಂದ ಕನ್ನಡಕ್ಕೊದಗುವ ಪ್ರಯೋಜನಗಳನ್ನು ಜನತೆ ಈಗೀಗ ಅರ್ಥ ಮಾಡಿಕೊಳ್ಳುತ್ತಿದೆ. ರೈತ ಕಾರ್ಮಿಕರಿಂದ ಹಿಡಿದು ಮುಖ್ಯಮಂತ್ರಿಗಳವರೆಗಿನ ಎಲ್ಲ ವೃತ್ತಿಗಳ ಜನ ಸಕಲ ಜೀವನ ವ್ಯವಹಾರಗಳ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಬಳಸಿದಾಗ ಅದು ದೇದೀಪ್ಯಮಾನವಾಗುತ್ತದೆ, ಸರ್ವಶಕ್ತವಾಗುತ್ತದೆ, ಫಲವತ್ತಾಗುತ್ತದೆ. ಕನ್ನಡ ಈ ಉದ್ದೇಶವನ್ನು ಈಡೇರಿಸಿಕೊಳ್ಳುವ ಮಾರ್ಗದಲ್ಲಿದೆ. ವಿಜ್ಞಾನ ಮತ್ತು ತಾಂತ್ರಿಕ ವಿಜ್ಞಾನಗಳು ಸೇರಿದಂತೆ ಈಗಾಗಲೇ ವಿವಿಧ ಜ್ಞಾನ ಶಾಖೆಗಳಲ್ಲಿ ಪ್ರಕಟವಾಗಿರುವ ಗ್ರಂಥರಾಶಿಯನ್ನು ನೋಡಿದಾಗ, ಕನ್ನಡವನ್ನು ಬಳಸುವ ಜನ ಸಮರ್ಥರಾದರೆ, ಅದು ಶಕ್ತಿಯುತವೂ ಪರಿಣಾಮಕಾರಿಯೂ ಆದ ಮಾಧ್ಯಮವಾಗುತ್ತವೆನ್ನುವುದಕ್ಕೆ ಅನ್ಯ ಸಾಕ್ಷಿ ಅನವಶ್ಯಕ.

ಕಾವ್ಯಶಾಸ್ತ್ರ ಹಾಗೂ ಭಾಷಾ ಶಾಸ್ತ್ರಗಳಿಗೆ ಸಂಬಂಧಿಸಿದ ಪುಸ್ತಕಗಳಿಗೆ ಏನೇನೂ ಕೊರತೆಯಿಲ್ಲ. ಈ ಮೊದಲೇ ಹೆಸರಿಸಿರುವ ಪ್ರತಿಭಾವಂತರಲ್ಲದೆ ವಿ. ಸೀತಾರಾಮಯ್ಯ, ಆರ್. ಸಿ. ಹಿರೇಮಠ, ಎಂ. ಮರಿಯಪ್ಪ ಭಟ್ಟ, ಎಂ. ಚಿದಾನಂದಮೂರ್ತಿ, ಎಂ. ಎಂ. ಕಲ್ಬುರ್ಗಿ, ಹಂಪನಾಗರಾಜಯ್ಯ, ಜಯವಂತ ಕುಳ್ಳಿ, ಎಚ್. ಎಸ್. ಬಿಳಿಗಿರಿ, ಪಿ. ಬಿ. ದೇಸಾಯಿ, ನಂದಿಮಠ, ಟಿ. ಟಿ. ಶರ್ಮ, ಬಿ. ಹೆಚ್. ಶ್ರೀಧರ, ಶಂ. ಬಾ. ಜೋಶಿ, ಎಸ್. ಶ್ರೀಕಂಠಶಾಸ್ತ್ರಿ, ತೀನಂಶ್ರೀ, ಎಲ್. ಬಸವರಾಜು, ಎಂ. ಎಸ್. ಸುಂಕಾಪುರ, ಆರ್. ಎಸ್. ಮುಗಳಿ, ಸ. ಸ. ಮಾಳವಾಡ, ಜಿ. ಎಸ್. ಶಿವರುದ್ರಪ್ಪ, ಎ. ವೆಂಕಟಸುಬ್ಬಯ್ಯ, ಎಚ್. ತಿಪ್ಪೇರುದ್ರಸ್ವಾಮಿ, ಸೂರ್ಯನಾಥ ಕಾಮತ್, ಎಂ. ವಿ. ಸೀತಾರಾಮಯ್ಯ, ಮೊದಲಾದ ಗಣನೀಯ ಸಂಖ್ಯೆಯ ಗಣ್ಯರು ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಶಾಸನ, ಛಂದಸ್ಸು, ಮೊದಲಾದ ವಿಷಯಗಳ ವಿವಿಧ ಮುಖಗಳನ್ನು ಕುರಿತು ಮೌಲಿಕ ಲೇಖನ ಮತ್ತು ಗ್ರಂಥಗಳನ್ನು ಬರೆದಿದ್ದಾರೆ. ಶಿಕ್ಷಣ ಹಾಗೂ ಮಾನವಿಕ ಜ್ಞಾನ ಶಾಖೆಗಳಲ್ಲಿ ಜಿ. ಹನುಮಂತರಾವ್, ಎಂ. ಯಾಮುನಾಚಾರ್ಯ, ಎಂ. ವಿ. ಕೃಷ್ಣರಾವ್, ಎನ್. ಎಸ್. ವೀರಪ್ಪ, ಸಿದ್ದವ್ವನಹಳ್ಳಿ ಕೃಷ್ಣಶರ್ಮರೂ, ವಿಜ್ಞಾನ ಕ್ಷೇತ್ರದಲ್ಲಿ ಬೆಳ್ಳಾವೆ ವೆಂಕಟನಾರಣಪ್ಪ, ಎಲ್. ಸೀಬಯ್ಯ, ಆರ್. ಎಲ್. ನರಸಿಂಹಯ್ಯ, ಜಿ. ವಿ. ಬಿ. ನಾಯುಡು, ಬಿ. ಎನ್. ಬೋಳೇಗೌಡ, ಬಿ. ಪಿ. ರಾಧಾಕೃಷ್ಣ, ಡಿ. ಎಸ್. ಶಿವಪ್ಪ, ಟಿ. ಎಸ್. ಸುಬ್ಬರಾಯ, ಆರ್. ಎಸ್. ಭೂಸನೂರು ಮಠ, ಜಿ. ಟಿ. ನಾರಾಯಣರಾವ್, ಜೆ. ಆರ್. ಲಕ್ಷ್ಮಣರಾವ್, ಬಿ. ಜಿ. ಎಲ್. ಸ್ವಾಮಿ, ವಿಶೇಷ ಸಾಧನೆಯ ಮೂಲಕ ಅನೇಕ ಕೃತಿಗಳನ್ನು ಪ್ರಕಟಿಸಿ ಹೊಸ ಪರಂಪರೆಗೆ ಭದ್ರವಾದ ಅಡಿಪಾಯ ಹಾಕಿದ್ದಾರೆ. ಗ್ರಂಥ ರಚನೆ ಮಾಡಲು ಇಲ್ಲಿಯ ಹಲವು ಲೇಖಕರನ್ನು ಪ್ರೋತ್ಸಾಹಿಸಿ ಈ ಮಹಾಯಜ್ಞಕಾರ್ಯಕ್ಕೆ ಸಮರ್ಪಿಸಿಕೊಳ್ಳುವಂತೆ ಅವರಿಗೆ ಸ್ಫೂರ್ತಿ ನೀಡಿ ಜ್ಞಾನ ವಿಜ್ಞಾನ ಸಾಹಿತ್ಯ ಹುಲುಸಾಗಿ ಬೆಳೆಯಲು ಕಾರಣರಾದ ಬಿ. ಎಂ. ಶ್ರೀಕಂಠಯ್ಯ, ಎ. ಆರ್. ಕೃಷ್ಣಶಾಸ್ತ್ರೀ ಮತ್ತು ಕೆ. ವಿ. ಪುಟ್ಟಪ್ಪನವರನ್ನು ಈ ಸಂದರ್ಭದಲ್ಲಿ ನೆನೆಯಬೇಕಾಗಿದೆ. ಶಿವರಾಮ ಕಾರಂತರ ಏಕಾಂಗ ಸಾಹಸದ ಮತ್ತು ವಿಶೇಷ ಪ್ರತಿಭೆಯ ಸತ್ಫಲಗಳು ಬಾಲ ಪ್ರಪಂಚ ಮತ್ತು ವಿಜ್ಞಾನ ಪ್ರಪಂಚಗಳು. ಜ್ಞಾನ ವಿಜ್ಞಾನಗಳ ಪ್ರಸರಣ ಕಾರ್ಯದಲ್ಲಿ ಜ್ಞಾನ ಗಂಗೋತ್ರಿ ಮತ್ತು ಕನ್ನಡ ವಿಶ್ವಕೋಶಗಳು ನಿರ್ವಹಿಸಿರುವ ಪಾತ್ರ ಅದ್ವಿತೀಯವಾದದ್ದು. ಪ್ರಬುದ್ಧ ಲೇಖಕರ ಪಡೆಯನ್ನು ಸಿದ್ಧಗೊಳಿಸಿದ ವಿಶೇಷ ಯಶಸ್ಸು ಅವುಗಳಿಗೆ ಸಲ್ಲಬೇಕು.

ಕನ್ನಡ ಆಡಳಿತ ಮಾಧ್ಯಮವಾಗಿ, ಅದರ ನ್ಯಾಯೋಚಿತವಾದ ಸ್ಥಾನಮಾನಗಳು ದೊರೆತು, ಸಮಾಜದ ಅತ್ಯಂತ ಕೆಳಗಿನ ಜನ ವಿದ್ಯಾವಂತರಾದಾಗ ಕನ್ನಡ ಭಾಷೆ ಮತ್ತು ಸಾಹಿತ್ಯಗಳು ಅತ್ಯುನ್ನತ ಶಿಖರವನ್ನು ಮುಟ್ಟುತ್ತವೆ. ಈಗಾಗಲೇ ಅದರ ಸುಳಿವು ಸ್ಪಷ್ಟವಾಗಿ ಗೋಚರಿಸುತ್ತಿದೆ. ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳು ಸಕಲ ಜ್ಞಾನ ಶಾಖೆಗಳಿಗೆ ಸಂಬಂಧಿಸಿದಂತೆ ಪಠ್ಯ ಪುಸ್ತಕ ನಿರ್ಮಾಣ ಯೋಜನೆಯನ್ನು ಕಾರ್ಯಗತಗೊಳಿಸುತ್ತಿರುವುದು ಕನ್ನಡದ ಭವಿಷ್ಯಕ್ಕೆ ಶುಭಸೂಚನೆಯಂತಿದೆ.

ಹೊಸ ಪ್ರೇರಣೆಗಳು : ಈ ಮೊದಲೇ ಸ್ಪಷ್ಟಪಡಿಸಿದಂತೆ, ಪಾಶ್ಚಾತ್ಯ ಸಂಪರ್ಕ ಮತ್ತು ಮಹಾತ್ಮಾ ಗಾಂಧೀಜಿಯ ನಾಯಕತ್ವದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿ ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸಿದ ಪ್ರಮುಖ ಶಕ್ತಿಗಳು. ಸಾಮಾನ್ಯ ಜನತೆಯ ನಡುವೆ ನಡೆಯುತ್ತಿರುವ ಶಿಕ್ಷಣ ಪ್ರಸಾರದಿಂದಾಗಿ, ಹಿಂದುಳಿದ ಮತ್ತು ದಲಿತ ವರ್ಗಗಳಿಗೆ ಲಭಿಸುತ್ತಿರುವ ವಿಶೇಷ ಸವಲತ್ತುಗಳಿಂದಾಗಿ, ವ್ಯಕ್ತಿಪ್ರಜ್ಞೆ ಪ್ರಜ್ವಲವಾಗತೊಡಗಿದೆ. ಸಾವಿರಾರು ವರ್ಷಗಳಿಂದ ಪ್ರಮುಖ ಸಾಂಸ್ಕೃತಿಕ ವಾಹಿನಿಯ ಸಂಪರ್ಕದಿಂದ ವಂಚಿತರಾದ, ಗ್ರಾಮೀಣ ಸಂಸ್ಕೃತಿಯ ಹಿನ್ನೆಲೆ

ಯುಳ್ಳ ಯುವಕರು ಕ್ರಮಕ್ರಮೇಣ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುವ ಹವಣಿನಲ್ಲಿದ್ದಾರೆ. ಹೊಸ ಪ್ರೇರಣೆಗಳು, ಹೊಸ ಧ್ಯೇಯೋದ್ದೇಶಗಳು ಮತ್ತು ಹೊಸ ಅಭೀಪ್ಸೆ ಆಕಾಂಕ್ಷೆಗಳು ಮುಂಬರುವ ವರ್ಷಗಳಲ್ಲಿ ಭಾಷೆ ಮತ್ತು ಸಾಹಿತ್ಯಗಳ ಮೇಲೆ ಪರಿಣಾಮಕಾರಿಯಾದ ಪ್ರಭಾವ ಬೀರುವುದರಲ್ಲಿ ಅನುಮಾನ ವಿಲ್ಲ.

ಪೂರ್ವ ಸಂಸ್ಕೃತಿಯ ಹೊಂದಾಣಿಕೆಯಲ್ಲಿ, ಹೊಸ ಬಗೆಯ ಸಂಸ್ಕೃತೀಕರಣದಲ್ಲಿ ವಿಶ್ವವಿದ್ಯಾಲಯಗಳು ವಹಿಸಿರುವ ಪಾತ್ರ ಅಮೋಘವಾದದ್ದು. ಅವು ಎಲ್ಲ ದಿಕ್ಕುಗಳಿಗೂ ಸಂಸ್ಕೃತಿಯ ಪ್ರವಾಹವನ್ನು ಹರಿಸುವ ಗಂಗೋತ್ರಿಗಳು. ಕೆಲವು ಸಾಹಿತಿಗಳು ವಿನಾ, ಉಳಿದ ಶ್ರೇಷ್ಠ ಲೇಖಕರು ಈ ವಿದ್ಯಾಮಂದಿರಗಳಲ್ಲಿ ನಿರ್ಮಾಣಗೊಂಡವರು, ಇಲ್ಲವೆ ಅಧ್ಯಾಪಕ ವೃತ್ತಿಗೆ ಸಮರ್ಪಿಸಿಕೊಂಡವರು. ಆದರೆ ಈ ಯುಗದ ಧೀಮಂತ ಪ್ರತಿಭಾಸಂಪನ್ನರಾದ ಕಾರಂತ, ಗುಂಡಪ್ಪ, ಅ. ನ. ಕೃಷ್ಣರಾವ್ ಅಲ್ಲದೆ ಮತ್ತೂ ಕೆಲವರು ನಾನಾ ರೀತಿಯಲ್ಲಿ ಸಲ್ಲಿಸಿರುವ ಅನುಮೂಲ್ಯ ಸೇವೆಯನ್ನು ಮರೆಯಲಾಗದು. ಅಷ್ಟೇ ಅಲ್ಲ, ನಾನಾ ವೃತ್ತಿಗಳಲ್ಲಿ ತೊಡಗಿರುವ ಲೇಖಕರ ಕೊಡುಗೆಗಳಿಂದಾಗಿ ಸಾಹಿತ್ಯ ಕ್ಷೇತ್ರ ಸಾರವತ್ತಾಗಿ, ವೈವಿಧ್ಯಪೂರ್ಣವಾಗಿ, ವಿಸ್ತಾರವಾಗಿ, ಉತ್ಪನ್ನಕಾರಕವಾಗಿ ವಿರಾಜಿಸುತ್ತಿದೆ. ಆದರೆ ವಿಶ್ವವಿದ್ಯಾಲಯಗಳು ಸಮಸ್ತ ಸಾಹಿತ್ಯ ಚಟುವಟಿಕೆಗಳಿಗೆ ಸುಭದ್ರ ತಳಹದಿಯನ್ನು ನಿರ್ಮಿಸಿ, ನಾನಾ ರೀತಿಯ ಉತ್ತೇಜನಗಳನ್ನೊದಗಿಸಿದೆಯೆಂಬ ಸಂಗತಿ ನಿರ್ಲಕ್ಷಿಸತಕ್ಕದ್ದಲ್ಲ. ಪಾಶ್ಚಾತ್ಯ ಶಿಕ್ಷಣದ ಸೌಲಭ್ಯಗಳನ್ನು ಸಮಾಜದ ಮೂಲೆಮೊಡಕುಗಳಿಗೆ ಮುಟ್ಟಿಸಿರುವ ಸಂಸ್ಥೆಗಳವು. ಪಠ್ಯಕ್ರಮದಲ್ಲಿ ಕನ್ನಡ ಭಾಷಾ ಸಾಹಿತ್ಯಗಳಿಗೆ ಪ್ರಾಮುಖ್ಯ ನೀಡಿ, ಪ್ರಸಾರಾಂಗಗಳ ಮೂಲಕ ಎಲ್ಲ ವಿಷಯಗಳ ಮೇಲೆ ಆಧಾರಭೂತವಾದ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಿ ಒದಗಿಸುವ ಮೂಲಕ ಅವು ಭಾಷಾ ಸಾಹಿತ್ಯಗಳ ಅಭಿವೃದ್ಧಿಗೊಂದು ನೆಲೆಯನ್ನು ನಿರ್ಮಿಸಿವೆ. ಕನ್ನಡ ಅಧ್ಯಯನ ಸಂಸ್ಥೆಗಳಂತೂ ಉತ್ಕೃಷ್ಟತೆಯ ಮಹತ್ವಪೂರ್ಣ ಕೇಂದ್ರಗಳಾಗಿ, ನಿರಂತರ ಕಾರ್ಯಚಟುವಟಿಕೆಗಳ ಜೇನುಗೂಡುಗಳಾಗಿ, ಕನ್ನಡಕ್ಕೆ ವರಗಳಾಗಿ ಪರಿಣಮಿಸಿವೆ. ಕನ್ನಡದ ಬೋಧನೆಗೆ ಸಂಶೋಧನೆಗಳಿಗೆ ನೆರೆಹೊರೆಯ ರಾಜ್ಯಗಳ ವಿಶ್ವವಿದ್ಯಾಲಯಗಳು ನೀಡುತ್ತಿರುವ ಉತ್ತೇಜನವೂ ಗಮನಾರ್ಹವಾದದ್ದು. ಎಚ್. ಚನ್ನಕೇಶವ ಅಯ್ಯಂಗಾರ್, ಎಚ್. ಶೇಷಅಯ್ಯಂಗಾರ್, ಎ. ವೆಂಕಟರಾವ್ ಮತ್ತು ಎಂ. ಮರಿಯಪ್ಪ ಭಟ್ಟ, ಮುಂತಾದವರಿಗೆ ಪ್ರೋತ್ಸಾಹ ನೀಡಿದ್ದು ಮದ್ರಾಸು ವಿಶ್ವವಿದ್ಯಾಲಯ.

ದೂರದೃಷ್ಟಿಯ ಭಾಷಾಭಿಮಾನಿಗಳು 1890 ಮತ್ತು 1915ನೇಯ ಇಸವಿಗಳಲ್ಲಿ, ಧಾರವಾಡ ಹಾಗೂ ಬೆಂಗಳೂರು ನಗರಗಳಲ್ಲಿ ಪ್ರಾರಂಭಿಸಿದ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕನ್ನಡ ಸಾಹಿತ್ಯ ಪರಿಷತ್ತುಗಳು ಕರ್ನಾಟಕ ಏಕೀಕರಣ ಕಾರ್ಯದಲ್ಲಿ ಮತ್ತು ಕನ್ನಡ ಭಾಷಾಭಿವೃದ್ಧಿ ವಿಷಯದಲ್ಲಿ ಅದ್ಭುತ ಪಾತ್ರ ವಹಿಸಿರುವ ಸಂಗತಿ ಸರ್ವ ವೇದ್ಯವಾದದ್ದು. ಅವು ಕನ್ನಡ ಚಳವಳಿಯ ತವರೆಂಬುದು, ಭಾಷಾಭಿವೃದ್ಧಿ ಯೋಜನೆಗಳಿಗೆ, ಸಾಹಿತ್ಯಕ ಕಾರ್ಯಕ್ರಮಗಳಿಗೆ, ಹೊಸ ಹೊಸ ನಿರ್ದೇಶನಗಳಿಗೆ ಮೂಲ ನೆಲೆಯೆಂಬುದು ಸರ್ವಸಮ್ಮತ ವಿಚಾರ. ವಿವಿಧ ಪಂಥ ಪರಂಪರೆಗಳ, ವಿಭಿನ್ನ ಮನೋಧರ್ಮದ ಸಾಹಿತಿಗಳನ್ನು ಏಕವೇದಿಕೆಯ ಮೇಲೆ ಕೂಡಿಸುವ ಸೇತುಶಕ್ತಿಗಳಾಗಿವೆ. ಅವುಗಳ ಪ್ರವರ್ತಕರು ಸಹ ಕನಸಿನಲ್ಲಿಯೂ ಕಾಣದ, ಬಹು ಪರಿಣಾಮಕಾರಿಯಾದ ಸಿದ್ಧಿಗಳನ್ನು ಅಗಾಧ ಪ್ರಮಾಣದಲ್ಲಿ ಕಳೆದ ಒಂದೂವರೆ ದಶಕಗಳಲ್ಲಿ ಸಾಧಿಸಿವೆ. ಅವು ಸಾಂಸ್ಕೃತಿಕ ಜ್ಯೋತಿಯನ್ನು ರಾಜ್ಯದ ಮೂಲೆ ಮೂಲೆಗಳಿಗೆ ಕೊಂಡೊಯ್ದು, ಕನ್ನಡಿಗರ ಕನಸನ್ನು ನನಸುಗೊಳಿಸುತ್ತಿವೆ, ಅವರ ಆಸೆ ಆಕಾಂಕ್ಷೆಗಳನ್ನು ಪೂರೈಸುತ್ತಿವೆ.

ಕನ್ನಡದ ಮುನ್ನಡೆಯ ಪ್ರಾರಂಭದ ದಿನಗಳಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನ, ಮೈಸೂರು ಮಹಾರಾಜಾ ಕಾಲೇಜಿನ, ಹಾಗೂ ಶಿವಮೊಗ್ಗೆಯ ಕರ್ನಾಟಕ ಸಂಘಗಳೂ, ಧಾರವಾಡದ ಗೆಳೆಯರ ಗುಂಪೂ, ಇನ್ನೂ ಇಂಥ ಹಲವು ಸಾಂಸ್ಕೃತಿಕ ಸಂಸ್ಥೆಗಳೂ, ಅನೇಕ ಪ್ರಕಾಶಕರೂ ಪ್ರಕಾಶನ ಸಂಸ್ಥೆಗಳೂ ತಮ್ಮ ಅವಿಸ್ಮರಣೀಯವಾದ ಸಾಧನೆಗಳಿಂದ ಕನ್ನಡದ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣವಾಗಿವೆ. ನಾಟಕಗಳನ್ನು ಬರೆಸುವಲ್ಲಿ, ಅವನ್ನು ಜನಪ್ರಿಯಗೊಳಿಸುವಲ್ಲಿ, ಕಲಾವಿದರಿಗೆ ಪ್ರೋತ್ಸಾಹ ನೀಡುವಲ್ಲಿ ಅದ್ವಿತೀಯ ಪಾತ್ರವನ್ನು ಅಭಿನಯಿಸಿದ ನಾಟಕ ಕಂಪೆನಿಗಳನ್ನೂ, ಯಕ್ಷಗಾನ ಮಂಡಲಿಗಳನ್ನೂ, ಅವುಗಳ ಸೂತ್ರಧಾರರನ್ನೂ ಮರೆಯುವಂತಿಲ್ಲ. ನಿರಕ್ಷರತೆಯನ್ನು ನಿರ್ಮೂಲ ಮಾಡುವಲ್ಲಿ, ಹೊಸದಾಗಿ ಕಲಿಯುವ ವಯಸ್ಕರಿಗೆ ಪಠ್ಯಪುಸ್ತಕಗಳನ್ನೂ, ಕಲಿತವರಿಗೆ ಸಹಾಯಕ ಜ್ಞಾನಸಾಹಿತ್ಯವನ್ನೂ ಸಿದ್ಧಗೊಳಿಸುವಲ್ಲಿ, ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸುವಲ್ಲಿ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಸಾಧಿಸಿರುವ ವಿಕ್ರಮ ಆಶಾದಾಯಕವಾಗಿದೆ, ಉತ್ತೇಜನಕಾರಿಯಾಗಿದೆ. ಮೈಸೂರಿನ ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟು, ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಕೇಂದ್ರ, ಬೆಂಗಳೂರಿನ ಬಸವ ಸಮಿತಿ ಮತ್ತು ಹಲವಾರು ಮಠ ಮತ್ತು ಧಾರ್ಮಿಕ ಸಂಸ್ಥೆಗಳು ಸಂಶೋಧನಾತ್ಮಕ ಕಾಯಕ್ರಮಗಳನ್ನೂ, ಸಾಂಸ್ಕೃತಿಕಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸುತ್ತಿವೆ. ಬೆಂಗಳೂರು ಮತ್ತು ಮೈಸೂರು ನಗರಗಳ ಶ್ರೀ ರಾಮಕೃಷ್ಣಾಶ್ರಮಗಳು ಸತತವಾಗಿ ನಡೆಸುತ್ತಿರುವ ಸರ್ವೋಪಯುಕ್ತವಾದ ಪ್ರಕಾಶನ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಲೋಕದ ಗಮನವನ್ನು ಸೆಳೆದಿವೆ. ಕೇಂದ್ರ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿಗಳು, ನ್ಯಾಷನಲ್ ಬುಕ್ ಟ್ರಸ್ಟ್ ಮತ್ತು ಭಾರತೀಯ ಜ್ಞಾನಪೀಠಗಳು ಪುರಸ್ಕಾರ

ಪ್ರಕಾಶನಗಳ ಮೂಲಕ ಸಾಹಿತಿಗಳ ನೀಡುತ್ತಿರುವ ಉತ್ತೇಜನ ಮೆಚ್ಚುವಂಥದು. ಅಂತೆಯೇ ಕೆಲವು ಸಾಮಾಜಿಕ ರಾಜಕೀಯ ಸಂಸ್ಥೆಗಳು ಜನತೆಯಲ್ಲಿ ಮೂಡಿಸಿದ ಕನ್ನಡಪ್ರಜ್ಞೆಯಿಂದಾಗಿ ಕನ್ನಡದ ಸ್ಥಾನಮಾನಗಳು ಸುಭದ್ರವಾಗಿವೆಯೆಂದು ಸ್ಪಷ್ಟ ಪಡಿಸಬಹುದು.

ಕಳೆದ ಶತಮಾನದಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್ ಸಾಹಿತ್ಯ ಪ್ರಸಾರಕ್ಕಾಗಿ ಹಾಕಿಕೊಂಡ ಬೃಹದ್ಯೋಜನೆಗಳಿಂದಾಗಿ, ಕಿಟ್ಟೆಲ್, ಜೀಗ್ಲರ್, ಮೋಗ್ಲಿಂಗ್ ಮೊದಲಾದ ಪಾದ್ರಿಗಳ ಸತತ ಸಾಧನೆಯಿಂದಾಗಿ ವಿದ್ವತ್ಸಂಪಾದನೆಗೆ ಹಾಗೂ ಸಂಶೋಧನೆಗೆ ಆಧಾರ ಭೂತವೂ ಅತ್ಯಗತ್ಯವೂ ಆದ ಸಾಹಿತ್ಯ ಸಾಮಗ್ರಿ ವಿಪುಲ ಪ್ರಮಾಣದಲ್ಲಿ ದೊರೆಯುವಂತಾಯಿತೆಂಬುದನ್ನು ವಿಶೇಷವಾಗಿ ಗಮನಿಸಬೇಕಾಗಿದೆ. ಆ ಕ್ರಿಶ್ಚಿಯನ್ ವಿದ್ವಾಂಸರು ಕೋಶಗಳನ್ನು ತಯಾರಿಸಿದ್ದಾರೆ, ವ್ಯಾಕರಣಗಳನ್ನು ಬರೆದಿದ್ದಾರೆ, ಛಂದೋಗ್ರಂಥಗಳನ್ನು ಹಳಗನ್ನಡ ಸಾಹಿತ್ಯ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ, ವಿಮರ್ಶೆ ಟಿಪ್ಪಣಿ ವ್ಯಾಖ್ಯಾನಗಳೊಡನೆ ಮುದ್ರಿಸಿ, ಪ್ರಕಟಿಸುತ್ತಾರೆ. ಕನ್ನಡ ಭಾಷಾ ಸಾಹಿತ್ಯಗಳ ಬೆಳವಣಿಗೆಗೆ ಇವುಗಳಿಂದೊದಗಿರುವ ಸಹಾಯ ಊಹಾತೀತವಾದದ್ದು.

ಸೃಜನಾತ್ಮಕ ಮತ್ತು ವಿಮರ್ಶಾತ್ಮಕ ಸಾಹಿತ್ಯದ ಪ್ರಚೋದಕ ಶಕ್ತಿಗಳಲ್ಲಿ ಪತ್ರಿಕೋದ್ಯಮವೂ ಒಂದೆಂದು ಹೇಳುವುದರಲ್ಲಿ ಸತ್ಯವಿದೆ. ನವೋದಯದ ಪ್ರಾರಂಭದ ದಶೆಯಲ್ಲಿ ಪ್ರಬುದ್ಧ ಕರ್ನಾಟಕ ನಿರ್ವಹಿಸಿದ ಪಾತ್ರ, ಸಾಧಿಸಿದ ಸಿದ್ಧಿ, ನಿರ್ಮಿಸಿದ ಬೌದ್ಧಿಕ ಮತ್ತು ಸಾಹಿತ್ಯಿಕ ವಾತಾವರಣವನ್ನು ಸಮೀಕ್ಷಿಸಿದಾಗ ಅದರ ಅವತರಣವೊಂದು ಮಹಾಘಟನೆಯೆಂದೇ ಹೇಳಬೇಕಾಗಿದೆ. ಈ ತ್ರೈಮಾಸಿಕೆಯ ಮೂಲಕವೇ ಕನ್ನಡದ ಸುಪ್ರಸಿದ್ಧ ಸಾಹಿತಿಗಳೆಲ್ಲ ಬೆಳಕಿಗೆ ಬಂದದ್ದು. ಕನ್ನಡ ಸಾಹಿತ್ಯ ಪರಿಷತ್ತು ಆರು ತಿಂಗಳಿಗೊಮ್ಮೆ ಪ್ರಕಟಿಸುತ್ತಿರುವ ಸಾಹಿತ್ಯ ಪರಿಷತ್ಪತ್ರಿಕೆ ಉತ್ತಮ ಶ್ರೇಣಿಯ ಸಂಶೋಧನಾತ್ಮಕವೂ ವಿಮರ್ಶಾತ್ಮಕವೂ ಆದ ಲೇಖನ ಪ್ರಬಂಧಗಳಿಗೆ ಮೀಸಲಾಗಿದೆ. ಪ್ರಭಾತ, ಶ್ರೀ ಕೃಷ್ಣಸೂಕ್ತಿ, ಶಿವಾನುಭವ, ಶರಣ ಸಾಹಿತ್ಯ, ಜಯಕರ್ನಾಟಕ, ಜಯಂತಿ, ವಾಗ್ಭೂಷಣ, ಜೀವನ ಮೊದಲಾದ ಪತ್ರಿಕೆಗಳು ದುರದೃಷ್ಟವಶಾತ್ ಈಗ ಚಾಲ್ತಿಯಲ್ಲಿಲ್ಲವಾದರೂ, ಶ್ರೇಷ್ಠದರ್ಜೆಯ ಸಾಹಿತ್ಯಿಕ ಗುಣಗಳಿಗಾಗಿ ಹಿಂದೊಮ್ಮೆ ಅನುವಾಚಕ ವೃಂದದ ಗೌರವಕ್ಕೆ ಪಾತ್ರವಾಗಿದ್ದುವೆಂಬುದನ್ನು ಮರೆಯಲಾಗದು. ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯಗಳಿಂದ ಪ್ರಕಟವಾಗುತ್ತಿದ್ದು, ಪ್ರಬುದ್ಧ ಕರ್ನಾಟಕದ ಪ್ರತಿರೂಪಗಳೆನ್ನಬಹುದಾದ ಸಾಧನೆ ಮತ್ತು ಕನ್ನಡ ಭಾರತಿಗಳು ಲೇಖನಗಳ ಗುಣಮಟ್ಟವನ್ನು ಕಾಪಾಡಿಕೊಂಡು ಬರುತ್ತಿವೆ. ಬಹು ಜನಪ್ರಿಯವಾದ, ಅದರಲ್ಲಿಯೂ ಮನೆಯಲ್ಲಿರುವ ಮಹಿಳೆಯರಿಗೆ ಮನರಂಜನೆಯನ್ನೂ ಲೋಕ ವ್ಯವಹಾರ ಜ್ಞಾನವನ್ನೂ ಒದಗಿಸುತ್ತಿರುವ ವಾರ ಪತ್ರಿಕೆ, ಪಾಕ್ಷಿಕ ಪತ್ರಿಕೆ, ಮಾಸ ಪತ್ರಿಕೆ ಮತ್ತು ಹಲವು ವಿಶೇಷ ಸಂಚಿಕೆಗಳು ವಿಶೇಷ ಸಾಮರ್ಥ್ಯವುಳ್ಳ ಲೇಖಕರಿಗೆ ಪವಿತ್ರಾಶ್ರಯಗಳಾಗಿವೆ, ಅವರ ಕೌಶಲ್ಯವನ್ನು ಬೆಳೆಸುವ ಕಮ್ಮಟಗಳಾಗಿವೆ. ಸಂಸ್ಕೃತಿ ಜ್ಞಾನ ಪ್ರಸಾರೋದ್ಯಮದಲ್ಲಿ, ಜನತೆಯ ಅಭಿರುಚಿಯನ್ನು ತಿದ್ದುವಲ್ಲಿ, ನಾಡಿನ ಭವಿಷ್ಯವನ್ನು ರೂಪಿಸುವಲ್ಲಿ, ಮೇಲಾಗಿ ಭಾಷಾಭಿವೃದ್ಧಿಯನ್ನು ಸಾಧಿಸುವಲ್ಲಿ ದಿನಪತ್ರಿಕೆ, ಆಕಾಶವಾಣಿ, ಸಿನಿಮಾ ಮೊದಲಾದ ಸಮೂಹ ಮಾಧ್ಯಮಗಳ ಪಾತ್ರ ಅಗಾಧವಾದದ್ದೆಂದೇ ಒಪ್ಪಿಕೊಳ್ಳಬೇಕಾಗಿದೆ.

ಕರ್ನಾಟಕ ಸಂಸ್ಕೃತಿಯ ಪ್ರಧಾನ ಲಕ್ಷಣವಾದ ವಿಶ್ವವಿಶಾಲ ದೃಷ್ಟಿ ಕನ್ನಡದ ಪ್ರಾತಿನಿಧಿಕ ಸಾಹಿತ್ಯ ಕೃತಿಗಳಲ್ಲಿ ಸಮೃದ್ಧವಾಗಿ ಅಭಿವ್ಯಕ್ತಗೊಂಡಿದೆ. ಉತ್ತಮವಾದದ್ದು, ಯಾವ ಕಡೆಯಿಂದಲೇ ಬರಲಿ, ಅದನ್ನು ಹೀರಿಕೊಂಡು ತನ್ನದನ್ನಾಗಿ ಮಾಡಿಕೊಳ್ಳುವ ಶಕ್ತಿ ಅದರ ವಿಶಿಷ್ಟ ಲಕ್ಷಣ. ಸಂಸ್ಕೃತ, ಪ್ರಾಕೃತ, ಇಂಗ್ಲಿಷ್, ಅಂತೆಯೇ ಮತ್ತಾವುದೇ ಭಾಷೆಯಿಂದ ಅದರ ಉತ್ತಮಾಂಶಗಳನ್ನು ತನ್ನೊಳಗೆ ಸೇರಿಸಿಕೊಂಡರೂ ತನ್ನ ವ್ಯಕ್ತಿತ್ವವನ್ನು ಮಾತ್ರ ಬಿಟ್ಟುಕೊಡುವುದಿಲ್ಲ. ಅಷ್ಟೇ ಅಲ್ಲ, ಭಾರತೀಯ ಮತ್ತು ಜಗತ್ತಿನ ಸಾಹಿತ್ಯ ಸಾಗರಕ್ಕೆ ಯಥಾಶಕ್ತಿಯಾಗಿ ಕೊಡುಗೆ ಸಲ್ಲಿಸಿರುವ ಸಂಗತಿಯನ್ನು ಘೋಷಿಸುವ ಯೋಗ್ಯತೆಯನ್ನು ಸಹ ಅದು ಪಡೆದಿದೆ. ವಸ್ತುಕ ವರ್ಣಕಗಳ ಮಾತಂತಿರಲಿ, ಭಾರತೀಯ ಸಾಹಿತ್ಯಕ್ಕೆ ಕನ್ನಡ ನೀಡಿರುವ ಅಮೂಲ್ಯ ಕಾಣಿಕೆಯೆಂದರೆ ಚಂಪೂರೂಪ, ರಾಮಾಯಣ, ಮಹಾಭಾರತಗಳ ವಿಕಾಸ ಯಾತ್ರೆಯಲ್ಲಿ ಕನ್ನಡವೂ ವಿಶಿಷ್ಟ ರೀತಿಯಲ್ಲಿ ಪಾತ್ರ ವಹಿಸಿದೆಯೆಂಬುದಕ್ಕೆ ಹಲವು ನಿದರ್ಶನಗಳನ್ನು ಉಲ್ಲೇಖಿಸಬಹುದು. ಪುರಾಣಗಳ ವಿಷಯಕ್ಕೂ ಈ ಮಾತನ್ನೇ ಅನ್ವಯಿಸಬಹುದು. ಪ್ರತಿಮಾ, ಪ್ರತಿಕೃತಿ, ದರ್ಶನಧ್ವನಿ, ಪೂರ್ಣದೃಷ್ಟಿ, ಮಹಾಛಂದಸ್ಸು, ಮೊದಲಾದ ಉಕ್ತಿಗಳು ಮತ್ತು ಅವು ಗರ್ಭೀಕರಿಸಿಕೊಂಡಿರುವ ತತ್ವಗಳು ಭಾರತೀಯ ಕಾವ್ಯಮೀಮಾಂಸೆ ಮತ್ತು ಛಂದಶ್ಶಾಸ್ತ್ರಗಳಿಗೆ ತೀರ ಹೊಸವೆಂದೇ ಹೇಳಬಹುದು. ವೀರಶೈವ ಸಾಹಿತ್ಯದ ಬಹುಭಾಗ ದೇಶೀಯವಾಗಿದ್ದು, ಅದರಲ್ಲಿ ಮಣ್ಣಿನ ಪರಿಮಳ ಎರಚುತ್ತದೆ. ವಚನಗಳಂತೂ ಜಗತ್ತಿನ ಸಾಹಿತ್ಯಕ್ಕೆ ಅಮೂಲ್ಯ ಬಳುವಳಿಯೆಂದರೆ ಅತಿಶಯೋಕ್ತಿಯಾಗಲಾರದು. ಪ್ರಾಚೀನ ಕವಿಗಳ ಪೈಕಿ, ಪಂಪ, ಹರಿಹರ, ಕುಮಾರವ್ಯಾಸ, ರತ್ನಾಕರವರ್ಣಿಯರಲ್ಲಿ ಒಬ್ಬೊಬ್ಬರೂ ಜಗತ್ತಿನ ಯಾವ ಅತ್ಯುತ್ತಮ ಕವಿಯಾದರೂ ಸರಿಯೇ ಅವನಿಗೆ ಹೆಗಲೆಣೆಯಾಗಿ ನಿಲ್ಲಬಲ್ಲರು. ಮಾಸ್ತಿಯವರ ಕೆಲವು ಸಣ್ಣಕತೆಗಳು, ಶಿವರಾಮಕಾರಂತರ ಕೆಲವು ಕಾದಂಬರಿಗಳು, ಬೇಂದ್ರೆಯವರ ಹಲವು ಭಾವಗೀತೆಗಳು, ಡಿ.ವಿ. ಗುಂಡಪ್ಪನವರ ಮಂಕುತಿಮ್ಮನ ಕಗ್ಗ, ಕುವೆಂಪು ಅವರ ಶ್ರೀರಾಮಾಯಣ

ದರ್ಶನಂ, ಬೆರಳ್‌ಗೆ ಕೊರಳ್ ಮತ್ತು ಅವರ ಎರಡು ಕಾದಂಬರಿಗಳು, ಪುತಿನ ಅವರ ಅಹಲ್ಯೆ, ಗೋಕುಲ ನಿರ್ಗಮನ ಮತ್ತು ಇತರ ಗೀತನಾಟಕಗಳು, ಶ್ರೀರಂಗರ ಕೆಲವು ನಾಟಕಗಳು, ಇವೇ ಮೊದಲಾದವು ಜಗತ್ತಿನ ಸಾಹಿತ್ಯಕ್ಕೆ ಕನ್ನಡ ನೀಡಿರುವ ಅನುಪಮ ಕೊಡುಗೆಯೆಂದು ಯಾರಾದರೂ ಬೆನ್ನು ತಟ್ಟಿಕೊಳ್ಳಬಹುದು.

1979ರಲ್ಲಿ 1,157 ಕನ್ನಡ ಪುಸ್ತಕಗಳು ಪ್ರಕಟವಾದವು. 1980ರಲ್ಲಿ 1,056, 1981ರಲ್ಲಿ 1,235, 1982ರಲ್ಲಿ 1,062 ಹಾಗೂ 1983ರಲ್ಲಿ 1,071. ವಿಷಯದ ಪ್ರಕಾರ 1981ರ ಪುಸ್ತಕಗಳನ್ನು ವಿಂಗಡಿಸಿದಾಗ ಭಾಷಾ ಶಾಸ್ತ್ರ, ವ್ಯಾಕರಣ, ನಿಘಂಟು ಇತ್ಯಾದಿ 20 (25) ಶುದ್ಧ ವೈಜ್ಞಾನಿಕ ಮತ್ತು ಕೃಷಿ ವಿಜ್ಞಾನದ ಗ್ರಂಥಗಳು 31 (17) ಧರ್ಮ, ತತ್ವ ಮತ್ತು ಜ್ಯೋತಿಷ್ಯ 45 (24) ಮಾನವಿಕ ವಿಜ್ಞಾನ, ಶಿಕ್ಷಣ ಮತ್ತು ಕಲೆ 48 (74) ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆ 73 (67), ಕಾವ್ಯ 145 (140), ನಾಟಕಗಳು 54 (49), ಕಾದಂಬರಿಗಳು 193 (144), ಸಣ್ಣ ಕಥೆಗಳು 44 (37), ಪ್ರಬಂಧ, ಪತ್ರಗಳು, ಪ್ರವಾಸ ಕಥನ, ಭಾಷಣಗಳು 27 (22), ಯಕ್ಷಗಾನ 9 (6), ಜಾನಪದ 29 (29), ಮಕ್ಕಳ ಸಾಹಿತ್ಯ 173 (138), ಜೀವನ ಚರಿತ್ರೆ, ಸ್ವಯಂಜೀವನ ಚರಿತ್ರೆಗಳು 63 (49), ಸಂಶೋಧನ ಗ್ರಂಥಗಳು 3 (4), ಸಂಭಾವನಾ ಗ್ರಂಥಗಳು 18 (22), ಅನುವಾದಗಳು 113 (117), ಪುನರ್ಮುದ್ರಣಗಳು 133 (75) ಮತ್ತು ಇತರೆ ಪ್ರಕಟಣೆಗಳು 16 (17), ಒಟ್ಟು 1,235 (1,056). (ಕಂಸದೊಳಗಿನ ಅಂಕಿಗಳು 1980ರವು) ಮುಂದಿನ ಸರ್ವೇಕ್ಷಣದಿಂದ 1980ರ ಪ್ರಕಟಣೆಗಳ ಸಂಖ್ಯೆ 1,083 ಎಂದು ತಿಳಿದಿದ್ದು 1,056 ಅಲ್ಲ ಎಂದು ತಿಳಿದು ಬಂದಿದೆ. (ಆಧಾರ: ಗ್ರಂಥಲೋಕ, ಮಾಸ ಪತ್ರಿಕೆ, ಮೈಸೂರು).

### ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಕನ್ನಡ ಲೇಖಕರು

| ಹೆಸರು | ಕೃತಿ | ವರ್ಷ |
|---|---|---|
| 1 | 2 | 3 |
| ಕೆ. ವಿ. ಪುಟ್ಟಪ್ಪ | ರಾಮಾಯಣ ದರ್ಶನಂ (ಕಾವ್ಯ) | 1955 |
| ರಂ. ಶ್ರೀ. ಮುಗಳಿ | ಕನ್ನಡ ಸಾಹಿತ್ಯ ಚರಿತ್ರೆ (ಸಂಶೋಧನೆ) | 1956 |
| ದ. ರಾ. ಬೇಂದ್ರೆ | ಅರಳು-ಮರಳು (ಕಾವ್ಯ) | 1958 |
| ಕೆ. ಶಿವರಾಮ ಕಾರಂತ | ಯಕ್ಷಗಾನ (ಸಂಶೋಧನೆ) | 1959 |
| ವಿ. ಕೃ. ಗೋಕಾಕ್ | ದ್ಯಾವಾ ಪೃಥುವಿ (ಕಾವ್ಯ) | 1960 |
| ಎ. ಆರ್. ಕೃಷ್ಣಶಾಸ್ತ್ರಿ | ಬಂಗಾಲಿ ಕಾದಂಬರಿಕಾರ ಬಂಕಿಮ ಚಂದ್ರ (ಸಾಹಿತ್ಯ ವಿಮರ್ಶೆ) | 1961 |
| ದೇವುಡು ನರಸಿಂಹಶಾಸ್ತ್ರಿ | ಮಹಾ ಕ್ಷತ್ರಿಯ (ಕಾದಂಬರಿ) | 1962 |
| ಬಿ. ಪುಟ್ಟಸ್ವಾಮಯ್ಯ | ಕ್ರಾಂತಿ ಕಲ್ಯಾಣ (ಕಾದಂಬರಿ) | 1964 |
| ಎಸ್. ವಿ. ರಂಗಣ್ಣ | ರಂಗ ಬಿನ್ನಪ (ಕಾವ್ಯ) | 1965 |
| ಪು. ತಿ. ನರಸಿಂಹಾಚಾರ್ | ಹಂಸದಮಯಂತಿ ಮತ್ತು ಇತರ ರೂಪಕಗಳು (ನಾಟಕ) | 1966 |
| ಡಿ. ವಿ. ಗುಂಡಪ್ಪ | ಶ್ರೀಮದ್ ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮಯೋಗ (ವ್ಯಾಖ್ಯಾನ) | 1967 |
| ಮಾಸ್ತಿ ವೆಂಕಟೇಶ ಅಯ್ಯಂಗಾರ್ | ಸಣ್ಣ ಕಥೆಗಳು (ಸಣ್ಣ ಕಥೆ) | 1968 |
| ಎಚ್. ತಿಪ್ಪೇರುದ್ರಸ್ವಾಮಿ | ಕರ್ನಾಟಕ ಸಂಸ್ಕೃತಿ ಸಮೀಕ್ಷೆ (ಸಂಶೋಧನೆ) | 1969 |

| 1 | 2 | 3 |
|---|---|---|
| ಶಂ. ಬಾ. ಜೋಶಿ | ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ (ಸಂಶೋಧನೆ) | 1970 |
| ಆದ್ಯ ರಂಗಾಚಾರ್ಯ | ಕಾಳಿದಾಸ (ಸಾಹಿತ್ಯ ವಿಮರ್ಶೆ) | 1971 |
| ಎಸ್. ಎಸ್. ಭೂಸನೂರಮಠ | ಶೂನ್ಯ ಸಂಪಾದನೆಯ ಪರಾಮರ್ಶೆ (ಸಂಶೋಧನೆ) | 1972 |
| ವಿ. ಸೀತಾರಾಮಯ್ಯ | ಅರಲು-ಬರಲು (ಕಾವ್ಯ) | 1973 |
| ಎಂ. ಗೋಪಾಲಕೃಷ್ಣ ಅಡಿಗ | ವರ್ಧಮಾನ (ಕಾವ್ಯ) | 1974 |
| ಎಸ್. ಎಲ್. ಭೈರಪ್ಪ | ದಾಟು (ಕಾದಂಬರಿ) | 1975 |
| ಎಂ. ಶಿವರಾಂ | ಮನಮಂಥನ (ವಿಜ್ಞಾನ ಪ್ರಬಂಧ) | 1976 |
| ಕೆ. ಎಸ್. ನರಸಿಂಹಸ್ವಾಮಿ | ತೆರೆದ ಬಾಗಿಲು (ಕಾವ್ಯ) | 1977 |
| ಬಿ. ಜಿ. ಎಲ್. ಸ್ವಾಮಿ | ಹಸಿರು ಹೊನ್ನು (ವಿಜ್ಞಾನ ಪ್ರಬಂಧ) | 1978 |
| ಎ. ಎನ್. ಮೂರ್ತಿ ರಾವ್ | ಚಿತ್ರಗಳು ಪತ್ರಗಳು (ಪ್ರಬಂಧಗಳು) | 1979 |
| ಚೆನ್ನವೀರಕಣವಿ | ಜೀವನ ಧ್ವನಿ (ಕಾವ್ಯ) | 1980 |
| ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಅಮೆರಿಕದಲ್ಲಿ ಗೊರೂರು (ಪ್ರವಾಸ ಕಥನ) | 1981 |
| ಸುಬ್ರಮಣ್ಯ ರಾಜೇ ಅರಸ್ (ಚದುರಂಗ) | ವೈಶಾಖಿ (ಕಾದಂಬರಿ) | 1982 |
| ಯಶವಂತ ಚಿತ್ತಾಲ | ಕಥೆಯಾದಳು ಹುಡುಗಿ (ಸಣ್ಣ ಕಥೆ) | 1983 |
| ಜಿ. ಎಸ್. ಶಿವರುದ್ರಪ್ಪ | ಕಾವ್ಯಾರ್ಥ ಚಿಂತನ (ವಿಮರ್ಶೆ) | 1984 |
| ತ. ರಾ. ಸು. | ದುರ್ಗಾಸ್ತಮಾನ (ಕಾದಂಬರಿ) | 1985 |

## ಕರ್ನಾಟಕದ ಜಾನಪದ

ನೆಲದ ಮೇಲೆ ಮಾನವ ವಾಸಿಸಲು ಮೊದಲಾದ ದಿನದಿಂದ ಬೆಳೆದು ಬಂದ ಪಾರಂಪರಿಕ ಸಂಸ್ಕೃತಿ ಸಮಷ್ಟಿಯೇ ಜಾನಪದ. ಇದರಲ್ಲಿ ತಲೆಮಾರಿನಿಂದ ತಲೆಮಾರಿಗೆ ಪರಂಪರೆಯಿಂದ ಹಸ್ತಾಂತರ ಗೊಂಡು ಬಂದ ಸಾಮಗ್ರಿ ಇರುತ್ತದೆ. ಹೀಗೆ ಹಸ್ತಾಂತರ ಗೊಂಡ ಸಾಮಗ್ರಿಗಳನ್ನು ನಾಲ್ಕು ಗುಂಪುಗಳಲ್ಲಿ ವಿಂಗಡಿಸ ಬಹುದು: 1) ವಾಚಿಕ ಸಾಹಿತ್ಯ, 2) ವಸ್ತು ಸಂಸ್ಕೃತಿ, 3) ಸಾಮುದಾಯಿಕ ನಡಾವಳಿಗಳು ಮತ್ತು 4) ಪ್ರದರ್ಶಕ ಕಲೆಗಳು.

### ಚಾರಿತ್ರಿಕ ಹಿನ್ನೆಲೆ

ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ 150 ವರ್ಷ ಗಳಿಗೂ ಮಿಕ್ಕಿದ ಚರಿತ್ರೆ ಇದೆ. ಮೊದಮೊದಲ ವಿದ್ವಾಂಸರು ಜಾನಪದದಲ್ಲಿ ಹಾಡು, ಲಾವಣಿಗಳಿಗೆ ತಮ್ಮ ಆಸಕ್ತಿಯನ್ನು ಮಿತಿಗೊಳಿಸಿಕೊಂಡರು. ಈ ದಿಸೆಯಲ್ಲಿ ಯುರೋಪಿನ ವಿದ್ವಾಂಸರು ನಡೆಸಿದ ಯತ್ನಗಳು ಶ್ಲಾಘ್ಯವೆನಿಸಿವೆ. ತಮ್ಮ ಹಲವಾರು ಚಟುವಟಿಕೆಗಳ ನಡುವೆಯೂ ಪಾಶ್ಚಾತ್ಯ ವಿದ್ವಾಂಸರು ಕರ್ನಾಟಕದ ಜಾನಪದದ ಸಂಗ್ರಹ ಕಾರ್ಯದಲ್ಲಿ ತೊಡಗಿ, ಹೀಗೆ ಸಂಗ್ರಹಿಸಿದ್ದನ್ನು ಸರಿಯಾಗಿ ಸಂಪಾದಿಸಿ, ಯುಕ್ತ ಟಿಪ್ಪಣಿಗಳ ಜೊತೆಗೆ ಪ್ರಕಟಿಸಿದರು. ಅಬೆ ದುಬುವಾ, ಜಾನ್ ಲೇಡನ್, ಮೇರಿ ಫ್ರೇರ, ಜಾನ್ ಎಫ್. ಫ್ಲೀಟ್, ರೆವರೆಂಡ್ ಎಫ್. ಕಿಟೆಲ್, ಚಾರ್ಲ್ಸ್ ಇ. ಗೋವರ್ ಮತ್ತು ಮೊಗ್ಲಿಂಗ್—ಇವು ಇಲ್ಲಿ ಉಲ್ಲೇಖಿಸಬಹುದಾದ ಖ್ಯಾತರ ಹೆಸರುಗಳು. ಕರ್ನಾಟಕದ ವಿವಿಧ ಪ್ರದೇಶಗಳ ಜನಪದ ಕತೆಗಳು, ಹಾಡುಗಳು, ಲಾವಣಿಗಳು ಹಾಗೂ ಗಾದೆಮಾತುಗಳನ್ನು ಸಂಗ್ರಹಿಸಿ ಅವುಗಳ ಇಂಗ್ಲೀಷ್ ಅನುವಾದದೊಡನೆ ಪ್ರಕಟಿಸಿದರು. ಅನೇಕ ಸ್ಥಳೀಯ ವಿದ್ವಾಂಸರು 20ನೇಯ ಶತಮಾನದಲ್ಲಿ ಈ ಕ್ಷೇತ್ರಕ್ಕೆ ಪ್ರವೇಶಿಸಿದರು ಮತ್ತು ಹೆಚ್ಚು ಸಾಹಿತ್ಯವನ್ನು ಬೆಳಕಿಗೆ ತಂದರು.

ಕೊಡಗಿನ ವಿದ್ವಾಂಸರಾದ ನಡಿಕೇರಿಯಂಡ ಚಿನ್ನಪ್ಪನವರನ್ನು ಇಲ್ಲಿ ಉಲ್ಲೇಖಿಸಬೇಕು. ಇವರು ಕೊಡವ ಭಾಷೆಯಲ್ಲಿ ಲಭ್ಯವಿದ್ದ ಮೂಲ ಜಾನಪದ ಸಾಮಗ್ರಿಯನ್ನು ಸಂಗ್ರಹಿಸಿ ಅಧ್ಯಯನ ಮಾಡಿ ಕನ್ನಡ ವ್ಯಾಖ್ಯಾನದೊಡನೆ ಪ್ರಕಟಿಸಿದರು. 1924ರಲ್ಲಿ ಪ್ರಕಟವಾದ ಇವರ ಈ ಪುಸ್ತಕ 'ಪಟ್ಟೋಳೆ ಪಳಮೆ'ಗೆ ಜಾನಪದ ಅಧ್ಯಯನದಲ್ಲಿ ಅತ್ಯಂತ ಮಹತ್ವದ ಸ್ಥಾನವಿದೆ. ದಕ್ಷಿಣ ಕರ್ನಾಟಕದ ಈ ಮುಂಚೂಣಿಯ ಸಾಧನೆಗಳ ಅನಂತರ ಉತ್ತರ ಕರ್ನಾಟಕದ ವಿದ್ವಾಂಸರೂ ಕ್ಷೇತ್ರ ಕಾರ್ಯಕ್ಕೆ ಮೊದಲಿಟ್ಟರು. ಹಲಸಂಗಿಯ ಸೋದರರು 'ಗರತಿಯ ಹಾಡು', 'ಮಲ್ಲಿಗೆ ದಂಡೆ' ಹಾಗೂ 'ಜೀವನ ಸಂಗೀತ' ಎಂಬ ಮೂರು ಜನಪದ ಹಾಡು ಹಾಗೂ ಲಾವಣಿಗಳ ಸಂಗ್ರಹಗಳನ್ನು ಪ್ರಕಟಿಸಿದರು. ಈ ವಲಯದಲ್ಲಿ ಈ ಪ್ರಕಟಣೆಗಳಿಂದ ಒಂದು ಚಳವಳಿಯೇ ಮೊದಲಾಯಿತು. ಅದೇ ವೇಳೆಗೆ ದಕ್ಷಿಣ ಕರ್ನಾಟಕದ ವಿದ್ವಾಂಸರು ಹಲಸಂಗಿ ಸೋದರರ ಹೆಜ್ಜೆಗಳನ್ನು ಅನುಸರಿಸತೊಡಗಿದರು. ಮತಿಘಟ್ಟ ಸೋದರರು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ದೇವುಡು ನರಸಿಂಹ ಶಾಸ್ತ್ರಿ, ಹಾಗೂ ಬಿ. ಎಸ್. ರಂಗಸ್ವಾಮಿ ಇವರು ಜನಪದಗೀತೆಗಳ ಉತ್ತಮ ಸಂಗ್ರಹಗಳನ್ನು ಹೊರತಂದರು. ಅರ್ಚಕ್ ರಂಗಸ್ವಾಮಿಯವರ 'ಹುಟ್ಟಿದ ಹಳ್ಳಿ ಹಳ್ಳಿಯ ಹಾಡು' ಕನ್ನಡ ಜಾನಪದದಲ್ಲೇ ಮಹತ್ವದ ಕೃತಿ. ಏಕೆಂದರೆ ಅದು ಇಡೀ ಒಂದು ಹಳ್ಳಿಯ ಜನಪದ ಸಂಸ್ಕೃತಿಯನ್ನು ವಿವರಿಸುತ್ತದೆ.

ಸ್ವಾತಂತ್ರ್ಯಪೂರ್ವ ಅವಧಿಯಲ್ಲಿ ಸಾಹಿತ್ಯ ವಲಯದ ವಿದ್ವಾಂಸರು ಜಾನಪದ ಅಧ್ಯಯನದಲ್ಲಿ ತೊಡಗಿದ್ದರು. ಹಾಗಾಗಿ ಸಹಜವಾಗಿಯೇ ಅವರು ಉತ್ತಮ ಸಾಹಿತ್ಯಿಕ ಮೌಲ್ಯಗಳಿದ್ದ ಹಾಡುಗಳನ್ನು ಆಯ್ಕೆ ಮಾಡಿಕೊಂಡರು. ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಪೂರ್ಣಾವಧಿ ಜಾನಪದ ವಿದ್ವಾಂಸರು ಕಾಣಿಸಿಕೊಂಡರು. ಬಿ. ಎಸ್. ಗದಗೀಮಠರಂಥ ವಿದ್ವಾಂಸರು ಜಾನಪದದ ತೀವ್ರ ಅಧ್ಯಯನದಲ್ಲಿ ತೊಡಗಿ, ತಮ್ಮ ಅಧ್ಯಯನಕ್ಕಾಗಿ ಡಾಕ್ಟರೇಟ್ ಪದವಿಯನ್ನು ಪಡೆದರು. ಕೆ.ಆರ್. ಕೃಷ್ಣಸ್ವಾಮಿ, ಮುದೇನೂರ ಸಂಗಣ್ಣ, ಜೀ. ಶಂ. ಪರಮಶಿವಯ್ಯ, ಎಲ್. ಆರ್. ಹೆಗಡೆ, ಎಚ್. ಎಲ್. ನಾಗೇಗೌಡ, ಇವರೇ ಮೊದಲಾದ ಹಲವು ಜಾನಪದ ಪ್ರೇಮಿಗಳು ವಿವರವಾದ ಕ್ಷೇತ್ರ ಕಾರ್ಯ ನಡೆಸಿ, ಸಂಗ್ರಹಿಸಿ ಹಲವಾರು ಹಾಡುಗಳ ಸಂಕಲನಗಳನ್ನು ಹೊರತಂದರು.

## ಸಂಸ್ಥೆಗಳು

ಹಾಡುಗಳು, ಕಥನ ಗೀತೆಗಳ ಮಟ್ಟಿಗೆ ಸೀಮಿತವಾಗಿದ್ದ ಕರ್ನಾಟಕದ ಜಾನಪದ ಅಧ್ಯಯನವು ತನ್ನ ವಲಯವನ್ನು ವಿಸ್ತರಿಸಿಕೊಂಡು, ಜಾನಪದದ ಉಳಿದ ಅಂಗಗಳನ್ನು ಒಳಗೊಳ್ಳತೊಡಗಿತು. ಕರ್ನಾಟಕದ ವಿವಿಧ ಪತ್ರಿಕೆಗಳಲ್ಲಿ ಜಿ. ಶಂ. ಪರಮಶಿವಯ್ಯನವರು ಪ್ರಕಟಿಸಿದ ಲೇಖನಗಳು ಯುವ ಕಾರ್ಯಕರ್ತರನ್ನು ಗಾಢವಾಗಿ ಪ್ರಭಾವಿಸಿದವು. ಹಾ. ಮಾ. ನಾಯಕರು ತಮ್ಮ ವಿದ್ವತ್ ಪ್ರಬಂಧಗಳನ್ನು ಪ್ರಕಟಿಸುವ ಮೂಲಕ ಜಾನಪದ ಅಧ್ಯಯನಕ್ಕೆ ವೈಜ್ಞಾನಿಕ ಮಾದರಿಯನ್ನು ಹಾಕಿಕೊಟ್ಟರು. ಜಾನಪದದ ಬಗೆಗೆ ಪ್ರೀತಿಯಿದ್ದ ದೇ. ಜವರೇಗೌಡರು ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದಾಗ, ಮೈಸೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿಯ ಹಂತದಲ್ಲಿ ಜಾನಪದವನ್ನು ಒಂದು ಐಚ್ಛಿಕ ವಿಷಯವನ್ನಾಗಿಸಿದರು. ಮೇಲೆ ಹೇಳಲಾದ ವಿದ್ವಾಂಸರು ಹಾಗೂ ಇನ್ನೂ ಹಲವು ಜಾನಪದ ಪ್ರೇಮಿಗಳ ಪ್ರಯತ್ನದಿಂದಾಗಿ ಒಂದು ಜಾನಪದ ವಸ್ತು ಸಂಗ್ರಹಾಲಯವನ್ನು (ಭಾರತದಲ್ಲೇ ಇದು ಮೊದಲನೇಯದು) ಸ್ಥಾಪಿಸಿ, ಅದರ ಜೊತೆಯಲ್ಲೇ ಜಾನಪದ ಸಂಶೋಧನಾ ವಿಭಾಗವನ್ನೂ ಬೆಳೆಸಲಾಯಿತು. ಜಾನಪದದಲ್ಲಿ ಎಂ. ಎ. ಹಾಗೂ ಡಿಪ್ಲೋಮಾ ತರಗತಿಗಳನ್ನು ಮೊದಲು ಮಾಡಿದ ಸಾಧನೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗೆ ಸಲ್ಲುತ್ತದೆ. ವೃತ್ತಿ ಚಿತ್ರಕಾರರಾದ ಪಿ. ಆರ್. ತಿಪ್ಪೇಸ್ವಾಮಿಯವರನ್ನು ಈ ವಸ್ತು ಸಂಗ್ರಹಾಲಯದ ಕ್ಯುರೇಟರ್ ಆಗಿ ನೇಮಿಸಲಾಯಿತು. ಇತರರ ನೆರವು, ಸಲಹೆಗಳೊಂದಿಗೆ ಇವರು ಅಗಾಧ ಪ್ರಮಾಣದಲ್ಲಿ ಜನಪದ ವಸ್ತುಗಳನ್ನು ಸಂಗ್ರಹಿಸಿ, ಅವುಗಳನ್ನು ವೈಜ್ಞಾನಿಕವಾದ ವಿಧಾನದಲ್ಲಿ ಜೋಡಿಸಿದ್ದಾರೆ. ಸಂಶೋಧನೆಯ ದೃಷ್ಟಿಯಿಂದ ಈ ಸಂಗ್ರಹಾಲಯಕ್ಕೆ ಅತ್ಯಂತ ಹೆಚ್ಚಿನ ಮಹತ್ವವಿದೆ. ಅಲ್ಲದೆ ಇದೊಂದು ಪ್ರವಾಸೀ ಆಕರ್ಷಣೆಯ ಕೇಂದ್ರ ಕೂಡ ಹೌದು.

ಜಾನಪದದ ಮಹತ್ವವನ್ನು ಗಮನಿಸಿ ಕರ್ನಾಟಕದ ಇತರ ವಿಶ್ವವಿದ್ಯಾಲಯಗಳೂ ಜಾನಪದವನ್ನು ಸ್ನಾತಕೋತ್ತರ ಪದವಿ ತರಗತಿಗಳಲ್ಲಿ ಅಧ್ಯಯನ ವಿಷಯವನ್ನಾಗಿಸಲು ಮುಂದಾದವು. ಕರ್ನಾಟಕ ವಿಶ್ವವಿದ್ಯಾಲಯವು ಜನಪದ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ತರಗತಿಯನ್ನು ಪ್ರಾರಂಭಿಸಿತು. ಬೆಂಗಳೂರು ವಿಶ್ವವಿದ್ಯಾಲಯವು ಕನ್ನಡ ಎಂ.ಎ. ತರಗತಿಗೆ ಜಾನಪದವನ್ನು ಒಂದು ಐಚ್ಛಿಕ ವಿಷಯವನ್ನಾಗಿ ಆಯ್ದುಕೊಳ್ಳುವ ಅವಕಾಶವನ್ನು ಒದಗಿಸಿತು. ಇನ್ನೂ ಹಲವಾರು ಸಂಸ್ಥೆಗಳು ಈ ಕೈಂಕರ್ಯದಲ್ಲಿ ತೊಡಗಿ ಕರ್ನಾಟಕದುದ್ದಕ್ಕೂ ಜಾನಪದದ ಪುನರುತ್ಥಾನಕ್ಕೆ ನೆರವಾದವು. ಜನಪದ ಕಲೆಗಳ ಉತ್ಸವಗಳನ್ನು ಏರ್ಪಡಿಸುವುದೇ ಅಲ್ಲದೆ, ಜನಪದ ಹಾಡುಗಳನ್ನು ಸಂಗ್ರಹಿಸುವುದು ಕೂಡ ತನ್ನ ಚಟುವಟಿಕೆಯ ವ್ಯಾಪ್ತಿಯಲ್ಲಿ ಬರುವುದೆಂದು ತಿಳಿದಿರುವ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಂಸ್ಥೆಯ ಯತ್ನಗಳು ಅಭಿನಂದನಾರ್ಹವಾಗಿವೆ. ಮೈಸೂರು ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಜಾನಪದ ಪರಿಷತ್ತು, ಜಾನಪದ ಕಲಾ

ಕೂಟ, ನೆಹರೂ ಯುವಕ ಕೇಂದ್ರಗಳು, ಆಕಾಶವಾಣಿ ಹಾಗೂ ವಾರ್ತಾ ಮತ್ತು ಪ್ರಚಾರ ಇಲಾಖೆಗಳು ಪ್ರತೀ ವರ್ಷವೂ ನಡೆಸುವ ಜನಪದ ಕಲೆಗಳ ಉತ್ಸವಗಳಲ್ಲಿ ಎಷ್ಟೋ ಅಪರಿಚಿತ ಜನಪದ ಕಲೆಗಳು ಬೆಳಕು ಕಂಡಿವೆ. ಜಾನಪದ ಸಂಶೋಧನೆಗಾಗಿಯೇ ಮೀಸಲಾದ ಪತ್ರಿಕೆಯಾದ 'ಜನಪದ'ವನ್ನು ಕೆಲವು ವರ್ಷಗಳಿಂದ ಜಾನಪದ ಪರಿಷತ್ತು ಪ್ರಕಟಿಸುತ್ತಾ ಬರುತ್ತಿದೆ.

ಕಳೆದ ನಾಲ್ಕು ವರ್ಷಗಳಲ್ಲಿ ರೂಪು ತಳೆದ ಕರ್ನಾಟಕ ಜನಪದ ಟ್ರಸ್ಟ್ ಮತ್ತು ಕರ್ನಾಟಕ ಜನಪದ ಹಾಗೂ ಯಕ್ಷಗಾನ ಅಕ್ಯಾಡೆಮಿ ಎಂಬ ಸಂಸ್ಥೆಗಳಿಂದಾಗಿ ಜಾನಪದದ ಅಧ್ಯಯನಕ್ಕೆ ಹೊಸ ಆಯಾಮ ಒದಗಿದಂತಾಗಿದೆ. ಇವುಗಳಲ್ಲಿ ಮೊದಲನೇಯದು ಒಂದು ಸಾರ್ವಜನಿಕ ಪುದುವಟ್ಟು. ಎರಡನೇಯದು ಕರ್ನಾಟಕ ಸರಕಾರವು ಇತರ ಅಕ್ಯಾಡೆಮಿಗಳ ಮಾದರಿಯಲ್ಲೇ ರಚಿಸಿರುವ ಒಂದು ಸಂಸ್ಥೆ. ಟ್ರಸ್ಟು ಜನಪದ ಗೀತೆಗಳನ್ನು ದಾಖಲು ಮಾಡುವ ಅಪೂರ್ವ ಕಾರ್ಯದಲ್ಲಿ ತೊಡಗಿದೆ. ಈಗಾಗಲೇ 1,000 ಗಂಟೆಗಳಷ್ಟು ಅವಧಿಯ ಧ್ವನಿಮುದ್ರಿತ ಸಂಗೀತ ಟ್ರಸ್ಟಿನ ಬಳಿ ಇದ್ದು ಈ ಹಾಡುಗಳನ್ನು ಕರ್ನಾಟಕದ ಎಲ್ಲ ವಲಯಗಳಿಂದಲೂ ಸಂಗ್ರಹಿಸಲಾಗಿದೆ. ಇದರ ಜೊತೆಗೇ 'ಜಾನಪದ ಜಗತ್ತು' ಎಂಬ ಜಾನಪದಕ್ಕಾಗಿಯೇ ಮೀಸಲಾದ ಪತ್ರಿಕೆಯನ್ನೂ ಪ್ರಕಟಿಸಲಾಗುತ್ತಿದೆ. ಕರ್ನಾಟಕದ ಜಾನಪದವನ್ನು ಪುನರುಜ್ಜೀವನಗೊಳಿಸಲು ಟ್ರಸ್ಟಿನ ಬಳಿ ಹಲವು ಯೋಜನೆಗಳಿವೆ. ಸದ್ಯಕ್ಕೆ ಅದು ಜನಪದ ಗೀತದ ಮೇಲೆ ತನ್ನ ಗಮನವನ್ನು ಕೇಂದ್ರೀಕರಿಸಿದೆ.

ಕಳೆದ ಮೂರು ವರ್ಷಗಳಿಂದ ಕೆಲಸ ಮಾಡುತ್ತಿರುವ ಅಕ್ಯಾಡೆಮಿಯು ಈವರೆಗೆ ಜನಪದ ಕಲಾವಿದರಿಗೆ ದೊರಕದಿದ್ದ ಸ್ಥಾನಮಾನಗಳನ್ನು ಒದಗಿಸಿಕೊಡಲು ಯತ್ನಿಸುತ್ತಿದೆ. ಗ್ರಾಮಗಳ ಹಂತದಿಂದ ರಾಜ್ಯಮಟ್ಟದವರೆಗೆ ಜನಪದ ಕಲೆಗಳ ಪ್ರದರ್ಶನವನ್ನು ಅಕ್ಯಾಡೆಮಿಯು ಏರ್ಪಡಿಸುವುದು ; ಇಪ್ಪತ್ತು ಮಂದಿ (ಒಬ್ಬ ಜಾನಪದ ತಜ್ಞರೂ ಸೇರಿದಂತೆ) ಜನಪದ ಕಲಾವಿದರಿಗೆ ಸನ್ಮಾನ ಮಾಡುವುದು. ಜಾನಪದ ಅಧ್ಯಯನದಲ್ಲಿನ ಉತ್ತಮ ಪುಸ್ತಕಗಳಿಗೆ ನಗದು ಬಹುಮಾನಗಳನ್ನು ನೀಡುವುದು. ಪ್ರತೀ ವರ್ಷವೂ ಜಾನಪದದ ವಿವಿಧ ಸಾಮಗ್ರಿಯನ್ನು ನೂರು ಪುಟಗಳಷ್ಟು ಸಂಗ್ರಹಿಸಿ ಜನಪ್ರಿಯ ಆವೃತ್ತಿಯಲ್ಲಿ ಮುದ್ರಿಸಿ ಒಂದು ರೂಪಾಯಿಗೆ ಒಂದು ಪ್ರತಿಯಂತೆ ಅತೀ ಕಡಿಮೆ ಬೆಲೆಗೆ ಮಾರಾಟ ಮಾಡುತ್ತಿದೆ. ಅಕ್ಯಾಡೆಮಿಯು ಮಾಡುತ್ತಿರುವ ಇನ್ನೊಂದು ಮುಖ್ಯ ಕೆಲಸವೆಂದರೆ ಜೀವನ ನಿರ್ವಹಣೆ ಅತೀ ಕಷ್ಟವಾಗಿರುವ ಜನಪದ ಕಲಾವಿದರನ್ನು ಗುರುತಿಸಿ ಅವರಿಗೆ ಮಾಸಿಕ ಸಹಾಯಧನ ದೊರಕುವಂತೆ ಮಾಡುತ್ತಿದೆ. ರಾಜ್ಯಸರ್ಕಾರವು ಈವರೆಗೆ ಇಂಥ 170 ಜನರಿಗೆ ಸಹಾಯ ಧನವನ್ನು ನೀಡಿದೆ (1980ರಲ್ಲಿ).

ತರಬೇತು ಪಡೆದ ಜಾನಪದ ತಜ್ಞರು ಮತ್ತಿತರರ ಅವಿರತ ಪ್ರಯತ್ನದಿಂದಾಗಿ ಕನ್ನಡ ಜಾನಪದವನ್ನು ಕುರಿತು ಹೆಚ್ಚು ಹೆಚ್ಚು ಪುಸ್ತಕಗಳು ಪ್ರತೀ ವರ್ಷವೂ ಪ್ರಕಟವಾಗುತ್ತಿವೆ. 1973ರವರೆಗೆ ಈ ಕ್ಷೇತ್ರದಲ್ಲಿ ಸುಮಾರು 500 ಪುಸ್ತಕಗಳು ಪ್ರಕಟವಾಗಿದ್ದುವೆಂದು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪ್ರಕಟಿಸಿರುವ ಪುಸ್ತಕಸೂಚಿ ತಿಳಿಸುತ್ತವೆ. ಕಳೆದ ಏಳು ವರ್ಷಗಳಲ್ಲಿ ಪ್ರಕಟವಾಗಿರುವ ಪುಸ್ತಕಗಳ ಸಂಖ್ಯೆ 800ಕ್ಕೂ ಮಿಕ್ಕಿದೆ. ಕಳೆದ ಒಂದು ದಶಕದಲ್ಲಿ ಜಾನಪದದ ವಿವಿಧ ವಲಯಗಳಾದ ಗದ್ಯ, ಕಥಾನಕ, ಹಾಡು, ಲಾವಣಿ, ಮಹಾಕಾವ್ಯ, ಶಿಶುಪ್ರಾಸಗಳು, ಜಾನಪದ ವೈದ್ಯ, ಮತ್ತಿತರ ಪ್ರಕಾರಗಳಲ್ಲಿ ಪುಸ್ತಕಗಳು, ಪ್ರಕಟವಾಗಿವೆ. ಸಂಗ್ರಹಕಾರ್ಯ ಹಾಗೂ ಅಧ್ಯಯನಗಳೆರಡೂ ಸವೇಗವಾಗಿ ಒಟ್ಟೊಟ್ಟಿಗೆ ಸಾಗುತ್ತಿವೆ. ಈಗ ಅಧ್ಯಯನ ಮಾಡುವವರಿಗೆ ಕನ್ನಡದಲ್ಲಿ ಸಾಕಷ್ಟು ಸಾಮಗ್ರಿ ಲಭ್ಯವಿದೆ. ಹಲವಾರು ವಿದ್ವಾಂಸರು ತಮ್ಮ ಡಾಕ್ಟರಲ್ ಅಧ್ಯಯನಕ್ಕೆ ಜಾನಪದವನ್ನು ಕ್ಷೇತ್ರವನ್ನಾಗಿ ಆಯ್ದುಕೊಂಡಿದ್ದಾರೆ. ಹತ್ತಕ್ಕೂ ಮಿಕ್ಕಿ ವಿದ್ವಾಂಸರು ಈಗಾಗಲೇ ಈ ವಲಯದಲ್ಲಿ ತಮ್ಮ ಪಿಎಚ್.ಡಿ. ಪದವಿಗಳನ್ನು ಪಡೆದುಕೊಂಡಿದ್ದಾರೆ.

### ವರ್ಗೀಕರಣ

ಈಗ ಪ್ರಕಟವಾಗಿರುವ ಸಾಮಗ್ರಿಯನ್ನು ಗಮನಿಸಿದರೆ ಕರ್ನಾಟಕದಲ್ಲಿ ಜಾನಪದಕ್ಕೆ ಸಮೃದ್ಧ ಪರಂಪರೆಯಿರುವುದು ಸ್ಪಷ್ಟವಾಗುತ್ತದೆ. ಮೌಖಿಕ ಸಾಹಿತ್ಯವನ್ನು ಗದ್ಯ-ಪುರಾಣಗಳು, ಐತಿಹ್ಯಗಳು ಹಾಗೂ ಕತೆಗಳು, ಹಾಡುಗಳು, ಲಾವಣಿಗಳು, ಮಹಾಕಾವ್ಯಗಳು, ಶಿಶುಪ್ರಾಸ, ಇತ್ಯಾದಿಯಾಗಿ ವಿಭಾಗಿಸಬಹುದು. ಹಾಗೆಯೇ ಗಾದೆ, ಒಗಟು, ಒಡಪು, ಜಾಣ ಮಾತು ಮತ್ತು ಜನಪದ ನಾಟಕಗಳು ಎಂಬ ವಿಭಾಗಗಳನ್ನು ಗುರುತಿಸಲು ಸಾಧ್ಯವಿದೆ. 19ನೇಯ ಶತಮಾನದಿಂದಲೇ ಕರ್ನಾಟಕದ ಗದ್ಯ ಕಥಾನಕಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ. ಅಬೆ ದುಬುವಾರ ಕೃತಿ 'ಹಿಂದೂ ಕಸ್ಟಂಸ್, ಮ್ಯಾನರ್ಸ್ ಅಂಡ್ ಸೆರಮನೀಸ್' ನಲ್ಲಿ ಜನಪದ ಕತೆಗಳಿವೆ. ಮೇರಿ ಫ್ರೇರಿಯವರ 'ಓಲ್ಡ್ ಡೆಕ್ಕನ್ ಡೇ' ಕೃತಿಯು ಜನಪದ ಕತೆಗಳ ಒಂದು ಸ್ವತಂತ್ರ ಸಂಕಲನ. ಈಚಿನ ದಿನಗಳಲ್ಲಿ ಯುಕ್ತವಾಗಿ ಸಂಪಾದಿಸಿ, ವೈಜ್ಞಾನಿಕ ವಿಧಾನದಲ್ಲಿ ಕತೆಗಳನ್ನು ವರ್ಗೀಕರಿಸಿರುವ ಹಲವಾರು ಕಥಾಸಂಗ್ರಹಗಳು ಪ್ರಕಟವಾಗಿವೆ. ಹಲವು ಕಥಾ ಮಾದರಿಗಳು—ದೇಶೀಯ ಹಾಗೂ ಅಂತರ್‌ರಾಷ್ಟ್ರೀಯ ಸ್ವರೂಪದವು—ಈಗ ಈ ಕತೆಗಳಲ್ಲಿ ಕಂಡುಬಂದಿದ್ದು ಅವುಗಳನ್ನು ಈ ಸಂಗ್ರಹಗಳು ಬೆಳಕಿಗೆ ತಂದಿವೆ.

ಜನಪದ ಕತೆಗಳಲ್ಲಿ, ಪುರಾಣಗಳು—ಭೂಮಿಯ ಸೃಷ್ಟಿ, ದೇವರುಗಳು, ದೇವತೆಗಳು, ಸಾಂಸ್ಕೃತಿಕ ವೀರರು ಇತ್ಯಾದಿ

ವಸ್ತುಗಳನ್ನು ಹೊಂದಿರುತ್ತನೆ. ಕರ್ನಾಟಕದ ಹಳ್ಳಿಗಾಡುಗಳಲ್ಲಿ ಹಾಗೂ ಗುಡ್ಡಗಾಡುಗಳಲ್ಲಿ ಹೇಳಲಾಗುವ ಪುರಾಣಗಳಲ್ಲಿ ಹಲವಾರು ಬಗೆಯ ವೈವಿಧ್ಯವಿದೆ. ಕರ್ನಾಟಕದಲ್ಲಿ ಗ್ರಾಮ ದೇವತೆಯನ್ನು ಕುರಿತು ಪುರಾಣಗಳು ಜನಪ್ರಿಯವಾಗಿವೆ. ಈ ಪುರಾಣದಲ್ಲಿ ಹರಿಜನ ಯುವಕನೊಬ್ಬ ಬ್ರಾಹ್ಮಣ ಯುವಕನಂತೆ ವೇಷ ಧರಿಸಿ, ಬ್ರಾಹ್ಮಣ ಹುಡುಗಿಯೊಬ್ಬಳನ್ನು ಮದುವೆಯಾಗುತ್ತಾನೆ. ತಾನು ಕೀಳುಜಾತಿಯವನನ್ನು ಮದುವೆಯಾಗಿ ಮೋಸಹೋದುದನ್ನು ಅರಿತ ಆ ಹುಡುಗಿ ಚಿತೆಯಲ್ಲಿ ಬಿದ್ದು ದೇವತೆಯಾಗಿಬಿಡುತ್ತಾಳೆ. ದೇವರು ಇಲ್ಲವೇ ದೇವತೆ ಹೇಗೆ ಪೊದೆಯಲ್ಲಿ ಅಥವಾ ಹುತ್ತದಲ್ಲಿ ಕಾಣಿಸಿಕೊಂಡರು, ಎಂಬುದನ್ನು ಹೇಳುವ ಪುರಾಣಗಳೂ ವಿವಿಧ ಮಾದರಿಗಳಲ್ಲಿ ಲಭಿಸುತ್ತವೆ. ಕರ್ನಾಟಕದುದ್ದಕ್ಕೂ ಹಲವು ಐತಿಹ್ಯಗಳನ್ನು ನಾವು ಕೇಳಬಹುದಾಗಿದೆ. ಈ ಐತಿಹ್ಯಗಳೆಲ್ಲ ನಿರ್ದಿಷ್ಟ ಸ್ಥಳ, ವ್ಯಕ್ತಿ ಅಥವಾ ವಸ್ತುವನ್ನು ಕುರಿತು ಇರುತ್ತವೆ. ನಿಜವಾಗಿ ನಡೆದ ಘಟನೆಗಳೊಡನೆ ಸಾಂಪ್ರದಾಯಿಕ ಸಂಗತಿಗಳನ್ನು ಬೆರಸಿ ನಿರೂಪಿಸಲಾಗುವ ಕಥಾನಕಗಳಿವು. ಕೆಲವು ನಿರ್ದಿಷ್ಟ ಪ್ರದೇಶಗಳಿಗೆ ಸಂಬಂಧಿಸಿದ ಪ್ರಾದೇಶಿಕ ಐತಿಹ್ಯಗಳೂ ಇವೆ. ಚನ್ನಪಟ್ಟಣ ತಾಲೂಕಿನಲ್ಲಿ ಪ್ರಚಲಿತವಿರುವ ಒಂದು ಪ್ರಾದೇಶಿಕ ಐತಿಹ್ಯವು, ದೊಂಬನೊಬ್ಬ ತನ್ನ ಶೌರ್ಯಕ್ಕಾಗಿ ಭೂಮಿಯನ್ನು ಕಾಣಿಕೆಯನ್ನಾಗಿ ಪಡೆದುದನ್ನು ಹೇಳುತ್ತದೆ. ಈ ಐತಿಹ್ಯವನ್ನು ದೊಂಬನ ಕೊಡಿಗೆ ಎಂದು ಗುರುತಿಸಲಾಗಿದೆ. ಬೆಟ್ಟಗಳು, ಬಾವಿಗಳು, ಕೆರೆಗಳು, ಕಲ್ಲುಬಂಡೆಗಳು, ಮರಗಳು ಹಾಗೂ ಮನೆಗಳ ಬಗೆಗೆ ಐತಿಹ್ಯಗಳು ಪ್ರಚಲಿತವಿದೆ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋದ ಐತಿಹ್ಯಗಳೂ ಸಾಕಷ್ಟಿವೆ. ಕನ್ನಡದಲ್ಲಿ ಈ ಬಗೆಯ ಐತಿಹ್ಯಗಳೂ ದೊರಕುತ್ತವೆ. ಪತಿವ್ರತೆಯೊಬ್ಬಳನ್ನು ಹೊಸದಾಗಿ ಕಟ್ಟಿಸಿದ ಕೆರೆಗೆ ಬಲಿಯಾಗಿ ನೀಡುವ ಐತಿಹ್ಯವು ಇದಕ್ಕೆ ಒಂದು ಒಳ್ಳೆಯ ಉದಾಹರಣೆ. ಚಿಕ್ಕಮಗಳೂರು ಜಿಲ್ಲೆಯ ಅಯ್ಯನಕೆರೆಗೆ ಹೊನ್ನಬಿಲ್ಲನು ಬಲಿಯಾದುದು ಹಾಗೂ ಚಿತ್ರದುರ್ಗ ಜಿಲ್ಲೆಯ ಧರ್ಮಪುರಿ ಕೆರೆಗೆ ಧರ್ಮನು ಬಲಿಯಾದುದು ಗಂಡಸರು ಬಲಿಯಾಗಿರುವುದಕ್ಕೆ ನಿದರ್ಶನಗಳಾಗಿವೆ.

ಮರ್ಚೆನ್ ಮಾದರಿಯ ಕತೆಗಳು ಸಾಮಾನ್ಯವಾದ ಜನಪದ ಕತೆಗಳಾಗಿರುತ್ತವೆ. ಅಲೆಕ್ಸಾಂಡರ್ ಎಚ್. ಕ್ರಾಫ್ ಅವರು ಜನಪದ ಕತೆಯೆಂದರೆ ಒಬ್ಬ ನಾಯಕ ಇಲ್ಲವೇ ನಾಯಕಿಯ ಸುತ್ತ ಹೆಣೆದುಕೊಂಡ ಗದ್ಯ ಕಥಾನಕವನ್ನು ನಿರ್ದಿಷ್ಟ ಕಾಲಾವಧಿಯಲ್ಲಿ ನಿರೂಪಿಸುವುದು ಎಂದು ವ್ಯಾಖ್ಯಾನಿಸಿದ್ದಾರೆ. ನಾಯಕನು ಕತೆಯ ಮೊದಲಲ್ಲಿ ಬಡವನೂ ನಿರ್ಗತಿಕನೂ ಆಗಿದ್ದು ಮುಂದೆ ಸಾಕಷ್ಟು ಸಾಹಸಗಳನ್ನು ತೋರಿ ಅತಿಮಾನುಷ ಶಕ್ತಿಗಳ ನೆರವನ್ನು ಪಡೆದು ಅವನು ತನ್ನ ಗುರಿಯನ್ನು ತಲುಪಿ ಕೊನೆಯಲ್ಲಿ ಸುಖವಾಗಿ ಬಾಳುತ್ತಾನೆ. ಮರ್ಚೆನ್ ಮಾದರಿಗಳಲ್ಲಿ ಇದೇ ಸಾಮಾನ್ಯವಾದ ಬಗೆಯಾದರೂ ಪ್ರಾಣಿಗಳು ಮತ್ತು ಜಾಣರು ಮುಖ್ಯ ಪಾತ್ರವಹಿಸುವ ಕತೆಗಳಿವೆ. ಇಂಥ ಕತೆಗಳನ್ನು ಅತಿಮಾನುಷ ಕತೆಗಳು, ಮಾಂತ್ರಿಕ ಕತೆಗಳು, ವಾಸ್ತವ ಕತೆಗಳು, ಪಡ್ಡರ ಕತೆಗಳು ಮತ್ತು ಬುದ್ಧಿವಂತರ ಕತೆಗಳು, ಹಾಸ್ಯ ಕತೆಗಳು, ಸರಪಳಿ ಕತೆಗಳು, ಸೂತ್ರ ಕತೆಗಳು, ದೆವ್ವದ ಕತೆಗಳು ಎಂದೆಲ್ಲ ವರ್ಗೀಕರಿಸಲಾಗಿದೆ. ಅಂತರ್‌ರಾಷ್ಟ್ರೀಯ ವರ್ಗೀಕರಣವನ್ನು ಗಮನದಲ್ಲಿರಿಸಿಕೊಂಡು ಕನ್ನಡ ಮರ್ಚೆನ್ ಕತೆಗಳನ್ನು ಕೂಡ ಪ್ರಪಂಚದ ಮರ್ಚೆನ್ ಕತೆಗಳ ಮಾದರಿಯಲ್ಲೇ ವರ್ಗೀಕರಿಸಬಹುದಾಗಿದೆ. ಈ ದಶಕದಲ್ಲಿ ಪ್ರಕಟಗೊಂಡಿರುವ ಕಥಾಸಂಕಲನಗಳಲ್ಲಿ ಈ ಎಲ್ಲ ಮಾದರಿಯ ಕತೆಗಳಿಗೂ ಸಾಕಷ್ಟು ಉದಾಹರಣೆಗಳು ಕನ್ನಡದಲ್ಲಿ ದೊರಕುತ್ತವೆ. ಕನ್ನಡದ ಅತಿಮಾನುಷ ಜನಪದ ಕತೆಗಳಲ್ಲಿ ರಕ್ಕಸರು ಹಾಗೂ ರಕ್ಕಸಿಯರು ಮುಖ್ಯ ಪಾತ್ರವಹಿಸುತ್ತಾರೆ. ಮಾಂತ್ರಿಕ ಕತೆಗಳಲ್ಲಿ ಮಾಂತ್ರಿಕ ವಸ್ತುಗಳ ಜೊತೆಗೆ ಮಾಂತ್ರಿಕರೂ ಪಾತ್ರಧಾರಿಗಳಾಗಿ ಬರುತ್ತಾರೆ. ಈ ಮಾದರಿಯಲ್ಲಿ ಸಾಕಷ್ಟು ಸಂಕೀರ್ಣ ಕತೆಗಳು ದೊರಕುತ್ತವೆ. ಎಷ್ಟೋ ಅಂತರ್‌ರಾಷ್ಟ್ರೀಯ ಮಾದರಿಯ ಕತೆಗಳು ಕನ್ನಡದಲ್ಲಿ ದೊರಕುತ್ತಿದ್ದು, ಅರ್ನೆ ಅಂಟಿ ಮತ್ತು ಸ್ಮಿತ್ ಥಾಂಪ್ಸನ್ ಅವರ 'ಟೇಲ್ ಟೈಪ್' ಗಳನ್ನು ಈ ಕತೆಗಳಿಗೆ ನೇರವಾಗಿ ಅನ್ವಯಿಸಬಹುದಾಗಿದೆ. ಪ್ರಾದೇಶಿಕ ಮರ್ಚೆನ್ ಮಾದರಿಗಳೂ ಸಾಕಷ್ಟು ಪ್ರಮಾಣದಲ್ಲಿ ದೊರಕುತ್ತವೆ.

ಕನ್ನಡದ ಪ್ರಾಣಿ ಕತೆಗಳಲ್ಲಿ ನರಿ ಕಿಲಾಡಿತನವನ್ನು ಪ್ರದರ್ಶಿಸುತ್ತದೆ. ದೆವ್ವದ, ಸರಪಳಿ ಮಾದರಿಯ, ಸೂತ್ರದ ಕತೆಗಳಿಗೂ ಸಾಕಷ್ಟು ಒಳ್ಳೆಯ ಉದಾಹರಣೆಗಳು ಕನ್ನಡದಲ್ಲಿ ದೊರಕುತ್ತವೆ. ಮರ್ಚೆನ್‌ನಲ್ಲಿ ಇನ್ನೊಂದು ಬಗೆ ಎಂದರೆ ಕೊನೆಯಿಲ್ಲದ ಕತೆಗಳು. ಕನ್ನಡದಲ್ಲಿ ಇದಕ್ಕೂ ಉತ್ತಮ ಉದಾಹರಣೆಗಳು ದೊರಕುತ್ತವೆ. ಕಾರಣ ಹೇಳುವ ಕತೆಗಳಿಗೂ ಕನ್ನಡದಲ್ಲಿ ಸಾಕಷ್ಟು ವೈವಿಧ್ಯವಿದೆ. ಕೋಗಿಲೆಯು ಏಕೆ ಯಾವಾಗಲೂ 'ಚಿಕ್ಕವ್ವೋ ಚಿಕ್ಕವ್ವೋ' ಎಂದು ಕೂಗುತ್ತದೆ, ಅಳಿಲಿಗೆ ಬೆನ್ನ ಮೇಲೆ ಮೂರು ಗೆರೆಗಳು ಇರುವುದೇಕೆ, ಎಂದೆಲ್ಲ ವಿವರಿಸುವ ಕತೆಗಳು ಸಿಗುತ್ತವೆ.

ಗದ್ಯ ಕಥಾನಕಗಳ ನಿಧಿಯ ಅನಂತರದಲ್ಲಿ ಮಹತ್ವವನ್ನು ಪಡೆಯುವ ಪ್ರಕಾರವೆಂದರೆ ಹಾಡುಗಳು. ಜನಪದ ಗೀತೆಗಳು ಕರ್ನಾಟಕದಲ್ಲಿ ಹಲವಾರು ಸಂಪ್ರದಾಯಗಳನ್ನು ಪಡೆದುಕೊಂಡಿವೆ. ಭಕ್ತಿಗೀತೆಗಳು, ರಾಗಿ ಬೀಸುವ ಪದಗಳು, ಭತ್ತ ಕುಟ್ಟುವ ಪದಗಳು, ಜೋಗುಳಗಳು, ಶಿಶುಪ್ರಾಸಗಳು, ಕುಣಿತದ ಹಾಡುಗಳು, ಕೆಲಸದ ಹಾಡುಗಳು, ಮದುವೆಯ ಹಾಡುಗಳು, ಮೈನೆರೆದಾಗ ಹಾಡುವ ಹಾಡುಗಳು, ಹೊಗಳಿಕೆಯ ಹಾಡುಗಳು, ಮತ್ತಿತರ ಬಗೆಯ ಹಾಡುಗಳನ್ನು ಸಂಶೋಧಕರು ಅಧ್ಯಯನ ಮಾಡಿದ್ದಾರೆ. ಜನಪ್ರಿಯ ಹಾಡುಗಾರಿಕೆಯ ಸಂಪ್ರದಾಯ

ಗಳೆಂದರೆ ಕಲ್ಗಿತುರಾ, ಗೀಗೀ, ಕೊಂತಿಪೂಜೆ, ತಿಂಗಳ ಮಾವನ ಪೂಜೆ, ಅಂಟಿಗೆ ಪಂಟಿಗೆ, ಭಾಗವಂತಿಕೆ, ಇತ್ಯಾದಿ. ಇವುಗಳಿಗೆ ತಮ್ಮದೇ ಆದ ಹಾಡುಗಳ ಸಂಗ್ರಹವಿದೆ. ಬ್ರಾಹ್ಮಣ ಹೆಂಗಸರು ತಮ್ಮವೇ ಆದ ಸಂಪ್ರದಾಯದ ಹಾಡುಗಳನ್ನು ಹೊಂದಿದ್ದಾರೆ. ಈ ಹಾಡುಗಳ ಮೇಲೆ ಶಿಷ್ಟ ಸಂಪ್ರದಾಯದ ಪ್ರಭಾವವನ್ನು ನೋಡಬಹುದಾದರೂ ಇವು ಕೂಡ ನಿಜವಾಗಿ ಜನಪದ ಹಾಡುಗಳೇ ಆಗಿವೆ. ಕೊರವಂಜಿಗಳು ಹಚ್ಚೆ ಹುಯ್ಯುವುದರಲ್ಲಿ ಪ್ರವೀಣರು. ಯಾವ ಪ್ರಧಾನ ಪ್ರಕಾರದಿಂದಲೂ ಪ್ರಭಾವಕ್ಕೆ ಒಳಗಾಗದ, ತಮ್ಮವೇ ಆದ ಹಾಡುಗಳನ್ನು ಅವರು ಹೇಳುವರು. ಇವರು ಅಲೆಮಾರಿಗಳಾಗಿದ್ದು ತಮ್ಮದೇ ಆದ ಭಾಷೆಯನ್ನು ಮಾತನಾಡುವವರು ; ಈ ಭಾಷೆಯಲ್ಲಿ ಎಲ್ಲ ದ್ರಾವಿಡ ಭಾಷೆ ಗಳೂ ಮಿಶ್ರಗೊಂಡಂತೆ ತೋರುವುದು. ಹಳ್ಳಿಯ ಜನರಿಗೆ ಹಚ್ಚೆ ಹುಯ್ಯುವಾಗ ಅವರು ನೋವು ಮರೆಯುವಂತಾಗಲು ಮನರಂಜನೆಗಾಗಿ ಹಾಡುಗಳನ್ನು ಹೇಳುತ್ತಾರೆ.

ಕನ್ನಡದ ಬೀಸುವ ಪದಗಳು ಹೆಂಗಸರ ಭಾವನೆಗಳು ಹಾಗೂ ಆಶೋತ್ತರಗಳನ್ನು ಹೊರಹಾಕುತ್ತವೆ. ಜೋಗುಳದ ಹಾಡುಗಳು ತಾಯಿ-ಮಗುವಿನ ಸಂಬಂಧವನ್ನು ಸುಂದರವಾಗಿ ಅಭಿವ್ಯಕ್ತಿಸುತ್ತವೆ. ಮದುವೆ ಹಾಡುಗಳು ಸಮಾರಂಭದ ಎಲ್ಲ ಹಂತಗಳನ್ನು ನಿರೂಪಿಸುತ್ತವೆ. ಈ ಎಲ್ಲ ಹಾಡುಗಳಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳ ಜೊತೆಗೆ ಭಾವಗೀತೆಗಳ ಸೊಗಸು ಕೂಡ ಸೇರಿದೆ. ಗ್ರಾಮದೇವತೆಗಳನ್ನು, ಹಳ್ಳಿಯ ದೇವಾನುದೇವತೆಗಳನ್ನು ಕುರಿತು ಹಾಡುವ ಹಾಡುಗಳ ಸಂಖ್ಯೆ ಯಂತೂ ಅಸಂಖ್ಯ. ಈ ಹಾಡುಗಳನ್ನು ಮೋಹಕವಾದ ರಾಗ ಗಳಲ್ಲಿ ಪಲ್ಲವಿಗಳೊಡನೆ ಹಾಡಲಾಗುವುದು. ಹೆಂಗಸರು ಹಾಡುವ ಹಾಡುಗಳಿಗೆ ಜೊತೆಯ ಸಂಗೀತ ವಾದ್ಯಗಳಿರುವುದಿಲ್ಲ. ಗಂಡಸರು ಹಾಡುವ ಹಾಡುಗಳಿಗೆ ವಾದ್ಯಗಳ ಜೊತೆಗೆ ಕುಣಿತವೂ ಇರುವು ದುಂಟು. ಎಲ್ಲ ಪ್ರದರ್ಶಕ ಕಲೆಗಳೂ ಗಂಡಸರ ಕೈವಶವಾಗಿವೆ. ಅಲ್ಲೆಲ್ಲ ಅವರದೇ ಮೇಲುಗೈ. ಕೋಲಾಟದಂಥ ಕುಣಿತಗಳಲ್ಲಿ ಸುಂದರವಾದ ಹಾಡುಗಳಿರುತ್ತವೆ. ಈ ಲಯಬದ್ಧ ಹಾಡುಗಳನ್ನು ವಿವಿಧ ರಾಗಗಳಲ್ಲಿ ಹಾಡಲಾಗುವುದು. ಪಲ್ಲವಿಗಳು ಜನರ ಹರ್ಷವನ್ನು, ಅವರ ಭಾವನೆಗಳನ್ನು ಸೂಚಿಸುವಂತಿರುತ್ತವೆ.

## ವೃತ್ತಿ ಗಾಯಕರು

ಲಾವಣಿಗಳು ಕಥೆಯುಳ್ಳ ಜನಪದ ಗೀತೆಗಳು. ಈ ಹಾಡುಗಳನ್ನು ವಾದ್ಯಗಳೊಡನೆ ಹಾಡಲೆಂದೇ ರಚಿಸಲಾಗಿರುತ್ತದೆ. ಲಾವಣಿಗಳನ್ನು ವಿವಿಧ ರಾಗಗಳಲ್ಲಿ ಹಾಡಬಹುದಾಗಿದ್ದು ಈ ರಾಗಗಳು ಪರಂಪರೆಯಿಂದ ಬಂದವುಗಳಾಗಿವೆ. ಕರ್ನಾಟಕದಲ್ಲಿ ಹಲವು ಲಾವಣಿ ಸಂಪ್ರದಾಯಗಳಿವೆ. ಲಾವಣಿ ಹಾಗೂ ಮಹಾ ಕಾವ್ಯಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಗಂಡಸರು ಹಾಗೂ ಹೆಂಗಸರು ಹಾಡುವರು. ಲಾವಣಿಗಳ ಗಾಯಕರನ್ನು ಮೂರು ಮುಖ್ಯ ಗುಂಪುಗಳಲ್ಲಿ ಅಳವಡಿಸಬಹುದು : ವೃತ್ತಿಗಾಯಕರು, ಅರೆವೃತ್ತಿ ಗಾಯಕರು ಹಾಗೂ ಸಾಮಾನ್ಯ ಗಾಯಕರು. ಜನಪದ ಮಹಾಕಾವ್ಯಗಳನ್ನು ಹಾಗೂ ಲಾವಣಿಗಳನ್ನು ಹಾಡು ವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವವರೇ ವೃತ್ತಿಗಾಯ ಕರು. ಇವರಿಗೆ ಇವರದ್ದೇ ಆದ ಪಾರಂಪರಿಕ ವೇಷಭೂಷಣ ಗಳಿರುತ್ತವೆ ಹಾಗೂ ವಿಶಿಷ್ಟ ವಾದ್ಯಗಳೂ ಇರುತ್ತವೆ. ತಮ್ಮ ಪರಂಪರೆಗೆ ಸೇರಿದ ವಿಶಿಷ್ಟವಾದ ಹಾಡುಗಳನ್ನು ಅವರು ಹಾಡುತ್ತಾರೆ. ಜನರು ಅವರನ್ನು ಆಗಾಗ ತಮ್ಮ ಮನೆಗೆ ಇಲ್ಲವೇ ಹಳ್ಳಿಗೆ ಆಹ್ವಾನಿಸಿ ಇಡೀ ರಾತ್ರಿ ಅವರಿಂದ ದೇವರು ಇಲ್ಲವೇ ಜನಪದ ನಾಯಕ ನಾಯಕಿಯರ ಮಹಾಕಾವ್ಯಗಳನ್ನು ಹಾಡಿಸಿ ಕೇಳುತ್ತಾರೆ. ಈ ಗಾಯಕರು ಮೂರು ಇಲ್ಲವೇ ಅದಕ್ಕೂ ಹೆಚ್ಚಿನ ಜನರ ಗುಂಪುಗಳಲ್ಲಿದ್ದು ಆಗಾಗ ಕತೆ ಹೇಳುತ್ತಲೇ ಹಾಡುತ್ತಾ ನರ್ತಿಸುತ್ತಾರೆ.

ಮುಖ್ಯ ಮಹಾಕಾವ್ಯದ ಜೊತೆಗೆ ಏಕತಾನತೆಯನ್ನು ಮುರಿಯಲು ನಡುನಡುವೆ ಹಾಸ್ಯ ಪ್ರಸಂಗಗಳನ್ನು ಕುರಿತ ಹಾಡುಗಳನ್ನು ಹಾಡುವುದುಂಟು. ಜೀ. ಶಂ. ಪರಮಶಿವಯ್ಯ ನವರ ಅಧ್ಯಯನವು ಕರ್ನಾಟಕದ ವೃತ್ತಿಗಾಯಕರ ಪರಂಪರೆ ಯನ್ನು ಬೆಳಕಿಗೆ ತಂದಿದೆ. ಅವರು ಪಟ್ಟಿ ಮಾಡಿರುವ ವೃತ್ತಿ ಗಾಯಕರ ಬಗೆಗಳು ಹನ್ನೆರಡಕ್ಕೂ ಮಿಕ್ಕಿವೆ. ಅವರಲ್ಲಿ ಮಲೆಯ ಮಾದೇಶ್ವರ ಪರಂಪರೆಯ ದೇವರಗುಡ್ಡರು, ಮಂಟೇಸ್ವಾಮಿ ಸಂಪ್ರದಾಯದ ನೀಲಗಾರರು, ಜುಂಜಪ್ಪ ಸಂಪ್ರದಾಯದ ಗಣೆಯವರು, ಮೈಲಾರ ಲಿಂಗನ ಪರಂಪರೆಯ ಗೊರವರು, ಸೌಂದತ್ತಿಯ ಎಲ್ಲಮ್ಮನ ಪರಂಪರೆಯ ಚೌಡಿಕೆಯವರು, ಅಂತರ ಘಟ್ಟಮ್ಮನ ಪರಂಪರೆಯ ಆಸಾದಿಗಳು ಮುಂತಾದ ಧಾರ್ಮಿಕ ಗಾಯಕರು ಬರುತ್ತಾರೆ. ಕರಪಾಲದವರು, ತಂಬೂರಿಯವರು, ಕಿನ್ನರಿ ಜೋಗಿಗಳು, ದೊಂಬಿದಾಸರು, ಹೆಳವರು, ತೆಲುಗು ಜಂಗಮರು ಮತ್ತು ಹೆಣ್ಣು ಗಾಯಕರು ಮುಂತಾದ ಲೌಕಿಕ ಗಾಯಕ ವರ್ಗವೂ ಇದೆ. ಈ ಜನಪದ ಗಾಯಕರನ್ನು ಅವರವರ ಸಂಪ್ರದಾಯಗಳಿಗೆ ಅನುಗುಣವಾಗಿ ಧಾರ್ಮಿಕ ಹಾಗೂ ಲೌಕಿಕ ಗಾಯಕರೆಂದು ವರ್ಗೀಕರಣ ಸಾಧ್ಯ. ಧಾರ್ಮಿಕ ಗಾಯಕರು ನಿರ್ದಿಷ್ಟ ದೇವತೆಯ ಭಕ್ತ ಪರಂಪರೆಗೆ ಸೇರಿದ್ದು ಆ ದೇವರನ್ನು ಕುರಿತ ಮಹಾಕಾವ್ಯಗಳನ್ನು ಹಾಡುತ್ತಾರೆ. ಹಾಗೂ ಆ ದೇವತೆಗೆ ಸಂಬಂಧಿಸಿದ ಸಮಾರಂಭಗಳಲ್ಲಿ ಭಾಗವಹಿಸುತ್ತಾರೆ. ಲೌಕಿಕ ಗಾಯಕರಿಗೆ ಈ ಕಟ್ಟುಪಾಡುಗಳಿಲ್ಲ. ಅವರು ತಮಗೆ ಬೇಕಾದ ಮಹಾಕಾವ್ಯವನ್ನು ಹಾಡಬಹುದು. ಅದು ಯಾವ ದೇವತೆಯನ್ನು ಇಲ್ಲವೇ ನಾಯಕನನ್ನು ಕುರಿತು ಬೇಕಾದರೂ ಇರಬಹುದು. ಅವರು ಯಾವುದೇ ಧಾರ್ಮಿಕ ಸಮಾರಂಭಗಳಲ್ಲಿ ಭಾಗವಹಿಸುವುದಿಲ್ಲ.

ವೃತ್ತಿ ಗಾಯಕರಲ್ಲಿ ಮಾದೇಶ್ವರ ಪರಂಪರೆಗೆ ಸೇರಿದ ದೇವರ ಗುಡ್ಡರು ಕಂಸಾಳೆಯನ್ನು ಬಳಸುತ್ತಾರೆ. ಅವರು ಮಾದೇಶ್ವರನ ಕಾವ್ಯ ಮತ್ತಿತರ ದೀರ್ಘ ಕಥಾನಕಗಳನ್ನು ಹಾಡುತ್ತಾರೆ. ಜನಪದ ತಂಬೂರಿ (ಚಿಕ್ಕದು)ಯನ್ನು ಬಳಸುವ ನೀಲಗಾರರು ಮಂಟೇಸ್ವಾಮಿಯ ಭಕ್ತರು. ಹಾಗೂ 13ನೇಯ ಶತಮಾನದ ಮಹಾನ್ ಸಂತರಾದ ಸಿದ್ಧಪ್ಪಾಜಿ ಹಾಗೂ ರಾಚಪ್ಪಾಜಿಯ ಭಕ್ತರು. ಕಾಡುಗೊಲ್ಲರ ದೇವತೆಯಾದ ಜುಂಜಪ್ಪನ ಭಕ್ತರು ಗಣೆಯವರು. ಅವರು ಒಂದು ಮೀಟರು ಉದ್ದದ ಬೊಂಬಿನ ಕೊಳಲು (ಗಣೆ)ಯನ್ನು ಬಳಸುತ್ತಾರೆ. ಗೊರವರು ಮೈಲಾರಲಿಂಗನ ಭಕ್ತರು. ಅವರ ಉಡುಪು ವಿಶಿಷ್ಟ ಹಾಗೂ ವಿಚಿತ್ರ. ಕಪ್ಪು ಕಂಬಳಿಯನ್ನು ಹೊದ್ದು ಕರಡಿಯ ತುಪ್ಪಳದ ಟೋಪಿಯನ್ನು ಹಾಕಿಕೊಳ್ಳುತ್ತಾರೆ. ಅವರ ವಾದನಗಳೆಂದರೆ ಡಮರುಗ ಮತ್ತು ಕೊಳಲು. ಚೌಡಿಕೆಯವರು ಸೌಂದತ್ತಿಯ ಎಲ್ಲಮ್ಮನ ಸಂಪ್ರದಾಯದವರು. ಅವರು ಎರಡು ಬಗೆಯ ಚೌಡಿಕೆಗಳನ್ನು ಬಳಸುತ್ತಾರೆ. ಅವುಗಳಲ್ಲಿ ಒಂದು ಮುಖ್ಯವಾದ್ಯವಾದ ಕರಿಕೆ ವಾದ್ಯ. ಇನ್ನೊಂದು ಶ್ರುತಿ. ಅಸಾದಿಗಳು ಗುಂಪುಗಳಲ್ಲಿ ಅಂತರಘಟ್ಟಮ್ಮನ ಮಹಾಕಾವ್ಯವನ್ನು ಕೊಳವೆಯಂಥ ಚರ್ಮವಾದ್ಯಗಳನ್ನು ಬಾರಿಸಿಕೊಂಡು ಹಾಡುತ್ತಾರೆ. ಎಲ್ಲ ಧಾರ್ಮಿಕ ಗಾಯಕರು ಒಂದು ನಿರ್ದಿಷ್ಟ ಸಂಪ್ರದಾಯದ ಪ್ರಚಾರಕರಾಗಿದ್ದು, ಧಾರ್ಮಿಕ ಸಮಾರಂಭಗಳಲ್ಲಿ ತಮ್ಮ ದೇವರ ಮಹಾಕಾವ್ಯಗಳನ್ನು ಹಾಡುತ್ತಾರೆ.

ಜನಪದ ಮಹಾಕಾವ್ಯಗಳ ಪರಂಪರೆಯನ್ನು ಮುಂದು ನಡೆಸುತ್ತಿರುವ ಲೌಕಿಕ ಗಾಯಕರು ಕರ್ನಾಟಕದ ಉದ್ದಕ್ಕೂ ಕಾಣಿಸಿಕೊಳ್ಳುತ್ತಾರೆ. ಮಧ್ಯ ಕರ್ನಾಟಕದಲ್ಲಿ ಕಾಣಿಸಿಕೊಳ್ಳುವ ಕರಪಾಲದವರು ಗುಮ್ಮಟೆಯನ್ನು ತಮ್ಮ ವಾದ್ಯವನ್ನಾಗಿ ಬಳಸುತ್ತಾರೆ. ಇದು ಮಣ್ಣಿನಿಂದ ಮಾಡಿದ ಮಡಕೆಯಂಥ ವಾದ್ಯವಾಗಿದ್ದು ಅದರ ಒಂದು ಭಾಗವನ್ನು ಚರ್ಮದಿಂದ ಬಿಗಿದು ಮುಚ್ಚಿ ಕಟ್ಟಿರುತ್ತಾರೆ. ಇವರು ತಾಳಗಳನ್ನು ಬಳಸುವುದೂ ಉಂಟು. ಅವರಲ್ಲಿ ಮೂವರು ಒಂದು ಸಾಲಿನಲ್ಲಿ ನಿಂತು, ತಮ್ಮ ವೇಷಗಳನ್ನು ತೊಟ್ಟು ಜನರ ಎದುರು ವಾದ್ಯಗಳನ್ನು ಬಾರಿಸುತ್ತಾ ಹಾಡುತ್ತಾರೆ. ಅವರಲ್ಲಿ ಒಬ್ಬ ಹಾಡುತ್ತಾ, ಕತೆ ಹೇಳುತ್ತಾ ಕುಣಿಯುತ್ತಾನೆ. ಉಳಿದಿಬ್ಬರು ಹಿಮ್ಮೇಳದವರು. ತಂಬೂರಿ ಸಂಪ್ರದಾಯ ಮಧ್ಯ ಕರ್ನಾಟಕದಲ್ಲಿ ಮಾತ್ರ ಕಾಣ ಸಿಗುವಂಥದು. ಅದರಲ್ಲೂ ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಮಾತ್ರ ಅವರು ಇದ್ದಾರೆ. ಅವರು ಹರಿಜನರಾಗಿದ್ದು ಚಿಕ್ಕದಾದ, ಸುಂದರವಾದ ತಂಬೂರಿ ಹಾಗೂ ಗುಮ್ಮಟೆಗಳನ್ನು ತಮ್ಮ ವಾದ್ಯಗಳನ್ನಾಗಿ ಬಳಸುತ್ತಾ, ತಮ್ಮದೇ ಆದ ಸಂಪ್ರದಾಯದ ಹಾಡುಗಳನ್ನು ಹಾಡುತ್ತಾರೆ. ಕಿನ್ನರಿ ಜೋಗಿಗಳಿಗೆ ಅವರು ಬಳಸುವ ಕಿನ್ನರಿಯಿಂದಾಗಿ ಆ ಹೆಸರು ಬಂದಿದೆ. ಅದರ ನಾದ ಬಲು ಮಧುರ. ಈ ಜೋಗಿಗಳು ಸುಂದರವಾದ ವೇಷವನ್ನು ತೊಡುತ್ತಾರೆ. ಉಳಿದ ಗಾಯಕರಿಗೆ ಹೋಲಿಸಿದರಂತೂ ಇವರ ವೇಷ ಆಕರ್ಷಕ. ತನ್ನ ಹಳೆಯ ಪ್ರೇಯಸಿಯನ್ನು ಭೇಟಿಯಾಗಲು ಅರ್ಜುನನು ಕಿನ್ನರಿ ಹಿಡಿದು ಜೋಗಿಯ ವೇಷ ತೊಟ್ಟು ಪರ್ಯಟನೆ ಹೊರಟು ತನ್ನ ಕೆಲಸ ಮುಗಿದ ಮೇಲೆ ಕಿನ್ನರಿ ಹಾಗೂ ಅವನ ವೇಷವನ್ನು ಇಂದಿನ ಜೋಗಿಗಳ ಪೂರ್ವಿಕರಿಗೆ ದಾನವಾಗಿ ಕೊಟ್ಟನಂತೆ. ಅವರ ಮಹಾಕಾವ್ಯಗಳು ಮುಖ್ಯವಾಗಿ ಮಹಾಭಾರತಕ್ಕೆ ಸೇರಿರುತ್ತವೆ. ಅದರಲ್ಲೂ ಅವರು ಹಾಡುವ ಮುಖ್ಯ ಕಥಾನಕವೆಂದರೆ ಅರ್ಜುನ ಜೋಗಿ ಹಾಡು.

ದೊಂಬಿದಾಸರು, ಹೆಳವರು ಹಾಗೂ ತೆಲುಗು ಜಂಗಮರು ಕನ್ನಡಿಗರಲ್ಲ. ಅವರ ಮಾತೃಭಾಷೆ ತೆಲುಗು. ಹಲವಾರು ಶತಮಾನಗಳಿಂದ ಕರ್ನಾಟಕದಲ್ಲೇ ವಾಸ ಮಾಡಿರುವುದರಿಂದ ಜೀವನ ನಿರ್ವಹಣೆಗಾಗಿ ಕನ್ನಡ ಕಥಾನಕಗಳನ್ನು ಹಾಡುವುದನ್ನು ಅಭ್ಯಾಸ ಮಾಡಿಕೊಂಡಿದ್ದಾರೆ. ದೊಂಬಿದಾಸರೂ, ತೆಲುಗು ಜಂಗಮರೂ ಒಂದು ತಂತಿಯುಳ್ಳ ಏಕತಾರಿಯನ್ನು ವಾದ್ಯವನ್ನಾಗಿ ಬಳಸುತ್ತಾರೆ. ಜೊತೆಗೆ ದಮ್ಮಡಿಯನ್ನು ಕೂಡ ಬಾರಿಸುತ್ತಾರೆ. ಹೆಳವರು ದೊಡ್ಡ ಗಂಟೆಗಳನ್ನು ತಮ್ಮ ವಾದ್ಯವನ್ನಾಗಿ ಬಳಸುವರು. ಉತ್ತರ ಕರ್ನಾಟಕದಲ್ಲಿ ಕನ್ನಡ ಮಾತನಾಡುವ ಹೆಳವರೂ ಇದ್ದಾರೆ. ಹೆಳವರು ವರ್ಷ ವರ್ಷವೂ ತಮ್ಮ ಕುಲದವರ ಮನೆ ಮನೆಗಳಿಗೆ ಹೋಗಿ, ಅವರ ತಲೆಮಾರುಗಳ ಕತೆಯನ್ನು ಹಾಡಿ ಧಾನ್ಯ, ಬಟ್ಟೆಬರೆ, ಕರುಗಳು ಮತ್ತಿತರ ಕೊಡುಗೆಗಳನ್ನು ಕುಲದವರಿಂದ ಪಡೆಯುತ್ತಾರೆ.

ಈ ವೃತ್ತಿಗಾಯಕರ ಜೊತೆಗೆ ಅರೆ ವೃತ್ತಿಗಾಯಕರೂ ಕಾಣಸಿಗುತ್ತಾರೆ. ಕಲ್ಗಿ ತುರಾ ಕಲೆಗಾರರು, ಅಂಟಿಗೆ ಪಂಟಿಗೆಯವರು, ಭಾಗವಂತಿಕೆಯವರು ಇಂಥವರು. ಇವರ ಮುಖ್ಯ ವೃತ್ತಿ ಹಾಡುವುದಿಲ್ಲವಾದ್ದರಿಂದ ಅವಕಾಶ ಸಿಕ್ಕಿದಾಗ ಅವರು ಹಾಡುತ್ತಾರೆ. ಅಂಟಿಗೆ ಪಂಟಿಗೆ ಗಾಯಕರು ಹಾಗೂ ಭಾಗವಂತಿಕೆಯವರು ತಮ್ಮ ಹಾಡುಗಾರಿಕೆಯನ್ನು ದೀಪಾವಳಿ ಹಬ್ಬದ ಸಂದರ್ಭಕ್ಕೆ ಮಾತ್ರ ಮೀಸಲಾಗಿರಿಸಿರುತ್ತಾರೆ.

ಜನಪದ ಹಾಡುಗಳು ಹಾಗೂ ಲಾವಣಿಗಳನ್ನು ಹಾಡುವ ಸಾಮಾನ್ಯ ಗಾಯಕರು ಕೃಷಿಕರಲ್ಲಿ ಸಾಮಾನ್ಯವಾಗಿ ಕಾಣಸಿಗುತ್ತಾರೆ. ಇವರಲ್ಲದೆ ಬೆಸ್ತರು, ನೇಯ್ಗೆಯವರು ಮತ್ತಿತರ ವೃತ್ತಿಯವರಲ್ಲೂ ಇಂಥವರು ಇರುವುದುಂಟು. ಇವರು ಎಲ್ಲೆಲ್ಲೂ ಹರಡಿಕೊಂಡಿದ್ದು ಹಾಡುಗಾರಿಕೆಯಲ್ಲಿ ಪರಿಣತರಾಗಿರುತ್ತಾರೆ. ಗಂಡಸರಿಗೆ ಅವರದೇ ಆದ ಹಾಡುಗಳಿರುವಂತೆ ಹೆಂಗಸರಿಗೂ ವಿಶಿಷ್ಟ ವರ್ಗದ ಹಾಡುಗಳಿರುತ್ತವೆ. ಈ ಹಾಡು ಲಾವಣಿಗಳನ್ನು ಹಬ್ಬ ಹರಿದಿನಗಳಲ್ಲಿ, ಹೊಲ ಗದ್ದೆಗಳಲ್ಲಿ ಕೆಲಸದಲ್ಲಿ ತೊಡಗಿರು

ವಾಗ ಇಲ್ಲವೇ ಹಾಡಬೇಕೆಂದು ಮನಸ್ಸಿನ ಲಹರಿ ಬಂದಾಗ ಹಾಡುವುದುಂಟು.

### ಲಾವಣಿಯ ಬಗೆಗಳು

ಕನ್ನಡದ ಮಹಾಕಾವ್ಯ ಹಾಗೂ ಲಾವಣಿಗಳನ್ನು ಹಲವಾರು ಸಂಗ್ರಾಹಕರು ನೂರಾರು ಸಂಖ್ಯೆಯಲ್ಲಿ ಸಂಗ್ರಹಿಸಿದ್ದಾರೆ. ವಿದ್ವಾಂಸರು ಅವುಗಳನ್ನು ಕುರಿತು ಅಧ್ಯಯನ ನಡೆಸಿದ್ದಾರೆ. ಈ ಸಂಗ್ರಹಗಳು ಕರ್ನಾಟಕದ ಎಲ್ಲ ಪ್ರದೇಶಗಳನ್ನೂ ಪ್ರತಿನಿಧಿಸುವಂತಿವೆ. ಉತ್ತರದೇವಿ, ಕೆರೆ ಹೊನ್ನಮ್ಮ, ಗುಣಸಾಗರಿ ಹಾಗೂ ಕಾಳಿಂಗರಾಯ ಮುಂತಾದ ಜನಪ್ರಿಯ ಕತೆಗಳಿವೆ. ಇವುಗಳನ್ನು ಕರ್ನಾಟಕದ ಉದ್ದಕ್ಕೂ ಹಾಡುತ್ತಿದ್ದು ಇವುಗಳಿಗೆ ಹಲವಾರು ಪಾಠಾಂತರಗಳಿವೆ. ಸರ್ಜಪ್ಪನಾಯಕನ ಕತೆ, ಸಿರ್ಸಪ್ಪನಾಯಕನ ಕತೆ, ಮದಕರಿನಾಯಕ, ಕಿತ್ತೂರು ಚನ್ನಮ್ಮ, ಸಂಗೊಳ್ಳಿ ರಾಯಣ್ಣ, ಮತ್ತಿತರ ಐತಿಹಾಸಿಕ ಕಥಾನಕಗಳನ್ನು ಹೇಳುವ ಲಾವಣಿಗಳೂ ಸಾಕಷ್ಟಿವೆ. ಬಾಲನಾಗಮ್ಮ, ಗಜವಂತಿ, ಎರಿದಿವ್ಮಿ, ಕಾಡುಸಿದ್ದಮ್ಮ, ಲೋಹಿಕುಮಾರ-ಬಸವಕುಮಾರ, ಮುಂತಾದ ರೋಚಕ ಕತೆಯ ಲಾವಣಿಗಳಿವೆ. ವಾಸ್ತವ ಘಟನೆಗಳನ್ನು ಆಧರಿಸಿದ ಕಲಿಯುಗದ ಬಲೆ, ಸಂಗ್ಯಾನ ಅಪರಾಧ, ಹಲಗಲಿಯ ಬೇಡರು, ಮುಂತಾದ ಲಾವಣಿಗಳಿವೆ. ಪುರಾಣದ ಕತೆಯನ್ನೊಳಗೊಂಡ ಅರ್ಜುನ ಜೋಗಿಯ ಹಾಡು ಸೀತಾ ವನವಾಸ, ಗಂಗೆ ಗೌರಿ ಜಗಳ, ಕೃಷ್ಣ ಕೊರವಂಜಿ ಲಾವಣಿಗಳಿವೆ. ಕೋಣವೇಗೌಡ ಒಂದು ಹಾಸ್ಯ ಕಥಾನಕ; 'ನುಚ್ಚಾಯ್ತು ನೀರ ಹೋಳಿಯಾಗೆ' ಒಂದು ಪ್ರೇಮಕತೆ. ಶಿವಶರಣರನ್ನು ಕುರಿತು ಹಾಡುವ ದೀರ್ಘ ಕಥಾನಕಗಳೂ ಇವೆ. ಪಿರಿಯಾಪಟ್ಟಣದ ಕಾಳಗವನ್ನು ಕುರಿತ ಒಂದು ಐತಿಹಾಸಿಕ ಲಾವಣಿ ಇದ್ದು ಅದು ಅತ್ಯಂತ ಸುಂದರವಾಗಿದೆ. ಒಂದು ನಿರ್ದಿಷ್ಟ ಸಂಪ್ರದಾಯಕ್ಕೆ ಸೇರಿದ ವೃತ್ತಿಗಾಯಕರು ಹಾಡುವ ಮುಖ್ಯ ಮಹಾಕಾವ್ಯಗಳೂ ಇವೆ. ಇಲ್ಲಿ ಮಲೆಯ ಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪನ ಕಾವ್ಯ, ಯಲ್ಲಮ್ಮನ ಕಾವ್ಯ ಹಾಗೂ ಮೈಲಾರಲಿಂಗನ ಕಾವ್ಯಗಳನ್ನು ಹೆಸರಿಸಬಹುದಾಗಿದೆ. ಇವು ಸಾಕಷ್ಟು ದೀರ್ಘವಾಗಿದ್ದು ಹಲವಾರು ಅಧ್ಯಾಯಗಳನ್ನು ಹೊಂದಿವೆ. ಇವುಗಳನ್ನು ಹಾಡಿ ಮುಗಿಸಲು ಹಲವು ರಾತ್ರಿಗಳೇ ಬೇಕಾಗಬಹುದು.

ಗಾದೆ ಮತ್ತು ಒಡಪುಗಳ ಕ್ಷೇತ್ರದಲ್ಲೂ ವಿದ್ವಾಂಸರು ಹಲವಾರು ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಮೊಗ್ಲಿಂಗ್ ಮತ್ತು ಕಿಟೆಲ್ ಅವರು 19ನೇಯ ಶತಮಾನದಲ್ಲಿಯೇ ಸಾಪಿರಾರು ಗಾದೆಗಳನ್ನು ಸಂಗ್ರಹಿಸಿದರು. ಕಳೆದ 15 ವರ್ಷಗಳಲ್ಲಿ ಇನ್ನಷ್ಟು ಸಂಗ್ರಹ ಕಾರ್ಯ ನಡೆದಿದೆ. ಒಗಟುಗಳ ಮಾದರಿಯಲ್ಲೇ ಇರುವ ಒಡಪುಗಳನ್ನು ಗುರುತಿಸಲಾಗಿದ್ದು, ಉತ್ತರ ಕರ್ನಾಟಕದ ಪ್ರದೇಶದಿಂದಲೇ ಇಂಥ ಒಡಪುಗಳ ನಾಲ್ಕು ಸಂಗ್ರಹಗಳು ಪ್ರಕಟವಾಗಿವೆ. ಹೊಸದಾಗಿ ಮದುವೆಯಾದ ಗಂಡು ಹೆಣ್ಣುಗಳು ಹೆಂಡತಿ ಹಾಗೂ ಗಂಡನ ಹೆಸರನ್ನು ಹೇಳಲು ಚಿಕ್ಕ ಚಿಕ್ಕ ಹಾಡುಗಳನ್ನು ಕಟ್ಟುವರು. ಇವೇ ಒಡಪುಗಳು. ಈ ಒಡಪುಗಳು ಗದ್ಯ ರೂಪದಲ್ಲೂ ಇರಬಹುದು.

### ಜನಪದ ರಂಗಭೂಮಿ

ಕರ್ನಾಟಕ ಜನಪದ ರಂಗಭೂಮಿಗೆ ಉಜ್ವಲ ಪರಂಪರೆಯಿದ್ದು ಇದು ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡಿದೆ. ಎರಡು ಬಗೆಯ ಜನಪದ ರಂಗಭೂಮಿಗಳನ್ನು ಕಾಣುತ್ತೇವೆ. ಯಕ್ಷಗಾನ ಒಂದು ಬಗೆಯಾದರೆ ಇನ್ನೊಂದು ಗೊಂಬೆಯಾಟ. ಕರ್ನಾಟಕದ ಯಕ್ಷಗಾನದಲ್ಲೂ ಎರಡು ಮುಖ್ಯ ಶೈಲಿಗಳಿವೆ. ಅದರಲ್ಲಿ ಪಡುವಲಪಾಯವು ಕರ್ನಾಟಕದ ಎರಡು ಕರಾವಳಿ ಜಿಲ್ಲೆಗಳಲ್ಲಿ, ಅಂದರೆ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಪ್ರಚಲಿತವಿದೆ. ಮೂಡಲಪಾಯ ಉಳಿದ ಹದಿನೇಳು ಜಿಲ್ಲೆಗಳಲ್ಲಿ ಹರಡಿಕೊಂಡಿದೆ. ಯಕ್ಷಗಾನವು ಕರಾವಳಿ ಜಿಲ್ಲೆಗಳಲ್ಲಿ ಮಾತ್ರ ಇದೆ ಎನ್ನುವುದು ಅಜ್ಞಾನದ ಮಾತಾಗುತ್ತದೆ. ಇದು ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ಹರಡಿಕೊಂಡು ಜೀವಂತವಾಗಿವೆ. ಬೇರೆ ಬೇರೆ ಕಡೆ ಇದಕ್ಕೆ ಬೇರೆ ಬೇರೆ ಹೆಸರುಗಳನ್ನಿಟ್ಟು ಕರೆಯಲಾಗಿದೆ: ಬಯಲಾಟ, ದೊಡ್ಡಾಟ, ಬಯಲಾಟ ಯಕ್ಷಗಾನ, ಪಡುವಲಪಾಯ ಯಕ್ಷಗಾನ ಇವೇ ಮುಂತಾದ ಹೆಸರುಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದನ್ನು ಬಯಲಾಟ ಇಲ್ಲವೇ ಯಕ್ಷಗಾನ ಬಯಲಾಟವೆಂದು ಕರೆಯಲಾಗುತ್ತದೆ. ಇತ್ತೀಚಿನ ಪರಿವೀಕ್ಷಣೆಯ ಪ್ರಕಾರ ಮೂಡಲಪಾಯ ಯಕ್ಷಗಾನ ಆಟದಲ್ಲಿ ನಿರತವಾಗಿರುವ 200 ತಂಡಗಳಾದರೂ ಕಂಡುಬಂದಿದ್ದು, ಕರ್ತೃ ಯಾರೆಂಬುದು ಗೊತ್ತಿಲ್ಲದ ಬಯಲಾಟಗಳ ಹಸ್ತಪ್ರತಿಗಳು ಈ ತಂಡಗಳ ಬಳಿ ಇವೆ. ಈ ಕೃತಿಗಳ ಕಾಲ ಕೂಡ ಗೊತ್ತಾಗುವಂತಿಲ್ಲ. ತಂಡಗಳಲ್ಲಿ ಆಟ ಕಲಿಸುವ ಗುರು ಇದ್ದು ಆತನನ್ನು ಭಾಗವತನೆಂದು ಕರೆಯಲಾಗುತ್ತದೆ. ಮೂಡಲಪಾಯದಲ್ಲಿ ಹಾಡುಗಳನ್ನು ಹಾಡುವಾತ ಭಾಗವತ. ಅವನೊಡನೆ ಹಿಮ್ಮೇಳದ ಗಾಯಕರ ತಂಡ ಇರುತ್ತದೆ. ಮಾತು, ಸಂವಾದಗಳನ್ನು ಬರೆಯಲಾಗಿದ್ದು ನಟರು ಆ ಮಾತುಗಳನ್ನು ಕಲಿತು ಆಡುತ್ತಾರೆ. ವಾದ್ಯಗಳೆಂದರೆ ಮದ್ದಳೆ ಇಲ್ಲವೇ ಮೃದಂಗ ಹಾಗೂ ತಾಳಗಳು. ಪಡುವಲ ಪಾಯದಲ್ಲಿ ಬಳಸಲಾಗುವ ಚಂಡೆಯ ಬದಲು ಒಂದು ಅಡಿ ಉದ್ದದ ಕೊಳವೆಯಾಕಾರದ ಮುಖವೀಣೆಯನ್ನು ಇಲ್ಲಿ ಬಳಸಲಾಗುವುದು. ಈ ವಾದ್ಯವು ಆಟಕ್ಕೆ ಕಳೆಕಟ್ಟುವ ವಾತಾವರಣವನ್ನು ನಿರ್ಮಿಸುವುದು. ಮೂಡಲಪಾಯದ ವೇಷ ಭೂಷಣಗಳೂ ಪಡವಲಪಾಯದಲ್ಲಿರುವುದಕ್ಕಿಂತ ಭಿನ್ನವಾಗಿವೆ. ಕಿರೀಟ, ಭುಜಕೀರ್ತಿ, ಎದೆಹಾರ, ಸಡುಪಟ್ಟಿ ಮತ್ತು ವೀರಗಾಸೆಗಳನ್ನು ಮರದಿಂದ

ಮಾಡಿದ್ದು ಹೊಳೆಯುತ್ತಿರುತ್ತವೆ. ಸಾಕಷ್ಟು ಭಾರದ ಆಭರಣಗಳಿವು. ಕೆಲವು ದೃಷ್ಟಿಯಲ್ಲಿ ಮೂಡಲಪಾಯದ ನೃತ್ಯ ಹಾಗೂ ಸಂಗೀತವು ಪಡುವಲಪಾಯಕ್ಕಿಂತ ಬೇರೆಯಾಗಿದೆ. ನೃತ್ಯವು ವೀರ್ಯವತ್ತಾದುದು. ಸಂಗೀತ ಹೆಚ್ಚು ಮಧುರವಾದುದು. ಮೂಡಲಪಾಯದ ಇನ್ನೊಂದು ವಿಶಿಷ್ಟ ಲಕ್ಷಣವೆಂದರೆ ರಾಕ್ಷಸ ಪಾತ್ರಗಳು ಪ್ರೇಕ್ಷಕರ ಮಧ್ಯದಿಂದ ದೀವಟಿಗೆಗಳನ್ನು ಹಿಡಿದುಕೊಂಡು, ಹಳ್ಳಿಯ ತಮಟೆಗಳ ಸದ್ದಿಗೆ ಕುಣಿಯುತ್ತಾ ರಂಗ ಪ್ರವೇಶ ಮಾಡುತ್ತವೆ.

ಉತ್ತರ ಕರ್ನಾಟಕದಲ್ಲಿ ಮೂಡಲಪಾಯವನ್ನು ದೊಡ್ಡಾಟವೆಂದು ಕರೆದು ಅದನ್ನು ಸಣ್ಣಾಟದಿಂದ ಬೇರೆ ಮಾಡಲಾಗಿದೆ. ಈ ಸಣ್ಣಾಟಗಳು ಬಲು ಜನಪ್ರಿಯವಾಗಿವೆ. ಇವು ಉಡುಗೆ, ನೃತ್ಯ, ರಂಗತಂತ್ರ, ಇವೇ ಮೊದಲಾದ ಸಂಗತಿಗಳಲ್ಲಿ ದೊಡ್ಡಾಟಕ್ಕಿಂತ ಭಿನ್ನವಾಗಿರುತ್ತವೆ. ಕತೆಗಳು ಕೂಡ ಬೇರೆ ಬೇರೆಯಾಗಿವೆ. 150 ವರ್ಷಗಳ ಹಿಂದೆ ನಡೆದ ಸಂಗತಿಯೊಂದನ್ನು ಆಧರಿಸಿ ಸಂಗ್ಯಾ-ಬಾಳ್ಯಾ ಎಂಬ ಜಾನಪದ ನಾಟಕವನ್ನು ರಚಿಸಿ ಈಗ ಅದನ್ನು ಉತ್ತರ ಕರ್ನಾಟಕದಲ್ಲಿ ಅಭಿನಯಿಸಲಾಗುತ್ತಿದೆ. ಶ್ರೀ ಕೃಷ್ಣಪಾರಿಜಾತ, ಶರಣರ ಆಟ, ಮತ್ತಿತರರ ಸಣ್ಣಾಟಗಳು ಈ ಪ್ರದೇಶದಲ್ಲಿ ಸಾಕಷ್ಟು ಜನಪ್ರಿಯವಾಗಿವೆ. ಇವುಗಳ ಜೊತೆಗೆ ಸಾಮಗಾನವೆಂಬ ಜನಪದ ನಾಟಕ ಪ್ರಕಾರವೂ ಇದ್ದು ಇದನ್ನು ಉತ್ತರ ಕರ್ನಾಟಕದಲ್ಲಿ ರಾಜಾನಾಟ ಎಂದು ಕರೆಯಲಾಗುತ್ತದೆ.

ಕರ್ನಾಟಕದ ಗೊಂಬೆಯಾಟದಲ್ಲಿ ಎರಡು ಬಗೆಗಳು : ತೊಗಲು ಬೊಂಬೆಯಾಟ ಮತ್ತು ಸೂತ್ರದ ಬೊಂಬೆಯಾಟ. ತೊಗಲು ಬೊಂಬೆಯಾಟವನ್ನು ಕಿಳ್ಳೀಕ್ಯಾತರು ಇಲ್ಲವೇ ಗೊಂಬೆ ರಾಮರು ಎಂಬ ವೃತ್ತಿ ಕಲೆಗಾರರು ಆಡಿಸುತ್ತಾರೆ. ಇವರು ಮಹಾರಾಷ್ಟ್ರ ಇಲ್ಲವೇ ಕೊಂಕಣದಿಂದ ಕರ್ನಾಟಕಕ್ಕೆ ಬಂದವರು. ಮರಾಠಿ (ಅಥವಾ ಕೊಂಕಣಿ)ಯ ಉಪಭಾಷೆಯೊಂದನ್ನು ಅವರು ಆಡುತ್ತಾರೆ. ತಮ್ಮ ಆಟಗಳಿಗೆ ಕನ್ನಡವನ್ನು ಹಾಗೂ ಯಕ್ಷಗಾನದ ಕಥಾನಕಗಳನ್ನು ಬಳಸುತ್ತಾರೆ. ಗೊಂಬೆಗಳನ್ನು ಮಾಡುವುದು ಜಿಂಕೆ ಇಲ್ಲವೇ ಆಡಿನ ಚರ್ಮದಿಂದ. ಇಡೀ ಕುಟುಂಬದ ಎಲ್ಲ ಸದಸ್ಯರು ಆಟದ ಒಂದಲ್ಲ ಒಂದು ಅಂಗದಲ್ಲಿ ಭಾಗವಹಿಸುತ್ತಿರುತ್ತಾರೆ. ಹೆಂಗಸರು ಹಾಗೂ ಮಕ್ಕಳಿಗೂ ಆಟದಲ್ಲಿ ಕೆಲಸ ಉಂಟು. ಮೂರು ಕಡೆ ಮುಚ್ಚಿರುವ ರಂಗದಲ್ಲಿ ಕುಳಿತಿರುತ್ತಾರೆ. ಅವರ ಎದುರು ಬಿಳಿಯ ಪರದೆ ಇರುತ್ತದೆ. ಕಡ್ಡಿಗಳ ನೆರವಿನಿಂದ ಗೊಂಬೆಗಳನ್ನು ಬೇಕೆಂದಂತೆ ಆಡಿಸುತ್ತಾ ಅದರ ನೆರಳು ತೆರೆಯ ಮೇಲೆ ಬೀಳುವಂತೆ ಮಾಡುತ್ತಾರೆ.

ಸೂತ್ರದ ಬೊಂಬೆಯಾಟ ತೊಗಲು ಬೊಂಬೆಯಾಟಕ್ಕಿಂತ ಭಿನ್ನ. ಇಲ್ಲಿ ಗೊಂಬೆಗಳು ತೆರೆಯ ಮುಂದೆ ಕಾಣಿಸಿಕೊಳ್ಳುತ್ತವೆ. ಕಲೆಗಾರರು ತೆರೆಯ ಮೇಲೆ ಹಿಂದಿನಿಂದ ಅವುಗಳನ್ನು ಆಡಿಸುತ್ತಾರೆ. ಈ ಆಟ ಸಾಮಾನ್ಯ ರೂಪದ್ದಾಗಿದ್ದು ಹಳ್ಳಿಯ ಯಾವುದೇ ಜಾತಿ, ಬುಡಕಟ್ಟಿಗೆ ಸೇರಿದ ವ್ಯಕ್ತಿಯಾದರೂ ಇದರಲ್ಲಿ ಭಾಗವಹಿಸಬಹುದು. ಗೊಂಬೆಗಳು ಗುಂಡಾಗಿದ್ದು ಚಲನೆಯುಳ್ಳ ಕೈಕಾಲುಗಳನ್ನು ಹೊಂದಿರುತ್ತವೆ. ಇವುಗಳನ್ನು ದಾರದ ನೆರವಿನಿಂದ ನಿಯಂತ್ರಿಸಲಾಗುತ್ತದೆ. ಗೊಂಬೆಗಳ ಸೂತ್ರಗಳನ್ನು ಕಲೆಗಾರರು ತೆರೆಯ ಹಿಂದೆ ನಿಂತು ಕುಣಿಸುತ್ತಾರೆ. ಅದೇ ವೇಳೆಗೆ ಗೊಂಬೆಗಳೂ ಆ ಹಾಡುಗಳ ಲಯಗಳಿಗೆ ಅನುಗುಣವಾಗಿ ಕುಣಿಯುತ್ತವೆ. ಗೊಂಬೆಯಾಟಗಳು ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರಚಲಿತವಿವೆ. ಈಗ ಈ ಕಲೆ ಜನರ, ಅದರಲ್ಲೂ ಹಳ್ಳಿಗರ ಪ್ರೋತ್ಸಾಹವಿಲ್ಲದೆ ವಿನಾಶದ ಹಾದಿ ಹಿಡಿದಿದೆ.

ಕೋಲೆ ಬಸವನವರು, ಕರಡಿ ಕುಣಿತದವರು, ಕೋತಿ ಕುಣಿಸುವವರು, ಹಾವಾಡಿಗರು, ನೋಡಿಯುವರು ಮತ್ತು ದೊಂಬರು, ಇಂತಹ ಜನಪದ ಮನರಂಜನೆಗಾರರೂ ಇದ್ದಾರೆ. ಇವರು ಜನಪದ ಮನರಂಜಕರಾಗಿ ಮಹತ್ವದ ಪಾತ್ರ ವಹಿಸುತ್ತಾರೆ. ಇವರನ್ನು ಸಂತೆ, ಜಾತ್ರೆಗಳಲ್ಲಿ, ಕೊಯ್ಲಿನ ಕಾಲದಲ್ಲಿ ಹಳ್ಳಿಹಳ್ಳಿಗಳಲ್ಲಿ ನೋಡಬಹುದು. ಇಂಥ ಜನಪದ ಮನರಂಜನೆಕಾರರನ್ನು ಕುರಿತು ಯುವ ಸಂಶೋಧಕರು ಈಗ ಪರಿವೀಕ್ಷಣೆ ನಡೆಸುತ್ತಿದ್ದಾರೆ.

ಕರ್ನಾಟಕದ ಪ್ರದರ್ಶಕ ಕಲೆಗಳಲ್ಲಿ ಜನಪದ ನೃತ್ಯಗಳಿಗೆ ಮಹತ್ವದ ಸ್ಥಾನವಿದೆ. ಭೂತನೃತ್ಯ, ವೀರಗಾಸೆ, ಬೀಸು ಕಂಸಾಳೆ, ಸೋಮನ ಕುಣಿತ, ಪೂಜಾ ಕುಣಿತ, ಮಾರಿ ಕುಣಿತ, ಡೊಳ್ಳು ಕುಣಿತ, ಪಟ ಕುಣಿತ, ಮುಂತಾದ ಧಾರ್ಮಿಕ ಕುಣಿತಗಳಿವೆ. ಕೋಲಾಟ, ಚಿಟ್ಟೀಮೇಳ, ವೇಷಗಾರರ ಕುಣಿತ ಮತ್ತಿತರ ಲೌಕಿಕ ಕುಣಿತಗಳೂ ಇವೆ. ಕರ್ನಾಟಕದ ಪ್ರತೀಯೊಂದು ಭಾಗದಲ್ಲೂ ಇಂಥ ಜನಪದ ನೃತ್ಯಗಳ ಸಂಪ್ರದಾಯಗಳು ಪ್ರಚಲಿತವಾಗಿವೆ. ಇಂಥ ನೃತ್ಯಗಾರರ ನೂರಾರು ತಂಡಗಳನ್ನು ಗುರುತಿಸಲಾಗಿದೆ. ಇವರಿಗೆ ತಮ್ಮ ಕಲೆಯನ್ನು ಪ್ರದರ್ಶಿಸುವ ಅವಕಾಶವನ್ನು ಒದಗಿಸಲಾಗುತ್ತಿದೆ. ಆದರೆ ಈ ಪ್ರೋತ್ಸಾಹ ನೀಡುವ ಕಾರ್ಯ ವ್ಯವಸ್ಥಿತವಾಗಿ ನಡೆಯುತ್ತಿಲ್ಲ. ಬಹುಮಟ್ಟಿನ ಕುಣಿತಗಳಲ್ಲಿ ಹಾಡು ಮತ್ತು ವಾದ್ಯಗಳಿದ್ದೇ ಇರುತ್ತವೆ. ಶೌರ್ಯದ ಕುಣಿತಗಳಾದ ಡೊಳ್ಳು ಕುಣಿತ, ಬೀಸು ಕಂಸಾಳೆ, ಪಟ ಕುಣಿತ ಮತ್ತು ನಂದೀಕೋಲು ಕುಣಿತಗಳು ಶೌರ್ಯ ಹಾಗೂ ಕೌಶಲ್ಯಗಳಿಗೆ ಮಾದರಿಯಾಗಿವೆ.

ನಂಬಿಕೆ ಹಾಗೂ ಆಚರಣೆಗಳೂ ಕೂಡ ಜಾನಪದದ ಮುಖ್ಯ ಅಂಗ. ಹಲವು ವಿದ್ವಾಂಸರು ಈ ಎರಡು ಪ್ರಕಾರಗಳಲ್ಲೂ ಸಾಕಷ್ಟು ಸಂಗ್ರಹಕಾರ್ಯ ನಡೆಸಿ ಸಂಪ್ರಬಂಧಗಳ ಸಂಕಲನಗಳನ್ನು ಹೊರ ತಂದಿದ್ದಾರೆ. ಜನಪದ ವೈದ್ಯ, ಜನಪದ

ಗಣಿತ ಮತ್ತಿತರ ಕುತೂಹಲಕಾರಿ ವಿವರಗಳನ್ನು ಕುರಿತ ಪುಸ್ತಕಗಳನ್ನು ಉತ್ಸಾಹೀ ಕಾರ್ಯಕರ್ತರು ಪ್ರಕಟಿಸಿದ್ದಾರೆ. ಕರ್ನಾಟಕದ ಸಮೃದ್ಧ ಹಾಗೂ ಶ್ರೀಮಂತ ಪರಂಪರೆ ಅದರ ಮಣ್ಣಿನ ಜಾನಪದದಲ್ಲಿ ಪ್ರಕಟಗೊಂಡಿದೆ. ಈ ಜಾನಪದದ ಅಧ್ಯಯನದ ಮೂಲಕ ಮಾತ್ರ ನಾವು ಇಲ್ಲಿನ ಜನರ ಆಶೋತ್ತರಗಳನ್ನು ಕಂಡುಕೊಳ್ಳುವುದು ಸಾಧ್ಯ.

## ಕರ್ನಾಟಕದಲ್ಲಿ ಪತ್ರಿಕೋದ್ಯಮ

ಇತರ ಬಹುಪಾಲು ಭಾಷಾ ರಾಜ್ಯಗಳಂತೆ ಕರ್ನಾಟಕದಲ್ಲೂ ಇಂಗ್ಲೀಷ್‌ನಲ್ಲಿ ಭಾರತದ ಪ್ರಪ್ರಥಮ ವೃತ್ತಪತ್ರಿಕೆ ಆರಂಭವಾದ ಹಲವಾರು ದಶಕಗಳ ಬಳಿಕ ಪತ್ರಿಕೋದ್ಯಮ ನೆಲೆಯೂರಿತು. ಕನ್ನಡ ವೃತ್ತಪತ್ರಿಕೆಯ ಇತಿಹಾಸವೇ ಸುಮಾರು ಒಂದೂವರೆ ಶತಮಾನಕ್ಕೆ ಈಚಿನದು. ಮೊಟ್ಟಮೊದಲನೇಯ ಕನ್ನಡ ವೃತ್ತಪತ್ರಿಕೆ 1848ರ ಜುಲೈ ತಿಂಗಳಲ್ಲಿ ಕರಾವಳಿಯ ಊರಾದ ಮಂಗಳೂರಿನಲ್ಲಿ ಹೊರಬಂದಿತು. ಮಂಗಳೂರ ಸಮಾಚಾರ ಎಂಬ ಅದರ ಹೆಸರು ತುಂಬ ಸಮಂಜಸವಾಗಿತ್ತು. ಬಾಸೆಲ್ ಮಿಷನ್ ಸಂಸ್ಥೆಯ ಹರ್ಮನ್ ಮೊಗ್ಲಿಂಗ್ ಅದರ ಸಂಪಾದಕ ಪ್ರಕಾಶಕರಾಗಿದ್ದರು. ಕಲ್ಲಚ್ಚಿನಲ್ಲಿ ಮುದ್ರಿಸಿದ ಈ ಸಾಹಸದ ಪ್ರಧಾನ ಉದ್ದೇಶ ಕ್ರೈಸ್ತ ಮತದ ಪ್ರಚಾರವಾಗಿದ್ದರೂ, ಅದರಲ್ಲಿ ಸುದ್ದಿಗಳೂ ಇರುತ್ತಿದ್ದವು. ಅನತಿ ಕಾಲದಲ್ಲಿ ಇತರರು ಮೊಗ್ಲಿಂಗ್ ಅವರನ್ನು ಅನುಸರಿಸಿದರು. ಅನೇಕಾನೇಕ ವೃತ್ತಪತ್ರಿಕೆಗಳು-ಅವುಗಳನ್ನು ಹಾಳೆಗಳೆಂದರೂ ಸರಿ, ಕಾಣಿಸಿಕೊಂಡವು. ಒಂದು ವರ್ಷದ ಬಳಿಕ ಆ ಪಕ್ಷ ಪತ್ರಿಕೆಯನ್ನು ಬಳ್ಳಾರಿಗೆ ವರ್ಗಾಯಿಸಲಾಯಿತು. ಅದರ ಹೆಸರು 'ಕನ್ನಡ ಸಮಾಚಾರ' ಎಂದು ಬದಲಾಯಿತು. ಆದರೆ ಅದು ಹೆಚ್ಚು ಕಾಲ ನಡೆಯಲಿಲ್ಲ.

ಈ ರಾಜ್ಯದಲ್ಲಿ ಕನ್ನಡ ಪತ್ರಿಕೆಗಳಲ್ಲದೆ ಇತರ ಭಾಷೆಯವೂ ಇದ್ದವು. ಪ್ರಪ್ರಥಮ ಕನ್ನಡ ವಾರಪತ್ರಿಕೆಯಾದ ಸುಬುದ್ಧಿ ಪ್ರಕಾಶವನ್ನು 1849ರಲ್ಲಿ ಪ್ರಕಟಿಸಿದ ಹೆಗ್ಗಳಿಕೆ ಬೆಳಗಾವಿಯದು. ಅದು ಕಲ್ಲಚ್ಚಿನ ಪತ್ರಿಕೆಯಾಗಿತ್ತು. ಅದರ ಪ್ರಕಾಶಕ, ಸಂಪಾದಕ, ಮತ್ತಿತರ ವಿವರಗಳು ಸಿಕ್ಕಿಲ್ಲ. 'ಕನ್ನಡ ಸಮಾಚಾರ' ಅಲ್ಪಾವಧಿಯಲ್ಲೇ ಕೊನೆಗೊಂಡಿದ್ದರಿಂದ ಮಿಶನರಿಗಳ ಮೇಲೆ ದುಷ್ಪ್ರಭಾವವಾಗಿ ಅವರು ಬಹಳಷ್ಟು ಕಾಲ ವೃತ್ತಪತ್ರಿಕಾ ಪ್ರಕಟಣೆಯ ವ್ಯವಹಾರದಿಂದ ದೂರ ಉಳಿದರು. 1855ರ ವೇಳೆಗೆ ಜ್ಞಾನ ಪ್ರಕಾಶ ಎಂಬ ಇನ್ನೊಂದು ಪತ್ರಿಕೆ ಇತ್ತೆನ್ನಲಾಗಿದೆ. ಅಂತೂ ಕರ್ನಾಟಕದ ಅಗ್ರಮಾನ್ಯ ಪತ್ರಕರ್ತ ಹರ್ಮನ್ ಮೊಗ್ಲಿಂಗ್ ಸುಮ್ಮನಿರಲಿಚ್ಛಿಸದೆ 1857ರಲ್ಲಿ ಮಂಗಳೂರಿನಿಂದ ಕನ್ನಡ ವಾರ್ತಿಕಾ ಅಥವಾ ಕ್ಯಾನರೀಸ್ ಮೆಸೇಜ್ ಎಂಬ ವಾರಪತ್ರಿಕೆಯನ್ನು ಆರಂಭಿಸಿದರು. ಆದರೆ ಈ ಪತ್ರಿಕೆ ಸಹ ಒಂದು ವರ್ಷದೊಳಗೆ ನಿಂತುಹೋಯಿತು.

ಆಗಿನ ಮೈಸೂರು ರಾಜ್ಯದಲ್ಲಿನ ಎಲ್ಲ ಸಾಹಿತ್ಯಿಕ ಹಾಗೂ ರಾಜಕೀಯ ಚಟುವಟಿಕೆಗಳಿಗೆ ಮೈಸೂರು ನಗರ ಕೇಂದ್ರವಾಗಿತ್ತು. ಸಹಜವಾಗಿಯೇ ಅಲ್ಲಿ ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕೆಗಳು ಪುಷ್ಕಳವಾಗಿ ಆರಂಭಗೊಂಡವು. ಅಲ್ಲಿಯ ಪ್ರಥಮ ವಾರಪತ್ರಿಕೆಯಾದ ಮೈಸೂರು ವೃತ್ತಾಂತ ಬೋಧಿನಿ 1859ರ ಜೂನ್ ತಿಂಗಳಿನಲ್ಲಿ ಆರಂಭವಾಗಿ 1864ರವರೆಗೆ ಪ್ರಕಟವಾಯಿತು. ವೃತ್ತಾಂತ ಬೋಧಿನಿಯ ಅಧ್ವರ್ಯು ಭಾಷ್ಯಂ ತಿರುಮಲಾಚಾರ್ಯ ಅವರು ತಮ್ಮ ಮಗ ಭಾಷ್ಯಂ ಭಾಷ್ಯಾಚಾರ್ಯ ಅವರ ನೆರವಿನಿಂದ 1865ರಲ್ಲಿ 'ಕರ್ನಾಟಕ ಪ್ರಕಾಶಿಕಾ' ಎಂಬ ಪಕ್ಷ ಪತ್ರಿಕೆಯನ್ನು ಪ್ರಕಟಿಸಿದರು. ಆ ಪತ್ರಿಕೆ 1868ರಲ್ಲಿ ನಿಂತುಹೋಯಿತಾದರೂ 1873 ರಿಂದ 1896ರವರೆಗೆ ವಾರಪತ್ರಿಕೆಯಾಗಿ ಆಗಾಗ ಕಾಣಿಸಿಕೊಳ್ಳುತ್ತಿತ್ತು.

ಕಾನರೀಸ್ ವರ್ನಾಕ್ಯುಲರ್ ಸೊಸೈಟಿಯ ಆಶ್ರಯದಲ್ಲಿ ವೆಂಕಟ ರಂಗೋ ಕಟ್ಟಿ ಅವರು 1861ರ ನವೆಂಬರ್ ತಿಂಗಳಿನಲ್ಲಿ ಜ್ಞಾನ ಬೋಧಕ ಎಂಬ ಕನ್ನಡ ಪತ್ರಿಕೆಯನ್ನು ಪ್ರಕಟಿಸಿದರು. ಅದನ್ನು ಧಾರವಾಡದಲ್ಲಿ ಮುದ್ರಿಸಿ, ಬೆಳಗಾವಿಯಲ್ಲಿ ಪ್ರಕಟಿಸಲಾಗುತ್ತಿತ್ತು. ಎರಡು ವರ್ಷಗಳೊಳಗೆ—ಅಂದರೆ 1863ರಲ್ಲಿ ಮುದ್ರಣದ ಸ್ಥಳವನ್ನೂ ಬೆಳಗಾವಿಗೆ ಬದಲಾಯಿಸಲಾಯಿತು.

ಬೆಂಗಳೂರಿನಲ್ಲಿ 1862ರಲ್ಲಿ ಅರುಣೋದಯ ಎಂಬ ಮಾಸ ಪತ್ರಿಕೆ ಇತ್ತು. ಅದರ ಸಂಪಾದಕ ಬಿ. ಎಚ್. ರೈಸ್ ಆಗಿದ್ದು ಅವರ ಉದ್ದೇಶ ಕ್ರೈಸ್ತಮತದ ಪ್ರಚಾರವಾಗಿತ್ತು. ಕೆಲವು ವರ್ಷಗಳ ಬಳಿಕ ಅದನ್ನು ನಿಲ್ಲಿಸುವುದು ಅನಿವಾರ್ಯವಾಯಿತು. ಅದನ್ನು 1886ರಲ್ಲಿ ಪುನರಾರಂಭಿಸಲಾಯಿತಾದರೂ ಹೆಚ್ಚು ಕಾಲ ಉಳಿಯಲಿಲ್ಲ. ಅದೇ ವರ್ಷ ವಿಚಿತ್ರ ವರ್ತಮಾನ ಸಂಗ್ರಹ ಅಥವಾ ಇಲ್ಲಸ್ಟ್ರೇಟೆಡ್ ಕ್ಯಾನರೀಸ್ ಜರ್ನಲ್ ಎಂಬ ದ್ವಿಭಾಷಾ ಪಕ್ಷಪತ್ರಿಕೆ ಮಂಗಳೂರಿನಲ್ಲಿ ಆರಂಭವಾಯಿತು. ಕಿಟ್ಟೆಲ್ ಮತ್ತು ಮ್ಯಾಕ್ ಅವರು ಅದರ ಸಂಪಾದಕರುಗಳಾಗಿದ್ದರು. ಬಾಂಬೆ ಕ್ಯಾನರೀಸ್ ವರ್ನಾಕ್ಯುಲರ್ ಸೊಸೈಟಿ ಅದನ್ನು ಪ್ರಕಟಿಸುತ್ತಿತ್ತು. ಒಂದು ನೂರು ವರ್ಷ ಸತತವಾಗಿ ನಡೆದ ಇನ್ನೊಂದು ಮುಖ್ಯ ಪತ್ರಿಕೆಯಾದ ಕನ್ನಡ ಶಾಲಾ ಪತ್ರಿಕೆ 1865ರಲ್ಲಿ ಬೆಳಗಾವಿಯಲ್ಲಿ ಹೊರಟಿತು. ಮೊದಲಲ್ಲಿ ಅದರ ಹೆಸರು ಮಠ ಪತ್ರಿಕೆ ಎಂದಿತ್ತು. 1867ರ ಏಪ್ರಿಲ್‌ನಲ್ಲಿ ಅದು ಶಾಲಾ ಪತ್ರಿಕೆ ಎಂದಾಯಿತು. 1871ರಲ್ಲಿ ಕನ್ನಡ ಶಾಲಾ ಪತ್ರಿಕೆ ಎಂದು ಪುನರ್ನಾಮಕರಣವಾಯಿತು. ಈಗ ಅದನ್ನು 'ಜೀವನ ಶಿಕ್ಷಣ' ಎಂಬ ಹೆಸರಿನಿಂದ ಮುಂದುವರೆಸಲಾಗುತ್ತಿದೆ. ಶಾಲೆಗಳ ಉಪತಪಾಸಣಾಧಿಕಾರಿ ಚನ್ನಬಸಪ್ಪ ಅವರು ಅದರ ಬೆನ್ನೆಲುಬಾಗಿ

ದ್ದರು. ಅವರು ಉತ್ತರ ಕರ್ನಾಟಕದಲ್ಲಿ ಮರಾಠಿಯ ಬದಲಿಗೆ ಕನ್ನಡವನ್ನು ಬಹು ಜನರ ಭಾಷೆಯನ್ನಾಗಿ ಮಾಡುವುದಕ್ಕೆ ಶ್ರಮಿಸಿದರು. ಆ ಪ್ರದೇಶದಲ್ಲಿ ಕೆಲವೊಮ್ಮೆ ಕನ್ನಡಿಗರನ್ನು ಟೀಕಿಸುತ್ತಿದ್ದ ಮರಾಠಿ ಪತ್ರಿಕೆಗಳು ಬಹಳಷ್ಟಿದ್ದವು. ಬೆಳಗಾಮ್ ಸಮಾಚಾರ್ (1864) ಎಂಬ ಮರಾಠಿ ಪತ್ರಿಕೆ ನಿರ್ಭೀತವಾಗಿ ಅಧಿಕಾರಿಗಳ ದುಷ್ಕೃತ್ಯಗಳನ್ನು ಬಯಲಿಗೆಳೆಯುತ್ತಿತ್ತು. ಹಿತೇಚ್ಛು (1870) ಎಂಬ ಇನ್ನೊಂದು ಮರಾಠಿ ನಿಯತಕಾಲಿಕೆ (ಅದು ಕನ್ನಡ ಪತ್ರಿಕೆ ಎಂದು ಊಹಿಸಲಾಗಿತ್ತು) ವಿಜಾಪುರ ಜಿಲ್ಲೆಯಲ್ಲಿ ಸೈನ್ಯದ ಬೀಡಾದ ಕಲಾದಗಿಯಿಂದ ಹೊರಟಿತು. ಇದಕ್ಕೆ ಮುನ್ನ ನ್ಯಾಯ ಸಂಗ್ರಹ ಎಂಬ ಕನ್ನಡದ ಪ್ರಥಮ ನ್ಯಾಯ ಶಾಸ್ತ್ರದ ಪತ್ರಿಕೆಯನ್ನು 1868ರಲ್ಲಿ ಮಂಗಳೂರಲ್ಲಿ ಪ್ರಕಟಿಸಲಾಯಿತು. ಉಭಯ ಗೋಪಾಲಕೃಷ್ಣಯ್ಯ ಅವರು ಅದರ ಸ್ಥಾಪಕರು. ಆದರೆ ಅದು ಒಂದು ವರ್ಷದೊಳಗೇ ನಿಂತು ಹೋಯಿತು.

ಅತಿ ಹಳೆಯ ಪತ್ರಿಕೆಗಳಲ್ಲೊಂದಾದ ಮೈಸೂರು ಗೆಜೆಟ್ ಈಗಲೂ ಅಚ್ಚಾಗುತ್ತಿದೆ. ಈಗಿನ ಗೆಜೆಟ್ (ರಾಜ್ಯಪತ್ರ) ಸರ್ಕಾರಿ ಸೂಚನಾ ಪತ್ರಗಳನ್ನು ಮಾತ್ರ ಪ್ರಕಟಿಸುತ್ತದೆ. ಇಂಗ್ಲೀಷ್ ಮತ್ತು ಕನ್ನಡದ ಈ ಪತ್ರಿಕೆ 1866ರ ಏಪ್ರಿಲ್ 7 ರಂದು ಆರಂಭವಾಯಿತು. ಅದು ಸುದ್ದಿಗಳನ್ನು ಮತ್ತು ಅಭಿಪ್ರಾಯಗಳನ್ನೂ ಅಚ್ಚು ಮಾಡುತ್ತಿತ್ತು. ಎಲ್. ರಿಕೆಟ್ ಅವರು ಅದರ ಸಂಪಾದಕರಾಗಿದ್ದರು. ಬಾಸೆಲ್ ಮಿಶನ್ ಮಂಗಳೂರಿನಲ್ಲಿ ಸಭಾ ಪತ್ರ (1868)ದ ಪ್ರಥಮ ಸಂಚಿಕೆಯನ್ನು ಅಚ್ಚು ಮಾಡಿತು. ಜನರಲ್ಲಿ ಜ್ಞಾನ ಪ್ರಸಾರ ಮಾಡುವ ಏಕೈಕ ಉದ್ದೇಶದಿಂದ ವೆಂಕಟ ರಂಗೋ ಕಟ್ಟಿ ಅವರು ಶೋಧಕ ಎಂಬ ಮಾಸ ಪತ್ರಿಕೆಯನ್ನು ಸ್ಥಾಪಿಸಿದರು. ಅದು 1875ರಿಂದ 1878ರ ತನಕ ನಡೆಯಿತು. ಬೆಳಗಾವಿಯಲ್ಲಿ 1874ರಲ್ಲಿ ಕರ್ನಾಟಕ ಜ್ಞಾನ ಮಂಜರಿ ಎಂಬ ಇನ್ನೊಂದು ಕನ್ನಡ ಮಾಸ ಪತ್ರಿಕೆ ಇತ್ತು. ಧಾರವಾಡ ವೃತ್ತ ಎಂಬ ಮರಾಠಿ ಪತ್ರಿಕೆಯನ್ನು 1873ರ ಸೆಪ್ಟೆಂಬರಿನಲ್ಲಿ ಆರಂಭಿಸಲಾಯಿತು. 'ಹುಬ್ಬಳ್ಳಿ ವೈಭವ' ಮತ್ತು 'ಕರ್ನಾಟಕ ವಾರ್ತಿಕ' ಎಂಬ ಇನ್ನೆರಡು ಮರಾಠಿ ಪತ್ರಿಕೆಗಳು 1879ರಲ್ಲಿ ಹೊರಟವು. ಆ ಪೈಕಿ ಎರಡನೇಯದು ಧಾರವಾಡದಿಂದ ಪ್ರಕಟಗೊಳ್ಳುತ್ತಾ ಒಳ್ಳೆಯ ಪ್ರಸಾರ ಹೊಂದಿದ್ದು ಅಕ್ಷರಸ್ಥರಲ್ಲಿ ಅದು ಹೆಸರುವಾಸಿಯಾಗಿತ್ತು. ಕರ್ನಾಟಕದ ವಿದ್ಯಮಾನಗಳಿಗೆ ಮೀಸಲಾಗಿದ್ದರೂ ಅದರ ಭಾಷಾ ಮಾಧ್ಯಮ ಮರಾಠಿಯಾಗಿತ್ತು. ಶೆಟ್ಟಿ ಕಲ್ಯಾಣಪ್ಪ ಅವರು ಪುಷ್ಪ ಮಾಲಿಕೆ (1880, ಧಾರವಾಡ) ಯ ಸಂಪಾದಕರಾಗಿದ್ದರು.

'ಶೋಧಕ' ಪತ್ರಿಕೆ ಸ್ಥಗಿತಗೊಂಡ ಬಳಿಕ ವೆಂಕಟ ರಂಗೋ ಕಟ್ಟಿ ಅವರು ಧಾರವಾಡದಿಂದ 'ಲೋಕ ಶಿಕ್ಷಕ' (1888) ಆರಂಭಿಸಿದರು. 'ಸುದರ್ಶನ' (1886, ಉಡುಪಿ) ದಕ್ಷಿಣ ಕನ್ನಡ ಮತ್ತು ಹಳೆಯ ಮೈಸೂರು ಪ್ರದೇಶಗಳಲ್ಲಿ ಪ್ರಸಾರ ಹೊಂದಿತ್ತು. ಮೈಸೂರು ರಂಗರಾವ್ ಅವರು 1883ರಲ್ಲಿ ಬೆಂಗಳೂರಿನ ಕೊಡಗು ಚಂದ್ರಿಕೆಯ ಸಂಪಾದಕರಾಗಿದ್ದರು. ಮೈಸೂರಿನ ವೆಸ್ಲಿಯನ್ ಮಿಶನ್ 1887ರಲ್ಲಿ ವೃತ್ತಾಂತ ಪತ್ರಿಕೆಯನ್ನು ಪ್ರಕಟಿಸಿತು. ಅದೇ ವರ್ಷ ಬೆಂಗಳೂರಿನಲ್ಲಿ ಪೋಲೀಸ್ ಗೆಜೆಟ್ ಹೊರಟಿತು. ಅದು 20 ವರ್ಷಗಳಿಗಿಂತ ಹೆಚ್ಚು ಕಾಲ ಪ್ರಸಾರದಲ್ಲಿತ್ತು. ಚಂದ್ರೋದಯ (1883, ಧಾರವಾಡ) ಶನಿವಾರದ ವಾರಪತ್ರಿಕೆ ಎಂದು ಪ್ರಕಟಣೆ ಆರಂಭಿಸಿತು. ಅದು ಆಗಿನ ಸರ್ಕಾರವನ್ನು ತುಂಬ ಟೀಕಿಸುತ್ತಿತ್ತು. ಉತ್ತರ ಕರ್ನಾಟಕದ ಸಣ್ಣ ಊರಾಗಿದ್ದ ಗದುಗಿನಲ್ಲಿ ರಸಿಕ ರಂಜಿನಿ (1884) ಎಂಬ ವಾರ್ತಾ ಪತ್ರಿಕೆ ಇತ್ತು. ಅದು ನಾಲ್ಕು ಪುಟಗಳಲ್ಲಿ ಕಲ್ಲಚ್ಚಿನಿಂದ ಪ್ರಕಟವಾಗುತ್ತಿತ್ತು. ಅದರಲ್ಲಿ ಸರ್ಕಾರಿ ಸೂಚನಾ ಪತ್ರಗಳು ಹೆಚ್ಚಾಗಿ ಇರುತ್ತಿದ್ದವು. ಈ ಊರಿನಲ್ಲಿ 1888ರ ವೇಳೆಗೆ ಸತ್ಯವ್ರತ ಎಂಬ ಇನ್ನೊಂದು ವಾರಪತ್ರಿಕೆ ಇತ್ತು. ಧಾರವಾಡದ ವೃತ್ತಾಂತ ಮಂಜರಿ 1885ರಲ್ಲಿ ಬಿರುಸಿನ ಮಾರಾಟ ಆರಂಭಿಸಿತು. ಅಲ್ಲಿ ಲೋಕ ಬಂಧು ಎಂಬ ಇನ್ನೊಂದು ಪತ್ರಿಕೆ 1889ರಲ್ಲಿ ಮೊದಲಾಯಿತು. ಕರ್ನಾಟಕ ಹಿತೇಚ್ಛು (1886, ಬೆಳಗಾವಿ) ನನ್ನು ಇಲ್ಲಿ ಮರೆಯಲಾಗದು.

ಮೈಸೂರಿನ ವೃದ್ಧ ಪಿತಾಮಹರೆಂದು ಖ್ಯಾತರಾಗಿದ್ದ ಎಂ. ವೆಂಕಟಕೃಷ್ಣಯ್ಯ ಅವರು ಪತ್ರಿಕೋದ್ಯಮದಲ್ಲಿ ನುರಿತಿದ್ದರು. ಅವರ ವೃತ್ತಪತ್ರಿಕೆಗಳಲ್ಲಿನ ಕಾಲಮುಗಳ ಮೂಲಕ ಸಾರ್ವಜನಿಕ ಸೇವೆ ಮಾಡುವ ಅವರ ಧ್ಯೇಯ ಈಡೇರುತ್ತಿತ್ತು. ವೆಂಕಟಕೃಷ್ಣಯ್ಯ ಅವರು ಹಿತಬೋಧಿನಿ (1883)ಯ ಮೂಲಕ ಪತ್ರಿಕೋದ್ಯಮದಲ್ಲಿ ತೊಡಗಿದರು. ಆ ವಾರ್ತಾ ಪತ್ರಿಕೆ ಜನರ ಮನ್ನಣೆಯನ್ನು ಗಳಿಸಿತ್ತು. ಎಂ. ಬಿ. ಶ್ರೀನಿವಾಸ ಅಯ್ಯಂಗಾರ್ ಮತ್ತು ಎಂ. ಎಸ್. ಪುಟ್ಟಣ್ಣ ಅವರು ಅದರ ಪ್ರಥಮ ಸಂಪಾದಕರಾಗಿದ್ದರು. ಅದನ್ನು ಸಿದ್ಧಗೊಳಿಸುವುದಕ್ಕೆ ನೆರವಾಗುತ್ತಿದ್ದ ವೆಂಕಟಕೃಷ್ಣಯ್ಯ ಅವರು 11 ತಿಂಗಳುಗಳ ಬಳಿಕ ಅದರ ಮಾಲಿಕತ್ವ ವಹಿಸಿಕೊಳ್ಳಬೇಕಾಯಿತು. ಸುಧಾರಣಾತ್ಮಕ ವಿಚಾರದವರಾಗಿದ್ದ ಎಂ. ವೆಂಕಟಕೃಷ್ಣಯ್ಯ ಅವರು ಕನ್ನಡ ಪತ್ರಿಕೋದ್ಯಮದ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ್ದಾರೆ. ಅನತಿ ಕಾಲದಲ್ಲೇ 1885ರಲ್ಲಿ ಅವರು ವೃತ್ತಾಂತ ಚಿಂತಾಮಣಿ ಎಂಬ ವಾರಪತ್ರಿಕೆಯನ್ನು ಆರಂಭಿಸಿದರು. ಅದು ಅವರ ವಿಚಾರಧಾರೆಯನ್ನು ಪ್ರತಿಧ್ವನಿಸುತ್ತಿತ್ತು. ಅದರಲ್ಲಿನ ತೀಕ್ಷ್ಣ ಸಂಪಾದಕೀಯ ಟಿಪ್ಪಣಿಗಳು ಓದುಗರಿಗೆ ಪ್ರಿಯವಾಗಿದ್ದವು. ಅವರು ತಮ್ಮ ಲೇಖನಿಯಿಂದ ಆಡಳಿತಗಾರರ ತಪ್ಪುಗಳನ್ನು ಟೀಕಿಸುತ್ತಿದ್ದರು. ಅವರ ಎದೆಗಾರಿಕೆಯನ್ನು ಜನರು ಪ್ರೀತಿಸುತ್ತಿದ್ದರು. ವೆಂಕಟಕೃಷ್ಣಯ್ಯ ಅವರು ಕನ್ನಡ

ಮತ್ತು ಇಂಗ್ಲೀಷಿನಲ್ಲಿ ಮೈಸೂರಿನಿಂದ ಅನೇಕ ಪತ್ರಿಕೆಗಳನ್ನು ಹೊರಡಿಸಿದರು : ಮೈಸೂರು ಹೆರಾಲ್ಡ್ (1886, ಇಂಗ್ಲೀಷ್), ನೆಲ್ಸ್ ಆಫ್ ಮೈಸೂರು (1912, ಇಂಗ್ಲೀಷ್ ಮಾಸಪತ್ರಿಕೆ), ಸಂಪದಭ್ಯುದಯ (ಕನ್ನಡ ದಿನಪತ್ರಿಕೆ, 1912), ನೇಚರ್ ಕ್ಯೂರ್ (ಇಂಗ್ಲೀಷ್ ದಿನಪತ್ರಿಕೆ), ಮತ್ತು ಸಾಧ್ವಿ (1899). ಸಾಧ್ವಿ ಮೊದಲಲ್ಲಿ ಕನ್ನಡ ವಾರಪತ್ರಿಕೆಯಾಗಿತ್ತು. ಆದರೆ ಈಗ ಅದನ್ನು ದಿನಪತ್ರಿಕೆಯಾಗಿ ನಡೆಸಲಾಗುತ್ತಿದೆ. 'ತಾತಯ್ಯ' ಎಂದು ಜನಪ್ರಿಯರಾಗಿದ್ದ ಅವರು ಪತ್ರಿಕೋದ್ಯಮ ಶಿಕ್ಷಣದಲ್ಲಿ ಅಪಾರ ನಂಬಿಕೆ ಹೊಂದಿದ್ದರು. ಅವರು ಎಂ. ಗೋಪಾಲ ಅಯ್ಯಂಗಾರ್ ಮತ್ತು ಎಂ. ಶ್ರೀನಿವಾಸ ಅಯ್ಯಂಗಾರ್ ಎಂಬ ತರುಣ ಸಹೋದರರನ್ನು ತರಬೇತುಗೊಳಿಸಿದರು. ಆ ಇಬ್ಬರು ಬೆಂಗಳೂರಿನಿಂದ ಕನ್ನಡ ನಡೆಗನ್ನಡಿ (1895) ಪ್ರಕಟಿಸಿದರು. ಆ ಪತ್ರಿಕೆ 1908ರ ಪತ್ರಿಕಾ ನಿಬಂಧನೆಗಳಿಗೆ ಬಲಿಯಾಗಿ, ನಿಲ್ಲಿಸಲ್ಪಟ್ಟಿತು. ಮೈಸೂರು ಸರಕಾರವು ಪತ್ರಿಕೆಗಳ ಸ್ವಾತಂತ್ರ್ಯದ ಮೇಲೆ ಮಾಡಿದ ಗದಾಪ್ರಹಾರ ಅದಾಗಿತ್ತು.

ಪ್ರಪ್ರಥಮ ಕನ್ನಡ ದಿನಪತ್ರಿಕೆಯಾದ ಸೂರ್ಯೋದಯ ಪ್ರಕಾಶಿಕ (1888, ಮೈಸೂರು) ಬಿ. ನರಸಿಂಗರಾವ್ ಅವರ ಪ್ರಯತ್ನವಾಗಿತ್ತು. ಆದರೆ ಆರ್ಥಿಕ ಮತ್ತಿತರ ತೊಂದರೆಗಳಿಂದಾಗಿ ಅವರು ಅದನ್ನು ವಾರಪತ್ರಿಕೆಯಾಗಿ ಪರಿವರ್ತಿಸಿದರೆಂದು ತೋರುತ್ತದೆ. ವಿಜಾಪುರದ 'ಕರ್ನಾಟಕ ವೈಭವ' (1892) ಇಂದೂ ನಡೆಯುತ್ತಿರುವ ಅತ್ಯಂತ ಹಳೆಯ ವೃತ್ತ ಪತ್ರಿಕೆಗಳಲ್ಲೊಂದು. ಬಿ. ಶ್ರೀನಿವಾಸ ಅಯ್ಯಂಗಾರ್ ಅವರ ದೇಶಾಭಿಮಾನಿ (1894) ಪತ್ರಿಕಾ ನಿಯಮಾವಳಿಗಳು ರೂಪುಗೊಳ್ಳುವುದಕ್ಕೆ ಕಾರಣವಾಯಿತಲ್ಲದೆ ಅವುಗಳಿಗೆ ಬಲಿಯೂ ಆಯಿತು. ಬ್ಯಾಡಗಿ ಶೇಷಗಿರಿರಾವ್ ಅವರ ಶಿವಮೊಗ್ಗ ವೃತ್ತಾಂತ ಮಂಜರಿ (1898, ಶಿವಮೊಗ್ಗ), ಕನ್ನಡ ಮತ್ತು ಮರಾಠಿ ಭಾಷೆಗಳ ಕಾರವಾರದ ವಿಚಾರಿ ಮತ್ತು ಕರ್ನಾಟಕ ಮಿತ್ರ (1919, ಬೆಳಗಾವಿ) ಇತರ ಉಚ್ಚಮಟ್ಟದ ಪತ್ರಿಕೆಗಳಾಗಿದ್ದವು. ಬಾಸೆಲ್ ಮಿಷನ್ ಸತ್ಯದೀಪಿಕೆ (1896) ಯನ್ನು ಆರಂಭಿಸಿತು. 19ನೇಯ ಶತಮಾನದ ಅಂತ್ಯದಲ್ಲಿ ಈ ಮುಂದೆ ತಿಳಿಸಿದ ವೃತ್ತಪತ್ರಿಕೆಗಳು ಜನ್ಮ ತಳೆದವು: ಕನ್ನಡ ಕೇಸರಿ (1888, ಹುಬ್ಬಳ್ಳಿ), ಕೆ. ಟಿ. ಶ್ರೀನಿವಾಸ ದೇಶಿಕಾಚಾರ್ಯ ಅವರ ವಿವೇಕ ದೀಪಿಕೆ (1894, ಮೈಸೂರು), ಶ್ರೀಕಂಠೇಶ ಗೌಡ ಅವರ ಸುರಭಿ (1896), ಬ್ಯಾಡಗಿ ಶೇಷಗಿರಿರಾವ್ ಅವರ ಜ್ಞಾನೋದಯ (1896, ಶಿವಮೊಗ್ಗ), ವಿದ್ಯಾದಾಯಿನಿ (1897, ಬೆಂಗಳೂರು), ಸುಬೋಧಿನಿ (1871, ಮಂಗಳೂರು) ಮತ್ತು ಸುವಾಸಿನಿ (1900, ಮಂಗಳೂರು).

ಸತ್ಯ ದೀಪಿಕೆ ಮಾಸಪತ್ರಿಕೆಯಾಗಿ ಆರಂಭವಾಗಿ ಅನಂತರ ವಾರಪತ್ರಿಕೆಯಾಯಿತು. ಈ ಪತ್ರಿಕೆಗೆ ಪಂಜೆ ಮಂಗೇಶರಾಯರು ಸಣ್ಣಕಥೆ, ಪ್ರಬಂಧ ಮತ್ತು ಕವನಗಳನ್ನು ಬರೆಯುತ್ತಿದ್ದರು. ಬೆನಗಲ್ ರಾಮರಾವ್ ಅವರು ಸುವಾಸಿನಿಯ ಸಂಪಾದಕರಾಗಿದ್ದರು. ಈ ಉತ್ತಮವಾದ ಸಾಹಿತ್ಯಿಕ ಪತ್ರಿಕೆ ಮೂರು ವರ್ಷ ಮಾತ್ರ ನಡೆಯಿತು. ಉತ್ತರ ಕರ್ನಾಟಕದ ಪ್ರಮುಖ ಪತ್ರಿಕೆಯಾದ ರಾಜಹಂಸ (1891, ಧಾರವಾಡ), ಹಾಗೂ ಕರ್ನಾಟಕ ವೃತ್ತ ಮತ್ತು ಧನಂಜಯ (1892) ದಿಟ್ಟ ಬರವಣಿಗೆಗೆ ಹೆಸರುವಾಸಿಯಾಗಿದ್ದವು. ಕರೋಡಿ ಸುಬ್ಬರಾವ್ ಮತ್ತು ಕಡೇಕಾರು ರಾಜ ಗೋಪಾಲಕೃಷ್ಣರಾವ್ ಅವರ ಶ್ರೀ ಕೃಷ್ಣಸೂಕ್ತಿ (1905, ಉಡುಪಿ), ಸಾಹಿತ್ಯಿಕ ಬರವಣಿಗೆಯಲ್ಲಿ ಅಪ್ರತಿಮವಾಗಿದ್ದು, ಇತರ ಪತ್ರಿಕೆಗಳು ಅದನ್ನು ಹೆಮ್ಮೆಯಿಂದ ಉಲ್ಲೇಖಿಸುತ್ತಿದ್ದವು. ಹುರುಳಿ ಭೀಮರಾವ್, ಆಲೂರು ವೆಂಕಟರಾವ್, ಬಂಟ್ವಾಳ ಸೀತಾರಾಮರಾವ್, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಬೆನಗಲ್ ರಾಮರಾವ್, ಎಚ್. ಚಿದಂಬರಯ್ಯ ಮತ್ತು ಇತರರು ಈ ಪತ್ರಿಕೆಗಾಗಿ ಕವನ, ಪ್ರಬಂಧ ಮತ್ತು ಸಣ್ಣಕತೆಗಳನ್ನು ಬರೆಯುತ್ತಿದ್ದರು.

ಕನ್ನಡಕ್ಕೆ ಅನುವಾದಿಸಿದ ಬಂಗಾಳಿ ಕಾದಂಬರಿಗಳನ್ನು ಅಚ್ಚು ಮಾಡಿ ಪ್ರಕಟಿಸುವುದಕ್ಕಾಗಿ ಬಿ. ವೆಂಕಟಾಚಾರ್ಯ ಅವರು ಅವಕಾಶ ತೋಷಿಣಿ (1906-7, ಮೈಸೂರು) ಯನ್ನು ಸ್ಥಾಪಿಸಿದರು. ಯಜಮಾನ್ ವೀರಬಸಪ್ಪ ಅವರ ಮೈಸೂರು ಸ್ಟಾರ್ (1884, ಮೈಸೂರು) ತನ್ನದೇ ಆದ ಸೈದ್ಧಾಂತಿಕ ಕಾರ್ಯಗಳಿಗಾಗಿ ಶ್ರಮಿಸಿತು. ಅಂತಹದೇ ಉದ್ದೇಶದಿಂದ ಒಕ್ಕಲಿಗರ ಸಂಘವು ಒಕ್ಕಲಿಗರ ಪತ್ರಿಕೆ (1907, ಬೆಂಗಳೂರು) ಎಂಬ ಪತ್ರಿಕೆಯನ್ನು ಹೊರಡಿಸಿತು. ಸಿ. ಲಕ್ಷ್ಮಣ ಗೌಡ ಅವರು ಅದರ ಪ್ರಥಮ ಸಂಪಾದಕರಾಗಿದ್ದರು. ಹರ್ಡೇಕರ ಮಂಜಪ್ಪ ಅವರು ಧನುರ್ಧಾರಿ (1906 ರಿಂದ ಮುಂದೆ) ಎಂಬ ವಾರಪತ್ರಿಕೆಯನ್ನು ಮೊದಲು ದಾವಣಗೆರೆಯಿಂದ ನಡೆಸಿದರು.

ಪ್ರಾಚೀನ ಕಾವ್ಯ ಮತ್ತು ಆಧುನಿಕ ಗದ್ಯ ಇವೆರಡನ್ನೂ ಪ್ರಕಟಿಸಿ, ಅನಂತರ ಪುಸ್ತಕದ ರೂಪದಲ್ಲಿ ಪಡೆಯುವ ಹಾಗೆ ಮಾಡುತ್ತಿದ್ದ ಕೆಲವು ವೃತ್ತಪತ್ರಿಕೆಗಳಿದ್ದವು. ಎಂ. ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ಯ ಅವರ ಕರ್ನಾಟಕ ಕಾವ್ಯ ಮಂಜರಿ (1892, ಮೈಸೂರು) ಅವುಗಳಲ್ಲೊಂದು. ಅದರೊಂದಿಗೆ ಮೈಸೂರಿನಲ್ಲಿದ್ದ ಪದವೀಧರರ ವ್ಯಾಪಾರ ಸಂಘ ಇಂಗ್ಲೀಷಿನಿಂದ ಗ್ರಂಥಗಳು ಮತ್ತು ಪ್ರಾಚೀನ ಹಾಗೂ ಆಧುನಿಕ ಕಾವ್ಯಗಳು ಮತ್ತು ಗದ್ಯವನ್ನು ಪ್ರಕಟಿಸಿ, ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಸೇವೆ ಸಲ್ಲಿಸಿತು. ಕರ್ನಾಟಕ ಗ್ರಂಥ ಮಾಲೆ (1893, ಮೈಸೂರು) ಆ ಸಂಘದ ಮಾಧ್ಯಮವಾಗಿತ್ತು. ಕರ್ನಾಟಕ ಕಾವ್ಯ ಕಲಾನಿಧಿ (1899, ಮೈಸೂರು) ಸಹ ಅದೇ ಕೆಲಸ ಮಾಡಿತು. ಅದಕ್ಕಿಂತ ಹಿಂದೆ ಸಂಸ್ಕೃತ ಸಾಹಿತ್ಯವನ್ನು ಕನ್ನಡ ಓದುಗರಿಗೆ ಪರಿಚಯಿಸು

ವುದಕ್ಕಾಗಿ ಕೋಣಂದೂರು ಶ್ರೀನಿವಾಸ ಅಯ್ಯಂಗಾರ್ ಅವರು ಕಾವ್ಯ ಕಲ್ಪದ್ರುಮಂ (1892, ಮೈಸೂರು) ಆರಂಭಿಸಿದ್ದರು. ಭಾಷಾ ಸೇವಕ (1894, ವಿಜಾಪುರ) ಮತ್ತು ವಾಗ್ಭೂಷಣ (1896, ಧಾರವಾಡ) ದಂತಹ ಪ್ರಕಟಣೆಗಳಿಗೂ ಅಂತಹದೇ ಸಾಹಿತ್ಯಿಕ ಉದ್ದೇಶ ಕಾರಣವಾಗಿತ್ತು. ಶಾಲಾ ಉಪಾಧ್ಯಾಯ ರಾಗಿದ್ದ ಶೇಷಗಿರಿರಾವ್ ಕೊಣ್ಣೂರು, ಹನುಮಂತರಾವ್ ಸಾಗರ ಮತ್ತು ಕೃಷ್ಣರಾವ್ ಹುನಗುಂದ ಅವರು ಭಾಷಾ ಸೇವಕದ ಮೂಲಕ ಕನ್ನಡ ಪತ್ರಿಕೋದ್ಯಮದಲ್ಲಿ ತೊಡಗಿದರು. ಧಾರವಾಡವು ಉತ್ತರ ಕರ್ನಾಟಕದಲ್ಲಿನ ಸಾಹಿತ್ಯಿಕ ಚಟುವಟಿಕೆ ಗಳ ಕೇಂದ್ರವಾಗಿತ್ತು. ಇದರ ಹಿರಿಯ ಸಂಸ್ಥೆಯಾಗಿದ್ದ ಕರ್ನಾಟಕ ವಿದ್ಯಾವರ್ಧಕ ಸಂಘವು ಅನೇಕ ಯುವ ಹಾಗೂ ಪ್ರೌಢಿಮೆಯ ಮಂದಿಯನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪರಿಚಯಿಸಿತು. ವಾಗ್ಭೂಷಣ ಮಾಸಪತ್ರಿಕೆ ಅದರ ವಾಹಿನಿ ಯಾಗಿತ್ತು.

ಕ್ರೈಸ್ತ ಮಿಶನರಿಗಳು ಮತ್ತು ಅವರ ಧಾರ್ಮಿಕ ಪ್ರಚಾರ ವನ್ನು ತಡೆಯುವುದಕ್ಕಾಗಿ ಹಲವಾರು ವೃತ್ತಪತ್ರಿಕೆಗಳನ್ನು ಆರಂಭಿಸಲಾಯಿತು. ವೆಂಕಟಕೃಷ್ಣ ಸರಸ್ವತಿ ಅವರ ಹಿಂದೂ ಮತಾಭಿಮಾನಿ (1888, ಬೆಂಗಳೂರು) ಮತ್ತು ಆರ್. ಎಸ್. ವೆಂಕಟಕೃಷ್ಣಯ್ಯ ಅವರ ವಿವೇಕಾನಂದ (1898, ಮೈಸೂರು) ಇಂತಹ ಎರಡು ಮಾಸಪತ್ರಿಕೆಗಳಾಗಿದ್ದವು. ಬುಧಜನಮನೋ ರಂಜಿನಿ (1890-94), ಕಾವ್ಯಾಂಬುಧಿ (1894) ಮತ್ತು ಜಿನ ಮತಾದರ್ಶ (1898) ಜೈನ ಮತದ ಪ್ರಚಾರಕ್ಕಾಗಿ ಮೀಸಲಾಗಿದ್ದವು. ಪಿ. ವಿ. ರುದ್ರಪ್ಪ ಮತ್ತು ಕರಿಬಸವ ಶಾಸ್ತ್ರಿ ಅವರು 1891ರಲ್ಲಿ ವೀರಶೈವ ಮತ ಪ್ರಕಾಶಿಕೆ ಎಂಬ ಮಾಸ ಪತ್ರಿಕೆಯನ್ನು ಸ್ಥಾಪಿಸಿದರು. ಆಗಿನ ಇತರ ಧಾರ್ಮಿಕ ನಿಯತ ಕಾಲಿಕಗಳೆಂದರೆ ಆರ್ಯಮತ ಸಂಜೀವಿನಿ (1890), ಹಿಂದೂ ಮತ ಪ್ರಕಾಶಿಕಾ (1896) ಮತ್ತು ವೇದಾಂತ ವೇದಾವಳಿ (1898). ಶಿಕ್ಷಣವನ್ನು ಹೆಚ್ಚಿಸುವುದಕ್ಕೆ ಮೀಸಲಾಗಿದ್ದ ಕೆಲವು ಪತ್ರಿಕೆಗಳೂ ಚೆನ್ನಾಗಿ ನಡೆಯುತ್ತಿದ್ದವು. ಸ್ತ್ರೀ ವಿದ್ಯಾಭಿಮಾನಿ, ವಿಜ್ಞಾನ ದೀಪಿಕೆ (1893), ವಿದ್ಯಾರ್ಥಿ ಕೋಶ (1897), ವೆಂಕಟ ಸುಬ್ಬಾಚಾರ್ ಅವರ ಕನ್ನಡ ನುಡಿ (1895) ಮತ್ತು ಎಂ. ಶಾಮರಾವ್ ಅವರ ವಿದ್ಯಾದಾಯಿನಿ (1897) ಅಭೂತ ಪೂರ್ವ ಕೆಲಸ ಮಾಡಿದವು. ಇಪ್ಪತ್ತನೇಯ ಶತಮಾನದ ಆದಿಯ ವರ್ಷಗಳಲ್ಲಿ ಹಲವಾರು ಮಹಿಳಾ ಸಂಪಾದಕಿಯರು ಕನ್ನಡ ಪತ್ರಿಕೋದ್ಯಮದಲ್ಲಿ ಪದಾರ್ಪಣ ಮಾಡಿದರು. ಟಿ. ಸಂಜೀವಮ್ಮ ಅವರು ಭಾಗ್ಯೋದಯ (1914, ಶಿವಮೊಗ್ಗ) ಆರಂಭಿಸಿದರೆ, ನಂಜನಗೂಡು ತಿರುಮಲಮ್ಮ ಅವರು ಕರ್ನಾಟಕ ನಂದಿನಿ (1916, ಮೈಸೂರು) ಪ್ರಕಟಿಸಿದರು. ಭಾರತದ ಸಮಾಜದಲ್ಲಿ ಸ್ತ್ರೀಯರ ಸ್ಥಾನದ ಕುರಿತು ಅವರು ಚರ್ಚಿಸಿದರಲ್ಲದೆ ಅವರ ಪುನರುತ್ಥಾನವಾಗಬೇಕೆಂದು ವಾದಿಸಿದರು. ಇದೇ ಧಾಟಿಯಲ್ಲಿ 1913ರಲ್ಲಿ ಎಂ. ಸೀತಾರಾಮ ಜೋಯಿಸ್ ಅವರ ಆರ್ಯ ಮಹಿಳೆ (ಮೈಸೂರು) ಇತ್ತು. ಕಲ್ಯಾಣಮ್ಮ ಅವರ ಸರಸ್ವತಿ (1921, ಬೆಂಗಳೂರು) ಸಾಂಸ್ಕೃತಿಕ ಸಾಧನೆಗಳಲ್ಲಿ ಅತಿಶಯ ವಾಗಿತ್ತು.

ಇಪ್ಪತ್ತನೇಯ ಶತಮಾನದ ಆರಂಭವು ಹತ್ತೊಂಭತ್ತನೇಯ ಶತಮಾನದ ಅಂತ್ಯ ಕಾಲಕ್ಕಿಂತ ಬದಲಾಗಿರಲಿಲ್ಲ. ಹೀಗಿದ್ದರೂ ರಾಜಕೀಯ ಚಳುವಳಿಗಳಿಂದಾಗಿ ಕನ್ನಡ ಪತ್ರಿಕೋದ್ಯಮದ ಮೇಲ್ಮೈ ಬದಲಾಯಿತು. ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಉದಯ ಮತ್ತು ಭಾರತದ ರಾಜಕೀಯ ರಂಗಕ್ಕೆ ಮಹಾತ್ಮಾ ಗಾಂಧಿ ಅವರ ಪ್ರವೇಶದ ಪರಿಣಾಮ ಈ ಕ್ಷೇತ್ರದ ಮೇಲೆ ಬೀಳದಿರಲಿಲ್ಲ. ಅನೇಕ ಯುವ ಉತ್ಸಾಹಿಗಳಿಗೆ ರಾಷ್ಟ್ರೀಯ ಸ್ವಾತಂತ್ರ್ಯದ ಧ್ಯೇಯವನ್ನು ಬೋಧಿಸುವುದಕ್ಕೆ ವೃತ್ತಪತ್ರಿಕೆಗಳು ಶಕ್ತಿಶಾಲಿ ಮಾಧ್ಯಮವಾಗಿದ್ದವು. ತಿಲಕ್ ಅವರ ಮರಾಠಿ ಕೇಸರಿಯ ಕನ್ನಡ ರೂಪವಾಗಿದ್ದ ಕನ್ನಡ ಕೇಸರಿ (1906, ಹುಬ್ಬಳ್ಳಿ), ಚಂದ್ರೋದಯ (1913, ಧಾರವಾಡ), ಕೆರೂರು ವಾಸುದೇವಾಚಾರ್ಯರ ಶುಭೋದಯ (1917, ಧಾರವಾಡ), ಸಚಿತ್ರ ಭಾರತ (1913, ಧಾರವಾಡ), ಕರ್ಮವೀರ (1921, ಧಾರವಾಡ), ಕನ್ನಡಿಗ (1925, ಬಾಗಲಕೋಟೆ) ಮತ್ತು ವಿಜಯ (1921, ಧಾರವಾಡ), ರಾಷ್ಟ್ರೀಯ ಚಳುವಳಿಗೆ ಗರಿಷ್ಠ ಬೆಂಬಲ ಕೊಟ್ಟವು.

ಖ್ಯಾತ ಕನ್ನಡ ಗ್ರಂಥಕರ್ತರಾಗಿದ್ದ ಡಿ. ವಿ. ಗುಂಡಪ್ಪ ಅವರು ಅತ್ಯುನ್ನತ ಮಟ್ಟದ ಪತ್ರಕರ್ತರೂ ಆಗಿದ್ದರು. ಅವರ ಪತ್ರಿಕೋದ್ಯಮದ ಸಾಹಸಗಳಲ್ಲಿ ಭಾರತಿ (1907, ಬೆಂಗಳೂರು) ಎಂಬ ಕನ್ನಡ ದಿನಪತ್ರಿಕೆ, ಮೈಸೂರು ಟೈಮ್ಸ್ (1909, ಬೆಂಗಳೂರು) ಎಂಬ ಪಾಕ್ಷಿಕ ಪತ್ರಿಕೆ, ಅರ್ಥ ಸಾಧಕ ಪತ್ರಿಕೆ (1915) ಎಂಬ ಕನ್ನಡ ಮಾಸ ಪತ್ರಿಕೆ ಮತ್ತು ಕರ್ನಾಟಕ (1912, ಬೆಂಗಳೂರು) ಎಂಬ ಇಂಗ್ಲೀಷ್ ಪಾಕ್ಷಿಕ ಪತ್ರಿಕೆ ಸೇರಿದ್ದವು. ಪಂಡಿತಪ್ಪ ಚಿಕ್ಕೋಡಿ ಅವರು ಆರಂಭಿಸಿದ ವಿಭಾಕರ (1915-18, ಬೆಳಗಾವಿ) ಎಂಬ ಕನ್ನಡ–ಇಂಗ್ಲೀಷ್ ವಾರಪತ್ರಿಕೆ ಮುಂದುವರಿದ ಸಮುದಾಯಗಳ ವಿರುದ್ಧದ ಚಳುವಳಿಯ ಮುಂಚೂಣಿಯಲ್ಲಿತ್ತು.

ಪಿ. ಆರ್. ರಾಮಯ್ಯ ಅವರ ತಾಯಿನಾಡು (1926, ಮೈಸೂರು) ಕಟ್ಟಾ ರಾಷ್ಟ್ರೀಯವಾದಿ ವೃತ್ತಪತ್ರಿಕೆಯಾಗಿತ್ತು. ಮೊದಲಲ್ಲಿ ಅದು ಮೈಸೂರಿನ ವಾರಪತ್ರಿಕೆಯಾಗಿತ್ತು. ಅನಂತರ ಅದನ್ನು ಬೆಂಗಳೂರಿಗೆ ವರ್ಗಾಯಿಸಿ, ದಿನಪತ್ರಿಕೆಯನ್ನಾಗಿ ಪರಿವರ್ತಿಸಲಾಯಿತು (1928). ಎನ್. ಎಸ್. ಸೀತಾರಾಮ ಶಾಸ್ತ್ರಿ ಅವರು ದೇಶ ಬಂಧು (1931, ಬೆಂಗಳೂರು) ದಿನಪತ್ರಿಕೆ ಮತ್ತು ವಾರಪತ್ರಿಕೆಗಳ ಜನಪ್ರಿಯ ಸಂಪಾದಕರಾಗಿದ್ದರು.

ಎಸ್. ಎಸ್. ವೆಂಕೋಬರಾವ್ ಅವರು ಅವರ ಉತ್ತರಾಧಿಕಾರಿ ಯಾದರು. ಎಂ. ಸೀತಾರಾಮಶಾಸ್ತ್ರಿ ಅವರ ವೀರಕೇಸರಿ (1928, ಬೆಂಗಳೂರು) ಗಮನಾರ್ಹವಾಗಿತ್ತು. ಖಡ್ಗದ ಅಲಗಿನಷ್ಟು ಹರಿತವಾದ ಸಂಪಾದಕೀಯಗಳ ಮೂಲಕ ಅಧಿಕಾರಿ ಗಳ ಕೀಟಲೆ ಮಾಡುವ ಚಾಕಚಕ್ಯತೆಯಿಂದ ತಿ. ತಾ. ಶರ್ಮ ಅವರು ಸ್ವಾತಂತ್ರ್ಯಪ್ರಿಯರನ್ನು ಮುದಗೊಳಿಸುತ್ತಿದ್ದರು. ಅವರ ವಿಶ್ವಕರ್ನಾಟಕ (1925) ಅಧಿಕಾರವರ್ಗಕ್ಕೆ ನಿರಂತರ ತಲೆ ನೋವನ್ನು ಒಡ್ಡುತ್ತಿತ್ತು. ನಾನಾ ಕಾರಣಗಳಿಂದಾಗಿ ತಿ. ತಾ. ಶರ್ಮ ಅವರಿಗೆ ತೊಂದರೆಯಾದಾಗ ಸರಳ ಹಾಗೂ ಪರಿಣಾಮ ಯುತ ಬರಹಕ್ಕೆ ಹೆಸರಾಂತರಾಗಿದ್ದ ಸಿದ್ದವನಹಳ್ಳಿ ಕೃಷ್ಣಶರ್ಮ ಅವರು ಈ ಪತ್ರಿಕೆಯನ್ನು ಕೆಲವು ಕಾಲ ನಡೆಸಿದರು. ಇದೇ ರೀತಿ ಬಿ. ಎನ್. ಗುಪ್ತ ಅವರ ಪ್ರಜಾಮತ (1931, ಮದ್ರಾಸ್) ಒಂದೇ ಸಮನಾಗಿ ಅಧಿಕಾರಿಗಳಿಗೆ ಕಿರುಕುಳ ಕೊಡುತ್ತಿತ್ತು. ಅನಂತರ ಅದನ್ನು ಬೆಂಗಳೂರಿಗೆ ತರಲಾಯಿತಲ್ಲದೆ ಅದರ ಪ್ರಕಟಣೆಗೆ ಅಡ್ಡಿ ಮಾಡಲಾಯಿತು. ಛಲಗಾರರಾದ ಗುಪ್ತ ಅವರು ಅದರ ಪ್ರತಿಗಳನ್ನು ಮುಟ್ಟುಗೋಲು ಹಾಕುವುದನ್ನು ತಪ್ಪಿಸಲು ಪ್ರಜಾಮಿತ್ರ ಎಂಬ ಹೆಸರಿನಲ್ಲಿ ಕೆಲಕಾಲ ಹುಬ್ಬಳ್ಳಿ ಯಿಂದ ಅದನ್ನು ಪ್ರಕಟಿಸಿದರು. ಈಗ ಪ್ರಜಾಮತದ ಮಾಲೀಕತ್ವ ಬದಲಾಗಿದ್ದು ಅದು ಅತ್ಯಧಿಕ ಪ್ರಸಾರದ ಕನ್ನಡ ವಾರಪತ್ರಿಕೆ ಗಳಲ್ಲಿ ಒಂದಾಗಿದೆ. ಗುಪ್ತ ಅವರು ಜನವಾಣಿ (1934) ಎಂಬ ಸಾಯಂಕಾಲದ ಕನ್ನಡದ ದಿನಪತ್ರಿಕೆಯನ್ನೂ ಆರಂಭಿಸಿದರು. ಸ್ವದೇಶಾಭಿಮಾನಿ (1907, ಮಂಗಳೂರು), ಹಾಗೂ ಬೆಂಗ ಳೂರಿನ ನಡೆಗನ್ನಡಿ ಮತ್ತು ವಿಕಟವಿನೋದಿನಿ ಉಲ್ಲೇಖಿಸಬೇಕಾದ ಪತ್ರಿಕೆಗಳು.

ರಾಷ್ಟ್ರೀಯ ಚಳವಳಿ ವ್ಯಾಪಿಸುತ್ತಿದ್ದಂತೆ ಹಲವಾರು ಸಾಹಿತ್ಯಿಕ ಪತ್ರಿಕೆಗಳು ಓದುಗರ ಮನ ಸೆಳೆದವು. ಆ ಪೈಕಿ ಮುಖ್ಯವಾದವೆಂದರೆ ಆಲೂರು ವೆಂಕಟರಾವ್ ಅವರ ಜಯ ಕರ್ನಾಟಕ (1922, ಧಾರವಾಡ), ಗಳಗನಾಥ ಅವರ ಸದ್ಬೋಧ ಚಂದ್ರಿಕೆ (1912, ಆಗಡಿ), ಜಯಂತಿ (1938, ಧಾರವಾಡ), ಪ್ರಬುದ್ಧ ಕರ್ನಾಟಕ (1932, ಬೆಂಗಳೂರು) ಮತ್ತು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (1916, ಬೆಂಗಳೂರು), ಜೀವನ (1940, ಧಾರವಾಡ), ಕನ್ನಡ ಸಾಹಿತ್ಯಿಕ ಪತ್ರಿಕೋದ್ಯಮದಲ್ಲಿ ವಿಶಿಷ್ಟಸ್ಥಾನ ಹೊಂದಿವೆ. ಮುಂದೆ ಅದನ್ನು ಬೆಂಗಳೂರಿಗೆ ತರಲಾಯಿಲ್ಲದೆ ಖ್ಯಾತ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅದರ ಸಂಪಾದರಾದರು.

ಸಂಯುಕ್ತ ಕರ್ನಾಟಕ ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಮುಂಚೂಣಿಯಲ್ಲಿತ್ತು. ಅದನ್ನು ಉತ್ಸಾಹಿ ಜನರ ಗುಂಪು 1929ರಲ್ಲಿ ಬೆಳಗಾವಿಯಲ್ಲಿ ವಾರಪತ್ರಿಕೆಯಾಗಿ ಆರಂಭಿ ಸಿತ್ತು. ಅತ್ಯಲ್ಪ ಕಾಲದಲ್ಲಿ ಅದರ ಜವಾಬ್ದಾರಿಯನ್ನು ಕಬ್ಬೂರು ಮಧ್ವರಾವ್, ರಾಮರಾವ್ ಹುಕ್ಕೇರಿಕರ್ ಮತ್ತು ರಂಗನಾಥ ರಾಮಚಂದ್ರ ದಿವಾಕರ್ ಅವರಿಗೆ ವರ್ಗಾಯಿಸಲಾಯಿತು. ಆ ಪತ್ರಿಕೆಯನ್ನು ಹುಬ್ಬಳ್ಳಿಗೆ ಸ್ಥಳಾಂತರಿಸಲಾಯಿತಲ್ಲದೆ 1933ರಲ್ಲಿ ಅದು ದಿನಪತ್ರಿಕೆಯಾಯಿತು. ದಿವಾಕರ್ ಅವರ ಲೋಕ ಶಿಕ್ಷಣ ವಿಶ್ವಸ್ಥ ನಿಧಿ ಅದರ ಆಡಳಿತವನ್ನು ವಹಿಸಿಕೊಂಡಿತು. 1959ರಲ್ಲಿ ಅದರ ಬೆಂಗಳೂರು ಆವೃತ್ತಿಯನ್ನು ಹೊರಡಿಸಲಾಯಿತು. ಕರ್ಮವೀರ ವಾರಪತ್ರಿಕೆಯನ್ನೂ ಇದೇ ಸಂಸ್ಥೆ ವಹಿಸಿಕೊಂಡಿತು. ಹನುಮಂತರಾವ್ ಮೊಹರೆ ಅವರು ಸಂಯುಕ್ತ ಕರ್ನಾಟಕದ ಏಳಿಗೆಗಾಗಿ ಅವಿಶ್ರಾಂತವಾಗಿ ದುಡಿದರು. ಮುಂದಿನ ವರ್ಷಗಳಲ್ಲಿ ಈ ದಿನಪತ್ರಿಕೆಯ ಮಾಲಿಕತ್ವ ಪದೇ ಪದೇ ಬದಲಾಗಿದೆ. ಆರ್. ಆರ್. ದಿವಾಕರ್ ಅವರ ನವಶಕ್ತಿ (1923, ಧಾರವಾಡ) ಇಂಗ್ಲೀಷ್ ವಾರಪತ್ರಿಕೆಯಾಗಿತ್ತು.

ಉತ್ತರ ಕನ್ನಡ ಜಿಲ್ಲೆಯ ಕಾನಡಾ ವೃತ್ತ (1916, ಕುಮಟ) ಅಚ್ಚಳಿಯದ ಹೆಸರು ಗಳಿಸಿದೆ. ಪಂಡಿತ ತಾರಾನಾಥ ಅವರು ಪ್ರೇಮ ಎಂಬ ಮಾಸಪತ್ರಿಕೆಯನ್ನು ಅಚ್ಚಿಸುತ್ತಿದ್ದರು. ಕರ್ನಾಟಕ ಸುಂದರಿ ಪಿ. ಎಸ್. ದೇಸಾಯಿ ಅವರ ಸಂಪಾದಕತ್ವ ದಲ್ಲಿ ಹಾವೇರಿಯಿಂದ ಹೊರಟಿತು. ನಾ. ಸು. ಹರ್ಡೀಕರ್ ಅವರ ಕನ್ನಡ ಮಾಸಪತ್ರಿಕೆ ಹುಬ್ಬಳ್ಳಿ ಗೆಜೆಟ್ (1939, ಹುಬ್ಬಳ್ಳಿ) ನಾಗರಿಕ ಸೌಲಭ್ಯಗಳ ಬಗ್ಗೆ ಅಧಿಕಾರಿಗಳ ಅಸಡ್ಡೆ ಯನ್ನು ಬಯಲುಗೊಳಿಸುತ್ತಿತ್ತು. ಅನಂತರ ಅವರು ಹುಬ್ಬಳ್ಳಿ ಯಿಂದ ಜೈ ಹಿಂದ್ ಎಂಬ ಕನ್ನಡ ವಾರಪತ್ರಿಕೆಯನ್ನು ಹೊರಡಿಸಿದರು.

ದಕ್ಷಿಣ ಕನ್ನಡ ಜಿಲ್ಲೆ ಕರ್ನಾಟಕದಲ್ಲಿ ವೃತ್ತಪತ್ರಿಕೆಗಳ ಪ್ರಗತಿಗಾಗಿ ಪ್ರಮುಖ ಪಾತ್ರ ವಹಿಸಿದೆ. ಕಂಠೀರವ (1919, ಮಂಗಳೂರು), ರಾಷ್ಟ್ರ ಬಂಧು (1928, ಮಂಗಳೂರು), ಭಕ್ತಿ ಸಂದೇಶ (1918, ಮಂಗಳೂರು), ನವಯುಗ (1921, ಮಂಗಳೂರು), ಉದಯ ಭಾರತ (1927, ಮಂಗಳೂರು), ಬಡವರ ಬಂಧು (1932, ಮಂಗಳೂರು), ಭಾರತಿ (1933, ಮೂಲ್ಕಿ) ಮತ್ತು ಕರ್ನಾಟಕ ಕೇಸರಿ (1928, ಮಂಗಳೂರು) ಅಲ್ಲಿಯ ಮುಖ್ಯ ಪತ್ರಿಕೆಗಳಾಗಿದ್ದವು. 1923ರಷ್ಟು ಹಿಂದೆಯೇ ಪ್ರಖ್ಯಾತ ಲೇಖಕ ಕೋಟ ಶಿವರಾಮ ಕಾರಂತ ಅವರು ಪುತ್ತೂರಿನಿಂದ ವಸಂತ ಎಂಬ ಮಾಸಪತ್ರಿಕೆಯನ್ನು ಹೊರಡಿಸಿ ದ್ದರು. ನವಶಕ್ತಿ (1938, ಉಡುಪಿ), ಧುರೀಣ (1935) ಮತ್ತು ಅಂತರಂಗ (1938, ಉಡುಪಿ) ಕೆಲವು ಪ್ರಮುಖ ವಾರ ಪತ್ರಿಕೆಗಳಾಗಿದ್ದವು. ನವಭಾರತ (1941, ಮಂಗಳೂರು) ಮತ್ತು ಉದಯವಾಣಿ (1970, ಮಣಿಪಾಲ) ಈ ಜಿಲ್ಲೆಯ ಪ್ರಮುಖ ದಿನಪತ್ರಿಕೆಗಳಾಗಿವೆ. ಉದಯವಾಣಿಯ ಪ್ರಕಾಶಕರು ಈಚೆಗೆ 'ತರಂಗ' (1983) ಎಂಬ ಸಚಿತ್ರ ವಾರಪತ್ರಿಕೆಯನ್ನು ಆರಂಭಿಸಿದ್ದಾರೆ.

ಸಣ್ಣ ಕತೆಗಳನ್ನು ಪ್ರಕಟಿಸುವುದಕ್ಕಾಗಿಯೇ ಕತೆಗಾರ (1933) ಮತ್ತು ಕಥಾ ಕುಂಜ ಎಂಬ ಎರಡು ಪತ್ರಿಕೆಗಳು ಬೆಂಗಳೂರಿನಿಂದ ಹೊರಟವು. ನಗುವನಂದ ಮತ್ತು ಕೊರವಂಜಿ (1942) ಹಾಸ್ಯ ಪತ್ರಿಕೆಗಳಾಗಿದ್ದವು. ದೇವುಡು ನರಸಿಂಹ ಶಾಸ್ತ್ರಿ ಅವರು ನಮ್ಮ ಪುಸ್ತಕ (1936) ಪತ್ರಿಕೆಯ ಸಂಪಾದಕರಾಗಿದ್ದರು. ಜಿ. ಎಸ್. ಕೃಷ್ಣರಾವ್ ಅವರು ಕಥಾ ಚಂದ್ರಿಕೆಯನ್ನು (1942) ಪ್ರಕಟಿಸಿದರು. ಬಿ. ಎನ್. ಗುಪ್ತ ಅವರ ಜನಪ್ರಗತಿ (1951, ಬೆಂಗಳೂರು) ವಾಚಕರಿಗೆ ಸಾಪ್ತಾಹಿಕ ಸಂಭ್ರಮವೆನಿಸಿತ್ತು. ಪಾಟೀಲ ಪುಟ್ಟಪ್ಪ ಅವರು ಪ್ರಪಂಚ (1954, ಹುಬ್ಬಳ್ಳಿ) ವಾರಪತ್ರಿಕೆ ಮತ್ತು ವಿಶ್ವ ವಾಣಿ (1959) ದಿನಪತ್ರಿಕೆಯನ್ನು ಅತ್ಯುತ್ಸಾಹದಿಂದ ನಡೆಸುತ್ತಿದ್ದಾರೆ. ಕಸ್ತೂರಿ (1956, ಹುಬ್ಬಳ್ಳಿ) ಮತ್ತು ತುಷಾರ (1973, ಮಣಿಪಾಲ) ಕನ್ನಡದ ಜನಪ್ರಿಯ ಮಾಸಿಕ ಡೈಜೆಸ್ಟ್ ಆಗಿವೆ.

ಪ್ರಿಂಟರ್ಸ್ (ಪ್ರೈವೇಟ್) ಲಿಮಿಟೆಡ್ ಎಂಬ ಬೆಂಗಳೂರಿನ ಜಾಯಿಂಟ್ ಸ್ಟಾಕ್ ಕಂಪೆನಿ 1948ರಲ್ಲಿ ಪ್ರಜಾವಾಣಿ (ಕನ್ನಡ) ಮತ್ತು ಡೆಕ್ಕನ್ ಹೆರಾಲ್ಡ್ (ಇಂಗ್ಲೀಷ್) ಎಂಬ ದಿನಪತ್ರಿಕೆಗಳನ್ನಾರಂಭಿಸಿ ಚರಿತ್ರಾರ್ಹವಾಯಿತು. ಈಗ ಈ ಸಂಸ್ಥೆ ಪ್ರಸಾರ ಮತ್ತು ವರ್ಚಸ್ಸಿನಲ್ಲಿ ಎಲ್ಲ ವೃತ್ತಪತ್ರಿಕಾ ಸಂಸ್ಥೆಗಳ ಮುಂಚೂಣಿಯಲ್ಲಿದೆ. ಸುಧಾ ಎಂಬ ಕನ್ನಡ ವಾರಪತ್ರಿಕೆ ಮತ್ತು ಮಯೂರ ಎಂಬ ಕನ್ನಡ ಮಾಸಪತ್ರಿಕೆ ಅದರ ಇತರ ಪ್ರಕಟಣೆಗಳಾಗಿವೆ. ಕನ್ನಡ ಪ್ರಭ ಎಂಬ ಇನ್ನೊಂದು ಕನ್ನಡ ದಿನಪತ್ರಿಕೆ ಎಕ್ಸ್‌ಪ್ರೆಸ್ ತಂಡದ ವೃತ್ತಪತ್ರಿಕಾ ಸರಣಿಗೆ ಸೇರಿದೆ. ಅದರ ಪ್ರಥಮ ಸಂಚಿಕೆ 1967ನೇಯ ಸೆಪ್ಟೆಂಬರ್ 4ರಂದು ಹೊರಬಂದಿತು. ಎನ್. ಎಸ್. ಸೀತಾರಾಮ ಶಾಸ್ತ್ರಿ ಅವರು ಅದರ ಮೊದಲ ಸಂಪಾದಕರಾಗಿದ್ದರು. ಲೋಕವಾಣಿ (1974, ಬೆಂಗಳೂರು), ವಿಶಾಲ ಕರ್ನಾಟಕ (1947, ಹುಬ್ಬಳ್ಳಿ), ಜನಮಿತ್ರ (1967, ಹಾಸನ ಮತ್ತು 1969, ಚಿಕ್ಕಮಗಳೂರು) ಹಾಗೂ ನಾಡೋಜ (1973ರಲ್ಲಿ ವಾರಪತ್ರಿಕೆಯಾಗಿ ಆರಂಭಗೊಂಡು 1974ರಲ್ಲಿ ದಿನಪತ್ರಿಕೆಯಾಯಿತು; ಬೆಳಗಾವಿ) ಕನ್ನಡ ಪತ್ರಿಕೋದ್ಯಮದಲ್ಲಿ ಹೆಸರುವಾಸಿಯಾಗಿವೆ. ಇತರ ಗಮನಾರ್ಹ ದಿನಪತ್ರಿಕೆಗಳು ಇವು: ಸಮಾಜ (1961, ಹುಬ್ಬಳ್ಳಿ), ನಾಗರಿಕ (1954, ಗದಗ), ಕನ್ನಡಮ್ಮ (1974, ಬೆಳಗಾವಿ), ಲೋಕದರ್ಶನ (1961, ಬೆಳಗಾವಿ), ಗಿರಿವಾರ್ತಾ (1962, ಚಿಕ್ಕಮಗಳೂರು), ನಗರವಾಣಿ (1973, ದಾವಣಗೆರೆ), ಜನತಾವಾಣಿ (1974, ದಾವಣಗೆರೆ), ಶಕ್ತಿ (1957, ಮಡಿಕೇರಿ), ರವಿ (1965, ಮಡಿಕೇರಿ), ನವಶಕ್ತಿ (1973, ಮಡಿಕೇರಿ), ಹಿತವಾಣಿ (1967, ವಿರಾಜಪೇಟೆ) ಮತ್ತು ರಾಷ್ಟ್ರಬಂಧು (ವಿರಾಜಪೇಟೆ). ಸಂಧ್ಯಾ ದೀಪ (1954) ಮಂಗಳೂರಿನ ಸಂಜೆಯ ಪತ್ರಿಕೆಯಾಗಿದ್ದು, ಈಗ ನಿಂತಿದೆ.

ಮೈಸೂರು ನಗರದಲ್ಲಿ ಅತೀ ಹೆಚ್ಚು ಸಂಖ್ಯೆಯ ಸಂಜೆಯ ದಿನಪತ್ರಿಕೆಗಳಿವೆಯಲ್ಲದೆ ಇತರ ನಿಯತಕಾಲಿಕೆಗಳು ಮತ್ತು ಪತ್ರಿಕೆಗಳೂ ಇವೆ. ಮೈಸೂರು ಪತ್ರಿಕೆ (1941), ವರ್ತಮಾನ (1947), ವಿಶ್ವದೂತ (1962), ಅಶೋಕ (1964), ರಾಜ್ಯಧರ್ಮ (1967), ಸಂಸ್ಕೃತ ದೈನಿಕವಾದ ಸುಧರ್ಮ (1970), ಅರುಣ (1947), ವಿಜಯ (1947), ಇಂಡಿಪೆಂಡೆಂಟ್ (1967) ಮತ್ತು ಸಂಕ್ರಾಂತಿ ಆ ಪೈಕಿ ಸೇರಿವೆ. ಸಾಧ್ವಿ (1936) ಪತ್ರಿಕೆಗೆ ಡಾ|| ಆ್ಯನೀ ಬೆಸೆಂಟ್ ಅವರಿಂದ ಪತ್ರಿಕೋದ್ಯಮದಲ್ಲಿ ತರಬೇತಿ ಪಡೆದ ಅಗರಂ ರಂಗಯ್ಯ ಅವರು ಸಂಪಾದಕರಾಗಿದ್ದಾರೆ.

ಕರ್ನಾಟಕದಲ್ಲಿ ಅತೀ ಹೆಚ್ಚು ಸಂಖ್ಯೆಯ ಉರ್ದು ಪತ್ರಿಕೆಗಳು ಕಾಣಿಸಿಕೊಂಡಿವೆ. ಪ್ರಪ್ರಥಮ ಉರ್ದು ವೃತ್ತಪತ್ರಿಕೆ 1794ರಲ್ಲಿ ವಾರಪತ್ರಿಕೆಯಾಗಿ ಆರಂಭವಾಯಿತೆನ್ನಲಾಗಿದೆ. ಅದೇ ಫೌಜಿ ಅಖ್‌ಬಾರ್ (ಶ್ರೀರಂಗಪಟ್ಟಣದಿಂದ). ಆನಂತರದ ವಾರಪತ್ರಿಕೆ ಎಂದರೆ ಖಾಸಿಂ-ಉಲ್-ಅಖ್‌ಬಾರ್ (1861, ಬೆಂಗಳೂರು). ಬೆಂಗಳೂರ್ ಅಖ್‌ಬಾರ್ (1876) ಪಾಕ್ಷಿಕ ಪತ್ರಿಕೆಯಾಗಿತ್ತು. ಬಳಿಕ ಇನ್ನೂ ಅನೇಕ ವಾರಪತ್ರಿಕೆಗಳೂ, ಮಾಸಪತ್ರಿಕೆಗಳೂ ಕಾಣಿಸಿಕೊಂಡವು. 'ಸಾಲಾರ್' ದಿನಪತ್ರಿಕೆ 1964ರಲ್ಲಿ ಪ್ರಕಟಣೆ ಆರಂಭಿಸಿತು. ಮೈಸೂರು ನಗರದಲ್ಲೂ ಕೆಲವು ಉರ್ದು ಪತ್ರಿಕೆಗಳಿವೆ.

ಎಚ್. ಕೆ. ವೀರಣ್ಣ ಗೌಡ ಅವರ ಚಿತ್ರಗುಪ್ತ (1928, ಬೆಂಗಳೂರು), ಮತ್ತು ಬೆಂಗಳೂರಿನಿಂದ ಹೊರಟ ಪಿ. ಶೇಷಪ್ಪ ಅವರ ಕಿಡಿ ಕನ್ನಡ ಪತ್ರಿಕೋದ್ಯಮದಲ್ಲಿ ವಿಶಿಷ್ಟ ಸ್ಥಾನ ಗಳಿಸಿವೆ. ಇತರ ಉಲ್ಲೇಖನಾರ್ಹ ಕನ್ನಡ ವಾರಪತ್ರಿಕೆಗಳೆಂದರೆ ಪೌರವಾಣಿ (1966, ಮಂಡ್ಯ), ಜನ ಜೀವಾಳ (1948, ಬೆಳಗಾವಿ) ಮಲೆನಾಡು ವಾರ್ತಾ (1954, ಶಿವಮೊಗ್ಗ), ಶರಾವತಿ (1963, ಶಿವಮೊಗ್ಗ), ತುಮಕೂರು ಟೈಮ್ಸ್ (1971, ತುಮಕೂರು), ನವ ಸಂದೇಶ (1935, ಬಳ್ಳಾರಿ ಮತ್ತು ಸಮಾಜ ವಿಕಾಸ (1969, ರಾಯಚೂರು) ಇವುಗಳೊಂದಿಗೆ ಈ ರಾಜ್ಯದಲ್ಲಿ ಅನೇಕ ಭಾಷೆಗಳಲ್ಲಿ ಪ್ರಕಟವಾಗುತ್ತಿರುವ ಹಲವಾರು ಇತರ ವಾರಪತ್ರಿಕೆಗಳು ಮತ್ತು ದಿನಪತ್ರಿಕೆಗಳಿವೆ. ಕೆಲವು ದೀರ್ಘ ಕಾಲ ಬಾಳಿದರೆ ಉಳಿದವು ಬೇಗ ಅಳಿದಿವೆ. ದಿ ಹಿಂದೂ, ಇಂಡಿಯನ್ ಎಕ್ಸ್‌ಪ್ರೆಸ್ (ಇಂಗ್ಲಿಷ್ ದಿನಪತ್ರಿಕೆಗಳು), ಮತ್ತು ತಮಿಳು ದಿನಪತ್ರಿಕೆ ದಿನ ತಂತಿಯ ಬೆಂಗಳೂರು ಆವೃತ್ತಿಗಳಿವೆ. ಕೊನೆಯದಾಗಿ ಕರ್ನಾಟಕದಲ್ಲಿನ ವೃತ್ತಪತ್ರಿಕೆಗಳಿಗೆ ಸಾಕಷ್ಟು ದೀರ್ಘ ಇತಿಹಾಸವಿದ್ದು ಅವುಗಳ ಗಾಥೆ ಅನೇಕ ಏರುಪೇರುಗಳಿಂದ ಕೂಡಿದೆ. ಅದು ನಿಜವಾಗಿಯೂ ರೋಮಾಂಚಕಾರಿ ಬೆಳವಣಿಗೆ.

ಕರ್ನಾಟಕದ ರಾಜಕೀಯ, ಸಾಮಾಜಿಕ ಹಾಗೂ ಸಾಹಿತ್ಯಿಕ ಜೀವನದಲ್ಲಿ ವೃತ್ತಪತ್ರಿಕೆಗಳು, ಪ್ರತ್ಯೇಕ ಪಾತ್ರ

ವಹಿಸಿವೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಅವುಗಳ ಪಾತ್ರ ಗಣನೀಯ. ಬಹಳಷ್ಟು ಪತ್ರಿಕೆಗಳು ಏಕೀಕರಣ ಚಳವಳಿಯನ್ನು ಮನಸಾರೆ ಬೆಂಬಲಿಸಿದುವಲ್ಲದೆ ಕರ್ನಾಟಕದಲ್ಲಿ ಭಾವನಾತ್ಮಕ ಐಕ್ಯತೆಯನ್ನು ರೂಪಿಸಿದವು. ನಾಟಕ, ಸಂಗೀತ, ಸಿನೆಮ, ಕಲೆ, ಕ್ರೀಡೆ ಮತ್ತು ಸಾಹಿತ್ಯದಂತಹ ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವು ಕೊಟ್ಟ ಪ್ರೋತ್ಸಾಹ ಮತ್ತು ಬೆಂಬಲ ಶ್ಲಾಘನೀಯ. ಹೊಸ ಹಾಗೂ ಪ್ರಗತಿ ಪರ ವಿಚಾರಗಳನ್ನು ಪ್ರಚುರಪಡಿಸುವುದರಲ್ಲಿ ಅವು ಪ್ರಮುಖ ಪಾತ್ರ ವಹಿಸಿವೆ.

**ಕರ್ನಾಟಕದಲ್ಲಿ 1978ರಿಂದ 1980ರ ವರೆಗೆ ಭಾಷಾವಾರು ಹಾಗೂ ಕಾಲಾವಧಿ ಪ್ರಕಾರ ನಿಯತಕಾಲಿಕೆಗಳ ಹಂಚಿಕೆಯ ಪಟ್ಟಿ**

| ಭಾಷೆ | 1978 | | | 1979 | | | 1980 | | |
|---|---|---|---|---|---|---|---|---|---|
| | ದಿನ | ವಾರ | ಇತರ* | ದಿನ | ವಾರ | ಇತರ | ದಿನ | ವಾರ | ಇತರ |
| ಇಂಗ್ಲಿಷ್ | 5 | 13 | 106 | 6 | 12 | 89 | 8 | 15 | 101 |
| ಕನ್ನಡ | 57 | 123 | 230 | 59 | 134 | 250 | 67 | 146 | 309 |
| ತಮಿಳು | 1 | 3 | 10 | 1 | 3 | 10 | 1 | 3 | 12 |
| ತೆಲುಗು | 1 | 1 | 2 | 1 | 1 | 3 | 1 | 1 | 2 |
| ಮಲೆಯಾಳಿ | 2 | 1 | 2 | 2 | 1 | 2 | — | 1 | 2 |
| ಹಿಂದಿ | 1 | 2 | 7 | 1 | 2 | 7 | 1 | 2 | 7 |
| ಉರ್ದು | 8 | 15 | 11 | 8 | 16 | 12 | 8 | 17 | 15 |
| ಮರಾಠಿ | 2 | 6 | 1 | 2 | 6 | 1 | 2 | 6 | 1 |
| ಕೊಂಕಣಿ | — | 1 | 7 | — | 1 | 3 | — | 1 | 6 |
| ತುಳು | — | — | 2 | — | — | 2 | — | — | 2 |
| ಸಂಸ್ಕೃತ | 1 | — | — | 1 | — | — | 1 | — | — |
| ದ್ವಿಭಾಷೆ (ಇಂಗ್ಲಿಷ್ ಮತ್ತು ಕನ್ನಡ) | 2 | 14 | 46 | 2 | 14 | 25 | 2 | 15 | 47 |
| ಬಹುಭಾಷೆ** | — | 2 | 11 | — | 2 | 8 | — | 2 | 11 |

* ಇದರಲ್ಲಿ ಪಾಕ್ಷಿಕ ಪತ್ರಿಕೆಗಳು, ಮಾಸಪತ್ರಿಕೆ, ತ್ರೈಮಾಸಿಕ, ಅರ್ಧ ವಾರ್ಷಿಕ ಹಾಗೂ ವಾರ್ಷಿಕಗಳು ಸೇರಿವೆ.

** (ಕನ್ನಡದೊಂದಿಗೆ ಇಂಗ್ಲಿಷ್ ಅಥವಾ ತಮಿಳು ಅಥವಾ ತೆಲುಗು ಅಥವಾ ಹಿಂದಿ ಅಥವಾ ಉರ್ದು ಅಥವಾ ಮರಾಠಿ).

ಆಧಾರ: ಪ್ರೆಸ್ ಇನ್ ಇಂಡಿಯಾ (1978, 1979 ಮತ್ತು 1980), ಸಮಾಚಾರ ಮತ್ತು ಪ್ರಸಾರ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ.

## 1843–1956 ರ ವರೆಗಿನ ಕನ್ನಡ ಪತ್ರಿಕಾ ಪಟ್ಟಿ

| ಹೆಸರು | ಅವಧಿ | ಸ್ಥಳಗಳು | ತಾರೀಖು | ಸಂಪಾದಕ ಅಥವಾ ಪ್ರಕಾಶಕರು* |
|---|---|---|---|---|
| 1 | 2 | 3 | 4 | 5 |
| ಅಂತರಂಗ | ವಾರ | ಉಡುಪಿ | 1938 | ಆರ್ ಹೊನ್ನಯ್ಯ ಶೆಟ್ಟಿ |
| ಅದ್ವೈತ ಪ್ರಬೋಧಿನೀ | ಮಾಸ | | 1935 | |
| ಅಧ್ಯಾತ್ಮ ಪ್ರಕಾಶ | ವಾರ | ಹೊಳೆನರಸೀಪುರ | 1930 | ವೈ ನರಸಪ್ಪ |
| ಅಭ್ಯುದಯ | ವಾರ | | 1951 | |
| ಅಮರವಾಣಿ | ಮಾಸ | ಯಾದಗಿರಿ | 1949-69 | ಬಿ ಎಂ ವಿರೇಶ್ವರ ಶಾಸ್ತ್ರಿ |
| ಅರ್ಥಸಾಧಕ ಪತ್ರಿಕೆ | ವಾ.-ಮಾ.-ಪಕ್ಷ | ಬೆಂಗಳೂರು | 1914-33 | ದಿವಾನ್ ಅನಂದರಾವ್ ಹನುಮಂತಗೌಡ |
| ಅರುಣ | ಮಾಸ | ಬೆಂಗಳೂರು | 1947 | ಎಸ್ ಆರ್ ಭಟ್ |
| ಅರುಣ | ಮಾ-ವಾ | ಮಂಗಳೂರು | 1947 | ಯು ಎನ್ ಶ್ರೀನಿವಾಸ ಭಟ್ |
| ಅರುಣ | ದಿನ | ಮೈಸೂರು ಬೆಂಗಳೂರು | 1947-79 | ಎಚ್ ಕೆ ಕುಮಾರಸ್ವಾಮಿ |
| ಅರುಣೋದಯ | ವಾರ | ಬೆಳಗಾವಿ | 1936 | ಪಿ ವೆಂಕಟೇಶ ಎಸ್ ಪಂಡಿತ |
| ಅರುಣೋದಯ (ಕ/ಸಂ) | ಮಾಸ | ಬೆಂಗಳೂರು | 1862-68 | ಬಿ ಎಚ್ ರೈಸ್ |
| ಅಲಂಕಾರ | ಪಕ್ಷ | ಬೆಂಗಳೂರು | 1956 | ಎಂ ಎನ್ ಸೋಮಶೇಖರ |
| ಅವಕಾಶ ತೋಷಿಣೀ | ಮಾಸ | ಮೈಸೂರು | 1906-25 | ಬಿ ವೆಂಕಟಾಚಾರ್ಯ |
| ಆಕಾಶವಾಣಿ ಪ್ರಸಾರಿಕಾ | ಮಾಸ | ಮೈಸೂರು | 1958 | ಪ್ರಕಾಶಕ: ಮೈಸೂರು ಸರಕಾರ |
| ಆತ್ಮವಿಚಾರ | ಮಾಸ | ಮೈಸೂರು | 1949-56 | ಎಂ ಎಲ್ ನಾಗಣ್ಣ |
| ಆತ್ಮಾನಂದ (ಕ/ಸಂ) | ಮಾ | ಮೈಸೂರು | 1910 | |
| ಆತ್ಮಾಹ್ಲಾದಿನೀ | ಮಾ | ಚಿಕ್ಕಮಗಳೂರು | 1922 | ಜೆ ಅಪ್ರಮೇಯ ಅಯ್ಯಂಗಾರ್ |
| ಆತ್ಮ ಜ್ಞಾನೋದಯ | ವಾ | ಮೈಸೂರು | 1936 | ವೇದಾಂತ ಶಂಕರ ಶಾಸ್ತ್ರಿ |
| ಆಧುನಿಕ ಭಾರತ | ಪ | ರಾಣಿಬೆನ್ನೂರು | 1938 | |
| ಆನಂದ | ಮಾ-ಪ | ಬಂಟ್ವಾಳ | 1916 | ಎಂ ಎನ್ ಕಾಮತ್ |
| ಆನಂದ | ತ್ರೈಮಾ | ಬೆಂಗಳೂರು | | ಎಸ್ ಸಂಪತ್ತ್ರಯ್ಯಂಗಾರ್ |
| ಆನಂದ | ಮಾ | ಮೈಸೂರು | 1934 | ಆರ್ ಕೆ ಲಕ್ಕೂರ |
| ಆನಂದ ಚಂದ್ರಿಕೆ | ಮಾ | ಕೆಲಮಂಗಲಂ | 1916-32 | |
| ಆನಂದ ಚಂದ್ರಿಕೆ (ಕ-ಸಂ) | ಮಾ | ಬೆಂಗಳೂರು | 1906 | |
| ಆನಂದ ಜ್ಯೋತಿ | ವಾ/ಪ/ಮಾ | ಬೆಂಗಳೂರು | 1948-50 | ಡಾ॥ ಎಂ ಶಿವರಾಮ್ |

*ಪ್ರಕಾಶಕ ಎಂದು ಹೇಳದಿದ್ದ ಸ್ಥಳದಲ್ಲಿ ಸಂಪಾದಕರನ್ನು ಮಾತ್ರ ಉಲ್ಲೇಖಿಸಿದೆ.

| 1 | 2 | 3 | 4 | 5 |
|---|---|---|---|---|
| ಆಯುರ್ವೇದ | ಮಾ | ಹಿರಿಯಡ್ಕ | 1948-60 | ಕೆ ಆರ್ ಪುರಾಣಿಕ |
| ಆಯುರ್ವೇದ | ಮಾ | ಮೈಸೂರು | 1949-52 | ಡಾ॥ ಎಂ ಎಸ್ ನಾಗೇಶ್ವರ ರಾವ್ |
| ಆಯುರ್ವೇದ | ಮಾ | ತೀರ್ಥಹಳ್ಳಿ | 1925-27 | ಪಿ ಸೂರ್ಯನಾರಾಯಣ ಶಾಸ್ತ್ರಿ |
| ಆಯುರ್ವೇದ ಕಲಾಭೂಷಣ | ಮಾ | ಚಿತ್ರದುರ್ಗ | 1937 | ಎಚ್ ಎಂ ಪಂಡಿತ್ |
| ಆಯುರ್ವೇದ ಮಾರ್ತಾಂಡ | ಮಾ | ಶಿವಮೊಗ್ಗ | 1935 | ಡಾ॥ ವೈ ಪಿ ಎನ್ ಪಂಡಿತ್ |
| ಆಯುರ್ವೇದ ವಿದ್ಯಾ | ಮಾ | ಹುಬ್ಬಳ್ಳಿ | | |
| ಆರ್ಯ ಕಂಕಣ | ಮಾ | | 1939 | |
| ಆರ್ಯಧರ್ಮ ಪ್ರಕಾಶ | ಮಾ | ನಡಹಳ್ಳಿ (ಶಿವ ಜಿ॥) | 1914-18 | ನಡಹಳ್ಳಿ ವೆಂಕಪ್ಪ |
| ಆರ್ಯಧರ್ಮ ಸಂಗ್ರಹ | ಮಾ | ಚಾಮರಾಜನಗರ | 1937 | ಸಿ ವೆಂಕಾಶಾಸ್ತ್ರಿ |
| ಆರ್ಯ ಧರ್ಮೋಜ್ಜೀವಿನೀ | ಮಾ | ಮೈಸೂರು | 1905 | ಎ ಮಹಾದೇವ ಶಾಸ್ತ್ರಿ |
| ಆರ್ಯ ಮತ ಸಂಜೀವಿನಿ | ಮಾ | ಮೈಸೂರು | 1889-99 | ಎಂ ಆರ್ ಅಯ್ಯಂಗಾರ್ |
| ಆರ್ಯ ಮಹಿಳಾ | ಮಾ | ಶೃಂಗೇರಿ | | ವಿ ಸೀತಾರಾಮಶಾಸ್ತ್ರಿ |
| ಆರ್ಯ ವಾಣಿ | ದಿ | ತುಮಕೂರು | 1952-53 | ಆರ್ ಎಸ್ ಆರಾಧ್ಯ |
| ಆರ್ಯ ವಿದ್ಯಾ | ಮಾ | ಹುಬ್ಬಳ್ಳಿ | 1938-54 | ದಾಮೋದರ ಅ ಹಲಸೀಕರ್ |
| ಆರ್ಯ ವಿದ್ಯಾಸಂಜೀವಿನೀ (ಕ/ತೆ/ಇ) | ಮಾ | ಮೇಲುಕೋಟೆ | 1887 | ರಾಮಸ್ವಾಮಿ ಶೆಲ್ವಯ್ಯಂಗಾರ್ |
| ಆರಾಧ್ಯ ಧರ್ಮೋಜ್ಜೀವಿನೀ | ಮಾ | ಮೈಸೂರು | 1920-32 | ಕೆ ಸಿ ನಂಜುಂಡಾರಾಧ್ಯ |
| ಆರೋಗ್ಯ ಭಾಗ್ಯ | ಮಾ | | 1927 | ಕೆ ಶಿವರಾಮದಾಸ್ |
| ಆರೋಗ್ಯ ಮಂದಿರ | ಮಾ | ಹುಬ್ಬಳ್ಳಿ | 1939-42 | ಭಾಸ್ಕರ ಎಸ್ ಗೋರೆ |
| ಆಶಾ ಜ್ಯೋತಿ | ಮಾ | ಮೂಲ್ಕಿ (ದ.ಕ.) | 1954 | ಎಂ ಎನ್ ಕಾಮತ |
| ಆಹಾರ ವಿಜ್ಞಾನ | ತ್ರೈ ದ್ವೈ ಮಾ | ಮೈಸೂರು | 1956 | ಪ್ರಕಾಶಕ: ಕೇ ಆ ಸಂ ಸಂಸ್ಥೆ |
| ಇಂಡಿಯಾ ಮತ್ತು ಅನ್ಯ ದೇಶದ ವಾರ್ತಿಕ (ಕ/ಇ) | ಪ | ಬೆಂಗಳೂರು | 1862 | ಫಾಕಿಟಿಲ್ ಜೆ ಮ್ಯಾಕ್ |
| ಉದಯ | ದಿ ವಾ ಪ | ವಿಜಾಪುರ, ಕಲ್ಬುರ್ಗಿ | 1930 | ಸ ಚ ಮಿರ್ಜಿ |
| ಉದಯ (ಇ/ಕ) | ವಾ | ಕೊಡಗು | 1936-38 | ಬಿ ಎಂ ಕಾರ್ಯಪ್ಪ |
| ಉದಯ ಚಂದ್ರ | ವಾ | ಮಂಗಳೂರು (ದ.ಕ.) | 1907-50 | ಎಸ್ ಎಸ್ ಒಡೆಯರ<br>ಡಾ॥ ಎಚ್ ಎಫ್ ಒಡೆಯರ |
| ಉದಯ ಭಾರತ | ತ್ರೈ ಮಾ ಪ | ಉಡುಪಿ ಮಂಗಳೂರು | 1927 | ಆಲೆವೂರು ಶೇಷಪ್ಪಯ್ಯ |
| ಉಷಾ | ಮಾ | ಬೆಂಗಳೂರು | 1942-68 | ಬಸವರಾಜ ಕಟ್ಟೀಮನಿ |
| ಎಕ್ಸಾಮಿನರ್ | ಮಾ | ಚಿಕ್ಕಬಳ್ಳಾಪುರ | 1916-46 | ನಾರಾಯಣರಾವ್ |
| ಎಸ್. ಎಸ್. ಸಿ. ಮ್ಯಾಗಜಿನ್ | ಮಾ | ಧಾರವಾಡ | 1952 | ಬಿ ಎನ್ ಹುದ್ದಾರ |

| 1 | 2 | 3 | 4 | 5 |
|---|---|---|---|---|
| ಎಳೆಯರ ಗೆಳೆಯ | ಮಾ | ಮೈಸೂರು | | ಸ್ವಾಮಿ ಜೋಸೆಫ್‌ರಾಮು |
| ಒಕ್ಕಲಿಗರ ಪತ್ರಿಕೆ | ವಾ | ಬೆಂಗಳೂರು | 1907 | ಪ್ರಕಾ: ಒಕ್ಕಲಿಗರ ಸಂಘ |
| ಒಕ್ಕಲಿಗರ ಬಂಧು | ವಾ | ಮೈಸೂರು | 1911 | ಎಸ್ ವೆಂಕಟರಾಮಯ್ಯ |
| ಒಕ್ಕಲಿಗರೂ ಒಕ್ಕಲುತನವೂ | ಮಾ | ಧಾರವಾಡ | 1911 | ದೇಸಾಯಿ, ಹೊನ್ನಾಪುರಮಠ |
| ಕಂಕಣ | ಮಾ | ಹೊಸೂರು | 1949 | ಎಂ ಬಿ ಬೂದಿಹಾಳಮಠ |
| ಕಂಠೀರವ | ಮಾ | ಮಂಗಳೂರು | 1919-36 | ಬೋಳಾರ ವಿಠಲರಾವ್ |
| ಕಂದ | ಮಾ | ಉಡುಪಿ | 1957 | ಮೈಲಾರಯ್ಯ |
| ಕಣಿಯರ ಪತ್ರಿಕೆ | — | ಚಾಮರಾಜನಗರ | 1927 | ಟಿ ರಾಮಚಂದ್ರರಾವ್ |
| ಕಥಾಂಜಲಿ | ಮಾ | ಬೆಂಗಳೂರು | 1929-30 | ಅ ನ ಕೃಷ್ಣರಾಯರು |
| ಕಥಾಂಜಲಿ | ಮಾ | ಹುಬ್ಬಳ್ಳಿ | 1938-39 | ಪಟ್ಟಾಭಿರಾಮ |
| ಕಥಾಂಜಲಿ | ಮಾ | ಮಂಗಳೂರು | 1930 | |
| ಕಥಾಕುಂಜ | ಮಾ | ಬೆಳಗಾವಿ | 1934-36 | ಪ್ಯಾಟಿ ಶಾಮರಾವ್ |
| ಕಥಾ ಕುಸುಮಾವಲಿ | ಮಾ | ಹುಬ್ಬಳ್ಳಿ | 1938 | ಜಿ ಎಸ್ ಕುಲಕರ್ಣಿ |
| ಕಥಾ ಚಂದ್ರಿಕೆ | ಮಾ | ಬೆಂಗಳೂರು | 1942-43 | ಜಿ ಎಸ್ ಕೃಷ್ಣರಾವ್, ರಾಮ್‌ರಾವ್ ಜೋಶಿ |
| ಕಥಾ ಪ್ರೇಮಿ | ಮಾ | ಬೆಂಗಳೂರು | 1938 | ಬಿ ಎಸ್ ಶರ್ಮಾ |
| ಕಥಾ ಲೋಕ | ಮಾ | ಮೈಸೂರು | 1925 | |
| ಕಥಾವಳಿ | ಮಾ | ಬೆಂಗಳೂರು | 1938-56 | ಓಲೇಟಿ ಗುಪ್ತಾ |
| ಕಥಾ ಸಂಗ್ರಹ | ಮಾ | ಹಿಚಕಡ (ಉ.ಕ.) | 1953-56 | ವಾಮನ ಅನಂತ ಹೊದಿಕೆ |
| ಕನಕ | ಮಾ | ಬೆಂಗಳೂರು | | ಹೊಯ್ಸಳ |
| ಕನ್ನಡ ಕಂದ | ಮಾ | ಧಾರವಾಡ | 1937 | ಕರವೀರ ಮುಮ್ಮಿಗಟ್ಟಿ ಮೋ. ಮುಲ್ಲಾರಿ |
| ಕನ್ನಡ ಕೇಸರಿ | ಮಾ | ಮಂಗಳೂರು | 1885 | ಮಂಜೇಶ್ವರ ಅನಂತ ರಾವ್ |
| ಕನ್ನಡ ಕೇಸರಿ | ವಾ | ಹುಬ್ಬಳ್ಳಿ | 1908-09 | ಕೆರೂರು ವಾಸುದೇವಾಚಾರ್ಯ, |
| ಕನ್ನಡ ಕ್ರೈಸ್ತ ಬಂಧು | ಪ/ಮಾ | ಮಂಗಳೂರು | 1932 | ಎಂ ಬೆಂರ್ಝರ್ ಕರುಣಾಕರ ಕೆ ಆರ್ |
| ಕನ್ನಡ ಕೋಕಿಲೆ | ಪ/ಮಾ | ನರೇಗಲ್ | 1938 | ಶ್ರೀ ಗುರುಪಾದ ಮಠ |
| ಕನ್ನಡ ಕೋಗಿಲೆ | ಪ/ಮಾ | ಮಂಗಳೂರು | 1916-19 | ಪಿ ಭೋಜರಾಜ ಮುಳಿಯ ತಿಮ್ಮಪ್ಪಯ್ಯ |
| ಕನ್ನಡ ಜ್ಯೋತಿ (ಕ/ಇಂ) | ಮಾ | ಬೆಂಗಳೂರು | 1933 | ಬಿ ಸತ್ಯನಾರಾಯಣ ಶರ್ಮಾ ಕೆ ಎಸ್ ನರಸಿಂಹಯ್ಯ |
| ಕನ್ನಡ ಜ್ಯೋತಿ | ವಾ/ಮಾ | ಬೆಂಗಳೂರು | 1937-38 | ಬಿ ಎಲ್ ಮುನಿಯಪ್ಪ |

| 1 | 2 | 3 | 4 | 5 |
|---|---|---|---|---|
| ಕನ್ನಡ ಜ್ಞಾನಬೋಧಕ | ವಾ ಮಾ | ಧಾರವಾಡ, ಬೆಳಗಾವಿ | 1862-63 | ವೆಂಕಟ ರಂಗೋ ಕಟ್ಟಿ |
| ಕನ್ನಡ ನಡೆಗನ್ನಡಿ | ವಾ ಮಾ | ಬೆಂಗಳೂರು | 1895-1908 | ಎಂ ಗೋಪಾಲಯ್ಯಂಗಾರ್ ಎಂ ಶ್ರೀನಿವಾಸಯ್ಯಂಗಾರ್ |
| ಕನ್ನಡ ನಿಬಂಧಮಾಲೆ | ವಾ ಮಾ | ಬಾಗಲಕೋಟೆ | 1919 | |
| ಕನ್ನಡ ನುಡಿ | ವಾ ಮಾ ಪ | ಬೆಂಗಳೂರು | 1938 | ಎಂ ಎಸ್ ಸುಬ್ರಹ್ಮಣ್ಯಶಾಸ್ತ್ರಿ ಅ ನ ಕೃಷ್ಣರಾಯರು |
| ಕನ್ನಡ ನುಡಿ | ಮಾ | ಮೈಸೂರು | 1895-96 | ವೆಂಕಟಸುಬ್ಬಾಚಾರ್ಯ |
| ಕನ್ನಡ ಪ್ರಾಥಮಿಕ ಶಿಕ್ಷಣ | ಮಾ | ಧಾರವಾಡ | 1929-55 | ಆರ್ ವಿ ದೇಸಾಯಿ |
| ಕನ್ನಡ ಮ್ಯೂಸಿಕ ಜರ್ನಲ್ | ಮಾ | ಮೈಸೂರು | 1933 | ಎ ಕೃಷ್ಣ ಅಯ್ಯಂಗಾರ್ |
| ಕನ್ನಡ ಲಾ-ರಿಪೋರ್ಟ್ | ಮಾ | ಮೈಸೂರು | 1908-19 | ಎಂ ಮಲ್ಲಾರಾಧ್ಯ |
| ಕನ್ನಡ ವೃತ್ತ | ವಾ | ಕುಮಟಾ | 1916 | ಎಂ ಕೆ ಶಾನಭಾಗ |
| ಕನ್ನಡ ವಾಣಿ | ಮಾ | ಬೆಂಗಳೂರು | 1935 | ಟಿ ಡಿ ಶಾಮಣ್ಣ ಶೆಟ್ಟಿ |
| ಕನ್ನಡ ವಾರ್ತಿಕ (ಕ/ಇಂ) | ಪ | ಮಂಗಳೂರು | 1862 | |
| ಕನ್ನಡ ಶಾಲಾ ಪತ್ರಕ | ಮಾ | ಬೆಳಗಾವಿ, ಧಾರವಾಡ | 1867-71 | ಡೆಪ್ಯುಟಿ ಚೆನ್ನಬಸಪ್ಪ |
| ಕನ್ನಡ ಶಿಕ್ಷಕ | ಮಾ | ಧಾರವಾಡ | 1871 | ಪ್ರಕಾಶಕ: ಸರಕಾರಿ ತರಬೇತಿ ಕಾಲೇಜು |
| ಕನ್ನಡ ಶೀರ್ಷಿಕೆ | — | — | 1916 | ಎಂ ರಾಮನ್ |
| ಕನ್ನಡ ಸಮಾಚಾರ | ಪಕ್ಷ | ಬಳ್ಳಾರಿ | 1844 | ಹೆರ್ಮನ ಮೋಗ್ಲಿಂಗ್ |
| ಕನ್ನಡ ಸಹಕಾರಿ | ಮಾ | ಪುತ್ತೂರು | 1919 | ಉಗ್ರಾಣ ಮಂಗೇಶರಾವ್, ಮಂ ಅನಂತರಾಯರು |
| ಕನ್ನಡ ಸಹಕಾರಿ | ಮಾ | ಮಂಗಳೂರು | 1936-72 | ವಿ. ನರಸಿಂಹರಾವ್, ವಿ ಪ್ರಭಾಕರರಾವ್ |
| ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ | ಅರ್ಧವಾರ್ಷಿಕ | ಬೆಂಗಳೂರು | 1916 | ಎ ಆರ್ ಕೃಷ್ಣಶಾಸ್ತ್ರಿ, ಮಾಸ್ತಿ |
| ಕನ್ನಡಿಗ | | ಧಾರವಾಡ | 1923 | ಆಲೂರು ವೆಂಕಟರಾವ್ |
| ಕನ್ನಡಿಗ | ವಾ ಅರ್ಧವಾ | ಬಾಗಲಕೋಟೆ | 1925-30 | ಮಂಗಳವೇಢೆ ಶ್ರೀನಿವಾಸರಾವ್ |
| ಕನ್ನಡಿಗ | ವಾ | ಹುಬ್ಬಳ್ಳಿ | 1937 | ಹುಚ್ಚೇಶ್ವರ ಮೇಧಿ |
| ಕನ್ನಡಿಗ | | ಬೆಂಗಳೂರು | 1938 | ಪ್ರಕಾಶಕ : ಸೇಂಟ್ ಜೋಸೆಫ್ಸ್ ಕಾಲೇಜು |
| ಕನ್ನಡಿಗರ ಜ್ಞಾನ ದೀಪಿಕೆ | ಮಾ | ಮೈಸೂರು | 1922 | ಎಂ ತಿರುನಾರಾಯಣ |
| ಕರ್ತವ್ಯ | ಮಾ | ಚೆನ್ನಪಟ್ಟಣ | 1918 | |
| ಕರ್ಮವೀರ | ವಾ | ಹುಬ್ಬಳ್ಳಿ | 1921-78 | ಆರ್ ಎಸ್ ಹುಕ್ಕೇರಿ, ರಂ ರಾ ದಿವಾಕರ |

| 1 | 2 | 3 | 4 | 5 |
|---|---|---|---|---|
| ಕಲ್ಪನಾ | ವಾ | ಹುಬ್ಬಳ್ಳಿ | 1951-70 | ಎಸ್ ವಿ ಪಾಟೀಲ, ಕೆ ರಾಮಯ್ಯ |
| ಕಲಾ | ವಾ | ಬೆಂಗಳೂರು | 1929-34 | |
| ಕಲಾ | ವಾ | ಮಂಗಳೂರು | 1947-49 | ವೈ ಉಮೇಶರಾವ್ |
| ಕಲಾ ಚಂದ್ರ | ವಾ | ಕಾರ್ಕಳ | 1933-35 | ಆರ್ ಜೆ ಶೆಣೈ |
| ಕಲಾ ನಿವೇದನ | — | | 1929 | ಬಿ ವಿ ಕೃಷ್ಣಮೂರ್ತಿ |
| ಕಲಾವಿದ | ಮಾ | ಮಂಗಳೂರು | 1947 | ಎಂ ಎಸ್ ಶೆಟ್ಟಿ |
| ಕಲಿಯುಗ | ತ್ರೈ ಮಾ/ಮಾ | ಧಾರವಾಡ, ಮಂಗಳೂರು | 1936-56 | ಡಾ\|\| ಎಂ ಗೋಪಾಲಕೃಷ್ಣ ರಾವ್ |
| ಕಲ್ಕಿ | ವಾ | ಗದಗ | 1949 | ಅಂದಾನಪ್ಪ ದೊಡ್ಡಮೇಟಿ |
| ಕಲ್ಕಿ | ವಾ | ಬೆಂಗಳೂರು | 1954 | ಡಿ ವಿ ರಮೇಶ |
| ಕವಿತಾ | ಮಾ | ಧಾರವಾಡ | 1918 | |
| ಕಸ್ತೂರಿ | ಮಾ | ಹುಬ್ಬಳ್ಳಿ | 1957 | ಮೊಹರೆ ಹನುಮಂತರಾಯರು |
| ಕರ್ನಾಟಕ | ದಿನ/ವಾ | ಮೈಸೂರು | 1926 | ಎಚ್ ಶರ್ಮಾ |
| ಕರ್ನಾಟಕ | ಅರ್ಧವಾರ | ಬೆಂಗಳೂರು | 1913-21 | ಡಿ ವಿ ಗುಂಡಪ್ಪ |
| ಕರ್ನಾಟಕ ಕಾವ್ಯ ಕಲಾನಿಧಿ | ಮಾ | ಮೈಸೂರು | 1908-16 | ಎಂ ಎ ಆರ್ ಅಯ್ಯಂಗಾರ್ |
| ಕರ್ನಾಟಕ ಕಾವ್ಯ ಮಂಜರಿ | ಮಾ | ಮೈಸೂರು | 1892-1908 | ಎಸ್ ಜಿ ನರಸಿಂಹಾಚಾರ್ |
| ಕರ್ನಾಟಕ ಕೇಸರಿ | ವಾ | ಮಂಗಳೂರು | 1928 | ಮಂಜೇಶ್ವರ ಅನಂತರಾವ್ |
| ಕರ್ನಾಟಕ ಕೇಸರಿ | ಮಾ | ಪುತ್ತೂರು | 1929 | ಮಂಜೇಶ್ವರ ಅನಂತರಾವ್ |
| ಕರ್ನಾಟಕ ಕೇಸರಿ | ವಾ | ಬಳ್ಳಾರಿ | 1931-32 | ಟೇಕೂರು ಸುಬ್ರಹ್ಮಣ್ಯ ಟಿ ಬಿ ಕೇಶವರಾಯರು |
| ಕರ್ನಾಟಕ ಗ್ರಂಥಮಾಲೆ | ಮಾ | ಮೈಸೂರು, ಬೆಂಗಳೂರು | 1893 | ಬಿ ಸುಬ್ಬರಾವ್, ಬಿ ಕೃಷ್ಣಪ್ಪ |
| ಕರ್ನಾಟಕ ಚಂದ್ರಿಕೆ | ಮಾ | ಮೈಸೂರು, ಬೆಂಗಳೂರು | 1908-29 | ಕೆ ರಾಮನರಸಿಂಹಯ್ಯ ಎಂ ಶಾಮರಾವ್ |
| ಕರ್ನಾಟಕ ಜನಜೀವನ | ಅವಾ/ ವಾ/ಮಾ | ಬೆಂಗಳೂರು | 1909 | |
| ಕರ್ನಾಟಕ ಜನಜೀವನ ಮತ್ತು ಅರ್ಥಸಾಧಕ ಪತ್ರಿಕೆ | ಅವಾ/ಮಾ | ಬೆಂಗಳೂರು | 1909-23 | |
| ಕರ್ನಾಟಕ ಜ್ಞಾನ ಮಂಜರಿ | ಮಾ | ಬೆಳಗಾವಿ | 1875 | ಭಿಕಾಜಿ ಹರಿ ಸಾಮಂತ |
| ಕರ್ನಾಟಕ ಜೀವನ | ಮಾ | ಬೆಂಗಳೂರು | 1916 | ಡಿ ವಿ ಜಿ |
| ಕರ್ನಾಟಕ ಟೈಮ್ಸ್ | ವಾ | ಬೆಂಗಳೂರು | 1908 | |
| ಕರ್ನಾಟಕ ಟೈಮ್ಸ್ | ವಾ | ಧಾರವಾಡ | 1930-35 | ಎಚ್ ಎಸ್ ಶಿವಲಿಂಗಶಾಸ್ತ್ರಿ |
| ಕರ್ನಾಟಕ ಧನಂಜಯ | ದಿನ | ಧಾರವಾಡ, ಬೆಳಗಾವಿ | 1910-30 | ಎಂಕೃಷ್ಣರಾವ್ |

| 1 | 2 | 3 | 4 | 5 |
|---|---|---|---|---|
| ಕರ್ನಾಟಕ ನಂದಿನಿ | ಮಾ | ನಂಜನಗೂಡು | 1916 | ಎನ್ ತಿರುಮಲಮ್ಮ |
| ಕರ್ನಾಟಕ ನವಜೀವನ | ಮಾ | ವಿಜಾಪುರ | 1928 | ಫ ಗು ಹಳಕಟ್ಟಿ, ಬಿ ಸಿ ಪುರಾಣಿಕ |
| ಕರ್ನಾಟಕ ಪತ್ರ | ವಾ | ಬೆಳಗಾವಿ/ಧಾರವಾಡ | 1883-1906 | ವೆಂಕಟ ರಂಗೋ ಕಟ್ಟಿ, ದೇ ಹೊನ್ನಾಪುರಮಠ |
| ಕರ್ನಾಟಕ ಪ್ರಕಾಶಿಕಾ (ಕ ಇಂ) | ಪ/ವಾ | ಮೈಸೂರು/ಬೆಂಗಳೂರು | 1865-68 | ಸಿ ಶ್ರೀನಿವಾಸಾಚಾರ್ |
| ಕರ್ನಾಟಕ ಪ್ರಕಾಶಿಕಾ | | ಮೈಸೂರು | 1874 | |
| ಕರ್ನಾಟಕ ಬಂಧು | ಮಾ | ಬಳ್ಳಾರಿ | 1925-29 | ವೈ ನಾಗೇಶ ಶಾಸ್ತ್ರಿ, ಟಿ ವೀರಮಲ್ಲಪ್ಪ |
| ಕರ್ನಾಟಕ ಬಂಧು | ಮಾ/ವಾ | ಗದಗ | 1931-69 | ಸಿ ಬಿ ಸ್ವಾಮಿ ಹಿರೇಮಠ |
| ಕರ್ನಾಟಕ ಭಾಷಾ ಸೇವಕ | ಮಾ/ವಾ | ವಿಜಾಪುರ | 1894 | ಶೇಷಗಿರಿ ಕೊಣ್ಣೂರ, ಎಚ್ ಸಾಗರ |
| ಕರ್ನಾಟಕ ಮಿತ್ರ (ಕ ಮ) | ದಿ | ಬೆಳಗಾವಿ | 1920 | ಬಿ ತಿರುಮಲಾಚಾರ್ |
| ಕರ್ನಾಟಕ ವರ್ತಮಾನ | ದಿ | ಬೆಂಗಳೂರು | 1922 | ಸಿ ಪಿ ಸುಂದರರಾವ್ |
| ಕರ್ನಾಟಕ ವೃತ್ತ | ವಾ | ಧಾರವಾಡ | 1890-1910 | ಫಕೀರಪ್ಪ, ಅನಾಡ ಚೆನ್ನಬಸಪ್ಪ |
| ಕರ್ನಾಟಕ ವಾಣಿ | ವಾ | ನಾಗಮಂಗಲ | 1925 | ಎನ್ ಟಿ ಹಿರಿಯಣ್ಣ |
| ಕರ್ನಾಟಕ ವಿಲಾಸ | ಮಾ | ಮೈಸೂರು | 1888 | ಎಲ್ ಎಸ್ ಸುಬ್ಬರಾವ್ |
| ಕರ್ನಾಟಕ ವಿದ್ಯಾರ್ಥಿ | ಮಾ | ಮೈಸೂರು | 1922 | |
| ಕರ್ನಾಟಕ ಪತ್ರಿಕಾ | ಮಾ | ಮೈಸೂರು | 1940-78 | ಪಿ ಗೋಪಾಲಕೃಷ್ಣ ಶೆಟ್ಟಿ |
| ಕರ್ನಾಟಕ ವೈಭವ | ಅ ವಾ/ವಾ | ವಿಜಾಪುರ | 1892 | ಎಂ ಗುಂಡೂರಾವ್, ಮೊ. ಹಣಮಂತರಾವ್ |
| ಕರ್ನಾಟಕ ಸಹಕಾರ ವಿಜಯ | ಮಾ | ಮೈಸೂರು | 1930-35 | ಮಾಧವನ್, ಶ್ರೀಕಂಠಶಾಸ್ತ್ರಿ |
| ಕರ್ನಾಟಕ ಶಿಕ್ಷಣ | ಮಾ ತ್ರೈಮಾ | ಧಾರವಾಡ | 1918-19 | |
| ಕರ್ನಾಟಕ ಶಿಕ್ಷಣ | ಮಾ ತ್ರೈಮಾ | ಬಾಗಲಕೋಟೆ | 1920 | ಎಚ್ ಬಿ ಹೊನ್ನೂರು, ಆರ್ ವೈ ಯಲಗುರ್ದ |
| ಕರ್ನಾಟಕ ಸತ್ಯಾಗ್ರಹ | | ಹುಬ್ಬಳ್ಳಿ | 1924 | ಚಂದೂರ, ಮೂರ್ತಿ |
| ಕರ್ನಾಟಕ ಸಹಕಾರ ಪತ್ರಿಕೆ (ಕ ಮ) | ಮಾ | ಬೆಂಗಳೂರು | 1954 | ಪಿ ಆರ್ ಕಂಠಿ, ವಿ ಎಸ್ ಹಳ್ಳಿಕೇರಿ |
| ಕರ್ನಾಟಕ ಸಹಕಾರಿ ಮಿತ್ರ | ಮಾ | ಧಾರವಾಡ | 1922-25 | ಎಂ ಎಂ ಬಸರೂರು |
| ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ | ಅರ್ಧ ವಾರ್ಷಿಕ | ಬೆಂಗಳೂರು | 1916 | ಸಿ ಕೆ ವೆಂಕಟರಾಮಯ್ಯ, ಎಸ್ ಕೃಷ್ಣ ಶರ್ಮ |
| ಕರ್ನಾಟಕ ಸುಂದರಿ | ಮಾ | ಹಾವೇರಿ | 1922-23 | ದೇಸಾಯಿ ಪಾಯಪ್ಪ ಸೋಸುಪ್ಪ |

| 1 | 2 | 3 | 4 | 5 |
|---|---|---|---|---|
| ಕರ್ನಾಟಕ ಸ್ಕೌಟ್ ಮತ್ತು ಗೈಡ್ (ಕ/ಇ) | ಮಾ | ಬೆಂಗಳೂರು | 1918 | ಎ ಡಿ ಅನಂದನ್, ವೆಂಕಟಕೃಷ್ಣಯ್ಯ |
| ಕರ್ನಾಟಕ ಸ್ಕೌಟ್ | — | ಧಾರವಾಡ | 1927 | ಬಿ ಟಿ ಚಾರಿ |
| ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ | — | ಬೆಂಗಳೂರು | 1927 | ಎಂ ರಾಮರಾವ್ |
| ಕರ್ನಾಟಕ ಹಿತೇಚ್ಛು | — | ಬೆಳಗಾವಿ | 1886 | |
| ಕೃಷಿಯ ಸುವಾರ್ತೆ | ಮಾ | | 1937-38 | ಬಾಸೆಲ್ ಮಿಶನ್ |
| ಕೃಷಿ ಕಲಾನಿಧಿ | ಪ | ಮೈಸೂರು | 1913 | |
| ಕಾಂಗ್ರೆಸ್ ಬುಲೆಟಿನ್ | ವಾ | ಬಳ್ಳಾರಿ | 1938-40 | ಟಿ ಬಿ ಕೇಶವರಾಯರು |
| ಕಾಂಗ್ರೆಸ್ | ದಿ | ಮೈಸೂರು | 1927 | ಅಗರಂ ರಂಗಯ್ಯ |
| ಕಾದಂಬರಿ ಸಂಗ್ರಹ | ಮಾ | ಚಾಮರಾಜನಗರ | 1914-38 | ಕೆ ವೆಂಕಟರಮಣ ಶಾಸ್ತ್ರಿ |
| ಕಾದಂಬರಿ ಸಾಗರ | ಮಾ | ಬೆಂಗಳೂರು | | ಸಿ ಕೆ ಹನುಮಂತಪ್ಪ |
| ಕಾವ್ಯ ಕಲ್ಪದ್ರುವ (ಕ/ಸಂ) | ಮಾ | ಬೆಂಗಳೂರು | 1892-97 | ಕೆ ಶ್ರೀನಿವಾಸ ಅಯ್ಯಂಗಾರ್ |
| ಕಾವ್ಯಾಂಬುಧಿ | ಮಾ | ಮೈಸೂರು | 1894-95 | ಬಿ ಪದ್ಮರಾಜ ಪಂಡಿತ |
| ಕ್ರಾಂತಿ | ದಿ | ಬೆಂಗಳೂರು | 1948 | ಆರ್ ದಯಾನಂದ ಸಾಗರ |
| ಕಿಡಿ | ಅರ್ಧ ವಾ/ವಾ | ಬೆಂಗಳೂರು | 1949-58 | ಪಿ ಶೇಷಪ್ಪ |
| ಕೀರ್ತಿ ಕಿರಣ | ಮಾ | ಬೆಂಗಳೂರು | 1943-50 | ಜಿ ಎ ನರಸಿಂಹ ಮೂರ್ತಿ |
| ಕುಂಚಿಟಿಗರ ಪತ್ರಿಕೆ | ವಾ | ಮೈಸೂರು | 1930 | ಎಂ ಸಿ ಮಲ್ಲಯ್ಯ |
| ಕುರುಕ್ಷೇತ್ರ | ವಾ | ಧಾರವಾಡ, ಜಮಖಂಡಿ, ವಿಜಾಪುರ | 1947-75 | ಬಾಬುರೆಡ್ಡಿ, ವಿ ತುಂಗಳ, ಮ ಕೊಕಟನೂರ |
| ಕುರುಬಕುಲ ಕೀರ್ತಿ (ಕ/ಇ) | ವಾ | ಮೈಸೂರು | 1934 | ಎಂ ಎನ್ ಲಿಂಗಪ್ಪ |
| ಕುರುಬರ ಜಗತ್ಪಾವನ | ವಾ/ಮಾ | ಬೆಂಗಳೂರು | 1927-31 | ಎಂ ಎನ್ ಲಿಂಗಪ್ಪ |
| ಕುರುಬರ ಪತ್ರಿಕೆ | — | ಮೈಸೂರು | 1928 | ನೀಲಗಿರಿ ಜಿ ಸಂಜೀವಯ್ಯ |
| ಕುರು ವಿಜಯ | ವಾ | — | 1913 | ನೀಲಗಿರಿ ಜಿ ಸಂಜೀವಯ್ಯ |
| ಕೇಸರಿ | ಮಾ | ಮೈಸೂರು | 1928-33 1947 | ವಿ ಸೀತಾರಾಮಶಾಸ್ತ್ರಿ |
| ಕ್ಷೇಮ ಸಮಾಚಾರ | ವಾ | ಧಾರವಾಡ | 1912 | ಕಾವ್ಯಾನಂದ (ಪುಣೇಕರ್) |
| ಕೈಗಾರಿಕೆ | ಮಾ | ಕೋಲಾರ | 1935 | ಫಾ ಜೆ ಜೆ ಎಂ ಫುರ್ಟಾಡೋ |
| ಕ್ರೈಸ್ತ ಮತಾಭಿಮಾನಿ | ವಾ | — | 1931 | ಜೆಡ್ ಇರ್ಝಾಕ್ |
| ಕ್ರೈಸ್ತ ಸಭಾಪತ್ರ | ಮಾ | ಮಂಗಳೂರು | 1867-19 | ಸಿ ಸ್ಟೊಲ್ಜ, ಜೆ ಜೆ ಬ್ರಿಗೇಲ, "ವತ್ಸ" |
| ಕ್ರೈಸ್ತ ಹಿತವಾದಿ | ಮಾ | ಮಂಗಳೂರು | 1924-32 | ಐ ಎಲ್ ಜೋಶುವಾ ಜತ್ತಣ್ಣ |
| ಕೊಡಗು | ವಾ | ಮಡಿಕೇರಿ | 1920 | ಕೆ ಬಿ ಕಾಳಪ್ಪ, ಪಂ ಐ ಬೆಳ್ಯಪ್ಪ |

| 1 | 2 | 3 | 4 | 5 |
|---|---|---|---|---|
| ಕೊಡಗು ಚಂದ್ರಿಕೆ | ವಾ | ಬೆಂಗಳೂರು | 1883-85 | ಮೈಸೂರು ರಂಗರಾವ್ |
| ಕೊಡಗು ಚಂದ್ರಿಕೆ | ಮಾ | ಮಡಿಕೇರಿ | 1939-41 | ಬಿ ಆರ್ ಸುಬ್ರಾಯ |
| ಕೊಡಗು ಬೋಧಿನೀ | ಮಾ | ಅಮ್ಮತ್ತಿ (ಕೊಡಗು ಜಿ॥) | 1925 | ಅಬ್ದುಲ್ ಜಿ ಖಾನ್ |
| ಕೊಡಗು ವೃತ್ತಾಂತ | ವಾ | ಮಡಿಕೇರಿ | 1921 | ಸಿ ಎಂ ಪೂಣಚ್ಚ |
| ಕೊಡಗು ಸಮಾಚಾರ | ವಾ | ಮಡಿಕೇರಿ | 1952-54 | ಬಿ ಕೆ ಎಸ್ ಮೂರ್ತಿ |
| ಕೊಡಗು ಸಹಕಾರ ಬಂಧು | ಮಾ | ಕೊಡಗು | 1941-62 | ಪಿ ಪಿ ಬೆಳ್ಳಪ್ಪ |
| ಕೊರವಂಜಿ | ಮಾ | ಬೆಂಗಳೂರು | 1942-67 | ಎಂ ಶಿವರಾಮ, ಟಿ ಜಿ ರವಿಕುಮಾರ |
| ಖಾದಿ ವಿಜಯ | ಮಾ | ಹುಬ್ಬಳ್ಳಿ | 1928 | ಮಂಜಪ್ಪ ಹರ್ಡೀಕರ |
| ಗರ್ಜನೆ | ಮಾ | ಗದಗ–ಬೆಟಗೇರಿ | 1950-51 | ಪ ಲೋ ಬಂಕಾಪುರ |
| ಗರಿಕೆ | — | ಮೈಸೂರು | 1935 | ಎಸ್ ಎಲ್ ಶ್ರೀಕಂಠಯ್ಯ |
| ಗೃಹವೈದ್ಯ | ಮಾ | ಹುಬ್ಬಳ್ಳಿ | 1938 | ಎ ಎಂ ಹಲಸೀಕರ |
| ಗಾನವಾಹಿನಿ | ಮಾ | ಮಂಡ್ಯ | 1950-51 | ಕೆ ಎಸ್ ಚಂದ್ರಶೇಖರಯ್ಯ |
| ಗಾಯನ ಗಂಗಾ | ದ್ವೈಮಾ ಮಾ | ಬೆಂಗಳೂರು | 1959 | ಆರ್ ವಿ ಶೇಷಾದ್ರಿ ಗವಾಯಿ |
| ಗ್ರಾಮ ಜೀವನ | — | ಬೆಂಗಳೂರು | 1927 | ಎಂ ಸೀತಾರಾಮಶಾಸ್ತ್ರಿ |
| ಗ್ರಾಮಜೀವನ | ಮಾ | ಕುಮಟಾ | 1956-64 | ಲಿಂಗೇಶ ಶರ್ಮಾ |
| ಗ್ರಾಮಜೀವನ ಅರ್ಥ | — | ಮೈಸೂರು | 1928 | ಎಂ ಸೀತಾರಾಮಶಾಸ್ತ್ರಿ |
| ಗ್ರಾಮ ಸುಧಾರಣೆ | ಮಾ | ಬೆಂಗಳೂರು | 1938 | ಪಿ ಎಸ್ ಶರ್ಮಾ |
| ಗ್ರಾಮ ಸೇವಕ | — | ರಾಮದುರ್ಗ | 1925-29 | ಮುದಕವಿಯ ಮಹಾದೇವನಾಯ್ಕ |
| ಗ್ರಾಮ ಸೇವಕ | ಮಾ | ಅಂಕೋಲಾ | | ತಿಮ್ಮಪ್ಪನಾಯ್ಕ |
| ಗ್ರಾಮ ಸೇವಕಿ | ಪ | ಅರಸೀಕೆರೆ | 1950 | ಯಶೋಧರಾ ದಾಸಪ್ಪ |
| ಗ್ರಾಮ ಸೇವಕಿ | ಮಾ | ಮೈಸೂರು, ಬೆಂಗಳೂರು | 1934-36 | ಎನ್ ಖಂಡ್ರಯ್ಯ |
| ಗ್ರಾಮಾಧಿಪತಿಯು | — | ಎಲಿಹಡಲಗಿ, ಅಥಣಿ | 1927 | ಜೆ ಎಸ್ ಪಾಟೀಲ |
| ಗ್ರಾಮಾಭ್ಯುದಯ ಮತ್ತು ಮೈಸೂರು | ಮಾ | ಬೆಂಗಳೂರು | 1947-48 | ಜೀರಿಗೆಕಟ್ಟೆ ಬಸವಪ್ಪ |
| ಗ್ರಾಮಾಭ್ಯುದಯ ಮತ್ತು ಸಹಕಾರ | ಮಾ | ಬೆಂಗಳೂರು | 1948-51 | ಕೆ ಸಿ ಚೌಡಪ್ಪ ರೆಡ್ಡಿ |
| ಗೀತಾ ನಮ್ಮ ಪುಸ್ತಕ | ಮಾ | ಬೆಂಗಳೂರು | 1937-50 | ದೇವುಡು ನರಸಿಂಹ ಶಾಸ್ತ್ರಿ |
| ಗೀತಾವಾಣಿ | ಮಾ | ಬಳ್ಳಾರಿ | 1955 | ಜೀರಿಗೆಕಟ್ಟೆ ಬಸವಪ್ಪ, ದೇವುಡು |
| ಗುರುದೇವ | ಮಾ | ಹುಮುಚ | 1957 | ಕುಂದ ಕುಂದ ವಿದ್ಯಾವೇದಸ್ವಾಮಿ |

| 1 | 2 | 3 | 4 | 5 |
|---|---|---|---|---|
| ಗೆಳೆಯ | — | ಕೋಳಿವಾಡ (ಧಾರವಾಡ ಜಿ||) | 1929 | ವಿ ಕೃ ಕೋಳಿವಾಡ |
| ಗೋಕುಲ | ಮಾ | ಬೆಂಗಳೂರು | 1951 | ಕಳಸ ಸತ್ಯನಾರಾಯಣ |
| ಗೋಪಾಲ | ಮಾ | ಬೆಂಗಳೂರು | 1939-41 | ಕೆ ಎಸ್ ನರಸಿಂಹಯ್ಯ |
| ಗೋರಕ್ಷಣ | ಮಾ | ಮೈಸೂರು | 1949-52 | ಎಂ ಎಸ್ ಕೃಷ್ಣರಾವ್ |
| ಗೋಸೇವಕ | ಮಾ | ಬೆಳಗಾವಿ | 1925 | ಗೋಪಾಲ ಎ ದೇಶಪಾಂಡೆ |
| ಚಂದ್ರಿಕಾ | ಮಾ | ಬಾಗಲಕೋಟೆ | 1896 | ಕರೂರು ರಾಘವ ಭಟ್ |
| ಚಂದ್ರೋದಯ (ಕಲ್ಲಚ್ಚು) | ವಾ/ಮಾ | ಧಾರವಾಡ | 1877-1953 | ಪಂಡಿತಪ್ಪ ಚಿಕ್ಕೋಡಿ, ಜಿ ಎಸ್ ಕೃಷ್ಣರಾವ್ |
| ಚಲಚಿತ್ರ | ವಾ/ಮಾ | ಬೆಂಗಳೂರು | 1956-58 | |
| ಚಾತುರ್ಯ | ಮಾ | ಬೆಂಗಳೂರು | 1909 | ಬಿ ಜನಾರ್ದನರಾಯರು |
| ಚಿಂತಾಮಣಿ | ಮಾ | ಮೈಸೂರು | 1908 | |
| ಚಿಂತಾಮಣಿ ಅಭ್ಯುದಯ | ಮಾ | ಚಿಂತಾಮಣಿ (ತುಮಕೂರು ಜಿ||) | 1920 | ತಹಸೀಲದಾರ |
| ಚಿಕಿತ್ಸಕ | — | — | 1903 | ಗಂಗಾಧರ ರಾವ್ |
| ಚಿತ್ರ | ಮಾ | ಮಂಗಳೂರು | 1937-39 | ಕುಮಾರ ವೆಂಕಣ್ಣ, ವಿ ಆರ್ ಕೊಳ್ಳೂರ್‌ಕರ |
| ಚಿತ್ರಗುಪ್ತ (ಇಂ ಕ) | ದಿ.ವಾ | ಮೈಸೂರು | 1928-38 | ಎಚ್ ಕೆ ವೀರಣ್ಣಗೌಡ, ಎನ್ ಜಿ ಸಂಜೀವಯ್ಯ |
| ಚಿತ್ರಗುಪ್ತ | ದಿ/ಮಾ/ವಾ | ಬೆಂಗಳೂರು | 1955-66 | ಎಂ ಎಸ್ ಭಾರದ್ವಾಜ, ಎ ಆರ್ ತಿರುಮಲೈ |
| ಚಿತ್ರವಾಣಿ | ಮಾ/ಪಾ | ಮಂಗಳೂರು | 1952 | ಕುಮಾರ ಮಂಗಳೂರು |
| ಚಿತ್ರವಾಣಿ | ಪಾ/ಮಾ | ಬೆಂಗಳೂರು | 1944 | ಸಿ ಸತ್ಯನಾರಾಯಣ, ಎಸ್ ರಾಮನಾಥನ್ |
| ಚಿತ್ರಾ | ಮಾ/ಪಾ | ಬೆಂಗಳೂರು | 1938 | ಎಸ್ ನರಸಿಂಹಯ್ಯ |
| ಚಿತ್ರ ಸಮಾಚಾರ (ಇಂ ಕ) | ಮಾ/ಪಾ | ಬೆಂಗಳೂರು | 1938-49 | ಎಚ್ ಆರ್ ಕೃಷ್ಣಮೂರ್ತಿ |
| ಚಿರಾಯು | ಮಾ | ಮೈಸೂರು | 1954 | ಎಂ ಎಸ್ ಸುಬ್ಬರಾವ್ |
| ಚೆನ್ನಬಸವೇಶ್ವರ (ಕ ಇಂ) | ವಾ | ತುಮಕೂರು | 1926 | ಕೆ ಸೈಯದ್, ಎಸ್ ಹುಸೇನ್ |
| ಚೆನ್ನರಾಯಪಟ್ಟಣ ತಾಲೂಕು ವರ್ತಮಾನ | ಪ | ಚೆನ್ನರಾಯಪಟ್ಟಣ | 1918 | |
| ಚೆಲುವನಾಡು | ಮಾ | ಬೆಂಗಳೂರು | | ಸಿ ಎನ್ ಸ್ವಾಮಿ |
| ಚೇತನ | ಮಾ | ಚಿತ್ರದುರ್ಗ/ಕುಷ್ಟಗಿ | 1948 | ಟಿ ಆರ್ ಸುಬ್ಬರಾವ್ |
| ಚೈತನ್ಯ | ಮಾ | ಇಳಕಲ್ (ಧಾರವಾಡ) | 1931 | ಶಿವಶಂಕರರಾವ್ |

| 1 | 2 | 3 | 4 | 5 |
|---|---|---|---|---|
| ಚೈತನ್ಯ ಕುಸುಮಾವಳಿ | ಮಾ | ಧರ್ಮಸ್ಥಳ(ದ. ಕ.) | 1934 | |
| ಛಾಯಾ | ಮಾ | ಬೆಂಗಳೂರು | 1942 | ಬಿ ಎಸ್ ವೆಂಕಟ್ರಮಣ |
| ಜಗನ್ಮೋಹಿನೀ | ಅರ್ಧವಾರ | ಮೈಸೂರು | 1911 | ಎಸ್ ರಾಮನಾಥಯ್ಯ |
| ಜನಜೀವನ | ಮಾ | ಬೆಂಗಳೂರು | 1912 | ಡಿ ವಿ ಗುಂಡಪ್ಪ |
| ಜನಜೀವನ | ದಿ | ಮಂಡ್ಯ | 1956 | ಎಂ ಸಿ ಮಾದೇಗೌಡ |
| ಜನಜೀವಾಳ | ವಾ | ಬೆಳಗಾವಿ | 1948 | ಬಿ ಎಂ ಬಾಗಲಕೋಟೆ |
| ಜನತಾ | ಮಾ | ಬೆಂಗಳೂರು | 1941 | ಎ ಕೇಶವ |
| ಜನತಾ ಬಂಧು | — | | 1956 | ಷಡಕ್ಷರ |
| ಜನಪದ | ವಾ | ಮಂಗಳೂರು (ದ. ಕ.) | 1950 | ನಾರಾಯಣ ಕಲ್ಲೆ |
| ಜನಪ್ರಗತಿ | ವಾ | ಬೆಂಗಳೂರು | 1952 | ರಾಮಚಂದ್ರ, ಉಚ್ಚಿಲ, ಬಿ ಎನ್ ಗುಪ್ತ |
| ಜನಪ್ರಿಯ | ದ್ವೈಮಾ | ಮಂಗಳೂರು | 1954 | ಮುನಿಪಾಲರಾಜು |
| ಜನಪ್ರಿಯ | ದಿ | — | 1955 | ಆರ್ ಕೆ ನಾಯ್ಕ |
| ಜನಪ್ರೇಮಿ | ವಾ | ಮಂಗಳೂರು | 1954-55 | ಎಫ್ ಐ ಅಲಸಿಯಾದಾಸ್ ಪಿಂಟೋ |
| ಜನಮತ | ವಾ | ಬೆಂಗಳೂರು | 1956 | ಕಳಸ ಸತ್ಯನಾರಾಯಣ |
| ಜನಯುಗ | ಪ/ವಾ | ಕಟಪಾಡಿ (ದ. ಕ.) | 1952-53 | ಎಂ ವಿ ಹೆಗಡೆ |
| ಜನವಾಣಿ | ಮಾ | ಮೈಸೂರು | 1951 | ಎಂ ಸಿ ಪದ್ಮನಾಭ ಶರ್ಮ |
| ಜನವಾಣಿ | ದಿ/ವಾ | ಬೆಂಗಳೂರು, ಮುಂಬಯಿ | 1933-41 | ಬಿ ಪುಟ್ಟಸ್ವಾಮಯ್ಯ, ಸಿ ಆರ್ ರೆಡ್ಡಿ |
| ಜನಶಕ್ತಿ | ವಾ | ಬೆಂಗಳೂರು | 1951 | ಸಿ ಆರ್ ಕೃಷ್ಣರಾವ್ |
| ಜನಸೇವಕ | ವಾ | ಅಂಕೋಲಾ | 1955-72 | ದಿನಕರ ದೇಸಾಯಿ, ಅಮ್ಮೆಂಬಳ ಆನಂದ |
| ಜನಸೇವಕ | ದಿ | ದಾವಣಗೆರೆ | 1924 | ಕೆ ಗುರುಪಾದಪ್ಪ |
| ಜನ ಹಿತೈಷಿಣೀ | ಪ | — | 1912 | ಎಂ ಎಸ್ ಧರಣೀಂದ್ರಯ್ಯ |
| ಜನ ಹಿತೋಪಕಾರಿಣಿ | ದಿ | ಮೈಸೂರು | | |
| ಜನ್ಮಭೂಮಿ | ವಾ | ತೀರ್ಥಹಳ್ಳಿ | 1928-29 | ಚಿನ್ನ ಭಂಡಾರದ ಸುಬ್ಬರಾವ್ |
| ಜನ್ಮಭೂಮಿ | ದಿ | ಬೆಂಗಳೂರು | 1930-36 | ಬಿ ಪುಟ್ಟಸ್ವಾಮಯ್ಯ |
| ಜನ್ಮಭೂಮಿ | ವಾ | ಮಡಿಕೇರಿ (ಕೊಡಗು) | 1931-62 | ಕೆ ಎ ಸೋಮಣ್ಣ, ಎಂ ಸುಬ್ಬರಾವ್ |
| ಜಯ | ಮಾ | ಹುಬ್ಬಳ್ಳಿ (ಧಾರವಾಡ) | 1928 | ಎಸ್ ಭೀಮಾಚಾರ್ |
| ಜಯಂತಿ | ಮಾ/ವಾ | ಧಾರವಾಡ | 1938 | ಬೆಟಗೇರಿ ಕೃಷ್ಣಶರ್ಮ, ಎಚ್ ವಿ ಮೆಳ್ಳಿಗಟ್ಟಿ |
| ಜಯ ಕರ್ನಾಟಕ | ಮಾ/ವಾ | ಧಾರವಾಡ | 1947-70 | ಆಲೂರು ವೆಂಕಟರಾವ್, ದ ರಾ ಬೇಂದ್ರೆ |

| 1 | 2 | 3 | 4 | 5 |
|---|---|---|---|---|
| ಜಯಮಾಲಾ | ಮಾ | ಮೈಸೂರು | 1935-47 | ಎಂ ಕೆ ಬಾಬು, ಪಿಂಟೋ |
| ಜಯ್ ಹಿಂದ್ | ವಾ/ಮಾ | ಹುಬ್ಬಳ್ಳಿ (ಧಾರ) | 1939-47 | ಎಸ್ ವಿ ಮನಗೋಳಿ |
| ಜಾಗೃತಿ | ವಾ | ಧಾರವಾಡ | 1947 | ಖಾದ್ರಿ ಶಾಮಣ್ಣ |
| ಜಾಹೀರಾತು ಮತ್ತು ಸಮಾಚಾರ ಪತ್ರಿಕೆ | ಮಾ | ಬೆಂಗಳೂರು | 1955 | ಟಿ ಆರ್ ಗೋವಿಂದ |
| ಜ್ಞಾನಜ್ಯೋತಿ | ಮಾ | ಮೈಸೂರು | 1925 | ಎಸ್ ಆರ್ ರಾಮಯ್ಯ |
| ಜ್ಞಾನ ಪ್ರಕಾಶ | — | ಬೆಳಗಾವಿ | 1855 | — |
| ಜ್ಞಾನ ಪ್ರಕಾಶ | ದಿ | ಮೈಸೂರು | 1910 | — |
| ಜ್ಞಾನಾಂಜನ | ಮಾ | ಬೆಂಗಳೂರು | 1908 | ಪ್ರಕಾಶಕ: ಆನಂದ ಚಂದ್ರಿಕೆ ಕಾರ್ಯಾಲಯ |
| ಜ್ಞಾನಾಂಜನ | ಮಾ | ಬೆಳಗಾವಿ | 1919 | ಎಸ್ ಎಸ್ ಪೇಟಕರ |
| ಜ್ಞಾನೋದಯ | ಮಾ | ಬೆಂಗಳೂರು | 1912 | ಪ್ರಕಾಶಕ: ಭಕ್ತಿ ಮಾರ್ಗ ಸಭಾ |
| ಜ್ಞಾನೋದಯ | ಪ | ಮೈಸೂರು | 1921 | ಶಾಂತಿರಾಜಶಾಸ್ತ್ರಿ, ಶ್ರೀಕಂಠ ಶಾಸ್ತ್ರಿ |
| ಜ್ಞಾನೋದಯ | ಮಾ | ಶಿವಮೊಗ್ಗ | 1897 | ಬ್ಯಾಡಗಿ ಶೇಷಗಿರಿಯಪ್ಪ |
| ಜ್ವಾಲಾಮುಖಿ | ವಾ | ಬೆಂಗಳೂರು | | ಸಿ ಎಸ್ ಸತ್ಯ, ಕೆ ರಾಮಸ್ವಾಮಿ |
| ಜನಮತ ಪ್ರಕಾಶಿಕಾ (ಕ/ಸಂ) | ಮಾ | ಮೈಸೂರು | 1933-34 | |
| ಜನಮತಾದರ್ಶ | ಮಾ | ಮೈಸೂರು | 1898 | ರಾಮಣ್ಣ ವಾಗ್ಮಿ |
| ಜಿನವಾಣಿ | ಮಾ | ಮೈಸೂರು | 1951-74 | ಎಂ ಸಿ ಪದ್ಮರಾಜ ಶರ್ಮಾ, ಎಂ ಸಿ ಜಯಕೀರ್ತಿ |
| ಜಿನವಿಜಯ | ಮಾ | ಬೆಳಗಾವಿ | 1905-34 | ಅಣ್ಣಪ್ಪ ಫ ಚೌಗುಲೆ |
| ಜೀವಜಲ | ಮಾ | ಬೆಂಗಳೂರು | 1952-53 | ಆರ್ ಗ್ರೀನ್ ಫೀಲ್ಡ್, ಬಿ ಸುಮಂತ |
| ಜೀವಜಲ | ಮಾ | ಮಳವಳ್ಳಿ (ಮಂಡ್ಯ) | 1953 | ಕೆ ನ್ಯೂಟನ್ |
| ಜೀವನ | ಮಾ | ಬೆಂಗಳೂರು | 1940-77 | ಮಾಸ್ತಿ, ದ ರಾ ಬೇಂದ್ರೆ |
| ಜೀವನ ಪ್ರಕಾಶ | ಮಾ | ಬೆಳಗಾವಿ | 1953 | ಶ್ರೀಮತಿ ಪ್ರೇಮಾ |
| ಜೀವನ ಶಿಕ್ಷಣ | ಮಾ | ಧಾರವಾಡ | 1956 | ಬಿ ಡಿ ಮೂಗಿ, ಎಸ್ ಹಿರೇಮಠ |
| ಜೈನ ತರಂಗಿಣಿ | ಮಾ | | 1921 | |
| ಜೈನ ಬಂಧು | ಮಾ | ಕೊಕ್ಕರ್ಣೆ (ದ. ಕ.) | 1911-14 | ಎಸ್ ಎ ನಾಭಿರಾಜಯ್ಯ |
| ಜೈನ ಹಿತೈಷಿಣೀ | — | — | 1906 | |
| ಜ್ಯೋತಿ | ಪ/ವಾ | ಮಂಗಳೂರು | 1950-59 | ಬಿ ಎಸ್ ಭಾಸ್ಕರ ರೈ, ಎಂ. ರಾಮನಾಥ |

| 1 | 2 | 3 | 4 | 5 |
|---|---|---|---|---|
| ಜ್ಯೋತಿ | ಮಾ | | 1954 | ಕುಪ್ಪೇರಾವ್ |
| ಜ್ಯೋತಿಷ್ಯ | ಮಾ | ಧರ್ಮಸ್ಥಳ | 1957 | ಕೆ ಎಸ್ ಉಪಾಧ್ಯಾಯ |
| ಜ್ಯೋತಿಷ್ಯ ಕಲ್ಪಧ್ರುಮ | ಮಾ | ತೀರ್ಥಹಳ್ಳಿ | 1926-28 | ಪಿ ಕೆ ಜೋಶಿ, ಕೆ ಎನ್ ಶಾಸ್ತ್ರಿ |
| ಜ್ಯೋತಿಷ್ಯ ಕಿರಣ | ಮಾ | ಗುರುವಿನಹಳ್ಳಿ | 1948 | ಗುರುಜೀವಾರಾಧ್ಯ |
| ಜ್ಯೋತಿಷ್ಯ ವಿಚಾರ ಸಾಗರ | ಮಾ | ಶಿವಮೊಗ್ಗ | 1932 | ಸಿ ಲಿಂಗಾ ಜೊಯಿಸ್ |
| ಜ್ಯೋತಿಷ್ಯ ವಿದ್ಯಾಸಾಗರ | ಮಾ | ಬೆಂಗಳೂರು | 1908 | ಡಿ ರಾಮಾ ಜೊಯಿಸ್ |
| ಜ್ಯೋತಿಷ್ಯ ವಿದ್ಯಾ ಸಂಗ್ರಹ | | | 1910-50 | |
| ಟ್ರೂಥ್ (ಇ) | ಅರ್ಧವಾರ | ಬೆಂಗಳೂರು | 1919 | ಕೆ ಎನ್ ಸ್ವಾಮಿ, ಅಯ್ಯಂಗಾರ್ |
| ಟ್ರೇಡ್ ರಿಪೋರ್ಟರ್ (ಇ/ಕ) | | ಬೆಂಗಳೂರು | 1935 | ಜಿ ಆರ್ ರೇವಣ್ಣ |
| ತಂದೆನಾಡು (ಇ/ಕ) | ವಾ | ಬೆಂಗಳೂರು | 1931 | ಜೆ ಭೀಮರಾವ್ |
| ತತ್ವ ಪ್ರಕಾಶಿಕೆ | ಮಾ | ಕವುತಾಳ (ಬಳ್ಳಾರಿ) | 1908 | ಜೆ ಭೀಮರಾವ್ |
| ತತ್ವ ವಾದ | ಮಾ | ಗದಗ | 1954 | ಜಯರಾಮಾಚಾರ್ಯ ಮಳಗಿ |
| ತರಂಗ | ಮಾ | ಗದಗ | 1951 | |
| ತರಂಗಿಣಿ | ಮಾ | ಬೆಂಗಳೂರು | 1955 | ಕೆ ಗಣಪತಿ ಶರ್ಮಾ |
| ತರುಣ | ಮಾ | ಮಂಗಳೂರು | 1951 | ಕೆ ರಾಮದಾಸ ನಾಯಕ |
| ತರುಣ ಕರ್ನಾಟಕ | ವಾ | ಬೈಲಹೊಂಗಲ | | ಬಿ ಎಸ್ ಪಾಟೀಲ |
| ತರುಣ ಕರ್ನಾಟಕ | ವಾ/ದಿ | ಹುಬ್ಬಳ್ಳಿ | 1929-53 | ಎಲ್ ಎಸ್ ಪಾಟೀಲ |
| ತರುಣ ವಾಣಿ | | ಬೆಂಗಳೂರು | 1942 | ಎನ್ ಎಸ್ ಚಂದ್ರಶೇಖರ |
| ತಾಯಿನಾಡು | ವಾ/ದಿ | ಬೆಂಗಳೂರು | 1927-67 | ಪಿ ಆರ್ ರಾಮಯ್ಯ, ಆರ್ ಎಸ್ ನಾರಾಯಣ |
| ತಾರಕೋದಯ | ಮಾ | ಬೆಂಗಳೂರು | 1923 | ಪ್ರಕಾಶನ: ಜಗದ್ಗುರು ಸೇವಾ ಸಮಾಜ |
| ತಿಲಕ ಸಂದೇಶ | ವಾ/ಮಾ | ಮಂಗಳೂರು | 1918 | ದ ಕೃ ಭಾರದ್ವಾಜ |
| ತ್ರಿಭಾಷಾ ನಿರ್ವಾಣವಚನ ಚಂದ್ರಿಕೆ | ಪ | | 1927 | ಸ್ವಾಮಿ ದಯಾಸಾಗರ ಭೀಷ್ಮಾಚಾರ್ |
| ತ್ರಿವೇಣಿ | ಮಾ | ಮಂಗಳೂರು | 1933-37 | ಟಿ ನಾರಾಯಣ ಭಟ್, ಎಂ ಬಾಬುರಾವ ಪ್ರಭು |
| ತ್ರಿಶೂಲಿ | ಮಾ | ಬೆಂಗಳೂರು | 1932 | ಎಂ ಸಿ ಲಿಂಗೇಗೌಡ |
| ತುಣುಕು ಮಿಣುಕು | ಮಾ | ಕೊಡಿಯಾಲಬೈಲು (ದ. ಕ.) | 1928 | ಎಂ ಪಿ ಭಟ್, ಅ ಶೇಷಪ್ಪಯ್ಯ |
| ತುತ್ತೂರಿ | ಮಾ | ಮಂಗಳೂರು | 1952 | ರಾ ಮೋ ವಿಶ್ವಾಮಿತ್ರ |
| ತುಮಕೂರು ವರ್ತಮಾನ | ವಾ | ತುಮಕೂರು | 1917-54 | ಕೆ ರಂಗೈಯ್ಯಂಗಾರ್ |

| 1 | 2 | 3 | 4 | 5 |
|---|---|---|---|---|
| ದಕ್ಷನ್ ಪ್ರಭಾತ | ವಾ | ರಾಯಚೂರು | 1940 | ಪಿ ಆರ್ ರಾಚೋಟಯ್ಯ, ಎಸ್ ಶರ್ಮ |
| ದಲಿತ ಬಂಧು | ಮಾ/ಪ | ಬೆಂಗಳೂರು | 1952-56 | ಎಸ್ ಗೋಪಾಲ ಸಾಲೆನ್ನ, ಕೆ ಗುರುದತ್ತ |
| ದರ್ಶನ | ವಾ | ಬೆಳಗಾವಿ | 1956 | ಎಂ ಬಿ ದೇಸಾಯಿ |
| ದಾಂಪತ್ಯ ಜೀವನ | ಮಾ | ದೊಡ್ಡಬಳ್ಳಾಪುರ | 1951-56 | ಡಾ|| ಡಿ ವಿ ರಾವ್ |
| ದಾಸವಾಣಿ | ಮಾ | ಮಂಗಳೂರು | | ಬಿ ಕೇಶವದಾಸ |
| ದಿ ಜರ್ನಲ್ ಆಫ್ ಎಜ್ಯುಕೇಶನ್ (ಕ/ಇ) | — | ಧಾರವಾಡ | 1934 | ಎಸ್ ಎಸ್ ನೆಗಳೂರು |
| ದಿವ್ಯ ಜೀವನ | ಮಾ | ಬೆಂಗಳೂರು | 1957-61 | ವೈ ನರಸಪ್ಪ |
| ದಿವ್ಯ ಜ್ಯೋತಿ | ಮಾ | ಮೈಸೂರು | 1928-71 | ಎ ವಾಸುದೇವಯ್ಯ |
| ದೀರ್ಘಾಯು | ತ್ರೈಮಾ | ಮಂಗಳೂರು/ ಬೆಂಗಳೂರು | 1954 | ಎಂ ಆರ್ ಭಟ್, ಎಂ ಗೋಪಾಲಕೃಷ್ಣ ರಾವ್ |
| ದೀನಬಂಧು | ವಾ | ಮೈಸೂರು | 1928-32 | ಟಿ ರಾಮಚಂದ್ರರಾವ್, ಕೆ ಎನ್ ಅಯ್ಯಂಗಾರ್ |
| ದೀನವಾಣಿ | ವಾ | ಬೆಂಗಳೂರು | 1928 | ಬಿ ಸಿ ರಂಗಪ್ಪ |
| ದೂತ | ಮಾ | ಡೋರನಹಳ್ಳಿ (ಮೈಸೂರು ಜಿ||) | 1925 | ದಯಾನಂದ ಪ್ರಭು |
| ದೇವಭುಜ | ಮಾ | ರೋಣ (ಧಾರವಾಡ) | 1927-29 | ಎಸ್. ಸಿ. ಸಾಲೀಮಠ |
| ದೇವಾಂಗ ಪತ್ರಿಕೆ (ಕ/ಇ) | ವಾ | ಬೆಂಗಳೂರು | 1931 | ಎನ್ ಸಿದ್ಧಲಿಂಗಯ್ಯ |
| ದೇಶಬಂಧು | ದಿ/ವಾ | ಬೆಂಗಳೂರು | 1926-39 | ಎನ್ ಸುಬ್ಬರಾವ್ |
| ದೇಶಬಂಧು | ದಿ/ವಾ | ಬೆಂಗಳೂರು | 1940-56 | ಎನ್ ಎಸ್ ಸೀತಾರಾಮಶಾಸ್ತ್ರಿ, ಎನ್ ವೆಂಕೋಬರಾವ್ |
| ದೇಶಭಕ್ತ | ಮಾ | ಮಂಗಳೂರು | 1940 | ಜಯದೇವಜೀ |
| ದೇಶ ರಂಜನ | ದ್ವೈವಮಾ/ ಮಾ/ಪ | ಮಂಗಳೂರು | 1931 | ಬಿ ರಾಘವೇಂದ್ರರಾಯರು |
| ದೇಶಾಭಿಮಾನಿ | ದಿ | ಮೈಸೂರು | 1898-1908 | ಬಿ ಎಸ್ ಅಯ್ಯಂಗಾರ್ |
| ದೇಶೀಯ ವಿದ್ಯಾಶಾಲಾ ಪತ್ರಿಕೆ | ತ್ರೈಮಾ | ಬೆಂಗಳೂರು | 1923 | ಕೆ ಸಂಪದ್ಗಿರಿರಾವ್, ಕೆ ಕೃಷ್ಣಯ್ಯಂಗಾರ್ |
| ದ್ವೈತ ದುಂದುಭಿ | ಮಾ | ಹುಬ್ಬಳ್ಳಿ, ಬಾಗಲಕೋಟೆ | 1923-39 | ರಾಮಾಚಾರ್ಯ ಕಟಗೇರಿ |
| ಧನಂಜಯ | ವಾ/ದಿ/ಮಾ | ಧಾರವಾಡ | 1910-36 | ಗುರುರಾವ್ ವಾಳ್ವೇಕರ, ಮುದವೀಡು ಕೃಷ್ಣರಾವ್ |
| ಧನ್ವಂತರಿ | ಮಾ | ವಿಜಾಪುರ | 1938 | ಅದ್ಯ ಅನಂತಾಚಾರ್ಯ |

ಚಿನ್ನ, ಮುತ್ತು ಸರಮಾಲೆಯಂತೆಸಗುವ ನಾಡಿನಲ್ಲಿ
ನೆಮ್ಮದಿಯಿಂದ ಜೀವಿಸುವ ಜನರೆದೆಯಲ್ಲಿ
ಈ ಹಾಡು ಚಿರವಾಗಿ ನೆಲಸಿರಲಿ" ಎಂದು ಸೂಚಿಸುತ್ತಾನೆ.

ಕೊಡವರು ವ್ಯವಸಾಯಗಾರರಾದ್ದರಿಂದ ಅವರಿಗೆ ಅವರ ನೆಲದ ಸಂಬಂಧ ಅತಿ ನಿಕಟವಿದ್ದು ಮಳೆಯಿರಲಿ, ಬಿಸಿಲಿರಲಿ, ಆ ನೆಲವೇ ಅವರ ಕಾರ್ಯಕ್ಷೇತ್ರವಾಗಿದೆ. ಅದು ನಾಟಿಯ ಸಮಯವೇ ಇರಲಿ ಅಥವಾ ಕುಯ್ಲಿನ ಕಾರ್ಯವೇ ಇರಲಿ ಇವು ಅವರ ಜೀವನ ಮಾದರಿ ಇದ್ದು ಈ ಕಷ್ಟ ಕಾರ್ಯದಲ್ಲೂ ಹಾಸ್ಯ, ತಮಾಷೆಗಳಿಗೆ ಅನುಮಾಡಿಕೊಂಡು ಜೀವನವನ್ನು ಹಗುರ ಮಾಡಿಕೊಳ್ಳುತ್ತಾರೆ. ನಾಟಿಯ ಸಮಯದಲ್ಲಿ ಅವರು ಹಾಡುವ 'ಒಯ್ಯಪಾಟ್' ಒಂದು ಮಾದರಿಯಾಗಿದೆ. ಕೊಡವರ ಹಲವು ನೃತ್ಯಗಳು ಯುದ್ಧ ನೃತ್ಯಗಳಾಗಿದ್ದು ಅವುಗಳಲ್ಲಿ ಬೊಳಕಾಟ್, ಪರಿಯಕಳಿ ವಿಶಿಷ್ಟವಾಗಿವೆ. ಅತಿ ಪುರಾತನವಾದ ಈ ನೃತ್ಯ ಮಾದರಿಗಳನ್ನು ತಮ್ಮ ಸಂಸ್ಕೃತಿ ಪರಂಪರೆಗಳ ದ್ಯೋತಕವಾಗಿ ಉಳಿಸಿಕೊಂಡಿದ್ದಾರೆ. ಈ ನೃತ್ಯಗಳು ಕೊಡವರ ಮೂಲಭೂತ ಸ್ವಭಾವ ಮತ್ತು ಪರಂಪರೆಗಳಿಗೆ ಒರೆಗನ್ನಡಿಯಂತಿದ್ದು ಕೊಡವರ ಆರ್ಷೇಯ ಜೀವನ ವೈಖರಿಯನ್ನು ಪ್ರತಿನಿಧಿಸುತ್ತವೆ.

ಕೊಡವ ಮಹಿಳೆಯರ ಹೆಸರಾಂತ ಉಮ್ಮತ್ತಾಟ್ ಹಾಡು, ಮತ್ತು ಸಂಗೀತ ವಾದ್ಯಗಳ ಸುಗಮ ಸಂಗಮವೇ ಆಗಿದೆ. ಅವರ 'ಉಮ್ಮತ್' (ತಾಳ) ದಿಂದ ಹೊರಡುವ ತರಂಗ ಥಾಟ, ಹಾಗೂ ನೃತ್ಯ ಮಾದರಿಯಲ್ಲಿ ಅವರ ಕಲಾತ್ಮಕ ಪರಂಪರೆ ಮತ್ತು ಹಿಂದಿನ ಸಂಸ್ಕೃತಿಯು ಪ್ರತಿಬಿಂಬಿತವಾಗಿದೆ. ಎತ್ತರಿಸಿದ ವೇದಿಕೆಯ ಮೇಲಿರಿಸಿ 'ಕುತ್ತ್‌ಂಬೋಳಚ' (ನಿಂತ ದೀಪ) ದ ಸುತ್ತು ನೃತ್ಯಗಾರ್ತಿಯರು ಗೋಲಾಕಾರವಾಗಿ ನರ್ತಿಸುತ್ತಾರೆ. ಈ ನೃತ್ಯದಲ್ಲಿ ಸುಮಾರು ಇಪ್ಪತ್ತು ವೈವಿಧ್ಯಮಯ ಭಂಗಿಗಳಿದ್ದು ಈ ನೃತ್ಯಗಳು ವಿಶಿಷ್ಟ ಪಲ್ಲವಿಯಿಂದ ಪ್ರಾರಂಭಗೊಳ್ಳುತ್ತವೆ. ಈ ವಿವಿಧ ಜಾನಪದ ಗೀತೆಗಳು, ನೃತ್ಯಗಳು, ಮೊದಲಾದವು ಕೊಡವರ ಸಾಂಸ್ಕೃತಿಕ ಜೀವನ ಪರಂಪರೆಯಲ್ಲಿ ಶತಮಾನಗಳ ಹಿಂದೆಯೇ ದೃಢವಾಗಿ ನೆಲೆಯೂರಿವೆ. ಈ ನೃತ್ಯ ಮಾದರಿಗಳು ಕಾಲಗತಿಯಲ್ಲಿ ಹೊಸ ತಾನ, ಹೊಸ ತರಂಗಗಳನ್ನು ಪಡೆದು ಅಭಿವೃದ್ಧಿಗೊಂಡು ಇಂದಿನ ಪರಿಪೂರ್ಣಾವಸ್ಥೆಯಲ್ಲಿವೆ.

## ತುಳು ಭಾಷೆ ಮತ್ತು ಸಾಹಿತ್ಯ

ಕಡಿಮೆ ಪ್ರಸಾರದಲ್ಲಿರುವ ಭಾಷೆಗಳಲ್ಲಿ ಒಂದಾದರೂ ಸಹ ತುಳು ಭಾಷೆಯು ದ್ರಾವಿಡ ಭಾಷಾ ವರ್ಗದ ಒಂದು ಸಂಪದ್ಯುಕ್ತವಾದ ಪ್ರಾಚೀನ ಭಾಷೆಯಾಗಿದೆ. 1971ರ ಭಾರತ ಜನಗಣತಿಯ ಪ್ರಕಾರ 1,158,419 ಜನ ಭಾರತದಲ್ಲಿ ತುಳು ಭಾಷೆ ಮಾತನಾಡುತ್ತಾರೆ. ತುಳು ಭಾಷೆಯನ್ನಾಡುವ ಮೂಲ ವಾಸಿಗಳನ್ನು ತುಳುವರೆಂದೂ ಅವರ ಪ್ರದೇಶವನ್ನು ತುಳುನಾಡು ಎಂದೂ ಕರೆಯುತ್ತಾರೆ. ತುಳುನಾಡಿನ ಗಡಿಗಳು ಉತ್ತರದಲ್ಲಿ ಕಲ್ಯಾಣಪುರ ನದಿ, ಪಶ್ಚಿಮದಲ್ಲಿ ಅರಬ್ಬೀ ಸಮುದ್ರ, ಪೂರ್ವದಲ್ಲಿ ಪಶ್ಚಿಮ ಘಟ್ಟಗಳು ಮತ್ತು ದಕ್ಷಿಣದಲ್ಲಿ ಪಯಸ್ವಿನಿ/ಚಂದ್ರಗಿರಿ ನದಿಗಳ ಮಧ್ಯದ ವಿಶಾಲವಾದ ಪ್ರದೇಶವನ್ನು ಒಳಗೊಂಡಿದೆ. ಈ ಪ್ರದೇಶ ದಕ್ಷಿಣ ಕನ್ನಡ ಜಿಲ್ಲೆಯ ಬಹುಭಾಗಗಳನ್ನು ಮತ್ತು ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಯ ಹೆಚ್ಚಿನ ಭಾಗಗಳನ್ನು ಒಳಗೊಳ್ಳುತ್ತದೆ. ಸಂಗಂ ಸಾಹಿತ್ಯದ ಅಗನಾನೂರುನಲ್ಲಿ ತುಳುವರನ್ನು ಹೆಸರಿಸಲಾಗಿದೆ. "ಹರಡಿದ ತಮ್ಮ ಗರಿಗಳು ಮತ್ತು ಮೋಹಕ ಕಣ್ಣುಗಳಿಂದ ನೃತ್ಯ ಮಾಡುತ್ತಿರುವ ನವಿಲುಗಳಿಂದ ಕೂಡಿದ ಅನೇಕ ತೋಟಗಳಿರುವ ತುಳುನಾಡು ಅಸ್ತಿತ್ವದಲ್ಲಿತ್ತು". ತುಳುನಾಡು ಮತ್ತು ಅಲ್ಲಿನ ಜನರ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ. ಪಟ್ಟಾತ್ತಾಲ ಮಂಗಲದ ತಮಿಳು ಶಾಸನದಲ್ಲಿ (8ನೇಯ ಶತಮಾನ) "ಪಲ್ಲವ ರಾಜನ ಅರಮನೆಯ ಬಾಗಿಲು, ರಾಜನನ್ನು ಸೇವಿಸುವ ಅವಕಾಶಕ್ಕಾಗಿ ಕಾಯುತ್ತಿದ್ದ ತುಳುವರೂ ಸೇರಿ ಅನೇಕ ಜನರಿಂದ ಕಿಕ್ಕಿರಿದಿತ್ತು" ಎಂದಿದೆ. ಕನ್ನಡ ಅಥವಾ ಸಂಸ್ಕೃತಗಳಲ್ಲಿ ರಚಿತವಾಗಿರುವ ದಕ್ಷಿಣ ಕನ್ನಡದ ಅನೇಕ ಶಾಸನಗಳು ತುಳು ನಾಡನ್ನು ಹೆಸರಿಸುತ್ತವೆ.

ತುಳುವರು ಕರ್ನಾಟಕದ ಪ್ರಭಾವದಲ್ಲಿ ಇದ್ದವರು. ಆಳುಪ, ಬಂಗ, ಚೌಟ, ಮತ್ತು ಅಜಿಲ ಮುಂತಾದ ತುಳುವ ರಾಜಮನೆತನದವರು, ಅನೇಕ ಶತಮಾನಗಳ ಕಾಲ ತುಳು ನಾಡನ್ನು ಆಳಿದರು.

ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಗಳು ಎರಡು-ಮೂರು-ನಾಲ್ಕು ಭಾಷೆಗಳನ್ನು ಸಮ ಪರಿಣತಿಯಲ್ಲಿ ಮಾತನಾಡಬಲ್ಲ ಜನರಿಂದ ಕೂಡಿ ಬಹು ಭಾಷಾ ಪ್ರದೇಶಗಳಾಗಿವೆ. ಶಾಲೆ ಮತ್ತು ಕಾರ್ಯಾಲಯಗಳಲ್ಲಿ, ಮತ್ತು ಯಕ್ಷಗಾನವೆಂಬ ಜಾನಪದ ನೃತ್ಯದಲ್ಲಿ ಕನ್ನಡವೇ ಪ್ರಮುಖ ಭಾಷೆಯಾಗಿದೆ. ಆದರೆ ದೈನಂದಿನ ವ್ಯವಹಾರ ಭಾಷೆ ತುಳು ಆಗಿದೆ. ತುಳು ಇಲ್ಲಿನ ಬಹುಪಾಲು ಜನರ ಮಾತೃ ಭಾಷೆ. ಮೇಲೆ ಸೂಚಿಸಿರುವ ತುಳು ಮಾತನಾಡುವ ಜನರಲ್ಲಿ 1971ರ ಜನಗಣತಿಯ ಪ್ರಕಾರ, ಕರ್ನಾಟಕದಲ್ಲಿ 1,042,865 ಮಂದಿ ಮತ್ತು ಕೇರಳದಲ್ಲಿ 78,637 ಮಂದಿ ಇದ್ದಾರೆ. ಉಳಿದ 36,917 ಮಂದಿ ತುಳು ಮಾತನಾಡುವವರು ಇತರ ರಾಜ್ಯಗಳಲ್ಲಿ ನೆಲೆಸಿದ್ದಾರೆ. ಕರ್ನಾಟಕದ ತುಳುವರಲ್ಲಿ ಶೇ. 90 ಜನ ದಕ್ಷಿಣ ಕನ್ನಡದಲ್ಲಿಯೇ ಇದ್ದಾರೆ. ಅವರಲ್ಲಿ ಬ್ರಾಹ್ಮಣರು (ಶಿವಳ್ಳಿ ಮತ್ತು ಸ್ಥಾನಿಕ), ಜೈನರು, ಬಂಟರು, ಗೌಡರು, ಕುಂಬಾರರು/ಮೂಲ್ಯರು, ಪೂಜಾರಿಗಳು/ಬೈದ್ಯರು/ಬಿಲ್ಲವರು, ಗಟ್ಟಿಗಳು,

ಮಡಿವಾಳರು, ಮೊಗೇರರು, ಗಾಣಿಗರು/ಸಪಲ್ಯರು, ನಾಯಕರು/ಮರಾಠಿಗರು, ಪರವರು, ಪಂಬದರು, ನಲಿಕೆಯರು/ಹೊಲೆಯರು, ಗಿರಿಜನರು/ಕೊರಗರು ಮತ್ತು ಪ್ರಾಟೆಸ್ಟೆಂಟ್ ಕ್ರಿಶ್ಚಿಯನ್ನರೂ ಸೇರಿದ್ದಾರೆ.

ತುಳು ಶಬ್ದವನ್ನು ಮೊದಲು ಭೂ ಪ್ರದೇಶಕ್ಕೂ ಅನಂತರ ಜನವರ್ಗಕ್ಕೂ, ಕೊನೆಯಲ್ಲಿ ಭಾಷೆಗೂ ಬಳಸಲಾಯಿತೆಂದು ದೊರೆತಿರುವ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. 'ತುಳು' ಮತ್ತು ಅದರಿಂದ ನಿಷ್ಪತ್ತಿಯಾದ 'ತುಳುವ' ಶಬ್ದಗಳು, ಅವುಗಳ ಮೂಲವನ್ನು ಹುಡುಕುವ ಪ್ರಯತ್ನ ಮಾಡಿದ ಅನೇಕ ವಿದ್ವಾಂಸರ ಗಮನವನ್ನು ಸೆಳೆದಿದೆ. 'ತುಳುನಾಡಿಗೆ ಸೇರಿದ್ದು', 'ತುಳು ಮಾತನಾಡುವವನು', 'ಮೃದು', 'ತಿರುಳು', 'ನೀರೂಡಿದ' ಎಂಬ ಅರ್ಥಗಳಲ್ಲಿ ತುಳುವ ಶಬ್ದವನ್ನು ಉಪಯೋಗಿಸುತ್ತಾರೆ. ತುಳು ಭಾಷೆಯು ಬಹಳವಾಗಿ ಬೆಳೆದ ಸಂಪದ್ಯುಕ್ತವಾದ ಒಂದು ಭಾಷೆಯಾಗಿದ್ದು, ಪೂರ್ವ ದ್ರಾವಿಡ ಭಾಷೆಯ ವೈಲಕ್ಷಣ್ಯಗಳನ್ನು ಉಳಿಸಿಕೊಂಡಿರುವ ಶಬ್ದ ಸಂಪತ್ತು, ವ್ಯಾಕರಣ ಮತ್ತು ವಾಕ್ ಸಾಹಿತ್ಯವನ್ನು ಪಡೆದಿದೆ. ಅದು ತನ್ನದೇ ಆದ ಭಾಷಾ ವಿಜ್ಞಾನ ವಿಶೇಷಗಳನ್ನು ಉಳಿಸಿಕೊಂಡಿದ್ದು ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳೊಂದಿಗೆ ಅನೇಕ ವೈಲಕ್ಷಣ್ಯಗಳಲ್ಲಿ ಸಾಮ್ಯತೆಯನ್ನು ಹೊಂದಿದೆ. ತುಳು ಭಾಷೆಯು ಭೌಗೋಳಿಕ ಹಾಗೂ ಸಾಮಾಜಿಕ ದೃಷ್ಟಿಯಲ್ಲಿ ವಿಶಿಷ್ಟವಾದ ಉಪಭಾಷಾ ವ್ಯತ್ಯಾಸಗಳನ್ನು ಪಡೆದಿದೆ. ಪ್ರಾಂತೀಯ ವ್ಯತ್ಯಾಸಗಳ ಆಧಾರದಿಂದ, ಅದನ್ನು ಉಡುಪಿ ತುಳು, ಮಂಗಳೂರು ತುಳು, ಪುತ್ತೂರು ತುಳು, ಕಾಸರಗೋಡು ತುಳು ಎಂದು ವರ್ಗೀಕರಿಸಬಹುದು. ಮಾತನಾಡುವ ವ್ಯತ್ಯಾಸಗಳ ಆಧಾರದಿಂದ ತುಳುವಿನಲ್ಲಿ ಬ್ರಾಹ್ಮಣರ ತುಳು ಮತ್ತು ಬ್ರಾಹ್ಮಣೇತರರ ತುಳು ಎಂದು ಎರಡು ಮುಖ್ಯವಾದ ಸಾಮಾಜಿಕ ಉಪಭಾಷೆಗಳನ್ನು ಗುರುತಿಸಬಹುದು. ಬ್ರಾಹ್ಮಣೇತರರ ತುಳುವನ್ನು ಮೇಲ್‌ವರ್ಗದವರ ತುಳು, ಮಧ್ಯಮ ವರ್ಗದವರ ತುಳು ಮತ್ತು ಕೆಳವರ್ಗದವರ ತುಳು ಎಂದು ವಿಭಾಗಿಸುತ್ತಾರೆ. ಬ್ರಾಹ್ಮಣರ ತುಳು ಮತ್ತು ಬ್ರಾಹ್ಮಣೇತರರ ತುಳುವಿನಲ್ಲಿ ಸ್ಪಷ್ಟ ವ್ಯತ್ಯಾಸಗಳು ಕಾಣುತ್ತವೆ. ಆದರೆ ಬ್ರಾಹ್ಮಣೇತರರ ತುಳುವಿನ ಉಪಭಾಷೆಗಳಲ್ಲಿ ಅಷ್ಟು ವ್ಯತ್ಯಾಸಗಳು ಕಾಣುವುದಿಲ್ಲ. ಹಳೆಯ ತುಳು ಮತ್ತು ಹೊಸ ತುಳುವಿನಲ್ಲಿ ಕೆಲವು ಅಪ್ರಧಾನ ವ್ಯತ್ಯಾಸಗಳು ಕಾಣಬಹುದು, ಆದರೆ ಗ್ರಾಂಥಿಕ ಮತ್ತು ಮಾತಿನ ತುಳುವಿನಲ್ಲಿ ವ್ಯತ್ಯಾಸಗಳಿಲ್ಲ. ತುಳು ಬಹು ಅಭಿವೃದ್ಧಿ ಹೊಂದಿದ ಭಾಷೆಯಾದರೂ, ಅದಕ್ಕೆ ತನ್ನದೇ ಆದ ಲಿಪಿಯಿಲ್ಲ. ಮಲಯಾಳ (ಗ್ರಂಥ) ಲಿಪಿ ಮಾದರಿಯ ಲಿಪಿಯೊಂದನ್ನು ತುಳು ಹೊಂದಿತ್ತೆಂದು ಕೆಲವರು ಹೇಳುತ್ತಾರೆ. ಪ್ರಾಚೀನ ಕಾಲದಲ್ಲಿ ಕೆಲವು ಸಂಸ್ಕೃತ ಗ್ರಂಥಗಳನ್ನು ಅಂತಹ ತುಳು ಲಿಪಿಯಲ್ಲಿ ಬರೆಯಲಾಗಿದೆ.

ತನ್ನದೇ ಆದ ವೈಲಕ್ಷಣ್ಯಗಳನ್ನು ಹೊಂದಿರುವ ಅಪಾರವಾದ ಜಾನಪದ ಪರಂಪರೆಯನ್ನು ತುಳು ಭಾಷೆ ಪಡೆದಿದೆ. ಆ ಪರಂಪರೆ ಅಂತರಸಂಬಂಧವಿರುವ ಜಾನಪದ ಸಂಸ್ಕೃತಿ, ಜಾನಪದ ಕಲೆ ಮತ್ತು ಜಾನಪದ ಧರ್ಮಗಳನ್ನು ಒಳಗೊಂಡಿದೆ. ಬಾಯಿಂದ ಬಾಯಿಗೆ ವರ್ಗಾವಣೆಯಾಗಿ ಬಂದಿರುವ ತುಳು ಜಾನಪದ ಸಾಹಿತ್ಯವು ವೈಯಕ್ತಿಕವಾದ ಶೈಲಿ, ಅಭಿರುಚಿಗಳನ್ನು ಪಡೆದಿದೆ. ಆದರೂ, ತುಳು ಜನರ ಸ್ವಭಾವ, ಸಂಪ್ರದಾಯ, ಪರಂಪರೆ, ನಂಬಿಕೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಅರ್ಥ ಮಾಡಿಕೊಳ್ಳಲು ಈ ಜಾನಪದ ಸಾಹಿತ್ಯವು ಸಾಮಗ್ರಿಗಳನ್ನು ಒದಗಿಸುತ್ತದೆ. ತುಳುವಿನ ಜಾನಪದ ಸಾಹಿತ್ಯವು ಮುಖ್ಯವಾಗಿ ಪಾಡ್ದನ, ಸಂಧಿ, ಕಬಿತಾ, ಉರಲ್, ಮಡಿಪು, ನೃತ್ಯ, ಪದ್ಯ, ಗಾದೆ, ಒಗಟ್, ಜೋಗುಳ, ಅಜ್ಜಿಕಥೆ, ಇತ್ಯಾದಿ ಪ್ರಕಾರಗಳಲ್ಲಿ ಕಂಡುಬರುತ್ತದೆ. ಪಾಡ್ದನ ಅಥವಾ ಸಂಧಿಯು ಲಾವಣಿಯಂತೆ ಕಥನಾತ್ಮಕ ಗೀತೆ. ಪಾಡ್ದನಗಳು, ತುಳುನಾಡಿನ ಪೂಜೆಗೊಳ್ಳುವ ಭೂತಗಳು, ನಾಯಕರು ಮತ್ತು ಅರೆನಾಯಕರ ಇತಿಹಾಸ ಕಥೆಗಳನ್ನು ನಿರೂಪಿಸುತ್ತವೆ. ಭತ್ತದ ಸಸಿಗಳನ್ನು ನೆಡುವಾಗ, ಹೆಣ್ಣುಮಕ್ಕಳು ಮಾತ್ರ ಹೇಳಿಕೊಳ್ಳುವ 'ಕವಿತಾ' ಸ್ವಲ್ಪ ದೀರ್ಘವಾದ ಕವಿತೆಯಾಗಿದ್ದು, ವಿವಿಧ ಘಟನೆಗಳನ್ನು ನಿರೂಪಿಸುತ್ತದೆ. 'ಮಡಿಪು', ಪದ್ಯವೂ ಅಲ್ಲದ ಗದ್ಯವೂ ಅಲ್ಲದ ಒಂದು ಬಗೆಯ ಶ್ಲೋಕವಾಗಿದ್ದು, ಭೂತ ನೃತ್ಯ ಮಾಡುವವರು ನೃತ್ಯದ ಸಮಯದಲ್ಲಿ ಅದನ್ನು ಹೇಳುತ್ತಾರೆ. 'ಉರಲ್' ಸ್ವಲ್ಪ ಉದ್ದದ ಕವಿತೆ. ಇದನ್ನು ಪುರುಷರು, ಉಳುಮೆ ಮಾಡುವಾಗ, ಗಾಡಿ ಹೊಡೆಯುವಾಗ, ಹೆಂಡ ಇಳಿಸುವಾಗ ಹಾಡುತ್ತಾರೆ. ಕೆಳವರ್ಗದ ಜನರ ಭೂತ ನೃತ್ಯಗಾರನಾದ ನಲಿಕೆ ಬೇರೆ ಬೇರೆ ಋತುಗಳಲ್ಲಿ ಆಟಿಕಳಂಜ ಅಥವಾ ಮಾದಿರೊ ಎಂಬ ಸಣ್ಣ ತಂಡವನ್ನು ಮನೆಯಿಂದ ಮನೆಗೆ ತೆಗೆದುಕೊಂಡು ಹೋಗುತ್ತಾನೆ. ಈ ತಂಡ 'ನೃತ್ಯ-ಪದ್ಯ' ಗಳನ್ನು ಹಾಡುತ್ತಾ ಕುಣಿಯುತ್ತದೆ. ಗಾದೆ ಮತ್ತು ಒಗಟುಗಳು, ಪ್ರಾಚೀನರ ಯುಕ್ತಿ ಪೂರ್ಣ ರಚನೆಗಳಾಗಿವೆ. ಅಜ್ಜಿಕಥೆ ಮತ್ತು ಜೋಗುಳಗಳನ್ನು ತೊಟ್ಟಿಲು ತೂಗುವಾಗ ಹಾಡುತ್ತಾರೆ. ಏತದಿಂದ ಹೊಲಗದ್ದೆಗಳಿಗೆ ನೀರು ಚೆಲ್ಲುವಾಗ, ಗಾಣಗಳಲ್ಲಿ ತೆಂಗಿನ ಎಣ್ಣೆಯನ್ನು ತೆಗೆಯುವಾಗ, ಮತ್ತು ಅಂತಹ ಅನೇಕ ಸಂದರ್ಭಗಳಲ್ಲಿ ಕೆಲವು ಹಾಡುಗಳನ್ನು ಹಾಡುತ್ತಾರೆ.

ತುಳುನಾಡಿನ ವಿವಿಧ ಜಾತಿಗಳಲ್ಲಿ ಹಂಚಿಹೋಗಿರುವ ಜಾನಪದದ ಬಗೆಗಳನ್ನು ಹೆಸರಿಸುವುದು ಅವಶ್ಯಕ. ತುಳು ಬ್ರಾಹ್ಮಣರು ಸಾಮಾನ್ಯವಾಗಿ ವಿದ್ಯಾವಂತರು ಮತ್ತು ವೇದ ಪರಂಪರೆಯನ್ನು ಅನುಸರಿಸುವವರು. ಅವರ ಜಾನಪದದ ಬಗೆಗಳು ಬ್ರಾಹ್ಮಣೇತರರ ಜಾನಪದಗಳಿಗೆ ಭಿನ್ನವಾಗಿವೆ. ಬ್ರಾಹ್ಮಣರ ಜಾನಪದ ಹಾಡುಗಳು ಮುಖ್ಯವಾಗಿ ದೇವದೇವತೆಗಳ, ರಾಮಾಯಣ, ಮಹಾಭಾರತದ ನಾಯಕ ನಾಯಕಿಯರನ್ನು

ಹೊಗಳುವ ಹಾಡುಗಳಾಗಿವೆ. ಮದುವೆ, ಪೂಜೆ ಮತ್ತು ಇತರ ಹಬ್ಬದ ದಿನಗಳಲ್ಲಿ ಹಿರಿಯ ಹೆಂಗಸರು ಇವುಗಳನ್ನು ಹೇಳುತ್ತಾರೆ. ಈ ಹಾಡುಗಳು ಹೆಚ್ಚು ಪ್ರೌಢವಾಗಿವೆ, ಆಧುನಿಕವಾಗಿವೆ. ಸಮಾಜದಲ್ಲಿ ಹಾಗೂ ಪರಸ್ಪರರಲ್ಲಿ ಅಸ್ಪೃಶ್ಯರಾದ ಪಂಬದ, ಪರವ ಮತ್ತು ನಲಿಕೆಯರು ವೃತ್ತಿಯಿಂದ ಭೂತ ನೃತ್ಯಗಾರರು. ಭೂತದ ಕಥೆಗಳನ್ನು ನಿರೂಪಿಸುವ ಜಾನಪದ ಹಾಡುಗಳಾದ ಪಾಡ್ದನಗಳನ್ನು ಹಾಡುತ್ತಾರೆ. ಶಿವನು 1,001 ಭೂತಗಳನ್ನು ಜೊತೆಗೆ ಅಷ್ಟೇ ಸಂಖ್ಯೆಯ ರೋಗಗಳನ್ನು ನಿರ್ಮಾಣ ಮಾಡಿ, ಪಾಪಿಗಳ ಮೇಲೆ ಆಕ್ರಮಣ ಮಾಡಲು ಭೂಮಿಗೆ ಕಳುಹಿಸಿದ ನೆಂದು ಒಂದು ಪಾಡ್ದನ ನಿರೂಪಿಸುತ್ತದೆ. ಜನರು ಭೂತಗಳಿಗೆ ವರ್ಷಕ್ಕೊಮ್ಮೆ ಆಹಾರವನ್ನು ಅರ್ಪಿಸಿ, ತಮಗಿರುವ ತಾಪತ್ರಯ ಗಳಿಂದ ಬಿಡುಗಡೆ ಹೊಂದಲು, ಸಮಾಧಾನ ಪಡೆಯಲು ಪ್ರಯತ್ನಿಸುತ್ತಾರೆ. ಈ ವಾರ್ಷಿಕ ಹಬ್ಬಗಳಲ್ಲಿ ನೇಮ, ಆಯನ, ಕೋಲ, ಬಲಿ, ತಂಬಿಲ ಮತ್ತು ಅಗೆಲು, ಮುಂತಾದ ಬಗೆಗಳಿವೆ. ನಾಯಕರು ಮತ್ತು ಅರೆನಾಯಕ ನಾಯಕಿಯರು ಸತ್ತು ಭೂತಗಳಾಗುತ್ತಾರೆಂದು ಜನರಲ್ಲಿ ನಂಬಿಕೆಯಿದೆ. ಅವರುಗಳ ಕಥೆಯನ್ನು ಪಾಡ್ದನಗಳಲ್ಲಿ ನಿರೂಪಿಸಲಾಗುತ್ತದೆ. ಬ್ರಾಹ್ಮಣೇತರರು ಈ ಪಾಡ್ದನಗಳನ್ನು ಮನರಂಜನೆಗಾಗಿ ಹಾಡುತ್ತಾರೆ. ತುಳು ಜಾನಪದವು ಜನರ ಪ್ರಾಚೀನ ನಂಬಿಕೆಗಳ ಮೇಲೆ ಬೆಳಕು ಚೆಲ್ಲಿದೆ; ಜನರ ಸಾಮಾಜಿಕ ಮನೋವಿಜ್ಞಾನ ಮತ್ತು ಸಾಮಾಜಿಕ ನಡವಳಿಕೆಯ ಕ್ರಮವನ್ನು ಆಳವಾಗಿ ಅಭ್ಯಾಸ ಮಾಡಲು ಬೇಕಾದಷ್ಟು ಅವಕಾಶವನ್ನು ಕಲ್ಪಿಸಿ ಕೊಟ್ಟಿದೆ.

ಇತರ ದ್ರಾವಿಡ ಭಾಷೆಗಳಿಗೆ ಹೋಲಿಸಿದರೆ ತುಳು ಭಾಷೆ ಯಲ್ಲಿ ಉತ್ತಮ ಸಾಹಿತ್ಯ ಕೃತಿಗಳು ಕಡಿಮೆ. ಇತ್ತೀಚೆಗೆ ಅನೇಕ ಕೃತಿಗಳ ರಚನೆಯಾಗುತ್ತಿವೆ. ಮೂರು ವರ್ಷಗಳ ಕೆಳಗೆ ಕಾಸರಗೋಡಿನಲ್ಲಿ ದೊರೆತ 200 ಗರಿಗಳಿರುವ ತಾಳೆಗರಿಯ ಹಸ್ತಪ್ರತಿಯೊಂದರಿಂದ ತುಳು ಭಾಷೆಯಲ್ಲಿ ಉತ್ತಮ ಸಂಖ್ಯೆಯ ಸಾಹಿತ್ಯ ಕೃತಿಗಳಿದ್ದಿರಬಹುದೆಂಬ ಊಹೆಗೆ ಆಧಾರ ಸಿಕ್ಕಿದೆ. ತುಳು ಲಿಪಿಯೆಂದು ಹೇಳಲಾಗುವ ಲಿಪಿಯಲ್ಲಿ ಕ್ರಿ. ಶ. 1695ರಲ್ಲಿ ಬ್ರಾಹ್ಮಣನಾದ ವಿಷ್ಣು ಕವಿ ಎಂಬವನಿಂದ ರಚಿತವಾದ ಈ ಗ್ರಂಥದ ಹೆಸರು ಕೃಷ್ಣ ಲೀಲಾ.

ಕಳೆದ 150 ವರ್ಷಗಳಿಂದ ಮಾತ್ರ ತುಳು ಭಾಷೆಯು ತನ್ನ ಸಾಹಿತ್ಯ ಕೃತಿಗಳ ರಚನೆಗೆ ಕನ್ನಡ ಲಿಪಿಯನ್ನು ಬಳಸಿಕೊಂಡಿದೆ. ಬಾಸೆಲ್ ಮಿಷನ್ನಿನವರು ತುಳುವಿನಲ್ಲಿ ಕೆಲವು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಸಂತ ಮತ್ತಾಯನ ಸುವಾರ್ತೆ (1842) ಮತ್ತು ಹೊಸ ಒಡಂಬಡಿಕೆ (1847) ಎಂಬ ಅನುವಾದಗಳು, ಶಾಲಾ ಮಕ್ಕಳಿಗೋಸ್ಕರ ಕೆಲವು ಬೈಬಲ್ ಕಥೆಗಳು, ಕೆಲವು ಧಾರ್ಮಿಕ ಪುಸ್ತಕಗಳು (1859) ಇದನ್ನು ಅವರು ಪ್ರಕಟಿಸಿದ್ದಾರೆ. ರೆವರೆಂಡ್ ಬ್ರಿಗೆಲ್ ಅವರು ಇಂಗ್ಲಿಷ್‌ನಲ್ಲಿ ಬರೆದಿರುವ ತುಳು ಭಾಷೆಯ ವ್ಯಾಕರಣ (1872) ಭಾಷಾ ವಿಜ್ಞಾನದ ವಿದ್ಯಾರ್ಥಿಗಳಿಗೆ ದೊರಕುವ ಏಕ ಮಾತ್ರ ಆಧಾರವಾಗಿತ್ತು. 1886ರಲ್ಲಿ ರೆವರೆಂಡ್ ಮ್ಯಾನರ್ ಅವರು ತುಳು-ಇಂಗ್ಲಿಷ್ ನಿಘಂಟನ್ನು ಪ್ರಕಾಶ ಪಡಿಸಿದರು. ಮತ್ತು ಅನಂತರ ಇಂಗ್ಲಿಷ್ ತುಳು ನಿಘಂಟನ್ನು ಸಹ ಪ್ರಕಟಿಸಿದರು. ಮ್ಯಾನರ್ ಅವರು ತುಳು-ಇಂಗ್ಲಿಷ್ ನಿಘಂಟನ್ನು ಪ್ರೊ|| ಎಂ. ಮರಿಯಪ್ಪ ಭಟ್ ಮತ್ತು ಡಾ|| ಶಂಕರ ಕೆದಿಲಾಯ ಅವರು ಪುನರ್ ಸಂಪಾದನೆ ಮಾಡಿದ್ದು ಅದನ್ನು ಮದ್ರಾಸ್ ವಿಶ್ವವಿದ್ಯಾಲಯದವರು ಪ್ರಕಟಿಸಿದ್ದಾರೆ. ಮಿಷನರಿಗಳು ಕೆಲವು ಪಾಡ್ದನಗಳನ್ನು ಸಂಗ್ರಹಿಸಿ ಪ್ರಕಟಿಸಿದರು. ಮಿಷನರಿಗಳ ನಂತರ ದೇಶೀಯ ವಿದ್ವಾಂಸರ ಗುಂಪೊಂದು ತುಳು ಭಾಷೆ ಮತ್ತು ಸಾಹಿತ್ಯಗಳ ಬೆಳವಣಿಗೆಗೆ ಕಾಣಿಕೆ ಸಲ್ಲಿಸಿತು. ದಿವಂಗತ ಎಸ್. ಯು. ಪಣಿಯಾಡಿ ಅವರು 'ತುಳು ವ್ಯಾಕರಣ' (ತುಳು ಭಾಷೆ ಮತ್ತು ಕನ್ನಡ ಲಿಪಿ) ವನ್ನು ಬರೆದು, 1932ರಲ್ಲಿ ಪ್ರಕಟಪಡಿಸಿದ ಮೊದಲ ವಿದ್ವಾಂಸರು. ತುಳು ಕೃತಿಗಳ ಪ್ರಕಾಶನಕ್ಕೋಸ್ಕರ ತುಳುನಾಡು ಮುದ್ರಣಾಲಯವನ್ನು ಅವರು ಪ್ರಾರಂಭಿಸಿದರು. ಇಲ್ಲಿ ದೇಶೀಯ ವಿದ್ವಾಂಸರ ಗುಂಪಿನ ವಿವಿಧ ಪುಸ್ತಕಗಳನ್ನು 12 ಶ್ರೇಣಿಗಳಲ್ಲಿ ಪ್ರಕಟಿಸಲಾಯಿತು. ಅವುಗಳು ಮುಖ್ಯವಾಗಿ ಹಳೆಯ ಜಾನಪದ ಗೀತೆಗಳು, ಅರೆ ಐತಿಹಾಸಿಕ ಪಾಡ್ದನ ಅಥವಾ ಸಂಧಿಗಳ ಸಂಗ್ರಹಗಳಾಗಿದ್ದವು. ಅವುಗಳಲ್ಲಿ ಕೆಲವು ಪಾರಂಪರಿಕ ರಚನೆಗಳು ಮತ್ತೆ ಕೆಲವು ಕವನ, ನಾಟಕ ಮುಂತಾದ ಸ್ವಂತ ರಚನೆಗಳಾಗಿದ್ದವು. ಈ ಉತ್ಸಾಹ ಬಹುಕಾಲ ಉಳಿಯಲಿಲ್ಲ. 1950ರ ನಂತರ, ತುಳು ಸಾಹಿತ್ಯ ರಭಸವಾಗಿ ಬೆಳೆಯಿತು. ದೇಶೀಯ ಮತ್ತು ಹೊರಗಿನ ಅನೇಕ ಮಂದಿ ವಿದ್ವಾಂಸರು ತುಳು ಸಾಹಿತ್ಯದ ಅಭಿವೃದ್ಧಿಗೆ ಬೇಕಾದಷ್ಟು ಸಹಾಯ ಮಾಡಿದ್ದಾರೆ. ತುಳು ಭೂಮಿ, ತುಳು ಜನ, ಅವರ ಸಂಸ್ಕೃತಿ ಭಾಷೆ ಸಾಹಿತ್ಯಗಳ ಮೇಲೆ ತುಳು-ಕನ್ನಡ-ಇಂಗ್ಲಿಷ್‌ಗಳಲ್ಲಿ ಅವರು ಬರೆದಿದ್ದಾರೆ. ಕೆ. ವಿ. ರಮೇಶರ ಎ ಹಿಸ್ಟರಿ ಆಫ್ ಸೌತ್ ಕೆನರಾ (1970) ಮತ್ತು ಪಿ. ಗುರುರಾಜ ಭಟ್ಟರ ಸ್ಟಡೀಸ್ ಇನ್ ತುಳುವ ಹಿಸ್ಟರಿ ಅ್ಯಂಡ್ ಕಲ್ಚರ್ (1976), ಇವೆರಡು ಪ್ರಮುಖವಾದ ಕೃತಿಗಳು.

ತುಳು ಸಾಹಿತ್ಯದ ವಿವಿಧ ಶಾಖೆಗಳಲ್ಲಿ, ನಾಟಕವು ವಿಶೇಷ ವಾಗಿ ಕಾಣಿಸುತ್ತದೆ. ಈಗ ತುಳುವಿನಲ್ಲಿ ಯಕ್ಷಗಾನಗಳು ಜನಪ್ರಿಯವಾಗುತ್ತಿವೆ. ಅನೇಕ ವಿದ್ವಾಂಸರು ಪಾಡ್ದನಗಳನ್ನು ಸಂಗ್ರಹಿಸಿ ತುಳುವಿನಲ್ಲಿ ಪ್ರಕಟಿಸಿದ್ದಾರೆ. ತುಳು ಭಾಷೆ ಮತ್ತು ಸಾಹಿತ್ಯಗಳನ್ನು ಪ್ರೋತ್ಸಾಹಿಸುವ ಪ್ರಯತ್ನ ಮಾಡುವ ಕಾರಣ ದಿಂದ ಕೆಲವು ಮಾಸ ಪತ್ರಿಕೆಗಳನ್ನು (ತುಳುಕೂಟ, ತುಳು ಸಿರಿ, ಇತ್ಯಾದಿ) ಪ್ರಾರಂಭಿಸಲಾಗಿದೆ. ಕಳೆದ ಹತ್ತು ವರ್ಷಗಳಿಂದ, ಕೆಲವರು ತುಳು ಚಲನಚಿತ್ರಗಳನ್ನು ತಯಾರಿಸುತ್ತಿದ್ದಾರೆ.

ಮತ್ತು ಅವು ಅತ್ಯಂತ ಜನಪ್ರಿಯವಾಗಿವೆ. ಮಂಗಳೂರು ಆಕಾಶವಾಣಿ ನಿಲಯವು ತುಳು ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತದೆ. ಆಧುನಿಕ ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ನಡೆದಿದೆ. ತುಳುವಿನ ವಿವರಣಾತ್ಮಕ ವಿಶ್ಲೇಷಣೆ (ಡಿಸ್‌ಕ್ರಿಪ್‌ಟಿವ್ ಎನಾಲಿಸಿಸ್ ಆಫ್ ತುಳು) 1967 (ಡಿ. ಎನ್. ಎಸ್. ಭಟ್), ದ್ರಾವಿಡ ಭಾಷೆ-ತುಳು ವ್ಯಾಕರಣ (ಎ ಗ್ರಾಮರ್ ಆಫ್ ತುಳು-ಎ ದ್ರವಿಡಿಯನ್ ಲ್ಯಾಂಗ್ವೇಜ್) 1971 (ಎಸ್. ಎಲ್. ಭಟ್), ತುಳು-ಕುಂಬಾರ ಉಪಭಾಷೆಯ ರಚನಾಶಿಲ್ಪ ವಿವರಣೆ (ಸ್ಟ್ರಕ್ಚರಲ್ ಡಿಸ್‌ಕ್ರಿಪ್‌ಶನ್ ಆಫ್ ತುಳು-ಕುಂಬಾರ ಡಾಯಲೆಕ್ಟ್) 1978 (ಎಂ. ರಾಮ), ತುಳುವಿನ ಕ್ರಿಯಾಪದ ರಚನೆ-ಪರಿವರ್ತಕ ವಿಶ್ಲೇಷಣೆ, 1979 (ಎಸ್. ಮಲ್ಲಿಕಾದೇವಿ) ಇವು ತುಳು ಭಾಷೆಯ ಮೇಲಿನ ಕೆಲವು ಪಿಎಚ್.ಡಿ. ನಿಬಂಧಗಳಾಗಿವೆ. ಮಂಗಳೂರು ವಿಶ್ವ ವಿದ್ಯಾಲಯದ ಸ್ನಾತಕೋತ್ತರ ಹಂತದಲ್ಲಿ ತುಳು ಭಾಷೆ, ಸಾಹಿತ್ಯ, ಸಂಸ್ಕೃತಿ ಮತ್ತು ಜಾನಪದವನ್ನು ಹೇಳಿಕೊಡುತ್ತಾರೆ.

ಅಕ್ಟೋಬರ್ 2, 1979ರಲ್ಲಿ ಕರ್ನಾಟಕ ಸರ್ಕಾರದ ಸಹಾಯದಿಂದ ಎಂ. ಜಿ. ಎಂ. ಕಾಲೇಜಿನ ಪ್ರೊ॥ ಕು. ಶಿ. ಹರಿದಾಸಭಟ್ಟರ ಪ್ರಧಾನ ಸಂಪಾದಕತ್ವದಲ್ಲಿ ತುಳು ಪದಕೋಶ ಯೋಜನೆಯನ್ನು ಪ್ರಾರಂಭಿಸಲಾಯಿತು. ಇದು ಒಂದು ಸಮಕಾಲೀನ ಸಂಪೂರ್ಣ ಕೃತಿಯಾಗುತ್ತದೆಂದು ನಿರೀಕ್ಷಿಸಲಾಗಿದೆ. ಮಂಗಳೂರಿನ ತುಳು ಕೂಟವು, ತುಳು ಭಾಷೆ, ಸಾಹಿತ್ಯ ಮತ್ತು ಜನಪದಗಳ ಅಭಿವೃದ್ಧಿಯಲ್ಲಿ ಆಸಕ್ತಿಯನ್ನು ಹೊಂದಿದೆ. 1983 ರಲ್ಲಿ ಬೆಂಗಳೂರಿನಲ್ಲಿ ಅಖಿಲ ಭಾರತ ತುಳು ಸಾಹಿತ್ಯ ಸಮ್ಮೇಳನ ನಡೆಯಿತು. ತಿರುವನಂತಪುರದ ಅಂತಾರಾಷ್ಟ್ರೀಯ ದ್ರಾವಿಡ ಭಾಷಾ ವಿಜ್ಞಾನ ಶಾಲೆ, ತುಳು ಭಾಷೆಯ ಮೇಲೆ ವಿಚಾರ ಸಂಕಿರಣವೊಂದನ್ನು ಏರ್ಪಡಿಸಿತ್ತು. ತುಳು ವ್ಯುತ್ಪತ್ತಿ ಕೋಶವೊಂದನ್ನು ತಯಾರಿಸಲು, ಅದು ಯೋಜನೆಯನ್ನು ಪ್ರಾರಂಭಿಸಿದೆ. ಜೊತೆಗೆ ಪ್ರಾಥಮಿಕ ತರಗತಿಗಳಿಗೆ ತುಳು ಪುಸ್ತಕಗಳನ್ನು ಬರೆಸುವ ಯೋಜನೆಯನ್ನು ಹಾಕಿಕೊಂಡಿದೆ. ತುಳು ಭಾಷೆ ಕನ್ನಡದಿಂದ ಅಪಾರವಾಗಿ ಉಪಕೃತವಾಗಿದೆ. ಸಾಹಿತ್ಯಿಕ ರಚನೆಗಳಲ್ಲಿ ವಿಶೇಷವಾಗಿ ಆಧುನಿಕ ರಚನೆಗಳಲ್ಲಿ ಕನ್ನಡದ ಪ್ರಭಾವ ಗಣನೀಯವಾಗಿದೆ. ಕೆಲವು ಕನ್ನಡದ ನೇರ ಅನುವಾದಗಳಾಗಿವೆ. ಕನ್ನಡ ಯಕ್ಷಗಾನ ಕೃತಿಗಳನ್ನು ತುಳುವಿಗೆ ಅನುವಾದ ಮಾಡಲಾಗಿದೆ. ಯಕ್ಷಗಾನದ ಪಾತ್ರಗಳನ್ನಾಡುವವರು ಕನ್ನಡ ಮತ್ತು ತುಳು ಎರಡನ್ನೂ ಆಡುವವರಾಗಿರುವುದು ಒಂದು ಸ್ವಾರಸ್ಯಕರ ಅಂಶ. ಹೆಚ್ಚು ಕಡಿಮೆ ಎಲ್ಲಾ ತುಳು ಭಾಷಾ ಸಾಹಿತಿಗಳು ಕನ್ನಡವನ್ನು ತಿಳಿದಿದ್ದಾರೆ.

## ಕರ್ನಾಟಕದಲ್ಲಿ ಕೊಂಕಣಿ

ಕೊಂಕಣಿ ಸ್ವತಂತ್ರವಾದ ಭಾಷೆ ಎಂದು ಈಗ ಅಧಿಕೃತವಾಗಿ ಗುರುತಿಸಲ್ಪಟ್ಟಿದೆ. ಅದನ್ನು 15 ಲಕ್ಷಕ್ಕಿಂತ ಹೆಚ್ಚು ಮಂದಿ ಮಾತನಾಡುತ್ತಿದ್ದು, ಅವರು ಭಾರತ ಪ್ರಸ್ಥಭೂಮಿಯ ಪಶ್ಚಿಮ ತೀರದಾದ್ಯಂತ ಹೆಚ್ಚಾಗಿ ಹರಡಿದ್ದಾರೆ. ಇತರ ಅನೇಕ ಭಾರತೀಯ ಭಾಷೆಗಳ ಹಾಗೆ ಅದರ ಮೂಲ ಸಂಸ್ಕೃತವಾಗಿದ್ದು, ಅದು ಆರ್ಯರ ಆವಂತಿ ಪ್ರಾಕೃತದ ರೂಪವೆನ್ನಲಾಗಿದೆ. ಆವಂತಿಯು ಶೌರಸೇನಿ ಮತ್ತು ಮಹಾರಾಷ್ಟ್ರೀಪ್ರಾಕೃತಗಳ ಮಿಶ್ರಣ. ಆದರೆ ಕೆಲವು ಪಂಡಿತರು ಅದು ಅರ್ಧ ಮಾಗಧಿಯಿಂದ ಉತ್ಪತ್ತಿಯಾಯಿತೆಂದರೆ ಇನ್ನು ಕೆಲವರು ಅದು ಪೈಶಾಚಿಯ ಇನ್ನೊಂದು ರೂಪವೆನ್ನುತ್ತಾರೆ. ಕೊಂಕಣಿ ಎಂಬ ಹೆಸರು ಕೊಂಕಣದಿಂದ ಬಂದಿದೆ. ಅದು ಪಶ್ಚಿಮ ತೀರದ ಪುರಾತನ ಹೆಸರಾಗಿದ್ದು, ಸ್ಕಂದಪುರಾಣ, ಬೃಹತ್ ಸಂಹಿತೆ ಮುಂತಾದ ಪುರಾತನ ಉದ್ಗ್ರಂಥಗಳಲ್ಲಿ ಉಲ್ಲೇಖಿತವಾಗಿದೆ. ಸ್ಕಂದ ಪುರಾಣದ 'ಸಹ್ಯಾದ್ರಿ ಖಂಡ'ದಲ್ಲಿ ಕೊಂಕಣ ಪ್ರದೇಶವನ್ನು ಏಳು ಗಡಿ ಪ್ರದೇಶಗಳನ್ನಾಗಿ ವಿಭಜಿಸಿದೆ: 1) ಬರ್ಬರ, 2) ಸೌರಾಷ್ಟ್ರ, 3) ಕೊಂಕಣ (ನಿಜವಾದುದು), 4) ಕರ್ಹಾಟ, 5) ಕರ್ನಾಟ, 6) ತೆಲಂಗ ಮತ್ತು 7) ಕೇರಳ.

ಆಗ ಗೋವೆಯನ್ನಾಳುತ್ತಿದ್ದ ಕದಂಬ ಮನೆತನದ ಕನ್ನಡ ರಾಜರು (ಜಯಕೇಶಿ 1050-1080) ಮತ್ತು ಸಾರಸ್ವತ ಬ್ರಾಹ್ಮಣರ ನಡುವೆ ವೈವಾಹಿಕ ಸಂಬಂಧವಾದುದರಿಂದ ಅವರು ಕೊಂಕಣಕ್ಕೆ ಬರುವಂತಾಯಿತೆಂಬುದು ಕೊಂಕಣಿ ಭಾಷೆ ಮತ್ತು ಜನರ ಇತಿಹಾಸದ ಅತಿ ಪ್ರಾಮುಖ್ಯ ಘಟನೆ ಎನ್ನಬಹುದು. ಭಾರಿ ಸಂಖ್ಯೆಯಲ್ಲಿ ವಲಸೆ ಬರುವುದಕ್ಕೆ ಇದು ಕಾರಣವಾಗಿರಬಹುದು. ಆದರೆ ಕೊಂಕಣಿ ಬ್ರಾಹ್ಮಣರು ಕೊಂಕಣ ತೀರದಲ್ಲಿ ಅದಕ್ಕಿಂತ ಮೊದಲೇ ನೆಲೆಸಿದ್ದರು. ಕ್ರಿ.ಶ. 10ನೇಯ ಶತಮಾನದ ಕೆಲವು ಶಿಲಾಹಾರ ಶಾಸನಗಳು ಇದನ್ನು ಸಾಬೀತುಪಡಿಸಿವೆ. ಉತ್ತರ ಭಾರತದ ಸಾರಸ್ವತ ಬ್ರಾಹ್ಮಣರು ವಲಸೆ ಬಂದ ಕಾಲದಲ್ಲಿ ಇಡೀ ಕೊಂಕಣ ತೀರವೂ ಸೇರಿದಂತೆ ಗೋದಾವರಿಯಿಂದ ಕಾವೇರಿಯವರೆಗಿನ ತೀರ ಪ್ರದೇಶಾದ್ಯಂತ ಕನ್ನಡದ ಘನತೆ ಮತ್ತು ಅಧಿಕಾರ ಅಪಾರವಾಗಿತ್ತು.

ಆ ಕಾಲದಲ್ಲಿ ಗೋವೆಯ ಅಧಿಕೃತ ಭಾಷೆ ಕನ್ನಡವಾಗಿದ್ದರೂ ಗೋವೆಯಲ್ಲಿ ನೆಲೆಯೂರಿದ ಸಾರಸ್ವತ ಬ್ರಾಹ್ಮಣರು ಬಹುಬೇಗ ವ್ಯಾಪಾರದಲ್ಲಿ ಮುಂದಾಳುತ್ವ ಗಳಿಸಿ ತಮ್ಮ ಲೆಕ್ಕದ ಪುಸ್ತಕಗಳಲ್ಲಿ ಮತ್ತು ವ್ಯಾಪಾರದ ಪತ್ರವ್ಯವಹಾರದಲ್ಲಿ ಕೊಂಕಣಿ ಭಾಷೆಯನ್ನು ಬಳಸಲಾರಂಭಿಸಿದರು. ಆಶ್ಚರ್ಯದ ಸಂಗತಿ ಎಂದರೆ ಆ ಭಾಷೆಯನ್ನು ಬರೆಯಲು ಬಳಸಿದ ಲಿಪಿ ಕನ್ನಡವಾಗಿತ್ತು. ಆದರೆ ಯಾದವರು ಹಾಗೂ ಅನಂತರ ಬಹಮನಿ ಅರಸರು ಕದಂಬ ರಾಜರ ಅಧಿಕಾರವನ್ನು ಚ್ಯುತಿಗೊಳಿಸಿ, ಮರಾಠಿಗೆ ಅಧೀಕೃತ ಸ್ಥಾನ ಕೊಟ್ಟರು. ಪೋರ್ತುಗಾಲದ ಮಿಶನರಿಗಳು ಗೋವೆಗೆ ಬಂದು ಸ್ಥಳೀಯ ಭಾಷೆಯಲ್ಲಿ ತಮ್ಮ ಧರ್ಮವನ್ನು ಬೋಧಿಸುವುದಕ್ಕಾಗಿ 16ನೇಯ ಮತ್ತು 17ನೇಯ

ಶತಮಾನಗಳಲ್ಲಿ ಈ ಭಾಷೆಯನ್ನು ಕಲಿಯತೊಡಗಿದಾಗ ಕೊಂಕಣಿಯನ್ನು ಕನ್ನಡ ಲಿಪಿಯಲ್ಲಿ ಬರೆಯುತ್ತಿದ್ದುದನ್ನು ನೋಡಿ ಚಕಿತಗೊಂಡು, ಈ ಕಾರಣದಿಂದ ಕೊಂಕಣಿಯನ್ನು 'ಲಿಂಗ್ವ ಕ್ಯಾನರಿನಾ' (ಕನ್ನಡ ಭಾಷೆ) ಎಂದು ಕರೆದರು.

ದೇವಗಿರಿ ಯಾದವರು (ಸೇಉಣರು), ವಿಜಯನಗರ ಚಕ್ರವರ್ತಿಗಳು ಮತ್ತು ಕೆಳದಿಯ ಅಧಿಪತಿಗಳ ಕಾಲದಲ್ಲಿ ಕೊಂಕಣಿಗರು ಮುಖ್ಯವಾದ ಆಡಳಿತ ಸ್ಥಾನಗಳಲ್ಲಿದ್ದರೆಂಬುದಕ್ಕೆ ಆ ರಾಜರುಗಳ ಶಿಲಾಶಾಸನಗಳಲ್ಲಿ ಪುರಾವೆ ಇದೆ. ಸನ್ನದುಗಳು ಮತ್ತಿತರ ಅಧಿಕೃತ ದಾಖಲೆಗಳಲ್ಲೂ ಅವರ ಹೆಸರುಗಳನ್ನು ಕಾಣಬಹುದು. 12ನೇಯ ಶತಮಾನದಷ್ಟು ಹಿಂದೆಯೇ ಗೋವೆಯಿಂದ ಕೇರಳದಲ್ಲಿನ ಕೊಯಿಲಾನ್‌ವರೆಗಿನ ಪಶ್ಚಿಮ ತೀರದ ಉದ್ದಕ್ಕೂ ಕೊಂಕಣಿಗರ ಸಣ್ಣ ಸಣ್ಣ ಸಮುದಾಯಗಳು ನೆಲೆಸಿದ್ದವು. ಮಂಜೇಶ್ವರದ ಅನಂತೇಶ್ವರ ದೇವಸ್ಥಾನ 12ನೇಯ ಶತಮಾನದಷ್ಟು ಹಿಂದೆಯೇ ಕೊಂಕಣಿಗರ ಉಸ್ತುವಾರಿಗೆ ಒಳಪಟ್ಟಿತ್ತು. ಆ ದೇವಾಲಯದ ಅಧಿದೇವತೆ ನರಸಿಂಹ ಎಂದು ಸುಮಧ್ವ ವಿಜಯ ಎಂಬ ಸಂಸ್ಕೃತ ಗ್ರಂಥವು ಉಲ್ಲೇಖಿಸುತ್ತದೆ. ಈ ಮೂರ್ತಿಯನ್ನು ಗೌಡಸಾರಸ್ವತ ಬ್ರಾಹ್ಮಣರು ಪ್ರತಿಷ್ಠಾಪಿಸಿದರು. ಶ್ರೀ ಅನಂತೇಶ್ವರದಂತಹ ಬೃಹತ್ ದೇವಾಲಯವನ್ನು ಯಶಸ್ವಿಯಾಗಿ ನಡೆಸುವುದಕ್ಕೆ ಸಾಕಷ್ಟು ದೊಡ್ಡದಾದ ಮತ್ತು ಸಂಪದ್ಭರಿತ ಸಮುದಾಯದ ಬೆಂಬಲ ಇರಲೇಬೇಕು. ಕ್ರೈಸ್ತ ಮತದಲ್ಲಿ ನಂಬಿಕೆ ಇಲ್ಲದವರಿಂದ ತಮ್ಮ ರಾಜಕೀಯ ಅಧಿಕಾರಕ್ಕೆ ಅಡ್ಡಿಯಾಗುತ್ತದೆಂದು ಭಾವಿಸಿದ ಮಧ್ಯಯುಗದ ಮನೋಭಾವದ ಪೋರ್ತುಗಾಲದ ಆಡಳಿತಗಾರರ ಚಿತಾವಣೆಯಿಂದಾಗಿಯೇ ಕೊಂಕಣಿ ಮಾತನಾಡುವ ಜನರು ತಮ್ಮ ಗೋವೆಯ ನಾಡಿನಿಂದ ಕರ್ನಾಟಕದ ಇತರ ಭಾಗಗಳಿಗೆ ವಲಸೆ ಬರುವುದಕ್ಕೆ ಮುಖ್ಯ ಕಾರಣವಾಯಿತು. ಕ್ರೈಸ್ತಧರ್ಮಕ್ಕೆ ಮತಾಂತರಗೊಳಿಸಲಾಗುವುದೆಂದು ಹೆದರಿ ಹಿಂದೂಗಳು ಅಧಿಕ ಸಂಖ್ಯೆಯಲ್ಲಿ ದಕ್ಷಿಣದ ಕಡೆಗೆ ಧಾವಿಸಿದರು. 1560ರ ಮತೀಯ ವಿಚಾರಣಾ (ಇಂಕ್ವಿಜಿಶನ್) ಪ್ರಕರಣವೂ ಇನ್ನೊಂದು ಕಾರಣವಾಗಿತ್ತು. ಇದಲ್ಲದೆ 1553, 1570, 1682ರಲ್ಲಿ ಗೋವೆಯಲ್ಲಿ ಕ್ಷಾಮಗಳು ತಲೆದೋರಿದವು. ಅನಂತರ 1635ರಲ್ಲಿ ಸಾಂಕ್ರಾಮಿಕ ರೋಗ ಹರಡಿತು. ಇದರ ಜೊತೆಗೆ ಮೇಲಿಂದ ಮೇಲೆ ಮರಾಠರು ದಾಳಿ ಮಾಡಿದರು. (1683, 1729). ಈ ದುರಂತಗಳಿಂದ ಪಾರಾಗಲು ಕೊಂಕಣಿ ಜನರು—ಹಿಂದೂಗಳು ಹಾಗೂ ಕ್ರೈಸ್ತರು—ದಕ್ಷಿಣದತ್ತ ವಲಸೆ ಹೋಗಿ, ಕನ್ನಡ (ಕೆನರಾ) ಜಿಲ್ಲೆಗಳಲ್ಲಿ, ಅದರಲ್ಲೂ ಮುಖ್ಯವಾಗಿ ಮಂಗಳೂರು ಮತ್ತು ಕಾರವಾರದಲ್ಲಿ ಹಾಗೂ ಅದರ ಸುತ್ತಮುತ್ತಲಿನಲ್ಲಿ ನೆಲೆಸಿದರು. ಕನ್ನಡ ಜಿಲ್ಲೆಗಳಲ್ಲಿ ಕ್ರೈಸ್ತರು ಸಂಖ್ಯೆಯಲ್ಲಿ ಹೆಚ್ಚಾದರಲ್ಲದೆ ಉತ್ಕರ್ಷ ಹೊಂದಿ ಕೊಂಕಣಿ ಭಾಷೆ ಮತ್ತು ಸಂಸ್ಕೃತಿಯನ್ನು ಬೆಳೆಸಿದರು. ಅವರ ಧರ್ಮ, ಮತೀಯ ಗೀತೆಗಳು, ಹಾಡುಗಳು, ಕತೆಗಳು, ಮುಂತಾದವುಗಳನ್ನು ಕನ್ನಡ ಲಿಪಿಯಲ್ಲಿ ಸವಿಸ್ತಾರವಾಗಿ ಬರೆದು, ರಕ್ಷಿಸಿಡಲಾಯಿತು. ಈ ಅವಧಿಯಲ್ಲಿ ಜನಪದ ಸಾಂಗತ್ಯ ವಿಪುಲವಾಯಿತು. ಅದನ್ನು ವಮೌಖಿಕ ಸಂಪ್ರದಾಯದ ಮೂಲಕ ಇಂದಿಗೂ ಕಾಪಾಡಿಕೊಳ್ಳಲಾಗಿದೆ.

ಆ ವೇಳೆಗೆ ಕನ್ನಡ ಜಿಲ್ಲೆಗಳು ಮೈಸೂರಿನ ಅಧೀನವಾಗಿದ್ದವು. ಹೈದರ್ ಅಲಿಯ ಬಳಿಕ ಟಿಪ್ಪು ಸುಲ್ತಾನನ ಆಡಳಿತ ಬಂದಾಗ ಕ್ರೈಸ್ತರು ಆಂಗ್ಲರೊಂದಿಗೆ ಸಂಪರ್ಕ ಹೊಂದಿದ್ದಾರೆಂದು ಶಂಕಿಸಲಾಯಿತು. 1784ರಲ್ಲಿ ಅವರನ್ನು ತನ್ನ ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿ ಟಿಪ್ಪು ಸುಲ್ತಾನನು ಸೆರೆಯಲ್ಲಿಟ್ಟನು. ಹೀಗೆ ಹಲವಾರು ವರ್ಷಗಳವರೆಗೆ ಸೆರೆಯಲ್ಲಿಟ್ಟಿದ್ದರಿಂದ ಬಹಳಷ್ಟು ಕ್ರೈಸ್ತರು ತಪ್ಪಿಸಿಕೊಂಡು ನೆರೆಯ ಕೊಡಗು ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಆಶ್ರಯ ಯಾಚಿಸಿದರು. ಹೀಗೆ ಆ ಜಿಲ್ಲೆಗಳಲ್ಲೂ ಕೊಂಕಣಿ ವ್ಯಾಪಿಸಿತು.

ಇಂದು ಕೊಂಕಣಿ ಮಾತನಾಡುವ 15 ಲಕ್ಷ ಜನರ ಪೈಕಿ ಆರು ಲಕ್ಷಕ್ಕಿಂತ ಹೆಚ್ಚು ಮಂದಿ ಕರ್ನಾಟಕದಲ್ಲಿದ್ದಾರೆ. ಇವರು ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಉಳಿದವರು ಶಿವಮೊಗ್ಗ, ಧಾರವಾಡ, ಬೆಳಗಾವಿ, ಹಾಸನ, ಕೊಡಗು, ಚಿಕ್ಕಮಗಳೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಹಂಚಿಹೋಗಿದ್ದಾರೆ. ವಿವಿಧ ಸಮುದಾಯಗಳವರು ಮತ್ತು ಜಾತಿಯ ಜನರು ಕೊಂಕಣಿ ಮಾತನಾಡುತ್ತಾರೆ. ಮುಖ್ಯ ಗುಂಪುಗಳೆಂದರೆ ಕ್ಯಾಥೊಲಿಕ್ ಕ್ರೈಸ್ತರು, ನವಾಯತರು (ಮುಸಲ್ಮಾನರು), ಮತ್ತು ಹಿಂದೂಗಳ ಪೈಕಿ ಗೌಡ ಸಾರಸ್ವತರು, ಸಾರಸ್ವತರು, ಸೋನಾರರು, ಗಬ್ರಿಗಳು, ಪಡ್ತಿಯರು, ಕೊಂಕಣ ಮರಾಠರು, ಹರಿಕಂತ್ರರು, ಮೇಸ್ತ್ರರು, ಖಾರ್ವಿಗಳು, ಚಮಾರರು, ಬಾಂದಿಗಳು, ಕುಣಬಿಗಳು, ಮುಂತಾದವರು. ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಂಕಣಿಯನ್ನು ಎಲ್ಲರೂ—ಕನ್ನಡ ಮಾತೃಭಾಷೆಯಾಗಿರುವವರೂ ಸಹ-ಅರ್ಥ ಮಾಡಿಕೊಳ್ಳುತ್ತಾರಲ್ಲದೆ ಎಲ್ಲರೂ ಬಳಸುತ್ತಾರೆ. ಭಟ್ಕಳದ ಬಳಿ ಶಿರಾಲಿಯಲ್ಲಿರುವ ಕ್ರಿ. ಶ. 1345ರ ಶಿಲಾ ಶಾಸನದಲ್ಲಿ ಆ ಹಳ್ಳಿಯ 'ಎರಡೂ ಭಾಷೆಗಳನ್ನಾಡುವ' ಬ್ರಾಹ್ಮಣರಿಗೆ 'ಬಿಡಾರ'ವನ್ನು ಅನುದಾನ ಕೊಟ್ಟ ಪ್ರಸ್ತಾಪವಿದ್ದು, ಆ ಭಾಷೆಗಳು ಕೊಂಕಣಿ ಮತ್ತು ಕನ್ನಡವೆನ್ನುವಂತಿದೆ.

ಗೋವೆ ಮತ್ತಿತರ ಕಡೆ ಕೊಂಕಣಿ ಭಾಷೆಗೆ ಅಡ್ಡಿ ಮಾಡಲಾಯಿತಾದರೂ ಅದರ ಸಾಹಿತ್ಯಿಕ ಬೆಳವಣಿಗೆ ನಿರಾತಂಕವಾಗಿ ಮುಂದುವರೆಯಿತು. ಅದರಲ್ಲೂ ಆರಂಭ ಕಾಲದಲ್ಲಿ ಕ್ರೈಸ್ತ ಧರ್ಮ ಪ್ರಚಾರಕರ ಧಾರ್ಮಿಕ ಅಭಿಮತೋತ್ಸಾಹದಿಂದ ಹಾಗಾಯಿತು. ಈ ಹಿಂದೆಯೇ ಹೇಳಿದಂತೆ ಬೈಬಲನ್ನು ಸ್ಥಳೀಯ ಭಾಷೆಯಲ್ಲಿ ಬೋಧಿಸುವುದು ಅವರ ಅತಿ ಮುಖ್ಯ

ಉದ್ದೇಶವಾಗಿತ್ತು. ಧರ್ಮ ಬೋಧನೆಗಾಗಿ ಕೊಂಕಣ ಪ್ರದೇಶಾದ್ಯಂತ ಕೊಂಕಣಿಯನ್ನು ಬಳಸಲಾಗಿತ್ತು; ಕ್ರೈಸ್ತರು ತಮ್ಮ ಮತದ ಆರಂಭದ ಪಾಠಗಳನ್ನು ಕೊಂಕಣಿಯಲ್ಲೇ ಕಲಿತಿದ್ದರು. ಆ ದಿನಗಳಲ್ಲಿ ಕೊಂಕಣಿ ಹಿಂದೂಗಳ ಧಾರ್ಮಿಕ ವಿಧಿಗಳನ್ನು ಮರಾಠಿ ಅಥವಾ ಸಂಸ್ಕೃತದಲ್ಲಿ ನಡೆಸಲಾಗುತ್ತಿತ್ತಾದರೂ ತಮ್ಮ ಮಾತೃ ಭಾಷೆಯನ್ನು ಪೋಷಿಸುವುದರಲ್ಲಿ ಅವರೂ ಹಿಂದೆ ಬೀಳಲಿಲ್ಲ.

ಕರ್ನಾಟಕದಲ್ಲಿ ರಚಿತವಾದ ಕೊಂಕಣಿ ಸಾಹಿತ್ಯವನ್ನು ವಿಶ್ಲೇಷಿಸಿದಾಗ ಎರಡು ಸ್ಪಷ್ಟ ವರ್ಗಗಳನ್ನು ಗುರುತಿಸಬಹುದಾಗಿದೆ. ಒಂದು ಕ್ರೈಸ್ತರಿಗೆ ಸೇರಿದ್ದಾದರೆ ಇನ್ನೊಂದು ಹಿಂದೂಗಳದ್ದು. ಧಾರ್ಮಿಕ ವ್ಯತ್ಯಾಸಗಳು ಹಾಗೂ ಹಿಂದೂಗಳು ಗೋವೆಯಿಂದ ವಲಸೆ ಹೋಗುವಂತೆ ಮಾಡಿದ ಮತೀಯ ವಿಚಾರಣಾ ಪ್ರಕರಣದ ಕಷ್ಟಕಾರ್ಪಣ್ಯಗಳ ನೆನಪಿನಿಂದಾಗಿ ಈಗ ಕನ್ನಡ ಜಿಲ್ಲೆಗಳಲ್ಲಿ ನೆಲೆಸಿರುವ ಎರಡು ಮುಖ್ಯ ಕೊಂಕಣಿ ಸಮುದಾಯಗಳ ನಡುವೆ ಸಾಹಿತ್ಯಿಕ ಮತ್ತು ಭಾವನಾತ್ಮಕ ಭಿನ್ನತೆ ಉಂಟಾಗಿರಬೇಕು. ಕನ್ನಡ ಜಿಲ್ಲೆಗಳಲ್ಲಿ ಕೊಂಕಣಿಯ ಸಾಹಿತ್ಯಿಕ ಬೆಳವಣಿಗೆಯನ್ನು ಪರಿಶೀಲಿಸುವುದಕ್ಕಾಗಿ ಹಿಂದೂ ಲೇಖಕರು ಮತ್ತು ಕ್ರೈಸ್ತ ಭಾಷಾಭಿಮಾನಿಗಳು ಬರೆದಿರುವುದನ್ನು ಪ್ರತ್ಯೇಕವಾಗಿ ಪರಿಗಣಿಸುವುದು ಅನುಕೂಲಕರ ಹಾಗೂ ಹೋಲಿಕೆಗೆ ಸುಲಭವಾಗುತ್ತದೆ.

ಇಕ್ಕೇರಿ ರಾಜರ ಆಡಳಿತವಿದ್ದಾಗ (17ನೇಯ ಮತ್ತು 18ನೇಯ ಶತಮಾನಗಳಲ್ಲಿ) ಶಾಂತಪ್ಪಯ್ಯ, ರಾಘವದಾಸ, ಜೋಗವ್ವ ಮತ್ತು ಅವಧೀಬಾಯಿ ಅವರಂತಹ ಕೆಲವು ಖ್ಯಾತ ಭಕ್ತಿ ಕವಿಗಳು ಹಾಗೂ ಕವಿಯಿತ್ರಿಯರು ಭಕ್ತಿಪರವಾದ ಹಾಗೂ ಭಾವಪರವಶತೆಯ ಕೊಂಕಣಿ ಹಾಡುಗಳನ್ನು ರಚಿಸಿದರೆಂಬುದಕ್ಕೆ ಸಾಕ್ಷ್ಯಾಧಾರವಿದೆ. ಅನಂತರ ಶ್ರೀ ಪಾಂಡುರಂಗಾಶ್ರಮ ಸ್ವಾಮಿ ಮತ್ತು ಶ್ರೀ ಆನಂದಾಶ್ರಮ ಸ್ವಾಮಿ ಅವರಂತಹ ಚಿತ್ರಾಪುರ ಸ್ವಾಮೀಜಿಗಳು ಈ ಸಂತ ಪರಂಪರೆಯನ್ನು ಪುನರುಜ್ಜೀವನಗೊಳಿಸಿದರು. ಅವರ ಶಿಷ್ಯರಾದ ಸಹಜಾನಂದ (1850-1911), ನಾಡಘರ ಶಾಂತಾಬಾಯಿ (1850-1901) ಮುಂತಾದವರು ಕೊಂಕಣಿಯಲ್ಲಿ ಪದ್ಯಗಳನ್ನು ರಚಿಸಿದರು. ಹಿಂದೂ ಉದ್ಗ್ರಂಥಗಳ ಪೈಕಿ ಮಹೋನ್ನತವಾದ ಗೀತೆಯನ್ನು ಬಂಗ್ಲೆ ನಾರಾಯಣ ಕಾಮತ್ (1872-1918) ಅವರು ಕೊಂಕಣಿಯಲ್ಲಿ ಬರೆದರು. ಪದ್ಯಗಳು ಮತ್ತು ನಾಟಕಗಳನ್ನು ಬರೆದ ಇತರ ಪ್ರಮುಖ ಕೊಂಕಣಿ ಬರಹಗಾರರ ಪೈಕಿ ಮಂಗೇಶ ರಾಮಕೃಷ್ಣ ತೇಲಂಗ್ (1858-1949), ಬೋಳಂತೂರು ಕೃಷ್ಣ ಪ್ರಭು (1882-1965), ಉಪೇಂದ್ರ ಪೈ, ಸ್ವಾಮಿ ಪ್ರಭವಾನಂದ, ಗೋಕರ್ಣದ ಎನ್. ವಿ. ಪ್ರಭು ಮತ್ತು ಮಂಗಳೂರಿನ ಬಿ. ವಿ. ಬಾಳಿಗಾ ಅವರು ಸೇರಿದ್ದಾರೆ. ಉದ್ಯಾವರ ನಾರಾಯಣಾಚಾರ್, ಹಟ್ಟ್ಯಂಗಡಿ ನಾರಾಯಣ ರಾವ್ (1863-1921), ಮತ್ತು ಎಂ. ಎಂ. ಶಾನಭಾಗ ಅವರಂತಹ ಪಂಡಿತರು ಕೊಂಕಣಿ ವ್ಯಾಕರಣ ಮತ್ತು ಪಠ್ಯಪುಸ್ತಕಗಳನ್ನು ಪ್ರಕಟಿಸಿದರು. ಶೇಷಗಿರಿ ಕೇಶವ ಪ್ರಭು ಅವರು ಪದರೂಪಿ ಉಪನಿಷತ್ತು ಬರೆದರಲ್ಲದೆ ಠಾಕೂರರ ಗೀತಾಂಜಲಿ ಮತ್ತು ನಾರದ ಭಕ್ತಿ ಸೂತ್ರವನ್ನು ಕೊಂಕಣಿಗೆ ಭಾಷಾಂತರಿಸಿದರು. ಮುಂಡಾಜೆ ದೇವದಾಸ ಪೈ, ಕೊಡಬೆಟ್ಟು ರಾಮರಾಯ ಕಾಮತ್, ಬಂಟ್ವಾಳ ಪುಂಡಲೀಕ ಬಾಳಿಗಾ, ವಿ. ಆರ್. ಪ್ರಭು, ಎಸ್. ವಿ. ಕಾಮತ್ ಮತ್ತು ಎಂ. ಜಿ. ಪೈ ಅವರು ಇತರ ಉತ್ತಮ ಬರಹಗಾರರು. ಬೋಳಂತೂರು ಕೃಷ್ಣಪ್ರಭು ಅವರು ಚಂದ್ರಹಾಸ ನಾಟಕ (1912), ಪ್ರಹ್ಲಾದ ಚರಿತ್ರ ನಾಟಕ ಮತ್ತು ಹಲವಾರು ಭಕ್ತಿ ಗೀತೆಗಳನ್ನು ಬರೆದಿದ್ದಾರೆ. ಕುಂಬಳೆ ನರಸಿಂಹ ನಾಯಕ್ (1873-1945) ಅವರು ಸಾವಿತ್ರಿ ನಾಟಕ ಬರೆದಿದ್ದಾರೆ. ಶ್ರೀನಿವಾಸ ಪ್ರಭು, ಮಂಜೇಶ್ವರ ಗೋವಿಂದ ಪೈ, ಶಾಂತರಾಮ ಕಾಮತ್, ದಿನಕರ ದೇಸಾಯಿ, ಎನ್. ವಿ. ಪ್ರಭು ಮತ್ತು ಕೆ. ಎನ್. ರಾವ್ ಅವರಂತಹ ಕವಿಗಳು ಕೊಂಕಣಿ ಪದ್ಯಗಳನ್ನು ಬರೆದರಲ್ಲದೆ ಆ ಪೈಕಿ ಕೆಲವರು ಹೆಸರಾಂತ ಕನ್ನಡ ಲೇಖಕರೂ ಆಗಿದ್ದಾರೆ. ಈಚಿನ ವರ್ಷಗಳಲ್ಲಿ ಶ್ರೀ ರಮಾನಂದ ಚೂರ್ಯ ಅವರು ಕೊಂಕಣಿ ನಾಟಕ ರಂಗದಲ್ಲಿ ಹೆಸರುವಾಸಿಯಾಗಿದ್ದಾರೆ.

ಸಾರಸ್ವತ ಎಂಬ ಪಕ್ಷಪತ್ರಿಕೆ 1929ರಿಂದ ಮಂಗಳೂರಿನಿಂದ ಕನ್ನಡ ಲಿಪಿಯಲ್ಲಿ ತಪ್ಪದೆ ಪ್ರಕಟವಾಗುತಿತ್ತು. ಮಂಜೇಶ್ವರ ಗೋವಿಂದ ಪೈ, ನಾರಾಯಣ ಕಾಮತ್ ಬಂಗ್ಲೇಕರ್ ಮತ್ತು ಹಟ್ಟ್ಯಂಗಡಿ ನಾರಾಯಣರಾವ್ ಅವರು ಈ ನಿಯತಕಾಲಿಕೆಗೆ ಆಸರೆಯಾಗಿದ್ದ ಕೆಲವರು. ಇತರ ಪತ್ರಿಕೆಗಳೆಂದರೆ ನವಯುಗ (ಕಾರವಾರ 1940), ಉಜ್ವಾಡ್ (ಕಾರವಾರ 1947), ಕೊಂಕಣ ಕಿನಾರ (ಕುಮಟ 1950) ಮತ್ತು ಸರ್ವೋದಯ (ಕಾರವಾರ). ಸದ್ಯಕ್ಕೆ ಮಂಗಳೂರಿನಿಂದ ಬಿ. ವಿ. ಬಾಳಿಗ ಅವರ ಸಂಪಾದಕತ್ವದ ಪಂಚ್ಯಾದಾಯಿ (1966) ಕೊಂಕಣಿ ಹಿಂದೂಗಳು ಪ್ರಕಟಸುತ್ತಿರುವ ಕೊಂಕಣಿ ಮಾಸಪತ್ರಿಕೆಗಳಲ್ಲಿ ತುಂಬ ಯಶಸ್ವಿಯಾಗಿದೆ. ಅದನ್ನು ಕನ್ನಡ ಮತ್ತು ದೇವನಾಗರಿ ಲಿಪಿಗಳಲ್ಲಿ ಅಚ್ಚು ಮಾಡಲಾಗುತ್ತಿದೆ. ಕೊಂಕಣಿ ಭಾಷೆಯ ಏಳಿಗೆ ಮತ್ತು ಕ್ರಮಬದ್ಧ ಅಧ್ಯಯನದ ಬಗ್ಗೆ ಕಾರವಾರದ ಎಂ. ಎಂ. ಶಾನಭಾಗ್ (1887-1950) ಅವರು ತುಂಬ ಪ್ರಮುಖ ಪಾತ್ರ ವಹಿಸಿದರು. ಅವರು ಕೊಂಕಣಿ ಭಾಷಾ ಮಂಡಲವನ್ನು ಸ್ಥಾಪಿಸಿದರು. ಅದರ ಪ್ರಥಮ ಅಧಿವೇಶನ 1939ರಲ್ಲಿ ಕಾರವಾರದಲ್ಲಿ ಸಮಾವೇಶಗೊಂಡಿತ್ತು. ಸದ್ಯದಲ್ಲಿ ಕರ್ನಾಟಕದಲ್ಲಿ ಈ ಭಾಷೆಯನ್ನು ಪ್ರಚುರಪಡಿಸುತ್ತಿರುವ ಸಂಸ್ಥೆಗಳೆಂದರೆ ಕಾರವಾರದ ಕೊಂಕಣಿ ಭಾಷಾ ಪರಿಷದ್, ಮಂಗಳೂರಿನ ಕೊಂಕಣಿ ಭಾಷಾ ಮಂಡಲ, ಮಂಗಳೂರಿನ ಸಂತ ಎಲೋಸಿ

ಯಸ್ ಕಾಲೇಜಿನ ಕೊಂಕಣಿ ಸಂಸ್ಥೆ, ಉಡುಪಿಯ ಕೊಂಕಣಿ ಭಾಷಾಭಿಮಾನಿ ಸಮಿತಿ ಹಾಗೂ ಧಾರವಾಡದ ಕೊಂಕಣಿ ಸಮಾಜ. ಅಲ್ಪಸಂಖ್ಯಾತರ ಭಾಷೆಗಳಲ್ಲಿ ವಾಣಿಜ್ಯ ಚಲನಚಿತ್ರಗಳಿಗೆ ಇತಿಮಿತಿ ಹಾಗೂ ಅಡ್ಡಿ ಆತಂಕಗಳಿದ್ದರೂ, ಈವರೆಗೆ ಕರ್ನಾಟಕದಲ್ಲಿ ಜನಮನ, ಅಮ್ಚೆ ಜೀವಿತ್ ಆಶೆಂ ಮತ್ತು ತಪಸ್ವಿನಿ ಎಂಬ ಮೂರು ಕೊಂಕಣಿ ಚಲನಚಿತ್ರಗಳು ಬಿಡುಗಡೆಯಾಗಿವೆ. ಇಬ್ಬರು ಪ್ರಖ್ಯಾತ ಕೀರ್ತನಕಾರರಾದ ಭದ್ರಗಿರಿ ಅಚ್ಯುತದಾಸ್ ಮತ್ತು ಕೇಶವದಾಸ್ ಅವರು ತಮ್ಮ ಕವಿತೆಗಳು ಮತ್ತು ಕೀರ್ತನೆಗಳ ಮೂಲಕ ಕೊಂಕಣಿಯ ಸೇವೆ ಮಾಡುತ್ತಿದ್ದಾರೆ. ಹೊಸಾಡ ಬಾಬುಟಿ ನಾಯಕ್ (ಹೊನ್ನಾವರ) ಮತ್ತು ಹುಬ್ಬಳ್ಳಿಯ ಆರ್. ಜಿ. ಗೋಳೆ ಅವರು ಕನ್ನಡ ನಾಟಕಗಳನ್ನು ಬರೆದು ಪ್ರದರ್ಶಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾರೆ.

ಮಂಗಳೂರು ನಗರವನ್ನು ಸಾಹಿತ್ಯಿಕ ಮತ್ತು ಅಧ್ಯಾತ್ಮಿಕ ಕೇಂದ್ರವಾಗಿ ಹೊಂದಿರುವ ದಕ್ಷಿಣ ಕನ್ನಡದ ಕ್ರೈಸ್ತರಲ್ಲಿ ಕೊಂಕಣಿ ಭಾಷೆ ವರ್ಧಿಸಿತು. ಕ್ರೈಸ್ತರು ತಮ್ಮ ಧಾರ್ಮಿಕ ಚಟುವಟಿಕೆಗಳು, ಪ್ರಾರ್ಥನೆಗಳು, ಮತೀಯ ಪುಸ್ತಕಗಳು, ಇತ್ಯಾದಿಗಳಲ್ಲಿ ತಮ್ಮ ಮಾತೃಭಾಷೆಯನ್ನು ಧಾರಾಳವಾಗಿ ಬಳಸಿದರು. ತಮ್ಮ ಮತಬಾಂಧವರಲ್ಲಿ ಧಾರ್ಮಿಕ ಶ್ರದ್ಧೆಯನ್ನು ಉಳಿಸುವುದಕ್ಕಾಗಿ ಈ ಭಾಷೆಯ ಅಧ್ಯಯನ ಮತ್ತು ಬಳಕೆಯನ್ನು ಆರಂಭಿಸಿದ ವಿದೇಶೀ ಧರ್ಮ ಪ್ರಚಾರಕರಿಗೆ ಹೀಗೆ ಮಾಡಿದ ಕೀರ್ತಿ ಸಲ್ಲಲೇಬೇಕು. ಇಬ್ಬರು ಕೊಂಕಣಿ ಪಂಡಿತರು ನವಸುವಾರ್ತೆ (ನ್ಯೂ ಟೆಸ್ಟಮೆಂಟ್) ಮತ್ತು ಪೆಂತಾತ್ಯೂಚ್ ಕೊಂಕಣಿ ಕರಡು ಪ್ರತಿಯನ್ನು ಸಿದ್ಧಗೊಳಿಸಿದರು. ವಿಲಿಯಂ ಕ್ಯಾರಿ (1761-1834) ಅದನ್ನು ಅಂತಿಮಗೊಳಿಸಿದರು. ಮಂಗಳೂರಿನ ಕ್ರೈಸ್ತರ ಭಾಷೆಯ ವಿಸ್ತೃತ ಅಧ್ಯಯನ ನಡೆಸಿದ ಆರಂಭಿಕ ಕ್ರೈಸ್ತ ಮತ ಪ್ರಚಾರಕರ ಪೈಕಿ ರೆವರೆಂಡ್ ರಾಫೆಲ್ ವೆಸೆಟ್ಟಿ ಮತ್ತು ರೆವರೆಂಡ್ ಫ್ರಾನ್ಸೆಸ್ಕೊ ಸವೇರಿಯಾ ದ ಸಾಂತಾ ಅನ್ನಾ ಈ ರಂಗದಲ್ಲಿ ಅದ್ವಿತೀಯವಾಗಿ ಶ್ರಮಿಸಿದರು. ರೆವರೆಂಡ್ ಪಿಯೊ ನರೊನ್ಹಾ (1810-83) ಅವರು ಕೊಂಕಣಿ ವ್ಯಾಕರಣದ ಸವಿಸ್ತಾರ ಅಧ್ಯಯನ ಮಾಡಿದರಲ್ಲದೆ ಅವರನ್ನು ಮಂಗಳೂರು ಕೊಂಕಣಿಯ ಪ್ರಪ್ರಥಮ ವ್ಯಾಕರಣಕಾರರೆನ್ನಬಹುದು. ಮಂಗಳೂರಿನಲ್ಲಿ ಯೇಸುವಿತರ (ಜೆಸುಯಿಟ್ಸ್) ಆಗಮನ (1878) ಮತ್ತು ಸಂತ ಜೋಸೆಫ್ ಅವರ ಸೆಮಿನರಿ (1879), ಸಂತ ಎಲೊಸಿಯಸ್ ಕಾಲೇಜು, ಫಾದರ್ ಮುಲ್ಲರ್ ಅವರ ಆಸ್ಪತ್ರೆ (1881) ಹಾಗೂ ಕೊಡಿಯಾಲಬೈಲ್ ಪ್ರೆಸ್ (1882) ಇವು ಕೊಂಕಣಿ ಭಾಷೆ ಮತ್ತು ಸಾಹಿತ್ಯದಲ್ಲಿ ಹೊಸ ಶಕೆಯ ನಾಂದಿ ಹಾಕಿದವು. ಮಂಗಳೂರಿಗೆ ಬಂದ ಪ್ರಥಮ ಯೇಸುವಿತರ ಪೈಕಿ ಇದ್ದ ರೆವರೆಂಡ್ ಆಂಜೆಲೆಸ್ ಫ್ರಾನ್ಸಿಸ್ ಝೇವಿಯರ್ ಮ್ಯಾಫೀ, ಎಸ್.ಜೆ. ಅವರು ಕೊಂಕಣಿ ವ್ಯಾಕರಣ ಮತ್ತು ಧಾರ್ಮಿಕ ಸಾಹಿತ್ಯ ರಚನೆಗೆ ಮುಖ್ಯ ಕಾರಣಕರ್ತರಾಗಿದ್ದರು. ಅವರು ಬರೆದ ಕೊಂಕಣಿ ವ್ಯಾಕರಣ ಮತ್ತು ನಿಘಂಟನ್ನು 1883ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್ ಪ್ರಕಟಿಸಿತು.

ಆರಂಭಿಕ ಸಾಹಿತ್ಯ ಕೃತಿಗಳು ಕ್ರೈಸ್ತಮತದ ಧಾರ್ಮಿಕ ಮತ್ತು ತಾತ್ವಿಕ ವಿಷಯಗಳಿಗೆ ಸಂಬಂಧಿಸಿದವು. ಹೈದರ್ ಅಲಿಯ ಆಡಳಿತವಿದ್ದಾಗ ಮಂಗಳೂರಿನ ಫರಂಗಿಪೇಟೆಯಲ್ಲಿನ ಆಶ್ರಮದಲ್ಲಿ ಸನ್ಯಾಸಿಯಾಗಿದ್ದ ರೆವರೆಂಡ್ ಜೋಕಿಂ ಮಿರಾಂಡಾ ಅವರು ಮಹಾ ಸಾಹಿತ್ಯಿಕ ಮೌಲ್ಯ ಮತ್ತು ಧಾರ್ಮಿಕ ಪ್ರಖರತೆಯ ಕಾವ್ಯಗಳನ್ನು ರಚಿಸಿದರಲ್ಲದೆ ಅವನ್ನು ಬಳಿಕ ಒಂದುನೂರು ಪದ್ಯಗಳ ಸಂಗ್ರಹವನ್ನಾಗಿ ಪ್ರಕಟಿಸಲಾಯಿತು. ಕೆನರಾ ಕ್ರೈಸ್ತರ ಪ್ರಾಚೀನ ಪರಂಪರೆಯ ಶಾಶ್ವತ ಸ್ಮರಣ ಸಂಪುಟಗಳಾಗಿ ಅವು ಉಳಿದಿವೆ. ಕ್ರಿಸ್ತ ಪುರಾಣ್ ಎಂಬ ಮಹಾ ಗ್ರಂಥವನ್ನು ಮೂಲತಃ ಇಂಗ್ಲೀಷನಾದ ಯೇಸುವಿತ ಮತ ಪ್ರಚಾರಕರ ರೆವರೆಂಡ್ ಥಾಮಸ್ ಸ್ಟೀಫನ್ಸ್ ಅವರು ಬರೆದರು. ಅದರಲ್ಲಿ 11,018 ಪದ್ಯಗಳಿದ್ದು, ಅದರ ಸಾಹಿತ್ಯಿಕ ಶೈಲಿ ವಿಶಿಷ್ಟವಾಗಿದೆ. ಗ್ರಂಥವು ಅರ್ಥವಾಗುವಂತೆ ಅವರು ಅದನ್ನು ಕೊಂಕಣಿ ಮತ್ತು ಮರಾಠಿ ಸಮ್ಮಿಶ್ರಗೊಳಿಸಿ ಬರೆದರು. ಅನಂತರ ಅದನ್ನು ಜೋಸೆಫ್ ಸಾಲ್ಡಾನ್ಹಾ, ಲಿಯೋ ಸಾಲ್ಡಾನ್ಹಾ ಮತ್ತು ಫೆಲಿಕ್ಸ್ ಪಾಲ್ ನರೋನ್ಹಾ ಅವರಂತಹ ಕವಿಗಳು ಉದ್ದಾಮ ಕೊಂಕಣಿ ಕಾವ್ಯವನ್ನಾಗಿ ಮಾಡಿದರು. ರೆವರೆಂಡ್ ಮೈಕೇಲ್ ಪ್ಲಾಸಿಡ್ ಕೊಲಾಸೊ ಅವರು ಪ್ರಕಟಿಸಿದ ಗೀತೆಗಳ ರಚನೆಗಳು, ರೆವರೆಂಡ್ ಲೂಯಿ ಡಿ'ಸೋಜಾ ಅವರು ಪ್ರಕಟಿಸಿದ ಗಾದೆಗಳು, ಒಗಟುಗಳು, ಗೀತೆಗಳು, ಮುಂತಾದವುಗಳ ಸಂಗ್ರಹ, ರೆವರೆಂಡ್ ರೈಮೊನ ಮ್ಯಾಸ್ಕರೇಂಞಸ, ರೆವರೆಂಡ್ ಸಿಲ್ವೆಸ್ಟರ್ ಮೆನೆಜಿಸ್ ಮತ್ತು ಈಚೆಗೆ ರೆವರೆಂಡ್ ವಿಲಿಯಂ ಡಿ'ಸಿಲ್ವಾ ಅವರು ಭಾಷಾಂತರಿಸಿದ ನವಸುವಾರ್ತೆ—ಇವು ವಿದ್ವಾಂಸರಾದ ಗ್ರಂಥಕರ್ತರ ಸಾಹಿತ್ಯಿಕ ಹಿರಿಮೆಯ ಶ್ರೇಷ್ಠ ಕೊಡುಗೆಗಳಾಗಿ ಕೆನರಾ ಕ್ರೈಸ್ತರೊಂದಿಗೆ ಉಳಿಯುತ್ತವೆ.

ಕನ್ನಡ ಲಿಪಿಯಲ್ಲಿ ಪ್ರಥಮ ಕೊಂಕಣಿ ಪತ್ರಿಕೆಯಾದ 'ಕೊಂಕಣಿ ದಿರ್ವೆಂ'ಯನ್ನು ಮಂಗಳೂರಿನ ಇಬ್ಬರು ಯುವಕರಾದ ಲೂಯಿ ಮ್ಯಾಸ್ಕರೇಂಞಸ್ ಮತ್ತು ಲೂಯಿ ಕಣ್ಣಪ್ಪ ಅವರು ಸಂಪಾದಕರಾಗಿದ್ದು ಪ್ರಕಟಿಸಿದಾಗ ಕೊಂಕಣಿ ಪತ್ರಿಕೋದ್ಯಮದಲ್ಲಿ 1912ರಷ್ಟು ಹಿಂದೆಯೇ ದಿಟ್ಟ ಹೆಜ್ಜೆ ಇಡಲಾಯಿತು. ಈ ಪತ್ರಿಕೆಯಲ್ಲಿ ಉಚ್ಚ ಸಾಹಿತ್ಯಿಕ ಶೈಲಿ ಮತ್ತು ಶೈಕ್ಷಣಿಕ ಸ್ವರೂಪದ ಬರಹಗಳು ಪ್ರಕಟಗೊಳ್ಳುತ್ತಿದ್ದವು. ಮುಖ್ಯವಾಗಿ ಆರ್ಥಿಕ ಹಾಗೂ ನಿರ್ವಹಣಾ ತೊಂದರೆಗಳಿಂದಾಗಿ ಕೊಂಕಣಿ ದಿರ್ವೆಂ ನಿಂತಿತಾದರೂ ರೆವರೆಂಡ್ ಸಿಲ್ವೆಸ್ಟರ್ ಮೆನೆಜಿಸ್ ಅವರು 1938ರಲ್ಲಿ ರಾಕ್ಣೊ ಎಂಬ

ಇನ್ನೊಂದು ವಾರಪತ್ರಿಕೆಯನ್ನು ಸ್ಥಾಪಿಸಿದರು. ಅದು ಭಾರತ ಮತ್ತು ವಿದೇಶಗಳಲ್ಲಿ ಗಣನೀಯ ಪ್ರಸಾರ ಹೊಂದಿರುವ ಪ್ರಮುಖ ಕೊಂಕಣಿ ವಾರಪತ್ರಿಕೆಯಾಗಿದೆ. ರಾಕ್ಣೊದ ಪುಟಗಳಲ್ಲಿ ಅಮೂಲ್ಯ ಸಾಹಿತ್ಯವನ್ನು ಸಂಪಾದಿಸಿ, ಪ್ರಕಟಿಸುವುದಲ್ಲದೆ ರಾಕ್ಣೊದ ಪ್ರಕಾಶನದ ನಾನಾ ಪ್ರಕಟಣೆಗಳ ಮೂಲಕ ರೆವರೆಂಡ್ ಜಾನ್ ಮೆನೆಜಿಸ್, ಡಾ|| ಆಲೆಕ್ಸಾಂಡರ್ ಎಫ್ ಡಿ' ಸೋಜ ಮತ್ತು ರೆವರೆಂಡ್ ಮಾರ್ಕ್ ವಲ್ಡರ್ ಅವರಂತಹ ಸಂಪಾದಕರು ಕೊಂಕಣಿ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಮುಂಬೈಯಲ್ಲಿ ನೆಲೆಸಿದ ಮಂಗಳೂರಿನ ಕ್ರೈಸ್ತರು ಆ ಎರಡು ಪಟ್ಟಣಗಳ ನಡುವೆ ನಿಕಟ ಸಂಬಂಧವಿಟ್ಟುಕೊಂಡು, ಕೊಂಕಣಿ ಸಾಹಿತ್ಯವನ್ನು ಪೋಷಿಸಿದರು. ಪೊಯ್ಣಾರಿ ಎಂಬ ವಾರಪತ್ರಿಕೆಯನ್ನು 1950ರಲ್ಲಿ ವಿ. ಜೆ. ಪಿ. ಸಲ್ಡಾನ್ಹಾ ಅವರು ಸ್ಥಾಪಿಸಿದರಲ್ಲದೆ ಅನಂತರ ಸಿ. ಎಫ್. ಡಿ'ಕೊಸ್ತಾ, ಮಾರ್ಕ್ ಡಿ'ಸೋಜ, ಅಲ್ಫಾನ್ಸ್ ಕೊಸ್ತಾ ಮತ್ತು ಪಿ. ಡಿ'ಸೋಜಾ ಅವರಂತಹ ಸಾಹಿತ್ಯಿಕ ದಿಗ್ಗಜಗಳು ಅದರ ಹೊಣೆಗಾರಿಕೆ ಹೊತ್ತಿದ್ದರು. ವರ್ಷಗಳು ಸರಿದಂತೆ ಪೊಯ್ಣಾರಿ ಬಲಯುತ ಗೊಂಡಿತಲ್ಲದೆ ಈಗ ವ್ಯಾಪಕ ವಾಚಕರಿರುವ ಅತ್ಯಧಿಕ ಪ್ರಸಾರದ ಕೊಂಕಣಿ ವಾರಪತ್ರಿಕೆ ಎಂದು ಹೇಳಿಕೊಳ್ಳುತ್ತಿದೆ. ಜನಪ್ರಿಯ ಪ್ರೋತ್ಸಾಹ ಗಳಿಸಿದ ಇತರ ನಿಯತಕಾಲಿಕೆಗಳೆಂದರೆ ಮಿತ್ರ್, ಸುಖ್-ದುಖ್, ಜ್ಹೊಲ್ಹೊ, ಆಂಜ್, ಸೇವಕ್, ಝುಗ್-ಮುಗ್, ವಿಶಾಲ ಕೊಂಕಣ್, ಕೊಂಕಣ್, ಕಾಣಿಕ್ ಮತ್ತು ಉದೆವ್.

ಮಂಗಳೂರಿನಲ್ಲಿ ನಾಟಕಗಳು (ಮುಂಬೈಯಲ್ಲಿ 'ತಿಯಾತ್ರ್' ಎನ್ನುತ್ತಾರೆ) ಕ್ರೈಸ್ತ ಸಂಸ್ಕೃತಿಯ ಅಂತರ್ಗತ ಭಾಗವಾಗಿವೆ. ಮಂಗಳೂರಿನಲ್ಲಿ ಸ್ಥಾಪಿಸಲಾದ ಕೊಂಕಣಿ ನಾಟಕ ಸಭಾ ಎಂಬ ಸಂಘ ಹೊಸ ನಾಟಕಗಳನ್ನು ಅಭಿನಯಿಸುವುದಲ್ಲಿ, ಅಂತರ-ಧರ್ಮ ಮಂಡಲ ನಾಟಕ ಸ್ಪರ್ಧೆಗಳನ್ನು ನಡೆಸುವುದರಲ್ಲಿ ಹಾಗೂ ಲಲಿತ ಕಲೆಗಳನ್ನು ಪ್ರೋತ್ಸಾಹಿಸುವುದರಲ್ಲಿ ಗಮನಾರ್ಹ ಕೆಲಸ ಮಾಡಿದೆ. ಮಂಗಳೂರಿನ ಕೊಂಕಣಿ ನಾಟಕಕಾರರ ಪೈಕಿ ಜಿ. ಎಂ. ಬಿ. ರಾಡ್ರಿಗ್ಸ್, ಎ. ಡಿ. ಲೋಬೋ, ವಿ. ಜೆ. ಪಿ. ಸಲ್ಡಾನ್ಹಾ, ಎಂ. ಪಿ. ಡೇಸಾ, ಹೆನ್ರಿ ಡಿ'ಸಿಲ್ವಾ, ಎಡ್ಡೀ ಡಿ'ಸೋಜಾ ಮತ್ತು ಸಿ. ಎಫ್. ಡಿ'ಕೊಸ್ತಾ ಅವರು ಪ್ರಖ್ಯಾತರಾಗಿದ್ದಾರೆ. ಕನ್ನಡ ಲಿಪಿಯ ಕೊಂಕಣಿ ಕಾದಂಬರಿಗಳಿಗೆ ಕೊರತೆ ಇಲ್ಲ. ಸಲ್ಲಕ್ ಪ್ರಕಾಶನ್, ರಾಕ್ಣೊ ಪ್ರಕಾಶನ್, ಪುನೊವ್ ಪ್ರಕಾಶನ್, ಮುಂತಾದ ಮಂಗಳೂರಿನ ಪ್ರಕಾಶಕರು ತಪ್ಪದೆ ಕೊಂಕಣಿ ಕಾದಂಬರಿಗಳನ್ನು ಪ್ರಕಟಿಸುತ್ತಿದ್ದಾರೆ. ಹೆಸರಾಂತ ಕಾದಂಬರಿಕಾರರಾದ ಜಿ. ಎಸ್. ಆಲ್ವಾರಿಸ 30ಕ್ಕಿಂತ ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾರೆ. ವಿ. ಜೆ. ಪಿ. ಸಲ್ಡಾನ್ಹಾ ಅವರ ಐತಿಹಾಸಿಕ ಕಾದಂಬರಿಗಳಿಗೆ ಕೊಂಕಣಿ ಸಾಹಿತ್ಯ ಮತ್ತು ಸಾಹಿತ್ಯಿಕ ಚರಿತ್ರೆಯಲ್ಲಿ ಉಚ್ಚ ಸ್ಥಾನವಿದೆ. ಇತರ ಖ್ಯಾತ ಕಾದಂಬರಿಕಾರರು ಮತ್ತು ಸಣ್ಣ ಕತೆಗಾರರೆಂದರೆ ಸಿ. ಎಫ್. ಡಿ'ಕೊಸ್ತಾ, ಎಡ್ವಿನ್ ಡಿ'ಸೋಜಾ, ಐರೀನ್ ಪಿಂಟೋ, ಜೆ. ಸಿ. ವೇಗಾಸ್ ಮುಂತಾದವರು. ವಿವಿಧ ನಿಯತ ಕಾಲಿಕೆಗಳ ಪುಟಗಳಲ್ಲಿ ಸಾಮಾನ್ಯವಾಗಿ ಕೊಂಕಣಿ ಪದ್ಯಗಳು ಪ್ರಕಟವಾಗುತ್ತವೆ. ಲೂಯಿ ಮಸ್ಕರೇಂಞಸ್, ಫೆಲಿಕ್ಸ್ ಪಾಲ್ ನರೋನ್ಹ, ಜೋಸೆಫ್ ನರೋನ್ಹ, ಗ್ರೆಗರಿ ಮೆನೆಜಿಸ್, ಫಾದರ್ ಬೊತೆಲ್ಲೊ, ಅಂತೋಣಿ ಜಾನ್ ಡಿ'ಸೋಜ, ಹೆನ್ರಿ ಡಿ'ಸಿಲ್ವ, ವಿಲ್ಫ್ರೆಡ್ ರೆಬಿಂಬಸ್, ಸಿರಿಲ್ ಸಿಕೇರಾ, ಲಿಯೋ ಡಿ'ಸೋಜಾ ಮುಂತಾದ ಕವಿಗಳು ಕೊಂಕಣಿ ಮಾತನಾಡುವವರಲ್ಲಿ ಸಾಕಷ್ಟು ಪ್ರಸಿದ್ಧರಾಗಿದ್ದಾರೆ. ಕೊಂಕಣಿಯ ಭಾಷಾ ಶಾಸ್ತ್ರದ ಬಗ್ಗೆ ಡಾ|| ವಿಲಿಯಂ ಮಾಡ್ತಾ ಮತ್ತು ಡಾ|| ರಾಕಿ ಮಿರಾಂಡಾ ಅವರಂತಹ ಪಂಡಿತರು ಸಂಶೋಧನಾತ್ಮಕ ಅಧ್ಯಯನ ನಡೆಸುತ್ತಿದ್ದಾರೆ. ಈ ಭಾಷೆ ಮತ್ತು ಇದರ ಸಾಹಿತ್ಯವನ್ನು ಕುರಿತು ಈ ಪಂಡಿತರು ಸಿದ್ಧಗೊಳಿಸಿದ ನಾನಾ ಲೇಖನಗಳು ಮತ್ತು ಪಾಂಡಿತ್ಯಪೂರ್ಣ ಬರಹಗಳನ್ನು ವಿವಿಧ ವಿಶ್ವವಿದ್ಯಾಲಯಗಳು ಪ್ರಕಟಣೆಗಾಗಿ ಸ್ವೀಕರಿಸಿವೆ. ಕೊಂಕಣಿ ಜನಪದ ಸಾಹಿತ್ಯದಲ್ಲಿ ಅಷ್ಟೇನೂ ಸಾಧನೆಯಾಗಿಲ್ಲವಾದರೂ ರೆವರೆಂಡ್ ಲೂಯಿ ಡಿ'ಸೋಜ, ಜೋಸೆಫ್ ಲೆಗೋ, ರೆವರೆಂಡ್ ಸಿಪ್ರಿಯನ್ ಪೈ ಮತ್ತು ಸಿರಿಲ್ ಮಾಡ್ತಾ ಅವರಂತಹ ಪಂಡಿತರು ಅಷ್ಟಿಷ್ಟು ಕೆಲಸ ಮಾಡಿದ್ದಾರೆ.

ಕರ್ನಾಟಕದಲ್ಲಿ ವಿದ್ಯಾಭ್ಯಾಸದ ಅತಿ ಪ್ರಮುಖ ಸ್ಥಳಗಳಲ್ಲಿ ಒಂದಾದ ಧಾರವಾಡದಲ್ಲಿ ಕೊಂಕಣಿ ಸಾಹಿತ್ಯಿಕ ಚಟುವಟಿಕೆಗಳ ಬಗ್ಗೆ ಪ್ರಸ್ತಾಪಿಸಲೇಬೇಕು. ಇಲ್ಲಿ ಬಹಳ ಹಿಂದಿನಿಂದ ನೆಲಸಿರುವ ಸಾರಸ್ವತ ಬ್ರಾಹ್ಮಣರು ಹೆಚ್ಚಾಗಿ ಮಾತನಾಡುವ ಭಾಷೆ ಕೊಂಕಣಿ. ಆದ್ದರಿಂದಲೇ ಈ ಪಟ್ಟಣದ ಒಂದು ಭಾಗದ ಹೆಸರು ಸಾರಸ್ವತಪುರ ಎಂದಿದೆ. ಈ ಸಾರಸ್ವತರು ಹಾಗೂ ಗೌಡ ಸಾರಸ್ವತರು ಮತ್ತು ಗೋವೆ ಹಾಗೂ ಕಾರವಾರದಿಂದ ವಲಸೆ ಬಂದ ಕ್ರೈಸ್ತರು ಕೊಂಕಣಿ ಭಾಷೆಗೆ ಬಹಳಷ್ಟು ಸೇವೆ ಸಲ್ಲಿಸಿದ್ದಾರೆ. ಆರ್. ಎ. ಪೈ, ಎಂ. ಆರ್. ಪೈ, ಎಂ. ಎ. ಕಾಮತ್ ಮತ್ತು ಇತರರು 1942ರಲ್ಲಿ ಕೊಂಕಣಿ ಸಮಾಜವನ್ನು ಸ್ಥಾಪಿಸಿದರು. ಆಗ ಧಾರವಾಡದ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಪ್ರೊ|| ಆರ್ಮಂಡೋ ಮೆನೆಜಿಸ್ ಅವರು ಅದಕ್ಕೆ ಮಾರ್ಗದರ್ಶಕರಾಗಿದ್ದರು. ಕೊಂಕಣಿ ಮಾತನಾಡುವ ವಿದ್ಯಾರ್ಥಿಗಳಿಗಾಗಿ ಅದು ವಿಚಾರಗೋಷ್ಠಿಗಳು, ಕಮ್ಮಟಗಳು, ಪ್ರಬಂಧ ಮತ್ತು ಭಾಷಣ ಸ್ಪರ್ಧೆಗಳನ್ನು ನಡೆಸುತ್ತಿದೆ. ಮೇಲಾಗಿ ಸ್ಥಳೀಯ ಗೌಡ ಸಾರಸ್ವತ ಸಮಾಜ ಕೊಂಕಣಿ ನಾಟಕಗಳ ಅಭಿನಯ ಮುಂತಾದ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಕಾರ್ಯಕ್ರಮಗಳನ್ನು ಕ್ರಮಬದ್ಧವಾಗಿ ಏರ್ಪಡಿಸುತ್ತಿದೆ. ಡಾ|| ಡಿ. ಎನ್. ಶಾನಭಾಗ, ಡಾ|| ಕೆ. ಜೆ. ಮಹಾಲೆ ಮತ್ತು ಪ್ರೊ|| ಎಸ್. ವಿ. ಭಟ್ ಅವರಂತಹ ಪಂಡಿತರ ಸಹಭಾಗಿತ್ವವಿರುವ ಕೊಂಕಣಿ ಸಾಹಿತ್ಯ ಪ್ರಕಾಶನ ಈಗಾಗಲೇ ಕೊಂಕಣಿ ಭಾಷೆ ಮತ್ತು

ಸಾಹಿತ್ಯದ ಕುರಿತು ಹಲವಾರು ಪುಸ್ತಕಗಳನ್ನು ಪ್ರಕಟಿಸಿದೆ. ಧಾರವಾಡದ ಆಕಾಶವಾಣಿ 1965ರಿಂದ ಜಾಯಿ-ಜೂಯಿ ಎಂದು ಜನಪ್ರಿಯವಾಗಿರುವ ಸಾಪ್ತಾಹಿಕ ಕೊಂಕಣಿ ಕಾರ್ಯಕ್ರಮಗಳನ್ನು ಬಿತ್ತರಿಸುತ್ತಿದೆ. ಸ್ಥಳೀಯ ಜನರ ಸಾಹಿತ್ಯಿಕ ಜಾಣ್ಮೆಯನ್ನು ಗುರುತಿಸಿ, ಅವರ ಶ್ರೀಮಂತ ಸಾಂಸ್ಕೃತಿಕ ಪರಂಪರೆಯನ್ನು ಕನ್ನಡಿಗರಿಗೆ ಪರಿಚಯಿಸುವುದರಲ್ಲಿ ಈ ಕಾರ್ಯಕ್ರಮ ಮಹತ್ತರ ಪಾತ್ರ ವಹಿಸಿದೆ. ಮಂಗಳೂರಿನ ಆಕಾಶವಾಣಿ ಕೇಂದ್ರವೂ ಕೊಂಕಣಿ ಕಾರ್ಯಕ್ರಮಗಳನ್ನು ಬಿತ್ತರಿಸುತ್ತಿದೆ.

ಆಲಿಸುವುದಕ್ಕೆ ಹಿತಕರವಾದ, ಸ್ವತಂತ್ರ ಆಧುನಿಕ ಭಾಷೆಯಾದ ಕೊಂಕಣಿ ಭಾರತೀಯ ಭಾಷೆಗಳ ನಡುವಣ 'ಸಿಂಡ್ರೆಲ್ಲಾ' ಎನ್ನಬಹುದು. 15 ಲಕ್ಷಕ್ಕಿಂತ ಹೆಚ್ಚು ಜನ ಮಾತನಾಡುವ ಈ ಸುಂದರ ಭಾಷೆ ಎಂತಹ ಆಘಾತದಿಂದಾದರೂ ಪಾರಾಗಿ ವಿಜೃಂಭಿಸುವ ಅಪರೂಪದ ಗುಣ ಹೊಂದಿದೆ. ಕನ್ನಡ ಮತ್ತು ಮರಾಠಿಯಂತಹ ನೆರೆಹೊರೆಯವರ ಬಲಯುತ ಪ್ರಭಾವ, ಅದನ್ನು ಮಾತನಾಡುವವರ ಸಂಖ್ಯೆ ಹೋಲಿಕೆಯಲ್ಲಿ ಕಡಿಮೆಯಾಗಿರುವಿಕೆ ಮತ್ತು ಅವರ ಆರ್ಥಿಕ ಬಡತನದಿಂದ ಈ ಭಾಷೆಯ ಬೆಳವಣಿಗೆ ಕುಂಠಿತವಾಗಿದೆ. ಹೀಗಿದ್ದರೂ ಕೊಂಕಣಿಗರಲ್ಲಿ ಈಚೆಗೆ ಜಾಗೃತಿ ಮೂಡಿದೆ. ತಮ್ಮ ಭಾಷೆಗೆ ತನ್ನದೇ ಆದ ಅಪೂರ್ವ ಇತಿಹಾಸ, ಪರಂಪರೆ, ಸ್ವತಂತ್ರ ಸ್ಥಾನಮಾನವಿರುವುದರಿಂದ ಅದರ ಭವಿಷ್ಯತ್ತು ಭವ್ಯವಾಗಿದೆ ಎಂದು ಅವರು ಅರಿತಿದ್ದಾರೆ.

## ಕರ್ನಾಟಕದಲ್ಲಿ ಮಲಯಾಳಂ

ಕೇರಳ ಮತ್ತು ಕರ್ನಾಟಕಗಳ ಸಾಂಸ್ಕೃತಿಕ ಏಕತೆಯ ನಿದರ್ಶನಗಳು ಪರಶುರಾಮನು ಕರಾವಳಿ ಪ್ರದೇಶವನ್ನು ಸೃಷ್ಟಿಸಿದನೆನ್ನುವಂತಹ ಪುರಾಣಗಳಲ್ಲಿ ಗೋಚರಿಸುತ್ತವೆ. ಕರ್ನಾಟಕ ಕೇರಳ ಸಂಸ್ಕೃತಿಗಳು ಸಾಮಾನ್ಯ ದ್ರಾವಿಡ ಮೂಲವೊಂದರಿಂದ ಆವಿರ್ಭವಿಸಿದವೆಂಬ ಸತ್ಯಸಂಗತಿಯನ್ನು ಹೊರತುಪಡಿಸಿದರೂ, ಈ ಎರಡು ಸಂಸ್ಕೃತಿಗಳೂ ಹೆಚ್ಚು ಕಡಿಮೆ ಒಂದೇ ಬಗೆಯ ಪರಕೀಯ ಪ್ರಭಾವಗಳಿಗೆ ಒಳಗಾಗಿದ್ದವು. ಏಕೆಂದರೆ, ಪಶ್ಚಿಮ ಕರಾವಳಿಯ ಸಮಗ್ರ ಭೂಪ್ರದೇಶವೇ ವಾಣಿಜ್ಯ ಮತ್ತು ವ್ಯಾಪಾರ ವಹಿವಾಟುಗಳ ಕೇಂದ್ರವಾಗಿ ಪರಿಣಮಿಸಿತ್ತು. ಕೇರಳಕ್ಕೆ ಆರ್ಯರ ಆಗಮನವು ಕರ್ನಾಟಕ ಭಾಗವಾಗಿದ್ದ ತುಳುನಾಡಿನ ಮೂಲಕ ಆಯಿತು ಎಂದು ನಂಬಲಾಗಿದೆ. ಈ ಪ್ರಕ್ರಿಯೆಯಲ್ಲಿ ಸ್ಪಷ್ಟವಾದ ನಿರ್ಣಾಯಕ ಪಾತ್ರವನ್ನು ಕದಂಬ ರಾಜನಾದ ಮಯೂರವರ್ಮನು ವಹಿಸಿದ್ದ. ಅವನ ರಾಜ್ಯದ ಭಾಗವಾದ ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶವು ಸಂಸ್ಕೃತ ಹಾಗೂ ವೇದಾಧ್ಯಯನಗಳ ಪ್ರಸಿದ್ಧ ಸ್ಥಾನವಾಗಿದ್ದಿತು. ಈ ಪ್ರದೇಶದ ಮುಖಾಂತರ ಕೇರಳವನ್ನು ಪ್ರವೇಶಿಸಿದ ಆರ್ಯರು ಬಹುಶಃ ಅಲ್ಲಿನ ಮೂಲನಿವಾಸಿ ಜನರೊಂದಿಗೆ ಬೆರೆತು, ಆಗಿನ ಕೇರಳದ ಭಾಷೆಯಲ್ಲಿ ಅನೇಕ ಮಾರ್ಪಾಡುಗಳನ್ನು ಉಂಟುಮಾಡಿದರು. ಮಲಯಾಳಂ ಭಾಷೆಯ ಪ್ರಮುಖ ಇತಿಹಾಸಕಾರರಾದ ಪ್ರೊ॥ ಏಳಂಕುಳಂ ಕುಂಜನ್‌ಪಿಳ್ಳೈ ಅವರು ಆಗಿನ ಕೇರಳದ ಭಾಷೆ ಇಲ್ಲಿಯತನಕದ ತನ್ನ ವಿಕಾಸದ ಹಂತದಲ್ಲಿ ಸುಸ್ಪಷ್ಟವಾಗಿ ತುಳು ಮತ್ತು ಕನ್ನಡಗಳಿಂದ ಪ್ರಭಾವಿತವಾಗಿದೆ ಎಂದು ಸೂಚಿಸಿರುವರು. ಕೇರಳದಲ್ಲಿ ಜೈನಮತದ ಪ್ರಸಾರಕ್ಕೆ ಕರ್ನಾಟಕ ಪ್ರದೇಶವು ಒಂದು ಕೊಂಡಿಯಾಗಿಯೂ ಪರಿಣಮಿಸಿದೆ ಎಂದು ತೋರುತ್ತದೆ.

ಶ್ರೀ ಶಂಕರಾಚಾರ್ಯರು ಕೇರಳ ಸಂಸ್ಕೃತಿಗೆ ಮಾತ್ರ ಪ್ರತ್ಯೇಕ ಪ್ರತಿನಿಧಿಯೆಂದು ಬಹುಶಃ ಹೇಳಲಾಗುವುದಿಲ್ಲ. ಏಕೆಂದರೆ, ಅವರು ಸಾಮಾನ್ಯ ಹಿಂದೂ ಧರ್ಮದ ಪುನರುಜ್ಜೀವನದ ಸಾಕಾರಮೂರ್ತಿಯಾಗಿದ್ದರು. ಆದರೂ, ಅವರು ಕರ್ನಾಟಕದ ಶೃಂಗೇರಿ ಕೇಂದ್ರದಲ್ಲಿ ತಮ್ಮ ಮಠಗಳಲ್ಲೊಂದನ್ನು ಸ್ಥಾಪಿಸಿದ ಸಂಗತಿ ಗಮನಾರ್ಹವಾದುದು. ಈ ಮಠವು ಕೇರಳ ಕರ್ನಾಟಕಗಳ ಪರಸ್ಪರ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಪರ್ಕದ ಮಾಧ್ಯಮವಾಗಿ ಪರಿಣಮಿಸಿರಬಹುದು. ಇನ್ನೊಂದು ರೀತಿಯಲ್ಲೂ ಸಹ ಶಂಕರಾಚಾರ್ಯರು ಈ ಸಾಂಸ್ಕೃತಿಕ ಸಂಪರ್ಕವನ್ನು ಶ್ರೀಮಂತಗೊಳಿಸಲು ಕಾರಣರಾದರು. ಕುಂದಾಪುರ ತಾಲೂಕಿನ ಕೊಲ್ಲೂರಿನಲ್ಲಿರುವ ಮೂಕಾಂಬಿಕಾ ದೇವಾಲಯದಲ್ಲಿರುವ ಈಗಿನ ಪ್ರತಿಮೆಯನ್ನು ಪ್ರತಿಷ್ಠಾಪನೆ ಮಾಡಿದವರು ಅವರೇ ಎಂಬುದಾಗಿ ಕೂಡ ಹೇಳಲಾಗುತ್ತಿದೆ. ಮಲಯಾಳಿಗಳಿಗೆ ಈ ದೇವಾಲಯ ಈಗಲೂ ವಿಶೇಷ ಆಕರ್ಷಣೆಯ ಕೇಂದ್ರವಾಗಿದೆ. ಕೇರಳದಿಂದ ಈ ದೇವಾಲಯಕ್ಕೆ ಅವ್ಯಾಹತವಾಗಿ ಆಗಮಿಸುತ್ತಿರುವ ಯಾತ್ರಿಕರು ಕೇರಳೀಯರ ಮತ್ತು ಕನ್ನಡಿಗರ ಪರಸ್ಪರ ಸಂಪರ್ಕಕ್ಕೆ ಕಾರಣವಾಗಿರಬಹುದು. ತೀರ ಇತ್ತೀಚಿನ ಕಾಲದವರೆಗೂ ತುಳು ಬ್ರಾಹ್ಮಣರು ಬಹುಸಂಖ್ಯೆಯಲ್ಲಿ ಕೇರಳಕ್ಕೆ ವಲಸೆ ಹೋದುದರ ಪರಿಣಾಮವನ್ನೂ ಈ ಧಾರ್ಮಿಕ ಸಂಯೋಗಕ್ಕೆ ಅನುಬಂಧವಾಗಿ ಪರಿಗಣಿಸಬೇಕಾಗಿದೆ. ಇವರಲ್ಲಿ ಅನೇಕರು (ಕೇರಳದ ಮೂಲೆ ಮೂಲೆಗಳಲ್ಲಿ ಎಂಬ್ರಾಂದಿಗಳೆಂದು ಇವರು ಪ್ರಸಿದ್ಧರಾಗಿದ್ದಾರೆ) ಚಿಕ್ಕಪುಟ್ಟ ದೇವಾಲಯಗಳಲ್ಲಿ ಅರ್ಚಕ (ಪುರೋಹಿತ) ವೃತ್ತಿಯನ್ನು ನಡೆಸಿಕೊಂಡಿದ್ದರು. (ಓ. ಚಂದುಮೆನನ್ ಅವರಿಂದ 1892ರಲ್ಲಿ ವಿರಚಿತವಾದ 'ಶಾರದಾ' ಎಂಬ ತೀರ ಮೊದಲಿನ ಮುಖ್ಯ ಮಲಯಾಳಂ ಕಾದಂಬರಿಯಲ್ಲಿ ಇಂತಹ ಒಬ್ಬ ಯುವಕ ಪೂಜಾರಿಯ ಪಾತ್ರ ಬರುತ್ತದೆ. ಅವನ ವಿಚಿತ್ರ ಬೆರಕೆ ಮಾತು ಹಾಸ್ಯಮಯವಾಗಿದೆ. ಈ ಬಗೆಯ ಪಾತ್ರ ನಿರ್ವಹಣೆಯಲ್ಲಿ ಕಾದಂಬರಿಕಾರರು ಸಮಗ್ರ ಸನ್ನಿವೇಶದ ಬಗೆಗೆ ತಮಗಿರುವ ನಿಷ್ಪಕ್ಷಪಾತತೆಯನ್ನು ಪ್ರಕಟಿಸಿದ್ದಾರೆ). ಈ ಬಗೆಯ ಜನರು ಆಗೀಗ ತಮ್ಮ ಮೂಲ

ಪ್ರದೇಶಕ್ಕೆ ಬಂದು ಹೋಗುತ್ತಿದ್ದುದು ಸಾಂಸ್ಕೃತಿಕ ವಿನಿಮಯಕ್ಕೆ ಒಂದು ಹೊಸ ಮಾರ್ಗವನ್ನು ಸೃಜಿಸಿತು. ಇದರ ಕೊನೆಯ ಕೊಂಡಿಯೆಂದರೆ, ಪ್ರತೀ ವರ್ಷ ಶಬರಿಮಲೆಗೆ ಹೋಗುವುದರೊಂದಿಗೆ ಕೇರಳದ ದೈವವಾದ ಅಯ್ಯಪ್ಪನ ವರ್ಚಸ್ಸು ಕನ್ನಡಿಗರ ಮೇಲೆ ಆಗಿರುವುದು. ದಕ್ಷಿಣ ಕನ್ನಡ ಪ್ರದೇಶವು ವಿಶೇಷವಾಗಿ ಆಚಾರ, ಸಂಪ್ರದಾಯ, ಧಾರ್ಮಿಕ ಕ್ರಿಯೆಗಳ ಮತ್ತು ಸಮಾರಂಭಗಳು, ಮೊದಲಾದ ವಿಷಯಗಳಲ್ಲಿ ಕೇರಳದೊಂದಿಗೆ ಬಲವಾದ ಬಾಂಧವ್ಯ ಹೊಂದಿದೆ. ಸರ್ಪಾರಾಧನೆ ಇವುಗಳಲ್ಲಿ ಬಹಳ ಮುಖ್ಯವಾದುದು. ಇಂಥ ಸಾಮ್ಯಗಳು ಸ್ವಾಭಾವಿಕವಾಗಿಯೇ ಕೆಲವು ಕಲಾರೂಪ (ಪ್ರಕಾರ) ಗಳಲ್ಲಿಯೂ ದೃಗ್ಗೋಚರವಾಗಿವೆ. ಜನಪದ ಕಲೆಯನ್ನು ಹೊರತುಪಡಿಸಿದರೂ ಸಹ, ದಕ್ಷಿಣ ಕನ್ನಡ ಪ್ರದೇಶದ ಯಕ್ಷಗಾನವೆಂಬ ಪ್ರಮುಖ ಕಲೆ ಕೇರಳದ ಪ್ರಧಾನ ಕಲಾರೂಪಗಳಲ್ಲೊಂದಾದ ಕಥಕ್ಕಳಿಯೊಡನೆ ಕೆಲವೊಂದು ಒಲವುಗಳನ್ನು ಪ್ರತಿಬಿಂಬಿಸಿದೆಯೆಂದೇ ಹೇಳಬೇಕು.

ಭಾಷಾ ವಿಜ್ಞಾನೀಯ ವಿಲಕ್ಷಣತೆಗಳಲ್ಲಿ ಸಹ ಕರ್ನಾಟಕ ಕೇರಳಗಳ ನಿಕಟ ಬಾಂಧವ್ಯವನ್ನು ಒತ್ತುಕೊಟ್ಟು ಹೇಳಬಹುದು. ಈ ಎರಡು ಪ್ರದೇಶಗಳ ಭಾಷೆಗಳಾದ ಕನ್ನಡ ಮತ್ತು ಮಲಯಾಳಂ ದ್ರಾವಿಡ ಭಾಷೆಯ ಮೂಲಕ್ಕೆ ಸೇರಿದವು. ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಕೆಲವೊಮ್ಮೆ ಹಳಗನ್ನಡವು ಮಲಯಾಳಂ ಭಾಷೆಗೆ ತೀರ ಹತ್ತಿರವಾಗಿದೆ. ಅಲ್ಲದೆ, ಈ ಭಾಷೆಗಳ ವರ್ಣಮಾಲೆ, ಮೂಲಶಬ್ದಗಳು, ಪದವಿರಚನೆ—ಇವೆಲ್ಲ ಬಹುತೇಕ ಒಂದೇ ಮಾದರಿಯವಾಗಿವೆ. ಈ ಬುನಾದಿಗಳ ಮೇಲೆ ಕನ್ನಡ ಮತ್ತು ಮಲಯಾಳಂಗಳಲ್ಲಿ ಸಾಹಿತ್ಯದ ಮಹಾ ಸೌಧಗಳು ನಿರ್ಮಾಣಗೊಂಡಿವೆ. ಈ ಪ್ರಕ್ರಿಯೆಯಲ್ಲಿ ಸಂಸ್ಕೃತವು ಅವುಗಳಿಗೆ ಗಣನೀಯವಾದ ನೆರವು ನೀಡಿದೆ. ಮುಂದೆ, ಬಹುಶಃ ಸಂಸ್ಕೃತದ ನಿಜವಾದ ಪಾತ್ರ ಮತ್ತು ಸಾರ್ಥಕತೆಗಳು ಅತಿ ವ್ಯಾಪಕತೆಯನ್ನು ಪಡೆದು—ಕನ್ನಡ ಮತ್ತು ಮಲಯಾಳಂ ಸಾಹಿತ್ಯ ಚರಿತ್ರೆಯ ಒಂದು ಕಾಲಾವಧಿಯಲ್ಲಂತೂ ಸಂಸ್ಕೃತವು ಕೇವಲ ಒಣಪ್ರತಿಷ್ಠೆಯ ಹಾಗೂ ಬರಡು ವಿದ್ವತ್ತಿನ ಸಂಕೇತವಾಗಿ ಪರಿಣಮಿಸುವಂತೆ ಮಾಡಿತು. ಸೈದ್ಧಾಂತಿಕ ಮಹಾ ಪ್ರಬಂಧಗಳು ಸಂಸ್ಕೃತ ರೀತಿ ನೀತಿಗಳನ್ನವಲಂಬಿಸಿದ್ದುದು ಮಾತ್ರವಲ್ಲ, ಆ ಭಾಷೆಯಲ್ಲಿಯೇ ಅವನ್ನು ಪ್ರತಿಪಾದಿಸಬೇಕಾಗಿಯೂ ಬಂದಿತು. ಈ ಸಾಮಾನ್ಯ ವಿದ್ಯಮಾನವು ಹೇಗೆ ಕನ್ನಡ ಮತ್ತು ಮಲಯಾಳಂಗಳಿಗೆ ಸಂಸ್ಕೃತದಲ್ಲಿ ವ್ಯಾಕರಣ ಮತ್ತು ಕಾವ್ಯ ಮೀಮಾಂಸೆಯ ಗ್ರಂಥಗಳು ವಿರಚಿತವಾದವು—ಎಂಬ ವಿಚಿತ್ರ ಸಂಗತಿಯನ್ನು ವಿವರಿಸುತ್ತವೆ. (ಕನ್ನಡಕ್ಕೆ ಎರಡನೇಯ ನಾಗವರ್ಮನ "ಕರ್ನಾಟಕ ಭಾಷಾ ಭೂಷಣಂ", ಭಟ್ಟಾಕಳಂಕನ "ಕರ್ಣಾಟಕ ಶಬ್ದಾನುಶಾಸನಂ", ಮಲಯಾಳಂಗೆ 14ನೇಯ ಶತಮಾನದಲ್ಲಿ "ಲೀಲಾ ತಿಲಕಂ"). ಸಂಸ್ಕೃತ ಮಹಾ ಕಾವ್ಯಗಳ ಮತ್ತು ಕಾಳಿದಾಸ ಮೊದಲಾದ ಕವಿಗಳ ಪ್ರಭಾವ ಕನ್ನಡ ಮತ್ತು ಮಲಯಾಳಂಗಳ ಮೇಲೆ ಸ್ವತಸ್ಸಿದ್ಧ.

ಹಿಂದಿನ ಕಾಲದಿಂದಲೂ ಕರ್ನಾಟಕ ಮತ್ತು ಕೇರಳಗಳೊಳಗೆ ನಡೆದುಬಂದ ಈ ಸಂಬಂಧ, ಪಶ್ಚಿಮ ಕರಾವಳಿಯಲ್ಲಿ ಕ್ರೈಸ್ತ ಮಿಶನರಿಗಳ ಚಟುವಟಿಕೆಯ ಕಾಲದಲ್ಲಿ ಹೊಸ ಶಕೆಯೊಂದರ ಪ್ರವೇಶವಾಯಿತು. ಈ ಎರಡು ಪ್ರದೇಶಗಳಿಗೂ ಮಂಗಳೂರು ಸಾಮಾನ್ಯ ಕೇಂದ್ರವಾಗಿ ಪರಿಣಮಿಸಿತು. ಮುದ್ರಣ, ಪುಸ್ತಕ ಪ್ರಕಟಣೆ, ಪತ್ರಿಕೋದ್ಯಮ ಮುಂತಾದ ಆಧುನಿಕ ಭಾಷೆಗಳ ಬೆಳವಣಿಗೆಗೆ ಕಾರಣವಾಗುವ ವಿದ್ಯಮಾನಗಳ ಜೊತೆ ಜೊತೆಗೇ ಈ ಕ್ರೈಸ್ತ ಮಿಶನರಿಗಳು ಕನ್ನಡ ಮತ್ತು ಮಲಯಾಳಂ ಆಡುಮಾತುಗಳನ್ನು ಆಧಾರವಾಗಿಟ್ಟುಕೊಂಡು ವ್ಯಾಕರಣ ಗ್ರಂಥಗಳನ್ನೂ, ಶಬ್ದಕೋಶಗಳನ್ನೂ (ಕಿಟ್ಟೆಲ್ ಕನ್ನಡಕ್ಕೆ, ಗುಂಡರ್ಟ್ ಮಲಯಾಳಂಗೆ) ರಚಿಸುವುದರ ಮೂಲಕ ಪ್ರಾಮಾಣಿಕ ಸೇವೆ ಸಲ್ಲಿಸಿದರು. ಸ್ವಲ್ಪದರಲ್ಲಿ ಹೇಳುವುದಾದರೆ ಈ ಭಾಷೆಗಳಲ್ಲಿ ಗದ್ಯವು ವಿಕಾಸಗೊಂಡು ಮುಂದುವರಿಯುವುದಕ್ಕೆ ಅಗತ್ಯವಾದ ಪ್ರಚೋದನೆಯನ್ನು ಇವು ಒದಗಿಸಿದವು. ಆಧುನಿಕ ಕಾಲದಲ್ಲಿ ಈ ಎರಡು ಪ್ರದೇಶಗಳೂ ವ್ಯವಸ್ಥಿತ ಪಾಶ್ಚಾತ್ಯ ವಿದ್ಯಾಭ್ಯಾಸ ಕ್ರಮಗಳಿಗೆ ಒಳಗಾಗಿದ್ದುದರಿಂದ ತೀವ್ರವಾದ ಸಾಂಸ್ಕೃತಿಕ ವಿನಿಮಯಗಳಿಗೆ ಬೇಕಾದ ಒಗ್ಗಟ್ಟು ಮತ್ತು ಪ್ರೇರಣೆಯ ಪ್ರಜ್ಞೆಯನ್ನು ವರ್ಧಿಸಿಕೊಂಡು ಭಾಷಾಂತರಗಳ ಪ್ರಯತ್ನಗಳಿಗೆ ಹೆಚ್ಚಿನ ಅನುವನ್ನು ಮಾಡಿಕೊಡಬೇಕಾಗಿದ್ದಿತು. ಆದರೆ, ಏನೋ ಕಾರಣದಿಂದ, ಈ ಎಲ್ಲ ಬಾಂಧವ್ಯ ಮತ್ತು ಗತಕಾಲದ ಸಂಬಂಧಗಳ ಹಿನ್ನೆಲೆಗೆ ವಿರುದ್ಧವಾಗಿ ಕನ್ನಡ ಮತ್ತು ಮಲಯಾಳಂಗಳ ನಡುವೆ ಭಾಷಾಂತರ ಕೆಲಸ ಕಾರ್ಯಗಳು ಆಶ್ಚರ್ಯಕರವಾದ ರೀತಿಯಲ್ಲಿ ವಿರಳವಾಗಿಯೇ ಉಳಿದುಬಿಟ್ಟವು. ತೀರ ಇತ್ತೀಚೆಗೆ ಹೊಸ ಅರಿವು ಮೂಡಿ ಬಂದು ಪರಸ್ಪರ ಭಾಷಾಂತರದ ಸರ್ವಸಮ್ಮತ ಕೆಲಸಗಳು ಪ್ರಾರಂಭವಾಗಿವೆ. ಸಾಹಿತ್ಯ ಅಕ್ಯಾಡೆಮಿ ಮತ್ತು ಇಂಥ ಇತರ ಸಂಘ ಸಂಸ್ಥೆಗಳು ಇದಕ್ಕೆ ಸಾಕಷ್ಟು ಆಶ್ರಯ ನೀಡಿವೆ. ಪ್ರೊ|| ನಾ. ಕಸ್ತೂರಿಯವರು, ಮಲಯಾಳಂನ ಟಿ. ಶಿವಶಂಕರಪಿಳ್ಳೆಯವರ ಚೆಮ್ಮೀನ್ ಮತ್ತು ರಂಡಿಡಂಗಳಿ ಕಾದಂಬರಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಮಲಯಾಟ್ಟೂರ್ ರಾಮಕೃಷ್ಣನ್ ಅವರ "ಯಕ್ಷಿ" ಕಾದಂಬರಿಯನ್ನು ಕೆ. ಎಸ್. ಕರುಣಾಕರನ್ ಕನ್ನಡಕ್ಕೆ ಅನುವಾದಿಸಿರುವರು. ಬಿ. ಕೆ. ತಿಮ್ಮಪ್ಪನವರು ಅನೇಕ ಮಲಯಾಳಂ ಕೃತಿಗಳನ್ನು (ಮೇಲಿನ ಇಬ್ಬರದೂ ಒಳಗೊಂಡು) ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. ಉಬೈದ್ ಅವರು ವಲ್ಲತ್ತೋಳ್ ಕವಿಯ ಕವನಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಕನ್ನಡ ಲೇಖಕರು ಕೇರಳದ ಜನಜೀವನದ ಕೆಲವು ಹಿನ್ನೆಲೆ ಹಾಗೂ ವೈಶಿಷ್ಟ್ಯ ವೈಲಕ್ಷಣ್ಯಗಳಿಂದ (ಕೇರಳ ಲೇಖಕರು ಕನ್ನಡ

ಜನಜೀವನದಿಂದ) ಸ್ಫೂರ್ತಿ ಹೊಂದಿ ಕೃತಿ ರಚನೆ ಮಾಡಿದ ನಿದರ್ಶನಗಳು ವಿರಳವಾದುದಾದರೂ ಇಲ್ಲವೇ ಇಲ್ಲ ಎಂಬಂತಿಲ್ಲ. ನಿರಂಜನರು ಬರೆದ ಸುಪ್ರಸಿದ್ಧ ಪ್ರಗತಿಶೀಲ ಕಾದಂಬರಿಯಾದ ಚಿರಸ್ಮರಣೆಯನ್ನು ಕೇರಳದ ಕಯ್ಯೂರು ಎಂಬ ಗ್ರಾಮದಲ್ಲಿ ನಡೆದ ಒಂದು ಘಟನೆಯ ಸುತ್ತ ಹೆಣೆಯಲಾಗಿದೆ. ಈ ಕಾದಂಬರಿ ಮಲಯಾಳಂಗೆ ಅನುವಾದಗೊಂಡು ಮೆಚ್ಚುಗೆಯನ್ನು ಗಳಿಸಿದುದರಲ್ಲಿ ಆಶ್ಚರ್ಯಪಡಬೇಕಾದುದೇನೂ ಇಲ್ಲ. ಮಲಯಾಳಂನ ಪ್ರಮುಖ ನವ್ಯಕವಿಯಾದ ಡಾ|| ಅಯ್ಯಪ್ಪ ಪಣಿಕ್ಕರ್ ಅವರ ಇತ್ತೀಚಿನ ಕವನವೊಂದರ ಹೆಸರು "ಚಾಮುಂಡಿ ಮಲೆಯಿಲೆ ತಿರುವಿಳಯಾಟ್ಟಂ" ಎಂದು; ಇದರಲ್ಲಿ ಪುರಂದರದಾಸರಂತೆಯೇ ಶಿವರಾಮ ಕಾರಂತರೂ ಒಂದು ಪ್ರತಿಮೆಯಾಗಿ ಪರಿಣಮಿಸಿದ್ದಾರೆ. ಆದರೆ ಈ ಬಗೆಯ ನಿದರ್ಶನಗಳ ಮೂಲಕ ಕ್ರೋಢೀಕೃತವಾದ ಪರಿಚಯ ತೀರ ಸಾಂದರ್ಭಿಕವಾದುದು. ಕರ್ನಾಟಕದಲ್ಲಿ ಮಲಯಾಳಿ ಸಾಂಸ್ಕೃತಿಕ ಸಂಘಗಳು, ಕೇರಳದಲ್ಲಿ ಕನ್ನಡ ಸಾಂಸ್ಕೃತಿಕ ಸಂಘಗಳು ತಮ್ಮ ಈ ಚಟುವಟಿಕೆಗಳ ಮುಖಾಂತರ ಏರ್ಪಡುವ ಪರಸ್ಪರ ಬಾಂಧವ್ಯವೇ ಇದಕ್ಕಿಂತ ಮಿಗಿಲಾದುದು. ಕನ್ನಡಕ್ಕೆ ಮಲಯಾಳಂ ಸಾಹಿತ್ಯದ ಪ್ರಾತಿನಿಧಿಕ ತುಣುಕುಗಳನ್ನು ಅನುವಾದ ಮಾಡಿ ಮಂದಾರ ಮಲ್ಲಿಗೆ ಎಂಬ ಹೆಸರಿನ ಸಂಪುಟವನ್ನು ತ್ರಿವೇಂದ್ರಂನಲ್ಲಿಯ ಕರ್ನಾಟಕ ಸಂಘವು ಇತ್ತೀಚೆಗೆ ಹೊರತಂದಿರುವ ಮಹತ್ತರ ಕಾರ್ಯವನ್ನು ಇಲ್ಲಿ ಎತ್ತಿ ಹೇಳಬಹುದು.

ಈ ಎಲ್ಲ ಅನಧಿಕೃತ ಉದ್ಯಮಗಳ ಜೊತೆಗೆ, ಅಧಿಕೃತವಾಗಿ ಕರ್ನಾಟಕದಲ್ಲಿ ಮಲಯಾಳಂ ಅನ್ನು ಪ್ರೋತ್ಸಾಹಿಸಲು ಪ್ರಯತ್ನಗಳು ನಡೆದಿವೆಯೆಂಬ ಅಂಶವು ತೃಪ್ತಿದಾಯಕವಾದುದು. ಕರ್ನಾಟಕ ರಾಜ್ಯದಲ್ಲಿರುವ ವಿಶ್ವವಿದ್ಯಾಲಯಗಳು ಪದವಿ ತರಗತಿಗಳ ಹಂತದಲ್ಲಿ ಮಲಯಾಳಂ ಕಲಿಸುವ ವ್ಯವಸ್ಥೆ ಮಾಡಿದೆ. ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಮಲಯಾಳಂ ವಿಭಾಗವೊಂದು ಕಾರ್ಯಪ್ರವೃತ್ತವಾಗಿದೆ. ಮೈಸೂರು ವಿಶ್ವವಿದ್ಯಾಲಯದ ದಕ್ಷಿಣ ಭಾರತ ಅಧ್ಯಯನಗಳ ಎಂ.ಎ. ಕೋರ್ಸ್‌ನಲ್ಲಿ ಮಲಯಾಳಂಗೆ ಸೂಕ್ತ ಪ್ರಾತಿನಿಧ್ಯ ನೀಡಲಾಗಿದೆ. ಇದರ ಪ್ರಭಾವ ಸೀಮಿತವಾದುದಾದರೂ ಪರಿಣಾಮದಲ್ಲಿ ತುಂಬ ಗಹನವಾಗಬಹುದೆಂಬುದರಲ್ಲಿ ಸಂದೇಹವಿಲ್ಲ.

## ತೆಲುಗು ಮತ್ತು ಕರ್ನಾಟಕ

ಕರ್ನಾಟಕ ರಾಜ್ಯ ಮತ್ತು ಆಂಧ್ರ ಪ್ರದೇಶಗಳೊಳಗಿನ ಸಾಂಸ್ಕೃತಿಕ, ಧಾರ್ಮಿಕ ಮತ್ತು ಸಾಹಿತ್ಯಿಕ ಸಂಬಂಧಗಳು ನಿಕಟವಾಗಿಯೂ, ಮಹತ್ವದ್ದಾಗಿಯೂ ಇವೆ. ಈ ಎರಡೂ ರಾಜ್ಯಗಳ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಪರಂಪರೆಗಳು ಬಹುತೇಕ ಒಂದೇ ಬಗೆಯವಾಗಿವೆ. ಭೌಗೋಳಿಕವಾಗಿ ಇವೆರಡು ರಾಜ್ಯಗಳು ನೆರೆಹೊರೆಯವಾಗಿದ್ದು, ಹಿಂದಿನ ಕಾಲದಲ್ಲಿ ಇವೆರಡರ ನಡುವೆ ಯಾವ ನಿರ್ದಿಷ್ಟ ಸರಹದ್ದುಗಳೂ ಇರಲಿಲ್ಲ. ನೀತಿಶಾಸ್ತ್ರೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ಸರ್ವ ಸಾಮಾನ್ಯವಾದ ಪರಂಪರೆಯು ಈ ಎರಡು ರಾಜ್ಯಗಳ ಮಧ್ಯೆ ನೆಲೆಸಿರುವ ಬಲವಾದ ಬಾಂಧವ್ಯಕ್ಕೆ ಕಾರಣವಾಗಿದೆ. ಬಾದಾಮಿಯ ಚಲುಕ್ಯರು ತೆಲುಗು ಪ್ರದೇಶಗಳನ್ನು ಆಳುತ್ತಿದ್ದರು. ವೆಂಗಿ ಚಲುಕ್ಯರು ಬಾದಾಮಿಯ ಚಲುಕ್ಯರ ವಂಶದವರೇ ಆಗಿದ್ದರು. ಕನ್ನಡದ ಅತ್ಯಂತ ಶ್ರೇಷ್ಠ ಕವಿಯಾದ ಪಂಪ ತೆಲುಗು ಪ್ರದೇಶವಾದ ವೆಂಗಿಯಿಂದ ವಲಸೆ ಬಂದವನೆಂದು ಹೇಳಲಾಗಿದೆ. ಈಗ ತೆಲುಗು ಪ್ರದೇಶವಾಗಿರುವ ವೇಮುಲವಾಡದಲ್ಲಿ ರಾಜ್ಯವಾಳುತ್ತಿದ್ದ ಅರಿಕೇಸರಿಯೆಂಬ ಕನ್ನಡ ರಾಜ ಅವನಿಗೆ ಆಶ್ರಯದಾತನಾಗಿದ್ದ. ವೆಂಗಿಪಳುವನ್ನು ದುರ್ಗಸಿಂಹನೆಂಬ ಕವಿ ಕರ್ನಾಟಕದ ಹೃದಯ ಪ್ರದೇಶವೆಂದು ಕರೆದಿದ್ದಾನೆ. ತೆಲುಗಿನ ಆದಿಕವಿ ನನ್ನಯನಿಗೆ ಮಹಾಭಾರತವನ್ನು ಅನುವಾದ ಮಾಡಲು ಸಹಾಯಕನಾದ ಬಹುಭಾಷಾವಿಶಾರದ ಮತ್ತು ಬಹು ದೊಡ್ಡ ಕನ್ನಡ ವಿದ್ವಾಂಸ ನಾರಾಯಣಭಟ್ಟ ವೆಂಗಿ ಚಾಳುಕ್ಯ ದೊರೆ ರಾಜರಾಜ ನರೇಂದ್ರನ ಆಸ್ಥಾನದಲ್ಲಿ ಮಾನ್ಯನಾಗಿದ್ದು ವೆಂಗಿ ದೇಶದಲ್ಲಿ ಒಂದು ಅಗ್ರಹಾರವನ್ನು ಬಳುವಳಿಯಾಗಿ ಪಡೆದಿದ್ದ. ನನ್ನಯನು ಬಳಸಿರುವ ಸಂಸ್ಕೃತ ಪದಸಮುಚ್ಚಯಗಳೂ ಕಾವ್ಯ ಕೌಶಲಗಳೂ ಪಂಪನಿಂದ ಬಹುಮಟ್ಟಿಗೆ ಪ್ರಭಾವಿತವಾದವೆಂಬುದನ್ನು ವಿಮರ್ಶಕರು ತೋರಿಸಿಕೊಟ್ಟಿದ್ದಾರೆ. ತೆಲುಗು ಕುಮಾರ ಸಂಭವಂ ಕಾವ್ಯದಲ್ಲಿ ನನ್ನಚೋಡನು ಹೇಳಿರುವ ಮಾರ್ಗ ಮತ್ತು ದೇಶಿ ಆ ಕಾಲದಲ್ಲಾಗಲೇ ಕನ್ನಡದಲ್ಲಿ ಬಳಕೆಯಲ್ಲಿತ್ತು.

ಕರ್ನಾಟಕದಲ್ಲಿ ತೆಲುಗು ಶಾಸನಗಳು ಕಂಡುಬಂದಿರುವಂತೆಯೇ ಆಂಧ್ರ ಪ್ರದೇಶದಲ್ಲಿ ಕನ್ನಡ ಶಾಸನಗಳೂ ದೊರೆತಿವೆ. ಕರ್ನಾಟಕದ ಕೋಲಾರ ಜಿಲ್ಲೆಯಲ್ಲಿ ಇನ್ನೂರಐವತ್ತರಷ್ಟು ತೆಲುಗು ಶಾಸನಗಳು ಬೆಳಕು ಕಂಡಿವೆ; ಈಗ ಸಂಪೂರ್ಣವಾಗಿ ತೆಲುಗು ಮಾತನಾಡುವ ಸ್ಥಳಗಳಲ್ಲಿ ಕನ್ನಡ ಶಾಸನಗಳೂ ಲಭ್ಯವಾಗಿವೆ. ಬಸವೇಶ್ವರನಿಂದ ಪ್ರಣೀತವಾದ ವೀರಶೈವ ಪಂಥ ಮೊದಲಲ್ಲಿ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿತ್ತು. ಇದೇ ಕಾಲದಲ್ಲಿ ಅಂಥದೇ ಒಂದು ಧಾರ್ಮಿಕ ಚಳುವಳಿ ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ಆಂಧ್ರದಲ್ಲಿ ಸಂಘಟಿತವಾಗಿತ್ತು. ಅವರಿಬ್ಬರೂ ಪರಸ್ಪರ ಭೇಟಿಯಾಗಿದ್ದರೂ, ಅವರಿಬ್ಬರೊಳಗೆ ಪರಸ್ಪರ ಗೌರವಾದರಗಳಿದ್ದವು. ಮಲ್ಲಿಕಾರ್ಜುನನ ಶಿವತತ್ತ್ವಸಾರವು ಮೊದಲು ತೆಲುಗಿನಲ್ಲಿ ರಚಿತವಾಗಿ ತದನಂತರ ಆತನಿಂದಲೇ ಕನ್ನಡಕ್ಕೆ ಅನುವಾದಿತವಾಯಿತು. ಕರ್ನಾಟಕದಲ್ಲಿ ಬಸವೇಶ್ವರನಿಂದ, ಆಂಧ್ರದಲ್ಲಿ ಮಲ್ಲಿಕಾರ್ಜುನನಿಂದ ಪ್ರಾರಂಭವಾದ ಕಾರ್ಯ ಪಾಲ್ಕುರಿಕೆ ಸೋಮನಾಥನಿಂದ ಮುಂದು

ವರಿಯಿತು. ಸೋಮನಾಥನು ವೀರಶೈವ ಪಂಥವನ್ನು ಆಂಧ್ರದಲ್ಲಿ ಉಪದೇಶಿಸಲು ದೀಕ್ಷಾಬದ್ಧನಾಗಿ ಬಸವ ಪುರಾಣ ಮತ್ತು ಪಂಡಿತಾರಾಧ್ಯ ಚಾರಿತ್ರಗಳನ್ನು ರಚಿಸಿದನು. ಕನ್ನಡ ಮತ್ತು ತೆಲುಗುಗಳಲ್ಲಿ ಶಾಶ್ವತವಾದ ಸಾಹಿತ್ಯಿಕ ಮತ್ತು ಧಾರ್ಮಿಕ ಬಾಂಧವ್ಯವನ್ನು ಏರ್ಪಡಿಸುವುದಕ್ಕೆ ಆತನು ಮಾರ್ಗ ದರ್ಶಕನಾದನು. ಕನ್ನಡಿಗರು ಈತನನ್ನು ಭೃಂಗೀಶ್ವರನ ಅವತಾರವೆಂದು ಪರಿಗಣಿಸಿರುವರು. ಅನೇಕ ಕನ್ನಡ ಕವಿಗಳು ಆತನನ್ನು ಮನಃಪೂರ್ವಕ ಕೊಂಡಾಡಿದ್ದಾರೆ. ಪಾಲ್ಕುರಿಕೆ ಸೋಮನಾಥನು ಕರ್ನಾಟಕದಲ್ಲಿ ಸ್ವಲ್ಪ ಕಾಲ ವಾಸವಾಗಿದ್ದನು. ಕರ್ನಾಟಕದ ಮಾಗಡಿ ಬಳಿಯಿರುವ ಕಲ್ಯ ಎಂಬ ಗ್ರಾಮದಲ್ಲಿ ಆತನ ಸಮಾಧಿಯಿದೆ. ಅವನ ಹೆಸರಿನಲ್ಲಿ ಕೆಲವು ಕನ್ನಡ ಕೃತಿಗಳು ಇವೆ. ಇವನ ಬಸವ ಪುರಾಣವನ್ನು ಭೀಮಕವಿ ಕನ್ನಡಕ್ಕೆ ಅನುವಾದಿಸಿದ್ದಾನೆ. ಆಂಧ್ರ ಭಾಷಾಭೂಷಣಂ ಎಂಬ ತೆಲುಗಿನ ಮೊದಲ ವ್ಯಾಕರಣ ಕೃತಿ ಕರ್ಣಾಟಕ ಭಾಷಾ ಭೂಷಣಂ ಎಂಬ ಕನ್ನಡ ಕೃತಿಯನ್ನು ಮಾದರಿಯಾಗಿರಿಸಿ ಕೊಂಡಿದೆ. ಇವೆರಡರ ಹೆಸರುಗಳೂ ವಿಸ್ಮಯಕಾರಿಯಾದ ರೀತಿ ಯಲ್ಲಿ ಒಂದೇ ಬಗೆಯಾಗಿವೆ. ತೆಲುಗಿನ ಸಿಂಹಗಿರಿ ವಚನಗಳು ಮತ್ತು ವೆಂಕಟೇಶ್ವರ ವಚನಗಳು ಕನ್ನಡದ ವೀರಶೈವ ವಚನಗಳ ಸಂಪ್ರದಾಯದಲ್ಲಿಯೇ ಮೂಡಿ ಬಂದಿವೆ.

ವಿಜಯನಗರ ಸಾಮ್ರಾಜ್ಯದಲ್ಲಿ ಬುಕ್ಕರಾಯನಿಂದ ತೆಲುಗು ಸಾಹಿತ್ಯಿಕ ಚಟುವಟಿಕೆಗೆ ಪ್ರೋತ್ಸಾಹ ದೊರಕಿತು. ನಾಚನ ಸೋಮನಾಥನೆಂಬ ತೆಲುಗು ಕವಿಗೆ ಪೆಂಚುಕಲದಿನ್ನ ಎಂಬ ಗ್ರಾಮವನ್ನು ಬುಕ್ಕರಾಯ ದಾನವಾಗಿ ಕೊಟ್ಟುದಕ್ಕೆ ಶಾಸನ ವೊಂದು ಸಾಕ್ಷಿಯಾಗಿ ನಿಂತಿದೆ. ಸೋಮನಾಥ ಉದ್ದಾಮ ಸಂಸ್ಕೃತ ವಿದ್ವಾಂಸನಾಗಿದ್ದನಲ್ಲದೆ ಎಂಟು ಭಾಷೆಗಳಲ್ಲಿ ಕಾವ್ಯ ನಿರ್ಮಾಣ ಮಾಡುವ ಸಾಮರ್ಥ್ಯವನ್ನೂ ಪಡೆದಿದ್ದ. ಉತ್ತರ ಹರಿವಂಶಂ ಮತ್ತು ವಸಂತ ವಿಲಾಸಂ ಎಂಬ ಎರಡು ತೆಲುಗು ಕೃತಿಗಳ ಗ್ರಂಥಕರ್ತ ಇವನೇ. ವಿಜಯನಗರದ ರಾಜ ಪ್ರೌಢ ದೇವರಾಯ ಶ್ರೀನಾಥ ಕವಿಯನ್ನು ಅವನ ಮುತ್ತಿನ ಮನೆಯಲ್ಲಿ (ಮುತ್ಯಾಲ ಶಾಲ) ಸುವರ್ಣ ವೃಷ್ಟಿಯನ್ನು ಸುರಿಸುವುದರ ಮೂಲಕ ಮನ್ನಿಸಿದ. ಮುಂದೆ ಸಾಳುವ ನರಸಿಂಹನಿಗೆ ಪಿಲ್ಲಲಮರ್ರಿ ಪಿನ್ನ ವೀರಭದ್ರನೆಂಬ ಕವಿ ತನ್ನ ಜೈಮಿನಿ ಭಾರತವನ್ನು ಅರ್ಪಿಸಿದ್ದು ಕಂಡುಬರುತ್ತದೆ. ಕೃಷ್ಣದೇವರಾಯನ ಆಳ್ವಿಕೆಯ ಕಾಲವು ತೆಲುಗು ಸಾಹಿತ್ಯ ಚರಿತ್ರೆಯ ಸುವರ್ಣಯುಗವೆಂದು ಪರಿಗಣಿತವಾಗಿದೆ. ಕೃಷ್ಣದೇವರಾಯನು ತೆಲುಗು ಭಾಷೆಯಲ್ಲಿ ಪ್ರಕಾಂಡ ಪಂಡಿತನಾಗಿದ್ದುದಲ್ಲದೆ ತೆಲುಗು, ಸಂಸ್ಕೃತಗಳಿಗೆ ಆತ ಮಾಡಿದ ಮಹಾಸೇವೆಯನ್ನು ಸರ್ವತ್ರ ಕೊಂಡಾಡಲಾಗುತ್ತಿದೆ. ತೆಲುಗಿಗೆ ಆತ ನೀಡಿದ ಆಶ್ರಯ ಆತನಿಗೆ 'ಆಂಧ್ರಭೋಜ' ನೆಂಬ ಬಿರುದನ್ನು ತಂದುಕೊಟ್ಟಿದೆ. ತೆಲುಗಿಗೆ ಆತ ಕೊಟ್ಟ ಅಮೂಲ್ಯ ಕಾಣಿಕೆಯೆಂದರೆ ಆತನ ಆಮುಕ್ತ ಮಾಲ್ಯದ. ಇದು ತೆಲುಗು ಸಾಹಿತ್ಯದ ಮಹತ್ತರ ಕೃತಿಗಳಲ್ಲೊಂದಾಗಿದೆ. ಆತನ ಆಸ್ಥಾನ ದಲ್ಲಿ ಅಷ್ಟದಿಗ್ಗಜಗಳೆಂದು ಹೆಸರಾದ ಸಾಹಿತಿಗಳಿದ್ದರು. ಇವರ ಪೈಕಿ ಅಲ್ಲಸಾನಿ ಪೆದ್ದನ ಅತ್ಯಂತ ಶ್ರೇಷ್ಠನಾದವನು. ಪೆದ್ದನನ ಮೊದಲನೇಯ ಪ್ರಬಂಧವಾದ ಮನುಚರಿತ್ರವು ಸಾತವಲ್ಲಿ ಚಂದ್ರಶೇಖರ ಶಾಸ್ತ್ರಿಯಿಂದ ಕನ್ನಡಕ್ಕೆ ಅನುವಾದಿತವಾಗಿದೆ. ಬೆಂಗಳೂರು ನಗರ ನಿರ್ಮಾಪಕನಾದ ಕೆಂಪೇಗೌಡನು ಗಂಗಾಗೌರೀ ವಿಲಾಸಂ ಎಂಬ ತೆಲುಗು ಯಕ್ಷಗಾನವನ್ನು ರಚಿಸಿದ್ದಾನೆ. ತೆಲುಗಿನ ಮೊದಲ ಯಕ್ಷಗಾನ ಕೃತಿ ಇದೇ. ಆತನ ಕೆಲವು ಶಾಸನಗಳೂ ತೆಲುಗಿನಲ್ಲಿವೆ. ತಿರುಮಲರಾಯನ ಆಳ್ವಿಕೆಯ ಕಾಲ ದಲ್ಲಿ ರಾಮರಾಜಭೂಷಣನಿಂದ ವಸು ಚರಿತ್ರವೆಂಬ ಶ್ರೇಷ್ಠ ಶ್ಲೇಷಕಾವ್ಯ ನಿರ್ಮಾಣವಾಯಿತು. ಅದರ ಕಾವ್ಯಸತ್ತ್ವವು ಅದು ಸಂಸ್ಕೃತಕ್ಕೆ ಪರಿವರ್ತನಗೊಳ್ಳುವಂತೆ ಮಾಡಿತು. ಪುರಂದರ ದಾಸ ಮತ್ತು ತ್ಯಾಗರಾಜ—ಇವರು ಕರ್ಣಾಟಕ ಸಂಗೀತದ ಎರಡು ಕಣ್ಣುಗಳು. ತ್ಯಾಗರಾಜರ ಕೀರ್ತನೆಗಳೆಲ್ಲ ತೆಲುಗು ಭಾಷೆಯಲ್ಲಿದ್ದರೂ ಕರ್ನಾಟಕದಲ್ಲಿ ಅವು ಜನಪ್ರಿಯವಾದಷ್ಟು ಬೇರೆಲ್ಲಿಯೂ ಆಗಿಲ್ಲ. ಆಂಧ್ರದಲ್ಲಿ ಕೂಡ ಸಂಗೀತದ ಮೊದಲ ಪಾಠಗಳು ಕನ್ನಡದಲ್ಲಿರುವ ಪುರಂದರದಾಸರ ಕೀರ್ತನೆಗಳಿಂದಲೇ ಪ್ರಾರಂಭವಾಗುತ್ತವೆ. ತ್ಯಾಗರಾಜರ ಹಾಡುಗಳಲ್ಲಿ ಪುರಂದರ ದಾಸರ ಪ್ರಭಾವವಿರುವುದನ್ನು ಸ್ಪಷ್ಟವಾಗಿಯೇ ನಂಬಲಾಗಿದೆ. ತೆಲುಗು ಕವಿಗಳಿಗೆ ಆಶ್ರಯವೀಯುವ ವಿಜಯನಗರದ ಸಂಪ್ರ ದಾಯವೂ ದೊರೆಗಳ ಕೊಡುಗೆಯೂ ಮೈಸೂರು ಅರಸರ ಕಾಲದಲ್ಲಿ ಕರ್ನಾಟಕದಲ್ಲಿ ಮುಂದುವರಿಯಿತು. ಕೆಳದಿಯ ಶಿವಪ್ಪನಾಯಕನ ಮೇಲೆ (ಮೈಸೂರಿನ) ದೊಡ್ಡದೇವರಾಯನ ವಿಜಯವನ್ನು ಕುರಿತು ತೆಲುಗು ಕವಿಗಳು ಕಾವ್ಯರಚನೆ ಮಾಡಿ ದ್ದಾರೆ. ಚಿಕ್ಕದೇವರಾಯ ವಿಲಾಸಂ ಎಂಬ ಯಕ್ಷಗಾನವನ್ನು ಚಿಕ್ಕದೇವರಾಯನು ಬರೆದನೆಂದು ಹೇಳಲಾಗಿದೆ. ಚಿಕ್ಕದೇವ ರಾಯನು ಬರೆದುದೆಂದು ಹೇಳಲಾದ ಸಪ್ತಪದಿಯಲ್ಲಿ ತೆಲುಗು ಮತ್ತು ಕನ್ನಡ ಹಾಡುಗಳೆರಡೂ ಬೆರೆತುಕೊಂಡಿವೆ. ಚಿಕ್ಕದೇವ ರಾಯನ ಆಸ್ಥಾನ ಕವಿಯಾದ ತಿರುಮಲಾರ್ಯ ಕನ್ನಡ, ತೆಲುಗು, ಸಂಸ್ಕೃತಗಳಲ್ಲಿ ವಿದ್ವಾಂಸನಾಗಿದ್ದ. ಚಿಕ್ಕದೇವರಾಯನದೆಂದು ಹೇಳಲಾಗುತ್ತಿರುವ ಕನ್ನಡ ಮತ್ತು ತೆಲುಗು ಕೃತಿಗಳಲ್ಲಿ ತಿರುಮಲಾರ್ಯನ ಕೈಚಳಕವಿದೆ ಎಂದು ನಂಬಲಾಗಿದೆ.

ಚಿಕ್ಕದೇವರಾಯನ ಮಗ ಕಂಠೀರವ ನರಸರಾಜನದೆಂದು ಹೇಳಲಾಗಿರುವ ಎಂಟು ತೆಲುಗು ಯಕ್ಷಗಾನಗಳು ದೊರೆತಿವೆ. ಇವುಗಳಲ್ಲಿ ಅಷ್ಟದಿಕ್ಪಾಲಕ ವಿಲಾಸಂ ಎಂಬುದು ಪ್ರಮುಖ ವಾಗಿದ್ದು ಸಾಕಷ್ಟು ಕಾವ್ಯಸತ್ತ್ವದಿಂದ ತುಂಬಿದೆ. ಮೈಸೂರು ರಾಜ್ಯಕ್ಕೆ ಇಬ್ಬರು ಮಹಾ ದಂಡನಾಯಕರನ್ನು ಕೊಡುಗೆ ಯಾಗಿತ್ತ ಕಳಲೆ ವಂಶ ತೆಲುಗು ಲೇಖಕರಿಗೆ ಸಾಹಿತ್ಯಿಕ ಔದಾರ್ಯ ವನ್ನು ಮುಂದುವರಿಸಿತು. ಆ ವಂಶಸ್ಥರು ನ್ಯಾಯಬದ್ಧ ವಾಗಿಯೇ ಕೀರ್ತಿಶಾಲಿಗಳಾಗಿದ್ದಾರೆ. ಅಲ್ಲದೆ ತೆಲುಗಿಗೆ ಅವರು

ಸಲ್ಲಿಸಿದ ಸೇವೆಗಾಗಿ ಮೆಚ್ಚುಗೆಯನ್ನೂ ಗಳಿಸಿದ್ದಾರೆ. ದೊಡ್ಡ ಕೃಷ್ಣರಾಜನ ಆಳ್ವಿಕೆಯಲ್ಲಿ ಕಳಲೆ ವೀರರಾಜನು ದಳವಾಯಿಯಾಗಿದ್ದನು. ವೀರಭೂಪಾಲೀಯಂ ಎಂಬ ತೆಲುಗು ವ್ಯಾಕರಣ ಗ್ರಂಥವು ನ್ಯಾಯಕಾಂತಿ ಮದನಾಮಾತ್ಯನಿಂದ ವೀರರಾಜನಿಗೆ ಅರ್ಪಿತವಾಗಿದೆ. ಮಹಾಭಾರತವನ್ನು ಗದ್ಯರೂಪದಲ್ಲಿ ಬರೆಯುವ ಮುಖ್ಯವಾದ ಮತ್ತು ಕಷ್ಟಸಾಧ್ಯವಾದ ಕೆಲಸದ ಸಲುವಾಗಿ ವೀರರಾಜನು ತನ್ನ ದಳವಾಯಿ ಪದವಿಯನ್ನು ತ್ಯಜಿಸಿದನು. ಇದೊಂದು ಪ್ರಮುಖ ಕೃತಿಯೆಂದು ಪರಿಗಣಿತವಾಗಿದ್ದು, ವೀರರಾಜನು ತೆಲುಗು ಗದ್ಯ ಕಾವ್ಯದ ಅಗ್ರಗಾಮಿಯೆಂದು ಮಾನ್ಯತೆ ಗಳಿಸಿದ್ದಾನೆ. ಇದರಿಂದಾಗಿ ಅವನ ಪ್ರಾಧಾನ್ಯವು ಚಾರಿತ್ರಿಕವಾಗಿದೆ. ಇವರ ಈ ಕೃತಿಯಲ್ಲಿ ಈಗ ಆದಿ, ಸಭಾ ಮತ್ತು ಭೀಷ್ಮಪರ್ವಗಳು ಮಾತ್ರ ಲಭ್ಯವಿವೆ. ವೀರರಾಜನ ಮಗನಾದ ಕಳಲೆ ನಂಜರಾಜನು ಪ್ರತಿಭಾವಂತನಾದ ಲೇಖಕ. ತೆಲುಗಿನಲ್ಲಿ ಐದು ಕೃತಿಗಳೂ ಕನ್ನಡದಲ್ಲಿ ಹತ್ತು ಕೃತಿಗಳೂ ಅವನ ಹೆಸರಿನಲ್ಲಿವೆ. ಅವನ ಎಲ್ಲ ಕೃತಿಗಳೂ ಶೈವ ಪಂಥಕ್ಕೆ ಸೇರಿದವಾಗಿದ್ದು ಶಿವನಿಗೆ ಅರ್ಪಿತವಾಗಿವೆ. ದೊಡ್ಡ ಕೃಷ್ಣರಾಜನ ಆಸ್ಥಾನದಲ್ಲಿ ಅವನು ಸರ್ವಾಧಿಕಾರಿಯ ಹುದ್ದೆಯಲ್ಲಿದ್ದ. ಆಲೂರಿ ನರಸಿಂಹ ಶಾಸ್ತ್ರಿ ಸಂಸ್ಕೃತದಲ್ಲಿ ನಂಜರಾಜ ಯಶೋಭೂಷಣವೆಂಬ ಲಕ್ಷಣ ಗ್ರಂಥವನ್ನು ಬರೆದು ನಂಜರಾಜನಿಗೆ ಅರ್ಪಿಸಿದ್ದಾನೆ. ಪ್ರತೀ ಪದ್ಯದಲ್ಲೂ ನಂಜರಾಜನ ಹೊಗಳಿಕೆ ಇದ್ದು ಅವನನ್ನು ನಾಯಕನನ್ನಾಗಿ ಕೊಂಡಾಡಲಾಗಿದೆ. ಈ ಕೃತಿ ತೆಲುಗಿಗೂ ಅನುವಾದಿತವಾಗಿದೆ.

ಕರ್ನಾಟಕದ ಚನ್ನಪಟ್ಟಣದಲ್ಲಿ ಆಳುತ್ತಿದ್ದ ಇಮ್ಮಡಿ ಜಗದೇವರಾಯನು ಅಧ್ಯಾತ್ಮ ರಾಮಾಯಣವೆಂಬ ತೆಲುಗು ಕೃತಿಯನ್ನು ರಚಿಸಿದ್ದಾನೆ. ಜಗದೇವರಾಯನ ಆಸ್ಥಾನ ಕವಿಯಾಗಿದ್ದ ಪೊನ್ನತೋಟ ಓಬಳ ಕವಿ ವಾಮನ ಪುರಾಣ ಎಂಬ ಶ್ರೇಷ್ಠ ಕೃತಿಯನ್ನು ರಚನೆ ಮಾಡಿರುವನು. ಚನ್ನಪಟ್ಟಣ ಮತ್ತು ಸುಗಟೂರು ಸಂಸ್ಥಾನಗಳಲ್ಲಿ ಓಬಳ ಕವಿ ಮಾತ್ರವಲ್ಲದೆ ಇನ್ನೂ ಹಲವರು ಕವಿಗಳಿದ್ದರು. ಅವರಲ್ಲಿ ಕೆಲವರನ್ನು ಹೆಸರಿಸುವುದಾದರೆ ನೈಷಧಮ್ ತಿಮ್ಮ ಕವಿ, ಕೋಡೂರು ವೆಂಕಟಾಚಲ ಕವಿ, ಮುಮ್ಮಡಿ ತಿಮ್ಮ ಭೂಪಾಲುಡು (ಸುಗಟೂರು) ಮತ್ತು ಬದ್ದೆವೀಟಿ ದತ್ತ ಕವಿ (ಸುಗಟೂರು). ತೆಲುಗು ಕಥಾ ಕಾವ್ಯಗಳ ಪೈಕಿ ಅತ್ಯಂತ ಸುಂದರವಾದ ಮತ್ತು ಜನಪ್ರಿಯವಾದ ಶುಕ ಸಪ್ತತಿ ಎಂಬ ಕೃತಿಯು ಕರ್ನಾಟಕದಿಂದಲೇ ಮೂಡಿ ಬಂದಿದೆ. ಸಾಹಿತ್ಯಿಕ ಗುಣಮೌಲ್ಯದಲ್ಲಿ ಅದನ್ನು ಸರಿಗಟ್ಟುವ ಕೃತಿ ಯಾವುದೂ ಇಲ್ಲ. ಈ ಕಾವ್ಯದ ಕರ್ತೃ ಕದಿರಿ ಪಾಟಿನಾಯಕ. ಈತ ವಿಜಯನಗರ ಅರಸುಗಳ ಸಾಮಂತನಾಗಿದ್ದು, ಈಗ ಕೋಲಾರ ಜಿಲ್ಲೆಯಲ್ಲಿರುವ ತಡಿಗೊಳ್ಳದಲ್ಲಿ ರಾಜ್ಯಭಾರ ಮಾಡುತ್ತಿದ್ದ.

ಹದಿನೆಂಟನೇಯ ಶತಮಾನದಲ್ಲಿ ಸುರಪುರ ಸಂಸ್ಥಾನದಲ್ಲಿ (ಕಲ್ಬುರ್ಗಿ ಜಿಲ್ಲೆಯಲ್ಲಿರುವ ಶೋರಾಪುರ) ನಾಯಕರ ಆಳ್ವಿಕೆಯ ಕಾಲದಲ್ಲಿ ಮೂರು ಮುಖ್ಯ ತೆಲುಗು ಕೃತಿಗಳು ರಚಿತವಾದವು : 1) ಬಹಿರಿ ಪಾಮನಾಯಕನ ಭಾರ್ಗವ ಪುರಾಣ, 2) ಪುರುಷಕರಿ ಕೇಶವಯ್ಯನ ದಾಶರಥಿ ಚರಿತ್ರ (ನಿರೋಷ್ಠ್ಯ) ಮತ್ತು 3) ಕಿರೀಟಿ ವೆಂಕಟಾಚಾರ್ಯನ ಅಚಲಾತ್ಮಜ ಪರಿಣಯಮ್. ಕೊನೆಯದು ಒಂದು ಅನ್ಯೋಕ್ತಿ ಕಾವ್ಯ. ಕಿರೀಟಿ ವೆಂಕಟಾಚಾರ್ಯನು ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಸಾರ ಮಾಡಿದುದೂ ಅಲ್ಲದೆ ಅನೇಕ ಧಾರ್ಮಿಕ ಸ್ಪರ್ಧೆಗಳಲ್ಲಿ ವಾದ ಮಾಡಿ ಗೆದ್ದಿರುತ್ತಾನೆ. ವೆಂಕಟಪ್ಪ ನಾಯಕನ ಆಳ್ವಿಕೆಯ ಕಾಲದಲ್ಲಿ ಅವನು ಸುರಪುರದ ಆಸ್ಥಾನದಲ್ಲಿದ್ದನು.

ಹತ್ತೊಂಬತ್ತನೇಯ ಹಾಗೂ ಇಪ್ಪತ್ತನೇಯ ಶತಮಾನಗಳ ಕಾಲಾವಧಿಯಲ್ಲಿ ಕೋಲಾರ ಪ್ರದೇಶದಲ್ಲಿ ಅನೇಕ ಮಹತ್ವದ ತೆಲುಗು ಕೃತಿಗಳು ಗುಮ್ಮರಾಜುರ ಮಹಾಕವಿ (ಚೌಡೇಶ್ವರಿ ಪುರಾಣಮ್), ಕೊಮಾರ್ಲ ರಾಮಚಂದ್ರಯ್ಯ (ಸುಕರ್ಮ ನೀತಿ ಚಿಂತಾಮಣಿ), ಕಾಹುಲ ಭೈರವ ಕವಿ (ಪದ್ಮಾವತಿ ಶ್ರೀನಿವಾಸ) ಮೊದಲಾದವರಿಂದ ರಚಿತವಾಗಿವೆ. ಇಡುಗೂರಿ ರುದ್ರಕವಿ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಉದ್ದಾಮ ಪಂಡಿತನಾಗಿದ್ದ. ಆತ ಕನ್ನಡ ಮತ್ತು ತೆಲುಗುಗಳಲ್ಲಿ ಅನೇಕ ನಾಟಕಗಳನ್ನೂ, ಯಕ್ಷಗಾನಗಳನ್ನೂ, ಕಾವ್ಯಗಳನ್ನೂ ರಚಿಸಿದ್ದಾನೆ. ತಾನು ಕನ್ನಡದಲ್ಲಿ ಬರೆದ ಕೆಲವು ಕೃತಿಗಳನ್ನು ತಾನೇ ತೆಲುಗಿಗೆ ಅನುವಾದಿಸಿಯೂ ಇದ್ದಾನೆ. ಕನ್ನಡಿಗರಿಗೆ ಸರ್ವಜ್ಞ ಕವಿ ಹೇಗೋ ಹಾಗೆ ಆಂಧ್ರದವರಿಗೆ ವೇಮನ. ವೇಮನನನ್ನು ಹಲವಾರು ರೀತಿಗಳಲ್ಲಿ ಸರ್ವಜ್ಞನಿಗೆ ಹೋಲಿಸಬಹುದು. ಕರ್ನಾಟಕದಲ್ಲಿರುವ ಭೀಮರಾಜು ಎಂಬ ತೆಲುಗು ಕವಿ ವೇಮನನ ಪದ್ಯಗಳನ್ನು ಕನ್ನಡಕ್ಕೂ ಸರ್ವಜ್ಞನ ವಚನಗಳನ್ನು ತೆಲುಗಿಗೂ ಅನುವಾದಿಸಿದ್ದಾನೆ.

ಆಧುನಿಕ ಕಾಲದಲ್ಲಿ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಮಹತ್ವದ ದಾಪುಗಾಲುಗಳನ್ನು ಹಾಕಲಾಗಿದೆ. ಅನೇಕ ಸಾಹಿತ್ಯ ಪ್ರಕಾರಗಳು ಕವಿತೆ, ನಾಟಕ, ಕಾದಂಬರಿ, ಏಕಾಂಕ ನಾಟಕ, ಸಣ್ಣ ಕತೆ, ಖಂಡಕಾವ್ಯಗಳು ತೆಲುಗಿನಿಂದ ಕನ್ನಡಕ್ಕೂ, ಕನ್ನಡದಿಂದ ತೆಲುಗಿಗೂ ಅನುವಾದಗೊಂಡಿವೆ. ಕನ್ನಡ ಮತ್ತು ತೆಲುಗುಗಳಿಗೆ ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಅತ್ಯುತ್ತಮ ಸೇವೆ ಸಲ್ಲಿಸಿರುವರು. ಅವರು ಈ ಎರಡು ಭಾಷೆಗಳಲ್ಲೂ ದೊಡ್ಡ ವಿದ್ವಾಂಸರಾಗಿದ್ದರು. ಮಾತ್ರವಲ್ಲ ಶ್ರೇಷ್ಠ ಸಂಗೀತ ವಿದ್ವಾಂಸರೂ ಆಗಿದ್ದರು. ಸಾಹಿತ್ಯ ವಿಮರ್ಶೆ ಮತ್ತು ಇತರ ಅನೇಕ ವಿಷಯಗಳನ್ನು ಕುರಿತಾದ ಅವರ ಪ್ರಬಂಧಗಳು ಕನ್ನಡಕ್ಕೆ ಅನುವಾದಗೊಂಡಿವೆ. ಸಮಕಾಲೀನ ಕ್ರಾಂತಿಕಾರಿ ಕವಿಗಳಾದ ದಿಗಂಬರ ಕವುಲು ಅವರ 'ದಿಗಂಬರ ಕವಿತ', ಪಟ್ಟಾಭಿಯವರ ಫಿಡೆಲ್

ರಾಗಲ ಡಜನ್, ಅಲ್ಲದೆ ತಿಲಕ ಸಿ. ನಾರಾಯಣರೆಡ್ಡಿ ಮತ್ತು ಗುಂಟೂರು ಶೇಷೇಂದ್ರಶರ್ಮ ಇವರ ಕವಿತೆಗಳು ಅನುವಾದ ಗೊಂಡು ಕನ್ನಡದಲ್ಲಿ ಬಂದಿವೆ. ಕನ್ನಡದಲ್ಲಿ ದೊರೆಯುವ ಪ್ರಮುಖ ತೆಲುಗು ಕಾದಂಬರಿಗಳೆಂದರೆ ರುದ್ರಮದೇವಿ, ನಾರಾಯಣರಾವು, ಮಾ ಬಾಬು, ಮೈದಾನಂ ಮತ್ತು ಪಂಡಿತ ಪರಮೇಶ್ವರಶಾಸ್ತ್ರಿ ಗಳ ವೀಲುನಾಮ, ಮೊದಲಾದವು. ಶಾಂತಲಾ, ವಂಶವೃಕ್ಷ, ಮತ್ತಿತರ ಕನ್ನಡ ಕಾದಂಬರಿಗಳು ತೆಲುಗಿಗೆ ತರ್ಜುಮೆಯಾಗಿವೆ. ಕನ್ನಡದ ಕಾವ್ಯ, ಸಾಹಿತ್ಯ ವಿಮರ್ಶೆ, ಪ್ರಬಂಧಗಳು, ಮುಂತಾದ ವನ್ನು ತೆಲುಗಿಗೆ ಅನುವಾದಿಸುವುದರಲ್ಲಿ ಡಾ|| ಟಿ. ವಿ. ಸುಬ್ಬ ರಾವ್, ಬಾಡಾಲ ರಾಮಯ್ಯ, ಕೆ. ಎಸ್. ಜಾನಕಿರಾಮಯ್ಯ, ಡಾ|| ಆರ್. ವಿ. ಎಸ್. ಸುಂದರಂ ಮತ್ತು ಹರಿಹರಪ್ರಿಯರದು ದೊಡ್ಡ ಸಾಧನೆ. ಸದ್ಯದಲ್ಲಿ, ಬೆಂಗಳೂರಿನಲ್ಲಿರುವ ಆಂಧ್ರ ವಿಜ್ಞಾನ ಸಾರಸ್ವತ ಸಂಘಂ (ಬೆಂಗಳೂರು ದಂಡಿನ ಪ್ರದೇಶ), ಆಂಧ್ರ ವಿಜ್ಞಾನ ಸಂಘಂ (ಮಲ್ಲೇಶ್ವರಂ), ತೆಲುಗು ಸಮಿತಿ (ಬಸವನಗುಡಿ) ಮೊದಲಾದ ಸಂಘ ಸಂಸ್ಥೆಗಳು ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಒಂದು ಸಾಮಾನ್ಯ ವೇದಿಕೆ ಯನ್ನು ರಚಿಸಲು ಶಕ್ತಿ ಮೀರಿ ಹವಣಿಸುತ್ತಿವೆ. ತೆಲುಗು ಮತ್ತು ಕನ್ನಡಗಳಿಗೆ ಒಂದು ಸಾಮಾನ್ಯ ಲಿಪಿಯನ್ನು ಏರ್ಪಡಿಸುವ ಪ್ರಯತ್ನ ಕೂಡ ನಡೆದಿದೆ. ವಿಜಯನಗರ ಕಾಲದ ಅಂತ್ಯದವರೆಗೆ ಈ ಎರಡು ಭಾಷೆಗಳಿಗೂ ಒಂದೇ ಬಗೆಯ ಲಿಪಿ ಇದ್ದಿತು.

## ತಮಿಳು ಮತ್ತು ಕರ್ನಾಟಕ

ಮೂಲ ದ್ರಾವಿಡ ಭಾಷೆಯಿಂದ ಕವಲೊಡೆದು ಬಂದ ಒಂದು ಸ್ವತಂತ್ರ ಭಾಷೆ ಕನ್ನಡ. ಒಂದೇ ಮೂಲ ದ್ರಾವಿಡ ಭಾಷೆಯಿಂದ ಉಗಮಗೊಂಡ ಭಾಷೆಗಳು ಕನ್ನಡ ಮತ್ತು ತಮಿಳು. ಈ ಭಾಷಾ ಗೋತ್ರದಲ್ಲಿ ಕನ್ನಡವು ಪ್ರಾಚೀನತೆಯಲ್ಲಿ ತಮಿಳಿನ ಅನಂತರ ಬರುತ್ತದೆ. "ಕನ್ನಡವು ತಮಿಳಿಗೆ ತೀರ ಹತ್ತಿರದ ಬಾಂಧವ್ಯವನ್ನು ಹೊಂದಿದ್ದು ಅವು ಮಾತ್ರ ಕ್ರಮವಾದ ಸ್ತ್ರೀಲಿಂಗವನ್ನು ಹೊಂದಿವೆ. ಬಹುವಚನದ ಅನೇಕ ಪ್ರತ್ಯಯ ಗಳು, ಹಾಗೆಯೇ ಸಮರ್ಪಕ ಮತ್ತು ಅಸಮರ್ಪಕ ನಾಮಪದಗಳ ಪ್ರತ್ಯಯಗಳು ಈ ಎರಡು ಭಾಷೆಗಳಲ್ಲೂ ಬಹುತೇಕ ಒಂದೇ ತೆರ ನಾಗಿವೆ. ವಾಕ್ಯ ರಚನೆಯು ಇನ್ನೂ ಅನೇಕ ವಿಧಾನಗಳಲ್ಲಿ ಕೂಡ ಅವು ಒಂದೇ ರೀತಿಯ ವಿಧಿಗಳನ್ನು ಹೊಂದಿವೆ. ಈ ಎರಡು ಭಾಷೆಗಳೂ ಪರ್ಯಾಯ ಧಾತುಗಳ ನಿರ್ಮಾಣದಲ್ಲಿ ಒಂದೇ ಸೂತ್ರ ವನ್ನು ಅನುಸರಿಸುತ್ತವೆ", ಎಂಬುದಾಗಿ ಆರ್. ನರಸಿಂಹಾಚಾರ್ ಹೇಳುತ್ತಾರೆ. ಕರ್ನಾಟಕ ಮತ್ತು ತಮಿಳುನಾಡು ಹತ್ತಿರ ಹತ್ತಿರದ ರಾಜ್ಯಗಳಾಗಿದ್ದು, ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ವ್ಯವಹರಿಸುತ್ತ, ಪರಸ್ಪರ ಬಾಂಧವ್ಯವನ್ನು ತೋರಿಸುತ್ತ, ಪರಸ್ಪರ ಪ್ರಭಾವಗಳಿಗೆ ಒಳಗಾಗುತ್ತಲೇ ಬಂದಿವೆ.

ಕದಂಬರ ಹಾಗೂ ಗಂಗರ ಆಗಮನಕ್ಕಿಂತ ಪೂರ್ವದಲ್ಲಿ ವಾಸ್ತವವಾಗಿ ಅನೇಕ ದಶಕಗಳ ಕಾಲ ಪಲ್ಲವರು ಕರ್ನಾಟಕದ ಅನೇಕ ಭಾಗಗಳನ್ನು ಆಳಿದ್ದರು. ಕರ್ನಾಟಕದ ಬಹಳಷ್ಟು ಭಾಗ, ಅದರಲ್ಲೂ ಮುಖ್ಯವಾಗಿ ಗಂಗವಾಡಿ ಪ್ರದೇಶವು ಒಂದು ಶತಮಾನಕ್ಕಿಂತ ಹೆಚ್ಚು ಕಾಲಾವಧಿ ಚೋಳರ ಅಧೀನದಲ್ಲಿದ್ದಿತು. ಕರ್ನಾಟಕದಲ್ಲಿ ಚೋಳರ ಆಳ್ವಿಕೆಯ ರುಜುವಾತಾಗಿ ಅನೇಕ ದೇವಾಲಯಗಳು ದೊಮ್ಮಲೂರು, ಅಲಸೂರು, ಚನ್ನಪಟ್ಟಣದ ಸಮೀಪದ ಮಳೂರು ಮುಂತಾದೆಡೆ ಇವೆ; ಹಾಗೂ ನಾಗ ಮಂಗಲ, ಬಿನ್ನಮಂಗಲ ಮುಂತಾದ ಅನೇಕ ಅಗ್ರಹಾರಗಳೂ ಉಳಿದಿವೆ. ತರುವಾಯದಲ್ಲಿ ಹೊಯ್ಸಳರು ತಮಿಳುನಾಡಿನ ಭಾಗಗಳನ್ನು ಆಕ್ರಮಿಸಿದರು. ಹೊಯ್ಸಳ ಇಮ್ಮಡಿ ಬಲ್ಲಾಳನು ಚೋಳರಾಜ ಪ್ರತಿಷ್ಠಾಪಕ ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದಾನೆ. ಶ್ರೀರಂಗಂ ಮತ್ತು ಕಣ್ಣಾನೂರು ಕುಪ್ಪಂ ಹೊಯ್ಸಳ ಚಟುವಟಿಕೆಗಳ ಕೇಂದ್ರಗಳಾಗಿದ್ದವು; ತಮಿಳು ನಾಡಿನಾದ್ಯಂತ ಹತ್ತಾರು ಕನ್ನಡ ಶಾಸನಗಳನ್ನು ಅವರು ಬಿಟ್ಟಿದ್ದಾರೆ. ವಿಜಯನಗರ ಚಕ್ರವರ್ತಿಗಳು ತಮಿಳುನಾಡನ್ನು ಸಮಗ್ರವಾಗಿ ಆಳಿದ್ದಾರೆ. ಹಾಗೆಯೇ ಮೈಸೂರು ರಾಜರೂ ಹೈದರ್ ಅಲಿ ಮತ್ತು ಟಿಪ್ಪು ಇವರೂ ತಮಿಳುನಾಡಿನ ಭಾಗ ಗಳನ್ನು ಆಳಿರುತ್ತಾರೆ. ತಮಿಳುನಾಡಿನಲ್ಲಿ ವಿಜಯನಗರದ ಪ್ರಭುತ್ವವು ಅನೇಕ ರಾಯಗೋಪುರ ('ರಾಯ'ರಿಂದ ನಿರ್ಮಿತ ವಾದ ಗೋಪುರ) ಗಳನ್ನೂ ವಿಜಯನಗರ ಶೈಲಿಯ ಕಲ್ಯಾಣ ಮಂಟಪಗಳನ್ನೂ ಸಭಾಮಂಟಪಗಳನ್ನೂ ದೇವಾಲಯಗಳನ್ನೂ ಬಿಟ್ಟಿದೆ. ಈ ನಿಡುಗಾಲದ ಬಾಂಧವ್ಯ ಸ್ವಾಭಾವಿಕವಾಗಿಯೇ ಈ ಎರಡು ರಾಜ್ಯಗಳ ಜನ ಜೀವನ ಮತ್ತು ಸಂಸ್ಕೃತಿಗಳ ಅನೇಕ ಅಂಶಗಳಲ್ಲಿ ಕೊಳು-ಕೊಡೆಗಳನ್ನು ಏರ್ಪಡಿಸಿದೆ. ಮೊದಲೇ ತಿಳಿಸಿರುವಂತೆ 'ಕರ್ನಾಟಕ' ವೆಂಬ ಶಬ್ದವೇ 'ಶಿಲಪ್ಪದಿಗಾರಂ' ಮೊದಲಾದ ತಮಿಳು ಕೃತಿಗಳಲ್ಲಿ ಲಭ್ಯವಾಗುವ 'ಕರುನಾಟ್' ಎಂಬ ತಮಿಳರ ಬಳಕೆಗಳಿಂದ ಉದ್ಭೂತವಾಗಿದೆಯೆಂದು ಹೇಳ ಬಹುದಾಗಿದೆ. ತಮಿಳು ಮತ್ತು ಕನ್ನಡಗಳು ಪರಸ್ಪರ ಎಷ್ಟು ನಿಕಟವಾಗಿವೆಯೆಂದರೆ, ಕನ್ನಡದ ಪುರಾತನ ಶಾಸನಗಳಲ್ಲಿ ದೊರೆ ಯುವ ಶಬ್ದರೂಪಗಳು ತಮಿಳಿನಂತೆಯೇ ಭಾಸವಾಗುತ್ತವೆ.

ಶ್ರವಣಬೆಳಗೊಳದ ಒಂದು ಶಾಸನ ಹೀಗಿದೆ: "ಕಲ್ಬಪ್ಪಿನಾ ವೆಟ್ಟಿದುಳ್......ನೋಂತು......ಮುನಿವರನ್ ದೇವಲೋಕಕ್ಕೆ ಸಂದಾನ್" ಹೀಗೆಯೇ ಇನ್ನೊಂದು ಶಾಸನದಲ್ಲಿ "ಕೊಡು ವೋರುಂ ಪಂಚಮಹಾಪಾತಕ ಸಂಯುಕ್ತರಪ್ಪಾರ್" ಎಂದಿದೆ. ಇನ್ನೂ ಇಂಥ ಅನೇಕ ರೂಪಗಳು ತಮಿಳಿನಂತೆಯೇ ಗೋಚರಿಸು ತ್ತವೆ. "ಇದರ್ಕೆ ನೆಲವೋದುಪೋನ್" ಅಥವಾ "ಎಳ್ತು ಕೋಳ್—ಇಲ್ಲೆ" ಇತ್ಯಾದಿ. ತಮಿಳುನಾಡಿನ ಪ್ರಭಾವ ಹೆಚ್ಚಿಗೆ ಆಗಿರುವ ಮೈಸೂರು ಮತ್ತು ಹಾಸನ ಜಿಲ್ಲೆಗಳಲ್ಲಿ ಲಭ್ಯವಾಗಿರುವ ಶಾಸನಗಳಲ್ಲಿ ಈ ಬಗೆಯ ಶಬ್ದರೂಪಗಳು ಧಾರಾಳವಾಗಿ

ಸಿಗುತ್ತವೆ. 'ವಡ್ಡಾರಾಧನೆ' ಯೆಂಬ ಕನ್ನಡ ಕೃತಿಯಲ್ಲಿ ಇಂಥ ಹಲವಾರು ರೂಪಗಳು ಕಂಡುಬಂದಿವೆ. ಉದಾಹರಣೆಗೆ—"ತಾಯರ್ ತಂದೆವಿರ ಕೆಲ್ಪಿಯುವ ಗಯ್ಯಾದೆ" (ಕೆಲ್ಪಿಯುವರ್), ಇಲ್ಲಿ ತಮಿಳಿನ 'ಕೆಲ್ವಿ' ಯಂತೆ ರೂಪವಿದೆ; ಅಥವಾ, "ಸಂಯುಕ್ತ್ವಮನೋದಯನಾಗಿ" ಅಥವಾ "ಸರ್ವಜ್ಞ ಧರ್ಮಮಂ ಕೊಲಲಾಗ", ಇತ್ಯಾದಿ. ಅನೇಕ ಶಬ್ದಗಳು ತಮಿಳು ಮತ್ತು ಕನ್ನಡಗಳಲ್ಲಿ ಒಂದೇ ರೂಪದಲ್ಲಿ ಪ್ರಯೋಗ ಗೊಂಡಿವೆ. ಉದಾಹರಣೆಗೆ—ತಾಯ್, ಪೆಣ್, ಅಡಿ, ಮುಡಿ, ಕಣ್, ಕಲ್, ಮಣ್, ಪಗಲ್, ತಿಂಗಳ್, ಪುಲಿ, ಪೊನ್, ಪಣಂ—ಇವು ನಾಮವಾಚಕಗಳು; ನಾನ್, ನೀನ್, ಅದು, ಇದು—ಇವು ಸರ್ವನಾಮಗಳು; ಕುಡು, ಕುರು, ನಲ್, ನೇರ್, ತಣ್, ನುಣ್, ಮೇಲ್, ಕರಿಯ, ಇನಿಯ—ಇವು ಗುಣವಾಚಕ ಗಳು; ಅಡು, ಓಡು, ಕಡಿ, ತಣಿ, ನಂಬು—ಇವು ಕ್ರಿಯಾವಾಚಕ ಗಳು; ಅರು, ಏಳು, ಪತ್ತು, ನೂರು—ಇವು ಸಂಖ್ಯಾವಾಚಕ ಗಳು. ಕೆಲವು ಶಬ್ದರೂಪಗಳು ಅಲ್ಪಸ್ವಲ್ಪ ವ್ಯತ್ಯಾಸವನ್ನು ತಾಳಿವೆ. ತಂದೆ (ತಂದೈ-ತಮಿಳು), ಅರ್ಪಿ (ಅರುವಿ), ಒಡಲ್ (ಉಡಲ್), ಉಸಿರು (ಉಯಿರ್), ಪೊಸ (ಪುದು), ಬೆಳ್ (ವೆಳ್), ಇರಿ (ಎರಿ), ಪೊರ್ದು (ಪೊರುಂದು), ಸೊಲ್ (ತೊಲ್), ಎರಡು (ಇರಂಡು), ಇಪ್ಪತ್ತು (ಇರುಪದು), ಇತ್ಯಾದಿ.

ಕೆಲವೊಮ್ಮೆ ಸಂಪರ್ಕದ ಅಭಾವದಿಂದಲೋ, ಮರೆವಿ ನಿಂದಲೋ, ಮೂಲ ದ್ರಾವಿಡದ ಕೆಲವು ಶಬ್ದಗಳು ತಪ್ಪಾಗಿ ವ್ಯಾಖ್ಯಾನಗೊಂಡಿವೆ. ಕನ್ನಡದಲ್ಲಿ 'ಪರಮೆ' ಎಂಬುದು ದುಂಬಿ ಎಂಬ ಅರ್ಥದಲ್ಲಿ ಬಳಕೆಯಾಗಿದ್ದಕ್ಕೆ ತಮಿಳಿನಲ್ಲಿ ಪರಮೆ ಎಂದರೆ ಹಕ್ಕಿ ಎಂದರ್ಥ. ಹೀಗೆಯೇ 'ಪುವೆಲ್' ಎಂಬುದು ಮರಳು ದಿಣ್ಣೆ, ಎಂದು ವ್ಯಾಖ್ಯಾನಗೊಂಡಿದೆ; ವಾಸ್ತವವಾಗಿಯೂ ಇದು ತಮಿಳಿನ 'ಪೊವೆಲ್'ನಿಂದ ಬಂದುದು, ಇದಕ್ಕೆ ಅಲ್ಲಿ ಪೊದೆ ಎಂಬರ್ಥವಿದೆ. ಪಂಪ ಮತ್ತು ನಾಗಚಂದ್ರ ಇಬ್ಬರೂ ಇದೇ ಅರ್ಥದಲ್ಲಿ ಇದನ್ನು ಬಳಸಿದ್ದಾರೆ. ಪಂಪಕವಿ 'ಹಬ್ಬ' ಎನ್ನುವ ಅರ್ಥದಲ್ಲಿ ಬಳಸಿದ 'ಸೆರಪು' ಶಬ್ದದ ಅರ್ಥ ತಿಳಿಯಬೇಕಾದರೆ ತಮಿಳಿನ 'ಶಿರಪ್ಪು' ನೋಡಬೇಕು. ಹೀಗೆ, ತಮಿಳಿನ ಜ್ಞಾನವು ಕನ್ನಡದ ಅನೇಕ ಮಾರ್ಗ (ಅಭಿಜಾತ) ಕವಿಗಳು ಬಳಸಿದ ಶಬ್ದಗಳ ಅರ್ಥವನ್ನು ಸ್ಫುಟವಾಗಿ ತಿಳಿದುಕೊಳ್ಳಲು ಸಹಾಯಕ ವಾಗುವುದು. ಆದರೆ, ಕನ್ನಡವೊಂದೇ ಮೂಲದ್ರಾವಿಡದ ಕೆಲವು ಶಬ್ದರೂಪಗಳನ್ನು ಉಳಿಸಿಕೊಂಡಿರುವ ನಿದರ್ಶನಗಳೂ ಇವೆ. ತಮಿಳಿನ 'ಅಯಿಲ್' ಶಬ್ದಕ್ಕೆ ತಿನ್ನು ಎಂದರ್ಥವಿದೆ. ಆದರೆ ಇದರ ಮೂಲ ಅರ್ಥ 'ಜಗಿ' ಎಂದು; ಈ ಅರ್ಥದಲ್ಲೇ ಅದು ಕನ್ನಡದಲ್ಲಿ ಪ್ರಯೋಗಗೊಂಡಿದೆ. 'ಕಿರಿದು' ಎಂಬ ಮೂಲಶಬ್ದ ಕನ್ನಡದಲ್ಲಿ ಹಾಗೆಯೇ ಉಳಿದುಕೊಂಡಿದೆ; ತಮಿಳುನಲ್ಲಾದರೋ ಅದು 'ಶಿರಿದು' ಎಂದಾಗಿದೆ. ಇದೇ ಬಗೆಯಲ್ಲಿ 'ಕೆದರು' ಶಬ್ದ ತಮಿಳಿನಲ್ಲಿ 'ಶಿದರು' ಎಂದೂ 'ಕೆಸರು' ಎಂಬುದು 'ಶೇರು' ಎಂದೂ ಆಗಿವೆ.

ಸಾಹಿತ್ಯರಂಗದಲ್ಲಂತೂ ಬೇಕಾದಷ್ಟು ಕೊಳು-ಕೊಡುಗೆ ಗಳು ನಡೆದಿವೆ. ಪಂಪನಿಗೆ ತಮಿಳು ಸಾಹಿತ್ಯದ ಪರಿಚಯವಿದ್ದಿರ ಬಹುದು. ಈಗಾಗಲೇ ಹೇಳಿದಂತೆ, ಪಂಪ 'ಸೆರಪು' ಎಂಬ ಶಬ್ದ ಪ್ರಯೋಗ ಮಾಡಿದ್ದಾನೆ. 'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪ ನಿರೂಪಿಸಿರುವ—ದುರ್ಯೋಧನನ ಹೆಂಡತಿ ಭಾನುಮತಿ ಯನ್ನು ನೆತ್ತದಾಟದಲ್ಲಿ ಸೋಲಿಸಿ ಕರ್ಣ ಅವಳ ಕೊರಳ ಹಾರ ವನ್ನು ಕಿತ್ತುಕೊಳ್ಳುವ ಸನ್ನಿವೇಶದಲ್ಲಿ ತಮಿಳಿನ ಆಕರ ಕಾಣಿಸು ತ್ತವೆ. ತದನಂತರದಲ್ಲಿ ಬಂದ ಹರಿಹರ ಕವಿ ತನ್ನ ರಗಳೆಗಳಲ್ಲಿ ಶಿವಶರಣರ ಕತೆಗಳನ್ನು ನಿರೂಪಿಸಿದ್ದಾನೆ. ವೀರಶೈವ ಧಾರ್ಮಿಕ ಚಳವಳಿಯಲ್ಲಿ ತಮಿಳುನಾಡಿನ ನಾಯನ್ಮಾರರ ಪ್ರಭಾವ ಸುಸ್ಪಷ್ಟ ವಾಗಿದೆ. ವೀರಶೈವರು ಅವರನ್ನು ಅರವತ್ತಮೂರು ಪುರಾತನರು ಎಂಬುದಾಗಿ ಕರೆಯುತ್ತಾರೆ. ಈ ಪುರಾಣಗಳಲ್ಲಿ ಹೆಚ್ಚಿನವನ್ನು ಅವನು ತನ್ನ ರಗಳೆಗಳಲ್ಲಿ ನಿರೂಪಿಸಿದ್ದಾನೆ. ಹರಿಹರ ಉಪಯೋಗಿ ಸಿದ ರಗಳೆ ಛಂದಸ್ಸೇ 'ಶಿಲಪ್ಪದಿಗಾರಂ', 'ಮಣಿಮೇಖಲೈ', 'ತಿರುವಾಚಕಂ'ಗಳಲ್ಲಿ ಬಳಕೆಯಾಗಿರುವ 'ಅಗವಲ್' ಛಂದಸ್ಸಿ ನಿಂದ ಪ್ರೇರಿತವಾಗಿದ್ದಿರಬಹುದು. ತಮಿಳು ಶಬ್ದಗಳಾದ 'ತಿರು ನಾಳ್', 'ತಿರುಪಾಡು' 'ಪೆರುಮಲೆ', 'ತಿರುವಿಧಿ', ಮೊದಲಾದ ಅನೇಕವನ್ನು ಹರಿಹರ ಸಮರ್ಥವಾಗಿ ಉಪಯೋಗಿಸಿಕೊಂಡಿ ದ್ದಾನೆ. ಅರವತ್ತಮೂರು ಪುರಾತನರ ಕಥೆಗಳನ್ನು ಶೆಕ್ಕಿಲಾರ್ ತಮಿಳಿನಲ್ಲಿ ಬರೆದ 'ಪೆರಿಯ ಪುರಾಣ'ಕ್ಕೆ ಹರಹರ ಋಣಿಯಾಗಿ ದ್ದಾನೆ. ಇಷ್ಟಾದರೂ ಇಲ್ಲಿ ಹರಿಹರನ ಸ್ವೋಪಜ್ಞತೆಯನ್ನು ಕಡೆಗಣಿಸುವಂತಿಲ್ಲ. ವಾಸ್ತವವಾಗಿ ಹರಿಹರ ಹೊಯ್ಸಳರ ಅಧಿಕಾರಿಯಾಗಿ ತಮಿಳುನಾಡಿನಾದ್ಯಂತ ಸಂಚರಿಸಿ ಈ ಶಿವಶರಣರಿಗೆ ಸಂಬಂಧಿಸಿದ ದೇವಸ್ಥಾನಗಳನ್ನು ಸಂದರ್ಶಿಸಿದ್ದಾನೆಂದು ತೋರು ತ್ತದೆ. ಶಿವಶರಣರ ಕಥೆಗಳನ್ನು ಹೇಳುವಾಗ ಈ ಸ್ಥಳಗಳ ಮತ್ತು ದೇವಾಲಯಗಳ ನೈಜ ವಿಸ್ತೃತ ಹಾಗೂ ಸ್ವಂತಿಕೆಯ ವರ್ಣನೆಗಳನ್ನು ಅವನು ಕೊಡುತ್ತಾನೆ ಮಾತ್ರವಲ್ಲ, ಈ ಶರಣರ ನಿಜಕೃತಿಗಳಿಂದ ಬೇಕಾದಷ್ಟು ಅವತರಣಿಕೆಗಳನ್ನೂ ನೀಡು ತ್ತಾನೆ.

ಕನ್ನಡ ಪ್ರದೇಶಗಳಲ್ಲಿ ಬಹಳ ಕಾಲ ವಲಸೆ ಹೋಗಿ ವಾಸ ಮಾಡಿದ್ದ ರಾಮಾನುಜರ ಕಾಲದಲ್ಲಿ ಅವರು ಪ್ರತಿಪಾದಿಸಿದ ಶ್ರೀ ವೈಷ್ಣವ ಧರ್ಮವು ಕರ್ನಾಟಕದಲ್ಲಿ ತನ್ನ ದಟ್ಟವಾದ ಪ್ರಭಾವ ಮುದ್ರೆಯನ್ನು ಒತ್ತಿದೆ. ತೊಂಡನೂರು ಮತ್ತು ಮೇಲುಕೋಟೆಗಳಲ್ಲಿ ರಾಮಾನುಜರ ಅನುಯಾಯಿಗಳಿಂದ ಸ್ಥಾಪಿತ ವಾದ ಅಗ್ರಹಾರಗಳಲ್ಲಿ ಅನೇಕ ಮಂದಿ ಬ್ರಾಹ್ಮಣರು ನೆಲೆಸಿದರು. ಈ ಧರ್ಮವೂ ತಮಿಳಿನಲ್ಲಿರುವ ಅದರ ಸಾಹಿತ್ಯವೂ ಕನ್ನಡ ಸಾಹಿತ್ಯದ ಮೇಲೆ ನಿಚ್ಚಳವಾದ ಪ್ರಭಾವ ಬೀರಿದೆ. ಕನ್ನಡದಲ್ಲಿ

ಹರಿದಾಸ ಸಾಹಿತ್ಯವನ್ನು ಪ್ರಾರಂಭಿಸಿದ ಶ್ರೀಪಾದರಾಯರು ಶ್ರೀರಂಗಪಟ್ಟಣದಲ್ಲಿ ಹಾಡಲಾಗುತ್ತಿದ್ದ ತಮಿಳು ಭಕ್ತಿಗೀತೆಗಳಿಂದ ಪ್ರಚೋದಿತರಾಗಿದ್ದರೆಂದೂ ನಂಬಲಾಗಿದೆ. ಚಿಕ್ಕದೇವರಾಯ ಒಡೆಯರ ಕಾಲದಲ್ಲಿ ಮೈಸೂರು ಆಸ್ಥಾನದಲ್ಲಿ ಈ ಪ್ರಭಾವ ಹೆಚ್ಚು ಸ್ಫುಟವಾಯಿತು. ಭಾಷೆಯ ಬಗೆಗಿನ ಅನುಪಮವಾದ ಪ್ರೇಮ ಶುದ್ಧ ತಮಿಳು ಅಭಿವ್ಯಕ್ತಿಗೋಸ್ಕರ ಅಚಲ ಕಾಳಜಿ, ಸಾಧ್ಯವಾದಮಟ್ಟಿಗೂ ಸಂಸ್ಕೃತದಿಂದ ಎರವಲು ಪಡೆಯಬಾರದೆಂಬ ಉದ್ದೇಶಪೂರ್ವಕ ಛಲ—ಇವು ತಮಿಳು ಕವಿಗಳಿಗಿದ್ದುದರಿಂದ ಅವರು ಮೂಲ ತಮಿಳಿನಲ್ಲಿ ಪ್ರಚಲಿತವಾಗಿರುವ ನುಡಿಗಳನ್ನೂ, ನುಡಿಗಟ್ಟುಗಳನ್ನೂ ತಮ್ಮ ಕೃತಿಗಳಲ್ಲಿ ಉಳಿಸಿಕೊಂಡರು. ಈ ಮನೋಭಾವನೆ ಚಿಕ್ಕದೇವರಾಯನ ಆಸ್ಥಾನದಲ್ಲಿದ್ದ ಚಿಕುಪಾಧ್ಯಾಯ, ಸಿಂಗರಾರ್ಯ, ತಿರುಮಲಾರ್ಯ, ಸಂಚಿಯ ಹೊನ್ನಮ್ಮ, ಮೊದಲಾದ ಶ್ರೀ ವೈಷ್ಣವ ಕನ್ನಡ ಲೇಖಕರಲ್ಲೂ ಪ್ರತಿಬಿಂಬಿತವಾಗಿದೆ. ಸಂಸ್ಕೃತವನ್ನು ಚೆನ್ನಾಗಿ ಬಲ್ಲವರಾಗಿದ್ದರೂ ಇವರು ಶುದ್ಧ ಕನ್ನಡವನ್ನೇ ಬಳಸಿರುವರು. ಇವರ ಈ ಧೋರಣೆಯಲ್ಲಿ ತಮಿಳು ಸಾಹಿತ್ಯದ ಪ್ರಭಾವ ಯಾರಿಗಾದರೂ ಗೋಚರಿಸುತ್ತದೆ. ಆಧುನಿಕ ಕಾಲದ ಬಿ. ಎಂ. ಶ್ರೀಕಂಠಯ್ಯನವರ ಬರಹಗಳಲ್ಲೂ ಈ ಮನೋಭಾವನೆ ಪ್ರತಿಫಲಿತವಾಗಿದೆ. 'ಸಿರಿಗನ್ನಡಂ ಗೆಲ್ಗೆ' ಎಂಬ ಅವರ ಘೋಷಣೆ, "ಅಳ್ ಕನ್ನಡ ತಾಯ್, ಬಾಳ್ ಕನ್ನಡ ತಾಯ್", "ಕನ್ನಡಂ ಬಾಳ್ಗೆ, ಗೆಲ್ಗೆ" ಮೊದಲಾದ ಮಾತುಗಳು ಅವರಿಗಿದ್ದ ಶುದ್ಧ ಕನ್ನಡ ಪ್ರೇಮದ ದ್ಯೋತಕ. ಈ ವಿಷಯದಲ್ಲಿ ಅವರು ತಮಿಳು ಸಾಹಿತ್ಯದಿಂದ ಪ್ರಭಾವಿತರಾಗಿದ್ದಾರೆಂಬುದೂ ಸ್ಪಷ್ಟ. ಕನ್ನಡದಲ್ಲಿ ಬರೆಯುವವರಿಗೆ ಮಾದರಿಯಾಗಿ ತಮಿಳು ಕೃತಿಗಳಾದ 'ಅಗನಾನೂರು', 'ಪುರನಾನೂರು', 'ತಿರುವಾಚಕಂ'ಗಳನ್ನೂ, ಹರಿಹರನ ರಗಳೆಗಳನ್ನೂ ತಮ್ಮ ವಿದ್ಯಾರ್ಥಿಗಳ ಎದುರಿನಲ್ಲಿ ಅವರು ಓದಿ ವಿವರಿಸುತ್ತಿದ್ದರು. 'ಇಂಗ್ಲೀಷ್ ಗೀತೆಗಳು', 'ಹೊಂಗನಸುಗಳು' ಮತ್ತು 'ಅಶ್ವತ್ಥಾಮನ್' ಮೊದಲಾದ ಅವರ ಕೃತಿಗಳಲ್ಲಿ ಶುದ್ಧ ಕನ್ನಡದ ಗತ್ತು ಗಾಂಭೀರ್ಯಗಳನ್ನು ಯಾರೂ ನೋಡಬಹುದಾಗಿದೆ.

ತಮಿಳು ಭಾಷೆ ಮತ್ತು ಜನತೆಯ ಮೇಲೆ ಕನ್ನಡದ ಪ್ರಭಾವವನ್ನೂ ಕಡೆಗಣಿಸುವಂತಿಲ್ಲ. ಜೈನಮತ ಮತ್ತು ಗಾಣಪತ್ಯ ಪಂಥ ಮೊದಲಾದ ಅನೇಕ ಧಾರ್ಮಿಕ ಚಳವಳಿಗಳು ಕರ್ನಾಟಕದಿಂದ ತಮಿಳುನಾಡಿಗೆ ಸಾಗಿವೆ ಎಂದು ಕಾಣುತ್ತದೆ. ಶ್ರವಣಬೆಳಗೊಳದಿಂದ ಹೋದ ಜೈನ ಸವಣರು ತಮಿಳುನಾಡಿನಲ್ಲಿ ಕಾರ್ಯೋನ್ಮುಖರಾಗಿದ್ದರೆಂಬುದನ್ನು ತಿಳಿಸುವ ಅನೇಕ ಶಾಸನಗಳು ತಮಿಳಿನಲ್ಲಿವೆ. ಮುತ್ತಯ್ಯ ದೀಕ್ಷಿತರಿಂದ ಸ್ತುತಿತನಾದ ವಾತಾಪಿ ಗಣಪತಿಯು ಕರ್ನಾಟಕದ ಮೂಲಕ ತಮಿಳುನಾಡಿಗೆ ಗಾಣಪತ್ಯ ಪಂಥದ ಆಗಮನವನ್ನು ತೋರಿಸುತ್ತಾನೆ. ಕನ್ನಡದಿಂದ ತಮಿಳಿಗೆ ಅನುವಾದಿತವಾದ ಅನೇಕ ಕೃತಿಗಳ ಪೈಕಿ ಚಾಮರಸನ 'ಪ್ರಭುಲಿಂಗ ಲೀಲೆ'ಯೂ ಒಂದು. ಆಧುನಿಕ ಕಾಲದಲ್ಲಿ ಸರ್ವಜ್ಞ, ಬಸವಣ್ಣ, ಅಕ್ಕಮಹಾದೇವಿ ಮೊದಲಾದವರ ವಚನಗಳು ತಮಿಳಿಗೆ ಅನುವಾದಗೊಂಡಿವೆ. 'ತಿರುಕ್ಕುರಳ್', 'ಪೆರಿಯ ಪುರಾಣಂ', 'ಮೂದುರೈ' ಮುಂತಾದ ತಮಿಳು ಅಭಿಜಾತ ಕೃತಿಗಳು ಕನ್ನಡಕ್ಕೆ ಅನುವಾದಿತವಾಗಿವೆ. ಆಧುನಿಕ ಲೇಖಕರಾದ ರಾಜಾಜಿ, ಸುಬ್ರಹ್ಮಣ್ಯ ಭಾರತಿ, ಅಖಿಲಾಂಡನ್, ಮೊದಲಾದ ಅನೇಕಾನೇಕ ಗ್ರಂಥಕರ್ತರ ಕೃತಿಗಳೂ ಕನ್ನಡಕ್ಕೆ ಬಂದಿವೆ.

## ಕರ್ನಾಟಕದಲ್ಲಿ ಉರ್ದು

ಕರ್ನಾಟಕದಲ್ಲಿ ಉರ್ದು ಶೇಕಡ ಒಂಭತ್ತು ಜನರ ಮಾತೃಭಾಷೆಯಾಗಿದೆ. ಕನ್ನಡ ಮಾತನಾಡುವವರೊಡನೆ ಹೋಲಿಸಿದರೆ ಅದರದು ಎರಡನೇಯ ಸ್ಥಾನ. ಅದು ಕರ್ನಾಟಕದ ಹೆಚ್ಚು ಜನ ಮುಸ್ಲಿಮರ ಮಾತೃಭಾಷೆ. ಉರ್ದು ಭಾಷೆಯ ವಿಕಾಸಕ್ಕಾಗಿ ಕರ್ನಾಟಕ ಸರ್ಕಾರ ರಾಜ್ಯದಲ್ಲಿ ಉರ್ದು ಅಕ್ಯಾಡಮಿಯನ್ನು ಸ್ಥಾಪಿಸಿದೆ. ಉರ್ದು ಭಾಷೆಯ ಆರಂಭ ದೆಹಲಿ, ಪಂಜಾಬ್, ಸಿಂದ್ ಮತ್ತು ಅಜ್ಮೀರ್‌ಗಳಲ್ಲಿ ಉಂಟಾಯಿತೆಂದು ಅನೇಕ ಅಭಿಪ್ರಾಯಗಳಿವೆ. ಆದರೂ ಕರ್ನಾಟಕದಲ್ಲಿ ಉರ್ದು ಉಗಮವಾಯಿತೆಂದು ಇನ್ನೊಂದು ಅಭಿಪ್ರಾಯವಿದ್ದು, ಅದರ ಪ್ರತಿಪಾದಕರು ಡಾ|| ಅಮೀನಾ ಖಾತೂನ್ ಮತ್ತು ಫಜ್ಲುಲ್ ಹಸನ್. ಈಗ ಉರ್ದು ಎಂದು ಕರೆಯಲ್ಪಡುವ ಭಾಷೆಯ ಮೂಲ 'ರೇಖ್ತಾ' ಆಗಿತ್ತು. ಮೊದಲು ಕಲ್ಬುರ್ಗಿ ಅನಂತರ ಬಿದರೆಯಲ್ಲಿ ಬೇರೂರಿದ ಬಹಮನಿ ರಾಜ್ಯಗಳ ಆಳ್ವಿಕೆಯಲ್ಲಿ (1347-1490) ರೇಖ್ತಾ ಜನರ ವ್ಯವಹಾರ ಭಾಷೆಯಾಗಿ ಪ್ರಾರಂಭವಾಯಿತು. ಅರಬ್ಬಿ, ಕನ್ನಡ ಹಾಗೂ ಮರಾಠಿ ಪದಗಳ ಪಾರ್ಶಿ ಉಚ್ಚಾರದಿಂದ ರೇಖ್ತಾ ಬಳಕೆಗೆ ಬಂದಿತು ಎಂದು ಫಜ್ಲುಲ್ ಹಸನ್ ಪ್ರತಿಪಾದಿಸುತ್ತಾರೆ.

ದಕ್ಷಿಣದಲ್ಲಿ ಮುಸ್ಲಿಂ ಪ್ರಭುತ್ವ ಅಭಿವೃದ್ಧಿಗೊಂಡಂತೆ ಆಡಳಿತ ವರ್ಗದವರು, ಪ್ರಾಂತೀಯ ವಿವಿಧ ಮುಸ್ಲಿಂ ಮತ್ತು ಜನಸಾಮಾನ್ಯರೊಡನೆ ವ್ಯವಹರಿಸಲು ಒಂದು ಹೊಸ ಭಾಷಾರೂಪದ ಅವಶ್ಯಕತೆ ಅತೀವವಾಗಿ ಭಾಸವಾಗತೊಡಗಿತು. ಹೀಗೆ ಉಗಮವಾದ ಪ್ರಾಂತೀಯ ಭಾಷೆ 'ದಖ್ಖನಿ' ಹಿಂದು ಮುಸ್ಲಿಮರಲ್ಲಿ ಸಮಗ್ರತೆ ಭಾವೈಕ್ಯತೆ ಹಾಗೂ ತಿಳುವಳಿಕೆಯ ಸಂಕೇತವಾಯಿತು. ತನಗೆ ದೊರೆತ ಮಮತೆಯ ಪೋಷಣೆಯಿಂದ ಶತಮಾನಗಳು ಕಳೆದಂತೆ ಅದು ಮೆರಗುಗೊಂಡ ಒಂದು ಸಂಪರ್ಕ ಭಾಷೆಯಾಯಿತು. ಕಾಲ ಕಳೆದಂತೆ ದಖ್ಖನಿ ಆಸ್ಥಾನ ಭಾಷೆಯಾಗಿಯೇ ಅಲ್ಲದೆ ಜನಸಾಮಾನ್ಯರ ವ್ಯವಹಾರ ಭಾಷೆ, ಜ್ಞಾನಾರ್ಜನೆ ಮತ್ತು ಸಂಸ್ಕೃತಿಯ ವಿಕಾಸದ ಭಾಷೆಯಾಯಿತು. ಇದು ಸೂಫಿಗಳಿಂದ, ಸಂತರಿಂದ ಪೋಷಣೆ ಪಡೆಯಿತು.

ರಾಜರೂ, ಸಾಮಾನ್ಯ ಜನರೂ ಅದನ್ನು ಮೋಹಕವಾದ ಪ್ರಕೃತಿಯ ಒಂದು ಮಹತ್ವವನ್ನಾಗಿ ರೂಪಿಸಲು ಯತ್ನಿಸಿದರು. ಬಹಮನಿ ರಾಜ್ಯ ಸ್ಥಾಪನೆಯ ವೇಳೆಗಾಗಲೇ ದಖ್ಖನಿ ಭಾಷೆ ಪ್ರಗತಿಶೀಲ ಸಾಹಿತ್ಯವಾಗಿ ಬೆಳೆದಿತ್ತು. ಬಹಮನಿ ಸುಲ್ತಾನರೂ ಅದನ್ನು ಪೋಷಿಸಿದರಲ್ಲದೆ ಆಡಳಿತ ಭಾಷೆಯನ್ನಾಗಿ ಮಾಡಿದರು. ಇದೇ ಕಾಲದಲ್ಲಿ ಹಜರತ್ ಖಾಜಾ ಬಂದೇ ನವಾಜ್ ಅವರು ದಖ್ಖನಿ ಭಾಷೆಯಲ್ಲಿಯೇ ಪುಸ್ತಕಗಳನ್ನು ಬರೆದರು. ಬಹಮನಿ ರಾಜ್ಯದ ಪತನದ ನಂತರ ಅದರ ಉತ್ತರಾಧಿಕಾರಿಗಳಾದ ಐದು ಷಾಹಿ ರಾಜ್ಯಗಳೂ ಬಹಮನಿ ರಾಜ್ಯದ ಮಾರ್ಗದರ್ಶನವನ್ನು ಅವಲಂಬಿಸಿ ದಖ್ಖನಿಯನ್ನು ಪೋಷಿಸಿದವು. ಈ ಷಾಹಿ ರಾಜ್ಯಗಳಲ್ಲಿ ಕರ್ನಾಟಕದ ವಿಜಾಪುರವು ಪ್ರಮುಖ ರಾಜ್ಯವಾಗಿತ್ತು. ಈ ಐದು ಸುಲ್ತಾನರ ಆಡಳಿತ ಕಾಲ ದಖ್ಖನಿಯ ಸುವರ್ಣ ಯುಗವಾಗಿತ್ತು. ದಖ್ಖನಿ ಸಾಹಿತ್ಯವು ವೈಭವಪೂರಿತವಾಯಿತು. ನಿಜಾಮ (ಕೃತಿ: ಕದಂ ರಾವ್ ಪದಂ), ವಾಜ್ಹಿ (ಖುತುಬ್ ಮುಷ್ತರಿ ಮತ್ತು ಸಬ್ ರೂಸ್), ಗವಾಸಿ (ಸೈಫುಲ್ ಮುಲುಕ್—ಒ ಬಾದಿಯುಲ್ ಜಮಾಲ ಮತ್ತು ಟೂಟಿ ನಾಮ), ಐಜಾಸ್ (ಲೈಲಾ ಮಜ್ನು), ಬಲಾಖಿ (ಮೇರಾಜ್ ನಾಮ) ಇಬನ್ ನಿಷ್ಠಾತಿ (ಫೂಲ್ ಬನ್), ತಾಬಿ (ಖಿಸ್ಸಾ-ಎ-ಬೆಹರಾಂ ಒ ಗುಲ್ ಆನ್ದಂ) ಮತ್ತು ಸೇವಕ (ಜಂಗ್‌ನಾಮ) ಈ ಕಾಲದ ಹೆಸರಾಂತ ಕವಿಗಳು. ಹಜರತ್ ಖಾಜಾ ಬಂದೇ ನವಾಜ್ ಅವನ ಮಗ ಹಜರತ್ ಮೊಹಮ್ಮದ್ ಹುಸೇನಿ ಮತ್ತು ಅವನ ಮೊಮ್ಮಗ ಹಜರತ್ ಸೈಯ್ಯದ್ ಅಬ್ದುಲ್ಲಾ ಹುಸೇನಿ ಅವರೇ ಅಲ್ಲದೆ ಮೀರಾನ್‌ಜಿ ಖುದಾನುಮ, ಷಾ ಮೀರಾನ್‌ಜಿ ಶಂಸುಲ್ ಇಸಾಖ್ ಹಾಗೂ ಅವನ ಮಗ ಷಾ ಬುರ್‌ಹಾನೊದ್ದೀನ್ ಜನಂ ಮತ್ತು ಮೊಮ್ಮಗ ಷಾ ಅಮೀನೊದ್ದೀನ್ ಅಲಾ ಸೂಫಿ ತತ್ವಜ್ಞಾನಿಗಳೇ ಅಲ್ಲದೆ ವಿದ್ವಾಂಸರೂ ಆಗಿದ್ದರು. ಅವರುಗಳು ದಖ್ಖನಿ ಭಾಷೆಯ ಮೊದಲ ಗದ್ಯ ಬರಹಗಾರರೂ ಆಗಿರುತ್ತಾರೆ. ಈ ಕಾಲದಲ್ಲಿಯೇ ಮೊಹಮ್ಮದ್ ಗವಾನ್ ಬಿದರೆಯಲ್ಲಿ ತನ್ನ ಹೆಸರಾಂತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದನು. ಈ ಕಾರಣಗಳಿಂದ ಉರ್ದು ಸಾಹಿತ್ಯದ ವಿಕಾಸ ಅಪಾರವಾಯಿತು. ವಿಜಾಪುರದ ಸುಲ್ತಾನ ಇಮ್ಮಡಿ ಇಬ್ರಾಹಿಂ ಆದಿಲ್ ಷಾ ಬರೆದ ಕಿತಾಬ್-ಎ-ನೌರಸ್ ಈ ಭಾಷೆಯ ಪ್ರಾಚೀನ ಸಂಗೀತ ಕೃತಿಗಳಲ್ಲಿ ಒಂದಾಗಿರುತ್ತದೆ. ಅದು ಗಣಪತಿ ಮತ್ತು ಸರಸ್ವತಿಯ ಪ್ರಾರ್ಥನೆಯಿಂದ ಪ್ರಾರಂಭವಾಗುತ್ತದೆ.

ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನನ ಆಗಮನದೊಡನೆ ಮೈಸೂರಿನಲ್ಲಿ ಒಂದು ಹೊಸ ಬೆಳವಣಿಗೆ ಆರಂಭವಾಯಿತು. ಈ ಇಬ್ಬರು ದೊರೆಗಳ ಅಧಿಕಾರದ ಅವಧಿ ಬಹಳ ಕಡಮೆಯಾಗಿದ್ದರೂ (1761-99) ಅವರು ದಖ್ಖನಿ ಭಾಷೆಗೆ ಪೋಷಣೆ ನೀಡಿದರಲ್ಲದೆ, ಅದರ ಬೆಳವಣಿಗೆಗೆ ಉತ್ತೇಜನವಿತ್ತರು. ಮೊಹಮ್ಮದ ಸಯೀದ್ ಮೇಕ್ರಿ ಆಸಿ (ನೆಲಮಂಗಲ), ಷಾ ಮೊಹಮ್ಮದ ಸದ್ರೊದ್ದೀನ್ (ನೆಲಮಂಗಲ, ಅನೇಕ ಗದ್ಯ ಗ್ರಂಥಗಳ ಕರ್ತೃ), ಷಾ ಸೈಯ್ಯದ್ ಕಮಾಲೊದ್ದೀನ್ ಕಮಾಲ್ (ಶ್ರೀರಂಗಪಟ್ಟಣದ ಶ್ರೇಷ್ಠಕವಿ ಹಾಗೂ ಸೂಫಿ), ಮೊಹಮ್ಮದ್ ಇಸಾಖ್ ಬಿಜಾಪುರಿ (ಮದ್ದೂರು, ರಿಯಾಜುಲ್ ಆರಿಫೀನ್ ಎಂಬ ಕಾವ್ಯ ಮೀಮಾಂಸೆಯ ಕರ್ತೃ), ಜೈನುಲ್ ಅಬಿದೀನ್ ಷುಸ್ತ್ರಿ (ತುಫಾತುಲ್ ಮುಜಾಹಿದೀನ್), ಹಸನ್ ಆಲಿ ಇಜ್ಜತ್ (ಮುಫ್ರಾ ಉಲ್ ಖುಲೂಬ್ ಮತ್ತು ಅಜ್ರ ಬೆ ಸುಲ್ತಾನಿ), ಅಹಮದ್‌ಖಾನ್ ಷೆರಾನಿ (ಕೋಲಾರ, ಚಾರ್ ಕುಕುರುಸ್ ಕರ್ತೃ), ಸೈಯ್ಯದ್ ಷಾ ಆರೀಫ್ ಖಾದ್ರಿ (ಹುಖೂಕುಲ್ ಮುಸ್ಲಮೀನ್, ಮತ್ಲಬ್ ಉಲ್ ಮುರಿದೀನ್), ಖಾಜಿ ಗುಲಾಂ ಅಹಮದ್ (ಖುಲಾ ಸಾಯಿ ಸುಲ್ತಾನಿ), ಲಾಲಾ ಬಾಥಾಸಿಂಗ್ (ಹೈದರ್‌ಅಲಿಯ ಚರಿತ್ರೆ), ಲಾಲಾ ಮೆಹತಾಬ್ ರಾಯ್ ಸಬ್‌ಖತ್ (ಷಾವರ್-ಎ-ಸಕೂನ್) ಮತ್ತು ಮೀರ್ ಹಸನ್ ಕಿರ್ಮಾನಿ (ತಾಜ್‌ನೀಸ್ ಉಲ್ ಲೊಗತ)—ಇವರುಗಳು ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ಕಾಲದ ಕೆಲ ಖ್ಯಾತ ಬರಹಗಾರರು ಮತ್ತು ಕವಿಗಳು.

ದಯಾಪರರಾದ ಮೈಸೂರಿನ ಮಹಾರಾಜರೂ ಸಹ ಈ ಭಾಷೆಗೆ ಪೋಷಣೆಯನ್ನಿತ್ತಿದ್ದರಿಂದ ಇದರ ಪರಿಣಾಮ ದಖ್ಖನಿ ಭಾಷೆ ಪುಷ್ಟಿಗೊಂಡಿತು. 19ನೇಯ ಶತಮಾನದಲ್ಲಿ ಅದು ಪೂರ್ಣ ಪ್ರಮಾಣದಲ್ಲಿ ವಿಕಾಸಗೊಂಡಿತು. ಷಾ ಅಬು ಹೈವೈಜ್ ಈ ಕಾಲದ ಅಗ್ರಮಾನ್ಯ ಸಾಹಿತಿ. ಅವನು ಗದ್ಯ ಮತ್ತು ಕಾವ್ಯಗಳಲ್ಲಿ ಪರಿಪೂರ್ಣನಾಗಿದ್ದನಲ್ಲದೆ ಘನವಿದ್ವಾಂಸನೂ ಶ್ರೇಷ್ಠ ಸುಧಾರಕನೂ ಶಿಕ್ಷಣಶಾಸ್ತ್ರಜ್ಞನೂ ಮತ್ತು ದಖನ್ನಿನ ಸಾಹಿತ್ಯಾತ್ಮಕ ಗಾರುಡಿಗನೂ ಆಗಿದ್ದನು. 200 ಪುಸ್ತಕಗಳ ಕರ್ತೃವಾಗಿದ್ದ ಅವನ ಕೃತಿಗಳು ಸಾವಿರಾರು ಸಂಖ್ಯೆಯಲ್ಲಿಯೇ ಅಲ್ಲದೆ ಲಕ್ಷಾನುಗಟ್ಟಲೆ ಇಡೀ ಹಿಂದೂಸ್ಥಾನದಲ್ಲಿ ಮುದ್ರಣಗೊಂಡು ಪ್ರಕಾಶನ ಪಡೆದವು. ಇಂದಿಗೂ ಅವು ಜನಾನುರಾಗಿಯಾಗಿವೆ. ಅವನು ಬರೆದ ಮಹತ್ವಪೂರ್ಣ ಗ್ರಂಥ ಜಾನನ್-ಎ-ಸೈಯರ್ ಪವಿತ್ರ ಖುರಾನಿನ ನಂತರದ ಧಾರ್ಮಿಕ ಪುಸ್ತಕವೋ ಎಂಬಂತೆ ಮಾನ್ಯತೆ ಪಡೆದಿದೆ. ಹಜರತ್ ಮೊಹಮ್ಮದ್ ಖಾಸಿಂ ಫವರ್ ಈ ಕಾಲದ ಮತ್ತೊಬ್ಬ ಸಾಹಿತಿ. ಕರ್ನಾಟಕದಲ್ಲಿ ಉರ್ದು ಪತ್ರಿಕೋದ್ಯಮದ ಪಿತಾಮಹನೆಂದು ಗೌರವಾನ್ವಿತನಾಗಿದ್ದಾನೆ. 1860ರಲ್ಲಿ ಅವನು ಖಾಸಿಮುಲ್ ಅಕ್ಬಾರ್ ಎಂಬ ವೃತ್ತಪತ್ರಿಕೆಯನ್ನು ಹೊರತಂದನು. ಅವನು ಕವಿಯೂ, ಐತಿಹಾಸಿಕ ಬರಹಗಾರನೂ ಮತ್ತು ಪತ್ರಿಕೋದ್ಯಮಿಯೂ ಆಗಿದ್ದನು. ಈ ಸಾಹಿತ್ಯ ಕ್ಷೇತ್ರದ ಇತರ ವ್ಯಕ್ತಿಗಳೆಂದರೆ ನವಾಬ್ ಸುಲ್ತಾನ ನಸೀಮ್ (ಮೈಸೂರು), ಅಥರ್, ದಿಲ್, ಸಾಬಿರ್, ಕಲೀಮ್, ಸುಫಿ, ಷೌಕತ್ ನಸೀರ್, ಬರಖ್, ತಹಖೀಕ್, ಅಮೀರ್, ಜಾದೂ, ತಹಸೀಲ್, ಅಸೀರ್ ಮತ್ತು ಆರಾಮ್.

ಉತ್ತರ ಹಿಂದೂಸ್ಥಾನದಲ್ಲಿ ದಖ್ಖನಿ ಭಾಷೆ 'ಉರ್ದು' ಎಂಬ ಹೊಸ ಹೆಸರಿನಲ್ಲಿ ಬೆಳವಣಿಗೆಗೊಂಡಿದೆ. ಈ ಕಾರಣದಿಂದ ಕರ್ನಾಟಕದಲ್ಲಿ ದಖ್ಖನಿಯ ಭಾಷಾ ಸ್ವರೂಪ ಇಬ್ಬಗೆಯಾಗಿದೆ. ಇಡೀ ರಾಜ್ಯದ ಜನ ಬಹುಕಾಲದಿಂದ ಬಂದಿರುವ ದಖ್ಖನೀ ಭಾಷೆಯಲ್ಲಿ ಮಾತನಾಡುತ್ತಾರೆ. ಆದರೆ ಲಿಖಿತ ಭಾಷೆ ಉತ್ತರ ಹಿಂದೂಸ್ಥಾನದ ಉರ್ದು ಆಗಿದೆ. ಖಾಜಿ ಅಬ್ದುಲ್ಲಾ ಹುಸೇನ್ ಖಲೀಲ್, ಷಾ ಅಬ್ದುಲ್ ಹುಸೇನ್ ಅದೀಬ್, ಸೈಯ್ಯದ್ ಗೌಸ್ ಮೊಹಿಯುದ್ದೀನ್, ಹಜರತ್ ಫೈಕ್, ಹಜರತ್ ಅಲ್ತಾ, ಹಜರತ್ ಷೌಕ್ ಮತ್ತು ಸಲ್ತನತೆ ಖುದಾದಾದ್ ಬರೆದ ಮಹಮೂದ್ ಖಾನ್ ಮಹಮೂದ್ ಪ್ರಸಕ್ತ ಶತಮಾನದ ಪೂರ್ವಾರ್ಧದ ಉರ್ದು ಸಾಹಿತಿಗಳು. ಸುಲೇಮಾನ್ ಖತೀಬ್, ಇಮಾಮಿ ತಾಬೀಷ್, ಖಲೀಲ್ ಸೆಮಾಬಿ, ಮಹಮೂದ್ ಇಯಾಜ್, ಹಮೀದ್ ಅಲ್ಮಾಸ್, ರಾಹಿ ಖುರೇಷಿ, ಡಾ|| ಮುದ್ದಣ್ಣ ಮನ್ಜರ್, ಫಯ್ಯಾಜ್ ಬೆಳಗುಡಿ, ಷುಲಾ ಮೈಲ್ಲಿ, ಮೊಹಮ್ಮದ್ ಹನೀಫ್ ಕಲೀಂ, ಮೊಹಮ್ಮದ್‌ಖಾನ್, ಮತ್ತು ಮುಬೆರಿಜುದ್ದೀನ್ ರಫತ್ ಇಂದಿನ ತಲೆಮಾರಿನ ಸಾಹಿತಿಗಳು. ಈಗ ಮಹಿಳೆಯರಲ್ಲಿ ಉಂಟಾಗಿರುವ ದೃಷ್ಟಿ ಪರಿವರ್ತನೆಯಿಂದ ಮತ್ತು ಅವರಲ್ಲಿ ಹರಡಿರುವ ವಿದ್ಯಾಭ್ಯಾಸದಿಂದ ಅನೇಕ ಮಹಿಳಾ ಲೇಖಕಿಯರು ಹೆಸರುವಾಸಿಯಾಗಿದ್ದಾರೆ. ಸೈಯಿದಾ ಅಖ್ತರ್, ಮುಮ್ತಾಜ್ ಷೀರೀನ್, ಬೇಗಂ ರಹಮತುನ್ನಿಸ, ಮೈಮುನಾ ತಸ್ನೀಂ, ಹುಸ್ನ ಸರೂರ್, ಜುಬೇದ ನಸ್ರೀನ್, ಡಾ|| ಹಬೀಬುನ್ನಿಸಾ ಬೇಗಂ, ಡಾ|| ಅಮೀನಾ ಖಾತೂನ್, ಡಾ|| ವಹೀದುನ್ನಿಸಾ, ಡಾ|| ಫಹ್‌ಮಿದಾ ಬೇಗಂ ಮತ್ತು ಬಷೀರುನ್ನಿಸಾ ಬೇಗಂ—ಇವರುಗಳು ಅಂಥ ಲೇಖಕಿಯರು ಹಾಗೂ ಕವಯಿತ್ರಿಯರು.

ಅನೇಕ ಉರ್ದು ವೃತ್ತಪತ್ರಿಕೆಗಳು ಪ್ರಕಟವಾದವು. ಮೊದಲ ವೃತ್ತಪತ್ರಿಕೆ ಖಾಸಿಮುಲ್ ಅಖ್ಬಾರ್. ದ್ವಿವಾರ ಪತ್ರಿಕೆಯಾಗಿ 1860ರಲ್ಲಿ ಪ್ರಕಟವಾದ ಈ ಪತ್ರಿಕೆಯ ಸಂಪಾದಕ ಮೊಹಮ್ಮದ್ ಖಾಸಿಂ ಘಂ. 19ನೇಯ ಶತಮಾನದ ಉತ್ತರಾರ್ಧ ಮತ್ತು 20ನೇಯ ಸತಮಾನದಲ್ಲಿ ಈ ಪತ್ರಿಕೆ ಪ್ರದರ್ಶನಾ ಸಾಧನೆಯ ಮುನ್ಸೂಚಿಯಾಯಿತು. ಬೆಂಗಳೂರಿನಲ್ಲಿ 1848ರಲ್ಲಿ ಸ್ಥಾಪಿತವಾದ ಮುತಾಬೆ ಫಿರ್ದೋಸಿ ಪ್ರಥಮ ಕಲ್ಲಚ್ಚಿನ ಯಂತ್ರ· ಮುತಾಬೆ ಸುನ್ನಿ, ಮುತಾಬೆ ನಬ್ವಿ, ಬಾಖಿ ಮುದ್ರಣಾಲಯ, ಸುಲ್ತಾನ್ ಮುದ್ರಣಾಲಯ, ಮುತ್ಬಾ ಎ ಉಲ್ವಿ, ಮುತ್ಬಾ ಎ ರಜ್ವಿ, ಮುತ್ಬಾ ಎ ಬಹರುಲ್ ಉಲೂಂ, ಅಕ್ರಮುಲ್ ಮುತಾಬೆ, ಮುತ್ಬಾ ಎ ಗುಲ್‌ಜಾರ್, ಮುತ್ಬಾ ಎ ನಾಯಿಬ್ ಅಹಮದ್ ಖಲಂದರ್, ಮುತ್ಬಾ-ಎ-ಅಷ್ಮತ್ ಉಲ್ ಇಸ್ಲಾಂ, ಮುತ್ಬಾ-ಎ-ಷೌಕತುಲ್ ಇಸ್ಲಾಂ ಮತ್ತು ಇನ್ನೂ ಅನೇಕ ಶಿಲಾ ಮುದ್ರಣಾಲಯಗಳು ಮುತ್ಬಾ ಎ ಫಿರ್ದೋಸಿಯನ್ನು ಹಿಂಬಾಲಿಸಿದವು. ಷೌಕತುಲ್ ಇಸ್ಲಾಂ ಅನ್ನು ಗುಲಾಂ ಮೊಹಮ್ಮದ್ ಷೌಕತ್ ಸ್ಥಾಪಿಸಿದರು. ಕೆಲಕಾಲದಲ್ಲಿಯೇ ಅದು ಪ್ರಸಿದ್ಧವೂ ಜನಾನುರಾಗಿಯೂ ಆಯಿತು. ದಕ್ಷಿಣ ಭಾರತದಲ್ಲಿ ಬೆಂಗಳೂರು ನಗರವು ಉರ್ದು ಮುದ್ರಣ ಮತ್ತು ಪ್ರಕಾಶನದ ಒಂದು ಕೇಂದ್ರವೇ ಆಯಿತು. 19ನೇಯ ಶತಮಾನದಲ್ಲಿ ಮೊದಲುಗೊಂಡ ಈ ಹುರುಪು 20ನೇಯ ಶತಮಾನದಲ್ಲೂ ಮುಂದುವರಿಯಿತು. ಅನೇಕ ಮುದ್ರಣಾಲಯಗಳು ಸ್ಥಾಪಿತವಾದವು. ಅವುಗಳಲ್ಲಿ ಅಕ್ರಮುಲ್ ಮುತಬೆ, ಖದೀರಿಯಾ, ಮದೀನ, ಹಫೀಜಿಯ, ಮಜಹರ್, ಜವರ್‌ಹೂರ, ಮುಶ್ರಿಕ್, ಆಜಾದ್, ಅಲ್ಕಲಾಂ, ಪಾಸ್ಬಾನ್, ಅಫ್‌ತಾಬೆ ಉರ್ದು, ರಫ್ತಾರ್ ಮತ್ತು ನಶೇಮನ್ ಮುದ್ರಣಾಲಯಗಳು ಉಲ್ಲೇಖನೀಯವಾಗಿವೆ. ಖೌಮಿ ಮುದ್ರಣಾಲಯ ಮೊದಲ ವಿದ್ಯುತ್‌ಚಾಲಿತ ಮುದ್ರಣವಾಗಿದ್ದು ಅದನ್ನು ಅಬ್ದುಲ್ ಮತೀನ ಸ್ಥಾಪಿಸಿದರು. ಪ್ರಸಕ್ತ ವೇಳೆ ಇಡೀ ಕರ್ನಾಟಕ ರಾಜ್ಯದಲ್ಲಿ ಸುಮಾರು 200 ಕಲ್ಲಚ್ಚಿನ ಮುದ್ರಣಾಲಯಗಳು, 25ರಿಂದ 30 ವಿದ್ಯುತ್ ಚಾಲಿತ ಮುದ್ರಣಾಲಯಗಳು ಉರ್ದು ಭಾಷೆಯ ಮುದ್ರಣ ಮತ್ತು ಪ್ರಕಾಶನ ಕಾರ್ಯಗಳಲ್ಲಿ ಭರದಿಂದ ನಿರತವಾಗಿವೆ. ಈ ಕಾರಣ ಪತ್ರಿಕೋದ್ಯಮ ಮತ್ತು ಸಾಹಿತ್ಯಾತ್ಮಕ ಚಟುವಟಿಕೆಗಳಿಗೆ ಅಪಾರ ಶಕ್ತಿ ಲಭ್ಯವಾಯಿತು. 1862ರಲ್ಲಿ ಸ್ಥಾಪಿತವಾದ ಮನ್ಸೂರ್ ಮೊಹಮ್ಮದಿ ಮತ್ತೊಂದು ಮೊದಲ ವೃತ್ತಪತ್ರಿಕೆ. ಕೆಲ ಸಮಯದಲ್ಲಿಯೇ ಅದು ಅತ್ಯಧಿಕ ಪ್ರಸಾರದ ಜನಪ್ರಿಯ ವಾರಪತ್ರಿಕೆಯಾಯಿತು. ಮೈಸೂರು ಅಖ್ಬಾರ್, ಸುಲ್ತಾನ್ ಅಖ್ಬಾರ್, ಬೆಂಗಳೂರ ಗಾರ್ಡಿಯನ್, ಬೆಂಗಳೂರು ಅಖ್ಬಾರ್ ಮತ್ತು ನೈಯರ್ ಅಜಮ್ 19ನೇಯ ಶತಮಾನದ ಇನ್ನಿತರ ಮುಖ್ಯವಾದ ವೃತ್ತಪತ್ರಿಕೆಗಳು ಮತ್ತು ನಿಯಲಿತಕಾಲಿಕೆಗಳಾಗಿದ್ದವು.

19ನೇಯ ಶತಮಾನದಲ್ಲಿ ಲಭ್ಯವಾದ ರಚನಾತ್ಮಕ ಉತ್ಸಾಹ 20ನೇಯ ಶತಮಾನದಲ್ಲೂ ಮುಂದುವರೆದು ನೂರಾರು ವೃತ್ತಪತ್ರಿಕೆಗಳೂ, ನಿಯತಕಾಲಿಕೆಗಳೂ ಪ್ರಾರಂಭವಾದವು. ಅಬ್ದುಲ್ ಹಫೀಜ್ ಆರಾಮ್ ಎಂಬುವವರು ತರ್‌ಗೀಬ್ ಎಂಬ ಕೇವಲ ಮಹಿಳೆಯರಿಗೆ ಮೀಸಲಾದ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ತಾಲೀಮ್, ಮಸ್ವಾಲೆ ಮತ್ತು ಷಾಮ್ ಎ ಸಕೂನ್ ಇನ್ನಿತರ ಮಾಸಪತ್ರಿಕೆಗಳು. ಎಡ್ವರ್ಡ್ ಗೆಜೆಟ್, ಅಖ್ಬಾರ್ ಪಂಚುಲ್ ಪಂಚ್, ಅಖ್ಬಾರ್ ಅಲ್ ಮುಸ್ಲಿಂ, ಅಖ್ಬಾರ್ ಹಿಲಾಲ್, ಕಮರ್ಷಿಯಲ್ ಅಂಡ್ ಟೆಕ್ನಿಕಲ್ ಗೈಡ್, ಬರಖೆ ಸಕೂನ್, ಸೈಫುಲ್ಲಾ, ಸಬ್ ಹೆ ಬಹಾರ್ ಮತ್ತು ಮಜಾಕ್ ಸಕೂನ್ ಪ್ರಸಕ್ತ ಶತಮಾನದ ಮೊದಲ ಇಪ್ಪತ್ತೈದು ವರ್ಷಗಳಲ್ಲಿ ಪ್ರಸಿದ್ಧಿ ಪಡೆದ ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕೆಗಳು.

1924ರಲ್ಲಿ ಸೈಯ್ಯದ್ ಗೌಸ್ ಮೊಹಿದೀನ್‌ರ ಸಂಪಾದಕತ್ವದಲ್ಲಿ ಪ್ರಕಟವಾದ ಅಖ್ಬಾರ್ ಅಲ್ ಕಲಾಂ ಈ ಶತಮಾನದ

ಅತ್ಯಂತ ಗಮನಾರ್ಹವಾದ ಉರ್ದು ಪತ್ರಿಕೆ. ಸೀತಾರ್ ಮೈಸೂರ್ (1926), ಡೈಲಿ ಬೆಂಗಳೂರ್ (1928), ವೀಕ್ಲಿ ಖ್ವಾವರ್ (1933), ಡೈಲಿ ಆಜಾದ್ (1940), ಡೈಲಿ ಪಸ್ಬನ್ (1945), ಇಲಾನ್ (1950) ಮತ್ತು ಸಾಲಾರ್ (1960), ಅಫ್ತಾಬೆ ಉರ್ದು, ಜವರ್ ಹೂರ್, ಸದಾಖತ್, ಇನ್ಕಿಲಾಬ್, ಷೇರ್ ಮೈಸೂರ್, ಫಿಲಂಕಾರ್, ನಯಾ ದೌರ್, ಸಂಘಟ್, ಕಾರ್ವಾನ್ ಮತ್ತು ನಷೇಮನ್—ಇವು ಇನ್ನಿತರ ವಾರ ಮತ್ತು ದ್ವಿವಾರ ಪತ್ರಿಕೆಗಳು.

ಕನ್ನಡ ಭಾಷೆಯೊಡನೆ ಉಂಟಾದ ಉರ್ದುವಿನ ಸಂಪರ್ಕವೂ ಗಮನಾರ್ಹವಾಗಿದೆ. ಉರ್ದುವಿನ ಮುಖಾಂತರ ಕನ್ನಡದಲ್ಲಿ ಹಾಸುಹೊಕ್ಕಾಗಿರುವ 408 ಅರಬ್ಬೀ ಮತ್ತು 614 ಪಾರ್ಸಿ ಪದಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಕನ್ನಡ ಭಾಷೆಯ ದಿನನಿತ್ಯದ ಬರವಣಿಗೆಯಲ್ಲಿ ಮತ್ತು ಮಾತುಕತೆಯಲ್ಲಿ ಈ ಪದಗಳು ಎಷ್ಟರಮಟ್ಟಿಗೆ ಬಳಸಲಾಗುತ್ತಿದೆ ಎಂದರೆ ಅವುಗಳ ಇರುವಿಕೆ ಸ್ವಾಭಾವಿಕವೋ ಎಂಬಂತೆ ಭಾಸವಾಗುತ್ತದೆ. ಅರಬ್ಬೀ ಮತ್ತು ಪಾರ್ಸಿ ಭಾಷೆಗಳ ಪ್ರಭಾವ ದಕ್ಷಿಣ ಭಾರತದ ಇನ್ನಿತರ ಭಾಷೆಗಳಿಗಿಂತ ಕನ್ನಡದಲ್ಲಿ ಹೆಚ್ಚು ಪ್ರಮಾಣದಲ್ಲಿದೆ. ಕನ್ನಡ ಕಾಗದ ಪತ್ರಗಳಲ್ಲಿ, ರಾಜ್ಯಾದಾಯದ ಹಾಗೂ ಕಾನೂನು ಮತ್ತು ನ್ಯಾಯಾಸ್ಥಾನಗಳಲ್ಲಿ ಬಳಸಲಾಗುವ ವಾಕ್ಸರಣಿಯಲ್ಲಿ ಈ ಎರಡು ಭಾಷೆಗಳಿಂದ ಎರವಲು ಪಡೆಯಲಾಗಿರುವ ಪದಗಳನ್ನು ಮುಂದೆ ನಮೂದಿಸಲಾಗಿದೆ. ಜಮೀನ್, ಜಮೀನ್‌ದಾರಿ, ಜಮಾನ್ ದಾರ್ಸ್, ಮುಜ್ರಾಯಿ, ತಕಾವಿ, ಖರಾಬು, ಬಂಜರು, ಫಸಲ್, ಇನಾಮು, ಇನಾಮತಿ, ರೈಯ್ಯತ್, ಕೊತ್ವಾಲ್, ಮುತ್ಸದಿ, ಅಮೀನ್, ಅಮಿಲ್, ದಸ್ಕತ್ತು, ಮೊಹರು,ಫರ್ಮಾನ್, ಪರ್ವಾನಾ, ಖೈದಿ, ಖೈದುಖಾನೆ, ಕೈಫಿಯತ್, ಕಸ್ತಗಾರಿ, ಖರ್ಚು, ಕಿರಾಯ, ಅರ್ಜಿ, ಸನ್ನದ್, ದಾಖಲೆ, ಜಮಾಬಂದಿ, ರುಜು, ಮುಚ್ಚಳಿಕೆ, ಜಪ್ತಿ, ಜಬಿತಾ, ಗುಮಾಸ್ತ, ಕಚೇರಿ, ರಿಸಾಲು, ದಫೆದಾರ, ಜಮಾದಾರ, ಹವಾಲ್ದಾರ, ರಿಸಾಲ್‌ದಾರ, ಮೊಬಲಗು, ನಜರು, ತನ್ಖಾ (ಟಂಕಾ), ಮೊಹಲ್ಲಾ, ಪಟ್ವಾರಿ, ದರ್ಗಾನ, ಆಬಾದು, ಅದಾಲತ್ತು, ನಕಲು, ರಫ್ತು, ನಸೀಬು, ಬಕ್ಷಿ, ಸಿಪಾದಾರ, ಖಜಾನೆ, ಖಜಾಂಚಿ, ನಗದಿ, ಸರ್ಕಾರ, ಕಸಬು, ಸುಬಾ, ಪರಗಣಾ, ಮಹಲ್, ಪಂಚಾಯತ್, ಮುನ್ಸಿ, ದಿವಾನ, ಗುರ್ ಪೀರ, ರೀತಿ ರಿವಾಜು, ಕಾರ್ಖಾನೆ, ಮೌಲ್ವಿ, ಇಮಾಮ್, ನಮಾಜ್, ರೋಜ, ಮಸೀದಿ, ಇತ್ಯಾದಿ.

## ಕರ್ನಾಟಕದಲ್ಲಿ ಪಾರ್ಸಿ ಮತ್ತು ಅರಬ್ಬೀ ಭಾಷೆಗಳು

ಭಾರತೀಯರೂ ಮತ್ತು ಫಾರಸಿಕರೂ ಒಂದೇ ಬುಡಕಟ್ಟಿಗೆ ಸೇರಿದವರಾದ ಕಾರಣ ಭಾರತೀಯ ಮತ್ತು ಇರಾನಿ ಭಾಷೆಗಳೂ ಮೂಲ ಆರ್ಯಭಾಷೆಯ ಭೇದಗಳಾಗಿವೆ. ಪರ್ಶಿಯ ಮತ್ತು ಭಾರತಗಳು ಬುಡಕಟ್ಟು ಮತ್ತು ಭಾಷಾ ಸಾಮೀಪ್ಯವನ್ನು ಮಾತ್ರವೇ ಹೊಂದದೆ ನೆರೆಹೊರೆಯ ರಾಷ್ಟ್ರಗಳೂ ಆಗಿರುವ ಕಾರಣ ಅವು ಪುರಾತನ ಕಾಲದಿಂದಲೂ ಸಾಂಸ್ಕೃತಿಕ ಮತ್ತು ವಾಣಿಜ್ಯ ಸಂಪರ್ಕ ನಡೆದಿದ್ದವು. ಹಿಬ್ರು ಭಾಷೆಯಂತೆ ಅರಬ್ಬಿಯೂ ಸೆಮೆಟಿಕ್ ಬುಡಕಟ್ಟಿಗೆ ಸೇರಿದ ಭಾಷೆ. ಜ್ಯೋತಿಷ್ಯ ಮತ್ತು ವೈದ್ಯಶಾಸ್ತ್ರ ಪುಸ್ತಕಗಳ ವ್ಯಾಸಂಗಕ್ಕಾಗಿ ಹಿಂದೂಸ್ಥಾನದಲ್ಲಿ ಅರಬ್ಬಿ ಭಾಷೆಯನ್ನು ಬಳಸಿಕೊಳ್ಳಲಾಗುತ್ತಿತ್ತು. ಅರಬ್ಬಿ ವರ್ತಕರು ಕರ್ನಾಟಕದೊಡನೆ ವಾಣಿಜ್ಯ ಸಂಪರ್ಕ ಪಡೆದಿದ್ದರು. ಈ ಸಂಬಂಧದ ಪರಿಣಾಮವೇ ಪಶ್ಚಿಮ ಕರಾವಳಿಯಲ್ಲಿ ಮಾಪಿಳ್ಳೆ ಮತ್ತು ನವಾಯತ ಮುಸ್ಲಿಮರು ಮೂಡಿ ಬಂದದ್ದು. ರಾಷ್ಟ್ರಕೂಟರ ಕಾಲದಲ್ಲಿ ಕೊಂಕಣ ಕರಾವಳಿಯಲ್ಲಿ ಒಬ್ಬ ತಜ್ಜಿಕ (ಅರಬ್) ರಾಜ್ಯಪಾಲನಾಗಿದ್ದ.

ದಕ್ಷಿಣ ಭಾರತದಲ್ಲಿ ಮುಸ್ಲಿಮರ ಆಡಳಿತ 14ನೇಯ ಶತಮಾನದಿಂದ ಮುಂದಿನ ನಾಲ್ಕು ಶತಮಾನಗಳ ವರೆಗೂ ಹರಡಿದ್ದು, ಬಹಮನಿ ರಾಜರಿಂದ ಮೊದಲುಗೊಂಡು ಟಿಪ್ಪು ಸುಲ್ತಾನನ ಅಂತ್ಯದವರೆಗೂ ಅದು ಜಾರಿಯಲ್ಲಿದ್ದಿತು. ಈ ನಾಲ್ಕು ಶತಮಾನಗಳ ಪರ್ಯಂತರವೂ, ಇಡೀ ದಕ್ಷಿಣ ಭಾರತ ಅರಬ್ಬಿ ಭಾಷೆಯೇ ತಮ್ಮ ಧಾರ್ಮಿಕ ಭಾಷೆಯಾಗಿ ಹೊಂದಿದ್ದ ಪಾರ್ಸಿ ಮಾತನಾಡುವ ರಾಜರ ಹಿಡಿತದಲ್ಲಿತ್ತು. ಈ ಕಾಲದಲ್ಲಿ ಪಾರ್ಸಿ ಭಾಷೆ ಕೇವಲ ಆಸ್ಥಾನ ಭಾಷೆಯಾಗಿರದೆ ಸಾಂಸ್ಕೃತಿಕ ಭಾಷೆಯೂ ಆಗಿದ್ದಿತು. ಈ ಕಾರಣವೇ ಇಸ್ಲಾಮಿ ನ್ಯಾಯ ಶಾಸ್ತ್ರ, ತತ್ವಶಾಸ್ತ್ರ ಮತ್ತು ಸಾಹಿತ್ಯಗಳ ಪ್ರಚಾರಕ್ಕಾಗಿ ನೂರಾರು ಪುಸ್ತಕಗಳು ಪ್ರಕಟವಾದವು. ಮುಸ್ಲಿಂ ರಾಜರ ಆಸ್ಥಾನಗಳಲ್ಲಿ ಉಲೆಮಾಗಳ, ಕವಿಗಳ ಸಮೂಹವೇ ಇರುತ್ತಿತ್ತು. ಆಡಳಿತ ಮತ್ತು ಸಮಾಜದ ನಾನಾ ಶಾಖೆಗಳ ಇಡಿ ವಿವರಣೆ ಕನ್ನಡದಿಂದ ಪಾರ್ಸಿ ಹಾಗೂ ಅರಬ್ಬಿ ಭಾಷೆಗಳಿಗೆ ಪರಿವರ್ತಿಸಲಾಗಿತ್ತು. ಈ ಕಾರಣದಿಂದಲೇ ತನ್ಖಾ, (ಟಂಕಾ) ಬಾಜಾರ್, ಫರ್ಮಾನ್, ಮುಜರಾಯಿ, ಮಹಜರ್, ಇತ್ಯಾದಿ ಅನೇಕಾನೇಕ ಈ ಭಾಷೆಗಳ ಪದಗಳು ಸಾರ್ವಜನಿಕ ಮತ್ತು ಮನೆ ಬಳಕೆಯ ಮಾತುಗಳಾಗಿದ್ದವು. ಈ ಕಾಲದಲ್ಲಿ ಕರ್ನಾಟಕವು ವಿದ್ವತ್ಪೂರ್ಣ ಹಾಗೂ ಹೆಸರಾಂತ ಪಾರ್ಸಿ ಮತ್ತು ಅರಬ್ಬೀ ಬರಹಗಾರರ ಆಗರವಾಯಿತು. ಬರಹಗಾರರ ಸಾಹಿತ್ಯಾಕಾಂಕ್ಷೆ, ಭಾಷೆ ಮತ್ತು ಸಾಹಿತ್ಯಗಳ ಮೇಲೆ ಸಹನಶೀಲ ಪರಿಣಾಮವನ್ನುಂಟುಮಾಡಿತ್ತು. ಕಲ್ಬುರ್ಗಿಯ ಹಜರತ್ ಗೈಸುದ್ದರಾಜ್ ಎಂದು ಹೆಸರುವಾಸಿಯಾಗಿರುವ ಹಜರತ್ ಖಾಜ ಸದರುದ್ದೀನ್ ಅಬ್ದುಲ್ ಫತ್ತ ಸೈಯದ್ ಹುಸೇನಿ (ಬಂದೆ ನವಾಜ್) ಅಂತಹ ಬರಹಗಾರರಲ್ಲಿ ಅಗ್ರಮಾನ್ಯ. ಈತನು ಪಾರ್ಸಿ ಮತ್ತು ಅರಬ್ಬಿ ಭಾಷೆಗಳಲ್ಲಿ ಅನೇಕ ಧಾರ್ಮಿಕ ಪೌರಾಣಿಕ ಮತ್ತು ತತ್ವಶಾಸ್ತ್ರದ ಪುಸ್ತಕಗಳನ್ನು ಬರೆದಿದ್ದಾನೆ. ಬಹಮನಿ ರಾಜ್ಯದ ಕಾಲದಲ್ಲಿ

ಪ್ರಭಾವಶಾಲಿ ವ್ಯಕ್ತಿತ್ವ ಅವನದಾಗಿತ್ತು. ಷೇಖ್ ಅಲ್ಲಾವುದ್ದೀನ್ ಅಲಿ, ಅಲ್ಲಾಮ ಅಬ್ದುಲ್ ಅಜೀಜ್, ಷೇಖ್ ಅಲೀಮೊದ್ದೀನ್ ಗುಂಜೆ ಉಲೂಮ್ ಜುನ್ಯೆದಿ, ಷೇಖ್ ಸಿರಾಜೊದ್ದೀನ್ ಜುನ್ಯೆದಿ, ಮೀರ್ ಫಜಲುಲ್ಲಾ ಇಂಜು ಮತ್ತು ಮುಲ್ಲಾ ಜಲಾಲೊದ್ದೀನ್ ದವಾನಿ ಈ ಕಾಲದ ಇನ್ನಿತರ ಹೆಸರಾಂತ ಬರಹಗಾರರಾಗಿದ್ದರು. ಬಹಮನಿ ರಾಜರ ಪ್ರಸಿದ್ಧ ಮಂತ್ರಿ ಮೊಹಮ್ಮದ್ ಗವಾನನು ಕವಿಯೂ, ವಿದ್ವಾಂಸನೂ ಆಗಿದ್ದನು. ಅವನ ಪತ್ರಗಳ ಸಂಗ್ರಹ ರೌಜತುಲ್ ಇನ್‌ಷಾ ಮತ್ತು ಪ್ರಬಂಧಗಳ ಸಂಕಲನ ದಿವಾನ್ ಇ ಅಷರ್ ಅವನ ಗಮನಾರ್ಹ ಪಾರ್ಸಿ ಪುಸ್ತಕಗಳಾಗಿವೆ. ಅವನು ಬಿದರೆಯಲ್ಲಿ ಒಂದು ಮಹಾ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದನಲ್ಲದೆ ಅಲ್ಲಿಗೆ ಈರಾನ್ ಮತ್ತು ಈರಾಖ್ ದೇಶಗಳಿಂದ ಉನ್ನತ ಬರಹಗಾರರನ್ನೂ, ಕವಿಗಳನ್ನೂ ಮತ್ತು ವಿದ್ವಾಂಸರನ್ನೂ ಆಮಂತ್ರಿಸಿದ್ದನು. ಆ ಕಾಲದಲ್ಲಿ ಬಿದರೆ ವಿದ್ಯಾಭ್ಯಾಸ ಮತ್ತು ಸಾಹಿತ್ಯದ ಒಂದು ಹೆಸರಾಂತ ಕ್ಷೇತ್ರವಾಗಿತ್ತು.

ಬಹಮನಿ ರಾಜರು ಪಾಂಡಿತ್ಯ ಮತ್ತು ಸಾಹಿತ್ಯಗಳ ಮಹಾಪೋಷಕರಾಗಿದ್ದರು. ಇದೇ ಕಾಲದಲ್ಲಿ ಅಧರಿಯು, ಬಹಮನ್ ನಾಮ ಗ್ರಂಥವನ್ನು ರಚಿಸಿದನು. ಇದಲ್ಲದೆ ವ್ಯಾಕರಣ, ಪತ್ರಲೇಖನ, ಆಧ್ಯಾತ್ಮಿಕ ಯೋಗ ಮತ್ತು ತತ್ವಶಾಸ್ತ್ರಗಳ ಇನ್ನಿತರ ಮಹತ್ವಪೂರ್ಣ ಪುಸ್ತಕಗಳು ಪ್ರಕಟವಾದವು.

ಬಹಮನಿ ರಾಜ್ಯದ ಅವನತಿಯ ನಂತರ ಅದರ ಉತ್ತರಾಧಿಕಾರಿಗಳಾಗಿ ತಲೆದೋರಿದ ಷಾಹಿ ರಾಜ್ಯಗಳಲ್ಲಿ ವಿಜಾಪುರದ ಆದಿಲ್‌ಷಾಹಿ ರಾಜರುಗಳು ಪಾರ್ಸಿ ಭಾಷೆಯ ಪೋಷಣೆಯನ್ನು ಮುಂದುವರಿಸಿದರು. ಆದಿಲ್‌ಷಾಹಿ ಸಂತತಿಯ ಸ್ಥಾಪಕ ಯೂಸೂಫ್ ಆದಿಲ್ ಷಾ ಸ್ವತಃ ಕವಿಯಾಗಿದ್ದ. ಇಸ್ಮಾಯಿಲ್ ಮತ್ತು ಅವನ ಉತ್ತರಾಧಿಕಾರಿಗಳೂ ಹಾಗೂ ಅಲಿ ಆದಿಲ್ ಷಾ ಸ್ವತಃ ಸಾಹಿತಿಗಳೂ ಮತ್ತು ಕಲೆ, ಸಾಹಿತ್ಯಗಳ ಪೋಷಕರೂ ಆಗಿದ್ದರು. ಇಮ್ಮಡಿ ಇಬ್ರಾಹಿಂ ಆದಿಲ್‌ಷಾಹನ ಕಾಲದಲ್ಲಿಯೇ ಹೆಸರಾಂತ ಐತಿಹಾಸಿಕ ಬರಹಗಾರ ಮೊಹಮ್ಮದ ಖಾಸಿಂ ಫಿರಿಷ್ತಾ ತನ್ನ ಪ್ರಖ್ಯಾತ ಗುಲ್ಷನ್ ಎ ಇಬ್ರಾಹಿಮಿಯನ್ನು ಬರೆದನು. ತಾರೀಖೆ ಫಿರಿಷ್ತಾ ಎಂದು ಹೆಸರುವಾಸಿಯಾಗಿರುವ ಈ ಕೃತಿ ದಖ್ಖನ್ನಿನ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಒಂದು ಮಹಾ ಐತಿಹಾಸಿಕ ಗ್ರಂಥ. ಆದಿಲ್ ಷಾಹಿ ಆಸ್ಥಾನದಲ್ಲಿದ್ದ ಷಿರಾಜಿ ಮತ್ತೊಬ್ಬ ಹೆಸರಾಂತ ಬರಹಗಾರ. ಅವನ ಚಾರಿತ್ರಿಕ ಕೃತಿ ತಜ್‌ಕೀರತ್-ಉಲ್-ಮುಲ್ಕ್ 1610ರಲ್ಲಿ ಪೂರ್ಣಗೊಂಡಿತು.

ಆದಿಲ್‌ಷಾಹಿ ರಾಜರ ಆಡಳಿತ ಕಾಲದಲ್ಲಿ ಅವರ ರಾಜಧಾನಿ ವಿಜಾಪುರವು ಪಾಂಡಿತ್ಯ ಮತ್ತು ಸಾಹಿತ್ಯ ಚಟುವಟಿಕೆಯಲ್ಲಿ ದಿಲ್ಲಿ, ಆಗ್ರ, ಆಸ್ಫಹಾನ್, ಕ್ವಾಜೈನ್‌ಗಳ ರಾಜಾಸ್ಥಾನಗಳ ಪ್ರತಿಸ್ಪರ್ಧಿಯಂತೆ ಮೆರೆಯಿತು. ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಯಲ್ಲಿ ಪಾರ್ಸಿ ಭಾಷೆ ರಾಜಾಶ್ರಯ ಪಡೆದು ಯಥಾ ಪ್ರಕಾರ ಬಳಕೆಯಲ್ಲಿ ಮುಂದುವರೆಯಿತು. ಟಿಪ್ಪುವಿನ ಕಾಗದ ಪತ್ರಗಳು ಪಾರ್ಸಿ ಭಾಷೆಯಲ್ಲಿಯೇ ಬರೆಯಲ್ಪಡುತ್ತಿದ್ದವು. ಮತ್ತು ಅವನು ಪಾರ್ಸಿಯಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದನಲ್ಲದೆ ಆ ಭಾಷೆಯಲ್ಲಿ ಮತ್ತು ಅದರ ಸಾಹಿತ್ಯದಲ್ಲಿ ಜ್ಞಾನಾರ್ಜನೆ ಪಡೆದಿದ್ದನು. ಸುಲ್ತಾನ್ ಉ ತವರಖ್ ಕೃತಿಯನ್ನು ತಾನೇ ಹೇಳಿ ಜೆನುಲ್ ಆಬೆದೀನ್ ಷೂಸ್ತ್ರಿಯ ಕೈಯಿಂದ ಬರೆಸಿದ್ದನೆಂದು ಪ್ರತೀತಿ ಇದೆ. ಜೆನುಲ್ ಆಬೆದೀನ್ ಷೂಸ್ತ್ರಿ, ಹುಸೇನ್ ಅಲಿ ಕಿರ್ಮಾನಿ, ಮೌಲ್ವಿ ಮೊಹಮ್ಮದ್ ಹಬೀಬುಲ್ಲಾ, ಮುನ್ಷಿ ಗುಲಾಂ ಹುಸೇನ ಮುನಜ್ಜಿಂ, ಹಸನ್ ಅಲಿ ಇಜತ್ ಮತ್ತು ಮೆಹ್ತಾಬ್ ರಾಯ್ ಸಬ್‌ಖತ್‌ರಂತಹ ಹೆಸರಾಂತ ಪಾರ್ಸಿ ಬರಹಗಾರರು ಅವನ ಆಸ್ಥಾನದಲ್ಲಿದ್ದರು. ಟಿಪ್ಪುವಿನ ಪತನದ ನಂತರವೂ ಕರ್ನಾಟಕದಲ್ಲಿ ಪಾರ್ಸಿ ಭಾಷೆಯ ಪ್ರಭಾವ ಬಹಳ ಕಾಲ ಮುಂದುವರೆಯಿತು. ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರಂತಹ ಮಹಾರಾಜರೂ ಪೂರ್ಣಯ್ಯನಂತಹ ದಿವಾನರೂ ಪಾರ್ಸಿಯಲ್ಲಿ ನಿಷ್ಣಾತರಾಗಿದ್ದರಲ್ಲದೆ, ಆ ಭಾಷೆಯಲ್ಲಿಯೇ ಕಾಗದ ಪತ್ರಗಳನ್ನು ಬರೆಯುತ್ತಿದ್ದರು. ಅವರ ಮೇಲ್ವಿಚಾರಣೆಯಲ್ಲಿ ಪಾರ್ಸಿ ಮೌಲ್ವಿಗಳು ತಮ್ಮ ಕಾರ್ಯ ನಿರ್ವಹಣೆ ಮಾಡುತ್ತಿದ್ದರು. 1835ರವರೆಗೂ ಪಾರ್ಸಿ ಭಾಷೆ ಮೈಸೂರಿನ ಆಡಳಿತ ಭಾಷೆಯಾಗಿತ್ತು. ಅದಕ್ಕೆ ದೊರೆತ ಈ ರೀತಿಯ ಪೋಷಣೆ ಮತ್ತು ಆಡಳಿತ ಭಾಷೆಯ ಮಾನ್ಯತೆಯಿಂದಾಗಿ ಸಂಸ್ಥಾನದಲ್ಲಿ ಇನ್ನಿತರ ಭಾಷೆಗಳಿಗಿಂತ ಅದು ಅಪಾರ ಹಿರಿಮೆಯನ್ನು ಗಳಿಸಿತ್ತು. ಮೌಲಾನ ಗುಲಾಂ ಹುಸೇನ್ ಮುನಜ್ಜಂ, ಅವನ ಶಿಷ್ಯ ಹಾಸನದ ದಿವಾನ್ ಸೆಯ್ಯಿದ್ ಅಮೀರ್ ಅಹಮದ್, ಮೀರ್ ನಯತ್, ಸಿರಾಜುಲ್ ಉಲೆಮ, ಸೈಯ್ಯದ್ ಷಾಹಬುದ್ದೀನ್ ಷಾ ಖಾದ್ರಿ, ಸೂಫಿ ಅಹಮದ್ ಅಲಿ ಅಹಮದ್, ಮೀರ್ ಫೈಯ್ಯಾಜ್ ಅಸ್ಕರಿ, ಅಬಿದ್ ಮೈಸೂರಿ ಮತ್ತು ಮೊಹಮ್ಮದ ಅಲಿ ಮೇಕ್ರಿ, ಟಿಪ್ಪು ಸುಲ್ತಾನನ ಆಳ್ವಿಕೆಯ ನಂತರದ ಹೆಸರಾಂತ, ವಿದ್ವಾಂಸರೂ, ಕವಿಗಳೂ ಆಗಿದ್ದರು.

ಕರ್ನಾಟಕದ ಕಲೆ ಮತ್ತು ಕರಕೌಶಲ್ಯಗಳ ಮೇಲೆ ಪಾರ್ಸಿ ಸಂಸ್ಕೃತಿ ತನ್ನ ಪ್ರಭಾವವನ್ನು ಬೀರಿದೆ. ಕನಾಟಕದ ಸಾಂಸ್ಕೃತಿಕ ಜೀವನದಲ್ಲಿ ಸೂಫಿ ಚಳವಳಿ ಒಂದು ಮುಖ್ಯ ಪಾತ್ರವನ್ನು ವಹಿಸಿದೆ. ಕರ್ನಾಟಕದಲ್ಲಿ ಸಂಗೀತವು ಸೂಫಿಗಳ ಪ್ರಭಾವ ಪಡೆದಿದೆ. ಮುಸ್ಲಿಂ ರಾಜರು ಇತ್ತ ಪೋಷಣೆ ಮತ್ತು ಉತ್ತೇಜನದಿಂದ ಇಸ್ಲಾಮಿನ ನಿರ್ದಿಷ್ಟ ಕಲೆ ಎನಿಸಿದ ಉಬ್ಬಕ್ಷರದ ಕೆತ್ತನೆ ದಕ್ಷಿಣ ಭಾರತದಲ್ಲಿ ಸಾಂಪ್ರದಾಯಿಕವಾಗಿ ಪ್ರವೇಶ ಪಡೆದಿದ್ದಲ್ಲದೆ ಅದು ಅತ್ಯುನ್ನತ ಶಿಖರವನ್ನೇರಿತು.

## ಕರ್ನಾಟಕದಲ್ಲಿ ಹಿಂದಿ

ಮೊಹಮ್ಮದ್ ಬಿನ್ ತೂಘಲಕ್ ತನ್ನ ರಾಜಧಾನಿಯನ್ನು ದೆಹಲಿಯಿಂದ ದೇವಗಿರಿಗೆ ಸ್ಥಳಾಂತರಿಸಿದಾಗ ದೆಹಲಿಯ ನಿವಾಸಿಗಳು ತನ್ನನ್ನು ಹಿಂಬಾಲಿಸಲು ಬಲಾತ್ಕರಿಸಿದನು. ಈ ಕಾರಣದಿಂದ ವಲಸೆಗೆ ಬಂದ ಜನರು ಹಿಂದೂಸ್ಥಾನದ ಮಧ್ಯ ಮತ್ತು ದಕ್ಷಿಣ ಭಾಗಗಳಲ್ಲಿ ನೆಲೆಸಿದರು. ದೆಹಲಿ, ಮೇರಟ್, ಹಾಗೂ ಅವುಗಳ ಸುತ್ತುಮುತ್ತಿನ ಜನರು ಆಡುವ ಪ್ರಾಂತೀಯ ಭಾಷೆ ಖಡಿಬೋಲಿಯೂ ಅವರೊಡನೆ ಬಂದಿತು. ಖಡಿಬೋಲಿಯು ಪ್ರಾಂತೀಯ ಭಾಷೆಗಳ ಪ್ರಭಾವಕ್ಕೆ ಸಿಕ್ಕಿ ದಖ್ಖನಿ ಭಾಷೆಯ ಪದರಚನೆ ರೂಪಗೊಂಡಿತು. ಪ್ರಾಕೃತದ ಮೂಲ ಶೌರಸೇನಿಯ ನೇರ ಸಂತಾನವಾದ ಖಡಿಬೋಲಿ ಪ್ರಾಚೀನ ಕಾಲದಿಂದಲೂ ದೆಹಲಿ ಪರಿಸರದ ಭಾಗಗಳ ಸ್ಥಳೀಯ ಭಾಷೆಯಾಗಿತ್ತು. 1347 ರಲ್ಲಿ ಸ್ಥಾಪಿತವಾದ ಬಹಮನೀ ರಾಜ್ಯಕ್ಕೆ ಎಡಬಿಡದೆ ಬಂದ ಸೈನಿಕ ದಳಗಳ ಯೋಧರಿಂದ, ಅವರ ಪಾಳಯಗಳ ಹಿಂಬಾಲಕರಿಂದ ಹಾಗೂ ಅವರ ಸಿಬ್ಬಂದಿಯ ಇನ್ನಿತರ ಜನಗಳಿಂದ ಈ ಭಾಷೆ ಜಾರಿಗೆ ಬಂದಿತು. ಪಾರ್ಸಿಯು ಅಂಗೀಕೃತ ಆಸ್ಥಾನ ಭಾಷೆಯಾಗಿದ್ದರೂ ಖಡಿಬೋಲಿ ಇಲ್ಲಿಗೆ ನೆಲೆಸಬಂದ ಜನರ ವ್ಯವಹಾರ ಭಾಷೆಯಾಗಿತ್ತು. ಪ್ರಾಂತೀಯ ಜನರೂ ಆ ಭಾಷೆಯಲ್ಲಿ ಸರಾಗವಾಗಿ ಮಾತನಾಡುತ್ತಿದ್ದರು. ಗೌರಾವಾನ್ವಿತ ಸೂಫಿ ತತ್ವಜ್ಞಾನಿಯಾದ ಖಾಜಾ ಬಂದೇ ನವಾಜ್ ಗೈಸುದರಾಜ್ ಅದನ್ನು ತಮ್ಮ ಧರ್ಮಬೋಧನೆಗಾಗಿ ಧಾರ್ಮಿಕ ಬರವಣಿಗೆಗಾಗಿ ಬಳಸಿಕೊಂಡ ನಂತರ ಖಡಿಬೋಲಿ ದಖ್ಖನಿ ಸಾಹಿತ್ಯದ ರೂಪ ಪಡೆಯಿತು. ಕರ್ನಾಟಕದ ಮುಸ್ಲಿಮರು ಅದನ್ನು ತಮ್ಮ ಬರವಣಿಗೆಗಳಲ್ಲಿ ತಂದ ಮೇಲೆ ಅದು ಸಾಹಿತ್ಯದ ಮಾನ್ಯತೆ ಪಡೆಯಿತು. ಹೀಗೆ ರೂಪಗೊಂಡ ದಖ್ಖನಿ ಭಾಷೆ ಬಹುಮನಿ ಕಲ್ಬುರ್ಗಿ, ಬಿದರೆ ಮತ್ತು ವಿಜಾಪುರ ರಾಜರ ಪೋಷಣೆ ಪಡೆಯಿತು. ಇಮ್ಮಡಿ ಆಲಿ ಆದಿಲ್‌ಷಾ ಈ ಭಾಷೆಯನ್ನೇ ತನ್ನ ಬರವಣಿಗೆಗಳಲ್ಲಿ ಉಪಯೋಗಿಸಿಕೊಂಡನು. ಈ ಭಾಷೆಯನ್ನೇ ಬಳಸಿಕೊಂಡ ಅನೇಕ ಕವಿಗಳಿಗೆ ಅವನು ಅಪಾರ ಪ್ರೋತ್ಸಾಹವನ್ನಿತ್ತನು. ಆದಿಲ್‌ಷಾಹನನ್ನು ದಖ್ಖನಿ ಕವಿತೆಯ ಮೊದಲ ವಾಸ್ತವಿಕ ಆಶ್ರಯದಾತನೆಂದು ಕರೆಯಬಹುದು.

ದಖ್ಖನಿ ಕಾವ್ಯಯುಗ ಪ್ರವರ್ತಕ ಮತ್ತು ಮೊದಲ ಕವಿ ಎಂಬ ಹೆಮ್ಮೆಯ ಗೌರವವನ್ನು ಬಂದನೇಯ ಸಿದ್ಧಲಿಂಗಯ್ಯ ಪಡೆದಿದ್ದಾರೆ. ನಸೀರೊದ್ದೀನ್ ಚಿರಾಗ್ ದೆಹಲ್ವಿ ತಮ್ಮ ಗುರು ಎಂದು ಈ ವೀರಶೈವ ಸಂತರು ಹೆಸರಿಸುತ್ತಾರೆ. ನಿರಾಕಾರ ಭಗವಂತನ ಪ್ರಾರ್ಥನೆ, ಯೋಗ, ವೇದ ಮತ್ತು ಪವಿತ್ರ ಖುರಾನಿನಲ್ಲಿ ನಂಬಿಕೆ, ಇವು ಸಿದ್ಧಲಿಂಗಯ್ಯನವರ ಕಾವ್ಯಗಳ ವಿಷಯ ವಸ್ತುಗಳಾಗಿವೆ. ಕರ್ನಾಟಕದ ಒಬ್ಬ ಗಣ್ಯ ಸಂತ ಮತ್ತು ಕವಿಯೂ ಆದ ಮಹೀಪತಿ ದಾಸರು ಈ ಭಾಷೆಯನ್ನು ಬಳಸಿಕೊಂಡ ಮತ್ತೊಬ್ಬ ರಚನಕಾರರು. ಅವರು 1611ರಿಂದ 1681ರವರೆಗೆ ಬಾಳಿದರು. ವಿಜಾಪುರದ ಸುಲ್ತಾನರಾದ ಮೊಹಮ್ಮದ್ ಆದಿಲ್ ಷಾ ಮತ್ತು ಸಿಕಂದರ್ ಆದಿಲ್ ಷಾರು ಅವರನ್ನು ತಮ್ಮ ಗುರುಗಳೆಂದು ಪರಿಗಣಿಸಿದ್ದಾರೆ. ಪ್ರಭುದತ್ತ ವಿಚಾರ ಧಾರೆಯ ಧರ್ಮ ನಿಷ್ಠೆಯಲ್ಲೊಬ್ಬನಾದ ಮಾಣಿಕ್ ಪ್ರಭು ಈ ಭಾಷೆಯಲ್ಲಿಯೇ ನೂರಾರು ಕೀರ್ತನೆಗಳನ್ನು ಬರೆದರು. ತಿಪ್ಪಣಾರ್ಯನು ಐದು ಭಾಷೆಗಳಲ್ಲಿ ಬರೆದ ಒಬ್ಬ ಕವಿ. ಅವನು ತನ್ನ ಕೃತಿ ಕೃಷ್ಣಲೀಲಾದಲ್ಲಿ 20 ಪದ್ಯಗಳನ್ನು ಹಿಂದಿಯಲ್ಲಿ ರಚಿಸಿದ್ದಾನೆ. ಭಕ್ತಿರಸ ಪ್ರಧಾನ ಕಾವ್ಯಗಳನ್ನು ಬರೆದ ಅಣ್ಣಾವದೂತ ಅವನ ಸಮಕಾಲೀನ ಕವಿ. "ವಿಠಲ ವ್ಯಾಸ" ಎಂಬ ಕಾವ್ಯನಾಮದಲ್ಲಿ ಅವನು ಕಾವ್ಯರಚಿಸಿರುತ್ತಾನೆ. ಅವನು ಬರೆದ ದಖ್ಖನೀ ಕಾವ್ಯಗಳು ಗಾಢ ಭಕ್ತಿ ಹಾಗೂ ಹುರುಪನ್ನು ಹೊಂದಿವೆ.

ಕರ್ನಾಟಕದ ಹಿಂದೀ ಕವಿಗಳ ಸಾಲಿನಲ್ಲಿ ಶಿಶುನಾಳ ಶರೀಫ (1819-89) ರಿಗೆ ಒಂದು ವಿಶಿಷ್ಟ ಸ್ಥಾನವಿದೆ. ಅವರು ಕನ್ನಡ ಮತ್ತು ಹಿಂದೀ ಭಾಷೆಗಳಲ್ಲಿ ನೂರಾರು ಗೀತೆಗಳನ್ನು ಬರೆದಿದ್ದಾರೆ. ಸಾಹಿತ್ಯಿಕ ಉತ್ಕೃಷ್ಟತೆಗೆ ಮಾತ್ರವಲ್ಲದೆ ಬಹು ಇಂಪಾದ ಅವರ ಹಾಡುಗಳು ಗಾಯನಕ್ಕೂ ಹೆಸರುವಾಸಿಯಾಗಿವೆ. ಮಹೀಪತಿ ಮತ್ತು ಶಿಶುನಾಳ ಶರೀಫರ ಹಾಡುಗಳು ವಿಶ್ವ ವಿದ್ಯಾಲಯಗಳಲ್ಲಿ ಸಂಶೋಧನೆಯ ವಿಷಯಗಳಾಗಿವೆಯೆಂದು ಈ ಸಂದರ್ಭದಲ್ಲಿ ಹೇಳಿದರೆ ಅನುಚಿತವೆನಿಸಲಾರದು. ಶ್ರೇಷ್ಠ ಉರ್ದು ಕವಿಗಳಲ್ಲಿ ವಲಿ ದಖ್ಖಾನಿಯ ಹೆಸರು ಅಗ್ರಮಾನ್ಯ. ಅವನು ಸಾಂಪ್ರದಾಯಿಕ ಖಡಿಬೋಲಿ ಉರ್ದುವಿನಲ್ಲಿ ಕಾವ್ಯಗಳನ್ನು ರಚಿಸಿದನು. ಅವನು ದಖ್ಖನಿನಿಂದ ದೆಹಲಿಗೆ ವಲಸೆ ಹೋಗಿದ್ದು, ದೆಹಲಿ ಮಾದರಿಯ ಕಾವ್ಯ ರಚನೆಯಲ್ಲಿ ಅವನದು ಮಹತ್ವದ ಕೊಡುಗೆ. ಇಡೀ ಹಿಂದೂಸ್ಥಾನದ ಉದ್ದಗಲಕ್ಕೂ ಖಡಿಬೋಲಿ ಹಿಂದಿ ಮತ್ತು ದಖ್ಖನಿ ಭಾಷೆಗಳು ಅಷ್ಟೊಂದು ಜನಪ್ರಿಯವಾಗಲು ಕಾರಣವೆಂದರೆ ಈ ಎರಡು ಪ್ರಾಂತೀಯ ಭಾಷೆಗಳು ಒಂದೇ ಭಾಷಾ ಬುಡಕಟ್ಟಿಗೆ ಸೇರಿದವುಗಳಾಗಿದ್ದು ಶತಮಾನಗಳಿಂದ ಅವು ನಮ್ಮ ದೇಶದ ಮಾತೃಭಾಷೆಯಾಗಿ ಒಂದಕ್ಕೊಂದು ಹೊಂದಿಕೊಂಡಿವೆ. ಉತ್ತರ ಭಾರತದ ಒಬ್ಬ ನಿವಾಸಿ ಯಾತ್ರಾರ್ಥಿಯಾಗಿಯೋ ವ್ಯಾಪಾರಕ್ಕಾಗಿಯೋ ಯಾವಾಗಲಾದರೂ ದಕ್ಷಿಣ ಭಾರತಕ್ಕೆ ಬಂದರೆ ಖಡಿಬೋಲಿ ಹಿಂದಿಯಲ್ಲಿ ಮಾತು ನಡೆಸುವುದರಲ್ಲಿ ಅವನಿಗೆ ಯಾವ ಕಷ್ಟವೂ ಭಾಸವಾಗುತ್ತಿರಲಿಲ್ಲ. ಏಕೆಂದರೆ, ಖಡಿಬೋಲಿ ಹಿಂದಿಯ ದಖ್ಖನಿ ಸಂಪ್ರದಾಯ ದಕ್ಷಿಣ ಭಾರತದ ಜನರಲ್ಲಿ ಅದರಲ್ಲೂ ಮುಸ್ಲಿಮರಲ್ಲಿ ಯತೇಚ್ಛವಾಗಿ ಜಾರಿಯಲ್ಲಿತ್ತು.

ಭಾರತದ ನ್ಯಾಷನಲ್ ಕಾಂಗ್ರೆಸ್ಸಿನ ಮತ್ತು ಮಹಾತ್ಮಾ ಗಾಂಧಿಯವರ ಸತತ ಪ್ರಯತ್ನದಿಂದ, ದಕ್ಷಿಣ ಭಾರತದಲ್ಲಿ

ಉಂಟಾದ ಹಿಂದಿ ಭಾಷಾ ಚಳವಳಿಯಿಂದ ಅದರ ಪ್ರಚಾರ 1918ರಷ್ಟು ಹಿಂದೆಯೇ ಪ್ರಾರಂಭವಾಯಿತು. ಅಲಹಾಬಾದಿನಲ್ಲಿ ನಡೆದ ವಾರ್ಷಿಕ ಹಿಂದೀ ಸಾಹಿತ್ಯ ಸಮ್ಮೇಳನದ ನಿರ್ಣಯದಿಂದ ದಕ್ಷಿಣ ಭಾರತದಲ್ಲಿ ಹಿಂದೀ ಭಾಷೆಯಲ್ಲಿ ಪ್ರಚಾರ ವಿಶಾಲ ತಳಹದಿಯ ಮೇಲೆ ನಿಂತಂತಾಯಿತು. ದೇಶದ ಏಕತೆ ಮತ್ತು ಭಾವೈಕ್ಯತೆಯ ಕಲ್ಪನೆಯನ್ನು ಮುಂದುವರಿಸುವುದೇ ಆ ನಿರ್ಣಯದ ಗುರಿಯಾಗಿದ್ದಿತು. ದಕ್ಷಿಣ ಹಿಂದೂಸ್ಥಾನದಲ್ಲಿ ಹಿಂದೀ ಭಾಷೆಯ ಪ್ರಚಾರಕ್ಕೆ ತಮ್ಮ ಅಭಿಪ್ರಾಯಗಳನ್ನು ಮಹಾತ್ಮಾ ಗಾಂಧಿಯವರು ಈ ರೀತಿ ವ್ಯಕ್ತಪಡಿಸಿದ್ದಾರೆ. "ಒಂದು ವೇಳೆ ನೀವು ದಕ್ಷಿಣ ಭಾರತದ ಜನಕ್ಕೆ ಹಿಂದಿಯ ಕೊಡುಗೆಯನ್ನು ನೀಡಿದರೆ ಮತ್ತು ಒಂದು ವೇಳೆ ದಕ್ಷಿಣ ಭಾರತೀಯರು ನಿಮ್ಮ ಕೊಡುಗೆಯನ್ನು ಸ್ವೀಕರಿಸಿದರೆ ಆಗ ನೀವು ರಾಷ್ಟ್ರದ ಪ್ರಮುಖ ಸಮಸ್ಯೆಗೆ ಪರಿಹಾರ ಕಂಡುಹಿಡಿದಂತೆ ಆಗುತ್ತದೆ. ಅವರು ಹಿಂದಿಯನ್ನು ಅಂಗೀಕರಿಸಿದರೆ ದೇಶದ ಸಮಗ್ರತೆ ಪರಿಪೂರ್ಣಗೊಳ್ಳುತ್ತದೆ".

ದಕ್ಷಿಣ ಭಾರತದಲ್ಲಿ ಹಿಂದೀ ಭಾಷೆಯ ಪ್ರಚಾರದ ಚರಿತ್ರೆ ನಿಜಕ್ಕೂ ಸ್ವಾರಸ್ಯವಾಗಿದೆ. 1918ರಲ್ಲಿ ನಡೆದ ಹಿಂದೀ ಸಾಹಿತ್ಯ ಸಮ್ಮೇಳನದ ಒಂದು ಕಚೇರಿಯನ್ನು ಮದ್ರಾಸಿನಲ್ಲಿ ತೆರೆಯಲಾಯಿತು. ದೇವದಾಸ ಗಾಂಧಿಯವರು ಅದರ ಪ್ರಮುಖ ಪ್ರಚಾರಕರಾಗಿದ್ದರು. 1927ರಲ್ಲಿ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆ ಶುರುವಾದಾಗ ಉತ್ತರ ಹಿಂದೂಸ್ಥಾನದ ಹಿಂದೀ ಪ್ರಚಾರ ಸಾಧನೆಗೆ ಒಂದು ವಾಸ್ತವ ರೂಪ ಬಂದಿತು. ಕೇವಲ ದಕ್ಷಿಣ ಭಾರತೀಯರಿಂದ ಈ ಸಂಸ್ಥೆ ನಡೆಸಲ್ಪಡುತ್ತಿತ್ತು. ಇದರ ಪರಿಣಾಮವಾಗಿ ದಕ್ಷಿಣ ಭಾರತದಲ್ಲಿ ಅನೇಕ ಹಿಂದೀ ಪ್ರಚಾರ ಸಂಸ್ಥೆಗಳು ಸ್ಥಾಪಿತವಾದವು. ಅವುಗಳಲ್ಲಿ ಕೆಲವು ಮದ್ರಾಸಿನ ಹಿಂದೀ ಪ್ರಚಾರ ಸಭೆಗೋ (ಅದರ ಅಧ್ಯಕ್ಷರು ಮಹಾತ್ಮಾಗಾಂಧಿಯವರೇ ಆಗಿದ್ದರು) ಅಲಹಾಬಾದಿನ ಹಿಂದೀ ಸಾಹಿತ್ಯ ಸಮ್ಮೇಳನಕ್ಕೋ ಒಡಂಬಡಿಕೆಯುಳ್ಳವುಗಳಾಗಿದ್ದವು. ಈ ಸಂಸ್ಥೆಗಳು ಹಿಂದೀ ಶಿಕ್ಷಣ ಪ್ರಾರಂಭಿಸುವ ಜೊತೆಗೆ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯವರು ಅಥವಾ ಅಲಹಾಬಾದ ಹಿಂದೀ ಸಾಹಿತ್ಯ ಸಮ್ಮೇಳನದವರ ಮೇಲ್ವಿಚಾರಣೆಯಲ್ಲಿ ನಡೆಯುವ ಹಿಂದೀ ಪರೀಕ್ಷೆಗಳಿಗೆ ಅರ್ಹರಾಗಲು ವಿದ್ಯಾರ್ಥಿಗಳಿಗೆ ಪಾಠ ಕಲಿಸುತ್ತಿದ್ದರು. ಮದ್ರಾಸಿನ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯೇ ಕರ್ನಾಟಕದಲ್ಲಿ ಹಿಂದೀ ಪ್ರಚಾರ ಚಳವಳಿಗೆ ಸ್ಫೂರ್ತಿ ನೀಡಿತು. 1927ರಲ್ಲಿ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆ ಪ್ರಾರಂಭವಾದಾಗ ಹಿಂದೀ ಪ್ರಚಾರದಲ್ಲಿ ತೊಡಗಿದ್ದ ಕಾರ್ಯಕರ್ತರಿಗೆ ಒಂದು ಹೊಸ ಉತ್ಸಾಹ ಉಂಟಾಯಿತು. 1927ರಲ್ಲಿ ಗಾಂಧೀಜಿಯವರು ಕೈಗೊಂಡ ಕರ್ನಾಟಕದ ಪ್ರವಾಸದ ನಂತರ ಹಿಂದೀ ಪ್ರಚಾರಕ್ಕೆ ಒಂದು ಹೊಸ ಹುರುಪು ಬಂದಿತು. ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲಿ ಹಿಂದೀ ವ್ಯಾಸಂಗವನ್ನು ಪ್ರಾರಂಭಿಸಲು ಯಶಸ್ವೀ ಪ್ರಯತ್ನಗಳನ್ನು ಮಾಡಲಾಯಿತು. ಮೈಸೂರಿನ ಬನುಮಯ್ಯ ಪ್ರೌಢಶಾಲೆ ಮತ್ತು ಬೆಂಗಳೂರಿನ ದೇಶೀಯ ಪ್ರೌಢಶಾಲೆಗಳು ಹಿಂದೀ ಭಾಷೆಯನ್ನು ಐಚ್ಛಿಕ ಭಾಷೆಯಾಗಿ ಪ್ರಾರಂಭಿಸಿದ ಮೊದಲ ಶಾಲೆಗಳಾಗಿವೆ. ಪ್ರಸಕ್ತ ಶತಮಾನದ ಮೂರನೇಯ ದಶಕದಲ್ಲಿ ಈ ಪ್ರೌಢಶಾಲೆಗಳು ಹಿಂದಿಯನ್ನು ನಾಲ್ಕನೇಯ ಮತ್ತು ಐದನೇಯ ತರಗತಿಗಳಲ್ಲಿ ಪ್ರಾರಂಭಿಸಿದವು. ನಂತರ ಅದನ್ನು ಒಂದು ಅಧಿಕ ಅಥವಾ ಐಚ್ಛಿಕ ಭಾಷೆಯನ್ನಾಗಿ ವಿದ್ಯಾಭ್ಯಾಸ ಮಾಡಲು ಅನುಮತಿ ನೀಡಲಾಯಿತು.

ದೇಶಕ್ಕೆ ಸ್ವಾತಂತ್ರ್ಯ ದೊರೆತ ಮೇಲೆ ಹಿಂದೀ ಪ್ರಚಾರ ಕಾರ್ಯಕ್ಕೆ ಒಂದು ನಿಖರವಾದ ವ್ಯವಹಾರ ಚಾತುರ್ಯತೆ ನೀಡಲಾಯಿತು. ತ್ರಿಭಾಷಾ ಸೂತ್ರಕ್ಕೆ ಕರ್ನಾಟಕ ಸರ್ಕಾರ ದೃಢ ನಿಷ್ಠೆಯನ್ನು ನೀಡಿದೆ. ನಮ್ಮ ದೇಶದ ರಾಜ್ಯಗಳಲ್ಲಿ ಹಿಂದಿಯನ್ನು ಪ್ರೌಢಶಾಲೆಗಳಲ್ಲಿ ಕಡ್ಡಾಯವಾಗಿ ಪರೀಕ್ಷಾರಹಿತ ಭಾಷಾ ವಿಷಯವನ್ನಾಗಿ 1949ರಲ್ಲಿ ಪ್ರಾರಂಭಿಸಿದ ಕೀರ್ತಿ ಮೈಸೂರಿಗೆ ಸಲ್ಲುತ್ತದೆ. ಸಾರ್ವಜನಿಕವಾಗಿ ಹಿಂದೀ ಒಂದು ಅವಶ್ಯ ಭಾಷೆಯಾಗಿರಬೇಕೆಂಬ ಅಭಿಪ್ರಾಯವನ್ನು ಎಲ್ಲಾ ರಾಜಕೀಯ ಪಕ್ಷಗಳು ಒಮ್ಮತದಿಂದ ಸ್ವಾಗತಿಸಿವೆ. ಈ ಶತಮಾನದ ಮೂರನೇಯ ದಶಕದಲ್ಲಿ ಹಿಂದಿಯನ್ನು ಐಚ್ಛಿಕ ಅಥವಾ ಒಂದು ಅಧಿಕ ಭಾಷೆಯನ್ನಾಗಿ ಪ್ರಾರಂಭಿಸಿದಾಗ ಸಂಸ್ಥಾನದ ಹಿಂದೀ ಪ್ರಚಾರ ಸಂಸ್ಥೆಗಳು ವಿವಿಧ ಪ್ರೌಢಶಾಲೆಗಳಿಗೆ ಉಚಿತ ಸೇವೆ ಸಲ್ಲಿಸಲು ಅಪೇಕ್ಷೆ ಪಟ್ಟವು. ಸ್ವಪ್ರೇರಿತವಾಗಿ ಸ್ಥಾಪಿತವಾದ ಹಿಂದೀ ಸಂಸ್ಥೆಗಳು ಹಿಂದಿಯ ಕಾರ್ಯಸಾಧನೆಯಲ್ಲಿ ನಿಷ್ಠೆಯ ಸೇವೆ ಸಲ್ಲಿಸಿದವು. ಹಿಂದಿಯನ್ನು ಹಿಂದೂಸ್ಥಾನದ ಅಧಿಕೃತ ಭಾಷೆಯನ್ನಾಗಿ ರಾಜ್ಯಾಂಗ ರಚನಾ ಸಭೆ ಸ್ವೀಕರಿಸಿದಾಗ ಹಿಂದೀ ಪ್ರಚಾರ ಚಳವಳಿಗೆ ಒಂದು ದೊಡ್ಡ ಪ್ರೋತ್ಸಾಹ ದೊರಕಿತು. ಸ್ವಪ್ರೇರಿತವಾಗಿ ಸ್ಥಾಪಿತವಾದ ಹಿಂದೀ ಸಂಸ್ಥೆಗಳ ವಿವಿಧ ಪರೀಕ್ಷೆಗಳಿಗೆ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗುತ್ತಿದೆ.

ಸ್ವಇಚ್ಛೆಯಿಂದ ಪ್ರಾರಂಭವಾದ ಸಂಸ್ಥೆಗಳು ಹಿಂದೀ ಭಾಷೆಯೇ ಮಾತ್ರವಲ್ಲದೆ ಹಿಂದೀ ಸಾಹಿತ್ಯವನ್ನೂ ಪ್ರಾಥಮಿಕವಾಗಿ ಅಥವಾ ಮಂದವಾಗಿ ಪ್ರಯೋಗಿಸುವ ಪ್ರಸ್ತಾಪ ಮಾಡಿದವು. ಅವುಗಳು ನಡೆಸುತ್ತಿದ್ದ ಉನ್ನತ ಪರೀಕ್ಷೆಗಳು ವಾಸ್ತವಿಕವಾಗಿ ವಿದ್ಯಾರ್ಥಿಗಳು ಹಿಂದೀ ಭಾಷೆಯ ಜ್ಞಾನ ಮತ್ತು ಅದರ ಸಾಹಿತ್ಯವನ್ನು ಎಷ್ಟರಮಟ್ಟಿಗೆ ಪಡೆದಿದ್ದಾರೆ ಎಂಬುದನ್ನು ತಿಳಿಯುವ ಪರೀಕ್ಷೆಗಳಾಗಿದ್ದವು. 1939ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಹಿಂದೀಯನ್ನು ಮಧ್ಯಶ್ರೇಣಿಯ ಕುಶಲ ವಿದ್ಯಾ ತರಗತಿಗಳಲ್ಲಿ ಐಚ್ಛಿಕ ವಿಷಯವಾಗಿ ಪ್ರಾರಂಭಿಸಲಾಯಿತು. ಅನಂತರ ಪದವಿ ಪಡೆಯುವ ತರಗತಿ

ಗಳಲ್ಲಿ ಹಿಂದಿಯನ್ನು ಒಂದು ಐಚ್ಛಿಕ ವಿಷಯವಾಗಿ ಅಥವಾ ದ್ವಿತೀಯ ಭಾಷೆಯನ್ನಾಗಿ ಆರಂಭಿಸಲಾಯಿತು; ಮತ್ತು 1959 ರಲ್ಲಿ ಎಂ. ಎ. ಪರೀಕ್ಷೆಯಲ್ಲೂ ಹಿಂದಿಯ ಗಲಿಕೆಯನ್ನು ಪ್ರಾರಂಭಿಸಲಾಯಿತು. ಮೈಸೂರು, ಕರ್ನಾಟಕ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳು ಸ್ನಾತಕೋತ್ತರ ಹಿಂದೀ ವಿಭಾಗಗಳನ್ನೂ ಪಡೆದವು.

ಪ್ರೇಮ್‌ಚಂದ್, ಕಿಷನ್‌ಚಂದ್, ಇಖ್ಬಾಲ್ ಮತ್ತು ಇನ್ನಿತರ ಹಿಂದೀ ಮತ್ತು ಉರ್ದು ಸಾಹಿತಿಗಳ ಕೃತಿಗಳನ್ನು ಕನ್ನಡದಲ್ಲಿ ಭಾಷಾಂತರಿಸಲಾಯಿತು. ಮೀರಾ, ತುಲಸೀದಾಸ್ ಮತ್ತು ಕಬೀರರಂತಹ ಹಿಂದೀ ಸಂತ ಕವಿಗಳನ್ನು ಕನ್ನಡ ಓದುಗರಿಗೆ ಪರಿಚಯ ಮಾಡಿಕೊಡಲಾಯಿತು.

## ಕರ್ನಾಟಕದಲ್ಲಿ ಮರಾಠಿ ಭಾಷೆ

ಕರ್ನಾಟಕದಲ್ಲಿ ಮರಾಠಿ ಭಾಷೆ (ಮತ್ತು ಸಾಹಿತ್ಯ) ಅನೇಕ ದೃಷ್ಟಿಯಿಂದ ವಿಚಾರಣೀಯ ವಿಷಯವಾಗಿದೆ. ಶಕೆ 905ನೇಯ ಅಂದರೆ ಕ್ರಿ. ಶ. 983ನೇಯ ಶ್ರವಣಬೆಳಗೊಳದ ಶಿಲಾಶಾಸನದಿಂದಲೇ ಕರ್ನಾಟಕದಲ್ಲಿಯ ಮರಾಠಿಯ ಪ್ರಾಚೀನತೆಯನ್ನು ಗುರುತಿಸಲಾಗಿದೆ. ಈ ಶಿಲಾಲಿಪಿಯು ಗೋಮ್ಮಟೇಶ್ವರನ ಪಾದಗಳ ಬಳಿ ಇದೆ. "ಶ್ರೀ ಚಾವುಂಡರಾಜೆ ಕರವಿಯಲೆ" ಮತ್ತು "ಶ್ರೀ ಗಂಗರಾಜೆ ಸುತ್ತಾಲೆ ಕರವಿಯಲೆ" ಎಂಬ ವಾಕ್ಯಗಳು ಅದರಲ್ಲಿವೆ; ಚಾವುಂಡರಾಯ ಪುರಾಣದ ಗ್ರಂಥಕರ್ತ ಹಾಗೂ ಗಂಗರ ಸಚಿವನಾದ ಚಾವುಂಡರಾಯನು ಈ ಮರಾಠಿ ವಾಕ್ಯಗಳನ್ನು ಅಲ್ಲಿ ಬರೆಯಿಸಲು ಕಾರಣನಾಗಿರುತ್ತಾನೆ.

ಕನ್ನಡವು ಆಗಲೇ ಸಾಹಿತ್ಯ ಸಂಪತ್ತನ್ನು ಹೊಂದಿದ್ದಾಗ ಜೈನ ಮಹಾರಾಷ್ಟ್ರಿ ಎಂದು ಜನಪ್ರಿಯವಾಗಿದ್ದ ಮಹಾರಾಷ್ಟ್ರಿ ಪ್ರಾಕೃತವು ಆಗಿನ್ನೂ ರೂಪು ತಳೆಯುತ್ತಿತ್ತು. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಜೈನ ಮಹಾರಾಷ್ಟ್ರಿಯು ಪ್ರೋತ್ಸಾಹ ಪಡೆಯಿತು. ಲೀಲಾವಯಿ (ಸುಮಾರು ಕ್ರಿ. ಶ. 800) ಯನ್ನು ಬರೆದ ಕವಿ ಕೌಹಲನು ತನ್ನ ಭಾಷೆಯು 'ಮರಾಹ್ಮಾ ದೇಶಿ ಭಾಷಾ' ಎಂಬುದಾಗಿ ಹೇಳಿಕೊಂಡಿದ್ದು, ಅವನು ಮಹಾರಾಷ್ಟ್ರ ದೇಶವನ್ನು ಬಹು ವಿವರವಾಗಿ ವರ್ಣಿಸಿರುತ್ತಾನೆ. ದೇಸಿ ಅಥವಾ ಪ್ರಾಕೃತದ ಶಬ್ದಗಳು ಹಾಗೂ ನುಡಿಗಟ್ಟುಗಳು ಜೈನ ಮಹಾರಾಷ್ಟ್ರಿ ಮತ್ತು ಕನ್ನಡಗಳಲ್ಲಿ ಒಂದೇ ಆಗಿರುತ್ತವೆ. ಇದು ಅತ್ಯಂತ ಮಹತ್ವವಾದುದು; ಏಕೆಂದರೆ ನಿಜವಾದ ಕನ್ನಡದ ಕೇಂದ್ರಗಳಾಗಿದ್ದ ಪುಲಿಗೆರೆ, ಮಾನ್ಯಖೇಟ ಮತ್ತು ಕಲ್ಯಾಣಗಳಲ್ಲಿ ಮರಾಠಿಯ ಪ್ರಯೋಗ ನಡೆಯುತ್ತಲಿತ್ತು. ಹತ್ತನೇಯ ಮತ್ತು ಹನ್ನೊಂದನೇಯ ಶತಮಾನಗಳಲ್ಲಿ ಕರ್ನಾಟಕದಲ್ಲಿ ಎಲ್ಲಿಯಾದರೂ ಮರಾಠಿ ಸಾಹಿತ್ಯ ಕೃತಿಯೊಂದು ರಚಿತವಾದುದರ ಬಗ್ಗೆ ಇದುವರೆಗೂ ಯಾವ ಆಧಾರಗಳೂ ದೊರಕಿಲ್ಲ. ಆದರೆ ಪಂಪ ಜನ್ನ ಹಾಗೂ ಅಂಡಯ್ಯ ಇವರ ಬರಹಗಳಲ್ಲಿ ಕನ್ನಡ ಸಾಹಿತ್ಯವು ಮರಾಠಿಯೊಂದಿಗೆ ಬಹಳಷ್ಟು ಸಂಬಂಧ ಹೊಂದಿರಬೇಕೆಂಬ ಕುರುಹು ಕಂಡುಬಂದಿವೆ. ಜನ್ನನ 'ಅನಂತನಾಥ ಪುರಾಣ' (ಕ್ರಿ. ಶ. 1210) ದಲ್ಲಿ "ಉಠಿ ಉಠಿ ಮಗ ಬೈಸ್ ಜಾತು ಹಳು" ಎಂಬ ಮರಾಠಿ ವಾಕ್ಯವೊಂದು ಇದೆ.

ಮರಾಠಿ ಮತ್ತು ಕನ್ನಡಗಳು ಶತಮಾನಗಳವರೆಗೆ ಒಂದಕ್ಕೊಂದು ಸಾಮಿಪ್ಯ ಪಡೆದಿದ್ದವು. ಇವೆರಡೂ ಭಾಷೆಗಳ ಹಾಗೂ ಇವೆರಡೂ ಭಾಷೆ ಮಾತನಾಡುವ ಜನರ ಸಮೀಪ ಬಾಂಧವ್ಯಕ್ಕೆ ಅನೇಕ ಕಾರಣಗಳೂ ಇದ್ದವು. ಭೌಗೋಲಿಕ, ಸಾಂಸ್ಕೃತಿಕ, ಸಮಾಜ ಶಾಸ್ತ್ರದ ಮತ್ತು ಧಾರ್ಮಿಕ ಬಂಧನಗಳೇ ಅವೆರಡರ ಸಂಬಂಧ, ಸಾಮೀಪ್ಯಕ್ಕೆ ಕಾರಣವಾಗಿರುತ್ತವೆ. ನಾಥ ಸಂಪ್ರದಾಯ, ಜೈನ ಧರ್ಮ, ಶರಣ ಸಾಹಿತ್ಯ ಹಾಗೂ ವಾರಕರಿ ಪಂಥದಂಥ ಸಾಹಿತ್ಯಿಕ ಮತ್ತು ತತ್ವಶಾಸ್ತ್ರದ ಚಟುವಟಿಕೆ ಮುಂತಾದವುಗಳು ಅವುಗಳ ತೀರ ಸಾಮಿಪ್ಯಕ್ಕೆ ನೆರವಾದವು. ಎರಡೂ ಭಾಷೆಗಳಲ್ಲಿ ಪರಸ್ಪರ ಕೊಳು-ಕೊಡುಗೆಗಳು ಮತ್ತು ಪ್ರಭಾವಗಳನ್ನು ಕಾಣಬಹುದು.

ಕರ್ನಾಟಕದಲ್ಲಿ ಮಾತನಾಡುವ ಮರಾಠಿಯ ಭಾಷಾ ಶಾಸ್ತ್ರೀಯ ವೈಲಕ್ಷಣ್ಯಗಳು ಉಲ್ಲೇಖನೀಯವಾಗಿವೆ. ಬಹಳಷ್ಟು ಕನ್ನಡ ಶಬ್ದಗಳು ಹಾಗೂ ಕನ್ನಡ ಪಡೆನುಡಿಗಳನ್ನು ಉಪಯೋಗಿಸುವುದು ಮುಖ್ಯ ವೈಶಿಷ್ಟ್ಯವಾಗಿವೆ. ಅಡಕಿತ್ತ ಎಂಬ ಮರಾಠಿ ಶಬ್ದವನ್ನು ತೆಗೆದುಕೊಂಡರೆ, ಈ ಶಬ್ದವು ಅಡಕಿ ಎಂಬ ಕನ್ನಡ ನಾಮಪದದಿಂದ ಮತ್ತು ಕಿತ್ತುವುದು ಎಂಬ ಕ್ರಿಯಾಪದದಿಂದ ಬಂದಿದೆ. ಈಗಲೂ ಪ್ರಚಲಿತವಿರುವ ಮರಾಠಿ ನಾಣ್ಣುಡಿಯೊಂದು ಹೀಗೆ ಇದೆ—'ಕರಾಯಲಾ ಗೇಲೊ ಏಕ್, ಝಾಲ ಭಲತೇಚ್'; ಇದಕ್ಕೆ ಸರಿಸಮಾನವಾದ ಕನ್ನಡ ನಾಣ್ಣುಡಿಯು ಶೂನ್ಯ ಸಂಪಾದನೆ ಗ್ರಂಥದಲ್ಲಿ ಕಂಡುಬಂದಿದ್ದು, ಅದು 'ಒಂದು ಮಾಡಹೋದಲ್ಲಿ ಮತ್ತೊಂದಾಯಿತ್ತೆಂಬ' ಎಂಬುದಾಗಿ ಇದೆ. ಪಾರಿಭಾಷಿಕ ಅರ್ಥವನ್ನು ಕೊಡುವ ಆರೋಗಣ, ಅವಸ್ಥಾ ಎಂಬ ಸಾಮಾನ್ಯ ಪದಗಳು ಗಮನಿಸುವಂತಹವು. ಸಾಮಾನ್ಯ ಬಳಕೆಯಲ್ಲಿ ಆರೋಗಿಸು ಎಂದರೆ ಊಟ ಮಾಡು, ಆರೋಗಣ ಎಂದರೆ ಊಟ ಅಥವಾ ಸವಿಯೂಟ ಎಂದರ್ಥವಾಗುವುದು; ಆದರೆ ಪಾರಿಭಾಷಿಕ ಅರ್ಥದಲ್ಲಿ ದೇವರು ಅಥವಾ ವಿಶೇಷವಾಗಿ ಸಾಧುಸಂತರು ಸವಿಯೂಟ ಮಾಡುವುದಕ್ಕೆ ಅದು ಸಂಬಂಧಿಸಿದುದಾಗಿದೆ. ಶೂನ್ಯ ಸಂಪಾದನೆಯಲ್ಲಿ 'ಪ್ರಭುದೇವರ ಆರೋಗಣೆ' ಎಂದು ಹೆಸರಿಸುವ ಅಧ್ಯಾಯವೊಂದಿದೆ. ಮಹಾನುಭಾವ ಸಾಹಿತ್ಯದಲ್ಲಿ ಆರೋಗಣ ಎಂಬ ಶಬ್ದವನ್ನು ವಿಶಿಷ್ಟವಾದ ಈ ಅರ್ಥದಲ್ಲಿಯೇ ಉಪಯೋಗಿಸಲಾಗಿದೆ.

ಬಸವೇಶ್ವರ ಮತ್ತು ಜ್ಞಾನದೇವರಿಬ್ಬರೂ ಅವಸ್ಥಾ ಎಂಬ ಶಬ್ದವನ್ನು ಸಾಧುಸಂತರಿಗೆ ಉಂಟಾದ 'ಅಗಲಿಕೆಯ ದುಃಖ' ಎಂಬ ಅರ್ಥದಲ್ಲಿಯೇ ಪ್ರಯೋಗಿಸಿರುವರು.

ಕರ್ನಾಟಕದಲ್ಲಿಯ ಮರಾಠಿಯಲ್ಲಿ ಕೆಲವು ಭಾಷಾಶಾಸ್ತ್ರದ ವೈಚಿತ್ರ್ಯಗಳಿದ್ದು, ತಾಲವ್ಯದ 'ಚ' ಬದಲಾಗಿ ಚ್ಯಟ್ನಿ, ಚ್ಯಪಾತಿ ಶಬ್ದಗಳಲ್ಲಿ ಬರುವ 'ದಂತ-ತಾಲವ್ಯ' ವನ್ನು, ಭಲೆ (ಬಲೆ), ಭಾಂಗರ (ಬಂಗಾರ), ಧಡ್ಡ (ದಡ್ಡ), ಖಾಂಬ (ಕಂಬ) ಈ ಶಬ್ದಗಳಲ್ಲಿ ಬರುವ ಮಹಾಪ್ರಾಣೋಚ್ಚಾರಣೆಯನ್ನು ಗಮನಿಸಬಹುದು. ಬೆಟ್ಟದ ನೆಲ್ಲಿಯ ಕಾಯಿ, ಸಮುದ್ರದೊಳಗಣ ಉಪ್ಪು—ಡೊಂಗರಾಚೆ ಆವಳೆ, ಸಮುದ್ರಕಾಟಾಚೆ ಮೀಠ್— ಇಂಥ ಹಲವು ಸಾಮಾನ್ಯ ಪದಗುಚ್ಛಗಳು ಮರಾಠಿ ಹಾಗೂ ಕನ್ನಡಗಳಿಗೆ ಇರುವ ಮಹತ್ವವಾದ ಹೋಲಿಕೆಯನ್ನು ವ್ಯಕ್ತ ಮಾಡುವವು.

ಕನ್ನಡದಲ್ಲಿರುವ 'ಅವರು' ಎಂಬುದು ಕರ್ನಾಟಕದಲ್ಲಿಯ ಮರಾಠಿಯ ಮೇಲೆ ಉಂಟುಮಾಡಿದ ಪ್ರಭಾವವು ಕುತೂಹಲಕಾರಿಯಾಗಿದೆ. ಅದು ಸರ್ವನಾಮವಾಗಿದ್ದರೂ, ಗೌರವಾರ್ಥದಲ್ಲಿ ಅದನ್ನು ಉಪಯೋಗಿಸಿದಾಗ ಪ್ರತ್ಯಯವಾಗುವುದು. ಕನ್ನಡದಲ್ಲಿ ಹೇಳುವ 'ದೇಶಪಾಂಡೆ ಅವರು ಬಂದರು' ಎಂಬುದನ್ನು ಸಹಜವಾಗಿ ಮರಾಠಿಯಲ್ಲಿ 'ದೇಶಪಾಂಡೆ ತೇ ಆಲೆ' ಎಂದೂ, ಮತ್ತು 'ದೇಶಪಾಂಡೆ ಅವರಿಗೆ ಹೇಳಿದೆ' ಎಂಬುದನ್ನು 'ದೇಶಪಾಂಡೆ ತ್ಯಾನಾ ಸಾಂಗಿತ್ಲೆ' ಎಂದೂ ಅನುವಾದಿಸಲಾಗುತ್ತಿದೆ.

ಕರ್ನಾಟಕದಲ್ಲಿ ಮರಾಠಾ ಆಡಳಿತ ಬರುವುದಕ್ಕಿಂತ ಮೊದಲು ವಿಜಾಪುರ, ಮೈಸೂರುಗಳು ಮುಸಲ್ಮಾನ್ ಆಡಳಿತಗಾರರು ಹಾಗೂ ಕರ್ನಾಟಕದಲ್ಲಿಯ ಸಣ್ಣ ಜಹಗೀರುಗಳಲ್ಲಿಯ ಆಡಳಿತಗಾರರು ಮರಾಠಿ ಭಾಷೆಗೆ ಮತ್ತು ಮೋಡಿ ಲಿಪಿಗೆ ವಿಶೇಷವಾದ ಸ್ಥಾನವನ್ನು ಕೊಟ್ಟಿದ್ದರು. ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ಮೋಡಿ ಲಿಪಿಯು 19ನೇಯ ಶತಮಾನದ ಕೊನೆಯವರೆಗೂ ಇದ್ದಿತು. ಈ ಲಿಪಿಯು ಕನ್ನಡ ಲಿಪಿಯನ್ನೇ ಹೋಲುತ್ತದೆ. ಮರಾಠರ ಆಳ್ವಿಕೆಯಲ್ಲಿ ಕನ್ನಡ ಹಾಗೂ ಮರಾಠಿಗಳು ಹೆಚ್ಚು ಸಾಮೀಪ್ಯ ಪಡೆದು, ಬಹಳಷ್ಟು ಪರಸ್ಪರ ಪ್ರಭಾವ ಬೀರಿದವು. ಕರ್ನಾಟಕದಲ್ಲಿಯ ಮರಾಠಿಯಲ್ಲಿ ಪ್ರಕಟವಾದ ಮಹತ್ವದ ಸಾಹಿತ್ಯ ಕೃತಿಯ ಕಾಲವು 17ನೇಯ ಶತಮಾನದಷ್ಟು ಹಿಂದಿನದು. ಗೋಕಾಕದ ಸಮೀಪವಿರುವ ಮೂಡಲಗಿಯಲ್ಲಿ ಸ್ವಾಮಿಗಳ ಸಂಪ್ರದಾಯವೊಂದು ಇದ್ದು, ಪ್ರಥಮ ಮರಾಠಿ ಕವಿಯಾದ ಮುಕುಂದರಾಜನ ಪಂಥಕ್ಕೆ ಅವರು ಸಂಬಂಧಿಸಿರುತ್ತಾರೆ. ಮೂಡಲಗಿಯ ಈ ಸ್ವಾಮಿಗಳು ಹಳೇ ಮರಾಠೀ ಕಾವ್ಯಕ್ಕೆ ವಿಶೇಷವಾದ ಸೇವೆ ಸಲ್ಲಿಸಿರುವರು. 19ನೇಯ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ತನ್ನ ಹಾಗೂ ತನ್ನ ಜನರ ಭಾಷೆಯೆಂದು ಮರಾಠಿಗೆ ಪ್ರೋತ್ಸಾಹನೆ ನೀಡಿರುತ್ತಾರೆ. ಸ್ವತಃ ಅರಸರೇ ಚದುರಂಗದಾಟವನ್ನು ಕುರಿತು ಸಾಂಖ್ಯ ರತ್ನಕೋಶ ಎಂಬ ಕೃತಿಯನ್ನು ಮರಾಠಿಯಲ್ಲಿ ರಚಿಸಿರುತ್ತಾರೆ. ಅದು 1846ರಲ್ಲಿ ರಚನೆಯಾಗಿದ್ದು, 1852ರಲ್ಲಿ ಮೈಸೂರಲ್ಲಿ ರಾಜ್ಯದ ಕಲ್ಲಚ್ಚಿನ ಮುದ್ರಣಾಲಯದಲ್ಲಿ ಮುದ್ರಣಗೊಂಡಿದೆ. ಬ್ರಿಟಿಷರ ರಾಜ್ಯಾಡಳಿತ ಬಂದ ಮೇಲೆ, ರಾಜಕಾರಣ, ಶಿಕ್ಷಣ, ಸಾಹಿತ್ಯ ಹಾಗೂ ಇನ್ನಿತರ ಲಲಿತಕಲೆಗಳಲ್ಲಿ ಕರ್ನಾಟಕಕ್ಕೂ ಮಹಾರಾಷ್ಟ್ರಕ್ಕೂ ಇದ್ದ ಅನೇಕ ಕ್ಷೇತ್ರಗಳಲ್ಲಿಯ ಸಂಬಂಧಗಳಿಂದ ಮರಾಠಿಯು ಕರ್ನಾಟಕದಲ್ಲಿ ಮಹತ್ವದ ಪಾತ್ರ ವಹಿಸುವಂತಾಯಿತು. ರಾಜಕೀಯ ಧುರೀಣರಾದ ಗೋಖಲೆ ಹಾಗೂ ಟಿಳಕರನ್ನು ಕರ್ನಾಟಕ ಜನತೆ ತಮ್ಮವರೆಂದೇ ಪ್ರೀತಿಸಿ ಗೌರವಿಸಿತು. ಕೆಲವೇ ದಿನಗಳ ಹಿಂದೆಯೂ ಕೇಸರಿ (ಲೋಕಮಾನ್ಯ ಟಿಳಕ ಪ್ರಾರಂಭಿಸಿದ ಪತ್ರಿಕೆ) ಯನ್ನು ಓದುವ ಭಕ್ತರು ಕರ್ನಾಟಕದ ಹಳ್ಳಿಗಳಲ್ಲಿಯೂ ಸಹ ಇದ್ದರು. ಕರ್ನಾಟಕದಲ್ಲಿ ಮರಾಠಿ ನಾಟಕಗಳು ಅತ್ಯಂತ ಜನಪ್ರಿಯವಾಗಿದ್ದವು; ಬಾಲಗಂಧರ್ವರಂಥ ರಂಗ ಕಲಾವಿದರನ್ನು ಜನತೆ ಬಹುವಾಗಿ ಮೆಚ್ಚಿಕೊಂಡಿತ್ತು. ಹರಿ ನಾರಾಯಣ ಆಪ್ಟೆಯವರ ಐತಿಹಾಸಿಕ ಕಾದಂಬರಿಗಳನ್ನು ಗಳಗನಾಥರು ಕನ್ನಡದಲ್ಲಿ ಅನುವಾದಿಸಿದ್ದರಿಂದ, ಮರಾಠಿ ಸಾಹಿತ್ಯವು ಭಾಷಾಂತರದ ರೂಪದಲ್ಲಿ ಹೆಚ್ಚು ಪ್ರಚಲಿತವಾಗತೊಡಗಿತ್ತು. ವಿಶೇಷತಃ ಪುಣೆಯಲ್ಲಿ ಶಿಕ್ಷಣವನ್ನು ಪಡೆದ ವಿದ್ಯಾವಂತ ಜನಾಂಗವು ಉತ್ತರ ಕರ್ನಾಟಕದಲ್ಲಿ ಮರಾಠಿ ಭಾಷೆ ಹಾಗೂ ಸಾಹಿತ್ಯಗಳ ಬೆಳವಣಿಗೆಗೆ ಕಾರಣವಾಗಿದ್ದಿತು. ಇಂದಿನ ಕಾಲದಲ್ಲಿಯೂ ಸಾನೇ ಗುರೂಜಿ, ಫಡಕೆ, ಖಾಂಡೇಕರ್, ಸಾವರಕರ್ ಮತ್ತು ರಣಜಿತ್ ದೇಸಾಯಿ ಇವರ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. ಬಹಳಷ್ಟು ಆಧುನಿಕ ಮರಾಠಿ ನಾಟಕಗಳನ್ನು ಕನ್ನಡಕ್ಕೂ, ಕನ್ನಡ ನಾಟಕಗಳನ್ನು ಮರಾಠಿಯಲ್ಲಿಯೂ ಭಾಷಾಂತರಿಸಲಾಗಿದೆ. ಕನ್ನಡಿಗರಿಗೆ ತೆಂಡೂಲಕರ್‌ರ ನಾಟಕಗಳು ಗೊತ್ತಿದ್ದರೆ, ಮರಾಠಿ ಪ್ರೇಕ್ಷಕರಿಗೆ ಗಿರೀಶ್ ಕಾರ್ನಾಡರವು ತಿಳಿದಿವೆ.

## ಪ್ರಾಕೃತ ಭಾಷೆಗಳು ಮತ್ತು ಕರ್ನಾಟಕ

ಇಂಡೋ-ಆರ್ಯನ್ ಭಾಷೆಯ ಸುಮಾರು 3,500 ವರ್ಷಗಳಷ್ಟು ಸುದೀರ್ಘ ಇತಿಹಾಸದಲ್ಲಿ ಪ್ರಾಕೃತ ಭಾಷೆಗಳು ಭಾರತದ ಸಾಂಸ್ಕೃತಿಕ ಜೀವನಕ್ಕೆ ತಮ್ಮ ಸೇವೆ ಸಲ್ಲಿಸಿ ಮಹತ್ವದ ಪಾತ್ರ ವಹಿಸಿವೆ; ಇದು ಅವುಗಳ ಸಾಹಿತ್ಯದಲ್ಲಿ ಪ್ರತಿಬಿಂಬಿತವಾಗಿದ್ದು, ಮಹಾವೀರ ಹಾಗೂ ಬುದ್ಧನ ಕಾಲದಿಂದ (ಕ್ರಿ.ಪೂ. 600) ಕ್ರಿ.ಶ. 11ನೇಯ ಶತಮಾನದವರೆಗೆ—ಆಧುನಿಕ

ಇಂಡೋ-ಆರ್ಯನ್ ಭಾಷೆಗಳ ಸಾಹಿತ್ಯ ಪ್ರಾರಂಭವಾಗುವವರೆಗೆ —ಸುಮಾರು 1700 ವರ್ಷಗಳಷ್ಟು ಸುದೀರ್ಘ ಕಾಲವನ್ನಾವರಿಸಿದೆ. ಕರ್ನಾಟಕವೂ ಸಹ ಸಹಜವಾಗಿಯೇ ಪ್ರಾಕೃತ ಭಾಷೆಗಳಿಂದ ಪ್ರಭಾವಿತವಾಗಿದೆ. ಪ್ರಾಕೃತವನ್ನು ಮಾತನಾಡುವ ಜನರು ಕರ್ನಾಟಕಕ್ಕೆ ಎಂದು ಬಂದರೆಂದು ಹೇಳುವುದು ಕಠಿಣವಾದರೂ ಪ್ರಚಲಿತವಿರುವ ದಕ್ಷಿಣ ಭಾರತದ ಸಂಪ್ರದಾಯದ ಪ್ರಕಾರ ಚಂದ್ರಗುಪ್ತ ಮೌರ್ಯನ ಸಮೇತ ಒಂದನೇಯ ಭದ್ರಬಾಹುವಿನ ಮುಂದಾಳುತ್ವದಲ್ಲಿ ಜೈನ ಸಂಘವೊಂದು ಉತ್ತರದಿಂದ ದಕ್ಷಿಣಕ್ಕೆ ಬಂದುದರ ಬಗ್ಗೆ ಹಾಗೂ ಅದು ಕಳ್ಬಪ್ಪು (ಶ್ರವಣಬೆಳಗೊಳ) ವಿನಲ್ಲಿ ಕೇಂದ್ರವೊಂದನ್ನು ಸ್ಥಾಪಿಸಿದುದರ ಬಗ್ಗೆ ಕಥೆ ಇದೆ. ಮಾಗಧೀಯ ಪ್ರಾಕೃತ ಉಪಭಾಷೆಗಳನ್ನಾಡುತ್ತಿದ್ದ ಜೈನ ಮತ್ತು ಬುದ್ಧ ಸಂನ್ಯಾಸಿಗಳು ಬೇರೆ ಬೇರೆ ಮಾರ್ಗಗಳಿಂದ ಈ ಪ್ರದೇಶಕ್ಕೆ ಬಂದಿರುವ ಸಾಧ್ಯತೆಗಳಿವೆ.

ಚಿತ್ರದುರ್ಗ, ರಾಯಚೂರು ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿಯ ವಿವಿಧ ಸ್ಥಳಗಳಲ್ಲಿ ಕಂಡುಬಂದ ಅಶೋಕನ ಶಿಲಾಲೇಖಗಳಿಂದ ಕರ್ನಾಟಕ ಪ್ರದೇಶದಲ್ಲಿಯು ಪ್ರಾಕೃತ ಪ್ರಭಾವದ ಬಗ್ಗೆ ಮೊದಲನೇಯ ಐತಿಹಾಸಿಕ ದಾಖಲೆ ದೊರೆಯುವುದು. ಈ ಶಿಲಾಲೇಖಗಳು ಅಶೋಕನ ಲಘು ಶಿಲಾಶಾಸನಗಳ ಗುಂಪಿಗೆ ಸೇರಿದವುಗಳಾಗಿವೆ. ಕರ್ನಾಟಕದ ಭಾಗಗಳು ಮೌರ್ಯ ಸಾಮ್ರಾಜ್ಯದಲ್ಲಿದ್ದವು, ಹಾಗೂ ಅವುಗಳ ಆಡಳಿತ ಭಾಷೆ ಪ್ರಾಕೃತವಾಗಿತ್ತೆಂಬುದು ಇದರಿಂದ ತಿಳಿಯುತ್ತದೆ.

ಇದರ ತರುವಾಯ, ಕ್ರಿ.ಶ. ಒಂದನೇಯ ಶತಮಾನ ಹಾಗೂ ಕ್ರಿ. ಶ. ನಾಲ್ಕನೇಯ ಶತಮಾನಗಳ ನಡುವಿನ ಅವಧಿಯವುಗಳಾದ ದಾಕ್ಷಿಣಾತ್ಯ ವೈಶಿಷ್ಟ್ಯಗಳಿಂದ ಕೂಡಿದ ಬ್ರಾಹ್ಮೀ ಲಿಪಿಯ ಅಸಂಖ್ಯಾತ ಪ್ರಾಕೃತ ಶಾಸನಗಳು, ಶಾತವಾಹನರು, ಚುಟುಗಳು, ಪಲ್ಲವರು ಆಳಿದ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಮತ್ತು ಕದಂಬ ರಾಜ್ಯದ ಭಾಗದಲ್ಲಿ ಕಂಡುಬಂದಿವೆ. ಈ ಎಲ್ಲಾ ಅಂಶಗಳು ಕದಂಬ ರಾಜವಂಶದ ಕೆಲಕಾಲದಲ್ಲಿ ಮತ್ತು ಅದಕ್ಕೂ ಹಿಂದೆ ಪ್ರಾಕೃತವು ಆಡಳಿತ ಭಾಷೆಯಾಗಿತ್ತೆಂಬುದನ್ನು ತೋರಿಸುತ್ತವೆ. ಹೀಗೆ ಅಶೋಕನ ಕಾಲವಾದ ಕ್ರಿ. ಪೂ. 300 ಮತ್ತು ಸುಮಾರು ಕ್ರಿ. ಶ. 350 ಇವುಗಳ ಮಧ್ಯದ ಅವಧಿಯನ್ನು ಕರ್ನಾಟಕ ಶಾಸನಗಳ 'ಪ್ರಾಕೃತ ಯುಗ' ಎಂದು ಕರೆಯಬಹುದು. ಇದಲ್ಲದೆ, ಕರ್ನಾಟಕದ ರಾಜಕಾರಣ, ಧರ್ಮ ಹಾಗೂ ಸಾಮಾಜಿಕ ಇತಿಹಾಸ ಇವುಗಳಿಗೆ ಈ ಶಾಸನಗಳು ಮಹತ್ವದ ಮೂಲ ಆಕರಗಳಾಗಿದ್ದು ಅದೇ ಹೊಸದಾಗಿ ರೂಪುಗೊಳ್ಳುತ್ತಿದ್ದ ಕನ್ನಡ ಲಿಪಿ ಹಾಗೂ ಶಾಸನಗಳಿಗೆ ಇವು ಮಾದರಿಗಳಾಗಿವೆ.

ಕ್ರಿಸ್ತಶಕದ ಮೊದಲಿನ ಹಲವು ಶತಮಾನಗಳಲ್ಲಿ ಕರ್ನಾಟಕದ ಹಲವು ಪ್ರದೇಶಗಳನ್ನು ಆಳುತ್ತಿದ್ದ ಕೆಲವು ರಾಜವಂಶಗಳಲ್ಲಿ ಪ್ರಾಕೃತವು ಆಡಳಿತ ಭಾಷೆಯ ಸ್ಥಾನವನ್ನು ಪಡೆದಾಗ, ಹಲವು ಪ್ರತಿಭಾವಂತ ಬರಹಗಾರರು ಪ್ರಾಕೃತದಲ್ಲಿ ಸಾಹಿತ್ಯ ಕೃತಿಗಳನ್ನು ರಚಿಸುವಂತಾಯಿತು. ಪ್ರಾಕೃತದಲ್ಲಿರುವ ಷಟ್ಖಂಡಾಗಮದ ಮೂಲ ಸೂತ್ರಗಳಲ್ಲಿ 177 ಸತ್ಪರುವನಗಳು ಬನವಾಸಿಯಲ್ಲಿ ಪುಷ್ಪದಂತನಿಂದ (ಸುಮಾರು ಕ್ರಿ. ಶ. 100) ಬರೆಯಲ್ಪಟ್ಟವೆಯೆಂದು ಹೇಳಲಾಗಿದೆ. ಪುಷ್ಪದಂತನು ಎಲ್ಲಿಯವನೆಂಬುದು ಸ್ಪಷ್ಟವಿಲ್ಲ. ಅನಂತರ ಕರ್ನಾಟಕದವನೇ ಎಂದು ನಿಶ್ಚಿತವಾದ ಕುಂದಕುಂದನು (ಸುಮಾರು ಕ್ರಿ. ಶ. 100-200) ಪ್ರಾಕೃತದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದು, ಇವೇ ಮುಂದೆ ದಿಗಂಬರರಿಗೆ ಮಹತ್ವಪೂರ್ಣವಾದ ಪೂರ್ವ-ವಿಧಿಗಳ ಭಾಗಗಳಾಗಿ ಬಂದಿವೆ. 1) ಪಂಚಸ್ತಿಕಾಯ, 2) ಪ್ರವಚನ ಸಾರ ಮತ್ತು 3) ಸಮಯಸಾರ ಇವು ಅವನ ಬೃಹತ್ ಕೃತಿಗಳಾಗಿವೆ. ನಿಯಮಸಾರ, ಪ್ರಾಕೃತ ಭಕ್ತಿಗಳು, ಎಂಟು ಪಹುಡಗಳು, ಬರಸ್ ಅನುವೆಖ್ಖ ಮುಂತಾದವುಗಳು ಅವನ ಇನ್ನಿತರ ಕೃತಿಗಳಾಗಿವೆ. ಷಟ್ಖಂಡಾಗಮದ ಮೂಲ ಸೂತ್ರಗಳನ್ನು ಕುರಿತು ಪರಿಕಮ್ಮ ಎಂಬ ಟೀಕಾ ಗ್ರಂಥವನ್ನು ಅವನು ಬರೆದಿರುವುದಾಗಿ ಹೇಳಲಾಗಿದೆ. ಕುಂದಕುಂದನ ಎಲ್ಲಾ ಕೃತಿಗಳೂ ಪ್ರಾಕೃತದಲ್ಲಿ ಇರುವುದು ಗಮನಾರ್ಹವಾಗಿದೆ. ಶಿವಾರ್ಯನ (ಸುಮಾರು ಕ್ರಿ. ಶ. 100) ಮೂಲಾರಾಧನ ಹಾಗೂ ವಟ್ಟಕೆರನ (ಸುಮಾರು ಕ್ರಿ. ಶ. 100-200) ಮೂಲಾಚಾರ ಇವುಗಳನ್ನು ಪ್ರತ್ಯೇಕವಾಗಿ ಮತ್ತು ಒಟ್ಟುಗೂಡಿ ವಡ್ಡಾರಾಧನೆಯಲ್ಲಿ ಹಾಗೂ ಚಾವುಂಡರಾಯ ಪುರಾಣದಲ್ಲಿ ಉಪಯೋಗಿಸಲಾಗಿದ್ದು, ಇವೆರಡೂ ಕರ್ನಾಟಕದಲ್ಲಿಯೇ ರಚಿತವಾಗಿರಬೇಕೆಂದು ತೋರಿಬರುತ್ತದೆ. ವಟ್ಟಕೆರನ ಹೆಸರು ಬೆಟಗೇರಿಗೆ (ಧಾರವಾಡ ಜಿಲ್ಲೆ) ಸಂಬಂಧಿಸಿದಂತೆ ಬಂದಿರಬಹುದು. ಶಿವಾರ್ಯನು ಹೊರಗಿನವನಾಗಿರಬಹುದು. ಜೈನ ವಿಶ್ವಶಾಸ್ತ್ರದ ಬಗ್ಗೆ ಇರುವ ಸರ್ವನಂದಿಯ (ಸುಮಾರು ಕ್ರಿ. ಶ. 500) ಲೋಕ ವಿಭಾಗ ಹಾಗೂ ಯತಿವೃಷಭನ (ಸುಮಾರು ಕ್ರಿ. ಶ. 600) ತಿಲೋಯಪನ್ನತ್ತಿ ಇವೆರಡೂ ಕೃತಿಗಳು ಕರ್ನಾಟಕದಲ್ಲಿಯೇ ರಚಿತವಾಗಿರಬೇಕು. ಅನಂತರ ಷಟ್ಖಂಡಾಗಮದ ಮೇಲಿನ ಶ್ರೇಷ್ಠ ಟೀಕಾ ಗ್ರಂಥಗಳ ಹಲವು ಭಾಗಗಳು ಪ್ರಾಕೃತದಲ್ಲಿ ಪ್ರಕಟಗೊಂಡವು. ವೀರಸೇನನಿಂದ (ಕ್ರಿ. ಶ. 816) ರಚಿತವಾದ 72,000 ಶ್ಲೋಕಗಳ ಧವಳ ಟೀಕಾಗ್ರಂಥವು ಶೇಕಡಾ 75 ಭಾಗ ಪ್ರಾಕೃತದಲ್ಲಿ ಇರುವುದನ್ನು ನಾವು ಗಮನಿಸಬೇಕು. ಈ ಸಂದರ್ಭದಲ್ಲಿ ಷಟ್ಖಂಡಾಗಮದ, ಆದರೂ ಈಗಲೂ ಸಿಗದೇ ಕಳೆದುಹೋದ ತುಂಬಲೂರಾಚಾರ್ಯನ (ಸುಮಾರು ಕ್ರಿ. ಶ. 650) ಚೂಡಾಮಣಿ ಹಾಗೂ ಶ್ಯಾಮಕುಂದಾಚಾರ್ಯನ (ಸುಮಾರು ಕ್ರಿ. ಶ. 650) ಪದ್ಧತಿ ಇವುಗಳಲ್ಲಿನ ಪ್ರಾಕೃತ ಭಾಗಗಳನ್ನು ನಾವು ನಿರ್ಲಕ್ಷಿಸುವುದು ಶಕ್ಯವಿಲ್ಲ. ಪ್ರಾಚೀನ ಪ್ರಾಕೃತ ಕೃತಿ, ಧವಳದಂಥ ಟೀಕಾ ಕೃತಿ ಮುಂತಾದವುಗಳ ಅಧ್ಯಯನವು ಕರ್ನಾಟಕದಲ್ಲಿಯ ಜೈನ

ಮುನಿಗಳಿಂದ, ವಿದ್ವಾಂಸರಿಂದ, ಕ್ರಿ. ಶ. 10ನೇಯ ಶತಮಾನದಲ್ಲಿಯೂ ನಡೆದಿದ್ದಿತೆಂದು ತೋರಿಬರುತ್ತದೆ; ಈ ಸಮಯಕ್ಕೆ ಸಿದ್ಧಾಂತ ಚಕ್ರವರ್ತಿಯೆಂದು ಖ್ಯಾತಿ ಪಡೆದ ನೇಮಿಚಂದ್ರನು, ಶ್ರವಣಬೆಳಗೊಳದಲ್ಲಿ ಬಾಹುಬಲಿಯ ಮೂರ್ತಿಯನ್ನು ನಿಲ್ಲಿಸಿದ ತನ್ನ ಶಿಷ್ಯನಾದ ಚಾವುಂಡರಾಯನಿಗಾಗಿ ಧವಲ ಮುಂತಾದವುಗಳ ಸಾರಸಂಗ್ರಹವನ್ನು ಗೊಮ್ಮಟಸಾರ ಎಂಬ ಕೃತಿಯಲ್ಲಿ ಸ್ಥಿರಪಡಿಸಿದನು. ಅವನು ದ್ರವ್ಯಸಂಗ್ರಹವೆಂಬ ಜೈನ ಮತ ತತ್ವಸಿದ್ಧಾಂತಿಗಳ ಕೈಪಿಡಿಯೊಂದನ್ನು ರಚಿಸಿದನು. ಮೂಡಬಿದರೆ ಹಸ್ತಪ್ರತಿ ಸಂಗ್ರಹದ ಗ್ರಂಥಭಂಡಾರದಲ್ಲಿ ಇವನಿಂದಲೇ ರಚಿತವಾದ ತಿಭಂಗಿ, ಪಯಡಿಸಮುಖಿತ್ತನ, ವಿಷಪರುವನ ಮುಂತಾದ ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟ ಪ್ರಾಕೃತ ಕೃತಿಗಳಿವೆ. ಈವರೆಗೆ ಉಲ್ಲೇಖಿಸಿದ ಪ್ರಾಕೃತ ಕೃತಿಗಳು ಹಾಗೂ ಟೀಕಾಕೃತಿಗಳಲ್ಲಿಯ ಪ್ರಾಕೃತ ಭಾಗಗಳು ಇವೆಲ್ಲವೂ ಜೈನ ಶೌರಸೇನಿ ಪ್ರಾಕೃತದಲ್ಲಿ ಇವೆಯೆಂಬುದನ್ನು ಕುತೂಹಲದಿಂದ ಗಮನಿಸುವಂತಿದೆ; ಈ ಸಾಹಿತ್ಯಿಕ ಪ್ರಾಕೃತ ಉಪಭಾಷೆಯಲ್ಲಿ ಸಾಕಷ್ಟು ಅರ್ಧಮಾಗಧಿ ಹಾಗೂ ಮಹಾರಾಷ್ಟ್ರಿ ಲಕ್ಷಣಗಳಿದ್ದರೂ ಅನುಕೂಲತೆಗಾಗಿ ಆರ್. ಪಿಶ್ಚೆಲ್‌ರಿಂದ ಈ ಹೆಸರು ಕೊಡಲ್ಪಟ್ಟಿರುವುದು. ಈ ಶೌರಸೇನಿ ಸಾಹಿತ್ಯವು ಕರ್ನಾಟಕ ಪ್ರದೇಶದಲ್ಲಿದ್ದ ದಿಗಂಬರ ಸಂನ್ಯಾಸಿಗಳಿಂದ ಹಾಗೂ ವಿದ್ವಾಂಸರಿಂದಲೇ ಸಾಕಷ್ಟು ಭಾಗ ರಚಿತವಾಗಿರುವುದು ಮತ್ತೊಂದು ಗಮನಾರ್ಹ ವಿಷಯವಾಗಿದೆ. ಇವುಗಳ ಅನೇಕ ಮೂಲ ಪಠ್ಯಗಳಿಗೆ ಕನ್ನಡ ಟೀಕೆಗಳಿದ್ದು ಅವುಗಳೆಲ್ಲ ಇನ್ನೂ ಹಸ್ತಪ್ರತಿ ರೂಪದಲ್ಲಿಯೇ ಇವೆ. ಇದೂ ಅಲ್ಲದೆ, ಈ ಗ್ರಂಥಕರ್ತರು ಹಾಗೂ ಅವರ ಕೃತಿಗಳು ಸಮಕಾಲೀನ ಮತ್ತು ಅನಂತರದ ಕನ್ನಡ ಸಾಹಿತ್ಯದ ಮೇಲೆ ಬಹಳಷ್ಟು ಪ್ರಭಾವ ಬೀರಿವೆ ಹಾಗೂ ಅದನ್ನು ರೂಪಿಸಿವೆ.

ಕರ್ನಾಟಕದಲ್ಲಿ ತ್ರಿವಿಕ್ರಮನಿಂದ (ಕ್ರಿ. ಶ. 1300) ಬರೆಯಲಾದ ಪ್ರಾಕೃತ ಶಬ್ದಾನುಶಾಸನಂ ಎಂಬ ಪ್ರಾಕೃತ ವ್ಯಾಕರಣವೂ ಇದೆ. ಪ್ರಾಕೃತ ವ್ಯಾಕರಣಗಳನ್ನು ಬರೆದ ದಾಕ್ಷಿಣಾತ್ಯ ಪಂಥದವರಲ್ಲಿ ತ್ರಿವಿಕ್ರಮನು ಆದ್ಯಪ್ರಮುಖನಾಗಿರುತ್ತಾನೆ. ಮೂಲತಃ ಆಂಧ್ರ ಪ್ರದೇಶದವನಾದ ಅವನು ಅನಂತರ ಕರ್ನಾಟಕಕ್ಕೆ ಬಂದಿರುವುದಾಗಿ ತೋರುತ್ತದೆ. ಕರ್ನಾಟಕದಲ್ಲಿ ಮಹಾರಾಷ್ಟ್ರಿ ಪ್ರಾಕೃತ ಕೃತಿ ರಚನೆಯಾದುದು ಇದುವರೆಗೂ ಕಂಡುಬಂದಿಲ್ಲ. ಆದರೆ ಗಾಥಾಸಪ್ತಶತಿಯಲ್ಲಿಯ ಅನೇಕ ಶ್ಲೋಕಗಳನ್ನು ಕರ್ನಾಟಕದ ಕವಿಗಳೇ ಬರೆದಿರುವ ಸಾಧ್ಯತೆಗಳಿವೆ; ಹಲವು ಹಸ್ತಪ್ರತಿಗಳಲ್ಲಿ ಉಲ್ಲೇಖಿಸಲಾಗಿರುವ ಅವರ ಹೆಸರುಗಳ ಆಧಾರದ ಮಾತ್ರದಿಂದಲೇ ಅವರನ್ನು ಗುರುತಿಸಲು ಶಕ್ಯವಿಲ್ಲ. ಗಾಥಾ 4.14ರ ಕವಿ ನರಸಿಂಹ, ಗಾಥಾ 2.59 ಹಾಗೂ 3.20ರ ಕವಿ ಅರಿಕೇಸರಿ ಇವರು ಕರ್ನಾಟಕದವರೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. 'ಗಾದೆ' ಎಂಬ ಕನ್ನಡ ಶಬ್ದವು 'ಗಾಥಾ' ಎಂಬುದರಿಂದ ಬಂದಿದ್ದು, ಅದು ಈಗಲೂ ಪ್ರಚಲಿತವಿದೆ; ಇದು ಪ್ರಾಕೃತ ಗಾಥಾಗಳು ಪ್ರಾಚೀನ ಕಾಲದಲ್ಲಿ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯತೆ ಪಡೆದಿದ್ದವು ಎಂಬುದನ್ನು ಸೂಚಿಸುತ್ತದೆ.

ಪೈಶಾಚಿ ಪ್ರಾಕೃತದಲ್ಲಿಯೂ ಕರ್ನಾಟಕದಿಂದ ಯಾವುದೇ ಕೃತಿ ಪ್ರಕಟಿತವಾದುದು ಕಂಡುಬಂದಿಲ್ಲ. ಏನಿದ್ದರೂ, ಪೈಶಾಚಿ ಬೃಹತ್ಕಥೆಯನ್ನು ಸಂಸ್ಕೃತಕ್ಕೆ ಅನುವಾದಿಸಿದನೆಂದು ಹೇಳಲಾದ ಗಂಗರಾಜನಾದ ದುರ್ವಿನೀತನು ಅದನ್ನು ಕನ್ನಡಕ್ಕೂ ತರ್ಜುಮೆಗೊಳಿಸಿರುವುದು ಸಾಧ್ಯವಿದೆ; ಏಕೆಂದರೆ ನೃಪತುಂಗನು ತನ್ನ 'ಕವಿರಾಜಮಾರ್ಗ'ದಲ್ಲಿ ದುರ್ವಿನೀತನು ಕನ್ನಡದಲ್ಲಿ ಶ್ರೇಷ್ಠ ಗದ್ಯ ಬರಹಗಾರನೆಂದು ತಿಳಿಸಿರುತ್ತಾನೆ. ಪೈಶಾಚಿ ಭಾಷೆ ಮಾತನಾಡುತ್ತಿದ್ದ ಒಳನಾಡಿನ ಹಲವು ಬುಡಕಟ್ಟು ಜನಾಂಗ ಅಥವಾ ದಕ್ಷಿಣ ಭಾರತದ (ಕರ್ನಾಟಕವೂ ಸೇರಿ) ಹಲವು ನಿವಾಸಿಗಳು ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿರುವ ಸಾಧ್ಯತೆ ಇದೆ. ಇದು ರಾಚಮಲ್ಲ, ರಾಚನಾಯಕ ಈ ಮುಂತಾದ ಶಬ್ದಗಳಲ್ಲಿ ಬರುವ ಜ > ಚ ಈ ಮುಂತಾದ ಉದಾಹರಣೆಗಳಲ್ಲಿ ಕಂಡುಬರುವುದು. ಮಾಗಧಿಯಿಂದ ಹೀಗಾಗಲು ಸಾಧ್ಯವಿಲ್ಲದ್ದರಿಂದ, ಇಂಥ ಪ್ರಭಾವವು ಪಾಲಿಯಿಂದಲೂ ಬಂದಿರುವುದು ಶಕ್ಯವಿದೆ.

ಸಾಹಿತ್ಯಿಕ ಪ್ರಾಕೃತದ ಕೊನೆಯ ಹಂತವಾದ ಅಪಭ್ರಂಶವನ್ನು ಅವಲೋಕಿಸುವಾಗ, ಸ್ವಯಂಭು (ಸರಿಸುಮಾರು 9ನೇಯ ಶತಮಾನ) ಮತ್ತು ಪುಷ್ಪದಂತ (ಕ್ರಿ.ಶ. 10ನೇಯ ಶತಮಾನ) ಹೀಗೆ ಇಬ್ಬರು ಶ್ರೇಷ್ಠ ಅಪಭ್ರಂಶ ಕವಿಗಳಿದ್ದು, ಇವರು ತಮ್ಮ ಸಾಹಿತ್ಯಿಕ ಚಟುವಟಿಕೆಗಳ ಅನುಕೂಲತೆಗಾಗಿ ಕರ್ನಾಟಕವನ್ನೇ ಆಯ್ಕೆ ಮಾಡಿಕೊಂಡಿರುತ್ತಾರೆ. ಸ್ವಯಂಭುವಿನ ಪಉಮ ಚರಿಉ ಹಾಗೂ ರಿಥ್ಥ ನೇಮಿಚರಿಉ ಇವು ಅಮೂಲ್ಯವಾದ ಮಹಾ ಕಾವ್ಯಗಳಾಗಿದ್ದು, ಇವುಗಳಲ್ಲಿನ ಸ್ವಯಂಭುಛಂದವು, ಛಂದಶ್ಶಾಸ್ತ್ರದಲ್ಲಿಯೇ ಅಪೂರ್ವವಾದುದು. ಇದಾದ ನಂತರ ರಾಷ್ಟ್ರಕೂಟ ಅರಸನಾದ ಮೂರನೇಯ ಕೃಷ್ಣನ ಆಳ್ವಿಕೆಯಲ್ಲಿ ಭರತ ಹಾಗೂ ನನ್ನ ಇವರ ಕೃಪಾಪೋಷಣೆಯಲ್ಲಿ ಪುಷ್ಪದಂತನು 1) ಮಹಾಪುರಾಣ, 2) ಣಾಯಕುಮಾರಚರಿಉ ಮತ್ತು 3) ಜಸಹರಚರಿಉ ಎಂಬ ಕೃತಿಗಳನ್ನು ರಚಿಸಿರುತ್ತಾನೆ. ಮಹಾಪುರಾಣವು, ಬಹುಬೆಲೆಯುಳ್ಳ ಮಹತ್ವವಾದ ಕೃತಿ. ಇದಲ್ಲದೆ ಕರಕಂಡುಚರಿಉವಿನ ಕವಿಯಾದ ಕನಕಮಾರನು ಶಿಲಾಹಾರರ ಹಳೆಯ ತಗರ, ಈಗಿನ ತೇರ್, ಎಂಬಲ್ಲಿಯ ಜೈನ ಗವಿಗಳನ್ನು ಬಹು ವಿವರವಾಗಿ ವರ್ಣಿಸಿರುವುದರಿಂದ, ಅವನಿಗೆ ಕರ್ನಾಟಕದ ನಿಕಟ ಪರಿಚಯವಿದ್ದಿತೆಂಬುದು ತಿಳಿದುಬರುವುದು. ಅಪಭ್ರಂಶವು ಕನ್ನಡ ಸಾಹಿತ್ಯದ ಮೇಲೆಯೂ ಹಲವು ರೀತಿಯಲ್ಲಿ ಪರಿಣಾಮ ಬೀರಿದೆ. ಕನ್ನಡ ಛಂದೋರೂಪವಾದ ರಘಟ ಅಥವಾ ರಗಳೆಯು ಅಪಭ್ರಂಶದ ಪಜ್ಝಹದಿಯ ಛಂದಸ್ಸಿನಿಂದಲೇ ಬಂದುದಾಗಿದೆ. ಈ ಛಂದಸ್ಸು

ಮೊದಲು ಪಂಪನಲ್ಲಿ ಕಂಡುಬಂದಿದ್ದು, ಅನಂತರ ಅದು ಅನೇಕ ವಿಧ ರೂಪಗಳನ್ನು ತಾಳಿದೆ.

ಕರ್ನಾಟಕದಲ್ಲಿಯ ಸಾಹಿತ್ಯಕ ಪ್ರಾಕೃತಗಳ ಬಗ್ಗೆ ನಮಗೆ ದೊರೆಯುವ ಮಾಹಿತಿ ಇದಿಷ್ಟೇ ಆಗಿದೆ. ಆದರೆ ಪ್ರಾಕೃತ ಮಾತನಾಡುವ ಜನರೊಂದಿಗೆ ಕನ್ನಡ ಮಾತನಾಡುವ ಜನರ ಸಂಬಂಧ ಬಂದುದರಿಂದ, ಪ್ರಾಕೃತದ ಪ್ರಭಾವ ಕನ್ನಡ ಭಾಷೆಯ ಮೇಲೆ ಆಗಿರಲೇಬೇಕು ; ಇದರ ಬಗ್ಗೆ ಮೊದಲಿನ ಆಧಾರಗಳು ಯಾವುವೂ ದೊರಕಿಲ್ಲ. ಪ್ರಾಚೀನ ಶಾಸನಗಳು ಹಾಗೂ ವಡ್ಡಾರಾಧನೆ ಮೊದಲಾದ ಹಲವಾರು ಸಾಹಿತ್ಯ ಕೃತಿಗಳಲ್ಲಿ ಮಾತ್ರ ಭಾಷಾಶಾಸ್ತ್ರೀಯ ಪ್ರಭಾವವು ಉಂಟಾದುದು ತೋರಿಬರುತ್ತದೆ ; ಅವುಗಳಲ್ಲಿ ಅಚ್ಚ ಪ್ರಾಕೃತಿಕ ಕೃತಿ ಹಾಗೂ ಧಮ್ಮ, ಭಗ, ಜಸ, ಪಪ್ಪುನಿಸು, ಪಗುಡ, ಗುಡ್ಡ, ಮುಂತಾದವು ಇಂಥ ಪ್ರಾಕೃತ ಪ್ರಭಾವದ ಪದಗಳು ದೊರೆಯುತ್ತವೆ. ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಅಪಭ್ರಂಶ ಪ್ರಕರಣವು, ಪ್ರಾಕೃತ ವ್ಯಾಕರಣದಲ್ಲಿದ್ದ ಧ್ವನಿಶಾಸ್ತ್ರದ ಭಾಗಶಃ ಯಥಾ ಪ್ರತಿಯೇ ಇರುತ್ತದೆ. ಹೀಗೆ ಪ್ರಾಕೃತದ ನಿಘಂಟುವಿನ ಕಾಣಿಕೆ ಕನ್ನಡಕ್ಕೆ ಸಾಕಷ್ಟು ಇದ್ದು, ಈ ದೃಷ್ಟಿಯಿಂದ ಜೈನರು ಅಪಾರವಾಗಿ ಸೇವೆ ಸಲ್ಲಿಸಿದ್ದಾರೆ.

ಕನ್ನಡವು ಪ್ರಾಕೃತದಿಂದ ಸ್ವೀಕರಿಸಿತೆಂದಷ್ಟೇ ತಿಳಿದುಕೊಳ್ಳಬಾರದು. ವಿಶೇಷತಃ ಮಹಾರಾಷ್ಟ್ರ ಹಾಗೂ ಅಪಭ್ರಂಶಗಳ ಮುಖಾಂತರ ಕನ್ನಡವು ಸರ್ವಸಾಮಾನ್ಯವಾಗಿ ಪ್ರಾಕೃತಕ್ಕೆ ಅನೇಕ ಶಬ್ದಗಳನ್ನು ಕೊಟ್ಟು, ಅದರ ಶಬ್ದಭಂಡಾರವನ್ನು ಹೆಚ್ಚಿಸಿದೆ. ತುಪ್ಪ, ಕೋಣ, ಬೇಲಿ, ಭಂಡಿ, ಗೊಂಜಲ, ಮುಂತಾದ ಶಬ್ದಗಳನ್ನು ಪ್ರಾಕೃತ ನಿಘಂಟುಕಾರರು ಹಾಗೂ ವ್ಯಾಕರಣಕಾರರು ದೇಸಿಯೆಂದು ಪಟ್ಟಿಮಾಡಿದ್ದು, ಅವೆಲ್ಲವೂ ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಾಕೃತವು ಕನ್ನಡದಿಂದ ತೆಗೆದುಕೊಂಡ ಶಬ್ದಗಳವೇ ಆಗಿವೆ. ಇವೆಲ್ಲವೂ ಈ ಭಾಷೆಗಳನ್ನು ಮಾತನಾಡುತ್ತಿದ್ದ ಜನರಲ್ಲಿ ಹಾಗೂ ಬರಹಗಾರರಲ್ಲಿ ಇದ್ದ ಸಹಕಾರ, ಹೊಂದಾಣಿಕೆ ಮತ್ತು ಮೆಚ್ಚುಗೆಯನ್ನು ಸೂಚಿಸುತ್ತವೆ.

ಈಗಿನ ಕರ್ನಾಟಕದ ಹಲವು ವಿದ್ಯಾಲಯಗಳಲ್ಲಿ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಪ್ರಾಕೃತ ಭಾಷೆಗಳನ್ನು, ಅವುಗಳ ಸಾಹಿತ್ಯವನ್ನು ಅಭ್ಯಾಸ ಮಾಡಲಾಗುತ್ತಿದೆ. ಧರ್ಮೋಪದೇಶ ಮಾಡುವಾಗ, ವಿದ್ವತ್ಪೂರ್ಣ ಭಾಷಣ ಮಾಡುವಾಗ ವಿದ್ವಾಂಸರ ಮುಖಾಂತರವಾಗಿಯೂ ಹಲವೊಮ್ಮೆ ಪ್ರಾಕೃತಗಳ ಅವತರಣಿಕೆಗಳು ಕೇಳಬರುತ್ತವೆ.

## ಕರ್ನಾಟಕದಲ್ಲಿ ಸಂಸ್ಕೃತ

ಕರ್ನಾಟಕದಲ್ಲಿ ಸಂಸ್ಕೃತವು ಎಂದಿನಿಂದ ಆರಂಭವಾಯಿತೆಂಬುದನ್ನು ಗುರುತಿಸುವುದು ಕಠಿಣವಿದೆ. ಕನ್ನಡದಲ್ಲಿ ಲಭ್ಯವಿದ್ದ ಉಲ್ಲೇಖಗಳಲ್ಲಿ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಿಲಾಶಾಸನದಲ್ಲಿ ಅನೇಕ ಸಂಸ್ಕೃತ ಪದಗಳಿವೆ. ಅದರ ಮಂಗಳಶ್ಲೋಕವೇ ಸಂಸ್ಕೃತದಲ್ಲಿದೆ. ಕರ್ನಾಟಕದಲ್ಲಿ ಸುಮಾರು ಕ್ರಿ.ಸ್ತ. ಪೂರ್ವ 3ನೇಯ ಶತಮಾನದಿಂದ ಕ್ರಿ.ಶ. 4ನೇಯ ಶತಮಾನದವರೆಗಿನ ಪ್ರಾಚೀನ ಶಾಸನಗಳು ಸಾಮಾನ್ಯವಾಗಿ ಪ್ರಾಕೃತದಲ್ಲಿದ್ದರೂ, ಶಾಂತಿವರ್ಮನ ತಾಳಗುಂದ ಶಿಲಾಶಾಸನವನ್ನು ಸುಪ್ರಸಿದ್ಧ ಸಂಸ್ಕೃತ ಕವಿಯಾದ ಕುಬ್ಜನು ಬರೆದಿದ್ದಾನೆ. ಇದು ಕರ್ನಾಟಕದ ಮೊದಲ ಸಂಸ್ಕೃತ ಶಿಲಾಶಾಸನವಾಗಿದೆ. ಇದರ ನಂತರದ ಮಹತ್ವದ ಸಂಸ್ಕೃತ ಶಾಸನವೆಂದರೆ ರವಿಕೀರ್ತಿಯಿಂದ ರಚಿತವಾದ ಐಹೊಳೆಯ ಪ್ರಶಸ್ತಿ (ಕ್ರಿ.ಶ. 637) ; ಇದರಲ್ಲಿ ಕಾಳಿದಾಸ, ಭಾರವಿ ಅವರ ಹೆಸರುಗಳು ಉಲ್ಲೇಖವಾಗಿವೆ. 5ನೇಯ ಶತಮಾನದಿಂದ ಏಳನೇಯ ಶತಮಾನದವರೆಗಿನ ಸುಮಾರು ಮೂರು ಶತಕಗಳ ಶಿಲಾಶಾಸನಗಳು ಹೆಚ್ಚಾಗಿ ಸಂಸ್ಕೃತದಲ್ಲಿಯೇ ಇವೆ. ಆಮೇಲೆ ಶಿಲಾಶಾಸನಗಳು ಸಂಸ್ಕೃತ ಹಾಗೂ ಕನ್ನಡದಲ್ಲಿದ್ದುದು ಕಂಡುಬರುತ್ತದೆ. ಈ ದ್ವಿಭಾಷೆಯಲ್ಲಿರುವ ಇಂಥ ಶಿಲಾಶಾಸನಗಳು ಹೆಚ್ಚಾಗಿ ಕದಂಬ, ಹೊಯ್ಸಳ, ಗಂಗ ಮತ್ತು ಚಾಳುಕ್ಯರ ಕಾಲಗಳಿಗೆ ಸಂಬಂಧಿಸಿವೆ. ಸಂಸ್ಕೃತ ಶಿಲಾಶಾಸನಗಳಲ್ಲಿಯೂ ಸಹ ದಾನವಾಗಿ ಕೊಟ್ಟ ಭೂಮಿಯ ಸೀಮಾರೇಖೆಗಳನ್ನು ಹಾಗೂ ದಾನದ ಹಲವಾರು ವಿಷಯಗಳನ್ನು ಕನ್ನಡ ಭಾಷೆಯಲ್ಲಿಯೇ ಬರೆದಿರುವುದು ಕಾಣುತ್ತದೆ. ನೃಪತುಂಗನ ಕಾಲದಿಂದ ಮುಂದೆ ಕನ್ನಡ ಶಾಸನಗಳ ಸಂಖ್ಯೆ ಹೆಚ್ಚುತ್ತಾ ಹೋಗಿದೆ. ಆದರೂ ವಿಜಯನಗರದ ಕಾಲದಲ್ಲಿ ಮತ್ತೆ ಸಂಸ್ಕೃತ ಶಾಸನಗಳು ಕಂಡುಬಂದಿವೆ. ಶಾಸನಗಳ ಸಾಹಿತ್ಯವು ಶೈಲಿ ಹಾಗೂ ಶಬ್ದಕೋಶಗಳಲ್ಲಿ ಸಂಸ್ಕೃತ ಭಾಷೆಯನ್ನು ಸರ್ವ ರೀತಿಯಲ್ಲಿಯೂ ಹೊಂದಿಸಿಕೊಂಡಿದ್ದು, ಹಲವು ಶಿಲಾಲೇಖಗಳು ಸಂಪೂರ್ಣವಾಗಿ ಸಂಸ್ಕೃತ ಭಾಷೆಯಲ್ಲಿಯೇ ಇವೆ.

ನೃಪತುಂಗನು ರಚಿಸಿದ ಕವಿರಾಜಮಾರ್ಗವು ಪ್ರಕಟವಾಗುವ ಮುನ್ನ ಕನ್ನಡ ಸಾಹಿತ್ಯ ಕೃತಿಗಳ ಮೇಲೆ ಉಂಟಾದ ಸಂಸ್ಕೃತ ಭಾಷೆಯ ಪ್ರಭಾವವನ್ನು ಸರಿಯಾಗಿ ನಿಷ್ಕರ್ಶಿಸುವುದು ಕಷ್ಟದಾಯಕವಾಗಿದೆ. ಕರ್ನಾಟಕದ ಪ್ರಾಚೀನ ಜೈನ ಗ್ರಂಥಕರ್ತರು ಪ್ರಾಕೃತದಲ್ಲಿಯೇ ಬರೆಯಲು ಮೊದಲು ಮಾಡಿದರು. ಸ್ವಲ್ಪ ಕಾಲಾನಂತರ ಅವರು ಸಂಸ್ಕೃತದಲ್ಲಿ ಬರೆದರು. ಸುಮಾರು 9ನೇಯ ಶತಮಾನದ ಸರಿಸುಮಾರಿನಲ್ಲಿ ಅವರು ಕನ್ನಡದಲ್ಲಿ ಬರೆಯಲು ಪ್ರಾರಂಭಿಸಿದರು. ಜೈನ ಮಹಾ ಕವಿಗಳು ಕನ್ನಡದಲ್ಲಿ ಬರವಣಿಗೆ ಪ್ರಾರಂಭಿಸುವ ಮುನ್ನ, ಕರ್ನಾಟಕದ ಜೈನ ವಿದ್ವಾಂಸರು ಬರೆದ ಪ್ರಾಕೃತ ಹಾಗೂ ಸಂಸ್ಕೃತದ ಶ್ರೇಷ್ಠ

ಕೃತಿಗಳು ಸಾಕಷ್ಟು ದೊರಕಿವೆ. ಭಾರತದ ಇನ್ನುಳಿದ ಭಾಗಗಳಲ್ಲಿಯ ವೈದಿಕ ಧರ್ಮದ ವಿದ್ವಾಂಸರು ಜ್ಞಾನದ ವಿವಿಧ ಕ್ಷೇತ್ರಗಳಲ್ಲಿ ಸಂಸ್ಕೃತ ಸಾಹಿತ್ಯವನ್ನು ಅಧಿಕಗೊಳಿಸಿದಂತೆ ಕರ್ನಾಟಕದಲ್ಲಿಯೂ ಚಟುವಟಿಕೆ ಸಾಗಿದ್ದವು. ಈ ವಿದ್ವಾಂಸರು ಕನ್ನಡದಲ್ಲಿ ಮಾತ್ರ ಬಹು ತಡವಾಗಿ ಬರೆಯಲಾರಂಭಿಸಿದರು. ಆ ವೇಳೆಗೆ ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಹೊಂದಿಕೆಯಾದ ಸಾಹಿತ್ಯ ಶೈಲಿಯೊಂದು ಹೆಣೆದುಕೊಂಡು ರೂಪಗೊಂಡಿದ್ದಿತು. ಕನ್ನಡ ಭಾಷೆಯಲ್ಲಿ ಇಂದಿಗೂ ಸಂಸ್ಕೃತ ಪದಗಳು ಸಾಹಿತ್ಯ ರೂಪದಲ್ಲಿ ಹಾಗೂ ಆಡುಮಾತಿನಲ್ಲಿ ಹಾಸುಹೊಕ್ಕಾಗಿ ಬಿಟ್ಟಿವೆ. ಸಂಸ್ಕೃತ ಹಾಗೂ ಕನ್ನಡಗಳ ಮಿಶ್ರಣವು ಅಲ್ಪ ಸ್ವಲ್ಪ ವ್ಯತ್ಯಾಸದಲ್ಲಿದೆ. ಮೇಲಿಂದ ಮೇಲೆ ಸಮರ್ಥ ವಿದ್ವಾಂಸರು ಶಬ್ದಕೋಶ, ವ್ಯಾಕರಣದ ರೀತಿಗಳು, ಕಾವ್ಯ ಪ್ರಯೋಗಗಳು ಹಾಗೂ ಸಾಹಿತ್ಯಿಕ ಶೈಲಿ ಇವುಗಳಲ್ಲಿ ಸಂಸ್ಕೃತದ ಭಾಗ ಎಷ್ಟಿದೆಯೆಂಬುದನ್ನು ವಿವರವಾಗಿ ವಿವೇಚಿಸಿದ್ದಾರೆ. ಕನ್ನಡವು ದ್ರಾವಿಡ ಭಾಷಾ ಗುಂಪಿಗೆ ಸೇರಿದ ಭಾಷೆಯಾಗಿದ್ದರೆ, ಪ್ರಾಕೃತ ಹಾಗೂ ಸಂಸ್ಕೃತಗಳು ಇಂಡೋ-ಆರ್ಯನ್ ಭಾಷಾ ಗುಂಪಿಗೆ ಸೇರಿದವುಗಳಾಗಿವೆ. ಈ ಭಾಷೆಗಳ ರಚನೆಯಲ್ಲಿ ಮತ್ತು ರೀತಿಯಲ್ಲಿ ಮೂಲತಃ ಹಲವಾರು ವ್ಯತ್ಯಾಸಗಳಿವೆ. ಆದರೂ ಪ್ರಾಕೃತ ಹಾಗೂ ಸಂಸ್ಕೃತಗಳ ಸುದೀರ್ಘವಾದ ಸಂಬಂಧದಿಂದ ಕನ್ನಡವು, ಶಬ್ದಕೋಶ, ವ್ಯಾಕರಣ ಹಾಗೂ ಸಾಹಿತ್ಯಿಕ ಅಭಿವ್ಯಕ್ತಿಗಳಲ್ಲಿ ಎರಡೂ ಭಾಷೆಗಳಲ್ಲಿಯ ಗಮನಾರ್ಹವಾದ ಹೊಂದಾಣಿಕೆಯನ್ನು ನಿರೂಪಿಸಿದೆ. ಮೊದಲ ಹೆಜ್ಜೆ ಕನ್ನಡ ಮತ್ತು ಪ್ರಾಕೃತ ಭಾಷೆಗಳದ್ದಾದರೆ, ಎರಡನೆಯದು ಕನ್ನಡ ಮತ್ತು ಸಂಸ್ಕೃತಗಳದ್ದಾಗಿದೆ. ಭದ್ರಬಾಹು ಕರ್ನಾಟಕಕ್ಕೆ ಆಗಮಿಸಿದ ಕಾಲದಿಂದ ಜೈನ ವಿದ್ವಾಂಸರು ಸಂಸ್ಕೃತದಲ್ಲಿ ಅನಂತರ ಕನ್ನಡದಲ್ಲಿ ಬರೆಯುವವರೆಗೆ, ಕರ್ನಾಟಕದಲ್ಲಿ ಪ್ರಾಕೃತವು ಧಾರ್ಮಿಕ ಉದ್ದೇಶಗಳಿಗಾಗಿ, ಹಲವು ಮಟ್ಟಿಗೆ ಸಾಹಿತ್ಯ ಕೃತಿಗಳ ರಚನೆಗಾಗಿ ವಿದ್ವಾಂಸರ ಭಾಷೆಯೇ ಆಗಿದ್ದಿತು. ಕನ್ನಡದಲ್ಲಿರುವ ತದ್ಭವ ಶಬ್ದಗಳು ಬಹುತರವಾಗಿ ಪ್ರಾಕೃತದಿಂದಲೇ ತೆಗೆದುಕೊಂಡವಾಗಿವೆ. ಆದರೆ ತತ್ಸಮಾನ ಶಬ್ದಗಳು ಮಾತ್ರ ಆಮೇಲೆ ಹೆಚ್ಚಾಗುತ್ತ ಹೋದವು. ಸಂಸ್ಕೃತ ಪದಗಳನ್ನು ಬಿಟ್ಟು ಕನ್ನಡದಲ್ಲಿ ಬರೆಯುವ ವಡ್ಡಾರಾಧನೆಯ ಸಾಧನೆಯು ತತ್ಸಮ ಶಬ್ದಗಳನ್ನು ತ್ಯಜಿಸಿ, ತದ್ಭವಗಳನ್ನು ಉಪಯೋಗಿಸುವ ಪ್ರಯತ್ನವೇ ಆಗಿದ್ದಿತು. ಹಲವಾರು ಶತಕಗಳಿಂದ ಪ್ರಾಕೃತದಿಂದ ಶಬ್ದಗಳನ್ನು ಕನ್ನಡಕ್ಕೆ ಅಂಗೀಕರಿಸುವುದು ಸಾಮಾನ್ಯ ಸಂಗತಿಯಾಗಿತ್ತು. ಹಾಗೂ, ವಡ್ಡಾರಾಧನೆಯನ್ನು ಬರೆಯುವ ಕಾಲಕ್ಕೆ ಕನ್ನಡ ಭಾಷೆಯಲ್ಲಿ ಆ ಪದಗಳು ಒಂದಾಗಿ ಒಗ್ಗಿಹೋಗಿದ್ದವು. ಹೀಗಾಗಿ ಜೈನ ಗ್ರಂಥಕರ್ತರು ಮೊದಲು ಸಂಸ್ಕೃತದಲ್ಲಿ, ಅನಂತರ ಕನ್ನಡದಲ್ಲಿ ಬರೆಯಲು ಹೊರಟಾಗ, ನೇರವಾಗಿ, ಸಂಸ್ಕೃತದಿಂದ ತತ್ಸಮ ಶಬ್ದಗಳನ್ನು ತೆಗೆದುಕೊಳ್ಳುವುದು ಅಧಿಕವಾಯಿತು. ಬಹುಶಃ ಈ ರೀತಿಗೆ ವಿರೋಧವು ಕಂಡುಬಂದಿರಬೇಕು ಹಾಗೂ ಪ್ರಾಕೃತದಿಂದ ತೆಗೆದುಕೊಂಡ ತದ್ಭವ ಶಬ್ದಗಳಿಗೇನೆ ಅಂಟಿಕೊಳ್ಳುವ ಪ್ರಯತ್ನವು ನಡೆದಿರಬೇಕು. ಆದರೂ, ಸಂಸ್ಕೃತದಿಂದ ನೇರವಾಗಿ ತತ್ಸಮ ಪದಗಳನ್ನು ಸ್ವೀಕರಿಸುವ ಪ್ರವೃತ್ತಿ ಬರಬರುತ್ತ ಹೆಚ್ಚಾದ್ದರಿಂದ, ಮುಂದಿನ ಶತಕಗಳಲ್ಲಿ ಪ್ರಾಕೃತಕ್ಕಿಂತಲೂ ನಿಕಟವಾದ ಸಂಸ್ಕೃತದ ಸಂಬಂಧವು ಕನ್ನಡ ಭಾಷೆಗೆ ಅಧಿಕವಾಗಿ ಆಯಿತು.

ಉಪಲಬ್ಧವಿರುವ ಪ್ರಥಮ ಕನ್ನಡ ವ್ಯಾಕರಣವಾದ ಭಾಷಾಭೂಷಣವು ಸಂಸ್ಕೃತದಲ್ಲಿ ಇದೆ. ಆದರೂ ಅನಂತರದ ವ್ಯಾಕರಣ ಕೃತಿಯಾದ ಶಬ್ದಮಣಿದರ್ಪಣ ಕನ್ನಡದಲ್ಲಿ ರಚಿತವಾಗಿರುತ್ತದೆ. ಇದರ ತರುವಾಯ ಕನ್ನಡ ವ್ಯಾಕರಣವನ್ನು ವಿಶದವಾಗಿ ಹಾಗೂ ವಿದ್ವತ್ಪೂರ್ಣವಾಗಿ ನಿರೂಪಿಸಿದ ಶಬ್ದಾನುಶಾಸನವು ಸಂಸ್ಕೃತ ರಚನೆಯಾಗಿರುತ್ತದೆ. ಈ ಕನ್ನಡದ ವ್ಯಾಕರಣ ಗ್ರಂಥಗಳಲ್ಲಿ ಕನ್ನಡ ಭಾಷೆಯನ್ನು ವಿಶ್ಲೇಷಿಸುವ ವಿಧಾನವು, ಸಂಸ್ಕೃತ ವ್ಯಾಕರಣ ಗ್ರಂಥಗಳು ಅನುಸರಿಸಿದ ವಿಧಾನಕ್ಕೆ ನಿಕಟವಾಗಿ ಹೋಲುತ್ತದೆ. ನಾಮ, ಧಾತು, ಕ್ರಿಯಾ, ಕಾರಕ, ವಿಭಕ್ತಿ ಮುಂತಾದ ಪರಿಭಾಷೆಗಳು ಒಂದೇಯಾಗಿವೆ. ರಚನೆಯ ವಿಶ್ಲೇಷಣೆ, ಪದವಿನ್ಯಾಸ, ಶಬ್ದಾರ್ಥ, ನಿರ್ವಚನ ಶಾಸ್ತ್ರ ಮುಂತಾದವು ವಿವರವಾಗಿ ಸಂಸ್ಕೃತದಲ್ಲಿ ಇದ್ದ ರೀತಿಯಲ್ಲಿಯೇ ಬಂದಿವೆ. ಆದರೂ ಹಲವೆಡೆ ಪಾಣಿನಿಯ ಪಂಥದ ಜೊತೆಗೆ ಶಕಟಾಯನ ಹಾಗೂ ಜೈನೇಂದ್ರರ ವ್ಯಾಕರಣ ಪಂಥಗಳೂ ಪ್ರಭಾವ ಬೀರಿರುವುದು ತೋರಿಬರುತ್ತದೆ. ಹೀಗೆ ಕನ್ನಡದಲ್ಲಿ ಬರೆದ ವ್ಯಾಕರಣಗಳು ಸಂಸ್ಕೃತೀಕರಣಗೊಂಡ ಕನ್ನಡ ವ್ಯಾಕರಣಗಳೇ ಆಗಿವೆ. ಕನ್ನಡ ವೈಯಾಕರಣಿಗಳ ದೃಷ್ಟಿಯಲ್ಲಿ ಪ್ರಾಕೃತ ಹಾಗೂ ಸಂಸ್ಕೃತಗಳಿಂದ ಬಹುವಾಗಿ ಪ್ರಭಾವಿತವಾದ, ಆದರೂ ಮೂಲತಃ ಇವೆರಡೂ ಭಾಷೆಗಳಿಂದ ವಿಭಿನ್ನವಾದ ಭಾಷೆಯೊಂದು ಇದ್ದಿತು. ಇಷ್ಟೇ ಅಲ್ಲದೆ, ಸಂಸ್ಕೃತದ ಚೆನ್ನಾಗಿ ಅಭಿವೃದ್ಧಿ ಹೊಂದಿದ ವ್ಯಾಕರಣ ಪದ್ಧತಿಯೂ ಅವರಿಗೆ ಸಾಧನವಾಗಿ ಸಿಕ್ಕಿತ್ತು. ಈ ಪದ್ಧತಿಯಲ್ಲಿ ಭಾಷೆಯ ಮೂಲ ತತ್ವಗಳನ್ನೇ ವಿಶ್ಲೇಷಿಸಲಾಗಿದ್ದು, ಅವು ಯಾವುದೇ ಭಾಷೆಯ ವ್ಯಾಸಂಗಕ್ಕೆ ಅನ್ವಯಿಸುವಂತೆ ಇದ್ದವು; ಆದರೂ ಅಭಿವೃದ್ಧಿ ಹೊಂದಿದ ಸಂಸ್ಕೃತದಂಥ ಭಾಷೆಗೆ ಅನ್ವಯವಾಗುವಂತೆ ವ್ಯಾಕರಣದ ವಿಶೇಷ ನಿಯಮಗಳನ್ನು ರಚಿಸಲಾಗಿದ್ದಿತು. ಹೀಗೆ ಯೋಗ್ಯವಾದ ಬದಲಾವಣೆಗಳನ್ನು ಮಾಡಲು ಉಪಯೋಗಿಸಬಹುದಾದಂಥ ಸಂಸ್ಕೃತ ವ್ಯಾಕರಣದ ರೂಪದಲ್ಲಿರುವ ಸಾಧನೆಯು ಹಾಗೂ ಈ ಸಾಧನೆಗೆ ಹೊಂದಿಕೊಂಡು ಅಗಲೇ ಸಂಕೀರ್ಣವಾಗಿ ಬೆಳೆದುಕೊಂಡ ಕನ್ನಡ ಭಾಷೆಯಂಥ ಒಂದು ಭಾಷೆಯೂ ಕನ್ನಡ ವೈಯಾಕರಣಿಗಳಿಗೆ ಗೊತ್ತಿತ್ತು. ಏನೇ ಇದ್ದರೂ, ಅಲ್ಲಲ್ಲಿ ಹಲವಾರು ವ್ಯಾಕರಣದ ವೈಶಿಷ್ಟ್ಯಗಳನ್ನು ಕನ್ನಡದಲ್ಲಿ ಮಿಶ್ರಣ ಮಾಡಿದರೂ, ಕನ್ನಡ ಭಾಷೆಯ ವಿಶಿಷ್ಟವಾದ ಲಕ್ಷಣಗಳನ್ನು ಕೈಬಿಡದೆ, ಅವರು ಭಾಷಾ ಶಾಸ್ತ್ರದ ಬಗೆಗಿನ ಅಸಾಧಾರಣ ಅಂತರ್ದೃಷ್ಟಿಯನ್ನು ವ್ಯಕ್ತ ಮಾಡಿದ್ದಾರೆ.

ಪ್ರಾಕೃತ ಹಾಗೂ ಸಂಸ್ಕೃತಗಳಿಗೆ ಉಪಯೋಗಿಸುತ್ತಿರುವ ದೇವನಾಗರಿ ಲಿಪಿಯಿಂದ ಸಂಪೂರ್ಣ ವಿಭಿನ್ನವಾದ ಲಿಪಿಯು ಕನ್ನಡಕ್ಕೆ ಇತ್ತು. ಆದರೆ ಕನ್ನಡ ಲಿಪಿಯೂ ಸಹ, ದೇವನಾಗರಿ ಲಿಪಿಗೂ ಜನಕವಾದ ಮೂಲ ಬ್ರಾಹ್ಮೀಲಿಪಿಯಿಂದಲೇ ಬಂದುದಾಗಿದೆ. ವಿವಿಧ ಭಾರತೀಯ ಲಿಪಿಯ ವಿಕಾಸವು ಉತ್ತರ ಬ್ರಾಹ್ಮೀ ಮತ್ತು ದಕ್ಷಿಣ ಬ್ರಾಹ್ಮೀ ಎಂಬ ಬ್ರಾಹ್ಮೀ ಲಿಪಿಯ ಎರಡು ಶಾಖೆಗಳಿಂದ ಆಗಿದೆಯೆಂಬುದನ್ನು ಗುರುತಿಸಬಹುದು; ಕನ್ನಡ ಹಾಗೂ ತೆಲುಗು ಲಿಪಿಗಳು ದಕ್ಷಿಣ ಬ್ರಾಹ್ಮೀ ಶಾಖೆಗೆ ಸೇರಿದವುಗಳಾಗಿವೆ. ಕನ್ನಡ ಲಿಪಿಯಲ್ಲಿರುವ ಶಾಸನಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದರೆ, ಮೂರು ಶತಕಗಳಿಗೊಮ್ಮೆ ಕನ್ನಡ ಲಿಪಿಯಲ್ಲಿ ಗಮನಿಸಬಹುದಾದ ಬದಲಾವಣೆಗಳು ಆಗಿರುವುದು ಕಂಡುಬರುತ್ತದೆ. ಸದ್ಯದ ಕನ್ನಡದ ಲಿಪಿ ಮತ್ತು ದೇವನಾಗರಿ ಲಿಪಿ ಇವುಗಳ ಮೂಲ ಸ್ವರೂಪದ ಬದಲಾವಣೆ ಅನೇಕ ವರ್ಷಗಳ ಹಿಂದೆಯೇ ಸಂಭವಿಸಿದಂತೆ ತೋರುತ್ತದೆ. ಆದರೆ ಇಲ್ಲಿ ಒಂದು ವಿಷಯವನ್ನು ಮಾತ್ರ ನಾವು ಗಮನಿಸಬೇಕು. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗಳು ಕರ್ನಾಟಕದಲ್ಲಿ ಅದರಲ್ಲಿಯೂ ವಿಶೇಷ ವಾಗಿ ದಕ್ಷಿಣ ಕರ್ನಾಟಕದಲ್ಲಿ ನಂದಿನಾಗರಿ ಅಥವಾ ದೇವನಾಗರಿ ಯಲ್ಲಿರದೆ ಹಳೆಗನ್ನಡ (ಅಥವಾ ಹಳೆ ತೆಲುಗು), ಗ್ರಂಥ ಹಾಗೂ ತಿಗಳ ಲಿಪಿಯಲ್ಲಿರುತ್ತವೆ. ಮುದ್ರಣ ಕಾರ್ಯ ಪ್ರಾರಂಭವಾದ ಮೇಲೆ ಕರ್ನಾಟಕದಲ್ಲಿ ದೇವನಾಗರಿ ಲಿಪಿಯು ಹೆಚ್ಚು ಪ್ರಚಲಿತ ವಾಯಿತು. ಮುದ್ರಣದ ಪ್ರಥಮ ಹಂತದಲ್ಲಿ ಅನೇಕ ಸಂಸ್ಕೃತ ಕೃತಿಗಳು ಕರ್ನಾಟಕದಲ್ಲಿ ಕನ್ನಡದ ಲಿಪಿಯಲ್ಲಿ ಇಲ್ಲವೆ ತೆಲುಗು ಲಿಪಿಯಲ್ಲಿ ಮುದ್ರಣಗೊಂಡಿವೆ. ಇದೇ ಪರಿಸ್ಥಿತಿಯು ಸಂಸ್ಕೃತ ಕೃತಿಗಳು ಪ್ರಕಟಗೊಂಡ ಭಾರತದ ಇನ್ನಿತರ ಪ್ರದೇಶಗಳಲ್ಲಿಯೂ ಇತ್ತು. ಬೇರೆ ಬೇರೆ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಪ್ರಾದೇಶಿಕ ಭಾಷೆಗಳಲ್ಲಿಯೇ ಪ್ರಕಟವಾದ ಸಂಸ್ಕೃತ ಗ್ರಂಥಗಳು ದೊರೆಯು ತ್ತವೆ. ದೇವನಾಗರಿಯ ಉಪಯೋಗವು ಇತ್ತೀಚೆಗೆ ಮಾತ್ರ ಹೆಚ್ಚುತ್ತಾ ಬಂದಿದೆ.

ಕಾವ್ಯ ಮೀಮಾಂಸೆ ಹಾಗೂ ಛಂದಶ್ಶಾಸ್ತ್ರ ವಿಭಾಗದಲ್ಲೂ ಕನ್ನಡವು ಸಂಸ್ಕೃತದಿಂದ ಬಹಳಷ್ಟು ಎರವಲು ಪಡೆದಿದೆ. ಕನ್ನಡದಲ್ಲಿ ಉಪಲಬ್ಧವಿರುವ ಕಾವ್ಯ ಮೀಮಾಂಸೆಯ ಪ್ರಥಮ ಕೃತಿಯಾದ ಕವಿರಾಜಮಾರ್ಗದಲ್ಲಿ ದಂಡಿಯ ಕಾವ್ಯಾದರ್ಶವನ್ನು ಅನುಸರಿಸಲಾಗಿದೆ. ಉದಿಯಾದಿತ್ಯನ ಉದಯಾದಿತ್ಯಾಲಂಕಾರ, ನಾಗವರ್ಮನ ಕಾವ್ಯಾಲಂಕಾರ, ಕವಿಕಾಮನ ಮಾಧವಾ ಲಂಕಾರ, ರಸವಿವೇಕ ಮತ್ತು ಶೃಂಗಾರ ರತ್ನಾಕರ, ಸಾಳ್ವನ ರಸರತ್ನಾಕರ, ತಿಮ್ಮನ ನವರಸಾಲಂಕಾರ, ತಿರುಮಲಾರ್ಯನ ಅಪ್ರತಿಮ ವೀರಚರಿತ, ಲಿಂಗರಾಜನ ನರಪತಿ ವಿಜಯ ಈ ಮೊದಲಾದ ಅನೇಕ ಕನ್ನಡದ ಅಲಂಕಾರ ಕೃತಿಗಳಲ್ಲಿ, ಸಂಸ್ಕೃತ ಅಲಂಕಾರ ಗ್ರಂಥಗಳನ್ನೇ ಅನುಸರಿಸಲಾಗಿದೆ. ಸಂಸ್ಕೃತ ಕಾವ್ಯದ ಬೆಳವಣಿಗೆಯಲ್ಲಿ ವ್ಯಕ್ತವಾದ ಕಾವ್ಯದ ವಿವಿಧ ಸಿದ್ಧಾಂತಗಳು ಕನ್ನಡ ಕವಿಗಳಿಂದಲೂ ಸ್ವೀಕೃತವಾಗಿದ್ದು, ಕನ್ನಡ ಕಾವ್ಯ ಗಳಲ್ಲಿಯ ಉದಾಹರಣೆಗಳನ್ನು ಕೊಡುತ್ತಾ ಆ ಸಿದ್ಧಾಂತಗಳನ್ನೇ ಕನ್ನಡ ಬರಹಗಾರರು ಕೊಟ್ಟಿರುವರು. ಕನ್ನಡದಲ್ಲಿ ಬರೆಯುವು ದೆಂದರೆ ವಿಷಯದ ಬಗ್ಗೆ ಬೇರೆ ಭಾಷೆಯಲ್ಲಿ ಬರೆಯುವುದಾಗಿದ್ದು ಸಂಸ್ಕೃತದಲ್ಲಿ ಇದ್ದ ವಿಷಯವನ್ನೇ ಅಂಗೀಕರಿಸುವುದಾಗಿತ್ತು. ಸಂಸ್ಕೃತ ಅಲಂಕಾರ ಕೃತಿಗಳ ಕರ್ತೃಗಳೂ ಪ್ರಾಕೃತದಿಂದ ಉದಾಹರಣೆಗಳನ್ನು ಕೊಟ್ಟಿರುವರೆಂಬುದನ್ನು ನಾವು ಗಮನಿಸ ಬೇಕು. ಕಾವ್ಯವು ಸಂಸ್ಕೃತದಲ್ಲಿರಬಹುದು, ಪ್ರಾಕೃತದಲ್ಲಿರ ಬಹುದು ಅಥವಾ ಕನ್ನಡದಲ್ಲಿರಬಹುದು. ಆದರೆ ಕಾವ್ಯ ಮೀಮಾಂಸೆಯು ಮಾತ್ರ ಎಲ್ಲದಕ್ಕೂ ಒಂದೇ ರೀತಿಯದು. ಸಂಸ್ಕೃತದಲ್ಲಿ ಆ ಮೊದಲೇ ಪ್ರಕಟವಾದ ಕಾವ್ಯ ಮೀಮಾಂಸೆಯ ಸಿದ್ಧಾಂತಗಳನ್ನು ಕನ್ನಡ ವಿದ್ವಾಂಸರು ಬಲ್ಲವರಾಗಿದ್ದರು. ಸಂಸ್ಕೃತದಲ್ಲಿ ಇದ್ದುದನ್ನು ಕನ್ನಡದಲ್ಲಿ ಬರೆದು, ಅವುಗಳಿಗೆ ಕನ್ನಡ ಸಾಹಿತ್ಯದಲ್ಲಿಯ ನಿದರ್ಶನಗಳನ್ನು ಕೊಡುವುದು ಮಾತ್ರ ಅವರ ಕೆಲಸವಾಗಿತ್ತು. ಪಾಂಡಿತ್ಯದ ವಿವಿಧ ಕ್ಷೇತ್ರಗಳಲ್ಲಿ, ಭಾರತೀಯ ಎಲ್ಲ ಭಾಷೆಗಳಲ್ಲಿಯೂ ಸಂಸ್ಕೃತವು ಹಿರಿಯ ಪಾಲುಗಾರನಂತೆ ಮುಂದುವರೆಯುತ್ತಲೇ ಬಂದಿರುವುದು. ಸಂಸ್ಕೃತ ಪಾಲು ಗಾರಿಕೆಯ ಸಂಪೂರ್ಣ ಲಾಭವನ್ನು ಕನ್ನಡವು ಪಡೆದಿರುವುದು. ಈ ಉಭಯ ಭಾಷೆಗಳ ಬಹುತೇಕ ಬರಹಗಾರರು ಸಂಸ್ಕೃತ ಹಾಗೂ ಕನ್ನಡಗಳಲ್ಲಿ ಪ್ರವೀಣರಾಗಿದ್ದರು. ಕನ್ನಡದಲ್ಲಿ ಬರೆಯ ಲಾದ ಛಂದಶ್ಶಾಸ್ತ್ರದ ಗ್ರಂಥಗಳಲ್ಲಿ ಸಂಸ್ಕೃತ, ಪ್ರಾಕೃತ ಮತ್ತು ಕನ್ನಡಗಳಲ್ಲಿ ಪ್ರಚಲಿತವಿದ್ದ ಎಲ್ಲ ಛಂದಸ್ಸುಗಳೂ ಬಂದಿವೆ. ಮೊಟ್ಟಮೊದಲಿನ ಛಂದೋಕೃತಿಯಾದ ನಾಗವರ್ಮನ ಛಂದೋಂಬುಧಿಯಲ್ಲಿ ಪಿಂಗಳನು ಸಂಸ್ಕೃತ ಹಾಗೂ ಪ್ರಾಕೃತ ಛಂದಶ್ಶಾಸ್ತ್ರ ಬರೆದವರಲ್ಲಿ ಪ್ರಥಮನೆಂದು ಉಲ್ಲೇಖಿಸಲಾಗಿದೆ. ಈ ಗ್ರಂಥದಲ್ಲಿ ಸಂಸ್ಕೃತದಲ್ಲಿ, ಪ್ರಾಕೃತದಲ್ಲಿ ಪ್ರಚಲಿತವಿದ್ದ ಛಂದಸ್ಸುಗಳನ್ನು ವಿವರಿಸಿರುವುದಲ್ಲದೆ, ಪ್ರಾಮುಖ್ಯವಾಗಿ ಕನ್ನಡ ದಲ್ಲಿ ಪ್ರಚಲಿತವಿದ್ದ ಛಂದಸ್ಸುಗಳನ್ನೂ ತಿಳಿಸಲಾಗಿದೆ. ಈಶ್ವರ ಕವಿಯ ಕವಿಜಿಹ್ವಾಬಂಧನ, ಗುಣಚಂದ್ರನ ಛಂದಸ್ಸಾರ ಇವು ಗಳಲ್ಲಿಯೂ ಇದೇ ಪದ್ಧತಿಯನ್ನು ಮುಂದುವರೆಸಿಕೊಂಡು ಹೋಗಲಾಗಿದೆ.

ಕನ್ನಡದಲ್ಲಿ ಗ್ರಂಥಕರ್ತರು ತಮ್ಮ ಕೃತಿಗಳಿಗಾಗಿ ವಿಷಯ ಗಳನ್ನು ಹೆಚ್ಚಾಗಿ ಮಹಾಭಾರತ, ರಾಮಾಯಣ, ಬೃಹತ್ಕಥಾ, ಜೈನ ಆಗಮಗಳು, ಶೈವ ಆಗಮಗಳು ಹಾಗೂ ಪುರಾಣ ಗಳಿಂದಲೇ ಆಯ್ಕೆ ಮಾಡಿರುತ್ತಾರೆ. ಹೀಗೆ ವಿಷಯಗಳ ಮೂಲವು ಸಂಸ್ಕೃತದಲ್ಲಿ ಹಾಗೂ ಪ್ರಾಕೃತದಲ್ಲಿ ಇದೆ. ಅವುಗಳ ಶಬ್ದಕೋಶ ಹಾಗೂ ಶೈಲಿಗಳಂತೂ ಸಂಸ್ಕೃತ ಮತ್ತು ಪ್ರಾಕೃತಗಳಿಂದಲೇ ಪ್ರಭಾವಿತವಾಗಿವೆ ಎಂಬುದನ್ನು ಈಗಾಗಲೇ ತೋರಿಸಲಾಗಿದೆ. ಶ್ರೇಷ್ಠ ಕೃತಿರತ್ನಗಳಾದ ಪಂಪನ ವಿಕ್ರಮಾರ್ಜುನ ವಿಜಯ, ರನ್ನನ ಸಾಹಸಭೀಮ ವಿಜಯ ಅಥವಾ ಗದಾಯುದ್ಧ, ನಾಗಚಂದ್ರನ

ರಾಮಚಂದ್ರ ಚರಿತೆ, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಜನ್ನನ ಯಶೋಧರ ಚರಿತೆ, ಕುಮಾರ ವಾಲ್ಮೀಕಿಯ ರಾಮಾಯಣ, ಕುಮಾರವ್ಯಾಸನ ಮಹಾಭಾರತ, ಲಕ್ಷ್ಮೀಶನ ಜೈಮಿನೀ ಭಾರತ, ಚಂದ್ರವರ್ಣಿಯ ಪರಶುರಾಮ ಭಾರತ ಮತ್ತು ಪುಟ್ಟಪ್ಪನವರ ರಾಮಾಯಣ ದರ್ಶನ, ಇವೆಲ್ಲವೂ ಸಂಸ್ಕೃತ ಹಾಗೂ ಪ್ರಾಕೃತ ದಲ್ಲಿನ ಮಹಾಭಾರತ, ರಾಮಾಯಣ, ಪುರಾಣ ಮತ್ತು ಆಗಮ ಈ ಕೃತಿಗಳ ಮೇಲೆಯೇ ಆಧಾರಿತವಾಗಿವೆ. ಈ ಕನ್ನಡ ಕೃತಿ ಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ, ಮೂಲದಲ್ಲಿಯ ಅದೇ ಸಾಹಿತ್ಯಿಕ ಪ್ರಗಲ್ಭತೆ ಹಾಗೂ ಸಾಂಸ್ಕೃತಿಕ ಮೌಲ್ಯಗಳು ಕನ್ನಡದಲ್ಲಿಯೂ ವ್ಯಕ್ತವಾಗಿರುವುದು ಸ್ಪಷ್ಟವಾಗಿ ಕಂಡು ಬರುವುದು. ಸಂಸ್ಕೃತ ಮತ್ತು ಕನ್ನಡದ ಕವಿಗಳು ಒಂದೇ ಉದ್ದೇಶ ಮತ್ತು ಆದರ್ಶದಿಂದ ಬೇರೆ ಬೇರೆ ಭಾಷೆಗಳಲ್ಲಿ ಕೃತಿ ರಚನೆ ಮಾಡಿರುವರು. ಮಹಾಕಾವ್ಯ ಹಾಗೂ ಪುರಾಣಗಳಲ್ಲಿ ಬಂದಿರುವ ಕಥಾ ವಿಷಯಗಳ ಆಧಾರದಿಂದಲೇ ಸಂಸ್ಕೃತ ಮತ್ತು ಕನ್ನಡಗಳಲ್ಲಿ ಆಲಂಕಾರಿಕ ಕಾವ್ಯ ಬೆಳವಣಿಗೆ ಪಡೆದಿರುವುದು. ಉಭಯ ಭಾಷಾವಿದರ ಸಾಂಸ್ಕೃತಿಕ ಚೈತನ್ಯ ಒಂದೇ ; ಅವರು ಅವೇ ವಿಚಾರಗಳನ್ನು , ಅವೇ ಜೀವನದ ಮೌಲ್ಯಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ವ್ಯಕ್ತಮಾಡಿರುವರು.

ಮಹಾಕಾವ್ಯ ಹಾಗೂ ಪುರಾಣಗಳಲ್ಲಿರುವ ವಿಷಯಗಳನ್ನು ಆಧರಿಸಿ ಸ್ವತಂತ್ರ ಕೃತಿರತ್ನಗಳ ರಚನೆಯಾಗಿರುವುದಲ್ಲದೆ, ಹಲವು ಸಂಸ್ಕೃತ ಕೃತಿಗಳ ಅನುವಾದವೂ ಆಗಿದ್ದು, ಅವು ಕೇವಲ ಅಕ್ಷರಶಃ ಭಾಷಾಂತರವಾಗಿರದೆ ಸಂಸ್ಕೃತ ಗ್ರಂಥಗಳನ್ನೇ ಅನುಸರಿಸಿ ಕನ್ನಡ ದಲ್ಲಿ ನಿರೂಪಿಸಿವೆ. ಪಂಚತಂತ್ರ, ಕಾದಂಬರಿ, ಶಾಕುಂತಲ, ಮುದ್ರಾರಾಕ್ಷಸ, ರತ್ನಾವಳಿ ಈ ಮೊದಲಾದ ಸಂಸ್ಕೃತ ಸಾಹಿತ್ಯಿಕ ಕೃತಿಗಳು ಈ ಹಿಂದೆಯೇ ಕನ್ನಡದಲ್ಲಿ ಭಾಷಾಂತರವಾಗಿದ್ದವು. ಇತ್ತೀಚೆಗೆ ಇನ್ನೂ ಹೆಚ್ಚು ಸಾಹಿತ್ಯಿಕ ಕೃತಿಗಳು ಅನುವಾದ ವಾಗಿವೆ. ಸಂಸ್ಕೃತ ಮೂಲಗಳಲ್ಲಿರುವ ವಸ್ತುಗಳನ್ನು ಆಧರಿಸಿ, ಆಯುರ್ವೇದ, ಜ್ಯೋತಿಷ್ಯ, ಸಂಗೀತ, ಶಿಲ್ಪ, ಮುಂತಾದ ಶಾಸ್ತ್ರೀಯ ಗ್ರಂಥಗಳು ರಚನೆಗೊಂಡಿವೆ. ವೇದಾಂತದ ಮೂರು ಪಂಥಗಳನ್ನು ಕುರಿತು ಹಲವು ಕೃತಿಗಳು ರಚಿತವಾಗಿವೆ. ತರ್ಕ, ವ್ಯಾಕರಣ, ಸಾಂಖ್ಯ, ಯೋಗ, ಮುಂತಾದವುಗಳ ಕುರಿತು ಯೋಗ್ಯ ಗ್ರಂಥಗಳು ಇದೀಗ ಅನುವಾದವಾಗಿವೆ. ಸಂಸ್ಕೃತ ಮತ್ತು ಪ್ರಾಕೃತದಲ್ಲಿ ಘನವಿದ್ವಾಂಸರು ಅಭಿವೃದ್ಧಿಗೊಳಿಸಿದ ಜ್ಞಾನವನ್ನು ತಿಳಿಸುವ ವಾಹಕವಾಗಿ ಕನ್ನಡದ ಭಾಷೆಯನ್ನು ಉಪಯೋಗಿಸಿಕೊಳ್ಳಲಾಗಿದೆಯಲ್ಲದೆ, ಇಂಥ ಜ್ಞಾನವನ್ನು ಸ್ವತಂತ್ರವಾಗಿಯೂ ವ್ಯಕ್ತಮಾಡಲು ಈ ಭಾಷೆಯನ್ನು ಬಳಸಲಾಗಿದೆ.

ಕರ್ನಾಟಕದ ಜನತೆಯ ಜೊತೆಗೆ ಸಂಸ್ಕೃತ ಮತ್ತು ಪ್ರಾಕೃತಗಳ ಸಂಬಂಧವು ಅನೇಕ ವರುಷಗಳದ್ದಾಗಿರುವುದರಿಂದ, ಕರ್ನಾಟಕದ ಅನೇಕ ಕವಿಗಳು ಹಾಗೂ ವಿದ್ವಾಂಸರು ಸಂಸ್ಕೃತ ದಲ್ಲಿ ಬರೆಯುವುದೂ ಸಹಜವಿದೆ. ಸಂಸ್ಕೃತದ ಬೆಳವಣಿಗಾಗಿ ಕರ್ನಾಟಕವು ಮಹತ್ವಪೂರ್ಣವಾದ ಸೇವೆ ಸಲ್ಲಿಸಿದೆ. ಸಂಸ್ಕೃತದ ಕಾವ್ಯಕೃತಿಗಳಲ್ಲಿ ವರ್ಧಮಾನದೇವನ ಚೂಡಾಮಣಿಯು ಅತ್ಯಂತ ಪ್ರಾಚೀನವಾಗಿದ್ದು, ಅದು ಕರ್ನಾಟಕದ ಕವಿಯಿಂದ ರಚಿತ ವಾಗಿದೆ. ದಂಡಿಯು ಇದನ್ನು ಉಲ್ಲೇಖಿಸಿರುತ್ತಾನಾದರೂ ಈ ಗ್ರಂಥದ ಪ್ರತಿಯು ನಮಗಿನ್ನೂ ದೊರಕಿಲ್ಲ. ಕತೆಗಳ ಬಹು ದೊಡ್ಡ ಸಂಗ್ರಹವಾದ ಪೈಶಾಚಿ ಭಾಷೆಯಲ್ಲಿಯ ಗುಣಾಢ್ಯನ ಬೃಹತ್ಕಥೆಯು ಗಂಗರಸನಾದ ದುರ್ವಿನೀತನಿಂದ ಸಂಸ್ಕೃತದಲ್ಲಿ ಮೊಟ್ಟಮೊದಲು ಭಾಷಾಂತರವಾದ ಮಹತ್ವದ ಕೃತಿಯಾಗಿದೆ. ಈ ಕೃತಿಯೂ ಲಭ್ಯವಾಗಿಲ್ಲ. ಸೋಮದೇವನ ಕಥಾಸರಿತ್ ಸಾಗರವು, ಬೃಹತ್ಕಥೆಯು ಸಂಸ್ಕೃತದಲ್ಲಿ ಭಾಷಾಂತರಿತವಾದ ಅನಂತರದ ಕೃತಿಯಾಗಿದೆ. ಗಂಗರಸನಾದ ಭೂತುಗನ ಆಸ್ಥಾನ ಕವಿಯಾದ ವಿದ್ಯಾಧನಂಜಯನು ಒಂದು ದ್ವಿಸಂಧಾನ ಕಾವ್ಯ (ಅಂದರೆ ಶ್ಲೇಷಾಲಂಕಾರದ ಮೂಲಕ, ಭಾರತ ಮತ್ತು ರಾಮನ ಕತೆಗಳನ್ನು ನಿರೂಪಿಸುವ) ವಾದ ರಾಘವಪಾಂಡವೀಯವನ್ನು ಬರೆದಿರುವನು. ಈ ತೆರನಾದ ಕೃತಿಗಳಲ್ಲಿ ಇದೇ ಮೊದಲನೇಯದು. ಜಟಾಸಿಂಹ ನಂದಿಯ ವರಾಂಗ ಚರಿತೆ, ವೀರನಂದಿಯ ಚಂದ್ರ ಪ್ರಭ ಚರಿತೆ, ವಾದಿರಾಜನ ಪಾರ್ಶ್ವನಾಥ ಚರಿತೆ, ಹಾಗೂ ಯಶೋಧರ ಚರಿತೆ, ಜಿನಸೇನನ ಹರಿವಂಶ ಪುರಾಣ, ಗುಣಭದ್ರನ ಉತ್ತರ ಪುರಾಣ ಮತ್ತು ಜಿನದತ್ತ ಚರಿತೆ, ಮಲ್ಲಿಸೇನನ ನಾಗಕುಮಾರ ಕಾವ್ಯ, ವಾದೀಭಸಿಂಹನ ಗದ್ಯಚಿಂತಾಮಣಿ, ಮುಂತಾದವುಗಳು ಕರ್ನಾಟಕದ ಜೈನ ಕವಿಗಳು ಬರೆದ ಹಲವು ಸಂಸ್ಕೃತ ಮಹಾ ಕಾವ್ಯಗಳಾಗಿವೆ. ಇವುಗಳನ್ನು ಧಾರ್ಮಿಕ ಉದ್ದೇಶಗಳಿಂದ ಬರೆದಿದ್ದರೂ, ಇವು ಅತ್ಯುತ್ತಮ ಕಾವ್ಯಗಳೆಂದು ಪರಿಗಣಿತವಾಗಿವೆ.

ಎರಡನೇಯ ಪುಲಿಕೇಶಿಯ ಸೊಸೆ ವಿಜಯಾಂಬಿಕಾ ಅಥವಾ ವಿಜ್ಜಿಕಾ ಸಂಸ್ಕೃತದ ಮಹಾಕವಯಿತ್ರಿಯಾಗಿದ್ದಳು. ಅವಳ ಕೃತಿಯಾದ ಕೌಮುದಿ ಮಹೋತ್ಸವವು ರಂಜಕ ವಿಷಯವನ್ನೇ ಒಳಗೊಂಡ ಐತಿಹಾಸಿಕ ನಾಟಕವಾಗಿದೆ. ದಂಡಿಗೆ ಅವಳು ಪ್ರತಿಸ್ಪರ್ಧಿಯಾಗಿ, ಅವನನ್ನೇ ಪ್ರಶಂಸಿಸುತ್ತಾ ಆಣಕವಾತು ಗಳನ್ನು ಉಪಯೋಗಿಸಿರುವಳು. ಅವಳ ಶ್ಲೋಕಗಳನ್ನು ಅಲಂಕಾರ ಗ್ರಂಥಗಳಲ್ಲಿ ಉದಾಹರಿಸಲಾಗಿದೆ. ತ್ರಿವಿಕ್ರಮನ ನಳಚಂಪೂ, ಸಂಸ್ಕೃತದ ಚಂಪೂ ಕಾವ್ಯಗಳಲ್ಲಿ ಮೊದಲನೇಯದು. ಅವನು ರಾಷ್ಟ್ರಕೂಟ ಅರಸರ ಆಸ್ಥಾನದಲ್ಲಿದ್ದನು. ಮದಾಲಸ ಚಂಪೂ ಅವನ ಇನ್ನೊಂದು ಕೃತಿಯಾಗಿದೆ. ಕನ್ನಡದಲ್ಲಿಯೇ ಮೊದಲು ಚಂಪೂ ಶೈಲಿಯು ರೂಪಿತಗೊಂಡು, ಅನಂತ ಸಂಸ್ಕೃತದಲ್ಲಿ ಅದು ಬಳಕೆಗೊಂಡಿರುವ ಸಂಭವವಿದೆ. ಸೋಮ ದೇವ ಸೂರಿಯ ಯಶಸ್ತಿಲಕ ಚಂಪೂ ಮತ್ತೊಂದು ಉತ್ತಮ ಚಂಪೂ ಕಾವ್ಯ. ಅಮೋಘವರ್ಷನ ಪ್ರಶ್ನೋತ್ತರ ರತ್ನಮಾಲಿಕ

ತತ್ತ್ವ ವಿವೇಚನೆಯ ಚಿಕ್ಕ ಕಾವ್ಯವಾಗಿದೆ. ಹಲಾಯುಧನ ಕೃತಿಗಳಿಂದ ಕೋಶ, ಕವಿರಹಸ್ಯ ಮತ್ತು ಮೃತ ಸಂಜೀವಿನಿ ನಿಘಂಟು ಹಾಗೂ ಛಂದಶ್ಶಾಸ್ತ್ರಗಳನ್ನು ಕುರಿತಾಗಿವೆ. ಬಿಲ್ಹಣನು ಕಾಶ್ಮೀರದಿಂದ ಬಂದಿದ್ದರೂ, ಕಲ್ಯಾಣದ ಚಾಳುಕ್ಯ ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿದ್ದನು. ಅವನ 'ವಿಕ್ರಮಾಂಕ ಚರಿತ'ವು ಒಂದು ಐತಿಹಾಸಿಕ ಕಾವ್ಯವಾಗಿದೆ. ಹೊಯ್ಸಳ ಅರಸರ ಕಾಲದಲ್ಲಿ ವಿದ್ಯಾ ಚಕ್ರವರ್ತಿ ಮನೆತನದ ಕವಿಗಳು ಸಂಸ್ಕೃತ ಕಾವ್ಯಕ್ಕೆ ಮಹತ್ವಪೂರ್ಣವಾದ ಕಾಣಿಕೆ ಸಲ್ಲಿಸಿರುವರು. ಎರಡನೇಯ ವಿದ್ಯಾಚಕ್ರವರ್ತಿಯ ಗದ್ಯ ಕರ್ಣಾಮೃತ ಮತ್ತು ಮೂರನೇಯ ವಿದ್ಯಾಚಕ್ರವರ್ತಿಯ ರುಕ್ಮಿಣೀ ಕಲ್ಯಾಣ ಇವು ಮಹತ್ವಪೂರ್ಣವಾದ ಕೃತಿಗಳು. ಶ್ರೀ ಮಧ್ವಾಚಾರ್ಯರ ಸಮಕಾಲೀನನಾದ ತ್ರಿವಿಕ್ರಮ ಪಂಡಿತನು ಉಷಾಹರಣ ಎಂಬ ಉತ್ಕೃಷ್ಟ ಕಾವ್ಯ ಬರೆದಿರುವನು. ತ್ರಿವಿಕ್ರಮ ಪಂಡಿತನ ಮಗನಾದ ನಾರಾಯಣ ಪಂಡಿತನು ರಚಿಸಿದ ಮಧ್ವವಿಜಯವು ಶ್ರೀಮಧ್ವರ ಜೀವನ ಚರಿತ್ರೆಯ ಕಥನ ಮಾಡುವ ಕಾವ್ಯವಾಗಿದೆ. ಇದು ಮಾಧ್ವಯತಿಗಳ ಬಗೆಯ ಚಾರಿತ್ರಿಕ ಕವನಗಳಿಗೆ ಒಂದು ಮಾದರಿಯಾಯಿತು. ಜಯತೀರ್ಥ ವಿಜಯ, ವಾದಿರಾಜ ಚರಿತಾಮೃತ, ವಿದ್ಯಾಧೀಶ ವಿಜಯ, ಸತ್ಯನಾಥಾಭ್ಯುದಯ, ರಾಘವೇಂದ್ರ ವಿಜಯ, ಸತ್ಯಭೋದ ವಿಜಯ ಮುಂತಾದವು ಇಂಥವೇ ಜೀವನ ಚರಿತ್ರೆಯ ಕಥನದ ಕಾವ್ಯಗಳಾಗಿದ್ದು, ಅವು ಆಗಿನ ಕಾಲದ ಐತಿಹಾಸಿಕ ಸಂಗತಿಗಳನ್ನು ಸಾಕಷ್ಟು ಚಿತ್ರಿಸಿವೆ. ಸೋಮನಾಥ ಕವಿಯ ವ್ಯಾಸಯೋಗಿ ಚರಿತವು ಪರಿಪೂರ್ಣವಾದ ಚಂಪೂಕಾವ್ಯವಾಗಿದ್ದು, ಶಬ್ದ ಸಂಪತ್ತು ಹಾಗೂ ಆಕರ್ಷಕ ನಿರೂಪಣೆಗಳೊಂದಿಗೆ ವಿದ್ವತ್ಪೂರ್ಣ ಶೈಲಿಯಲ್ಲಿ ಬರೆಯಲ್ಪಟ್ಟಿದೆ.

ಗುರುಚಂದ್ರ ಕಾಲೋದಯವು ಸತ್ಯಧರ್ಮನ ಜೀವನದಲ್ಲಿಯ ಘಟನೆಗಳನ್ನು ವರ್ಣಿಸುವ ನಾಟಕವಾಗಿದೆ. ಶ್ರೀ ಮಧ್ವರಿಂದ ಸತ್ಯಬೋಧರ ವರೆಗಿನ ಮಧ್ವಯತಿಗಳ ಜೀವನ ಚರಿತ್ರೆಯನ್ನು ಗುರುವಂಶ ಕಥಾ ಕಲ್ಪತರು ಕೊಡುತ್ತದೆ. ಆನಂದಗಿರಿಯ ಹಾಗೂ ವಿದ್ಯಾರಣ್ಯರ ಶಂಕರ ವಿಗ್ವಿಜಯ ಶಂಕರಾಚಾರ್ಯರ ಜೀವನವನ್ನು ಚಿತ್ರಿಸುವ ಎರಡು ಚಾರಿತ್ರಿಕ ಕಾವ್ಯಗಳಾಗಿವೆ. ವಿಜಯನಗರ ಕಾಲದಲ್ಲಿ ಸಂಸ್ಕೃತ ಸಾಹಿತ್ಯವು ಎಲ್ಲ ವಿಭಾಗಗಳಲ್ಲಿಯೂ ಅಭಿವೃದ್ಧಿ ಪಡೆಯಿತು. ಸಾಯಣನ ಸೋದರ ಭೋಗನಾಥನು ಶ್ರೇಷ್ಠ ಕವಿಯಾಗಿದ್ದನು. ಅವನ ಉದಾಹರಣ ಮಾಲಾ ಅಲಂಕಾರ ಶಾಸ್ತ್ರದ ವಿವಿಧ ಸಿದ್ಧಾಂತಗಳನ್ನೊಳಗೊಂಡ ಉದಾಹರಣೆಗಳ ಸಂಗ್ರಹವಾಗಿದೆ. ರಾಮೋಲ್ಲಾಸ, ತ್ರಿಪುರ ವಿಜಯ, ಶೃಂಗಾರ ಮಂಜರಿ ಇವು ಅವನ ಇನ್ನುಳಿದ ಕಾವ್ಯಗಳಾಗಿವೆ. ಸ್ವತಃ ಸಾಯಣನೇ ಅಲಂಕಾರ—ಸುಧಾನಿಧಿ ಹಾಗೂ ಸುಭಾಷಿತ ಸುಧಾನಿಧಿ ಇವುಗಳನ್ನು ರಚಿಸಿದ್ದಾನೆ. ಬುಕ್ಕನ ಸೊಸೆಯಾದ ಗಂಗಾದೇವಿಯು ಮಧುರಾವಿಜಯ ಅಥವಾ ವೀರ ಕಂಪರಾಯ ಚರಿತೆ ಎಂಬ ಕಾವ್ಯವನ್ನು ಬರೆದಿರುತ್ತಾಳೆ. ವಿಜಯನಗರ ಸಾಮ್ರಾಜ್ಯದ ಹಲವು ರಾಜರು ಕವಿಗಳಾಗಿದ್ದರು. ವಿರೂಪಾಕ್ಷನ ನರಕಾಸುರ ವಿಜಯ, ಸಾಳ್ವ ನರಸಿಂಹನ ರಾಮಾಭ್ಯುದಯ, ಕೃಷ್ಣದೇವರಾಯನ ಜಾಂಬವತೀ ಕಲ್ಯಾಣ ಹಾಗೂ ಮದಾಲಸ ಚರಿತ ಮುಂತಾದವು ಆಗಿನ ಕಾಲದ ಮಹತ್ವದ ಕೃತಿಗಳಾಗಿವೆ. ಪ್ರೌಢದೇವರಾಯನ ಮಹಾನಾಟಕ ಸುಧಾನಿಧಿ ಮತ್ತು ರತೀರತ್ನ ಪ್ರದೀಪಿಕಾ ಇವು ಅರಸು ಮನೆತನದವರು ರಚಿಸಿದ ಹಲವು ಕೃತಿಗಳಾಗಿವೆ. ಡಿಂಡಿಮ ಮನೆತನದ ಕವಿಗಳು, ಅನಂತಭಟ್ಟ, ಶಿವಸೂರ್ಯ, ವಾಮನಭಟ್ಟಬಾಣ, ಭಾಸ್ಕರ, ಏಕಾಂಬರನಾಥ, ಅರುಣಗಿರಿನಾಥ, ಮಲ್ಲಿಕಾರ್ಜುನ, ವಿದ್ಯಾರಣ್ಯ, ಮಾಧವ ಮಂತ್ರಿ, ಭೋಗನಾಥ, ಸ್ವಯಂಭು, ದಿವಾಕರ ಹಾಗೂ ಇನ್ನು ಅನೇಕ ಕವಿಗಳು ಮತ್ತು ಲೇಖಕರು ವಿಜಯನಗರ ರಾಜ್ಯದ ಆಡಳಿತ ಕಾಲದಲ್ಲಿ ಹೆಸರು ಪಡೆದಿದ್ದವರು. ದಾರ್ಶನಿಕರೂ, ಕವಿಗಳೂ ಮತ್ತು ಯತಿಗಳೂ ಆಗಿದ್ದ ಸೋದೆ ಮಠದ ವಾದಿರಾಜರು ರುಕ್ಮಿಣೀಶ ವಿಜಯ ಹಾಗೂ ತೀರ್ಥ ಪ್ರಬಂಧವನ್ನು ಬರೆದಿರುತ್ತಾರೆ. ಕಾಮಾಕ್ಷಿ, ತಿರುಮಲಾಂಬಾ, ಮಧುರವಾಣಿ, ಮೋಹನಾಂಗಿ, ಮೊದಲಾದ ಕವಯಿತ್ರಿಯರೂ ಸಾಕಷ್ಟು ಕೃತಿಗಳನ್ನು ರಚಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯವು ಅಳಿದ ಮೇಲೆಯೂ ಸಂಸ್ಕೃತ ಸಾಹಿತ್ಯ ಕೃತಿಗಳು ರಚನೆಯಾಗುತ್ತಲೇ ಇದ್ದವು. ಇಂಥ ಮಹತ್ವಪೂರ್ಣವಾದ ಹಲವು ಕೃತಿಗಳನ್ನು ಸಂಪೂರ್ಣವಾಗಿ ಹೆಸರಿಸುವುದು ಕಷ್ಟಕರವಾಗಿದೆ. ಆದ್ದರಿಂದ ಕರ್ನಾಟಕ ಕವಿಗಳು ಸಂಸ್ಕೃತ ಸಾಹಿತ್ಯ ಪರಂಪರೆಗೆ ಅವಿರತವಾಗಿ ಸೇವೆ ಸಲ್ಲಿಸಿದರೆಂಬುದನ್ನು ತೋರಿಸಲು ಹಲವು ಉದಾಹರಣೆ ಮಾತ್ರ ಕೊಡಲಾಗಿದೆ. ಅನಂತಾಚಾರ್ಯನ ಯಾದವ ಪಾಂಡವ ರಾಘವೀಯ, ಷಡಕ್ಷರ ದೇವನ ಕವಿಕರ್ಣ ರಸಾಯನ, ಏಕಾಂಬರನ ವೀರಭದ್ರವಿಜಯ, ನರಸಕವಿಯ ನಂಜರಾಜ ಯಶೋಭೂಷಣ, ಸುಧೀಂದ್ರ ಯೋಗಿಯ ಸುಭದ್ರಾ ಧನಂಜಯ, ಸುಮತೀಂದ್ರನ ಸುಭದ್ರಾ ಪರಿಣಯ, ರಾಮಾಚಾರ್ಯನ ಕೊಂಕಣಾಭ್ಯುದಯ, ಮಲ್ಲಾರಿ ಆರಾಧ್ಯನ ಶಿವಲಿಂಗಸೂರ್ಯೋದಯ ನಾಟಕ, ಪರಕಾಲಯತಿಯ ಹಂಸ ಸಂದೇಶ ಹಾಗೂ ಮಂಡಿಕಲ್ ರಾಮಶಾಸ್ತ್ರಿಯ ಮೇಘ ಪ್ರತಿಸಂದೇಶ ಇವೇ ಅಂಥ ಕೆಲವು ಕೃತಿಗಳಾಗಿವೆ. ಸಂಸ್ಕೃತ ನಾಟಕಗಳ ಎಲ್ಲ ಪ್ರಕಾರಗಳಲ್ಲಿಯೂ ಬರೆಯಲು ಪ್ರಧಾನಿ ವೆಂಕಟಾಮಾತ್ಯನು ಪ್ರಯತ್ನಿಸಿರುತ್ತಾನೆ. ಬೇರೆ ಬೇರೆ ಪ್ರಕಾರಗಳಿಗೆ ಹೊಂದಿಕೆಯಾಗುವಂತೆ ಅವನು ನಾಟಕ, ಪ್ರಕರಣ, ಪ್ರಹಸನ, ಭಾನ ಮುಂತಾದವುಗಳನ್ನು ರಚಿಸಿದ್ದು, ಇವು ಒಳ್ಳೆಯ ಕೃತಿಗಳಾಗಿವೆ. ಅವನ ಅಲಂಕಾರಮಣಿದರ್ಪಣವು ಕಾವ್ಯಶಾಸ್ತ್ರದ ಎಲ್ಲಾ ವಿಷಯಗಳನ್ನು ಒಳಗೊಂಡಿದೆ.

ಇಪ್ಪತ್ತನೇಯ ಶತಮಾನದಲ್ಲಿಯೂ ಹಲವು ಸಮಕಾಲೀನ ಲೇಖಕರು ಸಂಸ್ಕೃತದಲ್ಲಿ ಬರೆಯುವುದನ್ನು ಮುಂದುವರೆಸಿದ್ದಾರೆ.

ಜಗ್ಗು ಆಳ್ವಾರ್ ಅಯ್ಯಂಗಾರ್ ಮತ್ತು ಗಲಗಲಿ ರಾಮಾಚಾರ್ಯ ಇವರಿಬ್ಬರೂ ಈ ಶತಮಾನದ ಗಮನಾರ್ಹ ಕವಿಗಳು. ಆಳ್ವಾರ್ ಅಯ್ಯಂಗಾರ್ ಅವರು ಪ್ರತಿಜ್ಞಾನ ಕೌಟಿಲ್ಯ, ಪ್ರಸನ್ನ ಕಾಶ್ಯಪ, ಅದ್ಭುತಾಂಶುಕ ಮುಂತಾದ ನಾಟಕಗಳನ್ನೂ ಜಯಂತಿಕಾ, ಯದುವಂಶ ಚರಿತ, ಮೊದಲಾದ ಗದ್ಯ ರಮ್ಯ ಕತೆಗಳನ್ನೂ, ಅದ್ಭುತದೂತಮ್‌ನಂಥ ಮಹಾಕಾವ್ಯವನ್ನೂ ಬರೆದಿರುತ್ತಾರೆ. ಸುಮಾರು 30 ಕೃತಿಗಳನ್ನು ಅವರು ರಚಿಸಿರುತ್ತಾರೆ. ಗಲಗಲಿ ರಾಮಾಚಾರ್ಯರು ಆಧುನಿಕ ವಿಷಯಗಳನ್ನು ಕುರಿತು ಸಂಸ್ಕೃತದಲ್ಲಿ ಶಕ್ತಿಯುತವಾದ ಪ್ರಬಂಧಗಳನ್ನು ಆಕರ್ಷಕ ಶ್ಲೋಕಗಳನ್ನು ರಚಿಸಿರುವರು. ಅವರ ಹಲವು ಶ್ಲೋಕಗಳು ಮಧುರವಾಣಿಯಲ್ಲಿ ಪ್ರಕಟವಾಗಿವೆ. ಉಡುಪಿಯ ಅಲೆವೂರ ಸೀತಾರಾಮಾಚಾರ್ಯರು ಭೈಷ್ಮೀಪರಿಣಯವನ್ನು ಬರೆದಿರುವರು. ಹೊಸಪೇಟೆಯ ಕೃಷ್ಣಾವಧೂತ ಪಂಡಿತರ ಮಂದಾರ ಮಕರಂದ ಚಂಪೂ, ಅಲಂಕಾರ ಸೂತ್ರಾಣಿ ಮುಂತಾದವುಗಳನ್ನು ರಚಿಸಿರುತ್ತಾರೆ. ಇದಲ್ಲದೆ ವೇದಾಂತ ಹಾಗೂ ನ್ಯಾಯ ಇವುಗಳನ್ನು ಕುರಿತು ಸಹ ಅವರು ಬರೆದಿರುವರು. ಕೆ. ಎಸ್. ನಾಗರಾಜನ್ ಅವರು ಸೀತಾಸ್ವಯಂವರ ಹಾಗೂ ಶಬರಿ ವಿಲಾಸ ಕಾವ್ಯಗಳನ್ನು ರಚಿಸಿರುವರು. ಪ್ರೊ|| ಕೆ. ಟಿ. ಪಾಂಡುರಂಗಿಯವರು 'ಉಪನಿಷತ್ ರೂಪಕಾಣಿ ಎಂಬ ತಲೆಬರಹದಲ್ಲಿ ಉಪನಿಷತ್ತಿನ ಸಂವಾದಗಳನ್ನು ಆಧರಿಸಿ ರೇಡಿಯೋ ನಾಟಕಗಳನ್ನು ನಿವೇದಿಸಿರುವರು. ಅವರ ಇನ್ನುಳಿದ ರೇಡಿಯೋ ನಾಟಕಗಳು ನಭೋವಾಣಿ ರೂಪಕಾಣಿ ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ಈ ನಾಟಕಗಳಲ್ಲಿ ಸೂತ್ರಧಾರ ಪಾತ್ರದ ಬದಲು ನಿವೇದಕನು ಬಂದಿರುವನು. ಶೈಶವಮ್ ಎಂಬುದು ಅವರ ಕವನ ಸಂಕಲನ. ಸರ್ವಜ್ಞನ ಕನ್ನಡ ತ್ರಿಪದಿಗಳನ್ನು ಸಂಸ್ಕೃತದಲ್ಲಿ ಅನುವಾದಿಸಿ ಸರ್ವಜ್ಞ ವಚನಾನಿ ಎಂದು ಪ್ರಕಟಿಸಿದ್ದಾರೆ. ಸಿ. ಜಿ. ಪುರುಷೋತ್ತಮರು ಪುಟ್ಟಪ್ಪನವರ ಕನ್ನಡ ಕವನಗಳನ್ನು ಸಂಸ್ಕೃತದಲ್ಲಿ ಅನುವಾದಿಸಿದ್ದಾರೆ. ಡಾ|| ರಾಘವನ್ ಗುಂಡಪ್ಪನವರ ಮಂಕುತಿಮ್ಮನ ಕಗ್ಗವನ್ನು ಸಂಸ್ಕೃತದಲ್ಲಿ ಭಾಷಾಂತರಿಸಿರುವರು. ಗೋಕರ್ಣದ ವಿಘ್ನೇಶ್ವರ ಶರ್ಮಾ, ಪಂಡರಿನಾಥಾಚಾರ್ಯ ಗಲಗಲಿ, ಶ್ರೀರಂಗಪಟ್ಟಣದ ಬಾಲಗಣಪತಿ ಭಟ್ಟ ಮುಂತಾದ ಹಲವರು ಇಂದಿಗೂ ಸಂಸ್ಕೃತದಲ್ಲಿ ಬರೆಯುತ್ತಿರುವ ಲೇಖಕರು. ಗಲಗಲಿಯವರ ಸಂಸ್ಕೃತ ಕಾವ್ಯವೊಂದಕ್ಕೆ ಇತ್ತೀಚೆಗೆ ಕೇಂದ್ರ ಸಾಹಿತ್ಯ ಅಕ್ಯಾಡೆಮಿಯ ಪ್ರಶಸ್ತಿ ಸಂದಿದೆ.

ಕಾವ್ಯ, ನಾಟಕ ಕ್ಷೇತ್ರಗಳಲ್ಲಿ ಹಾಗೂ ಸಾಮಾನ್ಯ ಸಾಹಿತ್ಯದಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ ಏನಿದೆ ಎಂಬುದನ್ನು ಈವರೆಗೆ ವಿವರಿಸಲಾಗಿದೆ. ಆದರೆ ಶಾಸ್ತ್ರದ ವಿಷಯದಲ್ಲಿ ಪ್ರಾಮುಖ್ಯವಾಗಿ ವೇದಾಂತದಲ್ಲಿ ಕರ್ನಾಟಕದ ಕೊಡುಗೆ ಅಮೂಲ್ಯವಾಗಿದೆ. ಸುರೇಶ್ವರ-ವಿಶ್ವರೂಪ ಎಂಬ ಮಹಾ ಹೆಸರು ಶೃಂಗೇರಿ ಪೀಠಕ್ಕೆ ಸಂಬಂಧಿಸಿದೆ. ಅವರ ಬೃಹದಾರಣ್ಯ ಭಾಷ್ಯವಾರ್ತಿಕಾ ಹಾಗೂ ನೈಷ್ಕರ್ಮ್ಯಸಿದ್ಧಿ ಬಹಳ ಪರಿಚಿತವಾಗಿವೆ. ಗೀತಾಭಾಷ್ಯ ಹಾಗೂ ಉಪನಿಷತ್ತುಗಳ ಮೇಲಿನ ಆನಂದಗಿರಿಯ ಟೀಕಾ ಗ್ರಂಥಗಳು ಶಂಕರಾಚಾರ್ಯರನ್ನು ತಿಳಿದುಕೊಳ್ಳಲು ಬಹಳ ನೆರವಾಗುವವು. ನ್ಯಾಯ ಮಕರಂದ, ನ್ಯಾಯ ದೀಪಾವಳಿ ಮತ್ತು ಪ್ರಮಾಣಮಾಲಾ ಇವು ಆನಂದಬೋಧರ ಕೃತಿಗಳು. ಪ್ರಕಾಶಾತ್ಮನ್‌ರ ಪಂಚಪದೈಕವಿವರಣ, ವಿದ್ಯಾರಣ್ಯರ ವಿವರಣ ಪ್ರಮೇಯ ಸಂಗ್ರಹ, ನೃಸಿಂಹಾಶ್ರಮ ಮುನಿಯ ವಿವರಣ ಭಾವದೀಪಿಕಾ—ಇವು ವಿವರಣಪಂಥದ ಹಲವು ಮಹತ್ವದ ಗ್ರಂಥಗಳು. ವಾದೀಂದ್ರರ ಮಹಾ ವಿದ್ಯಾವಿಡಂಬನ, ಭಾರತೀ ತೀರ್ಥರ ವೈಯಾಶಿಕ ನ್ಯಾಯಮಾಲಾ ಇವೆರಡು ಅದ್ವೈತದ ಬಗ್ಗೆ ಮಹತ್ವವಾದ ಕೃತಿಗಳು. ವಿದ್ಯಾರಣ್ಯರ ಪಂಚದಶಿ-ದೃಕ್‌ದೃಶ್ಯ ವಿವೇಕ, ಜೀವನುಕ್ತಿ ವಿವೇಕ ಹಾಗೂ ಅನುಭೂತಿ ಪ್ರಕಾಶ, ಇವು ಅದ್ವೈತದ ದರ್ಶನಗಳನ್ನು ಹೆಚ್ಚು ಮಾರ್ಮಿಕವಾಗಿ ವ್ಯಕ್ತಮಾಡುತ್ತವೆ. ನೃಸಿಂಹಶರ್ಮನ ಭೇದಧಿಕ್ಕಾರದಲ್ಲಿ ದ್ವೈತದೃಷ್ಟಿಯ ಟೀಕೆಯಿದೆ. ಬಹಳಷ್ಟು ಅದ್ವೈತ ಲೇಖಕರು ನಿಕಟವಾಗಿ ಶೃಂಗೇರಿ ಪೀಠಕ್ಕೆ ಹಾಗೂ ಇನ್ನಿತರ ಅದ್ವೈತ ಶಿಕ್ಷಣದ ಕೇಂದ್ರಗಳಿಗೆ ಸಂಬಂಧಿಸಿದವರಾಗಿದ್ದು, ಪ್ರಾದೇಶಿಕ ಆಧಾರದ ಮೇಲೆ ಅವನ್ನು ವಿಂಗಡಿಸುವುದೂ ಕಠಿಣವಿದೆ.

ವಿಶಿಷ್ಟಾದ್ವೈತದ ಬಗ್ಗೆ ಕರ್ನಾಟಕದ ವಿದ್ವಾಂಸರು ಬರೆದ ಗ್ರಂಥಗಳಲ್ಲಿ ರಾಮಾನುಜರ ಬಂಧುಗಳೇ ಆದ ಹಾಗೂ ಅವರ ಜೊತೆಗೇನೆ ಕರ್ನಾಟಕಕ್ಕೆ ಬಂದ ರಾಮಮಿಶ್ರದೇಶಿಕ, ವತ್ಸ್ಯವರದ ಮತ್ತು ವರದವಿಷ್ಣುಮಿಶ್ರ ಇವರ ಕೃತಿಗಳು ಗಮನಾರ್ಹವಾಗಿದ್ದು, ಹೆಸರಿಸಲು ಯೋಗ್ಯವಾಗಿವೆ. ಪರಕಾಲಯತಿ, ಶ್ರೀನಿವಾಸಚಾರ್ಯ ಹಾಗೂ ಅನಂತಾಚಾರ್ಯ ಇವರ ಕೃತಿಗಳೂ ಗಮನಾರ್ಹವಾಗಿವೆ. ಇಲ್ಲಿಯೂ ಸಹ ಪ್ರಾದೇಶಿಕ ಆಧಾರದ ಮೇಲೆ ವಿಶಿಷ್ಟಾದ್ವೈತ ವಿದ್ವಾಂಸರನ್ನು ವಿಂಗಡಿಸುವುದು ಅದ್ವೈತ ವಿದ್ವಾಂಸರಿಗಿಂತಲೂ ಕಠಿಣವಿದೆ. ಮೇಲುಕೋಟೆ, ಮೈಸೂರು ಅಥವಾ ಇನ್ನುಳಿದ ಹಲವು ಶ್ರೀ ವೈಷ್ಣವ ಕೇಂದ್ರಗಳ ಜೊತೆಗೆ ಅವರಿಗಿದ್ದ ಸಂಬಂಧವು, ಅವರ ಕೃತಿಗಳು ಕರ್ನಾಟಕಕ್ಕೆ ಕೊಡುಗೆಯಾಗಿವೆ ಎಂದು ತೋರಿಸುವ ನಮ್ಮ ಉದ್ದೇಶಕ್ಕೆ ಸಫಲತೆ ನೀಡಿದೆ.

ದ್ವೈತ ಪಂಥದ ತತ್ತ್ವಜ್ಞಾನದ ಸಂಸ್ಥಾಪಕನಿಂದ ಪ್ರಕಟಗೊಂಡ ಕೃತಿಗಳ ಮೇಲೆ ಕರ್ನಾಟಕದ ಸಂಪೂರ್ಣವಾದ ಹಕ್ಕು ಇದೆ. ಮಧ್ವಾಚಾರ್ಯರು ಪ್ರಸ್ಥಾನತ್ರಯ ಅಂದರೆ ಬ್ರಹ್ಮಸೂತ್ರ, ಉಪನಿಷತ್ತು ಮತ್ತು ಗೀತಾ ಇವುಗಳ ಮೇಲೆ ಭಾಷ್ಯಗಳನ್ನೂ ಋಗ್ವೇದದ ಮೇಲೆ ಭಾಷ್ಯವನ್ನೂ ಬರೆದರಲ್ಲದೆ, ಮಹಾಭಾರತ ಹಾಗೂ ಭಾಗವತಗಳ ಸಾರ ಸಂಗ್ರಹವನ್ನು ಸಿದ್ಧಪಡಿಸಿರುತ್ತಾರೆ. ತಮ್ಮ 37 ಕೃತಿಗಳಲ್ಲಿ ಅವರು ಸಂಪೂರ್ಣವಾಗಿ ಹಿಂದೂ ಪವಿತ್ರ ಗ್ರಂಥಗಳ ಮರುಮೌಲ್ಯಮಾಪನ ಮಾಡಿ,

ದ್ವೈತಸಿದ್ಧಾಂತಗಳನ್ನು ಸ್ಥಾಪಿಸಿರುವರು. ಅವರ ಗ್ರಂಥಗಳ ಮುಖ್ಯ ಟೀಕಾಕಾರರಾದ ಜಯತೀರ್ಥರು ಸರಿಸುಮಾರು ಅವರ ಎಲ್ಲ ಕೃತಿಗಳ ಬಗ್ಗೆಯೂ ಟೀಕೆಗಳನ್ನು ಬರೆದಿರುವರು. ನ್ಯಾಯ ಸುಧಾ ಜಯತೀರ್ಥರ ಮುಖ್ಯವಾದ ಕೃತಿ. ಭಾರತೀಯ ತತ್ತ್ವ ಶಾಸ್ತ್ರದ ಎಲ್ಲ ಪ್ರಮುಖವಾದ ಸಮಸ್ಯೆಗಳ ಚರ್ಚೆ ಇದರಲ್ಲಿದ್ದು, ಎಷ್ಟೋ ಸಮಸ್ಯೆಗಳಿಗೆ ಹೊಸ ದೃಷ್ಟಿಕೋನವನ್ನು ನೀಡಿದೆ. ವ್ಯಾಸರಾಯರು ಮತ್ತೊಬ್ಬ ದ್ವೈತ ಮಹಾಲೇಖಕರು. ಅವರ ಚಂದ್ರಿಕಾ, ನ್ಯಾಯಾಮೃತ ಹಾಗೂ ತರ್ಕತಾಂಡವ ಇವು ಅವರ ಮಹಾ ದಾರ್ಶನಿಕ ಕೃತಿಗಳು. ವಿಜಯೀಂದ್ರ, ವಾದಿರಾಜ, ವಿದ್ಯಾಧೀಶ, ರಾಘವೇಂದ್ರ, ಸತ್ಯನಾಥ, ಯಾದವಾರ್ಯ, ಪಾಂಡುರಂಗಿ ಆನಂದಭಟ್ಟ ಮತ್ತು ಕೇಶವಭಟ್ಟ, ಶ್ರೀನಿವಾಸತೀರ್ಥ ಹಾಗೂ ಇನ್ನೂ ಅನೇಕರು ದ್ವೈತ ತತ್ತ್ವಜ್ಞಾನದ ಬಗ್ಗೆ ಸಾಕಷ್ಟು ಟೀಕಾ ಸಾಹಿತ್ಯವನ್ನು ರಚಿಸಿದ್ದಾರೆ. ವೇದಾಂತದಲ್ಲಿರುವ ಸಿದ್ಧಾಂತಗಳಲ್ಲಿ ಇದು ಶಕ್ತಿಪೂರ್ಣವಾದ ಒಂದು ಸಿದ್ಧಾಂತವಾಗಿದೆ ; ಪ್ರಪಂಚದ ಮಾಯಾವಾದದ ಸಂಬಂಧವಿರುವ ಅದ್ವೈತದ ಗ್ರಹಿಕೆಗಳನ್ನು ಅದು ಪ್ರಶ್ನಿಸಿದೆ. ಈ ಪಂಥದ ಮತ್ತೊಂದು ಮಹತ್ವಪೂರ್ಣವಾದ ಸಾಧನೆಯೆಂದರೆ ಕನ್ನಡದಲ್ಲಿಯ ಹರಿದಾಸ ಸಾಹಿತ್ಯ. ದ್ವೈತ ತತ್ತ್ವಜ್ಞಾನವು ಗ್ರಹಿಸಿಕೊಂಡ ರೀತಿಯಲ್ಲಿ ಉಪನಿಷತ್ತು, ಮಹಾಕಾವ್ಯ ಹಾಗೂ ವೇದಾಂತಗಳ ಉಪದೇಶಗಳನ್ನು ಹರಿದಾಸ ಸಾಹಿತ್ಯದಲ್ಲಿ ಸರಳವಾಗಿ ನಿರೂಪಿಸಿದೆ. ಬಂಗಾಲದ ಚೈತನ್ಯ ಪಂಥದವರ ಮೇಲೆಯೂ ಈ ಹರಿದಾಸ ಪಂಥವು ಪ್ರಭಾವ ಬೀರಿದೆ.

ಜೈನ ತತ್ತ್ವಜ್ಞಾನವನ್ನು ಕುರಿತು, ಸಂಸ್ಕೃತದಲ್ಲಿ ಬರೆದ ಭದ್ರಬಾಹುವಿನ ಕಾಲದಿಂದ ಸಮಂತಭದ್ರ, ಪೂಜ್ಯಪಾದ, ಅಕಲಂಕ, ಗುಣಭದ್ರ, ವಾದಿರಾಜ, ಪ್ರಭಾಚಂದ್ರ, ಮಾಣಿಕ್ಯನಂದಿ, ಮೊದಲಾದ ಅನೇಕ ಜೈನ ವಿದ್ವಾಂಸರಿಂದ ಕರ್ನಾಟಕವು ಜೈನ ಪಂಡಿತರ ತವರುಮನೆಯಾಗಿದೆ. ಸಮಂತಭದ್ರನು ಕದಂಬ ರಾಜಮನೆತನದವನೆಂದು ಹೇಳಲಾಗಿದೆ. ಅವನು ಮನುಕವಳ್ಳಿಯಲ್ಲಿ ಇದ್ದನೆಂದು ಹೇಳಲಾಗಿದ್ದು, ಅದು ಬೆಳಗಾವಿ ಜಿಲ್ಲೆಯಲ್ಲಿರುವ ಈಗಿನ ಮುನವಳ್ಳಿ ಎಂದು ಗೊತ್ತಾಗಿದೆ. ಪೂಜ್ಯಪಾದನು, ಮೈಸೂರು ಜಿಲ್ಲೆಯ ಕೊಳ್ಳೇಗಾಲದವನು. ತತ್ತ್ವಾರ್ಥಸೂತ್ರ, ಸರ್ವಾರ್ಥಸಿದ್ಧಿ, ತತ್ತ್ವಾರ್ಥವಾರ್ತಿಕ, ಧವಳಾ, ಜಯಧವಳಾ, ಪ್ರಮಾಣ ಸಂಗ್ರಹ, ಪ್ರಮೇಯ ಕಮಲ ಮಾರ್ತಾಂಡ, ನ್ಯಾಯಕುಮುದಚಂದ್ರ, ಮೊದಲಾದವು ಸಂಸ್ಕೃತದಲ್ಲಿರುವ ಹಲವು ಮಹತ್ತರವಾದ ಜೈನ ಕೃತಿಗಳಾಗಿವೆ.

ವೀರಶೈವ ಧರ್ಮದ ತತ್ತ್ವಜ್ಞಾನವನ್ನು, ನೀತಿಗಳನ್ನು ಹಾಗೂ ಧಾರ್ಮಿಕ ರೂಢಿಗಳನ್ನು ಒಳಗೊಂಡ ಶಿವಶರಣರ ವಚನಗಳು ಕನ್ನಡದಲ್ಲಿ ಬರೆಯಲ್ಪಟ್ಟಿವೆ. ಆದರೂ ವೀರಶೈವ ಧರ್ಮದ ತತ್ತ್ವಗಳಲ್ಲಿ ಅಡಗಿದ ಶಕ್ತಿವಿಶಿಷ್ಟಾದ್ವೈತ ತತ್ತ್ವಜ್ಞಾನವನ್ನು ಶೈವಾಗಮದ ವಾತುಲಾಗಮವೇ ಮೊದಲಾದ ಸಂಸ್ಕೃತ ಕೃತಿಗಳಲ್ಲಿ ಗುರುತಿಸಬಹುದು; ಸಿದ್ಧಾಂತಶಿಖಾಮಣಿ, ಶ್ರೀಕರ ಭಾಷ್ಯ, ಕ್ರಿಯಾಸಾರ, ಮತ್ತು ಅನುಭವ ಸೂತ್ರಗಳು ಇವುಗಳಲ್ಲಿ ಮಹತ್ವವಾದವುಗಳು. ಹೀಗೆ ವೇದಾಂತ, ಜೈನ ಹಾಗೂ ವೀರಶೈವ ಈ ಮೂರು ಪಂಥಗಳ ಬಗ್ಗೆ ಸಂಸ್ಕೃತದಲ್ಲಿ ಸಾಹಿತ್ಯವನ್ನು ಕರ್ನಾಟಕವು ಒದಗಿಸಿದೆ.

ಇನ್ನುಳಿದವುಗಳಲ್ಲಿ ಸಾಯಣನ ವೇದಭಾಷ್ಯ (ವೇದಾರ್ಥ ಪ್ರಕಾಶ) ವನ್ನು ವಿಶೇಷತಃ ಉಲ್ಲೇಖಿಸಬೇಕಾಗುವುದು. ಸಾಯಣನ ನಾಯಕತ್ವದಲ್ಲಿ ವಿದ್ವಾಂಸರ ಗುಂಪೊಂದು ಈ ಕೃತಿಯನ್ನು ರಚಿಸಿದೆ. ಶಬ್ದನಿಷ್ಪತ್ತಿ, ವ್ಯಾಕರಣ, ಉಚ್ಚಾರಣೆ, ಅರ್ಥ, ಋಷಿ, ಛಂದಸ್ ಇವೆಲ್ಲವುಗಳ ಸಂಪೂರ್ಣ ಟಿಪ್ಪಣಿ ಕೊಡುತ್ತಾ ಅಖಂಡ ವೇದಕ್ಕೆ ಅರ್ಥವನ್ನು ಹಚ್ಚಿ ಹೇಳಿರುವುದು ಅತ್ಯದ್ಭುತವಾದ ಕಾರ್ಯವಾಗಿದೆ. ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ವಿಜ್ಞಾನೇಶ್ವರನ ಮಿತಾಕ್ಷರ ಎಂಬ ಟೀಕಾಗ್ರಂಥವು ಹಿಂದೂ ಕಾಯಿದೆಯ ವಿಶಿಷ್ಟವಾದ ಕೃತಿಯಾಗಿದೆ. ವಿಶ್ವೇಶ್ವರನ ಬಾಲಕ್ರೀಡಾ ಇಂಥದೇ ಇನ್ನೊಂದು ಟೀಕಾಗ್ರಂಥವಾಗಿದೆ. ನಿರ್ಣಯಸಿಂಧು, ಧರ್ಮಸಿಂಧು ಹಾಗೂ ಇನ್ನಿತರ ಎಷ್ಟೋ ನಿಬಂಧ ಕೃತಿಗಳು ಧರ್ಮಶಾಸ್ತ್ರದ ಬಗ್ಗೆ ಮಹತ್ವಪೂರ್ಣವಾದ ಕೊಡುಗೆಗಳಾಗಿವೆ. ಮಾಧವನ ಜೈಮಿನೀ ಯಮಳ ವಿಸ್ತಾರ, ರಾಘವೇಂದ್ರ ಯತಿಯ ಭಟ್ಟಸಂಗ್ರಹ ಮತ್ತು ದಿನಕರ ಭಟ್ಟನ ಶಾಸ್ತ್ರಮಾಲಾ ಇವು ಪೂರ್ವಮೀಮಾಂಸೆಯ ಮೇಲಿನ ಕೆಲವು ಕೃತಿಗಳಾಗಿವೆ. ಸತ್ಯಪ್ರಿಯತೀರ್ಥನ ಟೀಕಾಗ್ರಂಥವಾದ ವ್ಯಾಕರಣ ಮಹಾಭಾಷ್ಯ ಗಜೇಂದ್ರಗಡ ರಾಘವೇಂದ್ರಾಚಾರ್ಯನ ಸುಶಬ್ದ ಪ್ರದೀಪ ಹಾಗೂ ಶಬ್ದ ಕಂಠಾಭರಣ ಇವು ಹಲವು ವ್ಯಾಕರಣ ಗ್ರಂಥಗಳಾಗಿವೆ. ಪಾಣಿನಿಯ ವ್ಯಾಕರಣವಲ್ಲದೆ ಜೈನೇಂದ್ರ ಹಾಗೂ ಶಾಕಟಾಯನ ಪಂಥದ ವ್ಯಾಕರಣಗಳೂ ಕರ್ನಾಟಕದಲ್ಲಿ ಪ್ರಚಲಿತದಲ್ಲಿವೆ.

ರಾಜ್ಯವ್ಯವಸ್ಥೆಯನ್ನು ಕುರಿತು ನೀತಿವಾಕ್ಯಾಮೃತ ಮತ್ತು ಅಭಿಲಷಿತಾರ್ಥಚಿಂತಾಮಣಿ ಎಂಬ ಕುತೂಹಲಕರವಾದ ಕೃತಿಗಳೂ ಬರೆಯಲ್ಪಟ್ಟಿವೆ. ಎರಡನೇಯದು ಮಾನಸೋಲ್ಲಾಸ ಎಂಬ ಹೆಸರನ್ನೂ ಹೊಂದಿರುವ ವಿಶ್ವಕೋಶವಾಗಿದೆ. ಶಿವತತ್ತ್ವ ರತ್ನಾಕರವೂ ಇಂಥದೇ ಒಂದು ಕೃತಿಯಾಗಿದ್ದು ಲೌಕಿಕ ಹಾಗೂ ಸುಸಂಸ್ಕೃತಾಭಿರುಚಿಯ ಜೀವನದ ದೃಷ್ಟಿಯುಳ್ಳ ರಾಜ್ಯ ವ್ಯವಸ್ಥೆ, ಲಲಿತಕಲೆ, ಬೇಟೆ ಹೀಗೆ ಎಲ್ಲ ವಿಷಯಗಳನ್ನು ಒಳಗೊಂಡಿದೆ. ಈ ರೀತಿಯಾಗಿ ಬೌದ್ಧಿಕ, ಧಾರ್ಮಿಕ, ಹಾಗೂ ಸಾಹಿತ್ಯಿಕ ಸಾಧನೆಗಾಗಿ ಕನ್ನಡದ ಸಂಗಡವೇ ಸಂಸ್ಕೃತವನ್ನು ತನ್ನ ಮಾಧ್ಯಮವನ್ನಾಗಿ ಕರ್ನಾಟಕವು ಸ್ವೀಕರಿಸಿದೆ; ಸಂಸ್ಕೃತವು ತನಗೆ ಶಿಕ್ಷೆಯಾಗಿ ಬಂದುದು ಅಥವಾ ಹೊರೆಯಾದುದು ಎಂದು

ಕರ್ನಾಟಕಕ್ಕೆ ಎಂದೂ ಅನಿಸಿಲ್ಲ. ಶತಮಾನಗಳಿಂದಲೂ ಕನ್ನಡ ಭಾಷೆ ಹಾಗೂ ಸಾಹಿತ್ಯಿಕ ಸಾಧನೆಗಳು ಸಂಸ್ಕೃತದ ನಿಕಟವಾದ ಸಂಬಂಧವನ್ನು ಪಡೆದಿವೆ. 19 ಹಾಗೂ 20ನೇಯ ಶತಮಾನ ಗಳಲ್ಲಿ ಮಾತ್ರ ಕನ್ನಡಕ್ಕೆ ಇಂಗ್ಲಿಷ್ ಭಾಷೆಯ ಸಂಪರ್ಕ ಬೆಳೆಯುತ್ತ ಹೋಗಿ, ಕನ್ನಡವು ಬೇರೆ ರೀತಿಯಲ್ಲಿ ಜೀವ ಪಡೆಯಲಾರಂಭಿಸಿತು. ಭಾಷಾಭಿಮಾನದ ಗಾಳಿಯು ರಾಷ್ಟ್ರಾಭಿಮಾನದ ಒಂದು ಭಾಗವಾಗಿ ಬೀಸಿ, ಕನ್ನಡದ ಸ್ವಾತಂತ್ರ್ಯವನ್ನು ಹಕ್ಕಿನಿಂದ ಕೇಳುವ ಭಾವನೆ ಸ್ಫುರಣಗೊಂಡಿತು.

ಪ್ರಾಚೀನ ಕಾಲದಲ್ಲಿ ಹಾಗೂ ಈಗಲೂ ಸಂಸ್ಕೃತ ಸಾಹಿತ್ಯದ ಬೆಳವಣಿಗೆಗಾಗಿ ಕೆಲಸ ಮಾಡಿದ ಮತ್ತು ಕೆಲಸ ಮಾಡುತ್ತಿರುವ ವಿದ್ಯಾಕೇಂದ್ರಗಳು ಮತ್ತು ಸಂಘ ಸಂಸ್ಥೆಗಳ ಬಗ್ಗೆ ಹೇಳದೆ ಕರ್ನಾಟಕದಲ್ಲಿಯ ಸಂಸ್ಕೃತ ಸಾಹಿತ್ಯದ ವಿವೇಚನೆಯು ಪೂರ್ಣವಾಗಲಾರದು. ಪ್ರಾಚೀನ ಕಾಲದಲ್ಲಿ ವಿದ್ಯಾಕೇಂದ್ರಗಳು ರಾಜಧಾನಿಗಳು ಹಾಗೂ ಧಾರ್ಮಿಕ ಕೇಂದ್ರಗಳ ಜೊತೆಗೆ ಹೆಚ್ಚುಕಡಿಮೆ ಹೊಂದಿಕೊಂಡಿದ್ದವು. ವಿದ್ವಾಂಸರಿಗೆ ದಾನವಾಗಿ ನೀಡಿದ ಅಗ್ರಹಾರಗಳು ನಿಧಾನವಾಗಿ ವಿದ್ಯಾಕೇಂದ್ರಗಳಾದವು. ಹಲವು ವಿದ್ವಾಂಸರ ನಿವಾಸಗಳೇ ಗುರುಕುಲಗಳಾಗಿ ಪರಿವರ್ತಿತವಾದದ್ದನ್ನು ಗುರುತಿಸಬಹುದು. ಸಂಸ್ಕೃತ ಶಿಕ್ಷಣವು ಒಂದು ಸಂಸ್ಥೆಯದಾಗಿರದೆ ಹೆಚ್ಚಾಗಿ ಗುರುವಿನ ಮುಖಾಂತರವಾಗಿಯೇ ಇದ್ದ ಕಾರ್ಯಕ್ರಮವಾಗಿತ್ತು. ರಾಜಧಾನಿಗಳಲ್ಲಿ ಕಾಣಿಸಿಕೊಂಡ ಸಂಸ್ಥೆಗಳು ರಾಜಮನೆತನವು ವೈಭವದಲ್ಲಿರುವಾಗ ಅವೂ ವೈಭವಕ್ಕೇರಿ, ಆ ರಾಜಮನೆತನದ ಅವನತಿಯ ಜೊತೆಗೆ ಅವೂ ವಿನಾಶವನ್ನು ಪಡೆದಿವೆ. ಆದರೆ ಪ್ರಧಾನವಾಗಿರುವ ಅಗ್ರಹಾರದ ಸಣ್ಣ ಗುರುಕುಲಗಳು ಮತ್ತು ವಿವಿಧ ಧಾರ್ಮಿಕ ಪಂಗಡಗಳ ಮಠಗಳು ಸಂಸ್ಕೃತ ಶಿಕ್ಷಣವನ್ನು ಕೊನೆವರೆಗೂ ಕೊಡುತ್ತಲೇ ಬಂದಿವೆ. (ವಿವರಗಳಿಗಾಗಿ 10 ನೇಯ ಅಧ್ಯಾಯದ ಶಿಕ್ಷಣ ವಿಭಾಗವನ್ನು ನೋಡಿ).

ರಾಜಪರಿಪೋಷಿತ ಈ ಕೇಂದ್ರಗಳಲ್ಲದೆಯೇ, ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತ ಹೀಗೆ ವೇದಾಂತದ ಈ ಮೂರು ಪಂಥಗಳಿಗೆ ಮುಖ್ಯ ಸ್ಥಳಗಳಾದ ಶೃಂಗೇರಿ, ಮೇಲುಕೋಟೆ ಮತ್ತು ಉಡುಪಿ ಇವು ಆ ಸಿದ್ಧಾಂತಗಳ ಶೈಕ್ಷಣಿಕ ಕೇಂದ್ರಗಳೂ ಆಗಿವೆ. ಕಾಲ ಸರಿದಂತೆ ಕೂಡ್ಲಿ, ಶಿವಗಂಗಾ, ಆವನಿ, ಸಂಕೇಶ್ವರ ಮುಂತಾದವೂ ಅದ್ವೈತ ವಿದ್ಯೆಯ ಕೇಂದ್ರಗಳಾಗಿ ಅಭಿವೃದ್ಧಿಗೊಂಡವು. ಮೈಸೂರಿನ ಪರಕಾಲಮಠವು ವಿಶಿಷ್ಟಾದ್ವೈತದ ಕೇಂದ್ರವಾಯಿತು. ಉತ್ತರಾಧಿಮಠ, ವ್ಯಾಸರಾಯ ಮಠ, ರಾಘವೇಂದ್ರ ಮಠ, ಮುಳಬಾಗಿಲ ಮಠ ಮತ್ತು ಇನ್ನಿತರ ಕೆಲವು ಮಠಗಳು ದ್ವೈತ ವಿದ್ಯೆಯ ಕೇಂದ್ರಗಳಾಗಿ ಬೆಳೆದವು. ಜೈನವಿದ್ಯೆಯ ಕೇಂದ್ರಗಳಾಗಿ ಕಾರ್ಕಳ, ಮೂಡಬಿದ್ರಿ, ಶ್ರವಣಬೆಳಗೊಳ ಹಾಗೂ ಹುಂಚಗಳೂ ಪ್ರಗತಿ ಪಡೆದವು. ವೀರಶೈವ ಕೇಂದ್ರಗಳು ಅಸಂಖ್ಯಾತವಿದ್ದು, ಅವುಗಳಲ್ಲಿ ಶಿವಯೋಗಮಂದಿರ ಮತ್ತು ಪಂಚಾಚಾರ್ಯ ಮಠಗಳ ಪ್ರಧಾನ ಸ್ಥಳಗಳು ಹಾಗೂ ಅನೇಕ ವಿರಕ್ತಮಠಗಳು ಗಮನಾರ್ಹವಾದವುಗಳು.

19ನೇಯ ಶತಮಾನದಲ್ಲಿ ಆಧುನಿಕ ಪದ್ಧತಿಯ ಶೈಕ್ಷಣಿಕ ಸಂಸ್ಥೆಗಳು ಪ್ರಾರಂಭವಾದ ಮೇಲೆ, ಎಷ್ಟೋ ಸ್ಥಳಗಳಲ್ಲಿ ಸಂಸ್ಕೃತ ವಿದ್ಯಾಲಯಗಳನ್ನು, ಪಾಠಶಾಲೆಗಳನ್ನು ಸ್ಥಾಪಿಸಲಾಯಿತು. (10ನೇಯ ಅಧ್ಯಾಯದ ಸಂಸ್ಕೃತ ಶಿಕ್ಷಣವನ್ನು ನೋಡಿ).

ಬೆಂಗಳೂರಿನ ಉಭಯ ವೇದಾಂತ ಸಭಾ, ಅಭಿವೃದ್ಧಿ ಕಾರಿಣಿ ಸಭಾ, ಉನ್ನಹಿನಿ ಸಭಾ, ಸಮೀರ ಸಮಯ ಸಭಾ, ಹಾಗೂ ಇತರ ಇಂಥ ಸಂಸ್ಥೆಗಳು ಪ್ರತೀ ವರುಷ ವಿದ್ವತ್ ಸಭೆಗಳನ್ನು ಏರ್ಪಡಿಸುತ್ತವೆ. ನೋಂದಾಯಿಸಲಾದ ಹಲವು ಸಂಸ್ಥೆಗಳು ಸಾಹಿತ್ಯ ಕಾರ್ಯಕ್ರಮಗಳನ್ನು ಏರ್ಪಡಿಸುತ್ತವೆ. ಹೀಗೆ ಕರ್ನಾಟಕದ ಬುದ್ಧಿಜೀವಿಗಳ ಜೀವನದಲ್ಲಿ ಸಂಸ್ಕೃತವು ಹಾಸುಹೊಕ್ಕಾಗಿದೆ. ಸಂಸ್ಕೃತದ ಮುಂದಾಳುಗಳು ದೇಶದಲ್ಲಿನ ಹೊಸ ಬೌದ್ಧಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಸಮಾಲೋಚಿಸಿದರೆ, ಸಂಸ್ಕೃತವು ಹೆಚ್ಚು ಪರಿಣಾಮಕಾರಿಯಾಗಿ ತನ್ನ ಪಾತ್ರವನ್ನು ನಿರ್ವಹಿಸಬಲ್ಲುದು.

## ಕರ್ನಾಟಕದಲ್ಲಿ ಇಂಗ್ಲೀಷ್

ಕಳೆದ ಸುಮಾರು ಒಂದುನೂರ ಐವತ್ತು ವರ್ಷಗಳಲ್ಲಿ ಕರ್ನಾಟಕದ ಸಾಂಸ್ಕೃತಿಕ ಜೀವನದಲ್ಲಿ ಇಂಗ್ಲೀಷ್ ಗಣನೀಯವಾದ ಶಕ್ತಿ ಎನಿಸಿದೆ. ಇಂಗ್ಲೀಷ್ ಭಾಷೆ ಸಾಮಾನ್ಯ ಮನುಷ್ಯ ಮತ್ತು ಉನ್ನತ ಶಿಕ್ಷಣ ಪಡೆದ ಈ ಎರಡೂ ವರ್ಗದವರ ಕನ್ನಡ ಬರಹ ಮತ್ತು ಶಬ್ದ ಭಂಡಾರದ ಮೇಲೂ ಪ್ರಭಾವವನ್ನು ಬೀರಿದೆ. ಕನ್ನಡ ಸಾಹಿತ್ಯದ ಮೇಲೆ ಇಂಗ್ಲೀಷ್ ಸಾಹಿತ್ಯವು ತನ್ನ ಪ್ರಭಾವ ಮುದ್ರೆಯನ್ನೊತ್ತಿದೆ. ಅದು ಈ ಶತಮಾನದ ಎರಡನೇಯ ದಶಕದ ನವೋದಯಕ್ಕೆ ನೆರವಾಯಿತು ; ಮತ್ತು ಅನಂತರದ ಬೆಳವಣಿಗೆಗಳ ಮೇಲೂ ಅದು ಪ್ರಭಾವವನ್ನು ಬೀರಿತು. ಕನ್ನಡ ಓದುಗನಿಗೆ ಜಗತ್ತಿನ ಸಾಹಿತ್ಯಗಳ ರತ್ನ ಭಂಡಾರಗಳ ಬೀಗಗಳನ್ನು ತೆರೆಯಲು ಇಂಗ್ಲೀಷ್ ಬೀಗದಕೈ ಆಯಿತು. ಹೀಗೆ ಹೊಸ ಪ್ರಭಾವಗಳು ಇಂಗ್ಲೀಷ್‌ನ ಮೂಲಕ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದವು.

ಕನ್ನಡ ಭಾಷೆಯನ್ನಾಡುವ ಪ್ರದೇಶದಲ್ಲಿ ಸುಮಾರು ಅರ್ಧ ಭಾಗ ಹಿಂದಿನ ಮೈಸೂರು ಅರಸರ ಆಡಳಿತವಿದ್ದ ಸಂಸ್ಥಾನಕ್ಕೆ ಸೇರಿತ್ತು. ಈ ಪ್ರದೇಶವು ಟಿಪ್ಪುಸುಲ್ತಾನನ

ಪತನಾನಂತರ 1799ರಲ್ಲಿ ಬ್ರಿಟಿಷರ ಅಧೀನಕ್ಕೆ ಬಂದಿತು. ಮೈಸೂರಿನ ರಾಜರಾದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಇಂಗ್ಲಿಷ್ ಕಲಿಸಲಾಯಿತು. ಹಿಂದಿನ ಮೈಸೂರು ಸಂಸ್ಥಾನದಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಸುವ ಮೊಟ್ಟಮೊದಲ ಶಾಲೆ 1833ರಲ್ಲಿ ಪ್ರಾರಂಭವಾಯಿತು. ಈ ಕಾಲದಲ್ಲಿ ಮುದ್ರಣದ ಪ್ರಾರಂಭ, ವೃತ್ತಪತ್ರಿಕೆಗಳ ಸ್ಥಾಪನೆ ಇಂತಹ ಹಲವಾರು ಗಮನಾರ್ಹ ಬೆಳವಣಿಗೆಗಳಾದವು. ಪಶ್ಚಿಮ ದೇಶಗಳಿಂದ ಬಂದ ಮಿಷನರಿಗಳು ಈ ಎಲ್ಲ ಪ್ರಯತ್ನಗಳಲ್ಲೂ ಭಾಗವಹಿಸಿದ್ದರು. ಇಂಗ್ಲಿಷನ್ನು ಶಾಲೆಗಳಲ್ಲಿ ಕಲಿಸುವ ಅಗತ್ಯವನ್ನು ಈಸ್ಟ್ ಇಂಡಿಯಾ ಕಂಪೆನಿ, ಹಾಗೆಯೇ ಮೈಸೂರಿನ ಅರಸರೂ ಗುರುತಿಸಿದರು. ಹೀಗೆ ಪಾಶ್ಚಾತ್ಯ ಶಿಕ್ಷಣ ಪದ್ಧತಿಯು ಆಳವಾಗಿ ಬೇರುಬಿಟ್ಟಿತು. (ಭಾರತೀಯ ರಾಜರಾಳುತ್ತಿದ್ದ ಸಂಸ್ಥಾನಗಳಲ್ಲಿ ಮೊಟ್ಟಮೊದಲ ವಿಶ್ವವಿದ್ಯಾಲಯ ಸ್ಥಾಪಿತವಾದದ್ದು 1916 ರಲ್ಲಿ, ಇದು ಮೈಸೂರು ವಿಶ್ವವಿದ್ಯಾಲಯ). ಹಳೆಯ ಮೈಸೂರು ಸಂಸ್ಥಾನವು 1831 ರಿಂದ 1881 ರವರೆಗೆ ನೇರವಾಗಿ ಬ್ರಿಟಿಷರ ಆಡಳಿತಕ್ಕೆ ಒಳಗಾಯಿತು. ಆ ಅವಧಿಯಲ್ಲಿ ಈ ಪ್ರದೇಶದ ಆಡಳಿತದಲ್ಲಿಯೂ, ಶಿಕ್ಷಣ ವ್ಯವಸ್ಥೆಯಲ್ಲಿಯೂ ಇಂಗಿಷ್ ಭಾಷೆ ಮುಖ್ಯವಾದ ಪಾತ್ರವನ್ನು ವಹಿಸಿತು.

ಸಹಜವಾಗಿ ಹೊಸ ಭಾಷೆಯ ಪ್ರಭಾವ ಮೊಟ್ಟಮೊದಲು ಕಂಡುಬಂದದ್ದು ಆಡಳಿತ ಮತ್ತು ನ್ಯಾಯಾಂಗಗಳಲ್ಲಿ. ಸಾಮಾನ್ಯ ಮನುಷ್ಯ, ಅಧಿಕಾರಿಗಳು, ಹಳ್ಳಿಗ, ನಗರವಾಸಿ, ಮಹಾರಾಜರು—ಎಲ್ಲರೂ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತ ಮತ್ತು ಅದರ ನ್ಯಾಯ ವ್ಯವಸ್ಥೆ ಇವುಗಳ ಪ್ರಭಾವಕ್ಕೆ ಒಳಗಾದರು. ಅನೇಕ ಶಬ್ದಗಳು-ಕಂಪೆನಿ, ಕೋರ್ಟ್, ಆರ್ಡರ್ ಇಂತಹವು ದಿನನಿತ್ಯದ ಭಾಷೆಯೊಳಕ್ಕೆ ಬಂದವು. ಕೆಲವೊಮ್ಮೆ ಅವು ಸ್ವಲ್ಪ ಮಟ್ಟಿಗೆ ಮಾರ್ಪಟ್ಟವು; 'ಕಂಪೆನಿ' ಶಬ್ದವು 'ಕುಂಪಣಿ' ಆದಹಾಗೆ ಕಾಲಕಳೆದಂತೆ, ಆಡಳಿತ, ನ್ಯಾಯ ಮತ್ತು ಶಿಕ್ಷಣ ವ್ಯವಸ್ಥೆಗಳು ತಮ್ಮ ಪ್ರಭಾವ ವಲಯವನ್ನು ವಿಸ್ತರಿಸಿಕೊಂಡಂತೆ ಕನ್ನಡಕ್ಕೆ ಬಂದ ಇಂಗ್ಲಿಷ್ ಶಬ್ದಗಳ ಸಂಖ್ಯೆ ಹೆಚ್ಚಿತು. ಈ ಪ್ರಕ್ರಿಯೆ ಮುಂದುವರಿಯುತ್ತಲೇ ಇದ್ದು, ಪ್ರಾಯಶಃ ಇನ್ನೂ ಬಹುಕಾಲ ಮುಂದುವರಿಯುವುದು; ಆದರೆ ಬಳಕೆಗೆ ತೆಗೆದುಕೊಳ್ಳುವಲ್ಲಿ ಹೆಚ್ಚು ವಿವೇಚನೆ ಕಾಣುತ್ತದೆ. ಸ್ಕೂಲ್, ಕಾಲೇಜ್, ಲಾಯರ್, ರಿಕಾರ್ಡ್, ಅಜರ್ನ್‌ಮೆಂಟ್, ಫೀಸ್ ಮತ್ತು ಮಿಸ್ಟೇಕ್ ಇಂತಹ ಶಬ್ದಗಳು ಬಳಕೆಯಲ್ಲಿ ಕನ್ನಡ ಶಬ್ದಗಳೇ ಆಗಿಹೋಗಿವೆ. ಜೀವನದ ಹಲವು ಕ್ಷೇತ್ರಗಳಿಗೆ ಸಂಬಂಧಿಸಿದ ಹಲವು ಶಬ್ದಗಳ ವಿಷಯದಲ್ಲಿಯೂ ಇದನ್ನೇ ಕಾಣುತ್ತೇವೆ; ಉದಾಹರಣೆಗೆ ('ರೈಲ್ವೆ'ಗೆ) ರೈಲ್, ಲೈಟ್, ಬಿಲ್, ('ರಿಸೀಟ್'ಗೆ) ರಸೀತಿ, ಹೋಟೇಲ್, ರೋಡ್, ಪೇಪರ್, ಪೆನ್ಸಿಲ್, ವೋಟ್, ಬಸ್, ಲಾರಿ, ಸೈಕಲ್ ('ಬೈಸಿಕಲ್'ಗೆ), ಗೇಟ್ ಮತ್ತು ಸಿನಿಮಾ. ಮನುಷ್ಯನು ಹೊಸ ಸಂಗತಿಗಳನ್ನು ಕಂಡುಕೊಂಡಂತೆ ಮತ್ತು ವಸ್ತುಗಳನ್ನು ಸೃಷ್ಟಿ ಮಾಡಿದಂತೆ ಇಂಗ್ಲಿಷ್ ಭಾಷೆ ಬೆಳೆದಿದೆ. ಕನ್ನಡ ಭಾಷೆ ನಿಸ್ಸಂಕೋಚವಾಗಿ ಹೊಸ ಶಬ್ದಗಳನ್ನು ತೆಗೆದುಕೊಂಡಿದೆ; ನೈಲಾನ್, ಟ್ರಾನ್ಸಿಸ್ಟರ್ ಮತ್ತು ಜೆಟ್ ನಂತಹ ಪದಗಳು—ಹೀಗೆ ಕನ್ನಡಕ್ಕೆ ಸೇರಿಸಿಕೊಂಡ ಶಬ್ದಗಳಾಗಿವೆ. ಬಳಕೆಗೆ ತೆಗೆದುಕೊಳ್ಳುವ ಪ್ರಕ್ರಿಯೆ ಹಲವು ಸ್ತರಗಳಲ್ಲಿ ಮುಂದುವರಿದೇ ಇದೆ. ಹಳ್ಳಿಯವರು ಸಹ ಡೆಪ್ಯುಟಿ ಕಮಿಷನರ್, ಮಾಸ್ಟರ್, ಲಾಯರ್, ಕೋರ್ಟ್, ಫೈನ್, ಹಿಯರಿಂಗ್, ರಿಕಾರ್ಡ್ ಇಂತಹ ಶಬ್ದಗಳನ್ನು ತಮ್ಮದನ್ನಾಗಿ ಮಾಡಿಕೊಂಡುಬಿಟ್ಟಿದ್ದಾರೆ. ವಿದ್ಯಾವಂತರು ಭಾಷೆ ಬೆಳೆಸುವಾಗ ತಮ್ಮ ವೃತ್ತಿಗಳು ಮತ್ತು ಆಸಕ್ತಿಗಳಿಗೆ ಸಂಬಂಧಿಸಿದ ಶಬ್ದಗಳನ್ನು ಆರಿಸಿಕೊಂಡಿದ್ದಾರೆ. ಜ್ಞಾನದ ಎಲ್ಲ ಕ್ಷೇತ್ರಗಳೂ ತಮ್ಮ ಶಬ್ದ ಭಂಡಾರದ ಶ್ರೀಮಂತಿಕೆಗೆ ಇಂಗ್ಲಿಷ್ ಭಾಷೆಗೆ ಬಹುಮಟ್ಟಿಗೆ ಋಣಿಯಾಗಿವೆ. ತೀರ ತಜ್ಞನಲ್ಲದವನು ತನ್ನ ಶಬ್ದ ಭಂಡಾರದ ಕೊರತೆಗಳನ್ನು ತುಂಬಿಕೊಳ್ಳುವುದಕ್ಕೆ ಇಂಗ್ಲಿಷನ್ನು ಬಳಸಿಕೊಂಡಿದ್ದಾನೆ. ವಿದ್ಯಾವಂತನಾದವನೂ ಮಾತನಾಡುವಾಗ ಹಲೋ, ಜಂಟ್ಲ್‌ಮನ್ ಮತ್ತು ಥ್ಯಾಂಕ್ಸ್ ಇಂತಹ ಶಬ್ದಗಳನ್ನು ಬಳಸಿಕೊಳ್ಳದೆ ಮಾತನಾಡಲಾರ. ಇನ್ನೂ ತಿಳುವಳಿಕೆಯ ಜನ ಸೀರಿಯಸ್, ರಿಸ್ಕ್, ರೊಮ್ಯಾಂಟಿಕ್, ಕ್ರಾಸ್‌ಸೆಕ್ಷನ್, ಅಥೆಂಟಿಕ್, ಪಾಸಿಟಿವ್ ಅಪ್ರೋಚ್, ನೆಗೆಟಿವ್ ಅಪ್ರೋಚ್ ಮತ್ತು ಕನ್‌ಸ್ಟ್ರಕ್ಟಿವ್—ಇಂತಹ ಪದಗಳನ್ನು ನಿರಾತಂಕವಾಗಿ ಬಳಸುತ್ತಾರೆ.

ಇಂಗ್ಲಿಷ್ ಭಾಷೆಯು ಸಾಮಾನ್ಯ ಮನುಷ್ಯ, ಇನ್ನೂ ತಿಳುವಳಿಕೆಯುಳ್ಳ, ಚಿಂತನಶೀಲ ಮತ್ತು ತಜ್ಞ ಈ ಮೂವರ ಭಾಷೆಯ ಮೇಲೂ ಇಷ್ಟು ಗಾಢವಾಗಿ ಪ್ರಭಾವಿಸಿರುವಾಗ ಸೃಜನಶೀಲ ಬರಹ ಮತ್ತು ಸೃಜನಶೀಲವಲ್ಲದ ಬರಹ ಎರಡರ ಮೇಲೂ ಪ್ರಭಾವ ಬೀರಿರುವುದು ಆಶ್ಚರ್ಯವಲ್ಲ. ಇಂಗ್ಲಿಷಿನಲ್ಲಿ ಸಾಹಿತ್ಯಿಕ ಮತ್ತು ಸಾಹಿತ್ಯವಲ್ಲದ ಬರಹವನ್ನು ಅಧ್ಯಯನ ಮಾಡಿದವರು ಕನ್ನಡವನ್ನು ಬಳಸಿದಾಗ ವಾಕ್ಯಗಳ ರಚನೆಯಲ್ಲಿಯೇ ಹೆಚ್ಚು ವೈವಿಧ್ಯ ಕಾಣಲಾರಂಭವಾಯಿತು. ಅವರ ಅಧ್ಯಯನದಿಂದ ಅವರಿಗೆ ಇಂಗ್ಲಿಷ್ ಗದ್ಯದ ಶ್ರೀಮಂತ ವೈವಿಧ್ಯ ಮತ್ತು ವಿಶಿಷ್ಟ ಉದ್ದೇಶಗಳಿಗೆ ಭಾಷೆಯನ್ನು ಪ್ರಜ್ಞಾಪೂರ್ವಕವಾಗಿ ಹೊಂದಿಸಿಕೊಳ್ಳುವುದು ಸ್ಪಷ್ಟವಾಯಿತು. ಇಂಗ್ಲಿಷ್ ಬರಹದಲ್ಲಿ ಒತ್ತನ್ನು ವಿತರಣೆ ಮಾಡುವ ರೀತಿ ಮತ್ತು ರಸ್ಕಿನ್, ನ್ಯೂಮನ್, ಕಾರ್ಲೈಲ್, ಪೇಟರ್ ಮತ್ತು (ಅವನ ಬರಹದಲ್ಲಿ ಹಲವಾರು ವೈಚಿತ್ರ್ಯಗಳಿದ್ದರೂ ಭಾಷೆಯನ್ನು ಅದ್ಭುತವಾದ ಕೌಶಲದಿಂದ ನಡೆಸುವ) ಡಿಕನ್ಸ್ ಇಂತಹ ಭಾಷಾಪ್ರಭುಗಳು ಬಳಸುವ ಸಾಧನಗಳನ್ನು ಅವರು ಗುರುತಿಸಿದರು. ಇಂಗ್ಲಿಷ್ ಭಾಷೆಯ ಅಭ್ಯಾಸದಿಂದ ಕನ್ನಡ ಗದ್ಯ ತುಂಬಾ ಲಾಭ ಗಳಿಸಿತು. ಅದಕ್ಕೆ ವೈವಿಧ್ಯ ಮತ್ತು ಹೊಂದಿಕೊಳ್ಳುವಿಕೆಗಳು ಲಭ್ಯವಾದವು. ಕಳೆದ ಹಲವು ದಶಕಗಳ ಪ್ರಮುಖ ಗದ್ಯ ಬರಹಗಾರರು (ಇವರಲ್ಲಿ

ಹಲವರು ಖ್ಯಾತ ಪತ್ರಕರ್ತರು) ಪ್ರಜ್ಞಾಪೂರ್ವಕ ಕಲೆಗಾರರು ; ಕನ್ನಡ ಭಾಷೆಯಲ್ಲಿ ಸಂಸ್ಕೃತದಿಂದ ಬಂದ ಶಬ್ದಗಳು, ಕನ್ನಡದ ಸ್ವಂತ ಶಬ್ದಗಳು, ಇಂಗ್ಲಿಷ್ ಮತ್ತು ಹಲವು ಭಾರತೀಯ ಭಾಷೆಗಳಿಂದ ಎರವಲಾಗಿ ಬಂದ ಪದಗಳು—ಈ ಶಬ್ದನಿಧಿಗಳಿಂದ ಕನ್ನಡದಲ್ಲಿರುವ ವಿವಿಧ ಅಂಶಗಳು ಮತ್ತು ಆಡುಮಾತಿನ ಲಯಗಳು ಇವೆಲ್ಲವುಗಳ ಅರಿವು ಸದಾ ಅವರ ಶೈಲಿಯನ್ನು ರೂಪಿಸಿದೆ.

ನವೋದಯದ ಪ್ರಾರಂಭವನ್ನು 'ಇಂಗ್ಲಿಷ್ ಗೀತೆಗಳು' (1921; ವಿಸ್ತೃತ ಆವೃತ್ತಿ 1924) ಗುರುತಿಸಿತು. ಈ ಅವಧಿಯಲ್ಲಿ ಸುನೀತ, ಪ್ರಗಾಥ, ಸಣ್ಣಕಥೆ, ಕಾದಂಬರಿ ಮತ್ತು ಲಲಿತ ಪ್ರಬಂಧದಂತಹ ಹಲವಾರು ಸಾಹಿತ್ಯ ರೂಪಗಳು ಕನ್ನಡಕ್ಕೆ ಇಂಗ್ಲಿಷ್ ಸಾಹಿತ್ಯದ ಉಡುಗೊರೆಯಾಗಿ ಬಂದವು. ಈ ಶ್ರೀಮಂತಿಕೆಯಲ್ಲದೆ ಇನ್ನೊಂದು ಸಂಗತಿಯೂ ನಡೆಯಿತು. ಮೊದಲನೇಯದಾಗಿ ಸಾಹಿತ್ಯದ ಮನೋಧರ್ಮದಲ್ಲೇ ತೀವ್ರ ಮಾರ್ಪಾಟಾಯಿತು. ಸಾಹಿತ್ಯವು ಮಾನವತಾವಾದಿ ಮತ್ತು ಜಾತ್ಯತೀತವಾಯಿತು. ನವೋದಯ ಬರಹಗಾರರಲ್ಲಿ ಬಹುಮಂದಿ ಭಾರತೀಯ ತತ್ವಶಾಸ್ತ್ರವನ್ನು ರಕ್ತಗತ ಮಾಡಿಕೊಂಡವರು ಮತ್ತು ಆಸ್ತಿಕರು. ಆದರೆ ಷೇಕ್ಸ್‌ಪಿಯರ್ ಮತ್ತು ಇಂಗ್ಲಿಷ್ ರಮ್ಯ ಸಾಹಿತ್ಯ ಇವುಗಳ ಅಧ್ಯಯನ ಅವರ ಮೇಲೆ ಆಳವಾದ ಪ್ರಭಾವವನ್ನು ಬೀರಿತು. ಸಾಹಿತ್ಯವು ಜೀವನಕ್ಕೆ ಬಹಳ ಸಮೀಪವಾಯಿತು. ಈ ಜಗತ್ತಿನ ಬಾಳು ಇನ್ನೊಂದು ಜಗತ್ತಿಗೆ ಹಾದಿ ಎಂಬುವುದಕ್ಕಾಗಿ ಮುಖ್ಯ ಎನ್ನಿಸದೆ, ಈ ಬಾಳನ್ನೇ ಮೆಚ್ಚಿ ಸ್ವೀಕರಿಸುವ ಮನೋಧರ್ಮ ಬಂದಿತು. ಒಟ್ಟಿನಲ್ಲಿ ಈ ಕಾಲದ ಬರಹಗಾರರು ಕ್ರಾಂತಿಕಾರರಲ್ಲ. (ಇದು ಸಹಜವೇ ಏಕೆಂದರೆ ಸ್ವಾತಂತ್ರ್ಯದ ಹೋರಾಟ ತೀವ್ರವಾದದ್ದು ಈ ಕಾಲದಲ್ಲೇ ; ಸ್ವಾತಂತ್ರ್ಯವು ಸರ್ವರೋಗ ಪರಿಹಾರಿಣಿ ಎಂದು ಕಾಣುತ್ತಿತ್ತು). ಆದರೆ ಇವರೆಲ್ಲ ಉದಾರವಾದಿಗಳು ಮತ್ತು ಮನುಷ್ಯರಾಗಿಯೇ ಮನುಷ್ಯನ ಘನತೆಯನ್ನು ಸಾರಿದವರು. ಮನುಷ್ಯ ಅನುಭಾವವನ್ನು ಪವಿತ್ರವೆಂದು ಸಾರಿದರು. ಭೂಮಿಯ ಸೌಂದರ್ಯ, ಗೆಳೆತನ ಮತ್ತು ಪ್ರೀತಿಯ ಮಾಧುರ್ಯಗಳನ್ನು ಅರ್ಥೈಸುವ ಹಾಗೂ ಕನಿಕರಿಸುವ ಬಗೆಯು ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡು ಮೆರೆಯಿತು. ನಿಸರ್ಗದೊಡನೆ ಒಂದು ಅನುಭಾವದ ಸಂಬಂಧವನ್ನು ಸಂತೋಷದಿಂದ ಬೆಳೆಸಿಕೊಂಡರು.

ಎರಡನೇಯದಾಗಿ ಈ ಯುಗದವರೆಗೆ ಕನ್ನಡ ಸಾಹಿತ್ಯವಷ್ಟೂ ಸಮಾಜ ಸ್ವೀಕರಿಸಿದ್ದ ನೈತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ನಿರೂಪಿಸಿತ್ತು. ಸಾಹಿತಿಯು ಸಮಾಜ ಒಪ್ಪಿಕೊಂಡಿದ್ದ ಮೌಲ್ಯಗಳು ಮತ್ತು ನಿಲುವುಗಳನ್ನು ಶಕ್ತಿಯುತವಾದ ಮತ್ತು ಅಂತಃಕರಣವನ್ನು ಮುಟ್ಟುವ ಭಾಷೆಯಲ್ಲಿ ನಿರೂಪಿಸಿ ಸಮಾಜದ ಮಾರ್ಗದರ್ಶಕ ಮತ್ತು ಗುರು ಆಗಿದ್ದನು. ಹೀಗೆಯೇ, ವೀರಶೈವ ಶರಣರೂ, ಹರಿದಾಸರೂ ಸಮಾಜವನ್ನು ಟೀಕಿಸಿದ್ದರು. ಆದರೆ ಅವರೂ ತಮ್ಮ ತತ್ತ್ವಜ್ಞಾನದ ಸಾಧನಗಳನ್ನು ಆಸ್ತಿಕತೆ ಮತ್ತು ಆಮುಷ್ಮಿಕತೆ ಇವುಗಳ ಗಟ್ಟಿ ಬಂಡೆಯ ಮೇಲೆಯೇ ನಿರ್ಮಿಸಿದ್ದರು. ಆದರೆ ಪುನರುಜ್ಜೀವನ ಯುಗದಲ್ಲಿ ಸಾಹಿತ್ಯದಲ್ಲಿ, ಪತ್ರಿಕೋದ್ಯಮದಲ್ಲಿ ಮತ್ತು ಇತರ ಗಂಭೀರ ಬರಹದಲ್ಲಿ ವೈಯಕ್ತಿಕ ಅಂಶ ಮುಖ್ಯವಾಯಿತು. ಆಗ ಸಾಹಿತಿ ಓದುಗನೊಂದಿಗೆ ತನ್ನ ದರ್ಶನವನ್ನು ಹಂಚಿಕೊಳ್ಳುತ್ತಿದ್ದ. ಕನ್ನಡ ಸಾಹಿತಿ ಇಂಗ್ಲಿಷ್ ಭಾಷೆಯ ಮೂಲಕ ಗ್ರೀಕ್ ಸಾಹಿತ್ಯ ಮತ್ತು ಸಾಕಷ್ಟು ಮಟ್ಟಿಗೆ ಆಧುನಿಕ ಯುರೋಪಿಯನ್ ಸಾಹಿತ್ಯಗಳಿಗೆ ಕೈಚಾಚುತ್ತಿದ್ದ. ಈಸ್ಕಿಲಸ್ ಮತ್ತು ಸಫೋಕ್ಲೀಸ್, ಷೇಕ್ಸ್‌ಪಿಯರ್, ಮಿಲ್ಟನ್, ಷೆಲ್ಲಿ ಮತ್ತು ಇಬ್ಸನ್ ಇವರೆಲ್ಲರ ವೈಯಕ್ತಿಕ ದರ್ಶನಗಳಿಗೆ ಅವನು ಸ್ಪಂದಿಸದೇ ಇರುವುದು ಸಾಧ್ಯವಿರಲಿಲ್ಲ.

ಈಚಿನ ಎಲ್ಲ ದಶಕಗಳಲ್ಲಿ ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಪ್ರಭಾವ ಬೀರುತ್ತಲೇ ಬಂದಿದೆ. ಹೀಗೆಂದರೆ ಕನ್ನಡ ಸಾಹಿತ್ಯ ಅನುಕರಣೆ ಮಾಡುತ್ತಿದೆ ಎಂದರ್ಥವಲ್ಲ. ಕನ್ನಡದ ಶ್ರೇಷ್ಠ ಬರಹಗಾರರು ಹೊರದೇಶಗಳ ಸಾಹಿತ್ಯಗಳ ಪ್ರಭಾವವನ್ನು ಅರಗಿಸಿಕೊಂಡಿದ್ದಾರೆ. ಆದರೆ ಆಧುನಿಕ ಕನ್ನಡ ಸಾಹಿತ್ಯವು ಪ್ರತೀಯೊಂದು ಘಟ್ಟದಲ್ಲೂ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಇಂಗ್ಲಿಷಿಗೆ ಋಣಿಯಾಗಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಇಂಗ್ಲಿಷ್ ಬರಹಗಾರರೇ ಹೊಸ ಸಾಧ್ಯತೆಗಳನ್ನು ಸೂಚಿಸಿದ್ದಾರೆ. ಪ್ರಗತಿಶೀಲ ಪಂಥದ ಕಾದಂಬರಿಯ ಮೇಲೆ ಡಿ. ಎಚ್. ಲಾರೆನ್ಸ್‌ನ ಪ್ರಭಾವ ಬಿತ್ತು. ನವ್ಯಯುಗವು, 1952ರಲ್ಲಿ ಪ್ರಕಟವಾದ ಗೋಪಾಲಕೃಷ್ಣ ಅಡಿಗರ ಕೃಷ್ಣನ ಕೊಳಲು ಮತ್ತು ಹಿಮಗಿರಿಯ ಕಂದರ ಈ ಕವನಗಳಿಂದ ಸ್ಪಷ್ಟವಾಗಿ ಪ್ರಾರಂಭವಾಯಿತೆನ್ನಬಹುದು. ಈ ಯುಗದ ಮನೋಧರ್ಮ ಹಾಗೂ ಹೊಸ ತಾಂತ್ರಿಕ ಪ್ರಯೋಗಗಳು ಟಿ. ಎಸ್. ಎಲಿಯಟ್‌ನಿಂದ ಪ್ರೇರಿತವಾದವು. ಅಸಂಬದ್ಧ ನಾಟಕವು ಸ್ಯಾಮ್ಯುಯಲ್ ಬೆಕೆಟ್‌ನ ನಾಟಕಗಳ, ಮುಖ್ಯವಾಗಿ ವೈಟಿಂಗ್ ಫಾರ್ ಗೋಡ್ಡೋ ನಾಟಕದ, ಮನೋಧರ್ಮವನ್ನು ಹಿಡಿಯಿತು. ಮಾರ್ಕ್ಸಿಸ್ಟ್ ತತ್ವಗಳು ಪ್ರಗತಿಶೀಲ ಸಾಹಿತ್ಯದಲ್ಲಿ (ಸುಮಾರು 1945-52) ಹಾಸುಹೊಕ್ಕಾಗಿ ಸೇರಿಕೊಂಡವು. ನವ್ಯೋತ್ತರ ಸಾಹಿತ್ಯವು ಅವುಗಳಿಂದ ಸಾಕಷ್ಟು ಪ್ರಭಾವ ಪಡೆದಿದೆ. ಬೆಕೆಟ್, ಕಾಮೂ, ಕಾಫ್ಕ, ಬ್ರೆಕ್ಟ್, ಸಾರ್ತ್ರೆ—ಇಂಗ್ಲೆಂಡಿನ ಮತ್ತು ಯೂರೋಪಿನ ಇಂತಹ ಅನೇಕ ಮಂದಿ ಬರಹಗಾರರ ಕೃತಿಗಳ ಅನುವಾದಗಳು ಕನ್ನಡದಲ್ಲಿ ಪ್ರಕಟವಾಗಿವೆ. ಕನ್ನಡ ಬರಹಗಾರನು ಅಮೇರಿಕದ ಮತ್ತು ಯೂರೋಪಿನ ಸಾಹಿತ್ಯಗಳ ಸಾಮ್ರಾಜ್ಯಗಳನ್ನು ಪ್ರವೇಶಿಸಿದ್ದು ಇಂಗ್ಲಿಷ್ ಮೂಲಕ; ಅಲ್ಲದೆ, ಆಧುನಿಕ ಮನೋವಿಜ್ಞಾನ, ಸಮಾಜ ವಿಜ್ಞಾನ, ಮಾನವಶಾಸ್ತ್ರ ಮತ್ತು ಜ್ಞಾನದ ಇತರ ಶಾಖೆಗಳೆಲ್ಲದರ ಭಂಡಾರ

ಗಳಿಗೆ ಇಂಗ್ಲಿಷ್ ಬೀಗದಕ್ಕೈ ಆಯಿತು. ಇವೆಲ್ಲ ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಗಾಢವಾದ ಪ್ರಭಾವ ಬೀರಿವೆ. ಅಲ್ಲದೆ ಹಲವು ಶತಮಾನಗಳಿಂದ ಭಾರತದಲ್ಲಿ ತತ್ತ್ವಶಾಸ್ತ್ರದ ಹೊಸ ಪಂಥಗಳ ಮಹತ್ವಪೂರ್ಣ ಬೆಳವಣಿಗೆ ಆಗಿಲ್ಲ; ಪಶ್ಚಿಮದಲ್ಲಿನಂತೆ ಇಲ್ಲಿ ಸಾಹಿತ್ಯ ಮತ್ತು ತತ್ತ್ವಶಾಸ್ತ್ರಗಳ ನಿಕಟಸಂಪರ್ಕವೂ ಆಗಿಲ್ಲ. ಆದರೆ ಕನ್ನಡ ಬರಹಗಾರನು ಆಧುನಿಕ ಯುರೋಪಿಯನ್ ಸಾಹಿತ್ಯದ ತತ್ತ್ವಶಾಸ್ತ್ರೀಯ ಆಧಾರಗಳನ್ನು ಪರಿಚಯ ಮಾಡಿಕೊಂಡಿದ್ದಾನೆ. ನವ್ಯಸಾಹಿತ್ಯಕ್ಕೆ ಪ್ರೇರಣೆ ಬಂದದ್ದು ಮತ್ತು ಅದನ್ನು ಪೋಷಿಸಿದ್ದು ಅಸ್ತಿತ್ವವಾದ.

ಆಧುನಿಕ ಕನ್ನಡ ಸಾಹಿತ್ಯದ ವಿದ್ಯಾರ್ಥಿಗೆ ಕಳೆದ ಆರು ದಶಕಗಳ ಸಾಹಿತ್ಯದ ನಿಲುವುಗಳಲ್ಲಿ ಮತ್ತು ಮೌಲ್ಯಗಳಲ್ಲಿ ಆದ ಬದಲಾವಣೆ ಗಮನಾರ್ಹ ಎನ್ನಿಸುತ್ತದೆ. ತೀವ್ರ ಬದಲಾವಣೆಗಳು ಆದದ್ದು ಪಾಶ್ಚಾತ್ಯ ಸಾಹಿತ್ಯಗಳ ಮತ್ತು ಸಾಹಿತ್ಯ ವಿಮರ್ಶೆಯ ಪ್ರಭಾವದಿಂದ. ನವೋದಯ ಬರಹಗಾರರು ಅಭಿಜಾತ ಭಾರತೀಯ ಸಾಹಿತ್ಯದ ಮಾರ್ಗಗಳು ಮತ್ತು ಮೌಲ್ಯಗಳನ್ನು ಇಂಗ್ಲೆಂಡಿನ ರಮ್ಯ ಮತ್ತು ವಿಕ್ಟೋರಿಯಾ ಯುಗಗಳ ವಿಮರ್ಶಕರ ಮಾರ್ಗಗಳು ಮತ್ತು ಮೌಲ್ಯಗಳೊಂದಿಗೆ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅಥವಾ ಡಿ. ವಿ. ಗುಂಡಪ್ಪ ಅಥವಾ ವಿ. ಸೀತಾರಾಮಯ್ಯ ಅಥವಾ ವಿ. ಕೃ. ಗೋಕಾಕ ಬರೆದ ಒಂದೇ ವಿಮರ್ಶಾ ಪ್ರಬಂಧದಲ್ಲಿ ಆನಂದ ವರ್ಧನ, ಅರಿಸ್ಟಾಟಲ್ ಮತ್ತು ಅರ್ನಾಲ್ಡರ ವಿಚಾರಗಳ ವಿವರಣೆಯಿರಬಹುದು ಅಥವಾ ಆ ವಿಚಾರಗಳು ಅಂತರ್ಗತವಾಗಿರಬಹುದು. ಆದರೆ ರಸ, ಆನಂದ, ವಕ್ರೋಕ್ತಿ, ಸಹೃದಯ ಮೊದಲಾದ ಪರಿಕಲ್ಪನೆಗಳು ಪ್ರಗತಿಶೀಲರ ವಿಮರ್ಶಾ ಬರಹದಲ್ಲಿ ಇಷ್ಟರಮಟ್ಟಿಗೆ ಕಾಣುವುದಿಲ್ಲ. ಸಾಹಿತ್ಯದಲ್ಲಿ ಬದ್ಧತೆಯ ಅಗತ್ಯದ ದೃಢ ಪ್ರತಿಪಾದನೆ ಮೊಟ್ಟಮೊದಲು ಈ ಯುಗದಲ್ಲಿ ಕೇಳಿಬರುತ್ತದೆ. ನವ್ಯ ಬರಹಗಾರನು ಸಾಹಿತ್ಯ ವ್ಯಕ್ತಿತ್ವದ ಅನ್ವೇಷಣೆ ಎಂದೂ ಸೃಜನ ಬರಹಗಾರನ ಭಾಷೆಯನ್ನು ಅನುಭವದ ಶೋಧನೆಯೆಂದೂ ಕಾಣುತ್ತಾನೆ; ಅವನು ಕವನದ ಸಾವಯವ ಸ್ವರೂಪವನ್ನು ಒತ್ತಿ ಹೇಳುತ್ತಾನೆ. .ನವ್ಯೋತ್ತರ ಬರಹಗಾರನು ಪ್ರತಿಗಾಮಿ ಮೌಲ್ಯಗಳನ್ನು, ಭೂಷ್ವಾರ್ ನಿಲುವುಗಳನ್ನು ಖಂಡಿಸುತ್ತಾನೆ. ಕಳೆದ ಮೂವತ್ತು ವರ್ಷಗಳಲ್ಲಂತೂ ಸಾಹಿತ್ಯವನ್ನು ಕುರಿತು ಸಿದ್ಧಾಂತಗಳು ಓದುಗ ಮತ್ತು ಬರಹಗಾರ ಇಬ್ಬರ ಮೇಲೂ ಬಹುಮಟ್ಟಿನ ಪ್ರಭಾವವನ್ನು ಬೀರಿವೆ; ಈ ಮಾಧ್ಯಮದ ಸ್ವರೂಪ, ಗುರಿ ಮತ್ತು ಶಕ್ತಿ ಸಾಮರ್ಥ್ಯಗಳನ್ನು ಕುರಿತು ಅವರ ವಿಚಾರಗಳು ರೂಪ ತಾಳುವಲ್ಲಿ ಪಾಶ್ಚಾತ್ಯ ಸಾಹಿತ್ಯಗಳ ಮತ್ತು ವಿಮರ್ಶೆಯ ಪಾತ್ರ ಪ್ರಧಾನವಾಗಿದೆ.

ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಇಂಗ್ಲಿಷಿನ ಭವಿಷ್ಯವನ್ನು ಕುರಿತು ಏನನ್ನೂ ನಿರ್ಧಾರವಾಗಿ ಹೇಳುವಂತಿಲ್ಲ. ಆದರೆ ಕೆಲವು ವಾಸ್ತವ ಅಂಶಗಳು ಕುತೂಹಲಕರವಾಗಿವೆ. ಇಂಗ್ಲಿಷನ್ನು ಕಲಿತ ಪ್ರತಿಯೊಬ್ಬರೂ, ಅದರ ಮೇಲೆ ಅವರ ಪ್ರಭುತ್ವ ಎಷ್ಟೇ ಇರಲಿ, ಸ್ವಲ್ಪ ಮಟ್ಟಿಗೋ ಹೆಚ್ಚಾಗಿಯೋ ಎರಡೂ ಭಾಷೆಗಳನ್ನು ಉಪಯೋಗಿಸುತ್ತಾರೆ. ನಿತ್ಯ ಜೀವನದಲ್ಲಿ ಹೆಚ್ಚು ವಿದ್ಯಾವಂತರಲ್ಲದವರೂ ತಮ್ಮ ಕನ್ನಡದಲ್ಲಿ ಅನೇಕ ಇಂಗ್ಲಿಷ್ ಶಬ್ದಗಳನ್ನು ಪೋಣಿಸುವುದನ್ನು ಕಾಣುತ್ತೇವೆ. ದಿವಂಗತ ಟಿ. ಪಿ. ಕೈಲಾಸಂ ತಮ್ಮ ನಾಟಕಗಳಲ್ಲಿ ಈ ಅಭ್ಯಾಸವನ್ನು ಹಾಸ್ಯ ಮಾಡಿದರು. ಆದರೆ ಅದು ಉಳಿದು ಬಂದಿದೆ. ಒಂದು ಭಾಷೆಯಲ್ಲಿ ಹೇಳಿದ ವಾಕ್ಯವನ್ನು ತಕ್ಷಣವೇ ಇನ್ನೊಂದು ಭಾಷೆಗೆ ಅನುವಾದ ಮಾಡಿ ಹೇಳುವುದನ್ನು ಮತ್ತೆ ಮತ್ತೆ ಕಾಣುತ್ತೇವೆ. ಪ್ರಾತಿನಿಧಿಕ ವೈದ್ಯನಾಗಲಿ, ವಕೀಲನಾಗಲಿ, ವಾಸ್ತುಶಿಲ್ಪಿಯಾಗಲಿ, ಬುದ್ಧಿಜೀವಿಯಾಗಲಿ ತಕ್ಕಷ್ಟು ಇಂಗ್ಲಿಷಿನ ಪರಿಚಯವಿಲ್ಲದೆ ಕರ್ನಾಟಕದಲ್ಲಿ ಒಂದು ದಿನದ ಮಟ್ಟಿಗೆ ಕೆಲಸ ಮಾಡುವುದನ್ನು ಕಲ್ಪಿಸಿಕೊಳ್ಳುವುದು ಕಷ್ಟ. ಸಾಮಾನ್ಯ ಪತ್ರಿಕಾಕರ್ತನು ಸಾಕಷ್ಟು ಮಟ್ಟಿಗೆ ಇಂಗ್ಲಿಷ್ ಬರಹಗಳ ಉಪಯೋಗ ಮಾಡಿಕೊಳ್ಳುತ್ತಾನೆ. ಪಾಶ್ಚಾತ್ಯ ಬರಹಗಾರರು ಸೃಷ್ಟಿಸಿದ ಈಡಿಪಸ್, ಹ್ಯಾಮ್ಲೆಟ್ ಮತ್ತು ಡಾನ್ ಕ್ವಿಕ್ಸೋಟ್‌ನಂತಹ ಪಾತ್ರಗಳು ಕನ್ನಡ ಬರಹಗಾರರೂ ಓದುಗರೂ ಬಿಟ್ಟುಬಿಡಲಾಗದಂತಹ ಪ್ರತೀಕಗಳಾಗಿದ್ದಾರೆ. ಇವತ್ತಿನ ಪ್ರಾತಿನಿಧಿಕ ವೈಯಕ್ತಿಕ ಪತ್ರದ ವಿನ್ಯಾಸ, ಸಂಬೋಧನೆ, ಸಂದರ್ಭಕ್ಕೆ ಹೊಂದಿಕೊಳ್ಳುವ ಭಾಷೆಯ ಮೆದು, ಜಾಗು ಮತ್ತು ಸಲಿಗೆ ಇವನ್ನು ಸುಮಾರು ಐವತ್ತು ವರ್ಷಗಳ ಹಿಂದಿನ ಪ್ರಾತಿನಿಧಿಕ ಪತ್ರದ ಅಂಗಗಳು ಮತ್ತು ಲಕ್ಷಣಗಳೊಂದಿಗೆ ಹೋಲಿಸಿದರೆ ಇಂಗ್ಲಿಷ್ ಎಷ್ಟು ಆಳವಾಗಿ ಮತ್ತು ವ್ಯಾಪಕವಾಗಿ ಸಾಮಾನ್ಯ ಕನ್ನಡಿಗನ ಭಾಷಾಭ್ಯಾಸಗಳನ್ನು ಹೊಕ್ಕಿದೆ ಎನ್ನುವುದು ಸ್ಪಷ್ಟವಾಗುವುದು. ಇನ್ನೂ ಬಹುಕಾಲ ಇಂಗ್ಲಿಷ್ ಕರ್ನಾಟಕದ ಸಾಂಸ್ಕೃತಿಕ ಮತ್ತು ಬೌದ್ಧಿಕ ಪ್ರವಾಹವನ್ನು ಹೆಚ್ಚಿಸುವ ಅತ್ಯಂತ ಸಮೃದ್ಧ ಉಪನದಿಗಳಲ್ಲಿ ಒಂದಾಗಿ ಉಳಿಯುವುದೆಂಬುದರಲ್ಲಿ ಸಂದೇಹವೇ ಇಲ್ಲ.

## ಕರ್ನಾಟಕದ ತಾತ್ತ್ವಿಕ ಪಂಥಗಳು

ಕ್ರಿಸ್ತ ಪೂರ್ವಕ್ಕೂ ಹಿಂದಕ್ಕೆ ಅನೇಕ ಶತಮಾನಗಳಿಂದ ಕರ್ನಾಟಕವು ವಿವಿಧ ಧಾರ್ಮಿಕ ಪಂಥಗಳ ಬೆಳವಣಿಗೆಯ ತೊಟ್ಟಿಲಾಗಿದೆ. ಪ್ರಾರಂಭದ ದಿನಗಳಲ್ಲಿಯೇ, ಆ ಪಂಥಗಳಿಗೆ ಸಹಾಧೀನ ವಿವರಣಕಾರಿಯಾಗಿ ತಾತ್ತ್ವಿಕ ಪಂಥಗಳು ಬೆಳೆದವು. ಕ್ರಿ.ಶ. 1129ರ ಶಾಸನವೊಂದು ಕರ್ನಾಟಕದ ಅಂದಿನ ಸಾಂಸ್ಕೃತಿಕ ಕೇಂದ್ರವಾಗಿದ್ದ ಬಳ್ಳಿಗಾವೆಯನ್ನು (ಇಂದಿನ ಬೆಳ್ಗಾವಿ ಗ್ರಾಮ) ಹರಿ, ಹರ, ಕಮಲಾಸನ (ಬ್ರಹ್ಮ,) ವೀತರಾಗ (ಜಿನ) ಮತ್ತು ಬುದ್ಧ ಎಂಬ ಐದು ನದಿಗಳಿಂದ (ಧಾರ್ಮಿಕ ಪಂಥಗಳು)

ನೀರಾವರಿಯನ್ನು ಪಡೆದ ನಗರ ಎಂದು ಬಣ್ಣಿಸಿದೆ. ಆ ವರ್ಗಗಳನ್ನು ಪಂಚಮಠಗಳೆಂದು ಶಾಸನದಲ್ಲಿ ಕರೆದಿರುವುದು ಸ್ವಾರಸ್ಯಕರವಾಗಿದೆ. (ಈ ಮಠಗಳು ಧಾರ್ಮಿಕ ಶಿಸ್ತನ್ನು ಮತ್ತು ತಾತ್ವಿಕ ವಿಚಾರಗಳನ್ನು ಪ್ರೋತ್ಸಾಹಿಸಿದವು). ಕರ್ನಾಟಕವು ಯಾವಾಗಲೂ ಈ ಧಾರ್ಮಿಕ ತಾತ್ವಿಕ ವ್ಯವಸ್ಥೆಗಳ ಜೊತೆಯಲ್ಲಿಯೇ ಬಾಳಿದೆ.

ಭಾರತದ ಇತಿಹಾಸದ ಪ್ರಾರಂಭದ ದಿನಗಳಲ್ಲಿಯೇ ಜೈನ ಧರ್ಮ ಕರ್ನಾಟಕವನ್ನು ಪ್ರವೇಶಿಸಿತು. ಈ ಧರ್ಮವನ್ನು ಮಗಧದ ದೊರೆಯಾದ ಚಂದ್ರಗುಪ್ತನು ಉತ್ತರದಿಂದ ಶ್ರವಣ ಬೆಳಗೊಳಕ್ಕೆ ತಂದನೆಂದು ಹೇಳುತ್ತಾರೆ. ಇದುವರೆಗೂ ಅದು ಪ್ರಜ್ವಲಿಸುತ್ತಲೇ ಇದೆ. ಕ್ರಿ. ಶ. 350 ರಿಂದ 1000ದವರೆಗೆ ಈ ರಾಜ್ಯವನ್ನು ಆಳಿದ ಗಂಗರು ಜೈನ ವಿದ್ವಾಂಸರಿಗೆ ಪೋಷಕರಾಗಿದ್ದರು ಮತ್ತು ಈ ಕಾಲದಲ್ಲಿ ಅಪಾರವಾದ ತಾತ್ವಿಕ ಸಾಹಿತ್ಯ ಬೆಳೆಯಲು ಪ್ರೋತ್ಸಾಹ ನೀಡಿದರು. ಕರ್ನಾಟಕವು ದಿಗಂಬರ ಜೈನ ಪಂಥವನ್ನು ಸ್ಪಷ್ಟವಾಗಿ, ಸ್ಥಿರವಾಗಿ, ವಿಸ್ತಾರವಾಗಿ ಬೆಳೆಸಿತು. ಕ್ರಿಸ್ತಶಕೆಯ ಪ್ರಾರಂಭದ ಶತಮಾನಗಳಿಗೆ ಸೇರುವ ಮೂವರು, ಕುಂದಕುಂದಾಚಾರ್ಯ (ಪ್ರವಚನ ಸಾರ, ಸಮಯಸಾರ, ಪಂಚಾಸ್ತಿಕಾಯ ಮತ್ತು ಪ್ರಾಭೃತಗಳೆಂಬ ಸಣ್ಣ ಪ್ರಮಾಣದ ಗ್ರಂಥಗಳು), ಉಮಾಸ್ವಾಮಿ (ತತ್ವಾರ್ಥಸಾರ) ಮತ್ತು ಸಮಂತ ಭದ್ರ (ಆಪ್ತಮೀಮಾಂಸ) ಮೊದಲಾದವರ ತಾತ್ವಿಕ ಬರವಣಿಗೆಗಳು ತಾತ್ವಿಕ ಚಿಂತನೆಯ ಹೊಸದೊಂದು ಯುಗವನ್ನೇ ಆರಂಭಿಸಿದವು. ಅನಂತರ ಸಿದ್ಧಸೇನ (ಸಮ್ಮತಿ ತರ್ಕ, ನ್ಯಾಯಾವತಾರ) ಮತ್ತು ಅಕಳಂಕರು (ಆಪ್ತ ಮೀಮಾಂಸೆಯ ಮೇಲಿನ ಅಷ್ಟಶತಿ) ದಿಗಂಬರ ಪಂಥದ ನಿಲವನ್ನು ಸ್ಪಷ್ಟಪಡಿಸಿದರು.

ಭಾರತೀಯ ತತ್ವ ಚಿಂತನೆಗೆ ಧವಳ ಸಾಹಿತ್ಯವು ಕರ್ನಾಟಕದ ಅತ್ಯಂತ ಗಮನಾರ್ಹವಾದ ಕೊಡುಗೆಯಾಗಿದೆ. ಶ್ರುತ-ಸ್ಕಂದಗಳು, ಕರ್ಮ-ಪ್ರಕೃತಿ-ಪ್ರಾಭೃತ ಮತ್ತು ಕಷಾಯ ಪ್ರಾಭೃತ ಎಂದು ಹೆಸರಿಸಲಾಗುವ ಎರಡು ಕೃತಿಗಳು ದಿಗಂಬರ ಪಂಥದ ವಿಚಾರಗಳನ್ನು ಪ್ರತಿನಿಧಿಸುತ್ತವೆ. 'ಷಟ್ಖಂಡಾಗಮ'ವನ್ನು ಒಳಗೊಂಡಿರುವ ಮೊದಲನೇಯ ಕೃತಿಗೆ ವೀರಸೇನ (ಸು.ಕ್ರಿ.ಶ. 790) ಮತ್ತು ಭೂತಬಲಿ ಎನ್ನುವವರು ಧವಳ (ಮೊದಲನೇಯದು ಐದು ಕಾಂಡಗಳ ಮೇಲೆ) ಮತ್ತು ಮಹಾಧವಳ (ಕೊನೆಯ ಕಾಂಡದ ಮೇಲೆ)ಎಂಬ ಹೆಸರಿನಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಎರಡನೇಯ ಕೃತಿಗೆ ಜಯಧವಳ ಎಂಬ ಸಂಗ್ರಹದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಧವಳ ಸಾಹಿತ್ಯದಲ್ಲಿ ಒಟ್ಟು 1,96,686 ಪ್ರಾಕೃತ ಮತ್ತು ಸಂಸ್ಕೃತ ಶ್ಲೋಕಗಳಿವೆ ಮತ್ತು ಜೈನಧರ್ಮದ ಮೂಲ ಕಲ್ಪನೆಗಳಾದ ವೈಯಕ್ತಿಕ ಜೀವ, ಧವಳದಲ್ಲಿರುವ ಅದರ 14 ಹಂತಗಳು (ಗುಣ-ಸ್ಥಾನಗಳು), ಮಹಾಧವಳದಲ್ಲಿರುವ ಎಂಟು ಬಗೆಯ ಕರ್ಮಗಳು (ಜ್ಞಾನಾವರಣೀಯ ಇತ್ಯಾದಿ) ಮತ್ತು ಜಯಧವಳದಲ್ಲಿರುವ ನಾಲ್ಕು ಬಗೆಯ 'ಬಂಧ'ಗಳು—ಇವುಗಳನ್ನು ಕುರಿತು ಹೇಳಿದೆ. ಯಾಪನೀಯ ಅಥವಾ ಜಾಪುಲಿ ಕರ್ನಾಟಕದಲ್ಲಿ ಬೆಳಗಿದ ಮತ್ತೊಂದು ಜೈನಪಂಥ. ವಯ್ಯಾಕರಣಕಾರನಾದ ಶಕಟಾಯನ (ಪಾಲ್ಯಕೀರ್ತಿ) ಈ ಸಂಘದ ಒಬ್ಬ ಪ್ರಮುಖ ಮುಂದಾಳಾಗಿದ್ದನು. 'ಯಮ'ವನ್ನು ಅನುಸರಿಸುತ್ತಿದ್ದ ಕಾರಣ ಅದಕ್ಕೆ 'ಯಾಪನೀಯ' ಎಂಬ ಹೆಸರು ಬಂದಿತು ಮತ್ತು ಯಾಪನೀಯರು ಸಂಯಮ ಜೀವನವನ್ನು ನಡೆಸುತ್ತಿದ್ದರು. ಯಾಪನೀಯರು ಹೆಣ್ಣುಮಕ್ಕಳೂ ಮೋಕ್ಷವನ್ನೂ ಪಡೆಯಬಹುದೆಂಬ ಶ್ವೇತಾಂಬರ ತತ್ವವನ್ನು ಒಪ್ಪಿಕೊಂಡಿದ್ದರೂ, ಈ ಪಂಥದ ಮುನಿಗಳು ದಿಗಂಬರ ಪಂಥದ ಮುನಿಗಳಂತೆ ದಿಗಂಬರರಾಗಿಯೇ ಉಳಿಯುತ್ತಿದ್ದರು.

ಕ್ರಿ.ಪೂ. ಮೂರನೇಯ ಶತಮಾನದಲ್ಲಿ ಅಶೋಕನ ಕಾಲದಲ್ಲಿ ಜೈನ ಧರ್ಮಕ್ಕಿಂತ ಸ್ವಲ್ಪ ತಡವಾಗಿ ಕರ್ನಾಟಕಕ್ಕೆ ಬೌದ್ಧ ಧರ್ಮ ಬಂದಿತು. ಮತ್ತು ಕ್ರಿ.ಶ. 12ನೇಯ ಶತಮಾನದವರೆಗೂ ತನ್ನ ಪ್ರಭಾವವನ್ನು ಉಳಿಸಿಕೊಂಡಿತು. ಕನ್ಹೇರಿ, ಕಾರ್ಲೆ, ಡಂಬಳ, ಅಜಂತಾ ಮತ್ತು ಬನವಾಸಿಗಳು ಮುಖ್ಯವಾದ ಬೌದ್ಧರ ಕೇಂದ್ರಗಳಾಗಿದ್ದವು. ಈ ಸ್ಥಳಗಳ ವಿಹಾರಗಳಲ್ಲಿದ್ದ ಬೌದ್ಧ ಭಿಕ್ಷುಗಳು ತತ್ವಶಾಸ್ತ್ರದ ಮಂತ್ರಯಾಣ ಪಂಥವನ್ನು ರೂಪಿಸಿದರು. ಇದು ಮುಂದೆ ಬಂಗಾಳ, ಒರಿಸ್ಸಾ, ನೇಪಾಲ ಮತ್ತು ಟಿಬೆಟ್‌ಗಳಲ್ಲಿ ವಜ್ರಯಾನ ಎಂದು ಪ್ರಸಿದ್ಧವಾಯಿತು. ಮಂಜುಶ್ರೀ ಮೂಲಕಲ್ಪ ಎಂಬುದು ಈ ಪಂಥದ ಪ್ರಾರಂಭದ ಕೃತಿ. ಇದು ದಕ್ಷಿಣ ಭಾರತದ ಕೃತಿಯಾಗಿದ್ದು ಬಹುಶಃ ಕರ್ನಾಟಕದಲ್ಲಿ ರಚಿತವಾಗಿರಬೇಕೆಂದು ತೋರುತ್ತದೆ. ಈ ಪ್ರದೇಶದ ಅನೇಕ ದೇವಸ್ಥಾನಗಳಲ್ಲಿ ತಾರಾ ಭಗವತಿ ಮತ್ತು ಅವಲೋಕಿತೇಶ್ವರರ ಪೂಜೆ ನಡೆಯುತ್ತಿತ್ತೆಂಬುದಕ್ಕೆ ದಾಖಲೆಗಳು ದೊರೆತಿವೆ. ಹದಿನಾರು ಮಂದಿ ಸ್ಥಳೀಯ ವ್ಯಾಪಾರಿಗಳು 1095 ರಲ್ಲಿ ಕಟ್ಟಿಸಿದ ಧಾರವಾಡ ಜಿಲ್ಲೆಯ ಡಂಬಳದ ವಿಹಾರವನ್ನು ಆರ್ಯ ತಾರಾದೇವಿಗೆ ಅರ್ಪಿಸಲಾಗಿದೆ. ಇಲ್ಲಿರುವ ಶಾಸನವು ಆಕೆಯನ್ನು 'ಪ್ರಜ್ಞಾ' ಎಂದೂ 'ಬುದ್ಧನಿಗೆ ದೊಡ್ಡತನವನ್ನು ನೀಡಿದವಳು' ('ಬುದ್ಧಸ್ಯ ವಿಭೂತಿದಾ') ಎಂದೂ 'ಬೋಧಿ' ಎಂದೂ 'ತಥಾಗತನ ಹೃದಯದಲ್ಲಿ ವಾಸ ಮಾಡುವವಳು' ಎಂದೂ ಗೌರವದಿಂದ ಕರೆದಿದೆ. ಬೆಳ್ಗಾವಿ, ಮಂಗಳೂರು (ಕದರಿ) ಮತ್ತು ಇತರ ಪ್ರದೇಶಗಳಲ್ಲಿಯೂ ತಾರಾ ಪೂಜೆ ಇತ್ತು. ಬಾದಾಮಿ, ಕಾರ್ಲೆ ಲೋಕಾಪುರ (ವಿಜಾಪುರ) ಮತ್ತು ಮಂಗಳೂರು (ಕದರಿ)ಗಳಲ್ಲಿ ತಾರಾದೇವಿಯು ಅವಲೋಕಿತೇಶ್ವರನ ಜೊತೆಯಲ್ಲಿಯೇ ಕಾಣುತ್ತಾಳೆ. ಈ ಆರಾಧನೆಯು ಪ್ರಜ್ಞಾ ಪರಿಮಿತಿಯೆಂಬ ತಾತ್ವಿಕ ಪಂಥದ ಬೆಳವಣಿಗೆಗೆ ಪ್ರೋತ್ಸಾಹ ನೀಡುತ್ತದೆ.

ಜೈನ ಮತ್ತು ಬೌದ್ಧ ಧರ್ಮಗಳ ಪ್ರಾಚೀನ ಕೇಂದ್ರವಾಗಿ ಬೆಳ್ಗಾವಿ ಕ್ರಿ.ಶ. 12ನೇಯ ಶತಮಾನದಲ್ಲಿ ಅಲ್ಲಮಪ್ರಭುವಿ

ಪ್ರತಿಭೆಯನ್ನು ಬೆಳೆಸಿದ ಕೇಂದ್ರವೂ ಆಗಿತ್ತು. ತನ್ನ ಸಮಕಾಲೀನನಾದ ಬಸವಣ್ಣನ ನೇತೃತ್ವದಲ್ಲಿ ಸಾಮಾಜಿಕ ಕ್ರಾಂತಿಯಾಗಿ ಬದಲಾವಣೆಯಾದ-ಧಾರ್ಮಿಕ ಚಳವಳಿಗೆ ಅಲ್ಲಮಪ್ರಭು ಮಾರ್ಗದರ್ಶಕನಾಗಿದ್ದವನು. ವಿಸ್ತಾರವಾಗಿ ಪ್ರವಾಸ ಮಾಡಿದ್ದ ಮತ್ತು ಶೈವಧರ್ಮದ ಔತ್ತರೇಯ ಪದ್ಧತಿಯನ್ನು ವಿಶೇಷವಾಗಿ ನಾಥ ಸಿದ್ಧ ಪದ್ಧತಿ ಮತ್ತು ಕಾಶ್ಮೀರದ ತ್ರಿಕಾ ಸಿದ್ಧಾಂತವನ್ನು ಚೆನ್ನಾಗಿ ತಿಳಿದಿದ್ದ ಅಲ್ಲಮಪ್ರಭು, ವೀರಶೈವ ತತ್ತ್ವದ ಮೂಲಭೂತ ವಿಚಾರಗಳನ್ನು ಗಟ್ಟಿ ಮಾಡಿದ. ಅವನು ಸಮಗ್ರ ಅನುಭಾವ (ಶಿವಾನುಭಾವ)ವನ್ನು ಮತ್ತು ಪರಿಣಾಮಕಾರಿ ಧಾರ್ಮಿಕ ತಂತ್ರಗಳಿಂದ (ಶಿವಯೋಗ) ಅದನ್ನು ಸಂಪಾದಿಸುವುದರ ಬಗ್ಗೆ ಒತ್ತಿ ಹೇಳಿದ್ದಾನೆ.

ನಾಥ ಸಿದ್ಧ ದೃಷ್ಟಿಯು ಆಧ್ಯಾತ್ಮಿಕವೂ ತಾತ್ತ್ವಿಕವೂ ಆಗಿತ್ತು. ತಾತ್ತ್ವಿಕವಾಗಿ ಅದು ಬ್ರಹ್ಮಶೂನ್ಯವನ್ನು ಒಪ್ಪಿಕೊಂಡರೆ, ಅದರ ಪ್ರಾಯೋಗಿಕ ಭಾಗ "ಮನೋ ವೈಜ್ಞಾನಿಕ ಭೌತಿಕ ಸಂಕೀರ್ಣ ಸಹಜಾಭಿವ್ಯಕ್ತಿ" (ಸಹಜ ಮಾರ್ಗ)ಯ ರೂಪವನ್ನು ಪಡೆಯಿತು. ಪಾರಂಪರಿಕರಾದ 84 ಜನ ಸಿದ್ಧರು ಮತ್ತು ವಿಶೇಷತಃ ಒಬ್ಬ ಸಿದ್ಧನಾದ ನಾಗಾರ್ಜುನನು ಮುಖ್ಯವಾಗಿ ಪ್ರತಿಪಾದಿಸಿದ ಮಹಾಯಾನ ಬೌದ್ಧ ಧರ್ಮದ ಸಂಪರ್ಕವು ನಿರಂತರವಾಗಿತ್ತು; ಫಲಪ್ರದವಾಗಿತ್ತು. ಅನಂತರ, ವಜ್ರಯಾನ ತತ್ತ್ವದ ರೂಪವನ್ನು ಪಡೆದು ಹಿಮಾಲಯ ಪ್ರದೇಶಗಳಲ್ಲಿ ಅಧಿಕಾರಿಕ ಮತ ಸ್ವರೂಪವನ್ನು ತಳೆಯಿತು. ಈ ಪಂಥದ ವಿಚಾರಗಳು ಒಂದು ಕಡೆ ಘನೀಕರಿಸುವುದಕ್ಕೆ ಕರ್ನಾಟಕದ ಕೊಡುಗೆ-ಸಿದ್ಧರ ಅಪಭ್ರಂಶ ದೋಹಗಳಲ್ಲಿನ ಕನ್ನಡ ಮಾತುಗಳಲ್ಲಿ ಮತ್ತು ಅಲ್ಲಮನಿಗೆ ವಿಶೇಷವಾದ ವಿಚಾರ ಪದ್ಧತಿಯಲ್ಲಿ ಕಂಡುಬರುತ್ತದೆ.

ಶಾತವಾಹನ ರಾಜರ (ಸುಮಾರು ಕ್ರಿ. ಪೂ. 30) ಕಾಲದಿಂದಲೂ ಕರ್ನಾಟಕದಲ್ಲಿ ಶೈವಧರ್ಮ ಪ್ರಚಲಿತವಾಗಿದೆ ಮತ್ತು ಕದಂಬ, ಚಳುಕ್ಯ ರಾಜರ ಪೋಷಣೆಯಲ್ಲಿ ಅದು ಅಭಿವೃದ್ಧಿಯಾಯಿತು. ನೆರೆಯ ತಮಿಳು ನಾಡಿನಲ್ಲಿ ಆರು ಮತ್ತು ಒಂಬತ್ತನೇಯ ಶತಮಾನಗಳ ನಡುವೆ ಶೈವಧರ್ಮ ಮತ್ತು 63 ಮಂದಿ ಪುರಾತನರ ಆರಾಧನೆ ಬೆಳೆಯಿತು. ಸ್ಥಾವರ ಲಿಂಗಪೂಜೆ ಮತ್ತು ಪಾಶುಪತ ತತ್ತ್ವ (ಶೈವ ಸಿದ್ಧಾಂತ) ವನ್ನು ಜನಪ್ರಿಯಗೊಳಿಸಿದ್ದು ಈ ಪ್ರಾಂತೀಯ ಬೆಳವಣಿಗೆಯ ಲಕ್ಷಣ. ಮೈ ಮೇಲೆ ಧರಿಸುವ ವೈಯಕ್ತಿಕ ಅಥವಾ ಇಷ್ಟಲಿಂಗ ಪೂಜೆಯ ಬಗೆಗೆ ಒಲವು ಷಟ್‌ಸ್ಥಲವೆಂಬ ಆರು ಹಂತಗಳಲ್ಲಿನ ಆಧ್ಯಾತ್ಮಿಕ ಸಾಧನೆ—ಇವು ಕರ್ನಾಟಕದಲ್ಲಿ ಬೆಳೆದ ವೀರಶೈವ ತತ್ತ್ವದಲ್ಲಿ ಪ್ರಾಮುಖ್ಯತೆ ಪಡೆಯಿತು. ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿ (11ನೇಯ ಶತಮಾನ), ಶ್ರೀಪತಿ ಪಂಡಿತರ ಶ್ರೀಕರ ಭಾಷ್ಯ (ಬ್ರಹ್ಮಸೂತ್ರದ ಮೇಲೆ) ಮತ್ತು ನೀಲಕಂಠ ಶಿವಾಚಾರ್ಯರ ಕ್ರಿಯಾಸಾರ (14ನೇಯ ಶತಮಾನ) ಇವುಗಳು ಇಲ್ಲಿ ಬೆಳೆದ ವೀರಶೈವ ಪಂಥದ ತಾತ್ತ್ವಿಕ ನಿಲುವುಗಳನ್ನು ನಿರೂಪಿಸಿದವು. ಇದಕ್ಕಿಂತ ಹಿಂದೆಯೇ ಶ್ರೀಕಂಠರು (ಸುಮಾರು ಕ್ರಿ. ಶ. 800) ತಮ್ಮ ಬ್ರಹ್ಮ ಮೀಮಾಂಸ ಸೂತ್ರದ ಮೇಲಿನ ಟೀಕಿನಲ್ಲಿ ಶಿವಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸಿದ್ದರು. ಈ ಕೃತಿಯಲ್ಲಿ ಕಾಶ್ಮೀರ ಶೈವ ಎಂದು ಕರೆಯುವ ತಾತ್ತ್ವಿಕ ಪಂಥಕ್ಕಿಂತ ಭಿನ್ನವಾದ ನಿಲುವಿದೆ ಮತ್ತು ವೀರಶೈವ ತತ್ತ್ವದ ಕಡೆಗೆ ಹೆಚ್ಚು ಒಲವಿದೆ.

ಶಕ್ತಿ ವಿಶಿಷ್ಟಾದ್ವೈತದ ತಾತ್ತ್ವಿಕ ವಿಚಾರಗಳನ್ನು ಧಾರ್ಮಿಕ ಶಿಸ್ತಿಗೆ ಒಳಪಡಿಸಿದ ಸಮಗ್ರೀಕರಿಸಿದ ಕೀರ್ತಿ ಅಲ್ಲಮ ಪ್ರಭು ಮತ್ತು ಬಸವಣ್ಣ ಇವರಿಗೆ ಸಲ್ಲಬೇಕು. ಈ ಧರ್ಮದ ಪ್ರಾಯೋಗಿಕ ವಿಚಾರಗಳನ್ನು ವೀರಶೈವ ಸಿದ್ಧಾಂತಗಳು ಚೆನ್ನಾಗಿ ತಿಳಿಸುತ್ತವೆ. ಮತ್ತು ಶಿವನೊಡನೆ ಆಧ್ಯಾತ್ಮಿಕ ಐಕ್ಯತೆಯನ್ನು ಪಡೆಯಲು ಬೇಕಾದ ಪ್ರಸಿದ್ಧವಾದ ಎಂಟು ವಸ್ತುಗಳು (ಅಷ್ಟಾವರಣ: ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ ಮತ್ತು ಮಂತ್ರ), ಶಿವಯೋಗ ಸಾಧನೆಯಾದ ಲಿಂಗಾಂಗ ಸಾಮರಸ್ಯಕ್ಕೆ (ಲಿಂಗ: ಶಿವ ಅಥವಾ ಭಕ್ತಿಯ ವಸ್ತು; ಅಂಗ: ಸಾಧಕನ ವೈಯಕ್ತಿಕ ಜೀವ) ಬೇಕಾದ ಆರು ಹಂತಸ್ಥಲಗಳು - ಇವುಗಳ ಮೂಲಕ ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ. ಲಿಂಗ ಮತ್ತು ಅಂಗಗಳಲ್ಲಿನ ಭೇದ ನಾಶವಾಗಿ ಐಕ್ಯತೆಯು ಆರು ಹಂತ ಅಥವಾ ಸ್ಥಲಗಳಲ್ಲಿ ಸಾಧ್ಯವಾಗುತ್ತದೆಂದು ಇಲ್ಲಿ ಹೇಳುತ್ತಾರೆ. ಭಕ್ತ (ಗುರು ದಯಪಾಲಿಸಿ ಇಷ್ಟ ಲಿಂಗಕ್ಕೆ ತನ್ನನ್ನು ಬದ್ಧನಾಗಿಸಿಕೊಂಡ ಭಕ್ತನ ಹಂತ) ಮಾಹೇಶ (ಸಾಧನೆಯಲ್ಲಿ ಮುಂದುವರೆದು ನಂಬಿಕೆಯನ್ನು ಬಲಪಡಿಸಿಕೊಂಡ, ಭಕ್ತಿಯನ್ನು ತೀವ್ರವಾಗಿಸಿಕೊಂಡ ಭಕ್ತನ ಹಂತ), ಪ್ರಸಾದಿ (ಶರೀರ ಸ್ವಭಾವದ ಕಲ್ಮಶಗಳನ್ನು ಕಡಿಮೆ ಮಾಡಿಕೊಂಡು ಶುದ್ಧೀಕರಣದ ಮೂಲಕ ದೈವಿಕ ಸೌಂದರ್ಯವನ್ನು ಕಾಣುವ ಹಂತ), ಪ್ರಾಣ ಲಿಂಗಿ (ತನ್ನ ವೈಯಕ್ತಿಕ ಜೀವನವನ್ನು ಲಿಂಗವೆಂದೇ ಭಾವಿಸಿ ಅಂತರಂಗಿಕವಾಗಿ ಬೆಳೆಯುವ ಅನುಭವ ಪಡೆಯುವ ಹಂತ), ಶರಣ (ಲಿಂಗಕ್ಕೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡು ಅದರಿಂದ ಮೋಕ್ಷಾನುಭವವನ್ನು ಪಡೆಯುವ ಹಂತ) ಮತ್ತು ಐಕ್ಯ (ವೈಯಕ್ತಿಕತೆ ನಾಶವಾಗಿ ಅಂಗವು ಲಿಂಗದೊಡನೆ ಅಭಿನ್ನವಾಗುವ ಹಂತ). ಈ ಕೊನೆಯ ಸ್ಥಲವನ್ನು 'ಲಿಂಗಾಂಗ ಸಾಮರಸ್ಯ' ಎಂದೂ ಕರೆಯುತ್ತಾರೆ. ಈ ಹಂತದಲ್ಲಿ ಲಿಂಗದ ಶಕ್ತಿಯು ಭಕ್ತಿಯ ರೂಪದಲ್ಲಿ ವ್ಯಕ್ತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಈ ಶಕ್ತಿಗೆ ಎರಡು ಭಾಗಗಳಿರುತ್ತವೆ. ಒಂದು—ಉತ್ಪತ್ತಿ ಹಾಗೂ ಪ್ರಾಪಂಚಿಕ ಅಧಿಕ್ಯಕ್ಕೆ ಕಾರಣವಾದ 'ಮಾಯೆ' ಮತ್ತೊಂದು ವೈಯಕ್ತಿಕತೆಯನ್ನು ನಾಶ ಮಾಡಿ ಸಾರ್ವತ್ರಿಕತೆಯಾಗಲು ಅನುಕೂಲ ಮಾಡುವ ಸಮಗ್ರ ಭಕ್ತಿ.

ಇದು ಸಂಗ್ರಹವಾಗಿ ವೀರಶೈವದ ಅಧ್ಯಾತ್ಮ. ಇದು ಭಾರತೀಯ ವಿಚಾರಧಾರೆಗೆ ಕರ್ನಾಟಕದ ವೈಶಿಷ್ಟ್ಯಪೂರ್ಣ ಕೊಡುಗೆ. ಬಸವಣ್ಣನು ಅಗ್ರರಾಗಿದ್ದ ವೀರಶೈವ ಚಳವಳಿ, ನೆರೆಯ ಮಹಾರಾಷ್ಟ್ರದ ಮೇಲೂ ತನ್ನ ಪ್ರಭಾವವನ್ನು ಬೀರಿತು ಮತ್ತು ಆ ಪ್ರದೇಶದ ಮಹಾನುಭಾವ ಪಂಥದ ಉಗಮ ಮತ್ತು ಜನಪ್ರಿಯತೆಗೆ ಪರೋಕ್ಷವಾಗಿ ಕಾರಣವಾಯಿತು. ಕನ್ನಡದ ವಚನ ಸಾಹಿತ್ಯದಲ್ಲಿರುವ ಅನೇಕ ವಿಚಾರಗಳನ್ನು ಮಹಾರಾಷ್ಟ್ರದ ಕೆಲವು ಸಂತರ ಅಭಂಗಗಳಲ್ಲಿ ಕಾಣಬಹುದು. ಈ ಚಳವಳಿ ಆಂಧ್ರ ಪ್ರದೇಶದ ಮೇಲೂ ತನ್ನ ಪ್ರಭಾವವನ್ನು ಬೀರಿ, ಅಲ್ಲಿ ವಿಸ್ತಾರವಾದ ವೀರಶೈವ ಸಾಹಿತ್ಯ ಬೆಳೆಯುವುದಕ್ಕೆ ಕಾರಣ ವಾಯಿತು.

ಕರ್ನಾಟಕದ ವಿಷ್ಣುಭಕ್ತಿ ಪಂಥವೂ ಪ್ರಾಚೀನವಾದದ್ದೇ. ಈ ಪ್ರಾಂತದ ಮೇಲೆ 11ನೇಯ ಶತಮಾನದಲ್ಲಿ ರಾಮಾನುಜರ ಪ್ರಭಾವವಾದಾಗ, ವಿಷ್ಣುಭಕ್ತಿ ಪಂಥಕ್ಕೆ ಹೆಚ್ಚಿನ ಬಲವುಂಟಾ ಯಿತು. ಶ್ರೀ ವೈಷ್ಣವಧರ್ಮ ಹರಡಿದರೂ ಅದಕ್ಕೆ ತಾತ್ತ್ವಿಕ ವ್ಯವಸ್ಥೆಗಳ ದೃಷ್ಟಿಯಿಂದ ಕರ್ನಾಟಕದ ಕೊಡುಗೆ ಅತ್ಯಲ್ಪ ಎಂದೇ ಹೇಳಬೇಕು. ಕರ್ನಾಟಕದಲ್ಲಿ ವೈಷ್ಣವಧರ್ಮ ಜನಪ್ರಿಯ ವಾಗಿ ಪುನಶ್ಚೇತನ ಪಡೆಯಲು ಮುಖ್ಯವಾಗಿ ಕಾರಣರಾದವರು ಮಧ್ವಾಚಾರ್ಯರು (1238). ಅವರು ಅದಕ್ಕೆ ಪಾರಂಪರಿಕ ವೈದಿಕ ತತ್ತ್ವಗಳ ಆಧಾರದ ಮೇಲೆ ಸ್ಪಷ್ಟವಾಗಿ ವಿವರಿಸಲಾಗುವ ತಾತ್ತ್ವಿಕ ಪದ್ಧತಿಯನ್ನು ರೂಪಿಸಿದರು. ಅವರು ಒಟ್ಟು 37 ಕೃತಿಗಳನ್ನು ರಚಿಸಿದ್ದಾರೆಂದು ಹೇಳುತ್ತಾರೆ. (ಅದರಲ್ಲಿ ಬ್ರಹ್ಮ ಸೂತ್ರದ ಮೇಲೆ ನಾಲ್ಕು, ಉಪನಿಷತ್ತುಗಳ ಹತ್ತು ಮತ್ತು ಭಗವದ್ಗೀತೆಯ ಮೇಲಿನ ಎರಡು ಕೃತಿಗಳು ಸೇರಿವೆ). ಈ ಕೃತಿಗಳು, ರಾಮಾನುಜರ ವಿಶಿಷ್ಟಾದ್ವೈತ, ಶಂಕರರ ಅದ್ವೈತ ಗಳಿಗೆ ಭಿನ್ನ ಹಾಗೂ ವಿರೋಧವಾದ ಅಂಶಗಳಿಂದ ಕೂಡಿದ 'ದ್ವೈತ' ಎಂದು ಕರೆಯುವ ವಿಚಾರ ಪಂಥವನ್ನು ಪ್ರತಿಪಾದಿ ಸುತ್ತವೆ.

ಮಧ್ವರು ತಾವು ರೂಪಿಸಿದ ದ್ವೈತಸಿದ್ಧಾಂತದಲ್ಲಿ ಎರಡು ತತ್ತ್ವಗಳನ್ನು ಗುರುತಿಸುತ್ತಾರೆ. ಒಂದು ಸ್ವತಂತ್ರನಾದ ಬ್ರಹ್ಮ, ಮತ್ತೊಂದು ಪರತಂತ್ರವಾದ ಜೀವ ಜಡ. ಇನ್ನೂ ಮುಂದು ವರೆದು ಅವರು, ಜಡ ಮತ್ತು ಜೀವ, ಜೀವ ಮತ್ತು ಬ್ರಹ್ಮ, ಜಡ ಮತ್ತು ಬ್ರಹ್ಮ, ಜಡ ಮತ್ತು ಜಡ, ಮತ್ತು ಜೀವ ಮತ್ತು ಜೀವಗಳ ಪರಸ್ಪರ ಭೇದವನ್ನು ನಿರೂಪಿಸುತ್ತಾರೆ ('ಭೇದ ವಾದ'). ಜಗತ್ತು ಮಿಥ್ಯೆ ಎಂಬ ವಾದವನ್ನೂ ಜೀವವು ಬ್ರಹ್ಮದ ಜೊತೆಗೆ ತನ್ನನ್ನೂ ಗುರುತಿಸಿಕೊಳ್ಳುವ ಅಹಂ ಬ್ರಹ್ಮಾಸ್ಮಿ ತತ್ತ್ವವನ್ನೂ ಮಧ್ವರು ತಿರಸ್ಕರಿಸುತ್ತಾರೆ. ಜ್ಞಾನವೇ ಮುಕ್ತಿಗೆ ಅಂತಿಮವಾದ ಮಾರ್ಗ ಎಂಬುದನ್ನು ಅವರು ಒಪ್ಪುತ್ತಾರೆ; ಮತ್ತು ಆ ದೈವಿಕ ಸೌಂದರ್ಯವನ್ನು ಪಡೆಯಲು ಭಕ್ತಿಯ ಉಪಯೋಗವನ್ನು ಸೂಚಿಸುತ್ತಾರೆ. ಅವರು ಬ್ರಹ್ಮವನ್ನು ವಿಷ್ಣುವಿನಲ್ಲಿ ಗುರುತಿಸುತ್ತಾರೆ ಮತ್ತು ಅವನನ್ನು ಪವಿತ್ರವಾದ ಗುಣಗಳಿಂದ ತುಂಬಿದವನು ಎಂದು ಪ್ರಶಂಸೆ ಮಾಡುತ್ತಾರೆ.

ಮಧ್ವಾಚಾರ್ಯರ ಬೋಧನೆಗಳು ಹಾಗೂ ಅವರು ನಿರೂಪಿಸಿದ ತಾತ್ತ್ವಿಕ ನಿಲವುಗಳು ಪಂಡಿತವರ್ಗಕ್ಕೆ ಮಾನ್ಯ ವಾಯಿತು; ಅಲ್ಲಮಪ್ರಭು ಮತ್ತು ಬಸವಣ್ಣನವರ ಬೋಧನೆ ಗಳಂತೆ ಸಾಮಾನ್ಯರಿಗೂ ಇಷ್ಟವಾಯಿತು. ವಿಜಯನಗರದ ದೊರೆಯಾದ ಕೃಷ್ಣದೇವರಾಯನ ರಾಜಗುರುವಾಗಿದ್ದ ವ್ಯಾಸ ತೀರ್ಥರ ಪ್ರಯತ್ನಗಳಿಂದ, ಮಧ್ವರ ಬೋಧನೆಗಳನ್ನು ಸರಳ ಕನ್ನಡದ ಹಾಡುಗಳ ಮೂಲಕ ಸಾಮಾನ್ಯ ಜನರು ತಿಳಿಯುವಂತೆ ಮಾಡಲು ಒಂದು ಗುಂಪು ಪ್ರಾರಂಭವಾಯಿತು. ಮಧ್ವರನ್ನು ಅನುಸರಿಸಿದ ಗುಂಪನ್ನು ದಾಸಕೂಟವೆಂದೂ (ಭಕ್ತರ ಗುಂಪು) ಹಾಗೆಯೇ ಬಸವಣ್ಣನವರನ್ನು ಅನುಸರಿಸಿದವರನ್ನು ಶರಣರೆಂದೂ ಕರೆಯುತ್ತಿದ್ದರು. ಎರಡು ಗುಂಪುಗಳು ತಮ್ಮತಮ್ಮ ತಾತ್ತ್ವಿಕ ವಿಚಾರಗಳನ್ನು ಜನಪ್ರಿಯಗೊಳಿಸಿದುದಷ್ಟೇ ಅಲ್ಲ, ಧಾರ್ಮಿಕ ಶಿಸ್ತನ್ನು ತಾತ್ತ್ವಿಕ ನಿಲುವುಗಳನ್ನು ಸ್ಪಷ್ಟಮಾಡಿದವು. ದಾಸ ಕೂಟದಲ್ಲಿ ಪುರಂದರದಾಸರ, ಕನಕದಾಸರಂಥ ಮೇಧಾವಿಗಳಿದ್ದು, ಅವರ ಹಾಡುಗಳು ವೇದಾಂತದ ಮೇಲಿನ ಜನಪ್ರಿಯ ತತ್ತ್ವದ ಹೊಸ ಯುಗವೊಂದನ್ನು ಪ್ರಾರಂಭ ಮಾಡಿದವು.

ಮಧ್ವರ ತಾತ್ತ್ವಿಕ ಪಂಥದಲ್ಲಿ ವ್ಯಾಸತೀರ್ಥರಂತಹ (1449-1537) ಪರಿಣತ ಪ್ರತಿಪಾದಕರಿದ್ದರು. ಇವರ ಪ್ರಖ್ಯಾತಿ ತರ್ಕತಾಂಡವ, ನ್ಯಾಯಾಮೃತ ಮತ್ತು ತಾತ್ಪರ್ಯ ಚಂದ್ರಿಕಾ ಎಂಬ ಮೂರು ತಾರ್ಕಿಕ ಗ್ರಂಥಗಳಲ್ಲಿ ವ್ಯಕ್ತವಾಗು ತ್ತದೆ. ಇವರ ಕಾಲದಲ್ಲಿ ಮಧ್ವಸಿದ್ಧಾಂತವು ಬಂಗಾಳ, ಗಯಾ, ಪುರಿ, ವಾರಾಣಸಿ ಮತ್ತು ಉತ್ತರ ಭಾರತದ ಇತರ ಸ್ಥಳಗಳಿಗೆ ಹರಡಿತು. ಕೃಷ್ಣಚೈತನ್ಯರು (1486-1534) ಬಂಗಾಳದಲ್ಲಿ ಆರಂಭಿಸಿದ ಗೌಡೀಯ ಪಂಥದ ಮೇಲೆ ಮಧ್ವಪಂಥದ ಪ್ರಭಾವ ಪ್ರಸಿದ್ಧವಾಗಿದೆ. ಕೃಷ್ಣಚೈತನ್ಯರು ತಮ್ಮ ಪಂಥವನ್ನು ಪ್ರಾರಂಭಿಸಿದಾಗ ಮಧ್ವರನ್ನೇ ಮೂಲಪುರುಷರೆಂದು ಹೇಳಿದ್ದರು ('ಮಧ್ವ ಗೌಡೀಯ ಸಂಪ್ರದಾಯ'). ಕೃಷ್ಣಚೈತನ್ಯರ ಗುರು ಪರಂಪರೆ ಹೀಗಿದೆ: ಮಧ್ವ, ಪದ್ಮನಾಭತೀರ್ಥ, ನರಹರಿತೀರ್ಥ, ಮಧ್ವತೀರ್ಥ, ಅಕ್ಷೋಭ್ಯ, ಜಯತೀರ್ಥ, ಜ್ಞಾನಸಿಂಧು, ಮಾತ್ರನಿಧಿ............ಲಕ್ಷ್ಮೀಪತಿ, ಮಾಧವೇಂದ್ರಪುರಿ, ಈಶ್ವರಪುರಿ, ಕೃಷ್ಣಚೈತನ್ಯದೇವ. ಗಯೆಯ ಈ ಪರಂಪರೆಯ ಕೃಷ್ಣಚೈತನ್ಯರ ಕಾಲವನ್ನು ಕ್ರಿ.ಶ. 1508 ಎನ್ನುತ್ತಾರೆ. ಆ ಕಾಲದಲ್ಲಿ ಗಯೆಯು ಮಾಧ್ವಸಿದ್ಧಾಂತದ ಪ್ರಮುಖ ಕೇಂದ್ರವಾಗಿತ್ತಂತೆ. ಕೃಷ್ಣಚೈತನ್ಯರು ಮಧ್ವರ ಹುಟ್ಟೂರಾದ ಕರ್ನಾಟಕದ ಉಡುಪಿಗೆ ಭೇಟಿ ನೀಡಿದ್ದರು.

ಬಂಗಾಳದ ಮಧ್ವ ಗೌಡೀಯ ಸಂಪ್ರದಾಯವು ಭಾಗವತ ಪುರಾಣವನ್ನು ತನ್ನ ಮುಖ್ಯ ಗ್ರಂಥವಾಗಿ ಒಪ್ಪಿಕೊಳ್ಳುತ್ತದೆ. ಮಧ್ವರು ಈ ಗ್ರಂಥದ ನಿಜವಾದ ಅರ್ಥವನ್ನು ವಿವರಿಸಲು ಪ್ರಯತ್ನಿಸಿ ಭಾಗವತ ತಾತ್ಪರ್ಯ ನಿರ್ಣಯವೆಂಬ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿದ್ದರೆಂಬುದನ್ನು ಇಲ್ಲಿ ನೆನಸಿಕೊಳ್ಳಬಹುದು. ಬಂಗಾಳ ಸಂಪ್ರದಾಯವೂ ಸಹ ಮಧ್ವರು ಪ್ರತಿಪಾದಿಸಿದಂತೆ ಮೋಕ್ಷ ಸಾಧನೆಗೆ ಭಕ್ತಿಯ ಮಹತ್ವವನ್ನು ಹೇಳುತ್ತದೆ.

ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಅನೇಕ ಧಾರ್ಮಿಕ ಆಚರಣೆಗಳ ಹಿನ್ನೆಲೆಯಲ್ಲಿ ನಾವು ಅತಿ ಮಹತ್ವದ ತಾತ್ತ್ವಿಕ ವಿಚಾರಗಳನ್ನು ವಿವೇಚಿಸಬಹುದು. ಉದಾಹರಣೆಗೆ ಶಾಕ್ತ ಸಿದ್ಧಾಂತದ ಮೂಲಭೂತ ವಿಚಾರವಾದ ಶಕ್ತಿಪೂಜೆಯ ಆಚರಣೆಯೇ ಕರಗ. ಇದು ಕರ್ನಾಟಕದಲ್ಲಷ್ಟೇ ಅಲ್ಲದೆ ಅಸ್ಸಾಂ, ಬಂಗಾಳ, ಕಾಶ್ಮೀರಗಳಲ್ಲೂ ವಿಸ್ತಾರವಾಗಿ ಆಚರಣೆಯಲ್ಲಿದೆ. ಕರ್ನಾಟಕದ ತೀರ ಪ್ರದೇಶಗಳಲ್ಲಿರುವ ಭೂತಾರಾಧನೆಯ ತಾತ್ತ್ವಿಕ ವಿಚಾರಗಳನ್ನು ದೇಶದ ಉಳಿದ ಅನೇಕ ಭಾಗಗಳಲ್ಲೂ ಕಾಣಬಹುದು. ಹೆಣ್ಣು–ಪ್ರಕೃತಿ ಮತ್ತು ಗಂಡು–ಪುರುಷ ಇವರಿಗಿರುವ ಸಾಂಖ್ಯದ್ವೈತ, ಪ್ರಕೃತಿಗಿರುವ ಉತ್ಪಾದನಾ ಸಾಮರ್ಥ್ಯದ ಕಲ್ಪನೆ, ಪುರುಷದೇವತೆಗಳಿಗಿರುವ ಸಹಾಯಕ ಪಾತ್ರ, ಗಂಡು ಮತ್ತು ಹೆಣ್ಣುಗಳ ಮಿಲನವನ್ನು ನೀರಿನ (ಕಳಶದ ಸಂಕೇತದಿಂದ) ಮೂಲಕ ಪ್ರತಿನಿಧಿಸುವುದು—ಇವುಗಳು ಈ ಧಾರ್ಮಿಕ ಆಚರಣೆಗಳ ಮೂಲಭೂತ ತತ್ತ್ವಗಳಾಗಿವೆ.

## ವಾಸ್ತು ಶಿಲ್ಪ

ಭಾರತೀಯ ನೆಲದಲ್ಲಿಯೇ ಬೇರು ಬಿಟ್ಟಿರುವ ಭಾರತೀಯ ವಾಸ್ತುಶಿಲ್ಪ ಕಲೆಗೆ ಸಿಂಧೂ ನಾಗರಿಕತೆ (ಹರಪ್ಪ) ಯಷ್ಟು ಹಳೆಯದಾದ ಇತಿಹಾಸವಿದೆ. ಹರಪ್ಪ, ಮೊಹೆಂಜೋದಾರೋ (ಪಾಕಿಸ್ತಾನ) ಮತ್ತು ಲೋಥಲ್ (ಗುಜರಾತ್) ನ ನಗರಗಳು ವ್ಯವಸ್ಥಿತವಾದ ರೀತಿಯಲ್ಲಿ ನಿರ್ಮಾಣಗೊಂಡಿದ್ದು ವಿಶೇಷವಾಗಿ ನಾಗರಿಕ ಸೌಲಭ್ಯಗಳನ್ನು ಹೊಂದಿದ್ದವು. ಲೌಕಿಕ ಕಟ್ಟಡಗಳಾದ ಮೊಹೆಂಜೋದಾರೋ ಸ್ನಾನಗೃಹ, ಹರಪ್ಪ ನಗರದ ಉಗ್ರಾಣ ಮತ್ತು ಲೋಥಲ್ ನಗರದ ಬಂದರು ಆ ಕಾಲದ ಇಂಜಿನಿಯರಿಂಗ್ ತಾಂತ್ರಿಕತೆಗೆ ಸಾಕ್ಷಿಯಾಗಿವೆ. ಆದರೆ ಆಶ್ಚರ್ಯದ ಸಂಗತಿ ಎಂದರೆ, ಲೋಥಲ್ ಮತ್ತು ಕಾಲಿಬಂಗನ್ (ರಾಜಸ್ಥಾನ)ಗಳಲ್ಲಿ ಕಂಡುಬಂದಿರುವ ಕೆಲವು ಹೋಮಕುಂಡಗಳನ್ನು ಬಿಟ್ಟರೆ, ಮಹತ್ತರವಾದ ಧಾರ್ಮಿಕ ಕಟ್ಟಡಗಳು ಯಾವುವೂ ಈ ಸಂಸ್ಕೃತಿಯಲ್ಲಿ ದೊರಕಿಲ್ಲ. ಸಿಂಧೂ ನಗರಗಳ ಅವನತಿಯಾದ ನಂತರ, ಅಲ್ಲಿನ ವಾಸ್ತುಶಿಲ್ಪದ ಮಟ್ಟ ಅವನತಿಯನ್ನು ಹೊಂದಿತು. ಆದರೆ ಅವರ ಮುಖ್ಯ ಕಲೆಯಾದ ಕಂಚಿನಿಂದ ಎರಕ ಹೊಯ್ಯುವ ಕಲೆಯು ಮಾತ್ರ ಮುಂದುವರಿಯಿತು. ಮಹಾರಾಷ್ಟ್ರದಲ್ಲಿರುವ ಹರಪ್ಪ ಸಂಸ್ಕೃತಿಯ ಕೊನೆಯ ಹಂತಕ್ಕೆ ಸೇರುವ ದೈಮಾಬಾದ್‌ನಲ್ಲಿ ದೊರಕಿರುವ ಕಂಚಿನ ರಥ ಮತ್ತು ಪ್ರಾಣಿಗಳ ಶಿಲ್ಪಗಳು ಈ ಕಲೆಗೆ ಉತ್ತಮ ಉದಾಹರಣೆಗಳು. ದಕ್ಷಿಣ ಭಾರತದಲ್ಲಿ, ಹಳ್ಳಿಗಳ ನಗರೀಕರಣ ಪೂರ್ಣವಾಗಿಲ್ಲದೇ ಇದ್ದುದರಿಂದ, ವಾಸ್ತುಶಿಲ್ಪವು ಕೆಳಮಟ್ಟದ್ದಾಗಿದೆ ; ಆದರೆ ಇತರ ಕಲೆಗಳು, ಅದರಲ್ಲಿಯೂ ವರ್ಣಚಿತ್ರಕಲೆಯು ಸುಮಾರು ಕ್ರಿ.ಪೂ. ಎರಡು ಸಹಸ್ರ ವರ್ಷಗಳಲ್ಲೇ ಹೆಚ್ಚು ಪ್ರಗತಿಯನ್ನು ಸಾಧಿಸಿದಂತೆ ತೋರುತ್ತದೆ. ರಾಯಚೂರು ಜಿಲ್ಲೆಯಲ್ಲಿರುವ ಹಿರೇಬೆನಕಲ್ಲಿನ ಬಂಡೆ ಮೇಲಿರುವ ಚಿತ್ರಗಳನ್ನು ಹೊಸ ಶಿಲಾಯುಗದ ಕಲೆಗೆ ಉತ್ತಮ ಉದಾಹರಣೆಯಾಗಿ ಉಲ್ಲೇಖಿಸಬಹುದು.

ರಾಯಚೂರು, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಅಶೋಕನ ಶಿಲಾಶಾಸನಗಳು ದೊರಕಿದ್ದರೂ ಕೂಡ, ಕ್ರಿ.ಪೂ. 3–2ನೇಯ ಶತಮಾನಕ್ಕೆ ಉಲ್ಲೇಖಿಸಬಹುದಾದ ವಾಸ್ತುಶಿಲ್ಪದ ಅವಶೇಷಗಳು ಈ ಸ್ಥಳದಲ್ಲೆಲ್ಲೂ ದೊರಕಿಲ್ಲ. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ನಡೆದ ಉತ್ಖನನದಲ್ಲಿ ದೊರಕಿರುವ ಇಟ್ಟಿಗೆಯ ಗಜಪೃಷ್ಠಾಕಾರದ ಸ್ತೂಪ ಮತ್ತು ಬೆಳಗಾವಿಗೆ ಸಮೀಪದ ವಡಗಾಂ ಮಾಧವಪುರದಲ್ಲಿ ಕಂಡುಬಂದಿರುವ ಶಾತವಾಹನರ ಕಾಲದ ಕೋಟೆಯ ಅವಶೇಷಗಳು ಸ್ವಲ್ಪ ಅನಂತರದ ಕಾಲಕ್ಕೆ ಸೇರುವಂತಹವು. ವಿಜಾಪುರ ಜಿಲ್ಲೆಯ ಪಟ್ಟದಕಲ್ಲಿನಲ್ಲಿ ಡಾ|| ಎಸ್. ಆರ್. ರಾವ್ ಅವರಿಂದ ಉತ್ಖನನಗೊಂಡ ಆಯತಾಕಾರದ ಇಟ್ಟಿಗೆ ದೇವಾಲಯ, ಸ್ತಂಭಗಳ ಹಜಾರ ಮತ್ತು ಗರ್ಭಗೃಹಗಳು, ಬಾದಾಮಿ ಚಲುಕ್ಯರ ಕಾಲದಲ್ಲಿ ನಿರ್ಮಿತವಾದ ಕಲ್ಲಿನ ಕಟ್ಟಡಗಳಿಗೆ ಮಾದರಿಯನ್ನು ಒದಗಿಸಿತೆಂದು ನಿರ್ಧರಿಸಬಹುದು. ಕಲ್ಬುರ್ಗಿ ಜಿಲ್ಲೆಯ ಸನ್ನತಿಯಲ್ಲಿ ಸುಣ್ಣಕಲ್ಲಿನಲ್ಲಿ ನಿರ್ಮಿತವಾದ ವಿಶೇಷ ಕಲಾಕೌಶಲ್ಯವುಳ್ಳ ಶಿಲ್ಪಫಲಕಗಳು ದೊರಕಿವೆ.

### ಪ್ರಾಚೀನ ಚಲುಕ್ಯ ಶೈಲಿ

ಕರ್ನಾಟಕವನ್ನು ದೇವಾಲಯ ವಾಸ್ತುಶಿಲ್ಪದ ತವರುಮನೆ ಎಂದು ಕರೆದಿರುವುದು ಸಮಂಜಸವಾಗಿದೆ. ಏಕೆಂದರೆ ಮಲಪ್ರಭಾ ಪ್ರದೇಶದಲ್ಲಿ ತೀವ್ರಾಸಕ್ತಿಯಿಂದ ಮಾಡಲಾದ ಪ್ರಯೋಗಗಳಿಂದ, ಎರಡು ಪ್ರಮುಖ ಶೈಲಿಗಳಾದ ಚತುರಸ್ರಾಕಾರದ ಶಿಖರವನ್ನುಳ್ಳ ವಿಮಾನವನ್ನು ಹೊಂದಿದ ದಕ್ಷಿಣ ಶೈಲಿ ಮತ್ತು ರೇಖಾಪ್ರಾಸಾದ ಅಥವಾ ರೇಖಾನಾಗರ ಎಂದೂ ಕರೆಯಲ್ಪಡುವ ಒಳಬಾಗುಳ್ಳ ಶಿಖರಕ್ಕೆ ಹೆಸರಾಗಿರುವ ನಾಗರ ಶೈಲಿಯ ಕಟ್ಟಡಗಳು ಒಂದೇ ಕಾಲದಲ್ಲಿ ರೂಪುಗೊಂಡವು.

ಇನ್ನೂ ಒಂದು ಮೂರನೇಯ ಶೈಲಿಯಾದ ವಿದ್ವಾಂಸರು ಕದಂಬ ನಾಗರವೆಂದು ಕರೆಯುವ ಶಂಕ್ವಾಕೃತಿಯ ಅನೇಕಸ್ತರಗಳ ಶಿಖರವನ್ನು ಹೊಂದಿರುವ ರೀತಿಯೂ ಕಾಣಿಸಿಕೊಂಡಿತು. ಇದು ಸ್ವಲ್ಪ ಕಾಲ ಪಶ್ಚಿಮ ಕರಾವಳಿಯಲ್ಲಿ ಪ್ರಚಲಿತವಾಗಿದ್ದಿತು. ಕೇವಲ ಸ್ವಲ್ಪ ಅವಧಿಯಲ್ಲಿ ಅಂದರೆ ಎರಡೂವರೆ ಶತಮಾನಗಳ ಕಾಲದಲ್ಲಿ (ಕ್ರಿ. ಶ. 500-750), ಐಹೊಳೆ, ಮಹಾಕೂಟ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿ, ಈ ಬಗೆಯ ವಾಸ್ತುಶಿಲ್ಪ ಪ್ರಯೋಗಗಳಲ್ಲಿ ಚಲುಕ್ಯರು ನೂರಕ್ಕೂ ಹೆಚ್ಚು ದೇವಾಲಯ ಗಳನ್ನು ನಿರ್ಮಿಸಿದರು. ಇವರು ಸರಳವಾದ, ಮಟ್ಟಸವಾದ, ಗ್ರಾಮಚಾವಡಿಗಳನ್ನು ಹೋಲುವ ಮಂಟಪದ ರೀತಿಯ ಕಟ್ಟಡ ಗಳಿಂದ ಭವ್ಯವಾದ (ಸುವ್ಯವಸ್ಥಿತವಾದ) ಸೌಧಗಳನ್ನು ನಿರ್ಮಿಸಿದರು. ಅವರು ಬಳಸಿದ ಮರಳು ಶಿಲೆಯು ಅಷ್ಟೇನೂ ಮೃದುವಲ್ಲದಿದ್ದರೂ, ಅವರು ಸುಂದರ ಶಿಲ್ಪಗಳನ್ನು ನಿರ್ಮಾಣ ಮಾಡಲು ಸಮರ್ಥರಾಗಿದ್ದರು.

ಅತ್ಯಂತ ಪ್ರಾಚೀನ ಕಲ್ಲಿನ ಗುಡಿಯೆಂದರೆ ಐಹೊಳೆ ಯಲ್ಲಿರುವ ಗೌಡರಗುಡಿ. ಇತ್ತೀಚೆಗೆ ಪಟ್ಟದಕಲ್ಲಿನಲ್ಲಿ ಉತ್ಖನನ ದಲ್ಲಿ ಪತ್ತೆ ಹಚ್ಚಲಾದ ಕ್ರಿ. ಶ. ಮೂರು-ನಾಲ್ಕನೇಯ ಶತಮಾನಕ್ಕೆ ಸೇರುವ ಶಾತವಾಹನರ ಕಾಲದ್ದಾದ ಇಟ್ಟಿಗೆಯ ಕಟ್ಟಡದ ಮಾದರಿಯ ಮೇಲೆ ಗೌಡರ ಗುಡಿಯ ನಿರ್ಮಾಣ ವಾಗಿದೆ. ಇದೊಂದು ಆಯತಾಕಾರದ ಸ್ತಂಭಮಂಟಪ. ಇದು ಎತ್ತರವಾಗಿ ಜೋಡಿಸಿರುವ ಅಧಿಷ್ಠಾನದ ಮೇಲೆ ಇದ್ದು, ಇದನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಅವು ಯಾವುವೆಂದರೆ, ಮಧ್ಯಾಂಗಣವು ಮಟ್ಟಸವಾದ ಮುಚ್ಚು ಚಾವಣಿಯನ್ನು ಹೊಂದಿರುತ್ತದೆ. ಮತ್ತು ಹಜಾರಗಳ ಚಾವಣಿ ಇಳಿಜಾರಾಗಿರು ತ್ತದೆ. ಮಧ್ಯಾಂಗಣದ ಮಧ್ಯದ ಚೌಕವನ್ನು ಗರ್ಭಗೃಹ ವನ್ನಾಗಿ ಪರಿವರ್ತಿಸಲಾಗಿದೆ. ಹೀಗಾಗಿ ಸುತ್ತ ತೆರೆದ ಪ್ರದಕ್ಷಿಣಾಪಥಕ್ಕೆ ದಾರಿ ಮಾಡಿದೆ. ನಂತರ ಹೆಚ್ಚು ಹೆಚ್ಚು ಪ್ರಯೋಗಗಳನ್ನು ಮಾಡುವ ಆಕಾಂಕ್ಷೆ ಮತ್ತು ಭಕ್ತರನ್ನು ಮಳೆ ಮತ್ತು ಬಿಸಿಲಿನಿಂದ ರಕ್ಷಿಸುವ ಪ್ರವೃತ್ತಿಗಳು ಕಾಣಿಸಿದವು. ಈ ಮಂಟಪಗಳನ್ನು ಛಾವಣಿಗಳಿಂದ ಮುಚ್ಚುವ ಪ್ರಯತ್ನವನ್ನು ಅವರು ನಿರ್ಮಿಸಿದ ಲಾಡ್‌ಖಾನ್ (ಸೂರ್ಯ) ದೇವಾಲಯದಲ್ಲಿ ಮಾಡಿದರು. ಇದರಲ್ಲಿ ಸ್ಫುಟವಾಗಿ ಕೆತ್ತಲಾದ ಜಾಲಂಧ್ರ ಗಳನ್ನು ಅಳವಡಿಸಿದರು. ಇಂತಹ ಕಡೆ ಗರ್ಭಗೃಹವು ಹಿಂಭಾಗ ದಲ್ಲಿದ್ದುದರಿಂದ ಪ್ರದಕ್ಷಿಣಾ ಪಥವನ್ನು ಅಳವಡಿಸಲಾಗಲಿಲ್ಲ. ಆದುದರಿಂದ ಮುಂಭಾಗದಲ್ಲಿ ಮುಖ ಮಂಟಪವನ್ನು ಅಳವಡಿಸಿ, ಮಟ್ಟಸವಾದ ಛಾವಣಿಯ ಬದಲು ಅದರ ಮೇಲೆ ಮತ್ತೊಂದು ಗರ್ಭಗೃಹವನ್ನು ನಿರ್ಮಿಸಿದರು. ಇದರ ಮುಂದಿನ ಹಂತವನ್ನು ಐಹೊಳೆಯ ಮೇಗುತಿ ದೇವಾಲಯದಲ್ಲಿ ಕಾಣುತ್ತೇವೆ. ಇದರಲ್ಲಿ ಮುಚ್ಚಿಗೆಯಿಲ್ಲದ ಹಜಾರ, ಮುಚ್ಚಿಗೆಯಿಂದ ಕೂಡಿದ ಪ್ರದಕ್ಷಿಣಾ ಪಥ (ಸಾಂಧಾರ) ಮತ್ತು ವಿಶಾಲವಾದ ಮುಖಮಂಟಪವನ್ನು ಸೇರಿಸಿರುತ್ತಾರೆ. ಚಾವಣಿಯ ಮೇಲಣ ಹಂತದ ಗರ್ಭಗೃಹ ವನ್ನು ಅನಂತರ ಸೇರಿಸಿರುವಂತೆ ಕಾಣುತ್ತದೆ. ಈ ದೇವಾಲಯ ದಲ್ಲಿ ಕ್ರಿ. ಶ. 634ರ ರವಿಕೀರ್ತಿಯ ಶಾಸನವಿರುವುದರಿಂದ, ಖಚಿತವಾಗಿ ಈ ದೇವಾಲಯದ ಕಾಲ ನಿರ್ಮಾಣವನ್ನು ನಿರ್ದೇಶಿಸ ಬಹುದು. ಈ ಕಾಲಕ್ಕೆ ಮೊದಲನೇಯ ಹಂತದ ಪ್ರಯೋಗ ಕಾರ್ಯ, ಅಂದರೆ ದೇವಾಲಯದ ವಿವಿಧ ಭಾಗಗಳಾದ ಗರ್ಭ ಗೃಹ, ಪ್ರದಕ್ಷಿಣಾಪಥ, ಸಭಾಮಂಟಪ, ಮತ್ತು ಮುಖಮಂಟಪ ಗಳು ವಿಕಾಸಗೊಂಡಿದ್ದವು. ಅಲಂಕಾರದ ದೃಷ್ಟಿಯಿಂದ ಹೇಳುವುದಾದರೆ, ಭುವನೇಶ್ವರಿಗಳು, ಬಾಗಿಲುವಾಡಗಳು, ಸ್ತಂಭಗಳು ಮತ್ತು ಜಗತಿಗಳನ್ನು ಮಾತ್ರ ಶಿಲ್ಪಗಳನ್ನು ಕೆತ್ತಲು ಬಳಸಲಾಗಿದ್ದು, ಪ್ರಾಣಿಗಳ, ಮನುಷ್ಯರ, ಪುಷ್ಪ ಮತ್ತು ವಿವಿಧ ವಿನ್ಯಾಸಗಳನ್ನು ಅಲ್ಲಿ ಕೆತ್ತಲಾಗಿದೆ.

ಚಲುಕ್ಯ ಶೈಲಿಯ ಪ್ರಯೋಗದ ಮುಂದಿನ ಹಂತವನ್ನು ಬಾದಾಮಿಯಲ್ಲಿರುವ ಪಲ್ಲವರ ಕಾಲಕ್ಕಿಂತ ಪ್ರಾಚೀನವಾದ ಮೇಲಿನ ಮತ್ತು ಕೆಳಗಿನ ಶಿವಾಲಯಗಳಲ್ಲಿ ಕಾಣಬಹುದು. ಇಲ್ಲಿನ ವೈಶಿಷ್ಟ್ಯವೆಂದರೆ, ಶಿಖರವನ್ನು ದೇವಾಲಯದ ಒಂದು ಅವಿಭಾಜ್ಯ ಅಂಗವೆಂಬಂತೆ ಅಳವಡಿಸಿರುವ ಜಾಣ್ಮೆ. ಇದು ಮೊಟ್ಟಮೊದಲ ಬಾರಿಗೆ ಇಲ್ಲಿ ಕಾಣಬರುತ್ತದೆ. ಭಿತ್ತಿಯ ಮೇಲೆ ಎದ್ದುಕಾಣುವ ವಿಮಾನದ ವಿನ್ಯಾಸವನ್ನು ಗಮನಿಸಿದರೆ ತ್ರಿಕೂಟಾಚಲ ಪ್ರವೃತ್ತಿಯ ಉಗಮ ಇಲ್ಲಿಯೇ ಆಗಿರಬಹುದು ಎನ್ನಿಸುತ್ತದೆ. ಮೇಲಿನ ಮತ್ತು ಕೆಳಗಿನ ಶಿವಾಲಯಗಳ ಒಳಗಡೆ ಟೊಳ್ಳಾಗಿ ಇರುವ ಶಿಖರಗಳಲ್ಲಿ ಅತ್ಯಂತ ಎತ್ತರದ ಸ್ತರದಲ್ಲಿ ಸ್ಫುಟತೆ ಎದ್ದುಕಂಡರೂ, ಕೆಳಗಿನ ಸ್ತರಗಳಲ್ಲಿ ಇದು ಕಲಸಿ ಹೋದಂತೆ ಭಾಸವಾಗುತ್ತದೆ. ಈ ಎರಡು ಶಿವಾಲಯಗಳು (ಕ್ರಿ.ಶ. 634ಕ್ಕಿಂತ ಮುಂಚೆಯೇ ನಿರ್ಮಾಣವಾದುದರಿಂದ) ಚಲುಕ್ಯ ವಾಸ್ತುಶಿಲ್ಪಿಗಳು ದಕ್ಷಿಣ ಭಾರತೀಯ ವಿಮಾನದ ವಿನ್ಯಾ ಸವನ್ನು ಮಾಡುವುದರಲ್ಲಿ ಆದ್ಯಪ್ರವರ್ತಕರೆಂದು ಹೇಳಬಹುದು. ಕ್ರಿ.ಶ. 634ರ ನಂತರ ಪಲ್ಲವರ ಪ್ರಭಾವದಿಂದಾಗಿ ಇನ್ನೂ ಕೆಲವು ವಿವರಗಳ ನಿರ್ಮಾಣವಾಗತೊಡಗಿತು. ಅನಂತರ ಒಳಬಾಗುಳ್ಳ ಶಿಖರವನ್ನೊಳಗೊಂಡ ಉತ್ತರ ಭಾರತದ ರೇಖಾನಾಗರ ಶಿಖರ ವಾಗಿ ಪರಿವರ್ತನೆಗೊಂಡ ಮುಂದಿನ ಹಂತದ ವಿಕಾಸವನ್ನು ನೋಡಲು ಐಹೊಳೆಯ ಹುಚ್ಚಮಲ್ಲಿ ಗುಡಿ, ಮಹಾಕೂಟದ ಸಂಗಮೇಶ್ವರ ಮತ್ತು ಇತರ ದೇವಾಲಯಗಳನ್ನು ಗಮನಿಸ ಬೇಕು. ಮೂರನೇಯ ಇನ್ನೊಂದು ನಮೂನೆಯ ವಾಸ್ತು ರಚನೆಯು ಕ್ರಿ.ಶ. 6-7ನೇಯ ಶತಮಾನಗಳಲ್ಲಿ ನಡೆಸಲಾದ ಪ್ರಯೋಗಗಳಿಂದ ಹೊರಹೊಮ್ಮಿತು. ಇದರಲ್ಲಿ ಆಯತಾಕಾರದ ಗರ್ಭಗೃಹ, ಅದರ ಮೇಲೆ ಕೆಳಗಿನಿಂದ ಮೇಲೆ ಹೋದಂತೆ ಕಿರಿದಾಗುವ ಸ್ತರಗಳು, ಕೊನೆಯಲ್ಲಿ ಆಮಲಕಶಿಲೆ ಮತ್ತು ಕಲಶ, ಆದರೆ ಭೂಮಿಗಳು ಮತ್ತು ಶುಕನಾಸ ಇಲ್ಲದೇ ಇರುವ ದೇವಾಲಯಗಳು ನಿರ್ಮಾಣಗೊಂಡವು. ಐಹೊಳೆಯಲ್ಲಿರುವ

ಮಲ್ಲಿಕಾರ್ಜುನ ಮತ್ತು ಗಳಗನಾಥ ದೇವಾಲಯಗಳು ಈ ಮಾದರಿಗೆ ಉತ್ತಮ ಉದಾಹರಣೆಗಳಾಗಿವೆ. ಈ ಮಾದರಿಯು ಹೊಯ್ಸಳ ಕಾಲದವರೆಗೆ ಮುಂದುವರಿಯಿತೆಂಬುದಕ್ಕೆ ಹಾಸನ ಜಿಲ್ಲೆಯಲ್ಲಿರುವ ದೊಡ್ಡಗದ್ದವಳ್ಳಿಯ ಲಕ್ಷ್ಮೀ ದೇವಾಲಯವೇ ಸಾಕ್ಷಿ.

ಮೇಲೆ ಹೇಳಿದ ಈ ಮೂರು ಶೈಲಿಗಳಲ್ಲದೆ ಅಲ್ಲಿರುವ ಮತ್ತೊಂದು ಶೈಲಿಯೇ ಗಜಪೃಷ್ಠಾಕಾರದ ಶೈಲಿ. ಐಹೊಳೆಯಲ್ಲಿರುವ ದುರ್ಗ ದೇವಾಲಯ ಮತ್ತು ಇತ್ತೀಚಿನ ಉತ್ಖನನದಲ್ಲಿ ಬೆಳಕಿಗೆ ಬಂದ ಚಿಕ್ಕಿಗುಡಿ ದೇವಾಲಯ ಸಮೂಹದಲ್ಲಿ ಈ ಶೈಲಿಯನ್ನು ಕಾಣುತ್ತೇವೆ. ಈ ವಿಮಾನ ಮಾದರಿ ದೇವಾಲಯದ ವಿಕಾಸದ ಮುಂದಿನ ಹಂತವನ್ನು ಬಾದಾಮಿಯ ಭೂತನಾಥ ದೇವಾಲಯ ಸಮೂಹದಲ್ಲೂ, ರೇಖಾನಾಗರ ವಿನ್ಯಾಸದ ವಿಕಾಸವನ್ನು ಐಹೊಳೆಯ ಹುಚ್ಚುಮಲ್ಲಿ ಗುಡಿಯಲ್ಲೂ ಕಾಣುತ್ತೇವೆ. ಮಹಾಕೂಟೇಶ್ವರವು ದ್ವಿತಲ ವಿಮಾನ ಮತ್ತು ಅಷ್ಟಕೋನಾಕೃತಿಯ ಶಿಖರಕ್ಕೂ, ಅಲ್ಲೇ ಇರುವ ಸಂಗಮೇಶ್ವರ ದೇವಾಲಯವು ರೇಖಾನಾಗರಕ್ಕೂ ಉತ್ತಮ ಉದಾಹರಣೆಗಳು. ಶಿಖರದಿಂದ ಹೊರಹೊಮ್ಮುವ ಮಹಾನಾಸಿಕವು ಉತ್ತರ ಭಾರತದ ದೇವಾಲಯಗಳ ಮುಖ್ಯ ಲಕ್ಷಣವಾದರೂ, ಅದನ್ನು ಇಲ್ಲಿ ದಕ್ಷಿಣದ ವಿಮಾನ ಮಾದರಿಯ ದೇವಾಲಯಗಳಿಗೂ ಅಳವಡಿಸಲಾಯಿತು. ಅದೇ ರೀತಿಯಲ್ಲಿ ಮುಚ್ಚಿಗೆ ಇರುವ ಪ್ರದಕ್ಷಿಣಾ ಪಥವನ್ನುಳ್ಳ (ಸಾಂಧಾರ) ಔತ್ತರೇಯ ಲಕ್ಷಣವು ದಾಕ್ಷಿಣಾತ್ಯ ರೀತಿಯ ಕೆಲವು ಚಲುಕ್ಯ ದೇವಾಲಯಗಳಲ್ಲೂ ಕಂಡು ಬರುತ್ತದೆ.

ಐಹೊಳೆ, ಬಾದಾಮಿ ಮತ್ತು ಮಹಾಕೂಟಗಳಲ್ಲಿ ಪ್ರಾರಂಭವಾದ ಔತ್ತರೇಯ ಮತ್ತು ದಾಕ್ಷಿಣಾತ್ಯ ದೇವಾಲಯ ಶೈಲಿಗಳು ಪಟ್ಟದಕಲ್ಲಿನಲ್ಲಿ ವಿಕಾಸವನ್ನು ಪಡೆದವು. ದಾಕ್ಷಿಣಾತ್ಯ ಶೈಲಿಯಲ್ಲಿ ಇನ್ನೂ ಕೆಲವು ಹೊಸ ವಿನ್ಯಾಸಗಳನ್ನು ಸೇರಿಸಲಾಯಿತು. ಅಲಂಕಾರಿಕವಾದ ಅಂಗಳದಲ್ಲಿ ಪೂರಕವಾದ ದೇಗುಲಗಳನ್ನು ಸೇರಿಸುವುದು ಮತ್ತು ವಿಮಾನದ ಸ್ತರಗಳಲ್ಲಿ ಅಲಂಕಾರವನ್ನು ಸೇರಿಸುವುದು ಮೊದಲಾಯಿತು. ಸಂಗಮೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳು ಇದಕ್ಕೆ ಉತ್ತಮ ಉದಾಹರಣೆಯಾದರೂ ವಿರೂಪಾಕ್ಷ ದೇವಾಲಯವು ಅತಿ ಚೆನ್ನಾಗಿ ವಿಕಸನಗೊಂಡ ಕಟ್ಟಡ. ಕಾಶಿವಿಶ್ವೇಶ್ವರ, ಗಳಗನಾಥ ಮತ್ತು ಕಾಡಸಿದ್ಧೇಶ್ವರ ದೇವಾಲಯಗಳು ಎತ್ತರವಾದ ಔತ್ತರೇಯ ಶಿಖರಗಳಿಗೆ ಪ್ರಸಿದ್ಧಿಯಾಗಿವೆ. ಆದರೆ ಪಾಪನಾಥ ದೇವಾಲಯವು ಈ ಎರಡು ಶೈಲಿಗಳ ಮಿಶ್ರಣವಾಗಿದೆ.

ವಾಸ್ತುವಿನ ದೃಷ್ಟಿಯಿಂದ ಮಾತ್ರವಲ್ಲದೆ ಶಿಲ್ಪಗಳ ದೃಷ್ಟಿಯಿಂದಲೂ ಪ್ರಸಿದ್ಧಿ ಪಡೆದಿರುವ ದೇವಾಲಯಗಳಲ್ಲಿ ಲಾಡ್ ಖಾನ್, ದುರ್ಗ, ಕುಂತಿ (1 ರಿಂದ 4), ಮೇಗುತಿ, ಹುಚ್ಚಪ್ಪಯ್ಯ ಮಠ, ಚಿಕ್ಕಿ ಮತ್ತು ರಾವಳಫಡಿ (ವೈದಿಕ ಧರ್ಮದ ಗುಹಾಲಯ), ಮೇಗುತಿಗೆ ಹೋಗುವ ದಾರಿಯಲ್ಲಿರುವ ಬೌದ್ಧಾಲಯ ಮತ್ತು ಇತರ ದೇವಾಲಯಗಳಾದ ಚರಂತಿಮಠ, ಮುಂತಾದವುಗಳನ್ನು ಹೆಸರಿಸಬೇಕು. ಅಲಂಕಾರಿಕ ವಿವರಗಳಿಗೆ ಮತ್ತು ಶಿಲ್ಪಗಳಿಗೆ ಪಟ್ಟದಕಲ್ಲಿನಲ್ಲಿರುವ ಪಾಪನಾಥ, ವಿರೂಪಾಕ್ಷ, ಮಲ್ಲಿಕಾರ್ಜುನ, ಕಾಶಿವಿಶ್ವೇಶ್ವರ ಮತ್ತು ಗಳಗನಾಥ ದೇವಾಲಯಗಳು, ಬಾದಾಮಿಯಲ್ಲಿರುವ ಗುಹಾಲಯಗಳು, ಮೇಲಿನ ಮತ್ತು ಕೆಳಗಿನ ಶಿವಾಲಯಗಳು ಮತ್ತು ಮಾಲೆಗಿತ್ತಿ ಶಿವಾಲಯಗಳು ಗಮನಾರ್ಹವಾದವು. ಅರಸರು ಮತ್ತು ವ್ಯಾಪಾರಿಗಳು ಈ ದೇವಾಲಯಗಳ ನಿರ್ಮಾಣ ಮತ್ತು ಪೋಷಣೆಗಾಗಿ ವಿಶೇಷ ದತ್ತಿಗಳನ್ನು ಬಿಟ್ಟುಕೊಟ್ಟರು. ಮಂಗಳೇಶನ ಶಾಸನ, ವಿಕ್ರಮಾದಿತ್ಯನ ರಾಣಿಯರ ಶಾಸನ ಮತ್ತು ರವಿಕೀರ್ತಿಯ ಪ್ರಶಸ್ತಿಯು ಈ ದೇವಾಲಯಗಳ ನಿರ್ಮಾಣದ ಕಾಲವನ್ನು ಮತ್ತು ಸಂದರ್ಭವನ್ನು ತಿಳಿಸುತ್ತವೆ.

### ರಾಷ್ಟ್ರಕೂಟ ಶೈಲಿ

ನರ್ಮದೆಯಿಂದ ಕಾವೇರಿಯವರೆಗೆ ಪ್ರಸರಿಸಿದ್ದ ಬಾದಾಮಿ ಚಲುಕ್ಯರ ಸಾಮ್ರಾಜ್ಯದ ಪತನಾನಂತರ ಮಳಖೇಡದ ರಾಷ್ಟ್ರಕೂಟರು ಎಂಟನೇಯ ಶತಮಾನದ ಉತ್ತರಾರ್ಧದಲ್ಲಿ ತಲೆ ಎತ್ತಿ ಗುಜರಾತ್ ಕೂಡ ಸೇರಿದಂತೆ ವಿಶಾಲವಾದ ರಾಜ್ಯವನ್ನು ಆಳಿದರು. ಅವರು ಚಲುಕ್ಯರ ಪರಂಪರೆಯನ್ನೇ ಮುಂದುವರಿಸಿದರು. ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆಯ ಎಲ್ಲೋರದಲ್ಲಿರುವ ಕೈಲಾಸ ಗುಹಾ ದೇವಾಲಯವೇ ಅವರ ಅತ್ಯಂತ ಸುಂದರ ದೇವಾಲಯ. ಇದು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಮಾದರಿಯಲ್ಲಿಯೇ ರಚಿತವಾಗಿದೆ. ಚಲುಕ್ಯರ ಕಾಲದಲ್ಲೇ ಬಳಕೆಯಲ್ಲಿದ್ದ ರಾವಣನು ಕೈಲಾಸವನ್ನು ಎತ್ತುತ್ತಿರುವ, ಜಟಾಯುವು ರಾವಣನನ್ನು ಎದುರಿಸುತ್ತಿರುವ, ಲಿಂಗೋದ್ಭವ ಶಿವ, ಶರಶಯ್ಯೆಯಲ್ಲಿ ಮಲಗಿರುವ ಭೀಷ್ಮ ಮುಂತಾದ ಶಿಲ್ಪಗಳು ಇಲ್ಲಿ ಇನ್ನೂ ಹೆಚ್ಚಿನ ಆಕರ್ಷಕ ಶೈಲಿಯಲ್ಲಿ ಮತ್ತು ಹೆಚ್ಚು ಸ್ಫುಟವಾಗಿ ಕೆತ್ತಲ್ಪಟ್ಟಿವೆ. ಇಂದಿನವರೆಗೂ ಉಳಿದು ಬಂದಿರುವ ಮತ್ತು ಕರ್ನಾಟಕದ ಗಡಿಯೊಳಗೆ ಇರುವ ರಾಷ್ಟ್ರಕೂಟ ದೇವಾಲಯಗಳಲ್ಲಿ ಪಟ್ಟದಕಲ್ಲಿನ ಜೈನ ದೇವಾಲಯ ಮತ್ತು ಧಾರವಾಡ ಜಿಲ್ಲೆಯ ಗದಗಿನಲ್ಲಿರುವ ತ್ರಿಕೂಟೇಶ್ವರ ದೇವಾಲಯಗಳು ಮುಖ್ಯವಾದವು. ತ್ರಿಕೂಟೇಶ್ವರ ದೇವಾಲಯವು ದೇವತೆಗಳ, ರಾಜರ ಉತ್ಸವಗಳ, ಬೇಟೆಯ ದೃಶ್ಯಗಳ, ಇತ್ಯಾದಿ ಸೂಕ್ಷ್ಮ ಪ್ರಮಾಣದ ಶಿಲ್ಪಗಳನ್ನು ಹೆಚ್ಚಾಗಿ ಒಳಗೊಂಡಿದ್ದರೆ, ಪಟ್ಟದಕಲ್ಲಿನ ಜೈನ ದೇವಾಲಯವು ಮುಖ ಮಂಟಪವೂ ಸೇರಿದಂತೆ, ಅದರ ವಿನ್ಯಾಸಕ್ಕೆ ಪ್ರಸಿದ್ಧಿಯಾಗಿದೆ. ಬಾದಾಮಿ ಚಲುಕ್ಯರ ವಾಸ್ತುಶೈಲಿಗಳು ಎಲಿಫಂಟಾ ಗುಹಾಲಯಗಳ

ಶಿಲ್ಪಗಳ ಮೇಲೆ ಪ್ರಭಾವ ಬೀರಿದಂತೆ, ರಾಷ್ಟ್ರಕೂಟ ಶೈಲಿಯ ಪ್ರಭಾವವು ದೂರದ ದ್ವಾರಕೆಯವರೆಗೆ ಉಂಟಾಯಿತೆಂಬುದು ಕ್ರಿ. ಶ. 8-9ನೇಯ ಶತಮಾನದ ದೇವಾಲಯಗಳ ಅವಶೇಷಗಳು ಇತ್ತೀಚೆಗೆ ದೊರಕಿರುವುದರಿಂದ ತಿಳಿದುಬಂದಿದೆ.

## ಗಂಗ ಮತ್ತು ಚೋಳ ಶೈಲಿಗಳು

ತಲಕಾಡಿನ ಗಂಗರು ನಿರ್ಮಿಸಿದ ಕೆಲವು ದೇವಾಲಯಗಳು ವಾಸ್ತು ಶೈಲಿಯ ಪರಿಶುದ್ಧತೆ ಮತ್ತು ಶಿಲ್ಪಶೈಲಿಯ ಸೊಬಗಿಗೆ ಹೆಸರಾಗಿವೆ. ಕೋಲಾರ ಜಿಲ್ಲೆಯ ನಂದಿಯಲ್ಲಿರುವ ಭೋಗ ನಂದೀಶ್ವರ ದೇವಾಲಯವು (ಕ್ರಿ. ಶ. 9ನೇಯ ಶತಮಾನ) ವಿದ್ವಾಂಸರು ಕರೆಯುವಂತೆ ಗಂಗ, ಬಾಣ ಶೈಲಿಯಲ್ಲಿದೆ. ಇದರಲ್ಲಿ ಎರಡು ದೇವಾಲಯಗಳಿದ್ದು ಇದು ದಾಕ್ಷಿಣಾತ್ಯ ವಿಮಾನ ಶೈಲಿಗೆ ಅತ್ಯಂತ ಸಮರ್ಪಕವಾದ ಉದಾಹರಣೆಯೆನಿಸಿದೆ. ಇದರಲ್ಲಿ ವಿಮಾನದ ವಿವಿಧ ಸ್ತರಗಳು ಸ್ಫುಟವಾಗಿ ಶಿಲ್ಪಗಳಿಂದ ವಿಶೇಷವಾಗಿ ಅಲಂಕೃತವಾಗಿವೆ. ನವರಂಗವೆಂಬ ಸ್ತಂಭದ ಹಜಾರದಲ್ಲಿಯೂ ಬಲು ಸುಂದರವಾದ ದೇವ ದೇವತೆಗಳ ಮತ್ತು ಗಂಧರ್ವರ ಶಿಲ್ಪಗಳಿವೆ. ಕರಿಯ ಕಗ್ಗಲ್ಲಿನಲ್ಲಿ ರಚಿತವಾದ ಕಲ್ಯಾಣ ಮಂಟಪವು ವಿವರಗಳ ಮತ್ತು ನಾಜೂಕಿನ ಕೆತ್ತನೆಗೆ ಹೆಸರಾಗಿದೆ. ದಾಕ್ಷಿಣಾತ್ಯ ವಿಮಾನ ಶೈಲಿಯಲ್ಲಿ, ಗಂಗ-ಚೋಳ ಮಾದರಿಯಲ್ಲಿ ನಿರ್ಮಿತವಾದ ಕೋಲಾರಮ್ಮ ದೇವಾಲಯ, ಚೋಳ ಶೈಲಿಯಲ್ಲಿ ನಿರ್ಮಿತವಾದ ಸೋಮೇಶ್ವರ ದೇವಾಲಯಗಳಲ್ಲಿ (ಕ್ರಿ.ಶ. 9-10 ನೇಯ ಶತಮಾನ) ಚೋಳರ ಶಿಲ್ಪ ಪ್ರಭಾವವನ್ನು ಗುರುತಿಸ ಬಹುದು. ಸೋಮೇಶ್ವರ ದೇವಾಲಯದ ಗೋಪುರವು ಆನಂತರದ ಕಾಲಕ್ಕೆ ಸೇರಿದ್ದು.

## ಕಲ್ಯಾಣಿ ಚಾಳುಕ್ಯ ಶೈಲಿ

ಧಾರವಾಡ ಜಿಲ್ಲೆಯ ಲಕ್ಕುಂಡಿ, ಗದಗ, ಕುರುವತ್ತಿ, ಹಾವೇರಿ ಮತ್ತು ಚೌಡದಾನಪುರ, ರಾಯಚೂರು ಜಿಲ್ಲೆಯ ಇಟಗಿ ಮತ್ತು ಕುಕನೂರು, ಬಳ್ಳಾರಿ ಜಿಲ್ಲೆಯ ಹಡಗಲಿ ಮತ್ತು ಬಾಗಲಿ, ಶಿವಮೊಗ್ಗ ಜಿಲ್ಲೆಯ ಬೆಳ್ಳಾವಿ ಮತ್ತು ಚಿತ್ರದುರ್ಗ ಜಿಲ್ಲೆಯ ಹರಿಹರಗಳಲ್ಲಿರುವ ದೇವಾಲಯಗಳು ಕಲ್ಯಾಣಿ ಚಾಳುಕ್ಯ ಶೈಲಿಯ ಪ್ರಸಿದ್ಧ ದೇವಾಲಯಗಳು. ಅಷ್ಟಾಗಿ ಪ್ರಸಿದ್ಧಿ ಪಡೆಯದಿರುವ ದೇವಾಲಯಗಳಲ್ಲಿ, ಧಾರವಾಡ ಜಿಲ್ಲೆಯ ಉಣಕಲ್, ರಟ್ಟೆಹಳ್ಳಿ ಮತ್ತು ಗಳಗನಾಥ, ಮಹಾರಾಷ್ಟ್ರದಲ್ಲಿ ರುವ ಕೊಲ್ಲಾಪುರ ಜಿಲ್ಲೆಯ ಖಿದ್ರಾಪುರಗಳು ಹೆಸರಿಸಲು ಯೋಗ್ಯವಾದವು. ಕಲ್ಯಾಣಿ ಚಾಳುಕ್ಯ ಶೈಲಿಯ ದೇವಾಲಯ ಗಳಲ್ಲಿ ವಿಮಾನದ ಮುಖ ಭಾಗದ ಸ್ತರಗಳ ಸಂಖ್ಯೆಯು ಇನ್ನೂ ಹೆಚ್ಚಾದುದರಿಂದ, ವಾಸ್ತುವಿನ ಅಲಂಕಾರಕ್ಕೂ ಮತ್ತು ಶಿಲ್ಪ ಗಳನ್ನು ಪ್ರಾಚೀನ ಚಲುಕ್ಯ ಶೈಲಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಅಳವಡಿಸಲು ಅವಕಾಶವಾಯಿತು. ಪ್ರಾಚೀನ ಚಲುಕ್ಯ ಶೈಲಿ ಯಲ್ಲಿದ್ದಂತೆ ಗೋಡೆಯ ಭಾಗಗಳಲ್ಲಿ ಉಬ್ಬುಗಂಬಗಳನ್ನು, ಪಟ್ಟದಕಲ್ಲಿನ ವಿರೂಪಾಕ್ಷ ಮತ್ತು ಪಾಪನಾಥ ದೇವಾಲಯಗಳಲ್ಲಿ ದ್ದಂತೆ, ಈ ಶೈಲಿಯಲ್ಲಿಯೂ ಮುಂದುವರಿಸಲಾಯಿತು. ಇದರಿಂದ ಇಡೀ ದೇವಾಲಯಕ್ಕೆ ಒಂದು ರೀತಿಯ ಉಪಯುಕ್ತತೆಯ ಚೌಕಟ್ಟನ್ನು ಒದಗಿಸಿದಂತಾಯಿತು. ಉಬ್ಬುಗಂಬಗಳ ಮಧ್ಯದ ಕೋಷ್ಠ (ಗೂಡು) ಗಳನ್ನು ಈ ವಾಸ್ತುವಿನ್ಯಾಸದಲ್ಲಿ ಜಾಣತನ ದಿಂದ ಸೇರಿಸಲಾಯಿತು, ಮತ್ತು ಪತ್ರಾಕೃತಿಯ ಅಲಂಕಾರದ ಬಾಗಿನ ರೇಖೆಗಳನ್ನು ವಾಸ್ತುಚಿಹ್ನೆಗಳ ಮಧ್ಯೆ ಸೇರಿಸಲಾಯಿತು. ಶಿಖರದ ಭಾರವನ್ನು ಕಡಿಮೆಮಾಡಿ, ಅದು ಉತ್ತರ ಭಾರತದ ದೇವಾಲಯಗಳಂತೆ ಎತ್ತರವನ್ನು ತೋರಿಸುವಂತೆ ಮಾಡಲು ತೂಗುದಿಮ್ಮಿಯನ್ನು ಅಳವಡಿಸಲಾಯಿತು. ಆದರೆ ದಾಕ್ಷಿಣಾತ್ಯ ಉಗಮವನ್ನು ತೋರಿಸುವ ಸಲುವಾಗಿ ಅಡ್ಡಲಾಗಿರುವ ರೇಖೆ ಗಳನ್ನು ಶಿಖರದಲ್ಲಿ ಹಾಗೆಯೇ ಉಳಿಸಿಕೊಳ್ಳಲಾಯಿತು. ಸ್ತೂಪಿ, ಶಿಖರ ಮತ್ತು ಮಹಾನಾಸಿಕಗಳು, ಲಕ್ಕುಂಡಿಯ ನನ್ನೇಶ್ವರ ದೇವಾಲಯದಲ್ಲಿರುವಂತೆ ಔತ್ತರೇಯ ಲಕ್ಷಣಗಳ ಸಾಮೀಪ್ಯವನ್ನು ಸೂಚಿಸುತ್ತವೆ. ಇದು ಹೆಚ್ಚಿನ ಅಲಂಕಾರವಿಲ್ಲದ ಸ್ತರಗಳನ್ನು ಹೊಂದಿದ ಪ್ರಾಚೀನ ಚಲುಕ್ಯ ಶೈಲಿಗೂ, ವಿಶೇಷ ಅಲಂಕಾರಗಳ ಸ್ತರಗಳನ್ನು ಹೊಂದಿದ ಹೊಯ್ಸಳ ಶೈಲಿಗೂ ಮಧ್ಯದಲ್ಲಿರುವ ಶೈಲಿಯಾಗಿದೆ. ವಿಶೇಷ ಅಲಂಕಾರಿಕ ಬಾಗಿಲ ವಾಡಗಳು, ಶಿಖರದಲ್ಲಿರುವ ಸಮತಲ ಸ್ತರಗಳ ಹೆಚ್ಚಿನ ಅಲಂಕಾರ, ಸಣ್ಣ ಪ್ರಮಾಣದ ಶಿಲ್ಪಗಳು, ಕುರುವತ್ತಿಯ ದೇವಾಲಯದಲ್ಲಿ ರುವಂತೆ ಅಲಂಕಾರಿಕ ಶಿಲಾಭಂಜಿಕೆಗಳು, ಇಟಗಿ ಮತ್ತು ಲಕ್ಕುಂಡಿಯ ದೇವಾಲಯಗಳಲ್ಲಿರುವಂತೆ ಭುವನೇಶ್ವರಿ ಮತ್ತು ಕೋಷ್ಠಗಳಲ್ಲಿರುವ ಮನುಷ್ಯ ಪ್ರಮಾಣದ ಸುಂದರ ಶಿಲ್ಪಗಳು ಈ ಶೈಲಿಯ ಶಿಲ್ಪದ ಗಮನಾರ್ಹ ಲಕ್ಷಣಗಳು. ಈ ಕಲ್ಯಾಣಿ ಚಾಳುಕ್ಯ ಶೈಲಿಯ ಶಿಲ್ಪಿಗಳು ಗರ್ಭಗೃಹದ ಬಾಗಿಲ ವಾಡಗಳನ್ನು ಅಲಂಕಾರದ ಮುಖ್ಯ ಕೇಂದ್ರವನ್ನಾಗಿ ಮಾಡಿ, ಅದರ ವಿಷಯ ದಲ್ಲಿ ವಿಶೇಷ ಆಸಕ್ತಿ ವಹಿಸಿದರು. ಹೊಯ್ಸಳ ದೇವಾಲಯಗಳ ಬಾಗಿಲ ವಾಡಗಳು ಪೂರ್ಣವಾಗಿ ಅಲಂಕೃತ ವಸ್ತುಗಳಾದರೆ ಕಲ್ಯಾಣಿ ಚಾಳುಕ್ಯ ಶೈಲಿಯ ಬಾಗಿಲವಾಡಗಳಿಗೆ ಒಂದು ವಾಸ್ತು ವಿನ್ಯಾಸವಿದೆ; ಈ ವಿನ್ಯಾಸದಲ್ಲಿ ಎರಡು ಕಡೆಗಳಲ್ಲಿಯೂ ಉಬ್ಬು ಗಂಬಗಳು, ಅಚ್ಚುಪಟ್ಟಿಯ ಹಾಸುಗಲ್ಲು, ಮತ್ತು ಅದರ ಮೇಲೆ ಕಪೋತವಿರುತ್ತದೆ. ಈ ರೀತಿಯ ವ್ಯಾಪಕವಾದ ಕೆತ್ತನೆ ಗಳು ಸಾಧ್ಯವಾಗುವುದಕ್ಕೆ ಮುಖ್ಯ ಕಾರಣವೆಂದರೆ, ಕಲ್ಯಾಣಿ ಚಾಳುಕ್ಯ ಶಿಲ್ಪಿಗಳು ಉಪಯೋಗಿಸಿದ ನಯವಾದ ಮತ್ತು ಮೆದುವಾದ ಪದರುಗಲ್ಲು (ಷಿಸ್ಟ್). ಅಂತಿಮವಾಗಿ, ಚಾಳುಕ್ಯ ಶೈಲಿಯು ಹೊಯ್ಸಳ ಶೈಲಿಯಾಗಿ ವಿಕಾಸ ಹೊಂದಿದ ಹಂತವನ್ನು ತೋರಿಸುವ, ಧಾರವಾಡ ಜಿಲ್ಲೆಯ ಡಂಬಳದ ದೊಡ್ಡಬಸಪ್ಪ ದೇವಾಲಯವು ಒಂದು ಹೆಗ್ಗುರುತು ಎಂಬ ವಿಷಯವನ್ನು ಗಮನಿಸಬೇಕು. ಈ ದೇವಾಲಯದ ವಿಮಾನ ಮತ್ತು ಆಲಯ

ಗಳು ನಕ್ಷತ್ರಾಕಾರದಲ್ಲಿದೆ; ಈ ದೇವಾಲಯವನ್ನು ಕಲ್ಯಾಣಿ ಚಾಳುಕ್ಯ ಮತ್ತು ಹೊಯ್ಸಳ ದೇವಾಲಯಗಳಿಗಿಂತ ಭಿನ್ನವಾಗಿ ಮಾಡಿರುವ ಮುಖ್ಯ ಅಂಶವೆಂದರೆ ಮೆಟ್ಟಿಲು ಮೆಟ್ಟಿಲಾಗಿ ಮೇಲೇರುವ ಪಿರಮಿಡ್ಡಿನ ಮಾದರಿಗೆ ಬದಲಾಗಿ ಕೆಳಭಾಗದ ಮುಂಚಾಚುಗಳು ಕೂಡಂಚಿನ ರೂಪದಲ್ಲಿ ಶಿಖರದ ಗ್ರೀವದವರೆಗೆ ಮುಂದುವರಿಯುವುದೇ ಆಗಿದೆ.

### ಹೊಯ್ಸಳ ಶೈಲಿ

ದ್ವಾರಸಮುದ್ರದ (ಹಳೇಬೀಡು) ಹೊಯ್ಸಳರು ಕಲೆ ಮತ್ತು ವಿದ್ಯೆಯ ಮಹಾಪೋಷಕರಾಗಿದ್ದರು. ದೇವಾಲಯ ಗಳನ್ನು ನಿರ್ಮಿಸುವುದು, ಅವುಗಳನ್ನು ಸುಂದರವಾದ ಶಿಲ್ಪಗಳಿಂದ ಅಲಂಕೃತವನ್ನಾಗಿ ಮಾಡುವುದರ ಜೊತೆಗೆ ಅವರು ವರ್ಣಚಿತ್ರ ಕಲೆ, ಸಂಗೀತ ಮತ್ತು ನೃತ್ಯಗಳಿಗೂ ವಿಶೇಷ ಪ್ರೋತ್ಸಾಹವನ್ನು ಕೊಟ್ಟರು. ಹೊಯ್ಸಳ ಶಿಲ್ಪಿಗಳು ಬಲು ನಾಜೂಕಾದ ಶಿಲ್ಪ ಗಳನ್ನು ಮಾಡಬಲ್ಲ ಮತ್ತು ವಿಶೇಷ ಹೊಳಪನ್ನು ಕೊಡಬಲ್ಲ, ನೀಲಿ ಅಥವಾ ಬೂದು ಬಣ್ಣದ ಕ್ಲೊರಿಟಿಕ್ ಷಿಸ್ಟ್ (ಬಳಪದ ಕಲ್ಲು) ಎಂಬ ಕಲ್ಲನ್ನು ಬಳಸಿದರು. ಅವರು ನಿರ್ಮಿಸಿದ ನೂರಾರು ದೇವಾಲಯಗಳಲ್ಲಿ 84 ದೇವಾಲಯಗಳು ಚೆನ್ನಾಗಿ ಉಳಿದುಬಂದಿವೆ. ಇವುಗಳಲ್ಲಿ ವಿಶೇಷ ಖ್ಯಾತಿಯನ್ನು ಪಡೆದಿರುವ ದೇವಾಲಯಗಳು ಹಾಸನ ಜಿಲ್ಲೆಯ ಬೇಲೂರು, ಹಳೇಬೀಡು, ದೊಡ್ಡಗದ್ದವಳ್ಳಿ, ಅರಸಿಕೆರೆ, ಹೊಸಹೊಳಲು, ಕೋರಮಂಗಲ, ಅರಕೆರೆ, ಹಾರ್ನಹಳ್ಳಿ, ನುಗ್ಗೇಹಳ್ಳಿ, ಮೊಸಳೆ ಮತ್ತು ಅರಳ ಗುಪ್ಪೆ, ಮೈಸೂರು ಜಿಲ್ಲೆಯ ಸೋಮನಾಥಪುರ ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲಗಳಲ್ಲಿವೆ. ಹೊಯ್ಸಳ ದೇವಾಲಯಗಳ ಅತಿ ಮುಖ್ಯ ಲಕ್ಷಣವೆಂದರೆ, ವಾಸ್ತುವಿಗಿಂತ ಶಿಲ್ಪಕ್ಕೆ ಹೆಚ್ಚು ಪ್ರಾಧಾನ್ಯ. ದೇವಾಲಯದ ಎಲ್ಲ ಮೂಲೆಗಳೂ ಕೋಷ್ಠಗಳೂ, ಅಚ್ಚುಪಟ್ಟಿನ ಅಧಿಷ್ಠಾನಗಳೂ, ಶಿಖರ ಮತ್ತು ಭುವನೇಶ್ವರಿ ಗಳೂ, ಬಲು ನಾಜೂಕಾದ ಮನುಷ್ಯ ಮತ್ತು ಪ್ರಾಣಿಗಳು, ದೇವದೇವತೆಗಳೂ, ಪುಷ್ಪವಿನ್ಯಾಸದ ಅಲಂಕಾರಗಳು ಮತ್ತು ಜ್ಯಾಮಿತಿಯ ವಿವಿಧ ವಿನ್ಯಾಸಗಳಿಂದ ಅಲಂಕೃತವಾಗಿರುತ್ತವೆ.

ಮೇಲ್ಮೈ ಮತ್ತು ರಚನಾಕ್ರಮಗಳಲ್ಲಿ ಹೊಯ್ಸಳ ದೇವಾಲಯಗಳು ಕಲ್ಯಾಣಿ ಚಾಳುಕ್ಯ ದೇವಾಲಯಗಳಿಗಿಂತ ಭಿನ್ನವಾಗಿರುತ್ತವೆ. ವಿಮಾನದ ತಲವಿನ್ಯಾಸವು ಹತ್ತಾರು ಮೂಲೆಗಳಿಂದ ಮಾಡಲ್ಪಟ್ಟು ನಕ್ಷತ್ರಾಕಾರವನ್ನು ಪಡೆದಿದೆ; ಇದು ಒಂದು ಚೌಕವನ್ನು ಒಂದು ನಿರ್ದಿಷ್ಟ ಬಿಂದುವಿನಲ್ಲಿ ತಿರುಗಿಸಿದಂತೆ ತೋರುತ್ತದೆ; ಇಲ್ಲಿ ಎಷ್ಟು ಮೂಲೆಗಳಿರ ಬೇಕೆಂಬುದು, ಆ ನಕ್ಷತ್ರದಲ್ಲಿ ಎಷ್ಟು ತಿರುವುಗಳಿರಬೇಕೆನ್ನುವುದರ ಮೇಲೆ ಆಧರಿಸಿದೆ. ದೇವಾಲಯದ ಜಗತಿಯು ನಕ್ಷತ್ರಾಕಾರದ ವಿನ್ಯಾಸವನ್ನೇ ವಿಶೇಷವಾಗಿ ಅನುಸರಿಸುತ್ತದೆ. ಎತ್ತರವಾದ ಜಗತಿಯಲ್ಲಿ ಒಂದರ ಮೇಲೆ ಒಂದರಂತೆ ಪ್ರಾಣಿಶಿಲ್ಪಗಳ ಪಟ್ಟಿಕೆ ಗಳು, ಪುಷ್ಪ ಪಟ್ಟಿಕೆಗಳು, ಮತ್ತು ಇತರ ಶಿಲ್ಪ ಪಟ್ಟಿಕೆ ಗಳಿರುತ್ತವೆ. ಗೋಡೆಯ ಮೇಲಿನ ಶಿಲ್ಪಗಳು ಸಮತಲ ಪಟ್ಟಿಕೆ ಗಳಿಂದ ಕೂಡಿರುತ್ತವೆ. ಇವು ವಿಮಾನದ ಸುತ್ತಲೂ ಮೂರು ಪಟ್ಟಿಕೆಗಳಾಗಿಯೂ, ನವರಂಗದ ಸುತ್ತಲೂ ಎರಡು ಪಟ್ಟಿಕೆ ಗಳಾಗಿಯೂ ಇರುತ್ತವೆ. ಶಿಖರವು ಮೇಲೇರುವುದನ್ನು ಸೂಚಿಸಲು ಲಂಬ ಮಾನದ ಪಟ್ಟಿಕೆಗಳು ಸ್ತೂಪಿಯವರೆಗೂ ಉಪಯೋಗಿಸಲ್ಪಟ್ಟರೂ ಸಮತಲದ ಪಟ್ಟಿಕೆಗಳು ಉತ್ತರ ಭಾರತ ಶಿಖರ ಶೈಲಿಯ ಪ್ರಭಾವವನ್ನು ಕಡಿಮೆ ಮಾಡುತ್ತವೆ. ಹೊಯ್ಸಳ ದೇವಾಲಯದ ಸ್ತಂಭಗಳು ತಿರುಗಣೆಯ ('ಲೇಥ್') ಮೇಲೆ ತಿರುಗಿಸಿ ಮಾಡಿದವುಗಳಾಗಿದ್ದು, ಸಮತಲ ವೃತ್ತಗಳು ಮತ್ತು ತೋಡುಗಳನ್ನು ಹೊಂದಿರುತ್ತವೆ. ಕಂಬದ ದಿಂಡಿನ ಕೆಳಭಾಗದಲ್ಲಿ ಘಂಟಾಕೃತಿಯ ವಿನ್ಯಾಸವಿದ್ದು, ಬೋದಿಗೆಯು ಶಿಲಾಭಂಜಿಕೆಯ ಶಿಲ್ಪಗಳನ್ನು ಹೊಂದಿರುತ್ತದೆ. ಅನೇಕ ಹೊಯ್ಸಳ ದೇವಾಲಯಗಳಲ್ಲಿ ಒಂದೇ ಗರ್ಭಗುಡಿ ಇರುತ್ತದೆ ; ಆದರೆ ಮತ್ತೆ ಕೆಲವಲ್ಲಿ ಎರಡು ಮತ್ತು ಮೂರು ಗರ್ಭಗುಡಿ ಗಳಿದ್ದು, ಶಿಖರವು ಒಂದೇ ಒಂದು ಆಲಯದಿಂದ ಕೂಡಿರುತ್ತದೆ. ಸೋಮನಾಥಪುರದಲ್ಲಿರುವ ಕೇಶವ ದೇವಾಲಯವು ಸಮಗ್ರ, ಪೂರ್ಣ ದೇವಾಲಯವಾದರೆ, ಬೇಲೂರಿನ ಚನ್ನಕೇಶವ ದೇವಾಲ ಯವು ಅತ್ಯಂತ ಅಲಂಕೃತವಾದುದು. ಬೇಲೂರಿನ ದೇವಾಲಯವು ಮನಮೋಹಕವಾದ ಶಿಲಾಬಾಲಿಕೆಯರ ಶಿಲ್ಪಗಳಿಗೆ ಮತ್ತು ಬಲು ನಾಜೂಕಾದ ಭುವನೇಶ್ವರಿಗಳಿಗೂ ಬಾಗಿಲವಾಡಗಳಿಗೂ ಪ್ರಖ್ಯಾತ ವಾಗಿದೆ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವು ಹೊಯ್ಸಳರ ಮತ್ತೊಂದು ಮಹಾ ಸಾಧನೆ. ಅದೊಂದು ದ್ವಿಕೂಟ ; ಪ್ರತಿಯೊಂದು ಶಿಲುಬೆಯಾಕಾರದಲ್ಲಿದೆ. ದೇವಾ ಲಯದ ಹೊರಭಾಗದ ಗೋಡೆಯ ಮೇಲೆ ದೊರಕಿದ ಸ್ಥಳವನ್ನು ಅತ್ಯಂತ ಜಾಣತನದಿಂದ ಉಪಯೋಗಿಸಿ, ಈ ದೇವಾಲಯವು ದೇವ ದೇವತೆಗಳು, ಅವರ ಅನುಚರರು, ಸಂಗೀತ ಮತ್ತು ನೃತ್ಯಗಾರರ ಶಿಲ್ಪಗಳನ್ನೊಳಗೊಂಡ ಒಂದು ಶಿಲ್ಪಕಲಾ ಸಂಗ್ರಹವಾಗುವಂತೆ ಮಾಡಲಾಗಿದೆ.

### ವಿಜಯನಗರ ಶೈಲಿ

ವಿಜಯನಗರ ರಾಜರು ಕೃಷ್ಣಾ ನದಿಯ ತೀರದಿಂದ ಕನ್ಯಾ ಕುಮಾರಿಯವರೆಗಿನ ವಿಸ್ತಾರವಾದ ಮತ್ತು ಶ್ರೀಮಂತವಾದ ರಾಜ್ಯವನ್ನು ಸ್ಥಾಪಿಸಿದರು. ಇವರು ಕಲೆಯ ಪ್ರೋತ್ಸಾಹಕರೂ ಆಗಿದ್ದು, ಒಂದು ಹೊಸ ಶೈಲಿಯ ವಾಸ್ತುಶಿಲ್ಪಕ್ಕೆ ಕಾರಣ ರಾದರು. ಈ ಶೈಲಿಯಲ್ಲಿ ಆಲಂಕಾರಿಕವಾದ ಮತ್ತು ಎತ್ತರ ವಾದ ಗೋಪುರಗಳು, ಮಹಾದ್ವಾರಗಳು, ವಿಸ್ತಾರವಾದ ಮತ್ತು ಉತ್ಸವಾದಿಗಳಿಗೆ ಬೇಕಾದ ಮಂಟಪಗಳು, ಗಾಢ ಕಲ್ಪಕತೆಯಿಂದ ಕೆತ್ತಲಾದ ಕಂಬಗಳು ಮತ್ತು ಬೋದಿಗೆಗಳು ಮುಖ್ಯವಾದವು.

ಪೌರಾಣಿಕ ಕಾಲ್ಪನಿಕ ಪ್ರಾಣಿಗಳು ಮತ್ತು ಅವುಗಳ ಸವಾರರ ಶಿಲ್ಪಗಳನ್ನೊಳಗೊಂಡ ಸಂಘಟಿತ ಸ್ತಂಭಗಳು ವಿಜಯನಗರ ಅರಸರ ವೈಶಿಷ್ಟ್ಯಪೂರ್ಣ ಕೊಡುಗೆಗಳು. ಮುಖ್ಯ ದೇವತೆಯ ಸಹಭಾಗಿಗಳಿಗಾಗಿ ಪ್ರತ್ಯೇಕ ಆಲಯವನ್ನು ಕಟ್ಟಿದುದು ಮಾತ್ರ ವಲ್ಲದೆ, ಅನೇಕ ಸಣ್ಣ ಆಲಯಗಳನ್ನು ಇತರ ದೇವತೆಗಳಿಗಾಗಿ ನಿರ್ಮಿಸಿ, ಅವುಗಳ ಸುತ್ತಲೂ ಎತ್ತರವಾದ, ಆದರೆ ಜಾನಪದ ನೃತ್ಯಗಳು, ರಾಜರ ಬೇಟೆಗಳು, ವಿಜಯೋತ್ಸವದ ಮೆರವಣಿಗೆ ಗಳು, ಮುಂತಾದವುಗಳ ಶಿಲ್ಪಗಳನ್ನು ಹೊಂದಿದ ಹಜಾರರಾಮ ದೇವಾಲಯದಲ್ಲಿರುವಂತಹ ಪ್ರಾಕಾರದ ಗೋಡೆಗಳನ್ನು ನಿರ್ಮಿಸಿ ದರು. ಶ್ರೀಮಂತವಾದ ರಾಜಧಾನಿ ವಿಜಯನಗರವು ವಿಶಾಲ ವಾಗಿದ್ದು, ಸುವ್ಯವಸ್ಥಿತವಾಗಿದ್ದು, ಅದರಲ್ಲಿ ಹನ್ನೊಂದು ಬಜಾರುಗಳಿದ್ದವು. ಪ್ರತಿಯೊಂದು ಬಜಾರಿನಲ್ಲಿಯೂ ಒಂದು ಎತ್ತರವಾದ ಮತ್ತು ಭವ್ಯವಾದ ದೇವಾಲಯವೂ ಇದ್ದಿತು. ವಿಜಯನಗರದ ಅರಸರು ನಿರ್ಮಿಸಿದ ಭೂಮಿಯ ಒಳಗಿನ ಮತ್ತು ಮೇಲಿನ ಕಾಲುವೆಗಳು ಕಲ್ಪನೆಯಲ್ಲಿ ಮತ್ತು ತಾಂತ್ರಿಕತೆಯಲ್ಲಿ ವಿಶಿಷ್ಟವಾಗಿದ್ದು, ಅವರ ಲೌಕಿಕ ವಾಸ್ತುಶಿಲ್ಪಕ್ಕೆ ಸಾಕ್ಷಿಯಾಗಿದೆ. ವಿರೂಪಾಕ್ಷ, ವಿಜಯವಿಟ್ಠಲ, ಅಚ್ಯುತರಾಯ, ಕೃಷ್ಣ ಮತ್ತು ಪಟ್ಟಾಭಿರಾಮ ದೇವಾಲಯಗಳು ಅವರ ಧಾರ್ಮಿಕ ವಾಸ್ತು ಶಿಲ್ಪಕ್ಕೆ ಉಜ್ವಲ ಸಾಕ್ಷಿಯಾಗಿವೆ. ಕೋಟೆಯ ಗೋಡೆಯ ಒಳ ಭಾಗದಲ್ಲಿ ವಿಶಾಲವಾದ ಅರಮನೆಗಳು, ಸೇನಾ ಪ್ರದರ್ಶನವನ್ನು ಪರಿವೀಕ್ಷಿಸಲು ಅನುಕೂಲವಾಗುವ ಮುಚ್ಚಿಗೆ ಇಲ್ಲದ ಜಗಲಿಗಳೂ ಇವೆ. ಇವೆಲ್ಲವೂ ಶಿಲ್ಪಗಳಿಂದ ಮತ್ತು ಕಥಾನಕ ಶಿಲ್ಪ ಫಲಕ ಗಳಿಂದ ಅಲಂಕೃತವಾಗಿವೆ. ಹಜಾರರಾಮ ದೇವಾಲಯದಲ್ಲಿ ರಾಮಾಯಣದ ಕಥೆಯ ಶಿಲ್ಪಗಳನ್ನು ನೋಡಬಹುದಾದರೆ, ಹಂಪಿಯ ಕೃಷ್ಣ ಮತ್ತು ವಿಠ್ಠಲ ದೇವಾಲಯಗಳಲ್ಲಿ ಭಾಗವತದ ಕಥಾನಕ ಶಿಲ್ಪಗಳನ್ನು ನೋಡಬಹುದು. ವಿಠ್ಠಲ ದೇವಾಲಯ ದಲ್ಲಿರುವ ಸಂಗೀತ ಸ್ತಂಭಗಳು, ಬೆರಳಿನಿಂದ ಮೆದುವಾಗಿ ತಾಡಿಸಿ ದ್ದಾಗ ಸಂಗೀತದ ವಿವಿಧ ಸ್ವರಗಳನ್ನು ನುಡಿಸುತ್ತವೆ. ರಾಜ ಧಾನಿಯ ಹೊರಗಡೆ, ಕೆಳದಿಯ ಅರಸರೇ, ಮುಂತಾದ ಸಾಮಂತ ರಾಜರು ವಿಜಯನಗರ ಶೈಲಿಯಲ್ಲಿಯೇ ಅನೇಕ ದೇವಾಲಯ ಗಳನ್ನು ನಿರ್ಮಿಸಿದರು.

## ಮುಹಮ್ಮದೀಯ ವಾಸ್ತುಶಿಲ್ಪ

ಮಧ್ಯಕಾಲೀನ ಕರ್ನಾಟಕದಲ್ಲಿ, ಅನೇಕ ಭಾಗಗಳು ಬಹಮನಿ, ಬರೀದಿ (ಬಿದರೆ) ಮತ್ತು ಆದಿಲ್‌ಶಾಹಿ (ವಿಜಾಪುರ) ಮುಂತಾದ ಮುಹಮ್ಮದೀಯ ರಾಜವಂಶಗಳ ಆಳ್ವಿಕೆಗೆ ಒಳ ಪಟ್ಟಿದ್ದವು. ಇದರಿಂದಾಗಿ ಈ ಸ್ಥಳಗಳಲ್ಲಿ ಮತ್ತು ಕೆಲವು ಪ್ರಮುಖ ಜಾಗಗಳಲ್ಲಿ ಭವ್ಯವಾದ ಸೌಧಗಳು ಹೆಚ್ಚಿನ ಸಂಖ್ಯೆ ಯಲ್ಲಿ, ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿ ನಿರ್ಮಾಣಗೊಂಡವು. ಆದರೂ ಕೂಡ ಬಹಮನೀಯರ ಕಾಲಕ್ಕೆ ಮುಂಚೆಯೇ ದಕ್ಷಿಣಾ ಪಥದಲ್ಲಿಯೇ ಬಲು ಪ್ರಾಚೀನ ಕಾಲಕ್ಕೆ ಸೇರುವ ವಿಜಾಪುರದಲ್ಲಿನ ಕರೀಂ-ಉದ್-ದೀನ್‌ನ ಮಸೀದಿಯು, ಇತರ ಅದೇ ಕಾಲದ ಸೌಧಗಳಲ್ಲಿ ಕಾಣಬರುವಂತೆಯೇ, ಪೂರ್ಣವಾದ ಮುಹಮ್ಮದೀಯ ವಾಸ್ತುಶಿಲ್ಪ ಲಕ್ಷಣಗಳನ್ನು ಅಷ್ಟಾಗಿ ತೋರುವುದಿಲ್ಲ. ಆದರೆ ಬಹಮನಿ ಅರಸರ ಪ್ರಾರಂಭದೊಂದಿಗೆ ಒಂದು ಹೊಸ ವಿಶಿಷ್ಟ ಶೈಲಿಯು ಬಳಕೆಗೆ ಬಂದಿತು. ಇದು ಮೊದಮೊದಲು ದೆಹಲಿಯ ತಘಲಖ್ ಶೈಲಿಯಿಂದಲೂ, ನಂತರ ಪರ್ಷಿಯ ದೇಶದ ಕಟ್ಟಡ ಗಳಿಂದಲೂ ಪ್ರಭಾವವನ್ನು ಪಡೆದು, ಒಂದು ಪ್ರಾದೇಶಿಕ ಶೈಲಿ ಯಾಗಿ ಮಾರ್ಪಾಡು ಹೊಂದಿ, ಭವ್ಯವಾದ ಮತ್ತು ಎತ್ತರವಾದ ಕಟ್ಟಡಗಳು, ಸುಭದ್ರ ಕಟ್ಟಣೆಯ ವಿಧಾನಗಳು ಮತ್ತು ಕಲ್ಲಿನ ಮತ್ತು ಗಾರೆಯ ಅಲಂಕಾರಗಳಿಗೆ ಹೆಸರುವಾಸಿ ಯಾಯಿತು.

ಕಲ್ಬುರ್ಗಿಯಲ್ಲಿರುವ ಕಟ್ಟಡಗಳನ್ನು ಅರಸರ ಗೋರಿಗಳು ಮತ್ತು ಮಸೀದಿಗಳೆಂದು ಎರಡು ಗುಂಪುಗಳಾಗಿ ವಿಂಗಡಿಸ ಬಹುದು. ಬಹಮನಿ ಅರಸರಿಗೆ ಸೇರಿದ ಮೂರು ಗೋರಿಗಳು ಮೊದಲನೇಯ ಗುಂಪಿಗೆ ಸೇರಿದ್ದು, ಹಿಂದೂ ನಮೂನೆಯ ವಾಸ್ತು ಲಕ್ಷಣಗಳನ್ನು ಹೊಂದಿವೆ. ಅವುಗಳಲ್ಲಿ ಚೌಕನಾದ ಕೋಣೆಗಳು, ಇಳಿಜಾರಾದ ಗೋಡೆಗಳು, ಮೇಲ್ಗಡೆ ಸುತ್ತಲೂ ಕೋಟೆಯ ತೆನೆಯ ಕಮಾನುಗಳ ಸಾಲಿನ ಕಟಾಂಜನಗಳು, ಮೂಲೆಗಳಲ್ಲಿ ಉದ್ದ ಕೊಯ್ದು ಕೊಳವೆಯ ಅಲಂಕಾರವನ್ನುಳ್ಳ ಮಿನಾರೆಟ್ಟು (ಸ್ತಂಭಗೋಪುರ) ಗಳು, ಇವೆಲ್ಲವೂ ಸೇರಿದಂತೆ ಇರುವ ಚಪ್ಪಟೆಯ ಗುಮ್ಮಟದ ಮುಚ್ಚಿಗೆ ಇರುತ್ತವೆ. ಇದೇ ಕಾಲದ ಮತ್ತೊಂದು ಸೌಧವೆಂದರೆ ಷಾ ಬಜಾರ್ ಮಸೀದಿ ; ಇದರ ಅತ್ಯಂತ ಮುಖ್ಯ ಲಕ್ಷಣವೆಂದರೆ ಗುಮ್ಮಟವನ್ನೊಳಗೊಂಡ ಪ್ರವೇಶ ಶಾಲೆ. ಇದು ಇದರ ರಚಯಿತ ಎರಡನೇಯ ಬಹಮನಿ ದೊರೆ ಮೊದಲನೇಯ ಮುಹಮ್ಮದ್ ಷಾ (1358-75) ನ ಗೋರಿಯ ವಿನ್ಯಾಸದ ಮೇಲೆ ರಚಿತವಾಗಿದೆ. ಮತ್ತೊಂದು ಗುಂಪಿಗೆ ಸೇರಿದ ಸೌಧಗಳಲ್ಲಿ ಏಳು ಅರಸರ ಗೋರಿಗಳಿವೆ. ಸ್ಥಳೀಯವಾಗಿ ಅವನ್ನು ಹಫ್ತ್‌ಗುಂಬಜ್ ಎನ್ನುತ್ತಾರೆ. ಸಾಮಾನ್ಯ ರೂಪದಲ್ಲಿ ಇವುಗಳು ಮೊದಲನೇಯ ಗುಂಪಿನ ಗೋರಿ ಗಳನ್ನೇ ಹೋಲುತ್ತವಾದರೂ, ಅವುಗಳಿಗಿಂತ ವಿಸ್ತಾರವಾಗಿಯೂ, ಹೆಚ್ಚು ಗಾತ್ರವಾಗಿಯೂ ಇವೆ. ಘಿಯಾಸುದ್ದೀನ್ ತಹಮತನ್‌ನ ಗೋರಿಯ (1397) ಪ್ರಾರ್ಥನಾ ಮಂದಿರದ ಅಲಂಕಾರಗಳಲ್ಲಿ, ಅದಕ್ಕಿಂತ ಹೆಚ್ಚಾಗಿ ತಾಜುದ್ದೀನ್ ಫಿರೂಜ್ (1397-1422)ನ ಗೋರಿಗಳ ಬಾಗಿಲವಾಡಗಳ ಅಲಂಕಾರದಲ್ಲಿ ಮತ್ತು ಬೋದಿಗೆಯ ಕಾರ್ನೀಸುಗಳಲ್ಲಿ ಸ್ಥಳೀಯ ಪ್ರಭಾವವು ಎದ್ದುಕಾಣುತ್ತದೆ. ಅದಕ್ಕಿಂತ ಭಿನ್ನವಾಗಿ ಕಮಾನಿನ ಮೇಲ್ಭಾಗದಲ್ಲಿ ಹಾಗೂ ಅವು ಗಳ ಮೂಲೆಕಟ್ಟುಗಳಲ್ಲಿ ಮಾಡಿರುವ ಗಾರೆಯ ಅಲಂಕಾರ. ಹಾಗೂ ಗುಮ್ಮಟದ ಒಳಭಾಗದಲ್ಲಿ ಕಾಣಬರುವ ಉಜ್ವಲವಾದ ಬಣ್ಣಗಳು ಪರ್ಷಿಯನ್ ಪ್ರಭಾವವನ್ನು ತೋರಿಸುತ್ತವೆ.

1367ರಲ್ಲಿ ನಿರ್ಮಿತವಾದುದೆಂದು ನಂಬಲಾಗಿರುವ, ಕೋಟೆಯ ಒಳಗಡೆ ಇರುವ ಜಾಮಿ ಮಸೀದಿಯೇ ಕಲ್ಬುರ್ಗಿಯಲ್ಲಿರುವ ಕಟ್ಟಡಗಳಲ್ಲಿ ಅತ್ಯಂತ ಮುಖ್ಯವಾದುದು. ವಿಶೇಷವಾಗಿ ಪರ್ಷಿಯನ್ ಪ್ರಭಾವಗಳನ್ನು ಹೊಂದಿರುವ ಈ ಮಸೀದಿಯಲ್ಲಿ ಅನೇಕ ಗುಮ್ಮಟಗಳೂ, ಅನೇಕ ಗೇಬಲ್ಲುಗಳೂ ಅಪರೂಪದ ಸಂಗತಿಗಳೇ ಸರಿ. ಸಾಮಾನ್ಯ ವಿನ್ಯಾಸದ ರೀತಿಯಲ್ಲಿಯೇ ಅಂದರೆ ವಿಶಾಲವಾದ ಹಜಾರ ಮತ್ತು ಅದರ ಸುತ್ತಲೂ ಹಾದಿ ಇರುವಂತೆಯೇ ಕಟ್ಟಲಾಪರೂ, ಇದರ ಅಪರೂಪದ ಲಕ್ಷಣವೆಂದರೆ ಈ ಹಜಾರದ ಮತ್ತು ಸುತ್ತಲ ಹಾದಿಯು ಮುಚ್ಚಿಗೆಯಿಲ್ಲದೆ ಇರುವುದರ ಬದಲು, ಚಾವಣಿಯಿಂದ ಕೂಡಿದೆ ; ಮತ್ತೊಂದು ವಿಶೇಷ ಲಕ್ಷಣವೆಂದರೆ ಮೊಗಸಾಲೆಯ ಸುತ್ತಲೂ ಇರುವ ಗೋಡೆಯಲ್ಲಿರುವ ಮತ್ತು ಕಟ್ಟಡದ ಇತರ ಭಾಗಗಳಲ್ಲಿರುವ, ಪರಸ್ಪರ ವೈದೃಶ್ಯವನ್ನು ತೋರಿಸುವ ಕಮಾನುಗಳ ಆಕಾರ. ಎತ್ತರಿಸಿ ಕಟ್ಟಿದ ಗುಮ್ಮಟಗಳು ಮತ್ತು ಕಿರಿದಾದ ಪ್ರವೇಶ ದ್ವಾರಗಳು ಪರ್ಷಿಯನ್ ಪ್ರಭಾವವನ್ನು ತೋರ್ಪಡಿಸುತ್ತವೆ. ಈ ಮಸೀದಿಯ ಮತ್ತೊಂದು ಲಕ್ಷಣವೆಂದರೆ ಎತ್ತರವಾದ ಮತ್ತು ಚೌಕಾಕಾರದ ತಳಭಾಗದ ಮೇಲೆ ಗುಮ್ಮಟವನ್ನು ನಿಲ್ಲಿಸಿರುವುದು. ಈ ಮಸೀದಿಯು ಭಾರತದಲ್ಲೇ ಅತ್ಯಂತ ಸುಂದರವಾದ ಕಟ್ಟಡಗಳಲ್ಲಿ ಒಂದೆಂದೂ, ದಕ್ಷನಿ ವಾಸ್ತುಶಿಲ್ಪದ ಹೆಗ್ಗುರುತೆಂದೂ ಭಾವಿಸಲಾಗಿದೆ. ಇದರ ಕೆಲವು ಮುಖ್ಯ ಲಕ್ಷಣಗಳಾದ ಗುಮ್ಮಟದ ತಳಗಟ್ಟು ಹಾಗೂ ಅಗಲವಾದ ಮತ್ತು ಕುಳ್ಳಾದ ಕಮಾನುಗಳನ್ನು ಮುಂದಿನ ಕಟ್ಟಡಗಳಲ್ಲಿ, ಅದರಲ್ಲಿಯೂ ವಿಶೇಷವಾಗಿ ವಿಜಾಪುರದಲ್ಲಿ ಅಳವಡಿಸಲಾಯಿತು.

ಬಿದರೆಯಲ್ಲಿರುವ ಬಹಮನಿಕಾಲದ ಕಟ್ಟಡಗಳಲ್ಲಿ ಮುಖ್ಯವಾದುವೆಂದರೆ ಕೋಟೆ, ಅರಮನೆಗಳು, ಸೋಲಾಕಂಭಾ ಮಸೀದಿ, ಮಹಮೂದ್ ಗವಾನನ ಪಾಠಶಾಲೆ (ಮದರಸಾ) ಮತ್ತು ಹನ್ನೆರಡು ಅರಸರ ಗೋರಿಗಳ ಗುಂಪು. ಅರಮನೆಯ ಬಹುಭಾಗ ನಾಶವಾಗಿ ಹೋಗಿದ್ದರೂ, ಉಳಿದಿರುವ ಭಾಗಗಳಿಂದ ಆಗಿನ ಕಾಲದ ಅವುಗಳ ಭವ್ಯತೆ ಮತ್ತು ವೈಭವವನ್ನು ತಿಳಿದುಕೊಳ್ಳಬಹುದು. ವಿಶಾಲವಾಗಿರುವ ಸೋಲಾಕಂಭಾ ಅಥವಾ ಜನಾನಾ ಮಸೀದಿಯು ಭಾರತದಲ್ಲೇ ಅತ್ಯಂತ ದೊಡ್ಡದಾದವುಗಳಲ್ಲಿ ಒಂದಾಗಿದ್ದು, ಪ್ರಾರ್ಥನಾ ಮಂದಿರದಲ್ಲಿ ಕೊಳವೆಯಾಕಾರದ ಭಾರಿ ಕಂಬಗಳು, ಅವುಗಳ ಮೇಲೆ ನಿಂತ ಭವ್ಯವಾದ ಗುಮ್ಮಟ, ಎತ್ತರದ ಕಿಟಕಿಯ ಸಾಲುಳ್ಳ ಗೋಡೆಯ ಭಾಗಗಳೂ ಇವೆ. ಇದರ ಮುಂಭಾಗವು ಮನೋಹರ ವಿನ್ಯಾಸದ ಕಟಾಂಜನವಿರುವ ಅಪರಭಾಗವನ್ನು ಹೊಂದಿದೆ. ಇಲ್ಲಿನ ಗೋರಿಗಳು ಕಲ್ಬುರ್ಗಿಯವುಗಳಂತೆ ಅರ್ಧ ಗುಮ್ಮಟದ ಆಕಾರದಲ್ಲಿವೆ. ಆದರೆ ಅವುಗಳು ಗಾತ್ರದಲ್ಲಿ ದೊಡ್ಡವಾಗಿದ್ದು ಕಮಾನಿನ ಹಿಂಜರಿತಗಳು, ಜಾಲಂಧ್ರದ ಕಿಟಕಿಗಳು ಹಾಗೂ ವೃತ್ತಾಕಾರದ ಗುಮ್ಮಟಗಳನ್ನು ಹೊಂದಿವೆ. ಇವುಗಳಲ್ಲಿ ಕೆಲವು ಹೊಳಪುಳ್ಳ ಹೆಂಚುಗಳು ಮುಚ್ಚಿಗೆ ಮತ್ತು ವರ್ಣಚಿತ್ರಗಳ ಮೇಲ್ಮೈ ಅಲಂಕಾರಗಳನ್ನು ಹೊಂದಿವೆ. ಇವುಗಳಲ್ಲಿ ಅತ್ಯಂತ ಸುಂದರವಾದದ್ದು ಮೊದಲನೇಯ ಅಹಮದ್ ಷಾ (1422-36)ನ ಗೋರಿ. ಪರ್ಷಿಯನ್ ಚಿತ್ರಕಾರನಾದ ಶಿರಾಜ್‌ನ ಶುಕ್ರುಲ್ಲಾನಿಂದ ರಚಿತವಾದ ಚಿನ್ನ, ಸಿಂಧೂರ ಮತ್ತು ಹಸಿರು ಎದ್ದುಕಾಣುವ ಬಣ್ಣಗಳ ವರ್ಣಚಿತ್ರ, ಚಿನ್ನದ ಬಣ್ಣದ ಅಕ್ಷರಗಳನ್ನು ಉಪಯೋಗಿಸಿ ನಿಯೋಜಿಸಿದ ಬರವಣಿಗೆ ಇವುಗಳ ಆಂತರಿಕ ಅಲಂಕಾರಗಳಿಂದ ಇದು ಅತ್ಯಂತ ಮನಮೋಹಕವಾಗಿದೆ. 1472ರಲ್ಲಿ ಖ್ಯಾತ ಬಹಮನಿ ಮಂತ್ರಿ ಮಹಮೂದ್ ಗವಾನನಿಂದ ನಿರ್ಮಿಸಲ್ಪಟ್ಟ ಮದರಸಾ ಬಿದರೆಯಲ್ಲಿರುವ ಇನ್ನೊಂದು ಅತ್ಯಂತ ಮಹತ್ತರವಾದ ಕಟ್ಟಡ. ವಿಶಾಲವಾದ ಈ ಪರ್ಷಿಯನ್ ಮಾದರಿಯ ಕಟ್ಟಡದಲ್ಲಿ ಮೂರು ಮಹಡಿಯ ಭಾಗಗಳಿದ್ದವು; ಇದರ ಸುತ್ತಲೂ ಮುಚ್ಚಿಗೆ ಇಲ್ಲದ ಆಯಾಕಾರದ ಅಂಗಳವಿದ್ದಿತು; ಇದರಲ್ಲಿ ಒಂದು ಮಸೀದಿ, ಗ್ರಂಥಾಲಯ, ಉಪನ್ಯಾಸ ಮಂದಿರ, ಪ್ರಾಧ್ಯಾಪಕರ ಮತ್ತು ವಿದ್ಯಾರ್ಥಿಗಳ ವಸತಿಗೃಹಗಳು ಮುಂತಾದವು ಇದ್ದವು. ಇದರ ಮುಮ್ಮುಖದಲ್ಲಿ ಎರಡು ಮಿನಾರೆಟ್ಟುಗಳಿದ್ದವು; ಈಗ ಅವುಗಳಲ್ಲಿ ಒಂದು ಹಾಳಾಗಿದೆ; ಅವುಗಳನ್ನು ಅದ್ದೂರಿಯಾಗಿ ವಿವಿಧ ಬಣ್ಣಗಳ ಮತ್ತು ವಿನ್ಯಾಸಗಳ ಹೊಳಪಿನ ಹೆಂಚುಗಳಿಂದ ಅಲಂಕರಿಸಲಾಗಿತ್ತು. ಬಿದರೆಯಲ್ಲಿರುವ ಇದೇ ಕಾಲದ ಮತ್ತೊಂದು ಕಟ್ಟಡವೆಂದರೆ ಷಾ ಕಲೀಲುಲ್ಲಾನ ಗೋರಿ.

ಬಹಮನಿ ಸುಲ್ತಾನರ ಅನಂತರ ಈ ಭಾಗದಲ್ಲಿ ರಾಜ್ಯವನ್ನಾಳಿದ ಬರೀದೀ ವಂಶದ ಸುಲ್ತಾನರು, ತಮ್ಮ ರಾಜಧಾನಿಯಾದ ಬಿದರೆಯಲ್ಲಿ ಕೆಲವು ಆಕರ್ಷಕವಾದ ಕಟ್ಟಡಗಳನ್ನು ನಿರ್ಮಿಸಿದರು. ಇವರ ಕಟ್ಟಡಗಳು ಸಾಮಾನ್ಯ ಲಕ್ಷಣಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳನ್ನು ತೋರ್ಪಡಿಸುವುದಲ್ಲದೆ, ಕಟ್ಟಡಗಳು ಹಗುರ ಹಾಗೂ ನಾಜೂಕಾದವುಗಳು. ಜಾಮಿ ಮಸೀದಿಯು ವಿಶಾಲವಾದ ಮತ್ತು ಸರಳವಾದ ಕಟ್ಟಡ; ಇದು ರೂಢಿಯಲ್ಲಿದ್ದ ವಿನ್ಯಾಸದ ಮಾದರಿಯಲ್ಲೇ ಇದ್ದು, ಕಂಬಗಳಿಂದ ಕೂಡಿದ ಪ್ರಾರ್ಥನಾ ಮಂದಿರ, ಉನ್ನತವಾದ ಮುಂಭಾಗ ಹಾಗೂ ಕಟಾಂಜನದಿಂದ ಆವೃತವಾದ ಅಂಗಣವನ್ನು ಹೊಂದಿದೆ. ಗೋರಿಗಳಲ್ಲೆಲ್ಲ ಅತ್ಯಂತ ಸುಂದರವಾದದ್ದು ಅಲಿ ಬರೀದ್‌ನ (1542-79) ಗೋರಿ. ಇದು ಮುಂದಿನ ಗೋರಿಗಳಿಗೆ ಮಾದರಿಯಾಯಿತು. ಚೌಕನಾದ ಕೋಣೆ, ಸುತ್ತಲೂ ಎತ್ತರವಾದ ಕಮಾನುಗಳು ಮತ್ತು ಬುರುಡೆಯಾಕಾರದ ಗುಮ್ಮಟಗಳನ್ನು ಇದು ಹೊಂದಿದೆ. ಹೀಗೆ ಇದು ವಾಸ್ತುದೃಷ್ಟಿಯಿಂದ ಸರಳವಾಗಿಯೂ, ಅಚ್ಚುಕಟ್ಟಾಗಿಯೂ, ಬೃಹತ್ ಪ್ರಮಾಣದ್ದಾಗಿಯೂ ಇದ್ದು ಉತ್ತಮ ಕಲಾತ್ಮಕತೆಯನ್ನೂ ಅದಕ್ಕಿಂತ ಹೆಚ್ಚಾಗಿ ವಿವಿಧ ಬಣ್ಣಗಳ ಹೊಳಪಿನ ಹೆಂಚುಗಳನ್ನು ಸುವ್ಯವಸ್ಥಿತವಾಗಿ ಪ್ರದರ್ಶಿಸುತ್ತದೆ. ಈ ಗೋರಿಗೆ ಸೇರಿರುವ ಮಸೀದಿಯೂ ಸುಂದರ ಕಟ್ಟಡ. ಇನ್ನೊಂದು ಗಮನಾರ್ಹ

ವಾದ ಕಟ್ಟಡವೆಂದರೆ ಇಬ್ರಾಹಿಂ ಬರೀದನ (ಸು. 1587) ಗೋರಿ; ಇದು ಪೂರ್ಣವಾಗಿಲ್ಲ. ಇದೇ ರೀತಿಯ ಮುಚ್ಚಿಗೆ ಇಲ್ಲದ ಗೋರಿಗಳೆಂದರೆ, ಸ್ಥಳೀಯವಾಗಿ ಹಜಾಮನ ಗೋರಿ ಮತ್ತು ನಾಯಿಯ ಗೋರಿ ಎಂದು ಕರೆಯಲ್ಪಡುವ ಗೋರಿಗಳು. ಮುಚ್ಚಿಗೆ ಇರುವ ಗೋರಿಗಳಿಗೆ ಉತ್ತಮ ಉದಾಹರಣೆ ಎಂದರೆ ಕಾಸಿಂ ಬರೀದನ (1587-91) ಗೋರಿ. ಇದು ಸಾಮಾನ್ಯ ಲಕ್ಷಣಗಳಲ್ಲಿ ಬಹಮನಿ ಅಂತ್ಯಕಾಲದ ಗೋರಿಗಳನ್ನು ಹೋಲುತ್ತದೆಯಾದರೂ ವಿನ್ಯಾಸದಲ್ಲಿ ಪ್ರಮಾಣ ಬದ್ಧತೆ ಮತ್ತು ನಾಜೂಕಾದ ಕಲೆಗಾರಿಕೆಯನ್ನು ಹೊಂದಿದೆ. ಖಾನ್ ಜಹಾನನ (ಸು. 1553) ಮತ್ತು ಚಾಂದ್ ಸುಲ್ತಾನನ ಗೋರಿಗಳು ಸಾಕಷ್ಟು ವಾಸ್ತು ವೈಶಿಷ್ಟ್ಯಗಳನ್ನು ಪ್ರದರ್ಶಿಸುತ್ತವೆ. ಕಲ್ಲಿನಿಂದ ನಿರ್ಮಿತವಾದ ಕಾಲಿ ಮಸೀದಿಯು, ಬಹುಶಃ, ಬಿದರೆಯಲ್ಲೇ ಅತ್ಯಂತ ಮಹತ್ತರವಾದ ಮಸೀದಿ. ಇದರಲ್ಲಿರುವ ಮರಗೆಲಸವನ್ನು ಹೋಲುವಂತಹ ನಾಜೂಕಾದ ಅಲಂಕರಣ ಮತ್ತು ಪ್ರಮಾಣಬದ್ಧ ರಚನೆಯಿಂದ ಇದು ಅಸಾಧಾರಣ ಕಟ್ಟಡವೆನಿಸಿದೆ. ಈ ಮಸೀದಿಯು ವಿಜಾಪುರದ ಮಸೀದಿಗೆ ವಿನ್ಯಾಸ ಮತ್ತು ಮಾದರಿಯನ್ನು ಒದಗಿಸಿತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹಜರತ್ ಮಕದುಮ್ ಖಾದಿರಿಯ ಗೋರಿಗೆ ಸೇರಿರುವ ಮಸೀದಿಯೂ ಇದೇ ಶೈಲಿಯಲ್ಲಿದೆ.

ವಿಜಾಪುರವು ಆದಿಲ್ ಷಾಹಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟ ಮೇಲೆ, ಭಾರೀ ಪ್ರಮಾಣದಲ್ಲಿ ವಾಸ್ತುಕೃತಿ ನಿರ್ಮಾಣ ಆರಂಭವಾಯಿತು. ಇದರಿಂದಾಗಿ ಹತ್ತಾರು ವೈಭವಯುತವಾದ ಮತ್ತು ಉನ್ನತವಾದ ಮಸೀದಿಗಳು, ಗೋರಿಗಳು, ಅರಮನೆಗಳು, ಮೆಟ್ಟಿಲು ಬಾವಿಗಳು ಮುಂತಾದವು, ಅತ್ಯಂತ ಸುಧಾರಿತ ವಾಸ್ತು ವಿಧಾನದಲ್ಲಿ ನಿರ್ಮಾಣಗೊಂಡವು. ಈ ಶೈಲಿಯ ಮುಖ್ಯ ಲಕ್ಷಣಗಳೆಂದರೆ ವಿಶಾಲತೆ ಮತ್ತು ವೈಭವಯುತ ಕಲ್ಪನೆ, ಮೂರು ಕಮಾನುಗಳ ಮುಂಭಾಗ (ಮಧ್ಯದ ಕಮಾನು ಪಕ್ಕವುಗಳಿಗಿಂತ ದೊಡ್ಡದು), ಬುರುಡೆಯಾಕಾರದ, ಹೆಚ್ಚಿನ ಮಟ್ಟಿಗೆ ಗೋಳಾಕಾರದ-ಗುಮ್ಮಟ, ಗುಮ್ಮಟದ ತಳಭಾಗವನ್ನು ಆವರಿಸಿರುವ ತಲೆಕೆಳಗಾಗಿ ಕಾಣುವ ಹೂವಿನ ದಳಗಳು, ಎತ್ತರವಾಗಿ, ಚಿತ್ತಾಕರ್ಷಕವಾಗಿರುವ ತೆಳ್ಳನೆಯ ಮಿನಾರೆಟ್ಟುಗಳು, ಕಟಾಂಜನಗಳಲ್ಲಿ ಅಲ್ಲಲ್ಲಿ ಬಳಸಿದ ಮೇಲ್ಬುದಿಯ ಅಲಂಕಾರ, ಮೊನಚಾದ ಕಮಾನುಗಳು ಮತ್ತು ಅಲಂಕೃತ ಚಾಚುಪೀಠಗಳಲ್ಲಿನ ದಟ್ಟವಾದ ಮುಂಚಾಚಿರುವ ಕಾರ್ನಿಸುಗಳು, ಇತ್ಯಾದಿ.

ವಿಜಾಪುರದ ಮೊದಲ ಮಸೀದಿಗಳಲ್ಲಿ, ಯುಸೂಫನ ಪ್ರಾಚೀನ ಜಾಮಿ ಮಸೀದಿಯೂ (1512) ಸೇರಿದಂತೆ, ಇಬ್ರಾಹಿಂಪುರ ಮಸೀದಿ (ಸು. 1526), ಐನ್-ಉಲ್-ಮುಲ್ಕನ ಮಸೀದಿ (ಸು. 1556), ಇಖ್ಲಾಸ್ ಖಾನನ ಮಸೀದಿ (ಸು. 1590), ಅಲಿ ಷಹೀದಾ ಪೀರನ ಮಸೀದಿ (ಸು. 1583), ಮೊದಲನೇಯ ಆಲಿಯ ಗೋರಿ (ಸು. 1580), ಐನ್-ಉಲ್-ಮುಲ್ಕನ ಗೋರಿ (ಸು. 1556) ಮುಂತಾದವುಗಳನ್ನು ಹೆಸರಿಸಬೇಕು. ಅತ್ಯಂತ ಮಹತ್ತರವಾದ ಕಟ್ಟಡವೆಂದರೆ ಮೊದಲನೇಯ ಅಲಿಯಿಂದ ಪ್ರಾರಂಭಿಸಲ್ಪಟ್ಟು, ಅನಂತರ ಮುಗಿಸಲ್ಪಟ್ಟ ಜಾಮಿ ಮಸೀದಿ. ಈ ಬೃಹತ್ ಪ್ರಮಾಣದ ರಚನೆಯು ಸಾಂಪ್ರದಾಯಿಕ ರೀತಿಯಲ್ಲಿ ನಿರ್ಮಾಣಗೊಂಡ ಚಾವಣಿಯಿಂದ ಮುಚ್ಚಿದೆ. ವಿಜಾಪುರದಲ್ಲೇ ಮಸೀದಿಗಳಲ್ಲಿ ಬಹುಶಃ ಇದೇ ಘನಗಾತ್ರದ್ದು. ಇದರ ವಿಶಾಲವಾದ ಪ್ರಾರ್ಥನಾಲಯ, ಮೂರು ಕಡೆಗಳಲ್ಲಿರುವ ಎರಡು ಮಹಡಿಯ ಕೈಸಾಲೆಗಳು ಹಾಗೂ ನೈಜ ಪ್ರಮಾಣಗಳಿಂದ ಇದು ಅಸಾಧಾರಣವೆನಿಸಿದೆ. ಅಲಿ ಷಹೀದ್ ಪೀರನ ಮಸೀದಿಯು ಸಣ್ಣ ಕಟ್ಟಡ. ಆದರೆ ಅದರ ಪ್ರಾರ್ಥನಾಲಯವನ್ನು ಪೂರ್ಣವಾಗಿ ಮುಚ್ಚಲು ಕಮಾನು ಚಾವಣಿಯನ್ನು ಬಳಸಲಾಗಿದೆ. ಮುಮ್ಮುಖದಲ್ಲಿರುವ ಮೂರು ಕಮಾನುಗಳು ಒಂದಕ್ಕಿಂತ ಒಂದು ಸಣ್ಣದಾದ ರೇಖಾವಿನ್ಯಾಸವನ್ನು ಹೊಂದಿದ್ದು, ಹೊರಗಡೆಯ ಕಮಾನು ಮಾತ್ರ ಅಲಂಕಾರವನ್ನು ಹೊಂದಿದೆ. ವಿಜಾಪುರದಲ್ಲಿ ಇನ್ನೊಂದು ಕಟ್ಟಡವೆಂದರೆ, ಈಗ ಚಾವಣಿ ಇಲ್ಲದಿರುವ ಗಗನ್ ಮಹಲ್ (ಸು. 1561). ದರ್ಬಾರಿನ ಮುಂಭಾಗದಲ್ಲಿರುವ ಒಂದು ಘನ ಗಾತ್ರದ ಕಮಾನು ಹಾಗೂ ಅದರ ಪಕ್ಕದ ಎತ್ತರದ ಸಂಕುಚಿತ ಕಮಾನುಗಳ ವೈದೃಶ್ಯ ಎದ್ದು ಕಾಣುವಂತಿದೆ. ವಿಜಾಪುರದಲ್ಲಿರುವ ಸಂಗೀತ ಮಹಲ್ ಮತ್ತು ಆನಂದ ಮಹಲ್ ಒಂದೇ ರೀತಿಯ ಕಟ್ಟಡಗಳು.

ಅನಂತರದ ಕಟ್ಟಡಗಳಲ್ಲಿ ಜಂಜೀರಿ ಮಹಲ್ ಅಥವಾ ಮಲಿಕಾ ಜಹಾನ್ ಮಸೀದಿ ಸಣ್ಣದಾದರೂ ಬಹಳ ಅಚ್ಚುಕಟ್ಟಾದ ಕಟ್ಟಡ. ನಾಜೂಕಾದ ಕೆತ್ತನೆಯ ಕೆಲಸದಿಂದ ಅಲಂಕೃತವಾದ ಅನೇಕ ಭಾಗಗಳನ್ನು ಹೊಂದಿರುವ ಈ ಕಟ್ಟಡವು ವಿಜಾಪುರ ವಾಸ್ತುಕೃತಿಗಳಲ್ಲಿ ಒಂದು ರತ್ನವೆನಿಸಿದೆ. ಅಂದು ಮಸೀದಿಯು ಚದರಕಲ್ಲಿನ ಎರಡು ಮಹಡಿಯ ಕಟ್ಟಡವಾಗಿದೆ, ಆದರೆ ಎರಡೂ ಮಹಡಿಗಳು ಮಸೀದಿಗಳಲ್ಲ. ಇದು ತನ್ನ ಅಸಾಧಾರಣವಾದ ವಿನ್ಯಾಸ ಮತ್ತು ಕರಬೂಜ ಆಕಾರದ ಗುಮ್ಮಟಗಳಿಂದ ಖ್ಯಾತವಾಗಿದೆ. ಇಬ್ರಾಹಿಂ ರೋಜ ಮತ್ತು ಅದರ ಪಕ್ಕದ ಮಸೀದಿಯು ವಿಜಾಪುರದಲ್ಲೇ ಅತ್ಯಂತ ಅಲಂಕಾರಿಕ ಮತ್ತು ಅತ್ಯಂತ ಸಮರ್ಪಕವೆನಿಸಿವೆ. ಇವು ವಿಜಾಪುರ ಶೈಲಿಯ ಶ್ರೇಷ್ಠ ಪ್ರತಿನಿಧಿಗಳಾಗಿವೆ ರೋಜ ಅಥವಾ ಗೋರಿಯು ಚೌಕಾಕಾರದ ಕೋಣೆ, ಅದರ ಸುತ್ತಲೂ ಇರುವ ಎರಡು ಕೈಸಾಲೆಗಳು ಒಂದು ಕಟ್ಟಡವು ರಚನಾಶಾಸ್ತ್ರ ಮತ್ತು ತಾಂತ್ರಿಕತೆಯಲ್ಲಿ ಎಷ್ಟರಮಟ್ಟಿನ ಔನ್ನತ್ಯವನ್ನು ಸಾಧಿಸಬಹುದೋ ಅಷ್ಟನ್ನೂ ಸಾಧಿಸಿವೆ. ಆಶ್ಚರ್ಯವಾಗುವ ರೀತಿಯಲ್ಲಿರುವ ತಗ್ಗು ಉಬ್ಬಿನ ವಿವಿಧ ವಿನ್ಯಾಸದ ಕೆತ್ತನೆ, ಅಲಂಕಾರಾಕ್ಷರಗಳು, ಜಾಲಂಧ್ರದ ಕಿಟಕಿಗಳು, ಮುಂಚಾಚಿರುವ ಮತ್ತು ನಾಜೂಕು ಕೆತ್ತನೆಯ ಕಾರ್ನಿಸುಗಳು ಮತ್ತು ಚಾಚುಪೀಠಗಳು, ಸೊಬಗಿನ ಮಿನಾರೆಟ್ಟುಗಳು, ಜಾಲಂಧ್ರ

ದಂತಹ ಕಟಾಂಜನದ ಸಾಲು, ಸಣ್ಣ ಪ್ರಮಾಣದ ಮಿನಾರೆಟ್ಟುಗಳು, ಮಧ್ಯದಲ್ಲಿ ಮತ್ತು ಮೂಲೆಗಳಲ್ಲಿರುವ ಗೋರಿಗಳು, ಗುಮ್ಮಟಗಳ ಅಸರೆ, ಇವುಗಳಿಂದ ಈ ಗೋರಿಯು ಸುಂದರವಾಗಿಯೂ ಆಕರ್ಷಕವಾಗಿಯೂ ಇದೆ. ಇದಕ್ಕೆ ಸೇರಿರುವ ಮಸೀದಿಯು ಅಷ್ಟೇನೂ ಅಲಂಕೃತವಿಲ್ಲದಿದ್ದರೂ ನಯನ ಮನೋಹರವಾಗಿದೆ. ಮಿಹ್ತಾರ್ ಮಹಲ್ ಎತ್ತರವಾದ ಚೌಕಾಕಾರದ ಗೋಪುರದ ಆಕಾರದ, ಎರಡು ಅಂತಸ್ತಿನ, ಎರಡು ತೆಳುವಾದ, ಮಿನಾರೆಟ್ಟುಗಳನ್ನು ಹೊಂದಿರುವ ಕಟ್ಟಡ. ವಿಶೇಷವಾದ ಅಲಂಕಾರಕ್ಕೂ ಅದು ಗಮನಾರ್ಹವೆನಿಸಿದೆ. ಇದಕ್ಕೆ ಸೇರಿರುವ ಮಸೀದಿಯೂ ಕೂಡ ಒಳ್ಳೆಯ ವಾಸ್ತುಕೃತಿ. ಇದು ಜಂಜೀರಿ ಮಸೀದಿಯ ಮಾದರಿಯಲ್ಲಿದೆ. ಈ ಶೈಲಿಯ ಮತ್ತೊಂದು ಸುಂದರವಾದ ಕಟ್ಟಡವೆಂದರೆ ಜಲಮಂದಿರ ಎಂದು ಕರೆಯಲಾಗುವ ಸಣ್ಣ ವಾಸ್ತುಕೃತಿ. ಇದು ಸಾತ್‌ಮಂಜಿಲ್ ಎಂಬ ಏಳು ಮಾಳಿಗೆಯ ಅರಮನೆಯ ಎದುರಿಗಿದೆ. ಈ ಅರಮನೆಯೂ ಕೂಡ ಒಂದು ಉತ್ತಮ ಕಟ್ಟಡ. ಇದೇ ಶೈಲಿಯನ್ನು ಅನುಸರಿಸಿ ನಿರ್ಮಿಸಲಾದ ಮತ್ತೊಂದು ರಚನೆಯೆಂದರೆ ಅಥರ್ ಮಹಲ್. ಈ ಎರಡು ಅಂತಸ್ತಿನ ಕಟ್ಟಡವು ಅಲಂಕಾರದ ವೈವಿಧ್ಯತೆಗಾಗಿ, ಅದರಲ್ಲಿಯೂ ವರ್ಣ ಭಾವಚಿತ್ರಗಳಿಗಾಗಿ ಅಸಾಧಾರಣವೆನಿಸಿದೆ. ಗಮನಾರ್ಹವಾದ ಇತರ ಕಟ್ಟಡಗಳೆಂದರೆ ರಂಗೀನ್ ಮಸೀದಿ, ಬುಖಾರಿ ಮಸೀದಿ ಮತ್ತು ನೌ ಗುಂಬಜ್ ಮಸೀದಿ.

ವಿಜಾಪುರದ ಅತ್ಯಂತ ಮಹತ್ತರವಾದ ಮತ್ತು ಪ್ರಪಂಚ ಪ್ರಸಿದ್ಧವಾದ ಕಟ್ಟಡವೆಂದರೆ ಗೋಳ ಗುಂಬಜ್. ಅತ್ಯಂತ ಶ್ರೇಷ್ಠವಾದ ಈ ವಾಸ್ತುಕೃತಿಯು ಮಹಮದ್ ಷಾ ನಿಂದ (ಮರಣ: 1656) ಅವನಿಗಾಗಿಯೇ ನಿರ್ಮಿಸಲ್ಪಟ್ಟಿತೆಂದು ನಂಬಲಾಗಿದೆ. ಇಡೀ ಇಂಡೋ-ಇಸ್ಲಾಮಿಕ್ ವಾಸ್ತು ಶೈಲಿಯಲ್ಲಿ ಈ ಘನಾಕೃತಿಯ ಸರಳತೆ ಹಾಗೂ ಆದರ ಅದ್ಭುತ ಗಾತ್ರದ ಮಹತ್ತಿನ ಕಲ್ಪನೆಯನ್ನು ಹೋಲುವ ಕೃತಿಗಳು ಇಲ್ಲ. ಇದರ ವಿಶಾಲವಾದ ಕೇಂದ್ರ ಭವನವನ್ನು ಬೃಹತ್ ಗಾತ್ರದ ಗುಮ್ಮಟದಿಂದ ಮುಚ್ಚಲು ಅಷ್ಟಕೋನಾಕಾರದ ಬಹು ಮಹಡಿಯ, ಗುಮ್ಮಟವನ್ನು ಹೊಂದಿರುವ ಗೋಪುರಗಳನ್ನು ಊರುಗಂಬಗಳಂತೆ ಹೊರಗಡೆಯಿಂದ ಅಳವಡಿಸಲಾಗಿದೆ. ಹೊರಗೋಡೆಯನ್ನು ಕೋಟೆಯ ತೆನೆಯ ಕಟಾಂಜನದ ಸರಣಿಯಿಂದ ಅಲಂಕರಿಸಲಾಗಿದ್ದು ಗೋಡೆಗಳನ್ನು ಸುದೃಢವಾದ ಮುಂಚಾಚಿದ ಕಾರ್ನಿಸುಗಳಿಂದ ಅಳವಡಿಸಲಾಗಿದೆ. ಇಷ್ಟೊಂದು ಬೃಹತ್ ಪ್ರಮಾಣದ ಒಂದೇ ಒಂದು ಕಮಾನು ಚಾವಣಿಯನ್ನು, ಅಷ್ಟೇ ಮಹತ್ ಪ್ರಮಾಣದ ಗುಮ್ಮಟದ ಮೇಲೆ ನಿರ್ಮಾಣ ಮಾಡಿರುವುದು ಆಗಿನ ಕಾಲದ ಶಿಲ್ಪಿಗಳ ತಾಂತ್ರಿಕ ಅಸಾಧಾರಣ ಕುಶಲತೆಗೆ ಸಾಕ್ಷಿಯಾಗಿದೆ. ಅಷ್ಟೇ ಅಲ್ಲದೆ 3.3 ಮೀಟರ್ ಅಗಲದ ಪಿಸುಮಾತಿನ ಮೊಗಸಾಲೆಯು ಗುಮ್ಮಟದಿಂದ ಚಾಚಿಕೊಂಡು ಒಳಗಡೆ ಸುತ್ತಲೂ ಇರುವುದು ನಿರ್ಮಾಣ ಕಲೆಯ ಮತ್ತು ಶಬ್ದ ವಿಜ್ಞಾನದ ಆಶ್ಚರ್ಯಗಳಲ್ಲಿ ಒಂದಾಗಿದೆ. ನಿಜವಾಗಿಯೂ ಗೋಳ ಗುಂಬಜ್ ಆಗಿನ ಕಾಲದ ಕಲ್ಪನಾ ಶಕ್ತಿಯ ಪ್ರತಿಭೆ ಮತ್ತು ಸಾಮರ್ಥ್ಯಗಳಿಗೆ ಜೀವಂತ ಸಾಕ್ಷಿಯಾಗಿದೆ. ನಕರ್ ಖಾನಾ ಮತ್ತು ಗೋಳ ಗುಂಬಜಿಗೆ ಸೇರಿರುವ ಮಸೀದಿಗಳೂ ಕೂಡ ವಾಸ್ತು ವೈಶಿಷ್ಟ್ಯಗಳು ಇಲ್ಲದಿರುವ ಕಟ್ಟಡಗಳೇನಲ್ಲ.

ಇಸ್ಲಾಮಿಕ್ ಶೈಲಿಯ ಅನಂತರದ ಶತಮಾನಗಳ ಕೆಲವು ಗಮನಾರ್ಹ ಮೊಗಲ್ ಶೈಲಿಯ ಕಟ್ಟಡಗಳಲ್ಲಿ ಮಲಿಕ್ ರಿಹಾನ್ ದರ್ಗ ಮತ್ತು ಜಾಮಿ ಮಸೀದಿಗಳು ಶಿರಾದಲ್ಲಿಯೂ, ಹೈದರ್ ಮತ್ತು ಟಿಪ್ಪುವಿನ ಸಮಾಧಿ ಭವನಗಳು ಮತ್ತು ಮಸೀದಿಗಳು ಶ್ರೀರಂಗಪಟ್ಟಣದಲ್ಲಿಯೂ ಇವೆ.

## ಆಧುನಿಕ ವಾಸ್ತುಶಿಲ್ಪ

ಯೂರೋಪಿಯನ್ನರ ಆಗಮನವಾದ ಮೇಲೆ ವಾಸ್ತು ಶೈಲಿಯಲ್ಲಿ, ಅದರಲ್ಲಿಯೂ ಚರ್ಚುಗಳ ಮತ್ತು ಸಾರ್ವಜನಿಕ ಕಟ್ಟಡಗಳ ನಿರ್ಮಾಣದಲ್ಲಿ ಬದಲಾವಣೆಗಳುಂಟಾದವು. ಪಶ್ಚಿಮ ಕರಾವಳಿಗೆ ಬಂದ ಪೋರ್ತುಗೀಸರು ಮಂಗಳೂರು ಮತ್ತು ಹೊನ್ನಾವರಗಳಲ್ಲಿ ಕೋಠಿಗಳನ್ನು ಕಟ್ಟಿಕೊಂಡಿದ್ದರು. ಅವರು ಗ್ರೀಕೋ ರೋಮನ್ ಮಾದರಿಯನ್ನನುಸರಿಸಿ ಯೂರೋಪಿನ ರಿನೇಸಾನ್ಸ್ ಶೈಲಿಯಲ್ಲಿ ಚರ್ಚುಗಳನ್ನು ಕಟ್ಟಿದರು. ಅನಂತರ ಬಾಸೆಲ್ ಮಿಶನ್‌ನವರ ಆಗಮನವಾದ ಮೇಲೆ ನಾಡುಹೆಂಚುಗಳ ಬದಲಿಗೆ ಯಂತ್ರಗಳಿಂದ ತಯಾರು ಮಾಡಿದ ಚಪ್ಪಟೆಯಾದ ಹೆಂಚುಗಳನ್ನು ಉಪಯೋಗಿಸುವುದು ರೂಢಿಯಾಯಿತು. ಇದರಿಂದಾಗಿ ಪಶ್ಚಿಮ ಕರಾವಳಿಯಲ್ಲಿ ಪ್ರಚಲಿತವಾಗಿದ್ದ ಮತ್ತು ಅಲ್ಲಿನ ಗುಡಿಸಲುಗಳನ್ನು ಹೋಲುವ ಗೇಬಲ್ ಚಾವಣಿಯನ್ನು ಎಲ್ಲೆಡೆ ಬಳಕೆಗೆ ತರಲಾಯಿತು. ಈ ಹೆಂಚುಗಳ ಭಾರವು ಕಡಿಮೆಯಾಗಿದ್ದು, ಅವು ನಾಡಹೆಂಚುಗಳಿಗಿಂತ ಅಗಲವಾಗಿದ್ದುದರಿಂದ, ಒಂದೇ ಒಂದು ಹಾಸಿನಲ್ಲಿ ಉಪಯೋಗಿಸಲು ಅವು ಯೋಗ್ಯವಾಗಿದ್ದುವು. ಈ ಕಾಲದಲ್ಲಿ ಕಟ್ಟಲಾದ ಸಾರ್ವಜನಿಕ ಕಟ್ಟಡಗಳು ಭಾಗಶಃ ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿಯೂ, ಆದರೆ ವಿಶೇಷವಾಗಿ ಗ್ರೀಕೋ-ರೋಮನ್ ಶೈಲಿಯಲ್ಲಿಯೂ ಕಟ್ಟಲಾದವುಗಳು. ಇವು ಯೂರೋಪಿನ ರಿನೇಸಾನ್ಸ್ ಶೈಲಿಯ ಕಟ್ಟಡಗಳನ್ನು ವಿಶೇಷವಾಗಿ ಅನುಕರಿಸಿ ನಿರ್ಮಾಣ ಮಾಡಿದವುಗಳಾಗಿದ್ದವು.

ಇಂಡೋ ಇಸ್ಲಾಮಿಕ್ ಶೈಲಿಯು ಆಗಲೇ ಜನಪ್ರಿಯವಾಗಿದ್ದು ಶ್ರೀರಂಗಪಟ್ಟಣದ ಹೈದರ್ ಮತ್ತು ಟಿಪ್ಪು ಅವರ ಸಮಾಧಿಭವನವು ಸುಂದರವಾದ ಕಮಾನುಗಳು ಮತ್ತು ಗುಮ್ಮಟಗಳಿಂದ, ಹದಿನೆಂಟನೇಯ ಶತಮಾನದ ಸುಂದರ

ನಿರ್ಮಾಣವಾಗಿದೆ. ಶ್ರೀರಂಗಪಟ್ಟಣದ ದರಿಯಾದೌಲತ್ ಅರಮನೆ, ಬೆಂಗಳೂರು ಕೋಟೆಯಲ್ಲಿರುವ ಟಿಪ್ಪುವಿನ ಅರಮನೆಗಳು, ಹೊರಗೋಡೆಯನ್ನು ಬಿಟ್ಟರೆ, ಬಹುಮಟ್ಟಿಗೆ ಮರದಿಂದ ನಿರ್ಮಾಣಗೊಂಡವುಗಳಾಗಿ, ಇದೇ ಶೈಲಿಯಲ್ಲಿವೆ. ಮಹಡಿಯ ಮೆಟ್ಟಿಲುಗಳು, ಉಪ್ಪರಿಗೆಗಳು ಮುಂತಾದವುಗಳು ಫ್ರೆಂಚ್ ಇಂಜಿನಿಯರುಗಳ ಸಲಹೆಯ ಮೇರೆಗೆ ಸೇರಿಸಿದ್ದಾಗಿರಬೇಕು. ಲಿಂಗರಾಜನಿಂದ 19ನೇಯ ಶತಮಾನದ ಆದಿ ಭಾಗದಲ್ಲಿ ಮಡಿಕೇರಿಯಲ್ಲಿ ಕಟ್ಟಲಾದ ಓಂಕಾರೇಶ್ವರ ದೇವಾಲಯವು, ಅದರ ಮಧ್ಯದ ಗುಮ್ಮಟ, ಮಿನಾರೆಟ್ಟನಂತಿರುವ ಮೂಲೆಯ ಕಂಬಗಳು, ಅದೇ ಊರಿನಲ್ಲಿರುವ ದೊಡ್ಡವೀರರಾಜ ಮತ್ತು ಲಿಂಗರಾಜ ಅವರ ಗದ್ದುಗೆಗಳು, ಮುಂತಾದವುಗಳು ಮಹಮ್ಮದೀಯ ಸುಲ್ತಾನರ ಸಮಾಧಿ ಭವನವನ್ನು ಹೋಲುವುದರಿಂದ, ಆ ಶೈಲಿಯು ಎಷ್ಟೊಂದು ಜನಪ್ರಿಯವಾಗಿದ್ದಿತೆಂದು ತಿಳಿಯುತ್ತದೆ. 1910ರಲ್ಲಿ ಪೂರ್ಣಗೊಂಡ ಮೈಸೂರು ಅರಮನೆಯು ಗಂಭೀರವಾದ ಗುಮ್ಮಟಗಳು ಮತ್ತು ಕಮಾನುಗಳಿಂದ ಇಸ್ಲಾಮಿಕ್ ಶೈಲಿ ಮತ್ತು ಯೂರೋಪಿಯನ್ ಶೈಲಿಯ ಲಕ್ಷಣಗಳನ್ನು ಹೊಂದಿದ್ದು, ಮಿಶ್ರ ಶೈಲಿಯ ಕಟ್ಟಡವಾಗಿದೆ.

ಕ್ರಿಶ್ಚಿಯನ್ ವಾಸ್ತುಶಿಲ್ಪ : ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ ಕಟ್ಟಡಗಳಲ್ಲಿ ವಿಶೇಷವಾಗಿ ಚರ್ಚುಗಳು ಪಶ್ಚಿಮ ಕರಾವಳೀ ಪ್ರದೇಶದಲ್ಲಿವೆ. ಇವು ಪಶ್ಚಿಮದಲ್ಲಿರುವಂತೆ ಕಗ್ಗಲ್ಲಿನಿಂದ ನಿರ್ಮಿತವಾದ ಕಟ್ಟಡಗಳಲ್ಲ. ಆದರೆ ಸ್ಥಳೀಯವಾಗಿ ದೊರಕುವ ಜಂಬಿಟ್ಟಿಗೆ ('ಲ್ಯಾಟರೈಟ್') ಯಿಂದ, ಗೋವಾದ ದೊಡ್ಡ ಚರ್ಚುಗಳಂತೆ, ನಿರ್ಮಾಣಗೊಂಡವು. ಆದರೆ ಪಶ್ಚಿಮ ಕರಾವಳಿಯ 27 ಚರ್ಚುಗಳು, ಹದಿನೆಂಟನೇಯ ಶತಮಾನದ ಕೊನೆಯ ಭಾಗದಲ್ಲಿ, ಕ್ರೈಸ್ತರು ಕರ್ನಾಟಕದ ಆಗಿನ ರಾಜನ ಕೃಪೆಯನ್ನು ಕಳೆದುಕೊಂಡುದ್ದರ ಫಲವಾಗಿ, ನಾಶ ಮಾಡಲ್ಪಟ್ಟವೆಂದು ಹೇಳಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗಿರುವ ಚರ್ಚುಗಳಲ್ಲಿ, 1857ರಲ್ಲಿ ಪುನರ್ನಿರ್ಮಾಣಗೊಂಡ ಮಂಗಳೂರಿನ ಕೊಡಿಯಾಲ್‌ಬೈಲಿನಲ್ಲಿರುವ 'ಅವರ್ ಲೇಡಿ ಆಫ್ ಸಾರೋಸ್ ಚರ್ಚ್' ಅತ್ಯಂತ ಪ್ರಾಚೀನವಾದದ್ದು. ಮಂಗಳೂರಿನ ಬಿಷಪ್ ಅವರ ನಿವಾಸ ಸ್ಥಾನಕ್ಕೆ ಸೇರಿದಂತಿರುವ ಈ ಚರ್ಚು ಪರಿಣಾಮಕಾರಕ ಮುಮ್ಮುಖವನ್ನು ಹೊಂದಿದೆ. ಮುಮ್ಮುಖದ ಎತ್ತರವಾದ ಗೋಡೆಯು ಒಂದೇ ಪ್ರಮಾಣದ ನಾಲ್ಕು ಆಯತಾಕಾರದ ಭಾಗಗಳಾಗಿ ವಿಭಜಿತವಾಗಿದ್ದು, ಮೇಲ್ಗಡೆಯ ತ್ರಿಕೋಣಾಕೃತಿಯ ರಚನೆ ('ಪೆಡಿಮೆಂಡ್') ಗೆ ಆಧಾರವಾಗಿದೆ. ಕೆಳಭಾಗದ ಈ ಗೋಡೆ ಆಯತದಲ್ಲಿ ಚರ್ಚಿನ ಪ್ರವೇಶ ದ್ವಾರವಿದೆ. ಈ ಸುಂದರ ಕಟ್ಟಡವು ಯೂರೋಪಿಯನ್ ವಾಸ್ತು ಶೈಲಿಯ ಅನೇಕ ಲಕ್ಷಣಗಳನ್ನು ಹೊಂದಿದೆ. ಅನಂತರದ ಗಮನಾರ್ಹವಾದ ಚರ್ಚೆಂದರೆ ಮಂಗಳೂರಿನ ಮಿಲಾಗ್ರಿಸ್ ಚರ್ಚು. ಇದನ್ನು ಮೂಲತಃ 1680ರಲ್ಲಿ ಕಟ್ಟಲಾದರೂ, ಈಗಿನ ಕಟ್ಟಡವು 1910ರಲ್ಲಿ ಪುನರ್ನಿರ್ಮಾಣಗೊಂಡಿತು. ಈ ಗಮನಾರ್ಹ ಕಟ್ಟಡದಲ್ಲಿ ಯೂರೋಪಿನ ಕ್ಲಾಸಿಕ್ ಯುಗದ ಮುಮುಖವೂ, ಅದರಲ್ಲಿನ ಕಟಾಂಜನದಲ್ಲಿ ಸುಂದರ ಶಿಲ್ಪಗಳ ಸಾಲೂ ಇದ್ದು, ಇದು ರೋಮಿನ ಸಂತ ಪೀಟರನ ಬ್ಯಾಸಿಲಿಕವನ್ನು ನಮ್ಮ ಸ್ಮೃತಿ ಪಟಲಕ್ಕೆ ತರುತ್ತದೆ. ಈ ಚರ್ಚು 60 ಮೀಟರು ಉದ್ದವೂ, 27.5 ಮೀಟರು ಅಗಲವೂ ಇದೆ. ಇದರ ಲಾಳಾಕಾರದ ಹಿಂಭಾಗವು ಉನ್ನತವಾದ ಅರ್ಧ ಗುಮ್ಮಟದಿಂದ ಮುಚ್ಚಲ್ಪಟ್ಟಿದೆ ; ಇದರ ಪ್ರಾರ್ಥನಾ ಮಂದಿರದಲ್ಲಿ ಅಗಲವಾದ ಮಧ್ಯಾಂಗಣ, ಕಂಬ ಸಾಲು ಮತ್ತು ಚೆನ್ನಾಗಿ ಅಲಂಕಾರ ಮಾಡಿದ ಇಕ್ಕೆಲದ ಹಜಾರಗಳು ಸುಂದರವಾಗಿ ನಿರ್ಮಾಣಗೊಂಡಿವೆ. ಇಷ್ಟೇ ಪ್ರಾಚೀನತೆಯನ್ನು ಹೊಂದಿದ ಇನ್ನೊಂದು ಕಟ್ಟಡವೆಂದರೆ ಮಂಗಳೂರಿನ ಬೋಳಾರ್‌ನಲ್ಲಿರುವ ರೊಸಾರಿಯೊ ಕ್ಯಾಥಿಡ್ರಲ್ ಚರ್ಚ್. ಮೂಲತಃ 1526ರಲ್ಲಿ ನಿರ್ಮಾಣಗೊಂಡು ದಕ್ಷಿಣ ಕನ್ನಡದಲ್ಲಿಯೇ ಪ್ರಾಚೀನತಮವಾದದ್ದಾದರೂ, ಈಗಿನ ಕಟ್ಟಡವು 1910ರಲ್ಲಿ ನಿರ್ಮಾಣಗೊಂಡಿತು. ಸಂಕೀರ್ಣವಾದ ಈ ಕಟ್ಟಡದಲ್ಲಿ, ಕಟ್ಟಡದ ಒಳಗಣ ಕೂಡು ಕೇಂದ್ರದ ಮೇಲೆ ದೊಡ್ಡದಾದ ಗುಮ್ಮಟವೂ, ಶಿಲುಬೆಯಾಕಾರದ ಅಡ್ಡ ಭಾಗವೂ, ಅಗಲವಾದ ಮಧ್ಯಾಂಗಣದ ಎರಡು ತುದಿಯಲ್ಲಿ ಸಮಾನ ಗಾತ್ರದ ಎರಡು ಅರೆಗುಮ್ಮಟಗಳೂ, ಹಿಂಭಾಗದ ಅರೆ ಗುಮ್ಮಟದ ಪಕ್ಕಗಳಲ್ಲಿ ಎರಡು ಸಣ್ಣ ಗುಮ್ಮಟಗಳೂ ಇವೆ. ಇದು ಇಟಾಲಿಯನ್ ಗಾಥಿಕ್ ಶೈಲಿಯಲ್ಲಿದ್ದು, ಇಟಲಿಯ ಜಿನೋವಾದಲ್ಲಿರುವ ಸಂತ ಮರಿಯ ಚರ್ಚನ್ನು ನಮ್ಮ ಸ್ಮೃತಿ ಪಟಲಕ್ಕೆ ತರುತ್ತದೆ. ಅಷ್ಟೇ ಪ್ರಮುಖವಾದ ಮತ್ತೊಂದು ಕಟ್ಟಡವೆಂದರೆ 1890ರಲ್ಲಿ ನಿರ್ಮಾಣಗೊಂಡ ಮಂಗಳೂರಿನ ಸಂತ ಜೋಸೆಫ್‌ನ ಸೆಮಿನರಿ. ಈ ಜಿಲ್ಲೆಯ ಮತ್ತೊಂದು ಪ್ರಾಚೀನ ಚರ್ಚೆಂದರೆ, ಉಡುಪಿಯ ಸಮೀಪದಲ್ಲಿರುವ ಕಲ್ಯಾಣಪುರದ ಮಿಲಾಗ್ರಿಸ್ ಚರ್ಚು. ಮೂಲತಃ 1678ರಲ್ಲಿ ಅದನ್ನು ನಿರ್ಮಿಸಲಾದರೂ, ಈಗಿರುವ ಚರ್ಚು ಈ ಶತಮಾನದಲ್ಲಿ ನಿರ್ಮಾಣವಾದುದು. ಇದರಲ್ಲಿ ಅನೇಕ ಪ್ರಾಚೀನವಾದ ಸುಂದರ ವಿಗ್ರಹಗಳಿವೆ. ಕಾರವಾರ ಬಳಿಯ ಸುಂಕೇರಿಯ ಚರ್ಚ್ ಅಷ್ಟಕೋನಾಕಾರದ ಕಟ್ಟಡವಾಗಿ ಒಂದು ವಿಶಿಷ್ಟ ರಚನೆಯಾಗಿದೆ (1801).

ಮೈಸೂರು ಸಂಸ್ಥಾನದ ಪ್ರಾಚೀನ ಚರ್ಚುಗಳಲ್ಲಿ ಹಾಸನ ತಾಲೂಕಿನ ಶೆಟ್ಟಿಹಳ್ಳಿಯಲ್ಲಿರುವ 1848ರಲ್ಲಿ ನಿರ್ಮಿತವಾದ ಚರ್ಚ್ ಗಮನಾರ್ಹವಾದುದು. ಮುಂಭಾಗದಲ್ಲಿ ಗಾಥಿಕ್ ಶೈಲಿಯ ಎತ್ತರವಾದ ಗೋಪುರವಿದ್ದ ಈ ಕಟ್ಟಡವು ಹೇಮಾವತಿ ನೀರಾವರಿ ಯೋಜನೆಯಲ್ಲಿ ಮುಳುಗಡೆ ಹೊಂದಿದೆ. ಅಬ್ಬೆ ದುಬುವಾಗೆ ಸಂಬಂಧಿಸಿದ ಶ್ರೀರಂಗಪಟ್ಟಣದಲ್ಲಿರುವ ಚರ್ಚು ಸಣ್ಣದಾಗಿದ್ದು ದಪ್ಪವಾದ ಗಾರೆಯ ಗೋಡೆಗಳನ್ನು ಹೊಂದಿದೆ. ಗಮನಾರ್ಹವಾದ ಇತರ ಚರ್ಚುಗಳಲ್ಲಿ ಮೈಸೂರಿನ ಸಂತ

ಫಿಲೋಮಿನ ಚರ್ಚು (1943), ಮತ್ತು ಬೆಂಗಳೂರಿನ ಶಿವಾಜಿ ನಗರದ ಸಂತ ಮೇರಿ ಚರ್ಚು (1882)ಗಳಲ್ಲಿ ಎತ್ತರವಾದ ಸುಂದರ ವಾದ ಗಾಥಿಕ್ ಗೋಪುರಗಳು ಮತ್ತು ಮೊನಚಾದ ಕಮಾನು ಗಳಿವೆ. ಸಂತ ಫಿಲೋಮಿನ ಚರ್ಚಿನಲ್ಲಿ ಎತ್ತರವಾದ ಬೃಹತ್ ಗಾತ್ರದ ಎರಡು ಗೋಪುರಗಳು ಮತ್ತು ಹೆಬ್ಬಾಗಿಲುಗಳಿದ್ದರೆ, ಸಂತ ಮೇರಿ ಚರ್ಚಿನಲ್ಲಿ ಶೆಟ್ಟಿಹಳ್ಳಿ ಚರ್ಚಿನಲ್ಲಿರುವಂತೆ ಒಂದೇ ಒಂದು ಎತ್ತರವಾದ ಗೋಪುರವಿದೆ. ಅವು ಸಂಕೀರ್ಣವಾದ ತಾಂತ್ರಿಕತೆಯಿಂದ ಕೂಡಿವೆ. ಬೆಂಗಳೂರಿನಲ್ಲಿರುವ ಸಂತ ಮಾರ್ಕ್‌ನ ಕಥೀಡ್ರಲ್ (1926) ಸಂಕೀರ್ಣ ಕಟ್ಟಡವಾಗಿದ್ದು ಕಮಾನುಗಳ ಸಾಲುಗಳು ಮತ್ತು ಅಸಾಧಾರಣವಾದ ಮಧ್ಯದ ಗುಮ್ಮಟವನ್ನು ಹೊಂದಿದೆ. ಒಳಗಡೆ ಇರುವ ಸಂಕೀರ್ಣವಾದ ಸುಂದರ ಮರಕೆತ್ತನೆಗೆ ಅದು ಖ್ಯಾತವಾಗಿದೆ. ಇದೇ ಶೈಲಿಯಲ್ಲಿ ಬೆಂಗಳೂರಿನ ಸಂತ ಜೋಸೆಫ್ ಚರ್ಚು ನಿರ್ಮಾಣವಾಗಿದೆ. ಇದರಲ್ಲಿ ಬೃಹದಾಕಾರದ ಮುಮ್ಮುಖದಲ್ಲಿ ಎತ್ತರದ ಎರಡು ಗೋಪುರಗಳು ಇಕ್ಕೆಲಗಳಲ್ಲಿದ್ದು ಎರಡು ಗುಮ್ಮಟಗಳಿಗೆ ಆಧಾರ ವಾಗಿವೆ. ದೈವ ಮಂದಿರದ ಮೇಲೆ ದೊಡ್ಡದಾದ ಮತ್ತೊಂದು ಗುಮ್ಮಟವಿದೆ. ಇದು ನೆಲಮಾಳಿಗೆ ಇರುವ ಏಕೈಕ ಚರ್ಚು. ಇದರ ವಿನ್ಯಾಸವು ಶಿಲುಬೆಯಾಕಾರದಲ್ಲಿದೆ. ಹಡ್‌ಸನ್ ಮೆಮೋರಿಯಲ್ ಚರ್ಚ್ ಮತ್ತು ಸಂತ ಪ್ಯಾಟ್ರಿಕ್ ಚರ್ಚ್ (1899) ಬೆಂಗಳೂರಿನಲ್ಲಿರುವ ಇತರ ಕ್ರೈಸ್ತ ದೇವಾಲಯಗಳು. ಮೊದಲನೇಯದರಲ್ಲಿ ಇಂಗ್ಲೆಂಡಿನ ಗಾಥಿಕ್ ದೇವಾಲಯದ ಎಲ್ಲ ಲಕ್ಷಣಗಳೂ ಇವೆ. ಎರಡನೇಯದರಲ್ಲಿ ಕಮಾನು ಪ್ರವೇಶ ದ್ವಾರವೂ, ಅದರ ಇಕ್ಕೆಲಗಳಲ್ಲಿಯೂ ಎಟ್ರುಸ್ಕನ್ ಮಾದರಿಯ ಕಂಬವೂ ಇರುವ ಮುಮ್ಮುಖವಿದೆ. ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳಲ್ಲಿರುವ ಚರ್ಚುಗಳ ಮಾದರಿಯಲ್ಲಿ ಇದು ನಿರ್ಮಿತ ವಾಗಿದೆ.

ಆಧುನಿಕ ಕಟ್ಟಡಗಳು : ಹತ್ತೊಂಬತ್ತನೇಯ ಶತಮಾನದಲ್ಲಿ ಯೂರೋಪಿನ ರಿನೇಸಾನ್ಸ್ ಶೈಲಿಯಲ್ಲಿ ಅನೇಕ ಲೌಕಿಕ ಕಟ್ಟಡ ಗಳು ನಿರ್ಮಾಣಗೊಂಡವು. ಈ ಕಟ್ಟಡಗಳಲ್ಲಿ ಅಯೊನಿಕ್ ಮತ್ತು ಕಾರಿಂಥಿಯನ್ ಲಕ್ಷಣಗಳನ್ನು, ಗಾಥಿಕ್ ಲಕ್ಷಣಗಳನ್ನು ಕಾಣಬಹುದು. ಇನ್ನು ಕೆಲವು ಯೂರೋಪಿಯನ್ ಮಾದರಿ ಯಲ್ಲಿ ನಿರ್ಮಿತವಾಗಿವೆ. ಇವುಗಳಲ್ಲಿ ಬೆಂಗಳೂರಿನ ಅಠಾರಾ ಕಚೇರಿಯು (ಈಗಿನ ಹೈಕೋರ್ಟ್ ಕಟ್ಟಡ, 1867) ಅಗಲ ವಾದ ಮುಮ್ಮುಖವನ್ನು ಹೊಂದಿದ್ದು, ಅದರ ಎರಡು ಅಂತಸ್ತು ಗಳಲ್ಲಿಯೂ ಅಯೊನಿಕ್ ಸ್ತಂಭಗಳಿವೆ. 1877ರಲ್ಲಿ ಕಟ್ಟಲಾದ ಬೆಂಗಳೂರು ಮ್ಯೂಸಿಯಂ ಕಾರಿಂಥಿಯನ್ ಸ್ತಂಭಗಳನ್ನುಳ್ಳ ಚೂಪಾದ ಕಮಾನುಗಳುಳ್ಳ ಸುಂದರವಾದ ಕಟ್ಟಡ. ಎತ್ತರ ವಾದ ಗಡಿಯಾರಗೋಪುರ, ವಿಶಾಲವಾದ ಹಜಾರಗಳು, ಅಗಲ ವಾದ ಕೈಸಾಲೆಗಳು, ಆಕರ್ಷಕವಾದ ಕಿಟಕಿಗಳನ್ನು ಹೊಂದಿರುವ ಗಾಥಿಕ್ ಶೈಲಿಯ ಸೆಂಟ್ರಲ್ ಕಾಲೇಜು (1860) ಮತ್ತೊಂದು ದೊಡ್ಡ ಕಟ್ಟಡ. ಕಲ್ಲಿನಿಂದ ನಿರ್ಮಿತವಾದ ಬೆಂಗಳೂರು ಅರಮನೆಯು (1882) ಇಂಗ್ಲೆಂಡಿನ ವಿಂಡ್ಸರ್ ಕ್ಯಾಸಲ್ ಮಾದರಿಯಲ್ಲಿದ್ದು, ಯೂರೋಪಿನ ಮ್ಯಾನರ್ ಗೃಹವನ್ನು ನಮ್ಮ ನೆನಪಿಗೆ ತರುತ್ತದೆ. ಇದರ ಒಳಗಡೆ ಸುಂದರವಾದ ಮರದ ಕೆತ್ತನೆಗಳಿವೆ. ಈ ಸಂಕೀರ್ಣ ಶೈಲಿಯ ಮತ್ತೊಂದು ಗಮನಾರ್ಹ ಕಟ್ಟಡವೆಂದರೆ ಕಬ್ಬನ್ ಪಾರ್ಕಿನಲ್ಲಿರುವ ಶೇಷಾದ್ರಿ ಸ್ಮಾರಕ ಭವನ. ಸಿಮೆಂಟಿನ ಬಳಕೆ ಮತ್ತು ಆರ್. ಸಿ. ಸಿ. ಅಳವಡಿಕೆಯಿಂದಾಗಿ ವಾಸ್ತು ನಿರ್ಮಾಣ ತಂತ್ರಗಳಲ್ಲಿ ಇಪ್ಪತ್ತ ನೇಯ ಶತಮಾನದಲ್ಲಿ ಗಮನಾರ್ಹ ಬದಲಾವಣೆಗಳುಂಟಾದವು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕಟ್ಟಡದ ಮತ್ತು ವಿಧಾನ ಸೌಧಗಳ ರಚನೆಯಲ್ಲಿ ಇದನ್ನು ಗಮನಿಸ ಬಹುದು.

ಸ್ಮರಣೆಗೆ ಯೋಗ್ಯವಾದ ಕರ್ನಾಟಕದ ಆಧುನಿಕ ಕಟ್ಟಡ ಗಳಲ್ಲಿ ನಮ್ಮ ಕಾಲಕ್ಕೇ ಸೇರುವ ವಿಧಾನಸೌಧವು ಗಮನಾರ್ಹ ವಾದುದು. ಸಾಂಪ್ರದಾಯಿಕ ಭಾರತೀಯ ಲಕ್ಷಣಗಳನ್ನು ಹೊಂದಿರುವ ಕಟ್ಟಡವಿದು. ಅಗಲವಾದ ಮೆಟ್ಟಿಲುಗಳ ಸರಣಿ ಯನ್ನು ಹೊಂದಿರುವ ವಿಶಾಲವಾದ ಪ್ರವೇಶ ಮಂಟಪವನ್ನು ಇದು ಹೊಂದಿದೆ. ಇದರ ಬೃಹತ್ ಪ್ರಮಾಣದ ಗುಮ್ಮಟ, ಎತ್ತರವಾದ ಕೊಳವೆಯಾಕಾರದ ಸ್ತಂಭಗಳು, ಸಿಮೆಂಟಿನಲ್ಲಿ ರೂಪಿಸಿರುವ ತಗ್ಗು ಉಬ್ಬಿನ ಶಿಲ್ಪ ವಿನ್ಯಾಸಗಳು, ಇದನ್ನು ಶಿಲೆಯ ಮಹಾಕಾವ್ಯವಾಗಿಸಿದೆ. ಇದು ನಮ್ಮ ಕಾಲದ ಅದ್ಭುತವಾದ ಕಟ್ಟಡಗಳಲ್ಲೊಂದು. ಸಮಕಾಲೀನ ಪ್ರಪಂಚದ ಇದೇ ರೀತಿಯ ಕಟ್ಟಡವೊಡನೆ ಸರಿಸಾಟಿಯಾಗಿ ನಿಲ್ಲಲು ಈ ಕಟ್ಟಡ ಯೋಗ್ಯವಾಗಿದೆ. ಇದರ ಒಳಭಾಗದಲ್ಲಿ ಸುಂದರವಾದ ಮರಗೆಲಸದ ಕೆತ್ತನೆಗಳಿವೆ. ಇತರ ಗಮನಾರ್ಹ ಆಧುನಿಕ ಕಟ್ಟಡಗಳಲ್ಲಿ ಧಾರವಾಡದ ಕೃಷಿ ವಿಜ್ಞಾನ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರಿನಲ್ಲಿ ಕೇಂದ್ರ ಆಹಾರ ವಿಜ್ಞಾನ ಸಂಸ್ಥೆಯಿರುವ ಅರಮನೆ, ಯೂರೋಪಿಯನ್ ಮಾದರಿಯ ಲಲಿತಮಹಲ್ ಅರಮನೆ ಮತ್ತು ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್‌ಗಳನ್ನು ಹೆಸರಿಸಬೇಕು. ಈ ಕೊನೆಗೆ ಹೆಸರಿಸಿದ ಕಟ್ಟಡವು ಯೂರೋಪಿನ ಕ್ಲಾಸಿಕಲ್ ಶೈಲಿ ಯಲ್ಲಿರುವ ಭವ್ಯವಾದ ಕಟ್ಟಡ. ಇದರ ಮಧ್ಯ ಪ್ರಾಂಗಣವು ಕ್ಲಾಸಿಕಲ್ ಪರ್ಷಿಯನ್ ಚಿಹ್ನೆಗಳಿಂದ ಅಲಂಕೃತವಾಗಿದೆ. ಬೆಂಗಳೂರಿನಲ್ಲಿರುವ ಮಿಥಿಕ್ ಸೊಸೈಟಿಯಿರುವ ಡ್ಯಾಲಿ ಮೆಮೋರಿಯಲ್ ಭವನ (1917) ಮತ್ತು ಟೌನ್ ಹಾಲ್ (1935) ಗಳು ಗ್ರೀಕೊ-ರೋಮನ್ ಶೈಲಿಯಲ್ಲಿರುವ ಸುಂದರ ಕಟ್ಟಡಗಳು. ಅಮೆರಿಕ ಸಂಯುಕ್ತ ಸಂಸ್ಥಾನದ ಎಂಪೈರ್ ಸ್ಟೇಟ್ ಕಟ್ಟಡದ ಮಾದರಿಯಲ್ಲಿ ರಚಿತವಾಗಿರುವ ಬೆಂಗಳೂರಿನ ಮಹಾತ್ಮಾ ಗಾಂಧಿ ರಸ್ತೆಯಲ್ಲಿರುವ ಯುಟಿಲಿಟಿ ಕಟ್ಟಡವು 30 ಅಂತಸ್ತುಗಳನ್ನುಳ್ಳ, 1970ರಲ್ಲಿ ನಿರ್ಮಾಣವಾದ ಕಟ್ಟಡ.

# ಶಿಲ್ಪಕಲೆ

## ಬಾದಾಮಿ ಚಲುಕ್ಯ ಶಿಲ್ಪ

ಕರ್ನಾಟಕದಲ್ಲಿ ಉಗಮವಾದ ಪ್ರಮುಖ ಕಲಾಶೈಲಿಯಲ್ಲಿ ಬಾದಾಮಿ ಚಲುಕ್ಯರ ಶೈಲಿಯು ಮೊದಲನೇಯದು. ಬಾದಾಮಿ ಚಲುಕ್ಯರ ಕಾಲದಲ್ಲಿ ಕಂಡುಬರುವ ಮುಖ್ಯ ಸಂಗತಿಯೆಂದರೆ ವೈದಿಕ ಪ್ರವೃತ್ತಿಗೆ ಪ್ರಾಮುಖ್ಯತೆ ದೊರಕಿದ್ದು. ಈ ಹಿಂದೆ ಇದು ಸ್ವಲ್ಪ ಮಟ್ಟಿಗೆ ಅವನತಿಯನ್ನು ಹೊಂದಿತ್ತು. ಏಕೆಂದರೆ ಹಿಂದಿನ ಶತಮಾನಗಳಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ವಿಶೇಷವಾಗಿ ಜನಾನುರಾಗಿಯಾಗಿದ್ದವು. ಆದರೆ ಬಾದಾಮಿ ಚಲುಕ್ಯ ರಾಜರುಗಳು ವಿಷ್ಣುವಿನ ಭಕ್ತರಾಗಿದ್ದರೂ ಕೂಡ, ಶೈವ ಮತ್ತು ಜೈನ ದೇವಾಲಯಗಳನ್ನು ಕಟ್ಟಲು ಸಮಾನ ಪ್ರೋತ್ಸಾಹವನ್ನು ಕೊಟ್ಟರು ಎನ್ನುವ ಮಾತನ್ನು ಹೇಳಲೇ ಬೇಕು. ಬೌದ್ಧ ಧರ್ಮವು ಅವನತಿಯನ್ನು ಹೊಂದುತ್ತಿದ್ದಾಗ್ಯೂ ಐಹೊಳೆಯಲ್ಲಿ ಒಂದು ಬೌದ್ಧ ವಿಹಾರ ನಿರ್ಮಾಣವಾಯಿತು. ಐಹೊಳೆಯಲ್ಲಿರುವ ಹುಚ್ಚಪ್ಪಯ್ಯನ ಮಠ, ಕುಂತಿ ಗುಡಿ, ಲಾಡಖಾನ್ ಮತ್ತು ದುರ್ಗ ದೇವಾಲಯಗಳಲ್ಲಿ ಕಾಣಬರುವ ಶಿಲ್ಪಫಲಕಗಳಿಂದ ವೈದಿಕ ಸಂಪ್ರದಾಯದ ಈ ದೇವಾಲಯಗಳಲ್ಲಿ ಬ್ರಹ್ಮ, ವಿಷ್ಣು ಮತ್ತು ಶಿವ ಇವರಿಗೆ ಸಮಾನವಾದ ಸ್ಥಾನವನ್ನು ಕಲ್ಪಿಸಲಾಯಿತೆಂದು ತಿಳಿದುಬರುತ್ತದೆ. ಸ್ವಲ್ಪಕಾಲ ಬಾದಾಮಿಯ ಗುಹಾಲಯಗಳಲ್ಲಿ ವಿಷ್ಣುವಿಗೆ ಪ್ರಾಮುಖ್ಯವಿದ್ದಿತಾದರೂ, ಕಾಲಕ್ರಮದಲ್ಲಿ ಶಿವನಿಗೆ ಹೆಚ್ಚಿನ ಪ್ರಾಮುಖ್ಯ ದೊರಕಿ, ಬಾದಾಮಿ ಮತ್ತು ಪಟ್ಟದಕಲ್ಲುಗಳಲ್ಲಿ ಅನೇಕ ಶಿವ ದೇವಾಲಯಗಳು ನಿರ್ಮಾಣಗೊಂಡವು.

ಭಾರತೀಯ ಕಲೆಗೆ ಬಾದಾಮಿ ಚಲುಕ್ಯ ಕಲೆಯು ತನ್ನ ಶಾಶ್ವತವಾದ ಕೊಡುಗೆಯನ್ನು ಕೊಟ್ಟಿದ್ದು ತನ್ನ ಸರಳತೆಯಿಂದ. ಇದು ಗುಪ್ತರ ಕಲೆಗಿಂತ ಭಿನ್ನವಾಗಿತ್ತು; ಏಕೆಂದರೆ ಅದು ಮಾನವಾತೀತ ಪ್ರಮಾಣವನ್ನು ತಲಪಿದ್ದು ಅದರಲ್ಲಿ ಕಲ್ಪನೆ ಮತ್ತು ರೂಪಗಳೆರಡೂ ಒಂದಾಗಿದ್ದವು. ಗುಪ್ತರ ಶೈಲಿಯ ಬುದ್ಧ ಮತ್ತು ವಿಷ್ಣುವಿನ ಶಿಲ್ಪಗಳಲ್ಲಿ ಕಂಡುಬಂದ ಬೆರಗು ಮತ್ತು ಆನಂದ, ಚಲುಕ್ಯ ಕಲೆಯಲ್ಲಿ ಸಾಂತ್ವನ ಮತ್ತು ಆತ್ಮವಿಶ್ವಾಸವಾಗಿ ಮಾರ್ಪಾಡು ಹೊಂದಿತು. ವಿಶೇಷವಾದ ಚಟುವಟಿಕೆಯಿಂದ ಕೂಡಿದ ಈ ಜೀವನದಲ್ಲಿ ರಮ್ಯತೆ ಮತ್ತು ಚೆಲುವಿನ ಆಕಾರಗಳಲ್ಲಿ ಕಂಡುಬಂದ ಶಾಂತಿ, ಜನಸಾಮಾನ್ಯರನ್ನು ಮತ್ತು ಗಣ್ಯರನ್ನೂ ಸಮಾನವಾಗಿ ಆಕರ್ಷಿಸಿತು. ಚಲುಕ್ಯ ಕಲೆಯು ಅಂಗಾಂಗಗಳ ಚಲನೆಯ ಮೂಲಕ ಹೊರ ಚಾಲನಾ ಶಕ್ತಿಯ ಕಡೆಗೆ ವಾಲಿದರೆ, ಗುಪ್ತಶೈಲಿಯು ನವಿರಾದ ಮತ್ತು ಮೃದುವಾದ ತಿರುವುಗಳಿಗೆ ಪ್ರಾಮುಖ್ಯ ಕೊಟ್ಟಿತು. ಚಲುಕ್ಯ ಕಲಾಕಾರನು ಹೊರಹೊಮ್ಮುವ ಶಕ್ತಿಯನ್ನು ರೂಪಿಸಲು ಅತ್ಯಂತ ಕಾತುರತೆಯನ್ನು ತೋರಿಸುತ್ತಿದ್ದನೆಂಬುದಕ್ಕೆ ದುರ್ಗ ದೇವಾಲಯದ ಮಹಿಷಾಸುರ ಮರ್ದಿನಿ ಮತ್ತು ಬಾದಾಮಿಯ ಮೂರನೇಯ ಗುಹಾಲಯದ ತ್ರಿವಿಕ್ರಮ ಶಿಲ್ಪಗಳು ಉತ್ತಮ ಉದಾರಣೆಗಳು. ರಾಷ್ಟ್ರಕೂಟರು ಚಲುಕ್ಯರ ಶೈಲಿಯನ್ನೇ ಅನುಸರಿಸಿ ಚೈತನ್ಯ ಮತ್ತು ಚಲನೆಯನ್ನು ಪ್ರಾಮುಖ್ಯಗೊಳಿಸಿದರು. ಈ ಲಕ್ಷಣಗಳನ್ನು ಎಲ್ಲೋರದ ಕೈಲಾಸ ದೇವಾಲಯದ ಶಿವನ ರೂಪಗಳಾದ ತ್ರಿಪುರಾಂತಕ ಕಾಲಾರಿ ಮತ್ತು ರಾವಣನು ಕೈಲಾಸವನ್ನು ಅಲುಗಾಡಿಸುತ್ತಿರುವ ಶಿಲ್ಪಗಳಲ್ಲಿ ಕಾಣಬಹುದು. ಗುಪ್ತ ಶೈಲಿಯ ಆದರ್ಶ ರೂಪಗಳು ಬದಲಾಗಿ, ಚಲುಕ್ಯ ಶಿಲ್ಪದಲ್ಲಿ ರಮ್ಯತೆ ಮತ್ತು ಸಹಜತೆಗಳು ಒಂದುಗೂಡಿದವು. ಆದರೆ ಗುಪ್ತರ ಕೊಡುಗೆಯಾದ ಸಾಮರಸ್ಯ, ಸೌಂದರ್ಯ ಹಾಗೆಯೇ ಮುಂದುವರಿಯಿತು. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಮಿಥುನ (ದಂಪತಿ) ಶಿಲ್ಪಗಳು, ಐಹೊಳೆಯ ಹಾರುತ್ತಿರುವ ಅಪ್ಸರೆಯರ ಶಿಲ್ಪಗಳು (ಈಗ ಮುಂಬಯಿನ ಪ್ರಿನ್ಸ್ ಆಫ್ ವೇಲ್ಸ್ ಸಂಗ್ರಹಾಲಯದಲ್ಲಿದೆ) ಈ ಎರಡೂ ಸಂಪ್ರದಾಯಗಳ ಸಮ್ಮಿಳನಕ್ಕೆ ಉತ್ತಮ ಉದಾಹರಣೆಗಳು.

ಚಲುಕ್ಯ ಶಿಲ್ಪಕಲೆಯಲ್ಲಿ ಪ್ರಧಾನ ಶಿಲ್ಪದ ಸುತ್ತಲೂ ಒಂದು ಕ್ರಮದಲ್ಲಿ ಅಪ್ರಧಾನವಾದ ಶಿಲ್ಪಗಳನ್ನು ಕೆತ್ತುವುದರಿಂದ, ಪ್ರಧಾನ ಶಿಲ್ಪದ ಸ್ಥಾನಮಾನ ಮತ್ತು ಆಕೃತಿಯನ್ನು ಹೆಚ್ಚಿಸುವ ತಂತ್ರವನ್ನು ಬಳಸಲಾಯಿತು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಬಾದಾಮಿಯಲ್ಲಿರುವ ತ್ರಿವಿಕ್ರಮ ಶಿಲ್ಪ ಫಲಕ. ಇಲ್ಲಿ ಆಕೃತಿಗಳ ನೂಕುನುಗ್ಗಲಿಲ್ಲದೆ ಮಹಾಬಲಿಪುರ, ಎಲ್ಲೋರ ಮತ್ತು ಎಲಿಫಾಂಟಗಳ ಕಲಾಕಾರರಲ್ಲಿ ಕಂಡುಬರುವ ಬೃಹತ್ ಪ್ರಮಾಣ ಮತ್ತು ಭವ್ಯತೆಗಳನ್ನು ಸಮಪ್ರಮಾಣದಲ್ಲಿ ಸೇರಿಸಲಾಗಿದೆ. ಬಾದಾಮಿಯ ತ್ರಿವಿಕ್ರಮ ಮತ್ತು ಪಟ್ಟದಕಲ್ಲಿನ ಮಹಿಷಾಸುರ ಮರ್ದಿನಿ ಮತ್ತು ಕಾಲಾರಿ ಶಿಲ್ಪಗಳಲ್ಲಿ ಕಂಡುಬರುವ ಪೌರಾಣಿಕ ವಸ್ತು ಅಥವಾ ವಿಷಯಾತೀತ ಸತ್ಯಕ್ಕಿಂತ ಹೆಚ್ಚಾಗಿ, ಇಲ್ಲಿ ಹೆಚ್ಚಿನ ಉದ್ವೇಗ, ಹೊರಹೊಮ್ಮುವ ಶಕ್ತಿ ಮತ್ತು ಭಾವಪರವಶತೆಗಳು ಕಂಡುಬರುತ್ತವೆ. ಚಲುಕ್ಯ ಶೈಲಿಯಲ್ಲಿ, ವಾಸ್ತುವಿನಂತೆಯೇ ಪ್ರತಿಮಾ ವಿಧಾನದಲ್ಲಿಯೂ ಹಂತಹಂತವಾದ ಒಂದು ವಿಕಾಸವನ್ನು ಕಾಣುತ್ತೇವೆ. ಅಷ್ಟದಿಕ್ಪಾಲರು ನಿರ್ದಿಷ್ಟ ಸ್ಥಾನವಿಲ್ಲದೆ ಕೆತ್ತಲ್ಪಡುತ್ತಿದ್ದುದು ಪ್ರತಿಮಾವಿಧಾನದಲ್ಲಿ ವಿಕಾಸದ ಹಂತಗಳನ್ನು ಅಳೆಯಲು ನೆರವಾಗುತ್ತದೆ. ಇದುವರೆಗೂ ಅಸಮರ್ಪಕವಾಗಿ ರಚಿತವಾಗುತ್ತಿದ್ದ ಕೆಲವು ದೇವತಾ ಪ್ರತಿಮೆಗಳಿಗೆ ಒಂದು ಸೌಂದರ್ಯಯುಕ್ತ ಸ್ವರೂಪವನ್ನು ಚಲುಕ್ಯ ಶಿಲ್ಪಿಗಳು ಕೊಟ್ಟರು. ಗುಪ್ತಶೈಲಿಯಲ್ಲಿ ಗೋವರ್ಧನಧಾರಿ ಕೃಷ್ಣನು ಸ್ಕಂದನಂತೆ ಕೆತ್ತಲ್ಪಟ್ಟಿದ್ದರೆ, ಚಲುಕ್ಯ ಕಲೆಯಲ್ಲಿ ಅವನನ್ನು ಮಾನವರೂಪಕ್ಕೆ ಹೋಲುವಂತೆ ರಚಿಸಿ ಆಭರಣಗಳು, ಜತೆಗೆ ಹಸುಕರುಗಳನ್ನು ರೂಪಿಸಲಾಯಿತು.

ದೇವಾಲಯಗಳ ನಮೂನೆಗೆ ಹೊಂದಿಕೊಳ್ಳುವಂತೆ ಮತ್ತು ಸ್ಥಳೀಯ ಧಾರ್ಮಿಕ ಅಗತ್ಯಗಳಿಗೆ ಬೇಕಾದಂತೆ, ಚಲುಕ್ಯ ಶೈಲಿಯ ವಿವಿಧ ಹಂತಗಳ ಪ್ರತಿಮಾ ವಿಧಾನದಲ್ಲಿ ಹೊಸ ಹೊಸ ರೀತಿಗಳನ್ನು ಕಲ್ಪಿಸಲಾಯಿತು. ಒಂದು ಉದಾಹರಣೆಯನ್ನು ಗಮನಿಸುವುದಾದರೆ, ಐಹೊಳೆಯ ದುರ್ಗ ದೇವಾಲಯದ ಮೊದಲನೇಯ ಹಂತದ ನರಸಿಂಹನ ಶಿಲ್ಪ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಕೊರೆಯಲಾಗುವ ಸಮಯಕ್ಕೆ ಸಾಕಷ್ಟು ಬದಲಾವಣೆಗಳನ್ನು ಹೊಂದಿತೆಂದು ತಿಳಿಯುತ್ತದೆ. ಇದೇ ರೀತಿಯಲ್ಲಿ, ಮಹಿಷಾಸುರ ಮರ್ದಿನಿ ಶಿಲ್ಪದಲ್ಲಿ ಮಹಿಷನು ಕಾಲಕ್ರಮದಲ್ಲಿ ಅರ್ಧಮಾನುಷ ರೂಪವನ್ನು ಪಡೆದನು. ಕೊನೆಗೆ ಈ ಲಕ್ಷಣಗಳೆಲ್ಲವೂ ಆಗಮಗಳಲ್ಲಿ ಕ್ರೋಢೀಕೃತವಾದವು. ಪರಮಭಾಗವತರೇ ಆದ ಚಲುಕ್ಯ ದೊರೆಗಳು ನೀಡಿದ ಮತ್ತೊಂದು ಕೊಡುಗೆಯೆಂದರೆ, ಇದುವರೆಗೂ ಶಿಲ್ಪದಲ್ಲಿ ರೂಪಿತವಾಗದೇ ಇದ್ದ ಭಾಗವತ ಪುರಾಣದ ಅನೇಕ ಕಥೆಗಳಿಗೆ ಶಿಲ್ಪರೂಪವನ್ನು ಕಲ್ಪಿಸಿಕೊಟ್ಟದ್ದು. ಉದಾಹರಣೆಗೆ, ಶೈವರಿಗೂ ಮತ್ತು ವೈಷ್ಣವರಿಗೂ ಹಿತವಾದ ಕೃಷ್ಣಲೀಲೆಗಳನ್ನು ಶಿಲ್ಪ ಫಲಕಗಳಲ್ಲಿ ಕಥಾರೂಪದಲ್ಲಿ ಅಳವಡಿಸಿದ್ದನ್ನು ಗಮನಿಸಬಹುದು. ಇದಕ್ಕೆ ಉತ್ತಮ ನಿದರ್ಶನವೆಂದರೆ, ಬಾದಾಮಿಯ ಮೂರನೇಯ ಗುಹೆ, ಮೇಲಿನ ಶಿವಾಲಯ ಮತ್ತು ಮಾಲೆಗಿತ್ತಿ ಶಿವಾಲಯದ ಶಿಲ್ಪಫಲಕಗಳು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಶಿವನು ಪದೇ ಪದೇ, ಕಾಲಾರಿ, ತ್ರಿಪುರ ಸಂಹಾರ ಮತ್ತು ಅಂಧಕಾಸುರ ಮರ್ದನನಾಗಿ ಸಂಹಾರಮೂರ್ತಿಯ ರೂಪದಲ್ಲಿ ರೂಪಿತನಾದರೂ, ಬಹಳ ವಿರಳವಾಗಿ ಅನುಗ್ರಹ ಮೂರ್ತಿಯ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಇಷ್ಟೇ ಅಲ್ಲದೆ, ನಟರಾಜನೂ ಸೇರಿದಂತೆ, ಅನೇಕ ಪ್ರತಿಮಾ ಲಕ್ಷಣಗಳು ಚಲುಕ್ಯರ ಕಾಲದಲ್ಲಿ ಹೊರಹೊಮ್ಮಿದವು. ಚಲುಕ್ಯ ರಾಜರು ಎಲ್ಲ ಧರ್ಮಗಳಿಗೂ ಒಂದೇ ಛತ್ರದ ಅಡಿಯಲ್ಲಿ ರಾಜಾಶ್ರಯವನ್ನು ಕೊಟ್ಟು, ಹೊಸದಾಗಿ ಸ್ಥಾಪಿತವಾದ ಸಾಮ್ರಾಜ್ಯಕ್ಕೆ ಆಸರೆಯನ್ನು ಬಯಸಿದರು. ಇದರಿಂದಲೇ ಮಹಾಕೂಟದಲ್ಲಿ ಲಕುಲೀಶ, ಐಹೊಳೆ ಮತ್ತು ಪಟ್ಟದಕಲ್ಲುಗಳಲ್ಲಿ ಮಾತೃಕೆಯರ ಆರಾಧನೆಯನ್ನು ಕಾಣುತ್ತೇವೆ. ಐಹೊಳೆ ಶಿಲ್ಪ ಸಂಗ್ರಹಾಲಯದಲ್ಲಿರುವ ಕೆಲವು ಸಪ್ತಮಾತೃಕೆಯರ ಶಿಲ್ಪಗಳು ಬೃಹತ್ ಪ್ರಮಾಣದವುಗಳು.

ಚಲುಕ್ಯ ಶಿಲ್ಪಕಲೆಯಲ್ಲಿ ಗಣಗಳಿಗೆ ವಿಶೇಷವಾದ ಸ್ಥಾನವಿದೆ. ಬಾದಾಮಿಯ ಒಂದನೇಯ ಗುಹಾಲಯದಲ್ಲಿರುವ ಮಹಿಷಾಸುರ ಮರ್ದಿನಿ ಶಿಲ್ಪ ಫಲಕದಲ್ಲಿ ಕಾಣಬರುವಂತೆ, ಈ ಗಣಗಳ ವಿನೋದಕರ ಕೆಲಸಗಳು ಮತ್ತು ಅವುಗಳ ಅಸ್ತಿತ್ವವೇ, ಉದ್ವೇಗಪೂರಿತ ಶಿಲ್ಪಗಳಲ್ಲಿ ಒಂದು ರೀತಿಯ ವಿನೋದವನ್ನು ಒದಗಿಸುತ್ತವೆ. ಆರಾಧಕರ ಮೆರವಣಿಗೆಯೇ ಮುಂತಾದ ಶಿಲ್ಪ ಫಲಕಗಳಲ್ಲಿ ಈ ಕುಬ್ಜರು ದೃಶ್ಯದ ಸ್ವಾರಸ್ಯವನ್ನು ಹೆಚ್ಚಿಸುತ್ತಾರೆ. ಚಲುಕ್ಯರು ಲೌಕಿಕ ಕಲೆಗೆ ಕೊಡುಗೆಯನ್ನು ಹಿತವಾದ ಶೃಂಗಾರ ಶಿಲ್ಪಗಳಲ್ಲಿ ನೋಡಬಹುದು. ಕಾಮಶಾಸ್ತ್ರೀಯ ಭಂಗಿಯ ಶಿಲ್ಪಗಳನ್ನು ಮೊಟ್ಟಮೊದಲ ಬಾರಿಗೆ ಶಿಲ್ಪದಲ್ಲಿ ಅಳವಡಿಸಿದ ಕೀರ್ತಿ ಚಲುಕ್ಯ ಶಿಲ್ಪಿಗಳಿಗೆ ಸೇರುತ್ತದೆ. ಮಿಥುನವು ಮಂಗಳ ಚಿಹ್ನೆಯಾಗಿ ಕಂಬ, ಹೊಸಿಲು ಮತ್ತು ಚಾಚುಪೀಠಗಳಲ್ಲಿ ಕಾಣಿಸಿಕೊಳ್ಳುತ್ತದೆ. ಬಾದಾಮಿಯ ಮೂರನೇಯ ಗುಹಾಲಯದ ಚಾಚುಪೀಠದ ಮೇಲಿನ ಮಿಥುನಗಳು ಉಲ್ಲಾಸದಿಂದ ಕೂಡಿದ್ದು, ನೋಟಕ್ಕೆ ಮನೋಹರವಾಗಿವೆ. ಆದರೆ ಇವುಗಳನ್ನು ಚಲುಕ್ಯ ಶಿಲ್ಪಿಯು ಹೆಚ್ಚಿನ ಆಭರಣಗಳಿಂದ ಅಲಂಕರಿಸಿಲ್ಲ. ಮೇಘದೂತ ಮತ್ತು ವಿಕ್ರಮೋರ್ವಶೀಯ ಗ್ರಂಥಗಳಲ್ಲಿ ಕಾಳಿದಾಸನು ವರ್ಣಿಸಿರುವ ಕೆಲವು ದೃಶ್ಯಗಳು ಈ ಚಲುಕ್ಯ ಶಿಲ್ಪದ ಮಿಥುನಗಳಿಗೆ ಪ್ರೇರಣೆಯನ್ನು ಒದಗಿಸಿದೆಯೆಂದು ನಂಬಲಾಗಿದೆ. ಗುಪ್ತಶಿಲ್ಪ ಶೈಲಿಯ ಸಂಕೇತಗಳಾದ ಪೂರ್ಣಘಟ, ಚೈತ್ಯಗವಾಕ್ಷ, ಹಾರವನ್ನು ಹೊರುವವರು ಮತ್ತು ಮುತ್ತಿನ ಹಾರಗಳನ್ನು ಚಲುಕ್ಯ ಶಿಲ್ಪಿಗಳು ಕಂಬಗಳು ಮತ್ತು ಬೋದಿಗೆಯ ಮೇಲೆ ವಿವೇಚನೆಯಿಂದ ಕೆತ್ತಿದ್ದಾರೆ.

## ಕಲ್ಯಾಣಿ ಚಾಳುಕ್ಯ ಮತ್ತು ಹೊಯ್ಸಳ ಕಲೆ

ನಾಜೂಕಾಗಿ ಕೆತ್ತಲಾದ ಸಣ್ಣಪ್ರಮಾಣದ ದೇವದೇವತೆಗಳ ಸುಂದರ ವಿಗ್ರಹಗಳಿಂದ ದೇವಾಲಯಗಳನ್ನು ಅಲಂಕರಿಸುವುದರಲ್ಲಿ ಕಲ್ಯಾಣದ ಚಾಳುಕ್ಯರು ಆಸಕ್ತಿ ವಹಿಸಿದರು. ಈ ವಿಗ್ರಹಗಳನ್ನು ವಿಶೇಷವಾಗಿ ದೇವಾಲಯದ ಗೋಡೆಗಳ ಮೇಲ್ಭಾಗದಲ್ಲಿ ಮತ್ತು ಶಿಖರದ ವಿವಿಧ ಸ್ತರಗಳಲ್ಲಿ ಅಳವಡಿಸಿದರು. ದೊಡ್ಡ ಶಿಲ್ಪಗಳನ್ನು ನಾಗರ ಮತ್ತು ದ್ರಾವಿಡ ಶೈಲಿಗೆ ಸೇರಿದುವೆನ್ನಲಾದ ವಾಸ್ತುವಿನ್ಯಾಸಗಳನ್ನೊಳಗೊಂಡ, ಉಬ್ಬುಗಂಬಗಳ ದೇವಕೋಷ್ಠಗಳಲ್ಲಿ ಅಳವಡಿಸಿದರು. ವೈದಿಕ ಮತ್ತು ಜೈನ ದೇವಾಲಯಗಳಲ್ಲಿ ಶಿಲ್ಪಗಳ ಅಲಂಕಾರದಲ್ಲಿ ವಿವೇಚನೆ ಕಂಡುಬರುತ್ತದೆ; ಉಡುಗೆಯು ಬಹಳ ನವಿರಾಗಿರುತ್ತದೆ. ಲಕ್ಕುಂಡಿಯಲ್ಲಿರುವ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಸಂಗ್ರಹಾಲಯದಲ್ಲಿ, ನಾಜೂಕಾದ ಮತ್ತು ಸುಂದರವಾದ ಶಿಲ್ಪಗಳ ಉತ್ತಮ ಉದಾಹರಣೆಗಳಿವೆ. ಇದರಲ್ಲಿ ವಿಶೇಷವಾಗಿ ಉಲ್ಲೇಖನೀಯವಾದುವು ಕುಬೇರ, ಚಾಮರಧಾರಿ ಪುರುಷರು, ಸರಸ್ವತಿ ಮತ್ತು ಗಣೇಶ ; ಬಾಗಳಿಯ ಮಹಿಷಾಸುರಮರ್ದಿನಿ ಮತ್ತು ಸರಸ್ವತಿ, ಕುರುವತ್ತಿಯ ಸಾಲಭಂಜಿಕೆಗಳು, ಹಾವೇರಿಯ ದೇವಾಲಯಗಳ ಭುವನೇಶ್ವರಿಯ ಶಿಲ್ಪಗಳು, ಬೆಳ್ಳಾವಿ ಮತ್ತು ಲಕ್ಷ್ಮೇಶ್ವರದ ದೇವಾಲಯಗಳ ಶಿಖರದಲ್ಲಿರುವ ಸಣ್ಣ ಪ್ರಮಾಣದ ದೇವತೆಗಳ ಶಿಲ್ಪಗಳು—ಇವೆಲ್ಲವೂ ಕಲ್ಯಾಣದ ಚಾಳುಕ್ಯ ಶಿಲ್ಪಕಲೆಯ ಶ್ರೀಮಂತಿಕೆಯನ್ನು ಎತ್ತಿ ತೋರಿಸುತ್ತವೆ.

ಭಾರತದಲ್ಲಿ ದೇವಾಲಯವು ಮಾನವನ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ನಿರ್ದೇಶಿಸುವ ಆಧ್ಯಾತ್ಮಿಕ

ಕೇಂದ್ರವೆಂದು ಭಾವಿಸಲಾಗಿದೆ. ಇಲ್ಲಿ ಮಾನವನು ಎಲ್ಲ ಲಲಿತ ಕಲೆಗಳ ಮತ್ತು ಜೀವನ ಕಲೆಯ ಅಭ್ಯಾಸ ಮಾಡುತ್ತಾನೆ. ಅದು ಅವನ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುವ ವಿದ್ಯಾ ಕೇಂದ್ರವೂ ಹೌದು. ದೈವ ಸಾಕ್ಷಾತ್ಕಾರಕ್ಕೆ ಮುಂಚೆ ಮಾನವನು ಪ್ರಾಪಂಚಿಕ ಕಾಮನೆಗಳಿಂದ ನಿವೃತ್ತನಾಗಿ, ಅಹಂಕಾರವನ್ನು ತ್ಯಜಿಸಬೇಕು. ಆದುದರಿಂದ ಮಹಾ ಕಾವ್ಯಗಳು ಮತ್ತು ಪುರಾಣಗಳ ಕಥೆಗಳನ್ನು ದೇವಾಲಯದ ಗೋಡೆಗಳ ಮೇಲೆ ಶಿಲ್ಪರೂಪದಲ್ಲಿ ತೋರಿಸಿ, ಮಾನವನು ಸಾಧಿಸಬೇಕಾದ ಗುರಿ ಮತ್ತು ಆತ್ಮಸಾಕ್ಷಾತ್ಕಾರದ ಮಾರ್ಗಗಳನ್ನು ಶಿಲ್ಪಿಯು ನೆನಪಿಗೆ ತರುತ್ತಾನೆ. ಹೊಯ್ಸಳ ದೇವಾಲಯವು ನಿಜವಾಗಿಯೂ ಒಂದು ಆಭರಣದ ಕರಂಡಕದಂತಿದೆ; ಇಲ್ಲಿ ದೇವಾಲಯದ ಎಲ್ಲ ಭಾಗಗಳೂ, ಸಸ್ಯ ಮತ್ತು ಪ್ರಾಣಿವರ್ಗಗಳಿಂದ, ಸುಂದರ ಸ್ತ್ರೀಯರಿಂದ ಮತ್ತು ಕರುಣಾಳುತನವನ್ನು ತೋರಿಸುವ ದೇವರ ಶಿಲ್ಪಗಳಿಂದ ಉಚ್ಚಮಟ್ಟದಲ್ಲಿ ಅಲಂಕೃತವಾಗಿವೆ. ಬೇಲೂರಿನ ಚೆನ್ನಕೇಶವ ದೇವಾಲಯವನ್ನು ಹೊಯ್ಸಳ ಕಲೆಯ ಉತ್ತಮ ಉದಾಹರಣೆಯನ್ನಾಗಿ ಪರಿಗಣಿಸಬಹುದು. ಇಲ್ಲಿ ದೇವಾಲಯದ ಪ್ರವೇಶದಲ್ಲಿ ಕಾಮ ಮತ್ತು ರತಿಯರ ಶಿಲ್ಪಗಳನ್ನು ಕೆತ್ತಿದ್ದು, ಇದು ಭಕ್ತನು ಇನ್ನೂ ಇಹಲೋಕದ ಆಸೆ ಮತ್ತು ಮನೋವಿಕಾರಗಳಲ್ಲಿಯೇ ನಿರತನಾಗಿರುವುದನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಕತ್ತೆತ್ತಿ ಬಾಗಿಲುವಾಡವನ್ನು ನೋಡಿದರೆ ಕಾಲ್ಪನಿಕ ಮಕರ ಮತ್ತು ವಿಷ್ಣುವಿನ ದಶಾವತಾರಗಳನ್ನು ಸೂಕ್ಷ್ಮವಾಗಿ ಕೆತ್ತಿದ ಸುಂದರವಾದ ಸುರುಳಿಯಲಂಕಾರದ ಕೆತ್ತನೆಗಳು ಕಾಣಬರುತ್ತವೆ.

ಅಲಂಕರಿಸಲ್ಪಟ್ಟ ಅಧಿಷ್ಠಾನದ ಮೇಲ್ಭಾಗವನ್ನು ಪಟ್ಟಿಕೆಗಳಾಗಿ ವಿಂಗಡಿಸಿ ಅವುಗಳಲ್ಲಿ ಆನೆಗಳು, ಸುರುಳಿಯ ಅಲಂಕಾರ, ನೃತ್ಯದ ದೃಶ್ಯಗಳು, ಸಂಗೀತಗಾರರು, ಬಳ್ಳಿಮಾಡಗಳ ಕೆಳಗಿರುವ ಸ್ತ್ರೀಯರ ಸಮೂಹ, ಮುಂತಾದುವನ್ನು ಕೆತ್ತಲಾಗಿರುತ್ತದೆ. ಅಲಂಕಾರವನ್ನು ಮಾಡಿಕೊಳ್ಳುತ್ತಿರುವ ಕೆಲವು ಸ್ತ್ರೀಯರ ಶಿಲ್ಪಗಳು, ಅವುಗಳಲ್ಲಿ ಮೂಡಿಸಿರುವ ವಿವರಣೆಗಳಿಗಾಗಿ ಮತ್ತು ಕೆತ್ತನೆಯ ಸೂಕ್ಷ್ಮತೆಗಾಗಿ ನಮ್ಮ ಮೆಚ್ಚುಗೆಯನ್ನು ಗಳಿಸುತ್ತವೆ. ಅವುಗಳು ಲಲಿತ ಪ್ರಮಾಣಗಳಿವೆ. ಇವುಗಳ ಮೇಲ್ಭಾಗದಲ್ಲಿ ಜಾಲಂಧ್ರಗಳೂ, ಕಂಬ ಚಾಚುಪೀಠಗಳ ಮೇಲೆ ಮದನಿಕೆ ಎಂದು ಸ್ಥಳೀಯವಾಗಿ ಪ್ರಸಿದ್ಧವಾಗಿರುವ ಶಿಲ್ಪಗಳು ಚಿತ್ತಾಕರ್ಷಕ ಭಂಗಿಯಲ್ಲಿ ನಿಂತಿವೆ. ಇವರು ಧರಿಸಿರುವ ಆಭರಣಗಳ ನಡುವಿಂದ ಅವರ ದಷ್ಟಪುಷ್ಟ ಅಂಗಾಂಗಗಳು ಉಕ್ಕಿ ಹರಿಯುವಂತಿವೆ. ನರ್ತಕಿಯರಾಗಿ, ಬೇಟೆಗಾರ್ತಿಯರಾಗಿ ಅಥವಾ ಸಂಗೀತಗಾರ್ತಿಯರಾಗಿ ಈ ಶಿಲ್ಪಗಳು ವೈವಿಧ್ಯಮಯ ರಸಗಳನ್ನು ಸೂಚಿಸುತ್ತವೆ. ಶ್ರೇಷ್ಠತಮ ದೇವಿಯ ದೂತರಾದ ಈ ದೇವಕನ್ನಿಕೆಯರು, ಅವ್ಯಾಹತವಾಗಿ ಸೂಚಿಸುವ ರಸಗಳು ಮಾನವನ ಪ್ರಜ್ಞೆಯ ಸಂಕೇತಗಳಾಗಿ, ಕೊನೆಗೆ ಅವನು ಆನಂದದತ್ತ ಸಾಗಬೇಕೆನ್ನುವುದನ್ನು ಸೂಚಿಸುತ್ತವೆ. ಈ ಮದನಿಕಾ ವಿಗ್ರಹಗಳು ಹೊಯ್ಸಳ ಶಿಲ್ಪಿಗಳ ಮಹಾ ಕೃತಿಗಳೆನಿಸಿ, ಆಕೃತಿಯ ಸುಕುಮಾರತೆ, ಸಾಮಂಜಸ್ಯ ಮತ್ತು ಚಿರಮೌಲ್ಯಗಳ ಮೇಳದಿಂದ ಖ್ಯಾತಿಗಳಿಸಿವೆ. ಈ ಶಿಲ್ಪಗಳು ಕಾಳಿದಾಸ, ಪಂಪ ಮುಂತಾದ ಕವಿಗಳಿಂದ ಪ್ರೇರಣೆ ಹೊಂದಿದ ಕಲಾಕಾರರಿಂದ ನಿರ್ಮಾಣಗೊಂಡಿರಬೇಕೆಂದು, ಅವುಗಳ ಪರಾಮರ್ಶನದಿಂದ ತಿಳಿಯಬರುತ್ತದೆ. ದೇವಾಲಯಗಳಲ್ಲಿ ಕಂಡುಬರುವ ರಾಮಾಯಣ ಮತ್ತು ಮಹಾಭಾರತದ ಶಿಲ್ಪ ಫಲಕಗಳಿಂದ, ಈ ಶಿಲ್ಪಿಗಳಿಗೆ ಆ ಮಹಾ ಕಾವ್ಯ ಮತ್ತು ಪುರಾಣಗಳ ಪರಿಚಯ ಚೆನ್ನಾಗಿದ್ದಿತೆಂದು ತಿಳಿದುಬರುತ್ತದೆ. ಧರ್ಮದ ಮಾರ್ಗದಿಂದ ಸರಿಯಬಾರದೆಂಬ ತತ್ತ್ವವನ್ನು ಯಾತ್ರಿಕರಿಗೆ ಪದೇ ಪದೇ ನೆನಪು ಮಾಡಿಕೊಡುವುದೇ ಈ ಶಿಲ್ಪಗಳ ಮುಖ್ಯ ಉದ್ದೇಶ. ಅಧಿಕಾರ ಮತ್ತು ಹಣಗಳನ್ನು ಅನ್ಯಾಯದಿಂದ ಸಂಪಾದಿಸಿ ದುರುಪಯೋಗ ಮಾಡುವುದರ ವಿರುದ್ಧ ಈ ಕಥನಗಳ ಮೂಲಕ ಭಕ್ತರನ್ನು ಎಚ್ಚರಿಸಲಾಗುತ್ತದೆ.

ಕಲಾಕಾರ, ತತ್ವಶಾಸ್ತ್ರಜ್ಞ ಮತ್ತು ಕವಿ, ಇವರುಗಳಿಗೆ ಮನುಷ್ಯನಿಂದ ಬೇರ್ಪಟ್ಟ ಪ್ರಕೃತಿ ಎಂಬುದಿಲ್ಲ. ಆದುದರಿಂದ ಪ್ರಕೃತಿ, ಮಾನವ ಮತ್ತು ದೇವರುಗಳು, ಅಧಿಷ್ಠಾನದ ಪಟ್ಟಿಕೆಗಳಲ್ಲಿರಲಿ, ಇಲ್ಲವೇ ರಾವಣನು ಕೈಲಾಸವನ್ನು ಅಲುಗಿಸುತ್ತಿರುವ ಶಿಲ್ಪದಲ್ಲೇ ಆಗಲೀ, ಅವೆಲ್ಲವೂ ಅವಿಚ್ಛಿನ್ನತೆಯ ಭಾಗಗಳು ಎಂಬುದನ್ನು ಹೊಯ್ಸಳ ಶಿಲ್ಪಿಯು, ಎತ್ತಿ ತೋರಿಸಿಕೊಟ್ಟಿದ್ದಾನೆ. ಗಜಾಸುರ ಮರ್ದನ, ನರಸಿಂಹ ಮುಂತಾದ ಸಂಹಾರ ಮೂರ್ತಿಗಳನ್ನು ಪದೇ ಪದೇ ಮೂಡಿಸುವಾಗ, ದುಷ್ಟ ಶಿಕ್ಷಣವನ್ನೇ ಅತೀಂದ್ರಿಯ ಮಟ್ಟದಲ್ಲಿ ಶಿಲ್ಪಿಯು ತೋರಿಸುತ್ತಿದ್ದನೇ ಹೊರತು ದೇವರ ಕೋಪವನ್ನಲ್ಲ. ಇದರಿಂದಲೇ ಹೊಯ್ಸಳ ಶಿಲ್ಪದಲ್ಲಿ ಕೆಲವು ಸಂಹಾರ ಮೂರ್ತಿಗಳು ಸೌಮ್ಯವಾಗಿ ಕಂಡುಬರುವುವು. ಅತಿಸೂಕ್ಷ್ಮವಾದ ವಿವರಗಳನ್ನು ಕೆತ್ತುವುದರಲ್ಲಿ ಹೊಯ್ಸಳ ಶಿಲ್ಪಿಯನ್ನು ಮೀರಿಸಬಲ್ಲವರು ಯಾರೂ ಇಲ್ಲ. ಹಜಾರದ ಒಳಗಿರುವ ನರಸಿಂಹ ಮತ್ತು ಮೋಹಿನಿ ಸ್ತಂಭಗಳು ಮತ್ತು ಹೊರಗಿರುವ ಮುಂಚಾಚು ಪೀಠದ ಶಿಲ್ಪಗಳೇ ಇದಕ್ಕೆ ಸಾಕ್ಷಿ. ಪರಿಚಾರಿಕೆಯೊಬ್ಬಳು ತನ್ನ ಒಡತಿಯ ಕಾಲಿನಿಂದ ಮುಳ್ಳನ್ನು ತೆಗೆಯುತ್ತಿರುವಂತೆ ಶಿಲ್ಪಿಸಿರುವ ಶಿಲಾಬಾಲಿಕಾ ವಿಗ್ರಹವು ಕಲಾಕಾರನು ಎಷ್ಟೊಂದು ಜಾಗರೂಕತೆಯಿಂದ ವಿವರಗಳನ್ನು ಕೆತ್ತಿದ್ದಾನೆ ಎಂಬುದಕ್ಕೆ ಉತ್ತಮ ಉದಾಹರಣೆ, ಮುಳ್ಳನ್ನು ತೆಗೆಯಲು ಉಪಯೋಗಿಸುತ್ತಿರುವ ಸೂಜಿಯನ್ನೂ ಇಲ್ಲಿ ಕೆತ್ತಲಾಗಿದೆ. ಕಪಿಯು ಯುವತಿಯೊಬ್ಬಳ ಸೀರೆಯನ್ನು ಎಳೆಯುತ್ತಿರುವ ಶಿಲಾಬಾಲಿಕೆಯ ಶಿಲ್ಪದಲ್ಲಿ ಹೊಯ್ಸಳ ಶಿಲ್ಪಿಯ ವಿನೋದಪ್ರಿಯತೆಯನ್ನು ಕಾಣಬಹುದು. ಅರೆನಗ್ನಳಾಗಿ ಮಾಡಲ್ಪಟ್ಟ ಆಕೆಯು ಆ ಕಪಿಯನ್ನು ಓಡಿಸಲು ಪ್ರಯತ್ನಿಸಿದರೂ, ಅದು ಸರಿಯುವುದಿಲ್ಲ. ನಗ್ನಸ್ತ್ರೀಯ ಶರೀರ ಸೌಂದರ್ಯ

ವನ್ನು ಶಿಲ್ಪದಲ್ಲಿ ತೋರಿಸುವುದಕ್ಕೆ ಕಪಿಯು ಒಂದು ನಿಮಿತ್ತ ಮಾತ್ರ.

## ವಿಜಯನಗರ ಶೈಲಿ

ಗಟ್ಟಿಯಾದ ಕಗ್ಗಲ್ಲನ್ನು ವಿಜಯನಗರ ಕಲೆಯಲ್ಲಿ ಉಪಯೋಗಿಸಿದುದರಿಂದ, ಸೂಕ್ಷ್ಮವಾದ ಕೆತ್ತನೆಗಳಿಗೆ ಅವಕಾಶವಿಲ್ಲವಾಯಿತು. ಆದರೆ ಈ ಶೈಲಿಯ ಉಬ್ಬು ತಗ್ಗಿನ ಶಿಲ್ಪಗಳು ಹೆಚ್ಚಿನ ಚೈತನ್ಯ ಮತ್ತು ಚಲನೆಯನ್ನು ತೋರ್ಪಡಿಸುತ್ತವೆ. ಏಕಶಿಲಾ ಶಿಲ್ಪಗಳಾದ ಲಕ್ಷ್ಮೀನರಸಿಂಹ ಮತ್ತು ಗಣೇಶ (ಸಾಸಿವೆ ಕಾಳು ಮತ್ತು ಕಡಲೆ ಕಾಳು) ಮುಂತಾದವು ಭಾರಿ ಪ್ರಮಾಣದವುಗಳಾಗಿದ್ದು (ಏಳು-ಎಂಟು ಮೀಟರ್ ಎತ್ತರ) ಅವುಗಳ ಗಾತ್ರವೇ ವಿಜಯನಗರ ಸಾಮ್ರಾಜ್ಯವು ಮಹಾಸಾಮ್ರಾಜ್ಯವೆಂದು ಜನಗಳಿಗೆ ತಿಳಿಯಪಡಿಸುವ ಆಸೆಯನ್ನು ವ್ಯಕ್ತಪಡಿಸುತ್ತವೆ. ಈ ಸಾಮ್ರಾಜ್ಯದ ಶಕ್ತಿಯನ್ನು ಶಿಲ್ಪಕಲೆಯಲ್ಲಿ ತೋರಿಸಲಾದ ಸೈನಿಕರ ಪ್ರದರ್ಶನವು ಸಾಂಕೇತಿಕವಾಗಿ ಸೂಚಿಸುತ್ತದೆ. ವಿಜಯನಗರ ರಾಜರು ಜನಪದ ಕುಣಿತ, ಬಣ್ಣವನ್ನು ಎರಚುವ ಹೋಳಿಯೇ ಮೊದಲಾದ ಜನಪದ ಹಬ್ಬಗಳು ಮುಂತಾದ ಜನಪದ ಕಲೆಗಳನ್ನು ಪೋಷಿಸುವಲ್ಲಿ ಹೆಚ್ಚಿನ ಆದರ ತೋರಿದರು. ಹಜಾರ ರಾಮ ದೇವಾಲಯವೂ ಸೇರಿದಂತೆ ಅನೇಕ ದೇವಾಲಯಗಳಲ್ಲಿ, ಮಹಾಕಾವ್ಯಗಳ ದೃಶ್ಯಗಳು ಪದೇ ಪದೇ ಮೂಡಿಸಲ್ಪಟ್ಟಿವೆ. ವಿಜಯನಗರ ಶಿಲ್ಪಿಯು ಪ್ರಾಣಿಜೀವನವನ್ನು ಚಿತ್ರಿಸುವಲ್ಲಿ ವಿಶೇಷ ಆಸಕ್ತಿ ತೋರಿಸಿದನು. ಹಂಪಿ, ಶ್ರೀರಂಗ ಮತ್ತು ವೆಲ್ಲೂರುಗಳ ದೇವಾಲಯಗಳ ಸಂಕೀರ್ಣ ಸ್ತಂಭಗಳಲ್ಲಿ ನಿಜವಾದ ಮತ್ತು ಕಾಲ್ಪನಿಕ ಪ್ರಾಣಿಗಳ ಶಿಲ್ಪಗಳಿವೆ.

## ಆಧುನಿಕ ಕಾಲದಲ್ಲಿ ಶಿಲ್ಪ

ದೇವಾಲಯ ನಿರ್ಮಾಣದ ಸಮೃದ್ಧ ಸಂಪ್ರದಾಯ ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪ ಮತ್ತು ಚಿತ್ರಕಲೆಗಳು ಅಭಿವೃದ್ಧಿಯಾಗುವುದಕ್ಕೆ ಅನುಕೂಲವಾಯಿತು. ಈ ಎರಡು ಕಲೆಗಳೂ ಪ್ರಾಚೀನ ಭಾರತದಲ್ಲಿ ವಾಸ್ತುವಿನ ಭಾಗವೆಂದೇ ಪರಿಗಣಿತವಾಗಿತ್ತು. ಮಾನಸೋಲ್ಲಾಸವು ಈ ಎರಡು ಕಲೆಗಳನ್ನೂ ವಾಸ್ತುವಿನ ನಂತರವೇ ವಿವರೀಕರಿಸುತ್ತದೆ. ಇಂದಿಗೂ ಈ ಶಿಲ್ಪ ಕಲಾ ಸಂಪ್ರದಾಯ ಕರ್ನಾಟಕದಲ್ಲಿ ಮುಂದುವರಿಯುತ್ತಾ ಬಂದಿದೆ. ಮರದಲ್ಲಿ (ವಿಶೇಷವಾಗಿ ಗಂಧದ ಮರ) ಮತ್ತು ದಂತದಲ್ಲಿ ಕುಸುರಿ ಕೆಲಸ ಮಾಡುವ ಮಲೆನಾಡಿನ ಗುಡಿಗಾರರು, ಆಟದ ಸಾಮಾನುಗಳು ಮತ್ತು ಈ ತರಹದ ವಸ್ತುಗಳನ್ನು ತಯಾರಿಸುವ ಚಿತ್ರಗಾರರುಗಳ ಜೊತೆಗೆ ಕಂಚು ಮತ್ತು ಕಲ್ಲಿನಲ್ಲಿ ಕೆಲಸ ಮಾಡುವ ವಿಶ್ವಕರ್ಮರೂ ಇದ್ದಾರೆ (ನೋಡಿ ಭಾಗ II ಪುಟ 87 ರಿಂದ). ನಾಗಮಂಗಲ ಮತ್ತು ಶಿವಾರಪಟ್ಟಣಗಳಲ್ಲಿರುವ ಸಾಂಪ್ರದಾಯಿಕ ಶಿಲ್ಪಿಗಳು ಸಾಂಪ್ರದಾಯಿಕ ರೀತಿಯಲ್ಲಿ ದೇವದೇವತೆಗಳ ಶಿಲ್ಪಗಳನ್ನು ತಯಾರಿಸಿದರೆ ಮತ್ತೆ ಕೆಲವು ಶಿಲ್ಪಿಗಳು ಲೌಕಿಕ ಅಭಿರುಚಿಗೆ ತಕ್ಕಂತೆ ತಮ್ಮ ಕಲೆಯನ್ನು ಅಳವಡಿಸಿಕೊಂಡಿದ್ದಾರೆ. ಮೈಸೂರಿನ ಸಿದ್ಧಲಿಂಗಸ್ವಾಮಿ ಮತ್ತು ಅವರ ಮಗ ನಾಗೇಂದ್ರ ಸ್ಥಪತಿ ಮುಂತಾದ ಗಮನಾರ್ಹ ಶಿಲ್ಪಿಗಳು ಧಾರ್ಮಿಕ ಹಾಗೂ ಲೌಕಿಕ ಶಿಲ್ಪರಚನೆಯಲ್ಲಿ ಹೆಸರು ಗಳಿಸಿದ್ದಾರೆ. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯು ಅನೇಕರಿಗೆ ಶಿಕ್ಷಣ ಸ್ಥಾನವಾಗಿದೆ. ಆಧುನಿಕ ಕರ್ನಾಟಕದ ಖ್ಯಾತ ಶಿಲ್ಪಿಗಳೆಂದೂ ಹೆಸರುವಾಸಿಯಾಗಿರುವ ಕೆ. ವೆಂಕಟಪ್ಪ ಮತ್ತು ಆರ್. ಎಸ್. ನಾಯ್ಡು ಅವರು ಚಿತ್ರಕಾರರೆಂದೂ ಹೆಸರು ಗಳಿಸಿದ್ದಾರೆ. ವೆಂಕಟಪ್ಪನವರಿಂದ ರಚಿತವಾದ ಪ್ಲ್ಯಾಸ್ಟರ್ ಆಫ್ ಪ್ಯಾರಿಸ್‌ನ ವಿಶಿಷ್ಟ ಶಿಲ್ಪಗಳು ಬೆಂಗಳೂರು ಮ್ಯೂಸಿಯಮ್ಮಿನ ಅವರ ಹೆಸರಿನಲ್ಲೇ ನಿರ್ಮಿತವಾದ ಕಲಾ ಸಂಗ್ರಹಾಲಯದಲ್ಲಿ ರಕ್ಷಿಸಲ್ಪಟ್ಟಿವೆ. ದೇವನಹಳ್ಳಿಯ ಹನುಮಂತಾಚಾರ್ ಅವರು ತರುಣ ಶಿಲ್ಪಿಗಳಿಗೆ ಶಿಕ್ಷಣ ಕೊಡಲು ಸಂಸ್ಥೆಯೊಂದನ್ನು ನಡೆಸುತ್ತಿದ್ದಾರೆ. ಬೆಂಗಳೂರಿನ ಡಿ. ವಾದಿರಾಜ್ ಅವರು ಸಾಂಪ್ರದಾಯಿಕ ಶೈಲಿಯನ್ನೇ ಅನುಸರಿಸಿ ಮರ, ಕಂಚು ಮತ್ತು ಕಲ್ಲುಗಳಲ್ಲಿ ಕಲಾ ಕೆಲಸವನ್ನು ಸುಲಭವಾಗಿ ಮಾಡಬಲ್ಲವರಾಗಿದ್ದಾರೆ. ಕಾರ್ಕಳದ ರಂಜಾಳ ಗೋಪಾಲ ಶೆಣೈ ಅವರು ಧರ್ಮಸ್ಥಳದ (47 ಅಡಿ ಎತ್ತರ) ಗೊಮ್ಮಟನ ಶಿಲ್ಪದಿಂದ ಮತ್ತು ಜಪಾನಿನ ನಾರ ಎಂಬಲ್ಲಿ ಸ್ಥಾಪಿಸುವುದಕ್ಕಾಗಿ ಕೆತ್ತಿರುವ 67 ಅಡಿ ಎತ್ತರವಾದ ಬುದ್ಧನ ಶಿಲ್ಪದಿಂದ ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದ್ದಾರೆ. ಅಪ್ಪುಕುಟ್ಟನ್ ಆಚಾರಿ ದಂತದಲ್ಲಿ ಕುಸುರಿ ಕಲೆಯನ್ನು ರೂಪಿಸುವಲ್ಲಿ ಖ್ಯಾತಿ ಗಳಿಸಿದ್ದಾರೆ. ಇತ್ತೀಚೆಗೆ ಗುಡಿಗಾರರಲ್ಲಿ ಹೆಸರು ಗಳಿಸಿರುವವರಲ್ಲಿ, ಶಾಂತಪ್ಪ ಗುಡಿಗಾರ್, ಸಾಗರದ ಮಂಜುನಾಥಪ್ಪ ಗುಡಿಗಾರ್, ಕುಮಟಾದ ವಿಠಲ ರಾಮಚಂದ್ರ ಗುಡಿಗಾರ್ ಮತ್ತು ವಿಠಲ ಮಂಜುನಾಥ ಗುಡಿಗಾರ್ ಇವರನ್ನು ಹೆಸರಿಸಬೇಕು. ಮೈಸೂರಿನ ಸಿ. ಪರಮೇಶ್ವರಾಚಾರ್, ಗದಗಿನ ಸೋಮನಾಥ ಶಿಲ್ಪಿ, ಧಾರವಾಡದ ನಾಗಲಿಂಗ ಸ್ಥಪತಿ, ನಾಗಮಂಗಲದ ಶ್ರೀನಿವಾಸಾಚಾರ್, ಬೆಂಗಳೂರಿನ ನೀಲಕಂಠಾಚಾರ್, ಮೈಸೂರಿನ ಬಸವಣ್ಣ ಶಿಲ್ಪಿ ಮತ್ತು ನರಸಿಂಹಾಚಾರ್ ಮುಂತಾದವರು ಖ್ಯಾತ ಶಿಲ್ಪಿಗಳಾಗಿದ್ದು ವಿಗ್ರಹಗಳನ್ನು ಕೆತ್ತುವುದರಲ್ಲಿ ಇವರು ಪ್ರಾವೀಣ್ಯ ಪಡೆದಿದ್ದಾರೆ. ಬೆಂಗಳೂರಿನಲ್ಲಿರುವ ಕ್ರಾಫ್ಟ್ಸ್ ಕೌನ್ಸಿಲ್ ಆಫ್ ಕರ್ನಾಟಕ ಕುಶಲ ಕಲಾಕಾರರನ್ನು, ಅದರಲ್ಲಿಯೂ ಶಿಲ್ಪದಲ್ಲಿ ಪ್ರಾವೀಣ್ಯ ಇರುವವರನ್ನು ಪ್ರೋತ್ಸಾಹಿಸಲು ಶ್ರಮಿಸುತ್ತಿದೆ. ಇವರುಗಳಲ್ಲದೆ, ಇನ್ನೂ ಅನೇಕ ಕಲಾಕಾರರು, ಕಲಾಸೇವೆ ಮಾಡುತ್ತಿದ್ದಾರೆ. ಇವರು ತಯಾರಿಸಿದ ಮರ, ಕಂಚು, ದಂತ ಮತ್ತು ಕಲ್ಲಿನ ಶಿಲ್ಪಗಳು ಪ್ರಪಂಚದ ಮೂಲೆ ಮೂಲೆಗಳಲ್ಲಿ, ಅನೇಕ ಮ್ಯೂಸಿಯಂ ಮತ್ತು ಮನೆಗಳನ್ನು ಅಲಂಕರಿಸಿವೆ; ಅನೇಕ ದೇವಾಲಯಗಳಲ್ಲೂ

ಪ್ರತಿಷ್ಠಾಪಿತವಾಗಿವೆ. ಬೆಂಗಳೂರಿನ ವಿಧಾನಸೌಧದಲ್ಲಿರುವ ಒಂದು ಮಹಾದ್ವಾರವು ಈ ರೀತಿಯಲ್ಲಿ ಉತ್ತಮ ಕೆತ್ತನೆಯನ್ನು ಹೊಂದಿರುವ ಮತ್ತು ಖ್ಯಾತಿ ಪಡೆದಿರುವುದರಲ್ಲಿ ಮುಖ್ಯವಾದುದಾಗಿದೆ.

## ಚಿತ್ರಕಲೆ

ಚಲುಕ್ಯ ಸಾಮ್ರಾಟ ಮಂಗಳೇಶನು ಒಳ್ಳೆಯ ಕಲಾಭಿಮಾನಿ. ಬಾದಾಮಿಯ ಮೂರನೇಯ ವೈಷ್ಣವ ಗುಹೆಯನ್ನು ಕೊರೆಯಿಸಿದುದೇ ಅಲ್ಲದೆ ಅದನ್ನು ಸುಂದರ ಚಿತ್ರಗಳಿಂದಲೂ ಅಲಂಕರಿಸಿದವನಿವನು. ಪ್ರಾಕೃತಿಕ ಕಾರಣಗಳಿಂದ ಈ ಚಿತ್ರಗಳು ಬಹುತೇಕ ಅಳಿಸಿಹೋಗಿವೆ. ಆದರೂ ಗುಹೆಯ ಒಳಗಿನ ಹಾಗೂ ಪಡಸಾಲೆಯ ಚಾವಣಿಗಳಲ್ಲಿ ಚೂರುಪಾರು ಚಿತ್ರಗಳು ಉಳಿದಿರುವುದನ್ನು ಕಾಣಬಹುದು. ಇದರಲ್ಲಿ ಒಂದು ಅಂಕಣದಲ್ಲಿ ರಾಜನು ನೃತ್ಯ ಪ್ರದರ್ಶನವನ್ನು ವೀಕ್ಷಿಸುತ್ತಿರುವ ದೃಶ್ಯವಿದೆ. ಇನ್ನೊಂದು ಅಂಕಣದಲ್ಲಿ ರಾಜನು ಮಂತ್ರಾಲೋಚನಾ ನಿರತನಾಗಿರುವಂತೆ ಚಿತ್ರಿಸಿದ್ದು, ಪಕ್ಕದಲ್ಲಿ ರಾಣಿಯು ಸುಖಾಸೀನಳಾಗಿದ್ದಾಳೆ. ಮೂರನೇಯ ಅಂಕಣದಲ್ಲಿ ಮೂವರು ಹೆಂಗಸರು ವ್ಯಕ್ತಿಯೊಬ್ಬನೆಡೆಗೆ ನಡೆದು ಹೋಗುವ ದೃಶ್ಯವಿದೆ. ಚಿತ್ರಗಳ ವರ್ಣ ಸಂಯೋಜನೆ ಒಪ್ಪವಾಗಿದೆ ಮತ್ತು ರಚನಾಶೈಲಿ ವಾಕಾಟಕ ಶೈಲಿಯನ್ನು ಅಂದರೆ ಅಜಂತಾ ಚಿತ್ರಶೈಲಿಯನ್ನು ಹೋಲುವಂತಿದೆ.

ಹೊಯ್ಸಳರ ಕಾಲದ ಭಿತ್ತಿಚಿತ್ರಗಳಾವುವೂ ಉಳಿದು ಬಂದಿಲ್ಲ. ಆದರೆ ಮೂಡಬಿದ್ರೆಯಲ್ಲಿರುವ ಜೈನಪುರಾಣಗಳ ಚಿತ್ರಾಲಂಕೃತ ಹಸ್ತಲಿಖಿತ ಧವಳಾ ಹಸ್ತಪ್ರತಿಗಳು ಕ್ರಿ. ಶ. 12-13ನೇಯ ಶತಮಾನದಲ್ಲಿ ಪ್ರಚಲಿತವಿದ್ದ ಚಿತ್ರಕಲಾ ಶೈಲಿಯ ಕಲ್ಪನೆಯನ್ನುಂಟುಮಾಡುತ್ತವೆ. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಕೃಷ್ಣದೇವರಾಯನೂ ಅವನ ನಂತರ ಬಂದ ಅರಸರೂ ಚಿತ್ರಕಲೆಗೆ ಒಳ್ಳೆಯ ಪ್ರೋತ್ಸಾಹವಿತ್ತರು. ಆ ಕಾಲದ ಪ್ರಮುಖ ದೇವಾಲಯಗಳ ಗೋಡೆಗಳಿಗೆ ಚಿತ್ರಾಲಂಕಾರ ಮಾಡಿಸಿದರು. ಈ ಚಿತ್ರಗಳು ಧಾರ್ಮಿಕ ಮತ್ತು ಲೌಕಿಕ ವಸ್ತುಗಳನ್ನು ನಿರೂಪಿಸುತ್ತಿದ್ದವು. ವಿಜಯನಗರ ಕಾಲದಲ್ಲಿ ರಚಿತವಾಗಿ ಉಳಿದುಕೊಂಡು ಬಂದ ಉತ್ತಮ ಕಲಾಕೃತಿಗಳು ಆಂಧ್ರಪ್ರದೇಶದ ಲೇಪಾಕ್ಷಿಯಲ್ಲಿರುವ ವೀರಭದ್ರದೇವಾಲಯದಲ್ಲಿ ಕಂಡುಬರುತ್ತವೆ. ಹಾಗೆಯೇ ಹಂಪೆಯ ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಒಳಚಾವಣಿಯಲ್ಲಿ ಆ ಕಾಲದ ಚಿತ್ರಗಳು ಲಭ್ಯವಿವೆ. ಈ ಚಿತ್ರಗಳ ಒಂದು ಅಂಕಣದಲ್ಲಿ ವಿಜಯನಗರ ಸ್ಥಾಪನಾಚಾರ್ಯರೆಂದು ಪ್ರಸಿದ್ಧರಾದ ವಿದ್ಯಾರಣ್ಯರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರವಣಿಗೆ ಮಾಡುತ್ತಿರುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಇನ್ನೊಂದು ಅಂಕಣದಲ್ಲಿ ಧನುರ್ಧಾರಿ ಅರ್ಜುನ, ಮತ್ತೊಂದರಲ್ಲಿ ಶ್ರೀರಾಮನು ಶಿವಧನುಸ್ಸನ್ನು ನಿಗ್ರಹಿಸಿ ಸೀತೆಯ ಕೈಹಿಡಿಯುತ್ತಿರುವ ಸನ್ನಿವೇಶಗಳು ಚಿತ್ರಿತವಾಗಿವೆ. ಐತಿಹಾಸಿಕ ದೃಷ್ಟಿಯಿಂದ ಈ ಚಿತ್ರಗಳು ಬಹು ಮಹತ್ವಪೂರ್ಣವಾಗಿವೆ. ಆಗಿನ ಕಾಲದ ರಾಜಮನೆತನದವರು, ರಾಜಪರಿವಾರದವರು, ಸಾಮಾನ್ಯ ಜನತೆ ಮುಂತಾದವರು ಧರಿಸುತ್ತಿದ್ದ ಉಡುಪು, ಆಭರಣಗಳ ರೀತಿ ನೀತಿಗಳ ಉತ್ತಮ ನಿದರ್ಶನಗಳಂತಿವೆ. ಈ ವಿಜಯನಗರ ಕಾಲದ ದೇವತಾ ಮೂರ್ತಿಗಳ ಚಿತ್ರಗಳು ನೋಡುವವರಲ್ಲಿ ಭಕ್ತಿಯನ್ನು ಪ್ರಚೋದಿಸುತ್ತವೆ. ವಿಜಯನಗರದ ಪತನಾನಂತರವೂ ರಾಜ್ಯದ ಸಾಮಂತರೂ ಮತ್ತು ಅವರ ಸಂತತಿಯವರೂ ಈ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದರು. ಮೈಸೂರಿನ ಅರಸರ ಆಶ್ರಯದಲ್ಲಿ ರಚಿತವಾದ ಅನೇಕ ಚಿತ್ರಗಳು ಮೈಸೂರಿನ ಜಗನ್ಮೋಹನ ಚಿತ್ರಶಾಲೆ ಮತ್ತು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಸಂಗ್ರಹಗಳಲ್ಲಿವೆ.

ಉತ್ತರ ಕರ್ನಾಟಕದಲ್ಲಿ ವಿಜಾಪುರವು ಒಂದು ಮುಖ್ಯ ಚಿತ್ರಕಲಾಕೇಂದ್ರವಾಗಿತ್ತು. ಆ ನಗರದ ವಾಸ್ತುಶಿಲ್ಪದಂತೆಯೇ ವಿಜಾಪುರದ ಚಿತ್ರಶೈಲಿಯಲ್ಲಿಯೂ ಡೆಕ್ಕನಿ ಶೈಲಿಯಲ್ಲಿ ಅತ್ಯುತ್ತಮವೆಂದು ಪರಿಗಣಿತವಾಗಿವೆ. ರಚಿತವಾದ ಕಾಲವನ್ನು ಸ್ಪಷ್ಟವಾಗಿ ಸೂಚಿಸುವಂತಹ ವಿಜಾಪುರ ಶೈಲಿಯ ಕೃತಿಗಳು ಉಳಿದಿಲ್ಲ. ಆದರೆ ಅನೇಕ ಹಸ್ತಲಿಖಿತ ಗ್ರಂಥಗಳಲ್ಲಿ ಇಂತಹ ಚಿತ್ರಗಳು ದೊರೆಯುತ್ತವೆ. ಅಲ್ಲದೆ ಪ್ರತ್ಯೇಕ ಚಿತ್ರಗಳೂ, ಭಾವ ಚಿತ್ರಗಳೂ ದೊರೆಯುತ್ತವೆ. ಅವುಗಳ ಶೈಲಿ, ಕಥಾಸಂದರ್ಭ, ಮುಂತಾದ ಅಂಶಗಳ ತುಲನೆಯಿಂದ ಈ ಚಿತ್ರಗಳ ಕಾಲವನ್ನು ವಿಜಾಪುರಕ್ಕೆ ಇರುವ ಸಂಬಂಧವನ್ನೂ ನಿರ್ಧರಿಸಬಹುದಾಗಿದೆ. ಹಾಗೆಯೇ ಸುಂದರ ಲಿಪಿಯಿಂದ ಕೂಡಿ ಕುಶಲ ಕಲಾವಿದರಿಂದ ರಚಿತವಾದ ಅನೇಕ ಹಸ್ತಲಿಖಿತ ಗ್ರಂಥಗಳೂ ದೊರೆಯುತ್ತವೆ. ಇವುಗಳಲ್ಲಿ ಉತ್ತಮ ನಿದರ್ಶನಗಳೆಂದು ಭಾವಿಸಲಾದ ಗ್ರಂಥಗಳಲ್ಲಿ ಅಜೈಬುಲ್ ಮಖ್ಲುಕತ್, ನಜುಮುಲ್ ಉಲೂಂ, ರತನ್ ಕಹಾನ್, ನಿಮತ್ ನಾಮಾ, ಖವರ್‌ನಾಮಾ ದಿವಾನಿ-ಇ-ಉರ್‌ಫಿ, ಮುಂತಾದುವನ್ನು ಹೇಳಬಹುದು. ಹಾಗೆಯೇ ಎರಡನೇಯ ಇಬ್ರಾಹಿಂ ಆದಿಲ್‌ಷಾ, ಎರಡನೇಯ ಅಲಿ ಆದಿಲ್‌ಷಾ ಮುಂತಾದವರ ಹಾಗೂ ಅವರ ಇತರ ಸಮಕಾಲೀನ ಗಣ್ಯರ ಭಾವಚಿತ್ರಗಳೂ, ಇತರ ಪಶುಪಕ್ಷಿಗಳ ಚಿತ್ರಗಳೂ ವಿಜಾಪುರ ಚಿತ್ರಕಲೆಯ ಉತ್ತಮ ಮಾದರಿಗಳು. 17ನೇಯ ಶತಮಾನದಲ್ಲಿ ವಿಜಾಪುರದ್ದೇ ಒಂದು ವಿಶಿಷ್ಟ ಶೈಲಿಯು ರೂಪಗೊಂಡಿದ್ದಿತು. ಇದರ ಮುಖ್ಯ ಗುಣಗಳೆಂದರೆ, ನಿಯಮಗಳಿಗೆ ಬದ್ಧವಾಗದ ರಚನಾವಿಧಾನ, ಸುಂದರ ಹಾಗೂ ಸಮೃದ್ಧವಾದ ನಿಸರ್ಗ ದೃಶ್ಯಗಳು, ಗೂಢಾರ್ಥದ ವಾತಾವರಣ, ರತ್ನಗಳಂತೆ ಸ್ವಚ್ಛವಾದ ವರ್ಣವೈಖರಿ, ಧಾರಾಳವಾದ ಬಂಗಾರದ ರೇಖಿನ

ಬಳಕೆ, ದಟ್ಟವಾದ ಎಲೆಬಳ್ಳಿಗಳ ಅಲಂಕಾರ, ಡೆಕ್ಕನ್ ಭಾಗಗಳಲ್ಲಿರುವ ಕೋಟೆಕೊತ್ತಲಗಳ ಹಿನ್ನೆಲೆ, ದಿಗಿಲಾಗಿ ಒಟ್ಟು ಚಿತ್ರದಲ್ಲಿನ ಪರಿಪೂರ್ಣತೆ ಮತ್ತು ಪರಿಷ್ಕಾರ, ಇವುಗಳನ್ನು ಹೇಳಬಹುದು.

ನಜುಮುಲ್ ಉಲೂಂ ಹಸ್ತಲಿಖಿತ ಗ್ರಂಥದಲ್ಲಿ 876 ಕಿರುಚಿತ್ರಗಳಿವೆ. ಹಾಗೆಯೇ ಅಜ್ಜೈಬುಲ್-ಮಖ್ಲುಕತ್ ಗ್ರಂಥದ ತುಂಬಾ ಚಿತ್ರಗಳಿವೆ. ಈ ಚಿತ್ರಗಳು 16ನೇಯ ಶತಮಾನದ ಉತ್ತರಾರ್ಧದಲ್ಲಿ ವಿಜಾಪುರದಲ್ಲಿ ಪ್ರವರ್ಧಮಾನಕ್ಕೆ ಬಂದ ಚಿತ್ರ ಶೈಲಿಯ ಕಲ್ಪನೆಯನ್ನು ಮಾಡಿಕೊಡುವಂತಿದೆ. ಇಲ್ಲಿರುವ ಭಾವ ಚಿತ್ರಗಳಲ್ಲಿ ರಾಜಕುಮಾರ ಎರಡನೇಯ ಇಬ್ರಾಹಿಂ ಅದಿಲ್ ಷಾ ಪರಿವಾರ ಸಮೇತನಾಗಿರುವ ಭಾವಚಿತ್ರವು ಬಹು ಉಚ್ಚ ಮಟ್ಟದ ಕಲಾಕೃತಿಯಾಗಿದೆ. ಈ ಚಿತ್ರವು ಇಂದು ಬಿಕಾನೇರಿನ ಲಾಲ್‌ಗರ್ ಅರಮನೆಯಲ್ಲಿದೆ. ಬಹು ಸೂಕ್ಷ್ಮವಾಗಿ ನಿರೂಪಿತವಾದ ಇಬ್ರಾಹಿಂ ಮತ್ತು ಅವನ ಏಳು ಮಂದಿ ಪರಿವಾರದವರೇ ಅಲ್ಲದೆ, ರಾಜಕುಮಾರನು ಧರಿಸಿದ ವೈಭವಯುತ ವಸ್ತ್ರ ವಸನಗಳು ಮತ್ತು ಕೋರೈಸುವಂತಹ ವರ್ಣವಿನ್ಯಾಸವಾದ ಚಿತ್ರವು ಬಹು ಆಕರ್ಷಣೀಯವಾಗಿದೆ. ವಿಜಾಪುರ ಶೈಲಿಯ ಭಾವಚಿತ್ರಗಳಲ್ಲಿ ವಿಶೇಷವೆಂದರೆ ಕಲ್ಪನಾ ದೃಷ್ಟಿ ಸಹಜತ್ವವನ್ನು ಹಿಂದೆ ಹಾಕುತ್ತದೆ. ವರ್ಣವಿನ್ಯಾಸ ದಟ್ಟವಾಗಿ ಕೋರೈಸುವಂತಿದೆ. ವ್ಯಕ್ತಿಗಳ ಭಂಗಿಗಳು ಸ್ವಲ್ಪ ಆಡಂಬರದಿಂದ ಕೂಡಿವೆ; ಒಟ್ಟು ಚಿತ್ರದಲ್ಲಿ ಭಾವಪೂರಿತ ನಿಗೂಢ ವಾತಾವರಣ ಹಾಗೂ ಕಳಕಳಿಸುವ ಆಂತರಿಕ ವಲಯಗಳು ಅನುಭವವಾಗುವುವು.

ವಿಜಾಪುರದ ಹಳೆಯ ಕಟ್ಟಡಗಳಲ್ಲಿ ಫ್ರೆಸ್ಕೊ ಮತ್ತು ಇತರ ಶೈಲಿಗಳ ಭಿತ್ತಿಚಿತ್ರಗಳ ರಚನೆಯನ್ನೂ ಮಾಡುತ್ತಿದ್ದುದು ಕಾಣಬರುತ್ತದೆ. ಶಿಥಿಲಾವಸ್ಥೆಯಲ್ಲಿರುವ ಅಂತಹ ಚಿತ್ರಗಳ ಕೆಲವು ಮಾದರಿಗಳನ್ನು ಕುಮಟಗಿಯ ಜಲಮಂಟಪ, ವಿಜಾಪುರದ ಸಾತ್‌ಮಂಜಿಲ್ ಅರಮನೆ, ಅಥರ್ ಮಹಲ್ ಹಾಗೂ ಮುಬಾರಕ್‌ಖಾನನ ಮಂಟಪದಲ್ಲಿ ನೋಡಬಹುದು. ವಿಜಾಪುರದ ಪ್ರಸಿದ್ಧ ಚಿತ್ರಕಾರರಲ್ಲಿ ಫರೂಕ್‌ಬೇಗ್, ಮುರ್ತದಾಖಾನ್, ಮಹಮದ್ ಅಲಿ ಮತ್ತು ಅಬ್ದುಲ್ ಕಾದಿರ್ ಮುಂತಾದವರು ಮುಖ್ಯರು.

## ಆಧುನಿಕ ಚಿತ್ರಕಲೆ

ಕರ್ನಾಟಕದಲ್ಲಿ ದೊರೆವ ಅತಿ ಪ್ರಾಚೀನ ಚಿತ್ರಗಳು ಇತಿಹಾಸದ ಪೂರ್ವಕಾಲಕ್ಕೆ ಸೇರುವಂತಹವಾಗಿದ್ದು, ಸುಮಾರು ಕ್ರಿ.ಪೂ. 2000-1000 ಮಧ್ಯಕಾಲದವಾಗಿವೆ. ಆದಿಮಾನವರ ಆಸರೆಗಳಾಗಿದ್ದ ಗುಹೆಗಳ ಶಿಲಾಶ್ರಯಗಳಲ್ಲಿ ದೊರೆವ ಈ ಚಿತ್ರಗಳಲ್ಲಿ ಪ್ರಾಣಿಗಳು, ಮಾನವಾಕೃತಿಗಳು ಪ್ರಧಾನವಾಗಿವೆ. ಇಂತಹ ಪ್ರಾಚ್ಯ ಇತಿಹಾಸ ಕಾಲದ ಚಿತ್ರಗಳು ಬಳ್ಳಾರಿ, ವಿಜಾಪುರ, ರಾಯಚೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ದೊರೆಯುತ್ತವೆ. ಹಿರೇಬೆಣಕಲ್, ಪೀಕಿಳಿಹಾಳ್ ಮುಂತಾದ ಸ್ಥಳಗಳ ಶಿಲಾಶ್ರಯಗಳಲ್ಲಿ ಆಯುಧ ಸಹಿತ ಬೇಟೆಯಾಡುವವರು, ಗೂಳಿಗಳು ಮುಂತಾದ ಚಿತ್ರಗಳಿವೆ. ವರ್ಣಮಯ ಚಿತ್ರಗಳಿಂದ ಅಲಂಕೃತವಾದ ಆ ಯುಗದ ಮಡಕೆಗಳು ಬ್ರಹ್ಮಗಿರಿ, ಚಂದ್ರವಳ್ಳಿ, ಹೆಮ್ಮಿಗೆ, ಹೆರೆಕಲ್, ಮಸ್ಕಿ, ಬೆಂಗಳೂರು ಮತ್ತು ಇನ್ನೂ ಅನೇಕ ಸ್ಥಳಗಳಲ್ಲಿ ದೊರೆತಿವೆ. ಚಾರಿತ್ರಿಕ ಯುಗಕ್ಕೆ ಬಂದ ನಂತರ ಪ್ರಚಲಿತವಿದ್ದ ಚಿತ್ರಕಲೆಯ ಬಗೆಗೆ ಅಂದು ಲಿಖಿತವಾದ ಶಾಸನಗಳಲ್ಲಿಯೂ ಮತ್ತು ಸಾಹಿತ್ಯದಲ್ಲಿಯೂ ಉಲ್ಲೇಖಗಳಿವೆ. ಸುಮಾರು ಕ್ರಿ.ಶ. 707ರಲ್ಲಿ ಬರೆಯಲಾದ ಗಂಗರಸರ ಕಾಲದ ಮಣ್ಣೆಯ ತಾಮ್ರ ಫಲಕಗಳಲ್ಲಿ ಆಸ್ಥಾನದ ಲಿಪಿಕಾರನು ಚಿತ್ರಕಲೆಯಲ್ಲಿ ಪ್ರಾವಿಣ್ಯತೆಯನ್ನೂ ಪಡೆದಿದ್ದಂತೆ ತಿಳಿಸುತ್ತದೆ. ಹಾಗೆಯೇ ಕ್ರಿ.ಶ. 776ರಲ್ಲಿ ರಚಿತವಾದ ದೇವನಹಳ್ಳಿ ತಾಮ್ರ ಫಲಕಗಳಲ್ಲಿ ಚಿತ್ರಕಲೆಯಲ್ಲಿ ನಿಪುಣನಾದ ಒಬ್ಬ ಕೆತ್ತನೆ ಕೆಲಸದವನ ಹೆಸರು ಉಲ್ಲೇಖವಾಗಿದೆ. ಕರ್ನಾಟಕದಲ್ಲಿ ಬೆಳೆದುಬಂದ ಚಿತ್ರಕಲೆಯ ಮೂಲ ಜಾಡು ಪಶ್ಚಿಮದ ಚಲುಕ್ಯ ಸಂತತಿಯ ಚಕ್ರವರ್ತಿ ಮಂಗಳೇಶನ ಕಾಲದಲ್ಲೇ ಪ್ರಾರಂಭವಾಗುವುದನ್ನು ಗುರುತಿಸಬಹುದು. ಈಗ ಬಾದಾಮಿ ಗುಹಾ ದೇವಾಲಯಗಳಲ್ಲಿ ಅವನ ಕಾಲದಲ್ಲಿ ರಚಿತವಾದ ಚಿತ್ರಗಳ ಕುರುಹುಗಳು ಮಾತ್ರ ಕಾಣಬರುತ್ತವೆ. ಚಾರಿತ್ರಿಕ ಕಾರಣಗಳಿಂದ ಈ ಚಿತ್ರಸಂಪ್ರದಾಯ ಬೆಳೆದು ಬಂದ ಬಗೆಯನ್ನು ತಿಳಿಯಲು ಸಾಧ್ಯವಾಗಿಲ್ಲ. ಮಧ್ಯೆ ಮಧ್ಯೆ ಮುಂದೆ ನಮಗೆ ಲಭ್ಯವಿರುವ ಚಿತ್ರಗಳು ಹೊಯ್ಸಳರ ಕಾಲದ ಚಿತ್ರಾಲಂಕೃತ ಹಸ್ತ ಲಿಖಿತ ಗ್ರಂಥಗಳು ಜೈನ ಸಂಪ್ರದಾಯಕ್ಕೆ ಸೇರಿದವು. ಆದರೆ ಹಿನ್ನೆಲೆ, ಆಕೃತಿಗಳ ವಿನ್ಯಾಸ, ನಿಲುವು ಮುಂತಾದವು ದೃಷ್ಟಿಗಳಿಂದ ಇವು ಅದೇ ಕಥಾ ವಸ್ತುವಿನ ಗುಜರಾತಿನ ಕಲ್ಪಸೂತ್ರ ಚಿತ್ರಗಳಿಗಿಂತ ಭಿನ್ನವಾಗಿವೆ. ಇದರ ರಚನಾ ಶೈಲಿ ಪೂರಾ ಪ್ರಾದೇಶಿಕವಾದದ್ದಾಗಿದ್ದು, ಚಿತ್ರಗಳಲ್ಲಿನ ವಸ್ತ್ರಾಭರಣಗಳು ಹೊಯ್ಸಳರ ಶಿಲ್ಪಗಳ ನೆನಪುಂಟುಮಾಡುವಂತಿವೆ. ಕನ್ನಡ ಕಾವ್ಯಗಳಲ್ಲಿಯೇ ಚಿತ್ರಕಲೆಗೆ, ಭಾವಚಿತ್ರಗಳಿಗೆ ಸಂಬಂಧಿಸಿದ ವರ್ಣನೆಗಳಿವೆ. ನಿದರ್ಶನವಾಗಿ ಪೊನ್ನ, ರುದ್ರಭಟ್ಟ ಮುಂತಾದವರ ಕಾವ್ಯಗಳಲ್ಲಿ ವ್ಯಕ್ತಿಚಿತ್ರ ಮತ್ತು ಚಿತ್ರಗಳ ಬಗೆಗೆ ಅನೇಕ ಉಲ್ಲೇಖಗಳಿವೆ. ಸಂಸ್ಕೃತ ಕಾವ್ಯಗಳಲ್ಲಿಯೂ ಭಿತ್ತಿಚಿತ್ರಗಳು, ಭಾವಚಿತ್ರಗಳ ರಚನಾವಿಧಾನ, ಸಂಚಾರಿ ಕಲಾ ಶಾಲೆಗಳು ಮುಂತಾದವುಗಳ ಬಗೆಗೆ ಉಲ್ಲೇಖಗಳಿವೆ. ಮಾನಸೋಲ್ಲಾಸದಲ್ಲಿ ಚಿತ್ರಕಲೆಯ ಬಗೆಗೆ ಒಂದು ಅಧ್ಯಾಯವೇ ಇದೆ.

ವಿಜಯನಗರ ಕಾಲದ ಚಿತ್ರಕಲೆಯನ್ನು ಪರಿಶೀಲಿಸಿದಾಗ ಒಂದು ಅಂಶ ಪ್ರಧಾನವಾಗಿ ಕಾಣಬರುತ್ತದೆ. ಈ ಕಾಲದಲ್ಲಿ ಭಿತ್ತಿಚಿತ್ರಗಳ ರಚನೆ ಹೇರಳ ಪ್ರಮಾಣದಲ್ಲಿ ನಡೆದಂತೆ ಕಂಡು

ಬರುತ್ತದೆ. ಇಂತಹ ಅತಿ ಹಳೆಯ ಭಿತ್ತಿಚಿತ್ರಗಳನ್ನು ಹಂಪೆಯ ದೇವಾಲಯಗಳ ಗೋಡೆ ಮತ್ತು ಮಾಳಿಗೆಗಳಲ್ಲಿ ನೋಡಬಹುದು. ವಿಜಯನಗರದ ಅರಮನೆಯ ಒಳಾಂಗಣಗಳ ಗೋಡೆಗಳನ್ನು ಈ ರೀತಿ ಚಿತ್ರಗಳಿಂದ ಅಲಂಕರಿಸಲಾಗಿತ್ತೆಂದೂ ಆ ಚಿತ್ರಗಳು ಪೋರ್ಚುಗೀಸರವರೆಗೆ ವಿವಿಧ ಜನಾಂಗಗಳ ಜೀವನಗಳ ರೀತಿ ನೀತಿಗಳನ್ನು ನಿರೂಪಿಸುತ್ತಿದ್ದುವೆಂದು ತಿಳಿದುಬರುತ್ತದೆ. ಈ ಚಿತ್ರಗಳು ಬಹುಶಃ ರಾಣೀವಾಸದವರಿಗಾಗಿ, ಪ್ರಪಂಚದ ವಿವಿಧ ಜನಾಂಗದವರ ಜೀವನ ವಿಧಾನಗಳು ಹೇಗೆ ಎಂಬುದನ್ನು ತಿಳಿಯಪಡಿಸಲೋಸುಗ ರಚಿತವಾದುದೆಂದು ಪಾಯಿಸ್ ಊಹಿಸಿದ್ದಾನೆ. ಆದರೆ ಕರ್ನಾಟಕದ ಸಾಂಪ್ರದಾಯಿಕ ಚಿತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವುಗಳು ಪ್ರಾಯಶಃ ಅಂದಿನ ಜೀವನದ ದೃಶ್ಯಗಳನ್ನು ಪ್ರತಿಧ್ವನಿಸುವ ಬದಲು, ಸಾಂಪ್ರದಾಯಿಕ ರೀತಿಯ ಹಿನ್ನೆಲೆ, ಆಗಮ ಸೂತ್ರಗಳಿಗನುಸಾರವಾದ ನಡೆ, ನಿಲುವುಗಳನ್ನು ಬಳಸಿದ್ದಾರೆ. ಈ ಚಿತ್ರಗಳು ಸಾಂಪ್ರದಾಯಿಕ ಶಿಲ್ಪಗಳ ಚಿತ್ರಾಕೃತಿಯೆಂಬ ಅನುಭವವಾಗುವುದು. ಕರ್ನಾಟಕದಲ್ಲಿನ ಪ್ರಮುಖ ದೇವಾಲಯಗಳನ್ನೆಲ್ಲಾ ಒಂದು ಕಾಲದಲ್ಲಿ ಈ ರೀತಿಯ ಚಿತ್ರಗಳಿಂದ ಅಲಂಕರಿಸಿದ್ದ ಸಾಧ್ಯತೆ ಇದೆ. ಸಿ. ಹಯವದನರಾಯರು ಸಂಪಾದಿಸಿದ ಮೈಸೂರು ಗ್ಯಾಸೆಟಿಯರ್‌ನಲ್ಲಿ ಹೀಗೆ ಭಿತ್ತಿಚಿತ್ರಗಳೋ ಅಥವಾ ಅವುಗಳ ಅವಶೇಷಗಳೋ ಉಳಿದಿದ್ದ ಅನೇಕ ದೇವಾಲಯಗಳ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಈಗಲೂ ಅಂತಹ ಭಿತ್ತಿ ಚಿತ್ರಗಳಿರುವ ಅಥವಾ ಅಂತಹ ಚಿತ್ರಗಳ ಅವಶೇಷಗಳು ಉಳಿದುಕೊಂಡಿರುವ ದೇವಾಲಯಗಳಲ್ಲಿ ಯಡೆಯೂರಿನ ಸಿದ್ಧಲಿಂಗೇಶ್ವರ ದೇವಾಲಯ, ಗುಬ್ಬಿಯ ವೇಲಪ್ಪ ದೇವಾಲಯ, ಬೊಪ್ಪಗೌಡನಪುರದ ಮಂಟೇಸ್ವಾಮಿ ಮಠ (ಈಗ ಇಲ್ಲಿನ ಚಿತ್ರಗಳು ನಾಶವಾಗಿವೆ), ಹಿರಿಯೂರಿನಲ್ಲಿರುವ ತೇರುಮಲ್ಲೇಶ್ವರ ದೇವಾಲಯ, ಮುಡುಕುತೊರೆಯ ಮಲ್ಲಿಕಾರ್ಜುನಸ್ವಾಮಿ ದೇವಾಲಯ, ಹಂಪೆಯ ವಿರೂಪಾಕ್ಷ ದೇವಾಲಯ, ಮೈಸೂರು ಕೋಟೆಯಲ್ಲಿರುವ ವರಾಹಸ್ವಾಮಿ ಮತ್ತು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ, ಶ್ರವಣಬೆಳಗೊಳದಲ್ಲಿರುವ ಜೈನ ಮಠ, ಸೀಬಿಯಲ್ಲಿರುವ ನರಸಿಂಹ ದೇವಾಲಯ, ಮೈಸೂರಿನಲ್ಲಿರುವ ಪ್ರಸನ್ನ ವೆಂಕಟರಮಣಸ್ವಾಮಿ ದೇವಾಲಯ ಮತ್ತು ಹರದನಹಳ್ಳಿಯಲ್ಲಿರುವ ದಿವ್ಯಲಿಂಗೇಶ್ವರ ದೇವಾಲಯ ಮುಂತಾದುವನ್ನು ಹೇಳಬಹುದು. ಇದರಂತೆ ಶ್ರೀರಂಗಪಟ್ಟಣದ ದರಿಯಾದೌಲತ್, ಮೈಸೂರಿನ ಜಗನ್ಮೋಹನ ಚಿತ್ರಶಾಲೆ, ನರಗುಂದ, ಕುಮಟಗಿ ಮತ್ತು ನಿಪ್ಪಾಣಿಗಳಲ್ಲಿನ ಮಾಜಿ ಅರಸರ ಭವನಗಳು, ಮಾಗಡಿಯಲ್ಲಿನ ಕೆಂಪೇಗೌಡನ ಹಜಾರ ಮತ್ತು ಚನ್ನಪಟ್ಟಣದಲ್ಲಿರುವ ಜಗದೇವರಾಯನ ಅರಮನೆ ಮುಂತಾದವುಗಳಲ್ಲಿಯ ಭಿತ್ತಿಚಿತ್ರಗಳು ಅಥವಾ ಅವುಗಳ ಅವಶೇಷಗಳು ಕಾಣಬರುತ್ತವೆ.

ವಿಜಯನಗರ ಸಾಮ್ರಾಜ್ಯದ ಉತ್ತರಾರ್ಧದ ವೇಳೆಗೆ ಕರ್ನಾಟಕದ ಚಿತ್ರಕಲೆಯು ಎರಡು ವಾಹಿನಿಯಾಗಿ ಪ್ರವಹಿಸುವುದನ್ನು ಕಾಣಬಹುದಾಗಿದೆ. ವಿಜಯನಗರದ ಅರಸರೂ ಅವರ ಸಾಮಂತರೂ ಹಿಂದಿನಿಂದ ಬಂದ ಆಗಮ ಮತ್ತು ಇತರ ಶಾಸ್ತ್ರ ಸೂತ್ರಗಳಿಗನುಸಾರ ರೂಪಿತವಾದ ಸಂಪ್ರದಾಯಿಕ ಶೈಲಿಯನ್ನು ಪೋಷಿಸಿಕೊಂಡು ಬಂದರು. ಆದರೆ ವಿಜಾಪುರ, ಕಲ್ಬುರ್ಗಿ ಮತ್ತು ಬಿದರೆಗಳಲ್ಲಿ ಆಳುತ್ತಿದ್ದ ಬಹಮನಿ ಸಂತತಿಯ ಸುಲ್ತಾನರು ಒಂದು ಪ್ರತ್ಯೇಕ ಚಿತ್ರ ಶೈಲಿ ರೂಪಿತವಾಗಲು ಕಾರಣರಾದರು. ಈ ಚಿತ್ರಶೈಲಿ ಇಂದು ಡೆಕ್ಕನ್ ಶೈಲಿಯೆಂದು ಮಾನಿತವಾಗಿದೆ. ಈ ಶೈಲಿಯ ಅತ್ಯುತ್ತಮ ಚಿತ್ರಗಳು ರಚಿತವಾದುದು ವಿಜಾಪುರದಲ್ಲಿ. ಇದರ ಮೇಲೆ ಮುಘಲ್ ಶೈಲಿಯ ಪ್ರಭಾವವಾಗಿದ್ದರೂ ಪ್ರಾದೇಶಿಕ ಗುಣಗಳು ಈ ಡೆಕ್ಕನಿ ಶೈಲಿಯಲ್ಲಿ ಕಾಣಬರುತ್ತವೆ. ಉತ್ತರ ಕರ್ನಾಟಕದ ನರಗುಂದ ಮುಂತಾದ ಸ್ಥಳಗಳಲ್ಲಿನ ಅರಮನೆಗಳಲ್ಲಿರುವ ಭಿತ್ತಿಚಿತ್ರಗಳಲ್ಲಿ ಈ ಡೆಕ್ಕನಿ ಶೈಲಿಯ ಪ್ರಭಾವ ಸ್ಪಷ್ಟವಾಗಿ ಕಾಣಬರುತ್ತದೆ.

### ಮೈಸೂರು ಆಸ್ಥಾನ

ಕರ್ನಾಟಕದ ದಕ್ಷಿಣಾರ್ಧದಲ್ಲಿ ವಿಜಯನಗರದಲ್ಲಿ ಬೆಳೆದು ಬಂದ ಸಾಂಪ್ರದಾಯಿಕ ಚಿತ್ರಶೈಲಿ ಮುಂದುವರಿದುಕೊಂಡು ಬಂದಿತು. ವಿಜಯನಗರದ ಪತನಾನಂತರ ಅರಮನೆಯ ಆಸರೆಯಲ್ಲಿದ್ದ ಚಿತ್ರಗಾರರೆಲ್ಲಾ ಚದುರಿ ದಕ್ಷಿಣ ಭಾರತದ ವಿವಿಧ ಸ್ಥಳಗಳಿಗೆ ವಲಸೆ ಹೋದರು. ಮೈಸೂರಿನ ಅರಸರು ಈ ಕಲೆಗಾಗಿ ಬಹು ಪ್ರೋತ್ಸಾಹ ನೀಡಿದರು. ಇವರಲ್ಲಿ ಬಹುಮಂದಿ ರಾಜ ಒಡೆಯರ ಆಶ್ರಯದಲ್ಲಿ ಶ್ರೀರಂಗಪಟ್ಟಣದಲ್ಲಿ ನೆಲೆಸಿದರು. ಶ್ರೀರಂಗಪಟ್ಟಣದ ದರಿಯಾ ದೌಲತ್ ಭವನ ಪೂರಾ ಚಿತ್ರಾಲಂಕೃತವಾಗಿದ್ದು ವಸ್ತುವೈವಿಧ್ಯದಿಂದ ಕೂಡಿದೆ. ಹಾಗೆಯೇ ಬೆಂಗಳೂರಿನಲ್ಲಿರುವ ಟಿಪ್ಪುಸುಲ್ತಾನ್ ಅರಮನೆಯಲ್ಲಿಯೂ ಚಿತ್ರಗಳ ಚೂರುಪಾರು ಅವಶೇಷಗಳು ಕಾಣಬರುತ್ತವೆ.

ಭಿತ್ತಿಚಿತ್ರಗಳೇ ಅಲ್ಲದೆ ಚಿತ್ರಗಾರರು ಹಸ್ತಲಿಖಿತ ಪುಸ್ತಕಗಳಿಗೆ ಚಿತ್ರಗಳನ್ನು ರಚಿಸಿ ಕೊಡುತ್ತಿದ್ದರು. ಈ ಬಗೆಯ ವರ್ಣಮಯ ಚಿತ್ರಾಲಂಕೃತ ಪುಸ್ತಕಗಳೂ ಇತ್ತೀಚಿನವರೆಗೂ ಹಳೆಯ ಮನೆತನಗಳಲ್ಲಿ ಇದ್ದವು. ಅಂತಹ ಚಿತ್ರಪೂರಿತ ಗ್ರಂಥಗಳಲ್ಲಿ ಪ್ರಸಿದ್ಧವಾದುದು ಶ್ರೀ ತತ್ವನಿಧಿ. ಇದು ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಯದಲ್ಲಿ ರಚಿತವಾದದ್ದು. ಇದು ಒಂಬತ್ತು ವಿಭಾಗಗಳುಳ್ಳ ದೊಡ್ಡ ಗ್ರಂಥವಾಗಿದ್ದು, ಒಂದೊಂದು ವಿಭಾಗವೂ ಒಂದೊಂದು ದೇವತಾ ಪ್ರಪಂಚಕ್ಕೆ ನಿಗದಿಯಾಗಿದೆ. ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ ಮುಂತಾದ ಶೀರ್ಷಿಕೆಗಳು ಆಯಾ ವಿಭಾಗದಲ್ಲಿ ವಿವರಿತವಾಗುವ ವಿಷಯದ ಸೂಚನೆ ನೀಡುತ್ತವೆ. ಈ ಗ್ರಂಥವು 1888 ವರ್ಣಚಿತ್ರಗಳನ್ನೂ, 458 ರೇಖಾಚಿತ್ರಗಳನ್ನೂ ಒಳಗೊಂಡಿದೆ. ಶ್ರೀತತ್ವನಿಧಿಯು ಆಗಮ,

ಶಿಲ್ಪ, ತಂತ್ರ, ಜ್ಯೋತಿಷ ಮುಂತಾದ ಪ್ರಾಚೀನ ಜ್ಞಾನ ಭಂಡಾರದ ವಿಶ್ವಕೋಶದಂತಿದೆ. ಶಾಸ್ತ್ರಗಳಲ್ಲಿ ವಿವರಿತವಾದ ಅಂಶಗಳನ್ನು ಈ ಚಿತ್ರಗಳು ದೃಶ್ಯರೂಪದಲ್ಲಿ ಉದಾಹರಿಸುತ್ತವೆ. ಒಳ್ಳೆಯ ವರ್ಣಶೋಭೆಯಿಂದ ಕೂಡಿದ ಈ ಚಿತ್ರಗಳಲ್ಲಿ ಒಂದೊಂದೂ, ಪ್ರತ್ಯೇಕವಾಗಿ ನೋಡಿದಾಗಲೂ ಉತ್ತಮ ಕಲಾ ಕೃತಿಯೆನ್ನಲು ಯೋಗ್ಯವಾಗಿವೆ.

ಮೈಸೂರಿನ ಜಗನ್ಮೋಹನ ಬಂಗಲೆಯನ್ನು ಕಟ್ಟಲು ಪ್ರಾರಂಭಿಸಿದುದು 1861ರಲ್ಲಿ. 1875ರಲ್ಲಿ ಅದನ್ನು ಚಿತ್ರಶಾಲೆ ಯಾಗಿ ಮಾರ್ಪಾಟು ಮಾಡಲಾಯಿತು. ಅದರ ಭಿತ್ತಿಗಳು ವರ್ಣಮಯ ಚಿತ್ರಗಳಿಂದ ಅಲಂಕೃತವಾಗಿವೆ. ಅವುಗಳಲ್ಲಿ ಮೈಸೂರಿನ ರಾಜವಂಶಕ್ಕೆ ಸೇರಿದ ವ್ಯಕ್ತಿಗಳು, ಮುಮ್ಮಡಿ ಕೃಷ್ಣರಾಜರ ಹುಲಿ ಷಿಕಾರಿ, ಆ ಕಾಲದ ಇತರ ಗಣ್ಯರು, ಪಶುಪ್ರಾಣಿಗಳು ಮುಂತಾದ ದೃಶ್ಯಗಳಿವೆ. ಅಂದಿನ ಚಿತ್ರಕಾರರಲ್ಲಿ ಪ್ರಸಿದ್ಧರಾದವರಲ್ಲಿ ವೀರಣ್ಣ, ಮಲ್ಲಪ್ಪ, ಬಸವಣ್ಣ ಮುಂತಾದ ವರನ್ನು ಹೆಸರಿಸಬಹುದು. ಮುಂದೆ ಚಾಮರಾಜ ಒಡೆಯರು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರು ಈ ಸಾಂಪ್ರದಾಯಿಕ ಚಿತ್ರಕಲೆಗೆ ಬಹು ಪ್ರೋತ್ಸಾಹವನ್ನಿತ್ತರು. ಅವರ ಕಾಲದಲ್ಲಿ ಪುರಾಣಕತೆಗಳ ಸನ್ನಿವೇಶಗಳ ಚಿತ್ರಗಳೂ ರಾಜರ ಭಾವ ಚಿತ್ರಗಳೂ, ಇತರ ನಾವಿನ್ಯ ಕೃತಿಗಳೂ ಹೇರಳ ಸಂಖ್ಯೆಯಲ್ಲಿ ಜಲ ಮತ್ತು ತೈಲ ಎರಡೂ ವರ್ಣ ಮಾಧ್ಯಮದಲ್ಲಿ ರಚಿತವಾದವು. ಆ ಕಾಲದ ಚಿತ್ರಗಾರರಲ್ಲಿ ಸುಂದರಯ್ಯ, ಕೊಂಡಪ್ಪ, ಎಲ್ಲಪ್ಪ, ದುರ್ಗದ ವೆಂಕಟಪ್ಪ, ನರಸಿಂಹಯ್ಯ, ಮುಂತಾದವರು ಮುಖ್ಯ ರಾಗಿದ್ದು, ಈ ಮಾಧ್ಯಮಗಳಲ್ಲಿ ಚಿತ್ರರಚನೆ ಮಾಡಿದರು.

ಆ ಕಾಲದಲ್ಲಿ ಚಿತ್ರಕಾರರೇ ತಮಗೆ ಅವಶ್ಯಕವಾದ ಬಣ್ಣ ಗಳನ್ನು ಸ್ವಂತವಾಗಿ ತಯಾರಿಸಿ ಕೊಳ್ಳಬೇಕಾಗಿತ್ತು. ಅವುಗಳೂ ಪ್ರಕೃತಿ ಮೂಲದಿಂದ ಅಂದರೆ ಖನಿಜ, ಸಸ್ಯ ಮತ್ತು ಪ್ರಾಣಿ ಮೂಲಗಳಿಂದ ದೊರೆಯುವಂತಹವು. ಚಿತ್ರಗಳಲ್ಲಿ ಸ್ವಲ್ಪಭಾಗ ಉಬ್ಬಿದ್ದು ಚಿನ್ನದ ರೇಖೆಯಿಂದ ಅವೃತವಾಗುತ್ತಿತ್ತು. ಇದು ಕರ್ನಾಟಕ ಸಾಂಪ್ರದಾಯಿಕ ಚಿತ್ರಗಳ ಹೆಗ್ಗುರುತು. ಚಿತ್ರ ರಚನೆಯ ಕ್ಷೇತ್ರದಲ್ಲಿ ಕಾಗದದ ಜೊತೆಗೆ ಕೆಲವು ವೇಳೆ ಗಾಜನ್ನೂ ಉಪಯೋಗಿಸುತ್ತಿದ್ದರು.

## ಪಶ್ಚಿಮದ ಪ್ರಭಾವ

18ನೇಯ ಶತಮಾನದಲ್ಲಿ ಮೈಸೂರಿಗೆ ಪಾಶ್ಚಾತ್ಯ ಚಿತ್ರ ಕಲೆಯು ಪ್ರವೇಶವಾಯಿತು. ಇದು ದೇಶೀಯ ಸಾಂಪ್ರದಾಯಿಕ ಚಿತ್ರಕಲೆಯ ಮೇಲೆ ಪ್ರಭಾವ ಬೀರಿದ ಹಾಗೆ ಕಾಣಬರುತ್ತದೆ. ಏಕೆಂದರೆ ಸ್ಥಳೀಯ ಕಲಾವಿದರ ಚಿತ್ರಗಳಲ್ಲಿಯೂ ಕ್ರಮೇಣ, ದೃಶ್ಯಸಿಸ್ಟೆಯ ವಾತಾವರಣ, ಉದ್ದ ಅಗಲ ಆಳದ ಭ್ರಮೆ ಮುಂತಾದವು ಕಾಣಲಾರಂಭವಾಯಿತು. ಕೆಲವು ಚಿತ್ರಗಾರರು ತೈಲಚಿತ್ರ ಮಾಧ್ಯಮ ಬಳಸುವುದರಲ್ಲಿಯೂ ಶಿಕ್ಷಣ ಪಡೆದರು. ಅವರು ರಚಿಸಿದ ಸಾಂಪ್ರದಾಯಿಕ ಶೈಲಿಯ ಚಿತ್ರಗಳಲ್ಲಿಯೂ ಈ ಮಾಧ್ಯಮವನ್ನು ಉಪಯೋಗಿಸಲಾರಂಭಿಸಿದರು. ಇದಲ್ಲದೆ ಈ ಶತಮಾನದ ಆದಿಭಾಗದಲ್ಲಿ ಪ್ರಸಿದ್ಧ ಚಿತ್ರಕಾರ ರಾಜಾ ರವಿವರ್ಮರು ಮೈಸೂರಿನಲ್ಲಿ ಕೆಲಕಾಲ ವಾಸವಾಗಿದ್ದು ಚಿತ್ರರಚನೆ ಮಾಡಿದ್ದರಿಂದ ಅದು ಅನೇಕ ಸ್ಥಳೀಯ ತರುಣ ಕಲಾವಿದರ ಮೇಲೆಯೂ ಪ್ರಭಾವ ಬೀರಿತು. ಮೈಸೂರು ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ಪಾಶ್ಚಾತ್ಯ ಚಿತ್ರಶೈಲಿಯು ಪಠ್ಯ ವಿಷಯ ವಾಗಿ ಸೇರಿಸಿದ ಮೇಲೆ, ಆ ತತ್ವ ಮತ್ತು ಶೈಲಿಯಲ್ಲಿ ತರಬೇತಾದ ಕಲಾವಿದರ ಒಂದು ಹೊಸ ಪೀಳಿಗೆಯೇ ಹುಟ್ಟಿ ಬಂದಿತು. ಇದರ ಫಲವಾಗಿ ಸಾಂಪ್ರದಾಯಿಕ ಚಿತ್ರಕಲೆ ಹಿಂದೆ ಬಿದ್ದು ಮೂಲೆ ಪಾಲಾಯಿತು.

ಇಂತಹ ಹೊಸ ಪೀಳಿಗೆಯ ಕಲಾವಿದರಲ್ಲಿ ಮೈಸೂರಿನವರೇ ಅಲ್ಲದೆ, ಕರ್ನಾಟಕದ ಇತರ ಭಾಗಗಳಿಂದಲೂ ತರುಣ ಕಲಾವಿದರನೇಕರು ಮುಂಬಯಿಗೆ ಹೋಗಿ ಅಲ್ಲಿನ ಜೆ. ಜೆ. ಕಲಾಶಾಲೆಯಲ್ಲಿ ಉನ್ನತ ಶಿಕ್ಷಣ ಪಡೆದರು. ಕೆಲವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಪಾಶ್ಚಾತ್ಯ ದೇಶಗಳಲ್ಲಿ ಶಿಕ್ಷಣ ಪಡೆದು ಬಂದರು. ಹೀಗಾಗಿ ಮೈಸೂರಿನ 20ನೇಯ ಶತಮಾನದ ಕಲೆಯು ಪಾಶ್ಚಾತ್ಯ ಕಲೆಯ ಪ್ರಭಾವಕ್ಕೆ ಒಳಗಾಯಿತು. ಕರ್ನಾಟಕದ ಅನೇಕ ಚಿತ್ರಕಲಾವಿದರು ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧರಾಗಿದ್ದಾರೆ. ನಿದರ್ಶನವಾಗಿ ಮೈಸೂರು ಕೆ. ವೆಂಕಟಪ್ಪ (ರಾಷ್ಟ್ರೀಯ ಖ್ಯಾತರಾದ ಈ ಕಲಾವಿದರ ಹೆಸರಲ್ಲಿ ಬೆಂಗಳೂರಿನಲ್ಲಿ ಒಂದು ಚಿತ್ರಶಾಲೆಯನ್ನು ಸ್ಥಾಪಿಸಲಾಗಿದೆ), ಕೆ. ಕೆ. ಹೆಬ್ಬಾರ್, ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಲಲಿತ ಕಲಾ ವಿಭಾಗದ ಮಾಜಿ ಡೀನ್ ಕೆ. ಎಸ್. ಕುಲಕರ್ಣಿ, ಎ. ಎ. ಆಲಮೇಲ್‌ಕರ್, ಎನ್. ಎಚ್. ಕುಲಕರ್ಣಿ, ಎಸ್. ಜಿ. ವಾಸುದೇವ್, ಎನ್. ಎಸ್. ಸುಬ್ಬಕೃಷ್ಣ, ಕೆ. ಕೇಶವಯ್ಯ, ಎಸ್. ಎನ್. ಸ್ವಾಮಿ, ದಂಡಾವತಿಮಠ, ವೈ. ಸುಬ್ರಹ್ಮಣ್ಯ ರಾಜು, ಎನ್. ಹನುಮಯ್ಯ ಮುಂತಾದವರು ಇತರ ಪ್ರಸಿದ್ಧ ಚಿತ್ರ ಕಲಾವಿದರು.

ರಾಜ್ಯಮಟ್ಟದಲ್ಲಿ ಪ್ರಸಿದ್ಧರಾದ ಕಲಾವಿದರಲ್ಲಿ ಮೈಸೂರಿನ ಎಸ್. ನಂಜುಂಡಸ್ವಾಮಿಯವರು ಮೊದಲು ನೆನಪಿಗೆ ಬರುತ್ತಾರೆ. ಚಿತ್ರಕಲೆಯ ವಿವಿಧ ಮಾದರಿಗಳನ್ನೆಲ್ಲ ಕರಗತ ಮಾಡಿಕೊಂಡಿದ್ದ ಸ್ವಾಮಿಯವರ ಚಿತ್ರಗಳು ಮನಸ್ಸಿನ ಮೇಲೆ ಬಹು ಪರಿಣಾಮ ಕಾರಿಯಾಗಿವೆ. ಎಂ. ವೀರಪ್ಪ, ಎಸ್. ಆರ್. ಸ್ವಾಮಿ ಮತ್ತು ಹೆಚ್. ಎಸ್. ಇನಾಮತಿಯವರುಗಳ ಚಿತ್ರಗಳು ಸಾಂಪ್ರ ದಾಯಿಕ ರೀತಿ ನೀತಿಗಳಿಂದ ಮಾನ್ಯವಾಗಿವೆ. ಕಲ್ಬುರ್ಗಿಯ

ಶಂಕರರಾವ್ ಅಳಂಡಕರ್‌ರವರು ರಚಿಸಿದ ಚಿತ್ರಗಳು ಭಾವ ಪ್ರಧಾನತೆಗೆ ಹೆಸರುಗೊಂಡಿವೆ. ಭಾವಚಿತ್ರ ರಚನೆಯಲ್ಲಿ ಎ. ಆರ್. ರಾವ್, ಎಸ್. ಎಸ್. ಕುಕ್ಕೆ ಮತ್ತು ಆರ್. ಸೀತಾರಾಂ ಮುಂತಾದವರು ಮಾನ್ಯರಾಗಿದ್ದಾರೆ. ವಸ್ತುವಿನ್ಯಾಸದಲ್ಲಿ ಜನಾಬ್ ಸೂಫಿಯವರ ಕೌಶಲ್ಯ, ಚಿತ್ರ ಕಲೆಯೇ ಮೂರ್ತಿವೆತ್ತಂತಹ ಮೀರ್ ಷೌಕತ್ ಅಲಿಯವರ ಹುದುಗುಕಲೆಯ ಕೃತಿಗಳು ಸ್ಮರಣೀಯವಾದವು. ಚಾರಿತ್ರಿಕ ಸನ್ನಿವೇಶಗಳನ್ನೂ ಆಧರಿಸಿದ ವೈ. ಸುಬ್ರಹ್ಮಣ್ಯರಾಜುರವರ ಕೃತಿಗಳ ರಚನೆಯಲ್ಲಿ ಸಾಂಪ್ರದಾಯಿಕ ಹಾಗೂ ಪಾಶ್ಚಾತ್ಯ ಶೈಲಿಗಳ ಹದವಾದ ಮಿಶ್ರಣದ ಅನುಭವವಾಗುವುದು. ಹಾಗೆಯೇ ಎಂ. ವಿ. ಮಿಣಜಿಗಿಯವರ ರಾಗಮಾಲಾ ಚಿತ್ರಗಳೂ, ಎಂ. ಎ. ಚೆಟ್ಟಿಯವರ ಚಿತ್ರಗಳಲ್ಲಿನ ವರ್ಣಶೋಭೆಯ ತಾಂತ್ರಿಕ ವಿಧಾನ ಅಮೋಘವೆನಿಸುತ್ತವೆ. ಎಂ. ಟಿ. ವಿ. ಆಚಾರ್ಯರು ಪೌರಾಣಿಕ ಕಥಾವಸ್ತುಗಳ ನಿರೂಪಣೆಗೆ ಹೆಸರುವಾಸಿ ಯಾಗಿದ್ದಾರೆ. ಎಸ್. ಎನ್. ಸ್ವಾಮಿಯವರು ರೇಖೆ ಹಾಗೂ ತೈಲ ವರ್ಣಗಳಲ್ಲಿ ರಚಿಸಿದ ಭಾವಚಿತ್ರಗಳು, ಟಂಕಸಾಲೆಯವರು ರಚಿಸಿದ ನಿಸರ್ಗದೃಶ್ಯಗಳು, ಹಾಗೆಯೇ ಎನ್. ಹನಮಯ್ಯ ಮತ್ತು ಎಫ್. ಜಿ. ಯಲವಟ್ಟಿಯವರುಗಳು ಜಲವರ್ಣದಲ್ಲಿ ರಚಿಸಿದ ಚಿತ್ರಗಳು ಕಲೆಯ ಬಗೆಗೆ ತಿಳುವಳಿಕೆ ಇಲ್ಲದವರಿಗೂ ಸಂತೋಷ ಉಂಟು ಮಾಡುವಂತಿದೆ. ಇದರಂತೆಯೇ ವೈ. ನಾಗರಾಜು, ಬಿ. ಎಚ್. ರಾಮಚಂದ್ರ, ಎಸ್. ಆರ್. ಅಯ್ಯಂಗಾರ್, ಎಸ್. ಎನ್. ಸುಬ್ಬಕೃಷ್ಣ, ಎಂ. ಎಚ್. ರಾಮು, ಮತ್ತಿತರರು ಭಾವಚಿತ್ರ ರಚನೆಗೆ ಪ್ರಸಿದ್ಧರಾಗಿದ್ದಾರೆ. ರುಮಾಲೆ ಚೆನ್ನಬಸವಯ್ಯ, ಶುದ್ಧೋದನ, ಸುಬ್ಬಕೃಷ್ಣ, ಎಂ. ಎಸ್. ಚಂದ್ರಶೇಖರ್, ಸೋಮಸುಂದರ, ಪಿ. ಆರ್. ತಿಪ್ಪೇಸ್ವಾಮಿ, ಮರಿಸ್ವಾಮಿ ಮತ್ತು ಇತರರು, ಗ್ರಾಮ್ಯ ಜೀವನದ ವಿವಿಧ ಮುಖಗಳನ್ನು ವರ್ಣರಂಜಿತವಾದ ಅವರವರದೇ ವಿಶಿಷ್ಟ ಶೈಲಿಯಲ್ಲಿ ಗ್ರಹಿಸಿದ್ದಾರೆ. ಭಾರತೀಯ ಸಂಸ್ಕೃತಿ ಮತ್ತು ಸಂಪ್ರದಾಯದ ಸಂಕೇತಗಳಾದ ಗುಡಿ, ದೇವಾಲಯಗಳ ದೃಶ್ಯವನ್ನು ಚಿತ್ರಿಸುವುದರಲ್ಲಿ ಪಿ. ಆರ್. ತಿಪ್ಪೇಸ್ವಾಮಿಯವರು ಸಿದ್ಧಹಸ್ತರು.

ಧೃಡವಾದ ರೇಖಾಚಿತ್ರಗಳು ಹಾಗೂ ವ್ಯಂಗ್ಯಚಿತ್ರಗಳೂ ಸಹ ನಕಾಶೆ ಕಲೆಯ ಇನ್ನೊಂದು ಪ್ರಭೇದವೆನ್ನಬಹುದು. ಬಳ್ಳಾರಿಯ ಕೊಂಡಾಚಾರಿ, ಪುರುಷೋತ್ತಂ, ಅರಗಂ ಕೃಷ್ಣ ಮೂರ್ತಿ, ಶೇವಗೂರು, ಬಾಯಿರಿ, ಟಿ. ಕೆ. ರಾಮರಾವ್, ಕೆ. ಬಿ. ಕುಲಕರ್ಣಿ, ಮುಂತಾದವರು ಈ ಕಲೆಯಲ್ಲಿ ಪ್ರಸಿದ್ಧರು. ಹಾಗೆಯೇ ವ್ಯಂಗ್ಯಚಿತ್ರ ರಚನೆಯಲ್ಲಿ ಆರ್. ಎಸ್. ನಾಯ್ಡು, ಆರ್. ಕೆ. ಲಕ್ಷ್ಮಣ್, ಆರ್. ಮೂರ್ತಿ, ರಮೇಶ್, ಗೋಪಾಲ್, ಜಿ. ವೈ. ಹುಬ್ಳೀಕರ್, ರಂಗನಾಥ್, ಎನ್. ಸಿ. ರಘು, ಎಸ್. ಕೆ. ನಾಡಿಗ್, ಮತ್ತು ಇತರರು ಪ್ರಸಿದ್ಧರಾದವರು.

ಸಾಂಪ್ರದಾಯಿಕ ಮತ್ತು ನವ್ಯ ಎರಡೂ ಶೈಲಿಯಲ್ಲಿಯೂ ಪರಿಣಿತರಾದ ಕೆ. ಕೆ. ಹೆಬ್ಬಾರರೂ ರೇಖಾಚಿತ್ರ ರಚನೆಯಲ್ಲಿ ನಿಸ್ಸೀಮರೆನಿಸಿಕೊಂಡರು. ಸಮಕಾಲೀನ ಕಲೆಯಲ್ಲಿ ಪಿ. ಸುಬ್ಬ ರಾವ್, ಆರ್. ಎಂ. ಹಡಪದ್, ಜಿ. ಎಸ್. ಶೆಣೈ, ಎಸ್. ಜಿ. ವಾಸುದೇವ್, ಅಲ್ಫಾಂಜೊ, ಮುಂತಾದವರು ಪ್ರಸಿದ್ಧರು. ಇವರುಗಳೇ ಅಲ್ಲದೇ ಜಿ. ಎಸ್. ದಂಡಾವತಿಮಠ, ಹಾಲಭಾವಿ, ವಿ. ಜಿ. ಶೆಣೈ, ಬಿ. ಜಿ. ಬಡಿಗೇರ, ಎಂ. ಎ. ಚೆಟ್ಟಿ, ಬಿ. ಜಿ. ಗೌಡ, ಟಿ. ಪಿ. ಅಕ್ಕಿ, ಎಸ್. ಎಂ. ಪಂಡಿತ್, ರಾಮನರಸಯ್ಯ, ರಘೋತ್ತಮ ಪುಟ್ಟಿ, ಗೂಳಣ್ಣನವರ್, ಎಂ. ಈ. ಗುರು, ಎಸ್. ಕಾಳಪ್ಪ, ಎಂ. ಎಸ್. ನಂಜುಂಡರಾವ್, ಎಂ. ಬಿ. ಬಸವರಾಜ್, ವಿಷ್ಣುದಾಸ್, ರಾಮದಾಸ್, ಸುಂಕದ್, ಮನೋಳಿ ಮತ್ತು ಇತರರು ರಾಜ್ಯದ ಚಿತ್ರಕಲೆಯನ್ನು ಶ್ರೀಮಂತ ಗೊಳಿಸಿದ್ದಾರೆ. ಮಹಿಳಾ ಕಲಾವಿದರಲ್ಲಿ ಪಿ. ಆರ್. ಕಮಲಮ್ಮ, ಸುಭಾಷಿಣಿದೇವಿ, ಎಸ್. ಧನಲಕ್ಷ್ಮಿ, ಎಂ. ಜಿ. ಕಮಲಾಕ್ಷಿ ಮುಂತಾದವರು ಪ್ರಸಿದ್ಧರು. ಸಾಂಪ್ರದಾಯಿಕ ಶೈಲಿಯಲ್ಲಿ ದೇವತಾ ಮೂರ್ತಿಗಳನ್ನು ರೇಖೆ ಮತ್ತು ವರ್ಣಗಳಲ್ಲಿ ಚಿತ್ರಿಸುವುದರಲ್ಲಿ ಸಿದ್ದಲಿಂಗಸ್ವಾಮಿ, ನಾಗೇಂದ್ರ ಸ್ಥಪತಿ ಹಾಗೂ ಮಹಾದೇವ ಸ್ವಾಮಿ ಇವರುಗಳು ನೆನಪಿಗೆ ಬರುತ್ತಾರೆ. ರಚನಾತ್ಮಕ ರೀತಿಯ ಕಲಾವಿಮರ್ಶಕರೂ ಕರ್ನಾಟಕದಲ್ಲಿ ಅನೇಕ ರಿದ್ದಾರೆ. ಅವರಲ್ಲಿ ನೆನಪಿಗೆ ಬರುವವರು ಪಾಂಡವಪುರದ ಜಿ. ವೆಂಕಟಾಚಲಂ, ಡಾ|| ಶಿವರಾಮ ಕಾರಂತರು, ಅ. ನ. ಕೃಷ್ಣ ರಾಯರು, ಪ್ರೊ|| ಎಸ್. ಕೆ. ರಾಮಚಂದ್ರರಾಯರು, ಬಿ. ವಿ. ಕೆ. ಶಾಸ್ತ್ರಿ ಮತ್ತು ಪಿ. ಆರ್. ತಿಪ್ಪೇಸ್ವಾಮಿ.

## ಶಿಕ್ಷಣ ಸೌಲಭ್ಯಗಳು

ರಾಜ್ಯದಲ್ಲಿ ಕಲಾ ಶಿಕ್ಷಣ ನೀಡುವ ಸರ್ಕಾರಿ ಸಂಸ್ಥೆಗಳು ಎರಡು ಮಾತ್ರ. ಹಿಂದಿನ ಮೈಸೂರು ಸಂಸ್ಥಾನದಲ್ಲಿ ಶ್ರೀ ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ಇದ್ದಿತು. ಮೈಸೂರು ನಗರದಲ್ಲಿ 1913ರಲ್ಲಿ ಪ್ರಾರಂಭವಾದ ಈ ಸಂಸ್ಥೆಯಲ್ಲಿ ಇತರ ಕಸಬುಗಳ ಜೊತೆಗೆ ಚಿತ್ರಕಲೆಯನ್ನೂ ಕಲಿಸಲಾಗುತ್ತಿದೆ. ಇದರಿಂದ ಈ ಕಲೆಯು ಸಾಮಾನ್ಯ ಜನತೆಗೂ ಮುಟ್ಟಿ ಅವರಲ್ಲಿ ಅಭಿರುಚಿ ಬೆಳೆಯಲು ಸಾಧಕವಾಗಿದೆ. ಈ ಸಂಸ್ಥೆಯಲ್ಲಿ ಇತರ ತಾಂತ್ರಿಕ ವಿದ್ಯೆಗಳ ಜೊತೆಗೆ ಚಿತ್ರಕಲೆ, ಶಿಲ್ಪ ಮುಂತಾದವು ಗಳಲ್ಲಿಯೂ ಶಿಕ್ಷಣವೀಯಲಾಗುತ್ತಿದೆ. ಹೀಗೆಯೇ ಕಲಾ ಶಿಕ್ಷಣ ನೀಡುತ್ತಿರುವ ಇನ್ನೊಂದು ಸಂಸ್ಥೆ ದಾವಣಗೆರೆಯ ಕಲಾ ಮತ್ತು ಕರಕುಶಲ ವಿದ್ಯಾಲಯ. ಈಗ ರಾಜ್ಯದ ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿರುವ ಈ ಶಾಲೆ 1964ರಲ್ಲಿ ಸ್ಥಾಪಿತ ವಾಯಿತು. ಈ ಶಾಲೆಯಲ್ಲಿ ಲಲಿತಕಲೆ (ಚಿತ್ರಕಲೆ), ಅಪ್ಲೈಡ್ ಆರ್ಟ್ಸ್ ಅಥವಾ ಅನ್ವಯ ಕಲೆ ಎರಡರಲ್ಲಿಯೂ ಶಿಕ್ಷಣವೀಯ ಲಾಗುತ್ತಿದೆ. ಈ ಎರಡು ಶಿಕ್ಷಣ ಸಂಸ್ಥೆಗಳಲ್ಲದೆ ಲಲಿತಕಲೆ

ಮತ್ತು ಕರಕುಶಲ ಕಲೆಗಳಲ್ಲಿ ಅನೇಕ ಖಾಸಗಿ ಸಂಸ್ಥೆಗಳೂ ಶಿಕ್ಷಣ ನೀಡುತ್ತಿವೆ. ಅವುಗಳಲ್ಲಿ 1919ರಲ್ಲಿ ಎ. ಎನ್. ಸುಬ್ಬರಾಯರು ಸ್ಥಾಪಿಸಿದ ಕಲಾಮಂದಿರ, ಧಾರವಾಡದಲ್ಲಿ 1935ರಲ್ಲಿ ಡಿ. ಹಾಲಭಾವಿಯವರು ಸ್ಥಾಪಿಸಿದ ಕಲಾ ಶಾಲೆ, 1941ರಲ್ಲಿ ಗದಗಿನಲ್ಲಿ ಸ್ಥಾಪಿತವಾದ ವಿಜಯ ಆರ್ಟ್ ಇನ್ಸ್‌ಟಿಟ್ಯೂಟ್, ಹುಬ್ಬಳ್ಳಿಯಲ್ಲಿ ಸ್ಥಾಪಿತವಾದ ಶ್ರೀ ವಿಜಯ ಮಹಂತೇಶ ಲಲಿತ ಕಲಾ ಶಾಲೆ, ಮೈಸೂರಿನಲ್ಲಿ ಸ್ಥಾಪಿತವಾದ ಕಲಾ ನಿಕೇತನ, ಬೆಂಗಳೂರಿನಲ್ಲಿ ಸ್ಥಾಪಿತವಾದ ಚಿತ್ರಕಲಾ ವಿದ್ಯಾಲಯ, ಚಿತ್ರಕಲಾ ಪರಿಷತ್, ಕೆನ್ ಸ್ಕೂಲ್ ಆಫ್ ಆರ್ಟ್, ಆಚಾರ್ಯ ಚಿತ್ರಕಲಾ ಭವನ, ಧಾರವಾಡದ ಕಲಾ ಕೇಂದ್ರ ಮತ್ತು ಸ್ಕೂಲ್ ಆಫ್ ಆರ್ಟ್ಸ್, ಕಲ್ಬುರ್ಗಿಯ ಐಡಿಯಲ್ ಫೈನ್ ಆರ್ಟ್ ಇನ್ಸ್‌ಟಿಟ್ಯೂಟ್, ಬೆಳಗಾವಿಯಲ್ಲಿರುವ ಉಮ್ಮರ್ ಖಯಾಂ ಸ್ಕೂಲ್ ಆಫ್ ಆರ್ಟ್ ಚಿತ್ರಮಂದಿರ, ಬೆನ್‌ಯಾನ್ ಸ್ಮಿತ್ ಡಿ.ಟಿ.ಸಿ. ಕಲಾಧ್ಯಾಪಕರ ಶಾಲೆ, ದಕ್ಷಿಣ ಕನ್ನಡದ ಕಟಪಾಡಿಯಲ್ಲಿರುವ ಚಿತ್ರಕಲಾ ಮಂದಿರ, ರೇಖಾಚಿತ್ರ ಹಾಗೂ ಚಿತ್ರಕಲೆಯಲ್ಲಿ ಶಿಕ್ಷಣ ನೀಡುತ್ತಿರುವ ಪ್ರಮುಖ ಕಲಾ ಶಿಕ್ಷಣ ಸಂಸ್ಥೆಗಳು. ಇನ್ನೂ ಕರ್ನಾಟಕ ಸರಕಾರವೇ ಸೆಕೆಂಡರಿ ಎಜುಕೇಷನ್ ಬೋರ್ಡ್ ಮುಖಾಂತರ ಲಲಿತಕಲೆಗಳ ವಿವಿಧ ಹಂತದ ಪರೀಕ್ಷೆಗಳನ್ನು 1967ನೇ ಇಸವಿಯಿಂದ ನಡೆಸುತ್ತಿದೆ.

ಇದಲ್ಲದೆ ಡಿ. ಎಂ. ಸಿ. ಮತ್ತು ಶಿಲ್ಪಕಲೆಯ ಬಗೆಗೆ ನಾನಾ ದರ್ಜೆಯ ಪರೀಕ್ಷೆಗಳನ್ನು ನಡೆಸುತ್ತಿದೆ. ಹೀಗೆ ಉಚ್ಚಶ್ರೇಣಿಯ ಕಲಾ ಪರೀಕ್ಷೆಗಳಿಗೆ ಬರುವ ಅಭ್ಯರ್ಥಿಗಳ ಸಂಖ್ಯೆ ಕ್ರಮೇಣ ಹೆಚ್ಚುತ್ತಿದೆ. 1967ರಲ್ಲಿ 275 ಮಂದಿ ಪರೀಕ್ಷೆಗೆ ಕುಳಿತಿದ್ದರೆ, 1980-81ರಲ್ಲಿ ಈ ಸಂಖ್ಯೆ 1,195ಕ್ಕೆ ಏರಿದೆ. 1981-82ರಲ್ಲಿ 738 ಮಂದಿ ಕುಳಿತಿದ್ದರು. ಈ ಉಚ್ಚಕಲಾ ಪರೀಕ್ಷೆಗಳೇ ಅಲ್ಲದೆ ಚಿತ್ರಕಲೆಯಲ್ಲಿ ಲೋಯರ್ ಮತ್ತು ಹೈಯ್ಯರ್ ಪರೀಕ್ಷೆಗಳನ್ನು ಈ ಮಂಡಳಿ 1967ರಿಂದ ನಡೆಸುತ್ತಿದೆ. ಲೋಯರ್ ವಿಭಾಗದಲ್ಲಿ 1967ರಲ್ಲಿ 6,073 ಮಂದಿ ಕುಳಿತು 4,361 ಮಂದಿ ತೇರ್ಗಡೆಯಾಗಿದ್ದರು. ಹೈಯ್ಯರ್ ವಿಭಾಗದಲ್ಲಿ 3,081 ಮಂದಿ ಕುಳಿತು 2,363 ಮಂದಿ ತೇರ್ಗಡೆಯಾದರು. ಅದೇ 1982ರಲ್ಲಿ ಲೋಯರ್ ವಿಭಾಗದಲ್ಲಿ 20,558 ಮಂದಿ ಕುಳಿತು 12,269 ಮಂದಿ ತೇರ್ಗಡೆಯಾದರು ಮತ್ತು ಹೈಯ್ಯರ್ ವಿಭಾಗದಲ್ಲಿ 13,205 ಮಂದಿ ಕುಳಿತು 9,243 ಮಂದಿ ತೇರ್ಗಡೆಯಾದರು. ಬಾಲ್ಯದಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ ಹುಟ್ಟಿಸುವ ಸಲುವಾಗಿ ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳಲ್ಲಿ ಚಿತ್ರಕಲೆಯನ್ನು ಅಗತ್ಯ ಪಠ್ಯವಿಷಯವಾಗಿ ಸೇರಿಸಲಾಗಿದೆ. ಸುಮಾರು 500 ಪ್ರೌಢಶಾಲೆಗಳಲ್ಲಿ ಡ್ರಾಯಿಂಗ್ ಮತ್ತು ಚಿತ್ರಕಲೆಯಲ್ಲಿ ಅವಶ್ಯಕ ಶಿಕ್ಷಣ ಪಡೆದ ಉಪಾಧ್ಯಾಯರಿದ್ದಾರೆ. ಇದಲ್ಲದೆ ರೋಟರಿ, ಲಯನ್ಸ್ ಕ್ಲಬ್, ಜ್ಯೂನಿಯರ್ ಚೇಂಬರ್ ಮುಂತಾದ ಖಾಸಗಿ ಸಂಸ್ಥೆಗಳು ಮಕ್ಕಳಿಗೆ ಸ್ಥಳದಲ್ಲೇ ಚಿತ್ರ ರಚಿಸುವ ಸ್ಪರ್ಧೆಗಳನ್ನು ನಡೆಸುತ್ತಿದೆ.

ಮೂರನೇಯ ಯೋಜನೆಯ ಕಾಲದಲ್ಲಿ ರಾಜ್ಯದಲ್ಲಿ ಲಲಿತ ಕಲಾ ಅಕ್ಯಾಡೆಮಿಯು 1962ರಲ್ಲಿ ಸ್ಥಾಪಿತವಾಗಿ ಕಲೆ ಮತ್ತು ಕಲಾವಿದರಿಗೆ ಪ್ರೋತ್ಸಾಹ ಮತ್ತು ಸಹಾಯ ನೀಡುವ ಉದ್ದಿಶ್ಯದಿಂದ ಕೂಡಿದೆ. ರಾಜ್ಯದಲ್ಲಿಯೂ ರಾಜ್ಯದ ಹೊರಗೂ ಕಲಾ ಪ್ರದರ್ಶನಗಳನ್ನು ನಡೆಸುವ ಸಲುವಾಗಿ ಅಕ್ಯಾಡೆಮಿ ಆರ್ಥಿಕ ನೆರವು ನೀಡುತ್ತದೆ. ಕಲೆಯ ಬಗೆಗೆ ಪುಸ್ತಕ ಪ್ರಕಟಣೆ ಮಾಡುತ್ತದೆ. ಕಲೆಯ ಅಭಿವೃದ್ಧಿಯಲ್ಲಿ ಶ್ಲಾಘನೀಯ ಸೇವೆ ಸಲ್ಲಿಸಿದ ಕಲಾವಿದರಿಗೆ ಗೌರವ ಪ್ರಶಸ್ತಿಗಳನ್ನು ನೀಡುವುದರ ಜೊತೆಗೆ ಮಾಸಾಶನ ಮುಂತಾದವುಗಳ ಮೂಲಕ ಆರ್ಥಿಕವಾಗಿಯೂ ನೆರವಾಗಲು ಸಹಾಯಕವಾಗಿದೆ.

1960ರಲ್ಲಿ ಮೈಸೂರಿನಲ್ಲಿ ಸ್ಥಾಪಿತವಾದ ಚಿತ್ರಶಿಲ್ಪ ಅಕ್ಯಾಡೆಮಿ, ಚಿತ್ರಕಲಾ ಸಂಘ, ಬೆಂಗಳೂರಿನ ಚಿತ್ರಕಲಾ ಪರಿಷತ್, ಚಿತ್ರ ಕಲಾವಿದರ ಮಹಾ ಪರಿಷತ್, ಮುಂತಾದ ಸಂಸ್ಥೆಗಳು ಕಲಾವಿದರನ್ನು ಒಟ್ಟುಗೂಡಿಸುವುದು, ಉತ್ತಮ ಮಟ್ಟದ ಕಲಾ ಪ್ರದರ್ಶನ ಮತ್ತು ವಿಚಾರ ಸಂಕಿರಣಗಳನ್ನು ಏರ್ಪಡಿಸುವುದು, ಮುಂತಾದ ಕಾರ್ಯಗಳಲ್ಲಿ ನಿರತವಾಗಿವೆ. ಅನೇಕ ದಶಕಗಳಿಂದ ಮೈಸೂರು ದಸರಾ ಮತ್ತು ಪ್ರದರ್ಶನದ ಅಂಗವಾಗಿ ನಡೆವ ಕಲಾ ಪ್ರದರ್ಶನ ಶ್ರೀ ಚಾಮರಾಜೇಂದ್ರ ಕಲಾ ಶಾಲೆ, ಮೈಸೂರು ಅರಮನೆ, ಬೆಂಗಳೂರಿನ ವೆಂಕಟಪ್ಪ ಕಲಾದರ್ಶನ ಶಾಲೆ, ಹಾರ್ವೆ ಆರ್ಟ್ ಗ್ಯಾಲರಿ ಮುಂತಾದ ಸಂಸ್ಥೆಗಳು ಕರ್ನಾಟಕದಲ್ಲಿ ಕಲೆಯಲ್ಲಿ ಚುರುಕಾದ ಕಾರ್ಯಕಲಾಪಗಳು ನಡೆಯಲು ಸಾಧಕವಾಗಿವೆ.

ಲಲಿತ ಕಲೆಗಳಿಗೂ ಫೋಟೋಗ್ರಫಿ ಅಥವಾ ಛಾಯಾ ಚಿತ್ರ ಕಲೆಗೂ ನಿಕಟ ಸಂಪರ್ಕವಿದೆ. 1970ರ ಆದಿಭಾಗದಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಫೋಟೋಗ್ರಫಿಕ್ ಸೊಸೈಟಿ ಬಹು ಪರಿಣಾಮಕಾರಿಯಾಗಿ ಕೆಲಸಮಾಡುತ್ತಿದೆ. ಈ ಸಂಸ್ಥೆಯು ಚುರುಕಾಗಿ ಕಾರ್ಯಮಗ್ನವಾಗಿದ್ದ ಈ ಅವಧಿಯಲ್ಲಿ ಅದು ಗ್ರೇಟ್ ಬ್ರಿಟನ್ನಿನ ರಾಯಲ್ ಫೋಟೋಗ್ರಾಫಿಕ್ ಸೊಸೈಟಿಯಿಂದ ತನ್ನ ಮೂವರು ಸದಸ್ಯರಿಗೆ ಫೆಲೋಷಿಪ್ ಪ್ರಶಸ್ತಿ, ಹನ್ನೊಂದು ಮಂದಿಗೆ ಅಸೋಸಿಯೇಟ್ ಫೆಲೋಷಿಪ್ ಪ್ರಶಸ್ತಿ, ಫ್ರಾನ್ಸಿನ ಫೆಡರೇಷನ್ ಇಂಟರ್‌ನ್ಯಾಷನಲ್ ಡಿ'ಲಾ ಆರ್ಟ್ ಫೋಟೋಗ್ರಾಫಿಕ್ ಸಂಸ್ಥೆಯ ಒಂಬತ್ತು ಡಿಪ್ಲೊಮಾ ಡಿ ಹಾನರ್ ಆರ್ಟಿಸ್ಟ್ ಪ್ರಶಸ್ತಿ, ಅಮೆರಿಕಾ ಮತ್ತು ನ್ಯೂಜಿಲೆಂಡ್ ಫೋಟೋಗ್ರಾಫಿಕ್ ಸಂಸ್ಥೆಗಳ ಫೆಲೋಷಿಪ್ ತಲಾ ಒಂದೊಂದು ಪ್ರಶಸ್ತಿ, ಶ್ರೀಲಂಕಾದ ನ್ಯಾಷನಲ್ ಫೋಟೋಗ್ರಾಫಿಕ್ ಆರ್ಟ್ ಸೊಸೈಟಿಯ ಒಂದು ಶಿಷ್ಯವೇತನದ ಪ್ರಶಸ್ತಿಗಳನ್ನು ಗಳಿಸಿದೆ. ಇದರ ಜೊತೆಗೆ ತರುಣರಲ್ಲಿ ಪ್ರತಿಭೆಯನ್ನು ಗುರುತಿಸಿ ಅದನ್ನು ಅಭಿವೃದ್ಧಿಪಡಿಸಿಕೊಂಡು ಬರುವುದರಲ್ಲಿಯೂ ಯಶಸ್ವಿಯಾಗಿದೆ. ತನ್ನ ಇತರ ಕಲಾ ಪ್ರದರ್ಶನಗಳ ಜೊತೆಗೆ 1979ನೇಯ ವರುಷ

ದಲ್ಲಿ ನಡೆದ ಅಂತರರಾಷ್ಟ್ರೀಯ ಮಕ್ಕಳ ವರುಷದಲ್ಲಿ 'ಬಾಲ ಜಗತ್' ಎಂಬ ಶೀರ್ಷಿಕೆಯ ಮಕ್ಕಳ ಚಿತ್ರಗಳ ವಿಶೇಷ ಪ್ರದರ್ಶನ ವನ್ನು ನಡೆಸಿದೆ. ಇದರ ಜೊತೆಗೆ ಬೆಂಗಳೂರಿನಲ್ಲಿ ಕಲಾ ವಿಲಾಸಿ ಛಾಯಾ ಚಿತ್ರಗಾರರ ಒಂದು ಸಂಸ್ಥೆಯಿದ್ದು ಗಮನಾರ್ಹ ಕೆಲಸ ಮಾಡುತ್ತಿದೆ.

## ಕರ್ನಾಟಕದಲ್ಲಿ ಸಂಗೀತಕಲೆ

ಭಾರತೀಯ ಸಂಗೀತವು ಹಿಂದೂಸ್ತಾನಿ ಮತ್ತು ಕರ್ನಾಟಕ ಎಂಬ ಎರಡು ಪ್ರಧಾನ ಪದ್ಧತಿಗಳಿಂದ ಕೂಡಿದೆ. ಹಿಂದೂಸ್ತಾನಿ ಸಂಗೀತವು ಉತ್ತರ ಭಾರತದಲ್ಲೆಲ್ಲಾ ಪ್ರಚಾರದಲ್ಲಿದ್ದರೆ ಕರ್ನಾಟಕ ಸಂಗೀತವು ದಕ್ಷಿಣ ಭಾರತದ ನಾಲ್ಕೂ ರಾಜ್ಯಗಳಲ್ಲಿ ಶೋಭಿಸುತ್ತಿದೆ. ಸ್ವಾರಸ್ಯದ ಸಂಗತಿಯೆಂದರೆ ಕರ್ನಾಟಕ ರಾಜ್ಯದಲ್ಲಿ ಈ ಎರಡೂ ಪದ್ಧತಿಗಳೂ ಪ್ರಚಾರದಲ್ಲಿವೆ. ಕರ್ನಾಟಕದಲ್ಲಿ ತುಂಗಭದ್ರಾ ನದಿಯು ಈ ಎರಡನ್ನೂ ವಿಭಜಿಸುವ ಸ್ಥೂಲವಾದ ರೇಖೆಯಂತಿದೆ ಎನ್ನಬಹುದು. ಸಂಗೀತಕ್ಕೆ ಸಂಬಂಧಿಸಿದಂತೆ ಕರ್ನಾಟಕ ಎಂಬ ಪದವು ದಕ್ಷಿಣ ಭಾರತದ ಆಂಧ್ರ ಪ್ರದೇಶ, ಕೇರಳ, ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಪ್ರಚಲಿತವಿರುವ ಸಂಗೀತಕ್ಕೆ ಅನ್ವಯಿಸುತ್ತದೆ. ಭಾರತೀಯ ಸಂಗೀತದ ಬೆಳವಣಿಗೆಯಲ್ಲಿ ಕರ್ನಾಟಕದ ಪಾತ್ರವು ಬಹು ಮುಖ್ಯವಾದುದು ಎಂಬುದು ಗಮನಾರ್ಹ ವಿಷಯ. ಪುರಾತನ ಶಾಸನ, ಸ್ಮಾರಕಗಳು, ಕಾವ್ಯ ಗಳೇ ಮುಂತಾದವುಗಳಲ್ಲಿ ದೊರೆವ ಉಲ್ಲೇಖಗಳಿಂದ ಈ ಅಂಶವು ಧೃಢಪಡುತ್ತದೆ.

ಸಾಹಿತ್ಯ ಹಾಗೂ ಸೃಜನಾತ್ಮಕ ಕಲೆಗಳಂತೆಯೇ ಸಂಗೀತವೂ ಕರ್ನಾಟಕದಲ್ಲಿ ಪುರಾತನ ಕಾಲದಿಂದಲೂ ಅನುಷ್ಠಾನ ದಲ್ಲಿದೆ. ಅದು ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಅವಿ ಭಾಜ್ಯ ಭಾಗವಾಗಿತ್ತು. ಎಲ್ಲೋರ ಗವಿಗಳಿಂದ ಹಿಡಿದು ವಿಜಯನಗರ ಕಾಲದವರೆಗೆ ಕೆತ್ತಲಾದ ಶಿಲ್ಪಗಳು ಸಂಗೀತ ಕಲೆಯ ವೈವಿಧ್ಯಪೂರ್ಣ ವಿಕಾಸಕ್ಕೆ ಸಾಕ್ಷೀಭೂತವಾಗಿವೆ. ಯುದ್ಧ ಮತ್ತು ಶಾಂತಿ ಎರಡು ಸಮಯಗಳಲ್ಲಿಯೂ ಸಂಗೀತವು ಅತ್ಯ ವಶ್ಯಕವಾಗಿತ್ತು. ಸಂಗೀತ ಲಕ್ಷಣ ಗ್ರಂಥಗಳಲ್ಲಿ ಬಹುತೇಕ ಪುರಾತನ ಆಚಾರ್ಯರನ್ನು ಉಲ್ಲೇಖಿಸಲಾಗುತ್ತದೆ. ಅದರ ಕಲೆಯ ಕಲ್ಪನೆಗಳಿಗೆ ಖಚಿತ ಆಕಾರವಿತ್ತ ಕಲಾವಿದರ ಪ್ರಸ್ತಾಪ ವಿಲ್ಲ. ಇಷ್ಟಾದರೂ ಪುರಾತನ ಕನ್ನಡ ಕಾವ್ಯ ಮತ್ತು ಇತಿಹಾಸ ಗ್ರಂಥಗಳಲ್ಲಿ ಆಯಾ ಕಾಲದಲ್ಲಿ ಪ್ರಸಿದ್ಧರಾಗಿದ್ದ ಗಾಯಕ ಹಾಗೂ ವಾದ್ಯವಾದಕರ ಉಲ್ಲೇಖಗಳು ದೊರೆಯುತ್ತವೆ.

ನಿದರ್ಶನವಾಗಿ ವೀರಶೈವ ಸಾಹಿತ್ಯದಲ್ಲಿ ಬರುವ ಸಕಲೇಶ ಮಾದರಸನನ್ನು ನೆನೆಯಬಹುದು. ಆತನು ಹತ್ತಾರು ಬಗೆಯ ವೀಣೆಯನ್ನು ನುಡಿಸುತ್ತಿದ್ದ ಸಂದರ್ಭವನ್ನು ವರ್ಣಿಸಲಾಗಿದೆ. ಹಾಗೆಯೇ ಕಹಳೆವಾದ್ಯದಲ್ಲಿ ನಿಷ್ಣಾತಳಾಗಿದ್ದ ಅಲ್ಲಮನದೇವಿ, ದಂಡಿಗೆಯ ವಾದನದಲ್ಲಿ ನಿಷ್ಣಾತಳಾಗಿದ್ದ ಇನ್ನೊಬ್ಬ ಮಹಿಳೆ ಗುಡ್ಡದೇವಿಯ ಪ್ರಸ್ತಾಪವಿದೆ. ಹೀಗೆ ಸಂಗೀತದ ಬಗೆಗೆ ಪುರಾತನ ಕಾವ್ಯಗಳಲ್ಲಿ ಬರುವ ವರ್ಣನೆಗಳನ್ನು ಪರಿಶೀಲಿಸಿದಾಗ ಅನೇಕ ಸ್ವಾರಸ್ಯ ಸಂಗತಿಗಳು ಕಂಡುಬರುತ್ತವೆ. ಈ ಉಲ್ಲೇಖ ಗಳಂತೆ ಅಂದು ವೀಣೆ ಮತ್ತು ಕಿನ್ನರ ವಾದ್ಯಗಳು ಬಹುಪ್ರಿಯ ವಾಗಿದ್ದವು. ಅಭಿಲಷಿತಾರ್ಥ ಚಿಂತಾಮಣಿ (ಮಾನಸೋಲ್ಲಾಸ), ಸಂಗೀತ ರತ್ನಾಕರ ಮುಂತಾದ ಶಾಸ್ತ್ರ ಗ್ರಂಥಗಳಲ್ಲಿ ಕಿನ್ನರಿ ವಾದ್ಯದ ಬಗೆಗೆ ದೀರ್ಘ ವಿವರಗಳಿವೆ. ಕಿನ್ನರಿಯ ಎರಡು ಪ್ರಕಾರಗಳಾದ ಲಘು ಕಿನ್ನರಿ, ಬೃಹತ್ ಕಿನ್ನರಿ, ಅವುಗಳ ಆಕಾರ, ಅಂಗಗಳು, ವಾದನತಂತ್ರ, ಮುಂತಾದವುಗಳನ್ನು ದೀರ್ಘ ವಾಗಿ ಪ್ರಸ್ತಾಪಿಸಲಾಗಿದೆ. ಈ ವಾದ್ಯವಾದನ ಪ್ರವೀಣ ಶರಣ ಕಿನ್ನರಿ ಬೊಮ್ಮಯ್ಯನ ಉಲ್ಲೇಖ ಬರುತ್ತದೆ. ಈ ಎಲ್ಲಾ ವಾದ್ಯಗಳಲ್ಲಿಯೂ ಬಹು ಜನಪ್ರಿಯವಾಗಿದ್ದುದು ವೀಣೆ. ಅದಕ್ಕೆ ಒಂದು ಮುಖ್ಯಸ್ಥಾನವೂ ಇತ್ತು. ಪುರಾತನ ಕಾವ್ಯಗಳಲ್ಲಿ ವೀಣೆಯ ಬಗೆಗೆ ಸುದೀರ್ಘ ವಿವರಗಳು ದೊರೆಯುತ್ತವೆ. ಅದರ ವಾದನದ ಸೊಗಸು, ಪ್ರತಿಭಾವಂತ ವಾದಕರೇ ಮುಂತಾದ ವಿಷಯ ಗಳೇ ಅಲ್ಲದೆ ಇನ್ನೂ ಇತರ ಸ್ವಾರಸ್ಯ ಸಂಗತಿಗಳೂ ಕಾಣಬರು ತ್ತವೆ. ವೀಣೆಯು ಸ್ವಯಂವರದ ಮುಖ್ಯ ಪರೀಕ್ಷಾಸಾಧನ ವಾಗಿಯೂ ಉಲ್ಲೇಖಿತವಾಗಿದ್ದು ಈ ಸಂದರ್ಭದಲ್ಲಿ ವೀಣೆಯ ವಾದನದ ಸ್ಪರ್ಧೆಯಲ್ಲಿ ಗೆದ್ದವನನ್ನು ರಾಜಕುವರಿಯು ವರಿಸು ತ್ತಾಳೆ. ಪ್ರಸಿದ್ಧ ದೇವಾಲಯಗಳ ಸಿಬ್ಬಂದಿಯಲ್ಲಿ ವೈಣಿಕರೂ ಇದ್ದರು. ನಿತ್ಯಪೂಜಾವಿಧಿಗಳಲ್ಲಿ ನಿಯಮಿತ ಸಮಯದಲ್ಲಿ ಇವರು ವೀಣಾವಾದನ ಮಾಡಬೇಕಿತ್ತು. ಶ್ರೇಷ್ಠ ವೈಣಿಕರಿಗೆ ರಾಜ ಸನ್ಮಾನ ದೊರೆಯುತ್ತಿದ್ದ ದಾಖಲೆಗಳೂ ಇವೆ. ವಿಜಯನಗರದ ಚಕ್ರವರ್ತಿಗಳು, ವೀಣಾರಾಮಯ್ಯನೆಂಬುವನಿಗೆ ಇಂದಿನ ಹಾಸನ ಜಿಲ್ಲೆಯಲ್ಲಿ ಬಹುಮಾನವಾಗಿ ಜಹಗೀರು ಕೊಟ್ಟಿದ್ದರೆಂದು ತಿಳಿದುಬರುತ್ತದೆ. ಹಾಗೆಯೇ ದೇವರಾಯದುರ್ಗದಲ್ಲಿ ವಿರುಪಣ್ಣ ಎಂಬ ಹೆಸರಿನ 15ನೇಯ ಶತಮಾನದ ವೈಣಿಕನೊಬ್ಬನ ಶಿಲ್ಪವಿದೆ. ಯುದ್ಧವನ್ನು ಚಿತ್ರಿಸುವ ಶಿಲ್ಪ ಫಲಕಗಳಲ್ಲಿ ಸೈನಿಕರನ್ನು ಹುರಿದುಂಬಿಸಲು ಬಳಸುತ್ತಿದ್ದ ವಾದ್ಯಗಳ ಮಾದರಿಗಳನ್ನು ಕಾಣ ಬಹುದು. ರಾಜಾಸ್ಥಾನ, ದೇವಾಲಯಗಳಲ್ಲಿ ಅಲ್ಲದೆ ಮುಖ್ಯ ಧಾರ್ಮಿಕ ಸಮಾರಂಭಗಳಲ್ಲಿ ಗೌರವಸೂಚಕವಾದ ಪಂಚಮಹಾ ವಾದ್ಯಗಳ ರವ ಮೊಳಗುತ್ತಿತ್ತು.

ಸಂಗೀತದ ಬಗೆಗೆ ಅತಿ ಪ್ರಾಚೀನ ಉಲ್ಲೇಖವು ತಾಳಗುಂದದ ಶಾಸನದಲ್ಲಿ ಕಂಡುಬರುತ್ತದೆ. ಕದಂಬ ರಾಜರ ಕಾಲದ ಈ ಶಾಸನದಲ್ಲಿ ಅಂದು ನಗರ ಮತ್ತು ಅರಮನೆಗಳು ಸಂಗೀತದಿಂದ ಮೊಳಗುತ್ತಿದ್ದುವೆಂದು ಹೇಳಲಾಗಿದೆ. ಮುಂದೆ ಬಾದಾಮಿಯ ಚಲುಕ್ಯರ ಕಾಲದಲ್ಲಿ ದೇವಾಲಯಗಳಲ್ಲಿ ಸಂಗೀತಗಾರರು ನೇಮಿತ

ರಾಗಿರುತ್ತಿದ್ದರು. ವಿಜಯಾದಿತ್ಯನ ಪಟ್ಟದಕಲ್ಲಿನ ಶಾಸನದಲ್ಲಿ ದೇವಾಲಯಗಳಲ್ಲಿ ನೇಮಿತರಾದ ಸಂಗೀತಗಾರರಿಗೆ ಕೆಲವು ಸವಲತ್ತುಗಳನ್ನು ನೀಡಿದ ಪ್ರಸ್ತಾಪವಿದೆ. ಕ್ರಿ. ಶ. 1017ರ ಶಾಸನವೊಂದರಲ್ಲಿ ಸಂಗೀತ, ನಾಟ್ಯ ಇತ್ಯಾದಿಗಳಲ್ಲಿ ಪರಿಣಿತನಾದ ಉದಯಸಿಂಹನೆಂಬುವನ ಪ್ರಸ್ತಾಪವಿದೆ. ಮುಂದಿನ ಶತಮಾನಗಳ ಕೆಲವು ಶಾಸನವುಗಳಲ್ಲಿ ಸಂಗೀತದ ವಿವಿಧ ಪ್ರಕಾರಗಳಲ್ಲಿ ಪ್ರವೀಣರಾಗಿದ್ದ ರಾಜರು ಹಾಗೂ ರಾಜಮನೆತನದವರ ಉಲ್ಲೇಖಗಳಿವೆ. ಹೊಯ್ಸಳ ವಂಶದ ಅರಸರೂ, ಅವರ ಆಸ್ಥಾನದ ಕುಲೀನರೂ, ಸಂಗೀತ ಮತ್ತು ನೃತ್ಯಕಲೆಗಳ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರ ವಹಿಸಿದ್ದರು ಮತ್ತು ಮಾರ್ಗದರ್ಶಕರಾಗಿದ್ದರು. ಹೊಯ್ಸಳ ಸಾಮ್ರಾಜ್ಞಿ ಶಾಂತಲಾದೇವಿ ಸಂಗೀತ ಮತ್ತು ನೃತ್ಯಕಲೆಗಳಲ್ಲಿ ಪ್ರವೀಣೆಯಾಗಿದ್ದಳು. ಆ ಕಾಲದ ಸಾಹಿತ್ಯದಲ್ಲಿ ತಾಳ, ನಾನಾ ವಿಧವಾದ ತಮಟೆಗಳು, ಮುಂತಾದವುಗಳ ಪ್ರಸ್ತಾಪವಿದೆ. ವೀಣೆ, ಕೊಳಲು, ತಾಳ, ವಿಧವಿಧವಾದ ತಾಳವಾದ್ಯಗಳೇ ಮುಂತಾದುವನ್ನು ಅಂದಿನ ಕಾಲದ ಶಿಲ್ಪಗಳಲ್ಲಿ ರೂಪಿಸಲಾಗಿದೆ. ದೇವಾಲಯಗಳ ಉದ್ಯೋಗದವರಲ್ಲಿ ಸಂಗೀತಗಾರರು ಕಡ್ಡಾಯವಾಗಿರುತ್ತಿದ್ದರು. ನೃತ್ಯ ಮತ್ತು ಸಂಗೀತ ಕಲೆಗಳ ಅತಿ ಪುರಾತನ ಗ್ರಂಥವೆನಿಸಿದ ಭರತನ ನಾಟ್ಯಶಾಸ್ತ್ರವು ಕರ್ನಾಟಕದಲ್ಲಿ ಬಹು ಹಿಂದೆಯೇ ಪರಿಚಿತವಾಗಿದ್ದಂತೆ ಕಾಣಬರುವುದು. ಪ್ರಾಚೀನ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಲಿತವಿದ್ದ ಸಂಗೀತದಲ್ಲಿ ಮೂರು ಸ್ಪಷ್ಟವಾದ ಎಳೆಗಳಿದ್ದಂತೆ ಅನುಭವವಾಗುತ್ತದೆ. ಅವು ಧಾರ್ಮಿಕ, ಲೌಕಿಕ ಮತ್ತು ಜಾನಪದ. ಈ ಮೂರು ಎಳೆಗಳೂ ಬೇರೆ ಬೇರೆ ಪ್ರೇರಕಶಕ್ತಿಗಳಿಂದ ರೂಪಗೊಂಡಂತಿವೆ. ಜಾನಪದ ಸಂಗೀತವೂ ಶಾಸ್ತ್ರೀಯ ಸಂಗೀತದ ತಳಹದಿ ಎಂದು ಭಾವಿಸಿದರೆ ತಪ್ಪಾಗಲಾರದು. ನಾಗರಹೊಳೆಯ ಬೆಟ್ಟಕುರುಬರ ಹಾಡುಗಳ ಸ್ವರಗಳನ್ನು ಪರಿಶೀಲಿಸಿದಲ್ಲಿ ಅವು ಖರಹರಪ್ರಿಯರಾಗವನ್ನು ಹೋಲುವಂತಿವೆಯೆನಿಸುವುದು. ಶಾರ್ಙ್ಗದೇವನಿಂದ ವಿವರಿತವಾದ ಕಪಾಲ ಮತ್ತು ಕಂಬಳ ಗೀತಗಳು ದೇವಕರ್ಮಕ್ಕೆ ಸಂಬಂಧಿಸಿದ ಸಂಗೀತದ ಉತ್ತಮ ನಿದರ್ಶನಗಳೆನ್ನಬಹುದು ; ಅವು ತಮ್ಮ ಪರಿಶುದ್ಧತೆಯನ್ನು ಉಳಿಸಿಕೊಂಡು ಬಂದಿವೆ.

ಭರತನ ನಾಟ್ಯಶಾಸ್ತ್ರದ ನಂತರ ಸಂಗೀತದ ಬಗೆಗಿರುವ ಮುಖ್ಯ ಪ್ರಮಾಣ ಗ್ರಂಥವೆಂದರೆ ಮಾತಂಗನ ಬೃಹದ್ದೇಶಿ. ಈ ಗ್ರಂಥದಲ್ಲಿ ಅಂದಿನ ಸಂಗೀತದ ಲಕ್ಷಣ ಹಾಗೂ ತನ್ನ ಕಾಲದ ಜಾನಪದ ಗೀತೆಗಳ ಬಗೆಗೆ ದೀರ್ಘವಾದ ವಿವರಣೆ ಇದೆ. 'ರಾಗ' ಎಂಬ ಪದವನ್ನು ಮೊಟ್ಟಮೊದಲು ಉಪಯೋಗಿಸಿರುವವನು ಮಾತಂಗನೇ. ಅಂದು ವ್ಯವಹಾರದಲ್ಲಿದ್ದ ಮಟ್ಟುಗಳನ್ನು ವಿವಿಧ ರಾಗಗಳ ಹೆಸರಿನಲ್ಲಿ ಕರೆದಿದ್ದಾನೆ. ಪ್ರಾಯಶಃ ಇಂದಿನ ರಾಗ ಪದ್ಧತಿಯ ವಿಕಾಸ ಮತ್ತು ವರ್ಗೀಕರಣಕ್ಕೆ ಇದು ತಳಹದಿ ಎನ್ನಬಹುದು. ಮುಂದೆ ದೇವಗಿರಿಯ ಯಾದವರಾಜರಿಂದ ಪೋಷಿತವಾದ ಶಾರ್ಙ್ಗದೇವನು ಸಂಗೀತ ರತ್ನಾಕರದಲ್ಲಿ 26 ರಾಗಗಳನ್ನು ವಿವರಿಸಿದ್ದಾನೆ.

ಪುರಾತನ ಕನ್ನಡ ಕಾವ್ಯಗಳಲ್ಲಿ ರಾಗಗಳೂ ಅವುಗಳ ವಿಧವಿಧ ವರ್ಗೀಕರಣಗಳೂ ಉಲ್ಲೇಖಿಸಲ್ಪಟ್ಟಿವೆ. ಗ್ರಾಮ, ಮೂರ್ಛನ, ಜಾತಿ, ಶುದ್ಧ, ಭಿನ್ನ, ಮುಂತಾದ ವರ್ಗೀಕರಣ ಕ್ರಮಗಳನ್ನು ಅಲ್ಲಿ ಪ್ರಸ್ತಾಪಿಸಲಾಗಿದೆ. ರಾಗಾಂಗ ಚತುಷ್ಟಯ ಪದ್ಧತಿ ಮತ್ತು ಪತಿಪತ್ನಿ, ಪುತ್ರ, ಇತ್ಯಾದಿ ರಾಗ ಪರಿವಾರ ಅಥವಾ ರಾಗ–ರಾಗಿಣಿ ಪದ್ಧತಿಯೂ ಕರ್ನಾಟಕದಲ್ಲಿ ಪ್ರಚಲಿತವಿದ್ದುದಾಗಿ ಕಾಣಬರುತ್ತದೆ. ಆದರೆ ಇವೆರಡರಿಂದಲೂ ಪ್ರತ್ಯೇಕವಾದ ಹಾಗೂ ಕರ್ನಾಟಕಕ್ಕೇ ವಿಶಿಷ್ಟವಾದ ಇನ್ನೊಂದು ಪದ್ಧತಿಯೂ ಪ್ರಚಾರದಲ್ಲಿ ಇದ್ದಿತು. ಅದು 32 ರಾಗಗಳನ್ನೊಳಗೊಂಡ ಬತ್ತೀಸ ರಾಗಪದ್ಧತಿ. ಈ ಬತ್ತೀಸ ರಾಗಗಳ ಪದ್ಧತಿಯು ಯಾವ ಸಂಸ್ಕೃತ ಲಕ್ಷಣ ಗ್ರಂಥದಲ್ಲಿಯೂ ಕಂಡು ಬರುವುದಿಲ್ಲ. ಆದರೆ 11ನೇಯ ಶತಮಾನದಿಂದ ಹಿಡಿದು 17ನೇಯ ಶತಮಾನದವರೆಗೆ ರಚಿತವಾದ ಕನ್ನಡ ಕಾವ್ಯಗಳಲ್ಲಿ ಅನೇಕ ಕಡೆ ಪ್ರಸ್ತಾಪಿಸಲ್ಪಟ್ಟಿದೆ. ಇದಲ್ಲದೆ ಕ್ರಿ. ಶ. 1074ರ ಶಾಸನವೊಂದರಲ್ಲಿಯೂ ಈ ಬತ್ತೀಸ ರಾಗಗಳ ಪ್ರಸ್ತಾಪವಿದೆ. ಇದರಿಂದ ಇಷ್ಟು ಹೇಳಬಹುದು. ಸಂಸ್ಕೃತ ಲಕ್ಷಣ ಗ್ರಂಥಗಳು ಯಾವುದೇ ರಾಗವರ್ಗೀಕರಣ ಪದ್ಧತಿಯನ್ನು ಪ್ರತಿಪಾದಿಸಿದ್ದರೂ ಕರ್ನಾಟಕದಲ್ಲಿ ಇಲ್ಲಿಗೇ ವಿಶಿಷ್ಟವಾದ ರಾಗಪದ್ಧತಿ ಇತ್ತೆನ್ನಬಹುದು. 12ನೇಯ ಶತಮಾನದಲ್ಲಿದ್ದ ಬಸವೇಶ್ವರರು ತನ್ನ ವಚನವೊಂದರಲ್ಲಿ ಈ 32 (ಬತ್ತೀಸ) ರಾಗಗಳ ಬಗೆಗೆ ಪ್ರಸ್ತಾಪಿಸಿದ್ದಾರೆ. ಪುರಂದರದಾಸರ ಒಂದು ಶತಮಾನದ ನಂತರ ಜೀವಿಸಿದ್ದ ವಿಜಯದಾಸರು ಈ ಬತ್ತೀಸ ರಾಗಗಳ ಬಗೆಗೆ ಪ್ರಸ್ತಾಪಿಸಿದ್ದಾರೆ. ಕ್ರಿ. ಶ. 1660ರಲ್ಲಿದ್ದ ವೆಂಕಟಮುಖಿ, 72 ಮೇಳಗಳ ಕಲ್ಪನೆಯನ್ನು ಪ್ರತಿವಾದಿಸಿದ ನಂತರ, ರಾಗ ವರ್ಗೀಕರಣವು ಒಂದು ನಿರ್ದಿಷ್ಟ ಕ್ರಮಕ್ಕೆ ಬದ್ಧವಾಯಿತೆನ್ನಬಹುದು. ಇದರಂತೆಯೇ ಬೃಹದ್ದೇಶಿಯಲ್ಲಿ ಕರ್ಣಾಟಕ ಭಾಷೆಯಲ್ಲಿಯೇ ರಚಿತವಾದ ಕೆಲವು ವಿಶೇಷ ಪ್ರಬಂಧಗಳ ಹೆಸರುಗಳನ್ನೂ ಹೇಳಲಾಗಿದೆ. ಈ ಗ್ರಂಥವು ಸುಮಾರು 8-10ನೇಯ ಶತಮಾನದ ಅಂತರದಲ್ಲಿ ರಚಿತವಾದುದೆಂದು ಭಾವಿಸಲಾಗಿದೆ.

### ಶಾಸ್ತ್ರ ಗ್ರಂಥಗಳು

ಸಂಗೀತ ಮತ್ತು ನೃತ್ಯಕಲೆಗಳಿಗೆ ಸಂಬಂಧಪಟ್ಟ ಅನೇಕ ಶಾಸ್ತ್ರಗ್ರಂಥಗಳನ್ನು ರಚಿಸಿದವರು ಕರ್ನಾಟಕದವರು ಎಂಬುದು ಗಮನಾರ್ಹವಾದುದು. ಭಾರತೀಯ ಸಂಗೀತದ ವಿಕಾಸ ಮತ್ತು ಬೆಳವಣಿಗೆಯಲ್ಲಿ ಕರ್ನಾಟಕವು ಪ್ರಮುಖ ಪಾತ್ರ ವಹಿಸಿತ್ತೆನ್ನುವುದಕ್ಕೆ ಇದು ನಿದರ್ಶನ. ಇದಕ್ಕೆ ಮುಖ್ಯ ಕಾರಣವೆಂದರೆ ಕರ್ನಾಟಕದ ಭೌಗೋಳಿಕ ಸ್ಥಾನ ; ಇದು ನಾನಾ ಸಂಸ್ಕೃತಿಗಳು

ಸಂಬಂಧಿಸಿದಂತಹ ಆಯಕಟ್ಟಿನ ಸ್ಥಾನ. ಇದರ ಫಲವಾಗಿ ಸಂಗೀತ ಕಲೆಯು ವಿವಿಧ ಕಲ್ಪನೆಗಳು, ಭಾವನೆಗಳು, ಶೈಲಿಗಳೂ, ವಿಳಿತವಾಗಿ ಕಲೆಗೆ ಒಂದು ಹೊಸ ಚೈತನ್ಯ ತುಂಬಿ ಅದು ಸರ್ವತೋಮುಖವಾಗಿ ಅಭಿವೃದ್ಧಿಯಾಗಿ ಮುನ್ನಡೆಯಲು ಕಾರಣ ವಾಯಿತು. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ರಚಿತವಾದ ಅನೇಕ ಕಾವ್ಯಗಳಲ್ಲಿ ಸಂಗೀತ ಕಲೆಯ ಬಗೆಗೆ ಮತ್ತು ಅದರ ವಿವಿಧ ಅಂಗಗಳ ಬಗೆಗೆ ವಿಸ್ತಾರ ವರ್ಣನೆ ಇದೆ. ಸಂಗೀತ ಮತ್ತು ನೃತ್ಯ ಕಲೆಗೆ ಪ್ರತ್ಯೇಕವಾಗಿ ರಚಿತವಾದ ಗ್ರಂಥಗಳು ಅಥವಾ ಈ ಎರಡೂ ಕಲೆಗಳಿಗೂ ಪ್ರತ್ಯೇಕವಾದ ಅಧ್ಯಾಯ ಗಳಿರುವ ಗ್ರಂಥಗಳೂ ರಚಿತವಾಗಿವೆ. ಇವುಗಳಲ್ಲಿ ಮುಖ್ಯವಾದ ಗ್ರಂಥವೊಂದು ಅಭಿಲಷಿತಾರ್ಥ ಚಿಂತಾಮಣಿ. ಇದನ್ನು ರಾಜ ಮಾನಸೋಲ್ಲಾಸ ಎಂದೂ ಕರೆಯಲಾಗಿದೆ. ಈ ಬೃಹದ್ಗ್ರಂಥದ 100 ಅಧ್ಯಾಯಗಳಲ್ಲಿ ಮೂರು ಅಧ್ಯಾಯಗಳು ಸಂಗೀತ, ನೃತ್ಯಗಳಿಗೇ ಮೀಸಲಾಗಿವೆ. ಈ ಮೂರು ಅಧ್ಯಾಯಗಳಲ್ಲಿ ಒಟ್ಟು 1,400 ಶ್ಲೋಕಗಳಿವೆ. ಇದನ್ನು ರಚಿಸಿದವನು ಕಲ್ಯಾಣ ದಲ್ಲಿ ಆಳಿದ ಚಾಳುಕ್ಯ ಚಕ್ರವರ್ತಿ ಮುಮ್ಮಡಿ ಸೋಮೇಶ್ವರ (1127-39). ಇವನು ಆ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಲಿತವಿದ್ದ ಸಂಗೀತ ಕಲೆಯನ್ನು ಸುದೀರ್ಘವಾಗಿ ಪ್ರಸ್ತಾಪಿ ಸಿದ್ದಾನೆ. ಇದರಂತೆ ಇನ್ನೊಂದು ಬೃಹದ್‌ಗ್ರಂಥ ಸರಸ್ವತೀ ಹೃದಯಾಲಂಕಾರ ಎಂದು ಕರೆಯುವ ಭರತ ಭಾಷ್ಯ. 11,000 ಶ್ಲೋಕಗಳಿಂದ ಕೂಡಿದ ಇದನ್ನು ಕರ್ನಾಟಕ ಕುಲದವನಾದ ನಾನ್ಯದೇವನು ರಚಿಸಿದ. ಇಂದಿನ ಬಿಹಾರಿನ ಈ ನಾನ್ಯದೇವನು ಕ್ರಿ.ಶ. 1097-1133ರ ಅಂತರದಲ್ಲಿ ಮಿಥಿಲಾ ರಾಜ್ಯವನ್ನು ಆಳಿದವನು. ಇದರ ಹಾಗೆಯೇ ಗುಜರಾತಿನ ರಾಷ್ಟ್ರಕೂಟ ಶಾಖೆಗೆ ಸೇರಿದ ಹರಿಪಾಲನು ಸಂಗೀತ ಸುಧಾಕರ ಎಂಬ ಗ್ರಂಥ ವನ್ನು ಬರೆದಿದ್ದಾನೆ. ಸಂಗೀತ ಲಕ್ಷಣ ಗ್ರಂಥವನ್ನು ಬರೆದ ಇನ್ನೊಬ್ಬ ರಾಜಮನೆತನದವನು ಚಾಳುಕ್ಯ ಜಗದೇಕಮಲ್ಲ II ಪ್ರತಾಪ ಚಕ್ರವರ್ತಿ (1139-49) ; ಈತನು ಸಂಗೀತ ಚೂಡಾಮಣಿ ಎಂಬ ಗ್ರಂಥವನ್ನು ಬರೆದಿರುತ್ತಾನೆ. ತಾಳ, ರಾಗ ಮತ್ತು ಪ್ರಬಂಧಗಳ ಬಗೆಗೆ ಈ ಗ್ರಂಥದಲ್ಲಿ ದೀರ್ಘ ವಿವರಣೆ ಇದೆ. ಕ್ರಿ.ಶ. 1123-42ರ ಅಂತರದಲ್ಲಿ ದೇವಗಿರಿಯಲ್ಲಿ ರಾಜ್ಯವಾಳಿದ ಸೇಉಣ ಸಿಂಘಣನ ಕೋಶಾಧಿಕಾರಿಯಾದ ಶಾರ್ಙ್ಗದೇವನು ಸಂಗೀತ ರತ್ನಾಕರವನ್ನು ಬರೆದಿದ್ದಾನೆ. ಇದು ಭಾರತೀಯ ಸಂಗೀತದ ಮುಖ್ಯ ಆಧಾರ ಗ್ರಂಥವೆಂದು ಪರಿಗಣಿತವಾಗಿದೆ. ಸುಮಾರು 1330ರಲ್ಲಿ ಜೀವಿಸಿದ್ದ ಸಿಂಹಭೂಪಾಲನು ಸಂಗೀತ ರತ್ನಾಕರಕ್ಕೆ ಸುಧಾಕರ ಎಂಬ ವಿಸ್ತಾರ ವ್ಯಾಖ್ಯೆ ಬರೆದಿದ್ದಾನೆ. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಸಂಗೀತಕ್ಕೆ ಸಂಬಂಧಿಸಿದ ಸಾಹಿತ್ಯ ಗಣನೀಯ ಪ್ರಮಾಣದಲ್ಲಿ ರಚಿತವಾಗಿದೆ. ರಾಜಗುರು ವಿದ್ಯಾರಣ್ಯರು ಸ್ವತಃ ಸಂಗೀತಸಾರ ಎಂಬ ಗ್ರಂಥವನ್ನು ರಚಿಸಿದ ರೆಂದು ಹೇಳಲಾಗಿದೆ. ಈ ಗ್ರಂಥದಲ್ಲಿ 15 ಜನಕ ರಾಗಗಳೂ ಅವುಗಳ ಜನ್ಯರಾಗಗಳನ್ನು ಪ್ರಸ್ತಾಪಿಸಲಾಗಿದೆ. ಈ ಜನಕ ಮತ್ತು ಜನ್ಯ ರಾಗ ವರ್ಗೀಕರಣ ಕ್ರಮದ ಆದ್ಯಪ್ರವರ್ತಕರು ವಿದ್ಯಾರಣ್ಯರೇ ಎಂದು ಭಾವಿಸಲಾಗಿದೆ. ಮುಮ್ಮಡಿ ಚಿಕ್ಕ ಭೂಪಾಲನ ಅಭಿನವ ಭರತಸಾರ ಸಂಗ್ರಹ ಎಂಬ ಶಾಸ್ತ್ರ ಗ್ರಂಥದಲ್ಲಿ ಸಂಗೀತಸಾರದ ಉಲ್ಲೇಖವಿದೆ. 1424-46ರ ಅಂತರದಲ್ಲಿ ವಿಜಯನಗರವನ್ನು ಆಳಿದ ಇಮ್ಮಡಿ ದೇವರಾಯನ ಆಸ್ಥಾನ ದಲ್ಲಿದ್ದ ಕಲ್ಲಿನಾಥ ಅಥವಾ ಕಲ್ಲರಸ ಅಥವಾ ಕಲ್ಲಾಮಾತ್ಯನು ಸಂಗೀತ ರತ್ನಾಕರಕ್ಕೆ ಕಲಾನಿಧಿಯೆಂಬ ವಿಸ್ತಾರ ವ್ಯಾಖ್ಯೆ ಬರೆದಿದ್ದಾನೆ.

ಕ್ರಿ.ಶ. 1500ರ ಸುಮಾರಿನಲ್ಲಿ ಕೊಳ್ಳೇಗಾಲದ ಬಳಿಯ ಶಂಭುಲಿಂಗ ಬೆಟ್ಟದಲ್ಲಿ ವಾಸ ಮಾಡುತ್ತಿದ್ದ ನಿಜಗುಣ ಶಿವ ಯೋಗಿಯು ರಚಿಸಿದ ವಿವೇಕ ಚಿಂತಾಮಣಿಯಲ್ಲಿ ಸಂಗೀತ ಮತ್ತು ನೃತ್ಯಕ್ಕೆ ಸಂಬಂಧಪಟ್ಟ ಪ್ರತ್ಯೇಕ ಅಧ್ಯಾಯವೇ ಇದೆ. ಈ ಗ್ರಂಥದಲ್ಲಿ ಶ್ರುತಿ, ಸ್ವರ, ಅಲಂಕಾರ, ಜಾತಿ, ಗ್ರಾಮ, ರಾಗ, ವಾದ್ಯ ಮುಂತಾದವುಗಳನ್ನು ವಿವರಿಸಿದ್ದಾನೆ. ರಾಗಗಳ ವರ್ಗೀ ಕರಣದಲ್ಲಿ ಪುರುಷ, ಸ್ತ್ರೀ ಮತ್ತು ನಪುಂಸಕ ರಾಗ ವರ್ಗೀಕರಣ ಪದ್ಧತಿಯನ್ನು ವಿವರಿಸಿದ್ದಾನೆ. ಕನ್ನಡ ಭಾಷೆಯಲ್ಲಿ ಸಂಗೀತದ ಬಗೆಗೆ ಬರೆಯಲಾದ ಗ್ರಂಥಗಳಲ್ಲಿ ಇದೇ ಅತಿ ಹಳೆಯದು. ವಿಜಯನಗರ ಆಸ್ಥಾನದ ಗಾಯಕನಾಗಿದ್ದ ಭಂಡಾರು ಲಕ್ಷ್ಮೀ ನಾರಾಯಣನು ಸಂಗೀತ ಸೂರ್ಯೋದಯ ಎಂಬ ಗ್ರಂಥವನ್ನು ರಚಿಸಿದ್ದಾನೆ. ಗ್ರಂಥದ ಐದು ಅಧ್ಯಾಯಗಳಲ್ಲಿ ತಾಳ, ನೃತ್ತ, ಸ್ವರ, ಗೀತ, ಜಾತಿ ಮತ್ತು ಪ್ರಬಂಧಗಳ ಬಗೆಗೆ ವಿವರಿಸಿದ್ದಾನೆ. ಹಾಗೆಯೇ ಮುಳಬಾಗಿಲಿನಲ್ಲಿ ರಾಜಪ್ರತಿನಿಧಿಯಾಗಿದ್ದ ಗೋಪ ತಿಪ್ಪನು ತಾಳದೀಪಿಕಾ ಎಂಬ ತಾಳಭಾಗದಲ್ಲಿ ವಿಸ್ತಾರ ಪರಿಚಯ ನೀಡುವ ಗ್ರಂಥವನ್ನು ಬರೆದಿದ್ದಾನೆ. ಅಳಿಯ ರಾಮರಾಯನಿಂದ ಪೋಷಿತನಾದ ವಿಜಯನಗರ ಆಸ್ಥಾನದಲ್ಲಿದ್ದ ರಾಮಾಮಾತ್ಯನು ಬರೆದ ಸ್ವರ ಮೇಳ ಕಲಾನಿಧಿ ಒಂದು ಮುಖ್ಯ ಲಕ್ಷಣ ಗ್ರಂಥ. ಕ್ರಿ.ಶ. 1550ರ ಸುಮಾರಿನಲ್ಲಿ ರಚಿತವಾದ ಸ್ವರ ಮೇಳ ಕಲಾನಿಧಿ ಯಲ್ಲಿ 20 ಮೇಳ ರಾಗಗಳನ್ನು ಪ್ರಸ್ತಾಪಿಸಲಾಗಿದೆ. ಇವುಗಳ ಜನ್ಯ ರಾಗಗಳೂ ಸೇರಿ ರಾಮಾಮಾತ್ಯನು ವಿವರಿಸಿರುವ ಜನಕ ಜನ್ಯ ಪದ್ಧತಿ ಕ್ರಮಬದ್ಧವಾಗಿದೆ. ಜನಕ ರಾಗಕ್ಕೂ ಜನ್ಯಕ್ಕೂ ಸ್ವರಭಾಗದಲ್ಲಿ ಸಾಮ್ಯವಿದೆ. ವಿಜಯನಗರ ಸಾಮ್ರಾಜ್ಯ ಪತನಾನಂತರ ದಕ್ಷಿಣದ ತಂಜಾವೂರು ಪ್ರಮುಖ ಸಾರಸ್ವತ ಮತ್ತು ಸಾಂಸ್ಕೃತಿಕ ಕೇಂದ್ರವಾಯಿತು. ಆ ರಾಜ್ಯವನ್ನು ಆಳಿದ ನಾಯಕ ರಾಜರುಗಳಲ್ಲಿ ಕ್ರಮವಾಗಿ ಚೇವಪ್ಪ, ಅಚ್ಯುತಪ್ಪ ಮತ್ತು ರಘುನಾಥ ನಾಯಕರ ಅಮಾತ್ಯನಾಗಿದ್ದ ಗೋವಿಂದ ದೀಕ್ಷಿತನು ಸಂಗೀತ ಸುಧಾ ಎಂಬ ಲಕ್ಷಣ ಗ್ರಂಥವನ್ನು ಬರೆ ದಿದ್ದಾನೆ. ಇದಕ್ಕೆ ರಘುನಾಥ ನಾಯಕನ ಹೆಸರಿದ್ದರೂ ಬರೆದವನು ಗೋವಿಂದ ದೀಕ್ಷಿತನೇ. ಕರ್ನಾಟಕ ಸಂಗೀತಕ್ಕೆ ಒಂದು ಆಧಾರ ಗ್ರಂಥವೆನಿಸಿದ ಚತುರ್ದಂಡಿ ಪ್ರಕಾಶಿಕೆಯನ್ನು ಬರೆದ ವೆಂಕಟಮುಖಿ ಗೋವಿಂದ ದೀಕ್ಷಿತನ ಮಗ. ಗೋವಿಂದ

ದೀಕ್ಷಿತನು ಹೊಯ್ಸಳ ಕರ್ನಾಟಕ ಬ್ರಾಹ್ಮಣನು. ಸಂಗೀತ ಸುಧಾ ಗ್ರಂಥವು ಕ್ರಿ.ಶ. 1577-1614ರ ಮಧ್ಯೆ ಯಾವಾಗಲೋ ರಚಿತವಾದುದು. ಚತುರ್ದಂಡಿ ಪ್ರಕಾಶಿಕೆಯು 1650ರ ಸುಮಾರಿನಲ್ಲಿ ರಚಿತವಾದುದು. ಈ ಗ್ರಂಥಗಳಂತೆಯೇ ಸಂಗೀತ ಮತ್ತು ನೃತ್ಯ ಕಲೆಗಳಿಗೆ ಸಂಬಂಧಿಸಿದ ನಾಲ್ಕು ಅಮೂಲ್ಯ ಗ್ರಂಥಗಳು ಷಡ್ರಾಗ ಚಂದ್ರೋದಯ, ರಾಗಮಂಜರಿ, ರಾಗಮಾಲ ಮತ್ತು ನರ್ತನನಿರ್ಣಯ. ಇದನ್ನು ರಚಿಸಿದವನು ಪುಂಡರೀಕ ವಿಠಲ. ಬೆಂಗಳೂರು ಜಿಲ್ಲೆಯ ಮಾಗಡಿ ತಾಲೂಕಿನ ಸಾತನೂರಿನಲ್ಲಿ ಹುಟ್ಟಿ ಮುಂದೆ ಉತ್ತರ ಭಾರತದ ನಾಲ್ಕಾರು ರಾಜರಿಂದ ಸನ್ಮಾನಿತನಾದ ಪುಂಡರೀಕ ವಿಠಲನು ತನ್ನ ಗ್ರಂಥಗಳಲ್ಲಿ ಪದೇ ಪದೇ ಕರ್ನಾಟ ಜಾತೀಯನೆಂದು ಹೇಳಿಕೊಂಡಿದ್ದಾನೆ. ಹಿಂದೂಸ್ತಾನೀ ಮತ್ತು ಕರ್ನಾಟಕ ಸಂಗೀತ ಪದ್ಧತಿಗಳೆರಡರಲ್ಲೂ ಆತ ನಿಷ್ಣಾತನಾಗಿದ್ದ.

ದೊಡ್ಡ ದೊಡ್ಡ ರಾಜ್ಯಗಳೂ ಸಾಮ್ರಾಜ್ಯಗಳೂ ಕಲಾ ಪೋಷಣೆ ಮಾಡುತ್ತಿರಲು ಸಣ್ಣ ಪಾಳೆಯ ಪಟ್ಟುಗಳೇನೂ ಹಿಂದೆ ಬೀಳಲಿಲ್ಲ. ಮಧುಗಿರಿಯ ಬಳಿಯ ಬಿಜ್ಜಾವರದ ಅರಸನಾಗಿದ್ದು ಕ್ರಿ. ಶ. 1633–76ರ ಮಧ್ಯೆ ರಾಜ್ಯವಾಳಿದ ಮುಮ್ಮಡಿ ಚಿಕ್ಕ ಭೂಪಾಲ ಅಥವಾ ಚಿಕ್ಕಪ್ಪಗೌಡನು ಅಭಿನವ ಭರತ ಸಾರ ಸಂಗ್ರಹವೆಂಬ ಗ್ರಂಥವನ್ನು ಬರೆದಿದ್ದಾನೆ. ಕ್ರಿ. ಶ. 1697-1714ರ ಅಂತರದಲ್ಲಿ ಕೆಳದಿ ರಾಜ್ಯವನ್ನಾಳಿದ ಇಮ್ಮಡಿ ಬಸವಪ್ಪ ನಾಯಕನು 'ಶಿವತತ್ವ ರತ್ನಾಕರ' ವೆಂಬ ವಿಶ್ವಕೋಶರೂಪ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಸಂಗೀತ ಮತ್ತು ನೃತ್ಯ ಕಲೆಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕ ಅಧ್ಯಾಯವೇ ಇದೆ. ಮೈಸೂರು ರಾಜ್ಯವನ್ನಾಳಿದ ಮಹಾರಾಜರುಗಳಲ್ಲಿ ಅನೇಕರು ಉತ್ತಮ ಸಂಗೀತಜ್ಞರೂ ಸಾಹಿತಿಗಳೂ ಆಗಿದ್ದರು. ಕ್ರಿ. ಶ. 1617-37ರ ಮಧ್ಯೆ ರಾಜ್ಯವಾಳಿದ ಚಾಮರಾಜ ಒಡೆಯರೂ ಕಂಠೀರವ ನರಸಿಂಹರಾಜ ಒಡೆಯರು ಕಲಾಭಿಮಾನಿಗಳಾಗಿದ್ದವರು. ಕ್ರಿ. ಶ. 1672-1704ರ ಅವಧಿಯಲ್ಲಿ ರಾಜ್ಯವಾಳಿದ ಚಿಕ್ಕದೇವರಾಜ ಒಡೆಯರು ಸ್ವತಃ ಸಾಹಿತಿ ಮತ್ತು ಸಂಗೀತಗಾರರಾಗಿದ್ದರು. ಅವರು ರಚಿಸಿದ ಗ್ರಂಥಗಳಲ್ಲಿ ಗೀತಗೋಪಾಲವೆಂಬ ಗೇಯ ನಾಟಕವೂ ಇದೆ. ಮುಮ್ಮಡಿ ಕೃಷ್ಣರಾಜ ಒಡೆಯರು (1799-1868) ಉತ್ತಮ ಕಲಾಭಿಜ್ಞ ಮತ್ತು ಪೋಷಕ. ವಿಶ್ವಕೋಶರೂಪವಾಗಿ ಅವರು ರಚಿಸಿದ ಉದ್ಗ್ರಂಥ ಶ್ರೀ ತತ್ವನಿಧಿ ಬಹು ಪ್ರಸಿದ್ಧವಾದುದು. ಇದರಲ್ಲಿ ಒಂದು ಭಾಗ ಸಂಗೀತ ಕಲೆಗೆ ಮೀಸಲಾಗಿದ್ದು, ಅಲ್ಲಿ ಸಂಗೀತ ಕಲೆಗೆ ದೃಶ್ಯ ರೂಪವನ್ನು ಕೊಡಲಾಗಿದೆ. ಸ್ವರ, ರಾಗ, ತಾಳಗಳನ್ನು ಪ್ರತಿಬಿಂಬಿಸುವ ವರ್ಣಮಯ ಚಿತ್ರಗಳಿವೆ.

ಇಪ್ಪತ್ತನೇಯ ಶತಮಾನದಲ್ಲಿಯೂ ಅನೇಕ ಸಂಗೀತ ಶಾಸ್ತ್ರ ಗ್ರಂಥಗಳು ರಚಿತವಾಗಿವೆ. ಇವುಗಳಲ್ಲಿ ದಿ|| ಹುಲಗೂರು ಕೃಷ್ಣಾಚಾರ್ಯರಿಂದ ರಚಿತವಾದ ಶ್ರುತಿ ಸಿದ್ಧಾಂತ ಎಂಬ ಗ್ರಂಥವೂ ಮತ್ತು ಮೈಸೂರಿನ ಡಾ|| ರಾ. ಸತ್ಯನಾರಾಯಣ ಅವರಿಂದ ರಚಿತವಾದ ನಿಶ್ಶಂಕ ಹೃದಯ ಎಂಬ ಗ್ರಂಥಗಳು ಮುಖ್ಯವಾದವು.

ಕರ್ನಾಟಕದ ರಾಜಮನೆತನಗಳ ಆಸ್ಥಾನಗಳನ್ನು ಅಲಂಕರಿಸಿದ್ದವರಲ್ಲಿ ಸಂಗೀತ ವಿದ್ವಾಂಸರು ಮುಖ್ಯರು. ಅಂತೆಯೇ ರಾಜ್ಯದ ಪ್ರಮುಖ ದೇವಾಲಯಗಳ ಸಿಬ್ಬಂದಿಯಲ್ಲಿಯೂ ಸಂಗೀತಗಾರರಿರುತ್ತಿದ್ದರು. ಮಾನಸೋಲ್ಲಾಸದಲ್ಲಿ ಒಂದು ಸಂಗೀತ ಸಭೆಯನ್ನು ತೆಗೆದುಕೊಂಡು ಅಲ್ಲಿ ಸಂಗೀತಗಾರರ, ಸಭಾಸದರ ವಿವಿಧ ಭಾಗಗಳ ಗುಣ ಮತ್ತು ಕರ್ತವ್ಯಗಳೇನು ಎಂಬ ಅಂಶಗಳನ್ನು ಸೋಮೇಶ್ವರನು ದೀರ್ಘವಾಗಿ ವಿವರಿಸಿದ್ದಾನೆ. ಸಂಗೀತಗಾರರು, ಅವರ ವಿವಿಧ ವರ್ಗಗಳು, ಉತ್ತಮಾಂಶಗಳು, ಲೋಪದೋಷಗಳು, ಸ್ಥಾನಮಾನ, ಸಾಧನೆ ಮುಂತಾದ ವಿಷಯಗಳನ್ನೆಲ್ಲಾ ವಿಶ್ಲೇಷಿಸಿದ್ದಾನೆ. ಅದರಂತೆ ಒಬ್ಬನೇ ಭಾಗವಹಿಸುವ ಅಥವಾ ಹಾಡುವ ಏಕಲಗಾಯಕರೂ, ಇಬ್ಬರು ಭಾಗವಹಿಸುವ ಯಮಳಗಾಯಕರೂ, ಹತ್ತಾರು ಜನ ಕೂಡಿದ ವೃಂದ ಗಾಯಕರೂ ಇದ್ದರು. ಅವರು ಶೃತಿಗೆ ಆಧಾರವಾಗಿ ಕೊಳಲನ್ನು ಮತ್ತು ಇತರ ಪಕ್ಕವಾದ್ಯಗಳನ್ನು ಉಪಯೋಗಿಸುತ್ತಿದ್ದರು.

### ವಾದ್ಯಗಳು

ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಸಂಗೀತ ವಾದ್ಯಗಳ ಬಗೆಗೆ ಪ್ರಾಚೀನ ಕಾವ್ಯಗಳಲ್ಲಿ ವಿಸ್ತಾರವಾದ ವಿವರಣೆ ಇದೆ. ಶಿಲ್ಪದಲ್ಲಿ ಅನೇಕ ವಾದ್ಯಗಳು ರೂಪಿತವಾಗಿವೆ. ಜಾನಪದ ಸಂಗೀತದಲ್ಲಿ ಬಹು ವಿಧ ವಾದ್ಯಗಳು ಇಂದೂ ಬಳಕೆಯಲ್ಲಿವೆ. ಇವೆಲ್ಲವನ್ನೂ ಒಟ್ಟು ಪರಿಶೀಲಿಸಿದಲ್ಲಿ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ವಾದ್ಯಗಳ ವೈವಿಧ್ಯದ ಬಗೆಗೆ ಆಶ್ಚರ್ಯವುಂಟಾಗುವುದು ಸಹಜವೇ. ಜಂತ್ರ ಸಂಗೀತ ಅಥವಾ ವಾದ್ಯಸಂಗೀತದಲ್ಲಿ ವೀಣೆ ಮತ್ತು ಕೊಳಲು ಪ್ರತ್ಯೇಕವಾಗಿ ಕಚೇರಿ ಮಾಡುವಂತಹ ವಾದ್ಯಗಳಾಗಿದ್ದು ಅದಕ್ಕೆ ಯಾವುದಾದರೂ ಚರ್ಮವಾದ್ಯ ಪಕ್ಕವಾದ್ಯವಾಗಿರುತ್ತಿತ್ತು. ಬಾಯ ಹಾಡುಗಾರಿಕೆಯಲ್ಲಿ ಒಬ್ಬರು (ಏಕಲ), ಇಬ್ಬರು (ಯಮಳ) ಅಥವಾ ಹತ್ತಾರು ಮಂದಿ ಕೂಡಿ (ವೃಂದಗಾಯಕ) ಹಾಡುವ ಪದ್ಧತಿ ಇತ್ತು. ಇವರಿಗೆ ಸೂಕ್ತ ಪಕ್ಕವಾದ್ಯಗಳಿರುತ್ತಿದ್ದು, ಗುಂಪಾಗಿ ಹಾಡುವಾಗ ಮುಖ್ಯ ಗಾಯಕನನ್ನು ಮುಖರಿ ಎಂದು ಕರೆಯುತ್ತಿದ್ದರು. ಆತನಿಗೆ ಸಹಾಯಕವಾಗಿ ಇತರ ಗಾಯಕರಿರುತ್ತಿದ್ದರು. ಸಣ್ಣ ಗೋಷ್ಠಿಗಳಲ್ಲಿ ನಡೆವ ಸಂಗೀತ ಕಾರ್ಯಕ್ರಮಗಳಲ್ಲಿ ಗಾಯಕನಿಗೆ ಸಹಾಯಕವಾಗಿ ತಂತ್ರೀ ಹಾಗೂ ಗಾಳಿ ವಾದ್ಯಗಳನ್ನೂ ಬಳಸಲಾಗುತ್ತಿತ್ತು. ವಾದ್ಯಗಳದೇ ಮೇಳಗಳಿರುತ್ತಿದ್ದು ಅವುಗಳನ್ನು ವೃಂದ ಅಥವಾ

ವಾದ್ಯಮೇಳ ಅಥವಾ ಕುತುಪ ಎಂದೂ ಕರೆಯಲಾಗುತ್ತಿತ್ತು. ಈ ಬಗೆಯ ಕುತುಪಗಳು ಚೆನ್ನಾಗಿ ವೃದ್ಧಿಸಲ್ಪಟ್ಟು ಪ್ರಚಾರದಲ್ಲಿದ್ದವು. ಕನ್ನಡ ಕಾವ್ಯಗಳಲ್ಲಿ ಪಟಹ, ಭೇರಿ ಮುಂತಾದ ಅನೇಕ ಬಗೆಯ ತಾಳವಾದ್ಯಗಳು, ಶಂಖ, ಶೃಂಗ ಮುಂತಾದ ಸುಷಿರ ವಾದ್ಯಗಳ ಬಗೆಗೆ ಹೇರಳ ಉಲ್ಲೇಖಗಳಿವೆ. ಉತ್ಸವ, ಬೇಟೆ, ವಿಜಯ, ಪೂಜೆ, ಬಲಿಪ್ರದಾನ, ಅಲ್ಲದೆ ಜನಗಳನ್ನು ಕೂಡಿಸುವುದು ಮುಂತಾದ ಸಂದರ್ಭಗಳಲ್ಲಿಯೂ ಕಾಲಮಾನವನ್ನು ಸೂಚಿಸುವ ಗಡಿಯಾರಗಳಂತೆಯೂ ಈ ವಾದ್ಯಗಳನ್ನು ಉಪಯೋಗಿಸಲಾಗುತ್ತಿತ್ತು.

ಪ್ರತಿಷ್ಠಿತರ ಗೌರವ ಪ್ರಶಸ್ತಿಗಳ ಜೊತೆಗೆ ಇನ್ನೊಂದು ಸಂಕೇತವು ಕರ್ನಾಟಕದಲ್ಲಿ ಬಳಕೆಯಲ್ಲಿತ್ತು. ಅದು ಪಂಚಮಹಾಶಬ್ದ. ಹೆಸರೇ ಸೂಚಿಸುವಂತೆ ಇದು ಗೌರವಾರ್ಥವಾಗಿ ಐದು ವಾದ್ಯಗಳಿಂದ ಏಕಕಾಲದಲ್ಲಿ ಮಾಡುವ ನಾದರಪ. ಹೀಗೆ ಬಳಕೆಯಲ್ಲಿದ್ದ ವಾದ್ಯಗಳಲ್ಲಿ ಬಹುಶಃ ಕರ್ನಾಟಕಕ್ಕೇ ವಿಶಿಷ್ಟವಾದ ವಾದ್ಯಗಳೂ ಇದ್ದವು. ಅಂತಹುದರಲ್ಲಿ ಒಂದು-ದಂಡಿಗೆ. ಹೀಗೆ ಬಿಡಿಬಿಡಿಯಾಗಿ ನುಡಿಸುವ ವಾದ್ಯಗಳೂ, ಮೇಳದಲ್ಲಿ ಕೂಡಿ ನುಡಿಸುವ ವಾದ್ಯಗಳೂ, ಬಗೆಬಗೆಯಾಗಿ ಬಳಕೆಯಲ್ಲಿದ್ದವು. ಅವುಗಳ ವೈವಿಧ್ಯಗಳ ಮತ್ತು ಸಂಖ್ಯಾ ಪ್ರಮಾಣ ಆಶ್ಚರ್ಯವನ್ನುಂಟುಮಾಡುವಂತಹುದು. ಮತ್ತು ಕರ್ನಾಟಕ ಜನಜೀವನದಲ್ಲಿ ಈ ವಿಧ ವಿಧ ಸಂಗೀತ ವಾದ್ಯಗಳು ಹೇಗೆ ಹಾಸುಹೊಕ್ಕಾಗಿದ್ದವು ಮತ್ತು ಜನಗಳ ಎಲ್ಲಾ ಕಾರ್ಯಕಲಾಪಗಳಲ್ಲಿ ಅವಿಭಾಜ್ಯ ಭಾಗವಾಗಿ ಜೀವನಕ್ಕೆ ಉತ್ಸಾಹ, ಕಳೆ ತುಂಬಿದ್ದವು ಎಂಬ ಅಂಶ ಅನುಭವವಾಗುವುದು.

ಶಾಸ್ತ್ರಕಾರರು ಭಾರತೀಯ ಸಂಗೀತ ವಾದ್ಯಗಳನ್ನು ನಾಲ್ಕು ವರ್ಗಗಳಾಗಿ ವಿಭಾಗಿಸಿದ್ದಾರೆ. ಅವು ತತ, ಸುಷಿರ, ಆನದ್ಧ ಮತ್ತು ಘನ ; ಕನ್ನಡ ಕವಿಗಳಿಗೆ ಈ ಅಂಶವು ಚೆನ್ನಾಗಿ ತಿಳಿದಿದ್ದಿತೆಂಬ ಅಂಶವು ಕಾವ್ಯಗಳಲ್ಲಿ ಸ್ಪಷ್ಟವಾಗಿದೆ. ಇದರ ಜೊತೆಗೆ ಅಂದು ಬಳಕೆಯಲ್ಲಿದ್ದ ಅನೇಕ ಅಪರೂಪ ವಾದ್ಯಗಳ ಬಗೆಗೆ ಅವರಿಗೆ ತಿಳುವಳಿಕೆ ಇದ್ದುದು ತಿಳಿದುಬರುತ್ತದೆ. ತತ ಅಥವಾ ತಂತ್ರಿ ವಾದ್ಯಗಳಲ್ಲಿ ಕಿನ್ನರಿ, ವಲ್ಲಕಿ, ವಿಪಂಚಿ, ದಂಡಿಕ, ರಾವಣಹಸ್ತ, ತ್ರಿಸರಿ, ಜಂತ್ರ, ಸ್ವರಮಂಡಲ, ಪರಿವಾದಿನಿ, ಮುಂತಾದವು ಉಲ್ಲೇಖವಾಗಿವೆ. ಹಾಗೆಯೇ ಸುಷಿರ ವಾದ್ಯಗಳಲ್ಲಿ ಶಂಖ, ಶೃಂಗ, ವಂಶ, ತಿತ್ತಿರಿ, ಬೊಂಬುಳಿ, ಕಹಳೆ, ಮುಂತಾದ ವಾದ್ಯಗಳ ಪ್ರಸ್ತಾಪವಿದೆ. ಆನದ್ಧ ವಾದ್ಯಗಳಲ್ಲಿ ಒತ್ತು, ಕರಡಿ, ಮೃದಂಗ, ಡಕ್ಕಾ, ಪಟಹ, ದುಂದುಭಿ, ಪಣವ, ಭೇರಿ, ಡಿಂಡಿಮ, ತ್ರಿವಳಿ, ನಿಸ್ಸಾಹ, ಡಮರು, ಚಂಬಕ, ದಂಡೆ, ರುಂಜ, ಡೋಲು, ಮುಂತಾದ ವಾದ್ಯಗಳ ಉಲ್ಲೇಖವಿದೆ. ಘನ ವಾದ್ಯಗಳಲ್ಲಿ ಘಂಟಾ, ಜಯಘಂಟಾ, ಕಿಂಕಿಣಿ, ಝಲ್ಲರಿ, ತಾಳ, ಕಾಂಸ್ಯತಾಳ ಮುಂತಾದವುಗಳ ಉಲ್ಲೇಖವಿದೆ. ಪಾಲ್ಕುರಿಕೆ ಸೋಮನಾಥನು ಬೇರೆ ಬೇರೆ ಹೆಸರುಗಳಿಂದ ಬಳಕೆಯಲ್ಲಿದ್ದ 32 ವೀಣೆಗಳನ್ನು 18 ಬಗೆಯ ಕೊಳಲುಗಳನ್ನೂ ಪ್ರಸ್ತಾಪಿಸಿ ಈ ವಾದ್ಯಗಳಿಗೆ ಸಂಬಂಧಪಟ್ಟ ಹಾಗೆ ಹೆಚ್ಚಿನ ವಿವರಗಳನ್ನೂ ಇತ್ತಿದ್ದಾನೆ. ಈ ವಿವರಗಳಂತೆ ಅಂದು ನಾನಾ ಬಗೆಯ ಚರ್ಮವಾದ್ಯಗಳು ಬಳಕೆಯಲ್ಲಿರುತ್ತಿದ್ದುವು. ತತ ಅಥವಾ ತಂತ್ರೀ ವಾದ್ಯಗಳಲ್ಲಿ ವೀಣೆ ಮತ್ತು ಕಿನ್ನರಿ ಜನಪ್ರಿಯವಾಗಿದ್ದಂತೆ ಕಂಡುಬರುತ್ತದೆ. ಪಿಟೀಲಿನ ರೀತಿಯಲ್ಲಿ ಕಮಾನಿನಿಂದ ನುಡಿಸುವ ವಾದ್ಯಗಳೂ ಬಳಕೆಯಲ್ಲಿದ್ದವು. ಇದನ್ನು ಸಮರ್ಥಿಸುವಂತೆ ಮೈಸೂರಿನ ಬಳಿ ಇರುವ ತಿರುಮಕೂಡಲು ಅಗಸ್ತ್ಯೇಶ್ವರ ದೇವಾಲಯದಲ್ಲಿರುವ ಕಂಭವೊಂದರಲ್ಲಿ ಈ ಬಗೆಯ ವಾದ್ಯವನ್ನು ನುಡಿಸುತ್ತಿರುವ ಸ್ತ್ರೀಯನ್ನು ಕೆತ್ತಲಾಗಿದೆ. ಇದು ಇಂದಿನ ಪಿಟೀಲುಗಳ ಹಿಂದಿನ ರೂಪವಿರಬೇಕು. ಇದರಂತೆಯೇ ಇತರ ಕೆಲವು ದೇವಾಲಯಗಳ ಶಿಲ್ಪಗಳಲ್ಲಿ ಪ್ರಾಚೀನ ಪುಷ್ಕರ ಮತ್ತು ಪಂಚಮುಖ ಮುಂತಾದ ವಾದ್ಯಗಳ ಮಾದರಿಗಳನ್ನು ನೋಡಬಹುದು. ಬೇಲೂರು ದೇವಾಲಯದಲ್ಲಿ ಕೆತ್ತಲಾದ ಶಿಲ್ಪಗಳಲ್ಲಿ ವೀಣೆಯ ಪ್ರಾಚೀನ ರೂಪವಾದ ಮೆಟ್ಟುಗಳನ್ನು ಅಳವಡಿಸಿದ ವೀಣೆ ಮತ್ತು ಅಪರೂಪದ ಶುಕ್ತಿ ವಾದ್ಯವನ್ನು ಕಾಣಬಹುದು.

## ಪ್ರಬಂಧ ಮತ್ತು ವಾಗ್ಗೇಯಕಾರರು

ಇಂದು ಕರ್ನಾಟಕ ಮತ್ತು ಹಿಂದೂಸ್ತಾನೀ ಎರಡೂ ಸಂಗೀತ ಕ್ಷೇತ್ರಗಳಲ್ಲಿಯೂ ಪ್ರಚಾರದಲ್ಲಿರುವ ಕೃತಿ ಅಥವಾ ಪ್ರಬಂಧಗಳು ಶಾಸ್ತ್ರೀಯ ಸಂಗೀತ ಪ್ರಕಾರಗಳು ಇಡೀ ಸಂಗೀತ ಕ್ಷೇತ್ರಕ್ಕೆ ಸಂಬಂಧಪಟ್ಟವಾಗಿವೆ. ಆದರೂ ಕರ್ನಾಟಕಕ್ಕೇ ವಿಶಿಷ್ಟವಾದ ಸಂಗೀತ ಪ್ರಕಾರಗಳೂ ಬೆಳೆದು ಬಂದಂತೆ ಕಾಣಬರುತ್ತದೆ. ಪುರಾತನ ಶಾಸ್ತ್ರ ಗ್ರಂಥಗಳಾದ ಬೃಹದ್ದೇಶಿ ಮುಂತಾದುವುಗಳಲ್ಲಿ ಕರ್ನಾಟ ಭಾಷೆಯಲ್ಲಿಯೇ ರಚಿತವಾದ ಕಂದಶುಕಸಾರಿಕ ಮುಂತಾದ ಪ್ರಬಂಧಗಳ ಪ್ರಸ್ತಾಪವಿದೆ. ಅದರ ನಂತರ ರಚಿತವಾದ ಮಾನಸೋಲ್ಲಾಸ, ಸಂಗೀತ ರತ್ನಾಕರ ಮುಂತಾದ ಗ್ರಂಥಗಳಲ್ಲಿ ಕಂದ, ತ್ರಿಪದಿ, ಚತುಷ್ಪದಿ, ಷಟ್ಪದಿ, ವರ್ಣ ಮುಂತಾದ ಪ್ರಬಂಧಗಳನ್ನು ಕರ್ನಾಟಕ ಭಾಷೆಯಲ್ಲಿ ರಚಿಸಿ ಹಾಡಲಾಗುತ್ತಿತ್ತೆಂದು ವರ್ಣಿತವಾಗಿದೆ. ಇದರ ಜೊತೆಗೆ, ರಗಳೆ ಮತ್ತು ಸಾಂಗತ್ಯಗಳೂ ಈ ಪ್ರಕಾರಗಳನ್ನು ಹೆಸರಿಸಬಹುದು. ಇತ್ತೀಚಿನವರೆಗೂ ಸಂಗೀತ ಮತ್ತು ಸಾಹಿತ್ಯಗಳೆರಡಕ್ಕೂ ನಿಕಟ ಸಂಬಂಧವಿತ್ತು. ಕೆಲವು ಸಲ ಸಂಗೀತ ಮುಂದು ಇನ್ನೊಂದು ಸಲ ಸಾಹಿತ್ಯ ಮುಂದು ಎನ್ನುವಂತಿತ್ತು. ಕರ್ನಾಟಕಕ್ಕೆ ವಿಶಿಷ್ಟವಾದ 'ಗಮಕ' ಕಲೆ ಸಾಹಿತ್ಯ ಸಂಗೀತಗಳೆರಡಕ್ಕೂ ಸಂಪರ್ಕ ಸೇತುವೆಯಂತಿತ್ತು. ಇನ್ನು ವಚನ ಮುಂತಾದ ಕೆಲವು ಪ್ರಕಾರಗಳು ವಾಚನ ಮತ್ತು ಗಾಯನ ಎರಡಕ್ಕೂ ಒದಗಿಬರುತ್ತಿದ್ದವು.

ಈ ಗೇಯ ಪ್ರಕಾರಗಳೇ ಅಲ್ಲದೆ ಧವಳವೇ ಮುಂತಾದ ಕೆಲವು ಪ್ರಕಾರಗಳು ಕರ್ನಾಟಕದಲ್ಲಿ ಬಹುಕಾಲದಿಂದಲೂ ಜನಪ್ರಿಯವಾಗಿವೆ. ಕರ್ನಾಟಕದ ವಾಗ್ಗೇಯಕಾರರ ಇನ್ನೊಂದು ವಿಶಿಷ್ಟ ಕೊಡುಗೆ—ಸುಳಾದಿ. ಈ ಪುರಾತನ ಲಕ್ಷಣ ಗ್ರಂಥಗಳನ್ನು ಪರಿಶೀಲಿಸಿದಾಗ ಕರ್ನಾಟಕದಲ್ಲಿ, ಪ್ರಚಲಿತವಿದ್ದ ಗೇಯ ಪ್ರಬಂಧಗಳಲ್ಲಿ ಕರ್ನಾಟಕ ಭಾಷೆಯದೇ ಅಲ್ಲದೆ, ಸಂಸ್ಕೃತ, ಪ್ರಾಕೃತ, ಲಾಟ, ದ್ರಾವಿಡ ಮುಂತಾದ ಇತರ ಭಾಷೆಗಳಲ್ಲಿ ರಚಿತವಾದ ಗೇಯ ಪ್ರಕಾರಗಳೂ ಬಳಕೆಯಲ್ಲಿದ್ದವು ಎಂಬ ಅಂಶ ಸ್ಪಷ್ಟವಾಗುತ್ತದೆ. ಆದರೆ ಈ ಪ್ರಕಾರಗಳಲ್ಲಿ ಬಹುಪಾಲು ಪ್ರೌಢ ಸಂಗೀತಕ್ಕಿಂತ ಪಾಮರ ರಂಜನೀಯವಾದ ಬಗೆಯವೆನ್ನ ಬಹುದು. ಪ್ರೌಢ ಅಥವಾ ಸಾಂಪ್ರದಾಯಿಕ ಸಂಗೀತದಲ್ಲಿ ಬಳಕೆಯಲ್ಲಿದ್ದ ಪ್ರಬಂಧ ಪ್ರಕಾರಗಳೆಲ್ಲಾ ಬಹುತೇಕ ಸಂಸ್ಕೃತ ಭಾಷೆಯಲ್ಲಿಯೇ ರಚಿತವಾಗುತ್ತಿದ್ದುವೆನ್ನಬಹುದು. ಆದರೆ ಸಂಗೀತದ ಅಗತ್ಯಗಳಿಗನುಕೂಲವಾಗುವಂತಹ ಒಂದು ಭಾಷೆಯೂ ನಿರ್ಮಿತವಾಯಿತು. ಅದನ್ನು ಭಾಂಡೀರ ಭಾಷೆ ಯೆಂದು ಕರೆಯುತ್ತಿದ್ದರು. ಅದು ಸಂಸ್ಕೃತ, ಪ್ರಾಕೃತ, ಅಲ್ಲದೆ ಪ್ರಾದೇಶಿಕ ಭಾಷೆ ಮುಂತಾದವುಗಳ ಒಂದು ರೀತಿಯ ಮಿಶ್ರಣ ವೆನ್ನಬಹುದು. ಈ ಭಾಂಡೀರ ಭಾಷೆಯನ್ನು ಸೃಜಿಸಿದ ಕೀರ್ತಿ ಮಾನಸೋಲ್ಲಾಸ ಗ್ರಂಥದ ಕರ್ತೃವಾದ ಸೋಮೇಶ್ವರನಿಗೆ ಸಲ್ಲುತ್ತದೆ.

ಇದಲ್ಲದೆ ಲಲಿತ ಗೇಯ ಪ್ರಕಾರಗಳೂ ಹೇರಳ ಸಂಖ್ಯೆಯಲ್ಲಿ ಪ್ರಚಲಿತವಾಗಿದ್ದು ಅವುಗಳನ್ನು ದಾಸರ ಹಾಡುಗಳೆಂದು ಕರೆಯಲಾಗುತ್ತಿದೆ. ಅವುಗಳಲ್ಲಿ ಅನೇಕವು ಕ್ರಮ ಬದ್ಧವಾಗಿ ರಾಗ ತಾಳಗಳನ್ನು ನಿಯೋಜಿಸಿ ರಚಿತವಾದ ಕೀರ್ತನೆಗಳಾಗಿವೆ. ಅವರು ಯಾವ ಪಂಥದವರೇ ಆಗಲಿ, ಈ ರಚನೆಗಳ ಕೃತಿಕರ್ತರು ಭಕ್ತಿ ವೈರಾಗ್ಯದಿಂದ ತುಂಬಿರುವುದು ಈ ಪದಗಳ ವೈಶಿಷ್ಟ್ಯ. ಈ ದೃಷ್ಟಿಯಿಂದ ಈ ಪದಗಳಲ್ಲಿ ಜೈನ ಮತ್ತು ವೀರಶೈವ ಪಂಥದ ರಚನಾಕಾರರನ್ನೂ ಸೇರಿಸಬೇಕಾಗುತ್ತದೆ. ಸಂಗೀತ ಪರಿಭಾಷೆ ಯಲ್ಲಿ ಪದವೆಂದರೆ ಸಂಗೀತ ರಚನೆ ಅಥವಾ ಪ್ರಬಂಧವೆಂದರ್ಥ. ನೂರಾರು ವರುಷಗಳಿಂದ ಕರ್ನಾಟಕದಲ್ಲಿ ಪದಗಳೇ ಅಲ್ಲದೆ ಇತರ ಅನೇಕ ಗೇಯ ಪ್ರಕಾರಗಳಾದ ಸುಳಾದಿ, ವಚನ, ಉಗಾಭೋಗ, ಕೀರ್ತನ, ತತ್ವ ಹಾಗೂ ಯಕ್ಷಗಾನಗಳು ಪ್ರಚಾರ ದಲ್ಲಿವೆ. ಹೀಗೆ ರಚಿತವಾದ ಅತೀ ಹಳೆಯ ಗೇಯ ಪ್ರಕಾರಗಳು ಜಾನಪದ ಸಂಗೀತದಲ್ಲಿ ಹೇರಳವಾಗಿ ದೊರೆಯುತ್ತವೆ. ಆದರೆ ಅವನ್ನು ರಚಿಸಿದವರಾರು, ಯಾವಾಗ ಎಂಬ ಸಂಗತಿ ತಿಳಿಯ ಬರದು. ಈಗ ತಿಳಿದುಬಂದಿರುವಂತೆ ಈ ರೀತಿಯ ಪ್ರಾಚೀನ ಗೇಯ ಪ್ರಕಾರಗಳು ರಚಿತವಾದುದು ವೀರಶೈವ ಪಂಥದವರಾದ ಸಕಳೇಶ ಮಾದರಸ, ಬಸವಣ್ಣ, ಮುಂತಾದವರಿಂದ. ಆದರೆ ಈ ಪದಗಳು ಇನ್ನೂ ಪರಿಷ್ಕಾರವಾಗಿ ನುಡಿ ಮತ್ತು ಧಾತುಗಳ ಸುಂದರ ಸಮನ್ವಯದಿಂದ ಕೂಡಿ ಪ್ರೌಢ ರೀತಿಯಲ್ಲಿ ರಚಿತವಾದುದು ನಿಜಗುಣ ಶಿವಯೋಗಿಯಿಂದ. ಇವರುಗಳೇ ಅಲ್ಲದೆ ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಂತ ಶಿವಯೋಗಿ, ನಾಗಭೂಷಣ ಘನಮಠಾರ್ಯ, ಕಡಕೋಳದ ಮಡಿವಾಳಪ್ಪ, ನಂಜುಂಡ ಶಿವಯೋಗಿ, ನೊಣವಿನಕೆರೆಯ ಕರಿಬಸವಸ್ವಾಮಿ, ಸರ್ಪಭೂಷಣ ಶಿವಯೋಗಿ, ಮುಂತಾದವರು ವೀರಶೈವ ಪಂಥದ ಕೃತಿರಚನಾಕಾರರಲ್ಲಿ ಮುಖ್ಯರು. ಇದರಂತೆಯೇ ಕನ್ನಡದ ಅನೇಕ ಪುರಾತನ ಗೇಯ ಪ್ರಕಾರಗಳು ಹರಿದಾಸ ಪಂಥದವರಿಂದ ರಚಿತವಾಗಿದೆ. ಈ ಹರಿದಾಸ ಪಂಥ ಅಥವಾ ಹರಿದಾಸ ಕೂಟದ ಆದ್ಯಪ್ರವರ್ತಕರು ಮಧ್ವಾಚಾರ್ಯರ ಶಿಷ್ಯರಾದ ಕ್ರಿ. ಶ. 1300ರಲ್ಲಿ ಜೀವಿಸಿದ್ದ ನರಹರಿ ತೀರ್ಥರೆಂದು ಭಾವಿಸಲಾಗಿದೆ. ಆದರೆ ಇವರಿಂದ ರಚಿತವಾದುದೆಂದು ಹೇಳಲಾದ ಕನ್ನಡ ಪದಗಳು ಕೆಲವು ಮಾತ್ರ ಇವೆ. ಈ ಪದರಚನೆ ಇನ್ನೂ ಪರಿಷ್ಕಾರವಾಗಿ ಹುಲುಸಾಗಿ ಬೆಳೆಯಲಾರಂಭವಾದುದು ಶ್ರೀಪಾದರಾಯರ (1450) ಕಾಲದಲ್ಲಿ. ಹರಿದಾಸ ಕೂಟದ ಪಿತಾಮಹರೆಂದು ಮಾನಿತರಾದ ಶ್ರೀಪಾದರಾಯರು ವಿಷ್ಣುಸ್ತುತಿ ರೂಪವಾದ ಅನೇಕ ಪದಗಳನ್ನು ಕನ್ನಡ ಭಾಷೆಯಲ್ಲಿ ರಚಿಸಿದ್ದಾರೆ. ಅವರ ನಂತರ ಈ ಪಂಥವನ್ನು ಬೆಳಗಿದ ವ್ಯಾಸರಾಯ (1449-1537), ವಾದಿರಾಜ (1480-1600), ಕನಕದಾಸ, ಪುರಂದರದಾಸ ಮುಂತಾದವರನೇಕರು ಕೀರ್ತನೆಗಳನ್ನು ರಚಿಸಿದ್ದಾರೆ. ಹೆಳವನ ಕಟ್ಟೆ ಗಿರಿಯಮ್ಮನು (1750) ಸೀತಾಕಲ್ಯಾಣವನ್ನು ಗೇಯ ರೂಪದಲ್ಲಿ ರಚಿಸಿದ್ದಾಳೆ. ಇದರಂತೆಯೇ ಪ್ರಸಿದ್ಧರಾದ ಇನ್ನೊಬ್ಬ ಹರಿದಾಸರೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿದ್ದ ಸುರಪುರದ ಆನಂದದಾಸರು. ಕರ್ನಾಟಕ ಮತ್ತು ಹಿಂದುಸ್ತಾನಿ ಎರಡೂ ಸಂಗೀತ ಪದ್ಧತಿಗಳಲ್ಲಿಯೂ ಪ್ರವೀಣರಾಗಿದ್ದ ಇವರು ಕರ್ನಾಟಕ ಪದ್ಧತಿಯಲ್ಲಿ ಕೃತಿ ರಚನೆ ಮಾಡಿದ್ದಾರೆ. ಅವುಗಳದೇ ಒಂದು ವಿಶೇಷ ಶೈಲಿಯಾಗಿದ್ದು ಅದನ್ನು ಸುರಪುರ ಶೈಲಿ ಎಂದು ಕರೆಯುತ್ತಾರೆ. ಹಾಗೆಯೇ ಮಂಗಳೂರಿನ ತುಪಾಕಿ ಕುಟುಂಬದವರೂ ಬಾಗೇಪಲ್ಲಿಯ ಗುರುದಾಸ ವಿಠಲರೆಂಬ ಅಂಧ ಹರಿದಾಸರೂ, ಹೊಸಳೆ ನರಹರಿ ವಿಠಲ ಮುಂತಾದವರ ಕೃತಿಗಳೂ ಉತ್ತಮ ರಾಗಸಂಯೋಜನೆ ಯಿಂದ ಕೂಡಿವೆ.

ಕರ್ನಾಟಕ ಸಂಗೀತದ ಪ್ರಾರಂಭಿಕ ಶಿಕ್ಷಣದಲ್ಲಿ ಪುರಂದರ ದಾಸರು ರಚಿಸಿದ ಪಿಳ್ಳಾರಿ ಗೀತೆಗಳು ಇಂದಿಗೂ ಮುಖ್ಯ ತಳಹದಿ ಯಂತಿವೆ. ಅನೇಕ ಹರಿದಾಸರು ಯಕ್ಷಗಾನಗಳನ್ನೂ ರಚಿಸಿದ್ದಾರೆ. ಈ ಹರಿದಾಸ ಪರಂಪರೆಯಲ್ಲಿ ಪುರಂದರದಾಸರು ಕರ್ನಾಟಕ ಸಂಗೀತ ಪಿತಾಮಹ ಎಂದು ಮಾನಿತರಾಗಿದ್ದಾರೆ. ಇಂದಿನ ಕರ್ನಾಟಕ ಸಂಗೀತದ ಆದ್ಯ ಪ್ರವರ್ತಕರಾಗಿ ಅದಕ್ಕೆ ಹೊಸಹಾದಿ ತೋರಿದವರೆಂದೂ ಗೌರವಿತರಾಗಿದ್ದಾರೆ. ಕರ್ನಾಟಕ ಸಂಗೀತವು ಪ್ರಚಾರದಲ್ಲಿರುವ ಭಾಗಗಳಲ್ಲೆಲ್ಲಾ ಸಂಗೀತ ಶಿಕ್ಷಣದ ಪೂರ್ವ ಹಂತಗಳಲ್ಲೆಲ್ಲಾ ಪುರಂದರದಾಸರ ಕೃತಿಗಳನ್ನು ಕಡ್ಡಾಯವಾಗಿ ಕಲಿಯಬೇಕಾದುದು ಸಂಪ್ರದಾಯ.

ಈ ರೀತಿ ಸಂಗೀತ ಕೃತಿ ರಚನೆಗಳಲ್ಲಿ ಹರಿದಾಸರೇ ಅಲ್ಲದೆ ಇತರ ಪಂಥಗಳಿಗೆ ಸೇರಿದವರು ರಚಿಸಿದ ಕೃತಿಗಳೂ ಇವೆ. ಇದರಲ್ಲಿ ಸಂಗೀತಕ್ಕೆ ಒದಗಿಬರುವ ಶಿವಶರಣರಿಂದ ರಚಿತವಾದ ಕೃತಿಗಳು ಸಾಕಷ್ಟು ಸಂಖ್ಯೆಯಲ್ಲಿದ್ದು ಇವು ಸಂಗೀತ ಕಲೆಯ ಅಭಿವೃದ್ಧಿಗೆ ಬಹು ಸಹಾಯಕವಾಗಿವೆ. ಈ ಶಿವಶರಣ ವಾಗ್ಗೇಯಕಾರರಲ್ಲಿ ಮುಖ್ಯರಾದವರು ಸರ್ಪಭೂಷಣ ಶಿವ ಯೋಗಿ ಅಥವಾ ಸಪ್ಪಣ್ಣ. ಇವರು ಕೈವಲ್ಯ ಕಲ್ಪವಲ್ಲರಿ ಎಂಬ ಗ್ರಂಥವನ್ನು ಬರೆದಿದ್ದಾರೆ. ಇದು ಹರಿದಾಸರಂತೆ ವೀರಶೈವ ತತ್ತ್ವವನ್ನು ಸಾರುವ ಹಾಡುಗಳ ಸಂಗ್ರಹ. ಹಾಗೆಯೇ ಜೈನ ಪಂಥದ ವಾಗ್ಗೇಯಕಾರರಲ್ಲಿ ಸುಪ್ರಸಿದ್ಧ ಭರತೇಶ ವೈಭವ ಕಾವ್ಯ ರಚಿಸಿದ ರತ್ನಾಕರವರ್ಣಿಯನ್ನು ಹೆಸರಿಸಬೇಕು. ಆತನು ರಚಿಸಿದ ಕೀರ್ತನೆಗಳನ್ನು ಅಣ್ಣನ ಪದಗಳೆಂದು ಕರೆಯುತ್ತಾರೆ. ಯೋಗ ಮತ್ತು ಅನುಭಾವದ ಬಗೆಗೆ ಪದಗಳನ್ನು ರಚಿಸಿದ ಇತರ ಪಂಥಗಳ ಕೃತಿ ರಚನಾಕಾರರಲ್ಲಿ ಚಿದಾನಂದಾವಧೂತ ಮತ್ತು ಶಿಶುನಾಳ ಷರೀಫ್ ಸಾಹೇಬರನ್ನು ನೆನೆಯಬಹುದು.

### ಆಧುನಿಕ ಕಾಲದ ಸಂಗೀತ

19 ಮತ್ತು 20ನೇಯ ಶತಮಾನಗಳ ಮಧ್ಯಂತರದಲ್ಲಿ ಸಂಗೀತ ಕ್ಷೇತ್ರದಲ್ಲಿ ಒಟ್ಟಿಗೆ ಹರಿದುಬರುತ್ತಿದ್ದ ಶಾಸ್ತ್ರೀಯ ಮತ್ತು ಜನಪ್ರಿಯ ಸಂಗೀತಗಳು ಬೇರೆಯಾಗಲು ಪ್ರಾರಂಭ ವಾಯಿತು. ಕೆಲವು ವಾಗ್ಗೇಯಕಾರರು ಕೇವಲ ಶಾಸ್ತ್ರೀಯ ಸಂಗೀತ ಕೃತಿಗಳನ್ನೇ ರಚಿಸಲಾರಂಭಿಸಿದರು. ಇನ್ನು ಕೆಲವರು ಎರಡೂ ಪ್ರಕಾರಗಳಲ್ಲಿಯೂ ಕೃತಿ ರಚನೆ ಮಾಡಿದರು. ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಹಿಡಿದು ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯವರೆಗಿನ ಒಂದು ಶತಮಾನದ ಅಂತರದಲ್ಲಿ ಅನೇಕ ವಿದ್ವಾಂಸರೂ, ವಾಗ್ಗೇಯಕಾರರೂ ಗಣನೀಯ ಸಂಖ್ಯೆಯಲ್ಲಿ ಕೃತಿ ರಚನೆ ಮಾಡಿದರು. ಇವುಗಳನ್ನು ಶಾಸ್ತ್ರೀಯ ಸಂಗೀತ ಮತ್ತು ನೃತ್ಯ ಕಚೇರಿಗಳಲ್ಲಿ ಉಪಯೋಗಿಸ ಲಾಗುತ್ತಿದೆ. ಇಂತಹ ವಿದ್ವಾಂಸರಲ್ಲಿ ವೀಣೆ ಭಕ್ಷಿ ವೆಂಕಟಸುಬ್ಬಯ್ಯ ಮೊದಲಿಗರು. ಇವರು ತಂಜಾವೂರಿನಲ್ಲಿದ್ದ ವೀಣೆ ಕುಪ್ಪಯ್ಯ ನವರ ಮೊಮ್ಮಗ. ದಿವಾನ್ ಪೂರ್ಣಯ್ಯನವರ ಆಹ್ವಾನವನ್ನು ಅಂಗೀಕರಿಸಿ ಮೈಸೂರು ಆಸ್ಥಾನಕ್ಕೆ ಬಂದ ಇವರು ರಚಿಸಿದ ಕೃತಿಗಳಲ್ಲಿ ಒಂದಾದ ಸಪ್ತತಾಳೇಶ್ವರಿ ಗೀತ ಮಾತ್ರ ಉಳಿದಿದೆ. ಇವರಂತೆಯೇ ಮೈಸೂರು ಆಸ್ಥಾನವನ್ನಲಂಕರಿಸಿದ್ದ ಇನ್ನೊಬ್ಬ ವಿದ್ವಾಂಸರು ಮೈಸೂರು ಸದಾಶಿವರಾಯರು. ಅವರ ಶಿಷ್ಯ ವರ್ಗದಲ್ಲಿ ಪ್ರಸಿದ್ಧ ವಿದ್ವನ್‌ಮಣಿಗಳಾದ ವೀಣೆ ಶೇಷಣ್ಣ, ವೀಣೆ ಸುಬ್ಬಣ್ಣ ಮುಂತಾದವರಿದ್ದರು. ಅವರ ಸಮಕಾಲೀನರೇ ಆಗಿದ್ದ ಇನ್ನೊಬ್ಬ ಪ್ರಸಿದ್ಧ ಸಂಗೀತ ವಿದ್ವಾಂಸರು ಮೂಗೂರು ಸುಬ್ಬಣ್ಣ. ಇದಲ್ಲದೆ ಬೇರೆ ಬೇರೆ ರಾಜ್ಯಗಳಿಂದಲೂ ಸಂಗೀತ ವಿದ್ವಾಂಸರನ್ನು ಮೈಸೂರು ಆಸ್ಥಾನಕ್ಕೆ ಬರಮಾಡಿಕೊಂಡು ಸನ್ಮಾನಿಸುತ್ತಿದ್ದರು. ಸಂಗೀತಕಲೆಗೆ ಮೈಸೂರು ಆಸ್ಥಾನದಲ್ಲಿ ಬಹಳ ಪ್ರೋತ್ಸಾಹ ನೀಡಲಾಗುತ್ತಿತ್ತು. 20ನೇಯ ಶತಮಾನದ ಪೂರ್ವಭಾಗದಲ್ಲಿ ರಾಜ್ಯವಾಳಿದ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸಂಗೀತ ಕಲೆಗೆ ವಿಶೇಷ ಪ್ರೋತ್ಸಾಹ ದೊರಕಿತು. ಹಿಂದೂಸ್ತಾನೀ ಮತ್ತು ಕರ್ನಾಟಕವೆರಡೂ ಸಂಗೀತ ಪದ್ಧತಿಗಳ ಪ್ರಸಿದ್ಧ ಸಂಗೀತ ವಿದ್ವಾಂಸರನ್ನು ಆಹ್ವಾನಿಸಿ ಸತ್ಕರಿಸುತ್ತಿದ್ದರು. ಅವರ ಆಸ್ಥಾನದಲ್ಲಿ ಸಾಂಬಯ್ಯ, ವೀಣೆ ಶೇಷಣ್ಣ, ಮುತ್ತಯ್ಯ ಭಾಗವತರು, ಕೆ. ವಾಸುದೇವಾಚಾರ್ಯರೇ ಮುಂತಾದ ಪ್ರಸಿದ್ಧ ವಾಗ್ಗೇಯಕಾರರಿದ್ದು ಅನೇಕ ಕೃತಿ ರಚನೆಗಳಾದವು. ಅವರಲ್ಲಿ ವಾಸುದೇವಾಚಾರ್ಯರಿಂದ ರಚಿತವಾದ ಕೃತಿಗಳನ್ನೊಳಗೊಂಡ ವಾಸುದೇವ ಕೀರ್ತನ ಮಂಜರಿ 1929ರಲ್ಲಿ ಪ್ರಕಟವಾಯಿತು. ಆ ಕೃತಿಗಳು ಸಂಗೀತ ಶಾಸ್ತ್ರ ಮತ್ತು ಪ್ರಯೋಗ ಎರಡೂ ಭಾಗ ಗಳಲ್ಲಿಯೂ ಆಚಾರ್ಯರಿಗಿದ್ದ ಪಾಂಡಿತ್ಯವನ್ನು ಎತ್ತಿ ತೋರು ವುದೇ ಅಲ್ಲದೆ ಕೃತಿ ರಚನಾ ಕಲೆಯಲ್ಲಿ ಆಚಾರ್ಯರಿಗಿದ್ದ ಕಲ್ಪನೆ ಮತ್ತು ಕೌಶಲ್ಯಕ್ಕೆ ಸಾಕ್ಷೀಭೂತವಾಗಿವೆ. ಇತರ ಕೃತಿ ರಚನಾ ಕಾರರಲ್ಲಿ ದೇವೋತ್ತಮ ಜೋಯಿಸ್ ಹಾಗೂ ಕರಿಗಿರಿರಾಯರನ್ನು ನೆನೆಯಬಹುದು. ಕರಿಗಿರಿರಾಯರ ಶಿಷ್ಯವರ್ಗದಲ್ಲಿ ಪ್ರಸಿದ್ಧ ರಾದವರು ಬಿಡಾರಂ ಕೃಷ್ಣಪ್ಪ ಮತ್ತು ಚಿಕ್ಕರಾಮರಾಯರು. ಮೈಸೂರು ರಾಜ್ಯವಾಳಿದ ಕಡೆಯ ಅರಸರಾದ ಶ್ರೀ ಜಯಚಾಮ ರಾಜ ಒಡೆಯರೂ ಕಲಾಪೋಷಕರಾಗಿದ್ದುದೇ ಅಲ್ಲದೆ ಉತ್ತಮ ವಾಗ್ಗೇಯಕಾರರಾಗಿದ್ದರು. ಇವರ ಹಾಗೆಯೇ ಪ್ರಸಿದ್ಧರಾದ ಸಂಗೀತ ವಿದ್ವಾಂಸರು ಮತ್ತು ವಾಗ್ಗೇಯಕಾರರಲ್ಲಿ ಮುಖ್ಯ ರಾದವರು ಅಳಿಯ ಲಿಂಗರಾಜ, ತಿರುಪ್ಪನಂದಲ್ ಪಟ್ಟಾಭಿ ರಾಮಯ್ಯ, ಕೋಲಾರ ಚಂದ್ರಶೇಖರ ಶಾಸ್ತ್ರಿ, ಬಳ್ಳಾರಿ ರಾಜಾರಾವ್, ರುದ್ರಪಟ್ಟಣಂ ವೆಂಕಟರಾಮಯ್ಯ, ಹುಲ್ಲಹಳ್ಳಿ ರಾಮಣ್ಣ, ವೀಣಾ ಕೃಷ್ಣಾಚಾರ್ಯ ಮುಂತಾದವರನ್ನು ಹೇಳ ಬಹುದು. ಇವರಲ್ಲಿ ಕೆಲವರು ಜಾವಳಿಗಳನ್ನು ರಚಿಸಿದ್ದಾರೆ. ಅಂತೆಯೇ ಮಹಿಳೆಯರಲ್ಲಿ ಬಹುಪ್ರಸಿದ್ಧ ಸಂಗೀತ ವಿದುಷಿ ಯಾಗಿದ್ದವರು ಬೆಂಗಳೂರಿನ ನಾಗರತ್ನಮ್ಮ. ತಿರುವಯ್ಯಾರಿ ನಲ್ಲಿದ್ದ ತ್ಯಾಗರಾಜರ ಸಮಾಧಿಯನ್ನೂ ಪುನರುದ್ಧಾರಮಾಡಿ ಕರ್ನಾಟಕ ಸಂಗೀತದ ಎಲ್ಲ ವಿದ್ವಾಂಸರಿಗೂ ಅದು ಒಂದು ಸಂಗೀತ ಯಾತ್ರಾಕ್ಷೇತ್ರವಾಗುವಂತೆ ಮಾಡಿದ ಕೀರ್ತಿ ನಾಗರತ್ನಮ್ಮನವರದು. ಈ ಪ್ರಸಿದ್ಧ ವಾಗ್ಗೇಯಕಾರರಂತೆಯೇ, ಜನಸಾಮಾನ್ಯರಿಗೆ ಅನುಕೂಲವಾಗುವಂತಹ ಹಾಡುಗಳನ್ನು ರಚಿಸಿದ ಅನೇಕ ಪಂಡಿತರೆಂದರೆ, ಬಸವಪ್ಪ ಶಾಸ್ತ್ರಿ, ಸೋಸಲೆ ಅಯ್ಯಾಶಾಸ್ತ್ರಿ, ಜಯರಾಯಾಚಾರ್ಯ, ಬೆಳ್ಳಾವೆ ನರಹರಿಶಾಸ್ತ್ರಿ, ಶಾಂತಕವಿ ಮುಂತಾದವರು. ಇವರು ಧಾರ್ಮಿಕ ಮತ್ತು ಸಾಮಾಜಿಕ ಸಮಾರಂಭಗಳಿಗೆ ಅವಶ್ಯಕವಾದ ಸಂಪ್ರದಾಯದ ಹಾಡುಗಳನ್ನು ರಚಿಸಿದ್ದಾರೆ. ಇವು ಸಮಾಜದ ಎಲ್ಲ ವರ್ಗ ದವರಿಗೂ ಅದರಲ್ಲಿಯೂ ಮಹಿಳೆಯರಿಗೆ ಉಪಯುಕ್ತವಾಗುವಂತೆ ರಚಿತವಾಗಿವೆ.

ರಾಜ ಪೋಷಣೆ

ಕರ್ನಾಟಕದ ರಾಜರ ಆಸ್ಥಾನದಲ್ಲಿ ಅನೇಕ ಸಂಗೀತ ವಿದ್ವಾಂಸರು ಪೋಷಿತರಾಗಿದ್ದು, ಅವರಲ್ಲಿ ವೈಣಿಕರು ಗಣನೀಯ ಪ್ರಮಾಣದಲ್ಲಿದ್ದರು. ಗೋವಿಂದ ವೈದ್ಯನ ಹೆಸರಾಂತ ಕಾವ್ಯವಾದ ಕಂಠೀರವ ನರಸರಾಜ ವಿಜಯದಲ್ಲಿ ಆಸ್ಥಾನವನ್ನು ಬಣ್ಣಿಸುವಾಗ ಅಲ್ಲಿ ಪೋಷಿತನಾದ ಪ್ರಸಿದ್ಧ ವೈಣಿಕ ಕೃಷ್ಣಯ್ಯನ ಪ್ರಸ್ತಾಪ ಬಂದಿದೆ. ಚಿಕ್ಕದೇವರಾಜ ಒಡೆಯರು ಸ್ವತಃ ಉತ್ತಮ ವೈಣಿಕರಾಗಿದ್ದರು. ಆದರೆ 19ನೇಯ ಶತಮಾನದ ಪ್ರಾರಂಭದ ವೇಳೆಗೆ ಮೈಸೂರು ರಾಜ್ಯದ ರಾಜಕೀಯ ಸ್ಥಿತಿ ಸ್ವಲ್ಪ ಅಸ್ಯವಸ್ಥೆಯಿಂದಿದ್ದಿತು. ಆದರೆ ಕ್ರಮೇಣ ಪರಿಸ್ಥಿತಿ ತಿಳಿಗೊಂಡು ಮೈಸೂರು ಒಂದು ಪ್ರಧಾನ ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಂಡಿತು. ಮತ್ತು ಈ ವೇಳೆಗೆ ಅನೇಕ ಸಣ್ಣ ರಾಜ ಮನೆತನಗಳು ತಮ್ಮ ಇರವನ್ನು ಕಳೆದುಕೊಳ್ಳುತ್ತಿದ್ದವು. ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಪ್ರಾರಂಭವಾಗಿ ಜಯ ಚಾಮರಾಜ ಒಡೆಯರ ಕಾಲದವರೆಗಿನ ಸುಮಾರು ಒಂದೂವರೆ ಶತಮಾನ ಕಾಲ ರಾಜ್ಯದ ಸಾಂಸ್ಕೃತಿಕ ಸ್ವರ್ಣಯುಗವೆನ್ನಬಹುದು. ಈ ಅವಧಿಯಲ್ಲಿ ಮೈಸೂರು ಒಂದು ಪ್ರಸಿದ್ಧ ಸಂಗೀತ ಮತ್ತು ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಂಡಿತು. ಈ ನಾಲ್ವರೂ ಮಹಾರಾಜರ ಅಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ್, ಚಾಮರಾಜ ಒಡೆಯರ್, ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಜಯಚಾಮರಾಜ ಒಡೆಯರ ಆಸ್ಥಾನವನ್ನು ಸುಪ್ರಸಿದ್ಧ ವೈಣಿಕರು ಅಲಂಕರಿಸಿದ್ದರು. ಜಯಚಾಮರಾಜರು ಸ್ವತಃ ಕೃತಿರಚನಕಾರರಾಗಿದ್ದು, ಕರ್ನಾಟಕ ಸಂಗೀತ ಪದ್ಧತಿಯಲ್ಲಿ 94 ಕೃತಿಗಳನ್ನು ರಚಿಸಿದ್ದಾರೆ. ಇದಲ್ಲದೆ ಅವರು ಪಾಶ್ಚಾತ್ಯ ಸಂಗೀತದಲ್ಲಿಯೂ ಪ್ರವೀಣರಾಗಿದ್ದರು. ಈ ನಾಲ್ವರು ಮಹಾರಾಜರ ಕಾಲದಲ್ಲಿ ಮೈಸೂರು ಆಸ್ಥಾನವನ್ನು ಬೆಳಗಿದ ಹೆಸರಾಂತ ವೈಣಿಕರಲ್ಲಿ ವೀಣಾಭಕ್ಷಿ ವೆಂಕಟಸುಬ್ಬಯ್ಯ, ಚಿಕ್ಕರಾಮಪ್ಪ, ಸುಬ್ಬರಾವ್, ಸಾಂಬಯ್ಯ, ಬಂಗಾರು ಸಾಮಯ್ಯ, ಶಾಮಣ್ಣ, ರುದ್ರಪಟ್ಣಂ ವೆಂಕಟರಾಮಯ್ಯ, ಶೇಷಣ್ಣ, ಭಕ್ಷಿ ಸುಬ್ಬಣ್ಣ, ಸುಂದರಶಾಸ್ತ್ರಿ, ವೆಂಕಟಗಿರಿಯಪ್ಪ, ಶಿವರಾಮಯ್ಯ, ಲಕ್ಷ್ಮೀನಾರಾಯಣ, ಮುಂತಾದವರನ್ನು ಹೆಸರಿಸಬಹುದು. ಹಾಗೆಯೇ ಆಸ್ಥಾನದಲ್ಲಿದ್ದ ಇನ್ನೊಬ್ಬ ವೈಣಿಕರನ್ನು ಸವ್ಯಸಾಚಿ ಅಯ್ಯಂಗಾರ್ ಎಂದು ಕರೆಯಲಾಗುತ್ತಿತ್ತು. ಇದಕ್ಕೆ ಕಾರಣವೆಂದರೆ ಅವರು ವೀಣೆಯನ್ನು ಎರಡೂ ಕಡೆಯಿಂದ ಎರಡೂ ಕೈಗಳಲ್ಲಿ ನುಡಿಸಬಲ್ಲ ಸಾಮರ್ಥ್ಯಪಡೆದಿದ್ದವರು. ಕುಣಿಗಲ್ ತಾಲೂಕಿನ ಜೋಡಿಹಳ್ಳಿ ಗ್ರಾಮದ ಪಲ್ಲವಿ ರಾಮಲಿಂಗಯ್ಯನವರು, 128 ತಾಳಗಳಲ್ಲಿಯೂ ಪಲ್ಲವಿಯನ್ನು ಹಾಡುವ ಸಾಮರ್ಥ್ಯ ಪಡೆದಿದ್ದು, ದಕ್ಷಿಣದ ಅನೇಕ ರಾಜರುಗಳಿಂದ ಸನ್ಮಾನಿತರಾಗಿದ್ದರು. ಹಾಗೆಯೇ ಈ ನಾಲ್ವರು ಅರಸರ ಕಾಲದಲ್ಲಿ ಆಸ್ಥಾನದಲ್ಲಿಯೂ, ಹೊರಗಡೆಯೂ ಇದ್ದ ಇನ್ನು ಕೆಲವರು ಪ್ರಸಿದ್ಧ ಸಂಗೀತ ವಿದ್ವಾಂಸರಲ್ಲಿ—ಸದಾಶಿವರಾವ್, ಲಾಲ್ಗುಡಿ ರಾಮಯ್ಯರ್, ಮೂಗೂರು ಸುಬ್ಬಣ್ಣ, ಅಲಸೂರು ಕೃಷ್ಣಯ್ಯ, ಕರಿಗಿರಿರಾವ್, ಭೈರವಿ ಕೆಂಪೇಗೌಡ, ನಖಾಸ್ ರುದ್ರಪ್ಪ, ಜಂಝಾಮಾರುತಂ ಸುಬ್ಬಯ್ಯ, ಲಾಲ್‌ಗುಡಿ ಗುರುಸ್ವಾಮಯ್ಯರ್, ಬಿಡಾರಂ ಕೃಷ್ಣಪ್ಪ, ಕೆ. ವಾಸುದೇವಾಚಾರ್, ತಿರುವಯ್ಯಾರು ಸುಬ್ರಹ್ಮಣ್ಯ ಅಯ್ಯರ್, ನಾಗರತ್ನಮ್ಮ, ಕೋಲಾರ ನಾಗರತ್ನಮ್ಮ, ಪಟ್ನಾಲ ನರಸಯ್ಯ, ಚಿಕ್ಕರಾಮರಾವ್, ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್, ಚಿಂತಲಪಲ್ಲಿ ವೆಂಕಟರಾವ್, ಬಿ. ದೇವೇಂದ್ರಪ್ಪ ಮತ್ತು ಟಿ. ಚೌಡಯ್ಯನವರನ್ನು ಹೇಳಬಹುದು. ಇದರಲ್ಲಿ ದೇವೇಂದ್ರಪ್ಪನವರು ಹಾಡುಗಾರಿಕೆಯೇ ಅಲ್ಲದೆ, ವೀಣೆ, ಪಿಟೀಲು, ಸಿತಾರ್, ಜಲತರಂಗ್ ಮುಂತಾದ ನಾನಾ ವಾದ್ಯಗಳನ್ನು ನುಡಿಸುವುದರಲ್ಲಿ ಪ್ರವೀಣರಾಗಿದ್ದಾರೆ. ವಾದ್ಯ ವಿದ್ವಾಂಸರಲ್ಲಿ ಪೊನ್ನುಸ್ವಾಮಿ, ಮುನಿಸ್ವಾಮಪ್ಪ, ಪುಟ್ಟಪ್ಪ, ಮತ್ತು ಟಿ. ಚೌಡಯ್ಯನವರುಗಳು ಪಿಟೀಲು ವಾದ್ಯ ವಾದನದಲ್ಲಿ ಬಹು ಪ್ರವೀಣರೆಂದು ಮಾನಿತರಾಗಿದ್ದರು. ಹಾಗೆಯೇ ತಾಳವಾದ್ಯ ಭಾಗದಲ್ಲಿ ರಂಗರಾಯರು ಘಟವಾದ್ಯ ವಾದನಕ್ಕೂ ಮುತ್ತುಸ್ವಾಮಿದೇವರು ಮೃದಂಗ ವಾದನಕ್ಕೂ ಲಕ್ಷ್ಮಣಾಚಾರ್ಯರು ಮೋರ್ಚಿಂಗ್ ವಾದನಕ್ಕೂ ಹೆಸರುವಾಸಿಯಾಗಿದ್ದರು.

ಹಿಂದೂಸ್ತಾನಿ ಸಂಗೀತ

ಹಿಂದೂಸ್ತಾನಿ ಸಂಗೀತ ಪದ್ಧತಿಯು ಕರ್ನಾಟಕಕ್ಕೆ ಹೊಸತೇನಲ್ಲ. 14ನೇಯ ಶತಮಾನದ ಮೊದಲ ದಶಕಗಳ ವೇಳೆಗಾಗಲೇ ಕರ್ನಾಟಕದಲ್ಲಿ ಅಮೀರ್ ಖುಸ್ರುವಿನ ಗೀತೆಗಳು ಪ್ರಚಲಿತವಿದ್ದವು. ವಿಜಯನಗರದ ರಾಜರಿಗೂ ಬಹುಮನಿ ಸುಲ್ತಾನ ಮಹಮ್ಮದನಿಗೂ ಯುದ್ಧ ನಡೆದ ಕಾಲದಲ್ಲಿ ಈ ಅಮೀರ್ ಖುಸ್ರುವಿನ ಗೀತೆಗಳನ್ನು ಹಾಡುತ್ತಿದ್ದರು. ಇದಲ್ಲದೆ ಕಲ್ಬುರ್ಗಿಯಲ್ಲಿ ನೆಲೆಸಿದ ಸೂಫಿ ಸಂತ ಬಂದೇ ನವಾಜ್ ಮುಂತಾದ ಸಂತರೂ ಅನೇಕ ಗೀತೆಗಳನ್ನು ರಚಿಸಿದರು. ಆದರೆ ಗೀತರಚನೆಗಳಲ್ಲಿ ಬಹು ಪ್ರಮುಖನಾದವನು, ಕ್ರಿ.ಶ. 1580 ರಿಂದ 1627 ರವರೆಗೆ ರಾಜ್ಯವಾಳಿದ ವಿಜಾಪುರದ ಸುಲ್ತಾನ ಎರಡನೇಯ ಇಬ್ರಾಹಿಂ ಆದಿಲ್ ಷಾ. ಅವನು ಪ್ರಬುದ್ಧ ಸಂಗೀತಜ್ಞ ಮತ್ತು ವಾಗ್ಗೇಯಕಾರ. ಸುಪ್ರಸಿದ್ಧ ಗ್ರಂಥವಾದ ಕಿತಾಬ್–ಎ–ನೌರಸ್ ರಚಿಸಿದವ. ಇದರಲ್ಲಿ ಉತ್ತರಾದಿ ರಾಗಗಳಲ್ಲಿ ರಚಿತವಾದ ಅನೇಕ ಸುಂದರ ಕೃತಿಗಳಿವೆ.

ಇಂದಿನ ಮಾಗಡಿ ತಾಲೂಕಿಗೆ ಸೇರಿದಂತೆ ಶಿವಗಂಗೆಯ ಸಮೀಪವಿರುವ ಸಾತನೂರು ಗ್ರಾಮಕ್ಕೆ ಸೇರಿದವನಾದ ಕ್ರಿ.ಶ. 1562-1599 ಮಧ್ಯೆ ಜೀವಿಸಿದ್ದ ಪುಂಡರೀಕ ವಿಠಲನು ಔತ್ತರೇಯ ಮತ್ತು ದಾಕ್ಷಿಣಾತ್ಯ ಎರಡೂ ಸಂಗೀತ ಪದ್ಧತಿಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದನು. ಊರನ್ನು ಬಿಟ್ಟು ರಾಜಾಶ್ರಯವನ್ನು

ರಸುತ್ತಾ ಮೊದಲು ಖಾನ್ ದೇಶದ ಸುಲ್ತಾನ್ ಬುರ್‌ಹಾನ ಖಾನನ ಆಸ್ಥಾನದಲ್ಲಿ ಆಶ್ರಯ ಪಡೆದು ಅವನ ಅಣತಿಯಂತೆ ಪ್ರಚಲಿತವಿದ್ದ ಸಂಗೀತ ಪದ್ಧತಿಗಳನ್ನು ಪುನಃ ಪರಿಷ್ಕರಿಸಿ ಕ್ರೋಢೀಕರಿಸಲು ನೆರವಾದನು. ಇಂದು ಪ್ರಚಾರದಲ್ಲಿರುವ ಅನೇಕ ಹಿಂದೂಸ್ತಾನೀ ರಾಗಗಳು ಪುಂಡರೀಕ ವಿಠಲನ ಲಕ್ಷಣ ಗ್ರಂಥಗಳಲ್ಲಿ ವಿವರಿಸಿದ ಆಕಾರಗಳನ್ನೇ ಹೋಲುತ್ತವೆ ಎಂದು ಅನೇಕ ಪಂಡಿತರ ಅಭಿಪ್ರಾಯ. ಮುಮ್ಮಡಿ ಕೃಷ್ಣರಾಜರ ಸಮಕಾಲೀನರಾಗಿದ್ದ ಸುರಪುರದ ಆನಂದದಾಸರು ಹಿಂದೂಸ್ತಾನೀ ಸಂಗೀತದಲ್ಲಿಯೂ ಪ್ರವೀಣರಾಗಿದ್ದರು. ಮೈಸೂರು ಸಂಸ್ಥಾನವು ಮುಖ್ಯವಾಗಿ ಬಹುತೇಕ ಕರ್ನಾಟಕ ಸಂಗೀತಕ್ಕೆ ಪ್ರೋತ್ಸಾಹ ನೀಡಿದರೂ ಹಿಂದೂಸ್ತಾನಿ ಸಂಗೀತಕ್ಕೂ ಸಾಕಷ್ಟು ಪ್ರೋತ್ಸಾಹ ಹಾಗೂ ಪೋಷಣೆ ಒದಗಿಸಿತ್ತು. ನಿದರ್ಶನವಾಗಿ, ತಿರುವಾಂಕೂರಿನ ಸ್ವಾತಿ ತಿರುನಾಳರ ಕೋರಿಕೆಯಂತೆ ಮೈಸೂರು ಆಸ್ಥಾನದ ಹಿಂದೂಸ್ತಾನಿ ಗವಾಯಿಗಳಾದ ನಾಥೂರಾಂ ಮತ್ತು ನಂದಾರಾಂ ಎಂಬ ಇಬ್ಬರು ಹಿಂದೂಸ್ತಾನೀ ಸೋದರ ಗವಾಯಿಗಳನ್ನು ತಿರುವಾಂಕೂರು ಆಸ್ಥಾನಕ್ಕೆ ಕಳುಹಿಸಲಾಯಿತೆಂದು ಹೇಳಲಾಗಿದೆ.

ಮೈಸೂರು ಆಸ್ಥಾನದಲ್ಲಿಯೇ ಅನೇಕ ಹಿಂದೂಸ್ತಾನಿ ಉಸ್ತಾದರಿದ್ದರು. ಅವರಲ್ಲಿ ಕೆಲವರು ಮೈಸೂರು ನಗರದಲ್ಲಿಯೇ ಖಾಯಂ ಆಗಿ ನೆಲೆಸಿದರು. ಇನ್ನು ಕೆಲವರು ಕೆಲವು ಕಾಲ ಮಾತ್ರ ಅಲ್ಲಿದ್ದರು. ಹೀಗೆ ಮೈಸೂರಿನಲ್ಲಿಯೇ ಖಾಯಂ ಆಗಿ ನೆಲೆಸಿದ ಉಸ್ತಾದರಲ್ಲಿ—ನಥಾನ್ ಖಾನ್, ಹೈದರ್ ಭಕ್ಷ್, ಗೌಹರ್ ಜಾನ್, ಬರಕತ್ತುಲ್ಲಾ ಖಾನ್, ಹಾಫಿಸ್ ಖಾನ್, ಮುಂತಾದವರು ಮುಖ್ಯರು. ಉಸ್ತಾದ್ ವೌಲಾ ಭಕ್ಷ್ ಕೆಲಕಾಲ ಮೈಸೂರು ಆಸ್ಥಾನದಲ್ಲಿದ್ದರು. ಫಯ್ಯಾಜ್ ಖಾನ್ ಮತ್ತು ಬಷೀರ್ ಖಾನರು ವಿಶೇಷ ಉತ್ಸವಾದಿಗಳ ಸಮಯದಲ್ಲಿ ಮೈಸೂರಿಗೆ ಬಂದು ಸೇವೆ ಸಲ್ಲಿಸಿ ಹಿಂತಿರುಗುತ್ತಿದ್ದರು.

ಕರ್ನಾಟಕದ ಉತ್ತರ ಭಾಗಗಳೆಲ್ಲವೂ ಮುಂಬೈ ಪ್ರಾಂತದ ಆಡಳಿತಕ್ಕೊಳಪಟ್ಟು ಪ್ರಾಯಶಃ ಮಹಾರಾಷ್ಟ್ರದ ಪ್ರಭಾವವೇ ಹೆಚ್ಚಾಗಿದ್ದರೂ ಆ ಭಾಗದಲ್ಲಿ ಎಲ್ಲೆಡೆ ಬಹುತೇಕ ಕರ್ನಾಟಕ ಸಂಗೀತವೇ ಪ್ರಚಾರದಲ್ಲಿದ್ದಿತು. ಆದರೆ ಜಮಖಂಡಿ ರಾಮದುರ್ಗ ಮುಂತಾದ ಸಣ್ಣ ಪುಟ್ಟ ಪಾಳೆಯಪಟ್ಟುಗಳಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ಪೋಷಣೆಯಿತ್ತು. ಜಮಖಂಡಿ ಸಂಸ್ಥಾನದಲ್ಲಿ ಬಾಲಕೃಷ್ಣ ರಾಸ್ತೆ, ಗಣಪತ್‌ರಾವ್ ರಾಸ್ತೆ, ನಂದೋಪಂತ್ ಜೋಗ್ಳೇಕರ್, ಬಲವಂತರಾವ್ ವೈದ್ಯ, ದಾದಾ ಖರೆ ಮುಂತಾದ ಹಿಂದೂಸ್ತಾನಿ ಸಂಗೀತ ವಿದ್ವನ್‌ಮಣಿಗಳು ಪೋಷಿತರಾಗಿದ್ದರು. ಹಾಗೆಯೇ ಬಳವಂತ್‌ರಾವ್ ಕಾಟ್ಕರ್ ಹಾಗೂ ಅಂತೂಬುವಾ ಅಪ್ಪೆ ಅವರುಗಳು ರಾಮದುರ್ಗದ ಸಂಸ್ಥಾನದಲ್ಲಿ ನೇಮಕವಾಗಿದ್ದರು.

ಪ್ರಸಿದ್ಧ ಗಾಯಕರಾದ ಭಾಸ್ಕರಬುವಾ ಬಖ್ಲೆ ಅವರು ಧಾರವಾಡಕ್ಕೆ ಬಂದ ನಂತರ ಉತ್ತರ ಕರ್ನಾಟಕದ ಸಂಗೀತ ಕ್ಷೇತ್ರದಲ್ಲಿ ತೀವ್ರ ಬದಲಾವಣೆಯುಂಟಾಯಿತು. ಧಾರವಾಡದ ಉಪಾಧ್ಯಾಯ ಶಿಕ್ಷಣ ಶಾಲೆಗೆ ವರ್ಗವಾಗಿ ಬಂದ ಭಾಸ್ಕರಬುವಾ ಅವರು ಅಂದು ಹಿಂದೂಸ್ತಾನಿ ಸಂಗೀತ ಕ್ಷೇತ್ರದ ಹೆಸರಾಂತ ಹಿರಿಯ ಗಾಯಕರು. ಅವರು ಎಲ್ಲರ ಮನ್ನಣೆಗೂ ಪಾತ್ರರಾಗಿದ್ದ ಹಿರಿಯ ಸಂಗೀತ ವಿದ್ವಾಂಸರಾದುದರಿಂದ ಅವರಲ್ಲಿಗೆ ಸಂಗೀತಗಾರರೂ, ಕಲಾಭಿಮಾನಿಗಳೂ ಆಗಾಗ್ಗೆ ಬರುತ್ತಿದ್ದು, ಹೊರಗಡೆಯ ಪ್ರಸಿದ್ಧ ಗವಾಯಿಗಳೂ, ಉಸ್ತಾದರೂ ಕಲೆತು ವಿಚಾರ ವಿನಿಮಯ ಮಾಡುವ ಕೇಂದ್ರವಾಯಿತು ಅವರ ಮನೆ ಅನತಿಕಾಲದಲ್ಲಿಯೇ, ಹಿಂದೂಸ್ತಾನಿ ಸಂಗೀತವು ಅಭಿವೃದ್ಧಿಯಾಗಿ ಜನಾದರಣೀಯವಾಗಿ ಉತ್ತರ ಕರ್ನಾಟಕದಲ್ಲಿ ಅಂದಿನವರೆಗೂ ಪ್ರಚಲಿತವಿದ್ದ ಕರ್ನಾಟಕ ಸಂಗೀತದ ಸ್ಥಾನಕ್ಕೆ ಬಂದಿತು. ಹಿಂದೂಸ್ತಾನೀ ಸಂಗೀತವು ಯಾವ ಮಟ್ಟಕ್ಕೆ ಅಭಿವೃದ್ಧಿಯಾಯಿತೆಂದರೆ ಭಾರತ ಸಂಗೀತ ಕ್ಷೇತ್ರದಲ್ಲಿ ಇಂದು ಕರ್ನಾಟಕದ ಹಿಂದೂಸ್ತಾನೀ ಸಂಗೀತಕಲೆಗೆ ಬಹು ಗಣ್ಯಸ್ಥಾನವಿದೆ. ಧಾರವಾಡದಲ್ಲಿ ಸ್ವಲ್ಪಕಾಲ ನೆಲೆಸಿದ್ದ ಭಾಸ್ಕರ ಬುವಾರವರೇ ಅಲ್ಲದೆ ಹುಬ್ಬಳ್ಳಿ-ಧಾರವಾಡ ಪ್ರಾಂತಕ್ಕೆ ಪದೇಪದೇ ಬರುತ್ತಿದ್ದ ಮತ್ತು ಅಲ್ಲಿಯೇ ನೆಲೆಸಿದ ಗವಾಯಿ ಮತ್ತು ಉಸ್ತಾದರಲ್ಲಿ ಮುಖ್ಯರಾದವರೆಂದರೆ—ಅಲ್ಲಾ ದಿಯಾಖಾನ್, ಖಾನ್ ಅಬ್ದುಲ್ ಕರೀಂಖಾನ್, ರಹಮತ್‌ಖಾನ್, ರಾಮಕೃಷ್ಣ ಬುವಾ ವಝೆ, ಶಿವರಾಮ ಬುವಾ, ಮಂಜಿಖಾನ್, ವಿಷ್ಣುಪಂತ ಛತ್ರೆ, ರಹಿಮತ್‌ಖಾನ್ ಸಿತಾರಿಯಾ, ನೀಲಕಂಠ ಬುವಾ, ಶಂಕರ ದೀಕ್ಷಿತ್ ಜಂತಲಿ, ದತ್ತೋಪಂತ ಪಾಠಕ್, ಪಂಚಾಕ್ಷರಿ ಗವಾಯಿ, ಹನುಮಂತರಾವ್ ವಾಳವೇಕರ್ ಹಾಗೂ ವಿಠಲರಾವ್ ಕೊರೆಗಾಂವ್‌ಕರ್. ಸವಾಯಿ ಗಂಧರ್ವರೆಂದು ಪ್ರಸಿದ್ಧರಾದ ರಾಮಭಾವು ಕುಂದಗೋಳಕರ್ ಅವರು ಖಾನ್ ಅಬ್ದುಲ್ ಕರೀಂಖಾನರ ಪ್ರಸಿದ್ಧ ಶಿಷ್ಯರು. ಅಬ್ದುಲ್ ಕರೀಂಖಾನರು ಕರ್ನಾಟಕದ ಈಗಿನ ಗಡಿಗೆ ಸಮೀಪವಾಗಿರುವ ಮಿರಜ್‌ನಲ್ಲಿ ವಾಸವಾಗಿದ್ದವರು. ಅವರದು ಕಿರಾಣಾ ಘರಾಣೆ. ಈ ಘರಾಣೆಯ ಪ್ರತಿಪಾದಕರಲ್ಲಿ ಕರ್ನಾಟಕದಲ್ಲಿ ಪ್ರಸಿದ್ಧರಾದವರಲ್ಲಿ ಗಂಗೂಬಾಯಿ ಹಾನಗಲ್, ಭೀಮಸೇನ್ ಜೋಷಿ, ವೆಂಕಟರಾವ್ ರಾಮದುರ್ಗ ಮುಂತಾದವರನ್ನು ಹೇಳಬಹುದು. ಹಾಗೆಯೇ ಗ್ವಾಲಿಯರ್ ಘರಾಣೆಯ ಪ್ರತಿಪಾದಕರಲ್ಲಿ ಗುರುರಾವ್ ದೇಶಪಾಂಡೆ ಮತ್ತು ನೀಲಕಂಠ ಬುವಾ ಗಾಡ್ಗೋಳಿಯವರು ಮುಖ್ಯರು. ಮಲ್ಲಿಕಾರ್ಜುನ ಮನ್ಸೂರರು ಗ್ವಾಲಿಯರ್ ಮತ್ತು ಜಯಪುರ ಎರಡೂ ಘರಾಣೆಗಳ ಉತ್ತಮಾಂಶಗಳು ಬೆರೆತ ಒಂದು ವಿಶಿಷ್ಟ ಶೈಲಿಯನ್ನು ರೂಪಿಸಿಕೊಂಡಿರುತ್ತಾರೆ. ಅನೇಕ ಶಿಷ್ಯರಿಗೆ ತರಬೇತಿ ನೀಡಿರುತ್ತಾರೆ. ಹುಟ್ಟುಕುರುಡರಾದ ಪಂಚಾಕ್ಷರಿ ಗವಾಯಿಯವರು ಉತ್ತರ ಕರ್ನಾಟಕದ ಒಬ್ಬ ಪ್ರತಿಭಾನ್ವಿತ ಸಂಗೀತ ವಿದ್ವಾಂಸರು. ಅವರು ಉಭಯಗಾನ ವಿಶಾರದರೆಂಬ ಬಿರುದು ಪಡೆದಿದ್ದಾರೆ.

ಇದಕ್ಕೆ ಕಾರಣ, ಅವರಿಗೆ ಕರ್ನಾಟಕ ಮತ್ತು ಹಿಂದೂಸ್ತಾನೀ ಎರಡೂ ಪದ್ಧತಿಗಳಲ್ಲಿ ಇದ್ದ ಪ್ರಾವೀಣ್ಯ. ಇವರು ನೂರಾರು ಮಂದಿ ಶಿಷ್ಯರನ್ನು ತರಬೇತಿಗೊಳಿಸಿದರು. ಅವರಲ್ಲಿ ಪ್ರಸಿದ್ಧರಾದವರು ಬಸವರಾಜ ರಾಜಗುರು. ಹಿಂದೂಸ್ತಾನೀ ಘರಾಣೆಗಳಲ್ಲಿ ಪ್ರಸಿದ್ಧವಾದುದೊಂದು ಆಗ್ರಾ ಘರಾಣೆ. ಅದರ ಪ್ರತಿಪಾದಕರೂ ಕರ್ನಾಟಕದಲ್ಲಿ ಸುಮಾರು ಸಂಖ್ಯೆಯಲ್ಲಿದ್ದಾರೆ. ಅವರಲ್ಲಿ ಪ್ರಸಿದ್ಧರು ರಾಮರಾವ್ ವಿ. ನಾಯಕ್.

ಉತ್ತರ ಕರ್ನಾಟಕದಲ್ಲಿ ಸಂಗೀತ ಶಾಸ್ತ್ರಜ್ಞರಿಗೇನೂ ಕೊರತೆ ಇದ್ದಿಲ್ಲ. ಕಾರವಾರದ ಮಂಗೇಶರಾವ್ ತೆಲಂಗ್‌ರವರು ಅಂತಹವರಲ್ಲೊಬ್ಬರು. ಸಂಗೀತ ಮಕರಂದ, ಸಂಗೀತ ರತ್ನಾಕರ, ಮುಂತಾದ ಗ್ರಂಥಗಳನ್ನು ಅವರು ಶೋಧಿಸಿ ಸಂಪಾದಿಸಿರುತ್ತಾರೆ. ವಾದ್ಯವಾದನ ಪ್ರವೀಣರಲ್ಲಿ ಹನುಮಂತರಾವ್ ವಾಳ್ವೇಕರ್‌ರವರು ಹಾರ್ಮೋನಿಯಂ ವಾದ್ಯದಂತೆಯೇ ಪಿಟೀಲು ವಾದ್ಯದ ಪ್ರಚಾರಕ್ಕೂ ಕಾರಣರಾದರು. ಹಾಗೆ ಪಿಟೀಲು ಕಲಿತು ಪ್ರಸಿದ್ಧರಾದವರಲ್ಲೊಬ್ಬರು ಫಿಡಲ್ ಅನಂತಪ್ಪ. ನಾಟಕಗಳಲ್ಲಿ ಪಿಟೀಲು ಪಕ್ಕವಾದ್ಯ ನುಡಿಸಿ ಹೆಸರುವಾಸಿಯಾಗಿದ್ದರು. ದತ್ತಾತ್ರೇಯ ಪರ್ವತೀಕರ್ ಅವರು ಸ್ವರಮಂಡಲ ವಾದನಕ್ಕೂ ಹಾಗೆಯೇ ಹುಲಗೂರು ಕೃಷ್ಣಾಚಾರ್ಯರು ಕಿನ್ನರಿ ವಾದನಕ್ಕೂ ಪ್ರಸಿದ್ಧರಾಗಿದ್ದವರು. ಅವರು ಪ್ರಸಿದ್ಧ ಸಂಗೀತ ಶಾಸ್ತ್ರಜ್ಞರೂ ಆಗಿದ್ದರು. ಕರ್ನಾಟಕದಲ್ಲಿ ಇಂದಿಗೂ ಹಿಂದೂಸ್ತಾನೀ ಮತ್ತು ಕರ್ನಾಟಕ ಸಂಗೀತ ಪದ್ಧತಿಗಳು ಪಕ್ಕಪಕ್ಕದಲ್ಲಿಯೇ ಬೆಳೆದು ಅಭಿವೃದ್ಧಿಯಾಗಿರುವುದು ವಿಶೇಷ ಸಂಗತಿ. ಇಂದು ರಾಷ್ಟ್ರ ಮತ್ತು ಅಂತರರಾಷ್ಟ್ರ ಮಟ್ಟದಲ್ಲಿ ಪ್ರಸಿದ್ಧಿ ಪಡೆದ ಕರ್ನಾಟಕದ ಹಿಂದೂಸ್ತಾನೀ ಪದ್ಧತಿಯ ಸಂಗೀತ ಕಲಾವಿದರಲ್ಲಿ ಡಾ|| ಮಲ್ಲಿಕಾರ್ಜುನ ಮನ್ಸೂರ್, ಡಾ|| ಗಂಗೂಬಾಯಿ ಹಾನಗಲ್, ಭೀಮ್‌ಸೇನ್ ಜೋಷಿ, ಬಸವರಾಜ ರಾಜಗುರು, ಶೇಷಾದ್ರಿ ಗವಾಯಿ, ಸಂಗಮೇಶ್ವರ ಗುರವ್ ಮುಂತಾದವರನ್ನು ಹೇಳಬಹುದು. ಕುಮಾರ ಗಂಧರ್ವ, ದೇವೇಂದ್ರ ಮುರುಡೇಶ್ವರ್, ವಿಷ್ಣು ದಾಸ್ ಶಿರಾಲಿ, ಡಾ|| ಎಂ. ಆರ್. ಗೌತಮ್, ಮುಂತಾದ ಕರ್ನಾಟಕದ ಸಂಗೀತ ಕಲಾವಿದರು ಬೇರೆ ರಾಜ್ಯಗಳಲ್ಲಿ ನೆಲಸಿದ್ದಾರೆ. ಹೀಗೆಯೇ ಈ ಕ್ಷೇತ್ರದಲ್ಲಿ ಪ್ರಸಿದ್ಧರಾದ ಇತರ ಕಲಾವಿದರಲ್ಲಿ, ಪುಟ್ಟರಾಜ ಗವಾಯಿ, ಬಸವರಾಜ ಮನ್ಸೂರ್, ಕೃಷ್ಣಾಬಾಯಿ ರಾಮದುರ್ಗ, ಫಕೀರಪ್ಪ ಗವಾಯಿ, ಗುರುಬಸವಾಚಾರ್ಯ ಹಿರೇಮಠ, ವಿಠಲರಾವ್ ಕೋರೆಗಾಂವ್‌ಕರ್, ವಿ. ವಿ. ಉತ್ತೂರ್‌ಕರ್, ಎನ್. ಜಿ. ಮಜುಂದಾರ್, ಆರ್. ಎಸ್. ದೇಸಾಯಿ, ಅರ್ಜುನಸಾ ನಾಕೋಡ್, ಶೇಷಗಿರಿ ಹಾನಗಲ್, ಲಕ್ಷ್ಮಿ ಜಿ. ಭಾವೆ, ಬಸವರಾಜ ಬೆಂಡಿಗೇರಿ, ಮಾಣಿಕ್‌ರಾವ್ ರಾಯಚೂರ್‌ಕರ್, ಲಲಿತಾ ಉಭಯಕರ್, ಡಿ. ಎಸ್. ಗರೂಡ್, ಡಿ. ಶೀನಪ್ಪ, ಪ್ರೇಮಾನಂದ್, ಸಂಗಮೇಶ್ವರ ಗುರವ್, ಡಾ|| ರಾಜೀವ್ ತಾರಾನಾಥ್, ಮುಂತಾದವರು ಹೆಸರಾಗಿದ್ದಾರೆ.

ಕರ್ನಾಟಕ ಸಂಗೀತ ಕ್ಷೇತ್ರದಲ್ಲಿಯೂ ಹಾಗೆಯೇ ತಮ್ಮ ಸ್ವಪ್ರತಿಭೆಯಿಂದಲೂ, ಸೃಜನಶೀಲತೆಯಿಂದಲೂ ಕರ್ನಾಟಕ ಸಂಗೀತದ ಸಿರಿವಂತಿಕೆಯನ್ನು ಹೆಚ್ಚಿಸಿದ್ದಾರೆ. ಅವರಲ್ಲಿ ಅನೇಕರು ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದ ಮನ್ನಣೆಯನ್ನು ಪಡೆದಿದ್ದಾರೆ. ಅವರಲ್ಲಿ ಗಾಯನ ವಿಭಾಗದಲ್ಲಿ ಬೆಳಕವಾಡಿ ಶ್ರೀನಿವಾಸಯ್ಯಂಗಾರ್, ವರದರಾಜಯ್ಯಂಗಾರ್, ಚಿಂತಲಪಲ್ಲಿ ವೆಂಕಟರಾವ್, ರಾಮಚಂದ್ರರಾವ್, ಎನ್. ಚನ್ನಕೇಶವಯ್ಯ, ಬಿ. ದೇವೇಂದ್ರಪ್ಪ, ಪಲ್ಲವಿ ಚಂದ್ರಪ್ಪ, ಕುರುಡಿ ವೆಂಕಣ್ಣಾಚಾರ್, ಎಲ್. ಎಸ್. ನಾರಾಯಣಸ್ವಾಮಿ ಭಾಗವತರು, ಎಂ. ಎ. ನರಸಿಂಹಾಚಾರ್, ಬಿ. ಕೆ. ಪದ್ಮನಾಭರಾವ್, ಆರ್. ಕೆ. ನಾರಾಯಣಸ್ವಾಮಿ, ಆರ್. ಕೆ. ಶ್ರೀಕಂಠನ್, ಆರ್ ಕೆ. ರಾಮನಾಥನ್, ಬಿ. ಎಸ್. ರಾಜಯ್ಯಂಗಾರ್, ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಪಾಪಚೂಡಾಮಣಿ, ಎ. ಸುಬ್ಬರಾವ್, ತಿರುಮಕೂಡಲು ಪುಟ್ಟಸಾಮಯ್ಯ, ತಿಟ್ಟೆ ಕೃಷ್ಣಯ್ಯಂಗಾರ್, ಎನ್. ಚೊಕ್ಕಮ್ಮ, ಜಿ. ಚನ್ನಮ್ಮ, ಬಳ್ಳಾರಿ ಸೋದರರು, ಚಕ್ರಕೋಡಿ ನಾರಾಯಣಶಾಸ್ತ್ರಿ, ಎಸ್. ಎನ್. ಮರಿಯಪ್ಪ, ರಾ. ಚಂದ್ರಶೇಖರಯ್ಯ, ಸಿ. ಹೊನ್ನಪ್ಪ ಭಾಗವತರು, ವಿ. ರಾಮರತ್ನಂ, ಅನೂರು ಸೂರ್ಯನಾರಾಯಣ, ಟಿ. ಕೆ. ರಾಮಮೂರ್ತಿ, ಪದ್ಮಾಮೂರ್ತಿ, ಹೆಚ್. ಕೆ. ನಾರಾಯಣ, ಬಿ. ಎಸ್. ವಿಜಯ ರಾಘವನ್, ಕೆ. ಜಿ. ಕನಕಲಕ್ಷ್ಮಿ, ಜಿ. ಆರ್. ಜಯ ಮುಂತಾದವರನ್ನು ಹೇಳಬಹುದು.

ವಾದ್ಯಭಾಗದಲ್ಲಿ ಐ. ಭುವನೇಶ್ವರಯ್ಯ, ಅನೂರು ರಾಮಕೃಷ್ಣ, ಆನೆಕಲ್ ಎಸ್. ಶಿವರುದ್ರಪ್ಪ, ಎಂ. ಎಸ್. ಗೋವಿಂದಸ್ವಾಮಿ, ಎ. ವಿ. ಕೃಷ್ಣಮಾಚಾರ್, ಹೆಚ್. ವಿ. ಕೃಷ್ಣಮೂರ್ತಿ, ಎಸ್. ಮಹದೇವಪ್ಪ, ಆರ್. ಕೆ. ವೆಂಕಟರಾಮಾ ಶಾಸ್ತ್ರಿ, ಆರ್. ಆರ್. ಕೇಶವಮೂರ್ತಿ, ಎಸ್. ಶೇಷಗಿರಿರಾವ್, ಎಂ. ಎಸ್. ಸುಬ್ರಹ್ಮಣ್ಯಂ, ಟಿ. ಎಸ್. ತಾತಾಚಾರ್ಯರು, ಎ. ವೀರಭದ್ರಯ್ಯ, ಟಿ. ಗುರುರಾಜಪ್ಪ, ಹೆಚ್. ಕೆ. ನರಸಿಂಹಮೂರ್ತಿ, ರತ್ನಗಿರಿ ಸುಬ್ಬಶಾಸ್ತ್ರಿ, ಜೆ. ಎಲ್. ಕಾಶಿನಾಥ ಶಾಸ್ತ್ರಿ, ಎ. ಡಿ. ಜಕರಯ್ಯ, ಕೆ. ಜಿ. ವೆಂಕಟಾಚಾರ್ ಮುಂತಾದವರು ಪಿಟೀಲು ವಾದನದಲ್ಲಿ ಪ್ರಸಿದ್ಧರು.

ಇನ್ನು ವೀಣೆಯಲ್ಲಿ ಡಾ|| ವಿ. ದೊರೆಸ್ವಾಮಯ್ಯಂಗಾರ್, ಎಂ. ಜೆ. ಶ್ರೀನಿವಾಸಯ್ಯಂಗಾರ್, ನೀಲಮ್ಮ ಕಡಾಂಬಿ, ಆರ್. ಎಸ್. ಕೇಶವಮೂರ್ತಿ, ಆರ್. ಎನ್. ದೊರೆಸ್ವಾಮಿ, ಆರ್.ಕೆ. ಶ್ರೀನಿವಾಸಮೂರ್ತಿ, ಆರ್.ಕೆ. ಸೂರ್ಯನಾರಾಯಣ, ಆರ್. ವಿಶ್ವೇಶ್ವರನ್, ವಿ. ವೆಂಕಟಸುಬ್ಬರಾವ್, ಎ. ಎನ್. ಚಂದ್ರಶೇಖರಯ್ಯ, ಸಿ. ಕೃಷ್ಣಮೂರ್ತಿ ಮುಂತಾದವರು ಪ್ರಸಿದ್ಧರು. ತಗಡೂರು ಎಂ. ಪುಟ್ಟಸ್ವಾಮಯ್ಯ, ಎಂ. ಎಸ್. ರಾಮಯ್ಯ, ಹೆಚ್. ಪುಟ್ಟಾಚಾರ್, ಎಚ್. ಪಿ. ರಾಮಾಚಾರ್,

ಎಂ. ಎಲ್. ವೀರಭದ್ರಯ್ಯ, ವಿ. ವಿ. ರಂಗನಾಥನ್, ಕೆ. ಹರಿಶ್ಚಂದ್ರ, ಎ. ವಿ. ಆನಂದ್, ಪಿ. ಜಿ. ಲಕ್ಷ್ಮೀನಾರಾಯಣ, ವಿ. ಎಸ್. ರಾಜಗೋಪಾಲ್, ಟಿ. ಎ. ಎಸ್. ಮಣಿ, ಟಿ. ವಿ. ಭದ್ರಾಚಾರ್, ಇವರುಗಳು ಮೃದಂಗವಾದನದಲ್ಲಿಯೂ, ಡಿ. ಶೇಷಪ್ಪನವರು ತಬಲಾ ವಾದನದಲ್ಲಿಯೂ, ಕೆ. ಎಸ್. ಮಂಜುನಾಥ್, ಕೆ. ವೆಂಕಟರಾಂ, ಕೆ. ಎನ್. ಕೃಷ್ಣಮೂರ್ತಿ, ಎಂ. ಎ. ಕೃಷ್ಣಮೂರ್ತಿ, ಇವರುಗಳು ಘಟವಾದ್ಯ ವಾದನದಲ್ಲಿಯೂ, ಹೆಚ್. ಪಿ. ರಾಮಾಚಾರ್, ಸೋಸಲೆ ಶೇಷಗಿರಿದಾಸ್ ಇವರುಗಳು ಖಂಜರಿ ವಾದನದಲ್ಲಿಯೂ ಹೆಸರುವಾಸಿಯಾದ ಕಲಾವಿದರು.

ಬಿ. ಎಸ್. ಸುರೇಶ್, ಎಸ್. ಪಿ. ನಟರಾಜನ್, ಎಂ. ಆರ್. ದೊರೆಸ್ವಾಮಿ, ವಿ. ದೇಶಿಕಾಚಾರ್, ಸಿ. ಎಂ. ಮಧುರಾನಾಥ್, ಪ್ರಪಂಚಂ ಸೀತಾರಾಂ, ಪ್ರಭಾಕರ ಉಪಾಧ್ಯಾಯ, ಎ. ವಿ. ಪ್ರಕಾಶ್ ಮುಂತಾದವರು ಕೊಳಲು ವಾದ್ಯವಾದನಕ್ಕೆ ಪ್ರಸಿದ್ಧರು. ಎ. ವಿ. ನಾರಾಯಣಪ್ಪ, ಬಿ. ರಾಮದಾಸ್ ನಾಗಸ್ವರವಾದನಕ್ಕೆ ಪ್ರಸಿದ್ಧರು. ಗದ್ವಾಲ್ ವೆಂಕಟಪ್ಪ, ಡಿ. ಮುನಿರತ್ನಂ, ಬಾಲಶಂಕರ್ ಡೋಲುವಾದನಕ್ಕೆ ಹೆಸರಾಂತರು. ಹಾಗೆಯೇ ಕದ್ರಿ ಗೋಪಿನಾಥ್ ಸಾಕ್ಸೋಫೋನ್ ವಾದನಕ್ಕೂ, ಎಂ. ವಿ. ವರಾಹಸ್ವಾಮಿಯವರು ಗೋಟು ವಾದ್ಯ ವಾದನಕ್ಕೂ ಪ್ರಸಿದ್ಧರಾಗಿದ್ದಾರೆ.

ಇದಲ್ಲದೆ ಈಗ ಪ್ರಸಿದ್ಧಿಗೆ ಬರುತ್ತಿರುವ ತರುಣ ಕಲಾವಿದರಲ್ಲಿ ಆರ್. ಎನ್. ತ್ಯಾಗರಾಜನ್ ಮತ್ತು ಡಾ|| ಆರ್. ಎನ್. ತಾರಾನಾಥನ್, ಎಂ. ಎಸ್. ಶೀಲಾ, ಆರ್. ಎ. ರಮಾಮಣಿ, ನಾಗಮಣಿ, ಶ್ರೀನಾಥ್, ಆರ್. ಎಸ್. ರಮಾಕಾಂತ, ಎಸ್. ಶಂಕರ್, ಟಿ. ಎಸ್. ಸತ್ಯವತಿ, ಎಂ. ಟಿ. ಶೆಲ್ವ ನಾರಾಯಣ, ಟಿ. ಎಸ್. ರಮಾ, ನಾಗವಲ್ಲಿ ನಾಗರಾಜ್, ಬೆಳ್ಳೂರು ಸೋದರಿಯರು ಮುಂತಾದ ಗಾಯಕರು, ಸುಮಾ ಸುಧೀಂದ್ರ, ಶಾಂತಿರಾವ್, ಡಿ. ಬಾಲಕೃಷ್ಣ ಮುಂತಾದ ವೈಣಿಕರು, ಕಾಂಚನ ಸುಬ್ಬರತ್ನಂ, ಅಂಬಳೆ ಆರ್. ಕೃಷ್ಣಮೂರ್ತಿ, ಬಿ. ಕೆ. ಶ್ರೀಧರ್, ಟಿ. ಜಿ. ತ್ಯಾಗರಾಜನ್, ಎಂ. ನಾಗರಾಜ್ ಮುಂತಾದ ಪಿಟೀಲು ವಾದಕರೂ, ಎಂ. ಟಿ. ರಾಜಕೇಸರಿ, ಆರ್. ಎ. ರಾಜಗೋಪಾಲ್, ಟಿ. ಎನ್. ರಮೇಶ್, ವಿ. ಪ್ರವೀಣ್, ಎ. ಕುಮಾರ್ ಮುಂತಾದ ಮೃದಂಗ ವಾದಕರೂ ಮುಖ್ಯರು.

## ಸುಗಮ ಸಂಗೀತ ಮತ್ತು ವಾದ್ಯಗೋಷ್ಠಿಗಳು

ಶಾಸ್ತ್ರೀಯ ಸಂಗೀತದಂತೆಯೇ ಕರ್ನಾಟಕದಲ್ಲಿ ಪ್ರಸಿದ್ಧವಾಗಿರುವ ಇನ್ನೊಂದು ಸಂಗೀತ ಪ್ರಕಾರವೆಂದರೆ ಲಲಿತ ಸಂಗೀತ. ಇದನ್ನು ಸುಗಮ ಸಂಗೀತವೆಂದೂ ಇಂದು ಕರೆಯಲಾಗುತ್ತಿದೆ. ಇದೊಂದು ಜನಪ್ರಿಯ ಶೈಲಿ. ಇದರಲ್ಲಿ ಕಾವ್ಯ ಪ್ರಧಾನವಾದ ಭಾವಗೀತೆ, ರಂಜನೆಯೇ ಪ್ರಧಾನವಾದ ಚಿತ್ರಗೀತೆ, ಜಾನಪದದ ಲಾವಣಿ ಮುಂತಾದ ವಿವಿಧ ಪ್ರಕಾರಗಳು ಸೇರುತ್ತವೆ. ಈ ಜನಪ್ರಿಯ ಶೈಲಿಯ ಹಾಡುಗಾರರಲ್ಲಿ ಬಹು ಪ್ರಸಿದ್ಧರಾದವರು—ಬಾಳಪ್ಪ ಹುಕ್ಕೇರಿ, ಪಿ. ಕಾಳಿಂಗರಾವ್, ಪಿ. ಆರ್. ಭಗವತ್, ಹೆಚ್. ಆರ್. ಲೀಲಾವತಿ, ಮೈಸೂರು ಅನಂತಸ್ವಾಮಿ, ಹೆಚ್. ಕೆ. ನಾರಾಯಣ, ಶ್ಯಾಮಲಾ ಭಾವೆ, ಬಿ. ಕೆ. ಸುಮಿತ್ರ, ಗುರುರಾಜ ಹೊಸಕೋಟೆ, ಉಷಾ ಖಾಡಿಲ್ಕರ್, ಎಂ. ಎನ್. ರತ್ನ, ಅನೂರಾಧ, ಧಾರೇಶ್ವರ್, ಗೀತಾಬಾಯಿ ಕುಲಕರ್ಣಿ, ಶಾಂತಿಮತಿ ಗಂಗೊಳ್ಳಿ, ಎನ್. ಎಸ್. ರಾಮನ್, ಸಿ. ಅಶ್ವಥ್, ಎಂ. ಪ್ರಭಾಕರ್, ನಾರಾಯಣರಾವ್ ಮಾನೆ, ಶಿವಮೊಗ್ಗ ಸುಬ್ಬಣ್ಣ, ಶ್ಯಾಮಲಾ ಜಾಗೀರ್‌ದಾರ್, ಕಸ್ತೂರಿ ಶಂಕರ್, ಮಾಲತಿ ಶರ್ಮ, ರತ್ನಮಾಲಾ ಪ್ರಕಾಶ್, ಎಂ. ಕೆ. ಜಯಶ್ರೀ, ವಿದ್ಯಾರಾಣಿ, ಮುಂತಾದವರನ್ನು ಹೇಳಬಹುದು. ಇವರು ಬಹುತೇಕ ಸುಗಮ ಸಂಗೀತ ಗಾಯಕರೆಂದು ಮಾನಿತರಾಗಿದ್ದರೂ ಅವರಲ್ಲಿ ಬಹುಮಂದಿಗೆ ಶಾಸ್ತ್ರೀಯ ಸಂಗೀತದ ತಳಹದಿ ಇದೆ.

ವಾದ್ಯಗೋಷ್ಠಿಗಳು ಕರ್ನಾಟಕಕ್ಕೆ ಹೊಸತೇನಲ್ಲ. ಬಹು ಹಿಂದಿನಿಂದಲೂ ಪ್ರಚಲಿತವಿದೆ. ವಾದ್ಯವೃಂದ ಅಥವಾ ಕುತುಪ ಅಥವಾ ಮೇಳವೆಂದು ಅವುಗಳನ್ನು ಕರೆಯಲಾಗುತ್ತಿತ್ತು. ಬ್ರಿಟಿಷರ ಪ್ರವೇಶವಾದನಂತರ ಪಾಶ್ಚಾತ್ಯ ಸಂಗೀತದ ಮಟ್ಟುಗಳನ್ನು ನುಡಿಸುತ್ತಿದ್ದ ಈ ಬಗೆಯ ವಾದ್ಯಗೋಷ್ಠಿಗಳು ಬಹು ಜನಪ್ರಿಯವಾಗಲಾರಂಭವಾಯಿತು. ಈ ಸೈನ್ಯದ ಬ್ಯಾಂಡ್ ವೃಂದಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಿಂದಲೇ ಪ್ರಚಲಿತವಿದ್ದುವೆನ್ನಬಹುದು. ಅವರ ನಂತರ ಬಂದ ಚಾಮರಾಜ ಒಡೆಯರ ಕಾಲದಲ್ಲಿ ಈ ಬಗೆಯ ಬ್ಯಾಂಡ್ ವೃಂದಗಳಿಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ದೊರಕಿತು. ಅರಸರೇ ಸ್ವತಃ ವಿದೇಶದಿಂದ ಸಂಗೀತ ಶಿಕ್ಷಕರನ್ನು ಕರೆಸಿ ತಾವೂ ಈ ಸಂಗೀತವನ್ನು ಕಲಿತುದೇ ಅಲ್ಲದೆ, ಅರಮನೆಯಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಸಂಗೀತಗಳದೇ ಪ್ರತ್ಯೇಕ ಬ್ಯಾಂಡ್ ವೃಂದಗಳನ್ನು ರಚಿಸುವ ವ್ಯವಸ್ಥೆ ಮಾಡಿದರು. ಮೈಸೂರು ಸಂಸ್ಥಾನದ ರಾಷ್ಟ್ರೀಯ ಗೀತೆ 'ಕಾಯೌ ಶ್ರೀ ಗೌರಿ ಕರುಣಾಲಹರಿ' ರಚಿತವಾದುದು ಚಾಮರಾಜ ಒಡೆಯರ ಕಾಲದಲ್ಲಿಯೇ. ಪಾಶ್ಚಾತ್ಯ ಸಂಗೀತದ ಸಿ. ಮೇಜರ್ ಸೂಚಿಸಿದ ಮಟ್ಟಿಗೆ ಆಸ್ಥಾನ ವಿದ್ವಾಂಸರಾದ ಬಸವಪ್ಪಶಾಸ್ತ್ರಿಗಳು ಸಾಹಿತ್ಯ ಜೋಡಿಸಿ ರಚಿತವಾದ ಗೀತೆ ಇದು. ಹೀಗೆಯೇ ಪಾಶ್ಚಾತ್ಯ ಸಂಗೀತದ ಮಟ್ಟುಗಳನ್ನು ಆಧರಿಸಿದ ಇನ್ನೂ ಅನೇಕ ಕನ್ನಡ ಹಾಡುಗಳು ಚಾಮರಾಜ ಒಡೆಯರ ರಾಜ್ಯಭಾರ ಕಾಲದಲ್ಲಿ ರಚಿತವಾದವು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಪಾಶ್ಚಾತ್ಯ ಸಂಗೀತಕ್ಕೆ ಇನ್ನೂ ಉತ್ತಮ ಪ್ರೋತ್ಸಾಹ ಸಿಕ್ಕಿತು. ಉತ್ತಮ ಪಾಶ್ಚಾತ್ಯ

ಸಂಗೀತ ವಿದ್ವಾಂಸರನ್ನು ಕರೆಸಿ ಅರಮನೆಯಲ್ಲಿ ನೇಮಿಸಿ ಅವರಿಂದ ರಾಜಮನೆತನದವರಿಗೂ, ಆಸ್ಥಾನದ ಸ್ಥಳೀಯ ಸಂಗೀತ ವಿದ್ವಾಂಸರಿಗೂ ಪಾಶ್ಚಾತ್ಯ ಸಂಗೀತ ಕಲಿಯುವ ವ್ಯವಸ್ಥೆ ಮಾಡಿದರು. ಅವರ ಕಾಲದಲ್ಲಿ ಸ್ಥಾಪಿತವಾದ ಮೈಸೂರು ಅರಮನೆಯ ಕರ್ನಾಟಕ ಬ್ಯಾಂಡ್ ವೃಂದಕ್ಕೆ ನಿರ್ದೇಶಕರಾಗಿದ್ದವರು—ಆಸ್ಥಾನ ವಿದ್ವಾನ್ ವಿ. ವೆಂಕಟಗಿರಿಯಪ್ಪನವರು. ಮೈಸೂರಿನ ಕರ್ಜನ್ ಪಾರ್ಕ್ ಮತ್ತು ಬೆಂಗಳೂರಿನ ಕಬ್ಬನ್ ಪಾರ್ಕ್ ಉದ್ಯಾನಗಳಲ್ಲಿ ವಾರಕ್ಕೊಮ್ಮೆ ಪಾಶ್ಚಾತ್ಯ ಸಂಗೀತ ವೃಂದದ ಕಾರ್ಯಕ್ರಮವು ನಡೆಯುವಂತೆ ವ್ಯವಸ್ಥೆಯಾಗಿತ್ತು.

ಅರಮನೆಯಿಂದ ಈ ರೀತಿ ವಾದ್ಯಮೇಳಗಳು ರಚಿತವಾಗಿ ಕಲಾಪ್ರದರ್ಶನವಾಗುವುದರ ಜೊತೆಗೆ ಸ್ವತಂತ್ರವಾಗಿಯೇ ವಾದ್ಯಮೇಳಗಳು ಈ ಶತಮಾನದ ಪೂರ್ವಾರ್ಧದಲ್ಲಿ ರಚಿತವಾಗಿ ಕಾರ್ಯಕ್ರಮ ನಡೆಸುತ್ತಿದ್ದುವು. ಇವುಗಳಲ್ಲಿ ಗಮನಾರ್ಹವಾದುದೊಂದು ಬೆಂಗಳೂರಿನ ಸರಸ್ವತಿ ಆರ್ಕೆಸ್ಟ್ರಾ. ಇದನ್ನು ಪ್ರಾರಂಭಿಸಿದವರು ಎಂ. ಎಸ್. ನಟರಾಜನ್. ತಾವೇ ಸ್ವತಃ ಹಲವಾರು ವಾದ್ಯಗಳನ್ನು ನುಡಿಸಬಲ್ಲ ನಟರಾಜನ್, 1936ರಲ್ಲಿ ಪ್ರಾರಂಭಿಸಿದ ಈ ಸರಸ್ವತಿ ಆರ್ಕೆಸ್ಟ್ರಾದಲ್ಲಿ ಗಾಯಕರೂ ಸೇರಿ ಹನ್ನೊಂದು ಕಲಾವಿದರಿದ್ದರು. ಅವರಲ್ಲಿ ಇಂದು ಕೆಲವರು ಶಾಸ್ತ್ರೀಯ ಸಂಗೀತ ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದಾರೆ. ಹತ್ತು ವರುಷ ಕಾಲ ಈ ವಾದ್ಯಮೇಳವು ಸುಪ್ರಸಿದ್ಧ ನರ್ತಕ ರಾಂ ಗೋಪಾಲರೊಂದಿಗೆ ಅಖಿಲ ಭಾರತ ಪ್ರವಾಸ ಮಾಡಿ ಮಾನ್ಯತೆ ಪಡೆಯಿತು. ಈ ವಾದ್ಯಮೇಳ ಕರ್ನಾಟಕದ ಆಧುನಿಕ ಯುಗದಲ್ಲಿ ಮೊದಲು ರಚನೆಯಾದುದೆನ್ನಬಹುದು. ಇದರಲ್ಲಿದ್ದ ಕಲಾವಿದರನೇಕರು ಮುಂದೆ ತಾವೇ ಸ್ವಂತವಾಗಿ ಪ್ರತ್ಯೇಕ ವಾದ್ಯಮೇಳಗಳನ್ನೂ ಸ್ಥಾಪಿಸಿದರು.

ಈ ಶತಮಾನದ ಮಧ್ಯಭಾಗದಲ್ಲಿ ಬೆಂಗಳೂರಿನಲ್ಲಿ ಬಹು ಪ್ರಸಿದ್ಧವಾಗಿದ್ದ ಇನ್ನೊಂದು ವಾದ್ಯಮೇಳ ಸರಸವಾಣಿ ಆರ್ಕೆಸ್ಟ್ರಾ. ಭಾನುವಾರ ಸಂಜೆ ಕಬ್ಬನ್ ಪಾರ್ಕ್‌ನಲ್ಲಿ ನಡೆಯುತ್ತಿದ್ದ ಈ ವಾದ್ಯಮೇಳದ ಕಾರ್ಯಕ್ರಮಗಳಿಗೆ ಬಹು ಸಂಖ್ಯೆಯಲ್ಲಿ ಜನಗಳು ಸೇರುತ್ತಿದ್ದರು. ಮೈಸೂರಿನ ಶ್ರೀ ಸ್ವಾಮಿ ಮತ್ತು ಅವರ ಪುತ್ರಿಯರಾದ ಉಷಾ ಉಥುಪ್ ಮತ್ತು ಮಾಯಾ ಇಬ್ಬರೂ ಪಾಶ್ಚಾತ್ಯ ಸಂಗೀತದ ಹಾಡುಗಳ ಜನಪ್ರಿಯ ಗಾಯಕಿಯರೆನಿಸಿಕೊಂಡಿದ್ದರು. ಈಗ ಈ ವಾದ್ಯಮೇಳಗಳು ಎರಡೂ ಪದ್ಧತಿಗಳ ಸಂಗೀತವನ್ನು ನಿರೂಪಿಸುತ್ತಾ ಬಹು ಜನಪ್ರಿಯವಾಗಿವೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಇಂತಹ ಹಲವಾರು ವಾದ್ಯಮೇಳಗಳಿದ್ದು ಪ್ರಾಯಶಃ ಲಲಿತ ಸಂಗೀತದ ಕಾರ್ಯಕ್ರಮಗಳನ್ನೇ ನೀಡುತ್ತವೆ. ಈ ಕಾರ್ಯಕ್ರಮಗಳಿಗೆ ಬಹುಸಂಖ್ಯೆಯಲ್ಲಿ ಜನರು ಕೂಡುತ್ತಾರೆ.

## ಹರಿಕಥೆ

ಹರಿಕಥೆ ಜನಗಳನ್ನು ಸನ್ಮಾರ್ಗಾವಲಂಬಿಗಳಾಗಲು ಪ್ರಚೋದಿಸುವಂತಹ ಬೋಧಪ್ರದವಾದ ಕಲೆ ಎನ್ನಬಹುದು. ಇದಕ್ಕಾಗಿ ಪುರಾಣಗಳಿಂದ ಧಾರ್ಮಿಕ, ನೈತಿಕ ಮತ್ತು ಆಧ್ಯಾತ್ಮಿಕ ಪರವಾದ ಕಥೆಗಳನ್ನು ಆರಿಸಿ ನಿರೂಪಿಸಲಾಗುವುದು. ಈ ಕಾರ್ಯವನ್ನು ಕರ್ನಾಟಕದ ಹರಿದಾಸರು ಸಮರ್ಥವಾಗಿ ನಿರ್ವಹಿಸಿ ಜನಪ್ರಿಯಗೊಳಿಸಿದ್ದಾರೆ. ಈ ಹರಿಕಥಾ ಮಾಧ್ಯಮವು ಸಫಲವಾಗಲು ಕೀರ್ತನಕಾರ ಅಥವಾ ಭಾಗವತರು ಉಚಿತ ಪ್ರಮಾಣದಲ್ಲಿ ಸಂಗೀತ, ನೃತ್ಯ, ಅಭಿನಯಗಳನ್ನು ಉಪಯೋಗಿಸಿಕೊಳ್ಳುವುದೇ ಅಲ್ಲದೆ ಸಾಕಷ್ಟು ಉಪಕಥೆಗಳನ್ನೂ ಬಳಸಿಕೊಳ್ಳುತ್ತಾರೆ. ಇದರ ಫಲವಾಗಿ ನಿರೂಪಣೆಯು ಉಲ್ಲಾಸಕರವಾಗಿಯೂ, ಭಾವಪೂರ್ಣವಾಗಿಯೂ ಇದ್ದು ಸಾರ್ಥಕವಾಗುವುದು. ರಾಷ್ಟ್ರೀಯ ಭಾವನೆಗಳನ್ನು ಉತ್ತೇಜಿಸಲು ಈ ಹರಿಕಥಾ ಮಾಧ್ಯಮವನ್ನು ಕೆಲವು ಕೀರ್ತನಕಾರರು ಬಳಸಿಕೊಂಡಿದ್ದಾರೆ. ಅಂತಹವರಲ್ಲಿ ಶಾಂತಕವಿ, ಬೇಲೂರು ಕೇಶವದಾಸ್, ಕೊಪ್ಪಳ ಜಯರಾಮಾಚಾರ್ಯ ಮುಂತಾದವರು ಮುಖ್ಯರು. ಹರಿಕಥೆಗಳಲ್ಲಿ ಹಾಡುಗಾರಿಕೆಗೆ ಒತ್ತಾಸೆಯಾಗಿ ಪಿಟೀಲು, ಹಾರ್ಮೋನಿಯಂ, ಮೃದಂಗ, ತಬಲಾ, ತಾಳ ಮುಂತಾದ ವಾದ್ಯಗಳನ್ನು ಉಪಯೋಗಿಸುತ್ತಾರೆ. ಈ 20ನೇಯ ಶತಮಾನದ ಜನಪ್ರಿಯ ಹರಿಕಥಾ ಕೀರ್ತನಕಾರರಲ್ಲಿ, ಸೋಸಲೆ ರಾಮದಾಸ್, ರಾ. ವೆ. ಕರಿಗುದರಿ, ಕೃಷ್ಣ ಭಾಗವತರು, ಕೊಣನೂರು ಸೀತಾರಾಮ ಶಾಸ್ತ್ರಿ, ಶ್ರೀಕಂಠ ಶಾಸ್ತ್ರಿ, ವೇಣುಗೋಪಾಲ ದಾಸ್, ಗಮಕಿ ರಾಮಕೃಷ್ಣಶಾಸ್ತ್ರಿ, ಕುರ್ತುಕೋಟಿ ಶ್ರೀಪಾದಶಾಸ್ತ್ರಿ, ಗೋಪಾಲದಾಸರು, ಟಿ. ವಿ. ಗೋಪಿನಾಥದಾಸರು, ಬಿ. ಶಿವಮೂರ್ತಿಶಾಸ್ತ್ರಿ, ಭದ್ರಗಿರಿ ಕೇಶವದಾಸ್, ಅಚ್ಯುತದಾಸ್, ಮುಂತಾದವರನ್ನು ಹೇಳಬಹುದು. ಇತ್ತೀಚಿನ ಹರಿಕಥಾ ವಿದ್ವಾಂಸರಲ್ಲಿ ಗುರುರಾಜಲು ನಾಯುಡು, ಶಿವಲಿಂಗಸ್ವಾಮಿ ಹಿರೇಮಠ, ಸೋಸಲೆ ನಾರಾಯಣದಾಸ್, ಟಿ. ವಿ. ಜಯಸಿಂಹದಾಸ್ ಮುಂತಾದವರ ಕಾರ್ಯಕ್ರಮಗಳು ಬಹು ಜನಾಕರ್ಷಣೀಯವಾಗಿವೆ. ಇವರಲ್ಲಿ ಟಿ. ಕೆ. ವೇಣುಗೋಪಾಲದಾಸರಿಗೆ ಕರ್ನಾಟಕ ಸಂಗೀತ ನೃತ್ಯ ಅಕ್ಯಾಡೆಮಿಯು ತನ್ನ 1977-78ರ ವಾರ್ಷಿಕ ಪ್ರಶಸ್ತಿ ಇತ್ತು ಗೌರವಿಸಿದೆ. ಇವರಲ್ಲಿ ಕೆಲವು ಕೀರ್ತನಕಾರರು, ರಾಜ್ಯದ ಹೊರಗೂ ಮತ್ತು ವಿದೇಶಗಳಲ್ಲಿಯೂ ಕಥಾ ಕಾರ್ಯಕ್ರಮಗಳನ್ನು ನಡೆಸಿ ಬಂದಿದ್ದಾರೆ.

ಹರಿಕಥೆ ಕಲೆ ಕೇವಲ ಪುರುಷರಿಗೇ ಸೀಮಿತವಾಗಿಲ್ಲ. ಅನೇಕ ಮಹಿಳೆಯರೂ, ಹರಿಕಥಾ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿ ಜನಾದರಣೀಯರಾಗಿದ್ದಾರೆ. ಅವರಲ್ಲಿ ಲಲಿತಾಂಬಾ, ಯದುಗಿರಿ ಕುಮಾರಿ, ಭಾಗೀರಥೀ ಬಾಯಿಯವರನ್ನು ಹೇಳಬಹುದು.

### ಗಮಕ

ಗಮಕವು ಕರ್ನಾಟಕಕ್ಕೆ ವಿಶಿಷ್ಟವಾದ ಕಲೆ. ಇಲ್ಲಿ ಕಥಾ ನಿರೂಪಣೆಗೆ ಗಾಯನ ಮತ್ತು ರಾಗಗಳನ್ನು ಬಳಸಿದರೂ, ಗಮಕವು ಸಾಹಿತ್ಯ ಪ್ರಧಾನವಾದ ಕಲೆ. ಕನ್ನಡದ ಪ್ರಾಚೀನ ಕಾವ್ಯಗಳ ಪದ್ಯಗಳನ್ನು ಈ ರೀತಿ ಹಾಡಿ ಕಥಾವಸ್ತು ನಿರೂಪಣೆ ಮಾಡಲಾಗುತ್ತದೆ. ಗಮಕ ಕಲೆಯು ಕರ್ನಾಟಕದಲ್ಲಿ ಪುರಾತನ ಕಾಲದಿಂದಲೂ ಪ್ರಚಲಿತವಿದೆ. ಪೊನ್ನನ ಶಾಂತಿಪುರಾಣದಲ್ಲಿ ಈ ಕಲೆಯನ್ನು ನಿರೂಪಿಸುವ ಗಮಕಿಗಳ ಪ್ರಸ್ತಾಪವಿದೆ. ಅನೇಕ ಶಾಸನಗಳಲ್ಲಿ ಗಮಕ ಮತ್ತು ಗಮಕಿಗಳ ಪ್ರಸ್ತಾಪವಿದೆ. ನಿದರ್ಶನವಾಗಿ ಕ್ರಿ.ಶ. 1068ರ ಶಾಸನವೊಂದರಲ್ಲಿ ಒಬ್ಬ ಗಂಗರಸನನ್ನು ಕವಿ ಮತ್ತು ಗಮಕಿ ಎಂದು ಬಣ್ಣಿಸಲಾಗಿದೆ. ಈ ಕಲೆಯ ಬಗೆಗೆ ಪುರಾತನ ಕನ್ನಡ ಕಾವ್ಯಗಳಾದ ಆದಿಪುರಾಣ, ಪಂಚತಂತ್ರ, ನಂಬಿಯಣ್ಣನ ರಗಳೆ, ಮೋಹನತರಂಗಿಣಿ, ಜೈಮಿನೀ ಭಾರತ, ಭರತೇಶ ವೈಭವ, ಪ್ರಭುಲಿಂಗಲೀಲೆ, ವಿವೇಕ ಚಿಂತಾಮಣಿ, ಮುಂತಾದವುಗಳಲ್ಲಿ ವರ್ಣನೆಯಿದೆ. ಸಂಗೀತ ಗಾರ, ನಟ ಮುಂತಾದವರಿಗೂ, ಕಾವ್ಯಪ್ರಧಾನವಾದ ಯಾವುದೇ ಕಲೆಯ ಪ್ರತಿಪಾದಕರಿಗೂ ಗಮಕ ಕಲೆಯ ಪರಿಚಯ ವಾದರೂ ಇರಬೇಕಾದುದು ಅವಶ್ಯಕ. ಹಿಂದಿನ ಪೀಳಿಗೆಯ ಅನೇಕ ಪ್ರಸಿದ್ಧ ಗಾಯಕರೂ ಹಾಗೂ ಯಕ್ಷಗಾನದ ಭಾಗವತರೂ ತಮ್ಮ ಕಲೆಯನ್ನು ಇಂಬುಗೊಳಿಸುವಲ್ಲಿ ಗಮಕ ಕಲೆಯನ್ನು ಅಳವಡಿಸಿದ್ದರೆನ್ನಲಾಗಿದೆ. ಹೀಗೆ ಅಳವಡಿಸಿಕೊಂಡವರಲ್ಲಿ ಟೈಗರ್ ವರದಾಚಾರ್, ಗರುಡನಗಿರಿ ನಾಗೇಶರಾವ್, ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್, ಚಿಕ್ಕರಾಮರಾವ್ ಮುಂತಾದವರು ಮುಖ್ಯರು. ಈ ಶತಮಾನದಲ್ಲಿ ಪ್ರಸಿದ್ಧರಾಗಿದ್ದ ಹರಿಕಥಾ ಕೀರ್ತನಕಾರರಲ್ಲಿ ಕೃಷ್ಣಗಿರಿ ಕೃಷ್ಣರಾಯರು, ಕಳಲೆ ಸಂಪತ್ಕುಮಾರಾಚಾರ್ಯರು, ಭಾರತದ ಎಸ್. ಜಿ. ಬಿಂದೂ ರಾಯರು, ಕೆ. ಟಿ. ರಾಮಸ್ವಾಮಯ್ಯಂಗಾರ್ಯರು, ಎಚ್. ಕೆ. ರಾಮಸ್ವಾಮಿ, ಚಂದ್ರಶೇಖರಯ್ಯ, ತಲಕಾಡು ಮಾಯಿಗೌಡರು, ಎಚ್. ಪಿ. ರಾಮಾರಾಧ್ಯರು, ಗಮಕಿ ರಾಘವೇಂದ್ರರಾಯರು, ಶಕುಂತಲಾಬಾಯಿ ಪಾಂಡುರಂಗರಾವ್, ಬಿ. ಎಸ್. ಎಸ್. ಕೌಶಿಕ್ ಮುಂತಾದವರನ್ನು ಹೇಳಬಹುದು. ಕರ್ನಾಟಕ ರಾಜ್ಯದ ಸಾಹಿತ್ಯ ಅಕ್ಯಾಡೆಮಿ ಗಮಕ ಕಲೆಗೆ ವಾರ್ಷಿಕ ಪ್ರಶಸ್ತಿ ಕೊಡುತ್ತಿದೆ.

ಇಪ್ಪತ್ತನೇಯ ಶತಮಾನದ ಮಧ್ಯಭಾಗದಿಂದ ಸಂಗೀತ ಕ್ಷೇತ್ರದಲ್ಲಿ ಒಂದು ಮಹತ್ತರ ಬದಲಾವಣೆಯುಂಟಾಯಿತು. ಕಲೆಯ ಪೋಷಣೆಯ ಕಾರ್ಯಭಾರ ಅರಮನೆಯಿಂದ ಜನತೆಯ ಪಾಲಿಗೆ ಬಂದಿತು. ಈ ಅಂಶವು ಸಂಗೀತ ಕಲೆಯ ಅಭಿವೃದ್ಧಿ ಹಾಗೂ ಪ್ರಚಾರದ ಉದ್ದೇಶದಿಂದಲೇ ಸ್ಥಾಪಿತವಾದ ಅನೇಕ ಸಾಂಸ್ಕೃತಿಕ ಸಂಘಗಳೂ ಮತ್ತು ಸಂಗೀತ ಸಭೆಗಳಲ್ಲಿ ಮೂರ್ತೀ ಭವಿಸಿದೆ. ಬೆಂಗಳೂರು, ಮೈಸೂರು, ಮಂಗಳೂರು, ಶಿವಮೊಗ್ಗ, ಹುಬ್ಬಳ್ಳಿ, ಬೆಳಗಾವಿ, ವಿಜಾಪುರ, ಕಲ್ಬುರ್ಗಿ, ಮುಂತಾದ ನಗರ ಗಳಲ್ಲಿ ಇಂತಹ ಸಭೆಗಳು ಸ್ಥಾಪಿತವಾಗಿ ಕೆಲಸ ಮಾಡುತ್ತಿವೆ. ಕಛೇರಿ, ಸ್ಪರ್ಧೆ, ಸಂಗೀತೋತ್ಸವವೇ ಮುಂತಾದ ವಿವಿಧ ಕಾರ್ಯ ಕ್ರಮಗಳ ಮೂಲಕ ಈ ಸಭೆಗಳು ಸಂಗೀತ ಕಲೆಯನ್ನು ಪ್ರೋತ್ಸಾಹಿಸುತ್ತಿದೆ. ಕಲೆಯ ಬೆಳವಣಿಗೆಗೆ ಬಹು ಸಹಾಯ ಮಾಡುತ್ತಿದೆ. ಬೆಂಗಳೂರಿನಲ್ಲಿ, ಗಾಯನ ಸಮಾಜ, ಮಲ್ಲೇಶ್ವರಂ ಸಂಗೀತ ಸಭಾ, ಕರ್ನಾಟಕ ಗಾನ ಕಲಾ ಪರಿಷತ್, ಅಕ್ಯಾಡೆಮಿ ಆಫ್ ಮ್ಯೂಸಿಕ್ (ಚೌಡಯ್ಯ ಸ್ಮಾರಕ ಭವ್ಯ ಭವನವನ್ನು ಕಟ್ಟಿದ ಸಂಸ್ಥೆ), ಬೆಂಗಳೂರು ಸಂಗೀತ ಸಭಾ (ಹಿಂದೂಸ್ಥಾನೀ ಸಂಗೀತ), ರಾಮ ಲಲಿತಕಲಾ ಮಂದಿರ, ಕೃಷ್ಣ ಸಂಗೀತ ಸಭಾ, ಸುರ್‌ಸಾಗರ್ ಮುಂತಾದ ಸಂಸ್ಥೆಗಳು ಕಲೆಯ ಅಭಿವೃದ್ಧಿಗೆ ಶ್ರಮಿಸುತ್ತಿವೆ. ಹಾಗೆಯೇ ಮೈಸೂರಿನಲ್ಲಿ ಪ್ರಸನ್ನ ಸೀತಾರಾಮ ಮಂದಿರ (ಬಿಡಾರದ ಕೃಷ್ಣಪ್ಪನವರ ರಾಮಮಂದಿರ), ನಾದ ಬ್ರಹ್ಮ ಸಂಗೀತ ಸಭಾ, ಚೌಡಯ್ಯ ಸ್ಮಾರಕ ಸಂಗೀತೋತ್ಸವ, ಮುಂತಾದ ಸಂಸ್ಥೆಗಳು ಈ ಕೆಲಸಮಾಡುತ್ತಿವೆ. ಇತರ ಊರು ಗಳಲ್ಲಿ ಮಣಿಪಾಲದ ಉಡುಪಿ ಸಂಗೀತ ಸಭಾ, ವಿಜಾಪುರದ ಕರ್ನಾಟಕ ಪ್ರದೇಶ ಸಂಗೀತ ಸೇವಾ ಸಮಿತಿ, ಹುಬ್ಬಳ್ಳಿಯ ಹುಬ್ಲಿ ಆರ್ಟ್ ಸರ್ಕಲ್, ಮುಂತಾದವು ಮುಖ್ಯವಾದವು. ಬೆಂಗಳೂರಿನಲ್ಲಿ ಗಾಯನ ಸಮಾಜ ಹಾಗೂ ಗಾನಕಲಾ ಪರಿಷತ್ತಿ ನವರು ಪ್ರತೀ ವರುಷವೂ ನಡೆಸುತ್ತಿರುವ ಸಂಗೀತ ಸಮ್ಮೇಳನ ಗಳು, ರಾಜ್ಯದ ಸಂಗೀತ ಕ್ಷೇತ್ರದ ಮುಖ್ಯ ಕಾರ್ಯಕ್ರಮಗಳೆಂದು ಮಾನಿತವಾಗಿವೆ. ಕಲೆಯ ವಿವಿಧ ಮುಖಗಳ ಬಗೆಗೆ ಪರಿಚಯ ಮತ್ತು ಶಾಸ್ತ್ರಚರ್ಚೆಗಳೇ ಅಲ್ಲದೆ ಪ್ರವರ್ಧಮಾನಕ್ಕೆ ಬರುತ್ತಿ ರುವ ತರುಣ ಕಲಾವಿದರ ಪ್ರತಿಭಾ ಪ್ರದರ್ಶನಕ್ಕೆ ಸೂಕ್ತ ಅವಕಾಶವಿತ್ತು, ಬೆಳಕಿಗೆ ತರುವ ಸ್ತುಪ್ರಯತ್ನ ಮಾಡುತ್ತಿದೆ. ಈಚೆಗೆ ಹಂಪೆಯಲ್ಲಿ ಪ್ರತೀ ವರುಷವೂ ಪುರಂದರದಾಸರ ಆರಾಧನಾ ಸಂಗೀತೋತ್ಸವ ನಡೆವ ವ್ಯವಸ್ಥೆಯಾಗಿದೆ. ಆದರೆ ಕುಂದ ಗೋಳದಲ್ಲಿ ಪ್ರತೀ ವರುಷ ನಡೆವ ಸವಾಯ್ ಗಂಧರ್ವ ಪುಣ್ಯ ತಿಥಿಯ ಸಂಗೀತೋತ್ಸವವೂ ಬಹು ಮುಖ್ಯವಾದುದು.

ಸಾರ್ವಜನಿಕ ಸಾಂಸ್ಕೃತಿಕ ಸಂಸ್ಥೆಗಳಂತೆಯೇ ಸಂಗೀತದ ಪ್ರಚಾರದಲ್ಲಿ ರಂಗಭೂಮಿ ಮುಖ್ಯ ಪಾತ್ರ ವಹಿಸಿದೆ. ಈ ಭಾಗದಲ್ಲಿ ವರದಾಚಾರ್ಯರು, ಮಳವಳ್ಳಿ ಸುಂದರಮ್ಮ, ಅಶ್ವತ್ಥಮ್ಮ, ನಾಗೇಶರಾವ್, ಸುಬ್ಬಯ್ಯನಾಯುಡು, ಗುರು ಮೂರ್ತಪ್ಪ, ನಾಗೇಂದ್ರರಾವ್, ಗಂಗೂಬಾಯಿ ಗುಳೇದಗುಡ್ಡ, ಸೋನುಬಾಯಿ ದೊಡ್ಡಮನಿ, ಮುಂತಾದವರು ಪ್ರಸಿದ್ಧರು.

ಹೀಗೆ ನಾನಾ ಸಂಘ ಸಂಸ್ಥೆಗಳ ನಿಗದಿಯಾದ ಕಾರ್ಯ ಕ್ರಮಗಳೇ ಅಲ್ಲದೆ ಪ್ರತೀ ವರುಷ ಬೆಂಗಳೂರು, ಮೈಸೂರು ನಗರ ಗಳಲ್ಲಿ ನಡೆವ ರಾಮನವಮಿ ಸಂಗೀತೋತ್ಸವಗಳು, ಹುಬ್ಬಳ್ಳಿ ಯಲ್ಲಿ ನಡೆವ ಕಲಾ ಮಹೋತ್ಸವ, ಧಾರವಾಡದಲ್ಲಿ ನಡೆವ

ಅಲ್ಲಾದಿಯಾ ಖಾನ್ ಅಲ್ಲದೆ ಸಿತಾರ್ ರಹಮತ್‌ಖಾನರ ಸ್ಮಾರಕ ಸಂಗೀತೋತ್ಸವ ಮುಂತಾದ ಕಾರ್ಯಕಲಾಪಗಳು ರಾಜ್ಯದ ವಿವಿಧ ಭಾಗಗಳಲ್ಲಿ ಸಂಗೀತ ಕಲೆಯ ಬೆಳವಣಿಗೆಗೆ ಪ್ರೇರಕ ವಾಗಿವೆ.

ರಾಜ್ಯದ ಎಲ್ಲಾ ಹೆಣ್ಣುಮಕ್ಕಳ ಶಾಲೆಗಳಲ್ಲಿಯೂ ಸಂಗೀತ ವನ್ನು ಕಲಿಸುವ ವ್ಯವಸ್ಥೆ ಇದೆ. ಅಲ್ಲದೆ ಈ ಕಲೆಯಲ್ಲಿ ಶಿಕ್ಷಣ ಮತ್ತು ಪರಿಶೋಧನಕ್ಕಾಗಿ ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಪ್ರತ್ಯೇಕ ವಿಭಾಗಗಳೇ ಇವೆ. 1967ರಿಂದ ರಾಜ್ಯದ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಸಂಗೀತದಲ್ಲಿಯೂ ರಾಜ್ಯಾದ್ಯಂತ ಪರೀಕ್ಷೆಗಳನ್ನು ನಡೆಸುತ್ತಿದೆ. ಈ ಪರೀಕ್ಷೆಗಳು ಜ್ಯೂನಿಯರ್, ಸೀನಿಯರ್, ಪ್ರೊಫಿಷಿಯೆನ್ಸಿ ಅಥವಾ ವಿದ್ವತ್ ಎಂಬ ಮೂರು ಹಂತಗಳಲ್ಲಿ ನಡೆಯುತ್ತದೆ. ಕರ್ನಾಟಕ ಸಂಗೀತ, ಹಿಂದೂಸ್ತಾನೀ ಸಂಗೀತ ಮತ್ತು ತಾಳವಾದ್ಯ ಈ ಮೂರು ವಿಭಾಗಗಳಲ್ಲಿಯೂ ಪರೀಕ್ಷೆಗಳು ನಡೆಸಲ್ಪಡುತ್ತಿವೆ. 1967ರಲ್ಲಿ ವಿವಿಧ ಭಾಗಗಳಲ್ಲಿ ಉತ್ತೀರ್ಣ ರಾದ ವಿದ್ಯಾರ್ಥಿಗಳ ಸಂಖ್ಯೆ ಇಂತಿದೆ : ಕರ್ನಾಟಕ ಸಂಗೀತದಲ್ಲಿ ಪ್ರೊಫಿಷಿಯೆನ್ಸಿ (ವಿದ್ವತ್)-17 ; ಸೀನಿಯರ್-179 ; ಜ್ಯೂನಿಯರ್-780. ಹಿಂದೂಸ್ತಾನೀ ಸಂಗೀತದಲ್ಲಿ ಪ್ರೊಫಿಷಿ ಯೆನ್ಸಿ (ವಿದ್ವತ್)-5; ಸೀನಿಯರ್-13; ಜ್ಯೂನಿಯರ್-43 ಕರ್ನಾಟಕ ತಾಳವಾದ್ಯಗಳಲ್ಲಿ ಪ್ರೊಫಿಷಿಯನ್ಸಿ (ವಿದ್ವತ್)-1; ಸೀನಿಯರ್-6 ; ಜ್ಯೂನಿಯರ್-16. ಹಿಂದೂಸ್ತಾನೀ ತಾಳ ವಾದ್ಯದಲ್ಲಿ ಸೀನಿಯರ್-2 ; ಜ್ಯೂನಿಯರ್-20. ಈ ಪರೀಕ್ಷೆ ಗಳು ಹೆಚ್ಚು ಹೆಚ್ಚು ಆಕರ್ಷಣೀಯವಾಗುತ್ತಾ ಬಂದು ಅಭ್ಯರ್ಥಿ ಗಳ ಸಂಖ್ಯೆಯೂ ವರ್ಷವರ್ಷವೂ ಹೆಚ್ಚುತ್ತಿದ್ದು, 1982ರಲ್ಲಿ ಉತ್ತೀರ್ಣರಾದವರ ಸಂಖ್ಯೆ ಇಂತಿದೆ (ಮೊದಲನೇಯ ಸಂಖ್ಯೆ ಪರೀಕ್ಷೆಗೆ ಕುಳಿತವರನ್ನೂ, ಎರಡನೇಯ ಸಂಖ್ಯೆ ಉತ್ತೀರ್ಣ ರಾದವರನ್ನೂ ಸೂಚಿಸುತ್ತದೆ) : ಕರ್ನಾಟಕ ಸಂಗೀತದಲ್ಲಿ, ಪ್ರೊಫಿಷಿಯೆನ್ಸಿ ಅಥವಾ ವಿದ್ವತ್ (42) 11; ಸೀನಿಯರ್ (281) 154 ; ಜ್ಯೂನಿಯರ್ (1,641) 1,414. ಹಿಂದು ಸ್ತಾನೀ ಸಂಗೀತದಲ್ಲಿ ಪ್ರೊಫಿಷಿಯೆನ್ಸಿ ಅಥವಾ ವಿದ್ವತ್ (18) 10 ; ಸೀನಿಯರ್ (36) 26 ; ಜ್ಯೂನಿಯರ್ (203) 179. ಕರ್ನಾಟಕ ತಾಳವಾದ್ಯ ಪ್ರೊಫಿಷಿಯೆನ್ಸಿ ಅಥವಾ ವಿದ್ವತ್ (5) 2 ; ಸೀನಿಯರ್ (13) 11 ; ಜ್ಯೂನಿಯರ್ (48) 42. ಹಿಂದೂಸ್ತಾನೀ ತಾಳವಾದ್ಯ ವಿಭಾಗದಲ್ಲಿ ಪ್ರೊಫಿಷಿಯೆನ್ಸಿ (ವಿದ್ವತ್) (6) 3 ; ಸೀನಿಯರ್ (19) 11 ; ಮತ್ತು ಜ್ಯೂನಿಯರ್ (88) 79.

ಖಾಸಗಿಯಾಗಿ ನಡೆಸಲಾಗುತ್ತಿರುವ ಅನೇಕ ಸಂಗೀತ ಶಾಲೆ ಗಳು ಈ ಪರೀಕ್ಷೆಗಳಿಗಾಗಿ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿವೆ. ಬೆಂಗಳೂರಿನಲ್ಲಿ ಸ್ಥಾಪಿತವಾದ ಇಂತಹ ಸಂಗೀತ ಶಿಕ್ಷಣ ಶಾಲೆಗಳಲ್ಲಿ ಅಯ್ಯನಾರ್ ಸಂಗೀತ ಕಲಾ ಶಾಲೆ, ವಿಜಯ ಕಾಲೇಜ್ ಆಫ್ ಮ್ಯೂಸಿಕ್, ಗಾನ ಕಲಾಮಂದಿರ, ಶ್ರೀ ವೆಂಕಟೇಶ್ವರ ಗಾನ ನಿಲಯ, ಭಾಮಿ ಸಂಗೀತ ಶಿಕ್ಷಣ ಸಂಸ್ಥೆ, ಗಾನ ಕಲಾ ಭಾರತಿ, ವಿಜಯ ಕಲಾ ಮಂದಿರ, ಅರವಿಂದ ಸಂಗೀತ ವಿದ್ಯಾಲಯ, ಶ್ರೀ ವಿಜಯ ಸಂಗೀತ ಮತ್ತು ಚಲನಚಿತ್ರ ವಿದ್ಯಾಲಯಗಳನ್ನು ಹೇಳಬಹುದು. ಹಾಗೆಯೇ ರಾಜ್ಯದ ಇತರ ಭಾಗಗಳಲ್ಲಿ ಸಂಗೀತ ಶಿಕ್ಷಣ ಕೊಡುತ್ತಿರುವ ಶಾಲೆಗಳಲ್ಲಿ ವಿಜಾಪುರ ಜಿಲ್ಲೆಯ ಗೂಡೂರಿ ನಲ್ಲಿರುವ ಶ್ರೀ ಪಂಚಾಕ್ಷರೀ ಕೃಪಾ ಪೋಷಿತ ಸಂಗೀತ ಶಾಲೆ, ಗದಗಿನಲ್ಲಿರುವ ವೀರೇಶ್ವರ ಪುಣ್ಯಾಶ್ರಮ, ತುಮಕೂರಿನಲ್ಲಿರುವ ಸುಪ್ತ ಮಹಿಳಾ ಮಂಡಳಿ, ಕಾರ್ಕಳದ ಲಲಿತ ಕಲಾ ವೃಂದ, ಏಕನಾಥೇಶ್ವರಿ ಸಂಗೀತ ಕಲಾ ಮಂದಿರ, ಚಿತ್ರದುರ್ಗ, ಶ್ರೀ ರಾಘವೇಂದ್ರ ಸಂಗೀತ ವಿದ್ಯಾಲಯ, ರಾಯಚೂರು, ರಾಮಸಾಗರದ ತ್ಯಾಗರಾಜ ಸಂಗೀತ ವಿದ್ಯಾಲಯ, ಶಿವಮೊಗ್ಗೆಯ ವಾಣಿ ವಿದ್ಯಾ ಸಂಸ್ಥೆ, ವಿಜಾಪುರದ ಪಂಚಾಕ್ಷರಿ ಲಲಿತಕಲಾ ಮತ್ತು ಸಂಗೀತ ಕಲಾ ಸಂಘ ಮುಂತಾದ ಸಂಗೀತ ಶಿಕ್ಷಣ ಶಾಲೆ ಗಳನ್ನು ಹೇಳಬಹುದು. ಇವುಗಳಲ್ಲಿ ಕೆಲವು ಕರ್ನಾಟಕ ಸಂಗೀತ ನೃತ್ಯ ಅಕ್ಯಾಡೆಮಿಯಿಂದ ಅಂಗೀಕೃತವಾಗಿವೆ. ಇವುಗಳೇ ಅಲ್ಲದೆ ರಾಜ್ಯದ ನಾನಾ ನಗರಗಳಲ್ಲಿ ಹೀಗೆ ಶಿಕ್ಷಣ ನೀಡುವ ಖಾಸಗಿ ಸಂಗೀತ ಕಾಲೇಜುಗಳು ಇನ್ನೂ ಅನೇಕವಿವೆ.

## ಕರ್ನಾಟಕದಲ್ಲಿ ನೃತ್ಯ ಕಲೆ

ನೃತ್ಯವು ದೃಶ್ಯ ಕಲೆ. ನೋಡಿ ಸಂತೋಷಿಸಬೇಕಾದ ಮಹತ್ತರ ಗುಣವುಳ್ಳದ್ದು. ಆದುದರಿಂದ ಈ ಕಲೆಯ ನೋಟದ ನೆನಪುಗಳು ಕಾಲಮಾನದಲ್ಲಿ ಮರೆಯಾಗುವುದೂ ಮರೆತು ಹೋಗುವುದೂ ಸಹಜ. ಇತಿಹಾಸ ಪೂರ್ವ ಕಾಲದಲ್ಲಿ ಈ ಕಲೆಯು ಹೇಗೆ, ಯಾವ ರೀತಿ ಇತ್ತೆಂಬುದಕ್ಕೆ ಯಾವ ಆಧಾರ ಗಳೂ ದೊರೆಯಲಾರವು. ಆದರೆ ರಾಯಚೂರು, ಬಳ್ಳಾರಿ, ವಿಜಾಪುರ ಮುಂತಾದೆಡೆಗಳಲ್ಲಿ ಪ್ರಾಚ್ಯಯುಗಕ್ಕೆ ಸೇರಿದ ನಿವೇಶನ ಗಳ ಬಂಡೆಗಳ ಮೇಲೆ ಬಹುಶಃ ಅಂದು ನಡೆಯುತ್ತಿದ್ದ ರೀತಿಯ ನೃತ್ಯಗೋಷ್ಠಿಗಳ ಸ್ಥೂಲ ಚಿತ್ರಗಳನ್ನು ಕೆತ್ತಲಾಗಿದೆ. ತೆಕ್ಕಲ ಕೋಟೆಯ ಒಂದು ಗುಹೆಯಲ್ಲಿ ಚಿತ್ರಿತವಾದ ಇಂತಹ ನೃತ್ಯ ಗೋಷ್ಠಿಯ ದೃಶ್ಯವು ಬಹುಶಃ ನೂತನ ಶಿಲಾಯುಗಕ್ಕೆ ಸೇರ ಬಹುದೆಂದು ಭಾವಿಸಲಾಗಿದೆ. ಕರ್ನಾಟಕದಲ್ಲಿ ಪ್ರಚಲಿತವಿರುವ ನೃತ್ಯ ಸಂಪ್ರದಾಯವನ್ನು ಎರಡು ವರ್ಗವಾಗಿ ವಿಂಗಡಿಸಬಹುದು. 1) ಜಾನಪದ : ಇದರ ಪ್ರಕಾರಗಳು ಒಂದೊಂದೇ ಸ್ಥಳಗಳಿಗೇ ಅಥವಾ ಪ್ರದೇಶಕ್ಕೇ ಸೀಮಿತವಾಗುವುವು. 2) ಶಿಷ್ಟ ಸಂಪ್ರ ದಾಯ : ಅದರದೇ ಸೂತ್ರ ನಿಯಮಗಳಿಂದ ಕೂಡಿದ ಈ ಸಂಪ್ರದಾಯವು ರಾಜ್ಯದ ನಾನಾ ಭಾಗಗಳಲ್ಲಿ ಮತ್ತು ಹೊರಗೂ ವ್ಯಾಪಕವಾಗಿದೆ. ಹಿಂದೆ ಈ ಕಲೆಯು ಹೇಗಿತ್ತು ? ಅದರ

ಆಕಾರ, ಕಲಾವಿದರು ಯಾರು ? ಮುಂತಾದವುಗಳ ಬಗೆಗೆ ಯಾವ ಲಿಖಿತ ದಾಖಲೆಗಳೂ ದೊರೆಯುವುದಿಲ್ಲ. ಆದರೆ ಹಿಂದಿನ ತಲೆಮಾರಿನವರು ಕೆಲವರು ತಮ್ಮ ನೆನಪುಗಳನ್ನೂ ಅನುಭವ ಗಳನ್ನೂ ತಿಳಿಸಿಯೋ ಅಥವಾ ಪ್ರಕಟಿಸಿಯೋ ಈ ಕಲೆಯ ಮೇಲೆ ಸ್ವಲ್ಪ ಬೆಳಕು ಚೆಲ್ಲಿದ್ದಾರೆ.

ಕರ್ನಾಟಕದ ಜನತೆಯು ನೃತ್ಯಕಲೆಯನ್ನು ಬಹು ಹಿಂದಿನಿಂದಲೂ ಕಲಿತು ಪ್ರದರ್ಶಿಸುತ್ತಿದ್ದರೆಂಬುದಕ್ಕೆ ತಮಿಳು ಪ್ರಾಚೀನ ಕಾವ್ಯವಾದ ಶಿಲಪ್ಪದಿಗಾರದಲ್ಲಿ ಇದರ ಮಾಹಿತಿ ದೊರೆಯುತ್ತದೆ. ಚೇರ ವಂಶದ ಅರಸನಾದ ಸೆಂಗುಟ್ಟುವನ್‌ನ ಎದುರಿಗೆ ಕರುನಾಟರ್ ಅಂದರೆ ಕರ್ನಾಟಕದ ನರ್ತಕ ನರ್ತಕಿಯರು ತಮ್ಮ ಕಲೆಯನ್ನು ಪ್ರದರ್ಶಿಸಿದರೆಂದು ಹೇಳಲಾಗಿದೆ. ಮುಂದೆ ಬಾದಾಮಿಯ ಚಲುಕ್ಯರ ಕಾಲಕ್ಕೆ ಸೇರಿದ ಶಾಸನವೊಂದರಲ್ಲಿ ಅಚಲನೆಂಬ ಪ್ರಸಿದ್ಧ ನರ್ತಕ ಮತ್ತು ನಟನ ಪ್ರಸ್ತಾಪವಿದೆ. ಆ ಕಾಲದಲ್ಲಿ ನಾನಾ ಬಗೆಯ ನೃತ್ಯ ಪ್ರಕಾರಗಳು ಪ್ರಚಾರದಲ್ಲಿದ್ದವು. ಆದರೆ ಭರತನ ನಾಟ್ಯ ಪಂಥವೇ ಪ್ರಧಾನವಾಗಿದ್ದಂತೆ ಕಂಡು ಬರುತ್ತದೆ. ಕ್ರಿ. ಶ. 778-79ನೇ ವರುಷದಲ್ಲಿ ಲಿಖಿತವಾದ ಪಟ್ಟದಕಲ್ಲಿನ ಶಾಸನವೊಂದರಲ್ಲಿ ದೇವಾಲಯಗಳಲ್ಲಿ ನೃತ್ಯ ಸೇವೆ ಸಲ್ಲಿಸಲು ದೇವದಾಸಿಯರನ್ನು ನೇಮಿಸಿದ್ದ ವಿಷಯವು ತಿಳಿದು ಬರುತ್ತದೆ. ಅಂದು ಪ್ರಚಲಿತವಿದ್ದ ಕಾಳಾಮುಖ ಶೈವಪಂಥದವರ ದೇವಾಲಯದ ಪೂಜಾ ಕಟ್ಟಳೆಗಳಲ್ಲಿ ಸಂಗೀತ ನೃತ್ಯ ಕಲೆಗಳನ್ನೂ ಒಂದು ಮುಖ್ಯ ಭಾಗವಾಗಿ ಮಾಡಿಕೊಂಡಿದ್ದರು. ದೇವಾಲಯಗಳಿಗೆ ಗೌರವ ಪ್ರಾಶಸ್ತ್ಯ ಹೆಚ್ಚುತ್ತಾ ಶಾಸ್ತ್ರೀಯ ನೃತ್ಯಕಲೆಗೂ ಪ್ರೋತ್ಸಾಹ ಹೆಚ್ಚಲಾರಂಭವಾಯಿತು. ರಾಜರೂ ಪಾಳೆಯಗಾರರೂ ನೃತ್ಯ ಕಲೆಗೆ ಬಹು ಹಿಂದಿನಿಂದಲೂ ಪ್ರೋತ್ಸಾಹ ಕೊಡುತ್ತಿದ್ದುದು ಎಲ್ಲರೂ ಬಲ್ಲ ವಿಷಯವೇ. ಇದಲ್ಲದೆ ರಾಜ ಮನೆತನದವರೂ, ಅಂದರೆ ರಾಜಕುಮಾರರೂ, ರಾಜಕುಮರಿಯರೂ ನೃತ್ಯ ಕಲೆಯಲ್ಲಿ ಪರಿಣತರಾಗಿರುತ್ತಿದ್ದರು.

ಗಂಗರಾಜರಾದ ದುರ್ವಿನೀತ ಮತ್ತು ನರಸಿಂಹದೇವ ಸತ್ಯವಾಕ್ಯ, ಇವರಿಬ್ಬರೂ ಸಂಗೀತ ಮತ್ತು ನೃತ್ಯ ಕಲೆಗಳಲ್ಲಿ ಪರಿಣತರಾಗಿದ್ದರೆಂದು ಹೇಳಲಾಗಿದೆ. ಮುಂದೆ ರಾಷ್ಟ್ರಕೂಟರ ಕಾಲದಲ್ಲಿ ಮತ್ತು ಕಲ್ಯಾಣ ಚಾಳುಕ್ಯ ರಾಜ್ಯಭಾರದಲ್ಲಿ ದೇವಾಲಯಗಳಲ್ಲಿ ನೃತ್ಯ ಸೇವೆ ಮಾಡಲು ದೇವದಾಸಿ ನರ್ತಕಿಯರು ನೇಮಿತರಾಗಿರುತ್ತಿದ್ದರು. ಈ ಕಲೆಯನ್ನು ಕಾಪಾಡಿಕೊಂಡು ಬರುವುದೇ ಅಲ್ಲದೆ ತಮಗೆ ನಿಯುಕ್ತವಾದ ದೇವಾಲಯ ಸೇವೆಯನ್ನು ಈ ದೇವದಾಸಿಯರು ಸಲ್ಲಿಸುತ್ತಿದ್ದರು. ರಾಜಮನೆತನಗಳ ಹೆಸರಾಂತ ನರ್ತಕಿಯರಲ್ಲಿ ಕಳಚೂರಿ ವಂಶದ ಸಾವಲದೇವಿ, ಚಾಳುಕ್ಯ ಚಾಂದಲದೇವಿಯರು ಪ್ರಸಿದ್ಧರು. ಹಾಗೆಯೇ ಅನೇಕ ಶಾಸನಗಳಲ್ಲಿ, ಹೊಯಿಸಳ ವಿಷ್ಣುವರ್ಧನನ ಪತ್ನಿ ಶಾಂತಲಾದೇವಿಯನ್ನು ನೃತ್ಯ ಕಲೆಯಲ್ಲಿ ಬಹು ನಿಷ್ಣಾತೆ ಎಂದು ವರ್ಣಿಸಲಾಗಿದೆ. ಹೊಯ್ಸಳರ ಕಾಲದಲ್ಲಿ ದೇವಾಲಯದಲ್ಲಿ ನೃತ್ಯ ಸೇವೆ ಸಲ್ಲಿಸಲು ಅನೇಕ ನರ್ತಕಿಯರೂ ನಾಟ್ಯಾಚಾರ್ಯರೂ ನೇಮಿತರಾಗಿದ್ದರು.

ವಿಜಯನಗರ ಕಾಲದಲ್ಲಿ ಸಂಗೀತ ಮತ್ತು ನೃತ್ಯ ಕಲೆಗಳಿಗೆ ಬಹು ಧಾರಾಳವಾದ ಪ್ರೋತ್ಸಾಹ ದೊರಕಿತು. ನೃತ್ಯವನ್ನು ಹೆಣ್ಣು ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ಕಲಿಸಲಾಗುತ್ತಿತ್ತು. ಇತಿಹಾಸಕಾರ ಪಾಯಿಸ್ ವಿಜಯನಗರದಲ್ಲಿಯೂ ಮತ್ತು ಹೊರಗಡೆಯೂ ಇದ್ದ ಅನೇಕ ನಾಟ್ಯಶಾಲೆಗಳನ್ನು ವರ್ಣಿಸಿದ್ದಾನೆ. ಹಾಗೆಯೇ ಅವುಗಳಲ್ಲಿ ಅನೇಕವು ವ್ಯಾಯಾಮ ಶಾಲೆಗಳೂ ಆಗಿದ್ದುವೆಂದು ಹೇಳಿದ್ದಾನೆ. ಸಕಲ ಸಾಧನ ಸಲಕರಣೆಗಳಿಂದ ಕೂಡಿ, ರಾಜಮನೆತನದವರಿಗೆ ನೃತ್ಯಕಲೆಯನ್ನು ಕಲಿಸಲು ಉಪಯೋಗಿಸುತ್ತಿದ್ದ ಒಂದು ನಾಟ್ಯ ಶಾಲೆಯನ್ನು ಸುದೀರ್ಘವಾಗಿ ಅವನು ವಿವರಿಸಿದ್ದಾನೆ. ಕೃಷ್ಣದೇವರಾಯನ ಆಸ್ಥಾನದ ನಾಟ್ಯಾಚಾರ್ಯ ಭಂಡಾರು ಲಕ್ಷ್ಮೀನಾರಾಯಣ. ಆತನಿಗೆ ಅಭಿನವ ಭರತನೆಂಬ ಬಿರುದಿದ್ದಿತು. ದೇವಾಲಯ, ಅರಮನೆ ಮುಂತಾದುವುಗಳ ಗೋಡೆ, ಕಂಭ, ಬೋದಿಗೆ ಮುಂತಾದುವುಗಳ ಮೇಲೆ ಕಂಡುಬರುವ ನಾನಾ ಭಂಗಿಗಳಿಂದ ಕೂಡಿದ ನೃತ್ಯ ಶಿಲ್ಪಗಳು ಅಂದು ಕಲೆಗೆ ದೊರೆಯುತ್ತಿದ್ದ ಪ್ರೋತ್ಸಾಹಕ್ಕೂ ಕಲೆಯ ಉತ್ತಮ ಮಟ್ಟಕ್ಕೂ ಸಾಕ್ಷೀಭೂತವಾಗಿದೆ. ಪ್ರತೀವರ್ಷದ ದಸರಾ ಉತ್ಸವ ಕಾಲದಲ್ಲಿ ಕಲಾಪ್ರದರ್ಶನ ಮಾಡಲು ರಾಜ್ಯದ ನಾನಾ ಮೂಲೆಗಳಿಂದ ನೃತ್ಯ ಕಲಾವಿದರು ವಿಜಯನಗರಕ್ಕೆ ಬರುತ್ತಿದ್ದರು. ಅವರುಗಳಿಗೆ ಅರಮನೆಯಿಂದ ಧಾರಾಳವಾಗಿ ಸನ್ಮಾನ, ಪಾರಿತೋಷಕಗಳು ದೊರೆಯುತ್ತಿದ್ದುವು. ಇದರಂತೆಯೇ ಕೆಳದಿ ಮನೆತನದ ಮೊದಲನೇಯ ವೆಂಕಟಪ್ಪನ ಕಾಲದಲ್ಲಿ ಇಕ್ಕೇರಿಯಲ್ಲಿ ಒಂದು ಸುಂದರ ನಾಟ್ಯ ಶಾಲೆಯು ನಿರ್ಮಾಣವಾಯಿತು. ಮೈಸೂರು ಒಡೆಯರು ವಿಜಯನಗರದ ಸಂಪ್ರದಾಯವನ್ನೇ ಮುಂದುವರೆಸಿಕೊಂಡು ಬಂದು ನೃತ್ಯ ಕಲೆಗೆ ಒಳ್ಳೆಯ ಪ್ರೋತ್ಸಾಹ ಮತ್ತು ಪೋಷಣೆ ನೀಡಿದರು.

ಇನ್ನು ನೃತ್ಯ ಕಲೆಯ ಲಕ್ಷಣ ಸಾಹಿತ್ಯದ ಬಗೆಗೆ ಹೇಳುವುದಾದರೆ ಮುಮ್ಮಡಿ ಸೋಮೇಶ್ವರನ ಮಾನಸೋಲ್ಲಾಸ ಮೊದಲು ನೆನಪಿಗೆ ಬರುತ್ತದೆ. ವಿನೋದಗಳಿಗೆ ಸಂಬಂಧಪಟ್ಟ ಅದರ ನಾಲ್ಕನೇಯ ವಿಂಶತಿ ಅಥವಾ ವಿಭಾಗದಲ್ಲಿ ನೃತ್ಯಕಲೆಯ ಬಗೆಗೆ ದೀರ್ಘ ವಿವರಣೆ ಇದೆ. ಅದರಂತೆಯೇ ಶಿವಗಂಗೆಯ ಬಳಿಯಿರುವ ಸಾತನೂರು ಗ್ರಾಮದವನಾದ ಪುಂಡರೀಕ ವಿಠ್ಠಲನು ತನ್ನ ಸುಪ್ರಸಿದ್ಧ ಗ್ರಂಥವಾದ ನರ್ತನ ನಿರ್ಣಯದಲ್ಲಿ ನೃತ್ಯ ಕಲೆಯನ್ನು ದೀರ್ಘವಾಗಿ ವಿವೇಚಿಸಿದ್ದಾನೆ. 17ನೇಯ ಶತಮಾನದಲ್ಲಿ ಸಿಂಹ ಭೂಪಾಲ ಎಂಬ ಅರಸನು ಕನ್ನಡದಲ್ಲಿ ಲಾಸ್ಯರಂಜನವೆಂಬ ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ ನೃತ್ಯ ಕಲೆಯ ವಿವಿಧ ಅಂಗಗಳ ಬಗೆಗೆ ದೀರ್ಘ ವಿವರಣೆ ಇದೆ. ಹಾಗೆಯೇ 1908ರಲ್ಲಿ ಪ್ರಕಟವಾದ ವೆಂಕಟ ಸುಂದರಾಸಾನಿ ಬರೆದ ರಸಿಕ

ಜನಮನೋಲ್ಲಾಸಿನಿ ಸಾರಸಂಗ್ರಹ ಭರತವೆಂಬ ಗ್ರಂಥದ ಮೂರನೇಯ ಭಾಗವು ಸಂಗೀತ ಮತ್ತು ನೃತ್ಯ ಕಲೆಗಳಿಗೆ ಮೀಸಲಾಗಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ನೃತ್ಯ ಕಲೆಗೆ ವಿಶೇಷ ಪ್ರೋತ್ಸಾಹ ದೊರೆಯಿತು. ಸುಮಾರು 19ನೇಯ ಶತಮಾನದ ಮಧ್ಯಭಾಗದಲ್ಲಿ ಇವರು ತಂಜಾವೂರಿನ ಚಿನ್ನಯ್ಯ ಪಿಳ್ಳೆಯವರನ್ನು ಆಸ್ಥಾನದ ನಾಟ್ಯಾಚಾರ್ಯನಾಗಿ ನೇಮಿಸಿದರು. ಇವರು ತಂಜಾವೂರು ಚತುಷ್ಟಯವೆಂದು ಪ್ರಸಿದ್ಧರಾದ ಪಂಡನಲ್ಲೂರ ಸೋದರರಲ್ಲಿ ಹಿರಿಯರು. ಅನೇಕರನ್ನು ನೃತ್ಯ ಕಲೆಯಲ್ಲಿ ತರಪೇತು ಮಾಡಿದರು. ಅದರಂತೆಯೇ ಮುಂದೆ ಆಳಿದ ಚಾಮರಾಜ ಒಡೆಯರು ಅನೇಕ ಪ್ರಸಿದ್ಧ ಸಂಗೀತ ಮತ್ತು ನೃತ್ಯಕಲಾವಿದರನ್ನು ಆಸ್ಥಾನ ವಿದ್ವಾಂಸರಾಗಿ ನೇಮಿಸಿದರು. 19ನೇಯ ಶತಮಾನದಲ್ಲಿ ನೃತ್ಯಕಲೆಯ ಬಗೆಗೇ ಆಗಲೀ, ನರ್ತಕಿ ಹಾಗೂ ದೇವದಾಸಿಯರ ಬಗೆಗೇ ಆಗಲೀ ಸಮಾಜದಲ್ಲಿ ತಿರಸ್ಕಾರ ವಿರಲಿಲ್ಲ. ಮೈಸೂರು, ಬೆಂಗಳೂರು, ಕುದೂರು, ಟಿ. ನರಸೀ ಪುರ, ಮುಳಬಾಗಲು, ಮುಂತಾದ ಸ್ಥಳಗಳಲ್ಲಿ ಪ್ರಸಿದ್ಧ ನರ್ತಕಿ ಯರಿದ್ದು ಇವರೆಲ್ಲಾ ಬಹುತೇಕ ದೇವದಾಸಿಯರು. ಒಂದೊಂದು ದೇವಾಲಯದ ಸೇವೆಯನ್ನು ಸಲ್ಲಿಸುತ್ತ ಆ ದೇವಾಲಯಗಳ ಸಮೀಪದಲ್ಲಿಯೇ ವಾಸ ಮಾಡುತ್ತಿದ್ದರು. ಈ ದೇವಾಲಯಗಳ ಪೂಜಾವಿಧಿಗಳ ಅಂಗವಾಗಿ ನೃತ್ಯಸೇವೆ ಮಾಡುವುದು ಅವರ ವಂಶ ಪಾರಂಪರ್ಯವಾದ ಕರ್ತವ್ಯ ಮತ್ತು ಹಕ್ಕೂ ಆಗಿದ್ದಿತು. ಈ ನರ್ತಕಿಯರಿಗೆ ಸಂಗೀತ ಮತ್ತು ನೃತ್ಯ ಶಾಸ್ತ್ರಗಳಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. ಅಲ್ಲದೆ ಸಾಹಿತ್ಯ ಹಾಗೂ ನಾನಾ ಭಾಷೆಗಳಲ್ಲಿ ಪ್ರಾವೀಣ್ಯತೆ ಇದ್ದುದರಿಂದ ಪಂಡಿತ ಮತ್ತು ರಸಿಕ ಜನರು ಇವರ ಸ್ನೇಹ ಸಹವಾಸಗಳನ್ನು ಅಪೇಕ್ಷಿಸುತ್ತಿದ್ದರು. ಈ ನರ್ತಕಿಯರಿಗೆ ಸಮಾಜದಲ್ಲಿ ಒಂದು ಗೌರವ ಸ್ಥಾನವಿತ್ತು. ಆದರೂ ಕಾಲಾನು ಕಾಲದಲ್ಲಿ ಈ ನರ್ತಕಿಯರಿಗೆ ಇದ್ದ ಶ್ರೀಮಂತಿಕೆ ಮತ್ತು ಗೌರವಾ ದರಗಳು ಕುಗ್ಗಿ ನೃತ್ಯಕಲೆ ಹೀನಾಯಕ್ಕೆ ಗುರಿಯಾಗಿ ನಿಷಿದ್ಧ ವೆನಿಸಿತು. ಇಷ್ಟಾದರೂ ನೃತ್ಯಕಲೆಯು ಸಂಪೂರ್ಣವಾಗಿ ನಾಶ ವಾಗದೆ ಕೆಲವು ದೇವದಾಸಿಯರು ಹಾಗೂ ನಟ್ಟುವನಾರರ ಮನೆತನಗಳಲ್ಲಿ ಉಳಿದು ಬಂದಿತು. ಅವರುಗಳು ಧೃಡ ನಿರ್ಧಾರ ದಿಂದ ಭಕ್ತಿ ಶ್ರದ್ಧೆಗಳಿಂದ ಕಾಪಾಡಿಕೊಂಡು ಬಂದರು.

19ನೇಯ ಶತಮಾನದ ಅಂತ್ಯದ ವೇಳೆಗೆ ತಿರುಮಕೂಡ್ಲು ನರಸೀಪುರ, ಮುಳಬಾಗಿಲು, ಚಿಂತಾಮಣಿಯ ಬಳಿ ಇರುವ ಹೂವಾಡಿ ಅಥವಾ ಹೂವಲವಾಡಿ ಮುಂತಾದ ಸ್ಥಳಗಳಲ್ಲಿ ಸುಮಾರು ಇನ್ನೂರು ಮಂದಿ ನರ್ತಕ ವೃತ್ತಿಯವರೂ ನೃತ್ಯ ಶಿಕ್ಷಕರಾದ ಅನೇಕ ನಟ್ಟುವನಾರರೂ ಇದ್ದರು. ಮುಳಬಾಗಿಲಿ ನಂತಹ ಊರಿನ ಒಂದೇ ದೇವಾಲಯಕ್ಕೆ ಸೇರಿದಂತೆ 14 ನರ್ತಕಿಯರಿದ್ದು ದೇವರಿಗೆ ವಾರಕ್ಕೊಮ್ಮೆ ನೃತ್ಯ ಸೇವೆ ಸಲ್ಲಿಸುತ್ತಿದ್ದರೆಂದು ಹೇಳಲಾಗಿದೆ. ಇದಲ್ಲದೆ ಸಂಸ್ಕೃತದ ಜೊತೆಗೆ ಭರತನಾಟ್ಯ ಮತ್ತು ಅಭಿನಯ ಶಾಸ್ತ್ರಗಳಲ್ಲಿ ಪರಿಣತರಾದ ಅನೇಕ ಬ್ರಾಹ್ಮಣ ಪರಿಣಿತರೂ ಇದ್ದರು. ಇವರು ಈ ನರ್ತಕಿಯರಿಗೆ ಕ್ಲಿಷ್ಟವಾದ ಅಭಿನಯ ಕಲೆಯಲ್ಲಿ ಶಿಕ್ಷಣ ನೀಡುತ್ತಿದ್ದರು. ಅಂತಹವರಲ್ಲೊಬ್ಬರು ಮುಳಬಾಗಲಿನ ಪನಸಕಾಯಲ ವೆಂಕಟ ಸುಬ್ಬಾಭಟ್ಟರು. ಪದವಿನ್ಯಾಸದ ನಿರ್ಣಯ ಮತ್ತು ಕೌಶಲ್ಯಕ್ಕೆ ಪ್ರಸಿದ್ಧರಾಗಿದ್ದವರವರು. ಅವರ ಶಿಷ್ಯರಲ್ಲೊಬ್ಬಳು ಬೈರಕೂರು ವೆಂಕಟಲಕ್ಷ್ಮಸಾನಿ. ಅಭಿನಯದಲ್ಲಿ, ಅದರಲ್ಲಿಯೂ ಅದರ ಸೂಕ್ಷ್ಮ ಭಾವ ಸಂಚಾರಗಳಲ್ಲಿ ಬಹು ಪ್ರವೀಣಳಾ ಗಿದ್ದವಳು. ಅದರಂತೆಯೇ ಆ ಕಾಲದಲ್ಲಿ ಪ್ರಸಿದ್ಧಳಾಗಿದ್ದ ಇನ್ನೊಬ್ಬ ನರ್ತಕಿ ತಿರಮಕೂಡಲು ಸುಂದರಮ್ಮ. ಜಯದೇವನ ಗೀತಗೋವಿಂದದ ಅಷ್ಟಪದಿ, ಅದರಲ್ಲಿಯೂ "ಯಾಹಿ ಮಾಧವ ಯಾಹಿ ಕೇಶವ" ಎಂದು ಪ್ರಾರಂಭವಾಗುವ ಅಷ್ಟಪದಿಯ ಅಭಿನಯಕ್ಕೆ ಬಹು ಪ್ರಸಿದ್ಧಳಾದವಳು. ಮೈಸೂರಿನಲ್ಲಿ ಆಳಿದ ನಾಲ್ವಡಿ ಕೃಷ್ಣರಾಜ ಒಡೆಯರು ಗಾಢವಾದ ಕಲಾಪ್ರೇಮಿ ಯೆಂದು ಖ್ಯಾತರಾಗಿದ್ದರು. ಅನೇಕ ಸಂಗೀತ ಮತ್ತು ನೃತ್ಯ ಕಲಾ ಪರಿಣತರಿಗೆ ಅವರು ಪೋಷಕರಾಗಿದ್ದರು. ಆಗಿನ ಕಾಲದಲ್ಲಿ ಕಲೆಯನ್ನು ಚೆನ್ನಾಗಿ ಅಭ್ಯಾಸ ಮಾಡಿದ ತರುಣ ಪ್ರತಿಭಾವಂತ ನರ್ತಕಿಯರು ಅರಮನೆಯ ಗಮನಕ್ಕೆ ಬರಲು ಬಹುಕಾಲ ಬೇಕಾಗುತ್ತಿತ್ತು. ಮಹಾರಾಜರ ಮುಂದೆ ಕಲಾ ಪ್ರದರ್ಶನ ಮಾಡುವ ಮುನ್ನ ಕಲಾ ಪರಿಣತರಿಂದ ಪರೀಕ್ಷಿಸಲ್ಪಡ ಲಾಗುತ್ತಿತು. ನೃತ್ಯ ಕಲೆಯ ಬಗೆಗೆ ಅಂತಹ ಪರಿಣತರೆನಿಸಿ ಕೊಂಡಿದ್ದವರೊಬ್ಬರು ಅಂಬಿಲ್ ನರಸಿಂಹಯ್ಯಂಗಾರ್. ಈ ಭಾಗದಲ್ಲಿ ಮೈಸೂರು ರಾಜ್ಯವು ಗಮನಾರ್ಹವಾದುದು. ಅರಮನೆ ಮತ್ತು ದೇವಾಲಯಗಳ ಪೋಷಣೆಯಿಂದ ಸುಮಾರು 200 ವರುಷಗಳಿಂದ ನರ್ತಕಿಯರೂ ಗುರುಗಳೂ ಭರತ ನಾಟ್ಯದಲ್ಲಿ ಇಲ್ಲಿಯದೇ ಒಂದು ವಿಶಿಷ್ಟ ನೃತ್ಯಶೈಲಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಇವರುಗಳಲ್ಲಿ ಅಭಿನಯ ಭಾಗದಲ್ಲಿ ಬಹು ಪ್ರವೀಣ ರೆನಿಸಿದ್ದ ಕವೀಶ್ವರ ಗಿರಿಯಪ್ಪ ಮತ್ತು ಕಾಶಿಗುರು, ಅಲ್ಲದೆ ಅಮೃತಪ್ಪ, ಅಪ್ಪಯ್ಯ, ದಾಸಪ್ಪ, ಕಿಟ್ಟಪ್ಪ, ಮತ್ತು ಜೆಟ್ಟಿ ತಾಯಮ್ಮ ಮುಂತಾದವರು ಭರತನಾಟ್ಯ ಕಲೆಯ ಖ್ಯಾತ ವ್ಯಕ್ತಿ ಗಳು. ಇವರುಗಳು ತಮ್ಮದೇ ವಿಶಿಷ್ಟ ರೀತಿಯ ನಾಟ್ಯಪ್ರಬಂಧ ಗಳನ್ನು ರಚಿಸಿ ಪ್ರದರ್ಶನದಲ್ಲಿಯೂ ಒಂದು ಕ್ರಮವನ್ನು ರೂಪಿಸಿದರು. ಇದರಂತೆ ನಾಟ್ಯವು ಮಂಗಳದಿಂದ ಪ್ರಾರಂಭ ವಾಗಿ ಅನಂತರ ಕ್ರಮವಾಗಿ ಸ್ತುತಿ, ಅಲರಿಪು, ಸ್ವರಜತಿ, ವರ್ಣ, ಪದ, ತಿಲ್ಲಾನ ಮುಂತಾದ ಕೃತಿಗಳು ಪ್ರದರ್ಶಿತವಾಗು ತ್ತಿದ್ದವು. ಅನಂತರ ಅಭಿನಯ ಭಾಗದಲ್ಲಿ ಸಂಸ್ಕೃತ ಶ್ಲೋಕಗಳು; ಅದರಲ್ಲಿಯೂ ಜಯದೇವನ ಗೀತಗೋವಿಂದದ ಅಷ್ಟಪದಿಗಳನ್ನು ಪ್ರಧಾನವಾಗಿ ಉಪಯೋಗಿಸಲಾಗುತ್ತಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದ ಪ್ರಸಿದ್ಧ ಜೆಟ್ಟಿ ದಾಸಪ್ಪ ನವರ ಮಗಳಾದ ಜೆಟ್ಟಿ ತಾಯಮ್ಮನವರು ಈ ಭಾಗದಲ್ಲಿ ಬಹು

ಪ್ರೌಢಿಮೆ ಪಡೆದು ಕಲ್ಪನಾ ಪ್ರತಿಭೆಯಿದ್ದ ನರ್ತಕಿ. ಆಕೆಗೆ ನಾಟ್ಯಕಲೆ ಕೇವಲ ವೃತ್ತಿಯಾಗಿರದೆ ಆತ್ಮಾನುಸಂಧಾನದ ಒಂದು ಮಾರ್ಗವಾಗಿದ್ದಿತು. ತಾಯಮ್ಮನವರಿಗೆ ನೃತ್ಯ ಭಾಗದಲ್ಲಿ ಗುರುಗಳು ಸುಬ್ಬರಾಯಪ್ಪನವರೂ, ಅಭಿನಯ ಭಾಗದಲ್ಲಿ ಕವೀಶ್ವರ ಗಿರಿಯಪ್ಪನವರೂ, ಅಭಿನವ ಕಾಳಿದಾಸನೆಂದು ಖ್ಯಾತರಾದ ಕರಿಬಸಪ್ಪಶಾಸ್ತ್ರಿಗಳು, ಮತ್ತು ಚಂದ್ರಶೇಖರ ಶಾಸ್ತ್ರಿಗಳು. ಆಕೆಯ ಸಂಗ್ರಹದಲ್ಲಿ ಸಾವಿರಾರು ಪದ, ಜಾವಳಿಗಳಿದ್ದವು. ಹಿಂದಿನ ಮಹಾರಾಜರಿಂದ ತಾಯಮ್ಮನವರು ಅನೇಕ ಸನ್ಮಾನಗಳನ್ನು ಪಡೆದಿದ್ದರು. ಆಕೆಯ 80ನೇಯ ಜನ್ಮದಿನೋತ್ಸವದಂದು ಡಾ|| ಎಸ್. ರಾಧಾಕೃಷ್ಣನ್ ಅವರಿಂದ 'ನಾಟ್ಯ ಸರಸ್ವತಿ' ಎಂಬ ಬಿರುದನ್ನು ತಾಯಮ್ಮನವರಿಗೆ ನೀಡಲಾಯಿತು. ಆಕೆಯ ಶಿಷ್ಯೆ ವೆಂಕಟಲಕ್ಷ್ಮಮ್ಮನವರು ತಾಯಮ್ಮನವರು ಹಾಕಿದ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಾ ಕಲೆಯನ್ನು ಮುಂದುವರಿಸಿ ಎಲ್ಲರ ಗೌರವಾದರಗಳನ್ನು ಗಳಿಸಿದ್ದಾರೆ. ಆ ಕಾಲದಲ್ಲಿ ಪ್ರಸಿದ್ಧರಾಗಿದ್ದ ಇತರ ನೃತ್ಯ ಕಲಾವಿದೆಯರಲ್ಲಿ ಚಂದ್ರವದನಮ್ಮ, ಪುಟ್ಟದೇವಮ್ಮ, ಬೆಂಗಳೂರಿನ ನಾಗರತ್ನ ಮತ್ತು ವರಾಲು, ಕೊನಮಾರದೇವಿಯಮ್ಮ, ರಮಾಮಣಿ, ಮೂಗೂರು ತ್ರಿಪುರಸುಂದರಮ್ಮ, ಮುಂತಾದವರನ್ನು ನೆನೆಯಬಹುದು.

ಬೆಂಗಳೂರು ನಗರದಲ್ಲಿ ಪ್ರತಿಭಾವಂತ ನಾಟ್ಯಾಚಾರ್ಯರಾಗಿದ್ದವರು ಕೋಲಾರ ಕಿಟ್ಟಪ್ಪ. ಅವರ ಬಳಿ ವರಾಲು, ನಾಗರತ್ನ ಮುಂತಾದ ಕಲಾವಿದೆಯರು ಶಿಕ್ಷಣ ಪಡೆದರು. ಮುಂದೆ ರಾಮಗೋಪಾಲ್ ಮತ್ತು ಕೃಷ್ಣರಾಯರೂ ಶಿಕ್ಷಣ ಪಡೆದು ಉತ್ತಮ ನರ್ತಕರಾದರು. ಕೋಲಾರ ಪುಟ್ಟಪ್ಪನವರು ಕಿಟ್ಟಪ್ಪನವರ ಶಿಷ್ಯರು. ಕಿಟ್ಟಪ್ಪನವರು ಕಂಚಿ ಸದಾಶಿವಯ್ಯನವರ ಶಿಷ್ಯರು. ಸದಾಶಿವಯ್ಯನವರು ಕಂಚಿ ಮತ್ತು ಪಂಡನಲ್ಲೂರುಗಳಲ್ಲಿ ಶಿಕ್ಷಣ ಪಡೆದವರು. ಸುಮಾರು 1910-30ರ ಅಂತರದಲ್ಲಿ ನಾಟ್ಯಕಲೆ ಮತ್ತು ಅದನ್ನು ಕಾಪಾಡಿಕೊಂಡು ಬಂದ ಕಲಾವಿದರ ಕ್ಷೀಣದೆಸೆ ಪ್ರಾರಂಭವಾಯಿತೆನ್ನಬಹುದು. ಇದಕ್ಕೆ ಮುಖ್ಯ ಕಾರಣಗಳೆಂದರೆ ಸಾಮಾಜಿಕ ಮೌಲ್ಯಗಳು ಏರುಪೇರಾದುದು ಮತ್ತು ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದಾಗಿ ದೇಶೀಯ ಕಲೆಗಳು ಮೂಲೆಗುಂಪಾದುದು. ಆದರೆ 1930ರಿಂದ ಮುಂದಿನ ದಶಕದಲ್ಲಿ ಭರತನಾಟ್ಯವು ಅನೇಕ ಕಲಾಭಿಮಾನಿಗಳ ಆದರಕ್ಕೆ ಪ್ರಾಪ್ತವಾಯಿತು. ಅನೇಕರು ಅದನ್ನು ಅಭ್ಯಾಸಮಾಡಿ, ಪ್ರದರ್ಶನ ಮಾಡಿ ಅದಕ್ಕೆ ಒಂದು ಜನಪ್ರಿಯತೆಯನ್ನು ಗಳಿಸಿಕೊಟ್ಟರು. ಈಗ ಈ ಕಲೆಗೆ ಗೌರವವಿದೆ. ಶಾಲಾ ಕಾಲೇಜುಗಳಲ್ಲಿ ಹೆಣ್ಣು ಗಂಡು ಇಬ್ಬರಿಗೂ ಈಗ ನರ್ತನ ಕಲಿಸಲಾಗುತ್ತಿದೆ. ಈ ಶತಮಾನದ ಮೂರನೇಯ ದಶಕದಲ್ಲಿ ಈ ನೃತ್ಯಕಲೆಯ ಪುನರುದ್ಧಾರಕ್ಕೆ ಮತ್ತು ಪ್ರಚಾರಕ್ಕೆ ಶ್ರಮಿಸಿದವರಲ್ಲಿ ಇಬ್ಬರು ಪ್ರಮುಖರು. ಮೊದಲಿಗರು—ಇ. ಕೃಷ್ಣಯ್ಯರ್. ವೃತ್ತಿಯಲ್ಲಿ ವಕೀಲರಾದರೂ ಈ ಕಲೆಯನ್ನು ಅಭ್ಯಾಸಮಾಡಿ ಪ್ರಚಾರ ಮಾಡಿದರು. ಇನ್ನೊಬ್ಬರು ರುಕ್ಮಿಣಿದೇವಿ ಅರುಂಡೇಲ್. ಈಕೆ ಕಲೆಯ ಪುನರುಜ್ಜೀವನಕ್ಕೆ ಬಹಳ ಕೆಲಸಮಾಡಿದರು. ಇದರ ಫಲವಾಗಿ ಕ್ರಮೇಣ ಆಸಕ್ತರಾದವರು ನಾಟ್ಯಗುರುಗಳ ಬಳಿ ಹೋಗಿ ಈ ಕಲೆಯನ್ನು ಕಲಿಯಲು ಪ್ರಾರಂಭಿಸಿದರು. ನೃತ್ಯಕಲೆ ದೇವಾಲಯ ಪ್ರಾಕಾರಗಳಿಂದ ಹೊರಬಂದು ಎಲ್ಲ ನಗರಗಳ ಆಧುನಿಕ ರಂಗವೇದಿಕೆಯ ಮೇಲೆ ಕಾಣಲಾರಂಭವಾಯಿತು. ಮೈಸೂರು ರಾಜ್ಯದಲ್ಲಿ ಅಂತರರಾಷ್ಟ್ರೀಯ ಖ್ಯಾತಿ ಪಡೆದ ರಾಮಗೋಪಾಲ್, ಯು. ಎಸ್. ಕೃಷ್ಣರಾವ್, ಇವರ ಪತ್ನಿ ಚಂದ್ರಭಾಗಾದೇವಿ, ಮುಂತಾದವರು ಸುಮಾರು 1940ರಿಂದ ಈ ಕಲೆಯನ್ನು ಜನಪ್ರಿಯ ಮಾಡಿ ಬೆಳೆಸಿಕೊಂಡು ಬರುತ್ತಿದ್ದಾರೆ. ಇವರುಗಳಲ್ಲದೆ, ದಿವಂಗತರಾದ ಶ್ರೀನಿವಾಸ ಕುಲಕರ್ಣಿಯವರು ಒಬ್ಬ ಪ್ರಸಿದ್ಧ ನಾಟ್ಯಾಚಾರ್ಯರಾಗಿದ್ದು, ಅನೇಕರಿಗೆ ಈ ಕಲೆಯಲ್ಲಿ ಶಿಕ್ಷಣ ನೀಡಿದ್ದರು. ಇವರು ಧಾರವಾಡದ ಬಳಿಯ ಹಂಸಭಾವಿಯಲ್ಲಿ ಇದಕ್ಕಾಗಿ ಒಂದು ಶಾಲೆಯನ್ನೂ ಸ್ಥಾಪಿಸಿದರು. ಕಥಕ್ ಶೈಲಿಯ ನೃತ್ಯದಲ್ಲಿ ಪ್ರಸಿದ್ಧರಾದವರು, ಮೋಹನ್ ಕಲ್ಯಾಣಪೂರ್‌ಕರ್. ಈ ಶೈಲಿಯ ಹಿರಿಯ ನರ್ತಕರೇ ಅಲ್ಲದೆ ತಮ್ಮ ಸಾಮರ್ಥ್ಯದಿಂದ ಆ ಕಲೆಗೆ ಅವರು ಒಂದು ವರ್ಚಸ್ಸನ್ನು ಕೊಟ್ಟಿದ್ದಾರೆ. ಹಾಗೆಯೇ ಕಥಕ್ ನೃತ್ಯದಲ್ಲಿ ಉತ್ತಮ ಶಿಕ್ಷಣ ಪಡೆದು ಪ್ರಸಿದ್ಧರಾಗಿರುವವರು ಮಾಯಾರಾವ್. ಇವರು ಕಥಕ್ ಶೈಲಿ ಒಂದೇ ಅಲ್ಲದೆ ಬ್ಯಾಲೆ ಕಲೆಯಲ್ಲಿಯೂ ರಷ್ಯಾ ದೇಶದಲ್ಲಿ ವಿಶೇಷ ಶಿಕ್ಷಣ ಪಡೆದು ಈ ಎರಡೂ ವಿಭಾಗಗಳಲ್ಲಿಯೂ ಶಿಕ್ಷಣ ನೀಡುತ್ತಿದ್ದಾರೆ.

ನಾಟ್ಯಕಲೆಯ ಪುನರುಜ್ಜೀವನವಾದ ನಂತರ ಈ ಶತಮಾನದ ನಾಲ್ಕನೇಯ ದಶಕದ ವೇಳೆಗೆ ಕರ್ನಾಟಕದಲ್ಲಿ ಅನೇಕ ನಾಟ್ಯ ಗುರುಗಳ ಉದ್ಭವವಾಯಿತು. ಐದನೇಯ ದಶಕದ ವೇಳೆಗೆ ಇನ್ನೂ ಸ್ವಲ್ಪ ಬದಲಾವಣೆಗಳಾದವು. ಕೇಂದ್ರದಲ್ಲಿಯೂ ಮತ್ತು ರಾಜ್ಯಮಟ್ಟದಲ್ಲಿಯೂ ಸಂಗೀತ, ನಾಟಕ, ನೃತ್ಯ ಕಲೆಗಳ ಬೆಳವಣಿಗಾಗಿ ಅಕ್ಯಾಡೆಮಿಗಳು ಸ್ಥಾಪಿತವಾದವು. ಒಳ್ಳೆಯ ನಾಟ್ಯಗುರುಗಳಿಗೂ ಸಂಸ್ಥೆಗಳಿಗೂ ಈ ಅಕ್ಯಾಡೆಮಿಗಳು ಅನುದಾನ ನೀಡಲಾರಂಭಿಸಿದವು. ಕ್ರಮೇಣ ಹಳೆಯ ಮೈಸೂರು ರಾಜ್ಯದಲ್ಲಿಯೂ ಅನಂತರ ಇಡೀ ಕರ್ನಾಟಕದಲ್ಲಿ ಈ ನೃತ್ಯ ಕಲೆಯ ಶಿಕ್ಷಣ ಪ್ರಸಾರ ಕಾರ್ಯಗಳು ಉತ್ತಮಗೊಂಡವು. ಮುಂದೆ ಸರ್ಕಾರವು ಭರತನಾಟ್ಯ ಮತ್ತು ಇತರ ನೃತ್ಯಕಲಾ ಪ್ರಕಾರಗಳಲ್ಲಿ ಜ್ಯೂನಿಯರ್, ಸೀನಿಯರ್ ಮತ್ತು ವಿದ್ವತ್ ಮಟ್ಟದ ಪರೀಕ್ಷೆಗಳನ್ನು ಪ್ರಾರಂಭಿಸಿತು. ಇದರ ಫಲವಾಗಿ ಈ ಕ್ಷೇತ್ರವನ್ನು ಆವರಿಸಿಕೊಂಡಿದ್ದ ಪೊಳ್ಳು ಗುರುಗಳಲ್ಲಿ ಅನೇಕರು ಕ್ಷೇತ್ರದಿಂದ ನಿರ್ಗಮಿಸಿದರು. ಇನ್ನೂ ಕೆಲವರು ನುರಿತ ನಾಟ್ಯ ಗುರುಗಳ ಬಳಿ ಶಿಕ್ಷಣ ಪಡೆದರು. ರಾಜ್ಯದ ಪುನರ್ರಚನೆಯಾದ

ನಂತರ ರಾಜ್ಯದ ಭರತನಾಟ್ಯ ಕಲೆಯ ಸ್ಥಿತಿಯೇ ಬದಲಾಯಿಸಿತು.

ಈ ಶತಮಾನದ ಏಳನೇಯ ದಶಕದ ವೇಳೆಗೆ ಕರ್ನಾಟಕದಲ್ಲಿ, ಅದರಲ್ಲಿಯೂ ಬೆಂಗಳೂರು ಮೈಸೂರು ನಗರಗಳಲ್ಲಿ, ಒಳ್ಳೆಯ ನರ್ತಕ ನರ್ತಕಿಯರನ್ನು ತಯಾರಿಸಬಲ್ಲ ಉಚ್ಚಮಟ್ಟದ ನಾಟ್ಯಗುರುಗಳೂ ಮತ್ತು ಸಂಸ್ಥೆಗಳೂ ಪ್ರವರ್ಧಮಾನಕ್ಕೆ ಬಂದಿದ್ದವು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನೃತ್ಯ, ನಾಟಕ ಸಂಗೀತ ವಿಭಾಗವು ಪ್ರಾರಂಭವಾಯಿತು. ಈ ಹಿನ್ನೆಲೆಯಿಂದ ಕರ್ನಾಟಕದಲ್ಲಿ ಭರತನಾಟ್ಯದ ಭವಿಷ್ಯವು ಬಹು ಆಶಾದಾಯಕವಾಗಿಯೂ ಮತ್ತು ಸಮಾಧಾನಕರವಾಗಿಯೂ ಇದೆ ಎನ್ನಬಹುದು.

ಇಂದು ರಾಜ್ಯದಲ್ಲಿ ಭರತನಾಟ್ಯವೇ ಅಲ್ಲದೆ ಇತರ ನೃತ್ಯ ಪ್ರಕಾರಗಳಲ್ಲಿಯೂ ಶಿಕ್ಷಣ ಕೊಡುವ ಅನೇಕ ಶಾಲೆಗಳಿವೆ. ಇವುಗಳು ನುರಿತ ಹಿರಿಯ ನಾಟ್ಯಾಚಾರ್ಯರುಗಳ ನೇತೃತ್ವದಲ್ಲಿ ನಡೆಯುತ್ತಿವೆ. ಬೆಂಗಳೂರು ನಗರದಲ್ಲಿಯೇ, ಯು. ಎಸ್. ಕೃಷ್ಣರಾಯರಿಂದ 1942ರಲ್ಲಿ ಸ್ಥಾಪಿತವಾದ ನೃತ್ಯಪೀಠ ಮತ್ತು 1973ರಲ್ಲಿ ಸ್ಥಾಪಿತವಾದ ಮಹಾಮಾಯ ನೃತ್ಯ ಪೀಠಗಳೇ ಅಲ್ಲದೆ ವಿ. ಎಸ್. ಕೌಶಿಕ್‌ರವರಿಂದ ಸ್ಥಾಪಿತವಾದ ಸನಾತನ ಕಲಾಕ್ಷೇತ್ರ (1946), ಎಚ್. ಆರ್. ಕೇಶವಮೂರ್ತಿಗಳಿಂದ ಸ್ಥಾಪಿತವಾದ ಕೇಶವ ನೃತ್ಯಶಾಲಾ (1949), ಟಿ. ಎಸ್. ಭಟ್ಟರಿಂದ ಸ್ಥಾಪಿತವಾದ ಮೇನಕಾ ನೃತ್ಯ ಶಾಲಾ (1957), ಭಾರತೀಯ ವಿದ್ಯಾಭವನದ ನೃತ್ಯ ಕೇಂದ್ರ (1969), ಮಾಣಿಕ್ಯಂ ಅವರು ಸ್ಥಾಪಿಸಿದ ಭರತನಾಟ್ಯ ಕಲಾ ಶಾಲೆ, ಲಲಿತಾ ದೊರೈ ಅವರ ಗಣೇಶ ನೃತ್ಯಶಾಲೆ, ಶೇಖರ್‌ರವರ ಸರಸ್ವತಿ ನಾಟ್ಯಶಾಲೆ, ರಾಧಾ ಶ್ರೀಧರ್‌ರವರ ವೆಂಕಟೇಶ್ವರ ನಾಟ್ಯ ಮಂದಿರ, ಲೀಲಾ ರಾಮನಾಥನ್‌ರ ಮೀನಾಕ್ಷಿ ಸುಂದರಂ ಪಿಳ್ಳೆ ನೃತ್ಯಶಾಲೆ, ಸಿ. ರಾಧಾಕೃಷ್ಣರವರ ಚಿತ್ರರಂಜಿನಿ ಕಲಾಕ್ಷೇತ್ರ, ಎಂ. ಎಲ್. ವಿ. ಭರತ ನಾಟ್ಯ ಶಾಲೆ, ವಿ. ಸಿ. ಲೋಕಯ್ಯನವರ ವೆಂಕಟೇಶ್ವರ ನಾಟ್ಯ ಮಂದಿರ, ಗಾನ ನೃತ್ಯ ಕಲಾ ಶಾಲೆ, ನೂಪುರ ನೃತ್ಯ ಶಾಲೆ ಮುಂತಾದವು ಮುಖ್ಯವಾದವು.

ಅದರಂತೆಯೇ ದಾವಣಗೆರೆಯ ನಾಟ್ಯಭಾರತಿ, ಮಂಗಳೂರಿನ ಶ್ರೀ ದೇವಿ ನೃತ್ಯ ಕೇಂದ್ರ, ನೃತ್ಯ ವಿದ್ಯಾಲಯ, ಕಲಾನಿಕೇತನ, ಸುರತ್ಕಲ್ಲಿನ ಗಣೇಶ ನೃತ್ಯ ವಿದ್ಯಾಲಯ, ಬಂಟ್ವಾಳದ ನಾಟ್ಯ ಕಲಾ ಮಂದಿರ, ಪುತ್ತೂರಿನ ನಾಟ್ಯಾಲಯ, ಶಿವಮೊಗ್ಗದ ಶ್ರೀ ನಟರಾಜ ನೃತ್ಯ ನಿಕೇತನ, ಶ್ರೀ ರಾಘವೇಂದ್ರ ನೃತ್ಯ ನಿಕೇತನ, ಮಡಿಕೇರಿಯ ಭಾರತೀಯ ಸಂಗೀತ ನೃತ್ಯ ಕಲಾ ಶಾಲೆ, ಹಾಸನದ ಗಾನ ನೃತ್ಯ ಕಲಾ ಶಾಲೆ, ಸರಸ್ವತಿ ನೃತ್ಯ ಕಲಾ ಶಾಲೆ, ಅರಸೀಕೆರೆಯ ಭಾರತ ಕಲಾನಿಕೇತನ ನೃತ್ಯ ಶಾಲೆ, ಮುಂತಾದವು ರಾಜ್ಯದ ವಿವಿಧ ಭಾಗಗಳಲ್ಲಿ ನೃತ್ಯ ಕಲಾ ಶಿಕ್ಷಣ ನೀಡುತ್ತಿರುವ ಜನಪ್ರಿಯ ಸಂಸ್ಥೆಗಳು. ಈ ಶಾಲೆಗಳೆಲ್ಲಾ ಬಹುತೇಕ ಬೆಂಗಳೂರಿನಲ್ಲಿ ರಾಜ್ಯದ ಸೆಕೆಂಡರಿ ಎಜ್ಯುಕೇಷನ್ ಪರೀಕ್ಷಾ ಮಂಡಳಿಯವರು ನಡೆಸುವ ಭರತನಾಟ್ಯ ಮತ್ತು ಕಥಕ್ಕಳಿ ನೃತ್ಯ ಪ್ರಕಾರಗಳಲ್ಲಿ ಜ್ಯೂನಿಯರ್, ಸೀನಿಯರ್ ಮತ್ತು ವಿದ್ವತ್ ದರ್ಜೆಯ ಪರೀಕ್ಷೆಗಳಿಗೆ ಕೂಡುವ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿವೆ. ಮಂಡಳಿಯು 1967ರಿಂದ ಈ ಪರೀಕ್ಷೆಗಳನ್ನು ನಡೆಸುತ್ತಿದೆ. ಆ ವರುಷ ಈ ಮೂರು ವರ್ಗಗಳಿಗೆ ಒಟ್ಟು 35 ಅಭ್ಯರ್ಥಿಗಳು ಕುಳಿತಿದ್ದರು. 1982ನೇಯ ಇಸವಿಯ ವೇಳೆಗೆ ಈ ಸಂಖ್ಯೆ 162ಕ್ಕೆ ಏರಿತು.

ಕರ್ನಾಟಕದಲ್ಲಿ ನೃತ್ಯ ಕಲೆಯ ಬೆಳವಣಿಗೆಗೆ ಅನೇಕ ಪ್ರಸಿದ್ಧ ಕಲಾವಿದರು ಶ್ರಮಿಸಿದ್ದಾರೆ. ಅವರಲ್ಲಿ ಬಹು ಮಂದಿಯನ್ನು ರಾಜ್ಯ ಸಂಗೀತ ನಾಟಕ ಆಕ್ಯಾಡೆಮಿಯು ಪ್ರಶಸ್ತಿ ಇತ್ತು ಪುರಸ್ಕರಿಸಿದೆ. ಹಾಗೆ ಪುರಸ್ಕೃತರಾದವರು—ಎನ್. ಗುಂಡಪ್ಪ ಮತ್ತು ಕೆ. ವೆಂಕಟಲಕ್ಷ್ಮಮ್ಮ (1961-62), ಎನ್. ಸುಂದರಮ್ಮ (1962-63), ಎಂ. ಜೇಜಮ್ಮ (1963-64), ಚಂದ್ರಕಾಂತಮ್ಮ (1964-65), ಸುಬ್ಬಮ್ಮ (1965-66), ಎಂ. ಸಿ. ವೀರ್ (1966-67), ಮಾಯಾರಾವ್ (1967-68), ಶಾಂತಾರಾವ್ (1968-69), ಶ್ರೀನಿವಾಸ ಕುಲಕರ್ಣಿ ಮತ್ತು ಮೋಹನ ಶಂಕರ್ ಕಲ್ಯಾಣ್‌ಪೂರ್‌ಕರ್ (1970-72), ಚಿನ್ನಮ್ಮ (1972-73), ಯು. ಎಸ್. ಕೃಷ್ಣರಾವ್ ಮತ್ತು ಯು. ಕೆ. ಚಂದ್ರಭಾಗಾದೇವಿ (1978-79), ಎಚ್. ಆರ್. ಕೇಶವಮೂರ್ತಿ (1980-81), ಮಂಗಳೂರು ಯು. ಎಸ್. ಕೃಷ್ಣರಾವ್ (1981-82), ವಿ. ಎಸ್. ಕೌಶಿಕ್ (1982-83), ಇವರಲ್ಲದೆ ರಾಜ್ಯದ ಇತರ ಹೆಸರಾಂತ ಕಲಾವಿದರಲ್ಲಿ ಲೀಲಾರಾಮನಾಥನ್, ಬಿ. ಕೆ. ವಸಂತಲಕ್ಷ್ಮಿ, ಸಿ. ರಾಧಾಕೃಷ್ಣ, ಲಲಿತಾ ಶ್ರೀನಿವಾಸನ್, ರಾಧಾ ಶ್ರೀಧರ್, ಪದ್ಮಿನಿ ರಾಮಚಂದ್ರನ್, ಉಷಾ ದಾತಾರ್ ಇವರುಗಳನ್ನು ಇಲ್ಲಿ ಹೆಸರಿಸಬಹುದು. ಇವರಲ್ಲಿ ಕೆಲವರು ಅಂತರರಾಷ್ಟ್ರೀಯ ಮಟ್ಟದಲ್ಲಿಯೂ ಖ್ಯಾತರಾಗಿದ್ದಾರೆ.

## ರಂಗಭೂಮಿ

ಬರಹಕ್ಕಿಂತ ಮುಂಚೆ ಮಾತು, ಮಾತಿಗೂ ಮುಂಚೆ ಗೀತ, ಅದಕ್ಕೂ ಮುಂಚಿತವಾಗಿ ಅಣಕುದನಿ ಬಳಕೆಗೆ ಬಂತು. ಪ್ರಪಂಚದ ಬೇರೆ ಬೇರೆ ಜನಾಂಗಗಳ ರಂಗಭೂಮಿಯ ಸ್ಥೂಲವಾದ ಇತಿಹಾಸವೇ ಇದು. ಕರ್ನಾಟಕವೇನೂ ಇದಕ್ಕೆ ಹೊರತಾಗುವುದಿಲ್ಲ. ಆದರೆ ಕರ್ನಾಟಕದಲ್ಲಿ ಅಣಕುದನಿ, ಗೀತ ಮತ್ತು ಮಾತಿಗೂ, ಬರಹಕ್ಕೂ ಐತಿಹಾಸಿಕ ಕಾರಣಗಳಿಂದಾಗಿ

ಕಾಲದ ಪರಿಸ್ಥಿತಿಯಲ್ಲಿ ಇತರ ಜನಾಂಗಗಳಿಗಿಂತ ಅಂತರ ಕಂಡು ಬರುತ್ತದೆ.

ಕರ್ನಾಟಕದ ರಂಗಭೂಮಿಯ ಇತಿಹಾಸದಲ್ಲಿ ಬರಹ ರೂಪದಲ್ಲಿ ದೊರೆತ ಮೊದಲ ನಾಟಕವು 17ನೇಯ ಶತಮಾನದಷ್ಟು ಈಚಿನದಾಗಿರುತ್ತದೆ. ಮೈಸೂರರಸರ ಆಸ್ಥಾನಕವಿಯಾಗಿದ್ದ ಸಿಂಗರಾರ್ಯನು ಬರೆದ ಮಿತ್ರವಿಂದಾ ಗೋವಿಂದವೇ ಆ ಕೃತಿ. ಈ ನಾಟಕ ಕೂಡ ಮೂಲ ರಚನೆಯಾಗಿರದೆ ಶ್ರೀಹರ್ಷನು ಬರೆದ ರತ್ನಾವಲೀ ಎಂಬ ಕೃತಿಯ ರೂಪಾಂತರವೆಂಬುದನ್ನು ನೆನಪಿನಲ್ಲಿಡಬೇಕಾಗಿದೆ. ಈ ಸಂಗತಿಯು ಕನ್ನಡದಲ್ಲಿ ಬರೆದ ನಾಟಕವು ಮೂರು ಶತಮಾನಗಳಷ್ಟು ಹಿಂದೆಯಷ್ಟೇ ತಡವಾಗಿ ಕಾಣಿಸಿಕೊಂಡಿತೆಂಬುದನ್ನು ವಿವರಿಸುತ್ತದೆ. ಕನ್ನಡ ಪದ್ಯ ಕಾವ್ಯದ ಪರಿಶೀಲನೆಯಿಂದ (19ನೇ ಶತಮಾನದವರೆಗೂ ಹೆಸರಿಸಬಹುದಾದ ಗದ್ಯ ಕೃತಿಗಳ ರಚನೆಯೇನೂ ಇರಲಿಲ್ಲ) ಕನ್ನಡವನ್ನು ಅದರ ಪ್ರಾರಂಭ ಕಾಲದಿಂದಲೂ ಸಂಸ್ಕೃತವು ಆಳುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಅದರ ವ್ಯಾಕರಣ ಮತ್ತು ಕಾವ್ಯ ಮೀಮಾಂಸೆಯೂ ಸಂಸ್ಕೃತದಿಂದ ರೂಪಗೊಂಡಿದ್ದು ಪ್ರತೀಯೊಬ್ಬ ಕನ್ನಡ ಕವಿಯು ತನ್ನನ್ನು ಉಭಯ ಭಾಷಾ ಚಕ್ರವರ್ತಿಯೆಂದು ಕರೆದುಕೊಳ್ಳಲು ಹೆಮ್ಮೆಪಡುತ್ತಿದ್ದನು. ಕಾವ್ಯ ರಚನೆಯಿಂದ ಕವಿಯ ಪಾಂಡಿತ್ಯವು ಎದ್ದುಕಾಣುತ್ತಿದ್ದುದರಿಂದ ಅವರೆಲ್ಲರೂ ಪದ್ಯ ಕಾವ್ಯವನ್ನೇ ರಚಿಸಿದ್ದಾರೆ. ಆಗ ಪ್ರತೀಯೊಬ್ಬ ವಿದ್ಯಾವಂತನಿಗೂ ಸಂಸ್ಕೃತ ನಾಟಕವು ಅರ್ಥವಾಗುತ್ತಿದ್ದುದರಿಂದ ಸಿಂಗರಾರ್ಯನವರೆಗೂ ಯಾವ ಕವಿಯೂ ನಾಟಕ ರಚನೆಯಲ್ಲಿ ಆಸಕ್ತನಾಗಿರಲಿಲ್ಲ. ಸಂಸ್ಕೃತ ನಾಟಕಕಾರನು ಬಳಸುತ್ತಿದ್ದ ಪ್ರಾಕೃತಗಳಿಗೆ ಬದಲಾಗಿ ಬೇರೆ ಭಾಷೆಗಳಿರದಿದ್ದಾಗ ಸಂಸ್ಕೃತ ನಾಟಕಗಳ ರೂಪದಲ್ಲಿ ಒಂದು ಕನ್ನಡ ನಾಟಕವನ್ನು ರಚಿಸುವುದು ಹೇಗೆ ತಾನೇ ಸಾಧ್ಯ ?

ಅದೂ ಅಲ್ಲದೆ ನಾಟಕವನ್ನೇ ಆಗ ಪ್ರಾಕೃತವೆಂದೂ (ಅಸಭ್ಯವೆಂಬರ್ಥದಲ್ಲಿ) ಪರಿಗಣಿಸುತ್ತಿದ್ದರು. ಕ್ರಿ.ಶ. 9ನೇಯ ಶತಮಾನದಷ್ಟು ಹಿಂದೆ ನಾಟಕಗಳ ಉಲ್ಲೇಖವಿದ್ದು, ಅದನ್ನು ದೇಶೀ (ಸಂಸ್ಕೃತದ ಮಾರ್ಗಕ್ಕೆ ವಿರುದ್ಧ ಅಂದರೆ ಅನಾಗರಿಕ) ಎಂದು ಕರೆಯುತ್ತಿದ್ದರು. ಆದುದರಿಂದ ದೇಶೀ ಹಗರಣಗಳು (ಬಹುಶಃ ಸಂಸ್ಕೃತದ ಪ್ರಕರಣ ಎಂಬ ದಶರೂಪಕಗಳಲ್ಲಿ ಒಂದು ಬಗೆ) ಎಂಬುದನ್ನು ಓದುತ್ತೇವೆ. ನಂತರ ಕುಮಾರವ್ಯಾಸ ಕವಿಯು 'ನಾಡಾಡಿಗಳ ನಾಟಕ'ವೆಂದು ಈ ಜನಸಾಮಾನ್ಯರ ನಾಟಕವನ್ನು ಕರೆದಿರುತ್ತಾನೆ. ಲಿಖಿತ ದಾಖಲೆಗಳು ಇಲ್ಲದಿದ್ದರೂ ಮೇಲಿನ ಉದಾಹರಣೆಗಳಿಂದ ಜನಸಾಮಾನ್ಯರ ರಂಗಭೂಮಿಯು 9ನೇಯ ಶತಮಾನಕ್ಕೂ ಹಿಂದಿನಿಂದ ಇದ್ದಿರಬೇಕೆಂಬುದು ಖಚಿತವಾಗುತ್ತಿದೆ. ನೃಪತುಂಗನು 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದು ಹೇಳಿರುವಂತೆ ಅದು ಇದ್ದಿರಬೇಕೆಂಬುದು ಸ್ಪಷ್ಟ. (ವಿದ್ಯಾವಂತಿಕೆಯು ಸ್ವತಂತ್ರ ರಚನೆಗೆ ಬಿಟ್ಟುಕೊಡುವುದಿಲ್ಲವೆಂಬುದನ್ನು ಕಳೆದ 150 ವರ್ಷಗಳಿಂದೀಚೆಗೆ ಮಾತ್ರ ಕಾಣುತ್ತೇವೆ). ಆದರೂ ಸಹ ಅಣಕು ದನಿಯು ಮಾನವನ ಹುಟ್ಟಿನಿಂದಲೇ ಬಂದಿರುತ್ತದೆ ಮತ್ತು ಅದರಿಂದ ಅವಿಚ್ಛಿನ್ನವಾದ ಮನರಂಜನೆಗೂ ಅವಕಾಶವಿರುತ್ತದೆ. ಮಗುವು ಹಿರಿಯರ ಅನುಕರಣೆಯಿಂದ ಸಂತೋಷಪಡುವುದಲ್ಲದೆ ಆ ಅನುಕರಣೆಯಿಂದ ವಿದ್ಯೆಯನ್ನೂ ಪಡೆಯುತ್ತದೆ. ಇದರಿಂದ ಇದರ ಹಲವು ಬಗೆಗಳಿಂದಾಗಿ ರಂಗಭೂಮಿಯು ಹುಟ್ಟಿರಬೇಕು. ಅದನ್ನೇ 'ಆಟ' ಎಂದಿದ್ದಾರೆ; ಅದು ಆಡುವ ಆಟವೂ ಆಗಿರುತ್ತದೆ. ಹಾಗಾಗುವುದೆಲ್ಲಾ ಸಂತೋಷಕ್ಕೇ ಹೊರತು ಗಂಭೀರವಾಗಿರುವುದಕ್ಕಲ್ಲ.

ಇಂದಿಗೂ ಅನೇಕ ಶತಮಾನಗಳಿಂದ ಉಳಿದು ಬಂದ ಹಲವು 'ಆಟ'ಗಳನ್ನು ಕಾಣುತ್ತೇವೆ. ಒಂದು ಕಡೆ ಸಂಪರ್ಕದ ಅಭಾವದಿಂದ ಮತ್ತು ಭೌಗೋಳಿಕ ಸನ್ನಿವೇಶಗಳ ಕಾರಣದಿಂದ ಹಲವು ಬಗೆಯವಾಗಿ ಅವು ಕಾಣುತ್ತವೆ. ಆದರೂ ಅವುಗಳನ್ನು ನಾವು ರಂಗಭೂಮಿಯ ಉಪಭಾಷೆಗಳೆಂದು (ಅಥವಾ ಉಪ ಪ್ರಕಾರಗಳೆಂದು) ಕರೆಯಬಹುದು. ಪ್ರಾರಂಭದಲ್ಲಿ ಬಾಹ್ಯ ಅನುಕರಣೆಯನ್ನು ಮೀರಿದ ಪ್ರಯತ್ನಗಳಿದ್ದಿರಲಾರದಾದರೂ (ಅದರಿಂದ ನೃತ್ಯ ಕಲೆಯು ಹುಟ್ಟಿರಬೇಕು). ಮುಂದೆ ಹಕ್ಕಿಗಳು, ಮೃಗಗಳು, ಗಾಳಿಗಳು ಮತ್ತು ಬಿರುಗಾಳಿಗಳು ಅನುಕರಣೆಗೆ ಬಂದವು. ಮತ್ತು ಇವು ದನಿಯ ಅನುಕರಣೆಯಾಗಿದ್ದಿರಬೇಕು. (ಇದರಿಂದ ಸಂಗೀತ ಹುಟ್ಟಿರಬೇಕು). ಪ್ರಾರಂಭದಲ್ಲಿ ಮನರಂಜನೆಯೊಂದೇ ಉದ್ದೇಶವಾಗಿತ್ತು. ಆದರೆ ಮನುಷ್ಯನು ವ್ಯವಸಾಯದಲ್ಲಿ ತೊಡಗಿದಾಗ ಪ್ರಕೃತಿಗೆ ಮುಖಾಮುಖಿಯಾಗಬೇಕಾಯಿತು. ಮಳೆ, ಗಾಳಿ, ಸೂರ್ಯ ಮತ್ತು ಚಂದ್ರ ಇವುಗಳ ಮೇಲೆ ಅವಲಂಬಿತನಾಗಬೇಕಾಯಿತು. ಆದ್ದರಿಂದ ಹುಲುಸಾದ ಬೆಳೆಗೆ ಈ ಶಕ್ತಿಗಳನ್ನು ಮನರಂಜನೆಯಿಂದ ಮೆಚ್ಚಿಸಬಹುದೆಂದು ಯೋಚನೆ ಮೂಡಿತು. ಇಂದಿಗೂ ನಾಡಾಡಿಗಳ ನಾಟಕವು ಸಾಂಪ್ರದಾಯಿಕವಾಗಿ ಒಂದು ದೇಗುಲದಲ್ಲಿ ಅಥವಾ ಅದರ ಬಳಿಯಲ್ಲಿ ಮತ್ತು ಸುಗ್ಗಿಯಲ್ಲಿ ಪ್ರದರ್ಶಿತವಾಗುತ್ತಿದೆ.

ರಾಮಾಯಣ ಮತ್ತು ಮಹಾಭಾರತದ ಕಥೆಗಳು ತೋಂಡಿ ಸಂಪ್ರದಾಯದಲ್ಲಿ ದೊರಕಿದಾಗ ಕನ್ನಡ ಜನರ ರಂಗಭೂಮಿಯಲ್ಲಿ ಕ್ರಾಂತಿಯುಂಟಾಯಿತು. ಪ್ರಕೃತಿಯನ್ನು ವಿವರಿಸಲು ಒಂದು ಪೂರ್ಣ ಪೌರಾಣಿಕ ಕತೆ, ಸಂಘಟಿತ ಧರ್ಮ, ಮನುಷ್ಯ ಜೀವನಕ್ಕೊಂದು ಉದ್ದಿಶ್ಯ, ಮುಕ್ತಿಯನ್ನು ಗಳಿಸುವುದಕ್ಕೆ ಒಂದು ಗುರಿ, ಇವಿಷ್ಟು ಈ ಮಹಾ ಕಾವ್ಯಗಳಿಂದ ದೊರಕಿದುವು. ನಮ್ಮ ಅನಕ್ಷರಸ್ಥ ಸಾಮಾನ್ಯರ ಕಲ್ಪನೆಯ ಮೇಲೆ ಈ ಕೃತಿಗಳ ಹಿಡಿತವನ್ನು ಇವುಗಳಿಂದ ತೆಗೆದ ವಸ್ತುಗಳಿಂದ ಕೂಡಿದ ನಾಟಕಗಳಲ್ಲಿ ಇಂದಿಗೂ ಕಾಣುತ್ತೇವೆ. ಹಳ್ಳಿಯ ಪಂಡಿತನು ಕಥೆಯನ್ನು

ಹೇಳುವುದೂ ಇತರರು ಇದನ್ನು ಅಭಿನಯಿಸುವುದೂ ಸಾಮಾನ್ಯ
ವಾಗಿದೆ. ಹೀಗೆ ಯಕ್ಷಗಾನದ ಭಾಗವತ ಮತ್ತು ಹಿಮ್ಮೇಳಗಳು
ಈ ನಾಟಕಗಳ ಲಕ್ಷಣಗಳಾಗಿವೆ. ಮೊದಲು ಸಂಭಾಷಣೆ
ಯೆಂಬುದು ಇರಲಿಲ್ಲ ; ಆದರೂ ಕೆಲವರು ನಟರು ಕತೆಯ ವಿವರ
ವನ್ನು ತಿಳಿದವರಾಗಿ ತಾವಾಗಿಯೇ ಸಂಭಾಷಣೆಯನ್ನು ಸೃಷ್ಟಿ
ಮಾಡುತ್ತಿದ್ದುದುಂಟು. ಅನಕ್ಷರತೆಯ ಕಾರಣ ನೃತ್ಯ ಮತ್ತು
ಗೀತಗಳು ಮುಖ್ಯವಾಗಿದ್ದಿರಬೇಕಾಯಿತು. ಕ್ರಮೇಣ ನಟರು
ದೇವತೆಗಳಾಗಿ ಅಥವಾ ರಾಕ್ಷಸರಾಗಿ ತಮ್ಮ ಪ್ರಸಾದನವನ್ನು
ತಾವೇ ಮಾಡಿಕೊಂಡು, ಆ ಮೂಲಕ ಪಾತ್ರಗಳ ಬೆಲೆಯನ್ನು
ಹೆಚ್ಚಿಸಿದರು.

ನಮ್ಮ ಸಂಪ್ರದಾಯದಲ್ಲಿ ಮನುಷ್ಯ ಮತ್ತು ಪ್ರಕೃತಿಗಳ
ನಡುವೆ ಹೊಂದಾಣಿಕೆಯನ್ನು ತರುವ ಉದ್ದಿಶ್ಯವುಳ್ಳ ಕೆಲವು
ಆಟಗಳಿವೆ. ಉದಾಹರಣೆಗೆ ಕಿಳ್ಳಿಕೇತರ ಆಟ ಎಂಬುದಿದ್ದು,
ಇದರ ಉದ್ದೇಶ ಸಾಕಷ್ಟು ಮಳೆ ತರಿಸುವುದು. ಈ ಆಟವನ್ನು
ತೊಗಲುಗೊಂಬೆಗಳ ನೆರಳಿನಿಂದ ತೋರಿಸಲಾಗುವುದು. ದಾಸರ
ಆಟ ಎಂಬ ಮತ್ತೊಂದು ಬಗೆಯ ಆಟವಿದೆ. ಇದರಲ್ಲಿ ಗಂಡು–
ಹೆಣ್ಣು ಕೂಡಿ ಅಭಿನಯಿಸುತ್ತಾರೆ. ಆದರೆ ಇವರು ಹಿಂದೆ
ಬಹಿಷ್ಕೃತವಾಗಿದ್ದ ಜಾತಿಯವರು. ಹಳ್ಳಿಯಿಂದ ಹಳ್ಳಿಗೆ
ಪ್ರಯಾಣಮಾಡುತ್ತಾ ಹಗಲಿನಲ್ಲಿ ದೈಹಿಕ ಶ್ರಮದ ದುಡಿಮೆ
ಮಾಡುತ್ತಾ ರಾತ್ರಿ ವೇಳೆ ಸಂಗೀತಾಭಿನಯದ ಆಟವಾಡುತ್ತಾರೆ.
ಆದರೆ ಯಕ್ಷಗಾನ (ಕಡಲ ತೀರದಲ್ಲಿ) ಮತ್ತು ಉತ್ತರ
ಕರ್ನಾಟಕದ ಬಯಲಾಟ ಮತ್ತು ಕೃಷ್ಣಪಾರಿಜಾತವೆಂಬ ಆಟ
ಗಳೂ ಇವುಗಳಲ್ಲಿ ಹೆಚ್ಚು ಮುಖ್ಯವಾದುವು. ಇವೆಲ್ಲವೂ ಮಹಾ
ಕಾವ್ಯ ಮತ್ತು ಭಾಗವತ ಪುರಾಣದಿಂದ ಆಯ್ದ ವಸ್ತುಗಳಿಂದ
ಕೂಡಿವೆ. (ಪಾರಿಜಾತ ಆಟವನ್ನು ಹೆಚ್ಚಾಗಿ ಮುಸಲ್ಮಾನ
ನಟರು ಅಭಿನಯಿಸುತ್ತಾರೆ. ನಬೀಸಾಹೇಬ್ ಎಂಬ ಪ್ರಸಿದ್ಧ
ಆಟಗಾರನಿಂದಾಗಿ ಇದನ್ನು 'ನಬೀ ಆಟ'ವೆಂದೂ ಕರೆಯುವು
ದುಂಟು). ಇವುಗಳಲ್ಲೆಲ್ಲಾ ಸಂಗೀತ ಮತ್ತು ನೃತ್ಯವು ಒಂದು
ಅವಿಭಾಜ್ಯ ಅಂಗವಾಗಿರುತ್ತದೆ. ನಗರೀಕರಣದ ಬೆಳವಣಿಗೆ
ಯಿಂದಾಗಿ ಸಾಂಪ್ರದಾಯಿಕವಾದ ಜಾನಪದ ರಂಗಭೂಮಿಯು
ವೇಗವಾಗಿ ಕಣ್ಮರೆಯಾಗುತ್ತಿರುವುದಂತೂ ದುರದೃಷ್ಟಕರವಾಗಿದೆ.
ನಗರೀಕರಣದ ಬೆಳವಣಿಗೆಯಿಂದಾಗಿ ಕರ್ನಾಟಕದಲ್ಲಿ ತನ್ನದೇ ಆದ
ಲಕ್ಷಣಗಳಿಂದ ಕೂಡಿದ ಒಂದು ನವೀನ ರಂಗಭೂಮಿಯು ರೂಪ
ತಾಳಿದೆ. ಆದರೂ 18ನೇಯ ಶತಮಾನದಿಂದ ಈಚೆಗೆ ನಮ್ಮ
ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ಸಂಬಂಧದಿಂದಾಗಿ, ಅದರಲ್ಲೂ
ಬ್ರಿಟಿಷರ ಆಕ್ರಮಣದಿಂದಾಗಿ ಒಂದು ಬದಲಾಗುತ್ತಿರುವ ಗುಣ
ವುಳ್ಳ 'ರಂಗ' ಉಂಟಾಯಿತು. ಇತರ ಆಕ್ರಮಣಕಾರರಂತೆ
ಇಂಗ್ಲೀಷರು ಇಲ್ಲಿಯ ಸ್ವದೇಶಿಗಳೊಡನೆ ಬೆರೆಯಲೂ ಇಲ್ಲ ;
ಇಲ್ಲಿ ಉಳಿಯಲೂ ಇಚ್ಛಿಸಲಿಲ್ಲ. ಅವರು ತಮ್ಮದೇ ಆದ
'ಮನೆಯ ವಾತಾವರಣ'ವನ್ನು ನಿರ್ಮಿಸಿಕೊಳ್ಳುವುದರಲ್ಲಿ ತೊಡಗಿ
ಭಾರತಕ್ಕೆ ತಮ್ಮ ದೇಶದಿಂದ ನಾಟಕ ಸಂಸ್ಥೆಗಳನ್ನು ಬರಮಾಡಿ
ಕೊಂಡು ಷೇಕ್ಸ್‌ಪಿಯರ್ ಮತ್ತು ಇತರರ ಇಂಗ್ಲಿಷ್ ನಾಟಕ
ಗಳನ್ನು ಆಡಿಸಿದ್ದರು. ಕೆಲವೇ ಭಾರತೀಯರಿಗೆ ಪ್ರವೇಶಾವಕಾಶ
ವನ್ನು ನೀಡುತ್ತಿದ್ದರು. ಆದರೆ ಹೀಗೆ ಅವಕಾಶವನ್ನು ಪಡೆದು
ಕೊಂಡ ಕೆಲವೇ ಭಾರತೀಯರ ಮನಸ್ಸಿಗೆ ಪ್ರದರ್ಶನವು ಮುಟ್ಟಿದ
ಕಾರಣ ಒಬ್ಬ ರಷ್ಯದ ಪ್ರಜೆಯ ನೆರವಿನಿಂದ ಭಾರತೀಯ ರಂಗ
ಭೂಮಿಯನ್ನು ಪ್ರಾರಂಭ ಮಾಡಿದರು. ಬಹುಶಃ ಈ ವಿಷಯದ
ಹಿರಿಮೆಯು (ನಿಸ್ಸಂಶಯವಾಗಿ ಉದ್ಘಟಿತನವಾಗಿದ್ದರೂ) ಕೆಲವು
ಪ್ರೇಕ್ಷಕರನ್ನು ಸೆಳೆದುಕೊಂಡಿತು. ನಾಟಕದ ಪ್ರದರ್ಶನದಿಂದ
ಹಣ ಸಂಗ್ರಹದ ಸಾಧ್ಯತೆ ಗ್ರಹಿಕೆಯಾದ ಕೂಡಲೇ ಒಂದು ಸಂಸ್ಥೆ
ಯನ್ನು ಸ್ಥಾಪಿಸಲು ಅವಕಾಶವಾಯಿತು. ಆಗ ಮೊದಮೊದಲಿಗೆ
ಇಂಗ್ಲಿಷ್ ನಾಟಕಗಳ ಅನುವಾದಗಳನ್ನು ಪ್ರದರ್ಶಿಸಲಾಯಿತು.
ಕ್ರಮೇಣ ನಮ್ಮ ಪ್ರೇಕ್ಷಕರಿಗೆ ಏನು ಬೇಕೆಂಬುದನ್ನು ನಮ್ಮ
ಜಾನಪದ ರಂಗಭೂಮಿಯಿಂದ ತಿಳಿದು ನೃತ್ಯ ಮತ್ತು ಸಂಗೀತ
ಗಳಿಂದ ತುಂಬಿದ ಕತೆಗಳನ್ನು ಬಳಸಲಾಯಿತು. ಹೀಗೆ ಮೊಟ್ಟ
ಮೊದಲ ನಾಟಕ ಸಂಸ್ಥೆಯನ್ನು ಪಾರ್ಸೀ ಕಂಪನಿ ಎಂದು
ಕರೆಯಲಾಯಿತು.

ಈ ರಂಗಭೂಮಿಯ ಎದ್ದುಕಾಣುವಂತಹ ಪ್ರದರ್ಶನಗಳು,
ವ್ಯಾಪಾರ-ಲಾಭಗಳು ಇತರರನ್ನೂ ಆಕರ್ಷಿಸಿದ ಕಾರಣ ದೇಶದ
ಉಳಿದೆಡೆಗಳಲ್ಲಿ ಸಾಧ್ಯವಾದಂತೆ ಕರ್ನಾಟಕದಲ್ಲೂ ವ್ಯಾಪಾರ
ಧರ್ಮದ 'ಕಂಪನಿ'ಗಳು ಹುಟ್ಟಿಕೊಂಡವು. ಕೆಲವು ವೇಳೆ ದೇಶೀ
ಅರಸರೂ ನವಾಬರೂ ತಮ್ಮದೇ ಆದ ಸ್ವಂತ ಸಂಸ್ಥೆಗಳನ್ನು
ಹೊಂದಿದ್ದರು. ಕರ್ನಾಟಕದಲ್ಲಿ ಅಂಥ 'ಕಂಪನಿ'ಗಳು ಸುಮಾರು
100 ವರ್ಷಗಳಿಗೂ ಹೆಚ್ಚು ಕಾಲ ಅಸ್ತಿತ್ವದಲ್ಲಿದ್ದವು. ಅದರಿಂದ
ರಂಗಭೂಮಿಗಂತೂ ಒಂದು ರೀತಿ ಅನಿಶ್ಚಿತ ಕೊಡುಗೆಯು ದೊರಕಿ
ದಂತಾಯಿತು. ಇದರಿಂದ ಬಹುಕಾಲ ಉಳಿಯಬಲ್ಲ ನಾಟಕ
ಪ್ರೇಮಿಗಳನ್ನು ಸೃಷ್ಟಿಸಲು ಮತ್ತು ಬೆಳೆಸಿ ಕಾಪಾಡಿಕೊಳ್ಳಲು
ಸಾಧ್ಯವೇನೋ ಆಯಿತು. ಹೊಸಬರಾಗಿದ್ದ ನಗರ ಪ್ರಜೆಗಳು
ಹೊರನೋಟದಲ್ಲಿ ಜನಜೀವನಕ್ಕೆ ಸಮೀಪವಾಗಿದ್ದ ಒಂದು 'ರಂಗ
ಭೂಮಿ'ಯನ್ನು ಉತ್ತೇಜಿಸಿದರು. ಇಲ್ಲಿ 'ರಂಗಭೂಮಿ'ಯು
ಮೊದಲೇ ಇದ್ದುದಾಗಿ ಪ್ರತಿಭಾವಂತ ನಟರನ್ನೂ, ಹಾಡುವ
ವರನ್ನೂ ಉತ್ತೇಜಿಸಿತ್ತು. ಹಲವು ಸಂದರ್ಭಗಳಲ್ಲಿ ಇದು
ಸಾಮಾಜಿಕ ಮತ್ತು ರಾಜಕೀಯ ಉದ್ದೇಶಗಳಿಗೆ ತಕ್ಕಂಥ ಸಮ
ಕಾಲಿಕ ಸಂದರ್ಭಗಳನ್ನೂ ಸೆಳೆದುಕೊಳ್ಳಬಲ್ಲದಾಯಿತು ; ಅದೇ
ವೇಳೆಗೆ ಈ ರಂಗಭೂಮಿಯು ಜನತೆಯ ರಂಗಭೂಮಿಯಾಗುವ
ಒಳಸತ್ವವನ್ನೇನೂ ಪಡೆದುದಾಗಿರಲಿಲ್ಲ. ಜನಪದ ರಂಗಭೂಮಿ
ಯಲ್ಲಿದ್ದಂತೆ ವ್ಯಾಪಾರಿ ಸಂಸ್ಥೆಗಳ ರಂಗಭೂಮಿಯಲ್ಲೂ ಕಲಾ
ವಿದರು ಅನಕ್ಷರಸ್ಥರೇ ಆಗಿದ್ದರು. ಹಳ್ಳಿಯ ಕಲಾವಿದನಿಗೆ ರಂಗ
ಭೂಮಿಯು ಒಂದು ಮೀಸಲಾದ ಧಾರ್ಮಿಕ ಗುರಿಯನ್ನು
ಹೊಂದಿತ್ತು. ಆದರೆ ವ್ಯಾಪಾರಿ ಸಂಸ್ಥೆಯಲ್ಲಿ ಆತನಿಗೆ ಸಂಬಳ

ವಷ್ಟೇ ಮುಖ್ಯವಾಗಿತ್ತು. ಹಳ್ಳಿಯ ನಾಟಕಗಳಲ್ಲಿ ಬಹುಪಾಲು ಪೌರಾಣಿಕ ವಸ್ತುಗಳಿದ್ದು ಅಲ್ಲಿಯ ಪಾತ್ರಗಳನ್ನು ಅಂದಂದಿಗೆ ಪುನರ್‌ನಿರ್ಮಾಣ ಮಾಡಬೇಕಾಗಿದ್ದಿತು. ಆದರೆ ಕಂಪನಿಯ ನಾಟಕಗಳಲ್ಲಿ ವಸ್ತುವು ಪೌರಾಣಿಕವಾಗಿದ್ದರೂ ಮನರಂಜನೆಯೇ ಗುರಿಯಾಗಿದ್ದಿತಲ್ಲದೆ ಅದರ ನೈತಿಕ ಅಂಶವು ಸಂಪೂರ್ಣವಾಗಿ ಇಲ್ಲವಾಗಿತ್ತು. ಒಂದು ಶತಮಾನದಷ್ಟು ಕಾಲ ಬದುಕಿದ್ದ ಈ ಕಂಪನಿಗಳು ಕೇವಲ ಅತಿರೇಕ ನಾಟಕಗಳನ್ನು ಒದಗಿಸಿದ್ದುವು. ಮತ್ತು ಆಕರ್ಷಣೆಯ ವಿಶೇಷ ಸಾಧನೆಗಳಾಗಿ ರಂಗದ ಮೇಲಿನ ಜೋಡಣೆಗಳೂ (ಸೆಟ್ಸ್) ವಸ್ತ್ರಾಲಂಕಾರಗಳೂ ಅರ್ಥಹೀನ ಐಸಿರಿಯನ್ನೋ ಅತಿ ವೈಭವದ ಅಸ್ವಾಭಾವಿಕತೆಯನ್ನೋ ಅಥವಾ ಬರಿಯ ದಡ್ಡತನವನ್ನೋ ಒಳಗೊಂಡಿರುತ್ತಿದ್ದುವು. ನಗರದ ಪ್ರೇಕ್ಷಕರು ತಮ್ಮ ವಿದ್ಯಾಭ್ಯಾಸದ ಹೆಚ್ಚಳದಿಂದ ಈ ಕಂಪನಿಗಳಿಂದ ದೂರ ದೂರ ಸರಿಯತೊಡಗಿದರು. ಆದರೂ ಕರ್ನಾಟಕ ರಂಗಭೂಮಿಯ ಇತಿಹಾಸದಲ್ಲಿ ವ್ಯಾಪಾರಿ ಸಂಸ್ಥೆಗಳು ಒಂದು ಪ್ರಮುಖ ಸ್ಥಾನವನ್ನು ಗಳಿಸಿಕೊಂಡಿವೆ. ಗುಬ್ಬಿ ಕಂಪನಿಯಂಥ ಸಂಸ್ಥೆಯು ಕರ್ನಾಟಕದಲ್ಲಿ ಮತ್ತು ಅಕ್ಕಪಕ್ಕದ ರಾಜ್ಯಗಳಲ್ಲಿ ಯಶೋದಾಯಕವಾಗಿ ಬಳಸಿ ಬಂದುದಲ್ಲದೆ ಕಾಲಕಾಲದ ಬದಲಾವಣೆಗಳನ್ನೂ ಎದುರಿಸಿ ಇಂದಿಗೂ ಉಳಿದುಕೊಂಡಿದೆ. ಕರ್ನಾಟಕದ ಪ್ರಮುಖ ಕಂಪನಿಗಳ ಪಟ್ಟಿಯು ಬಹು ದೊಡ್ಡದಾಗುತ್ತದೆ. ಉತ್ತರ ಕರ್ನಾಟಕದಲ್ಲಿ ಕೊಣ್ಣೂರು ಕಂಪನಿ, ಶಿರಹಟ್ಟಿ ಕಂಪನಿ, ವಿಶ್ವಗುಣಾದರ್ಶ ಕಂಪನಿ, ಮೊದಲಾದುವಲ್ಲಿ ಯೆಲ್ಲಮ್ಮ, ಗುರುಸಿದ್ದಪ್ಪ, ವೆಂಕೋಬರಾಯರು, ಗರೂಡ ಸದಾಶಿವರಾಯರು, ಮಾಸ್ತರ್ ವಾಮನರಾಯರು ಮತ್ತು ಇನ್ನೂ ಅನೇಕ ಸುಪ್ರಸಿದ್ಧ ನಟರು ಮತ್ತು ಹಾಡುಗಾರರಿದ್ದರು. ಮೈಸೂರಿನ ಭಾಗದಲ್ಲಿ ವರದಾಚಾರ್ಯ, ಗುಬ್ಬಿ ವೀರಣ್ಣ, ಮಹಮದ್ ಪೀರ್, ಮಳವಳ್ಳಿ ಸುಂದರಮ್ಮ, ಹಿರಣ್ಣಯ್ಯ ಮೊದಲಾದ ಮಹಾನ್ ಕಲಾವಿದರೇ ಇದ್ದರು. ಈ ಕಲಾವಿದರು, ಕೇವಲ ತೆಳುವಾದ 'ಕತೆ', ಅಸಹಜ ಸಂಭಾಷಣೆಗಳ ಮತ್ತು ಅತಿರೇಕದ ಸಂದರ್ಭಗಳಲ್ಲಿ ಕೂಡ ತಮ್ಮ ಮಂಜುಳಗೀತ ಲಹರಿಯಿಂದ ಮತ್ತು ಅಸಾಂದರ್ಭಿಕ ಹಾಸ್ಯದಿಂದ ಪ್ರೇಕ್ಷಕರನ್ನು ಹಿಡಿದಿಟ್ಟಿರುತ್ತಿದ್ದರು. ಇಷ್ಟಾದರೂ ಪ್ರಗತಿದಾಯಕವಾಗಿದ್ದ ಸಾಮಾಜಿಕ ಪ್ರಜ್ಞೆಗೆ ಸ್ಪಂದಿಸಲಾರದೆ ಮನರಂಜನೆಯ ವಿಷಯದಲ್ಲಿ ಸಿನಿಮಾಗಳೊಡನೆ ಯಶಸ್ವಿಯಾಗಿ ಸ್ಪರ್ಧಿಸಲಾರದೆ ವ್ಯಾಪಾರಿ ರಂಗಭೂಮಿಯ ಕಂಪನಿಗಳು ಸೋಲಿನ ಹೋರಾಟವನ್ನು ನಡೆಸಬೇಕಾಯಿತು. ಆದರೆ ಈಗಲೂ ಕೆಲವು ಕಂಪನಿಗಳು (ಏಣಗಿ ಬಾಳಪ್ಪನವರ ಕಲಾ ವೈಭವ ನಾಟಕ ಸಂಘದಂಥವು) ಆಧುನಿಕತೆ ಮತ್ತು ಸಂಪ್ರದಾಯಗಳ ನಡುವೆ ಹೊಂದಾಣಿಕೆಯನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿದರೂ ಅವುಗಳ ಕಾರ್ಯ ವಲಯವು ಹಳ್ಳಿಗಳ ಸಂತೆಗಳಿಗೂ ಜಾತ್ರೆಗಳಿಗೂ ಸೀಮಿತವಾಗಿರುವ ಅವುಗಳ ಅನಿವಾರ್ಯ ಅಂತ್ಯವನ್ನು ಹೇಳುತ್ತದೆ.

ನಾವೀಗ ನಾಗರಿಕ ರಂಗಭೂಮಿಯೆಂದು ಕರೆಯಬಹುದಾದ ಒಂದು ಬಗೆಯನ್ನು ಪರಿಶೀಲಿಸೋಣ. ಇದನ್ನು ಸಾಮಾನ್ಯವಾಗಿ ಹವ್ಯಾಸಿ ರಂಗಭೂಮಿಯೆಂದು ಕರೆಯುತ್ತಾರೆ. ಇದು ಹೊಸದಾಗಿ ವಿದ್ಯಾವಂತರಾದ ಅಥವಾ ಇಂಗ್ಲಿಷ್ ಕಲಿತ ನಾಗರಿಕರ ರಂಗಭೂಮಿಯಾಗಿದೆ. ಹಿಂದಿನ ಕಾಲದಲ್ಲಿ ಇದು ಒಂದು ಕಾಲೇಜಿನ ಅಥವಾ ಶಾಲೆಯ ರಂಗವಾಗಿದ್ದು ವರ್ಷಕ್ಕೊಮ್ಮೆ ವಿದ್ಯಾರ್ಥಿಗಳು ಇಂಗ್ಲಿಷ್ ನಾಟಕಗಳನ್ನೋ ಅಥವಾ ಅವುಗಳ ಅನುವಾದಿತ ನಾಟಕಗಳನ್ನೋ ಅಭಿನಯಿಸುತ್ತಿದ್ದ ಪರಿಣಾಮವಾಗಿ ಹುಟ್ಟಿಕೊಂಡಿತು. ಅನೇಕ ವೇಳೆ ದೇಶಪ್ರೇಮದ ಭರದಿಂದ (ಲೋಕಮಾನ್ಯ ಟಿಳಕ್ ಮೊದಲಾದವರು ತಮ್ಮ ರಾಜಕೀಯ ಚಳವಳಿಯನ್ನು ಪ್ರಾರಂಭಿಸಿದ ಮೇಲೆ) ಸಂಸ್ಕೃತದ ಮಹಾ ನಾಟಕಗಳನ್ನು ಅನುವಾದ ಮಾಡಿಕೊಂಡು ಅಭಿನಯಿಸುತ್ತಿದ್ದರು. ಹೀಗೆ ಕಾಳಿದಾಸನ ಶಾಕುಂತಲವನ್ನು ತುರಮರಿ ಶೇಷಗಿರಿ ರಾಯರು ಧಾರವಾಡದಲ್ಲೂ ಮೈಸೂರಿನ ಮಹಾರಾಜರ ಆಸ್ಥಾನದಲ್ಲಿ ಬಸವಪ್ಪ ಶಾಸ್ತ್ರಿಗಳೂ ಅನುವಾದಿಸಿದರು. ಇವುಗಳಿಗೆ ವಿದ್ಯಾವಂತ ಕಲಾವಿದರು ಬೇಕಾಗಿ ಬಂದರು. ಅನುವಾದದಿಂದ ಸ್ವತಂತ್ರ ಬರವಣಿಗೆಗೆ ಸಹಜವಾದ ಬೆಳವಣಿಗೆಯುಂಟಾಯಿತು. ಇದರಿಂದ ಹೆಚ್ಚು ಹೆಚ್ಚು ಹವ್ಯಾಸಿ ಕಲಾವಿದರ ಸಂಸ್ಥೆಗಳು ಹುಟ್ಟಿಕೊಂಡವು. ಅವುಗಳು ಸಾಮಾನ್ಯವಾಗಿ ಅಪರೂಪಕ್ಕೆ ಸಂಘಟಿತವಾಗುತ್ತಿರುತ್ತಿದ್ದುದರಿಂದ ಅವುಗಳನ್ನೆಲ್ಲಾ ಹೆಸರಿಸಲು ಸಾಧ್ಯವಾಗುವುದಿಲ್ಲ. ಅಪರೂಪ ಬೆಂಗಳೂರಿನ 'ಅಮೆಚ್ಯೂರ್ ಡ್ರಾಮಾ ಅಸೋಸಿಯೇಷನ್' (ಎ. ಡಿ. ಎ.) ಎಂಬುದು 1909ರಲ್ಲೂ, ಧಾರವಾಡದ ಕಲೋತ್ತೇಜಕ ಸಂಘವು 1904ರಲ್ಲಾದರೂ, ಗದುಗಿನ 'ಯಂಗ್ ಮೆನ್ಸ್ ಫುಟ್‌ಬಾಲ್ ಅಸೋಸಿಯೇಷನ್' ಅವುಗಳಲ್ಲಿ ಮೊದಲಿನದೆಂಬುದನ್ನು ಹೇಳಬೇಕಾಗುತ್ತದೆ. ಸ್ವಾತಂತ್ರ್ಯಪೂರ್ವದ ಕೆಲವು ದಶಕಗಳಲ್ಲಿ ಬಳ್ಳಾರಿ ರಾಘವರು ಇಂಥ ಹವ್ಯಾಸಿ ಕಲಾವಿದರಲ್ಲಿ ಪ್ರಸಿದ್ಧರಾಗಿದ್ದರು.

ಈ ಶತಮಾನದ ಎರಡನೇಯ ದಶಕದಲ್ಲಿ ಬೆಂಗಳೂರಿನ ಕೈಲಾಸಂ, ಉತ್ತರ ಕರ್ನಾಟಕದ ಗದಗಿನ ಹುಯಿಲಗೋಳ ನಾರಾಯಣರಾಯರು ತಮ್ಮ ತಮ್ಮ ಸ್ವಂತ ಕೃತಿಗಳನ್ನು ರಚಿಸಿದ ಮೇಲೆ ಹವ್ಯಾಸಿ ರಂಗದ ಚಳವಳಿಗೆ ಒಂದು ಹೊಸ ಆಯಾಮ ದೊರಕಿದಂತಾಯಿತು. ಮೊದಲಿಗೇ ಅವರು ಅತಿರೇಕದ ನಾಟಕಗಳನ್ನು ಪ್ರದರ್ಶಿಸುತ್ತಿದ್ದ 'ಕಂಪನಿ ರಂಗಭೂಮಿ'ಯನ್ನು ವಿರೋಧಿಸಿದರು. ಎರಡನೇಯದಾಗಿ ಸಮಕಾಲಿಕ ಸಾಮಾಜಿಕ ಸಮಸ್ಯೆಗಳನ್ನು ನಾಟಕಕ್ಕೆ ತಂದರು. ಮತ್ತು ಮೂರನೇಯದಾಗಿ ಸಂಗೀತ, ನೃತ್ಯ ಮತ್ತು ಅನವಶ್ಯ ಗೀತವನ್ನು ಅವರು ಕೈಬಿಟ್ಟರು. ಇಲ್ಲಿಂದ ಮುಂದಕ್ಕೆ ಹವ್ಯಾಸಿ ರಂಗಭೂಮಿಯ ಇತಿಹಾಸವು ಒಬ್ಬೊಬ್ಬ ನಾಟಕಕಾರನ ಸಂಬಂಧವನ್ನು ಪಡೆದಿರುತ್ತದೆ. ಹಾಗೆ 1927ರಲ್ಲಿ ಕೆಲವು ಸ್ವತಂತ್ರ ನಾಟಕ

ಗಳನ್ನೂ ಕೆಲವು ಷೇಕ್ಸ್‌ಪಿಯರನ ಅನುವಾದಗಳನ್ನೂ ರಚಿಸಿದ್ದ ಒಬ್ಬ ಪ್ರಸಿದ್ಧ ಸಾಹಿತಿಯ ನೆನಪಿನಲ್ಲಿ ಉತ್ತರ ಕರ್ನಾಟಕದ ಬಾಗಲಕೋಟೆಯಲ್ಲಿ ವಾಸುದೇವ (ಸಾಹಿತಿಯ ಹೆಸರು) ವಿನೋದಿನಿ ಸಭಾ ಎಂಬುದು ಸ್ಥಾಪಿತವಾಯಿತು. ಹೀಗೆಯೇ 1933ರಲ್ಲಿ ಸ್ವತಂತ್ರ ನಾಟಕಗಳನ್ನು ರಚಿಸಲು - ತೊಡಗಿದ್ದ ಶ್ರೀರಂಗರು 'ಕನ್ನಡ ಹವ್ಯಾಸಿಗಳು' ಎಂಬ ಸಂಸ್ಥೆಯನ್ನು ಧಾರವಾಡದಲ್ಲಿ ಪ್ರಾರಂಭಿಸಿದರು. ಇವೆರಡೂ ಸುಮಾರು 25 ವರ್ಷಗಳಿಗೂ ಹೆಚ್ಚು ಕಾಲ ಬದುಕಿದ್ದು ಹವ್ಯಾಸಿ ರಂಗಭೂಮಿ ಯನ್ನು ಗಟ್ಟಿಯಾದ ತಳಪಾಯದ ಮೇಲೆ ನಿಲ್ಲಿಸಿದ್ದಲ್ಲದೆ ಆ ಪ್ರದೇಶಗಳಲ್ಲಿ ಬೆಳೆಯುತ್ತಿದ್ದ ಪ್ರೇಕ್ಷಕರಿಗೆ ಹೊಸ ನಾಟಕವನ್ನು ನೀಡುತ್ತಿದ್ದವು. ಹೀಗೆಯೇ ಅರಸೊತ್ತಿಗೆಯ ಮೈಸೂರಿನಲ್ಲಿ ಕೈಲಾಸಂ ಜೊತೆಗೆ ಕ್ಷೀರಸಾಗರ, ಅ. ನ. ಕೃಷ್ಣರಾಯರು, ಪರ್ವತವಾಣಿ (ಇವರು ಮೋಲಿಯರನ ಬಹುತೇಕ ಕೃತಿ ಗಳನ್ನೆಲ್ಲಾ ರೂಪಾಂತರಿಸಿದವರು), ಕೈವಾರ ರಾಜಾರಾವ್ ಮುತ್ತು ಇತರರಿದ್ದರು. ಕಡಲತೀರದಲ್ಲಿ ಈವರೆಗೂ ಯಕ್ಷಗಾನವು ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿಲ್ಲವಾದರೂ ಕೋಟ ಶಿವರಾಮ ಕಾರಂತರು ಸ್ವತಂತ್ರ ನಾಟಕಗಳನ್ನು ರಚಿಸಿ ಜನಪ್ರಿಯ ಗೊಳಿಸಿದರು. ಆಗಿನ ದಿನಗಳಲ್ಲಿ ಪ್ರದರ್ಶನಗಳನ್ನು ಸಾಮಾನ್ಯ ವಾಗಿ ಗಣೇಶೋತ್ಸವ ಅಥವಾ ದಸರಾ ಹಬ್ಬಗಳಂತಹ ಸಾರ್ವ ಜನಿಕ ಉತ್ಸವಗಳಲ್ಲಿ ಸೇರಿಸಲಾಗುತ್ತಿತ್ತು. ಸ್ವಾತಂತ್ರ್ಯಾನಂತರ ಕನ್ನಡ ಹವ್ಯಾಸಿ ರಂಗಭೂಮಿಯು ಇಂಥ ಸಾರ್ವಜನಿಕ ಉತ್ಸವಗಳನ್ನು ಬಿಟ್ಟು ಸ್ವತಂತ್ರ ಪ್ರದರ್ಶನಗಳನ್ನು ನೀಡಲು ಪ್ರಾರಂಭಿಸಿದವು.

ಆ ದಿನಗಳಲ್ಲಿ ಹವ್ಯಾಸಿ ರಂಗಭೂಮಿಯೆಂದರೆ ಹೆಚ್ಚಾಗಿ 'ಕೇಳಿಸಿ' ಕೊಳ್ಳುವಂಥದಾಗಿತ್ತು. ನಾಟಕಗಳಲ್ಲಿ ಅಂದಿನ ಬಡ ಮಧ್ಯಮ ವರ್ಗದ ಜನರ ಸಂದರ್ಭಗಳು ನಾಟಕದಲ್ಲಿ ಸೇರಿರು ತ್ತಿದ್ದುದರಿಂದ ರಂಗಮಂಟಪದಲ್ಲಾಗಲೀ ಅಲಂಕಾರದಲ್ಲಾಗಲೀ ಹೇಳಿಕೊಳ್ಳುವಂತಹದೇನೂ ಇರಲಿಲ್ಲ. ಅಲ್ಲದೆ ಹವ್ಯಾಸಿ ರಂಗ ಭೂಮಿಯು ಕಂಪೆನಿಗಳ ಕೃತಕತೆ ಮತ್ತು ಅತಿರೇಕ ಲಕ್ಷಣಗಳ ವಿರುದ್ಧವಾಗಿದ್ದಿತು. ಆದರೂ ಒಂದು ವಿಷಯದಲ್ಲಿ ಮಾತ್ರ ಕ್ರಾಂತಿಕಾರಿ ಬದಲಾವಣೆಯಾಯಿತು. ಅದೆಂದರೆ ನಾಟಕದ ಸಂಭಾಷಣೆಯ ಭಾಷೆಯು ಸಾಮಾನ್ಯರ ಮಾತಿಗೆ ಸಮೀಪ ವಾಗಿದ್ದು; ಆಡಂಬರದ, ಕೃತಕವಾದ, ವ್ಯಾಕರಣ ಬದ್ಧವಾದ, ಛಂದೋಬದ್ಧವಾದ ಪದಗಳುಳ್ಳ ಕಂಪೆನಿ ನಾಟಕಗಳು, ಪ್ರೇಕ್ಷಕ ರಿಂದ ಎಷ್ಟು ದೂರವಾಗಿರುತ್ತಿತ್ತೋ ಹವ್ಯಾಸಿ ರಂಗದವು ಅಷ್ಟೇ ಹತ್ತಿರವಾಗಿದ್ದಿತ್ತೆನ್ನಬಹುದು. ಇದರಿಂದಲೇ ಪ್ರೇಕ್ಷಕರಿಗೂ ನಾಟಕಕ್ಕೂ ಇದ್ದ ಸಂಬಂಧವು ತೀರ ಸಮೀಪದ್ದಾಗಿಬಿಟ್ಟಿದ್ದಿತು. ಈ ರಂಗಭೂಮಿಯ ಒಂದು ಕೊರತೆಯೆಂದರೆ, ಇದು ಸರಿಯಾಗಿ ಸಂಘಟಿತವಾಗಿ ಇರುತ್ತಿರಲಿಲ್ಲ; ಯಾವ ಸಮಯದಲ್ಲೇ ಆಗಲಿ ಒಂದುಗೂಡಿಸಲೂ ಸಾಧ್ಯವಾಗುತ್ತಿರಲಿಲ್ಲ. ಅದಕ್ಕೆ ಕಾರಣ ಕಲಾವಿದರು ಬೇರೆ ಬೇರೆ ಕಡೆಗಳಲ್ಲಿ ಕೆಲಸ ಮಾಡುತ್ತಿದ್ದವರು; ವರ್ಗಾವರ್ಗಿಗೂ ಸೇರಿದ್ದವರು. ಅಲ್ಲದೆ ಅವರ ರಂಗ ಚಟುವಟಿಕೆ ಗಳಿಗಾಗಿ ಪ್ರತಿಫಲವೇನನ್ನೂ ನೀಡುತ್ತಿರಲಿಲ್ಲ. ಸಾಮಾನ್ಯವಾಗಿ ಒಂದು ಪ್ರದರ್ಶನವನ್ನು ಮತ್ತೊಮ್ಮೆ ತೋರಿಸಲಾಗುತ್ತಿರಲಿಲ್ಲ. ಅಂತಹುದು ಸಾಧ್ಯವಾದರೂ ಹಿಂದಿನ ಕಲಾವಿದರೇ ಅದರಲ್ಲಿ ಭಾಗವಹಿಸುತ್ತಿದ್ದರೆಂಬ ಭರವಸೆಯಿರುತ್ತಿರಲಿಲ್ಲ. ಬಹು ಕಾಲದ ವರೆಗೆ ವಿದ್ಯಾವಂತ ಸ್ತ್ರೀಯರು ರಂಗದ ಮೇಲೆ ಬರಲು ಒಪ್ಪುತ್ತಿರ ಲಿಲ್ಲ ಮತ್ತು ಇದರಿಂದ ನಾಟಕಗಳಲ್ಲಿರುತ್ತಿದ್ದ ವಾಸ್ತವತೆಗೆ ಪ್ರತಿಕೂಲ ಪರಿಣಾಮವನ್ನುಂಟು ಮಾಡಿತು.

ಸ್ವಾತಂತ್ರ್ಯ ಬಂದ ಮೇಲೆ ಹವ್ಯಾಸಿ ರಂಗಭೂಮಿಯ ಪ್ರಗತಿಯತ್ತ ದಾಪುಗಾಲು ಹಾಕಿತು. ಅಕ್ಯಾಡಮಿಗಳು ಸ್ಥಾಪಿತವಾದವು. ಅವುಗಳಿಂದ ಧನ ಸಹಾಯ ದೊರಕಿ ನಾಟಕೋತ್ಸವಗಳೂ ಸ್ಪರ್ಧೆಗಳೂ ಜರುಗಿದುವು. ಬಹುಮುಖ್ಯ ಘಟನೆಯೆಂದರೆ ದಿಲ್ಲಿಯಲ್ಲಿ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ ಎಂಬುದು ಸ್ಥಾಪನೆಯಾಗಿ ಕರ್ನಾಟಕದ ಕೆಲವು ಯುವಕರು ಇದರಲ್ಲಿ ತರಬೇತಿ ಪಡೆದುಬಂದರು. ವರ್ಷಂಪ್ರತಿಯಾಗಿ ಶ್ರೀರಂಗರು ಹೀಗೆ ತರಬೇತಿಯನ್ನು ಪಡೆದ ಯುವಕರನ್ನು ಕರ್ನಾಟಕದ ಹವ್ಯಾಸಿ ರಂಗಭೂಮಿಗೆ ಸೇರಿಸಿದ ಕಾರಣವಾಗಿ ರಂಗಭೂಮಿಯು ಕೂಡಲೇ ವಿಕಾಸವಾಯಿತೆನ್ನಬಹುದು. ಇಂದಿನವರೆಗೂ ನಮ್ಮ ಹವ್ಯಾಸಿ ರಂಗಭೂಮಿಯಲ್ಲಿ ಒಬ್ಬ ನಾದರೂ ಮಹಾ ನಟನನ್ನಾಗಲಿ ಮಹಾನ್ ಹಾಡುಗಾರ ನನ್ನಾಗಲಿ ಕಾಣಲಾಗದಿದ್ದರೂ ರಂಗಭೂಮಿಯ ಪ್ರೇಕ್ಷಕರ ಸಂಖ್ಯೆಯು ಬೆಳೆಯತೊಡಗಿತು. ಕಂಪೆನಿ ನಾಟಕಗಳ ವಿಷಯ ದಲ್ಲಿ ಹೇಳುವುದಾದರೆ ಪ್ರೇಕ್ಷಕರು ನಾಟಕವನ್ನೇ ನೋಡಲು ಹೋಗುತ್ತಿರಲಿಲ್ಲ. ಅವರು ಒಬ್ಬ ಮಹಾನ್ ಹಾಡುಗಾರನ ಹಾಡಿಗಾಗಿ ಅಥವಾ ಮಹಾ ನಟನೊಬ್ಬನ ಅಭಿನಯದಿಂದ ರೋಮಾಂಚನಗೊಳ್ಳುವುದಕ್ಕಾಗಿ ಹೋಗುತ್ತಿದ್ದರು. ಹವ್ಯಾಸಿ ರಂಗದ ಪ್ರೇಕ್ಷಕರಾದರೆ ನಾಟಕವನ್ನು ನೋಡಲಿಕ್ಕಾಗಿಯೇ ಹೋಗುತ್ತಾರೆ. ನಾಟಕವೆನ್ನುವುದು ಒಂದು ಸಾಮೂಹಿಕ ಚಟುವಟಿಕೆ ಮತ್ತು ಅದನ್ನು ಯಾರಾದರೊಬ್ಬರು ಹೊಣೆಗಾರ ರಾಗಿ ಸಾಧಿಸಬೇಕು ಎಂಬ ತಿಳಿವಳಿಕೆಯಿಂದಾಗಿ ಇಂತಹ ಬದಲಾವಣೆಯು ಸಾಧ್ಯವಾಗಿದೆ. ಹೀಗೆ ನಮ್ಮ ಯುವಕ ಹವ್ಯಾಸಿಗಳು ಒಬ್ಬ ನಿರ್ದೇಶಕನನ್ನೂ ಅದರ ಅವಶ್ಯಕತೆಯನ್ನೂ ಗುರುತಿಸಿಕೊಂಡರು. ಬಹುಬೇಗನೆ ಇದರಿಂದಾಗಿ ಪ್ರತಿಭಾವಂತ ನಿರ್ದೇಶಕರು ಬೆಳಕಿಗೆ ಬಂದರು. ಮತ್ತು ನಾಟಕಕಾರರಾದ ಬಿ. ವಿ. ಕಾರಂತ ಇಡೀ ದೇಶದಲ್ಲಿ ಪ್ರಖ್ಯಾತ ನಿರ್ದೇಶಕರೆನ್ನಿಸಿ ಕೊಂಡರು. ಈಚೆಗೆ ಕೆಲವರು ಯುವಕರೂ ನಿರ್ದೇಶಕರಾಗಿ ಪ್ರಸಿದ್ಧಿಗೆ ಬರುತ್ತಿದ್ದಾರೆ.

ಕೊನೆಯದಾಗಿ ನಮ್ಮ ಯುವಕ ನಾಟಕಕಾರರಲ್ಲಿ ಗಿರೀಶ್

ಕಾರ್ನಾಡ್ (ತುಘಲಕ್ ಮತ್ತು ಹಯವದನ ರಚಿಸಿದವರು), ಪಿ. ಲಂಕೇಶ್ (ತೆರೆಗಳು ಮತ್ತು ಇತರ ನಾಟಕಗಳನ್ನು ಬರೆದವರು) — ಚಂದ್ರಶೇಖರ ಕಂಬಾರ (ಜೋಕುಮಾರ ಸ್ವಾಮಿ ಮತ್ತು ಇತರ ನಾಟಕಗಳನ್ನು ಬರೆದವರು) ಇವರನ್ನು ಹೆಸರಿಸಬಹುದು. ಮೇಲೆ ಹೇಳಿದ ನಾಟಕಗಳೆಲ್ಲವೂ ಹಿಂದಿಗೆ ಅನುವಾದವಾಗಿ ಪ್ರದರ್ಶಿತವಾಗಿವೆ. ಎಲ್ಲರಿಗೂ ಹಿರಿಯ ನಾಟಕಕಾರರಾಗಿ ಶ್ರೀರಂಗರು 1930ರಷ್ಟು ಹಿಂದೆಯೇ ತಮ್ಮ ರಂಗಜೀವನವನ್ನು ಪ್ರಾರಂಭಿಸಿದವರು. (ಕೊನೆಯವರೆಗೂ ಕ್ರಿಯಾಶೀಲರಾಗಿದ್ದರು. 1984ರ ನವೆಂಬರಿನಲ್ಲಿ ಅವರು ತೀರಿ ಕೊಂಡರು –ಸಂ.). ಅವರ 'ಕೇಳು ಜನಮೇಜಯ'ವು ಹಿಂದಿಗೆ ಮೊದಲು ಅನುವಾದವಾಗಿ 'ರಂಗಮಂಚ'ದಲ್ಲಿ ಪ್ರದರ್ಶನಗೊಂಡ ಮೇಲೆ ಅವರ ಹನ್ನೆರಡು ನಾಟಕಗಳು ಮರಾಠಿ ರಂಗಭೂಮಿ ಯಲ್ಲಿ ಪ್ರದರ್ಶನಗೊಂಡಿವೆ. ಈಗ ಕರ್ನಾಟಕದ ನಾಟಕಗಳು ಮತ್ತು ಹವ್ಯಾಸಿ ಸಂಸ್ಥೆಗಳು ಮುಂಬಯಿ, ದಿಲ್ಲಿ ಮತ್ತು ಕಲ್ಕತ್ತಾ ನಗರಗಳಲ್ಲಿ ಪ್ರೇಕ್ಷಕರನ್ನು ಪಡೆಯಬಲ್ಲ ಭವಿಷ್ಯವನ್ನು ಪಡೆದಿವೆ.

## ಕನ್ನಡ ರಂಗಭೂಮಿಯಲ್ಲಿ ಆಧುನಿಕತೆ

ಕನ್ನಡ ರಂಗಭೂಮಿಯ ಆಧುನಿಕತೆಯನ್ನು ಸುಮಾರು 1955ರಿಂದ 1980ರ ನಡುವೆ ಗುರುತಿಸುವುದು ಒಳ್ಳೆಯದು. ಆದರೂ ಇದಕ್ಕೆ ಕೆಲವು ಮಿತಿಗಳೂ ಇವೆ. ಎಂದಿನಂತೆ ಈ ಅವಧಿಯಲ್ಲಿಯೂ ಅನೇಕ ಪಾಶ್ಚಿಮಾತ್ಯ ವಿಚಾರಗಳು ನಮ್ಮ ಕಡೆಗೆ ಹರಿದುಬಂದು ಸೇರಿಕೊಂಡಿವೆ. ಇದರಲ್ಲಿ ಕೆಲವು ರಂಗ ಭೂಮಿಯ ಪ್ರಾಯೋಗಿಕ ಅಭ್ಯಾಸಗಳೂ ಸೇರಿವೆ. ನಾಟಕದ ವಿಮರ್ಶೆ ಕೂಡ ಅಲ್ಲಿಯದನ್ನು ಅನುಸರಿಸುತ್ತದೆ. ನಾಟಕಗಳನ್ನು ರಂಗಪ್ರಯೋಗಕ್ಕಾಗಿ ಬರೆಯುವಲ್ಲಿ ಪಾಶ್ಚಾತ್ಯ ವಿಷಯಗಳನ್ನು ಎರವಲಾಗಿ ಪಡೆಯಲು ಈ ಕಾಲದಲ್ಲಿ ನಾಟಕಕಾರರು ಹಿಂಜರಿದಿಲ್ಲ. ಆದುದರಿಂದ ನಮ್ಮಲ್ಲೂ ಅಸ್ತಿತ್ವವಾದ, ಅಸಂಗತ ಮತ್ತು ರಂಗಭೂಮಿಯ ಇತರ ಆಧುನಿಕ ವಿಚಾರಗಳೂ ರಂಗ ಪ್ರಯೋಗಗಳಲ್ಲಿ ಕಂಡುಬರುತ್ತಿವೆ. ಇವೆಲ್ಲವುಗಳೊಂದಿಗೆ ನಮ್ಮ ಸಮಕಾಲೀನ ರಂಗಭೂಮಿಯು ಅಭಿವೃದ್ಧಿ ಹೊಂದಿದೆ. ರೊಮ್ಯಾಂಟಿಕ್ ಎನ್ನಬಹುದಾದ ಕಾಲದಲ್ಲಿ ಹಿರಿಯ ಬರಹ ಗಾರರಾದ ಶ್ರೀರಂಗ ಮತ್ತು ಜಿ. ಬಿ. ಜೋಷಿಯವರು ತಮ್ಮ ಕಿರಿಯ ತಲೆಮಾರುಗಳ 'ಹೊಸ ಅಲೆ'ಯನ್ನೂ ಅರ್ಥ ಮಾಡಿ ಕೊಂಡು ಅವರಿಗೂ ಸರಿಸಮನಾಗಿ ನಿಂತು ನಾಟಕಗಳನ್ನು ರಚಿಸಿ ದ್ದಾರೆ. ಇದೆಲ್ಲಾ 1955ರ ನಂತರ ಜರುಗಿದ್ದು, ಸ್ವಾತಂತ್ರ್ಯಾ ನಂತರ ನಮ್ಮೆಲ್ಲರ ವಿಚಾರದಲ್ಲೂ ಮಾರ್ಪಾಡಾಗಿರುವುದೂ ಇದಕ್ಕೆ ಮುಖ್ಯ ಕಾರಣವಾಗಿರುತ್ತದೆ.

ಕಿರಿಯ ನಾಟಕಕಾರರಲ್ಲಿ ಗಿರೀಶ್ ಕಾರ್ನಾಡ್, ಪಿ. ಲಂಕೇಶ್, ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ್, ಬಿ. ಸಿ. ರಾಮಚಂದ್ರಶರ್ಮ, ಎ.ಕೆ. ರಾಮಾನುಜನ್, ಕೀರ್ತಿನಾಥ ಕುರ್ತಕೋಟಿ, ನ. ರತ್ನ ಮತ್ತು ಪೂರ್ಣಚಂದ್ರ ತೇಜಸ್ವಿ ಇವರನ್ನು ಈ ಚಳುವಳಿಗೆ ಮುಖ್ಯರೆಂದು ಪರಿಗಣಿಸ ಬಹುದು. ಈ ಕಲೆಯ ಸಮಕಾಲಿಕತೆಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡವರಾಗಿ, ರಂಗಚಟುವಟಿಕೆಯಲ್ಲಿ ಭಾಗ ವಹಿಸುತ್ತಾ ಬೆಳೆದ ನಾಟಕಕಾರರಾಗಿ ಇವರನ್ನು ಗುರುತಿಸ ಬೇಕಾಗುತ್ತದೆ. ಇವರಿಂದ ಕೆಲವು ಹೊಸ ನಾಟಕಗಳ ರಚನೆ ಯಾದ ಕೂಡಲೆ ಬಿ. ಚಂದ್ರಶೇಖರ್, ಬಿ. ವಿ. ಕಾರಂತ, ಎಂ. ಎಸ್. ನಾಗರಾಜ್, ಕೆ. ವಿ. ಸುಬ್ಬಣ್ಣ ಮತ್ತು ನ. ರತ್ನ ಮೊದಲಾದ ಹೊಸ ನಿರ್ದೇಶಕರು ಬೆಳಕಿಗೆ ಬಂದರು. ಆದುದ ರಿಂದ, ಯಯಾತಿ, ತುಘಲಕ್, ಕೇಳು ಜನಮೇಜಯ, ಕದಡಿದ ನೀರು, ತೆರೆಗಳು, ಸಂಕ್ರಾಂತಿ, ಜೋಕುಮಾರಸ್ವಾಮಿ, ಅಪ್ಪ, ಕುಂಟಕುಂಟಕುರವತ್ತಿ, ನೀಲಿ ಕಾಗದ, ನೆರಳು, ಬ್ರಹ್ಮರಾಕ್ಷಸ, ಆ ಮನಿ, ಎಲ್ಲಿಗೆ, ಯಮಳ ಪ್ರಶ್ನೆ, ಮೊದಲಾದುವು ಇಂದಿಗೂ ಮುಖ್ಯ ಪ್ರಯೋಗಗಳೂ ಆಗಿವೆ. ಈ ನಾಟಕಗಳು ರಚನೆಯಲ್ಲಿ ಸಂಕೀರ್ಣತೆಯನ್ನು ಒಳಗೊಂಡು ಪರಿಣಾಮದಲ್ಲಿ ಕಾವ್ಯಸತ್ವವುಳ್ಳ ವಾದ ಕಾರಣ ನಿರ್ದೇಶಕರು ಇವುಗಳನ್ನು ಬುದ್ಧಿವಂತಿಕೆಯಿಂದ ಅರ್ಥೈಸಬೇಕಾಯಿತು. ಅದರಂತೆ ನಾಟಕದ ಯಶಸ್ಸು ಮತ್ತು ಸೋಲು ನಿರ್ಧಾರವಾಗಬೇಕಾಯಿತು. ಹೀಗೆ ನಿರ್ದೇಶಕನ ಸ್ಥಾನಮಾನವು ಕನ್ನಡ ರಂಗಭೂಮಿಯಲ್ಲಿ ಗಟ್ಟಿಯಾಯಿತು, ಎನ್ನಬಹುದು.

ಶ್ರೀರಂಗರು ಹಿರಿಯ ನಾಟಕಕಾರರೂ, ರಂಗಭೂಮಿಯ ಕ್ರಿಯಾವಂತರೂ ಆಗಿ ಮುಂದೆ ಬಂದು, ತಮ್ಮ 'ಕೇಳು ಜನಮೇಜಯ'ದಿಂದ ಬೆಳೆದು ನಿಂತರು. ಇವರ ಸ್ವಗತ ಸಂಭಾಷಣವು ಏಕಾಂಕಗಳಲ್ಲಿ ಒಂದು ವಿಶಿಷ್ಟ ಪ್ರಯೋಗವೂ ಆಯಿತು. ಇದರಲ್ಲಿ ಪರಿಪೂರ್ಣ ರಂಗಭೂಮಿ ('ಟೋಟಲ್ ಥಿಯೇಟರ್') ಯ ಪ್ರಾಯೋಗಿಕ ಶೋಧವನ್ನೂ ಕಾಣುತ್ತೇವೆ. ಅವರು ಪಿರಾಂಡಲೋ ಎಂಬ ನಾಟಕಕಾರನ 'ಸಿಕ್ಸ್ ಕ್ಯಾರೆಕ್ಟರ್ಸ್ ಇನ್ ಸರ್ಚ್ ಆಫ್ ಎನ್ ಆಥರ್' ಎಂಬ ಕೃತಿಯಿಂದ ಸ್ಫೂರ್ತಿ ಪಡೆದು ರಚಿಸಿದ ಕೇಳುಜನಮೇಜಯ ನಾಟಕವು ದೇಶಾದ್ಯಂತ (ಹಿಂದೀ ವಲಯದಲ್ಲಿ ಕೂಡ), ಪ್ರಮುಖ ನಗರಗಳಾದ ದೆಹಲಿ, ಕಲ್ಕತ್ತಾ ಮತ್ತು ಮುಂಬಯಿಗಳಲ್ಲಿ ಹಿಂದಿ, ಬಂಗಾಲಿ ಮತ್ತು ಮರಾಠಿ ಭಾಷೆಗಳಿಗೆ ಅನುವಾದವಾಗಿ ಪ್ರಯೋಗವನ್ನು ಕಂಡಿತು. ಅವರ ಇತ್ತೀಚಿನ ಕೃತಿ ಅಗ್ನಿಸಾಕ್ಷಿಯು ವರದಕ್ಷಿಣೆ ಮತ್ತು ವಿಧವಾ ಪದ್ಧತಿಯ ಕೆಡಕುಗಳನ್ನು ಬೆಳಕಿಗೊಡ್ಡುತ್ತದೆ. ಪ್ರಮುಖ ನಾಟಕಕಾರರಾಗಿ ಶ್ರೀರಂಗರು ಸುಮಾರು 45 ದೊಡ್ಡ ನಾಟಕ ಗಳನ್ನೂ, ನೂರಕ್ಕೂ ಹೆಚ್ಚು ಏಕಾಂಕಗಳನ್ನೂ ರಚಿಸಿದ್ದಾರೆ. ಅವರ ನಾಟಕಗಳು 1930ರ ಈಚಿನ ಸಮಕಾಲಿಕ ಸಾಮಾಜಿಕ

ದೌರ್ಜನ್ಯಗಳನ್ನು ಒಳಗೊಳ್ಳುತ್ತವೆ. ಸ್ವತಃ ಗಾಂಧೀವಾದಿಯಾಗಿ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದ ಶ್ರೀರಂಗರು ಪ್ರಜಾಪ್ರಭುತ್ವದ ಕಾರಣಕ್ಕೆ ತಾವೇ ಬಂದು ವರ್ಗದಲಿತರಾಗಿ ನಿಲ್ಲುವರಲ್ಲದೆ ಧೀಮಂತ ವ್ಯಕ್ತಿಯಾಗಿ ರಂಗಭೂಮಿಗೆ ಈ ನಡುವೆ ಬಂದ 'ಸ್ಪಾಟ್‌ಲೈಟ್'ನ ಪ್ರವೇಶದಿಂದ ಒಡಮೂಡಿದ ರಂಗ ಪ್ರಕ್ರಿಯೆಯ ಎಲ್ಲಾ ಅಂಶಗಳನ್ನೂ ಅರಿತವರಾದರು. ಅವರ ನಾಟಕಗಳೆಲ್ಲಾ ರಂಗಪ್ರಯೋಗದಲ್ಲಿ ಕಿಂಚಿತ್ತೂ ಬದಲಾವಣೆಯಿಲ್ಲದೆ ಯಶಸ್ವಿಯಾಗುವಂಥವು. ಸಂಭಾಷಣೆಯಲ್ಲಿ ಬರ್ನಾಡ್ ಷಾನ ನೆನಪು ಮೂಡಿಸುವಷ್ಟು ಹರಿತವಾಗಿದ್ದು, ನಮ್ಮ ಸಮಾಜದ ಅವಶ್ಯಕತೆಯನ್ನು ಪೂರೈಸಬಲ್ಲವಾಗಿವೆ. ಹರಿಜನ್ವಾರ, ಪ್ರಪಂಚ ಪಾಣಿಪತ್ತು, ಸಂಧ್ಯಾಕಾಲ, ಶೋಕಚಕ್ರ, ಕೇಳು ಜನಮೇಜಯ, ಕತ್ತಲೆ ಬೆಳಕು, ನೀ ಕೊಡೆ ನಾ ಬಿಡೆ, ಸ್ವರ್ಗಕ್ಕೆ ಮೂರೇ ಬಾಗಿಲು, ಅಗ್ನಿಸಾಕ್ಷಿ, ಇತ್ಯಾದಿಗಳು ಕನ್ನಡ ರಂಗಭೂಮಿಯ ಹೆಮ್ಮೆಯ ಕೃತಿಗಳಾಗಿವೆ. ಬಹುಶಃ ಶ್ರೀರಂಗರನ್ನು ಅವರ ಸ್ತ್ರೀ ಪಾತ್ರಗಳಿಗಾಗಿ, ಇಂದಿನ ಗಂಡಸಿನ ದೌರ್ಬಲ್ಯಗಳನ್ನು ಬೆಳಕಿಗೊಡ್ಡುವ ಸಾಮರ್ಥ್ಯಕ್ಕಾಗಿ ನೆನೆಯಬೇಕಾಗುತ್ತದೆ. ಅವರ ನಾಟಕಗಳಲ್ಲಿ ಬಹುಪಾಲು ಮರಾಠಿಗೆ ಅನುವಾದವಾಗಿವೆ. ಕೆಲವು ಪ್ರಸಿದ್ಧ ಕೃತಿಗಳು ಹಿಂದಿಗೂ ಆಗಿವೆ. (ಒಂದೆರಡು ಇಂಗ್ಲಿಷ್‌ಗೂ ಅನುವಾದವಾಗಿವೆ). ಸಾಗರದ 'ಉದಯ ಕಲಾವಿದರು' ಶ್ರೀರಂಗರ ನಾಟಕಗಳಿಗೆ ಮೀಸಲಾದ ಸಂಸ್ಥೆಯಾಗಿತ್ತು. ಶ್ರೀರಂಗರು ನಮ್ಮ ಯಾವುದೇ ನಾಟಕೋತ್ಸವದಲ್ಲೂ, ಸ್ಪರ್ಧೆಗಳಲ್ಲೂ ಭಾಗಿಗಳಾಗಿದ್ದವರು. ಇವರು ಇಂಗ್ಲಿಷ್ ಮತ್ತು ಸಂಸ್ಕೃತದಲ್ಲೂ ಪ್ರಸಿದ್ಧ ವಿದ್ವಾಂಸರಾಗಿದ್ದು, ಭಾರತೀಯ ರಂಗಭೂಮಿಯನ್ನು ಕುರಿತ ಒಂದು ಉದ್ಗ್ರಂಥವನ್ನು ಬರೆದಿರುವರಲ್ಲದೆ, ಭರತನ ನಾಟ್ಯಶಾಸ್ತ್ರದ ಇತ್ತೀಚಿನ ವ್ಯಾಖ್ಯಾನವನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ರಚಿಸಿದ್ದಾರೆ. (ಇದರಲ್ಲಿ ಕನ್ನಡ ವ್ಯಾಖ್ಯಾನವು ಅಚ್ಚಾಗಿದ್ದು, ಮತ್ತೊಂದು ಸಿದ್ಧವಾಗಿದೆ). ಈ ಕಾಲದ ಮತ್ತೊಬ್ಬ ಹಳೆಯ ನಾಟಕಕಾರರಾದ ಜಿ. ಬಿ. ಜೋಷಿ, ಶ್ರೀರಂಗರ ಸಮಕಾಲೀನರಾಗಿದ್ದು, 1950ರ ದಶಕದಲ್ಲಿ ನಾಟಕ ರಚನೆಗೆ ತೊಡಗಿದವರು. ಅವರ ಐದೂ ನಾಟಕಗಳು ಗಮನಾರ್ಹವಾಗಿವೆ. ಮೂಕ ಬಲಿ, ಕಡಡಿದ ನೀರು, ಆ ಊರು ಈ ಊರು, ಸತ್ತವರ ನೆರಳು ಮತ್ತು ನಾನೇ ಬಿಜ್ಜಳ. ಇವುಗಳಲ್ಲಿ ಕೊನೆಯ ನಾಟಕಕ್ಕೆ ಪಿರಾಂಡಲೋ ಬರೆದ ಹೆನ್ರಿ IV ನಾಟಕವನ್ನು ಆಧಾರವಾಗಿಸಿದ್ದಾರೆ. ಇದೊಂದು ರೂಪಾಂತರವೆಂದರೂ ಸರಿ. ಆದರೆ ಇಂದಿಗೂ ಇವರ ಕಡಡಿದ ನೀರು ಒಂದು ಅತ್ಯುತ್ತಮ ಕೃತಿಯಾಗಿದೆ. ಜೋಷಿಯವರ ಮೇಲಿನ ಪ್ರಭಾವಗಳನ್ನು ಕಡೆಗಣಿಸಬಹುದಲ್ಲದೆ ಅವರ ಪಾತ್ರಗಳಲ್ಲಿ ಸ್ವಾತಂತ್ರ್ಯ ನಂತರದ ನಮ್ಮನ್ನೂ ಗುರುತಿಸಿಕೊಳ್ಳಬಹುದು. ಬಿ. ವಿ. ಕಾರಂತರು ಇವರ ಸತ್ತವರ ನೆರಳು ನಾಟಕವನ್ನು ತುಂಬ ಯಶಸ್ವಿ ಪ್ರಯೋಗವನ್ನಾಗಿ ಮಾಡಿದ್ದಾರೆ (ಅದೀಗ 100 ಪ್ರದರ್ಶನಗಳನ್ನೂ ದಾಟಿದೆ). ಅಲ್ಲದೆ ಕಡಡಿದ ನೀರು ನಾಟಕದ ನಿರ್ದೇಶನದಿಂದ ಪ್ರಸನ್ನ ಬೆಳಕಿಗೆ ಬಂದರು.

ಕನ್ನಡ ರಂಗಭೂಮಿಯ ಆಧುನಿಕತೆಗೆ ಗಿರೀಶ್ ಕಾರ್ನಾಡ್ ಮತ್ತು ಪಿ. ಲಂಕೇಶ್ ಇಬ್ಬರೂ ಪ್ರಮುಖ ಕೊಡುಗೆಗಳನ್ನು ನೀಡಿದ್ದಾರೆ. 1961ರಷ್ಟು ಹಿಂದೆ ಕಾರ್ನಾಡ್ ತಮ್ಮ ಯಯಾತಿಯನ್ನು ರಚಿಸಿದರು. ಅವರ ತುಘಲಕ್, ಮಾನಿಷಾದ, ಹಯವದನ, ಅಂಜುಮಲ್ಲಿಗೆ ಮತ್ತು ಹಿಟ್ಟಿನ ಹುಂಜ—ಹೀಗೆ ಒಟ್ಟು ಆರು ನಾಟಕಗಳು ಅವರಿಂದ ರಚಿತವಾಗಿವೆ. ಇವುಗಳಲ್ಲಿ ಪ್ರತೀಯೊಂದೂ ಬೇರೆ ಬೇರೆಯಾದ ರೂಪಕ ಸಾಮರ್ಥ್ಯದಿಂದ ರಂಗಭೂಮಿಗೆ ಆಧುನಿಕ ಕಾಣಿಕೆಯಾಗಿರುತ್ತದೆ. ಈ ನಾಟಕಗಳ ಕಥಾನಕಗಳು ಸಂಕೀರ್ಣವಾಗಿದ್ದು, ಪ್ರದರ್ಶನಕ್ಕೆ ಸವಾಲಾಗುತ್ತವೆ. ನಾಟಕದ ವಸ್ತುಗಳಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಮಾನವನ ಸ್ಥಿತಿಗತಿಯನ್ನೂ ಗುರುತಿಸಬಹುದಾಗಿದೆ. ಆದರೂ ಪಾತ್ರಗಳೆಲ್ಲಾ ಭಾರತೀಯ ಇತಿಹಾಸ ಮತ್ತು ಪುರಾಣಗಳಿಂದ ಒಡಮೂಡಿ 'ಕ್ಲಾಸಿಕಲ್' ಎನ್ನಬಹುದಾದ ರೀತಿ ನೀತಿಯಲ್ಲಿವೆ. ಬಿ. ಚಂದ್ರಶೇಖರ್ ಅವರು ತುಘಲಕ್ ನಾಟಕದ ಮೊದಲ ಯಶಸ್ವೀ ನಿರ್ದೇಶಕರಾದಂತೆ ಬಿ. ವಿ. ಕಾರಂತರು ಹಯವದನ ನಾಟಕದ ಯಶಸ್ವೀ ನಿರ್ದೇಶಕರಾಗಿದ್ದಾರೆ. ಇವರ ಯಯಾತಿ, ತುಘಲಕ್ ಮತ್ತು ಹಯವದನ ಮೂರೂ ಕೃತಿಗಳು ಪದೇ ಪದೇ ರಂಗದ ಮೇಲೆ ಕಾಣಿಸಿಕೊಳ್ಳುತ್ತಲೇ ಇವೆ. ತುಘಲಕ್ ಮತ್ತು ಹಯವದನ ಕೃತಿಗಳು ಇಂಗ್ಲಿಷ್ ಭಾಷೆಯಲ್ಲೂ ರಚಿತವಾಗಿ ಪಾಶ್ಚಾತ್ಯ ದೇಶಗಳಲ್ಲಿ ಪ್ರದರ್ಶಿತವಾಗಿವೆ. ಹಿಂದೀ ಭಾಷೆಯಲ್ಲಿ ತುಘಲಕ್ ಸುಪ್ರಸಿದ್ಧ ಅಲಕಾಜಿಯವರಿಂದ ನಿರ್ದೇಶಿತವಾಯಿತು. ಪಿ. ಲಂಕೇಶ್ ನಮ್ಮ ಸಮಕಾಲಿಕ ಬದುಕಿಗೆ ನೇರವಾದ ಸಂವೇದನೆಯಿಂದ ಕೂಡಿದ ನಾಟಕಕಾರರಾಗಿದ್ದಾರೆ. ಅವರ ಹತ್ತು ನಾಟಕಗಳಲ್ಲಿ ಎರಡು ಮಾತ್ರ ದೊಡ್ಡ ನಾಟಕಗಳು. ಅವರ ಏಕಾಂಕಗಳಲ್ಲಿ ತೆರೆಗಳು ಮತ್ತು ಕ್ರಾಂತಿ ಬಂತು ಕ್ರಾಂತಿ—ಪರಿಣಾಮದಲ್ಲಿ ದೊಡ್ಡ ನಾಟಕಗಳಿಗೆ ಸಮನಾಗುತ್ತವೆ. ಇವರ ಸಂಕ್ರಾಂತಿಯು ಈ ಶತಮಾನದಲ್ಲಿ ಬೆಳಕು ಕಂಡ ಐತಿಹಾಸಿಕ ನಾಟಕಗಳಲ್ಲಿ ಅತ್ಯುತ್ತಮವಾದುದೆಂದು ತೋರುತ್ತದೆ. ಇದರಲ್ಲಿ ಬಸವಣ್ಣನವರು ಮತ್ತು ಅವರ ಅನುಯಾಯಿಗಳಾದ ಹೊಲೆಯರನ್ನು ಮೊಟ್ಟಮೊದಲಿಗೆ ವಿಶ್ಲೇಷಿಸಿದ ವಸ್ತುವಿನಿಂದಾಗಿ, ಇಂದಿನ ಸಾಮಾಜಿಕ ಸ್ಥಿತಿಗತಿಯನ್ನೂ ಕುರಿತಂತಾಗಿದೆ. ಲಂಕೇಶರ ಪ್ರತಿಭೆಯಿಂದ ಒಡಮೂಡಿದ ಈ ಕೃತಿಯು ಕನ್ನಡ ನಾಟಕ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಮತ್ತು ಕ್ರಿಯಾಶೀಲ ಮಾದರಿಯೂ ಆಗಿದೆ. ಇದನ್ನು ಬಿ. ವಿ. ಕಾರಂತರು 1972ರಲ್ಲಿ ಅಚ್ಚಾಗುವುದಕ್ಕೂ ಮುಂಚೆ ನಿರ್ದೇಶಿಸಿದ್ದಾರೆ. ಶ್ರೀರಂಗರನ್ನು ಗಾಂಧೀವಾದಿ ಪ್ರಗತಿಶೀಲ ಧೋರಣೆಯ ಪ್ರತಿಪಾದನೆಗೆ ಗುರುತಿಸುವಂತೆ ಲಂಕೇಶರನ್ನು ಕನ್ನಡ ನಾಟಕಕಾರರಲ್ಲಿ ಸಮಾಜವಾದಿ ಮತ್ತು

ರಾಜಕೀಯ ಧೋರಣೆಯ ಪ್ರತಿಪಾದನೆಗೆ ಗುರುತಿಸಬಹುದಾಗಿದೆ.

ಉಳಿದವರಲ್ಲಿ ಚಂದ್ರಶೇಖರ ಕಂಬಾರರು ಜನಪದ ಪ್ರಜ್ಞೆಯ ಕವಿ. ಉತ್ತರ ಕರ್ನಾಟಕದ 19ನೇಯ ಶತಮಾನದ 'ಸಂಗ್ಯಾ ಬಾಳ್ಯಾ' ಎಂಬ ನಾಟಕವನ್ನು ಸಂಪಾದಿಸಿ ಪ್ರಸಿದ್ಧಿಗೆ ತಂದವರು (ಸಮಕಾಲಿಕ ರಂಗಭೂಮಿಯಲ್ಲಿ ಈ ನಾಟಕವು ಪ್ರಭಾವಿಯೂ ಆಯಿತು). ಕಂಬಾರರು ಜನಪದ ಕಥೆಗಳನ್ನು ಆಯ್ದುಕೊಂಡು ಅದರ ಸತ್ವವನ್ನು ಆಧುನಿಕ ನಾಟಕದಲ್ಲಿ ಬಳಸಿದರಲ್ಲದೆ, ಪ್ರಮುಖ ನಾಟಕಕಾರರೂ ಆದರು. ಅವರ ಎಂಟು-ಹತ್ತು ದೊಡ್ಡ ನಾಟಕಗಳಲ್ಲಿ ಜೋಕುಮಾರಸ್ವಾಮಿ ಎಂಬುದಕ್ಕೆ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ ದೊರಕಿತು. ಇದರಿಂದಾಗಿ ಹಿಂದಿಗೂ ಅನುವಾದವಾಗಿ ಅದು ಪ್ರದರ್ಶಿತವಾಯಿತು. (ಈ ಪ್ರಶಸ್ತಿಯು ಕಾರ್ನಾಡರ ತುಘಲಕ್ ಮತ್ತು ಹಯವದನ ಕೃತಿಗಳಿಗೂ ಲಭಿಸಿದೆ). ಈ ನಾಟಕವನ್ನು 1972ರಲ್ಲಿ ಬಿ. ವಿ. ಕಾರಂತರು ನಿರ್ದೇಶಿಸಿದರು. ಕರಿಮಾಯಿ ನಾಟಕವನ್ನು ಜಯಶ್ರೀಯವರು ನಿರ್ದೇಶಿಸಿರುತ್ತಾರೆ. ಋಷ್ಯಶೃಂಗ, ನಾರ್ಸಿಸಸ್, ಜೈಸಿದನಾಯಕ, ಕರಿಮಾಯಿ (ಇದೇ ಹೆಸರಿನ ಕಾದಂಬರಿಯ ರೂಪಾಂತರ), ಒಂದು ನಾಯಿಯ ಕತೆ, ಮೊದಲಾದುವು ಇವರ ಇತರ ಪ್ರಸಿದ್ಧ ನಾಟಕಗಳಾಗಿವೆ. ಈ ಕಾಲದ ತರುಣ ನಾಟಕಕಾರರಲ್ಲಿ ಚಂದ್ರಶೇಖರ ಪಾಟೀಲ, ನ. ರತ್ನ, ಎಂ. ಎಸ್. ಕೆ. ಪ್ರಭು ಮತ್ತು ಪೂಚಂತೇ ತುಂಬ ಗಮನಾರ್ಹ ನಾಟಕಗಳನ್ನು ರಚಿಸಿದ್ದಾರೆ. ಆದರೆ ಇವುಗಳು ದೊಡ್ಡ ನಾಟಕಗಳಲ್ಲ. ಆದರೂ ಆಧುನಿಕ ರಂಗಭೂಮಿಯಲ್ಲಿ ಉಳಿದಿರುವಂಥ ಕೃತಿಗಳಾಗಿವೆ. ಪ್ರಭು ಅವರ ಬಕ ಮಾತ್ರ ದೊಡ್ಡ ನಾಟಕ ಮತ್ತು ದೇಶದ ತುರ್ತು ಪರಿಸ್ಥಿತಿಯಲ್ಲಿ ಅದರ ಟೀಕೆಯನ್ನು ಒಳಗೊಂಡ ನಾಟಕವೂ ಆಗಿದೆ. ಪಾಟೀಲರ ಅಪ್ಪ, ಕುಂಟಕುಂಟ ಕುರವತ್ತಿ, ಟಿಂಗರ ಬುಡ್ಡಣ್ಣ, ನ. ರತ್ನರ ಎಲ್ಲಿಗೆ, ಗೋಡೆ ಬೇಕೆ ಗೋಡೆ, ಪೂಚಂತೇಯವರ ಯಮಳ ಪ್ರಶ್ನೆ ತುಂಬ ಪರಿಣಾಮಕಾರಿಯಾಗಿವೆ. ಕೀರ್ತಿನಾಥ ಕುರ್ತುಕೋಟಿಯವರ ಅಮನಿ, ರಾಮಚಂದ್ರರ ಶರ್ಮರ ನೀಲಿ ಕಾಗದ, ನೆರಳು, ಎ. ಕೆ. ರಾಮಾನುಜನ್‌ರ ಬ್ರಹ್ಮರಾಕ್ಷಸ, ಯು. ಆರ್. ಅನಂತಮೂರ್ತಿಯವರ ಆವಾಹನೆ ಇವುಗಳೂ ಆಧುನಿಕ ನಾಟಕಗಳಾಗಿವೆ. ಆದರೆ ಇವರು ಯಾರೂ ರಂಗಮಾಧ್ಯಮವನ್ನು ನಂಬಿಕೊಂಡ ಸಾಹಿತಿಗಳಾಗಿ ತೋರುವುದಿಲ್ಲ. ನಿಜಕ್ಕೂ ಕುರ್ತುಕೋಟಿಯವರ ಆ ಮನಿ 1958ರಲ್ಲಿ ಪ್ರಕಟವಾಗಿದ್ದು, ಕನ್ನಡದ ಮೊತ್ತಮೊದಲ ಆಧುನಿಕ ನಾಟಕವಾಗಿರುತ್ತದೆ. ಹಿರಿಯರ ಆಟವನ್ನಾಡುವ ಶಾಲೆಯ ಮಕ್ಕಳ ಕಥೆ ಒಂದು ರೋಮಾಂಚಕ ಅನುಭವ ನೀಡುತ್ತವೆ. ಕಿರಿಯರಿಗೆ ಇಲ್ಲಿ ಸಾವಿನ ಅರ್ಥ ಕೂಡ ಹೊಳೆಯುವಂತಿದೆ. ಇಂತಹ ಕಾವ್ಯಸತ್ವದಿಂದ ಈ ನಾಟಕವು ಜೀವಂತವಾಗಿದೆ. ಈ ಬಿಡಿ ನಾಟಕಗಳು ಒಂದು ವರ್ಗಕ್ಕೆ ಸೇರುತ್ತವೆ. ಇವುಗಳಲ್ಲಿ ಪಾಶ್ಚಾತ್ಯ ನಾಟಕಗಳ ಚಟುವಟಿಕೆಗಳಲ್ಲಿ ಪ್ರಸಿದ್ಧವಾದ ಅಸಂಗತವಾದ ಮತ್ತು ಅಸ್ತಿತ್ವವಾದದ ಅಂಶಗಳು ಕಂಡುಬರುತ್ತವೆ. ನಮ್ಮ ತರುಣರಲ್ಲಿ ಚಂದ್ರಕಾಂತ ಕುಸನೂರ ಎಂಬವರು ತಮ್ಮ ಮನೆ, ವಿದೂಷಕ, ಮೊದಲಾದ ಕೃತಿಗಳನ್ನು ಅಸಂಗತ ನಾಟಕಗಳೆಂದೇ ಕರೆದಿದ್ದಾರೆ. ಅಸಂಗತ ನಾಟಕಗಳೆಂದರೆ ಕೊನೇಪಕ್ಷ ರಂಗಪ್ರಯೋಗದ ಯಶಸ್ಸನ್ನು ಪಡೆದಿರುತ್ತವೆ ಎಂಬುದೂ ಮುಖ್ಯ.

1970ರ ದಶಕದಲ್ಲಿ ಬರ್ಟೊಲ್ಟ್ ಬ್ರೆಕ್ಟ್‌ನ ಪ್ರಯೋಗಗಳ ಪ್ರಭಾವ ಗಾಢವಾಯಿತು. ಆತನ ತಾಯಿ (ಮದರ್ 1933), ಮೂರು ಪೆನ್ನಿಯ ಅಪೆರಾ (ದಿ ತ್ರೀಪೆನ್ನಿ ಅಪೆರಾ 1933), ಸೆಜುವಾನಿನ ಒಳ್ಳೆಯವಳು (ದಿ ಗುಡ್ ಉಮನ್ ಆಫ್ ಸೆಜುವಾನ್ 1956), ಗೆಲೀಲಿಯೋ ಗ್ಯಾಲಿಲೀ, ದಿ ಕಕೇಷಿಯನ್ ಚಾಕ್ ಸರ್ಕಲ್ ಮತ್ತು ಕೆಲವು ಏಕಾಂಕಗಳು, (ಉದಾ : ಅಪವಾದ ಮತ್ತು ನಿಯಮ—ದಿ ಎಕ್ಸೆಪ್ಶನ್ ಅಂಡ್ ದಿ ರೂಲ್), ಆನೆಮರಿ (ದಿ ಬೇಬಿ ಎಲಿಫೆಂಟ್), ಇತ್ಯಾದಿ ಅನುವಾದಗಳಾಗಿ ಅಥವಾ ರೂಪಾಂತರ ಹೊಂದಿ ಕನ್ನಡ ರಂಗಭೂಮಿಗೆ ಬಂದುವು. ತರುಣ ನಿರ್ದೇಶಕರಾದ ಬಿ. ಎಸ್. ವೆಂಕಟರಾವ್, ಜಿ. ವಿ. ಶಿವಾನಂದ, ಪ್ರಸನ್ನ, ಸಿಂಹ ಮತ್ತು ಕ. ವೆಂ. ಅಲ್ಲದೆ ಎಚ್. ಕೆ. ರಾಮಚಂದ್ರಮೂರ್ತಿ ಸೇರಿದಂತೆ ಇಂಥ ಪ್ರಯೋಗಗಳಿಗೆ ಕಾರಣರಾದರು. ಇವರಲ್ಲಿ ಪ್ರಸನ್ನ ಮತ್ತು ಬಿ. ಎಸ್. ವೆಂಕಟರಾವ್‌ರ ಪ್ರಯೋಗಗಳು ಅಧಿಕ ಸಂಖ್ಯೆಯಲ್ಲಿವೆ. ಅದರಲ್ಲೂ ಪ್ರಸನ್ನರ ಮದರ್, ಗೆಲಿಲಿಯೋ ಗ್ಯಾಲಿಲೀ ನಾಟಕಗಳಂತಹ ಪ್ರಯೋಗಗಳಿಂದ ಮತ್ತು ವೆಂಕಟರಾವ್ ಅವರ ಪ್ರಯೋಗಗಳಿಂದ ಕನ್ನಡ ನಾಟಕದ ಮೇಲೆ ವಿಶೇಷ ಪ್ರಭಾವವುಂಟಾಯಿತು. ಅಲ್ಲದೆ ಪ್ರೊ॥ ಫಿಟ್ಜ್ ಬೆನೆವಿಟ್ಜ್ ಎಂಬ ಪಶ್ಚಿಮ ಜರ್ಮನಿಯ ರಂಗತಜ್ಞರೂ ನಿರ್ದೇಶಕರೂ ಬೆಂಗಳೂರಿಗೆ 1970, 73, 77 ಮತ್ತು 82ರಲ್ಲಿ ಬಂದು ಬ್ರೆಕ್ಟ್‌ನ ನಾಟಕಗಳನ್ನು ನಿರ್ದೇಶಿಸಿದ್ದಾರೆಯಲ್ಲದೆ ಎರಡು ಬಾರಿ ಪ್ರಸಿದ್ಧ ತರಬೇತಿ ಶಿಬಿರಗಳನ್ನೂ ನಡೆಸಿಕೊಟ್ಟಿದ್ದಾರೆ. ಇವರ ಪ್ರಯೋಗಗಳು ಮೊದಲಿಗೆ ಹಿಂದಿಯಲ್ಲಿ ನಡೆದಿದ್ದು 1982ರಲ್ಲಿ ಸಾಹುಕಾರ ಪುಟ್ಟಪ್ಪ ಮತ್ತು ಆತನ ಡ್ರೈವರ್ ಸೋಮು (ಪುಂಟಿಲಾ ಅಂಡ್ ಹಿಸ್ ಡ್ರೈವರ್ ಮಟ್ಟಿ)—ಕನ್ನಡದಲ್ಲೂ ಷೇಕ್ಸ್‌ಪಿಯರನ ದಿ ಮಿಡ್‌ಸಮರ್ ನೈಟ್ಸ್ ಡ್ರೀಂ—ಅನ್ನು ಹಿಂದಿಯಲ್ಲೂ 1982ರ ಜನವರಿಯಲ್ಲಿ ಉಡುಪಿಯಲ್ಲಿ ನಿರ್ದೇಶಿಸಿ ಪ್ರದರ್ಶನಗೊಳಿಸಿದ್ದಾರೆ. ಪ್ರಸನ್ನರು ದಂಗೆಯ ಮುಂಚಿನ ದಿನಗಳು ಮತ್ತು ತದ್ರೂಪಿ ನಾಟಕಗಳನ್ನು ರಚಿಸಿ ಪ್ರಯೋಗ ಮಾಡಿದರು. ಹೀಗಾಗಿ ಕನ್ನಡ ರಂಗಭೂಮಿಯ ಮೇಲೆ ಬ್ರೆಕ್ಟ್‌ನ ಪ್ರಭಾವವು ಢಟ್ಟವಾಗಿಬಿದ್ದಿದೆ.

1980ರ ದಶಕದಲ್ಲಿ ಮತ್ತೆ ಕೆಲವರು ತರುಣ ನಾಟಕಕಾರರೂ ರಂಗಪ್ರೇಮಿಗಳೂ ಸೇರಿಕೊಂಡರು. ಬಿ. ವಿ. ವೈಕುಂಠರಾಜು, ಶ್ರೀನಿವಾಸರಾಜು, ಟಿ. ಎನ್. ಸೀತಾರಾಮು,

ವಿಶುಕುಮಾರ್, ಶೂದ್ರ ಶ್ರೀನಿವಾಸ್ ಮತ್ತು ಡಿ. ಆರ್. ನಾಗರಾಜ್ ಮೊದಲಾದವರು ರಂಗಚಳವಳಿಯ ಹೊಸ ಹೆಜ್ಜೆಯನ್ನಿರಿಸಿದರು. ಬಿ. ವಿ. ವಿ. ರಾಜು ಅವರ ಎರಡು (ಮೂರು) ನಾಟಕಗಳು ಸಂದರ್ಭ ಮತ್ತು ಸನ್ನಿವೇಶ—ಇವೆರಡೂ ವಸ್ತುವಿಗೆ ತಕ್ಕಂತೆ ಹೊಸ ಹೆಜ್ಜೆಗಳನ್ನಿರಿಸಿದಂತಾಗಿವೆ. ಹಾಗೆಯೇ ಟಿ. ಎನ್. ಸೀತಾರಾಮ್‌ರ ಆಸ್ಫೋಟವು ನಮ್ಮ ಸಾಮಾಜಿಕ—ರಾಜಕೀಯ ಪರಿಸ್ಥಿತಿಯಲ್ಲಿನ ವಿರೋಧಾಭಾಸಗಳನ್ನು ಬೆಳಕಿಗೊಡ್ಡುವ ಸಮರ್ಥ ಕೃತಿಯಾಗಿದೆ. ಶ್ರೀನಿವಾಸರಾಜು ಈ ವೇಳೆಗೇ ಪ್ರಯೋಗವಾಗಿದ್ದ ಐದು ಮೂಕ ನಾಟಕಗಳನ್ನೂ ವಿಶಿಷ್ಟವಾದ ಮೂರು ಏಕಾಂಕಗಳನ್ನೂ ರಚಿಸಿದ್ದಾರೆ. 1) ನಾಳೆ ಯಾರಿಗೂ ಇಲ್ಲ, 2) ಯಾರಿಲ್ಲಿಗೆ ಬಂದವರು ಮತ್ತು 3) ಹೆದ್ದಾರಿಯಲ್ಲಿ ಒಂದು ರಾತ್ರಿ ಇವು ತುಂಬ ಗಂಭೀರವಾದ ಕೃತಿಗಳೆಂದು ಮಾತ್ರ ಹೇಳಬಹುದಾದಗಿದೆ. ಸಮುದಾಯ ಎಂಬ ತಂಡದ ಉದಯವು ದೇಶದ ಎಮರ್ಜೆನ್ಸಿಯ ದೆಸೆಯಿಂದಾಗಿದ್ದು ಅದರ ಮುಂದಾಳುಗಳಲ್ಲಿ ಒಬ್ಬರಾದ ಪ್ರಸನ್ನರು ಬ್ರೆಕ್ಟ್‌ನ ಹಾದಿಯಲ್ಲಿ ನಡೆದು ದಂಗೆಯ ಮುಂಚಿನ ದಿನಗಳು ನಾಟಕವನ್ನು ರಚಿಸಿ ಪ್ರದರ್ಶಿಸಿದರು. ಇದರ ವಸ್ತು ಪ್ರೇಮಚಂದ್ರರ ಶತರಂಜ್ ಕೆ ಕಿಲಾಡಿ ಎಂಬ ಕಥೆಯಿಂದ ಕೂಡಿದೆ. ಆದರೆ ಇದರಲ್ಲಿ ಸಮಕಾಲಿಕ ಟೀಕೆಯನ್ನು ರೂಪಿಸಲು ಯತ್ನಿಸಿರುವುದು ಒಂದು ವಿಶೇಷ. ಹೀಗೆಯೇ ವಿಶುಕುಮಾರರ ಡೊಂಕು ಬಾಲದ ನಾಯಕರು ನಾಟಕವು ಒಂದು ನೇರವಾದ ರಾಜಕೀಯ ವಿಡಂಬನೆಯಾಗಿರುತ್ತದೆ. ಹೀಗೆ ನೇರವಾಗಿ ಟೀಕೆಯಾಗುವಂಥ ಕೆಲವು ಚಿಕ್ಕ ನಾಟಕಗಳನ್ನು ಚಂಪಾ ಕೂಡ ರಚಿಸಿದ್ದಾರೆ. ಅವರ ಜಗದಂಬೆಯ ಬೀದಿ ನಾಟಕ, ಗೋಕರ್ಣದ ಗೌಡಸಾನಿ ಇವು ತೀಕ್ಷ್ಣವಾದುವು. ಇವುಗಳಲ್ಲಿ ಸಾಮಾನ್ಯವಾಗಿ ಕಟುವಾದ ಟೀಕೆ ಮಾತ್ರ ಬೆಳಗುತ್ತದೆ. ಇದನ್ನು ಬಿಟ್ಟರೆ ವಸ್ತುವು ತೀರಾ ದುರ್ಬಲವಾಗಿರುತ್ತದೆ. ಇಂಥ ನಾಟಕಗಳ ಪ್ರಯೋಗಗಳೂ ಪ್ರೇಕ್ಷಕರೂ ತೀರಾ ಹತ್ತಿರವಿರುತ್ತಾರೆಂಬುದು ನಮ್ಮ ರಂಗಭೂಮಿಯ ಪ್ರಗತಿಗೆ ಸೇರುವ ವಿಚಾರವೇ ಆಗಿರುತ್ತದೆಯಷ್ಟೆ. ತರುಣ ನಿರ್ದೇಶಕರಾದ ಎಂ. ಎಸ್. ಪ್ರಭು, ಬಾದರದಿನ್ನಿ, ನರಸಿಂಹನ್ ಮತ್ತು ಸಿ. ಜಿ. ಕೃಷ್ಣಸ್ವಾಮಿ, ಶ್ರೀಮತಿ ಮಾಲತಿ, ಮೊದಲಾದವರು ಇಂತಹ ನಾಟಕಗಳ ಈ ಅವಧಿಯಲ್ಲಿ ಬೆಳಕಿಗೆ ಬಂದವರು. ಆದರೆ ಆರ್. ನಾಗೇಶ್, ಪ್ರಸನ್ನ, ಜಯಶ್ರೀ ಮತ್ತು ಎಚ್. ವಿ. ವೆಂಕಟಸುಬ್ಬಯ್ಯ ಸುಮಾರು 1970 ರಿಂದಲೂ ರಂಗಭೂಮಿಯಲ್ಲಿ ದುಡಿಯುತ್ತಾ ಬಂದಿರುವ ನಿರ್ದೇಶಕರಾಗಿದ್ದಾರೆ.

## 1981ರಿಂದೀಚೆಗೆ

ಇತ್ತೀಚಿನ ನಾಟಕಕಾರರಲ್ಲಿ ಎಚ್. ಎಸ್. ಶಿವಪ್ರಕಾಶ್ ತಮ್ಮ ಮಹಾಚೈತ್ರ ಎಂಬ ದೊಡ್ಡ ನಾಟಕದಿಂದ ಒಂದು ಹೊಸ ಹೆಜ್ಜೆಯನ್ನೇ ಇರಿಸಿದ್ದಾರೆ. 12ನೇಯ ಶತಮಾನದ ವೀರಶೈವ ಕ್ರಾಂತಿಯನ್ನೂ ಅದರ ಮುಖ್ಯ ಘಟ್ಟವನ್ನೂ ವಸ್ತುವಾಗುಳ್ಳ ಲಂಕೇಶರ ಸಂಕ್ರಾಂತಿಯು, 1975ರ ವೇಳೆಗೆ ರಚಿತವಾದ ಕೆ. ವಿ. ನಾರಾಯಣರ ಹುತ್ತವ ಬಡಿದರೆ ನಾಟಕವು ಒಂದು ವಿಶಿಷ್ಟ ಕೃತಿಯಾಗಿದೆ. ಕಂಬಾರರರೂ ತಮ್ಮ ಹರಕೆಯ ಕುರಿ ಮತ್ತು ಹುಲಿಯ ನೆರಳು ನಾಟಕಗಳಿಂದ ಹೊಸ ಗುರುತುಗಳನ್ನು ಮಾಡಿದಂತೆ ಕಂಡುಬರುತ್ತದೆ. ಮತ್ತು ಶ್ರೀರಂಗರ ನಂತರ ರಂಗಭೂಮಿಯನ್ನು ತುಂಬ ಹಚ್ಚಿಕೊಂಡವರು ಎಂಬುದೂ ಸ್ಪಷ್ಟವಾಗುತ್ತಿದೆ.

ಈ ಬಗೆಯ ನಾಟಕದ ಬೆಳವಣಿಗೆಗೆ ಸೇರಿದಂತೆ ನಿರ್ದೇಶಕ ಸಿ. ಜಿ. ಕೃಷ್ಣಸ್ವಾಮಿ, ದೇವನೂರು ಮಹಾದೇವರ ಒಡಲಾಳವನ್ನು ನಾಟಕ ರೂಪಕ್ಕೆ ತಂದು ಅದರ ಪ್ರಯೋಗದಿಂದ ಹೆಸರನ್ನೂ ಗಳಿಸಿದ್ದಾರೆ. ಇವರ ನಿರ್ದೇಶನಕ್ಕೆ ಕಾರ್ನಾಡರ ಯಯಾತಿ ಮತ್ತು ಶಿವಪ್ರಕಾಶರ ಮಹಾಚೈತ್ರ ಸಮರ್ಥ ಪ್ರದರ್ಶನಗಳಾಗಿವೆ. ನಾಟಕಗಳ ಮೂಲಕ ಜೀವನದ ಅರ್ಥವನ್ನು ಹುಡುಕುತ್ತಾ ಹೋಗುವುದೂ ಪ್ರಜಾಪ್ರಭುತ್ವದ ವಿಶ್ವಾಸವನ್ನು ಮೂಡಿಸುವುದೂ ಈ ತರುಣ ನಿರ್ದೇಶಕರ ಜೀವಂತ ಗುರಿಯೆನ್ನುವಂತೆ ತೋರುತ್ತಿದೆ.

ಇಷ್ಟೇ ಅಲ್ಲದೆ ರಾಮಚಂದ್ರ ದೇವರ ರಥಮುಸಲ ಮತ್ತು ಕುದುರೆ ಬಂತು ಕುದುರೆ (ಸಹ ಕರ್ತೃ : ನರಸಿಂಹನ್), ಹೂಲಿ ಶೇಖರ್ ಅವರ ಕಲ್ಯಾಣದಲ್ಲಿ ಒಂದು ಕ್ರಾಂತಿ, ಸಿದ್ದಗಂಗಯ್ಯನವರ ಸ್ವರ್ಗಸ್ಥ, ಡಿ. ಆರ್. ನಾಗರಾಜ್ ಅವರ ಕತ್ತಲೆ ದಾರಿ ದೂರ, ನರಸಿಂಹನ್‌ರ ದಿ ಟಿಪಿಕಲ್ ಕೈಲಾಸಂ, ಮೇಘಮಿತ್ರರ ಎಚ್ಚಿತ್ತ ಏಕಲವ್ಯ (ಅನುವಾದಿತ ನಾಟಕವಾದ ಬುಟ್ಟೋ ಕೂಡ) ಮೊದಲಾದುವು ಅರ್ಥಪೂರ್ಣ ಪ್ರಯೋಗಗಳಾಗಿವೆ. ದಕ್ಷಿಣ ವಲಯದ ನಾಟಕ ಸ್ಪರ್ಧೆಯಲ್ಲಿ ಹುಲಿಯ ನೆರಳು ಎಂಬ ಕಂಬಾರರ ನಾಟಕವು ಆಯ್ಕೆಯಾಗಿತ್ತು. ಅದರ ನಿರ್ದೇಶಕ ಪ್ರಸನ್ನ.

ಸ್ವತಂತ್ರ ಕೃತಿಗಳ ಜೊತೆಗೆ ಅನುವಾದಗಳೂ ಹೇರಳವಾಗಿ ರಂಗಭೂಮಿಯನ್ನು ಕಂಡಿವೆ. ಕೆಲವು ಸಣ್ಣಕತೆಗಳನ್ನೂ ಕಾದಂಬರಿಗಳನ್ನೂ ನಮ್ಮ ತರುಣ ನಿರ್ದೇಶಕರು ರಂಗಭೂಮಿಗೆ ಅಳವಡಿಸುತ್ತಿರುವರಲ್ಲದೆ ಅಂಕುರ್ ಅವರು ಬಂದು ತೋರಿದ ನಿರೂಪಣಾ ಬಗೆಯನ್ನೂ ಬಳಸಿಕೊಳ್ಳುತ್ತಿದ್ದಾರೆ. ಇದರಿಂದ ಕಾದಂಬರಿಯ ಹೇಳಿಕೆಯು ಕೆಡದಂತೆ ಅದರ ನಾಟಕೀಯತೆಯೂ ರೂಪ ತಾಳುತ್ತದೆ. (ಇದನ್ನು ನ್ಯಾರೆಟಿವ್ ಥಿಯೇಟರ್ ಎನ್ನಬಹುದು). ಈ ಸಾಲಿನಲ್ಲಿ ಯು. ಆರ್. ಅನಂತಮೂರ್ತಿಯವರ ಸಂಸ್ಕಾರ, ಭಾರತೀಪುರ ಮತ್ತು ಅವಸ್ಥೆ, ಮೂರೂ ಕೃತಿಗಳೂ ಪ್ರದರ್ಶಿತವಾಗಿವೆ. ಕಂಬಾರರ ಕರಿಮಾಯಿಯನ್ನು

ಜಯಶ್ರೀ ನಿರ್ದೇಶಿಸಿದ್ದರು. ಸಿಂಗಾರವ್ವ ಮತ್ತು ಅರಮನೆ ಕಾದಂಬರಿಯನ್ನು ಬಾದರದಿನ್ನಿ ನಿರ್ದೇಶಿಸಿದ್ದರು. ಕುವೆಂಪು ಅವರ ಮಹಾಲಕ್ಷ್ಮೀ ಮನೆ ಮೇಷ್ಟರು (ಸಣ್ಣಕತೆ) ಮತ್ತು ದಿ ಟಿಪಿಕಲ್ ಕೈಲಾಸಂ—ಇವುಗಳನ್ನು ನರಸಿಂಹನ್ ರಚಿಸಿ ರಂಗ ಭೂಮಿಗೆ ತಂದರು.

ಇಂತಹ ಹಳೆಬರಾಗುತ್ತಾ ಬಂದಿರುವ ನಾಟಕ ನಿರ್ದೇಶಕರ ಜೊತೆಗೆ ಹೊಸದಾಗಿ ಸೇರಿಕೊಂಡಿರುವ ಕೆಲವರು ತರುಣ ಸಮರ್ಥ ನಿರ್ದೇಶಕರನ್ನೂ ಹೆಸರಿಸಬಹುದಾಗಿದೆ. ಇವರಲ್ಲಿ ಮಾಲತಿ, ರಘುನಂದನ್, ಗೋಪಾಲಕೃಷ್ಣ ನಾಯಿರಿ, ಜಯತೀರ್ಥ ಜೋಷಿ, ಚಿದಂಬರರಾವ್ ಜಂಬೆ, ಬಸವಲಿಂಗಪ್ಪ ಮತ್ತು ಜನಾರ್ದನರು ಪ್ರಮುಖರೆನ್ನಬಹುದು. ಇವರೆಲ್ಲಾ ನಾಟಕ ಶಿಬಿರಗಳನ್ನು ನಡೆಸುವುದರಲ್ಲಿ ನಿರತರೂ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ (ದೆಹಲಿ) ದಿಂದ ತರಬೇತಿಯನ್ನು ಪಡೆದವರೂ ಆಗಿರುತ್ತಾರೆ. ಇವರಿಂದ ಮುಖ್ಯವಾಗಿ ಆಧುನಿಕ ವೈವಿಧ್ಯವು ಬರುತ್ತಿದೆ. ಕೆರೆಗೆ ಹಾರ (ಜಾನಪದ), ಸಮಗಾರ ಭೀಮಪ್ಪ (ಕವಿತೆ), ಮೀಡಿಯಾ (ಅನು: ಗ್ರೀಕ್), ದೂತವಾಕ್ಯ (ಅನು: ಭಾಸ), ಮೃಚ್ಛಕಟಿಕ (ಅನು: ಶೂದ್ರಕ), ಮೊದಲಾದುವು ಹೊಸ ಹೊಸ ಶೈಲಿಗಳಲ್ಲಿ ಪ್ರದರ್ಶಿತವಾಗಿವೆ. ಜಂಬೆಯವರು ಕೆ. ವಿ. ಸುಬ್ಬಣ್ಣ ರೂಪಾಂತರಿಸಿ ಕೊಟ್ಟ ಅಚಿನ ಅಬೆಯವರ ಥಿಂಗ್ಸ್ ಫಾಲ್ ಅಪಾರ್ಟ್ ಎಂಬ ಇಂಗ್ಲಿಷ್ ಕಾದಂಬರಿಯನ್ನು ಕಪ್ಪು ಜನ, ಕೆಂಪು ನೆರಳು ಎಂಬುದಾಗಿ ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಜನಾಂಗದವರಿಂದ ಅಭಿನಯಿಸಿಸಿ ಒಂದು ಹೊಸ ಸುದ್ದಿಯಾಗಿ ಬಿಟ್ಟಿದ್ದಾರೆ. ನಮ್ಮ ರಂಗಭೂಮಿಯ ಸುದ್ದಿ ಸಮಾಚಾರಗಳಿಗೆ ಮೀಸಲಾದ 'ಸೂತ್ರಧಾರ' ಕಳೆದ ಐದು ವರ್ಷಗಳಿಂದ ಯಶಸ್ವಿಯಾಗಿ ಪ್ರಕಟವಾಗುತ್ತಿದೆ.

ಈ ರಂಗಭೂಮಿಯ ಚಳುವಳಿಯು ಹಲವು ಜಿಲ್ಲಾ ಕೇಂದ್ರಗಳಿಗೂ ಹರಡಿದೆ. ಅಂದರೆ ಬೆಂಗಳೂರಿನ ಪ್ರಯೋಗಗಳನ್ನು ಈ ಕೇಂದ್ರಗಳಲ್ಲಿ ಅಭಿನಯಿಸುವುದರ ಜೊತೆಗೆ ಕೆಲವು ಸ್ವತಂತ್ರ ಕೃತಿಗಳನ್ನೂ ಪ್ರಯೋಗಿಸುತ್ತಿದ್ದಾರೆ. ಇಂತಹ ಕೇಂದ್ರಗಳಲ್ಲಿ ಮೈಸೂರು, ಧಾರವಾಡ ಮತ್ತು ಮಂಗಳೂರು ಮುಂದುವರಿದಿದ್ದು ಕೆಲವು ಬೆಂಗಳೂರಿನ ಸಂಸ್ಥೆಗಳನ್ನು ನಾಟಕ ಅಕ್ಯಾಡೆಮಿಯ ನೆರವಿನಿಂದ ಬರಮಾಡಿಕೊಂಡು ನೋಡುವ ಪದ್ಧತಿಯೂ ಬೆಳೆಯುತ್ತಿದೆ. ಇದರಿಂದಾಗಿ ಜಿಲ್ಲೆಗೊಂದು ರಂಗಮಂದಿರ ಆಗಬೇಕೆಂಬ ಕರೆಯನ್ನು ಸರ್ಕಾರವೂ ಒಪ್ಪಿಕೊಂಡಿದೆ. ರಂಗ ತರಬೇತಿಯ ವಿಷಯದಲ್ಲಿ ಸಾಗರದ ಬಳಿಯ ಹೆಗ್ಗೋಡು ಎಂಬಲ್ಲಿ ಕೆ. ವಿ. ಸುಬ್ಬಣ್ಣ ಒಂದು ವಿಶಿಷ್ಟ ಸಂಸ್ಥೆಯನ್ನು ಪ್ರಾರಂಭಿಸಿ ಅದರಲ್ಲಿ ರಂಗ ಮತ್ತು ಬೆಳ್ಳಿತೆರೆಯ ಮಾಧ್ಯಮಗಳೆರಡರಲ್ಲೂ ವಿಚಾರವಂತಿಕೆಯನ್ನು ಬೆಳೆಸಲು ತೊಡಗಿ ಸಾಕಷ್ಟು ಯಶಸ್ಸನ್ನುಗಳಿಸಿದ್ದಾರೆ. ಇದಕ್ಕಾಗಿ ಡಾ|| ಶಿವರಾಮ ಕಾರಂತರ ರಂಗಮಂದಿರ ಎಂಬ ಕಟ್ಟಡವೂ ಸಿದ್ಧವಾಗಿದೆ. ಇದರಿಂದಾಗಿ ಮೊದಲಿಗೆ ಕೆ. ವಿ. ಸುಬ್ಬಣ್ಣನವರು ಪೋಸ್ಟಾಫೀಸ್ (ಠಾಕೂರ್) ಮತ್ತು ಬಿ. ವಿ. ಕಾರಂತರಿಂದ ಪಂಜರಶಾಲೆ ನಾಟಕವನ್ನು ಪ್ರಯೋಗಿಸಿ ಮಕ್ಕಳ ರಂಗಭೂಮಿಯ ಒಂದು ಚಳುವಳಿಯನ್ನೇ ಪ್ರಾರಂಭಿಸಿದಂತಾಯಿತು. ಇಂದಿಗೂ ಪಂಜರಶಾಲೆಯು ಮಕ್ಕಳ ರಂಗಭೂಮಿಯ ಅಮೂಲ್ಯ ಕೃತಿಯಾಗಿದೆ.

ಬೆಂಗಳೂರಿನಲ್ಲಿ ಮಕ್ಕಳ ರಂಗಭೂಮಿಗಾಗಿ ಬಾಲಭವನವಿರುವುದಲ್ಲದೆ ಪ್ರಭಾತ್ ಕಲಾವಿದರು ಗೋವಿನ ಕಥೆ, ಕಿಂದರಿ ಜೋಗಿ (ಕುವೆಂಪು), ಸಿಂಡ್ರೆಲ್ಲಾ (ಅನುವಾದ) ಮೊದಲಾದ ಗೀತ ನಾಟಕಗಳನ್ನು ಪ್ರಯೋಗಿಸುತ್ತಾ ಬಂದಿದ್ದಾರೆ. ಪ್ರೇಮಾ ಕಾರಂತರು ಮತ್ತು ಎನ್. ಎಸ್. ವೆಂಕಟರಾಂ ಮಕ್ಕಳ ರಂಗಭೂಮಿಯ ಬೆಳವಣಿಗೆಗಾಗಿ ಶ್ರಮಿಸುತ್ತಿರುವ ನಿರ್ದೇಶಕರಾಗಿದ್ದಾರೆ.

ಕನ್ನಡ ರಂಗಭೂಮಿಯ ಮತ್ತೊಂದು ಆಯಾಮವಾಗಿ ಬೀದಿ ನಾಟಕಗಳು ಬಳಕೆಯಲ್ಲಿವೆ. ಇದರ ಮೊದಲ ದಿನಗಳು ದೇಶದ ತುರ್ತು ಪರಿಸ್ಥಿತಿಯಲ್ಲಿ ಕಂಡು ಬಂದರೂ ಕ್ರಮೇಣ ಸಮುದಾಯ ಮತ್ತು ಕೆಲವು ನಿರ್ದೇಶಕರ ಆಶಯವಾಗಿ ಬೆಳೆಯುತ್ತಾ ಬಂದಿದೆ. ವಿಜಯಾ ರಚಿಸಿದ ಏಳು ಪ್ರಸಿದ್ಧ ಕೃತಿಗಳು ಈಗ ಪುಸ್ತಕ ರೂಪದಲ್ಲೂ ದೊರಕುತ್ತಿವೆ. ಎ. ಎಸ್. ಮೂರ್ತಿಯವರು ಇದರ ಪ್ರಯೋಗಗಳನ್ನು ಸಾಧಿಸುತ್ತಾ ಇದ್ದಾರೆ. ತರುಣ ನಿರ್ದೇಶಕ ಸಿ. ಜಿ. ಕೃಷ್ಣಸ್ವಾಮಿ ಕೂಡ ಬೆಲ್ಚಿ (ಬಾದಲ್ ಸರ್ಕಾರ್ ಅವರ ನೆರವಿನಿಂದ) ತಬರನ ಕಥೆ (ಪೂಚಂತೇ) ಎಂಬುವನ್ನೂ ಪ್ರಯೋಗಿಸಿದರು. ಈ ನಿಟ್ಟಿನಲ್ಲಿ ಕೋತಿಯ ಕತೆ, ಧನ್ವಂತರಿ ಚಿಕಿತ್ಸೆ, ಕೇಳ್ರಪ್ಪೋ ಕೇಳ್ರಿ, ಮೊದಲಾದವು ಪ್ರಯೋಗವಾಗಿ ಬಂದು ಬೀದಿ ನಾಟಕೋತ್ಸವವನ್ನು ನಡೆಸಿರುತ್ತಾರೆ. ಇದರಿಂದ ನಾಟಕ ಪ್ರಯೋಗಗಳಿಗೆ ಕೇರಿಕೇರಿಗಳಲ್ಲಿ ಪ್ರೇಕ್ಷಕರನ್ನು ಸೆಳೆದಂತೆ ಆಗಿರುತ್ತದೆ.

ಮೇಲೆ ಹೇಳಿದ ಹೊಸ ಅಲೆಯ ಭವಿಷ್ಯದಲ್ಲಿ ಕನ್ನಡ ರಂಗಭೂಮಿಯನ್ನು ಸ್ಥಿರ ನೆಲೆಯಲ್ಲಿ ನಿಲ್ಲಿಸುವ ಶಕ್ತಿಯನ್ನು ಹೊಂದಿದೆ. ರಾಜ್ಯದಲ್ಲಿ ಇಂದು ಸುಮಾರು 50 ಹವ್ಯಾಸೀ ಸಂಸ್ಥೆಗಳು ಕ್ರಿಯಾಶೀಲವಾಗಿವೆ. ಪ್ರತಿಯೊಂದು ಸಂಸ್ಥೆಯೂ ತಮ್ಮ ನಾಟಕ ಪ್ರಯೋಗಗಳು ಅತ್ಯಾಧುನಿಕ ತಂತ್ರದಿಂದ ಕೂಡಿರಬೇಕೆಂಬ ಪ್ರಜ್ಞೆಯನ್ನು ಹೊಂದಿವೆ. ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ ಶಾಲೆಯಲ್ಲಿ ಉತ್ತಮ ತರಬೇತಿ ಹೊಂದಿದ ವ್ಯಕ್ತಿಗಳು ನಡೆಸುವ ರಂಗ ತಾಲೀಮುಗಳಿಗೆ ನಾಟಕ ಅಕ್ಯಾಡೆಮಿಯು ತನ್ನ ಬೆಂಬಲ ನೀಡುವುದರ ಜೊತೆಗೆ ಅತ್ಯಾಧುನಿಕ ರಂಗತಂತ್ರಗಳ ತರಬೇತಿ ಗಳಿಸಲು ಆರ್ಥಿಕ ಸಹಾಯವನ್ನೂ ನೀಡುತ್ತದೆ.

1955ರಿಂದ ಮೊದಲು ಮಾಡಿ ಕೇಂದ್ರ ಸಂಗೀತ ನಾಟಕ ಅಕ್ಯಾಡಮಿಯು ಹಲವಾರು ಪ್ರಸಿದ್ಧ ಕಲಾವಿದರನ್ನು ಗೌರವಿಸುತ್ತಾ ಬಂದಿದೆ. ಅಭಿನಯಕ್ಕಾಗಿ ದಿ|| ಗುಬ್ಬಿ ವೀರಣ್ಣನವರು (1956) ಮತ್ತು ದಿ|| ಎಂ. ವಿ. ಸುಬ್ಬಯ್ಯ ನಾಯ್ಡು ಅವರಿಗೆ (1961), ನಾಟಕ ರಚನೆಗಾಗಿ ಆದ್ಯ ರಂಗಾಚಾರ್ಯರು (1963), ಗಿರೀಶ್ ಕಾರ್ನಾಡ್ (1972) ನಿರ್ದೇಶನಕ್ಕಾಗಿ, ಬಿ. ವಿ. ಕಾರಂತರಿಗೆ (1976) ನಿರ್ದೇಶಕರಾಗಿ, ರಂಗಸಜ್ಜಿಕೆಗಾಗಿ ವಿ. ರಾಮಮೂರ್ತಿಯವರಿಗೆ (1977), ನಾಟಕ ರಚನೆಗಾಗಿ ಪರ್ವತವಾಣಿಯವರಿಗೆ (1980), ಹಾಗೂ ಬಿ. ಜಯಮ್ಮ ಅವರಿಗೆ (1985) ಕೇಂದ್ರದಿಂದ ಗೌರವವು ಸಂದಿದೆ.

### ವೃತ್ತಿ ನಾಟಕ ಸಂಸ್ಥೆಗಳು

ಕರ್ನಾಟಕದಲ್ಲಿ ಹಲವಾರು ವೃತ್ತಿ ನಾಟಕ ಸಂಸ್ಥೆಗಳು ಬದುಕಿ ಬಾಳಿವೆ. ಅವುಗಳಲ್ಲಿ ಕೆಲವು ಮುಳುಗಿಹೋಗಿವೆ. ಇನ್ನು ಕೆಲವು ತಮ್ಮ ಹಳೆಯ ಹೆಸರನ್ನು ಬದಲಿಸಿಕೊಂಡು ಬದುಕಿವೆ. ಇಂಥ ಬದಲಾವಣೆಗೆ ಹೊಂದಿದಂತೆ ಒಡೆತನವೂ ಬದಲಾದುದಾಗಿದೆ. ಇಂಥ ಸಂಸ್ಥೆಗಳೆಲ್ಲದರ ಮಾಹಿತಿಯೊಂದನ್ನು ಸುಮಾರು 1961 ರವರೆಗೂ ಗುರುತಿಸಲಾಗಿದೆ. ಇವುಗಳಲ್ಲಿ ಕಂಪನಿಯ ಸ್ಥಳ ಮತ್ತು ಹುಟ್ಟಿದ ವರ್ಷವನ್ನು ಗುರುತು ಮಾಡಲಾಗಿವೆಯಷ್ಟೆ. ಅನೇಕ ಲಭ್ಯ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯಿಂದ ಕೂಡಿದ್ದರೂ ಈ ಪಟ್ಟಿಯು ಪೂರ್ಣವಲ್ಲದಿರಬಹುದು. ಬದಲಾವಣೆಗೆ ಅವಕಾಶವಿದೆ. (ನಾ—ನಾಟಕ; ಸ—ಸಭಾ; ಸಂ—ಸಂಘ; ಮಂ – ಮಂಡಳಿ; ಕಂ—ಕಂಪನಿ; ಕ—ಕಲಾವಿದರು) ಕರ್ನಾಟಕ ನಾ. ಕಂ. ಗದಗ (1872-73), ವೀರ ನಾರಾಯಣ ಪ್ರಾಸಾದಿತ ಕೃತಪುರ ನಾ. ಮಂ. ಗದಗ (1874), ಹಲಸಿಗೆ ನಾ. ಸ., ಹಲಸಿಗೆ (1878), ಶ್ರೀ ಚೆನ್ನಬಸವೇಶ್ವರಸ್ವಾಮಿ ಕೃಪಾ ಪೋಷಿತ ನಾ. ಸ., ಗುಬ್ಬಿ (1884), ರಾಜಧಾನಿ ನಾ. ಮಂ. (ದಿ ಮೆಟ್ರೋಪಾಲಿಟನ್ ಥಿಯೇಟ್ರಿಕಲ್ ಕಂಪನಿ), ಮೈಸೂರು (1881), ಶ್ರೀ ಚಾಮರಾಜೇಂದ್ರ ಕರ್ನಾಟಕ ನಾ. ಸ., ಮೈಸೂರು (1881),ರಸಿಕ ಜನಮನೋಲ್ಲಾಸಿನೀ ಸ. ಬೆಂಗಳೂರು (1883-86), ರಾಜಧಾನಿ ಸಂಗೀತಮೇಳ (ದಿ ಮೆಟ್ರೋಪಾಲಿಟನ್ ಅಪೆರಾಟಿಕ್ ಟ್ರೂಪ್), ಮೈಸೂರು (1883), ಶ್ರೀ ಸರಸ್ವತೀ ವಿಲಾಸ ಕರ್ನಾಟಕ ನಾ. ಸ. (1886), ತಂತು ಪುರುಷ ನಾ.ಮಂ., ಧಾರವಾಡ (1885), ರತ್ನಾವಲಿ ನಾ.ಕಂ., ಬೆಂಗಳೂರು (1890), ಗುಳೇದಗುಡ್ಡ ಬಾಲಕರ ಕಂ., ಗುಳೇದಗುಡ್ಡ (1885), ಬುಳ್ಳಪ್ಪನವರ ಕಂ., ಬೆಂಗಳೂರು (1895), ಬೆಂಗಳೂರು ನಾ ಸಂ., ಬೆಂಗಳೂರು (1900), ಸೀಡೆಡ್ ಡಿಸ್ಟ್ರಿಕ್ಟ್ ಅಸೋಸಿಯೇಷನ್, ಬೆಂಗಳೂರು (1900), ಮಳವಳ್ಳಿ ಸುಬ್ಬಣ್ಣ ನಾ. ಮ. (1900), ಕೊಣ್ಣೂರಕರ್ ಕಾಡಸಿದ್ದೇಶ್ವರ ಸಂಗೀತ ನಾ. ಮಂ. (1901), ಶ್ರೀ ಸರಸ್ವತೀ ವಿಲಾಸ ರತ್ನಾವಳೀ ಸ. (ದಿ|| ರತ್ನಾವಲೀ ಥಿಯೋಟ್ರಿಕಲ್ ಕಂ.,) ಮೈಸೂರು (1902), ತುಮಕೂರು ಕಂ. (1902), ಶಿರಹಟ್ಟಿ ನಾ. ಮಂ. (ಶ್ರೀ ಮಹಾಲಕ್ಷ್ಮೀ ಪ್ರಸಾದಿತ ನಾಟಕ ಮಂಡಲಿ, ಶಿರಹಟ್ಟಿ, (1903), ಭರತ ಕಲೋತ್ತೇಜಕ ಸಂಗೀತ ಸಮಾಜ, ಧಾರವಾಡ (1904), ಜೀವಾನಂದ ರತ್ನಾವಲಿ ನಾ. ಕಂ., ಗುಬ್ಬಿ (1905), ಕನ್ನಡ ಥಿಯೇಟರ್ಸ್ ಪ್ರೈವೇಟ್ ಲಿಮಿಟೆಡ್, ಮೈಸೂರು (1906), ಸರಸ್ವತೀ ನಾ. ಸ. (1907), ಸ್ತ್ರೀ ಸಂಗೀತ ನಾ. ಮಂ., ಲಕ್ಷ್ಮೇಶ್ವರ, ಹಾವೇರಿ, ಧಾರವಾಡ, ಇತ್ಯಾದಿ (1908), ಕೊಣ್ಣೂರು ನಾ. ಮಂ., ಕೊಣ್ಣೂರು (1908), ಕೊಪ್ಪಳ ನಾ.ಮ., ಕೊಪ್ಪಳ (1909), ಅಗಳಿ ಕಂ. (1910), ಶಾಕುಂತಲ ಕರ್ನಾಟಕ ನಾ. ಸ., ಬಾಗಲಕೋಟೆ (1910-11), ಶ್ರೀಕೃಷ್ಣವಿಲಾಸ ನಾ. ಸ. (1910), ಹೊಂಬಳ ಕಂ., ಹೊಂಬಳ (1912), ಹಳಹಳ್ಳಿ ಕಂ., ಹಳಹಳ್ಳಿ (1912), ದಿ ಕೊಟ್ಟೂರು ಟ್ರೂಪ್, ಕೊಟ್ಟೂರು (1912), ಕೊಣ್ಣೂರು ಕಂ. (ಭದ್ರಾಚಾರ್ಯ), ಕೊಣ್ಣೂರು (1913), ಶ್ರೀ ಚಾಮುಂಡೇಶ್ವರೀ ನಾ. ಸ., ಮೈಸೂರು (1914), ಶಾಬೂ ಶಾಹೇಬ್ ಕಂಪೆನಿ, ಮತ್ತು ಮನಮೋಹನ ಕಂಪೆನಿ, ದಕ್ಷಿಣ ಕನ್ನಡ (1914), ಒಥೆಲೋ ಥಿಯೇಟ್ರಿಕಲ್ ಯೂನಿಯನ್ (1914), ಐಯ್ಯಂಗಾರ್ ಕಂ., ಗ್ರಾಮಣಿ (1915), ಶಾರದಾ ನಾ.ಕಂ., ಮಳವಳ್ಳಿ (1915), ಶ್ರೀ ಕೃಷ್ಣ ಪಾರಿಜಾತ ನಾ. ಮ., ಗುಳೇದಗುಡ್ಡ (1919), ಶ್ರೀ ದತ್ತಾತ್ರೇಯ ನಾ. ಮ., ಗದಗ (1916), ಹಲಗೇರಿ ನಾ. ಮ., ಹಲಗೇರಿ (1916), ಸಾಹಿತ್ಯ ನಾ. ಸ. (1916), ಶೆಳ್ಳಿಕೇರಿ ನಾ.ಮಂ., ಶೆಳ್ಳಿಕೇರಿ (1920), ಮಹಾಲಕ್ಷ್ಮೀ ನಾ. ಕಂ., ದಾವಣಗೆರೆ (1921), ಶಾರದಾ ನಾ. ಶಾಲೆ, (ದಿ ಶಾರದಾ ಥಿಯೇಟರ್ ಲಿಮಿಟೆಡ್) ದಾವಣಗೆರೆ (1922), ಭಾರತ ಜನಮನೋಲ್ಲಾಸಿನಿ ನಾ. ಸ. (1924), ಬಾಲರತ್ನಾಕರ ನಾ. ಕಂ. (1925), ಭಾರತ ಸೇವಾ ಸಂಗೀತ ನಾ. ಮಂ., ಹುಬ್ಬಳ್ಳಿ (1925), ಬಾಲಕಲಾವರ್ಧಿನಿ ನಾ. ಸ., ಬೆಂಗಳೂರು (1925), ಚಂದ್ರಮೌಳೇಶ್ವರಸ್ವಾಮಿ ಕೃಪಾಪೋಷಿತ ನಾ. ಸ., ದೊಡ್ಡಬಳ್ಳಾಪುರ (1927), ಶ್ರೀ ದುರ್ಗಾಂಬಾ ಕೃಪಾ ಪೋಷಿತ ನಾ. ಸ., (1927), ಯಳಂದೂರು ಕಂ., ಯಳಂದೂರು, ಲಲಿತಕಲೋದ್ಧಾರ ನಾ. ಮಂ., ಇಳಕಲ್ (1928), ಚಂದ್ರಕಲಾ ನಾ. ಸಂ., ಬೆಂಗಳೂರು, ಅಲ್ಲಾಭಕ್ಷ್ ನಾ. ಮಂ., ಅಣ್ಣೀಗೇರಿ (1928), ಅಬ್ಬೀಗೇರಿ ನಾ. ಮಂ., ಅಬ್ಬೀಗೇರಿ (1928), ವಾಣೀವಿಲಾಸ ನಾ. ಮಂ., ಆಸುಂಡಿ (1930), ಅಂಬಾ ಪ್ರಸಾದಿತ ನಾ. ಮಂ., ಮಂಗಳೂರು (1930), ವಿಶ್ವಗುಣಾದರ್ಶ ನಾ. ಮಂ. ಧಾರವಾಡ (1931-34), ಕುಕನೂರು ಕಂ., ಬೆಂಗಳೂರು (1932), ಜೋಳದರಾಶಿ ಕಂ., ಬಳ್ಳಾರಿ, (1932), ವಿಶ್ವರಂಜಿನಿ ನಾ. ಮಂ. (ಹಕ್ಕಂಡಿ ವೀರಪ್ಪನವರ ಕಂ.) (1932), ಗುರುಸೇವಾ ಸಂಘ ನಾ ಮಂ., ಕಿತ್ತೂರು.

(1933), ಶ್ರೀ ಶಾರದಾ ಸಂಗೀತ ನಾ. ಮಂ., ಗೋಕಾಕ (1933), ಶ್ರೀ ಸರಸ್ವತೀ ಸುಪ್ರಸಾದಿತ ನಾ. ಸ. (1933), ಭಾಗ್ಯೋದಯ ಸಂಗೀತ ನಾ. ಮಂ. ಅಥಣಿ (1934), ಜಯಕರ್ನಾಟಕ ನಾಟ್ಯ ಸಂ., ಸಿದ್ದಾಪುರ (1936), ಶಾರದಾ ಸಂಗೀತ ನಾ. ಮಂ. (1937), ಲೋಕಸೇವಾ ನಾ. ಮಂ., ಸಂಪಗಾವ್ (1938), ವಿಶ್ವರಂಜನ ನಾ. ಮಂ., ಹಂದಿಗನೂರು (1939), ಕಲಾವೈಭವ ನಾ. ಸಂ. (1940), ಶ್ರೀ ಕುಮಾರೇಶ್ವರ ಕೃಪಾ ಪೋಷಿತ ನಾ. ಸ., ಗದಗ (1940), ಕುಮಾರ ವಿಜಯ ನಾ. ಸ., ಚಿತ್ತರಗಿ (1942), ಹಿರಣ್ಣಯ್ಯ ಮಿತ್ರ ಮಂಡಲಿ, ಬೆಂಗಳೂರು (1942), ಸತ್ಯನಾರಾಯಣ ನಾ. ಮಂ. (1942), ಅಕ್ಕಮಹಾದೇವಿ ಕೃಪಾ ಪೋಷಿತ ನಾ. ಸ., ಕೊಳ್ಳೇಗಾಲ (1943), ಶ್ರೀ ಸೋಮೇಶ್ವರ ನಾ. ಸ. (1943), ಇಂದಿರಾ ಲಲಿತ ಕಲಾ ಸೇವಾ ಮಂ. (1946), ಕೆ. ಬಿ. ಆರ್. ನಾ. ಮಂ., ದಾವಣಗೆರೆ (1948), ಕಲಾ ಪ್ರಕಾಶ ನಾ. ಸಂ., ಬ್ಯಾಡಗಿ (1950), ಸಮಾಜ ವಿಕಾಸ ನಾ. ಸಂ., ದೊಡ್ಡವಾಡ (1953), ಅಮರೇಶ್ವರ ನಾ. ಸಂ., ಸಿಂಧನೂರು (1957), ಸ್ತ್ರೀ ನಾ. ಮಂ. (1957), ಶೇಷ ಕಮಲ ನಾ. ಮಂ. (1957), ಸೀತಾಮನೋಹರ ನಾ. ಮಂ. (1957), ಹೊನ್ನಪ್ಪ ಭಾಗವತರ ಶ್ರೀ ಉಮಾಮಹೇಶ್ವರ ನಾ. ಮಂ. (1957) (ಇವು ನಾಲ್ಕೂ ದಾವಣಗೆರೆ ಕಂಪನಿಗಳು), ಶ್ರೀ ಸಿದ್ಧಲಿಂಗೇಶ್ವರ ನಾ. ಸ., ಪಡೇಸೂರು (1960), ಗಾಯತ್ರಿ ನಾ. ಸಂ. ಜಮಖಂಡಿ, (1960), ದತ್ತರಾಜ ಒಡೆಯರ್ ಕಂ. ಜಮಖಂಡಿ (1960), ಕಲಾವಿಲಾಸ ನಾ. ಮಂ., ವಿಜಾಪುರ (1961), ನಟರಾಜ ನಾ. ಸಂ., ಹೊಳೆ ಹಡಗಲಿ (1961), ವೀರಭದ್ರೇಶ್ವರ ನಾ. ಸಂ. ತಲವಣಿಕೆ (1961), ಶ್ರೀ ರಾಮಲಿಂಗೇಶ್ವರ ನಾ. ಮಂ., ಐಹೊಳೆ (1961), ಮತ್ತು ಇತರ ಸಂಸ್ಥೆಗಳು.

ಈ ಶತಮಾನದ ಪೂರ್ವಾರ್ಧದವರೆಗೂ ಜೀವಂತವಾಗಿದ್ದು ಹಲವಾರು ಕಾರಣಗಳಿಗಾಗಿ ಕಣ್ಮರೆಯಾಗಿಹೋದ ಹಲವಾರು ನಾಟಕ ಸಂಸ್ಥೆಗಳೂ ಇವೆ. ಅವುಗಳ ಕಾಲ ಮತ್ತು ಸ್ಥಳಗಳ ವಿವರಗಳು ನಿಖರವಾಗಿ ದೊರೆಯುವುದಿಲ್ಲ. ಅವುಗಳಲ್ಲಿ—ಸುಮನೋರಮ ಸ., ಸರಸವಿನೋದಿನಿ ಸ., ಸರಸ್ವತೀ ನಾಟಕ ಸ., ಕೊಟ್ಟೂರು ಬಸವೇಶ್ವರ ನಾ.ಮ., ಕೊಟ್ಟೂರು, ಪೆರಿಶಾಮ ಅಯ್ಯಂಗಾರ್ ಕಂ., ವ್ಯಾಸರಾವ್ ಡ್ರಮಾಟಿಕ್ ಕಂ., ಸಿದ್ದೇಶ್ವರ ಕೃಪಾಪೋಷಿತ ನಾ. ಮಂ. ಮತ್ತು ಮಲ್ಲೇಶ್ವರಂ ಕೃಪಾಪೋಷಿತ ನಾ. ಮಂ., ಹುಣಸಘಟ್ಟ, ಶ್ರೀ ವೀರ ಲಿಂಗೇಶ್ವರ ಕೃಪಾಪೋಷಿತ ನಾ. ಮಂ., ಅಂಬಳೆ, ಶ್ರೀ ರೇಣುಕ ಸಿದ್ದೇಶ್ವರ ಸಂಗೀತ ನಾ. ಮಂ., ಅರಸೀಕೆರೆ, ಶ್ರೀರಾಮಸೇವ್ಯ ನಾ. ಸಂ., ವಿಜಯಲಕ್ಷ್ಮೀ ನಾ. ಸ., ಗೊಲ್ಲರಪೇಟೆ ನಾ. ಸ., ಸಂಗೀತ ಸಾಗರ ಚಂದ್ರೋದಯ ಸ., ಸಿಟಿ ಅಪೆರಾ ಟ್ರೂಪ್, ಆರ್ಯ ರತ್ನಾವಳೀ ನಾ. ಸ., ಶಾರದಾವಿಲಾಸ ನಾ. ಸ., ತುಮಕೂರು, ಸಾಮ್ರಾಜ್ಯ ಲಕ್ಷ್ಮೀ ನಾ. ಸ., ಬೆಂಗಳೂರು, ಸೋಮೇಶ್ವರ ಕೃಪಾಪೋಷಿತ ಕ. ಸ., ಗುಬ್ಬಿ, ಶಾಂತರಾಜಪ್ಪನವರ ಕಂ., ಗುಬ್ಬಿ, ಗೋಪಾಲರಾಜ ಅರ್ಸ್ ಕಂ., ಅರೆವಳ್ಳಿ, ತಿಮ್ಮೋಜಪ್ಪ ಕಂ., ಸೋಮಶೇಖರ ವಿಲಾಸ ನಾ. ಮಂ., ಬೆಳ್ಳಾವೆ, ಶ್ರೀ ಪಂಚರತ್ನಾಕರ ನಾ. ಸ., ವರದಾಚಾರ್ಯ ಸ್ಮಾರಕ ಕರ್ನಾಟಕ ನಾ. ಸಂ., ಶ್ರೀ ರಾಮ ಸೇವಾ ನಾ. ಸಂ., ವಿಜಯಲಕ್ಷ್ಮೀ ನಾ. ಸ., ಶ್ರೀಮತಿ ಲಕ್ಷ್ಮೀಸಾನಿ ಮಂ., ಶ್ರೀ ಚಂದ್ರಮೌಳೇಶ್ವರ ನಾ. ಮಂ., ದಿ ಪಾಪ್ಯುಲರ್ ಥಿಯೇಟ್ರಿಕಲ್ ಕಂ., ಮೈಸೂರು, ಶ್ರೀ ಕಮಲಾಕರ ನಾ. ಸಂ., ಸ್ಟಾರ್ ಅಪೆರಾ ಟ್ರೂಪ್, ರಾಮ ಮನೋಹರ ನಾ. ಸ., ಶ್ರೀ ಚನ್ನಬಸವೇಶ್ವರ ಪ್ರಸನ್ನ ನಾ. ಮಂ., ಕನ್ನಡ ಥಿಯೇಟರ್ಸ್, ಕರ್ನಾಟಕ ನಾ. ಸ., ವಿದ್ವತ್‌ಜನ ಮನೋಲ್ಲಾಸಿನೀ ನಾ. ಸ., ಈಶ್ವರ್ಸ್ ಥಿಯೇಟ್ರಿಕಲ್ ಕಂ., ಬಾಲ ಗಂಧರ್ವ ಕಂ., ಶ್ರೀ ಶಾಂಭವಿ ಪ್ರಸಾದಿತ ನಾ. ಸಂ., ಆರ್ಯ ಕರ್ನಾಟಕ ನಾ. ಸ., ಮಹೇಶ ನಾ. ಸಂ., ನ್ಯಾಮತಿ, ಶ್ರೀ ಗಜಾನನ ನಾಟ್ಯ ಸಂ., ಜಮಖಂಡಿ, ವಾಣೀವಿಲಾಸ ನಾ. ಮಂಡಲಿ, ಇತ್ಯಾದಿ. ಶ್ರೀ ಹುಚ್ಚೇಶ್ವರ ನಾ. ಮಂ., ಹೊಳೇಹುಚ್ಚೇಶ್ವರ ನಾ. ಮಂ., ಕಲಾಪ್ರಕಾಶನ ನಾ. ಮಂ., ಕರ್ನಾಟಕ ಕಲಾ ಸಂ., ಮಹಾಕೂಟೇಶ್ವರ ಕೃಪಾಪೋಷಿತ ನಾ. ಸಂ., ಸಂಗಮೇಶ್ವರ ನಾ. ಮಂ., ಓಂಕಾರೇಶ್ವರ ನಾ. ಸಂ., ಮಲ್ಲಿಕಾರ್ಜುನ ನಾ. ಮಂ., ಭಾರತಿ ನಾಟ್ಯ ಸಂ., ಶಿವಯೋಗೀಶ್ವರ ನಾ. ಸಂ., ಶ್ರೀವೀರೇಶ್ವರ ನಾಟ್ಯ ಸಂ., ಕೊಟ್ಟೂರೇಶ್ವರ ನಾಟ್ಯ ಸಂ., ಭುವನೇಶ್ವರಿ ಕೃಪಾನಿಧಿ ಸಂ., ಶ್ರೀ ಅಮರೇಶ್ವರ ನಾಟ್ಯ ಸಂ.— ಮೊದಲಾದುವು ಮುಖ್ಯವಾಗಿ ಉತ್ತರ ಕರ್ನಾಟಕ ಭಾಗದಲ್ಲಿ 1970ರ ನಂತರ ಇದ್ದುವಾಗಿ ತಿಳಿದುಬರುತ್ತದೆ.

## ಹವ್ಯಾಸಿ ನಾಟಕ ಸಂಸ್ಥೆಗಳು

ಹತ್ತೊಂಬತ್ತನೇಯ ಶತಮಾನದ ಉತ್ತರಾರ್ಧದಲ್ಲಿ ಒಂದೆರಡು ಹವ್ಯಾಸಿ ಸಂಸ್ಥೆಗಳು ಮೈಸೂರಿನ ರಾಜಾಶ್ರಯ ಮತ್ತು ಕಾಲೇಜಿನ ಸಂಬಂಧದಲ್ಲಿ (ಅಥವಾ ಇಂಗ್ಲಿಷ್ ವಿದ್ಯಾಭ್ಯಾಸದ ಹಿನ್ನೆಲೆಯಲ್ಲಿ) ಇದ್ದಿರಬಹುದು. ಆದರೆ ಅವು ಷೇಕ್ಸ್‌ಪಿಯರ್‌ನ ಒಂದೆರಡು ಕೃತಿಗಳನ್ನು ಅಭಿನಯಿಸುವವರಾಗಿದ್ದಿರಲೂ ಬಹುದು ಎಂಬುದಕ್ಕೆ ಎಂ. ಎಸ್. ಪುಟ್ಟಣ್ಣನವರು ಷೇಕ್ಸ್‌ಪಿಯರ್‌ನ ಕಿಂಗ್ ಲಿಯರ್, ಸಿಂಬಲಿನ್ ಮತ್ತು ಹ್ಯಾಮ್‌ಲೆಟ್ ನಾಟಕಗಳನ್ನು ಅನುವಾದಿಸಿರುವುದೂ, ಆನಂದರಾವ್ ಎಂಬಾತ ರೋಮಿಯೋ ಆಂಡ್ ಜೂಲಿಯಟ್ ನಾಟಕವನ್ನು ಸುಮಾರು 1883-84ರ ವೇಳೆಗೆ ಅನುವಾದಿಸಿಕೊಟ್ಟಿರುವುದೂ ಸೂಚನೆಯನ್ನು ನೀಡುತ್ತಿವೆ. ಮೈಸೂರಿನ ಮಹಾರಾಜರಾಗಿದ್ದ

ಚಾಮರಾಜ ಒಡೆಯರವರು ಸಾಂಗ್ಲೀಕರ ನಾಟಕ ಮಂಡಲಿ ಮತ್ತು ವಿಕ್ಟೋರಿಯಾ ಪಾರ್ಸೀ ಕಂಪೆನಿಗಳ ಪ್ರದರ್ಶನಗಳನ್ನು 1876 ಮತ್ತು ನಂತರ ನೋಡಿದ್ದರ ಫಲವಾಗಿ ಮೈಸೂರಿನಲ್ಲೂ ರಂಗಭೂಮಿಯ ಅಭಿವೃದ್ಧಿಯಾಗಲು ಕಾರಣವಾಯಿತು. ಇಂತಹ ಪ್ರದರ್ಶನಗಳಿಂದ ಉತ್ತೇಜಿತರಾದ ರಾಯಲ್ ಸ್ಕೂಲಿನ ವಿದ್ಯಾರ್ಥಿಗಳು 1881ರಲ್ಲಿ 'ಪ್ರಹ್ಲಾದ' ಎಂಬ ಮರಾಠಿ ನಾಟಕವನ್ನು ಆಡಿದಂತೆ ತೋರುತ್ತದೆ. ರಾಯಲ್ ಸ್ಕೂಲ್‌ನ ವಿದ್ಯಾರ್ಥಿಗಳು, ರಾಜಸಭೆಯ ವಿದ್ವಾಂಸರುಗಳು, ಮತ್ತು ಅರಮನೆಯ ಕಲಾವಿದರು ಒಟ್ಟಾಗಿ ಶಾಕುಂತಲ ಕರ್ನಾಟಕ ನಾಟಕ ಸಭಾ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಮುಂದೆ 1882ರಲ್ಲಿ ಇದನ್ನು ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ ಎಂದು ಪುನರ್ನಾಮಕರಣ ಮಾಡಲಾಯಿತು. ಈ ಕಾಲದಲ್ಲಿ ಹಲವಾರು ತರುಣ ಕಲಾವಿದರು ಧಾರವಾಡದಲ್ಲಿ ಹಿಂದೂ ಯೂನಿಯನ್ ಕ್ಲಬ್ ಎಂಬ ಹವ್ಯಾಸಿ ಸಂಸ್ಥೆಯನ್ನು, ಕಿರ್ಲೋಸ್ಕರ್ ನಾಟಕ ಮಂಡಲಿ ಎಂಬ ಸಂಸ್ಥೆಯಿಂದ ಪ್ರೇರಿತ ರಾಗಿ 1893ರಲ್ಲಿ ಪ್ರಾರಂಭಿಸಿದರು. ಆಗಿನ ಕಾಲದಲ್ಲಿ ಕನ್ನಡ ನೆಲದಲ್ಲಿ ಮರಾಠಿ ನಾಟಕಗಳನ್ನು ಆಡುವುದು ಒಂದು ಶೋಕಿಯಾಗಿಬಿಟ್ಟಿತ್ತು. ಇದನ್ನು ವಿರೋಧಿಸಿ 1904ರಲ್ಲಿ ಧಾರವಾಡ ಜಿಲ್ಲೆಯ ಮದಿಹಾಳಿನ ಪ್ರಾಚ್ಯ ಕ್ರೀಡಾ ಸಂವರ್ಧಕ ಮಂಡಲಿಯು ಭರತ ಕಲೋತ್ತೇಜಕ ಸಂಗೀತ ಸಮಾಜವನ್ನು ಸ್ಥಾಪಿಸಿ ಕನ್ನಡ ನಾಟಕಗಳನ್ನು ಅಭಿನಯಿಸತೊಡಗಿತು. ಇದರಲ್ಲಿ ಬಹುಪಾಲು ಹವ್ಯಾಸಿ ಕಲಾವಿದರೇ ಸೇರಿದ್ದರು. ಆದರೆ ಇದರ ಕಲಾವಿದರು ಹೆಚ್ಚಾಗಿ ರೈಲ್ವೆ ನೌಕರಿಯಲ್ಲಿದ್ದ ಕಾರಣ, ಧಾರವಾಡದಲ್ಲಿದ್ದ ಕಛೇರಿಯನ್ನು ಮದರಾಸಿಗೆ ವರ್ಗಾಯಿಸಿದುದರಿಂದ, ಈ ಮಂಡಲಿಯು 1916ರಲ್ಲಿ ಕಣ್ಮರೆ ಯಾಯಿತು. ವಿಜಾಪುರದ ರುಕ್ಮಾಂಗದ ಮಂಡಲ (1894), ಬೆಂಗಳೂರಿನ ಅಮೆಚ್ಯೂರ್ ಡ್ರಮ್ಯಾಟಿಕ್ ಅಸೋಸಿಯೇಷನ್ (1909), ಹಾಸನದ ಅ. ಡ್ರ. ಕಂ. (1920), ಅಭಿನವ ನಾಟ್ಯ ಸಮಾಜ, ಜಮಖಂಡಿ (1921), ಗೌರ್ನಮೆಂಟ್ ಸೆಕ್ರಟೇರಿಯಟ್ ಕ್ಲಬ್ಬಿನ ನಾಟಕ ವಿಭಾಗ (ಡ್ರಮಾಟಿಕ್ ಸೆಕ್ಷನ್) (1923), ವಾಸುದೇವ ಅಮೆಚ್ಯೂರ್ ನಾ. ಮಂ., ಬಾಗಲಕೋಟೆ (1927), ಕರ್ನಾಟಕ ಸಂಘ, ಚನ್ನರಾಯಪಟ್ಟಣ (1934), ವಿದ್ಯಾರ್ಥಿ ಲಲಿತ ಕಲಾ ಸಂಘ, ಬಡೇಲಡಕು (1944), ಶಿವಯೋಗಿ ಬಕ್ಕೇಶ್ವರ ಸಂಗೀತ ನಾ. ಮಂ.—ಮುಂತಾದವು ಗಳನ್ನು ಹವ್ಯಾಸಿ ನಾಟಕ ಚಟುವಟಿಕೆಗಾಗಿ ಗುರುತಿಸಬಹು ದಾಗಿದೆ. ಅಲ್ಲಿಂದ ಮುಂದಕ್ಕೆ ಇಂಥ ಅನೇಕ ಸಂಸ್ಥೆಗಳು ಹುಟ್ಟಿ ಬೆಳೆದಿವೆ. ಇವುಗಳಲ್ಲಿ ಛಾಯಾ ಕಲಾವಿದರು, ರವಿ ಕ., ಕಲಾ ಜ್ಯೋತಿ ಕ., ಸಾಧನ ಕ., (ಸು: 1968), ಸರಸ್ವತೀ ಕಲಾನಿಕೇತನ (1965), ಸಿ. ಕೆ. ನಾಗರಾಜ ರಾಯರ ಗೆಳೆಯರ ಸಂಸ್ಥೆ, ಪ್ರಭಾತ್ ಕ., ಚಿತ್ರಾ ಕ., ಕನ್ನಡ ಸಾಹಿತ್ಯ ಕಲಾ ಸಂಘ, ರಂಗಮಂಟಪ, ಶಶಿ ಕ., ಶಕಶೈಲೂಷರು, ಲಲಿತ ಕಲಾ ನಿಕೇತನ, ಭೂಮಿಕಾ, ಅಭಿನಯ ತರಂಗ, ರಂಗಸಂಪದ, ಸಮುದಾಯ, ನಟರಂಗ, ಬೆನಕ, ಸೂತ್ರದಾರ ನಾಟಕ ಅಕ್ಯಾಡಮಿ, ರಮ್ಯ ಕ., ಮಲ್ಲಿಕಾ ಕ., ನಾಟ್ಯದರ್ಪಣ, ಕಲಾಗಂಗೋತ್ರಿ, ಸ್ಪಂದನ, ಪ್ರೇಕ್ಷಕ ಥಿಯೇಟರ್ಸ್, ಸಂಕೇತ್, ಆಕ್ರಾಂತ, ಯಶಸ್ವೀ ಕ., ಪ್ರಜಾವಾಣಿ ಲಲಿತ ಕಲಾ ಸಂಘ, ಸ್ಫೂರ್ತಿ— ಮುಂತಾದವು ಬೆಂಗಳೂರಿನಲ್ಲಿಯೂ, ರಂಗ ನಾಟಕ, ಸಮತೆಂತೋ (ಸರಸ್ವತಿಪುರ ಮಧ್ಯದ ತೆಂಗಿನ ತೋಟ), ಅಮರ ಕಲಾ ಸಂಘ, ಮಿತ್ರವೃಂದ ಇವೆಲ್ಲಾ ಮೈಸೂರಿನಲ್ಲಿಯೂ, ಮಂಡ್ಯ ಕ., ಮಂಡ್ಯ ನಾಟಕ ಕಲಾಸದನ, ಮಂಡ್ಯ ಶುಗರ್ ಟೌನ್ ಅಮೆಚ್ಯೂರ್ ಡ್ರಮ್ಯಾಟಿಕ್ ಕಂಪೆನಿ, ಇವೆಲ್ಲ ಮಂಡ್ಯ ದಲ್ಲಿಯೂ, ಉದಯ ಕ. ಮತ್ತು ಸರಸ್ವತೀ ಮಿತ್ರ ಮಂ., ಇವು ಸಾಗರದಲ್ಲಿಯೂ, ಛಾಯಾ ಕ. ಮತ್ತು ಕಲಾಸೇವಾ ಸಂಘ, ಇವು ಚಿಕ್ಕಮಗಳೂರಿನಲ್ಲಿಯೂ, ಮಿತ್ರವೃಂದ, ಬಾಲ ಭಾರತಿ ಸಂಘ, ಪ್ರತಿಭಾ ಆರ್ಟಿಸ್ಟ್ಸ್, ವಿಜ್ಞಾನೇಶ್ವರ ಕಲಾ ಸಂಘ, ಮತ್ತು ಮಿತ್ರಕಲಾ ಮಂಡಲಿ, ಇವು ಭದ್ರಾವತಿ ಯಲ್ಲಿಯೂ, ಐ. ಎಸ್. ಆರ್. ಸಂಘ, ಮತ್ತು ಮೂರ್ತಿ ಕಲಾಬಳಗ, ಇವು ಹೊಸಪೇಟೆಯಲ್ಲಿಯೂ, ರಾಘವ ಮೆಮೋ ರಿಯಲ್ ಅಸೋಸಿಯೇಷನ್, ಕಲಾಪ್ರೇಮಿ ಸಂಘಗಳು ಬಳ್ಳಾರಿ ಯಲ್ಲಿಯೂ ಭೂಮಿಕಾ (ಮಂಗಳೂರು), ಯವನಿಕಾ (ದಕ್ಷಿಣ ಕನ್ನಡ), ರಂಗಭೂಮಿ (ಉಡುಪಿ-1965), ರೂಪರಂಗ (ಕುಂದಾಪುರ), ಶ್ರೀ ನೀಲಕಂಠೇಶ್ವರ ನಾಟ್ಯ ಸೇವಾ ಸಂಘ, (ಹೆಗ್ಗೋಡು), ಸಹ್ಯಾದ್ರಿ ಕಲಾ ಸಂಘ (ತೀರ್ಥಹಳ್ಳಿ), ಕಲಾನಾಟಕ ಸಂಘ (ಶಿಕಾರಿಪುರ), ಲಾಲಬಹದ್ದೂರ್ ಕಲಾ ಸಂಘ (ಹೊಸನಗರ), ಕಲಾಸೇವಾ ಸಂಘ (ಅಜ್ಜಂಪುರ), ಪ್ರಯೋಗರಂಗ (ಧಾರವಾಡ), ಜ್ಯೋತಿ ಕಲಾ ಸಂಘ (ಹೊಳೆ ನರಸೀಪುರ), ಸ್ಕೌಟ್ ಕಲಾ ಸಂಘ (ಶಿವಮೊಗ್ಗ), ಎಸ್.ವಿ.ವಿ. ಕಲಾ ಬಳಗ (ಜೋಗ್ ಫಾಲ್ಸ್), ನಟರಾಜ ಕಲಾ ಮಂಡಲಿ (ಜಮಖಂಡಿ), ಕನ್ನಡ ಕಲಾ ಸಂಘ, (ತುಂಗಭದ್ರಾ ಅಣೆ ಕಟ್ಟು), ಮಿತ್ರವೃಂದ (ಬಿದರೆ), ಕರ್ನಾಟಕ ಥಿಯೇಟರ್ಸ್, ಮುಂಬಯಿ (1960), ಮೊದಲಾದುವು ಇತರ ಹವ್ಯಾಸಿ ಸಂಸ್ಥೆಗಳು.

ನಾಡಿನ ಹಲವು ನಾಟ್ಯ ಮಂದಿರಗಳೂ ನಾಟಕ ಪ್ರದರ್ಶನಕ್ಕೆ ಅವಕಾಶ ಮಾಡಿಕೊಟ್ಟಿರುವುದುಂಟು. ಇವುಗಳಲ್ಲಿ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರ, ಎ. ವಿ. ವರದಾಚಾರ್ ಮೆಮೋರಿಯಲ್ ಥಿಯೇಟರ್ಸ್, ಪುಟ್ಟಣ್ಣ ಚೆಟ್ಟಿ ಪುರಭವನ, ಗೋಖಲೆ ಇನ್‌ಸ್ಟಿಟ್ಯೂಟ್, ಮಲ್ಲೇಶ್ವರಂ ಲೇಡೀಸ್ ಎಸೋಸಿ ಯೇಷನ್, ಕೆನರಾ ಯೂನಿಯನ್ ಹಾಲ್, ಬಿಷಪ್ ಕಾಟನ್ಸ್ ರಂಗಮಂದಿರ, ಮೊದಲಾದುವನ್ನು ಗುರುತಿಸಬಹುದು. ಈಚೆಗೆ ನೃಪತುಂಗ ರಸ್ತೆಯಲ್ಲಿ 'ಯುವರಂಗ'ವಿದೆ. ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಹಲವಾರು ಪ್ರಸಿದ್ಧ ಇಂಗ್ಲಿಷ್ ನಾಟಕ ಗಳ ಪ್ರದರ್ಶನಕ್ಕೂ ಅವಕಾಶವಿತ್ತಿದೆ. ಇತರ ರಂಗಮಂದಿರ

ಗಳಲ್ಲಿ ಮೈಸೂರಿನ ಟೌನ್ ಹಾಲ್, ಕೆ. ಶಿವರಾಮ ಕಾರಂತ ರಂಗಮಂದಿರ (ಹೆಗ್ಗೋಡು), ಬಿದಿರಮ್ಮ ಯಕ್ಷರಂಗ ಭೂಮಿ (ಕೊನೇಹಳ್ಳಿ, ತಿಪಟೂರು ತಾಲೂಕು), ಪುಟ್ಟಣ್ಣ ಕಣಗಾಲ್ ರಂಗಮಂಟಪ (ಕಾಗಿನೆಲೆ), ಮೊದಲಾದುವನ್ನು ನೆನೆಯ ಬಹುದು. ರಾಜ್ಯದ ದೊಡ್ಡ ಪಟ್ಟಣಗಳಲ್ಲಿ ಬಯಲು ರಂಗ ಭೂಮಿಗಳೂ ಟೌನ್ ಹಾಲ್‌ಗಳೂ ಬಳಕೆಯಲ್ಲಿವೆಯಷ್ಟೆ. ಕೆಲವು ನಿಯತಕಾಲಿಕ ಪತ್ರಿಕೆಗಳು ರಂಗಭೂಮಿಯ ಬಗ್ಗೆ ಬಹು ಬೆಲೆಯುಳ್ಳ ಮಾಹಿತಿಯನ್ನೊದಗಿಸುತ್ತವೆ. ಹೀಗೆ ಬಂದವರಲ್ಲಿ ಹಳೆಯದೆಂದರೆ—ರಂಗಭೂಮಿ (1926). ನಾಂದಿ (1958), ರಂಗಮಂಟಪ (1972), ಸಮುದಾಯ ವಾರ್ತಾ ಪತ್ರ (1975), ಥಿಯೇಟರ್ (1975) (1930ರ ವೇಳೆಗೆ ಥಿಯೇಟರ್ ಎಂಬ ಇಂಗ್ಲಿಷ್ ಪತ್ರಿಕೆಯೂ ಇದ್ದುದುಂಟು) ಮತ್ತು ಸೂತ್ರಧಾರ (1979) ಇವುಗಳನ್ನೂ ಹೆಸರಿಸಬಹುದು.

## ಯಕ್ಷಗಾನ ರಂಗಭೂಮಿ

ಇತ್ತೀಚೆಗೆ ಯಕ್ಷಗಾನವೆಂದು ಕರೆಯುವ ಕಲೆಯು ಕರ್ನಾಟಕದಲ್ಲಿರುವ ಅನೇಕ ಜಾನಪದ ರಂಗರೂಪಕಗಳಲ್ಲಿ ಒಂದು. ಹಿಂದೆ ಇದನ್ನು ಬಯಲಾಟ, ಭಾಗವತರ ಆಟ, ಅಥವಾ ದಶಾವತಾರ ಆಟವೆಂದು ಕರೆಯುತ್ತಿದ್ದರು. ಹೀಗೆ ಕರೆಯುತ್ತಿದ್ದು ದಕ್ಕೆ ಕಾರಣ ಈ ಆಟಗಳನ್ನು ಸಂಗೀತ ನಾಟಕಗಳ ರೀತಿಯಲ್ಲಿ ರಚಿಸುತ್ತಿದ್ದುದು ಮತ್ತು ಈ ವಿಶಿಷ್ಟ ರೀತಿಯ ಸಂಗೀತವನ್ನೇ ಯಕ್ಷಗಾನವೆಂದು ಕರೆಯುತ್ತಿದ್ದುದು. ಈ ಪದವೇ ಈಗ ಈ ಬಗೆಯ ರಂಗರೂಪಕಕ್ಕೆ ಪರ್ಯಾಯವಾಗಿ ಬಂದಿದೆ.

ಚಿರಪರಿಚಿತ ಭಾರತೀಯ ಶಾಸ್ತ್ರೀಯ ಸಂಗೀತಗಳಾದ ಕರ್ನಾಟಕ ಮತ್ತು ಹಿಂದೂಸ್ಥಾನೀಯ ಜೊತೆಯಲ್ಲಿ, ಕರ್ನಾಟಕ ಮತ್ತು ಆಂಧ್ರ ಪ್ರದೇಶದಲ್ಲಿ ಅವುಗಳಷ್ಟೇ ಪ್ರಾಚೀನವಾದ ಸಂಗೀತವೊಂದು ಅಸ್ತಿತ್ವದಲ್ಲಿತ್ತು. ಇದನ್ನೇ 'ಯಕ್ಕಲಗಾನ' ಎಂದು ಕರೆಯುತ್ತಿದ್ದರು. ಆಂಧ್ರದಲ್ಲಿ ಇದೇ ರೀತಿಯ ಸಂಗೀತ ಗಾರರನ್ನು 'ಜಕ್ಕುಲು' ಎಂದು ಕರೆಯುತ್ತಿದ್ದರು. ಹಿಂದಿನ ಕನ್ನಡ ಕಾವ್ಯಗಳಾದ ಮಲ್ಲಿನಾಥಪುರಾಣ (1105) ಮತ್ತು ಚಂದ್ರಪ್ರಭ ಪುರಾಣ (1189) ಗಳಲ್ಲಿ ಇದರ ಪ್ರಸ್ತಾಪವಿದೆ. ಆದರೆ ನಂತರದ ಸಂತ ಶಾಸ್ತ್ರಜ್ಞರು ಇದನ್ನು ಕೇವಲ ಹೆಸರಿಸು ತ್ತಾರೆಯೇ ವಿನಾ ಅದರ ಲಕ್ಷಣವನ್ನು ತಿಳಿಸಿಲ್ಲ. ಆದರೆ ಕನ್ನಡ ಮತ್ತು ತೆಲುಗು ನಾಟಕ ಕರ್ತೃಗಳು ನಾಟಕಗಳನ್ನು ಬರೆಯಲು ಅಳವಡಿಸಿಕೊಳ್ಳದಿದ್ದರೆ ಈ ರೂಪಕವು ಮರೆತು ಹೋಗುತ್ತಿತ್ತು.

ಕರ್ನಾಟಕದಲ್ಲಿ 16ನೇಯ ಶತಕದಿಂದ 18ನೇಯ ಶತಕ ದವರೆಗೆ ಯಕ್ಷಗಾನಗಳು ಸಮೃದ್ಧವಾಗಿ ರಚಿತವಾಗಿರುವುದನ್ನು ಕಾಣುತ್ತೇವೆ. ಸುಮಾರು 16 ಮತ್ತು 17ನೇಯ ಶತಮಾನ ಗಳಲ್ಲಿ ಕೂಚಿಪುಡಿ ನೃತ್ಯಪಂಥದ ಸ್ಥಾಪಕನಾದ ಸಿದ್ಧೇಂದ್ರ ಯೋಗಿಯು ತನ್ನ 'ಆಟ'ಗಳನ್ನು ಯಕ್ಷಗಾನದ ಲಕ್ಷಣದಲ್ಲಿ ಬರೆದಿದ್ದಾನೆ. ಈ ಆಟದ ಲಕ್ಷಣದ ಉಲ್ಲೇಖವು ರಾಮ ಭದ್ರಾಂಬೆಯು ಬರೆದ ತನ್ನ ಗಂಡ ರಘುನಾಥರಾಯನ ಜೀವನ ಚರಿತ್ರೆಯಲ್ಲಿ ಉಲ್ಲೇಖಿತವಾಗಿದೆ. ಸಿದ್ಧೇಂದ್ರಯತಿಯ ಶಿಷ್ಯ ನಾದ ತೀರ್ಥನಾರಾಯಣ ಯತಿಯು ಈ 'ಆಟ'ಗಳನ್ನು ತಂಜಾ ವೂರಿಗೆ ಕೊಂಡುಹೋದನು. ಮೇಲಟ್ಟೂರ್ ಗ್ರಾಮದಲ್ಲಿ ಇವು ಇಂದಿಗೂ ಉಳಿದು ಬಂದಿವೆ. ಆದರೆ ಕರಾವಳಿ ಜಿಲ್ಲೆಗಳನ್ನು ಮತ್ತು ಅದರ ಹಿನ್ನಾಡನ್ನು ಬಿಟ್ಟರೆ ಎಲ್ಲಿಯೂ ಇದು ಜೀವಂತ ಜನಪದ ರಂಗವಾಗಿ ಕ್ರಿಯಾಶೀಲವಾಗಿಲ್ಲ ಮತ್ತು ಪ್ರೋತ್ಸಾಹಿ ಸಲ್ಪಟ್ಟಿಲ್ಲ. 300ಕ್ಕಿಂತಲೂ ಹೆಚ್ಚಿನ 'ಆಟ'ಗಳು ಈ ಪ್ರದೇಶ ದಲ್ಲಿ ರಚಿತವಾಗಿವೆ. ಇವುಗಳಲ್ಲಿ ಹೆಚ್ಚಿಗೆ ದಕ್ಷಿಣ ಕನ್ನಡದಿಂದಲೇ ಬಂದಿವೆ. ಹಿಂದಿನ ನಾಟಕ ಕರ್ತೃಗಳು ಈ ಯಕ್ಷಗಾನ ರೀತಿಯ ಸಂಗೀತವನ್ನು ತಮ್ಮ ಹಾಡುಗಳಲ್ಲಿ ಎಲ್ಲಾ ರೀತಿಯ ಭಾವನೆ ಗಳಿಗೂ ಮತ್ತು ಸನ್ನಿವೇಶಗಳಿಗೂ ಸಾಧ್ಯವಾದಷ್ಟು ಮಟ್ಟಿಗೆ ಉಪಯೋಗಿಸಿಕೊಂಡಿದ್ದಾರೆ. ಹಿಂದೆ ಉಪಯೋಗದಲ್ಲಿದ್ದ 160 ರಾಗಗಳಲ್ಲಿ ಇಂದಿನ ಭಾಗವತರು ಕೇವಲ ಸುಮಾರು 30ರಷ್ಟು ರಾಗಗಳನ್ನು ಮಾತ್ರ ಬಳಸಿಕೊಳ್ಳಲು ಸಮರ್ಥರಾಗಿದ್ದಾರೆ.

ಶಾಸ್ತ್ರೀಯ ಸಂಗೀತದಲ್ಲಿ ಕಾಣಬರದ ನೇಪಾಲಿ, ಗೂರ್ಜರಿ, ಮಾಧವಿ, ಪಂಚಗತಿ, ಗೋಪನಿತೆ, ಹೂವು, ದೀವಳಿ, ಚರಿತೆ, ಹಾರಾದಿ, ಮೇಚಲೆ, ಮುಂತಾದ ಅನೇಕ ಅಪರೂಪದ ರಾಗಗಳ ಹೆಸರುಗಳನ್ನೂ ಕಾಣುತ್ತೇವೆ. ಪ್ರತೀಯೊಂದು ಮನಸ್ಥಿತಿ ಮತ್ತು ಭಾವನೆಗಳನ್ನು ಪ್ರದರ್ಶಿಸಲು ಬೇಕಾದ ಶ್ರೀಮಂತ ಮತ್ತು ಶಕ್ತಿಶಾಲಿ ಹಾಡುಗಳ ಮಾದರಿಗಳೇ ಸಂಗೀತ ಕ್ಷೇತ್ರಕ್ಕೆ ಇದು ನೀಡಿರುವ ಮಹತ್ತರವಾದ ಕೊಡುಗೆ.

ಪ್ರತೀಯೊಂದು ಆಟವೂ ಒಂದೊಂದು ವಿಷಯವನ್ನು ಹೊಂದಿರುತ್ತದೆ. ಮತ್ತು ಕನ್ನಡ ಬರಹಗಾರರಿಗೆ ರಾಮಾಯಣ, ಭಾರತ, ಭಾಗವತ ಮತ್ತು ಪುರಾಣದ ಕತೆಗಳ ಅನೇಕ ತಾಯ್ನುಡಿಯ ರೂಪಾಂತರಗಳು ನೂರಾರು ನಾಟಕಗಳಿಗೆ ವಿಷಯ ಗಳನ್ನು ಒದಗಿಸಿದ್ದವು. ಇವುಗಳನ್ನು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ನಮ್ಮ ಹಳ್ಳಿಗಳವರ ಜೀವನದಲ್ಲಿ ಹಾಸುಹೊಕ್ಕಾಗಿರುವ ಇಂತಹ 'ವಸ್ತು'ಗಳನ್ನು ಅವರು ಅರಿಸಿ ಕೊಂಡಿರುವುದು ಸರಿಯಾಗಿಯೂ ಇದೆ. ಈ ರೂಪಕವು ರಾಮ ಕೃಷ್ಣರ ಲೀಲೆಗಳನ್ನು ಭಕ್ತಸಮುದಾಯದ ಮುಂದೆ ಪ್ರದರ್ಶಿ ಸುವ ಉದ್ದೇಶದಿಂದ ಬೆಳೆದಿರಬೇಕು. ಆಟದ ನಿರ್ದೇಶಕ ಅಂದರೆ ಭಾಗವತ ಅದರ ಪ್ರಮುಖ ವ್ಯಕ್ತಿಯಾಗಿ ಬರುತ್ತಾನೆ. ಅವನು ವಾದ್ಯಗಳೊಂದಿಗಿದ್ದು ಬೇಕಾದ ಸಂಗೀತವನ್ನು, ಕಥೆಯನ್ನು ಒದಗಿಸುತ್ತಾನೆ. ಹೇಳಬೇಕಾದ ಕೆಲವೇ ಮಾತುಗಳನ್ನು

ಬಿಟ್ಟರೂ, ಉಳಿದಂತೆ ಕಥೆಯು ರಾಗ ಮತ್ತು ತಾಳಗಳಿಂದ ಕೂಡಿರುತ್ತದೆ. ಇದು ಆಟದ ಭಾಗವೇ ಆಗಿರುವ ನೃತ್ಯ ಮಾಧ್ಯಮಕ್ಕೆ ತಾಳ ಲಯ ಗತಿಯನ್ನು ಒದಗಿಸುತ್ತದೆ. ಈ ಛಂದೋಬದ್ಧವಾದ ರಚನೆಯೇ ಇದರ ಮೂಲೋದ್ದೇಶವನ್ನು ಸಾರುತ್ತದೆ.

ಆಟಕ್ಕೆ ಬೇಕಾದ ಮೂಲ ನಿರೂಪಣೆಯು ಸಂಗೀತ ಮತ್ತು ನೃತ್ಯವನ್ನು ಒಳಗೊಂಡಿದ್ದು, ಈ ಎರಡಕ್ಕೂ ಸರಳ ಸಾಹಿತ್ಯ ಕಥೆಯು ಮೂಲ ವಸ್ತುವನ್ನೊದಗಿಸುತ್ತದೆ. ನೃತ್ಯವು ಚಂಡೆ, ಮದ್ದಳೆ ಮತ್ತು ತಾಳಗಳಂತಹ ಬಜಾವಣೆಯ ವಾದ್ಯಗಳ ನಾದದ ಸಂಯೋಜನೆಯಿಂದ ಕೂಡಿರುತ್ತದೆ. ಆಟದ ಆಟಗಾರರು ಕಾಲ್ಗೆಜ್ಜೆಗಳನ್ನು ಸಹ ಕಟ್ಟಿಕೊಂಡಿರುತ್ತಾರೆ. ಆದರೆ 'ಆಟ'ದ ತಿರುಳನ್ನು ಹಾಡಿನಲ್ಲಿರುವ ಸಾಹಿತ್ಯದ ಆಧಾರದ ಮೇಲೆ ತಟ್ಟನೆ ಬಾಯಿಮಾತಿನ ಮೂಲಕ ನೆರೆದ ಪ್ರೇಕ್ಷಕರಿಗೆ ಮನಮುಟ್ಟುವಂತೆ ಹೇಳಲಾಗುತ್ತದೆ. ಇದು ಉತ್ತಮಮಟ್ಟದ ಕಲಾ ಪ್ರದರ್ಶನ ವೆನಿಸಿದರೂ ಅದು ಸಂಗತವಾದ (ವಿಷಯಕ್ಕೆ ಸಂಬಂಧಪಟ್ಟ) ಮಾತಿನ ಮಿತಿಯನ್ನು ಮೀರುವ ಪ್ರದರ್ಶನವಾಗುವ ಅವಕಾಶವೂ ಉಂಟು.

'ತಾಳ ಮದ್ದಳೆ' ಎಂಬ ಜಾನಪದ ಪ್ರಾಕಾರದಲ್ಲಿ ಗದ್ಯ ಮತ್ತು ಸಂಗೀತವು ಅಗತ್ಯವಾದ ಮಾಧ್ಯಮಗಳನ್ನು ಒದಗಿಸು ತ್ತದೆ. ಕ್ರಿ. ಶ. 1550ರಷ್ಟು ಹಿಂದೆಯೇ ದೇವಾಲಯದ ಸಂಪ್ರದಾಯಗಳ ಅಂಗವಾಗಿ ಇದು ಮೂಡಿರಬಹುದು. ಆದರೆ ಇದರ ರಂಗಪ್ರಯೋಗದ ಸಾಮರ್ಥ್ಯದಲ್ಲಿ ಎಣ್ಣೆಯ ಪಂಜುಗಳ ಬೆಳಕಿನಲ್ಲಿ ಬಯಲಿನಲ್ಲಿ ಅಭಿನಯಿಸುವ ಈ ಆಟದ ವೇಷಭೂಷಣ ಮತ್ತು ಪ್ರಾಸಾದನಕ್ಕೆ ಅರ್ಧದಷ್ಟು ಪ್ರಾಶಸ್ತ್ಯ ಸಲ್ಲುತ್ತದೆ. ಪುರಾಣಗಳಲ್ಲಿ ಬರುವ ಅತಿಮಾನುಷ ದೇವತೆಗಳು, ರಾಕ್ಷಸರೇ ಮೊದಲಾದ ಪಾತ್ರಗಳು ತಮ್ಮ ಪಾತ್ರಗಳಿಗೆ ಉಚಿತವಾದ ಮತ್ತು ವಿಲಕ್ಷಣವಾದ ವಿವಿಧ ಉಡುಗೆ ತೊಡುಗೆಗಳನ್ನು ಧರಿಸುತ್ತಿದ್ದು ಗತಕಾಲದ ಪ್ರತಿಭಾವಂತರು ಇವುಗಳನ್ನು ಸೃಷ್ಟಿಸಿರುತ್ತಾರೆ.

ಕನ್ನಡ ಭಾಷೆ ಬಾರದ ಪ್ರೇಕ್ಷಕನೊಬ್ಬನ ಮನಸ್ಸನ್ನು ಅದರಲ್ಲಿ ಬಳಸಿರುವ ಪ್ರಾಸಾದನ ಮತ್ತು ತೊಡುಗೆಗಳ ಮಾಯಾ ಲೋಕವು ಸೂರೆಗೊಳ್ಳುತ್ತದೆ. ವಿಪುಲವಾದ ಸಂಗೀತ ಹಿನ್ನೆಲೆ ಇದಕ್ಕೆ ಪೋಷಕವಾಗಿ ಬರುತ್ತದೆ. ಆದರೆ ನೃತ್ಯದ ಅಂಶಗಳು ಇಲ್ಲಿ ಶೌರ್ಯ ಪ್ರದರ್ಶನಕ್ಕಾಗಿ ಬೆಳೆದುದಾಗಿದೆ. ಒಟ್ಟಾರೆ ಹೇಳುವುದಾದರೆ ಯಕ್ಷಗಾನ ರಂಗಭೂಮಿಯು ಶ್ರೀಮಂತವಾದ ಕೆಲವೇ ಪ್ರಕಾರಗಳಲ್ಲಿ ಇಂದಿಗೂ ಉಳಿದು ಬಂದಿರುವ ಒಂದು ಕಲೆಯಾಗಿದೆ. ಆದರೆ ಕಾಲ ಬದಲಾಗಿದೆ; ಮತ್ತು ಪ್ರಾಚೀನ ದೇವಾಲಯಗಳು ಒದಗಿಸುತ್ತಿದ್ದ ನೈತಿಕ ಮತ್ತು ಧಾರ್ಮಿಕ ಹಿನ್ನೆಲೆ ಹಿಂದಕ್ಕೆ ಸರಿದು ಈ ಕಲೆಯು ವ್ಯಾಪಾರೀಕರಣಕ್ಕೊಳ ಗಾಗಿ ಎಲ್ಲಾ ರೀತಿಯ ಕೀಳುದರ್ಜೆಯ ಮನರಂಜನೆಗೆ ಇಳಿಯು ವಂತಾಯಿತು. ಆದರೆ ರಂಗ ಪ್ರಯೋಗನಿರತ ಕಲೆಗಾರನು ಕರ್ನಾಟಕದಲ್ಲಿರುವ ಯಕ್ಷಗಾನದಿಂದ ಸ್ಫೂರ್ತಿಯ ಸೆಲೆಯನ್ನು ಪಡೆಯಬಹುದಾಗಿದೆ. ಈ ಶತಮಾನದ ಪ್ರಾರಂಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಅನೇಕ ದೇವಾಲಯಗಳು ನಡೆಸುತ್ತಿದ್ದ ಅನೇಕ ಯಕ್ಷಗಾನ ಮೇಳಗಳಿದ್ದವು. ಜಿಲ್ಲೆಯ ಉತ್ತರದಲ್ಲಿ ಸೌಕೂರು, ಮಾರನಕಟ್ಟೆ, ಮಂದರ್ತಿಗಳೂ, ದಕ್ಷಿಣದಲ್ಲಿರುವ ಮುಲ್ಕಿ, ಧರ್ಮ ಸ್ಥಳ, ಕೂಡ್ಲು ಸ್ಥಳಗಳ ಮೇಳಗಳು ಪ್ರಸಿದ್ಧವಾಗಿದ್ದವು. ಇವು ಗಳಲ್ಲಿ ಕೆಲವು ಒಂದೆರಡು ಶತಮಾನಗಳ ಕಾಲ ಚೆನ್ನಾಗಿ ಅಭಿವೃದ್ಧಿ ಹೊಂದಿದ್ದವು. ಸಂಬಂಧಿಸಿದ ದೇವಾಲಯಗಳು ಅವುಗಳ ನಿಧಿ ಯಿಂದ ಮತ್ತು ಆ ದೇವಾಲಯದ ಭಕ್ತರು ಉಚಿತವಾಗಿ ಪ್ರದರ್ಶನ ನೀಡಲು ನೀಡಿದ ಹಣದಿಂದ ಇವುಗಳ ನಿರ್ವಹಣೆ ಯಾಗುತ್ತಿತ್ತು. ಗ್ರಾಮಗಳಲ್ಲೂ ಸ್ಥಳೀಯರನೇಕರು ಇಂತಹ ಮೇಳಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ವಿಶೇಷ ಆಹ್ವಾನದ ಮೇರೆಗೆ ಪ್ರತೀ ರಾತ್ರಿ 'ಆಟ'ಗಳನ್ನು ಪ್ರದರ್ಶಿಸುತ್ತಿದ್ದರು. ಮೇಳಗಳಲ್ಲಿರುವ ನಟರು ಕೃಷಿಕ ವೃತ್ತಿಗಳಿಂದ ಬಂದವರಾಗಿದ್ದು, ವೃತ್ತಿಗಿಂತ ದೇವತಾ ಸೇವೆಯೆಂದು ತಿಳಿದೇ ಅವರು ದುಡಿಯು ತ್ತಿದ್ದರು. ಸಣ್ಣ ಪ್ರಾಯದಲ್ಲೇ ಆಸಕ್ತರು ಇಂತಹ ಮೇಳಗಳಲ್ಲಿ ಸೇರಿ ಅನೇಕ ವರ್ಷಗಳ ಕಲಿಕೆಯ ನಂತರ ಪ್ರೌಢ ಕಲೆಗಾರರಾಗು ತ್ತಿದ್ದರು.

ಈ ಶತಮಾನದ ನಾಲ್ಕನೇಯ ದಶಕದ ನಂತರ ಸಾಂಸ್ಥಿಕ ಮೇಳಗಳ ಸಂಘಟನೆಯ ವಸ್ತುಸ್ಥಿತಿ ಬೇರೆಯಾಯಿತು. ದೇವಾ ಲಯಗಳು 'ಆಟ'ಗಳನ್ನು ನಡೆಸುವ ಹಕ್ಕನ್ನು ಹರಾಜು ಹಾಕಲು ಪ್ರಾರಂಭಿಸಿದವು. ಈ ವೇಳೆಗೆ ವ್ಯಾಪಾರೀ ನಾಟಕ ಕಂಪನಿಗಳ ಪ್ರಭಾವ ಹೆಚ್ಚಾಗಿ ಜನರು ಆ ಕಡೆ ಒಲಿಯತೊಡಗಿದರು. ಮತ್ತು ಯಕ್ಷಗಾನದ ಕಲಾವಿದರೂ ಆ ಕಂಪನಿಗಳ ಉಡುಗೆ ತೊಡುಗೆಗಳನ್ನು ಅನುಸರಿಸುತ್ತಾ ನಿಧಾನವಾಗಿ ತಮ್ಮ ಪಾರಂಪರಿಕ ನೃತ್ಯವನ್ನು ಬಿಡಲಾರಂಭಿಸಿದರು. ಇನ್ನೊಂದು ನೆಲೆಯನ್ನು ಪಡೆಯುತ್ತಾ ಬಂದ ವಿಶೇಷ ಬದಲಾವಣೆಯೆಂದರೆ ವ್ಯಾಪಾರ ದೃಷ್ಟಿಯಿಂದ ಮೇಳಗಳನ್ನು ಟೆಂಟುಗಳಲ್ಲಿ ನಡೆಸುವುದು ಹಾಗೂ ಪ್ರವೇಶ ಶುಲ್ಕ ವಿಧಿಸುವುದು. ಇವುಗಳಿಂದ ಯಕ್ಷಗಾನ ರಂಗಭೂಮಿಯು ಬದಲಾಯಿತು.

ಈಗ ಹತ್ತನ್ನೆರಡು ವ್ಯಾಪಾರಿ ಮೇಳಗಳಿವೆ ಮತ್ತು ಕೆಲವೇ ಕೆಲವು ಭಕ್ತಜನರು ನಿರ್ವಹಣೆ ಮಾಡುತ್ತಿರುವ ದೇವಾಲಯದ ಮೇಳಗಳು ಉಚಿತ ಪ್ರದರ್ಶನ ನೀಡುತ್ತಿವೆ. ಜನರು ಸಾಮೂಹಿಕ ವಾಗಿ ತೋರಿಸುತ್ತಿರುವ ಈ ಬೆಂಬಲದಿಂದ ಇವು ಆರ್ಥಿಕವಾಗಿ ಫಲಪ್ರದವಾಗಿವೆ. ಯಕ್ಷಗಾನ ರಂಗಭೂಮಿಯ ಅನೇಕ ಸಾಂಪ್ರದಾಯಿಕ ರೀತಿನೀತಿಗಳು ಕೈಬಿಟ್ಟು ಹೋಗುವ ಹಾದಿ ಯಲ್ಲಿವೆ. ಗದ್ಯಕ್ಕೆ ಪ್ರಾಮುಖ್ಯತೆ ಬಂದು ನೃತ್ಯ ಹಿಂದೆ

ಬಿದ್ದಿದೆ. ಸಿನೀಮೀಯ ರೀತಿಯಲ್ಲಿ ರಂಜಿಸಲು ಪೌರಾಣಿಕ ತಳಹದಿ ಮೇಲೆ ನಿಂತಿದ್ದ ಹಳೆಯ ಜನಪ್ರಿಯ ಆಟಗಳನ್ನು ಹೊಸ ಬಗೆಯ ವಸ್ತು ವಿಷಯಗಳು ಮೂಲೆಗುಂಪನ್ನಾಗಿಸಿವೆ. ಪ್ರೇಕ್ಷಕರ ಮೆಚ್ಚುಗೆ ಗಳಿಸಲು ಕೀಳುದರ್ಜೆಯ ಸಂಭಾಷಣೆಗಳು ಬಳಕೆಗೆ ಬಂದಿವೆ. ಕೆಲವು ಪ್ರಮುಖ ಯಕ್ಷಗಾನ ಮೇಳಗಳೆಂದರೆ ಕರ್ನಾಟಕ ಮೇಳ, ದಕ್ಷಿಣ ಕನ್ನಡದ ಇರಾ, ಸುರತ್ಕಲ್, ಸಾಲಿಗ್ರಾಮ, ಧರ್ಮಸ್ಥಳ, ಅಮೃತೇಶ್ವರಿ, ಪೆರ್ಡೂರು ಮತ್ತು ಉತ್ತರ ಕನ್ನಡದ ಇಡುಗುಂಜಿ, ಮುಂತಾದವು. ಹಳೆಯ ದೇವಾಲಯದ ಮೇಳಗಳಲ್ಲಿ ಮಂದರ್ತಿ, ಕಟೀಲ್ ಮತ್ತು ಮಾರನಕಟ್ಟೆಯ ಮೇಳಗಳು ಇಂದಿಗೂ ಕ್ರಿಯಾಶೀಲವಾಗಿವೆಯಾದರೂ ಅಲ್ಲಿಯೂ ಹಳೆಯ ಆಟಗಳನ್ನು ಕೈಬಿಡುತ್ತಿರುವ ಪ್ರವೃತ್ತಿಯನ್ನು ಕಾಣ ಬಹುದು. ಆದರೆ, ವ್ಯಾಪಾರೀ ಮೇಳಗಳಲ್ಲಿನ ಜನಪ್ರಿಯ ನಟ ಭಾಗವತ ಮುಂತಾದವರ ಸ್ಥಿತಿಗತಿಗಳು ಆರ್ಥಿಕ ದೃಷ್ಟಿಯಿಂದ, ಉತ್ತಮವಾಗಿವೆ.

ಬಹುದಿನಗಳವರೆಗೂ ಆಸಕ್ತ ಯುವಕರಿಗೆ ಕ್ರಮಬದ್ಧ ವಾಗಿ ತರಬೇತಿ ನೀಡುವುದರತ್ತ ಗಮನ ಹರಿಸಿರಲಿಲ್ಲ. ಈಗ ಇದು ಬದಲಾಗಿದ್ದು, ಉಡುಪಿಯಲ್ಲಿ ಎಂ.ಜಿ.ಎಂ. ಕಾಲೇಜಿನವರು ನಡೆಸುತ್ತಿರುವ ಯಕ್ಷಗಾನ ಕೇಂದ್ರವೆಂಬ ತರಬೇತಿ ಶಾಲೆ ಇದೆ. ಅಲ್ಲಿ ಸುಮಾರು 12 ಜನ ವಿದ್ಯಾರ್ಥಿಗಳು ಸಾಂಪ್ರದಾಯಿಕ ನೃತ್ಯ ಮತ್ತು ಮಾದರಿಗಳನ್ನು ಅಭ್ಯಸಿಸುತ್ತಿದ್ದಾರೆ. ಇದೇ ರೀತಿಯ ತರಬೇತಿ ಕೇಂದ್ರಗಳನ್ನು 1972ರಿಂದ ಕೋಟ ಮತ್ತು ಧರ್ಮಸ್ಥಳ ಗಳಲ್ಲಿ ಪ್ರಾರಂಭಿಸಿರುತ್ತಾರೆ. ಯಕ್ಷಗಾನದ ಜೀವಂತ ಕಲೆಯ ರೀತಿಯ ಸಂಭವನೀಯತೆಯ ಬಗ್ಗೆ ಮತ್ತು ಅದರ ವಿಪುಲ ಪ್ರಾಸಾದನ, ನೃತ್ಯ ಮತ್ತು ಸಂಗೀತವೇ ಮೊದಲಾದ ಸಾಮರ್ಥ್ಯ ಗಳ ಬಗ್ಗೆ ಯೋಚಿಸಿದಾಗ ಜನರು ಇನ್ನೂ ಇದರ ಶ್ರೇಷ್ಠತೆ ಯನ್ನು ಅರಿತಿಲ್ಲದಿರುವುದು ವ್ಯಕ್ತವಾಗುತ್ತದೆ. ಈ ಕಲೆಯನ್ನು ಆಧುನಿಕ ರೀತಿಯಲ್ಲಿ ಸುಸಜ್ಜಿತಗೊಳಿಸುವ ಪ್ರಯತ್ನಗಳಿಗೆ ಸಾಕೂ ಸಾಕಾಗದಷ್ಟು ಗೌರವ ಅಥವಾ ಪ್ರೋತ್ಸಾಹ ದೊರಕಿದೆ. (ಕೆಳಗಿನ ಎರಡೂ ಪ್ಯಾರಾ ಗ್ಯಾಸೆಟಿಯರ್ ಕಚೇರಿಯಿಂದ ಸೇರಿಸಿದ್ದು).

ಅನೇಕ ಯಕ್ಷಗಾನ ಕಲಾವಿದರು, ತಮ್ಮ ಪ್ರತಿಭೆಯಿಂದ ಈ ಕಲೆಯನ್ನು ಶ್ರೀಮಂತಗೊಳಿಸಿರುತ್ತಾರೆ. ಅವರಲ್ಲಿ ದಕ್ಷಿಣ ಕನ್ನಡದ ವೀರಭದ್ರನಾಯಕ್, ಉಪ್ಪೂರು ನಾರಾಯಣ ಭಾಗವತ, ಐರೋಡಿ ಸದಾನಂದ ಹೆಬ್ಬಾರ್, ಪೊಳಲಿ ಶಂಕರ ನಾರಾಯಣಶಾಸ್ತ್ರಿ, ಮಲ್ಪೆ ಶಂಕರನಾರಾಯಣ ಸಾಮಗ, ಮೊವ್ವಾರು ಕಿಟ್ಟಣ್ಣ ಭಾಗವತ, ಅಳಿಕೆ ರಾಮಯ್ಯ ರೈ, ಹಾರಾಡಿ ಕೃಷ್ಣ ಗಾಣಿಗ, ಹಾರಾಡಿ ನಾರಾಯಣ ಗಾಣಿಗ, ಹಾರಾಡಿ ರಾಮ ಗಾಣಿಗ, ದಾಮೋದರ ಮಂಡೆಚ್ಚ, ಬಸವನಾಯ್ಕ್, ಬಲಿಪ ನಾರಾಯಣ ಭಾಗವತ, ಶೇಣಿ ಗೋಪಾಲಕೃಷ್ಣ ಭಟ್, ಕುಂಬಳೆ ಸುಬ್ಬರಾಯ, ಹಿರಿಯಡ್ಕ ಗೋಪಾಲರಾವ್, ಅಳಿಕೆ ಮೋನಪ್ಪ ರೈ, ಅಗರಿ ಶ್ರೀನಿವಾಸ ಭಾಗವತ, ಕುರಿಯ ವಿಠಲ ಶಾಸ್ತ್ರಿ ಮುಂತಾದವರು ಪ್ರಮುಖರು. ಉತ್ತರ ಕನ್ನಡದ ಕೆರೆಮನೆ ಶಿವರಾಮ ಹೆಗ್ಗಡೆ (1971ರಲ್ಲಿ ಕೇಂದ್ರ ಸಂಗೀತ ನಾಟಕ ಅಕ್ಯಾಡಮಿ ಬಹುಮಾನಿತರು), ಮಹಾಬಲ ಹೆಗ್ಡೆ, ಶಂಭು ಹೆಗ್ಡೆ, ಕೆ. ಸದಾನಂದ ಹೆಗ್ಗಡೆ, ಮೂಡಕಣಿ ನಾರಾಯಣ ಹೆಗ್ಗಡೆ, ಚಿಟ್ಟಾಣಿ ರಾಮಚಂದ್ರ ಹೆಗ್ಡೆ, ಕರ್ಕಿಯ ಹಾಸ್ಯಗಾರ ಮನೆತನದ ಕಲಾವಿದರು, ಹೊಸತೋಟ ಮಂಜುನಾಥ ಭಾಗವತ, ಮುಂತಾ ದವರು ಪ್ರಮುಖರು.

ಕರ್ನಾಟಕದ ಇತರ ಭಾಗಗಳಲ್ಲೂ ಯಕ್ಷಗಾನವು ಜನಪ್ರಿಯ ವಾಗಿದ್ದು, ಮೂಡಲಪಾಯವೆಂದು ಹೆಸರಾಗಿದೆ. (ನೋಡಿ, ಜಾನಪದ ಕಲೆಗಳು ಪುಟ 301). ಈ ಪ್ರಾಂತದಲ್ಲಿ ಶ್ರೀ ಕೃಷ್ಣ ಪಾರಿಜಾತದ ಕರ್ತೃವಾದ ಅಪರಾಳ ತಮ್ಮಣ್ಣ (1800), ಬೆಳಗಾವಿ ಜಿಲ್ಲೆಯ ಕುಲಗೋಡಿನ ತಮ್ಮಣ್ಣ (1860) ಮತ್ತು ಮೈಸೂರಿನ ಅಳಿಯ ಲಿಂಗರಾಜ (1823-1874) ರು ಪ್ರಮುಖ ಯಕ್ಷಗಾನ ಕವಿಗಳು. ಕರಾವಳಿ ಪ್ರದೇಶದಲ್ಲಿ ನಂಜಯ್ಯ (1860), ಪಾರ್ತಿ ಸುಬ್ಬ (1750-1830), ಹಳೇಮಕ್ಕಿ ರಾಮ, ಹಟ್ಟಿಂಗಡಿ ರಾಮಭಟ್ಟ, ಅಜಪುರದ (ಬ್ರಹ್ಮಾವರ) ವೆಂಕಟ, ನಿತ್ಯಾನಂದ ಅವಧೂತ, ಪಾಂಡೇಶ್ವರ ವೆಂಕಟ, ವಿಷ್ಣು ಸಭಾಹಿತ, ಗೇರುಸೊಪ್ಪೆ ಶಾಂತಪ್ಪಯ್ಯ, ನಗಿರೆ ಸುಬ್ರಹ್ಮಣ್ಯ, ಧ್ವಜಪುರದ ನಾಗಪ್ಪಯ್ಯ, ಪ್ರಖ್ಯಾತ ಕವಿ ಮುದ್ದಣ ಮತ್ತು ಹಲಸಿನಹಳ್ಳಿ ನರಸಿಂಹಶಾಸ್ತ್ರಿ ಪ್ರಮುಖ ಬರಹಗಾರರು. ದಕ್ಷಿಣ ಕನ್ನಡದಲ್ಲಿ ಈ ಯಕ್ಷಗಾನವು ಎರಡು ಭಾಗವಾಗಿ ತೆಂಕುತಿಟ್ಟು (ದಕ್ಷಿಣದ್ದು), ಬಡಗತಿಟ್ಟು (ಉತ್ತರದ್ದು) ಎಂದಾಗಿದೆ. ಪ್ರಾಸಾದನ, ನೃತ್ಯ ಮತ್ತಿತರ ವಿಷಯಗಳಲ್ಲಿ ಎರಡರಲ್ಲೂ ವ್ಯತ್ಯಾಸವಿದೆ. ಅನೇಕ ತೆಲುಗು ಯಕ್ಷಗಾನ ಕೃತಿಗಳೂ ಇದ್ದು ಇಂಥ ಕೃತಿಗಳ ಕವಿಗಳಲ್ಲಿ ವಿಜಯನಗರದ ಸಾಮಂತನಾಗಿದ್ದ ಬೆಂಗಳೂರಿನ ಕೆಂಪೇಗೌಡ ಒಬ್ಬನು. ಇವನು ಗಂಗಾಗೌರಿ ವಿಲಾಸಂ ಎಂಬ ಪ್ರಸಂಗ ಬರೆದಿದ್ದಾನೆ. ಮೈಸೂರರಸರ ಆಸ್ಥಾನದಲ್ಲೂ ಇಂತಹ ಅನೇಕ ಕೃತಿಗಳು ರಚಿಸಲ್ಪಟ್ಟಿವೆ. ಗೊಂಬೆ ಆಟದಲ್ಲೂ (ತೊಗಲು ಮತ್ತು ಸೂತ್ರದ ಬೊಂಬೆ) ಕೂಡ ಇವೇ ಪಾಠ ಅಥವಾ ಪ್ರಸಂಗ ಗಳನ್ನು ಬಳಸುತ್ತಾರೆ. ಇತ್ತೀಚೆಗೆ ತುಳು ಪ್ರಯೋಗಗಳು ಬಂದಿವೆ.

## ಕನ್ನಡ ಚಲನಚಿತ್ರಗಳು

ಕರ್ನಾಟಕದ ಚಿತ್ರೋದ್ಯಮಕ್ಕೆ ಆರು ದಶಕಕ್ಕೂ ದೀರ್ಘವಾದ ಇತಿಹಾಸವಿದೆ. ಆರಂಭದ ದಿನಗಳಲ್ಲಿ ಕರ್ನಾಟಕ ದಲ್ಲಿ ತಯಾರಾದ ಚಿತ್ರಗಳೆಂದರೆ ಕೇವಲ ಪರದೆಯ ಮೇಲೆ ಸರಿದಾಡುವ ಕನ್ನಡ ನಾಟಕಗಳೇ ಆಗಿದ್ದವು. 1924-25ರಷ್ಟು

ಮೊದಲೇ ಗುಬ್ಬಿ ವೀರಣ್ಣನವರ ನಾಟಕ ಕಂಪನಿಯ ಅಂದಿನ ಜನಪ್ರಿಯ ನಾಟಕ 'ಕಬೀರದಾಸ' ವನ್ನು ಚಿತ್ರೀಕರಿಸುವ ಯತ್ನ ನಡೆಯಿತೆಂದು ಕಾಣುತ್ತದೆ. 1929ರಲ್ಲಿ ಪ್ರಥಮ ಮೂಕ ಚಿತ್ರ ಮೃಚ್ಛಕಟಿಕ ತಯಾರಾಯಿತು. ಯೇಣಾಕ್ಷಿ ರಾಮರಾವ್ (ಬೆನೆಗಲ್), ಕಮಲಾದೇವಿ ಚಟ್ಟೋಪಾಧ್ಯಾಯ, ಟಿ. ಪಿ. ಕೈಲಾಸಂ, ಜಿ. ಕೆ. ನಂದಾ ಮುಂತಾದವರು ಅಭಿನಯಿಸಿದ ಈ ಚಿತ್ರಕ್ಕೆ ಮೋಹನ್ ಭವನಾನಿ ನಿರ್ಮಾಪಕ ಹಾಗೂ ನಿರ್ದೇಶಕ ರಾಗಿದ್ದರು. ಮುಂಬೈಯ ಹರಿಭಾಯಿ ಆರ್. ದೇಸಾಯಿ ಮತ್ತು ಭೋಗಿಲಾಲ್ ದವೆ ಎಂಬಿಬ್ಬರು ಉದ್ದಿಮೆಪತಿಗಳು 1930ರಲ್ಲಿ ದಕ್ಷಿಣ ಭಾರತದ ಪ್ರಥಮ ಸಿನಿಮಾ ಸ್ಟುಡಿಯೋವನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದರು. 'ಸೂರ್ಯ ಫಿಲ್ಮ್ ಕಂಪನಿ' ಎಂಬ ಹೆಸರಿನ ಈ ಸ್ಟುಡಿಯೋ ಮುಂದಿನ ನಾಲ್ಕು ವರುಷಗಳಲ್ಲಿ ಸುಮಾರು 40 ಮೂಕ ಚಿತ್ರಗಳನ್ನು ನಿರ್ಮಿಸಿತು. ಕನ್ನಡ ಚಲನಚಿತ್ರೋದ್ಯಮದ ಪ್ರಗತಿಗೆ ನಾಟಕರತ್ನ ಗುಬ್ಬಿ ವೀರಣ್ಣ ನವರ ಕೊಡುಗೆ ಗಮನಾರ್ಹವಾದುದು. 1929ರಲ್ಲಿ ದೇವುಡು ನರಸಿಂಹಶಾಸ್ತ್ರಿ, ಬೆಳ್ಳಿಯಪ್ಪನ ಅಲ್‌ಗುಡ್, ಗುಬ್ಬಿ ವೀರಣ್ಣ ಮುಂತಾದವರ ಸಹಕಾರದೊಂದಿಗೆ 'ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಶನ್' ಎಂಬ ಸಂಸ್ಥೆಯ ಸ್ಥಾಪನೆಯಾಯಿತು. ಈ ಸಂಸ್ಥೆಯ ಮೂಲಕವೇ ಹರಿಮಾಯೆ, ಸಾಂಗ್ ಆಫ್ ಲೈಫ್ ಮತ್ತು ಹಿಸ್ ಲವ್ ಅಫೇರ್ ಎಂಬ ಮೂರು ಮೂಕ ಚಿತ್ರ ಗಳನ್ನು ನಿರ್ಮಿಸಲಾಯಿತು. ಈ ಚಟುವಟಿಕೆಗಳಿಗೆಂದೇ 1931ರಲ್ಲಿ ಒಂದು ಸ್ಟುಡಿಯೋ ಕೂಡ ಸ್ಥಾಪನೆಯಾಯಿತು. ಈ ಮೂಕ ಚಿತ್ರಗಳಲ್ಲೇ ಅಲ್ಲದೇ ವೀರಣ್ಣನವರು ಮುಂದೆ ಸದಾರಮೆ (1935), ಸುಭದ್ರಾ (1941), ಜೀವನ ನಾಟಕ (1942), ಹೇಮರಡ್ಡಿ ಮಲ್ಲಮ್ಮ (1945), ಗುಣ ಸಾಗರಿ, ಬೇಡರ ಕಣ್ಣಪ್ಪ (1954) ಇವೇ ಮುಂತಾದ ಹಲವಾರು ವಾಕ್‌ಚಿತ್ರಗಳನ್ನು ನಿರ್ಮಿಸಿದರು. ಇದೇ ರೀತಿ 1930-31ರಲ್ಲಿ ಪುತ್ತೂರಿನಲ್ಲಿ ಡಾ|| ಶಿವರಾಮ ಕಾರಂತರು ಭೂತರಾಜ್ಯ ಮತ್ತು ಡೊಮಿಂಗೊ ಎಂಬ ಎರಡು ಮೂಕ ಚಿತ್ರಗಳನ್ನು ನಿರ್ಮಿಸಿದರು. ಡೊಮಿಂಗೊ ಚಿತ್ರ ಹರಿಜನರ ಉದ್ಧಾರ ಸಮಸ್ಯೆ ಯನ್ನು ಆಧರಿಸಿತ್ತು. 1933ರಲ್ಲಿ ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರು ಗತಿಸಿದ ನಂತರ ಅವರ ರತ್ನಾವಳಿ ಥಿಯೇಟ್ರಿಕಲ್ ಕಂಪನಿಯ ಕೆಲವು ನಟವರ್ಗದವರು ಸೇರಿ ಜಯವಾಣಿ ಫಿಲ್ಮ್ಸ್ ಆಫ್ ಬಾಂಬೆ ಎಂಬ ಶಿರೋನಾಮೆ ಯೊಂದಿಗೆ ಭಕ್ತ ಧ್ರುವ ಚಿತ್ರ ನಿರ್ಮಿಸಿದರು. ಇದರಲ್ಲಿ ವರದಾಚಾರ್ಯರ ಮೊಮ್ಮಗ ಮುತ್ತು ಧ್ರುವನ ಪಾತ್ರ ಅಭಿನಯಿಸಿದರು. ಕನಕಲಕ್ಷ್ಮಮ್ಮ, ಟಿ. ಸುನಂದಮ್ಮ, ಎಂ. ಜಿ. ಮರಿರಾವ್, ನಾಗೇಶ್ವರರಾವ್ ಮುಂತಾದವರು ಇತರ ಪ್ರಮುಖ ಪಾತ್ರಗಳಲ್ಲಿದ್ದರು. ಇದೇ ಕನ್ನಡದ ಪ್ರಥಮ ಮಾತಾಡುವ ಚಲನಚಿತ್ರ. 1934ರಲ್ಲಿ ನಿರ್ಮಾಣಗೊಂಡು ಅದೇ ವರುಷ ಏಪ್ರಿಲ್ ತಿಂಗಳಲ್ಲಿ ಈ ಚಿತ್ರವು ಬಿಡುಗಡೆಯಾಗುವ ತುಸು ಮುಂಚೆ ಸತಿ ಸುಲೋಚನಾ ಎಂಬ ಇನ್ನೊಂದು ಚಿತ್ರ ಬೆಂಗಳೂರಿನ ಪ್ಯಾರಾಮೌಂಟ್ ಚಿತ್ರಮಂದಿರದಲ್ಲಿ ಬಿಡುಗಡೆ ಯಾದ್ದರಿಂದ ಭಕ್ತ ಧ್ರುವ ಚಿತ್ರಕ್ಕೆ ಎರಡನೇಯ ಕನ್ನಡ ವಾಕ್ಚಿತ್ರವೆಂಬ ಪಟ್ಟ ಲಭಿಸಿತು. ಸತೀ ಸುಲೋಚನ ಚಿತ್ರಕ್ಕೆ ಬೆಳ್ಳಾವೆ ನರಹರಿ ಶಾಸ್ತ್ರಿಯವರು ಸಂಭಾಷಣೆ ಬರೆದಿದ್ದು, ವೈ. ವಿ. ರಾವ್ ನಿರ್ದೇಶನದಲ್ಲಿ ಎಂ. ವಿ. ಸುಬ್ಬಯ್ಯ ನಾಯ್ಡು, ಆರ್. ನಾಗೇಂದ್ರ ರಾವ್, ತ್ರಿಪುರಾಂಬಾ ಮತ್ತು ಸಿ. ಟಿ. ಶೇಷಾಚಲಂ ಇವರಂಥ ಪ್ರಮುಖರು ಇದರಲ್ಲಿ ಪಾತ್ರಧಾರಿಗಳಾಗಿ ದ್ದರು.

1935ರಲ್ಲಿ ಗುಬ್ಬಿ ವೀರಣ್ಣನವರು ತಮ್ಮ ಜನಪ್ರಿಯ ನಾಟಕ ಸದಾರಮೆಯನ್ನು ತೆರೆಗೆ ತಂದರು. ತುಂಬ ಜನಪ್ರಿಯತೆ ಗಳಿಸಿದ ಈ ಚಿತ್ರದಲ್ಲಿ ವೀರಣ್ಣನವರೇ ಪ್ರಮುಖ ಪಾತ್ರ ವಹಿಸಿದ್ದರು. ಕನ್ನಡ ಚಲನಚಿತ್ರರಂಗಕ್ಕೆ ಹೊಸ ಆಯಾಮ ವನ್ನೇ ದೊರಕಿಸಿಕೊಟ್ಟ ಈ ಚಿತ್ರದ ಮೂಲಕ ಪ್ರತಿಭಾವಂತ ನಟ ನಿರ್ದೇಶಕ ಬಿ. ಆರ್. ಪಂತುಲು ಮತ್ತು ಎಂ. ವಿ. ರಾಜಮ್ಮ ಬೆಳಕಿಗೆ ಬಂದರು. 1936ರಲ್ಲಿ ಸೇಲಂನ ರಾಜ ಗೋಪಾಲ ಚೆಟ್ಟಿಯವರು ದಕ್ಷಿಣ ಭಾರತದ ಪ್ರಥಮ ಸಾಮಾಜಿಕ ಚಿತ್ರ ಸಂಸಾರ ನೌಕ ನಿರ್ಮಿಸಿದರು. ರಾಜಸೂಯ ಯಾಗ ಸಂಪೂರ್ಣವಾಗಿ ಕರ್ನಾಟಕದಲ್ಲೇ ಚಿತ್ರೀಕರಣಗೊಂಡ ಮೊಟ್ಟ ಮೊದಲ ಚಿತ್ರವಾಗಿದ್ದು, ಅದೇ ವರ್ಷ ಬೆಂಗಳೂರಿನಲ್ಲಿ ಮೈಸೂರ್ ಸೌಂಡ್ ಸ್ಟುಡಿಯೋ ಸ್ಥಾಪನೆಯಾಯಿತು. ನಂತರ ತಯಾರಾದ ಚಿತ್ರಗಳಲ್ಲಿ ಪುರಂದರ ದಾಸ ಮತ್ತು ಭಕ್ತ ಮಾರ್ಕಂಡೇಯ (1937), ಸುಭದ್ರಾ ಮತ್ತು ವಸಂತ ಸೇನಾ (1941), ಜೀವನ ನಾಟಕ (1942), ಸತ್ಯ ಹರಿಶ್ಚಂದ್ರ (1943), ಹೇಮರೆಡ್ಡಿ ಮಲ್ಲಮ್ಮ ಮತ್ತು ಭಕ್ತ ಕುಂಬಾರ (1945), ಮಹಾತ್ಮಾ ಕಬೀರ್, ಕೃಷ್ಣಲೀಲಾ, ಚಂದ್ರಹಾಸ (1947), ಭಾರತಿ ಮತ್ತು ನಾಗಕನ್ನಿಕಾ (1949) ಹಾಗೂ ಜಗನ್ಮೋಹಿನಿ (1951) ಉಲ್ಲೇಖಾರ್ಹವಾದವು. 1950 ರವರೆಗೆ ಒಟ್ಟು ಸುಮಾರು 32 ಚಿತ್ರಗಳು ನಿರ್ಮಾಣಗೊಂಡವು. ಅಂದಿನ ಉತ್ತಮ ಚಿತ್ರಗಳ ಪೈಕಿ ವಸಂತಸೇನಾ ಕನ್ನಡದ ಚಲನಚಿತ್ರರಂಗದ ಪ್ರೌಢಿಮೆ ಹಾಗೂ ಪ್ರಬುದ್ಧತೆಯ ಪ್ರತೀಕ ವಾಗಿತ್ತು.

1940ರ ದಶಕದ ಕೊನೆಯ ವೇಳೆಗೆ ಮೈಸೂರಿನಲ್ಲಿ ನವ ಜ್ಯೋತಿ ಸ್ಟುಡಿಯೋ ಚುರುಕಾಗಿ ಕೆಲಸ ಮಾಡಲಾರಂಭಿಸಿ ಕೆಂಪರಾಜ ಅರಸ್, ಶಂಕರ ಸಿಂಗ್, ಬಿ. ವಿ. ವಿಟ್ಠಲಾಚಾರ್ಯ ಮುಂತಾದ ಖ್ಯಾತ ನಿರ್ಮಾಪಕರನ್ನು ಬೆಳಕಿಗೆ ತಂದಿತು. 1949ರಲ್ಲಿ ಸಿದ್ಧವಾದ ಆರು ಚಿತ್ರಗಳ ಪೈಕಿ, ಜಾನಪದ ಕತೆ ಯೊಂದನ್ನು ಆಧರಿಸಿದ ನಾಗಕನ್ನಿಕಾ ಗಲ್ಲಾಪೆಟ್ಟಿಗೆ ದೃಷ್ಟಿ ಯಿಂದ ಭಾರೀ ಯಶಸ್ಸು ಗಳಿಸಿತು. ಮೈಸೂರಿನಲ್ಲಿ ಶಂಕರ್

ಸಿಂಗ್ ನಿರ್ಮಿಸಿದ ಜಗನ್ಮೋಹಿನಿ ಚಿತ್ರವೂ ದಾವಣಗೆರೆಯಲ್ಲಿ ಸತತ 26 ವಾರಗಳ ಕಾಲ ಪ್ರದರ್ಶನಗೊಂಡು ಹಿಂದಿನ ಎಲ್ಲಾ ಗಲ್ಲಾ ದಾಖಲೆಗಳನ್ನೂ ಮುರಿಯಿತು.

1950ರವರೆಗೂ ಕನ್ನಡ ಚಲನಚಿತ್ರೋದ್ಯಮ ಕುಂಟುತ್ತಲೇ ಸಾಗಿತು. 1950ರ ದಶಕದಲ್ಲಿ ಆರ್. ನಾಗೇಂದ್ರರಾವ್, ಬಿ. ಆರ್. ಪಂತುಲು, ಶಂಕರ್ ಸಿಂಗ್, ಬಿ. ವಿ. ವಿಟ್ಠಲಾಚಾರ್ಯ, ಬಿ. ಎಸ್. ರಂಗಾ ಮತ್ತು ಕೆಂಪರಾಜ ಅರಸ್ ಮುಂತಾದ ನಿರ್ಮಾಪಕರು ತಾವಾಗಿಯೇ ಮುಂದೆ ಬಂದು ಚಿತ್ರ ನಿರ್ಮಾಣಕ್ಕಿಳಿದಾಗ ಚಿತ್ರೋದ್ಯಮಕ್ಕೆ ಚೈತನ್ಯ ಸಿಕ್ಕಂತಾಯಿತು. ಈ ಅವಧಿಯಲ್ಲೇ ಅಂದರೆ 1953ರಲ್ಲಿ ಮೈಸೂರಿನ ನವಜ್ಯೋತಿ ಸ್ಟುಡಿಯೋ ಸ್ಥಗಿತವಾಯಿತು. ಆದರೆ ಪ್ರೀಮಿಯರ್ ಸ್ಟುಡಿಯೋ ಮೈಸೂರಿನಲ್ಲೇ ಕಾರ್ಯಾರಂಭ ಮಾಡಿತು. ಆದಾಗ್ಯೂ ಚಿತ್ರ ನಿರ್ಮಾಣಕ್ಕೆ ಬೇಕಾದ ಎಲ್ಲ ವ್ಯವಸ್ಥೆಗಳೂ ಲಭ್ಯವಿದ್ದ ಮದ್ರಾಸ್ ನಗರವೇ ದಕ್ಷಿಣ ಭಾರತದ ಮುಖ್ಯ ಚಿತ್ರ ನಿರ್ಮಾಣ ಕೇಂದ್ರವಾಗಿ ಬೆಳೆಯಿತು. ಗುಬ್ಬಿ ವೀರಣ್ಣ, ಆರ್. ನಾಗೇಂದ್ರರಾವ್, ಬಿ. ಆರ್. ಪಂತುಲು, ಡಿ. ಕೆಂಪರಾಜ ಅರಸ್, ಬಿ. ಎಸ್. ರಂಗಾ, ಎಚ್. ಎಲ್. ಎನ್. ಸಿಂಹ ಮುಂತಾದ ಕನ್ನಡದ ಪ್ರಮುಖ ಚಿತ್ರ ಶಿಲ್ಪಿಗಳೆಲ್ಲ ಮದ್ರಾಸ್‌ನಲ್ಲೇ ನೆಲೆಸಿ ಕನ್ನಡ ಚಿತ್ರೋದ್ಯಮದ ಬೆಳವಣಿಗೆ ಸಾಧಿಸಿದರು. 1959ರಲ್ಲಿ ಭಾರತ ಸರಕಾರ ಪ್ರಾಂತೀಯ ಚಿತ್ರಗಳಿಗೆ ಪ್ರೋತ್ಸಾಹ ನೀಡಲೆಂದು ರಾಷ್ಟ್ರೀಯ ಪ್ರಶಸ್ತಿ ಸ್ಥಾಪಿಸಿದಾಗ ಚಿತ್ರೋದ್ಯಮದ ಹೊಸ ಅಧ್ಯಾಯವೇ ಪ್ರಾರಂಭವಾದಂತಾಯಿತು. ಅದೇ ವರ್ಷ ಗುಬ್ಬಿ ಕರ್ನಾಟಕ ಪ್ರೊಡಕ್ಷನ್ಸ್‌ನವರು ಖ್ಯಾತ ನಟ ಎಚ್. ಎಲ್. ಎನ್. ಸಿಂಹ ಅವರ ನಿರ್ದೇಶನದಲ್ಲಿ ನಿರ್ಮಿಸಿದ ಬೇಡರ ಕಣ್ಣಪ್ಪ ಚಿತ್ರಕ್ಕೆ ರಾಷ್ಟ್ರಪ್ರಶಸ್ತಿ ಬಂತು. ಕನ್ನಡದಲ್ಲಿ ಈವರೆಗೆ 200ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿ 'ಮ್ಯಾಟನಿ ಐಡಲ್' ಎಂಬ ಖ್ಯಾತಿ ಪಡೆದ ಡಾ|| ರಾಜಕುಮಾರ್ ಚಿತ್ರರಂಗ ಪ್ರವೇಶವಾದದ್ದು ಈ ಬೇಡರ ಕಣ್ಣಪ್ಪದ ಮೂಲಕವೇ. ಈ ನಟನಿಗೆ ಮೈಸೂರು ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿತು; ಭಾರತ ಸರಕಾರ 1983ರಲ್ಲಿ ಪದ್ಮಭೂಷಣ ಪ್ರಶಸ್ತಿ ನೀಡಿತು; ಕನ್ನಡ ಭಾಷೆ, ಕಲೆ, ಸಂಸ್ಕೃತಿಯ ಪೋಷಣೆಗಾಗಿ ದುಡಿದ ದ್ಯೋತಕವೆಂದು 'ಕೆಂಟಕಿ ಕರ್ನಲ್' ಪ್ರಶಸ್ತಿಯೂ ದೊರಕಿತು. ಈಗ ಇವರು ಅನೇಕ ಚಿತ್ರಗಳನ್ನು ನಿರ್ಮಿಸುತ್ತಿದ್ದಾರೆ. 1950ರ ದಶಕದಲ್ಲಿ ಸುಮಾರು 75 ಚಿತ್ರಗಳು ಬಿಡುಗಡೆಯಾದವು.

1955ರ ಈಚೆಗೆ ನಿರ್ಮಾಣಗೊಂಡ ಚಿತ್ರಗಳ ಪೈಕಿ ಆರ್. ನಾಗೇಂದ್ರರಾವ್ ಅವರ ಸಾಮಾಜಿಕ ಚಿತ್ರ ಪ್ರೇಮದ ಪುತ್ರಿ (1957) ಗೆ ರಾಷ್ಟ್ರಮಟ್ಟದ ಬೆಳ್ಳಿ ಪದಕ ಲಭಿಸಿತು. ಬಿ. ಆರ್. ಪಂತುಲು ಅವರ ಮೊದಲ ತೇದಿ ಹಾಗೂ ಸ್ಕೂಲ್ ಮಾಸ್ಟರ್, ಬಿ. ವಿ. ವಿಟ್ಠಲಾಚಾರ್ಯರ ಕನ್ಯಾದಾನ ಈ ಮೂರೂ ಜನಪ್ರಿಯತೆ ಪಡೆದ ಇತರ ಸಾಮಾಜಿಕ ಚಿತ್ರಗಳಾದವು. ಈ ಅವಧಿಯಲ್ಲೇ ಆದರ್ಶ ಸತಿ (1955), ಭಕ್ತ ಮಾರ್ಕಂಡೇಯ (1956), ರತ್ನಗಿರಿ ರಹಸ್ಯ (1957), ನಳ ದಮಯಂತಿ (1957), ಭೂಕೈಲಾಸ (1958), ಜಗಜ್ಯೋತಿ ಬಸವೇಶ್ವರ (1959), ದಶಾವತಾರ, ರಣಧೀರ ಕಂಠೀರವ ಮತ್ತು ಭಕ್ತ ಕನಕದಾಸ (ಎಲ್ಲ 1960) ಮುಂತಾದ ಪೌರಾಣಿಕ ಹಾಗೂ ಐತಿಹಾಸಿಕ ಭೂಮಿಕೆಯಲ್ಲಿ ನಿರ್ಮಾಣಗೊಂಡ ಅದ್ದೂರಿ ಚಿತ್ರಗಳೆನಿಸಿಕೊಂಡವು. 1960ರ ದಶಕದಲ್ಲಿ ಸಾಹಿತ್ಯ ಕ್ಷೇತ್ರ ಹಾಗೂ ಚಲನಚಿತ್ರೋದ್ಯಮದ ಮಧ್ಯೆ ಬೆಸುಗೆ ಗಟ್ಟಿಗೊಂಡಿತು. ಕನ್ನಡದ ಹಲವಾರು ಕಾದಂಬರಿಗಳು ತೆರೆಗೆ ಬರಲಾರಂಭಿಸಿದವು. ಚಿತ್ರ ಕಥಾ ನಿರೂಪಣೆಗೆ ಸಹಜತೆ ಬಂದಂತೆಲ್ಲ ಚಿತ್ರೋದ್ಯಮದ ಬೆಳವಣಿಗೆಯಲ್ಲಿ ಸಾಹಿತ್ಯಕ್ಷೇತ್ರಕ್ಕೆ ಸಿಂಹಪಾಲು ದೊರಕಲಾರಂಭಿಸಿತು. ಈವರೆಗೆ ಸುಮಾರು 100ಕ್ಕೂ ಹೆಚ್ಚು ಚಲನಚಿತ್ರಗಳು ಕನ್ನಡದ ಜನಪ್ರಿಯ ಕಾದಂಬರಿಗಳನ್ನೇ ಆಧರಿಸಿ ರೂಪುಗೊಂಡಿವೆ. ಕನ್ನಡ ಚಲನಚಿತ್ರ ಇತಿಹಾಸದಲ್ಲಿ 1964ನೇಯ ಇಸವಿ ತುಂಬ ಮಹತ್ವವಾದುದು. ಆಗಲೇ ಕನ್ನಡದಲ್ಲಿ ವರ್ಣಚಿತ್ರಗಳ ತಯಾರಿಕೆ ಪ್ರಾರಂಭವಾಯಿತು. ಅಮರ ಶಿಲ್ಪಿ ಜಕ್ಕಣ ಸಂಪೂರ್ಣ ವರ್ಣದಲ್ಲಿ ತಯಾರಾದ ಪ್ರಥಮ ಕನ್ನಡ ಚಿತ್ರವಾಯಿತು. ಅದೇ ವರ್ಷ ಹೊಸ ಅಲೆಯ ಕನ್ನಡ ಚಿತ್ರ ನಾಂದಿಯೂ ನಿರ್ಮಾಣವಾಯಿತು. ವಿದೇಶೀ ಚಿತ್ರೋತ್ಸವಗಳಲ್ಲಿ ಭಾರತವನ್ನು ಪ್ರತಿನಿಧಿಸಿ ಪ್ರದರ್ಶಿತಗೊಂಡ ಮೊಟ್ಟ ಮೊದಲ ಕನ್ನಡ ಚಿತ್ರ ನಾಂದಿ. ಅರವತ್ತರ ದಶಕವೇ ಚಿತ್ರೋದ್ಯಮದ ದೃಷ್ಟಿಯಿಂದ ಮುಖ್ಯವಾದುದು. ಏಕೆಂದರೆ ಬೆಳ್ಳಿಮೋಡ (1967), ಗೆಜ್ಜೆಪೂಜೆ (1968), ಉಯ್ಯಾಲೆ (1969), ನಮ್ಮ ಮಕ್ಕಳು (ಬೆಳ್ಳಿಹಬ್ಬ ಆಚರಿಸಿದ ಮಕ್ಕಳ ಚಿತ್ರ) ಮುಂತಾದ ಉತ್ತಮ ಚಿತ್ರಗಳು ಈ ದಶಕದಲ್ಲೇ ತೆರೆಕಂಡವು. ಇವುಗಳ ಪೈಕಿ ಮೊದಲ ಮೂರು ಚಿತ್ರಗಳು ಕಾದಂಬರಿ ಆಧಾರಿತವಾದವು. 1966ರಿಂದ ಕರ್ನಾಟಕ ಸರಕಾರ ಸಬ್ಸಿಡಿ ನೀಡುವ ಯೋಜನೆ ಪ್ರಾರಂಭಿಸಿತು. ಅ. ನ. ಕೃ., ಎಂ. ರಾಮಮೂರ್ತಿ ಮುಂತಾದ ಖ್ಯಾತ ಸಾಹಿತಿಗಳ ನಾಯಕತ್ವದಲ್ಲಿ 1960ರ ದಶಕದಲ್ಲಿ ಪ್ರಾರಂಭವಾದ ಕನ್ನಡ ಚಳವಳಿ, ಚಿತ್ರೋದ್ಯಮಕ್ಕೆ ಶುಕ್ರದೆಸೆ ತಂದುಕೊಟ್ಟಿತು. ಬೇರೆ ಭಾಷೆಗಳಿಂದ ಕನ್ನಡಕ್ಕೆ ಡಬ್ ಮಾಡಿದ ಚಿತ್ರಗಳ ಬಗ್ಗೆ ಜನಪ್ರಿಯತೆ ಕುಗ್ಗತೊಡಗಿತು.

1970ರ ಈಚಿನ ಅವಧಿ ಕನ್ನಡ ಚಲನಚಿತ್ರ ಚರಿತ್ರೆಗೆ ಮಹತ್ವದ ಘಟ್ಟವಾಯಿತು. ಅ.ನ.ಕೃ., ತ.ರಾ.ಸು., ಕೃಷ್ಣಮೂರ್ತಿ ಪುರಾಣಿಕ, ತ್ರಿವೇಣಿ, ಇವರೇ ಮೊದಲಾದ ಖ್ಯಾತ ಸಾಹಿತಿಗಳ ಕಾದಂಬರಿಗಳು ತೆರೆಗೆ ಬಂದುದಷ್ಟೇ ಅಲ್ಲ, ಕುವೆಂಪು, ಬೇಂದ್ರೆ, ಗೋಪಾಲಕೃಷ್ಣ ಅಡಿಗ, ನರಸಿಂಹಸ್ವಾಮಿ ಮುಂತಾದ ಪ್ರಮುಖ ಕವಿಗಳಿಗೂ ಚಲನಚಿತ್ರದಲ್ಲಿ ಮಹತ್ವದ ಸ್ಥಾನಮಾನ ಸಿಗಲಾರಂಭಿಸಿತು. ಈ ಅವಧಿಯಲ್ಲೇ ಕರುಣೆಯೇ ಕುಟುಂಬದ

ಕಣ್ಣು, ಕುಲವಧು, ಚಂದವಳ್ಳಿ ತೋಟ, ಬೆಳ್ಳಿಮೋಡ, ಚಕ್ರತೀರ್ಥ, ನಾಗರಹಾವು ಮತ್ತು ಮುಕ್ತಿಗಳಂಥ ಚಿತ್ರಗಳು ನಿರ್ಮಾಣವಾದವು. ಪುಟ್ಟಣ್ಣ ಕಣಗಾಲ್ ಮತ್ತು ಎನ್. ಲಕ್ಷ್ಮೀ ನಾರಾಯಣರಂಥ ಸಮರ್ಥ ನಿರ್ದೇಶಕರ ಮೂಲಕ ಜನಪ್ರಿಯ ಕಾದಂಬರಿಗಳು ತೆರೆಗೆ ಬಂದು ಹೊಸ ಪರಂಪರೆಯನ್ನೇ ಸೃಷ್ಟಿಸಿದವು. 1970 ರ ದಶಕದ ಮೊದಲ ಭಾಗದಲ್ಲಿ ಕನ್ನಡ ಚಲಚ್ಚಿತ್ರ ಉದ್ದಿಮೆ ಕೆಲವು ರಾಷ್ಟ್ರೀಯ ಪ್ರಶಸ್ತಿಗಳನ್ನೂ ಗಳಿಸಿಕೊಂಡಿತು. ಯು. ಆರ್. ಅನಂತಮೂರ್ತಿಯವರ ಜನಪ್ರಿಯ ಕಾದಂಬರಿ ಸಂಸ್ಕಾರ ಗಿರೀಶ್ ಕಾರ್ನಾಡ್ ಮೂಲಕ ತೆರೆ ಕಂಡು ರಾಷ್ಟ್ರಪತಿಯವರ ಸ್ವರ್ಣಪದಕ ಪಡೆದು 1970ರ ಪುರಸ್ಕಾರ ವಿಜೇತರ ಪಟ್ಟಿಯಲ್ಲಿ ಅಗ್ರಗಣ್ಯವಾಯಿತು. ಕಡಿಮೆ ಬಂಡವಾಳದಲ್ಲಿ ಹೊಸ ಅಲೆಯ ಚಿತ್ರಗಳ ಹೊಸದೊಂದು ಅಧ್ಯಾಯವೇ ಕನ್ನಡ ಚಿತ್ರೋದ್ಯಮದಲ್ಲಿ ಪ್ರಾರಂಭವಾಯಿತು. ಕರ್ನಾಟಕ ರಾಜ್ಯದಲ್ಲೇ ತಯಾರಾದ ಚಿತ್ರಕ್ಕೆ ಸಬ್ಸಿಡಿ ನೀಡುವ ಹಾಗೂ ನಗದು ಪುರಸ್ಕಾರ ನೀಡುವ ಯೋಜನೆಯೂ ಪ್ರಾರಂಭವಾಗಿ ಕನ್ನಡ ಚಿತ್ರರಂಗಕ್ಕೆ ನವಚೇತನ ಬಂದಂತಾಯಿತು. ಕಡಿಮೆ ಬಂಡವಾಳದಲ್ಲಿ ಹೊಸ ಅಲೆಯ ಚಿತ್ರ ತಯಾರಿಸುವವರ ತಂಡ ತಂಡವೇ ಬೆಳಕಿಗೆ ಬಂತು. ಕೆ. ಎಂ. ಶಂಕರಪ್ಪನವರ ನಿರ್ದೇಶನದ ಮಾಡಿ ಮಡಿದವರು, ಗಿರೀಶ್ ಕಾರ್ನಾಡ್ ನಿರ್ದೇಶನದ ಕಾಡು, ಜಿ. ವಿ. ಅಯ್ಯರ್‌ರ ಹಂಸಗೀತೆ, ಎಮ್. ಬಿ. ಎಸ್. ಪ್ರಸಾದರ ಕಂಕಣ, ಬಿ. ವಿ. ಕಾರಂತರ ಚೋಮನ ದುಡಿ, ನಾಗಾಭರಣ ಅವರ ಗ್ರಹಣ, ಟಿ. ಎಸ್. ರಂಗಾ ಅವರ ಗೀಜಗನ ಗೂಡು, ಗಿರೀಶ್ ಕಾಸರವಳ್ಳಿಯವರ ಘಟಶ್ರಾದ್ಧ, ಸಿ. ಆರ್. ಸಿಂಹ ಅವರ ಕಾಕನಕೋಟೆ, ಪಿ. ಲಂಕೇಶರ ಪಲ್ಲವಿ, ವಿ. ಆರ್. ಕೆ. ಪ್ರಸಾದರ ಋಷ್ಯಶೃಂಗ, ಈ ಎಲ್ಲ ಚಿತ್ರಗಳು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿದವು. ಇವುಗಳ ಪೈಕಿ ಹಲವು ಚಿತ್ರಗಳು ರಾಷ್ಟ್ರೀಯ ಹಾಗೂ ಅಂತರ್ರಾಷ್ಟ್ರೀಯ ಪ್ರಶಸ್ತಿ ಗೆದ್ದು, ಅನೇಕ ಅಂತರ್ರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಪ್ರದರ್ಶಿತವಾದವು. (ಆಯಾ ವರ್ಷಗಳಲ್ಲಿ ಚೋಮನ ದುಡಿ ಮತ್ತು ಘಟಶ್ರಾದ್ಧ ರಾಷ್ಟ್ರದ ಅತ್ಯುತ್ತಮ ಚಿತ್ರಗಳೆಂದೆನಿಸಿದವು).

1970ರ ದಶಕವನ್ನು ಹೊಸ ಅಲೆಯ ಅಥವಾ ಪ್ರಯೋಗಿಕ ಚಿತ್ರಗಳ ಅವಧಿಯೆಂದೇ ಪರಿಗಣಿಸುತ್ತಾರೆ. 1970ರಲ್ಲಿ ಸಂಸ್ಕಾರ ಚಿತ್ರದಿಂದ ಪ್ರಾರಂಭವಾಗಿ, ವಂಶವೃಕ್ಷ (1972), ಅಬಚೂರಿನ ಪೋಸ್ಟ್ ಆಫೀಸು (1973), ಕಾಡು (1974), ಹಂಸಗೀತೆ (1975), ಚೋಮನ ದುಡಿ (1975), ಪಲ್ಲವಿ (1976), ಕರಾವಳಿ (1977), ಕನ್ನೇಶ್ವರರಾಮ (1977), ಘಟಶ್ರಾದ್ಧ (1977), ಒಂದು ಊರಿನ ಕಥೆ, ಒಂದಾನೊಂದು ಕಾಲದಲ್ಲಿ, ಮಲೆಯ ಮಕ್ಕಳು, ಸ್ಪಂದನ (ಎಲ್ಲ 1978), ಕಾಡು ಕುದುರೆ ಮತ್ತು ಅರಿವು (1979), ಎಲ್ಲಿಂದಲೋ ಬಂದವರು (1980), ಗ್ರಹಣ ಮತ್ತು ಮೂರು ದಾರಿಗಳು (1981), ಬರ (1982), ಇತ್ಯಾದಿ ಚಿತ್ರಗಳವರೆಗೂ ಈ ಪರಂಪರೆ ಮುಂದುವರೆದಿದೆ. ಬರ ಚಿತ್ರವನ್ನು ಹಿಂದಿಯಲ್ಲಿ ಆಗಲೇ ಹೆಸರು ಮಾಡಿದ ಎಂ. ಎಸ್. ಸತ್ಯು ಅವರು ನಿರ್ಮಿಸಿದರು. ಇಂಥ ಹೊಸ ಅಲೆಯ ಚಿತ್ರಗಳು ತುಂಬ ಕಲಾತ್ಮಕವಾಗಿದ್ದುವಷ್ಟೇ ಅಲ್ಲ, ಬಹಳಷ್ಟು ಚಿತ್ರಗಳಲ್ಲಿ ಹಾಡು ಅಥವಾ ಮತ್ತಿತರ ಕೀಳು ಅಭಿರುಚಿಯ ತಂತ್ರಗಳ ಬಳಕೆಯಿರಲಿಲ್ಲ. ನಟರೂ ಕೂಡ ಪ್ರಸಿದ್ಧ ತಾರೆಗಳೇನಾಗಿರಲಿಲ್ಲ. ಹಣ ಹೂಡಿಕೆಯೂ ಕಡಿಮೆ ಮೊತ್ತದ್ದಾಗಿತ್ತು. ಹಲವಷ್ಟು ಕಲಾವಿದರನ್ನು ಹವ್ಯಾಸಿ ರಂಗತಂಡದಿಂದಲೇ ಆಯ್ಕೆ ಮಾಡಿಕೊಳ್ಳಲಾಗಿತ್ತು. ಈ ಹೊಸ ಅಲೆಯ ಚಿತ್ರಗಳ ಪೈಕಿ ಕೆಲವು ಮಾತ್ರ ಸಾಕಷ್ಟು ಯಶ ಪಡೆದುವೇ ಹೊರತು ಬಹುತೇಕ ಚಿತ್ರಗಳು ಗಲ್ಲಾ ಪೆಟ್ಟಿಗೆಯ ಮಾನದಂಡದಲ್ಲಿ ಹಣಗಳಿಸಲು ವಿಫಲಗೊಂಡವು. ಈ ಅವಧಿಯ 'ವ್ಯಾಪಾರೀ' ಚಿತ್ರಗಳ ಪೈಕಿ ಹಲವಾರು ಕಲಾತ್ಮಕವಾಗಿದ್ದಂತೇ ಗಲ್ಲಾ ಪೆಟ್ಟಿಗೆಯನ್ನೂ ತುಂಬಿಸಿಕೊಟ್ಟವು. ನಾಗರಹಾವು ಮತ್ತು ಬಂಗಾರದ ಮನುಷ್ಯ (1972), ಎಡಕಲ್ಲು ಗುಡ್ಡದ ಮೇಲೆ ಮತ್ತು ಪ್ರೊಫೆಸರ್ ಹುಚ್ಚೂರಾಯ (1973), ಉಪಾಸನೆ ಮತ್ತು ಭೂತಯ್ಯನ ಮಗ ಅಯ್ಯು (1974), ಶುಭ ಮಂಗಳ (1975), ಋತುಗಾನ, ಹರಕೆ, ಕೋಕಿಲ, ಮತ್ತು ಸಂಘರ್ಷ (ಎಲ್ಲ 1977), ಅಪರಿಚಿತ ಮತ್ತು ಪರಸಂಗದ ಗೆಂಡೆತಿಮ್ಮ (1978), ಮದರ್ ಮತ್ತು ಮಿಥುನ (1980) ಹಾಗೂ ಗಾಳಿಮಾತು (1981) ಚಿತ್ರಗಳನ್ನು ಈ ಸಾಲಿಗೆ ಸೇರಿಸಬಹುದು. ಈ ಚಿತ್ರಗಳು ಹಳೆಯ 'ವ್ಯಾಪಾರೀ' ದೃಷ್ಟಿಕೋನವನ್ನಿಟ್ಟುಕೊಂಡು ಹೊಸ ಅಲೆಯ ತಂತ್ರವನ್ನಳವಡಿಸಿಕೊಂಡುದಕ್ಕೇ ಯಶಸ್ವಿಯಾದುವೆಂದು ಹೇಳಬಹುದು.

## ಚಿತ್ರಗಳಲ್ಲಿ ಸಂಗೀತ

ಮೂಕಿ ಚಿತ್ರಗಳ ಕಾಲದಿಂದಲೂ ಹಿನ್ನೆಲೆ ಸಂಗೀತ ವಾದ್ಯಗಳ ಬಳಕೆಯಿದ್ದವಾದರೂ, 1934ರಲ್ಲಿ ವಾಕ್ಚಿತ್ರ ಬಂದ ಮೇಲೇ ಹಾಡುಗಳ ಬಳಕೆ ಸಿನಿಮಾದಲ್ಲಿ ಪ್ರಾರಂಭವಾಯಿತು. ಸಾಮಾನ್ಯವಾಗಿ ಆ ಕಾಲದಲ್ಲಿ ನಟನೇ ತನ್ನ ಹಾಡುಗಳನ್ನು ಹೇಳಬೇಕಾಗಿತ್ತು. ಭಕ್ತ ಧ್ರುವ ಚಿತ್ರಕ್ಕೆ ಹಂಪಾಪುರದ ಹಾರ್ಮೋನಿಯಂ ಶೇಷಗಿರಿರಾವ್ ಅವರು ಸಂಗೀತ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದರು. ಚಿತ್ರ ಸಂಗೀತಕ್ಕೆಂದು ಹಾರ್ಮೋನಿಯಂ, ಪಿಟೀಲು, ತಬಲಗಳೇ ಮುಂತಾದ ಸಾಮಾನ್ಯ ಬಳಕೆಯ ವಾದ್ಯಗಳಷ್ಟೇ ಬಳಕೆಯಾಗುತ್ತಿತ್ತು. ಆ ಕಾಲದಲ್ಲಿ ನಾಟಕಗಳಲ್ಲಿ ಬಳಸಲಾಗುತ್ತಿದ್ದ ಜನಪ್ರಿಯ ಸಂಗೀತವೇ ಸಿನಿಮಾ ಸಂಗೀತಕ್ಕೆ ಬುನಾದಿಯಾಯಿತು. ಜನಮೆಚ್ಚುಗೆ ಪಡೆದ ನಾಟಕವೊಂದನ್ನು ಬೆಳ್ಳಿತೆರೆಗೆ ಮಾರ್ಪಡಿಸುವಾಗ ಮೂಲ ನಾಟಕದಲ್ಲಿದ್ದ ಹಾಡು ಸಂಗೀತಗಳನ್ನೇ ಸಾರಾಸಗಟು ಸಿನಿಮಾದಲ್ಲಿ ಸೇರಿಸಲಾಗುತ್ತಿತ್ತು. ಕನ್ನಡ ಸಿನಿಮಾದ ಈ ಸಂಗೀತ ಪರಂಪರೆ

ಯನ್ನು ಬಿಟ್ಟು ಕೊಟ್ಟು ಶಾಸ್ತ್ರೀಯ ಸಂಗೀತವನ್ನು ಹಿನ್ನೆಲೆಗಾಗಿ ಬಳಸಿದ ಖ್ಯಾತಿ ಪದ್ಮನಾಭ ಶಾಸ್ತ್ರಿಯವರಿಗೆ ಸೇರುತ್ತದೆ. ಆಧುನಿಕ ವಾದ್ಯಗೋಷ್ಠಿಯನ್ನು ತೆರೆಗೆ ಅಳವಡಿಸುವ ಯತ್ನವನ್ನು ಪಿ. ಕಾಳಿಂಗರಾವ್ 1941ರಲ್ಲಿ ಕೈಗೊಂಡರೆಂದು ಹೇಳಲಾಗುತ್ತದೆ. ಹಿನ್ನೆಲೆ ಗಾಯನ ನಂತರದ ವರ್ಷಗಳಲ್ಲಿ ಜನಪ್ರಿಯವಾಗಲಾರಂಭಿಸಿತು. ಪಿ. ಶಾಮಣ್ಣ, ಆರ್. ಸುದರ್ಶನ, ಜಿ. ಕೆ. ವೆಂಕಟೇಶ್, ಟಿ. ಜಿ. ಲಿಂಗಪ್ಪ, ವಿಜಯಭಾಸ್ಕರ, ರಾಜನ್ ನಾಗೇಂದ್ರ ಮುಂತಾದ ಸಂಗೀತ ನಿರ್ದೇಶಕರು ಶಾಸ್ತ್ರೀಯ ಸಂಗೀತವನ್ನು ಕರ್ನಾಟಕದ ಜನಪ್ರಿಯ ವಾದ್ಯವೃಂದಕ್ಕೆ ಯಶಸ್ವಿಯಾಗಿ ಅಳವಡಿಸಿಕೊಂಡರು. ರಾಜೀವ ತಾರಾನಾಥ, ಚಂದ್ರಶೇಖರ ಕಂಬಾರ, ಬಿ. ವಿ. ಕಾರಂತ ಮುಂತಾದವರು ಹೊಸಬಗೆಯ ಸಂಗೀತ ಸೃಷ್ಟಿಸಿದ್ದಷ್ಟೇ ಅಲ್ಲ, ಪಾಶ್ಚಾತ್ಯ ವಿಧಾನದಿಂದ ಹಿಡಿದು ಜಾನಪದ ಪದ್ಧತಿಯವರೆಗಿನ ತಾಳಲಯಗಳ ಸ್ವರ್ಣ ಮುದ್ರೆಗಳನ್ನು ಒತ್ತಿದರು. ಜಾನಪದ ಹಾಡುಗಳನ್ನೂ ಕೆಲವೆಡೆ ನೇರವಾಗಿ ಬಳಸಿಕೊಂಡರು. ಜಾನಪದ ಸಂಗೀತವನ್ನು ಮೊಟ್ಟ ಮೊದಲು ಅಣ್ಣ ತಂಗಿ ಚಿತ್ರದಲ್ಲಿ ಜಿ. ಕೆ. ವೆಂಕಟೇಶ್ ಅವರೂ, ನಂತರ ಪರಸಂಗದ ಗೆಂಡೆತಿಮ್ಮ ಚಿತ್ರದಲ್ಲಿ ರಾಜನ್ ನಾಗೇಂದ್ರ ಅವರೂ ಬಳಸಿದರೆನ್ನಬಹುದು. ಜನಪದ ಹಾಡುಗಳನ್ನು ಡಾ|| ಚಂದ್ರಶೇಖರ ಕಂಬಾರ ಮತ್ತು ಸಿ. ಅಶ್ವತ್ಥ ಅವರು ಕಾಡುಕುದುರೆ, ಕರಿಮಾಯಿ, ಸಂಗೀತಾ, ಕಾಕನಕೋಟೆ ಮುಂತಾದ ಚಿತ್ರಗಳಿಗೆ ಅಳವಡಿಸಿಕೊಂಡರು. ಹಿನ್ನೆಲೆ ಗಾಯಕಿಯರ ಪೈಕಿ ಬಿ. ಕೆ. ಸುಮಿತ್ರ, ಕಸ್ತೂರಿ ಶಂಕರ್, ವಾಣಿ ಜಯರಾಮ್, ಬೆಂಗಳೂರು ಲತಾ ಮತ್ತು ಸುಲೋಚನಾ ವೆಂಕಟೇಶ್ ಮುಂತಾದವರು ಪ್ರಮುಖರಾಗಿದ್ದು, ಹಿನ್ನೆಲೆ ಗಾಯಕರ ಪೈಕಿ ಪಿ. ಬಿ. ಶ್ರೀನಿವಾಸ್ ಮತ್ತು ಎಸ್. ಪಿ. ಬಾಲಸುಬ್ರಮಣ್ಯಂ ಗಮನಾರ್ಹರಾಗಿದ್ದಾರೆ. ಶಿವಮೊಗ್ಗ ಸುಬ್ಬಣ್ಣ ಅವರು ರಾಷ್ಟ್ರಪ್ರಶಸ್ತಿ ಪಡೆದಿದ್ದಾರೆ.

ಪ್ರಾರಂಭದ ದಿನಗಳಿಂದ ಇಂದಿನವರೆಗೂ ಕನ್ನಡ ಚಲನಚಿತ್ರೋದ್ಯಮ ನಾಟಕರಂಗದೊಂದಿಗೆ ಅನ್ಯೋನ್ಯ ಸಂಬಂಧವಿಟ್ಟು ಕೊಂಡೇ ಬೆಳೆದಿದೆ. ಇತ್ತೀಚೆಗೆ ವೃತ್ತಿ ರಂಗಭೂಮಿ ಕಣ್ಮರೆಯಾಗುತ್ತ ಬಂದರೂ, ಹವ್ಯಾಸಿ ರಂಗಭೂಮಿ ಸಿನಿಮಾದೊಂದಿಗೆ ಈ ಸಂಬಂಧವನ್ನು ಮುಂದುವರೆಸಿಕೊಂಡು ಬರುತ್ತಿದೆ. ಚಿತ್ರೋದ್ಯಮಕ್ಕೆ ಲಾಭಕರವಾಗುವಂತೆ ರಂಗಭೂಮಿಯ ನಿರ್ದೇಶಕರೂ, ಹಾಡುಗಾರರೂ, ನಟರೇ ಮುಂತಾದ ಕ್ರಿಯಾಶೀಲ ವ್ಯಕ್ತಿಗಳು ಮೊದಲಿನಿಂದಲೂ ಸಿನಿಮಾರಂಗಕ್ಕೆ ಸ್ಥಳಾಂತರಗೊಂಡಿದ್ದಿದೆ. ಗುಬ್ಬಿ ವೀರಣ್ಣ, ಆರ್. ನಾಗೇಂದ್ರರಾವ್, ಸುಬ್ಬಯ್ಯನಾಯಿಡು, ಹೊನ್ನಪ್ಪ ಭಾಗವತರ್ ಮುಂತಾದ ಖ್ಯಾತ ರಂಗ ಕಲಾವಿದರು ಕನ್ನಡ ಚಿತ್ರಗಳಲ್ಲಿ ತೀವ್ರ ಆಸಕ್ತಿ ತೋರಿದ್ದಿದೆ. ನಿರ್ಮಾಪಕರಾಗಿ, ನಟರಾಗಿ, ನಿರ್ದೇಶಕರಾಗಿ ಎಚ್. ಎಲ್. ಎನ್. ಸಿಂಹ, ರಾಜಕುಮಾರ್, ಟಿ. ಎನ್. ಬಾಲಕೃಷ್ಣ, ಜಿ. ವಿ. ಅಯ್ಯರ್, ನರಸಿಂಹರಾಜು, ಶಿವರಾಮ್, ಲೋಕೇಶ್, ಶಂಕರನಾಗ್, ಅನಂತನಾಗ್, ಪುಟ್ಟಣ್ಣ ಕಣಗಾಲ್, ಕಣಗಾಲ್ ಪ್ರಭಾಕರಶಾಸ್ತ್ರಿ, ಕೆ. ಎಸ್. ಅಶ್ವತ್ಥ್, ಪಂಡರಿಬಾಯಿ, ಲಕ್ಷ್ಮೀದೇವಿ ಆದವಾನಿ, ಇವರೇ ಮುಂತಾದ ಅಸಂಖ್ಯ ಸಿನಿಮಾ ತಾರೆಯರೆಲ್ಲ ರಂಗಮಂಚದ ಮೇಲೆ ಖ್ಯಾತಿ ಗಳಿಸಿದವರೇ ಆಗಿದ್ದರು. ನಾಟಕ ರಂಗವೆಂದರೆ ಸಿನಿಮಾಕ್ಕೆ ತೂಗುತೊಟ್ಟಿಲಾಗಿ ಸ್ಫೂರ್ತಿಯ ಚಿಲುಮೆಯಾಗಿ ನಿಂತಿದ್ದೇ ಕಾರಣವೆಂಬಂತೆ ರಂಗಭೂಮಿಯಿಂದ ಸಿನಿಮಾರಂಗಕ್ಕೆ ನಟರ ನೆಗೆತ ಸದಾ ಏಕಮುಖವಾಗಿತ್ತು. ಪಿ. ಲಂಕೇಶ್, ಗಿರೀಶ್ ಕಾರ್ನಾಡ್, ಬಿ. ವಿ. ಕಾರಂತ, ಕಂಬಾರ, ಸಿ. ಆರ್. ಸಿಂಹ ಇವರೆಲ್ಲ ಹವ್ಯಾಸಿ ರಂಗಭೂಮಿಯಲ್ಲಿ ಹೆಸರು ಗಳಿಸಿಯೇ ಸಿನಿಮಾ ರಂಗಕ್ಕೆ ಪದಾರ್ಪಣ ಮಾಡಿದವರು.

## ಸರಕಾರಿ ಪ್ರೋತ್ಸಾಹ

ಶೈಕ್ಷಣಿಕ, ಸಾಂಸ್ಕೃತಿಕ, ಹಾಗೂ ಮನೋರಂಜಕ ವಲಯದಲ್ಲಿ ಸಿನಿಮಾದ ಪ್ರಭಾವ ದಿನದಿನಕ್ಕೂ ಹೆಚ್ಚುತ್ತಿರುವುದನ್ನು ಮನಗಂಡ ಕರ್ನಾಟಕ ಸರಕಾರ ಚಲನಚಿತ್ರೋದ್ಯಮಕ್ಕೆ ಸಬ್ಸಿಡಿ, ಪ್ರಶಸ್ತಿ, ಮನರಂಜನಾ ತೆರಿಗೆ ವಿನಾಯ್ತಿ ಮುಂತಾದವುಗಳನ್ನು ನೀಡಿ ಪ್ರೋತ್ಸಾಹಿಸುತ್ತಾ ಬಂದಿದೆ. ರಾಜ್ಯದಲ್ಲೇ ಪೂರ್ತಿಯಾಗಿ ನಿರ್ಮಾಣಗೊಂಡ ಎಲ್ಲ ಕನ್ನಡ ಚಿತ್ರಗಳಿಗೆ 50 ಸಾವಿರ ರೂಪಾಯಿಗಳ ಅನುದಾನ ನೀಡುವಂತೆ 1966ರಲ್ಲಿ ಕೈಗೊಂಡ ಸರಕಾರಿ ನಿರ್ಣಯದ ಪ್ರಕಾರ 1967-68ರ ನಂತರದ ಎಲ್ಲ ಚಿತ್ರಗಳಿಗೂ ಈ ಸಬ್ಸಿಡಿ ನೀಡಲಾಗುತ್ತಿದೆ. ಈ ಮೊತ್ತವನ್ನು ಕಪ್ಪುಬಿಳುಪು ಚಿತ್ರಕ್ಕೆ ಒಂದು ಲಕ್ಷ ರೂಪಾಯಿಗಳಷ್ಟು ಹಾಗೂ ವರ್ಣಚಿತ್ರಗಳಿಗೆ ಒಂದೂವರೆ ಲಕ್ಷ ರೂಪಾಯಿಗಳಷ್ಟಕ್ಕೂ ಹೆಚ್ಚಿಸಿ, 1-4-1974ರ ನಂತರ ನಿರ್ಮಾಣವಾದ ಹಾಗೂ 1-4-1975ರ ನಂತರ ಸೆನ್ಸಾರ್ ಆದ ಕನ್ನಡ ಮತ್ತು ಇತರ ಪ್ರಾಂತೀಯ ಚಿತ್ರಗಳಿಗೆ ನೀಡುವ ವ್ಯವಸ್ಥೆ ಮಾಡಲಾಯಿತು. ಈ ಸಬ್ಸಿಡಿ ನೀಡಿಕೆಯನ್ನು 1-8-1979ರ ನಂತರ ರೀ ಮೇಕ್ ಚಿತ್ರಗಳಿಗೆ ಹಾಗೂ ಇತರ ಭಾಷೆಯ ಚಿತ್ರಗಳಿಗೆ ಕೊಡಕೂಡದೆಂದು ನಿರ್ಧರಿಸಲಾಯಿತು. ಈ ಯೋಜನೆ ಪ್ರಾರಂಭವಾದಾಗಿನಿಂದ 31-3-1982ರವರೆಗೆ ಒಟ್ಟು 474 ಚಿತ್ರಗಳಿಗೆಂದು 390.75 ಲಕ್ಷ ರೂಪಾಯಿಗಳಷ್ಟು ಸಬ್ಸಿಡಿ ನೀಡಲಾಗಿದೆ. 1982-83ರಲ್ಲಿ ಒಟ್ಟು 104 ಕನ್ನಡ ಮತ್ತು ಪ್ರಾಂತೀಯ ಚಿತ್ರಗಳಿಗೆಂದು 85 ಲಕ್ಷ ರೂಪಾಯಿಗಳನ್ನು ನೀಡಲಾಗಿದೆ. 1975-76ರಿಂದ ಹಿಡಿದು 1981-82ರ ವರೆಗೆ ನೀಡಲಾದ ವಾರ್ಷಿಕ ಮೊತ್ತ ಹಾಗೂ ವಿಕಾಸಪಥದಲ್ಲಿನ ಚಿತ್ರೋದ್ಯಮದ ಕೆಲ ರೂಪುರೇಷೆಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ಕಾಣಬಹುದು.

| ವರ್ಷ | ರಾಜ್ಯದಲ್ಲಿ ತಯಾರಾದ ಒಟ್ಟು ಚಿತ್ರಗಳು | ಸಾಕ್ಷ್ಯ ಚಿತ್ರಗಳ ಸಂಖ್ಯೆ | ಸಬ್ಸಿಡಿ ಪಡೆದ ಚಿತ್ರಗಳು | ಮೊತ್ತ ಲಕ್ಷ ರೂ. ಗಳಲ್ಲಿ |
|---|---|---|---|---|
| 1975-76 | 43 | 1 | 19 | 9.50 |
| 1976-77 | 49 | — | 43 | 42.00 |
| 1977-78 | 54 | 6 | 55 | 59.75 |
| 1978-79 | 57 | 1 | 32 | 39.95 |
| 1979-80 | 68 | 1 | 51 | 59.75 |
| 1980-81 | 64 | 5 | 55 | 61.80 |
| 1981-82 | 63 | 9 | 38 | 27.50 |
| 1982-83 | — | 7 | 104 | 85.00 |
| 1983-84 | | | 68 | 40.00 |
| 1984-85 | | | 44 | 36.75 |

ಟಿಪ್ಪಣಿ : 1981–82 ರಿಂದ ವಾರ್ತಾ ಮತ್ತು ಪ್ರಚಾರ ಇಲಾಖೆಯೇ ಇತರ ಇಲಾಖೆಗಳಿಗೂ ಸಾಕ್ಷ್ಯ ಚಿತ್ರಗಳನ್ನು ತಯಾರಿಸುತ್ತಿದೆ.

1967 ರಿಂದ ಕನ್ನಡ ಚಿತ್ರಗಳಿಗೆ ಪ್ರತೀವರ್ಷ ಮೂರು ಪ್ರಶಸ್ತಿಗಳನ್ನು ನೀಡಲಾಗುತ್ತಿದೆ. ಇದಕ್ಕೆಂದೇ ವಿಶೇಷವಾಗಿ ನೇಮಕಗೊಂಡ ಸಮಿತಿಯ ಶಿಫಾರಸಿನ ಮೇರೆಗೆ ಕ್ರಮವಾಗಿ 50 ಸಾವಿರ, 25 ಸಾವಿರ ಮತ್ತು 10 ಸಾವಿರ ರೂಪಾಯಿಗಳ ಮೊತ್ತದ ಪ್ರಶಸ್ತಿಗಳನ್ನು ಮೂರು ಉತ್ತಮ ಚಿತ್ರಗಳು ಪಡೆಯುತ್ತವೆ. ಇದಲ್ಲದೇ ಪ್ರಶಸ್ತಿ ವಿಜೇತ ಚಿತ್ರಗಳ ನಿರ್ದೇಶಕರಿಗೆ, ಅತ್ಯುತ್ತಮ ನಟನಿಗೆ, ನಟಿಗೆ, ಸಂಭಾಷಣಾ ಲೇಖಕನಿಗೆ, ಛಾಯಾಗ್ರಾಹಕನಿಗೆ, ಸಂಗೀತ ನಿರ್ದೇಶಕನಿಗೆ, ಧ್ವನಿ ಮುದ್ರಕನಿಗೆ, ಸಂಕಲನಕಾರನಿಗೆ ಮತ್ತು ಇತರ ಕೆಲವರಿಗೆ ವೈಯಕ್ತಿಕ ಪದಕಗಳನ್ನೂ ನಗದು ಬಹುಮಾನಗಳನ್ನೂ ನೀಡಲಾಗುತ್ತಿದೆ. 1972-73 ರಿಂದ ರಾಜ್ಯದ ಇತರ ತುಳು, ಕೊಂಕಣಿ ಹಾಗೂ ಕೊಡವ ಭಾಷೆಯ ಚಿತ್ರಗಳೂ ಪ್ರಶಸ್ತಿಗೆ ಅರ್ಹವಾಗುವಂತೆ ಮಾಡಲಾಗಿದೆ. 1974ರಲ್ಲಿ ನಾಲ್ಕನೇಯ ಅತ್ಯುತ್ತಮ ಚಿತ್ರಕ್ಕೂ ಪ್ರಶಸ್ತಿ ಸಿಗುವಂತೆ ಸರಕಾರಿ ಆಜ್ಞೆಯನ್ನು ಮಾರ್ಪಡಿಸಲಾಗಿದ್ದು, ಈ ಆಜ್ಞೆ 1972-73ರ ನಂತರ ತಯಾರಾದ ಚಿತ್ರಗಳಿಗೂ ಅನ್ವಯಿಸುವಂತೆ ತಿದ್ದುಪಡಿಯಾಗಿದೆ. 1979ರಲ್ಲಿ ಪ್ರಶಸ್ತಿ ಯೋಜನೆಯನ್ನು ಚಲನಚಿತ್ರ ಸಲಹಾ ಸಮಿತಿಯ ಶಿಫಾರಸಿನ ಮೇರೆಗೆ ಪುನರ್ವಿಮರ್ಶೆ ಮಾಡಲಾಗಿದ್ದು, ಅದರ ಅನ್ವಯದಂತೆ 1977-78 ರಿಂದೀಚೆಗೆ ಪ್ರತೀವರ್ಷ ಕೇವಲ ಮೂರು ಅತ್ಯುತ್ತಮ ಚಿತ್ರಗಳನ್ನು ಪ್ರಶಸ್ತಿಗೆ ಆಯ್ಕೆ ಮಾಡಲಾಗುತ್ತಿದೆ.

### ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿಗಳು

ಚಲನಚಿತ್ರಗಳಿಗಾಗಿ 1954-55 ರಿಂದ ರಾಷ್ಟ್ರ ಪ್ರಶಸ್ತಿಗಳನ್ನೂ 1966-67 ರಿಂದ ರಾಜ್ಯ ಪ್ರಶಸ್ತಿಗಳನ್ನೂ ನೀಡಲಾಗುತ್ತಿದೆ. 1971-72ರವರೆಗೆ ರಾಜ್ಯ ಸರಕಾರ ಪ್ರತೀ ವರ್ಷ ಮೂರು ಅತ್ಯುತ್ತಮ ಚಿತ್ರಗಳನ್ನು ಆಯ್ಕೆ ಮಾಡುತ್ತಾ ಬಂದಿದ್ದು, 1972-73 ರಿಂದ 1976-77 ರವರೆಗೆ ಪ್ರತೀ ವರ್ಷ ನಾಲ್ಕು ಚಿತ್ರಗಳನ್ನು ಪ್ರಶಸ್ತಿಗೆ ಆಯ್ಕೆ ಮಾಡಿತ್ತು. 1977-78 ರಿಂದೀಚೆಗೆ ಮತ್ತೆ ಮೊದಲಿನಂತೆ ಪ್ರತೀ ವರ್ಷ ಮೂರೇ ಅತ್ಯುತ್ತಮ ಚಿತ್ರಗಳು ಆಯ್ಕೆಯಾಗುತ್ತಾ ಬಂದಿವೆ. 1977-78 ರಿಂದೀಚೆಗೆ ಗುಣಮಟ್ಟಕ್ಕನುಗುಣವಾಗಿ ಮೂರು ಅತ್ಯುತ್ತಮ ಚಿತ್ರಗಳಿಗೆಂದು 50 ಸಾವಿರ ರೂಪಾಯಿಗಳ ನಗದು ಮತ್ತು ಚಿನ್ನದ ಪದಕ, 25 ಸಾವಿರ ರೂ.ಗಳ ನಗದು ಮತ್ತು ಬೆಳ್ಳಿ

ಪದಕ, 20 ಸಾವಿರ ರೂ.ಗಳ ನಗದು ಮತ್ತು ಬೆಳ್ಳಿ ಫಲಕಗಳಿಗೆ ಅರ್ಹವೆಂದು ಕ್ರಮವಾಗಿ ಮೊದಲ, ಎರಡನೇಯ ಹಾಗೂ ಮೂರನೇಯ ಪುರಸ್ಕಾರ ನೀಡಲಾಗುತ್ತಿದೆ. ಅತ್ಯುತ್ತಮ ಚಿತ್ರಗಳ ಜೊತೆಗೇ ಅತ್ಯುತ್ತಮ ನಟ, ನಟಿ, ನಿರ್ದೇಶಕ, ಕತೆಗಾರ, ಚಿತ್ರಕತೆಗಾರ, ಸಂಭಾಷಣ ಲೇಖಕ, ಛಾಯಾಗ್ರಾಹಕ, ಸಂಗೀತ ನಿರ್ದೇಶಕ, ಧ್ವನಿ ಮುದ್ರಕ, ಮುಂತಾದವರಿಗೂ ನಗದು ಬಹುಮಾನ ಹಾಗೂ ಬೆಳ್ಳಿ ಪದಕ ನೀಡಲಾಗುತ್ತಿದೆ.

1966-67 ರಿಂದೀಚೆಗೆ ಪ್ರಶಸ್ತಿ ಗಳಿಸಿದ ಚಿತ್ರಗಳ ಹೆಸರನ್ನು ಅರ್ಹತೆಗೆ ಅನುಗುಣವಾಗಿ ಈ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ. (ಆವರಣದಲ್ಲಿ ಪ್ರಶಸ್ತಿಯ ಅವಧಿಯನ್ನು ನಮೂದಿಸಲಾಗಿದೆ). ಅವು ಯಾವುವೆಂದರೆ—ನಕ್ಕರದೇ ಸ್ವರ್ಗ, ಸಂಧ್ಯಾರಾಗ (1966-67); ಬೆಳ್ಳಿಮೋಡ, ಸರ್ವಮಂಗಳಾ ಮತ್ತು ಬಂಗಾರದ ಹೂವು (1967-68); ಹಣ್ಣೆಲೆ ಚಿಗುರಿದಾಗ, ನಮ್ಮ ಮಕ್ಕಳು, ಮಣ್ಣಿನ ಮಗ (1968-69); ಗೆಜ್ಜೆಪೂಜೆ, ಉಯ್ಯಾಲೆ, ಮುಕ್ತಿ ಮತ್ತು ಎರಡು ಮುಖ (1969-70); ಶರಪಂಜರ, ಸಂಸ್ಕಾರ ಮತ್ತು ಕುಲಗೌರವ (1970-71); ವಂಶವೃಕ್ಷ, ಬಂಗಾರದ ಮನುಷ್ಯ, ಸಿಪಾಯಿ ರಾಮು ಮತ್ತು ಯಾವ ಜನ್ಮದ ಮೈತ್ರಿ (1971-72); ಸಂಕಲ್ಪ, ನಾಗರ ಹಾವು, ಬಿಸತ್ತಿ ಬಾಬು (ತುಳು) ಮತ್ತು ಹೃದಯ ಸಂಗಮ (1972-73); ಭೂತಯ್ಯನ ಮಗ ಅಯ್ಯು, ಕಾಡು, ಮಾಡಿ ಮಡಿದವರು, ಅಬಚೂರಿನ ಪೋಸ್ಟ್ ಆಫೀಸು ಮತ್ತು ಕೋಟಿ ಚೆನ್ನಯ್ಯ (ತುಳು) (1973-74); ಉಪಾಸನೆ, ಕಂಕಣ, ಭಕ್ತ ಕುಂಬಾರ ಮತ್ತು ಜಾಗೃತಿ (1974-75); ಚೋಮನ ದುಡಿ, ಹಂಸಗೀತೆ, ಪ್ರೇಮದ ಕಾಣಿಕೆ ಮತ್ತು ಕಥಾ ಸಂಗಮ (1975-76); ಪಲ್ಲವಿ, ಋಷ್ಯಶೃಂಗ, ಕಾಕನಕೋಟೆ, ಮತ್ತು ಋತುಗಾನ (1976-77); ಘಟಶ್ರಾದ್ಧ, ಸ್ಪಂದನ ಮತ್ತು ಅನುರೂಪ (1977-78); ಗ್ರಹಣ, ಸಾವಿತ್ರಿ ಮತ್ತು ಪರಸಂಗದ ಗೆಂಡೆತಿಮ್ಮ (1978-79), ಅರಿವು, ಮಿಂಚಿನ ಓಟ, ಮತ್ತು ಚಂದನದ ಗೊಂಬೆ (1979-80); ರಂಗನಾಯಕಿ, ಮೂರು ದಾರಿಗಳು ಮತ್ತು ಸಂಗೀತಾ (1980-81); ಬರ, ಮುನಿಯನ ಮಾದರಿ, ಬಾಡದ ಹೂ (1981-82); ಹಾಲುಜೇನು, ಫಣಿಯಮ್ಮ, ಅನ್ವೇಷಣೆ (1982-83) II ಬೆಂಕಿ, III ನೋಡಿ ಸ್ವಾಮಿ ನಾವಿರೋದೇ ಹೀಗೆ (1983-84).

ಇದರಂತೇ ರಾಷ್ಟ್ರ ಪ್ರಶಸ್ತಿಯನ್ನು ಪ್ರಾರಂಭಿಸಿದ ವರ್ಷದಿಂದ ಹಿಡಿದು 1983-84 ರವರೆಗೆ ಅನೇಕ ಕನ್ನಡ ಹಾಗೂ ಪ್ರಾಂತೀಯ ಚಿತ್ರಗಳು ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿ ಗಳಿಸಿದ್ದು ಅವುಗಳ ಪಟ್ಟಿಯನ್ನೂ ಈ ಕೆಳಗೆ ಕೊಡಲಾಗಿದೆ.

ಕನ್ನಡ ಅತ್ಯುತ್ತಮ ಚಿತ್ರವೆಂದು 1955ರಲ್ಲಿ ಬೇಡರ ಕಣ್ಣಪ್ಪ, 1956ರಲ್ಲಿ ಮಹಾಕವಿ ಕಾಳಿದಾಸ, 1960ರಲ್ಲಿ ಜಗಜ್ಯೋತಿ ಬಸವಣ್ಣ, 1961ರಲ್ಲಿ ಭಕ್ತ ಕನಕದಾಸ, 1962ರಲ್ಲಿ ಕಿತ್ತೂರ ಚೆನ್ನಮ್ಮ, 1963ರಲ್ಲಿ ನಂದಾದೀಪ, 1964ರಲ್ಲಿ ಮಂಗಳ ಮುಹೂರ್ತ, 1965ರಲ್ಲಿ ನವಜೀವನ, ಹಾಗೂ 1966ರಲ್ಲಿ ಮಿಸ್ ಲೀಲಾವತಿ ಇವುಗಳಿಗೆ ಅರ್ಹತಾ ಪತ್ರ ನೀಡಲಾಗಿದೆ. ಎರಡನೇಯ ಅತ್ಯುತ್ತಮ ಚಿತ್ರವೆಂದು 1957ರಲ್ಲಿ ಭಕ್ತ ವಿಜಯ, 1965ರಲ್ಲಿ ಮನೆ ಅಳಿಯ, ಹಾಗೂ 1966ರಲ್ಲಿ ಮದುವೆ ಮಾಡಿ ನೋಡು ಈ ಮೂರು ಅರ್ಹತಾಪತ್ರ ಗಳಿಸಿವೆ. 1966ರಲ್ಲೇ ಕೊಂಕಣಿ ಭಾಷೆಯ ನಿರ್ಮಾಣ ಚಿತ್ರವೂ ಅರ್ಹತಾ ಪತ್ರ ಗಳಿಸಿದೆ.

ರಜತ ಕಮಲ (ಬೆಳ್ಳಿ ಪದಕ) ಅಥವಾ ಶ್ರೇಷ್ಠ ಪ್ರಾದೇಶಿಕ ಭಾಷಾ ಚಿತ್ರ ಪ್ರಶಸ್ತಿ ಗಳಿಸಿರುವ ಕನ್ನಡ ಚಿತ್ರಗಳೆಂದರೆ: ಪ್ರೇಮದ ಪುತ್ರಿ (1958), ಸ್ಕೂಲ್ ಮಾಸ್ಟರ್ (1959), ಸಂತ ತುಕಾರಾಮ (1964), ಚಂದವಳ್ಳಿಯ ತೋಟ (1965), ಸತ್ಯ ಹರಿಶ್ಚಂದ್ರ (1966), ಸಂಧ್ಯಾರಾಗ (1967), ಬಂಗಾರದ ಹೂವು (1968), ಮಣ್ಣಿನ ಮಗ (1969), ಗೆಜ್ಜೆಪೂಜೆ (1970), ನಗುವ ಹೂವು (1971), ವಂಶವೃಕ್ಷ (1972), ಶರಪಂಜರ (1973), ಅಬಚೂರಿನ ಪೋಸ್ಟ್ ಆಫೀಸು (1974), ಕಂಕಣ (1975), ಹಂಸಗೀತೆ (1976), ಪಲ್ಲವಿ (1977), ತಬ್ಬಲಿಯು ನೀನಾದೆ ಮಗನೆ (1978), ಒಂದಾನೊಂದು ಕಾಲದಲ್ಲಿ (1979), ಅರಿವು (1980), ಬರ (1981), ಫಣಿಯಮ್ಮ (1982), ಬ್ಯಾಂಕರ್ ಮಾರ್ಗಯ್ಯ (1983) ಮತ್ತು ಆ್ಯಕ್ಸಿಡೆಂಟ್ (1984).

ಸ್ವರ್ಣ ಕಮಲ ಗಳಿಸಿದ ಚಿತ್ರಗಳೆಂದರೆ: ಸಂಸ್ಕಾರ (1971), ಚೋಮನ ದುಡಿ (1976) ಮತ್ತು ಘಟಶ್ರಾದ್ಧ (1978). ಜಿ. ವಿ. ಅಯ್ಯರ್ ರಚಿಸಿದ ಸಂಸ್ಕೃತ ಚಿತ್ರ ಆದಿ ಶಂಕರಾಚಾರ್ಯಕ್ಕೆ 1984ರ ಸ್ವರ್ಣ ಕಮಲ ಲಭಿಸಿದೆ.

ಇವುಗಳ ಹೊರತಾಗಿ 1969ರಲ್ಲಿ ಸ್ಕೂಲ್ ಮಾಸ್ಟರ್ ಚಿತ್ರಕ್ಕೆ ಬೆಳ್ಳಿ ಪದಕ ಹಾಗೂ ಅಖಿಲ ಭಾರತ ಮಟ್ಟದ ಅರ್ಹತಾ ಪತ್ರವನ್ನು ನೀಡಲಾಗಿತ್ತಲ್ಲದೇ, 1974ರಲ್ಲಿ ಕಾಡು ಚಿತ್ರಕ್ಕೆ ಬೆಳ್ಳಿ ಪದಕ ಹಾಗೂ ಎರಡನೇಯ ಅತ್ಯುತ್ತಮ ರಾಷ್ಟ್ರೀಯ ಚಿತ್ರವೆಂಬ ಪ್ರಶಸ್ತಿಯನ್ನೂ ನೀಡಲಾಯಿತು. 1979ರಲ್ಲಿ ಗ್ರಹಣ ಚಿತ್ರಕ್ಕೆ ರಾಷ್ಟ್ರೀಯ ಸಾಮರಸ್ಯದ ಅತ್ಯುತ್ತಮ ಚಿತ್ರವೆಂದು ಬೆಳ್ಳಿ ಪದಕ ಗಳಿಸಿತು. 1980ರಲ್ಲಿ ದಂಗೆಯೆದ್ದ ಮಕ್ಕಳು ಅತ್ಯುತ್ತಮ ಮಕ್ಕಳ ಚಿತ್ರವೆಂಬ ರಾಷ್ಟ್ರಪ್ರಶಸ್ತಿ ಗಳಿಸಿತು.

ಈ ಎಲ್ಲವುಗಳ ಹೊರತಾಗಿ ರಾಜ್ಯದ ಅನೇಕ ಚಿತ್ರಗಳು ಅಂತರರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಮೆಚ್ಚುಗೆಯನ್ನೂ ಪ್ರಶಸ್ತಿಯನ್ನೂ ಗಳಿಸಿವೆ. 1972ರಲ್ಲಿ ಸಂಸ್ಕಾರ ಚಿತ್ರಕ್ಕೆ

ಲೊಕಾರ್ನೊ ಚಿತ್ರೋತ್ಸವದಲ್ಲಿ ಕಂಚಿನ ಚಿರತೆ ಪುರಸ್ಕಾರ ಲಭಿಸಿತು. ಆಕ್ರಮಣ ಚಿತ್ರಕ್ಕೆ ಜಕಾರ್ತದಲ್ಲಿ ನಡೆದ ಚಿತ್ರೋತ್ಸವದಲ್ಲಿ ಮಿತ್ರಾ ಪ್ರಶಸ್ತಿ ಲಭಿಸಿತಲ್ಲದೇ ಇಂಡೋನೇಶ್ಯದಲ್ಲಿ 1980ರಲ್ಲಿ ನಡೆದ 26ನೇಯ ಏಷ್ಯನ್ ಚಿತ್ರೋತ್ಸವದಲ್ಲಿ ಮತ್ತೊಂದು ಪುರಸ್ಕಾರವೂ ದೊರಕಿತು. ಕನ್ನಡ ಚಿತ್ರೋದ್ಯಮಕ್ಕಾಗಿ ಶ್ರಮಿಸಿದ ಹಲವು ಪ್ರತಿಭಾವಂತರಿಗೆ ರಾಷ್ಟ್ರಮಟ್ಟದಲ್ಲಿ ವೈಯಕ್ತಿಕ ಪ್ರಶಸ್ತಿಗಳು ಸಿಕ್ಕಿವೆ. ಸರ್ವಶ್ರೀ ಎಸ್. ಆರ್. ಪುಟ್ಟಣ್ಣ ಕಣಗಾಲ್, ಗಿರೀಶ್ ಕಾರ್ನಾಡ್. ಬಿ. ವಿ. ಕಾರಂತ, ಎಮ್. ವಿ. ವಾಸುದೇವರಾವ್, ಶಂಕರ್ ನಾಗ್, ಕೆ. ಎಸ್. ಅಶ್ವತ್, ಉದಯಕುಮಾರ್, ಪಿ. ಲಂಕೇಶ್, ಎಸ್. ರಾಮಚಂದ್ರ, ಅಜಿತ್ ಕುಮಾರ್, ಶಿವಮೊಗ್ಗ ಸುಬ್ಬಣ್ಣ, ಎಸ್. ಆರ್. ಭಟ್, ಟಿ. ಎಸ್. ರಂಗಾ, ಟಿ. ಎಸ್. ನಾಗಾಭರಣ, ಕೆ. ಶಿವರಾಮ ಕಾರಂತ, ಮಾಸ್ಟರ್ ಜಿ. ಎಸ್. ನಟರಾಜ್ ಇವರೇ ಮುಂತಾದವರು ಆ ಸಾಲಿಗೆ ಸೇರಿದ್ದಾರೆ. ಶ್ರೀಮತಿ ನಂದಿನಿ ಅವರು ಊರ್ವಶಿ ಪ್ರಶಸ್ತಿ ಗಳಿಸಿದ್ದಾರೆ.

ಚಿತ್ರೀಕರಣಕ್ಕೆಂದು ವಾರ್ತಾ ಮತ್ತು ಪ್ರಸಾರ ಇಲಾಖೆಯ ನಿರ್ದೇಶಕರಿಂದ ಅನುಮತಿ ಪಡೆಯಬೇಕಾಗುತ್ತದೆ. ಹೊರಾಂಗಣಗಳಲ್ಲಿ ಹಾಗೂ ವಿಶೇಷ ಸಂದರ್ಭಗಳಲ್ಲಿ ರಾಜ್ಯ ಭಾಷೆಯ ಸಿನಿಮಾ ದೃಶ್ಯಗಳ ಚಿತ್ರೀಕರಣಕ್ಕೆಂದು ದಿನಕ್ಕೆ ನೂರು ರೂಪಾಯಿಗಳಂತೆ ಶುಲ್ಕ ನೀಡಬೇಕಾಗುತ್ತದೆ. ಇತರ ಭಾಷೆಗಳ ಚಿತ್ರೀಕರಣಕ್ಕಾದರೆ ಶುಲ್ಕ ಜಾಸ್ತಿ ಇರುತ್ತದೆ. ಕರ್ನಾಟಕ ಸರಕಾರವು ರಾಜ್ಯದಲ್ಲಿ ಪ್ರದರ್ಶಿತವಾಗುವ ಕೆಲವು ಚಿತ್ರಗಳಿಗೆ ಮನರಂಜನೆ ತೆರಿಗೆ ವಿನಾಯಿತಿ ನೀಡುತ್ತದೆ. ಅಂಥ ವಿನಾಯಿತಿಗೆ ಯೋಗ್ಯವಾದ ಚಿತ್ರ ಯಾವುದೆಂಬುದನ್ನು ಶಿಫಾರಸು ಮಾಡಲೆಂದೇ ಸಮಿತಿಯೊಂದಿದೆ. ಇದಲ್ಲದೇ ರಾಜ್ಯದಲ್ಲೇ ತಯಾರಾದ ಕನ್ನಡ ಚಿತ್ರಗಳಿಗೆ ಶೇಕಡಾ 50ರಷ್ಟು ಮನರಂಜನೆ ತೆರಿಗೆ ವಿನಾಯಿತಿ ಕೊಡುವಂತೆ ಕರ್ನಾಟಕ ಮನರಂಜನೆ ತೆರಿಗೆ (ತಿದ್ದುಪಡಿ) ಶಾಸನ 1981ರಲ್ಲಿ ಸೂಕ್ತ ತಿದ್ದುಪಡಿ ಮಾಡಿಕೊಳ್ಳಲಾಗಿದೆ. 22-1-1983ರಿಂದ ಈ ವಿನಾಯಿತಿಯನ್ನು ಇತರ ರಾಜ್ಯಗಳಲ್ಲಿ ತಯಾರಾದ ಕನ್ನಡ ಚಿತ್ರಗಳಿಗೂ ನೀಡಲಾಗುತ್ತಿದೆ.

ಕನ್ನಡ ಚಲನಚಿತ್ರೋದ್ಯಮವನ್ನು ಅಭಿವೃದ್ಧಿಗೊಳಿಸಲು ಹಾಗೂ ಸುಧಾರಿಸಲೆಂದು ರಾಜ್ಯದಲ್ಲಿ ಹಲವಾರು ಸಂಸ್ಥೆಗಳು ಕಾರ್ಯನಿರತವಾಗಿವೆ. ಬೆಂಗಳೂರಿನಲ್ಲಿ ಕರ್ನಾಟಕ ಫಿಲ್ಮ್ ಇಂಡಸ್ಟ್ರಿ ಡೆವಲಪ್‌ಮೆಂಟ್ ಕಾರ್ಪೊರೇಷನ್ ಎಂಬ ಕಂಪನಿಯೊಂದು 1-2-1968ರಂದು ಸ್ಥಾಪಿತವಾಗಿದ್ದು ಅದರಲ್ಲಿ ಶೇಕಡಾ 83.85 ರಷ್ಟು ಶೇರುಗಳನ್ನು ಸರಕಾರವೇ ತೊಡಗಿಸಿ 12-7-1974ರಲ್ಲಿ ಸರಕಾರಿ ಸಂಸ್ಥೆಯನ್ನಾಗಿ ಮಾಡಿಕೊಂಡಿತು. ಈ ಕಾರ್ಪೊರೇಷನ್‌ನ ಅಧಿಕೃತ ಶೇರು ಬಂಡವಾಳ ಒಂದು ಕೋಟಿ ರೂಪಾಯಿಗಳಷ್ಟಿದ್ದು ಫೆಬ್ರವರಿ 1982ರವರೆಗೆ 77.598 ಲಕ್ಷ ರೂಪಾಯಿಗಳಷ್ಟು ಚಂದಾ ಸಂದಾಯವಾಗಿತ್ತು. ರಾಜ್ಯದಲ್ಲಿ ಚಿತ್ರೋದ್ಯಮವನ್ನು ಅಭಿವೃದ್ಧಿಗೊಳಿಸುವುದು ಮತ್ತು ಚಿತ್ರ ತಯಾರಿಕೆ ಹಾಗೂ ಅವುಗಳ ಪ್ರದರ್ಶನಕ್ಕೆ ಸೂಕ್ತ ಸೌಲಭ್ಯಗಳನ್ನು ವ್ಯವಸ್ಥೆ ಮಾಡುವುದು ಈ ಕಾರ್ಪೊರೇಶನ್‌ನ ಮುಖ್ಯೋದ್ದೇಶಗಳಾಗಿವೆ. ರಾಜ್ಯಾದ್ಯಂತ ಜನತಾ ಚಿತ್ರಮಂದಿರಗಳನ್ನು ಕಟ್ಟಿಸುವುದು, ಕನ್ನಡ ಚಿತ್ರ ನಿರ್ಮಾಪಕರಿಗೆ ಧನ ಸಹಾಯ ನೀಡುವುದು, ಹೊರಾಂಗಣ ಚಿತ್ರೀಕರಣಕ್ಕೆ ಸಂಚಾರಿ ಸ್ಟುಡಿಯೋ ಉಪಕರಣಗಳನ್ನು ಹಾಗೂ ಸಂಕಲನ ಸಲಕರಣೆಗಳನ್ನು ಬಾಡಿಗೆಗೆ ನೀಡುವುದು, ಬೆಂಗಳೂರಿನ ಶ್ರೀ ಕಂಠೀರವ ಸ್ಟುಡಿಯೋವನ್ನು ಆಧುನೀಕರಣಗೊಳಿಸುವುದು ಇವೇ ಮುಂತಾದ ಹಲವು ಯೋಜನೆಗಳನ್ನು ಈ ಕಾರ್ಪೊರೇಶನ್ ಹಾಕಿಕೊಂಡಿದೆ. 1981-82ರ ಹೊತ್ತಿಗೆ ಈ ಸಂಸ್ಥೆಯು 1) ಮಾಗಡಿ, ಕುದೂರ್, ತುರುವೇಕೆರೆ, ಚಿಕ್ಕ ಜಾಜೂರು, ಕುಶಾಲನಗರ, ಹುಣಸೂರು, ಚಿಕ್ಕಜೋಗಿಹಳ್ಳಿಗಳಲ್ಲಿ ಕಡಿಮೆ ವೆಚ್ಚದ ಚಿತ್ರಮಂದಿರಗಳ ನಿರ್ಮಾಣ, 2) ಸುಳಿ, ಸದಾನಂದ, ಪ್ರೇಮಜ್ವಾಲೆ ಹಾಗೂ ಲಕ್ಷ್ಮೀ ಪ್ರಸನ್ನ ವರ್ಣ ಚಿತ್ರಗಳ ತಯಾರಿಕೆ, 3) ಶ್ರೀಕಂಠೀರವ ಸ್ಟುಡಿಯೋದಲ್ಲಿ ರೀ ರೆಕಾರ್ಡಿಂಗ್ ಹಾಗೂ ಡಬ್ಬಿಂಗ್ ಸೌಲಭ್ಯಗಳ ನಿರ್ಮಾಣ ಹಾಗೂ 4) ವಿವಿಧ ಸರಕಾರೀ ಇಲಾಖೆಗಳ ಪರವಾಗಿ 25 ಸಾಕ್ಷ್ಯ ಚಿತ್ರಗಳ ತಯಾರಿಕೆಗಳಿಗೆ ಸಹಾಯ ಮಾಡಿದೆ.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಲಿ (ಕರ್ನಾಟಕ ಫಿಲ್ಮ್ ಚೇಂಬರ್ ಆಫ್ ಕಾಮರ್ಸ್) ಬೆಂಗಳೂರಿನಲ್ಲಿ 1944ರಲ್ಲಿ ಚಿತ್ರೋದ್ಯಮದ ವಿವಿಧ ಪ್ರತಿನಿಧಿಗಳಾದ ಪ್ರದರ್ಶಕರು, ಹಂಚಿಕೆದಾರರು, ಸ್ಟುಡಿಯೋ ಮತ್ತು ಲ್ಯಾಬೊರೇಟರಿ ಮಾಲೀಕರೇ ಮುಂತಾದವರ ಸಹಕಾರ ಸಂಘವಾಗಿ ರಾಜ್ಯದಲ್ಲಿ ಸ್ಥಾಪನೆಗೊಂಡಿತು. ಸದಸ್ಯತ್ವ ಶುಲ್ಕ, ಸದಸ್ಯರಾಗ ಬಯಸುವವರಿಂದ ಪ್ರವೇಶ ಧನ, ಚಿತ್ರ ಹಂಚಿಕೆದಾರರಿಂದ ಪ್ರತೀ ಚಿತ್ರದ ರೆಜಿಸ್ಟ್ರೇಶನ್‌ಗೆ ಶುಲ್ಕ, ಸಾರ್ವಜನಿಕ ವಂತಿಗೆ, ಕಾಣಿಕೆ ಬಡ್ಡಿ, ಇತ್ಯಾದಿ ಮೂಲಗಳಿಂದ ಈ ಫಿಲ್ಮ್ ಚೇಂಬರ್‌ಗೆ ಹಣ ಸಂಗ್ರಹಿಸಲಾಗುತ್ತದೆ. ಚಿತ್ರೋದ್ಯಮದ ಒಂದೊಂದು ಅಂಗಗಳಿಂದಲೂ ಆಯ್ಕೆಯಾದ ಪ್ರತಿನಿಧಿಗಳ ಕಾರ್ಯಕಾರಿ ಸಮಿತಿಯೇ ಚೇಂಬರ್‌ನ ಆಡಳಿತ ನಿರ್ವಹಣೆ ಮಾಡುತ್ತದೆ. ಇದರ ಸ್ಥಾಪನೆಯ ಉದ್ದೇಶಗಳು : ರಾಜ್ಯದ ಚಿತ್ರೋದ್ಯಮಕ್ಕೆ ಬೆಂಬಲ ಹಾಗೂ ಪ್ರೋತ್ಸಾಹ ನೀಡುವುದು ; ರಾಷ್ಟ್ರದ ಇಂಥ ಇತರ ಚೇಂಬರ್‌ಗಳ ಸಹವರ್ತಿಯಾಗುವುದು ; ಸದಸ್ಯರ ಹಕ್ಕು ಮತ್ತು ಸೌಲಭ್ಯಗಳ ರಕ್ಷಣೆಗಾಗಿ ಹೋರಾಡುವುದು ; ಕಲಾವಿದರು, ತಾಂತ್ರಿಕ ವರ್ಗ ಹಾಗೂ ನಿರ್ದೇಶಕರ ತರಬೇತಿಗಾಗಿ ಅಕ್ಯಾಡಮಿಯನ್ನು ಸ್ಥಾಪಿಸುವುದು ಹಾಗೂ ಚಿತ್ರೋದ್ಯಮದ ತಾಂತ್ರಿಕ ಗುಣಮಟ್ಟವನ್ನು ಅಭಿವೃದ್ಧಿಪಡಿಸುವುದು. ಉದ್ಯಮದ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಚೇಂಬರ್‌ನ ಸದಸ್ಯರ ಹಾಗೂ ಸರಕಾರದ ಮಧ್ಯೆ ಹಿತ

ಸೇತುವಾಗಿ ಕಾರ್ಯ ಮಾಡುವುದು ಹಾಗೂ ಚಿತ್ರೋತ್ಸವವೇ ಮುಂತಾದ ಸರಕಾರದ ಕೆಲಸಗಳಲ್ಲಿ ಸಹಕರಿಸುವುದು ಈ ಚೇಂಬರ್‌ನ ಉದ್ದೇಶ.

ಚಲನಚಿತ್ರ ವಿಭಾಗ (ಫಿಲ್ಮ್ಸ್ ಡಿವಿಜನ್) ಎಂಬುದು ಭಾರತ ಸರಕಾರದ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಕೇಂದ್ರೀಯ ಚಿತ್ರ ನಿರ್ಮಾಣ ಸಂಸ್ಥೆಯಾಗಿದೆ. ಇದರ ಹತ್ತು ಶಾಖೆಗಳ ಪೈಕಿ ಬೆಂಗಳೂರಿನಲ್ಲೂ ಒಂದು ಶಾಖೆ 1-4-1971 ರಿಂದ ಕಾರ್ಯಾರಂಭ ಮಾಡಿದ್ದು ಇಡೀ ಕರ್ನಾಟಕಕ್ಕೆ ಇದರ ಮೇಲ್ವಿಚಾರಣೆಯಿದೆ. ವಾರ್ತಾ ಚಿತ್ರ, ಸಾಕ್ಷ್ಯಚಿತ್ರ ಮತ್ತು ಜನತೆಯ ಶಿಕ್ಷಣ, ಸಂಸ್ಕೃತಿ, ಬೋಧನಾ ಹಾಗೂ ಮಾಹಿತಿಗಳಿಗೆ ಸಂಬಂಧಿಸಿದ ಇತರ ಚಿತ್ರಗಳನ್ನು ರಾಜ್ಯದಲ್ಲಿ ಹಂಚಿಕೆ ವ್ಯವಸ್ಥೆ ಮಾಡುವುದು ಈ ಇಲಾಖೆಯ ಹೊಣೆಗಾರಿಕೆಯಾಗಿದೆ. ರಾಜ್ಯದಲ್ಲಿ ತಯಾರಾದ ಸಾಕ್ಷ್ಯಚಿತ್ರಗಳನ್ನೂ ಚಿತ್ರಮಂದಿರಗಳಲ್ಲಿ ಅಥವಾ ಬೇರೆಡೆಗಳಲ್ಲಿ ಪ್ರದರ್ಶನಕ್ಕೆ ಇದು ಕೊಡುತ್ತದೆ.

ಫಿಲ್ಮ್ ಸೊಸೈಟಿ ಚಳವಳಿ: ಕಳೆದ 20 ವರ್ಷಗಳಿಂದಲೂ ಕರ್ನಾಟಕದಲ್ಲಿ ಫಿಲ್ಮ್ ಸೊಸೈಟಿ ಚಳವಳಿ ಅಸ್ತಿತ್ವದಲ್ಲಿದೆ. ಭಾರತದ ಫಿಲ್ಮ್ ಸೊಸೈಟಿ ಫೆಡರೇಷನ್‌ನಿಂದ ಶಿಫಾರಸು ಪಡೆದ ಉತ್ತಮ ಗುಣಮಟ್ಟದ ಹಾಗೂ ಶೈಕ್ಷಣಿಕ ಚಿತ್ರಗಳನ್ನು ಸೊಸೈಟಿಗಳು ತಮ್ಮ ಸದಸ್ಯರಿಗೆ (ಮಾತ್ರ) ಪ್ರದರ್ಶಿಸುತ್ತವೆ. ಇವುಗಳ ಉದ್ದೇಶ: ಚಿತ್ರಗಳಿಗೆ ಕಲಾತ್ಮಕ ಅಭಿವ್ಯಕ್ತಿ, ಸಾಮರ್ಥ್ಯ ಹಾಗೂ ಸಾಮಾಜಿಕ ಬದಲಾವಣೆಯ ಶಕ್ತಿಯಿದೆ ಎಂಬುದನ್ನು ಗುರುತಿಸಿ, ಜನತೆಗೆ ಉತ್ತಮ ಚಿತ್ರಗಳನ್ನು ನೋಡುವ ಅವಕಾಶ ದೊರಕಿಸಿಕೊಡುವುದು; ಚಿತ್ರಗಳ ಗುಣಮೌಲ್ಯಮಾಪನ ಮಾಡುವ ಅಭಿರುಚಿ ಸದಸ್ಯರಲ್ಲಿ ಬೆಳೆಯುವಂತೆ ಮಾಡುವುದು; ಇಂಥದೇ ಉದ್ದೇಶಗಳಿರುವ ರಾಷ್ಟ್ರೀಯ ಹಾಗೂ ಅಂತರ್ರಾಷ್ಟ್ರೀಯ ಫಿಲ್ಮ್ ಸೊಸೈಟಿಗಳ ಜತೆ ಸಂಬಂಧವಿಟ್ಟುಕೊಳ್ಳುವುದು; ಚಿತ್ರಗಳನ್ನು ಕಲಾತ್ಮಕವಾಗಿ ನಿರ್ಮಿಸಲು ಹೊಸ ತಂತ್ರಗಳನ್ನು ಶೋಧಿಸುವುದು, ಇವೇ ಮುಂತಾದವು ಪ್ರಮುಖವಾಗಿವೆ. ರಾಜ್ಯದಲ್ಲಿ ಬೆಂಗಳೂರಿನ ಮಯೂರ ಫಿಲ್ಮ್ ಸೊಸೈಟಿ ಮೊಟ್ಟಮೊದಲು ಅಸ್ತಿತ್ವಕ್ಕೆ ಬಂತು. ಅದು ಸ್ಥಗಿತವಾದ ಮೇಲೆ 1971ರಲ್ಲಿ ಫಿಲ್ಮ್ ಸೊಸೈಟಿ ಸ್ಥಾಪಿತವಾಯಿತು. ರಾಜ್ಯದಾದ್ಯಂತ ಸುಮಾರು 45 ಫಿಲ್ಮ್ ಸೊಸೈಟಿಗಳಿವೆ. ದೇಶದುದ್ದಕ್ಕೂ ಇರುವ ಫಿಲ್ಮ್ ಸೊಸೈಟಿಗಳಿಗೆಲ್ಲ ಫೆಡರೇಶನ್ ಆಫ್ ಫಿಲ್ಮ್ ಸೊಸೈಟೀಸ್ ಆಫ್ ಇಂಡಿಯಾ ಶೃಂಗ ಸಂಸ್ಥೆಯಾಗಿದ್ದು, ಇದಕ್ಕೆ ಕೇಂದ್ರ ಸರಕಾರದ ಧನಸಹಾಯ ಸಿಗುತ್ತದೆ. ಕೆಲವು ಹವ್ಯಾಸಿ ಫಿಲ್ಮ್ ಸೊಸೈಟಿಗಳು 16 ಮಿ.ಮೀ. ಅಥವಾ 8 ಮಿ.ಮೀ. ಚಿಕ್ಕ ಚಿತ್ರಗಳ ನಿರ್ಮಾಣದಲ್ಲಿ ಮಗ್ನವಾಗಿವೆ. ಅವುಗಳ ಪೈಕಿ ಅಸೀಮಾ, ಸೃಷ್ಟಿ, ಸ್ವಜನ ಮತ್ತು ಸುಚಿತ್ರಾ ಫಿಲ್ಮ್ ಸೊಸೈಟಿಗಳು ಮುಖ್ಯವಾಗಿವೆ. ಈ ಚಿಕ್ಕ ಚಿತ್ರಗಳಿಗೆ ಚಿತ್ರಮಂದಿರಗಳಲ್ಲಿ ಪ್ರದರ್ಶನ ಅವಕಾಶ ಇಲ್ಲ. ಬೆಂಗಳೂರಿನಲ್ಲಿ 1979ರಲ್ಲಿ ದಿ ಕರ್ನಾಟಕ ಫಿಲ್ಮ್ ಸೊಸೈಟೀಸ್ ಡೆವಲಪ್‌ಮೆಂಟ್ ಕೌನ್ಸಿಲ್ ಸ್ಥಾಪನೆಯಾಯಿತು. ಇದರ ಮುಖ್ಯ ಉದ್ದೇಶ: ರಾಜ್ಯದಲ್ಲಿ ಫಿಲ್ಮ್ ಸೊಸೈಟಿ ಚಳವಳಿಯ ಅಭಿವೃದ್ಧಿ, ವಿಕಾಸ, ರಾಜ್ಯದಲ್ಲಿನ ಫಿಲ್ಮ್ ಸೊಸೈಟಿಗಳ ಪರವಾಗಿ ಸರಕಾರದೊಂದಿಗೆ ಸಮಾಲೋಚನೆ ನಡೆಸುವುದು, ಫಿಲ್ಮ್ ಸೊಸೈಟಿಗಳು ನಡೆಸುವ ಚಿತ್ರಪ್ರದರ್ಶನ, ರಾಷ್ಟ್ರೀಯ ಅಂತರ್ರಾಷ್ಟ್ರೀಯ ಚಿತ್ರೋತ್ಸವಗಳ ಚಟುವಟಿಕೆಗಳಿಗೆ ಸಹಾಯ ಸಲ್ಲಿಸುವುದು, ಚರಿತ್ರಾರ್ಹ ಚಿತ್ರಗಳ ಕುರಿತು, ಚಿತ್ರ ಗುಣಮೌಲ್ಯಮಾಪನದ ಕುರಿತು ಚರ್ಚೆ ನಡೆಸುವಲ್ಲಿ ಅಥವಾ ಸಾಹಿತ್ಯ ಪ್ರಕಟಿಸುವಲ್ಲಿ ಫಿಲ್ಮ್ ಸೊಸೈಟಿಗಳಿಗೆ ನೆರವಾಗುವುದು.

ಫಿಲ್ಮ್ ಆರ್ಕೈವ್ಸ್

ಪುಣೆಯಲ್ಲಿರುವ ಭಾರತದ ರಾಷ್ಟ್ರೀಯ ಫಿಲ್ಮ್ ಆರ್ಕೈವ್ಸ್‌ನ ಪ್ರಥಮ ಪ್ರಾಂತೀಯ ಶಾಖೆಯು ಬೆಂಗಳೂರಿನ ಚೌಡಯ್ಯ ಸ್ಮಾರಕ ಭವನದಲ್ಲಿ 1982ರ ಜನವರಿಯಿಂದ ಕಾರ್ಯಾರಂಭ ಮಾಡಿತು. ಈ ಭಂಡಾರದ ಪ್ರಮುಖ ಉದ್ದೇಶಗಳು ಯಾವುವೆಂದರೆ: ರಾಷ್ಟ್ರಮಟ್ಟದ ಸಿನಿಮಾಗಳನ್ನು ದೊರಕಿಸಿಕೊಂಡು ಸಂರಕ್ಷಿಸುವುದು; ಅವುಗಳ ದಾಖಲಾತಿ, ವರ್ಗೀಕರಣ ಹಾಗೂ ಚಿತ್ರ ಸಂಬಂಧಿ ಸಂಶೋಧನೆಗಳಿಗೆ ಅವಕಾಶ ಮಾಡಿಕೊಡುವುದು; ದೇಶದ ಈ ಭಾಗದಲ್ಲಿ ಚಿತ್ರಸಂಸ್ಕೃತಿಯನ್ನು ಜನಪ್ರಿಯಗೊಳಿಸುವುದು– ಇವೇ ಮುಂತಾದವು. ಈ ಕಚೇರಿಯಲ್ಲಿ ವ್ಯಾಪಾರೀ ಉದ್ದೇಶಗಳಿಗೆ ಬಳಸಲಾಗದ ಕೆಲವು ಉತ್ತಮ ಗುಣಮಟ್ಟದ 16 ಮಿ.ಮೀ. ಚಿತ್ರಗಳಿವೆ. ಚಲನಚಿತ್ರಗಳಿಗೆ ಸಂಬಂಧಿಸಿದಂತೆ ಆಧಾರ ಗ್ರಂಥಗಳೂ, ಪತ್ರಿಕೆಗಳೂ ಇವೆ. ಫಿಲ್ಮ್ ಸೊಸೈಟಿಗಳಿಗೆ, ಶೈಕ್ಷಣಿಕ ಸಂಸ್ಥೆಗಳಿಗೆ, ಸಾಂಸ್ಕೃತಿಕ ಸಂಸ್ಥೆಗಳಿಗೆ ಈ ಲೈಬ್ರರಿಯ ಸೌಕರ್ಯಗಳು ಮೀಸಲಾಗಿವೆ. ಈ ಚಿತ್ರ ಭಂಡಾರದ ಇತರ ಚಟುವಟಿಕೆಗಳೆಂದರೆ ತನ್ನ ಸಂಗ್ರಹದಲ್ಲಿರುವ ಚಿತ್ರಗಳ ಪ್ರದರ್ಶನ ವ್ಯವಸ್ಥೆಯನ್ನು ತಾನೇ ಮುಂದಾಗಿ ಮಾಡುವುದು ಇಲ್ಲವೇ ಫಿಲ್ಮ್ ಸೊಸೈಟಿ ಅಥವಾ ಅಂಥದೇ ಉದ್ದೇಶವಿರುವ ಇತರ ಸಂಘಟನೆಗಳ ಮುಖಾಂತರ ಪ್ರದರ್ಶಿಸುವುದು; ಪುಣೆಯ ಪ್ರಧಾನ ಕಚೇರಿಯೊಂದಿಗೆ ಸಮಾಲೋಚನೆ ನಡೆಸಿ ಚಿತ್ರ ಗುಣಮೌಲ್ಯಮಾಪನ, ತರಬೇತಿ ಶಿಬಿರ ವ್ಯವಸ್ಥೆ, ಚರ್ಚಾಗೋಷ್ಠಿ, ವಿಚಾರ ಸಂಕಿರಣ ಏರ್ಪಡಿಸುವುದು; ನಿರ್ಮಾಪಕರಿಂದ ಹಂಚಿಕೆದಾರರಿಂದ ಚಿತ್ರಗಳ ಪ್ರತಿಯನ್ನೂ ಇತರ ಸಲಕರಣೆಗಳನ್ನೂ ಸಂಗ್ರಹಿಸುವುದು; ಚಿತ್ರಗಳ ನೆಗೆಟಿವ್‌ಗಳನ್ನೂ, ಮಹತ್ವಪೂರ್ಣ ಚಿತ್ರಗಳ ಮೂಲ ಸಲಕರಣೆಗಳನ್ನೂ ರಕ್ಷಿಸಲೆಂದು ಸಂದೂಕಗಳನ್ನು ಸಿದ್ಧಪಡಿಸುವುದು ಮಹತ್ವದ್ದಾಗಿವೆ. 1937ರಲ್ಲಿ ನಿರ್ಮಿಸಲಾದ ಚಿರಂಜೀವಿ ಚಿತ್ರದ ಪ್ರಿಂಟನ್ನು ಈ ಕಚೇರಿಯವರು ಪತ್ತೆ

ಹಚ್ಚಿ ಶೇಖರಿಸಿದ್ದಾರೆ. ಹಳ್ಳಿ ಪ್ರದೇಶಗಳಲ್ಲಿ ಚಿತ್ರಪ್ರಿಯತೆ ಹೆಚ್ಚಿಸಲೆಂಬ ಉದ್ದೇಶದಿಂದ ಒಳನಾಡು ಕ್ಷೇತ್ರಗಳಲ್ಲಿ ಚಿತ್ರಾಗಾರ ಪ್ರದರ್ಶನ ಯೋಜನೆಯ ಅನ್ವಯ ದೊಡ್ಡಬಳ್ಳಾಪುರ, ಹೊನ್ನಾವರ, ಯಲ್ಲಾಪುರಗಳಲ್ಲಿ ಚಿತ್ರಪ್ರದರ್ಶನ ಮಾಡಿದ್ದಾರೆ. ಪುಣೆಯ ಪ್ರಧಾನ ಕಚೇರಿಯ ಸಂದೂಕಗಳಲ್ಲಿ ಕನ್ನಡದ ಸುಮಾರು 60–70 ಚಿತ್ರಗಳನ್ನು ಶೇಖರಿಸಿಡಲಾಗಿದೆ.

ಆದರ್ಶ ಫಿಲ್ಮ್ ಇನ್ಸ್‌ಟಿಟ್ಯೂಟ್ : 1973ರಲ್ಲಿ ಬೆಂಗಳೂರಿನಲ್ಲಿ ಶ್ರೀ ಬಿ. ಆರ್. ಪುಟ್ಟಸ್ವಾಮಿಯವರಿಂದ ಸ್ಥಾಪಿತಗೊಂಡ ಆದರ್ಶ ಫಿಲ್ಮ್ ಇನ್ಸ್‌ಟಿಟ್ಯೂಟ್ ಕನ್ನಡ ಚಿತ್ರರಂಗದ ಖ್ಯಾತ ನಟ ದಿವಂಗತ ಆರ್. ನಾಗೇಂದ್ರರಾವ್ ಅವರ ಪ್ರಾಂಶುಪಾಲತ್ವದಲ್ಲಿ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿತು. ಈ ಕೆಳಗಿನ ಪ್ರಮುಖ ಉದ್ದೇಶಗಳಿಗಾಗಿ ಆದರ್ಶ ಇನ್‌ಸ್ಟಿಟ್ಯೂಟ್ ಸ್ಥಾಪನೆಯಾಗಿದೆ : ಚಿತ್ರ ನಿರ್ಮಾಣ ತಂತ್ರದ ವಿವಿಧ ಅಂಗಗಳಿಗೆಂದು ಅರ್ಹ ಅಭ್ಯರ್ಥಿಗಳನ್ನು ತರಬೇತಿಗೊಳಿಸುವುದು ; ಚಿತ್ರ ತಯಾರಿಕೆಯ ವಿವಿಧ ಚಟುವಟಿಕೆಗಳ ಬಗ್ಗೆ ಕೂಲಂಕುಷ ಮಾಹಿತಿ ನೀಡುವುದು ; ಚಿತ್ರೋದ್ಯಮ ಹಾಗೂ ಪ್ರತಿಭಾವಂತ ತರಬೇತಿ ಹೊಂದಿದ ಕಲಾಕಾರರ ಮಧ್ಯೆ ಸುಭದ್ರ ಸಂಬಂಧ ಏರ್ಪಡಿಸುವುದು. ಕನ್ನಡ ಮಾಧ್ಯಮದಲ್ಲಿ ಈ ಸಂಸ್ಥೆ ಒಂದು ವರ್ಷದ ಅವಧಿಯ ಡಿಪ್ಲೋಮಾ ಕೋರ್ಸ್ ನಡೆಸುತ್ತದೆ. ಸದ್ಯಕ್ಕೆ ಈ ಸಂಸ್ಥೆ 1) ಚಿತ್ರ ನಟನೆ, 2) ಹಿನ್ನೆಲೆ ಹಾಡುಗಾರಿಕೆ, 3) ವಾದ್ಯಗಳ ಮೂಲಕ ಚಿತ್ರಸಂಗೀತ ಮತ್ತು 4) ಶಾಸ್ತ್ರೀಯ ಮತ್ತು ಚಿತ್ರನೃತ್ಯ, ಈ ನಾಲ್ಕೇ ಕೋರ್ಸ್‌ಗಳನ್ನು ನಡೆಸುತ್ತಿದೆ. ಪ್ರವೇಶ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಮಾತ್ರ ಅಭ್ಯರ್ಥಿಗಳಿಗೆ ಪ್ರವೇಶ ನೀಡಲಾಗುತ್ತದೆ. ಪ್ರತಿಯೊಂದು ಕೋರ್ಸ್‌ಗೂ 15 ಅಭ್ಯರ್ಥಿಗಳನ್ನು ಮಾತ್ರ ತರಬೇತಿಗೆ ಆಯ್ಕೆ ಮಾಡಲಾಗುತ್ತದೆ. 1982-83ರ ಅವಧಿಯಲ್ಲಿ ಚಿತ್ರನಟನಾ ಕೋರ್ಸ್‌ಗೆ 15 ವಿದ್ಯಾರ್ಥಿಗಳಿದ್ದರು. ಹಿನ್ನೆಲೆ ಹಾಡುಗಾರಿಕೆಗೆ 13, ವಾದ್ಯಸಂಗೀತಕ್ಕೆ 10, ಶಾಸ್ತ್ರೀಯ ಹಾಗೂ ಚಿತ್ರನರ್ತನಕ್ಕೆ 15 ವಿದ್ಯಾರ್ಥಿಗಳೂ ಇದ್ದರು. ರಾಜ್ಯ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮೂಲಕ ಕರ್ನಾಟಕ ಸರಕಾರ ಈ ಸಂಸ್ಥೆಗೆ ಧನಸಹಾಯ ನೀಡುತ್ತದೆ.

## ಫಿಲ್ಮ್ ಸ್ಟುಡಿಯೋಗಳು

ಸ್ಟುಡಿಯೋ ಸೌಲಭ್ಯ ಬೇಕಿದ್ದರೆ ಹಿಂದೆಲ್ಲ ಚಿತ್ರ ನಿರ್ಮಾಪಕರು ಹೊರರಾಜ್ಯಗಳಿಗೆ ಹೋಗಬೇಕಾಗುತ್ತಿತ್ತು. ಬೆಂಗಳೂರಿನಲ್ಲಿ 1930ರಲ್ಲಿ ದಿ ಸೂರ್ಯ ಫಿಲ್ಮ್ ಕಂಪನಿ ಪ್ರಾರಂಭವಾಗಿ ಸುಮಾರು 40 ಮೂಕಚಿತ್ರಗಳನ್ನು ನಿರ್ಮಿಸಿತ್ತು. ಇದೇ ದಕ್ಷಿಣ ಭಾರತದ ಮೊದಲ ಸ್ಟುಡಿಯೋ ಎನಿಸಿಕೊಂಡಿತ್ತು. ನಂತರ ದೇವುಡು ನರಸಿಂಹಶಾಸ್ತ್ರಿ, ಬೆಲ್ಜಿಯಮ್‌ನ ಅಲಗೂಡ್, ಓರಿಯಂಟಲ್ ಬ್ಯಾಂಕ್‌ನ ಶ್ರೀನಿವಾಸಮೂರ್ತಿ, ನಾಟಕರತ್ನ ಗುಬ್ಬಿ ವೀರಣ್ಣ ಮುಂತಾದವರೆಲ್ಲ ಸೇರಿ ಮಲ್ಲೇಶ್ವರ ಬಡಾವಣೆಯಲ್ಲಿ ಇನ್ನೊಂದು ಸ್ಟುಡಿಯೋ ಪ್ರಾರಂಭಿಸಿ ಅನೇಕ ಮೂಕ ಚಿತ್ರಗಳ ನಿರ್ಮಾಣಕ್ಕೆ ಅನುಕೂಲ ಮಾಡಿಕೊಟ್ಟರು. ಸ್ಟುಡಿಯೋ ಮಾಲೀಕರೇ ಅಂದಿನ ದಿನಗಳಲ್ಲಿ ಚಿತ್ರಗಳನ್ನೂ ನಿರ್ಮಿಸುತ್ತಿದ್ದರು. 1936ರಲ್ಲಿ ಮೈಸೂರಿನ ವಿ. ತಿಮ್ಮಯ್ಯ ಎಂಬ ಉದ್ದಿಮೆಪತಿ ಮೈಸೂರ್ ಸೌಂಡ್ ಸ್ಟುಡಿಯೋ ಎಂಬ ಹೆಸರಿನ ಸ್ಟುಡಿಯೋ ಸ್ಥಾಪಿಸಿದರು. ರಾಜಸೂಯ ಯಾಗ ಎಂಬ ಚಿತ್ರ ಸಂಪೂರ್ಣವಾಗಿ ಮೊಟ್ಟಮೊದಲ ಬಾರಿ ಕರ್ನಾಟಕದಲ್ಲಿ ಇದೇ ಸ್ಟುಡಿಯೋದಲ್ಲಿ ತಯಾರಾಯಿತು. 1940ರ ಆದಿಭಾಗದಲ್ಲಿ ನಾರಾಯಣ ಎಂಬ ನೂಲು ವ್ಯಾಪಾರಿ ಮೈಸೂರು ಮೂವಿಟೋನ್ ಸ್ಟುಡಿಯೋ ಎಂಬುದನ್ನು ಸ್ಥಾಪಿಸಿದರೂ ಯಾವ ಚಿತ್ರವೂ ನಿರ್ಮಾಣವಾಗದೇ ಸ್ಟುಡಿಯೋ ನಿಷ್ಕ್ರಿಯವಾಯಿತು. 1946ರಲ್ಲಿ ಜಿ. ಆರ್. ರಾಮಯ್ಯ ಮತ್ತಿತರರು ಸೇರಿ ಮೈಸೂರಿನಲ್ಲಿ ಈಗಿನ ಮರಿಮಲ್ಲಪ್ಪ ಜ್ಯೂನಿಯರ್ ಕಾಲೇಜಿನ ಬಳಿ ನವಜ್ಯೋತಿ ಸ್ಟುಡಿಯೋ ಪ್ರಾರಂಭಿಸಿದರು. ಕೆಲ ಕಾಲಾನಂತರ ಈ ಸ್ಟುಡಿಯೋವನ್ನು ಸರಸ್ವತೀಪುರಕ್ಕೆ ಸ್ಥಳಾಂತರಿಸಲಾಯಿತು. 1947ರಲ್ಲಿ ಕೃಷ್ಣಲೀಲೆಯಿಂದ ಪ್ರಾರಂಭವಾಗಿ ಸುಮಾರು 30 ಚಿತ್ರಗಳು ಇಲ್ಲೇ ನಿರ್ಮಾಣಗೊಂಡವು. 1953ರಲ್ಲಿ ಈ ಸ್ಟುಡಿಯೋ ಮುಚ್ಚಿಕೊಂಡಿತು. ಅದೇ ವರುವರ್ಷ ಮೈಸೂರಿನಲ್ಲಿ ಪ್ರೀಮಿಯರ್ ಸ್ಟುಡಿಯೋ ಸ್ಥಾಪನೆಯಾಯಿತು. ಒಂದೇ ಅಂತಸ್ತಿನ ಕಟ್ಟಡ ಪ್ರಾರಂಭವಾಗಿದ್ದರೂ ನಂತರ ಆರು ಅಂತಸ್ತುಗಳಾಗಿ ಚಿತ್ರ ನಿರ್ಮಾಣಕ್ಕೆ ಬೇಕಾದ ಎಲ್ಲ ಸೌಕರ್ಯಗಳೂ ಏರ್ಪಡೆಯಾದವು. ಸುಮಾರು 250ಕ್ಕೂ ಹೆಚ್ಚು ಚಿತ್ರಗಳ ನಿರ್ಮಾಣಕ್ಕೆ ಅವಕಾಶ ಮಾಡಿಕೊಟ್ಟ ಈ ಸ್ಟುಡಿಯೋ ಈಗ ತನ್ನ ಚಟುವಟಿಕೆಗಳನ್ನು ಸ್ಥಗಿತಗೊಳಿಸಿದೆ. (1985ರಲ್ಲಿ ಮತ್ತೆ ಆರಂಭವಾಗಿದೆ).

ಬೆಂಗಳೂರಿನ ಶ್ರೀ ಕಂಠೀರವ ಸ್ಟುಡಿಯೋ ಲಿಮಿಟೆಡ್ 1966ರ ಮಾರ್ಚ್ ತಿಂಗಳಲ್ಲಿ ಸ್ಥಾಪನೆಯಾಯಿತು. 1970-71ರಲ್ಲಿ ಇದರಲ್ಲಿ ಚಿತ್ರೀಕರಣಗಳಿಗೆಂದು ಎರಡು ಅಂತಸ್ತುಗಳಿದ್ದವು. ಡಿಸೆಂಬರ್ 1974ರಲ್ಲಿ ಈ ಸ್ಟುಡಿಯೋವನ್ನು ಕರ್ನಾಟಕ ಸರಕಾರ ಸ್ವಾಧೀನಪಡಿಸಿಕೊಂಡಿತು. ಬೆಂಗಳೂರಿನ ಚಾಮುಂಡೇಶ್ವರಿ ಸ್ಟುಡಿಯೋ ಅ್ಯಂಡ್ ಲ್ಯಾಬೋರೇಟರೀಸ್ 1969ರಲ್ಲಿ ಪ್ರಾರಂಭವಾಯಿತು. ಇದರಲ್ಲಿ ರೀ ರೆಕಾರ್ಡಿಂಗ್, ಡಬ್ಬಿಂಗ್ ಮುಂತಾದವೂ ಸೇರಿದಂತೆ ಚಿತ್ರ ನಿರ್ಮಾಣಕ್ಕೆ ಬೇಕಾಗುವ ಬಹುತೇಕ ಅನುಕೂಲತೆಗಳಿವೆ. ಇಲ್ಲಿ ಚಿತ್ರಗಳ ಹಾಗೂ ಕಚ್ಚಾ ಫಿಲ್ಮ್‌ಗಳ ರಕ್ಷಣೆಗೆಂದು ಹವಾನಿಯಂತ್ರಿತ ಕೋಣೆಯೂ ಇದೆ. ಬೆಂಗಳೂರಿನ ಬಳಿಯ ಕೆಂಗೇರಿಯಲ್ಲಿ 1965ರಲ್ಲಿ ಅಭಿಮಾನ ಸ್ಟುಡಿಯೋವನ್ನು ಖ್ಯಾತ ಚಿತ್ರನಟ ಬಾಲಕೃಷ್ಣ ಸ್ಥಾಪಿಸಿದರು. 1969ರಲ್ಲಿ ಮಾರ್ಗದರ್ಶಿ ಎಂಬ ಪ್ರಥಮ ಚಿತ್ರ ಇಲ್ಲಿ ನಿರ್ಮಾಣವಾಯಿತು.

ಈ ಸ್ಟುಡಿಯೋದ ವಿಸ್ತರಣಾ ಕೆಲಸ ಇನ್ನೂ ಆಗಬೇಕಿದೆ. ಕನ್ನಡ ಚಿತ್ರೋದ್ಯಮದ ಸಹಾಯಕ್ಕೆಂದು ಚಲನಚಿತ್ರ ಸ್ಟುಡಿಯೋಗಳಷ್ಟೇ ಅಲ್ಲ, ಕಲರ್ ಲ್ಯಾಬೊರೇಟರಿಗಳೂ, ಸಂಸ್ಕರಣ ಕೇಂದ್ರಗಳೂ, ರೆಕಾರ್ಡಿಂಗ್ ಯೂನಿಟ್ಟುಗಳೂ ಕರ್ನಾಟಕದಲ್ಲಿ ವಿಶೇಷತಃ ಬೆಂಗಳೂರಿನಲ್ಲಿ ಕಾರ್ಯಶೀಲವಾಗಿವೆ.

ಚಿತ್ರೋದ್ಯಮ ವಿಕಾಸವಾಗುತ್ತ ಬಂದಂತೇ ರಾಜ್ಯದಲ್ಲಿ ನಿರ್ಮಾಣವಾಗುತ್ತಿರುವ ಚಿತ್ರಗಳ ಸಂಖ್ಯೆ ಹಾಗೂ ಚಿತ್ರಮಂದಿರಗಳ ಸಂಖ್ಯೆಯೂ ಕ್ರಮೇಣ ಹೆಚ್ಚುತ್ತಿರುವುದನ್ನು ಕಾಣಬಹುದು. 1934 ರಿಂದ 1950 ರವರೆಗೆ ಕನ್ನಡದಲ್ಲಿ ಸುಮಾರು 32 ಚಿತ್ರಗಳು ತಯಾರಾದವು. 1960ರ ವೇಳೆಗೆ ಚಿತ್ರಗಳ ಒಟ್ಟು ಸಂಖ್ಯೆ 133ಕ್ಕೇರಿತು. ಈ ಸಂಖ್ಯೆ ಕ್ರಮೇಣ ಹೆಚ್ಚುತ್ತ ಹೋಗಿ 1970 ರ ವೇಳೆಗೆ 384ಕ್ಕೂ 1980 ರ ವೇಳೆಗೆ 809 ಕ್ಕೂ ಏರಿ, 1982 ರ ಕೊನೆಯ ವೇಳೆಗೆ ಒಟ್ಟು ಕನ್ನಡ ಚಿತ್ರಗಳ ಸಂಖ್ಯೆ 936 ರಷ್ಟಾಯಿತು. 1985ರಲ್ಲಿ 1000 ದ ಗಡಿ ದಾಟಿತು. ಇದಲ್ಲದೇ ಕನ್ನಡದ ಹೊರತಾಗಿ 20 ತುಳು ಚಿತ್ರಗಳೂ (1949 ರಿಂದ 1980 ರವರೆಗೆ) 10 ಕೊಂಕಣಿ ಚಿತ್ರಗಳೂ (1969 ರಿಂದ 1980 ರವರೆಗೆ) ಕೊಡವ ಭಾಷೆಯಲ್ಲಿ 1972ರಲ್ಲಿ ಒಂದು ಚಿತ್ರವೂ ನಿರ್ಮಾಣವಾದವು. 1977ರಲ್ಲಿ ಸೊಸೆ ತಂದ ಸೌಭಾಗ್ಯ ಚಿತ್ರ ಮೊಟ್ಟಮೊದಲ ಬಾರಿ ಸಿನಿಮಾಸ್ಕೋಪ್‌ನಲ್ಲಿ ನಿರ್ಮಾಣಗೊಂಡು ನಂತರದ ವರ್ಷಗಳಲ್ಲಿ ಇನ್ನೂ ಅನೇಕ ಅಂಥ ಚಿತ್ರಗಳಿಗೆಡೆ ಮಾಡಿಕೊಟ್ಟಿತು. 1984ರಲ್ಲಿ ಕನ್ನಡ ಚಲನಚಿತ್ರ ರಂಗವು ಅದ್ದೂರಿಯಿಂದ ಸ್ವರ್ಣ ಮಹೋತ್ಸವವನ್ನು ಆಚರಿಸಿತು.

1969-70ರ ವೇಳೆಗೆ ರಾಜ್ಯದಲ್ಲಿ 702 ಚಿತ್ರ ಮಂದಿರಗಳಿದ್ದವು. ಇವುಗಳ ಪೈಕಿ 309 ಕಾಯಂ ಮಂದಿರಗಳು, 393 ತಾತ್ಕಾಲಿಕ ಶೆಡ್‌ಗಳು. ಆ ನಂತರದ ವರ್ಷಗಳಲ್ಲಿ ಚಿತ್ರಮಂದಿರಗಳ ಸಂಖ್ಯೆ ಸಾಕಷ್ಟು ಹೆಚ್ಚುತ್ತ ಬಂದಿದೆ. 1971-72ರ ವೇಳೆಗೆ ಇವುಗಳ ಒಟ್ಟು ಸಂಖ್ಯೆ 744 ಇದ್ದು (327 ಕಾಯಂ, 417 ತಾತ್ಕಾಲಿಕ) 1975-76ರ ವೇಳೆಗೆ 1,024 ಕ್ಕೇರಿ (ಕಾಯಂ 404, ತಾತ್ಕಾಲಿಕ 620), 1981-82ರ ವೇಳೆಗೆ 1,124 ಕ್ಕೆ (ಕಾಯಂ 526, ತಾತ್ಕಾಲಿಕ 598) ತಲುಪಿತ್ತು. 1983-84ರಲ್ಲಿ ಒಟ್ಟು ಸಂಖ್ಯೆ 1,226 ಆಗಿದೆ. ಚಿತ್ರಪ್ರದರ್ಶನದಿಂದ ಮನರಂಜನೆ ತೆರಿಗೆಯ ಮೂಲಕ ರಾಜ್ಯ ಬೊಕ್ಕಸಕ್ಕೆ ಆದಾಯವೂ ಗಣನೀಯ ಪ್ರಮಾಣದಲ್ಲಿ ಹೆಚ್ಚುತ್ತಿದೆ. 1971-72ರಲ್ಲಿ ಸರಕಾರದ ಆದಾಯ ಒಟ್ಟು 3.77 ಕೋಟಿ ರೂಪಾಯಿಗಳಷ್ಟಾಗಿದ್ದು ಪ್ರಜೆಗಳ ತಲಾ ವಾರ್ಷಿಕ ತೆರಿಗೆ 1.25 ರೂಪಾಯಿಗಳಷ್ಟಿತ್ತು. ಈ ಮೊತ್ತ 1975-76ರಲ್ಲಿ ಕ್ರಮವಾಗಿ 8.70 ಕೋಟಿ ಹಾಗೂ 2.62 ರೂಪಾಯಿಗಳಿಗೇರಿ, 1981-82ರ ಅವಧಿಯಲ್ಲಿ 20.59 ಕೋಟಿ ಹಾಗೂ 5.43 ರೂಪಾಯಿಗಳಷ್ಟನ್ನು ತಲುಪಿದೆ. ಹಲವಾರು ಕನ್ನಡ ಚಿತ್ರಗಳು ಅಮೆರಿಕ, ಇಂಗ್ಲೆಂಡ್, ಫ್ರಾನ್ಸ್, ಕೆನಡಾ, ಪಶ್ಚಿಮ ಜರ್ಮನಿ, ರುಮೇನಿಯಾ, ಇಥಿಯೋಪಿಯಾ ಮೊದಲಾದ ದೇಶಗಳಿಗೆ ರಫ್ತಾಗಿದ್ದು ವಿದೇಶಿ ವಿನಿಮಯ ಗಳಿಸಿವೆ. 1978-79ರಲ್ಲಿ ಒಟ್ಟು ಒಂಬತ್ತು ಚಿತ್ರಗಳೂ 1979-80ರಲ್ಲಿ ಮೂರು ಚಿತ್ರಗಳೂ ರಫ್ತಾಗಿವೆ.

ರಾಜ್ಯದಲ್ಲಿ 1981-82ರ ಅವಧಿಯಲ್ಲಿದ್ದ ಒಟ್ಟು ಚಿತ್ರ ನಿರ್ಮಾಣ ಕಂಪನಿಗಳ ಸಂಖ್ಯೆ ಹಾಗೂ ಒಟ್ಟು ಚಿತ್ರ ಹಂಚಿಕೆದಾರ ಕಂಪನಿಗಳ ಸಂಖ್ಯೆಯನ್ನು ಈ ಮುಂದಿನ ಕೋಷ್ಟಕದಲ್ಲಿ ಕೊಡಲಾಗಿದೆ.

| ಊರುಗಳು | ಚಿತ್ರ ನಿರ್ಮಾಣ ಕಂಪನಿಗಳ ಸಂಖ್ಯೆ | ಚಿತ್ರ ಹಂಚಿಕೆದಾರ ಕಂಪನಿಗಳ ಸಂಖ್ಯೆ |
|---|---|---|
| ಬೆಂಗಳೂರು | 61 | 318 |
| ಹುಬ್ಬಳ್ಳಿ | 1 | 13 |
| ಮೈಸೂರು | 4 | 9 |
| ಮಂಗಳೂರು | 2 | 3 |
| ದಾವಣಗೆರೆ | 1 | 2 |
| ಕಲ್ಬುರ್ಗಿ | 1 | 3 |
| ಚಿಕ್ಕಮಗಳೂರು | 2 | 1 |
| ಕೋಲಾರ | 2 | 1 |
| ಗದಗು | — | 4 |
| ಇತರ ಊರುಗಳು | 3 | 12 |
| ಒಟ್ಟು | 77 | 366 |

## ಲಲಿತ ಕಲಾ ಶಿಕ್ಷಣ

ಚಿತ್ರಕಲೆ, ಸಂಗೀತ, ನೃತ್ಯ, ನಟನೆ ಮುಂತಾದವುಗಳಿಗೆ ಸಂಬಂಧಿಸಿದ ವಿದ್ಯೆಗೆ ಲಲಿತಕಲಾ ಶಿಕ್ಷಣವೆನ್ನಬಹುದು. 19 ನೇಯ ಶತಮಾನದ ಕೊನೆಯ ದಶಕದಿಂದೀಚೆಗೆ ಔಪಚಾರಿಕ ಶಿಕ್ಷಣದ ಅಂಗವಾಗಿ ಇಂಥ ಗುಣಗ್ರಾಹಿ ಲಲಿತಕಲಾ ಶಿಕ್ಷಣದ ಬೋಧನೆಗೂ ಮಹತ್ವ ಬರತೊಡಗಿದೆ. ರಾಜ್ಯದ ಸಮಗ್ರ ಶಿಕ್ಷಣದ ಭಾಗವಾಗಿ ಪ್ರಾಥಮಿಕ ಹಂತದಲ್ಲೇ ಸಂಗೀತ ಮತ್ತು ಚಿತ್ರಕಲೆಯನ್ನು ಕಲಿಸುವ ಪದ್ಧತಿ ಕರ್ನಾಟಕದಲ್ಲಿ ಬೆಳೆದು ಬಂದಿದೆ. ಹೆಣ್ಣುಮಕ್ಕಳ ಶಾಲೆಯಲ್ಲಿ ಪರೀಕ್ಷೆಯ ಉದ್ದೇಶಕ್ಕಲ್ಲದಿದ್ದರೂ ಸಂಗೀತವನ್ನು ನಿಯಮಿತ ವಿಷಯವಾಗಿ ಕಲಿಸಲಾಗು

ತ್ತಿದೆ. ಬೆಳಗಾವಿ ಪ್ರದೇಶದಲ್ಲಿ 1890ರಿಂದಲೂ ಮಾಧ್ಯಮಿಕ ಶಾಲೆಗಳಲ್ಲಿ ಚಿತ್ರಕಲೆಯು ಬೋಧನೆಯಾಗುತ್ತಿದೆ. 1919-20 ರಿಂದ ಸಂಗೀತ ಮತ್ತು ಚಿತ್ರಕಲೆಯು ಶಿಕ್ಷಕರ ತರಬೇತಿಯ ವಿಷಯ ಗಳಾಗಿವೆ. ಇವೆರಡೂ ರಾಜ್ಯದ ಎಲ್ಲ ಮಾಧ್ಯಮಿಕ ಶಾಲೆಗಳಲ್ಲೂ 1914-15ರ ಹೊತ್ತಿಗೆ ಕಡ್ಡಾಯ ವಿಷಯಗಳಾಗಿ ಚಿತ್ರಕಲೆ ಮತ್ತು ಕುಶಲಕೆಲಸಕ್ಕೆಂದೇ ಒಬ್ಬ ಪ್ರತ್ಯೇಕ ಇನ್‌ಸ್ಪೆಕ್ಟರನ್ನು ನೇಮಕ ಮಾಡಿಕೊಳ್ಳಲಾಯಿತು. ಕಾರವಾರ, ಧಾರವಾಡ, ಬೆಳಗಾವಿ, ವಿಜಾಪುರಗಳಲ್ಲಿ ಹೈಸ್ಕೂಲುಗಳಿಂದ ಪ್ರತಿವರ್ಷ ವಿದ್ಯಾರ್ಥಿಗಳನ್ನು ಮುಂಬೈಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನವರು ನಡೆಸುವ ಫಸ್ಟ್ ಮತ್ತು ಸೆಕೆಂಡ್ ಗ್ರೇಡ್ ಡ್ರಾಯಿಂಗ್ ಪರೀಕ್ಷೆಗೆ (1915-16ರ ನಂತರ ಇವುಗಳಿಗೆ ಕ್ರಮ ವಾಗಿ ಎಲಿಮೆಂಟರಿ ಮತ್ತು ಇಂಟರ್‌ಮೀಡಿಯೆಟ್ ಎಂಬ ಹೆಸರು ಬಂತು) ಕಳುಹಿಸಲಾಗುತ್ತಿತ್ತು. 1938-39ರ ನಂತರ ಚಿತ್ರ ಕಲೆಯನ್ನು ಪ್ರಾಥಮಿಕ ಶಾಲೆಗಳಲ್ಲೂ ಅಭ್ಯಾಸ ವಿಷಯವಾಗಿ ತೊಡಗಿಸಲಾಯಿತು. 1950-51ರಲ್ಲಿ ಧಾರವಾಡದಲ್ಲಿ ಖಾಸಗೀ ಆಡಳಿತದಲ್ಲಿ ಒಂದು ಚಿತ್ರಕಲಾ ಶಾಲೆ ಸ್ಥಾಪನೆಯಾಯಿತು. ಈ ಸಂಸ್ಥೆಯು ಡ್ರಾಯಿಂಗ್ ಶಿಕ್ಷಕರಿಗೆ ಸರ್ಟಿಫಿಕೇಟ್ ಕೋರ್ಸನ್ನು ನಡೆಸುತ್ತಿತ್ತು; ಡ್ರಾಯಿಂಗ್ ಮತ್ತು ಪೇಂಟಿಂಗ್ ನಲ್ಲಿ ಇತರ ಕೋರ್ಸ್‌ಗಳನ್ನು ನಡೆಸುತ್ತಿತ್ತು; ಇಲಾಖೆಯವರು ನಡೆಸುತ್ತಿದ್ದ ಪರೀಕ್ಷೆಗಳಿಗೆ ಅಭ್ಯರ್ಥಿಗಳನ್ನು ತರಬೇತಿಗೊಳಿಸ ಲಾಗುತ್ತಿತ್ತು. 1956ರ ವೇಳೆಗೆ ಇತರೆಲ್ಲ ವಿಷಯಗಳಷ್ಟೇ ಚಿತ್ರ ಕಲೆಯೂ ಶಾಲೆಯ ಬೋಧನ ಕಾರ್ಯಕ್ರಮದ ಪ್ರಮುಖ ಅಂಗವಾಯಿತು. 1879ರ ಮುಂಚೆ ಮದ್ರಾಸ್ ಕರ್ನಾಟಕ ಭಾಗದಲ್ಲಿ ಚಿತ್ರಕಲೆ ಅಥವಾ ಪ್ರತಿಕೃತಿ ನಿರ್ಮಾಣ ಕಲೆ (ಮಾಡೆ ಲಿಂಗ್) ಮಾಧ್ಯಮಿಕ ಶಾಲಾ ಪರೀಕ್ಷಾ ವಿಷಯಗಳಲ್ಲೊಂದಾ ಗಿತ್ತು. 1885-86ರಲ್ಲಿ ಜಾರಿಗೆ ಬಂದ ಹೊಸ ಪರೀಕ್ಷಾ ಪದ್ಧತಿ ಯಲ್ಲಿ ಗಣಿತ ಮತ್ತು ಚಿತ್ರಕಲೆ ಎರಡೂ ಐಚ್ಛಿಕ ವಿಷಯ ಗಳಾಗಿದ್ದವು. ಪ್ರಾಥಮಿಕ (ಲೋವರ್ ಸೆಕೆಂಡರಿ) ಶಾಲೆಗಳಲ್ಲಿ ಫ್ರೀ ಹ್ಯಾಂಡ್ ಚಿತ್ರಕಲೆ ಐಚ್ಛಿಕ ವಿಷಯಗಳಲ್ಲೊಂದಾಗಿತ್ತು. 1908-09ರಲ್ಲಿ ಎಸ್. ಎಸ್. ಎಲ್. ಸಿ. ಸ್ಕೀಮು ಜಾರಿಗೆ ಬಂದ ನಂತರ ಹೈಯರ್ ಸೆಕೆಂಡರಿ ತರಗತಿಗಳಲ್ಲಿ ಅದೇ ವಿಷಯ ಕಡ್ಡಾಯವಾಯಿತು. ಬಳ್ಳಾರಿಯ ಹೆಣ್ಣುಮಕ್ಕಳ ಸರಕಾರಿ ಹೈಸ್ಕೂಲ್‌ನಲ್ಲಿ 1931ರಷ್ಟು ಹಿಂದೆಯೇ ಸಂಗೀತವು ಬೋಧನ ವಿಷಯಗಳಲ್ಲೊಂದಾಗಿತ್ತು.

ದಕ್ಷಿಣ ಕನ್ನಡದಲ್ಲಿ ಮಹಿಳೆಯರ ಸರಕಾರಿ ಮಾಧ್ಯಮಿಕ ಮತ್ತು ತರಬೇತಿ ಶಾಲೆಗಳಲ್ಲಿ ಸಂಗೀತ ಮತ್ತು ಚಿತ್ರಕಲೆ ಕಲಿಸ ಲಾಗುತ್ತದೆ. ಮಣಿಪಾಲದ ಅಕ್ಯಾಡಮಿ ಆಫ್ ಜನರಲ್ ಎಜುಕೇಶನ್ ಸಂಗೀತ ಮತ್ತು ಲಲಿತಕಲೆಗಳ ಶಾಲೆಗಳನ್ನು ನಡೆಸುತ್ತಿದೆ. 1947ರಿಂದ ಜಾರಿಗೆ ಬಂದ ಹೊಸ ಸ್ಕೀಮಿನಲ್ಲಿ 1948-49ರಿಂದ ಚಿತ್ರಕಲೆ, ಸಂಗೀತ ಮತ್ತು ನೃತ್ಯವನ್ನು ಸೇರಿಸಲಾಯಿತು. ಅಲ್ಲದೇ, 1953-54ರಲ್ಲಿ ರಾಜಾಜಿ ಸ್ಕೀಮ್ ನಲ್ಲಿ ಜಾರಿಗೊಳಿಸಿದ ವಿಷಯಗಳ ಪೈಕಿ, ಚಿತ್ರಕಲೆ, ಸಂಗೀತ ಮತ್ತು ನೃತ್ಯವನ್ನೂ ಸೇರಿಸಲಾಯಿತು. ಕೊಡಗು ಜಿಲ್ಲೆಯ ಮಡಿಕೇರಿಯ ಕೆಳಮಾಧ್ಯಮಿಕ ಶಾಲೆಗಳಲ್ಲಿ ಮೊದಲಿನಿಂದಲೂ ತುಸುಮಟ್ಟಿಗೆ ಉಚ್ಚಮಟ್ಟದ ಚಿತ್ರಕಲೆ, ವಾದ್ಯಸಂಗೀತ ಮೊದ ಲಾದವುಗಳನ್ನು ಕಲಿಸಲಾಗುತ್ತಿತ್ತು. 1921ರ ನಂತರ ಹೆಣ್ಣು ಮಕ್ಕಳ ಹೈಸ್ಕೂಲಿನಲ್ಲಿ ಸಂಗೀತ ಬೋಧನೆ ಪ್ರಾರಂಭವಾಯಿತು. 1956ರಲ್ಲಿ ಪೊನ್ನಂಪೇಟೆಯ ಸರಕಾರೀ ವಿವಿಧೋದ್ದೇಶ ಹೈಸ್ಕೂಲಿನಲ್ಲಿ ಚಿತ್ರಕಲೆ ಮತ್ತು ವರ್ಣಕಲೆಯನ್ನು ಐಚ್ಛಿಕ ವಿಷಯವಾಗಿ ಬೋಧನೆಗೆ ತೊಡಗಿಸಲಾಯಿತು. 1953ರಲ್ಲಿ ಕೊಡಗು ಸರಕಾರ ನೃತ್ಯ-ನಾಟಕ-ಸಂಗೀತದ ರಾಜ್ಯ ಅಕ್ಯಾಡಮಿ ಯೊಂದನ್ನು ಪ್ರಾರಂಭಿಸಿತು. ವಾರಕ್ಕೆರಡು ದಿನ ಮಡಿಕೇರಿ, ವಿರಾಜಪೇಟೆ ಮತ್ತು ಪೊನ್ನಂಪೇಟೆಯಲ್ಲಿ ಸಂಗೀತ ಮತ್ತು ನೃತ್ಯ ತರಗತಿಗಳನ್ನು ನಡೆಸಲಾಗುತ್ತಿತ್ತು. ಆರು ಸಮುದಾಯ ಕೇಂದ್ರ ಗಳಲ್ಲಿ ಸಂಗೀತ ತರಗತಿ ಮತ್ತು ವಾದ್ಯಗೋಷ್ಠಿಯ ತರಗತಿಗಳನ್ನು ನಡೆಸಲಾಗುತ್ತಿತ್ತು. ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಮೊದಲಿನಿಂದಲೂ ವರ್ಣಕಲೆ, ಸಂಗೀತ, ನೃತ್ಯ, ಮುಂತಾದ ಲಲಿತಕಲೆಗಳಿಗೆ ಚೆನ್ನಾಗಿಯೇ ಪ್ರೋತ್ಸಾಹ ಸಿಕ್ಕಿತ್ತು. 1854-1911ರ ಅವಧಿಯಲ್ಲಿ ಹೆಣ್ಣುಮಕ್ಕಳ ಶಿಕ್ಷಣದಲ್ಲಿ ಭಾರತೀಯ ಸಂಗೀತವನ್ನು ಕಲಿಸಲಾಗುತ್ತಿತ್ತು.

1937ರಲ್ಲಿ ಪ್ರಾಥಮಿಕ ಶಾಲೆಗಳ ಪುನರ್ರಚನೆಯಾದ ನಂತರ ಐದನೇಯ ತರಗತಿಗೆ ಚಿತ್ರಕಲೆಯನ್ನು ಸೇರಿಸಲಾಯಿತು. 1954ರಲ್ಲಿ ಕಲ್ಬುರ್ಗಿಯಲ್ಲಿ ಭಾರತೀಯ ಸಂಗೀತ ವಿದ್ಯಾಲಯ ವೆಂಬ ಸಂಸ್ಥೆ ಪ್ರಾರಂಭವಾಗಿ ಮುಂಬೈಯ ಗಂಧರ್ವ ಮಹಾ ವಿದ್ಯಾಲಯಕ್ಕೆ ಅಧೀನವಾಯಿತು. ಮೊದಲಿನ ಮೈಸೂರು ಅರಸೊತ್ತಿಗೆಯ ರಾಜ್ಯದಲ್ಲಿ 1895-1901ರ ಅವಧಿಯಲ್ಲಿ ಮೈಸೂರಿನ ಔದ್ಯಮಿಕ ಶಾಲೆಗಳಲ್ಲಿ ಡ್ರಾಯಿಂಗ್, ಪ್ರತಿಕೃತಿ ಕಲೆ, ಇತ್ಯಾದಿಗಳನ್ನು ಕಲಿಸಲಾಗುತ್ತಿತ್ತು. ಪ್ರಾಥಮಿಕ ಶಿಕ್ಷಣ ದಲ್ಲಿ ಹೆಣ್ಣು ಗಂಡು ಮಕ್ಕಳಿಗೆಲ್ಲರಿಗೆ ಹಾಡುಗಾರಿಕೆಯೂ ಶೈಕ್ಷಣಿಕ ವಿಷಯವಾಗಿತ್ತು. ಲೋವರ್ ಸೆಕೆಂಡರಿ ಶಾಲೆಗಳಲ್ಲಿ ಹೆಣ್ಣು ಮಕ್ಕಳಿಗೆ ಸಂಗೀತ ಮೊದಲೇ ಬೋಧನ ವಿಷಯವಾಗಿದ್ದರೂ 1915ರಲ್ಲಿ ಪ್ರಾಯೋಗಿಕ ಪಾಠಕ್ರಮದ ಯೋಜನೆಯನ್ವಯ ಚಿತ್ರಕಲೆ, ಸಂಗೀತ, ಮುಂತಾದವುಗಳನ್ನು ಪಾಠಕ್ರಮದಲ್ಲಿ ಅಳವಡಿಸಲಾಯಿತು. 1937ರಲ್ಲಿ ಎಸ್. ಎಸ್. ಎಲ್. ಸಿ. ಯೋಜನೆ ಮತ್ತೆ ಜಾರಿಗೆ ಬಂದ ಮೇಲೆ ಪಾಠಕ್ರಮದಲ್ಲಿ ಸಂಗೀತ, ವರ್ಣಕಲೆ ಹಾಗೂ ಚಿತ್ರಕಲೆಗಳನ್ನು ಐಚ್ಛಿಕ ವಿಷಯಗಳನ್ನಾಗಿ ಸೇರಿಸಲಾಯಿತು. ಹಲವು ಮಾಧ್ಯಮಿಕ ಶಾಲೆ ಹಾಗೂ ಹೈಸ್ಕೂಲುಗಳಲ್ಲಿ ತರಬೇತಿ ಪಡೆದ ಡ್ರಾಯಿಂಗ್ ಮಾಸ್ತರುಗಳ ನೇಮಕವಾಗಿತ್ತು. ಮಿಡ್ಲ್ ಸ್ಕೂಲುಗಳಲ್ಲಿ ಹೆಣ್ಣುಮಕ್ಕಳಿಗೆ ಸಂಗೀತ ಐಚ್ಛಿಕ ವಿಷಯವಾಗಿ ಮುಂದುವರಿದೇ ಇತ್ತು. 1932

ರಲ್ಲಿ ಮೈಸೂರಿನ ಶ್ರೀ ಚಾಮರಾಜ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್‌ನಲ್ಲಿ ಚಿತ್ರಕಲೆ, ವರ್ಣಕಲೆ ಮತ್ತು ಪ್ರತಿಕೃತಿ ಕಲೆಯನ್ನು ಕಲಿಸಲೆಂದೇ ಲಲಿತ ಕಲಾ ವಿಭಾಗವೊಂದನ್ನು ಪ್ರಾರಂಭಿಸಲಾಯಿತು. 1932-44ರ ಮಧ್ಯಾವಧಿಯಲ್ಲಿ ಸಾರ್ವಜನಿಕ ಶಿಕ್ಷಣ ಮಂಡಳಿಯೊಂದು ಕಾರ್ಯಾರಂಭ ಮಾಡಿತ್ತು. ಕರ್ನಾಟಕ ಸಂಗೀತದ ಜ್ಯೂನಿಯರ್, ಸೀನಿಯರ್ ಮತ್ತು ಪ್ರೊಫಿಷಿಯನ್ಸಿ ಹಂತಗಳಲ್ಲಿ ಈ ಮಂಡಲಿ ಪರೀಕ್ಷೆ ನಡೆಸುತ್ತಿತ್ತು. 1943-44ರಲ್ಲಿ ಜ್ಯೂನಿಯರ್ ಗ್ರೇಡ್‌ಗೆ 179, ಸೀನಿಯರ್ ಗ್ರೇಡ್‌ಗೆ 49 ಮತ್ತು ಪ್ರೊಫಿಷಿಯನ್ಸಿ ಗ್ರೇಡ್‌ನ ಹಾಡುಗಾರಿಕೆಗೆ ನಾಲ್ಕು ಅಭ್ಯರ್ಥಿಗಳು ಪರೀಕ್ಷೆ ಕಟ್ಟಿದ್ದರು. ಅವರ ಪೈಕಿ ಕ್ರಮವಾಗಿ 127, 28 ಮತ್ತು ಒಬ್ಬ ಅಭ್ಯರ್ಥಿ ಪಾಸಾದ ದಾಖಲೆಯಿದೆ. ಅದೇ ವರ್ಷ ಅವೇ ಗ್ರೇಡ್‌ಗಳ ವಾದ್ಯಸಂಗೀತ ಪರೀಕ್ಷೆಗೆ ಕ್ರಮವಾಗಿ 39, ಒಂಭತ್ತು ಮತ್ತು ಇಬ್ಬರು ಅಭ್ಯರ್ಥಿಗಳು ಕೂತು ಅದೇ ಕ್ರಮದಲ್ಲಿ 25, ಐದು ಮತ್ತು ಒಬ್ಬ ಅಭ್ಯರ್ಥಿ ಪಾಸಾದರು. 1944-45ರಿಂದ 1951-52ರ ವರೆಗೆ ಮತ್ತು ಅನಂತರವೂ ಇದೇ ರೀತಿ ಪ್ರೋತ್ಸಾಹ ಮುಂದುವರೆಯಿತು. ಖಾಸಗೀ ಕಲಾ ಶಾಲೆಗಳಿಗೆ ಧಾರಾಳವಾಗಿ ಧನಸಹಾಯ ಮಾಡುತ್ತ, ಸರಕಾರ ಲಲಿತ ಕಲೆಗೆ ಸೂಕ್ತ ಪ್ರೋತ್ಸಾಹ ನೀಡುತ್ತ ಬಂದಿದೆ.

1952-53ರಲ್ಲಿ ರಾಜ್ಯದಲ್ಲಿ ಮೂರು ಸಂಗೀತ ವಿದ್ಯಾಲಯಗಳೂ ಒಂದು ಲಲಿತಕಲಾ ವಿದ್ಯಾಲಯವೂ ಸರಕಾರದಿಂದ ನಿಗದಿತ ಮೊತ್ತದ ಧನಸಹಾಯ ಪಡೆಯುವ ಖಾಸಗಿ ಆಡಳಿತದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಈ ವಿದ್ಯಾಲಯಗಳಲ್ಲಿ ಒಟ್ಟು 142 ವಿದ್ಯಾರ್ಥಿಗಳಿದ್ದು, ಅವರ ಪೈಕಿ 67 ಮಂದಿ ಹೆಣ್ಣುಮಕ್ಕಳು ವ್ಯಾಸಂಗಮಾಡುತ್ತಿದ್ದರು. 1955-56ರಲ್ಲಿ ಈ ಸಂಖ್ಯೆ 111 ರಷ್ಟಿದ್ದು, ಹೆಣ್ಣುಮಕ್ಕಳ ಸಂಖ್ಯೆ 57ರಷ್ಟಿತ್ತು. 1953-54ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಪದವಿ ಪರೀಕ್ಷೆಗೆಂದು ಸಂಗೀತ ಮತ್ತು ನಾಟಕವನ್ನು ಐಚ್ಛಿಕ ವಿಷಯಗಳಾಗಿ ಸೇರ್ಪಡೆ ಮಾಡಲಾಯಿತು.

ರಾಜ್ಯಗಳ ಪುನರ್ರಚನೆಯ ನಂತರ ಸಂಗೀತ, ನೃತ್ಯ ಮತ್ತು ಲಲಿತಕಲಾ ಕ್ಷೇತ್ರವು ಶೀಘ್ರ ವಿಕಾಸವಾಗತೊಡಗಿತು. ನೃತ್ಯ ಸಂಗೀತಕ್ಕೆಂದು ಕಾಲೇಜುಗಳಿಲ್ಲದಿದ್ದರೂ 1956-57ರ ಅವಧಿಯಲ್ಲಿ 13 ಖಾಸಗೀ ಸಂಸ್ಥೆಗಳು 478 ವಿದ್ಯಾರ್ಥಿಗಳಿಗೆ ಸಂಗೀತ ಪಾಠ ಹೇಳುತ್ತಿದ್ದವು. 1968-69ರ ಸುಮಾರಿಗೆ ಇಂಥ ಸಂಸ್ಥೆಗಳ ಸಂಖ್ಯೆ 53ಕ್ಕೇರಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ 3,882ಕ್ಕೇರಿತು. ಮೈಸೂರು ವಿಶ್ವವಿದ್ಯಾಲಯದ ಅಧೀನದಲ್ಲಿರುವ ಹಲವು ಕಾಲೇಜುಗಳಲ್ಲಿ ಬಿ. ಎ. ವಿದ್ಯಾರ್ಥಿಗಳಿಗೆ ಸಂಗೀತವನ್ನು ಐಚ್ಛಿಕ ವಿಷಯವಾಗಿ ಕಲಿಸುವ ವ್ಯವಸ್ಥೆಯಿತ್ತು. 1961-62ರಲ್ಲಿ ಬೆಂಗಳೂರಿನಲ್ಲಿ ಚಿತ್ರಕಲಾ ಶಿಕ್ಷಕರಿಗೆ ತರಬೇತಿ ನೀಡುವ ಸಂಸ್ಥೆಯೊಂದು ಕಾರ್ಯಾರಂಭ ಮಾಡಿತು. 40 ಮಂದಿಗೆ ಶಿಕ್ಷಣ ನೀಡಬಲ್ಲ ಈ ಖಾಸಗಿ ಸಂಸ್ಥೆಗೆ ಪ್ರಾಥಮಿಕ ಶಾಲಾ ಶಿಕ್ಷಕರನ್ನು ಚಿತ್ರಕಲಾ ತರಬೇತಿಗೆಂದು ಕಳುಹಿಸಿ ಅವರೆಲ್ಲರನ್ನೂ ಹೈಸ್ಕೂಲು ವಿದ್ಯಾರ್ಥಿಗಳಿಗೆ ಪಾಠ ಹೇಳಲು ಅರ್ಹರಾಗುವಂತೆ ಮಾಡಲಾಯಿತು. 1969ರಲ್ಲಿ ಒಟ್ಟು 61 ಅಭ್ಯರ್ಥಿಗಳು ಈ ಸಂಸ್ಥೆಯಲ್ಲಿ ಪರೀಕ್ಷೆಗೆ ಕಟ್ಟಿದ್ದರು. ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲೂ ಸಂಗೀತ ಮತ್ತು ಚಿತ್ರಕಲೆಯನ್ನು ಒಂದು ವರ್ಷದ ಅವಧಿಯ ಅಭ್ಯಾಸ ವಿಷಯವನ್ನಾಗಿ ಸೇರಿಸಲಾಯಿತು. ಆದರೆ ಪರೀಕ್ಷೆಗಳಿರಲಿಲ್ಲ. ಈ ಅವಧಿಯನ್ನು 1966-67ರಲ್ಲಿ ಎರಡು ವರ್ಷಗಳಿಗೆ ವಿಸ್ತರಿಸಲಾಯಿತು. 1968-69ರ ಹೊತ್ತಿಗೆ ಸಂಗೀತ ಮತ್ತು ನೃತ್ಯ ಶಿಕ್ಷಣಕ್ಕೆಂದು ಒಂದು ವೃತ್ತಿ ಶಿಕ್ಷಣ ಕಾಲೇಜು ಪ್ರಾರಂಭವಾಗಿ 94 ವಿದ್ಯಾರ್ಥಿಗಳಿಗೆ ಶಿಕ್ಷಣಾವಕಾಶ ಕಲ್ಪಿಸಲಾಯಿತು.

1959-60ರಲ್ಲಿ ಜಾರಿಗೆ ಬಂದ ಹೊಸ ಪಾಠಕ್ರಮದ ಪ್ರಕಾರ ರಾಜ್ಯಾದ್ಯಂತ ಪ್ರಾಥಮಿಕ ಶಾಲೆಗಳಲ್ಲಿ ಸಂಗೀತವನ್ನು ಕಲಾ ವಿಷಯವಾಗಿ ಸೇರ್ಪಡೆ ಮಾಡಲಾಯಿತು. 1960-61ರಲ್ಲಿ ಅದನ್ನೇ ಹೈಸ್ಕೂಲಿನ ಎಂಟನೇಯ ತರಗತಿಗೂ ವಿಸ್ತರಿಸಲಾಯಿತು. ಇಲ್ಲಿ ಸಂಗೀತವನ್ನು ಐಚ್ಛಿಕ ವಿಷಯವಾಗಿ ಆಯ್ದುಕೊಳ್ಳಬಹುದಿತ್ತು. ಉಪಾಧ್ಯಾಯರ ತರಬೇತಿ ಪರೀಕ್ಷೆಗಳಲ್ಲಿ ಸಂಗೀತವನ್ನೂ ಐಚ್ಛಿಕ ವಿಷಯಗಳ ಪಟ್ಟಿಯಲ್ಲಿ ಸೇರಿಸಲಾಯಿತು. ಇದಲ್ಲದೇ 1967 ರಿಂದೀಚೆಗೆ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷೆಗಳಲ್ಲಿ ಅಭ್ಯರ್ಥಿಗಳು ಸಂಗೀತ ಮತ್ತು ನೃತ್ಯದ ವಿವಿಧ ಹಂತಗಳ ಪರೀಕ್ಷೆಗೆ ಕಟ್ಟುವ ಅವಕಾಶ ಕಲ್ಪಿಸಲಾಯಿತು. ಸಂಗೀತ, ನೃತ್ಯ ಮತ್ತು ತಾಳ ವಾದ್ಯ ಹಾಗೂ ಚಿತ್ರಸಟನೆಯೂ ಸೇರಿದಂತೆ ವಿವಿಧ ಪರೀಕ್ಷೆಗಳಿಗೆ 1981-82ರಲ್ಲಿ ಒಟ್ಟು, 2,582 ಅಭ್ಯರ್ಥಿಗಳು ಪರೀಕ್ಷೆಗೆ ಕುಳಿತಿದ್ದು, 2,084 ಮಂದಿ ಉತ್ತೀರ್ಣರಾದರು.

ಸಂಗೀತ, ನೃತ್ಯ ಮತ್ತು ನಾಟ್ಯ ಶಿಕ್ಷಣಕ್ಕೆಂದು ಪ್ರತ್ಯೇಕ ಮಂಡಳಿಯಿದ್ದು, ಇದು ಸರಕಾರಕ್ಕೆ ಈ ಕ್ಷೇತ್ರದ ಶಿಕ್ಷಣ ನಿರ್ವಹಣೆಯಲ್ಲಿ ಸಲಹೆ ನೀಡುತ್ತದೆ. ಸರಕಾರೀ ಶಿಕ್ಷಣ ಇಲಾಖೆಯಲ್ಲಿ ಈ ವಿಷಯಗಳ ಶಿಕ್ಷಣಕ್ಕೆಂದೇ ಪ್ರತ್ಯೇಕ ಶಾಖೆಯೊಂದನ್ನು 1963 ರಲ್ಲಿ ಸ್ಥಾಪನೆ ಮಾಡಲಾಗಿದ್ದು ಅದರ ನಿರ್ವಹಣೆಗೆಂದು ಹಿರಿಯ ಸಹಾಯಕ ನಿರ್ದೇಶಕರೊಬ್ಬರನ್ನು ನೇಮಕ ಮಾಡಲಾಗಿದೆ. ಶಾಲೆಗಳಲ್ಲಿ ಈ ಕ್ಷೇತ್ರದ ಬೋಧನೆಯ ಉಸ್ತುವಾರಿ ನೋಡಿಕೊಳ್ಳುವುದರ ಜೊತೆಗೆ ಇದು ಜಿಲ್ಲಾ ಹಾಗೂ ರಾಜ್ಯ ಮಟ್ಟದ ಸ್ಪರ್ಧೆಗಳನ್ನು ಏರ್ಪಡಿಸುತ್ತದೆ; ವಿದ್ಯಾರ್ಥಿವೇತನ, ಸ್ಟೈಪೆಂಡ್ ಮತ್ತು ಬಹುಮಾನಗಳನ್ನು ವಿತರಣೆ ಮಾಡುತ್ತಿದೆ. ರಾಜ್ಯದಲ್ಲಿ ಒಟ್ಟು ಸಂಗೀತ ಕಲಿಸಲು 300 ಶಿಕ್ಷಕರೂ, ನೃತ್ಯ ಶಿಕ್ಷಣಕ್ಕೆ 50 ಶಿಕ್ಷಕರೂ, ತಾಳವಾದ್ಯಕ್ಕೆ 30, ನಾಟಕಕ್ಕೆ ಇಬ್ಬರು ಹಾಗೂ ಚಿತ್ರನಟನೆಗೆ 10 ಶಿಕ್ಷಕರು ಕೆಲಸ ಮಾಡುತ್ತಿದ್ದಾರೆ. ಸರಕಾರಿ

ಶಿಕ್ಷಣ ಇಲಾಖೆಯು ನಾಟಕ ಮತ್ತು ನೃತ್ಯ ಕಲೆಗೆಂದು ಬೇಸಿಗೆ ತರಬೇತಿ ಶಿಬಿರಗಳನ್ನು ನಡೆಸುತ್ತಿದೆ.

ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯಗಳು ಸಂಗೀತ, ನೃತ್ಯ, ಚಿತ್ರಕಲೆ, ವರ್ಣಕಲೆ, ನಾಟಕವೇ ಮುಂತಾದ ಲಲಿತಕಲೆಗಳ ವಿಭಾಗವನ್ನು ಪ್ರಾರಂಭಿಸಿವೆ. ಮೈಸೂರು ವಿಶ್ವವಿದ್ಯಾಲಯವು 1965-66ರಲ್ಲಿ ವಿಶ್ವವಿದ್ಯಾಲಯ ಲಲಿತ ಕಲಾ ಕಾಲೇಜು (ಯೂನಿವರ್ಸಿಟಿ ಕಾಲೇಜ್ ಆಫ್ ಫೈನ್ ಆರ್ಟ್ಸ್) ಸ್ಥಾಪಿಸಿದ್ದು ಇತರ ಲಲಿತ ಕಲಾ ಶಿಕ್ಷಣದೊಂದಿಗೆ ಕರ್ನಾಟಕ ಸಂಗೀತದಲ್ಲಿ ಸ್ನಾತಕೋತ್ತರ ಪದವಿ ತರಗತಿಯನ್ನೂ ಪ್ರಾರಂಭಿಸಿದೆ. ಬೆಂಗಳೂರು ವಿಶ್ವವಿದ್ಯಾಲಯವೂ 1973 ರಿಂದ ನೃತ್ಯ, ನಾಟಕ, ಸಂಗೀತ ವಿಭಾಗವೊಂದನ್ನು ತೆರೆದಿದ್ದು, ಕರ್ನಾಟಕ ಸಂಗೀತದಲ್ಲಿ ಇದೂ ಸ್ನಾತಕೋತ್ತರ ಪದವಿಯ ಅಧ್ಯಯನ ವ್ಯವಸ್ಥೆ ಮಾಡಿದೆ. ಕರ್ನಾಟಕ ವಿಶ್ವವಿದ್ಯಾಲಯವೂ 1976 ರಿಂದ ಲಲಿತ ಕಲಾ ವಿಭಾಗವನ್ನು ಪ್ರಾರಂಭಿಸಿದ್ದು, ಹಿಂದೂಸ್ತಾನಿ ಸಂಗೀತದಲ್ಲಿ ಸ್ನಾತಕೋತ್ತರ ಪದವಿ ತರಗತಿಗಳನ್ನೂ, ಸರ್ಟಿಫಿಕೇಟ್ ಕೋರ್ಸ್‌ಗಳನ್ನೂ ನಡೆಸುತ್ತಿದೆ. 1983-84ರಿಂದ ಈ ವಿಶ್ವವಿದ್ಯಾಲಯ ನೃತ್ಯ, ನಾಟಕ, ಚಿತ್ರಕಲೆ ಮತ್ತು ವರ್ಣಕಲೆಯಲ್ಲಿ ಬೋಧನ ವ್ಯವಸ್ಥೆ ಪ್ರಾರಂಭಿಸಲಿದೆ. ಕಲ್ಬುರ್ಗಿ ವಿಶ್ವವಿದ್ಯಾಲಯವೂ ಲಲಿತ ಕಲೆಗಳ ಒಂದು ಕೋರ್ಸ್ ನಡೆಸುತ್ತಿದೆ.

## ಅಕ್ಯಾಡೆಮಿಗಳು

1954-55ರ ಕೊನೆ ವೇಳೆಯಲ್ಲಿ ಮೈಸೂರು ಸಂಗೀತ ನಾಟಕ ಅಕ್ಯಾಡೆಮಿ ಎಂಬ ಹೆಸರಿನಲ್ಲಿ ನೃತ್ಯ, ನಾಟಕ ಮತ್ತು ಸಂಗೀತಗಳ ಮೈಸೂರು ರಾಜ್ಯ ಅಕ್ಯಾಡೆಮಿಯು ಸ್ಥಾಪನೆಯಾಯಿತು. ನೃತ್ಯ, ನಾಟಕ, ಸಂಗೀತಗಳ ಅಭಿವೃದ್ಧಿಗೆ ಬೆಂಬಲ ನೀಡುವುದು ಇದರ ಉದ್ದೇಶ. ನಂತರ 1960-61ರಲ್ಲಿ ಲಲಿತ ಕಲಾ ಅಕ್ಯಾಡೆಮಿ ಹಾಗೂ ಸಾಹಿತ್ಯ ಅಕ್ಯಾಡೆಮಿಗಳೂ ಪ್ರಾರಂಭವಾದವು. 1977-78ರಲ್ಲಿ ಕರ್ನಾಟಕ ಉರ್ದು ಅಕ್ಯಾಡೆಮಿಯನ್ನು ಸಂಘಟಿಸಲಾಯಿತು. 1978-79ರಲ್ಲಿ ಒಟ್ಟು ಐದು ಅಕ್ಯಾಡೆಮಿಗಳು ಅಸ್ತಿತ್ವದಲ್ಲಿದ್ದವು. ಅವು ಯಾವುವೆಂದರೆ— ಕರ್ನಾಟಕ ಸಾಹಿತ್ಯ ಅಕ್ಯಾಡೆಮಿ, ಕರ್ನಾಟಕ ಲಲಿತಕಲಾ ಅಕ್ಯಾಡೆಮಿ, ಕರ್ನಾಟಕ ಸಂಗೀತ ನೃತ್ಯ ಅಕ್ಯಾಡೆಮಿ, ಕರ್ನಾಟಕ ನಾಟಕ ಅಕ್ಯಾಡೆಮಿ ಮತ್ತು ಕರ್ನಾಟಕ ಉರ್ದು ಅಕ್ಯಾಡೆಮಿ. ಇವೆಲ್ಲವನ್ನೂ ಸ್ವಾಯತ್ತ ಸಂಸ್ಥೆಗಳಾಗಿ ಮಾಡಲಾಯಿತು. 1980-81ರಲ್ಲಿ ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಅಕ್ಯಾಡೆಮಿಗಳೂ ಈ ಪಟ್ಟಿಯಲ್ಲಿ ಸೇರ್ಪಡೆಯಾದವು. ಈ ಆರೂ ಅಕ್ಯಾಡೆಮಿಗಳು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆಡಳಿತಕ್ಕೆ ಒಳಪಟ್ಟುವಾಗಿದ್ದು, ಅಧ್ಯಕ್ಷ, ರಿಜಿಸ್ಟ್ರಾರ್ ಮತ್ತು ಹಣಕಾಸು ಸದಸ್ಯರೆಂಬ ಆಡಳಿತಾಧಿಕಾರಿಗಳು ನೇಮಕಗೊಂಡರು. ಇವರ ಹೊರತಾಗಿ ಪ್ರತೀಯೊಂದು ಅಕ್ಯಾಡೆಮಿಗೂ ಆಯಾ ಕ್ಷೇತ್ರದ ಗಣ್ಯವ್ಯಕ್ತಿಗಳನ್ನು ಸರಕಾರವೇ ಸೀಮಿತ ಅವಧಿಯ ಸದಸ್ಯರನ್ನಾಗಿ ನೇಮಿಸಿತು. 1982ರಲ್ಲಿ ಕರ್ನಾಟಕ ಪ್ರೆಸ್ (ಪತ್ರಿಕೋದ್ಯಮ) ಅಕ್ಯಾಡೆಮಿಯೂ ಪ್ರಾರಂಭವಾಗಿ ಅದರ ನಿರ್ವಹಣೆಗಾಗಿ ಕಾರ್ಯದರ್ಶಿಯೊಬ್ಬರನ್ನು ನೇಮಕ ಮಾಡಲಾಯಿತು. ಈ ಅಕ್ಯಾಡೆಮಿಯು ವಾರ್ತಾ ಮತ್ತು ಪ್ರಚಾರ ಇಲಾಖೆಯ ಅಂಕೆಗೆ ಒಳಪಟ್ಟಿದಾಗಿದ್ದು, ರಾಜ್ಯದಲ್ಲಿ ಪತ್ರಿಕೋದ್ಯಮ ಕ್ಷೇತ್ರದ ಚಟುವಟಿಕೆಗಳನ್ನು ಚುರುಕುಗೊಳಿಸುವ ಹಾಗೂ ಸೂತ್ರಬದ್ಧಗೊಳಿಸುವ ಉದ್ದೇಶ ಪಿಟ್ಟುಕೊಂಡುದಲ್ಲದೇ ಈ ಕ್ಷೇತ್ರಕ್ಕೊಂದು ನಿರ್ದಿಷ್ಟ ಗುಣಮಟ್ಟ ನಿರೂಪಿಸುವ ಗುರಿಯನ್ನೂ ಯೋಜಿಸಿದೆ. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು, ಆಕಾಶವಾಣಿಯ ರಾಜ್ಯ ನಿರ್ದೇಶಕರು, ಕರ್ನಾಟಕ ಪತ್ರಕರ್ತರ ಸಂಘದ ಪ್ರತಿನಿಧಿ, ಅಖಿಲ ಭಾರತ ಪತ್ರಿಕಾ ಸಂಪಾದಕ ಮಂಡಳಿಯ ಪ್ರತಿನಿಧಿ, ಭಾರತೀಯ ಮತ್ತು ಪೌರ್ವಾತ್ಯ ಪತ್ರಿಕಾ ಸಂಘದ ಪ್ರತಿನಿಧಿ, ಪತ್ರಿಕೋದ್ಯಮ ಕ್ಷೇತ್ರದಿಂದ ಸರಕಾರವೇ ನಾಮಕರಣ ಮಾಡಿದ ಗಣ್ಯ ವ್ಯಕ್ತಿಗಳ ಹಾಗೂ ವಿಶ್ವವಿದ್ಯಾಲಯಗಳ ಪತ್ರಿಕೋದ್ಯಮ ಇಲಾಖೆಯ ಪ್ರತಿನಿಧಿಗಳ ಸರ್ವಸಾಮಾನ್ಯ ಮಂಡಳಿಯು ಪ್ರೆಸ್ ಅಕ್ಯಾಡೆಮಿಯ ಕಾರ್ಯಚಟುವಟಿಕೆಗಳ ಆಡಳಿತ ನಿರ್ವಹಿಸುತ್ತಿದೆ.

ನೃತ್ಯ, ನಾಟಕ, ಸಂಗೀತ ಕಲೆಗಳನ್ನು ಪ್ರೋತ್ಸಾಹಿಸಲೆಂದು ಎರಡನೇಯ ಪಂಚವಾರ್ಷಿಕ ಯೋಜನೆಯಲ್ಲಿ ಮೂರು ಯೋಜನೆಗಳನ್ನು ಸೂಚಿಸಲಾಗಿತ್ತು. ಅವು ಯಾವುವೆಂದರೆ 1) ಬೆಂಗಳೂರಿನಲ್ಲೊಂದು ಕೇಂದ್ರ ರಾಷ್ಟ್ರೀಯ ರಂಗಮಂದಿರ ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಒಂಬತ್ತು ರಾಷ್ಟ್ರೀಯ ರಂಗ ಮಂದಿರಗಳನ್ನು ನಿರ್ಮಿಸುವುದು, 2) ಈ ಲಲಿತಕಲಾ ವಿಷಯಗಳಿಗೆ ಸಂಬಂಧಿಸಿದ ಮುಖ್ಯ ಸಾಹಿತ್ಯಗಳ ಗ್ರಂಥ ಭಂಡಾರಗಳನ್ನು ಬೆಂಗಳೂರಲ್ಲಿ ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸುವುದು ಮತ್ತು 3) ಕಲಾವಿದರು ಹಾಗೂ ನಾಟಕಕರ್ತರಿಗೆ ಪ್ರೋತ್ಸಾಹ ನೀಡುವಂತೆ ಕಲಾ ಶಾಲೆಗಳಿಗೆ ಧನ ಸಹಾಯವನ್ನೂ ಲೇಖಕರಿಗೆ ಬಹುಮಾನಗಳನ್ನೂ, ಸಾಹಿತ್ಯ ಪ್ರಕಟಣೆಗೆ ಸೂಕ್ತ ಸೌಲಭ್ಯಗಳನ್ನೂ ಆಗಾಗ ನೀಡುವುದು.

ರಾಜ್ಯಮಟ್ಟದಲ್ಲಿ ಲಲಿತಕಲಾ ಅಕ್ಯಾಡೆಮಿ ಹಾಗೂ ಸಾಹಿತ್ಯ ಅಕ್ಯಾಡೆಮಿಗಳ ಸ್ಥಾಪನೆಗೆಂದು ಒಂದು ಲಕ್ಷ ರೂಪಾಯಿಗಳನ್ನು ತೆಗೆದಿರಿಸಿದ್ದು, 1961ರ ಅಂತ್ಯದ ವೇಳೆಗೆ ಈ ಎರಡು ಅಕ್ಯಾಡೆಮಿಗಳ ಸ್ಥಾಪನೆಯಾಯಿತು. ಮೂರನೇಯ ಯೋಜನೆಯ ಅವಧಿಯಲ್ಲಿ ಸಾಹಿತ್ಯ ಹಾಗೂ ಲಲಿತಕಲಾ ಅಕ್ಯಾಡೆಮಿ

ಗಳಿಗೆ 1.04 ಲಕ್ಷ ರೂಪಾಯಿಗಳನ್ನು ವಿನಿಯೋಗಿಸುವ ಅನುಕೂಲ ಮಾಡಲಾಗಿತ್ತಲ್ಲದೇ ಮೈಸೂರು ಸಂಗೀತ ನಾಟಕ ಅಕ್ಯಾಡೆಮಿಗೆಂದು 1.50 ಲಕ್ಷ ರೂಪಾಯಿಗಳನ್ನು ವಿನಿಯೋಗಿಸುವ ಯೋಜನೆಯಿತ್ತು. ನಾಲ್ಕನೇಯ ಯೋಜನಾವಧಿಯಲ್ಲಿ ಸಾಹಿತ್ಯ ಮತ್ತು ಲಲಿತಕಲಾ ಅಕ್ಯಾಡೆಮಿಗಳಿಗೆಂದು ಮೀಸಲಾಗಿಟ್ಟ ಮೂರು ಲಕ್ಷ ರೂಪಾಯಿಗಳ ಪೈಕಿ 1969-72ರ ಅವಧಿಯಲ್ಲಿ 1.9 ಲಕ್ಷ ಮತ್ತು 1.4 ಲಕ್ಷ ರೂಪಾಯಿಗಳ ನೈಜ ಅಂದಾಜು ವೆಚ್ಚವಾಗಿತ್ತು. ಈ ಮೂರು ಅಕ್ಯಾಡೆಮಿಗಳು ಹಮ್ಮಿಕೊಂಡ ಚಟುವಟಿಕೆಗಳ ಪೈಕಿ ವಿಚಾರಗೋಷ್ಠಿಗಳನ್ನು ಏರ್ಪಡಿಸುವುದು, ಸಂಗೀತ ಸ್ಪರ್ಧೆಗಳನ್ನು ನಡೆಸುವುದು, ನಾಟಕ ಮತ್ತು ನೃತ್ಯ ಪ್ರದರ್ಶನ, ಚಿತ್ರಕಲಾ ಪ್ರದರ್ಶನ, ಲಲಿತಕಲೆಯ ಎಲ್ಲ ಪ್ರಕಾರಗಳಲ್ಲೂ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಶಿಷ್ಯವೇತನ ನೀಡುವುದು, ಖ್ಯಾತ ಕಲಾವಿದರಿಗೆ, ಸಂಗೀತಗಾರರಿಗೆ, ಶಿಲ್ಪಿಗಳಿಗೆ, ವರ್ಣಚಿತ್ರಗಾರರಿಗೆ, ಸಾಹಿತಿಗಳಿಗೆ ಪ್ರಶಸ್ತಿ ನೀಡುವುದು, ಯಕ್ಷಗಾನ ಮೇಳ ಸಂಯೋಜಿಸುವುದು, ಕಲಾವಿದರಿಗೆ, ಧನ ಸಹಾಯ ನೀಡುವುದು ಇವೇ ಮುಂತಾದವು. 1974-79ರ ಮಧ್ಯಂತರ ಐದನೇಯ ಯೋಜನೆಯಲ್ಲಿ ಸಂಗೀತ ನಾಟಕ ಅಕ್ಯಾಡೆಮಿಗೆ ಯಕ್ಷಗಾನ ಕಲೆಯ ಅಭಿವೃದ್ಧಿಗೆಂದು, ಭರತನಾಟ್ಯ ಶಿಕ್ಷಕರಿಗೆ ತರಬೇತಿ ನೀಡಲೆಂದು, ಹವ್ಯಾಸಿ ತಂಡಗಳಿಂದ ನಾಟಕೋತ್ಸವ ಏರ್ಪಡಿಸಲೆಂದು ಹಾಗೂ ಜನಪದ ಕಲೆಗಳ ಬಗ್ಗೆ ವಿಚಾರಗೋಷ್ಠಿ ನಡೆಸಲೆಂದು ಐದು ಲಕ್ಷ ರೂಪಾಯಿಗಳಷ್ಟು ಮೀಸಲಾಗಿತ್ತು. ಸಾಹಿತ್ಯ ಮತ್ತು ಲಲಿತಕಲಾ ಅಕ್ಯಾಡೆಮಿಗಳಿಗೆ ಹತ್ತು ಲಕ್ಷ ರೂಪಾಯಿಗಳ ಅನುದಾನದ ಅಂದಾಜು ಮಾಡಲಾಗಿದ್ದು ಅದನ್ನು ಈ ಕೆಳಗಿನ ಉದ್ದೇಶಗಳಿಗಾಗಿ ವಿನಿಯೋಗಿಸುವ ಯೋಜನೆಯಿತ್ತು: ಭಿತ್ತಿಚಿತ್ರಗಳ ನಕಲು ಮಾಡುವುದು ಹಾಗೂ ಪ್ರಕಟಿಸುವುದು, ಕಲಾವಿದರ ವಿಚಾರಗೋಷ್ಠಿ ಏರ್ಪಡಿಸುವುದು, ಚಿತ್ರಕಲೆ ಕುರಿತು ಸಾಹಿತ್ಯ ಪ್ರಕಟಿಸುವುದು, ಪ್ರಖ್ಯಾತ ಲೇಖಕರುಗಳ ವಿವರಗಳನ್ನು ಪ್ರಕಟಿಸುವುದು, ಭಾರತದ ಇತರ ರಾಜ್ಯಗಳಿಗೆ ಸಾಂಸ್ಕೃತಿಕ ನಿಯೋಗಗಳನ್ನು ಕಳುಹಿಸುವುದು, ಇತ್ಯಾದಿ. ಆರನೇಯ ಯೋಜನೆಯಲ್ಲಿ ಈ ಅಕ್ಯಾಡೆಮಿಗೆ 1980-81ನೇಯ ಇಸವಿಗೆಂದು 3.5 ಲಕ್ಷ ರೂಪಾಯಿ ಗಳನ್ನೂ 1981-82ನೇಯ ಇಸವಿಗೆಂದು ನಾಲ್ಕು ಲಕ್ಷ ರೂ.ಗಳನ್ನೂ ಮೀಸಲಾಗಿಡಲಾಗಿತ್ತು. 1983-84ರ ವಾರ್ಷಿಕ ಯೋಜನೆಯಲ್ಲಿ 25 ಲಕ್ಷ ರೂ. ಗಳ ವಿಶೇಷ ಅನುದಾನವೊಂದನ್ನು ಎಲ್ಲ ಆರು ಅಕ್ಯಾಡೆಮಿಗಳಿಗೂ ಬೇಕಾದ ಒಂದು ಹೊಸ ಕಟ್ಟಡವನ್ನು ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ನಿರ್ಮಿಸಲೆಂದು ತೆಗೆದಿರಿಸಲಾಗಿತ್ತು. ಇದೇ ಅವಧಿಯಲ್ಲಿ ಪ್ರತಿಯೊಂದು ಅಕ್ಯಾಡೆಮಿಯ ಚಟುವಟಿಕೆಗಳಿಗೂ ಎರಡೆರಡು ಲಕ್ಷ ರೂಪಾಯಿಗಳ ಧನಸಹಾಯ ನೀಡಲಾಗಿತ್ತು.

'ಸಂಸ್ಕೃತಿ ಸುದಿನ' ಯೋಜನೆಯಲ್ಲಿ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನೃತ್ಯ, ನಾಟಕ, ಸಂಗೀತ ಮತ್ತು ಜಾನಪದ ಕಲೆಗಳಿಗೆ ಪ್ರೋತ್ಸಾಹ ನೀಡುತ್ತದೆ. ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಹಾಗೂ ರಾಜ್ಯದಾದ್ಯಂತ ಈ ಯೋಜನೆಯನ್ವಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತದೆ. ಆರೂ ಅಕ್ಯಾಡೆಮಿಗಳು ತಂತಮ್ಮ ಚಟುವಟಿಕೆಗಳನ್ನು ಜಾರಿಗೊಳಿಸುವಲ್ಲಿ ಇಲಾಖೆಯ ಹತೋಟಿಗೊಳಪಟ್ಟಿರುತ್ತವೆ.

ಸಾಹಿತ್ಯ ಅಕ್ಯಾಡೆಮಿ ಅತ್ಯುತ್ತಮ ಸಾಹಿತ್ಯ ಕೃತಿಗೆ ಪ್ರಶಸ್ತಿ ನೀಡುತ್ತದೆ; ಕನ್ನಡ ಸಂಘಗಳು ಏರ್ಪಡಿಸುವ ಕನ್ನಡ ಸಾಹಿತ್ಯ ಗೋಷ್ಠಿಗಳಿಗೆ ಧನ ಸಹಾಯ ನೀಡುತ್ತದೆ; ಬರಹಗಾರರೂ, ಸಂಘ-ಸಂಸ್ಥೆಗಳೂ, ಅಕ್ಯಾಡೆಮಿಗಳೂ, ವಿಶ್ವವಿದ್ಯಾಲಯಗಳೂ ಬೇರೆ ಬೇರೆ ರಾಜ್ಯಗಳಿಗೆ ಭೇಟಿಯಿತ್ತು ಅಲ್ಲಿನ ಸಾಹಿತ್ಯ ಕ್ಷೇತ್ರದ ವಿದ್ಯಮಾನಗಳ ಬಗ್ಗೆ ಈ ಅಕ್ಯಾಡೆಮಿಗೆ ವರದಿ ಸಲ್ಲಿಸಲು ಅನುಕೂಲವಾಗುವಂತೆ ಪ್ರಯಾಣಕ್ಕೆ ಧನ ಸಹಾಯ ನೀಡುತ್ತದೆ. ಯುವ ಕನ್ನಡ ಬರಹಗಾರರ ಎಲ್ಲ ಪ್ರಕಾರದ ಸಾಹಿತ್ಯದ ಕಮ್ಮಟವನ್ನೇರ್ಪಡಿಸುತ್ತದೆ. ಖ್ಯಾತ ಸಾಹಿತಿಗಳು ಗಂಭೀರ ಸ್ವರೂಪದ ಅನಾರೋಗ್ಯಕ್ಕೆ ತುತ್ತಾದಾಗ ವೈದ್ಯಕೀಯ ಸೌಲಭ್ಯಗಳ ಖರ್ಚನ್ನೂ ಅಕ್ಯಾಡೆಮಿ ನಿರ್ವಹಿಸುತ್ತದೆ. ಕೆಲವು ಆಯ್ದ ವಿಮರ್ಶಾತ್ಮಕ ಗ್ರಂಥಗಳನ್ನು ಪ್ರಕಟಿಸುವುದರ ಜೊತೆಗೆ ಈ ಅಕ್ಯಾಡೆಮಿ ಇತರ ಭಾರತೀಯ ಭಾಷೆಗಳನ್ನು ಕಲಿಯುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನೂ ನೀಡುತ್ತದೆ.

ನಾಟಕ ಅಕ್ಯಾಡೆಮಿ ರಾಜ್ಯದ ವಿವಿಧ ಭಾಗಗಳಲ್ಲಿ ನಾಟಕೋತ್ಸವ ನಡೆಸುತ್ತದೆ; ರಂಗಕಲೆ ಕುರಿತು ಕಾರ್ಯಾಗಾರಗಳನ್ನೂ ವಿಚಾರಗೋಷ್ಠಿಗಳನ್ನೂ ಏರ್ಪಡಿಸುತ್ತದೆ. ರಂಗ ತರಬೇತಿ ನಡೆಸುವ ಸ್ವಾಯತ್ತ ಸಂಘಗಳಿಗೆ ಹಾಗೂ ಬೇರೆ ರಾಜ್ಯಗಳಲ್ಲಿ ನಡೆಯುವ ನಾಟಕೋತ್ಸವಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸುವ ರಂಗ ತಂಡಗಳಿಗೆ ಧನ ಸಹಾಯ ನೀಡುತ್ತದೆ. ನಾಟಕ ತಂಡಗಳಿಗೆ ಹಾಗೂ ಸಂಸ್ಥೆಗಳಿಗೆ ರಂಗ ಸಲಕರಣೆಗಳನ್ನು ಖರೀದಿಸಲು, ನಾಟಕೋತ್ಸವ ಹಾಗೂ ವಿಚಾರ ಸಂಕಿರಣ ನಡೆಸಲೂ ಧನಸಹಾಯ ನೀಡುತ್ತದೆ. ದಿಲ್ಲಿಯ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ಹಾಗೂ ಇತರ ಸ್ಥಳಗಳಲ್ಲಿ ನಾಟಕ ವಿಷಯಗಳಲ್ಲಿ ಅಧ್ಯಯನ ನಡೆಸುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನೂ ನೀಡುತ್ತದೆ.

ಲಲಿತಾ ಕಲಾ ಅಕ್ಯಾಡೆಮಿ ವರ್ಣಚಿತ್ರಗಳನ್ನು ಪ್ರದರ್ಶಿಸುತ್ತದೆ; ಕಲಾ ಶಿಬಿರಗಳನ್ನೂ, ವಿಚಾರ ಸಂಕಿರಣಗಳನ್ನೂ ಏರ್ಪಡಿಸುತ್ತದೆ. ಕಲಾ ಶಿಕ್ಷಣ ಸಂಸ್ಥೆಗಳಿಗೆ ಸಹಾಯ ಧನ ಹಾಗೂ ಕಲಾವಿದರಿಗೆ ಬಹುಮಾನಗಳನ್ನು ನೀಡುತ್ತದೆ.

ಸಂಗೀತ ನೃತ್ಯ ಅಕ್ಯಾಡೆಮಿಯೂ ಸಹ ತನ್ನ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಉತ್ಕೃಷ್ಟ ಸಾಹಿತ್ಯಗಳನ್ನು

ಪ್ರಕಟಿಸುವವರಿಗೆ ಧನಸಹಾಯ ನೀಡುತ್ತದೆ. ಸಂಗೀತ ಮತ್ತು ನೃತ್ಯ ಕಾರ್ಯಕ್ರಮಗಳನ್ನು ಏರ್ಪಡಿಸುವ ಸಂಘ ಸಂಸ್ಥೆಗಳಿಗೆ ಮತ್ತು ಪುರಂದರ ದಾಸರೇ ಮುಂತಾದವರ ಆರಾಧನೋತ್ಸವಗಳಿಗೆ ಧನಸಹಾಯ ನೀಡುತ್ತದೆ. ತನ್ನ ಕ್ಷೇತ್ರದಲ್ಲಿ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿ ಕೊಡುವುದಲ್ಲದೇ, ಕಲಾವಿದರಿಗೆ ಪ್ರಶಸ್ತಿಯನ್ನೂ ನೀಡುತ್ತದೆ. ರಾಜ್ಯದ ವಿವಿಧ ಭಾಗಗಳಲ್ಲಿ ಸಂಗೀತ ಮತ್ತು ನೃತ್ಯ ಕಾರ್ಯಕ್ರಮಗಳನ್ನು ಈ ಅಕ್ಯಾಡೆಮಿ ಏರ್ಪಡಿಸುತ್ತಿರುತ್ತದೆ.

ಜಾನಪದ ಮತ್ತು ಯಕ್ಷಗಾನ ಅಕ್ಯಾಡೆಮಿ ಹಲವು ಯೋಜನೆಗಳನ್ನು ಹಾಕಿಕೊಂಡಿದ್ದು, ಅವುಗಳ ಪೈಕಿ ಜನಪ್ರಿಯ ಪುಸ್ತಕಗಳ ಪ್ರಕಟಣೆ, ಶಿಶುಗೀತಗಳ ಸಂಗ್ರಹಣೆ ಮತ್ತು ಪ್ರಕಟಣೆ, ಜಾನಪದ ಮತ್ತು ಯಕ್ಷಗಾನಗಳ ಉತ್ತಮ ಗ್ರಂಥಗಳ ಪ್ರಥಮ ಮುದ್ರಣ ವೆಚ್ಚ ಭರಿಸುವುದು, ಜನಪದ ಕಲಾ ಮಹೋತ್ಸವಗಳನ್ನು ಏರ್ಪಡಿಸುವುದು ಮತ್ತು ಗ್ರಾಮ ಪಂಚಾಯಿತಿಗಳಿಂದ ಹಿಡಿದು ಜಿಲ್ಲಾ ಮಟ್ಟದವರೆಗೆ ಜಾನಪದ ಮೇಳಗಳನ್ನು ನಡೆಸುವ ಸಂಘ ಸಂಸ್ಥೆಗಳಿಗೆ ಧನ ಸಹಾಯ ನೀಡುವುದು ಇವೇ ಮುಂತಾದವು ಪ್ರಮುಖವಾಗಿವೆ.

ಉರ್ದು ಅಕ್ಯಾಡೆಮಿಯ ಸ್ಥಾಪನೆಯ ಉದ್ದೇಶಗಳ ಪೈಕಿ ಉರ್ದು ಸಾಹಿತ್ಯ ರಚನೆಯನ್ನು ಪ್ರೋತ್ಸಾಹಿಸುವುದು ಮುಖ್ಯವಾದುದು. ಈ ದಿಶೆಯಲ್ಲಿ ಉರ್ದು ಕಾವ್ಯ ಹಾಗೂ ಗದ್ಯ ಸಾಹಿತ್ಯಗಳ ಪೈಕಿ ಶ್ರೇಷ್ಠವಾದವುಗಳನ್ನು ಪ್ರಕಟಿಸುವುದು, ಉರ್ದು ನಿಘಂಟು ತಯಾರಿ, ಉರ್ದು ಕೃತಿಗಳನ್ನು ಭಾಷಾಂತರಿಸುವುದು, ಉರ್ದು ಗ್ರಂಥಾಲಯಗಳನ್ನು ನಡೆಸಲು ಹಾಗೂ ಗ್ರಂಥಗಳನ್ನು ಪ್ರಕಟಿಸಲು ಧನಸಹಾಯ ನೀಡುವುದು, ಇವೇ ಮೊದಲಾದ ಕಾರ್ಯಕ್ರಮಗಳನ್ನು ಈ ಅಕ್ಯಾಡೆಮಿ ಹಾಕಿಕೊಂಡಿದೆ. ಭಾರತ ಸರಕಾರದ ಉರ್ದು ಉತ್ತೇಜನ ಕಚೇರಿಯ ಸಹಕಾರದಿಂದ ಬೆಂಗಳೂರು ಮತ್ತು ಕಲ್ಬುರ್ಗಿಯಲ್ಲಿ ಉರ್ದು ಕೇಂದ್ರಗಳನ್ನು ತೆರೆಯಲಾಗಿದ್ದು, ವಿದ್ಯಾರ್ಥಿಗಳಿಗೆ ತರಬೇತಿ ನೀಡಲಾಗುತ್ತಿದೆ. ರಾಜ್ಯದ ವಿವಿಧ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಓದುತ್ತಿರುವ ಉರ್ದು ವಿದ್ಯಾರ್ಥಿಗಳಿಗೆ ಅಕ್ಯಾಡೆಮಿಯಿಂದ ಶಿಷ್ಯವೇತನ ಸಿಗುತ್ತದೆ.

ಸಾಹಿತ್ಯ, ಸಂಗೀತ, ನೃತ್ಯ, ಲಲಿತಕಲೆ, ಜಾನಪದ ಕಲೆ ಹಾಗೂ ನಾಟಕ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಖ್ಯಾತ ವ್ಯಕ್ತಿಗಳಿಗೆ ಕರ್ನಾಟಕ ಸರಕಾರವು ತಿಂಗಳಿಗೆ ನೂರು ರೂಪಾಯಿಗಳಂತೆ ನಿವೃತ್ತಿ ವೇತನವನ್ನೂ (ಈಗ 150 ರೂ.), 250 ಹಾಗೂ 500 ರೂಪಾಯಿಗಳ ಮಾಸಿಕ ಸಂಭಾವನೆಯನ್ನೂ ನೀಡುತ್ತಿದೆ. ಆಯಾ ಅಕ್ಯಾಡೆಮಿಗಳ ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಶಿಫಾರಸಿನ ಮೇಲೆ ಈ ಬಗೆಯ ಧನ ಸಹಾಯ ನಿಷ್ಕರ್ಷೆಯಾಗುತ್ತದೆ. ಈ ಕೆಳಗಿನ ಕೋಷ್ಟಕದಲ್ಲಿ 1980-82ರ ವರೆಗೆ ಧನ ಸಹಾಯ ಪಡೆಯುತ್ತಿದ್ದವರ ಒಟ್ಟು ಸಂಖ್ಯೆಯನ್ನು ಕೊಡಲಾಗಿದೆ.

| ಕ್ಷೇತ್ರ | ಮಾಸಿಕ ಗೌರವಧನ ಪಡೆಯುವವರ ಸಂಖ್ಯೆ | | ಮಾಸಿಕ ನಿವೃತ್ತಿ ವೇತನ ಪಡೆಯುವವರ ಸಂಖ್ಯೆ |
|---|---|---|---|
| | ರೂ. 500 | ರೂ. 250 | ರೂ. 100 |
| ಸಾಹಿತ್ಯ | 93 | 31 | 40 |
| ಸಂಗೀತ ಮತ್ತು ನೃತ್ಯ | 64 | 51 | 564 |
| ನಾಟಕ ಮತ್ತು ಅಭಿನಯ | 35 | 32 | 915 |
| ಲಲಿತಕಲೆ | 16 | 17 | 47 |
| ಪತ್ರಿಕೋದ್ಯಮ | 28 | 14 | — |
| ಸಂಸ್ಕೃತ | 14 | 6 | — |
| ಚಲನಚಿತ್ರ | 2 | — | — |
| ಸಮಾಜಸೇವೆ | 22 | 10 | — |
| ಜನಪದ ಕಲೆ | 8 | — | 56 |
| ಯಕ್ಷಗಾನ (ಜನಪದ) | — | — | 107 |
| ವರ್ಣಕಲೆ ಮತ್ತು ಶಿಲ್ಪಕಲೆ | — | — | 17 |
| ಗಮಕ ಸಾಹಿತ್ಯ | — | — | 16 |

### ಕರ್ನಾಟಕದಲ್ಲಿ ಪದ್ಮ ಪ್ರಶಸ್ತಿಗಳ ವಿಜೇತರು

ಭಾರತ ರತ್ನ : ಡಾ|| ಚಂದ್ರಶೇಖರ ವೆಂಕಟರಾಮನ್ (1954) ಮತ್ತು ಡಾ|| ಮೋಕ್ಷಗುಂಡಂ ವಿಶ್ವೇಶ್ವರಯ್ಯ (1955).

ಪದ್ಮ ವಿಭೂಷಣ : ಎಚ್. ವಿ. ಆರ್. ಅಯ್ಯಂಗಾರ್ (1962), ಪಟ್ಟದಕಲ್ ವೆಂಕಣ್ಣ ರಾಘವೇಂದ್ರರಾವ್ (1967), ಡಾ|| ಬಿ. ಪಿ. ಗಜೇಂದ್ರಗಡ್ಕರ್ (1972), ಡಾ|| ವಿ. ಕೆ. ಆರ್. ವಿ. ರಾವ್ (1974), ಡಾ|| ರಾಜಾ ರಾಮಣ್ಣ (1975), ಡಾ|| ಸತೀಶ್ ಧಾವನ್ (1981) ಹಾಗೂ ಪ್ರೊ|| ಚಿಂತಾಮಣಿ ನಾಗೇಶ ರಾಮಚಂದ್ರರಾವ್ (1985).

ಪದ್ಮ ಭೂಷಣ : ಜನರಲ್ ಕೆ. ಎಸ್. ತಿಮ್ಮಯ್ಯ (1954), ವಿ. ನರಹರಿರಾವ್ (1954), ಕಮಲಾದೇವಿ ಚಟ್ಟೋಪಾಧ್ಯಾಯ (1955), ಡಾ|| ಎನ್. ಎಸ್. ಹರ್ಡೀಕರ್ (1958), ಡಾ|| ಕೆ. ವಿ. ಪುಟ್ಟಪ್ಪ (1958), ಬಿ. ಪಿ. ಪಾಟೀಲ್ (1959), ಮೈಸೂರು ಕೆ. ವಾಸುದೇವಾ ಚಾರ್ಯ (1959), ಸ್ವೆತೊಸ್ಲಾವ್ ರೋರಿಕ್ (1961), ಆರ್. ಕೆ. ನಾರಾಯಣ (1964), ಬೆನಗಲ್ ಶಿವರಾವ್ (1967), ಡಾ|| ದಾದಾಸಾಹೇಬ್ ಚಿಂತಾಮಣಿ ಪಾವಟೆ (1967), ಡಾ|| ಕೆ. ಶಿವರಾಮ ಕಾರಂತ (1968), ಡಾ|| ಎಮ್. ಸಿ. ಮೋದಿ (1968), ಡಾ|| ಪಿ. ಎಲ್. ಭಟ್ನಾಗರ್ (1968), ರಾಜಾರಾವ್ (1969), ಗಂಗೂಬಾಯಿ ಹಾನಗಲ್ (1971), ಆರ್. ಕೆ. ಲಕ್ಷ್ಮಣ್ (1971), ಡಾ|| ಸತೀಶ್ ಧಾವನ್ (1971), ಆದ್ಯ ರಂಗಾಚಾರ್ಯ (1972), ಲೆಫ್ಟಿನೆಂಟ್ ಕರ್ನಲ್ ಜಿ. ಜಿ. ಬೇವೂರ್ (1972), ಮೊಹಮ್ಮದ್ ಹಯಾತ್ (1972), ಟಿ. ಎ. ಪೈ (1972), ಯಶೋಧರಾ ದಾಸಪ್ಪ (1972), ಪೋಥನ್ ಜೋಸೆಫ್ (1973), ಡಾ|| ರಾಜಾರಾಮಣ್ಣ (1973), ಡಾ|| ಡಿ. ವಿ. ಗುಂಡಪ್ಪ (1974), ಮಲ್ಲಿಕಾರ್ಜುನ ಮನ್ಸೂರ್ (1976), ಪ್ರೊ|| ಉಡುಪಿ ರಾಮಚಂದ್ರರಾವ್ (1976), ಡಾ|| ಮೈಸೂರು ನರಸಿಂಹಾಚಾರ್ ಶ್ರೀನಿವಾಸ (1977), ಶಿವಪುತ್ರ ಸಿದ್ಧರಾಮ ಕೊಂಕಳ್ಳಿ (ಕುಮಾರ ಗಂಧರ್ವ) (1977), ಸಿಂಗನಲ್ಲೂರು ಪುಟ್ಟಸ್ವಾಮಯ್ಯ ಮುತ್ತು ರಾಜ್ (ಡಾ|| ರಾಜಕುಮಾರ್) (1983), ಡಾ|| ವಿ. ದೊರೆ ಸ್ವಾಮಿ ಅಯ್ಯಂಗಾರ್ (1983), ಡಾ|| ಎಚ್. ನರಸಿಂಹಯ್ಯ (1984), ಪ್ರೊ|| ಎಸ್. ರಾಮಶೇಷನ್ (1985), ಪಂಡಿತ್ ಭೀಮಸೇನ ಜೋಶಿ (1985) ಹಾಗೂ ಟಿ. ಆರ್. ಮಹಾಲಿಂಗಂ (1986).

ಪದ್ಮಶ್ರೀ : ಹುಮಾಯೂನ್ ಮಿರ್ಜಾ (1955), ಡಾ|| ಎಮ್. ಸಿ. ಮೋದಿ (1956), ಡಾ|| ಎಸ್. ಆರ್. ರಂಗನಾಥನ್ (1957), ಗಣೇಶ ಗೋವಿಂದ ಕಾರ್ಖಾನೀಸ್ (1969), ಮ್ಯಾಥ್ಯೂ ಕಂಡತ್ತಿಲ್ (1959), ಡಾ|| ಮೇರಿ ರತ್ನಮ್ಮ ಐಸಾಕ್ (1959), ಬಳ್ಳಾರಿ ಶಾಮಣ್ಣ (1960), ಡಾ|| ವೈದ್ಯನಾಥನ್ ಸುಬ್ರಹ್ಮಣ್ಯನ್ (1960), ಅಗರಂ ಕೃಷ್ಣಮಾಚಾರ್ (1961), ಇವಾಂಜಲೀನ್ ಲಜಾರಸ್ (1961), ಕಮಲಾಬಾಯಿ ಹೊಸಪೇಟೆ (1961), ಡಾ|| ಕಟ್ಟಂಗೇರಿ ಕೃಷ್ಣ ಹೆಬ್ಬಾರ್ (1961), ವೀರನಗೌಡ ವೀರ ಬಸವನಗೌಡ ಪಾಟೀಲ (1961), ವಿನಾಯಕ ಕೃಷ್ಣ ಗೋಕಾಕ್ (1961), ಚನ್ನಪಟ್ಟಣ ಕೃಷ್ಣಪ್ಪ ವೆಂಕಟ ರಾಮಯ್ಯ (1962), ಡಾ|| ತೋನ್ಸೆ ಮಾಧವ ಅನಂತ ಪೈ (1965), ಡಾ|| ವಿಷ್ಣು ಮಾಧವ ಘಾಟಗೆ (1965), ಬಿ. ಶಿವ ಮೂರ್ತಿಶಾಸ್ತ್ರಿ (1966), ಸಂಗಬಸಪ್ಪಾ ಮಲ್ಲನಗೌಡ ಪಾಟೀಲ (1966), ಡಾ|| ಸತೀಶ್ ಧಾವನ್ (1966), ಆನೇಕಲ್ ಆರ್. ಗೋಪಾಲಅಯ್ಯಂಗಾರ್ (1967), ಡಾ|| ದತ್ತಾತ್ರೇಯ ರಾಮಚಂದ್ರ ಬೇಂದ್ರೆ (1968), ಡಿ. ಎನ್. ಕೃಷ್ಣಯ್ಯಶೆಟ್ಟಿ, (1968), ಡಾ|| ರಾಜಾರಾಮಣ್ಣ (1968), ಭೈರಪ್ಪ ಸರೋಜಾದೇವಿ ಶ್ರೀಹರ್ಷ (1968), ಸುಧಾ ವಿ. ರೆಡ್ಡಿ (1969), ಡಾ|| ಆರ್. ಬಿ. ಪಾಟೀಲ (1969), ಈ. ಎ. ಎಸ್. ಪ್ರಸನ್ನ (1970), ಮಲ್ಲಿಕಾರ್ಜುನ ಮನ್ಸೂರ್ (1970), ಡಾ|| ಪಿ. ನರಸಿಂಹಯ್ಯ (1970), ಟಿ. ಆರ್. ಮಹಾಲಿಂಗಮ್ (1970), ಡಾ|| ಬಸವಾಪಟ್ನ ನಾರಾಯಣ ಬಾಲಕೃಷ್ಣರಾವ್ (1971), ಡಾ|| ಕೂರ್ಗ್ ನರಸಿಂಹ ಅಯ್ಯಂಗಾರ್ ಕೃಷ್ಣಮೂರ್ತಿ (1971), ಗುಂಡಪ್ಪ ರಂಗನಾಥ ವಿಶ್ವನಾಥ್ (1971), ಸಚ್ಚಿದಾನಂದ ಕೇಶವ ನರಗುಂದಕರ್ (1971), ಶಾಂತಾ ರಾವ್ (1971), ರೆವರೆಂಡ್ ಮದರ್ ಮೇರಿ ಥಿಯೊಡೋಸಿಯಾ (1971), ಬಿ. ಎಸ್. ಚಂದ್ರಶೇಖರ್ (1972), ಭೀಮಸೇನ ಜೋಶಿ (1972), ಡಾ|| ಜಿ. ಎಸ್. ಮೇಲುಕೋಟೆ (1972), ಪಾಲಹಳ್ಳಿ ಸೀತಾರಾಮಯ್ಯ (1972), ಡಾ|| ರವಿವರ್ಮಾ ಎಮ್. ವರ್ಮಾ (1972), ಚಿನ್ನಸ್ವಾಮಿ ರಾಜಂ ಸುಬ್ರಹ್ಮಣ್ಯಂ (1973), ಕೋದಂಡ ರೋಹಿಣಿ ಪೂವಯ್ಯ(1973), ಹರಿಶ್ಚಂದ್ರ ಕಾಶೀನಾಥ ಕರ್ವೆ (1973), ಗಿರೀಶ ರಘುನಾಥ ಕಾರ್ನಾಡ್ (1974), ಡಾ|| ಎಸ್. ಆರ್. ವಲ್ಲೂರಿ (1974), ಕಲ್ಲೂರಿ ಗೋಪಾಲ ರಾವ್ (1974), ಡಾ|| ಮೈಸೂರು ಶ್ರೀಕಂಠ ಪಂಡಿತ ನೀಲಕಂಠ ರಾವ್ (1974), ಬಸವರಾಜ್ ರಾಜಗುರು (1975), ಆರ್. ನಾಗೇಂದ್ರರಾವ್ (1976), ಎ. ಕೆ. ರಾಮಾನುಜನ್ (1976), ಬಿ. ವಿ. ಕಾರಂತ (1981), ಡಾ|| ಮಾಧವ ಧನಂಜಯ ಗಾಡಗೀಳ (1981),ಡಾ|| ಕೃಷ್ಣಸ್ವಾಮಿ ಕಸ್ತೂರಿ ರಂಗನ್ (1982), ಪ್ರಕಾಶ ಪಡುಕೋಣೆ (1982), ರಾಮ ಸ್ವಾಮಿ ಮಾಣಿಕ ವಾಚಗಂ (1982), ಸಯ್ಯದ್ ಕಿರ್ಮಾನಿ ಎಮ್. ಎಚ್. (1982), ಪಿ. ಪಿ. ಕಾಳೆ (1984), ಮೇಜರ್ ಸೋಮನಾಥ ಭಾಸ್ಕರ್ (1985), ಜಿ. ಬಿ. ಜೋಶಿ (1986).

# ಅಧ್ಯಾಯ 12

## ಪ್ರೇಕ್ಷಣೀಯ ಸ್ಥಳಗಳು

ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯಿಂದ ಶ್ರೀಮಂತವಾಗಿರುವ ಕರ್ನಾಟಕದಲ್ಲಿ ಹಲವು ನಗರಗಳೂ, ಪಟ್ಟಣಗಳೂ, ಗ್ರಾಮಗಳೂ, ಜಲಪಾತಗಳೂ, ಗಿರಿಧಾಮಗಳೂ ಇತರ ಪ್ರೇಕ್ಷಣೀಯ ತಾಣಗಳೂ ಇವೆ. ಇವುಗಳಲ್ಲಿ ಕೆಲವು ಸ್ಥಳಗಳು ಕೋಟೆ, ದೇಗುಲ, ಮಸೀದಿ, ಚರ್ಚು ಮತ್ತಿತರ ಪ್ರಾಚೀನ ಸ್ಮಾರಕಗಳಿಂದ ಕೂಡಿ ಪುರಾತತ್ವಾವಶೇಷಗಳಿಂದಾಗಿ ಪ್ರಸಿದ್ಧವಾಗಿವೆ. ಹಲವು ಸ್ಥಳಗಳು ಧಾರ್ಮಿಕ ಮಹತ್ವವುಳ್ಳವಾಗಿವೆ; ಇನ್ನೂ ಕೆಲವು ಔದ್ಯೋಗಿಕ ದೃಷ್ಟಿಯಿಂದ ನೀರಾವರಿ ಯೋಜನೆಗಳಿಂದ, ಪ್ರಯೋಗಾಲಯಗಳಿಂದ, ವಸ್ತುಸಂಗ್ರಹಾಲಯಗಳಿಂದ, ಉದ್ಯಾನಗಳಿಂದ ಹಾಗೂ ಪ್ರಕೃತಿ ಸೌಂದರ್ಯಗಳಿಂದಾಗಿ ಖ್ಯಾತವಾಗಿವೆ. ಇನ್ನು ಹಲವು ಸ್ಥಳಗಳೊಂದಿಗೆ ರಾಜರ, ಕವಿಗಳ, ಸಂತಪುರುಷರ ಹಾಗೂ ಇನ್ನಿತರ ಶ್ರೇಷ್ಠರ ಭಾವನಾತ್ಮಕ ಸಂಬಂಧವಿದ್ದುದರಿಂದ ಅವುಗಳದೇ ಆದ ಮಹತ್ವವಿದೆ. ಈ ಬಗೆಯ ಸ್ಥಳಗಳನ್ನು ಅಖಿಲ ಕರ್ನಾಟಕ ದೃಷ್ಟಿಯಿಂದ ಪರಿಚಯಿಸುವ ಒಂದು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಹಲವು ಚಿಕ್ಕಪುಟ್ಟ ಸ್ಥಳಗಳ ಮಾಹಿತಿಗಳನ್ನು ಆಯಾ ತಾಲೂಕು ಪ್ರಮುಖ ಸ್ಥಳ ಪರಿಚಯಿಸುವಾಗ ಸೇರಿಸಿಕೊಳ್ಳಲಾಗಿದೆ. ಜಿಲ್ಲಾ ತಾಲೂಕು ಸ್ಥಳಗಳ ಜನಸಂಖ್ಯೆಯನ್ನು 1981ರ ಜನಗಣತಿಯ ಪ್ರಕಾರ ನೀಡಿದ್ದರೆ, ಚಿಕ್ಕ ಸ್ಥಳಗಳ ಜನಸಂಖ್ಯೆಯನ್ನು 1971ರ ಜನಸಂಖ್ಯಾಗಣತಿಯನ್ನಾಧರಿಸಿ ಕೊಡಲಾಗಿದೆ.

ಅಂಕೋಲ : (ಉ. ಕ. ಜಿಲ್ಲೆ; ತಾ. ಕೆ.; ಜನ: 12,152) ಉತ್ತರ ಕನ್ನಡ ಜಿಲ್ಲೆಯ ಪಶ್ಚಿಮ ತೀರದಲ್ಲಿರುವ ಅಂಕೋಲ ಬೆಂಗಳೂರಿಂದ 487 ಕಿ.ಮೀ. ದೂರದಲ್ಲಿದೆ. 'ಅಲಂಜಿಯಂ ಲಮರ್ಕಿ' ಎಂದು ವೈಜ್ಞಾನಿಕವಾಗಿ ಕರೆಯಲಾದ ಒಂದು ಬಗೆಯ ಸಸ್ಯದಿಂದ ಈಗಿನ 'ಅಂಕೋಲೆ' ಎಂಬ ಹೆಸರು ಉತ್ಪತ್ತಿಯಾಗಿದೆ. ಕಡಲ ತೀರದ ಗುಡ್ಡಗಳಲ್ಲಿ ಬೆಳೆಯುವ ಈ ಸಸ್ಯವನ್ನು ಸ್ಥಳೀಯ ಹಾಲಕ್ಕಿ ಒಕ್ಕಲಿಗರು ಪಂಗಡದ ಸಂಕೇತವಾಗಿ ಆರಾಧಿಸುತ್ತಾರೆ. ಲಭ್ಯವಿರುವ ದಾಖಲೆಗಳ ಪ್ರಕಾರ ಅಂಕೋಲ ಒಂದು ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರವಾಗಿತ್ತು. ಕದಂಬ, ಚಾಳುಕ್ಯ ಮತ್ತು ವಿಜಯನಗರ ಅರಸರ ಆಡಳಿತಕ್ಕೆ ಇದು ಒಳಪಟ್ಟಿತ್ತು. ವಿಜಾಪುರ ಶಾಹಿಗಳು ಇದನ್ನು ವಶಪಡಿಸಿಕೊಂಡಿದ್ದರು. ಅನಂತರ ಶಿವಾಜಿಯು ಇದನ್ನು ಮುತ್ತಿಗೆ ಹಾಕಿ ಧ್ವಂಸ ಮಾಡಿದ. ವಿಜಾಪುರದ ಶಾಹಿಗಳು ಇದನ್ನು ಸೋದೆ ಅರಸನಾದ ಒಂದನೇಯ ಸದಾಶಿವ ನಾಯಕನ ಉಸ್ತುವಾರಿಗೆ ಕೊಟ್ಟಿದ್ದರು. 1763ರಲ್ಲಿ ಹೈದರ್ ಅಲಿ ಇದನ್ನು ತನ್ನ ಅಂಕಿತಕ್ಕೆ ತೆಗೆದುಕೊಂಡು ಇಲ್ಲಿಯ ಹಳೆಯ ಕೋಟೆಯನ್ನು ಭದ್ರಪಡಿಸಿದ. ಟಿಪ್ಪುವಿನ ಮರಣಾನಂತರ ಅಂಕೋಲೆಯು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. 1930ರಲ್ಲಿ ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ಅಂಕೋಲೆಯು ಗಣನೀಯ ಪಾತ್ರ ವಹಿಸಿತ್ತು. ಆಗ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯು ಇಲ್ಲಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಿತ್ತು. ಇದಾದ ಮೇಲೆ ಕರ ನಿರಾಕರಣೆ ಚಳವಳಿಯೂ ನಡೆಯಿತು.

17ನೇಯ ಶತಮಾನದ ಆರಂಭದಲ್ಲಿ ಕಟ್ಟಲಾದ ಅಂಕೋಲೆಯ ಕೋಟೆಯ ಅವಶೇಷಗಳಲ್ಲಿ ಬಹುಪಾಲು ನಾಶವಾಗಿವೆ. ಪ್ರಮುಖ ಐತಿಹಾಸಿಕ ಸ್ಥಳವಾದ ಅಂಕೋಲೆಯಲ್ಲಿ ಹಲವು ಸುಂದರವಾದ ಹಿಂದೂ, ಜೈನ, ಕ್ರೈಸ್ತ ಹಾಗೂ ಮುಸ್ಲಿಂ

---

ತಾ.ಕೆ.—ತಾಲೂಕು ಕೇಂದ್ರ, ಜಿ.ಕೆ.—ಜಿಲ್ಲಾ ಕೇಂದ್ರ, ಜನ—ಜನಸಂಖ್ಯೆ

ವಾಸ್ತು ಕೃತಿಗಳಿವೆ. ಹೊನ್ನೆಬೈಲ ಗವಿಗಳು ಅಂಕೋಲೆಯಿಂದ ಎಂಟು ಕಿಮೀ ದೂರದಲ್ಲಿವೆ. ಬಬ್ರುವಾಡ, ಮಂಜುಗುಣಿ ಬಳಿಯಿರುವ ಜೈನ ಬೀರ, ಬೇಲೇಕೇರಿ, ಕಿನೆಗುತ್ತಿ, ಭಾವಿಕೆರೆ, ಅಲಗೇರಿ ಮತ್ತಿತರ ಸ್ಥಳಗಳಲ್ಲಿ ಇಂದಿಗೂ ಜೈನ ವಾಸ್ತುಕೃತಿಗಳಿವೆ. ಬಬ್ರುವಾಡದಲ್ಲಿ ಕದಂಬರ ಕಾಲದ ಬುದ್ಧನ ವಿಗ್ರಹವಿದೆ. ಅಂಕೋಲೆಯ ಹಿಂದೂ ದೇವಾಲಯಗಳನ್ನು 1500ರಿಂದೀಚೆಗೆ ನಿರ್ಮಿಸಲಾಗಿವೆ. ಗೋವಾದಲ್ಲಿ ಪೋರ್ತುಗೀಜರಿಂದ ಉಂಟಾದ ಭಯಾನಕ ಪರಿಸ್ಥಿತಿಯಿಂದ ಅನೇಕ ಹಿಂದುಗಳು ಉತ್ತರ ಕನ್ನಡ ಜಿಲ್ಲೆಗೆ ವಲಸೆ ಬಂದರು. ಹೀಗೆ ಬರುವಾಗ ತಮ್ಮ ಆರಾಧ್ಯ ದೈವಗಳಾದ ಭಗವತಿ, ಶಾಂತೇರಿ, ಮಹಾಮಾಯಾ ಮತ್ತು ಕುಂಡೋದರಿ ದೇವಿಯರ ಪ್ರತಿಮೆಗಳನ್ನು ತಂದರು. 16ನೇಯ ಶತಮಾನದಲ್ಲಿ ಅಂಕೋಲೆಯಲ್ಲಿ ಕಟ್ಟಲಾದ ಮಹಾಮಾಯಾ ಮತ್ತು ಕುಂಡೋದರಿ ದೇಗುಲಗಳ ಗುಮ್ಮಟ ಮತ್ತು ಕಮಾನುಗಳಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಶೈಲಿಗಳ ಪ್ರಭಾವವನ್ನು ಗಮನಿಸಬಹುದು. ಇವುಗಳೊಂದಿಗೆ ಪ್ರದಕ್ಷಿಣಾಪಥ, ಗರ್ಭಗೃಹ, ಶುಕನಾಸ ಮುಂತಾದ ಹಿಂದೂ ದೇವಾಲಯದ ಲಕ್ಷಣಗಳೂ ಕಂಡುಬರುತ್ತವೆ. ಮಹಾಮಾಯಾ ದೇಗುಲವನ್ನು ಅಮೃತಶಿಲೆಯಿಂದ ವಿಶೇಷವಾಗಿ ಅಲಂಕರಿಸಲಾಗಿದೆ. ಆರ್ಯದುರ್ಗಾ ದೇಗುಲದಲ್ಲಿರುವ ಆರ್ಯದುರ್ಗೆಯ ಪ್ರತಿಮೆಯನ್ನು ಅಂಜದೀವ ದ್ವೀಪದಿಂದ ತರಲಾಯಿತೆಂದು ಹೇಳುತ್ತಾರೆ. ಶಾಂತಾದುರ್ಗ, ಸುಂದರ ನಾರಾಯಣ, ದತ್ತಾತ್ರೇಯ ಮುಂತಾದವು ಅಂಕೋಲೆಯ ಇತರ ಪ್ರಮುಖ ದೇಗುಲಗಳಾಗಿವೆ. ಅಂಕೋಲೆಯಿಂದ ನಾಲ್ಕು ಕಿಮೀ ದೂರದಲ್ಲಿರುವ ಅವರ್ಸಾದಲ್ಲಿ ಸುಂದರವಾದ ಕಾತ್ಯಾಯನೀ ಬಾಣೇಶ್ವರಾಲಯವಿದೆ. ಇದನ್ನು ಹದಿನಾರನೇಯ ಶತಮಾನದ ಉತ್ತರಾರ್ಧದಲ್ಲಿ ಕಟ್ಟಲಾಗಿದ್ದು ಇದರ ಪ್ರಧಾನ ವಿಗ್ರಹವನ್ನು ಗೋವೆಯಿಂದ ತಂದುದಾಗಿ ಭಾವಿಸುತ್ತಾರೆ. ಸಯ್ಯದ್ ಫತುಲ್ಲ ಬಾಗದಾದಿಯು ಅಂಕೋಲೆಯಲ್ಲಿದ್ದನೆಂದು ಹೇಳಲಾಗಿದೆ ಮತ್ತು ಇಲ್ಲಿ ಈತನ ಗೋರಿಯಿದೆ. ಅಂಕೋಲೆಯಲ್ಲಿ ಒಂದು ಮಸೀದಿಯೂ ಇದೆ. 17ನೇಯ ಶತಮಾನದ ಒಂದು ಚರ್ಚ್ ಇದೆ. ಈಚೆಗೆ 'ಕ್ರೈಸ್ತ ಮಿತ್ರ ಆಶ್ರಮ' ಎಂಬ ಸಾಮಾಜಿಕ ಸಂಘವನ್ನು, ಪ್ರೊಟೆಸ್ಟಂಟರು ನಡೆಸುತ್ತಿದ್ದಾರೆ. ಇವರು ಶೈಕ್ಷಣಿಕ ಸಂಸ್ಥೆ ಮತ್ತು ಆಸ್ಪತ್ರೆಗಳನ್ನು ಸ್ಥಾಪಿಸಿದ್ದಾರೆ. ಗಂಗಾವಳಿ ನದೀ ತೀರದಲ್ಲಿರುವ ಈ ಪುರಸಭಾ ಪಟ್ಟಣದ ಕೆಳಭಾಗದಲ್ಲಿ ಈ ನದಿಯಲ್ಲಿನ ಒಂದು ದ್ವೀಪಕ್ಕೆ ಕೂರ್ವೆ ಎಂದು ಕರೆಯಲಾಗಿದ್ದು ಇದೊಂದು ಸುಂದರವಾದ ವಿಹಾರ ಸ್ಥಳವಾಗಿದೆ.

**ಅಣ್ಣಿಗೇರಿ :** (ಧಾರವಾಡ ಜಿ; ನವಲಗುಂದ ತಾ; ಜನ: 14,681) ನವಲಗುಂದದಿಂದ ಸುಮಾರು 19 ಕಿಮೀ ಹಾಗೂ ಧಾರವಾಡದಿಂದ ಸುಮಾರು 52 ಕಿಮೀ ಅಂತರದಲ್ಲಿ ಹುಬ್ಬಳ್ಳಿ–ಗದಗ ಮಾರ್ಗದಲ್ಲಿದೆ. 1976ರಲ್ಲಿ ಆರಂಭವಾದ ಪಟ್ಟಣ ಪಂಚಾಯಿತಿಯಿದೆ. ಇಲ್ಲಿಯ ಸ್ಥಳ ಪುರಾಣದ ಪ್ರಕಾರ ಇದರ ಮೊದಲ ಹೆಸರು 'ಅಣ್ಣಿಗಿರಿ' ಹಾಗೂ 'ಅನ್ಯತಟಾಕ' ಎಂದಾಗಿತ್ತು. ಪಾಂಡವರು ತಮ್ಮ ವನವಾಸ ಸಮಯದಲ್ಲಿ ಇಲ್ಲಿಗೆ ಬಂದಿದ್ದರೆಂದು ಹೇಳಲಾಗಿದೆ. ಪ್ರಾಚೀನ ಕಾಲದಿಂದಲೂ ಇದು ಸಾಂಸ್ಕೃತಿಕ, ರಾಜಕೀಯ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿತ್ತು. ಪ್ರಾಚೀನ ಕರ್ನಾಟಕದ ಒಂದು ಸಮೃದ್ಧ ಪ್ರಾಂತ್ಯವಾದ ಬೆಳವೊಲ 300ರ ಮುಖ್ಯ ಪಟ್ಟಣವಿದಾಗಿದ್ದು, ಹಲವು ಶಾಸನಗಳಲ್ಲಿ ಇದನ್ನು 'ರಾಜಧಾನಿ ಪಟ್ಟಣ' ಎಂದೆ ಹೆಸರಿಸಲಾಗಿದೆ. ಸುಮಾರು 28 ಶಾಸನಗಳು ಇಲ್ಲಿ ಪತ್ತೆಯಾಗಿದ್ದು ಇವುಗಳಲ್ಲಿ ಬಾದಾಮಿ ಚಲುಕ್ಯ ವಂಶದ ಇಮ್ಮಡಿ ಪುಲಿಕೇಶಿ ಹಾಗೂ ಇಮ್ಮಡಿ ಕೀರ್ತಿವರ್ಮನ ಶಾಸನಗಳು ಪ್ರಾಚೀನವಾದುವು. ರಾಷ್ಟ್ರಕೂಟ ಇಮ್ಮಡಿ ಕೃಷ್ಣನ ಶಾಸನವೂ ಇಲ್ಲಿ ದೊರಕಿದೆ. 12ನೇಯ ಶತಮಾನದ ಉತ್ತರಾರ್ಧ ಹಾಗೂ 13ನೇಯ ಶತಮಾನದ ಪೂರ್ವಾರ್ಧದಲ್ಲಿ ಕಲ್ಯಾಣಿ ಚಾಳುಕ್ಯ, ಕಲಚುರಿ, ಸೇಉಣ ಹಾಗೂ ಹೊಯ್ಸಳ ಮುಂತಾದ ಅರಸು ಮನೆತನಗಳ ಆಳ್ವಿಕೆಗೆ ಒಳಗಾಗಿತ್ತು. ಚಾಳುಕ್ಯ ವಂಶದ ಮುಮ್ಮಡಿ ತೈಲನು ತನ್ನ ಕೊನೆಯ ದಿನಗಳಲ್ಲಿ ಇದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಚಾಳುಕ್ಯ ದಂಡನಾಯಕನಾಗಿದ್ದ ವೀರಬಮ್ಮರಾಜನು ಇಲ್ಲಿಯ ಅಮೃತೇಶ್ವರಾಲಯಕ್ಕೆ ದಾನ ನೀಡಿದನೆಂದು 1184ರ ಶಾಸನ ತಿಳಿಸುತ್ತದೆ. ವಿಜಯನಗರ ಅಚ್ಯುತರಾಯನ ಕಾಲದ (1539) ಶಿಲಾಶಾಸನವು ಆನಂದನಿಧಿ ದಾನವನ್ನು ಉಲ್ಲೇಖಿಸುತ್ತದೆ. ಬ್ರಿಟಿಷರ ಆಳ್ವಿಕೆಯ ಆರಂಭದಲ್ಲಿ ಅಣ್ಣಿಗೇರಿಯು ನಿಪ್ಪಾಣಿಯ ಜಾಗೀರಾಗಿದ್ದು, 1839ರಲ್ಲಿ ವಾರಸುದಾರರಿಲ್ಲದೆ ಇದು ಸರ್ಕಾರದ ವಶವಾಯಿತು. 76 ಕಂಬಗಳಿಂದ ಕೂಡಿದ ಅಮೃತೇಶ್ವರಾಲಯದಲ್ಲಿ ಶಿವ ಮತ್ತು ನಂದಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದು ಇದನ್ನು ಕಲ್ಯಾಣಿ ಚಾಳುಕ್ಯ ಶೈಲಿಯಲ್ಲಿ ರಚಿಸಲಾಗಿದೆ. ರೈಲ್ವೆ ನಿಲ್ದಾಣದ ಬಳಿಯಿರುವ ಪುರದ ವೀರಪ್ಪ ದೇಗುಲದಲ್ಲಿ ವೀರಭದ್ರನ ವಿಗ್ರಹವಿದೆ. ಇದೊಂದು ಪ್ರಾಚೀನ ದೇಗುಲವಾಗಿದ್ದು, ಅನಂತರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ. ಅರ್ಧ ಭಗ್ನಗೊಂಡ ಬನಶಂಕರಿ, ಹಿರೇ ಹನುಮ, ಮೈಲಾರ, ಉಮಾ ಪಾರ್ವತಿ ಗುಡಿಗಳು ಇಲ್ಲಿವೆ. ಇಲ್ಲೊಂದು ಪಾರ್ಶ್ವನಾಥ ಬಸದಿಯಿದೆ. ಇದು ಮೊದಲು ಮಹಾವೀರನ ಬಸದಿಯಾಗಿತ್ತು. ರಾಚಮಲ್ಲನು ಇದನ್ನು ಜೀರ್ಣೋದ್ಧಾರ ಮಾಡಿದನೆಂದು ತಿಳಿಸುವ ಒಂದು ಶಾಸನವಿಲ್ಲಿದೆ. ಇವಲ್ಲದೆ ಇಲ್ಲಿ ಏಳು ಮಸೀದಿಗಳಿವೆ. ಒಂದು ದರ್ಗಾ ಹಾಗೂ ಎರಡು ವೀರಶೈವ ಮಠಗಳಿವೆ. ಅಣ್ಣಿಗೇರಿ ಹತ್ತಿ (ಅರಳೆ) ವ್ಯಾಪಾರದ ಒಂದು ಪ್ರಮುಖ ಕೇಂದ್ರವಾಗಿದೆ.

**ಅಥಣಿ :** (ಬೆಳಗಾವಿ ಜಿ; ತಾ. ಕೇ; ಜನ: 27,543) ಬೆಂಗಳೂರಿನಿಂದ ಸುಮಾರು 679 ಕಿಮೀ. ಹಾಗೂ ಬೆಳಗಾವಿಯಿಂದ 148 ಕಿಮೀ. ಅಂತರದಲ್ಲಿರುವ ಅಥಣಿಯಲ್ಲಿ 1853ರಲ್ಲೇ

ಆರಂಭಿಸಿದ ಪುರಸಭೆ ಇದೆ. 16-17ನೇಯ ಶತಮಾನದ ವಿದೇಶಿ ಪ್ರವಾಸಿಗರು ಈ ಪಟ್ಟಣದ ಬಗೆಗೆ ಇನ್ನೂ ಹೆಚ್ಚಿನ ವಿವರಗಳನ್ನು ನೀಡಿ ಹೋಗಿದ್ದಾರೆ. ಮಂಡೆಲ್‌ಸ್ಲೊ (1639) ಎಂಬ ಜರ್ಮನ್ ಪ್ರವಾಸಿಗನ ಪ್ರಕಾರ ವಿಜಾಪುರ ಮತ್ತು ಗೋವೆಗಳ ಮಧ್ಯದ ಒಂದು ಪ್ರಮುಖ ಮಾರುಕಟ್ಟೆ ಇದಾಗಿತ್ತು. ಫ್ರಯರ್ (1675) ಎಂಬ ಇಂಗ್ಲಿಷ್ ಪ್ರವಾಸಿಗ ಇದನ್ನು ವಿಜಾಪುರ ಸಾಮ್ರಾಜ್ಯದಲ್ಲೇ ಅತ್ಯಂತ ಪ್ರಮುಖ ಪಟ್ಟಣವೆಂದು ಗುರುತಿಸಿದ್ದ. 1679ರಲ್ಲಿ ಶಿವಾಜಿಯು ಮೊಘಲ್ ದಂಡನಾಯಕನಾಗಿದ್ದ ದಿಲಾವರ್‌ಖಾನ್‌ನಿಂದ ಇದನ್ನು ವಶಪಡಿಸಿಕೊಂಡ. 1720ರ ಸುಮಾರಿಗೆ ನಿಜಾಂ-ಉಲ್-ಮುಲ್ಕನ ಆಡಳಿತಕ್ಕೆ ಇದು ಒಳಪಟ್ಟಿತು. ತಕ್ಷಣದಲ್ಲಿಯೇ ಇದನ್ನು ನಿಜಾಮರ ಅಧೀನದಲ್ಲಿದ್ದ ಕೊಲ್ಲಾಪುರದ ಛತ್ರಪತಿಗೆ ವಹಿಸಿಕೊಡಲಾಯಿತು. ಈತ ಇದನ್ನು ಸತಾರಾದ ಷಾಹುವಿಗೆ 1730ರಲ್ಲಿ ನೀಡಿದ. ನಿಪ್ಪಾಣಿ ಪಾಳೆಯಗಾರನು ವಾರಸುದಾರರಿಲ್ಲದೆ ಸತ್ತ ಬಳಿಕ, 1839ರಲ್ಲಿ ಇದು ಬ್ರಿಟಿಷರ ವಶವಾಯಿತು. ಅಥಣಿಯಲ್ಲಿರುವ ಪ್ರಾಚ್ಯಾವಶೇಷಗಳಲ್ಲಿ ವಿಜಾಪುರ ರಾಜರ ಕಾಲದ ಸಿದ್ದೇಶ್ವರ, ಅಮೃತೇಶ್ವರ, ಕಲ್ಮೇಶ್ವರ ಗುಡಿಗಳು, 500 ವರ್ಷಗಳ ಹಿಂದೆ ಸ್ಥಾಪಿತವಾದ ವೀರಶೈವ ಮಠವೂ ಪ್ರಸಿದ್ಧವಾಗಿವೆ. ಇದನ್ನು ಸ್ಥಳೀಯವಾಗಿ ಗಚ್ಚಿನಮಠ ಎಂದು ಕರೆಯಲಾಗುತ್ತಿದೆ. ರೇವಣಸಿದ್ದೇಶ್ವರ ಸ್ವಾಮಿಗಳು ಇದನ್ನು ಸ್ಥಾಪಿಸಿದರೆಂದು ಹೇಳಲಾಗುತ್ತಿದೆ. ತಮ್ಮ ಆಧ್ಯಾತ್ಮಿಕ ಸಾಧನೆಗಳಿಂದ ಖ್ಯಾತರಾದ ಶ್ರೀ ಮುರುಘಾ ರಾಜೇಂದ್ರ ಶಿವಯೋಗಿ, ಅವರ ಶಿಷ್ಯರಾದ ಶ್ರೀ ಮೃತ್ಯುಂಜಯ ಶಿವಯೋಗಿಗಳು (ಇವರು ಧಾರವಾಡದ ಶ್ರೀ ಮುರುಘಾ ಮಠದ ಸ್ಥಾಪಕರು) ಇಲ್ಲಿಯ ಮಠಾಧಿಪತಿಗಳಾಗಿದ್ದರು. ಸಿದ್ಧೇಶ್ವರಾಲಯದ ವಾಸ್ತುಶಿಲ್ಪದಲ್ಲಿ ಇಸ್ಲಾಂ ಮತ್ತು ಹಿಂದೂ ವಾಸ್ತುಶಿಲ್ಪದ ಸಮ್ಮಿಶ್ರಣವನ್ನು ನೋಡಬಹುದು. ಇಲ್ಲಿರುವ ಆಧುನಿಕ ದೇಗುಲಗಳಲ್ಲಿ ಭೀಮದಾಸ ರಾಘವೇಂದ್ರ ಸ್ವಾಮಿಗಳ ಮಠ ಬಹಳ ಖ್ಯಾತವಾಗಿದೆ. ಮುಸ್ಲಿಂ ಮಸೀದಿ ಹಾಗೂ ಶಿಥಿಲ ಕೋಟೆಯನ್ನೂ ಇಲ್ಲಿ ನೋಡಬಹುದು. ಅಥಣಿಯಲ್ಲಿ 'ಕೊಲ್ಲಾಪುರ ಚಪ್ಪಲ್' ಎಂದು ಹೆಸರು ಪಡೆದ ವಿಶೇಷ ಗುಣಮಟ್ಟದ ಚಪ್ಪಲಿಗಳನ್ನು ಮಾಡುವ ಉದ್ಯಮವಿದೆ. ಇದನ್ನು ಬೃಹತ್ ಪ್ರಮಾಣದಲ್ಲಿ ತಯಾರಿಸಿ ರಫ್ತು ಮಾಡಲಾಗುತ್ತಿದೆ. ಖಿಳೇಗಾಂವ್ (ಜನ : 2056) ಅಥಣಿಯಿಂದ ಸುಮಾರು 38 ಕಿಮೀ ದೂರದಲ್ಲಿ, ಮಹಾರಾಷ್ಟ್ರದ ಗಡಿಯಲ್ಲಿದ್ದು, ಇಲ್ಲಿ ಪ್ರಸಿದ್ಧವಾದ ಬಸವಣ್ಣನ ಗುಡಿಯಿದೆ. ಇಲ್ಲಿರುವ ನಂದಿಯ ವಿಗ್ರಹವು ಸಾಕಷ್ಟು ದೊಡ್ಡದೂ, ಆಕರ್ಷಣೀಯವೂ ಆಗಿದೆ. ಮಂಗಸೂಳಿಯು ಒಂದು ಪ್ರಮುಖ ಯಾತ್ರಾಸ್ಥಳವಾಗಿದ್ದು, ಅಥಣಿಯಿಂದ ಸುಮಾರು 24 ಕಿಮೀ ದೂರದಲ್ಲಿದೆ. ಇಲ್ಲಿ ಮೈಲಾರ ಮಾರ್ತಂಡ ಅಥವಾ ಖಂಡೋಬಾ ಎಂದು ಕರೆಯಲಾದ ಮಲ್ಲಯ್ಯನ ಗುಡಿಯಿದೆ. ಮಹಾರಾಷ್ಟ್ರ ಮತ್ತು ಕರ್ನಾಟಕಗಳಿಂದ ಬಹಳಷ್ಟು ಭಕ್ತಾದಿಗಳು ಇಲ್ಲಿಗೆ ಬರುತ್ತಿರುತ್ತಾರೆ. ಶೇಡಬಾಳವು ಜನಸಂಖ್ಯೆ : (10,044) ಅಥಣಿಯಿಂದ ಸುಮಾರು 32 ಕಿಮೀ ಅಂತರದಲ್ಲಿದೆ. ಈ ತಾಲೂಕಿನ ಸ್ವಾರಸ್ಯಕರ ಸ್ಥಳಗಳಲ್ಲೇ ಇದು ಗಣ್ಯವಾಗಿದೆ. ಇಲ್ಲಿ ಪುರಾತನ ಕಾಲದ ಬಸವನ ದೇಗುಲವಿದ್ದು, 1156ರ ಶಿಲಾಹಾರರ ಶಾಸನವೂ ಇಲ್ಲಿದೆ. ಗುಡಿಯ ಮುಂದೆ ನಿಲ್ಲಿಸಿರುವ ದೀಪಸ್ತಂಭದ ಮೇಲೆ ದೀಪ ಹಚ್ಚಿಟ್ಟಾಗ ಅದರ ಬೆಳಕು ನೇರವಾಗಿ ಈ ಶಿವಲಿಂಗ ಹಾಗೂ ಬಸವನ ಮೇಲೆ ಬೀಳುತ್ತದೆ. ಆದರೆ ಇದರ ಆಚೀಚೆಯಿರುವ ಇತರ ಎರಡೂ ವಿಗ್ರಹಗಳ ಮೇಲೆ ಈ ಬೆಳಕು ಬೀಳುವುದಿಲ್ಲ. ಶೇಡಬಾಳವು ಜೈನರ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕೇಂದ್ರವೂ ಹೌದು. ಖ್ಯಾತ ಲೇಖಕರಾದ ಮಿರ್ಜಿ ಅಣ್ಣಾರಾಯರು ಈ ಸ್ಥಳದವರು.

ಅಫ್ಜಲ್‌ಪುರ (ಕಲ್ಬುರ್ಗಿ ಜಿ; ತಾ.ಕೇ; ಜನ: 10,589) ಬೆಂಗಳೂರಿನಿಂದ 624 ಕಿಮೀ ದೂರದಲ್ಲಿದೆ. ಶಿವಾಜಿಯು ಪ್ರತಾಪಗಡದಲ್ಲಿ ಸಂಹರಿಸಿದ ವಿಜಾಪುರದ ದಂಡನಾಯಕನಾಗಿದ್ದ ಅಫ್ಜಲ್‌ಖಾನ್‌ನಿಂದಾಗಿ ಈ ಊರಿಗೆ ಈ ಹೆಸರು ಬಂದಿದೆ. ಅತನೂರಲ್ಲಿ ಹಾಗೂ ಪುರಸಭಾ ಪಟ್ಟಣವಾದ ಅಫ್ಜಲ್‌ಪುರದಲ್ಲಿ ಹಲವು ಪ್ರಾಕ್ತನ ಸ್ಮಾರಕಗಳಿವೆ. ಈ ತಾಲೂಕಿನ ಘಟ್ಟರ್ಗ ಗ್ರಾಮದಲ್ಲಿ ವಿಜಯನಗರ ಅರಸರ ಕಾಲದಲ್ಲಿ ನಿರ್ಮಿಸಲಾದ ಭಾಗ್ಯವಂತಿದೇವಿಯ ಗುಡಿಯಿದೆ. ಮಸ್ನಾಳದಲ್ಲಿ ಮುಸ್ಲಿಂ ಫಕೀರನಾಗಿದ್ದ ಶಹಬುದ್ದೀನನ ಖ್ಯಾತ ದರ್ಗಾ ಇದೆ.

ಅಮೃತಾಪುರ : (ಚಿಕ್ಕಮಗಳೂರು ಜಿ; ತರೀಕೆರೆ ತಾ; ಜನ: 621) ಹೋಬಳಿ ಕೇಂದ್ರವಾದ ಅಮೃತಾಪುರವು ಬೆಂಗಳೂರಿನಿಂದ 247 ಕಿಮೀ ದೂರದಲ್ಲಿದೆ. ಹೊಯ್ಸಳ ಅರಸನಾದ ಇಮ್ಮಡಿ ಬಲ್ಲಾಳನ ದಂಡನಾಯಕನಾದ ಅಮೃತೇಶ್ವರನಿಂದಾಗಿ ಊರಿಗೆ ಈ ಹೆಸರು ಬಂದಿದೆ. ಈತ ಕಟ್ಟಿಸಿದ ಅಮೃತೇಶ್ವರಾಲಯವು ಅಮೋಘವಾಗಿದ್ದು, ನಕ್ಷತ್ರಾಕಾರದ ತಲವಿನ್ಯಾಸದ ಮೇಲೆ ರಚಿತವಾದ ಹೊಯ್ಸಳ ಶೈಲಿಯ ಈ ದೇಗುಲದಲ್ಲಿ ಅಲಂಕಾರಯುತವಾಗಿ ಕೆತ್ತಿದ ದ್ವಾರಬಂಧ ಹಾಗೂ ಇತರ ಶಿಲ್ಪಗಳಿವೆ. ನವರಂಗ ಮಂಟಪದಲ್ಲಿ ಗಣಪತಿ, ಸರಸ್ವತಿ, ಸಪ್ತಮಾತೃಕೆ, ಮುಂತಾದ ಬಿಡಿ ಶಿಲ್ಪಗಳನ್ನಿಡಲಾಗಿದೆ. ಇವುಗಳಲ್ಲಿ ಸರಸ್ವತಿ ವಿಗ್ರಹ ಉಲ್ಲೇಖನೀಯವಾದುದು. ಇಲ್ಲಿಯ ಹಲವು ಶಿಲ್ಪಗಳ ಮೇಲೆ ಮಲ್ಲಿತಮ್ಮ, ಪದುಮಣ್ಣ, ಬಾಳುಗ, ಮಲಯ, ಮುಂತಾದವರ ಹೆಸರುಗಳಿವೆ. ಇಲ್ಲಿ ದೊರಕುವ ಹತ್ತು ಶಾಸನಗಳಲ್ಲಿ ಕ್ರಿ.ಶ. 1197ರ ಶಿಲಾ ಶಾಸನವು ಪ್ರಾಚೀನವಾದುದು ಮತ್ತು ಇದರಲ್ಲಿ ದೇಗುಲ ನಿರ್ಮಾಣದ ವಿವರ ಹಾಗೂ ಇಮ್ಮಡಿ ವೀರಬಲ್ಲಾಳ ನೀಡಿದ ದಾನಗಳ ಬಗೆಗೆ ಉಲ್ಲೇಖವಿದೆ. ಈ ಖ್ಯಾತ ಶಾಸನದ ಕರ್ತೃ ಕವಿ ಜನ್ನ ಎಂಬುದೂ ಗಮನಾರ್ಹ.

ಅರಕಲಗೂಡು : (ಹಾಸನ ಜಿ; ತಾ. ಕೇ; ಜನ: 11,069) ಮೂಲತಃ ಇದನ್ನು ಅರ್ಕಪುರಿಯೆಂದು ಕರೆಯಲಾಗಿದ್ದು, ಹಾಸನದಿಂದ 30 ಕಿಮೀ ಹಾಗೂ ಬೆಂಗಳೂರಿಂದ 195 ಕಿಮೀ ದೂರದಲ್ಲಿದೆ. ಈ ಸ್ಥಳನಾಮ ಅರ್ಕ (ಸೂರ್ಯ) ನಿಂದ ಉತ್ಪತ್ತಿಯಾಗಿದೆ. ಗೌತಮ ಋಷಿ ಇಲ್ಲಿ ಸೂರ್ಯೋಪಾಸನೆ ಮಾಡಿ ಅರ್ಕೇಶ್ವರ ದೇವರನ್ನು ಸ್ಥಾಪಿಸಿದನೆಂದು ಹೇಳುತ್ತಾರೆ. ಇದೇ ಇಲ್ಲಿಯ ಅರ್ಕೇಶ್ವರಾಲಯದ ಪ್ರಧಾನ ದೇವತೆ. ಐಗೂರು (ಬಲಂ) ಪಾಳೆಯಗಾರರಲ್ಲಿ ಗಣ್ಯನಾದ ಕೃಷ್ಣಪ್ಪ ನಾಯಕನು 1560ರಲ್ಲಿ ಈಗಿನ ಅರಕಲಗೂಡು ಪಟ್ಟಣವನ್ನು ನಿರ್ಮಿಸಿದನು. 1647ರಲ್ಲಿ ಕಂಠೀರವ ನರಸರಾಜ ಒಡೆಯರು ಇದನ್ನು ಆಕ್ರಮಿಸಿದರು. ನಂತರ ಕೆಳದಿ ಶಿವಪ್ಪನಾಯಕನೂ ಅಂತಿಮದಲ್ಲಿ ಮೈಸೂರಿನ ಚಿಕ್ಕದೇವರಾಯನೂ ವಶಪಡಿಸಿಕೊಂಡನು. 1924ರಲ್ಲಿ ಇಲ್ಲಿಯ ಪುರಸಭೆ ಸ್ಥಾಪನೆಯಾಯಿತು. **ಕೊಣನೂರು** (ಜನ: 6,931) ಪುರಸಭೆಯನ್ನು ಹೊಂದಿರುವುದಲ್ಲದೆ, ಹೋಬಳಿ ಕೇಂದ್ರವೂ ಆಗಿದೆ. ಇದನ್ನು ಹಿಂದೆ ಕೊಳಲೂರು ಎಂದು ಕರೆಯುತ್ತಿದ್ದರು. ಇದು ಅರಕಲಗೂಡಿನಿಂದ ಸುಮಾರು 24 ಕಿಮೀ ದೂರದಲ್ಲಿದ್ದು ಕಾವೇರಿಯ ಎಡದಂಡೆಯ ಮೇಲಿದೆ. ಇಲ್ಲಿಯ ಕೊಳಲ ಗೋಪಾಲಸ್ವಾಮಿ ಗುಡಿ ಸೊಗಸಾಗಿದೆ. **ರಾಮನಾಥಪುರ :** (ಜನ: 1,155) ಅರಕಲಗೂಡಿನಿಂದ ಸುಮಾರು 19 ಕಿಮೀ ದೂರದಲ್ಲಿದ್ದು, ಇದೊಂದು ಹೋಬಳಿ ಕೇಂದ್ರವಾಗಿದೆ. ಕಾವೇರಿಯ ಎಡದಂಡೆಯ ಮೇಲಿರುವ ಈ ಊರಿನ ಸುತ್ತಮುತ್ತಲಿನ ಪ್ರಾಕೃತಿಕ ಸನ್ನಿವೇಶ ಮನೋಹರವಾಗಿದೆ. ಇದೊಂದು ಯಾತ್ರಾ ಸ್ಥಳವೂ ಆಗಿದ್ದು 'ದಕ್ಷಿಣ ಕಾಶಿ' ಎಂದೇ ಖ್ಯಾತಿ ಪಡೆದಿದೆ. ಇಲ್ಲಿಯ ಸುಬ್ರಹ್ಮಣ್ಯೇಶ್ವರ, ಪಟ್ಟಾಭಿರಾಮ, ಅಗಸ್ತ್ಯೇಶ್ವರ, ಪ್ರಸನ್ನ ರಾಮೇಶ್ವರ, ಆಂಜನೇಯ, ಲಕ್ಷ್ಮೀನರಸಿಂಹ ಹಾಗೂ ದುರ್ಗಾಪರಮೇಶ್ವರಿ ದೇಗುಲಗಳಿವೆ. ಇಲ್ಲಿರುವ ವಹ್ನಿ ಪುಷ್ಕರಣಿಯು ಒಂದು ಪವಿತ್ರ ತೀರ್ಥವೆಂದು ಪರಿಗಣಿತವಾಗಿದ್ದು ಇದರಲ್ಲಿ ದೊಡ್ಡ ಗಾತ್ರದ ಮೀನುಗಳಿಂದ ತುಂಬಿದ್ದು, ಇವನ್ನು ಹಿಡಿಯುವುದನ್ನು ನಿಷೇಧಿಸಲಾಗಿದೆ. **ಸೋಮನಾಥಪುರ :** (ಜನ: 560) ಅರಕಲಗೂಡಿನಿಂದ ಸುಮಾರು 25 ಕಿಮೀ ದೂರದಲ್ಲಿದೆ. ಇದರ ಉತ್ತರಕ್ಕೆ, ಪಾಂಡುಗುತ್ತಿ ಎಂದು ಸ್ಥಳೀಯವಾಗಿ ಕರೆಯಲಾದ ಹಲವು ಮಣ್ಣು ದಿಬ್ಬಗಳಿದ್ದು ಇವು ಪ್ರಾಗೈತಿಹಾಸಿಕ ಅವಶೇಷಗಳಾಗಿರಬಹುದಾಗಿದೆ.

ಅರಸೀಕೆರೆ : (ಹಾಸನ ಜಿ ; ತಾ. ಕೇ ; ಜನ : 24,155) ಹಾಸನದಿಂದ ಸುಮಾರು 41 ಕಿಮೀ ಬೆಂಗಳೂರಿನಿಂದ 176 ಕಿಮೀ ದೂರದಲ್ಲಿದ್ದು, ಬೆಂಗಳೂರು ಮೀರಜ್ ರೈಲು ಮಾರ್ಗದಲ್ಲಿ ಹಾಗೂ ಬೆಂಗಳೂರು–ಹೊನ್ನಾವರ ಹೆದ್ದಾರಿಯಲ್ಲಿದೆ. ಅರಸೀಕೆರೆಗೆ ಪ್ರಾಚೀನ ಕಾಲದಲ್ಲಿ ಉದ್ಭವ ಸರ್ವಜ್ಞ ವಿಜಯ ಹಾಗೂ ಬಲ್ಲಾಳಪುರ ಎಂದು ಕರೆಯಲಾಗಿತ್ತು. ವಿಜಯನಗರ ಅರಸರ ಕಾಲದಲ್ಲಿ ಇದು ಚನ್ನಪಟ್ಟಣದ ಜಗದೇವರಾಯನ ಆಡಳಿತದ ಹತೋಟಿಯಲ್ಲಿತ್ತು. ಅನಂತರ ತರೀಕೆರೆಯ ತಿಮ್ಮಪ್ಪನಾಯಕನ ಕೈಗೆ ಬಂತು. ಕೊನೆಗೆ ಇಕ್ಕೇರಿ ಶಿವಪ್ಪ ನಾಯಕನ ಆಳ್ವಿಕೆಗೆ ಬಂತು. 1690ರಲ್ಲಿ ಮೈಸೂರು ಒಡೆಯರು ಇಕ್ಕೇರಿ ನಾಯಕರಿಂದ ಇದನ್ನು ಪಡೆದುಕೊಂಡರು. ಮೈಸೂರು ಒಡೆಯರ ಕಾಲದಲ್ಲಿ ಮರಾಠರ ದಾಳಿಗೆ ತುತ್ತಾಗಿ ಇದು ವಿಶೇಷವಾಗಿ ಹಾನಿಗೊಳಗಾಯಿತು. ಅನಂತರ ಮೈಸೂರು ಒಡೆಯರು ತಾವು ಸಲ್ಲಿಸಬೇಕಾದ ಪೊಗದಿಗೆ ಒತ್ತೆಯಾಗಿ ಮರಾಠರಿಗೆ ಇದನ್ನು ಒಪ್ಪಿಸಿದ್ದರು. ಇಲ್ಲಿಯ ಕಲಮೇಶ್ವರ ದೇವಾಲಯವು 1220ರಲ್ಲಿ ಹೊಯ್ಸಳ ವಾಸ್ತುಶೈಲಿಯಲ್ಲಿ ನಿರ್ಮಿತವಾಯಿತು. ಪೂರ್ವಾಭಿಮುಖವಾಗಿರುವ ಈ ದೇಗುಲವನ್ನು ಕತ್ತಮೇಶ್ವರ, ಚಂದ್ರಮೌಳೀಶ್ವರ ಎಂದೂ ಕರೆಯುತ್ತಾರೆ. ಇದರಲ್ಲಿ ಒಂದು ಗರ್ಭಗೃಹ, ತೆರೆದ ಅಂತರಾಳ, ತೆರೆದ ನವರಂಗ ಮತ್ತು ಆಯತಾಕಾರದ ಒಳಕೋಣೆ, ವೃತ್ತಾಕಾರದ ಮುಖಮಂಟಪಗಳಿವೆ. ಹಾಲುಬಕ್ಕಲು ದೇವಸ್ಥಾನದಲ್ಲಿ ಒಂದು ಗರ್ಭಗೃಹ, ತೆರೆದ ಅಂತರಾಳ, ಸ್ತಂಭಾಂಕಣಗಳಿವೆ. ಇಲ್ಲಿರುವ ಸಹಸ್ರಕೂಟ ಜಿನಾಲಯವು 1220ರಲ್ಲಿ ನಿರ್ಮಿತವಾದ ಒಂದು ಹೊಯ್ಸಳ ವಾಸ್ತುಕೃತಿಯಾಗಿದ್ದು ಇದನ್ನು ಇಮ್ಮಡಿ ಬಲ್ಲಾಳನ ಮಂತ್ರಿಯಾದ, 'ವಸುಧೈಕ ಬಾಂಧವ' ನೆಂದು ಬಿರುದು ಪಡೆದ ರೇಚರಸನು ಕಟ್ಟಿಸಿದನು. ಇಲ್ಲಿಯ ಸಾಯಿನಾಥ ಮತ್ತು ಗಣಪತಿ ದೇಗುಲಗಳು ಆಧುನಿಕ ಕಾಲದವು. ಅರಸೀಕೆರೆ ಬಳಿಯಿರುವ ಕಸ್ತೂರಬಾ ಗ್ರಾಮದಲ್ಲಿ, ಕರ್ನಾಟಕ ರಾಜ್ಯದ ಒಂದು ವಿಭಾಗೀಯ ಸಂಸ್ಥೆಯಾಗಿ ಕಸ್ತೂರಬಾ ಗಾಂಧಿಯವರ ರಾಷ್ಟ್ರೀಯ ಸ್ಮಾರಕ ಸಂಸ್ಥೆಯಿದೆ. 1882ರಲ್ಲಿ ಸ್ಥಾಪಿತವಾದ ಅರಸೀಕೆರೆ ಪುರಸಭೆಯು ಇಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುತ್ತಿದೆ. ಅರಸೀಕೆರೆಯಿಂದ ಸುಮಾರು ಮೂರು ಕಿಮೀ ಅಂತರದಲ್ಲಿ ಮಾಲೆಕಲ್ ತಿರುಪತಿಯಲ್ಲಿ ವೆಂಕಟರಮಣ ಹಾಗೂ ಗೋವಿಂದ ರಾಜರ ದೇವಾಲಯಗಳಿದ್ದು ಅಲ್ಲಿಗೆ ನಿತ್ಯವೂ ಯಾತ್ರಾರ್ಥಿಗಳು ದರ್ಶನಕ್ಕಾಗಿ ಬರುತ್ತಾರೆ. ಹಿರೇಕಲ್ ಬೆಟ್ಟದ ಮೇಲಿರುವ ನಾಗಪುರಿ ಕೋಟೆಯು ಅರಸೀಕೆರೆಯಿಂದ ಉತ್ತರಕ್ಕೆ 11 ಕಿಮೀ ದೂರದಲ್ಲಿದ್ದು, ಇದನ್ನು ಹೈದರ್ ಅಲಿ ಕಟ್ಟಿಸಿದನೆಂದು ಹೇಳುತ್ತಾರೆ. ಈ ಕೋಟೆ ಮೇಲಿಂದ ಕಾಣಸಿಗುವ ಸುತ್ತಮುತ್ತಲಿನ ಕಾಡು, ಗುಡ್ಡ, ನದಿ ನಾಲೆಗಳಿಂದ ಕೂಡಿದ ನಿಸರ್ಗ ಸೌಂದರ್ಯದ ನೋಟ ಭವ್ಯವಾಗಿದೆ. ಹಾಸನ-ಅರಸೀಕೆರೆಯ ರಸ್ತೆಯಲ್ಲಿರುವ ಹಾರನಹಳ್ಳಿ (ಜನ: 4,147) ಅರಸೀಕೆರೆಯಿಂದ ದಕ್ಷಿಣಕ್ಕೆ ಎಂಟು ಕಿಮೀ ದೂರದಲ್ಲಿದೆ. ಇಲ್ಲಿ ಪ್ರಾಚೀನ ದುರ್ಗದ ಅವಶೇಷಗಳಿದ್ದು ಇದನ್ನು 1070ರಲ್ಲಿ ಸೋಮೇಶ್ವರ ರಾಯನು ಕಟ್ಟಿಸಿದನೆಂದು ಹೇಳಲಾಗಿದೆ. ಇಲ್ಲಿರುವ ನಾಗರ್ತಿಕೆರೆಗೆ ಆತನ ಮಗಳ ಹೆಸರನ್ನಿಡಲಾಗಿದೆ. 13ನೇಯ ಶತಮಾನದಲ್ಲಿ ನಿರ್ಮಿಸಲಾದ ಚೆನ್ನಕೇಶವ ಮತ್ತು ಸೋಮೇಶ್ವರ ದೇವಾಲಯಗಳು ಹೊಯ್ಸಳ ವಾಸ್ತುಶಿಲ್ಪದ

ಉತ್ತಮ ವಾಸ್ತುಕೃತಿಗಳಾಗಿವೆ. ಅರಸೀಕೆರೆಯಿಂದ ಪಶ್ಚಿಮಕ್ಕೆ ಸುಮಾರು 33 ಕಿಮೀ ದೂರದಲ್ಲಿ ಹಾಗೂ ಹಾಸನದಿಂದ ಉತ್ತರಕ್ಕೆ ಸುಮಾರು 35 ಕಿಮೀ ಅಂತರದಲ್ಲಿರುವ ಜಾವಗಲ್ ಎಂಬುದು ದೊಡ್ಡ ಗ್ರಾಮ, (ಜನ: 4,771) ಹಾಗೂ ಹೋಬಳಿ ಕೇಂದ್ರ. ಇಲ್ಲಿಯ ಲಕ್ಷ್ಮೀನರಸಿಂಹಾಲಯ ಹೊಯ್ಸಳ ಶೈಲಿಯ ಒಂದು ಉತ್ತಮ ವಾಸ್ತುಕೃತಿಯಾಗಿದೆ. ಇದನ್ನು 13ನೇಯ ಶತಮಾನದಲ್ಲಿ ನಿರ್ಮಿಸಲಾಯಿತು. ಇಲ್ಲಿರುವ ಗಂಗಾಧರೇಶ್ವರ ಹಾಗೂ ವೀರಭದ್ರ ದೇಗುಲಗಳೂ ಉತ್ತಮ ವಾಸ್ತುಕೃತಿಗಳಾಗಿವೆ. ಬನಶಂಕರಿ ಗುಡಿ ಹಾಗೂ ಚಂದ್ರನಾಥ ಬಸದಿಗಳೂ ಇಲ್ಲಿವೆ.

ಅರಳಗುಪ್ಪೆ: (ತುಮಕೂರು ಜಿ; ತಿಪಟೂರು ತಾ; ಜನ: 1,599) ಕಿಬ್ಬನಹಳ್ಳಿ ಹೋಬಳಿಯ ಒಂದು ಗ್ರಾಮವಾದ ಅರಳಗುಪ್ಪೆ ಬೆಂಗಳೂರು-ಮಿರಜ್ ರೈಲು ಮಾರ್ಗದಲ್ಲಿ, ಬಾಣಸಂದ್ರ ರೈಲು ನಿಲ್ದಾಣದಿಂದ ಸುಮಾರು 6 ಕಿಮೀ ದೂರದಲ್ಲಿದೆ. ತಿಪಟೂರಿನಿಂದ ಸುಮಾರು 18 ಕಿಮೀ ಅಂತರದಲ್ಲಿದೆ. ಇಲ್ಲಿರುವ ಚನ್ನಕೇಶವ ದೇವಾಲಯವು 13ನೇಯ ಶತಮಾನದ ಹೊಯ್ಸಳ ಶೈಲಿಯ ಒಂದು ಸುಂದರ ದೇವಾಲಯ. ಇದರಲ್ಲಿ ಗರ್ಭಗೃಹ ಅಂತರಾಳ ಮತ್ತು ನವರಂಗ ಮಂಟಪಗಳಿವೆ. ಇದರ ದಕ್ಷಿಣ ಗೋಡೆಗೆ ಹೊಂದಿಕೊಂಡಂತೆ ನರಸಿಂಹ ದೇವರ ಗುಡಿಯಿದೆ. ಅರಳಗುಪ್ಪೆ ಕಲ್ಲೇಶ್ವರಾಲಯವು ಸುಮಾರು ಒಂಬತ್ತನೇಯ ಶತಮಾನದ್ದಾಗಿದ್ದು, ನೊಳಂಬ ಶೈಲಿಯಲ್ಲಿ ಕಂಡರಿಸಿದ ನಟರಾಜ ಹಾಗೂ ಅಷ್ಟದಿಕ್ಪಾಲಕರ ಶಿಲ್ಪಗಳು ಗಮನಾರ್ಹವಾಗಿವೆ. ಅಲ್ಲದೆ ಇಲ್ಲಿ ಗಂಗರ ಕಾಲದ ನಾಲ್ಕು ಇಟ್ಟಿಗೆಯ ದೇಗುಲಗಳಿವೆ.

ಅಶೋಕ ಸಿದ್ದಾಪುರ: (ಚಿತ್ರದುರ್ಗ ಜಿ; ಮೊಳಕಾಲ್ಮುರು ತಾ ; ಜನ 2,777) ಚಿತ್ರದುರ್ಗದಿಂದ 93 ಕಿಮೀ ಹಾಗೂ ಬೆಂಗಳೂರಿನಿಂದ 264 ಕಿಮೀ ದೂರದಲ್ಲಿದೆ. ಬ್ರಹ್ಮಗಿರಿ ಬೆಟ್ಟದ ತಡಿಯಲ್ಲಿ ಒಂದು ಜೈನ ಬಸದಿಯಿದೆ. ಇದರ ನೈಋತ್ಯಕ್ಕೆ ಪಗಡೆಸಾಲುಬೆಟ್ಟವೆಂದು ಹೇಳಲಾದ ಬೆಟ್ಟವಿದೆ. ಈ ಗುಡ್ಡದ ಮೇಲೆ ಅಕ್ಕತಂಗಿಯರ ಗುಡಿ ಎಂದು ಕರೆಯಲಾಗುವ ಒಂದು ಶಿವಾಲಯವಿದೆ. ಈ ಗುಡ್ಡದ ನೈಋತ್ಯಕ್ಕಿರುವ ಹೊಲದಲ್ಲಿ ಒಂದು ವೀರಗಲ್ಲು ಬಿದ್ದಿದ್ದು ಇದರಲ್ಲಿ 'ಸಿಡಿತಲೆ' ಶಿಲ್ಪವಿದೆ. ಈ ಸ್ಥಳದಲ್ಲಿ ಇಪ್ಪತ್ತೈದಕ್ಕೂ ಹೆಚ್ಚು ಗುಡಿಗಳಿವೆ. ಕೊತ್ತಲ ತಿಮ್ಮಪ್ಪ (ಇದು ವೆಂಕಟರಮಣ ಬೆಟ್ಟದ ಮೇಲಿದೆ), ಕೇಶವ, ನರಸಿಂಹ, ಸತ್ಯನಾರಾಯಣ, ಆಂಜನೇಯ, ದೇವಮ್ಮನ ಗುಡಿಗಳು ಇವುಗಳಲ್ಲಿ ಪ್ರಮುಖವಾಗಿವೆ. ಅಶೋಕ ಸಿದ್ದಾಪುರದ ಪೂರ್ವಕ್ಕೆ ಅನತಿದೂರದಲ್ಲಿ ಕಾಡಸಿದ್ಧಮಠವೆಂದು ಕರೆಯಲಾದ ಕುರುಬರ ಪುಟ್ಟ ಹಳ್ಳಿಯಿದೆ. ಇದರ ಪಕ್ಕದಲ್ಲಿರುವ ಗ್ರಾಮವನ್ನು ಶಾಸನದಲ್ಲಿ ಹಣೇಯವೆಂದು ಕರೆಯಲಾಗಿದೆ. ಇದೇ ಮುಂದೆ ಸಿದ್ದಾಪುರವೆಂದಾಗಿರಬೇಕು. ಇದರ ಬಳಿಯ ಗುಡ್ಡದ ಮೇಲಿರುವ ಎಮ್ಮೆತಮ್ಮನ ಗುಂಡಿನ ಮೇಲೆ (ಇದನ್ನು 'ಅಕ್ಷರದ ಗುಂಡು' ಎಂದೂ ಕರೆಯುತ್ತಾರೆ) ಅಶೋಕ ಚಕ್ರವರ್ತಿಯ ಧರ್ಮಲಿಪಿಯನ್ನು ಕೆತ್ತಲಾಗಿದೆ. ಇದನ್ನೀಗ ಸರ್ಕಾರದವರು ಸಂರಕ್ಷಿಸಿದ್ದಾರೆ. ಈ ಊರ ಬಳಿಯೇ ಬ್ರಹ್ಮಗಿರಿ ಇದೆ. ಇದು ಪ್ರಾಕ್ತನ ಮಹತ್ವವುಳ್ಳ ಊರಾಗಿದೆ. ಪ್ರಾಚೀನ ಇಸಿಲಾ ಇದ್ದ ಸ್ಥಳವಿದು. ಇಸಿಲಾ ಅಶೋಕನ ಸಾಮ್ರಾಜ್ಯದ ಪ್ರಾಂತೀಯ ರಾಜಧಾನಿಗಳಲ್ಲೊಂದಾಗಿತ್ತು. ಇಲ್ಲಿ ನಡೆಸಿದ ಉತ್ಖನನಗಳಿಂದ ಸೂಕ್ಷ್ಮ ಶಿಲಾಯುಗೀನ ನೆಲೆಯಿದ್ದದ್ದೂ ತಿಳಿದು ಬಂದಿದೆ. ಸಮೀಪದಲ್ಲಿರುವ ರೊಪ್ಪ ಎಂಬ ಗ್ರಾಮದ ಹೆಸರನ್ನಾಧರಿಸಿ ಇಲ್ಲಿಯ ಸಂಸ್ಕೃತಿಯನ್ನು ರೊಪ್ಪ ಸಂಸ್ಕೃತಿ ಎಂದು ಕರೆಯುತ್ತಾರೆ. ಇದು ಕ್ರಿ.ಪೂ. 8000ದಲ್ಲಿದ್ದ ಫ್ರಾನ್ಸಿನ 'ಕ್ಯಾಂಪಿಗ್ನ್ಯಯನ್' ಸಂಸ್ಕೃತಿಗೆ ಹೋಲುತ್ತದೆ. ಅಕ್ಷರದ ಗುಂಡು ಮತ್ತು ಎಮ್ಮೆತಮ್ಮನ ಗುಂಡು ಸ್ಥಳೀಯವಾಗಿ ಹೆಸರಾದ ಬೃಹತ್ ಬಂಡೆಯ ಮೇಲೆ ಕೆತ್ತಲಾದ ಅಶೋಕನ ಶಾಸನಕ್ಕೆ ಈ ಸ್ಥಳ ಪ್ರಸಿದ್ಧವಾಗಿದೆ. ಅಶೋಕನ ಶಾಸನವಲ್ಲದೆ, ಬ್ರಹ್ಮಗಿರಿಯಲ್ಲಿ ತ್ರಿಶಂಕೇಶ್ವರಾಲಯ ಹಾಗೂ ಒಂದು ಮಹಲಿದೆ. ಈ ಮಹಲನ್ನು ಸುಮಾರು ನೂರು ವರ್ಷಗಳ ಹಿಂದೆ ಲಿಂಗಾಯಿತ ಗುರುಗಳೊಬ್ಬರು ನಿರ್ಮಿಸಿದರು. ಬ್ರಹ್ಮಗಿರಿಯ ತ್ರಿಶಂಕೇಶ್ವರ ಗುಡಿಯಲ್ಲಿರುವ ಶಾಸನ ತಿಳಿಸುವಂತೆ, ಬಮ್ಮನಮಂತ್ರಿಯೂ ಭೋಗನೃಪನೂ ಆದ ಬೀಚಣನು ಹಣೇಯ (ಅಶೋಕ ಸಿದ್ಧಾಪುರ) ಹಾಗೂ ನಿಡುಗಲ್ ದುರ್ಗಗಳನ್ನು ನಿರ್ಮಿಸಿದ. ಬ್ರಹ್ಮಗಿರಿ ಸುಮಾರು 2,317 ಅಡಿ ಎತ್ತರದಲ್ಲಿದೆ. ಈಗಿನ ಶೋಧನೆಗಳಿಂದ ಪ್ರಾಗೈತಿಹಾಸಿಕ ಕಾಲದ ಬಂಡೆ ಚಿತ್ರಗಳು ಬೆಳಕಿಗೆ ಬಂದಿವೆ. ಇವುಗಳಲ್ಲಿ ಮನುಷ್ಯ, ಪ್ರಾಣಿ, ಸ್ವಸ್ತಿಕ ಮತ್ತಿತರ ವಿನ್ಯಾಸಗಳೇ ಮುಂತಾದವು ಚಿತ್ರಿತವಾಗಿವೆ. ಇವೆಲ್ಲವುಗಳನ್ನಾಧರಿಸಿ ಬ್ರಹ್ಮಗಿರಿಯು ಒಂದು ಪ್ರಾಚೀನ ಸಾಂಸ್ಕೃತಿಕ ಕೇಂದ್ರವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಸಮುದ್ರಮಟ್ಟದಿಂದ ಸುಮಾರು 3,469 ಅಡಿ ಎತ್ತರದಲ್ಲಿರುವ ಜಟ್ಟಿಂಗ ರಾಮೇಶ್ವರವು ಬ್ರಹ್ಮಗಿರಿಯ ವಾಯುವ್ಯಕ್ಕೆ ಸುಮಾರು ಐದು ಕಿಮೀ ಅಂತರಲ್ಲಿದೆ. ಅಶೋಕನ ಧರ್ಮಲಿಪಿಗಳು ಸಿಕ್ಕಿರುವ ಸ್ಥಳಗಳಲ್ಲಿ ಇದೂ ಒಂದು. ಸ್ಥಳೀಯವಾಗಿ ಇದನ್ನು 'ಬಳೆಗಾರರ ಗುಂಡು' ಎಂದು ಕರೆಯಲಾಗಿದೆ. ಪ್ರಾಕ್ತನ ದೃಷ್ಟಿಯಿಂದ ಇದಕ್ಕೆ ಮಹತ್ವವಿದೆ. ಇಲ್ಲಿಯ ಗುಡ್ಡಸಾಲಿನ ಪಶ್ಚಿಮದ ತುದಿಗೆ ಪ್ರಾಚೀನ ಕಾಲದ ರಾಮೇಶ್ವರಾಲಯವಿದೆ. ಕ್ರಿ.ಶ. 962ರ ಶಾಸನದಲ್ಲಿ ಇದರ ಉಲ್ಲೇಖವಿದೆ. ಮೂಲತಃ ಇಟ್ಟಿಗೆ ಕಟ್ಟಡವಾಗಿದ್ದು, ಹತ್ತನೇಯ ಶತಮಾನದಲ್ಲಿ ಇದನ್ನು ಶಿಲಾ ಕಟ್ಟಡವಾಗಿ ರೂಪಾಂತರಿಸಲಾಯಿತು. ರಾವಣನು ಜಟಾಯುವನ್ನು ಈ ಸ್ಥಳದಲ್ಲಿಯೇ ಸಂಹರಿಸಿದ ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ; ಪಕ್ಕದ ಗುಡ್ಡದಲ್ಲಿ ಜಟಾಯು ಗುಡಿಯಿದೆ. ಜಟ್ಟಿಂಗ ರಾಮೇಶ್ವರಗುಡ್ಡದ ಮೆಟ್ಟಿಲುಗಳ ಬುಡದಲ್ಲಿ ಭಗ್ನವಾದ ದ್ವಿಭುಜ ಗಣೇಶನ ಗುಡಿಯಿದೆ. ಇಲ್ಲಿರುವ ಭೋಗೇಶ್ವರ, ಸೂರ್ಯ ಮತ್ತು ವೀರಭದ್ರ ಗುಡಿಗಳಲ್ಲೂ ಶಾಸನಗಳಿವೆ.

ಆಗುಂಬೆ (ಶಿವಮೊಗ್ಗ ಜಿ; ತೀರ್ಥಹಳ್ಳಿ ತಾ; ಜನ: 1,974). ತಲ್ಲೂರು ಗ್ರಾಮದ ಒಂದು ಉಪ ಹಳ್ಳಿಯಾಗಿದ್ದು, ತೀರ್ಥಹಳ್ಳಿಯಿಂದ ಸುಮಾರು 32 ಕಿಮೀ ಅಂತರದಲ್ಲಿದೆ. ಇದು ಆಗುಂಬೆ ಹೋಬಳಿಯ ಕೇಂದ್ರವೂ ಹೌದು. ಘಟ್ಟದ ಮೇಲ್ತುದಿಯಲ್ಲಿರುವ ಆಗುಂಬೆಯಿಂದ ಪಶ್ಚಿಮ ಸಮುದ್ರವು ನೇರವಾಗಿ 60 ಕಿಮೀ ದೂರದಲ್ಲಿದೆ. ರಾಜ್ಯದಲ್ಲೇ ಇದು ಅತ್ಯಧಿಕ ನೈಋತ್ಯ ಮಾರುತದ ಮಳೆ ಬೀಳುವ (ಜೂನ್‌ನಿಂದ ಅಕ್ಟೋಬರ್ ತಿಂಗಳವರೆಗೆ) ಪ್ರದೇಶವಾಗಿದೆ. ಇದರಿಂದಾಗಿ ಆಗುಂಬೆಯ ಸುತ್ತಮುತ್ತ ದಟ್ಟಾರಣ್ಯ ಬೆಳೆದಿದೆ ಮತ್ತು ಭತ್ತ, ಅಡಿಕೆ ತೋಟಗಳ ವ್ಯವಸಾಯಕ್ಕೆ ತುಂಬ ಅನುಕೂಲವಾಗಿದೆ. ಸಮುದ್ರಮಟ್ಟದಿಂದ 826 ಮೀ ಎತ್ತರದಲ್ಲಿರುವ ಆಗುಂಬೆಯಿಂದ ನೋಡಬಹುದಾದ ಸೂರ್ಯಾಸ್ತಮಾನ ಒಂದು ರಮಣೀಯ ದೃಶ್ಯವಾಗಿದ್ದು, ಇದನ್ನು ವೀಕ್ಷಿಸಲು ವಿಶೇಷವಾಗಿ ನವೆಂಬರ್‌ನಿಂದ ಜನವರಿವರೆಗೆ ಹಲವು ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ವಿಜಯನಗರ ಅರಸರ ಕಾಲದ ಗೋಪಾಲಕೃಷ್ಣ ಮಂದಿರ ಇಲ್ಲಿದೆ; ಕೇಂದ್ರ ಸರ್ಕಾರದ ಪವನಶಾಸ್ತ್ರ ಇಲಾಖೆಯು ಇಲ್ಲಿ ಒಂದು ಹವಾಮಾನ ವೀಕ್ಷಣಾಲಯವನ್ನು ನಡೆಸುತ್ತಿದೆ.

ಆದಿಚುಂಚನಗಿರಿ (ಮಂಡ್ಯ ಜಿ; ನಾಗಮಂಗಲ ತಾ; ಜನ: 876). ಇದೊಂದು ಪ್ರಸಿದ್ಧ ಯಾತ್ರಾಸ್ಥಳ ಮತ್ತು ನಿಸರ್ಗ ಸೌಂದರ್ಯದ ತಾಣ. ನಾಗಮಂಗಲದಿಂದ ಸುಮಾರು 21 ಕಿಮೀ ಮಂಡ್ಯದಿಂದ 66 ಕಿಮೀ ದೂರದಲ್ಲಿದೆ. ಚುಂಚನಹಳ್ಳಿಯ ಬಳಿ, ಬೆಟ್ಟದ ಸಾಲುಗಳ ಮಧ್ಯೆ ಈ ಆದಿಚುಂಚನಗಿರಿ ಇದೆ. ಒಂದು ಕಾಲದಲ್ಲಿ ಇದೊಂದು ನಾಥಪಂಥದ ತಾಣವಾಗಿತ್ತು. ಇಲ್ಲಿ ಸ್ಥಾಪಿತವಾದ ಮಠ ಈ ಸಂಪ್ರದಾಯದ ಆದಿಪೀಠವಾಗಿತ್ತೆಂದು ಹೇಳಲಾಗಿದೆ. ಇದನ್ನು ಜೋಗಿಮಠವೆಂದೂ ಕರೆಯುತ್ತಾರೆ. ಭೈರವೇಶ್ವರಾಲಯ ಇಲ್ಲಿಯ ಪ್ರಮುಖ ಗುಡಿಯಾಗಿದೆ. ಸಿದ್ಧೇಶ್ವರ ಹಾಗೂ ಸೋಮೇಶ್ವರ ಎಂಬೆರಡು ಗವಿ ದೇಗುಲಗಳೂ ಇಲ್ಲಿವೆ. ಅಲ್ಲದೆ ಗಂಗಾಧರೇಶ್ವರ, ಚಂದ್ರಮೌಳೀಶ್ವರ, ಮತ್ತಿತರ ಗುಡಿಗಳೂ, ಮಂಟಪಗಳೂ, ಸ್ವಾಮಿಗಳ ಗದ್ದುಗೆಗಳೂ ಈ ಸ್ಥಳದ ಪಾವಿತ್ರ್ಯವನ್ನು ಹೆಚ್ಚಿಸಿವೆ. ಒಕ್ಕಲಿಗ ಜನಾಂಗದವರ ಒಂದು ಪ್ರಮುಖ ಧಾರ್ಮಿಕ ಸ್ಥಳ ಇದಾಗಿದ್ದು, ಅವರ ಮಠವೂ ಇಲ್ಲಿದೆ. ಈ ಮಠ ನಡೆಸುತ್ತಿರುವ ಆದಿಚುಂಚನಗಿರಿ ಶಿಕ್ಷಣ ಮಂಡಳಿಯು ಹಲವೆಡೆಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನೂ, ವಿದ್ಯಾರ್ಥಿನಿಲಯಗಳನ್ನೂ ಸ್ಥಾಪಿಸಿದೆ. ಆದಿಚುಂಚನಗಿರಿಯ ಸುತ್ತಮುತ್ತ ಕೆರೆ, ಹೊಳೆಗಳಿವೆ. ಇಲ್ಲಿಯ ಅರಣ್ಯದಲ್ಲಿ ರಾಷ್ಟ್ರೀಯ ಮಯೂರಧಾಮವನ್ನು ಈಚೆಗೆ ಆರಂಭಿಸಲಾಗಿದೆ. ನವಿಲು ಮತ್ತು ಇತರ ಕಾಡುಪಕ್ಷಿಗಳು ಇಲ್ಲಿ ತುಂಬಾ ಇವೆ. ಆದಿಚುಂಚನಗಿರಿಯಿಂದ ಸುಮಾರು ಐದು ಕಿಮೀ ದೂರದಲ್ಲಿರುವ ಬೆಳ್ಳೂರಿನಲ್ಲಿ ಪ್ರಸಿದ್ಧವಾದ ಮೈಲಾರ ಗುಡಿಯಿದೆ.

ಆನೇಕಲ್ : (ಬೆಂಗಳೂರು ಜಿ; ತಾ. ಕೇ; ಜನ: 19,227) ಬೆಂಗಳೂರಿಂದ 35 ಕಿಮೀ ದೂರದಲ್ಲಿರುವ ಆನೇಕಲ್ ಪುರಸಭೆಯನ್ನು ಹೊಂದಿರುವ ಪಟ್ಟಣವಾಗಿದೆ. ಇದರ ಮೂಲದ ಬಗೆಗೆ ಸ್ಪಷ್ಟವಾದ ಮಾಹಿತಿಯಿಲ್ಲವಾದರೂ ಕನ್ನಡದ ಆಲಿಕಲ್ಲಿನಿಂದ ಆನೇಕಲ್ ಎಂದಾಗಿರಬಹುದು. ಇದು ಸುಗಟೂರು ಮನೆತನದ ಚಿಕ್ಕತಿಮ್ಮೇಗೌಡನಿಂದ ಸುಮಾರು ಕ್ರಿ. ಶ. 1603 ರಲ್ಲಿ ಸ್ಥಾಪಿತವಾಯಿತು. ವಿಜಾಪುರದ ದಂಡನಾಯಕನು ಈ ತಿಮ್ಮೇಗೌಡನ ಹೊಸಕೋಟೆಯ ಪಿತ್ರಾರ್ಜಿತ ಆಸ್ತಿಯನ್ನು ಸೆಳೆದುಕೊಂಡ ಮೇಲೆ ಈ ಆನೇಕಲ್ಲನ್ನು ಆತನಿಗೆ ಬಿಟ್ಟುಕೊಟ್ಟ. ಅನಂತರ ಅಲ್ಲೊಂದು ಕೋಟೆ, ದೇಗುಲ ಮತ್ತು ದೊಡ್ಡಕೆರೆಯನ್ನು ಆತ ನಿರ್ಮಿಸಿದ. ಈತನ ಮೊಮ್ಮಗನಾದ ದೊಡ್ಡತಿಮ್ಮೇಗೌಡನ ಕಾಲದಲ್ಲಿ ಆನೇಕಲ್ ಮೈಸೂರು ಒಡೆತನಕ್ಕೆ ಸೇರಿತು. ಇಲ್ಲಿಯ ಮುಖಂಡ ಮೈಸೂರು ಒಡೆಯರಿಗೆ ಕಪ್ಪಕಾಣಿಕೆ ಕೊಡುವುದನ್ನು ಮುಂದುವರಿಸಿದ. ಕೊನೆಗೆ ಹೈದರ್ ಅಲಿಯು ಆನೇಕಲ್ ಪಾಳೆಗಾರನ ಆಡಳಿತವನ್ನು ಬದಿಗೊತ್ತಿ ಆನೇಕಲ್ಲನ್ನು ಮೈಸೂರು ಆಡಳಿತಕ್ಕೆ ಸೇರಿಸಿದ. ಆನೇಕಲ್ಲಿನಲ್ಲಿ ಹಲವು ಪುರಾತನ ದೇಗುಲಗಳಿವೆ. ಚನ್ನಕೇಶವ ದೇವಾಲಯವು ಪ್ರಾಚೀನವಾದುದಾಗಿದ್ದು ಶ್ರೀ ರಾಮಾನುಜಾಚಾರ್ಯರ ಗುಡಿಯೂ ಇಲ್ಲಿದೆ. ಇನ್ನೊಂದು ಹಳೆಯ ದೇವಾಲಯವಾದ ಅಮೃತಮಲ್ಲಿಕಾರ್ಜುನ ಗುಡಿಯೆದುರು ಸುಮಾರು ಮೂವತ್ತಡಿ ಎತ್ತರದ ದೀಪಸ್ತಂಭವಿದೆ. ಧರ್ಮರಾಯನ ಗುಡಿ, ಚೌಡೇಶ್ವರಿ, ಗಂಗಮ್ಮ, ಕಾಳಿಕಾಂಬಾ, ನಗರೇಶ್ವರ, ಕನ್ನಿಕಾಪರಮೇಶ್ವರಿ ಹಾಗೂ ಕೋದಂಡರಾಮ ಮುಂತಾದವು ಇಲ್ಲಿರುವ ಇತರ ದೇಗುಲಗಳಾಗಿವೆ. ಈ ಪಟ್ಟಣದ ನಾಲ್ಕು ಪ್ರವೇಶದ್ವಾರಗಳಲ್ಲಿ ನಾಲ್ಕು ಆಂಜನೇಯ ಗುಡಿಗಳಿವೆ. ಆನೇಕಲ್‌ನಲ್ಲಿ ರಾಗಿ ಮತ್ತು ರೇಷ್ಮೆ ಕೃಷಿ ಹೆಸರುವಾಸಿಯಾಗಿದೆ. ರೇಷ್ಮೆ ನೇಯ್ಗೆಗೆ ಇದು ಪ್ರಸಿದ್ಧಿ ಪಡೆದಿದೆ. ಬೊಮ್ಮಸಂದ್ರ ಕೈಗಾರಿಕಾ ಪ್ರದೇಶವು ಆನೇಕಲ್ಲಿನ ವಾಯುವ್ಯಕ್ಕೆ ಹನ್ನೆರಡು ಕಿಮೀ ದೂರದಲ್ಲಿದೆ. ಆನೇಕಲ್ಲಿನಿಂದ 5 ಕಿಮೀ ಮತ್ತು ಬೆಂಗಳೂರಿಂದ 40 ಕಿಮೀ ದೂರದಲ್ಲಿರುವ ಮುತ್ಯಾಲ ಮಡುವನ್ನು ಮುತ್ತುಗಳ ಕಣಿವೆ ಎಂದೂ ಕರೆಯಲಾಗುತ್ತಿದ್ದು, ಒಂದು ಸುಂದರ ಪ್ರವಾಸಿ ತಾಣವಾಗಿದೆ. ಸುಮಾರು 280 ಅಡಿ ಎತ್ತರದಿಂದ ಧುಮುಕುವ ಜಲಪಾತವು ಇಲ್ಲಿಯ ಪ್ರಧಾನ ಆಕರ್ಷಣೆಯಾಗಿದೆ. ಇದರ ಸುತ್ತಮುತ್ತ ನಿಸರ್ಗ ಸೌಂದರ್ಯ ತುಂಬಿದೆ. ಇಲ್ಲಿ ಪ್ರಖರವಾದ ಸೂರ್ಯ ಪ್ರಕಾಶದಲ್ಲಿ ಜಲಪಾತದ ನೀರ ಹನಿಗಳು ಮುತ್ತುಗಳಂತೆ ತೋರುತ್ತವೆ. ಈ ಜಲಪಾತದ ಬುಡದಲ್ಲಿ ಕಾಶಿ ವಿಶ್ವೇಶ್ವರನೆಂದು ಹೇಳಲಾದ ಒಂದು ಪುಟ್ಟ ಶಿವಾಲಯವಿದೆ.

ಆನೇಗೊಂದಿ : (ರಾಯಚೂರು ಜಿ; ಗಂಗಾವತಿ ತಾ; ಜನ: 3,023) ಐತಿಹಾಸಿಕ ಸ್ಥಳವಾದ ಆನೇಗೊಂದಿ ಗಂಗಾವತಿಯಿಂದ 15 ಕಿಮೀ ದೂರದಲ್ಲಿ, ತುಂಗಭದ್ರೆಯ ಉತ್ತರ ದಂಡೆಯ ಮೇಲಿದೆ. ರಾಮಾಯಣದ ವಾಲಿ ಸುಗ್ರೀವರ ಸಾಮ್ರಾಜ್ಯ

ವಾಗಿದ್ದ ಕಿಷ್ಕಿಂಧೆಯೇ ಇದಾಗಿತ್ತೆಂದು ಗುರುತಿಸಲಾಗಿದೆ. ಹಸ್ತಿನಾವತಿ, ಕುಂಜರಕೋಣ ಎಂಬಿವು ಇದರ ಇತರ ಹೆಸರುಗಳು. ವಿಜಯನಗರ ಸಾಮ್ರಾಜ್ಯಸ್ಥಾಪನೆಗೂ ಪೂರ್ವದಲ್ಲಿ ಕುಮಾರ ರಾಮನ ತಂದೆಯಾದ ಕಂಪಿಲರಾಯನು ಇದನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅನಂತರ ಇದು ರಾಜಧಾನಿಯಾದ ಭವ್ಯ ವಿಜಯನಗರದ ಒಂದು ಭಾಗವಾಗಿತ್ತು. ಹಂಪೆಗೆ ಸೇತುವೆಯಿಂದ ಸೇರಿದ ಈ ಸ್ಥಳವನ್ನು ಪಾಯಿಸ್ 'ಸೇನಗೊಂದಿಂ' ಎಂದು ಕರೆದಿದ್ದಾನೆ. ಇಲ್ಲಿ ಹಲವು ಮಾಧ್ವಯತಿಗಳಿದ್ದರು. ಆನೇಗೊಂದಿಯ ಬಳಿ ಹರಿಯುವ ತುಂಗಭದ್ರಾ ನದಿಯ ನಡುಗಡ್ಡೆಯಲ್ಲಿ ಈ ಯತಿಗಳ 'ನವವೃಂದಾವನ'ಗಳಿವೆ. ಇವುಗಳಲ್ಲಿ ಮಧ್ವಾಚಾರ್ಯರ ನೇರ ಶಿಷ್ಯರಾಗಿದ್ದ ಪದ್ಮನಾಭತೀರ್ಥ ಹಾಗೂ ವ್ಯಾಸತೀರ್ಥ ಮತ್ತು ಸುಧೀಂದ್ರತೀರ್ಥರ ಸಮಾಧಿಗಳು ಪ್ರಮುಖವಾಗಿವೆ. ವಿಜಯನಗರ ಸಾಮ್ರಾಜ್ಯ ಅಳಿದ ನಂತರ ಇದು ವಿಜಾಪುರ ಷಾಹಿಗಳ ಹಾಗೂ ಅನಂತರದಲ್ಲಿ ಮುಘಲರ ವಶವಾಯಿತು. ವಿಜಯನಗರದ ಅರವೀಡು ವಂಶದ ರಾಮರಾಯನ ವಂಶಸ್ಥರೆಂದು ಹೇಳಿಕೊಳ್ಳುವ ಪಾಳೆಯಗಾರರ ಮನೆತನವೊಂದು ಇಲ್ಲಿ ಆಳಿದ್ದುಂಟು. ಇವರು ನಂತರದಲ್ಲಿ ನಿಜಾಮನ ಸಾಮಂತರಾದರು. 1776ರಲ್ಲಿ ಟಿಪ್ಪು ಸುಲ್ತಾನನು ಈ ಪ್ರದೇಶವನ್ನು ಗೆದ್ದು ಆನೆಗೊಂದಿ ಮತ್ತು ನೆರೆ ಪ್ರದೇಶಗಳನ್ನು ಹಾಳುಗೆಡವಿದ. 1949ರವರೆಗೂ ಆನೆಗೊಂದಿ ನಿಜಾಮನ ಕೈಕೆಳಗಿನ ಒಂದು ಜಹಗೀರಿಯಾಗಿತ್ತು. ವಿಜಯನಗರದ ಕಾಲದ ಕೆಲವು ಅಮೋಘವಾದ ಅವಶೇಷಗಳನ್ನು ಇಲ್ಲಿ ಗುರುತಿಸಬಹುದು. ಇಲ್ಲಿಯ ಹುಚ್ಚಪ್ಪಯ್ಯನ ಮಠದಲ್ಲಿ ಕೆಲವು ಪುರಾತನ ಚಿತ್ರಗಳಿವೆ. ಶೇಷಶಾಯಿ ವಿಷ್ಣುವಿನ ಗುಹಾಲಯವೊಂದಿದೆ. ಗಗನಮಹಲ್, ರಂಗನಾಥ ದೇಗುಲ, ಭಗ್ನ ಅರಮನೆ ಮುಂತಾದವು ಇಲ್ಲಿಯ ಇತರ ಗಣನೀಯ ವಾಸ್ತುಕೃತಿಗಳು. 16ನೇಯ ಶತಮಾನದಲ್ಲಿ ಆನೇಗೊಂದಿಯ ಕೋಟೆಯನ್ನು ಪುನರ್ರಚಿಸಲಾಯಿತು. ಇದಕ್ಕೆ ಎರಡು ಗೋಡೆ ಮತ್ತು ಕೊತ್ತಲಗಳಿವೆ.

ಆಲೂರು (ಹಾಸನ ಜಿ; ತಾ. ಕೇ; ಜನ: 4,176). ಹಾಸನದಿಂದ ಸುಮಾರು 12.3 ಕಿಮೀ ಹಾಗೂ ಬೆಂಗಳೂರಿನಿಂದ 192 ಕಿಮೀ ದೂರದಲ್ಲಿರುವ ಆಲೂರು ಒಂದು ಪುರಸಭಾ ಪಟ್ಟಣವಾಗಿದೆ; ಅಲ್ಲದೆ ಹಾಸನ-ಮಂಗಳೂರು ರೈಲ್ವೇ ಮಾರ್ಗದಲ್ಲಿರುವ ಒಂದು ರೈಲ್ವೇ ನಿಲ್ದಾಣವಾಗಿದೆ. ಆಲೂರಿನಿಂದ ಸುಮಾರು 14 ಕಿಮೀ ದೂರದ ಮಹಾರಾಜನ ದುರ್ಗವು ಮಗನ ತಿಂದ ಮಹಾರಾಜನ ದುರ್ಗ ಎಂದೂ ಪರಿಚಿತವಾಗಿದೆ. ಇದು ಬೆಂಗಳೂರು-ಮಂಗಳೂರು ರೈಲು ಮಾರ್ಗದಲ್ಲಿರುವ ಒಂದು ಬೆಟ್ಟವಾಗಿದ್ದು, ಸಮುದ್ರಮಟ್ಟದಿಂದ ಸುಮಾರು 1,006 ಮೀ ಎತ್ತರದಲ್ಲಿ ಕಡಿದಾದ ಬಂಡೆಯ ಮೇಲೆ ಪ್ರಾಚೀನ ದುರ್ಗದ ಅವಶೇಷಗಳನ್ನೂ ನೋಡಬಹುದು. ಅಷ್ಟಕೋನಾಕಾರದ ಕೋಟೆಯ ಒಳಗೆ ಕೊಳವಿದೆ. ಗುಡ್ಡದ ತುದಿಯಿಂದ ಸುತ್ತಮುತ್ತಣ ಪ್ರದೇಶದ ಸುಂದರ ನೋಟವನ್ನು ಪಡೆಯಬಹುದು. ಈ ಕೋಟೆಯಿಂದ ಹೊರಬರಲು ಕಳ್ಳಮಾರ್ಗವೊಂದಿದೆ. ಇಲ್ಲಿಂದ ದುರ್ಗದ ಹೊರಗೆ ಹೋಗಬಹುದು. ಈ ಗಿರಿದುರ್ಗದ ಬುಡದಲ್ಲಿರುವ ಗೋರಿಯ ಬಳಿ ಎರಡು ಪರ್ಶಿಯನ್ ಶಾಸನಗಳಿವೆ. ಪಾಳ್ಯವು ಆಲೂರು ತಾಲೂಕಿನ ಒಂದು ಗ್ರಾಮ ಹಾಗೂ ಹೋಬಳಿ ಕೇಂದ್ರ. ಬೆಂಗಳೂರು-ಮಂಗಳೂರು ಹೆದ್ದಾರಿಯಲ್ಲಿ ಆಲೂರಿಂದ ಸುಮಾರು ಎಂಟು ಕಿಮೀ ಅಂತರದಲ್ಲಿದೆ. ಇಲ್ಲಿ ಲಕ್ಷ್ಮೀಜನಾರ್ದನ, ರಾಮೇಶ್ವರ, ತ್ರಿಪುರಾಂತಕೇಶ್ವರ ದೇಗುಲಗಳಿದ್ದು, ಅವುಗಳಲ್ಲಿ ಲಕ್ಷ್ಮೀಜನಾರ್ದನಾಲಯ ಹದಿನಾಲ್ಕನೇಯ ಶತಮಾನದ ಆದಿ ಭಾಗದ ದೇವಾಲಯವಾಗಿದೆ. ಇದರ ಪ್ರಧಾನ ವಿಗ್ರಹವು ವೈಶಿಷ್ಟ್ಯಪೂರ್ಣವಾಗಿದ್ದು 11ನೇಯ ಶತಮಾನದ್ದಾಗಿದೆ. ರಾಮೇಶ್ವರಾಲಯವು 19ನೇಯ ಶತಮಾನದ್ದೆಂದು ಹೇಳಬಹುದು. ತ್ರಿಪುರಾಂತಕೇಶ್ವರಾಲಯವು ಒಂದು ಹಳ್ಳಿಮನೆಯಂತೆ ಕಂಡುಬರುತ್ತದೆ. ಇದರಲ್ಲಿ 17ನೇಯ ಶತಮಾನದ ಶಿಲ್ಪಗಳಿವೆ. ಪದ್ಮಾವತಿ ಹೊಳೆಯ ಸಮೀಪದಲ್ಲೇ ಈ ಸ್ಥಳವಿದೆ. ಜಮದಗ್ನಿ ಮುನಿಯ ಆಶ್ರಮಸ್ಥಾನವೆಂದು ಬಣ್ಣಿಸಲಾದ ಈ ಸ್ಥಳದಲ್ಲಿ ಶಂಖತೀರ್ಥ ಹಾಗೂ ಚಕ್ರತೀರ್ಥಗಳಿವೆ. ಇದು ಮಹಾರಾಜನ ದುರ್ಗದ ಪಾಳೆಗಾರನ ಪ್ರಮುಖ ಕೇಂದ್ರವಾಗಿದ್ದು, ಅವನ ಕಾಲದಲ್ಲೇ ಇಲ್ಲಿಯ ಕೋಟೆ ನಿರ್ಮಾಣವಾಯಿತು.

ಆವನಿ (ಕೋಲಾರ ಜಿ; ಮುಳಬಾಗಲು ತಾ.) ಮುಳಬಾಗಲಿಂದ ಸುಮಾರು 13 ಕಿಮೀ ದೂರದಲ್ಲಿರುವ ಈ ಗ್ರಾಮವು ಹೋಬಳಿ ಕೇಂದ್ರವೂ ಹೌದು; ಇಲ್ಲಿಯ ಸ್ಥಳಪುರಾಣದ ಪ್ರಕಾರ ರುದ್ರಭಟ್ಟಾರಕನೆಂಬ ಮುನಿಯು ತಪಸ್ಸು ಮಾಡಿದ ಸ್ಥಳ. ಅಲ್ಲದೆ ಆತ ಇಲ್ಲಿ ಅಹವನ್ಯಯಾಗವನ್ನು ಮಾಡಿದ್ದರಿಂದಾಗಿ ಇದು ಅಹವನಿ ಅಥವಾ ಅವನಿ ಎಂಬ ಹೆಸರನ್ನು ಪಡೆಯಿತು. ಪೂರ್ವದಲ್ಲಿ ಇದನ್ನು ಅವಂತಿಕಾ ಕ್ಷೇತ್ರವೆಂದು ಕರೆಯಲಾಗಿತ್ತು. ಇದು ವಾಲ್ಮೀಕಿಯ ವಾಸಸ್ಥಾನ ಎಂದೂ ಹೇಳಲಾಗಿದೆ. ಇದಕ್ಕೆ ವಾಲ್ಮೀಕಿ ಪರ್ವತವೆಂದೂ ಹೆಸರಿದೆ. ಕ್ರಿ.ಶ. 799ರ ಬಾಣರ ಶಾಸನದಲ್ಲಿ ಈ ಸ್ಥಳವು ಉಲ್ಲೇಖಿತವಾಗಿದೆ. ಅನಂತರದ ಶಾಸನದಲ್ಲಿ ಇದನ್ನು ದಕ್ಷಿಣ ಗಯಾ ಎಂದೂ ಹೆಸರಿಸಲಾಗಿದೆ. ಈ ಊರಲ್ಲಿ ಸುಂದರವಾದ ದೇಗುಲಗಳ ಒಂದು ಸಂಕೀರ್ಣವಿದೆ. ಇವೆಲ್ಲವೂ ಒಂದೇ ಪ್ರಾಂಗಣದಲ್ಲಿದ್ದು, ಒಟ್ಟಾಗಿ ಅವನ್ನು ರಾಮೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಸ್ಥಳಪುರಾಣದ ಪ್ರಕಾರ ಈ ದೇಗುಲಗಳನ್ನು ಶ್ರೀರಾಮ ಹಾಗೂ ಆತನ ಸಹೋದರರು ಕಟ್ಟಿದುದರಿಂದ ಇವನ್ನು ರಾಮೇಶ್ವರ, ಲಕ್ಷ್ಮಣೇಶ್ವರ, ಭರತೇಶ್ವರ ಮತ್ತು ಶತ್ರುಘ್ನೇಶ್ವರ ದೇಗುಲವೆಂದು ಕರೆಯಲಾಗುತ್ತದೆ. ಪಾರ್ವತಿ ಹಾಗೂ ಸುಬ್ರಹ್ಮಣ್ಯ ಮೂರ್ತಿಗಳ ದೇಗುಲಗಳೂ ಇಲ್ಲಿವೆ. ಇಲ್ಲಿಯ ಶಾಸನಾಧಾರದಂತೆ ಇವು ನಂತರದ ಗಂಗರ ಕಾಲದವು; ಇನ್ನು ಕೆಲವು ಚೋಳ ಮತ್ತೆ ವಿಜಯನಗರ ರಾಜರ ಕಾಲದವು. ಇವುಗಳಲ್ಲೆಲ್ಲ

ಲಕ್ಷ್ಮೇಶ್ವರ ದೇವಾಲಯವೂ ಅತ್ಯಂತ ಅಲಂಕೃತವಾಗಿದೆ. ಇದರ ಮೇಲ್ಛಾವಣಿಯನ್ನು ಚೆನ್ನಾಗಿ ಕಂಡರಿಸಲಾಗಿದೆ. ಅವನಿಯಲ್ಲಿರುವ ಹೆಚ್ಚಿನ ದೇಗುಲಗಳು ನೊಳಂಬ ಶೈಲಿಯಲ್ಲಿವೆ. ಇಲ್ಲಿಯ ಗುಡ್ಡದ ಮೇಲೆ ಹಲವು ಸ್ವಾರಸ್ಯಕರ ತಾಣಗಳಿವೆ. ಸೀತಾ-ಪಾರ್ವತಿ ದೇಗುಲ, ಹೊರಳುಗುಂಡು, ತೊಟ್ಟಿಲುಗುಂಡು, ಅಗ್ನಿ ತೀರ್ಥ, ಏಕಾಂತ ರಾಮಸ್ವಾಮಿ ಗುಡಿ, ಮುಂತಾದವನ್ನು ಹೆಸರಿಸಬಹುದು. ಶೃಂಗೇರಿಮಠದ ಪರಂಪರೆಗೆ ಸೇರಿದ ಒಂದು ಸ್ಮಾರ್ತ ಮಠ ಇಲ್ಲಿದೆ.

ಆಳಂದ : (ಕಲ್ಬುರ್ಗಿ ಜಿ; ತಾ. ಕೇ; ಜನ: 26,425) ಬೆಂಗಳೂರಿಂದ 650 ಕಿಮೀ ದೂರದಲ್ಲಿರುವ ಆಳಂದ ಒಂದು ಪುರಸಭಾ ಪಟ್ಟಣವಾಗಿದೆ; ಕಲ್ಬುರ್ಗಿಯಿಂದ 47 ಕಿಮೀ ಅಂತರದಲ್ಲಿದೆ. ಇಲ್ಲಿ ದೊರೆತಿರುವ ಹಲವು ಶಾಸನಗಳಲ್ಲಿ ಆರನೇಯ ವಿಕ್ರಮಾದಿತ್ಯನೊಡನಿದ್ದ ಸಂಬಂಧ ಸೂಚಿಸುವ ಶಿಲಾ ಶಾಸನ ಗಮನಾರ್ಹವಾಗಿದೆ. ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಆಳಂದೆ 1000ದ ಆಡಳಿತ ಕೇಂದ್ರವಾಗಿತ್ತು. ಇಲ್ಲೊಂದು ಪ್ರಸಿದ್ಧವಾದ ಜೈನ ಬಸದಿಯಿದೆ. 1950ರ ಪೂರ್ವದಲ್ಲಿ ನಿಜಾಮರ ಕಾಲದ ಒಂದು ಜಾಗೀರಾಗಿದ್ದು, ದುವಂ ತಾಲೂಕ್‌ದಾರನು ಇದನ್ನು ಆಳುತ್ತಿದ್ದನು. ಇಲ್ಲಿ ನೇಕಾರಿಕೆ ಗಣನೀಯ ಉದ್ಯಮವಾಗಿದ್ದು, ಆಳಂದ ಸೀರೆ ಜನಪ್ರಿಯವಾಗಿದೆ. ಖ್ಯಾತ ಯತಿ ರಾಘವೇಂದ್ರ ಚೈತನ್ಯ ಮಹಾರಾಜರ ಸಮಾಧಿ, ಮುಸ್ಲಿಂ ಸಂತನಾದ ಲಾಡ್ಲೆ ಮುಶೇಕರ ಸಮಾಧಿಗಳು ಇಲ್ಲಿವೆ. ಆಳಂದದಿಂದ 25 ಕಿಮೀ ದೂರದಲ್ಲಿರುವ ನಿರೋಣದಲ್ಲಿ ಖಿನ್ನಿಂಗೇಶ್ವರ ಎಂದು ಕರೆಯುವ ಕಾರ್ತಿಕೇಯನ ದೇಗುಲವಿದೆ. ಅಲ್ಲದೆ ನೆಲಮಾಳಿಗೆಯಲ್ಲೊಂದು ವಿಷ್ಣು ದೇವಾಲಯವಿದೆ. ಆಳಂದದಿಂದ 12 ಕಿಮೀ ದೂರದಲ್ಲಿರುವ ಪಡಸಾವಳಿ ಯಲ್ಲಿ ಹಲವು ಕಲ್ಯಾಣಿ ಚಾಳುಕ್ಯರ ದೇಗುಲಗಳಿವೆ. ಇವುಗಳಲ್ಲಿ ಚನ್ನಕೇಶವಾಲಯ ಗಮನಾರ್ಹವಾದುದು.

ಇಂಡಿ : (ವಿಜಾಪುರ ಜಿ; ಉಪವಿಭಾಗ ಹಾಗೂ ತಾ. ಕೇ; ಜನ: 17,767) ಇಂಡಿ ವಿಜಾಪುರದಿಂದ 51 ಕಿಮೀ ದೂರದಲ್ಲಿದೆ. ಇದು ಇಂಡಿ ರೈಲು ನಿಲ್ದಾಣದ ಆಗ್ನೇಯಕ್ಕೆ ಆರು ಕಿಮೀ ದೂರದಲ್ಲಿದೆ. ಟಾಲೆಮಿ ಸೂಚಿಸಿರುವ ಇಂಡೆ ಎಂಬ ಸ್ಥಳನಾಮ ಬಹುಶಃ ಇಂಡಿಯದೇ ಇರಬಹುದು. ಹಿಂದಿನ ಕಾಲದಲ್ಲಿ ಇದನ್ನು ಚಿಕ್ಕಇಂಡಿ ಎಂದು ಕರೆಯುತ್ತಿದ್ದರು. ಕ್ರಿ. ಶ. 1790ರ ಒಂದು ಕಂದಾಯ ಖಾತೆಯ ಉಲ್ಲೇಖದಂತೆ ಈ ಸ್ಥಳ ವಿಜಾಪುರ ಸಂಸ್ಥಾನದ ಆಡಳಿತ ವಿಭಾಗದ ಒಂದು ಕೇಂದ್ರ ಸ್ಥಳವಾಗಿತ್ತು. ಇಲ್ಲಿನ ಶಾಂತೇಶ್ವರ ಎಂಬ ಹೆಸರಿನ ಶಿವಾಲಯ ಬಹಳ ಹಳೆಯ ದೇವಸ್ಥಾನವಾಗಿದ್ದು ಅನೇಕ ಮೂರ್ತಿಗಳ ಕೆತ್ತನೆಯಿಂದ ಕೂಡಿದ ಅಷ್ಟಮೂಲೆಯ ಗೋಪುರವು ದೇವಸ್ಥಾನದ ಆವರಣದಲ್ಲಿದೆ. ಆದಿನಾಥ ಸ್ವಾಮಿಯ ದಿಗಂಬರ ಜೈನ ದೇವಾಲಯದಲ್ಲಿ ಕೆಲವು ಸುಂದರವಾದ ಶಿಲಾ ಹಾಗೂ ಲೋಹದ ಪ್ರತಿಮೆಗಳು ಇವೆ. ಹನುಮಂತರಾಯ ಮತ್ತು ಮಹಾಲಿಂಗರಾಯ ಎಂಬೆರಡು ಬೇರೆ ದೇವಾಲಯಗಳೂ ಇಲ್ಲಿವೆ. ಇಲ್ಲಿ ಎರಡು ಮಸೀದಿಗಳೂ ಮತ್ತು ಹುಸೇನ್ ಬಾಷಾರ ದರ್ಗಾವೂ ಇವೆ. ಇಲ್ಲಿ ಪೌರಾಡಳಿತವಿದ್ದು, ಸೇಂಗಾ, ಜೋಳ ಮತ್ತು ವಿರ್ಸಾರ್ ಹತ್ತಿ ವ್ಯಾಪಾರಕ್ಕೆ ಇದು ಪ್ರಸಿದ್ಧವಾಗಿದೆ. ತಾಲೂಕಿನ ಇತರ ಪ್ರಸಿದ್ಧವಾದ ಸ್ಥಳಗಳು ಈ ಕೆಳಗೆ ಇವೆ. ಇಂಚಗೇರಿ (ಜನ: 2,388) ಒಂದು ಪ್ರಸಿದ್ಧವಾದ ಯಾತ್ರಾಸ್ಥಳ. ಇದು ಇಂಡಿ ಊರಿನ ನೈರುತ್ಯಕ್ಕೆ 45 ಕಿಮೀ ದೂರದಲ್ಲಿಯೂ ಹಾಗೂ ಹೊರಟ್ಟಿ ರೈಲು ನಿಲ್ದಾಣದಿಂದ 11 ಕಿಮೀ ದೂರದಲ್ಲಿಯೂ ಇದೆ. ಗುರುಲಿಂಗಪ್ಪ ಮಹಾರಾಜ್, ಭಾಹುಸಾಹೇಬ್ ಮಹಾರಾಜ್, ಗಿರಿಮಲ್ಲಪ್ಪ ಮಹಾರಾಜ್ ಮತ್ತು ಶಿವಪ್ರಭು ಮಹಾರಾಜ್ ಎಂಬ ಮಹಾಮುಮುಕ್ಷುಗಳು ಇಲ್ಲಿದ್ದುದರಿಂದ ಇದಕ್ಕೆ ಪುಣ್ಯ ಕ್ಷೇತ್ರವೆಂಬ ಪ್ರಸಿದ್ಧಿ ಬಂದಿದೆ. ಮುಮುಕ್ಷುವೂ, ಮಹಾತತ್ವ ಜ್ಞಾನಿಯೂ ಆಗಿದ್ದ ಪ್ರೊಫೆಸರ್ ರಾನಡೆ ಅವರು ಈ ಮಠದ ಸಂಪ್ರದಾಯದವರು. ಮೇಲೆ ಸೂಚಿತವಾದ ಮುಮುಕ್ಷ ಮಹನೀಯರ ಗದ್ದುಗೆಗಳಿಗೆ ಶಿಲಾಕಟ್ಟಡಗಳ ಸಾಲುಗಳ ನಿರ್ಮಾಣ ಸಾಗಿವೆ. ಈ ಮಠದ ಸುತ್ತಲೂ ತಂಪು ನೀಡುವ ತೋಪುಗಳೂ ಇದ್ದು ಇಡೀ ವಾತಾವರಣ ನೆಮ್ಮದಿ ನೀಡುವ ಪ್ರಶಾಂತತೆ ಪಡೆದಿದೆ. ಪ್ರತೀವರ್ಷ ಇಲ್ಲಿ ಐದು ಸಪ್ತಾಹಗಳು ವಿಧಿಪೂರ್ವಕವಾಗಿ ನಡೆಯುತ್ತವೆ. ಆ ಕಾಲದಲ್ಲಿ ಭಜನೆ, ಧ್ಯಾನ ಹಾಗೂ ಧಾರ್ಮಿಕ ಪ್ರವಚನಾದಿಗಳು ನಡೆಯುತ್ತವೆ. ಅದರಲ್ಲಿಯೂ ಪ್ರತೀವರ್ಷ ಜನವರಿ-ಫೆಬ್ರವರಿಗಳಲ್ಲಿ ಅಂದರೆ ಮಾಘ ಮಾಸದಲ್ಲಿ ನಡೆಯುವ ಸಪ್ತಾಹಕ್ಕೆ ಸರಿಸುಮಾರು 30,000 ಜನ ಭಕ್ತರು ಇಲ್ಲಿಗೆ ಬರುತ್ತಾರೆ. ಬಂದವರಿಗೆಲ್ಲಾ ಇಲ್ಲಿ ಉಚಿತ ಭೋಜನದ ವ್ಯವಸ್ಥೆ ಇದೆ. ಈ ಮಠದಲ್ಲಿ ಸುಮಾರು 500 ಜನ ಮಠವಾಸಿಗಳು ಇದ್ದು, ಇವರೆಲ್ಲ ವ್ಯವಸಾಯಾದಿ ಕಾಯಕದಲ್ಲಿ ತೊಡಗಿರುತ್ತಾರೆ. ಮಹಾರಾಷ್ಟ್ರದ ಜತ್ತ್ ತಾಲೂಕಿನಲ್ಲಿ ಸಹ ಈ ಮಠ ಎರಡು ವ್ಯವಸಾಯೋತ್ಪನ್ನ ಸಹಕಾರಿ ಸಂಘಗಳನ್ನು ಸ್ಥಾಪಿಸಿ ನಡೆಸುತ್ತಿದೆ. ಭಾರತೀಯ ಸ್ವಾತಂತ್ರ್ಯ ಚಳವಳಿಯ ಸಮಯದಲ್ಲಿ ಅನೇಕ ರಾಷ್ಟ್ರೀಯ ಚಳವಳಿ ನೇತಾರರು ಈ ಮಠದಲ್ಲಿ ಆಶ್ರಯ ಪಡೆದಿದ್ದರು. ಇಲ್ಲಿನ ಇನ್ನೊಂದು ಮಠ ಕರಬಸ್ವೇಶ್ವರ ಮಠ. ಇದರಲ್ಲಿ ಸಂತ ಕರಬಸ್ವೇಶ್ವರರ ಗದ್ದುಗೆ ಇದೆ. ಇಲ್ಲಿ ಒಂದು ಮಸೀದಿ ಮತ್ತು ಹನುಮಂತನ ದೇವಸ್ಥಾನ ಇದೆ. ಒಂದು ಗ್ರಾಮ ಪಂಚಾಯತಿಯೂ ಇದೆ. ಸಾಲೋಟಗಿಯು ಇಂಡಿಯ ಆಗ್ನೇಯಕ್ಕೆ ಎಂಟು ಕಿಮೀ ದೂರದಲ್ಲಿ ಇದ್ದು, ಇದಕ್ಕೆ ಪ್ರಾಚೀನತೆಯ ಸ್ಥಾನವಿದೆ. ಕ್ರಿ.ಶ. 945ರ ಮುಮ್ಮಡಿ ಕೃಷ್ಣನ ಕಾಲದ ಶಿಲಾಶಾಸನವೊಂದು ಇಲ್ಲಿದ್ದು (ಈಗ ಶಾಸನ ಸ್ಥಳಾಂತರಗೊಂಡಿದೆ) ಆ ಶಾಸನದಲ್ಲಿ ಸಾಲೆಪಾವಿಟ್ಟಿಗೆ ಎಂದು ಊರ ಹೆಸರು ಉಲ್ಲೇಖವಾಗಿದೆ. ಮತ್ತು ಆ ಸ್ಥಳದಲ್ಲಿ ಒಂದು ಮಹಾವಿದ್ಯಾಲಯವಿತ್ತೆಂದೂ, ಅಲ್ಲಿ ಕಲಿಯಲು ದೂರದೂರದ ಸ್ಥಳಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರೆಂದೂ ಆ ಶಾಸನದಲ್ಲಿ

ಉಕ್ತವಾಗಿದೆ. ಈ ಮಹಾವಿದ್ಯಾಲಯದ ಅವಶೇಷಗಳು ಶಿವ ಯೋಗೀಶ್ವರ ದೇವಾಲಯದಲ್ಲಿ ಕಾಣಸಿಗುತ್ತವೆ. 11-12ನೇಯ ಶತಮಾನದ ಇನ್ನೊಂದು ಶಾಸನದಲ್ಲಿ ಮಹಾಮಂಡಳೇಶ್ವರ ಗೋವಣರಸ ಈ ಮಹಾವಿದ್ಯಾಲಯಕ್ಕೆ ದಾನದತ್ತಿ ಬಿಟ್ಟ ವಿಷಯವಿದೆ. ಈ ಶಿವಯೋಗೀಶ್ವರ ದೇವಾಲಯ ಗ್ರಾಮದ ಈಶಾನ್ಯಕ್ಕೆ ಇದೆ. ದೇವಾಲಯದ ಪಶ್ಚಿಮ ಭಾಗದಲ್ಲಿ ಒಂದು ಶಿಖರವಿದೆ. ಕೆಲವು ಪ್ರಮುಖ ಸಂದರ್ಭದಲ್ಲಿ ದೀಪ ಬೆಳಗಲು ಈ ಗೋಪುರವನ್ನು ಉಪಯೋಗಿಸಲಾಗುತ್ತಿತ್ತು. ಬಹುಶಃ ಒಬ್ಬ ಪಾಳೆಯಗಾರ ಈ ದೇವಾಲಯವನ್ನು ಕಟ್ಟಿಸಿರಬಹುದೆಂದು ತೋರುತ್ತದೆ. ಗ್ರಾಮ ಪ್ರವೇಶ ತಾಣದಲ್ಲಿ ಒಂದು ಭಾರಿ ದ್ವಾರ ಮತ್ತು ಎರಡು ವೀರಗಲ್ಲುಗಳು ಇವೆ. ಮಲ್ಲಿಕಾರ್ಜುನ, ಶಿವಯೋಗೀಶ್ವರ, ಹನುಮಂತ ಇವು ಗ್ರಾಮದಲ್ಲಿರುವ ಇತರ ದೇವಾಲಯಗಳು. ಒಂದು ಹೆಣ್ಣು ಪ್ರತಿಮೆಗೆ ಎಲ್ಲಮ್ಮ ದೇವರ ಹೆಸರಿನಲ್ಲಿ ಪೂಜಾದಿಗಳು ನಡೆಯುತ್ತಿವೆ. ಜಾನಪದ ಗೀತೆಗಳ ಗಾಯನ ಸ್ಥಳೀಯರಿಗೆ ಉತ್ಸಾಹದ ಹವ್ಯಾಸ. ಈ ಗ್ರಾಮ ಸ್ಥರಿಗೆ ಜಿಲ್ಲಾ ಮಟ್ಟದ ಹಾಗೂ ರಾಜ್ಯಮಟ್ಟದ ಹಲವು ಜಾನಪದ ಪ್ರಶಸ್ತಿಗಳು ಬಂದಿವೆ. ಇಲ್ಲಿ ಒಂದು ಮಸೀದಿ ಮತ್ತು ಮೆಹಬೂಬ್ ಸುಭಾನಿ ದುರ್ಗಾ ಇವೆ.

ಇಕ್ಕೇರಿ : (ಶಿವಮೊಗ್ಗಾ ಜಿ; ಸಾಗರ ತಾ; ಜನ: 220) ಅರಳಿಕೊಪ್ಪ ಗ್ರಾಮದ ಉಪಗ್ರಾಮ ಇಕ್ಕೇರಿ. ಇದು ಒಂದು ಕಾಲದಲ್ಲಿ ಕೆಳದಿ ಸಂಸ್ಥಾನದ ರಾಜಧಾನಿಯಾಗಿತ್ತು. ಕ್ರಿ.ಶ. 1512ಕ್ಕೆ ಕೆಳದಿ ರಾಜರು ಇದನ್ನು ತಮ್ಮ ರಾಜಧಾನಿಯಾಗಿ ಬದಲಾಯಿಸಿಕೊಂಡರು. ಇದು 1639ರವರೆಗೆ ರಾಜಧಾನಿಯಾಗಿ ಮುಂದುವರಿದಿತ್ತು. ನಂತರ ರಾಜಧಾನಿಯನ್ನು ಬಿದನೂರಿಗೆ (ನಗರ) ಬದಲಾಯಿಸಲಾಯಿತು. ಪೀತ್ರೊ ದೆಲ್ಲ ವಲ್ಲೆ ಮೊದ ಲಾದ ವಿದೇಶಿ ಪ್ರವಾಸಿಗರು ವಿಸ್ತಾರವಾದ ಈ ರಾಜನಗರದ ವರ್ಣನೆಯನ್ನು ಮಾಡಿದ್ದಾರೆ. ಇದು ಸಾಗರಕ್ಕೆ ಮೂರು ಕಿಮೀ ದಕ್ಷಿಣಕ್ಕೂ ಶಿವಮೊಗ್ಗಾದಿಂದ 76 ಕಿಮೀ ಉತ್ತರಕ್ಕೂ ಇದೆ. ಇಲ್ಲಿರುವ ಅಘೋರೇಶ್ವರ ದೇವಸ್ಥಾನ ತುಂಬಾ ದೊಡ್ಡದು. 16ನೇಯ ಶತಮಾನದಲ್ಲಿ ಹೊಯ್ಸಳ, ವಿಜಯ ನಗರಗಳ ಹಾಗೂ ಮುಸ್ಲಿಂ ವಾಸ್ತು ಶೈಲಿಗಳ ಮಿಶ್ರಣ ಶೈಲಿ ಯಲ್ಲಿ ಇದನ್ನು ಕಟ್ಟಲಾಗಿದ್ದರೂ, ನಿರ್ದಿಷ್ಟ ಪ್ರಮಾಣಗಳ ಅನುಸಾರವಾಗಿ ಕಟ್ಟಲಾಗಿದೆ. ದೇವರಿಗೆ ತಮ್ಮ ಭಕ್ತಿ, ಶ್ರದ್ಧೆ ಗಳನ್ನು ಅರ್ಪಿಸುತ್ತಿರುವ ಕೆಳದಿ ರಾಜರುಗಳ ಪ್ರತಿಮೆಗಳು ಮುಂಭಾಗದಲ್ಲಿವೆ. ದೇವಸ್ಥಾನ ಉತ್ತರಾಭಿಮುಖವಾಗಿದ್ದು ಭವ್ಯ ಚಾವಣಿಯಿದೆ. ಗರ್ಭಗೃಹ, ತೆರೆದ ಶುಕನಾಸಿ ಮತ್ತು ವಿಸ್ತಾರವಾದ ಮುಖಮಂಟಪಗಳಿವೆ. ಆದರೆ ನವರಂಗವಿಲ್ಲ. ನಂದಿ ಮಂಟಪವು ದೇವಾಲಯದ ಮುಂದೆ ಇದೆ. ಇಲ್ಲಿರುವ ಪಾರ್ವತಿ ದೇವಾಲಯಕ್ಕೆ ಗರ್ಭಗೃಹ, ಶುಕನಾಸ, ಕಂಭಗಳಿಲ್ಲದ ಪುಟ್ಟ ನವರಂಗ ಮತ್ತು ಮುಂಭಾಗದಲ್ಲಿ ಮಾತ್ರ ತೆರವಾದ ಮುಖಮಂಟಪವಿದೆ. ಸ್ಥಳದ ಭಾರಿ ಮಳೆ ಹೊಡೆತಕ್ಕೆ ಹೊಂದಿ ಕೊಳ್ಳಲು ಅನುಕೂಲವಾದ ವಿಶಿಷ್ಟ ವಾಸ್ತು ರಚನೆಯನ್ನು ಈ ದೇವಸ್ಥಾನಗಳು ಪಡೆದಿವೆ.

ಇಟಗಿ : (ರಾಯಚೂರು ಜಿ; ಯಲಬುರ್ಗಿ ತಾ; ಜನ: 3,250) ಹುಬ್ಬಳ್ಳಿ ಗುಂತಕಲ್ ರೈಲು ಮಾರ್ಗದಲ್ಲಿರುವ ಬನ್ನಿಕೊಪ್ಪ ರೈಲ್ವೆ ನಿಲ್ದಾಣದಿಂದ ಐದು ಕಿಮೀ ದೂರದಲ್ಲಿ ಇಟಗಿ ಗ್ರಾಮವಿದೆ. ಒಂದಾನೊಂದು ಕಾಲದಲ್ಲಿ ಇದು ತುಂಬಾ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಅಗ್ರಹಾರವಾಗಿತ್ತು. ಇಲ್ಲಿನ ಕಲ್ಯಾಣಿ ಚಾಳುಕ್ಯರ ಕಾಲದ ಮಹಾದೇವ ದೇವಾಲಯ ಪ್ರಸಿದ್ಧ ವಾದುದು. ಆರನೇಯ ವಿಕ್ರಮಾದಿತ್ಯನ ದಂಡನಾಯಕರಲ್ಲಿ ಒಬ್ಬನಾದ ಮಹದೇವ ದಂಡನಾಯಕ ಈ ದೇವಾಲಯವನ್ನು ಕ್ರಿ. ಶ. 1112ರಲ್ಲಿ ಕಟ್ಟಿಸಿದನೆಂದೂ ಅದನ್ನು 'ದೇವಾಲಯ ಚಕ್ರವರ್ತಿ' ಎಂದು ಕರೆಯುತ್ತಿದ್ದುದಾಗಿ ಉಲ್ಲೇಖಿಸಿರುವ ಶಾಸನದ ಮಾತು ಸತ್ಯವಾದುದು. ದೇವಾಲಯವು ಪೂರ್ವಾಭಿ ಮುಖವಾಗಿದ್ದು ಅದಕ್ಕೆ ಗರ್ಭಗೃಹವಿದ್ದು ಅದರ ಮೇಲೊಂದು ಶಿಖರವಿದೆ. ಶಿಖರ ಅಲ್ಲಲ್ಲಿ ಶಿಥಿಲಗೊಂಡಿದೆ. ಅದರ ಪುಟ್ಟ ನವರಂಗದ ಇಕ್ಕೆಲಗಳಲ್ಲಿ ದೇವಾಲಯದ ದಕ್ಷಿಣೋತ್ತರ ದ್ವಾರ ಗಳತ್ತ ಹೋಗಲು ನೇರ ಹಾದಿ ಇದೆ. ಎರಡೂ ದ್ವಾರಗಳಿಗೆ ಹೊಂದಿದಂತೆ ಅವುಗಳ ಮುಂದೆ ಪುಟ್ಟ ಮಂಟಪಗಳು ಇವೆ. ಒಳಗಿನ ವಿಸ್ತಾರವಾದ ತೆರೆದ ನವರಂಗದಲ್ಲಿ 68 ಕಂಭಗಳು ಇವೆ. ಇವೆಲ್ಲ ತಿರುಗುಣಿ ಯಂತ್ರಗಳಿಂದ ರೂಪುಗೊಂಡ ದುಂಡು ಕಂಭಗಳು. ಈ ನವರಂಗದ ಭಿತ್ತಿಗೆ ಹೊಂದಿದಂತೆ ಕಕ್ಷಾಸನ ಗಳು ಇವೆ. ಅವುಗಳ ಮೇಲೆ ಕುಬ್ಜಾಕಾರದ ಕಂಭಗಳು ಇವೆ. ನವರಂಗದ ನಡುಭಾಗದ ಛಾವಣಿ ಸುಂದರವಾಗಿ ಕೊರೆದ ಮಕರ ತೋರಣಗಳಿಂದ ಅಲಂಕೃತವಾಗಿದೆ. ಗರ್ಭಗೃಹದ ಪ್ರವೇಶ ದ್ವಾರವು ಸೂಕ್ಷ್ಮ ಕೆತ್ತನೆಯ ಕೆಲಸದಿಂದ ಕೂಡಿದ್ದು, ಇದು ಚಾಳುಕ್ಯ ಮಾದರಿಯ ಅತ್ಯಂತ ಸೊಗಸಾದ ಗರ್ಭಗೃಹಗಳಲ್ಲಿ ಒಂದಾಗಿದೆ. ದೇವಾಲಯದ ಹೊರಮೈಯಲ್ಲಿನ ಉಬ್ಬು ಕಂಬ ಗಳ ಜೋಡಣೆಯ ರೀತಿ, ಅದರಲ್ಲಿ ಅಳವಡಿಸಿರುವ ಪ್ರತಿಮಾ ಮಾಡಗಳು, ಸೂಕ್ಷ್ಮ ಕೆತ್ತನೆಯ ವಿವಿಧ ರೂಪಗಳ ಅಲಂಕಾರ ಪಟ್ಟಿಕೆಗಳು ನೋಡುವವನ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ಗರ್ಭಗೃಹದ ಹೊರಭಿತ್ತಿಯಲ್ಲಿನ ಕೋಷ್ಠಗಳು ಎದ್ದು ಕಾಣುತ್ತವೆ; ಹಾಗೂ ತುಂಬಾ ಸುಂದರವಾಗಿವೆ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವನ್ನು ಬಿಟ್ಟರೆ ಇದೇ ಅದರ ನಂತರದ ಸುಂದರ ದೇವಾಲಯ ಎಂಬ ಅಭಿಪ್ರಾಯವನ್ನು ಪರ್ಸಿ ಬ್ರೌನ್ ವ್ಯಕ್ತಪಡಿಸಿದ್ದಾರೆ.

ಉಡುಪಿ : (ದ. ಕ. ಜಿ; ತಾ. ಕೇ; ಜನ: 33,413) ಉಡುಪಿ ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 422 ಕಿಮೀ ಮತ್ತು ಮಂಗಳೂರಿನಿಂದ ಉತ್ತರಕ್ಕೆ 58 ಕಿಮೀ ದೂರದಲ್ಲಿರುವ

ಒಂದು ಯಾತ್ರಾಸ್ಥಳ. ಇದು ರಜತ ಪೀಠ ಮತ್ತು ಶಿವಳ್ಳಿ (ಶಿವಬೆಳ್ಳಿ) ಎಂಬ ಹೆಸರುಗಳಿಂದಲೂ ಪರಿಚಿತವಾಗಿದೆ. ಸ್ಥಳ ನಾಮವಾದ ಉಡುಪಿ ಎಂಬುದು ಉಡುಪ ಅಂದರೆ ಚಂದ್ರ, ಎಂಬ ಪದದಿಂದ ನಿಷ್ಪನ್ನವಾಗಿದ್ದು, ಚಂದ್ರಮೌಳೀಶ್ವರ ದೇವಾಲಯ ಅಲ್ಲಿರುವ ಕಾರಣದಿಂದ ಬಂದಿರಬಹುದು. ಉಡುಪಿಯು ಈ ಪ್ರಾಂತದ ಏಳು ಪುಣ್ಯ ಕ್ಷೇತ್ರಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಪಟ್ಟಣದ ಮಧ್ಯದಲ್ಲಿರುವ ಭಗವಾನ್ ಕೃಷ್ಣನ ದೇವಾಲಯಕ್ಕೆ ಭಾರತದ ಎಲ್ಲಾ ಭಾಗಗಳಿಂದಲೂ ಯಾತ್ರಿಕರು ಬಂದು ಹೋಗುತ್ತಾರೆ. ಇಲ್ಲಿರುವ ಕನಕನ ಕಿಂಡಿ ಮೂಲಕ ಕನಕದಾಸರಿಗೆ (16ನೇಯ ಶತಮಾನ) ದರ್ಶನ ನೀಡಲೆಂದು ಕೃಷ್ಣನು ಪೂರ್ವದಿಂದ ಪಶ್ಚಿಮಕ್ಕೆ ತಿರುಗಿದನೆಂದು ಹೇಳುತ್ತಾರೆ. ಈ ಕೃಷ್ಣನ ಮೂರ್ತಿಯನ್ನು ಮಧ್ವಾಚಾರ್ಯರು ಪ್ರತಿಷ್ಠಾಪಿಸಿದ್ದರು. ಪ್ರಖ್ಯಾತ ಧರ್ಮ ಗುರುಗಳೆನಿಸಿದ ಮಧ್ವಾಚಾರ್ಯರು (ಕ್ರಿ. ಶ. 1238-1317) ಸ್ಥಾಪಿಸಿದ ಉಡುಪಿಯ ಅಷ್ಟಮಠಗಳ ಕೇಂದ್ರಕಾರ್ಯಸ್ಥಾನವಾದ ಕೃಷ್ಣ ದೇವಾಲಯದ ಆವರಣದಲ್ಲಿ ಈ ಎಲ್ಲಾ ಮಠಗಳ ಸ್ವಾಮಿಗಳು ವರ್ಷದಲ್ಲಿ ಕೆಲವು ಕಾಲವಾದರೂ ವಾಸ್ತವ್ಯ ಹೂಡುವರು. ಕೃಷ್ಣ ದೇವಾಲಯದಲ್ಲಿರುವ ಮಧ್ವ ಸರೋವರ ಎಂಬ ಕಲ್ಯಾಣಿಯ ಮಧ್ಯೆ ಕಲ್ಲಿನ ಮಂಟಪವೊಂದಿದ್ದು, ತೆಪ್ಪವೊಂದರಲ್ಲಿ ಕೃಷ್ಣನ ಉತ್ಸವ ಮೂರ್ತಿಯನ್ನು ಹಬ್ಬದ ದಿನಗಳಲ್ಲಿ ಅದರ ಸುತ್ತಲೂ ಕರೆದೊಯ್ಯುವ ಪದ್ಧತಿ ಇದೆ. ಈ ದೇವಾಲಯದ ಆವರಣದಲ್ಲಿಯೇ ಒಂದು ನಾಗಾಲಯ ಅಥವಾ ಸುಬ್ರಹ್ಮಣ್ಯ ದೇವಾಲಯವಿದೆ; ಇದಲ್ಲದೆ, ವಸಂತಮಹಲ್ ಹೆಸರಿನ ಸಭಾಂಗಣವೂ ಇಲ್ಲಿದೆ. ಅಷ್ಟಮಠದಲ್ಲಿ ಆಚರಿಸುವ ಅತ್ಯಂತ ಮುಖ್ಯವಾದ (ಇಂಗ್ಲಿಷ್ ಪಂಚಾಂಗದಂತೆ ಪ್ರತೀ ಸರಿಸಂಖ್ಯೆ ವರ್ಷದ ಜನವರಿ ಮೂರನೇಯ ವಾರದಲ್ಲಿ ನಡೆಯುವ) ಪರ್ಯಾಯ ಮಹೋತ್ಸವದಂದು ಅಷ್ಟಮಠದ ಪೀಠಾಧಿಪತಿಗಳಲ್ಲಿ ಒಬ್ಬರಿಂದ ಮತ್ತೊಬ್ಬರಿಗೆ ಕೃಷ್ಣದೇವಾಲಯದ ಆಡಳಿತದ ಹೊಣೆಯನ್ನು ಸರದಿ (ಪರ್ಯಾಯ) ಪ್ರಕಾರ ವರ್ಗಾಯಿಸಲಾಗುತ್ತದೆ. ಪ್ರಾಚೀನ ಅನಂತೇಶ್ವರ ಮತ್ತು ಚಂದ್ರಮೌಳೀಶ್ವರ ದೇವಾಲಯಗಳಲ್ಲದೆ ಇಲ್ಲಿ ನೋಡಬೇಕಾದ ದೇವಾಲಯಗಳಲ್ಲಿ ಹೆಸರಿಸಬಹುದಾದವೆಂದರೆ ಅಂಬಲಪಾಡಿಯ ದೇವಿಯ ಗುಡಿ ಮತ್ತು ಕಡಿಯಾಳಿಯ ಮಹಿಷಮರ್ದಿನಿ ದೇವಾಲಯಗಳು. ಎಂ. ಜಿ. ಎಂ. ಕಾಲೇಜಿನ ಆವರಣದಲ್ಲಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದವರ ವಸ್ತುಸಂಗ್ರಹಾಲಯವಿದೆ. ಉಡುಪಿಯು ವಿದ್ಯಾ ಮತ್ತು ಬ್ಯಾಂಕ್ ಉದ್ಯಮ ಕೇಂದ್ರವಾಗಿದೆ. ಇಲ್ಲಿ ಒಂದು ಪುರಸಭೆ ಇದೆ. ಮಲ್ಪೆಯು (ಜನ: 17,985-1981) ಉಡುಪಿಯಿಂದ ಪಶ್ಚಿಮಕ್ಕೆ ನಾಲ್ಕು ಕಿಮೀ ದೂರದಲ್ಲಿ ಉದ್ಯಾವರ ಅಥವಾ ಮಲ್ಪೆ ನದಿಯ ಮುಖದ ಬಳಿ ಇದೆ. ಬಹಳ ಹಿಂದಿನಿಂದ ವಾಣಿಜ್ಯ ಚಟುವಟಿಕೆಗಳ ಕೇಂದ್ರವಾಗಿರುವ ಇಲ್ಲಿಯ ಸಮುದ್ರ ತೀರ ಬಹಳ ಸುಂದರವಾಗಿದೆ. ಬಂಡೆಗಳಿಂದ ತುಂಬಿರುವ ಮೂರು ಪುಟ್ಟ ದ್ವೀಪಗಳು ಮಲ್ಪೆಯ ಪಶ್ಚಿಮಕ್ಕಿವೆ. ಬಾಸೆಲ್ ಮಿಷನ್ ಸ್ಥಾಪಿಸಿರುವ ಇಲ್ಲಿಯ ಹೆಂಚಿನ ಕಾರ್ಖಾನೆ ಈ ಜಿಲ್ಲೆಯ ಒಂದು ಅತ್ಯಂತ ಹಳೆಯ ಕೈಗಾರಿಕೆಗಳಲ್ಲೊಂದು. ಇಲ್ಲಿ ಅನಂತೇಶ್ವರ ಮತ್ತು ಸುಬ್ರಹ್ಮಣ್ಯನಂತೆ ಆರು ಮುಖಗಳಿರುವ ಬಲರಾಮನ ದೇವಸ್ಥಾನಗಳಿವೆ. ಬಿದನೂರಿನ ಬಸವಪ್ಪ ನಾಯಕನು ಕಟ್ಟಿದನೆನ್ನಲಾದ ದರಿಯಾ ಬಹಾದುರ್‌ಗಡ ಎಂಬ ಕೋಟೆ ಇಲ್ಲಿದೆ. ಇಲ್ಲಿ ಒಡಭಾಂಡೇಶ್ವರ ದೇವಾಲಯ ಸಹ ಇದೆ. ಮಲ್ಪೆ ಗ್ರಾಮಕ್ಕೆ ಸೇರಿರುವ ಕೊಡವೂರು ಎಂಬ ಸಣ್ಣ ಹಳ್ಳಿಯಲ್ಲಿ ಜೋಡಿ ಲಿಂಗಾಕೃತಿಯಲ್ಲಿರುವ ಶಂಕರ ನಾರಾಯಣನ ದೇವಸ್ಥಾನವಿದೆ. ಈ ಜಾಗ ಕ್ರೋಢಾಶ್ರಮ ಎಂಬ ಹೆಸರಿನಿಂದಲೂ ಪರಿಚಿತವಾಗಿದೆ. ಮೀನು ಹಿಡಿಯುವುದು ಮತ್ತು ಮೀನು ಸಂಸ್ಕರಣೆ ಇಲ್ಲಿಯ ಮುಖ್ಯ ಕೈಗಾರಿಕೆಗಳು. ಮಣಿಪಾಲ (ಜನ: 11,289) ಉಡುಪಿಯಿಂದ ಪೂರ್ವಕ್ಕೆ ಮೂರು ಕಿಮೀ ದೂರದಲ್ಲಿರುವ ಶಿವಳ್ಳಿ ಗ್ರಾಮದ ಭಾಗವಾಗಿದ್ದು ಜಂಬಿಟ್ಟಿಗೆ ಬಂಡೆಗಳಿಂದ ಕೂಡಿದ ಪ್ರಸ್ಥಭೂಮಿಯಲ್ಲಿದೆ. ಇದೊಂದು ಪುರೋಭಿವೃದ್ಧಿ ಹೊಂದುತ್ತಿರುವ ವಿದ್ಯಾ ಹಾಗೂ ಕೈಗಾರಿಕಾ ಕೇಂದ್ರವಾಗಿ ಬೆಳೆಯುತ್ತಿದೆ. ಅಕ್ಯಾಡೆಮಿ ಅಫ್ ಜನರಲ್ ಎಜುಕೇಶನ್ ಆಶ್ರಯದಲ್ಲಿ 1942 ರಿಂದ ಇಲ್ಲಿ ಅನೇಕ ವಿದ್ಯಾ ಸಂಸ್ಥೆಗಳು ಕಾರ್ಯ ನಿರತವಾಗಿವೆ. ಸಿಂಡಿಕೇಟ್ ಬ್ಯಾಂಕಿನ ಕೇಂದ್ರ ಕಛೇರಿ ಇಲ್ಲಿಯೇ ಇದೆ. ಸಂಗೀತ ಮತ್ತು ಕಲಾ ಶಾಲೆಗಳಲ್ಲದೆ, ಗೀತಾ ಮಂದಿರ ಎಂಬ ಪ್ರಾರ್ಥನಾ ಭವನ ಮತ್ತು ಸಂಗೀತ ಮತ್ತು ಕುಶಲಕಲೆಯ ಅಕ್ಯಾಡೆಮಿ ಸಹ ಇಲ್ಲಿವೆ. ಮಣಿಪಾಲದಲ್ಲಿ, 1973ರಲ್ಲಿ ಕಟ್ಟಿದ, ಅಪೂರ್ವ ವಿನ್ಯಾಸದ ವೇಣುಗೋಪಾಲಕೃಷ್ಣ ಮಂದಿರವಿದೆ. ಒಂದು ಮುಖ್ಯ ಆರಾಧನಾ ಕೇಂದ್ರವಾದ ಜ್ಯೂಬಿಲೀ ಚರ್ಚ್ ಕಟ್ಟಡ ಗಮನ ಸೆಳೆಯುವಂಥದು. ಮಣಿಪಾಲ ಪಟ್ಟಣದ ಸೃಷ್ಟಿಕರ್ತ ಎನಿಸಿದ ಡಾ|| ಟಿ. ಎಂ. ಎ. ಪೈ ಅವರ ಸ್ಮರಣಾರ್ಥ ಸ್ಥಾಪಿಸಿರುವ ಒಂದು ವಸ್ತು ಸಂಗ್ರಹಾಲಯ ಮತ್ತು ವೈದ್ಯಕೀಯ ವಿದ್ಯಾಲಯದ ಭವ್ಯ ಆಸ್ಪತ್ರೆಯ ಕಟ್ಟಡ ಗಮನ ಸೆಳೆಯುತ್ತವೆ. ಉದ್ಯಾವರ (ಜನ: 10,273) ಅಥವಾ ಪ್ರಾಚೀನ ಕಾಲದ ಉದಯಪುರ ಇಲ್ಲವೇ ಒಡೆಯೂರು ಉಡುಪಿಯಿಂದ ನೈರುತ್ಯಕ್ಕೆ ನಾಲ್ಕು ಕಿಮೀ ದೂರದಲ್ಲಿದೆ. ಹಿಂದೆ, ಬಹಳ ಕಾಲದವರೆಗೆ, ಇದು ಆಳುಪರ ರಾಜಧಾನಿಯಾಗಿತ್ತು. ಕನ್ನಡ ಶಾಸನಗಳಿರುವ ಅನೇಕ ಶಿಲಾಸ್ತಂಭಗಳಲ್ಲದೆ ಇಲ್ಲಿ ಒಂದು ಕೋಟೆ ಮತ್ತು ಬೇರೆ ಕೆಲವು ಪ್ರಾಚೀನ ಸ್ಮಾರಕಗಳಿವೆ; ಇಲ್ಲಿರುವ ಶಾಸನಗಳಲ್ಲಿ ಕೆಲವು ಕ್ರಿ.ಶ. ಏಳನೇಯ ಶತಮಾನದಷ್ಟು ಹಳೆಯವು. ಇಲ್ಲಿ ಅನೇಕ ದೇವಾಲಯಗಳಿದ್ದು, ಅವುಗಳಲ್ಲಿ ಪ್ರಮುಖವಾದುವೆಂದರೆ ಬೃಹತ್ ಗಾತ್ರದ ಬಂಡೆಯೊಂದರ ಮೇಲೆ ಕಟ್ಟಿರುವ ಶಂಭುಕಲ್ಲು ಭೈರವ. ಈ ಊರಿನ ಬಳಿ ಸಮುದ್ರ ತೀರದಲ್ಲಿ ನಡೆಸಿರುವ ಭೂಶೋಧನೆಗಳಿಂದ, ಬಲವಾದ ಕೋಟೆಯಿಂದ ಕೂಡಿದ್ದ ರೇವು ಪಟ್ಟಣವೊಂದರ ಅವಶೇಷಗಳು ಬೆಳಕಿಗೆ ಬಂದಿವೆ. ಬೆಳ್ಳೆ (ಜನ: 4,042) ಉಡುಪಿಯಿಂದ

ಆಗ್ನೇಯಕ್ಕೆ ಸುಮಾರು ಒಂಭತ್ತು ಕಿಮೀ ದೂರವಿದೆ. ಸಮೀಪ ದಲ್ಲಿಯೇ ಇರುವ ಪಾಜಕ ಕ್ಷೇತ್ರವು ಪ್ರಖ್ಯಾತ ಧರ್ಮಗುರು ಗಳಾದ ಮಧ್ವಾಚಾರ್ಯರು ಜನ್ಮವೆತ್ತಿದ ಸ್ಥಳ. ಐನೂರು ವರ್ಷಗಳಿಗೂ ಹಿಂದೆ ಸೋದೆ ಮಠದ ಸ್ವಾಮಿಗಳು, ಮಧ್ವಾ ಚಾರ್ಯರು ಜನಿಸಿದ ತಾಣದಲ್ಲಿ ಅವರ ಪ್ರತಿಮೆಯೊಂದನ್ನು ನಿಲ್ಲಿಸಿ ಆ ನಿವೇಶನಕ್ಕೆ ಮೂಡುಮಠ ಎಂದು ಹೆಸರಿಟ್ಟರು. ಈ ಹಳ್ಳಿಯಲ್ಲಿ ರುವ ಮಠದ ಕಟ್ಟಡಗಳು ಕಾಣಿಯೂರು ಮಠಾಧಿಪತಿಗಳ ಮೇಲ್ವಿ ಚಾರಣೆಗೊಳಪಟ್ಟಿವೆ. ಈ ಹಳ್ಳಿಯ ಮತ್ತು ಇದರ ಸುತ್ತಮುತ್ತ ಮಧ್ವಾಚಾರ್ಯರು ತೋರಿದ ಪವಾಡಗಳಿಗೆ ಸಂಬಂಧಿಸಿದ ತಾಣ ಗಳನ್ನು ತೋರಿಸುತ್ತಾರೆ. ಅವರ ಹಿರಿಯರಿದ್ದ ಮನೆಯ ಹಿಂದೆ ಒಂದು ದೊಡ್ಡ ಕೆರೆ ಇದೆ. ಇಲ್ಲಿಯೇ ಇರುವ ಮಹಾದೇವ ದೇವ ಸ್ಥಾನದ ಮುಂಭಾಗದಲ್ಲಿ ಪುಟ್ಟ ಸೂರ್ಯ ಮಂದಿರವೊಂದಿದೆ. ಕುಂಜಾರು (ಜನ: 4,223) ಕುರ್ಕಾಲ್ ಗ್ರಾಮದ ಒಂದು ಹಳ್ಳಿ. ಇದು ಉಡುಪಿಯಿಂದ ದಕ್ಷಿಣಕ್ಕೆ ಸುಮಾರು 11 ಕಿಮೀ ದೂರದಲ್ಲಿದೆ. ಈ ಹಳ್ಳಿ ಕುಂಜಾರುಗಿರಿ ಮತ್ತು ಪರಶುರಾಮ ಗಿರಿ ಎಂಬ ಎರಡು ಬೆಟ್ಟಗಳಿಂದ ಕೂಡಿದೆ. ಪಾಜಕ ಕ್ಷೇತ್ರ ಇದಕ್ಕೆ ಬಹಳ ಸಮೀಪವಿದೆ. ಕುಂಜಾರು ಗಿರಿಯ ಮೇಲೆ ಉಡುಪಿಯ ಅದಮಾರು ಮಠದ ಆಡಳಿತೆಯಲ್ಲಿರುವ ಮಹಿಷಾಸುರ ಮರ್ದಿನಿಯ ಚಿಕ್ಕ ಗುಡಿಯಿದ್ದು, ಈ ದೇವಿಯನ್ನು ಮಧ್ವಾ ಚಾರ್ಯರು ಆರಾಧಿಸಿದ್ದರೆಂದು ಹೇಳುತ್ತಾರೆ. ವಿಮಾನಗಿರಿ ಯೆಂದೂ ಕರೆಯುವ ಪರಶುರಾಮಗಿರಿ ನಾಲ್ಕೂ ದಿಕ್ಕಿನಲ್ಲಿ ಒಂದೊಂದು ಕೊಳ ಮತ್ತು ಅನೇಕ ಗವಿಗಳನ್ನು ಹೊಂದಿದೆ. ಕಲ್ಯಾಣಪುರ (ಜನ: 6,574) ತೊನ್ಸೆ (ಪೂರ್ವ) ಗ್ರಾಮದ ಒಂದು ಹಳ್ಳಿ. ಇದು ಸ್ವರ್ಣಾ ನದಿಯ ದಕ್ಷಿಣ ದಂಡೆಯ ಮೇಲೆ ಉಡುಪಿಯಿಂದ ಸುಮಾರು ಆರು ಕಿಮೀ ಮತ್ತು ಸಮುದ್ರ ತೀರ ದಿಂದ ಪೂರ್ವಕ್ಕೆ ನಾಲ್ಕು ಕಿಮೀ ದೂರದಲ್ಲಿದೆ. ಸ್ವರ್ಣಾ ನದಿಯನ್ನು ಕಲ್ಯಾಣಪುರ ನದಿ ಎಂದೂ ಕರೆಯುವುದುಂಟು. ಕಲ್ಯಾಣಪುರದಲ್ಲಿ ವಿಜಯನಗರ ಕಾಲದ ಒಂದು ಕೋಟೆ ಮತ್ತು ಕೆಂಚಮ್ಮ, ಗಣಪತಿ, ವೀರಭದ್ರ, ಮಹಾಲಿಂಗೇಶ್ವರ ಹಾಗೂ ವೆಂಕಟರಮಣ ದೇವಾಲಯಗಳಿವೆ. ಸಮೀಪದಲ್ಲಿಯೇ ಇರುವ ಅಕ್ಕಲಬೆಟ್ಟು ಎಂಬಲ್ಲಿ ಸುಂದರವಾದ ನಾರಾಯಣಮೂರ್ತಿ ಮತ್ತು ಉಪ್ಪೂರು ಎಂಬಲ್ಲಿ ಗಣೇಶನ ದೇವಸ್ಥಾನಗಳಿದ್ದು, ಇವೆರಡೂ ವಿಜಯನಗರ ಕಾಲದವು. ಇಲ್ಲಿಯೇ ಇರುವ ಮಿಲಾ ಗ್ರಿಸ್ ಚರ್ಚ್ 'ನಮ್ಮ ಪವಾಡ ಸ್ತ್ರೀ'ಗೆ ಅರ್ಪಣೆ ಮಾಡ ಲಾದುದು; ಹದಿನೇಳನೇಯ ಶತಮಾನದ ಉತ್ತರ ಭಾಗದಲ್ಲಿ ನಿರ್ಮಿಸಲಾದ ಈ ಚರ್ಚನ್ನು 1941ರಲ್ಲಿ ಜೀರ್ಣೋದ್ಧಾರಗೊಳಿಸ ಲಾಯಿತು. ಇದಲ್ಲದೆ, 1837ರಲ್ಲಿ ಸ್ಥಾಪಿಸಿದ ಕ್ಯಾಥೋಲಿಕರ ಮೌಂಟ್ ರೋಸರಿ ಚರ್ಚ್ ಕೂಡ ಇಲ್ಲಿದೆ. ಕಾಪು (ಜನ: 4,669) ಉಡುಪಿಯಿಂದ ದಕ್ಷಿಣಕ್ಕೆ 12 ಕಿಮೀ ದೂರದಲ್ಲಿ ಸಮುದ್ರ ತೀರದಲ್ಲಿದೆ. ಮೀನುಗಾರಿಕೆ ಇಲ್ಲಿಯ ಮುಖ್ಯ ಉದ್ಯೋಗ. ವಿಜಯನಗರ ಕಾಲದಲ್ಲಿ ಮರ್ದ ಹೆಗ್ಗಡೆ ಎಂಬು ವನು ಇಲ್ಲಿ ಪ್ರಬಲಿಸಿಕೊಂಡಿದ್ದನು. ಸಮುದ್ರದಲ್ಲಿ ಬಂಡೆಗಳ ಇರುವಿಕೆಯನ್ನು ಸೂಚಿಸುವುದಕ್ಕೆಂದೂ ಮತ್ತು ಮಾರ್ಗ ಸೂಚಿಸ ಲೆಂದೂ ಕಟ್ಟಿರುವ ಒಂದು ಹಳೇ ದೀಪಗೃಹ ಇಲ್ಲಿದೆ. ಮಾರಿ ಯಮ್ಮನ ಎರಡು ಗುಡಿಗಳು, ಶಿಥಿಲವಾಗಿರುವ ಜನಾರ್ದನ ದೇವಸ್ಥಾನ ಮತ್ತು ಒಂದು ಜೈನ ಬಸದಿ ಸಹಾ ಇಲ್ಲಿಯೇ ಇದೆ. ಕೋಟ (ಜನ: 2,323) ಉಡುಪಿಯಿಂದ ಉತ್ತರಕ್ಕೆ ಸುಮಾರು 25 ಕಿಮೀ ಮತ್ತು ಕುಂದಾಪುರದಿಂದ ದಕ್ಷಿಣಕ್ಕೆ ಸುಮಾರು 12 ಕಿಮೀ ದೂರದಲ್ಲಿರುವ ಅದೇ ಹೆಸರಿನ ಬ್ರಾಹ್ಮಣ ಸಮುದಾಯ ವೊಂದರ ಕೇಂದ್ರವಾಗಿದೆ. ಕನ್ನಡ ಸುಪ್ರಸಿದ್ಧ ಬರಹಗಾರರಾದ ಶಿವರಾಮ ಕಾರಂತರು ಇದೇ ಊರಿನವರು. ಮಂದರ್ತಿ (ಜನ: 2,544) ಹೆಗ್ಗುಂಜೆ ಗ್ರಾಮದ ಒಂದು ಹಳ್ಳಿ. ಉಡುಪಿ ಯಿಂದ ಉತ್ತರಕ್ಕೆ ಸುಮಾರು 25 ಕಿಮೀ ದೂರವಿರುವ ಇಲ್ಲಿ ಬಹಳ ಹಿಂದಿನಿಂದಲೂ ಶಕ್ತಿಪೂಜಾ ಕೇಂದ್ರವಾಗಿರುವ ದುರ್ಗಾ ಪರಮೇಶ್ವರಿ ದೇವಾಲಯವಿದೆ. ಇದರಲ್ಲಿರುವ ಒಂಬತ್ತು ಮರದ ಮುಖವಾಡಗಳು ದೇವಿಯ ಬೇರೆ ಬೇರೆ ರೂಪಗಳನ್ನೂ ಚಿತ್ರಿಸು ತ್ತವೆ. ಈ ಊರಿನ ಯಕ್ಷಗಾನ ಕಲಾ ತಂಡ ಹೆಸರುವಾಸಿಯಾ ದುದು. ನಂದಿಕೂರು (ಜನ: 2,719) ಉಡುಪಿಯಿಂದ ದಕ್ಷಿಣಕ್ಕೆ ಸುಮಾರು 28 ಕಿಮೀ ದೂರವಿದೆ. ಮಧ್ವಾಚಾರ್ಯರ ಆಧ್ಯಾತ್ಮಿಕ ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯರ ಜನ್ಮ ಸ್ಥಾನವಾದ ಇಲ್ಲಿ ಮಹಿಷಾಸುರ ಮರ್ದಿನಿಯ ದೇವಾಲಯ ಇದೆ. ಪಡುಬಿದ್ರಿ (ಜನ: 8,229) ನಡ್ಸಾಲ್ ಗ್ರಾಮಕ್ಕೆ ಸೇರಿದ್ದು ಉಡುಪಿಯಿಂದ ದಕ್ಷಿಣಕ್ಕೆ, ಉಡುಪಿ-ಮಂಗಳೂರು ಮಾರ್ಗದಲ್ಲಿ, ಸುಮಾರು 26 ಕಿಮೀ ದೂರದಲ್ಲಿರುವ ಇದು ಬಳ್ಳಾಳರೆಂಬ ಜೈನ ಪ್ರಮುಖರ ಕೇಂದ್ರವಾಗಿದೆ. ಇಲ್ಲಿ ಒಂದು ಬ್ರಹ್ಮಸ್ಥಾನ ಹಾಗೂ ಮಹಾಲಿಂಗೇಶ್ವರ ಮತ್ತು ಮಹಾ ಗಣಪತಿ ದೇವಸ್ಥಾನಗಳಿವೆ; ಈ ಬ್ರಹ್ಮಸ್ಥಾನದಲ್ಲಿ ಎರಡು ವರ್ಷಗಳಿಗೊಮ್ಮೆ ಢಕ್ಕೆ ಬಲಿ ಎಂಬ ಧಾರ್ಮಿಕ ಉತ್ಸವ ಜರುಗುವುದು. ಪಡುಬಿದ್ರಿಯಿಂದ ಉತ್ತರಕ್ಕೆ ಇರುವ ಎರ್ಮಾಳು ಒಂದು ಮೀನು ಮಾರಾಟದ ಕೇಂದ್ರ. ಇಲ್ಲಿರುವ ಜನಾರ್ದನ ದೇವಸ್ಥಾನದಲ್ಲಿರುವ ಮೂರ್ತಿ ಮಧ್ವಾ ಚಾರ್ಯರು ದೋಣಿಯೊಂದರಿಂದ ರಕ್ಷಿಸಿ ತಂದ ಮೂರು ಮೂರ್ತಿ ಗಳಲ್ಲಿ ಒಂದೆಂದು ಹೇಳುವರು. ಸುರಾಲು ಪೆಜ ಮಂಗೂರು (ಜನ: 2,803) ಗ್ರಾಮದ ಒಂದು ಹಳ್ಳಿ. ಇದು ಬ್ರಹ್ಮಾವರ-ಬಾರಕೂರು-ಕೊಕ್ಕರ್ಣೆ ಮಾರ್ಗದಲ್ಲಿ, ಮಂಗಳೂರಿನಿಂದ ಉತ್ತರಕ್ಕೆ 64 ಕಿಮೀ ಮತ್ತು ಉಡುಪಿಯಿಂದ ಈಶಾನ್ಯಕ್ಕೆ 24 ಕಿಮೀ ದೂರದಲ್ಲಿದೆ. ಅದು ವಿಜಯನಗರದ ಸಾಮಂತರಾಗಿದ್ದ ತೋಳಹರೆಂಬ ನಾಯಕ ಮನೆತನದವರ ನೆಲೆಯಾಗಿತ್ತು. ಈ ತೋಳಹರು ಪೋರ್ತುಗೀಸರ ವಿರುದ್ಧ ಶೌರ್ಯದಿಂದ ಹೋರಾಟ ನಡೆಸಿದವರು. ಇವರ ವಂಶಸ್ಥರು ಈಗಲೂ ಇದ್ದಾರೆ. ತೋಳಹ ನಾಯಕ ಮನೆತನದವರ ಸುಮಾರು 12 ಸಮಾಧಿಗಳು ಈ ಊರಿನಲ್ಲಿವೆ. ಇದೇ ಊರಿನಲ್ಲಿ ಸುಂದರ ಶಿಲ್ಪಗಳಿರುವ ಕಪ್ಪು ಶಿಲೆಯ ಮಹಾದೇವ ದೇವಸ್ಥಾನವಿದೆ; ಇದರ ಚಾವಣಿಯ

ನಾಲ್ಕೂ ಮೂಲೆಗಳ ಅಂಚಿನಲ್ಲಿ ನೇತಾಡುತ್ತಿರುವ ಕಲ್ಲಿನ ಸರಪಳಿಗಳಿದ್ದು, ಅವುಗಳ ಕೊಂಡಿಗಳಲ್ಲಿ ಕೆಲವು ಮಾತ್ರ ಇನ್ನೂ ಉಳಿದುಕೊಂಡಿವೆ.

ಉಳವಿ : (ಉ. ಕ. ಜಿಲ್ಲೆ; ತಾ. ಸೂಪಾ; ಜನ: 317) ಯಲ್ಲಾಪುರದಿಂದ 32 ಕಿಮೀ ದೂರದಲ್ಲಿರುವ ಒಂದು ಸಣ್ಣ ಹಳ್ಳಿ ಮತ್ತು ವೀರಶೈವರ ಒಂದು ಪ್ರಾಚೀನ ಕೇಂದ್ರ. ಇದನ್ನು ತಲುಪಲು ಎರಡು ಮಾರ್ಗಗಳಿದ್ದು, ಒಂದು ಅಣಶಿ ಘಾಟ್ ಮೂಲಕವೂ ಮತ್ತೊಂದು ಸೂಪಾ ಮೂಲಕ ಸಾಗುತ್ತವೆ. ಜೈನ ಗ್ರಂಥವೊಂದು ಹೇಳುವಂತೆ, ಹಿಂದೆ ಇದರ ಹೆಸರು ವೃಷಭಪುರ ಎಂದಿದ್ದು ಕಾಲಾನಂತರ ಉಳವಿ ಎಂಬ ಹೆಸರಾಗಿ ಬದಲಾವಣೆಗೊಂಡಿತು. ಇದು, ಕಾಳೀನದಿಯು ಯಲ್ಲಾಪುರ ಮತ್ತು ಸೂಪಾ ತಾಲೂಕುಗಳನ್ನು ಪ್ರತ್ಯೇಕಿಸುವ ರಾಕ್ಷಸ ಘಾಟಿಯ ಮೇಲಿನ ಬಯಲಲ್ಲಿದೆ. ಇದನ್ನು ಮೈಸೂರಿನ ಟಿಪ್ಪು ಸುಲ್ತಾನ್ ವಶಪಡಿಸಿಕೊಳ್ಳುವ ಮುನ್ನ, ಸ್ಥಳೀಯ ನಾಯಕನೋರ್ವನ ಅಧೀನದಲ್ಲಿತ್ತು. ಇಲ್ಲಿರುವ ಅತಿ ಹಳೆಯ ಕಟ್ಟಡಗಳಲ್ಲೊಂದಾದ ಗವಿಮಠ (ಅನೇಕ ಗವಿಗಳ ಒಂದು ಗುಂಪು) ವೀರಶೈವ ಸಂತರ ವಾಸಸ್ಥಾನವಾಗಿತ್ತು. ಈ ಗವಿಗಳಲ್ಲಿ ಒಂದಕ್ಕೆ ಬಸವೇಶ್ವರರ ಸಹೋದರಿ ಅಕ್ಕನಾಗಮ್ಮನ ಗವಿ ಎಂದು ಕರೆಯುವರು. ಅಕ್ಕನಾಗಮ್ಮ, ಕಿನ್ನರಿ ಬೊಮ್ಮಯ್ಯ, ಮಡಿವಾಳ ಮಾಚಿದೇವ ಮುಂತಾದ 12ನೇಯ ಶತಮಾನದ ವೀರಶೈವ ಶರಣರು ಉಳವಿಯಲ್ಲಿ ವಾಸಿಸುತ್ತಿದ್ದರೆಂದು ತಿಳಿದುಬರುತ್ತದೆ. ಬಸವೇಶ್ವರನ ಸೋದರಳಿಯ ಹಾಗೂ ನಿಷ್ಠ ಅನುಯಾಯಿ ಚನ್ನಬಸವಣ್ಣ ಕಲ್ಯಾಣವನ್ನು ತ್ಯಜಿಸಿದ ನಂತರ ತನ್ನ ಅಂತ್ಯ ಕಾಲದವರೆಗೂ ಇಲ್ಲಿಯೇ ಇದ್ದನೆಂದು ಹೇಳುವರು. ಇಲ್ಲಿ ಅವನಿಗೆ ಸ್ಮಾರಕವಾಗಿ ಕಟ್ಟಿರುವ ಗುಡಿ ಮನ ಸೆಳೆಯುವಂತಿದೆ. ಈ ಗುಡಿಯಲ್ಲಿರುವ ನಂದಿಯ ವಿಗ್ರಹವನ್ನು ಚನ್ನಬಸವಣ್ಣನ ಗದ್ದುಗೆಯೆಂದು ಪೂಜಿವರು. ಗುಡಿಯ ಗೋಪುರದಲ್ಲಿ ಗಾರೆಯಿಂದ ಮಾಡಿರುವ ಶಿವಶರಣರ ಶಿಲ್ಪಗಳಿವೆ. ಇಲ್ಲಿ ನೋಡತಕ್ಕ ಇನ್ನಿತರ ವಿಶೇಷಗಳೆಂದರೆ ವೀರಭದ್ರಕೆರೆ, ಶಿವತೀರ್ಥ, ಬಸವೇಶ್ವರ ಮಂದಿರ, ರುದ್ರಮಂಟಪ, ಬಾಬುರಾಯನ ಕೋಟೆ, ಇತ್ಯಾದಿ. ಸಮೀಪದಲ್ಲಿಯೇ ಇರುವ ನೀರ್ಗುಳ್ಳೆ ಬಾವಿ ಅಥವಾ ಬುದ್‌ಬುದ್ ತಳೆ ಸಹ ಆಸಕ್ತಿ ಕೆರಳಿಸುವಂತಹ ಒಂದು ಬಾವಿ. ಪ್ರತೀವರ್ಷ ಶಿವರಾತ್ರಿ ಕಾಲದಲ್ಲಿ ಜರುಗುವ ಜಾತ್ರೆಗೆ ಕರ್ನಾಟಕದ ಎಲ್ಲಾ ಭಾಗಗಳಿಂದ ಸಹಸ್ರಾರು ಭಕ್ತರು ಸೇರುವರು.

ಐಹೊಳೆ : (ಬಿಜಾಪುರ ಜಿ; ಹುನಗುಂದ ತಾ; ಜನ: 2,278). ನಮ್ಮ ರಾಜ್ಯದ ಕಲಾ ಇತಿಹಾಸದಲ್ಲಿ ಅತ್ಯಂತ ಖ್ಯಾತವಾದ ಸ್ಥಳಗಳಲ್ಲಿ ಒಂದಾದ ಐಹೊಳೆಯು ಹುನಗುಂದದಿಂದ 26 ಕಿಮೀ ಹಾಗೂ ಬೆಂಗಳೂರಿನಿಂದ 510 ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ ಇದನ್ನು ಅಯ್ಯಾವೊಳೆ ಹಾಗೂ ಆರ್ಯಪುರ ಎಂದು ಉಲ್ಲೇಖಿಸಲಾಗಿದೆ. ಈಗ ಇದನ್ನು ಐಹೊಳೆ, ಐವಳ್ಳಿ ಮತ್ತು ಅಯ್ಯಾಹೊಳೆ ಎಂದು ಕರೆಯುತ್ತಾರೆ. ಬಾದಾಮಿ ಚಲುಕ್ಯರ ಕಾಲದ ಒಂದು ಪ್ರಮುಖ ನಗರವಾಗಿದ್ದು, ವಾಸ್ತುಶಿಲ್ಪ ಕೃತಿಗಳಿಗಾಗಿ ಇದು ಹೆಸರುವಾಸಿಯಾಗಿದೆ. ಮೇಗುತಿಗುಡ್ಡದ ಬಳಿಯಿರುವ ಮೋರೇರ ಅಂಗಡಿಗಳು ಎಂದು ಕರೆಯಲಾದ ತಾಣದಲ್ಲಿ ಹಲವು ಪ್ರಾಗೈತಿಹಾಸಿಕ ಶಿಲಾ ಗೋರಿಗಳಿವೆ. ಐಹೊಳೆಯ ಕೆಲ ದೇಗುಲಗಳ ಬಳಿ ನಡೆಸಿದ ಉತ್ಖನನಗಳಿಂದ ಚಲುಕ್ಯರ ಪೂರ್ವಕಾಲದ ಇಟ್ಟಿಗೆ ಕಟ್ಟಡಗಳ ತಳಪಾಯಗಳೂ, ಮಡಿಕೆ ಕುಡಿಕೆಗಳೂ ದೊರೆತಿವೆ. ಇಲ್ಲಿ ಚಲುಕ್ಯರ ಆಡಳಿತ ಆರಂಭವಾದ ಮೇಲೆ ಅಭಿವೃದ್ಧಿ ತ್ವರಿತವಾಯಿತು. ಮತ್ತು ಏಳನೇಯ ಶತಮಾನದ ಸುಮಾರಿಗಾಗಲೇ ಇದು ಪ್ರಸಿದ್ಧ ಕಲಾಕೇಂದ್ರವಾಯಿತು. ನಮಗೆ ಇಂದು ನೋಡಸಿಗುವ ಹಲವು ಕಟ್ಟಡಗಳನ್ನು ಆಗ ಕಟ್ಟಲಾಯಿತು. ಇಲ್ಲಿರುವ ಹೆಚ್ಚಿನ ಶಾಸನಗಳೂ ಆರರಿಂದ ಎಂಟನೇಯ ಶತಮಾನಕ್ಕೆ ಸೇರಿದವುಗಳಾಗಿವೆ. ರಾಷ್ಟ್ರಕೂಟ ಹಾಗೂ ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಕೆಲವು ದೇಗುಲಗಳನ್ನು ಇಲ್ಲಿ ನಿರ್ಮಿಸಿರುತ್ತಾರೆ. 1169-70ರ ಶಾಸನವೇ ಐಹೊಳೆಯ ಕೊನೆಯ ಶಾಸನವಾಗಿದೆ. ಐಹೊಳೆ ಐನೂರು ಮಹಾಜನರಿರುವ ಒಂದು ಅಗ್ರಹಾರವಾಗಿತ್ತು. ಕ್ರಿ.ಶ. 700-1700ರ ಅವಧಿಯ ದಕ್ಷಿಣ ಭಾರತೀಯ ಶಾಸನಗಳು ಐಯ್ಯಾಹೊಳೆ ಐನೂರ್ವರ್ ಎಂಬ ವಣಿಕ ಸಂಘವನ್ನು ಹೆಸರಿಸಿದ್ದರೂ ಈ ಊರಿನ ಯಾವುದೇ ಶಾಸನದಲ್ಲೂ ಇವರ ಉಲ್ಲೇಖವಿಲ್ಲ ; ಇಲ್ಲಿಯ ದೇಸಾಯಿಯವರ ಮನೆಯಲ್ಲಿದ್ದ ಉರ್ದು ತಾಮ್ರಪಟದಲ್ಲಿ (ಈಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿದೆ) ವಿಜಾಪುರದ ಆದಿಲ್‌ಶಾಹಿಗಳು ಆ ದೇಸಾಯಿಯವರ ಪೂರ್ವಿಕರಿಗೆ ಬಿರುದು ನೀಡಿ ಪಕ್ಕದ ಹಳ್ಳಿಯಾದ ಕೇಲೂರು ಪರಗಣವನ್ನು ದತ್ತಿಯಾಗಿ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. (ಈ ಪರಗಣದ ಒಂದು ಭಾಗವಾಗಿ ಅಂದಿನ ಐಹೊಳೆ ಇತ್ತು). ಐಹೊಳೆಯಲ್ಲಿ 125 ದೇಗುಲಗಳಿದ್ದು, ಅವನ್ನು ಪುರಾತತ್ವ ಇಲಾಖೆಯವರು 22 ಗುಂಪುಗಳಾಗಿ ವಿಂಗಡಿಸಿದ್ದಾರೆ. ಇವನ್ನು ಐಹೊಳೆಯಲ್ಲಿ ಮತ್ತು ಅದರ ಸಮೀಪದ ಹೊಲಗಳಲ್ಲಿ ನೋಡಬಹುದು. ಈ ಊರಿನ ವಿಶಾಲವಾದ ಸ್ಥಳವನ್ನೊಳಗೊಂಡು ದುರ್ಗದ ಗೋಡೆಗಳಿದ್ದು, ಈಗ ಅವುಗಳ ಕುರುಹುಗಳು ಮಾತ್ರ ಉಳಿದಿವೆ. ಕ್ರಿ.ಶ. ಆರನೇಯ ಶತಮಾನದ್ದಿರಬಹುದಾದ ಈ ಕೋಟೆ ಕರ್ನಾಟಕದ ಒಂದು ಪ್ರಾಚೀನ ದುರ್ಗವಾಗಿದೆ. ಇಲ್ಲಿರುವ ದೇಗುಲಗಳ ಗುಂಪಿನ ಒಂದು ಸಂಕ್ಷಿಪ್ತ ಸಮೀಕ್ಷೆಯನ್ನು ನೀಡಲಾಗಿದೆ. ತ್ರ್ಯಂಬಕೇಶ್ವರ ದೇಗುಲ ಸಮೂಹ : ಚರಂತಿ ಮಠದ ಬಳಿ, ಈಶಾನ್ಯಕ್ಕೆ ಈ ಗುಂಪಿನ ದೇಗುಲಗಳಿವೆ. ಇವುಗಳಲ್ಲಿ ಹನ್ನೆರಡನೇಯ ಶತಮಾನದ ಎರಡು ಗುಡಿಗಳು ತ್ರಿಕೂಟಾಚಲಗಳಾಗಿವೆ. ಇದೇ ಮಾದರಿಯ 11ನೇಯ ಶತಮಾನದ ಮಧ್ಯದ ಗುಡಿಯೂ ಇದರ ಸಮೀಪದಲ್ಲಿದ್ದು, ಇದರ ಮಂಟಪದಲ್ಲಿರುವ ನಟರಾಜ ವಿಗ್ರಹ ಸುಂದರವಾಗಿದೆ. ಜೈನಬಸದಿಗಳ ಸಮೂಹ :

ತ್ರ್ಯಂಬಕೇಶ್ವರಾಲಯದ ಉತ್ತರಕ್ಕೆ ಕೆಲವು ಜೈನಬಸದಿಗಳಿವೆ. ಇದನ್ನು ಜೈನ ನಾರಾಯಣ ಇಲ್ಲವೆ ಯೋಗಿ ನಾರಾಯಣ ಗುಡಿಗಳೆನ್ನುತ್ತಾರೆ. ಇವೂ 11ನೇಯ ಶತಮಾನದ ಕಲ್ಯಾಣಿ ಚಾಳುಕ್ಯ ಶೈಲಿಯ ತ್ರಿಕೂಟಾಚಲಗಳಾಗಿವೆ. ಇವುಗಳ ಮಧ್ಯ ಗುಡಿಯಲ್ಲಿರುವ ಪಾರ್ಶ್ವನಾಥ ಪ್ರತಿಮೆ ಇನ್ನೂ ಇದೆ. ಇಲ್ಲಿ ಇನ್ನೂ ಮೂರು ಜೈನ ಬಸದಿಗಳಿವೆ. ಗೌರಿಗುಡಿ : ಜೈನ ಬಸದಿಗಳ ಉತ್ತರಕ್ಕಿರುವ ಈ ಗೌರಿಗುಡಿಯು ಮೂಲತಃ ಹನ್ನೆರಡನೇಯ ಶತಮಾನದ, ಕಲ್ಯಾಣಿ ಚಾಳುಕ್ಯ ಶೈಲಿಯ ವೈಷ್ಣವ ದೇಗುಲವಾಗಿದ್ದಂತೆ ತೋರುತ್ತದೆ. ಅಂಬಿಗೇರ ಗುಡಿ ಸಮೂಹ : ಇದು ಕೋಟೆಯ ಹೊರಭಾಗದಲ್ಲಿ, ದುರ್ಗಗುಡಿಗೆ ಪಶ್ಚಿಮ ಭಾಗದಲ್ಲಿದೆ. ಈ ಗುಂಪಿನ ಮೂರು ಗುಡಿಗಳಲ್ಲಿ ಅತಿ ದೊಡ್ಡ ದೇಗುಲಕ್ಕೆ ರೇಖಾ ನಾಗರ ಶಿಖರವಿದೆ. ಇದು 10ನೇಯ ಶತಮಾನದ್ದೆಂದು ಹೇಳಲಾಗಿದೆ. ಚಿಕ್ಕಿಗುಡಿ ಸಮೂಹ : ಅಂಬಿಗೇರ ಗುಡಿಯ ಉತ್ತರಕ್ಕೆ ಅನತಿದೂರದಲ್ಲಿರುವ ಈ ದೇಗುಲ ಸಮೂಹಗಳಲ್ಲಿ ಚಿಕ್ಕಿಗುಡಿ ಅತಿ ದೊಡ್ಡದಾಗಿದೆ. ಇದರಲ್ಲಿ ಗರ್ಭಗುಡಿ, ಮಂಟಪಗಳಲ್ಲದೆ ಎದುರಲ್ಲಿ ಒಂದು ಮುಖ (ಸಭಾ) ಮಂಟಪವಿದೆ. ಇದು ಏಳನೇಯ ಶತಮಾನದ ಗುಡಿಯೆಂದು ತಿಳಿಯಲಾಗಿದೆ. ಹುಚ್ಚಮಲ್ಲಿಗುಡಿ ಸಮೂಹ: ಐಹೊಳೆಯ ಉತ್ತರಕ್ಕೆ, ಪ್ರವಾಸಿ ಬಂಗಲೆಯ ಹಿಂದುಗಡೆ ಈ ಸುಂದರ ದೇವಾಲಯವಿದೆ. ಇದರ ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥವಿದ್ದು ಇದರ ಹೊರಗೋಡೆಗೆ ಜಾಲಂಧ್ರಗಳನ್ನೂ ಅಳವಡಿಸಲಾಗಿದೆ. ಇದರ ಶಿಖರವು ಉತ್ತರ ಭಾರತದ ರೇಖಾನಾಗರ ಶಿಖರ ಮಾದರಿಯಲ್ಲಿದೆ. ಈ ಗುಡಿಯಲ್ಲಿ ಮೊದಲ ಬಾರಿಗೆ ಶುಕನಾಸ ಅಥವಾ ಅಂತರಾಳವನ್ನು ಸೇರಿಸಲಾಗಿದೆ. ಈ ದೇಗುಲದ ಎದುರಿಗೆ ತುಸು ದೂರದಲ್ಲಿ ಇನ್ನೊಂದು ಭಗ್ನ ದೇಗುಲವಿದೆ. ಹುಚ್ಚಮಲ್ಲಿ ಗುಡಿಯ ಉತ್ತರಕ್ಕಿರುವ ಪುಟ್ಟ ಗುಡಿಯು ಹನ್ನೊಂದನೇಯ ಶತಮಾನದ್ದಾಗಿದೆ. ರಾವಳಫಡಿ: ಐಹೊಳೆಯ ಮೂರು ಗುಹಾಲಯಗಳಲ್ಲೆಲ್ಲ ಇದು ಅತ್ಯಂತ ಪ್ರಸಿದ್ಧವಾದ ಶೈವ ಗುಹಾಲಯವಾಗಿದ್ದು, ಹುಚ್ಚಮಲ್ಲಿಗುಡಿ ಸಮೂಹದ ಆಗ್ನೇಯಕ್ಕಿದೆ. ಆರನೇಯ ಶತಮಾನದ ಈ ಗವಿಗುಡಿಯಲ್ಲಿ ಮನೋಹರವಾದ ನಟರಾಜನ ವಿಗ್ರಹವಿದ್ದು, ಅದರ ಸಪ್ತ ಮಾತೃಕೆಯರ ಪ್ರತಿಮೆಗಳನ್ನೂ ಅಷ್ಟೇ ಮೋಹಕವಾದ ಶೈಲಿಯಲ್ಲಿ ಉಬ್ಬು ಶಿಲ್ಪಗಳಲ್ಲಿ ಕಂಡರಿಸಲಾಗಿದೆ. ಜ್ಯೋತಿರ್ಲಿಂಗ ಸಮೂಹ : ರಾವಳಫಡಿಯ ನೈಋತ್ಯಕ್ಕೆ ಸನಿಹದಲ್ಲೇ ಈ ದೇಗುಲ ಸಂಕುಲವಿದೆ. ಇಲ್ಲಿರುವ ಎರಡು ಪುಟ್ಟ ಗುಡಿಗಳಿಗೆ ಚಪ್ಪಟೆ ಮುಚ್ಚಿಗೆಗಳಿದ್ದು, ಇವುಗಳೆದುರು ನಂದಿಮಂಟಪಗಳಿವೆ. ಉಳಿದ ಗುಡಿಗಳಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮಂಟಪಗಳಿವೆ. ಎರಡು ಗುಡಿಗಳಿಗೆ ಕದಂಬ ನಾಗರ ಶಿಖರಗಳಿವೆ. ಇನ್ನೆರಡು ದೇಗುಲಗಳಲ್ಲಿ ಕಲ್ಯಾಣಿ ಚಾಳುಕ್ಯರ ಕಾಲದ ಶಿಲಾ ಶಾಸನಗಳಿವೆ. ಇನ್ನಿತರ ಗುಡಿಗಳೆಲ್ಲ ಭಗ್ನಾವಸ್ಥೆಯಲ್ಲಿದ್ದು, ಅವು ಸುಮಾರು 8-10ನೇಯ ಶತಮಾನದವಾಗಿವೆ. ಮೇಗಣ ಗುಡಿ ಹಾಗೂ ಇತರ ಗುಡಿಗಳು: ಐಹೊಳೆಯ ಆಗ್ನೇಯಕ್ಕಿರುವ ಪುಟ್ಟ ಮೇಗುತಿ ಗುಡ್ಡದ ಮೇಲೆ ಹಲವು ಪುರಾತನ ಗುಡಿಗಳಿವೆ. ಎರಡು ಅಂತಸ್ತಿನ ಒಂದು ಗುಡಿಯ ಒಳಭಾಗದಲ್ಲಿ ನೈಜವಾಗಿರುವ ಗವಿಯೊಂದಿದೆ. ಮೊದಲಂತಸ್ತಿನಲ್ಲಿ ಸ್ತಂಭಮಂಟಪವಿದ್ದು, ಅದರ ಹಿಂದುಗಡೆ ಗೋಡೆಗೆ ತಾಗಿ ಮೂರು ಕೋಣೆಗಳಿದ್ದು, ಇವುಗಳಲ್ಲಿ ಮಧ್ಯದ್ದು ಪ್ರಧಾನ ಗರ್ಭಗೃಹವಾಗಿದೆ. ಇದೇ ರೀತಿಯಲ್ಲಿ ಎರಡನೇಯ ಅಂತಸ್ತಿನಲ್ಲೂ ಮಂಟಪ ಹಾಗೂ ಅದರ ಹಿಂದುಗಡೆ ಚೌರಸಾಕಾರದ ಗರ್ಭಗೃಹವಿದೆ. ಈ ದೇವಾಲಯದ ಮೊದಲಂತಸ್ತಿನ ಗುಡಿಯಲ್ಲಿ ಹಿಂದೊಮ್ಮೆ ಬುದ್ಧನ ವಿಗ್ರಹವಿತ್ತು. ಈಗ ಅದನ್ನು ಹೊರಗಿಡಲಾಗಿದೆ. ಆದರೆ ಈ ಅಂತಸ್ತಿನ ಮೇಲ್ಛಾವಣಿಯಲ್ಲಿ ಇದೇ ಬಗೆಯ ಬುದ್ಧ ವಿಗ್ರಹವನ್ನು ಕಂಡರಿಸಲಾಗಿದೆ. ಕೆಲವು ವಿದ್ವಾಂಸರ ಪ್ರಕಾರ ಇದೊಂದು ಬೌದ್ಧ ವಿಹಾರವಾಗಿತ್ತು. ಐದನೇಯ ಶತಮಾನದ್ದೆಂದು ಹೇಳಬಹುದಾದ ಈ ವಾಸ್ತುಕೃತಿ ಸರಳವಾಗಿದೆ. ಮೇಗುತಿ ಅಥವಾ ಮೇಲಣ ಗುಡಿಯು ದ್ರಾವಿಡ ಶೈಲಿಯ ಒಂದು ಜಿನಾಲಯವಾಗಿದ್ದು ಇದರ ಸುತ್ತ ಶಿಲಾ ಪ್ರಾಕಾರವಿದೆ. ಮುಂದುಗಡೆ ಸ್ತಂಭಮಂಟಪವಿದೆ. ಇದಕ್ಕೆ ತಾಗಿದಂತೆ ಅಂತರಾಳ, ಅದಕ್ಕೆ ಹೊಂದಿಕೊಂಡಂತೆ ಪ್ರದಕ್ಷಿಣಾ ಪಥವುಳ್ಳ ಗರ್ಭಗುಡಿಯಿದೆ. ಇದರ ಹೊರಗೋಡೆಯ ಮೇಲೆ ಪ್ರಸಿದ್ಧವಾದ ಕ್ರಿ.ಶ. 634ರ 'ಐಹೊಳೆ ಪ್ರಶಸ್ತಿ' ಶಾಸನವಿದೆ. ಈ ಶಾಸನವು ತಿಳಿಸುವಂತೆ ಆ ಜಿನೇಂದ್ರಾಲಯವನ್ನು ಇಮ್ಮಡಿ ಪುಲಿಕೇಶಿಯ ಅಮಾತ್ಯ ಹಾಗೂ ದಂಡನಾಯಕನಾಗಿದ್ದ ರವಿಕೀರ್ತಿಯು ನಿರ್ಮಿಸಿದನು. ಈ ಶಾಸನವು ಕಾಳಿದಾಸ ಮತ್ತು ಭಾರವಿಯರನ್ನೂ ಉಲ್ಲೇಖಿಸುತ್ತದೆ. ಈ ಶಾಸನವನ್ನೂ ರವಿಕೀರ್ತಿಯೇ ಅಲಂಕಾರಿಕ ಕಾವ್ಯ ಶೈಲಿಯಲ್ಲಿ ರಚಿಸಿದ. ಮೇಗುತಿಯ ಆಗ್ನೇಯಕ್ಕೆ ಮತ್ತೊಂದು ಪುಟ್ಟ ಜೈನ ಗವಿಯಿದೆ. ಇದಕ್ಕೊಂದು ಮುಖಮಂಟಪವಿದ್ದು, ಹಿಂದುಗಡೆಯ ಗೋಡೆಗೆ ತಾಗಿದಂತೆ ಗರ್ಭಗುಡಿಯೂ ಇದೆ. ಇದರಲ್ಲಿ ಐದಡಿ ಎತ್ತರದ ಬಾಹುಬಲಿ ಮತ್ತಿತರ ಜೈನ ತೀರ್ಥಂಕರರ ಪ್ರತಿಮೆಗಳು ಕಂಡು ಬರುತ್ತವೆ. ಗಳಗನಾಥಗುಡಿ ಸಮೂಹ : ಹುಚ್ಚಪ್ಪಯ್ಯ ಗುಡಿಯ ದಕ್ಷಿಣಕ್ಕೆ ಸುಮಾರು 38 ಸಣ್ಣ ಗುಡಿಗಳ ಒಂದು ಸಮೂಹವಿದೆ. ಇವುಗಳಲ್ಲಿ ಗಳಗನಾಥಗುಡಿ ಉತ್ತಮವಾಗಿದ್ದು ಉಳಿದವುಗಳಲ್ಲಿ ಹಲವು ಭಗ್ನಸ್ಥಿತಿಯಲ್ಲಿವೆ. ಗಳಗನಾಥ ಗುಡಿಯಲ್ಲಿ ಗರ್ಭಗೃಹ, ಅಂತರಾಳ, ಹಾಗೂ ನವರಂಗ ಮಂಟಪಗಳಿವೆ. ಎಂಟನೇಯ ಶತಮಾನದ ಈ ಗುಡಿಗೆ ರೇಖಾನಾಗರ ಶಿಖರವಿದೆ. ಈ ದೇಗುಲ ಸಮೂಹದಲ್ಲಿ ಹತ್ತನೇಯ ಶತಮಾನದ ಇನ್ನೊಂದು ತ್ರಿಕೂಟಾಚಲವಿದೆ. ದುರ್ಗದೇಗುಲವು ಐಹೊಳೆಯ ಒಂದು ಪ್ರಮುಖ ವಾಸ್ತುಕೃತಿಯಾಗಿದ್ದು, ಇದರ ವಾಸ್ತುಶೈಲಿ ಬೌದ್ಧ ಚೈತ್ಯಾಲಯದಂತಿದೆ. ಎತ್ತರದ ಜಗತಿಯ ಮೇಲೆ ನಿರ್ಮಿತವಾದ ಈ ದೇಗುಲದ ಹಿಂಭಾಗ ಹಾಗೂ ಗರ್ಭಗುಡಿ ಭಾಗ ಗಜಪೃಷ್ಠಾಕಾರದಲ್ಲಿದೆ. ಇದರ ಮೇಲುಗಡೆ ರೇಖಾ ನಾಗರ ಶಿಖರವಿದೆ. ಇದೊಂದು ಸೂರ್ಯ ದೇಗುಲವಾಗಿದ್ದಿರ

ಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಲಾಡಖಾನ್ : ದುರ್ಗ ಗುಡಿಯ ದಕ್ಷಿಣಕ್ಕೆ ಈ ದೇಗುಲ ಸಮೂಹವಿದೆ. ಲಾಡಖಾನ್ ಎಂಬ ಸರದಾರ ಅನಂತರದಲ್ಲಿ ಅಲ್ಲಿದ್ದನಾದ್ದರಿಂದ ಇದಕ್ಕೆ ಆತನ ಹೆಸರಿಡಲಾಗಿದೆ. ಇದರಲ್ಲಿ ಚೌರಸಾಕಾರದ ಸಭಾಮಂಟಪ ಮತ್ತು ಮುಖಮಂಟಪವಿದ್ದು, ಸಭಾಮಂಟಪದ ಹಿಂಗೋಡೆಗೆ ತಾಗಿದಂತೆ ಗರ್ಭಗುಡಿಯನ್ನು ನಿರ್ಮಿಸಲಾಗಿದೆ. ಪಶ್ಚಿಮ ದಕ್ಷಿಣ ಹಾಗೂ ಉತ್ತರದ ಗೋಡೆಯಲ್ಲಿ ಸುಂದರವಾಗಿ ಕಂಡರಿಸಿದ ಜಾಲಂಧ್ರಗಳಿವೆ. ಗರ್ಭಗೃಹದ ಬಾಗಿಲವಾಡದಲ್ಲಿ ಗರುಡನ ಶಿಲ್ಪವಿದೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಕೇಂದ್ರಭಾಗದ ಚೌರಸಮಂಟಪಕ್ಕೆ ಚಪ್ಪಟೆಯ ಮೇಲ್ಚಾವಣಿಯಿದೆ. ಈ ಭಾಗದಲ್ಲೇ ನಂದಿಯನ್ನಿಡಲಾಗಿದೆ. ಇದರ ಮೇಲುಗಡೆ ಅನಂತರ ಸೇರಿಸಿದ್ದೆಂದು ತೋರುವ ನಾಗರ ಶಿಖರವಿದ್ದು ಭಗ್ನಗೊಂಡಿದೆ. ಇದು ಸುಮಾರು 450ರ ಕಾಲದ್ದೆಂದು ತಿಳಿದುಬರುತ್ತದೆ. ಗೌಡರಗುಡಿ : ಲಾಡಖಾನ್ ಬಳಿಯಲ್ಲೇ ಅದೇ ಮಾದರಿಯಲ್ಲಿ ಕಟ್ಟಿದ ಇನ್ನೊಂದು ಗುಡಿಯಿದಾಗಿದೆ. ಪಟ್ಟಿಕೆಗಳಿಂದ ಕೂಡಿದ ಎತ್ತರದ ಅಧಿಷ್ಠಾನದ ಮೇಲೆ ನಿಂತ ಈ ಗುಡಿಯ ಹೊರ ಭಿತ್ತಿಭಾಗದಲ್ಲಿ ಹದಿನಾರು ಕಂಬಗಳಿವೆ. ಇವುಗಳ ಮಧ್ಯದ ಜಾಗವನ್ನು ಕಲ್ಲುಚಪ್ಪಡಿಗಳಿಂದ ಜೋಡಿಸಿರುವುದರಿಂದ ದೇಗುಲದ ಭಿತ್ತಿಯಾಗಿದೆ. ಎಂಟನೇಯ ಶತಮಾನದ ಶಾಸನವೊಂದು ಈ ಗುಡಿಯನ್ನು ಭಗವತಿ ಆಲಯವೆಂದೇ ಉಲ್ಲೇಖಿಸುತ್ತದೆ. ಡಾ|| ಎಸ್. ಆರ್. ರಾವ್ ಅವರ ಪ್ರಕಾರ ಐಹೊಳೆಯಲ್ಲೇ ಪ್ರಾಚೀನತಮ ಕಟ್ಟಡವಿದಾಗಿದೆ. ಸೂರ್ಯನಾರಾಯಣ ಗುಡಿ: ಇದು ಲಾಡಖಾನ್ ದೇಗುಲದ ಈಶಾನ್ಯಕ್ಕಿದೆ. ನಾಲ್ಕು ಕಂಬಗಳ ಮೇಲೆ ನಿರ್ಮಿಸಿದ ಒಳ ಮಂಟಪ ಹಾಗೂ ಗರ್ಭಗೃಹವಿದೆ. ಇದರ ಶಿಖರವೂ ರೇಖಾ ನಾಗರ ಶೈಲಿಯಲ್ಲಿದ್ದು ಸುಮಾರು 7-8ನೇಯ ಶತಮಾನದ ಸೂರ್ಯನ ಎರಡು ಅಡಿ ಎತ್ತರವಾದ ವಿಗ್ರಹ ಇದರಲ್ಲಿದೆ. ಚಕ್ರಗುಡಿ : ಲಾಡ್‌ಖಾನ್‌ನಿಂದ ತುಸು ದಕ್ಷಿಣಕ್ಕೆ ಚಕ್ರಗುಡಿ ಸಮೂಹವಿದೆ. ಇದರಲ್ಲೂ ಗರ್ಭಗೃಹ ಹಾಗೂ ಸಭಾಮಂಟಪಗಳಿವೆ. ಇದಕ್ಕೆ ರೇಖಾ ನಾಗರ ಶಿಖರವಿದೆ. ಇದು ಸುಮಾರು ಒಂಬತ್ತನೇಯ ಶತಮಾನದ ವಾಸ್ತುಕೃತಿಯಾಗಿದೆ. ಬಡಿಗೇರ ಗುಡಿ : ಚಕ್ರಗುಡಿಯ ಪಶ್ಚಿಮಕ್ಕೆ ಇರುವ ಈ ಗುಡಿಯು ಮೂಲತಃ ಸೂರ್ಯದೇಗುಲವಾಗಿತ್ತು. ಒಂಬತ್ತನೇಯ ಶತಮಾನದ ಈ ಗುಡಿಯಲ್ಲಿ ಗರ್ಭಗೃಹ, ನವರಂಗ ಹಾಗೂ ಮುಖಮಂಟಪಗಳಿವೆ. ಇದರ ಶಿಖರವೂ ರೇಖಾ ನಾಗರ ಶೈಲಿಯಲ್ಲಿದೆ. ರಾಚಿಗುಡಿ : ಇದು ಐಹೊಳೆಯ ಪಶ್ಚಿಮಕ್ಕಿದೆ. 11ನೇಯ ಶತಮಾನದಲ್ಲಿ ಕಟ್ಟಲಾದ ಈ ಗುಡಿಯು ತ್ರಿಕೂಟಾಚಲ ಶೈವ ದೇವಾಲಯವಾಗಿದೆ. ಪಶ್ಚಿಮಾಭಿಮುಖವಾಗಿ ಎತ್ತರವಾದ ಜಗತಿಯ ಮೇಲಿದ್ದು ಮೂರು ಗರ್ಭಗೃಹಗಳು ಮೂರು ದಿಕ್ಕಿಗೆ ಮುಖಮಾಡಿವೆ. ಹೊರಭಿತ್ತಿಯ ಮೇಲೆ ಪುಟ್ಟಪುಟ್ಟ ದೇವಕೋಷ್ಠಗಳಿವೆ. ಇವುಗಳಲ್ಲಿ ಗಣಪತಿ, ನಟರಾಜ, ವಿಷ್ಣು ವಿಗ್ರಹಗಳನ್ನಿಡಲಾಗಿದೆ. ಹುಚ್ಚಪ್ಪಯ್ಯಮಠ : ಐಹೊಳೆಯ ಪಶ್ಚಿಮಕ್ಕಿರುವ ಈ ಮಠದ ಬಳಿಯಲ್ಲೊಂದು ಗುಡಿಯಿದೆ. ಗರ್ಭಗುಡಿ ಹಾಗೂ ಸಭಾಮಂಟಪಗಳಿರುವ ಈ ದೇಗುಲದ ಮೇಲ್ಛಾವಣಿಯಲ್ಲಿ ತ್ರಿಮೂರ್ತಿಗಳ ಶಿಲ್ಪವನ್ನು ಕಂಡರಿಸಲಾಗಿದೆ. 1067ರ ಶಾಸನವೂ ಇಲ್ಲಿದೆ. ಹಾಲಬಸಪ್ಪ ಗುಡಿ : ಐಹೊಳೆಯ ಪಶ್ಚಿಮಕ್ಕಿರುವ ಈ ಪುಟ್ಟಗುಡಿಯಲ್ಲಿ ಗರ್ಭಗೃಹ ಮತ್ತು ಸಭಾಮಂಟಪಗಳಿವೆ. ಪ್ರವೇಶ ದ್ವಾರಬಂಧದ ಮೇಲೆ ಗಂಗಾ-ಯಮುನೆಯರ ಶಿಲ್ಪಗಳನ್ನು ಕೆತ್ತಲಾಗಿದೆ. ಕೊಂತಿಗುಡಿ ಸಮೂಹ : ಐಹೊಳೆ ಬಜಾರಿನ ಮಧ್ಯೆ ನಾಲ್ಕು ಗುಡಿಗಳಿದ್ದು ಅವು ಏಳನೇಯ ಶತಮಾನದವಾಗಿವೆ. ಇವುಗಳ ಹಲವು ಭಾಗಗಳನ್ನು ಅನಂತರದಲ್ಲಿ ಸೇರಿಸಿದ್ದುಂಟು. ಮೊದಲನೇಯ ಗುಡಿಯ ಮಂಟಪದ ಮೇಲ್ಛಾವಣಿಯಲ್ಲಿ ತ್ರಿಮೂರ್ತಿಗಳ ಶಿಲ್ಪಗಳಿವೆ. 10ನೇಯ ಶತಮಾನದ ಒಂದು ಗುಡಿ ಮಾತ್ರ ಮುರಿದು ಬಿದ್ದಿದೆ. ಚರಂತಿಮಠ ಸಮೂಹ: ಕೊಂತಿಗುಡಿ ಸಮೂಹಕ್ಕೆ ಅತಿ ಸಮೀಪದಲ್ಲಿ, ಊರಿನ ಈಶಾನ್ಯಕ್ಕೆ ಜೈನ ಬಸದಿಗಳಿವೆ. ಕಾಲಕ್ರಮದಲ್ಲಿ ಇವು ಚರಂತಿಮಠದ ಉಸ್ತುವಾರಿಗೆ ಬಂದದ್ದರಿಂದ ಚರಂತಿಮಠ ಸಮೂಹವೆಂದು ಕರೆಯಲಾಗಿದೆ. ಇವುಗಳಲ್ಲಿ ಪ್ರಮುಖವಾದ ಜಿನಾಲಯ ತ್ರಿಕೂಟಾಚಲವಿದೆ. ಇದರ ಮೂರು ಗರ್ಭ ಗೃಹಗಳಿಗೆ ಸಾಮಾನ್ಯವಾದ ಒಂದು ಸಭಾಮಂಟಪ ಮತ್ತು ಮುಖಮಂಟಪವಿದೆ. ಇದು ಸುಮಾರು 11-12ನೇಯ ಶತಮಾನದ ಕಟ್ಟಡವಾಗಿದ್ದು ಕಲ್ಯಾಣಿ ಚಾಳುಕ್ಯ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇನ್ನೊಂದು ಜೋಡಿ ಬಸದಿಗೆ ಸಾಮಾನ್ಯವಾದ ಒಂದೇ ಮುಖಮಂಟಪವಿದ್ದು ಪ್ರತೀಯೊಂದು ಬಸದಿಯಲ್ಲೂ ಹನ್ನೆರಡು ತೀರ್ಥಂಕರರಂತೆ ಒಟ್ಟು 24 ತೀರ್ಥಂಕರರ ವಿಗ್ರಹಗಳಿವೆ. ಇಲ್ಲಿರುವ ಒಂದು ಶಾಸನವನ್ನಾಧರಿಸಿ ಹೇಳುವುದಾದರೆ ಇದನ್ನು ಕ್ರಿ.ಶ. 1120ರಲ್ಲಿ ನಿರ್ಮಿಸಲಾಯಿತು. ಹುಚ್ಚಪ್ಪಯ್ಯನ ಗುಡಿ : ಐಹೊಳೆಯ ಕೋಟೆಯ ದಕ್ಷಿಣಕ್ಕೆ ಮಲಪ್ರಭಾ ನದಿಗೆ ಹೊಗುವ ದಾರಿಯಲ್ಲಿರುವ ಶಿವಾಲಯವನ್ನು ಹುಚ್ಚಪ್ಪಯ್ಯನ ಗುಡಿ ಎಂದು ಕರೆಯುತ್ತಾರೆ. ಗರ್ಭಗೃಹ, ಸಭಾಮಂಟಪ ಹಾಗೂ ಮುಖಮಂಟಪಗಳಿರುವ ಈ ಗುಡಿಗೆ ರೇಖಾನಾಗರ ಶಿಖರವಿದೆ. ಇದರ ಮುಖ ಹಾಗೂ ಸಭಾ ಮಂಟಪಗಳಲ್ಲಿ ಹಲವು ಚೌಕಾಕಾರದ ಸ್ತಂಭಗಳಿವೆ. ಮುಖಮಂಟಪದ ಕಂಬಗಳ ಮೇಲೆ ಸುಂದರವಾಗಿ ಕಂಡರಿಸಿದ ಮಿಥುನ ಶಿಲ್ಪಗಳಿವೆ. ಇದರ ಮೇಲ್ಛಾವಣಿಯಲ್ಲಿ ಮನೋಹರವಾದ ನಟರಾಜನ ಶಿಲ್ಪವಿದೆ. ಗರ್ಭಗೃಹದ ಹೊರಗೋಡೆಯಲ್ಲಿ ಮೂರು ದೇವಕೋಷ್ಠಗಳಿವೆ. ಇವುಗಳಲ್ಲಿ ನರಸಿಂಹ ವಿಗ್ರಹವಿದೆ. ಇದನ್ನು ಸುಮಾರು ಎಂಟನೇಯ ಶತಮಾನದಲ್ಲಿ ನಿರ್ಮಿಸಲಾಯಿತು. ಎಣಿಯರ ದೇಗುಲ ಸಮೂಹ : ಹುಚ್ಚಪ್ಪಯ್ಯನ ಗುಡಿಯಿಂದ ತುಸು ದೂರದಲ್ಲಿ, ದಕ್ಷಿಣಕ್ಕೆ, ನದಿಯ ದಂಡೆಯಮೇಲೆ ಎಂಟು ದೇಗುಲಗಳ ಸಮೂಹವಿದೆ. ಹನ್ನೆರಡನೇಯ ಶತಮಾನದ ಈ ಗುಡಿಗಳಲ್ಲಿ ಗರ್ಭಗೃಹ, ಸಭಾಮಂಟಪ

ಹಾಗೂ ಮುಖಮಂಟಪಗಳಿವೆ. ರಾಮಲಿಂಗ ಗುಡಿಗಳು : ಏಣಿಯರ ದೇಗುಲ ಸಮೂಹದ ದಕ್ಷಿಣಕ್ಕಿರುವ ಗುಡಿಗಳಲ್ಲಿ ರಾಮಲಿಂಗ ದೇಗುಲ ಪ್ರಮುಖವಾಗಿದೆ. 11ನೇಯ ಶತಮಾನದಲ್ಲಿ ನಿರ್ಮಿತವಾದ ಈ ದೇವಾಲಯವು ತ್ರಿಕೂಟಾಚಲವಾಗಿದೆ. ಇದರ ಎರಡು ಗರ್ಭಗೃಹಗಳಲ್ಲಿ ಶಿವಲಿಂಗಗಳಿದ್ದು, ಮೂರನೇಯದರಲ್ಲಿ ಪಾರ್ವತಿ ವಿಗ್ರಹವಿದೆ. ಪಶ್ಚಿಮಾಭಿಮುಖವಾಗಿರುವ ಈ ದೇವಾಲಯಕ್ಕೆ ಕದಂಬ ನಾಗರ ಶಿಖರವಿದೆ.

ಐಹೊಳೆಯಲ್ಲಿ ಒಂದು ಮಸೀದಿಯನ್ನೂ ನೋಡಬಹುದು. ಈ ಗ್ರಾಮವು ಈಗ ಪಂಚಾಯತಿ ಕೇಂದ್ರವಾಗಿದೆ. ಪರ್ಸಿ ಬ್ರೌನ್ ಎಂಬ ವಿದ್ವಾಂಸರು ಐಹೊಳೆಯು ದೇಗುಲಗಳ ವಾಸ್ತುಶಿಲ್ಪದ ತೊಟ್ಟಿಲುಗಳಲ್ಲಿ ಒಂದು, ಎಂದು ವರ್ಣಿಸಿರುತ್ತಾರೆ. ಈಚೆಗೆ ಈ ಊರಲ್ಲಿ ಚಲುಕ್ಯಪೂರ್ವಕಾಲದ ಕೆಲವು ಇಟ್ಟಿಗೆ ಕಟ್ಟಡದ ಭಾಗಗಳು ಭೂ ಉತ್ಖನನದಲ್ಲಿ ಪತ್ತೆಯಾಗಿವೆ. ಇವುಗಳಿಂದಾಗಿ ಈ ಸ್ಥಳ ಬಹು ಪುರಾತನವಾದದ್ದೆಂದು ತಿಳಿದುಬರುತ್ತದೆ. ಇದೊಂದು ಪ್ರಾಚೀನ ವಾಣಿಜ್ಯ ಕೇಂದ್ರವೂ ಹೌದು; ಅಲ್ಲದೆ ವಣಿಕ ಸಂಘಗಳ ಕೇಂದ್ರವಾಗಿತ್ತು. ಈ ದೇಗುಲಗಳ ಸುತ್ತಮುತ್ತ ಕಟ್ಟಲಾದ ಮನೆಗಳನ್ನೂ, ಕಸಕುಪ್ಪೆಗಳ ರಾಶಿಯನ್ನೂ 15 ವರ್ಷಗಳಿಂದೀಚೆಗೆ ತೆಗೆದುಹಾಕಿ, ಕೈದೋಟಗಳಿಂದ ಸುಂದರಗೊಳಿಸಲಾಗಿದೆ.

ಔರಾದ್ : (ಬಿದರೆ ಜಿ; ತಾ. ಕೇ; ಜನ: 7,962) ಬಿದರೆಯಿಂದ 42 ಕಿಮೀ ಹಾಗೂ ಬೆಂಗಳೂರಿನಿಂದ 712 ಕಿಮೀ ದೂರದಲ್ಲಿದೆ. ಇದು ದನಗಳ ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿದೆ. ಇಲ್ಲಿಯ ಅಮರೇಶ್ವರ ದೇಗುಲವು ಪ್ರಸಿದ್ಧವಾಗಿದೆ. ಭಾಲ್ಕಿ ಪಟ್ಟದದೇವರೆಂದು ಹೆಸರಾದ ವೀರಶೈವ ಸ್ವಾಮಿಯೊಬ್ಬರು ಹಲವು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ಚಿಂಟಾಕಿಯು ಔರಾದ್‌ನಿಂದ ಸುಮಾರು 16 ಕಿಮೀ ದೂರದಲ್ಲಿದೆ. ಇಲ್ಲಿ ಶೇಕ್ ಸಾಹೇಬರ ಹೆಸರಾಂತ ದರ್ಗಾ ಇದೆ. ಔರಾದ್‌ನಿಂದ ಸುಮಾರು 32 ಕಿಮೀ ದೂರದಲ್ಲಿರುವ ಸಂಗಮದಲ್ಲಿ ಪುರಾತನವಾದ ಸಂಗಮೇಶ್ವರಾಲಯವಿದೆ.

ಕಡೂರು : (ಚಿಕ್ಕಮಗಳೂರು ಜಿ; ತಾ. ಕೇ; ಜನ: 19,410) ಕಡೂರು ಬೆಂಗಳೂರಿಗೆ 207 ಕಿಮೀ ದೂರದಲ್ಲಿ ಇದೆ. ಈಗಿನ ಚಿಕ್ಕಮಗಳೂರು ಜಿಲ್ಲೆಗೆ 1863ರಷ್ಟು ಹಿಂದೆಯೇ ಕಡೂರು ಜಿಲ್ಲಾಕೇಂದ್ರವಾಗಿತ್ತು. ಅನಂತರ ಜಿಲ್ಲಾ ಕೇಂದ್ರವನ್ನು ಚಿಕ್ಕಮಗಳೂರಿಗೆ ಸ್ಥಳಾಂತರಿಸಲಾಯಿತು. ಗಂಗರ ಕಾಲದಲ್ಲಿ ಇದು ಜೈನರ ಕೇಂದ್ರವಾಗಿತ್ತು. 14ನೇಯ ಶತಮಾನದಲ್ಲಿ ವಿಜಯನಗರದ ಅರಸರು ಮಾದನಾಯಕ ಎಂಬ ಪ್ರಮುಖನಿಗೆ ಎಮ್ಮೆದೊಡ್ಡಿಗುಡ್ಡದ ಪರಿಸರದ ಜಮೀನುಗಳನ್ನು ಪ್ರದಾನ ಮಾಡಿದರು. ಆಗ ಇದು ನಾರಾಯಣಪುರ ಎಂಬ ಹೆಸರಿನ ಒಂದು ಪುಟ್ಟ ಅಗ್ರಹಾರವಾಗಿತ್ತು. ಇಲ್ಲಿನ ಸ್ಥಳ ಐತಿಹ್ಯದ ಪ್ರಕಾರ ಮಾದನಾಯಕ ಒಮ್ಮೆ ಈ ಪ್ರಾಂತದಲ್ಲಿ ಬೇಟೆಯಾಡುತ್ತಿದ್ದಾಗ ಅವನ ಬೇಟೆ ನಾಯಿಗಳನ್ನು ಒಂದು ಕಡವೆ (ಒಂದು ಜಾತಿಯ ಜಿಂಕೆ) ಹಿಮ್ಮೆಟ್ಟಿಸಿದ ಪ್ರಸಂಗ ಜರುಗಿತಂತೆ. ಈ ಪ್ರಸಂಗದಿಂದ ಪ್ರಭಾವಿತನಾಗಿ ಅವನು ಇಲ್ಲಿ 'ಕಡವೆ ಊರ'ನ್ನು ಸ್ಥಾಪಿಸಿ ಕೋಟೆಯನ್ನು ಕಟ್ಟಿಸಿದನಂತೆ. ದೇವನೂರಿನ ಕ್ರಿ. ಶ. 1609ರ ಒಂದು ಶಾಸನದಲ್ಲಿ ಇದನ್ನು ಕಡಊರು ಎಂದು ಹೆಸರಿಸಲಾಗಿದೆ. ಇಲ್ಲಿನ ಸಿಹಿ ನೀರಿನ ಹೊಂಡದ ದಂಡೆಯ ಮೇಲೆ ಈಶ್ವರ ಮತ್ತು ಆಂಜನೇಯ ದೇವಾಲಯಗಳು ಇವೆ. ಇವೆರಡನ್ನು 17ನೇಯ ಶತಮಾನದಲ್ಲಿ ಕಟ್ಟಲಾಯಿತು ಎಂದು ಹೇಳಲಾಗುತ್ತಿದೆ. ಹೊಯ್ಸಳ ಶೈಲಿಯ ಚೆನ್ನಕೇಶವ ದೇವಾಲಯ ಇಲ್ಲಿನ ಇನ್ನೊಂದು ದೇವಾಲಯ. ಈ ಊರಿನಲ್ಲಿ ಶ್ರೀ ರೇಣುಕಾಮಠ ಮತ್ತು ರಾಘವೇಂದ್ರಸ್ವಾಮಿಗಳ ಬೃಂದಾವನಗಳಿವೆ. ಪ್ರಾಚೀನತೆಗೆ ಹೆಸರಾದ ಒಂದು ಸ್ವಾರಸ್ಯಕರವಾದ ಗ್ರಾಮ ಮಚ್ಚೇರಿ. ಇದು ಕಡೂರಿನ ಪೂರ್ವಕ್ಕೆ ನಾಲ್ಕು ಕಿಮೀ ದೂರದಲ್ಲಿದೆ. ವೇದಾವತಿ ನದಿಯು ಬಂಡೆಗಳ ಮೇಲೆ ಹರಿಯುತ್ತಾ, ಅದು ಏಳು ಕಡೆ ಬಂಡೆಯನ್ನು ಕೊರೆದಿದೆ. ಇದನ್ನು ಕುಂತಿ ಹೊಳೆ ಎಂದು ಸ್ಥಳೀಯರು ಕರೆಯುತ್ತಾರೆ. ಇದಕ್ಕೆ ಅನತಿ ದೂರದಲ್ಲಿ ಒಂದು ಗುಡ್ಡವಿದೆ. ಅದನ್ನು ಕೀಚಕನ ಗುಡ್ಡ ಎಂದು ಸಾಮಾನ್ಯವಾಗಿ ಕರೆಯುತ್ತಾರೆ. ಈ ಗುಡ್ಡದ ಮೇಲೆ ಒಂದು ಗವಿ ದೇವಸ್ಥಾನವಿದೆ. ಮೈಲಾರದೇವರ (ಮಲ್ಲಿದೇವ) ಪ್ರತೀಕವೆನಿಸಿದ ಏಳು ಕಲ್ಲುಗಳು ಇವೆ. ಇಲ್ಲಿ ಪಾಳು ಸ್ಥಿತಿಯಲ್ಲಿರುವ ಯೋಗಾನರಸಿಂಹ, ಕೇಶವ ಮತ್ತು ಈಶ್ವರ ದೇವಾಲಯಗಳು ಇವೆ. ಯೋಗಾನರಸಿಂಹ ದೇವಸ್ಥಾನ ಪ್ರಾಚೀನವಾದುದು. ಕಡೂರಿನ ದಕ್ಷಿಣಕ್ಕೆ 23 ಕಿಮೀ ದೂರದಲ್ಲಿ ಹುಲಿಗೆರೆ ದೊಡ್ಡಮಠ ಎಂಬ ಹೆಸರಿನ ವೀರಶೈವ ಮಠವೊಂದಿದೆ. ಇದು ಸಕ್ಕರೆ ಪಟ್ಟಣದ ಕಲ್ಲುಮರಡಿ ಮಠಕ್ಕೆ ಸಂಬಂಧಿಸಿದ ಮಠ. ಕಡೂರಿನ ಈಶಾನ್ಯಕ್ಕೆ 13 ಕಿಮೀ ದೂರದಲ್ಲಿ ಹಿರೇನಲ್ಲೂರು ಎಂಬ ಗ್ರಾಮವಿದೆ. ಕ್ರಿ. ಶ. 1215ರ ಒಂದು ಶಾಸನದಲ್ಲಿ ಇದನ್ನು ಹಿರಿಯನಲ್ಲೂರು ಎಂದು ಕರೆದಿದೆ. ಇದು ಆಗ ಅಗ್ರಹಾರವಾಗಿತ್ತೆಂದು ತಿಳಿಯುತ್ತದೆ. ಕ್ರಿ. ಶ. 1242ರ ಇನ್ನೊಂದು ಶಾಸನದಲ್ಲಿ ಇದನ್ನು ಕೇಶವನಪುರ ಎಂದು ಹೆಸರಿಸಲಾಗಿದೆ. ಇಲ್ಲಿ ಮಲ್ಲಿಕಾರ್ಜುನ (ಮಲ್ಲೇಶ್ವರ) ದೇವಸ್ಥಾನವೂ ಇದೆ. ಕಡೂರಿನ ಹೊರವಲಯದಲ್ಲಿ ತೀರ ಎರಡೇ ಕಿಮೀ ದೂರದಲ್ಲಿರುವ ಮಲ್ಲೇಶ್ವರ ಗ್ರಾಮ ಇನ್ನೊಂದು ಮುಖ್ಯ ಸ್ಥಳ. ಮಲ್ಲಾಸುರನೆಂಬ ರಾಕ್ಷಸನಿಗೆ ಇಲ್ಲಿನ ಜನ ಹೆದರಿ ತತ್ತರಿಸುತ್ತಿದ್ದರಂತೆ. ರಾಮಾಯಣದ ಶ್ರೀ ರಾಮಚಂದ್ರ ಅವನನ್ನು ನಿಗ್ರಹಿಸಿದ ಮೇಲೆ ಜನರ ಭಯ ನಿವಾರಣೆಯಾಯಿತಂತೆ. ಇಲ್ಲಿನ ಮಲ್ಲಿದೇವ ದೇವಸ್ಥಾನ 12ನೇಯ ಶತಮಾನದ್ದೆಂದು ನಿಗದಿಪಡಿಸಲಾಗಿದೆ. ಕ್ರಿ. ಶ. 1125ರ ಒಂದು ಶಾಸನದಲ್ಲಿ ಈ ಗ್ರಾಮವನ್ನು

ಮಲ್ಲೇಶ್ವರವೆಂದೂ, ದೇವರನ್ನು ಮಲ್ಲಿಕಾರ್ಜುನನೆಂದೂ ಹೆಸರಿಸಲಾಗಿದೆ. ದೇವಸ್ಥಾನವು ಹೊಯ್ಸಳ ಶೈಲಿಯಲ್ಲಿದೆ. ಬೀರೂರು : (1981ರ ಜನಸಂಖ್ಯೆ 18,081) ಬೆಂಗಳೂರಿನಿಂದ 214 ಕಿಮೀ ದೂರದಲ್ಲಿರುವ ಪ್ರಸಿದ್ಧ ರೈಲು ಕೂಡು ನಿಲ್ದಾಣ (ಜಂಕ್ಷನ್) ವಾಗಿದೆ. ಕ್ರಿ. ಶ. 1063ರ ಇಲ್ಲಿನ ಒಂದು ಶಾಸನ ಈ ಊರನ್ನು ಬೀರಊರು ಎಂದು ಹೆಸರಿಸಿದೆ. ಇಲ್ಲಿ ಅಂತರಘಟ್ಟೆಮ್ಮ, ಮೈಲಾರದೇವರು, ಬೀರೇದೇವರು ಮೊದಲಾದ ದೇವಸ್ಥಾನಗಳು ಇವೆ. ಇಲ್ಲಿನ ಬೀರೇದೇವರ ಜಾತ್ರೆ ಹನ್ನೆರಡು ವರ್ಷಕ್ಕೊಮ್ಮೆ 15 ದಿನಗಳ ಕಾಲ ಜರಗುತ್ತದೆ. ಇಲ್ಲಿನ ನಾಗರಿಕ ಸೌಲಭ್ಯಗಳನ್ನು ಇಲ್ಲಿನ ಪೌರಾಡಳಿತ ನಿರ್ವಹಿಸುತ್ತದೆ. ಸಕ್ರೆಪಟ್ಣ (ಜನ: 3,684) ಕಡೂರಿಗೆ 17 ಕಿಮೀ ದೂರದಲ್ಲಿ ಇದೆ. ಇದನ್ನು ಸ್ಥಳೀಯವಾಗಿ ಸುಖರಾಯ ಪಟ್ಟಣವೆಂದೂ ಕರೆಯುತ್ತಾರೆ. ಕ್ರಿ. ಶ. 1864ರ ಒಂದು ತೆಲುಗು ತಾಮ್ರ ಶಾಸನದಲ್ಲಿ ಇದನ್ನು ಗಾಳಿ ಪೂಜೆ ಸಕರಪಟ್ಟಣಮು ಎಂದು ಹೆಸರಿಸಲಾಗಿದೆ. ಇಲ್ಲಿನ ಐತಿಹ್ಯ ಸ್ವಾರಸ್ಯವಾಗಿವೆ. ಅದರ ಪ್ರಕಾರ ಶಬರಾಸುರನೆಂಬ ರಾಕ್ಷಸ ಮತ್ತು ಅಂಬರೀಷನೆಂಬ ಒಬ್ಬ ಮಹಾ ಸಾಧು ಇಲ್ಲಿ ಆಳಿದ್ದರಂತೆ. ಆದ್ದರಿಂದ ಇದನ್ನು ಶಂಬರಪುರಿಯೆಂದೂ, ಅಂಬರೀಷ ಕ್ಷೇತ್ರವೆಂದೂ ಕರೆಯುತ್ತಿದ್ದರಂತೆ. ಬೇರೊಂದು ಸಂಪ್ರದಾಯದ ಐತಿಹ್ಯದಂತೆ ಇದು ರುಕ್ಮಾಂಗದರಾಯನ ರಾಜಧಾನಿಯಾಗಿತ್ತು. ಇಲ್ಲಿ ಎರಡು ಸುತ್ತಿನ ಭಗ್ನ ಕೋಟೆಯಿದೆ. ರಂಗನಾಥ ದೇವಸ್ಥಾನವಿದೆ. ಅದರ ಪ್ರಾಕಾರ ಶುಕನಾಸ, ನವರಂಗ ಮತ್ತು ಮುಖಮಂಟಪಗಳೆಲ್ಲ ನಾಯಕರ ಕಾಲದವು ಮತ್ತು ವಿಜಯನಗರೋತ್ತರ ಶೈಲಿಯವು. ಇಲ್ಲಿ ಚತುರ್ಭುಜ ರಾಮ, ನವನೀತ ಕೃಷ್ಣ ಮತ್ತು ಭಾಷ್ಯಕಾರರ ಕಂಚಿನ ಪ್ರತಿಮೆಗಳಿವೆ. ಅಲ್ಲದೆ ವೀರಭದ್ರ, ಕಾಳಹಸ್ತೀಶ್ವರ, ಬಲ್ಲೇಶ್ವರ, ಲಕ್ಷ್ಮೀ ರಾಮೇಶ್ವರ, ಸೋಮೇಶ್ವರ ಮೊದಲಾದ ದೇವಾಲಯಗಳೂ ಈ ಊರಿನಲ್ಲಿವೆ. ಊರಿಗೆ ಹತ್ತಿರದಲ್ಲಿಯೇ ಕಲ್ಲುಮರಡಿ ಮಠವಿದ್ದು ಅಲ್ಲಿ ಅಜ್ಜಯ್ಯಸ್ವಾಮಿಯ ಗದ್ದುಗೆಯಿದೆ. ಸಕ್ರೆಪಟ್ಣದ ಪಶ್ಚಿಮಕ್ಕೆ ಅಯ್ಯನಕೆರೆ ಎಂಬ ದೊಡ್ಡ ಕೆರೆಯೊಂದಿದೆ. ಅದನ್ನು ದೊಡ್ಡ ಮದಗದ ಕೆರೆಯೆಂದೂ ಕರೆಯುತ್ತಾರೆ. ಅದರ ಸುತ್ತ ಬೆಟ್ಟಗುಡ್ಡಗಳಿದ್ದು ಅದು ಬಾಬಾ ಬುಡನ್ ಬೆಟ್ಟ ಸಾಲಿನ ಬುಡಕ್ಕೆ ಅಂದರೆ ಶಕುನಗಿರಿ ಬೆಟ್ಟದ ತಪ್ಪಲಿನಲ್ಲಿದೆ. ಗೌರಿಹಳ್ಳದ ನೀರು ಈ ಕೆರೆಗೆ ಆಧಾರ. ಈ ಕೆರೆಯಿಂದ ಹೊರಕ್ಕೆ ಹರಿದು ಬರುವ ನೀರಿಗೆ ವೇದಾ ಎಂಬ ಹೆಸರಿದೆ. ಮತ್ತು ಮುಂದೆ ಇದು ಕಡೂರಿನ ಬಳಿ ಆವತಿ ಹಳ್ಳದೊಂದಿಗೆ ಸಂಗಮಿಸುತ್ತದೆ. ಈ ಎರಡೂ ಒಟ್ಟಾಗಿ ಸೇರಿ ಮುಂದಕ್ಕೆ ಹರಿಯುವುದರಿಂದ ನದಿಗೆ ವೇದಾವತಿ ಎಂಬ ಹೆಸರು ಬಂತು. ಈ ಮೊದಲು ಸೂಚಿತವಾಗಿರುವ ರುಕ್ಮಾಂಗದ ರಾಯನೇ ಈ ಕೆರೆಯ ನಿರ್ಮಾತೃ ಎಂಬ ಒಂದು ಐತಿಹ್ಯವೂ ಇದೆ. ಹೊಯ್ಸಳ ನರಸಿಂಹ ಕ್ರಿ. ಶ. 1156ರಲ್ಲಿ ಈ ಕೆರೆಯ ದುರಸ್ತಿ ಮಾಡಿಸಿದ. ಕೆರೆ ಏರಿಯ ನಡುವಂತರಕ್ಕೆ ಇರುವ ಒಂದು ಸಣ್ಣ ಗುಡ್ಡದ ಮೇಲೆ ಪ್ರಸನ್ನ ಬಲ್ಲಾಳೇಶ್ವರ ದೇವಸ್ಥಾನವಿದೆ. ಇಲ್ಲಿ ಒಂದು ಅಮೃತಮಹಲ್ ಕಾವಲೂ (ಗೋಮಾಳ) ಮತ್ತೊಸ್ಯೋತ್ಪನ್ನ ಕೇಂದ್ರವೂ ಇದೆ. ಹರಿಹರಪುರವು ಕೊಪ್ಪ ಊರಿನ ಪಶ್ಚಿಮಕ್ಕೆ ಹತ್ತು ಕಿಮೀ ದೂರದಲ್ಲಿ ತುಂಗಾ ನದಿಯ ಎಡದಂಡೆಯ ಮೇಲಿದೆ. ವಿಜಯನಗರದ ಅರಸು ಇಮ್ಮಡಿ ಹರಿಹರ ಮತ್ತು ಅರಗ ಸೀಮೆಯ ಆಡಳಿತಾಧಿಕಾರಿ ಸಾಬಣ್ಣ ಒಡೆಯರ ಶಿಲಾಶಾಸನಗಳಲ್ಲಿ (1392 ಮತ್ತು 1418) ಇದು ಪ್ರಾಚೀನ ಅಗ್ರಹಾರವಾಗಿತ್ತೆಂಬ ಅಂಶ ತಿಳಿದುಬರುತ್ತದೆ. ಅದ್ವೈತ ಸಂಪ್ರದಾಯದ ಒಂದು ಸ್ಮಾರ್ತ ಮಠ ಮತ್ತು ಅದರೊಳಗೆ ಶಾರದಾಂಬಾ ಮತ್ತು ನರಸಿಂಹ ದೇವಾಲಯಗಳೂ ಇವೆ. ಶಾರದಾಂಬಾ ದೇವಾಲಯದಲ್ಲಿ ಶ್ರೀಚಕ್ರವಿದೆ. ವರದರಾಯ, ವೆಂಕಟರಮಣ, ಅಂಬಿಕಾ, ಚೌಡೇಶ್ವರಿ ಮೊದಲಾದ ಇತರ ಮುಖ್ಯ ದೇವಾಲಯಗಳೂ ಈ ಊರಿನಲ್ಲಿವೆ. ರಂಗನಾಥನೆಂಬ ಪಾಳೆಯಗಾರ ಕಟ್ಟಿಸಿದ ಕೋಟೆಯ ಭಗ್ನಾವಶೇಷವಿದೆ. ಜಂಬಿಟ್ಟಿಗೆ ಹರಿಹರಪುರದ ಉಪಗ್ರಾಮ. ಇಲ್ಲಿ ನೀಲಕಂಠೇಶ್ವರ ದೇವಸ್ಥಾನವಿದೆ. ಕಳಸ ಗ್ರಾಮದ ಕೊಲ್ಲೂರ ಎಂಬುವನ ಮಗ ಕಾಳಣ್ಣ ಎಂಬ ಶಿಲ್ಪಿ ಈ ದೇವಸ್ಥಾನವನ್ನು ಕ್ರಿ. ಶ. 1733ರಲ್ಲಿ ಕಟ್ಟಿದ. ದೇವನೂರು (ಜನ: 1,552) ಬೆಂಗಳೂರು ನಗರದಿಂದ 234 ಕಿಮೀ ದೂರದಲ್ಲಿದೆ. ಇಲ್ಲಿನ ಪ್ರಖ್ಯಾತ ದೇವಸ್ಥಾನಗಳಿಂದ ಈ ಊರಿಗೆ ಈ ಹೆಸರು ಬಂದಿದೆ. ಇದನ್ನು ಸುರಪುರವೆಂದೂ, ಗೀರ್ವಾಣಪುರವೆಂದೂ ಕೆಲವು ದಾಖಲೆಗಳಲ್ಲಿ ಹೆಸರಿಸಲಾಗಿದೆ. ಕ್ರಿ. ಶ. 1234ರ ಶಾಸನದಲ್ಲಿ ಇದನ್ನು ಲಕ್ಷ್ಮೀನಾರಾಯಣಪುರವೆಂದು ಹೆಸರಿಸಲಾಗಿದೆ. ಇದು ಕನ್ನಡದ ಪ್ರಸಿದ್ಧ ಕವಿ ಲಕ್ಷ್ಮೀಶನ ಜನ್ಮಸ್ಥಳ. ಅವನು ಲಕ್ಷ್ಮೀಕಾಂತನ ಪರಮಭಕ್ತನಾಗಿದ್ದು ಜೈಮಿನಿ ಭಾರತವನ್ನು ರಚಿಸಿದ್ದಾನೆ. ಕರ್ನಾಟಕದ ಇನ್ನೊಬ್ಬ ಪ್ರಸಿದ್ಧ ಕವಿ ರುದ್ರಭಟ್ಟ (12ನೇಯ ಶತಮಾನ) ತನ್ನ ಕಾವ್ಯವಾದ ಜಗನ್ನಾಥ ವಿಜಯವನ್ನು ಈ ಲಕ್ಷ್ಮೀಕಾಂತ ಸ್ವಾಮಿಗೆ ಅರ್ಪಿಸಿದ್ದಾನೆ. ಇಲ್ಲಿನ ಲಕ್ಷ್ಮೀಕಾಂತ ದೇವಾಲಯ ಮತ್ತು ಸಿದ್ದೇಶ್ವರ ದೇವಾಲಯಗಳು ವಾಸ್ತವವಾಗಿ ಗಮನಾರ್ಹ ಸ್ಥಳ ವಿಶೇಷಗಳು. ಮೊದಲಿನದನ್ನು 17ನೇಯ ಶತಮಾನದಲ್ಲೂ, ಎರಡನೇಯದನ್ನು 13ನೇಯ ಶತಮಾನದಲ್ಲೂ ಕಟ್ಟಲಾಯಿತೆಂದು ಹೇಳುತ್ತಾರೆ. ಲಕ್ಷ್ಮೀಶನದೆಂದು ಹೇಳುವ ಒಂದು ಹಳೆಯ ಮನೆಯೂ ಇಲ್ಲಿದೆ. ಆಸಂದಿ (ಜನ: 1,780) ಯು ಬೆಂಗಳೂರಿನಿಂದ ವಾಯುವ್ಯಕ್ಕೆ 227 ಕಿಮೀ ದೂರದಲ್ಲಿದೆ. ವೀರಗಲ್ಲುಗಳೂ ಸೇರಿದಂತೆ ಈ ಗ್ರಾಮದಲ್ಲಿ ಒಟ್ಟು 14 ಶಾಸನಗಳು ದೊರಕಿವೆ. ಅಲ್ಲದೆ ಕೆಲವು ಪ್ರಸಿದ್ಧ ಸ್ಮಾರಕಗಳೂ ಇವೆ. ಗಂಗರ ಮತ್ತು ಹೊಯ್ಸಳರ ಕಾಲಗಳಲ್ಲಿ ಇದು ಒಂದು ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಇದರ ಆಡಳಿತಕ್ಕೆ ಒಳಪಟ್ಟ ಭಾಗವನ್ನು ಆಸಂದಿನಾಡು ಎಂದು

ಕರೆಯಲಾಗುತ್ತಿತ್ತು. ಗಂಗ ಶ್ರೀಪುರುಷನ ಮಗ ವಿಜಯಾದಿತ್ಯನು ಎಂಟನೇಯ ಶತಮಾನದಲ್ಲಿ ಇಲ್ಲಿ ಆಡಳಿತ ನಡೆಸುತ್ತಿದ್ದ. ನಂತರ 12 ಮತ್ತು 13ನೇಯ ಶತಮಾನಗಳಲ್ಲಿ ಹೊಯ್ಸಳ ಸಾಮಂತರಾದ ಗಂಗ ವಂಶೀಯರು ಇಲ್ಲಿ ಆಡಳಿತ ನಡೆಸುತ್ತಿದ್ದರು. ಕ್ರಿ. ಶ. 1206ರ ಶಾಸನವೊಂದು ಅಸಂದಿಯಲ್ಲಿ ಹದಿಮೂರು ಶಿವಾಲಯಗಳಿದ್ದವೆಂದು ಉಲ್ಲೇಖಿಸುತ್ತದೆ. ಆದರೆ ಈಗ ಅಲ್ಲಿರುವುದು ಮೂರು ದೇವಾಲಯಗಳು ಮಾತ್ರ. ಗ್ರಾಮದ ಹೆಬ್ಬಾಗಿಲ ಬಳಿ ಹೊಯ್ಸಳ ಶೈಲಿಯ ಚಂಡಿಕೇಶ್ವರ ದೇವಾಲಯವಿದೆ. ಇದಕ್ಕೆ ಎರಡು ಗರ್ಭಗೃಹಗಳು ಇದ್ದು ಅವುಗಳಲ್ಲಿ ಶಿವಲಿಂಗಗಳು ಸ್ಥಾಪಿತಗೊಂಡಿವೆ. ಕ್ರಿ. ಶ. 1191ರಲ್ಲಿ ಮಹಾಮಂಡಳೇಶ್ವರ ಗಂಗರಾಜ ಕಟ್ಟಿಸಿದ ಗಂಗೇಶ್ವರ, ಬ್ರಹ್ಮೇಶ್ವರ ಎರಡೂ ದೇವಾಲಯಗಳೂ ಪ್ರಸಿದ್ಧವಾದವು. ಎರಡೂ ಸುಂದರವಾದ ಹೊಯ್ಸಳ ಶಿಲ್ಪಗಳನ್ನು ಹೊಂದಿವೆ. ಹೊಯ್ಸಳ ಮಂತ್ರಿಯಾಗಿದ್ದ ಹರಹ ಸಾಹಣಿಯು ಇಲ್ಲಿ ಕ್ರಿ. ಶ. 1205ರಲ್ಲಿ ವೀರಭದ್ರೇಶ್ವರ, ದೇವಸ್ಥಾನವನ್ನು ಕಟ್ಟಿಸಿದ. ಅಲ್ಲದೆ ಇಲ್ಲಿ ಬೀರಲಿಂಗೇಶ್ವರ ಮತ್ತು ರೇವಣಸಿದ್ದೇಶ್ವರ ದೇವಸ್ಥಾನಗಳೂ ಇವೆ. ಹನ್ನೆರಡು ಸಂವತ್ಸರಗಳಿಗೊಮ್ಮೆ ಇಲ್ಲಿ 15 ದಿನಗಳ ಕಾಲ ಬೀರಲಿಂಗೇಶ್ವರನ ಹೆಸರಿನಲ್ಲಿ ವಿಶೇಷ ಜಾತ್ರೆ ನಡೆಯುತ್ತದೆ.

ಕನಕಪುರ : (ಬೆಂಗಳೂರು ಜಿ; ತಾ. ಕೇಂ; ಜನ: 30,153) ಕನಕಪುರವು ಅರ್ಕಾವತಿ ನದಿಯ ಬಲದಂಡೆಯ ಮೇಲೆ ಇದೆ. ಅದು ಬೆಂಗಳೂರಿನ ದಕ್ಷಿಣಕ್ಕೆ 56 ಕಿಮೀ ದೂರದಲ್ಲಿ ಇದೆ. ಇಲ್ಲಿ ದೊರೆತಿರುವ ಒಂದು ಶಾಸನದಲ್ಲಿ ಈ ಊರನ್ನು ಕಾಣಿಕಾರನಹಳ್ಳಿ ಎಂದು ಹೆಸರಿಸಲಾಗಿದೆ. 1947ರವರೆಗೆ ಇದನ್ನು ಕಾನಕಾನಹಳ್ಳಿ ಎಂದು ಕರೆಯಲಾಗುತ್ತಿತ್ತು. ಚನ್ನಪಟ್ಟಣದ ಪಾಳೆಯಗಾರನು ಇಲ್ಲಿ ಒಂದು ಕೋಟೆ ಕಟ್ಟಿದನೆಂದು ತೋರಿಬರುತ್ತದೆ. ಕ್ರಿ.ಶ. 1630ರಲ್ಲಿ ಮೈಸೂರರಸು ಚಾಮರಾಜ ಒಡೆಯರ್ ಇದನ್ನು ಆಕ್ರಮಿಸಿಕೊಂಡರು. ಶ್ರೀರಂಗಪಟ್ಟಣದತ್ತ ದಾಳಿಗೆ ಹೊರಟಿದ್ದ ಬ್ರಿಟಿಷ್ ಸೈನ್ಯಕ್ಕೆ ದೊರಕಬಹುದಾಗಿದ್ದ ರಕ್ಷಣಾ ಸೌಲಭ್ಯ ತಪ್ಪಿಸಲೋಸುಗ ಟಿಪ್ಪು ಇಲ್ಲಿನ ಕೋಟೆಯನ್ನು ಎರಡು ಸಲ ಧ್ವಂಸ ಮಾಡಿದ. ಇಲ್ಲಿ ಶ್ರೀರಾಮ, ಗಣಪತಿ, ರಂಗನಾಥಸ್ವಾಮಿ, ಸೋಮೇಶ್ವರ, ಕೆಂಕೇರಮ್ಮ, ಪೊಲಕೋಟಮ್ಮ, ಆಂಜನೇಯರುಗಳ ದೇವಸ್ಥಾನಗಳು ಮುಖ್ಯವಾದವು. ಇಲ್ಲಿ ವಾರ್ಷಿಕ ಜಾತ್ರೆ ಮತ್ತು ಶ್ರೀರಾಮ ದೇವಸ್ಥಾನದ ದನಗಳ ಪರಿಷೆಗಳು ಒಟ್ಟಿಗೆ ಜರಗುತ್ತವೆ. ಮತ್ತು ಅಸಂಖ್ಯಾತ ಜನ ಇವುಗಳಲ್ಲಿ ಪಾಲ್ಗೊಳ್ಳುತ್ತಾರೆ. ಇಲ್ಲಿನ ವೀರಶೈವರ ದೇಗುಲ ಮಠವು ಬಹಳ ಹಳೆಯದು ಮತ್ತು ಗೌರವಾನ್ವಿತವಾದುದು. ಈ ಮಠದಲ್ಲಿ ನಿರ್ವಾಣಸ್ವಾಮಿ, ಮರುಳಸಿದ್ಧಸ್ವಾಮಿ ಮೊದಲಾದ ಶರಣರ ಗದ್ದುಗೆಗಳು ಇವೆ. ಈ ಮಠದೊಳಗೆ ಕ್ರಿ.ಶ. 1667ರ ಒಂದು ಶಾಸನವಿದ್ದು ಅದರಲ್ಲಿ ದಳವಾಯಿ ಕುಮಾರಯ್ಯನ ತಾಯಿ ತಿಮ್ಮಮ್ಮನು ದೇವಸ್ಥಾನಕ್ಕೆ ಮಾಡಿದ ದಾನ ದತ್ತಿಗಳ ಉಲ್ಲೇಖವಿದೆ. ಕ್ರಿ.ಶ. 1678ರ ಇನ್ನೊಂದು ಶಾಸನದಲ್ಲಿ ಕುಮಾರಯ್ಯನು ಈ ಮಠವನ್ನು ಪುನಃ ಕಟ್ಟಿಸಿ ಅದಕ್ಕೆ ಬೇಕಾದಷ್ಟು ದತ್ತಿಗಳನ್ನು ನೀಡಿದ ಉಲ್ಲೇಖವಿದೆ. ಈ ಮಠದ ಆಶ್ರಯದಲ್ಲಿ ಒಂದು ಉಚಿತ ವಿದ್ಯಾರ್ಥಿನಿಲಯ ಮತ್ತು ಒಂದು ಸಂಸ್ಕೃತ ವೇದ ಪಾಠಶಾಲೆ ನಡೆಯುತ್ತಿವೆ. ಜುಮ್ಮಾ ಮಸೀದಿ ಮತ್ತು ಮೆಳೆಕೋಟೆ ಮಸೀದಿ ಎಂಬ ಎರಡು ಮಸೀದಿಗಳು ಇವೆ. ಎರಡು ದರ್ಗಾಗಳೂ ಇವೆ. ಸಂತ ರೀತಾ ಹೆಸರಿನ ಒಂದು ಇಗರ್ಜಿಯೂ ಇದೆ. ಇಲ್ಲಿನ ಗ್ರಾಮೀಣ ವಿದ್ಯಾಸಂಸ್ಥೆ ಅನೇಕ ವಿದ್ಯಾಸಂಸ್ಥೆಗಳನ್ನೂ, ಒಂದು ಪ್ರಥಮ ದರ್ಜೆ ಕಾಲೇಜನ್ನೂ ನಡೆಸುತ್ತಿದೆ. ಇದು ಪ್ರಸಿದ್ಧವಾದ ರೇಷ್ಮೆ ವ್ಯಾಪಾರ ಕೇಂದ್ರ. ಇಲ್ಲಿ ಒಂದು ರೇಷ್ಮೆ ನೂಲು ಬಿಚ್ಚುವ ಕಾರ್ಖಾನೆ ಇದೆ. ಜೊತೆಗೆ ರೇಷ್ಮೆ ನೂಲುವ, ಹುರಿ ಮಾಡಿ ಲಡಿ ಮಾಡುವ ಅನೇಕ ಖಾಸಗಿ ಘಟಕಗಳೂ ಇವೆ. ಒಂದು ತೆಂಗಿನ ನಾರು ಘಟಕ, ರೇಷ್ಮೆಗೂಡು ಮಾರುಕಟ್ಟೆ ಇವೆ. ಕನಕಪುರಕ್ಕೆ ಎರಡು ಕಿಮೀ ದೂರದಲ್ಲಿರುವ ಕಲ್ಲಹಳ್ಳಿ ಗ್ರಾಮದಲ್ಲಿ ಪ್ರಸಿದ್ಧಿ ಪಡೆದ ಶ್ರೀನಿವಾಸ ದೇವಸ್ಥಾನವಿದೆ. ಕಾವೇರಿ ಮತ್ತು ಅರ್ಕಾವತಿಗಳ ಸುಂದರ ಸಂಗಮ ಕನಕಪುರಕ್ಕೆ ಅನತಿ ದೂರದಲ್ಲೇ ಆಗುತ್ತದೆ. ಈ ಸಂಗಮ ಕ್ಷೇತ್ರ ತನ್ನ ಪ್ರಕೃತಿ ಸೌಂದರ್ಯದಿಂದ ಜನಮನವನ್ನು ತಣಿಸುತ್ತದೆ. ನದಿ ದಂಡೆಯ ಮೇಲೆ ಹಳೇ ಕಾಲದ ಸಂಗಮೇಶ್ವರ ದೇವಾಲಯ ಮತ್ತು ಪ್ರವಾಸಿ ಮಂದಿರಗಳು ಇವೆ. ಇಲ್ಲಿಗೆ ಐದು ಕಿಮೀ ದೂರದಲ್ಲಿ ಮೇಕೆದಾಟು ಎಂಬ ಬಹು ರಮ್ಯ ಸ್ಥಳವಿದೆ. ಇಲ್ಲಿಗೆ ಸಂಗಮದಿಂದ ಸಣ್ಣ ವಾಹನಗಳು ಹೋಗಬಹುದಾದ ರಸ್ತೆಯಿದೆ. ಈ ಸ್ಥಳಕ್ಕೆ ಈ ಹೆಸರು ಬರಲು ಇಲ್ಲಿನ ಪ್ರಾಕೃತಿಕ ಸ್ವರೂಪ ಕಾರಣ. ಕಾವೇರಿ ನದಿ ಆಳವಾದ ಬಂಡೆಗೋಡೆಯ ಮೇಲೆ ಹರಿಯುತ್ತದೆ. ಎರಡು ದಂಡೆ ಮೇಲಿನ ಬಂಡೆಗಳು ಒಂದಕ್ಕೊಂದಕ್ಕೆ ಎಷ್ಟು ಹತ್ತಿರವಾಗಿವೆ ಎಂದರೆ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಮೇಕೆ ಜಿಗಿಯಬಹುದು. ಕೆಲವು ವರ್ಷಗಳ ಕೆಳಗೆ ಈ ಪ್ರಕೃತಿ ಸೌಲಭ್ಯ ಒದಗಿಸಿದ್ದ ಬಂಡೆಗಳಲ್ಲೊಂದು ಕಳಚಿಬಿದ್ದಿತು. ದಂಡೆಯ ಮೇಲಿನ ಈ ತಾಣದಿಂದ 60 ಅಡಿಗಳ ಕೆಳಗಿನ ಬಹು ಸಣ್ಣ ಜಾಗದಲ್ಲಿ ಸಂಗಮವಾದ ಕಾವೇರಿ-ಅರ್ಕಾವತಿಗಳ ನೀರು ರಭಸವಾಗಿ ನುಗ್ಗುತ್ತದೆ. ಸ್ಥಳ ಜನಾಕರ್ಷಣೀಯವಾಗಿರುವುದರಿಂದ ಅನೇಕರು ವಿಹಾರಾರ್ಥವಾಗಿ ಬಂದು ಹೋಗುತ್ತಿರುತ್ತಾರೆ. ಸಂಗಮದವರೆಗೆ ಮಾತ್ರ ಸಾರ್ವಜನಿಕ ವಾಹನ ಸೌಕರ್ಯವಿದೆ.

ಕಲಘಟಗಿ : (ಧಾರವಾಡ ಜಿ; ತಾ. ಕೇ; ಜನ: 11,034) ಕಲಘಟಗಿಯು ಧಾರವಾಡದ ದಕ್ಷಿಣಕ್ಕೆ 34 ಕಿಮೀ ದೂರದಲ್ಲಿದೆ. ಇಲ್ಲಿ 1973 ರಿಂದ ಅಸ್ತಿತ್ವಕ್ಕೆ ಬಂದಿರುವ ಪುರಸಭೆಯಿದೆ. ಇಲ್ಲಿ ಐದು ಶಾಸನಗಳು ದೊರೆತಿದ್ದು ಅವುಗಳಲ್ಲಿ

ಅತ್ಯಂತ ಹಿಂದಿನದೆಂದರೆ ಚಾಳುಕ್ಯ ಆರನೇಯ ವಿಕ್ರಮಾದಿತ್ಯನ ಕಾಲದ್ದು. ಮರಾಠರ ಆಳ್ವಿಕೆಯ ಕಾಲದಲ್ಲಿ ಇದು ಒಂದು ವಿಭಾಗದ ಆಡಳಿತ ಕೇಂದ್ರವಾಗಿತ್ತು. ಇಲ್ಲಿ ಆಸಕ್ತಿ ಕೆರಳಿಸುವ ಪ್ರಾಚೀನಾವಶೇಷಗಳೇನೂ ಇಲ್ಲ. 18ನೇಯ ಶತಮಾನದ ಇಸ್ಲಾಂ ಧರ್ಮ ಪ್ರಸಾರಕನಾಗಿದ್ದ ರುಸ್ತುಂ ಷಾಹೀದ್‍ರ ಗೋರಿ ಹಾಗೂ ಅವರ ಹೆಸರಿನ ಒಂದು ಕೆರೆಯೂ ಇಲ್ಲಿದೆ. ಹನುಮಾನ್, ವೆಂಕಟೇಶ್ವರ ಮತ್ತು ಬಸವಣ್ಣರ ಆಧುನಿಕ ಶೈಲಿಯ ದೇವಸ್ಥಾನಗಳೂ ಕೆಲವು ಗ್ರಾಮದೇವತೆಗಳ ಗುಡಿಗಳೂ ಇವೆ. ಶಾಂತಿನಾಥ (1857) ಮತ್ತು ಪಾರ್ಶ್ವನಾಥ (1967)ರ ಎರಡು ಬಸದಿಗಳೂ ಮತ್ತು ಒಂದು ಚರ್ಚು ಸಹ ಇವೆ. ಈ ಸ್ಥಳದಲ್ಲಿ ಅನೇಕ ಅಕ್ಕಿ ಗಿರಣಿಗಳು ಮರ ಕೊಯ್ಯುವ ಕಾರ್ಖಾನೆಗಳು ಒಂದು ಬೆಂಕಿಕಡ್ಡಿ ಕಾರ್ಖಾನೆಯೂ ಇವೆ. ಬಣ್ಣ ಬಣ್ಣದ ತೊಟ್ಟಿಲು ತಯಾರಿಕೆಗೆ ಈ ಊರು ಪ್ರಸಿದ್ಧಿ ಪಡೆದಿದೆ. ಕಲಘಟಗಿಯ ಈಶಾನ್ಯಕ್ಕೆ 10 ಕಿಮೀ ದೂರದಲ್ಲಿ ಕಾಮಧೇನು ಎಂಬ ಗ್ರಾಮವಿದೆ. ಅಲ್ಲಿ ಕಲ್ಮೇಶ್ವರ ದೇವಸ್ಥಾನವಿದೆ. ಅದರ ಹೊರಮೈಯಲ್ಲಿ ಸುಂದರವಾದ ಪೌರಾಣಿಕ ಕೆತ್ತನೆಗಳು ಇವೆ.

ಕಲ್ಬುರ್ಗಿ : (ಜಿ., ಉಪವಿಭಾಗ ಮತ್ತು ತಾ ಕೇ; ಜನ: 2,18,621) ಚಾಳುಕ್ಯರ ಶಾಸನಗಳಲ್ಲಿ ಕಲುಂಬರಿಗೆ ಎಂದು ಕರೆಯಲಾಗುತ್ತಿದ್ದ ಗುಲ್ಬರ್ಗ (ಕನ್ನಡದಲ್ಲಿ ಕಲ್ಬುರ್ಗಿ)ವು ಬೆಂಗಳೂರಿನಿಂದ 623 ಕಿಮೀ ದೂರದಲ್ಲಿದೆ. ಇದು ಕಂದಾಯ ವಿಭಾಗದ ಕೇಂದ್ರವಾಗಿದೆ. ಈ ನಗರವೂ 1347ರಲ್ಲಿ ಅಲ್ಲಾವುದ್ದೀನ್ ಬಹಾಮನ್ ಷಾನ ರಾಜಧಾನಿಯಾಗಿತ್ತು. 1424ರ ವರೆಗೆ ಬಿದರೆಗೆ ವರ್ಗಾವಣೆ ಆಗುವವರೆಗೂ ರಾಜಧಾನಿಯಾಗಿಯೇ ಮುಂದುವರೆಯಿತು. 1347ಕ್ಕೂ ಮುಂಚೆಯೂ ಇದು ಪ್ರಾಂತೀಯ ಆಡಳಿತದ ಕೇಂದ್ರವಾಗಿದ್ದಿತು. ಮುಹಮ್ಮದೀಯರ ಆಕ್ರಮಣಕ್ಕೆ ಮುಂಚೆ ಇದು ವಾರಂಗಲ್ಲಿನ ಕಾಕತೀಯರ ಆಡಳಿತ ಪ್ರದೇಶಕ್ಕೆ ಸೇರಿದ್ದಿತು. ಕಲ್ಬುರ್ಗಿಯ ಕೋಟೆಯನ್ನು ಮೊದಲು ವಾರಂಗಲ್ಲಿನ ರಾಜಾ ಗುಲ್‍ಚಂದ್ ಕಟ್ಟಿಸಿದನೆಂದೂ ಹೇಳಲಾಗಿದೆ. ಅನಂತರ ಅದನ್ನು ಅಲ್ಲಾವುದ್ದೀನ್ ಬಹಮನಿ ಬಲಪಡಿಸಿದನು. ಹದಿನೈದು ಕಾವಲು ಗೋಪುರಗಳುಳ್ಳ ಈ ಕೋಟೆಯು ಒಂದು ವಿಸ್ತಾರವಾದ ರಚನೆಯಾಗಿದೆ. ಫಿರೋಜ್ ಷಾ (1397-1422) ಹಳೆಯ ಕೋಟೆಯುಲ್ಲಿರುವ ಬೃಹತ್ ಮಸೀದಿಯನ್ನು 1397ರಲ್ಲಿ ಕಟ್ಟಿಸಿದನು. ಪೂರ್ವದಿಂದ ಪಶ್ಚಿಮಕ್ಕೆ 216 ಅಡಿ ಉದ್ದ, ಉತ್ತರದಿಂದ ದಕ್ಷಿಣಕ್ಕೆ 176 ಅಡಿ ಅಗಲವಿದ್ದು 38,016 ಚದರ ಅಡಿ ವಿಸ್ತೀರ್ಣ ಪ್ರದೇಶವನ್ನು ಆಕ್ರಮಿಸುವ ಈ ಮಸೀದಿಯು ಸ್ಪೇನಿನ ಕಾರ್ಡೊವಾದಲ್ಲಿರುವ ದೊಡ್ಡ ಮಸೀದಿಯನ್ನು ಹೋಲುತ್ತದೆ. ಅಲ್ಲದೆ ಭಾರತದಲ್ಲಿ ಪೂರ್ಣವಾಗಿ ಮೇಲ್ಛಾವಣಿಯನ್ನು ಹೊಂದಿರುವ ಏಕೈಕ ಮಸೀದಿಯಾಗಿದೆ. ಇರಾನಿನ ಕ್ವಾಸ್ವಿನ್ ಎಂಬ ಊರಿನ ರಫಿ ಎಂಬಾತನು ಇದರ ಶಿಲ್ಪಿ. ಪ್ರಸಿದ್ಧ ಸೂಫಿ ಸಂತ ಖ್ವಾಜಾ ಸೈಯದ್ ಗೆಸೂ ದರಾಜ್ (ಬಂದೇ ನವಾಜ್) ಕಲ್ಬುರ್ಗಿಗೆ 1413ರಲ್ಲಿ ಬಂದರು. ಪ್ರಮುಖವಾಗಿ ಪರ್ಷಿಯನ್ ಲೇಖಕರಾಗಿದ್ದ ಇವರು ದಖ್ಖಣದಲ್ಲಿ ನೆಲೆಸಿದ ನಂತರ ಉರ್ದು ಭಾಷೆಯಲ್ಲೂ ಪರಿಣತಿಯನ್ನು ಪಡೆದುಕೊಂಡರು. ಬಹಮನಿ ದೊರೆ ಅಹಮದ್ ಷಾ (1422-36) ಬಂದೇ ನವಾಜರಿಗೆ ಅನೇಕ ಉದಾರವಾದ ದಾನ ದತ್ತಿಗಳನ್ನು ನೀಡಿದನು. ಈ ಸಂತರ ಸಮಾಧಿಯು ಇಂದಿಗೂ ಮುಸ್ಲಿಂ ಹಾಗೂ ಹಿಂದೂಗಳ ಪವಿತ್ರ ಸ್ಥಳವೆನಿಸಿಕೊಂಡಿದೆ. ಈ ಸಮಾಧಿಯು ಒಂದು ವಿಶಾಲವಾದ ಸಂಕೀರ್ಣದಲ್ಲಿ ಹಲವಾರು ಸಮಾಧಿಗಳ ಮಧ್ಯದಲ್ಲಿದ್ದು ಭಾರಿ ಕಟ್ಟಡವನ್ನು ಹೊಂದಿದೆ. ಈ ಕಟ್ಟಡದೊಳಗೆ ಅನೇಕ ವರ್ಣಚಿತ್ರಗಳಿವೆ. ಇದೇ ಸಂಕೀರ್ಣದಲ್ಲಿಯೇ ಔರಂಗಜೇಬನು ಕಟ್ಟಿಸಿದನೆಂದು ಹೇಳಲಾಗುವ ಒಂದು ಮಸೀದಿಯೂ ಇದೆ. ಬಹಮನಿ ಸುಲ್ತಾನರು ಈ ರಾಜಧಾನಿಗೆ ಹೊರ ದೇಶಗಳಿಂದ ಕವಿಗಳು, ಪಂಡಿತರು, ರಾಜಕಾರಣಿಗಳನ್ನು ಬರಮಾಡಿಕೊಂಡರು. ಕಾಲಾನುಕ್ರಮದಲ್ಲಿ ಇದು ಆದಿಲ್ ಷಾಹಿ ದೊರೆಗಳ ಅಧೀನಕ್ಕೆ ಒಳಗಾಯಿತು. ಮೊಗಲರ ಕಾಲದಲ್ಲಿಯೂ ನಿಜಾಮನ ಕಾಲದಲ್ಲಿಯೂ ಕಲ್ಬುರ್ಗಿಯು ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿತು. ಮೊದಲನೇಯ ನಿಜಾಮ್ ಉಲ್ ಮುಲ್ಕ ಅಸಫ್ ಜಾ ಇದನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡನು. 1873ರಲ್ಲಿ ಇದನ್ನು ಜಿಲ್ಲಾ ಕೇಂದ್ರವನ್ನಾಗಿ ಮಾಡಿದನು. 1956ರಲ್ಲಿ ಇದು ಕರ್ನಾಟಕ ರಾಜ್ಯದ ಒಂದು ಭಾಗವಾಯಿತು. ನಗರದ ವಾಯುವ್ಯ ಭಾಗದಲ್ಲಿ ಕಲ್ಬುರ್ಗಿಯ ಹಳೆಯ ಕೋಟೆಯಿದೆ. ಇದರಲ್ಲಿನ ದ್ವಾರಗಳೂ ಹೊರಗೋಡೆಗಳೂ, ಕಟ್ಟಡಗಳೂ, ಜೀರ್ಣಾವಸ್ಥೆಯಲ್ಲಿವೆ. ಬಂದೇ ನವಾಜರ ಸಮಾಧಿಯಲ್ಲದೆ ಕಲ್ಬುರ್ಗಿಯ ಮತ್ತೊಂದು ಪ್ರಮುಖ ಸ್ಮಾರಕವೆಂದರೆ 19ನೇಯ ಶತಮಾನದ ವೀರಶೈವ ಸಂತ ಶರಣ ಬಸವೇಶ್ವರರ ದೇವಾಲಯ. ಈ ಶರಣರ ಉತ್ತರಾಧಿಕಾರಿಗಳು ನಗರದಲ್ಲಿ ಹಲವಾರು ವಿದ್ಯಾಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ಖಲಂಧರ್ ಖಾನನ ಮಸೀದಿ ಮತ್ತು ಚಾಂದ್ ಬೀಬಿ ಕಟ್ಟಿಸಿದ ಹೀರಾಪುರ್ ಮಸೀದಿ (5851) ಇಲ್ಲಿಯ ಎರಡು ಪ್ರಮುಖ ಕಟ್ಟಡಗಳು. ತುಘಲಕ್ ಶೈಲಿಯಲ್ಲಿ ನಿರ್ಮಿಸಲಾಗಿರುವ ಸುಲ್ತಾನ್ ಹಸನ್‍ನ ಸಮಾಧಿ ಮತ್ತು ಅವನ ಉತ್ತರಾಧಿಕಾರಿಗಳಿಬ್ಬರ ಸಮಾಧಿಗಳು ಈ ನಗರದಲ್ಲಿವೆ. ಫಿರೋಜ್ ಷಾನ ಸಮಾಧಿಯು ಮತ್ತೊಂದು ಭವ್ಯವಾದ ಕಟ್ಟಡ. ಷಾ ಬಜಾರ್ ಮಸೀದಿ ಬಹಮನಿ ಕಾಲದ ಮತ್ತೊಂದು ಪ್ರಮುಖ ಸ್ಮಾರಕ. ನಗರದ ಹೊರಗಡೆ ಹಫ್ತ್ ಗುಂಬಜ್‍ನಲ್ಲಿ ಕ್ರಿ.ಶ. 1375-1422ರ ನಡುವಿನ ಅವಧಿಯಲ್ಲಿ ನಿರ್ಮಿಸಿದ ಬಹಮನಿ ದೊರೆಗಳ ಏಳು ಸಮಾಧಿಗಳಿವೆ. ಕಲ್ಬುರ್ಗಿಯ ಕಟ್ಟಡಗಳು ಇಂಡೊ-ಸಾರ್‍ಸೆನಿಕ್ ಶೈಲಿಗೆ ಉತ್ತಮ ನಿದರ್ಶನಗಳಾಗಿವೆ. ಕಲ್ಬುರ್ಗಿಯಲ್ಲಿ ನಗರ ಕಾರ್ಪೊರೇಶನ್ ಆಡಳಿತವನ್ನು ನಿರ್ವಹಿಸುತ್ತಿದೆ. ಇತ್ತೀಚೆಗೆ ಇಲ್ಲಿ ಒಂದು ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಲಾಗಿದೆ. (ವಾಸ್ತು ಶಿಲ್ಪದ

ಬಗೆಗಿನ ವಿವರಗಳಿಗೆ ಇಸ್ಲಾಮಿಕ್ ವಾಸ್ತುಶಿಲ್ಪದ ಮೇಲಿನ 11ನೇ ಅಧ್ಯಾಯವನ್ನು ನೋಡಿ).

ಕಾರ್ಕಳ : (ದ. ಕ. ಜಿ; ತಾ. ಕೇ; ಜನ: 20,656) ಕಾರ್ಕಳ ಮಂಗಳೂರಿನ ಈಶಾನ್ಯಕ್ಕೆ 52 ಕಿಮೀ ಮತ್ತು ಬೆಂಗಳೂರಿಗೆ 384 ಕಿಮೀ ದೂರದಲ್ಲಿದೆ. ಕಾರ್ಕಳದ ಭೈರರಸ (ಸಾಂತರ) ಮನೆತನದ ವೀರಪಾಂಡ್ಯದೇವನು, ತನ್ನ ಆಳ್ವಿಕೆಯ ಕಾಲದಲ್ಲಿ 1432ರಲ್ಲಿ ಇಲ್ಲಿ 12.8 ಮೀ ಎತ್ತರದ ಗೊಮ್ಮಟ ವಿಗ್ರಹವನ್ನು ಸ್ಥಾಪಿಸಿದ. ಈ ಮನೆತನದ ಆಳ್ವಿಕೆ ಇಲ್ಲಿ 14ನೇಯ ಶತಮಾನದಿಂದಲೇ ಆರಂಭವಾಗಿತ್ತು. ಇಲ್ಲಿನ ಸ್ಮಾರಕಗಳಲ್ಲಿ ಈ ಮನೆತನದವರ ಅನೇಕ ಶಾಸನಗಳು ದೊರಕಿವೆ. ಗ್ರಾನೈಟ್ ಕಲ್ಲಿನಲ್ಲಿ ಕಟ್ಟಿರುವ ಸುಂದರವಾದ ಚತುರ್ಮುಖ ಬಸದಿ, ಅನಂತಶಯನ ಮತ್ತು ವೆಂಕಟರಮಣ ದೇವಸ್ಥಾನಗಳು ಇಲ್ಲಿನ ಶಾಶ್ವತ ಸ್ಮಾರಕ ಕಟ್ಟಡಗಳು. ಇವೆಲ್ಲ ವಿಜಯನಗರ ಶಿಲ್ಪ ಶೈಲಿಯಲ್ಲಿ ಕಟ್ಟಲ್ಪಟ್ಟಿವೆ. ಭೈರರಸರ ಹಳೆಯ ಅರಮನೆಯ ಜೀರ್ಣೋದ್ಧಾರವನ್ನು ಇತ್ತೀಚೆಗೆ ಮಾಡಲಾಗಿದೆ. ಗೊಮ್ಮಟ ಗುಡ್ಡದ ಸನಿಹದಲ್ಲಿರುವ ರಾಮಸಮುದ್ರ ಎಂಬ ಹೆಸರಿನ ಕೆರೆಯ ನಿರ್ಮಾಣವು 14ನೇಯ ಶತಮಾನದ ಕಡೆಯ ಕಾಲುಶತಮಾನದಲ್ಲಿ ಆಳುತ್ತಿದ್ದ ರಾಮನಾಥ ಅರಸನೆಂಬ ಕಾರ್ಕಳ ಮನೆತನದ ಅರಸನ ಕಾಲದಲ್ಲಿ ಆಯಿತು. ಇಲ್ಲಿನ ನಾಗರಿಕ ಪೂರೈಕೆಯನ್ನು ಇಲ್ಲಿನ ಪೌರಾಡಳಿತ ನಿರ್ವಹಿಸುತ್ತದೆ. ಇಲ್ಲಿನ ಶಿಲ್ಪಕಲೆ ಶಿಲ್ಪಿ ರಂಜಾಳ ಗೋಪಾಲ ಶೆಣೈ ಅವರ ಮಾರ್ಗದರ್ಶನದಲ್ಲಿ ಈಗಲೂ ಹಾಗೆಯೇ ಉಳಿದುಕೊಂಡು ಬಂದಿದೆ. ಇಲ್ಲಿನ ಸಂತ ಲಾರೆನ್ಸ್ ಇಗರ್ಜಿ ಕ್ರೈಸ್ತರಲ್ಲದವರ ಗೌರವಕ್ಕೂ ಪಾತ್ರವಾಗಿದೆ. ಕಾರ್ಕಳಕ್ಕೆ ಅನತಿ ದೂರದ ಹಿರಿಯಂಗಡಿ ಗ್ರಾಮದಲ್ಲಿ ಒಂದು ಸುಂದರ ಬಸದಿ ಮತ್ತು ಒಂದು ಬಹು ಎತ್ತರದ ಮಾನಸ್ತಂಭವಿದೆ. ಕಾರ್ಕಳದ ಉತ್ತರಕ್ಕೆ 12 ಕಿಮೀ ದೂರದಲ್ಲಿರುವ ವರಂಗ (ಜನ: 2,582) ದಲ್ಲಿ ಕೊಳದ ನಡುವೆ ಒಂದು ಜೈನ ಮಠವಿದೆ. ಅಲ್ಲದೆ ವಿಜಯನಗರದ ಕಾಲದ ನೇಮಿನಾಥ ಬಸದಿ ಮತ್ತು ಚತುರ್ಮುಖ ಬಸದಿ ಎಂಬ ಎರಡು ಜೈನ ಬಸದಿಗಳು ಇವೆ. ಇಲ್ಲಿನ ಬೆಟ್ಟದ ಮೇಲೆ ಬೇಡರಕೋಟೆ ಎಂಬ ಹೆಸರಿನ ಕೋಟೆಯಿದೆ. ನಡಪಾಲ ಗ್ರಾಮದ ಭಾಗ ಸೋಮೇಶ್ವರ (ಜನ: 2,098) ವು ಕಾರ್ಕಳ–ಆಗುಂಬೆ ದಾರಿಯಲ್ಲಿ ಕಾರ್ಕಳದ ಈಶಾನ್ಯಕ್ಕೆ 40 ಕಿಮೀ ದೂರದಲ್ಲಿದೆ. ಇದು ಪಶ್ಚಿಮ ಘಟ್ಟಗಳ ಸಾಲಿನ ತಪ್ಪಲಿನಲ್ಲಿ, ಘಟ್ಟದ ಕೆಳಗಿನ ಉಪ್ಪು, ಮೆಣಸು ಹಾಗೂ ಇತರ ಉತ್ಪಾದನೆಗಳನ್ನು ಘಟ್ಟದ ಮೇಲಿನ ಇತರ ಭಾಗಗಳಿಗೆ ಸಾಗಿಸಲಿರುವ ಘಟ್ಟವೇರುವ ಈ ಘಾಟಿ ರಸ್ತೆಯ ಆರಂಭದಲ್ಲಿಯೇ ಇದೆ. ಶಿವಮೊಗ್ಗಾ ಕಡೆ ಹೋಗಬೇಕಾಗಿರುವ ಬಸ್ ಪ್ರಯಾಣಿಕರು ಇಲ್ಲಿ ಇಳಿದು ಇಲ್ಲಿಂದ ಮುಂದೆ ಆಗುಂಬೆಯವರೆಗಿನ ತೀರ ಕಿರಿದಾದ ಅಂಕುಡೊಂಕಿನ ಘಾಟಿ ರಸ್ತೆಯಲ್ಲಿ ಬೇರೆ ಸಣ್ಣ ವಾಹನಗಳಲ್ಲಿ ಹೋಗಬೇಕು. ಇಲ್ಲಿ ಸೋಮೇಶ್ವರ ಮತ್ತು ವೆಂಕಟರಮಣ ದೇವಸ್ಥಾನಗಳಿವೆ. ಬಾರಕೂರಿನ ಅಧಿಪತಿಗಳು ಸೋಮೇಶ್ವರ ದೇವಸ್ಥಾನವನ್ನು ಕಟ್ಟಿಸಿದ್ದರು. ಆದರೆ ವೆಂಕಟರಮಣ ದೇವಸ್ಥಾನವನ್ನು ಈಗ 2-3 ಶತಮಾನಗಳ ಹಿಂದೆ ಕಟ್ಟಲಾಯಿತು. ನಂದಳಿಕೆ (ಜನ: 2,618) ಕಾರ್ಕಳದ ಪಶ್ಚಿಮಕ್ಕೆ 30 ಕಿಮೀ ದೂರದಲ್ಲಿದೆ. ಇದು ಹಿಂದೆ, ನಂದಳಿಕೆ ಹೆಗ್ಗಡೆಮನೆತನದ ಆಡಳಿತಕ್ಕೆ ಒಳಪಟ್ಟಿತ್ತು. ಹೆಗ್ಗಡೆಮನೆತನದ ಪೂರ್ವಿಕರ ಮನೆ ಕೆಲವು ಸುಂದರವಾದ ಮರದ ಕೆತ್ತನೆಗಳಿಂದ ಶೋಭಾಯಮಾನವಾಗಿದೆ. ರಾಮಾಶ್ವಮೇಧ ಹಾಗೂ ಇತರ ಕೃತಿಗಳ ರಚಯಿತನೂ ಮುದ್ದಣ್ಣ ಕಾವ್ಯನಾಮದಿಂದ ಪ್ರಸಿದ್ಧನೂ ಆದ ನಂದಳಿಕೆ ಲಕ್ಷ್ಮೀನಾರಣಪ್ಪ ಈ ಗ್ರಾಮದವನು. ಮೂಡುಬಿದರೆ (1981ರ ಜನ: 13,575) ಮಂಗಳೂರಿನ ಈಶಾನ್ಯಕ್ಕೆ 35 ಕಿಮೀ ದೂರದಲ್ಲೂ, ಕಾರ್ಕಳದ ದಕ್ಷಿಣಕ್ಕೆ 28 ಕಿಮೀ ದೂರದಲ್ಲೂ ಇದೆ. ಇದು ದಕ್ಷಿಣದ ಜೈನಕಾಶಿ ಎಂದು ಪ್ರಸಿದ್ಧವಾಗಿದೆ. ಗುಡ್ಡಸಾಲುಗಳ ನಡುವೆ ಇರುವ ಈ ಊರು ಸಂತ ಮಹಾಪುರುಷರು ಹಾಗೂ ಪ್ರಸಿದ್ಧ ಕವಿಗಳ ವಾಸ್ತವ್ಯದ ಫಲವಾಗಿ ವಿಶೇಷ ಮಹತ್ವ ಪಡೆದುಕೊಂಡಿದೆ. ಇಲ್ಲಿರುವ 18 ಬಸದಿಗಳಲ್ಲಿ ಪೂಜಾರ್ಚನೆಗಳನ್ನು ಮಾಡಿಸಲು ಭಾರತದ ನಾನಾ ಸ್ಥಳಗಳಿಂದ ಜೈನರು ಇಲ್ಲಿಗೆ ಯಾತ್ರೆ ಬರುತ್ತಾರೆ. ಹದಿನೆಂಟು ಬಸದಿಗಳಲ್ಲಿ ಅತ್ಯಂತ ದೊಡ್ಡದಾದ ತ್ರಿಭುವನತಿಲಕ ಚೂಡಾಮಣಿ ಬಸದಿಯು 'ಸಾವಿರ ಕಂಭದ ಬಸದಿ' ಎಂದು ಪರಿಚಿತವಾಗಿದೆ. ಚಂದ್ರನಾಥ ಬಸದಿ ಮತ್ತು ಹೊಸ ಬಸದಿಗಳನ್ನು ವಿಜಯನಗರ ಶಿಲ್ಪ ಶೈಲಿಯಲ್ಲಿ ಕ್ರಿ.ಶ. 1429-30ರಲ್ಲಿ ಕಟ್ಟಲಾಯಿತು. ಬಡಗ ಬಸದಿ, ಶೆಟ್ಟರ ಬಸದಿ, ಹಿರೇ ಬಸದಿ ಹಾಗೂ ಇತರ ಹದಿಮೂರು ಬಸದಿಗಳು ನೋಡಲು ಯೋಗ್ಯವಾದವುಗಳಾಗಿವೆ. ಅನೇಕ ಜೈನಗುರುಗಳ ಸಮಾಧಿಗಳೂ ಇಲ್ಲಿವೆ. ಚೌಟ ಮನೆತನದವರು ಇದನ್ನು ತಮ್ಮ ಆಡಳಿತ ಕೇಂದ್ರವಾಗಿ ಮಾಡಿಕೊಂಡಿದ್ದರು. ಆ ವಂಶೀಯರು ಈಗಲೂ ಇಲ್ಲಿನ ಅರಮನೆಯಲ್ಲಿ ವಾಸಿಸುತ್ತಿದ್ದಾರೆ. ಈ ಅರಮನೆಯಲ್ಲಿ ಅತಿ ಸುಂದರ ಕೆತ್ತನೆಯ ನಾಲ್ಕು ಮರದ ಕಂಭಗಳು ಇವೆ. ಅದೇ ರೀತಿ ಸುಂದರ ಕೆತ್ತನೆಯ ಮರದ ಚಾವಣಿ ಮತ್ತು ಸೂಕ್ಷ್ಮ ಕೆತ್ತನೆಯ ಮರದ ಜಾಲಂಧ್ರಗಳು ಅಲ್ಲಿವೆ. ಮರಗಂಬಗಳಲ್ಲಿನ ನವನಾರಿಕುಂಜರ ಮತ್ತು ಪಂಚನಾರಿ ತುರಗಗಳು ಎದ್ದುಕಾಣುವ ಕುಸುರಿ ಕೆಲಸಗಳು. ಕನ್ನಡದ ಸುಪ್ರಸಿದ್ಧ ಕವಿಯಾದ ರತ್ನಾಕರವರ್ಣಿ (16ನೇಯ ಶತಮಾನ) ತನ್ನ ಭರತೇಶ ವೈಭವವನ್ನು ರಚಿಸಿದುದು ಇಲ್ಲೇ. 1981ರ ಜನಗಣತಿಯ ಪ್ರಕಾರ ಇದನ್ನು ಗ್ರಾಮಮಟ್ಟದಿಂದ ಪಟ್ಟಣದ ಮಟ್ಟಕ್ಕೆ ಏರಿಸಲಾಗಿದೆ. ಇಲ್ಲಿನ ಜೈನಮಠದಲ್ಲಿ ಜೈನಧರ್ಮ ತತ್ತ್ವಗಳ ಗ್ರಂಥಗಳಾದ ಧವಳ ಮತ್ತು ಜಯಧವಳಗಳ ಅಮೂಲ್ಯ ಮತ್ತು ದುರ್ಲಭವಾದ ಹಸ್ತಪ್ರತಿಗಳು ಇವೆ.

ಕಾರವಾರ : (ಉ. ಕ. ಜಿ; ಜಿ, ಉಪವಿಭಾಗ ಮತ್ತು

ತಾ. ಕೇ; ಜನ: 42,203) ಬೆಂಗಳೂರಿನ ವಾಯುವ್ಯಕ್ಕೆ 519 ಕಿಮೀ ದೂರದಲ್ಲಿರುವ ಕಾರವಾರ ಸಮುದ್ರದಂಡೆಯ ಊರು. ಹಿಂದಿನ ಕಾಲದ ನಾಲ್ಕು ಗ್ರಾಮಗಳಾದ ಬೈತ್ಖೋಲ್, ಬಾಡ್, ಕೊನೆ ಮತ್ತು ಕೋಡಿಬಾಗ್ ಒಟ್ಟುಗೂಡಿ ಕಾರವಾರ ಎಂಬ ಹೆಸರನ್ನು ಪಡೆದಿದೆ. ಹತ್ತಿರದ ಗ್ರಾಮ ಕಡವಾಡದಿಂದಾಗಿ (ಕಡೇ ವಾಡಿ ಅಥವಾ ಕಡೇ ಗ್ರಾಮ) ಈ ಹೆಸರು ಕೂಡಿ ಬಂತು. ಕಾರವಾರವು ಉತ್ತರ ಕನ್ನಡ ಜಿಲ್ಲೆಯ ಜಿಲ್ಲಾ ಕೇಂದ್ರವಾಗಿದೆ. ಇದರ ಮೂರು ಕಡೆ ಸಮುದ್ರವಿದ್ದು, ಈ ಪರಿಸರವೆಲ್ಲ ಸಮುದ್ರ ಸ್ನಾನಮಾಡುವವರಿಗೆ ಹಿತಕರ ತಾಣ ವಾಗಿದೆ. ಕ್ರಿ.ಶ. 1510ರಲ್ಲಿ ಸಿಂತಕೋರ ಅಥವಾ ಚಿತಾಕುಲ್ ಎಂಬ ಹೆಸರಿನ ನದಿಯ ಆಚೆ ದಂಡೆಯ ಈ ಸ್ಥಳವನ್ನು ಕರಿಬಾಲ್ ಎಂದು ಕರೆಯಲಾಗಿದೆ. ಹದಿನೇಳನೇಯ ಶತಮಾನದಲ್ಲಿ ಇದು ವಿಜಾಪುರ ರಾಜ್ಯದ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ.ಶ. 1638ರಲ್ಲಿ ಸರ್ ವಿಲಿಯಂ ಕರ್ಟಿನ್ ಕಾರವಾರ ಬಳಿಯ ಕಡವಾಡ ಗ್ರಾಮದಲ್ಲಿ ಒಂದು ವ್ಯಾಪಾರೀ ಮಳಿಗೆಯನ್ನು ಆರಂಭಿಸಿದ. ಕ್ರಿ.ಶ. 1660ರಲ್ಲಿ ಈ ಮಳಿಗೆಯ ತುಂಬಾ ನವುರಾದ ಮಸ್ಲಿನ್ ಬಟ್ಟೆಯನ್ನು ಸಂಗ್ರಹಿಸಿ ವಿದೇಶಗಳಿಗೆ ಕಳುಹಿಸುತ್ತಿತ್ತು. ಇಡೀ ಪಶ್ಚಿಮ ಕರಾವಳಿಯಲ್ಲಿ ತಯಾರಿಸಲಾಗುತ್ತಿದ್ದ ಮಸ್ಲಿನ್ ಬಟ್ಟೆ ಗಳಲ್ಲಿ ಈ ವ್ಯಾಪಾರೀ ಮಳಿಗೆಯದೇ ಅತ್ಯಂತ ಶ್ರೇಷ್ಠವಾದು ದಾಗಿತ್ತು. ಮಸ್ಲಿನ್ ಬಟ್ಟೆಯಲ್ಲದೆ, ಇಲ್ಲಿಂದ ಮೆಣಸು, ಏಲಕ್ಕಿ, ದಾಲ್ಚಿನ್ನಿ ಮತ್ತು ಒರಟಾದ ಡುಂಗರಿ ಎಂಬ ಹೆಸರಿನ ನೀಲಿಬಟ್ಟೆಯನ್ನು ಸಹ ರಫ್ತು ಮಾಡಲಾಗುತ್ತಿತ್ತು. ಈ ವ್ಯಾಪಾರೀ ಮಳಿಗೆಯನ್ನು ಕ್ರಿ.ಶ. 1679ರಲ್ಲಿ ಮುಚ್ಚಲಾಯಿ ತಾದರೂ ಅದನ್ನು ಪುನಃ ಕ್ರಿ.ಶ. 1682ರಲ್ಲಿ ತೆರೆಯಲಾಯಿತು. ಅಷ್ಟೇ ಅಲ್ಲ, ಅಧಿಕ ಉತ್ಪಾದನೆಗೂ ಅವಕಾಶ ಮಾಡಿಕೊಡ ಲಾಯಿತು. ಕ್ರಿ.ಶ. 1715ರಲ್ಲಿ ಈ ಊರು ಸೋಂದೆರಾಜರ ಆಡಳಿತಕ್ಕೆ ಒಳಪಟ್ಟಿತ್ತು. ಆ ಅರಸರು ಕಡವಾಡದ ಹಳೇ ಕೋಟೆಯನ್ನು ಕೆಡವಿ ಸದಾಶಿವಗಡದ ಕೋಟೆಯನ್ನು ಕಟ್ಟಿಸಿ ದ್ದರು. 1862ರಲ್ಲಿ ಬೊಂಬಾಯಿ ಅಧಿಪತ್ಯಕ್ಕೆ ಇದನ್ನು ವರ್ಗಾಯಿಸಿದ ಮೇಲೆ ಈಗಿನ ಹೊಸ ಊರು ವಾಸ್ತವವಾಗಿ ರೂಪುಗೊಂಡಿತು. ಅದರ ಸುಂದರ ಬಂದರಿನಿಂದ ಕಾರವಾರಕ್ಕೆ ಪ್ರಾಶಸ್ತ್ಯ ಬಂದಿದೆ. ಮುಂಬೈಯಿಂದ ಹಿಡಿದು ಕೊಲಂಬೋ ವರೆಗಿನ ಇಡೀ ಕರಾವಳಿ ಪ್ರದೇಶದಲ್ಲಿ ವರ್ಷದ ಎಲ್ಲ ಋತು ಗಳಲ್ಲಿಯೂ ಯೋಗ್ಯವೆನಿಸುವ ಬಂದರು ತಾಣ ಇದೊಂದೇ. ಈ ಬಂದರಿಗೆ ಕಾರವಾರ ಭೂಶಿರದ ರಕ್ಷಣೆ ಬಲವಾಗಿದೆ. ಏಕೆಂದರೆ ಈ ಭೂಶಿರ ಸಮುದ್ರದಲ್ಲಿ ನೈಋತ್ಯ ದಿಕ್ಕಿನಲ್ಲಿ ಎದ್ದು ನಿಂತಿರು ವುದರಿಂದ ಆಗ್ನೇಯ ಮಾರುತದಿಂದ ಬಂದರಿಗೆ ಬಲವಾದ ರಕ್ಷಣೆ ಇದೆ. ಕಾರವಾರ ಕೊಲ್ಲಿಯ ನೋಟ ಅದ್ಭುತ ರಮ್ಯ. ಬಾನೆತ್ತರದ ಸರ್ವೇ ತೋಪಿನ ಬುಡದಿಂದ ಹರಡಿಕೊಂಡಿರುವ ವಿಸ್ತಾರವಾದ ಮಳಲಿನ ಬಿಳಿಪಟ್ಟಿಯವರೆಗೆ ಒಂದು ಕಡೆ ಕಡಲನ್ನು ಸೇರುವ ಕಾಳಿನದಿಯಿಂದ ಇನ್ನೊಂದು ಕಡೆ ರಕ್ಷಿತ ವಾಗಿರುವ ಬೈತ್ಖೋಲ್ ಖಾರಿವರೆಗೆ ಸಮುದ್ರ ಮೈದೆರೆದಿರುವ ನೋಟ ಬಹು ರಮ್ಯ. ಈ ರಮ್ಯ ತಾಣವನ್ನು ವೀಕ್ಷಿಸಿ ಸ್ಫೂರ್ತಿ ಗೊಂಡ ರವೀಂದ್ರನಾಥ್ ಠಾಕೂರರು ತಮ್ಮ ಪ್ರಥಮ ನಾಟಕ ವನ್ನು ರಚಿಸಿದರು. ಕಾರವಾರ ಈಗ ಪ್ರಮುಖ ಪ್ರವಾಸಿ ಹಾಗೂ ವ್ಯಾಪಾರೀ ಕೇಂದ್ರ. ಊರಿನಲ್ಲಿ ಅನೇಕ ದೇವಾಲಯ ಗಳು, ಮಸೀದಿಗಳು ಮತ್ತು ಚರ್ಚುಗಳು ಇವೆ. ಊರು ಪುರಸಭೆಯನ್ನು ಹೊಂದಿದೆ. ಕಾರವಾರಕ್ಕೆ ಮೂರು ಕಿಮೀ ದೂರದಲ್ಲಿ ಜೋಡಿ ಊರುಗಳಾದ ಸದಾಶಿವಗಡ-ಚಿತ್ತಾಕುಲ ಗಳಿವೆ. 1983ರಲ್ಲಿ ಇವುಗಳನ್ನು ಕಾರವಾರದ ಜೊತೆಗೂಡಿಸುವ ಕಾಳಿ ಸೇತುವೆ ಸಿದ್ಧವಾಯಿತು. ಚಿತ್ತಾಕುಲವನ್ನು ಮೊದಲು ಸಿಂದಬೂರ್, ಚಿಂತಬೂರ್, ಸಿಂತಪೂರ್ ಮತ್ತು ಚಿಂತಕುಲ ಎಂಬುದಾಗಿ ಕರೆಯುತ್ತಿದ್ದರು. ಸೋಂದೆ ಮನೆತನದ ಸದಾಶಿವ ನಾಯಕನು ಕಟ್ಟಿಸಿದ ಕೋಟೆ ಸದಾಶಿವಗಡ. ಕ್ರಿ.ಶ. 1747ರಲ್ಲಿ ಪೋರ್ತುಗೀಸರು ಸದಾಶಿವಗಡವನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಸೋಂದೆ ಅರಸು ಅದನ್ನು ಬಿಟ್ಟು ಕೊಡಲಿಲ್ಲ. ಆದರೆ ಕ್ರಿ.ಶ. 1763ರಲ್ಲಿ ಅದನ್ನು ಹೈದರ್ ಅಲಿ ಆಕ್ರಮಿಸಿದ ಮತ್ತು ಟಿಪ್ಪು ಕಾವಲು ಸೈನ್ಯವನ್ನು ಇಟ್ಟ. ಕವಳೆಮಠ, ವಿವೇಕಾನಂದ ಆಶ್ರಮ, ಶಾಂತಾದುರ್ಗಾ ದೇವಾಲಯ, ಒಂದು ಮಸೀದಿ ಮತ್ತು ಒಂದು ಹಳೇ ಚರ್ಚು ಇವೆ. ಜೊತೆಗೆ ಪೀರ್ ಕರೀಮುದ್ದೀನರ ಹೆಸರಲ್ಲಿ ನಿರ್ಮಿತವಾದ ಒಂದು ದರ್ಗಾ ಸಹ ಇದೆ. ಮುಸ್ಲಿಮರು-ಹಿಂದುಗಳು ಇಬ್ಬರೂ ಈ ದರ್ಗಾದ ಬಗೆಗೆ ವಿಶೇಷ ಗೌರವಭಾವ ಉಳ್ಳವರಾಗಿ ದ್ದಾರೆ.

ಕಿತ್ತೂರು : (ಬೆಳಗಾವಿ ಜಿ; ಬೈಲಹೊಂಗಲ ತಾ; ಜನ: 9,397) ಕಿತ್ತೂರು ಇತಿಹಾಸ ಪ್ರಸಿದ್ಧವಾದ ಸ್ಥಳ. ಇದು ಪುಣೆ—ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಬೆಂಗಳೂರಿನ ವಾಯುವ್ಯಕ್ಕೆ 457 ಕಿಮೀ ದೂರದಲ್ಲಿದೆ. ಈ ಊರು ಕಿತ್ತೂರಿನ ರಾಣಿ ಚೆನ್ನಮ್ಮನ ಹೆಸರಿನೊಂದಿಗೆ ನಿಕಟವರ್ತಿ ಯಾಗಿದೆ. ಆಕೆ ಸುಪ್ರಸಿದ್ಧ ಯೋಧಳಾಗಿದ್ದು, ಕ್ರಿ. ಶ. 1824 ರಲ್ಲಿ ಬ್ರಿಟಿಷರ ವಿರುದ್ಧ ದಂಗೆ ಎದ್ದಳು. ಈ ಸ್ಥಳದ ಇತಿಹಾಸ 12ನೇಯ ಶತಮಾನದಿಂದ ಆರಂಭವಾಗುತ್ತದೆ. ಇಲ್ಲಿನ ಬಸವಣ್ಣ ದೇವಸ್ಥಾನದಲ್ಲಿ ದೊರೆತ ಕ್ರಿ. ಶ. 1188ರ ಒಂದು ಶಾಸನದಲ್ಲಿ ಗೋವೆಯ ಕದಂಬರು ಕೊಟ್ಟ ದಾನದ ಉಲ್ಲೇಖ ಮತ್ತು ಹತ್ತಿರದ ದೇಗಾವೆ ಅಗ್ರಹಾರದ ಮಹಾಜನರ ಉಲ್ಲೇಖವೂ ಇದೆ. ವಿಜಾಪುರದ ಇಸ್ಮಾಯಿಲ್ ಆದಿಲ್‌ಷಾನ ಆಡಳಿತ ಕ್ಕೊಳಪಟ್ಟಿದ್ದಾಗ ಇದು ಯೂಸುಫ್ ಖಾನನ ಜಾಗೀರಾಗಿತ್ತು. 17ನೇಯ ಶತಮಾನದ ಉತ್ತರಾರ್ಧದಲ್ಲಿ (ಕ್ರಿ. ಶ. 1660) ಕಿತ್ತೂರು, ಬಿಡಿ ಮತ್ತು ಸಂಪಗಾಂವಗಳು ಸ್ಥಳೀಯ ದೇಸಾಯಿ ಮುದಿಮಲ್ಲಪ್ಪ (ಅಲ್ಲಪ್ಪ ಗೌಡ ಸರದೇಸಾಯಿ ಎಂದೂ ಕರೆಯುತ್ತಿದ್ದರು)ನ ಆಡಳಿತಾಧಿಕಾರದೊಳಗೆ ಸೇರಿತ್ತು. ಈತ

ಈ ಮನೆತನದ ಐದನೇಯ ಪೀಳಿಗೆಯವನು ಮತ್ತು ಈತನೇ ಇಲ್ಲಿನ ಕೋಟೆಯನ್ನು ಕಟ್ಟಿಸಿದವನೆಂದು ಹೇಳಲಾಗಿದೆ. ಇವನ ಪೂರ್ವಿಕರಾದ ಹಿರೇಮಲ್ಲ ಮತ್ತು ಚಿಕ್ಕಮಲ್ಲರು ಕಲ್ಬುರ್ಗಿಯಿಂದ ಇತ್ತ ಕಡೆಗೆ ಹದಿನಾರನೇಯ ಶತಮಾನದ ಸರಿಸುಮಾರಿಗೆ ವಿಜಾಪುರ ಸುಲ್ತಾನನ ಸೈನ್ಯದೊಂದಿಗೆ, ಸೈನ್ಯದ ಅವಶ್ಯಕತೆಗಳನ್ನು ಸರಬರಾಜು ಮಾಡುವ ಸಲುವಾಗಿ ವ್ಯಾಪಾರಿಗಳಾಗಿ ಬಂದರೆಂದೂ, ಮತ್ತು ಸಂಪಗಾಂವದಲ್ಲಿ ನೆಲೆಸಿದರೆಂದೂ ಹೇಳಲಾಗಿದೆ. ಅವರ ಶೌರ್ಯಾದಿಗಳಿಗೆ ಮೆಚ್ಚಿದ ವಿಜಾಪುರದ ಸುಲ್ತಾನ ಅವರಿಗೆ ಹುಬ್ಬಳ್ಳಿ ಸೀಮೆಯ ಸರದೇಸಾಯಿತನದ ಬಳುವಳಿ ಕೊಟ್ಟ. ಕಾಲಾನುಕ್ರಮದಲ್ಲಿ ಆ ವಂಶೀಯರು ತಮ್ಮ ಸೀಮೆಯನ್ನು ಸೌಂದತ್ತಿ ಮತ್ತು ಗೋಕಾಕಗಳವರೆಗೆ ವಿಸ್ತರಿಸಿದರು. ಪ್ರಾರಂಭದಿಂದಲೂ ಕಿತ್ತೂರಿನ ದೇಸಾಯಿಗಳು ಬ್ರಿಟಿಷರೊಂದಿಗೆ ಸ್ನೇಹಪರತೆಯನ್ನೇ ಪ್ರಕಟಿಸಿಕೊಂಡು ಬಂದರು. ಮತ್ತು ಬ್ರಿಟಿಷರು ವಿರೋಧ ಎದುರಿಸಬೇಕಾದ ಸಂದರ್ಭಗಳಲ್ಲೆಲ್ಲಾ ಇವರು ಅವರ ಪರವಾಗಿಯೇ ಇದ್ದರು. ಕಿತ್ತೂರು ವಂಶದ ಹನ್ನೊಂದನೇಯ ದೇಸಾಯಿಯಾದ ಮಲ್ಲಸರ್ಜ ದೇಸಾಯಿಯ 1782ರಿಂದ 34 ವರ್ಷಗಳ ಕಾಲದ ಆಳ್ವಿಕೆಯಲ್ಲಿ ಕಿತ್ತೂರು ರಾಜ್ಯವು ತನ್ನ ಕೀರ್ತಿ ಶಿಖರವನ್ನೇರಿತು. ಬ್ರಿಟಿಷರು 285 ಗ್ರಾಮಗಳನ್ನು ವಂಶಪಾರಂಪರ್ಯ ಹಕ್ಕುಗಳೊಂದಿಗೆ ದೇಸಾಯಿಗೆ ವಹಿಸಿದ್ದರು. ಮಲ್ಲಸರ್ಜನ ನಂತರ ಅವನ ಮಗ ಶಿವಲಿಂಗರುದ್ರ ಸರ್ಜ (1817-1824) ಅಧಿಕಾರ ವಹಿಸಿಕೊಂಡ. ಶಿವಲಿಂಗಸರ್ಜನು ಶಿವಲಿಂಗಪ್ಪನನ್ನು ದತ್ತು ತೆಗೆದುಕೊಂಡುದನ್ನು ತಮ್ಮದೇ ಕಾರಣಗಳಿಗೆ ಬ್ರಿಟಿಷರು ಒಪ್ಪದೆ ಕಿತ್ತೂರು ಸೀಮೆ ತಮ್ಮ ನೇರ ಅಡಳಿತಕ್ಕೆ ಒಳಪಡುತ್ತದೆಂದು ಘೋಷಿಸಿದರು. ಆದರೆ ಮಲ್ಲಸರ್ಜನ ಪತ್ನಿ, ಶಿವಲಿಂಗ ಸರ್ಜನ ಮಲತಾಯಿ, ವಿಧವೆ ರಾಣಿ ಚೆನ್ನಮ್ಮ ಬ್ರಿಟಿಷರ ಈ ಘೋಷಣೆಯನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ನಂತರ ಏನಾಯಿತೆಂಬುದೆಲ್ಲ ಸರ್ವಜನವಿದಿತವಾದ ವಿಚಾರ (ಸಂಪುಟ I ಅಧ್ಯಾಯ 2 ನೋಡಿ). ಇಲ್ಲಿನ ಶಿಥಿಲವಾಗಿ ಬಿದ್ದಿರುವ ಕೋಟೆ ಮತ್ತು ಈಗಿನ ಊರಿನ ಉತ್ತರ ಭಾಗದಲ್ಲಿರುವ ಅರಮನೆಯ ಅವಶೇಷಗಳು ಇಲ್ಲಿನ ಕುತೂಹಲ ಕೆರಳಿಸುವ ವಸ್ತುಗಳು. ಕೋಟೆಯೊಳಗಿನ ಭಾಗದಲ್ಲಿ ಮಾರುತಿ, ದುರ್ಗಾ ಮತ್ತು ಕಲ್ಮೇಶ್ವರ ದೇವಸ್ಥಾನಗಳಿವೆ. ಪಾಳುಬಿದ್ದ ಕೋಟೆಯ ಪಶ್ಚಿಮ ಭಾಗದಲ್ಲಿ ದೇಸಾಯಿ ಮನೆತನದವರ ಕೆಲವು ಸಮಾಧಿಗಳು ಇವೆ. ಅವುಗಳ ರಚನೆ ಹಿಂದೂ-ಇಸ್ಲಾಮೀಯ ಸಮ್ಮಿಳಿತ ವಾಸ್ತುಶಿಲ್ಪದಲ್ಲಿದೆ. ಕಲ್ಯಾಣಿ ಚಾಳುಕ್ಯರ ವಾಸ್ತುಶೈಲಿಯಲ್ಲಿ ಕಟ್ಟಿದ 12ನೇಯ ಶತಮಾನದ ಶಿವ ದೇವಾಲಯವೊಂದು ಇದೆ. ಮತ್ತು ಅದು ಈಗ ಸಂಪೂರ್ಣ ದುರಸ್ತಿಗೊಂಡಿದೆ. ಇಲ್ಲಿ ಹಿರೇಮಠ ಮತ್ತು ಚೌಕಿಮಠ ಎಂಬ ಎರಡು ಪ್ರಸಿದ್ಧ ವೀರಶೈವ ಮಠಗಳ ಜೊತೆಗೆ ಕೆಲವು ಮಸೀದಿಗಳೂ, ದರ್ಗಾಗಳೂ ಇವೆ. ಇಲ್ಲಿ ಪ್ರಾಚ್ಯ ವಸ್ತು ಸಂಗ್ರಹಾಲಯ ಇದೆ. ಕಿತ್ತೂರಿನ ಪಶ್ಚಿಮಕ್ಕೆ ನಾಲ್ಕು ಕಿಮೀ ದೂರದ ಕಾಡಿನ ನಡುವಿನ ಗುಡ್ಡದ ಮೇಲೆ ಹೆಣ್ಣುಮಕ್ಕಳ ತರಬೇತಿಗಾಗಿಯೇ ಮೀಸಲಾದ ಸೈನಿಕ ಶಾಲೆಯ ಮಾದರಿಯ ರಾಣಿ ಚೆನ್ನಮ್ಮ ಸ್ಮಾರಕ ವಸತಿ ಶಾಲೆಯಿದೆ. ಇಲ್ಲಿ ನಗರ ಪಂಚಾಯತಿ ಉಂಟು. ಕಿತ್ತೂರು-ಖಾನಾಪುರ ರಸ್ತೆಯಲ್ಲಿ ಕಿತ್ತೂರಿನಿಂದ ಐದು ಕಿಮೀ ದೂರದಲ್ಲಿ ದೇಗಾವೆ ಎಂಬ ಒಂದು ಪುಟ್ಟ ಗ್ರಾಮವಿದೆ. ಹಿಂದಿನ ಕಾಲದಲ್ಲಿ ಅದು ಹಲಸಿಗೆ ನಾಡಿಗೆ ಒಳಪಟ್ಟ ಪ್ರಸಿದ್ಧ ಅಗ್ರಹಾರವಾಗಿತ್ತು. ಇಲ್ಲಿ 12ನೇಯ ಶತಮಾನದ ಗೋವೆಯ ಕದಂಬ ದೊರೆ ಶಿವಚಿತ್ತ ಪೆರ್ಮಾಡಿ (ಕ್ರಿ. ಶ. 1147-1175)ಯ ರಾಣಿ ಕಟ್ಟಿಸಿದುದೆಂದು ಹೇಳಲಾದ ಕಮಲ ನಾರಾಯಣ ದೇವಸ್ಥಾನವಿದೆ. ಇದು ವಿಷ್ಣು, ಲಕ್ಷ್ಮೀನಾರಾಯಣ, ಲಕ್ಷ್ಮೀ ಅಥವಾ ಶಕ್ತಿಗೆ ಮೀಸಲಾದ ದೇವಸ್ಥಾನವಾಗಿದೆ. ಕಂಬಗಳ ಸುಂದರ ಕೆತ್ತನೆಗೆ ಈ ದೇವಸ್ಥಾನ ಹೆಸರುವಾಸಿಯಾಗಿದೆ. ಇದಲ್ಲದೆ ಗ್ರಾಮ ದೇವತೆಯ ದೇವಸ್ಥಾನ, ಮಹಾವೀರ ಜಿನಮಂದಿರಗಳು ಇವೆ. ಜೊತೆಗೆ ಶಿವಾನಂದ ಮಠವೂ ಇದೆ.

ಕುಂದಗೋಳ : (ಧಾರವಾಡ ಜಿ; ತಾ. ಕೇ; ಜನ: 14,325) ಕುಂದಗೋಳ ಬೆಂಗಳೂರಿಗೆ 410 ಕಿಮೀ ಹಾಗೂ ಧಾರವಾಡದ ಆಗ್ನೇಯಕ್ಕೆ ಹುಬ್ಬಳ್ಳಿ-ಲಕ್ಷ್ಮೇಶ್ವರ ರಸ್ತೆಯಲ್ಲಿ 38 ಕಿಮೀ ದೂರದಲ್ಲಿ ಇದೆ. 1948ಕ್ಕೆ ಮುಂಚೆ ಇದು ಜಮಖಂಡಿ ಸಂಸ್ಥಾನದಲ್ಲಿ ಕುಂದಗೋಳಪೇಟಾ ಎಂಬ ಹೆಸರಿನಿಂದ ಮುಖ್ಯ ಕೇಂದ್ರವಾಗಿತ್ತು. ಕ್ರಿ. ಶ. 1887ರಲ್ಲಿ ಇಲ್ಲಿ ಮೊದಲಿಗೆ ಪುರಸಭೆ ಪ್ರಾರಂಭವಾಯಿತು. ಇದರ ಹಿಂದಿನ ಹೆಸರು ಕುಂದಂಗೋಳ್ ಎಂದಾಗಿತ್ತೆಂದೂ ಮತ್ತು ಇದು ಒಂದು ಸಾವಿರ ಮಹಾಜನರ ಅಗ್ರಹಾರವಾಗಿತ್ತೆಂದೂ ತಿಳಿದು ಬರುತ್ತದೆ. ಕುಂದಗೋಳದಲ್ಲಿ ಮಧ್ಯಕಾಲೀನ ಹಾಗೂ ನಂತರದ ಕಾಲದ ಹನ್ನೊಂದು ಶಾಸನಗಳು ಲಭ್ಯವಾಗಿದ್ದು, ಅವುಗಳಲ್ಲಿ ಬಹುಪಾಲು ಕಲ್ಯಾಣಿ ಚಾಳುಕ್ಯರ, ಕಳಚೂರಿಗಳ, ಸೇವುಣರ ಮತ್ತು ವಿಜಯನಗರದ ಅರಸರ ಕಾಲದವಾಗಿವೆ. ಅವುಗಳಲ್ಲಿ ಬಹು ಪ್ರಾಚೀನವಾದದ್ದು ಕ್ರಿ. ಶ. 1044ರ ಚಾಳುಕ್ಯ ಒಂದನೇಯ ಸೋಮೇಶ್ವರನ ಕಾಲದ ಶಾಸನ. ಆಗ ಇದು ಬೆಳವೊಲ 300ರ ವಿಭಾಗಕ್ಕೆ ಸೇರಿತ್ತು. ಇಲ್ಲಿ ಕಲ್ಯಾಣಿ ಚಾಳುಕ್ಯರ ಕಾಲದ ಸುಂದರವಾದ ಶಂಭುಲಿಂಗ ದೇವಸ್ಥಾನ ಮೆಚ್ಚುವಂತಹುದಾಗಿದೆ. ಇದಲ್ಲದೆ ಬ್ರಹ್ಮದೇವ, ಶಂಕರಾಚಾರ್ಯ, ಮಲ್ಲಿಕಾರ್ಜುನ, ದತ್ತಾತ್ರೇಯ, ವಿಠ್ಠಲ, ಬಸವಣ್ಣ, ಹನುಮಾನ ಮತ್ತು ಎಲ್ಲಮ್ಮ ಮೊದಲಾದ ಆಧುನಿಕ ಕಾಲದ ದೇವಸ್ಥಾನಗಳೂ, ನಾಲ್ಕು ಮಸೀದಿಗಳೂ ಮತ್ತು ಹೈದರ್ ವಲಿಯವರ ದರ್ಗಾ ಇವೆ. ಪಂಚಗೃಹ ಹಿರೇಮಠ, ಸಿದ್ಧಲಿಂಗ ಶಿವಾಚಾರ್ಯ ಮತ್ತು ಶಿವಾನಂದರ ಮಠಗಳು ಇಲ್ಲಿ ಇವೆ. ಭಾರತೀಯ ಸಂಗೀತದಲ್ಲಿ ಇದು ಒಂದು ವಿಶಿಷ್ಟವಾದ ಸ್ಥಾನ ಪಡೆದ ಊರು. ಸುಪ್ರಸಿದ್ಧ ಹಿಂದೂಸ್ತಾನಿ ಗಾಯಕ ಸವಾಯಿ

ಗಂಧರ್ವ (ರಾಮಭಾವು ಕುಂದಗೋಳಕರ್, ಕ್ರಿ. ಶ. 1886-1952) ಅವರು ಕೆಲವು ಕಾಲ ಇಲ್ಲಿ ವಾಸಿಸುತ್ತಿದ್ದರು ಮತ್ತು ಪ್ರತೀವರ್ಷ ಅವರ ಗೌರವಾರ್ಥವಾಗಿ ಬಹು ದೊಡ್ಡದಾದ ಸಂಗೀತ ಆರಾಧನಾ ಮಹೋತ್ಸವಗಳು ನಡೆಯುತ್ತವೆ. ಇದು ಮೆಣಸಿನಕಾಯಿ, ಜೋಳ ಮತ್ತು ಹತ್ತಿ ಉತ್ಪಾದನೆಗೆ ಪ್ರಸಿದ್ಧವಾಗಿದೆ. ಈ ತಾಲೂಕಿನ ಉಳಿದ ಗಮನಾರ್ಹ ಸ್ಥಳಗಳಲ್ಲಿ ಮುಕ್ತಿಮಂದಿರವು ಗುಡಿಗೇರಿ ರೈಲ್ವೆ ಸ್ಟೇಷನ್‌ನ ಪೂರ್ವಕ್ಕೆ, ಹತ್ತು ಕಿಮೀ ಹಾಗೂ ಲಕ್ಷ್ಮೇಶ್ವರಕ್ಕೆ ನಾಲ್ಕು ಕಿಮೀ ದೂರದಲ್ಲೂ ಇರುವ ಇದು ತುಂಬ ಜನಪ್ರಿಯವೂ, ಗೌರವನೀಯವೂ ಆದ ವೀರಶೈವ ಮಠ. ಆಧ್ಯಾತ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಚಟುವಟಿಕೆಗಳಿಗೆ ಈ ಭಾಗದ ಒಂದು ಪ್ರಮುಖ ಕೇಂದ್ರವಾಗಿರುವ ಈ ಮಠವನ್ನು ರಂಭಾಪುರ ಮಠದ ಶಿವೈಕ್ಯ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಸ್ವಾಮಿಗಳು ಸ್ಥಾಪಿಸಿದರು. ವಿವಿಧ ಧಾರ್ಮಿಕ ನಂಬಿಕೆಯುಳ್ಳ ಜನ ಇಲ್ಲಿ ಒಂದೇ ಎಡೆಯಲ್ಲಿ ಶ್ರದ್ಧಾಸಕ್ತಿಗಳನ್ನು ಹೊಂದಿ ಪೂಜಾ ಸೇವೆಗಳನ್ನು ಮಾಡುವುದರಿಂದ ಮಠವು ಧಾರ್ಮಿಕ ಸಮುಯನ್ವಯಕ್ಕೆ ಹೆಸರಾಗಿದೆ. ಮಠದ ಮೂಲ ಉದ್ದೇಶ ಮಾನವ ಧರ್ಮದ ಪ್ರತಿಪಾದನೆ.

ಕುಂದಾಪುರ : (ದ. ಕ. ಜಿ; ತಾ. ಕೇ; ಜನ: 28,315) ಕುಂದಾಪುರವನ್ನು "ಸೂರ್ಯನಗರ" ಎಂದು ವರ್ಣಿಸಲಾಗಿದೆ. ಇದು ಬೆಂಗಳೂರಿನ ವಾಯುವ್ಯಕ್ಕೆ 460 ಕಿಮೀ ಮತ್ತು ಮಂಗಳೂರಿನ ಉತ್ತರಕ್ಕೆ 104 ಕಿಮೀ ದೂರದಲ್ಲೂ ಇದೆ. ಪಂಚಗಂಗವಳ್ಳಿ ನದಿಯ ಬಳಿ ಕುಂದವರ್ಮನು ನಿರ್ಮಿಸಿದ ಕುಂದೇಶ್ವರ ದೇವಸ್ಥಾನದಿಂದ ಇಲ್ಲಿಗೆ ಈ ಹೆಸರು ಬಂದಿದೆಯೆನ್ನಬಹುದು. ಇಲ್ಲಿ ಮಹಾಲಿಂಗೇಶ್ವರ ಎಂಬ ಹೆಸರಿನ ಇನ್ನೂ ಒಂದು ಪ್ರಾಚೀನ ದೇವಸ್ಥಾನವಿದೆ. ವಿಜಯನಗರದ ಕಾಲದಲ್ಲಿ ಮತ್ತು ಕೆಳದಿ ಅರಸರ ಕಾಲದಲ್ಲಿ ಇದು ಒಂದು ಪ್ರಮುಖ ಬಂದರಾಗಿತ್ತು. ಹದಿನಾರನೇಯ ಶತಮಾನದಲ್ಲಿ ಇದನ್ನು ಪೋರ್ಚುಗೀಸರ ಆಕ್ರಮಿಸಿಕೊಂಡು ಇಲ್ಲಿ ಒಂದು ಕೋಟೆಯನ್ನು ಕಟ್ಟಿದರು. ಅವರು ಇದನ್ನು ಬಾರ್ಸ್ಲೋರ್ (ಕೆಳಗಿನ) ಎಂದು ಕರೆಯುತ್ತಿದ್ದರು. ಅವರು ಇಲ್ಲಿ ಚರ್ಚೊಂದನ್ನು ಕಟ್ಟಿದರು. ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲ ತಾಲೂಕುಗಳಿಗಿಂತ ಈ ತಾಲೂಕಿನಲ್ಲಿ ಹೆಚ್ಚು ನದಿಗಳು ಇವೆ. ಬಡಗತಿಟ್ಟು ಎಂದು ಪ್ರಸಿದ್ಧವಾದ ಯಕ್ಷಗಾನ ಪ್ರಕಾರವನ್ನು ರೂಪಿಸುವಲ್ಲಿ ಕುಂದಾಪುರ ಪ್ರಧಾನ ಪಾತ್ರ ವಹಿಸಿದೆ. ಮುದ್ದಣ (ಕನ್ನಡ ಕವಿ ನಂದಳಿಕೆ ಲಕ್ಷ್ಮೀನಾರಾಯಣಪ್ಪ)ನು ತನ್ನ ಶ್ರೇಷ್ಠವಾದ ಕೃತಿಗಳನ್ನು ಇಲ್ಲಿನ ಶಾಲೆಯಲ್ಲಿ ವ್ಯಾಯಾಮ ಶಿಕ್ಷಕನಾಗಿದ್ದಾಗ ಬರೆದನು. ಇದು ಪುರಸಭೆಯನ್ನು ಹೊಂದಿದೆ. ಬಸರೂರು : (ಜನ: 5,231) ಕುಂದಾಪುರದಿಂದ ಆರು ಕಿಮೀ ದೂರದ ಬಂದರುಳ್ಳ ಒಂದು ಮುಖ್ಯ ಗ್ರಾಮ. ಈ ಊರಿಗೂ ವಸು ಚಕ್ರವರ್ತಿ ಎಂಬ ಪೌರಾಣಿಕ ವ್ಯಕ್ತಿಗೂ ಸಂಬಂಧ ಕಲ್ಪಿತವಾಗಿದೆ. ಅದರಿಂದ ಇದು ವಸುಪುರವೆನಿಸಿಕೊಂಡು ಈಗ ಈ ಹೆಸರಿನ ರೂಪ ಪಡೆದಿದೆ. ವಾಸ್ತವವಾಗಿ ಇದನ್ನು ಬಸುರೆಪಟ್ಟಣವೆಂದು ಕರೆಯಲಾಗುತ್ತಿತ್ತು. ಪ್ಲಿನಿ ಉಲ್ಲೇಖಿಸಿರುವ ಬರ್ಸೆ ಇದೇ ಎಂದೂ ಅಂತೆಯೇ ಪೋರ್ತುಗೀಸರ (ಮೇಲಿನ) ಬಾರ್ಸೆಲೋರ್ ಎಂದೂ ಗುರುತಿಸಲಾಗಿದೆ. ಇದರ ಬಂದರು ಪ್ರಾಮುಖ್ಯತೆ ಕಳೆದು ಕೊಳ್ಳಲು ಮುಖ್ಯ ಕಾರಣ ನದಿ ದಂಡೆಯ ಮೇಲಿದ್ದ ಊರಿನ ಬಳಿ ನದಿ ಸಮುದ್ರ ಕೂಡಿಕೊಳ್ಳುವ ಸ್ಥಳದಲ್ಲಿ ಅಗಾಧ ಮರಳು ಕವಿದುಕೊಂಡುದು. ಬರ್ಬೊಸಾ ಮತ್ತು ಇತರ ವಿದೇಶಿ ಪ್ರವಾಸಿಗರು ಇದರ ಬಹುಮುಖ ವ್ಯಾಪಾರಿ ವಹಿವಾಟಿನ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ. ಕ್ರಿ.ಶ. 1660ರ ಸುಮಾರಿನಲ್ಲಿ ಡಚ್ಚರ ಒಂದು ವ್ಯಾಪಾರಿ ಮಳಿಗೆ ಇಲ್ಲಿತ್ತು. ಪೋರ್ತುಗೀಸರು ಒಂದು ವ್ಯಾಪಾರಿ ಮಳಿಗೆಯನ್ನು ಹೊಂದಿದ್ದರು. ಶಿವಾಜಿ ಈ ಗ್ರಾಮವನ್ನು ಒಮ್ಮೆ ಲೂಟಿ ಮಾಡಿದ. ಇಲ್ಲಿರುವ ನಗರೇಶ್ವರ ದೇವಸ್ಥಾನದಲ್ಲಿ ಅನೇಕ ಶಾಸನಗಳು ಇವೆ. ಅವುಗಳಲ್ಲಿ ಇಲ್ಲಿನ ಶೆಟ್ಟಿಗಾರರ ಉಚ್ಛ್ರಾಯ ಸ್ಥಿತಿಯನ್ನು ಬಣ್ಣಿಸಲಾಗಿದೆ. ಈ ದೇವಸ್ಥಾನ ಪ್ರಾಚೀನವಾದುದು ಮತ್ತು ಇದು ವಿಜಯನಗರದ ಕಾಲದಲ್ಲಿ ಜೀರ್ಣೋದ್ಧಾರವಾಗಿದೆ. ಮತ್ತು ಈ ದೇವಸ್ಥಾನದಲ್ಲಿ ಕಂಚಿನ ಬಹು ಸುಂದರ ದೀಪಸ್ತಂಭ ಮತ್ತು ದ್ವಾರಪಾಲರ ವಿಗ್ರಹಗಳಿವೆ. ಇಲ್ಲಿನ ತುಳುವೇಶ್ವರ ದೇವಸ್ಥಾನವನ್ನು ಅರಳೀಮರ ಮುಸುಗಿಬಿಟ್ಟಿದೆ. ಇಲ್ಲಿ ಇತರ ಅನೇಕ ದೇವಸ್ಥಾನಗಳಿವೆ. ಅವುಗಳಲ್ಲಿ ಕೋಟೇಶ್ವರ ಮತ್ತು ಮಹಾಲಿಂಗೇಶ್ವರ ದೇವಸ್ಥಾನಗಳು ಮುಖ್ಯವಾದವು. ಇಲ್ಲಿನ ಆದಿನಾಥ ದೇವಾಲಯ, ನಾಥ ಪಂಥದ ಕೇಂದ್ರವಾಗಿದ್ದಂತೆ ಕಾಣುತ್ತದೆ. ನೋಸ್ಸಾ ಸೆನೊರಾ ಡೆ ರೊಸಾನಾ ಹೆಸರಿನ ಚರ್ಚ್ ಇದ್ದು ಇದನ್ನು 16ನೇಯ ಶತಮಾನದಲ್ಲಿ ರೋಮನ್ ಕ್ಯಾಥೋಲಿಕರು ಕಟ್ಟಿಸಿದರು. ಅಲ್ಲಿನ ಒಂದು ಖಾಸಗಿ ಮನೆ ಹಿಂದೆ ಕೆಳದಿ ರಾಜ್ಯದ ಒಬ್ಬ ಅಧಿಕಾರಿಯ ವಾಸಗೃಹವಾಗಿದ್ದು ಆ ಮನೆಯಲ್ಲಿ ಸುಂದರವಾದ ಸಾಕಷ್ಟು ಹಿಂದಿನ ಮರದ ಕೆತ್ತನೆ ಕೆಲಸ ಕಾಣಬಹುದು. ಗಂಗೊಳ್ಳಿ : (1981ರ ಜನ: 11,956) ಕುಂದಾಪುರದ ಉತ್ತರಕ್ಕೆ ಮೂರು ಕಿಮೀ ದೂರದಲ್ಲಿ ಅದೇ ಹೆಸರಿನ ನದಿಯ ಮುಖದಲ್ಲಿದೆ. ಗ್ರಾಮ ಪಂಚಾಯತಿಯಿರುವ ಪಟ್ಟಣ ಪೋರ್ತುಗೀಸರು ಇದನ್ನು ಕ್ಯಾಂಬೋಲಿಮ್ ಎಂದು ಕರೆಯುತ್ತಿದ್ದರು. ಕೆಲವು ಕಾಲ ಇದು ಅವರ ಆಡಳಿತದಲ್ಲಿತ್ತು. ಟಿಪ್ಪುಸುಲ್ತಾನ ಇಲ್ಲಿ ಒಂದು ಹಡಗುಕಟ್ಟೆ ಕಟ್ಟಿಸಿದ್ದ. ವಾಸ್ತವವಾಗಿ ಕುಂದಾಪುರ ಬಂದರು ಇರುವುದೇ ಇಲ್ಲಿ. ಈ ಊರಿನಿಂದ ತಾಲೂಕಿನ ಒಳಕ್ಕೆ ಸಲೀಸಾದ ಜಲಮಾರ್ಗವಿದೆ. ಕುಂದಾಪುರದ ಕಡೆ ಕೋಡಿಯಲ್ಲಿ ಒಂದು ಸುಂಕದ ಕಟ್ಟೆ ಹಾಗೂ ದೀಪದ ಮನೆ ಇವೆ. ಕೋಟೇಶ್ವರ (ಜನ : 5,551) ವು ಕುಂದಾಪುರದ ದಕ್ಷಿಣಕ್ಕೆ ನಾಲ್ಕು ಕಿಮೀ ದೂರದಲ್ಲಿದೆ. ಇದು ಒಂದು ಪವಿತ್ರ ಕ್ಷೇತ್ರವೆಂದು ಪರಿಗಣಿತವಾಗಿದೆ. ಇಲ್ಲಿನ ಕೋಟಿನಾಥ

ಅಥವಾ ಕೋಟಿ ಲಿಂಗೇಶ್ವರ ದೇವಸ್ಥಾನ ತುಂಬಾ ಪ್ರಸಿದ್ಧವಾದುದು. ಒಂದು ವರ್ಗದ ಬ್ರಾಹ್ಮಣರಿಗೂ ಈ ಊರ ಹೆಸರು ಅಂಟಿದೆ. ದೇವಸ್ಥಾನದ ಉತ್ತರಕ್ಕೆ ಹಲವು ಗಜಗಳ ದೂರದಲ್ಲಿ ಒಂದು ದೊಡ್ಡ ಕೊಳವಿದೆ. ಮೂಲ ದೇವಸ್ಥಾನದ ಸುತ್ತ ಗಣಪತಿ, ಸುಬ್ರಹ್ಮಣ್ಯ, ಮಹಿಷಾಸುರ ಮರ್ದಿನಿ, ಜ್ಯೇಷ್ಠ ಲಕ್ಷ್ಮೀ, ಗೋಪಾಲಕೃಷ್ಣ ಮತ್ತು ಸಪ್ತಮಾತೃಕೆಯರೇ ಮೊದಲಾದ ಪುಟ್ಟ ಗುಡಿಗಳು ಇವೆ. ಕೋಟಿಲಿಂಗೇಶ್ವರ ದೇವಸ್ಥಾನವನ್ನು ಹಲವಾರು ಸಲ ಜೀರ್ಣೋದ್ಧಾರ ಮಾಡಲಾಗಿದೆ. ಆಳುಪರ ಮತ್ತು ವಿಜಯನಗರದ ಕಾಲದ ಅನೇಕ ಶಾಸನಗಳು ಇಲ್ಲಿವೆ. ಈ ಭಾಗದ ಏಳು ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲಿ ಇದೊಂದು. ಕುಂಭಾಶಿ : (ಜನ: 2,468) ದಕ್ಷಿಣ ಕನ್ನಡ ಜಿಲ್ಲೆಯ ಏಳು ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲಿ ಇದು ಇನ್ನೊಂದು. ಇದು ಕುಂದಾಪುರದಿಂದ ಒಂಭತ್ತು ಕಿಮೀ ದಕ್ಷಿಣಕ್ಕೆ ಇದೆ. ಶಾಸನಗಳಲ್ಲಿ ಇದನ್ನು ಕುಂಭಕಾಶಿ ಎಂದು ಹೆಸರಿಸಲಾಗಿದೆ. ಕುಂಭಾಸುರನೆಂಬ ರಾಕ್ಷಸನನ್ನು ಸಂಹರಿಸಿದ ತಾಣ ಎಂಬುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇಲ್ಲಿ ಎರಡು ಪ್ರಸಿದ್ಧ ದೇವಸ್ಥಾನಗಳಿವೆ. ಒಂದು ಆನೆಗುಡ್ಡೆ ವಿನಾಯಕ ದೇವಸ್ಥಾನ. ಇನ್ನೊಂದು ಮಹಾಲಿಂಗೇಶ್ವರ ದೇವಸ್ಥಾನ. ಮಹಾಲಿಂಗೇಶ್ವರ ದೇವಸ್ಥಾನ ಕೊಳದ ನೀರಿನಿಂದ ಸುತ್ತುವರಿಯಲ್ಪಟ್ಟಿದೆ. ಇಲ್ಲಿರುವ ಸಣ್ಣ ಡೊಣೆಗೆ ಪೂಜೆ ಸಲ್ಲಿಸಲಾಗುತ್ತದೆ; ಅಲ್ಲಿ ಗಂಗೆ ಉದ್ಭವವಾಗುತ್ತದೆ ಎಂಬ ನಂಬಿಕೆ ಇದೆ. ಈ ಕೊಳದ ಇಬ್ಬದಿಯಲ್ಲಿ ಎರಡು ಸಣ್ಣ ಪುಷ್ಕರಣಿಗಳು ಇವೆ. ಒಂದನ್ನು ಸೂರ್ಯ ಪುಷ್ಕರಣಿಯೆಂದೂ ಇನ್ನೊಂದನ್ನು ಚಂದ್ರ ಪುಷ್ಕರಣಿಯೆಂದೂ ಕರೆಯಲಾಗುತ್ತದೆ. ಕೊಳದ ದಂಡೆಯ ಮೇಲೆ ಚೆನ್ನಕೇಶವ, ಲಕ್ಷ್ಮೀನಾರಾಯಣ ಮತ್ತು ಸೂರ್ಯನಾರಾಯಣ ಗುಡಿಗಳು ಇವೆ. ಸೋದೆ ಮಠದ ಒಂದು ಶಾಖೆ ಇಲ್ಲಿದೆ. ಮರವಂತೆ : (ಜನ: 2,813) ದಕ್ಷಿಣ ಕನ್ನಡ ಜಿಲ್ಲೆಯ ಸುಂದರ ಪ್ರೇಕ್ಷಣೀಯ ಸ್ಥಳ. ಇದು ಕುಂದಾಪುರದಿಂದ ಉತ್ತರಕ್ಕೆ 16 ಕಿಮೀ ದೂರದಲ್ಲಿ ಸಮುದ್ರ ದಂಡೆಯಲ್ಲಿದೆ. ಇಲ್ಲಿ ಸೌಪರ್ಣಿಕಾ ನದಿ ದಕ್ಷಿಣೋತ್ತರವಾಗಿ ಪೂರ್ವದಲ್ಲಿ ಹರಿಯುವುದರಿಂದ ಅರಬ್ಬೀ ಸಮುದ್ರವನ್ನೂ ಈ ನದಿಯನ್ನೂ ನಿರ್ಮಾಣಗೊಂಡಿರುವ ರಸ್ತೆ ಬೇರ್ಪಡಿಸಿದಂತೆ ಕಂಡುಬರುತ್ತದೆ; ಮತ್ತು ಗಂಗೊಳ್ಳಿ ಬಳಿ ಸಮುದ್ರವನ್ನು ಸೇರುವ ಈ ಸೌಪರ್ಣಿಕಾ ನದಿಯ ಮಟ್ಟಕ್ಕಿಂತ ಇಲ್ಲಿ ಅರಬ್ಬೀ ಸಮುದ್ರದ ಮಟ್ಟವೇ ಎತ್ತರವಿದ್ದಂತೆ ಗೋಚರವಾಗುತ್ತದೆ. ಈ ಸೌಪರ್ಣಿಕಾ ನದಿಯ ದಂಡೆಯ ಮೇಲೆ ಮೂರು ಗರ್ಭಗೃಹದ ವರಾಹಸ್ವಾಮಿ ದೇವಸ್ಥಾನವಿದೆ. ಅವುಗಳಲ್ಲಿ ವರಾಹ, ನರಸಿಂಹ ಮತ್ತು ಜನಾರ್ದನ ವಿಗ್ರಹಗಳು ಇವೆ. ಈ ಆಕರ್ಷಕ ಸ್ಥಳವನ್ನು ಒಂದು ಪ್ರಶಸ್ಥವಾದ ಪ್ರೇಕ್ಷಣೀಯ ಪ್ರವಾಸೀ ಕೇಂದ್ರ ಮಾಡುವ ಆಲೋಚನೆಯಿದೆ. ಶಂಕರನಾರಾಯಣ (ಜನ: 4,098)ವು ದಕ್ಷಿಣ ಕನ್ನಡ ಜಿಲ್ಲೆಯ ಏಳು ಪ್ರಸಿದ್ಧ ಪುಣ್ಯ ಕ್ಷೇತ್ರಗಳಲ್ಲಿ ಇನ್ನೊಂದು. ಇದರ ಪರಂಪರಾಗತ ಹೆಸರು ಕ್ರೋಢಕ್ಷೇತ್ರ ಎಂದು. ಇದು ಕುಂದಾಪುರದ ಪೂರ್ವಕ್ಕೆ 32 ಕಿಮೀ ದೂರದಲ್ಲಿದೆ. ಹಿಂದೆ ಕ್ರೋಢನೆಂಬ ಋಷಿ ತಪಸ್ಸನ್ನಾಚರಿಸಿದ ತಾಣವೆಂಬುದು ಇಲ್ಲಿನ ನಂಬಿಕೆ. ಕೋಟಿ ತೀರ್ಥವೆಂಬ ಹೆಸರಿನ ಒಂದು ಕೊಳದ ದಂಡೆಯ ಮೇಲೆ ದೊಡ್ಡದೂ, ಪ್ರಸಿದ್ಧವಾದುದೂ ಆದ ಶಂಕರನಾರಾಯಣ ದೇವಸ್ಥಾನವಿದೆ. ಈ ದೇವಸ್ಥಾನದ ದೇವರು ದ್ವಿಲಿಂಗ ರೂಪದಲ್ಲಿದ್ದರೂ ಒಂದೇ ಲಿಂಗವೆಂದು ಭಾಸವಾಗುತ್ತದೆ. ಈ ದೇವಸ್ಥಾನದಲ್ಲಿ ಒಂದು ಅತ್ಯಂತ ಸುಂದರವಾದ ಕಂಚಿನ ಹರಿಹರ ವಿಗ್ರಹವಿದೆ. ಮತ್ತು ಇಲ್ಲಿನ ಮರಗೆತ್ತನೆ ಸಹ ಬಹಳ ಕಲಾಮಯವಾಗಿದೆ. ಬೇರೆ ಬೇರೆ ದೇವರ ಗುಡಿಗಳೂ ಇಲ್ಲಿ ಇವೆ. ದೇವಸ್ಥಾನದ ಮುಂದಿನ ಆವರಣದಲ್ಲಿ ಒಂದು ಭಾರಿ ಘಂಟೆಯಿದ್ದು ಇದನ್ನು ಟಿಪ್ಪು ಸುಲ್ತಾನನು ಈ ದೇವಸ್ಥಾನಕ್ಕೆ ತಂದಿತ್ತುದಾಗಿ ಹೇಳಲಾಗುತ್ತದೆ. ಅದರ ಮೇಲೆ ಲ್ಯಾಟಿನ್ ಬರಹವಿದೆ. ಹಟ್ಟಿಯಂಗಡಿ (ಜನ: 1,108)ಯು ಕುಂದಾಪುರದ ಈಶಾನ್ಯಕ್ಕೆ ಎಂಟು ಕಿಮೀ ದೂರದಲ್ಲಿ ವಾರಾಹಿ ನದಿ ದಂಡೆಯ ಮೇಲೆ ಇದೆ. ಇಲ್ಲಿನ ಲೋಕನಾಥ ದೇವಸ್ಥಾನದ ಲೋಕನಾಥ ಪ್ರತಿಮೆ ಲೋಕಾದಿತ್ಯರಾಯನಿಂದ ಸುಮಾರು ಕ್ರಿ.ಶ. 900ರಲ್ಲಿ ಸ್ಥಾಪಿಸಲಾಯಿತೆಂಬ ನಂಬಿಕೆಯಿದೆ. ಇಲ್ಲಿನ ವೇಣುಗೋಪಾಲ ದೇವಸ್ಥಾನದ ವಿಗ್ರಹವನ್ನು ಸ್ವಾಮಿ ಗಂಗಾಧರ ಉಮಾ ವಲ್ಲಭ ದಾಸರು ಗೇರಸೊಪ್ಪೆಯಿಂದ ತಂದು ಸ್ಥಾಪಿಸಿದರೆಂದು ಹೇಳಲಾಗುತ್ತದೆ. ಶಿವಲಿಂಗ, ಗಣಪತಿ, ದಧಿವಾಮನ ಮತ್ತು ದುರ್ಗಾ ಪರಮೇಶ್ವರಿಯ ಸಣ್ಣ ಗುಡಿಗಳು ಇಲ್ಲಿವೆ. ಇಲ್ಲಿನ ಶಂಕರನಾರಾಯಣ ದೇವಸ್ಥಾನದ ಜೀರ್ಣೋದ್ಧಾರ ಇತ್ತೀಚೆಗೆ ಆಗಿದೆ. ಇಲ್ಲಿನ ಚಂದ್ರನಾಥ ಬಸದಿಯಲ್ಲಿ ಅನಂತನಾಥ ಪ್ರತಿಮೆಯ ಪೀಠ 12ನೇಯ ಶತಮಾನದ್ದೆನ್ನಲಾದ ಶಾಸನವಿದೆ. ಬಸದಿಯ ಹಿಂದೆ ಕ್ಷೇತ್ರಪಾಲ ಬಸದಿ ಇದೆ. ಅದರಲ್ಲಿ ಎರಡು ಶಾಸನಗಳೂ ಅದರ ಮಹಾದ್ವಾರದಲ್ಲಿ ಎರಡು ಸುಂದರ ಕೆತ್ತನೆಯ ಮರಗಂಭಗಳೂ ಇವೆ. ಬೈಂದೂರು : (1981ರ ಜನ: 14,071) ಕುಂದಾಪುರದ ಉತ್ತರಕ್ಕೆ 30 ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ ಇದನ್ನು 'ಬಯಿದೂರು', 'ಬಿಂದುಪುರ' ಮೊದಲಾದ ಬೇರೆ ಬೇರೆ ಹೆಸರುಗಳಿಂದ ಉಲ್ಲೇಖಿಸಲಾಗಿದೆ. ಇದು ಬಾರಕೂರು ಪ್ರಾಂತದ ಭಾಗವಾಗಿದ್ದು ವಿಜಯನಗರದ ಅಳ್ವಿಕೆಗೆ ಒಳಪಟ್ಟಿತ್ತು. ಆಳುಪರ ಅವನತಿಯ ನಂತರ ಇದು ಉತ್ತರ ಕನ್ನಡ ಜಿಲ್ಲೆಯ ಹಾಡುವಳ್ಳಿಯ ಜೈನ ರಾಜಕುಮಾರಿ ಭೈರಾದೇವಿಯ ಆಡಳಿತಕ್ಕೆ ಒಳಪಟ್ಟಿತು. ಬೈಂದೂರಿನ ಸೇನೇಶ್ವರ ದೇವಸ್ಥಾನವು ಚಾಳುಕ್ಯ ಶೈಲಿಯಲ್ಲಿದ್ದು ಹನ್ನೊಂದನೇಯ ಶತಮಾನದ್ದಾಗಿದೆ. ಇಲ್ಲಿನ ಮಂಟಪದಲ್ಲಿರುವ ಕರಿಕಲ್ಲು ಬಸವ ಹೊಯ್ಸಳಪೂರ್ವ ಕಾಲದ್ದು. ಗರ್ಭಗೃಹದ ಹೊರ ಮೈಯಲ್ಲಿ ಭೈರವ, ಮಹಾದೇವ, ಚಾಮುಂಡಿ ಮತ್ತು ಉಗ್ರನರಸಿಂಹನ ಪ್ರತಿಮೆಗಳಿವೆ. ಕ್ರಿ.ಶ. 1360ರ ಒಂದು ಶಿಲಾಶಾಸನದಲ್ಲಿ ಚಿಕ್ಕಮಲ್ಲ ಡಣ್ಣಾಯಕನೆಂಬ ವ್ಯಕ್ತಿ ಈ ಸೇನೇಶ್ವರ ದೇವರಿಗೆ ಭೂದಾನ ಮಾಡಿದ ವಿಷಯವಿದೆ. ಇಲ್ಲಿ ಒಂದು ಮಾಸ್ತಿಕಟ್ಟೆಯೂ ಇದೆ. ಬೈಂದೂರ ಬಂದರನ್ನು

ಕೇವಲ ಸಮುದ್ರ ದಂಡೆಯ ವ್ಯಾಪಾರಕ್ಕಾಗಿ ಮಾತ್ರ ಉಪಯೋಗಿಸಲಾಗುತ್ತದೆ. ಬೈಂದೂರಿನಲ್ಲಿ ಪುರಸಭೆ ಇದೆ.

ಕುಣಿಗಲು : (ತುಮಕೂರು ಜಿ ; ತಾ. ಕೇ; ಜನ: 18,076) ಬೆಂಗಳೂರು ನಗರದಿಂದ 75 ಕಿಮೀ ಹಾಗೂ, ತುಮಕೂರಿನ ದಕ್ಷಿಣಕ್ಕೆ 35 ಕಿಮೀ ದೂರದಲ್ಲೂ, ಬೆಂಗಳೂರು-ಹಾಸನ ಹೆದ್ದಾರಿಯಲ್ಲಿ ಕುಣಿಗಲು ಇದೆ. ಶಾಸನಗಳಲ್ಲಿ ಇದನ್ನು ಕುಣಿಗಿಲ್ ಅಥವಾ ಕುಣಿಂಗಲು ಎಂದು ಹೆಸರಿಸಿವೆ. ಕುಣಿಯುವ ಕಲ್ಲು ಎಂಬುದರಿಂದ ಕುಣಿಗಲ್ ಬಂದಿದೆ ಎಂದು ಹೇಳಲಾಗುತ್ತದೆ. ಶಿವತಾಂಡವ ಮಾಡಿದನೆಂಬುದು ಇಲ್ಲಿನ ಐತಿಹ್ಯ. ಶಿವಗಂಗೆ ಬೆಟ್ಟದಲ್ಲಿ ಹುಟ್ಟುವ ನಳಿನಿ, ನಾಗಿನಿ ಮತ್ತು ಕಮಲಾ ಎಂಬ ಹೊಳೆಗಳ ಸಂಗಮ ಇಲ್ಲಿ ಆಗುತ್ತದೆಂದು ನಂಬುತ್ತಾರೆ. ಗಂಗರ ದೊರೆ ಶಿವಮಾರ ಇಲ್ಲಿ ರಾಜ್ಯಪಾಲನಾಗಿದ್ದನೆಂಬ ಹೇಳಿಕೆ ಇದೆ. ಕ್ರಿ.ಶ. 785ರಲ್ಲಿ ಇಲ್ಲಿನ ಕೋಟೆಗೆ ವೀರಕಂಬರಾಯನೆಂಬುವವನು ಶಂಕುಸ್ಥಾಪನೆ ಮಾಡಿದನೆಂದು ಹೇಳಲಾಗಿದೆ. ಹೊಯ್ಸಳರ ಕಾಲದಲ್ಲಿ ಇದು ಒಂದು ಅಗ್ರಹಾರವಾಗಿತ್ತು. ಇದು ಮಾಗಡಿ ಪ್ರಭುಗಳ ವಶಕ್ಕೆ ಬಂದ ಮೇಲೆ ಈ ಊರು ಮತ್ತು ಕೋಟೆಗಳು ವಿಸ್ತೃತಗೊಂಡವು. ಇಲ್ಲಿನ ನರಸಿಂಹ ದೇವಾಲಯ ದೊಡ್ಡದು ಮತ್ತು ಹೊಯ್ಸಳರ ಕಾಲದ್ದು. ಇದು ವಿಜಯನಗರದ ಕಾಲದಲ್ಲಿ ಬದಲಾವಣೆಗೆ ಒಳಗಾಯಿತು. ಹುಲಿಯೂರು ದುರ್ಗದಿಂದ ತಂದರೆಂದು ಹೇಳುವ ಜನಾರ್ದನ ವಿಗ್ರಹ ಇಲ್ಲಿದೆ. ದೊಡ್ಡದಾದ ಸೋಮೇಶ್ವರ ದೇವಸ್ಥಾನಕ್ಕೆ ಮಹಾದ್ವಾರವಿರುವುದು ದಕ್ಷಿಣಕ್ಕೆ ಮತ್ತು ಅಲ್ಲಿ ಉದ್ಭವಲಿಂಗ ಇದೆ. ಇಲ್ಲಿನ ಪದ್ಮೇಶ್ವರ ದೇವಾಲಯ ಹೊಯ್ಸಳ ಮಾದರಿಯಲ್ಲಿದ್ದು ಇದರಲ್ಲಿ ಗರ್ಭಗೃಹ, ಶುಕನಾಸ ಮತ್ತು ನವರಂಗಗಳು ಇವೆ. ಮೂರು ಗರ್ಭಗೃಹಗಳಿರುವ ವೆಂಕಟರಮಣ ದೇವಸ್ಥಾನದಲ್ಲಿ ಸುಂದರವಾದ ಶ್ರೀನಿವಾಸ ವಿಗ್ರಹವಿದೆ. ಶಿವರಾಮೇಶ್ವರ ದೇವಸ್ಥಾನ ನೂತನವಾದುದು. ಅದರಲ್ಲಿ ಗಂಗರ ಕಾಲದ ಮಹಿಷಾಸುರಮರ್ದಿನಿಯ ವಿಗ್ರಹವಿದೆ. ಇದನ್ನು ಇಲ್ಲಿಗೆ ಕೊಟ್ಟಗೆರೆಯಿಂದ ತರಲಾಯಿತೆಂದು ಹೇಳುತ್ತಾರೆ. ಇಲ್ಲಿನ ಒಂದು ಕುದುರೆಗಾವಲು ಹೈದರ್‌ಅಲಿ ಕಾಲದಿಂದಲೂ ಇದೆ. ಜೊತೆಗೆ ಇದು ರೇಷ್ಮೆ ಕೃಷಿಗೂ, ಬೀಡಿ ತಯಾರಿಕೆಗೂ ಹೆಸರುವಾಸಿಯಾಗಿದೆ. ತಾಲೂಕಿನ ಇತರ ಪ್ರಮುಖ ಸ್ಥಳಗಳು ಈ ಮುಂದಿನಂತಿವೆ: ಹುಲಿಯೂರುದುರ್ಗ (ಜನ: 5,519) ವು ತುಮಕೂರಿನ ದಕ್ಷಿಣಕ್ಕೆ 64 ಕಿಮೀ ಹಾಗೂ ಕುಣಿಗಲಿಗೆ ದಕ್ಷಿಣಕ್ಕೆ 38 ಕಿಮೀ ದೂರದಲ್ಲಿಯೂ ಇದೆ. ಈಗ ಅದೇ ಹೆಸರಿನ ಹೋಬಳಿಯ ಕೇಂದ್ರವಾಗಿದೆ. ಆದರೆ ಆ ಮೊದಲು ಕ್ರಿ.ಶ. 1873ರ ವರೆಗೆ ತನ್ನ ಹೆಸರಿನ ತಾಲೂಕಿನ ಕೇಂದ್ರವಾಗಿತ್ತು. ಇದು ಅದೇ ಹೆಸರಿನ ಬೆಟ್ಟದ ಬುಡದಲ್ಲಿದೆ. ಇಡೀ ಬೆಟ್ಟ ಒಂದೇ ಬಂಡೆಯಾಗಿದ್ದು, ಅದರ ಆಕಾರ ತಲೆಕೆಳಗಾದ ಬಟ್ಟಲು ಮಾದರಿಯಾಗಿ ಗೋಚರಿಸುತ್ತದೆ. ಬೆಟ್ಟದ ಮೇಲಿನ ಕೋಟೆ ಗೋಡೆಗಳು ಸಮುದ್ರಮಟ್ಟಕ್ಕೆ 854 ಮೀ ಎತ್ತರದಲ್ಲಿ ಇದ್ದು ಇದನ್ನು ಮಾಗಡಿಪ್ರಭು ಕೆಂಪೇಗೌಡ ಕಟ್ಟಿಸಿದನೆಂದು ಹೇಳಲಾಗಿದೆ. ಇಲ್ಲಿ ಚಿಲುಮೆಗಳು, ಪಾಳುಬಿದ್ದ ಮನೆಗಳು, ಮದ್ದುಗುಂಡಿನ ಕೋಠಿ, ಕಣಜಗಳು, ದರಬಾರು ಹಜಾರ, ಮತ್ತಿತರ ಅವಶೇಷಗಳಿವೆ. ಬೆಟ್ಟದ ಸನಿಯದಲ್ಲಿರುವ ಗೋಪಾಲ ಕೃಷ್ಣ ದೇವಸ್ಥಾನವನ್ನು ಕೆಂಪೇಗೌಡನೋ ಅಥವಾ ಚಿಕ್ಕದೇವ ಒಡೆಯರೋ ಕಟ್ಟಿದರೆಂಬ ಪ್ರತೀತಿ ಇದೆ. ಸುಂದರ ಕೆತ್ತನೆಯ ಗ್ರಾನೈಟ್ ಕಂಭಗಳು ದೇವಸ್ಥಾನದ ನವರಂಗದಲ್ಲಿವೆ. ಹುಲಿಯೂರುದುರ್ಗ ಬೆಟ್ಟದ ಪಕ್ಕದ ಹೇಮಗಿರಿ ಬೆಟ್ಟದ ಮೇಲೆ ಮಲ್ಲಿಕಾರ್ಜುನ ದೇವಸ್ಥಾನವಿದೆ. ಹೇಮಗಿರಿಯ ಪೂರ್ವದ ಇಳಿಜಾರಿನಲ್ಲಿ ವಾದಿರಾಜ ಗುಡಿ ಇದ್ದು, ಇದನ್ನು ಸ್ಥಳೀಯರು ಹೇಮಗಿರಿಯಪ್ಪ ಎಂದು ಕರೆಯುತ್ತಾರೆ. ಇಲ್ಲಿನ ಒಂದು ಗುಂಡುಕಲ್ಲಿಗೆ ಪೂಜಾದಿಗಳು ನಡೆಯುತ್ತವೆ. ಹೇಮಗಿರಿಯ ದಕ್ಷಿಣ ಇಳಿಜಾರಿನಲ್ಲಿ ಭೈರವಾಲಯವಿದೆ. ಹುಲಿಯೂರುದುರ್ಗ ಬೆಟ್ಟಕ್ಕಿಂತ ಇದು ಉನ್ನತವಾಗಿದ್ದರೂ, ಇದಕ್ಕೆ ಕೋಟೆ ಇಲ್ಲ. ಹುತ್ತರಿದುರ್ಗವು (ಜನ: 1,020) ಕುಣಿಗಲಿಗೆ ನೈಋತ್ಯಕ್ಕೆ ಸಮುದ್ರಮಟ್ಟಕ್ಕಿಂತ 3,708 ಅಡಿಗಳು ಅಥವಾ 1,130 ಮೀಗಳ ಎತ್ತರವಿರುವ ಕೋಟೆಯಿರುವ ಬೆಟ್ಟ. ಇದನ್ನು ದೊಡ್ಡ ಬೆಟ್ಟವೆಂದು ಸಹ ಕರೆಯಲಾಗುತ್ತದೆ. ಬೆಟ್ಟದ ಮೇಲಕ್ಕೆ ಹೋಗಲು ಎಂಟು ದ್ವಾರಗಳಿವೆ. ಇದಲ್ಲದೆ ಇನ್ನೂ ಕೆಲವು ಹೊರದ್ವಾರಗಳು ಸಹ ಇವೆ. ಇದರ ತುದಿಯಲ್ಲಿ ಶಂಕರಕುಂಭಿ ಎಂದು ಕರೆಯುವಲ್ಲಿ ಶಂಕರೇಶ್ವರ ದೇವಸ್ಥಾನ ಮತ್ತು ಅದರ ಮುಂದೆ 'ದೊಡ್ಡ ದೊಣೆ' ಎಂಬ ಹೆಸರಿನ ನೀರಿನ ಒರತೆ ಇದೆ. ಇದರ ತುದಿಯಿಂದ ಸುತ್ತಲಿನ ವಿಸ್ತಾರವಾದ ಭೂಭಾಗದ ತುಂಬ ಅಸಂಖ್ಯಾತ ಕೆರೆಗಳು ಮತ್ತು ಪುಟ್ಟಪುಟ್ಟ ಗುಡ್ಡಗಳು ಕಣ್ತಣಿಸುವಂತೆ ಹರಡಿರುವುದು ಕಾಣುತ್ತದೆ. ಬೆಟ್ಟದ ಬುಡದಿಂದ ಮೂರು ಕಿಮೀ ದೂರದಲ್ಲಿರುವ ಹುತ್ರಿ ಗ್ರಾಮದಿಂದ ಈ ಬೆಟ್ಟಕ್ಕೆ ಈ ಹೆಸರು ಬಂದಿದೆ. ಬೆಟ್ಟದ ತೀರ ಬುಡದಲ್ಲಿರುವ ಗ್ರಾಮವನ್ನು ಸಂತೇಪೇಟೆ ಎಂದು ಕರೆಯುತ್ತಾರೆ. ಬೆಟ್ಟದ ಒಂದು ಹಂತದಲ್ಲಿ ಹುತ್ತರಿದುರ್ಗ ಗ್ರಾಮವಿದೆ. ಇಲ್ಲಿ ಆದಿನಾರಾಯಣ, ವೀರಭದ್ರ, ಆಂಜನೇಯ, ಮೊದಲಾದ ದೇವಸ್ಥಾನಗಳಿವೆ. ಅಮೃತೂರು (ಜನ: 4,455) ಕುಣಿಗಲ್‌ನ ನೈಋತ್ಯಕ್ಕೆ 11 ಕಿಮೀ ದೂರದಲ್ಲಿದೆ. ಇದು ಅದೇ ಹೆಸರಿನ ಹೋಬಳಿಯ ಕೇಂದ್ರ. ಇದು ಒಂದು ಹಳೇಕಾಲದ ಅಗ್ರಹಾರವಾಗಿದ್ದು, ಇದನ್ನು ಮೊದಲು ಅತಕೂರು ಎಂದೂ, ವೀರನರಸಿಂಹಪುರ ಎಂದೂ ಕರೆಯಲಾಗುತ್ತಿತ್ತು. ಇಲ್ಲಿನ ಚೆನ್ನಕೇಶವ ದೇವಸ್ಥಾನ 16ನೇಯ ಶತಮಾನದ ದ್ರಾವಿಡ ಶೈಲಿಯ ಕಟ್ಟಡ. ಇಲ್ಲಿನ ಸೋಮೇಶ್ವರ ದೇವಸ್ಥಾನವೂ 16ನೇಯ ಶತಮಾನದ್ದೇ. ಅದು ಕೆರೆಯ ಬದಿಗಿದೆ. ಅದನ್ನು ಚಂದ್ರಮೌಳೀಶ್ವರ ದೇವಸ್ಥಾನವೆಂದು ಸಹ ಕರೆಯುತ್ತಾರೆ. ಇಲ್ಲಿನ ಗ್ರಾಮದೇವತೆ ಪಟ್ಟಲದಮ್ಮನ ಗುಡಿಯಲ್ಲಿ ಅನೇಕ ಬಣ್ಣ ಬಳಿದ ಮಣ್ಣಿನ

ಮೂರ್ತಿಗಳಿದ್ದು, ಪಟ್ಟದಲಮ್ಮ ಮತ್ತು ಲಕ್ಷ್ಮೀ ವಿಗ್ರಹಗಳಿಗೆ ಏಳು ಹೆಡೆಯ ಸರ್ಪಗಳ ಶಿರೋರಕ್ಷಣೆಯಿದೆ. ದೇವಸ್ಥಾನದ ಗೋಡೆಗಳ ಮೇಲೆ, ತೊಲೆಗಳ ಮೇಲೆ ಶಿವಲೀಲಾ ಪ್ರಸಂಗಗಳನ್ನೂ, ವಿಷ್ಣುವಿನ ದಶಾವತಾರಗಳನ್ನೂ ಚಿತ್ರಿಸಲಾಗಿದೆ. ಇಲ್ಲಿಗೆ ಸಮೀಪದಲ್ಲಿ ಮಾರ್ಕೋನಹಳ್ಳಿ ಎಂಬಲ್ಲಿ ಶಿಂಷಾ ನದಿಗೆ ಅಣೆಕಟ್ಟು ಕಟ್ಟಿ ಇಡೀ ಜಿಲ್ಲೆಯಲ್ಲೇ ಅತ್ಯಂತ ದೊಡ್ಡ ಜಲಾಶಯದ ನಿರ್ಮಾಣವಾಗಿದೆ. 1939ರಲ್ಲಿ 29 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಈ ಅಣೆಕಟ್ಟು ನಿರ್ಮಾಣವಾಯಿತು. ಈ ಜಲಾಶಯದ ಅಚ್ಚುಕಟ್ಟು 4,455 ಹೆಕ್ಟೇರುಗಳು.

ಕುಮಟಾ : (ಉ. ಕ. ಜಿ; ತಾ. ಕೇ; ಜನ: 23,385) ಕುಮಟಾ ಬೆಂಗಳೂರಿನ ವಾಯುವ್ಯಕ್ಕೆ 474 ಕಿಮೀ ದೂರದಲ್ಲಿದೆ. ಕುಮಟಾ ಹೆಸರಿನ ಅತ್ಯಂತ ಹಿಂದಿನ ಉಲ್ಲೇಖ ಸುಮಾರು ಕ್ರಿ.ಶ. 1530ರಲ್ಲಿ ಪೋರ್ಚುಗೀಸರಿಗೆ 200 ಚೀಲ ಅಕ್ಕಿಯನ್ನು ಕಾಣಿಕೆ ಕೊಡುವ ಸಂದರ್ಭದಲ್ಲಿ 'ಕೊಂಬಟಿಂ' ನದಿಯ ಉಲ್ಲೇಖದಲ್ಲಿ ಬಂದಿದೆ. ಕ್ರಿ. ಶ. 1758ರಲ್ಲಿ ಆಂಕೆತಿಲ್ ದು ಪೆರ್ರಾನ್ ಎಂಬ ಫ್ರೆಂಚ್ ವಿದ್ವಾಂಸ 'ಕೊಮೆಂಟಾ' ಊರಿನ ಪ್ರಸ್ತಾಪ ಮಾಡಿದ್ದು, ಅಲ್ಲಿ ಒಂದು ಕ್ರೈಸ್ತರ ಚರ್ಚು, ಒಂದು ನದಿ ಮತ್ತು ಸಮುದ್ರ ಮಧ್ಯದಲ್ಲಿನ ಬೆಟ್ಟದ ಮೇಲೆ ಕೋಟೆಗಳಿದ್ದವೆಂದು ಹೇಳುತ್ತಾನೆ. ಕ್ರಿ. ಶ. 1801ರಲ್ಲಿ ಬುಕಾನನ್ ಕುಮಟಾವನ್ನು 'ಕುಮಟಿ' ಎಂದು ಹೇಳಿ ಅದು ಗಮನಾರ್ಹ ಸ್ಥಳ ಎಂದು ಸೂಚಿಸಿದ್ದಾನೆ. ಊರಿನಲ್ಲಿ ಕುಂಭೇಶ್ವರ ದೇವಸ್ಥಾನವಿದೆ. ಆ ದೇವರ ಹೆಸರು ಊರಿಗೆ ಅನ್ವಯವಾಗಿದೆ. ಹಿಂದೆ ಈ ಊರನ್ನು ಕುಂಭಟ ಎಂದೇ ಕರೆಯಲಾಗುತ್ತಿತ್ತು. ಇದೊಂದು ಸಣ್ಣ ರೇವು; ಆದರೂ ಹಿಂದೆ ಇದು ಹತ್ತಿಯ ರಫ್ತಿಗೆ ಹೆಸರುವಾಸಿಯಾಗಿತ್ತು. ಇಲ್ಲಿ ಭಾರಿ ವ್ಯಾಪಾರ ಹಿಂದೆ ನಡೆಯುತ್ತಿದ್ದು ಇದಕ್ಕೆ ಮುಖ್ಯ ಕಾರಣ ಹತ್ತಿ ಬೆಳೆಯುವ ಧಾರವಾಡ ಮಾರುಕಟ್ಟೆಗಳಿಗೆ ಇಲ್ಲಿಂದ ಸುಗಮ ದಾರಿ ಇದ್ದುದು. ಇಲ್ಲಿ ಶಾಂತಿಕಾಪರಮೇಶ್ವರಿ, ಕಾವೇರಿ, ಕಾಮಾಕ್ಷಿ, ವೆಂಕಟರಮಣ, ವಿಠೋಬ, ಶಂಕರನಾರಾಯಣ ಮತ್ತು ಗೋಪಾಲಕೃಷ್ಣರ ದೇವಸ್ಥಾನಗಳಿವೆ. ಈ ದೇವಾಲಯಗಳಲ್ಲದೆ ಕುಮಟಾದಲ್ಲಿ ಒಂದು ಪಾರ್ಶ್ವನಾಥ ಜೈನ ಬಸದಿ ಹಾಗೂ ಕ್ಯಾಥಲಿಕರ ಇಗರ್ಜಿ ಇವೆ. ಊರಿನಲ್ಲಿ ರಾಜ್ಯದ ವಿಶಿಷ್ಟ ಕರಕುಶಲ ಗುಂಪಿನವರಾದ ಗುಡಿಗಾರರೇ ವಾಸ ಮಾಡುವ ಗುಡಿಗಾರ ಬೀದಿ ಇದೆ. ಈ ಗುಡಿಗಾರರು ಗಂಧದ ಕೆತ್ತನೆಯ ಕೆಲಸದಲ್ಲಿ ಶ್ರೇಷ್ಠರು, ನಿಷ್ಣಾತರು. ಕುಮಟಾದಿಂದ ಐದು ಕಿಮೀ ದೂರದಲ್ಲಿ ಬಾಡ ಗ್ರಾಮವಿದೆ. ಇದು ಅಘನಾಶಿನಿ ನದಿಗೂ ಸಮುದ್ರಕ್ಕೂ ನಡುವೆ ಇದೆ. ಉಬ್ಬರವಿಳಿತಗಳ ಭೂಪ್ರದೇಶವಾದ ಇದು ಪ್ರವಾಸಿಗರ ಕಣ್ಣುಗಳಿಗೆ ಆಕರ್ಷಕ ವೆನಿಸುತ್ತದೆ. ಶಕ್ತಿದೇವತೆಯಾದ ಅಮ್ಮನ ಹೆಸರಿನ ದೇವಸ್ಥಾನವೊಂದು ಇಲ್ಲಿದೆ. ಉಪ್ಪಿನಪಟ್ಟಣ ಎಂಬ ಒಂದು ಪುಟ್ಟ ಗ್ರಾಮ ಕುಮಟಾಕ್ಕೆ 14 ಕಿಮೀ ದೂರ ಅಘನಾಶಿನಿಯ ದಡದಲ್ಲಿದೆ. ಇಲ್ಲಿ ಖ್ಯಾತ ಗಣಪತಿಯ ದೇವಾಲಯವಿದೆ. ತೀರ ಕಡಿಮೆ ಆಭರಣಗಳಿಂದ ಅಲಂಕೃತವಾಗಿರುವ ಕುಳಿತ ಭಂಗಿಯ ಈ ಗಣಪತಿ ಮೂರ್ತಿಗೆ ಎರಡೇ ಕೈಗಳಿವೆ.

ಕುಶಾಲನಗರ : (ಕೊಡಗು ಜಿ ; ಸೋಮವಾರಪೇಟೆ ತಾ; 1981ರ ಜನ: 6,936) ಕುಶಾಲನಗರ ಸೋಮವಾರಪೇಟೆ ತಾಲೂಕಿನಲ್ಲಿ ಅಭಿವೃದ್ಧಿಗೊಳ್ಳುತ್ತಿರುವ ಊರು. ಇದು ಬೆಂಗಳೂರಿನಿಂದ 218 ಕಿಮೀ ಹಾಗೂ ಮಡಿಕೇರಿಯಿಂದ 30 ಕಿಮೀ ದೂರದಲ್ಲಿ ಮಡಿಕೇರಿ ಮೈಸೂರು ರಸ್ತೆಯಲ್ಲಿದೆ. ಕ್ರಿ. ಶ. 1773ರಲ್ಲಿ ಹೈದರ್‌ಅಲಿಯಿಂದ ಈ ಊರಿಗೆ ಕುಶಾಲನಗರ ಎಂದು ನಾಮಕರಣವಾಯಿತು. ಅವನ ಮೊಟ್ಟಮೊದಲ ಕೊಡಗು ದಾಳಿಯಲ್ಲಿ ಇಲ್ಲಿ ಗೆಲವು ಸಿದ್ಧಿಸಿದ ಸಂತಸ ಇದಕ್ಕೆ ಕಾರಣ. ಬ್ರಿಟಿಷರ ಆಡಳಿತ ಕಾಲದಲ್ಲಿ ಕೊಡಗಿನ ಮೊಟ್ಟಮೊದಲ ಕಮಿಷನರ್ ಕರ್ನಲ್ ಫ್ರೇಜರ್ ಅವರ ನೆನಪಿಗಾಗಿ ಇದರ ಹೆಸರನ್ನು ಫ್ರೇಜರ್‌ಪೇಟೆ ಎಂದು ಬದಲಾಯಿಸಲಾಯಿತು. ಈಗ ಅದರ ಹಿಂದಿನ ಹೆಸರನ್ನೇ ಮತ್ತೆ ಇಡಲಾಗಿದೆ. ಇಲ್ಲಿ ಕಾವೇರಿ ನದಿಯನ್ನು ದಾಟಲು ಒಂದು ಬಲವಾದ ಕಲ್ಲು ಸೇತುವೆಯ ನಿರ್ಮಾಣವಾಗಿದೆ. ಇದರ ಭೂಮಟ್ಟದ ಕಾರಣವಾಗಿ ಇಲ್ಲಿ ಮಡಿಕೇರಿಗಿಂತ ಹೆಚ್ಚು ಸೆಖೆಯಿದ್ದು ಮಳೆಗಾಲದಲ್ಲಿ ವಾಸಕ್ಕೆ ತುಂಬಾ ಹಿತವಾಗಿರುತ್ತದೆ. ಇದು ತುಂಬಾ ಚಟುವಟಿಕೆಯಿಂದ ಕೂಡಿದ ವ್ಯಾಪಾರೀ ಕೇಂದ್ರ. ಆನೆಕಾಡು ಮತ್ತು ಅತ್ತೂರು ಮನ್ನಾ ಜಂಗಲ್‌ಗಳು ಇದಕ್ಕೆ ಬಹಳ ಹತ್ತಿರದಲ್ಲಿವೆ. ಇಲ್ಲಿ 200 ಎಕರೆ ಜಮೀನಿನಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಪ್ರಾದೇಶಿಕ ಉದ್ಯಮ ಅಭಿವೃದ್ಧಿ ನಿಗಮದವರು ದಿಢೀರ್ ಕಾಫಿ ಉತ್ಪಾದನಾ ಕಾರ್ಖಾನೆಯನ್ನು ಸ್ಥಾಪಿಸಿದ್ದಾರೆ. ಹಣ್ಣಿನ ಸಂಸ್ಕರಣ ಸಹಕಾರ ಸಂಘ ಇಲ್ಲಿ ಕೆಲಸ ಮಾಡುತ್ತಿದ್ದು 'ಕುಶಾಲ ಫಲೋತ್ಪತ್ತಿ'ಗಳನ್ನು ತಯಾರಿಸುತ್ತಿದೆ.

ಕುಷ್ಟಗಿ : (ರಾಯಚೂರು ಜಿ; ತಾ. ಕೇ; ಜನ: 11,781) ಕುಷ್ಟಗಿಯು ಬೆಂಗಳೂರಿಗೆ 45 ಕಿಮೀ ಹಾಗೂ, ರಾಯಚೂರಿನ ಪಶ್ಚಿಮಕ್ಕೆ 100 ಕಿಮೀ ದೂರದಲ್ಲಿದೆ. ಇದಕ್ಕೆ ಹಿಂದೆ ಕುಸ್ತಗಿ ಅಥವಾ ಕೃಷ್ಣಗಿರಿ ಎಂಬ ಹೆಸರುಗಳಿದ್ದವೆಂದು ಹೇಳಲಾಗುತ್ತದೆ. ಕೃಷ್ಣದೇವರಾಯನ ಅಳಿಯ ರಾಮರಾಯ ಇಲ್ಲಿ ರಾಜ್ಯಾಡಳಿತ ನಡೆಸಿದನೆಂದೂ ಹೇಳಲಾಗುತ್ತದೆ. ಇದು ಒಂದು ಪ್ರಸಿದ್ಧ ವ್ಯಾಪಾರೀ ಕೇಂದ್ರ. ಇಲ್ಲಿನ ಬುತ್ತಿ ಬಸವಣ್ಣ, ವೀರಭದ್ರ ಮತ್ತು ಅಡವಿರಾಯನ ಗುಡಿ ಮೊದಲಾದ ದೇವಸ್ಥಾನಗಳು ಮುಖ್ಯವಾದುವು. ಇಲ್ಲಿ ಕೆಲವು ಮಸೀದಿಗಳು ಸಹ ಇವೆ. ಇಲ್ಲಿ 12-13ನೇಯ ಶತಮಾನದ ಸರಿಸುಮಾರಿನಲ್ಲಿ ಕಟ್ಟಿದುದೆನ್ನಲಾದ ಸೋಮನಾಥನ ಹಳೆಯ ದೇವಸ್ಥಾನವಿದೆ.

ಹನುಮಸಾಗರವು ಕುಷ್ಟಗಿ ತಾಲೂಕಿನಲ್ಲಿದ್ದು ಕಲ್ಲಿನ ಸಮಾಧಿಗಳಿಗೆ ಮತ್ತು ಇತಿಹಾಸಪೂರ್ವದ ಇತರ ಅವಶೇಷಗಳಿಗೆ ಗಮನಾರ್ಹವಾದ ಗ್ರಾಮ. ಗ್ರಾಮದಲ್ಲಿ ವೆಂಕಟೇಶ್ವರ ಗೋವಿಂದರಾಜ ದೇವಸ್ಥಾನವಿದೆ.

ಕೂಡ್ಲಿಗಿ : (ಬಳ್ಳಾರಿ ಜಿ; ತಾ. ಕೇ; ಜನ: 13,964) ಕೂಡ್ಲಿಗಿಯು ಬಳ್ಳಾರಿಗೆ 80 ಕಿಮೀ ಪಶ್ಚಿಮಕ್ಕಿದೆ. ಇಲ್ಲಿ ಒಂದು ಪ್ರಮುಖವಾದ ಸಿದ್ಧೇಶ್ವರನ ದೇವಸ್ಥಾನವಿದೆ. ವಿಜಯನಗರದ ಕಾಲದಲ್ಲಿ ಇದು ಒಂದು ಪ್ರಸಿದ್ಧ ಸ್ಥಳವಾಗಿತ್ತು. ಅದು ಕಂಬಳಿ ಮತ್ತು ಉಣ್ಣೆಯ ಶಾಲುಗಳ ನೂಲಿನ ಚಾಪೆಗಳು ಹಾಗೂ ನೇಯ್ಗೆಯ ಉದ್ಯಮಕ್ಕೆ ಪ್ರಸಿದ್ಧವಾಗಿದೆ. ಜರಿಮಲೆ (ಜನ : 1,507) ಗ್ರಾಮ ಮತ್ತು ಅದರ ಬಳಿಯ ಬೆಟ್ಟವು ಕೂಡ್ಲಿಗಿಯ ನೈಋತ್ಯಕ್ಕೆ 14 ಕಿಮೀ ದೂರದಲ್ಲಿದೆ. ಬೆಟ್ಟವು ಸಮುದ್ರಮಟ್ಟದಿಂದ 838 ಮೀ ಎತ್ತರವಾಗಿದೆ. ಮತ್ತು ಸುತ್ತಲಿನ ಭೂಮಟ್ಟದಿಂದ 844 ಮೀ ಎತ್ತರವಿದ್ದು, ಇದು ಸುತ್ತಮುತ್ತಲ ಪ್ರದೇಶಕ್ಕೆ ಎದ್ದುಕಾಣುವಂತಿದೆ. ಈಗ ಪಾಳು ಬಿದ್ದಿರುವ ಕೋಟೆಯು ವಿಜಯನಗರಾನಂತರ ಜರಿಮಲೆ ಪಾಳೆಯಗಾರರ ವಾಸಸ್ಥಳವಾಗಿತ್ತು. ಗುಡಿಕೋಟೆ (ಜನ : 3,583) ಗ್ರಾಮ ಕೂಡ್ಲಿಗಿಯ ಪೂರ್ವಕ್ಕೆ 28 ಕಿಮೀ ದೂರದಲ್ಲಿದ್ದು, ಹಾಲಿ ಒಂದು ಕಂದಾಯ ವೃತ್ತದ ಕೇಂದ್ರವಾಗಿದೆ. ಇದು ಹಿಂದೆ ಬೇಡಮನೆತನದ ಪಾಳೆಯಗಾರರ ಆಡಳಿತದಲ್ಲಿತ್ತು. ಕ್ರಿ.ಶ. 1777ರಲ್ಲಿ ಹೈದರ್‌ಅಲಿ ಇದನ್ನು ಮುತ್ತಿ ಆಕ್ರಮಿಸಿಕೊಂಡ. ಪಾಳು ಬಿದ್ದಿರುವ ಕೋಟೆಯ ಅವಶೇಷಗಳು ಇಲ್ಲಿನ ಬೆಟ್ಟದ ಮೇಲಿದ್ದು, ಇದರ ವೈಶಿಷ್ಟ್ಯವೆಂದರೆ ಕೋಟೆಗೆ ಬಳಸಿರುವ ಹೆಬ್ಬಂಡೆಗಳು. ಬ್ರೂಸ್ ಫೂಟ್ ಎಂಬಾತನ ಹೇಳಿಕೆಯ ಪ್ರಕಾರ ಇಷ್ಟು ಗಾತ್ರದ ಬಂಡೆಗಳನ್ನು ಬಳಸಿರುವ ಕೋಟೆಯನ್ನು ದಕ್ಷಿಣ ಭಾರತದಲ್ಲಿ ಎಲ್ಲಿಯೂ ಆತ ಕಂಡುದೇ ಇಲ್ಲ. ಬೆಟ್ಟದ ಮೇಲೆ ಎರಡು ವಿಚಿತ್ರ ಬಾವಿಗಳಿವೆ. ಅಲ್ಲಿ ಸಣ್ಣಸಣ್ಣ ದೇವಸ್ಥಾನಗಳ ಅವಶೇಷಗಳಿವೆ. ಕೆರೆಯ ಪೂರ್ವದ ತುದಿಯಲ್ಲಿ ಅಗಣಿತ ಸಂಖ್ಯೆಯ ನಾಗರಕಲ್ಲುಗಳಿವೆ. ಕೊಟ್ಟೂರು (1981ರ ಜನ: 15,445) ಒಂದು ಪ್ರಮುಖ ವ್ಯಾಪಾರೀ ಕೇಂದ್ರ ಮತ್ತು ಅದೇ ಹೆಸರಿನ ಹೋಬಳಿ ಕೇಂದ್ರವಾಗಿರುವುದರ ಜೊತೆಗೆ ಪುರಸಭೆಯನ್ನು ಹೊಂದಿದೆ. ಇದು ಬೆಂಗಳೂರಿನಿಂದ 285 ಕಿಮೀ ಹಾಗೂ ಕೂಡ್ಲಿಗಿಯಿಂದ 19 ಕಿಮೀ ದೂರದಲ್ಲಿದೆ. ಇಲ್ಲಿ ಅನೇಕ ಹೆಸರುಗಳಿಂದ ಪರಿಚಿತವಾಗಿದ್ದ ಒಬ್ಬ ಮಹಾಶರಣನ ಸಮಾಧಿಯಿದೆ. ಅವರನ್ನು ಬಸಪ್ಪಲಿಂಗಸ್ವಾಮಿಯೆಂದೂ ಕೊಟ್ರ (ಕೊಟ್ಟೂರು) ಬಸಪ್ಪನವರೆಂದೂ, ಕೊಟ್ಟೂರಸ್ವಾಮಿಯೆಂದೂ ಕರೆಯುತ್ತಿದ್ದರು. ಅವರ ಸಮಾಧಿ ಒಂದು ದೀರ್ಘ ಚತುರಸ್ರ ಆಕಾರದ ಕಟ್ಟಡದಲ್ಲಿದೆ. ಈ ಶರಣರು ಮೂರುಕಲ್ಲು ಮಠದಲ್ಲಿ ಲಿಂಗ ಸ್ಥಾಪನೆ ಮಾಡಿದರೆಂದು ಹೇಳಲಾಗಿದೆ. ಈ ಶರಣರ ಹೆಸರಿನ ಈ ಪವಿತ್ರ ಸ್ಥಳಕ್ಕೆ ಅನೇಕಾನೇಕ ಭಕ್ತರು ಬಂದು ನಡೆದುಕೊಳ್ಳುತ್ತಾರೆ. ನೇಯ್ಗೆ ಕಸುಬಿಗೆ ಈ ಊರು ಪ್ರಸಿದ್ಧಿ. ಇದು ವ್ಯಾಪಾರೀ ಕೇಂದ್ರವೂ ಹೌದು. ಅಂಬಳಿ (ಜನ : 1,403) ಗ್ರಾಮ ಕೊಟ್ಟೂರಿನ ವಾಯವ್ಯಕ್ಕೆ 10 ಕಿಮೀ ಹಾಗೂ ಕೂಡ್ಲಿಗಿಯ ವಾಯವ್ಯಕ್ಕೆ 28 ಕಿಮೀ ದೂರದಲ್ಲಿದೆ. ಈ ಗ್ರಾಮ ಹೆಚ್ಚು ಕಡಿಮೆ ಹರಪನಹಳ್ಳಿ, ಕೂಡ್ಲಿಗಿ ಮತ್ತು ಹಡಗಲಿ ಈ ಮೂರೂ ತಾಲೂಕುಗಳು ಸೇರುವಲ್ಲಿದೆ. ಇಲ್ಲಿ ಕರೀ ಶಿಲೆಯ ಚಾಳುಕ್ಯ ಶೈಲಿಯ ಕಲ್ಲೇಶ್ವರ ದೇವಸ್ಥಾನವಿದ್ದು, ಇಲ್ಲಿ ಆರನೇಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ. 1081-82 ಮತ್ತು 1105-06ರ ಕಾಲದ ಎರಡು ಶಾಸನಗಳಿವೆ. 1081-82ರ ಶಾಸನದ ಪ್ರಕಾರ ಈ ದೇವಸ್ಥಾನ ಆ ಮುಂಚಿನಿಂದಲೂ ಇದ್ದುದಾಗಿ ತಿಳಿಯುತ್ತದೆ. ಇಲ್ಲಿ ಹನುಮಾನ್ ದೇವಸ್ಥಾನವೂ ಇದ್ದು ಅಲ್ಲಿ ಇಮ್ಮಡಿ ಜಗದೇಕಮಲ್ಲನ ಶಾಸನ ಸಿಕ್ಕಿದೆ. ಉಜ್ಜನಿ (ಜನ 4,847) ಗ್ರಾಮ ಕೊಟ್ಟೂರಿಗೆ 16 ಕಿಮೀ, ಕೂಡ್ಲಿಗಿಗೆ 21 ಕಿಮೀ ದೂರದಲ್ಲಿದೆ. ಇದು ವೀರಶೈವ ಮಠಾಧೀಶರೊಬ್ಬರ ಆವಾಸಸ್ಥಾನವಾಗಿತ್ತು. 'ಉಜ್ಜಯಿನಿ ಸದ್ಧರ್ಮ ಪೀಠ' ಎಂಬ ಹೆಸರಿನ ಪ್ರಾಚೀನ ಧರ್ಮಪೀಠ ಇಲ್ಲಿದೆ. ಈ ಧರ್ಮಪೀಠದ ಗುರುಗಳ ಮಠ ಈ ಗ್ರಾಮದಲ್ಲಿ ಗಮನಾರ್ಹವಾದ ಕಟ್ಟಡ. ಇದರ ಆವರಣದಲ್ಲಿ ಸಿದ್ಧೇಶ್ವರ ದೇವಾಲಯವಿದೆ. ಈ ದೇವಸ್ಥಾನದ ದೇವರ ಮುಂದಿನ ಮಂಟಪ ವಿಭಾಗವೊಂದರ ಚಾವಣಿ ಸುಂದರವಾಗಿ ಕೆತ್ತಿದ ಕಮಲವಿದೆ. ಮಠದಲ್ಲಿರುವ ಒಂದು ವಿಗ್ರಹವನ್ನು ಬಸವೇಶ್ವರರದು ಎಂದು ವರ್ಣಿಸುತ್ತಾರೆ.

ಕೃಷ್ಣರಾಜನಗರ : (ಮೈಸೂರು ಜಿ; ತಾ. ಕೇ; ಜನ: 18,852) ಪುರಸಭೆಯನ್ನು ಪಡೆದಿರುವ ಕೃಷ್ಣರಾಜನಗರ ಮೈಸೂರಿನ ವಾಯುವ್ಯಕ್ಕೆ 39 ಕಿಮೀ ಹಾಗೂ ಬೆಂಗಳೂರಿನಿಂದ 156 ಕಿಮೀ ದೂರದಲ್ಲಿದೆ. ಊರು ಕಾವೇರಿ ನದಿಯ ಬಲದಂಡೆಯ ಮೇಲೆ ಇದ್ದು ಹಿಂದೆ ಇದನ್ನು ಯೆಡತೊರೆ ಎಂದು ಕರೆಯಲಾಗುತ್ತಿತ್ತು. ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರು 1937ರಲ್ಲಿ ಈ ಸ್ಥಳಕ್ಕೆ ಭೇಟಿ ಇತ್ತುದರ ಸ್ಮರಣಾರ್ಥವಾಗಿ ಇದಕ್ಕೆ ಕೃಷ್ಣರಾಜನಗರವೆಂಬ ಹೊಸ ಹೆಸರನ್ನು ಕೊಡಲಾಯಿತು. ಕಾವೇರಿ ದಂಡೆಯ ಮೇಲಿರುವ ಅರ್ಕೇಶ್ವರ ದೇವಾಲಯವು ಒಂದು ದೊಡ್ಡ ದೇವಾಲಯವಾಗಿದ್ದು ಅದು ಹನ್ನೊಂದನೇಯ ಶತಮಾನದ ಚೋಳ ಶಿಲ್ಪದ ಮಾದರಿಯಲ್ಲಿದೆ. ಇಲ್ಲಿ ರಾಮೇಶ್ವರ ದೇವಸ್ಥಾನವೂ ಮತ್ತು ಎರಡು ಮಸೀದಿಗಳೂ ಇವೆ. ಚುಂಚನಕಟ್ಟೆ ಅದೇ ಹೆಸರಿನ ಹೋಬಳಿ ಕೇಂದ್ರ. ಇದು ಕೃಷ್ಣರಾಜ ನಗರದಿಂದ 15 ಕಿಮೀ ದೂರದಲ್ಲಿದೆ. ಇಲ್ಲಿನ ಶ್ರೀರಾಮ ದೇವಸ್ಥಾನ ಭಾರೀ ಕಟ್ಟಡವಾಗಿದೆ. ಇಲ್ಲಿ ಶ್ರೀರಾಮ ಸಹಕಾರ ಸಕ್ಕರೆ ಕಾರ್ಖಾನೆಯೊಂದು ಕಾರ್ಯನಿರ್ವಹಿಸುತ್ತಿದೆ. ಹನಸೋಗೆ (ಜನ: 1,076)ಯು ಚುಂಚನಕಟ್ಟೆ ಹೋಬಳಿಗೆ ಸೇರಿದ ಗ್ರಾಮ. ಇದು ಕೃಷ್ಣರಾಜನಗರದಿಂದ ಪಶ್ಚಿಮಕ್ಕೆ 32 ಕಿಮೀ ದೂರದಲ್ಲಿದೆ. ಇದು ಒಂದು

ಕಾಲದಲ್ಲಿ ಜೈನ ಕೇಂದ್ರವಾಗಿತ್ತು ಮತ್ತು ಗುರುಪೀಠವೂ ಆಗಿತ್ತು. ಕೊಂಗಾಳ್ವ ವಂಶದವರ ಸಾಮಂತನೊಬ್ಬ ಈ ಸ್ಥಳದಲ್ಲಿ ಆಳುತ್ತಿದ್ದ. ಇಲ್ಲಿ ಒಂದು ಕಾಲದಲ್ಲಿ ಅನೇಕ ಬಸದಿಗಳಿದ್ದವು. ಆದರೆ ಈಗ ಒಂದೇ ಒಂದು ಬಸದಿಯಿದೆ. ಅದರಲ್ಲಿ ತುಂಬಾ ಕಲಾಮಯವಾದ ಆದಿನಾಥ, ಶಾಂತಿನಾಥ ಮತ್ತು ನೇಮಿನಾಥರ ವಿಗ್ರಹಗಳಿವೆ. ಈ ಸ್ಥಳದ ಪ್ರಾಮುಖ್ಯತೆಯನ್ನು ಇಲ್ಲಿನ ಶಾಸನಗಳು ಸಾರುತ್ತಿವೆ. ಇಲ್ಲಿಗೆ ಸಮೀಪದಲ್ಲಿ ದೊಡ್ಡ ಹನಸೋಗೆ ಎಂಬ ಗ್ರಾಮ ಕಾವೇರಿ ನದಿ ದಂಡೆಯ ಮೇಲಿದೆ. ಅಲ್ಲಿ ಕರಿಕಲ್ಲು ಆಂಜನೇಯ, ಅವಿಮುಕ್ತೇಶ್ವರ ದೇವಸ್ಥಾನಗಳೂ ರಾಘವೇಂದ್ರರ ವೃಂದಾವನವೂ ಇವೆ. ಕೃಷ್ಣರಾಜನಗರಕ್ಕೆ ಎಂಟು ಕಿಮೀ ದೂರದಲ್ಲಿ ರಾಚಪ್ಪಾಜಿಯ ಗದ್ದುಗೆ ಮತ್ತು ಇನ್ನೂ ಕೆಲವು ದೇವಸ್ಥಾನಗಳಿರುವ ಕಪ್ಪಡಿ ಕ್ಷೇತ್ರವು ಕಾವೇರಿ ನದಿಯ ಎಡದಂಡೆಯ ಮೇಲಿದೆ. ಇದು ಮಂಟೆಸ್ವಾಮಿ ಪರಂಪರೆಯ ಕ್ಷೇತ್ರ. ದೋರನಹಳ್ಳಿ ಗ್ರಾಮವು ಕೃಷ್ಣರಾಜ ನಗರದಿಂದ ಎಂಟು ಕಿಮೀ ದೂರದಲ್ಲಿದೆ. ಇದು ಕ್ರೈಸ್ತರ ಪವಿತ್ರ ಕ್ಷೇತ್ರ. ಸಂತ ಅಂತೋಣಿಯವರ ಚರ್ಚು ಇಲ್ಲಿದ್ದು, ಇದು ಜಿಲ್ಲೆಯ ಅತ್ಯಂತ ಹಳೆಯ ಚರ್ಚಾಗಿದೆ. 1980ರಲ್ಲಿ ಈ ಚರ್ಚಿನ ಶತಮಾನೋತ್ಸವವನ್ನು ಆಚರಿಸಲಾಯಿತು. ಸಾಗರ ಕಟ್ಟೆ ಎಂಬಲ್ಲಿ ಇಡೀ ರಾಜ್ಯದಲ್ಲಿ ಅತ್ಯಂತ ಉದ್ದವಾದ ರೈಲ್ವೆ ಸೇತುವೆಗಳಲ್ಲಿ ಒಂದಾದ ಸೇತುವೆಯನ್ನು ಕಾವೇರಿಗೆ ಅಡ್ಡಲಾಗಿ ಕಟ್ಟಲಾಗಿದೆ. ಸಾಲಿಗ್ರಾಮವು (ಜನ: 8,775) ಅದೇ ಹೆಸರಿನ ಹೋಬಳಿಯ ಕೇಂದ್ರಸ್ಥಾನ. ಇದು ಕೃಷ್ಣರಾಜನಗರದ ವಾಯುವ್ಯಕ್ಕೆ 26 ಕಿಮೀ ದೂರದಲ್ಲಿದೆ. ಇದು ವ್ಯಾಪಾರಿ ಕೇಂದ್ರವೂ ಹೌದು. ಪೌರಾಡಳಿತ ಉಳ್ಳದ್ದೂ ಹೌದು. ಇದು ಹಿಂದೆ ಜೈನಧರ್ಮದ ಕೇಂದ್ರವಾಗಿತ್ತು. ಇಲ್ಲಿ ಈಗ ಎರಡು ಹಳೆಯ ಬಸದಿಗಳಿವೆ. ಶ್ರೀ ವೈಷ್ಣವರ ದೇವಸ್ಥಾನಗಳೂ ಕೆಲವಿವೆ. ರಾಮಾನುಜಾಚಾರ್ಯ, ಯೋಗಾನರಸಿಂಹ ಮತ್ತು ಜ್ಯೋತಿರ್ಮಹೇಶ್ವರ ದೇವಸ್ಥಾನಗಳಿಲ್ಲಿವೆ. ಇಲ್ಲಿ ಅನೇಕ ವೀರಗಲ್ಲುಗಳಿವೆ.

ಕೃಷ್ಣರಾಜಪೇಟೆ: (ಮಂಡ್ಯ ಜಿ; ತಾ. ಕೇ; ಜನ: 12,799) ಕೃಷ್ಣರಾಜಪೇಟೆ ಪುರಸಭೆಯುಳ್ಳ ಊರು. ಇದು ಮಂಡ್ಯದ ವಾಯುವ್ಯಕ್ಕೆ 56 ಕಿಮೀ ಹಾಗೂ ಬೆಂಗಳೂರಿಗೆ 157 ಕಿಮೀ ದೂರದಲ್ಲೂ ಇದೆ. ಕ್ರಿ. ಶ. 1891ರವರೆಗೆ ಇದನ್ನು ಅತ್ತಿಕುಪ್ಪೆ ಎಂದು ಕರೆಯಲಾಗುತ್ತಿತ್ತು. ನಂತರ ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರ ಸ್ಮಾರಕವಾಗಿ ಈ ಹೊಸ ಹೆಸರನ್ನಿಡಲಾಯಿತು. ತಾಲೂಕಿನ ಪಶ್ಚಿಮದಲ್ಲಿ ಹೇಮಾವತಿ ನದಿ ಹರಿದು ಕಾವೇರಿ ನದಿಗೆ ಸೇರುತ್ತದೆ. ಇಲ್ಲಿಗೆ ಒಂದು ಕಿಮೀ ದೂರದಲ್ಲಿರುವ ಹೊಸಹೊಳಲು ವಿನಲ್ಲಿ ಹೊಯ್ಸಳ ಶಿಲ್ಪದ ಒಂದು ಸುಂದರ ಲಕ್ಷ್ಮೀನಾರಾಯಣ ತ್ರಿಕೂಟಾಚಲ ದೇವಸ್ಥಾನವಿದೆ. ಅದು ಒಂದು ಅಗ್ರಹಾರವಾಗಿತ್ತು. ಇಲ್ಲಿ ಪಾಳು ಬಿದ್ದ ಕೋಟೆಯೂ ಇದೆ. ಈ ಗ್ರಾಮ ನೇಯ್ಗೆಗೆ ಪ್ರಸಿದ್ಧಿಯಾಗಿದ್ದು ಇಲ್ಲಿ ಪಂಚೆ, ಸೀರೆ ಮೊದಲಾದವನ್ನು ನೇಯುತ್ತಾರೆ. ಕೃಷ್ಣರಾಜಪೇಟೆಗೆ 27 ಕಿಮೀ ದೂರದಲ್ಲಿರುವ ಅಘಲಯ ಹೋಬಳಿ ಕೇಂದ್ರ. 13ನೇಯ ಶತಮಾನದ ಹೊಯ್ಸಳ ಶೈಲಿಯ ಮಲ್ಲೇಶ್ವರ ದೇವಸ್ಥಾನವಿದೆ. ಕೃಷ್ಣರಾಜಪೇಟೆಯ ಪೂರ್ವಕ್ಕೆ ಸುಮಾರು ಐದು ಕಿಮೀ ದೂರದಲ್ಲಿ ಅಗ್ರಹಾರ-ಬಾಚಹಳ್ಳಿ ಎಂಬ ಗ್ರಾಮವಿದೆ. ಹೊಯ್ಸಳ ಸೋಮೇಶ್ವರನ ವಿಜಯದ ಸಂಕೇತವಾಗಿ ಈ ಅಗ್ರಹಾರ ಅಸ್ತಿತ್ವ ಪಡೆದಂತೆ ಕಂಡುಬರುತ್ತದೆ. ಇಲ್ಲಿ ಮೂರು ಗರುಡರ ಸ್ಥಂಭಗಳನ್ನು ಹೊಂದಿರುವ ಹುಣಿಸೇಶ್ವರ ದೇವಸ್ಥಾನವಿದೆ. ಈ ತಾಲೂಕಿನ ಕಿಕ್ಕೇರಿಯ ವಾಯುವ್ಯಕ್ಕೆ ಸುಮಾರು ಆರು ಕಿಮೀ ದೂರದಲ್ಲಿರುವ ಗೋವಿಂದನಹಳ್ಳಿಯಲ್ಲಿ ಹೊಯ್ಸಳ ಶಿಲ್ಪದ ಸುಂದರ ಪಂಚಲಿಂಗೇಶ್ವರ ದೇವಸ್ಥಾನವಿದೆ. ಈ ದೇವಸ್ಥಾನದ ದ್ವಾರಪಾಲ ವಿಗ್ರಹಗಳು, ಸಪ್ತಮಾತೃಕೆಯರು ಮತ್ತು ಭಿತ್ತಿ ವಿಗ್ರಹಗಳ ಶಿಲ್ಪಗಳು ತುಂಬ ಉತ್ಕೃಷ್ಟವಾದವು. ಮಲ್ಲಿತಮ್ಮನೆಂಬ ಶಿಲ್ಪಿ ಈ ದೇವಸ್ಥಾನವನ್ನು 13ನೇಯ ಶತಮಾನದಲ್ಲಿ ಕಟ್ಟಿದವನು. ಒಂದು ಕಾಲದಲ್ಲಿ ಈ ಗ್ರಾಮ ಹೆಚ್ಚು ಹಾಲು ಕರೆಯುವ ಹಸುಗಳಿಗೆ ಪ್ರಸಿದ್ಧವಾಗಿತ್ತು. ಕೃಷ್ಣರಾಜಪೇಟೆಗೆ ಹತ್ತು ಕಿಮೀ ದೂರದಲ್ಲಿ ಹೇಮಾವತಿ ದಂಡೆಯ ಮೇಲೆ ಇರುವ ಗುಡ್ಡಕ್ಕೆ ಹೇಮಗಿರಿ ಎಂಬ ಹೆಸರಿದೆ. ಇಲ್ಲಿ ನದಿಗೆ ಅಡ್ಡಲಾಗಿ ಒಂದು ಹಳೆಯ ಅಣೆಕಟ್ಟು ಇದೆ, ಮತ್ತು ಇದು ಒಳ್ಳೆ ಆಕರ್ಷಕ ವಿಹಾರ ಕೇಂದ್ರವೂ ಆಗಿದೆ. ಪ್ರತೀವರ್ಷ ಜನವರಿಯಲ್ಲಿ ಇಲ್ಲಿ ವೆಂಕಟರಮಣಸ್ವಾಮಿಯ ರಥೋತ್ಸವ ಮತ್ತು ದನಗಳ ಪರಿಷೆ ನಡೆಯುತ್ತದೆ. ಕೃಷ್ಣರಾಜಪೇಟೆಯ ಪೂರ್ವಕ್ಕೆ ಹತ್ತು ಕಿಮೀ ದೂರದಲ್ಲಿರುವ ಕಸಪಸಹಳ್ಳಿಯ ಬಳಿ ಸಿದ್ಧಲಿಂಗೇಶ್ವರ ದೇವಸ್ಥಾನ ಮತ್ತು ಒಂದು ಮಠ ಇದೆ. ಕಿಕ್ಕೇರಿ ಈ ತಾಲೂಕಿನ ಒಂದು ಹೋಬಳಿ ಕೇಂದ್ರ. ಇದು ಕೃಷ್ಣರಾಜಪೇಟೆಯಿಂದ 12 ಕಿಮೀ ಹಾಗೂ ಶ್ರವಣಬೆಳಗೊಳದಿಂದ 16 ಕಿಮೀ ದೂರದಲ್ಲೂ ಇದೆ. ಗುಡ್ಡಗಾಡು ಜನಾಂಗದ ಕೀಕ ಎಂಬುವವನಿಂದ ಗ್ರಾಮಕ್ಕೆ ಈ ಹೆಸರು ಬಂತೆಂಬುದು ಇಲ್ಲಿನ ಐತಿಹ್ಯ. ಹೊಯ್ಸಳ ಶಿಲ್ಪದ ಸುಂದರ ಮಾದರಿ ಎನಿಸುವ ಇಲ್ಲಿನ ಬ್ರಹ್ಮೇಶ್ವರ ದೇವಸ್ಥಾನವನ್ನು ಬಮ್ಮವ್ವ ನಾಯಕಿತಿ ಎಂಬ ಹೆಂಗಸು ಹೊಯ್ಸಳ ಒಂದನೇಯ ನರಸಿಂಹನ ಕಾಲದಲ್ಲಿ 1171ರಲ್ಲಿ ಕಟ್ಟಿಸಿದಳು. ಇದಲ್ಲದೆ ಇಲ್ಲಿ ಗ್ರಾಮದೇವತೆ ಕಿಕ್ಕೇರಮ್ಮನ ದೊಡ್ಡ ದೇವಸ್ಥಾನ ಮತ್ತು ನರಸಿಂಹ ದೇವಸ್ಥಾನಗಳಿವೆ. ಪಾಳುಬಿದ್ದ ಕೋಟೆಯನ್ನೂ ನೋಡಬಹುದು. ಈ ಗ್ರಾಮ ರೇಷ್ಮೆ ಮತ್ತು ಹತ್ತಿ ಕೈಮಗ್ಗದ ಬಟ್ಟೆಗಳಿಗೆ ಹೆಸರುವಾಸಿಯಾಗಿದೆ. ಕೃಷ್ಣರಾಜಪೇಟೆಗೆ ಸಮೀಪದಲ್ಲಿರುವ ಮಾದಾಪುರ ಗ್ರಾಮದಲ್ಲಿ ಹೊಯ್ಸಳ ಶಿಲ್ಪದ ತ್ರಿಯಂಬಕೇಶ್ವರನ ದೇವಸ್ಥಾನವಿದೆ. ಈ ತಾಲೂಕಿನ ತೆಂಡೆಕೆರೆಯ ಬಳಿಯ ಮುರತಸಹಳ್ಳಿ ಗ್ರಾಮದಲ್ಲಿ ಒಂದು ದೊಡ್ಡ ತೋಟಗಾರಿಕೆ

ಕ್ಷೇತ್ರವಿದೆ. ಕೃಷ್ಣರಾಜಪೇಟೆಯ ದಕ್ಷಿಣಕ್ಕೆ 22 ಕಿಮೀ ದೂರದಲ್ಲಿರುವ ಬಸ್ತಿಕೋಟೆ ಗ್ರಾಮವು ಕಾವೇರಿ ನದಿ ದಂಡೆಯ ಮೇಲಿದೆ. ಇಲ್ಲಿ 18 ಅಡಿ ಎತ್ತರದ ಗೊಮ್ಮಟ ವಿಗ್ರಹವಿದೆ. ಕ್ರಿ. ಶ. 1147ರ ಶಾಸನವೊಂದು ಈ ಸ್ಥಳದ ವಿಷಯವನ್ನು ತಿಳಿಸುತ್ತದೆ. ಇಲ್ಲಿ ಒಂದು ಕಲ್ಲುಕಂಬ ಮತ್ತು ಪಾಳುಬಿದ್ದ ಬಸದಿ ಅವಶೇಷವಿದೆ. ಕಲ್ಲಹಳ್ಳಿ ಗ್ರಾಮದ ವರಾಹನಾಥೇಶ್ವರ ದೇವಸ್ಥಾನವು ತನ್ನ ಶಿಲ್ಪದಿಂದ ಪ್ರಾಮುಖ್ಯತೆಯನ್ನು ಪಡೆದಿದೆ.

ಕೃಷ್ಣರಾಜಸಾಗರ : (ಮಂಡ್ಯ ಜಿ; ಶ್ರೀರಂಗಪಟ್ಟಣ ತಾ.) ಕೃಷ್ಣರಾಜ ಸಾಗರವು ಶ್ರೀರಂಗಪಟ್ಟಣದಿಂದ 18 ಕಿಮೀ ಹಾಗೂ, ಮೈಸೂರಿನ ವಾಯುವ್ಯಕ್ಕೆ 16 ಕಿಮೀ ದೂರದಲ್ಲಿ ಮತ್ತು ಬೆಂಗಳೂರಿನಿಂದ 143 ಕಿಮೀ ದೂರದಲ್ಲಿದೆ. ಕಾವೇರಿ ನದಿಗೆ ಭಾರಿ ಅಡ್ಡಕಟ್ಟೆ ಕಟ್ಟಿ ಈ ಜಲಾಶಯದ ನಿರ್ಮಾಣವಾಗಿದೆ. ಕಾವೇರಿ, ಹೇಮಾವತಿ ಮತ್ತು ಲಕ್ಷ್ಮಣತೀರ್ಥ ನದಿಗಳು ಒಟ್ಟುಗೂಡುವ ಸ್ಥಳದ ನಂತರದಲ್ಲಿ ಈ ಅಡ್ಡಗಟ್ಟೆಯನ್ನು ನಿರ್ಮಿಸಲಾಗಿದೆ. ಈ ಅಡ್ಡಗಟ್ಟೆಯ ಉದ್ದ 8,600 ಅಡಿಗಳು ಮತ್ತು ಎತ್ತರ ನದಿ ಮಟ್ಟದಿಂದ ಮೇಲೆ 130 ಅಡಿಗಳು. ಈ ಸ್ಥಳಕ್ಕೆ ಮುಂಚೆ ಕನ್ನಂಬಾಡಿ ಎಂಬ ಹೆಸರಿತ್ತು. ಅದಕ್ಕೂ ಮೊದಲು ಇದಕ್ಕೆ ಕಣ್ವಪುರಿ ಎಂಬ ಹೆಸರಿತ್ತೆಂದೂ ಇಲ್ಲಿ ಕಣ್ವನ ಆಶ್ರಮವಿತ್ತೆಂದೂ ಕಣ್ವನು ಇಲ್ಲಿ ಶಿವನನ್ನು ಅರ್ಚಿಸುತ್ತಿದ್ದನೆಂದೂ ಪ್ರತೀತಿ ಇದ್ದುದರಿಂದ ಇಲ್ಲಿನ ಶಿವನನ್ನು ಕಣ್ವೇಶ್ವರನೆಂದೂ ಕರೆಯುತ್ತಿದ್ದರು. ಈ ದೇವಾಲಯ ಜಲಾಶಯದ ನೀರಿನಲ್ಲಿ ಮುಳುಗಿ ಹೋಗಿದೆ. ಈ ಜಲಾಶಯಕ್ಕೆ ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರ ಸ್ಮಾರಕವಾಗಿ ಈ ಹೆಸರಿನ್ನಿಡಲಾಗಿದೆ. ಇದನ್ನು ರೂಪಿಸಿ ಕಟ್ಟಿಸಿದವರು ಅವರ ಕಾಲದಲ್ಲಿ ಸಂಸ್ಥಾನದ ಮುಖ್ಯ ಇಂಜಿನಿಯರ್ ಆಗಿದ್ದ ಎಂ. ವಿಶ್ವೇಶ್ವರಯ್ಯನವರು. ಇಲ್ಲಿ ಸುಮಾರು 24 ಶಾಸನಗಳು ಲಭ್ಯವಾಗಿವೆ. ಅವುಗಳಲ್ಲೊಂದು ಪರ್ಷಿಯನ್ ಭಾಷೆಯ ಶಾಸನ. ಅದರಲ್ಲಿ ಟಿಪ್ಪು ಸುಲ್ತಾನನು ಇದೇ ಸ್ಥಳದಲ್ಲಿ ಕಟ್ಟೆ ಕಟ್ಟಿಸಲು ಪ್ರಯತ್ನ ಪಟ್ಟಿದ್ದಾಗಿ ತಿಳಿಸಲಾಗಿದೆ. ಅಡ್ಡಗಟ್ಟೆಯ ಉತ್ತರ ದಿಶಾ ಭಾಗದಲ್ಲಿ ಕಟ್ಟಲಾಗಿರುವ ದೇವಿ ಕಾಳಮ್ಮ ದೇವಸ್ಥಾನದ ಹೆಸರಿನಲ್ಲಿ ಜಾತ್ರೆ ಜರುಗುತ್ತದೆ. ಇಲ್ಲಿನ ಬೃಂದಾವನ ತೋಟವು ಇಡೀ ಭಾರತದಲ್ಲಿನ ದೀಪರಂಜಿತ ಮಾಳಿಗೆ ತೋಟಗಳಲ್ಲಿ ಅತ್ಯಂತ ಶ್ರೇಷ್ಠವಾದುದು. ಇಲ್ಲಿ ನೀರು ಚಿಮ್ಮುವ ಬಗೆ ಬಗೆಯ ಚಿತ್ತಾರದ ಕಾರಂಜಿಗಳನ್ನು ನದಿ ದಡೆಯ ಇಬ್ಬದಿಯಲ್ಲಿಯೂ ಅಳವಡಿಸಲಾಗಿದೆ. ಇತ್ತೀಚೆಗೆ ವರ್ಣರಂಜಿತ ಸಂಗೀತ ಕಾರಂಜಿ ಅಳವಡಿಸಿದ್ದಾರೆ. ದೋಣಿ ವಿಹಾರಕ್ಕಾಗಿ ಒಂದು ಕೊಳದ ಮಾದರಿಯ ಜಲ ವಿಭಾಗವನ್ನು ಈ ಕಾರಂಜಿ ತೋಟದ ನಡುವೆ ಸೃಷ್ಟಿಸಲಾಗಿದೆ. ದೀಪ ಬೆಳಗಿದಾಗ ಇಡೀ ತೋಟವು ಮಂತ್ರಮುಗ್ಧಗೊಳಿಸುವ ಸ್ವರೂಪ ತಾಳುತ್ತದೆ. ಪ್ರತೀ ಬುಧವಾರ, ಶನಿವಾರ ಮತ್ತು ಭಾನುವಾರಗಳಲ್ಲಿ ತಪ್ಪದೆ ಸಂಜೆ 7 ಗಂಟೆಗೆ ದೀಪಾಲಂಕಾರವನ್ನು ಬೆಳಗಿಸುತ್ತಾರೆ. ಇಲ್ಲಿನ ಮಕ್ಕಳ ಉದ್ಯಾನ, ತೋಟಗಾರಿಕೆ ಕ್ಷೇತ್ರ, ಸಸಿಮಡಿ ಕ್ಷೇತ್ರ, ಮೀನುಗಾರಿಕೆ ಕೊಳ ಮತ್ತು ಜಲಶಕ್ತಿ ಸಂಶೋಧನ ಕೇಂದ್ರಗಳು ಪ್ರವಾಸಿಗರಿಗೆ ಆಕರ್ಷಣಾ ಕ್ಷೇತ್ರಗಳಾಗಿವೆ. ಅಣೆಕಟ್ಟೆಯ ಬುಡದಲ್ಲಿ ಒಂದು ಸುಂದರವಾದ ಕಾವೇರಿ ಪ್ರತಿಮೆ ಇದೆ. ಈ ಸ್ಥಳ ತುಂಬಾ ಆಕರ್ಷಣೀಯವಾದ ಒಂದು ಪ್ರವಾಸಿ ಕೇಂದ್ರ. ಇಲ್ಲಿನ ತೋಟ ಉದ್ಯಾನಗಳತ್ತ ಮುಖ ಮಾಡಿದ ಎರಡು ಹೋಟೆಲುಗಳು ಮತ್ತು ಪ್ರವಾಸಿಗರ ವಸತಿ ಭೋಜನಾದಿಗಳ ಸೌಕರ್ಯಗಳಿರುವ ಒಂದು ಸರ್ಕಾರಿ ಪ್ರವಾಸಿ ಮಂದಿರ ಇವೆ.

ಕೈವಾರ : (ಕೋಲಾರ ಜಿ; ಚಿಂತಾಮಣಿ ತಾ; ಜನ: 3,421) ಚಿಂತಾಮಣಿಗೆ 13 ಕಿಮೀ ದೂರದಲ್ಲಿ ಕೈವಾರವಿದೆ. ಇದು ಹೋಬಳಿ ಕೇಂದ್ರ. ಪಾಂಡವರು ತಾವು ದೇಶಭ್ರಷ್ಟರಾಗಿ ಪರ್ಯಟನ ಮಾಡುವ ಕಾಲದಲ್ಲಿ ವಾಸ ಮಾಡುತ್ತಿದ್ದ ಆ ಏಕಚಕ್ರಪುರವೇ ಈ ಕೈವಾರ ಎಂಬುದು ಪ್ರತೀತಿ. ಹತ್ತಿರದ ಚಿದಂಬರ ಗಿರಿ ಎಂಬ ಬೆಟ್ಟದಲ್ಲಿ ಗವಿಯೊಂದಿದೆ. ಭೀಮ ಬಕಾಸುರನ ಕಳೇಬರವನ್ನು ಈ ಗವಿಯೊಳಕ್ಕೆ ಎಸೆದನಂತೆ. ಇಲ್ಲಿ ದೊರಕಿರುವ ಅನೇಕ ಶಾಸನಗಳಲ್ಲಿ ಇಲ್ಲಿನ ಅಮರನಾರಾಯಣ ದೇವಸ್ಥಾನ ಕ್ರಿ.ಶ. 1283ರ ಸರಿ ಸುಮಾರಿನಲ್ಲಿಯೇ ಕಟ್ಟಲಾಗಿತ್ತೆಂಬ ವಿಚಾರ ಸೂಚಿತವಾಗಿದೆ. ದೇವಸ್ಥಾನದ ಸುಂದರವಾದ ಗ್ರಾನೈಟ್ ಕಲ್ಲಿನಲ್ಲಿ ಚಿತ್ತಾರಗಳ ಸಮೇತ ಕೆತ್ತಿದ ಸುಂದರ ಕಂಭಗಳು ಗಣನೀಯವಾದ ಸ್ಮಾರಕವೆನಿಸುತ್ತದೆ. ಭೀಮೇಶ್ವರ, ನಕುಲೇಶ್ವರ ಮತ್ತು ಸಹದೇವೇಶ್ವರ ದೇವಾಲಯಗಳು ಇಲ್ಲಿನ ಉಳಿದ ದೇವಾಲಯಗಳು. ಸಹದೇವೇಶ್ವರ ದೇವಾಲಯದ ಭಿತ್ತಿಗಳಲ್ಲಿ ಅನೇಕ ತಮಿಳು ಶಿಲಾಲೇಖಗಳು ಇವೆ. ಕೈವಾರವು ಈಗ ಒಂದು ಪ್ರಸಿದ್ಧ ಯಾತ್ರಾಸ್ಥಳ. ಏಕೆಂದರೆ ಇಲ್ಲಿ ನಾರೇಣಪ್ಪ (ಕ್ರಿ.ಶ. 1730-1840)ನ ಮಠವಿದೆ. ಈತ ಕವಿ ಮತ್ತು ಯೋಗಿ. ಈತ ತೆಲುಗಿನಲ್ಲಿ ರಚಿಸಿರುವ ಕಾಲಜ್ಞಾನ ತುಂಬ ಜನಪ್ರಿಯವಾಗಿದೆ. ಇಲ್ಲಿನವರಿಗೆ ಈತ "ತಾತ" ಎಂದೇ ಪ್ರಸಿದ್ಧಿ. ನಾರೇಣಪ್ಪನ ಹೆಸರಿನಲ್ಲಿ ಇಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಲಾಗಿದೆ. ಈ ಆಶ್ರಮವು ಧಾರ್ಮಿಕ ಚಟುವಟಿಕೆಯಲ್ಲಿ ಕಾರ್ಯಪ್ರವೃತ್ತವಾಗಿದೆ. ಜೊತೆಗೆ ಈ ಆಶ್ರಮವು ಒಂದು ಪ್ರೌಢಶಾಲೆಯನ್ನು ನಡೆಸುತ್ತಿದ್ದು ಉಚಿತ ಊಟ ವಸತಿಗಳ ಸೌಕರ್ಯವನ್ನು ವಿದ್ಯಾರ್ಥಿಗಳಿಗೆ ಇಲ್ಲಿ ಕಲ್ಪಿಸಲಾಗಿದೆ. ನಾರೇಣಪ್ಪನವರ ಹೆಸರಿನ ಒಂದು ದೇವಾಲಯವೂ ಇಲ್ಲಿ ಉಂಟು. ಮುರುಘಾಮಲೆ ಎಂಬ ಹೆಸರಿನ ಗ್ರಾಮ ಮತ್ತು ಬೆಟ್ಟ ಚಿಂತಾಮಣಿಯ ಉತ್ತರಕ್ಕೆ 11 ಕಿಮೀ ದೂರದಲ್ಲಿದೆ. ಅದೇ ಹೆಸರಿನ ಹೋಬಳಿಯ ಕೇಂದ್ರ ಸ್ಥಳ ಇದು. ಇಲ್ಲಿನ ಐತಿಹ್ಯದ ಪ್ರಕಾರ ಒಬ್ಬ ಚೋಳ ದೊರೆ ಇಲ್ಲಿ ಮುರುಘನ ದೇವಸ್ಥಾನವನ್ನು ಕಟ್ಟಿಸಿದನಂತೆ. ಇಲ್ಲಿ ಕೆಲವು ಮುಸ್ಲಿಂ ಸಂತರ ಸಮಾಧಿಗಳಿವೆ. ಅವುಗಳಲ್ಲಿ ಅಬ್ಬಾಜಾನ್ ಮತ್ತು ಅಮ್ಮಾಜಾನ್ ಸಮಾಧಿಗಳು ಪ್ರಸಿದ್ಧವಾದವು. (ಇದು ಫಕೀರ್‌ಷಾ ವಲಿ ದರ್ಗಾ ಎಂಬ ಹೆಸರಿನಲ್ಲಿ ಜನಪ್ರಿಯವಾಗಿವೆ).

ವಾಸಿ ಮಾಡಲಾಗದಂತಹ ರೋಗಗಳನ್ನು ಇಲ್ಲಿ ವಾಸಿ ಮಾಡಲಾಗುತ್ತದೆ ಎಂಬ ನಂಬಿಕೆ ಜನಗಳಲ್ಲಿ ಇದೆ. ಅದ್ದರಿಂದ ಎಲ್ಲ ಧರ್ಮದ ಜನರೂ ಈ ದರ್ಗಾಕ್ಕೆ ಬರುತ್ತಾರೆ. ಗ್ರಾಮದಲ್ಲಿ ಒಂದು ಹಳೆಯ ಚಂದ್ರಮೌಳೀಶ್ವರ ದೇವಾಲಯವಿದೆ.

ಕೊಪ್ಪ : (ಚಿಕ್ಕಮಗಳೂರು ಜಿ; ತಾ. ಕೇ; ಜನ: 4,759) ಬೆಂಗಳೂರಿನ ವಾಯುವ್ಯಕ್ಕೆ 300 ಕಿಮೀ ದೂರದಲ್ಲಿರುವ ಕೊಪ್ಪವು ತಾಲೂಕಿನ ಆಡಳಿತ ಕೇಂದ್ರ. ಮುಸುರಿ ಹಳ್ಳ ಎಂಬ ಹೊಳೆ ಈ ಊರಿನ ಪಕ್ಕದಲ್ಲಿ ಹರಿಯುತ್ತದೆ. ಕೊಪ್ಪದ ಸುತ್ತ ತುಂಬಾ ಕಾಫಿ ಮತ್ತು ಟೀ ತೋಟಗಳು ಇವೆ. ಇಲ್ಲಿ ಒಂದು ವೀರಭದ್ರ ದೇವಾಲಯವಿದ್ದು ಅದು ಒಂದು ಸಣ್ಣ ಕಲ್ಲಿನ ಕಟ್ಟಡವಾಗಿದೆ. ವೀರಭದ್ರ ಮತ್ತು ಭದ್ರಕಾಳಿಯರ ಲೋಹದ ಪ್ರತಿಮೆಗಳೂ ಇಲ್ಲಿವೆ. ಕೊಪ್ಪದ ನೈಋತ್ಯಕ್ಕೆ ಎಂಟು ಕಿಮೀ ದೂರದಲ್ಲಿರುವ ಕುಂಚೂರು ಒಂದು ನೋಡಬೇಕಾದ ಗ್ರಾಮ. ಇಲ್ಲಿನ ಸೂರ್ಯಾಸ್ತಮಾನದ ದೃಶ್ಯ ನಯನ ಮನೋಹರ.

ಕೊಪ್ಪಳ : (ರಾಯಚೂರು ಜಿ; ಉಪವಿಭಾಗ ಮತ್ತು ತಾ. ಕೇ; ಜನ: 35,968) ಗುಂತಕಲ್-ಹುಬ್ಬಳ್ಳಿ ರೈಲು ಮಾರ್ಗದಲ್ಲಿ (ತುಂಗಭದ್ರಾಕ್ಕೆ ಸೇರುವ) ಹಿರೇಹಳ್ಳ ಎಂಬ ಉಪನದಿಯ ಎಡದಂಡೆಯಲ್ಲಿ ಇದ್ದು ಬೆಂಗಳೂರಿಗೆ 368 ಕಿಮೀ ದೂರದಲ್ಲಿದೆ. ಇದು ಜಿಲ್ಲೆಯ ಅತ್ಯಂತ ಮುಖ್ಯ ವ್ಯಾಪಾರಿ, ಔದ್ಯಮಿಕ ಹಾಗೂ ವಿದ್ಯಾಭ್ಯಾಸ ಕೇಂದ್ರವಾಗಿದೆ. ಇದು ಕೈಮಗ್ಗಕ್ಕೆ ತುಂಬಾ ಪ್ರಸಿದ್ಧವಾಗಿದೆ. 1949ರವರೆಗೆ ಕೊಪ್ಪಳ ಮತ್ತು ಯಲಬುರ್ಗಿ ತಾಲೂಕುಗಳನ್ನೊಳಗೊಂಡ ನವಾಬ ಸಾಲಾರ್‌ಜಂಗನ ಜಹಗೀರಿಯ ಕೇಂದ್ರ ಊರಾಗಿ ಇದು ಇತ್ತು. ಮಹಾಶರಣ ಗವಿ ಸಿದ್ಧೇಶ್ವರನಿಗೆ ಸಂಬಂಧಿಸಿದ ಗವಿಮಠವೆಂಬ ಹೆಸರಿನ ಒಂದು ಹಳೆಯ ಮತ್ತು ಪ್ರಸಿದ್ಧವಾದ ವೀರಶೈವ ಮಠವಿದೆ. ಈ ಮಠವು ಎರಡು ಪ್ರೌಢಶಾಲೆಗಳನ್ನೂ, ಒಂದು ಕಲೆ ಮತ್ತು ವಿಜ್ಞಾನ ಮಹಾವಿದ್ಯಾಲಯವನ್ನೂ, ಒಂದು ಉಚಿತ ವಿದ್ಯಾರ್ಥಿನಿಲಯವನ್ನೂ ನಡೆಸುತ್ತಿದೆ. ಇಲ್ಲಿ ದೊರೆತಿರುವ ಅನೇಕ ಪ್ರಾಕೃತ, ಕನ್ನಡ ಮತ್ತು ಸಂಸ್ಕೃತ ಶಾಸನಗಳಿಂದ ಇದು ಬಹಳ ಹಿಂದಿನಿಂದ ಪ್ರಸಿದ್ಧ ಸ್ಥಳವಾಗಿತ್ತೆಂಬುದು ತಿಳಿಯುತ್ತದೆ. ಇಲ್ಲಿನ ಗವಿಮಠ ಮತ್ತು ಪಾಲ್ಕಿ ಗುಂಡುಗಳಲ್ಲಿ ಎರಡು ಅಶೋಕನ ಶಾಸನಗಳು ದೊರೆತಿವೆ. ಇದರ ಹಿಂದಿನ ಹೆಸರು ಕೊಪಣವೆಂದಾಗಿತ್ತು ಮತ್ತು ಜೈನರಿಗೆ ಪವಿತ್ರ ಕ್ಷೇತ್ರವಾಗಿತ್ತು. ಈಗಿನ ಗವಿಮಠವೂ ಸಹ ಹಿಂದೆ ಜೈನ ಕೇಂದ್ರವಾಗಿತ್ತು. ಇಲ್ಲಿ ಅನೇಕ ತೀರ್ಥಂಕರರ ವಿಗ್ರಹಗಳು ಇವೆ. ಜೊತೆಗೆ ಕೊಪ್ಪಳದಲ್ಲಿ ಇಪ್ಪತ್ತು ಜೈನ ಶಾಸನಗಳು ಸಿಕ್ಕಿವೆ. ಒಂದು ಕಾಲದಲ್ಲಿ ಇದು ಕನ್ನಡ ನಾಡಿನ ತಿರುಳ್ಗನ್ನಡದ ಗಡಿಬಿಂದುವಿನಂತಿದ್ದು, ಒಕ್ಕುಂದ, ಪಟ್ಟದಕಲ್ ಮತ್ತು ಲಕ್ಷ್ಮೇಶ್ವರಗಳೂ ಇದರೊಂದಿಗೆ ಇಂತಹವೇ ಸ್ಥಾನಗಳಾಗಿದ್ದವೆಂದು ಮಹಾಕವಿ ಪಂಪ ಹೇಳಿದ್ದಾನೆ. ಹತ್ತನೇಯ ಶತಮಾನದ ಅಂತ್ಯದಲ್ಲಿ ಇದು ಶಿಲಾಹಾರರ ಒಂದು ಶಾಖೆಯ ರಾಜಧಾನಿಯಾಯಿತು. ಕಲ್ಯಾಣಿ ಚಾಳುಕ್ಯರ ಆಡಳಿತ ಕಾಲದಲ್ಲಿ ಇದು ಒಂದು ಪ್ರಮುಖ ಸ್ಥಾನ ಪಡೆದಿತ್ತು ಮತ್ತು ಅವರ ಅನೇಕ ಶಾಸನಗಳಲ್ಲಿ ಈ ಊರಿನ ಉಲ್ಲೇಖವಿದೆ. ನಂತರ ವಿಜಾಪುರ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಇದು ಕನಕಗಿರಿ ಜಹಗೀರಿನ ಭಾಗವಾಗಿ ಷಾಜಿಯ ಆಡಳಿತಕ್ಕೆ ಒಳಪಟ್ಟಿತ್ತು. 1858ರಲ್ಲಿ ಮುಂಡರಗಿ ಭೀಮರಾವ್ ಇಲ್ಲಿ ಹೋರಾಡುತ್ತ ಅಸು ನೀಗಿದನು. ಪಾಲ್ಕಿಗುಂಡುವಿನ ಬಳಿ ಇಂದ್ರಕೀಲ ಪರ್ವತವೆಂಬ ಹೆಸರಿನ ಸ್ಥಳವಿದೆ. ಅಲ್ಲಿನ ಮಲೆ ಮಲ್ಲೇಶ್ವರ ದೇವಸ್ಥಾನದಲ್ಲಿ ಹಿಂದೆ ಅರ್ಜುನನು ಮರಳು ಲಿಂಗೇಶ್ವರನನ್ನು ಪೂಜಿಗೈಯುತ್ತ ತಪವಾಚರಿಸಿದನೆಂಬ ಪ್ರತೀತಿ ಇದೆ. ಎಲ್ಲಿಂದಲೋ ಸ್ರವಿಸುವ ನೀರಿನಿಂದ ಈ ಲಿಂಗ ಸದಾ ಒದ್ದೆಯಾಗಿರುತ್ತದೆ. ಇಲ್ಲಿನ ಬೆಟ್ಟ ಒಂದು ಭಾರಿ ಕೋಟೆ ಹೊತ್ತ ಬೆಟ್ಟ. ಕೊಪ್ಪಳದಿಂದ 13 ಕಿಮೀ ದೂರದಲ್ಲಿ ಕಿನ್ನಾಳ (ಜನ: 6,330) ಎಂಬ ಗ್ರಾಮವಿದೆ. ಇಲ್ಲಿನ ಚಿತ್ರಗಾರರ, ಗಣೇಶನದೇ ಮೊದಲಾದ ಪ್ರತಿಮೆಗಳು ಮತ್ತು ಮಕ್ಕಳ ಮರದ ಆಟಿಕೆಗಳು ತುಂಬಾ ಪ್ರಸಿದ್ಧವಾದವು. ಇವಲ್ಲದೆ ನೇಯ್ಗೆ, ಕುಂಬಾರಿಕೆ ಮತ್ತು ಕೊಂಬಿನ ಬಾಚಣಿಗೆಗಳ ತಯಾರಿಕೆ ಇಲ್ಲಿನ ಇತರ ಮುಖ್ಯ ವೃತ್ತಿಗಳು. ಮುನಿರಾಬಾದ್ : (ಜನ: 3,610) ಹುಬ್ಬಳ್ಳಿ-ಗುಂತಕಲ್ ರೈಲು ಮಾರ್ಗದಲ್ಲಿ ಹೊಸಪೇಟೆಯಿಂದ ಎಂಟು ಕಿಮೀ ದೂರದಲ್ಲಿದೆ. ಈಚೆಗೆ ಅದರಲ್ಲಿಯೂ ತುಂಗಭದ್ರಾ ಅಣೆಕಟ್ಟು ನಿರ್ಮಾಣವಾದ ಮೇಲೆ ಇದರ ಪ್ರಾಮುಖ್ಯ ಹೆಚ್ಚಿದೆ. ಇಲ್ಲಿ ಕ್ರಿ.ಶ. 1088ರ ಒಂದು ಶಾಸನದಲ್ಲಿ ಚಾಳುಕ್ಯ ದೊರೆ ಆರನೇಯ ವಿಕ್ರಮಾದಿತ್ಯನು ಚೌವೇದಿ (ಚತುರ್ವೇದಿ) ಭಟ್ಟನೆಂಬಾತನಿಗೆ ಈ ಸ್ಥಳವನ್ನು ದಾನವಾಗಿ ಕೊಟ್ಟ ಉಲ್ಲೇಖವಿದೆ. ಸಂಸ್ಕೃತದಲ್ಲಿ ವ್ಯಾಘ್ರಪುರಿ ಎನ್ನಿಸಿಕೊಂಡುದರ ಈಗಿನ ಹೆಸರೇ ಹುಲಿಗೆ ಗ್ರಾಮ. ಇಲ್ಲಿ ಹುಲಿಗೆಮ್ಮನ ದೇವಸ್ಥಾನವಿದೆ. ಈ ದೇವಸ್ಥಾನವನ್ನು 13ನೇಯ ಶತಮಾನದಲ್ಲಿ ಕಟ್ಟಿಸಿದ ಹಾಗೆ ತಿಳಿದುಬರುತ್ತದೆ. ದೇವಸ್ಥಾನದ ಆವರಣದೊಳಗೆ ಪರಶುರಾಮನ ಗುಡಿ ಇದೆ. ಹತ್ತಿರದಲ್ಲಿ ಪಂಚಲಿಂಗೇಶ್ವರ ದೇವಸ್ಥಾನಗಳು ಇವೆಯಾದರೂ ಅವುಗಳಲ್ಲಿ ಒಂದು ಮಾತ್ರ ಒಳ್ಳೆಯ ಸ್ಥಿತಿಯಲ್ಲಿದೆ. ಇಲ್ಲಿ ಒಂದು ಜೈನ ಬಸದಿ ಸಹ ಇದೆ. ಇಡೀ ಕರ್ನಾಟಕದಲ್ಲಿಯೇ ಪ್ರಪ್ರಥಮವಾಗಿ ಇಲ್ಲಿ ಜಪಾನ್ ಮಾದರಿಯ ಬಹು ರಮ್ಯವಾದ ಹೂದೋಟವನ್ನು ಸೃಷ್ಟಿಸಲಾಗಿದೆ. ಇದು ಅನೇಕ ಪ್ರವಾಸಿಗರ ಆಕರ್ಷಣೆಗೆ ಕಾರಣವಾಗಿದೆ. ಇಲ್ಲಿ ಒಂದು ಸಕ್ಕರೆ ಕಾರ್ಖಾನೆ ಸಹ ಇದೆ.

ಕೊರಟಗೆರೆ : (ತುಮಕೂರು ಜಿ; ತಾ. ಕೇ; ಜನ: 8,082) ಕೊರಟಗೆರೆಯು ಸುವರ್ಣಮುಖಿ ನದಿಯ ದಂಡೆಯ ಮೇಲೆ, ಬೆಂಗಳೂರಿನ ವಾಯುವ್ಯಕ್ಕೆ 84 ಕಿಮೀ ದೂರದಲ್ಲಿಯೂ ತುಮಕೂರಿನ ವಾಯುವ್ಯಕ್ಕೆ 26 ಕಿಮೀ ದೂರದಲ್ಲಿಯೂ ಇದೆ.

ಇಲ್ಲಿನ ಕೋಟೆಪೇಟೆಗಳನ್ನು ಹೊಳವನಹಳ್ಳಿಯ ಒಬ್ಬ ಪಾಳೆಯಗಾರ ನಿರ್ಮಿಸಿದ. ಟಿಪ್ಪುಸುಲ್ತಾನನು ಆ ಕೋಟೆಯನ್ನು ಧ್ವಂಸಮಾಡಿದ. ಇಲ್ಲಿನ ಬೆಟ್ಟದ ಮೇಲೆ ಶ್ರೀ ಗಂಗಾಧರೇಶ್ವರನ ಗವಿ ದೇವಸ್ಥಾನವಿದ್ದು, ಇದು ಮುಜರಾಯಿ ಇಲಾಖೆಗೆ ಒಳಪಟ್ಟ ಒಂದು ಸಣ್ಣ ದೇವಸ್ಥಾನವಾಗಿದೆ. ಬೆಟ್ಟದ ತುದಿಯಲ್ಲಿ ಒಂದು ಬಸವನ ವಿಗ್ರಹವಿದೆ. ಗೋಕುಲದ ಆಂಜನೇಯನ ಗುಡಿ ಬಳಿ ಕೆಲವು ಮಾಸ್ತಿಕಲ್ಲುಗಳಿವೆ. ಊರು ಪುರಸಭೆಯನ್ನು ಹೊಂದಿದೆ. ತಾಲೂಕಿನ ಇತರ ಮುಖ್ಯ ಸ್ಥಳಗಳನ್ನು ಈ ಮುಂದೆ ಕೊಡಲಾಗಿದೆ. ಹೊಳವನಹಳ್ಳಿ (ಜನ: 4,022) ಕೊರಟಗೆರೆಯ ಪೂರ್ವಕ್ಕೆ ಎಂಟು ಕಿಮೀ ದೂರದಲ್ಲಿ ಜಯಮಂಗಲಿ ನದಿ ದಂಡೆಯ ಮೇಲಿದೆ. ಇದಕ್ಕೆ ಮೊದಲು ಕೊರಮಪುರವೆಂಬುದಾಗಿ ಹೆಸರಿತ್ತು ಮತ್ತು ಇದನ್ನು ಹೊಳವಗೌಡನೆಂಬ ಪಾಳೆಯಗಾರ ಆಳುತ್ತಿದ್ದ. ಇಲ್ಲಿರುವ ರಾಘವೇಂದ್ರಸ್ವಾಮಿಯವರ ಬೃಂದಾವನವು ಬಹಳ ಹಳೆಯ ಬೃಂದಾವನಗಳಲ್ಲೊಂದೆಂದು ಹೇಳಲಾಗುತ್ತದೆ. ಚನ್ನರಾಯನದುರ್ಗ (ಜನ: 506) ವು ಒಂದು ಸಣ್ಣ ಗ್ರಾಮ. ಇದಕ್ಕೆ ಒಂದು ಕೋಟೆಯಿರುವ ಬೆಟ್ಟ ಹೊಂದಿಕೊಂಡಿದೆ. ಈ ಗ್ರಾಮ ಕೊರಟಗೆರೆಯಿಂದ ವಾಯುವ್ಯಕ್ಕೆ 14 ಕಿಮೀ ದೂರದಲ್ಲಿದೆ. ಈ ಗ್ರಾಮ ಸಮುದ್ರಮಟ್ಟದಿಂದ 1,139 ಕಿಮೀ ಎತ್ತರದಲ್ಲಿದೆ. 17ನೇಯ ಶತಮಾನದ ನಡುವಿನಲ್ಲಿ ಮಧುಗಿರಿ ಪಾಳೆಯಗಾರನಾಗಿದ್ದ ಚನ್ನಪ್ಪಗೌಡನೆಂಬುವನು ಈ ಕೋಟೆಯನ್ನು ಕಟ್ಟಿಸಿದ. ಮುಂದೆ ಇದನ್ನು ಮರಾಠರು ಆಕ್ರಮಿಸಿಕೊಂಡರು. ಇದು ಆಮೇಲೆ ಮೈಸೂರರಸರ ಆಡಳಿತಕ್ಕೆ ಒಳಪಟ್ಟಿತು. ಅವರ ಕಾಲದಲ್ಲಿ ಇದಕ್ಕೆ ಪ್ರಸನ್ನಗಿರಿ ಎಂಬ ಹೊಸ ನಾಮಕರಣವಾಯಿತು. ಕ್ರಿ.ಶ. 1766ರ ಒಂದು ಶಾಸನದಲ್ಲಿ ಬೆಟ್ಟವನ್ನು ಚನ್ನರಾಯನದುರ್ಗವೆಂದು ಹೆಸರಿಸಲಾಗಿದೆ. ಬೆಟ್ಟದ ಬುಡದಲ್ಲಿನ ಗವಿ ದೇವಸ್ಥಾನವನ್ನು ಮುರಾರಿಮಠವೆನ್ನುತ್ತಾರೆ. ಇಲ್ಲಿ ಪೂಜಾದಿಗಳ ಸಲುವಾಗಿ ಒಂದು ಜೊತೆ ಪಾದುಕೆಗಳಿವೆ. ನಿರ್ವಾಣಸ್ವಾಮಿಯ ಶಿಷ್ಯರಿಬ್ಬರ ಸಮಾಧಿಗಳೂ ಇಲ್ಲಿವೆ.

ಕೊಲ್ಲೂರು : (ದ. ಕ. ಜಿ; ಕುಂದಾಪುರ ತಾ; ಜನ: 1,176) ಕೊಲ್ಲೂರನ್ನು ಕೊಲ್ಲಾಪುರವೆಂದು ಸಹ ಕರೆಯಲಾಗುತ್ತದೆ. ಇದು ಕುಂದಾಪುರದ ಈಶಾನ್ಯಕ್ಕೆ 42 ಕಿಮೀ ದೂರದಲ್ಲಿದ್ದು, ಕರ್ನಾಟಕದ ಒಂದು ಪ್ರಮುಖ ಯಾತ್ರಾಸ್ಥಳವಾಗಿದೆ. ಇಲ್ಲಿನ ಮೂಕಾಂಬಿಕಾ ದೇವಸ್ಥಾನ ತುಂಬಾ ಹೆಸರುವಾಸಿಯಾದುದು. ಮೂಕಾಸುರನೆಂಬ ರಾಕ್ಷಸನನ್ನು ದೇವಿ ಕೊಂದಳೆಂಬ ಭಾವನೆಯಿಂದ ಈ ದೇವಿಯನ್ನು ಮೂಕಾಂಬಿಕಾ ಎಂದು ಕರೆಯಲಾಗುತ್ತಿದೆ. ಶಿವ-ಶಕ್ತಿ ಸಂಯೋಜನೆಯಿಂದ ಕೂಡಿದ ಜ್ಯೋತಿರ್ಲಿಂಗ ರೂಪದಲ್ಲಿ ದೇವಿ ಇದ್ದಾಳೆಂದು ವರ್ಣಿಸಲಾಗಿದೆ. ಶ್ರೀಚಕ್ರದ ಮೇಲೆ ಪ್ರತಿಷ್ಠಾಪಿಸಲಾಗಿರುವ ಪಂಚಲೋಹದ ದೇವಿ ವಿಗ್ರಹದ ಪ್ರತಿಷ್ಠಾಪನೆಯನ್ನು ಆದಿಶಂಕರಾಚಾರ್ಯರು ಮಾಡಿದರೆಂಬುದು ಇಲ್ಲಿನ ನಂಬಿಕೆ. ಈ ದಿವ್ಯ ಮಹಾಮಾತೆ ತ್ರೈಗುಣ್ಯ ಸ್ವರೂಪಳೆಂದು ಭಾವಿಸಲಾಗಿದೆ. ಸ್ವರ್ಣಲೇಪನದ ದೇವಸ್ಥಾನದ ಶಿಖರದ ದಾನಿ ಸಂಕಣ್ಣ ಸಾವಂತನೆಂದು ಹೇಳುತ್ತಾರೆ. ಮೂಲ ಮೂಕಾಂಬಿಕಾ ದೇವಸ್ಥಾನದ ಸುತ್ತಮುತ್ತ ಇನ್ನೂ ಅನೇಕ ದೇವಸ್ಥಾನಗಳಿವೆ. ಇಲ್ಲಿ ಚಂದ್ರಮೌಳೀಶ್ವರನ ಸ್ಥಾಪನೆ ಆದಿ ಶಂಕರರಿಂದ ಆದುದೆಂದು ತಿಳಿದುಬರುತ್ತದೆ. ಕೆಳದಿ ಅರಸರು ದೇವಸ್ಥಾನವನ್ನು ದುರಸ್ತಿ ಮಾಡಿಸಿದರು. ಮೂಕಾಂಬಿಕಾ ದೇವಸ್ಥಾನ ಹಾಗೂ ಇತರ ದೇವಸ್ಥಾನಗಳು ಅನೇಕ ಯಾತ್ರಾರ್ಥಿಗಳನ್ನು ಇತರ ರಾಜ್ಯಗಳಿಂದಲೂ ಆಕರ್ಷಿಸುತ್ತಿವೆ.

ಕೊಳ್ಳೇಗಾಲ : (ಮೈಸೂರು ಜಿ; ತಾ. ಕೇ; ಜನ: 35,660) ಕೊಳ್ಳೇಗಾಲವು ಬೆಂಗಳೂರಿನಿಂದ 140 ಕಿಮೀ ಹಾಗೂ ಮೈಸೂರಿನ ಆಗ್ನೇಯಕ್ಕೆ 64 ಕಿಮೀ ದೂರದಲ್ಲಿದೆ. ಇಲ್ಲಿ ಪುರಸಭೆಯಿದೆ. ಕಹಳ ಮತ್ತು ಗಾಲವರೆಂಬ ಋಷಿಗಳಿಬ್ಬರು ಸ್ವಲ್ಪಕಾಲ ಇಲ್ಲಿ ವಾಸವಾಗಿದ್ದರಂತೆ. ಅದರಿಂದ ಈ ಊರಿಗೆ ಈ ಹೆಸರು ಬಂತೆಂಬ ಐತಿಹ್ಯವಿದೆ. ಮರುಳೇಶ್ವರ, ಸುಬ್ರಹ್ಮಣ್ಯೇಶ್ವರ, ಲಕ್ಷ್ಮೀನಾರಾಯಣ, ಚೌಡೇಶ್ವರಿ, ಕನ್ನಿಕಾಪರಮೇಶ್ವರಿ ದೇವಸ್ಥಾನಗಳು ಈ ಊರಿನಲ್ಲಿವೆ. ಊರಿನ ಸುತ್ತಮುತ್ತ ಬಸದಿಗಳಿದ್ದುದರ ಅವಶೇಷಗಳಿವೆ. ಕೊಳ್ಳೇಗಾಲ ಒಂದು ಪ್ರಸಿದ್ಧ ವ್ಯಾಪಾರೀ ಕೇಂದ್ರ. ಇಲ್ಲಿ ಅನೇಕ ರೇಷ್ಮೆ ನೇಯ್ಗೆ ಘಟಕಗಳಿವೆ. ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಕಾರ್ಖಾನೆ, ಮರಮುಟ್ಟುಗಳ ವ್ಯಾಪಾರೀ ಮಳಿಗೆಗಳೇ ಅಲ್ಲದೆ, ಅನೇಕ ಕೈಗಾರಿಕಾ ಘಟಕಗಳಿವೆ. ಈ ಸ್ಥಳವು ಜೈನಕವಿ ಪೂಜ್ಯಪಾದ, ಶರಣರಾದ ಮಾದೇಶ್ವರ, ನಿಜಗುಣ ಶಿವಯೋಗಿ ಮತ್ತು ಮುಪ್ಪಿನ ಷಡಕ್ಷರಿಗಳ ಸಂಬಂಧ ಹೊಂದಿದ್ದುದು ಒಂದು ಪ್ರಧಾನ ವಿಷಯವಾಗಿದೆ. ಇಲ್ಲಿನ ರೇಷ್ಮೆ ಫಾರ್ಮ್‌ಗೆ ಹೊಂದಿಕೊಂಡು ರೇಷ್ಮೆ ತರಬೇತಿ ಕೇಂದ್ರವಿದೆ. ಕೊಳ್ಳೆಗಾಲವು ಸೀರೆಗಳಿಗೆ ತುಂಬಾ ಪ್ರಸಿದ್ಧಿ. ಈ ಊರಿಗೆ ಹತ್ತು ಕಿಮೀ ದೂರದಲ್ಲಿರುವ ಚಿಲಕವಾಡಿ ಗ್ರಾಮದಲ್ಲಿ ಶಂಭು ಲಿಂಗೇಶ್ವರ ದೇವಸ್ಥಾನವಿದೆ. ಹಾಗೆಯೇ ಶರಣ ನಿಜಗುಣ ಶಿವಯೋಗಿಗಳ ಮಂದಿರವೂ, ಒಂದು ಮಠವು ಇದ್ದು, ಇಲ್ಲಿ ಪ್ರತೀವರ್ಷ ಜಾತ್ರೆ ನಡೆಯುತ್ತದೆ. ನಿಜಗುಣ ಶಿವಯೋಗಿಗಳು ಶರಣಶ್ರೇಷ್ಠರು, ಪಂಡಿತೋತ್ತಮ ಮತ್ತು ಕನ್ನಡದ ಕವಿ. ಕೊಳ್ಳೇಗಾಲದ ಸಮೀಪದ ಕುಂತೂರು ಗ್ರಾಮದಲ್ಲಿ ಮಾದೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ಇದೆ. ಮಲೆಯ ಮಾದೇಶ್ವರ ಬೆಟ್ಟ ಮತ್ತು ಶಂಭುಲಿಂಗನಬೆಟ್ಟ ಈ ತಾಲೂಕಿನಲ್ಲಿವೆ. ಕೊಳ್ಳೇಗಾಲಕ್ಕೆ ಸಮೀಪದಲ್ಲಿರುವ ಚಿಕ್ಕಲೂರು ಗ್ರಾಮದಲ್ಲಿ ಮಂಟೇಸ್ವಾಮಿ ಪರಂಪರೆಯ ಗುರುವಾದ ಸಿದ್ದಪ್ಪಾಜಿಯವರ ಗದ್ದುಗೆಯಿದೆ. ಇವರ ಹೆಸರಿನಲ್ಲಿ ನಡೆಯುವ ಜಾತ್ರೆಗಳು ಬಹುಸಂಖ್ಯಾತ ಭಕ್ತರನ್ನು, ಯಾತ್ರಿಕರನ್ನು ಆಕರ್ಷಿಸುತ್ತದೆ. ಈ ತಾಲೂಕಿಗೆ ಸೇರಿದ ಸತ್ಯಗಾಲ ಕಾವೇರಿ ನದಿಯ ದಂಡೆಯ ಮೇಲಿದ್ದು, ಇಲ್ಲೊಂದು ಪಾಳು ಕೋಟೆಯಿದೆ. ಪ್ರಾಚೀನವಾದ

ಸೋಮೇಶ್ವರ ಮತ್ತು ರಂಗನಾಥ ದೇವಾಲಯಗಳಲ್ಲದೆ ಇಲ್ಲಿ ಇನ್ನೂ ಅನೇಕ ದೇವಾಲಯಗಳಿವೆ. ಇದು ಒಳ್ಳೆಯ ವಿಹಾರ ಕೇಂದ್ರವೂ ಆಗಿದೆ. ಕಾವೇರಿಯ ಬಲದಂಡೆಯ ಮೇಲಿರುವ ಒಂದು ದರ್ಗಾ ಮುಸಲ್ಮಾನರಿಗೆ ಪೂಜ್ಯಸ್ಥಾನವಾಗಿದೆ. ಬಂಡಳ್ಳಿ ದರ್ಗಾಯಿರುವ ಭವ್ಯವಾದ ಬೆಟ್ಟ, ಹೊಗೇನಕಲ್ ಜಲಪಾತ ಮತ್ತು ಗೋಪಿನಾಥಂ ಕೆರೆ ಈ ತಾಲೂಕಿನ ನೋಡಬೇಕಾದ ಸ್ಥಳಗಳು. ಕೊಳ್ಳೇಗಾಲಕ್ಕೆ 50 ಕಿಮೀ ದೂರದಲ್ಲಿರುವ ಬೈಲೂರು ಟಿಬೆಟ್ ನಿರಾಶ್ರಿತರಿಗೆ ಆಶ್ರಯವಿತ್ತಿರುವ ಗ್ರಾಮ.

ಕೋಲಾರ: (ಕೋಲಾರ ಜಿ, ಉಪವಿಭಾಗ ಮತ್ತು ತಾ. ಕೇ; ಜನ: 65,602) ಬೆಂಗಳೂರಿನ ಪೂರ್ವಕ್ಕೆ 72 ಕಿಮೀ ದೂರದಲ್ಲಿ ಕೋಲಾರ ಇದೆ. ಇದರ ಮೊದಲ ಹೆಸರು ಕುವಲಾಲ ಅಥವಾ ಕೋಲಾಲ ಎಂದಿತ್ತು. ಕೋಲಾರಕ್ಕೆ ತುಂಬ ಪ್ರಾಚೀನತೆ ಇದೆ. ಆದರೆ ಇಲ್ಲಿ ಅವಶೇಷಗಳು ಉಳಿದಿರುವುದು ಮಾತ್ರ ಸ್ವಲ್ಪವೇ ಸ್ವಲ್ಪ. ನಾಲ್ಕನೇಯ ಶತಮಾನದಲ್ಲಿ ಅದು ಗಂಗರ ಪ್ರಪ್ರಥಮ ರಾಜಧಾನಿಯಾಗಿತ್ತು. ನಂತರ ಗಂಗರು ತಲಕಾಡು ರಾಜಧಾನಿಯಿಂದ ಆಳಿದರೂ ಅವರು ತಮ್ಮನ್ನು 'ಕುವಲಾಲ ಪುರವರೇಶ್ವರ'ರೆಂದು ಕರೆದುಕೊಳ್ಳುತ್ತಿದ್ದರು. ಹನ್ನೊಂದನೇಯ ಶತಮಾನದ ಆದಿ ಭಾಗದಲ್ಲಿ ಗಂಗರನ್ನು ಸೋಲಿಸಿ ಚೋಳರು ಕೋಲಾರವನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡರು. ಈಗ ಇರುವ ಕೋಲಾರಮ್ಮನ ದೇವಸ್ಥಾನದ ನಿರ್ಮಾತೃ ರಾಜೇಂದ್ರ ಚೋಳನೆಂದು ಹೇಳಲಾಗಿದೆ. ಹನ್ನೆರಡನೇಯ ಶತಮಾನದ ಆದಿ ಭಾಗದಲ್ಲಿ ಹೊಯ್ಸಳರು ಕೋಲಾರವನ್ನು ಗೆದ್ದುಕೊಂಡು ಚೋಳರನ್ನು ಆ ಭಾಗದಿಂದ ಓಡಿಸಿದರು. ಹದಿಮೂರನೇಯ ಶತಮಾನದ ಉತ್ತರಾರ್ಧದಲ್ಲಿ ಹೊಯ್ಸಳ ಸಾಮ್ರಾಜ್ಯ ಇಬ್ಭಾಗವಾದಾಗ ಕೋಲಾರ ಭಾಗವು ಸೋಮೇಶ್ವರನ ಮಗ ರಾಮನಾಥನ ಭಾಗಕ್ಕೆ ಉಳಿದ ತಮಿಳು ಭಾಗಗಳೊಂದಿಗೆ ಒಳಪಟ್ಟಿತು. ಮತ್ತೆ ಹದಿನೈದನೇಯ ಶತಮಾನದಲ್ಲಿ ಇದು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದಾಗ ಚಿಕ್ಕರಾಯನೆಂಬ ಬಿರುದನ್ನು ಪಡೆದಿದ್ದ ತಮ್ಮೇಗೌಡ ಇಲ್ಲಿನ ಕೋಟೆಯನ್ನು ದುರಸ್ತಿ ಮಾಡುವ ಅಧಿಕಾರವನ್ನು ಪಡೆದುಕೊಂಡ. ಅನಂತರ ಈ ಭಾಗ ವಿಜಾಪುರ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತು ಮತ್ತು ಕ್ರಿ.ಶ. 1638ರಲ್ಲಿ ಇದು ಶಿವಾಜಿಯ ತಂದೆ ಷಾಜಿಗೆ ಲಭ್ಯವಾದ ಜಹಗೀರನ ಭಾಗದಲ್ಲಿ ಸೇರಿತ್ತು. ಅಲ್ಲಿಂದ 50 ವರ್ಷಗಳ ನಂತರ ಮುಘಲರು ಇದನ್ನು ಆಕ್ರಮಿಸಿಕೊಂಡರು. ಆಮೇಲೆ ಕ್ರಿ.ಶ. 1720ರಲ್ಲಿ ಸಿರಾ ಸುಬೇದಾರನ ಕೈ ಕೆಳಗಿದ್ದ ಹೈದರ್ ಆಲಿಯ ತಂದೆ ಫತೇಮುಹಮದ್ ಕೋಲಾರದ ಫೌಜುದಾರನಾಗಿದ್ದ; ಅನೇಕ ಅದೃಷ್ಟ ಪರೀಕ್ಷೆಗಳ ನಂತರ ಕ್ರಿ.ಶ. 1761ರಲ್ಲಿ ಇದು ಹೈದರ್ ಆಲಿಯ ವಶಕ್ಕೆ ಬಂತು. ಕ್ರಿ.ಶ. 1768ರಲ್ಲಿ ಇದು ಬ್ರಿಟಿಷರ ವಶವಾಯಿತು. ಮತ್ತೆ ಕ್ರಿ.ಶ. 1770ರಲ್ಲಿ ಇದು ಮರಾಠರ ವಶವಾಯಿತು. ಪುನಃ ಕ್ರಿ.ಶ. 1791ರಲ್ಲಿ ಇದು ಬ್ರಿಟಿಷರ ವಶಕ್ಕೆ ಬಂತು. ಇಷ್ಟೆಲ್ಲ ಆದಮೇಲೆ ಕ್ರಿ.ಶ. 1792ರ ಒಪ್ಪಂದದ ಪ್ರಕಾರ ಇದನ್ನು ಟಿಪ್ಪುವಿನ ವಶಕ್ಕೆ ಬಿಟ್ಟುಕೊಟ್ಟಾಗ ಇದು ಮೈಸೂರು ಸಂಸ್ಥಾನದ ಭಾಗವಾಯಿತು. ನಂತರ ಸುಮಾರು 130 ವರ್ಷಗಳ ಹಿಂದೆ ಇಲ್ಲಿನ ಮಣ್ಣಿನ ಕೋಟೆ ಗೋಡೆಗಳನ್ನು ಕೆಡವಿ ಸುತ್ತಲಿನ ಕಂದಕಗಳನ್ನು ಮುಚ್ಚಲಾಯಿತು. ಅನೇಕ ಹೊಸ ರಸ್ತೆಗಳ ನಿರ್ಮಾಣವಾಯಿತು. ಕ್ರಿ.ಶ. 1864ರಲ್ಲಿ ರೈಲು ಮಾರ್ಗ ಆರಂಭವಾಗುವುದಕ್ಕೆ ಮೊದಲು ಕೋಲಾರ ಮದರಾಸಿನತ್ತ ಹೋಗಿ ಬರುವ ಹೆದ್ದಾರಿಯಲ್ಲಿ ಪ್ರಾಮುಖ್ಯತೆ ಪಡೆದಿತ್ತು. ಊರಿನ ಪಶ್ಚಿಮಕ್ಕೆ ಕೋಲಾರದ ಬೆಟ್ಟಗಳಿವೆ. ಪೂರ್ವಕ್ಕೆ ಒಂದು ದೊಡ್ಡ ಅಮಾನಿ ಕೆರೆ ಇದೆ. ಇಲ್ಲಿನ ಅನೇಕ ಪ್ರಮುಖ ಕಛೇರಿಗಳು ಊರಿನ ಉತ್ತರ ಭಾಗದಲ್ಲಿವೆ. ಇಲ್ಲಿ ಊರಿನ ಉತ್ತರ ದಕ್ಷಿಣ ಭಾಗಗಳನ್ನು ಕೂಡಿಸುವ ಅನೇಕ ಉತ್ತರ ದಕ್ಷಿಣ ನೇರ ರಸ್ತೆಗಳಿವೆ. ಸೋಮೇಶ್ವರ ಮತ್ತು ಕೋಲಾರಮ್ಮ ದೇವಸ್ಥಾನಗಳು ಇಲ್ಲಿನ ಎರಡು ಪ್ರಮುಖ ದೇವಸ್ಥಾನಗಳು. ಸೋಮೇಶ್ವರ ದೇವಸ್ಥಾನ ವಿಶಿಷ್ಟ ಅಲಂಕಾರದಿಂದ ಕೂಡಿದ ದ್ರಾವಿಡ ಶೈಲಿಯ ದೇವಸ್ಥಾನ. ಇದರ ಮಹಾದ್ವಾರದ ಮೇಲೆ ಇಟ್ಟಿಗೆ ಗಾರೆಗಳಿಂದ ಕಟ್ಟಿದ ವಿಜಯನಗರ ಶೈಲಿಯ ಎತ್ತರವಾದ ಗೋಪುರವಿದೆ. ದೇವಸ್ಥಾನದ ಗೋಡೆಗಳ ಮೇಲೆ ಅನೇಕ ಶಾಸನಗಳು ಇವೆ. ಚೋಳ ಸ್ಮಾರಕವಾದ ಕೋಲಾರಮ್ಮ ದೇವಸ್ಥಾನ ಪ್ರಮುಖ ಜನಪ್ರಿಯ ಪೂಜಾಸ್ಥಳ. ಈ ದೇವಸ್ಥಾನದ ಆವರಣದ ಒಳಗೆ ಮೂರು ಶಾಸನಗಳೂ ಇದ್ದು ಅವುಗಳಲ್ಲಿ ಒಂದು ಕನ್ನಡದಲ್ಲಿದೆ. ಇಲ್ಲಿ ಸಪ್ತಮಾತೃಕೆಯರ ಮೂರ್ತಿಗಳೂ ಇವೆ. ಉಳಿದೆರಡು ಸ್ಮಾರಕ ಫಲಕಗಳು. ದೇವಾಲಯದ ಗೋಡೆಯಲ್ಲಿ ಅನೇಕ ತಮಿಳು ಶಾಸನಗಳಿವೆ. ಆಂಜನೇಯ, ನಂಜುಂಡೇಶ್ವರ, ವೆಂಕಟರಮಣ ಮತ್ತು ಕೋದಂಡರಾಮ ದೇವಸ್ಥಾನಗಳು ಇಲ್ಲಿನ ಉಳಿದ ದೇವಸ್ಥಾನಗಳು. ಹೈದರ್ ಆಲಿಯ ಸಂಬಂಧಿಕರ ಗೋರಿಗಳಿರುವ ಮಕ್ಬರಾ ಕಟ್ಟಡ ಇಲ್ಲಿ ಮುಸಲ್ಮಾನರ ಪ್ರಮುಖ ಕಟ್ಟಡ. ಅತ್ಯಂತ ಶ್ರೇಷ್ಠ ಕಂಬಳಿ ಉತ್ಪಾದನೆಗೆ ಕೋಲಾರ ಹೆಸರುವಾಸಿಯಾಗಿದೆ. ರಾಜ್ಯ ಸರ್ಕಾರದ ಉಣ್ಣೆ ನೂಲು ಕೇಂದ್ರವೊಂದು ಇಲ್ಲಿದೆ. ಅದು ಬಗೆ ಬಗೆಯ ಉಣ್ಣೆ ಬಟ್ಟೆಗಳನ್ನು ತಯಾರಿಸುತ್ತದೆ. ಕರ್ನಾಟಕ ರಾಜ್ಯದ ಎರಡು ರೇಷ್ಮೆ ವ್ಯವಸಾಯ ಕೇಂದ್ರಗಳಲ್ಲಿ ಒಂದು ಇಲ್ಲಿದೆ. ಮತ್ತು ರಾಜ್ಯದ ಹತ್ತು ರೇಷ್ಮೆ ಬಿತ್ತನೆ ಕೋಠಿಗಳಲ್ಲಿ ಇಲ್ಲಿನದೂ ಒಂದು. ರೇಷ್ಮೆ ಉದ್ಯಮಕ್ಕೆ ಉಪಯುಕ್ತವಾಗುವ ರೇಷ್ಮೆ ಉತ್ಪಾದನೆಗೆ ನೆರವಾಗುವ ತತ್ಸಂಬಂಧವಾದ ಜೀವ ವಿಜ್ಞಾನ ಹಾಗೂ ಇತರ ವಿಷಯಗಳಲ್ಲಿ ತರಬೇತಿ ನೀಡುವ ಒಂದು ರೇಷ್ಮೆ ತರಬೇತಿ ಕೇಂದ್ರವೂ ಇಲ್ಲಿದೆ. ರಫ್ತು ಮಾಡುವ ಸಲುವಾಗಿ ಇಲ್ಲಿ ಟರ್ಕಿ ಕೋಳಿ ಸಾಕಣೆ ಉತ್ಪಾದನೆ ಬೃಹತ್ತಾಗಿದೆ. ಕೋಲಾರದ ಪರಿಸರದಲ್ಲಿ ಮೂರು ಕಿಮೀ ದೂರದಲ್ಲಿ ಒಂದು ಜನಪ್ರಿಯವಾದ ಪ್ರೇಕ್ಷಣೀಯ ಸ್ಥಾನವಾದ ಅಂತರಗಂಗೆ ಇದೆ. ಅಂತರಗಂಗೆಯು ಕೋಲಾರದ ಬೆಟ್ಟಗಳಲ್ಲಿ

ರುವ, ಮಧ್ಯದಲ್ಲಿ ಒಂದು ಮಂಟಪವಿರುವ ಕೊಳದಲ್ಲಿ ಉಗಮವಾಗುತ್ತದೆ. ಅಲ್ಲಿರುವ ಕಲ್ಲುಬಸವನ ಬಾಯಿಂದ ಇಲ್ಲಿಗೆ ನೀರು ಸದಾ ಹರಿಯುತ್ತಿರುತ್ತದೆ. ಇದು ಒಂದು ಪವಿತ್ರ ಸ್ಥಳವೆಂಬ ಭಾವನೆಯಿದೆ. ಜೊತೆಗೆ ಇದೊಂದು ಸುಂದರ ವಿಹಾರ ತಾಣವೂ ಹೌದು. ವೊಕ್ಕಲೇರಿ ಗ್ರಾಮ ಕೋಲಾರಕ್ಕೆ 12 ಕಿಮೀ ದೂರದಲ್ಲಿಯಿದೆ. ಇಲ್ಲಿನ ಮಾರ್ಕಂಡೇಯ ಸ್ವಾಮಿ ದೇವಸ್ಥಾನವೇ ಇದರ ಪ್ರಸಿದ್ಧಿಗೆ ಕಾರಣ. ಚಾಳುಕ್ಯ ಇಮ್ಮಡಿ ಕೀರ್ತಿವರ್ಮನ ತಾಮ್ರ ಶಾಸನವೊಂದು ಇಲ್ಲಿ ಸಿಕ್ಕಿದೆ. ಕೋಲಾರ ತಾಲೂಕಿನ ಸೀತಿ ಎಂಬ ಪುಟ್ಟ ಗ್ರಾಮ ಚೋಳ ಮತ್ತು ಹೊಯ್ಸಳರ ಕಾಲದಲ್ಲಿ ಸಾಕಷ್ಟು ಪ್ರಾಮುಖ್ಯತೆ ಪಡೆದಿತ್ತೆಂದು ಕಂಡುಬರುತ್ತದೆ. ಇಲ್ಲಿ ದೊರೆತಿರುವ ಒಂದು ಕನ್ನಡ ಶಿಲಾಶಾಸನದಲ್ಲಿ ಈ ಗ್ರಾಮವನ್ನು ಸೀಹತ್ತಿ ಅಥವಾ ಸೀಹತಿ ಎಂದು ಹೆಸರಿಸಲಾಗಿದೆ. ಸೀತಿ ಬೆಟ್ಟವೆಂಬ ಒಂದು ಸಣ್ಣ ಬೆಟ್ಟವಿದೆ. ಅದರ ಮೇಲೆ ಶ್ರೀಪತೀಶ್ವರ ಮತ್ತು ಕಾಲಭೈರವ ದೇವಸ್ಥಾನಗಳಿವೆ. ಬೆಟ್ಟದ ಮೇಲೆ ರಾಜೇಂದ್ರ ಚೋಳ (ಕ್ರಿ.ಶ. 1024) ನ ಕಾಲದ ತಮಿಳು ಶಾಸನವೇ ಇಲ್ಲಿ ದೊರೆತಿರುವ ಪ್ರಾಚೀನ ಶಾಸನ. ಇಲ್ಲಿರುವ ಅನೇಕ ಶಾಸನಗಳಲ್ಲಿ ಒಂದು 14ನೇಯ ಶತಮಾನದ ಶಾಸನ ಮುಖ್ಯವಾದುದು. ಅದರಲ್ಲಿ ಇಲ್ಲಿನ ಕಾಲಭೈರವ ದೇವರಿಗೆ ಬೆರಳುಗಳನ್ನು ಕಾಣಿಕೆ ಕೊಡುತ್ತಿದ್ದುದರ ಉಲ್ಲೇಖವಿದೆ. ರೆಡ್ಡಿ, ಮೊರಸು ಒಕ್ಕಲಿಗರು ಮೊದಲಾದ ಜನಾಂಗಗಳ ರಕ್ಷಕ ದೇವರು ಈ ಕಾಲಭೈರವ. ಬೆರಳು ಕಾಣಿಕೆ ಕೊಡುವ ಈ ಪದ್ಧತಿ ತೀರ ಇತ್ತೀಚಿನವರೆಗೆ ರೂಢಿಯಲ್ಲಿತ್ತು. ಈಗ ಎಪ್ಪತ್ತು ವರ್ಷಗಳ ಕೆಳಗೆ ಸರ್ಕಾರವು ಈ ಕ್ರಮವನ್ನು ನಿಷೇಧಿಸಿ ಆಜ್ಞೆ ಹೊರಡಿಸಿತು. ಈಗ ಅದರ ಬದಲಿಗೆ ನಿರಪಾಯಕರವಾದ ಮತ್ತೊಂದು ಪದ್ಧತಿ ಕೆಲವರಲ್ಲಿ ಆಚರಣೆಯಲ್ಲಿ ಬಂದಿದೆ. ಕಾಣಿಕೆ ನೀಡುವ ಬೆರಳಿಗೆ ದೇವಸ್ಥಾನದಲ್ಲಿ ದೇವರ ಬಳಿ ವಿಧಿವತ್ತಾಗಿ ಹೂ ಕಟ್ಟಿ ಮುಚ್ಚುವುದು. ಅದನ್ನು ಅದೇ ರೀತಿ ವಿಧಿವತ್ತಾಗಿ ಸ್ವಗ್ರಾಮಕ್ಕೆ ಹಿಂತಿರುಗಿದ ಮೇಲೆ ಬಿಚ್ಚುವುದು. ಈ ಬೆಟ್ಟದ ಮೇಲಿರುವ ಲಿಂಗವನ್ನು ಶ್ರೀಪತಿ ಅಥವಾ ವಿಷ್ಣು ಪ್ರತಿಷ್ಠಾಪಿಸಿದನೆಂಬ ನಂಬಿಕೆಯೇ ಶ್ರೀಪತೀಶ್ವರ ಎಂದು ಕರೆಯಲು ಕಾರಣ.

ಖಾನಾಪುರ: (ಬೆಳಗಾವಿ ಜಿ; ತಾ. ಕೇ; ಜನ: 12,465) ಖಾನಾಪುರ ಮೊದಲು ಇದೇ ಹೆಸರಿನ ಉಪವಿಭಾಗದ ಆಡಳಿತ ಕೇಂದ್ರವಾಗಿತ್ತು. ಇದು ಬೆಂಗಳೂರಿನ ವಾಯುವ್ಯಕ್ಕೆ 500 ಕಿಮೀ ದೂರದಲ್ಲಿಯೂ ಬೆಳಗಾವಿಯ ದಕ್ಷಿಣಕ್ಕೆ 28 ಕಿಮೀ ದೂರದಲ್ಲಿಯೂ ಮಲಪ್ರಭಾ ನದಿಯ ಬಲದಂಡೆಯ ಮೇಲೆ ಮಲೆನಾಡಿನ ಮಧ್ಯದಲ್ಲಿದೆ. 1973ರಲ್ಲಿ ಇಲ್ಲಿ ಪುರಸಭೆಯು ಸ್ಥಾಪಿತವಾಯಿತು. ಇದು ವ್ಯಾಪಾರ ಮತ್ತು ಅರಣ್ಯೋತ್ಪತ್ತಿಗಳಿಂದ ಪ್ರಾಮುಖ್ಯತೆ ಪಡೆದಿದೆ. 17 ಮತ್ತು 18ನೇಯ ಶತಮಾನಗಳಲ್ಲಿ ಖಾನಾಪುರವು ಗೋವೆಯ ವ್ಯಾಪಾರಿಗಳಿಗೆ ಪ್ರಮುಖ ಮರುರಫ್ತು ವ್ಯಾಪಾರಿ ಕೇಂದ್ರವಾಗಿತ್ತು. ಈ ವ್ಯಾಪಾರಕ್ಕೆ 1810ರಲ್ಲಿ ಕಿತ್ತೂರಿನ ದೇಸಾಯರಿಂದ ಅಡ್ಡಿ ಆತಂಕಗಳು ಬಂದವು, ಕಾರಣ ಕಿತ್ತೂರು ಆಡಳಿತಕ್ಕೆ ಒಳಪಟ್ಟ ಖಾನಾಪುರದ ಆಗ್ನೇಯಕ್ಕೆ 10 ಕಿಮೀ ದೂರದಲ್ಲಿರುವ ನಂದಗಡವನ್ನು ಕಿತ್ತೂರು ದೇಸಾಯರು ಪ್ರಮುಖ ವ್ಯಾಪಾರೀ ಕೇಂದ್ರವಾಗಿ ಬೆಳೆಸುವ ಉದ್ದೇಶ ಹೊಂದಿದ್ದರು. ಸದ್ಯಕ್ಕೆ ಇದು ಅಕ್ಕಿ, ಮರಮುಟ್ಟು, ಉರವಲು ಮರ ವ್ಯಾಪಾರಕ್ಕೂ, ಇಲ್ಲಿ ಸ್ಥಾಪಿಸಲಾಗಿರುವ ಪಿಂಗಾಣಿ ಕಾರ್ಖಾನೆ ಹಾಗೂ ತೋಟಗಾರಿಕೆ ಉತ್ಪಾದನೆಗಳಿಗೂ ಪ್ರಸಿದ್ಧವಾಗಿದೆ. ಇಲ್ಲಿನ ಪಂಚಮುಖ ಈಶ್ವರ ದೇವಸ್ಥಾನ ಮತ್ತು ಲಕ್ಷ್ಮೀ, ರೇವಂತ, ಮಾರುತಿ, ಗಣೇಶ, ವಿಠ್ಠಲ, ವೆಂಕಟೇಶ್ವರ, ಬಸವಣ್ಣನವರ ದೇವಾಲಯಗಳು ಪ್ರಾಚೀನತೆಯಿಂದ ಕೂಡಿವೆ. ಜೊತೆಗೆ ಒಂದು ಜಿನ ಮಂದಿರ, ಎರಡು ಚರ್ಚುಗಳು, ನಾಲ್ಕು ಮಸೀದಿಗಳು ಹಾಗೂ ಗಜ್‌ಬರ್ ಸಾಹೇಬರ ಮತ್ತು ಖಾದ್ರಿ ಷಾವಲಿ ಅವರ ದರ್ಗಾಗಳಿವೆ. ಕುಂಬಾರಿಕೆ ಮತ್ತು ತತ್ಸಂಬಂಧವಾದ ಕಸಬುಗಳಲ್ಲಿ ತರಬೇತಿ ನೀಡುವ ಒಂದು ಕೇಂದ್ರ ಶಿಕ್ಷಣ ಸಂಸ್ಥೆಯಿದೆ. ಅಸೋಗ ಒಂದು ಸಣ್ಣ ಗ್ರಾಮ. ಇದು ಖಾನಾಪುರದ ನೈಋತ್ಯಕ್ಕೆ ಮೂರು ಕಿಮೀ ದೂರದಲ್ಲಿ ಮಲಪ್ರಭಾ ನದಿಯ ದಂಡೆಯಲ್ಲಿದೆ. ಇಲ್ಲಿನ ಪ್ರಕೃತಿ ಸೌಂದರ್ಯ ಆಕರ್ಷಣೀಯವಾಗಿದೆ. ಜೊತೆಗೆ ನದಿ ದಂಡೆಯ ಮೇಲಿರುವ ರಾಮಲಿಂಗೇಶ್ವರ ದೇವಸ್ಥಾನ ಹಾಗೂ ನದೀ ಮಧ್ಯದಲ್ಲಿ ಇರುವ ವಿಶ್ವೇಶ್ವರಲಿಂಗ ದೇವಸ್ಥಾನಗಳು ಜನರ ಭಕ್ತಿಗೆ ಪಾತ್ರವಾಗಿವೆ. ಇಲ್ಲಿ ಒಂದು ಪುಟ್ಟ ಜಲಪಾತವಿದೆ. ಇತ್ತೀಚೆಗೆ ಇಲ್ಲಿ ತೋಟಗಾರಿಕೆಯು ಅಭಿವೃದ್ಧಿಗೊಂಡಿದೆ. ಖುಂಬರ್ಡೆ ಗ್ರಾಮ ಲೋಂಡಾ-ಹುಬ್ಬಳ್ಳಿ ಹೆದ್ದಾರಿಯಲ್ಲಿ ಲೋಂಡಾಕ್ಕೆ 16 ಕಿಮೀ ದೂರದಲ್ಲಿದೆ. ಈ ಗ್ರಾಮಕ್ಕೆ ಐದು ಕಿಮೀ ದೂರದಲ್ಲಿ ದಟ್ಟ ಕಾಡಿನ ನಡುವೆ ಇರುವ 300 ಅಡಿ ಎತ್ತರದ ಗುಡ್ಡದ ಮೇಲೆ ನಾಥ ಪಂಥದ ಒಂದು ಮಠವಿದೆ. ಈ ಮಠದಲ್ಲಿ ಸಿದ್ಧಿ ಹಂಡಿಬಡಗನಾಥ ಮತ್ತು ಕಾಲಭೈರವರ ಪೂಜಾದಿಗಳು ನಡೆಯುತ್ತವೆ. ಈ ಮಠ ಕರ್ನಾಟಕ, ಮಹಾರಾಷ್ಟ್ರ ಮತ್ತು ಗೋವಾಗಳಿಂದ ಅಸಂಖ್ಯಾತ ಭಕ್ತವೃಂದವನ್ನು ಆಕರ್ಷಿಸುತ್ತದೆ. ಈ ಮಠವನ್ನು ಕಿತ್ತೂರಿನ ದೇಸಾಯರು ಕಟ್ಟಿಸಿದರೆಂದೂ ಅನೇಕ ಸ್ಥಳೀಯ ಮುಖಂಡರು ಪೋಷಿಸಿದರೆಂದು ಹೇಳುತ್ತಾರೆ. ಕಕ್ಕೇರಿ ಗ್ರಾಮವು ಖಾನಾಪುರ-ಅಳ್ನಾವರ ಹೆದ್ದಾರಿಯಲ್ಲಿ, ಖಾನಾಪುರದ ಆಗ್ನೇಯಕ್ಕೆ 32 ಕಿಮೀ ದೂರದಲ್ಲಿದೆ. ಡೋಹರ ಕಕ್ಕಯ್ಯನಿಗೂ ಈ ಗ್ರಾಮದ ಹೆಸರಿಗೂ ಸಂಬಂಧವಿದೆಯೆಂದು ಕಾಣುತ್ತದೆ. ಡೋಹರ ಕಕ್ಕಯ್ಯ ಹನ್ನೆರಡನೇಯ ಶತಮಾನದ ಬಸವೇಶ್ವರರ ಸಮಕಾಲೀನ ಶರಣ. ಈ ಶರಣನ ಹೆಸರಿನಲ್ಲಿ ಅವನ ಗೌರವಾರ್ಥವಾಗಿ ಒಂದು ಸುಂದರ ದೇವಾಲಯ (ಈಚೆಗೆ ದುರಸ್ತು ಮಾಡಲಾಗಿದೆ)ವನ್ನು ಕಟ್ಟಲಾಗಿದೆ. ಗ್ರಾಮದೇವತೆ ಭಿಷ್ಟಾದೇವಿ, ವೀರಭದ್ರ, ರಾಮಲಿಂಗೇಶ್ವರ ಇಲ್ಲಿನ ಇತರ ದೇವಸ್ಥಾನಗಳು. ಪ್ರಜ್ಞೋದಯ ಆಶ್ರಮವೆಂಬ ಒಂದು ಆಶ್ರಮವೂ

ಇಲ್ಲಿದೆ. ಈ ಆಶ್ರಮ ಆಧ್ಯಾತ್ಮಿಕ ಹಾಗೂ ತಾತ್ವಿಕ ಕೇಂದ್ರವಾಗಿದೆ.

ಗಂಗಾವತಿ : (ರಾಯಚೂರು ಜಿ; ತಾ. ಕೇ; ಜನ: 58,630) ಬೆಂಗಳೂರಿನಿಂದ 374 ಕಿಮೀ ಹಾಗೂ ಆನೆಗೊಂದಿಯ ಉತ್ತರಕ್ಕೆ 14 ಕಿಮೀ ದೂರದಲ್ಲಿ ಈ ನಗರವಿದೆ. ಬಹು ಹಿಂದೆ ಗಂಗಾವತಿಯನ್ನು 'ನೀಲಾವತಿ' ಎಂದು ಕರೆಯಲಾಗುತ್ತಿತ್ತು. ಇಲ್ಲಿಂದ ಎರಡು ಮೈಲಿ ದೂರದಲ್ಲಿ ತುಂಗಭದ್ರಾ ನದಿ ಹರಿಯುತ್ತಿದೆ. ವಿಜಯನಗರ ಕಾಲಕ್ಕೆ ಸೇರಿದ ಪ್ರಸನ್ನ ಪಂಪಾವತಿ ದೇವಾಲಯ, ಹಾಗೂ ಹಳೆಯ ಮಠವಾದ ಮುದ್ದುಸ್ವಾಮಿ ಮಠ ಇಲ್ಲಿವೆ. ದೇವಘಟ್ಟದಲ್ಲಿರುವ ಈಶ್ವರ ದೇವಾಲಯವು ಇಲ್ಲಿನ ಮತ್ತೊಂದು ಪ್ರಮುಖ ಸ್ಮಾರಕ. ಇಲ್ಲಿ ಒಂದು ಮಸೀದಿಯಿದೆ. ಗಂಗಾವತಿ ಪ್ರಮುಖ ವಾಣಿಜ್ಯ ಕೇಂದ್ರವಾಗಿದ್ದು, ವಿಶೇಷವಾಗಿ ಬೆಲ್ಲ ಹಾಗೂ ಧಾನ್ಯಗಳ ಮಾರುಕಟ್ಟೆಗೆ ಹೆಸರುವಾಸಿಯಾಗಿದೆ. ಇಲ್ಲಿ ಕೃಷಿ ಸಂಶೋಧನಾ ಕೇಂದ್ರವೊಂದಿದೆ. ಗಂಗಾವತಿಗೆ ಸುಮಾರು 20 ಕಿಮೀ ದೂರದಲ್ಲಿ ಗಂಗಾವತಿ-ಲಿಂಗಸುಗೂರು ರಸ್ತೆಯಲ್ಲಿರುವ ಕನಕಗಿರಿ (ಜನ: 8,891)ಯು ಇಲ್ಲಿನ ಮತ್ತೊಂದು ಪ್ರಾಚೀನ ಸ್ಥಳ. ಅಶೋಕನ ಶಾಸನಗಳಲ್ಲಿ ಉಲ್ಲೇಖಿಸಿರುವ ಸುವರ್ಣಗಿರಿ ಇದೆಂದು ಗುರುತಿಸಲಾಗಿದೆ. ಕನಕಮುನಿ ಎಂಬ ಋಷಿಯು ಇಲ್ಲಿ ತಪಸ್ಸು ಮಾಡಿದನೆಂದು ಹೇಳಲಾಗಿದೆ. ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಪರಸಪ್ಪನಾಯಕನಿಂದ ಸ್ಥಾಪಿತವಾಗಿದ್ದ ಬೇಡ ಪಾಳೆಯಗಾರರ ಪ್ರಮುಖ ಆಡಳಿತ ಕೇಂದ್ರವಾಗಿದ್ದಿತು. ಈ ಸ್ಥಳವು ಮೂರು ಕಡೆಯಲ್ಲಿ ಎರಡು ನದಿಗಳಿಂದ ಸುತ್ತುವರೆಯಲ್ಪಟ್ಟಿದೆ. ನಿಜಾಮನು ಈ ಸಂಸ್ಥಾನದ 16 ಹಳ್ಳಿಗಳನ್ನು ನಾಯಕನ ಕುಟುಂಬದವರಿಗೆ ಬಿಟ್ಟುಕೊಟ್ಟಿದ್ದನು. ಇಲ್ಲಿಗೆ ಸಮೀಪದಲ್ಲಿರುವ ಹುಲಿ ಹೈದರ್ ಹಳ್ಳಿಯು ಇವರ ವಾಸ ಸ್ಥಳವಾಗಿದ್ದಿತು. ಈ ನಾಯಕರಿಂದ ನಿರ್ಮಿತವಾದ ಅನೇಕ ದೇವಾಲಯಗಳು ಕನಕಗಿರಿಯಲ್ಲಿವೆ. ಅವುಗಳಲ್ಲಿ ಅತ್ಯಂತ ಮುಖ್ಯವಾದುದು ಕನಕಾಚಲಪತಿ ದೇವಾಲಯ. ವಿಸ್ತಾರವಾದ ಈ ದೇವಾಲಯ ವಾಸ್ತುಶಿಲ್ಪದ ದೃಷ್ಟಿಯಿಂದ ಬಹು ಸುಂದರವಾದ ರಚನೆಯಾಗಿದೆ. ವಿಜಯನಗರದ ವಾಸ್ತುಶಿಲ್ಪಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ. ವಿಸ್ತಾರವಾದ ಒಳಾಂಗಣವನ್ನು ಹಾಗೂ ಬೃಹತ್ ಸ್ತಂಭಗಳನ್ನು ಒಳಗೊಂಡಿರುವ ಈ ದೇವಾಲಯ ಕಲಾತ್ಮಕತೆಗೆ ಹೆಸರಾಗಿದೆ. ಗೋಪುರ ಹಾಗೂ ದೇವಾಲಯದ ಗೋಡೆಗಳಲ್ಲಿ ಅಂದವಾಗಿ ಕೆತ್ತಿದ ಮೂರ್ತಿಶಿಲ್ಪಗಳನ್ನು ನೋಡಬಹುದು. ಕಪ್ಪುಶಿಲೆಯಲ್ಲಿ ರಾಜರಾಣಿಯರ ಮೂರ್ತಿಯನ್ನು ಈ ದೇವಾಲಯದಲ್ಲಿ ಕಡೆದು ನಿಲ್ಲಿಸಲಾಗಿದೆ. ಅಷ್ಟೇ ಅಲ್ಲದೇ ಪೌರಾಣಿಕ ವ್ಯಕ್ತಿಗಳ ವಿಗ್ರಹಗಳನ್ನು ಮರದಲ್ಲಿ ಕಡೆದು ನಿಲ್ಲಿಸಲಾಗಿದೆ. ವೆಂಕಟಪ್ಪನಾಯಕನು ಊರಿನ ಹೊರಗೆ ಕಟ್ಟಿಸಿರುವ 'ಸ್ನಾನಗೃಹ' ಈ ನಗರದ ಮತ್ತೊಂದು ಮುಖ್ಯ ಸ್ಮಾರಕ. "ಕಣ್ಣಿದ್ದವರು ಕನಕಗಿರಿಯನ್ನು ನೋಡಬೇಕು ಕಾಲಿದ್ದವರು ಹಂಪಿಯನ್ನು ನೋಡಬೇಕು" ಎಂಬುದು ಈ ಪ್ರದೇಶದಲ್ಲಿ ಜನಜನಿತವಾಗಿರುವ ಒಂದು ನುಡಿ.

ಗದಗ–ಬೆಟಗೇರಿ : (ಧಾರವಾಡ ಜಿ; ಉಪವಿಭಾಗ ಮತ್ತು ತಾ. ಕೇ; ಜನ: 1,16,596) ಇದು ಬೆಂಗಳೂರಿಗೆ 479 ಕಿಮೀ ದೂರದಲ್ಲಿ ಹಾಗೂ ಧಾರವಾಡಕ್ಕೆ 80 ಕಿಮೀ ದೂರದಲ್ಲಿದೆ. ಗದಗ ಕೂಡುನಿಲ್ದಾಣದ ಮೂಲಕ ಹುಬ್ಬಳ್ಳಿ–ಸೊಲ್ಲಾಪುರ, ಹಾಗೂ ಹುಬ್ಬಳ್ಳಿ-ಬಳ್ಳಾರಿ ರೈಲುಮಾರ್ಗವು ಹಾದುಹೋಗುತ್ತದೆ. ಕೇವಲ ಎರಡು ಕಿಮೀ ದೂರದಲ್ಲಿರುವ ಬೆಟಗೇರಿಯನ್ನು ಒಳಗೊಂಡಂತೆ ಈ ಸ್ಥಳವನ್ನು ಗದಗ-ಬೆಟಗೇರಿ ಎಂದೇ ಕರೆಯಲಾಗುತ್ತಿದೆ. ಈ ಎರಡಕ್ಕೂ ಒಂದೇ ಪುರಸಭೆಯಿದೆ. ಪ್ರಾಚೀನ ಕಾಲದಿಂದಲೂ ಈ ನಗರಕ್ಕೆ ಪ್ರಾಮುಖ್ಯತೆಯಿದ್ದು, ಶಾಸನಗಳಲ್ಲಿ ಕ್ರತುಕ, ಕ್ರತುಪುರ, ಕರ್ದುಗು, ಗಳ್ದುಗು, ಕೊನೆಗೆ ಗದಗು ಎಂದು ಹೆಸರಿಸಲಾಗಿದೆ. ಬೆಟಗೇರಿಗೆ ಮೊದಲು ಬಟ್ಟಗೆರೆ (ದುಂಡಾದ ಕೆರೆ) ಎಂದು ಹೆಸರಿದ್ದಿತು. ದಂಥಕತೆಯೊಂದರ ಪ್ರಕಾರ, ಜನಮೇಜಯನಿಂದ ಸ್ಥಾಪಿತವಾದ ಮಹಾ ಅಗ್ರಹಾರಗಳಲ್ಲಿ ಗದಗು ಒಂದು. 72 ಮಹಾಜನರು ಇಲ್ಲಿದ್ದು, ಅತ್ಯಂತ ಉನ್ನತ ಶಿಕ್ಷಣ ಕೇಂದ್ರವೆಂದು ಹೆಸರುವಾಸಿಯಾಗಿತ್ತು. ತ್ರಿಕೂಟೇಶ್ವರ ಮತ್ತು ವೀರನಾರಾಯಣ ದೇವಾಲಯದಲ್ಲಿ ದೊರೆತಿರುವ 34 ಶಾಸನಗಳು ಬಹು ಉಪಯುಕ್ತ ದಾಖಲೆಗಳಾಗಿವೆ. ಸಮೀಪದ ಲಕ್ಕುಂಡಿಯ ಬಳಿ ಹಾಗೂ ಬೆಟಗೇರಿಯ ಬಳಿ ದೊರೆತಿರುವ ಶಾಸನಗಳು, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಕಲಚೂರಿ, ಸೇಉಣ, ಹೊಯ್ಸಳ ಮತ್ತು ವಿಜಯನಗರ ಅರಸರುಗಳ ಬಗ್ಗೆ ಐತಿಹಾಸಿಕ ಮಾಹಿತಿಯನ್ನು ನೀಡುತ್ತವೆ. ಕ್ರಿ.ಶ. 1379ರ ಒಂದು ತಾಮ್ರ ಶಾಸನದಲ್ಲಿ ವಿಜಯನಗರದ ಅರಸನಾದ ಇಮ್ಮಡಿ ಹರಿಹರನು, ತ್ರಿಕೂಟೇಶ್ವರ ಮತ್ತು ವೀರನಾರಾಯಣ ದೇವಾಲಯಗಳಿಗೆ 22 ಹಳ್ಳಿಗಳನ್ನು ದಾನವಾಗಿ ನೀಡಿರುವ ವಿಷಯವನ್ನು ಸೂಚಿಸುತ್ತದೆ. ಈ ವೇಳೆಯಲ್ಲಿ ಹಂಪೆ ಹಸ್ತಿನಾವತಿ ಪ್ರಾಂತ್ಯದ ಲಕ್ಕುಂಡಿ ವೇಂಟೆಯ, ತೊರಗಲ್ಲು ನಾಡಿನ 66 ಹಳ್ಳಿಗಳಲ್ಲಿ ಗದಗದ ಪ್ರದೇಶದ ಒಂದಾಗಿತ್ತು. ವೀರನಾರಾಯಣ ದೇವಾಲಯದಲ್ಲಿ 1519ರ ಕೃಷ್ಣದೇವರಾಯನ ಆಳ್ವಿಕೆಗೆ ಸಂಬಂಧಿಸಿದಂತೆ ಒಂದು ಶಾಸನ ಹಾಗೂ 1539ರ ಅಚ್ಯುತರಾಯನ ಆಳ್ವಿಕೆಗೆ ಸಂಬಂಧಿಸಿದ ಮತ್ತೊಂದು ಶಾಸನವು ಲಭ್ಯವಾಗಿದೆ. ಈ ಶಾಸನದಲ್ಲಿ 'ಆನಂದನಿಧಿ' ಕೊಡುಗೆಯನ್ನು ಅಚ್ಯುತರಾಯನು ಗದುಗಿನ ವೀರನಾರಾಯಣನ ದೇವಾಲಯಕ್ಕೆ ನೀಡಿರುವುದನ್ನು ಉಲ್ಲೇಖಿಸಲಾಗಿದೆ. ಇದರಲ್ಲಿ ಕುಮಾರವ್ಯಾಸನ ಆರಾಧ್ಯದೈವ ಈ ಗದುಗಿನ ವೀರನಾರಾಯಣನು ಕುಮಾರವ್ಯಾಸನಿಗೆ ವರವನ್ನು ನೀಡಿದನೆಂದು ಹೇಳಿದೆ. ಇದು ಪ್ರಸಿದ್ಧ ಕವಿಯಾಗಿರುವ ಕುಮಾರವ್ಯಾಸನ ಬಗ್ಗೆ ದೊರಕಿರುವ

ಪ್ರಥಮ ಶಿಲಾಶಾಸನ. 1670ರ ವೇಳೆಗೆ ವಿಜಾಪುರದ ಅರಸರ ಆಳ್ವಿಕೆಯ ಕಾಲದಲ್ಲಿ ಧಾರವಾಡದೊಳಗೆ ವಿಲೀನಗೊಂಡು ಬಂಕಾಪುರದ ಸರ್ಕಾರದ ಜಿಲ್ಲೆಗಳಲ್ಲಿ ಒಂದಾಗಿದ್ದ 'ನುಸ್ರತಾಬಾದ್' ಎಂದು ಕರೆಯಲಾಯಿತು. 1799 ಜುಲೈ 26ರಂದು, ಡಂಬಳ ಕೋಟೆಯನ್ನು ವಶಪಡಿಸಿಕೊಂಡ ನಂತರ ಕರ್ನಲ್ ವೆಲ್ಲೆಸ್ಲಿ ಮರುದಿನ ಗದಗಿನತ್ತ ಮುಂದುವರೆದನು. ಆದರೆ ದೋಂಡಜಿ ವಾಘ್ ಅಲ್ಲಿಂದ ಪಲಾಯನ ಮಾಡಿದ್ದನು. ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿ ಗದಗು ಮತ್ತು ಡಂಬಳಕೋಟೆಯನ್ನು ವಶಪಡಿಸಿಕೊಂಡು ಧೋಂಡಜಿಯು ಗದಗಿನಲ್ಲಿ ಸೆರೆಯಲ್ಲಿಟ್ಟಿದ್ದ ಪೇಶ್ವೆಯ ಸೇನಾಧಿಕಾರಿಗೆ ಅವನ್ನು ಮತ್ತೆ ಒಪ್ಪಿಸಿದನು. ಕಡೆಯ ಮರಾಠಾ ಯುದ್ಧದಲ್ಲಿ ಮನ್ರೋ ಗದಗನ್ನು 1818ರ ಜನವರಿ 6ರಂದು ವಶಪಡಿಸಿಕೊಂಡನು. ತ್ರಿಕೂಟೇಶ್ವರ, ಸರಸ್ವತಿ, ಸೋಮೇಶ್ವರ, ರಾಮೇಶ್ವರ, ಕಲ್ಮೇಶ್ವರ ಮತ್ತು ವೀರ ನಾರಾಯಣ ದೇವಾಲಯಗಳು ಈ ನಗರದ ಅತ್ಯಂತ ಪ್ರಾಚೀನ ಸ್ಮಾರಕಗಳು. ತ್ರಿಕೂಟೇಶ್ವರ, ಮತ್ತು ಸರಸ್ವತಿ ದೇವಾಲಯಗಳನ್ನು ಒಂದೇ ಸಂಕೀರ್ಣದಲ್ಲಿ ಒಂದಕ್ಕೊಂದು ಸೇರಿದಂತೆ ನಿರ್ಮಿಸಲಾಗಿದೆ. ವಾಸ್ತುಶಿಲ್ಪದ ದೃಷ್ಟಿಯಿಂದ ರಾಷ್ಟ್ರಕೂಟರ ಕಾಲದ್ದೆಂದು ಹೇಳಲಾಗಿರುವ ತ್ರಿಕೂಟೇಶ್ವರ ದೇವಾಲಯವು ಅತ್ಯಂತ ಉತ್ತಮವಾದ ಹಾಗೂ ಚೆನ್ನಾಗಿ ರಕ್ಷಿಸಲ್ಪಟ್ಟಿರುವ ದೇವಾಲಯವಾಗಿದ್ದು, ಅದರಲ್ಲಿ ಒಂದೇ ಸಾಲಿನಲ್ಲಿ ಮೂರು ಲಿಂಗಗಳನ್ನು ಸ್ಥಾಪಿಸಿರುತ್ತಾರೆ. ಈ ದೇವಾಲಯದ ದಕ್ಷಿಣಕ್ಕೆ ಉತ್ತರಾಭಿಮುಖವಾಗಿ ಕಲ್ಯಾಣಿ ಚಾಳುಕ್ಯರ ಕಾಲದ್ದೆಂದು ಗುರುತಿಸಲಾಗಿರುವ ಸರಸ್ವತಿ ದೇವಾಲಯವಿದೆ. ಇಲ್ಲಿನ ಸರಸ್ವತಿ ದೇವಿಯ ಮೂಲವಿಗ್ರಹವು ಭಿನ್ನವಾಗಿದೆ. ಈ ಸುಂದರ ವಿಗ್ರಹವು ಅತ್ಯಂತ ಸೂಕ್ಷ್ಮ ಕೆತ್ತನೆಗೆ ಹೆಸರುವಾಸಿಯಾಗಿದೆ. ಕಲ್ಯಾಣಿ ಚಾಳುಕ್ಯರ ಕಾಲಕ್ಕೆ ಸೇರಿದ ಸೋಮೇಶ್ವರ ದೇವಾಲಯವು ಪೂರ್ಣವಾಗಿ ವಿಕಸಿತಗೊಂಡ ಕಲ್ಯಾಣಿ ಚಾಳುಕ್ಯರ ಕಲೆಗೆ ಉದಾಹರಣೆಯಾಗಿದೆ. ಈ ದೇವಾಲಯದ ಸಮೀಪದಲ್ಲಿ ಜೀರ್ಣವಾದ ರಾಮೇಶ್ವರ ದೇವಾಲಯವಿದೆ. ಬೆಟಗೇರಿಯಲ್ಲಿರುವ ಕ್ರಿ.ಶ. 11ನೇಯ ಶತಮಾನಕ್ಕೆ ಸೇರಿದ್ದೆಂದು ಗುರುತಿಸಲಾಗಿರುವ ಕಲ್ಮೇಶ್ವರ ದೇವಾಲಯವು ವಾಸ್ತುಶಿಲ್ಪದ ದೃಷ್ಟಿಯಿಂದ ಉತ್ತಮವೆನಿಸಿಕೊಂಡಿದೆ. ವಿಜಯನಗರ ಶೈಲಿಯಲ್ಲಿ ನಿರ್ಮಿಸಿರುವ ವೀರನಾರಾಯಣ ದೇವಾಲಯ ಒಂದು ದೊಡ್ಡ ದೇವಾಲಯವಾಗಿದೆ. ಹೊಯ್ಸಳ ವಿಷ್ಣುವರ್ಧನನು ವೈಷ್ಣವಧರ್ಮವನ್ನು ಅಂಗೀಕರಿಸಿದ ನಂತರ ಕ್ರಿ.ಶ. 1117ರಲ್ಲಿ ನಿರ್ಮಿಸಲಾದ ಪಂಚ ವಿಷ್ಣು ದೇವಾಲಯಗಳಲ್ಲಿ ಬೇಲೂರು ಹಾಗೂ ತಲಕಾಡಿನಲ್ಲಿರುವಂತೆ ಇದೂ ಒಂದೆಂದು ಹೇಳಲಾಗಿದೆ. ಹಾಗೆಯೇ ಕನ್ನಡದ ಖ್ಯಾತ ಕವಿಯಾದ ಕುಮಾರವ್ಯಾಸನು ಈ ದೇವಾಲಯದಲ್ಲಿಯೇ 'ಕರ್ನಾಟಕ ಭಾರತ ಕಥಾಮಂಜರಿ' (ಕುಮಾರವ್ಯಾಸ ಭಾರತ) ಯನ್ನು ರಚಿಸಿರುವನೆಂದು ಹೇಳಲಾಗಿದೆ. ಇತ್ತೀಚೆಗೆ ಈ ದೇವಾಲಯ ಸಂಕೀರ್ಣದಲ್ಲಿ ಕುಮಾರವ್ಯಾಸ ಕಲ್ಯಾಣಮಂಟಪ, ಸರ್ವೇಶ್ವರಗುಡಿ ಮತ್ತು ರಾಘವೇಂದ್ರ ಬೃಂದಾವನವನ್ನು ಸೇರಿಸಿರುತ್ತಾರೆ. ಬೆಟಗೇರಿಯ ಮಲ್ಲಾರಯ್ಯನಕಟ್ಟೆಯಲ್ಲಿ ಸ್ಥಾಪಿಸಲಾಗಿರುವ ವಿವಿಧ ಗಾತ್ರಗಳ ಅನೇಕ ವೀರಗಲ್ಲುಗಳು ಗಮನಾರ್ಹವಾದ ಸ್ಮಾರಕಗಳಾಗಿವೆ. ಇತರ ಪ್ರಮುಖ ದೇವಾಲಯಗಳೆಂದರೆ (ಆಧುನಿಕ) ರಾಚೋಟೇಶ್ವರ, ಗಂಜಿ ಬಸವಣ್ಣ, ಶಂಕರಲಿಂಗ (1853), ತುಳಜಾಭವಾನಿ, ಅಂಬಾಭವಾನಿ, ವೀರಭದ್ರ (1853), ಬನಶಂಕರಿ (1891), ರಾಮಮಂದಿರ (1916), ಮುಂತಾದ ದೇವಾಲಯಗಳು. ಈ ನಗರದಲ್ಲಿ ಪಾರ್ಶ್ವನಾಥ ಮತ್ತು ಮಹಾವೀರನಿಗೆ ಅರ್ಪಿತವಾಗಿರುವ ಎರಡು ಜೈನದೇವಾಲಯಗಳಿವೆ. ಈ ನಗರದಲ್ಲಿರುವ ಉಲ್ಲೇಖಾರ್ಹವಾದ ಮುಖ್ಯ ಮಠಗಳೆಂದರೆ, ಕ್ರಿ.ಶ. 16ನೇಯ ಶತಮಾನದಲ್ಲಿ ಸ್ಥಾಪಿತವಾದ ತೋಂಟದಸ್ವಾಮಿ ಸಂಸ್ಥಾನದ ಮಠ, ನಂದೀಶ್ವರಮಠ, ವೀರೇಶ್ವರ ಪುಣ್ಯಾಶ್ರಮ, ಶಿವಾನಂದ, ಚಿದಾನಂದ ಮತ್ತು ನೀಲಕಂಠ ಮಠಗಳು. ತೋಂಟದಸ್ವಾಮಿ ಸಂಸ್ಥಾನದ ಮಠವು ಈ ಪ್ರದೇಶದ, ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯದ ಪ್ರಗತಿಗಾಗಿ ದಕ್ಷರೀತಿಯಲ್ಲಿ ಶ್ರಮಿಸುತ್ತಿರುವ ಹಾಗೂ ಜನಮನ್ನಣೆ ಗಳಿಸಿರುವ ಮಠವಾಗಿದೆ. ಈ ಸ್ಥಳದಲ್ಲಿ 13 ಮಸೀದಿಗಳು, ಐದು ದರ್ಗಾಗಳಿವೆ. ಅವುಗಳಲ್ಲಿ ಉಲ್ಲೇಖಾರ್ಹವಾದುವೆಂದರೆ, ಜಾಮಿಯಾ ಮತ್ತು ಶಾಹಿ ಇದಗಾ ಮಸೀದಿ. ಇಲ್ಲಿರುವ ನಾಲ್ಕು ಚರ್ಚುಗಳಲ್ಲಿ ಬೆಟಗೇರಿಯಲ್ಲಿ ಮೂರಿವೆ. ಶಿಕ್ಷಣ, ಕಲೆ, ಸಂಸ್ಕೃತಿ, ಸಂಗೀತ, ವಾಣಿಜ್ಯ ಮುಂತಾವುಗಳ ಪ್ರಸಾರಕ್ಕಾಗಿ ಅನೇಕ ಖಾಸಗಿ ಸಂಸ್ಥೆಗಳು ಈ ಪ್ರದೇಶದಲ್ಲಿ ಶ್ರಮಿಸುತ್ತಿವೆ. ಪ್ರಾರಂಭದಿಂದಲೂ ಬೆಟಗೇರಿ ಕೈಮಗ್ಗದ ಉದ್ದಿಮೆಗೆ ಹೆಸರುವಾಸಿಯಾಗಿದೆ. ಉತ್ತರ ಕರ್ನಾಟಕ ಭಾಗದಲ್ಲಿಯೇ ಗದಗು ವಿಶೇಷವಾಗಿ ಹತ್ತಿ ವ್ಯಾಪಾರ, ವಾಣಿಜ್ಯ, ಕೈಗಾರಿಕೆಗೆ ಹೆಸರುವಾಸಿಯಾಗಿದೆ. ಬೀಡಿ ಮತ್ತು ಅಗರಬತ್ತಿ ತಯಾರಿಕೆ ಈ ಪ್ರದೇಶದ ಇನ್ನಿತರ ಪ್ರಮುಖ ಕೈಗಾರಿಕೆಗಳಾಗಿವೆ.

ಗುಂಡ್ಲುಪೇಟೆ : (ಮೈಸೂರು ಜಿ; ತಾ. ಕೇ; ಜನ: 19,965) ಮೈಸೂರು-ಊಟಿ ರಸ್ತೆಯಲ್ಲಿ ಗುಂಡ್ಲು ನದಿಯ ಎಡದಂಡೆಯ ಮೇಲೆ ಗುಂಡ್ಲುಪೇಟೆಯಿದೆ. ಇದು ಮೈಸೂರಿನಿಂದ ದಕ್ಷಿಣಕ್ಕೆ 61 ಕಿಮೀ ಮತ್ತು ಬೆಂಗಳೂರಿನಿಂದ 201 ಕಿಮೀ ದೂರದಲ್ಲಿದೆ. ಇದಕ್ಕೆ ಮೊದಲು ವಿಜಯಪುರ ಎಂಬ ಹೆಸರಿದ್ದು, ಇದು ಪ್ರಸನ್ನ ವಿಜಯಪುರ ಎಂಬ ಅಗ್ರಹಾರವಾಗಿತ್ತು. ಇದು ತೆರಕಣಾಂಬಿ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು. ಈ ಊರಿನ ಬಳಿ ಹರಿಯುವ ಗುಂಡ್ಲು ನದಿಯಿಂದ ಗುಂಡಲಪೇಟೆ ಎಂಬ ಹೆಸರು ಬಂದಿದೆ. ಕ್ರಿ.ಶ. 1367ರಲ್ಲಿ ನಿರ್ಮಿತವಾದ ರಾಮೇಶ್ವರ ಮತ್ತು 1674ರಲ್ಲಿ ನಿರ್ಮಿತವಾದ ಪರವಾಸುದೇವ ಮಂದಿರಗಳು ಇಲ್ಲಿನ ದೊಡ್ಡ ದೇವಾಲಯಗಳು. ಇಂದು ಇವು ಜೀರ್ಣಾವಸ್ಥೆಯಲ್ಲಿದ್ದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದ್ದಾಗಿವೆ. ಈ ಊರಿನ ವಿಜಯನಾರಾಯಣ

ಸ್ವಾಮಿ ದೇವಾಲಯದಲ್ಲಿ 1543ರ ಒಂದು ಶಾಸನವೂ ರಾಮೇಶ್ವರ ದೇವಾಲಯದಲ್ಲಿ ನಾಲ್ಕು ಶಾಸನಗಳೂ ದೊರೆತಿವೆ. ಸುಗಂಧ ದ್ರವ್ಯ ಮತ್ತು ಬೀಡಿ ತಯಾರಿಕೆ ಇಲ್ಲಿನ ಜನರ ಮುಖ್ಯ ಕಸುಬು. ಈ ಊರಿನ ಸುತ್ತಲೂ ಹೊಗೆಸೊಪ್ಪು ಮತ್ತು ವೀಳಯದೆಲೆ ಗಳನ್ನು ಬಹಳವಾಗಿ ಬೆಳೆಯುತ್ತಾರೆ. ಗುಂಡ್ಲುಪೇಟೆಯ ನೈಋತ್ಯಕ್ಕೆ 16 ಕಿಮೀ ದೂರದಲ್ಲಿ ಗೋಪಾಲಸ್ವಾಮಿಬೆಟ್ಟವಿದೆ. ಸಮುದ್ರ ಮಟ್ಟದಿಂದ 4,770 ಅಡಿ ಎತ್ತರವಿರುವ ಈ ಬೆಟ್ಟ ರಮಣೀಯ ಪ್ರದೇಶಗಳನ್ನೊಳಗೊಂಡಿದೆ. ಹಿಂದಿನ ಐತಿಹ್ಯಗಳಲ್ಲಿ ಇದನ್ನು ದಕ್ಷಿಣದ ಗೋವರ್ಧನ ಗಿರಿ ಎಂದು ಕರೆದಿದೆ. ಬೆಟ್ಟದ ಶಿಖರವು ಹಿಮ ಮತ್ತು ಮೋಡಗಳಿಂದ ಆವೃತವಾಗಿರುವಂತೆ ಕಾಣುವುದರಿಂದ ಇದನ್ನು ಹಿಮವತ್ ಗೋಪಾಲಸ್ವಾಮಿ ಬೆಟ್ಟ ಎಂದು ಕರೆಯುತ್ತಾರೆ. ಬೆಟ್ಟದ ಮೇಲಿನ ಹಳೆಯ ಕೋಟೆಯನ್ನು ಹದಿಮೂರನೇಯ ಶತಮಾನದಲ್ಲಿ ತೆರಕಣಾಂಬಿಯ ಪಾಳೆಯಗಾರರು ಕಟ್ಟಿಸಿದರೆಂದು ಹೇಳುತ್ತಾರೆ. ಕೋಟೆಯಲ್ಲಿ ಗೋಪಾಲಸ್ವಾಮಿ ದೇವಾಲಯವಿದ್ದು ಪ್ರತೀವರ್ಷವೂ ರಥೋತ್ಸವ ಜರುಗುತ್ತದೆ. ಮೈಸೂರಿನ ಒಡೆಯರು ದೇವಾಲಯಕ್ಕೆ ಅನೇಕ ದಾನದತ್ತಿಗಳನ್ನು ನೀಡಿದ್ದಾರೆ. ರಾಜವಂಶದವರಿಗೆ ಸೇರಿದ್ದೆಂದು ಹೇಳಲಾದ ಒಂದು ಅತಿಥಿಗೃಹ ಹಾಗೂ ಒಂದು ಅರಣ್ಯ ವಿಶ್ರಾಂತಿಗೃಹ ಇಲ್ಲಿವೆ. ರಮಣೀಯವಾದ ನಿಸರ್ಗ ದೃಶ್ಯಗಳನ್ನೊಳಗೊಂಡ ಇಲ್ಲಿನ ಪರ್ವತಪಂಕ್ತಿ ಒಳ್ಳೆಯ ಪ್ರವಾಸ ಸ್ಥಳವಾಗಿದೆ. ಗುಂಡ್ಲುಪೇಟೆಯಿಂದ 12 ಕಿಮೀ ದೂರದಲ್ಲಿರುವ ತೆರಕಣಾಂಬಿಯು ಹೋಬಳಿ ಕೇಂದ್ರವಾಗಿದೆ. ತ್ರಿಕದಂಬಪುರ ಎಂದು ಹೆಸರು ಪಡೆದಿದ್ದ ಈ ಊರು ಇಲ್ಲಿನ ಪಾಳೆಯಗಾರರ (ಮುಖ್ಯಸ್ಥಳ) ಕೇಂದ್ರವಾಗಿದ್ದಿತು. ಇಲ್ಲಿ ಒಂದು ಹಳೆಯ ಕೋಟೆಯೂ ಹತ್ತು-ಹನ್ನೆರಡು ದೇವಾಲಯಗಳೂ ಇದ್ದು, ಅವುಗಳಲ್ಲಿ ಮೂಲ ಸ್ಥಾನೇಶ್ವರ, ಹಂಡೆ ಗೋಪಾಲಸ್ವಾಮಿ, ಲಕ್ಷ್ಮೀ ವರದರಾಜಸ್ವಾಮಿ, ಆಂಜನೇಯ, ಶ್ರೀನಿವಾಸ, ತ್ರಿಯಂಬಕ ಮತ್ತು ಸುಗ್ರೀವರ ದೇವಾಲಯಗಳು ಮುಖ್ಯವಾದವು. ಸುಗ್ರೀವನ ವಿಗ್ರಹ ಏಳು ಅಡಿ ಎತ್ತರದ ಸುಂದರ ಮೂರ್ತಿ. ಇದು ಜೈನ ಕವಿ ಬೊಮ್ಮರಸನ ಮತ್ತು ರಣಧೀರ ಕಂಠೀರವ ನರಸರಾಜ ಒಡೆಯರ ಹುಟ್ಟಿದ ಊರೆಂದು ಹೇಳುತ್ತಾರೆ. ಸಮೀಪದ ಹುಲಿಗನ ಮರಡಿಯಲ್ಲಿ ವೆಂಕಟರಮಣಸ್ವಾಮಿ ದೇವಾಲಯವಿದೆ.

ಗುಡಿಬಂಡೆ : (ಕೋಲಾರ ಜಿ; ತಾ. ಕೇ; ಜನ: 6,421) ಗುಡಿಬಂಡೆಯು ನಂದಿ ದುರ್ಗದ ಬೆಟ್ಟ ಸಾಲಿನಲ್ಲಿ ಕೋಲಾರದ ವಾಯುವ್ಯಕ್ಕೆ 95 ಕಿಮೀ ಮತ್ತು ಬೆಂಗಳೂರಿನಿಂದ ಚಿಕ್ಕಬಳ್ಳಾಪುರದ ಮಾರ್ಗವಾಗಿ 93 ಕಿಮೀ ದೂರದಲ್ಲಿದೆ. ಇದು ಗುಡಿಯನ್ನು ಹೊಂದಿರುವ ಬಂಡೆಯ ದಕ್ಷಿಣಕ್ಕಿರುವುದರಿಂದ ಗುಡಿಬಂಡೆ ಎಂಬ ಹೆಸರು ಪಡೆದಿದೆ. ಇಲ್ಲಿನ ಬೃಹತ್ ಬಂಡೆಯ ತುದಿಯಲ್ಲಿ ಏಕಶಿಲೆಯಿಂದ ನಿರ್ಮಿತವಾದ ಅಹೋಬಲ ನರಸಿಂಹ ದೇವಾಲಯವಿದೆ. ಇಲ್ಲಿನ ಮೂರ್ತಿಯನ್ನು ಉದ್ಭವ ಮೂರ್ತಿಯೆಂದು ಹೇಳುತ್ತಾರೆ. ದೊಡ್ಡಬಳ್ಳಾಪುರವನ್ನು ಆಕ್ರಮಿಸಿಕೊಂಡಾಗ ಖಾಸಿಂ ಖಾನ್ ಎಂಬ ಮೊಗಲ್ ಫೌಜ್‌ದಾರನು ಈ ಊರನ್ನು ಹಾವಳಿ ಬೈರೇಗೌಡನಿಗೆ ನೀಡಿದನು. ಈ ಹಾವಳಿ ಬೈರೇಗೌಡನೇ ಈ ಗುಂಡಿಬಂಡೆಯ ಕೋಟೆಯನ್ನು ಕಟ್ಟಿಸಿದ. ಬೈರೇಗೌಡನ ಮರಣಾನಂತರ ಇದು ರಾಮೇಗೌಡನ ವಶವಾಯಿತು. ಅನಂತರ ಇದು ಚಿಕ್ಕಬಳ್ಳಾಪುರಕ್ಕೆ ಸೇರಿಹೋಯಿತು. ಗುಡಿಬಂಡೆಯು ಭತ್ತ ಮತ್ತು ಕಬ್ಬಿನ ಕೃಷಿಗೆ ಪ್ರಖ್ಯಾತವಾಗಿದೆ. ಗುಡಿಬಂಡೆಯ ಬಂಡೆಯ ಮೇಲೆ ಅಹೋಬಲ ನರಸಿಂಹಸ್ವಾಮಿ ದೇವಾಲಯವಲ್ಲದೆ ಎರಡು ಬಸದಿಗಳು ಇವೆ.

ಗುಬ್ಬಿ : (ತುಮಕೂರು ಜಿ; ತಾ. ಕೇ; ಜನ: 11,666) ಗುಬ್ಬಿಯು ಬೆಂಗಳೂರಿನಿಂದ 90 ಕಿಮೀ ಮತ್ತು ತುಮಕೂರಿನಿಂದ ಪಶ್ಚಿಮಕ್ಕೆ 20 ಕಿಮೀ ದೂರದಲ್ಲಿದ್ದು ಪುರಸಭೆಯನ್ನು ಹೊಂದಿದೆ. 400 ವರ್ಷಗಳ ಹಿಂದೆ ಹೊಸಹಳ್ಳಿಯ ಗೌಡನು ಇದನ್ನು ಸ್ಥಾಪಿಸಿದನೆಂದು ಹೇಳಿಕೆಯಿದೆ. ಮೊದಲು ಇದಕ್ಕೆ ಅಮರುಗೊಂಡಪುರ ಎಂಬ ಹೆಸರಿದ್ದಿತು. ಈ ಊರಿನ ಅತ್ಯಂತ ಪ್ರಾಚೀನ ದೇವಾಲಯವೆಂದರೆ ಗದ್ದೇರಾಮೇಶ್ವರ. ಹಿಂದೆ ಊರಿನ ಹೊರಗಡೆ ಒಂದು ಗದ್ದೆಯಲ್ಲಿ ಇದ್ದುದರಿಂದ ಇದಕ್ಕೆ ಈ ಹೆಸರು ಬಂದಿತು. ಈ ದೇವಾಲಯದ ನವರಂಗದಲ್ಲಿ ಮೂರು ಗೂಡುಗಳಿದ್ದು ದಕ್ಷಿಣಾಮೂರ್ತಿ, ಪಾರ್ವತಿ, ವೀರಭದ್ರ, ಗಣಪತಿ ಮತ್ತು ಸುಬ್ರಮಣ್ಯ ಇವರ ಮೂರ್ತಿಗಳನ್ನು ಇಲ್ಲಿ ಸ್ಥಾಪಿಸಲಾಗಿದೆ. 15 ಮತ್ತು 16ನೇಯ ಶತಮಾನಗಳಲ್ಲಿ ಇದು ಒಂದು ಪ್ರಸಿದ್ಧ ಸಾಹಿತ್ಯಿಕ ಚಟುವಟಿಕೆಗಳ ಕೇಂದ್ರವಾಗಿದ್ದಿತು. ಕನ್ನಡದ ಪ್ರಸಿದ್ಧ ಕವಿ ಮಲ್ಲಣಾರ್ಯನು ಗುಬ್ಬಿಯವನು. ಇಲ್ಲಿರುವ ಚೆನ್ನಬಸವೇಶ್ವರ ದೇವಾಲಯವು ಗುಬ್ಬಿಯಪ್ಪ ಅಥವಾ ಚೆನ್ನಬಸವಯ್ಯನ ಗದ್ದುಗೆಯನ್ನು ಒಳಗೊಂಡ ಒಂದು ದೊಡ್ಡ ದೇವಾಲಯ. ಈ ದೇವಾಲಯಕ್ಕೆ ಇತ್ತೀಚೆಗೆ ಅಲಂಕೃತವಾದ ಗೋಪುರವನ್ನು ನಿರ್ಮಿಸಲಾಗಿದೆ. ಗುಬ್ಬಿಯಲ್ಲಿರುವ ಜನಾರ್ದನ ದೇವಾಲಯ, ಬ್ಯಾಟರಾಯಸ್ವಾಮಿ, ವೈಲಪ್ಪ ಅಥವಾ ಚೀಲಪ್ಪ ಮತ್ತು ಆಂಜನೇಯಸ್ವಾಮಿ ದೇವಾಲಯಗಳು ಇಲ್ಲಿನ ಪ್ರೇಕ್ಷಣೀಯ ತಾಣಗಳು. ಇಲ್ಲಿರುವ ಚಿದಂಬರ ಆಶ್ರಮವೂ ಒಂದು ಹೆಸರಾಂತ ಧಾರ್ಮಿಕ ಕೇಂದ್ರವಾಗಿದ್ದು ಒಂದು ದತ್ತಾತ್ರೇಯ ಗುಡಿಯನ್ನು ಹೊಂದಿದೆ. ಇಲ್ಲಿ ಆಧುನಿಕ ಪದ್ಧತಿಯನ್ನು ಅನುಸರಿಸಿ ಒಂದು ಗುರುಕುಲವನ್ನು ನಡೆಸುತ್ತಿದ್ದಾರೆ. ಈ ತಾಲೂಕಿನ ಇತರ ಪ್ರಮುಖ ಸ್ಥಳಗಳು ಈ ರೀತಿಯಿವೆ. ಕಡಬ (ಜನ: 2,640) ಗುಬ್ಬಿಗೆ 11 ಕಿಮೀ ದೂರದಲ್ಲಿ ನೈಋತ್ಯಕ್ಕೆ ಶಿಂಷಾನದಿಯ ಬಲದಡದಲ್ಲಿರುವ ಕಡಬ ಅದೇ ಹೆಸರಿನ ಹೋಬಳಿ ಕೇಂದ್ರವಾಗಿದೆ. 1896ರವರೆಗೆ ಇದು ಗುಬ್ಬಿ ತಾಲೂಕಿನ ಕೇಂದ್ರಸ್ಥಳವಾಗಿತ್ತು. ಇಲ್ಲಿ ಕದಂಬ ಋಷಿಯು ಶಿಂಷಾ ನದಿಯ ತೀರದಲ್ಲಿ ತಪಸ್ಸು ಮಾಡುತ್ತಿದ್ದು

ಶ್ರೀರಾಮನು ಲಂಕೆಯಿಂದ ಹಿಂದಿರುಗುವಾಗ ಅವನನ್ನು ಸತ್ಕರಿಸಿದನೆಂದು ಹೇಳಲಾಗಿದೆ. ಮತ್ತೊಂದು ದಂತ ಕಥೆಯ ಪ್ರಕಾರ ಲಂಕೆಯಿಂದ ಹಿಂದಿರುಗುತ್ತಿದ್ದ ಶ್ರೀರಾಮನು ಇಲ್ಲಿ ಬೀಡು ಬಿಟ್ಟಿದ್ದು ಸೀತೆಯ ಪ್ರಾರ್ಥನೆಯ ಮೇರೆಗೆ ಒಂದು ಕೆರೆಯನ್ನು ಕಟ್ಟಿಸಿದನೆಂದು ಹೇಳಲಾಗುತ್ತದೆ. ಹೆಬ್ಬಾರ್ ಶ್ರೀ ವೈಷ್ಣವರ ಪಂಚಗ್ರಾಮಗಳಲ್ಲಿ ಇದೂ ಒಂದಾಗಿದ್ದು ಹೊಯ್ಸಳರ ಕಾಲದಲ್ಲಿ ಒಂದು ಪ್ರಮುಖ ಅಗ್ರಹಾರವಾಗಿತ್ತು. ಇಲ್ಲಿನ ರಾಮದೇವಾಲಯವು ಒಂದು ಗೋಪುರ ಮತ್ತು ಗರುಡ ಕಂಬವನ್ನು ಹೊಂದಿರುವ ದ್ರಾವಿಡ ಶೈಲಿಯ ದೇವ ಮಂದಿರವಾಗಿದೆ. ಈ ಊರಿನ ಕೈಲಾಸೇಶ್ವರ ದೇವಾಲಯವು ಇಲ್ಲಿನ ಅತ್ಯಂತ ಪ್ರಾಚೀನ ದೇವಾಲಯವೆಂದು ತೋರುತ್ತದೆ. ಕಡಬದ ಕೆರೆಯ ಪೂರ್ವದ ತೂಬಿನ ಬಳಿ ಒಂದು ಹನುಮಂತನ ಗುಡಿಯಿದೆ. ಹಾಗಲವಾಡಿ (ಜನ: 3,115) ಗುಬ್ಬಿಯಿಂದ 40 ಕಿಮೀ ದೂರದಲ್ಲಿದ್ದು ಹಿಂದೆ ಈ ಊರು ಹಾಗಲವಾಡಿ ಪಾಳೆಗಾರರ ಮುಖ್ಯ ಕೇಂದ್ರವಾಗಿದ್ದಿತು. ಈ ಊರಿನ ಸುತ್ತಮುತ್ತಲೂ ಅಡಕೆ ಬೆಳೆಯನ್ನು ವಿಶೇಷವಾಗಿ ಬೆಳೆಯುತ್ತಾರೆ. ಕಂಬಳಿಗಳನ್ನು ಇಲ್ಲಿ ನೇಯುತ್ತಾರೆ. ಇಲ್ಲಿನ ಪಾಳೆಯಗಾರರು ಕ್ರಿ. ಶ. 1478ರಿಂದ 1776ರವರೆಗೆ ಸುಮಾರು 300 ವರ್ಷಗಳ ಕಾಲ ಆಡಳಿತ ನಡೆಸಿದರು. ಎರ್ರಿ ಮಾದನಾಯಕ ಎಂಬುವನು ಈ ಸಂತತಿಯ ಸ್ಥಾಪಕ. ಅವನ ನಂತರ 16ನೇಯ ಶತಮಾನದಲ್ಲಿ ಆಳಿದ ಸಾಲಿನಾಯಕ ಈ ಪಾಳೆಪಟ್ಟನ್ನು ವಿಸ್ತರಿಸಿದನು. ಇವನು ತನ್ನ ತಮ್ಮನ ಹೆಸರಿನಲ್ಲಿ ಚಿಕ್ಕನಾಯಕನ ಹಳ್ಳಿಯನ್ನು ಸ್ಥಾಪಿಸಿದನು. ನಿಟ್ಟೂರು (ಜನ: 2,307) ಗುಬ್ಬಿಯಿಂದ 12 ಕಿಮೀ ದೂರದಲ್ಲಿದೆ. ಕ್ರಿ. ಶ. 1276ರ ಒಂದು ಶಾಸನದಲ್ಲಿ ಈ ಊರನ್ನು ದಕ್ಷಿಣದ ಅಯ್ಯಾವಳೆ (ಐಹೊಳೆ) ಎಂದೂ ಗಂಗವಾಡಿ 96,000ದ ನಾಭಿಯೆಂದೂ ಹೆರುತೆ ನಾಡಿನ ಶಿರೋಭೂಷಣವೆಂದೂ ಬಣ್ಣಿಸಲಾಗಿದೆ. ಇಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾದ ಶಾಂತೀಶ್ವರ ಬಸದಿ ಇದ್ದು ಈ ಬಸ್ತಿಯಲ್ಲಿ ಒಂದು ಗರ್ಭಗೃಹ, ಶುಕನಾಶಿ, ನವರಂಗ ಮತ್ತು ಮುಖ ಮಂಟಪಗಳಿವೆ. ಇಲ್ಲಿ ಪದ್ಮಾವತಿಯ ಆರಾಧನೆ ಕೂಡ ನಡೆಯುತ್ತದೆ.

ಗೋಕಾಕ : (ಬೆಳಗಾವಿ ಜಿ; ತಾ. ಕೇ; ಜನ: 42,492) ಬೆಂಗಳೂರಿನ ವಾಯುವ್ಯಕ್ಕೆ 526 ಕಿಮೀ ದೂರದಲ್ಲಿ ಹಾಗೂ ಬೆಳಗಾವಿಯ ಈಶಾನ್ಯಕ್ಕೆ 68 ಕಿಮೀ ದೂರದಲ್ಲಿ ಈ ನಗರವಿದೆ. ಈ ನಗರವು ಘಟಪ್ರಭಾ ನದಿಯ ದಕ್ಷಿಣ ದಂಡೆಯ ತಗ್ಗು ಪ್ರದೇಶದಲ್ಲಿ ಬೆಟ್ಟಗಳಿಂದ ಆವೃತವಾಗಿದ್ದು ನದಿಯು ದಕ್ಷಿಣಕ್ಕೆ ಹರಿಯದಂತೆ ತಡೆದಿರುವ ಸಾಲುಬೆಟ್ಟಗಳ ನಡುವೆ ನೆಲೆಸಿದೆ. ಘಟಪ್ರಭಾ ಮತ್ತು ಮಾರ್ಕಂಡೇಯ ನದಿಗಳ ಸಂಗಮವು ಈ ಪಟ್ಟಣಕ್ಕೆ ಬಹು ಸಮೀಪದಲ್ಲಿ ನಡೆಯುತ್ತದೆ. 1853ರಲ್ಲಿಯೇ ಈ ಸ್ಥಳವು ಪೌರಸಭೆಯನ್ನು ಹೊಂದಿತ್ತು. 1047ರ ಹಿಂದಿನ ಶಾಸನವೊಂದರಲ್ಲಿ ಈ ಸ್ಥಳವು ಗೋಕಾಗೆ ಅಥವಾ ಗೋಕಾವೆ ಎಂದು ಉಲ್ಲೇಖವಾಗಿದೆ. 1042-1068ರಲ್ಲಿ ಆಳ್ವಿಕೆ ನಡೆಸುತ್ತಿದ್ದ ಕಲ್ಯಾಣಿ ಚಾಳುಕ್ಯರ ಒಂದನೇಯ ಸೋಮೇಶ್ವರನ ಸೋದರತ್ತೆಯಾದ ರಾಣಿ ಅಕ್ಕಾದೇವಿಯು ಗೋಕಾಕದ ಕೋಟೆಯನ್ನು ತನ್ನ ವಶಕ್ಕೆ ಪಡೆದಳು. ಅನಂತರದಲ್ಲಿ ಇವರ ಸಾಮಂತನೊಬ್ಬನು ಅದನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನು. ಮುಂದೆ ಇದು ಸೇಉಣರ ಅಧೀನಕ್ಕೊಳಪಟ್ಟಿತು. 1685ರಲ್ಲಿ ಜಿಲ್ಲಾ ಕೇಂದ್ರವಾಗಿ ಗೋಕಾಕವು ಮೊಗಲರ ಆಳ್ವಿಕೆಗೆ ಒಳಪಟ್ಟಿತು. 1719-1754ರ ನಡುವಿನ ಅವಧಿಯಲ್ಲಿ ಸವಣೂರಿನ ನವಾಬನು ಈ ಪಟ್ಟಣದ ಒಡೆತನವನ್ನು ಹೊಂದಿ ಕೋಟೆಯೊಳಗೊಂದು ಮಸೀದಿಯನ್ನು ಹಾಗೂ ಗಂಜೀಖಾನೆಯನ್ನು ಕಟ್ಟಿಸಿದನು. ಆ ಮೇಲೆ ಈ ನಗರವು ಪೇಶ್ವೆಗಳ ಸ್ವಾಧೀನವಾಯಿತು. 1778ರಲ್ಲಿ ಕೆಲ ಕಾಲ ಈ ಪಟ್ಟಣವನ್ನು ಕಿತ್ತೂರಿನ ವೀರಪ್ಪ ದೇಸಾಯಿ ವಶಪಡಿಸಿಕೊಂಡಿದ್ದನು. ಮುಂದಿನ ವರ್ಷದಲ್ಲಿಯೇ ಪೇಶ್ವೆಯ ಪರವಾಗಿ ಪರಶುರಾಮಬಾವು ಪಟವರ್ಧನ್ ಈ ಪಟ್ಟಣವನ್ನು ಪುನಃ ವಶಪಡಿಸಿಕೊಂಡನು. 1783ರಲ್ಲಿ ಇವನಿಗೆ ಈ ಪಟ್ಟಣವನ್ನು ಜಾಗೀರಾಗಿ ಬಿಟ್ಟುಕೊಡಲಾಯಿತು. 1790ರಲ್ಲಿ ಈ ಪಟ್ಟಣಕ್ಕೆ ಭೇಟಿ ನೀಡಿದ ಕ್ಯಾಪ್ಟನ್ ಮೂರ್ ಇದೊಂದು ಪ್ರಮುಖ ವ್ಯಾಪಾರ ಕೇಂದ್ರವೆಂದು ಬರೆದಿದ್ದಾನೆ. 1836ರಲ್ಲಿ ತಾಸಗಾವ್‌ನ ಅರಸನಾಗಿದ್ದ ಗೋವಿಂದ ಪಟವರ್ಧನನು ಉತ್ತರಾಧಿಕಾರಿಯಿಲ್ಲದೆ ಮರಣ ಹೊಂದಿದಾಗ, ಈ ಪ್ರದೇಶವನ್ನು ಬ್ರಿಟಿಷರು ವಶಪಡಿಸಿಕೊಂಡು ಬೆಳಗಾವಿ ಸರ್ಕಾರದೊಡನೆ ಈ ಪ್ರದೇಶವನ್ನು ವಿಲೀನಗೊಳಿಸಿ ಇದನ್ನು ಪರಗಣದ (ಉಪ ವಿಭಾಗದ) ಮುಖ್ಯ ಕೇಂದ್ರವನ್ನಾಗಿ ಮಾಡಲಾಯಿತು. ಈ ಸ್ಥಳವು ಕಾಗದ ಹಾಗೂ ಮರದ ಕೈಗಾರಿಕೆಗಳಿಗಷ್ಟೇ ಅಲ್ಲದೇ ಹತ್ತಿ, ರೇಷ್ಮೆನೇಯ್ಗೆ, ನೂಲಿಗೆ ಬಣ್ಣ ಹಾಕುವುದು ಹಾಗೂ ಹಿತ್ತಾಳೆ ಹಾಗೂ ತಾಮ್ರದ ಕಲಾತ್ಮಕ ವಸ್ತುಗಳಿಗೆ ಹೆಸರುವಾಸಿಯಾಗಿದೆ. ಇಲ್ಲಿನ ಪ್ರೇಕ್ಷಣೀಯ ಸ್ಮಾರಕಗಳಲ್ಲಿ ಶಂಕರಲಿಂಗ ದೇವಾಲಯ, ಮಹಾಲಿಂಗೇಶ್ವರ, ಲಕ್ಷ್ಮೀದೇವಾಲಯ ಮುಂತಾದವುಗಳ ಜೊತೆಗೆ ಅನೇಕ ಆಧುನಿಕ ದೇವಾಲಯಗಳು ಉಲ್ಲೇಖಾರ್ಹವಾದುವು. ಈ ಸ್ಥಳದಲ್ಲಿ ಎರಡು ಐತಿಹಾಸಿಕ ದರ್ಗಾಗಳಿವೆ. ಒಂದು ಸಂತ ಜಂಗ್ಲಿ ಸಾಹೇಬ್ ದರ್ಗಾ ಮತ್ತೊಂದು ಮಸ್ತಾನ್ ಸಾಹೇಬ್ ದರ್ಗಾ. ಪಂಚಮಿಗುಡ್ಡ ಎಂದು ಕರೆಯಲಾಗಿರುವ ಗುಡ್ಡದಲ್ಲಿ ಶಿಥಿಲವಾಗಿರುವ ಕೋಟೆಯಲ್ಲಿ ಮೂರು ಪಾಳು ದೇವಾಲಯಗಳಿದ್ದು ಅವುಗಳಲ್ಲಿ ಒಂದು ಮಲ್ಲಿಕಾರ್ಜುನ ದೇವರ ಗುಡಿಯಾಗಿದೆ. ಈ ಕೋಟೆಯನ್ನು ಆದಿಲ್ ಷಾಹಿಗಳ ಆಳ್ವಿಕೆಯ ಕಾಲದಲ್ಲಿ ನಿರ್ಮಿಸಲಾಗಿದೆ. ಗೋಕಾಕವು ಸ್ಥಳೀಯ ಚಿತ್ರಗಾರರ ಕಲಾತ್ಮಕ ಬೊಂಬೆಗಳಿಗೆ ಹಾಗೂ ಬಣ್ಣ ಬಣ್ಣದ ಮರದ ಕೆತ್ತನೆಗಳಿಗೆ ಹೆಸರುವಾಸಿಯಾಗಿದೆ. ಈ ಬೊಂಬೆಗಳನ್ನು ಹೊರ ದೇಶಗಳಿಗೆ ರಫ್ತು ಮಾಡಲಾಗುತ್ತದೆ. ಈ ಗುಡಿ ಕೈಗಾರಿಕೆಗೆ 150 ವರ್ಷಗಳ

ಐತಿಹಾಸಿಕ ಪರಂಪರೆ ಇದೆ. ಈ ಕಲೆಯನ್ನು ಪ್ರೋತ್ಸಾಹಿಸುವ ಸಲುವಾಗಿ ಕಲಾಕಾರರ ತರಬೇತಿ ಕೇಂದ್ರವನ್ನು ಸ್ಥಾಪಿಸಲಾಗಿದೆ. ಗೋಕಾಕದ ಸಮೀಪದಲ್ಲೇ, ಬಹು ಸುಂದರವಾದ ಪ್ರಶಾಂತವಾದ ಕಣಿವೆಯೊಂದಿದ್ದು ಈ ರಮ್ಯ ತಾಣವನ್ನು ಯೋಗಿಕೊಳ್ಳ ಎಂದು ಕರೆಯುತ್ತಾರೆ. ಈ ಕೊಳ್ಳವು ನಿಸರ್ಗ ರಮಣೀಯ ಪರಿಸರದಲ್ಲಿದ್ದು ಸಣ್ಣ ಜಲಪಾತದಿಂದ ಮತ್ತಷ್ಟು ಸುಂದರವಾದ ತಾಣವೆನಿಸಿದೆ. ಇಲ್ಲಿ ಮಲ್ಲಿಕಾರ್ಜುನ ಮತ್ತು ನಿರ್ವಾಣಪ್ಪ ದೇವಾಲಯಗಳಿವೆ. ಗೋಕಾಕಕ್ಕೆ 32 ಕಿಮೀ ದೂರದಲ್ಲಿರುವ ಮಾರ್ಕಂಡೇಯ ನದಿಯ ದಂಡೆಯ ಮೇಲಿರುವ ಅಂಕಲಗಿ (ಜನ: 5,721) ಇಲ್ಲಿನ ಮತ್ತೊಂದು ಪ್ರಮುಖ ಸ್ಥಳ. ಇದು ಇಲ್ಲಿನ ಅಡವಿ ಸಿದ್ದೇಶ್ವರ ಮಠದಿಂದಾಗಿ ಖ್ಯಾತಿಗಳಿಸಿದೆ. ಇದು ಕುಂದರನಾಡು ಪ್ರದೇಶದಲ್ಲಿ ಅತ್ಯಂತ ಪೂಜ್ಯವೆನಿಸಿರುವ ಮಠವಾಗಿದ್ದು ಕೆಲವು ವಿಶೇಷ ಲಕ್ಷಣಗಳನ್ನು ಪಡೆದಿದೆ. 1820ರಲ್ಲಿ ಈಗ ಇರುವ ಈ ಮಠವನ್ನು ನಿರ್ಮಿಸಲಾಯಿತು. ಈ ಮಠದವರು ನಡೆಸುವ ವಾರ್ಷಿಕ ಜಾತ್ರೆಯ ಕಾಲದಲ್ಲಿ ಭಾರಿ ದನಗಳ ಜಾತ್ರೆ ಕೂಡುತ್ತದೆ. ಇಲ್ಲಿ ಬಹು ಪುರಾತನವಾದ ಇತ್ತೀಚೆಗೆ ಜೀರ್ಣೋದ್ಧಾರವಾಗಿರುವ ಲಕ್ಷ್ಮೀದೇವಾಲಯವಿದೆ. ಇಲ್ಲಿ ದಸ್ತಗೀರ್ ಮತ್ತು ಗಫೂರ್ ಸಾಹೇಬರ ಎರಡು ದರ್ಗಾಗಳಿವೆ. 1837ರಲ್ಲಿ ಬೆಳಗಾವಿಯನ್ನು ಕಲೆಕ್ಟೋರೇಟಿನ ಪ್ರಮುಖ ಕೇಂದ್ರವನ್ನಾಗಿ ಆರಿಸುವುದಕ್ಕಿಂತ ಮೊದಲು ಈ ಸ್ಥಳವೂ ಕೇಂದ್ರಕ್ಕಾಗಿ ಸೂಚಿತವಾಗಿದ್ದು ಅಂಥ ನಾಲ್ಕು ಸ್ಥಳಗಳಲ್ಲಿ ಇದೂ ಸಹ ಒಂದಾಗಿತ್ತು. 1974ರಿಂದೀಚೆಗೆ ಒಂದು ನಗರ ಪಂಚಾಯಿತಿ ಇಲ್ಲಿ ಕಾರ್ಯಾಚರಣೆಯಲ್ಲಿದೆ. ಬೆಂಗಳೂರಿನ ವಾಯುವ್ಯಕ್ಕೆ 536 ಕಿಮೀ ದೂರದಲ್ಲಿ ಹಾಗೂ ಬೆಳಗಾವಿಯ ಆಗ್ನೇಯಕ್ಕೆ 80 ಕಿಮೀ ದೂರದಲ್ಲಿ ಗೋಕಾಕ ಜಲಪಾತ (ಗೋಕಾಕ್ ಫಾಲ್ಸ್) ಇದೆ. ಈ ಸ್ಥಳವು (ಜನ: 11,587) ಐತಿಹಾಸಿಕ, ಪ್ರವಾಸೋದ್ಯಮ, ಪ್ರಾಕ್ತನ ಶಾಸ್ತ್ರದ ಅಧ್ಯಯನ ದೃಷ್ಟಿಯಿಂದ ಪ್ರಾಮುಖ್ಯ ಪಡೆದಿದೆ. ಈ ಜಲಪಾತವು 170 ಅಡಿ ಮೇಲಿನಿಂದ ಮರಳುಗಲ್ಲುಗಳ ಪದರನಿಂದ ಧುಮುಕುವ ಘಟಪ್ರಭಾ ನದಿಯ ನೀರಿನಿಂದ ಉಂಟಾಗಿದೆ. ಕುದುರೆ ಲಾಳಾಕಾರದಲ್ಲಿರುವ ಈ ಜಲಪಾತವು ಗೋಕಾಕ ಕಣಿವೆಗೆ ಮೆರಗಿಟ್ಟಂತಹ ನೋಟವನ್ನೊದಗಿಸಿದೆ. "ವಿಸ್ತಾರ, ನೀರಿನ ಬಣ್ಣ ಇವುಗಳನ್ನು ಬಿಟ್ಟರೆ ನೀರು ಬೀಳುವ ರೀತಿ, ಎತ್ತರ, ಆಕಾರ ಮತ್ತು ರಭಸ ಮುಂತಾದ ಲಕ್ಷಣಗಳಿಂದಾಗಿ ಈ ಜಲಪಾತವು, ನಯಾಗರಾ ಜಲಪಾತವನ್ನು ಹೋಲುತ್ತದೆ". ಈ ಜಲಪಾತವು ಜುಲೈ ಹಾಗೂ ಸೆಪ್ಟೆಂಬರ್ ತಿಂಗಳ ನಡುವೆ ಬಹು ರಮಣೀಯವಾಗಿ ಕಂಗೊಳಿಸುತ್ತದೆ. ಅದನ್ನು ಸಂದರ್ಶಿಸಲು ಉತ್ತಮ ಅವಧಿ ಎಂದರೆ ಆಗಸ್ಟ್ ತಿಂಗಳು. ಈ ನದಿಯ ಎರಡು ದಂಡೆಗಳಲ್ಲೂ ಹಾಳಾಗಿರುವ ದೇವಾಲಯಗಳ ಭಗ್ನಾವಶೇಷಗಳಿವೆ. ಪುರಾತನ ಕಾಲದ ಈ ದೇವಾಲಯಗಳೆಲ್ಲವೂ ನದಿಯ ಪ್ರವಾಹದಲ್ಲಿ ಕೊಚ್ಚಿಹೋಗಿರಬಹುದು. ಇಲ್ಲಿನ ಪ್ರಾಚೀನ ಸ್ಮಾರಕಗಳಲ್ಲಿ ಅತ್ಯಂತ ಪ್ರಮುಖ ಹಾಗೂ ಉಲ್ಲೇಖಾರ್ಹವಾದ ಸ್ಮಾರಕವೆಂದರೆ, ನದಿಯ ಬಲ ದಂಡೆಯ ಮೇಲೆ ಉತ್ತರಾಭಿಮುಖವಾಗಿ ಬಹು ಸರಳವಾಗಿ ಕಲ್ಲಿನಿಂದ ನಿರ್ಮಿಸಲಾಗಿರುವ ಮಹಾಲಿಂಗೇಶ್ವರ ದೇವಾಲಯ. ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಕಾಪಾಡಲಾಗಿದೆ. ರಟ್ಟರ ದೊರೆಯಾಗಿದ್ದ ಮೂರನೇಯ ಕಾರ್ತವೀರ್ಯ (1143–1164)ನ ಬಗ್ಗೆ ವಿವರಣೆ ನೀಡುವ ಶಾಸನವೊಂದು ಇಲ್ಲಿ ಲಭ್ಯವಾಗಿದೆ. ಈ ಸ್ಥಳದ ಮತ್ತೊಂದು ಪ್ರೇಕ್ಷಣೀಯ ನೋಟವೆಂದರೆ 1895ರಲ್ಲಿ ಗೋಕಾಕ ಗಿರಣಿಯವರು ಈ ನದಿಗೆ ನಿರ್ಮಿಸಿರುವ ತೂಗು ಸೇತುವೆ. ಈ ಸೇತುವೆಯ ಉದ್ದ 201 ಮೀಟರ್‌ಗಳು ಹಾಗೂ ನೆಲಮಟ್ಟದಿಂದ ಇದರ ಎತ್ತರ 14 ಮೀಟರ್‌ಗಳು. ಈ ಸ್ಥಳದ ಮತ್ತೆ ಕೆಲವು ಪ್ರಾಚೀನ ಮಂದಿರಗಳೆಂದರೆ ನದಿಯ ಇನ್ನೊಂದು ದಂಡೆಯ ಮೇಲಿರುವ ಮಹಾಲಿಂಗೇಶ್ವರ ದೇವಾಲಯದ ಪಕ್ಕದಲ್ಲಿರುವ ಈಶ್ವರ ದೇವಾಲಯ, ಕಾಡಸಿದ್ದೇಶ್ವರ ದೇವಾಲಯ ಮತ್ತು ನದಿಯ ಇನ್ನೊಂದು ದಡದಲ್ಲಿರುವ ದತ್ತ ಮಂದಿರ. ಇಲ್ಲಿ ಎರಡು ಚರ್ಚ್ ಹಾಗೂ ಒಂದು ಮಸೀದಿ ಇವೆ. 1885ರ ಪ್ರಾರಂಭದಲ್ಲಿ ಸ್ಥಾಪಿಸಲಾದ ಗೋಕಾಕ ಗಿರಣಿಯಿಂದಾಗಿ ಈ ಸ್ಥಳವು ಜಿಲ್ಲೆಯಲ್ಲಿ ಕೈಗಾರಿಕಾ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಿದೆ. 1887ರಲ್ಲೇ ಇಡೀ ದೇಶದಲ್ಲೇ ಮೊದಲ ಬಾರಿಗೆ ಜಲವಿದ್ಯುತ್ ಸ್ಥಾವರವನ್ನು ಸ್ಥಾಪಿಸಿದ ಕೀರ್ತಿ ಇದಕ್ಕೆ ಸಲ್ಲುತ್ತದೆ. 1965ರಲ್ಲಿ ರಚಿಸಲಾದ ಸಂವಿಧಾನಬದ್ಧ ಅನುಸೂಚಿತ ಪ್ರದೇಶ ಸಮಿತಿಯು (ನೋಟಿಫೈಡ್ ಏರಿಯಾ ಕಮಿಟಿ) ಇಲ್ಲಿನ ನಾಗರಿಕ ಆಡಳಿತವನ್ನು ನಿರ್ವಹಿಸುತ್ತದೆ; ಪ್ರವಾಸಿಗರ ಅನುಕೂಲಕ್ಕಾಗಿ ಇಲ್ಲಿ ಅಗತ್ಯವಾದ ಸೌಲಭ್ಯಗಳ ಅವಶ್ಯಕತೆ ಇದೆ. ಗೋಕಾಕದಿಂದ ವಾಯುವ್ಯಕ್ಕೆ 14 ಕಿಮೀ ದೂರದಲ್ಲಿ ಘಟಪ್ರಭಾ ನದಿಯ ದಂಡೆಯ ಮೇಲೆ ನೆಲೆಸಿರುವ ಕೊಣ್ಣೂರು ಮತ್ತೊಂದು ಪಟ್ಟಣ. ಇಲ್ಲಿ ದೊರೆತ ಶಾಸನಗಳ ಪ್ರಕಾರ ಕೊಣ್ಣೂರು ಎಂಬ ಹೆಸರು 'ಕೊಂಡನೂರು' ಎಂಬ ಪದದಿಂದ ಬಂದಿದೆ. ಇದೊಂದು ಇತಿಹಾಸಪೂರ್ವ ಕಾಲದ ಅವಶೇಷಗಳನ್ನು ಹೊಂದಿರುವ ಸ್ಥಳವಾಗಿದ್ದು ಬೃಹತ್ ಶಿಲಾಯುಗದ ಶಿಲಾ ಸಮಾಧಿಗಳನ್ನು ಇಲ್ಲಿ ಕಾಣಬಹುದು. ಇಲ್ಲಿ 11ನೇಯ ಶತಮಾನಕ್ಕೆ ಸೇರಿದ ರಟ್ಟರ ಕಾಲದ ಅನೇಕ ಶಾಸನಗಳು ಲಭ್ಯವಾಗಿದೆ. ಅಲ್ಲದೇ ಕೆಲವು ಶಿಥಿಲವಾಗಿರುವ ದೇವಾಲಯಗಳ ಭಗ್ನಾವಶೇಷಗಳಿವೆ. ಇಲ್ಲಿನ ಪ್ರಾಚೀನ ದೇವಾಲಯಗಳಲ್ಲಿ ಮುಖ್ಯವಾದುವೆಂದರೆ, ಚಿಕ್ಲೇಶ್ವರ ಎಂದು ಕರೆಯುವ ಈಶ್ವರನ ದೇವಾಲಯ, ಪಾರ್ಶ್ವನಾಥನಿಗರ್ಪಿತವಾಗಿರುವ ಜೈನ ಬಸದಿ, ಇವುಗಳ ಜೊತೆಗೆ ಆಧುನಿಕ ರೀತಿಯಲ್ಲಿ ನಿರ್ಮಿಸಿರುವ ಲಕ್ಷ್ಮೀದೇವಾಲಯ ಮತ್ತು ಕಾಡಸಿದ್ದೇಶ್ವರ ಮಠ. ಇಲ್ಲಿ ಹುಸೇನ್ ಪೀರ್ ಖಾದ್ರಿಯ ಸ್ಮಾರಕಾರ್ಥ ನಿರ್ಮಿಸಿರುವ ದರ್ಗಾ ಒಂದಿದೆ. ಈ ಊರಿನ ದಕ್ಷಿಣಕ್ಕೆ ಐವತ್ತಕ್ಕೂ ಹೆಚ್ಚು ಸಮಾಧಿ ಕೊಠಡಿಗಳು ಸಿಕ್ಕಿರುವುದರಿಂದ ಅದರ ಪುರಾತತ್ತ್ವ ದೃಷ್ಟಿಯ ಮಹತ್ವ ಹೆಚ್ಚಿದೆ. ಇಲ್ಲಿ ಒಂದು ಪುರಸಭೆಯಿದೆ. ಗೋಕಾಕಿಗೆ 16 ಕಿಮೀ ವಾಯುವ್ಯದಲ್ಲಿರುವ ಧೂಪದಾಳವು ಇಲ್ಲಿ

1884ರಲ್ಲಿ ಘಟಪ್ರಭಾ ನದಿಗೆ ಅಡ್ಡಲಾಗಿ ಕಟ್ಟಿದ ಅಣೆಕಟ್ಟೆಯಿಂದ ಹೆಸರು ಪಡೆದಿದೆ. ಆಧುನಿಕ ಕಾಲದಲ್ಲಿ ಇದು ಮೊಟ್ಟ ಮೊದಲ ನೀರಾವರಿ ಯೋಜನೆ. ಇಲ್ಲಿ ಒಂದು ಪುರಾತನ ಪಾರ್ಶ್ವನಾಥ ಬಸದಿಯಿದೆ. ಅರಭಾವಿ: (ಜನ: 5,407) ಗೋಕಾಕಿನ ಉತ್ತರಕ್ಕೆ ಆರು ಕಿಮೀ ಅಂತರದಲ್ಲಿರುವ ಅರಭಾವಿ ಹೆಸರಾಂತ ಪವಿತ್ರ ಸ್ಥಳ. ಇಲ್ಲಿರುವ 600 ವರ್ಷಗಳ ಹಿಂದಿನ ದುರುದುಂಡೇಶ್ವರ ಮಠವು ಧಾರ್ಮಿಕವಾಗಿಯಲ್ಲದೆ ವಾಸ್ತು ಶಿಲ್ಪದ ದೃಷ್ಟಿಯಿಂದಲೂ ಮಹತ್ವದ ಸ್ಥಳವಾಗಿದೆ. ಘಟಪ್ರಭಾ ನದಿಯ ಬಲದಂಡೆಯ ಮೇಲೆ ಗೋಕಾಕದಿಂದ 16 ಕಿಮೀ ದೂರದಲ್ಲಿರುವ ಸಾವಳಗಿ ಯು ಧಾರ್ಮಿಕ ಸಾಮರಸ್ಯವನ್ನು ಪ್ರತಿನಿಧಿಸುವ ಸ್ಥಳವಾಗಿದೆ. ಇಲ್ಲಿರುವ ಶಿವಲಿಂಗೇಶ್ವರ ಮಠಕ್ಕೆ ಹಿಂದುಗಳೂ ಮಹಮದೀಯ ಭಕ್ತರು ಶ್ರದ್ಧಾ ಭಕ್ತಿಗಳಿಂದ ನಡೆದುಕೊಳ್ಳುತ್ತಾರೆ. ಮಠದಲ್ಲಿ ಶಿವಲಿಂಗೇಶ್ವರನ ಗದ್ದುಗೆಯಿದೆ. ಈ ಮಠದ ವಾಸ್ತುಶಿಲ್ಪವು ಮಠ ಹಾಗೂ ಮಸೀದಿಗಳ ಲಕ್ಷಣಗಳನ್ನೊಳಗೊಂಡಂತಿದೆ. ಗೋಕಾಕದ ವಾಯುವ್ಯಕ್ಕೆ 20 ಕಿಮೀ ದೂರದಲ್ಲಿ ಘಟಪ್ರಭಾ ಗ್ರಾಮವಿದೆ. ಇಲ್ಲಿ ಒಂದು ಪುರ ಪಂಚಾಯತಿಯಿದೆ. ಹಿಂದೆ ಇದಕ್ಕೆ ಹುಕ್ಕೇರಿ ರೋಡ್ ಎಂಬ ಹೆಸರಿತ್ತು. ಮಿರಜ್-ಬೆಂಗಳೂರು ರಸ್ತೆಯಲ್ಲಿ ಇದೊಂದು ರೈಲು ನಿಲ್ದಾಣವಾಗಿದೆ. ಇಲ್ಲಿನ ಹಿತಕರ ಹವೆಯಿಂದ ಇದೊಂದು ಹೆಸರಾಂತ ಆರೋಗ್ಯ ಧಾಮವೆನಿಸಿಕೊಂಡಿದೆ. ಇಲ್ಲಿ ಎಲ್ಲ ಅನುಕೂಲಗಳನ್ನು ಹೊಂದಿರುವ ಜೆ. ಜಿ. ಸಹಕಾರಿ ಆಸ್ಪತ್ರೆ ಮತ್ತು ದಿ|| ಡಾ|| ಕೊಕಟ್ನೂರರು ಸ್ಥಾಪಿಸಿದ ಕರ್ನಾಟಕ ಆರೋಗ್ಯ ಸಂಸ್ಥೆ ಎಂಬ ಆಸ್ಪತ್ರೆಗಳಿವೆ. ಈ ಆಸ್ಪತ್ರೆಯು ಸೇವಾದಳದ ಸ್ಥಾಪಕ ಪ್ರಸಿದ್ಧ ಗಾಂಧೀವಾದಿ ದಿ|| ಡಾ|| ಎನ್. ಎಸ್. ಹರ್ಡೀಕರ್ ಅವರೊಂದಿಗೆ ಸಂಬಂಧವನ್ನು ಹೊಂದಿತ್ತು.

ಗೋಕರ್ಣ : (ಉ. ಕ. ಜಿ; ಕುಮಟಾ ತಾ; ಜನ: 9,547) ಗೋಕರ್ಣವು ಪಶ್ಚಿಮ ಸಮುದ್ರ ತೀರದಲ್ಲಿ, ಬೆಂಗಳೂರಿನ ವಾಯುವ್ಯಕ್ಕೆ 438 ಕಿಮೀ ದೂರದಲ್ಲಿದೆ. ದಕ್ಷಿಣ ಕಾಶಿಯೆಂದು ಪ್ರಸಿದ್ಧವಾಗಿರುವ ಗೋಕರ್ಣವು ಭಾರತದಲ್ಲೇ ಒಂದು ಪ್ರಮುಖ ಶೈವಯಾತ್ರಾ ಸ್ಥಳವಾಗಿದೆ. ಗೋಕರ್ಣ ಎಂದರೆ ಗೋವಿನ ಕಿವಿ ಎಂದು ಅರ್ಥ. ಒಂದು ಕಡೆ ಅರೇಬಿಯ ಸಮುದ್ರ ಮತ್ತೊಂದು ಕಡೆ ಅಘನಾಶಿನಿ ಮತ್ತು ಗಂಗಾವಳಿ ನದಿಗಳು ಹಸುವಿನ ಕಿವಿಯನ್ನು ಹೋಲುವ ಆಕೃತಿಯನ್ನು ಉಂಟು ಮಾಡಿದುದರಿಂದ ಈ ಹೆಸರು ಬಂದಿದೆ ಎಂದು ಹೇಳಲಾಗಿದೆ. ರಾಮಾಯಣ, ಮಹಾಭಾರತಗಳಲ್ಲಿ ಈ ಪವಿತ್ರ ಕ್ಷೇತ್ರದ ಪ್ರಸ್ತಾಪ ಅನೇಕ ಕಡೆ ಬಂದಿದೆ. ಇಲ್ಲಿರುವ ಮಹಾಬಲೇಶ್ವರ ದೇವಾಲಯವು ದ್ರಾವಿಡ ಶೈಲಿಯಲ್ಲಿ ಕಣ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಇಲ್ಲಿ ಪ್ರಾರಂಭದಲ್ಲಿ ಒಂದು ಗರ್ಭಗುಡಿ ಮತ್ತು ಹೊರಾಂಗಣಗಳು ಮಾತ್ರ ಇದ್ದಿತು. ವಿಜಯನಗರದ ಅನಂತರ ಈ ಮಂದಿರಕ್ಕೆ ಹಲವಾರು ಭಾಗಗಳನ್ನು ಸೇರಿಸಲಾಯಿತು. ಗರ್ಭಗುಡಿಯಲ್ಲಿರುವ ಶಿವಲಿಂಗವು ನೆಲದಿಂದ ಮೇಲೆ ಕೇವಲ ಎರಡು ಅಂಗುಲ ಮಾತ್ರ ಕಾಣಿಸುತ್ತದೆ. ಇದು ಆತ್ಮಲಿಂಗವೆಂದೂ, ರಾವಣನು ಇದನ್ನು ಇಲ್ಲಿಗೆ ತಂದನೆಂದೂ ಮುಂದೆ ನಿರ್ವಾಹವಿಲ್ಲದೆ ಅದನ್ನು ಇಲ್ಲಿಯೇ ಬಿಟ್ಟುಹೋಗಬೇಕಾಯಿತೆಂದೂ ಸ್ಥಳ ಪುರಾಣಗಳು ತಿಳಿಸುತ್ತವೆ. ಮುಖ ಮಂಟಪದ ಮಧ್ಯದಲ್ಲಿ ನಂದಿಯ ಶಿಲಾ ಮೂರ್ತಿಯಿದ್ದು ಪಾರ್ವತಿ ಮತ್ತು ಗಣಪತಿ ಇವರ ವಿಗ್ರಹಗಳಿವೆ. ಮಹಾ ಶಿವ ರಾತ್ರಿಯಂದು ಇಲ್ಲಿ ಮಹಾಬಲೇಶ್ವರನ ಜಾತ್ರೆ ನಡೆಯುತ್ತದೆ. ಮಹಾಬಲೇಶ್ವರ ದೇವಾಲಯವಲ್ಲದೆ ಇಲ್ಲಿ ಇಪ್ಪತ್ತು ಸಣ್ಣ ದೇವಾಲಯಗಳು 30 ಶಿವಲಿಂಗಗಳೂ ಇವೆ. ಮಹಾಬಲೇಶ್ವರ ದೇವಾಲಯದ ಬಳಿಯಲ್ಲಿಯೇ ಕದಂಬರ ಕಾಲದ ದ್ವಿಬಾಹು ಗಣಪತಿ ಮೂರ್ತಿ ಇರುವ ಗಣಪತಿ ದೇವಾಲಯವಿದೆ. ಭದ್ರಕಾಳೀ, ವೆಂಕಟರಮಣ, ತಾಮ್ರ ಗೌರಿ, ವೀರಶೈವ ಮಠ, ಇವು ಗೋಕರ್ಣದ ಇತರ ಮುಖ್ಯ ದೇವಾಲಯಗಳು. ಇಂದೋರಿನ ಅಹಲ್ಯಾಬಾಯಿ ಹೋಳ್ಕರ್ ಕಟ್ಟಿಸಿರುವ ಒಂದು ಛತ್ರವಿದ್ದು ಈ ಛತ್ರದಲ್ಲಿ ಈಕೆಯ ಅಮೃತಶಿಲೆಯ ಸಣ್ಣ ಮೂರ್ತಿಯನ್ನು ಸ್ಥಾಪಿಸಲಾಗಿದೆ. ದೇವಾಲಯದ ವಿಶ್ವಸ್ಥಮಂಡಲಿ ಮತ್ತು ಪಂಚಾಯತಿ ಸಮಿತಿ ಗೋಕರ್ಣದ ಸ್ಥಳೀಯ ಆಡಳಿತವನ್ನು ನಿರ್ವಹಿಸುತ್ತಿವೆ. ಗೋಕರ್ಣಕ್ಕೆ ಪ್ರವೇಶಿಸುವ ಮೊದಲು ಸಾಣೆಕಟ್ಟೆ ಎಂಬ ಸ್ಥಳವನ್ನು ಹಾದುಹೋಗಬೇಕು. ಇದು ಬಹು ಪ್ರಾಚೀನ ಕಾಲದಿಂದಲೂ ಉಪ್ಪಿನ ತಯಾರಿಕೆಗೆ ಪ್ರಸಿದ್ಧವಾಗಿದೆ. ಗೋಕರ್ಣವು ಒಂದು ಸುಂದರವಾದ ಸಮುದ್ರ ತೀರವನ್ನು ಹೊಂದಿದೆ. ಊರ ಕೋಟಿತೀರ್ಥ ಕೆರೆ ಮತ್ತು ತೀರದಲ್ಲಿರುವ ಜಟಾಯು ತೀರ್ಥಗಳು ಪವಿತ್ರ ಸ್ಥಳಗಳಾಗಿವೆ. ಹನ್ನೆರಡು ವರ್ಷಕ್ಕೊಮ್ಮೆ ಆಚರಿಸಲಾಗುವ ಅಷ್ಟಬಂಧ ಸಮಾರಂಭವು ಆತ್ಮಲಿಂಗದ ಗೌರವಾರ್ಥ ನಡೆಯುವ ಒಂದು ವೈಭವದ ಉತ್ಸವವೆನಿಸಿಕೊಂಡಿದೆ. ಇತ್ತೀಚೆಗೆ 50 ವರ್ಷಗಳ ಅನಂತರ 1983ರಲ್ಲಿ ಈ ಸಮಾರಂಭವನ್ನು ಏರ್ಪಡಿಸಲಾಗಿದ್ದಿತು. ಈ ಸಂದರ್ಭದಲ್ಲಿ ಆತ್ಮಲಿಂಗವು ಸಂಪೂರ್ಣವಾಗಿ ಕಾಣುವಂತೆ ಹೊರತೆಗೆದು ಭಕ್ತಾದಿಗಳು ಅದರ ದರ್ಶನವನ್ನು ಪಡೆದರು.

ಗೋಣಿಕೊಪ್ಪಲು : (ಕೊಡಗು ಜಿ; ವಿರಾಜಪೇಟೆ ತಾ; ಜನ: 2,757) ಗೋಣಿಕೊಪ್ಪಲು ಬೆಂಗಳೂರಿನಿಂದ 217 ಕಿಮೀ ಮತ್ತು ಮಡಿಕೇರಿಯಿಂದ 44 ಕಿಮೀ ದೂರದಲ್ಲಿದೆ. ಇದು ಲಕ್ಷ್ಮಣತೀರ್ಥಕ್ಕೆ ಸೇರುವ ಅತ್ತೀ ಹೊಳೆಯ ದಡದ ಮೇಲಿದೆ. ಇಲ್ಲಿರುವ ಕೆಂಪುಮಣ್ಣು ಫಲವತ್ತಾಗಿದ್ದು ಕಾಫಿ, ಭತ್ತ ಮತ್ತು ಕಿತ್ತಳೆ ಬೆಳೆಗಳಿಗೆ ಅನುಕೂಲವಾಗಿದೆ. ಇಲ್ಲಿರುವ ಸಿಟ್ರಸ್ ಸಂಶೋಧನ ಸಂಸ್ಥೆ ಮತ್ತು ಹಣ್ಣು ಸಂಸ್ಕಾರ ಕೇಂದ್ರ ಬಹು ಮುಖ್ಯವಾದ ಸಂಸ್ಥೆಗಳಾಗಿವೆ. ಗೋಣಿಕೊಪ್ಪಲ್ ಒಳ್ಳೆಯ ವ್ಯಾಪಾರ ಕೇಂದ್ರವಾಗಿದ್ದು ಪುರಸಭೆಯ ಆಡಳಿತಕ್ಕೆ ಒಳಪಟ್ಟಿದೆ.

ಕೆ. ಆರ್. ನಗರ ರೈಲ್ವೇ ಸ್ಟೇಷನ್ ಗೋಣಿಕೊಪ್ಪಲಿಗೆ 64 ಕಿಮೀ ದೂರದಲ್ಲಿದೆ.

ಗೌರಿಬಿದನೂರು : (ಕೋಲಾರ ಜಿ; ತಾ. ಕೇ; ಜನ: 18,753) ಉತ್ತರ ಪಿನಾಕಿನಿ ಎಡದಂಡೆಯ ಮೇಲಿರುವ ಗೌರಿಬಿದನೂರು, ಕೋಲಾರದ ವಾಯುವ್ಯಕ್ಕೆ 95 ಕಿಮೀ, ಹಾಗೂ ಬೆಂಗಳೂರಿಗೆ ದೊಡ್ಡಬಳ್ಳಾಪುರದ ಮಾರ್ಗವಾಗಿ 75 ಕಿಮೀ ದೂರದಲ್ಲಿದೆ. ಈ ಪಟ್ಟಣವು ಪುರಸಭೆಯನ್ನು ಹೊಂದಿದೆ. ದಂತಕತೆಯೊಂದರ ಪ್ರಕಾರ ಇದು ಪಾಂಡವರ ಚಿಕ್ಕಪ್ಪನಾದ ವಿದುರನ ವಾಸಸ್ಥಾನವಾಗಿದ್ದುದರಿಂದ, ಇದಕ್ಕೆ ವಿದರೂರು ಎಂಬ ಹೆಸರಿತ್ತು. ಮತ್ತೊಂದು ಹೇಳಿಕೆಯ ಪ್ರಕಾರ ದಾರಿನಾಯಕನ ಪಾಳ್ಯದ ನಾಯಕನ ಅಧೀನಕ್ಕೆ ಈ ಪ್ರದೇಶ ಸೇರಿದ್ದು, ಅವನು ಗೌರಿ ಎಂಬ ತನ್ನ ಮಗಳ ಮದುವೆಯಲ್ಲಿ ಈ ಊರನ್ನು ವರದಕ್ಷಿಣೆಯಾಗಿ ನೀಡಿದನಂತೆ. ಆದ್ದರಿಂದಲೇ ಈ ಊರನ್ನು ಅವಳ ಹೆಸರಿನಲ್ಲಿ ಗೌರಿವಿದರೂರು ಎಂದು ಕರೆಯಲಾಯಿತಂತೆ. ಈ ಸ್ಥಳದಲ್ಲಿ ಅನೇಕ ಗೋರಿಗಳಿರುವ ಕಾರಣ ಮಹಮದೀಯರು ಈ ಊರನ್ನು ಗೋರಿಬಿದನೂರು ಎಂದು ಕರೆದರು, ಎಂಬುದು ಇನ್ನೊಂದು ಹೇಳಿಕೆ. ಇಲ್ಲಿನ ವೆಂಕಟರಮಣಸ್ವಾಮಿ ಮಂದಿರ ಒಂದು ಮುಖ್ಯ ದೇವಾಲಯ. ಇದರ ನವರಂಗದಲ್ಲಿ ಸುಂದರವಾದ ನವಗ್ರಹ ಮೂರ್ತಿಗಳಿವೆ. ಈ ಪಟ್ಟಣಕ್ಕೆ ಹತ್ತಿರದಲ್ಲಿಯೇ ನದಿಯ ಇನ್ನೊಂದು ದಂಡೆಗೆ ಹಿರೇಬಿದನೂರಿದೆ. ವಿಜಾಪುರದ ಸುಲ್ತಾನ ಹುಸೇನ್ ಷಾ ಮಿರ್ಜಾನ ದರ್ಗಾ ಇಲ್ಲಿದೆ. ಈ ದರ್ಗಾದಲ್ಲಿ ನಾಲ್ಕು ಗೋರಿಗಳಿವೆ. ಅವುಗಳಲ್ಲಿ ಹುಸೇನ್ ಷಾ ಮಿರ್ಜಾನ ಮಗಳಾದ ನಿಯಾಮತ್‌ಬಿಯ ಗೋರಿಗೆ ಪೂಜೆ ನಡೆಯುತ್ತದೆ. ಇಲ್ಲಿ ಜುಮ್ಮಾಮಸೀದಿ ಎಂದು ಕರೆಯುವ ಮೀನಾರುಗಳುಳ್ಳ ಮಸೀದಿಯೊಂದಿದೆ. ದರ್ಗಾ ಮತ್ತು ಮಸೀದಿಗಳೆರಡೂ ಕಲ್ಲಿನ ಸುಂದರ ರಚನೆಗಳಾಗಿವೆ. ಈ ಸ್ಥಳವು ಕಬ್ಬು, ಮೆಣಸಿನಕಾಯಿ ಮತ್ತು ಭತ್ತಕ್ಕೆ ಹೆಸರುವಾಸಿಯಾಗಿದೆ. ಇಲ್ಲಿ ಸಕ್ಕರೆ ಕಾರ್ಖಾನೆ, ಸಿಮೆಂಟ್ ಕೊಳವೆಯನ್ನು ತಯಾರಿಸುವ ಕಾರ್ಖಾನೆ, ಮರ ಕೊಯ್ಯುವ ಕಾರ್ಖಾನೆಗಳಿವೆ; ಹಾಗೂ ಕೈಮಗ್ಗದ ಉದ್ಯಮಕ್ಕೆ ಈ ಊರು ಹೆಸರಾಗಿದೆ. ಗೌರಿಬಿದನೂರಿನಿಂದ ನೈಋತ್ಯಕ್ಕೆ 10 ಕಿಮೀ ದೂರದಲ್ಲಿ ಹೊಸೂರು ಎಂಬ ಮತ್ತೊಂದು ಐತಿಹಾಸಿಕ ಸ್ಥಳವಿದೆ. ಹೊಯ್ಸಳ ಮೂರನೇಯ ಬಲ್ಲಾಳನ ಹೊಸ ವಾಸಸ್ಥಾನವಾದ ಹೊಸವೀಡು ಇದೆಂದು ಗುರುತಿಸಲಾಗಿದೆ. ಮತ್ತು ವಿಜಯನಗರ ಸಾಮ್ರಾಜ್ಯದ ಪ್ರಾರಂಭದ ಕಾಲದ ಗಡಿ ನಗರವಾಗಿದ್ದ ಹೊಸ ಪಟ್ಟಣವೆಂದೂ ಇದನ್ನು ಗುರುತಿಸುತ್ತಾರೆ.

ಚಂದ್ರಗುತ್ತಿ : (ಶಿವಮೊಗ್ಗ ಜಿ ; ಸೊರಬ ತಾ; ಜನ: 1,422) ಪ್ರಾಚೀನ ಕಾಲದಲ್ಲಿ ಚಂದ್ರಗುತ್ತಿಪುರ, ಚಂದ್ರಗುಪ್ತಪುರ, ಗುತ್ತಿದುರ್ಗ ಮತ್ತು ಚಂದ್ರಗುತ್ತಿಪೇಟೆ ಎಂದೂ ಹೆಸರಾಗಿದ್ದ ಚಂದ್ರಗುತ್ತಿಯು ಸೊರಬದಿಂದ 16 ಕಿಮೀ ದೂರದಲ್ಲಿದೆ. ಇದು ಅದೇ ಹೆಸರಿನ ಹೋಬಳಿಯ ಕೇಂದ್ರ ಸ್ಥಳವಾಗಿದ್ದು, ಅದೇ ಹೆಸರಿನ ಗುಡ್ಡದ ಬದಿಯಲ್ಲಿದೆ. ಇದು ಜಮದಗ್ನಿ ಋಷಿಯ ಆಶ್ರಮವಾಗಿತ್ತೆಂದು ಹೇಳಲಾಗುತ್ತದೆ. ಇದು ಬನವಾಸಿಯ ಕದಂಬ ಅರಸರ ಪ್ರಬಲವಾದ ಕೇಂದ್ರವಾಗಿತ್ತು. ರೇಣುಕಾಂಬಾ ಮಂದಿರವೆಂದು ಕರೆಯಲಾಗುವ ದೊಡ್ಡದಾದ ನೈಸರ್ಗಿಕ ಗುಹೆಯಲ್ಲಿ ಒಂದು ಸಣ್ಣ ಲಿಂಗವಿದ್ದು, ಅದನ್ನು ಹಿತ್ತಾಳೆಯ ಮುಖದಿಂದ ಶೃಂಗರಿಸಲಾಗಿದೆ. (ರೇಣುಕಾದೇವಿಯನ್ನು ಸ್ಥಳೀಯವಾಗಿ ಚಂದ್ರಗುತ್ಯಮ್ಮ ಎಂದು ಕರೆಯಲಾಗುತ್ತದೆ). ಗುಹೆಯ ಹೊರಭಾಗವು ವಿಶಾಲವಾದ ಶುಕನಾಸಿಯಂತಿದೆ. ನವರಂಗದ ಭಾಗವು ಕಣಕಲ್ಲಿನದಾಗಿದೆ. ದಂಡಿನ ದುರ್ಗಿ ಎಂಬ ಗುಹೆಯಲ್ಲಿ ಮಹಿಷಾಸುರಮರ್ದಿನಿ ಎಂಬ ಹೆಸರಿನಿಂದಲೂ ಕರೆಯಲ್ಪಡುವ ಅಷ್ಟಭುಜಗಳುಳ್ಳ ದಂಡಿನ ದುರ್ಗಾಮಾತೆಯ ಮೂರ್ತಿಯಿದೆ. ಹಾಳುಬಿದ್ದ ಕೋಟೆಯ ಗೋಡೆ, ಹಾಳುಬಿದ್ದ ಮಸೀದಿ, ಒಂದು ಬಾವಿ, ಒಂದು ದರ್ಬಾರ್ ಮಂಟಪ (ಎರಡೂ ಹಾಳುಬಿದ್ದಿವೆ), ಅದರ ಕಮಾನುಗಳು, ಸುಂದರವಾದ ಕೋಟೆಯ ಪ್ರವೇಶದ್ವಾರಗಳು ಅಲ್ಲಿ ಗೋಚರಿಸುತ್ತವೆ. ಬೆಟ್ಟದ ತುದಿಯ ಮೇಲೆ ಚಂದ್ರಮೌಳೀಶ್ವರ ಗುಡಿಯಿತ್ತು. ಆಧುನಿಕ ಕಾಲದ ಶೂಲದ ಬೀರಪ್ಪನ ಹಂಚಿನ ಹೊದಿಕೆಯ ಗುಡಿಯು ನೋಡಲರ್ಹವಾಗಿದೆ. ಚಂದ್ರಗುತ್ತಿಯು ವಿಜಯನಗರ ಕಾಲದಲ್ಲಿ ಗುತ್ತಿರಾಜ್ಯದ ರಾಜಧಾನಿಯಾಗಿತ್ತು. ಕೆಳದಿ ಅರಸರ ಕಾಲದಲ್ಲಿಯೂ ಪ್ರಮುಖ ಕೇಂದ್ರವಾಗಿತ್ತು.

ಚಂದ್ರವಳ್ಳಿ : ಪ್ರಾಚೀನ ಸ್ಥಳವಾದ ಚಂದ್ರವಳ್ಳಿಯು ಚಿತ್ರದುರ್ಗ ಬೆಟ್ಟದ ವಾಯುವ್ಯ ದಿಕ್ಕಿನ ಬುಡದಲ್ಲಿ ನೆಲೆಸಿದೆ. ಈ ಪ್ರದೇಶವು ತ್ರಿಕೋಣಾಕಾರದಲ್ಲಿದ್ದು, ಸುತ್ತಲೂ ಚಿನ್ಮೂಲಾದ್ರಿ, ಚೋಳಗುಡ್ಡ ಮತ್ತು ಧವಳಪ್ಪನ ಗುಡ್ಡಗಳಿಂದ ಸುತ್ತುವರಿಯಲ್ಪಟ್ಟಿದೆ. ಇದು ಚಿತ್ರದುರ್ಗ ನಗರದ ಅವಿಭಾಜ್ಯ ಭಾಗವೆಂದೇ ಹೇಳಬೇಕು. ಹುಲಿಬಂಡೆಗಳ ಬಳಿಯಲ್ಲಿ ಬೃಹತ್ ಇಟ್ಟಿಗೆಗಳಿಂದ ನಿರ್ಮಿತವಾದ ಗೋಡೆಗಳ ಸಮೀಪದಲ್ಲಿ ಶಾತವಾಹನರ ಕಾಲದ ಸೀಸದನಾಣ್ಯಗಳು, ರೋಮನ್ನರ ಬೆಳ್ಳಿಯ ನಾಣ್ಯಗಳು ಮತ್ತು ಬಂಗಾರ, ಬೆಳ್ಳಿ ಹಾಗೂ ತಾಮ್ರದ ಆಭರಣಗಳು ಬೆಳಕಿಗೆ ಬಂದಿವೆ. ಇವಲ್ಲದೆ ಇಲ್ಲಿ ದೊರೆತಿರುವ ಕದಂಬ ಮಯೂರಶರ್ಮನ ಬಂಡೆ ಶಾಸನ ಹಾಗೂ ಇನ್ನಿತರ ಪ್ರಾಗೈತಿಹಾಸಿಕ ವಸ್ತುಗಳು ಶಾತವಾಹನ ಹಾಗೂ ಕದಂಬರ ಆರಂಭ ಕಾಲದಲ್ಲಿ ಈ ಪ್ರದೇಶದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ನಗರವೊಂದು ಅಸ್ತಿತ್ವದಲ್ಲಿದ್ದಿತೆಂಬುದನ್ನು ತೋರಿಸಿಕೊಡುತ್ತವೆ. ಇಲ್ಲಿ ನವಶಿಲಾಯುಗ ಹಾಗೂ ಕಬ್ಬಿಣ ಯುಗಕ್ಕೆ ಸೇರಿದ ಪ್ರಾಗೈತಿಹಾಸಿಕ ವಸತಿಯಿತ್ತು. ಹುಲಿಗೊಂದಿ ದಿಬ್ಬದ ಮೇಲೆ ಹೊಯ್ಸಳರ ಕಾಲದ ಭೈರವೇಶ್ವರ ಮಂದಿರವಿದೆ. ಅದನ್ನು ಹುಲಿಗೊಂದಿ ಸಿದ್ಧೇಶ್ವರ, ಎಂದೂ ಕರೆಯಲಾಗುತ್ತದೆ. ಅಲ್ಲಿರುವ

ಪಂಚಲಿಂಗೇಶ್ವರ ದೇವಾಲಯದಲ್ಲಿ ಧರ್ಮೇಶ್ವರ, ಭೀಮೇಶ್ವರ, ಅರ್ಜುನೇಶ್ವರ, ನಕುಲೇಶ್ವರ ಮತ್ತು ಸಹದೇವೇಶ್ವರ ಎಂಬ ಐದು ಲಿಂಗಗಳಿವೆ. ಈ ದೇವಾಲಯಕ್ಕೆ ಹೊಂದಿಕೊಂಡು, ಗುಹಾನಿರ್ಮಿತವಾದ ಪರದೇಶಪ್ಪನ ಗವಿ ಎಂಬ ಹೆಸರಿನ ಅಂಕಲಿ ಮಠವಿದೆ. ಅಂಕಲಿ ಮಠದ ಸಮೀಪದಲ್ಲಿ ಧರ್ಮೇಶ್ವರ ಗುಡ್ಡವಿದೆ. ಗುಡ್ಡದ ತುದಿಯಲ್ಲಿ ಗುಹೆಯಲ್ಲಿ ಧವಳೇಶ್ವರ ಲಿಂಗವಿದೆ. ಧವಳಪ್ಪನ ಗುಡ್ಡವು ಹಿಂದೂ ಮತ್ತು ಮುಸ್ಲಿಮ್ ಮತಾನುಯಾಯಿಗಳಿಗೆ ಪವಿತ್ರ ಸ್ಥಳವೆನಿಸಿದೆ.

ಚನ್ನಗಿರಿ : (ಶಿವಮೊಗ್ಗ ಜಿ; ತಾ. ಕೇ; ಜನ: 11,874) ಶಿವಮೊಗ್ಗದಿಂದ 43 ಕಿಮೀ ಮತ್ತು ಬೆಂಗಳೂರಿನಿಂದ 256 ಕಿಮೀ ದೂರದಲ್ಲಿರುವ ಚನ್ನಗಿರಿಯು ಹಿಂದೆ ಆಸಂದಿಯಿಂದಾಳುತ್ತಿದ್ದ (ಚಿಕ್ಕಮಗಳೂರು ಜಿ.) ಗಂಗರು ಮತ್ತು ಬಾದಾಮಿಯ ಚಲುಕ್ಯರ ಆಳ್ವಿಕೆಗೆ ಒಳಗಾಗಿತ್ತು. ವಿಜಯನಗರ ಅರಸರ ಕಾಲದಲ್ಲಿ ಇದು ಉಚ್ಚಂಗಿ ವಿಭಾಗಕ್ಕೊಳಗಾಗಿತ್ತು ಮತ್ತು ಸಂತೆಬೆನ್ನೂರು ನಾಡಿಗೆ ಸೇರಿತ್ತು. ಕೊನೆಗೆ ಇದು ಕೆಳದಿಯ ಅರಸರ ಆಳ್ವಿಕೆಗೆ ಒಳಗಾಯಿತು. ಮತ್ತು ಚೆನ್ನಮ್ಮಾಜಿ ರಾಣಿಯ ಹೆಸರಿನಿಂದ ಚನ್ನಗಿರಿಯಾಯಿತು. ಅವಳು ಇಲ್ಲೊಂದು ಕೋಟೆಯನ್ನು ನಿರ್ಮಿಸಿ, ತನ್ನ ತಂಗಿಗೆ ಬಳುವಳಿಯಾಗಿತ್ತಳು. ಚನ್ನಗಿರಿ ದುರ್ಗವು 61 ಮೀಟರ್ ಎತ್ತರವಾಗಿದ್ದು, ಊರ ಪಶ್ಚಿಮ ದಿಕ್ಕಿನಲ್ಲಿದೆ. ದುರ್ಗದ ತುದಿಯಲ್ಲಿ ಬೇಟೆ ರಂಗನಾಥ ಸ್ವಾಮಿಯ ಗುಡಿಯಿದ್ದು, ಅಲ್ಲಿಂದ ಸುಂದರವಾದ ನೈಸರ್ಗಿಕ ಭೂ ದೃಶ್ಯ ಗೋಚರಿಸುತ್ತದೆ. ಇಲ್ಲಿನ ವಿಷ್ಣುವಿನ ಮೂರ್ತಿಯು ಎಂಟನೇಯ ಶತಮಾನಕ್ಕೆ ಸೇರಿದುದಾಗಿದೆ. ಕೇತೇಶ್ವರ ಅಥವಾ ಕಲ್ಲೇಶ್ವರ ಎಂಬ ಹೆಸರಿನ ಗುಡಿಯು ಚಾಳುಕ್ಯ ಶೈಲಿಯ ಕಟ್ಟಡವಾಗಿದ್ದು, ಅದನ್ನು ಕ್ರಿ. ಶ. 1142ರಲ್ಲಿ ಜೀರ್ಣೋದ್ಧಾರ ಮಾಡಿದರು. ಸ್ಥಳೀಯ ಮರಾಠಿಗರು ಕಾಳಿಕಾಂಬಾ ಅಥವಾ ಅಂಬಾ ಭವಾನಿಯನ್ನು ಪೂಜಿಸುತ್ತಾರೆ. ಆಲ್ಲಿ ಭೂತಪ್ಪ ಎಂಬ ಗುಡಿಯೂ ಮತ್ತು ಸುಮಾರು 200 ವರ್ಷ ಹಳೆಯದಾದ ರಾಘವೇಂದ್ರ ಸ್ವಾಮಿಯ ಬೃಂದಾವನಗಳಿವೆ. ಇಲ್ಲಿರುವ ದೊಡ್ಡ ಮಸೀದಿಯಲ್ಲಿ ಮೊಹಬತ್ ಶಾಹ ಮಸ್ತಾನ್ ಖಾದ್ರಿಯ ಗೋರಿಯಿದೆ. ಅಲ್ಲೊಂದು ಮಣ್ಣಿನ ದಿನ್ನೆಯಿದ್ದು ಅದು ಈಗ ಕಲ್ಲುಮಠವೆಂದು ಕರೆಯಲ್ಪಡುವ ಚಾಳುಕ್ಯರ ದೇವಾಲಯವನ್ನು ಸಂಪೂರ್ಣವಾಗಿ ಆವರಿಸಿದೆ. ಈ ಕೆಳಗಿನವು ಈ ತಾಲೂಕಿನಲ್ಲಿರುವ ಇತರ ರಮಣೀಯ ಸ್ಥಳಗಳಾಗಿವೆ. ದೇವರಹಳ್ಳಿ ಚನ್ನಗಿರಿಯಿಂದ 12 ಕಿಮೀ ದೂರದಲ್ಲಿರುವ ದೇವರಹಳ್ಳಿ (ಜನ: 2,713) ಯಲ್ಲಿ ಉಡುಮರಡಿಯೆಂಬ ಹೆಸರಿನ ಮಣ್ಣಿನ ದಿನ್ನೆಯಿದ್ದು ಅದರ ಮೇಲೆ ರಂಗನಾಥ ದೇವಾಲಯವಿದೆ. ದೂರದಿಂದ ಗೋಚರವಾಗುವ ಮಂದಿರ ಸಹಿತವಾದ ಈ ಬೆಟ್ಟವು ರಮಣೀಯ ಸ್ಥಳವಾಗಿದೆ. ಚಕ್ರ ಮತ್ತು ಶಂಖಗಳ ಕೆತ್ತನೆಯನ್ನು ಒಳಗೊಂಡ ದುಂಡಾಕೃತಿಯ ಕಲ್ಲು ರಂಗನಾಥ ದೇವರನ್ನು ಪ್ರತಿನಿಧಿಸುತ್ತದೆ. ಅದರ ಹಿಂದೆ ಬಾಣದ ಆಕಾರದ ಲಿಂಗವಿದೆ. ಆದರ ಮೇಲೆ ವಿಜಯನಗರದ ದೊರೆ ಕೃಷ್ಣದೇವರಾಯನಿಂದ ಸ್ಥಾಪಿಸಲ್ಪಟ್ಟಿದೆಂದು ಹೇಳಲಾಗುವ ಕೇಶವನ ವಿಗ್ರಹವಿದೆ. ಹೊದಿಗೆರೆ (ಜನ: 2,872)ಯು ಚನ್ನಗಿರಿಯಿಂದ 12 ಕಿಮೀ ದೂರದಲ್ಲಿಯಿದ್ದು, ಅಲ್ಲಿ ಷಾಜಿ (ಶಿವಾಜಿಯ ತಂದೆ)ಯ ಸಮಾಧಿ, ಚಿಕ್ಕದಾದ ಭವಾನಿಯ ಗುಡಿ, ರಚಿರಾಮನ ಬಾವಿ ಮುಂತಾದ 17ನೇಯ ಶತಮಾನದ ಹಳೆಯ ಅವಶೇಷಗಳಿವೆ. ವಿಜಾಪುರದ ಆದಿಲ್‌ಷಾಹಿ ಸೈನ್ಯದ ದಳಪತಿಯಾಗಿದ್ದ ಷಾಜಿಯು ಕೆಳದಿಯ ಮೇಲೆ ದಂಡೆತ್ತಿ ಮರಳುವಾಗ, ಕ್ರಿ. ಶ. 1664ರ ಜನವರಿ ತಿಂಗಳಲ್ಲಿ ಈ ಸ್ಥಳದ ಸಮೀಪದಲ್ಲಿ ಬೇಟೆಯಾಡುವಾಗ ಆಕಸ್ಮಿಕ ಬಿದ್ದು ಮರಣ ಹೊಂದಿದ್ದನೆಂದು ಹೇಳಲಾಗುತ್ತದೆ. ಸಂತೇಬೆನ್ನೂರು (ಜನ: 5,894) ಚನ್ನಗಿರಿಯಿಂದ ಸುಮಾರು 23 ಕಿಮೀ ಅಂತರದಲ್ಲಿದ್ದು, ಅದೇ ಹೆಸರಿನ ಹೋಬಳಿಯ ಕೇಂದ್ರ ಸ್ಥಳವಾಗಿದೆ. ಬಸವಾಪಟ್ಟಣದ ಪಾಳೆಯಗಾರರ ಮನೆತನದ ದೊರೆಯೊಬ್ಬರು ಬಹುಶಃ 16ನೇಯ ಶತಮಾನದಲ್ಲಿ ಇದನ್ನು ಸ್ಥಾಪಿಸಿರಬಹುದು. ಇಲ್ಲೊಂದು ವಿಶಾಲವಾದ ಕೆರೆಯಿದ್ದು, ಅದರ ಸುತ್ತಲೂ ಕಲ್ಲಿನ ಮೆಟ್ಟಿಲುಗಳನ್ನು ಕಟ್ಟಲಾಗಿದೆ. ಕೆರೆಯ ಮಧ್ಯದಲ್ಲಿರುವ ಗೋಪುರವು ಗಮನಾರ್ಹವಾಗಿದೆ. ಮುಸಾಫಿರಖಾನಾದ ಪಶ್ಚಿಮಕ್ಕೆ ದೊಡ್ಡ ಕಲ್ಲುಗಳಿಂದ ಕೂಡಿದ ಮಿಶ್ರ ವಾಸ್ತುಶೈಲಿಯ ಹೊಸದಾದ ಮಂದಿರವನ್ನು ಕಟ್ಟಲಾಗಿದೆ. ರಾಮ ಮತ್ತವನ ಪರಿವಾರ ಮೂರ್ತಿಗಳು ಇಲ್ಲಿ ಪೂಜೆಗೊಳ್ಳುತ್ತಿವೆ. ಮೊದಲಿಗೆ ಸೂಳೆಕೆರೆಯೆಂದು ಕರೆಯಲ್ಪಡುತ್ತಿದ್ದ ಶಾಂತಿಸಾಗರ ಜಲಾಶಯವು ಚನ್ನಗಿರಿ ಪಟ್ಟಣದ ಉತ್ತರಕ್ಕೆ 20 ಕಿಮೀ ದೂರದಲ್ಲಿದೆ. ಇದು ರಾಜ್ಯದಲ್ಲಿಯೇ ಅತ್ಯಂತ ವಿಶಾಲವಾದ ಮತ್ತು ಸುಂದರವಾದ ಜಲಾಶಯವಾಗಿದೆ. ಈ ಜಲಾಶಯವನ್ನು 11-12ನೇಯ ಶತಮಾನಗಳ ಸುಮಾರಿಗೆ ಹಿರೇಹಳ್ಳ ಮತ್ತು ಸೊಪ್ಪಿನಹಳ್ಳಗಳ ನಡುವೆ ಕಟ್ಟಲಾಗಿದೆ. ಸೂಳೆಕೆರೆಯು ಚನ್ನಗಿರಿ ಪಟ್ಟಣದ ಉತ್ತರಕ್ಕೆ 20 ಕಿಮೀ ದೂರದಲ್ಲಿದೆ. ಇಲ್ಲಿರುವ ಒಂದು (ಒಂದು ಸಣ್ಣ ಗುಡ್ಡದ ಮೇಲೆ) ಸಿದ್ಧೇಶ್ವರ ದೇವಾಲಯವಿದ್ದು, ಅದು ಗರ್ಭಗೃಹ, ಶುಕನಾಶಿ, ನವರಂಗ, ಮುಖಮಂಟಪಗಳನ್ನು ಒಳಗೊಂಡಿದ್ದು ಅದರ ಸುತ್ತಲೂ ಪ್ರಾಕಾರವಿದೆ. ಈ ದೇವಾಲಯವು ಹೊಯ್ಸಳ ಮತ್ತು ಕೆಳದಿಯ ಅರಸರ ವಾಸ್ತುಶೈಲಿಯ ಮಿಶ್ರಣವಾಗಿದೆ. ಮುಖ್ಯ ದೇವಾಲಯದ ನೈಋತ್ಯ ದಿಕ್ಕಿನಲ್ಲಿ ದುರ್ಗಾದೇವಿಯ ಗುಡಿಯಿದ್ದು, ಅದು ಗರ್ಭಗೃಹವನ್ನು ಹೊಂದಿದೆ. ಅದರ ಪಡಸಾಲೆಯಲ್ಲಿ ಒರಟಾದ ದ್ರಾವಿಡಶೈಲಿಯ ಕಂಬಗಳಿದ್ದರೆ ಪ್ರವೇಶ ದ್ವಾರವು ಹೊಯ್ಸಳ ಶೈಲಿಯಲ್ಲಿದೆ. ಮೂರ್ತಿಯು ಕಾಪಾಲಿಕ ಪಂಥದ್ದಾಗಿದ್ದು ಆಳವಾಗಿ ಕೊರೆದಿದೆ. ಈ ದೇವಾಲಯದಿಂದ ಸುತ್ತಲೂ ಸುಂದರ ರಮ್ಯ ನೈಸರ್ಗಿಕ ದೃಶ್ಯವು ಗೋಚರಿಸುತ್ತದೆ.

ಚನ್ನಪಟ್ಟಣ : (ಬೆಂಗಳೂರು ಜಿ; ತಾ. ಕೇ; ಜನ: 50,699) ಚನ್ನಪಟ್ಟಣವು ಬೆಂಗಳೂರಿನಿಂದ 60 ಕಿಮೀ ದೂರದಲ್ಲಿದೆ. ಅದು ಅದೇ ಹೆಸರಿನ ತಾಲೂಕಿನ ಕೇಂದ್ರ ಸ್ಥಳವಾಗಿದೆ. ಹಿಂದಿನ ಕಾಲದಲ್ಲಿ ಚಂದಾಪುರವೆಂದು ಪ್ರಸಿದ್ಧವಾಗಿದ್ದ ಅದು ವಿಜಯನಗರದ ಸಾಮಂತರಾಗಿದ್ದ ಜಗದೇವರಾಯ ಮತ್ತು ಆತನ ವಂಶಜರ ರಾಜಧಾನಿಯಾಗಿತ್ತು. ಚನ್ನಪಟ್ಟಣದ ಕೋಟೆಯನ್ನು ಜಗದೇವರಾಯನು ಸುಮಾರು 1580ರಲ್ಲಿ ನಿರ್ಮಿಸಿದಂತೆ ತೋರುತ್ತದೆ. 1630ರಲ್ಲಿ ಮೈಸೂರಿನ ದೊರೆ ಚಾಮರಾಜ ಒಡೆಯರು ಅದನ್ನು ವಶಪಡಿಸಿಕೊಂಡರು. ನಂತರ ಗೋಪಾಲ ಹರಿ ಎಂಬಾತನ ನೇತೃತ್ವದಲ್ಲಿ ಮರಾಠಾ ಸೇನಾನಿಯು 1759ರಲ್ಲಿ ಈ ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಅಲ್ಪಾವಧಿಯಲ್ಲಿಯೇ ಅದು ಹೈದರ್ ಅಲಿಯ ಕೈವಶವಾಯಿತು. 1790ರಲ್ಲಿ ಟಿಪ್ಪುಸುಲ್ತಾನನು ಆ ಕೋಟೆಯ ಬಿರುಕುಗಳನ್ನು ಅನುಲಕ್ಷಿಸಿ ಅದನ್ನು ನೆಲಸಮಗೊಳಿಸಿದನು. ಈ ಊರಿನಲ್ಲಿರುವ ಕೆಲವು ಮಹತ್ವದ ದೇವಾಲಯಗಳು ಈ ರೀತಿ ಇವೆ: ವರದರಾಜ ಮಂದಿರವು ಗರ್ಭಗೃಹ, ಶುಕನಾಸಿ, ನವರಂಗ ಮತ್ತು ಪಾತಾಳಾಂಕಣಗಳನ್ನು ಒಳಗೊಂಡಿದೆ. ಲಕ್ಷ್ಮೀನಾರಾಯಣ ಮಂದಿರವು ಹಳೆಯ ಕಾಲದ ದೇವಾಲಯವಾಗಿದ್ದು, ಅದರ ಪಾತಾಳಾಂಕಣ ಮತ್ತು ಮುಖಮಂಟಪಗಳನ್ನು 18ನೇಯ ಶತಮಾನದಲ್ಲಿ ನಿರ್ಮಿಸಿದಂತೆ ತೋರುತ್ತದೆ. ನೀಲಕಂಠೇಶ್ವರ ದೇವಾಲಯವು ಅತ್ಯಂತ ಭವ್ಯವಾಗಿದ್ದು, ಗರ್ಭಗೃಹ, ಶುಕನಾಸಿ ಮತ್ತು ನವರಂಗಗಳನ್ನು ಒಳಗೊಂಡಿದೆ. ಕೋಟೆಯ ಪ್ರವೇಶ ದ್ವಾರದಲ್ಲಿರುವ ಆಂಜನೇಯ ದೇವಾಲಯಕ್ಕೆ ಜನರು ಬಹು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈ ಮಂದಿರದಲ್ಲಿ ಹನುಮಂತನ ಉಬ್ಬುಮೂರ್ತಿಯಿದ್ದು, ಅದನ್ನು ವ್ಯಾಸತೀರ್ಥರು ಸ್ಥಾಪಿಸಿದರೆಂದು ನಂಬಲಾಗುತ್ತದೆ. ಭದ್ರಕಾಳಿ, ರಾಮ, ಸುಗ್ರೀವಾಂಜನೇಯ ಮತ್ತು ಮಲೆಯ ಮಾದೇಶ್ವರ ಎಂಬವು ಇಲ್ಲಿಯ ಇನ್ನಿತರ ಗುಡಿಗಳಾಗಿವೆ. ಅಲ್ಲದೆ ಅಲ್ಲಿ ವ್ಯಾಸರಾಯ ಮಠ ಮತ್ತು ವೀರಶೈವ ಪಂಥದ ವಿರಕ್ತಮಠಗಳಿವೆ. ವಿರಕ್ತ ಮಠದಲ್ಲಿ ಚನ್ನಪಟ್ಟಣದ ಕೊನೆಯ ದೊರೆಯಾದ ತಿಮ್ಮಪ್ಪ ನಾಯಕನ ಮತ್ತು ಆತನ ಸತಿಯ ಎರಡು ಸಮಾಧಿಗಳಿವೆ. ಮೂರಂತಸ್ತಿನ ಭವ್ಯ ಕಟ್ಟಡವನ್ನು ತಿಮ್ಮಪ್ಪನಾಯಕನು ಕಟ್ಟಿಸಿರಬಹುದೆಂದು ಭಾವಿಸಲಾಗುತ್ತದೆ. ಇದು 19ನೇಯ ಶತಮಾನದ ವಿಶಿಷ್ಟ ಶೈಲಿಯ ಹಿಂದೂ ಕಟ್ಟಡವಾಗಿದೆ. ಅದರ ತೊಲೆ ಹಾಗೂ ಮೇಲ್ಛಾವಣಿಗಳನ್ನು ಸುಂದರವಾದ ವರ್ಣಾಲಂಕಾರ ಮತ್ತು ಮಿರುಗುಬಣ್ಣದಿಂದ ಅಲಂಕಾರಗೊಳಿಸಿದ ಮೋಪಿನಿಂದ ರಚಿಸಲಾಗಿದೆ. ದ್ವಾರಗಳನ್ನು ನಯವಾಗಿ ಕೆತ್ತಲಾಗಿದೆ. ಇಲ್ಲಿರುವ ಮಹತ್ವದ ದರ್ಗಾ ಅಕ್ಮಲ್‌ಷಾ ಖಾದ್ರಿ ಎಂಬಾತನದಾಗಿದೆ. ಬೆಂಗಳೂರಿನ ಸೈನ್ಯಾಧಿಕಾರಿಯಾಗಿದ್ದ ಸಯ್ಯದ್ ಇಬ್ರಾಹಿಂನ ಗೋರಿಯು ಬೆಂಗಳೂರು ರಸ್ತೆಯ ಪಕ್ಕದಲ್ಲಿದೆ. ಈ ಸಣ್ಣ ಕಟ್ಟಡದ ತುದಿಯಲ್ಲಿ ಒಂದು ಗುಮ್ಮಟವಿದೆ. ಅನೇಕ ವರ್ಷಗಳಿಂದ ಈ ಪಟ್ಟಣವು ಮರದ ವಸ್ತುಗಳು ಮತ್ತು ಆಟಿಗೆಯ ಸಾಮಾನುಗಳ ಉತ್ಪಾದನೆಯ ಮಹತ್ವದ ಕೇಂದ್ರವೆಂಬ ಖ್ಯಾತಿಯನ್ನು ಹೊಂದಿದೆ. ನೂರಕ್ಕೂ ಹೆಚ್ಚಿನ ಘಟಕಗಳು ಈ ವಸ್ತುಗಳ ಉತ್ಪಾದನೆಯಲ್ಲಿ ನಿರತವಾಗಿವೆ. ಇದು ರೇಷ್ಮೆ ವ್ಯಾಪಾರದ ಪ್ರಮುಖ ಕೇಂದ್ರವೂ ಆಗಿದೆ. ಮಳೂರು ಚನ್ನಪಟ್ಟಣದ ಹೊರವಲಯದಲ್ಲಿ ಮೈಸೂರು ರಸ್ತೆಯ ಮೇಲಿದೆ. ಇದು ಅತ್ಯಂತ ಪುರಾತನ ಸ್ಥಳವಾಗಿದ್ದು, ಚತುರ್ವೇದಿ ಮಂಗಲ ಪುರಂ, ರಾಜೇಂದ್ರಸಿಂಹನಗರಿ ಮತ್ತು ಪೆರಿಯ ಮಳೂರು ಅಗ್ರಹಾರ ಎಂಬ ಹೆಸರುಗಳನ್ನು ಹೊಂದಿತ್ತು. ಸ್ಥಳೀಯ ಪರಂಪರೆಯಂತೆ ಖ್ಯಾತ ನ್ಯಾಯತಜ್ಞ ವಿಜ್ಞಾನೇಶ್ವರನು ಈ ಊರಿನವನೆಂದು ತಿಳಿದುಬರುತ್ತದೆ. ಕೈಲಾಸೇಶ್ವರ ಮತ್ತು ಅಪ್ರಮೇಯಸ್ವಾಮಿಯೆಂಬ ಎರಡು ಪ್ರಸಿದ್ಧ ದೇವಾಲಯಗಳು ಇಲ್ಲಿವೆ. ಜನಾರ್ದನನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿರುವ ಅಪ್ರಮೇಯ ದೇವಾಲಯವು ಚೋಳರ ಕಾಲದ ಕಟ್ಟಡವಾಗಿದೆ. ಗರ್ಭಗೃಹದ ಹಿಂದೆ ಸಣ್ಣ ಮಂಟಪದಲ್ಲಿ ಅಂಬೆಗಾಲು ಕೃಷ್ಣನ ಸಣ್ಣ ವಿಗ್ರಹವಿದೆ. ಕೃಷ್ಣಮೂರ್ತಿಯನ್ನು ಕೈಯಲ್ಲಿ ಬೆಣ್ಣೆಯನ್ನು ಹಿಡಿದುಕೊಂಡು ಅಂಬೆಗಾಲಿಡುತ್ತಿರುವ ರೀತಿಯಲ್ಲಿ ಕೆತ್ತಲಾಗಿದೆ. ಮಕ್ಕಳಿಲ್ಲದ ದಂಪತಿಗಳು ಮಗುವು ಜನಿಸಿದ ನಂತರ ಈ ಕೃಷ್ಣನಿಗೆ ತೊಟ್ಟಿಲನ್ನು ಅರ್ಪಿಸುವುದಾಗಿ ಹರಕೆ ಹೊರುತ್ತಾರೆ. ಅದಕ್ಕೆ ನಿದರ್ಶನವಾಗಿ ಇಲ್ಲಿ ಅಸಂಖ್ಯ ಕಿರುಹರಕೆ ತೊಟ್ಟಿಲುಗಳು ಕಣ್ಣಿಗೆ ಬೀಳುತ್ತವೆ. ಲಕ್ಷ್ಮೀದೇವಿಯ ಗುಡಿಯು ನೈಋತ್ಯ ಮೂಲೆಯಲ್ಲಿದೆ. ನಾಚ್ಚಿಯಾರ್, ನಮ್ಮಾಳ್ವರ್, ಮಧುರ ಕವಿ ಆಳ್ವರ್ ಅವರ ಮೂರ್ತಿಗಳನ್ನು ಸಣ್ಣ ಗೂಡುಗಳಲ್ಲಿ ನಿಲ್ಲಿಸಿದ್ದಾರೆ. ರಾಮದಾಸ ಮತ್ತು ಆತನ ಹೆಂಡತಿಯ ಮೂರ್ತಿಗಳು ಗುಡಿಯ ಪ್ರಾಂಗಣದಲ್ಲಿ ನಿಂತಿವೆ. ವಿಜಯನಗರ ಶೈಲಿಯ ಮುಂಭಾಗದ ಗೋಪುರವು ಭವ್ಯವಾಗಿದ್ದು, ಅದರ ಗೂಡುಗಳಲ್ಲಿ ದಶಾವತಾರದ ಮೂರ್ತಿಗಳನ್ನು ಇರಿಸಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿರುವ ಒಂದು ಸಣ್ಣ ಕಲ್ಲಿನ ಕಟ್ಟಡದಲ್ಲಿ ಪುರಂದರದಾಸರು ಮುಖ್ಯದೇವತೆಯ ಭಕ್ತಿಯ ಹಾಡುಗಳನ್ನು ರಚಿಸಿದರೆಂದು ಹೇಳಲಾಗುತ್ತದೆ. ಅದರ ಬಲಬದಿಯಲ್ಲಿ ಒಂದು ದೊಡ್ಡದಾದ ಕಲ್ಲಿನ ಕಟ್ಟಡವಿದ್ದು, ಅದರಲ್ಲಿ ಸುಂದರ ಕೆತ್ತನೆಯ ಮೂರ್ತಿಗಳಿವೆ. ಆದರೆ ಗರ್ಭಗೃಹವು ಖಾಲಿಯಿದೆ. ಕೈಲಾಸೇಶ್ವರ ದೇವಾಲಯವು ಕ್ರಿ.ಶ. 1000ದ ಸುಮಾರಿಗೆ ಒಬ್ಬ ಚೋಳರ ಅಧಿಕಾರಿಯಿಂದ ನಿರ್ಮಿತವಾಯಿತು. ಅದರ ಗರ್ಭಗೃಹದಲ್ಲಿ ಸುಮಾರು ಒಂದು ಮೀ ಎತ್ತರದ ಕೈಲಾಸೇಶ್ವರಲಿಂಗವಿದೆ. ಪಕ್ಕದಲ್ಲಿ ಪಾರ್ವತಿ ಗುಡಿಯಿದೆ. ಕ್ರಿ.ಶ. 1100, 1140 ಮತ್ತು 1320ರ ಇಲ್ಲಿರುವ ಶಿಲಾಶಾಸನಗಳು ಈ ದೇವಾಲಯದ ಬೆಳವಣಿಗೆ ಮತ್ತು ಅದಕ್ಕೆ ಸಂದ ದತ್ತಿಗಳನ್ನು ಕುರಿತು ವಿವರಿಸುತ್ತದೆ. ಅದರ ಇಟ್ಟಿಗೆಯ ಗೋಪುರವು 17ನೇಯ ಶತಮಾನದ್ದಾಗಿದೆ. ಈ ದೇವಾಲಯದ ಸಮೀಪದಲ್ಲಿ ರಾಮಮಂದಿರವಿದೆ.

ಕೆಂಗಲ್ : ಚನ್ನಪಟ್ಟಣದ ಈಶಾನ್ಯಕ್ಕೆ ಬೆಂಗಳೂರು–

ಮೈಸೂರು ರಸ್ತೆಯ ಮೇಲಿರುವ ಇದು ಪವಿತ್ರ ಸ್ಥಳವಾಗಿದೆ. ಇಲ್ಲಿ ಆಂಜನೇಯಸ್ವಾಮಿಯ ದೇವಾಲಯವಿದೆ. ಆಂಜನೇಯ ಮೂರ್ತಿಯನ್ನು ಕೆಂಗಲ್ಲು ಅಂದರೆ ಕೆಂಪುಕಲ್ಲಿನ ಮೇಲೆ ಕೆತ್ತಲಾಗಿರುವುದರಿಂದ ಈ ಊರಿಗೆ ಕೆಂಗಲ್ ಎಂಬ ಹೆಸರು ಬಂದಿದೆ. ಮಹರ್ಷಿ ವ್ಯಾಸತೀರ್ಥರು ಈ ಮೂರ್ತಿಗೆ ಅಭಿಷೇಕ ಮಾಡಿದರೆಂದು ನಂಬಲಾಗುತ್ತದೆ. ರಾಮ, ಸೀತಾ ಮತ್ತು ಲಕ್ಷ್ಮಣ ಇವರ ಮೂರ್ತಿಗಳನ್ನು ಇಲ್ಲಿ ಸ್ಥಾಪಿಸಲಾಗಿದೆ. ಈ ದೇವಾಲಯದ ಎದುರುಗಡೆಯಲ್ಲಿ ಸುಂದರವಾದ ತೋಟವನ್ನು ಬೆಳಸಲಾಗಿದೆ. ಹನುಮನ ಶಸ್ತ್ರವಾದ ಗದೆಯ ಆಕಾರದಲ್ಲಿ ನಿರ್ಮಿಸಲಾಗಿರುವ ಜಲಗ್ರಾಹಕವು ಇಲ್ಲಿರುವ ಇನ್ನೊಂದು ಆಕರ್ಷಕ ವಸ್ತುವಾಗಿದೆ. ಇಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಮತ್ತು ಮದುವೆ ಸಮಾರಂಭಗಳಿಗಾಗಿ ಅನೇಕ ಧರ್ಮಛತ್ರಗಳಿವೆ. ಈ ದೇವಾಲಯದ ದನಗಳ ಜಾತ್ರೆಯು ಪ್ರತೀವರ್ಷ ಸೇರುತ್ತದೆ. ಇಲ್ಲಿ ಒಂದು ಫಲಪುಷ್ಪಗಳ ತೋಟವಿದೆ.

ಚನ್ನರಾಯಪಟ್ಟಣ : (ಹಾಸನ ಜಿ; ತಾ. ಕೇ; ಜನ: 16,305) ಚನ್ನರಾಯಪಟ್ಟಣವು ಹಾಸನದಿಂದ 32 ಕಿಮಿಾ ಮತ್ತು ಬೆಂಗಳೂರಿನಿಂದ 146 ಕಿಮಿಾ ದೂರದಲ್ಲಿದೆ. ಪ್ರಾಚೀನ ಕಾಲದಲ್ಲಿ ಇದು ಕೊಳತೂರು ಎಂದು ಕರೆಯಲ್ಪಡುತ್ತಿತ್ತು ಮತ್ತು ಒಂದು ಅಗ್ರಹಾರವಾಗಿತ್ತು. ಈ ನಗರದ ಈಶಾನ್ಯ ದಿಕ್ಕಿನಲ್ಲಿ ಒಂದು ವಿಶಾಲವಾದ ಕೆರೆಯಿದ್ದು ಅದನ್ನು ಮಾಚಲದೇವಿ ಮತ್ತು ಶಾಂತಲದೇವಿ ಎಂಬ ಇಬ್ಬರು ನೃತ್ಯಗಾರ್ತಿಯರು ನಿರ್ಮಿಸಿದರೆಂದು ಹೇಳಲಾಗುತ್ತದೆ. ಈ ಪಟ್ಟಣವನ್ನು ಹೊಳೆನರಸೀಪುರದ ದೊರೆಯಾದ ಲಕ್ಕಪ್ಪನಾಯಕನು ಪುಟ್ಟಗಿರಿಜ ಎಂಬ ಹೆಬ್ಬಾರನಿಂದ ವಶಪಡಿಸಿಕೊಂಡು ತನ್ನ ಮಗನಾದ ಚನ್ನರಾಯನಿಗೆ ಜಹಗೀರಾಗಿ ಕೊಟ್ಟನು. ಇಲ್ಲಿ ಒಂದು ಚನ್ನರಾಯಸ್ವಾಮಿಯ ದೇವಾಲಯವಿದೆ. ಅಲ್ಲಿ ದೊಡ್ಡ ಬಸವಯ್ಯನಿಂದ ನಿರ್ಮಿತವಾಗಿ ಅನಂತರ ಹೈದರ್ ಅಲಿಯಿಂದ ಪುನರ್ನಿರ್ಮಾಣಗೊಂಡ ಒಂದು ಹಳೆಯ ಕೋಟೆಯಿದೆ. ಊರಲ್ಲಿ ಪುರಸಭೆ ಇದೆ. ಈ ತಾಲೂಕಿನ ಉಳಿದ ಮಹತ್ವದ ಸ್ಥಳಗಳೆಂದರೆ: ಜಿನನಾಥಪುರವು ಚನ್ನರಾಯಪಟ್ಟಣದಿಂದ 14 ಕಿಮಿಾ ದೂರದಲ್ಲಿದೆ. ಈ ಹಳ್ಳಿಯನ್ನು ಕ್ರಿ. ಶ. 1117ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ದಂಡನಾಯಕನಾಗಿದ್ದ ಗಂಗರಾಜನು ನಿರ್ಮಿಸಿದನು. ಸುಮಾರು 1200ರಲ್ಲಿ ನಿರ್ಮಾಣಗೊಂಡ ಇಲ್ಲಿರುವ ಶಾಂತಿನಾಥ ಬಸದಿಯು ಹೊಯ್ಸಳ ಶೈಲಿಯ ಕಟ್ಟಡವಾಗಿದ್ದು, ತುಂಬ ಕಲಾತ್ಮಕವಾಗಿದೆ. ಇಲ್ಲಿಯ ಒಂದು ವಿಗ್ರಹದ ವೇದಿಕೆಯ ಮೇಲಿರುವ ಶಿಲಾಶಾಸನದಲ್ಲಿ ವಸುಧೈಕ ಬಾಂಧವ ರೇಚಿಮಯ್ಯನು ಈ ದೇವಾಲಯವನ್ನು ನಿರ್ಮಿಸಿ ಸಾಗರ ನಂದಿ ಸಿದ್ಧಾಂತ ದೇವರಿಗೆ ಸಮರ್ಪಿಸಿದ, ಎಂದು ಹೇಳಲಾಗಿದೆ. ಈ ದೇವಾಲಯದ ನವರಂಗದಲ್ಲಿರುವ ಒಂದು ಕಂಬದ ಮೇಲಿನ ಶಿಲಾಶಾಸನದಿಂದ ಪಾಳೆದ ಪದುಮಣ್ಣನು 1632ರಲ್ಲಿ ಈ ಬಸದಿಯ ಜೀರ್ಣೋದ್ಧಾರಗೈದನೆಂದು ತಿಳಿದು ಬರುತ್ತದೆ. ಹಳ್ಳಿಯ ಪೂರ್ವಕ್ಕೆ ಒಂದು ಬಂಡೆಗಲ್ಲಿನ ಮೇಲಿರುವ ಇನ್ನೊಂದು ಬಸದಿಯು ಶಾಂತಿನಾಥ ಬಸದಿಗಿಂತ ಹಳೆಯದಾಗಿದೆ. ಅದರಲ್ಲಿ 1889ರಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಪಾರ್ಶ್ವನಾಥನ ಅಮೃತಶಿಲೆಯ ಪ್ರತಿಮೆಯಿದೆ. ಈ ಊರಿನ ಈಶಾನ್ಯ ದಿಕ್ಕಿನಲ್ಲಿ ಚೌಕಾಕಾರದ ಕಲ್ಲಿನ ಸಮಾಧಿ ಮಂಟಪವೆಂಬ ಕಟ್ಟಡವಿದ್ದು, ಅದನ್ನು ಬಯಿರೋಜನೆಂಬಾತನು 1212ರಲ್ಲಿ ನೇಮಿಚಂದ್ರ ಪಂಡಿತನ ಶಿಷ್ಯನಾಗಿದ್ದ ಬಾಲಚಂದ್ರದೇವನ ಮಗನ ಸಮಾಧಿಯ ಸ್ಮರಣಾರ್ಥ ನಿರ್ಮಿಸಿದನು. ಕುಂದೂರು ಚನ್ನರಾಯಪಟ್ಟಣದಿಂದ ಸುಮಾರು 20 ಕಿಮಿಾ ಅಂತರದಲ್ಲಿದೆ. ಇಲ್ಲಿ ಒಕ್ಕಲಿಗರ ಮಠ ಮತ್ತು ಚಾಮುಂಡೇಶ್ವರಿ, ರಂಗನಾಥ ಹಾಗೂ ಸುಬ್ರಹ್ಮಣ್ಯೇಶ್ವರ ಗುಡಿಗಳಿವೆ. ನುಗ್ಗೆಹಳ್ಳಿ (ಜನ: 3,209) ಅದೇ ಹೆಸರಿನ ಹೋಬಳಿಯ ಕೇಂದ್ರವಾದ ಇದು ಚನ್ನರಾಯಪಟ್ಟಣದಿಂದ ಆಗ್ನೇಯ ದಿಕ್ಕಿಗೆ 20 ಕಿಮಿಾ ಅಂತರದಲ್ಲಿದೆ. ಇಲ್ಲಿ ಚೋಳರಸರಿಂದ ನಿರ್ಮಾಣಗೊಂಡ ಜಯಗೊಂಡೇಶ್ವರ ಎಂಬ ದೇವಾಲಯವಿದ್ದು, ಅದಕ್ಕೆ ಹೊಯ್ಸಳ ದೊರೆ ವಿಷ್ಣುವರ್ಧನನು ದತ್ತಿಗಳನ್ನು ಬಿಟ್ಟಿರುವಂತೆ ತಿಳಿದುಬರುತ್ತದೆ. ಇಲ್ಲಿ ಹೊಯ್ಸಳರ ದಂಡನಾಯಕ ಬೊಮ್ಮಣ್ಣ ದಂಡನಾಯಕನು 1246ರಲ್ಲಿ ಸೋಮನಾಥಪುರವೆಂಬ ಅಗ್ರಹಾರವನ್ನು ನಿರ್ಮಿಸಿದನು. ಆತನು ಮೂರು ಗರ್ಭಗೃಹಗಳುಳ್ಳ ಲಕ್ಷ್ಮೀನರಸಿಂಹ ದೇವಾಲಯವನ್ನು ನಿರ್ಮಿಸಿದಂತೆ ತಿಳಿದು ಬರುತ್ತದೆ. ಈ ದೇವಾಲಯವು ಹೊಯ್ಸಳ ವಾಸ್ತು ಶೈಲಿಯ ಉತ್ತಮ ನಿದರ್ಶನವಾಗಿದೆ. ವಿಜಯನಗರ ಮತ್ತು ಅನಂತರ ಕಾಲದಲ್ಲಿ ಈ ದೇವಾಲಯವನ್ನು ಹಲವಾರು ವಿಧದಲ್ಲಿ ವಿಸ್ತರಿಸಲಾಗಿದೆ. ಇಲ್ಲಿರುವ ಸದಾಶಿವ ದೇವಾಲಯದಲ್ಲಿ ಗರ್ಭಗೃಹ, ಶುಕನಾಶಿ ಮತ್ತು ವಿಶಾಲ ಪಡಸಾಲೆ ಮತ್ತು ನಂದಿ ಮಂಟಪವನ್ನುಳ್ಳ ನವರಂಗಗಳಿವೆ. ಅಲ್ಲಿ ಸೋಮೇಶ್ವರ ಎಂಬ ಹೆಸರಿನ ಹೊಯ್ಸಳರ ಕಾಲದ ತೀರ ಹಾಳು ಬಿದ್ದ ಇನ್ನೊಂದು ದೇವಾಲಯವಿದೆ.

ಚಳ್ಳಕೆರೆ : (ಚಿತ್ರದುರ್ಗ ಜಿ; ತಾ. ಕೇ; ಜನ: 25,035) ಚಳ್ಳಕೆರೆಯು ಬೆಂಗಳೂರು-ಬಳ್ಳಾರಿ ರಸ್ತೆಯಲ್ಲಿದ್ದು ಬೆಂಗಳೂರಿನಿಂದ ಸುಮಾರು 200 ಕಿಮಿಾ ಮತ್ತು ಚಿತ್ರದುರ್ಗದಿಂದ 29 ಕಿಮಿಾ ದೂರದಲ್ಲಿದೆ. ಪುರಸಭೆಯನ್ನು ಹೊಂದಿರುವ ಇದು ವ್ಯಾಪಾರೀ ಕೇಂದ್ರವಾಗಿದೆ. ಒಳ್ಳೆಣ್ಣೆ ಹಾಗೂ ಒಕ್ಕಲುತನದ ಉಪಕರಣಗಳು ಇಲ್ಲಿ ಉತ್ಪಾದಿತವಾಗುವ ಮಹತ್ವದ ವಸ್ತುಗಳಾಗಿವೆ. ಒಳ್ಳೆಣ್ಣೆಯ ಕಾರ್ಖಾನೆಗಳು, ಅಕ್ಕಿ ಗಿರಣಿಗಳು, ಮರ ಕೊಯ್ಯುವ ಕಾರ್ಖಾನೆಗಳು, ಕಡ್ಡಿ ಪೆಟ್ಟಿಗೆ ಕಾರ್ಖಾನೆ, ಸಾಬೂನು ತಯಾರಿಕೆ ಕಾರ್ಖಾನೆಗಳು ಮುಂತಾದ ವಿವಿಧ ಉದ್ಯಮಗಳು ಈ ಪಟ್ಟಣದಲ್ಲಿವೆ. ಸುತ್ತಲಿನ ಗ್ರಾಮೀಣ ಪ್ರದೇಶಗಳಲ್ಲಿ ಇತ್ತೀಚೆಗೆ ರೇಷ್ಮೆ ಹುಳು ಸಾಕಾಣಿಕೆಯನ್ನು ಆರಂಭಿಸಲಾಗಿದೆ. ಪರಶುರಾಮಪುರ, ರಾಮಸಾಗರ, ಮನ್ನೆ

ಕೋಟೆ-ಕೋಡಿಹಳ್ಳಿ, ಮೀರಸಾಬಿ ಹಳ್ಳಿಗಳಲ್ಲಿರುವ ಕೆರೆಗಳು ಮತ್ತು ರಾಣಿಕೆರೆ ಎಂಬವು ಈ ತಾಲ್ಲೂಕಿನಲ್ಲಿರುವ ಮಹತ್ವದ ಕೆರೆಗಳಾಗಿವೆ. ವೀರಭದ್ರ ದೇವರ ಗುಡಿ, ರಾಮಮಂದಿರ, ಲಕ್ಷ್ಮೀ ನಾರಾಯಣ ಮತ್ತು ಚಳ್ಳಕೆರೆಯಮ್ಮ ಈ ಪಟ್ಟಣದಲ್ಲಿರುವ ಪ್ರಮುಖ ದೇವಾಲಯಗಳಾಗಿವೆ, ಗೋರ್ಲಕಟ್ಟೆಯ ಜಗಳೂ ರಜ್ಜನ ಗುಡಿಯು ಬಹು ಸಂಖ್ಯೆಯ ಭಕ್ತರನ್ನು ಆಕರ್ಷಿಸುತ್ತದೆ. ದೊಡ್ಡೇರಿ (ಜನ: 2,928)ಯು ಚಳ್ಳಕೆರೆಯಿಂದ ಆರು ಕಿಮೀ ಪೂರ್ವಕ್ಕಿರುವ ಹಳ್ಳಿ; ಈ ಸ್ಥಳವನ್ನು ಹರತಿ-ನಿಡುಗಲ್ ಮನೆ ತನದವರು ಸಂಸ್ಥಾಪಿಸಿದರು. ಸಿರಾದ ನವಾಬರು ಮತ್ತು ಹೈದರ್ ಅಲಿಯ ಕಾಲದಲ್ಲಿ ಇದು ಮಹತ್ವದ ಸ್ಥಳವಾಗಿತ್ತು ಮತ್ತು 1882 ರವರೆಗೆ ತಾಲ್ಲೂಕು ಕೇಂದ್ರವಾಗಿತ್ತು. ಕಾಗದ ತಯಾರಿಕೆಗೆ ಪ್ರಸಿದ್ಧವಾಗಿದ್ದ ಇಲ್ಲಿನ ಕಾಗದದ ಅಳತೆಯನ್ನು ದೊಡ್ಡೇರಿ ಗಜ ಎಂಬ ಪ್ರಮಾಣಿತ ಅಳತೆಯಾಗಿ ಪರಿಗಣಿಸ ಲಾಗಿತ್ತು. ಇಲ್ಲಿ 1695ರಲ್ಲಿ ಮರಾಠಾ ಮತ್ತು ಮುಘಲ ಸೇನೆ ಗಳ ನಡುವೆ ಒಂದು ಭೀಕರವಾದ ಕಾಳಗ ನಡೆದಿತ್ತು. ಈ ಯುದ್ಧದಲ್ಲಿ ಸಿರಾದ ಮುಘಲ ಸೇನೆಯ ದಂಡನಾಯಕನಾದ ಕಾಸೀಮ ಖಾನನು ಸಂತಾಜಿ ಘೋರ್ಪಡೆಯಿಂದ ಹತನಾದನು. ಚಳ್ಳಕೆರೆಯಿಂದ 29 ಕಿಮೀ ದೂರದಲ್ಲಿರುವ ಗೌರ ಸಮುದ್ರ ಎಂಬ ಹಳ್ಳಿಯಲ್ಲಿ ಗೌರ ಸಮುದ್ರಮ್ಮ ಅಥವಾ ಮಾರಮ್ಮ ದೇವತೆಯ ಗುಡಿಯಿದೆ. ಚಳ್ಳಕೆರೆಯಿಂದ 22 ಕಿಮೀ ದೂರದಲ್ಲಿ ನೆಲೆಸಿರುವ ನಾಯಕನ ಹಟ್ಟಿ (ಜನ: 3,757) ಎಂಬ ಊರಿನ ಪ್ರಾಚೀನ ಹೆಸರು ಹಟ್ಟಿ ಎಂದು. ಇದು ಸ್ಥಾನೀಯ ನಾಯಕ ಮನೆತನದ ಆಡಳಿತ ಕೇಂದ್ರವಾಗಿತ್ತು. ಇಲ್ಲಿ ಹಾಳುಬಿದ್ದ ಕೋಟೆಯಿದೆ. ಕೋಟೆ ಮಲ್ಲಪ್ಪ ನಾಯಕನ ವಂಶಸ್ಥರಲ್ಲಿ ಒಬ್ಬನು ಮೂಲ ಮನೆತನದಿಂದ ದನಕರು ಸಹಿತ ಬೇರೆಯಾಗಿ ತನಗಾಗಿ ಹಟ್ಟಿಯೆಂಬ ಗ್ರಾಮವನ್ನು ಸ್ಥಾಪಿಸಿದನೆಂಬ ಪ್ರತೀತಿ ಯಿದೆ. ಅನಂತರ ಈ ವಂಶದಲ್ಲಿ ಹುಟ್ಟಿದ ಬೂದಿ ಮಲ್ಲನಾಯ ಕನು ವಿಜಯನಗರ ಕಾಲದಲ್ಲಿ ಪ್ರಸಿದ್ಧಿಗೆ ಬಂದನು. ಅತನು ಪ್ರಸಿದ್ಧ ಕುಸ್ತಿಪಟುವನ್ನು ಸೋಲಿಸಿ ಭೀಮ ಎಂದು ಪ್ರಸಿದ್ಧ ನಾಗಿದ್ದನು. ಭೀಮನಕೆರೆಯನ್ನು ಆತ ನಿರ್ಮಿಸಿದನೆಂದು ಹೇಳ ಲಾಗುತ್ತದೆ. ಈ ಊರಿನಲ್ಲಿ ಗುರು ತಿಪ್ಪೇರುದ್ರಯ್ಯ ಎಂಬ ಶ್ರೇಷ್ಠ ಲಿಂಗಾಯತ ಸಂತರ ಸಮಾಧಿ ಹಾಗೂ ಮಂದಿರಗಳಿವೆ. ಈ ಗುರುವು 17ನೇಯ ಶತಮಾನದಲ್ಲಿ ಜೀವಿಸಿದ್ದಂತೆಯೂ, ಹಟ್ಟಿಯ ಪಾಳೆಯಗಾರರ ಕುಲಗುರುಗಳಾಗಿದ್ದಂತೆಯೂ ತಿಳಿದು ಬರುತ್ತದೆ. ಭತ್ತ, ಅಡಕೆ ಮತ್ತು ವೀಳ್ಯದೆಲೆಗಳು ಈ ಪ್ರದೇಶದ ಪ್ರಮುಖ ಬೆಳೆಗಳಾಗಿವೆ. ಇಲ್ಲಿರುವ ವಿಶಾಲವಾದ ಹಿರೇಕೆರೆ ಎಂಬ ಹೆಸರಿನ ಬೃಹತ್ ಕೆರೆಯು ಜಿಲ್ಲೆಯಲ್ಲಿಯೇ ಅತೀ ದೊಡ್ಡ ದಾದ ಕೆರೆಯಾಗಿದ್ದು, ಅದನ್ನು ಮೇಲೆ ತಿಳಿಸಿದ ಸಂತರು ನಿರ್ಮಿಸಿ ದರೆಂಬ ಪ್ರತೀತಿಯಿದೆ. ಈ ಪಟ್ಟಣವು ಹೋಬಳಿಯ ಕೇಂದ್ರ ವಾಗಿದ್ದು, ಅಲ್ಲಿ ಪಟ್ಟಣ ಪಂಚಾಯತಿ ಸಂಸ್ಥೆಯಿದೆ. ರಾಮದುರ್ಗ ಹೊಸ ಗುಡ್ಡ ಎಂಬುದು 150 ಅಡಿ ಎತ್ತರದ ಚಿಕ್ಕ ಗುಡ್ಡವಾಗಿದ್ದು, ಅದು ನಾಯಕನ ಹಟ್ಟಿ ಪಟ್ಟಣದ ದಕ್ಷಿಣಕ್ಕೆ ಎಂಟು ಕಿಮೀ ದೂರದಲ್ಲಿದೆ. ಅದರ ಹತ್ತಿರದಲ್ಲಿ ಚೌಕಾ ಕಾರದ ಕೋಟೆಯಿದೆ ಮತ್ತು ಗುಡ್ಡದ ಮೇಲೆ ಬಂಡೆಗಲ್ಲಿನಲ್ಲಿ ನಿರ್ಮಿತವಾದ ನೀರಿನಿಂದ ತುಂಬಿದ ಜಲಾಶಯಗಳಿವೆ. ನಾಯಕರ ಕಾಲದಲ್ಲಿ ಗುಹಾಲಯದಲ್ಲಿ ಬಂಡೆಗಲ್ಲಿನಲ್ಲಿ ಕೆತ್ತಿ ನಿರ್ಮಿಸಲಾದ ರಾಮೇಶ್ವರ ದೇವಾಲಯವಿದ್ದು, ಎದುರಿನಲ್ಲಿ ಅಖಂಡ ಶಿಲೆಯಲ್ಲಿ ಕೆತ್ತಲಾದ ಬೃಹತ್ ನಂದಿ ವಿಗ್ರಹವುಳ್ಳ ಇದು ವೈಶಿಷ್ಟ್ಯಪೂರ್ಣ ವಾದ ಸ್ಮಾರಕವಾಗಿದೆ. ಚಿತ್ರದುರ್ಗದ ಪಾಳೆಯಗಾರರು 18 ನೇಯ ಶತಮಾನದಲ್ಲಿ ಈ ಮಂದಿರವನ್ನು ನಿರ್ಮಿಸಿದರೆಂದು ಹೇಳಲಾಗುತ್ತದೆ. ನಾಯಕನ ಹಟ್ಟಿಯಿಂದ ಐದು ಕಿಮೀ ದೂರದಲ್ಲಿ ಖುದಾಪುರ ಎಂಬ ಹಳ್ಳಿಯಿದೆ. ಐತಿಹಾಸಿಕ ಪ್ರಸಿದ್ಧಿಯ ಈ ಊರಲ್ಲಿ ಬೃಹತ್ತಾದ ಭಾರತ ಸರಕಾರದ ಕುರಿ ತಳಿಯ ಕೇಂದ್ರವಿದೆ. ತಳಕು (ಜನ: 1,803) ಎಂಬ ಹಳ್ಳಿಯು ಅದೇ ಹೆಸರಿನ ಹೋಬಳಿಯ ಕೇಂದ್ರವಾಗಿದ್ದು ಅಲ್ಲಿ ಗ್ರಾಮ ಪಂಚಾಯಿತಿಯಿದೆ. ಇದು ಚಳ್ಳಕೆರೆಯಿಂದ ಸುಮಾರು 14 ಕಿಮೀ ಅಂತರದಲ್ಲಿದೆ. ಬಸವನಾಲಾ ತಳಪರಿಗೆ ಎಂಬ ಹೆಸರಿನ ಕಾಲುವೆಯು ಸುಮಾರು 170 ಎಕರೆಯಷ್ಟು ಭೂಮಿಗೆ ನೀರುಣ್ಣಿಸುತ್ತದೆ. ಪ್ರೊ|| ಟಿ. ಎಸ್. ವೆಂಕಣ್ಣಯ್ಯ, ಟಿ. ಎಸ್. ಶಾಮರಾವ್ ಮತ್ತು ಸುಪ್ರಸಿದ್ಧ ಕನ್ನಡ ಕಾದಂಬರಿಕಾರ ತ.ರಾ.ಸು. ಅವರು ಮೂಲತಃ ಈ ಊರಿನವರು.

ಚಾಮರಾಜನಗರ : (ಮೈಸೂರು ಜಿ; ತಾ. ಕೇ; ಜನ: 40,422) ಪುರಸಭೆಯನ್ನುಳ್ಳ ಚಾಮರಾಜನಗರವು ಮೈಸೂರಿ ನಿಂದ 61 ಕಿಮೀ ಮತ್ತು ಬೆಂಗಳೂರಿನಿಂದ 198 ಕಿಮೀ ದೂರ ದಲ್ಲಿದೆ. ಅರಿಕುಟಾರ ಎಂಬುದು ಇದರ ಪ್ರಾಚೀನ ಹೆಸರಾಗಿತ್ತು. ಮೈಸೂರಿನ ದೊರೆ ಮೂರನೇಯ ಕೃಷ್ಣರಾಜ ಒಡೆಯರ್ ಅವರು ಈ ಊರಿನಲ್ಲಿ ಹುಟ್ಟಿದ ತಮ್ಮ ತಂದೆ ಚಾಮರಾಜ ಒಡೆಯರ ಸ್ಮರಣಾರ್ಥ ಈ ಊರಿನ ಹೆಸರನ್ನು ಚಾಮರಾಜನಗರವೆಂದು ಬದಲಾಯಿಸಿದ್ದರು. ಮತ್ತು 1825ರಲ್ಲಿ ಅತ್ಯಂತ ಸುಂದರವಾದ ಚಾಮರಾಜೇಶ್ವರ ಎಂಬ ಮಂದಿರವನ್ನು ನಿರ್ಮಿಸಿದರು. ಅಲ್ಲದೆ, ಅಲ್ಲಿ ವೀರಭದ್ರ ಮತ್ತು ಲಕ್ಷ್ಮೀಕಾಂತ ಎಂಬ ಎರಡು ಗುಡಿಗಳಿವೆ. ವಿಷ್ಣುವರ್ಧನನ ದಂಡನಾಯಕನಾಗಿದ್ದ ಪುಣಿಸೆ ರಾಜನು 12ನೇಯ ಶತಮಾನದಲ್ಲಿ ನಿರ್ಮಿಸಿದ್ದ ಪಾರ್ಶ್ವನಾಥ ಬಸದಿಯು ಒಳ್ಳೆಯ ಸುಸ್ಥಿತಿಯಲ್ಲಿದೆ. ಇದು ವ್ಯಾಪಾರದ ಕೇಂದ್ರವಾಗಿದೆ. ಮತ್ತು ಹಿಪ್ಪುನೇರಳೆ ಈ ತಾಲ್ಲೂಕಿನ ಪ್ರಮುಖ ಬೆಳೆಯಾಗಿದೆ. ಈ ಊರಿನಲ್ಲಿ ಒಂದು ರೇಷ್ಮೆ ವ್ಯಾಪಾರದ ಮಳಿಗೆ, ರೇಷ್ಮೆ ಗೂಡು ಶೇಖರಿಸುವ ಮಳಿಗೆಗಳು, ಮತ್ತು ರೇಷ್ಮೆ ಕೃಷಿ ತೋಟಗಳು ಇವೆ. ಇಲ್ಲಿಂದ ಮೂರು ಕಿಮೀ ಪೂರ್ವಕ್ಕಿರುವ ಇದೇ ಊರಿನ ಭಾಗವಾದ ರಾಮಸಮುದ್ರದಲ್ಲಿ ವಿಶಾಲವಾದ ಪುರಾತನ ನಗರದ ಅವಶೇಷಗಳು ಇವೆ. ಸ್ಥಾನಿಕ ನಂಬಿಕೆಯಂತೆ ಇದು ಅರ್ಜುನನ ಹೆಂಡತಿ ಚಿತ್ರಾಂಗದಾ

ಎಂಬವಳು ವಾಸವಾಗಿದ್ದ ಸ್ಥಳ (ಸ್ಥಳೀಯವಾಗಿ ಇದು ಅರಳು ಕೋಟೆ ಎಂದೂ ಹೆಸರು ಪಡೆದಿದೆ). ಇಲ್ಲಿರುವ ಜನಾರ್ದನನ ದೇವಾಲಯವು 12ನೇಯ ಶತಮಾನಕ್ಕೆ ಸೇರಿದ ಹೊಯ್ಸಳ ಶೈಲಿಯ ಕಟ್ಟಡವಾಗಿದೆ. ಈಗ ಇದು ತುಂಬ ಶಿಥಿಲಗೊಂಡಿದೆ. ಅಲ್ಲಿ ವೀರಭದ್ರ ಮತ್ತು ಆಂಜನೇಯ ಸ್ವಾಮಿಯ ಗುಡಿಗಳೂ ಇವೆ. ಹಳೆಯ ಕೋಟೆಯ ಅವಶೇಷಗಳೂ ಇಲ್ಲಿ ಗೋಚರಿಸುತ್ತವೆ. ಇದು ಪಾಳುಗ್ರಾಮದ ಸ್ಥಳವಾಗಿದೆ. ಹರದನಹಳ್ಳಿ ಎಂಬುದು ಹೋಬಳಿಯ ಕೇಂದ್ರವಾಗಿದ್ದು, ಚಾಮರಾಜನಗರದಿಂದ ಪೂರ್ವಕ್ಕೆ ಐದು ಕಿಮೀ ದೂರದಲ್ಲಿದೆ. ಇಲ್ಲಿ ಲಿಂಗಾಯತ ಸಂತ ಶ್ರೀಷ್ಮರ ಗದ್ದುಗೆಯಿದೆ. ಇಲ್ಲಿ ಗೋಸಲ ಚನ್ನಬಸವ ಮತ್ತು ತೋಂಟದ ಸಿದ್ಧಲಿಂಗೇಶ್ವರರು ಕೆಲವು ಕಾಲ ವಾಸವಾಗಿದ್ದರು. ಅಲ್ಲಿ ದಿವ್ಯಲಿಂಗೇಶ್ವರ ಮತ್ತು ಗೋಪಾಲಸ್ವಾಮಿ ಎಂಬ ಎರಡು ದ್ರಾವಿಡ ಶೈಲಿಯ ವಿಶಾಲವಾದ ಮಂದಿರಗಳಿವೆ. ಹಳ್ಳಿಯ ಬದಿಯಲ್ಲಿ ಒಂದು ಮಣ್ಣಿನ ಕೋಟೆ ಮತ್ತು ಒಕ್ಕಲುತನದ ಮಾದರಿ ತೋಟಗಳಿವೆ. ಹರದನಹಳ್ಳಿಯಿಂದ ಸುಮಾರು ಮೂರು ಕಿಮೀ ಅಂತರದಲ್ಲಿರುವ ಅಮಚವಾಡಿ ಎಂಬ ಹಳ್ಳಿಯ ಸಮೀಪದ ದಿಣ್ಣೆಯ ಮೇಲೆ ಇರುವ ಗುಡಿಯಲ್ಲಿ, ಪ್ರತಿಯೊಂದರಲ್ಲಿ ಆಯುಧವಿರುವ ಮೂವತ್ತು ಕೈಗಳನ್ನು ಹೊಂದಿದ ಸುಮಾರು 12 ಅಡಿ ಎತ್ತರದ, ಕಗ್ಗಲ್ಲಿನಲ್ಲಿ ಕೆತ್ತಿದ ವೀರಭದ್ರ ದೇವರ ಸುಂದರ ಮೂರ್ತಿಯಿದೆ. ಇದು ಹಿಂದೆ ಪಾಳೆಯಗಾರರ ಬೀಡಾಗಿತ್ತು. ಮೈಸೂರು ಅರಸು ಮನೆತನದವರು ಈ ಮಂದಿರಕ್ಕೆ ಅನೇಕ ದತ್ತಿಗಳನ್ನು ಬಿಟ್ಟಿದ್ದುಂಟು. ಚಾಮರಾಜನಗರದಿಂದ ಪಶ್ಚಿಮಕ್ಕೆ 24 ಕಿಮೀ ಅಂತರದಲ್ಲಿರುವ ಮಲೆಯೂರು ಎಂಬ ಹಳ್ಳಿಯು ಜೈನರ ಯಾತ್ರಾ ಸ್ಥಳವಾಗಿದೆ. ಜೈನರಿಂದ ಪೂಜಿಸಲ್ಪಡುವ ಎರಡು ಬಸದಿಗಳು ಈ ಊರಿನಲ್ಲಿವೆ. ಸಮೀಪದ ಗುಡ್ಡದ ತುದಿಯಲ್ಲಿ 24 ತೀರ್ಥಂಕರರ ಪಾದುಕೆಗಳನ್ನು ಸ್ಥಾಪಿಸಲಾಗಿವೆ. ಅವು ಉತ್ತರದ ಭಾರತದ ಸಮೇಧಗಿರಿಯ ಪಾದುಕೆಗಳಂತೆಯೇ ಇವೆ ಎಂದು ಹೇಳಲಾಗುತ್ತದೆ. ಗುಡ್ಡದ ಮೇಲಿರುವ ಬಸದಿಯಲ್ಲಿ ಸುಂದರವಾಗಿ ಕೆತ್ತಲಾದ, ಗರ್ಭಗೃಹದಲ್ಲಿರುವ ಪಾರ್ಶ್ವನಾಥನ ಮೂರ್ತಿ ಅಲ್ಲದೆ, ಪದ್ಮಾವತಿ ಮತ್ತು ಜ್ವಾಲಾಮಾಲಿನಿಯ ಮೂರ್ತಿಗಳೂ ಇವೆ. ಹರದನಹಳ್ಳಿ ಹೋಬಳಿಯಲ್ಲಿರುವ ಸರಸಮಂಗಲ ಎಂಬ ಹಳ್ಳಿಯು ಚಾಮರಾಜ ನಗರದಿಂದ 24 ಕಿಮೀ ದೂರದಲ್ಲಿದ್ದು ಇಲ್ಲಿ ಗಂಗರ ಕಾಲದ ರಾಮಲಿಂಗೇಶ್ವರ ದೇವಾಲಯದಲ್ಲಿ ಸಪ್ತಮಾತೃಕೆಯರು ಮತ್ತು ಅಷ್ಟದಿಕ್ಪಾಲಕರ ಸುಂದರ ಮೂರ್ತಿಗಳಿವೆ. ಎಂಟನೇಯ ಶತಮಾನದ ಈ ದೇವಾಲಯದ ಸುತ್ತಲಿನ ಬಯಲಿನಲ್ಲಿ ಅನೇಕ ಮೂರ್ತಿಗಳು, ವೀರಗಲ್ಲುಗಳು ಹರಡಿವೆ. ಸಂತೆಮಾರಹಳ್ಳಿಯಿಂದ 10 ಕಿಮೀ ಅಂತರದಲ್ಲಿರುವ, ನಂಜನಗೂಡು–ಎಳಂದೂರು ರಸ್ತೆಯಲ್ಲಿರುವ, ಉಮ್ಮತ್ತೂರು ಎಂಬ ಹಳ್ಳಿಯು ಪಾಳೆಯಗಾರರ ಮಹತ್ವದ ಆಡಳಿತ ಕೇಂದ್ರವಾಗಿತ್ತು. ಹಳೆಯ ಕೋಟೆಯ ಅವಶೇಷಗಳು, ಪಾಳೆಯಗಾರರು ನಿರ್ಮಿಸಿದ್ದ ದ್ರಾವಿಡ ಶೈಲಿಯ ವಿಶಾಲ ಕಟ್ಟಡಗಳಾದ ಭುಜಂಗೇಶ್ವರ ಮತ್ತು ರಂಗನಾಥ ಎಂಬ ದೇವಾಲಯಗಳು ಈ ಊರಿನ ನೋಡತಕ್ಕ ಸ್ಮಾರಕಗಳಾಗಿವೆ. ಅಲ್ಲಿ ಒಂದು ನೀರಾವರಿ ಸೌಕರ್ಯವಿರುವ ವಿಶಾಲವಾದ ಕೆರೆ ಮತ್ತು ಜೈನ ಬಸದಿಗಳು ಇವೆ.

ಚಿಂಚೋಳಿ : (ಕಲ್ಬುರ್ಗಿ ಜಿ ; ತಾ. ಕೇ ; ಜನ: 10,433) ಚಿಂಚೋಳಿಯು ಮುಳ್ಳಮಾರಿ ನದಿಯ ದಡದ ಮೇಲಿದ್ದು, ಬೆಂಗಳೂರಿನಿಂದ 578 ಕಿಮೀ ದೂರದಲ್ಲಿದೆ. ಈ ಊರಿನಲ್ಲಿ ಪುರಸಭೆಯಿದ್ದು, ಈ ಪ್ರದೇಶವು ಫಲವತ್ತಾದ ಮಸಾರಿ (ಜಂಬಿಟ್ಟಿಗೆ) ಮತ್ತು ಎರೆ ಭೂಮಿಗಳಿಂದ ಕೂಡಿದೆ; ಹಾಗೂ ಬೆಟ್ಟ ಮತ್ತು ಕೊಳ್ಳಗಳಿಂದ ಸುತ್ತುವರಿಯಲ್ಪಟ್ಟಿದೆ. ಇದು ನಿಜಾಮನಿಗೆ ಅಧೀನನಾಗಿದ್ದ ಅಲಮ್ ಅಲಿ ಫೈರೋಜ್ ಎಂಬ ಜಹಗೀರ್‌ದಾರನ ನಿಯಂತ್ರಣದಲ್ಲಿತ್ತು. ಇಲ್ಲಿರುವ ಸುಂದರವಾದ ಮಹಬೂಬ್ ಸುಭಾನಿ ದರ್ಗಾವನ್ನು ಸಂದರ್ಶಿಸಲು ಬಹು ಸಂಖ್ಯೆಯಲ್ಲಿ ಮುಸ್ಲಿಮರು ಬರುತ್ತಾರೆ. ಇಲ್ಲಿರುವ ರಾಜನ ಅರಮನೆಯೆಂಬ ಭವ್ಯವಾದ ಕಟ್ಟಡವು ಸಂದರ್ಶನೀಯ ಸ್ಥಳವಾಗಿದೆ. ಇಲ್ಲಿನ ಸೂಳೆಪೇಟೆಯಲ್ಲಿರುವ ವೀರಭದ್ರೇಶ್ವರ ದೇವಾಲಯವು ಬಹುಸಂಖ್ಯೆಯಲ್ಲಿ ಜನರನ್ನು ಆಕರ್ಷಿಸುತ್ತದೆ. ಚಂಗ್‌ತಾದಲ್ಲಿರುವ ಮಸ್ತಾನ್ ಖಾದ್ರಿ ದರ್ಗಾವು ಈ ಪ್ರದೇಶದ ಮುಸಲ್ಮಾನರಿಗೆಲ್ಲ ಧಾರ್ಮಿಕ ಮಹತ್ವದ ಸ್ಥಳವಾಗಿದೆ.

ಚಿಂತಾಮಣಿ : (ಕೋಲಾರ ಜಿ; ತಾ. ಕೇ; ಜನ: 39,214) ಕೋಲಾರದಿಂದ ಸುಮಾರು 32 ಕಿಮೀ ಮತ್ತು ಬೆಂಗಳೂರಿನಿಂದ 75 ಕಿಮೀ ದೂರದಲ್ಲಿರುವ ಚಿಂತಾಮಣಿಯನ್ನು ಮರಾಠಾ ಸರದಾರನಾದ ಚಿಂತಾಮಣಿರಾವ್ ಎಂಬುವನು ಸ್ಥಾಪಿಸಿದನು. ಪ್ರಸ್ತುತ ಅಲ್ಲಿ ಒಂದು ಪುರಸಭೆ ಇದೆ. ಚಿಂತಾಮಣಿಯು ಕೋಲಾರ ಜಿಲ್ಲೆಯಲ್ಲಿರುವ ಪ್ರಮುಖ ವ್ಯಾಪಾರ ಕೇಂದ್ರಗಳಲ್ಲಿ ಒಂದಾಗಿದೆ. ಬಂಗಾರ, ಬೆಳ್ಳಿ ಮತ್ತು ಅಮೂಲ್ಯ ಹರಳುಗಳ ಗಮನಾರ್ಹ ವ್ಯಾಪಾರವು ಇಲ್ಲಿ ನಡೆಯುತ್ತದೆ. ಈ ಸ್ಥಳವು ಊದುಬತ್ತಿ ಉತ್ಪಾದನೆ ಮತ್ತು ದಪ್ಪನೆಯ ದಾಳಿಂಬೆ ಹಣ್ಣುಗಳಿಗಾಗಿ ಪ್ರಸಿದ್ಧವಾಗಿದೆ. ವೇಣುಗೋಪಾಲ ಸ್ವಾಮಿ ದೇವಾಲಯ, ರಾಘವೇಂದ್ರ ಸ್ವಾಮಿಯ ಬೃಂದಾವನ ಮತ್ತು ಚಿಂತಾಮಣಿ ಬೆಟ್ಟದ ಮೇಲಿರುವ ಚಂದ್ರಮೌಳೀಶ್ವರ ದೇವಾಲಯ ಇಲ್ಲಿರುವ ಮಹತ್ವದ ಮಂದಿರಗಳಾಗಿವೆ. ಚಿಂತಾಮಣಿಯಿಂದ ನೈಋತ್ಯಕ್ಕೆ ಐದು ಕಿಮೀ ಅಂತರದಲ್ಲಿರುವ ಅಂಬಾಜಿ ದುರ್ಗವು 4,399 ಅಡಿ ಎತ್ತರದ ಉನ್ನತವಾದ ಬೆಟ್ಟವಾಗಿದ್ದು, ಅದರ ಮೇಲೆ ಟಿಪ್ಪು ಸುಲ್ತಾನನು ಒಂದು ಶಿವ ಮಂದಿರ ಸಹಿತ ಕೋಟೆಯನ್ನು ಕಟ್ಟಿಸಿದನು. ಹಾಳಾದ ಕೆಲವೊಂದು ಕಟ್ಟಡಗಳ ಅವಶೇಷಗಳನ್ನುಳ್ಳ ಇದು ಚಿಂತಾಮಣಿ ತಾಲೂಕಿನಲ್ಲಿರುವ ಆಕರ್ಷಕ ಸ್ಥಳವಾಗಿದೆ.

**ಚಿಕ್ಕನಾಯಕನಹಳ್ಳಿ:** (ತುಮಕೂರು ಜಿ; ತಾ. ಕೇ; ಜನ: 15,593) ಚಿಕ್ಕನಾಯಕನಹಳ್ಳಿಯು ತುಮಕೂರಿನಿಂದ 67 ಕಿಮೀ ಮತ್ತು ಬೆಂಗಳೂರಿನಿಂದ 132 ಕಿಮೀ ದೂರದಲ್ಲಿದೆ. ಇದು ಪುರಸಭೆಯನ್ನು ಹೊಂದಿದೆ. ಹಾಗಲವಾಡಿಯ ನಾಯಕನಾದ ಚಿಕ್ಕನಾಯಕನಿಂದಾಗಿ ಈ ಪಟ್ಟಣಕ್ಕೆ ಈ ಹೆಸರು ಬಂದಿದೆ. ಪರಶುರಾಮಭಾವು ಎಂಬಾತನ ನೇತೃತ್ವದಲ್ಲಿ ಮರಾಠರು ಈ ನಗರವನ್ನು ಸೂರೆಗೊಂಡು ಕೋಟೆಯನ್ನು ಹಾಳುಗೆಡವಿದರು. ಈ ಊರು ಬಿಳಿಯ ಮತ್ತು ಬಣ್ಣದ ನೂಲಿನ ಬಟ್ಟೆಗಳ ಉತ್ಪಾದನೆಗೆ ಪ್ರಸಿದ್ಧವಿದ್ದು, ಇಲ್ಲಿ ಸಿದ್ಧವಾಗುವ ಕಂಬಳಿಗಳು ಇಲ್ಲಿನ ಸಂತೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಮಾರಾಟವಾಗುತ್ತವೆ. ಈ ಪಟ್ಟಣದ ಸುತ್ತಲೂ ತೆಂಗಿನ ತೋಟಗಳು ಮತ್ತು ಅಡಿಕೆಯ ತೋಟಗಳಿವೆ. ಇಲ್ಲಿರುವ ವೆಂಕಟರಮಣ ದೇವಾಲಯವು ತುಂಬಾ ವಿಶಾಲವಾಗಿದ್ದು, ದ್ರಾವಿಡಶೈಲಿಯ ಕಟ್ಟಡವಾಗಿದೆ. ಇಲ್ಲಿ ಹುಳಿಯಾರು ಆಂಜನೇಯ ಮತ್ತು ಬ್ರಹ್ಮಪುರಿ ಆಂಜನೇಯ ಎಂಬ ಎರಡು ಆಂಜನೇಯ ದೇವಾಲಯಗಳಿದ್ದು, ಅವುಗಳಲ್ಲಿ ಮೊದಲನೇಯದು ತುಂಬಾ ದೊಡ್ಡದಾಗಿದೆ. ಇಲ್ಲಿರುವ ರಾಮೇಶ್ವರ ಎಂಬ ಇನ್ನೊಂದು ದೇವಾಲಯವು ದ್ರಾವಿಡ ಶೈಲಿಯ ಕಟ್ಟಡವಾಗಿದ್ದು, ಹಾಗಲವಾಡಿಯ ಪಾಳೆಯಗಾರನು ಇದನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ. ಗ್ರಾಮದೇವತೆಯ ಗುಡಿಯಲ್ಲಿ ರೇಣುಕಾದೇವಿ ಎಂದೂ ಕರೆಯುವ ಹಿರಿಮಾವರದ ಯಲ್ಲಮ್ಮದೇವಿಯ ಮರದ ಮೂರ್ತಿಯಿದೆ. ರೇಣುಕಾದೇವಿಯ ಪತಿಯಾದ ಜಮದಗ್ನಿಯ ಮೂರ್ತಿಯನ್ನು ರೇಣುಕಾದೇವಿಯ ಮೂರ್ತಿಯ ಬದಿಯಲ್ಲಿಡಲಾಗಿದೆ. ಇಲ್ಲಿರುವ ತಾತಯ್ಯನ ಗೋರಿಯೆಂಬ ಮುಸ್ಲಿಂ ಸಂತನ ಗೋರಿಗೆ ಹಿಂದೂಗಳು ಸಹ ಅತ್ಯಂತ ಭಕ್ತಿಯಿಂದ ನಡೆದುಕೊಳುತ್ತಾರೆ. ಈ ತಾಲೂಕಿನಲ್ಲಿರುವ ಇತರ ಮಹತ್ವದ ಸ್ಥಳಗಳು ಈ ರೀತಿ ಇವೆ: ಹಿಂದೆ ಬೂದಿಹಾಳು ತಾಲೂಕಿನ ಕೇಂದ್ರ ಸ್ಥಳವಾಗಿದ್ದ ಹುಳಿಯಾರು (ಜನ: 6,491) ಚಿಕ್ಕನಾಯಕನಹಳ್ಳಿಯಿಂದ 22 ಕಿಮೀ ಅಂತರದಲ್ಲಿದೆ. 1886ರಲ್ಲಿ ಇದನ್ನು ತಾಲೂಕಿನ ಪ್ರಮುಖ ಸ್ಥಳವನ್ನಾಗಿ ಮಾಡಲಾಗಿತ್ತು. ಇಲ್ಲಿ ದೊರೆತಿರುವ ಚಾಳುಕ್ಯರ ಶಿಲಾಶಾಸನಗಳೂ ಮತ್ತು ಇನ್ನಿತರ ಐತಿಹಾಸಿಕ ಅವಶೇಷಗಳು ಇದು ಪ್ರಾಚೀನ ಕಾಲದಲ್ಲಿ ಹುಳಿಯೇರು ಎಂಬ ಹೆಸರಿನ ಮಹತ್ವದ ಅಗ್ರಹಾರವಾಗಿತ್ತೆಂಬುದನ್ನು ನಿರೂಪಿಸುತ್ತದೆ. ಇದು ಕಾಲಾನುಕ್ರಮದಲ್ಲಿ ಹಾಗಲವಾಡಿಯ ಪಾಳೆಯಗಾರರ, ಸಿರಾದ ಮುಸ್ಲಿಂ ಸರದಾರರ ಮತ್ತು ಕೊನೆಗೆ ಹೈದರ್ ಅಲಿಯ ನಿಯಂತ್ರಣಕ್ಕೆ ಒಳಗಾಗಿತ್ತು. ಇಲ್ಲಿರುವ ರಂಗನಾಥ ದೇವಾಲಯವು 12ನೇಯ ಶತಮಾನದ ಹೊಯ್ಸಳ ಶೈಲಿಯ ಕಟ್ಟಡವಾಗಿದೆ. ಮೂಲಕಟ್ಟಡದಲ್ಲಿ ಈಗ ಉಳಿದಿರುವ ಒಂದೇ ಒಂದು ಭಾಗವೆಂದರೆ ಗರ್ಭಗೃಹ. ಇದರಲ್ಲಿರುವ ಮೂಲ ವಿಗ್ರಹವು ಅನಂತಶಯನನು ಏಳು ಹೆಡೆಯ ಸರ್ಪದ ಮೇಲೆ ವಿಲಾಸಪೂರ್ಣವಾಗಿ ಒರಗಿ ವಿಶ್ರಮಿಸುತ್ತಿರುವ ವಿಷ್ಣುವಿನ ಮೂರ್ತಿಯಾಗಿದೆ. ಇದರ ನಾಭಿಕಮಲದಲ್ಲಿ ಕುಳಿತಿರುವ ಬ್ರಹ್ಮನನ್ನು ಕೆತ್ತಲಾಗಿದೆ. ಇಲ್ಲಿರುವ ಮಲ್ಲೇಶ್ವರ ದೇವಾಲಯವು ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿದೆ. ನವರಂಗದ ಮೇಲಿರುವ ಮೇಲ್ಛಾವಣಿಯಲ್ಲಿ ಸುಂದರವಾದ ಹೂಗಳನ್ನು ಕೆತ್ತಲಾಗಿದೆ. ಇಲ್ಲಿ ಒಂದು ವೀರಶೈವ ವಿರಕ್ತಮಠವಿದೆ. ಚಿಕ್ಕನಾಯಕನಹಳ್ಳಿಯಿಂದ 28 ಕಿಮೀ ದೂರದಲ್ಲಿರುವ ಎಳನಾಡು (ಜನ: 1,753) ಎಂಬಲ್ಲಿ ಗಮನಾರ್ಹವಾದ ಸಿದ್ಧರಾಮೇಶ್ವರ ದೇವಾಲಯವಿದೆ. ಇದು ದ್ರಾವಿಡ ವಾಸ್ತುಶೈಲಿಯ ಬೃಹತ್ತಾದ ಕಟ್ಟಡವಾಗಿದ್ದು, ಪೂರ್ವ ಮತ್ತು ದಕ್ಷಿಣಾಭಿಮುಖವಾದ ಎರಡು ಮಹಾದ್ವಾರಗಳನ್ನು ಹೊಂದಿದೆ. ದಕ್ಷಿಣದ ದ್ವಾರಮಂಟಪದ ಮೇಲಿನ ಮೇಲ್ಛಾವಣಿಯನ್ನು ಸುಂದರ ವರ್ಣಾಕೃತಿಗಳಿಂದ ಅಲಂಕರಿಸಲಾಗಿತ್ತು. ಹುತ್ತವೇ ಈ ದೇವಾಲಯದಲ್ಲಿರುವ ಪೂಜನೀಯ ವಸ್ತು. ಅದಕ್ಕೆ ಲಿಂಗದ ಸ್ವರೂಪವನ್ನು ಕೊಟ್ಟು ಅಲಂಕರಿಸಲಾಗಿದೆ. ಉನ್ನತ ಗೋಪುರವನ್ನು ಹೊಂದಿದ ಮಂಟಪವು ಅನೇಕ ಮೆಟ್ಟಿಲುಗಳುಳ್ಳ ಒಂದು ಚೊಕ್ಕ ಕಟ್ಟಡವಾಗಿದೆ. ಇಲ್ಲಿ ಶ್ರೀಮದರಸೀಕೆರೆ—ಎಳನಾಡು ಸಂಸ್ಥಾನದ ರೇಣುಕ ಸಂಪ್ರದಾಯದ ಒಂದು ವೀರಶೈವ ಮಠವಿದೆ. ಅಲ್ಲದೆ, ಇನ್ನೂ ಅನೇಕ ದೇವಾಲಯಗಳಿವೆ. ಚಿಕ್ಕನಾಯಕನಹಳ್ಳಿಯಿಂದ ದಕ್ಷಿಣಕ್ಕೆ 14 ಕಿಮೀ ದೂರದಲ್ಲಿರುವ ಪಂಕಜನಹಳ್ಳಿಯಲ್ಲಿ ವಿಶಾಲವಾದ ಮಲ್ಲಿಕಾರ್ಜುನ ದೇವಾಲಯವಿದೆ. ಗರ್ಭಗೃಹ, ಶುಕನಾಶಿ, ಪ್ರದಕ್ಷಿಣಾಪಥ, ನವರಂಗ, ಒಂದು ಮೊಗಸಾಲೆ, ಪ್ರಾಕಾರ, ಮಹಾದ್ವಾರ ಮತ್ತು ಶಿಖರವನ್ನುಳ್ಳ ನಂದಿಮಂಟಪವನ್ನು ಹೊಂದಿದ ಇದು ದ್ರಾವಿಡ ಶೈಲಿಯ ಕಟ್ಟಡವಾಗಿದೆ. ಈ ದೇವಾಲಯದಲ್ಲಿರುವ ಲಿಂಗವು ಹಲವು ಉಂಡೆಕಲ್ಲುಗಳಿಂದ ಕೂಡಿದ್ದು, ಅದು ಒಂದು ನೂರ ಒಂದು ಲಿಂಗಗಳನ್ನು ಪ್ರತಿನಿಧಿಸುತ್ತದೆಂದು ಭಾವಿಸಲಾಗುತ್ತದೆ. ಮಹಾದ್ವಾರ ಮತ್ತು ಅದರ ಬಾಗಿಲುಗಳಲ್ಲಿ ಸುಂದರವಾದ ಶಿಲ್ಪಾಲಂಕಾರವಿದೆ.

**ಚಿಕ್ಕಬಳ್ಳಾಪುರ:** (ಕೋಲಾರ ಜಿ; ತಾ. ಕೇ; ಜನ: 40,030) ಕೋಲಾರದಿಂದ 60 ಕಿಮೀ ಮತ್ತು ಬೆಂಗಳೂರಿನಿಂದ 59 ಕಿಮೀ ದೂರದಲ್ಲಿರುವ ಚಿಕ್ಕಬಳ್ಳಾಪುರ ಎಂಬುದು ಅದೇ ಹೆಸರಿನ ದೊಡ್ಡಬಳ್ಳಾಪುರ ಎಂಬ ಹೆಸರಿನ ಸ್ಥಳದಿಂದ ವಿಭಿನ್ನ ಎಂದು ತೋರಿಸಲು ಇಟ್ಟ ಹೆಸರಾಗಿದೆ. ಮುಸ್ಲಿಮರು ಇದನ್ನು ಛೋಟಾಬಳ್ಳಾಪುರವೆಂದು, ತೆಲುಗು ಭಾಷೆಯವರು ಚಿನ್ನಬಳ್ಳಾಪುರವೆಂದೂ ಕರೆಯುತ್ತಾರೆ. ಆವತಿಯ ಭೈರೇಗೌಡನ ಮಗ ಮಲ್ಲಭೈರೇಗೌಡನು 1479ರಲ್ಲಿ ಇದನ್ನು ಸ್ಥಾಪಿಸಿದನು. ಈ ಹಳ್ಳಿಯು ಮೂಲತಃ ಅಸ್ತಿತ್ವದಲ್ಲಿದ್ದ ನಿವೇಶನವನ್ನು ಕೋಡಿಮಂಚನಹಳ್ಳಿ ಎಂದೂ ಕರೆಯಲಾಗುತ್ತಿತ್ತು. ಈಗ ಅದು ವ್ಯಾಪಾರದ ಪ್ರಮುಖ ಕೇಂದ್ರವೂ ಮತ್ತು ರೇಷ್ಮೆ ಉದ್ಯಮದ ಕೇಂದ್ರವೂ ಆಗಿದೆ. ಇಲ್ಲಿಂದ ನೀರುಳ್ಳಿ ಮತ್ತು ಆಲೂಗೆಡ್ಡೆಗಳು

ಶ್ರೀಲಂಕಾ ಮತ್ತಿತರ ವಿದೇಶಗಳಿಂದ ನಿರ್ಯಾತವಾಗುತ್ತವೆ. ಇಲ್ಲಿರುವ ದೇವಾಲಯಗಳೆಲ್ಲ ವಿಶೇಷವಾಗಿ ಆಧುನಿಕ ಕಾಲದ್ದಾಗಿವೆ. ಅವುಗಳಲ್ಲೆಲ್ಲ ಚೆನ್ನಕೇಶವ ಮಂದಿರವು ಹೆಚ್ಚು ಪುರಾತನವಾಗಿದೆ. ವೀರಭದ್ರ ದೇವಾಲಯವು ಇತ್ತೀಚಿನ ಸುಂದರ ಕಟ್ಟಡವಾಗಿದ್ದು, ಉಬ್ಬುಗಾರೆಯ ಮೂರ್ತಿಗಳಿಂದ ಅಲಂಕೃತವಾಗಿದೆ. ಈ ನಗರದ ಆಗ್ನೇಯ ದಿಕ್ಕಿಗೆ ಸುಮಾರು ನಾಲ್ಕು ಕಿಮೀ ಅಂತರದಲ್ಲಿ ವರ್ತುಲಾಕಾರದ ಒಂದು ಜಲಾಶಯವಿದ್ದು, ಅದರ ಸುತ್ತಲೂ ಮೆಟ್ಟಿಲುಗಳನ್ನು ಹೊಂದಿದ ಹಲಸಮ್ಮನ ಬಾವಿಯಿದೆ. ಪಶ್ಚಿಮ ದಿಕ್ಕಿನಲ್ಲಿರುವ ಹರಿಹರೇಶ್ವರ ಬೆಟ್ಟದಲ್ಲಿ ಹುಟ್ಟಿ ಹರಿಯುವ ಚಿತ್ರಾವತಿ ನದಿಯು ಈ ಜಲಾಶಯವನ್ನು ಸೇರುತ್ತದೆಂದು ಹೇಳಲಾಗುತ್ತದೆ ಮತ್ತು ಆ ಕಾರಣದಿಂದ ಅದನ್ನು ಪವಿತ್ರ ತೀರ್ಥವೆಂದು ಭಾವಿಸಲಾಗುತ್ತದೆ. ಈ ಜಲಾಶಯದ ಸಮೀಪದಲ್ಲಿ ಆಂಜನೇಯ, ಸುಬ್ರಹ್ಮಣ್ಯ ಮತ್ತು ಕಾಶೀ ವಿಶ್ವೇಶ್ವರ ಎಂಬ ಮೂರು ದೇವಾಲಯಗಳಿವೆ. ಈ ಪಟ್ಟಣದಲ್ಲಿ ಒಂದು ಮಸೀದಿ ಮತ್ತು ಒಂದು ಚರ್ಚ್ ಇದೆ. ಇಲ್ಲೊಂದು ಆಶ್ರಮವಿದ್ದು, ಅದರಲ್ಲಿ ದತ್ತಾತ್ರೇಯನ ಪೂಜೆ ನಡೆಯುತ್ತದೆ. ಮುದ್ದೇನಹಳ್ಳಿ ಈ ಹಳ್ಳಿಯು ಚಿಕ್ಕಬಳ್ಳಾಪುರದಿಂದ ಸುಮಾರು ಒಂಬತ್ತು ಕಿಮೀ ದೂರದಲ್ಲಿದ್ದು, ದಿವಂಗತ ಸರ್ ಎಂ. ವಿಶ್ವೇಶ್ವರಯ್ಯ ಅವರ ಜನ್ಮಸ್ಥಳವಾಗಿದೆ. ಅಲ್ಲಿ ಸತ್ಯಸಾಯಿ ವಸತಿ ಶಾಲೆ ಇದ್ದು, ಅದು ಕರ್ನಾಟಕದ ಎಲ್ಲೆಡೆಯಿಂದ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತದೆ. ಅಲ್ಲಿ ಸರ್ ಎಂ. ವಿಶ್ವೇಶ್ವರಯ್ಯ ಅವರ ಮನೆಯಿದ್ದು, ಅದನ್ನು ವಿಶೇಷ ಕಾಳಜಿಯಿಂದ ರಕ್ಷಿಸಿಡಲಾಗಿದೆ. ಅದರಲ್ಲಿ ಅವರಿಗೆ ಸಂಬಂಧಿಸಿದ ಎಲ್ಲ ವಸ್ತುಗಳು, ಪುಸ್ತಕಗಳು, ಛಾಯಾ ಚಿತ್ರಗಳು ಹಾಗೂ ಇನ್ನಿತರ ಅನೇಕ ವಸ್ತುಗಳನ್ನು ಪ್ರದರ್ಶಿಸಿಡಲಾಗಿದೆ.

ಚಿಕ್ಕಮಗಳೂರು : (ಜಿ. ಮತ್ತು ತಾ. ಕೇ; ಜನ: 60,573) ಚಿಕ್ಕಮಗಳೂರು ಬೆಂಗಳೂರಿನಿಂದ 251 ಕಿಮೀ ದೂರದಲ್ಲಿದೆ. ಈ ಸ್ಥಳವು ಬಾಬಾ ಬುಡನ್ ಬೆಟ್ಟದ ಶ್ರೇಣಿಯ ದಕ್ಷಿಣಕ್ಕಿರುವ ಫಲವತ್ತಾದ ಕಣಿವೆಯಲ್ಲಿದೆ. 1865ರಲ್ಲಿ ಕಡೂರಿನಲ್ಲಿದ್ದ ಜಿಲ್ಲಾ ಕೇಂದ್ರವನ್ನು ಇಲ್ಲಿಗೆ ಸ್ಥಳಾಂತರಿಸಲಾಯಿತು. ಈ ಊರಿನ ಹೆಸರು ಬೆಳೆದುಬಂದ ಬಗೆಗೆ ವಿಶೇಷವಾಗಿ ಅನೇಕ ಶಾಸನಗಳಿಂದ ಆಧಾರಗಳು ಸಿಕ್ಕುತ್ತವೆ. ಇವರ ಅತ್ಯಂತ ಪ್ರಾಚೀನ ಹೆಸರು ಕಿರಿಯ ಮುಗಳಿ ಎಂದಿದ್ದು ಅದು ಒಂದು ಅಗ್ರಹಾರವಾಗಿತ್ತು. ಅದಕ್ಕೆ ಹೊಂದಿಕೊಂಡು ಪಿರಿಯ ಮುಗಳಿ ಎಂಬ ಇನ್ನೊಂದು ಅಗ್ರಹಾರವಿತ್ತು. ಅನಂತರ ಈ ಎರಡು ಸ್ಥಳಗಳನ್ನು ಚಿಕ್ಕ ಮುಗಳಿ ಮತ್ತು ಹಿರಿಯ ಮುಗಳಿ ಎಂದು ಕರೆಯಲಾಗುತ್ತಿತ್ತು. ಈಗ ಈ ಎರಡೂ ಸ್ಥಳಗಳು ಕೂಡಿ ಚಿಕ್ಕಮಗಳೂರಾಗಿದ್ದು, ಅದರಲ್ಲಿಯೇ ಹಿರೇ ಮಗಳೂರು ಕೂಡಿಕೊಂಡಿದೆ. ಪ್ರಚುರದಲ್ಲಿರುವ ದಂತ ಕತೆಗಳ ಪ್ರಕಾರ ಹಿರೇಮಗಳೂರು ಒಂಬತ್ತು ಜನ ಸಿದ್ಧರ ನೆಲವೀಡಾಗಿತ್ತು. ಅವರು ಸಿದ್ಧ ಪುಷ್ಕರಣಿ ಎಂಬ ಜಲಾಶಯದ ಹತ್ತಿರ ತಪಸ್ಸು ಮಾಡಿದ್ದರು; ಅಲ್ಲದೆ ಪರಶುರಾಮನು ಇಲ್ಲಿ ವಾಸವಾಗಿದ್ದುದರಿಂದ ಈ ಸ್ಥಳಕ್ಕೆ ಭಾರ್ಗವ ಪುರಿ ಎಂಬ ಹೆಸರಿತ್ತು ಎಂದು ತಿಳಿದುಬರುತ್ತದೆ. ಚಿಕ್ಕಮಗಳೂರು ಸಮುದ್ರದ ತೀರದಿಂದ 1,034 ಮೀ ಎತ್ತರದಲ್ಲಿದ್ದು ಅತ್ಯಂತ ಹಿತಕರವಾದ ಹವೆಯನ್ನು ಹೊಂದಿದೆ. ಬೋಳರಾಮೇಶ್ವರ ದೇವರ ಜಾತ್ರೆಯು ಪ್ರತೀವರ್ಷ ಏಪ್ರಿಲ್ ತಿಂಗಳಿನಲ್ಲಿ ನೆರವೇರುತ್ತದೆ. ಸುಮಾರು ಒಂದು ಶತಮಾನದ ಹಿಂದೆ ನಿರ್ಮಿತವಾದ ಕತ್ತಿಮಾರಮ್ಮನ ಗುಡಿಯು ಜನಪ್ರಿಯವಾಗಿದೆ. ಇದರ ಪೂಜಾರಿಗಳು ಹರಿಜನರಾಗಿದ್ದಾರೆ. ಕೊಲ್ಲಾಪುರ ಮಹಾಲಕ್ಷ್ಮಿಯ ಮಂದಿರವು ಇಲ್ಲಿರುವ ಇನ್ನೊಂದು ಪ್ರಾಚೀನ ಗುಡಿಯಾಗಿದೆ. ಇದಲ್ಲದೆ ಇತ್ತೀಚೆಗೆ ಕಟ್ಟಲಾದ ಕನ್ನಿಕಾಪರಮೇಶ್ವರಿ ಮತ್ತು ರುಕ್ಮಾಯಿ-ಪಾಂಡುರಂಗ ದೇವಾಲಯಗಳು ಇಲ್ಲಿವೆ. ಈ ಪಟ್ಟಣದಲ್ಲಿ ಮುಸ್ಲಿಂ ಮತಾನುಯಾಯಿಗಳ ಜನಸಂಖ್ಯೆ ಗಮನಾರ್ಹವಾಗಿದ್ದು, ಅಲ್ಲಿ ಅನೇಕ ಮಸೀದಿ ಮತ್ತು ದರ್ಗಾಗಳು ಇವೆ. ಅವುಗಳಲ್ಲಿ ಸಂಗೀನ್ ಮಸೀದಿ, ಜಮಿಯಾ ಮಸೀದಿ ಮುಂತಾದವು ಮಹತ್ವದವುಗಳಾಗಿವೆ. ಸಂಗೀನ್ ಮಸೀದಿಯನ್ನು 17ನೇಯ ಶತಮಾನದಲ್ಲಿ ನಿರ್ಮಿಸಲಾಗಿದೆಯೆಂದು ಹೇಳಲಾಗುತ್ತದೆ. ಸುಮಾರು 150 ವರ್ಷಗಳ ಹಿಂದೆ ನಿರ್ಮಿಸಲಾದ ಜಮಿಯಾ ಮಸೀದಿಯು ಈ ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡದಾದ ಮಸೀದಿಯಾಗಿದೆ. ಅಲ್ಲಿ ಒಂದು ಸೇಂಟ್ ಜೋಸೆಫ್ಸ್ ಕಥೆಡ್ರಲ್ ಎಂಬ ಹೆಸರಿನ ಕ್ಯಾಥೋಲಿಕ್ ಕ್ರೈಸ್ತ ದೇವಾಲಯ (ನಿರ್ಮಾಣ 1976), ಮತ್ತು ಅಂಡ್ರೂಸ ಚರ್ಚ್ (1880ರಲ್ಲಿ ನಿರ್ಮಾಣ) ಎಂಬ ಪ್ರಾಟೆಸ್ಟಂಟ ಕ್ರೈಸ್ತ ಮಂದಿರಗಳು ಇವೆ. ಹಿರೇಮಗಳೂರಿನಲ್ಲಿರುವ ಹೊಯ್ಸಳ ಶೈಲಿಯ ಕೋದಂಡ ರಾಮ ದೇವಾಲಯ, ಪರಶುರಾಮ ಮಂದಿರ, ಈಶ್ವರ ದೇವಾಲಯ, ಕಾಳಿಮಂದಿರ ಮುಂತಾದವು ಇಲ್ಲಿರುವ ಇತರ ದರ್ಶನೀಯ ಕೇಂದ್ರಗಳಾಗಿವೆ. ಇಲ್ಲಿಯ ನಾಗರಿಕ ಆಡಳಿತ ವ್ಯವಸ್ಥೆಯನ್ನು ಪುರಸಭೆಯು ನೋಡಿಕೊಳ್ಳುತ್ತದೆ. ಹಿರೇಮಗಳೂರಲ್ಲಿ ಒಂದು ಕೋಟೆ ಹಾಗೂ ಕಂದಕಗಳ ಅವಶೇಷಗಳಿವೆ. ದಾಸರಹಳ್ಳಿಯು ಚಿಕ್ಕಮಗಳೂರಿನಿಂದ ಸುಮಾರು 10 ಕಿಮೀ ದೂರದಲ್ಲಿದ್ದು, ಅಲ್ಲಿ ಗುಹೆಯಂತಿರುವ ರಂಗನಾಥ ಸ್ವಾಮಿಯ ದೇವಾಲಯ ಮತ್ತು ವೀರಭದ್ರ ದೇವರ ಮೂರ್ತಿಗಳು ಇವೆ. ದತ್ತಾತ್ರೇಯ ಪೀಠ ಎಂಬ ಹಳ್ಳಿಯು ಚಿಕ್ಕಮಗಳೂರಿನಿಂದ ಉತ್ತರಕ್ಕೆ 35 ಕಿಮೀ ಅಂತರದಲ್ಲಿದೆ. ಸಮೀಪದಲ್ಲಿರುವ ಇನಾಮ ದತ್ತಾತ್ರೇಯ ಎಂಬ ಹಳ್ಳಿಯಿಂದ ಭಿನ್ನವಾದುದೆಂಬುದನ್ನು ತೋರಿಸಲು ಇದನ್ನು ಕೆಲವೊಂದು ಸಲ ಸರ್ಕಾರಿ ದತ್ತಾತ್ರೇಯ ಪೀಠದ ಹಳ್ಳಿ ಎಂದು ಕರೆಯಲಾಗುತ್ತದೆ. ಬಿಳಿಕಲ್ಲು ಎಂಬ ಹಳ್ಳಿಯಲ್ಲಿ ರಂಗನಾಥ ಸ್ವಾಮಿಯ ದೇವಾಲಯವಿದೆ. ಚಿಕ್ಕಮಗಳೂರಿನಿಂದ ಸುಮಾರು ಐದು ಕಿಮೀ ಅಂತರದಲ್ಲಿರುವ ಮುತ್ತಾವರ ಎಂಬಲ್ಲಿ ಪಾರ್ಶ್ವನಾಥ ಬಸದಿ ಇದೆ. ಕ್ರಿ. ಶ. 1120ರ ಒಂದು ಜೈನ ಶಾಸನದಲ್ಲಿ ಈ

ಊರನ್ನು ಮುತ್ತವುರ ಎಂದೂ, ಕ್ರಿ. ಶ. 1143ರ ಶಾಸನದಲ್ಲಿ ಮುತ್ತಾವರ ಎಂದು ಕರೆಯಲಾಗಿದೆ. ಮುತ್ತಾವರದಲ್ಲಿ ಆಂಜನೇಯ, ದೇವೀರಮ್ಮ ಮತ್ತು ಚೌಡೇಶ್ವರಿ ದೇವಾಲಯಗಳಿವೆ. ಚಿಕ್ಕಮಗಳೂರಿನಿಂದ ನೈಋತ್ಯಕ್ಕೆ ಸುಮಾರು 20 ಕಿಮೀ ಅಂತರದಲ್ಲಿರುವ ಆಲದೂರು ಎಂಬುದು ಇನ್ನೊಂದು ಮಹತ್ವದ ಸ್ಥಳವಾಗಿದೆ. ಶಿಲಾಶಾಸನಗಳಲ್ಲಿ ಈ ಸ್ಥಳವನ್ನು ಆರುಂದೂರೆಂದು ಹೆಸರಿಸಲಾಗಿದೆ. ಹೊಯ್ಸಳ ವಿಷ್ಣುವರ್ಧನ ಆಳ್ವಿಕೆಯ ಕಾಲದ ಕ್ರಿ. ಶ. 1116ರ ಎರಡು ವೀರಗಲ್ಲುಗಳಿದ್ದು, ಇವನ್ನು ಯುದ್ಧದಲ್ಲಿ ಮಡಿದ ಮಾಚಣ್ಣ ಮತ್ತು ಬೊಮ್ಮಯ್ಯ ಎಂಬಾತರ ಸ್ಮರಣಾರ್ಥವಾಗಿ ನಿಲ್ಲಿಸಲಾಗಿದೆ. ಚಿಕ್ಕಮಗಳೂರಿನಿಂದ ಸುಮಾರು ಎಂಟು ಕಿಮೀ ದೂರದಲ್ಲಿರುವ ಅಂಬಳೆ ಹೋಬಳಿಯ ಕೇಂದ್ರವಾಗಿದೆ. ಕ್ರಿ. ಶ. 959ರ ಶಿಲಾಶಾಸನದಲ್ಲಿ ಇದನ್ನು ಅಮ್ಮಲೆಯೆಂದು ಕರೆದಿದೆ. ಇಲ್ಲಿ ಚೆನ್ನಿಗರಾಯ, ಲೋಕೇಶ್ವರ, ವೀರಭದ್ರ ಮತ್ತು ಗೋಪಾಲಕೃಷ್ಣ ಎಂಬ ನಾಲ್ಕು ದೇವಾಲಯಗಳಿವೆ. ಚೆನ್ನಿಗರಾಯ ದೇವಾಲಯವನ್ನು ಇಮ್ಮಡಿ ಬಲ್ಲಾಳನು ಕ್ರಿ. ಶ. 1178ರಲ್ಲಿ ನಿರ್ಮಿಸಿದನು. ಇದರಲ್ಲಿರುವ ಮೂಲ ಪ್ರತಿಮೆಯನ್ನು ವೀರಬಲ್ಲಾಳ ಕೇಶವ ಎಂದೂ ಕರೆಯಲಾಗುತ್ತದೆ. ಈ ದೇವಾಲಯವನ್ನು ಹೊಯ್ಸಳ ಶೈಲಿಯಲ್ಲಿ ನಿರ್ಮಿಸಲಾಗಿದ್ದು ಅದರಲ್ಲಿ ಗರ್ಭಗೃಹ, ಶುಕನಾಸಿ ಮತ್ತು ನವರಂಗಗಳಿವೆ. ಕ್ರಿ. ಶ. 1249ರ ಶಾಸನವು ಇದನ್ನು ಪ್ರತಾಪಪುರ ಎಂದು ಹೆಸರಿಸಿದೆ. ಲೋಕೇಶ್ವರ ದೇವಾಲಯವನ್ನು ಹೊಯ್ಸಳ ಶೈಲಿಯಲ್ಲಿಯೇ ನಿರ್ಮಿಸಲಾಗಿದೆ. ಉಳಿದೆರಡು ದೇವಾಲಯಗಳಾದ ವೀರಭದ್ರ ಮತ್ತು ಗೋಪಾಲಕೃಷ್ಣ ಎಂಬುವು ಆಧುನಿಕ ಕಾಲದ ಕಟ್ಟಡಗಳಾಗಿವೆ. ಗೋಪಾಲಕೃಷ್ಣ ಮಂದಿರದಲ್ಲಿರುವ ವೇಣುಗೋಪಾಲನ ಮೂರ್ತಿಯು ಹೊಯ್ಸಳರ ಕಾಲದ್ದಾಗಿದ್ದು, ಅತ್ಯಂತ ನಯವಾದ ಕೆತ್ತನೆಗಳಿಂದ ಕೂಡಿದೆ. ದೇವದಾನ ಎಂಬ ಹಳ್ಳಿಯ ಭಾಗವಾದ ಖಾಂಡ್ಯವು ಚಿಕ್ಕಮಗಳೂರಿನಿಂದ 43 ಕಿಮೀ ದೂರದಲ್ಲಿ ಭದ್ರಾನದಿಯ ಬಲದಂಡೆಯ ಮೇಲಿದೆ. ದೇವದಾನವೆಂದರೆ ದೇವಾಲಯಕ್ಕೆ ದತ್ತಿಬಿಟ್ಟ ಹಳ್ಳಿ ಎಂದು ಅರ್ಥ. ಖಾಂಡ್ಯವು ಪಂಚಕ್ಷೇತ್ರಗಳಲ್ಲಿ ಒಂದಾಗಿದೆ. (ಕಳಸ, ಹೆಬ್ಬೆ, ಸೋಮಪುರ ಮತ್ತು ಕೂಡ್ಲಿ ಎಂಬುವು ಉಳಿದ ನಾಲ್ಕು ಕ್ಷೇತ್ರಗಳಾಗಿವೆ). ಖಾಂಡ್ಯದಲ್ಲಿರುವ ಅತ್ಯಂತ ಪುರಾತನ ದೇವಾಲಯಗಳಲ್ಲಿ ಮಾರ್ಕಂಡೇಶ್ವರ ದೇವಾಲಯ ಒಂದಾಗಿದೆ. ಈ ಊರಿನಲ್ಲಿ ಹಿಂದೆ ಮೃಕಂಡು ಋಷಿಯ ಆಶ್ರಮ ವಿದ್ದಿತೆಂದೂ ಅದರಿಂದಾಗಿ ಇದಕ್ಕೆ ಖಾಂಡ್ಯ ಎಂಬ ಹೆಸರು ಬಂದಿರುವುದಾಗಿಯೂ ಸ್ಥಳ ಪುರಾಣಗಳು ತಿಳಿಸುತ್ತವೆ. ಇಲ್ಲಿರುವ ಮೃತ್ಯುಂಜಯ ಮತ್ತು ಜನಾರ್ದನ ದೇವಾಲಯಗಳನ್ನು ಈ ಪರಂಪರೆಯ ಸ್ಮರಣಾರ್ಥವಾಗಿ ನಿರ್ಮಿಸಲಾಗಿರುವಂತೆ ತೋರುತ್ತದೆ. ಮಾರ್ಕಂಡೇಶ್ವರ ಅಥವಾ ಮೃತ್ಯುಂಜಯ ತ್ರಿಯಂಬಕೇಶ್ವರ ದೇವಾಲಯವು ಭದ್ರಾನದಿಯ ದಂಡೆಯ ಮೇಲಿದೆ. ಈ ದೇವಾಲಯವನ್ನು ಕೆಳದಿಯ ನಾಯಕರು 16ನೇಯ ಶತಮಾನದಲ್ಲಿ ನಿರ್ಮಿಸಿದರೆಂದು ಹೇಳಲಾಗುತ್ತದೆ. ಕ್ರಿ. ಶ. 1180ರ ಒಂದು ಶಾಸನದಲ್ಲಿ ಇಲ್ಲಿರುವ ಈಶ್ವರಲಿಂಗವನ್ನು ಅಗಸ್ತ್ಯ ಋಷಿಯು ಸ್ಥಾಪಿಸಿದರೆಂಬ ನಂಬಿಕೆಗೆ ಪ್ರತಿಧ್ವನಿಯಿದೆ. ಜನಾರ್ದನ ದೇವಾಲಯವು ವಿಜಯನಗರ ಕಾಲದ್ದೆಂದು ಹೇಳಲಾಗುತ್ತದೆ. ಕುದುರೆ ಹೆಬ್ಬೆ ಎಂಬಲ್ಲಿ ಒಂದು ಚಿಕ್ಕ ಜಲಪಾತವಿದ್ದು, ಅಲ್ಲಿ ಭದ್ರಾ ನದಿಯು ಎರಡು ಬಂಡೆಗಲ್ಲುಗಳ ನಡುವಿನ ಇಕ್ಕಟ್ಟಾದ ಪ್ರದೇಶದಲ್ಲಿ (ಸ್ಥಳೀಯವಾಗಿ ಇದನ್ನು ಮೇಕೆದಾಟು ಎಂದು ಕರೆಯಲಾಗುತ್ತದೆ) 7.6 ಮೀ ಎತ್ತರದಿಂದ ಕೆಳಗೆ ಧುಮುಕುತ್ತದೆ. ಇದನ್ನು ರಾಮತೀರ್ಥ ಎಂದು ಕರೆಯಲಾಗುತ್ತದೆ. ದೇವದಾನ ಹಳ್ಳಿಯ ಇನ್ನೊಂದು ಭಾಗವಾದ ಗರಿಗುಂಡಿಯಲ್ಲಿರುವ ಹಜರತ್ ಖಾಜಬುನ್ನಬಿ ದರ್ಗಾವು ಅತ್ಯಂತ ಪವಿತ್ರವಾದ ದರ್ಶನೀಯ ಸ್ಥಳವಾಗಿದೆ.

**ಚಿಕ್ಕೋಡಿ :** (ಬೆಳಗಾವಿ ಜಿ; ತಾ. ಕೇ; ಜನ : 22,790) ಚಿಕ್ಕೋಡಿಯು ಬೆಳಗಾವಿಯಿಂದ ಸುಮಾರು 72 ಕಿಮೀ ಮತ್ತು ಬೆಂಗಳೂರಿನಿಂದ ಸುಮಾರು 576 ಕಿಮೀ ದೂರದಲ್ಲಿದೆ. 1680ರ ಓಗ್ಲ್‌ಬಿ ಮತ್ತು 1720ರ ಕ್ಯಾಪ್ಟನ್ ಮೂರ್ ಎಂಬ ವಿದೇಶಿ ಪ್ರವಾಸಿಗರ ವೃತ್ತಾಂತಗಳಿಂದ ಈ ಸ್ಥಳವು ವ್ಯಾಪಾರ ಮತ್ತು ಉದ್ಯಮಗಳಿಗಾಗಿ ಪ್ರಸಿದ್ಧವಾಗಿತ್ತೆಂದು ತಿಳಿದುಬರುತ್ತದೆ. ಇದು ಇಂಗ್ಲಿಷರ ಅಧೀನಕ್ಕೆ ಬರುವ ಮುಂಚೆ ಕೊಲ್ಲಾಪುರದ ಸಂಸ್ಥಾನಿಕರು ಇದನ್ನು ನಿರ್ವಹಿಸುತ್ತಿದ್ದರು. ಶಬ್ದ ನಿಷ್ಪತ್ತಿಯ ಮೇರೆಗೆ ಇದರ ಹೆಸರು ಚಿಕ್ಕ ಕೋಡಿ (ಹಳ್ಳ) ಎಂಬ ಕನ್ನಡ ಪದಸಮುಚ್ಚಯದಿಂದ ಬಂದಿದೆ. ಇದರ ಸಮೀಪದಲ್ಲಿಯೇ ಹಿರೇಕೋಡಿ ಎಂಬ ಇನ್ನೊಂದು ಹಳ್ಳಿ ಇದೆ. ಈ ಊರಿನಲ್ಲಿ ಪುರಾತನ ಅವಶೇಷಗಳೇನೂ ಇಲ್ಲ. ಹಾಳುಬಿದ್ದ ಕೋಟೆ ಮತ್ತು ಅದರ ಕುಸಿದಿರುವ ದ್ವಾರಗಳು ಅಲ್ಲಲ್ಲಿ ಗೋಚರಿಸುತ್ತವೆ. ಬನಶಂಕರಿ, ಪತ್ರಿನಾಗಲಿಂಗ, ಕಾಳಾ ಮಾರುತಿ, ಮಹಾದೇವ ಮತ್ತು ವೆಂಕಟೇಶ ಎಂಬ ಗುಡಿಗಳಲ್ಲದೆ, ಚರಮೂರ್ತಿ ವೀರಶೈವಮಠವು ಇಲ್ಲಿರುವ ಇತ್ತೀಚಿನ ಮಹತ್ವದ ದರ್ಶನೀಯ ಸ್ಥಳಗಳಾಗಿವೆ. ಈ ಊರಿನಲ್ಲಿ ಆರು ಮಸೀದಿಗಳು ಮೂರು ದರ್ಗಾಗಳಿವೆ. ಇದು ಬೆಲ್ಲ, ಮೆಣಸಿನಕಾಯಿ, ತಂಬಾಕು ಅಲ್ಲದೆ ಒಳ್ಳೆಯ ಗುಣಮಟ್ಟದ ವೀಳ್ಯದ ಎಲೆಗಳ ವ್ಯಾಪಾರದ ಕೇಂದ್ರವೆಂದು ಇಡೀ ಜಿಲ್ಲೆಯಲ್ಲಿಯೇ ಪ್ರಸಿದ್ಧವಿದೆ. ತಾಮ್ರ ಮತ್ತು ಹಿತ್ತಾಳೆಯ ಪಾತ್ರೆಗಳನ್ನು ಇಲ್ಲಿ ಉತ್ಪಾದಿಸಲಾಗುತ್ತದೆ. ಇಲ್ಲಿನ ಪುರಸಭೆಯು 1973ರಲ್ಲಿ ಅಸ್ತಿತ್ವದಲ್ಲಿ ಬಂತು. ಎಡೂರು (ಜನ: 4,899) ಎಂಬುದು ಜಿಲ್ಲೆಯಲ್ಲಿಯ ಅತ್ಯಂತ ಸುಪ್ರಸಿದ್ಧ ಯಾತ್ರಾಸ್ಥಳವಾಗಿದ್ದು, ಚಿಕ್ಕೋಡಿಯಿಂದ 27 ಕಿಮೀ ದೂರದಲ್ಲಿ ಕೃಷ್ಣಾನದಿಯ ಎಡದಂಡೆಯ ಮೇಲಿದೆ. ಈ ಊರಿನಲ್ಲಿ ವೀರಭದ್ರ ವಿರೂಪಾಕ್ಷಲಿಂಗನ ಸುಪ್ರಸಿದ್ಧ ದೇವಾಲಯವಿದೆ. ಪೌರಾಣಿಕ ಪರಂಪರೆಯ ಪ್ರಕಾರ ಶ್ರೀರಾಮನು ದಂಡಕಾರಣ್ಯದಲ್ಲಿದ್ದಾಗ ಈ ಲಿಂಗವನ್ನು ಪೂಜಿಸಿದನೆಂದು ಹೇಳ

ಲಾಗುತ್ತದೆ. ದೇವಗಿರಿಯ ಯಾದವರ ದೊರೆ ಸಿಂಘಣದೇವನು 12ನೇಯ ಶತಮಾನದಲ್ಲಿ ಈ ದೇವಾಲಯವನ್ನು ನಿರ್ಮಿಸಿದನೆಂದು ನಂಬಲಾಗಿದೆ. ಈ ದೇವಾಲಯದಲ್ಲಿರುವ 1830, 1836ರ ಶಿಲಾಶಾಸನಗಳು ಪಾಚ್ಛಾಪುರದ ಓರ್ವ ಭಕ್ತರು ಈ ದೇವಾಲಯದ ಜೀರ್ಣೋದ್ಧಾರ ಮಾಡಿಸಿದರೆಂದು ಉಲ್ಲೇಖಿಸುತ್ತವೆ. ಇದು ಅತ್ಯಂತ ಆಯಕಟ್ಟಿನ ಸ್ಥಳದಲ್ಲಿರುವುದರಿಂದ 1754ರಲ್ಲಿ ಪೇಶ್ವೆ ಬಾಳಾಜಿರಾಯನು ಕರ್ನಾಟಕಕ್ಕೆ ಹೋಗುವ ದಾರಿಯಲ್ಲಿ ತನ್ನ ಸೈನ್ಯದ ಸಮೇತ ಇಲ್ಲಿ ಬೀಡುಬಿಟ್ಟಿದ್ದನು. 1818ರಲ್ಲಿ ಕರ್ನಲ್ ವೆಲ್ಲೆಸ್ಲಿ ಮತ್ತು ಜನರಲ್ ಮನ್ರೋ ಇಲ್ಲಿ ಬೀಡುಬಿಟ್ಟಿದ್ದರು. ಈ ಊರಿನಲ್ಲಿ ಕಾಡಸಿದ್ಧೇಶ್ವರ ಎಂಬ ಸುಪ್ರಸಿದ್ಧ ವೀರಶೈವಮಠವೂ ಇದೆ. ಚಿಕ್ಕೋಡಿಯಿಂದ ದಕ್ಷಿಣಕ್ಕೆ ಎಂಟು ಕಿಮೀ ದೂರದಲ್ಲಿರುವ ಕರೋಶಿಯು (ಜನ: 5,752) ಚಿಕ್ಕೋಡಿ-ಹುಕ್ಕೇರಿ ರಸ್ತೆ ಮೇಲಿರುವ ಒಂದು ದೊಡ್ಡ ಹಳ್ಳಿಯಾಗಿದೆ. ಶಾನೂರ್‌ಬಾಬಾ ಎಂಬ ಸುಪ್ರಸಿದ್ಧ ಮುಸಲ್ಮಾನ್ ಸಂತನೊಬ್ಬನ ಗೋರಿಯು ಇಲ್ಲಿರುವ ಮಹತ್ವದ ದರ್ಶನೀಯ ಸ್ಥಳಗಳಲ್ಲಿ ಒಂದಾಗಿದೆ. ಸುಮಾರು 450 ವರ್ಷಗಳಷ್ಟು ಹಳೆಯದೆಂದು ಹೇಳಲಾಗುವ ಇದು ಹಿಂದೂ ಮತ್ತು ಮುಸಲ್ಮಾನರಿಬ್ಬರಿಗೂ ಪೂಜ್ಯವೆನಿಸಿದೆ. ಇಲ್ಲಿರುವ ಘುಟ್ಟೆ ಬಸವಣ್ಣನ ದೇವಾಲಯವು ಈ ಪ್ರದೇಶದ ಜನರಿಗೆಲ್ಲಾ ಅತ್ಯಂತ ಪೂಜ್ಯವಾಗಿದೆ.

ಚಿತ್ರದುರ್ಗ : (ಜಿ. ಉಪವಿಭಾಗ; ತಾ. ಕೇ; ಜನ : 74,253) ಚಿತ್ರದುರ್ಗವು ಬೆಂಗಳೂರಿನಿಂದ ಸುಮಾರು 202 ಕಿಮೀ ದೂರದಲ್ಲಿದೆ. ಇದಕ್ಕೆ ಮಿರಜ್-ಬೆಂಗಳೂರು ರೈಲ್ವೆ ಮಾರ್ಗದ ಸಂಪರ್ಕವನ್ನು ಚಿಕ್ಕಜಾಜೂರಿನ ಶಾಖಾ ಮಾರ್ಗದಿಂದ ಜೋಡಿಸಲಾಗಿದೆ. ಇಲ್ಲಿ ಪುರಸಭೆಯಿದೆ. ಇಲ್ಲಿ ಒಂದು ಭವ್ಯವಾದ ಬೆಟ್ಟದ ಮೇಲಿನ ಕೋಟೆಯಿದ್ದು, ಅದನ್ನು ಹೆಸರಾಂತ ಪಾಳೆಯಗಾರರು ನಿರ್ಮಿಸಿದ್ದಾರೆ. ಆರಂಭದಲ್ಲಿ ಅವರು ವಿಜಯನಗರದ ಸಾಮಂತರಾಗಿದ್ದು, ಅನಂತರ ಮರಾಠರೊಡನೆ ಒಪ್ಪಂದ ಮಾಡಿಕೊಂಡಿದ್ದರು. ಹೈದರ್ ಅಲಿಯು 1778ರಲ್ಲಿ ಈ ಸಾಮಂತರಾಜ್ಯವನ್ನು ನಿರ್ನಾಮಗೊಳಿಸಿದನು. ಈ ನಗರದಲ್ಲಿ ಹೊಯ್ಸಳರ, ವಿಜಯನಗರದ ಅರಸರ ಮತ್ತು ಪಾಳೆಯಗಾರ ಮನೆತನದ ನಾಯಕರ ಅನೇಕ ಶಿಲಾಶಾಸನಗಳಿವೆ. ಚಿತ್ರದುರ್ಗವೆಂಬ ಈಗಿನ ಹೆಸರು ಚಿತ್ರವತ್ತಾದ ಕೋಟೆ ಎಂಬ ಅರ್ಥದ ಚಿತ್ರಕಲ್ ದುರ್ಗ ಎಂಬುದರಿಂದಾಗಲಿ ಅಥವಾ ಕೊಡೆಯಾಕಾರದ ಬಂಡೆಗಲ್ಲು ಎಂಬ ಅರ್ಥದ ಛತ್ರಕಲ್ ಎಂಬ ಪದದಿಂದ ವ್ಯುತ್ಪತ್ತಿಯಾಗಿದೆಯೆಂದು ನಂಬಲಾಗಿದೆ. ಚಿತ್ರಕಲ್ ಎಂಬ ಪದವೇ ಇದರ ಮೊದಲಿನ ಹೆಸರಾದ ಸುಳಿಗಲ್ ಎಂಬುದರ ವ್ಯುತ್ಪತ್ತಿಯಾಗಿರಬಹುದು. ಕನ್ನಡದಲ್ಲಿ ಸುಳಿ ಎಂದರೆ ಚಿತ್ರ ಎಂದು ಅರ್ಥ. ಬೆಮ್ಮತ್ತನಕಲ್ಲು (ಇತ್ತೀಚಿಗೆ ಅದನ್ನು ಚಿಮ್ಮನಕಲ್ಲು ಎಂದು ಓದಲಾಗಿದೆ), ಬ್ರಹ್ಮಗಿರಿಪುರಿ, ಪೆರುಮಾಳಪುರ, ಚಿಮ್ಮತ್ತನೂರು, ಮುಂತಾದವು ಶಿಲಾಶಾಸನಗಳಲ್ಲಿ ಕಂಡುಬರುವ ಈ ಊರಿನ ಇನ್ನಿತರ ಹಳೆಯ ಹೆಸರುಗಳಾಗಿವೆ. ಸ್ಥಳಪುರಾಣಗಳಲ್ಲಿ ಉಕ್ತವಾಗಿರುವ ಹಿಡಂಬಿಪಟ್ಟಣ (ಸ್ಥಳಪುರಾಣದ ಪ್ರಕಾರ ಮಹಾಭಾರತ ಪ್ರಸಿದ್ಧಿಯ ಹಿಡಂಬಾ ಇಲ್ಲಿ ವಾಸವಾಗಿದ್ದಳು), 15ನೇಯ ಶತಮಾನದ ವಿಜಯನಗರದ ವೀರಮಲ್ಲಣ್ಣ ಒಡೆಯನು ಕೊಟ್ಟ ಹೆಸರಾದ ಮಲ್ಲರಾಯನದುರ್ಗ, ಟಿಪ್ಪುಸುಲ್ತಾನನ ಕಾಲದಲ್ಲಿ ಪ್ರಚಾರದಲ್ಲಿದ್ದ ಫರಾಕಾಬಾದ್ ಎಂಬುವು ಈ ಊರಿನ ಇತರ ಹೆಸರುಗಳಾಗಿವೆ. ಈ ಊರಿನ ಮೂಲ ಹೆಸರಾದ ಚಿನ್ಮೂಲಾದ್ರಿ ಎಂಬುದನ್ನು ಶ್ರೀ ಮುರುಘಾರಾಜೇಂದ್ರ ಸ್ವಾಮಿಗಳು ಮತ್ತು ಶ್ರೀ ಕೂಡ್ಲಿ ಶೃಂಗೇರಿಮಠದ ಸ್ವಾಮಿಗಳು ಇಂದಿಗೂ ಉಪಯೋಗಿಸುತ್ತಾರೆ. ಭವ್ಯವಾದ ಈ ದುರ್ಗದ ಕೋಟೆಯು ಏಳು ಅಳಿದುಳಿದ ಗೋಡೆಗಳನ್ನು ಹೊಂದಿದೆ. ಅವುಗಳಲ್ಲಿ ಹೊರವಲಯದ ಗೋಡೆಗೆ ಪೂರ್ವದಲ್ಲಿ ರಂಗಯ್ಯನ ಬಾಗಿಲು, ಉತ್ತರದಲ್ಲಿ ಸಿದ್ದಯ್ಯನ ಬಾಗಿಲು, ಪಶ್ಚಿಮದಲ್ಲಿ ಸಿಹಿನೀರಿನ ಹೊಂಡದ ಬಾಗಿಲು ಅಥವಾ ಉಚ್ಚಂಗಿ ಬಾಗಿಲು ಮತ್ತು ದಕ್ಷಿಣದಲ್ಲಿ ಲಾಲ್‌ಕೋಟೆ ಬಾಗಿಲು ಎಂಬ ನಾಲ್ಕು ಪ್ರವೇಶದ್ವಾರಗಳಿವೆ. ಪಟ್ಟಣದ ದಕ್ಷಿಣಕ್ಕಿರುವ ಬೆಟ್ಟದ ತುದಿಯ ಮೇಲೆ ಓಬಲಾದೇವಿಯ ಗುಡಿಯಿದ್ದು, ವಿಶೇಷವಾಗಿ ಬೇಡರಿಗೆ ಅದು ಪವಿತ್ರ ಸ್ಥಳವಾಗಿದೆ. ಪೂರ್ವ ದಿಶೆಯಿಂದ ಬೆಟ್ಟದ ತುದಿಗೆ ಹೋಗುವಾಗ ಐದು ಪ್ರವೇಶದ್ವಾರಗಳು ಎದುರಾಗುತ್ತವೆ. ಬೆಟ್ಟದ ತುದಿಯ ಮೇಲೆ ಸಂಪಿಗೆ ಸಿದ್ದೇಶ್ವರ, ಹಿಡಂಬೇಶ್ವರ (ಗುಹಾದೇವಾಲಯ), ಏಕನಾಥಮ್ಮ, ಫಲ್ಗುಣೇಶ್ವರ, ಗೋಪಾಲಕೃಷ್ಣ, ಆಂಜನೇಯ, ಸುಬ್ಬರಾಯ ಮತ್ತು ಬಸವ ಎಂಬ ದೇವಾಲಯಗಳಿವೆ. ಇಲ್ಲಿಯ ಕೆಲವೊಂದು ದೇವಾಲಯಗಳು ಹಿಂದೆ ನಾಥ ಪಂಥದ ಕೇಂದ್ರಗಳಾಗಿದ್ದವು. ಇಲ್ಲಿರುವ ಬಹುತೇಕ ಮಂದಿರಗಳು ಪಾಳೆಯಗಾರ ಮನೆತನದವರಿಂದ ನಿರ್ಮಿತವಾದ ಇಲ್ಲವೆ ಜೀರ್ಣೋದ್ಧಾರಗೊಂಡ, ವಿಜಯನಗರ ಶೈಲಿಯ ಕಣಶಿಲೆಯ ಕಟ್ಟಡಗಳಾಗಿವೆ. ಹಿಡಿಂಬೇಶ್ವರ ದೇವಾಲಯದ ಎದುರಿನಲ್ಲಿರುವ ಗಾಳಿಮಂಟಪವು ವೈಶಿಷ್ಟ್ಯಪೂರ್ಣವಾದ ಕಣಶಿಲೆಯ ಕಟ್ಟಡವಾಗಿದೆ. ವಿಶಾಲವಾದ ಕೋಟೆಗಳೂ, ಬುರುಜುಗಳೂ, ಕಟ್ಟಡಕಾರ್ಯದ ಕುಶಲತೆ ಮುಂತಾದವು ಮೇಲ್ದುರ್ಗದ ವಿಶೇಷಗಳಾಗಿವೆ. ಮೇಲ್ದುರ್ಗದ ಮೇಲೆ ಬೀಳುವ ಮಳೆಯ ನೀರು ಹಲವಾರು ಹೊಂಡಗಳನ್ನು ತುಂಬುತ್ತದೆ. ಅವುಗಳಲ್ಲಿ ಗೋಪಾಲ ಕೃಷ್ಣದೇವರ ಹೊಂಡ, ಅಕ್ಕತಂಗಿಯರ ಹೊಂಡ, ಸಿಹಿನೀರಿನ ಮತ್ತು ಸಂತೆ ಹೊಂಡ ಎಂಬುವು ಪ್ರಸಿದ್ಧವಾಗಿವೆ. ಒನಕೆ ಕಿಂಡಿ ಎಂಬ ಗುಪ್ತದ್ವಾರವು ಕೋಟೆಯಲ್ಲಿ ಗುಪ್ತವಾಗಿ ಪ್ರವೇಶಿಸಲು ಪ್ರಯತ್ನಿಸಿದ ಹೈದರ್ ಅಲಿಯ ಸೈನಿಕರ ವಿರುದ್ಧ ಹೋರಾಡಿದ ವೀರಮಹಿಳೆ ಓಬವ್ವನ ವೀರಗಾಥೆಯೊಂದಿಗೆ ಸಂಬಂಧಹೊಂದಿದೆ. ಬೆಟ್ಟದ ತಳಭಾಗದಲ್ಲಿ ಉಚ್ಚಂಗಿಯಮ್ಮ (ಉತ್ಸವಾಂಬಾ)ನ ದೇವಾಲಯವಿದೆ. ಸುತ್ತಲೂ ಬೃಹದಾಕಾರದ ಕಣಶಿಲೆಯ ಬಂಡೆಗಳಿಂದ ಆವೃತವಾದ ಈ ಕೋಟೆಯು ಚಿತ್ರವತ್ತಾಗಿದೆ.

ರಾಜ್ಯ ಸರ್ಕಾರದ ಪುರಾತತ್ವ ಇಲಾಖೆಯ ವಸ್ತುಸಂಗ್ರಹಾಲಯವು ರಂಗಯ್ಯನ ಬಾಗಿಲಿನಲ್ಲಿದೆ. ಅದರಲ್ಲಿ ಪುರಾತತ್ವ ಮಹತ್ವದ ವಿವಿಧ ವಸ್ತುಗಳನ್ನು ಮತ್ತು ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಇದನ್ನು ದಿವಂಗತ ಹುಲ್ಲೂರು ಶ್ರೀನಿವಾಸ ಜೋಯಿಸ್ ಎಂಬುವರು ಸ್ಥಾಪಿಸಿದರು. ಟಿ. ಎಸ್. ಗಂಡುಗಲಿ ಎಂಬುವರು ಇಲ್ಲಿಯ ಮದಕರಿ ನಿಲಯದಲ್ಲಿ ಐತಿಹಾಸಿಕ ಮಹತ್ವದ ವಿವಿಧ ವಸ್ತುಗಳ ಒಂದು ಖಾಸಗಿ ವಸ್ತುಸಂಗ್ರಹಾಲಯವನ್ನು ನಿರ್ವಹಿಸುತ್ತಿದ್ದಾರೆ. ಎಚ್. ಶ್ರೀಶೈಲಾರಾಧ್ಯ ಎಂಬುವರ ಹತ್ತಿರ ಹಳೆಯ ನಾಣ್ಯಗಳೂ, ಶಸ್ತ್ರಗಳೂ, ಉಪಕರಣಗಳೂ, ಮತ್ತಿತರ ಐತಿಹಾಸಿಕ ಮಹತ್ವದ ವಸ್ತುಸಂಗ್ರಹವಿದೆ. ಚೆನ್ನಕೇಶವ, ವೆಂಕಟರಮಣ, ಆಂಜನೇಯ, ಗೋಪಾಲಪುರ ನೀಲಕಂಠೇಶ್ವರ, ಚೋಳೇಶ್ವರ, ಮಹೇಶ್ವರ ಮತ್ತು ಗಂಗಾಧರೇಶ್ವರ, ಮುಂತಾದವು ಇಲ್ಲಿರುವ ಕೆಲವು ಮಹತ್ವದ ದೇವಾಲಯಗಳಾಗಿವೆ. ಅತ್ಯಂತ ಭವ್ಯ ಕಟ್ಟಡವನ್ನು ಹೊಂದಿದ ಮುರುಘಾರಾಜೇಂದ್ರ ಬೃಹನ್ಮಠ, ಕೂಡಲಿ ಶೃಂಗೇರಿಮಠ, ರಾಘವೇಂದ್ರಮಠ, ಉತ್ತರಾಧಿಮಠ, ಉಜ್ಜೈನಿಮಠ, ಕಬೀರ್‌ಮಠ, ಮುಷ್ಟೂರುಮಠ ಎಂಬುವು ಇಲ್ಲಿರುವ ಕೆಲವು ಮಹತ್ವದ ಮಠಗಳಾಗಿವೆ. ಅಲ್ಲದೆ ಇಲ್ಲಿ ಏಳು ಮಸೀದಿಗಳೂ, ಎರಡು ಚರ್ಚುಗಳೂ ಮತ್ತು ಒಂದು ಜೈನ ಬಸದಿಯೂ ಇವೆ. ಜಗದ್ಗುರು ಮುರುಘಾ ಮಠದ ವಿಶ್ವಸ್ಥ ಸಂಸ್ಥೆಯು ಅನೇಕ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುತ್ತದೆ. ಜೋಳ, ರಾಗಿ, ತೆಂಗು ಮತ್ತು ಅಡಿಕೆ ಇವು ಇಲ್ಲಿನ ಪ್ರಮುಖ ಬೆಳೆಗಳಾಗಿವೆ. ತೋಟಗಳನ್ನು ಬಾವಿಯ ನೀರಿನಿಂದ ಬೆಳೆಸಲಾಗುತ್ತದೆ. ಹತ್ತಿಯ ಬೆಳೆಯು ಇಲ್ಲಿ ವಿಶೇಷವಾಗಿರುವುದರಿಂದ ಈ ಊರಿನಲ್ಲಿ ಹತ್ತಿಕಾಳು ಬಿಡಿಸುವ, ಒತ್ತಿ ತುಂಬುವ, ನೂಲು ಉತ್ಪಾದನೆಯ ಮತ್ತು ಬಟ್ಟೆ ತಯಾರಿಕೆಯ ಅನೇಕ ಕಾರ್ಖಾನೆಗಳಿವೆ. ಅಲ್ಲದೆ ಅಲ್ಲಿ ಎಣ್ಣೆಯ ಗಿರಣಿಗಳು, ಹಿಟ್ಟಿನ ಗಿರಣಿಗಳು, ಕಡ್ಡಿಪೆಟ್ಟಿಗೆಯ ಕಾರ್ಖಾನೆಗಳೂ ಉಂಟು. ಚಿತ್ರದುರ್ಗದಿಂದ ದಕ್ಷಿಣಕ್ಕೆ 14 ಕಿಮೀ ಅಂತರದಲ್ಲಿರುವ ಜೋಗಿಮಟ್ಟಿಯು ಅತ್ಯಂತ ಸುಂದರವಾದ ಗಿರಿಧಾಮವಾಗಿದೆ. ಅದು ಸಮುದ್ರದ ಪಾತಳಿಯಿಂದ ಸುಮಾರು 1,323 ಮೀ ಎತ್ತರದಲ್ಲಿದೆ. ಅತ್ಯಂತ ತಂಪಾದ ಹವೆ, ಸುಂದರವಾದ ನೈಸರ್ಗಿಕ ದೃಶ್ಯ ಮತ್ತು ನಿತ್ಯ ಹಸಿರಾಗಿರುವ ಪ್ರದೇಶದಿಂದಾಗಿ ಇದು ಬೇಸಿಗೆಯ ಧಾಮವಾಗಿದೆ. ಮನುಷ್ಯರು ಮತ್ತು ದನಗಳ ಕಾಯಿಲೆಗಳನ್ನು ಗುಣಪಡಿಸುವ ವೈದ್ಯ ಪ್ರವೀಣನಾಗಿದ್ದ ಒಬ್ಬ ಜೋಗಿಯ ಸಮಾಧಿಯೊಂದು ಇಲ್ಲಿದೆ. ಆದುದರಿಂದ ಆ ಸ್ಥಳಕ್ಕೆ ಜೋಗಿಮರಡಿ ಅಥವಾ ಜೋಗಿಮಟ್ಟಿ ಎಂಬ ಹೆಸರು ಬಂದಿದೆ. ಚಿತ್ರದುರ್ಗ ತಾಲೂಕಿನ ಇತರ ದರ್ಶನೀಯ ಸ್ಥಳಗಳು ಈ ರೀತಿ ಇವೆ. ಹಿಮವತ್ ಕೇದಾರ ಎಂಬುದು ಒಂದು ಸಣ್ಣ ಜಲಪಾತವಾಗಿದ್ದು, ಅದು ಚಿತ್ರದುರ್ಗದಿಂದ ಜೋಗಿಮಟ್ಟಿ ರಸ್ತೆಯ ಬಲಬದಿಯಲ್ಲಿ ಬಂಡೆಗಲ್ಲುಗಳಿಂದ ಆವೃತವಾದ ತಗ್ಗಾದ ಪ್ರದೇಶದಲ್ಲಿದೆ. ಇದು ಚಿತ್ರದುರ್ಗದಿಂದ ಸುಮಾರು ಆರು ಕಿಮೀ ದೂರದಲ್ಲಿದೆ. ಈ ಜಲಪಾತವು ಬೆಟ್ಟದ ಓರೆಗಳಲ್ಲಿ ಉಂಟಾಗಿದೆ. ಅಲ್ಲೊಂದು ಸಣ್ಣ ಗುಹೆಯಿದ್ದು, ಅದರಲ್ಲಿ ಶಿವಲಿಂಗವಿದೆ. ವೀರಭದ್ರ ಮತ್ತು ಬಸವನ ಮೂರ್ತಿಗಳು ಇವೆ. ನೀರು ಬಸವನ ಮುಖದಿಂದ ಹೊರಚೆಲ್ಲುತ್ತದೆ. ಪಂಡರಹಳ್ಳಿ ಗುಡ್ಡವು ಚಿತ್ರದುರ್ಗದಿಂದ ಸುಮಾರು 11 ಕಿಮೀ ದೂರದಲ್ಲಿದೆ. ಇಲ್ಲಿರುವ ಸಮಪಾತಳಿ ಪ್ರದೇಶವು ಸುಂದರ ದೃಶ್ಯಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಪಂಡರಹಳ್ಳಿಯಗುಡ್ಡದ ತುದಿಯ ಮೇಲೆ ರಂಗನಾಥಸ್ವಾಮಿಯ ದೇವಾಲಯವಿದೆ. ಈ ದೇವಾಲಯವು ಗಂಜೀಗಟ್ಟೆಹಳ್ಳಿ ಕಂದಾಯ ಗ್ರಾಮದಲ್ಲಿ ಬರುತ್ತದೆ. ಈ ದೇವಾಲಯಕ್ಕೆ ಹೋಗುವ ದಾರಿಯಲ್ಲಿರುವ ಗುಹೆಯಲ್ಲಿ ಭೀಮೇಶ್ವರಲಿಂಗವಿದೆ. ಅಲ್ಲಿ ಎರಡು ಕೊಳಗಳಿದ್ದು, ಒಂದು ರಂಗನಾಥಸ್ವಾಮಿಯ ದೇವಾಲಯದ ಎದುರಿನಲ್ಲಿಯೂ ಇನ್ನೊಂದು ಬೆಟ್ಟದ ತುದಿಯ ಮೇಲೂ ಇದೆ. ಇಲ್ಲಿರುವ ಮಹಾಲಕ್ಷ್ಮೀ ದೇವಾಲಯವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಎಡಬದಿಗೆ ಆಂಜನೇಯಸ್ವಾಮಿಯ ದೇವಾಲಯವಿದೆ. ಬೆಟ್ಟದ ಹಿಂಬದಿಯಲ್ಲಿ ಪುರಾತನವಾದ ಜನ್ನೇಶ್ವರ ದೇವಾಲಯವು ಇದೆ. ಚಿತ್ರದುರ್ಗದಿಂದ 6.5 ಕಿಮೀ ದೂರದಲ್ಲಿರುವ ಇಂಗಳದಹಾಳು (ಜನ: 901) ಎಂಬ ಸಣ್ಣ ಹಳ್ಳಿಯು ಹಿಂದಿನ ಕಾಲದಿಂದಲೂ ಗಣಿ ಕೆಲಸ ಮತ್ತು ಲೋಹ ಕಾರ್ಯಗಳ ಕೇಂದ್ರವಾಗಿರುವಂತೆ ತೋರುತ್ತದೆ. ಇಲ್ಲಿ ಬಂಗಾರ, ಬೆಳ್ಳಿ ಮತ್ತು ತಾಮ್ರದ ಗಣಿಗಳ ಕಾರ್ಯ ನಡೆಯುತ್ತಿತ್ತೆಂದು ನಂಬಲಾಗುತ್ತದೆ. ಮೌರ್ಯರ ಮನೆಗಳು ಅಥವಾ ಪಾಂಡವಗುತ್ತಿಗಳು ಎಂದು ಕರೆಯಲಾಗುವ ಬೃಹತ್ ಶಿಲಾ ಸಂಸ್ಕೃತಿಯ ಅವಶೇಷಗಳೊಂದಿಗೆ ಹೊಂದಿಕೊಂಡಿರುವ ಬೂದಿಯ ದಿಣ್ಣೆಗಳು ಮತ್ತು ಲೋಹ ತೆಗೆದು ನಂತರ ಉಳಿದ ನಿರುಪಯೋಗಿ ವಸ್ತುಗಳಿಂದಾಗಿ ಇದು ತಿಳಿದುಬರುತ್ತದೆ. ಈ ಹಳ್ಳಿಯ ಸಮೀಪದಲ್ಲಿ ಇಂಗಳದಹಾಳು ಮರಡಿ ಅಥವಾ ಬೆಳ್ಳಿಗುಡ್ಡದ ಶ್ರೇಣಿ ಎಂದು ಕರೆಯಲ್ಪಡುವ ಸುಮಾರು ನಾಲ್ಕೈದು ಗುಡ್ಡಗಳಿವೆ. ಇಂಗಳ ಎಂದರೆ ಇದ್ದಲು. ಒಲೆಗಳಲ್ಲಿ ಉಪಯೋಗಿಸಿ ಉಳಿದ ಇದ್ದಲನ್ನು ಇಲ್ಲಿ ರಾಶಿಯಾಗಿ ಒಟ್ಟಿರುವುದರಿಂದ ಈ ಊರಿಗೆ ಈ ಹೆಸರು ಬಂದಿದೆ. ಇಲ್ಲಿ (ಇಂಗಳದಹಾಳದ ಹಳ್ಳಿಯಲ್ಲಿ) ಪ್ರಾಚೀನ ಕಾಲದ ಗಂಧಕದ ಗಣಿಗಳಿವೆ. ಇಲ್ಲಿನ ಕರಿಯ ಕಲ್ಲುಬಂಡೆಗಳ ನಡುವಿನ ಬಿರುಕುಗಳಲ್ಲಿ, ಮೇಲ್ಪದರಿನಲ್ಲಿ ಮೈಲುತುತ್ತು ಮತ್ತು ಕಾರ್ಬೋನೇಟ್-ಮೆಲಕೈಟ್‌ಗಳು ಕಂಡುಬರುತ್ತವೆ. ವಜ್ರದ ಗಣಿಯನ್ನು ಕೊರೆಯುವ ಪ್ರವೇಶದ ಉದ್ದವನ್ನು ಎರಡು ಸಾವಿರ ಅಡಿ ಎಂದು ತೋರಿಸಲಾಗಿದೆ. ಒಂದು ನೂರು ಅಡಿ ಆಳದಲ್ಲಿ 5 ಲಕ್ಷ ಟನ್ನುಗಳಷ್ಟು ಇದರ ಉತ್ಪಾದನಾ ಸಾಮರ್ಥ್ಯವಿದೆ. ಚಿತ್ರದುರ್ಗ ಕಾಪರ್ ಕಂಪನಿ ಲಿಮಿಟೆಡ್ ಎಂಬುದು ಇಂಗಳದಹಾಳು ಎಂಬಲ್ಲಿರುವ ತಾಮ್ರದ ಗಣಿಗಳಲ್ಲಿ ಕಾರ್ಯನಿರತವಾಗಿದೆ; ಅಲ್ಲದೆ ಅಲ್ಲೊಂದು ರಾಜ್ಯ ಸರಕಾರದ ನೀರಿಗಾಗಿ ಭೂಮಿ ಕೊರೆಯುವ ಘಟಕದ ಕೇಂದ್ರ ಕಾರ್ಯಾಗಾರವೂ ಇದೆ.

ಈ ಸ್ಥಳದಲ್ಲಿ ಆಂಜನೇಯ ಮತ್ತು ಮಾರಿಕಾಂಬಾ ದೇವಾಲಯಗಳಿವೆ.

ಚಿತ್ತಾಪುರ : (ಕಲ್ಬುರ್ಗಿ ಜಿ; ತಾ. ಕೇ; ಜನ: 18,325) ಚಿತ್ತಾಪುರವು ಬೆಂಗಳೂರಿನಿಂದ 629 ಕಿಮೀ ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಇದು 50 ಹಳ್ಳಿಗಳನ್ನು ಒಳಗೊಂಡ ಪೈಗಾ (ಸರದಾರರ ಅಧೀನದಲ್ಲಿದ್ದ ಜಹಗೀರು) ಎಂಬ ವಿಭಾಗದ ಆಡಳಿತ ಕೇಂದ್ರವಾಗಿತ್ತು. 1949ರಲ್ಲಿ ಚಿತ್ತಾಪುರ ತಾಲೂಕನ್ನು ರಚಿಸಲಾಯಿತು. ಇಲ್ಲಿ ಪುರಸಭೆ ಇದೆ. ಬಹುತರವಾಗಿ ಬಹಮನಿ ಅರಸರ ಕಾಲದ ಒಂದು ಕೋಟೆ ಇದೆ. ಈ ಸ್ಥಳವು ನೆಲ ಹಾಸಿನ ಶಹಾಬಾದ್ ಕಲ್ಲು ಚಪ್ಪಡಿ ಮತ್ತು ನೇಯ್ಗೆಯ ಉದ್ಯಮಕ್ಕಾಗಿ ಪ್ರಸಿದ್ಧವಾಗಿದೆ. ನಗರದ ಹೊರ ವಲಯದಲ್ಲಿ ಮುಸಲ್ಮಾನ್ ಸಂತ ಚಿತಾಷಾವಲಿಯ ದರ್ಗಾ ಇದೆ. ಚಿತ್ತಾಪುರದ ಸಮೀಪದಲ್ಲಿರುವ ಎರಗೋಳವು ಮಾಧ್ವ ಪಂಥದ ದಾಸರಾದ ಜಯತೀರ್ಥ (ಟೀಕಾಚಾರ್ಯ)ರ ಜೀವನಕ್ಕೆ ಸಂಬಂಧಿಸಿದ ಊರಾಗಿದೆ. ಎರಡು ಕಿಮೀ ಅಂತರದಲ್ಲಿರುವ ಭಂಕೂರ್ ಎಂಬಲ್ಲಿ ದೇವಾಲಯ ಮತ್ತು ಬಸದಿಗಳ ಅವಶೇಷಗಳಿವೆ. ಚಿತ್ತಾಪುರ ತಾಲೂಕು ಅಲಹಳ್ಳಿಯಲ್ಲಿರುವ ಅಯ್ಯಪ್ಪಯ್ಯ ಗದ್ದಿಗೆ, ದಂಡಗುಂಡ ಹಳ್ಳಿಯಲ್ಲಿರುವ ಬಸವೇಶ್ವರ ದೇವಾಲಯ, ಕೊಂಚೂರ್ ಹಳ್ಳಿಯಲ್ಲಿರುವ ಹನುಮಾನ್ ದೇವಾಲಯಗಳಿಗಾಗಿಯೂ ಲಾಡ್‌ಲಾಪುರ ಹಳ್ಳಿಯಲ್ಲಿರುವ ಲಾಡ್‌ಲೇಶ್ ವಲಿದರ್ಗಾ ಮತ್ತು ಕಲ್ಲಿಪೆರ್ಗ್ಗ ದಲ್ಲಿರುವ ಬಾಬಾ ಸಾಹೇಬ್ ದರ್ಗಾಗಳಿಗಾಗಿಯೂ ಸುಪ್ರಸಿದ್ಧವಿದೆ. ಭೀಮಾ ಮತ್ತು ಕಾಗಿನಾ ನದಿಗಳ ಸಂಗಮದಲ್ಲಿರುವುದಕ್ಕಾಗಿ ಹೊನಗುಂಟೆ ಎಂಬ ಹಳ್ಳಿಯು ಪ್ರಸಿದ್ಧವಿದೆ. ಅಲ್ಲಿರುವ ಚಂದ್ರಾಪರಮೇಶ್ವರಿ ದೇವಾಲಯಕ್ಕೆ ಬಹುಸಂಖ್ಯೆಯ ಜನರು ನಡೆದುಕೊಳ್ಳುತ್ತಾರೆ. ಕಾಳಗಿಯು ದೇವಾಲಯದ ವಾಸ್ತುಶಿಲ್ಪಕ್ಕಾಗಿ ಪ್ರಸಿದ್ಧವಿದೆ. ಈ ತಾಲೂಕಿನಲ್ಲಿರುವ ಉಳಿದ ಪ್ರಸಿದ್ಧವಾದ ಊರುಗಳು ಈ ರೀತಿ ಇವೆ: ನಾಗಾಯಿ (ಜನ: 1,414) ಚಿತ್ತಾಪುರದ ರೈಲ್ವೆ ನಿಲ್ದಾಣದಿಂದ ಮೂರು ಕಿಮೀ ಅಂತರದಲ್ಲಿರುವ ಪುರಾತತ್ವ ಮಹತ್ತಿನ ಸ್ಥಳವಾಗಿದೆ. ಪ್ರಾಚೀನ ಕಾಲದಲ್ಲಿ ಮುಗುಳನಾಗಾವೆ ಎಂದು ಪ್ರಸಿದ್ಧವಿದ್ದ ಇದು ಶೈಕ್ಷಣಿಕ ಕೇಂದ್ರವಾಗಿ ಮಹತ್ವವನ್ನು ಹೊಂದಿತ್ತು. ಘಟಿಕಾಸ್ಥಾನವಾಗಿದ್ದ ಇದು ಎರಡು ನೂರಕ್ಕಿಂತಲೂ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವ ವಿದ್ಯಾಭ್ಯಾಸ ಕೇಂದ್ರವಾಗಿತ್ತು. ಕಲ್ಯಾಣಿ ಚಾಳುಕ್ಯರ ಕಾಲದ ಒಂದು ಶಿಲಾಶಾಸನದ ಉಲ್ಲೇಖದ ಪ್ರಕಾರ ಈ ಘಟಿಕಾ ಸ್ಥಾನದಲ್ಲಿ ಅಧ್ಯಯನ ಕೈಗೊಂಡಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ಎರಡು ನೂರ ಐವತ್ತೇಳು ಇತ್ತು. ಈ ಸಂಸ್ಥೆಯಲ್ಲಿ ಇವರಿಗೆ ಊಟೋಪಚಾರ ಮತ್ತು ಬಟ್ಟೆಗಳನ್ನು ಒದಗಿಸುವ ಅನುಕೂಲಗಳಿದ್ದವು. ಈ ಊರಿನಲ್ಲಿರುವ ಎಲ್ಲಾ ಕಟ್ಟಡಗಳು ಭಗ್ನಾವಸ್ಥೆಯಲ್ಲಿವೆ. ಚಾಳುಕ್ಯ ಅರಸರ ಪ್ರಸಿದ್ಧ ಮಂತ್ರಿ ಹಾಗೂ ದಂಡನಾಯಕನಾಗಿದ್ದ ಕಾಳಿದಾಸನು ಎರಡನೇಯ ಜಯಸಿಂಹನ ಕಾಲದಲ್ಲಿ ವೇದಾಧ್ಯಯನ ಪಾರಂಗತರಾದ ನಾಲ್ಕುನೂರು ಜನ ಬ್ರಾಹ್ಮಣರನ್ನು ಒಳಗೊಂಡ ಈ ಅಗ್ರಹಾರವನ್ನು ಪ್ರತಿಷ್ಠಾಪಿಸಿದಂತೆ ತೋರುತ್ತದೆ. ಈ ನಾಗಾಯಿಯನ್ನು ಕುಂತಲ ದೇಶದ ಎರಲು 300ರ ಆಡಳಿತ ವಿಭಾಗದ ರಾಜಧಾನಿ ಎಂದು ವರ್ಣಿಸಲಾಗಿದೆ. ಕಾಳಿದಾಸನ ಮಗನು ತ್ರಿಮೂರ್ತಿ ದೇವತೆಗಳ ಗೌರವಾರ್ಥ ಕಟಕ ಕಮಲಾರ್ಕ ಎಂಬ ದೇವಾಲಯವನ್ನು ನಿರ್ಮಿಸಿ ಈ ಅಗ್ರಹಾರದ ಸೌಂದರ್ಯವನ್ನು ಇಮ್ಮಡಿಗೊಳಿಸಿದ್ದನು. ಈ ಊರಲ್ಲಿ ನಯವಾದ ಕೆತ್ತನೆಗಳುಳ್ಳ ಅರವತ್ತೊಂದು ಕಂಬಗಳ ದೇವಾಲಯವಿದೆ. ಇದರ ಮುಂದೆ ಒಂದು ಚೌಕಾಕಾರದ, ಏಳು ಅಡಿ ಎತ್ತರದ ಶಿಲಾಸ್ತಂಭದ ಮೇಲೆ ಚಾಳುಕ್ಯರ ಕಾಲದ ಒಂದು ಮಹತ್ವದ ಶಿಲಾಶಾಸನವಿದೆ. ಈ ಊರಿನಲ್ಲಿ ಇನ್ನೂ ಅನೇಕ ದೇವಾಲಯಗಳಿದ್ದು ಅವುಗಳಲ್ಲಿ ಎಲ್ಲಮ್ಮನ ಗುಡಿಯು ಗಮನಾರ್ಹವಾಗಿದೆ. ಭಗ್ನಾವಸ್ಥೆಯಲ್ಲಿರುವ ಮತ್ತು ಜನರಿಂದ ತೊರೆಯಲ್ಪಟ್ಟ ನಾಗಾಯಿಯಲ್ಲಿ ಚಾಳುಕ್ಯರ ಕಾಲದ ದೇವಾಲಯಗಳು, ಮೂರ್ತಿಗಳು, ಕೆತ್ತನೆಗಳು ಮತ್ತು ಶಿಲಾಶಾಸನಗಳು ಸಾಕಷ್ಟಿವೆ. ಈ ಊರಿನಲ್ಲಿ ಒಂದು ಕಾಲಿ ಮಸೀದಿ (ಕಪ್ಪು ಕಲ್ಲಿನ ಮಸೀದಿ) ಮತ್ತು ಮುಸ್ಲೀಮರ ಪೂಜಾಸ್ಥಳವಿದೆ.

ಜಗಳೂರು : (ಚಿತ್ರದುರ್ಗ ಜಿ; ತಾ. ಕೇ; ಜನ: 9,774) ಜಗಳೂರು ಚಿತ್ರದುರ್ಗಕ್ಕೆ 45 ಕಿಮೀ ಹಾಗೂ ಬೆಂಗಳೂರಿಗೆ 246 ಕಿಮೀ ದೂರದಲ್ಲಿದೆ. ಪೌರಾಡಳಿತ ಹೊಂದಿದ ಈ ಊರಿನ ಹೆಸರು ಜೋಗಪ್ಪನೆಂಬ ಒಬ್ಬ ಋಷಿಯಿಂದ ಬಂದಿತೆಂದು ಪ್ರತೀತಿ. ಆತನ ಹೆಸರಿನ ಒಂದು ದೇವಾಲಯವೂ ಇತ್ತು. ಇಲ್ಲಿ ಒಂದು ಲಿಂಗಾಯಿತ ಮಠವಿದ್ದು ಅದರಲ್ಲಿ ತೋಟದ ಸ್ವಾಮಿಗಳ ಗದ್ದುಗೆ ಇದೆ. ಇವರು ಮುರುಘರಾಜೇಂದ್ರ ಮಠದ ಒಬ್ಬ ಸ್ವಾಮಿ ಆಗಿದ್ದರೆಂದು ಹೇಳುತ್ತಾರೆ. ಕ್ರಿ. ಶ. 1868ರಲ್ಲಿ ಕಣಕುಪ್ಪೆಯಿಂದ ತಾಲೂಕು ಕೇಂದ್ರವನ್ನು ಜಗಳೂರಿಗೆ ವರ್ಗಾಯಿಸಲಾಯಿತು. ಕಣಕುಪ್ಪೆ (ಜನ: 599) ಜಗಳೂರಿಗೆ ನಾಲ್ಕು ಕಿಮೀ ದೂರದಲ್ಲಿರುವ ಒಂದು ಗ್ರಾಮ. ಇಲ್ಲಿನ ಒಂದು ಗವಿಯಲ್ಲಿ ಕಣ್ವ ಋಷಿಗಳು ತಪಸ್ಸು ಆಚರಿಸಿದರೆಂಬ ಪ್ರತೀತಿ ಇದೆ. ಚಿತ್ರದುರ್ಗದ ಪಾಳೆಯಗಾರರು ಕಟ್ಟಿಸಿದ್ದ ಕೋಟೆಯ ಅವಶೇಷಗಳು ಇಲ್ಲಿ ಇವೆ. ಜಗಳೂರಿನ ಪೂರ್ವಕ್ಕೆ ಹತ್ತು ಕಿಮೀ ದೂರದಲ್ಲಿ ಕೊಣಚಗಲ್ಲು ಗುಡ್ಡ ಎಂಬ ಹೆಸರಿನ ಬೆಟ್ಟವಿದೆ. ಅದರ ಮೇಲೆ ರಂಗನಾಥನ ದೇವಾಲಯ ಮತ್ತು ಸಿಂಹದ ಪ್ರತಿಮೆ ಇವೆ. ಹತ್ತಿರದ ಒಂದು ಗವಿಯಲ್ಲಿ ಲಕ್ಷ್ಮೀದೇವಿಯ ವಿಗ್ರಹವಿದೆ. ಅದನ್ನೇ ಲಕ್ಕಮ್ಮ, ತೊಳಸಮ್ಮ ಎಂಬುದಾಗಿಯೂ ಕರೆಯುತ್ತಾರೆ. ಬಿಸ್ತುವಳ್ಳಿ (ಜನ: 816) ಗ್ರಾಮಕ್ಕೆ 3.2 ಕಿಮೀ ದೂರದಲ್ಲಿ ದಳವಾಯಿ ಹೊಂಡವಿದೆ. ಅದನ್ನು 17ನೇಯ ಶತಮಾನದಲ್ಲಿದ್ದ ಹಿರೆಮದಕರಿನಾಯಕನ ದಳವಾಯಿ ಮುದ್ದಣ್ಣ ಕಟ್ಟಿಸಿದನು.

ಕೋಟಿವಗುಡ್ಡದ ವೀರಭದ್ರ ಮತ್ತು ಮುಷ್ಟೂರಿನ ಹುಚ್ಚನಾಗಲಿಂಗೇಶ್ವರ ದೇವಾಲಯಗಳು ಈ ತಾಲೂಕಿನ ಇತರ ಪ್ರಮುಖ ದೇವಾಲಯಗಳು. ಆಸಗೋಡು (ಜನ: 3,153) ಗ್ರಾಮ ಜಗಳೂರಿನಿಂದ 28 ಕಿಮೀ ದೂರದಲ್ಲಿದೆ. ಅದಕ್ಕೆ, ಹಿಂದೆ ಶಿವಪುರ ಎಂಬ ಹೆಸರಿತ್ತು. ಅಶೋಕ ಮೌರ್ಯನಿಗೂ ಆಸಗೋಡಿಗೂ ಸಂಬಂಧವಿತ್ತೆಂದು ವರ್ಣಿಸಲಾಗಿದೆ. ಅಶೋಕನು ಈ ಗ್ರಾಮದಲ್ಲಿ ತಂಗಿದ್ದನೆಂದು ಪ್ರತೀತಿ. ಚಿತ್ರದುರ್ಗ ಜಿಲ್ಲೆಯ ಈ ಗ್ರಾಮ ಬಹಳ ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ಜ್ಞಾನಾರ್ಜನ ವಿದ್ಯಾಕೇಂದ್ರವಾಗಿತ್ತು. ಈ ಗ್ರಾಮದ ಪ್ರಾಚೀನತೆಗೆ ಇದರ ಸುತ್ತಮುತ್ತ ಇರುವ ದೊಡ್ಡ ಕಲ್ಲುಗಳಿಂದ ನಿರ್ಮಿತವಾಗಿರುವ ಅನೇಕ ಸಮಾಧಿಗಳು ಸಾಕ್ಷಿ. ಇಲ್ಲಿ ಸ್ವಯಂಭೂ ಕಲಿದೇವ ಸ್ವಾಮಿಯ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ಅನೇಕ ಶಿಲಾಶಾಸನಗಳು ಇವೆ. ಇದು ಬಳ್ಳಾರಿ ಜಿಲ್ಲೆಯಲ್ಲಿರುವ, ಒಂದು ಕಾಲದಲ್ಲಿ ರಾಜಧಾನಿಯಾಗಿದ್ದ ಉಚ್ಚಂಗಿದುರ್ಗ (ಉತ್ತಂಗಿ)ಕ್ಕೆ ಆರು ಕಿಮೀ ದೂರದಲ್ಲಿದೆ.

ಜಮಖಂಡಿ: (ವಿಜಾಪುರ ಜಿ; ಉಪವಿಭಾಗ ಹಾಗೂ ತಾ. ಕೇ; ಜನ: 39,029) ಜಮಖಂಡಿಯು ವಿಜಾಪುರದ ನೈಋತ್ಯಕ್ಕೆ 62 ಕಿಮೀ ದೂರದಲ್ಲಿದೆ. ಇದು ಮಹಾರಾಷ್ಟ್ರದ ಮಿರ್ಜಿ ಸಂಸ್ಥಾನಿಕ ಮನೆತನದ ದಾಯಾದಿಗಳಾದ ಮರಾಠಿ ಪಟವರ್ಧನ ವಂಶಸ್ಥರ ಸಂಸ್ಥಾನದ ರಾಜಧಾನಿಯಾಗಿತ್ತು. ಸಂಸ್ಥಾನದ ಹಳೆಯ ದಾಖಲೆಗಳಲ್ಲಿ ಇದರ ಹೆಸರು ಜಂಬುಖಂಡಿ ಎಂದಿದೆ. ಇಲ್ಲಿರುವ ಜಾಬುಕೇಶ್ವರ ದೇವಾಲಯದ ಕಾರಣವಾಗಿ ಆ ಹೆಸರು ಬಂದಿರಬಹುದು. ಇಲ್ಲಿನ ಕಡಪಟ್ಟಿ ಬಸವೇಶ್ವರ ದೇವಸ್ಥಾನವು ಬಹುಜನರ ಶ್ರದ್ಧಾ ಭಕ್ತಿಗಳನ್ನು ಗಳಿಸಿರುವ ಸ್ಥಳ. ಮೂಲಮಂದಿರದಲ್ಲಿ ಒಂದು ದೊಡ್ಡ ಪ್ರಮಾಣದ ಏಕಶಿಲಾ ಬಸವನ ವಿಗ್ರಹವಿದೆ. ಈ ದೇವಸ್ಥಾನದಲ್ಲಿ ಸಂಗಮೇಶ್ವರ ಹಾಗೂ ನೀಲಮ್ಮನವರ ಪ್ರತಿಮೆಗಳೂ ಪ್ರತಿಷ್ಠಾಪಿತವಾಗಿದೆ. ದೇವಸ್ಥಾನದ ಮುಂಭಾಗದಲ್ಲಿ ಕೆಲವು ಆಧುನಿಕ ವರ್ಣಚಿತ್ರಗಳು, ಮಣ್ಣಿನ ಮತ್ತು ಸಿಮೆಂಟ್‌ನ ವಿಗ್ರಹಗಳಿದ್ದು, ದೇವಸ್ಥಾನದ ಸೌಂದರ್ಯ ಹೆಚ್ಚಿಸಿವೆ. ಪ್ರತಿವರ್ಷ ಇಲ್ಲಿ ಬಸವೇಶ್ವರರ ಜಾತ್ರೆ, ಅದಕ್ಕೆ ಹೊಂದಿದಂತೆ ದನದ ಪರಿಷೆ ನಡೆಯುತ್ತದೆ. ಇಲ್ಲಿನ ರಾಮಲಿಂಗೇಶ್ವರ ದೇವಸ್ಥಾನದ ಸುತ್ತ ಎತ್ತರವಾದ ಗೋಡೆ ಇದೆ. ಇಲ್ಲಿನ ಜಂಬುಕೇಶ್ವರ ದೇವಾಲಯ ಅತ್ಯಂತ ಪ್ರಾಚೀನವಾದುದಾಗಿದ್ದು, ಚಾಳುಕ್ಯರ ಸ್ಮಾರಕವಾಗಿದೆ. ದೇವಾಲಯದ ಆವರಣದಲ್ಲಿ ಕೆಲವು ಭಿನ್ನಗೊಂಡ ವಿಗ್ರಹಗಳು ಬಿದ್ದಿವೆ. ಇಲ್ಲಿನ ಯೋಗನಾರಾಯಣ ದೇವಸ್ಥಾನದ ನಾರಾಯಣ ವಿಗ್ರಹ ಅತ್ಯಂತ ಸುಂದರವಾದುದು. ದತ್ತಾತ್ರೇಯ, ಕಾಮೇಶ್ವರ, ಪ್ರಭುಲಿಂಗೇಶ್ವರ, ಮಾರುತಿ, ನಂದಿಕೇಶ್ವರ, ಶ್ರೀರಾಮ, ಮಲ್ಲಪ್ಪ, ಎಲ್ಲಮ್ಮ, ಬನಶಂಕರಿ ದೇವಸ್ಥಾನಗಳು ಇಲ್ಲಿನ ಇತರ ದೇವಸ್ಥಾನಗಳು. ಇಲ್ಲಿ ರಾಘವೇಂದ್ರಸ್ವಾಮಿಗಳ ಬೃಂದಾವನವೂ ಇದೆ. ಇಲ್ಲಿನ ಒಂದು ಮಸೀದಿಯ ಜೊತೆಗೆ ಜನಪ್ರಿಯವಾದ ಅಬುಬೇಕರ್ ಅವರ ದರ್ಗಾ ಇದೆ. ಈ ದರ್ಗಾದ ಮುಂಭಾಗದ ಮಂಟಪ ಸುಂದರವಾದ ಚಿತ್ತಾರಗಳಿಂದ ಕೂಡಿ ಆಕರ್ಷಕವಾಗಿದೆ ಮತ್ತು ಇದರ ನಾಲ್ಕು ಮೂಲೆಯಲ್ಲಿಯೂ 30 ಅಡಿ ಎತ್ತರದ ನಾಲ್ಕು ಸ್ತಂಭಗೋಪುರಗಳಿವೆ. ಸ್ವಾತಂತ್ರ್ಯಪೂರ್ವದಲ್ಲಿ ಜಮಖಂಡಿ ರಾಜರು ಇದರ ದುರಸ್ತಿಯನ್ನು ಮಾಡಿಸಿದ್ದಾರೆ. ಊರಿನ ಪಶ್ಚಿಮದಲ್ಲಿರುವ ರಾಮತೀರ್ಥಗುಡ್ಡದ ಮೇಲೆ ಜಮಖಂಡಿ ರಾಜಮನೆತನದವರ ವಾಸಗೃಹವಾಗಿದ್ದ ರಾಮಚಂದ್ರ ಪ್ರಾಸಾದ ಎಂಬ ಹೆಸರಿನ ಭವ್ಯ ಕಟ್ಟಡ ಮತ್ತು ತ್ರಿಪುರಸುಂದರಿ ದೇವಸ್ಥಾನಗಳಿವೆ. ಈ ಕಟ್ಟಡದ ಮುಂದೆ ಎತ್ತರವಾದ ಗಡಿಯಾರದ ಗೋಪುರ ಮತ್ತು ಎರಡು ತಿರುಗುಫಿರಂಗಿ, ಪುಟ್ಟ ಬುರುಜುಗಳಿವೆ. ಇವಲ್ಲದೆ ಒಂದು ಸುಂದರವಾದ ರಾಮೇಶ್ವರ ದೇವಾಲಯ ಹಾಗೂ ಪಾರ್ವತಿ, ದತ್ತಾತ್ರೇಯರ ದೇವಾಲಯಗಳೂ ಇವೆ. ಇಲ್ಲಿ ಒಂದು ಕಲ್ಲಿನ ಕೊಳವಿದೆ. ಜಮಖಂಡಿ ಪೌರಾಡಳಿತ ಹೊಂದಿದ ಊರು. ಕೃಷ್ಣಾನದಿಯ ದಂಡೆಯ ಮೇಲೆ ಜಮಖಂಡಿಗೆ ಹತ್ತು ಕಿಮೀ ದೂರದಲ್ಲಿ ಶೂರ್ಪಾಲಿ ಗ್ರಾಮವಿದೆ. ಗ್ರಾಮದಲ್ಲಿ ಸದಾನಂದಮಠ ಮತ್ತು ಲಕ್ಷ್ಮೀ ನಾರಾಯಣ ದೇವಾಲಯಗಳಿವೆ. ಒಂದು ಕಾಲದಲ್ಲಿ ಇದೊಂದು ಅಗ್ರಹಾರವಾಗಿತ್ತು. ತಾಲೂಕಿನ ಇತರ ಪ್ರಮುಖ ಸ್ಥಳಗಳು ಈ ಕೆಳಗೆ ನಮೂದಾಗಿವೆ: ರಬಕವಿ-ಬನಹಟ್ಟಿ (1981ರ ಜನ: 53,639), ಜಮಖಂಡಿಯ ಪಶ್ಚಿಮಕ್ಕೆ 19 ಕಿಮೀ ದೂರದಲ್ಲಿದೆ. ಈ ಊರಿನ ಘಾಸಲೆಯೊಳಗೆ ರಬಕವಿ, ಬನಹಟ್ಟಿ, ಹೊಸೂರು ಮತ್ತು ರಾಮಪುರಗಳೆಂಬ ನಾಲ್ಕು ಸ್ಥಳಗಳು ಮಿಳಿತಗೊಂಡಿವೆ. ಕ್ರಿ.ಶ. 1952ರಲ್ಲಿ ರಬಕವಿ ಮತ್ತು ಬನಹಟ್ಟಿಯ ಬೇರೆ ಬೇರೆ ಪೌರಾಡಳಿತಗಳು ಒಂದುಗೂಡಿ ಒಂದೇ ಪೌರಾಡಳಿತವಾಯಿತು. ಇಲ್ಲಿ ಕೆಲವು ಮುಖ್ಯ ದೇವಸ್ಥಾನಗಳು ಇವೆ. ಅವುಗಳಲ್ಲಿ ರಬಕವಿಯ ಕಾಡಸಿದ್ದೇಶ್ವರ ದೇವಸ್ಥಾನವು ಒಂದು ಗುಡ್ಡದ ಮೇಲಿದೆ. ಬನಹಟ್ಟಿಯಲ್ಲಿ ಮಲ್ಲಿಕಾರ್ಜುನ ದೇವಸ್ಥಾನವಿದೆ. ಶಂಕರಲಿಂಗ ದೇವಸ್ಥಾನ ಎರಡಂತಸ್ತಿನ ಕಟ್ಟಡ. ಅದರ ಮುಂಭಾಗದ ಮರಗೆಲಸ ತುಂಬಾ ಚೆನ್ನಾಗಿದೆ. ತೇರದಾಳ ರಸ್ತೆಯಲ್ಲಿ ಆಧುನಿಕ ರೀತಿಯ ಧನಮ್ಮದೇವಿ ದೇವಸ್ಥಾನವಿದೆ. ಇದರಲ್ಲಿ ಕುಳಿತ ಭಂಗಿಯ ದೇವಿಯ ವಿಗ್ರಹವಿದ್ದು, $2\frac{1}{2}$ ಅಡಿ ಎತ್ತರವಿದೆ. ವಿಠ್ಠಲ ದೇವಸ್ಥಾನ ಆಧುನಿಕ ಕಟ್ಟಡ. ಇಲ್ಲಿ ಸುರಾಸಾಬ್-ಮುರಾಸಾಬ್‌ರ ದರ್ಗಾ ಇದೆ. ಈ ಊರಿನ ಕೈಮಗ್ಗ ಹಾಗೂ ಯಂತ್ರ ಮಗ್ಗಗಳ ಸೀರೆಗಳು ಪ್ರಸಿದ್ಧವಾದವು. ಮತ್ತು ಅವಕ್ಕೆ ಒಳ್ಳೆಯ ಮಾರುಕಟ್ಟೆಯಿದೆ. ತೇರದಾಳ (1981ರ ಜನ: 19,082) ಗ್ರಾಮಕ್ಕೆ ಪ್ರಾಚೀನತೆ ಇದೆ. ಇದು ಜಮಖಂಡಿಯ ಪಶ್ಚಿಮಕ್ಕೆ 29 ಕಿಮೀ ದೂರದಲ್ಲಿದೆ. 1984ರ ವರೆಗೆ ಇದು ಸಾಂಗ್ಲಿ ಸಂಸ್ಥಾನದ ಉಪವಿಭಾಗ ಕೇಂದ್ರವಾಗಿತ್ತು. ಅನೇಕ ಶಾಸನಗಳಲ್ಲಿ ಇದನ್ನು ತೇರಿಂದಾಳವೆಂದು ಹೆಸರಿಸಲಾಗಿದೆ. 11 ಮತ್ತು 12ನೇಯ ಶತಮಾನಗಳಲ್ಲಿ

ಇದು ಅತ್ಯಂತ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿ ಕಲ್ಯಾಣಿ ಚಾಳುಕ್ಯ ಶೈಲಿಯಲ್ಲಿ ಕಟ್ಟಿದ ನೇಮಿನಾಥಸ್ವಾಮಿಯ ಜಿನಾಲಯವಿದೆ. ಗರ್ಭಗೃಹದ ಹೊರಮೈಯಲ್ಲಿನ ಕೋಷ್ಠಗಳಲ್ಲಿ ಅತ್ಯಂತ ಸುಂದರವಾದ ಕೂಷ್ಮಾಂಡಿನಿ ಮತ್ತು ಪದ್ಮಾವತಿಯರ ವಿಗ್ರಹಗಳಿವೆ. ಮಹಾಮಂಡಳೇಶ್ವರ ಕಾರ್ತವೀರ್ಯನ ಆದೇಶಾನುಸಾರ ಗೌರ ಎಂಬ ಅವನ ಸಾಮಂತನೊಬ್ಬನು ಈ ಜಿನಾಲಯವನ್ನು ಕಟ್ಟಿಸಿದನೆಂಬುದನ್ನು ತಿಳಿಸುವ ಶಿಲಾಶಾಸನವೊಂದು ಈ ಜಿನಾಲಯದಲ್ಲಿದೆ. ಇಲ್ಲಿನ ಜನ ತುಂಬ ಭಕ್ತಿಯಿಂದ, ನಡೆದುಕೊಳ್ಳುವ ದೇವಸ್ಥಾನವೆಂದರೆ ಪ್ರಭುಸ್ವಾಮಿಯದು. ಪ್ರಭುಸ್ವಾಮಿ 17ನೇಯ ಶತಮಾನದ ಒಬ್ಬ ಮಹಾಯೋಗಿ. ಪ್ರಭುದೇವ, ದತ್ತಾತ್ರೇಯ ಮತ್ತು ಗಣಪತಿ ದೇವಾಲಯಗಳು ಇಲ್ಲಿನ ಉಳಿದ ದೇವಾಲಯಗಳು. ಊರಿನ ಉತ್ತರ ಗಡಿಯಲ್ಲಿ ಸುಡುಗಾಡು ಲಕ್ಷ್ಮಿಯ ಆಲಯವೊಂದಿದೆ. ಇಂಚಗೇರಿ ಸಿದ್ಧಾಂತದ ಮಠವೊಂದೂ ಇಲ್ಲಿದೆ. ಒಂದು ಜುಮ್ಮಾಮಸೀದಿ ಮತ್ತು ಬೇರೆ ಐದು ಮಸೀದಿಗಳು ಇಲ್ಲಿವೆ. ಜೊತೆಗೆ ಪೀರ್ ಆಗಾಖಾನರ ದರ್ಗಾವೂ ಇದೆ. ಅಸಂಖ್ಯಾತ ಯಂತ್ರಮಗ್ಗ, ಕೈಮಗ್ಗಗಳು ಇಲ್ಲಿ ಬಗೆಬಗೆಯ ಸೀರೆಗಳನ್ನು ನೇಯುತ್ತವೆ. ಪೌರಾವಶ್ಯಕತೆಗಳನ್ನು ಪೌರಾಡಳಿತ ನೋಡಿಕೊಳ್ಳುತ್ತದೆ. ಇಲ್ಲಿನ ಸುತ್ತಮುತ್ತಲ ಪ್ರದೇಶದಲ್ಲಿ ಅಂದರೆ ಹಣಗಂಡಿ, ಹಳಿಂಗಳಿ, ಮದಲಮಟ್ಟಿ, ಆಸಂಗಿ ಮೊದಲಾದ ಗ್ರಾಮಗಳಲ್ಲಿ ಇತಿಹಾಸ ಪೂರ್ವ ಕಾಲದ ಶವಸಂಪುಟಗಳು ಲಭ್ಯವಾಗಿವೆ.

ಜೇವರಗಿ : (ಕಲ್ಬುರ್ಗಿ ಜಿಲ್ಲೆ; ತಾ. ಕೇ; ಜನ: 8,293) ಜೇವರಗಿ ಬೆಂಗಳೂರಿಗೆ 589 ಕಿಮೀ ದೂರದಲ್ಲಿದೆ. ಈ ಮೊದಲು ಇದನ್ನು ಅಂದೋಲ ತಾಲೂಕು ಎಂದು ಕರೆಯಲಾಗುತ್ತಿತ್ತು. ಇದು ಜೈನ ಯಾತ್ರಾಸ್ಥಳ. ಇಲ್ಲಿ ಅನೇಕ ಬಸದಿಗಳು ಇವೆ. ಅರಳುಗುಂಡಿ ಎನ್ನುವುದು ಜೇವರಗಿ ತಾಲೂಕಿನ ಒಂದು ಗ್ರಾಮ. ಇದು ಶರಣ ಬಸವೇಶ್ವರರ ಜನ್ಮಸ್ಥಳ. ಈ ಶರಣ ಬಸವೇಶ್ವರರ ದೇವಸ್ಥಾನ ಈಗ ಕಲ್ಬುರ್ಗಿಯಲ್ಲಿ ಇದೆ. ಈ ತಾಲೂಕಿನ ಮಂದವಾಳ ಗ್ರಾಮವು ಇತಿಹಾಸ ಪೂರ್ವ ಕಾಲದ ಅನೇಕ ಪ್ರಸಿದ್ಧ ಸಮಾಧಿಗಳನ್ನು ಹೊಂದಿದೆ. ಸಮಾಧಿ ಗುಂಡಿಯ ಸುತ್ತು ಸಮಾಧಿಯ ನಡುವಿನಲ್ಲಿ ಅನೇಕ ಶವಪೆಟ್ಟಿಗೆಗಳು ದೊರಕಿವೆ. ಇಜೇರಿ ಗ್ರಾಮದಲ್ಲೂ ಈ ಬಗೆಯ ಅವಶೇಷಗಳು ದೊರೆತಿವೆ.

ಜೋಗ್‌ಫಾಲ್ಸ್ : (ಶಿವಮೊಗ್ಗಾ ಜಿಲ್ಲೆ; ಸಾಗರ ತಾ.) ಜೋಗ್ ಕಾರಗಲ್ ಗ್ರಾಮದ ಉಪಗ್ರಾಮ. ಇದು ಶಿವಮೊಗ್ಗಾಕ್ಕೆ 105 ಕಿಮೀ ದೂರದಲ್ಲೂ, ಸಾಗರದ ವಾಯುವ್ಯಕ್ಕೆ 32 ಕಿಮೀ ದೂರದಲ್ಲೂ ಇದೆ. ಜೋಗದ ಈ ಭವ್ಯ ಸುಂದರ ಜಲಪಾತ (ಇದನ್ನು 'ಗೆರುಸೊಪ್ಪೆ ಜಲಪಾತ' ಎಂದು ತಪ್ಪಾಗಿ ಕರೆಯಲಾಗುತ್ತದೆ)ವು ಬಹು ರಮ್ಯವಾದ ಪ್ರೇಕ್ಷಣೀಯ ತಾಣ ಮತ್ತು ಜಗತ್ಪ್ರಸಿದ್ಧವೂ ಆಗಿದೆ. ಈ ಭಾಗದಲ್ಲಿ 227.50 ಮೀ ಅಗಲದ ಶರಾವತಿ ನದಿಯು ಬಂಡೆಗಳ ಮೇಲೆ ಹರಿದು ಬಂದು ಭಾರಿ ಪ್ರಪಾತ ತಾಣ ಮುಟ್ಟಿ 292.80 ಮೀ ಆಳಕ್ಕೆ ಅದ್ಭುತ ರಮ್ಯವಾದ ದೃಶ್ಯವನ್ನು ಮೂಡಿಸಿ ನೇರ ಜಿಗಿಯುತ್ತದೆ. ಇಲ್ಲಿ ನದಿ ನೀರು ನಾಲ್ಕು ಭಾಗಗಳಾಗಿದೆ. ಅವುಗಳನ್ನು ರಾಜಾ, ರೋರರ್, ರಾಕೆಟ್ ಮತ್ತು ರಾಣಿ ಎಂಬುದಾಗಿ ಹೆಸರಿಸಲಾಗಿದೆ. ಇಲ್ಲಿನ ನೋಟ ಬರೀ ಅದ್ಭುತ ರಮ್ಯವಷ್ಟೇ ಅಲ್ಲ, ಭವ್ಯವೂ ಆದುದು. ಈ ಮೊದಲು ಪ್ರೇಕ್ಷಕರಿಗೆ ನವೆಂಬರ್, ಡಿಸೆಂಬರ್, ಜನವರಿ ತಿಂಗಳುಗಳು ಪ್ರೇಕ್ಷಣೀಯ ಕಾಲವಾಗಿತ್ತು. ಈಗ ಅದು ಅಕ್ಟೋಬರ್-ನವೆಂಬರ್ ತಿಂಗಳುಗಳಾಗಿವೆ. ಬೇಸಿಗೆಯಲ್ಲಿ ಇದರಲ್ಲಿ ನೀರು ತುಂಬಾ ಕಡಿಮೆ ಇರುತ್ತದೆ. ಇಲ್ಲಿನ ಮಹಾತ್ಮಾ ಗಾಂಧಿ ಜಲವಿದ್ಯುತ್ ಉತ್ಪಾದನಾ ಕೇಂದ್ರವೂ 1948ರಲ್ಲಿ ಕಾರ್ಯಾರಂಭ ಮಾಡಿತು. ಶರಾವತಿ ನದಿಗೆ ಲಿಂಗನಮಕ್ಕಿಯಲ್ಲಿ ಒಂದು ಅಣೆಕಟ್ಟನ್ನು ಕಟ್ಟಲಾಗಿದೆ. ಕಾರ್‌ಗಲ್ ಬಳಿ ಸಹ ಜಲ ಸಂಗ್ರಹಕ್ಕೆ ಒಂದು ಅಣೆಕಟ್ಟನ್ನು ಕಟ್ಟಲಾಗಿದೆ. ಅದು ಕಾರಗಲ್ ಅಣೆಕಟ್ಟೆಂದೇ ಪ್ರಸಿದ್ಧವಾಗಿದೆ. ಈ ಅಣೆಕಟ್ಟಿನಿಂದ ನೇರವಾಗಿ ನೀರನ್ನು ಸಿರೂರು ಸಮತೋಲನ ಜಲಾಶಯಕ್ಕೆ ಹಾಯಿಸಲಾಗುತ್ತದೆ. ಅಲ್ಲಿಂದ ವಿದ್ಯುತ್ ಉತ್ಪಾದನಾ ಘಟಕಕ್ಕೆ ಈ ಜಲಾಶಯದಿಂದ ನೀರನ್ನು ವ್ಯವಸ್ಥಿತವಾಗಿ ಬಿಡಲಾಗುತ್ತದೆ. ಪ್ರತೀವರ್ಷ ಈ ಕೇಂದ್ರದಲ್ಲಿ ಪ್ರತಿ ಶತ 60ರ ಒತ್ತಡದಲ್ಲಿ 1,89,21,600 ಎಂ. ವಿ. ಎ. ವಿದ್ಯುತ್ ಶಕ್ತಿ ಉತ್ಪತ್ತಿ ಆಗುತ್ತದೆ. ಲಿಂಗನಮಕ್ಕಿ (ಸಾಗರ ತಾ; ಜನ: 840)ಯು ಸಾಗರದ ವಾಯುವ್ಯಕ್ಕೆ 33 ಕಿಮೀ ದೂರದಲ್ಲಿದೆ. ಇಲ್ಲಿ ಶರಾವತಿ ನದಿಗೆ ಅಡ್ಡಲಾಗಿ ಕಟ್ಟಿರುವ ಪ್ರಸಿದ್ಧ ಅಣೆಕಟ್ಟಿನ ಉದ್ದ 2,751 ಮೀ ಅದರ ರಚನಾ ವಿನ್ಯಾಸದ ಫಲವಾಗಿ, 326 ಚ ಕಿಮೀ ಭೂ ವಿಸ್ತಾರದಲ್ಲಿ 4,368 ಸಿ. ಎಂ. ಟಿ. ನೀರು ಶೇಖರಣೆಗೆ ಅನುಕೂಲವಿದೆ. ಆಗ್ನೇಯ ಏಷ್ಯದ ಅತ್ಯಂತ ದೊಡ್ಡ ಏಕೈಕ ವಿದ್ಯುತ್ ಉತ್ಪಾದನಾ ಕೇಂದ್ರ ಹತ್ತಿರದ ಆನೆಬೈಲಿನಲ್ಲಿ ಇದೆ. ಇಲ್ಲಿರುವ ಪ್ರತೀಯೊಂದು ಉತ್ಪಾದನಾ ಯಂತ್ರವೂ 89.1 ಕಿ ವ್ಯಾ ವಿದ್ಯುತ್ತನ್ನು ಉತ್ಪಾದಿಸುತ್ತದೆ. ಇಲ್ಲಿನ ಪ್ರಕೃತಿ ಸೌಂದರ್ಯ ಬಹಳ ಆಕರ್ಷಣೀಯವಾಗಿದೆ.

ಡಂಬಳ : (ಧಾರವಾಡ ಜಿ; ಮುಂಡರಗಿ ತಾ; ಜನ: 6,483) ಡಂಬಳ ಮುಂಡರಗಿಯಿಂದ 18 ಕಿಮೀ ಮತ್ತು ಗದಗಿನಿಂದ 21 ಕಿಮೀ ದೂರದಲ್ಲಿದೆ. 1862ಕ್ಕಿಂತ ಮೊದಲು ಇದು ತಾಲೂಕು ಕೇಂದ್ರವಾಗಿತ್ತು. ಈ ಊರಿನಲ್ಲಿ ನಗರ ಪಂಚಾಯತಿ ಇದೆ. ಹತ್ತನೇಯ ಶತಮಾನದ ಶಾಸನದಲ್ಲಿ ಈ ಊರನ್ನು ಧರ್ಮಪುರ ಅಥವಾ ಧರ್ಮಪೊಳಲು ಎಂದು ಕರೆಯಲಾಗಿದೆ. ಈ ಊರಿನಲ್ಲಿ ಹತ್ತನೇಯ ಶತಮಾನ ಹಾಗೂ ಅನಂತರದ ಅನೇಕ ಶಿಲಾಶಾಸನಗಳಿವೆ. ಈ ಊರಿನಲ್ಲಿರುವ

ಐತಿಹಾಸಿಕ ಮಹತ್ವದ ಸ್ಥಳವೆಂದರೆ ಹನ್ನೆರಡನೇಯ ಶತಮಾನದ ಶಾಸನವೊಂದರಲ್ಲಿ ಉಕ್ತವಾಗಿರುವ ಒಂದು ಬೌದ್ಧ ಚೈತ್ಯಾಲಯ, ಅಜ್ಜಮೇಶ್ವರ ಶಿವಭವನ ಮತ್ತು ಮಲಘೇಶ್ವರ ದೇವಾಲಯ. ಕೊನೆಯವೆರಡು ದೇವಾಲಯಗಳು ಹನ್ನೊಂದರಿಂದ ಹನ್ನೆರಡನೇಯ ಶತಮಾನದಲ್ಲಿ ನಿರ್ಮಾಣಗೊಂಡಿವೆ. ಇಲ್ಲಿರುವ ದೊಡ್ಡ ಬಸಪ್ಪ ಮತ್ತು ಸೋಮೇಶ್ವರ ಎಂಬ ಎರಡು ದೇವಾಲಯಗಳು ಭಗ್ನಾವಸ್ಥೆಯಲ್ಲಿವೆ. ಈಶ್ವರ ದೇವರಿಗಾಗಿ ನಿರ್ಮಿಸಲಾಗಿರುವ ದೊಡ್ಡಬಸಪ್ಪ ದೇವಾಲಯವು ವಾಸ್ತುಶೈಲಿಯ ದೃಷ್ಟಿಯಿಂದ ಮಹತ್ವದ್ದಾಗಿದ್ದು, ನಕ್ಷತ್ರಾಕಾರದ ಇದು ಗದಗು ಹಾಗೂ ಲಕ್ಕುಂಡಿಗಳಲ್ಲಿರುವ ದೇವಾಲಯಗಳಿಗಿಂತ ವಾಸ್ತು ಶೈಲಿಯಲ್ಲಿ ಭಿನ್ನವಾಗಿದೆ. ವಿದ್ವಾಂಸರ ಅಭಿಪ್ರಾಯದಂತೆ ಅಜ್ಜಯ್ಯ ನಾಯಕ ಎಂಬುವನು ಕ್ರಿ.ಶ. 1124 ಅಥವಾ 1126ರಲ್ಲಿ ನಿರ್ಮಿಸಿದ ಅಜ್ಜಮೇಶ್ವರ ಶಿವ ಭವನವು ಇದೇ ಆಗಿರುವ ಸಂಭವವಿದೆ. ಶೈವ ಸಂಸ್ಥೆಗಳಿಗೂ ಮತ್ತು ಪಾಶುಪಥವೆಂಬ ಶೈವ ಪಂಥದ ಧರ್ಮಗುರುಗಳಿಗೆ ದತ್ತಿ ಕೊಟ್ಟಿರುವುದರ ಬಗ್ಗೆ ಶಿಲಾ ಶಾಸನಗಳ ಸಾಕ್ಷ್ಯಾಧಾರಗಳಿವೆ. ಸೋಮೇಶ್ವರ ಎಂಬ ದೇವಾಲಯವು ಹನ್ನೊಂದನೇಯ ಶತಮಾನದಲ್ಲಿ ಸ್ಥಳೀಯ ವ್ಯಾಪಾರಸ್ಥರು ದತ್ತಿ ದಾನಗಳಿಂದ ನಿರ್ಮಿಸಿದ್ದ ಜಿನಾಲಯವಾಗಿದ್ದಿರಬೇಕೆಂದು ಹೇಳಲಾಗುತ್ತದೆ. ಈ ಊರಿನ ಪಶ್ಚಿಮಕ್ಕೆ ಒಂದು ಭಗ್ನಾವಶೇಷದ ಕೋಟೆ ಇದೆ. ಅಲ್ಲಿ ಒಂದು ಸಣ್ಣ ಗುಡಿಯಲ್ಲಿ ದೊಡ್ಡದಾದ ಗಣಪತಿಯ ವಿಗ್ರಹವಿದೆ. ಇಲ್ಲಿ ದೊರೆತಿರುವ ಕ್ರಿ.ಶ. 1095, 1098 ಮತ್ತು 1283ರ ಶಿಲಾಶಾಸನಗಳಿಂದ ಡಂಬಳವು ಬೌದ್ಧ ಧರ್ಮದ ಅನೇಕ ಮಹತ್ವದ ಕೇಂದ್ರಗಳಲ್ಲಿ ಒಂದಾಗಿತ್ತೆಂಬುದು ಮತ್ತು ಅಲ್ಲಿ ವಿಹಾರಗಳಿದ್ದವೆಂಬುದು ವ್ಯಕ್ತವಾಗುತ್ತದೆ. ಈ ನಗರದ ಪಶ್ಚಿಮಕ್ಕೆ ಸುಮಾರು ನಾಲ್ಕು ನೂರು ವರ್ಷ ಹಳೆಯದಾದ ಐತಿಹಾಸಿಕ ಮಹತ್ವದ ಡಂಬಳದ ಕೆರೆ ಇದೆ. 1876–77ರಲ್ಲಿ ಬರಗಾಲ ಪರಿಹಾರ ಕಾರ್ಯವೆಂದು ಈ ಕೆರೆಯ ವಿಸ್ತೀರ್ಣ ಕಾರ್ಯವನ್ನು ಕೈಗೊಳ್ಳಲಾಗಿತ್ತು. ಈ ಕೆರೆಯ ನೀರನ್ನು ನೀರಾವರಿ ಉದ್ದೇಶಗಳಿಗಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ, ಮತ್ತು ಅದರ ಸುತ್ತಲೂ ಹಣ್ಣಿನ ತೋಟಗಳನ್ನು ಬೆಳೆಸಲಾಗಿದೆ. ಅಲ್ಲಿ ಅನೇಕ ಹಿಂದಿನ ಕಾಲದ ಬಾವಿಗಳಿದ್ದು, ಅವು ಮೆಟ್ಟಿಲುಗಳನ್ನು ಮತ್ತು ಆಚ್ಛಾದಿತವಾದ ಗೂಡುಗಳನ್ನು ಹೊಂದಿವೆ. ಈಶ್ವರ ಲಿಂಗಗಳನ್ನು ಹೊಂದಿರುವ ಆ ಗೂಡುಗಳನ್ನು, ಬಹುಶಃ ಸಂನ್ಯಾಸಿಗಳ ಜಪ-ತಪಗಳಿಗಾಗಿ ನಿರ್ಮಿಸಿರಬಹುದಾಗಿದೆ. ಈ ಊರಿನಲ್ಲಿ ಅನೇಕ ಆಧುನಿಕ ದೇವಾಲಯಗಳು, ಆರು ಮಸೀದಿಗಳು ಮತ್ತು ಎರಡು ದರ್ಗಾಗಳಲ್ಲದೆ ಹದಿನಾರನೇಯ ಶತಮಾನದಲ್ಲಿ ಸ್ಥಾಪಿತವಾದ ತೋಂಟದ ಸಿದ್ದಲಿಂಗೇಶ್ವರ ಮಠ ಎಂಬ ಹೆಸರಿನ ಸುಪ್ರಸಿದ್ಧ ವೀರಶೈವ ಮಠವಿದೆ.

**ತರೀಕೆರೆ :** (ಚಿಕ್ಕಮಗಳೂರು ಜಿ; ಉಪವಿಭಾಗ ಮತ್ತು ತಾ. ಕೇ; ಜನ: 23,929) ತರೀಕೆರೆಯು ಬೆಂಗಳೂರಿನಿಂದ ವಾಯುವ್ಯಕ್ಕೆ 235 ಕಿಮೀ ದೂರದಲ್ಲಿದೆ. ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಇದು ಕಾಟೂರು ಎಂಬ ಹೆಸರನ್ನು ಪಡೆದಿತ್ತು. ಹನ್ನೆರಡನೇಯ ಶತಮಾನದ ಒಂದು ಶಾಸನದಲ್ಲಿ ಇದನ್ನು ಒಂದು ಅಗ್ರಹಾರವೆಂದು ಕರೆದಿದೆ. ಹಳೆಯೂರಿನ ಕ್ರಿ.ಶ. 1158ನೇ ಇಸವಿಯ ಒಂದು ದತ್ತಿ ಶಾಸನ ತರಿಯನಕೆರೆ ಎಂಬ ಹೆಸರಿದ್ದ ಈ ಸ್ಥಳವನ್ನು ಅಮರಾವತಿಪುರಂ ಎಂದು ಕರೆದಿದೆಯಲ್ಲದೆ, ಹೊಸ ತರಿಯಕೆರೆ ಕಟ್ಟಿಸಿದ ಕೇಶವದೇವ ಎಂಬಾತನು ಅಮಿತಾನಂದ ದೇವನ ಪ್ರತಿಷ್ಠಾಪನೆ ಮಾಡಿ ದತ್ತಿಯೊಂದನ್ನು ನೀಡಿದ್ದನ್ನು ತಿಳಿಸುತ್ತದೆ. ಇಲ್ಲಿರುವ ಪೂರ್ಣಯ್ಯ ಧರ್ಮಶಾಲೆಯ ಪ್ರವೇಶ ದ್ವಾರದ ಬಳಿ ಹೊಯ್ಸಳರ ಕಾಲದ ಎರಡು ಸ್ತಂಭಗಳಿವೆ. ಇಲ್ಲಿ ನಾಯಕರ ಕಾಲದ ಒಂದು ಕೇಶವ ದೇವಸ್ಥಾನವಿದೆ. ಇವೇ ಅಲ್ಲದೆ, ಇಲ್ಲಿ ಸುಬ್ರಹ್ಮಣ್ಯ ದೇವಸ್ಥಾನ, ಲಕ್ಷ್ಮಣ ಯೋಗೀಂದ್ರ ಆಶ್ರಮ, ಕ್ಯಾಥಲಿಕರ ಸಂತ ಥಾಮಸ್ ಚರ್ಚ್ ಮತ್ತು ದಿವ್ಯ ಜ್ಯೋತಿ ಆಶ್ರಮ ಚರ್ಚ್ ಹಾಗೂ ಪ್ರಾಟೆಸ್ಟೆಂಟರ ಸಂತ ಪೀಟರ್ಸ್ ಚರ್ಚ್ ಇವೆ. ತರೀಕೆರೆ ಬಳಿ ಇರುವ ಹಳೆಯೂರು ಎಂಬಲ್ಲಿ ಸರ್ಕಾರದ್ದೆಂದೇ ಪರಿಗಣಿಸಿರುವ ವಿಜ್ಞಾನ್ ಇಂಡಸ್ಟ್ರೀಸ್ ಕಂಪನಿ ಲಿಮಿಟೆಡ್ ಇದೆ; ಮತ್ತು ಇಲ್ಲಿ ಉಕ್ಕು, ಎರಕ ಹೊಯ್ದ ಮಿಶ್ರ ಉಕ್ಕಿನ ಇಟ್ಟಿಗೆಗಳನ್ನು ತಯಾರಿಸುತ್ತಾರೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ : ನಂದಿ: ತರೀಕೆರೆಯಿಂದ ಆಗ್ನೇಯಕ್ಕೆ ಐದು ಕಿಮೀ ದೂರದಲ್ಲಿದೆ. ಇಲ್ಲಿ ಬಸವೇಶ್ವರರ ಒಡನಾಡಿಯಾಗಿದ್ದ ನೂಲಿಯ ಚಂದಯ್ಯ ಎಂಬ ಪ್ರಖ್ಯಾತ ಶಿವಶರಣನ ಒಂದು ಗದ್ದುಗೆ ಇದೆ; ಅಲ್ಲದೆ ಇಲ್ಲಿ ಸಿದ್ದಲಿಂಗೇಶ್ವರ ಮತ್ತು ಆಂಜನೇಯ ಗುಡಿಗಳೂ ಇವೆ. ಕಲಹತ್ತಿಪುರ ತರೀಕೆರೆಯಿಂದ ದಕ್ಷಿಣಕ್ಕೆ 20 ಕಿಮೀ ದೂರದಲ್ಲಿರುವ ಒಂದು ಊರು. ಇದು 1,877 ಮೀಟರು (6,155 ಅಡಿಗಳು)ಗಳಷ್ಟು ಎತ್ತರವಿರುವ ಕಲಹತ್ತಿಗಿರಿಗೆ ಅತ್ಯಂತ ಸಮೀಪದಲ್ಲಿದೆ. ಈ ಕಲಹತ್ತಿಗಿರಿಯ ಮೇಲೆ ಕತ್ತಿನ ಚೌಡೇಶ್ವರಿಯ ಕಲ್ಲಿನ ಒಂದು ಚಿಕ್ಕ ಗುಡಿಯಿದೆ. ಮನಮೋಹಕ ನಿಸರ್ಗ ದೃಶ್ಯಗಳ ನಡುವೆ 122 ಮೀಟರುಗಳಷ್ಟು ಎತ್ತರದಿಂದ ಧುಮುಕುವ "ಕಾಳಹಸ್ತಿ ಜಲಪಾತ" ಅಥವಾ "ಕಲ್‌ಹತ್ತಿ ಜಲಪಾತ" ಎಂಬ ಹೆಸರುಗಳಿಂದ ಕರೆಯುವ ಜಲಪಾತವೊಂದು ಇದಕ್ಕೆ ಸಮೀಪದಲ್ಲಿದೆ. ಇದು ಕೆಮ್ಮಣ್ಣು ಗುಂಡಿಯಿಂದ 10 ಕಿಮೀ ದೂರವಿದೆ. ಕೃಷ್ಣರಾಜೇಂದ್ರ ಗಿರಿಧಾಮ ಎಂದೂ ಕರೆಯಲಾಗುವ ಕೆಮ್ಮಣ್ಣುಗುಂಡಿ ತರೀಕೆರೆಗೆ ಸಮೀಪದಲ್ಲಿರುವ ತಿಗಡ ಗ್ರಾಮದ ಒಂದು ಕೊಪ್ಪವಾಗಿದ್ದು, ಬೆಂಗಳೂರಿನಿಂದ ವಾಯುವ್ಯಕ್ಕೆ 252 ಕಿಮೀ ದೂರದಲ್ಲಿದೆ. ಇದು ವರ್ಷಪೂರ್ತಿ ಹಿತಕರ ಹವಾಮಾನವಿರುವ ಒಂದು ಗಿರಿಧಾಮ. ಇಲ್ಲಿಯ ಗರಿಷ್ಠ ಉಷ್ಣಾಂಶ 28° ಸೆಂ. ಮತ್ತು ಕನಿಷ್ಠ ಉಷ್ಣಾಂಶ 8° ಸೆಂ. ವರ್ಷವೊಂದಕ್ಕೆ ಇಲ್ಲಿ ಸರಾಸರಿ 254 ಸೆಂ.ಮೀ. (100 ಅಂಗುಲಗಳು) ಮಳೆಯಾಗುತ್ತದೆ. ಈ ಗಿರಿಧಾಮದ ಉಸ್ತುವಾರಿಯನ್ನು ನೋಡಿಕೊಳ್ಳುವ ರಾಜ್ಯ ತೋಟಗಾರಿಕೆ ಇಲಾಖೆ

ಇಲ್ಲಿ ಸುಂದರವಾದ ಗುಲಾಬಿ ಉದ್ಯಾನವನ ಮುಂತಾದವನ್ನು ಬೆಳೆಸಿದೆ. ತೋಟಗಾರಿಕೆ ಇಲಾಖೆ ಕೆಮ್ಮಣ್ಣುಗುಂಡಿಯಲ್ಲಿ ಸುಸಜ್ಜಿತವಾದ ವಸತಿಗೃಹಗಳನ್ನು ಸಹ ನಿರ್ವಹಿಸುತ್ತಿದೆ. ಹತ್ತಿರದಲ್ಲಿಯೇ ಕಬ್ಬಿಣದ ಅದುರನ್ನು ಅಗೆದು ಹೊರಜಿಯ ಮೂಲಕ ತಣಿಗೆಬೈಲು ಎಂಬಲ್ಲಿಗೆ ಮತ್ತು ಅಲ್ಲಿಂದ ಟ್ರಾಮ್ ಬಂಡಿಗಳಲ್ಲಿ ಭದ್ರಾವತಿಯಲ್ಲಿರುವ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗೆ ಸಾಗಿಸುವರು. ಕೆಮ್ಮಣ್ಣುಗುಂಡಿಯಿಂದ ಸುಮಾರು ಎರಡು ಕಿಮೀ ದೂರದಲ್ಲಿ ಒಂಭತ್ತು ಮೀಟರುಗಳಷ್ಟು (30 ಅಡಿಗಳು) ಎತ್ತರದಿಂದ ಧುಮುಕುವ 'ಶಾಂತಿ ಜಲಪಾತ' ಇದೆ. ಇದನ್ನು 'ಗೌರೀ ಜಲಪಾತ' ಎಂದೂ ಕರೆಯುವುದುಂಟು. ಅಲ್ಲಿಂದ ಸುಮಾರು ಎಂಟು ಕಿಮೀ ದೂರದಲ್ಲಿ 'ಹೆಬ್ಬೆ ಜಲಪಾತ' ಇದೆ. ಅಜ್ಜಂಪುರವು ಬೆಂಗಳೂರಿನಿಂದ ವಾಯುವ್ಯಕ್ಕೆ 232 ಕಿಮೀ ದೂರದಲ್ಲಿದೆ. ಇದು ಬೆಂಗಳೂರು-ಮಿರಜ್ ರೈಲು ಮಾರ್ಗದಿಂದ ನೇರ ಸಂಪರ್ಕ ಪಡೆದಿದೆ. ಇಲ್ಲಿಯ ಕೋಟೆಯನ್ನು ಕಟ್ಟಿಸಿದ, 17ನೇಯ ಶತಮಾನದಲ್ಲಿ ಸಿರಾದಲ್ಲಿದ್ದ, ಮೊಗಲ್ ಅಧಿಕಾರಿ ಅಜಿಮ್‌ಖಾನ್ ಎಂಬವನಿಂದ ಈ ಊರಿಗೆ ಈ ಹೆಸರು ಬಂದಿದೆ. ಹಿಂದೆ ಈ ಸ್ಥಳವು ಕೆರಲು ಎಂದು ಕರೆಯಲ್ಪಡುತ್ತಿತ್ತು. ತರೀಕೆರೆಯ ಪಾಳೇಗಾರ ಹನುಮಪ್ಪನಾಯಕ ಇಲ್ಲಿಯ ಕೋಟೆಯನ್ನು ದುರಸ್ತಿಗೊಳಿಸಿದ್ದಲ್ಲದೆ, ವಿಜಯನಗರದ ಬುಕ್ಕರಾಯನಿಂದ ನಿರ್ಮಿತವಾದ ದೇವಾಲಯವೊಂದನ್ನು ಸಹ ಜೀರ್ಣೋದ್ಧಾರಗೊಳಿಸಿದನು. ಕ್ರಿ.ಶ. 1761ನೇ ಇಸವಿಯಲ್ಲಿ ಈ ಸ್ಥಳವನ್ನು ಹೈದರ್ ಅಲಿ ವಶಪಡಿಸಿಕೊಂಡ ನಂತರ, ಇಲ್ಲಿಯ ಕೋಟೆ ಮತ್ತು ದೇವಸ್ಥಾನಗಳು ಪುನಃ ಪಾಳುಬಿದ್ದವು. ಇಲ್ಲಿ ಆಂಜನೇಯ, ಸೋಮೇಶ್ವರ ಮತ್ತು ಕರಾಳಮ್ಮ ದೇವಸ್ಥಾನಗಳು ಸಹ ಇವೆ. ಪ್ರತೀವರ್ಷ ಏಪ್ರಿಲ್ ತಿಂಗಳಲ್ಲಿ ಈ ಕರಾಳಮ್ಮನ ಜಾತ್ರೆ ಆರು ದಿನಗಳ ಕಾಲ ಜರಗುತ್ತದೆ. ಸುಮಾರು 50 ವರ್ಷಗಳ ಹಿಂದೆ ಶಂಕರಾನಂದ ಸ್ವಾಮೀಜಿ ಎಂಬುವರಿಂದ ಸ್ಥಾಪಿಸಲ್ಪಟ್ಟ ಆಧ್ಯಾತ್ಮಿಕ ಕೇಂದ್ರ ಇಲ್ಲಿರುವ ಹೆಸರಿಸಬೇಕಾದ ಮತ್ತೊಂದು ಸ್ಥಳ. ಅಜ್ಜಂಪುರದ ನಾಗರಿಕ ಆಡಳಿತವನ್ನು ಪುರಸಭೆ ನಡೆಸುತ್ತಿದೆ.

**ತಲಕಾಡು :** (ಮೈಸೂರು ಜಿ; ತಿರುಮಕೂಡ್ಲು ನರಸೀಪುರ ತಾ; ಜನ: 6,999) ತಲಕಾಡು ಕಾವೇರಿ ನದಿ ದಂಡೆಯ ಮೇಲೆ ಟಿ. ನರಸೀಪುರದಿಂದ 29 ಕಿಮೀ ದೂರದಲ್ಲಿರುವ ಒಂದು ಹೋಬಳಿ ಕೇಂದ್ರ. ಬಹಳ ಕಾಲದವರೆಗೆ ಗಂಗರ ರಾಜಧಾನಿಯಾಗಿದ್ದ ಇದು ಒಂದು ಐತಿಹಾಸಿಕ ಸ್ಥಳ. ಐತಿಹ್ಯವೊಂದರ ಪ್ರಕಾರ ತಲ ಮತ್ತು ಕಾಡ ಎಂಬ ಇಬ್ಬರು ಬೇಡರು ಇಲ್ಲಿ ವೈದ್ಯನಾಥೇಶ್ವರನನ್ನು ಆರಾಧಿಸುತ್ತ ಮೋಕ್ಷ ಹೊಂದಿದ್ದರಿಂದ ಈ ಹೆಸರು ಬಂದಿದೆ. ಇದನ್ನು ಗಜಾರಣ್ಯ ಕ್ಷೇತ್ರ ಎಂದೂ ಕರೆದಿದ್ದಾರೆ. ಗಂಗರಿಂದ ಇದು ಚೋಳರ ಅಧೀನಕ್ಕೆ ಬಂದಾಗ ರಾಜರಾಜಪುರ ಎಂದು ಕರೆಯಲಾಯಿತು. ಇದನ್ನು ಹೊಯ್ಸಳರು ಆಕ್ರಮಿಸಿಕೊಂಡಾಗ ವಿಷ್ಣುವರ್ಧನನು 'ತಲಕಾಡುಗೊಂಡ' ಎಂಬ ಬಿರುದನ್ನು ಧರಿಸಿದನು. ಹಿಂದಿನ ತಲಕಾಡು ಪಟ್ಟಣ ಸಂಪೂರ್ಣವಾಗಿ ಮರಳಿನಲ್ಲಿ ಹೂತುಹೋಗಿದೆ. ಈಗಲೂ ನೋಡಲು ಸಾಧ್ಯವಿರುವ ಇಲ್ಲಿಯ ದೇವಸ್ಥಾನಗಳೆಂದರೆ ವೈದ್ಯೇಶ್ವರ, ಪಾತಾಳೇಶ್ವರ, ಮರುಳೇಶ್ವರ, ಕೀರ್ತಿನಾರಾಯಣ, ಗೌರಿಶಂಕರ ಮತ್ತು ಆನಂದೇಶ್ವರ. ಚೋಳರ ಮೇಲೆ ಕ್ರಿ.ಶ. 1117ರಲ್ಲಿ ವಿಜಯ ಸಾಧಿಸಿದ ಜ್ಞಾಪಕಾರ್ಥವಾಗಿ ವಿಷ್ಣುವರ್ಧನನು ಕೀರ್ತಿನಾರಾಯಣ ದೇವಸ್ಥಾನವನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಸುಮಾರು ಎಂಟು ಅಡಿಗಳಷ್ಟು ಎತ್ತರವಿರುವ ಈ ಮೂರ್ತಿಯ ಒಂದು ಬದಿಯಲ್ಲಿ ಶ್ರೀದೇವಿ, ಮತ್ತೊಂದು ಬದಿಯಲ್ಲಿ ಭೂದೇವಿ ನಿಂತಿದ್ದಾರೆ. ಐದು ಸೋಮವಾರಗಳಿರುವ ಕಾರ್ತಿಕ ಮಾಸದಲ್ಲಿ, ಈ ದೇವಸ್ಥಾನವನ್ನು ಭಕ್ತರ ದರ್ಶನಕ್ಕಾಗಿ ತೆರೆಯಲಾಗುವುದು. ಕಡೆಯ ಬಾರಿ ಇದನ್ನು ತೆರೆದ ಸಂದರ್ಭ 1978ರಲ್ಲಿ ಬಂದಿತ್ತು. ಇಂತಹ ಸಂದರ್ಭದಲ್ಲಿ ಪಂಚಲಿಂಗ ದರ್ಶನಕ್ಕಾಗಿ ಭಾರಿ ಸಂಖ್ಯೆಯಲ್ಲಿ ಭಕ್ತಾದಿಗಳು ನೆರೆಯುವರು. ಈ ತಲಕಾಡು 1868ರವರೆಗೆ ತಾಲೂಕು ಕೇಂದ್ರವಾಗಿತ್ತು. ಇಲ್ಲಿ ವೀರಶೈವ ಜನಾಂಗದ ಹಸ್ತಿಕೇರಿ ಮಠವಿದೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಜೊತೆಗೆ, ಈ ಮಠ ಒಂದು ಆಯುರ್ವೇದ ಚಿಕಿತ್ಸಾಕೇಂದ್ರ ಮತ್ತು ಒಂದು ಸರ್ಪವನವನ್ನು ಸಹ ನಡೆಸುತ್ತಿದೆ. ಈ ಸರ್ಪವನದಲ್ಲಿ ಸರ್ಪ ಕಡಿತಕ್ಕೆ ಚಿಕಿತ್ಸೆ ನೀಡಲಾಗುತ್ತದೆ. ತಲಕಾಡಿನಲ್ಲಿರುವ ವೈದ್ಯೇಶ್ವರ, ಅರ್ಕೇಶ್ವರ, ಪಾತಾಳೇಶ್ವರ, ಮತ್ತು ಮರುಳೇಶ್ವರ ಮತ್ತು ಮುಡುಕುತೊರೆಯಲ್ಲಿರುವ ಮಲ್ಲಿಕಾರ್ಜುನ ದೇವಾಲಯಗಳಲ್ಲಿರುವ ಲಿಂಗಗಳನ್ನೇ ಪಂಚಲಿಂಗ ಎಂದು ಕರೆಯುವುದು. ಸಮೀಪದಲ್ಲಿರುವ ವಾಟಾಳ್ ಗ್ರಾಮದಲ್ಲಿ ಒಂದು ವೀರಶೈವ ಮಠವಿದೆ.

**ತಲಕಾವೇರಿ :** (ಕೊಡಗು ಜಿ; ಮಡಿಕೇರಿ ತಾ; ಜನ: 28) ತಲಕಾವೇರಿಯು ಕಾವೇರಿ ನದಿಯ ಉಗಮ ಸ್ಥಾನ ಮತ್ತು ಒಂದು ಯಾತ್ರಾಸ್ಥಳ. ಇದು ಮಡಿಕೇರಿಯಿಂದ 46 ಕಿಮೀ ಮತ್ತು ಭಾಗಮಂಡಲದಿಂದ ಪಶ್ಚಿಮಕ್ಕೆ ಎಂಟು ಕಿಮೀ ದೂರದಲ್ಲಿ ಬ್ರಹ್ಮಗಿರಿ ಬೆಟ್ಟಗಳ ಇಳಿಜಾರು ಪ್ರದೇಶದಲ್ಲಿದೆ. ಕಾವೇರಿ ನದಿಯ ಉಗಮಸ್ಥಾನದ ಬಳಿ ಈಶ್ವರ ಮತ್ತು ಗಣಪತಿ ಮಂದಿರಗಳಿವೆ. ಈಶ್ವರ ಮಂದಿರದಲ್ಲಿರುವ ಲಿಂಗವನ್ನು ಅಗಸ್ತ್ಯ ಮಹಾಮುನಿಯು ಪ್ರತಿಷ್ಠಾಪಿಸಿದನೆಂಬ ನಂಬಿಕೆಯಿಂದಾಗಿ ಅಗಸ್ತ್ಯೇಶ್ವರ ಎನಿಸಿಕೊಂಡಿದೆ. ತಲಕಾವೇರಿಯ ದರ್ಶನಕ್ಕೆ ತುಲಾ ಸಂಕ್ರಮಣ ದಿನ ಬಹಳ ಪ್ರಶಸ್ತವಾದುದೆಂದು ನಂಬಿಕೆ ಇದೆ. ಇಲ್ಲಿ ಒಂದು ದೊಡ್ಡ ಕೊಳವೊಂದರ ಬದಿಯಲ್ಲಿ ಚಚ್ಚೌಕಾಕೃತಿಯ ಚಿಕ್ಕ ಕೊಳವೇ ಕಾವೇರಿಯ ಉಗಮಸ್ಥಾನ (ಭಾಗ-1ರಲ್ಲಿರುವ ಚಿತ್ರನೋಡಿ). ತುಲಾ ಸಂಕ್ರಮಣದ ದಿನ, ಶುಭಗಳಿಗೆಯೊಂದರಲ್ಲಿ ಪವಿತ್ರ ಕಾವೇರಿ ಗೋಚರಿಸುವಳೆಂದೂ

ಮತ್ತು ಕೊಳದಲ್ಲಿರುವ ನೀರು ಸರ್ರನೆ ಮೇಲಕ್ಕೆ ಉಕ್ಕುವುದೇ ಆವಳ ಆಗಮನದ ಸೂಚನೆಯೆಂದೂ ಯಾತ್ರಿಕರು ನಂಬುವರು. ತುಲಾ ಸಂಕ್ರಮಣ ದಿನದಂದು ಆರಂಭವಾಗುವ ಕಾವೇರಿ ಜಾತ್ರೆ ಒಂದು ತಿಂಗಳು ಪೂರ್ತಿ ಜರುಗುವುದು. ಪವಿತ್ರ ಸ್ನಾನದ ಬಳಿಕ ಅನೇಕ ಯಾತ್ರಿಕರು 300 ಅಡಿಗಳಷ್ಟು ಎತ್ತರದಲ್ಲಿರುವ, ಸಪ್ತಋಷಿಗಳು ತಪವನ್ನಾಚರಿಸಿದರೆಂದು ನಂಬಲಾದ, ಬ್ರಹ್ಮಗಿರಿ ಶಿಖರವನ್ನೇರುವರು. ಈ ಶಿಖರದ ಮೇಲೆ ನಿಂತವರು ಕುದುರೆಮುಖ ಗಿರಿಪಂಕ್ತಿಗಳು ಮತ್ತು ಸುತ್ತಮುತ್ತಲಿನ ಪ್ರದೇಶದ ಅಖಂಡ ದೃಶ್ಯವನ್ನು ನೋಡಬಹುದು. ತಮ್ಮ ವನವಾಸದ ಕಾಲದಲ್ಲಿ ಪಾಂಡವರು ಈ ಪ್ರದೇಶಕ್ಕೆ ಬಂದಿದ್ದರೆಂದು ಹೇಳುವರು. ಇದಕ್ಕೆ ಸಾಕ್ಷಿಯಾಗಿ ಇಲ್ಲಿರುವ ಭಾರಿ ಗಾತ್ರದ ಬಂಡೆಯೊಂದನ್ನು "ಭೀಮನ ಕಲ್ಲು" ಎಂದು ತೋರಿಸುವರು.

ತಿಪಟೂರು : (ತುಮಕೂರು ಜಿ; ತಾ. ಕೇ; ಜನ: 30,468) ತಿಪಟೂರು, ಬೆಂಗಳೂರು-ಹೊನ್ನಾವರ ಹೆದ್ದಾರಿಯಲ್ಲಿ ಮತ್ತು ಬೆಂಗಳೂರು-ಮೀರಜ್ ರೈಲು ಮಾರ್ಗದಲ್ಲಿ, ಬೆಂಗಳೂರಿನಿಂದ ವಾಯುವ್ಯಕ್ಕೆ 141 ಕಿಮೀ ಮತ್ತು ತುಮಕೂರಿನಿಂದ ಪಶ್ಚಿಮಕ್ಕೆ 73 ಕಿಮೀ ದೂರದಲ್ಲಿದೆ. ಇದು ಒಂದು ಪ್ರಮುಖ ವ್ಯಾಪಾರ ಮತ್ತು ವಿದ್ಯಾಕೇಂದ್ರ. ಇದು ಅದೇ ಹೆಸರಿನ ತಾಲೂಕು ಮತ್ತು ಉಪವಿಭಾಗದ ಕೇಂದ್ರವೂ ಆಗಿದೆ. ಇಲ್ಲಿ ಸುಮಾರು 12 ದೇವಸ್ಥಾನಗಳು ಮತ್ತು ಎರಡು ಧರ್ಮಛತ್ರಗಳಿವೆ. ಕಲ್ಲೇಶ್ವರ, ಕೆಂಪಮ್ಮ, ಆಂಜನೇಯ, ಮಲ್ಲಿಕಾರ್ಜುನ, ಕಾಶಿ ವಿಶ್ವೇಶ್ವರ ಮತ್ತು ಕನ್ನಿಕಾ ಪರಮೇಶ್ವರಿ ಇಲ್ಲಿಯ ದೇವಸ್ಥಾನಗಳಲ್ಲಿ ಮುಖ್ಯವಾದವು. ಈ ತಾಲೂಕು ತೆಂಗಿನ ಬೆಳೆಗೆ ಹೆಸರಾಗಿದ್ದು, ತಿಪಟೂರು ತೆಂಗಿನ ಕಾಯಿ ವ್ಯಾಪಾರದ ಪ್ರಮುಖ ಕೇಂದ್ರವಾಗಿದೆ. ಇಲ್ಲಿಯ ನಾಗರಿಕ ಆಡಳಿತವನ್ನು ಪುರಸಭೆ ನಡೆಸುತ್ತಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ: ಕೆರಗೋಡು (ಜನ: 1,076) ತಿಪಟೂರಿನಿಂದ ನೈಋತ್ಯಕ್ಕೆ 4.8 ಕಿಮೀ ದೂರದಲ್ಲಿದೆ. ಇಲ್ಲಿರುವ ಸುಂದರವಾದ ಶಂಕರೇಶ್ವರ ದೇವಸ್ಥಾನದ ದ್ವಾರದ ಬಳಿ ಕರಿ ಶಿಲೆಯಿಂದ ಕೆತ್ತಿ ರೂಪಿಸಿರುವ ಎರಡು ಸಿಂಹಗಳಿವೆ. ಇದಲ್ಲದೆ, ಇಲ್ಲಿ ಬುದ್ಧ, ವಿಘ್ನೇಶ್ವರ, ಮತ್ತು ನಂದಿ ಇವರುಗಳ ಗುಡಿಗಳಿವೆ. ಇಲ್ಲಿ ವೀರಶೈವ ಸಂಪ್ರದಾಯದ ಕೆರೆಗೋಡಿ ಸಂಸ್ಥಾನ ಮಠ ಸಹ ಇದೆ. ನೊಣವಿನಕೆರೆ (ಜನ: 3,205) ನೊಳಂಬರ ಕಾಲದಲ್ಲಿ ನೊಣಬನಕೆರೆ ಎಂಬ ಹೆಸರನ್ನು ಪಡೆದಿತ್ತು. ಇದು ತಿಪಟೂರಿನಿಂದ ಆಗ್ನೇಯಕ್ಕೆ ಸುಮಾರು 10 ಕಿಮೀ ದೂರದಲ್ಲಿದೆ. ಇದು ಹೆಬ್ಬಾರ್ ಶ್ರೀವೈಷ್ಣವರ ಪಂಚಗ್ರಾಮಗಳಲ್ಲಿ ಒಂದಾಗಿತ್ತು. ಕೊನೇರಿ ಅಯ್ಯಂಗಾರ್ ಎಂಬವನು ಕಟ್ಟಿಸಿದ ದ್ರಾವಿಡ ಶೈಲಿಯಲ್ಲಿರುವ ವಿಶಾಲವಾದ ಬ್ಯಾಟರಾಯಸ್ವಾಮಿ ದೇವಸ್ಥಾನದಲ್ಲಿ ಶ್ರೀನಿವಾಸದೇವರ ಮೂರ್ತಿಯೊಂದಿದೆ. ಇದಕ್ಕಿಂತಲೂ ಹಳೆಯದಾದ, ಅಂದರೆ ಹೊಯ್ಸಳರ ಕಾಲದ ಗೋಪಾಲಕೃಷ್ಣ ಮಂದಿರದ ಮೂರು ಗರ್ಭಗೃಹಗಳಲ್ಲಿ ಕೇಶವ, ವೇಣುಗೋಪಾಲ ಮತ್ತು ಯೋಗಾನರಸಿಂಹ ಮೂರ್ತಿಗಳಿವೆ. ಇಲ್ಲಿರುವ ಶೈವ ಮಂದಿರಗಳೆಂದರೆ ಶಾಂತೇಶ್ವರ, ನೊಣಂಬೇಶ್ವರ, ಚಂಡೇಶ್ವರ, ಕಲ್ಲೇಶ್ವರ ಮತ್ತು ಗೌರೀಶ್ವರ. ವಿಘ್ನಸಂತೆ (ಜನ: 1,217): ಶಾಸನಗಳಲ್ಲಿ ಇಗ್ಗನಸಂತೆ ಎಂದು ಕರೆದಿರುವ ಇದು, ನೊಣವಿನಕೆರೆಯಿಂದ ನೈಋತ್ಯಕ್ಕೆ ಸುಮಾರು ಮೂರು ಕಿಮೀ ಮತ್ತು ತಿಪಟೂರಿನಿಂದ ಆಗ್ನೇಯಕ್ಕೆ ಸುಮಾರು 14 ಕಿಮೀ ದೂರದಲ್ಲಿದೆ. ಹೊಯ್ಸಳರ ಕಾಲದ, ತ್ರಿಕೂಟಾಚಲ ಲಕ್ಷ್ಮೀನರಸಿಂಹ ದೇವಸ್ಥಾನ ಇಲ್ಲಿದೆ. ಕ್ರಿ. ಶ. 1286ರ ಶಾಸನವೊಂದರ ಪ್ರಕಾರ ಇದು ಹೊಯ್ಸಳ ದೊರೆ ಮುಮ್ಮಡಿ ನರಸಿಂಹನ ದಂಡನಾಯಕರುಗಳಿಂದ ನಿರ್ಮಿತವಾಯಿತು. ಇದರ ಗರ್ಭಗೃಹದಲ್ಲಿ ಚನ್ನಕೇಶವನ ಸುಂದರ ಮೂರ್ತಿ ಇದೆ. ಇಲ್ಲಿರುವ ಬಾಲಲಿಂಗೇಶ್ವರ ದೇವಸ್ಥಾನ ಒಂದು ಸರಳ ಹೊಯ್ಸಳ ಕಟ್ಟಡವಾಗಿದ್ದು, ಇದರ ಕಲ್ಲಿನ ಶಿಖರದ ನಾಲ್ಕೂ ಕಡೆಯಲ್ಲಿ ಒಂದರ ಮೇಲೊಂದರಂತೆ ನಾಲ್ಕು ವಿಗ್ರಹಗಳು ಮತ್ತು ಮುಂಭಾಗದಲ್ಲಿ ಒಂದು ಹೊಯ್ಸಳ ಲಾಂಛನ ಚಿತ್ರ ಕಂಡುಬರುತ್ತವೆ. ಈ ಊರಿನಲ್ಲಿ ಬನಶಂಕರಿ ದೇವಸ್ಥಾನವೂ ಇದೆ.

ತಿರುಮಕೂಡ್ಲು ನರಸೀಪುರ : (ಮೈಸೂರು ಜಿ ; ತಾ. ಕೇ ; ಜನ : 8,901) ತಿರುಮಕೂಡ್ಲು ನರಸೀಪುರ ಬೆಂಗಳೂರಿನಿಂದ 145 ಕಿಮೀ ಮತ್ತು ಮೈಸೂರಿನಿಂದ 30 ಕಿಮೀ ದೂರದಲ್ಲಿದೆ. ತಿರುಮಕೂಡ್ಲು ಎಂಬ ಹೆಸರು ತಿರುಮ + ಕೂಡಲ್ ಕಾವೇರಿ, ಕಪಿಲಾ ಮತ್ತು ಕಾವೇರಿನದಿಯ ತಳದಲ್ಲಿದೆಯೆಂದು ನಂಬಲಾದ ಸ್ಫಟಿಕ ಸರೋವರ ಇವುಗಳ ಸಂಗಮ ಸ್ಥಳದಲ್ಲಿರುವುದರಿಂದ ಬಂದಿದೆ. ಟಿ. ನರಸೀಪುರದಲ್ಲಿ ಮೂಲಸ್ಥಾನೇಶ್ವರ, ಪಾರ್ವತಿ ಮತ್ತು ಗುಂಜಾ ನರಸಿಂಹ (ವಿಜಯನಗರ ಕಾಲದ್ದು) ದೇವಾಲಯಗಳಿವೆ. ಪ್ರಾಚೀನ ಪಟ್ಟಣದ ಭಾಗವೆಂದು ಕರೆಯುವ ತಿರುಮಕೂಡ್ಲುವಿನಲ್ಲಿ ಅಗಸ್ತ್ಯೇಶ್ವರ, ಸೋಮೇಶ್ವರ, ಕಾಮಾಕ್ಷಿ, ಗಣಪತಿ, ಭಿಕ್ಷೇಶ್ವರ ಮಂದಿರಗಳಲ್ಲದೆ, ವ್ಯಾಸರಾಯರ ಮಠದ ಮಂದಿರ ಮತ್ತು ಬ್ರಹ್ಮಾಶ್ವತ್ಥ ಮಂದಿರಗಳಿವೆ. ವಿಶಾಲವಾದ ಗುಂಜಾ ನರಸಿಂಹ ಮತ್ತು ಅಗಸ್ತ್ಯೇಶ್ವರ ಮಂದಿರಗಳು ದ್ರಾವಿಡ ಶೈಲಿಯವು. ಈ ಎರಡು ಮಂದಿರಗಳ ವಾರ್ಷಿಕ ರಥೋತ್ಸವಗಳಿಗೆ ಬಹುಸಂಖ್ಯೆಯಲ್ಲಿ ಭಕ್ತರು ಸೇರುತ್ತಾರೆ. ಈ ಎರಡು ಮಂದಿರಗಳೂ ವಾಸ್ತುಶಿಲ್ಪದ ದೃಷ್ಟಿಯಿಂದ ಗಮನ ಸೆಳೆಯುವಂಥವು. ಇಲ್ಲಿ ಭತ್ತ ಮತ್ತು ಎಣ್ಣೆ ಗಿರಣಿಗಳು, ರೇಷ್ಮೆಗೂಡುಗಳಿಂದ ನೂಲು ಬಿಚ್ಚುವ ಘಟಕ ಮತ್ತು ತೋಟಗಾರಿಕೆ ಇಲಾಖೆಯ ಒಂದು ತೋಟವಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ : ಬನ್ನೂರು (ಹೋಬಳಿ ಕೇಂದ್ರ; ಜನ : 15,111) ಟಿ. ನರಸೀಪುರದಿಂದ ಉತ್ತರಕ್ಕೆ 16 ಕಿಮೀ ಮತ್ತು ಮೈಸೂರಿನಿಂದ ಪೂರ್ವಕ್ಕೆ 23 ಕಿಮೀ ದೂರದಲ್ಲಿದೆ. ಇಲ್ಲಿ ಒಂದು ಪುರಸಭೆಯಿದೆ. ಹಿಂದೆ ಇದಕ್ಕೆ ವಹ್ನಿಪುರ ಎಂಬ

ಹೆಸರಿತ್ತೆಂದು ಇಲ್ಲಿ ದೊರಕಿರುವ ಶಾಸನಗಳಿಂದ ತಿಳಿದುಬರುತ್ತದೆ. ವಹ್ನಿ ಅಂದರೆ ಬನ್ನಿಮರ ಎಂದು ಅರ್ಥ. ಇದರಿಂದಾಗಿಯೇ ಇದಕ್ಕೆ ಬನ್ನಿತೂರು, ನಂತರ ಬನ್ನೂರು ಎಂಬ ಹೆಸರು ಬಂದಂತೆ ಕಾಣುತ್ತದೆ. ಧಾರ್ಮಿಕ ದೃಷ್ಟಿಯಿಂದ ಮಹತ್ವದ್ದೆನಿಸಿರುವ ಕೈಲಾಸೇಶ್ವರ, ಆಂಜನೇಯ, ಹೇಮಾದ್ರಾಂಬಾ ಮುಂತಾದ ದೇವಾಲಯಗಳು ಇಲ್ಲಿವೆ. ಎಂಟನೇಯ ಶತಮಾನದಲ್ಲಿ ಗಂಗ ವಂಶದ ಶ್ರೀಪುರುಷನ ಅಧೀನದಲ್ಲಿದ್ದ ಈ ಸ್ಥಳ, ನಂತರ ವಿಜಯ ನಗರದ ಅರಸರ ಮತ್ತು ಪಾಳೇಗಾರರ ಆಡಳಿತದಲ್ಲಿತ್ತು. ಈ ಸ್ಥಳವು ಉತ್ತಮ ಮಾಂಸದ ತಳಿಯ ಕುರಿಯಾದ 'ಬಂಡೂರು ಕುರಿ'ಯ ತಳಿ ಅಭಿವೃದ್ಧಿ ಕೇಂದ್ರವನ್ನು ಹೊಂದಿದ್ದು ಅದರಿಂದ ಪ್ರಖ್ಯಾತವಾಗಿದೆ. ಮುಡುಕುತೊರೆ ಟಿ. ನರಸೀಪುರದಿಂದ 25 ಕಿಮೀ ದೂರದಲ್ಲಿರುವ ಒಂದು ಯಾತ್ರಾಸ್ಥಳ. ಇಲ್ಲಿಯ ಬೆಟ್ಟದ ಮೇಲೆ ತಲಕಾಡಿನ ಪಂಚಲಿಂಗಗಳಲ್ಲಿ ಒಂದೆಂದು ಹೆಸರಾದ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನವಿದೆ. ಈ ದೇವಸ್ಥಾನದ ಕಲ್ಯಾಣಮಂಟಪದ ಗೋಡೆಗಳ ಮೇಲೆ ಸುಂದರ ವರ್ಣಚಿತ್ರ ಗಳಿವೆ. ಪ್ರತೀವರ್ಷವೂ ಇಲ್ಲಿ ರಥೋತ್ಸವ ಮತ್ತು ಭಾರಿ ದನಗಳ ಪರಿಷೆ ನಡೆಯುವುದು. ಗುರುಕುಲಾಶ್ರಮ ಮತ್ತು ವೀರಶೈವರ ತೋಪಿನಮಠ ಸಹ ಇಲ್ಲಿಯೇ ಇವೆ. ಮೂಗೂರು ಟಿ. ನರಸೀಪುರದಿಂದ 10 ಕಿಮೀ ದೂರದಲ್ಲಿರುವ ಒಂದು ಹೋಬಳಿ ಕೇಂದ್ರ. ಇಲ್ಲಿ ಆರು ದೇವಾಲಯಗಳು ಮತ್ತು ಎರಡು ಜೈನ ಬಸದಿಗಳಿವೆ. ತಿಬ್ಬಾದೇವಿ ಅಥವಾ ತ್ರಿಪುರಸುಂದರಿ ಮಂದಿರ ವಿಜಯನಗರ ಕಾಲದ ಒಂದು ವಿಶಾಲ ಕಟ್ಟಡ. ದೇಶೇಶ್ವರ, ನಾರಾಯಣ, ಸೋಮೇಶ್ವರ, ವೀರಭದ್ರ ಮತ್ತು ಗಣಪತಿ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಪ್ರಮುಖವೆನಿಸಿವೆ. ಇಲ್ಲಿ ಜರುಗುವ ಪ್ರಸಿದ್ಧ ಬಂಡಿಹಬ್ಬಕ್ಕೆ ಜನರು ಕಿಕ್ಕಿರಿದು ನೆರೆ ಯುವರು. ಇಲ್ಲಿ ಒಂದು ವೀರಶೈವರ ಮಠವಿದೆ. ರೇಷ್ಮೆ ವ್ಯವಸಾಯ ಕ್ಷೇತ್ರ ಮತ್ತು ರೇಷ್ಮೆ ಕೃಷಿ ತರಬೇತಿ ಕೇಂದ್ರ ಸಹ ಇಲ್ಲಿವೆ. ಸೋಸಲೆ ಒಂದು ಹೋಬಳಿ ಕೇಂದ್ರವಾಗಿದ್ದು, ಟಿ. ನರಸೀಪುರದಿಂದ ನಾಲ್ಕು ಕಿಮೀ ದೂರದಲ್ಲಿದೆ. ವಿಜಯ ನಗರದ ಅರಸರ ಮತ್ತು ಮಧುರೆ ನಾಯಕರ ಕೆಲವು ಶಿಲಾಶಾಸನ ಗಳು ಇಲ್ಲಿ ಸಿಕ್ಕಿವೆ. ಸೋಸಲೆಯ ಉಪಗ್ರಾಮವಾದ ವ್ಯಾಸ ರಾಜಪುರದಲ್ಲಿ ಮಾಧ್ವ ಸಂಪ್ರದಾಯದ ಹೆಸರಾಂತ ವ್ಯಾಸರಾಜ ಮಠವಿದೆ. ಪ್ರಖ್ಯಾತ ವೀರಶೈವ ಕವಿ, ರೇವಣಾಚಾರ್ಯ ಮತ್ತು ಕೀರ್ತನಾಚಾರ್ಯರಾದ ಪುರುಷೋತ್ತಮದಾಸರು, ಶ್ರೀನಿವಾಸದಾಸರು ಮತ್ತು ರಾಮದಾಸರು ಇದೇ ಊರಿನವರು. ಹೆಮ್ಮಿಗೆ ಕಾವೇರಿನದಿ ದಂಡೆಯ ಮೇಲೆ ಟಿ. ನರಸೀಪುರದಿಂದ 11 ಕಿಮೀ ದೂರದಲ್ಲಿರುವ ಒಂದು ಚಿಕ್ಕ ಹಳ್ಳಿ. ಇಲ್ಲಿ ನವಶಿಲಾ ಯುಗದ ಒಂದು ನಿವೇಶನವಿದೆ. ವಿಜಯನಗರ ಕಾಲದ ವರದ ರಾಜಸ್ವಾಮಿ ದೇವಾಲಯ ಇಲ್ಲಿದೆ. ಅಲ್ಲದೆ, ಇಲ್ಲಿ ಅನೇಕ ವೀರಗಲ್ಲುಗಳು ಬೆಳಕಿಗೆ ಬಂದಿವೆ. ಸೋಮನಾಥಪುರ (ಜನ: 3,197) ಟಿ. ನರಸೀಪುರದಿಂದ 10 ಕಿಮೀ ಮತ್ತು ಮೈಸೂರಿನಿಂದ 45 ಕಿಮೀ ದೂರದಲ್ಲಿ ಕಾವೇರಿನದಿಯ ಎಡದಂಡೆಯ ಮೇಲಿರುವ ಒಂದು ಗ್ರಾಮ. ಹೊಯ್ಸಳ ದೊರೆ ಮುಮ್ಮಡಿ ನರಸಿಂಹನ ದಂಡನಾಯಕ ಸೋಮ ಎಂಬಾತನು ಕ್ರಿ.ಶ. 1268 ರಲ್ಲಿ ಕಟ್ಟಿಸಿದ ಹೊಯ್ಸಳ ಶೈಲಿಯ ಚನ್ನಕೇಶವ ದೇವಸ್ಥಾನ ಇಲ್ಲಿದೆ. ಇದಕ್ಕೂ ಮುಂಚೆ ಅಂದರೆ ಕ್ರಿ.ಶ. 1258ರಲ್ಲಿ, ಅವನು ಇಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿದ್ದನು. ಚನ್ನಕೇಶವ ದೇವಾಲಯವು ತ್ರಿಕೂಟಾಚಲವಾಗಿದ್ದು, ಜಗತಿ ಯೊಂದರ ಮೇಲೆ ನಿಂತಿದೆ. ಒಂದು ಸುಂದರ ಸಂಪುಟದಂತೆ ಕಾಣುವ ಈ ದೇವಸ್ಥಾನ ಹೊಯ್ಸಳ ಶೈಲಿಯ ಒಂದು ಪರಿಪೂರ್ಣ ನಿರ್ಮಾಣ ಎನಿಸಿಕೊಂಡಿದೆ. ಮುಖ್ಯ ಗುಡಿಯಲ್ಲಿ ಹಿಂದೆ ಇದ್ದ ಕೇಶವನಮೂರ್ತಿ ಈಗ ಕಾಣೆಯಾಗಿದೆ; ಆದರೆ ಉಳಿದ ಎರಡು ಗುಡಿಗಳಲ್ಲಿ ಜನಾರ್ದನ ಮತ್ತು ವೇಣು ಗೋಪಾಲನ ಮೂರ್ತಿಗಳು ಈಗಲೂ ಇವೆ. ಈ ದೇವಸ್ಥಾನದ ಹೊರಗೋಡೆಗಳು ಅತಿ ಸುಂದರವಾದ ಶಿಲ್ಪಗಳಿಂದ ತುಂಬಿವೆ. ಮಲ್ಲಿತಮ್ಮ, ಮಸಣಿತಮ್ಮ, ಪರಶುರಾಮ, ಮಾರಣ ಮುಂತಾ ದವರು ಈ ದೇವಸ್ಥಾನದ ರೂವಾರಿಗಳು. ಬೇರೆ ಕೆಲವು ಹೊಯ್ಸಳ ದೇವಾಲಯಗಳು ಶಿಖರಗಳನ್ನು ಕಳೆದುಕೊಂಡಿದ್ದರೂ ಇದರ ಶಿಖರಗಳು ಇಂದೂ ಉಳಿದಿವೆ. ಈ ಸೋಮನೇ ನಿರ್ಮಿಸಿದ ಪಂಚಲಿಂಗೇಶ್ವರ ಮತ್ತು ಲಕ್ಷ್ಮೀನಾರಾಯಣ ಎಂಬ ಎರಡು ದೇವಾಲಯಗಳು ನದಿ ದಂಡೆಯ ಮೇಲಿದ್ದು, ಈಗ ಶಿಥಿಲ ಸ್ಥಿತಿಯಲ್ಲಿವೆ.

ತೀರ್ಥಹಳ್ಳಿ : (ಶಿವಮೊಗ್ಗ ಜಿ; ತಾ. ಕೇ; ಜನ: 12,175) ತೀರ್ಥಹಳ್ಳಿಯು ಶಿವಮೊಗ್ಗೆಯಿಂದ 65 ಕಿಮೀ, ಬೆಂಗಳೂರಿನಿಂದ ಸುಮಾರು 336 ಕಿಮೀ ದೂರದಲ್ಲಿ ತುಂಗಾನದಿ ದಂಡೆಯ ಮೇಲಿರುವ ಒಂದು ವಾಣಿಜ್ಯ ಕೇಂದ್ರ. ಇಲ್ಲಿ ಕುಶಾವತಿ ಎಂಬ ಸಣ್ಣ ಹೊಳೆ ತುಂಗಾನದಿಯನ್ನು ಸೇರುತ್ತದೆ. ಈ ಊರಿನ ಸಮೀಪದಲ್ಲಿ ಕಂಡುಬರುವ ತುಂಗಾನದಿಯ ಅನೇಕ ತೀರ್ಥಗಳಿಂದಾಗಿ ಈ ಹೆಸರು ಬಂದಿದೆ. ಒಂದು ಕಡೆ ನೀರಿನ ಕೊರೆತದಿಂದ ಬಂಡೆಯಲ್ಲಿ ಉಂಟಾಗಿರುವ ಉರುಳೆಯಾಕಾರದ ಕೊಳವೊಂದಿದ್ದು ಶಾಸ್ತ್ರಸ್ನಾನಕ್ಕೆ ಶ್ರೇಷ್ಠವೆಂದು ಪ್ರಸಿದ್ಧವಾಗಿದೆ. ಐತಿಹ್ಯದಂತೆ, ಇಲ್ಲಿ ಹರಿಯುವ ನದಿಯಲ್ಲಿಯೇ ಪರಶುರಾಮನು ತನ್ನ ರಕ್ತಸಿಕ್ತ ಕೊಡಲಿಯನ್ನು ಶುಚಿಗೊಳಿಸಿದನು. ಇಲ್ಲಿ ಎರಡು ಮಠಗಳಿದ್ದು ಸ್ಮಾರ್ತರಾದ ಹವ್ಯಕರ ರಾಮಚಂದ್ರಾಪುರ ಮಠ ಮತ್ತು ಮಾಧ್ವ ವೈಷ್ಣವರ ಪುತ್ತಿಗೆ ಮಠಗಳಿವೆ. ನದಿ ದಂಡೆಯ ಮೇಲೆ ರಾಮೇಶ್ವರ ದೇವಸ್ಥಾನವಿದೆ. ಇಲ್ಲಿಯ ನಾಗರಿಕ ಆಡಳಿತವನ್ನು ಪುರಸಭೆಯು ನಡೆಸುತ್ತಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳು ಕೆಳಕಂಡಂತಿವೆ: ಅಂಬುತೀರ್ಥ (ಜನ: 601)ವು ನೊಣಬೂರು ಗ್ರಾಮಕ್ಕೆ ಸೇರಿದ ಒಂದು ಸಣ್ಣ ಹಳ್ಳಿ. ಇದು ತೀರ್ಥಹಳ್ಳಿಯಿಂದ ವಾಯುವ್ಯಕ್ಕೆ ಸುಮಾರು 16 ಕಿಮೀ ದೂರದಲ್ಲಿದ್ದು ಇಲ್ಲಿ ಶರಾವತಿ ನದಿಯ ಉಗಮ

ಸ್ಥಾನವಿದೆ. ಈ ಜಾಗದಲ್ಲಿ ಒಂದು ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿಂದ ಸುಮಾರು ನಾಲ್ಕು ಕಿಮೀ ದೂರದಲ್ಲಿರುವ ಅರಳಸುರಳಿ ಗ್ರಾಮದ ಹತ್ತಿರ ಶರಾವತಿ ನದಿಯು ಪ್ರಥಮ ಬಾರಿಗೆ 6.10 ಮೀಟರುಗಳಷ್ಟು ಎತ್ತರದಿಂದ ಧುಮುಕುತ್ತದೆ. ಇದು 'ಅಚ್ಚಕನ್ಯಾ ಜಲಪಾತ' ಎಂದು ಹೆಸರುಗಳಿಸಿದೆ. ಭುವನಗಿರಿ ದುರ್ಗ ಎಂದೂ ಕರೆಯಲಾಗುವ ಕವಲೆದುರ್ಗ (ಜನ: 166) ಅದೇ ಹೆಸರಿನ ಬೆಟ್ಟವೊಂದರ ತಪ್ಪಲಿನಲ್ಲಿರುವ ಒಂದು ಹಳ್ಳಿ. ಇದು ತೀರ್ಥಹಳ್ಳಿಯಿಂದ ವಾಯುವ್ಯಕ್ಕೆ ಸುಮಾರು 20 ಕಿಮೀ ದೂರವಿದೆ. ಬಹುದೂರದಲ್ಲಿ ಆರಣ್ಯದ ಮಧ್ಯೆ ಇರುವ ಈ ಕವಲೆದುರ್ಗಕ್ಕೆ ಪ್ರವೇಶ ಕಷ್ಟಸಾಧ್ಯ. ಕವಲೆದುರ್ಗ ಎಂದರೆ ಕಾವಲು ದುರ್ಗ ಎಂಬ ಅರ್ಥವಿದೆ. ಸಮುದ್ರ ಮಟ್ಟದಿಂದ 969 ಮೀಟರುಗಳ ಎತ್ತರದಲ್ಲಿರುವ ಇದು 1882ರವರೆಗೆ ಹಿಂದಿನ ಕವಲೆದುರ್ಗ ತಾಲೂಕಿನ ಕೇಂದ್ರವಾಗಿತ್ತು. ಸ್ಥಳಪುರಾಣವು ಇದಕ್ಕೆ ಅಗಸ್ತ್ಯ ಮತ್ತು ವಾಲ್ಮೀಕಿಯೊಡನೆ ಸಂಬಂಧ ಕಲ್ಪಿಸಿದೆಯಲ್ಲದೆ, ಮಹಾಭಾರತದ ಕಾಮ್ಯಕವನ ಇದೇ ಎಂದು ತಿಳಿಸುತ್ತದೆ. ಇದು ಕೆಳದಿ ನಾಯಕರ ಒಂದು ಭದ್ರ ಕೋಟೆಯಾಗಿತ್ತು. ಮಾಸ್ತಿಕಲ್ಲುಗಳು, ದೇವಾಲಯಗಳಾದ ವಿರೂಪಾಕ್ಷ, ವಿಜಯ ವಿಠಲ, ವೀರಭದ್ರ, ಭುವನೇಶ್ವರಿ, ಕೆಳದಿ ವೆಂಕಟಪ್ಪ ನಾಯಕನು ಕಟ್ಟಿಸಿದ್ದೆಂದು ಹೇಳಲಾಗುವ ಒಂದು ಮಸೀದಿ ಹಾಗೂ ಎರಡು ಕೊಳಗಳು ಇಲ್ಲಿವೆ. ಬೆಟ್ಟದ ಮೇಲು ಭಾಗದಲ್ಲಿ ಇರುವ ಶ್ರೀಕಂಠೇಶ್ವರ ದೇವಸ್ಥಾನ ಒಂದು ಚಿಕ್ಕ ಸರಳ ಕಟ್ಟಡವಾಗಿದ್ದು ಇಲ್ಲಿಂದ ಅರೇಬಿಯನ್ ಸಮುದ್ರ ಮತ್ತು ಸೂರ್ಯಾಸ್ತಮಾನದ ಸುಂದರ ದೃಶ್ಯವನ್ನು ಕಾಣಬಹುದು. ಇಲ್ಲಿ ಶಾಂತಗಂಗಾ ಮತ್ತು ಕಮಂಡಲು ತೀರ್ಥ ಎಂಬ ಹೆಸರಿನ ಎರಡು ಕೊಳಗಳಿವೆ. ಕವಲೆದುರ್ಗದಲ್ಲಿ ಒಂದು ವೀರಶೈವ ಮಠವಿದೆ. ತೀರ್ಥಹಳ್ಳಿ-ಶಿವಮೊಗ್ಗ ಮಾರ್ಗದಲ್ಲಿ, ತುಂಗಾನದಿಯ ದಂಡೆಯ ಮೇಲೆ, ತೀರ್ಥಹಳ್ಳಿಯಿಂದ ವಾಯುವ್ಯಕ್ಕೆ ಸುಮಾರು 16 ಕಿಮೀ ದೂರದಲ್ಲಿರುವ ಮಹಿಷಿ (ಜನ: 447) ಎಂಬಲ್ಲಿ ಸಂತ ಸತ್ಯಾನಂದ ಶ್ರೀಪಾದರ ಸಮಾಧಿ ಇದೆ. ಇದಲ್ಲದೆ, ಇಲ್ಲಿ ಅನೇಕ ದೇವಾಲಯಗಳಿವೆ. ಇವುಗಳಲ್ಲಿ ಪ್ರಮುಖವಾದ ಅಶ್ವತ್ಥನಾರಾಯಣ ದೇವರ ಗೌರವಾರ್ಥ ಪ್ರತೀವರ್ಷ ಮಾರ್ಚ್-ಏಪ್ರಿಲ್ ಮಾಹೆಯಲ್ಲಿ ರಥೋತ್ಸವ ನಡೆಸುತ್ತಾರೆ. ಮರಗಳಲೆ (ಜನ: 285)ಯು ತೀರ್ಥಹಳ್ಳಿಯಿಂದ ವಾಯುವ್ಯಕ್ಕೆ ಸುಮಾರು 16 ಕಿಮೀ ದೂರದಲ್ಲಿದೆ. ಇಲ್ಲಿ, ದೊಡ್ಡ ಕೆರೆಯೊಂದರ ದಂಡೆಯ ಮೇಲೆ ಕಪ್ಪುಗೋಡು ಕಪಿಲೇಶ್ವರ ಗುಡಿಯಿದೆ. ಇದು ಬೆಳ್ಳಾವೆಯ ಕೇದಾರೇಶ್ವರ ದೇವಸ್ಥಾನವನ್ನೇ ಹೋಲುತ್ತದೆ. ಮೂರು ಚಿಕ್ಕ ಗುಡಿಗಳಿರುವ ಈ ದೇವಸ್ಥಾನಕ್ಕೆ ಗೋಪುರವಿಲ್ಲ. ಮೇಳಿಗೆ (ಜನ: 795)ಯು ತೀರ್ಥಹಳ್ಳಿಯಿಂದ ಆಗ್ನೇಯಕ್ಕೆ ಸುಮಾರು 10 ಕಿಮೀ ದೂರದಲ್ಲಿದೆ. ಶಾಸನವೊಂದು ತಿಳಿಸುವಂತೆ ಬೊಮ್ಮಣಶ್ರೇಷ್ಠಿ ಎಂಬವನು ಕಟ್ಟಿಸಿದ ಇಲ್ಲಿರುವ ಜೈನರ ಅನಂತನಾಥ ಬಸದಿಯನ್ನು ಕ್ರಿ. ಶ. 1608ರಲ್ಲಿ ಆತನ ಮೊಮ್ಮಕ್ಕಳು ಶಿಲೆಯಿಂದ ಪುನರ್ನಿರ್ಮಾಣ ಮಾಡಿದರು. ದ್ರಾವಿಡ ಅಥವಾ ದಾಕ್ಷಿಣಾತ್ಯ ಶೈಲಿಯಲ್ಲಿರುವ ಈ ಬಸದಿ ಒಂದು ಮಾನಸ್ತಂಭವನ್ನು ಹೊಂದಿದೆ. ಈ ಊರಿನಲ್ಲಿ 17ನೇಯ ಶತಮಾನದ ಒಂದು ವೆಂಕಟರಮಣ ಗುಡಿಯಿದೆ. ಇದರ ಪ್ರಧಾನ ಮೂರ್ತಿ ಕಪ್ಪು ಶಿಲೆಯಿಂದಾದುದು. ಮಂಡಗದ್ದೆ (ಜನ: 1,642) ಲಿಂಗಾಪುರ ಗ್ರಾಮದ ಸಣ್ಣ ಹಳ್ಳಿ. ಇದು ತೀರ್ಥಹಳ್ಳಿಯಿಂದ ಈಶಾನ್ಯಕ್ಕೆ 32 ಕಿಮೀ ದೂರದಲ್ಲಿ, ಶಿವಮೊಗ್ಗ-ತೀರ್ಥಹಳ್ಳಿ ಮಾರ್ಗದಲ್ಲಿದೆ. ಮಾಂಡವ್ಯ ಮುನಿಯ ಆಶ್ರಮ ಇಲ್ಲಿತ್ತೆಂದು ಹೇಳುವರು. ತುಂಗಾನದಿಯ ದಂಡೆಯ ಮೇಲೆ, ಮಂಡಗದ್ದೆ ಬಳಿ, ಸುಂದರವಾದ ನಿಸರ್ಗದತ್ತ ಪಕ್ಷಿಧಾಮವಿದೆ. ಮಲೆನಾಡ ಅರಣ್ಯ ಪ್ರದೇಶವನ್ನು ತರಬೇತಿ ತಾಣವಾಗಿ ಬಳಸಿಕೊಂಡು, 1943ರಿಂದ ಇಲ್ಲಿ ಅರಣ್ಯ ಯುದ್ಧತಂತ್ರದ ತರಬೇತಿ ಶಾಲೆಯೊಂದು ನಡೆಯುತ್ತಿದೆ. ತೀರ್ಥಹಳ್ಳಿಯಿಂದ ಈಶಾನ್ಯಕ್ಕೆ ಸುಮಾರು 10 ಕಿಮೀ ದೂರದಲ್ಲಿರುವ ಅರಗ (ಜನ: 709)ವು ಅಗ್ರಹಾರ ಹೋಬಳಿಯ ಕೇಂದ್ರವಾಗಿದೆ. ಸ್ಥಳಪುರಾಣವೊಂದು ತಿಳಿಸುವಂತೆ ಈ ಊರು ಮಹಾಭಾರತದ ಲಾಕ್ಷಾಗೃಹವಿದ್ದ ನಿವೇಶನವಾಗಿತ್ತು. ಆದರೆ, ಅರಗ ಎಂಬ ಈ ಊರಿನ ಹೆಸರು ಹಿಂದೆ ಇಲ್ಲಿದ್ದ ಅಗ್ರಹಾರವೊಂದರಿಂದ ಬಂದಿದೆ. ಇಲ್ಲಿ ಆಂಜನೇಯ, ಗಣಪತಿ, ಉಮಾಮಹೇಶ್ವರ ಮತ್ತು ಅಖಂಡೇಶ್ವರ ದೇವಾಲಯಗಳಿವೆ. ವಿಜಯನಗರ ಕಾಲದ ಶಾಸನಗಳ ಪ್ರಕಾರ ಅರಗ-18 ಕಂಪಣಗಳು ಎಂಬ ಪ್ರದೇಶದ ರಾಜಧಾನಿ ಇದಾಗಿತ್ತು. ಕಲ್ಯಾಣಿ ಚಾಳುಕ್ಯರು ಮತ್ತು ಹುಂಚದ ಶಾಂತರಸು ಆಳುತ್ತಿದ್ದ ಅವಧಿಯಲ್ಲಿ ಇದೊಂದು ಪ್ರಮುಖ ಕೇಂದ್ರವೆನಿಸಿತ್ತು. 1763ರಲ್ಲಿ ಹೈದರ್ ಅಲಿ ಕೆಳದಿಯನ್ನು ಸ್ವಾಧೀನಪಡಿಸಿಕೊಳ್ಳುವವರೆಗೆ ಈ ಸ್ಥಳ ಕೆಳದಿ ನಾಯಕರ ಹಿಡಿತದಲ್ಲಿತ್ತು.

**ತುಂಗಭದ್ರಾ ಅಣೆಕಟ್ಟೆ :** (ಬಳ್ಳಾರಿ ಜಿ; ಹೊಸಪೇಟೆ ತಾ.) ತುಂಗಭದ್ರಾ ಅಣೆಕಟ್ಟೆ ಹೊಸಪೇಟೆಯಿಂದ ನೈಋತ್ಯಕ್ಕೆ ಸುಮಾರು ಆರು ಕಿಮೀ ದೂರದಲ್ಲಿದ್ದು, ಒಂದು ಪ್ರವಾಸೀ ಕೇಂದ್ರವೆನಿಸಿದೆ. ಕಮರಿಗೆ ಅಡ್ಡಕಟ್ಟೆ ಕಟ್ಟಿರುವುದರಿಂದ ಜಲಾಶಯವು ವಿಶಾಲವಾಗಿ ಹರಡಿಕೊಂಡಿದ್ದು 146 ಚದರ ಮೈಲಿಗಳಷ್ಟು ಪ್ರದೇಶವನ್ನಾಧರಿಸಿದೆ. ಮೂಲದಲ್ಲಿ ನೀರಾವರಿ ಉದ್ದೇಶಕ್ಕೆ ಸೀಮಿತವಾಗಿದ್ದರೂ, ಈ ಯೋಜನೆಯಡಿ ಈಗ ವಿದ್ಯುಚ್ಛಕ್ತಿಯನ್ನು ಸಹ ಉತ್ಪಾದಿಸಲಾಗುತ್ತಿದೆ. ಇಂಜಿನಿಯರಿಂಗ್ ವಿದ್ಯಾರ್ಥಿಗಳು ಮತ್ತು ಬಹುಸಂಖ್ಯೆಯಲ್ಲಿ ಪ್ರವಾಸಿಗಳು ಈ ಅಣೆಕಟ್ಟೆಯನ್ನು ನೋಡಲು ಹೋಗುತ್ತಾರೆ. ಇಲ್ಲಿ ಸುಂದರವಾದ ಒಂದು ಉದ್ಯಾನವನವಿದೆ. ತುಂಗಭದ್ರಾ ಮಂಡಳಿ ಪ್ರವಾಸಿಗರ ವಿಹಾರಕ್ಕೆಂದು ಯಂತ್ರಚಾಲಿತ ದೋಣಿಯೊಂದನ್ನು ಒದಗಿಸುತ್ತದೆ. ನಾಲೆಗಳಲ್ಲಿ ಮಾಡಿರುವ ಮಡುಗಳಲ್ಲಿ ಗಾಳ ಹಾಕಿ ಮೀನು ಹಿಡಿಯುವ ಹವ್ಯಾಸಿಗಳಿಗೆ ಬೇಕಾದ ಸೌಕರ್ಯ

ಗಳು ಸಹ ಇಲ್ಲಿ ಲಭ್ಯ. ಇಲ್ಲಿರುವ ಪ್ರವಾಸಿಧಾಮ ಮತ್ತು ತುಂಗಭದ್ರಾ ಅಣೆಕಟ್ಟೆಯ ಎರಡೂ ಬದಿಯ ಬೆಟ್ಟಗಳ ಮೇಲಿರುವ 'ವೈಕುಂಠ', 'ಇಂದ್ರಭವನ', ಮತ್ತು 'ಕೈಲಾಸ' ಅತಿಥಿಗೃಹಗಳಿಂದ ಜಲಾಶಯದ ನಯನಮನೋಹರ ದೃಶ್ಯವನ್ನು ಕಾಣಬಹುದು. ಇಲ್ಲಿಂದ ಸುಮಾರು 12 ಕಿಮೀ ದೂರದಲ್ಲಿರುವ, ರಾಯಚೂರು ಜಿಲ್ಲೆಯ ಗಿಣಿಗೇರ ಎಂಬಲ್ಲಿ ಒಂದು ಕಿರು ವಿಮಾನ ನಿಲ್ದಾಣವಿದೆ.

**ತುಮಕೂರು:** ಜಿ; ಉಪವಿಭಾಗ ಮತ್ತು ತಾ. ಕೇ; ಜನ: 1,08,670) ತುಮಕೂರು, ಹತ್ತನೇಯ ಶತಮಾನದ ಶಾಸನಗಳಲ್ಲಿ ತುಮ್ಮೆಗೂರು ಎಂದು ಉಲ್ಲೇಖವಾಗಿದ್ದು, ತುಂಬೆಗಿಡದಿಂದಾಗಿ ಈ ಹೆಸರನ್ನು ಪಡೆದಿರುವಂತೆ ಕಂಡುಬರುತ್ತದೆ. 'ಟುಮುಕೆ' ಎಂಬ ಸಣ್ಣ ನಗಾರಿಯಿಂದ 'ತುಮಕೂರು' ನಿಷ್ಪನ್ನವಾಗಿದೆ ಎಂಬ ಊಹೆಯೂ ಇದೆ. ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 70 ಕಿಮೀ ದೂರದಲ್ಲಿರುವ ತುಮಕೂರು, ರಸ್ತೆ ಮತ್ತು ರೈಲು ಸಂಪರ್ಕ ಹೊಂದಿದೆ. ದೇವರಾಯನದುರ್ಗ ಗಿರಿಶ್ರೇಣಿಯ ವಾಯುವ್ಯ ದಿಕ್ಕಿನ ತಪ್ಪಲಿನಲ್ಲಿ ದೊಡ್ಡ ಕೆರೆಯೊಂದರ ಕೋಡಿಯ ಸಮೀಪವಿರುವ ಎತ್ತರವಾದ ಪ್ರದೇಶದಲ್ಲಿ ಇದು ಹರಡಿಕೊಂಡಿದೆ. ಇದೊಂದು ವಾಣಿಜ್ಯ ಕೈಗಾರಿಕಾ ಮತ್ತು ವಿದ್ಯಾ ಕೇಂದ್ರವಾಗಿದೆ. ಕೈದಾಳದ ಕಂಠೆ ಅರಸು ಎಂಬುವನು ಒಂದು ಕೋಟೆ ಮತ್ತು ಅದರ ಪೂರ್ವಕ್ಕೆ ಒಂದು ಪೇಟೆ ಇದ್ದ ತುಮಕೂರು ಪಟ್ಟಣವನ್ನು ಕಟ್ಟಿಸಿದನೆಂದು ಹೇಳಲಾಗಿದೆ. ಕೋಟೆಯನ್ನು ಈಗ ನೆಲಸಮ ಮಾಡಲಾಗಿದೆ. ತುಮಕೂರಿನಲ್ಲಿ 40ಕ್ಕೂ ಹೆಚ್ಚು ದೇವಸ್ಥಾನಗಳು, ಒಂಬತ್ತು ಮಸೀದಿಗಳು ಮತ್ತು ಮೂರು ಚರ್ಚ್‌ಗಳಿವೆ. ವಿಜಯನಗರ ಕಾಲದಲ್ಲಿ ಕಟ್ಟಿದ್ದೆನ್ನಲಾದ ವಿಶಾಲವಾದ ಲಕ್ಷ್ಮೀಕಾಂತಸ್ವಾಮಿ ದೇವಸ್ಥಾನವೇ ಇವುಗಳಲ್ಲೆಲ್ಲಾ ಅತಿ ಹಳೆಯದು; ಕ್ರಿ.ಶ. 1560ರ ಶಾಸನವೊಂದು ಇಲ್ಲಿದೆ. ದ್ರಾವಿಡ ಶೈಲಿಯ ವಾಸ್ತುಶಿಲ್ಪವಿರುವ ಇದು ಗರ್ಭಗೃಹ, ಶುಕನಾಸ, ಮುಖಮಂಟಪ ಮತ್ತು ಪ್ರಾಕಾರ ಇವುಗಳನ್ನೊಳಗೊಂಡಿದೆ. ಲಕ್ಷ್ಮೀ ಸಹಿತ ಕುಳಿತಿರುವ ನಾರಾಯಣನ ವಿಗ್ರಹ ಸುಮಾರು 1.5 ಮೀ ಎತ್ತರವಿದೆ. ತುಮಕೂರಿನಲ್ಲಿ ಒಂದು ಪುರಸಭೆಯಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ: ಗೂಳೂರು (ಜನ: 3,114) ತುಮಕೂರಿನಿಂದ ಸುಮಾರು ಆರು ಕಿಮೀ ದಕ್ಷಿಣಕ್ಕಿದೆ. ಈಗಿನ ಕೈದಾಳ ಸೇರಿದಂತೆ ಇದು ಹಿಂದಿನ ಕ್ರೀಡಾಪುರದ ಭಾಗವಾಗಿತ್ತು. ಶೂನ್ಯ ಸಂಪಾದನೆ ಮುಂತಾದ ಕೃತಿಗಳನ್ನು ರಚಿಸಿದ ಸಿದ್ಧವೀರಣಾಚಾರ್ಯ ಇದೇ ಸ್ಥಳದವನು. ಕಾರ್ತೀಕಮಾಸ ಕಳೆದ ಮೂರನೇಯ ದಿನದಂದು, ಪ್ರತೀವರ್ಷವೂ ಇಲ್ಲಿ ಜರುಗುವ ಜಾತ್ರೆಯಲ್ಲಿ, ಜೇಡಿಮಣ್ಣಿನಿಂದ ರೂಪಿಸಿದ ಭಾರಿ ಗಾತ್ರದ ಗಣಪತಿ ವಿಗ್ರಹದ ಉತ್ಸವ ನಡೆಸುವರು. ಕೈದಾಳ (ಜನ: 1,266) ವು ತುಮಕೂರಿನಿಂದ ನೈಋತ್ಯಕ್ಕೆ ಐದು ಕಿಮೀ ಮತ್ತು ಗೂಳೂರಿನಿಂದ ಒಂದು ಕಿಮೀ ಪಶ್ಚಿಮಕ್ಕಿದೆ. ಹಿಂದೆ ಇದು ಕ್ರೀಡಾಪುರ ಎಂಬ ಹೆಸರಿನ ಪುಟ್ಟ ರಾಜ್ಯದ ರಾಜಧಾನಿಯಾಗಿದ್ದಂತೆ ತೋರುತ್ತದೆ. ಐತಿಹ್ಯದಂತೆ ಇದು ಸುಪ್ರಸಿದ್ಧ ರೂವಾರಿ ಜಕಣಾಚಾರಿಯ ಜನ್ಮಸ್ಥಳ. ಅವನು, ತನ್ನ ದೋಷಯುಕ್ತ ಕೆಲಸಗಾರಿಕೆಯಿಂದಾಗಿ, ಬೇಲೂರಿನಲ್ಲಿ ತಾನೇ ಕತ್ತರಿಸಿಕೊಂಡಿದ್ದ ಕೈಯೊಂದನ್ನು ಇಲ್ಲಿ ಮರಳಿ ಪಡೆದುದರಿಂದಾಗಿ ಈ ಸ್ಥಳಕ್ಕೆ ಕೈದಾಳ ಎಂಬ ಹೆಸರು ಬಂತೆಂದು ಐತಿಹ್ಯ ತಿಳಿಸುತ್ತದೆ. ಹೊಯ್ಸಳ ಶೈಲಿಯಲ್ಲಿರುವ ಈ ಊರಿನ ಚನ್ನಕೇಶವ ದೇವಸ್ಥಾನ ಒಂದು ದೊಡ್ಡ ಕಟ್ಟಡ; ಇದರ ಮಹಾದ್ವಾರದ ಮೇಲಿರುವ ಗೋಪುರ ವಿಜಯನಗರ ಶೈಲಿಯಲ್ಲಿದೆ. ಪಶ್ಚಿಮಾಭಿಮುಖವಾಗಿ ನಿಂತಿರುವ, ಚನ್ನಿಗರಾಯ ಎಂದೂ ಕರೆಯುವ, ಚನ್ನಕೇಶವನ ಮೂರ್ತಿ ಸುಮಾರು 1.8 ಮೀ ಎತ್ತರವಿದೆ. ಇಲ್ಲಿಯೇ ಒಂದು ಕಠಾರಿ ನೇತುಹಾಕಿಕೊಂಡು, ಉತ್ತರೀಯ ಹೊದ್ದು ಕೈಜೋಡಿಸಿ ನಿಂತಿರುವ ಸುಂದರ ಪ್ರತಿಮೆಯೊಂದನ್ನು ಜಕಣಾಚಾರಿ ಎಂದು ತೋರಿಸುವರು; ಆದರೆ, ನಿಜವಾಗಿ ಇದು ದೇವಸ್ಥಾನದ, ಅಥವಾ ಅದರ ಗೋಪುರದ ನಿರ್ಮಾಣಕ್ಕೆ ಕಾರಣನಾದ ದೊರೆಯೋರ್ವನದಿರಬಹುದು. ಗಂಗೇಶ್ವರ ಅಥವಾ ಗಂಗಾಧರೇಶ್ವರ ಮತ್ತು ನಾರಾಯಣಗುಡಿಯನ್ನು, ಅಲ್ಲಿಯೇ ಇರುವ ಶಾಸನವೊಂದು ಹೇಳುವಂತೆ, ಕ್ರಿ.ಶ. 1150ರಲ್ಲಿ ಹೊಯ್ಸಳ ದೊರೆ ನರಸಿಂಹನ ಕಾಲದಲ್ಲಿ ಗುಳೇಬಾಚಿ ಎಂಬ ಸಾಮಂತನೋರ್ವನು ಕಟ್ಟಿಸಿದನು. ಸಿದ್ಧಗಂಗಾ (ಜನ: 2,449) ತುಮಕೂರಿನಿಂದ ಪೂರ್ವಕ್ಕೆ ಸುಮಾರು ನಾಲ್ಕು ಕಿಮೀ ಮತ್ತು ಕ್ಯಾತ್ಸಂದ್ರದಿಂದ ಸುಮಾರು ಒಂದು ಕಿಮೀ ದೂರದಲ್ಲಿದೆ. ಬೆಟ್ಟದ ಮೇಲೆ ಸಿದ್ದಲಿಂಗೇಶ್ವರ ದೇವಸ್ಥಾನ ಮತ್ತು ಸಿದ್ಧಗಂಗಾ ಎಂದು ಕರೆಯುವ ಒಂದು ನೈಸರ್ಗಿಕ ಚಿಲುಮೆ ಇದ್ದು, ಬಹುಜನರನ್ನು ಆಕರ್ಷಿಸುತ್ತದೆ. ಮಠದ ಭಕ್ತರೊಬ್ಬರು ಈ ದೇವಸ್ಥಾನದ ಪ್ರವೇಶ ದ್ವಾರದ ಬಳಿ ಆರು ಸಣ್ಣ ಗುಡಿಗಳನ್ನು ಕಟ್ಟಿಸಿದ್ದಾರೆ. ಇಲ್ಲಿರುವ ಸುಪ್ರಸಿದ್ಧ ವೀರಶೈವಮಠ ಸುಂದರ ರಮ್ಯ ವಾತಾವರಣದಲ್ಲಿದೆ. ಈ ಮಠವು ಅನೇಕ ವಿದ್ಯಾ ಸಂಸ್ಥೆಗಳನ್ನು ನಡೆಸುತ್ತಿದ್ದು, ಅದರ ವಿದ್ಯಾರ್ಥಿನಿಲಯದಲ್ಲಿ ಜಾತಿ ಪಂಥಗಳ ಭೇದವಿಲ್ಲದೆ ಭಾರಿ ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿಗೆ ಪ್ರತೀದಿನ ಉಚಿತ ಆಹಾರ ಒದಗಿಸುವರು.

**ತುರುವೇಕೆರೆ:** (ತುಮಕೂರು ಜಿ; ತಾ. ಕೇ; ಜನ: 8,988) ತುರುವೇಕೆರೆ ತುಮಕೂರಿನಿಂದ ಆಗ್ನೇಯಕ್ಕೆ 64 ಕಿಮೀ ಮತ್ತು ಬಾಣಸಂದ್ರ ರೈಲ್ವೆ ನಿಲ್ದಾಣದಿಂದ ದಕ್ಷಿಣಕ್ಕೆ 10 ಕಿಮೀ ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಇದು ಒಂದು ಅಗ್ರಹಾರವಾಗಿತ್ತು. ಇದರ ಉತ್ತರಕ್ಕಿರುವ ದೊಡ್ಡ ಕೆರೆಯೊಂದರಿಂದ ಈ ಹೆಸರು ಬಂದಿದ್ದು, ಪಟ್ಟಣದ ನೀರು ಪೂರೈಕೆಗೆ ಈ ಕೆರೆಯಲ್ಲದೆ ಕೆಲವು ಕೊಳವೆ ಬಾವಿಗಳನ್ನು ತೋಡಲಾಗಿದೆ. ಇದರ ಹೊರ ಕೋಟೆಯನ್ನು ಕಟ್ಟಿದ ಹಾಗಲವಾಡಿಯ ನಾಯಕರಾದ

ಚಿಕ್ಕನಾಯಕ ಮತ್ತು ಅಣ್ಣಿನಾಯಕರು ಕೆರೆಯನ್ನು ವಿಸ್ತಾರ ಗೊಳಿಸುವ ಮತ್ತು ಅಭಿವೃದ್ಧಿ ಕಾರ್ಯಗಳನ್ನು ಮಾಡಿದರು. ಪಟ್ಟಣದ ಪೂರ್ವ ತುದಿಯಲ್ಲಿ ಬಸವನ ಗುಡಿಯೊಂದಿದೆ. ಅಲ್ಲದೆ, ಇಲ್ಲಿ ಮೂರು ಬೇರೆ ಬೇರೆ ದೇವಸ್ಥಾನಗಳಿವೆ. ಬಳಪದ ಕಲ್ಲಿನಿಂದ ಕಟ್ಟಿರುವ ಚನ್ನಿಗರಾಯ ದೇವಸ್ಥಾನವು ಹೊಯ್ಸಳ ರೀತಿಯ ರಚನೆಯಾಗಿದ್ದು ಗರ್ಭಗೃಹ, ಮುಚ್ಚಿದ ಶುಕನಾಸ, ನವರಂಗ, ಒಂಬತ್ತು ಅಂಕಣಗಳು ಮತ್ತು ಮುಖ ಮಂಟಪಗಳನ್ನು ಪಡೆದಿದೆ. ಚನ್ನಕೇಶವನ ಮೂರ್ತಿ ಸುಮಾರು 1.8 ಮೀಟರು ಎತ್ತರವಿದೆ. ಹದಿನೆಂಟನೇಯ ಶತಮಾನದ ಪೂರ್ವಾರ್ಧದಲ್ಲಿ ಕಟ್ಟಿರುವ ಗಂಗಾಧರೇಶ್ವರ ಗುಡಿಯಲ್ಲಿರುವ ಲಿಂಗ ವಿಶಿಷ್ಟ ಬಗೆಯದು; ಇದರ ಕಪ್ಪು ತಲೆಯ ಹಿಂಭಾಗದಲ್ಲಿರುವ ಕಮಾನಿ ನಾಕಾರದ ಜಟೆಯುಡಿಯಲ್ಲಿ, ಪದ್ಮಾಸನದಲ್ಲಿ ಕುಳಿತಿರುವ ಗಂಗೆಯ ಶಿಲ್ಪವಿದೆ. ಈ ಗುಡಿಯಲ್ಲಿರುವ ಬೃಹದಾಕಾರದ ಕಪ್ಪು ಶಿಲೆಯ ನಂದಿಯ ವಿಗ್ರಹ ಅತ್ಯುತ್ತಮವಾಗಿ ಕೆತ್ತಿರುವ ಶಿಲ್ಪವಾಗಿದೆ. ಬೇಟೆರಾಯ ಸ್ವಾಮಿ ಗುಡಿಯಲ್ಲಿ ಸಹ ಉತ್ತಮವಾಗಿ ಕೆತ್ತಿರುವ ಶಿಲ್ಪಗಳಿವೆ. ಈ ದೇವರ ಶಯನೋತ್ಸವದಲ್ಲಿ ಉಪಯೋಗಿಸುವ ಅಲಂಕೃತ ಮರದ ಮಂಚವನ್ನು ಮೈಸೂರಿನ ದಂಡನಾಯಕ ಕತ್ತಿ ಗೋಪಾಲರಾಜೇ ಅರಸು ನೀಡಿರುವ ಕಾಣಿಕೆಯಾಗಿದೆ. ಇಲ್ಲಿಯ ನಾಗರಿಕ ಆಡಳಿತವನ್ನು ಪುರಸಭೆ ನಿರ್ವಹಿಸುತ್ತಿದೆ. ಇದೇ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ: ಅಮ್ಮಸಂದ್ರ (ಜನ: 1,146) ತುರುವೇಕೆರೆಯಿಂದ ಈಶಾನ್ಯಕ್ಕೆ ಸುಮಾರು 19 ಕಿಮೀ ದೂರದಲ್ಲಿದೆ. ಇಲ್ಲಿ 1960ರಲ್ಲಿ ಸ್ಥಾಪಿಸಿದ ಒಂದು ಸಿಮೆಂಟ್ ಕಾರ್ಖಾನೆ ಇದೆ. ಮಾಯಸಂದ್ರ (ಜನ: 2,468)ವು ತುರುವೇಕೆರೆಯಿಂದ ಆಗ್ನೇಯಕ್ಕೆ ಸುಮಾರು 19 ಕಿಮೀ ದೂರ ದಲ್ಲಿದೆ. ಇದು ಹೆಬ್ಬಾರ್ ಶ್ರೀವೈಷ್ಣವರ ಪಂಚಗ್ರಾಮಗಳಲ್ಲಿ ಒಂದಾಗಿದೆ. ಬೆಸ್ತರು ಆರಾಧಿಸುವ ಮಾಯಮ್ಮನ ಒಂದು ಹಳೇ ಗುಡಿ ಮತ್ತು ಶಕ್ತಿ ದೇವತೆಯಾದ ಕೊಲ್ಲಾಪುರದಮ್ಮನ ಗುಡಿ ಇಲ್ಲಿವೆ. ಇಲ್ಲಿಂದ ಮೂರು ಕಿಮೀ ದೂರದಲ್ಲಿ, ಬೆಟ್ಟ ವೊಂದರ ಮೇಲೆ, ಮಹದೇಶ್ವರ ದೇವಸ್ಥಾನವಿದೆ. ಮಾಯ ಸಂದ್ರದಿಂದ ಸುಮಾರು ನಾಲ್ಕು ಕಿಮೀ ದೂರದಲ್ಲಿರುವ ರಾಮ ಸಾಗರ ಎಂಬಲ್ಲಿ ಹೊಯ್ಸಳರ ಕಾಲದ ವರದರಾಜ ದೇವಸ್ಥಾನ ವಿದೆ. ನಾಗಲಾಪುರ (ಜನ: 962) ಮಾಯಸಂದ್ರದಿಂದ ಪಶ್ಚಿಮಕ್ಕೆ ಎಂಟು ಕಿಮೀ ಮತ್ತು ತುರುವೇಕೆರೆಯಿಂದ ದಕ್ಷಿಣಕ್ಕೆ 14 ಕಿಮೀ ದೂರವಿದೆ. ಹೊಯ್ಸಳ ದೊರೆ ಮೂರನೇಯ ಬಲ್ಲಾಳನ ಶಾಸನಗಳು ಪತ್ತೆಯಾಗಿರುವ ಇದು ಹಿಂದೆ ಚಟುವಟಿಕೆ ಯಿಂದ ಕೂಡಿದ್ದ ಒಂದು ಅಗ್ರಹಾರವಾಗಿತ್ತು. ಹದಿಮೂರ ನೇಯ ಶತಮಾನದಲ್ಲಿ ಇಲ್ಲಿ ಹೊಯ್ಸಳರಿಂದ ನಿರ್ಮಿಸಲ್ಪಟ್ಟ ಸುಂದರವಾದ ಚನ್ನಕೇಶವ ಮತ್ತು ಕೇದಾರೇಶ್ವರ ದೇವಾಲಯ ಗಳು ಈಗ ಶಿಥಿಲಾವಸ್ಥೆಯಲ್ಲಿವೆ. ಈ ಎರಡು ದೇವಾಲಯಗಳ ನಡುವೆ ಒಂದು ಕೆರೆಯಿದೆ. ಸಂಪಿಗೆ (ಜನ: 1,964) ತುರುವೇ ಕೆರೆಯಿಂದ ಈಶಾನ್ಯಕ್ಕೆ ಸುಮಾರು ಆರು ಕಿಮೀ ದೂರದಲ್ಲಿದೆ. ಹೆಬ್ಬಾರ್ ಶ್ರೀವೈಷ್ಣವರ ನೆಲೆಯಾಗಿರುವ ಇದನ್ನು ಜೈಮಿನಿ ಭಾರತದಲ್ಲಿ ವರ್ಣಿಸಿರುವ ಖ್ಯಾತಿವೆತ್ತ ವೀರ ಸುಧನ್ವನ ರಾಜಧಾನಿ ಚಂಪಕ ನಗರವಿದ್ದ ಸ್ಥಳ ಎಂದು ಹೇಳುವರು. ಇಲ್ಲಿ ವೆಂಕಟ ರಮಣ ಸ್ವಾಮಿಯ ಸೊಗಸಾದ ದೇವಸ್ಥಾನವಿದೆ. ಸೂಳೇಕೆರೆ (ಜನ: 510) ತುರುವೇಕೆರೆಯಿಂದ ದಕ್ಷಿಣಕ್ಕೆ ಒಂಭತ್ತು ಕಿಮೀ ದೂರದಲ್ಲಿದೆ. ಇಲ್ಲಿ, ಗರ್ಭಗೃಹ ಮತ್ತು ಶುಕನಾಸ ಮಾತ್ರ ವಿರುವ, ಹೊಯ್ಸಳ ಶೈಲಿಯ ಈಶ್ವರ ದೇವಸ್ಥಾನವಿದೆ. ಗರ್ಭ ಗೃಹದಲ್ಲಿ ಲಿಂಗದ ಸಮೀಪ, ಭೈರವನ ಮೂರ್ತಿಯೊಂದಿದೆ. ಮುಖಮಂಟಪ, ನಾಲ್ಕು ಕಂಬಗಳ ಆಧಾರದ ಮೇಲೆ ನಿಂತಿ ರುವ ಮೂರು ಅಂಕಣಗಳು, ಮತ್ತು ವಿಸ್ಮಯಕಾರಿ ಶಿಲ್ಪಗಳಿಂದ ತುಂಬಿರುವ ನವರಂಗ ಇವುಗಳನ್ನುಳ್ಳ ವೀರಭದ್ರ ದೇವರಗುಡಿ ಸಹ ಇಲ್ಲಿದೆ. ತಂಡಗ (ಜನ: 1,645) ಅಥವಾ ಹಳೇ ತಂಡ ಗವು ತುರುವೇಕೆರೆಯಿಂದ ನೈಋತ್ಯಕ್ಕೆ ಸುಮಾರು 14 ಕಿಮೀ ಮತ್ತು ನೊಣವಿನಕೆರೆಯಿಂದ ಆಗ್ನೇಯಕ್ಕೆ ಸುಮಾರು 14 ಕಿಮೀ ದೂರವಿದೆ. ಪ್ರಖ್ಯಾತ ದೊರೆಯಾದ ಶಾಲಿವಾಹನ ಇದೇ ಊರಿನ ಕುಂಬಾರ ಸ್ತ್ರೀಯೋರ್ವಳಿಗೆ ಜನಿಸಿದವನೆಂಬ ಪ್ರತೀತಿ ಇದೆ. ಶಾಸನಗಳಲ್ಲಿ ಶಂಕರನಾರಾಯಣಪುರ ಎಂದು ಕರೆದಿರುವ ಈ ಊರು ಒಂದು ಪ್ರಾಚೀನ ಅಗ್ರಹಾರವಾಗಿತ್ತು. ಇಲ್ಲಿರುವ, 14ನೇಯ ಶತಮಾನದ, ಚನ್ನಕೇಶವ ದೇವಾಲಯ ಹೊಯ್ಸಳ ಶೈಲಿಯ ಒಂದು ಉತ್ತಮ ನಮೂನೆಯಾಗಿದೆ. ಚಿಕ್ಕದೂ, ಹಳೆಯದೂ ಆದ ಮಲ್ಲೇಶ್ವರ (ಶಾಸನಗಳಂತೆ ಮೂಲಸ್ಥಾನೇ ಶ್ವರ) ಗುಡಿ ನೊಣವಿನಕೆರೆಯ ನೊಳಂಬೇಶ್ವರ ಗುಡಿಯಂತೆಯೇ ಇದೆ. ಸಮೀಪದಲ್ಲಿಯೇ ಇರುವ ಕುಂಬಾರ ಕರಿಕಲ್ಲು ಎಂಬ ಹೆಸರಿನ ಬೆಟ್ಟ ಅದರ ಗವಿಯೊಂದರಲ್ಲಿರುವ ಗವಿಸಿದ್ದೇಶ್ವರ ಲಿಂಗದಿಂದಾಗಿ ಒಂದು ಯಾತ್ರಾಸ್ಥಳವೆನಿಸಿದೆ.

**ದಾಂಡೇಲಿ :** (ಉ. ಕ. ಜಿ; ಹಳಿಯಾಳ ತಾ; ಜನ: 1981ರಲ್ಲಿ 47,625) ದಾಂಡೇಲಿ ನಗರವು ಉತ್ತರ ಕನ್ನಡ ಜಿಲ್ಲೆಯ ಆಗ್ನೇಯ ದಿಕ್ಕಿನಲ್ಲಿ ಬೆಂಗಳೂರಿನಿಂದ 481 ಕಿಮೀ ದೂರದಲ್ಲಿದೆ. ದಾಂಡೇಲಿ ಎಂಬ ಹೆಸರು ಪುರಾಣ ಕಾಲದ ದಂಡಕಾರಣ್ಯದೊಂದಿಗೆ ಸಂಬಂಧ ಹೊಂದಿದೆ ಎನ್ನಲಾಗಿದೆ. ದಾಂಡೇಲಿಯು ನೈಸರ್ಗಿಕ ಸಂಪತ್ತಿನಿಂದ ಕೂಡಿದ್ದು, ಅದರಿಂದಾಗಿ ಅದು ಮಹತ್ವದ ಔದ್ಯಮಿಕ ಕೇಂದ್ರವಾಗಿದೆ. ದಾಂಡೇಲಿ ಮತ್ತು ಅಳ್ನಾವರಗಳ ನಡುವೆ ರೈಲು ಸಂಪರ್ಕವಿದೆ. ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್ (1956), ಪ್ಲೈವುಡ್ ಫ್ಯಾಕ್ಟರಿ (1944), ಫೆರೋಮ್ಯಾಂಗನೀಸ್ ಘಟಕ (1956) ಮುಂತಾದವುಗಳು ದಾಂಡೇಲಿಯಲ್ಲಿರುವ ಬೃಹತ್ ಪ್ರಮಾಣದ ಉದ್ಯಮಗಳಾಗಿವೆ. ಇಲ್ಲಿರುವ ಪ್ಲೈವುಡ್ ಫ್ಯಾಕ್ಟರಿಯ ಶಾಖೆ ಗಳನ್ನು ಧಾರವಾಡ, ತಾಳಗುಪ್ಪ, ಸುಬ್ರಹ್ಮಣ್ಯ (ದಕ್ಷಿಣ ಕನ್ನಡ ಜಿಲ್ಲೆ), ಹಂಗಾರಕಟ್ಟೆ, ಅಹಮದಾಬಾದ್, ಇಟಾರಸಿ (ಮಧ್ಯ ಪ್ರದೇಶ), ಮುಂಬೈ ಮುಂತಾದೆಡೆಗಳಲ್ಲಿ ಸ್ಥಾಪಿಸಲಾಗಿದೆ.

ಇತ್ತೀಚೆಗೆ ಅಲ್ಲೊಂದು ಮರಗಳನ್ನು ತುಂಡರಿಸುವ ಕಾರ್ಖಾನೆಯನ್ನು ಸ್ಥಾಪಿಸಲಾಗಿದೆ. ಫೆರೋಮ್ಯಾಂಗನೀಸ್ ಉತ್ಪಾದನೆಯಲ್ಲಿ ದಾಂಡೇಲಿಯು ಜಗತ್ತಿನ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿದೆ. ಈ ಸ್ಥಳವು ಕಾಳೀ ನದಿಯ ತೀರದಲ್ಲಿ ನಿತ್ಯ ಹರಿದ್ವರ್ಣ ಅರಣ್ಯ ಮಧ್ಯದಲ್ಲಿ ಇರುವುದರಿಂದ ಸುಂದರ ರಮಣೀಯವಾದ ದೃಶ್ಯಗಳಿಗಾಗಿಯೂ ಪ್ರಸಿದ್ಧವಾಗಿದೆ. ಸೈಕ್ಸ್‌ಪಾಯಿಂಟ್, ಕವಳೆ ಗುಹೆಗಳು, ಸಿಂತೇರಿ ಬಂಡೆ, ಇವೆಲ್ಲ ದಾಂಡೇಲಿಯ ಪರಿಸರದಲ್ಲಿ ಇರುವ ಸುಂದರವಾದ ವಿಹಾರ ಸ್ಥಳಗಳಾಗಿವೆ. ಸೈಕ್ಸ್ ಪಾಯಿಂಟ್‌ನಿಂದ ಕಾಳೀ ವಿದ್ಯುತ್ ಕೇಂದ್ರ (ನಾಗಝರಿ)ದ ಸಮಗ್ರವಾದ ಮನೋಹರ ದೃಶ್ಯವನ್ನು ಕಾಣಬಹುದಾಗಿದೆ. ದಾಂಡೇಲಿಯ ಸಮೀಪದಲ್ಲಿ ವನ್ಯಪ್ರಾಣಿಗಳ ಅಭಯಾರಣ್ಯವೂ ಇದೆ. ಅಲ್ಲಿರುವ ಮುನಿಸಿಪಲ್ ಕೌನ್ಸಿಲ್ ದಾಂಡೇಲಿಯ ನಾಗರಿಕ ಆಡಳಿತದ ವ್ಯವಸ್ಥೆಯನ್ನು ನಿರ್ವಹಿಸುತ್ತವೆ. ದಾಂಡೇಲಿಯಿಂದ ಸುಮಾರು 22 ಕಿಮೀ ದೂರದಲ್ಲಿರುವ ಅಂಬಿಕಾನಗರದಲ್ಲಿ ಕಾಳೀ ಜಲವಿದ್ಯುಜ್ಜನಕ ಕೇಂದ್ರವನ್ನು ಸ್ಥಾಪಿಸಲಾಗಿದ್ದು ಅದು ದಾಂಡೇಲಿ ನಗರದ ಬಡಾವಣೆಯಾಗಿ ಅತ್ಯಂತ ತೀವ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿದೆ.

ದಾವಣಗೆರೆ : (ಚಿತ್ರದುರ್ಗ ಜಿ ; ಉಪವಿಭಾಗ ಮತ್ತು ತಾ. ಕೇ; ಜನ : 1,96,481) ದಕ್ಷಿಣ ರೈಲ್ವೆಯ ಮೀರಜ್-ಬೆಂಗಳೂರು ರೈಲುದಾರಿಯ ಮೇಲಿರುವ ರೈಲು ನಿಲ್ದಾಣವಾದ ದಾವಣಗೆರೆ ನಗರವು ಅತ್ಯಂತ ಮಹತ್ವದ ಔದ್ಯಮಿಕ ಮತ್ತು ವ್ಯಾಪಾರದ ಕೇಂದ್ರವಾಗಿದೆ. ಇದು ಚಿತ್ರದುರ್ಗದಿಂದ 61 ಕಿಮೀ ಮತ್ತು ಬೆಂಗಳೂರಿನಿಂದ 263 ಕಿಮೀ ದೂರದಲ್ಲಿದ್ದು, ನಗರಸಭೆಯನ್ನು ಪಡೆದಿದೆ. ಸ್ಥಳೀಯ ಐತಿಹ್ಯಗಳ ಆಧಾರದಿಂದ ಇದರ ಸಮೀಪದಲ್ಲಿದ್ದ ದಾವಣಕೆರೆ ಎಂಬ ಕೆರೆಯಿಂದಾಗಿ ಈ ಊರಿಗೆ ದಾವಣಗೆರೆ ಎಂಬ ಹೆಸರು ಬಂದಿರುವಂತೆ ಕಾಣುತ್ತದೆ. ಒಂದು ಕಾಲದಲ್ಲಿ ಇದು ದನಗಳ ವ್ಯಾಪಾರದ ಕೇಂದ್ರವಾಗಿತ್ತು. ಇಂದಿಗೂ ಇಲ್ಲಿ ದನಗಳ ಸಂತೆ ನೆರೆಯುತ್ತದೆ. ಇದರ ಸಮೀಪದಲ್ಲಿದ್ದ ಹಳ್ಳಿಗೆ ದಾವಣಕೆರೆ ಎಂಬ ಹೆಸರಿತ್ತು. ಕಾಲಾನಂತರದಲ್ಲಿ ಅದರ ಹೆಸರು ದಾವಣಗೆರೆ ಎಂದಾಯಿತು. ಇದು ಕೆಲವು ಸ್ಥಳೀಯ ಶಿಲಾಶಾಸನಗಳಲ್ಲಿ ಉಲ್ಲೇಖನಗೊಂಡಿರುವ ಬೇತೂರು ಎಂಬುದರ ಭಾಗವಾಗಿತ್ತು. ಹೈದರ್ ಅಲಿಯು ಇದನ್ನು ಅಪ್ಪಾಜಿರಾಂ ಎಂಬ ಹೆಸರಿನ ಮರಾಠಾ ಸರದಾರನಿಗೆ ಜಹಗೀರಾಗಿ ಕೊಟ್ಟಿದ್ದನು. ಅಪ್ಪಾಜಿರಾಮನು ವ್ಯಾಪಾರಸ್ಥರಿಗೆ ಇಲ್ಲಿ ಬಂದು ನೆಲೆಗೊಳ್ಳಲು ಉತ್ತೇಜನವಿತ್ತನು. ಅಪ್ಪಾಜಿರಾಮನು ಮಕ್ಕಳಿಲ್ಲದೆ ಸಾವನ್ನಪ್ಪಿದನು. ಆದರೆ ಅದೃಷ್ಟವಶಾತ್ ಈ ಪಟ್ಟಣವು ಟಿಪ್ಪುಸುಲ್ತಾನ್ ಹಾಗೂ ಅನಂತರದ ಅರಸರಿಂದ ಅದೇ ವಿಧವಾದ ಉತ್ತೇಜನವನ್ನು ಹೊಂದುತ್ತಾ ಬಂದು ಈಗಿನ ಸ್ಥಿತಿಯನ್ನು ಪಡೆಯಲು ಕಾರಣವಾಯಿತು. ವಿಶೇಷವಾಗಿ ರೈಲು ಸೌಕರ್ಯ ಒದಗಿದ ನಂತರ ಒಂದೇ ಸಮನೆ ಹೆಚ್ಚಿದ ಜನಸಂಖ್ಯೆಯು ಕಾರಣದಿಂದ ನಗರದ ಬೆಳವಣಿಗೆ ಅನಿವಾರ್ಯವಾಯಿತು. ಇದು ಚಿತ್ರದುರ್ಗ ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡ ಹಾಗೂ ಅತ್ಯಂತ ಜನನಿಬಿಡವಾದ ನಗರವಾಗಿದೆಯಲ್ಲದೆ, ಇಡೀ ರಾಜ್ಯದಲ್ಲಿಯೇ ಅತ್ಯಂತ ಬೃಹತ್ತಾದ ಹಾಗೂ ಜನನಿಬಿಡ ನಗರಗಳಲ್ಲಿ ಒಂದಾಗಿದೆ. ಕಡಲೆಕಾಯಿ ಹಾಗೂ ಹತ್ತಿ ಬೆಳೆಯುವ ಸಮೃದ್ಧ ಪ್ರದೇಶದಲ್ಲಿ ನೆಲೆಗೊಂಡಿರುವ ಈ ಊರಿನಲ್ಲಿ ಅನೇಕ ಕಡಲೆಕಾಯಿ ಎಣ್ಣೆಯ ಕಾರ್ಖಾನೆಗಳಿದ್ದು, ಅವುಗಳಲ್ಲಿ ಕೆಲವು ವನಸ್ಪತಿ ಉತ್ಪಾದನೆಯಲ್ಲಿಯೂ ನಿರತವಾಗಿವೆ. ಈ ತಾಲೂಕಿನಲ್ಲಿರುವ ಕುಕ್ಕವಾಡ ಮತ್ತು ದೊಡ್ಡಬಾತಿ ಎಂಬ ಹಳ್ಳಿಗಳಲ್ಲಿ ಎರಡು ಸಕ್ಕರೆ ಕಾರ್ಖಾನೆಗಳಿವೆ. ಈ ನಗರದಲ್ಲಿ ಅನೇಕ ಬಟ್ಟೆ ಕಾರ್ಖಾನೆಗಳು, ಮರ ಕೊಯ್ಯುವ ಕಾರ್ಖಾನೆಗಳು, ನೆಲಹಾಸು ಬಿಲ್ಲೆಗಳ ಉತ್ಪಾದಕ ಘಟಕಗಳು, ಗಚ್ಚು ಮಿಶ್ರಣ (ಕಾಂಕ್ರೀಟ) ದ ಉತ್ಪಾದಕ ಘಟಕಗಳು, ಹಂಚಿನ ಕಾರ್ಖಾನೆಗಳು, ಅಲ್ಯುಮಿನಿಯಂ ಉದ್ಯಮಗಳು, ಮೇಣಕಪ್ಪಡ ಉತ್ಪಾದಕ ಉದ್ಯಮಗಳು ಇದ್ದು, ಅದರಿಂದಾಗಿ ಈ ನಗರದಲ್ಲಿ ಶ್ರಮಜೀವಿಗಳ ಸಂಖ್ಯೆ ಅಧಿಕವಾಗಿದೆ. ಇಲ್ಲಿ ಟ್ರ್ಯಾಕ್ಟರ್ ಟ್ರೇಲರ್‌ಗಳ ಉತ್ಪಾದಕ ಘಟಕವೂ ಇದೆ. ಹೊಸ ಬಡಾವಣೆಗಳಲ್ಲಿನ ವಿಶಾಲವಾದ ಬೀದಿಗಳು, ಸಾರ್ವಜನಿಕ ಉದ್ಯಾನವನಗಳು ಹಾಗೂ ಆಕರ್ಷಕ ಚೌಕಗಳಿಂದಾಗಿ ಈ ಊರಿನ ಸೌಂದರ್ಯವು ಇಮ್ಮಡಿಸಿದೆ. ಇಂಜಿನೀಯರಿಂಗ್ ಕಾಲೇಜು, ಮೆಡಿಕಲ್ ಕಾಲೇಜು, ಕಲಾ ಮತ್ತು ವಿಜ್ಞಾನ ಕಾಲೇಜು, ಶಿಕ್ಷಣ ತರಬೇತಿ ಕಾಲೇಜು, ಕಲೆ ಮತ್ತು ಕುಶಲ ಕೈಗಾರಿಕೆಗಳ ವಿದ್ಯಾಲಯಗಳನ್ನೊಳಗೊಂಡ ಈ ನಗರವು ಮಹತ್ವದ ಶೈಕ್ಷಣಿಕ ಕೇಂದ್ರವಾಗಿ ಬೆಳೆದಿದೆ. ಅಡಿಕೆ ಮತ್ತು ಕಂಬಳಿಗಳು ಇಲ್ಲಿನ ಅತ್ಯಂತ ಮಹತ್ವದ ವ್ಯಾಪಾರದ ವಸ್ತುಗಳಾಗಿವೆ. ಈ ಊರಿನಲ್ಲಿ ದುಗ್ಗಮ್ಮ (ದುರ್ಗಾಂಬಾ) ಮತ್ತು ವೀರಭದ್ರದೇವರ ಗುಡಿಗಳಿವೆ. ದಾವಣಗೆರೆ ತಾಲೂಕಿನಲ್ಲಿರುವ ಮಹತ್ವದ ದೇವಾಲಯಗಳೆಂದರೆ ಆನೆಕೊಂಡದ ಈಶ್ವರ ದೇವಾಲಯ, ಮಳಲ್ಕೆರೆಯ ಈಶ್ವರ ದೇವಾಲಯ, ಬಾಡದ ಕೋಡಿಬಸವಣ್ಣ ಮತ್ತು ಆಂಜನೇಯ, ಹಡದಿಯ ಹನುಮಾನ ದೇವಾಲಯ, ಆನೆಗೋಡದ ಸಿದ್ದೇಶ್ವರ, ಕೊಡಗನೂರಿನ ಕಲ್ಲೇಶ್ವರ, ಕೊಗ್ಗನೂರಿನ ಈಶ್ವರ, ಶಂಕರನಹಳ್ಳಿಯ ರಂಗನಾಥ ಮತ್ತು ನೀರುತಡಿಯ ರಂಗನಾಥ ಮುಂತಾದವು. ದಾವಣಗೆರೆಯಿಂದ 21 ಕಿಮೀ ದೂರದಲ್ಲಿರುವ ಲೋಕಿಕೆರೆ (ಜನ : 3,246) ಎಂಬ ಹಳ್ಳಿಯು ಕಲ್ಯಾಣದ ಚಾಳುಕ್ಯರ ಕಾಲದ ಪುರಾತನ ಅಗ್ರಹಾರವಾಗಿತ್ತು. ಇಲ್ಲಿರುವ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ಈ ಊರಿನ ಪ್ರಾಚೀನತೆಗೆ ಸಾಕ್ಷಿಯಾಗಿವೆ. ಪ್ರಾಚೀನ ಕೆರೆಯ ಪಶ್ಚಿಮ ಭಾಗದಲ್ಲಿರುವ ಕೋಡಿ ಕಾಳೇಶ್ವರ ದೇವಾಲಯದ ನೈಋತ್ಯ ಮೂಲೆಯ ಕಂಬದ ಮೇಲಿರುವ ಕ್ರಿ.ಶ. 1129ರ ಒಂದು ಶಾಸನದಲ್ಲಿ ಈ ದೇವಾಲಯದ ಮೂಲದೇವತೆಯನ್ನು ಮೂಲಸ್ಥಾನದ ಕಲ್ಲುದೇವ ಎಂದು ಹೆಸರಿಸಲಾಗಿದೆ. ಈ ಹಳ್ಳಿಯಲ್ಲಿರುವ ಕೇತೇಶ್ವರ

ದೇವಾಲಯವು ಅತ್ಯಂತ ಮಹತ್ವದ ಗುಡಿಯಾಗಿದೆ. ಅಲ್ಲದೆ ನಾರಾಯಣ, ಮೈಲಾರದೇವ, ವೀರಭದ್ರ ಮತ್ತು ಹನುಮಾನ್ ಎಂಬ ದೇವಾಲಯಗಳು ಈ ಊರಿನಲ್ಲಿವೆ. ಅವುಗಳಲ್ಲಿ ಕೊನೆಯದಾದ ಹನುಮಾನ್ ದೇವಾಲಯವು ಪಾಳೆಯಗಾರರ ಕಾಲದ್ದಾಗಿದೆ.

**ದೇವದುರ್ಗ :** (ರಾಯಚೂರು ಜಿ; ತಾ. ಕೇ; ಜನ : 81,927) ದೇವದುರ್ಗವು ಬೆಂಗಳೂರಿನಿಂದ 469 ಕಿಮೀ ದೂರದಲ್ಲಿ ಏರುಪೇರುಗಳಿರುವ ಭೂಪ್ರದೇಶದಲ್ಲಿ ಇರುವ ಊರು. ಹದಿನಾರು, ಹದಿನೇಳನೇಯ ಶತಮಾನದಲ್ಲಿ ಬೇಡರ ಜಾತಿಯ ಪಾಳೆಯಗಾರರಿಗೆ ಸೇರಿದ ಆಯಕಟ್ಟಿನ ಸ್ಥಳ ಇದಾಗಿತ್ತು. ಆರಂಭದಲ್ಲಿ ವಿಜಯನಗರದ ಅರಸರಿಗೆ ಅಧೀನರಾಗಿದ್ದ ಈ ಪಾಳೆಯಗಾರರು ಅನಂತರ ವಿಜಾಪುರದ ಪ್ರಭುತ್ವವನ್ನು ಆಶ್ರಯಿಸಿದ್ದರು. ಅವರ ಕಾಲದ ಕೋಟೆಯ ಅವಶೇಷಗಳು ಈಗಲೂ ಗೋಚರಿಸುತ್ತವೆ. ಈ ಊರಿನಲ್ಲಿ ಪುರಸಭೆ ಇದೆ. ದೇವದುರ್ಗ ತಾಲೂಕು ದೇವಾಲಯಗಳಿಗಾಗಿ ಪ್ರಸಿದ್ಧವಿದೆ. ಬೆಂಕಲುದೊಡ್ಡಿ ಹಳ್ಳಿಯ ತಿಮ್ಮಪ್ಪ ದೇವಾಲಯ, ಮನ್ಸ್‌ಗಲ್ ಹಳ್ಳಿಯ ರಂಗನಾಥಸ್ವಾಮಿ ದೇವಾಲಯ, ಮುಂಡರಗಿ ಎಂಬ ಹಳ್ಳಿಯ ಶಿವರಾಯ ದೇವಾಲಯ, ಕೃಷ್ಣಾನದಿಯ ತೀರದಲ್ಲಿ ನೆಲಸಿರುವ ಕೊಪ್ಪೇರಹಳ್ಳಿಯಲ್ಲಿರುವ ನರಸಿಂಹ ದೇವಾಲಯ ಮತ್ತು ಗಾಗಲ ಎಂಬ ಹಳ್ಳಿಯಲ್ಲಿರುವ ಅಲ್ಲಮ ಮಹಾಪ್ರಭುಗಳ ದೇವಾಲಯಗಳು ಅವುಗಳಲ್ಲಿ ಮಹತ್ವದವುಗಳಾಗಿವೆ. ಗಬ್ಬೂರು (ಜನ : 4,444) ಎಂಬಲ್ಲಿ ಅನೇಕ ದೇವಾಲಯಗಳು, ಶಿಲಾಶಾಸನಗಳು ಇವೆ. ಪುರಾತನ ಕಾಲದಲ್ಲಿ ಅಗ್ರಹಾರವಾಗಿದ್ದು, ಶೈಕ್ಷಣಿಕ ಕೇಂದ್ರವಾಗಿದ್ದ ಇದು ಗೋಪುರ ಗ್ರಾಮ ಎಂದು ಪ್ರಸಿದ್ಧವಾಗಿತ್ತು. ಮಳೆಶಂಕರ, ವೆಂಕಟೇಶ್ವರ, ಈಶ್ವರ, ಬಂಗಾರ ಬಸಪ್ಪ ಮತ್ತು ಹನುಮಾನ್ ಎಂಬುವು ಇಲ್ಲಿರುವ ಮಹತ್ವದ ದೇವಾಲಯಗಳಾಗಿವೆ. ಇವಲ್ಲದೆ ಅನೇಕ ಹಾಳುಬಿದ್ದ ದೇವಾಲಯಗಳೂ, ಎರಡು ಮೂರು ಮಠಗಳೂ ಕೆಲವೊಂದು ಪುಷ್ಕರಣಿಗಳೂ, ಇಕ್ಕೆಲಗಳಲ್ಲೂ ದೇವಾಲಯವನ್ನು ಹೊಂದಿರುವ ಚಂದಿಗೇಟ್ ಎಂಬ ಹೆಸರಿನ ಪ್ರವೇಶದ್ವಾರವೂ ಇಲ್ಲಿವೆ. ಅವುಗಳಲ್ಲಿ ಒಂದು ಮಠವನ್ನು ಗನ್ನಿಗುಡಿ ಮಠ ಎಂದು ಕರೆಯಲಾಗುತ್ತದೆ. ಅದು ನಯವಾಗಿ ಕೆತ್ತಲಾದ ಬಾಗಿಲನ್ನು ಹೊಂದಿದೆ. ಮಳೆಶಂಕರ ದೇವಾಲಯವನ್ನು ಒರಟಾದ ಬೂದು ಬಣ್ಣದ ಕಲ್ಲುಗಳಿಂದ ಕಟ್ಟಲಾಗಿದ್ದು, ಅದು ಎತ್ತರದ ವೇದಿಕೆಯ ಮೇಲಿದೆ. ವೆಂಕಟೇಶ್ವರ ದೇವಾಲಯವು ಮೂರು ಗರ್ಭಗೃಹಗಳನ್ನು ಹೊಂದಿದ್ದು, ಎರಡರಲ್ಲಿ ವಿಷ್ಣುವಿನ ಮೂರ್ತಿಗಳು, ಮೂರನೇಯದರಲ್ಲಿ ಲಿಂಗವೂ ಇವೆ. ಬಂಗಾರ ಬಸಪ್ಪನ ದೇವಾಲಯದಲ್ಲಿ ಗಣೇಶನ ವಿಗ್ರಹವುಳ್ಳ ಗರ್ಭಗೃಹವಿದ್ದು, ಎರಡು ನಂದಿಗಳು (ಅವುಗಳಲ್ಲಿ ಒಂದು ದೊಡ್ಡದಾಗಿದ್ದು, ಇನ್ನೊಂದು ಚಿಕ್ಕದಾಗಿದೆ) ಮತ್ತು ಶಿಲಾಶಾಸನವುಳ್ಳ ಕಲ್ಲಿನ ಫಲಕವಿದೆ. ಗಬ್ಬೂರಿನ ಸುತ್ತಲೂ ಕೋಟೆ ಗೋಡೆಗಳಿವೆ. ಬೇರೆ ಬೇರೆ ಕಾಲಕ್ಕೆ ಸಂಬಂಧಿಸಿದ ಅವು ಪಾಳು ಬೀಳುವ ವಿವಿಧ ಹಂತಗಳಲ್ಲಿವೆ. ಚೌಕಾಕಾರದ ಅವುಗಳ ಕೊತ್ತಳಗಳು ಮುಸ್ಲಿಂ ಶೈಲಿಯಲ್ಲಿವೆಯೆಂದು ಭಾವಿಸಲಾಗುತ್ತದೆ. ಚಾಳುಕ್ಯರ ಆರನೇಯ ವಿಕ್ರಮಾದಿತ್ಯನ ಕಾಲದ 1109ರ ಶಿಲಾಶಾಸನದ ಪ್ರಕಾರ ಈ ಊರು (ಆಗ ಅದನ್ನು ಗೊಬ್ಬೂರು ಅಥವಾ ಹಿರಿಯ ಗೊಬ್ಬೂರು ಎಂದು ಕರೆಯಲಾಗುತ್ತಿತ್ತು). ಹನ್ನೆರಡನೇಯ ಶತಮಾನದಲ್ಲಿ ಅಗ್ರಹಾರವಾಗಿತ್ತೆಂದು ತಿಳಿದುಬರುತ್ತದೆ. ಅದೇ ಶಿಲಾಶಾಸನವು ಈ ಊರಿನಲ್ಲಿ ಬ್ರಹ್ಮ ಜಿನಾಲಯ ಅಥವಾ ನಗರ ಜಿನಾಲಯ ಎಂಬ ಹೆಸರಿನ ಜೈನ ಬಸದಿಯಿದ್ದಿತೆಂದು ಉಲ್ಲೇಖಿಸುತ್ತದೆ. ಜಾಲಹಳ್ಳಿಯು ದೇವದುರ್ಗ ತಾಲೂಕಿನ ಇನ್ನೊಂದು ಹಳ್ಳಿಯಾಗಿದ್ದು, ಇಲ್ಲಿ ಪ್ರಸಿದ್ಧ ರಂಗನಾಥ ದೇವಾಲಯವಿದೆ.

**ದೇವನಹಳ್ಳಿ :** (ಬೆಂಗಳೂರು ಜಿ; ತಾ. ಕೇ; ಜನ: 15,187) ದೇವನಹಳ್ಳಿಯು ಬೆಂಗಳೂರಿನಿಂದ 39 ಕಿಮೀ ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಈ ಊರನ್ನು ದೇವನ ದೊಡ್ಡಿ ಮತ್ತು ದೇವನಪುರ ಎಂದು ಕರೆಯಲಾಗುತ್ತಿತ್ತು. ಟಿಪ್ಪು ಸುಲ್ತಾನನು ಇದಕ್ಕೆ ಯೂಸುಫಾಬಾದ್ ಎಂದು ಹೆಸರಿಟ್ಟಿದ್ದನು. ಆದರೆ ಅದು ಜನಪ್ರಿಯವಾಗಲಿಲ್ಲ. ಕ್ರಿ.ಶ. 1501ರಲ್ಲಿ ಆವತಿಯ ಮಲ್ಲಭೈರೇಗೌಡನು ದೇವನಹಳ್ಳಿಯಲ್ಲಿ ಒಂದು ಕೋಟೆಯನ್ನು ಕಟ್ಟಿಸಿದ್ದನು. ಈಗ ಅದರ ಅವಶೇಷಗಳು ಇಂದಿಗೂ ಉಳಿದಿವೆ. ಅನಂತರ ಆತನು ಈ ಊರಿನ ಆಡಳಿತದ ನಿರ್ವಹಣೆಯನ್ನು ತನ್ನ ಸಹೋದರನಾದ ಸಣ್ಣ ಭೈರೇಗೌಡನಿಗೆ ಒಪ್ಪಿಸಿದನು. ಈ ಮನೆತನದವರು 1749ರವರೆಗೆ ಈ ಊರಿನ ಆಡಳಿತವನ್ನು ನಿರ್ವಹಿಸಿದರು. ಅದೇ ವರ್ಷ ಮೈಸೂರಿನ ದಳವಾಯಿ ನಂಜರಾಜಯ್ಯನು ಈ ಊರನ್ನು ಆಕ್ರಮಿಸಿ ಮೈಸೂರು ಆಡಳಿತಕ್ಕೆ ಸೇರಿಸಿಕೊಂಡನು. ಇದೇ ಯುದ್ಧದಲ್ಲಿ ಹೈದರ್ ಅಲಿಯು ಬೆಳಕಿಗೆ ಬಂದಿದ್ದು. 1750ರಲ್ಲಿ ಟಿಪ್ಪುಸುಲ್ತಾನನು ಇಲ್ಲಿಯೇ ಹುಟ್ಟಿದನು. 1791ರಲ್ಲಿ ಲಾರ್ಡ್ ಕಾರ್ನವಾಲೀಸನು ಈ ಕೋಟೆಗೆ ಮುತ್ತಿಗೆ ಹಾಕಿ ವಶಪಡಿಸಿಕೊಂಡನು. ವೇಣುಗೋಪಾಲ ದೇವಾಲಯವು ಇಲ್ಲಿಯ ಮುಖ್ಯ ಮಂದಿರವಾಗಿದೆ. ಈ ದೇವಾಲಯದ ಹೊರ ಗೋಡೆಯ ಮೇಲೆ ರಾಮಾಯಣದ ಕಥೆಗೆ ಸಂಬಂಧಿಸಿದ ಶಿಲ್ಪಗಳಿವೆ. ನಾಲ್ಕು ಸ್ತಂಭಗಳನ್ನುಳ್ಳ ಮತ್ತು ಗೋಪುರವನ್ನು ಹೊಂದಿದ ಒಂದು ಚಿಕ್ಕ ಕಲ್ಲಿನ ಮಂಟಪವು ಈ ದೇವಾಲಯದ ಎದುರಿನಲ್ಲಿದೆ. ಕ್ರಿ.ಶ. 1698ರ ಒಂದು ತಾಮ್ರಪಟ ಹಾಗೂ ಈ ದೇವಾಲಯದಲ್ಲಿರುವ ಒಂದು ಶಿಲಾಶಾಸನಗಳಲ್ಲಿ ಆವತಿಯ ಪ್ರಭುಗಳು ಈ ದೇವಾಲಯಕ್ಕೆ ದತ್ತಿಯನ್ನು ಕೊಟ್ಟ ಬಗ್ಗೆ ಉಲ್ಲೇಖವಿದೆ. ನಂಜುಂಡೇಶ್ವರ, ಸರೋವರದ ಆಂಜನೇಯ, ಸಿದ್ಧೇಶ್ವರ ಮತ್ತು ಗಂಗಮ್ಮ ಎಂಬುವು ಈ ಊರಿನಲ್ಲಿರುವ ಇತರ ದೇವಾಲಯಗಳಾಗಿವೆ.

ಮಹಂತಿನ ಮಠ ಎಂಬ ವೀರಶೈವ ಮಠದಲ್ಲಿ ಪರ್ವತೇಶ್ವರ ಸ್ವಾಮಿಯ ಗದ್ದುಗೆ ಇದೆ. ಈ ಊರಿನಲ್ಲೊಂದು ಮಸೀದಿ ಇದೆ. ಟಿಪ್ಪು ಸುಲ್ತಾನನ ಚಿರ ನೆನಪಿಗಾಗಿ ಒಂದು ಕಟ್ಟಡವನ್ನು ನಿರ್ಮಿಸಲಾಗಿದೆ. ಈ ಊರಿನಲ್ಲಿ ಶಿಲ್ಪಕಲಾ ಶಾಲೆಯಿದೆ. ಶಿಲ್ಪಿ ಹನುಮಂತಾಚಾರ್ಯರಿಂದ ನಿರ್ವಹಿಸಲ್ಪಡುವ ಈ ಶಾಲೆಯಲ್ಲಿ ಪ್ರಾಚೀನ ಗುರುಕುಲ ಪದ್ಧತಿಯ ಪ್ರಕಾರ ಮೂರ್ತಿಶಿಲ್ಪ ಕಲೆಯಲ್ಲಿ ತರಬೇತಿಯನ್ನು ನೀಡಲಾಗುತ್ತದೆ. ಈ ಊರಿನಲ್ಲಿ ಪುರಸಭೆ ಇದೆ. ಅವತಿ (ಜನ: 2,104) ಎಂಬುದು ದೇವನಹಳ್ಳಿಯಿಂದ ಉತ್ತರಕ್ಕೆ ಎಂಟು ಕಿಮೀ ದೂರದಲ್ಲಿದೆ. ಹದಿನಾಲ್ಕನೇಯ ಶತಮಾನದ ಸುಮಾರಿಗೆ ರಣಭೈರೇಗೌಡನ ನೇತೃತ್ವದಲ್ಲಿ ಏಳು ಜನ ರೈತರು ಅತ್ಯಂತ ದುರಂತಮಯ ಸನ್ನಿವೇಶದಲ್ಲಿ ಕಾಂಚಿಯನ್ನು ತೊರೆದು ಆವತಿಗೆ ಬಂದು ನೆಲೆಗೊಂಡರೆಂದು ಹೇಳಲಾಗುತ್ತದೆ. ಅನಂತರ ರಣಭೈರೇಗೌಡನು ಆವತಿಯಲ್ಲಿಯೇ ನೆಲೆಗೊಂಡನು. ಆದರೆ ಆತನ ಉಳಿದ ಸಹೋದರರು ತಮ್ಮ ಭಾಗ್ಯವನ್ನರಸುತ್ತ ಬೇರೆ ಬೇರೆ ಊರುಗಳಿಗೆ ಹೋದರು. ಒಂದು ಹೇಳಿಕೆಯ ಪ್ರಕಾರ ಅವರೆಲ್ಲರೂ ತಮ್ಮ ಸ್ವಂತ ಸಾಮರ್ಥ್ಯದಿಂದ ಚಿಕ್ಕಪುಟ್ಟ ತುಂಡರಸರಾದರು. ಇಲ್ಲಿರುವ ಚನ್ನಕೇಶವ ಮತ್ತು ಗಂಗಸೋಮೇಶ್ವರ ಎಂಬ ದೇವಾಲಯಗಳು ಅತ್ಯಂತ ಪುರಾತನವಾಗಿವೆ.

**ದೇವರಾಯನದುರ್ಗ :** (ತುಮಕೂರು ಜಿ; ತುಮಕೂರು ತಾ; ಜನ: 177) ಕರಿಗಿರಿ ಕ್ಷೇತ್ರ ಎಂದು ಪುರಾಣಗಳಲ್ಲಿ ಕರೆಯಲಾಗಿರುವ ದೇವರಾಯನದುರ್ಗವು ಕೋಟೆಯಿಂದ ಕೂಡಿದ್ದು ಸಮುದ್ರ ಪಾತಳಿಯಿಂದ 1,188 ಮೀ ಎತ್ತರವಾಗಿದೆ; ಮತ್ತು ತುಮಕೂರಿನಿಂದ ಪೂರ್ವಕ್ಕೆ 14 ಕಿಮೀ ದೂರದಲ್ಲಿದೆ. ಇದು ಸುಂದರ ರಮ್ಯ ದೃಶ್ಯಗಳ ಮಧ್ಯದಲ್ಲಿ ಮತ್ತು ವಿಶಾಲವಾದ ಅರಣ್ಯಗಳ ನಡುವೆ ನೆಲೆಗೊಂಡಿದೆ. ವಿಜಯನಗರ ಅರಸರ ಕಾಲಕ್ಕೆ ಜಯಮಂಗಲಿ ನದಿಯ ಉಗಮ ಸ್ಥಳದ ಸುತ್ತಲೂ ಒಂದು ಒಡ್ಡು ನಿರ್ಮಿಸಿ ವಿಶಾಲವಾದ ಬುಕ್ಕಸಮುದ್ರ ಎಂಬ ಹೆಸರಿನ ಜಲಾಶಯವನ್ನು ನಿರ್ಮಿಸಲಾಗಿದೆ. ಇಲ್ಲಿರುವ ಕೋಟೆಗೆ ಏಳು ಪ್ರವೇಶ ದ್ವಾರಗಳಿವೆ. ಈ ಬೆಟ್ಟಕ್ಕೆ ಮೂರು ವಿಭಿನ್ನವಾದ ಹಂತಗಳಿವೆ. ದೇವರಾಯನ ದುರ್ಗದಹಳ್ಳಿ ಮತ್ತು ದುರ್ಗ ನರಸಿಂಹ ದೇವಾಲಯಗಳು ಬೆಟ್ಟದ ಕೆಳಗಿನ ಪ್ರದೇಶದಲ್ಲಿವೆ. ಪೂರ್ವಾಭಿಮುಖವಾಗಿರುವ ದುರ್ಗ ನರಸಿಂಹ ದೇವಾಲಯಗಳನ್ನು ಕಂಠೀರವ ನರಸರಾಜ ಒಡೆಯರ್ ಅವರು ನಿರ್ಮಿಸಿದರೆಂದು ಹೇಳಲಾಗುತ್ತದೆ. ಅಲ್ಲಿ ಲಕ್ಷ್ಮೀನರಸಿಂಹ ದೇವಾಲಯಕ್ಕಿಂತಲೂ ಪುರಾತನವಾದ ಹನುಮಂತನ ದೇವಾಲಯವಿದ್ದು, ಅದನ್ನು ಸಂಜೀವರಾಯನ ದೇವಾಲಯವೆಂದು ಕರೆಯಲಾಗುತ್ತದೆ. ಅನಂತರದ ಕಾಲದಲ್ಲಿ ಜಡಕ ಎಂಬ ಅರಸನ ಹೆಸರಿನಿಂದಾಗಿ ಇದಕ್ಕೆ ಜಡಕನದುರ್ಗ ಎಂಬ ಹೆಸರಿತ್ತು. 1697ರಲ್ಲಿ ಮೈಸೂರಿನ ದೊರೆ ಚಿಕ್ಕದೇವರಾಜ ಒಡೆಯರು ಅದನ್ನು ವಶಪಡಿಸಿಕೊಂಡ ನಂತರ ದೇವರಾಯನ ದುರ್ಗವೆಂದು ಹೆಸರಿಟ್ಟರು. ಈಗಿರುವ ಕೋಟೆಯು ಅವರಿಂದ ನಿರ್ಮಿತವಾಯಿತು. ಮಧ್ಯದಲ್ಲಿರುವ ಹಂತದಲ್ಲಿ ಪ್ರವಾಸಿಗರ ತಂಗು ಮನೆ ಇದೆ. ಅಲ್ಲಿ ರಾಮತೀರ್ಥ ಮತ್ತು ಧನುಷ್ ತೀರ್ಥ ಎಂಬ ಎರಡು ಡೋಣೆಗಳಿವೆ. ಅವುಗಳ ಸಮೀಪದಲ್ಲಿ ಶ್ರೀರಾಮನ ಮೂರ್ತಿಯುಳ್ಳ ಒಂದು ವಿಶಾಲವಾದ ಗುಹೆಯಿದೆ. ಈ ಬೆಟ್ಟದ ಮೂರನೇಯ ಹಂತದಲ್ಲಿ ಪೂರ್ವಾಭಿಮುಖವಾಗಿರುವ ನರಸಿಂಹ ದೇವಾಲಯವಿದೆ. ಕುಂಭಿ ಎಂಬ ಹೆಸರಿನಿಂದ ಪರಿಚಿತವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ, ಶುಕನಾಸಿ, ನವರಂಗ ಮತ್ತು ಒಂದು ಮುಖಮಂಟಪವಿದೆ. ಅಲ್ಲಿ ನರಸಿಂಹ ತೀರ್ಥ, ಪರಾಶರತೀರ್ಥ ಮತ್ತು ಪಾದತೀರ್ಥ ಎಂಬ ಮೂರು ಪವಿತ್ರ ಜಲಾಶಯಗಳಿವೆ. ಅವುಗಳಲ್ಲಿ ಕೊನೆಯದು ಮೆಟ್ಟಿಲು ಮೆಟ್ಟಿಲುಗಳುಳ್ಳ ಇಕ್ಕಟ್ಟಾದ ಗುಹೆಯಲ್ಲಿದೆ. ಈ ಮೆಟ್ಟಿಲುಗಳು ಅತ್ಯಂತ ತಳದಲ್ಲಿರುವ ಜಲಾಶಯದವರೆಗೆ ಮುಟ್ಟಿವೆ. ಅಲ್ಲಿ ಒಂದು ಗರುಡನ ಗುಡಿ ಮತ್ತು ದೀವಿಗೆ ಗುಂಡು ಎಂಬ ಹೆಸರಿನ ಒಂದು ಬೃಹತ್ತಾದ ಬಂಡೆಗಲ್ಲು ಇವೆ. ಇಲ್ಲಿ ಒಂದು ನಾಮದ ಚಿಲುಮೆ ಎಂಬ ಹೆಸರಿನ ನೈಸರ್ಗಿಕವಾದ ತಿಳಿನೀರಿನ ಕಾರಂಜಿಯು ಕಂಡುಬರುತ್ತದೆ. ಅದರ ನೀರು ಬಂಡೆಗಲ್ಲಿನಲ್ಲಿ ತೋಡಿರುವ ಗುಂಡಿಯನ್ನು ತುಂಬಿ ಹೊರ ಚೆಲ್ಲಿ ಹರಿಯುತ್ತದೆ. ಇಲ್ಲಿ ಹುಟ್ಟಿ ಹರಿಯುವ ಮಂಗಲಿ ಮತ್ತು ಜಯ ಎಂಬ ತೊರೆಗಳು ಈ ಬೆಟ್ಟದ ಬುಡದಲ್ಲಿ ಕೂಡಿ ಜಯಮಂಗಲಿ ಎಂಬ ನದಿಯಾಗಿ ಹರಿದಿವೆ. ಈ ಸ್ಥಳವು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿ ಹೊಂದುತ್ತಿದೆ.

**ದೇವಲಘಾಣಗಾಪುರ :** (ಕಲ್ಬುರ್ಗಿ ಜಿ; ಅಫಜಲ್‌ಪುರ ತಾ; ಜನ: 3,139) ದೇವಲಘಾಣಗಾಪುರವು ಅಫಜಲ್‌ಪುರ ತಾಲೂಕಿನಲ್ಲಿರುವ ದತ್ತಾತ್ರೇಯನ ಆರಾಧಕರ ತೀರ್ಥಸ್ಥಳವಾಗಿದ್ದು ಮದ್ರಾಸ್-ಮುಂಬೈ ರೈಲುದಾರಿಯ ಮೇಲೆ ಇರುವ ಘಾಣಗಾಪುರ ರೈಲ್ವೆ ನಿಲ್ದಾಣದಿಂದ ದಕ್ಷಿಣಕ್ಕೆ 16 ಕಿಮೀ ಹಾಗೂ ಬೆಂಗಳೂರಿನಿಂದ 651 ಕಿಮೀ ದೂರದಲ್ಲಿಯೂ ಇದೆ. ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ಅಸಂಖ್ಯ ಭಕ್ತರು ಈ ದೇವತೆಗೆ ಬಹು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ದತ್ತಾತ್ರೇಯನ ಅವತಾರವೆಂದು ಭಾವಿಸಲಾಗಿರುವ ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳ ಪೂಜ್ಯ ಮಠವೂ ಈ ಊರಿನ ಪ್ರಮುಖ ಆಕರ್ಷಣೆಯಾಗಿದೆ. ಯಾತ್ರಾರ್ಥಿಗಳು ವರ್ಷಾದ್ಯಂತ ಈ ದೇವಾಲಯದಲ್ಲಿ ಪೂಜೆಗಾಗಿ ಮತ್ತು ಅಮರ್ಜಾ ಮತ್ತು ಭೀಮಾ ನದಿಗಳ ಸಂಗಮದಲ್ಲಿ ಪವಿತ್ರ ಸ್ನಾನ ಮಾಡಲು ಬರುತ್ತಿರುತ್ತಾರೆ. ಯಾತ್ರಾರ್ಥಿಗಳಿಗೆ ಇದು ದೇವಲಘಾಣಗಾಪುರ ಎಂದು ಪರಿಚಿತವಾಗಿದೆ.

**ದೊಡ್ಡಗದ್ದವಳ್ಳಿ :** (ಹಾಸನ ಜಿ; ಹಾಸನ ತಾ; ಜನ: 927) ಹಾಸನದಿಂದ ಬೇಲೂರಿಗೆ ಹೋಗುವ ಮಾರ್ಗದಲ್ಲಿ

ಹಾಸನದ ವಾಯುವ್ಯಕ್ಕೆ 16 ಕಿಮೀ ದೂರದಲ್ಲಿರುವ ಈ ಹಳ್ಳಿಯನ್ನು ದಕ್ಷಿಣ ಕೊಲ್ಲಾಪುರ ಎಂದು ಸಹ ಕರೆಯಲಾಗಿದೆ. 2.1 ಮೀಟರ್ ಎತ್ತರವಿರುವ ಗೋಡೆಯಿಂದ ಆವೃತ್ತವಾಗಿರುವ ಇಲ್ಲಿನ ಲಕ್ಷ್ಮೀದೇವಿ ಮಂದಿರ ವಾಸ್ತುಶಿಲ್ಪದ ರತ್ನದಂತಿದೆ. ಇದೊಂದು ಹೊಯ್ಸಳರ ಪಂಚಕೂಟ ದೇವಾಲಯವಾಗಿದ್ದು, ಈ ದೇವಾಲಯದ ನಾಲ್ಕು ಮೂಲೆಯಲ್ಲಿರುವ ಸಣ್ಣ ಮಂದಿರಗಳ ಶಿಲಾಗೋಪುರಗಳ ಮೇಲೆ ಹೊಯ್ಸಳರ ಲಾಂಛನವನ್ನು ಹೊಂದಿಸಲಾಗಿದೆ. ಈ ದೇವಾಲಯವನ್ನು ಕ್ರಿ. ಶ. 1114ರಲ್ಲಿ ಕಲ್ಲಹಣ ರಾವುತ ಎಂಬ ವರ್ತಕನು ನಿರ್ಮಿಸಿದನು. ಇದು ಹೊಯ್ಸಳರ ಪ್ರಾರಂಭದ ಸ್ಮಾರಕಗಳಲ್ಲಿ ಒಂದಾಗಿದೆ. ದೇವಾಲಯದ ಪಶ್ಚಿಮ ದ್ವಾರದಲ್ಲಿರುವ ಹದಿನಾರು ಸ್ತಂಭಗಳ ಕಲಾತ್ಮಕವಾಗಿ ಸೂಕ್ಷ್ಮ ಕೆತ್ತನೆಯಿಂದ ಕೂಡಿರುವ ಭುವನೇಶ್ವರಿಗಳು ಪ್ರಶಂಸಾರ್ಹ ಕಲಾಕೃತಿಗಳಾಗಿವೆ. ದೇವಾಲಯದ ಮಧ್ಯದ ಭುವನೇಶ್ವರಿ ಶ್ರೇಷ್ಠ ಮಟ್ಟದ ಕೆತ್ತನೆಯಿಂದ ಕೂಡಿದೆ. ಪೂರ್ವ ಮಹಾದ್ವಾರದ, ಬಾಗಿಲುವಾಡವು ಉತ್ತಮ ಕೆತ್ತನೆಯ ಕಲೆಯಿಂದ ಕೂಡಿದೆ. 'ದಕ್ಷಿಣ ಕೊಲ್ಲಾಪುರಮ್ಮ' ಎಂದು ಕರೆಯುವ ಮಹಾಲಕ್ಷ್ಮೀ ಈ ದೇವಾಲಯದ ಪ್ರಮುಖ ದೇವತೆ. 1.3 ಮೀಟರ್ ಎತ್ತರವಿರುವ ಈ ಮೂರ್ತಿಯು ತನ್ನ ನಾಲ್ಕು ಕೈಗಳಲ್ಲಿ ಕ್ರಮವಾಗಿ ಶಂಖ, ಕಮಲ, ಜಪಮಾಲೆ ಮತ್ತು ಗಧೆಯನ್ನು ಹೊಂದಿರುತ್ತಾಳೆ.

**ದೊಡ್ಡಬಳ್ಳಾಪುರ :** (ಬೆಂಗಳೂರು ಜಿ ; ತಾ. ಕೇ; ಜನ : 47,172) ಬೆಂಗಳೂರಿನ ಉತ್ತರಕ್ಕೆ 39 ಕಿಮೀ ದೂರದಲ್ಲಿರುವ ದೊಡ್ಡಬಳ್ಳಾಪುರವು ಒಂದು ದೊಡ್ಡ ಪಟ್ಟಣ. ಈ ಊರ ಹೆಸರನ್ನು ವಿವರಿಸಲು ಒಂದು ದಂತ ಕತೆಯಿದೆ. ಆದರಂತೆ ಪ್ರತೀದಿನ ಒಂದು ಹಸು ಒಂದು ಬಳ್ಳದಷ್ಟು ಹಾಲನ್ನು ಹುತ್ತದ ಮೇಲೆ ಸುರಿಸುತ್ತಿತ್ತಂತೆ. ಈ ಬಳ್ಳಾಪುರವನ್ನು ಚಿಕ್ಕಬಳ್ಳಾಪುರದಿಂದ ವಿಭಿನ್ನವೆಂದು ಗುರುತಿಸುವ ಸಲುವಾಗಿ ದೊಡ್ಡ ಎಂಬ ವಿಶೇಷಣವನ್ನು ಸೇರಿಸಲಾಗಿದೆ. ಇಂದಿನ ಈ ಪಟ್ಟಣವನ್ನು ಆವತಿಯ ಮಲ್ಲಬೈರೇಗೌಡನು ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಆವತಿಯ ಮನೆತನದ ಒಂದು ಶಾಖೆಯ ಅರಸರು ಈ ನಗರವನ್ನಾಳುತ್ತಿದ್ದರು. 1637-38ರಲ್ಲಿ ರಣದುಲ್ಲಾ ಖಾನನ ನೇತೃತ್ವದಲ್ಲಿ ದಂಡೆತ್ತಿ ಬಂದ ವಿಜಾಪುರದ ಸೈನ್ಯವು ಇದನ್ನು ವಶಪಡಿಸಿಕೊಂಡಿತು. ಅನಂತರ ಇದನ್ನು ಷಾಜಿಯ ಬೆಂಗಳೂರು ಜಾಗೀರಿನ ಒಂದು ಭಾಗವಾಗಿ ಸೇರಿಸಲಾಯಿತು. ಪ್ರಾರಂಭದ ಹೊಯ್ಸಳರ ಪ್ರಾಚೀನ ಶಾಸನವೊಂದರ ಮೇಲೆ ಬರೆದಿರುವ ಪರ್ಶಿಯನ್ ಶಾಸನದ ಪ್ರಕಾರ 1689ರಲ್ಲಿ ಔರಂಗಜೇಬನ ಸೈನ್ಯವು ಈ ನಗರವನ್ನು ವಶಪಡಿಸಿಕೊಂಡಿತು. ದೊಡ್ಡಬಳ್ಳಾಪುರವನ್ನು ಒಳಗೊಂಡಂತೆ ವಿಸ್ತಾರವಾದ ಪ್ರದೇಶವನ್ನು ಅಲಿ ಖುಲಿ ಖಾನನಿಗೆ ಜಾಗೀರಾಗಿ ನೀಡಲಾಗಿತ್ತು. ಅವನ ಮರಣಾನಂತರ ಸಿರಾದ ದರ್ಗಾ ಖುಲಿ ಖಾನ್‌ಗೆ ಈ ಜಾಗೀರನ್ನು ನೀಡಲಾಯಿತು. ಇದನ್ನು ನಿಜಾಮನು ವಶಪಡಿಸಿಕೊಂಡಾಗ, ಅಬ್ಬಾಸ್ ಖುಲಿ ಖಾನನಿಗೆ ಜಾಗೀರಾಗಿ ನೀಡಲಾಯಿತು. ಕಡೆಗೆ ಹೈದರ್ ಅಲಿ ಈ ಪ್ರದೇಶವನ್ನು ತನ್ನ ವಶಪಡಿಸಿಕೊಂಡನು. ಈ ನಗರದಲ್ಲಿರುವ ದೊಡ್ಡದಾದ ವೆಂಕಟರಮಣಸ್ವಾಮಿ ದೇವಾಲಯದಲ್ಲಿ, ಹೈದರ್ ಅಲಿಯ ಕೈಕೆಳಗೆ ಅಧಿಕಾರಿಯಾಗಿದ್ದ ಅರುಣಾಚಲಪಂತ ಹಾಗೂ ಅವನ ಪತ್ನಿಯ ಎರಡು ಪ್ರತಿಮೆಗಳಿವೆ. ಇವನು ಈ ದೇವಾಲಯವನ್ನು 18ನೇಯ ಶತಮಾನದಲ್ಲಿ ಕಟ್ಟಿಸಿದನು. ಶಿವನಿಗೆ ಅರ್ಪಿತವಾದ ಪ್ರಸನ್ನ ಚಂದ್ರಮೌಳೀಶ್ವರ ದೇವಾಲಯ ಅತ್ಯಂತ ಹಳೆಯದಾದುದು. ಈ ದೇವಾಲಯವನ್ನೂ ಅರುಣಾಚಲ ಪಂತನೇ ನಿರ್ಮಿಸಿದನೆಂದು ಹೇಳಲಾಗಿದೆ. ದೊಡ್ಡಬಳ್ಳಾಪುರದ ಇತರ ದೇವಾಲಯಗಳೆಂದರೆ ಸೋಮೇಶ್ವರ ದೇವಾಲಯ, ರಾಮ ಹಾಗೂ ಜನಾರ್ದನಸ್ವಾಮಿ ದೇವಾಲಯಗಳು. ಅಬ್ಬಾಸ್ ಖುಲಿ ಖಾನನಿಂದ ನಿರ್ಮಿತವಾದ ಅಶೂರ್‌ಖಾನ್ ಬಹು ಸುಂದರವಾದ ಕಟ್ಟಡವಾಗಿದೆ. ಸೈಯದ್ ಹುಸೇನ್ ಷಾ ಖಾದ್ರಿ ಮತ್ತು ಸೈಯಿದ್ ಅಲ್ಲಾವುದ್ದೀನ್ ಚಿಸ್ತಿ ದರ್ಗಾ ಇಲ್ಲಿನ ಎರಡು ಪವಿತ್ರ ಮುಸ್ಲಿಂ ಸ್ಮಾರಕಗಳು. ಪ್ರತೀ ವರ್ಷ ಮೊಹರಮನ್ನು ವೈಭವದಿಂದ ಆಚರಿಸಲಾಗುತ್ತದೆ. ದೇಶಾದ್ಯಂತ ಇರುವ ಷೀಯಾ ಪಂಥೀಯರನ್ನು ಆಕರ್ಷಿಸುತ್ತದೆ. ದೊಡ್ಡಬಳ್ಳಾಪುರ ನೇಯ್ಗೆಗೆ ಹೆಸರುವಾಸಿಯಾಗಿದೆ. ಹತ್ತು ಸಾವಿರಕ್ಕೂ ಹೆಚ್ಚು ಕುಟುಂಬಗಳು ಈ ಉದ್ಯಮದಲ್ಲಿ ನಿರತವಾಗಿವೆ. ದೊಡ್ಡಬಳ್ಳಾಪುರವು ಕಂದಾಯ ಉಪವಿಭಾಗವಾಗಿದ್ದರೂ ವಿಭಾಗದ ಕಛೇರಿಯು ಬೆಂಗಳೂರಿನಲ್ಲಿದೆ. ಇದು ಪೌರಸಭೆಯನ್ನು ಹೊಂದಿದೆ. ಘಾಟಿ ಸುಬ್ರಹ್ಮಣ್ಯ ಇಲ್ಲಿನ ಪ್ರಮುಖ ಯಾತ್ರಾ ಸ್ಥಳವಾಗಿದ್ದು, ದೊಡ್ಡಬಳ್ಳಾಪುರದ ಉತ್ತರಕ್ಕೆ 12 ಕಿಮೀ ದೂರದಲ್ಲಿದ್ದು, ಇದು ಜೂಗನಹಳ್ಳಿಗೆ ಸೇರಿಕೊಂಡಂತಿರುವ ಒಂದು ಸಣ್ಣ ಹಳ್ಳಿಯಾಗಿದೆ. ಈ ದೇವಾಲಯವು ಘಟ್ಟಗಳ ಮಧ್ಯದಲ್ಲಿದೆ. ನಾಗದೇವತೆಯಾದ ವಾಸುಕಿ ಇಲ್ಲಿ ತಪಸ್ಸು ಮಾಡಿದನೆಂದು ಹೇಳಲಾಗಿದೆ. ಇಲ್ಲಿರುವ ಮುಖ್ಯ ಸ್ಮಾರಕವೆಂದರೆ ಆಧುನಿಕ ಶೈಲಿಯಲ್ಲಿ ನಿರ್ಮಿಸಿರುವ ಸುಬ್ರಮಣ್ಯ ದೇವಾಲಯ. ಇದರ ಮುಂಭಾಗದ ಗೋಪುರ ಬಹು ಆಕರ್ಷಕವಾಗಿದೆ. ಗರ್ಭಗುಡಿಯಲ್ಲಿರುವ ದೇವತಾ ಮೂರ್ತಿಯು ಮುಂಭಾಗದಿಂದ ನೋಡಿದರೆ ಸುಬ್ರಮಣ್ಯನಾಗಿಯೂ, ಹಿಂಭಾಗದಿಂದ ನೋಡಿದರೆ ನರಸಿಂಹನಾಗಿಯೂ ಕಾಣುವುದು. ದೇವಾಲಯದ ಹಿಂಭಾಗದಲ್ಲಿ ಕುಮಾರಧಾರಾ ಎಂಬ ಪುಷ್ಕರಣಿಯಿದೆ. ದೇವಾಲಯದ ಮುಂಭಾಗದಲ್ಲಿ ಅನೇಕ ಭಕ್ತಾದಿಗಳು ನಾಗರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿರುವರು. ಇಲ್ಲಿ ಒಂದು ಹನುಮಂತನ ದೇವಾಲಯವಿದೆ.

**ಧರ್ಮಸ್ಥಳ :** (ದ. ಕ. ಜಿ; ಬೆಳ್ತಂಗಡಿ ತಾ; ಜನ: 4,408) ಮಂಗಳೂರಿನಿಂದ ಪೂರ್ವಕ್ಕೆ 75 ಕಿಮೀ ದೂರದಲ್ಲಿ ಹಾಗೂ ಬೆಳ್ತಂಗಡಿಯ ಆಗ್ನೇಯಕ್ಕೆ 16 ಕಿಮೀ ದೂರದಲ್ಲಿ ಈ ಪವಿತ್ರ ಯಾತ್ರಾ ಸ್ಥಳವಿದು. ಮಂಗಳೂರು-ಚಾರ್ಮಾಡಿ ರಸ್ತೆ

ಯಲ್ಲಿ ಉಜಿರೆಯ ಮೂಲಕ ಧರ್ಮಸ್ಥಳವನ್ನು ಸೇರಬಹುದಾಗಿದೆ. ಈ ಪವಿತ್ರ ಕ್ಷೇತ್ರದಿಂದ ಸುಮಾರು ಮೂರು ಕಿಮೀ ದೂರದಲ್ಲಿ ನೇತ್ರಾವತಿ ನದಿ ಹರಿಯುತ್ತಿದೆ. ಈ ಕ್ಷೇತ್ರದ ಸುತ್ತಲೂ ಬೆಟ್ಟದ ಸಾಲು, ಭತ್ತದ ಗದ್ದೆಗಳು, ತೆಂಗು ಹಾಗೂ ಅಡಿಕೆಯ ತೋಟಗಳಿದ್ದು, ಇವುಗಳ ನಡುವೆ ರಮಣೀಯವಾದ ಪರಿಸರದಲ್ಲಿ ಈ ಸ್ಥಳವಿದೆ. ಈ ಕ್ಷೇತ್ರದ ಸ್ಥಳ ಪುರಾಣ ಪ್ರಕಾರ ಅಮ್ಮುದೇವಿ ಬಳ್ಳಾಳ್ತಿ ಮತ್ತು ಬಿರ್ಮಣ್ಣ ಪೆರ್ಗಡೆ ಎಂಬ ಜೈನ ದಂಪತಿಗಳು, ಸ್ಥಳೀಯರಾಗಿದ್ದು ದಾನಧರ್ಮಗಳಿಂದ ಹೆಸರುವಾಸಿಯಾಗಿದ್ದ ಇವರು ಅಲ್ಲಿನ ಚಂದ್ರನಾಥ ಬಸದಿಯ ಭಕ್ತರಾಗಿದ್ದರು. ಈ ದಂಪತಿಗಳು ಧರ್ಮದೇವತೆಗಳಿಗೆ ದೇವಾಲಯವನ್ನು ಕಟ್ಟಿಸಿ, ಅವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿ, ಉತ್ಸವ, ಪರ್ವ, ನಡಾವಳಿಗಳನ್ನು ಆಚರಿಸಿಕೊಂಡು ಬರುತ್ತಿದ್ದರು. ಈ ಧರ್ಮ ದೇವತೆಗಳು ಮಂಗಳೂರಿನ ಬಳಿ ಕದ್ರಿಯಲ್ಲಿರುವ ಮಂಜುನಾಥ ಲಿಂಗವನ್ನು ತರಲು ಅಣ್ಣಪ್ಪ ದೇವತೆಯನ್ನು ಕಳುಹಿಸಿದರಂತೆ. ಈ ಲಿಂಗವನ್ನು ಧರ್ಮದೇವತೆಗಳ ದೇವಾಲಯದ ಬಲಗಡೆಗೆ ಪ್ರತಿಷ್ಠಾಪಿಸಲಾಗಿದೆ. ಅಣ್ಣಪ್ಪನ ದೇವಾಲಯವು ಮಂಜುನಾಥನ ದೇವಾಲಯಕ್ಕೆ ಅಭಿಮುಖವಾಗಿದೆ. ಕನ್ಯಾಕುಮಾರಿ ದೇವಾಲಯವು ಅದರ ಹಿಂಭಾಗಕ್ಕಿದೆ. ಕ್ರಿ. ಶ. 16ನೇಯ ಶತಮಾನದಲ್ಲಿ ಸೋದೆ ಮಠದ ವಾದಿರಾಜಸ್ವಾಮಿಗಳು ಈ ಕ್ಷೇತ್ರಕ್ಕೆ ಭೇಟಿ ನೀಡಿ ಲಿಂಗವನ್ನು ಪುನಃಪ್ರತಿಷ್ಠಾಪಿಸಿ, ಅದುವರೆಗೂ ಕುಡುಮ ಎಂದು ಕರೆಯುತ್ತಿದ್ದ ಈ ಕ್ಷೇತ್ರವನ್ನು ಧರ್ಮಸ್ಥಳ ವೆಂದು ಕರೆದರು. ಇಂದಿಗೂ ಈ ಹೆಸರಿನಿಂದಲೇ ಈ ಕ್ಷೇತ್ರವು ಪ್ರಸಿದ್ಧವಾಗಿದೆ. ಈ ಶೈವ ದೇವಾಲಯದ ಪ್ರಮುಖ ಲಕ್ಷಣವೆಂದರೆ, ಈ ದೇವಾಲಯದ ಅರ್ಚಕರು ಮಾಧ್ವ ವೈಷ್ಣವರು ಹಾಗೂ ಧರ್ಮಾಧಿಕಾರಿಗಳು ಜೈನ ಧರ್ಮದ ಹೆಗ್ಗಡೆ ಕುಟುಂಬದವರು. ಪ್ರತೀವರ್ಷ ನವೆಂಬರ್-ಡಿಸೆಂಬರ್ ತಿಂಗಳಿನಲ್ಲಿ ಇಲ್ಲಿ ದೀಪೋತ್ಸವವನ್ನು ಆಚರಿಸಲಾಗುತ್ತದೆ. ಈ ಸಂದರ್ಭದಲ್ಲಿಯೇ ಸರ್ವಧರ್ಮ ಮತ್ತು ಸಾಹಿತ್ಯ ಸಮ್ಮೇಳನವನ್ನೂ ನಡೆಸಲಾಗುತ್ತದೆ. 1973ರಲ್ಲಿ ಬೃಹತ್ ಗೊಮ್ಮಟನ ಏಕಶಿಲಾ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪಿಸಲಾಯಿತು. 175 ಟನ್‌ಗಳಷ್ಟು ತೂಕವಿರುವ, ಕಣಶಿಲೆಯ (ಗ್ರಾನೈಟ್) ಈ ಮೂರ್ತಿಯು ದೇಶದಲ್ಲಿಯೇ ಬೃಹತ್ ಮೂರ್ತಿಗಳ ಸಾಲಿನಲ್ಲಿ ಮೂರನೇಯ ಸ್ಥಾನವನ್ನು ಗಳಿಸಿದೆ. ಈ ಏಕಶಿಲಾ ಮೂರ್ತಿ 11.9 ಮೀಟರ್ ಎತ್ತರವಿದೆ. ಇಲ್ಲಿ ಒಂದು ಸಣ್ಣ ಪ್ರಾಣಿ ಸಂಗ್ರಹಾಲಯ ಹಾಗೂ ಚಿತ್ರಕಲೆಯ ಸಂಗ್ರಹವನ್ನು ದೇವಾಲಯದ ಅಧಿಕಾರಿಗಳು ನಡೆಸುತ್ತಿದ್ದಾರೆ. ಈ ದೇವಾಲಯದ ಅಧಿಕಾರಿಗಳು, ಉಜಿರೆಯಲ್ಲಿ ಒಂದು ಪ್ರೌಢಶಾಲೆ, ಕಲೆ ಹಾಗೂ ವಿಜ್ಞಾನದ ಒಂದು ಪ್ರಥಮ ದರ್ಜೆ ಕಾಲೇಜನ್ನು ಅನೇಕ ಶಿಕ್ಷಣ ಸಂಸ್ಥೆಗಳನ್ನು ಕರ್ನಾಟಕಾದ್ಯಂತ ನಡೆಸುತ್ತಿರುವರು. ಈ ಕ್ಷೇತ್ರದಲ್ಲಿ ಯಾತ್ರಿಕರಿಗೆ ಉಚಿತ ಊಟ ಹಾಗೂ ವಸತಿ ಸೌಲಭ್ಯವನ್ನು ನೀಡಲಾಗುತ್ತದೆ. ಭಾರತದ ಒರಿಸ್ಸಾದಲ್ಲಿರುವ 'ಸಾಕ್ಷಿ ಗೋಪಾಲ' ದೇವಾಲಯ ಮತ್ತು ಧರ್ಮಸ್ಥಳದ ದೇವಾಲಯಗಳು ಒಂದು ವೈಶಿಷ್ಟ್ಯಪೂರ್ಣ ವ್ಯವಸ್ಥೆಯನ್ನು ಹೊಂದಿವೆ. ಈ ದೇವಾಲಯಗಳಲ್ಲಿ ನಾಗರಿಕ ನ್ಯಾಯಗಳನ್ನು ವಿಚಾರಣೆ ನಡೆಸಿ ತೀರ್ಪನ್ನು ಕೊಡಲಾಗುವುದು. ಸಾಮಾನ್ಯವಾಗಿ ದೇವಾಲಯದವರು ನೀಡಿದ ತೀರ್ಪನ್ನು ಕಕ್ಷಿದಾರರು ಒಪ್ಪಿಕೊಳ್ಳುವರು. ಇತ್ತೀಚೆಗೆ ವರ್ಷಕ್ಕೊಂದು ಬಾರಿ ಈ ದೇವಾಲಯದವರು ಸಾಮೂಹಿಕ ವಿವಾಹ ಸಮಾರಂಭಗಳನ್ನು ನಡೆಸುತ್ತಿದ್ದಾರೆ.

**ಧಾರವಾಡ:** (ಜಿ. ಮತ್ತು ತಾ.ಕೇ; ಜನ: 1,73,921) ಧಾರವಾಡವು ಬೆಂಗಳೂರಿನ ವಾಯುವ್ಯಕ್ಕೆ ಸುಮಾರು 427 ಕಿಮೀ ದೂರದಲ್ಲಿದೆ. 1830ರಲ್ಲಿ ಇದು ಇಂದಿನ ವಿಜಾಪುರ, ಧಾರವಾಡ, ಬೆಳಗಾವಿಯ ಕೆಲವು ಭಾಗ ಮತ್ತು ಸೊಲ್ಲಾಪುರ ಜಿಲ್ಲೆಗಳನ್ನು ಒಳಗೊಂಡಂತೆ ದಕ್ಷಿಣ ಮರಾಠಾ ಭಾಗಗಳ ವಿಭಾಗದ ಆಡಳಿತ ಕೇಂದ್ರ (ಕಲೆಕ್ಟರೇಟ್) ಆಗಿತ್ತು. ಧಾರವಾಡವು ಪ್ರಾರಂಭದಿಂದಲೂ ಉತ್ತರ ಕರ್ನಾಟಕದ ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿದ್ದಿತಲ್ಲದೆ, ಆಲೂರು ವೆಂಕಟರಾಯರು ಹಾಗೂ ಇತರೇ ಗಣ್ಯರು ಪ್ರಾರಂಭಿಸಿದ ಏಕೀಕರಣ ಚಳವಳಿಗೂ ಇದು ಕೇಂದ್ರವಾಗಿದ್ದಿತು. 1921ರಲ್ಲಿ ಧಾರವಾಡದಲ್ಲಿ ನಡೆದ ಗೋಲಿಬಾರ್ ಪ್ರಕರಣವು ಸ್ವಾತಂತ್ರ್ಯ ಚಳವಳಿಯಲ್ಲಿ ಈ ಸ್ಥಳದ ಮಹತ್ವವನ್ನು ಎತ್ತಿ ತೋರಿಸಿತು. 1856ರಲ್ಲಿ ಮೊದಲ ಬಾರಿಗೆ, ಇಲ್ಲಿ ಪುರಸಭೆ ಪ್ರಾರಂಭವಾಯಿತು. ಅನಂತರ 1883ರಲ್ಲಿ ಇದೇ ನಗರಸಭೆಯಾಯಿತು. 1926ರಲ್ಲಿ 'ಬರೋ ಮುನಿಸಿಪಾಲಿಟಿ' ಆಯಿತು. 1962ರ ಮಾರ್ಚಿಯಲ್ಲಿ ಧಾರವಾಡ ಮತ್ತು ಹುಬ್ಬಳ್ಳಿ ಅವಳಿ ನಗರಗಳನ್ನು ಒಟ್ಟುಗೂಡಿಸಿ ಮಹಾ ನಗರಪಾಲಿಕೆ (ಕಾರ್ಪೊರೇಷನ್) ರೂಪಿಸಲಾಯಿತು. ಈ ನಗರದ ಮೂಲ ಹೆಸರು ಧಾರವಾಡ. ಈ ಪದದ ಮೊದಲ ಭಾಗವಾದ ಧಾರ ಎಂಬುದು ಸಂಸ್ಕೃತದ ದ್ವಾರ ಅಂದರೆ, ಬಾಗಿಲು ಎಂಬುದರಿಂದಲೂ, ವಾಡ ಎಂಬುದು ಸಂಸ್ಕೃತದ ವಾಟ ಎಂಬುದರಿಂದಲೂ ಬಂದಿದೆ. ಧಾರವಾಟ ಎಂಬುದು ರೂಪಾಂತರ ಹೊಂದಿ ಧಾರವಾಡವಾಗಿದೆ. ಧಾರವಾಡವೆಂದರೆ ದ್ವಾರನಗರ ಎಂದರ್ಥ. (ಇನ್ನೊಂದು ವಿವರಣೆಯ ಪ್ರಕಾರ ಅದು ವಾಟ ಅಲ್ಲ, ಕನ್ನಡದಲ್ಲಿ ಹಳ್ಳಿ ಅಥವಾ ಊರು ಎಂಬರ್ಥವಿರುವ ಬಾಡ). ಬಹುಶಃ ಈ ಸ್ಥಳದ ಭೌಗೋಳಿಕ ಪರಿಸರ ಈ ನಗರಕ್ಕೆ ಈ ಹೆಸರು ಬರಲು ಕಾರಣವಾಗಿರಬಹುದು. ಈ ನಗರವು ಬಯಲು ಪ್ರದೇಶ ಹಾಗೂ ಮಲೆನಾಡಿನ ಪ್ರದೇಶಗಳ ನಡುವಿನ ಮಧ್ಯಂತರ ಭಾಗದಲ್ಲಿರುವುದೇ ಇದರ ವೈಶಿಷ್ಟ್ಯವಾಗಿದೆ. ಈ ನಗರಕ್ಕೆ ನೀಡಿರುವ ಈ ಹೆಸರನ್ನು ಸಮರ್ಥಿಸಲು ಧಾರವಾಡದ ಕೋಟೆಯಲ್ಲಿರುವ ದುರ್ಗಾದೇವಿ ದೇವಾಲಯದಲ್ಲಿ ದೊರೆತಿರುವ ಶಾಸನ ಸಹಾಯಕವಾಗಿದೆ. ಪ್ರಾಚೀನ ಕಾಲದಲ್ಲಿ ಪಲಸಿಗೆ—12,000ದ ಪ್ರಾಂತ್ಯದ ಅಧೀನ ಕ್ಕೊಳಪಟ್ಟಿದ್ದ ಬೆಳವೊಲ 300 ನಾಡಿಗೆ ಧಾರವಾಡವು

ಸೇರಿದ್ದಿತು. (ಪಲಸಿಗೆ ಇಂದಿನ ಬೆಳಗಾವಿ ಜಿಲ್ಲೆಯ ಹಲಸಿಗೆ) ಕ್ರಿ.ಶ. ಏಳನೇಯ ಶತಮಾನದ ಅನಂತರ ಧಾರವಾಡವು ನಗರವಾಗಿ ಬೆಳೆದುಬಂದಿರಬಹುದು. ಧಾರವಾಡದ ಬಳಿಯಿರುವ 'ನರೇಂದ್ರ'ದಲ್ಲಿ ದೊರೆತಿರುವ ಕ್ರಿ.ಶ. 1125 ಮತ್ತು 1126ರ ಎರಡು ಶಾಸನಗಳು ನವಲೂರೂ ಸೇರಿದಂತೆ, ಧಾರವಾಡವೂ ಸಹ 500 ಹಳ್ಳಿಗಳುಳ್ಳ ಕುಂದೂರು-500ಕ್ಕೆ ಸೇರಿತ್ತೆಂದು ತಿಳಿಸುತ್ತದೆ. ಕುಂದೂರು (ನರೇಂದ್ರ) ಪಲಸಿಗೆ-12000 ಪ್ರಾಂತ್ಯದ ಒಂದು ಭಾಗವಾಗಿದ್ದು, ಒಂದು ಪ್ರಮುಖ ನಗರವಾಗಿತ್ತು. ಕ್ರಿ.ಶ. 1117ರ ಚಾಳುಕ್ಯರ ಆರನೇಯ ವಿಕ್ರಮಾದಿತ್ಯನ ಆಳ್ವಿಕೆಯನ್ನು ಸೂಚಿಸುವ ಶಾಸನವೊಂದು ದುರ್ಗಾದೇವಿಯ ದೇವಾಲಯದಲ್ಲಿ ದೊರೆತಿದ್ದು, ಭಾನುದೇವ ಎಂಬ ಅಧಿಕಾರಿಯೂ ಈ ಪ್ರದೇಶವನ್ನು ಆಳುತ್ತಿದ್ದನೆಂಬುದನ್ನು ಉಲ್ಲೇಖಿಸುತ್ತದೆ. ಧರ್ಮೇಶ್ವರ ದೇವರ ದೇವಾಲಯಕ್ಕೆ ನೀಡಿದ ಒಂದು ದತ್ತಿಯಲ್ಲಿ ಇದನ್ನು ಪ್ರಸ್ತಾಪಿಸಲಾಗಿದೆ. ಬಹುಶಃ ಕಾಲಾನುಕ್ರಮದಲ್ಲಿ ಈ ದೇವಾಲಯವನ್ನು ದುರ್ಗಾದೇವಿಯ ದೇವಾಲಯವಾಗಿ ಪರಿವರ್ತಿಸಿರಬಹುದು. ಕಲ್ಯಾಣಿಯ ಚಾಳುಕ್ಯರ ಆಳ್ವಿಕೆಯ ಕಾಲದಲ್ಲಿ ಧಾರವಾಡದ ಪ್ರಾಮುಖ್ಯತೆ ಹಾಗೂ ಸಂಪತ್ತು ವೃದ್ಧಿಗೊಂಡಿತೆಂಬುದನ್ನು ಐತಿಹಾಸಿಕ ಮಾಹಿತಿಗಳು ತಿಳಿಯಪಡಿಸುತ್ತವೆ. ಕಲ್ಯಾಣಿಯ ಚಾಳುಕ್ಯರ ನಂತರ ಸೇಉಣರ ಅಧೀನಕ್ಕೂ, ಅನಂತರ ವಿಜಯನಗರದ ಅಧೀನಕ್ಕೂ ಈ ಪ್ರದೇಶವು ಒಳಪಟ್ಟಿತು. ಹುಬ್ಬಳ್ಳಿ ತಾಲೂಕಿಗೆ ಸೇರಿರುವ ಕಟ್ನೂರಿನಲ್ಲಿ ದೊರೆತಿರುವ ಶಾಸನವೊಂದು ಕ್ರಿ.ಶ. 13ನೇಯ ಶತಮಾನದ ವೇಳೆಗಾಗಲೇ ಧಾರವಾಡವು ಒಂದು ಪ್ರಮುಖ ನಗರವಾಗಿ ಬೆಳೆದು, ಧಾರವಾಡ ಕಂಪಣದ ಆಡಳಿತ ಕೇಂದ್ರವಾಗಿತ್ತೆಂಬುದನ್ನು ತಿಳಿಸುತ್ತದೆ. ಕ್ರಿ.ಶ. 1673ರಲ್ಲಿ ವಿಜಾಪುರದ ಸುಲ್ತಾನನು, ಸವಣೂರಿನ ನವಾಬನ ಪೂರ್ವಜನಾದ ಅಬ್ದುಲ್ ಕರೀಂಖಾನನನ್ನು 16 ಉಪವಿಭಾಗಗಳನ್ನು ಹೊಂದಿದ್ದ ಸರ್ಕಾರಕ್ಕೆ ರಾಜ್ಯಪಾಲನಾಗಿ ನೇಮಿಸಿದಾಗ ಧಾರವಾಡ ಸಹ ಅದರ ಒಂದು ಭಾಗವಾಗಿದ್ದು, 'ನಸ್ರತಾಬಾದ್' ಹೆಸರಿನಿಂದ ಕರೆಯಲ್ಪಡುತ್ತಿತ್ತು. 1674ರಲ್ಲಿ ಶಿವಾಜಿಯು ದಕ್ಷಿಣದ ದಂಡಯಾತ್ರೆ ಕೈಗೊಂಡಾಗ ಧಾರವಾಡವನ್ನು ತನ್ನ ಅಧೀನಕ್ಕೆ ತೆಗೆದುಕೊಂಡನು. ಕ್ರಿ.ಶ. 1685-1753ರ ಅವಧಿಯಲ್ಲಿ ಅಂದರೆ 68 ವರ್ಷಗಳ ಕಾಲ, ಹುಬ್ಬಳ್ಳಿ-ಧಾರವಾಡ ಪ್ರದೇಶಗಳು ಔರಂಗಜೇಬನ ಹಾಗೂ ಮಗನಾದ ಮುಆಜಿಮನ ಅಧೀನಕ್ಕೆ ಒಳಪಟ್ಟಿದ್ದು, ವಿಜಾಪುರದಲ್ಲಿ ಒಬ್ಬ ಮೊಗಲ್ ಸುಬೇದಾರನನ್ನು ನೇಮಿಸಲಾಗಿತ್ತು. 1753ರಲ್ಲಿ ಇದು ಪೇಶ್ವೆ ಬಾಳಾಜೀರಾಯನ ಅಧೀನಕ್ಕೆ ಒಳಪಟ್ಟಿತು. ಅನಂತರ 1764ರಿಂದಾಚೆಗೆ ಹೈದರನು ಸವಣೂರಿನ ನವಾಬನನ್ನು ಸೋಲಿಸಿ ಈ ಪ್ರದೇಶಗಳ ನಿಯಂತ್ರಣವನ್ನು ಹೊಂದಿದನು. ಅನಂತರ ಕೆಲಕಾಲ, ಪೇಶ್ವೆ ಈ ಪ್ರದೇಶಗಳನ್ನು ಮತ್ತೆ ತನ್ನ ವಶಕ್ಕೆ ತೆಗೆದುಕೊಂಡಿದ್ದನು. 1778ರಲ್ಲಿ ಹೈದರ್ ದೀರ್ಘ ಕಾಲದ ಹೋರಾಟ ನಡೆಸಿ ಮತ್ತೆ ಮರಾಠರಿಂದ ಇದನ್ನು ಹಿಂದಕ್ಕೆ ಕಸಿದುಕೊಂಡು ಭದ್ರಪಡಿಸಿಕೊಂಡನು. ಟಿಪ್ಪುವಿನ ಮರಣಾನಂತರ ಇದು ಮರಾಠರ ಅಧೀನಕ್ಕೊಳಗಾಯಿತು. ಕೊನೆಗೆ 1817ರ ಪುಣೆಯ ಒಪ್ಪಂದದಂತೆ ಧಾರವಾಡವನ್ನು ಪೇಶ್ವೆಯವರು ಬ್ರಿಟಿಷರಿಗೆ ಬಿಟ್ಟುಕೊಟ್ಟರು.

ಧಾರವಾಡದಲ್ಲಿ ಅನೇಕ ಪ್ರಾಚೀನ ಹಾಗೂ ಮಹತ್ವದ ಸ್ಥಳಗಳು ಹಾಗೂ ಸ್ಮಾರಕಗಳು ಇವೆ. ಆದರೆ ಇಂದು ಕೋಟೆಯಲ್ಲಿ ಎರಡು ಪರಸ್ಪರ ಅಭಿಮುಖವಾಗಿರುವ ಪ್ರಮುಖ ದ್ವಾರಗಳನ್ನು ಬಿಟ್ಟರೆ ಯಾವ ಪ್ರಾಚೀನ ಸ್ಮಾರಕಗಳೂ ಇಲ್ಲ. ಸುಮಾರು 76 ಎಕರೆ ಪ್ರದೇಶವನ್ನು ಆವರಿಸಿರುವ ಈ ಕೋಟೆಯನ್ನು ಕ್ರಿ. ಶ. 1403ರಲ್ಲಿ ನಿರ್ಮಿಸಲಾಗಿತ್ತು. ದ್ವಾರದ ಮೇಲಿರುವ ಪರ್ಶಿಯನ್ ಶಾಸನವು ಅಲಿ ಮತ್ತು ಮಹಮ್ಮದರನ್ನು ಪ್ರಾರ್ಥಿಸುವುದರಿಂದ ತೊಂದರೆಗೊಳಗಾದವರು ಅನುಗ್ರಹ ಪಡೆಯುತ್ತಾರೆಂದು ವಿವರಿಸುತ್ತದೆ. ಇತಿಹಾಸ ಪ್ರಸಿದ್ಧವಾದ ದುರ್ಗಾದೇವಿ ದೇವಾಲಯವು ಈ ಕೋಟೆಯ ಪ್ರಾಂಗಣದಲ್ಲಿದೆ. ಈ ದೇವಾಲಯದ ಅಕ್ಕಪಕ್ಕದಲ್ಲಿ ಮಾರುತಿ, ಈಶ್ವರ ದೇವಾಲಯಗಳಿವೆ. ಮೈಲಾರ ಗುಡ್ಡದ ತುದಿಯಲ್ಲಿ ಮೈಲಾರಲಿಂಗ ದೇವಾಲಯವಿದೆ. (ಇದನ್ನು ಈಗ ವಿದ್ಯಾಗಿರಿ ಎಂದು ಕರೆಯುವರು) ಇದು ಐತಿಹಾಸಿಕ ದೃಷ್ಟಿಯಿಂದ ಮಹತ್ವವುಳ್ಳದ್ದಾಗಿದೆ. ದೇಗುಲದ ಎರಡು ಸ್ತಂಭಗಳ ಮೇಲಿದ್ದ ಪರ್ಶಿಯನ್ ಶಾಸನದ ಪ್ರಕಾರ ಮಹಮುದ್ ಆದಿಲ್‌ಷಾನ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯವನ್ನು ವಶಪಡಿಸಿಕೊಂಡು ಅದನ್ನು ಮಸೀದಿಯಾಗಿ 1670ರಲ್ಲಿ ಪರಿವರ್ತಿಸಲಾಯಿತು. 1753ರಲ್ಲಿ ಮರಾಠರು ಧಾರವಾಡವನ್ನು ವಶಕ್ಕೆ ತೆಗೆದುಕೊಂಡಾಗ ಆ ಮಸೀದಿಯನ್ನು ಹಿಂದೂ ದೇವಾಲಯವನ್ನಾಗಿ ಪರಿವರ್ತಿಸಿ, ಮೈಲಾರದೇವರ ಗುಡಿಯನ್ನಾಗಿ ಮಾಡಲಾಯಿತು. ಧಾರವಾಡದಲ್ಲಿ ಎರಡು ನರಸಿಂಹ ದೇವಾಲಯಗಳಿದ್ದು ಒಂದು ನಗರದೊಳಗೂ, ಮತ್ತೊಂದು ಮದಿಹಾಳಿನಲ್ಲಿಯೂ ಇವೆ. ಎರಡು ಪಾಂಡುರಂಗ ದೇವಾಲಯಗಳಿದ್ದು ಒಂದು ಕೋಟೆಯಲ್ಲಿಯೂ (1800) ಮತ್ತೊಂದು ಮಂಗಳವಾರಪೇಟೆಯಲ್ಲಿಯೂ ಇವೆ (1796). 1830ರಲ್ಲಿ ಇಲ್ಲಿ ಒಂದು ರಾಘವೇಂದ್ರಸ್ವಾಮಿ ಮಠವನ್ನು ಕಟ್ಟಿಸಲಾಯಿತು. ಗಾಂಧಿಚೌಕದ ಬಳಿಯಿರುವ ಬಹು ಅಂತಸ್ತಿನ ಪುರಾತನ ಕಟ್ಟಡದಲ್ಲಿ (1887) 'ಶಂಕರಾಚಾರ್ಯ ಸಂಸ್ಕೃತ ಪಾಠಶಾಲೆ'ಯನ್ನು ನಡೆಸಲಾಗುತ್ತಿದೆ. ಈ ಕಟ್ಟಡದ ಆವರಣದಲ್ಲಿ ದತ್ತಾತ್ರೇಯ ದೇವಾಲಯವಿದೆ. ಇಲ್ಲಿನ ಕೆಲವು ಪ್ರಮುಖ ದೇವಾಲಯಗಳೆಂದರೆ, ಚನ್ನಬಸವಣ್ಣನು ಉಳವಿಗೆ ಹೋಗುವ ಮಾರ್ಗದಲ್ಲಿ ನಿರ್ಮಿಸಿದನೆಂದು ಹೇಳುವ 'ಉಳವಿ ಬಸಪ್ಪ' ಮತ್ತು ವೀರಭದ್ರ ದೇವಾಲಯಗಳು. ಕಲ್ಘಟಗಿ ರಸ್ತೆಯಲ್ಲಿರುವ ಹಾಗೂ ನಗರಕ್ಕೆ ನಾಲ್ಕು ಕಿಮೀ ದೂರದಲ್ಲಿರುವ ಶಾಲ್ಮಲಾ ನದಿಯ ಉಗಮಸ್ಥಾನ ಹಾಗೂ ಸೋಮೇಶ್ವರ ದೇವಾಲಯ ಇಲ್ಲಿನ ಇನ್ನೊಂದು ಪ್ರಮುಖ ದೇವಾಲಯ. ನಗರದ ಪ್ರಮುಖ ಮಠ

ಗಳೆಂದರೆ, 1935ರಲ್ಲಿ ಸ್ಥಾಪಿಸಲ್ಪಟ್ಟ ನವಕಲ್ಯಾಣ ಮಠ ಮತ್ತು ಮುರುಘಾಮಠ. ಎರಡನೇಯ ಮಠವು ಶಿಕ್ಷಣ, ಸಾಂಸ್ಕೃತಿಕ, ಧಾರ್ಮಿಕ ಪ್ರಚಾರ ಕಾರ್ಯಗಳಿಗಾಗಿ ಶ್ರಮಿಸುತ್ತಿದೆ. ಇಲ್ಲಿನ ಕುಮಾರಸ್ವಾಮಿ ಅಧ್ಯಾತ್ಮಿಕ ಮತ್ತು ಯೋಗ ಸಂಸ್ಥೆಯು ಅಂತರರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದೆ. ಹೊಸ ಯಲ್ಲಾಪುರ ದಲ್ಲಿ ಸುಮಾರು 800 ವರ್ಷಗಳಷ್ಟು ಹಳೆಯದಾದ ಜೈನ ಬಸದಿ ಯೊಂದಿದೆ. 1686ರಲ್ಲಿ ಆದಿಲ್‌ಷಾಹಿ ಸುಲ್ತಾನನು ಮಂಗಳ ವಾರಪೇಟೆಯಲ್ಲಿ ನಿರ್ಮಿಸಿದ ಜುಮ್ಮಾಮಸೀದಿಯು ಧಾರವಾಡದ ಪ್ರಮುಖ ಮಸೀದಿಗಳಲ್ಲಿ ಒಂದಾಗಿದೆ. ಇತರೇ ಪ್ರಮುಖ ಮಸೀದಿಗಳೆಂದರೆ, ಮಲ್ಲಾಪುರದ ಮಸೀದಿ, ಬಾರಾ ಇಮಾಮ್ ಮಸೀದಿ, ಮದನಿ ಮಸೀದಿ, ಸೌದಾಗರ್ ಮಸೀದಿ, ಹಾಗೂ ಇತ್ತೀಚೆಗೆ ನಿರ್ಮಿಸಿರುವ ಇತರೆ ಮಸೀದಿಗಳು. ಕೆಲವು ಮುಸ್ಲಿಂ ಸಂತರ ಸಮಾಧಿಗಳಿದ್ದು ಇವುಗಳ ಬಳಿ ಉರುಸನ್ನು ನಡೆಸಲಾಗು ತ್ತದೆ. ನಗರದಲ್ಲಿ ಮೂರು ಮುಖ್ಯ ಕ್ರೈಸ್ತ ದೇವಾಲಯಗಳಿವೆ. ಅವುಗಳಲ್ಲಿ 1888ರ ಆಲ್ ಸೈಂಟ್ಸ್ ಚರ್ಚು, 1844ರ ಬಾಸೆಲ್ ಮಿಷನ್ ಚರ್ಚು ಮತ್ತು ರೋಮನ್ ಕ್ಯಾಥೋಲಿಕರ ಇನ್ನೊಂದು ಚರ್ಚು. ನಗರದಲ್ಲಿ ಸುಂದರವಾಗಿ ರಚಿಸಿರುವ ಅಜಾದ್ ಪಾರ್ಕ್ (ಇದನ್ನು ಮೊದಲು ಎಡ್ವರ್ಡ್ ಪಾರ್ಕ್ ಎಂದು ಕರೆಯುತ್ತಿದ್ದರು) ಮತ್ತು ಕಿತ್ತೂರು ಚೆನ್ನಮ್ಮ ಪಾರ್ಕ್ ಎಂಬ ಎರಡು ಉದ್ಯಾನಗಳಿವೆ. ಕಿತ್ತೂರು ಚೆನ್ನಮ್ಮನ ಪಾರ್ಕ್ ಐತಿಹಾಸಿಕ ಮಹತ್ವದ್ದಾಗಿದ್ದು ಇಲ್ಲಿ 1824ರ ಕಿತ್ತೂರಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಡಿದ ಥ್ಯಾಕರೆ ಮತ್ತು ಮನ್ರೋ ಅವರ ಸ್ಮಾರಕವನ್ನು ನಿರ್ಮಿಸಲಾಗಿದೆ. ಪ್ರಾರಂಭದಿಂದಲೂ ಧಾರವಾಡವು ಜ್ಞಾನಾರ್ಜನೆಯ ಕೇಂದ್ರವಾಗಿದೆ. ಮುಂಬಯಿ ಕರ್ನಾಟಕ ಪ್ರಾಂತ್ಯದಲ್ಲಿಯೇ ಮೊದಲ ಬಾರಿಗೆ 1949ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲಾಯಿತು. 1917 ರಲ್ಲಿ ಕರ್ನಾಟಕ ಕಾಲೇಜನ್ನೂ ಇದಲ್ಲದೆ ಕೃಷಿ ಕಾಲೇಜನ್ನೂ ಸ್ಥಾಪಿಸಲಾಗಿದೆ. ನಗರದಲ್ಲಿ ಸ್ಥಾಪಿಸಲಾಗಿರುವ ಅನೇಕ ಖಾಸಗಿ ಸಂಸ್ಥೆಗಳು, ಸಮಾಜಿಕ-ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಪ್ರಗತಿ ಗಾಗಿ ಕಾರ್ಯಕ್ರಮಗಳನ್ನು ನಡೆಸುತ್ತಿವೆ. ಅವುಗಳಲ್ಲಿ ಉಲ್ಲೇ ಖಾರ್ಹವಾದುವೆಂದರೆ 1889ರಲ್ಲಿ ಸ್ಥಾಪಿತವಾದ ವಿದ್ಯಾವರ್ಧಕ ಸಂಘ, 1863ರ ಬಾಸೆಲ್ ಮಿಷನ್ ಸೊಸೈಟಿ, 1914ರ ಕರ್ನಾಟಕ ಹಿಸ್ಟಾರಿಕಲ್ ಸೊಸೈಟಿ, ಮುಂತಾದವು. ಧಾರವಾಡಕ್ಕೆ 11 ಕಿಮೀ ದೂರದಲ್ಲಿರುವ ಅಮ್ಮಿನಭಾವಿಯ ಸಮೀಪ ನೇಮಿನಾಥನ ತೀರ್ಥಂಕರನ ಬಸದಿ ಹಾಗೂ ಕಲ್ಲೇಶ್ವರ ಹಾಗೂ ಮಲ್ಲಿಕಾರ್ಜುನ ದೇವಾಲಯಗಳಿವೆ. ಮತ್ತು ಇಲ್ಲಿ ಕ್ರಿ. ಶ. 1071-1567ರ ಅವಧಿಗೆ ಸೇರಿದ ಆರು ಶಾಸನಗಳು ದೊರೆತಿವೆ.

**ನಂಜನಗೂಡು :** (ಮೈಸೂರು ಜಿ; ಉಪವಿಭಾಗ ಮತ್ತು ತಾ. ಕೇ; ಜನ; 34,939) ನಂಜನಗೂಡು ಪ್ರಖ್ಯಾತವಾದ ಯಾತ್ರಾಸ್ಥಳ. ಇದು ಕಪಿಲಾನದಿಯ ಬಲ ದಂಡೆಯಲ್ಲಿದೆ. ಇದು ಮೈಸೂರಿಗೆ ದಕ್ಷಿಣದಲ್ಲಿ 23 ಕಿಮೀ ಹಾಗೂ ಬೆಂಗಳೂರಿ ನಿಂದ 162 ಕಿಮೀ ದೂರದಲ್ಲಿಯೂ ಇದೆ. ಇಲ್ಲಿನ ಪ್ರಖ್ಯಾತ ನಂಜುಂಡೇಶ್ವರ ದೇವಾಲಯದ ಮುಖ್ಯ ದೇವರ ಹೆಸರಿನಿಂದ ಈ ಪಟ್ಟಣಕ್ಕೆ ಈ ಹೆಸರು ಬಂದಿತು. ದೇವರ ಹೆಸರು ಮೊದಲು ಶ್ರೀಕಂಠೇಶ್ವರ ಎಂದಿದ್ದು ನಂತರ ನಂಜುಂಡೇಶ್ವರ ಎಂದಾಯಿತು. ಸ್ಥಳ ಪುರಾಣಗಳಲ್ಲಿ ಈ ಸ್ಥಳದ ಹೆಸರನ್ನು ಸಂಸ್ಕೃತೀಕರಿಸಿ ಗರಳ ಪುರಿ ಎಂದು ಕರೆಯಲಾಗಿದೆ. ಇಲ್ಲಿನ ದೇವಾಲಯವು ದ್ರಾವಿಡ ಶೈಲಿಯ ಸಂಕೀರ್ಣ ದೇವಾಲಯ. ಮುಮ್ಮಡಿ ಕೃಷ್ಣರಾಜ ಒಡೆಯರು ಈ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ, 1845ರಲ್ಲಿ ಇದರ ಎತ್ತರವಾದ ಗೋಪುರವನ್ನು ನಿರ್ಮಿಸಿದರು. ಇದು ಕರ್ನಾಟಕದಲ್ಲೇ ಅತ್ಯಂತ ದೊಡ್ಡದಾದ ದೇವಾಲಯಗಳಲ್ಲಿ ಒಂದಾಗಿದ್ದು, ಇದು 385 ಅಡಿ ಉದ್ದ ಮತ್ತು 160 ಅಡಿ ಅಗಲವಿದೆ. ಮೂಲತಃ ಈ ದೇವಾಲಯವು ಗಂಗರಿಂದ (ಚೋಳರು?) ನಿರ್ಮಿಸಲ್ಪಟ್ಟಿರಬೇಕೆಂದು ಕಾಣುತ್ತದೆ. ಅನಂತ ರದ ಶತಮಾನಗಳಲ್ಲಿ 1900ರವರೆಗೆ ಹೊಸ ಭಾಗಗಳನ್ನು ಹೊಯ್ಸ ಳರು, ವಿಜಯನಗರದ ಅರಸರು, ಪಾಳೇಗಾರರು ಮತ್ತು ಇತರರು ಸೇರಿಸಿದರು. ಈ ದೇವಾಲಯದ ಒಳಗೆ ಸುಮಾರು 200 ಸಣ್ಣ ಪುಟ್ಟ ಗುಡಿಗಳಿವೆ. ಈ ಊರಿನ ಗುಂಡ್ಲು ನದಿ ಸೇತುವೆಯ ಆಚೆಯಲ್ಲಿ ಪರಶುರಾಮ ದೇವಾಲಯವಿದೆ. ಚಾಮುಂಡೇಶ್ವರಿ, ಗಣಪತಿ, ದತ್ತಾತ್ರೇಯ ಮತ್ತು ಸತ್ಯನಾರಾಯಣ ದೇವಾಲಯ ಗಳು ಈ ಊರಿನ ಇತರ ಗುಡಿಗಳು. ಇಲ್ಲಿನ ಧನ್ವಂತರಿ ಆಯು ರ್ವೇದ ಸಂಸ್ಥೆಯು ಆಯುರ್ವೇದ ಔಷಧಿಗಳು ಮತ್ತು ಅದರ ಇತರ ಉತ್ಪಾದನೆಗಳಿಗೆ ಪ್ರಖ್ಯಾತಿಯನ್ನು ಪಡೆದಿದೆ. ಒಂದು ಬಟ್ಟೆಯ ಗಿರಣಿ, ಒಂದು ಕಾಗದದ ಕಾರ್ಖಾನೆ, ಮತ್ತು ಇತರ ಕೈಗಾರಿಕಾ ಘಟಕಗಳು ಇಲ್ಲಿ ಮತ್ತು ಇದರ ಸುತ್ತಮುತ್ತ ಇವೆ. ಹುಲ್ಲಹಳ್ಳಿ, ರಾಮಪುರ ಮತ್ತು ಬೀರವಾಳ ನಾಲೆಗಳು ಈ ತಾಲೂಕಿಗೆ ನೀರಾವರಿ ಒದಗಿಸುತ್ತವೆ. ಈ ತಾಲೂಕಿನಲ್ಲಿ ಅನೇಕ ಧಾರ್ಮಿಕ ಸಂಸ್ಥೆಗಳು ಇವೆ. ನಂಜನಗೂಡಿಗೆ ಸಮೀಪದಲ್ಲಿ ವಯಸ್ಕರ ಶಿಕ್ಷಣ ಸಂಸ್ಥೆಗೆ ಸೇರಿದ ವಿದ್ಯಾಪೀಠವಿದೆ. ಈ ತಾಲೂಕಿನ ಇತರ ಗಮನಾರ್ಹವಾದ ಕೇಂದ್ರಗಳೆಂದರೆ, ಬದನವಾಳು ಗ್ರಾಮವು ನಂಜನಗೂಡಿನಿಂದ ಆಗ್ನೇಯದಲ್ಲಿ ಎಂಟು ಕಿಮೀ ದೂರದಲ್ಲಿದೆ. ಇಡೀ ರಾಜ್ಯದಲ್ಲೇ ಹಳೆಯದಾದ ಖಾದಿ ಮತ್ತು ಗ್ರಾಮೋದ್ಯೋಗ ಸಂಸ್ಥೆಯ ಕೇಂದ್ರ ಇಲ್ಲಿದೆ (1927). ಇಲ್ಲಿ ಕೊಡುವ ತರಬೇತಿಯು ಮಹಾರಾಷ್ಟ್ರದ ವರ್ಧಾದಲ್ಲಿರುವಂತೆಯೇ ಇದೆ. ನಂಜನಗೂಡಿನಿಂದ 14 ಕಿಮೀ ದೂರದಲ್ಲಿ ಚಾಮರಾಜನಗರ ರಸ್ತೆಯಲ್ಲಿ ದೇವನೂರು ಗ್ರಾಮ (ಜನ: 2,575)ವಿದೆ. ಇಲ್ಲಿನ ದಾಸೋಹ ವೀರಶೈವ ಮಠವು, ದೇವನೂರು ಮಠ ಎಂಬ ಹೆಸರಿನ ಖ್ಯಾತ ಗುರುಪೀಠವಾಗಿದ್ದು, ಅದು ಅನೇಕ ವಿದ್ಯಾಸಂಸ್ಥೆಗಳನ್ನೂ ಉಚಿತ ವಿದ್ಯಾರ್ಥಿನಿಲಯ ಗಳನ್ನೂ ನಡೆಸುತ್ತಿದೆ. ಇಲ್ಲಿ ಮಠದ ಸ್ವಾಮಿಗಳ ಗದ್ದುಗೆಗಳಿವೆ.

ನಂಜನಗೂಡಿಗೆ 13 ಕಿಮೀ ದೂರದಲ್ಲಿ ಹದಿನಾಡು ಎಂಬ ಹಳ್ಳಿಯಿದೆ. ಅದು ಹದಿನಾಡಿನ ಪಾಳೆಯಗಾರರ ಮುಖ್ಯ ಪಟ್ಟಣವಾಗಿತ್ತು. ಹೆಮ್ಮರಗಾಲದಲ್ಲಿರುವ ಗೋಪಾಲಕೃಷ್ಣ ದೇವಾಲಯವು ಬಹಳ ಆಕರ್ಷಕವಾದ ಹೊಯ್ಸಳ ದೇವಾಲಯ. ನಂಜನಗೂಡಿಗೆ ಸಮೀಪದಲ್ಲಿರುವ ಇಮ್ಮಾವು ಗ್ರಾಮದಲ್ಲಿ, ಗಂಗರ ಕಾಲದಲ್ಲಿ ನಿರ್ಮಿಸಲಾದ ರಾಮ-ಲಕ್ಷ್ಮಣರ ದೇವಾಲಯವಿದೆ. ಇಲ್ಲಿರುವ ಲಕ್ಷ್ಮಣನ ವಿಗ್ರಹವು ನಾಲ್ಕು ಭುಜಗಳಿಂದ ಕೂಡಿದೆ. ನಂಜನಗೂಡಿನಿಂದ ಏಳು ಕಿಮೀ ದೂರದಲ್ಲಿರುವ ಕಳಲೆ ಗ್ರಾಮವು ಮೈಸೂರು ಒಡೆಯರ ಅಧೀನದಲ್ಲಿದ್ದ ಕಳಲೆ ನಾಯಕರ ರಾಜಧಾನಿಯಾಗಿತ್ತು. ಇಲ್ಲಿ ಅನೇಕ ವೀರಗಲ್ಲುಗಳಿವೆ. ಇಲ್ಲಿರುವ ಲಕ್ಷ್ಮೀಕಾಂತ ದೇವಾಲಯವು ದ್ರಾವಿಡ ಶೈಲಿಯಲ್ಲಿದೆ. ಇಲ್ಲಿ ಪಟ್ಟದ ಚಾವಡಿ, ಮಾಸ್ತಿ ಗುಡಿ, ಮತ್ತು ಪಂಚಲಿಂಗೇಶ್ವರ ದೇವಾಲಯಗಳಿವೆ. ನಂಜನಗೂಡಿನಿಂದ 15 ಕಿಮೀ ದೂರದಲ್ಲಿ ನಗರ್ಲೆ ಎಂಬ ಗ್ರಾಮವಿದ್ದು, ಇಲ್ಲಿ ದುರ್ಗಾಪರಮೇಶ್ವರೀ ದೇವಾಲಯ ಮತ್ತು ಜೈನ ಬಸದಿಯ ಅವಶೇಷಗಳನ್ನೂ ನೋಡಬಹುದು. ತಗಡೂರು ನಂಜನಗೂಡಿಗೆ 14 ಕಿಮೀ ದೂರದಲ್ಲಿದೆ. ಇದು ತಗಡೂರು ಪಾಳೆಯಗಾರರ ಕೇಂದ್ರವಾಗಿತ್ತು. ಆ ಕಾಲದ ಮಣ್ಣಿನ ಕೋಟೆಯು ಈಗಲೂ ಇದೆ. ಒಂದು ಖಾದಿ ಗ್ರಾಮೋದ್ಯೋಗ ಕೇಂದ್ರ, ಗಾಂಧಿ ಆಶ್ರಮ, ದಾಸ್ತಾನು ಮಳಿಗೆ ಕೇಂದ್ರ ಇಲ್ಲಿವೆ. ಮಹಾತ್ಮಾ ಗಾಂಧಿಯವರು ಇಲ್ಲಿಗೆ ಭೇಟಿ ನೀಡಿದ್ದರು. ಇಲ್ಲಿರುವ ಲಕ್ಷ್ಮೀನಾರಾಯಣ ದೇವಾಲಯವು ವಿಶಾಲವಾಗಿದೆ. ಸಮೀಪದಲ್ಲೇ ಇರುವ ತಾಯೂರು ಎಂಬ ಹಳ್ಳಿಯಲ್ಲಿ ತೃಣಕೇಶ್ವರ ಮತ್ತು ಹನುಮಾನ್ ದೇವಾಲಯಗಳೂ ಮತ್ತು ಹದಿನೈದನೇಯ ಶತಮಾನದ ಒಂದು ಕೋಟೆಯೂ ಇವೆ. ಕಪಿಲಾ ನದಿಯ ಬಲದಂಡೆಯ ಮೇಲೆ ನಂಜನಗೂಡಿಗೆ ಪೂರ್ವದಲ್ಲಿ 18 ಕಿಮೀ ದೂರದಲ್ಲಿ, ಬಿಳಿಗೆರೆ ಹೋಬಳಿಗೆ ಸೇರಿದ ಸುತ್ತೂರು ಗ್ರಾಮವಿದೆ (ಜನ: 2,665). ಇದೊಂದು ಧಾರ್ಮಿಕ ಕೇಂದ್ರ. ಇಲ್ಲಿ ಸುತ್ತೂರು ಶಿವರಾತ್ರೀಶ್ವರ ಮಠವೆಂಬ ಪ್ರಖ್ಯಾತವಾದ ವೀರಶೈವ ದಾಸೋಹ ಮಠವಿದೆ. 1032ರ ಚೋಳರ ಶಾಸನ ಮತ್ತು 1169ರ ಹೊಯ್ಸಳರ ಶಾಸನಗಳಲ್ಲಿ, ಇದೊಂದು ಅಗ್ರಹಾರವಾಗಿದ್ದುದರಿಂದ ಇದನ್ನು ಶ್ರೋತ್ರಿಯೂರು ಎಂದು ಕರೆಯಲಾಗಿದೆ. ಇದಕ್ಕೆ ಪ್ರದಕ್ಷಿಣಪುರ ಎನ್ನುವ ಹೆಸರೂ ಇದ್ದಿತು. ವಿಜಯನಗರ ಶಾಸನಗಳಲ್ಲಿ ಇದನ್ನು ಸುತ್ತೂರು ಎಂದು ಕರೆಯಲಾಗಿದೆ. ಇದು ಹೊಯ್ಸಳ ದೊರೆ ಮೊದಲನೇಯ ನರಸಿಂಹನ ದಂಡನಾಯಕ ಲಕ್ಷ್ಮಯ್ಯನ ಆಡಳಿತ ಕೇಂದ್ರವಾಗಿತ್ತು. ಇಲ್ಲಿರುವ ಹೊಯ್ಸಳರ ಕಾಲದ ಸೋಮೇಶ್ವರ ದೇವಾಲಯದ ಒಂದು ಗರ್ಭಗೃಹದಲ್ಲಿ ಹರಿಹರೇಶ್ವರನ ವಿಗ್ರಹವಿದೆ. ವಿಗ್ರಹದ ಅಕ್ಕಪಕ್ಕಗಳಲ್ಲಿ ಪಾರ್ವತಿ ಮತ್ತು ಲಕ್ಷ್ಮಿಯರಿದ್ದಾರೆ. ಪೀಠದ ಮೇಲೆ ನಂದಿ ಮತ್ತು ಗರುಡರ ಶಿಲ್ಪಗಳಿವೆ. ಹೊಯ್ಸಳರ ಕಾಲದ ನಾರಾಯಣಸ್ವಾಮಿ ದೇವಾಲಯವು ಈಗ ಜೀರ್ಣಾವಸ್ಥೆಯಲ್ಲಿದೆ. ಇಲ್ಲಿ ವೀರಭದ್ರೇಶ್ವರ ದೇವಾಲಯ, ಮಾದೇಶ್ವರ ಮತ್ತು ಶಿವರಾತ್ರೀಶ್ವರ ಗುಡಿಗಳೂ ಇವೆ. ಇಲ್ಲಿ ಆದಿಗುರು ಶಿವರಾತ್ರೀಶ್ವರರ (ಇವರು 14-15 ನೇಯ ಶತಮಾನಗಳಲ್ಲಿ ಜೀವಿಸಿದ್ದರೆಂದು ಹೇಳಲಾಗಿದೆ) ಗದ್ದುಗೆಯಿದೆ. ಇದರ ಮೇಲೆ ಇತ್ತೀಚೆಗೆ ಸುಂದರವಾದ ದೇವಾಲಯವನ್ನು ನಿರ್ಮಿಸಲಾಗಿದೆ. ಈ ಮಠದ ಇತರ ಸ್ವಾಮಿಗಳ ಗದ್ದುಗೆಗಳೂ ಸುಂದರವಾದ ಪ್ರಾಕೃತಿಕ ವಾತಾವರಣದಲ್ಲಿ ನಿರ್ಮಿಸಲಾಗಿವೆ. ಜನವರಿಯಲ್ಲಿ ವಾರ್ಷಿಕ ಜಾತ್ರೆ ಮತ್ತು ದನಗಳ ಪರಿಷೆ ನಡೆಯುತ್ತದೆ. ಮಠವು ಅನೇಕ ವಿದ್ಯಾಸಂಸ್ಥೆಗಳನ್ನೂ (ಮೈಸೂರಿನಲ್ಲಿರುವ ಒಂದು ಇಂಜಿನಿಯರಿಂಗ್ ಕಾಲೇಜು ಮತ್ತು ಸಂಸ್ಕೃತ ಕಾಲೇಜುಗಳೂ ಸೇರಿದಂತೆ), ಬೆಂಗಳೂರಿನಲ್ಲಿರುವ ಒಂದು ಉಚಿತ ವಿದ್ಯಾರ್ಥಿನಿಲಯವೂ ಸೇರಿದಂತೆ ಅನೇಕ ಉಚಿತ ವಿದ್ಯಾರ್ಥಿನಿಲಯಗಳನ್ನು ನಿರ್ವಹಿಸುತ್ತಿದೆ.

**ನಂದಿಬೆಟ್ಟಗಳು :** (ಕೋಲಾರ ಜಿ; ಚಿಕ್ಕಬಳ್ಳಾಪುರ ತಾ.) ನಂದಿಬೆಟ್ಟ ಅಥವಾ ನಂದಿದುರ್ಗವು ಕೋಟೆಯನ್ನು ಹೊಂದಿರುವ ಖ್ಯಾತಬೆಟ್ಟ. ಇದು ಚಿಕ್ಕಬಳ್ಳಾಪುರ ತಾಲೂಕಿನ ಜನಪ್ರಿಯ ಗಿರಿಧಾಮ. ಇದು ಬೆಂಗಳೂರಿನಿಂದ 65 ಕಿಮೀ ದೂರದಲ್ಲಿದೆ. ಸಮುದ್ರಮಟ್ಟದಿಂದ ಇದರ ಗರಿಷ್ಠ ಎತ್ತರ 4,850 ಅಡಿಗಳು. ಉತ್ತರ ಪಾಲಾರ್, ದಕ್ಷಿಣ ಪೆನ್ನಾರ್, ಚಿತ್ರಾವತಿ, ಅರ್ಕಾವತಿ ಮತ್ತು ಪಾಪಘ್ನಿ ನದಿಗಳು ನಂದಿಬೆಟ್ಟಗಳಲ್ಲಿ ಹುಟ್ಟುತ್ತವೆ. ಇದನ್ನು ಶಾಸನಗಳಲ್ಲಿ ನಂದಗಿರಿ ಎಂದು ಕರೆಯಲಾಗಿದೆ. ನಂದಿಬೆಟ್ಟದಿಂದ ನಡೆದುಹೋಗಿ ನೋಡಬಹುದಾದ ಸ್ಥಳಗಳೆಂದರೆ, ವಾಯುವ್ಯದಲ್ಲಿ ಚೆನ್ನಕೇಶವ ಬೆಟ್ಟ (ಎತ್ತರ 4,762 ಅಡಿಗಳು); ನೈಋತ್ಯದಲ್ಲಿ ಬ್ರಹ್ಮಗಿರಿ (ಎತ್ತರ 4,657 ಅಡಿಗಳು) ಮತ್ತು ಉತ್ತರದಲ್ಲಿ ಸ್ಕಂಧಗಿರಿ (ಎತ್ತರ 4,749 ಅಡಿಗಳು); ಇವುಗಳಿಗೆ ಕೂಷ್ಮಾಂಡಗಿರಿ ಎಂದೂ ಹೆಸರು. ಏಕೆಂದರೆ ಪೌರಾಣಿಕ ಕಥೆಗಳು ಕೂಷ್ಮಾಂಡ ಋಷಿಯೊಂದಿಗೆ ಈ ಬೆಟ್ಟಗಳ ಸಂಬಂಧವನ್ನು ಕಲ್ಪಿಸುತ್ತವೆ. ಗಂಗರು ನಂದಗಿರಿನಾಥರೆಂಬ ಬಿರುದನ್ನು ಹೊಂದಿದ್ದರು. ಈ ಬೆಟ್ಟವು ಜೈನರಿಗೂ ಪೂಜ್ಯ ಸ್ಥಳವಾಗಿದ್ದಿದ್ದಂತೆ ಕಾಣುತ್ತದೆ. ಪಾಳುಬಿದ್ದಿರುವ, ದಕ್ಷಿಣದ ಪ್ರಪಾತದ ತುದಿಯಲ್ಲಿರುವ ಹೋಗಲು ಸಾಧ್ಯವಿಲ್ಲದಿರುವ ಒಂದು ಬಾವಿಗೆ ಶ್ರವಣತೀರ್ಥವೆಂಬ ಹೆಸರಿದ್ದಿತು. ಗೋಪೀನಾಥ ಬೆಟ್ಟದ ಈಶಾನ್ಯದಲ್ಲಿ ಪ್ರಾಚೀನ ಜೈನಶಾಸನವೊಂದಿದೆ. ಚೋಳರ ಕಾಲದಲ್ಲಿ ನಂದಗಿರಿ ಎಂಬ ಹೆಸರು ನಂದಿಗಿರಿ ಎಂದು ಬದಲಾಯಿಸಲ್ಪಟ್ಟಿತು. ಪ್ರಾಯಶಃ ಈ ಬೆಟ್ಟದ ಮೇಲೆ ಮೊಟ್ಟಮೊದಲು ಚಿಕ್ಕಬಳ್ಳಾಪುರದ ಪಾಳೆಯಗಾರರು, ಅನಂತರ ಹೈದರ್ ಮತ್ತು ಟಿಪ್ಪು ಕೋಟೆಯನ್ನು ಕಟ್ಟಿದರು. ಸ್ವಲ್ಪ ಕಾಲದವರೆಗೆ ಇದು ಮರಾಠರ ಅಧೀನದಲ್ಲಿತ್ತು. ನೈಋತ್ಯದಲ್ಲಿರುವ ಪ್ರಪಾತಕ್ಕೆ ಟಿಪ್ಪು ಪ್ರಪಾತ ('ಡ್ರಾಪ್') ಎಂದು ಹೆಸರಿದೆ. ಏಕೆಂದರೆ ಮರಣ ಶಿಕ್ಷೆಗೊಳಗಾದವರನ್ನು ಈ ಪ್ರಪಾತದ ತುದಿಯಿಂದ ಕೆಳಕ್ಕೆ ತಳ್ಳುತ್ತಿದ್ದರು.

ಇದಕ್ಕೆ ಸ್ವಲ್ಪ ಸಣ್ಣದಾಗಿರುವ ಉತ್ತರ ಭಾಗದ ಮತ್ತು ನಂದಿಗೆ ಹತ್ತಿರದಲ್ಲಿ ಉತ್ತರಕ್ಕಿರುವ ಬೆಟ್ಟವನ್ನು ಹೈದರ್ ಪ್ರಪಾತ ('ಡ್ರಾಪ್') ಎಂದು ತೋರಿಸುತ್ತಾರೆ. 1791ರಲ್ಲಿ ದುರ್ಗವು ವಾದ ಕೋಟೆಯನ್ನು ಲಾರ್ಡ್ ಕಾರ್ನ್‌ವಾಲೀಸನ ನೇತೃತ್ವದಲ್ಲಿ ಬ್ರಿಟಿಷರು ಆಕ್ರಮಿಸಿಕೊಂಡರು. ಇದನ್ನು ಬೇಸಿಗೆಯ ತಂಗು ದಾಣವಾಗಿ ಬೆಂಗಳೂರಿನ ಬ್ರಿಟಿಷ್ ಅಧಿಕಾರಿಗಳು ಉಪಯೋಗಿಸಿದರು. ಅದಕ್ಕೆ ಮುಂಚೆ ನಂದಿಯು ಬ್ರಿಟಿಷರ ಮಿಲಿಟರಿ ನಿಲ್ದಾಣವಾಗಿತ್ತು. ಇದೇ ಸಮಯದಲ್ಲಿ ದೊಡ್ಡ ಕೊಳದ ಸಮೀಪದಲ್ಲಿ ಕರ್ನಲ್ ಕಪ್ಪೇಜನಿಂದ ಮೊದಲನೇಯ ಉದ್ಯಾನವು ಬೆಳೆಸಲ್ಪಟ್ಟಿತು. ಅನಂತರ ಕರ್ನಲ್ ಹಿಲ್, ಸರ್ ಮಾರ್ಕ್ ಕಬ್ಬನ್ ಮತ್ತು ಕ್ಯಾಪ್ಟನ್ ಕನ್ನಿಂಗ್‌ಹ್ಯಾಂ ಅವರುಗಳು ಬೆಟ್ಟದ ಮೇಲೆ ವಾಸಗೃಹಗಳನ್ನು ನಿರ್ಮಿಸಿದರು. ಗಾಂಧೀಜಿಯವರು ನಂದಿಬೆಟ್ಟದಲ್ಲಿ ತಂಗಿದ್ದುದರ ಜ್ಞಾಪಕಾರ್ಥವಾಗಿ ಕನ್ನಿಂಗ್‌ಹ್ಯಾಂ ಲಾಡ್ಜಿಗೆ ಗಾಂಧಿ ನಿಲಯ ಎಂಬ ಹೆಸರನ್ನು ಕೊಡಲಾಯಿತು. ಪಶ್ಚಿಮಕ್ಕೆ ಇಳಿಜಾರಾಗಿರುವ ಪ್ರಸ್ಥಭೂಮಿಯ ಮಧ್ಯದಲ್ಲಿ ದೊಡ್ಡದಾದ ಹಳ್ಳವಿದ್ದು, ಅಲ್ಲಿ ನಿರ್ಮಿಸಲಾಗಿರುವ ಕೊಳಕ್ಕೆ ಅಮೃತ ಸರೋವರವೆಂದು ಹೆಸರು. ಸುಮಾರು 50 ಗಜ ದೂರದಲ್ಲಿರುವ ಜಗಲಿಯ ಮೇಲೆ ಟಿಪ್ಪುಸುಲ್ತಾನನು ನಮಾಜ್ ಮಾಡುತ್ತಿದ್ದನೆಂದು ಹೇಳಲಾಗಿದೆ. ಅವನು ಇಲ್ಲಿ ವಾಸಮಾಡುತ್ತಿದ್ದ ಕಟ್ಟಡವನ್ನು ಟಿಪ್ಪು ಲಾಡ್ಜ್ ಎಂದು ಸಂರಕ್ಷಿಸಲಾಗಿದೆ. ಯೋಗನಂದೀಶ್ವರನಿಗಾಗಿ ಕಟ್ಟಲಾದ ಚೋಳರ ಕಾಲದ ದೇವಾಲಯವೂ ಇಲ್ಲಿದೆ. ಅದರಲ್ಲಿ ಶಿವಾಜಿಯ ಮಗನಾದ ಸಂಭಾಜಿಯ ಶಾಸನವೊಂದಿದೆ. ಈ ಗಿರಿಧಾಮದಲ್ಲಿ ವರ್ಷ ಪೂರ್ತಿ ಹಿತವಾದ ವಾತಾವರಣವಿರುತ್ತದೆ. ಬೇಸಿಗೆಕಾಲ ಮತ್ತು ಚಳಿಗಾಲದಲ್ಲಿ ಇಲ್ಲಿನ ಗರಿಷ್ಠ ಮತ್ತು ಕನಿಷ್ಠ ಉಷ್ಣಾಂಶವು 29°ರಿಂದ 23° ಸೆಂ. ಗ್ರೇ. ಮತ್ತು 21°ರಿಂದ 11° ಸೆಂ. ಗ್ರೇ. ಗಳಾಗಿರುತ್ತವೆ. ಈ ಬೆಟ್ಟದ ಮೇಲಿನ ತುದಿಯಿಂದ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳ ವಿಶಾಲ ದೃಶ್ಯ ಕಾಣಿಸುತ್ತದೆ. ಈ ಬೆಟ್ಟಗಳ ಸುತ್ತಮುತ್ತ ಮತ್ತು ಅಕ್ಕಪಕ್ಕದಲ್ಲಿರುವ ರಕ್ಷಿತ ಅರಣ್ಯದಲ್ಲಿ ಅನೇಕ ವನ್ಯಮೃಗಗಳಿವೆ. ತೋಟಗಾರಿಕೆ ಇಲಾಖೆ ಮತ್ತು ಪ್ರವಾಸೋದ್ಯಮ ಇಲಾಖೆಗಳ ಆಶ್ರಯದಲ್ಲಿ ಅನೇಕ ವಸತಿಗೃಹಗಳಿವೆ. ಚಿಕ್ಕಬಳ್ಳಾಪುರದಿಂದ ಏಳು ಕಿಮೀ ದೂರದಲ್ಲಿ, ನಂದೀದುರ್ಗದ ಈಶಾನ್ಯ ಭಾಗದಲ್ಲಿರುವ ನಂದಿ ಗ್ರಾಮವು ಅದೇ ಹೆಸರಿನ ಹೋಬಳಿಯ ಕೇಂದ್ರವೂ ಆಗಿದೆ. ಈ ಪಟ್ಟಣವು ಆವತಿ ಪ್ರಭುಗಳಿಂದ ಸ್ಥಾಪಿಸಲ್ಪಟ್ಟಿತಾದರೂ, ಇಲ್ಲಿರುವ ಭೋಗ ನಂದೀಶ್ವರ ದೇವಾಲಯದ ಅಂಗಳದಲ್ಲಿ ಕಾಣಸಿಗುವ ಚೋಳ ಮತ್ತು ಪಲ್ಲವ ಶಾಸನಗಳಿಂದ, ಇದು ಪ್ರಾಚೀನವಾದುದೆಂದು ಗೊತ್ತಾಗುತ್ತದೆ. ಇಲ್ಲಿರುವ ದೇವಾಲಯಗಳಲ್ಲೊಂದಾದ ಭೋಗ ನಂದೀಶ್ವರ ದೇವಾಲಯವನ್ನು ಬಾಣವಂಶದ ರಾಣಿ ರತ್ನಾವಳಿಯು 806ರಲ್ಲಿ ಕಟ್ಟಿಸಿದಳು. ಈ ಸ್ಥಳವು ಕೆಲವು ಕಾಲ ಬ್ರಿಟೀಷರ ಮಿಲಿಟರಿ ಕೇಂದ್ರವಾಗಿತ್ತು. 1799ರಿಂದ 1808ರ ವರೆಗೆ ಬ್ರಿಟಿಷರು ಇಲ್ಲಿ ಸೇನಾ ತುಕಡಿಯನ್ನು ಇಟ್ಟಿದ್ದರು. ಇಡೀ ರಾಜ್ಯದಲ್ಲಿ ಅತ್ಯಂತ ಮುಖ್ಯವಾದ ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಒಂದಾದ ಭೋಗನಂದೀಶ್ವರ ದೇವಾಲಯದಿಂದ ನಂದಿ ಗ್ರಾಮವು ಪ್ರಖ್ಯಾತಿಹೊಂದಿದೆ. ಮೂಲ ದೇವಾಲಯವು ಒಂಬತ್ತನೇಯ ಶತಮಾನಕ್ಕಿಂತ ಪ್ರಾಚೀನವಾಗಿದ್ದು, ಅನಂತರ ಸೇರಿಸಲಾದ ಭಾಗಗಳು ಚೋಳ, ಹೊಯ್ಸಳ ಮತ್ತು ವಿಜಯನಗರ ಕಾಲಕ್ಕೆ ಸೇರುತ್ತವೆ. ಭೋಗನಂದೀಶ್ವರ ದೇವಾಲಯ ಸಂಕೀರ್ಣದಲ್ಲಿ ಎರಡು ಪ್ರತ್ಯೇಕ ಗರ್ಭಗೃಹಗಳು ಒಂದೇ ಸಾಲಿನಲ್ಲಿದ್ದು, ಅವುಗಳ ಮುಂದೆ ಎರಡು ನಂದಿಮಂಟಪಗಳೂ, ಅವುಗಳಲ್ಲಿ ಒಂದರ ಮುಂದೆ ಒಂದು ಸಣ್ಣ ಗರ್ಭಗೃಹವೂ ಇವೆ. ಉತ್ತರ ಭಾಗದ ದೇವಾಲಯವು ಭೋಗನಂದೀಶ್ವರನಿಗಾಗಿಯೂ ದಕ್ಷಿಣದ ದೇವಾಲಯವು ಅರುಣಾಚಲೇಶ್ವರನಿಗೂ ಸಮರ್ಪಿತವಾಗಿವೆ. ಇವುಗಳಲ್ಲಿರುವ ಜಾಲಂಧ್ರಗಳು ಉತ್ತಮ ಕಲಾತ್ಮಕತೆಯನ್ನು ಪ್ರದರ್ಶಿಸುತ್ತವೆ. ಒಟ್ಟಿನಲ್ಲಿ ದೇವಾಲಯವು ಶಿಲ್ಪ ಮತ್ತು ಶಾಸನಗಳಿಂದ ಶ್ರೀಮಂತವಾಗಿದೆ. ಹೊಸ ಭಾಗಗಳು ಹೊಯ್ಸಳ ಮತ್ತು ವಿಜಯನಗರ ಕಾಲದಲ್ಲಿ ಸೇರಿಸಲ್ಪಟ್ಟವು. ಹೊರಗಿನ ಮಂಟಪಗಳು ವಿಜಯನಗರ ಶೈಲಿಯಲ್ಲಿವೆ.

ನಗರ : (ಶಿವಮೊಗ್ಗ ಜಿ; ಹೊಸನಗರ ತಾ; ಜನ: 2,077) ಮೂಲತಃ ಬಿದರಹಳ್ಳಿ ಎಂಬ (ಬಿದಿರಿನ ಹಳ್ಳಿ) ಸಣ್ಣ ಗ್ರಾಮವಾಗಿದ್ದ ನಗರವನ್ನು ಕೆಲವು ಬಾರಿ ಮೂಡುಗೊಪ್ಪ ಮತ್ತು ವೇಣುಪುರ ಎಂಬ ಹೆಸರುಗಳಿಂದ ಕರೆದಿರುವುದೂ ಉಂಟು. ಹೊಸನಗರಕ್ಕೆ 15 ಕಿಮೀ ದಕ್ಷಿಣದಲ್ಲಿ ಶಿವಮೊಗ್ಗದಿಂದ ಪಶ್ಚಿಮಕ್ಕೆ 86 ಕಿಮೀ ದೂರದಲ್ಲಿರುವ ನಗರವು, ಬಿದನೂರು ಎಂಬ ಹೆಸರಿನಿಂದ ಈ ನಾಯಕರ ರಾಜಧಾನಿಯಾಗಿತ್ತು. 1639ರಲ್ಲಿ ಕೆಳದಿ ನಾಯಕರು ಇಕ್ಕೇರಿಯಿಂದ ರಾಜಧಾನಿಯನ್ನು ಇಲ್ಲಿಗೆ ಬದಲಾಯಿಸಿದರು. ಹೈದರ್ ಅಲಿಯು 1763ರಲ್ಲಿ ಇದನ್ನು ಗೆದ್ದುಕೊಂಡು ಹೈದರ್ ನಗರವೆಂಬ ಹೊಸ ಹೆಸರನ್ನು ಕೊಟ್ಟನು. ಕಾಲಕ್ರಮದಲ್ಲಿ ಈ ಸ್ಥಳಕ್ಕೆ ನಗರವೆಂಬ ಹೆಸರು ಬಂದಿತು. ಹೈದರನು ಇಲ್ಲಿಯ ಕೋಟೆಯ ಹೊರಗೆ ಒಂದು ಅರಮನೆಯನ್ನು ನಿರ್ಮಿಸಿದನು. ಆಯುಧಗಳ ಮತ್ತು ಮದ್ದುಗುಂಡುಗಳ ತಯಾರಿಕೆಗೋಸ್ಕರ ತನ್ನ ಪ್ರಧಾನ ತೋಫಖಾನೆಯನ್ನೂ ಸ್ಥಾಪಿಸಿದನು. ಅವನು ಇಲ್ಲಿ ಒಂದು ಟಂಕಶಾಲೆಯನ್ನೂ ಸ್ಥಾಪಿಸಿ ಹೈದರಿ ಪಗೋಡ ನಾಣ್ಯಗಳನ್ನು ಟಂಕಿಸಿದನು. 1830-31ರಲ್ಲಿ ನಡೆದ ದಂಗೆಗೆ ನಗರವೇ ಮುಖ್ಯ ಕೇಂದ್ರವಾಗಿತ್ತು. 1893ರವರೆಗೆ ನಗರವು ತಾಲೂಕು ಕೇಂದ್ರವಾಗಿತ್ತು. ಅನಂತರ ಅದು ಕಲ್ಲೂರುಕಟ್ಟೆಗೆ ಬದಲಾಯಿಸಲ್ಪಟ್ಟು ಹೊಸನಗರವೆಂಬ ಹೆಸರನ್ನು ಪಡೆಯಿತು. ಇಲ್ಲಿರುವ ಶಿವಪ್ಪನಾಯಕನ ಕೋಟೆಯು ಕೇಂದ್ರಸರ್ಕಾರದಿಂದ ರಕ್ಷಿಸಲ್ಪಟ್ಟ ಮುಖ್ಯವಾದ ಸ್ಮಾರಕವಾಗಿದ್ದು ಇದಕ್ಕೆ ಎತ್ತರವಾದ

ಹೆಬ್ಬಾಗಿಲಿದ್ದು, ಹೆಬ್ಬಾಗಿಲಿಗೆ ಊರೆಯಾಗಿ ಎರಡು ವೃತ್ತಾಕಾರದ ಕೊತ್ತಲಗಳಿವೆ. ಇದರ ಎಡಭಾಗದಲ್ಲಿ ದಿಡ್ಡಿಬಾಗಿಲಿದೆ. ಕೋಟೆಗೆ ನೇರವಾಗಿ ಉತ್ತರದಲ್ಲಿ ನೈಋತ್ಯಮುಖವಾಗಿ ವಿಶಾಲ ಆವಾರವಿದೆ. ಇದರಲ್ಲಿ ಅರಮನೆಯ ಅವಶೇಷಗಳಿವೆ. ನಗರದಲ್ಲಿರುವ ನೀಲಕಂಠೇಶ್ವರ ದೇವಾಲಯದಲ್ಲಿ ಗರ್ಭಗೃಹ, ಅಗಲವಾದ ಶುಕನಾಸಿ, ವಿಶಾಲವಾದ ನವರಂಗ ಮತ್ತು ಎತ್ತರವಾದ ಎರಡು ಜಗತಿಗಳಿವೆ. ಆಂಜನೇಯ ದೇವಾಲಯದಲ್ಲಿ ಎತ್ತರವಾದ ಜಗಲಿಯೂ, ಒಳ್ಳೆಯ ಕೆತ್ತನೆಯನ್ನು ಪ್ರದರ್ಶಿಸುವ ಎರಡು ಆನೆಗಳೂ ಇವೆ. ಗುಡ್ಡೆ ವೆಂಕಟರಮಣ ದೇವಾಲಯದಲ್ಲಿ ಗರ್ಭಗೃಹ ಮತ್ತು ಮುಖಮಂಟಪಗಳು ಮಾತ್ರ ಇವೆ. ಗರ್ಭಗೃಹದ ಬಾಗಿಲುವಾಡವು ಪ್ರಾಚೀನವಾಗಿದ್ದು ಹೊಯ್ಸಳರ ಕಾಲಕ್ಕೆ ಸೇರುತ್ತದೆ. ಈ ಊರಿನಿಂದ ಒಂದು ಕಿಮೀ ದೂರದಲ್ಲಿ ಉತ್ತರದಲ್ಲಿ ಕುದುರೆ ಲಾಳಾಕೃತಿಯ ಕೊಳ್ಳದಲ್ಲಿ ನೈಜವಾದ ಒಂದು ತೊರೆಯಿದೆ. ಇಲ್ಲಿ ದೇವಗಂಗಾ ಕೊಳಗಳು ಸುಂದರವಾದ ತಾಣದಲ್ಲಿವೆ. ಈ ಏಳು ಕೊಳಗಳು ಕೆಳದಿ ನಾಯಕರ ಜಲಕ್ರೀಡೆಯ ಸ್ಥಳವಾಗಿದ್ದವು. ಈಗ ಅವು ಕೇಂದ್ರದಿಂದ ರಕ್ಷಿಸಲ್ಪಟ್ಟ ಸ್ಮಾರಕಗಳಾಗಿವೆ.

ನರಸಿಂಹರಾಜಪುರ : (ಚಿಕ್ಕಮಗಳೂರು ಜಿ; ತಾ. ಕೇ; ಜನ: 6,102) ಪ್ರಾಚೀನ ಕಾಲದಲ್ಲಿ ಯೆಡೆಹಳ್ಳಿ ಎಂದು ಕರೆಯಲಾಗುತ್ತಿದ್ದ ನರಸಿಂಹರಾಜಪುರವು ಬೆಂಗಳೂರಿಗೆ ವಾಯುವ್ಯದಲ್ಲಿ ಸುಮಾರು 330 ಕಿಮೀ ದೂರದಲ್ಲಿದೆ. 1882ರವರೆಗೆ ಇದು ಲಕ್ಕವಳ್ಳಿ ತಾಲೂಕಿನ ಕೇಂದ್ರವಾಗಿತ್ತು. ಅನಂತರ 1897ರವರೆಗೆ ಯೆಡೆಹಳ್ಳಿ ಉಪತಾಲೂಕಿನ ಕೇಂದ್ರವಾಗಿತ್ತು. ಇಲ್ಲಿ ವೀರಶೈವ ಮಠದವರು ಯಾತ್ರಿಕರಿಗೆ ಊಟವನ್ನು (ಯೆಡೆ) ಒದಗಿಸುತ್ತಿದ್ದುದರಿಂದ, ಈ ಸ್ಥಳಕ್ಕೆ ಯೆಡೆಹಳ್ಳಿ ಎಂಬ ಹೆಸರು ಬಂದಿತು. ಹೊಸ ಹೆಸರಾದ ನರಸಿಂಹರಾಜಪುರವು ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಅವರು ಈ ಸ್ಥಳಕ್ಕೆ 1915ರಲ್ಲಿ ಭೇಟಿಕೊಟ್ಟಿದುದರ ಜ್ಞಾಪಕಾರ್ಥವಾಗಿ ಬಂದಿತು. ಇಲ್ಲಿರುವ ಶಿಥಿಲವಾಗಿರುವ ಕೋಟೆಯು ಹದಿನಾರನೇಯ ಶತಮಾನದಲ್ಲಿ ಕೆಳದಿ ನಾಯಕರ ಆಶ್ರಯದಲ್ಲಿತ್ತು. ಇದು ಭಾರತದಲ್ಲಿ ಈಗ ಉಳಿದು ಬಂದಿರುವ ಹನ್ನೊಂದು ಭಟ್ಟಾರಕ ಕೇಂದ್ರಗಳಲ್ಲಿ ಒಂದಾಗಿದೆ. ಇಲ್ಲಿನ ಕೇಂದ್ರದ ಭಟ್ಟಾರಕರ ಸಾಂಪ್ರದಾಯಿಕ ಹೆಸರು ಲಕ್ಷ್ಮೀಸೇನ. ನರಸಿಂಹರಾಜಪುರಕ್ಕೆ ಸಮೀಪದಲ್ಲಿರುವ ಸಿಂಗನಗದ್ದೆಯಲ್ಲಿ ಮೂರು ಬಸದಿಗಳು ಮತ್ತು ಒಂದು ಜೈನ ಮಠವೂ ಇದೆ. ಸಿಂಗನಗದ್ದೆಯು ಇಡೀ ರಾಜ್ಯದಲ್ಲಿ ಜೈನರ ಪ್ರಮುಖ ಯಾತ್ರಾಸ್ಥಳಗಳಲ್ಲೊಂದು. ಸಂತ ಥೆರೇಸ ಚರ್ಚು ಮತ್ತು ಲಿಟ್ಲ್ ಫ್ಲವರ್ ಕ್ಯಾಥಲಿಕ್ ಚರ್ಚು ಎಂಬ ಎರಡು ರೋಮನ್ ಕ್ಯಾಥಲಿಕ್ ಚರ್ಚುಗಳು ಇಲ್ಲಿವೆ. ನರಸಿಂಹರಾಜಪುರದಿಂದ 26 ಕಿಮೀ ದೂರದಲ್ಲಿರುವ ಹೆಬ್ಬೆಯು ಭದ್ರಾ ನದಿಯ ತೀರದಲ್ಲಿರುವ ಪಂಚಕ್ಷೇತ್ರಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ. ಅದು ಹೇರಂಬ ಕ್ಷೇತ್ರವೆಂದೂ ಪ್ರಖ್ಯಾತವಾಗಿದ್ದು ಇಲ್ಲಿ ಪ್ರಾಚೀನ ಭವಾನಿ ಶಂಕರ ದೇವಾಲಯವಿದೆ. ಇಲ್ಲಿಗೆ ಒಂದು ಕಿಮೀ ದೂರದಲ್ಲಿರುವ ಹೆಬ್ಬೆಟ್ಟದಲ್ಲಿ ತ್ರಿಕೋನಮಿತಿಯ ಕೇಂದ್ರವಿದೆ. ಇಲ್ಲಿ ಭದ್ರಾ ವನ್ಯಮೃಗ ಅಭಯಾರಣ್ಯವೂ ಇದೆ. ಹೆಬ್ಬೆಯಲ್ಲಿ ಈಗ ಮೂಲ ಅನುಕೂಲಗಳಿಲ್ಲದಿದ್ದರೂ, ಮುಂದೆ ಅದೊಂದು ಪ್ರವಾಸ ಕೇಂದ್ರವಾಗುವ ಸಾಧ್ಯತೆ ಇದೆ.

ನರಗುಂದ : (ಧಾರವಾಡ ಜಿ; ತಾ. ಕೇ; ಜನ: 23,531) ಹಿಂದೆ ಪೇಟಾ ಕೇಂದ್ರವಾಗಿದ್ದು, ಈಗ ತಾಲೂಕಿನ ಕೇಂದ್ರವಾಗಿರುವ ನರಗುಂದವು ಬೆಂಗಳೂರಿನಿಂದ ವಾಯುವ್ಯದಲ್ಲಿ ಸುಮಾರು 469 ಕಿಮೀ ಹಾಗೂ ಧಾರವಾಡದಿಂದ ಈಶಾನ್ಯದಲ್ಲಿ 78 ಕಿಮೀ ದೂರದಲ್ಲಿಯೂ ಇದೆ. ಇಲ್ಲಿನ ಪುರಸಭೆಯನ್ನು 1871ರಲ್ಲಿ ರಚಿಸಲಾಯಿತು. ಊರಿಗೆ ಈಗಿರುವ ಹೆಸರಿನ ಬಗೆಗೆ ಅನೇಕ ಕುತೂಹಲಕಾರಿ ಕಥೆಗಳು ಪ್ರಚಾರದಲ್ಲಿವೆ. ಡಾ|| ಪಿ.ಬಿ. ದೇಸಾಯಿಯವರ ಪ್ರಕಾರ ಈಗಿನ ಹೆಸರು ನಾರು (ಸುಗಂಧಿತ) ಕುನ್ರ (ಕುನ್ರ ಅಥವಾ ಕುಂದ ಅಂದರೆ ಎತ್ತರದ ಜಾಗ) ಎಂಬುದಾಗಿ ವಿಕಾಸ ಹೊಂದಿತು. ಪ್ರಾಚೀನ ಕಾಲದಲ್ಲಿ ಈ ಎತ್ತರದ ಪ್ರದೇಶವು ಸುವಾಸನಾ ಭರಿತವಾಗಿದ್ದು ಜನಗಳು ಇಲ್ಲಿ ಬಂದು ವಾಸ ಮಾಡಲು ಆಕರ್ಷಣೆಯಾಗಿರಬೇಕು. ಮತ್ತೊಂದು ಕಥೆಯ ಪ್ರಕಾರ ಈ ಸ್ಥಳದ ಹೆಸರು ನರಿ ಎಂಬ ಪದದಿಂದ ಬಂದಿರಬಹುದು. ಪ್ರಾಚೀನ ಕಾಲದಲ್ಲಿ ಇದು ಬೆಳ್ವೊಲ 300 ಎಂಬ ಪ್ರಾಂತದ ಭಾಗವಾಗಿದ್ದು 220 ಮಹಾಜನಗಳನ್ನೊಳಗೊಂಡ ಖ್ಯಾತ ಅಗ್ರಹಾರವಾಗಿತ್ತು. ಇಲ್ಲಿ ಕಲ್ಯಾಣಿ ಚಾಳುಕ್ಯರ ಕಾಲದ ಮೂರು ಶಾಸನಗಳಿವೆ. ನರಗುಂದದ ಆಧುನಿಕ ಇತಿಹಾಸವು 1674ರಲ್ಲಿ ಇಲ್ಲಿ ಶಿವಾಜಿಯು ಕೋಟೆಯನ್ನು ಕಟ್ಟಿಸಿದ ಕಾಲದಿಂದ ಪ್ರಾರಂಭವಾಗುತ್ತದೆ. ಹೈದರನು ಕೃಷ್ಣಾನದಿಯ ದಕ್ಷಿಣ ಭಾಗವನ್ನೆಲ್ಲ 1778ರಲ್ಲಿ ತನ್ನ ವಶಕ್ಕೆ ತೆಗೆದುಕೊಂಡ ನಂತರ, ನರಗುಂದದ ನಾಯಕನಾಗಿದ್ದ ಭಾವೆಯು ತಾತ್ಕಾಲಿಕವಾಗಿ ಅವನ ಅಧಿಪತ್ಯವನ್ನು ಒಪ್ಪಿಕೊಂಡನು. 1785ರಲ್ಲಿ ಟಿಪ್ಪುಸುಲ್ತಾನನು ನರಗುಂದ ಮತ್ತು ರಾಮದುರ್ಗಗಳನ್ನು ಗೆದ್ದುಕೊಂಡನು. ಅನಂತರ ಟಿಪ್ಪುವು ವೆಂಕಟರಾವ್ ಮತ್ತು ಅವನ ಕುಟುಂಬದವರನ್ನು ಬಂಧಿಗಳಾಗಿ ಮಾಡಿದನು. 1787ರಲ್ಲಿ ಮರಾಠರಿಗೂ ಮತ್ತು ಟಿಪ್ಪುವಿಗೂ ಏರ್ಪಟ್ಟ ಒಪ್ಪಂದದ ಪ್ರಕಾರ, ನರಗುಂದವು ಮರಾಠರಿಗೆ ಸೇರಿತು ಮತ್ತು ಅದು ಅವರ ತೊರಗಲ್ ಜಿಲ್ಲೆಯ ಭಾಗವಾಯಿತು. ಬ್ರಿಟಿಷರು 1816ರಲ್ಲಿ ಪೇಶ್ವೆಗಳ ರಾಜ್ಯವನ್ನು ಗೆದ್ದುಕೊಂಡುದರ ಪರಿಣಾಮವಾಗಿ, ನರಗುಂದವು ದಾದಾಜಿರಾವ್ ಅಪ್ಪಾನಿಗೆ ಕೊಡಲ್ಪಟ್ಟಿತು. 1857ರಲ್ಲಿ ಭಾಸ್ಕರರಾವ್ (ಬಾಬಾ ಸಾಹೇಬ್ 1842-58) ನರಗುಂದ ಮುಖಂಡನಾಗಿದ್ದನು. 'ಬೊಂಬಾಯಿ ಕರ್ನಾಟಕದ ಮಾಂಡಲಿಕರಲ್ಲಿಯೇ ಅತ್ಯಂತ ಬುದ್ಧಿವಂತ'ನೆಂದು ಇವನನ್ನು ವರ್ಣಿಸಲಾಗಿದೆ. ಇವನು ಬ್ರಿಟಿಷರಿಗೆ ವಿಧೇಯನಾಗಿದ್ದರೂ

ಕೂಡ, ದತ್ತು ತೆಗೆದುಕೊಳ್ಳುವ ಇವನ ಕೋರಿಕೆಯನ್ನು ಅವರು ತಿರಸ್ಕರಿಸಿದುದರಿಂದ, ಇವನು ಅವರ ಮೇಲೆ 1858ರಲ್ಲಿ ದಂಗೆ ಎದ್ದನು. ಬಾಬಾ ಸಾಹೇಬನ ಪರಾಜಯದ ನಂತರ ಬ್ರಿಟಿಷರು ನರಗುಂದವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ನರಗುಂದದ ಪ್ರಾಚೀನ ಅವಶೇಷಗಳಲ್ಲಿ ಹೆಸರಿಸಬೇಕಾದವು ಶಾಸನಗಳಿರುವ ವಿಶಾಲವಾದ ಶಂಕರಲಿಂಗ ದೇವಾಲಯ, ಮಹಾಬಲೇಶ್ವರ ಮತ್ತು ದಂಡೇಶ್ವರ ದೇಗುಲಗಳು, ಶಾಸನಗಳಿರುವ ಜೋಡಿ ಹನುಮಂತ ದೇವಾಲಯ ಮತ್ತು ರಾಮದುರ್ಗದ ಸ್ಥಾಪಕನಾದ ರಾಮರಾಯನಿಂದ 1720ರಲ್ಲಿ ನಿರ್ಮಿತವಾದ ವೆಂಕಟೇಶ್ವರ ದೇವಾಲಯ. ಇಲ್ಲಿರುವ ಇತರ ದೇವಾಲಯಗಳೆಂದರೆ ನಗರೇಶ್ವರ, ಮೈಲಾರಲಿಂಗ, ಮಲ್ಲಿಕಾರ್ಜುನ, ಬಸವಣ್ಣ, ಸಿದ್ದೇಶ್ವರದ ಜೊತೆಗೆ ಹೆಸರಾಂತ ಮಠಗಳಾದ ಶಂಭುಲಿಂಗೇಶ್ವರ, (ಪತ್ರಿವನ) ವಿರಕ್ತ ಮಠ ಮತ್ತು ಹಿರೇಮಠ. ನರಗುಂದ ಸಂಸ್ಥಾನಿಕರ ಇನ್ನೂರು ವರ್ಷಗಳಿಗೂ ಹಳೆಯದಾದ ಭಿತ್ತಿ ಚಿತ್ರಗಳಿರುವ ಅರಮನೆಯು ಈಗ ಪುರಸಭೆಯ ಕಾರ್ಯಾಲಯ ವಾಗಿ ಪರಿವರ್ತಿತವಾಗಿದೆ. ಇಲ್ಲಿರುವ ಅನೇಕ ಮಸೀದಿಗಳಲ್ಲಿ ಜುಮ್ಮಾ, ಫತೆ ಮತ್ತು ನಗೋಣ್ ಮಸೀದಿಗಳು ಮುಖ್ಯವಾದವು. ಇಡೀ ಜಿಲ್ಲೆಯಲ್ಲಿ ಇದು ಹತ್ತಿಯ ವ್ಯಾಪಾರ ಕೇಂದ್ರಗಳ ಲ್ಲೊಂದು. ಮಲಪ್ರಭಾ ಯೋಜನೆಯಿಂದ ಉಂಟಾಗಿರುವ ನೀರಾವರಿ ಸೌಲಭ್ಯಗಳು ಈ ಪ್ರದೇಶಕ್ಕೆ ವರವಾಗಿ ಪರಿಣಮಿಸಿದೆ. ಇದರಿಂದಾಗಿ ಇಲ್ಲಿನ ರೈತರಲ್ಲಿ ಒಂದು ಹೊಸ ಸಾಮಾಜಿಕ ಜಾಗೃತಿ ಉಂಟಾಗಿದೆ. 1980ರಲ್ಲಿ ನರಗುಂದ-ನವಲುಗುಂದ ಪ್ರದೇಶವು ಕೇಂದ್ರ ಬಿಂದುವಾಗಿ, ಕರ್ನಾಟಕದಲ್ಲಿ ರೈತರ ಚಳವಳಿ ಯನ್ನು ವ್ಯವಸ್ಥೆ ಮಾಡುವುದರಲ್ಲಿ ಮತ್ತು ಮುನ್ನಡೆಸುವುದರಲ್ಲಿ ವಿಶೇಷ ಪಾತ್ರ ವಹಿಸಿತು. ಕೊಣ್ಣೂರು ಗ್ರಾಮವು (ಜನ: 5,181) ಮಲಪ್ರಭಾ ಬಲದಂಡೆಯ ಮೇಲೆ ನರಗುಂದದ ಈಶಾನ್ಯಕ್ಕೆ 19 ಕಿಮೀ ದೂರದಲ್ಲಿದೆ. ಮೊದಲಿಗೆ ಕೋಳನೂರು ಎಂದು ಕರೆಯಲಾಗುತ್ತಿದ್ದ ಇಲ್ಲಿ ಪರಮೇಶ್ವರ ಮತ್ತು ರಾಮೇಶ್ವರ ಎಂಬ ಎರಡು ದೇವಾಲಯಗಳಿವೆ. ಇಲ್ಲಿ ಮೂರು ಶಾಸನಗಳಿದ್ದು ಅವುಗಳಲ್ಲಿ ಒಂದು ಪರಮೇಶ್ವರ ದೇವಾಲಯ ದಲ್ಲಿದೆ. ಅದರ ಕಾಲ 860 ಆಗಿದ್ದು ರಾಷ್ಟ್ರಕೂಟ ಮೊದಲ ನೇಯ ಅಮೋಘವರ್ಷನ ಕಾಲಕ್ಕೆ ಸೇರಿದುದಾಗಿದೆ. ಇಲ್ಲಿನ ಪರಮೇಶ್ವರ ದೇವಾಲಯವು ವಾಸ್ತುಶಿಲ್ಪ ದೃಷ್ಟಿಯಿಂದ ಗಮನಾರ್ಹವಾದದ್ದು. ವಿದ್ವಾಂಸರ ಪ್ರಕಾರ ಪರಮೇಶ್ವರ ದೇವಾಲಯವು ಅಪರೂಪದ ವಿನ್ಯಾಸವನ್ನು ಹೊಂದಿದ್ದ, ಮೂಲತಃ 9 ಅಥವಾ 10ನೇಯ ಶತಮಾನದಲ್ಲಿ ನಿರ್ಮಿತವಾದ ಜೈನ ದೇವಾಲಯವಾಗಿದ್ದು ಇದು ಹೊಯ್ಸಳ ಶೈಲಿಗೆ ಸ್ಫೂರ್ತಿ ಯನ್ನು ಮತ್ತು ಮಾದರಿಯನ್ನೂ ಒದಗಿಸಿರಬೇಕು. ಕೊಣ್ಣೂರಿಗೆ ಸಮೀಪದಲ್ಲಿರುವ ವಾಸನ ಎಂಬ ಗ್ರಾಮದಲ್ಲಿ, ಮಲ ಪ್ರಭಾ ದಂಡೆಯ ಮೇಲೆ ಇತ್ತೀಚೆಗೆ ಉತ್ಖನನಗಳು ನಡೆಸಲ್ಪಟ್ಟು ಶಾತವಾಹನ ಕಾಲದ ಒಂದು ಶಾಸನ ಮತ್ತು ಒಂಭತ್ತು ಅಥವಾ ಹತ್ತನೇಯ ಶತಮಾನದ ಹೂತುಹೋಗಿರುವ ದೇಗುಲಗಳ ಅವಶೇಷ ಗಳು ಬೆಳಕಿಗೆ ಬಂದಿವೆ.

**ನವಲಗುಂದ :** (ಧಾರವಾಡ ಜಿ; ತಾ. ಕೇ; ಜನ: 15,758) ಇದು ಬೆಂಗಳೂರಿಗೆ ವಾಯವ್ಯದಲ್ಲಿ 461 ಕಿಮೀ ಮತ್ತು ಧಾರವಾಡದಿಂದ ಈಶಾನ್ಯಕ್ಕೆ 47 ಕಿಮೀ ದೂರದಲ್ಲಿಯೂ ಇವೆ. ಇಲ್ಲಿ 1870ರಿಂದ ಪುರಸಭೆಯಿದೆ. ಇಲ್ಲಿ ಶಾಸನಗಳು ಇಲ್ಲದೇ ಇರುವುದರಿಂದ, ಸ್ಥಳೀಯ ನಂಬಿಕೆಗಳ ಪ್ರಕಾರ, ಈ ಸ್ಥಳದ ಈಗಿನ ಹೆಸರು ನವಿಲುಕುನ್ರ ಅಥವಾ ಕುಂದ ಎಂಬ ಪದಗಳಿಂದ ವಿಕಾಸ ಹೊಂದಿತೆಂದು ಗೊತ್ತಾಗುತ್ತದೆ. ನವಿಲು ಕುಂದ ಎಂದರೆ ನವಿಲುಗಳು ಕುಣಿಯುತ್ತಿದ್ದ ಎತ್ತರವಾದ ಸ್ಥಳ. ಇಲ್ಲಿನ ಆಧುನಿಕ ಇತಿಹಾಸವು 1454ರಿಂದ ಪ್ರಾರಂಭವಾಗುತ್ತದೆ. ಆಗ ಅದು ಬಹುಮನಿ ಸುಲ್ತಾನ ಎರಡನೇಯ ಅಲ್ಲಾವುದ್ದೀನನ ಆಶ್ರಯದಲ್ಲಿ ಅವನ ಭಾವಮೈದುನ ಜಲಾಲ್‌ಖಾನನ ಆಳ್ವಿಕೆಗೆ ಸೇರಿದ್ದ ಒಂದು ಸರ್ಕಾರ್ (ಪ್ರಾಂತ)ನ ಭಾಗವಾಗಿತ್ತು. ಜಲಾಲ್‌ಖಾನನು ಸ್ವತಂತ್ರನಾಗಲು ಮಾಡಿದ ಪ್ರಯತ್ನಗಳು ಫಲ ಕಾರಿಯಾಗಲಿಲ್ಲ. ಸುಮಾರು 1690ರಲ್ಲಿ ಸವಣೂರಿನ ನವಾಬನು ಈ ಪ್ರದೇಶವನ್ನು ಔರಂಗಜೇಬನ ಪರವಾಗಿ ಆಳುತ್ತಿದ್ದನು. ಆಗ ಇದು ನವಲಗುಂದದ ದೇಸಾಯಿಯಾದ ಇಮ್ಮಡಿ ಜಾಯ ಗೌಡ (1716) ನ ಅಧಿಪತ್ಯದಲ್ಲಿ ಕಂದಾಯ ವಿಭಾಗದ ಕೇಂದ್ರ ವಾಗಿದ್ದಿತು. ಜಾಯಗೌಡನು ದಕ್ಷ ಆಡಳಿತಗಾರನು ಮಾತ್ರ ವಲ್ಲದೆ, ಕಲೆ, ಸಾಹಿತ್ಯ ಮತ್ತು ಧರ್ಮಗಳ ಪೋಷಕನೂ ಆಗಿದ್ದನು. 1747ರಲ್ಲಿ ಈ ಪ್ರದೇಶವು ಇತರ ಪ್ರದೇಶಗಳೂ ಸೇರಿದಂತೆ ಸವಣೂರಿನ ನವಾಬನಿಂದ ಪೇಶ್ವೆಯ ಆಳ್ವಿಕೆಗೆ ಒಳಪಟ್ಟಿತು. ಹೈದರನು 1778ರಲ್ಲಿ ಕೃಷ್ಣಾನದಿಯ ದಕ್ಷಿಣ ಭಾಗವನ್ನು ತನ್ನ ವಶಮಾಡಿಕೊಂಡ ಮೇಲೆ, ಹೈದರನ ಅಧಿಪತ್ಯ ವನ್ನು ಒಪ್ಪಿಕೊಂಡ ಸ್ಥಳೀಯ ಲಿಂಗನಗೌಡ ದೇಸಾಯಿ (1769-1788) ಗೆ ನವಲಗುಂದದ ಅಧಿಪತ್ಯವನ್ನು ವಹಿಸಿಕೊಡ ಲಾಯಿತು. ಮರಾಠರು ಆಂತರಿಕ ಕಲಹಗಳಲ್ಲಿ ನಿರತರಾಗಿ ದ್ದಾಗ, 1795ರಿಂದ 1800ರ ವರೆಗೆ, ಧೋಂಡೋಪಂತ ಗೋಖಲೆಯು ಲಿಂಗನಗೌಡ ದೇಸಾಯಿಯಿಂದ ನವಲಗುಂದವನ್ನು ತನ್ನ ವಶಮಾಡಿಕೊಂಡನು. ಈ ಸಮಯದಲ್ಲಿ ನಂತರ ದೇಸಾಯಿ ಯಾದ ಜಾಯಪ್ಪನು (1795-1817) ನವಲಗುಂದವನ್ನು ತ್ಯಜಿಸಿ ಸಿರಸಂಗಿಯಲ್ಲಿ ವಾಸಿಸಲು ಪ್ರಾರಂಭಿಸಿದನು. 1817ರ ನವೆಂಬರ್ ತಿಂಗಳಲ್ಲಿ ಮನ್ರೋ ನವಲಗುಂದವನ್ನು ತನ್ನ ವಶಕ್ಕೆ ತೆಗೆದುಕೊಂಡು ರಾಮರಾವ್‌ನನ್ನು ನವಲಗುಂದದ ಸೈನಿಕ ಅಧಿಕಾರಿ ಮತ್ತು ಜಮಾದಾರನಾಗಿ ನಿಯಮಿಸಿದನು. ನೀಲಮ್ಮನ ಕೆರೆ ಮತ್ತು ಚೆನ್ನಮ್ಮನ ಕೆರೆ ಎಂದು ಕರೆಯಲಾಗಿರುವ ದೊಡ್ಡ ಕೆರೆಗಳು ದೇಸಾಯಿಗಳ ಕಾಲದಲ್ಲಿ ನಿರ್ಮಾಣವಾದವು. ದೇಸಾಯಿ ವಂಶದಲ್ಲಿ ಕೊನೆಯವನಾದ, ಲಿಂಗರಾಜ ದೇಸಾಯಿಯು ಈ ಪ್ರದೇಶದ ಸಾಂಪತ್ತಿಕ ಬೆಳವಣಿಗೆಗೆ ಬಹಳ ಪ್ರೋತ್ಸಾಹ

ಕೊಟ್ಟನು (ನೋಡಿ: ಶಿರಸಂಗಿ). ಇಲ್ಲಿನ ಪ್ರಾಚೀನ ಸ್ಮಾರಕಗಳಲ್ಲಿ ಹೆಸರಿಸಬೇಕಾದುವೆಂದರೆ ನವಿಲೇಶ್ವರ, ಗೋವಿಂದರಾಜ, ಗಣಪತಿ, ವೆಂಕಟೇಶ, ವೀರಭದ್ರ, ನಗರೇಶ್ವರ, ಲಾಲ್‌ಗುಡಿ ಮಾರುತಿ ಮತ್ತು ಬಸವಣ್ಣನ ದೇವಾಲಯಗಳು, ಆದಿನಾಥನಿಗಾಗಿ ನಿರ್ಮಿತವಾದ ಹಳೆಯ ಬಸದಿ. ಇಲ್ಲಿರುವ ಗಣಪತಿ ದೇವಸ್ಥಾನವನ್ನು ಇಲ್ಲಿ ತಂಗಿದ್ದ ಪೇಶ್ವೆಯು ಪೂಜೆ ನಡೆಸಲು ಒಂದೇ ಒಂದು ದಿನದಲ್ಲಿ ದೇಸಾಯಿಯು ನಿರ್ಮಿಸಿದನೆಂದು ಹೇಳುತ್ತಾರೆ. ಇಲ್ಲಿರುವ ಮೂರು ಮಠಗಳು ಬಹಳ ಗೌರವಕ್ಕೆ ಪಾತ್ರವಾಗಿವೆ. ಅವು ಯಾವುವೆಂದರೆ, ಸುಮಾರು 500 ವರ್ಷಗಳ ಹಿಂದೆ ಜಡೆಸ್ವಾಮಿಯು ಆರಂಭಿಸಿದ ಗವಿಮಠ; ಮರದ ಕೆತ್ತನೆಯ ಕೆಲಸಗಳಿಗೆ ಪ್ರಸಿದ್ಧವಾದ ಮತ್ತು ಅದರಷ್ಟೇ ಪ್ರಾಚೀನವಾದ ಪಂಚಗೃಹ ಹಿರೇಮಠ; 1825ರಲ್ಲಿ, ಹುಬ್ಬಳ್ಳಿಯ ಸಿದ್ಧಾರೂಢ ಸ್ವಾಮಿಗಳ ಸಮಕಾಲೀನರಾದ ಒಬ್ಬ ಮಹಿಮಾನ್ವಿತ ಯೋಗಿಯಿಂದ ನಿರ್ಮಿತವಾದ ನಾಗಲಿಂಗಸ್ವಾಮಿ ಮಠವು ಬಹಳ ಗೌರವಕ್ಕೆ ಪಾತ್ರವಾಗಿದೆ. ಈ ಮಠದಲ್ಲಿ ಬೈಬಲ್ಲಿಗೂ ಪೂಜೆ ಸಲ್ಲಿಸಲಾಗುವುದು. ಇಲ್ಲಿ ಹತ್ತು ಮಸೀದಿಗಳೂ ಐದು ದರ್ಗಾಗಳೂ ಇದ್ದು, ಅವುಗಳಲ್ಲಿ ಮಂಗಲ್‌ಷಾವಲಿಯ ದರ್ಗಾ ಮುಖ್ಯವಾದುದು. 1780ರ ಸುಮಾರಿಗೆ ಕಟ್ಟಲಾದ ಸ್ಥಳೀಯ ದೇಸಾಯಿಯ ವಾಡೆಯು ಈಗ ಕಾಲೇಜಾಗಿ ಪರಿವರ್ತಿತವಾಗಿದೆ. ಥಡಿಮಠದಲ್ಲಿ ಸ್ಥಳೀಯ ದೇಸಾಯಿಯ ಕುಟುಂಬದವರ ಗದ್ದುಗೆಗಳಿವೆ. ನವಲಗುಂದವು ಸ್ಥಳೀಯ ಕುಶಲಕರ್ಮಿಗಳಿಂದ ತಯಾರಿಸಿದ ಆಕರ್ಷಕ ಬಣ್ಣಬಣ್ಣದ ಜಮಖಾನೆಗಳು, ಗುಡಾರಗಳು, ಮರದ ತೊಟ್ಟಿಲುಗಳು, ಆಟದ ಬೊಂಬೆಗಳಿಗೆ ಪ್ರಸಿದ್ಧಿಯಾಗಿದೆ. ಯಮನೂರು ಹುಬ್ಬಳ್ಳಿ-ನವಲಗುಂದ ರಸ್ತೆಯಲ್ಲಿ ನವಲಗುಂದದ ನೈಋತ್ಯಕ್ಕೆ ಐದು ಕಿಮೀ ದೂರದಲ್ಲಿದೆ. ಶತಮಾನಗಳ ಹಿಂದೆ ಅನೇಕ ಪವಾಡಗಳನ್ನು ಮಾಡಿದ ಚಾಂಗದೇವನೆಂದು ಹಿಂದೂಗಳಿಂದ ಕರೆಸಿಕೊಳ್ಳುವ, ರಾಜಾಬಾಘ್ ಸವಾರ್ (ಹುಲಿಯ ಮೇಲೆ ಸವಾರಿ ಮಾಡುವ ದೊರೆ) ಎಂದೂ ಉಲ್ಲೇಖಿತವಾಗಿರುವ ಒಬ್ಬ ಯೋಗಿಯಿಂದಾಗಿ ಈ ಸ್ಥಳವು ಪ್ರಖ್ಯಾತವಾಗಿದೆ. ಸುಮಾರು 1720ರಲ್ಲಿ ಸತಾರಾ ಜಿಲ್ಲೆಯ ಕೋರೆಗಾಮಿಯ ಮರಾಠಾ ಮುಖಂಡ ಕ್ಷೇತ್ರೋಜಿರಾವ್ ಎಂಬುವನಿಂದ ಈ ಯೋಗಿಯ ಸ್ಮರಣಾರ್ಥವಾಗಿ ಸ್ಥಾಪಿಸಲಾದ ಸಮಾಧಿಯಿದು. ಈ ಸ್ಥಳವು ಹಿಂದೂಗಳಿಗೂ ಮತ್ತು ಮಹಮ್ಮದೀಯರಿಗೂ ಪವಿತ್ರವಾದ ಸ್ಥಳ. ಇಲ್ಲಿ ನಡೆಯುವ ಜಾತ್ರಾ ಸಮಯದಲ್ಲಿ ಭಾರೀ ಪ್ರಮಾಣದ ದನದ ಪರಿಷೆ ಕೂಡುತ್ತದೆ.

**ನಾಗಮಂಗಲ :** (ಮಂಡ್ಯ ಜಿ; ತಾ. ಕೇ; ಜನ: 11,086) ಮಂಡ್ಯದಿಂದ ಸುಮಾರು 41 ಕಿಮೀ ಮತ್ತು ಬೆಂಗಳೂರಿನಿಂದ 130 ಕಿಮೀ ದೂರದಲ್ಲಿರುವ ನಾಗಮಂಗಲವು ಪುರಸಭೆಯನ್ನು ಹೊಂದಿರುವ ಪಟ್ಟಣ. ಹೊಯ್ಸಳರ ಕಾಲದಲ್ಲಿ ಆದೊಂದು ಅಗ್ರಹಾರವಾಗಿತ್ತು. ಲೋಹಿತ ವಂಶದ ನಾಯಕರು ಇಲ್ಲಿ ಹದಿನಾರನೇಯ ಶತಮಾನದ ಕೊನೆಯವರೆಗೆ ರಾಜ್ಯವಾಳಿದರು. ಇಲ್ಲಿ ಎರಡು ಕೋಟೆಗಳ ಅವಶೇಷಗಳನ್ನು ಕಾಣಬಹುದು. ಒಳಗಿನ ಕೋಟೆಯನ್ನು 1270ರಲ್ಲಿ ಲೋಹಿತ ವಂಶದ ಅರಸರು ಕಟ್ಟಿದರು. ಎರಡನೇಯ ಹೊರಗಿನ ಕೋಟೆಯನ್ನು ಚನ್ನಪಟ್ಟಣದ ಪಾಳೆಯಗಾರನಾಗಿದ್ದ ಜಗದೇವರಾಯನು 1578ರಲ್ಲಿ ನಿರ್ಮಿಸಿದನು. ನಾಗಮಂಗಲವು ಅವನ ರಾಜ್ಯದ ಮುಖ್ಯ ನಗರಗಳಲ್ಲಿ ಒಂದಾಗಿತ್ತು. ಇಲ್ಲಿರುವ ಸೌಮ್ಯಕೇಶವ ದೇವಾಲಯವು ಹನ್ನೆರಡನೇಯ ಶತಮಾನದ ಹೊಯ್ಸಳ ಶೈಲಿಯ ದೊಡ್ಡ ದೇವಾಲಯ. ಆರು ಅಡಿ ಎತ್ತರದ ಕೇಶವನ ವಿಗ್ರಹವು ಗರುಡ ಪೀಠದ ಮೇಲಿದೆ. ಇಲ್ಲಿರುವ ಯೋಗಾನರಸಿಂಹ ಮತ್ತು ಭುವನೇಶ್ವರ ದೇವಾಲಯಗಳೂ ಹೊಯ್ಸಳರ ಕಾಲದವು. ವೀರಭದ್ರ ಮತ್ತು ಕಾಳಮ್ಮನ ದೇವಾಲಯಗಳೂ ಒಂದು ಮಸೀದಿಯೂ ಈ ಊರಲ್ಲಿವೆ. ನಾಗಮಂಗಲವು ಲೋಹ ಕಲೆಗೆ ಪ್ರಖ್ಯಾತಿಯನ್ನು ಪಡೆದಿದೆ. ಇಲ್ಲಿ ತಯಾರಾದ ಲೋಹದ ವಿಗ್ರಹಗಳು ಬಹಳ ಕಲಾತ್ಮಕವಾಗಿರುತ್ತವೆ. ಈ ಸ್ಥಳದಲ್ಲಿ ಸಾಂಪ್ರದಾಯಿಕವಾಗಿ ತರಬೇತಿ ಹೊಂದಿದ ಕಲಾಕಾರರು ವಿಶೇಷವಾಗಿದ್ದು, ಅವರು ಹಿತ್ತಾಳೆಯ ವಿಗ್ರಹಗಳನ್ನು ಮತ್ತು ಗೃಹೋಪಯೋಗಿ ಇತರ ವಸ್ತುಗಳನ್ನೂ ತಯಾರಿಸುತ್ತಾರೆ. ಈ ಪಟ್ಟಣವು ಚಾಪೆ ಹೆಣೆಯುವುದಕ್ಕೂ ಪ್ರಸಿದ್ಧಿಯಾಗಿದ್ದು ಇದು ಇಲ್ಲಿನ ಗೃಹ ಕೈಗಾರಿಕೆಯಾಗಿದೆ. ಇಲ್ಲಿರುವ ಗ್ರಾಮೀಣ ಕಲಾಕಾರರ ತರಬೇತಿ ಸಂಸ್ಥೆಯು ಮರಗೆಲಸ, ಲೋಹಗಾರಿಕೆ, ಉಣ್ಣೆಯ ನೇಯ್ಗೆ, ಶಿಲ್ಪಕಲೆ ಮುಂತಾದವುಗಳಲ್ಲಿ ತರಬೇತಿಯನ್ನು ಕೊಡುತ್ತಿದೆ. ಇದು ವ್ಯಾಪಾರ ಕೇಂದ್ರವಾಗಿದ್ದು ಮೂಲ ತರಬೇತಿ ಸಂಸ್ಥೆಯನ್ನು ಹೊಂದಿದೆ. ಪಟ್ಟಣದ ಸುತ್ತಲೂ ನಾಲ್ಕು ದೊಡ್ಡ ಕೆರೆಗಳಿವೆ. ಇದು ವಿಳ್ಳೇದೆಲೆ ತೋಟಗಳಿಗೂ ಪ್ರಸಿದ್ಧಿ ಪಡೆದಿದೆ. ನಾಗಮಂಗಲ ತಾಲೂಕಿನಲ್ಲಿ ಅನೇಕ ಐತಿಹಾಸಿಕ ಕಟ್ಟಡಗಳು, ದೇವಾಲಯಗಳು, ಬಸದಿಗಳು, ಮಸೀದಿಗಳು ಮತ್ತು ಅನೇಕ ಪ್ರೇಕ್ಷಣೀಯ ಸ್ಥಳಗಳಿವೆ. 616 ಜನಸಂಖ್ಯೆಯಿರುವ ಕಂಬದಹಳ್ಳಿಯು ನಾಗಮಂಗಲದಿಂದ 16 ಕಿಮೀ ದೂರದಲ್ಲಿ ವಾಯುವ್ಯ ದಿಕ್ಕಿಗೆ ನಾಗಮಂಗಲ–ಶ್ರವಣಬೆಳಗೊಳ ರಸ್ತೆಯಲ್ಲಿದೆ. ಇದು ಶ್ರವಣಬೆಳಗೊಳದಿಂದ ಆರು ಕಿಮೀ ದೂರದಲ್ಲಿದೆ. ಇದು ಜೈನರ ಖ್ಯಾತ ಯಾತ್ರಾಸ್ಥಳ. ಪಂಚಕೂಟ ಬಸದಿಯ ಉತ್ತರಕ್ಕಿರುವ, ಎತ್ತರವಾದ ಜಗಲಿಯ ಮೇಲೆ ನಿಂತಿರುವ ಬ್ರಹ್ಮದೇವ ಕಂಬದಿಂದ, ಈ ಹಳ್ಳಿಗೆ ಕಂಬದಹಳ್ಳಿ ಎಂಬ ಹೆಸರು ಬಂದಿತು. ಈ ಕಂಬವು ಸುಮಾರು 50 ಅಡಿ ಎತ್ತರವಾಗಿದ್ದು, ಅದರ ತುದಿಯಲ್ಲಿ ಪೂರ್ವಾಭಿಮುಖವಾಗಿರುವ ಬ್ರಹ್ಮನ ಶಿಲ್ಪವಿದೆ. ಇದರ ಸಮೀಪದಲ್ಲೆ ದ್ರಾವಿಡ ವಾಸ್ತುಶೈಲಿಯಲ್ಲಿ ರಚಿತವಾದ ಸಪ್ತಕೂಟ ದೇವಾಲಯವಿದೆ. ಪಂಚಕೂಟ ಬಸ್ತಿಯ ಮಧ್ಯದಲ್ಲಿರುವ ಗರ್ಭಗೃಹವಾದ ಆದಿನಾಥ ಬಸದಿಯು ಸುಮಾರು 900ರಲ್ಲಿ ನಿರ್ಮಾಣವಾಯಿತು. ಶಾಂತಿನಾಥ ಬಸದಿಯಲ್ಲಿ ಹತ್ತು ಅಡಿ ಎತ್ತರದ ಶಾಂತಿನಾಥನ ವಿಗ್ರಹ

ವಿದೆ. ಇದು ಸುಂದರವಾದ ಅಲಂಕೃತ ಬಾಗಿಲುವಾಡಗಳನ್ನು ಹೊಂದಿರುವ ದೊಡ್ಡ ದೇವಾಲಯ. ನವರಂಗದಲ್ಲಿರುವ ನೇಮಿನಾಥ, ಧ್ಯಾನಾಸನದಲ್ಲಿರುವ ಜಿನ ಮತ್ತು ನವರಂಗದಲ್ಲಿರುವ ಯಕ್ಷಿಯ ಶಿಲ್ಪಗಳು ಗಮನಾರ್ಹವಾದವು. 12ನೇಯ ಶತಮಾನ ದಲ್ಲಿದ್ದ ಹೊಯ್ಸಳ ದಂಡನಾಥನಾದ ಬೊಪ್ಪನು ಇದನ್ನು ವಿಸ್ತರಿಸಿದನು. ಬಿಂಡಿಗನವಿಲೆಯಲ್ಲಿರುವ ಕೇಶವ ದೇವಾಲಯ ದ್ರಾವಿಡ ಶೈಲಿಯಲ್ಲಿರುವ ಸರಳ ರಚನೆ. ಇಲ್ಲಿರುವ ಗರುಡಶಿಲ್ಪಕ್ಕೆ ವಿಶೇಷ ಪಾವಿತ್ರ್ಯತೆ ಇದೆಯೆಂದು ಪ್ರತೀತಿ. ದಡಗ ದಲ್ಲಿರುವ ಯೋಗಾನರಸಿಂಹ ದೇವಾಲಯವು 11ನೇಯ ಶತಮಾನದ ಕಟ್ಟಡ. ಬಳಪದ ಕಲ್ಲಿನಲ್ಲಿ ಕಟ್ಟಲಾದ ಮಾಚಲಘಟ್ಟದ ಮಲ್ಲೇಶ್ವರ ದೇವಾಲಯವು ಹೊಯ್ಸಳ ಕಾಲದ ಸುಂದರ ದೇವಾಲಯ. ನಾಗಮಂಗಲಕ್ಕೆ ಮೂರು ಕಿಮೀ ದೂರದಲ್ಲಿರುವ ಪಾಲಗ್ರಹಾರವು, ಕೋಟೆ ಬೆಟ್ಟದ ಬುಡದಲ್ಲಿದ್ದು, ಈ ಬೆಟ್ಟದ ತುದಿಯಲ್ಲಿ ದೊಡ್ಡದಾದ ಶ್ರೀನಿವಾಸ ದೇವಾಲಯವಿದೆ. ನಾಗಮಂಗಲಕ್ಕೆ ಸಮೀಪದಲ್ಲಿರುವ ಹುಲಿಕೆರೆಯಲ್ಲಿ ಹುಲಿಕೆರೆಯಮ್ಮನ ಹೆಸರಿನಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ.

**ನಾಗರಹೊಳೆ :** (ಕೊಡಗು ಜಿ; ವೀರಾಜಪೇಟೆ ತಾ; ಜನ: 517) ಸುಮಾರು 248 ಚದರ ಕಿಮೀ ಪ್ರದೇಶ ವಿಸ್ತೀರ್ಣವುಳ್ಳ ನಾಗರಹೊಳೆ ಅಭಯಾರಣ್ಯವು 1955ರ ಜುಲೈನಲ್ಲಿ ಪ್ರಾರಂಭವಾಯಿತು. ಇದರಲ್ಲಿ ನಾಗರಹೊಳೆ, ಕಲ್ಲಹಳ್ಳಿ ಮತ್ತು ತಿತಿಮತಿ ಎಂಬ ಮೂರು ಬೆಟ್ಟದ ಶ್ರೇಣಿಗಳು ಕೊಡಗು ಜಿಲ್ಲೆಯ ಪೂರ್ವಭಾಗದಲ್ಲಿವೆ. ವನ್ಯಜೀವಿಧಾಮವು ವೀರಾಜಪೇಟೆಯಿಂದ 67 ಕಿಮೀ ಹಾಗೂ ಬೆಂಗಳೂರಿನಿಂದ 283 ಕಿಮೀ ದೂರದಲ್ಲಿಯೂ ಇದೆ. ಇದು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲೂಕಿಗೆ ಸಮೀಪವಾಗಿದೆ. ಇಲ್ಲಿ ಒಂದು ಅರಣ್ಯ ವಸತಿಗೃಹವಿದ್ದು ಇಲ್ಲಿಂದ ಪ್ರೇಕ್ಷಕರು ಎಲ್ಲ ರೀತಿಯ ವನ್ಯಮೃಗಗಳನ್ನು ಅಂದರೆ ಗಂಭೀರವಾದ ಆನೆ ಮತ್ತು ರಮ್ಯತೆಯ ಚುಕ್ಕೆಗಳುಳ್ಳ ಜಿಂಕೆಗಳಿಂದ ಹಿಡಿದು ಉಪಾಯಗಾತ ನರಿಯವರೆಗೆ, ಅವುಗಳು ಪ್ರಾಕೃತಿಕ ಸನ್ನಿವೇಶದಲ್ಲಿ ಹೊರಗಿನವರ ಪರಿವೆಯಿಲ್ಲದೆ ಅಡ್ಡಾಡುವುದನ್ನು ನೋಡಲು ಉತ್ತಮವಾದ ಅವಕಾಶವನ್ನು ಕಲ್ಪಿಸಲಾಗಿದೆ. ಸುಮಾರಾಗಿ ದಕ್ಷಿಣ ಭಾರತದ ಎಲ್ಲ ಜಾತಿಯ ಪ್ರಾಣಿಗಳೂ ಈ ಅಭಯಾರಣ್ಯದಲ್ಲಿ ಕಾಣಬರುತ್ತವೆ. ಅರಣ್ಯ ಇಲಾಖೆಯ ಆನೆಯ ತಂಗುದಾಣಗಳು, ಅದರಲ್ಲಿಯೂ ಲಕ್ಷ್ಮಣತೀರ್ಥ ನದಿಯ ಹೆಬ್ಬಳ್ಳ ಆನೆಯ ತಂಗುದಾಣ ಮತ್ತೊಂದು ಆಕರ್ಷಣೆ. ಈ ಅಭಯಾರಣ್ಯದಲ್ಲಿ ಸೌಕರ್ಯಯುತವಾದ ವಿಶ್ರಾಂತಿ (ತಂಗುದಾಣ) ಗೃಹಗಳಿವೆ.

**ನಿಪ್ಪಾಣಿ :** (ಬೆಳಗಾವಿ ಜಿ; ಚಿಕ್ಕೋಡಿ ತಾ; ಜನ: 41,783—1981) ನಿಪ್ಪಾಣಿಯು ಚಿಕ್ಕೋಡಿ ತಾಲೂಕಿನಲ್ಲಿ ಎರಡನೇಯ ಮುಖ್ಯವಾದ ಪಟ್ಟಣವಾಗಿತ್ತು. ಬೆಂಗಳೂರಿನಿಂದ ವಾಯುವ್ಯದಲ್ಲಿ 587 ಕಿಮೀ ಹಾಗೂ ಬೆಳಗಾವಿಯಿಂದ ಉತ್ತರದಲ್ಲಿ 72 ಕಿಮೀ ದೂರದಲ್ಲಿಯೂ ಇದೆ. ಬ್ರಿಟೀಷರ ಆಳ್ವಿಕೆಯಲ್ಲಿ ನಿಪ್ಪಾಣಕರ್ ಎಂಬ ಸ್ಥಳೀಯ ನಾಯಕನು ಇಲ್ಲಿ ಆಡಳಿತ ನಡೆಸಿದನು. ಮೊಟ್ಟಮೊದಲನೇಯ ಬಾರಿಗೆ 1854ರಷ್ಟು ಮುಂಚೆಯೇ ಇಲ್ಲಿ ಪುರಸಭೆಯು ಪ್ರಾರಂಭವಾಯಿತು. ಈ ಸ್ಥಳದ ಮೊದಲ ಉಲ್ಲೇಖವು 1800ನೇಯ ವರ್ಷದ್ದಾಗಿದ್ದು, ಆಗಿನ ಸ್ಥಳೀಯ ದೇಸಾಯಿ ಸಿದ್ದೋಜಿರಾವ್ ನಿಂಬಾಳ್ಕರ್ ಅಥವಾ ಅಪ್ಪಾ ಸಾಹೇಬ್ ಈ ಪ್ರದೇಶವನ್ನು ಕೊಳ್ಳೆ ಹೊಡೆದನು. 1802ರಲ್ಲಿ ನಿಪ್ಪಾಣಿಯ ನಾಯಕನು ತನ್ನ ಸೈನ್ಯದೊಂದಿಗೆ ಕರ್ನಾಟಕದ ಏಳು ನಾಯಕರಲ್ಲಿ ಒಬ್ಬನಾಗಿ ಬೆಳಗಾವಿ ಜಿಲ್ಲೆಯ ಮೇಲೆ ಹಕ್ಕನ್ನು ಸ್ಥಾಪಿಸಲು ಯತ್ನಿಸಿದನು. ಅನೇಕ ಸಾರಿ ಇವನು ಚಿಕ್ಕೋಡಿ ಮತ್ತು ಮನವಳ್ಳಿ ಪ್ರದೇಶಗಳನ್ನು ಗೆದ್ದುಕೊಳ್ಳಲು ವಿಫಲ ಪ್ರಯತ್ನ ಮಾಡಿದನು. 1839ರಲ್ಲಿ ಉತ್ತರಾಧಿಕಾರಿಯಿಲ್ಲದೆ ದೇಸಾಯಿಯು ಮರಣ ಹೊಂದಲು, ಇವರ ರಾಜ್ಯವು ಬ್ರಿಟಿಷರಿಗೆ ಸೇರಿಹೋಯಿತು. ಇಲ್ಲಿನ ಚರಿತ್ರಾರ್ಹ ಅವಶೇಷಗಳೆಂದರೆ, ಸುಮಾರು 1771ರಲ್ಲಿ ಪೇಶ್ವೆಯಿಂದ ನಿರ್ಮಿಸಲಾದ ಕೋಟೆ, ಕೋಟೆಯೊಳಗಿನ ಅಂಬಾಬಾಯಿ ದೇವಾಲಯ, ನಾಶವಾಗಿರುವ ದೇಸಾಯಿಯ ಅರಮನೆ, ದೇಸಾಯಿಯಿಂದ ನಿರ್ಮಿಸಲ್ಪಟ್ಟ ಮಹಾದೇವ ದೇವಾಲಯ, ದತ್ತ ದೇವಾಲಯ ಮತ್ತು ವೆಂಕಟರಮಣ ದೇವಾಲಯ. ಇಲ್ಲಿ ಚೆನ್ನಾಗಿ ರಕ್ಷಿಸಲಾದ ನೇಮಿನಾಥ ಮತ್ತು ಚಂದ್ರಪ್ರಭ ಎಂಬೆರಡು ಜೈನ ದೇವಾಲಯಗಳಿವೆ. ನಗರದ ಹೊರವಲಯದಲ್ಲಿ, ನಿಪ್ಪಾಣಿ ಚಿಕ್ಕೋಡಿ ರಸ್ತೆಯಲ್ಲಿ ಸಮಾಧಿ ಮಠ ಅಥವಾ ದಾಸೋಹ ಮಠ ಎಂದೂ ಕರೆಯಲಾಗುವ ವಿರೂಪಾಕ್ಷಲಿಂಗಯ್ಯ ಸ್ವಾಮಿಗಳ ಪವಿತ್ರ ಸಮಾಧಿಯಿದೆ. ಇಲ್ಲಿ ಒಂದು ಮಸೀದಿಯೂ, ದಸ್ತಗೀರ್ ಸಾಹೇಬ್ ಅವರ ಸ್ಮರಣಾರ್ಥವಾದ ದರ್ಗಾವೂ ಇವೆ. ನಿಪ್ಪಾಣಿಯು ದೇಶದಲ್ಲೇ ಅತ್ಯಂತ ಮುಖ್ಯವಾದ ಹೊಗೆಸೊಪ್ಪಿನ ಸಗಟು ವ್ಯಾಪಾರ ಕೇಂದ್ರಗಳಲ್ಲೊಂದು ಎಂಬುದಾಗಿಯೂ ಮತ್ತು ಭಾರಿ ಪ್ರಮಾಣದಲ್ಲಿ ಬೀಡಿಗಳನ್ನು ತಯಾರಿಸುವ ಕೇಂದ್ರವಾಗಿಯೂ ಪರಿಗಣಿತವಾಗಿದೆ. ಇಲ್ಲಿ ಹೊಗೆಸೊಪ್ಪಿನ ಸಂಶೋಧನಾ ಕೇಂದ್ರವಿದೆ. ನಿಪ್ಪಾಣಿಯಿಂದ ಎಂಟು ಕಿಮೀ ದೂರದಲ್ಲಿರುವ ತವಂದಿ (ಅಥವಾ ತವನಿಧಿ) ಬಹಳ ಖ್ಯಾತವಾದ, ದಿಗಂಬರ ಸಂಪ್ರದಾಯದ ಜೈನರ ಯಾತ್ರಾಸ್ಥಳ. ಇಲ್ಲಿ ವೃಷಭನಾಥ, ಶಾಂತಿನಾಥ, ನವಖಂಡ ಪಾರ್ಶ್ವನಾಥ, ಬ್ರಹ್ಮದೇವ ಮತ್ತು ಇತರರ ಸಣ್ಣ ಐದು ಜೈನದೇವಾಲಯಗಳಿವೆ. ಇಲ್ಲಿ ಪಾರ್ಶ್ವನಾಥ ಗುರುಕುಲವೆಂಬ ರೆಸಿಡೆನ್ಷಿಯಲ್ ಶಾಲೆಯಿದೆ. ಈ ಕ್ಷೇತ್ರವು ಎಂಟು ಅಥವಾ ಒಂಭತ್ತನೇಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದಿ ಎನ್ನುವ ಸಣ್ಣ ಹಳ್ಳಿಯು ನಿಪ್ಪಾಣಿಯಿಂದ ಉತ್ತರಕ್ಕೆ ಹದಿನಾಲ್ಕು ಕಿಮೀ ದೂರದಲ್ಲಿ ನಿಪ್ಪಾಣಿ–ಮಾಂಗೂರ್ ರಸ್ತೆಯಲ್ಲಿದೆ. ಎರಡು ಕಿಮೀ ದೂರದಲ್ಲಿರುವ ಸಣ್ಣ ಬೆಟ್ಟದ ಮೇಲೆ ಮಲ್ಲಯ್ಯ

ಅಥವಾ ಮಲ್ಲಿಕಾರ್ಜುನ ಲಿಂಗವನ್ನು ಹೊಂದಿರುವ ಪ್ರಖ್ಯಾತ ದೇವಾಲಯವಿದೆ. ಮಲ್ಲಿಕಾರ್ಜುನ ಮತ್ತು ಸಿದ್ದೇಶ್ವರ ಮಠಗಳ ಜೊತೆಗೆ, ಇಲ್ಲಿ ಮಲ್ಲಯ್ಯ ಮಾರುತಿ ಮತ್ತು ಲಕ್ಷ್ಮೀ ದೇವಾಲಯಗಳಿವೆ.

**ನೆಲಮಂಗಲ :** (ಬೆಂಗಳೂರು ಜಿ; ತಾ. ಕೇ; ಜನ: 12,574) ನೆಲಮಂಗಲವು ಬೆಂಗಳೂರು–ತುಮಕೂರು ರಸ್ತೆಯಲ್ಲಿ ಬೆಂಗಳೂರಿನ ವಾಯುವ್ಯದಲ್ಲಿ 27 ಕಿಮೀ ದೂರದಲ್ಲಿದೆ. ಪೌರಾಣಿಕ ಕಥೆಯ ಪ್ರಕಾರ ಇಲ್ಲಿಗೆ ಸಮೀಪದಲ್ಲಿ ಭೂಮಂಡನ ಎಂಬ ದೊಡ್ಡ ನಗರವಿದ್ದಿತು. ಈ ನೆಲಮಂಗಲವು ಷಾಜಿಯ ಬೆಂಗಳೂರು ಜಾಗೀರಿನ ಭಾಗವಾಗಿತ್ತು. ಅನಂತರ ಬೆಂಗಳೂರು ಸೇರಿದಂತೆ ಮೊಗಲರು ಇದನ್ನು ಮೈಸೂರು ಅರಸರಿಗೆ ವಹಿಸಿಕೊಟ್ಟರು. ಇಲ್ಲಿರುವ ದೇವಾಲಯಗಳಲ್ಲಿ ಗಮನಾರ್ಹವಾದವು ಚೆನ್ನಕೇಶವ, ಅಡಕೆ ಆಂಜನೇಯ ಮತ್ತು ಈಶ್ವರ ದೇವಸ್ಥಾನಗಳು. ಇದರಲ್ಲಿ ಕೊನೆಯದಾಗಿ ಈಶ್ವರ ದೇವಾಲಯ ಬಹಳ ಪ್ರಾಚೀನವಾದುದು. ಇಲ್ಲಿ ಬಸವಣ್ಣ ದೇವರ ಮಠ ಎಂದು ಕರೆಯಲಾಗುವ ಪ್ರಾಚೀನ ವೀರಶೈವ ಪೀಠವಿದೆ. ಈ ಮಠವು ಬಡ ವಿದ್ಯಾರ್ಥಿಗಳಿಗಾಗಿ ಒಂದು ಉಚಿತ ವಿದ್ಯಾರ್ಥಿ ನಿಲಯ ಮತ್ತು ಒಂದು ಶಾಲೆಯನ್ನು ನಡೆಸುತ್ತಿದೆ. ಇಲ್ಲಿನ ದರ್ಗಾದಲ್ಲಿ ಹಾಜಿ ಸೈಯದ್ ಷಾ ಸದ್ರುದ್ದೀನ್ ಹುಸೈನಿ ಅವರ ಉರುಸ್ ವರ್ಷಕ್ಕೊಮ್ಮೆ ನಡೆಯುತ್ತದೆ. ಇಲ್ಲಿ ಒಂದು ಮಸೀದಿಯೂ ಇದೆ. ಈ ಊರಿನಲ್ಲಿ ಕರಕುಶಲ ತರಬೇತಿ ಕೇಂದ್ರವೊಂದಿದೆ. ಇಲ್ಲಿನ ಪುರಸಭೆಯು ಈ ಊರಿನ ನೈರ್ಮಲ್ಯವನ್ನು ನೋಡಿಕೊಳ್ಳುತ್ತದೆ. ಈ ತಾಲೂಕಿನ ಎಲೇಕ್ಯಾತನಹಳ್ಳಿಯು ಲೋಹಗಾರಿಕೆಗೆ ಪ್ರಸಿದ್ಧಿಯಾಗಿದೆ. ನಿಜಗಲ್ಲು ಬೆಟ್ಟದ ಮೇಲೆ ಒಂದು ಕೋಟೆಯಿದೆ. ನೆಲಮಂಗಲಕ್ಕೆ ಎಂಟು ಕಿಮೀ ದೂರದಲ್ಲಿರುವ ಮಣ್ಣೆ ಗಂಗರ ರಾಜಧಾನಿಗಳಲ್ಲೊಂದು. ಇದನ್ನು ಮಾನ್ಯಪುರನೆಂದೂ ಕರೆದಿದೆ. ಕಪಿಲೇಶ್ವರ ಮತ್ತು ಸೋಮೇಶ್ವರ ದೇವಾಲಯಗಳೂ ಸೇರಿದಂತೆ ಇಲ್ಲಿ ಅನೇಕ ದೇವಾಲಯಗಳಿದ್ದು ಇವೆಲ್ಲವೂ ಇಟ್ಟಿಗೆಯ ಕಟ್ಟಡಗಳಾಗಿವೆ. ಇಲ್ಲಿ 54 ಶಾಸನಗಳು ದೊರಕಿವೆ. ಈ ಸ್ಥಳದಲ್ಲಿ ದೇವಾಲಯಗಳ ಮತ್ತು ಶಿಲ್ಪಗಳ ಅವಶೇಷಗಳು ಹೇರಳವಾಗಿದೆ.

**ಪಟ್ಟದಕಲ್ಲು :** (ವಿಜಾಪುರ ಜಿ; ಬಾದಾಮಿ ತಾ; ಜನ: 1,479) ಪಟ್ಟದಕಲ್ಲು ರಾಜ್ಯದಲ್ಲೇ ಪ್ರಮುಖವಾದ ಪ್ರವಾಸಿ ಕೇಂದ್ರವಾಗಿದ್ದು, ಇದು ಬಾದಾಮಿಗೆ ಈಶಾನ್ಯಕ್ಕೆ 22 ಕಿಮೀ ಹಾಗೂ, ಬೆಂಗಳೂರಿನಿಂದ 514 ಕಿಮೀ ದೂರದಲ್ಲಿದ್ದು, ಮಲಪ್ರಭಾ ನದಿಯ ಎಡದಂಡೆಯ ಮೇಲಿದೆ. ಇದು ದೇವಾಲಯಗಳಿಗೂ, ಶಾಸನಗಳಿಗೂ ಪ್ರಖ್ಯಾತವಾಗಿರುವ ಚಲುಕ್ಯ ಕಲಾ ಕೇಂದ್ರ. ನದಿಯ ದಂಡೆಯ ಸುತ್ತಲೂ ಹೇರಳವಾಗಿ ದೊರಕಿರುವ ಕಲ್ಲಿನ ಆಯುಧಗಳಿಂದಲೂ ಮತ್ತು ದೊಡ್ಡ ಕಲ್ಲುಗಳಿಂದ ಮಾಡಿದ ಗೋರಿಗಳಿಂದಲೂ, ಇದು ಇತಿಹಾಸ ಪೂರ್ವಕಾಲದಲ್ಲಿ ಜನಜನಿತವಾದ ಪ್ರದೇಶವಾಗಿದ್ದಿತೆಂದು ಗೊತ್ತಾಗುತ್ತದೆ. ಸಂಗಮೇಶ್ವರ ಮತ್ತು ಜೈನ ದೇವಾಲಯಗಳ ಸಮೀಪದಲ್ಲಿ ನಡೆದ ಉತ್ಖನನಗಳಿಂದ, ಸುಟ್ಟ ಇಟ್ಟಿಗೆಗಳಿಂದ ನಿರ್ಮಿತವಾದ ಕಟ್ಟಡಗಳು ಬೆಳಕಿಗೆ ಬಂದಿದ್ದು, ಚಲುಕ್ಯರ ಕಾಲಕ್ಕಿಂತ ಪ್ರಾಚೀನವಾದ ಕಾಲಕ್ಕೆ ಅವು ಸೇರುತ್ತವೆ. ಪ್ರಾಚೀನ ಕಾಲದಲ್ಲಿ ಈ ಸ್ಥಳದ ಹೆಸರು ಕಿಸುವೊಳಲ್ (ಕೆಂಪು ಪಟ್ಟಣ) ಅಥವಾ ಪಟ್ಟದ ಕಿಸುವೊಳಲ್ ಎಂಬುದಾಗಿ ಇದ್ದಿತೆಂದು ಇಲ್ಲಿನ ಶಾಸನಗಳು ತಿಳಿಸುತ್ತವೆ. ಕ್ರಿ.ಶ. 1540ರ ಸಾಹಿತ್ಯಕೃತಿ ಹಮ್ಮೀರ ಕಾವ್ಯ ಈ ಸ್ಥಳವನ್ನು ಪಟ್ಟಶಿಲಾಪುರ ಮತ್ತು ಹಮ್ಮೀರಪುರ ಎಂದು ಉಲ್ಲೇಖಿಸುತ್ತದೆ. ಈ ನಗರವು ಬಾದಾಮಿ ಚಲುಕ್ಯರ ಕಾಲದಲ್ಲಿ ತನ್ನ ಅತ್ಯುತ್ತಮ ಸ್ಥಿತಿಯನ್ನು ಮುಟ್ಟಿತು ಮತ್ತು ಇದು ಅವರ ಉಪರಾಜಧಾನಿಯಾಗಿದ್ದಿತು. ಹನ್ನೊಂದು ಮತ್ತು ಹನ್ನೆರಡನೇಯ ಶತಮಾತನದ ಶಾಸನಗಳಲ್ಲಿ, 1500ರ ಸಿಂಗಿರಾಜ ಪುರಾಣ ಸಾಹಿತ್ಯಕೃತಿ ಮತ್ತು ಹಮ್ಮೀರ ಕಾವ್ಯಗಳಲ್ಲಿ, ಈ ಸ್ಥಳದಲ್ಲಿ ಚಲುಕ್ಯ ರಾಜರು ಪಟ್ಟಾಭಿಷಿಕ್ತರಾಗುತ್ತಿದ್ದರೆಂದು ಹೇಳಲಾಗಿದೆ. ಈ ಸ್ಥಳವು ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಳುಕ್ಯರ ಕಾಲದಲ್ಲಿಯೂ ಪ್ರಮುಖವಾದ ಸ್ಥಳವಾಗಿ ಮುಂದುವರೆಯಿತು. ಅನಂತರ ಇದು ಕಿಸುಕಾಡು–70 ಎಂಬ ಸಣ್ಣ ಪ್ರಾಂತ್ಯದ ಮುಖ್ಯ ನಗರವಾಗಿತ್ತು. ಯೆರಂಬರಿಗೆಯ (ಯೆಲಬುರ್ಗಿ) ಸಿಂಧರು ಈ ಪ್ರಾಂತವನ್ನು ಸ್ವಲ್ಪಕಾಲ ಆಳಿದರು. ದೇವಾಲಯದ ವಾಸ್ತುಶಿಲ್ಪ ದೃಷ್ಟಿಯಿಂದ ಗಮನಾರ್ಹ ಸಂಗತಿಯೆಂದರೆ ಚಲುಕ್ಯರ ಕಾಲದಲ್ಲಿ ದ್ರಾವಿಡ ಮತ್ತು ನಾಗರಶೈಲಿಯ ದೇವಾಲಯಗಳು ಪಕ್ಕಪಕ್ಕದಲ್ಲೇ ಇಲ್ಲಿ ನಿರ್ಮಾಣಗೊಂಡಿದ್ದು ಇಲ್ಲಿ ಹತ್ತು ದೊಡ್ಡ ದೇವಾಲಯಗಳಿದ್ದು, ಅವುಗಳಲ್ಲಿ ಒಂಭತ್ತು ಶೈವ ಮತ್ತು ಒಂದು ಜೈನಧರ್ಮಕ್ಕೆ ಸೇರಿದ್ದು. ಇವೆಲ್ಲವೂ ನದಿಯ ಉತ್ತರ ದಂಡೆಯ ಮೇಲಿದ್ದು, ವಾಸ್ತು ಗ್ರಂಥಗಳ ಪ್ರಕಾರ ಇದು ಪವಿತ್ರವಾದ ಸ್ಥಳ. ಪಟ್ಟದಕಲ್ಲಿನಲ್ಲಿ ಅತ್ಯಂತ ದೊಡ್ಡ ದೇವಾಲಯವೆಂದರೆ ವಿಶಾಲವಾದ ಪ್ರಾಕಾರದಿಂದ ಕೂಡಿದ ವಿರೂಪಾಕ್ಷ ದೇವಾಲಯ. ಇಲ್ಲಿರುವ ಒಂದು ಶಾಸನದ ಪ್ರಕಾರ, ಈ ದೇವಾಲಯವನ್ನು ಎರಡನೇಯ ವಿಕ್ರಮಾದಿತ್ಯನ ಪತ್ನಿಯಾದ ಲೋಕಮಹಾದೇವಿಯು, ವಿಕ್ರಮಾದಿತ್ಯನು ಮೂರು ಬಾರಿ ಪಲ್ಲವರನ್ನು ಸೋಲಿಸಿ ಕಂಚಿಯನ್ನು ವಶ ಮಾಡಿಕೊಂಡಿದ್ದರ ಜ್ಞಾಪಕಾರ್ಥವಾಗಿ ಕಟ್ಟಿಸಿದಳು. ಇದರ ಮೊದಲ ಹೆಸರು ಲೋಕೇಶ್ವರ ಅಥವಾ ಲೋಕಪಾಲೇಶ್ವರ. ಬಹುಶಃ ಇದು ಕ್ರಿ.ಶ. ಎಂಟನೇಯ ಶತಮಾನದ ಪೂರ್ವಾರ್ಧದಲ್ಲಿ ನಿರ್ಮಿತವಾಗಿರಬೇಕು. ಈ ದೇವಾಲಯದಲ್ಲಿ ಒಂದು ಗರ್ಭಗುಡಿ, ಪ್ರದಕ್ಷಿಣಾಪಥ, ಕಂಬಗಳಿಂದ ಕೂಡಿದ ನವರಂಗ ಮತ್ತು ಉತ್ತರ, ಪೂರ್ವ ಮತ್ತು ದಕ್ಷಿಣಗಳಿಗೆ ತೆರೆದಿರುವ ದ್ವಾರಗಳು ಇವೆ. ಇದಕ್ಕೆ ಪೂರ್ವದಲ್ಲಿ ಎತ್ತರವಾದ ಗೋಪುರವೂ ಅದರ

ಹಿಂದೆ ಸಣ್ಣ ಬಾಗಿಲೂ ಇದೆ. ಕಲ್ಲಿನ ಮಂಟಪದಲ್ಲಿ ಅನೇಕ ಶಾಸನಗಳು ಮತ್ತು ಎತ್ತರವಾದ ಮಾನುಷ ಶಿಲ್ಪಗಳೂ ಇವೆ. ಸ್ವಲ್ಪ ಒಳಗೆ, ನಾಲ್ಕು ಕಂಬಗಳುಳ್ಳ ನಂದಿಮಂಟಪವಿದ್ದು, ಅದರಲ್ಲಿ ಸುಂದರವಾದ ದೊಡ್ಡ ನಂದಿಯಿದೆ. ಕಂಬಗಳ ಮೇಲೆ ಮತ್ತು ಗೋಡೆಗಳ ಮೇಲೆ ಅನೇಕ ಪುರುಷರ, ಸ್ತ್ರೀಯರ, ಕುಬ್ಜರ ಮತ್ತು ಅನೇಕ ದಂಪತಿಗಳ ಸುಂದರ ಶಿಲ್ಪಗಳಿವೆ. ಮುಂಭಾಗದಲ್ಲೇ ಮುಖ್ಯ ಗುಡಿಯಿದೆ. ಈ ಗರ್ಭಗುಡಿಯಲ್ಲಿರುವ ವೃತ್ತಾಕಾರದಲ್ಲಿ ಚೌಕನೆಯ ಪೀಠದ ಮೇಲೆ ಕಪ್ಪು ಶಿಲೆಯ ಶಿವಲಿಂಗವಿದೆ. ಎಲ್ಲೋರದಲ್ಲಿರುವ ಪ್ರಖ್ಯಾತ ಕೈಲಾಸ ದೇವಾಲಯವು ಇಲ್ಲಿನ ವಿರೂಪಾಕ್ಷ ದೇವಾಲಯದ ಮಾದರಿಯಲ್ಲೇ ನಿರ್ಮಿತವಾಗಿದೆ. ಇಲ್ಲಿರುವ ದೇವಾಲಯಗಳಲ್ಲಿ ಬಹುಶಃ ಅತ್ಯಂತ ಪ್ರಾಚೀನವಾದದ್ದು, ದ್ರಾವಿಡ ಶೈಲಿಯಲ್ಲಿರುವ ಸಂಗಮೇಶ್ವರ ದೇವಾಲಯ. ಇದರಲ್ಲಿ ಗರ್ಭಗೃಹ, ಪ್ರದಕ್ಷಿಣಾಪಥ ಮತ್ತು ನವರಂಗವಿದೆ. ಗರ್ಭಗೃಹ ಮತ್ತು ಅಂತರಾಳದ ಸುತ್ತಲೂ ಪ್ರದಕ್ಷಿಣಾಪಥವಿದೆ. ಇದರ ಹೊರಗೋಡೆಗಳಲ್ಲಿ ಉಗ್ರನರಸಿಂಹ, ನಟರಾಜ ಇವರ ಶಿಲ್ಪಗಳನ್ನು ಹೊಂದಿದ ಜಾಲಂಧ್ರವಿದೆ. ನವರಂಗದಲ್ಲಿ ನಾಲ್ಕು ಸಾಲುಗಳಲ್ಲಿ ಇಪ್ಪತ್ತು ಕಂಬಗಳಿವೆ. ಇದರ ಹೊರಭಾಗದಲ್ಲಿ ಶಿಲ್ಪಗಳಿವೆ. ಗರ್ಭಗೃಹದ ಮೇಲೆ ದ್ರಾವಿಡ ರೀತಿಯ ವಿಮಾನವಿದೆ. ಕ್ರಿ.ಶ. 1162ರ ಶಾಸನವೊಂದರ ಪ್ರಕಾರ, ಈ ದೇವಾಲಯವನ್ನು ಚಲುಕ್ಯ ರಾಜ ವಿಜಯಾದಿತ್ಯನು ವಿಜಯೇಶ್ವರ ಎಂಬ ಹೆಸರಿನಲ್ಲಿ ನಿರ್ಮಿಸಿದನು. ವಿರೂಪಾಕ್ಷ ದೇವಾಲಯದ ಉತ್ತರಕ್ಕೆ ಮಲ್ಲಿಕಾರ್ಜುನ ದೇವಾಲಯವಿದೆ. ಇದರ ಹಿಂದಿನ ಹೆಸರು ತ್ರೈಲೋಕೇಶ್ವರವೆಂದಿತ್ತು. ಇದು ವಿನ್ಯಾಸ, ವಾಸ್ತು ಮತ್ತು ಶಿಲ್ಪಗಳಲ್ಲಿ ವಿರೂಪಾಕ್ಷ ದೇವಾಲಯವನ್ನೇ ಹೋಲುತ್ತದೆಯಾದರೂ ಗಾತ್ರದಲ್ಲಿ ಸಣ್ಣದು. ಮಂಟಪದಲ್ಲಿ ಹಿರಣ್ಯಕಶಿಪುವನ್ನು ಸಂಹಾರ ಮಾಡುತ್ತಿರುವ ನರಸಿಂಹನ ಶಿಲ್ಪ ಮತ್ತು ಇಬ್ಬರು ಸ್ತ್ರೀಯರ ಸುಂದರ ಶಿಲ್ಪಗಳಿವೆ. ಇಲ್ಲಿನ ನವರಂಗದ ಪ್ರವೇಶದ ಎರಡು ಕಡೆಗಳಲ್ಲೂ ಅದ್ಭುತವಾದ ಎರಡು ದ್ವಾರಪಾಲಕ ವಿಗ್ರಹಗಳಿವೆ. ನವರಂಗದಲ್ಲಿರುವ ಹದಿನೆಂಟು ಕಂಬಗಳ ಮೇಲೆ ರಾಮಾಯಣ, ಮಹಾಭಾರತ ಮತ್ತು ಆಗಿನ ಕಾಲದ ಸಾಮಾಜಿಕ ಸ್ಥಿತಿಯನ್ನು ಚಿತ್ರಿಸುವ ಶಿಲ್ಪಗಳಿವೆ. ಭುವನೇಶ್ವರಿಗಳಲ್ಲಿ ಗಜಲಕ್ಷ್ಮಿ, ನಂದಿ ಸಮೇತ ಪಾರ್ವತಿಯರ ಶಿಲ್ಪಗಳಿವೆ. ವಿಧವಿಧವಾದ ಆಭರಣಗಳನ್ನು ಹಾಕಿಕೊಂಡಿರುವ, ವೈವಿಧ್ಯಮಯ ಕೇಶಾಲಂಕಾರದಿಂದ ಅಲಂಕೃತವಾಗಿರುವ ಅನೇಕ ದಂಪತಿಗಳ ಶಿಲ್ಪಗಳೂ ಇಲ್ಲಿವೆ. ಹೊರಭಾಗದ ಗೋಡೆಗಳಲ್ಲಿ ಶಿವ, ನಂದಿ, ಲಕುಲೀಶ ಮುಂತಾದ ಶಿಲ್ಪಗಳಿವೆ. ಇಮ್ಮಡಿ ವಿಕ್ರಮಾದಿತ್ಯನ ರಾಣಿಯಾದ ತ್ರೈಲೋಕ್ಯ ಮಹಾದೇವಿಯು ಈ ದೇವಾಲಯವನ್ನು ನಿರ್ಮಿಸಿದಳು. ಪಟ್ಟದಕಲ್ಲಿನಿಂದ ಬಾದಾಮಿಗೆ ಹೋಗುವ ರಸ್ತೆಯಲ್ಲಿ ಜೈನ ಬಸದಿಯಿದೆ. ಇದರಲ್ಲಿ ಮುಖಮಂಟಪ, ನವರಂಗ, ಶುಕನಾಸ ಮತ್ತು ಗರ್ಭಗೃಹಗಳಿವೆ. ಬಹುಶಃ ಇದು ಕ್ರಿ.ಶ. ಒಂಬತ್ತನೇಯ ಶತಮಾನದಲ್ಲಿ ರಚಿತವಾಗಿರಬಹುದು. ಗಳಗನಾಥ ದೇವಾಲಯವು ವಿರೂಪಾಕ್ಷ ದೇವಾಲಯದ ಉತ್ತರಕ್ಕಿದ್ದು ಪಶ್ಚಿಮಾಭಿಮುಖವಾಗಿದೆ. ಇದರಲ್ಲಿ ನವರಂಗ, ಶುಕನಾಸ, ಲಿಂಗವಿರುವ ಗರ್ಭಗೃಹಗಳಿವೆ. ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣಾಪಥವಿದೆ. ಅನೇಕ ದೇವಕೋಷ್ಠಗಳಲ್ಲಿ ಕುಬೇರ, ಗಜಲಕ್ಷ್ಮಿ ಮತ್ತಿತರ ಶಿಲ್ಪಗಳಿವೆ. ಗರ್ಭಗುಡಿಯ ಸುತ್ತಲೂ ಇರುವ ಪ್ರದಕ್ಷಿಣಾಪಥದ ಹೊರಭಾಗದ ಗೋಡೆಯ ಮೇಲಿನ ಗೂಡಿನಲ್ಲಿ ಸುಂದರವಾದ ಶಿವನ ಶಿಲ್ಪವಿದೆ. ಇಲ್ಲಿರುವ ರೇಖಾನಾಗರ ಶಿಖರವು ಬಹು ಸುಂದರವಾಗಿದೆ. ಇದು ಕ್ರಿ.ಶ. ಎಂಟನೇಯ ಶತಮಾನದ ಪೂರ್ವಾರ್ಧದಲ್ಲಿ ರಚಿತವಾದದ್ದೆಂದು ತೋರುತ್ತದೆ. ವಿರೂಪಾಕ್ಷ ದೇವಾಲಯದ ದಕ್ಷಿಣಕ್ಕಿರುವ ಪಾಪನಾಥ ದೇವಾಲಯದಲ್ಲಿ ಮಂಟಪ, ನವರಂಗ, ದೊಡ್ಡ ಅಂತರಾಳ ಮತ್ತು ಪ್ರದಕ್ಷಿಣಾಪಥವಿರುವ ಗರ್ಭಗೃಹಗಳಿವೆ. ನವರಂಗದ ಪ್ರವೇಶದ್ವಾರದ ಎರಡು ಕಡೆಗಳಲ್ಲಿಯೂ ದ್ವಾರಪಾಲಕರು, ನಂದಿ ಮತ್ತು ವೀರಭದ್ರ ಶಿಲ್ಪಗಳಿವೆ. ಮುಖ್ಯ ಹಜಾರದಲ್ಲಿ ಹದಿನಾರು ಕಂಬಗಳಿದ್ದು, ಅವುಗಳಲ್ಲಿ ದಂಪತಿಗಳ, ಸ್ತ್ರೀಯರ ಸುಂದರ ಶಿಲ್ಪಗಳಿವೆ. ಭುವನೇಶ್ವರಿಯಲ್ಲಿ ಬಹಳ ಸುಂದರವಾದ, ವಿಷ್ಣು ಸಹಿತ ಶಿವ ಪಾರ್ವತಿ, ಗಾಂಧರ್ವರ ಶಿಲ್ಪಗಳಿವೆ. ಗೋಡೆಯ ವಾಯುವ್ಯ ಭಾಗದಲ್ಲಿರುವ ರಾಜನ ಆಸ್ಥಾನ ಶಿಲ್ಪ ಗಮನಾರ್ಹವಾದುದು. ಶೃಂಗಾರ ಚೇಷ್ಟಾನಿರತ ದಂಪತಿಗಳು ಮತ್ತು ಅಲಂಕಾರದ ವಿನ್ಯಾಸಗಳು ದೇವಾಲಯದ ಅನೇಕ ಭಾಗಗಳಲ್ಲಿವೆ. ದೇವಾಲಯದ ಹೊರಗೋಡೆಗಳಲ್ಲಿ ಸಿಂಹಗಳು, ಆನೆ ಸವಾರರು ಮತ್ತು ರಾಮಾಯಣ ದೃಶ್ಯಗಳನ್ನು ಬಿಡಿಸಿರುತ್ತಾರೆ. ಈ ದೇವಾಲಯವನ್ನು ಅನೇಕ ಹಂತಗಳಲ್ಲಿ ನಿರ್ಮಿಸಲಾಗಿದೆ. ಗರ್ಭಗುಡಿಯ ಮೇಲೆ ರೇಖಾನಾಗರ ವಿಮಾನವಿದೆ. ಈ ದೇವಾಲಯವು ಸುಮಾರು ಕ್ರಿ.ಶ. 680ರಲ್ಲಿ ನಿರ್ಮಿತವಾಗಿರಬೇಕು. ಸಂಗಮೇಶ್ವರ ದೇವಾಲಯದ ಎಡಭಾಗದಲ್ಲಿ ಸಣ್ಣದಾದ ಚಂದ್ರಶೇಖರ ದೇವಾಲಯವಿದೆ. ಇದರ ವಾಸ್ತುಶೈಲಿಯು ಬಹಳ ಸರಳವಾಗಿದ್ದು ಇದರಲ್ಲಿ ಯಾವ ಶಿಲ್ಪಗಳೂ ಇಲ್ಲ. ಈ ಸಣ್ಣ ಆಲಯದಲ್ಲಿ ಲಿಂಗವಿರುವ ಗರ್ಭಗುಡಿ ಮತ್ತು ಮಂಟಪವಿದೆ. ಒಂದೇ ಒಂದು ದ್ವಾರಪಾಲಕನ ವಿಗ್ರಹ ಮಾತ್ರ ಉಳಿದುಬಂದಿದೆ. ಗಳಗನಾಥ ದೇವಾಲಯದ ಹಿಂಭಾಗದಲ್ಲಿ ಜಂಬುಲಿಂಗ ದೇವಾಲಯವಿದೆ. ಇದರಲ್ಲಿ ಗರ್ಭಗೃಹ, ಶುಕನಾಸ ಮತ್ತು ನವರಂಗವಿದೆ. ಶುಕನಾಸದ ಪ್ರವೇಶದ್ವಾರದ ಎರಡು ಕಡೆಗಳಲ್ಲಿಯೂ ಶಿವನ ಭಟರಾದ ನಂದಿ ಮತ್ತು ವೀರಭದ್ರರಿದ್ದಾರೆ. ಗರ್ಭಗುಡಿಯಲ್ಲಿ ಲಿಂಗವಿದೆ. ಗರ್ಭಗುಡಿಯ ಹೊರಭಾಗದ ಗೋಡೆಯಲ್ಲಿರುವ ದೇವಕೋಷ್ಠಗಳಲ್ಲಿ ಶಿವ (ಲಕುಲೀಶ) ಮತ್ತು ವಿಷ್ಣುವಿನ ಶಿಲ್ಪಗಳಿವೆ. ಇದರಲ್ಲಿ ಸಣ್ಣದಾದ ರೇಖಾನಾಗರಶಿಖರವಿದೆ. ಉತ್ತರದಲ್ಲಿ ಜಂಬುಲಿಂಗ ದೇವಾಲಯಕ್ಕೆ ಸಮೀಪದಲ್ಲಿ ಕಾಡುಸಿದ್ಧೇಶ್ವರ ದೇವಾಲಯವಿದೆ. ಗಾತ್ರ ಮತ್ತು ವಾಸ್ತುಶಿಲ್ಪದಲ್ಲಿ ಇದು ಜಂಬುಲಿಂಗ ದೇವಾಲಯವನ್ನು ಹೋಲುತ್ತದೆ. ಇಲ್ಲಿ ಸ್ಫುಟವಾಗಿ ಕೆತ್ತಲಾಗಿರುವ ಶಿವ,

ಪಾರ್ವತಿ, ವಿಷ್ಣು ಮತ್ತು ಇತರ ದೇವತೆಗಳ ಶಿಲ್ಪಗಳು ಹೊರ ಗೋಡೆಯ ಮೇಲಿವೆ. ಮಲ್ಲಿಕಾರ್ಜುನ ದೇವಾಲಯದ ಉತ್ತರದಲ್ಲಿ ಕಾಶಿವಿಶ್ವೇಶ್ವರ ದೇವಾಲಯವಿದೆ. ಈಗ ಇದರ ಗರ್ಭಗೃಹ ಮತ್ತು ಅದರ ಮುಂದಿನ ಪಥ ಮಾತ್ರ ಉಳಿದಿವೆ. ಪ್ರದಕ್ಷಿಣಾ ಪಥದ ಒಳಭಾಗದಲ್ಲಿರುವ ಕಂಬಗಳ ಮೇಲೆ ಸ್ತ್ರೀಯರ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಭುವನೇಶ್ವರಿಯಲ್ಲಿ ಸೋಮಸ್ಕಂಧ ಶಿಲ್ಪವಿದೆ. ಇದರ ಗರ್ಭಗುಡಿಯ ಮೇಲೆ ರೇಖಾನಾಗರ ವಿಮಾನವಿದೆ. ಬಹುಶಃ ಇದು ಕ್ರಿ.ಶ. ಎಂಟನೇಯ ಶತಮಾನದ ರಚನೆಯಿರಬೇಕು. ಈ ಪ್ರಖ್ಯಾತ ದೇವಾಲಯಗಳು ಮಾತ್ರವಲ್ಲದೆ ಇಲ್ಲಿ ಅನೇಕ ಸಣ್ಣ ಸಣ್ಣ ಶಿವನ ದೇವಾಲಯಗಳೂ ಇವೆ. ವಿರೂಪಾಕ್ಷ, ಸಂಗಮೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳ ಸಮೀಪದಲ್ಲಿರುವ ಒಂದು ಶೈವಸ್ತಂಭದ ಮೇಲಿರುವ ಶಾಸನ ಪ್ರಕಾರ, ತ್ರಿಶೂಲವಿರುವ ಈ ಸ್ತಂಭವನ್ನು ಗಂಗಾನದಿಯ ಉತ್ತರ ತೀರದ ಮೃಗಥಾನಿಕಾಹಾರದಲ್ಲಿ ವಾಸವಾಗಿದ್ದ ಜ್ಞಾನ ಶಿವಾಚಾರ್ಯನು ಸ್ಥಾಪಿಸಿದನು. ಈತನು ವಿಜಯೇಶ್ವರನಿಗೆ ಕೊಟ್ಟ ದತ್ತಿಗಳ ವಿಷಯವನ್ನೂ ಈ ಶಾಸನ ತಿಳಿಸುತ್ತದೆ. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಶಿವದೇವಾಲಯಗಳು ಇರುವುದರಿಂದ ಪ್ರಾಚೀನ ಕಾಲದಲ್ಲಿ ಇದೊಂದು ಪ್ರಖ್ಯಾತ ಶೈವ ಕೇಂದ್ರವಾಗಿದ್ದಿತೆಂದು ಗೊತ್ತಾಗುತ್ತದೆ. ಈಗ ಈ ಸ್ಥಳವು ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ.

ಪಾಂಡವಪುರ: (ಮಂಡ್ಯ ಜಿ; ಉಪವಿಭಾಗ ಮತ್ತು ತಾ. ಕೇ; ಜನ: 14,164) ಪಾಂಡವಪುರವು ಕಾವೇರಿ ನದಿಯ ಬಲದಂಡೆ ನಾಲೆಯ ಮೇಲಿರುವ ಪುರಸಭಾ ಪಟ್ಟಣ. ಇದು ಮಂಡ್ಯದಿಂದ ಸುಮಾರು 34 ಕಿಮೀ ಪಶ್ಚಿಮದಲ್ಲಿಯೂ, ಬೆಂಗಳೂರಿನಿಂದ 123 ಕಿಮೀ ದೂರದಲ್ಲಿಯೂ ಇದೆ. ಈ ಪ್ರದೇಶದಲ್ಲಿ ಪ್ರಚಲಿತವಾಗಿರುವ ಕಥೆಗಳ ಪ್ರಕಾರ, ಪಾಂಡವರು ತಮ್ಮ ಅಜ್ಞಾತವಾಸ ಸಮಯದಲ್ಲಿ ಇಲ್ಲಿಗೆ ಭೇಟಿ ಇತ್ತಿದ್ದರು. ಸಮೀಪದಲ್ಲಿಯೇ ಎರಡು ಬೆಟ್ಟಗಳಿದ್ದು, ಅವುಗಳನ್ನು ಕುಂತಿಬೆಟ್ಟ ಮತ್ತು ಭೀಮನಬೆಟ್ಟ ಎಂದು ಕರೆಯಲಾಗುತ್ತದೆ. ಮತ್ತೊಂದು ಕಥೆಯ ಪ್ರಕಾರ ಅವು ಅಕ್ಕ ತಂಗಿಯರ ಬೆಟ್ಟಗಳಾಗಿವೆ. ಈ ಪಟ್ಟಣಕ್ಕೆ ಮೊದಲು ಹಿರೋಡೆ ಎಂಬ ಹೆಸರಿತ್ತು. ಅನಂತರ ಹೈದರ್ ಮತ್ತು ಟಿಪ್ಪು ಅವರ ಸೇವೆಯಲ್ಲಿದ್ದ ಫ್ರೆಂಚರು ಇಲ್ಲಿ ವಾಸ ಮಾಡುತ್ತಿದ್ದುದರಿಂದ, ಈ ಜಾಗಕ್ಕೆ ಫ್ರೆಂಚ್‌ರಾಕ್ಸ್ ಎಂಬ ಹೆಸರು ಬಂದಿತು. ಬ್ರೂಸ್‌ಫೂಟ್‌ನಿಂದ ಇಲ್ಲಿ ನವಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳು ಪತ್ತೆ ಹಚ್ಚಲ್ಪಟ್ಟವು. ಕಬ್ಬನ್ನು ಬೆಳೆಯುವ ಪ್ರದೇಶದ ಮಧ್ಯೆ ಈ ಪಟ್ಟಣವಿದ್ದು, ಇಲ್ಲಿ ಒಂದು ಸಕ್ಕರೆ ಕಾರ್ಖಾನೆಯೂ ಪ್ರಾರಂಭಿಸಲ್ಪಟ್ಟಿದೆ. ಪಾಂಡವಪುರಕ್ಕೆ ಸಮೀಪದಲ್ಲಿರುವ ಲೋಕಪಾವನಿ ರೈಲ್ವೆ ಸೇತುವೆ ಮತ್ತು ವಿಶ್ವೇಶ್ವರಯ್ಯ ನಾಲೆಯು ಹಾದುಹೋಗುವ ಸ್ಥಳದಲ್ಲಿ ನಿರ್ಮಿಸಿರುವ ಕಲ್ಲಿನ ಮೇಲುಕಾಲುವೆಗಳು (ಕಟ್ಟೇರಿಯ ಸಮೀಪ) ಇಂಜಿನಿಯರಿಂಗ್ ಕೌಶಲವನ್ನು ಪ್ರದರ್ಶಿಸುವ ಕಾಮಗಾರಿಗಳು. ಅತ್ಯಂತ ದೊಡ್ಡದಾದ, ಕರೀಘಟ್ಟ ಬೆಟ್ಟಗಳಲ್ಲಿ ಹಾದುಹೋಗುವ ಹುಲಿಕೆರೆ ಸುರಂಗವು ಈ ತಾಲೂಕಿನಲ್ಲಿ ಪ್ರಾರಂಭವಾಗುತ್ತದೆ. ಇದು 9,200 ಅಡಿ ಉದ್ದದ ನೀರಾವರಿ ಸುರಂಗ. ಪಾಂಡವಪುರದಿಂದ 14 ಕಿಮೀ ದೂರದಲ್ಲಿರುವ ಚಿನಕುರಳಿ ಹೋಬಳಿಯ ಕೇಂದ್ರ. ಈ ಸ್ಥಳದಲ್ಲಿ ಹೈದರನಿಗೂ ಮರಾಠರಿಗೂ 1771ರಲ್ಲಿ ಯುದ್ಧ ನಡೆಯಿತು. ಇಲ್ಲಿ ಆಂಜನೇಯ ದೇವಾಲಯ ಮತ್ತು ಮಾಸ್ತಿಗುಡಿಗಳು ಇವೆ. ಈ ಪಟ್ಟಣಕ್ಕೆ ಸಮೀಪದಲ್ಲಿರುವ ಬೇಬಿ ಬೆಟ್ಟದಲ್ಲಿ ಸಿದ್ದೇಶ್ವರಸ್ವಾಮಿ ಮತ್ತು ಮಾದೇಶ್ವರಸ್ವಾಮಿಯವರ ಹೆಸರಿನಲ್ಲಿ ಒಂದು ದೊಡ್ಡ ಜಾತ್ರೆ ಮತ್ತು ದನದ ಪರಿಷೆ ನಡೆಯುತ್ತದೆ. ಪ್ರಾಚೀನ ಕಾಲದಲ್ಲಿ ಕಣ್ವಪುರಿ ಎಂಬ ಹೆಸರನ್ನು ಹೊಂದಿದ್ದ ಕನ್ನಂಬಾಡಿ (ಈಗ ಮುಳುಗಿಹೋಗಿರುವ) ವಿಶೇಷ ಪ್ರಾಚೀನತೆಯನ್ನು ಹೊಂದಿದ್ದ ಪ್ರಖ್ಯಾತ ಸ್ಥಳ. ಇಲ್ಲಿ ನಡೆಯುವ ಹಿರಿದೇವಮ್ಮ ಮತ್ತು ಬನ್ನಂಗಾಡಿಯಲ್ಲಿ ನಡೆಯುವ ದೊಡ್ಡಮ್ಮ ಜಾತ್ರೆಗಳು ಬಹಳ ಜನಗಳನ್ನು ಆಕರ್ಷಿಸುತ್ತವೆ. 9ನೇಯ ಶತಮಾನದ ಶಾಸನಗಳ ಪ್ರಕಾರ, ಕ್ಯಾತನಹಳ್ಳಿಯ ಸಮೀಪದಲ್ಲಿರುವ ಬಸ್ತಿಗದ್ದೆಯು ಜೈನ ಕೇಂದ್ರವಾಗಿದ್ದು, ಈಗಲೂ ಜೈನ ಅವಶೇಷಗಳನ್ನು ಕಾಣಬಹುದು. ಪಾಂಡವಪುರದ ಉತ್ತರಕ್ಕೆ ಎಂಟು ಕಿಮೀ ದೂರದಲ್ಲಿರುವ ತೊಣ್ಣೂರು (ಜನ: 1,163) ತೊಂಡನೂರು ಎಂಬ ಹೆಸರಿನ ಇತಿಹಾಸ ಪ್ರಸಿದ್ಧವಾದ ಮತ್ತು ವಿಶೇಷ ಪ್ರಾಚೀನವಾದ ಸ್ಥಳ. ಅದು ಹೊಯ್ಸಳರ ಪ್ರಾಂತದ ರಾಜಧಾನಿಯಾಗಿತ್ತು. ಬಿಟ್ಟಿದೇವ ಅಥವಾ ವಿಷ್ಣುವರ್ಧನನು, ಶ್ರೀರಾಮಾನುಜಾಚಾರ್ಯರು ಅವನನ್ನು ಭೇಟಿ ಮಾಡಿದಾಗ ಇಲ್ಲಿಯ ರಾಜ್ಯಪಾಲನಾಗಿದ್ದನು. ರಾಮಾನುಜಾಚಾರ್ಯರು ಅವನನ್ನು ಶ್ರೀ ವೈಷ್ಣವ ಧರ್ಮಕ್ಕೆ ಸೆಳೆದುಕೊಂಡರು. ಅವರು ಮೇಲುಕೋಟೆಗೆ ಹೋಗುವ ಮುಂಚೆ ಇಲ್ಲಿ ಕೆಲವು ವರ್ಷ ತಂಗಿದ್ದರು. ಇದು ಶ್ರೀಮಂತವಾದ ಜೈನ ಕೇಂದ್ರವಾಗಿದ್ದು, ಅನೇಕ ಬಸದಿಗಳೂ ಇಲ್ಲಿವೆ. ಇದು ಶೈವ ಕ್ಷೇತ್ರವೂ ಆಗಿತ್ತು. ಹೊಯ್ಸಳರ ಕಾಲದ ಶಾಸನವೊಂದು ಇಲ್ಲಿರುವ ದೇವಾಲಯಗಳಿಗೆ ಮತ್ತು ಬಸದಿಗಳಿಗೆ ಕೊಡಲಾದ ದತ್ತಿಗಳ ವಿಷಯವನ್ನು ತಿಳಿಸುತ್ತದೆ. ಎರಡು ಬೆಟ್ಟಗಳ ಮಧ್ಯದಲ್ಲಿರುವ ಸ್ಥಳಕ್ಕೆ ದಂಡೆಯನ್ನು ಕಟ್ಟಿ ನಿರ್ಮಿಸಲಾದ ತಿರುಮಲಸಾಗರ ಅಥವಾ ಮೋತಿತಲಾಬ್ ಎಂಬ ದೊಡ್ಡ ಕೆರೆಯೂ ಇಲ್ಲಿದೆ. ದಕ್ಷಿಣದ ಸುಬೇದಾರ (ನಿಜಾಮ)ನ ಮಗ ನಾಸಿರ್‌ಜಂಗನು 1746ರಲ್ಲಿ ಈ ಕೊಳಕ್ಕೆ ಭೇಟಿ ಕೊಟ್ಟು, ಇದಕ್ಕೆ ಮೋತಿತಲಾಬ್ (ಮುತ್ತುಗಳ ಕೊಳ) ಎಂಬ ಹೆಸರನ್ನು ಕೊಟ್ಟನು. ಇಲ್ಲಿ ನಾಲ್ಕು ಪ್ರಾಚೀನ ದೇವಾಲಯಗಳಿದ್ದು, ಇವುಗಳಲ್ಲಿ ಅತ್ಯಂತ ದೊಡ್ಡದು ಮತ್ತು ಪ್ರಾಚೀನವಾದದ್ದು, ಹನ್ನೆರಡನೇಯ ಶತಮಾನದ ಲಕ್ಷ್ಮೀನಾರಾಯಣ ದೇವಾಲಯ. ಗರುಡಪೀಠದ ಮೇಲೆ ನಿಂತಿರುವ ನಾರಾಯಣನ ವಿಗ್ರಹವು ಆರು ಅಡಿ ಎತ್ತರವಿದೆ. ಯೋಗಾನರಸಿಂಹ ದೇವಾಲಯವು ಸಣ್ಣ

ದೇವಾಲಯ. ಸಂಪ್ರದಾಯದ ಪ್ರಕಾರ ಇದು ರಾಮಾನುಜಾಚಾರ್ಯರಿಗೆ ಸಂಬಂಧಿಸಿದ ದೇವಾಲಯ. ಇಲ್ಲಿ ರಾಮಾನುಜಾಚಾರ್ಯರ ವಿಗ್ರಹವೂ ಇದೆ. ಜೀರ್ಣಾವಸ್ಥೆಯಲ್ಲಿರುವ ಕೈಲಾಸೇಶ್ವರ ದೇವಾಲಯವೂ ಹನ್ನೆರಡನೇಯ ಶತಮಾನದ ದೇಗುಲ. ಹತ್ತಿರದಲ್ಲಿರುವ ಬೆಟ್ಟದ ಮೇಲೆ ಸಯ್ಯದ್ ಸಾಲಾರ್ ಮಸೂದ್ ಸಾಹಿಬ್ ಅವರ ದರ್ಗಾ ಇದೆ. ಇಲ್ಲಿ ವರ್ಷಕ್ಕೊಮ್ಮೆ ಉರುಸ್ ನಡೆಯುತ್ತದೆ.

ಪಾವಗಡ: (ತುಮಕೂರು ಜಿ; ತಾ. ಕೇ; ಜನ: 14,435). ಪಾವಗಡ ಬೆಟ್ಟದ ದಕ್ಷಿಣ ತುದಿಯಲ್ಲಿರುವ ಪಾವಗಡ ಪಟ್ಟಣವು ತುಮಕೂರಿನಿಂದ 96 ಕಿಮೀ ಮತ್ತು ಬೆಂಗಳೂರಿನಿಂದ ಉತ್ತರಕ್ಕೆ 168 ಕಿಮೀ ದೂರದಲ್ಲಿಯೂ ಇದೆ. ಇಲ್ಲಿ ದೊರಕಿದ ಒಂದು ಕಲ್ಲಿನ ಮೇಲೆ ಹಾವಿನ (ಪಾವು) ಚಿತ್ರವಿದ್ದುದರಿಂದ ಈ ಸ್ಥಳಕ್ಕೆ ಪಾವಗಡ ಎಂದು ಹೆಸರಾಯಿತೆಂದು ನಂಬಿಕೆ. ಪಾವಗಡ ಬೆಟ್ಟವು ಸಮುದ್ರ ಮಟ್ಟದಿಂದ 909 ಮೀ ಎತ್ತರದಲ್ಲಿದೆ. ಈ ಪಟ್ಟಣ ಮತ್ತು ಬೆಟ್ಟಗಳೆರಡೂ ಸುಂದರವಾದ ಕೋಟೆಯನ್ನು ಹೊಂದಿವೆ. ಇದು ಒಂದು ಪಾಳೆಗಾರ ಮನೆತನದವರ ಸ್ಥಳವಾಗಿತ್ತು. ಬೆಟ್ಟದ ಮೇಲೆ ಏಳಲು ಹತ್ತು ಬಾಗಿಲುಗಳಿದ್ದು ಅನೇಕ ಕೊಳಗಳು, ಉಗ್ರಾಣಗಳು, ಮದ್ದುಗುಂಡುಗಳ ಕೋಠಿ ಮುಂತಾದವುಗಳ ಅವಶೇಷಗಳು ಇಲ್ಲಿವೆ. ಇಲ್ಲಿ ಪ್ರಾಚೀನ ಕಾಲದಲ್ಲಿದ್ದ ಗೋಪಾಲಕೃಷ್ಣ ದೇವಾಲಯದ ಕಲ್ಲಿನ ಬಿಡಿಭಾಗಗಳನ್ನು ಬಳಸಿಕೊಂಡು ಕಟ್ಟಲಾದುದೆಂದು ಹೇಳಲಾದ ಪೂರ್ಣವಾಗಿಲ್ಲದ ಮಸೀದಿಯು ಬೆಟ್ಟದ ತುದಿಯಲ್ಲಿದೆ. ಬೆಟ್ಟದ ಮೇಲೆ ದೊರಕಿರುವ ಶಾಸನವು, ಈ ಕೋಟೆಯನ್ನು ಕ್ರಿ.ಶ. 1405ರಲ್ಲಿ, ವಿಜಯನಗರದ ದೊರೆ ಮೊದಲನೇಯ ದೇವರಾಯನ ದಂಡನಾಯಕನಾದ ಗೋಪಣ್ಣನು ನಿರ್ಮಿಸಿದನೆಂದು ತಿಳಿಸುತ್ತದೆ. ಈ ಊರಿನಲ್ಲಿ ಈಗ ಪುರಸಭೆಯಿದೆ. ನಿಡುಗಲ್ಲುದುರ್ಗ ಎಂದೂ ಪ್ರಖ್ಯಾತವಾಗಿರುವ ನಿಡುಗಲ್ಲು (ಜನ: 262) ಪಾವಗಡಕ್ಕೆ ಪಶ್ಚಿಮದಲ್ಲಿ 22 ಕಿಮೀ ದೂರದಲ್ಲಿ ನಿಡುಗಲ್ಲು ಎಂಬ ಹೆಸರನ್ನೇ ಹೊಂದಿರುವ ಹಳ್ಳಿಯ ದಕ್ಷಿಣ ಮತ್ತು ಪೂರ್ವಗಳಲ್ಲಿದೆ. ಈ ಸ್ಥಳವು ಒಂದಾನೊಂದು ಕಾಲದಲ್ಲಿ ಖ್ಯಾತಿಯನ್ನು ಪಡೆದಿದ್ದು, ಈಗ ಅದೇ ಹೆಸರಿನ ಹೋಬಳಿಯ ಕೇಂದ್ರವಾಗಿದೆ. ಎತ್ತರವಾದ, ಚೂಪಾದ ನಿಡುಗಲ್ಲು ಬೆಟ್ಟದ ತುದಿಯು (ಉದ್ದವಾದ ಅಥವಾ ಎತ್ತರವಾದ ಕಲ್ಲು ಅಥವಾ ಬಂಡೆ ಎಂದು ಅರ್ಥ) ಸಮುದ್ರ ಮಟ್ಟಕ್ಕಿಂತ 1,149 ಮೀ ಎತ್ತರದಲ್ಲಿದೆ. ಇದೊಂದು ಅಗಮ್ಯವಾದ ಸ್ಥಳವಾಗಿತ್ತು. ಹೇಮಾವತಿಯನ್ನು (ಆಂಧ್ರಪ್ರದೇಶ) ರಾಜಧಾನಿಯನ್ನಾಗಿ ಹೊಂದಿದ್ದ ನೊಳಂಬ ರಾಜರು ಈ ಸುತ್ತಮುತ್ತಲ ಪ್ರದೇಶಗಳನ್ನು ಒಂಭತ್ತು ಮತ್ತು ಹತ್ತನೇಯ ಶತಮಾನಗಳಲ್ಲಿ ತಮ್ಮ ಆಳ್ವಿಕೆಗೆ ಸೇರಿಸಿಕೊಂಡಿದ್ದರು. ಅನಂತರ ಇದು ಚೋಳರ ವಂಶಸ್ಥನೇ ಆದ, ಆದರೆ ಚಾಳುಕ್ಯರ ಆಶ್ರಯದಲ್ಲಿ ಆಳುತ್ತಿದ್ದ ಇರುಂಗೋಳನ ವಶವಾಯಿತು. ಇದನ್ನು ಹೊಯ್ಸಳ ಇಮ್ಮಡಿ ಬಲ್ಲಾಳನು ಗೆದ್ದುಕೊಂಡನು. ನಿಡುಗಲ್ಲಿನ ಕೋಟೆಯು ಅಭೇದ್ಯವಾಗಿದ್ದು, ಅಷ್ಟದುರ್ಗೆಯರು ಮತ್ತು ಅಷ್ಟಭೈರವರಿಂದ ರಕ್ಷಿಸಲ್ಪಟ್ಟಿದೆ. ಅನೇಕ ಉಗ್ರಾಣಗಳು, ಮದ್ದುಗುಂಡುಗಳ ಕೋಠಿಗಳು, ಕೊಳಗಳು ಮತ್ತು ಅನೇಕ ದೇವಾಲಯಗಳು ಇಲ್ಲಿನ ಕೋಟೆಯಲ್ಲಿವೆ. ಟಿಪ್ಪುಸುಲ್ತಾನನು ಗೆಲ್ಲುವವರೆಗೂ ಈ ಪ್ರದೇಶವನ್ನು ಹರತಿ ನಾಯಕರು ಆಳುತ್ತಿದ್ದರು. ಬೆಟ್ಟದ ಕೆಳಭಾಗದಲ್ಲಿ, ಹೊಟ್ಟೇಶ್ವರ ಎಂದು ಕರೆಯಲಾಗುವ, 1681ರಲ್ಲಿ ರಚಿತವಾದುದೆಂದು ಹೇಳಲಾದ ಸರ್ವದೇವೇಶ್ವರ ದೇವಾಲಯವಿದೆ. ಇಲ್ಲಿ ಮಿರ್ಜಾ ಹುಸೇನ್ ವಲಿಯ ಗೋರಿಯಿದೆ. ಇವರ ಗೌರವಾರ್ಥವಾಗಿ ಪ್ರತೀ ವರ್ಷವೂ ಒಂದು ಉರುಸ್ ಇಲ್ಲಿ ನಡೆಯುತ್ತದೆ.

ಪಿರಿಯಾಪಟ್ಟಣ: (ಮೈಸೂರು ಜಿ: ತಾ. ಕೇ; ಜನ: 10,039) ಪಿರಿಯಾಪಟ್ಟಣವು ಮೈಸೂರಿನಿಂದ ಪಶ್ಚಿಮಕ್ಕೆ 67 ಕಿಮೀ ಹಾಗೂ, ಬೆಂಗಳೂರಿನಿಂದ 206 ಕಿಮೀ ದೂರದಲ್ಲಿ ಇರುವ ಮತ್ತು ಪುರಸಭೆಯನ್ನು ಹೊಂದಿರುವ ಪಟ್ಟಣ. ಅದು ಚೆಂಗಾಳ್ವ ರಾಜರ ರಾಜಧಾನಿಯಾಗಿತ್ತು. ಪೆರಿಯ ರಾಜನೆಂಬವನು ಇಲ್ಲಿದ್ದ ಮಣ್ಣಿನ ಕೋಟೆಯನ್ನು ಕೆಡವಿಸಿ, ತನ್ನ ಹೆಸರಿನ ಮೇಲೆ ಒಂದು ಪಟ್ಟಣವನ್ನು ಸ್ಥಾಪಿಸಿದನು. ಇದಕ್ಕೆ ಮೊದಲಿದ್ದ ಹೆಸರು ಸಿಂಗಪಟ್ಟಣ. ಇಲ್ಲಿ ಟಿಪ್ಪು ಸುಲ್ತಾನನಿಗೂ ಕೊಡಗಿನ ರಾಜರಿಗೂ ಅನೇಕ ಯುದ್ಧಗಳು ನಡೆದವು. ಹಳೆಯ ಪಟ್ಟಣದ ಸುತ್ತಲೂ ಕೋಟೆಯಿದೆ. ಪಿರಿಯಾಪಟ್ಟಣದಮ್ಮ, ಕನ್ನಂಬಾಡಿಯಮ್ಮ, ಕೋಟೆಮಾರಮ್ಮ, ಆಂಜನೇಯ, ವೈದ್ಯೇಶ್ವರ, ಕೇಶವ ಮತ್ತು ಮಾದೇಶ್ವರ ದೇವಾಲಯಗಳು ಇಲ್ಲಿವೆ. ನಿಡುಮಾಮಿಡಿ ದೇವಾಲಯ, ಜಪದಕಟ್ಟೆ ಮಠ ಮತ್ತು ಒಂದು ದರ್ಗಾ ಕೂಡ ಇಲ್ಲಿವೆ. ಹೊಗೆಸೊಪ್ಪು ಈ ತಾಲೂಕಿನ ಮುಖ್ಯವಾದ ಬೆಳೆ. ಇಲ್ಲಿ ಒಂದು ಬೆಂಕಿಪೊಟ್ಟಣದ ಕಾರ್ಖಾನೆ ಮತ್ತು ಹೊಗೆಸೊಪ್ಪು ಪರಿಷ್ಕರಿಸುವ ಕಾರ್ಖಾನೆಯೂ ಇವೆ. ಪಿರಿಯಾಪಟ್ಟಣದಿಂದ ಉತ್ತರಕ್ಕೆ 16 ಕಿಮೀ ದೂರದಲ್ಲಿರುವ ಬೆಟ್ಟದಪುರವು ಹೋಬಳಿ ಕೇಂದ್ರ (ಜನ: 2,423). ತಾಲೂಕಿನಲ್ಲಿ ಇದೊಂದು ಮುಖ್ಯವಾದ ವ್ಯಾಪಾರ ಕೇಂದ್ರ. ಇಲ್ಲಿ ಬೆಳೆಯುವ ಹೊಗೆಸೊಪ್ಪು ಉತ್ತಮ ಗುಣವುಳ್ಳದ್ದು. ಬೆಟ್ಟದ ಮೇಲಿರುವ ಮಲ್ಲಿಕಾರ್ಜುನ ದೇವಾಲಯವು (ಎತ್ತರ 4,389 ಅಡಿ) ಶಂಕುವಿನ ಆಕಾರದಲ್ಲಿದೆ. ಫೆಬ್ರವರಿ ತಿಂಗಳಿನಲ್ಲಿ ಇಲ್ಲಿ ರಥೋತ್ಸವ ಮತ್ತು ದನದ ಪರಿಷೆ ನಡೆಯುತ್ತದೆ. ಇಲ್ಲೊಂದು ವೀರಶೈವ ಮಠವಿದೆ. ಇದು ವಿದ್ಯಾಕೇಂದ್ರಗಳನ್ನು ಮತ್ತು ವಿದ್ಯಾರ್ಥಿನಿಲಯಗಳನ್ನು ಈ ಜಿಲ್ಲೆಯಲ್ಲಿ ನಡೆಸುತ್ತಿದೆ. ಇಲ್ಲಿ ಒಂದು ಆಂಜನೇಯ ದೇವಾಲಯ ಮತ್ತು ಜೈನ ಬಸದಿಯ ಅವಶೇಷಗಳೂ ಇವೆ. ಟಿಬೆಟ್ಟನವರ ವಸಹಾತಾದ ಬೈಲಕುಪ್ಪೆಯು ಪಿರಿಯಾಪಟ್ಟಣದಿಂದ 16 ಕಿಮೀ ದೂರದಲ್ಲಿದೆ. ಪಿರಿಯಾಪಟ್ಟಣದಿಂದ ಐದು ಕಿಮೀ ದೂರದಲ್ಲಿ

ರುವ ಚೌಕೂರಿನಲ್ಲಿ ಇನ್ನೊಂದು ಗುಂಪು ಟಿಬೆಟ್ಟಿನ ನಿರಾಶ್ರಿತರಿಗೆ ಆಶ್ರಯವನ್ನು ಕಲ್ಪಿಸಲಾಗಿದೆ.

**ಪುತ್ತೂರು :** (ದ. ಕ. ಜಿ; ತಾ. ಕೇ; ಜನ: 20,103) ಪುತ್ತೂರು ಮಂಗಳೂರಿನಿಂದ ಆಗ್ನೇಯಕ್ಕೆ 50 ಕಿಮೀ ಬೆಂಗಳೂರಿನಿಂದ ನೈಋತ್ಯದಲ್ಲಿ 350 ಕಿಮೀ ದೂರದಲ್ಲಿಯೂ ಇದೆ. ಇಲ್ಲಿರುವ ದೇವಾಲಯಗಳಲ್ಲೆಲ್ಲಾ, ಮಹಾಲಿಂಗೇಶ್ವರ ಅತ್ಯಂತ ಪ್ರಾಚೀನವಾದದ್ದು. ಇದರಲ್ಲಿ ಕ್ರಿ.ಶ. 1431ರ, ವಿಜಯನಗರದ ಪ್ರತಾಪದೇವರಾಯನ ಕಾಲದ ಶಾಸನವಿದೆ. ವೆಂಕಟರಮಣ, ಮಹಾಮಾಯಾ, ರಾಧಾಕೃಷ್ಣ, ಭವಾನಿಶಂಕರ ಎಂಬವು ಇಲ್ಲಿರುವ ಇತರ ದೇವಾಲಯಗಳು. ಇಲ್ಲಿ ಗೋವೆಯ ಮತ್ತು ಸ್ಥಳೀಯ ಕ್ರೈಸ್ತರು ತಾಮ್ರದ ಪಾತ್ರೆಗಳನ್ನು ತಯಾರು ಮಾಡುತ್ತಾರೆ. ಪುತ್ತೂರು ಸಂಪದ್ಭರಿತವಾದ ವ್ಯಾಪಾರ ಸ್ಥಳ. ಇಲ್ಲಿ ಪುರಸಭೆಯಿದೆ. ಇಲ್ಲಿ ಹದಿನೆಂಟನೇಯ ಶತಮಾನಕ್ಕೆ ಸೇರಿದ ಮದರ್ ಆಫ್ ಗಾಡ್ ಚರ್ಚ್ ಇದೆ. ಉಪ್ಪಿನಂಗಡಿಯು ಪುತ್ತೂರಿನಿಂದ (ಜನ: 4,702) 13 ಕಿಮೀ ದೂರದಲ್ಲಿ ಈಶಾನ್ಯದಲ್ಲಿಯೂ, ಮಂಗಳೂರಿನಿಂದ ಪೂರ್ವದಲ್ಲಿ 48 ಕಿಮೀ ದೂರದಲ್ಲಿಯೂ ಇದೆ. 1882ರವರೆಗೆ ಇದು ಉಪ್ಪಿನಂಗಡಿ ತಾಲೂಕಿನ ಕೇಂದ್ರವಾಗಿತ್ತು. ನಂತರ ತಾಲೂಕು ಕೇಂದ್ರವನ್ನು ಪುತ್ತೂರಿಗೆ ಬದಲಾಯಿಸಲಾಯಿತು. ನೇತ್ರಾವತಿ ಮತ್ತು ಕುಮಾರಧಾರಾ ನದಿಗಳ ಸಂಗಮ ಸ್ಥಳದಲ್ಲಿ, ಪ್ರಾಚೀನ ಲಕ್ಷ್ಮೀವೆಂಕಟರಮಣ ದೇವಾಲಯವಿದೆ. ಅದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ. ಈ ದೇವಾಲಯದ ಸಮೀಪದಲ್ಲಿಯೇ ವಿಶೇಷವಾಗಿ ಆದರಕ್ಕೆ ಪಾತ್ರವಾದ ಸಹಸ್ರಲಿಂಗೇಶ್ವರ ದೇವಾಲಯವಿದೆ. ಕೊಯ್ಲ ದಲ್ಲಿರುವ ಜಿಲ್ಲಾ ಜಾನುವಾರು ಕೇಂದ್ರವು ಉಪ್ಪಿನಂಗಡಿಗೆ ಸಮೀಪದಲ್ಲಿದ್ದು ಇದು ಮಂಗಳೂರಿನಿಂದ 60.8 ಕಿಮೀ ದೂರದಲ್ಲಿ ಮಂಗಳೂರು-ಸುಬ್ರಮಣ್ಯ ರಸ್ತೆಯಲ್ಲಿದೆ. ಸುಧಾರಿಸಿದ ದನದ ಮೇವಿನ ತಳಿಯ ಬೀಜಗಳ ಪ್ರಚಾರಕ್ಕಾಗಿ ಉಚಿತ ಹಂಚಿಕೆ, ವಿವಿಧ ರೀತಿಯ ಹುಲ್ಲು, ವೈಜ್ಞಾನಿಕ ರೀತಿಯ ಪ್ರಾಣಿ ಸಾಕಣೆಯ ಮಾರ್ಗಗಳು ಮುಂತಾದವುಗಳ ಬಗ್ಗೆ ತಿಳುವಳಿಕೆ ಕೊಡಲಾಗುತ್ತದೆ.

**ಪೊನ್ನಂಪೇಟೆ :** (ಕೊಡಗು ಜಿ; ವಿರಾಜಪೇಟೆ ತಾ; ಜನ : 4,367–1981) ಪೊನ್ನಂಪೇಟೆಯು ಹಿಂದಿನ ಕಿಗ್ಗಟ್ಟು ನಾಡು ತಾಲೂಕಿನಲ್ಲಿ ಪ್ರಖ್ಯಾತವಾಗಿದ್ದ ಮಾರುಕಟ್ಟೆಯ ಸ್ಥಳವಾಗಿತ್ತು. ಇದು ವಿರಾಜಪೇಟೆಯಿಂದ 20 ಕಿಮೀ ದೂರದಲ್ಲಿ ಹುದಿಕೇರಿ-ಗೋಣಿಕೊಪ್ಪ ರಸ್ತೆಯಲ್ಲಿ, ಬೆಂಗಳೂರಿನಿಂದ 248 ಕಿಮೀ ದೂರದಲ್ಲಿ ಇದೆ. ಈ ನಗರವನ್ನು 1845-1850ರಲ್ಲಿ ಮಾದಯ್ಯನೆಂಬುವನು ತನ್ನ ತಂದೆ ಚೆಪ್ಪುಡಿರ ಪೊನ್ನಪ್ಪನ ಜ್ಞಾಪಕಾರ್ಥವಾಗಿ ಸ್ಥಾಪಿಸಿದನು. ಈತನು ಕೊಡಗಿನ ರಾಜ ಚಿಕ್ಕವೀರ ರಾಜೇಂದ್ರನ ದಿವಾನನಾಗಿದ್ದನು. ಇದು ಭತ್ತದ ವ್ಯಾಪಾರದ ಕೇಂದ್ರವಾಗಿದ್ದುದರಿಂದ, 1931ರಲ್ಲಿ, ಇಲ್ಲಿ ಒಂದು ವ್ಯವಸಾಯ ಕೇಂದ್ರವನ್ನು ಸ್ಥಾಪಿಸಲಾಯಿತು. ಈ ನಗರವು ಇಲ್ಲಿರುವ ಶ್ರೀರಾಮಕೃಷ್ಣಾಶ್ರಮ ಸಂಸ್ಥೆಗೆ ಹೆಸರುವಾಸಿಯಾಗಿದೆ. ಇಲ್ಲಿರುವ ಪುರಸಭೆಯು, ಪಟ್ಟಣದ ಆಡಳಿತವನ್ನು ನೋಡಿಕೊಳ್ಳುತ್ತಿದೆ.

**ಬಂಕಾಪುರ :** (ಧಾರವಾಡ ಜಿ; ಶಿಗ್ಗಾಂವ್ ತಾ.) ಧಾರವಾಡದ ದಕ್ಷಿಣಕ್ಕೆ ಸುಮಾರು 45 ಕಿಮೀ ಸವಣೂರಿಂದ ಸುಮಾರು 18 ಕಿಮೀ ದೂರದಲ್ಲಿರುವ ಬಂಕಾಪುರವು 1951ರವರೆಗೂ ತಾಲೂಕು ಕೇಂದ್ರವಾಗಿತ್ತು. ಅನಂತರ ಶಿಗ್ಗಾವಿಗೆ ಇದನ್ನು ವರ್ಗಾಯಿಸಲಾಯಿತು. 1960ರಲ್ಲಿ ಆರಂಭಿಸಿದ ಪುರಪಂಚಾಯಿತಿಯಲ್ಲಿ ಅಂಕದಕಾನ್, ಶಹಬಜಾರ್, ಕೊಟ್ಟೆಗೇರಿ ಎಂಬ ಮೂರು ಹಳ್ಳಿಗಳೂ ಸೇರಿಕೊಂಡವು. ಕೊಲ್ಲಾಪುರದ 898ರ ಜೈನ ಶಾಸನದ ಪ್ರಕಾರ ಮೊದಲನೇಯ ಅಮೋಘವರ್ಷನ ಸಾಮಂತನಾಗಿದ್ದ, ಚಲ್ಲಕೇತನ ವಂಶದ ಬಂಕೆಯರಸನಿಂದಾಗಿ ಇದಕ್ಕೆ ಬಂಕಾಪುರ ಎಂಬ ಹೆಸರು ಬಂತು. ಈ ಊರಲ್ಲಿ 16 ಶಾಸನಗಳಿದ್ದು ಇವುಗಳಲ್ಲಿ ಕಲ್ಯಾಣಿ ಚಾಳುಕ್ಯರು ಶಾಸನಗಳೂ ಸೇರಿವೆ. ಇವುಗಳಲ್ಲಿ 993ರ ಶಾಸನವೇ ಪ್ರಾಚೀನವಾದದ್ದು. 1052ರಿಂದ ಕದಂಬ ಸಾಮಂತನಾಗಿದ್ದ ಹರಿಕೇಸರಿಯು ಬಂಕಾಪುರದಲ್ಲಿ ಆಳುತ್ತಿದ್ದ. ಕೆಲ ಕಾಲ ಇದು ಹಾನಗಲ್ ಕದಂಬರ ಆಳ್ವಿಕೆಗೂ ಸೇರಿತ್ತು. 1140ರಲ್ಲಿ ಹೊಯ್ಸಳ ವಿಷ್ಣುವರ್ಧನ ಇದನ್ನು ಗೆದ್ದುಕೊಂಡು, ತನ್ನ ರಾಜ್ಯದ ಉತ್ತರ ಸರಹದ್ದಿನ ರಾಜಧಾನಿಯಾಗಿ ಇದನ್ನು ಅಭಿವೃದ್ಧಿಪಡಿಸಿಕೊಂಡ. ಅನಂತರದಲ್ಲಿ ವಿಜಯನಗರದ ಅರಸರೂ ಇದರ ಮೇಲಣ ಹತೋಟಿಯನ್ನಿಟ್ಟುಕೊಂಡಿದ್ದರು. ಇದರ ಸಲುವಾಗಿ ವಿಜಯನಗರ ಮತ್ತು ಬಹಮನಿ ಸುಲ್ತಾನರ ಮಧ್ಯೆ ಪೈಪೋಟಿ ನಡೆದಿತ್ತು. 1573ರಲ್ಲಿ ಮುಸ್ತಫಾಖಾನ್ ಎಂಬ ವಿಜಾಪುರದ ದಂಡನಾಯಕನು ಇದನ್ನು ಗೆದ್ದುಕೊಂಡ. ಆತ ಅಲ್ಲೊಂದು ಮಸೀದಿ ನಿರ್ಮಿಸಲು ಅಡಿಗಲ್ಲು ಹಾಕಿದ್ದ. ಆರು ವರ್ಷಗಳ ಕಾಲ ಬಂಕಾಪುರದಲ್ಲಿ ಆಳಿದ ಈತನನ್ನು ಕೊನೆಗೆ 1579ರಲ್ಲಿ ಅಲ್ಲೇ ಹತ್ಯೆ ಮಾಡಲಾಯಿತು. 1673ರಲ್ಲಿ ಅಬ್ದುಲ್ ಕರೀಂಖಾನ್ ಎಂಬ ಸವಣೂರು ನವಾಬನ ಪೂರ್ವಜನನ್ನು ಬಂಕಾಪುರ ಪ್ರಾಂತ್ಯದ ರಾಜ ಪ್ರತಿನಿಧಿಯಾಗಿ ವಿಜಾಪುರ ಸುಲ್ತಾನನು ನೇಮಕ ಮಾಡಿದನು. ಅಲ್ಲಿಂದ ಮೊದಲುಗೊಂಡು ಮುಂದೆ ಸವಣೂರಿಗೆ ಸ್ಥಳಾಂತರ ಮಾಡುವವರೆಗೂ ಇದು ಆ ಪ್ರಾಂತೀಯ ರಾಜಧಾನಿಯಾಗಿತ್ತು. 1755ರಲ್ಲಿ ಸವಣೂರು ನವಾಬನು ಬಂಕಾಪುರ ದುರ್ಗವನ್ನು ಹೋಳ್ಕರನಲ್ಲಿ ಅಡವಿಟ್ಟು ಮರಾಠಾ ಸೈನ್ಯವನ್ನು ವಾಪಾಸಾಗುವಂತೆ ಮಾಡಿದ. 1780ರಲ್ಲಿ ಟಿಪ್ಪು ಸವಣೂರು ಮತ್ತು ಬಂಕಾಪುರಗಳನ್ನು ಮರಾಠರಿಂದ ಕಿತ್ತುಕೊಂಡನು. 1780ರ ಮರಾಠಾ ದಾಖಲೆಗಳ ಪ್ರಕಾರ ಬಂಕಾಪುರವು 16 ಪರಗಣಗಳ ಒಂದು ಸರ್ಕಾರವಾಗಿತ್ತು.

ಇದರ ವಾರ್ಷಿಕ ಆದಾಯವು 25 ಲಕ್ಷಕ್ಕೂ ಮೀರಿತ್ತು. 1802 ರಲ್ಲಿ ಬೆಸ್ಸೀನ್ ಒಪ್ಪಂದದ ಮೇರೆಗೆ 26 ತಾಲೂಕುಗಳನ್ನು ಒಳಗೊಂಡ ಸವಣೂರು ಪ್ರಾಂತ್ಯ ಹಾಗೂ ಬಂಕಾಪುರ ತಾಲೂಕು ಬ್ರಿಟಿಷರ ಆಡಳಿತಕ್ಕೊಳಗಾಯಿತು. ಈ ಸ್ಥಳದ ಪ್ರಮುಖ ಪ್ರಾಚ್ಯಾವಶೇಷಗಳಲ್ಲಿ ಭಾಗಶಃ ಭಗ್ನವಾದ ನಗರೇಶ್ವರಾಲಯ ಅಥವಾ ರಂಗಸ್ವಾಮಿ ದೇವಾಲಯವನ್ನು ಹೆಸರಿಸಬೇಕು. ಪಟ್ಟಣದ ಪಶ್ಚಿಮಕ್ಕೆ ಹಾಳು ಕೋಟೆಯೊಳಗೆ ಇರುವ ಈ 11-12ನೇಯ ಶತಮಾನದ ಗುಡಿಯನ್ನು ಸ್ಥಳೀಕರು ಅರವತ್ತು ಕಂಬದ ದೇವಾಲಯ ಎಂದು ಕರೆಯುತ್ತಾರೆ. ಇದರ ಒಳ ಹೊರಗಿನ ವಾಸ್ತುಶಿಲ್ಪ ಸೌಂದರ್ಯ ತುಂಬ ಸುಂದರವಾಗಿದೆ. ಹಾಳುಕೋಟೆ ಪ್ರದೇಶವನ್ನು ಸರ್ಕಾರವು ಈಗ ಹೈನು ತಳಿ ಅಭಿವೃದ್ಧಿಯ ಮುಖ್ಯ ಕೇಂದ್ರವಾಗಿ ಅಭಿವೃದ್ಧಿಪಡಿಸಿದೆ. ಇನ್ನೊಂದು ಪುರಾತನ ಸಿದ್ದೇಶ್ವರ ದೇವಾಲಯವಿದ್ದು ಇದರಲ್ಲಿ 1055ರ ಶಿಲಾ ಶಾಸನವಿದೆ. ಇಲ್ಲಿರುವ ಆಧುನಿಕ ದೇವಾಲಯಗಳಲ್ಲಿ ದುರ್ಗಾದೇವಿ ಮತ್ತು ಯಲ್ಲಮ್ಮನ ಗುಡಿಗಳು ಪ್ರಮುಖವಾಗಿವೆ. ಕಲಾತ್ಮಕವಾಗಿ ಕೆತ್ತಿದ ಮಹಿಷಾಸುರಮರ್ದಿನಿಯ ದೊಡ್ಡ ವಿಗ್ರಹ ಹಾಗೂ ಎರಡು ಜೈನ ತೀರ್ಥಂಕರರ ವಿಗ್ರಹಗಳೂ ಶಾಸನಸಹಿತ ಈಚೆಗೆ ಸಿಕ್ಕಿವೆ. ಇಲ್ಲಿ ಹತ್ತು ಮಸೀದಿ ಹಾಗೂ ಹಲವು ದರ್ಗಾಗಳಿವೆ. ಅವುಗಳಲ್ಲಿ ಅಲ್ಲಾವುದ್ದೀನ್ ಷಾ ಖಾದರಿ ಹಾಗೂ ನೂರುಲ್ಲಾ ಷಾ ಖಾದರಿ ದರ್ಗಾಗಳು ಪ್ರಮುಖವಾಗಿವೆ. ಬೀಡಿ, ನೇಕಾರಿಕೆಗಳು ಈ ಸ್ಥಳದ ಪ್ರಮುಖ ಗೃಹ ಕೈಗಾರಿಕೆಗಳಾಗಿವೆ.

**ಬಂಗಾರಪೇಟೆ :** (ಕೋಲಾರ ಜಿ; ತಾ. ಕೇ; ಜನ: 22,550) ಕೋಲಾರದ ದಕ್ಷಿಣಕ್ಕೆ 18 ಕಿಮೀ ದೂರದಲ್ಲಿ ಹಾಗೂ ಬೆಂಗಳೂರಿನಿಂದ 78 ಕಿಮೀ ದೂರದಲ್ಲಿರುವ ಬಂಗಾರಪೇಟೆಯನ್ನು 1864ರಲ್ಲಿ ಹೊಸ ರೈಲು ಮಾರ್ಗ ಆರಂಭಿಸಿದಾಗ ಸ್ಥಾಪಿಸಲಾಯಿತು. ಮೈಸೂರಿನ ಚೀಫ್ ಕಮಿಷನರಾಗಿದ್ದ ಬೌರಿಂಗ್‌ರ ಹೆಸರಲ್ಲಿ ಇದನ್ನು ಬೌರಿಂಗ್‌ಪೇಟೆ ಎಂದು ಕರೆಯಲಾಗಿತ್ತು. 1948ರಲ್ಲಿ ಇದನ್ನು ಬಂಗಾರಪೇಟೆ ಎಂದು ಬದಲಾಯಿಸಲಾಯಿತು. ಧಾನ್ಯಗಳ ಸಗಟು ವ್ಯಾಪಾರಕ್ಕೆ ಪ್ರಸಿದ್ಧವಾಗಿದ್ದು ಈ ಊರು ಒಂದು ಪ್ರಸಿದ್ಧವಾದ ವ್ಯಾಪಾರಿ ಕೇಂದ್ರವಾಗಿದೆ. ಇಲ್ಲಿರುವ ಹೆಚ್ಚಿನ ದೇಗುಲಗಳು ಆಧುನಿಕ ಕಾಲದವು; ಇಲ್ಲೊಂದು ಮಸೀದಿಯೂ ಇದೆ. ಬೇತಮಂಗಲವು ಪಾಲಾರ್ ನದಿಯ ಬಲದಂಡೆಯಲ್ಲಿದೆ. ಇಲ್ಲಿರುವ ದೊಡ್ಡಕೆರೆಯನ್ನು ನೊಳಂಬರಾಜನಾಗಿದ್ದ ಇರಿವ ನೊಳಂಬನು ಜೀರ್ಣೋದ್ಧಾರ ಮಾಡಿಸಿದನೆಂದು ತಿಳಿದುಬರುತ್ತದೆ. ಹಿಂದೆ ಇದು ಬಿಜಯತಿಮಂಗಲ ಎಂಬ ಹೆಸರಿನ ಅಗ್ರಹಾರವಾಗಿತ್ತು. ಬಂಗಾರಪೇಟೆಯ ನೈಋತ್ಯಕ್ಕೆ 13 ಕಿ.ಮೀ. ದೂರದಲ್ಲಿರುವ ಬೂದಿಕೋಟೆಯು ಹೈದರ್ ಆಲಿಯ ಜನ್ಮಸ್ಥಳವಾಗಿದೆ. ಗುಟ್ಟಹಳ್ಳಿಯನ್ನು ಬಂಗಾರ-ತಿರುಪತಿ ಎಂದು ಜನಪ್ರಿಯವಾಗಿ ಕರೆಯುತ್ತಾರೆ. ಇಲ್ಲಿಯ ಗುಡ್ಡದ ಮೇಲೆ ವೆಂಕಟರಮಣಸ್ವಾಮಿಯ ದೇವಾಲಯವಿದೆ. ದೂರದೂರದ ಪ್ರದೇಶಗಳಿಂದ ನೂರಾರು ಭಕ್ತರು ಇಲ್ಲಿಗೆ ಬರುತ್ತಾರೆ. ಇಲ್ಲಿಯ ಐತಿಹ್ಯದ ಪ್ರಕಾರ ಭೃಗು ಮಹರ್ಷಿಯು ಇಲ್ಲಿ ಆಶ್ರಮವನ್ನು ಸ್ಥಾಪಿಸಿಕೊಂಡಿದ್ದ. ಕೋಲಾರ ಚಿನ್ನದ ಗಣಿ ಪ್ರದೇಶ (ಕೋಲಾರ ಗೋಲ್ಡ್ ಫೀಲ್ಡ್)ವು ಬಂಗಾರಪೇಟೆ ತಾಲೂಕಿನಲ್ಲಿದ್ದು ಬಂಗಾರಪೇಟೆಯಿಂದ ದಕ್ಷಿಣಕ್ಕಿದೆ (ಜನ: 77,622). ಕೋಲಾರದಿಂದ ಸುಮಾರು 36 ಕಿಮೀ, ಬೆಂಗಳೂರಿನಿಂದ 96 ಕಿಮೀ ದೂರದಲ್ಲಿದೆ. ಬಂಗಾರ ತೆಗೆಯುವ ಉದ್ಯಮದಿಂದಾಗಿ ಸೃಷ್ಟಿಯಾದ ಪಟ್ಟಣವಿದಾಗಿದೆ. ಒಂದೇ ಸಮನೆ ಬೆಳೆಯುತ್ತಿರುವ ಜನಸಂಖ್ಯೆಯಿಂದಾಗಿ ಇದೊಂದು ಕಾರ್ಮಿಕರ ದೊಡ್ಡ ನೆಲೆಯಾಗುತ್ತಿದೆ. 1964ರಲ್ಲಿ ಆರಂಭವಾದ ರಾಬರ್ಟ್‌ಸನ್‌ಪೇಟೆ ಪುರಸಭೆಯು ರೂಪು ತಾಳುವುದಕ್ಕಿಂತ ಮುಂಚೆ, ಈ ಪಟ್ಟಣದಲ್ಲಿ ರಾಬರ್ಟ್‌ಸನ್ ಪೇಟೆ, ಅಂಡರ್‌ಸನ್ ಪೇಟೆ, ಸೊಣ್ಣೆಕೊಪ್ಪ, ನಾಚಕಪಲ್ಲಿ, ಉರಿಗಾಂ ಒಂದೆಡೆ, ಇನ್ನೊಂದೆಡೆ ಕಾರ್ಮಿಕ ವಸಾಹತುಗಳಾದ ಪಂಡಾರಂ ಲೈನ್ಸ್, ಕೃಷ್ಣಗಿರಿ ಲೈನ್ಸ್, ಸ್ಯಾನಿಟರಿ ಬೋರ್ಡ್ ರೂರಲ್ ಪ್ರದೇಶ ಮುಂತಾದವನ್ನು ಒಳಗೊಂಡಿದ್ದವು. ಕೆ.ಜಿ.ಎಫ್.ನಿಂದ ರಾಬರ್ಟ್‌ಸನ್‌ಪೇಟೆ ಪ್ರತ್ಯೇಕಗೊಂಡ ಮೇಲೆ ಇದಕ್ಕೆ ಪ್ರತ್ಯೇಕವಾದ ಪುರಸಭೆಯನ್ನು ನೀಡಲಾಯಿತು. ಊರಗ್ಗಂ (ಊರಿಗಾಂ) ಒಂದು ಪ್ರತ್ಯೇಕವಾದ ಗ್ರಾಮವಾಗಿದ್ದು ಈಗ ಪಟ್ಟಣವಾಗಿ ಬೆಳೆದಿದೆ. ಅದೀಗ ರಾಬರ್ಟ್‌ಸನ್ ಪೇಟೆ ಪುರಸಭಾ ವ್ಯಾಪ್ತಿಗೆ ಒಳಪಡುತ್ತದೆ. ಹೊಯ್ಸಳ ರಾಮನಾಥನ 13ನೇಯ ಶತಮಾನದ ತಮಿಳು ಶಾಸನದಲ್ಲಿ ಇದನ್ನು ಉರಿಗೈಯಂ ಎಂದು ಉಲ್ಲೇಖಿಸಲಾಗಿದೆ. 1875ರಲ್ಲಿ ಚಿನ್ನ ತೆಗೆಯುವ ಮೊದಲ ಕಾರ್ಯ ಇಲ್ಲಿ ಆರಂಭವಾಯಿತು. ಅನಂತರ 1885ರಿಂದೀಚೆಗೆ ಚಿನ್ನದ ಗಣಿ ಉದ್ಯಮದಿಂದಾಗಿ ಹೊಸ ಪಟ್ಟಣ ಬೆಳೆದು ರಾಬರ್ಟ್‌ಸನ್ ಪೇಟೆಯೆಂದು ರೂಪು ತಾಳಿತು. ಕೆ.ಜಿ.ಎಫ್.ನ ಆಡಳಿತವು ಈಗ ನೈರ್ಮಲ್ಯ ಮಂಡಳಿಯ ಕೈಯಲ್ಲಿದೆ. ಇದರ ಸನಿಹದಲ್ಲಿ ಕೇಂದ್ರ ಸರ್ಕಾರವು ಭಾರತ್ ಅರ್ಥ್ ಮೂವರ್ಸ್ ಲಿಮಿಟೆಡನ್ನು ಆರಂಭಿಸಿದೆ. ರಕ್ಷಣಾ ಇಲಾಖೆಯ ಕಕ್ಷೆಯಲ್ಲಿರುವ ಈ ಸಂಸ್ಥೆ, ಕ್ರಾಲರ್ ಟ್ರಾಕ್ಟರ್, ರೈಲ್ವೆ ಕೋಚು ಮತ್ತಿತರ ಬೃಹತ್ ಭೂಸಂಚಾರಿ ವಾಹನಗಳನ್ನು ತಯಾರಿಸುತ್ತಿದೆ. ಈ ಪಟ್ಟಣದಲ್ಲಿ ಹಲವು ದೇಗುಲಗಳು, ಚರ್ಚುಗಳು, ಮಸೀದಿಗಳು ತಲೆಯೆತ್ತಿದ್ದು ಹೆಚ್ಚಿನವು ಅರ್ವಾಚೀನ ಕಟ್ಟಡಗಳಾಗಿವೆ.

**ಬಂಟವಾಳ :** (ದ. ಕ. ಜಿ; ತಾ. ಕೇ; ಜನ: 31,379) ಬಂಟವಾಳವು ನೇತ್ರಾವತಿ ನದಿಯ ಉತ್ತರ ತೀರದಲ್ಲಿ ಮಂಗಳೂರಿನಿಂದ ಪೂರ್ವಕ್ಕೆ 25 ಕಿಮೀ ಅಂತರದಲ್ಲಿ ನೆಲೆಸಿದೆ. ಈ ಊರಿನಲ್ಲಿ ವೆಂಕಟರಮಣ, ಸೀತಾರಾಮ ಮತ್ತು ಮಹಾಲಿಂಗೇಶ್ವರ ಎಂಬ ಮೂರು ದೇವಾಲಯಗಳೂ, ಒಂದು ಮಸೀದಿಯೂ ಉಂಟು.

ಅಲ್ಲೊಂದು ನರಹರಿ ಪರ್ವತ ಎಂಬ ಹೆಸರಿನ ಗುಡ್ಡವಿದ್ದು, ಅದರ ತುದಿಯ ಮೇಲೆ ಒಂದು ದೇವಾಲಯವಿದೆ. ಇದು ಸಮೀಪದ ಪಾಣೆಮಂಗಳೂರು ಎಂಬ ಪಟ್ಟಣಕ್ಕೆ ಹೊಂದಿಕೊಂಡಿದೆ. ನೇತ್ರಾವತಿ ನದಿಯು ಊರಿಗೆ ತೀರ ಸಮೀಪದಲ್ಲಿದ್ದು, ಮಳೆಗಾಲದಲ್ಲಿ ಮಹಾಪೂರ ಬಂದಾಗ ಊರ ಜನತೆ ಗಾಬರಿಗೊಳ್ಳುವಂತೆ ಮಾಡುತ್ತದೆ. ಟಿಪ್ಪುಸುಲ್ತಾನನೊಡನೆ ನಡೆದ ಯುದ್ಧದಲ್ಲಿ ಈ ನಗರವು ಭಾಗಶಃ ನಿರ್ನಾಮವಾಗಿತ್ತು. ಇತ್ತೀಚಿನವರೆಗೂ ಈ ನಗರವು ಅಕ್ಕಿಯ ವ್ಯಾಪಾರಕ್ಕೆ ಹೆಸರಾಂತ ಕೇಂದ್ರವಾಗಿತ್ತು. ಪಟ್ಟಣದ ಹೊರವಲಯದಲ್ಲಿರುವ ಮೊಡಂಕಾಪು ಮತ್ತು ಜಕ್ರಿಬೆಟ್ಟುಗಳಲ್ಲಿ ಒಂದೊಂದು ಕ್ರೈಸ್ತಮಂದಿರಗಳಿವೆ. ಪೊಳಲಿ ಎಂಬುದು ಅದರ ಸ್ಥಳ ಪುರಾಣದಲ್ಲಿ ಪುಳಿನಪುರ ಎಂದು ಉಕ್ತವಾಗಿದೆ. ಅದು ಕರಿಯಂಗಳ ಗ್ರಾಮಕ್ಕೆ ಸೇರಿದುದಾಗಿದೆ. ಅದು ಬಂಟವಾಳ ಬಳಿಯ ಜೋಡುಮಾರ್ಗದಿಂದ 12 ಕಿಮೀ ದೂರದಲ್ಲಿ ಮತ್ತು ಗುರುಪುರ ನದಿಗೆ ತೀರ ಹತ್ತಿರದಲ್ಲಿದೆ. ಇಲ್ಲಿ ಒಂದು ಪ್ರಸಿದ್ಧವಾದ ರಾಜರಾಜೇಶ್ವರಿ ಮಂದಿರವಿದೆ. ಇತ್ತೀಚೆಗೆ ಇಲ್ಲಿ ಬೆಳಕಿಗೆ ಬಂದ ಒಂದು ಶಾಸನದ ಮೇರೆಗೆ ಈ ದೇವಾಲಯವನ್ನು ಎಂಟನೇಯ ಶತಮಾನದಲ್ಲಿ ಸ್ಥಾಪಿಸಿದಂತೆಯೂ ಅದು ಶಕ್ತಿ ಆರಾಧಕರ ಪ್ರಮುಖ ಕೇಂದ್ರವಾಗಿದ್ದಂತೆಯೂ ತಿಳಿದುಬರುತ್ತದೆ. ಅಬ್ದುರ್ ರಜಾಕನ ಕಥನದಲ್ಲಿ ಈ ಮಂದಿರದ ಉಲ್ಲೇಖವಿದೆ. ರಾಜರಾಜೇಶ್ವರಿಯ ಪ್ರತಿಮೆಯು ಮಣ್ಣಿನದಾಗಿದ್ದು ಮೂರು ಮೀಟರ್ ಎತ್ತರವಿದೆ. ಅಲ್ಲದೆ, ಭದ್ರಕಾಳಿ, ಸುಬ್ರಮಣ್ಯ ಮುಂತಾದ ಇತರ ಅನೇಕ ಚಿಕ್ಕ ಮೂರ್ತಿಗಳು ಇಲ್ಲಿವೆ. ಬಂಟವಾಳದಿಂದ ಆರು ಕಿಮೀ ದೂರದಲ್ಲಿ ವಗ್ಗ ಎಂಬ ಸ್ಥಳಕ್ಕೆ ಅತೀ ಸಮೀಪದಲ್ಲಿ, ಕಾರಿಂಜ ಎಂಬ ಕ್ಷೇತ್ರವಿದೆ. ಅಲ್ಲಿ, ಒಂದು ಬೃಹತ್ ಬಂಡೆಗಲ್ಲಿನ ಮೇಲೆ ಶಿವ ಮಂದಿರವಿದ್ದು ಅದು ಗಜಪೃಷ್ಠಾಕಾರದ ಕಟ್ಟಡವಾಗಿದೆ. ಬಂಟವಾಳದಿಂದ 17 ಕಿಮೀ ದೂರದಲ್ಲಿ ವಿಟ್ಲ ಎಂಬ ಇನ್ನೊಂದು ಐತಿಹಾಸಿಕ ಸ್ಥಳವಿದ್ದು, ಅದು ವಿಟ್ಲ ಹೆಗ್ಗಡೆಗಳ ಮೂಲಸ್ಥಳವಾಗಿದೆ. ಅವರ ವಂಶಸ್ಥರು ಈಗಲೂ ಆ ಸ್ಥಳದಲ್ಲಿ ವಾಸವಾಗಿದ್ದಾರೆ. ಅಲ್ಲಿ ಪಂಚಲಿಂಗೇಶ್ವರ, ಸುಬ್ರಹ್ಮಣ್ಯ, ಮದನಂತೇಶ್ವರ ಮತ್ತು ವಿಠೋಬ ಎಂಬ ನಾಲ್ಕು ದೇವಾಲಯಗಳಿವೆ. ಟಿಪ್ಪುಸುಲ್ತಾನನಿಂದಾಗಿ ಅರಮನೆಯೊಡನೆ ಅಗ್ನಿ ಗಾಹುತಿಯಾದ ಕೋಟೆಯ ಮಣ್ಣಿನ ಗೋಡೆಗಳ ಅವಶೇಷಗಳು ಈಗಲೂ ಗೋಚರಿಸುತ್ತವೆ. ಈ ಊರಿನಲ್ಲಿ ಕೇಂದ್ರ ಸರಕಾರದ ಅಡಿಕೆ ಸಂಶೋಧನ ಕೇಂದ್ರ ಮತ್ತು ನಾಥಪಂಥದ ಒಂದು ಮಠವಿದೆ.

**ಬಂಡೀಪುರ:** (ಮೈಸೂರು ಜಿ; ಗುಂಡ್ಲುಪೇಟೆ ತಾ; ಜನ: 461) ಹಂಗಳ ಹೋಬಳಿಯಲ್ಲಿರುವ ಬಂಡೀಪುರವು ಗುಂಡ್ಲುಪೇಟೆಯಿಂದ 19 ಕಿಮೀ, ಮೈಸೂರಿನಿಂದ 80 ಕಿಮೀ ಹಾಗೂ ಬೆಂಗಳೂರಿನಿಂದ 220 ಕಿಮೀ ದೂರದಲ್ಲಿ ಮೈಸೂರು-ಉದಕಮಂಡಲ ಮಾರ್ಗದಲ್ಲಿದೆ. ಇಲ್ಲಿ ಸುಮಾರು 56.98 ಚ ಕಿಮೀ ವಿಸ್ತೀರ್ಣವುಳ್ಳ ವನ್ಯಪ್ರಾಣಿ ಅಭಯಾರಣ್ಯವಿದೆ. ದೇಶದಲ್ಲೇ ಅತ್ಯುತ್ತಮವಾದ ಅಭಯಾರಣ್ಯವಿದೆಂದು ಹೆಸರು ಪಡೆದಿದ್ದು ಇದೊಂದು ಸುಂದರವಾದ ಪ್ರವಾಸಿ ತಾಣವಾಗಿದೆ. ಈಗ 874.20 ಚ ಕಿಮೀ ವಿಸ್ತೀರ್ಣವುಳ್ಳ ರಾಷ್ಟ್ರೀಯ ವನವಾಗಿ ಬೆಳೆದಿದ್ದು 1974ರಲ್ಲಿ "ಪ್ರಾಜೆಕ್ಟ್ ಟೈಗರ್" (ಹುಲಿ ರಕ್ಷಣಾ ಕೇಂದ್ರ) ಪ್ರದೇಶವೆಂದು ಸಾರಿ ಇಲ್ಲಿ ಹುಲಿಗಳ ಸಂರಕ್ಷಣೆಯಲ್ಲದೆ, ಅವುಗಳ ಸಂತತಿಯನ್ನೂ ಅಭಿವೃದ್ಧಿಪಡಿಸಲಾಗುತ್ತಿದೆ. ಆನೆ, ಹುಲಿ, ಚಿರತೆ, ಸಂಬಾರ್, ಕರಡಿ, ನರಿ, ಅಳಿಲು, ಜಿಂಕೆ, ಕಾಡುನಾಯಿ, ಕಪ್ಪು ಮುಖದ ಮುಸವ ಮುಂತಾದ ಕಾಡು ಪ್ರಾಣಿಗಳಿವೆ. ಜೊತೆಗೆ ನವಿಲು, ರಾಬಿನ್ ಟಿಟ್ಟಿಬ, ಪಾರಿವಾಳ, ಕಾಡುಕೋಳಿ, ಹಾಡುಹಕ್ಕಿ (ಬುಲ್‌ಬುಲ್), ಗವುಜಗ, ವಾರ್‌ಬಲ್, ಮುಂತಾದವು ಸಾಕಷ್ಟಿವೆ. ತೇಗ, ದಿಂಡಲು, ಹೊನ್ನೆ, ಮತ್ತಿ, ನೇರಲೆ, ತಡಸಲು ಮತ್ತು ಬಿದಿರುಗಳಿಂದ ಕಾಡು ತುಂಬಿದೆ. ಈ ಪ್ರದೇಶದಲ್ಲಿರುವ ಹಲವು ಕೆರೆ, ಹಳ್ಳಗಳು ನೀರನ್ನೊದಗಿಸುತ್ತವೆ. ಮೇ ತಿಂಗಳಿನಿಂದ ನವೆಂಬರ್ ತಿಂಗಳ ಮಧ್ಯ ಕಾಲದಲ್ಲಿ ವನ್ಯಮೃಗಗಳನ್ನು ನೋಡುವುದಕ್ಕೆ ಅತ್ಯುತ್ತಮ ಋತುವಾಗಿದೆ. ಸಾರಿಗೆ ವಾಹನಗಳಲ್ಲದೆ, ಆನೆ ಸವಾರಿಗಳಲ್ಲೂ ಮೃಗವನಕ್ಕೆ ಪ್ರವಾಸಿಗಳನ್ನು ಕೊಂಡೊಯ್ಯುವ ವ್ಯವಸ್ಥೆಯಿದೆ. ಅಭಯಾರಣ್ಯದ ಪ್ರದೇಶದಲ್ಲೇ ಪ್ರವಾಸಿಗರಿಗೆ ವಸತಿ ಸೌಕರ್ಯಕ್ಕಾಗಿ ವಸತಿ ಗೃಹಗಳನ್ನು ನಿರ್ಮಿಸಲಾಗಿದೆ.

**ಬಂದಳಿಕೆ:** (ಶಿವಮೊಗ್ಗ ಜಿ; ಶಿಕಾರಿಪುರ ತಾ.) ಶಿಕಾರಿಪುರದಿಂದ 35 ಕಿಮೀ ದೂರದಲ್ಲಿರುವ ಬಂದಳಿಕೆ ಈಗ ಪಾಳು ಗ್ರಾಮ. ಪೂರ್ವದಲ್ಲಿ ನಾಗರಖಂಡ 70ರ ರಾಜಧಾನಿಯಾಗಿದ್ದು ಮಹತ್ವಪೂರ್ಣ ಸ್ಥಳವಾಗಿತ್ತು. ಇಲ್ಲಿ ಹಲವು ಭಗ್ನ ಮಂದಿರಗಳಿವೆ. ಇವುಗಳಲ್ಲಿ ಕೆಲವು ಅನೋಘವಾಗಿದ್ದು ಉತ್ತಮ ಶಿಲ್ಪಗಳಿಂದಲೂ ತುಂಬಿವೆ. ಶಾಂತಿನಾಥ ಬಸದಿ ನಾಗರಕೆರೆಯ ಬಲಬದಿಗೆ ಇದ್ದು ಇದಕ್ಕೆ ಜಕ್ಕಿಯಬ್ಬೆ ದತ್ತಿ ನೀಡಿದ್ದಳು. ಇದರಲ್ಲಿ ಸುತ್ತಲೂ ಕೈಸಾಲೆ ಮತ್ತು ಮೂರು ದಿಕ್ಕುಗಳಲ್ಲಿ ಮೂರು ಪ್ರವೇಶ ದ್ವಾರಗಳಿಂದ ಕೂಡಿದ ಮಹಾಮಂಟಪವಿದೆ. 14ನೇಯ ಶತಮಾನಕ್ಕೆ ಸೇರಬಹುದಾದ ವೀರಭದ್ರ ಗುಡಿಯಿದ್ದು, ಇದರಲ್ಲಿ ಚೆನ್ನಾಗಿ ಕಡೆದ ವೀರಭದ್ರ ವಿಗ್ರಹವಿದೆ. ಬೊಪ್ಪಸೆಟ್ಟಿ 1274ರಲ್ಲಿ ನಿರ್ಮಿಸಿದ ಸೋಮೇಶ್ವರಾಲಯವು ಒಂದು ತ್ರಿಕೂಟಾಚಲವಾಗಿದ್ದು ಒಂದು ರಂಗಮಂಟಪವನ್ನೊಳಗೊಂಡಿದೆ. ಹಾಗೆಯೇ ತ್ರಿಮೂರ್ತಿ ಗುಡಿ ಕೂಡ ಕಲ್ಯಾಣಿ ಚಾಳುಕ್ಯರ ಕಾಲದ ತ್ರಿಕೂಟಾಚಲವಾಗಿದ್ದು ಸುಮಾರು 1160ರಲ್ಲಿ ನಿರ್ಮಿತವಾಗಿರಬೇಕು. ಈ ಮೂರು ಗರ್ಭಗುಡಿಗಳ ಮೇಲಿರುವ ಶಿಖರ ಭಗ್ನವಾಗಿದೆ. ಇಲ್ಲಿರುವ ಮೂರು ಗರ್ಭಗೃಹಗಳಿಗೆ ಮೂರು ಅಂತರಾಳಗಳು ಸೇರಿದ್ದು ಅವುಗಳ ದ್ವಾರಬಂಧ ಅಲಂಕೃತವಾಗಿವೆ. ಹಾಗೆಯೆ ಹೊರಗೋಡೆಯ ಮೇಲಿರುವ ದೇವಕೋಷ್ಠ

ಗಳು ಅಲಂಕಾರಿಕವಾಗಿವೆ. ಪೂರ್ವಾಭಿಮುಖವಾಗುಳ್ಳ ಈ ತ್ರಿಕೂಟಾಚಲದಲ್ಲಿ ಪಶ್ಚಿಮ ಮತ್ತು ದಕ್ಷಿಣದ ಗರ್ಭಗುಡಿಗಳಲ್ಲಿ ಶಿವಲಿಂಗಗಳೂ ಹಾಗೂ ಉತ್ತರದ ಗರ್ಭಗೃಹದಲ್ಲಿ ವಿಷ್ಣುವಿನ ವಿಗ್ರಹವೂ ಪ್ರತಿಷ್ಠಾಪಿಸಲ್ಪಟ್ಟಿವೆ. ಸಹಸ್ರಲಿಂಗ ದೇಗುಲದ ಲಿಂಗದಮೇಲೆ 999 ಲಿಂಗಗಳನ್ನು, ಪ್ರಧಾನಲಿಂಗದ ಪೀಠದ ಮೇಲೆ ಸಾಂಕೇತಿಕವಾಗಿ ಕಂಡರಿಸಲಾಗಿದೆ. 1063ರಲ್ಲಿ ಮಾಚಯ್ಯ ದಂಡನಾಯಕನು ಇದನ್ನು ನಿರ್ಮಿಸಿದನು. 1209ರಲ್ಲಿ ಮಲ್ಲದಂಡನಾಯಕನು ಹೊಯ್ಸಳ ಇಮ್ಮಡಿ ಬಲ್ಲಾಳನ ರಾಣಿಯಾಗಿದ್ದ ಅಭಿನವಕೇತಲದೇವಿಯ ಅಣತಿಯ ಮೇರೆಗೆ ನಿರ್ಮಿಸಿದ ಮಹಾನವಮಿ ಮಂಟಪವನ್ನೂ ನೋಡ ಬಹುದು. ಬನಶಂಕರಿ ಬಂಡಳಿಕೆಯ ಪ್ರಧಾನ ದೇವತೆ. ಇವಳನ್ನು ಮಾಯಾದೇವಿ ಎಂದೂ ಕರೆಯುತ್ತಾರೆ. ಅಲ್ಲಮನ ಪರೀಕ್ಷೆಗಾಗಿ ಕಳಿಸಲಾದ ಮಾಯಾದೇವಿ ಅವನ ಪ್ರಭಾವದಿಂದ ಪರಿವರ್ತನೆ ಹೊಂದಿದಳೆಂದು ಐತಿಹ್ಯವಿದೆ. ಈ ಗುಡಿಯ ಬಳಿ ಚೆನ್ನಾಗಿ ಕಂಡರಿಸಿದ ಮಹಾಸತಿ ಕಲ್ಲಿದೆ.

ಬನವಾಸಿ : (ಉ. ಕ. ಜಿ; ಶಿರಸಿ ತಾ; ಜ: 3,881) ಕರ್ನಾಟಕದ ತೀರ ಪ್ರಾಚೀನ ಪಟ್ಟಣಗಳಲ್ಲೊಂದಾದ ಬನವಾಸಿಯು ಬೆಂಗಳೂರಿನಿಂದ ಸುಮಾರು 384 ಕಿಮೀ ದೂರ ದಲ್ಲಿದೆ. ವನವಾಸಕ ಹಾಗೂ ವನವಾಸದಿಂದ ಈಗಿನ ಬನವಾಸಿ ಎಂಬ ಹೆಸರು ಬಂದಿದೆ. ಇದಕ್ಕೆ ವೈಜಯಂತಿ, ಬನವಸೆ, ಜಯಂತಿಪುರ ಎಂಬ ಹೆಸರುಗಳಿದ್ದವು. ವರದಾನದಿಯ ದಂಡೆಯ ಮೇಲಿರುವ ಬನವಾಸಿಯು ಸುತ್ತಮುತ್ತ ಹಸಿರು ವನರಾಶಿಯಿದ್ದು, ವನವಾಸಿಯೆಂಬ ಪ್ರಾಚೀನ ಹೆಸರು ಇದಕ್ಕೆ ಅನ್ವರ್ಥವಾಗಿದೆ. ರಾಮಾಯಣ, ಮಹಾಭಾರತ, ಮಹಾವಂಶ, ಪಂಪಭಾರತ, ಪ್ರಭುಲಿಂಗಲೀಲೆ ಮುಂತಾದ ಸಾಹಿತ್ಯ ಕೃತಿಗಳಲ್ಲಿ ಈ ಊರಿನ ವಿವಿಧ ಉಲ್ಲೇಖಗಳಿವೆ. ಹ್ಯುಯೆನ್‌ತ್ಸಾಂಗ್, ಟಾಲೆಮಿ ಹಾಗೂ ಅಲ್ಬೆರುನಿ ಕೂಡ ಇದರ ಬಣ್ಣನೆ ನೀಡಿದ್ದಾರೆ. ಟಾಲೆಮಿಯು ಇದನ್ನು 'ಬನೌಸೀ' ಎಂದು ಹೆಸರಿಸಿದ್ದಾನೆ. ಮಹಾವಂಶದ ಪ್ರಕಾರ ಇಲ್ಲಿಗೆ ಅಶೋಕನು ಬೌದ್ಧ ಮತ ಪ್ರಸಾರಕರನ್ನು ಕಳಿಸಿದ್ದ. ಇದರ ಇತಿಹಾಸವನ್ನು ಕ್ರಿ. ಪೂ. ಮೂರನೇಯ ಶತಮಾನದಿಂದ ಗುರುತಿಸಬಹುದಾಗಿದೆ. ಆ ಕಾಲದ ಮಡಿಕೆ ಕುಡಿಕೆಗಳು ಇಲ್ಲಿ ಪತ್ತೆಯಾಗಿವೆ. ರಾಷ್ಟ್ರಕೂಟ ಹಾಗೂ ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಕೂಡ ಇದು ಬನವಾಸಿ ದೇಶವೆಂಬ ಪ್ರಮುಖ ಪ್ರಾಂತ್ಯವಾಗಿತ್ತು. ಪಂಪನು ತನ್ನ ವಿಕ್ರಮಾರ್ಜುನವಿಜಯ ಕಾವ್ಯದಲ್ಲಿ ಬನವಾಸಿ ದೇಶದಲ್ಲಿ ತಾನು ತಿರುಗಾಡಿದ ಮಧುರ ಸ್ಮರಣೆಯನ್ನು ಮಾಡಿಕೊಂಡಿದ್ದಾನೆ. ಗುಪ್ತ ಸಾಮ್ರಾಜ್ಯದ ರಾಯಭಾರಿಯಾಗಿ ಕಾಳಿದಾಸನೂ ಇಲ್ಲಿಗೆ ಬಂದಿರಬೇಕು; ಮೇಘದೂತದಲ್ಲಿ ಬನವಾಸಿಯ ಬಗ್ಗೆ ಈತನ ಅನಿಸಿಕೆಗಳನ್ನು ದಾಖಲಿಸಿದ್ದಾನೆ. ಬುಕನನ್ ಕೂಡ ಇಲ್ಲಿಗೆ ಬಂದಿದ್ದ. ಬನವಾಸಿಯು ಚುಟು ಸಾತಕರ್ಣಿಗಳ ರಾಜಧಾನಿಯಾಗಿತ್ತು. ಈ ವಂಶದ ನಾಗಶ್ರೀ ಎಂಬ ರಾಣಿಯ ಪ್ರಾಕೃತ ಶಾಸನವು ಇಲ್ಲಿದೆ. ಕದಂಬ ಮಯೂರ ಶರ್ಮನು ಬನವಾಸಿಯನ್ನು ತನ್ನ ರಾಜಧಾನಿಯಾಗಿ ಬೆಳೆಸಿದ ಮೇಲೆ ಇದೊಂದು ಪ್ರಮುಖ ನಗರವಾಯಿತು. ಇಲ್ಲಿಯ ಮಧುಕೇಶ್ವರಾಲಯವು ಎದ್ದು ಕಾಣುವ ಒಂದು ವಾಸ್ತುಕೃತಿಯಾಗಿದೆ. ಕಾಲಾಂತರ ದಲ್ಲಿ ಇದೊಂದು ಸಂಕೀರ್ಣ ಕಟ್ಟಡವಾಗಿ ಬೆಳೆದಿದೆ. ಈ ದೇವಾಲಯದ ಗರ್ಭಗೃಹದ ಹೊರಗೋಡೆಯಲ್ಲಿ ಮೂರು ಕಡೆ ದೇವಕೋಷ್ಠಗಳಿವೆ. ಗರ್ಭಗೃಹದಲ್ಲಿ ಕಣಶಿಲೆಯ ಚೌಕ ಕಂಬಗಳಿವೆ. ನವರಂಗದಲ್ಲಿ ತಿರುಗಣೆಯ ಮೇಲೆ ತಿರುಗಿಸಿ ಮಾಡಿದ ಸ್ತಂಭಸಾಲುಗಳಿವೆ. ಇವು ಕಲ್ಯಾಣಿ ಚಾಳುಕ್ಯ ಶೈಲಿಯಲ್ಲಿವೆ. ಮುಖಮಂಟಪದ ಸುತ್ತಲೂ ಕಟಾಂಜನವಿದ್ದು ಇದೂ 11-12ನೇಯ ಶತಮಾನಗಳಲ್ಲಿ ನಿರ್ಮಿತವಾಗಿರಬೇಕು. ಹೊರ ಭಾಗದಲ್ಲಿ ಅಷ್ಟದಿಕ್ಪಾಲಕ, ದಶಾವತಾರ, ದ್ವಾದಶ ಆದಿತ್ಯರು, ಇತ್ಯಾದಿ ವಿವಿಧ ಶಿಲ್ಪ ಕೆತ್ತನೆಗಳಿವೆ. ಇದರ ಮೇಲ್ಚಾವಣಿ ಸರಳವಾಗಿದೆ. ಗರ್ಭಗೃಹದ ಶಿಖರವು ಮೆಟ್ಟಿಲುಮೆಟ್ಟಿಲಾಗಿ ಮೇಲೇರುವ ಕದಂಬನಾಗರ ಶೈಲಿಯಲ್ಲಿದೆ. ಇದರ ಮೂಲೆಗಳಲ್ಲಿ ಗಾರೆಯಿಂದ ಮಾಡಿದ ನಂದಿ ವಿಗ್ರಹಗಳೂ ಇವೆ. ಶಿಖರಕ್ಕೆ ಶುಕನಾಸ ಮತ್ತು ಮೇಲ್ಭಾಗದಲ್ಲಿ ಲೋಹದ ಕಲಶವನ್ನೂ ನೋಡಬಹುದು. ಮಧುಕೇಶ್ವರಾಲಯದ ಸುತ್ತಲೂ ಹಲವಾರು ಸಣ್ಣ-ದೊಡ್ಡ ಗುಡಿಗಳಿವೆ. ಪರಶುರಾಮ, ವಿಠೋಬ, ಅರ್ಧ ಗಣಪತಿ, ರಾಮ, ಐದು ಹೆಡೆ ನಾಗಗುಡಿ, ಮುಂತಾದವನ್ನು ಇಲ್ಲಿ ಹೆಸರಿಸಬಹುದು. ಐದು ಹೆಡೆ ನಾಗಶಿಲ್ಪದ ಎರಡೂ ಪಕ್ಕಗಳಲ್ಲಿ ನಾಗಶ್ರೀಯ ಪ್ರಾಕೃತ ಶಾಸನವಿದೆ. ದೇವಾಲಯದ ಪ್ರಾಂಗಣ ದಲ್ಲಿ ಪ್ರಾಚ್ಯವಸ್ತುಗಳ ಶಿಲ್ಪ ಸಂಗ್ರಹಾಲಯವೊಂದಿದೆ. ಮಧುಕೇಶ್ವರಾಲಯದ ಎಡಕ್ಕೆ ಪಾರ್ವತಿ ದೇಗುಲವೂ, ಬಲಕ್ಕೆ ಸದಾಶಿವಾಲಯವೂ ವಿಜಯನಗರ ಕಾಲದಲ್ಲಿ ಸೇರ್ಪಡೆ ಆಗಿರ ಬೇಕು. ಇದನ್ನು ಕಟ್ಟುವಾಗ ಪ್ರಾಚೀನ ದೇಗುಲದ ಕಂಬ ಮುಂತಾದ ಭಾಗಗಳನ್ನು ಬಳಸಿಕೊಳ್ಳಲಾಗಿದೆ. ಈ ದೇವಾಲಯಗಳ ಸ್ತಂಭಗಳ ಮೇಲೆ ಕಂಡುಬರುವ ಶಾಸನಗಳ ಪ್ರಕಾರ ಈ ಮಂಟಪಗಳನ್ನು ಸೋಂದೆಯ ಸದಾಶಿವ ರಾಜೇಂದ್ರನು ನಿರ್ಮಿಸಿದನು. ಮಧುಕೇಶ್ವರಾಲಯದ ವಾಯುವ್ಯಕ್ಕಿರುವ ಬಸವಲಿಂಗೇಶ್ವರಾಲಯವೂ ವಿಜಯನಗರ ಅಥವಾ ಸೋಂದೆ ಅರಸರ ಕಾಲದ್ದಾಗಿರಬೇಕು. ತಿರುಮಲ, ರಾಮೇಶ್ವರ, ಕದಂಬೇಶ್ವರ ಗುಡಿಗಳು ಮಧುಕೇಶ್ವರಾಲಯದ ಪ್ರಾಂಗಣದ ಹೊರಗೆ ಆಗ್ನೇಯಕ್ಕಿವೆ. ತಿರುಮಲ ದೇಗುಲದ ಉಬ್ಬು ಕಂಬ ವೊಂದರ ಮೇಲೆ ಒಂದನೇ ಬುಕ್ಕನ ಮಂತ್ರಿಯಾಗಿದ್ದ ಮಾಧವ ಮಂತ್ರಿಯ ಕನ್ನಡ ಶಾಸನವಿದೆ.

ಮಧುಕೇಶ್ವರಾಲಯದ ಪ್ರಾಂಗಣದಲ್ಲಿ ದಕ್ಷಿಣ ಭಾಗದಲ್ಲಿ ಪ್ರತ್ಯೇಕವಾಗಿಟ್ಟಿರುವ ಕಲ್ಲುಮಂಚವು ಸುಂದರವಾದ ದ್ರಾವಿಡ ಶೈಲಿಯ ಕಂಬ, ಚಾವಣಿಗಳ ಸೂಕ್ಷ್ಮ ಕೆತ್ತನೆಗಳಿಂದಾಗಿ

ಮನೋಹರವಾಗಿದೆ. ಇದರ ಮೇಲೆ ಕೊರೆದಿರುವ ಶಾಸನವು ತಿಳಿಸುವಂತೆ ಸೋಂದೆಯ ರಘುನಾಥನು ಇದನ್ನು ದೇವರಿಗೆ ದತ್ತಿಯಾಗಿ ನೀಡಿದನು. ಮಧುಕೇಶ್ವರಾಲಯದಿಂದ ಸುಮಾರು ಒಂದು ಕಿಮೀ ದೂರದಲ್ಲಿ ಆದಿ ಬನವಾಸಿಯಿದ್ದು ಅಲ್ಲಿ ಆದಿ ಮಧುಕೇಶ್ವರಾಲಯವಲ್ಲದೆ ಶಿವ-ಪಾರ್ವತಿ ದೇವಾಲಯವೂ ಇದೆ. ಇದರ ಸುತ್ತಮುತ್ತ ಹಲವು ಕಟ್ಟಡಗಳ ಅವಶೇಷಗಳಿವೆ. ಈ ಗುಡಿಯಿಂದ ತುಸು ದೂರದಲ್ಲಿ ನಡೆಸಿದ ಉತ್ಖನನಗಳಿಂದ ಬೌದ್ಧ ಸ್ತೂಪವೆಂದು ಊಹಿಸಲಾದ ಇಟ್ಟಿಗೆ ಕಟ್ಟಡದ ಅವಶೇಷಗಳು ಪತ್ತೆಯಾಗಿವೆ. ಕದಂಬ ಪೂರ್ವ ಕಾಲದಲ್ಲೇ ಇಲ್ಲಿ ಬೌದ್ಧ ಮತ್ತು ಜೈನ ಮತಗಳು ಜನಪ್ರಿಯವಾಗಿದ್ದವು. ಮಧುಕೇಶ್ವರಾಲಯದ ಸಮೀಪದಲ್ಲಿ ಕದಂಬೇಶ್ವರ, ಶಿತಿಕಂಠೇಶ್ವರ ದೇವಾಲಯಗಳು ಮತ್ತು ಊರೊಳಗೆ ಇತ್ತೀಚಿನ ಬಸವೇಶ್ವರ, ಹನುಮಂತ, ಮಾರಿಗುಡಿಗಳಿವೆ; ಒಂದು ಮಸೀದಿಯೂ ಅಲ್ಲಿದೆ. ಬನವಾಸಿಯ ವಾಯುವ್ಯಕ್ಕೆ ಸುಮಾರು ಐದು ಕಿಮೀ ದೂರದಲ್ಲಿರುವ ಗುಡ್ನಾಪುರವು ಬನವಾಸಿ ಕದಂಬರ ಕಾಲದಲ್ಲಿ ರಾಜಧಾನಿಯ ಒಂದು ಭಾಗವೇ ಆಗಿತ್ತು. ಇಲ್ಲಿರುವ ವೀರಭದ್ರ ಗುಡಿಯ ಬಳಿ ಕದಂಬ ರವಿವರ್ಮನ ಸ್ತಂಭಶಾಸನವನ್ನು ಈಗ ಕೆಲವು ವರ್ಷಗಳ ಹಿಂದೆ ಪತ್ತೆ ಮಾಡಲಾಯಿತು. ಈ ಶಾಸನ ಪ್ರಚುರಪಡಿಸುವಂತೆ ಮಯೂರಶರ್ಮನ ತಂದೆ ಬಂಧುಷೇಣ, ತಾತ ವೀರಶರ್ಮರಾಗಿದ್ದರು. ಅಲ್ಲದೆ ಇಲ್ಲಿ ವಿಜೃಂಭಣೆಯಿಂದ ನಡೆಯುತ್ತಿದ್ದ ವಸಂತೋತ್ಸವವನ್ನು ಕಾಮನ ಗೌರವಾರ್ಥವಾಗಿ ಆಚರಿಸಲಾಗುತ್ತಿತ್ತೆಂದು ಶಾಸನವು ತಿಳಿಸುತ್ತದೆ. ಇಲ್ಲಿ ಕದಂಬರ ಅರಮನೆ ಮತ್ತಿತರ ಕಟ್ಟಡಗಳಿದ್ದಿರಬೇಕು. ಇದಲ್ಲದೆ ಗುಡ್ನಾಪುರದಲ್ಲಿ ಕೆಲವು ಅಪೂರ್ವ ವಿಗ್ರಹಗಳೂ ಬೆಳಕಿಗೆ ಬಂದಿವೆ. ಕಾಮ, ರತಿ, ಜೈನ ಪ್ರತಿಮೆಗಳು ಮುಂತಾದವನ್ನು ಇಲ್ಲಿ ಹೆಸರಿಸಬಹುದು. ಶಾಸನೋಕ್ತವಾದ ಗುಡ್ನಾಪುರ ಕೆರೆ ಪ್ರಸಿದ್ಧವಾಗಿದೆ.

**ಬನ್ನೇರುಘಟ್ಟ :** (ಬೆಂಗಳೂರು ಜಿ; ಅನೆಕಲ್ ತಾ; ಜನ: 1,277) ಬೆಂಗಳೂರಿನ ದಕ್ಷಿಣಕ್ಕೆ ಸುಮಾರು 19 ಕಿಮೀ ದೂರದಲ್ಲಿ, ಬೆಂಗಳೂರು, ಜಿಗಣಿ, ಆನೆಕಲ್ ಮಾರ್ಗದಲ್ಲಿ ಈ ಊರಿದೆ. ಹಲವು ಶಾಸನಗಳಲ್ಲಿ ಇದನ್ನು ಬನ್ನೂರಘಟ್ಟ ಎಂದು ಉಲ್ಲೇಖಿಸಲಾಗಿದೆ. ಈಗಿದ ಸ್ಥಳನಾಮವು ಇದರ ಅಪಭ್ರಂಶ ರೂಪವಾಗಿದೆ. ಇಲ್ಲಿನ ಚಂಪಕಧಾಮ ಸ್ವಾಮಿ ದೇವಾಲಯವು ಶಿಲ್ಪ ಪಟ್ಟಿಕೆಗಳಿಂದ ಕೂಡಿದ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಿತವಾಗಿದೆ. ಅಂತೆಯೇ ಇದನ್ನು ಏರಿ ಹೋಗಲು ಕೆಲವು ಮೆಟ್ಟಿಲುಗಳಿವೆ. ಶಾಸನಗಳಲ್ಲಿ ಮೂಲವಿಗ್ರಹವನ್ನು 'ದಾಮೋದರ' ಎಂದು ಬಣ್ಣಿಸಲಾಗಿದೆ. ಕ್ರಿ.ಶ. 1257ರ ಶಾಸನವು ತಿಳಿಸುವಂತೆ ಹೊಯ್ಸಳರ ಅಧೀನನಾಗಿ ಆಳುತ್ತಿದ್ದ ತಮಿಳು ಸಾಮಂತನಾದ ಪೂರ್ವದಿರಾಯನೆಂಬುವವನು ಈ ದೇಗುಲವನ್ನು ಕಟ್ಟಿಸಿದನು. ಆಂಜನೇಯ, ಬಿಸಿಲು ಮಾರಮ್ಮ, ಗ್ರಾಮದೇವಿ ಗುಡಿಗಳು ಇಲ್ಲಿಯ ಇತರ ದೇಗುಲಗಳಾಗಿವೆ. ಆಂಜನೇಯ ಗುಡಿಯ ಎದುರಲ್ಲಿ ಸುಮಾರು 50 ಅಡಿ ಎತ್ತರದ ಶಿಲಾಸ್ತಂಭವಿದ್ದು ಅದರ ತಳದಲ್ಲಿ ಒಂದು ಶಾಸನವಿದೆ. ಚಂಪಕಧಾಮ ಗುಡಿಯ ಹಿಂಗಡೆ ಸುವರ್ಣಮುಖಿಗಿರಿಯಿದ್ದು ಇಲ್ಲಿ ನರಸಿಂಹನ ಪುಟ್ಟಗುಡಿಯಿದೆ. ಇಲ್ಲಿಂದ ಸುಮಾರು ಎರಡು ಕಿಮೀ ದೂರದಲ್ಲಿ ಸುವರ್ಣಮುಖಿ ಸರೋವರವಿದೆ. ಇದರ ಜಲದಲ್ಲಿ ಹಲವು ಔಷಧೀಯ ಗುಣಗಳಿವೆಯೆಂದು ಪ್ರತೀತಿಯಿದೆ. ಕ್ರಿ.ಶ. 1818ರ ಶಾಸನವು ತಿಳಿಸುವಂತೆ ಈ ಸರೋವರಕ್ಕೆ ಮೆಟ್ಟಿಲುಗಳನ್ನು ನಿರ್ಮಿಸಲಾಯಿತು. ಭವಾನಿಶಂಕರ, ಆಂಜನೇಯ, ರಾಮಲಿಂಗೇಶ್ವರ, ಅಂಬಾ ಭವಾನಿ ಆಶ್ರಮಗಳೂ ಇಲ್ಲಿವೆ. ಬನ್ನೇರುಘಟ್ಟದಿಂದ ಸುಮಾರು ಒಂದು ಕಿಮೀ ದೂರದಲ್ಲಿ ರಾಷ್ಟ್ರೀಯ ಉದ್ಯಾನವನವಿದ್ದು ಸುಮಾರು 104 ಚಕಿಮೀ ಅರಣ್ಯ ಪ್ರದೇಶವನ್ನು ಒಳಗೊಂಡಿದೆ. ಇಲ್ಲಿ ಹಲವು ಬಗೆಯ ಪ್ರಾಣಿಗಳಿವೆ. ಈ ಪೈಕಿ ಮೊಸಳೆ, ಹಾವು ಹಾಗೂ ಸಿಂಹಗಳ ಸಫಾರಿ ಪಾರ್ಕ್‌ಗಳನ್ನು ಹೆಸರಿಸಬಹುದು.

**ಬಸರಾಳು :** (ಮಂಡ್ಯ ಜಿ; ಮಂಡ್ಯ ತಾ; ಜನ: 2,397) ಇದೊಂದು ಹೋಬಳಿ ಕೇಂದ್ರವಾದ ದೊಡ್ಡ ಗ್ರಾಮವಾಗಿದ್ದು ಮಂಡ್ಯದಿಂದ 25 ಕಿಮೀ ದೂರದಲ್ಲಿ, ಮಂಡ್ಯ ನಾಗಮಂಗಲ ರಸ್ತೆಯಲ್ಲಿದೆ. ಇಲ್ಲಿ ದೊರೆತ ಶಾಸನಗಳು ತಿಳಿಸುವಂತೆ ಹೊಯ್ಸಳರ ಕಾಲದಲ್ಲ ಬಸುರಿವಾಳು ಎಂಬ ಹೆಸರಿನ ಅಗ್ರಹಾರವಾಗಿತ್ತು. ಹೊಯ್ಸಳರ ಕಾಲದ ಸುಂದರವಾದ ಮಲ್ಲಿಕಾರ್ಜುನ ದೇವಾಲಯವನ್ನು 1234ರಲ್ಲಿ ಹರಿಹರ ದಂಡನಾಯಕನು ನಿರ್ಮಿಸಿದನು. ಇದು ತ್ರಿಕೂಟಾಚಲವಾಗಿದ್ದು ಇದರ ಪೂರ್ವಾಭಿಮುಖದ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ದಕ್ಷಿಣಕ್ಕಿರುವ ದೊಡ್ಡ ಮಂಟಪದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ದೇಗುಲದಲ್ಲಿ ಸುಂದರವಾದ ಶಿಲ್ಪಗಳಿವೆ. ಈ ಊರಿನಲ್ಲಿ ಹಲವು ವೀರಗಲ್ಲುಗಳಿದ್ದು, ಕೆಲವನ್ನು ಈ ದೇವಾಲಯದ ಬಳಿ ನಿಲ್ಲಿಸಲಾಗಿದೆ. ಬಸರಾಳಿನ ಬಳಿ ದೊಡ್ಡ ಕೆರೆಯಿದೆ.

**ಬಸವ ಕಲ್ಯಾಣ :** (ಬಿದರೆ ಜಿ; ತಾ. ಕೇ; ಜನ: 33,263) ಬಿದರೆಯಿಂದ ಸುಮಾರು 80 ಕಿಮೀ ಬೆಂಗಳೂರಿಂದ 683 ಕಿಮೀ ದೂರದಲ್ಲಿರುವ ಈ ಊರನ್ನು ಕಲ್ಯಾಣಿ, ಕಲ್ಯಾಣವೆಂದೂ, ಕೆಲವು ಬಹಮನಿಯ ದಾಖಲೆಗಳಲ್ಲೆಲ್ಲ ಕಸಬಾ ಕಲ್ಯಾಣಾಬಾದ್ ಎಂದು ಮುಂತಾಗಿ ಕರೆದಿದೆ. ಚಾಳುಕ್ಯರು ಮಾನ್ಯಖೇಟದಿಂದ ಕಲ್ಯಾಣಕ್ಕೆ ತಮ್ಮ ರಾಜಧಾನಿಯನ್ನು ಬದಲಾಯಿಸಿದ ಮೇಲೆ 10ನೇಯ ಶತಮಾನದಲ್ಲಿ ಇದು ಪ್ರಸಿದ್ಧಿಗೆ ಬಂತು. ಇದು ಕಳಚುರಿಗಳ ರಾಜಧಾನಿಯೂ ಆಗಿತ್ತು. ವಿಶಾಲವಾಗಿ ಅಭಿವೃದ್ಧಿ ಹೊಂದಿದ್ದ ಈ ನಗರದ ವೈಭವವನ್ನು ಕಲ್ಯಾಣಿ ಚಾಳುಕ್ಯರು ಹೆಚ್ಚಿಸಿದರು. ಇಲ್ಲಿಯ ಆರ್ಥಿಕ

ಸಮೃದ್ಧಿಯು ಹೆಸರಿಸುವಂಥದ್ದು. ಇವುಗಳಿಂದಾಗಿ ಇದು ಒಂದು ಶೈಕ್ಷಣಿಕ, ಆಧ್ಯಾತ್ಮಿಕ ಹಾಗೂ ಬೌದ್ಧಿಕ ಕೇಂದ್ರವಾಗಿ ಖ್ಯಾತಿ ಪಡೆಯಿತು. ಬಸವೇಶ್ವರ, ಅಕ್ಕಮಹಾದೇವಿ, ಚನ್ನಬಸವ, ಸಿದ್ಧರಾಮ ಮುಂತಾದವರು ಇಲ್ಲಿ ನೆಲೆಸಿದುದು ಇದಕ್ಕೆ ಕಾರಣ ವೆಂದು ಹೇಳಬೇಕು. ಮಿತಾಕ್ಷರದಲ್ಲಿ ವಿಜ್ಞಾನೇಶ್ವರನು ಎತ್ತಿ ಹೇಳುವಂತೆ, ಕಲ್ಯಾಣದಂಥ ನಗರ ಹಿಂದೆಂದೂ ಇರಲಿಲ್ಲ, ಅಂದಿಗೂ ಬೇರೊಂದಿರಲಿಲ್ಲ. ಸಂಸ್ಕೃತ ಕವಿ ಬಿಲ್ಹಣನೂ ಈ ನಗರದ ವೈಭವವನ್ನು ಹೊಗಳಿದ್ದಾನೆ. ಬಸವೇಶ್ವರ, ಅಲ್ಲಮ ಪ್ರಭು ಮುಂತಾದವರು ಆರಂಭಿಸಿದ ಶರಣರ ಕ್ರಾಂತಿಕಾರಿ ಚಳವಳಿಯು ಆರಂಭವಾದದ್ದು ಇಲ್ಲಿಂದಲೇ. ಸೇಉಣ, ಕಾಕತೀಯರ ನಂತರ ಕಲ್ಯಾಣವು ತಘಲಕ್, ಬಹಮನಿ, ಬರೀದ್ ಷಾಹಿ ಹಾಗೂ ಆದಿಲ್ ಷಾಹಿಗಳ ವಂಶಗಳ ಒಡೆತನಕ್ಕೊಳಗಾಯಿತು. ಅನಂತರ ಔರಂಗ್‌ಜೇಬ್ ಇದನ್ನು ಗೆದ್ದು ಒಬ್ಬ ಮುಸಲ್ಮಾನ್ ನವಾಬನಿಗೆ ಜಹಗೀರಾಗಿ ಕೊಟ್ಟಿದ್ದ. ಕಲ್ಯಾಣದಲ್ಲಿರುವ ಶಾಸನಗಳು ತಿಳಿಸುವಂತೆ ಭೀಮೇಶ್ವರ, ಮಧುಕೇಶ್ವರ, ಹಾಟಕೇಶ್ವರ, ಮಹಾಕಾಳೇಶ್ವರ, ಪಂಪೇಶ್ವರ, ಮತ್ತು ಇತರ ದೇವಾಲಯಗಳು ಇಲ್ಲಿದ್ದವು. ಇಂದು ನೋಡ ಸಿಗುವ ಇತಿಹಾಸಿಕ ವಾಸ್ತುಕೃತಿಗಳಲ್ಲಿ ಕೋಟೆ, ಬಸವೇಶ್ವರ ದೇವಾಲಯ, ಪರುಷ ಕಟ್ಟೆ, ಪ್ರಭುದೇವರ ಗದ್ದುಗೆ, ತ್ರಿಪುರಾಂತಕ ಕೊಳ, ಅಕ್ಕ ನಾಗಮ್ಮನ ಗುಹಾಲಯದ ಜಾಗ, ಬಸವೇಶ್ವರರ ಮಹಾಮನೆ, ಅರಿವಿನ ಗವಿ, ಅರಿವಿನ ಮನೆ, ನುಲಿಯ ಚಂದಯ್ಯನ ಗವಿ, ಘನಲಿಂಗ ರುದ್ರಮುನಿಯ ಗವಿ, ವಿಜ್ಞಾನೇಶ್ವರನ ಗವಿ, ಮಡಿವಾಳ ಮಾಚಯ್ಯನ ಕೊಳ, ಕಂಬಳಿ ಮಠ, ಸಿದ್ದೇಶ್ವರಾಲಯ, ಮಹಾಂತ ಮಠ, ಸದಾನಂದ ಸರಸ್ವತೀ ಮಠ, ಉರಿಲಿಂಗಪೆದ್ದಿ ಮಠ, ಖ್ವಾಜಿಯ ಮಸೀದಿ, ಅಥವಾ ಪೀರರ ದರ್ಗಾ, ಶೇರ್ ಸವಾರ್ ಅಥವಾ ಬಾಗ್ ಸವಾರ್ ದರ್ಗಾ ಮುಂತಾದವು ಇಲ್ಲಿವೆ. ಪಟ್ಟಣದ ಉತ್ತರಕ್ಕೆ ಇರುವ ಕೋಟೆಯನ್ನು ಮೂಲತಃ ಕಲ್ಯಾಣಿ ಚಾಳುಕ್ಯರು ಕಟ್ಟಿಸಿದ್ದರೆಂದು ತೋರುತ್ತದೆ. ಇದರಲ್ಲಿ ಹಲವು ಪುರಾತನ ದ್ವಾರಗಳೂ, ತೋಪುಗಳೂ ಇವೆ. ಲಕ್ಷ್ಮೀದೇವಿಯದೆಂದು ಹೇಳಲಾದ ಮೂರ್ತಿಯಿಲ್ಲದ ಒಂದು ಗುಡಿಯಿದೆ. ಬಾವಿಯಿಂದ ನೀರೆತ್ತಲು ಬಳಸಿದ್ದ ಚಕ್ರವಾಗಿದ್ದ ಚರಕ ನೋಟಾವನ್ನು ಇಲ್ಲಿ ನೋಡಬಹುದು. ಈ ಕೋಟೆಗೆ ಇರುವ ಒಂದೇ ದ್ವಾರವನ್ನು ಗಮನಿಸಿದರೆ ಅದರ ರಕ್ಷಣೆಯ ವ್ಯವಸ್ಥೆಯು ಅದೆಷ್ಟು ಭದ್ರವಾಗಿತ್ತೆಂದು ತಿಳಿಯಬಹುದು. ಈ ಕೋಟೆಯ ಒಳಗೆ ರಾಜ್ಯ ಸರ್ಕಾರದ ಪ್ರಾಕ್ತನ ವಸ್ತು ಸಂಗ್ರಹಾಲಯವಿದೆ. ರಾಜ್ಯ ಸರ್ಕಾರವು 1967ರಲ್ಲಿ ಸ್ಥಾಪಿಸಿದ ಬಸವವನವು ಬಸವೇಶ್ವರರ ಎಂಟನೇಯ ಶತಮಾನೋತ್ಸವದ ಸ್ಮಾರಕವಾಗಿದೆ. ಶರಣರ ಐತಿಹಾಸಿಕ ಧರ್ಮ ಸಭೆಯ ಸ್ಮಾರಕವಾಗಿ ರುದ್ರಮುನಿ ಗವಿಯ ಹಿಂಭಾಗದಲ್ಲಿ ಬೆಂಗಳೂರಿನ ಬಸವ ಸಮಿತಿಯವರು ಒಂದು ಹೊಸ ಅನುಭವ ಮಂಟಪವನ್ನು ನಿರ್ಮಿಸಿದ್ದಾರೆ. ಇಡೀ ಕಟ್ಟಡವೇ ಶಿವಲಿಂಗಾಕಾರದಲ್ಲಿದೆ. ಕಲ್ಯಾಣವು ಒಂದು ಶೈಕ್ಷಣಿಕ ಹಾಗೂ ವಾಣಿಜ್ಯ ಕೇಂದ್ರವಾಗಿದೆ. ಇಲ್ಲಿಗೆ ಸಮೀಪದಲ್ಲಿ ನಾರಾಯಣಪುರವಿದ್ದು ಇದು ಈ ಹಿಂದೆ ಕಲ್ಯಾಣದ ಭಾಗವೇ ಆಗಿತ್ತು. ಇಲ್ಲಿಯೂ ಕಲ್ಯಾಣಿ ಚಾಳುಕ್ಯರ ಕಾಲದ ಒಂದು ಪಾಳು ದೇಗುಲವಿದೆ. ಬಸವ ಕಲ್ಯಾಣದಿಂದ 20 ಕಿಮೀ ದೂರದಲ್ಲಿ ಚಂಪಕಪುರವಿದ್ದು ಅದು ಕೂಡ ಐತಿಹಾಸಿಕ ಮಹತ್ವವುಳ್ಳದ್ದಾಗಿದೆ. ಶ್ರೀರಾಮನು ತನ್ನ ವನವಾಸದ ಸಮಯದಲ್ಲಿ ಇಲ್ಲಿ ತಂಗಿದ್ದನೆಂದು ಹೇಳಲಾಗಿದೆ. ಖೆರ್ದ ಎಂಬ ಊರು ಬಸವಕಲ್ಯಾಣದಿಂದ ಸುಮಾರು 14 ಕಿಮೀ ದೂರದಲ್ಲಿದೆ. ಇಲ್ಲಿ ಮುಳ್ಳಮಾರಿ ಮೇಲ್ದಂಡೆ ನೀರಾವರಿ ಯೋಜನೆ ಇದೆ. ಮಿರ್ಖಲ್ ಬಸವ ಕಲ್ಯಾಣದಿಂದ 19 ಕಿಮೀ ದೂರದಲ್ಲಿದ್ದು ಇದು ಶಾಸನಗಳಲ್ಲಿ ಮರ್ಖಲ್ ಎಂದು ಉಲ್ಲೇಖಿತವಾಗಿದೆ. ಇಲ್ಲಿ ಈಚೆಗೆ ನಿರ್ಮಿಸಲಾದ ಅನಂತಶಯನ ಗುಡಿಯಿದೆ.

ಬಸವನ ಬಾಗೇವಾಡಿ : (ವಿಜಾಪುರ ಜಿ; ತಾ. ಕೇ; ಜನ: 13,881) ವಿಜಾಪುರದ ಆಗ್ನೇಯಕ್ಕೆ ಸುಮಾರು 43 ಕಿಮೀ ದೂರದಲ್ಲಿರುವ ಈ ಊರು ತಾಲೂಕು ಕೇಂದ್ರವಾಗಿದೆ. ನೀಲಗಿರಿ ಪಟ್ಟಣ, ಪಟ್ಟೇಂದ್ರಪುರ ಎಂಬವು ಇದರ ಪುರಾತನ ಹೆಸರುಗಳು. ಶಾಸನಗಳಲ್ಲಿ, ಇದನ್ನು ಬಾಗೇವಾಡಿ ಎಂದಿಷ್ಟೇ ಹೆಸರಿಸಲಾಗಿದೆ. ಹಲವು ಕವಿಗಳು ತಮ್ಮ ಕೃತಿಗಳಲ್ಲಿ ಈ ಸ್ಥಳವನ್ನು ಸಣ್ಣ ಇಂಗಳೇಶ್ವರ ಬಾಗೇವಾಡಿ, ಇಂಗಳೇಶ್ವರ ಬಾಗೇವಾಡಿ, ಹಿಂಗಳೇಶ್ವರ ಬಾಗೇವಾಡಿ ಎಂದು ಮುಂತಾಗಿ ವಿವಿಧ ಕಾಲಗಳಲ್ಲಿ (ಸುಲಭವಾಗಿ ಗುರುತಿಸಲು) ಬಣ್ಣಿಸಿದ್ದುಂಟು. 11-12ನೇಯ ಶತಮಾನಗಳಲ್ಲಿ ಇದೊಂದು ಪಾಶುಪತ ಬ್ರಾಹ್ಮಣರ ಪ್ರಸಿದ್ಧ ಅಗ್ರಹಾರವಾಗಿತ್ತು. ಇಲ್ಲಿ ಹಲವಾರು ಖ್ಯಾತ ವಿದ್ವಾಂಸರಿದ್ದರು. ಮಂತ್ರಿಯಾಗಿದ್ದ, ಸಮಾಜ ಹಾಗೂ ಧರ್ಮದ ಶ್ರೇಷ್ಠ ಸುಧಾರಕರಾಗಿ ಪರಿವರ್ತಿತರಾದ ಬಸವೇಶ್ವರರ ಜನ್ಮಸ್ಥಳವಿದು. ಇಲ್ಲಿಯ ಪ್ರಧಾನವಾದ ದೇವಾಲಯವನ್ನೂ ಬಸವಣ್ಣ ಅಥವಾ ಬಸವೇಶ್ವರ ದೇಗುಲ ವೆಂದು ಜನಪ್ರಿಯವಾಗಿ ಕರೆಯಲಾಗಿದೆ. ಇಲ್ಲಿಯ ಪ್ರಧಾನ ದೇವರು ಸಂಗಮನಾಥ. ಮೂರು ಪ್ರವೇಶ ದ್ವಾರಗಳಿರುವ ಈ ಗುಡಿಯು ವಿಶಾಲವಾದ ಪ್ರಾಕಾರದೊಳಗಿದೆ. ಇದನ್ನು ಪ್ರಾಯಶಃ ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ನಿರ್ಮಿಸಲಾಗಿದೆ. ಇದನ್ನು ದಕ್ಷಿಣ ಭಾಗದಿಂದ ಪ್ರವೇಶಿಸಬಹುದು. ಪಶ್ಚಿಮಕ್ಕಿರುವ ಗರ್ಭಗೃಹದಲ್ಲಿ ಸಂಗಮನಾಥ ಲಿಂಗವಿದ್ದು, ಪೂರ್ವಕ್ಕೆ ನಂದಿ ಅಥವಾ ಬಸವಣ್ಣ ಮಂಟಪವಿದೆ. ನಾಲ್ಕೂವರೆ ಅಡಿ ಎತ್ತರದ ನಂದಿಯನ್ನು ಚೆನ್ನಾಗಿ ಕೆತ್ತಲಾಗಿದೆ. ಈಶಾನ್ಯಕ್ಕಿರುವ ದೇವಕೋಷ್ಠದಲ್ಲಿ ಆಸೀನ ಭಂಗಿಯಲ್ಲಿರುವ ಬಸವೇಶ್ವರನ ಅಮೃತ ಶಿಲಾವಿಗ್ರಹವನ್ನು ಇಡಲಾಗಿದೆ. ಇದರ ಎದುರಿಗೆ ಆರಾಧನಾ ಭಂಗಿಯಲ್ಲಿರುವ ನೀಲಾಂಬಿಕೆಯ ವಿಗ್ರಹವನ್ನು ಇಡಲಾಗಿದೆ. ನಂದಿಯ ಮುಂಭಾಗದಲ್ಲಿ ಒಂದು ವೃತ್ತಾಕಾರದ ವೇದಿಕೆಯಿದ್ದು ಅದು ಚೆನ್ನಾಗಿ ಕೆತ್ತಿದ ಚೌಕ ಹಾಗೂ ಗುಂಡಗಿನ

ಕಂಬಗಳಿಂದ ಕೂಡಿವೆ. ಈ ದೇಗುಲದಲ್ಲಿ 11-12ನೇಯ ಶತಮಾನದ ಮೂರು ಶಾಸನಗಳಿವೆ. ದೇಗುಲದ ಪೂರ್ವ ದ್ವಾರದ ಬಳಿ 'ಬಸವತೀರ್ಥ'ವೆಂದು ಕರೆಯಲಾದ ಶಿಲಾ ಕೊಳವಿದೆ. ಇದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ. ಬಾಗೇವಾಡಿ ಪೇಟೆಯ ಮಧ್ಯದಲ್ಲಿರುವ ಮಾರುತಿ ಗುಡಿ ಸಾಧಾರಣವಾದ ಕಟ್ಟಡವಾಗಿದೆ. ಮಹಾದೇವ ಮತ್ತು ಗಣಪತಿಯ ಪುರಾತನ ದೇಗುಲಗಳೂ ಇವೆ. ಇಲ್ಲಿಯ ವಿಠೋಬ ದೇಗುಲವು ಸಾಮಾನ್ಯ ಕಟ್ಟಡವಾಗಿದ್ದು ಇಲ್ಲಿ ರಾಘವೇಂದ್ರ ಸ್ವಾಮಿಗಳ ಬೃಂದಾವನ ವಿದೆ. ಸಿದ್ಧರಾಮೇಶ್ವರ ಮಠ ಒಂದು ಸುಂದರವಾದ ಆಧುನಿಕ ಕಟ್ಟಡ. ಇಲ್ಲಿ ಇಂಚಗೇರಿ ಪಂಥದ ಸಿದ್ಧರಾಮೇಶ್ವರ ಮಹಾರಾಜರ ಹಾಗೂ ಗುರುಸಿದ್ದೇಶ್ವರ ಮಹಾರಾಜರ ಸಮಾಧಿ ಗಳಿವೆ. ರಾಚೋಟೇಶ್ವರ ಮತ್ತು ರುದ್ರಮುನಿಸ್ವಾಮಿಗಳ ಸಮಾಧಿಗಳಿರುವ ವಿರಕ್ತ ಮಠಕ್ಕೆ ಜನರು ಹೆಚ್ಚಿನ ಗೌರವಾದರ ಗಳನ್ನು ತೋರಿಸುತ್ತಾರೆ. ಬಾಗೇವಾಡಿಯಲ್ಲಿ ನಾಲ್ಕು ಮಸೀದಿ ಗಳಿವೆ. ಇದೊಂದು ಪುರಸಭಾ ಪಟ್ಟಣವಾಗಿದೆ. ಈ ತಾಲೂಕಿನ ಆಲಮಟ್ಟಿಯು ಕೃಷ್ಣಾನದಿಯ ದಂಡೆಯ ಮೇಲಿದ್ದು, ಬಸವನ ಬಾಗೇವಾಡಿಯಿಂದ ಸುಮಾರು 28 ಕಿಮೀ ದೂರದಲ್ಲಿದೆ. ಹೆಸರಾಂತ ರಾಷ್ಟ್ರೀಯ ಮುಖಂಡರಾಗಿದ್ದ ಹರ್ಡೇಕರ್ ಮಂಜಪ್ಪ ನವರು ಇಲ್ಲೊಂದು ಆಶ್ರಮವನ್ನು ಸ್ಥಾಪಿಸಿದ್ದರು. ಇವರು ಹಲವು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಶರಣ ಸಂದೇಶ ಎಂಬ ಮಾಸಪತ್ರಿಕೆಯನ್ನು ಅವರು ಪ್ರಕಟಿಸುತ್ತಿದ್ದರು. ಇವರ ಹೆಸರಿನಲ್ಲಿ ಈಗೊಂದು ಪ್ರೌಢಶಾಲೆಯಿದೆ. ಇದರಲ್ಲಿ ಮಂಜಪ್ಪ ನವರ ಸಮಾಧಿಯಿದೆ. ಇದರ ಸಮೀಪದಲ್ಲೇ ಕೃಷ್ಣಾ ಮೇಲ್ದಂಡೆ ಯೋಜನೆಯಡಿ ರಚಿಸಲಾಗುವ ಅಣೆಕಟ್ಟು ಪ್ರದೇಶ ವಿದೆ. ಈ ಯೋಜನೆಯ ಮೊದಲ ಹಂತ ಪೂರ್ತಿಗೊಂಡಾಗ ಆಲಮಟ್ಟಿ ಮುಳುಗಡೆ ಆಗುವುದು. ಇಂಗಳೇಶ್ವರ (ಜನ: 5,366) ವು ಬಸವನ ಬಾಗೇವಾಡಿಯಿಂದ ಸುಮಾರು 10 ಕಿಮೀ ದೂರದಲ್ಲಿದ್ದು ಐತಿಹಾಸಿಕ ಮಹತ್ವವುಳ್ಳ, ಒಂದು ಕಾಲಕ್ಕೆ ಅಗ್ರಹಾರವಾಗಿದ್ದ ಊರಾಗಿದೆ. ಕಾಲಕ್ರಮದಲ್ಲಿ ಇದಕ್ಕೆ ತಿಂಗ ಳೇಶ್ವರ, ಹಿಂಗಳೇಶ್ವರ ಮುಂತಾಗಿ ಹೆಸರುಗಳು ಬಂದವು. ಸುತ್ತಮುತ್ತಣ ಸ್ಥಳವು ಇಂಗಳೇಶ್ವರ ಬಾಗೇವಾಡಿ ಎಂದು ಪರಿಚಿತವಾಗಿದೆ. 11-12ನೇಯ ಶತಮಾನಗಳಲ್ಲಿ ಇದೊಂದು ಜೈನ ಕೇಂದ್ರವಾಗಿ ಅಭಿವೃದ್ಧಿಗೊಂಡಿತ್ತು. ಚಂದ್ರಪ್ರಭ ಪುರಾಣದ ಕರ್ತೃವಾದ ಜೈನ ಕವಿ ಅಗ್ಗಳನು ಈ ಸ್ಥಳದವನು. ಹಳೆ ಬಸದಿಯ ಅವಶೇಷಗಳನ್ನು ಇಂದಿಗೂ ಅಲ್ಲಿ ನೋಡಬಹುದಾ ಗಿದೆ. ಅಲ್ಲದೆ ಹಲವು ಪುರಾತನ ದೇವಾಲಯಗಳೂ ಇಲ್ಲಿವೆ. ಸುಂದರವಾದ ನಾರಾಯಣ ವಿಗ್ರಹವುಳ್ಳ ನಾರಾಯಣ ದೇವರ ಗುಡಿಯನ್ನು ಹೆಸರಿಸಬಹುದು. ನೀಲಕಂಠನಾಯಕ ನಿರ್ಮಿಸಿದ ನೀಲಕಂಠ ದೇಗುಲಕ್ಕೆ ಕಲ್ಯಾಣಿ ಚಾಳುಕ್ಯ ಭೂಲೋಕಮಲ್ಲನಾದ ಮುಮ್ಮಡಿ ಸೋಮೇಶ್ವರನ ಕಾಲದಲ್ಲಿ 1128ರಲ್ಲಿ ದಾನ ನೀಡಲಾಗಿದೆ. ಪ್ರಾಚೀನ ಸೋಮೇಶ್ವರಾಲಯದಲ್ಲೂ 1176ರ ಶಾಸನವಿದೆ. ಇದು ತಿಳಿಸುವಂತೆ ಕಳಚುರಿ ಸೋವಿದೇವನು ಈ ದೇಗುಲಕ್ಕೆ ಒಂದು ಗ್ರಾಮವನ್ನು ದಾನ ನೀಡಿದನು. ಕಲ್ಮೇಶ್ವರನೆಂದು ಹೇಳಲಾದ ಶಿವಾಲಯವೂ ಇಲ್ಲಿದೆ. ಈ ಊರಿನಲ್ಲಿರುವ ವಿರಕ್ತ ಮಠದಲ್ಲಿ, ಬಸವಣ್ಣನ ವಚನಗಳೆಲ್ಲವನ್ನೂ ಶಿಲಾ ಫಲಕದ ಮೇಲೆ ಕೆತ್ತಿಸಿ, ಗೋಡೆಗಳಿಗೆ ಜೋಡಿಸಿದ ವಚನ ಮಂಟಪವಿದೆ. ಇಲ್ಲಿ ಹಿರೇಮಠವಿದ್ದು, ಇದು ಇಂಗಳೇಶ್ವರ ಗ್ರಾಮದ ಮೂಲ ನಿವೇಶನವಿದ್ದ ಸ್ಥಳಕ್ಕೆ ಬಹಳ ಸಮೀಪದಲ್ಲಿದೆ. ಚಾಳುಕ್ಯ ಶೈಲಿಯ ಒಂದು ಪಾಳು ದೇವಾಲಯವೂ ಇಲ್ಲಿದೆ. ಇಲ್ಲಿಂದ ಒಂದು ಕಿಮೀ ದೂರದಲ್ಲಿ, ಇಂಗಳೇಶ್ವರ–ಬಾಗೇವಾಡಿ ಮಾರ್ಗದಲ್ಲಿ ಗುಡ್ಡದ ಮೇಲೆ ಎರಡು ಗುಹಾಲಯಗಳಿವೆ. ಇದರಲ್ಲಿ ಒಂದು ಸಿದ್ದೇಶ್ವರಾಲಯವಾಗಿದೆ. ಇಲ್ಲಿ ನಾಲ್ಕು ಅಡಿ ಎತ್ತರದ ಜೈನ ತೀರ್ಥಂಕರ ವಿಗ್ರಹವಿದೆ. ಇಲ್ಲಿಂದ ತುಸು ದೂರದಲ್ಲಿ ಇನ್ನೊಂದು ಗುಹಾಲಯವಿದ್ದು ಅಲ್ಲಿ ಅಕ್ಕನಾಗಮ್ಮನ ದೆಂದು ಹೇಳಲಾದ ಸ್ತ್ರೀ ವಿಗ್ರಹವಿದೆ. ಈ ಊರಿನಲ್ಲಿ ಗ್ರಾಮ ಪಂಚಾಯಿತಿಯಿದೆ.

ಬಳ್ಳಾರಿ : (ಜಿ. ಹಾಗೂ ತಾ. ಕೇ; ಜನ: 2,01,104) ಬೆಂಗಳೂರಿನ ಉತ್ತರಕ್ಕೆ ಸುಮಾರು 306 ಕಿಮೀ ದೂರದಲ್ಲಿದೆ. ಎರಡು ಶಿಲಾಪರ್ವತಗಳ ಮಧ್ಯೆ ಊರು ಇದೆ. ಕೋಟೆ ಇರುವ ಬೆಟ್ಟವನ್ನು ಬಲಹರಿಬೆಟ್ಟ ಮತ್ತು ಎದುರು ಬೆಟ್ಟವೆಂದು ಕರೆಯು ತ್ತಾರೆ. ಕೋಟೆ ಗುಡ್ಡದ ಮೇಲೆ ಒಂದು ಸಣ್ಣ ದೇಗುಲವಿದೆ. ಅಲ್ಲದೆ ಮೇಲಣ ಕೋಟೆ ಹಾಗೂ ಆಧುನಿಕ ಕಟ್ಟಡಗಳ ಕೆಲವು ಅವಶೇಷಗಳನ್ನೂ ಇಲ್ಲಿ ನೋಡಬಹುದು. ಕೆಳಗಣ ಕೋಟೆ, ಅದರ ಸುತ್ತಲೂ ಕಲ್ಲಿನ ಗೋಡೆ ಹಾಗೂ ವೃತ್ತಾಕಾರದ ಕೊತ್ತಲಗಳೂ ಇವೆ. ಸುತ್ತಲೂ ಕಂದಕವಿದೆ. ವಿಜಯನಗರ ಸಾಮ್ರಾಜ್ಯದ ಪತನಾನಂತರ ಬಳ್ಳಾರಿಯು ಸ್ಥಳೀಯ ಪಾಳೆಗಾರರ ಆಡಳಿತಕ್ಕೆ ಸೇರಿತು. ಅಲ್ಲದೆ ವಿಜಾಪುರದ ಅರಸರು, ಮರಾಠರೂ, ನಿಜಾಮ ಹಾಗೂ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರೂ ಇದನ್ನು ಆಳಿದರು. 1800ರಲ್ಲಿ ಹೈದರಾಬಾದಿನ ನಿಜಾಮ ಇದನ್ನು ಈಸ್ಟ್ ಇಂಡಿಯಾ ಕಂಪನಿಗೆ ವಹಿಸಿಕೊಟ್ಟ. ಬಳ್ಳಾರಿಯ ಪ್ರಮುಖ ಬಡಾವಣೆಯಾದ 'ಬ್ರೂಸ್‌ಪೇಟೆ'ಗೆ ಪೀಟರ್ ಬ್ರೂಸ್‌ನ ಹೆಸರಿಡಲಾಗಿದೆ. ಇದರ ನಂತರ ಕೌಲ್ ಬಝಾರ್ ಅಭಿವೃದ್ಧಿ ಹೊಂದಿತ್ತು. ದುರ್ಗಮ್ಮನ ಗುಡಿಯಲ್ಲಿ ರುವ ದೇವಿಯ ವಿಗ್ರಹವು ಮಣ್ಣುದಿಣ್ಣೆಯಾಕಾರದಲ್ಲಿದ್ದು, ಅರಿಶಿಣದಿಂದ ಮುಚ್ಚಿರುತ್ತದೆ. ಈ ನಗರದಲ್ಲಿ ಶಿವಾನುಭವ ಮಂಟಪವಲ್ಲದೆ ಎರಡು ಮಸೀದಿ ಹಾಗೂ ದರ್ಗಾಗಳಿವೆ. ಬಳ್ಳಾರಿಯು ಒಂದು ಶೈಕ್ಷಣಿಕ ಹಾಗೂ ಔದ್ಯೋಗಿಕ ಕೇಂದ್ರ ವಾಗಿದೆ. ವೀರಶೈವ ವಿದ್ಯಾವರ್ಧಕ ಸಂಘವು ನಡೆಸುತ್ತಿರುವ ಒಂದು ಕಾಲೇಜು ಮತ್ತು ಸರ್ಕಾರಿ ವೈದ್ಯಕೀಯ ಕಾಲೇಜು ಗಳಿವೆ. ಎಂ. ಜಿ. ಆಟೋಮೊಬೈಲ್ಸ್, ಬಳ್ಳಾರಿ ಸ್ಪಿನ್ನಿಂಗ್ ಮತ್ತು ವೀವಿಂಗ್ ಕಂಪನಿ ಲಿಮಿಟೆಡ್, ಹಾಗೂ ಹಲವು ಎಣ್ಣೆ

ಗಿರಣಿಗಳೂ ಇಲ್ಲಿವೆ. ಹೈದರ್ ಅಲಿಯ ಅಶ್ವಸೈನ್ಯದ ಪಾಳೆಯವಾಗಿದ್ದ ಸ್ಥಳದಲ್ಲಿರುವ ಅಲಿಪುರಂ ಜೈಲ್ ಬ್ರಿಟಿಷರ ಕಾಲದಲ್ಲಿ ಸೆಂಟ್ರಲ್ ಜೈಲ್ ಆಯಿತು. ಇಲ್ಲಿ ಸಿ. ರಾಜಗೋಪಾಲಾಚಾರಿಯವರಂಥ ಸ್ವಾತಂತ್ರ್ಯ ಹೋರಾಟಗಾರರನ್ನು ಸೆರೆಯಲ್ಲಿಡಲಾಗಿತ್ತು. ಬಳ್ಳಾರಿಯ ಉತ್ತರಕ್ಕೆ 17 ಕಿಮೀ ದೂರದಲ್ಲಿರುವ ದನಮ್ಮೂರಲ್ಲಿ ಒಂದು ಗುಹಾಲಯ ಹಾಗೂ ಸಾಧು ವೆಂಕಟಪ್ಪನ ಸಮಾಧಿಯಿವೆ. ಬಳ್ಳಾರಿಯಿಂದ ಸುಮಾರು 14 ಕಿಮೀ ದೂರದಲ್ಲಿರುವ ಪರಮದೇವನಹಳ್ಳಿಯು ಹಗರಿನದಿಯ ದಂಡೆಯಲ್ಲಿದೆ. ಇಲ್ಲಿ ಪಾಣ್ಯಂ ಸಿಮೆಂಟ್ ಫ್ಯಾಕ್ಟರಿ ಇದೆ. ಇಲ್ಲಿರುವ ಕೃಷಿ ಸಂಶೋಧನಾ ಫಾರ್ಮ್ ಸುಮಾರು 121 ಹೆಕ್ಟೇರ್ ಪ್ರದೇಶವನ್ನೊಳಗೊಂಡಿದೆ. ಡೈರಿ ಹಾಗೂ ಕೋಳಿ ಸಾಕಣೆ ಫಾರ್ಮ್‌ಗಳೂ ಇಲ್ಲಿವೆ. ಬಳ್ಳಾರಿಯ ಪೂರ್ವಕ್ಕೆ ಐದು ಕಿಮೀ ದೂರದಲ್ಲಿ ಪ್ರಸಿದ್ಧ ಪ್ರಾಗೈತಿಹಾಸಿಕ ನೆಲೆಯಾದ ಸಂಗನಕಲ್ಲು ಎಂಬ ಸ್ಥಳವಿದೆ. ಬಳ್ಳಾರಿಯಿಂದ ಸುಮಾರು 12 ಕಿಮೀ ದೂರದಲ್ಲಿರುವ ಕಪ್ಪಗಲ್ಲು ಪ್ರದೇಶದಲ್ಲಿ ಒಂದು ಗುಡ್ಡವಿದ್ದು ಇದನ್ನು ನವಿಲುಗುಡ್ಡ ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ನವಿಲುಗಳು ಇಲ್ಲಿ ವಾಸವಾಗಿದ್ದರಿಂದ ಈ ಹೆಸರು ಬಂದಿದೆಯೆಂದು ಹೇಳಲಾಗಿದೆ. ಇಲ್ಲಿ ವ್ಯಾಪಕವಾದ ಪ್ರಾಗೈತಿಹಾಸಿಕ ನೆಲೆಯಿದೆ. ಈ ಗುಡ್ಡದ ತಡಿಯಲ್ಲಿ ಮೂರು ಬೂದಿ ದಿಣ್ಣೆಗಳಿವೆ. ಇವು ನವಶಿಲಾಯುಗಕ್ಕೆ ಸಂಬಂಧಿಸಿವೆ. ವಿಜಯನಗರ ರಾಜರ ಕಾಲದಲ್ಲಿ ಕಟ್ಟಲಾದ ಕಲ್ಲುಗುಡಿ ಎಂದು ಕರೆಯಲಾದ ಶಿಲಾಮಂಟಪವಿದೆ. ಬಳ್ಳಾರಿಯಿಂದ ನೈಋತ್ಯಕ್ಕೆ ಸುಮಾರು 28 ಕಿಮೀ ದೂರದಲ್ಲಿರುವ ಕುರುಗೋಡು (ಜನ: 6,182) ಬಾದಾಮಿ ಚಲುಕ್ಯರ ಕಾಲದ ಐತಿಹಾಸಿಕ ಸ್ಥಳ. ಅನಂತರ ಕಲ್ಯಾಣಿ ಚಾಳುಕ್ಯರ ಕಾಲದಲ್ಲೂ ಪ್ರಮುಖ ನಗರವಾಗಿತ್ತು. ಇಲ್ಲಿಯ ಕೋಟೆಯು ಬಳ್ಳಾರಿ ಪಾಳೆಯಗಾರರ ವಶದಲ್ಲಿತ್ತು. ಇಲ್ಲಿಯ ಬಸವೇಶ್ವರ ದೇವಾಲಯಕ್ಕೆ ಎದ್ದುಕಾಣುವ ಒಂದು ಗೋಪುರವನ್ನು ಇತ್ತೀಚಿಗೆ ನಿರ್ಮಿಸಲಾಗಿದೆ. ಇಲ್ಲಿರುವ ನಂದಿ ವಿಗ್ರಹವು 3.7 ಮೀ ಎತ್ತರವಿದೆ. ಈ ದೇಗುಲಕ್ಕೆ ಸಂಬಂಧಿಸಿದಂತೆ ನೀಲಮ್ಮನ ಮಠವಿದ್ದು, ಇದನ್ನು ಜನ ತುಂಬ ಗೌರವದಿಂದ ಕಾಣುತ್ತಾರೆ. ನೀಲಮ್ಮ 15ನೇಯ ಶತಮಾನದ ಓರ್ವ ಸನ್ಯಾಸಿನಿ. ಈ ಊರಲ್ಲಿ ಅನೇಕ ವೀರಗಲ್ಲುಗಳಿವೆ. ಇಲ್ಲಿ ಹತ್ತು ದೇಗುಲಗಳ ಸಂಕೀರ್ಣವನ್ನು ಕಣಶಿಲೆಯಲ್ಲಿ ಗಾರೆಯನ್ನೇ ಬಳಸದೆ ಓರ್ವ ವ್ಯಾಪಾರಿ ಕಟ್ಟಿಸಿದನು. ಹಿರಿಧೂಳಿ ಸಂಗಮೇಶ್ವರಾಲಯವು ಖ್ಯಾತವಾದ ಒಂದು ಪ್ರಾಚೀನ ವಾಸ್ತು ಕೃತಿ. ಹಳೇ ಕುರುಗೋಡಿನಲ್ಲಿ ಕಲ್ಯಾಣಿ ಚಾಳುಕ್ಯರ ಕಾಲದ ಒಂಬತ್ತು ದೇವಾಲಯಗಳ ಸಮೂಹವಿದೆ. ಈ ಊರಲ್ಲಿ ಚಾದರಗಳ (ನೆಲಹಾಸುಗಳ) ನೇಕಾರಿಕೆ ಪ್ರಸಿದ್ಧವಾದ ಉದ್ಯಮವಾಗಿದೆ.

**ಬೆಳ್ಳಾವಿ:** (ಶಿವಮೊಗ್ಗ ಜಿ; ಶಿಕಾರಿಪುರ ತಾ; ಜನ: 2,342) ಬೆಳಗಾವಿ, ಬಳ್ಳಿಗಾವೆ, ಬಳ್ಳಿಗಾವಿ, ಬಲಿಪುರ ಎಂದು ಮುಂತಾಗಿ ಹೆಸರಿಸಲಾದ ಈ ಊರು ಶಿಕಾರಿಪುರದಿಂದ 12 ಕಿಮೀ ದೂರದಲ್ಲಿದೆ. ಕಲ್ಯಾಣ ಚಾಳುಕ್ಯರ ಕಾಲದ ಒಂದು ಪ್ರಖ್ಯಾತ ಸಾಂಸ್ಕೃತಿಕ ಕೇಂದ್ರವಾಗಿತ್ತು. ಸ್ಥಳೀಯ ಐತಿಹ್ಯದ ಪ್ರಕಾರ ಇದು ಬಲಿ ಚಕ್ರವರ್ತಿಯೊಡನೆ ಸಂಬಂಧಿಸಿದೆ. ಅತಿ ಪುರಾತನ ಸ್ಥಳವಾದ ಬಳ್ಳಿಗಾವೆಯನ್ನು ಅನಾದಿ ರಾಜಧಾನಿ, ಪಟ್ಟಣಗಳ ತವರುಮನೆ ಎಂದು ಮುಂತಾಗಿ ಬಣ್ಣಿಸಲಾಗಿದೆ. ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಇದು ಬನವಸೆ ನಾಡು ಅಥವಾ ಬನವಾಸಿ-12,000 ಪ್ರಾಂತ್ಯದ ರಾಜಧಾನಿಯಾಗಿತ್ತು. ಧಾರ್ಮಿಕವಾಗಿ ಮಹತ್ವಪೂರ್ಣವಾಗಿದ್ದ ಈ ಊರನ್ನು ದಕ್ಷಿಣ ಕೇದಾರವೆಂದೂ ಪಂಚ ಮಠಗಳಿರುವ ಶಿಕ್ಷಣ ಕೇಂದ್ರವೆಂದೂ ಹೇಳಲಾಗಿದೆ. ಇಲ್ಲಿ ಮೂರು ಪುರಗಳೂ ಇದ್ದವು. ಅಲ್ಲಮ ಪ್ರಭು, ಅಕ್ಕಮಹಾದೇವಿ, ಅಜಗಣ್ಣ, ಮುಕ್ತಾಯಕ್ಕ, ಅನಿಮಿಷಯ್ಯ ಮುಂತಾದ ವೀರಶೈವ ಶರಣ ಶರಣೆಯರು ಇಲ್ಲಿದ್ದರೆಂದು ಹೇಳಲಾಗಿದೆ. ಏಳು ಬ್ರಹ್ಮಪುರಿಗಳೂ ಇಲ್ಲಿದ್ದವು. ಇಲ್ಲಿಯ ಕೇದಾರೇಶ್ವರ ದೇವಾಲಯವು ಒಂದು ತ್ರಿಕೂಟಾಚಲವಾಗಿದ್ದು ಕಲ್ಯಾಣಿ ಚಾಳುಕ್ಯ ಶೈಲಿಯಲ್ಲಿ ಬಳಪದ ಶಿಲೆಯಲ್ಲಿ ನಿರ್ಮಿಸಲಾಗಿದೆ. ಇದರ ಪಶ್ಚಿಮ ಮತ್ತು ದಕ್ಷಿಣ ಗರ್ಭಗುಡಿಗಳಲ್ಲಿ ಶಿವಲಿಂಗಗಳೂ, ಉತ್ತರ ಗರ್ಭಗುಡಿಯಲ್ಲಿ ವಿಷ್ಣು ವಿಗ್ರಹವೂ ಇದೆ. ಕೋಡಿ ಮಠವೆಂದು ಹೆಸರಾಗಿದ್ದ ಈ ದೇವಾಲಯವು ಖ್ಯಾತ ಶಿಕ್ಷಣ ಕೇಂದ್ರವೂ ಆಗಿತ್ತು. ಕಾಳಾಮುಖ ಸಂಪ್ರದಾಯದ ಹಲವು ಪಂಡಿತರು ಇಲ್ಲಿದ್ದರು. ಈ ವಿಶ್ವವಿದ್ಯಾಲಯದಲ್ಲಿ 64 ವಿದ್ಯೆಗಳನ್ನು ಕಲಿಸಲಾಗುತ್ತಿತ್ತೆಂದು ಹೇಳಲಾಗಿದೆ. ಇದರ ಹಿಂಭಾಗದಲ್ಲಿ ಕೇಂದ್ರ ಸರಕಾರದ ವಸ್ತು ಸಂಗ್ರಹಾಲಯವಿದೆ. ಪ್ರಭುದೇವ ಗುಡಿಯೆಂದು ಹೇಳಲಾಗುವ ದೇಗುಲವು ನಖರೇಶ್ವರಾಲಯ (ನಗರೇಶ್ವರಾಲಯ) ವಾಗಿತ್ತು. ಕೇದಾರೇಶ್ವರದ ಎಡಕ್ಕಿರುವ ಇದು ಒಂದು ಪುಟ್ಟ ತ್ರಿಕೂಟಾಚಲವಾಗಿದ್ದು ಇದರಲ್ಲಿ ಮುಖಮಂಟಪ, ಸಣ್ಣ ನವರಂಗ, ಗರ್ಭಗೃಹಗಳಿವೆ. ಪಟ್ಟದಕಲ್ಲಿನ ವೀರಬಣಂಜುಗಳು ಇದನ್ನು ಹನ್ನೆರಡನೇಯ ಶತಮಾನದಲ್ಲಿ ಕಟ್ಟಿದರೆಂದು ಹೇಳಲಾಗಿದೆ. 989ರದ್ದೆಂದು ಹೇಳಲಾದ ಬೌದ್ಧ ತಾರಾಭಗವತಿಯ ವಿಗ್ರಹವನ್ನು ಬಪ್ಪುರ ನಾಗಿಯಕ್ಕ ಮಾಡಿಸಿ ಪ್ರಭುದ್ಧ ಜಯಂತಿ ವಿಹಾರದಲ್ಲಿ ಪ್ರತಿಷ್ಠಾಪಿಸಿದ್ದಳು. ಇದನ್ನು ಚಾಳುಕ್ಯ ದಂಡನಾಯಕನಾದ ರೂಪಭಟ್ಟಯ್ಯನು ನಿರ್ಮಿಸಿದನು. ತ್ರಿಪುರಾಂತಕೇಶ್ವರಾಲಯ ಈ ಊರಿನ ಈಶಾನ್ಯಕ್ಕಿದ್ದು ಬಹುಶಃ ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಕಟ್ಟಿರಬೇಕು. ಇದೊಂದು ದ್ವಿಕೂಟಾಚಲವಾಗಿದ್ದು, ಪೂರ್ವಕ್ಕೆ ಮುಖ ಮಾಡಿದೆ. ಬೇಲೂರಿನ ದೇವಾಲಯದ ಶಿಲ್ಪಿಗಳಾದ ದಾಸೋಜ, ಚಾವಣರು ವಾಸ್ತವಿಕವಾಗಿ ಈ ಪಟ್ಟಣದಿಂದ ಹೋದವರು. ಚಾಳುಕ್ಯ ತ್ರೈಲೋಕ್ಯಮಲ್ಲನ ದಂಡನಾಯಕನಾಗಿದ್ದ ಚಾವುಂಡರಸನು ತನ್ನ ವಿಜಯದ ಸ್ಮರಣಾರ್ಥ ಇಲ್ಲೊಂದು ಭೇರುಂಡೇಶ್ವರ ಸ್ತಂಭವನ್ನು (ವಿಜಯ

ಸ್ತಂಭ) ನಿರ್ಮಿಸಿದ್ದಾನೆ. ಇದರ ಮೇಲೆ ಗಂಡಭೇರುಂಡ ಪಕ್ಷಿಯ ಮಾನವಾಕೃತಿಯ ಉತ್ತಮವಾದ ವಿಗ್ರಹವಿತ್ತು. ಇದನ್ನು ಜೀರ್ಣೋದ್ಧಾರಗೊಳಿಸಿ ಮೈಸೂರಿನ ನಾಲ್ಮಡಿ ಕೃಷ್ಣರಾಜ ಒಡೆಯರು, ಪುನಃ ಪ್ರತಿಷ್ಠಾಪನೆ ಮಾಡಿಸಿದರು. ಭವ್ಯವಾದ ಗರ್ಭಗೃಹ ದ್ವಾರ, ಬೃಹತ್ ಲಿಂಗಗಳಲ್ಲದೆ, ಉತ್ತಮ ಕೆತ್ತನೆಯ ಉಮಾಮಹೇಶ್ವರ ಶಿಲ್ಪವನ್ನು ಒಳಗೊಂಡಿದ್ದ (ಈಗ ಈ ಶಿಲ್ಪವನ್ನು ಶಿವಮೊಗ್ಗದ ವಸ್ತು ಸಂಗ್ರಹಾಲಯದಲ್ಲಿಡಲಾಗಿದೆ) ಪಂಚಲಿಂಗೇಶ್ವರ ದೇವಾಲಯವು ಹನ್ನೊಂದನೇಯ ಶತಮಾನದ ಒಂದು ವಾಸ್ತುಕೃತಿ. ಚಾಳುಕ್ಯರ ಕಾಲದಲ್ಲಿ ಇಲ್ಲಿ ರಾಜಪ್ರತಿನಿಧಿಯಾಗಿದ್ದ ಕೇಶಿಮಯ್ಯನು ಅನಂತಪದ್ಮನಾಭ ದೇವಾಲಯವನ್ನು ನಿರ್ಮಿಸಿದನು. ಈತನನ್ನು ಅಕ್ಕಮಹಾದೇವಿಯನ್ನು ಮದುವೆಯಾದ ಕೌಶಿಕ ಮಹಾರಾಜನೆಂದು ಗುರುತಿಸಲಾಗಿದೆ. ಏಳು ಹೆಡೆ ಆದಿಶೇಷನ ಮೇಲೆ ಶಯನಾಸನದಲ್ಲಿರುವಂತೆ ಇಲ್ಲಿನ ಮೂರ್ತಿಯನ್ನು ಕಂಡರಿಸಲಾಗಿದೆ. ಪ್ರಭಾವಳಿಯ ಮೇಲೆ ದಶಾವತಾರಗಳ ಶಿಲ್ಪಗಳೂ ಇವೆ. ನೀಲಕಂಠೇಶ್ವರಾಲಯ ಮತ್ತೊಂದು (ಇದನ್ನು ಶ್ರೀಕಂಠೇಶ್ವರ ಎಂದೂ ಕರೆಯುತ್ತಾರೆ) ಚಾಳುಕ್ಯರ ವಾಸ್ತುಕೃತಿಯಾಗಿದೆ. ಗುಣಗಳ್ಳಯೋಗಿಗಳು ನಿರ್ಮಿಸಿದ ಯೋಗೀಶ್ವರಾಲಯವೂ 11ನೇಯ ಶತಮಾನದ ಒಂದು ವಾಸ್ತುಕೃತಿಯಾಗಿದೆ. 16ನೇಯ ಶತಮಾನದ್ದೆಂದು ಹೇಳಲಾದ ಕಾಳಿಗುಡಿಯು ಕಾಳಿಕಾಂಬೆಯ ಉಬ್ಬು ಶಿಲ್ಪವನ್ನೊಳಗೊಂಡಿದೆ. ಚಾಳುಕ್ಯರ ಕಾಲದ ಸೋಮೇಶ್ವರಾಲಯ ಭಗ್ನ ಸ್ಥಿತಿಯಲ್ಲಿದೆ. ಇದನ್ನು 1054ರಲ್ಲಿ ಸೋವಿಸೆಟ್ಟಿ ಕಟ್ಟಿಸಿದ. ವೀರಭದ್ರೇಶ್ವರ ದೇಗುಲವೆಂದು ಈಗ ಹೇಳಲಾದ ಕುಸುಮೇಶ್ವರ ದೇಗುಲವು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನೊಳಗೊಂಡ ಚಾಳುಕ್ಯ ವಾಸ್ತುಶಿಲ್ಪವಾಗಿದೆ. ಇದರಲ್ಲಿರುವ ವೀರಭದ್ರ ವಿಗ್ರಹವು ಅನಂತರದ ಕಾಲದ್ದಾಗಿದೆ. ಬ್ರಹ್ಮೇಶ್ವರ ದೇಗುಲವು ಪೂರ್ಣ ಭಗ್ನವಾಗಿದ್ದು, ಇದರ ಚತುರ್ಮುಖ ಲಿಂಗವನ್ನು ನೋಡಬಹುದು. ಇದನ್ನು 1015-1044ರ ಅವಧಿಯಲ್ಲಿ ನಿರ್ಮಿಸಿರಬಹುದು. ಏಕಾಂತದ ರಾಮಯ್ಯನ ಗುಡ್ಡ, ಅನಿಮಿಷಾರ್ಯರ ಕೊಪ್ಪಲು, ಗೊಗ್ಗಯ್ಯನ ಚೌಕಿ, ಅಕ್ಕಮಹಾದೇವಿ ಜನ್ಮ ಸ್ಥಳವಾದ ಉಡುತಡಿ (ಉಡುಗಣಿ) ಮುಂತಾದವು ಈ ಊರ ಸಮೀಪದಲ್ಲಿವೆ. ಮುಕ್ತಾಯಕ್ಕ ಅಜಗಣ್ಣರ ಗವಿಗಳೂ ದೂರವಿಲ್ಲ. ಇಲ್ಲೊಂದು ವೀರಶೈವ ವಿರಕ್ತಮಠವಿದೆ.

**ಬಾಗಲಕೋಟೆ :** (ವಿಜಾಪುರ ಜಿ; ಉಪವಿಭಾಗ ಹಾಗೂ ತಾ. ಕೇ; ಜನ: 67,867) ವಿಜಾಪುರದಿಂದ 90 ಕಿಮೀ ದೂರದಲ್ಲಿದೆ. ಸ್ಥಳೀಯ ಐತಿಹ್ಯ ತಿಳಿಸುವಂತೆ ಈ ಪಟ್ಟಣವನ್ನು ರಾವಣನ ಭಜಂತ್ರಿಗಳಿಗೆ (ವಾದ್ಯಗಾರರಿಗೆ) ದತ್ತಿಯಾಗಿ ನೀಡಲಾಗಿತ್ತಂತೆ. ಶಾಸನಗಳಲ್ಲಿ ಇದರ ಪೂರ್ವನಾಮವನ್ನು ಬಾಗಡಗೆ ಎಂದು ಉಲ್ಲೇಖಿಸಿದ್ದು, ಇದು ಚಾಳುಕ್ಯರ ಕಾಲದಲ್ಲಿ ಬಾಗಡಗೆ-70ರ ಮುಖ್ಯ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಈ ಹಿಂದೆ ವಿಜಾಪುರದ ಒಬ್ಬ ಅರಸನು ತನ್ನ ಪ್ರೀತಿಯ ಮಗಳಿಗೆ ಬಳೆಯ ಇಲ್ಲವೆ ಆಭರಣದ ಧನವಾಗಿ ಈ ಊರನ್ನು ನೀಡಿದ್ದರ ಪರಿಣಾಮವಾಗಿ ಇದು ಬಾಂಗ್ದಿಕೋಟೆ ಎಂದಾಯಿತು ಹಾಗೂ ಇದು ಅಪಭ್ರಂಶಗೊಂಡು ಬಾಗಿಲಕೋಟೆ ಅಥವಾ ಬಾಗಲಕೋಟೆ ಎಂದಾಯಿತು, ಎನ್ನಲಾಗುತ್ತದೆ. ಇದಕ್ಕೂ ಪೂರ್ವದಲ್ಲಿ ಈ ಪ್ರದೇಶವನ್ನು ವಿಜಯನಗರದರಸರು ತಮ್ಮ ಆಳ್ವಿಕೆಗೆ ಸೇರಿಸಿಕೊಂಡಿದ್ದರು. 1665ರಿಂದ 1755ರ ವರೆಗೆ ಈ ಭಾಗವು ಸವಣೂರು ನವಾಬನ ಆಡಳಿತದಲ್ಲಿತ್ತು. ಅವನಿಂದ ಇದು ಪೇಶ್ವೆಯಾಗಿದ್ದ ಬಾಳಾಜಿರಾಯನ ವಶವಾಯಿತು. 1778ರಲ್ಲಿ ಬಾಗಲಕೋಟೆಯು ಹೈದರ್ ಅಲಿಯ ಅಧೀನಕ್ಕೊಳಗಾಯಿತು. ಅನಂತರ ಇವನ ಸಾಮಂತನಾಗಿ ಸವಣೂರು ನವಾಬ ಇದನ್ನಾಳಿದನು. ಪುನಃ ಇದನ್ನು 1792ರ ಶ್ರೀರಂಗಪಟ್ಟಣದ ಒಪ್ಪಂದದ ಪ್ರಕಾರ ಮರಾಠರು ತಮ್ಮ ವಶಕ್ಕೆ ತೆಗೆದುಕೊಂಡರು. ರಾಸ್ತೆಯ ವಂಶದ ಆನಂದರಾವ್ ಭಿಕಾಜಿಯು 1800ರಲ್ಲಿ ಇದರ ಪ್ರಾಂತ್ಯಾಧಿಕಾರಿಯಾಗಿ ನೆಲೆಸಿದ್ದು, ಇಲ್ಲಿ ಒಂದು ಅರಮನೆಯನ್ನು ಕಟ್ಟಿಸಿದ. 1810ರಲ್ಲಿ ಇಮ್ಮಡಿ ಬಾಜೀರಾವ್ ಪೇಶ್ವೆಯು ಇದನ್ನು ನೀಲಕಂಠರಾವ್ ಸರ್‌ಸುಬೇದಾರನಿಗೆ ವಹಿಸಿಕೊಟ್ಟ. ಈತ ಇಲ್ಲಿ ಒಂದು ಸೈನ್ಯದ ತುಕಡಿಯನ್ನಿಟ್ಟು ದುರ್ಗವನ್ನಾಳಿದ. 1818ರಲ್ಲಿ ಜನರಲ್ ಮನ್ರೊ ಇದನ್ನು ತನ್ನ ಅಂಕಿತಕ್ಕೊಳಪಡಿಸಿದ. ಬಾಗಲಕೋಟೆಯಲ್ಲಿ ಶ್ರೀ ಭವಾನಿ, ಪಾಂಡುರಂಗ, ಕೊತ್ತಲೇಶ (ಹನುಮಾನ್‌ಗುಡಿ), ರಾಘವೇಂದ್ರ ಸ್ವಾಮಿ ಮಠ, ಮೋಟಗಿ ಬಸವೇಶ್ವರ ದೇಗುಲಗಳು ಪ್ರಮುಖವಾಗಿವೆ; ಪಾರ್ಶ್ವನಾಥ ಜೈನ ಬಸದಿಯೂ ಇಲ್ಲಿದೆ; ವಿರಕ್ತಮಠವೂ ಇದೆ. ಈ ಪಟ್ಟಣದ ಉತ್ತರಕ್ಕೆ ಸುಮಾರು ಎರಡು ಕಿಮೀ ದೂರದಲ್ಲಿ, ಒಂದು ಗುಡ್ಡದ ಮೇಲೆ ಮಲ್ಲಯ್ಯ, ಸಂಗಯ್ಯ ಎಂಬವರ ಎರಡು ಗುಡಿಗಳೂ ರಾಮಾರೂಢಸ್ವಾಮಿ ಹಾಗೂ ದುರುದುಂಡೇಶ್ವರ ಎಂಬ ಎರಡು ಮಠಗಳೂ ಇವೆ. ಇಲ್ಲಿರುವ ಹಲವು ಮಸೀದಿಗಳಲ್ಲಿ ಪಂಕಾ ಮಸೀದಿಯೂ ಒಂದು ಸುಂದರವಾದ ವಾಸ್ತುಕೃತಿಯಾಗಿದೆ. ಬಾಗಲಕೋಟೆಯ ಪಟ್ಟಣಾಡಳಿತವನ್ನು ಅಲ್ಲಿಯ ಪುರಸಭೆಯು ನಡೆಸುತ್ತಿದೆ. ಬಸವೇಶ್ವರ ವಿದ್ಯಾವರ್ಧಕ ಸಂಘವು ಹಲವು ಕಾಲೇಜುಗಳನ್ನೂ, ಶಿಕ್ಷಣ ಸಂಸ್ಥೆಗಳನ್ನೂ ನಡೆಸುತ್ತಿದೆ. ಖ್ಯಾತ ವಿದ್ವಾಂಸರಾಗಿದ್ದ ದಿವಂಗತ ಡಾ|| ಎಸ್. ಸಿ. ನಂದೀಮಠರು ಈ ಸಂಘದೊಡನೆ ನಿಕಟ ಸಂಬಂಧವಿಟ್ಟುಕೊಂಡಿದ್ದರು. ಸ್ವಾತಂತ್ರ್ಯ ಚಳವಳಿ ಹಾಗೂ ಅನಂತರದ ಏಕೀಕರಣದ ಚಳವಳಿಗಳಲ್ಲಿ ಬಾಗಲಕೋಟೆ ಗಣನೀಯವಾದ ಪಾತ್ರ ವಹಿಸಿತ್ತು. ಘಟಪ್ರಭಾ ನದಿಯ ದಂಡೆಯ ಮೇಲಿರುವ ಈ ಪಟ್ಟಣದ ಬಹುಭಾಗವು ಕೃಷ್ಣಾ ಮೇಲ್ದಂಡೆಯ ಎರಡನೇಯ ಹಂತದ ನೀರಾವರಿ ಯೋಜನೆ ಪೂರ್ಣಗೊಂಡಾಗ ಮುಳುಗಡೆಯಾಗುವ ಸಂಭವವಿದೆ. ಈ ನಗರದ ಉಳಿವಿಗಾಗಿ ದೊಡ್ಡ ಅಡ್ಡಗಟ್ಟೆ ಕಟ್ಟುವ ಯೋಜನೆಯೂ ಚರ್ಚಿತವಾಗಿದೆ. ಇಲ್ಲೊಂದು ಸಿಮೆಂಟ್ ಕಾರ್ಖಾನೆಯಿದೆ. ಇದು

ಹತ್ತಿ ಮತ್ತು ನೆಲಗಡಲೆಯ ವ್ಯಾಪಾರಿ ಕೇಂದ್ರವೂ ಹೌದು. ಕಲಾದಗಿ (ಜನ: 7,264) ಬಾಗಲಕೋಟೆಯಿಂದ ಸುಮಾರು 24 ಕಿಮೀ ದೂರದಲ್ಲಿದ್ದು, ಊರು ಘಟಪ್ರಭೆಯ ದಕ್ಷಿಣ ದಂಡೆಯ ಮೇಲಿದೆ. ಬ್ರಿಟಿಷ್ ಆಡಳಿತದ ಆರಂಭದಲ್ಲಿ ದಕ್ಷಿಣ ಮಹಾರಾಷ್ಟ್ರ ಜಾಗೀರದಾರರು ಇಲ್ಲಿ ತಮ್ಮ ಸೈನ್ಯದ ತುಕಡಿಗಳ ಬೀಡುಬಿಟ್ಟಿದ್ದರು. ಸೈನ್ಯಗಳ ಕಾರ್ಯಾಚರಣೆಗೆ ಇದು ತುಂಬ ಸೂಕ್ತವಾದ ಸ್ಥಳವೆಂದು ಗೊತ್ತಾಗಿತ್ತು. ಯುದ್ಧಾನಂತರ, 1864ರಲ್ಲಿ ಇದನ್ನು ಜಿಲ್ಲಾ ಕೇಂದ್ರವಾಗಿ ಪರಿವರ್ತಿಸಲಾಯಿತು. ಕಲಾದಗಿಯಲ್ಲಿ ಒಂದು ಸುಂದರವಾದ ಬಸವಣ್ಣನ ಗುಡಿಯಿದೆ. ಇದನ್ನು ಇಲ್ಲಿಯ ಪ್ರಸಿದ್ಧವಾದ ಶೆಲ್ಲಿಕೇರಿ ಕಪ್ಪುಶಿಲೆಯಲ್ಲಿ ನಿರ್ಮಿಸಲಾಗಿದೆ. ಬಸವಣ್ಣನ ವಿಗ್ರಹವು ಅಲಂಕೃತವಾಗಿದೆ. ಇನ್ನೊಂದು ದೇವಾಲಯದಲ್ಲಿ ಮಾರುತಿ ಮತ್ತು ಶಿವಲಿಂಗಗಳಿವೆ. ಜುಮ್ಮಾ ಮಸೀದಿಯಲ್ಲದೆ ಇನ್ನೂ ಎರಡು ಮಸೀದಿಗಳನ್ನು ಇಲ್ಲಿ ನೋಡಬಹುದು. ಇಲ್ಲಿನ ನುರುಲಿ ಸಾಹೇಬರ ದರ್ಗಾವು ಹೆಸರುವಾಸಿಯಾಗಿದೆ. ಇಲ್ಲಿಯ ಹಿರೇಮಠವು ಒಂದು ಪ್ರೌಢಶಾಲೆ ಹಾಗೂ ಉಚಿತ ವಸತಿ ಸೌಕರ್ಯವನ್ನೂ ನಡೆಸುತ್ತಿದೆ. ಭೂಗರ್ಭ ಶಾಸ್ತ್ರದ ವಲಯದಲ್ಲಿ ಕಲಾದಗಿ ಶ್ರೇಣಿ ಎಂಬ ಶಿಲೆ ತುಂಬ ಪರಿಚಿತವಿದೆ. ಇದು ಹಣ್ಣುಹಂಪಲುಗಳ ತೋಟಗಳಿಗೆ ಹೆಸರುವಾಸಿಯಾಗಿದೆ. ಬ್ರಿಟಿಷರ ಕಾಲದ ಹಲವು ಕಟ್ಟಡಗಳೂ, ಸಮಾಧಿಗಳೂ ಇನ್ನೂ ಉಳಿದಿವೆ. ಪಟ್ಟಣದಲ್ಲಿ ಪಂಚಾಯತಿಯಲ್ಲದೆ ಖಾದಿ ಉದ್ಯಮ ಘಟಕವೂ ಇದೆ.

**ಬಾಗಳಿ :** (ಬಳ್ಳಾರಿ ಜಿ; ಹರಪನಹಳ್ಳಿ ತಾ. ಜನ: 1,916) ಹರಪನಹಳ್ಳಿ-ಹಡಗಲಿ ಮಾರ್ಗದಲ್ಲಿ, ಹರಪನಹಳ್ಳಿಯ ಉತ್ತರಕ್ಕೆ ಸುಮಾರು ಒಂಭತ್ತು ಕಿಮೀ ಅಂತರದಲ್ಲಿರುವ ಭಾಗಳಿಯನ್ನು 'ಬಾಗುಳಿ' ಎಂದೂ ಕರೆಯಲಾಗಿದೆ. ಹೊಯ್ಸಳ ಇಮ್ಮಡಿ ಬಲ್ಲಾಳನ 1193-94ರ ಒಂದು ದಾನ ಶಾಸನದಲ್ಲಿ ಇದು ಅವನ ಒಂದು ರಾಜಧಾನಿಯಾಗಿತ್ತೆಂದು ತಿಳಿಸುತ್ತದೆ. 1013ರ ಮತ್ತೊಂದು ದಾನ ಶಾಸನದಲ್ಲಿ ಉಲ್ಲೇಖಿತವಾದ ಕಲ್ಲೇಶ್ವರಾಲಯವು ಕಲ್ಯಾಣಿ ಚಾಳುಕ್ಯ ಶೈಲಿಯ ಪಾಟಿಗಲ್ಲಿನ ವಾಸ್ತುಕೃತಿಯಾಗಿದೆ. ಈ ದೇಗುಲದ ದ್ವಾರಬಂಧ, ಮಂಟಪದ ಮಧ್ಯದ ಮೇಲ್ಛಾವಣಿ ಹಾಗೂ ಕಂಬಗಳ ಕೆತ್ತನೆಯಲ್ಲಿ ಕಂಡು ಬರುವ ಅಸಾಧಾರಣ ವೈವಿಧ್ಯ ವಿನ್ಯಾಸ ಮಹತ್ವಪೂರ್ಣವಾಗಿವೆ. ಈ ದೇವಾಲಯದಲ್ಲಿ 59 ಕಂಬಗಳಿದ್ದು ಪ್ರತೀಯೊಂದೂ ಒಂದರಂತೆ ಮತ್ತೊಂದಿರದೆ ಬೇರೆ ಬೇರೆ ತೆರನಾಗಿದೆ. 36ಕ್ಕೂ ಹೆಚ್ಚು ಶಿಲಾಶಾಸನಗಳು ಈ ಗುಡಿಯಲ್ಲಿ ಪತ್ತೆಯಾಗಿವೆ. ಅಲ್ಲದೆ ಈ ಊರಿನ ಇತರ ಗುಡಿಗಳಲ್ಲಿ ಮತ್ತೂ ಐದು ಶಾಸನಗಳಿವೆ. ಇವುಗಳಲ್ಲಿ 12 ಶಾಸನಗಳು ಕಲ್ಯಾಣಿ ಚಾಳುಕ್ಯ ಅರಸನಾದ ಆರನೇಯ ವಿಕ್ರಮಾದಿತ್ಯನ ಕಾಲದ್ದವಾಗಿವೆ. ದೊಡ್ಡ ಪ್ರಮಾಣದಲ್ಲಿ ಶಿಲಾ ಶಿಲ್ಪಗಳು ಲಭ್ಯವಿರುವುದರಿಂದಾಗಿ ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣೆಯವರು ಇಲ್ಲೊಂದು ಶಿಲ್ಪ ಸಂಗ್ರಹಾಲಯವನ್ನು ಸ್ಥಾಪಿಸಬೇಕೆಂದು ಯೋಜಿಸಿದ್ದಾರೆ.

**ಬಾಗೇಪಲ್ಲಿ :** (ಕೋಲಾರ ಜಿ; ತಾ. ಕೇ; ಜನ: 7,923) ಇದನ್ನು ಬಾಗೇನಪಲ್ಲಿ ಎಂದೂ ಕರೆಯಲಾಗುತ್ತಿದೆ. ಕೋಲಾರದಿಂದ ಸುಮಾರು 110 ಕಿಮೀ ಮತ್ತು ಬೆಂಗಳೂರಿನಿಂದ ಸುಮಾರು 120 ಕಿಮೀ ದೂರದಲ್ಲಿ ಚಿತ್ರಾವತಿ ನದಿಯ ಬಲ ದಂಡೆಯ ಮೇಲೆ ಈ ಊರಿದೆ. ಈ ಪುರಸಭಾ ಪಟ್ಟಣವು ಆಂಧ್ರಪ್ರದೇಶಕ್ಕೆ ತುಂಬ ಸಮೀಪದಲ್ಲಿದೆ. ಇದೊಂದು ವಾಣಿಜ್ಯ ಕೇಂದ್ರವಾಗಿದ್ದು ನೆಲಗಡಲೆ, ಮೆಣಸಿನಕಾಯಿ, ರೇಷ್ಮೆ ಕೃಷಿ ಮುಂತಾದ ವಾಣಿಜ್ಯ ಬೆಳೆಗಳಿಗಾಗಿ ಖ್ಯಾತಿ ಪಡೆದಿದೆ. ವೆಂಕಟರಮಣಸ್ವಾಮಿ, ಆಂಜನೇಯ, ಜಡಲೇಶ್ವರ ದೇವಾಲಯಗಳು ಗಮನಾರ್ಹವಾಗಿವೆ. ಇಲ್ಲಿ ಒಂದು ಮಸೀದಿ ಮತ್ತು ದರ್ಗಾಗಳಿದ್ದು, ದರ್ಗಾವು ಹಿಂದೂ ಮುಸ್ಲಿಮರೆಲ್ಲರಿಗೂ ಆರಾಧನಾ ಸ್ಥಳವಾಗಿದೆ. ಬಾಗೇಪಲ್ಲಿಯಿಂದ ಸುಮಾರು ಮೂರು ಕಿಮೀ ದೂರದಲ್ಲಿರುವ ಗಡಿದಂನಲ್ಲಿ ವಿಜಯನಗರ ಕಾಲದ ಬೃಹತ್ ರಚನೆಯ ವೆಂಕಟರಮಣ ಸ್ವಾಮಿ ದೇಗುಲವಿದ್ದು ಇದು ಪ್ರಸಿದ್ಧ ದೇವಾಲಯವಾಗಿದೆ. ಗಮ್ಮನಾಯಕನಪಾಳ್ಯವು ಬಾಗೇಪಲ್ಲಿಯ ಪೂರ್ವಕ್ಕೆ 22 ಕಿಮೀ ದೂರದಲ್ಲಿದೆ. ಪಾಳ್ಯವೆಂದು ಜನಪ್ರಿಯವಾಗಿರುವ ಇಲ್ಲಿ ಪಾಳೇಗಾರನಿದ್ದನು. ಇಲ್ಲಿಯ ಗುಡ್ಡದ ಮೇಲೆ ಕೋಟೆಯಿದೆ. ಬಾಗೇಪಲ್ಲಿಯಿಂದ ಸುಮಾರು ಎಂಟು ಕಿಮೀ ದೂರದಲ್ಲಿರುವ ಗೂಳೂರಲ್ಲಿ ಲಿಂಗಾಯತರ ಖ್ಯಾತವಾದ ನಿಡುಮಾಮಿಡಿ ಮಠವಿದೆ.

**ಬಾದಾಮಿ :** (ವಿಜಾಪುರ ಜಿ; ತಾ. ಕೇ; ಜನ: 15,201) ಬೆಂಗಳೂರಿನಿಂದ 499 ಕಿಮೀ ಹಾಗೂ ವಿಜಾಪುರದಿಂದ 113 ಕಿಮೀ ದೂರದಲ್ಲಿರುವ ಬಾದಾಮಿಯು ಪ್ರಾಚೀನ ಚಲುಕ್ಯರ ರಾಜಧಾನಿಯಾಗಿದ್ದು ಇದನ್ನು ವಾತಾಪ್ಯಧಿಷ್ಠಾನ, ವಾತಾಪಿ ಹಾಗೂ ಬಾದಾಮಿಯೆಂದೂ ಕರೆದಿದ್ದಾರೆ. ಟಾಲೆಮಿಯ 'ಬದಿಯಮೈ' ಇದೇ ಆಗಿರಬೇಕು. ಚಲುಕ್ಯವಲ್ಲಭೇಶ್ವರನಾಗಿದ್ದ ಮೊದಲನೇಯ ಪುಲಿಕೇಶಿಯು ಇದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿಯ ಕೋಟೆಯನ್ನು ಭದ್ರಪಡಿಸಿದನೆಂಬುದು ಇಲ್ಲಿಯ ಕ್ರಿ.ಶ. 543ರ ಪ್ರಾಚೀನ ಬಂಡೆ ಶಾಸನದಿಂದ ತಿಳಿದು ಬರುತ್ತದೆ. ಅಲ್ಲಿಂದಾಚೆ 753ರ ವರೆಗೂ ರಾಜಧಾನಿಯಾಗಿ ಮುಂದುವರೆಯಿತು. ಈ ಮಧ್ಯೆ ಕೆಲಕಾಲ (642-55) ಇದು ಪಲ್ಲವರ ವಶದಲ್ಲಿತ್ತು. ಇಲ್ಲಿಯ ಒಂದು ಶಾಸನದ ಪ್ರಕಾರ ಬಾದಾಮಿಯ (ಅಗ್ರಹಾರ)ಲ್ಲಿ 2,000 ಮಹಾಜನರಿದ್ದರು. ವಿಜಯನಗರದ ಅರಸರು, ಆದಿಲ್‌ಷಾಹಿಗಳು, ಸವಣೂರು ನವಾಬರು, ಮರಾಠರು ಹಾಗೂ ಹೈದರ್‌ಅಲಿಯ ಆಳ್ವಿಕೆಗಿದು ಒಳಪಟ್ಟಿತ್ತು. ಕೊನೆಗೆ ಅದು ಬ್ರಿಟಿಷರ ವಶವಾಗಿ, ಅವರು ಬಾದಾಮಿಯನ್ನು ಮುಂಬೈ ಪ್ರಾಂತ್ಯದ ಒಂದು ಭಾಗವಾಗಿಸಿದರು. ಬಾದಾಮಿ ಕೋಟೆಯ ಪಶ್ಚಿಮ ಭಾಗದಲ್ಲಿರುವ ಪ್ರಾಚೀನ ಗುಹಾಲಯಗಳು ಇಲ್ಲಿಯ ಪ್ರಮುಖ ಪ್ರಾಕೃತ ಆಕರ್ಷಣೆಗಳಾಗಿದ್ದು, ಇವುಗಳಿಗೆ ಹೋಗಲು ಮೆಟ್ಟಿಲು ಸಾಲು

ಗಳಿವೆ. ಗುಡ್ಡದಂಚಿನ ಮರಳುಗಲ್ಲಿನಲ್ಲಿ ಕೊರೆದ ಚಲುಕ್ಯರ ಕಾಲದ ನಾಲ್ಕು ಗುಹಾಂತರ ದೇವಾಲಯಗಳಲ್ಲಿ ಮೊದಲ ಮೂರು ಹಿಂದೂ ವೈದಿಕ ಮತೀಯವಾಗಿದ್ದರೆ, ಕೊನೆಯ ಗವಿ ಜೈನಮತಕ್ಕೆ ಸಂಬಂಧಿಸಿದುದಾಗಿದೆ. ಇವುಗಳಲ್ಲಿ ಪೌರಾಣಿಕ ಶಿಲ್ಪಗಳು ತುಂಬಿವೆ. ಮೊದಲ ಗವಿ (ಗುಡಿ)ಯ ಬಾಗಿಲಲ್ಲಿ ಶೈವ ದ್ವಾರಪಾಲಕರಿದ್ದಾರೆ. ಗವಿಯ ಬಲಬದಿಯಲ್ಲಿ ಹದಿನೆಂಟು ಭುಜಗಳ ಶಿವ ನಟರಾಜನ ತಾಂಡವ ನೃತ್ಯಶಿಲ್ಪವಿದೆ. ಈತನ ಬದಿಯಲ್ಲಿ ನಂದಿ, ನೃತ್ಯಗಣಪತಿ ಮುಂತಾದವು ಶಿಲ್ಪಿತವಾಗಿವೆ. ಅಚ್ಚುಕಟ್ಟಾಗಿ ಕೆತ್ತಿದ ಮಹಿಷಾಸುರಮರ್ದಿನಿ ಹಾಗೂ ಹಲವು ಕುಬ್ಜಗಣಗಳ ಶಿಲ್ಪಗಳನ್ನು ನೋಡಬಹುದು. ಮೇಲ್ಚಾವಣಿಯಲ್ಲಿ ನಾಗರಾಜ, ವಿದ್ಯಾಧರ ದಂಪತಿ ಮುಂತಾದವನ್ನು ಕಂಡರಿಸಲಾಗಿದೆ. ಈ ಗವಿಯಿಂದ ತುಸು ಮೇಲ್ಗಡೆ ಎರಡನೇಯ ಗುಹಾಲಯವಿದ್ದು ಇದರ ದ್ವಾರದಲ್ಲೂ ಕಮಲ ಹಿಡಿದ ದ್ವಾರಪಾಲಕರ ಶಿಲ್ಪಗಳನ್ನು ನೋಡಬಹುದು. ಇದರ ಪೂರ್ವ ಪಶ್ಚಿಮ ಗೋಡೆಗಳ ಮೇಲೆ ಭೂವರಾಹ ಮತ್ತು ತ್ರಿವಿಕ್ರಮರ ಬೃಹತ್ ಶಿಲ್ಪಗಳನ್ನು ಕಂಡರಿಸಲಾಗಿದೆ. ಮೇಲ್ಚಾವಣಿಯ ಮೇಲೆ ಅನಂತಶಯನ, ಬ್ರಹ್ಮ, ವಿಷ್ಣು, ಶಿವ ಮತ್ತು ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಮೂರನೇಯ ಗವಿಯು ಇನ್ನೂ ಮುಂದಕ್ಕಿದ್ದು ಅದು ಅತ್ಯಂತ ದೊಡ್ಡದು ಹಾಗೂ ಉತ್ತಮವಾದದ್ದಾಗಿದೆ. ಇದರಲ್ಲಿರುವ ಪರವಾಸುದೇವ, ಭೂವರಾಹ, ಹರಿಹರ ಮತ್ತು ನರಸಿಂಹರ ಬೃಹತ್ ಶಿಲ್ಪಗಳು ಅಮೋಘವಾಗಿವೆ. ಇವೆಲ್ಲವನ್ನೂ ಸತ್ವಯುತ ಶೈಲಿಯಲ್ಲಿ ಕಂಡರಿಸಲಾಗಿದೆ. ಇಲ್ಲಿರುವ ಶಾಸನ ತಿಳಿಸುವಂತೆ ಈ ಗುಹಾಲಯವನ್ನು ಮಂಗಳೇಶನು 578ರಲ್ಲಿ ನಿರ್ಮಿಸಿದ. ಇದರ ಮೇಲ್ಚಾವಣಿಯಲ್ಲಿ ಕೆಲವು ವರ್ಣಚಿತ್ರಗಳು ಉಳಿದಿವೆ. ಪ್ರಖರವಾದ ಮೂಲ ವರ್ಣಛಾಯೆಗಳನ್ನು ಕಳೆದುಕೊಂಡಿದ್ದರೂ ಚಿತ್ರಶೈಲಿಯಲ್ಲಿರುವ ಪ್ರೌಢಿಮೆಯನ್ನು ಗಮನಿಸಬಹುದು. ಇಲ್ಲಿರುವ ಬೋದಿಗೆಯಲ್ಲಿನ ವಿಗ್ರಹಗಳಂತೂ ತುಂಬ ಮನೋಹರವಾಗಿವೆ. ನಾಲ್ಕನೇಯ ಗುಹೆಯು ಮೂರನೇಯ ವೈಷ್ಣವ ಗವಿಯ ಪೂರ್ವಕ್ಕಿದೆ. ಈ ಜೈನ ಗುಹಾಲಯದ ಗರ್ಭಗೃಹ ಭಾಗದಲ್ಲಿ ಮಹಾವೀರನ ಪ್ರತಿಮೆ ಇದೆ. ಇದರ ಪೀಠದ ಮೇಲೆ 12ನೇಯ ಶತಮಾನದ ಕನ್ನಡ ಶಾಸನವಿದೆ. ಇದು ಜಕ್ಕವ್ವೆಯ ಮರಣವನ್ನು ದಾಖಲಿಸುತ್ತದೆ. ಇದರ ಒಳಗಂಬದ ಮೇಲೆ ಹಾಗೂ ಗೋಡೆಗಳ ಮೇಲೆ ಹಲವು ಜೈನ ತೀರ್ಥಂಕರ ಶಿಲ್ಪಗಳನ್ನು ಕೆತ್ತಲಾಗಿವೆ. ಇವಲ್ಲದೆ ಬಾಹುಬಲಿ, ಯಕ್ಷ-ಯಕ್ಷಿಣಿಯರ ವಿಗ್ರಹಗಳೂ ಇಲ್ಲಿವೆ. ಕೆಲವು ವಿದ್ವಾಂಸರ ಪ್ರಕಾರ ಇದು ಎಂಟನೇಯ ಶತಮಾನದ್ದಾಗಿದೆ. ಬಾದಾಮಿಯ ಉತ್ತರದ ಗುಡ್ಡದ ಮೇಲೆ ಮೂರು ಗುಡಿಗಳಿದ್ದು ಇವುಗಳಲ್ಲಿ ಮಾಲೆಗಿತ್ತಿ ಶಿವಾಲಯ ಪ್ರಾಯಶಃ ಪ್ರಾಚೀನದ್ದಾಗಿದೆ. ದ್ರಾವಿಡ ಶಿಖರವುಳ್ಳ ಈ ದೇಗುಲ ಬಾದಾಮಿಯಲ್ಲೇ ಅತ್ಯಂತ ಸುಂದರವಾದ ವಾಸ್ತುಕೃತಿಯಾಗಿದೆ. ಇಲ್ಲಿರುವ ಎರಡು ಶಾಸನಗಳಲ್ಲಿ ಒಂದು ಶಾಸನವು ಈ ದೇವಾಲಯವನ್ನು ಕಟ್ಟಿದ ಶಿಲ್ಪಿಯಾದ ಅರ್ಯಮಿಂಚಿ ಉಪಾಧ್ಯಾಯನನ್ನು ಉಲ್ಲೇಖಿಸುತ್ತದೆ. 1543ರ ಇನ್ನೊಂದು ಶಾಸನವು ವಿಜಯನಗರ ಕಾಲದಲ್ಲಿ ಬುರುಜನ್ನು ಸೇರಿಸಿದ್ದನ್ನು ದಾಖಲಿಸುತ್ತದೆ. ದ್ರಾವಿಡ ಶಿಖರವುಳ್ಳ ಕೆಳಗಣ ಶಿವಾಲಯದಲ್ಲಿ ಗರ್ಭಗೃಹ ಮಾತ್ರ ಉಳಿದಿದೆ. ಬಾದಾಮಿ ಪಟ್ಟಣದಲ್ಲಿರುವ ಜಂಬುಲಿಂಗ ದೇಗುಲವು ಪ್ರಾಯಶಃ ಕರ್ನಾಟಕದ ಒಂದು ಪ್ರಾಚೀನವಾದ ತ್ರಿಕೂಟಾಚಲವಾಗಿದೆ. ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಿದ ಇದರ ಶಿಖರವು ಬಹುಶಃ ವಿಜಯನಗರ ಕಾಲದ್ದಾಗಿದೆ. ಕ್ರಿ.ಶ. 699ರ ಶಾಸನವು ತಿಳಿಸುವಂತೆ ಈ ದೇಗುಲವನ್ನು ವಿಜಯಾದಿತ್ಯನ ತಾಯಿಯಾದ ವಿನಯವತಿ ಕಟ್ಟಿಸಿದಳು. ಬಾದಾಮಿ ಗುಹಾಲಯಗಳ ಎದುರಿಗೆ ಅಗಸ್ತ್ಯ ತೀರ್ಥವೆಂದು ಕರೆಯಲಾದ ನೀರಿನ ಕೊಳವಿದೆ. ಇದರ ದಂಡೆಗುಂಟ ದೇಗುಲಗಳಿವೆ. ದಕ್ಷಿಣ ದಂಡೆಯ ಮೇಲೆ ಎರಡು ಪುಟ್ಟ ಗುಡಿಗಳೂ, ಇನ್ನೆರಡು ದೊಡ್ಡ ದೇಗುಲಗಳಿವೆ. ಇವುಗಳಲ್ಲಿ ಒಂದು ವಿಷ್ಣು ದೇಗುಲವಾಗಿದ್ದರೆ, ಇನ್ನೊಂದು ಶಿವಾಲಯವಾಗಿದೆ. ಪಶ್ಚಿಮ ದಂಡೆಯ ಮೇಲೆ ಎಲ್ಲಮ್ಮನದೆಂದು ಪೂಜಿಸಲಾದ ಒಂದು ಶಾಕ್ತ ದೇಗುಲವಿದೆ. ಆದರೆ ಚಾಳುಕ್ಯ ಜಗದೇಕಮಲ್ಲನ ಶಾಸನ ತಿಳಿಸುವಂತೆ ಅದು ಯೋಗೇಶ್ವರ ಅಥವಾ ವಿಷ್ಣು ದೇವಾಲಯವಾಗಿತ್ತು. ಸುಂದರವಾದ ವಿಷ್ಣು ಮತ್ತಿತರ ದೇವತಾ ವಿಗ್ರಹಗಳು ಇಲ್ಲಿವೆ. ಇದರ ಶಿಖರವು ನಾಗರಶೈಲಿಯಲ್ಲಿದೆ. ಇದರ ಸನಿಹದಲ್ಲಿ ಮಲ್ಲಿಕಾರ್ಜುನ, ದತ್ತಾತ್ರೇಯ, ವಿರೂಪಾಕ್ಷ ದೇಗುಲಗಳಿವೆ. ಇವುಗಳಲ್ಲಿ ಮೊದಲ ಎರಡು ಗುಡಿಗಳು ಚಲುಕ್ಯ ಶೈಲಿಯಲ್ಲಿವೆ. ಮಲ್ಲಿಕಾರ್ಜುನ ದೇಗುಲದ ಬಳಿಯಲ್ಲಿ ಜಗತಿಯೊಂದಿದ್ದು ಅದನ್ನು ಪ್ರಸನ್ನ ವೆಂಕಟದಾಸರ ಕಟ್ಟೆಯೆನ್ನುತ್ತಾರೆ. ಭೂತನಾಥ ದೇಗುಲ ಸಮೂಹ ಬಾದಾಮಿಯಲ್ಲೇ ಅತಿ ಮಹತ್ವವುಳ್ಳದ್ದು. ಇದು ಕೆರೆಯ ಪೂರ್ವದ ತುದಿಯಲ್ಲಿದೆ. ದ್ರಾವಿಡ ಶೈಲಿಯಲ್ಲಿರುವ ಈ ಗುಡಿ ಸಣ್ಣ ಗುಡಿಗಳಿಂದ ಕೂಡಿದೆ. ಇಲ್ಲಿಂದ ತುಸು ದೂರದಲ್ಲಿ ಶೈವಮುನಿಯಾದ ಲಕುಲೀಶನೆಂದು ಹೇಳಲಾದ ಶಿವಾಲಯವಿದೆ. ಅಲ್ಲದೆ ತಟ್ಟುಕೋಟೆ ಮಾರುತಿಯ ಗುಡಿಯೂ ಇದೆ. ಭಾರತ ಪ್ರಾಕ್ತನ ಸರ್ವೇಕ್ಷಣೆಯವರು ಇಲ್ಲೊಂದು ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿದ್ದಾರೆ. ಇಲ್ಲಿ ಶಿಡ್ಲುಪಡಿ ನೈಸರ್ಗಿಕ ಗವಿ, ವೈಷ್ಣವ ಗುಹೆಯ ಮಾದರಿಗಳನ್ನಲ್ಲದೆ ಹಲವು ಶಾಸನಗಳನ್ನಿಡಲಾಗಿದೆ. ಬಾದಾಮಿಯ ಗುಹಾಲಯಗಳ ಬಳಿ ಟಿಪ್ಪುಸುಲ್ತಾನನ ದೊಡ್ಡ ಮಸೀದಿಯೂ ಇದೆ. ಈ ಊರಲ್ಲೊಂದು ಪುರಸಭೆ ಇದೆ. ಚೊಳಚಗುಡ್ಡವು ಬಾದಾಮಿಯಿಂದ ಸುಮಾರು ಐದು ಕಿಮೀ ದೂರದಲ್ಲಿದೆ. ಇಲ್ಲಿಯ ಬನಶಂಕರಿ ಅಥವಾ ಶಾಕಾಂಬರಿ ದೇಗುಲವು ಖ್ಯಾತವಾದದ್ದಷ್ಟೇ ಅಲ್ಲ ಭಕ್ತರಿಗೆ ತುಂಬ ಮಹತ್ವವುಳ್ಳದ್ದು. ಜನಪ್ರಿಯವಾಗಿ ಈ ಸ್ಥಳವನ್ನೇ 'ಬನಶಂಕರಿ' ಎಂದೂ ಕರೆಯುತ್ತಾರೆ. ಕಾಲಿನಲ್ಲಿ ರಾಕ್ಷಸನನ್ನು ತುಳಿದು ಸಿಂಹದ ಮೇಲೆ ಕುಳಿತಿರುವ ಈ ವಿಗ್ರಹವನ್ನು ಕರಿಶಿಲೆಯಲ್ಲಿ ಕಂಡರಿಸಲಾಗಿದೆ. ಪುರಾತನವಾದ ದ್ರಾವಿಡ ದೇಗುಲವನ್ನು ಆಧುನಿಕಗೊಳಿಸಲಾಗಿದೆ.

ಈ ಗುಡಿಯೆದುರು ಪ್ರಾಂಗಣದೊಳಗೆ ಮೂರು ಶಿಲಾ ದೀಪಸ್ತಂಭಗಳಿವೆ. ಪ್ರಮುಖ ಪರ್ವಕಾಲದಲ್ಲಿ ಇದರ ಮೇಲೆ ದೀಪ ಹಚ್ಚಲಾಗುತ್ತದೆ. ಇದರ ಗರ್ಭಗೃಹದ ಮೇಲೆ ಶಿಖರವಿದೆ. ಇದರ ಎದುರಿಗೆ ಹರಿದ್ರಾತೀರ್ಥ ಎಂದು ಕರೆಯಲಾದ ದೊಡ್ಡ ಕೊಳವಿದೆ. ಇದು ಹರಿಶ್ಚಂದ್ರತೀರ್ಥವೆಂಬುದರ ಗ್ರಾಮ್ಯರೂಪ. ಇದರ ಸುತ್ತ ಮೂರೆಡೆ ಒಳಸ್ತಂಭಾಂಕಣಗಳಿಂದ ಕೂಡಿದ ಶಿಲಾ ಮಂಟಪಗಳಿವೆ. ಬನಶಂಕರಿಯು ನೇಕಾರ ಜನಾಂಗದವರ ಪ್ರಿಯವಾದ ಶಕ್ತಿದೇವತೆ. ಬನದ ಹುಣ್ಣಿಮೆಯಂದು ಇಲ್ಲೊಂದು ಜಾತ್ರೆ ನಡೆಯುತ್ತದೆ. ಗುಳೇದಗುಡ್ಡವು ಬಾದಾಮಿಯಿಂದ ಸುಮಾರು 24 ಕಿಮೀ ದೂರದಲ್ಲಿರುವ ಒಂದು ಪಟ್ಟಣ. ಕೆಲವು ವಲಸಿಗರು ಈ ಹಿಂದೆ ಬಂದು ಗುಡ್ಡದ ಬಳಿ ನೆಲೆಸಲು ಆರಂಭಿಸಿದಾಗ ಇದನ್ನು ಗುಳೇದಗುಡ್ಡ (ವಲಸೆ ಬಂದವರ ಗುಡ್ಡ) ಎಂದು ಕರೆಯತೊಡಗಿದರು. ಇಮ್ಮಡಿ ಇಬ್ರಾಹಿಂ ಆದಿಲ್ ಷಾನ ಕಾಲದಲ್ಲಿ (ಕ್ರಿ.ಶ. 1580) ವಿಜಾಪುರದ ಅಧಿಕಾರಿಯಾಗಿದ್ದ ಸಿಂಗಪ್ಪನಾಯಕ ದೇಸಾಯಿಯು ಇಲ್ಲೊಂದು ಕೋಟೆಯನ್ನು ಕಟ್ಟಿಸಿದ. ಅನಂತರದಲ್ಲಿ ಇದು ಮೊಘಲರ ವಶವಾಯಿತು. 1705ರಲ್ಲಿ, ಒಣಗಿಹೋದ ಕೆರೆಯ ಜಾಗದಲ್ಲಿ ಇಂದಿನ ಪಟ್ಟಣವು ನಿರ್ಮಿತವಾಯಿತು. 1787ರಲ್ಲಿ ಟಿಪ್ಪು ಸುಲ್ತಾನ ಇದನ್ನು ವಶಪಡಿಸಿಕೊಂಡ; ಅನಂತರದಲ್ಲಿ ಇದು ಮರಾಠರ ವಶವಾಯಿತು. 1827ರಲ್ಲಿ ಬ್ರಿಟಿಷರ ವಶಕ್ಕೆ ಗುಳೇದಗುಡ್ಡ ಬರುವವರೆಗೆ ಅನೇಕ ಏರಿಳಿತಗಳನ್ನು ಕಾಣಬೇಕಾಯಿತು. ಬಾಲಾಜಿ, ಮೂಕನೆಪ್ಪ, ಶಂಕ್ರಮ್ಮ, ಬಸವೇಶ್ವರ, ಶಾಲೇಶ್ವರ, ಹನುಮಾನ್, ಮುಂತಾದವು ಇಲ್ಲಿಯ ಕೆಲವು ದೇವಾಲಯಗಳಾಗಿವೆ. ಅಲ್ಲದೆ, ಒಪ್ಪೊತ್ತಯ್ಯನ ಮಠ, ಗುರುಸಿದ್ಧೇಶ್ವರ ಮಠ, ಮುರುಘಾ ಮಠ, ಅಮರೇಶ್ವರ ಮಠಗಳು ಇಲ್ಲಿವೆ. ಸಯ್ಯದ್ ಬಾಷಾ ದರ್ಗಾವು ಇಲ್ಲಿಯ ಇನ್ನೊಂದು ಆಕರ್ಷಣೆಯಾಗಿದೆ. ಇಲ್ಲಿ ಪ್ರಸಿದ್ಧವಾದ ಚೋಳಿ (ಖಣ) ಬಟ್ಟೆಯನ್ನು ತಯಾರಿಸಲಾಗುತ್ತಿದ್ದು ಇದಕ್ಕೆ ವಿಶೇಷ ಬೇಡಿಕೆ ಇದೆ. ಈ ಪಟ್ಟಣದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ನೇಕಾರರಿದ್ದಾರೆ. ಈ ಕೈಮಗ್ಗದ ಬಟ್ಟೆ ವ್ಯಾಪಾರದಲ್ಲಿ ಗಣನೀಯ ಪ್ರಮಾಣದಲ್ಲಿ ಮಾರವಾಡಿಗಳು ನಿರತರಾಗಿದ್ದಾರೆ. ಇಲ್ಲಿಯ ನಾಗರಿಕ ಸೌಲಭ್ಯಗಳನ್ನು ಪುರಸಭೆಯು ನೋಡಿಕೊಳ್ಳುತ್ತಿದೆ. ನಂದಿಕೇಶ್ವರ ಗ್ರಾಮವು ಬಾದಾಮಿಯಿಂದ ಸುಮಾರು 18 ಕಿಮೀ ದೂರದಲ್ಲಿ ಮಲಪ್ರಭೆಯ ದಂಡೆಯ ಮೇಲಿದೆ. ಬಾದಾಮಿ ಚಲುಕ್ಯರ ಕಾಲದಲ್ಲಿ ಇದನ್ನು ನಂದಿಕೇಶ್ವರ ಹಾಗೂ ಲಂಜಿಕೇಶ್ವರ ಎಂದು ಕರೆಯಲಾಗಿತ್ತು. ಇಲ್ಲಿಯ ಎರಡು ಪ್ರಮುಖ ದೇವಾಲಯಗಳೆಂದರೆ ನಂದಿಕೇಶ್ವರ ಮತ್ತು ಕಮಲೇಶ್ವರ. ಮಹಾಕೂಟವು ಬಾದಾಮಿಯ ಪೂರ್ವಕ್ಕೆ ಸುಮಾರು 14 ಕಿಮೀ ದೂರದಲ್ಲಿ, ನಂದಿಕೇಶ್ವರದಿಂದ ಸುಮಾರು ಐದು ಕಿಮೀ ಅಂತರದಲ್ಲಿದೆ. ಇದೊಂದು ಐತಿಹಾಸಿಕ ಪ್ರಸಿದ್ಧ ಸ್ಥಳವಾಗಿದ್ದು, ಮಹಾಕೂಟೇಶ್ವರ, ಮಲ್ಲಿಕಾರ್ಜುನ, ಕಾಲಕಾಲೇಶ್ವರ, ವಿರೂಪಾಕ್ಷೇಶ್ವರ ಮುಂತಾದ ಹಲವು ಪುರಾತನ ದೇಗುಲಗಳು ಇಲ್ಲಿವೆ. ಈ ಊರಿನ ಸುತ್ತ ಗುಡ್ಡಗಳ ಸಾಲು ಸುತ್ತುವರಿದಿದ್ದು ಇದನ್ನು ಒಂದು ಸುಂದರ ತಾಣವನ್ನಾಗಿಸಿದೆ. ಇಲ್ಲಿರುವ ಹಲವು ಶೈವಾಲಯಗಳಿಂದ ತಿಳಿದುಬರುವಂತೆ ಮಹಾಕೂಟವು ಒಂದು ದೊಡ್ಡ ಶೈವ ಪಂಥದ ಕೇಂದ್ರವಾಗಿತ್ತು. ದ್ರಾವಿಡ ಶೈಲಿಯ ಶಿಖರವುಳ್ಳ ಮಹಾಕೂಟೇಶ್ವರ (ಮಕುಟೇಶ್ವರ) ದೇವಾಲಯದ ಮುಂದೆ ನಂದಿಮಂಟಪವಿದೆ. 'ವಿಷ್ಣು ಪುಷ್ಕರಿಣಿ' ಎಂದು ಕರೆಯಲಾದ ಚಿಲುಮೆ ಕೊಳದ ಮಧ್ಯದಲ್ಲಿ ಕಲ್ಲುಮಂಟಪದೊಳಗೆ ಮುಖಲಿಂಗವಿದೆ. ಈ ಕೊಳದ ಸುತ್ತ ಹಲವು ಚಿಕ್ಕ ಗುಡಿಗಳಿವೆ. ಪ್ರತಿಯೊಂದರಲ್ಲೂ ಗರ್ಭಗೃಹ ಮತ್ತು ಮುಖಮಂಟಪಗಳು ಮಾತ್ರ ಇವೆ. ಇವುಗಳಲ್ಲಿ ಕೆಲವಕ್ಕೆ ರೇಖಾನಾಗರ ಮತ್ತೆ ಕೆಲವಕ್ಕೆ ಕದಂಬನಾಗರ ಶಿಖರಗಳಿವೆ. ಹೊರಗೋಡೆಗಳ ಕೋಷ್ಠಗಳಲ್ಲಿ ಲಕುಲೀಶ, ಶಿವ, ನರಸಿಂಹ ಮತ್ತಿತರ ಶಿಲಾಮೂರ್ತಿಗಳಿವೆ. (ಇಲ್ಲಿರುವ) ಆರನೇಯ ಶತಮಾನದ ಸ್ತಂಭಶಾಸನ ತಿಳಿಸುವಂತೆ ಮಂಗಳೇಶನು ರಾಣಿ ದುರ್ಲಭದೇವಿಯ ಪರವಾಗಿ ಇಲ್ಲಿಯ ದೇಗುಲಕ್ಕೆ ದಾನ ನೀಡಿದ. ರಾಜ ವಿಜಯಾದಿತ್ಯನ (ರಾಜನರ್ತಕಿ) ಪ್ರಿಯೆಯಾಗಿದ್ದ ವಿನಾಪೋಟಿಯು ನೀಡಿದ ದತ್ತಿಯನ್ನು ಇನ್ನೊಂದು ಶಾಸನವು ತಿಳಿಸುತ್ತದೆ. ಮಹಾಕೂಟ-ಶಿವಯೋಗ ಮಂದಿರ ಮಾರ್ಗದಲ್ಲಿ ಹಳೆ ಮಹಾಕೂಟವಿದ್ದು ಅಲ್ಲಿ ಒಂದು ಪುರಾತನ ಶಿವಾಲಯವನ್ನು ನೋಡಬಹುದು. ಗರ್ಭಗೃಹದಲ್ಲಿ ಒಂದು ದೊಡ್ಡ ಶಿವಲಿಂಗವಿದ್ದು ಅದನ್ನು ವೃತ್ತಾಕಾರದ ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಸಭಾಮಂಟಪದಲ್ಲಿರುವ ಕಾರ್ತಿಕೇಯನ ವಿಗ್ರಹ ಗಮನಾರ್ಹವಾಗಿದೆ. ಇಲ್ಲಿ ಬಾದಾಮಿ ಚಲುಕ್ಯರ ಕಾಲದ ಹಾಗೂ ಕಲ್ಯಾಣಿ ಚಾಳುಕ್ಯ ಕಾಲದ ಎರಡು ಸಣ್ಣ ಗುಡಿಗಳಿವೆ.

ಬಾದಾಮಿಯಿಂದ ಸುಮಾರು 11 ಕಿಮೀ ದೂರದಲ್ಲಿರುವ ಶಿವಯೋಗಮಂದಿರವು ಮಲಪ್ರಭೆಯ ದಂಡೆಯ ಮೇಲಿರುವ ಒಂದು ಸುಂದರ ತಾಣವಾಗಿದೆ. ಇಳಕಲ್ಲಿನ ವಿಜಯಮಹಾಂತ ಸ್ವಾಮಿಗಳು ಆಯ್ಕೆ ಮಾಡಿದ ಈ ತಾಣದಲ್ಲಿ ಹಾನಗಲ್ಲಿನ ಕುಮಾರಸ್ವಾಮಿಗಳು 1909ರಲ್ಲಿ 'ಶಿವಯೋಗಮಂದಿರ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಇಲ್ಲಿ ವೀರಶೈವರಿಗೆ ಧಾರ್ಮಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ನೀಡಲಾಗುತ್ತದೆ. ವೀರಶೈವ ಮಠ ಪರಂಪರೆಯ ಸ್ವಾಮಿಗಳಿಗೆ ತರಬೇತಿ ನೀಡಲು ಇಲ್ಲಿ ಗುರುಕುಲ ಪದ್ಧತಿಯ ಒಂದು ಸಂಸ್ಕೃತ ಪಾಠಶಾಲೆಯನ್ನು ನಡೆಸಲಾಗುತ್ತಿದೆ. ಕುಮಾರಸ್ವಾಮಿಗಳ ಗದ್ದುಗೆಯ ಸ್ಥಳದಲ್ಲಿ ಒಂದು ದೊಡ್ಡ ಶಿಲಾಮಂದಿರವನ್ನು ಕಟ್ಟಲಾಗಿದೆ. ಇಲ್ಲೊಂದು ದೊಡ್ಡ ತಾಳೆಗರಿ ಹಸ್ತಪ್ರತಿಗಳ ಗ್ರಂಥಾಲಯವಿದೆ.

**ಬಾಬಾ ಬುಡನ್‌ಗಿರಿ :** (ಚಿಕ್ಕಮಗಳೂರು ಜಿಲ್ಲೆ) ಇದು ಬೆಂಗಳೂರಿನಿಂದ 279 ಕಿಮೀ ದೂರದಲ್ಲಿದೆ. ಚಂದ್ರ

ದ್ರೋಣ ಪರ್ವತ ಎಂಬುದು ಇದರ ಪರಂಪರಾಗತ ಹೆಸರಾಗಿದೆ. ಈಗಿನ ಹೆಸರು ಬಾಬಾಬುಡನ್ ಎಂಬ ಸೂಫಿ ಸಂತನಿಂದ ಬಂದಿದೆ. ಈತ ಈ ಸ್ಥಳದಲ್ಲಿ ಬಹುಕಾಲ ವಾಸಿಸಿದ್ದ. ಇದು ಪಶ್ಚಿಮ ಘಟ್ಟಗಳ ಸಾಲುಗಳಲ್ಲೇ ಎತ್ತರವಾದ ಶ್ರೇಣಿಗಳಿಗೆ ಸೇರಿದೆ. ಇದರಲ್ಲಿ 1,926 ಮೀ ಎತ್ತರವಿರುವ ಮುಳ್ಳಯ್ಯನ ಗಿರಿಯಿದೆ. ಶಿಖರದ ಮೇಲಿಂದ ಸುಮಾರು 15 ಮೀ ಕೆಳಭಾಗದಲ್ಲಿ ಮೂರು ದೊಡ್ಡ ಗುಹೆಗಳಿವೆ. ಇವುಗಳಲ್ಲಿ ಮುಳ್ಳಪ್ಪಸ್ವಾಮಿ, ಮುಪ್ಪಣ್ಣ ಸ್ವಾಮಿ ಮತ್ತು ನೂರೊಂದು ಸ್ವಾಮಿಗಳು ತಪಸ್ಸನ್ನಾಚರಿಸಿದ ರೆಂದು ಪ್ರತೀತಿಯಿದೆ. ಅವರ ಗದ್ದುಗೆ ಹಾಗೂ ಪ್ರತಿಮೆಗಳನ್ನಿಲ್ಲಿ ಇಂದಿಗೂ ಪೂಜಿಸಲಾಗುತ್ತಿದೆ. ಈ ಗುಡ್ಡದ ಒಂದು ಅಂಚಿನಲ್ಲಿ ಕೆಳದಿ ನಾಯಕರ ಕಾಲದ ಸೀತಾಳ ಮಲ್ಲಿಕಾರ್ಜುನ ದೇವಾಲಯ ವಿದೆ. ಇದರಲ್ಲಿ ಎರಡು ಗರ್ಭಗೃಹಗಳಿದ್ದು ಒಂದರಲ್ಲಿ ಶಿವಲಿಂಗ, ಇನ್ನೊಂದರಲ್ಲಿ ವೀರಭದ್ರ ವಿಗ್ರಹವಿದೆ. ಈ ಗುಡ್ಡದ ದಕ್ಷಿಣ ಭಾಗದ ಇಳಿಜಾರಲ್ಲಿ ಯಗಚಿ ನದಿ ಉಗಮಿಸುತ್ತದೆ. ಇದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕಾಫಿ ತೋಟಗಳಿವೆ. ವಾಯು ಪರ್ವತ, ಮರುತ ಶೈಲ, ಗಾಳಿಪೂಜೆ ಪರ್ವತ, ಜಲಮೇಲಗಿರಿ ಎಂದೆಲ್ಲ ಕರೆಯಲಾದ ಬಾಬಾಬುಡನ್‌ಗಿರಿಯು 1,895 ಮೀ ಎತ್ತರವಿದೆ. ಇದರ ಪೂರ್ವಮುಖದಲ್ಲಿ ಎದ್ದು ಕಾಣುವ ಕೋನಾಕಾರದ ಶಿಖರಕ್ಕೆ ದೇವೀರಮ್ಮನ ಗುಡ್ಡವೆಂದು ಹೆಸರಿದೆ. ಬಾಬಾಬುಡನ್‌ಗಿರಿ ಸಾಲುಗಳಲ್ಲೇ ದಕ್ಷಿಣ ಭಾರತದ ಕಾಫಿ ಕೃಷಿ ಉಗಮವಾಯಿತು. 1830ರಲ್ಲಿ ಕೆನನ್ ಆರಂಭಿಸಿದ ಮೊತ್ತ ಮೊದಲ ಕಾಫಿ ಪ್ಲಾಂಟೇಶನ್ ಬಾಬಾಬುಡನ್ ಗಿರಿಯ ದಕ್ಷಿಣ ಕ್ಕಿದೆ. ಈ ಗಿರಿ ಸಾಲಲ್ಲಿ ಗದಾತೀರ್ಥ, ಕಾಮನತೀರ್ಥ, ನೆಲ್ಲಿಕಾಯಿತೀರ್ಥ, ಮೊದಲಾದ ಹಲವು ತೀರ್ಥಗಳಿವೆ. ಇನಾಂದತ್ತಾತ್ರೇಯ ಪೀಠ ಎಂಬ ಪುಟ್ಟ ಹಳ್ಳಿ ಬಾಬಾಬುಡನ್ ಗಿರಿಯ ಶ್ರೇಣಿಯಲ್ಲಿದೆ. ಇದು ಚಿಕ್ಕಮಗಳೂರಿನಿಂದ ಸುಮಾರು 30 ಕಿಮೀ ದೂರದಲ್ಲಿದೆ. ಇದರ ದಕ್ಷಿಣದ ಇಳಿಜಾರಲ್ಲಿ ಬಾಬಾ ಬುಡನ್ ವಾಸಿಸುತ್ತಿದ್ದು, ಆತ ಯೆಮೆನ್‌ನಿಂದ ತಂದ ಕಾಫಿ ಬೀಜಗಳನ್ನು ಬಿತ್ತಿ ಈ ಬೆಳೆಯನ್ನಿಲ್ಲಿ ಆರಂಭಿಸಿದನೆಂದು ಪ್ರತೀತಿ ಯಿದೆ. ಇಲ್ಲಿ ಜಂಬಿಟ್ಟಿಗೆ ಕಲ್ಲಿನಲ್ಲಿ ಕೊರೆದ ಗುಹೆ ಇದೆ. ಇಲ್ಲಿಯೇ ದತ್ತಾತ್ರೇಯ, ಬಾಬಾಬುಡನ್ (ಹಜರತ್ ದಾದಾ ಹಯಾತ್ ಮೀರ್ ಖಲಂದರ್) ಮತ್ತಿತರ ಮುನಿ, ಸಂತರು ವಾಸ ಮಾಡಿದರೆಂದು ನಂಬುತ್ತಾರೆ. ಅಂತೆಯೇ ಇದು ಹಿಂದೂ, ಮುಸ್ಲಿಮರ ಪವಿತ್ರ ಯಾತ್ರಾಸ್ಥಳವಾಗಿದೆ. ಈ ಬೆಟ್ಟ ಶ್ರೇಣಿ ಗಳಲ್ಲಿರುವ ಭಿಷಗ್ನಿ ಮಠ ಹಾಗೂ ಫಲಾಹಾರ ಸ್ವಾಮಿ ಮಠಗಳೆರಡ ರಲ್ಲೂ ದತ್ತಾತ್ರೇಯನ ಆರಾಧನೆ ನಡೆಯುತ್ತದೆ. ಇನಾಂ ದತ್ತಾತ್ರೇಯ ಪೀಠದ ಛತ್ರಗಳನ್ನು ಕೆಳದಿ ಚೆನ್ನಮ್ಮಾಜಿ ಕಟ್ಟಿಸಿದ ಳೆಂದು ಹೇಳಲಾಗುತ್ತಿದೆ. ನಾಲ್ಮಡಿ ಕೃಷ್ಣರಾಜ ಒಡೆಯರು ಪಕ್ಕದ ಗುಡ್ಡದ ಮೇಲೆ ವಿಶಾಲವಾದ ಬಂಗಲೆಯನ್ನು ಕಟ್ಟಿಸಿ ದ್ದಾರೆ.

**ಬಾರಕೂರು :** (ದ. ಕ. ಜಿ; ಉಡುಪಿ ತಾ; ಜನ: 2,410) ಬಾರಕನೂರು, ಬಾರಹ ಕನ್ಯಾಪುರ, ಬಾರ್ಕೂರು ಎಂದು ಮುಂತಾಗಿ ಕರೆಯಲಾದ ಈ ಪುಟ್ಟ ಹಳ್ಳಿ ಕಾಚೂರು ಕಂದಾಯ ಗ್ರಾಮಕ್ಕೆ ಸೇರಿದೆ. ಉಡುಪಿಯಿಂದ ಸುಮಾರು 16 ಕಿಮೀ ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಇದು ಅಳುಪರ ಖ್ಯಾತ ರಾಜಧಾನಿಯಾಗಿತ್ತು. ವಿಜಯನಗರದ ಅರಸರ ಕಾಲ ದಲ್ಲಿ ಬಾರಕೂರು ರಾಜ್ಯದ (ಪ್ರಾಂತ) ಆಡಳಿತ ಕೇಂದ್ರವಾಗಿತ್ತು. ಇಲ್ಲಿ ಕಂಡುಬರುವ ಎರಡು ಕೋಟೆಯ ಅಸ್ಪಷ್ಟ ಕುರುಹುಗಳು ಮೂಲತಃ ಅಳುಪರು ಮತ್ತು ವಿಜಯನಗರದ ರಾಜಪ್ರತಿನಿಧಿಗಳು ನಿರ್ಮಿಸಿದ ದುರ್ಗಗಳಿಗೆ ಸಂಬಂಧಿಸಿವೆ. ಸೀತಾ ಮತ್ತು ಸ್ವರ್ಣಾ ನದಿಗಳ ಸಾಮಾನ್ಯ ಅಳಿವೆಯ ದಡದಲ್ಲಿ ಬಂದರು ಇದೆ. ಈಗ ಇದು ಸುಮಾರು ನಾಲ್ಕು ಕಿಮೀ ಒಳಪ್ರದೇಶಕ್ಕೆ ಸೇರಿಹೋಗಿದೆ. ಇದರ ಸಮೀಪದಲ್ಲಿರುವ ಹಂಗಾರಕಟ್ಟೆ ಬಂದರು ಒಂದು ಕಾಲಕ್ಕೆ ಹೊರದೇಶಗಳೊಡನೆ ವಾಣಿಜ್ಯ ಸಂಪರ್ಕವನ್ನು ಚುರುಕಾಗಿಟ್ಟು ಕೊಂಡಿತ್ತು. ಬಾರಕೂರಿನಲ್ಲಿ ಐತಿಹಾಸಿಕ ಮಹತ್ವವುಳ್ಳ ಹಲವು ಶಾಸನಗಳೂ, ದೇವಾಲಯಗಳೂ ಇವೆ. ಕೋಟೆಕೇರಿಯಲ್ಲಿರುವ ಪಂಚಲಿಂಗೇಶ್ವರಾಲಯ ಎಂಟನೇಯ ಶತಮಾನದ್ದಾಗಿದೆ. ಇದೇ ಸ್ಥಳದಲ್ಲಿರುವ ಬೆಟ್ಟೆ ವಿನಾಯಕ ದೇಗುಲ ಸುಮಾರು 9-10ನೇಯ ಶತಮಾನದ ಕಟ್ಟಡವಾಗಿದೆ. ಮೂಡುಕೇರಿಯ ಸೋಮನಾಥ ದೇಗುಲವು ಸುಮಾರು 10ನೇಯ ಶತಮಾನದ್ದಾ ಗಿದೆ. ಕೋಟೆಕೇರಿಯ ವೇಣುಗೋಪಾಲಕೃಷ್ಣ ಗುಡಿ ಸುಮಾರು 11ನೇಯ ಶತಮಾನದ್ದು. ಮಣಿಗಾರಕೇರಿಯ ಸಿದ್ದೇಶ್ವರಾ ಲಯವೂ ಇದೇ ಶತಮಾನದ್ದಾಗಿದೆ. 11-12ನೇಯ ಶತಮಾನದ ಮಹಿಷಾಸುರ ಮರ್ದಿನಿಯ ಗುಡಿ, ಪಾಠಶಾಲಕೇರಿಯ 12-13 ನೇಯ ಶತಮಾನದ ವೀರಭದ್ರ ದೇಗುಲ, 14ನೇಯ ಶತಮಾನದ ಚೌಳಿಕೇರಿಯ ಅವಳಿ ಗುಡಿಗಳೂ (ಇಲ್ಲಿ ಗಣಪತಿ ವಿಗ್ರಹ ಮತ್ತು ಶಿವಲಿಂಗಗಳಿವೆ), ಮೂಡುಕೇರಿಯಲ್ಲಿರುವ 14ನೇಯ ಶತಮಾನದ ಕಾಳಿಕಾಂಬಾ ದೇಗುಲ, 11ನೇಯ ಶತಮಾನದ ಗೋಪಾಲಕೃಷ್ಣ ದೇವಾಲಯ, 14ನೇಯ ಶತಮಾನದ ನಾಗರಮಠದ ಕೇಶವ ದೇಗುಲ, ಸುಮಾರು 13-14ನೇಯ ಶತಮಾನದ ಮೂಡುಕೇರಿ ಗಣಪತಿಗುಡಿ ಮುಂತಾದವನ್ನು ಇಲ್ಲಿ ಉಲ್ಲೇಖಿಸಬಹುದು.

ಐತಿಹಾಸಿಕ ಕಾಲದಲ್ಲಿ ಈ ನಗರದ ನಾಗರಿಕ ಆಡಳಿತ ವ್ಯವಸ್ಥೆ ಬಹಳ ಚೆನ್ನಾಗಿತ್ತು. ಇದರ ಎಲ್ಲ ಕೇರಿಯ ಜನರಿಗೆ ಹಾಗೂ ಹಂಜಮಾನದವರಿಗೆ (ಮುಸಲ್ಮಾನ) ಇದರಲ್ಲಿ ಪ್ರಾತಿನಿಧ್ಯ ವಿತ್ತು. ಪಂಚಲಿಂಗೇಶ್ವರ ದೇವಾಲಯದ ಹೊರಗೆ ಮೂರು ಮಹಾಸತಿ ಕಲ್ಲುಗಳಿವೆ. ಇವು ಶಿಲಾಸ್ತಂಭಗಳಾಗಿದ್ದು ಒಂದು ಬದಿಯಲ್ಲಿ ಹೆಂಗಸಿನ (ಮಹಾಸತಿಯ) ಬಲಗೈ ಮತ್ತು ತೋಳನ್ನು ಶಿಲ್ಪಿಸಿದೆ. ಇಲ್ಲಿರುವ ಜೈನ ವಾಸ್ತುಕೃತಿಗಳಲ್ಲಿ ಮೂರು ಪುಟ್ಟ ಬಸದಿಗಳು ಮಾತ್ರ ಈಗ ಉಳಿದಿವೆ; ವಾಸ್ತುಶಿಲ್ಪದ ದೃಷ್ಟಿಯಿಂದ ಅವು ಅಷ್ಟೇನೂ ಮೌಲಿಕವಾಗಿಲ್ಲ. ಬಾರಕೂರಿನ ಹಳೇ ಮಸೀದಿ ಮತ್ತು ದರ್ಗಾಗಳು ಬಹಳ ಜನ ಭಕ್ತರನ್ನೂ ಇಂದಿಗೂ ಆಕರ್ಷಿಸುತ್ತಿವೆ.

ಬಾಳೆಹೊನ್ನೂರು-ಕಣಬೂರು : (ಚಿಕ್ಕಮಗಳೂರು ಜಿ; ನರಸಿಂಹರಾಜಪುರ ತಾ. ಜನ: 4,734) ಕಣಬೂರಿನ ಒಂದು ಭಾಗವಾಗಿರುವ ಬಾಳೆಹೊನ್ನೂರು ನರಸಿಂಹರಾಜಪುರದಿಂದ 32 ಕಿಮೀ ದೂರದಲ್ಲಿ ಭದ್ರಾನದಿಯ ಎಡದಂಡೆಯ ಮೇಲಿದೆ. ಭದ್ರಾನದಿಯ ಬಳಿಯಲ್ಲಿ ಪಾಳು ಕೋಟೆಯಿದೆ. ಈ ಊರು ಒಂದು ಪ್ರಮುಖವಾದ ಧಾರ್ಮಿಕ ಹಾಗೂ ವಾಣಿಜ್ಯ ಕೇಂದ್ರ ವಾಗಿದೆ. ಶ್ರೀ ರೇಣುಕಾರ್ಯ ಸಂಪ್ರದಾಯದ ಪ್ರಸಿದ್ಧ ವೀರಶೈವ ಮಠವಾದ ಜಗದ್ಗುರು ರಂಭಾಪುರಿ ಪೀಠವು ಬಾಳೆಹಳ್ಳಿಯಲ್ಲಿದೆ. ಇದನ್ನು ರಂಭಾಪುರಿ ಎಂದು ಕರೆಯುತ್ತಿದ್ದು, ಇದು ಬಾಳೆ ಹೊನ್ನೂರು-ಕಣಬೂರಿನ ಪುಟ್ಟ ಹಳ್ಳಿಯಾಗಿದೆ. ಐದು ಪಂಚಾ ಚಾರ್ಯ ವೀರಶೈವ ಪೀಠಗಳಲ್ಲಿ ಇದೂ ಒಂದಾಗಿದೆ. ಕಾಶಿ, ಕೇದಾರ, ಶ್ರೀಶೈಲ ಮತ್ತು ಉಜ್ಜಯಿನಿ ಇತರ ನಾಲ್ಕು ಪೀಠ ಗಳಾಗಿವೆ. ಶಿವನಿಂದ ಹತನಾದ ರಂಭಾಸುರನಿಂದಾಗಿ ಈ ಊರಿಗೆ ರಂಭಾಪುರಿ ಎಂಬ ಹೆಸರು ಬಂದಿದೆಯೆಂದು ಹೇಳಲಾಗಿದೆ. ಈ ಮಠದಲ್ಲಿ ಹಿಂದಿನ ಸ್ವಾಮಿಗಳ ಹಲವು ಗದ್ದುಗೆಗಳಿವೆ. ವೇಸರ ಶೈಲಿಯಲ್ಲಿ ವಿಶಾಲವಾದ ಪ್ರಕಾರದೊಳಗೆ ಕಟ್ಟಲಾದ ವೀರಭದ್ರನ ಗುಡಿಯು ಇಲ್ಲಿಯ ಮತ್ತೊಂದು ಮಹತ್ವದ ದೇವಾಲಯವಾಗಿದೆ. ಇಲ್ಲಿಂದ ಸುಮಾರು ಎಂಟು ಕಿಮೀ ದೂರ ದಲ್ಲಿ (ದೇಶದಲ್ಲೇ ಮೊದಲನೇಯದಾದ) ಕಾಫಿ ಸಂಶೋಧನಾ ಕೇಂದ್ರವನ್ನು ಕೇಂದ್ರ ಸರ್ಕಾರವು ಸ್ಥಾಪಿಸಿದೆ.

ಬಿದರೆ : (ಜಿ ಮತ್ತು ತಾ ಕೇ; ಜನ: 78,886) ಬಿದರೆ ನಗರವು ಬೆಂಗಳೂರಿಂದ ಉತ್ತರಕ್ಕೆ 740 ಕಿಮೀ ದೂರ ದಲ್ಲಿದೆ. ಸಮುದ್ರ ಮಟ್ಟದಿಂದ 664 ಮೀ ಎತ್ತರದಲ್ಲಿ ಇರುವ ಇಲ್ಲಿಯ ಹವಾಮಾನವು ತುಂಬ ಆಹ್ಲಾದಕರವಾಗಿದೆ. ಐತಿಹ್ಯ ಗಳ ಪ್ರಕಾರ ಇದೇ ಮಹಾಭಾರತ ಕಾಲದ ವಿದುರನಗರವಾಗಿ ತ್ತೆಂದು ಮತ್ತು ನಳ ಹಾಗೂ ದಮಯಂತಿಯರು ಇಲ್ಲಿಯೇ ಪರಸ್ಪರ ಭೆಟ್ಟಿಯಾಗುತ್ತಿದ್ದರೆಂದು ತಿಳಿದುಬರುತ್ತದೆ. ಈ ಪ್ರದೇಶವು ರಾಜಾ ಭೀಮಸೇನನ ರಾಜಧಾನಿ ಆಗಿತ್ತೆಂದೂ ಹೇಳ ಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಇದನ್ನು ಬಿದುರಪುರ ಎಂದು ಕರೆಯಲಾಗುತ್ತಿದ್ದಿತು. ನಂತರ ಮುಸ್ಲೀಮರ ಆಳ್ವಿಕೆಯಲ್ಲಿ ಇದು ಅಹ್ಮದಾಬಾದ ಬೀದರ್ ಎಂದಾಯಿತು; ಅನಂತರ ಮಹಮ್ಮದಾಬಾದ ಬಿದರ್ ಎಂದು ಹೆಸರು ಪಡೆಯಿತು. ಇಲ್ಲಿ ದೊರೆತ ಕೆಲವು ಶಿಲಾಶಾಸನಗಳ ಮೇರೆಗೆ ಇದು ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಪ್ರಸಿದ್ಧ ಸ್ಥಳವಾಗಿತ್ತು. ಚಾಳುಕ್ಯರ ತರುವಾಯ ವಾರಂಗಲ್ಲಿನ ಕಾಕತೀಯರು ಈ ನಗರದ ಮೇಲೆ ಪ್ರಭುತ್ವ ಹೊಂದಿದ್ದರು. ಮೊಹಮ್ಮದ್-ಬಿನ್-ತಘಲಕ್‌ನು 1321-22ರಲ್ಲಿ ಇದನ್ನು ವಶಪಡಿಸಿಕೊಂಡನು. ಅನಂತರ ಇದು ಮುಸ್ಲೀಮರ ಅಧೀನದಲ್ಲಿಯೇ ಇದ್ದಿತು. 1347ರಲ್ಲಿ ಅಲ್ಲಾ ಉದ್ದೀನ್ ಹಸನ್ ಬಾಹಮನಿಯು ಇದನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ಇಲ್ಲಿಯ ಆಹ್ಲಾದಕರ ಹವಾಮಾನ ಹಾಗೂ ರಕ್ಷಣೆಯ ಅನುಕೂಲತೆಯ ದೃಷ್ಟಿಯಿಂದ ಸುಲ್ತಾನ ಅಹ್ಮದಷಾ ವಲಿ ಬಹಮನಿಯು (1422-36) ತನ್ನ ರಾಜಧಾನಿಯನ್ನು ಕಲ್ಬುರ್ಗಿಯಿಂದ ಬಿದರೆಗೆ ಸ್ಥಳಾಂತರಿಸಿದನೆಂದೂ ಮತ್ತು ಮೊಹಮ್ಮದಾಬಾದ ಎಂದು ಪುನರ್ನಾಮಕರಣ ಮಾಡಿದನೆಂದೂ ಹೇಳಲಾಗುತ್ತದೆ. ಅಲ್ಲಿನ ಕೋಟೆಯನ್ನು ಭದ್ರಪಡಸಲಾಯಿತು. ಭವ್ಯಕಟ್ಟಡಗಳು ಮತ್ತು ಮಸೀದಿಗಳು ಇಲ್ಲಿ ತಲೆ ಎತ್ತಿದವು. 1460-61ರಲ್ಲಿ ಮಾಳವ್ವದ ಮೊಹ್ಮದ ಖಿಲ್ಜಿಯು ಬಿದರೆ ಮೇಲೆ ಆಕ್ರಮಣ ಮಾಡಿ ಅಲ್ಲಿನ ಅನೇಕ ಕಟ್ಟಡಗಳನ್ನು ನೆಲಸಮ ಮಾಡಿದನು. ಅನಂತರ ನಿಜಾಮುಷಾನು ಕೆಲವೊಂದು ಕಟ್ಟಡ ಗಳನ್ನು ಮರಳಿ ಕಟ್ಟಿಸಿದನು. ರಶಿಯಾದ ಪ್ರವಾಸಿ ಅಥೇನೇಸಿ ಯನ್ ನಿಕೆತಿನ್‌ನು ಬಿದರೆ ನಗರವನ್ನು "ಮುಸ್ಲಿಮ್ ಆಳ್ವಿಕೆಗೆ ಒಳಪಟ್ಟ ಸಕಲ ಹಿಂದುಸ್ತಾನದ ಪ್ರಮುಖ ನಗರ"ವೆಂದು ವರ್ಣಿಸಿದ್ದಾನೆ. ಬಹಮನಿ ಮನೆತನದ ಅವಸಾನದ ನಂತರ ಬರೀದ್ ಷಾಹಿ ಸುಲ್ತಾನರು ಅಧಿಕಾರಕ್ಕೆ ಬಂದರು. ಕ್ರಿ.ಶ. 1619ರಲ್ಲಿ ವಿಜಾಪುರದ ಆದಿಲಷಾಹಿ ಸುಲ್ತಾನನು ಬಿದರೆ ಮತ್ತು ಕಲ್ಯಾಣದ ಮೇಲೆ ದಾಳಿ ಮಾಡಿ ಅವನ್ನು ವಶಪಡಿಸಿಕೊಂಡು ಬರೀದ್ ಷಾಹಿ ಆಡಳಿತವನ್ನು ಕೊನೆಗಾಣಿಸಿದನು. 1686ರಲ್ಲಿ ಔರಂಗಜೇಬನು ಬಿದರೆ ಮತ್ತು ಕಲ್ಯಾಣಗಳನ್ನು ವಶಪಡಿಸಿ ಕೊಂಡು ಬಿದರೆಯನ್ನು ಜಾಫರಾಬಾದ್ ಎಂದು ಹೆಸರಿಸಿದನು. ನಂತರ ಇದು ದೆಹಲಿಯ ಮುಘಲರ ಅಧೀನದಲ್ಲಿ ಉಳಿಯಿತು. 1724ರಲ್ಲಿ ಹೈದರಾಬಾದ್‌ನ ನಿಝಾಮ ಉಲ್-ಮುಲ್ಕ್ ಅಸಫಝಾನು ಈ ಪ್ರದೇಶದ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು. ಆಂದಿನಿಂದ ಬಿದರೆ ನಗರವು ಕ್ರಮೇಣ ತನ್ನ ಐತಿಹಾಸಿಕ ವೈಭವವನ್ನು ಕಳೆದುಕೊಂಡಿತು. ಕೊನೆಗೆ ಮುಖ್ಯ ಪಟ್ಟಣವೊಂದು ಮಾತ್ರ ಉಳಿಯಿತು. ಬಿದರೆಯ ಕೋಟೆ, ಬುರುಜುಗಳು, ತಖ್ತ್‌ಮಹಲ್, ತರ್ಖಾಶ್ ಮಹಲ್, ರಂಗೀನ್ ಮಹಲ್, ಶಾಹಿ ಮತಬಖ್ (ಅರಸು ಪರಿವಾರದ ಅಡಿಗೆ ಮನೆ), ಗಗನ ಮಹಲ್, ದಿವಾನ್-ಇ-ಆಮ್ (ಸಾರ್ವಜನಿಕರ ದರ್ಬಾರ್ ಭವನ), ಸೋಲಾ ಖಂಬಾ ಮಸೀದಿ, ಹಳೆಯ ನೌಬತ ಖಾನಾ (ಕೋಟೆಯ ರಕ್ಷಣಾಧಿಕಾರಿಯ ಮನೆ), ಷಾ ಗಂಜ್ ದರವಾಜಾ (ಮಕ್ಕಾ ದ್ವಾರ), ಫತೇಹ ದರವಾಜಾ (ವಿಜಯ ದ್ವಾರ), ಮಂಗಳಪೇಟೆ ದರವಾಜಾ, ದುಲ್ಹನ್ ದರವಾಜಾ (ವಧು ದ್ವಾರ), ತಳಘಾಟ ದರವಾಜಾ, ಚೌಬಾರಾ (ನಿರೀಕ್ಷಣಾ ಕೇಂದ್ರ), ಮದ್ರಸಾ (ಮಹಮ್ಮದ ಗವಾನನ ಮಹಾ ವಿದ್ಯಾ ಲಯ), ಜಾಮಿ ಮಸ್ಜಿದ್, ಕಾಲಿ ಮಸ್ಜಿದ್ (ಕಪ್ಪು ವರ್ಣದ ಮಸೀದಿ), ಖಲೀಲ-ಉಲ್ಲಾ-ಕಿರ್ಮಾನಿ ಎಂಬ ಫಕೀರನಿಗೆ ಸಂಬಂಧಿಸಿದೆ ತಖ್ತ್-ಇ-ಕಿರ್ಮಾನಿ, ಮನ್‌ಹಿಯಾರ್ ತಾಲೀಮ್, ಕಂಖಾ (ಮಠ)ಗಳು, ಬರೀದಿ ಅರಸರ ಗೋರಿಗಳು, ಕ್ಷೌರಿಕನ ಗೋರಿ, ಝರಣಿ ನರಸಿಂಹ ಗುಹಾಲಯ, ನಾನಕ ಝರಾ ಸಾಹಿಬ್, ಮುಂತಾದವು ಬಿದರೆ ನಗರದ ಆಕರ್ಷಣೀಯ ಸ್ಥಳ ಗಳಲ್ಲಿ ಪ್ರಮುಖವಾಗಿವೆ.

ಸೋಲಾಖಂಬಾ ಮಸೀದಿಯು ಅತ್ಯಂತ ಹಳೆಯ (ಸು.ಕ್ರಿ.ಶ. 1423) ಮುಸ್ಲಿಮ್ ಕಟ್ಟಡವಾಗಿದೆ. ಅದು ಅರ್ಧ ಗೋಳಾಕಾರದ ಗುಂಬಜ ಹಾಗೂ ವರ್ತುಲಾಕಾರದ ಕೊಳವೆಯಂಥ ಸ್ತಂಭಗಳನ್ನು ಹೊಂದಿದೆ. ರಂಗೀನ ಮಹಲ್ ಅರಮನೆಯು ಪ್ರಕಾಶಮಾನವಾದ ವಿವಿಧ ವರ್ಣಗಳಿಂದ ಆಲಂಕೃತ ವಾದ ಗೋಡೆಗಳಿಂದ ಸಂದರ್ಶಕರ ಮನಸ್ಸನ್ನು ಸೆರೆ ಹಿಡಿಯು ತ್ತದೆ. ಗವಾನನ ಮದ್ರಸಾ ಎಂಬುದು 250′×180′ದಷ್ಟು ವಿಸ್ತೀರ್ಣವಾದ ಪ್ರದೇಶವನ್ನು ವ್ಯಾಪಿಸಿದ್ದು, ಮೂರಂತಸ್ತಿನ ಭವ್ಯ ಕಟ್ಟಡವಾಗಿದೆ. ಅದರ ಮೂಲೆಗಳಲ್ಲಿ ತೆಳುವಾದ ಮಿನಾರು ಗಳಿದ್ದು, ಅವುಗಳ ಹೊರಗೋಡೆಗಳನ್ನು ಮಿರುಗುವ ವರ್ಣರಂಜಿತ ಹಂಚುಗಳಿಂದ ಅಲಂಕರಿಸಲಾಗಿತ್ತು. ಆದರೆ ಅವುಗಳಲ್ಲಿ ಬಹಳಷ್ಟು ಈಗ ಕಣ್ಮರೆಯಾಗಿವೆ. ಈ ಕಟ್ಟಣದ ಒಳಗಡೆ ಅನೇಕ ವಿಶಾಲ ಕೊಠಡಿಗಳು, ಪ್ರಾಧ್ಯಾಪಕರ ವಸತಿಗೃಹಗಳು, ಗ್ರಂಥಾಲಯ ಮತ್ತು ಕಟ್ಟಡಕ್ಕೆ ಹೊಂದಿಕೊಂಡ ಮಸೀದಿಗಳು ಇವೆ. ಇದು ಬಿದರೆ ನಗರದ ಮಧ್ಯವರ್ತಿ ಸ್ಥಳದಲ್ಲಿರುವ ಅತ್ಯಂತ ಭವ್ಯ ಕಟ್ಟಡವಾಗಿದೆ. ಬಿದರೆ ಕೋಟೆಯು ದೇಶದ ಅತ್ಯಂತ ಅಭೇಧ್ಯ ಕೋಟೆಗಳಲ್ಲಿ ಒಂದು ಎಂದು ಎಣಿಸಲಾಗುತ್ತದೆ. ಇದನ್ನು ಸುಲ್ತಾನ ಅಹ್ಮದಷಾ ಬಹಮನಿಯು 1426-1432ರ ಮಧ್ಯಾವಧಿಯಲ್ಲಿ ನಿರ್ಮಿಸಿದನು. ಹಲವಾರು ದೇಶಗಳ ತಂತ್ರಜ್ಞರು ಮತ್ತು ವಾಸ್ತುಶಿಲ್ಪ ನಿಪುಣರನ್ನು ಆಮಂತ್ರಿಸಿ ಇದರ ನೀಲ ನಕ್ಷೆ ಹಾಗೂ ನಿರ್ಮಾಣ ಕಾರ್ಯದಲ್ಲಿ ನಿಯುಕ್ತ ಗೊಳಿಸಲಾಗಿತ್ತು. ಇಲ್ಲಿರುವ ಒಂದು ಬೃಹತ್ ಫಿರಂಗಿಯು 4.72 ಮೀ ಉದ್ದ. ಅದರ ಮುಂಭಾಗದ ಸುತ್ತಳತೆ 63.5 ಸೆಂಟಿಮೀಟರ್ ಮತ್ತು ಹಿಂಭಾಗದ ಸುತ್ತಳತೆ 48.26 ಸೆಂಟಿ ಮೀಟರ್ ಇದೆ. ಮೇಲೆ ಉಲ್ಲೇಖಿಸಿದ ಸೋಲಾ ಖಂಬಾ ಮಸೀದಿ ಮತ್ತು ಮಹಲುಗಳು (ಅರಮನೆಗಳು) ಈ ಕೋಟೆಯ ಒಳಗಡೆ ಇವೆ. ಕೊತ್ತಳದ ಪೂರ್ವದಿಕ್ಕಿನಲ್ಲಿ ಇರುವ ಗುಡಿ ಯನ್ನು ವೀರಶೈವ ಶರಣ ವೀರಸಂಗಯ್ಯನ ಗುಡಿಯೆಂದು ಕರೆಯ ಲಾಗುತ್ತದೆ. ಫ್ರಾನ್ಸಿನ ಪ್ರವಾಸಿ ಥೀವನೋ ಈ ಕೋಟೆ ಯನ್ನು ವರ್ಣಿಸಿದ್ದಾನೆ (1667). ಇದಕ್ಕೆ ಏಳು ಪ್ರವೇಶ ದ್ವಾರಗಳಿದ್ದು, ಮುಖ್ಯ ಪ್ರವೇಶದ್ವಾರವು ನಗರಾಭಿಮುಖ ವಾಗಿದೆ. ಅವುಗಳಲ್ಲಿ ಮಂಡು ದರವಾಜಾ, ಕಲಮಡಗಿ ದರ ವಾಜಾ, ದೆಹಲಿ ದರವಾಜಾ, ಕಲ್ಯಾಣ ದರವಾಜಾ ಮತ್ತು ಕರ್ನಾಟಕ ದರವಾಜಾ ಎಂಬುವು ಕೆಲವು. ಚೌಬಾರಾ ಗೋಪುರವು 22 ಮೀ ಎತ್ತರವಾಗಿದ್ದು, ಇದರ ತುದಿಯಿಂದ ವಿಶಾಲವಾದ ಸಮತಟ್ಟು ಪ್ರದೇಶದ ಚಿತ್ರವತ್ತಾದ ದೃಶ್ಯವನ್ನು ಕಾಣಬಹುದು. ಮೇಲೆ ಹೋಗಲು ಸುತ್ತುವ 80 ಮೆಟ್ಟಿಲುಗಳನ್ನು ಹತ್ತಬೇಕು. ಕಾಲಿ ಮಸೀದಿಯು ಹಿಂದೂ-ಮುಸ್ಲಿಮ್ ಕಲಾ ನೈಪುಣ್ಯದ ಸಮನ್ವಯವನ್ನು ಪ್ರತಿನಿಧಿಸುತ್ತದೆ. ಜಖಿ ಕಿರ್ಮಾನಿಯ ಪ್ರವೇಶ ದ್ವಾರದ ಕಮಾನಿಗೆ ಹೊಂದಿಕೊಂಡಿರುವ ಒಂದು ಕಮಾನಿನ ಅಂಚಿನ ಉದ್ದಕ್ಕೂ ರುದ್ರಾಕ್ಷಿಯ ಪ್ರತಿಕೃತಿಗಳನ್ನು ಕೊರೆದಿರುವುದು ತುಂಬ ಗಮನಾರ್ಹ (ವಿವರಗಳಿಗಾಗಿ 11ನೇಯ ಅಧ್ಯಾಯದಲ್ಲಿ 'ಮಹಮ್ಮದೀಯ ವಾಸ್ತುಶಿಲ್ಪ' ನೋಡಿ). ಝರಣಿ ನರಸಿಂಹ ಗುಹಾಲಯವನ್ನು ಸುರಂಗದಂತೆ ಕೆತ್ತಲಾಗಿದೆ. ನರಸಿಂಹನ ವಿಗ್ರಹವನ್ನು ನೋಡಲು ದರ್ಶನಾಕಾಂಕ್ಷಿಗಳು ನಿತ್ಯ ಹರಿಯುತ್ತಿರುವ ಪ್ರವಾಹದಲ್ಲಿ ಹಾದು ಹೋಗಬೇಕಾಗುತ್ತದೆ. ಗುರುನಾನಕರು ಬಾಲ ಎಂಬ ಹಿಂದೂ ಹಾಗೂ ಮರ್ದನ ಎಂಬ ಮುಸ್ಲಿಮ ಅನುಯಾಯಿಗಳೊಡನೆ ಒಡಗೂಡಿ ಬಿದರೆಗೆ ಬಂದು ಒಂದು ಬಂಡೆಗಲ್ಲಿನ ಬುಡದಲ್ಲಿ ವಾಸವಾಗಿದ್ದರೆಂದು ನಂಬಿಕೆಯಿದೆ. ನಾನಕ ಝರಾ ಎಂಬಲ್ಲಿ ಒಂದು ಸುಂದರ ಗುರುದ್ವಾರವನ್ನು ನಿರ್ಮಿಸಲಾಗಿದೆ. ಬಿದರೆ ನಗರದ ಸುತ್ತುಮುತ್ತು ಅನೇಕ ಝರಿಗಳಿವೆ. ಪಾಪನಾಶಿನಿ ಎಂಬುದು ಇಂತಹ ಒಂದು ಪವಿತ್ರ ಝರಿಯಾಗಿದ್ದು ಅಲ್ಲಿ ಉದ್ಭವಲಿಂಗವನ್ನುಳ್ಳ ಒಂದು ಶಿವ ದೇವಾಲಯವಿದೆ. ಇಲ್ಲಿ 1968ರಲ್ಲಿ ಸ್ಥಾಪಿಸಲಾದ ಬಸವ ಮಂಟಪವು ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಐತಿಹಾಸಿಕ ಚಟುವಟಿಕೆಗಳ ಕೇಂದ್ರವಾಗಿದೆ. ರಾಜ್ಯದ ವಿಮಾನ ಹಾರಾಟ ತರಬೇತಿ ಶಾಲೆ ಮತ್ತು (ರಕ್ಷಣಾ ದಳಗಳ ಮೇಲ್ವಿಚಾರಣೆಯಲ್ಲಿ ರುವ) ವಾಯುದಳದ ಒಂದು ವಿಮಾನ ದಳಗಳು ಇಲ್ಲಿವೆ. ಈ ಸ್ಥಳವು 'ಬಿದ್ರಿ' ಎಂಬ ಹೆಸರಿನ ಕರ ಕುಶಲ ಕೈಗಾರಿಕೆಗಾಗಿ ಪ್ರಸಿದ್ಧವಿದೆ. ಅಷ್ಟೂರ್: ಬಿದರೆಯ ಹೊರ ವಲಯದಲ್ಲಿ ಅಷ್ಟೂರ್ ಎಂಬ ಹಳ್ಳಿಯಿದೆ. ಇಲ್ಲಿ ಬಹಮನಿ ಸುಲ್ತಾನ ರಾಗಿದ್ದ ಅಹ್ಮದ್‌ಷಾ ಅಲ್ ವಲಿಯ ಸ್ಮಾರಕ ಕಟ್ಟಡವಿದ್ದು, ಅದರ ಮೇಲೆ ಸ್ವಸ್ತಿಕ ಚಿಹ್ನೆಯನ್ನು ಅಲಂಕಾರಕ್ಕಾಗಿ ಕೆತ್ತ ಲಾಗಿದೆ. ಈ ಕಟ್ಟಡದ ಒಳಗಡೆ ಸುಂದರ ವರ್ಣಚಿತ್ರಗಳಿವೆ. ಇದಲ್ಲದೆ, ಅಹ್ಮದ್‌ಷಾನ ರಾಣಿಯ ಹಾಗೂ ಆತನ ಮಗನಾದ ಎರಡನೇಯ ಅಲ್ಲಾವುದ್ದೀನಷಾ ಸುಲ್ತಾನನ ಗೋರಿಗಳು ಇವೆ. ಇವಲ್ಲದೆ, ಈ ಊರಿನಲ್ಲಿ ಇನ್ನೂ ಅನೇಕ ಸ್ಮಾರಕ ಕಟ್ಟಡಗಳಿದ್ದು, ಅವುಗಳಲ್ಲಿ ಸುಲ್ತಾನ್ ಹುಮಾಯುನನ ಕರಿ ಕಲ್ಲಿನ ಕಟ್ಟಡ, ಮಲ್ಲಿಕ್-ಇ-ಜಹಾನ್ ಎಂಬ ಹೆಸರಿನ ಸುಲ್ತಾನ ಹುಮಾಯುನ್‌ಷಾನ ರಾಣಿಯ ಗೋರಿ, ಸುಲ್ತಾನ ನಿಜಾಮ್‌ಷಾ, ಮೂರನೇಯ ಮೊಹ್ಮದಷಾ, ಸುಲ್ತಾನ ವಲಿ-ಉಲ್ಲಾ, ಸುಲ್ತಾನ ಕಲಿಮ್-ಉಲ್ಲಾ, ಹಾಗೂ ಅಹ್ಮದಷಾನ ಗುರುವಾದ ಸಂತ ಖಲಿ-ಉಲ್ಲಾನ ಹದ್ರತ್ ಖಲಿದ್ ಉಲ್ಲಾ ಎಂಬ ನಾಲ್ಕಂತಸ್ತಿನ ಕಟ್ಟಡ ಮುಂತಾದ ಗೋರಿಗಳು ಪ್ರಮುಖವಾಗಿವೆ. ಗೋರ್ನಳ್ಳಿಯು ಬಿದರೆಯಿಂದ ಮೂರು ಕಿಮೀ ದೂರದಲ್ಲಿದ್ದು, ಅಲ್ಲಿ ಶಿರಚ್ಛೇದನಕ್ಕೆ ಒಳಗಾದ ಬಹಮನಿ ಅರಸರ ಪ್ರಧಾನ ಮಂತ್ರಿಯಾಗಿದ್ದ, ಮಹಮೂದ ಗವಾನನ ಗೋರಿಯಿದೆ. ಬಿದರೆಯಿಂದ 12 ಕಿಮೀ ದೂರದಲ್ಲಿರುವ ಜನವಾಡಾ ಎಂಬಲ್ಲಿ ಗುರುದ್ವಾರವಿದ್ದು, ಇದು ಯಾತ್ರಾಸ್ಥಳ ವಾಗಿದೆ. ಬಿದರೆಯಿಂದ ಎರಡು ಕಿಮೀ ದೂರದಲ್ಲಿರುವ, ಪ್ರಾಚೀನ ಕಾಲದಲ್ಲಿ ಒಂದು ಅಗ್ರಹಾರ ಸ್ಥಳವಾಗಿದ್ದ ಶಾಮರಾಜಪುರದಲ್ಲಿ ಚಾಳುಕ್ಯರ ಕಾಲದ ಅನಂತಶಯನ ಮಂದಿರ

ವಿದೆ. ಬಿದರೆಯಿಂದ ಹತ್ತು ಕಿಮೀ ದೂರದಲ್ಲಿರುವ ಯಡ್ಡಾಪುರದಲ್ಲಿ ಚರಪಟ್ಟಾಧ್ಯಕ್ಷ ಶಂಕರಲಿಂಗ ಶಿವಾಚಾರ್ಯ ಸಂಸ್ಥಾನ ಮಠವಿದೆ.

**ಬಿಳಿಗಿರಿರಂಗನಬೆಟ್ಟ :** (ಮೈಸೂರು ಜಿ; ಎಳಂದೂರು ತಾ; ಜನ: 1,052) ದಟ್ಟವಾಗಿ ಬೆಳೆದ ಮರಗಳಿಂದ ತುಂಬಿದ, ಬೆಟ್ಟದ ಪ್ರದೇಶವಾದ ಬಿಳಿಗಿರಿ ರಂಗನ ಬೆಟ್ಟವು ಮೈಸೂರಿನಿಂದ 120 ಕಿಮೀ ಹಾಗೂ ಬೆಂಗಳೂರಿನಿಂದ 247 ಕಿಮೀ ದೂರದಲ್ಲಿದೆ. ಈ ಬೆಟ್ಟವು ಸಮುದ್ರ ಮಟ್ಟದಿಂದ 5,091 ಅಡಿ ಎತ್ತರದಲ್ಲಿದ್ದು ದಕ್ಷಿಣೋತ್ತರವಾಗಿ 16 ಕಿಮೀ ನಷ್ಟು ಹರಡಿಕೊಂಡಿದೆ. ಬೆಟ್ಟದ ಮೇಲೆ ಬಿಳಿಗಿರಿ ರಂಗಸ್ವಾಮಿಯ ಗುಡಿಯಿದ್ದು, ಆದರಿಂದಾಗಿ ಈ ಬೆಟ್ಟಕ್ಕೆ ಈ ಹೆಸರು ಪ್ರಾಪ್ತವಾಗಿದೆ. ಶಾಸನಗಳಲ್ಲಿ ಈ ಬೆಟ್ಟವನ್ನು ಶ್ವೇತಾದ್ರಿಯೆಂದು ವರ್ಣಿಸಲಾಗಿದೆ. ಇಲ್ಲಿರುವ ದೇವಾಲಯ ದ್ರಾವಿಡ ಶೈಲಿಯ ದೊಡ್ಡ ಪುರಾತನ ಕಟ್ಟಡವಾಗಿದೆ. ಈ ದೇವಾಲಯದಲ್ಲಿನ ದೇವರು ವೆಂಕಟೇಶನಾದರೂ ಆತ ರಂಗನಾಥ ಎಂದು ಜನಪ್ರಿಯನಾಗಿದ್ದಾನೆ. ರಾಮಾನುಜ ಹಾಗೂ ಆಳ್ವಾರರ ಮೂರ್ತಿಗಳನ್ನು ಈ ಮಂದಿರದಲ್ಲಿ ಇರಿಸಲಾಗಿದೆ. ಕನಕದಾಸ ಗುಹೆ, ಬೃಂದಾವನ ಹಾಗೂ ಬೆಟ್ಟದ ಮೇಲಿನ ಇತರ ಗುಡಿಗಳು ಧಾರ್ಮಿಕ ಮಹತ್ವದ ಸ್ಥಳವಾಗಿವೆ. 15-16ನೇಯ ಶತಮಾನಗಳಲ್ಲಿ ಶಿವನಸಮುದ್ರದ ಗಂಗರಾಜರಿಂದ ನಿರ್ಮಿತವಾದುದೆಂದು ಹೇಳುವ ಕಂಚಿನಕೋಟೆ ಎಂಬ ಹಳೆಯ ಕೋಟೆಯ ಅವಶೇಷಗಳು ಅಲ್ಲಿವೆ. ಬೆಟ್ಟದ ಅಡಿಯಲ್ಲಿ ಹರಿಯುತ್ತಿರುವ ಹಳ್ಳವನ್ನು ಭಾರ್ಗವ ತೊರೆ ಎಂದು ಕರೆಯುತ್ತಾರೆ. ಈ ಬೆಟ್ಟದಲ್ಲಿರುವ ಅರಣ್ಯವು ಎತ್ತರವಾಗಿ ಬೆಳೆದ ಹುಲ್ಲು, ಮರಗಳಿಂದ ಹಾಗೂ ಆನೆ, ಹುಲಿ, ಚಿರತೆ, ಜಿಂಕೆ ಹಾಗೂ ಕರಡಿಗಳಿಂದ ತುಂಬಿದೆ. ಈ ಸ್ಥಳದಲ್ಲಿ ಸೋಲಿಗರೆಂಬ ಗುಡ್ಡಗಾಡು ಜನರು ವಾಸವಾಗಿದ್ದು, ಅವರು ಈ ಸ್ಥಳದ ದೇವತೆಯ ಬಗ್ಗೆ ಗಾಢವಾದ ಭಕ್ತಿಯನ್ನು ತಳೆದಿದ್ದಾರೆ. ಬೆಟ್ಟದ ಮೇಲಿರುವ ಸಮತಟ್ಟು ಪ್ರದೇಶದಲ್ಲಿ ತೋಟಗಾರಿಕೆ, ರೇಷ್ಮೆ ಹುಳು ಸಾಕಣೆಯ ತೋಟಗಳಲ್ಲದೆ, ಮೀನುಗಾರಿಕೆಯ ಕೆರೆಗಳೂ ಇದ್ದು, ಅವುಗಳಲ್ಲಿ ವಿಶಿಷ್ಟ ಜಾತಿಯ ಮೀನಿನ ತಳಿಗಳನ್ನು ಕಾಯ್ದಿಡಲಾಗಿದೆ. ಜೇನು ಸಾಕಣೆ, ಬುಟ್ಟಿ ಹೆಣೆಯುವ ಕೇಂದ್ರಗಳು ಪ್ರವಾಸಿಗರನ್ನು ಆಕರ್ಷಿಸುತ್ತವೆ. ಬೆಂಗಳೂರು, ಚಾಮರಾಜನಗರ, ಎಳಂದೂರುಗಳಿಂದ ನಿಯಮಿತವಾಗಿ ಓಡಾಡುವ ವಾಹನ ಸೌಕರ್ಯಗಳಿಂದ ಯಾರಾದರೂ ಈ ಸ್ಥಳವನ್ನು ಸುಲಭವಾಗಿ ಸೇರಬಹುದಾಗಿದೆ.

**ಬೀಳಗಿ :** (ವಿಜಾಪುರ ಜಿ; ತಾ. ಕೇ; ಜನ: 10,047). ಬೀಳಗಿಯು ವಿಜಾಪುರದಿಂದ 64 ಕಿಮೀ ದೂರದಲ್ಲಿದೆ. ಇಲ್ಲಿ ಅನೇಕ ಚಿಕ್ಕಪುಟ್ಟ ಗುಡಿಗಳು ಮತ್ತು ಮಸೀದಿಗಳಿವೆ. ಬೀಳಗಿ ಊರಿನ ಉತ್ತರ ದಿಕ್ಕಿನಲ್ಲಿ ಅರೆತ್ತಿನ ಬಾವಿ ಎಂಬ ಕುತೂಹಲ ಕೆರಳಿಸುವ ಕಲ್ಲಿನ ಕೊಳವಿದೆ. ಈ ಬಾವಿಯ ಒಳಗಡೆಯಿರುವ ಮಹಾದೇವನ ಗುಡಿಯಲ್ಲಿರುವ ಲಿಂಗವು ಭಿನ್ನವಾಗಿರುವುದರಿಂದ ಅಲ್ಲಿ ಪೂಜೆ ನಡೆಯುವುದಿಲ್ಲ. ಕನ್ನಡ, ಮರಾಠಿ ಹಾಗೂ ಪರ್ಶಿಯನ್ ಭಾಷೆಯಲ್ಲಿ ಕೆತ್ತಲಾಗಿರುವ ಹಾಗೂ ಬಾವಿಯ ಗೋಡೆಗಳಲ್ಲಿ ಅಳವಡಿಸಲಾಗಿರುವ ಶಿಲಾಶಾಸನಗಳಲ್ಲಿ ಕ್ರಿ. ಶ. 1708ರಲ್ಲಿ ವಿಸಾಜಿಪಂತ ಎಂಬಾತನು ಇದನ್ನು ನಿರ್ಮಿಸಿದನೆಂದು ಹೇಳಲಾಗಿದೆ. ಈ ಊರಿನಲ್ಲಿ ಹಸನ ಡೋಂಗ್ರಿಯ ದರ್ಗಾ ಒಂದಿದೆ. ಮೆಹಬೂಬ ಸುಭಾನಿ ಮತ್ತು ಮನ್ಸೂರ ಅಲಿ ಎಂಬ ಉಳಿದ ದರ್ಗಾಗಳು ಊರಲ್ಲಿವೆ. ಮೊಹರಂ ಹಬ್ಬವನ್ನು ಬಹು ದೊಡ್ಡ ಪ್ರಮಾಣದಲ್ಲಿ ಇಲ್ಲಿ ಆಚರಿಸಲಾಗುತ್ತದೆ. ಬೀಳಗಿಯ ದಕ್ಷಿಣಕ್ಕೆ ಒಂದು ಕಿಮೀ ಅಂತರದಲ್ಲಿ, ಗುಡ್ಡಗಳಿಂದ ಸುತ್ತುವರಿಯಲ್ಪಟ್ಟಿರುವ ಸಿದ್ಧೇಶ್ವರ ಮಂದಿರವಿದೆ. ಇದರಲ್ಲಿ ಪಾರ್ವತಿ ಹಾಗೂ ವೀರಭದ್ರ ದೇವರ ಸಣ್ಣ ಗುಡಿಗಳಿವೆ. ಈ ಮಂದಿರದ ಒಂದು ಮೆಟ್ಟಲಿನ ಮೇಲೆ 1695-96ರ ಒಂದು ಶಾಸನವಿದ್ದು, ಅದರಲ್ಲಿ ವಜೀರ ಹೈದರ ಖಾನನ ಅಧೀನ ಅಧಿಕಾರಿಯಾಗಿದ್ದ ಖಂಡೇರಾವ ತಿಮ್ಮಾಜಿ ಪೂರ್ವ ಪ್ರವೇಶ ದ್ವಾರದ ನಿರ್ಮಾತೃ ಎಂಬ ಉಲ್ಲೇಖವಿದೆ. ದೇವಾಲಯದ ಎದುರಿನಲ್ಲಿ, ಗುಡ್ಡದ ಮೇಲೆ 30 ಅಡಿ ಎತ್ತರವಾದ ದೀಪಸ್ತಂಭವಿದೆ. 1689ರಲ್ಲಿ ಖಂಡೇರಾವ ತಿಮ್ಮಾಜಿಯು ಎರಡು ಸ್ತಂಭಗಳನ್ನು ನಿಲ್ಲಿಸಿದನೆಂದು ಅದರ ಮೇಲೆ ಕೆತ್ತಲಾದ ಶಾಸನದಲ್ಲಿ ಉಲ್ಲೇಖವಿದೆ.

(ಉತ್ತರ ಕನ್ನಡ ಜಿಲ್ಲೆಯ ಬಿಳಗಿಗೆ ಸಂಬಂಧಿಸಿದಂತೆ ಸಿದ್ದಾಪುರದ ಅಡಿಯಲ್ಲಿ ನೋಡಿ).

**ಬೆಂಗಳೂರು :** (ಬೆಂಗಳೂರು ಜಿ ; ಉಪವಿಭಾಗ ; ತಾ. ಕೇ; ಜನ: 29,13,537) ಇದು ಕರ್ನಾಟಕದ ರಾಜಧಾನಿ. 1831ರಿಂದಲೂ ಅಂದಿನ ಮೈಸೂರು ಸಂಸ್ಥಾನದ ರಾಜಧಾನಿಯೂ ಆಗಿತ್ತು. ಈ ಹೆಸರನ್ನು ಕುರಿತಂತೆ ಒಂದು ಜನಪ್ರಿಯ ಕಥೆ ಪ್ರಚಲಿತದಲ್ಲಿದೆ. ಹೊಯ್ಸಳ ವೀರಬಲ್ಲಾಳನು ಬೇಟೆಗಾಗಿ ಇಲ್ಲಿಗೆ ಬಂದಾಗ, ಅವನು ಹಸಿದಿದ್ದಾಗ, ಬಡ್ಡಳು ಅಜ್ಜಿ ಬೆಂಡ ಕಾಳನ್ನು ಆತನಿಗೆ ನೀಡಿ ಸಂತೃಪ್ತಿಪಡಿಸಿದಳಂತೆ. ತಾನು ತಿಂದ ಬೆಂದಕಾಳಿನ ಹೆಸರನ್ನೇ ಆಧರಿಸಿ ಸ್ಥಳವನ್ನು 'ಬೆಂದಕಾಳೂರು' ಎಂದು ಕರೆದನಂತೆ. ಇದು ಕಾಲಕ್ರಮದಲ್ಲಿ ಬೆಂಗಳೂರು ಆಯಿತು. ಬೇಗೂರಲ್ಲಿ ದೊರೆತ ಒಂಬತ್ತನೇಯ ಶತಮಾನದ ಶಾಸನವೊಂದರಲ್ಲಿ ಇದನ್ನು 'ಬೆಂಗುಳೂರು' ಎಂದು ಉಲ್ಲೇಖಿಸಿದ್ದು ಆ ಕಾರಣದಿಂದ ಈ ಮೇಲಣ ಕತೆಯನ್ನು ಸುಳ್ಳಾಗಿಸುತ್ತದೆ. ಬೆಂಗ ಅಥವಾ ರಕ್ತಹೊನ್ನೆ ಮರದಿಂದ ಈ ಹೆಸರು ಬಂದಿರಬಹುದು. ಈಗಿನ ನಗರಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಜನ ವಾಸ್ತವ್ಯವುಳ್ಳ ಸ್ಥಳವಾಗಿತ್ತೆಂಬುದಕ್ಕೆ ಜಾಲಹಳ್ಳಿ ಮತ್ತು ರೇಸ್ ಕೋರ್ಸ್ ಪ್ರದೇಶದಲ್ಲಿ ದೊರೆತ ನವಶಿಲಾಯುಗೀನ ಅವಶೇಷಗಳೇ ಸಾಕ್ಷಿ. ಯಶವಂತಪುರ ಮತ್ತು ಹಿಂದೂಸ್ತಾನ ವಿಮಾನ ಕಾರ್ಖಾನೆಯ ಬಳಿ ರೋಮನ್ ನಾಣ್ಯಗಳು ಪತ್ತೆ

ಯಾಗಿವೆ. ಇದರಿಂದ ಕ್ರಿಸ್ತಶಕಾರಂಭದಲ್ಲೂ ಇಲ್ಲಿ ಜನಜೀವನ ಮುಂದುವರಿದಿತ್ತಲ್ಲದೆ, ಅಗಲೆ ಇದೊಂದು ದೂರ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನು ಪಡೆದ ಸ್ಥಳವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ದೊಮ್ಮಲೂರು ಮತ್ತು ಅಲಸೂರುಗಳಲ್ಲಿರುವ ಚೋಳ ವಾಸ್ತುಕೃತಿಗಳಿಂದ ಇದು 10ನೇಯ ಶತಮಾನದಿಂದಾಗಲೇ ಸಮೃದ್ಧವಾಗತೊಡಗಿದ ಪಟ್ಟಣವಾಗಿತ್ತೆಂಬುದೂ ಮನದಟ್ಟಾಗುತ್ತದೆ. ಕ್ರಿ.ಶ. 1537ರ ಸುಮಾರಿಗೆ ಯಲಹಂಕ ನಾಡ ಪ್ರಭುವಾಗಿದ್ದ ಮೊದಲನೇಯ ಕೆಂಪೇಗೌಡನು ತನ್ನ ಪ್ರಭುಗಳಾದ ವಿಜಯನಗರ ಅರಸರ ಅನುಮತಿ ಪಡೆದು ಇಲ್ಲೊಂದು ಮಣ್ಣಿನ ಕೋಟೆ ಕಟ್ಟಿಸಿದ. ಅನಂತರ ಒಂದು ಹೊಸ ನಗರವನ್ನೇ ನಿರ್ಮಾಣ ಮಾಡಿ ತನ್ನ ರಾಜಧಾನಿಯನ್ನು ಯಲಹಂಕದಿಂದ ಬೆಂಗಳೂರಿಗೆ ಸ್ಥಳಾಂತರಿಸಿದ. ಕೆಂಪೇಗೌಡನು ಈಗಿನ ಬಸವನಗುಡಿ ಪ್ರದೇಶದತ್ತ ಹೆಚ್ಚಿನ ಆಸ್ಥೆ ವಹಿಸಿದ್ದ. ಗವಿ ಗಂಗಾಧರೇಶ್ವರ ದೇವಾಲಯ, ಧರ್ಮಾಂಬುಧಿಕೆರೆ ಪ್ರದೇಶ (ಈಗಿನ ಬಸ್ ನಿಲ್ದಾಣ), ಕೆಂಪಾಂಬುಧಿ ಕೆರೆಗಳು ಈತನ ವಂಶಸ್ಥರ ಕಾಲದವೆಂದು ಹೇಳಬಹುದು. 1638ರಲ್ಲಿ, ವಿಜಯನಗರ ಸಾಮ್ರಾಜ್ಯ ಪತನವಾದ ಬಳಿಕ, ರಣದುಲ್ಲಾ ಖಾನ ಮತ್ತು ಷಾಜಿಯ ನೇತೃತ್ವದ ವಿಜಾಪುರದ ಸೈನ್ಯವು ಬೆಂಗಳೂರು ಕೋಟೆಯನ್ನು ಮುತ್ತಿಗೆಹಾಕಿ ವಶಪಡಿಸಿಕೊಂಡು ಬೆಂಗಳೂರಿನ ಈ ಸಾಮಂತರಾಜನನ್ನು ಮಾಗಡಿಗೆ ಕಳಿಸಿತು. ಸಿರಾ, ತುಮಕೂರು, ಕೋಲಾರ, ದೊಡ್ಡಬಳ್ಳಾಪುರ ಮುಂತಾದವನ್ನೊಳಗೊಂಡಂತೆ ಬೆಂಗಳೂರನ್ನು ಷಾಜಿಗೆ ಜಾಗೀರಾಗಿ ದತ್ತಿ ನೀಡಲಾಯಿತು. ಷಾಜಿಯ ಕಾಲದ ಬೆಂಗಳೂರು ನಗರ ವರ್ಣನೆಯನ್ನು ಸಂಸ್ಕೃತ ಚಂಪೂಕೃತಿಯಾದ 'ರಾಧಾಮಾಧವ ವಿಲಾಸ'ದಲ್ಲಿ ನೋಡಬಹುದು. ಈತನ ಮಗನಾದ ಶಿವಾಜಿಯು ತನ್ನ ಬಾಲ್ಯದ ಕೆಲಕಾಲವನ್ನು ಬೆಂಗಳೂರಿನಲ್ಲಿಯೇ ಕಳೆದನು. ಈತನ ಎರಡನೇಯ ಮದುವೆಯೂ ಇಲ್ಲಿಯೇ ನೆರವೇರಿತು. ಷಾಜಿಯ ಮತ್ತೊಬ್ಬ ಮಗನಾದ ವೆಂಕೋಜಿಯು 1675ರಲ್ಲಿ ತಂಜಾವೂರು ಪ್ರಾಂತ್ಯವನ್ನು ವಶಪಡಿಸಿಕೊಂಡ ಮೇಲೆ ತಂಜಾವೂರನ್ನೇ ತನ್ನ ರಾಜಕೀಯ ಕೇಂದ್ರವನ್ನಾಗಿ ಇಟ್ಟುಕೊಂಡನು. ಮಲ್ಲೇಶ್ವರಂ ದೇವಾಲಯದ ಬಳಿಯಿರುವ ಬಂಡೆಯ ಮೇಲೆ ವೆಂಕೋಜಿಯ ಒಂದು ಶಿಲಾಶಾಸನವಿದೆ. 1687ರಲ್ಲಿ ಮುಘಲರು ಈ ನಗರವನ್ನು ವಶಪಡಿಸಿಕೊಂಡು ಅವರು ಮೈಸೂರಿನ ಚಿಕ್ಕದೇವರಾಜ ಒಡೆಯರಿಗೆ ಭೋಗ್ಯವಾಗಿ ('ಇಜಾರಾ') ಇದನ್ನು ನೀಡಿದರು. ಕೊನೆಗೆ ಈ ನಗರವು ಮೈಸೂರು ಒಡೆಯರ ಒಡೆತನದಲ್ಲೇ ಮುಂದುವರಿಯಿತು. ಚಿಕ್ಕದೇವರಾಯನು ಇಲ್ಲಿಯ ಕೋಟೆ ವೆಂಕಟರಮಣ ದೇಗುಲವನ್ನು ನಿರ್ಮಿಸಿದನು. 1758ರಲ್ಲಿ ಈ ನಗರವನ್ನು ಹೈದರ್‌ಅಲಿಗೆ ಜಾಗೀರಾಗಿ ನೀಡಲಾಯಿತು. 1791ರಲ್ಲಿ ಬ್ರಿಟಿಷರ ಸೈನ್ಯವು ಕಾರ್ನವಾಲಿಸನ ಮುಂದಾಳುತ್ವದಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡಿತು. ಕೋಟೆಯೊಳಗಿನ ಪ್ರದೇಶದಲ್ಲಿ ಟಿಪ್ಪುಸುಲ್ತಾನನು ಹೈದರ್‌ಅಲಿಯು ಆಗಲೇ ಕಟ್ಟಲು ಆರಂಭಿಸಿದ್ದ ಅರಮನೆ ಕಟ್ಟಡವನ್ನು ಪೂರ್ಣಗೊಳಿಸಿದ್ದನು. 1799ರಲ್ಲಿ ಟಿಪ್ಪುವಿನ ಮರಣಾನಂತರ, ಬೆಂಗಳೂರು ಪುನಃ ಮೈಸೂರು ರಾಜವಂಶದ ಆಡಳಿತಕ್ಕೆ ಬಂತು. 1809ರಲ್ಲಿ ಅಲಸೂರಿನಲ್ಲಿ ಬ್ರಿಟಿಷರ ಸೈನ್ಯದ ತುಕಡಿಗಳು ತಂಗಿದ್ದವು. ಇದೇ ಮುಂದಿನ ಶಾಶ್ವತವಾದ ದಂಡು ಪ್ರದೇಶಕ್ಕೆ ನಾಂದಿಯಾಯಿತು. ಶೀಘ್ರದಲ್ಲೇ ಆ ಪ್ರದೇಶವು ಅಭಿವೃದ್ಧಿಹೊಂದಿ ದಂಡು (ಕೆಂಟೋನ್ಮೆಂಟ್) ಪ್ರದೇಶವೆಂದು ಜನಪ್ರಿಯವಾಯಿತು. ಮೈಸೂರು ಅರಸರು ಇದರ ಅಧಿಕಾರವನ್ನು ವಿಧ್ಯುಕ್ತವಾಗಿ ಬ್ರಿಟಿಷ್ ಸರ್ಕಾರಕ್ಕೆ ಒಪ್ಪಿಸಿದ್ದರು. ನಂತರ ಅದು ಒಂದು ಪುರಸಭಾ ಪಟ್ಟಣವಾಯಿತು. ಕಮಿಶನರ ಆಳ್ವಿಕೆಯ ಕಾಲಕ್ಕೆ ಬೆಂಗಳೂರು ಸಂಸ್ಥಾನದ ಆಡಳಿತ ಕೇಂದ್ರದ ಮಟ್ಟವನ್ನು ಪಡೆಯಿತು. 1831ರಲ್ಲಿ ಸೆಕ್ರೆಟೇರಿಯಟನ್ನು ಟಿಪ್ಪುವಿನ ಅರಮನೆಯಲ್ಲೇ ಆರಂಭಿಸಲಾಯಿತು. ಅನಂತರ 1867ರಲ್ಲಿ, ಈಗಿನ ಹೈಕೋರ್ಟಾಗಿರುವ, ಅಂದಿನ ಅಠಾರಾ ಕಚೇರಿ ಎಂಬ ಹೊಸ ಕಟ್ಟಡಕ್ಕೆ ವರ್ಗಾಯಿಸಲಾಯಿತು. 1881ರಲ್ಲಿ ರಾಜ್ಯದ ಆಡಳಿತವನ್ನು ಪುನಃ ಮೈಸೂರು ಅರಸುಮನೆತನಕ್ಕೆ ವಹಿಸಿಕೊಡಲಾಗಿದ್ದರೂ, ಬ್ರಿಟಿಷರು ದಂಡು ಪ್ರದೇಶದಲ್ಲಿ 1947ರ ವರೆಗೆ ತಮ್ಮ ಆಳ್ವಿಕೆಯನ್ನು ಮುಂದುವರಿಸಿದರು. ಬೆಂಗಳೂರು ಪುರಸಭೆಯನ್ನು 1862ರಲ್ಲಿ ರಚಿಸಲಾಯಿತು. 1949ರಲ್ಲಿ ದಂಡು ಪ್ರದೇಶದ ಪುರಸಭೆ ಮತ್ತು ಬೆಂಗಳೂರು ಪುರಸಭೆಗಳನ್ನು ಒಂದು ಮಾಡಿ ಬೆಂಗಳೂರು ನಗರ ಕಾರ್ಪೊರೇಷನನ್ನು ರೂಪಿಸಲಾಯಿತು.

ಬೆಂಗಳೂರು ರೆವಿನ್ಯೂ ವಿಭಾಗೀಯ, ಜಿಲ್ಲೆಯ, ಉಪ ವಿಭಾಗೀಯ ಹಾಗೂ ಉತ್ತರ ಮತ್ತು ದಕ್ಷಿಣ ತಾಲೂಕು ಕೇಂದ್ರಗಳಿಗೂ ಈ ಒಂದೇ ಹೆಸರಿದೆ. ರಾಜ್ಯದಲ್ಲೇ ಇದು ಅತ್ಯಂತ ಬೃಹತ್ ವಾಣಿಜ್ಯ ಮತ್ತು ಔದ್ಯಮಿಕ ಕೇಂದ್ರ. ರಾಜ್ಯದ ರಾಜಧಾನಿಯಾಗಿ ಉನ್ನತ ಕಚೇರಿಯಾದ ರಾಜಭವನ, ವಿಧಾನ ಪರಿಷತ್ ಮತ್ತು ವಿಧಾನ ಸಭೆ, ಅವುಗಳಿಗೆ ಸಂಬಂಧಿಸಿದ ವಿವಿಧ ಕಚೇರಿಗಳು, ಹೈಕೋರ್ಟ್, ಲೋಕಸೇವಾ ಆಯೋಗ, ಕರ್ನಾಟಕ ವಿದ್ಯುತ್ ಮಂಡಳಿ, ಇತ್ಯಾದಿಗಳೆಲ್ಲ ಬೆಂಗಳೂರಲ್ಲಿ ಸ್ಥಾಪಿತವಾಗಿವೆ. ಕೇಂದ್ರ ಸರ್ಕಾರದ ಕಚೇರಿಗಳಲ್ಲಿ ಅಕೌಂಟೆಂಟ್ ಜನರಲ್ ವಿಭಾಗೀಯ ಕಚೇರಿ, ದಕ್ಷಿಣ ರೈಲ್ವೆ ಪ್ರಾದೇಶಿಕ ಕಚೇರಿ, ಪೋಸ್ಟ್ ಮಾಸ್ಟರ್ ಜನರಲ್, ಸರ್ವೇ ಆಫ್ ಇಂಡಿಯಾ ವಿಭಾಗ, ಕಾಫಿ ಬೋರ್ಡ್, ರೇಷ್ಮೆ ಮಂಡಳಿ, ವಿವಿಧ ರಕ್ಷಣಾ ವಿಭಾಗಗಳಲ್ಲಿ ಭಾರತೀಯ ಸೈನ್ಯದ ಉಪವಿಭಾಗ (ಸಬ್ ಏರಿಯಾ), ಟ್ರೈನಿಂಗ್ ಕಮಾಂಡ್ ಆಫ್ ಇಂಡಿಯನ್ ಏರ್‌ಫೋರ್ಸ್, ಎಲ್. ಆರ್. ಡಿ. ಇ., ಇಸ್ರೋದ ಪ್ರಧಾನ ಘಟಕ, ಆರ್ಮಿ ರಿಕ್ರೂಟ್‌ಮೆಂಟ್ ಸೆಂಟರ್, ಇತ್ಯಾದಿಗಳಿವೆ. ಬೆಂಗಳೂರನ್ನು 'ನಿವೃತ್ತರ ಸ್ವರ್ಗ' ಎಂದೂ ಕರೆಯಲಾಗುತ್ತಿದೆ.

ಧಾರ್ಮಿಕ ಸ್ಥಳಗಳು : ಕೋಟೆಯೊಳಗಿರುವ ವೆಂಕಟ

ರಮಣ ಸ್ವಾಮಿ ದೇವಾಲಯವನ್ನು, ಚಿಕ್ಕದೇವರಾಜ ಒಡೆಯರು ವಿಜಯನಗರ ಶೈಲಿಯಲ್ಲಿ ನಿರ್ಮಿಸಿದರು. ಗವಿಪುರದಲ್ಲಿರುವ ಗವಿ ಗಂಗಾಧರೇಶ್ವರಾಲಯವು ಒಂದು ಗುಹೆಯಲ್ಲಿದೆ. ಇಲ್ಲಿ ಮುಖ್ಯ ಗುಡಿಯಲ್ಲಿ ಶಿವಲಿಂಗವಿದೆ. ಹಾಗೂ ಪಶ್ಚಿಮ ದಿಕ್ಕಿಗೆ ಪಾರ್ವತಿಯ ಗುಡಿಯಿದೆ. ಈ ದೇವಾಲಯದ ಎದುರಲ್ಲಿರುವ ಕುತೂಹಲಕಾರಿ ವಸ್ತುಗಳಲ್ಲಿ ಚಕ್ರ, ತ್ರಿಶೂಲ, ಡಮರುಗಳನ್ನು ಹೊತ್ತ ನಾಲ್ಕು ಏಕ ಶಿಲಾಸ್ತಂಭಗಳು ಗಮನಾರ್ಹವಾಗಿವೆ. ಬಸವನಗುಡಿಯಲ್ಲಿ ಮಲಗಿರುವ ಒಂದು ಬೃಹತ್ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಪೀಠದ ಮೇಲಿರುವ ಪುಟ್ಟ ಶಾಸನ ತಿಳಿಸುವಂತೆ ನಂದಿ ಪಾದದಿಂದ ವೃಷಭಾವತೀ ನದಿಯು ಉಗಮಿಸುತ್ತದೆ. ಪ್ರತೀವರ್ಷ ಕಾರ್ತಿಕ ಮಾಸದಲ್ಲಿ ಇಲ್ಲೊಂದು ಕಡಲೆಕಾಯಿ ಪರಿಷೆ ಜರುಗುತ್ತದೆ. ಈ ಗುಡಿಯು ಕೆಂಪೇಗೌಡರ ವಂಶಸ್ಥರದೆಂದು ಹೇಳಲಾಗಿದೆ. ಇದರ ಬಳಿ ಶಿವ, ಆಂಜನೇಯ, ಗಣಪತಿ ಗುಡಿಗಳಿವೆ. ಗಣಪತಿ ಗುಡಿಯಲ್ಲಿ ದೊಡ್ಡ ಗಣೇಶನ ಪ್ರತಿಮೆಯಿದೆ. ಅಲಸೂರಿನ ಸೋಮೇಶ್ವರ ದೇವಾಲಯವು ಒಂದು ಚೋಳ ವಾಸ್ತುಕೃತಿಯಾಗಿದ್ದು ಅದನ್ನು ಕೆಂಪೇಗೌಡನ ಕುಟುಂಬದವರು ಜೀರ್ಣೋದ್ಧಾರ ಮಾಡಿ ವಿಸ್ತರಿಸಿದರು. ಮುಖ್ಯ ಗುಡಿಯಲ್ಲಿ ಸೋಮೇಶ್ವರ ಲಿಂಗವಿದೆ; ಇನ್ನೊಂದು ಗುಡಿಯಲ್ಲಿ ಪಾರ್ವತಿ ವಿಗ್ರಹವಿದೆ. ಇದೊಂದು ಸುಂದರವಾದ ವಾಸ್ತುಶಿಲ್ಪ ಕೃತಿಯಾಗಿದೆ. ಹನುಮಂತನಗರದ ಹನುಮಂತ ರಾಯನ ಗುಡ್ಡದ ಮೇಲೆ ಆಧುನಿಕ ದೇವಾಲಯವನ್ನು ನಿರ್ಮಿಸಲಾಗಿದೆ. ಇದರ ಮೇಲೆ ಸುಮಾರು 30 ಅಡಿ ಎತ್ತರದ ರಾಮ-ಹನುಮರ ವಿಗ್ರಹಗಳನ್ನು ಸಿಮೆಂಟ್ ಕಾಂಕ್ರೀಟಿನಲ್ಲಿ ನಿರ್ಮಿಸಲಾಗಿದೆ. ಪರಸ್ಪರ ಆಲಿಂಗನ ಭಂಗಿಯಲ್ಲಿ ನಿಂತಿರುವ ಈ ಪ್ರತಿಮೆಗಳು ಭವ್ಯವಾಗಿವೆ. ದ್ರಾವಿಡ ಶೈಲಿಯಲ್ಲಿ ರಚಿತವಾಗಿರುವ ಧರ್ಮರಾಯನ ಗುಡಿಯಲ್ಲಿ ಗರ್ಭಗೃಹ ಮತ್ತು ಮುಖಮಂಟಪಗಳಿವೆ. ಇಲ್ಲಿರುವ ಶಕ್ತಿಪೀಠದ ಹಿಂಗಡೆ ಧರ್ಮರಾಯ, ಕೃಷ್ಣ ಮತ್ತಿತರ ವಿಗ್ರಹಗಳಿವೆ. ಈ ದೇಗುಲದ ಪ್ರಾಂಗಣದಲ್ಲಿ ಗಣಪತಿ ಮತ್ತು ಮುತ್ಯಾಲಮ್ಮನ ಗುಡಿಗಳಿವೆ. ಇದರ ಆಧುನಿಕ ಶಿಖರ ಸುಂದರವಾಗಿದೆ. ಚೈತ್ರ ಪೌರ್ಣಿಮೆಯಂದು ಪ್ರತೀವರ್ಷ ಇಲ್ಲಿ ಕರಗ ಮಹೋತ್ಸವ ಜರುಗುತ್ತದೆ. ಕಾಡು ಮಲ್ಲೇಶ್ವರ ದೇವಾಲಯ ಒಂದು ಶಿಲಾ ನಿರ್ಮಿತಿಯಾಗಿದ್ದು ಇಲ್ಲಿ 1669ರಲ್ಲಿ ಷಾಜಿಯ ಮಗ ವೆಂಕೋಜಿಯು ಈ ದೇಗುಲಕ್ಕೆ ನೀಡಿದ ದಾನವನ್ನು ಉಲ್ಲೇಖಿಸಿರುವ ಒಂದು ಶಿಲಾ ಶಾಸನವನ್ನೂ ನೋಡಬಹುದಾಗಿದೆ. ಜಯನಗರದ ಸಣ್ಣ ಗುಡ್ಡದ ಮೇಲೆ ಆಂಜನೇಯನ ಆಧುನಿಕ ಗುಡಿಯಿದೆ. ಇದು 'ರಾಗಿ ಗುಡ್ಡದ ಆಂಜನೇಯ' ಎಂದು ಜನಪ್ರಿಯವಾಗಿದೆ. ಈ ಗುಡಿಯ ಸುತ್ತಮುತ್ತಲಿನ ವಾತಾವರಣ ಪ್ರಶಾಂತವಾಗಿದೆ. ಹನುಮಂತನಗರದ ನರಹರಿರಾಯನ ಗುಡ್ಡದ ಮೇಲೆ ಕುಮಾರ ಸ್ವಾಮಿ ಗುಡಿಯಿದೆ. ಮಲ್ಲೇಶ್ವರಂನಲ್ಲಿ ಕೆಲವು ದಶಕಗಳ ಹಿಂದೆ ಗಂಗಮ್ಮನ ಗುಡಿಯನ್ನು ಕಟ್ಟಲಾಗಿದ್ದು, ವರ್ಷಂಪ್ರತಿ ಧರ್ಮರಾಯ ಕರಗವಾದ ಮೇಲೆ (20 ದಿನಗಳ ನಂತರ) ಇಲ್ಲೊಂದು ಕರಗ ಜರುಗುತ್ತದೆ. ಬೆಂಗಳೂರು ನಗರದ ಪೂರ್ವಕ್ಕಿರುವ ಕೋರಮಂಗಲ ಬಡಾವಣೆಯಲ್ಲಿ ಒಂದು ಪ್ರಾಚೀನ ಲಕ್ಷ್ಮೀದೇವಿ ಗುಡಿಯಿದೆ. ಸ್ಥಳೀಯ ಐತಿಹ್ಯದ ಪ್ರಕಾರ ಕೆಂಪೇಗೌಡ ಬೆಂಗಳೂರು ಕೋಟೆ ನಿರ್ಮಾಣ ಕಾರ್ಯದಲ್ಲಿ ತೊಡಗಿದಾಗ ಅದು ಹಲವು ಬಾರಿ ಉರುಳಿ ಬೀಳತೊಡಗಿತು. ನರಬಲಿಯ ವಿಚಾರವನ್ನು ಆಗ ಯೋಚಿಸಲಾಯಿತು. ಆಗ ಕೆಂಪೇಗೌಡನ ಸೊಸೆಯೇ ಸ್ವತಃ ಆತ್ಮಾರ್ಪಣೆಯನ್ನು ಮಾಡಿಕೊಂಡಳು. ಆ ಸೊಸೆ ಲಕ್ಷ್ಮೀದೇವಿಯ ಸ್ಮರಣಾರ್ಥ ಕೆಂಪೇಗೌಡ ಇಲ್ಲಿ ಗುಡಿಯನ್ನೂ ಕಟ್ಟಿಸಿದನಂತೆ. ಇದರ ಸಮೀಪದಲ್ಲಿ ಅವಳ ಸಮಾಧಿ ಮಂಟಪವಿದೆ. ಮಹಾಲಕ್ಷ್ಮೀ ಲೇ ಔಟ್‌ನಲ್ಲಿರುವ ಗುಡ್ಡದ ಮೇಲೆ ಸುಮಾರು 22 ಅಡಿ ಎತ್ತರವಿರುವ ಹನುಮಂತನ ಏಕಶಿಲಾ ವಿಗ್ರಹವನ್ನು ಆಧುನಿಕ ದೇಗುಲದಲ್ಲಿ ನಿಲ್ಲಿಸಲಾಗಿದೆ. ಈ ದೇವಾಲಯ ಮತ್ತು ಗೋಪುರದ ಕೆಲಸ ನಡೆಯುತ್ತಿದೆ. ಬಳ್ಳಾಪುರದ ಪೇಟೆಯಲ್ಲಿರುವ ರಂಗನಾಥಸ್ವಾಮಿ ದೇಗುಲ ಪ್ರಾಚೀನ ವಾಸ್ತುಕೃತಿಯಾಗಿದೆ. 1628ರ ಶಿಲಾಶಾಸನವನ್ನು ತೆಲುಗು ಭಾಷೆಯಲ್ಲಿ ಕಂಡರಿಸಿದ್ದು ಅದರ ಪ್ರಕಾರ ಬೆಂಗಳೂರು ಮತ್ತು ಇತರ ಸ್ಥಳದ ಮಹಾಜನರು ಸೇರಿ ಈ ದೇಗುಲದ ನಿತ್ಯ ಪೂಜೆಗೆಂದು ದಾನಗಳನ್ನು ನೀಡಿದರು. ಬೆಂಗಳೂರು ನಗರ ಮಧ್ಯೆಯಿರುವ ಅಣ್ಣಮ್ಮಗುಡಿ ಪ್ರಸಿದ್ಧವಾಗಿದೆ. ಗರ್ಭಗೃಹದಲ್ಲಿ ಏಳು ದೇವತೆಗಳ ವಿಗ್ರಹಗಳಿವೆ. ಈ ಗುಡಿಯೆದುರು ಇರುವ ನಾಗರಕಲ್ಲಿಗೆ ಮೊಸರಿನ, ಮಜ್ಜಿಗೆಯ ಅಭಿಷೇಕ ನಡೆಯುತ್ತಿರುತ್ತದೆ. ಸಜ್ಜನ್‌ರಾವ್ ವೃತ್ತದ ಬಳಿಯ ಒಂದು ಆಧುನಿಕ ಸುಬ್ರಹ್ಮಣ್ಯ ಮಂದಿರ ಖ್ಯಾತವಾಗಿದೆ. ಮಸೀದಿಗಳು ಮತ್ತು ದರ್ಗಾಗಳು : ಇವುಗಳಲ್ಲಿ ತಾರಾ ಮಂಡಲ ಸಂಗೀನ್ ಜಾಮಿಯಾ ಮಸೀದಿ ನಗರದಲ್ಲೇ ಪ್ರಾಚೀನವಾದುದಾಗಿದ್ದು ಇದನ್ನು ಮುಘಲ್ ಕಿಲ್ಲೇದಾರನು ನಿರ್ಮಿಸಿದ. ಓಲ್ಡ್ ಪುವರ್ ಹೌಸ್ ರಸ್ತೆಯಲ್ಲಿರುವ ಜಾಮಿ ಮಸೀದಿಯೂ ದಂಡು ಪ್ರದೇಶದ ಪ್ರಾಚೀನ ಮಸೀದಿಯಾಗಿದೆ. ಇದರ ನಿರ್ಮಾಣದಲ್ಲಿ ಟಿಪ್ಪು ಸುಲ್ತಾನನ ಅರಮನೆಯ ಭಗ್ನಾವಶೇಷದ ಕೆಲ ಭಾಗಗಳನ್ನು ಬಳಸಿಕೊಳ್ಳಲಾಗಿದೆ. 1761ರಲ್ಲಿ ನಿರ್ಮಿಸಿದ ಕುಂಬಾರಪೇಟೆಯಲ್ಲಿರುವ ಇಬ್ರಾಹಿಂಷಾ ಸಾಹೇಬ್ ಮಸೀದಿಯನ್ನೂ 1971ರಲ್ಲಿ ಜೀರ್ಣೋದ್ಧಾರ ಮಾಡಲಾಯಿತು. ಸಿಟಿ ಮಾರ್ಕೆಟ್‌ನಲ್ಲಿರುವ ಜಾಮಿಯಾ ಮಸೀದಿಯು ನಗರದಲ್ಲೇ ಅತ್ಯಂತ ಬೃಹತ್ ಮಸೀದಿಯಾಗಿದೆ. ಇದರ ಎದುರಿಗೆ ಇರುವ ಎರಡು ಮಿನಾರ್‌ಗಳು ತುಂಬ ಸೊಗಸಾಗಿವೆ. ಅರಳೇಪೇಟೆಯಲ್ಲಿರುವ ಹಜರತ್ ತವಕ್ಕಲ್ ಮಸ್ತಾನ್ ದರ್ಗಾವನ್ನು ತುಂಬ ಗೌರವದಿಂದ ಆರಾಧಿಸುತ್ತಾರೆ.

**ಚರ್ಚುಗಳು:** ಕೋಟೆ ಪ್ರದೇಶದಲ್ಲಿರುವ 1830ರ ಬಿಷಪ್ ಟರ್ನರ್ಸ್ ಚರ್ಚ್ ಪ್ರಾಚೀನವಾದ ಐರೋಪ್ಯ ಕಟ್ಟಡವಾಗಿತ್ತು.

ಇದನ್ನು ಕೆಡವಿ ಚಾಮರಾಜಪೇಟೆ ಸಂಸ್ಕೃತ ಕಾಲೇಜು ಬಳಿ ಮತ್ತೆ ಕಟ್ಟಲಾಯಿತು. ತರಗುಪೇಟೆಯ ಬಳಿಯಿರುವ ವಿಶಾಲವಾದ ಸೇಂಟ್ ಜೋಸೆಫ್ಸ್ ಚರ್ಚನ್ನು (ರೋಮನ್ ಕ್ಯಾಥೋಲಿಕ್ ಚರ್ಚ್) ಶಿಲುಬೆಯಾಕಾರದಲ್ಲಿ ಕಟ್ಟಲಾಗಿದೆ. 1904ರಲ್ಲಿ ಪೂರ್ತಿಗೊಳಿಸಿದ ಹಡ್ಸನ್ ಸ್ಮಾರಕ ಚರ್ಚನ್ನು ಕೋಟೆ ಮತ್ತು ಇತರೆಡೆಗಳಲ್ಲಿರುವ ಕ್ರೈಸ್ತರು ಸೇರಿ ಸುಂದರವಾಗಿ ಕಟ್ಟಿದ್ದಾರೆ. ಸೇಂಟ್ ಮೇರಿಸ್, ಸೇಂಟ್ ಫ್ರಾನ್ಸಿಸ್ ಜೇವಿಯರ್ಸ್, ಸೇಂಟ್ ಮಾರ್ಕ್ಸ್, ಸೇಂಟ್ ಆ್ಯಂಡ್ರೂಸ್, ಹೋಲಿ ಟ್ರಿನಿಟಿ, ಸೇಕ್ರೆಡ್ ಹಾರ್ಟ್, ಸೇಂಟ್ ಜಾನ್ಸ್, ಮೆಥೋಡಿಸ್ಟ್ಸ ಮೆಮೋರಿಯಲ್, ಆಲ್ ಸೇಂಟ್ಸ್ ಚರ್ಚುಗಳು 19ನೇಯ ಶತಮಾನದ ಇತರ ಚರ್ಚುಗಳಾಗಿವೆ. ಇವುಗಳಲ್ಲಿ ಅನೇಕವನ್ನು, ಇತ್ತೀಚೆಗೆ ನವೀಕರಣಗೊಳಿಸಲಾಗಿದೆ. ಫ್ರೆಂಚ್ ಮಿಶನರಿಯಾಗಿದ್ದ ಅಬ್ಬೆ ದುಬುವಾ ಎಂಬವನು ದಂಡು (ಶಿವಾಜಿನಗರ) ಪ್ರದೇಶದಲ್ಲಿನ ಸೇಂಟ್ ಮೇರೀಸ್ ಚರ್ಚನ್ನು ಕಟ್ಟಿದ್ದನೆಂದು ಹೇಳಲಾಗಿದೆ. ಈಗ ಅದನ್ನು ನವೀಕರಿಸಿದೆ. ಇತರ ಧಾರ್ಮಿಕ ಸ್ಥಳಗಳು : ಬೆಂಗಳೂರು-ಬಳ್ಳಾರಿ ರಸ್ತೆಯಲ್ಲಿ, ಮಿಲಿಟರಿ ಡೇರಿ ಫಾರಂ ಬಳಿ ಪಾರ್ಸಿ ಜನಾಂಗದವರ 'ಟವರ್ ಆಫ್ ಸೈಲೆನ್ಸ್' ಇದೆ. ಇದರಲ್ಲಿ ಪಾರ್ಸಿಯೇತರ ಜನರಿಗೆ ಪ್ರವೇಶವಿಲ್ಲ. ಅಲಸೂರಿನಲ್ಲಿ ಒಂದು ಸಿಖ ಜನಾಂಗದವರ ದೊಡ್ಡ ಗುರುದ್ವಾರವಿದೆ. ಗಾಂಧಿನಗರದಲ್ಲಿ ಒಂದು ಸುಂದರವಾದ ಪಾರ್ಶ್ವನಾಥ ಸ್ವಾಮಿಯ ಅಮೃತಶಿಲೆಯ ಜಿನಮಂದಿರವಿದೆ. ಇಲ್ಲಿ ಶಾಂತಮುದ್ರೆಯಲ್ಲಿರುವ ಪಾರ್ಶ್ವನಾಥ ಪ್ರತಿಮೆ, ಬಣ್ಣ ಬಣ್ಣದ ಕನ್ನಡಿ ಕೆಲಸದಿಂದ ಅಲಂಕೃತಗೊಳಿಸಿದ ಮೇಲ್ಛಾವಣಿ ನೋಡುವಂತಿದೆ. ಚಿಕ್ಕಪೇಟೆ ಮತ್ತು ದಂಡು ಪ್ರದೇಶದಲ್ಲಿರುವ ಶ್ವೇತಾಂಬರ ಬಸದಿಗಳು ನಗರದ ಪ್ರಾಚೀನ ಬಸದಿಗಳಾಗಿವೆ. ಬೆಂಗಳೂರಿನ ಪ್ರಮುಖ ಕಟ್ಟಡಗಳು : ಬೆಂಗಳೂರಿನಲ್ಲಿ ರಾಜಮನೆತನಗಳ ಹಾಗೂ ಬ್ರಿಟಿಷ್ ಆಡಳಿತದ ಸುದೀರ್ಘ ಸಂಬಂಧ ಹಾಗೂ ಇತಿಹಾಸವನ್ನು ನಮ್ಮ ನೆನಪಿಗೆ ತಂದುಕೊಡುವಂಥ ಹಲವು ಹಳೆಯ ಕಟ್ಟಡಗಳು ಇನ್ನೂ ಸಾಕ್ಷೀಭೂತವಾಗಿ ಉಳಿದಿವೆ. ಈಚೆಗೆ ಹಲವು ಆಧುನಿಕ ಕಟ್ಟಡಗಳೂ ತಲೆಯೆತ್ತಿವೆ. ಮೂರಂತಸ್ತಿನ ವಿಧಾನ ಸೌಧವು ಕಬ್ಬನ್ ಪಾರ್ಕಿನಲ್ಲಿ ಭವ್ಯವಾಗಿ ಎದ್ದು ನಿಂತಿದೆ. ಇದನ್ನು ಹಿಂದಿನ ರಾಜ್ಯ ಮುಖ್ಯಮಂತ್ರಿ ಕೆ. ಹನುಮಂತಯ್ಯನವರ ನೇತೃತ್ವದಲ್ಲಿ, ದ್ರಾವಿಡ ಶೈಲಿಯಲ್ಲಿ ನಿರ್ಮಿಸಲಾಯಿತು. ವಿಧಾನ ಸಭೆ ಮತ್ತು ಪರಿಷತ್ತುಗಳು ಇಲ್ಲಿ ಸೇರುತ್ತವೆ. ಕರ್ನಾಟಕ ರಾಜ್ಯ ಸರ್ಕಾರದ ಕೆಲವು ಕಚೇರಿಗಳೂ ಇಲ್ಲಿವೆ. ಇದು ಇಡೀ ನಗರದ ಪ್ರಧಾನ ಆಕರ್ಷಣೆಯಾಗಿದೆ. ಬೆಂಗಳೂರು ಅರಮನೆಯನ್ನು ಇಂಗ್ಲೆಂಡಿನ ವಿಂಡ್ಸರ್ ಕ್ಯಾಸಲ್ ಮಾದರಿಯಲ್ಲಿ ಕಟ್ಟಲಾಗಿದೆ (1882). ವಿಶಾಲವಾದ ಪ್ರದೇಶದಲ್ಲಿರುವ ಈ ಅರಮನೆಯ ಸುತ್ತ ಸುಂದರವಾದ ಕೈತೋಟಗಳನ್ನು ಬೆಳೆಸಲಾಗಿದೆ. ಕೋಟೆಯೊಳಗಿರುವ ಟಿಪ್ಪುಸುಲ್ತಾನನ ಅರಮನೆಯೂ ಒಂದು ಗಣನೀಯ ಐತಿಹಾಸಿಕ ಕಟ್ಟಡವಾಗಿದೆ. ಎರಡಂತಸ್ತಿನ ಈ ಕಟ್ಟಡದಲ್ಲಿ ಮರದ ಕೆತ್ತನೆಯ ಅಲಂಕರಣೆಗಳು ನೋಡುವಂತಿವೆ. ಇಲ್ಲಿರುವ ಶಿಲಾಫಲಕ ಶಾಸನದ ಪ್ರಕಾರ 1778ರಲ್ಲಿ ಹೈದರ್ ಅಲಿ ಆರಂಭಿಸಿದ ಈ ಕಟ್ಟಡವನ್ನು ಟಿಪ್ಪುಸುಲ್ತಾನನು 1789ರಲ್ಲಿ ಪೂರ್ತಿಗೊಳಿಸಿದನು. ಇತರ ಕಟ್ಟಡಗಳಲ್ಲಿ ಅಠಾರಾ ಕಚೇರಿ (1867, ಈಗ ಇದು ಹೈಕೋರ್ಟ್ ಕಟ್ಟಡವಾಗಿದೆ), ಡ್ಯಾಲಿ ಮೆಮೋರಿಯಲ್ ಹಾಲ್ (1917), ಪುಟ್ಟಣ್ಣಶೆಟ್ಟಿ ಪುರಭವನ (1935), ಮೆಯೋ ಹಾಲ್, ರಾಜಭವನ, ಸೆಂಟ್ರಲ್ ಕಾಲೇಜ್ (1860), ಕುಮಾರಕೃಪಾ ರಾಜ್ಯ ಅತಿಥಿಗೃಹ, ಹವಾಮಾನ ವೀಕ್ಷಣಾಲಯ, ಮೈಸೂರು ಬ್ಯಾಂಕ್, ಶೇಷಾದ್ರಿ ಮೆಮೋರಿಯಲ್ ಹಾಲ್ (ಈಗಿನ ರಾಜ್ಯ ಕೇಂದ್ರೀಯ ಗ್ರಂಥಾಲಯ), ನ್ಯೂ ಪಬ್ಲಿಕ್ ಆಫಿಸಸ್, ಮುಂತಾದವನ್ನು ಹೆಸರಿಸಬಹುದು. ಈಚೆಗೆ ನಿರ್ಮಿಸಲಾದ ಯುಟಿಲಿಟಿ ಕಟ್ಟಡ ನಗರದಲ್ಲೇ ಅತಿ ಎತ್ತರದ ಕಟ್ಟಡವಾಗಿದೆ. ವಿಶ್ವೇಶ್ವರಯ್ಯ ಇಂಡಸ್ಟ್ರಿಯಲ್ ಮತ್ತು ಟೆಕ್ನಾಲಾಜಿಕಲ್ ವಸ್ತುಸಂಗ್ರಹಾಲಯ ಈಚಿನ ವರ್ಷಗಳಲ್ಲಿ ಮಾಡಿದ ಸೇರ್ಪಡೆಯಾಗಿದೆ. ಇದರ ಪಕ್ಕದಲ್ಲಿರುವ 1877ರಲ್ಲಿ ಐರೋಪ್ಯ ಪುನರುಜ್ಜೀವನ ಶೈಲಿಯಲ್ಲಿ ನಿರ್ಮಿಸಲಾದ ಸರ್ಕಾರಿ ವಸ್ತು ಸಂಗ್ರಹಾಲಯ ಕಟ್ಟಡವು ಮನೋಹರವಾದ ವಾಸ್ತುಕೃತಿಯಾಗಿದೆ. ನಗರದ ಇತರ ಆಕರ್ಷಣೆಗಳಲ್ಲಿ ಕೆಂಪೇಗೌಡನು ನಗರದ ಗಡಿಬಿಂದುಗಳಾಗಿ ನಾಲ್ಕು ದಿಕ್ಕುಗಳಲ್ಲಿ ನಿರ್ಮಿಸಿದ ನಾಲ್ಕು ಕಾವಲು ಬುರುಜುಗಳು ಮುಖ್ಯವಾಗಿವೆ. 'ದೆಹಲಿ ಗೇಟ್' ಎಂದು ಕರೆಯಲಾದ ಕೋಟೆಯ ಅವಶೇಷ ಮತ್ತು ಅದರಲ್ಲಿ ಬ್ರಿಟಿಷ್ ಬಂದಿಗಳನ್ನು ಇಡಲು ಟಿಪ್ಪು ನಿರ್ಮಿಸಿದ ನೆಲಮಾಳಿಗೆ ಬಂಧಿಖಾನೆಗಳನ್ನು ಇಲ್ಲಿ ಹೆಸರಿಸಬಹುದು. ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿ ಕೆಲವು ಅಪೂರ್ವ ಪ್ರಾಚ್ಯ ವಸ್ತು ಸಂಗ್ರಹಗಳಿವೆ. ಸುಮಾರು 125 ಎಕರೆ ಪ್ರದೇಶವನ್ನು ಒಳಗೊಂಡಿರುವ ಅಲಸೂರು ಕೆರೆ ಪ್ರದೇಶವು ಒಂದು ಮೋಹಕ ತಾಣವಾಗಿದೆ. ಇಲ್ಲಿ ದೋಣಿ ವಿಹಾರಕ್ಕೆ ವ್ಯವಸ್ಥೆಯಿದೆ. ಜಯಪ್ರಕಾಶ ನಗರದಲ್ಲಿರುವ ಶಿವಬಾಲಯೋಗಿ ಆಶ್ರಮವು ಶಂಖ ಚಿಪ್ಪಿನ ಮೇಲ್ಛಾವಣಿಯುಳ್ಳ ಆಕರ್ಷಕ ಕಟ್ಟಡವಾಗಿದೆ. ಇದರ ಸುತ್ತ ಕೈದೋಟಗಳಿವೆ. ಬಸವ ಭವನಕ್ಕೆ ಸೇರಿದ ಅನುಭವ ಮಂಟಪ, ರವೀಂದ್ರ ಕಲಾಕ್ಷೇತ್ರ ಮುಂತಾದವೂ ಆಕರ್ಷಕ ಕಟ್ಟಡಗಳಾಗಿವೆ. ಸಂಪರ್ಕ ವ್ಯವಸ್ಥೆ: ಈ ನಗರಕ್ಕೆ ಬ್ರಾಡ್‌ಗೇಜ್ ಮತ್ತು ಮೀಟರ್‌ಗೇಜ್ ಸಂಪರ್ಕ ವ್ಯವಸ್ಥೆಯಿದೆ. ಬೆಂಗಳೂರು–ಮೈಸೂರು, ಬೆಂಗಳೂರು–ಮದ್ರಾಸ್, ಬೆಂಗಳೂರು–ಗುಂತಕಲ್ ಬೆಂಗಳೂರು–ಪುಣೆ, ಬೆಂಗಳೂರು–ಸೇಲಂ, ಮುಂತಾದ ಪ್ರಮುಖ ರೈಲ್ವೆ ಸಂಪರ್ಕಗಳಿವೆ. ನಗರ ವಿಮಾನ ನಿಲ್ದಾಣದಿಂದ ಮುಂಬಯಿ, ಮದ್ರಾಸ್, ಹೈದರಾಬಾದ್, ದೆಹಲಿ, ಮಂಗಳೂರು, ಕೊಚ್ಚಿನ್, ತಿರುವನಂತಪುರ, ಕೊಯಮುತ್ತೂರುಗಳಿಗೆ ಪ್ರಯಾಣಿಸಬಹುದು. ಅಂತರ ರಾಜ್ಯ ಬಸ್ ವ್ಯವಸ್ಥೆಯಲ್ಲದೆ, ರಾಜ್ಯದ ಹಲವು ಒಳ ಪ್ರದೇಶಗಳಿಂದ ಇಲ್ಲಿಗೆ ಬರಲು ಬಸ್ ವ್ಯವಸ್ಥೆಯಿದೆ. ಸಾಮಾನ್ಯ ಪ್ರಮಾಣದ ಹೊಟೆಲಿನಿಂದ ಹಿಡಿದು

ಅಶೋಕ ಹೋಟೆಲ್‌ನಂಥ ಪಂಚತಾರಾ ಹೊಟೆಲ್‌ನವರೆಗೆ ವಿವಿಧ ಬಗೆಯ ಹೊಟೆಲ್ ಸರಣಿಗಳಿವೆ. ಉದ್ಯಮಗಳು : ದೇಶದ ಔದ್ಯಮಿಕ ನಕಾಶೆಯಲ್ಲಿ ಬೆಂಗಳೂರು ಪ್ರಧಾನ ಸ್ಥಾನವನ್ನು ಪಡೆದಿದೆ. ಇಲ್ಲಿ ಹಲವು ಬೃಹತ್ ಉದ್ಯಮಗಳು ತಲೆಯೆತ್ತಿವೆ. ಅಖಿಲ ಭಾರತ ಮಟ್ಟದ ಉದ್ಯಮಗಳಲ್ಲಿ ಎಚ್.ಎ.ಎಲ್., ಎನ್.ಎ.ಎಲ್., ಐ.ಟಿ.ಐ., ಎಚ್.ಎಂ.ಟಿ., ಎನ್.ಜಿ.ಇ.ಎಫ್., ಜಿ.ಇ.ಎಫ್., ಬಿ.ಎಚ್.ಇ.ಎಲ್., ಬಿ.ಇ.ಎಲ್., ಸರ್ಕಾರಿ ಸಾಬೂನು ಕಾರ್ಖಾನೆಗಳನ್ನು ಇಲ್ಲಿ ಹೆಸರಿಸಬೇಕು. ಬೆಂಗಳೂರು ಡೈರಿ ರಾಜ್ಯದಲ್ಲೇ ಅತ್ಯಂತ ದೊಡ್ಡ ಉದ್ಯಮವಾಗಿದೆ. ಸರ್ಕಾರಿ ಮುದ್ರಣಾಲಯವು ರಾಜ್ಯದಲ್ಲೇ ದೊಡ್ಡ ಮುದ್ರಣಾಲಯವೆನಿಸಿಕೊಂಡಿದೆ. ಕೆಂಪೇಗೌಡ ರಸ್ತೆ, ಚಿಕ್ಕಪೇಟೆ, ಅವೆನ್ಯೂ ರಸ್ತೆ, ಕೃಷ್ಣರಾಜೇಂದ್ರ ಮಾರುಕಟ್ಟೆ, ರಸೆಲ್ ಮಾರ್ಕೆಟ್, ಮಹಾತ್ಮಾಗಾಂಧಿ ರಸ್ತೆ, ಬ್ರಿಗೇಡ್ ರಸ್ತೆ, ಕಮರ್ಶಿಯಲ್ ರಸ್ತೆ, ಮುಂತಾದವು ಸದಾ ಜನನಿಬಿಡ ವ್ಯಾಪಾರಿ ರಸ್ತೆಗಳಾಗಿವೆ. ಜಯನಗರ, ಇಂದಿರಾನಗರ, ಮುಂತಾದ ಹೊಸ ಬಡಾವಣೆಗಳಲ್ಲಿ ತಮ್ಮದೇ ಆದ ದೊಡ್ಡ ವಾಣಿಜ್ಯ–ವ್ಯಾಪಾರಿ ಸಂಕೀರ್ಣಗಳಿವೆ. ಬೆಂಗಳೂರನ್ನು 'ಉದ್ಯಾನ ನಗರ' ಎಂದು ಹೇಳುವುದುಂಟು. ಇಲ್ಲಿನ ಲಾಲ್‌ಬಾಗ್ ಅನ್ನು ಹೈದರ್ ಅಲಿ ಸ್ಥಾಪಿಸಿದ್ದು, ಅದರಲ್ಲಿ ಹಲವು ತೆರನ ಸಸ್ಯಗಳಿವೆ. ಇದರಲ್ಲಿ ಲಂಡನ್ನಿನ 'ಕ್ರಿಸ್ಟಲ್ ಪ್ಯಾಲೆಸ್' ಮಾದರಿಯಲ್ಲಿ ಕಟ್ಟಲಾದ ಗಾಜಿನ ಮನೆಯಿದೆ. ಇಲ್ಲಿ ಆಗಸ್ಟ್ ಮತ್ತು ಜನವರಿ ತಿಂಗಳಿನಲ್ಲಿ ಹೂ, ಹಣ್ಣು, ತರಕಾರಿ ಪ್ರದರ್ಶನಗಳನ್ನೇರ್ಪಡಿಸಲಾಗುತ್ತದೆ. ಇದೊಂದು ಸಸ್ಯೋದ್ಯಾನವೂ ಹೌದು. ಚಾಮರಾಜೇಂದ್ರ ಪಾರ್ಕನ್ನು ಕಬ್ಬನ್ ಪಾರ್ಕ್ ಎಂದೇ ಜನಪ್ರಿಯವಾಗಿ ಕರೆಯಲಾಗುತ್ತಿದೆ. ಇದೊಂದು ವಿಶಾಲವಾದ ತೋಪಿನ ಪ್ರದೇಶವಾಗಿದ್ದು, ಇದರಲ್ಲಿ ಕೆಲವು ಸಾರ್ವಜನಿಕ ಕಟ್ಟಡಗಳೂ ಇವೆ. ಇವಲ್ಲದೆ ಇನ್ನೂ ಹಲವು ಉಪವನಗಳು ಈ ನಗರದಲ್ಲಿವೆ. ಶಿಕ್ಷಣ : ಬೆಂಗಳೂರು ಒಂದು ಶಿಕ್ಷಣ ಕೇಂದ್ರವಾಗಿದೆ. ಇಲ್ಲಿ ಹಲವು ಉನ್ನತ ಶಿಕ್ಷಣ ಸಂಸ್ಥೆಗಳಿವೆ. ದೇಶ ವಿದೇಶಗಳಿಂದ ವಿದ್ಯಾರ್ಥಿಗಳು ದೊಡ್ಡ ಸಂಖ್ಯೆಯಲ್ಲಿ ಇಲ್ಲಿಗೆ ಬರುತ್ತಿರುತ್ತಾರೆ. ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಕೃಷಿ ವಿಶ್ವವಿದ್ಯಾಲಯಗಳು ಈ ನಗರದ ಎರಡು ವಿಶ್ವವಿದ್ಯಾಲಯಗಳಾಗಿವೆ. ಭಾರತೀಯ ವಿಜ್ಞಾನ ಸಂಸ್ಥೆ, ಭಾರತೀಯ ಆಡಳಿತ ಸಂಸ್ಥೆ (ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್), ಇನ್‌ಸ್ಟಿಟ್ಯೂಟ್ ಫಾರ್ ಸೋಸಿಯಲ್ ಆ್ಯಂಡ್ ಇಕಾನೊಮಿಕ್ ಚೇಂಜ್, ರಾಮನ್ಸ್ ಇನ್ಸ್‌ಟಿಟ್ಯೂಟ್ ಮುಂತಾದವುಗಳೂ ಇಲ್ಲಿದ್ದು, ಉನ್ನತ ವ್ಯಾಸಂಗ ವ್ಯವಸ್ಥೆ ಹೊಂದಿವೆ. ಬೆಂಗಳೂರಲ್ಲೇ ಪ್ರಾಚೀನವಾದ ಶಿಕ್ಷಣ ಸಂಸ್ಥೆಯೆಂದರೆ ಸೆಂಟ್ರಲ್ ಕಾಲೇಜ್; ಒಂದು ಹಳೆಯ ಸಂಸ್ಥೆಯಾಗಿದ್ದು, ಇದರ ಸುಂದರವಾದ ಗಾಥಿಕ್ ಶೈಲಿಯ ಕಟ್ಟಡವನ್ನು ನೋಡುವಂತಿದೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು : ಮಿಥಿಕ್ ಸೊಸೈಟಿ, ಕನ್ನಡ ಸಾಹಿತ್ಯ ಪರಿಷತ್ತು, ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್, ಮ್ಯಾಕ್ಸ್‌ಮುಲ್ಲರ್ ಭವನ, ಅಲೈಯನ್ಸ್ ಫ್ರಾಂಚೈಸ್, ಗೋಖಲೆ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಅಫೇರ್ಸ್, ರಾಷ್ಟ್ರೋತ್ಥಾನ ಪರಿಷತ್, ಬಸವ ಭವನ, ಭಾರತೀಯ ವಿದ್ಯಾ ಭವನ ಮತ್ತು ಇತರ ಹಲವಾರು ಸಂಸ್ಥೆಗಳು ನಗರದ ಸಾಂಸ್ಕೃತಿಕ ಚಟುವಟಿಕೆಗಳ ಮುಂಚೂಣಿಯಲ್ಲಿವೆ. ಥಿಯಾಸೋಫಿಕಲ್ ಸೊಸೈಟಿ, ಬೈಬಲ್ ಸೊಸೈಟಿ ಆಫ್ ಇಂಡಿಯಾ, ಶಂಕರಮಠ, ಮಹಾಬೋಧಿ ಸಂಘ, ಆರ್ಯ ಸಮಾಜ, ರಾಮಕೃಷ್ಣ ಮಿಶನ್, ಬ್ರಹ್ಮ ಸಮಾಜ, ಪೂರ್ಣಪ್ರಜ್ಞ ವಿದ್ಯಾಪೀಠ ಮುಂತಾದವು ನಗರದ ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಕಾರ್ಯನಿರತ ಸಂಸ್ಥೆಗಳಾಗಿವೆ. ಇಲ್ಲಿ ಮೂರು ಚಲನಚಿತ್ರ ಸ್ಟುಡಿಯೋಗಳಿವೆ. ಸಾಕಷ್ಟು ಚಿತ್ರಮಂದಿರಗಳಿವೆ. ರವೀಂದ್ರ ಕಲಾ ಕ್ಷೇತ್ರವು ಸದಾ ರಂಗ ಚಟುವಟಿಕೆಗಳಿಂದ ತುಂಬಿರುತ್ತದೆ. ಆಕಾಶವಾಣಿ, ದೂರದರ್ಶನಗಳೂ ಇಲ್ಲಿವೆ. ಪಿಟೀಲು ಆಕಾರದಲ್ಲಿ ಕಟ್ಟಲಾದ ಚೌಡಯ್ಯ ಸ್ಮಾರಕ ಭವನದಲ್ಲಿ ಹಲವು ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಬಾಣಸವಾಡಿ : ಬೆಂಗಳೂರಿನ ಪೂರ್ವಕ್ಕೆ ಎಂಟು ಕಿಮೀ ದೂರದಲ್ಲಿರುವ ಬಾಣಸವಾಡಿಯಲ್ಲಿ ಪ್ರಸಿದ್ಧವಾದ ಆಂಜನೇಯ ದೇವಾಲಯವಿದೆ. ಸಾಲಿಗ್ರಾಮ ಶಿಲೆಯಲ್ಲಿ ಕಂಡರಿಸಲಾಗಿದೆಯೆಂದು ಹೇಳುವ ಈ ಗುಡಿಯ ಪ್ರಾಂಗಣದಲ್ಲಿ ರಾಮ, ಸೀತೆ, ಲಕ್ಷ್ಮಣ, ಈಶ್ವರ ಮುಂತಾದ ಗುಡಿಗಳಿವೆ. ಈ ಸ್ಥಳವು ಗ್ರಾಮ ಪಂಚಾಯಿತಿಯನ್ನೂ ಹೊಂದಿದೆ. ಬೇಗೂರು ಬೆಂಗಳೂರಿನ ಆಗ್ನೇಯಕ್ಕೆ ಸುಮಾರು 13 ಕಿಮೀ ದೂರದಲ್ಲಿದ್ದು, ಇಲ್ಲಿರುವ ಚೋಳರ ಕಾಲದ ನಗರೇಶ್ವರಾಲಯವು ಒಂದು ಅವಳಿ ವಿಮಾನಗಳುಳ್ಳ ಕಟ್ಟಡವಾಗಿದೆ. ಇಲ್ಲಿ 10ನೇಯ ಶತಮಾನದ ನಾಗೇಶ್ವರ, ಚೋಳೇಶ್ವರ, ಕರ್ಣೇಶ್ವರ, ಕಮಠೇಶ್ವರ ಎಂಬ ನಾಲ್ಕು ಗುಡಿಗಳು ಇವೆ. ಕಮಠೇಶ್ವರ ಗುಡಿಯಲ್ಲಿ ಎರಡು ತಮಿಳು ಒಂದು ಕನ್ನಡ ಶಿಲಾ ಶಾಸನಗಳು ದೊರೆತಿವೆ. ಕ್ರಿ.ಶ.ಸು. 900ರ ಕನ್ನಡ ಶಾಸನವಿರುವ ವೀರಗಲ್ಲಿನಲ್ಲಿ ಬೆಂಗಳೂರಿನ ಪ್ರಾಚೀನ ಉಲ್ಲೇಖ ('ಬೆಂಗುಳೂರು' ಎಂಬುದಾಗಿ) ಬಂದಿದೆ. ಇನ್ನೊಂದು ಸುಂದರವಾದ ವೀರಗಲ್ಲನ್ನು ಬೆಂಗಳೂರು ವಸ್ತು ಸಂಗ್ರಹಾಲಯದಲ್ಲಿ ಇರಿಸಲಾಗಿದೆ. ಇಲ್ಲಿ ದೊರೆತಿರುವ ಹಲವು ಜೈನ ಶಾಸನಗಳ ಆಧಾರದಿಂದ ಒಂದು ಕಾಲದಲ್ಲಿ ಇದು ಜೈನ ಕೇಂದ್ರವಾಗಿತ್ತೆಂದು ಹೇಳಬಹುದು. ಹೊಸೂರಿನ ವೀರಶೈವ ಮಠದ ಒಂದು ಶಾಖೆ ಇಲ್ಲಿದ್ದು ಅದಕ್ಕೆ ಹೊಂದಿಕೊಂಡು ವೀರಭದ್ರನ ಗುಡಿಯಿದೆ. 19ನೇಯ ಶತಮಾನದ ಒಂದು ಚರ್ಚು ಕೂಡ ಇಲ್ಲಿದೆ. ಕೆಂಚೇನಹಳ್ಳಿ: ಬೆಂಗಳೂರಿನ ನೈಋತ್ಯಕ್ಕೆ ಸುಮಾರು 11 ಕಿಮೀ ದೂರದಲ್ಲಿರುವ ಈ ಊರಿನ ಕೈಲಾಸ ಆಶ್ರಮ ಪ್ರಸಿದ್ಧವಾಗಿದೆ. ಇದನ್ನು ತಿರುಚ್ಚಿ ಸ್ವಾಮಿಗಳು ಸ್ಥಾಪಿಸಿದರು. ಬೃಹತ್ ಗಾತ್ರದ ರಾಜರಾಜೇಶ್ವರಿ ದೇಗುಲ ಹಾಗೂ ಗಣೇಶ, ಮುನೇಶ್ವರರ ಪುಟ್ಟ ಗುಡಿಗಳೂ

ಇಲ್ಲಿವೆ. ಈ ಆಶ್ರಮದ ಆಶ್ರಯದಲ್ಲಿ ಒಂದು ವೇದ ಪಾಠಶಾಲೆ ಮತ್ತು ಪ್ರೌಢಶಾಲೆಗಳಿವೆ. ಕೆಂಗೇರಿ (ಜನ: 9,602) ಬೆಂಗಳೂರಿನ ನೈಋತ್ಯಕ್ಕೆ ಸುಮಾರು 16 ಕಿಮೀ ದೂರದಲ್ಲಿರುವ ಕೆಂಗೇರಿ ಬೆಂಗಳೂರು-ಮೈಸೂರು ರೈಲು ಮತ್ತು ರಾಜ್ಯ ಹೆದ್ದಾರಿಯಲ್ಲಿದೆ. ಇದನ್ನು ಪೂರ್ವದಲ್ಲಿ ತೆಂಗೇರಿಯೆಂದು ಕರೆಯುತ್ತಿದ್ದರು. ಕಾರ್ನ್‌ವಾಲಿಸನ ಸೈನ್ಯ ಇಲ್ಲಿ ತಂಗಿದ್ದಾಗ ಟಿಪ್ಪುಸುಲ್ತಾನ್ ಈ ಊರನ್ನೇ ನಾಶ ಮಾಡಿದ್ದ. 1873ರ ವರೆಗೂ ಇದೊಂದು ತಾಲೂಕು ಕೇಂದ್ರವಾಗಿತ್ತು. ಸೋಮೇಶ್ವರ, ಅಂಜನೇಯ, ಯಲ್ಲಮ್ಮ, ಗ್ರಾಮದೇವತೆ, ಗಣಪತಿ, ಶ್ರೀರಾಮ, ಕನ್ನಿಕಾ ಪರಮೇಶ್ವರಿ ಮುಂತಾದ ದೇವಾಲಯಗಳು ಇಲ್ಲಿವೆ. ಇಲ್ಲಿರುವ ಮಠಗಳಲ್ಲಿ ಏಕದಳ ಬಿಲ್ವಮಠ, ಕಬೀರ ಮಠಗಳು ಪ್ರಮುಖವಾಗಿವೆ. ರಾಧಾಸ್ವಾಮಿ ಸತ್ಸಂಗದವರ ಸಾವನ ದರ್ಬಾರ್ ಆಶ್ರಮವೂ ಇಲ್ಲಿದೆ. ಬೆಂಗಳೂರಿನಲ್ಲಿ ಕೆಲವು ದಶಕಗಳ ಹಿಂದೆ ವಾಸಿಸುತ್ತಿದ್ದ ಮಡಿಕೆಸ್ವಾಮಿಗಳ ಸಮಾಧಿಯೂ ಇಲ್ಲಿದೆ. ಇಲ್ಲಿಂದ ಎರಡು ಕಿಮೀ ಅಂತರದಲ್ಲಿ ಅಭಿಮಾನ್ ಸ್ಟುಡಿಯೊ ಇದೆ. ಇಲ್ಲಿರುವ ದೊಡ್ಡ ಮಸೀದಿಯ ಸುತ್ತ ಕೈದೋಟವಿದೆ. ಈಚಿನ ವರ್ಷಗಳಲ್ಲಿ ಹಲವು ಉದ್ಯಮಗಳು ಸುತ್ತಮುತ್ತ ತಲೆಯೆತ್ತುತ್ತಿವೆ. ಪುರಸಭಾ ಪಟ್ಟಣವಾಗಿರುವ ಈ ಊರು ಹಣ್ಣು-ತರಕಾರಿಗಳಿಗೆ ಪ್ರಸಿದ್ಧವಾಗಿದೆ. ಇದಕ್ಕೆ ಹೊಂದಿಕೊಂಡಂತೆ ಕೆಂಗೇರಿ ಉಪನಗರ ಬೆಳೆದಿದೆ. ವಸಂತಪುರ: ಬೆಂಗಳೂರಿನ ದಕ್ಷಿಣ ತಾಲೂಕಿನಲ್ಲಿ, ಬೆಂಗಳೂರಿನ ದಕ್ಷಿಣಕ್ಕೆ ಸುಮಾರು 13 ಕಿಮೀ ದೂರದಲ್ಲಿರುವ ವಸಂತಪುರದಲ್ಲಿ, ವಸಂತವಲ್ಲಭರಾಯಸ್ವಾಮಿಯ ಪ್ರಾಚೀನ ದೇಗುಲವಿದೆ. ಇದರಿಂದಲೇ ಈ ಊರಿಗೆ ಈ ಹೆಸರು ಬಂದಿದ್ದು ಇದಕ್ಕೆ ಸೇರಿದಂತೆ ಭವಾನಿಶಂಕರ ಗುಡಿಯಿದೆ. ಇದರಲ್ಲಿ ಹಲವು ಸಣ್ಣ ಗುಡಿಗಳಿವೆ. ಮರಾಠರ ಆಳ್ವಿಕೆಯಲ್ಲಿ ಇಲ್ಲಿರುವ ಭವಾನಿ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಯಿತೆಂದು ಹೇಳಲಾಗಿದೆ. ಈ ಊರಿನ ಬಳಿ ಹಲವು ತೀರ್ಥಗಳಿವೆ. ಮದುವೆ ಸಮಾರಂಭಗಳನ್ನು ಇಲ್ಲಿ ವಿಶೇಷವಾಗಿ ನೆರವೇರಿಸುವರು. ಸುಬ್ರಹ್ಮಣ್ಯಪುರ: ಬೆಂಗಳೂರಿನ ದಕ್ಷಿಣಕ್ಕೆ ಸುಮಾರು ಎಂಟು ಕಿಮೀ ದೂರದಲ್ಲಿರುವ ಈ ಊರಿನ ಸುಬ್ರಹ್ಮಣ್ಯ ದೇವಾಲಯದಿಂದಾಗಿ ಊರನ್ನು ಸುಬ್ರಹ್ಮಣ್ಯಪುರವೆಂದು ಹೆಸರಿಸಲಾಗಿದೆ. ಇದೊಂದು ಆಧುನಿಕ ವಾಸ್ತುಕೃತಿ. ಮಧ್ಯದ ಗುಡಿಯಲ್ಲಿ ಸುಬ್ರಹ್ಮಣ್ಯ ಪ್ರತಿಮೆಯಿದೆ. ಇತರ ದೇವರ ಗುಡಿಗಳೂ ಇಲ್ಲಿವೆ. ಇವೆಲ್ಲವನ್ನೂ ಚೆನ್ನಾಗಿ ಕಂಡರಿಸಲಾಗಿದೆ. ಇಲ್ಲೊಂದು ದೊಡ್ಡ ಬಟ್ಟೆ ಗಿರಣಿಯಿದೆ.

**ಬೆಳಗಾವಿ :** (ಜಿ; ಉಪವಿಭಾಗ ತಾ. ಕೇ; ಜನ: 3,00,290) ಇದೊಂದು ಕಂದಾಯ ವಿಭಾಗದ ಕೇಂದ್ರವಾಗಿದೆ. ಈ ನಗರವು ಬೆಂಗಳೂರಿಂದ ಸುಮಾರು 502 ಕಿಮೀ ದೂರದಲ್ಲಿದೆ. ಇದು ಬೆಂಗಳೂರು-ಮಿರಜ್ ವಿಭಾಗದ ರೈಲ್ವೆ ಕೂಡು ನಿಲ್ದಾಣವಾಗಿದೆ. 1836ರಲ್ಲಿ ಬೆಳಗಾವಿಯಲ್ಲಿ ಪ್ರತ್ಯೇಕವಾದ 'ಕಲೆಕ್ಟರೇಟ್' ಸ್ಥಾಪಿಸಲಾಗಿತ್ತು. 1851ರಲ್ಲಿ ಇಲ್ಲಿಯ ಪುರಸಭೆ ಸ್ಥಾಪಿತವಾಯಿತು. ಇದನ್ನು 1883ರಲ್ಲಿ ನಗರ ಪುರಸಭೆಯ ಮಟ್ಟಕ್ಕೇರಿಸಲಾಯಿತು. 1977ರಲ್ಲಿ ಇದು ಮಹಾ ನಗರಸಭೆ (ಕಾರ್ಪೊರೇಷನ್) ಆಯಿತು. ಕುಡಚಿ, ಕಣಬರ್ಗಿ, ಅಲರವಾಡ್, ಯಮ್ನಾಪುರದ ಸೂಚಿತ ಪ್ರದೇಶಗಳನ್ನು ಇದು ಒಳಗೊಂಡಿದೆ. ನಾಗರಿಕ ಆಡಳಿತದ ಅನುಕೂಲಕ್ಕಾಗಿ ಬೆಳಗಾವಿ ನಗರವನ್ನು ನಾಗರಿಕ ಪ್ರದೇಶ ಮತ್ತು ದಂಡು (ಜನ: 25,983) ಪ್ರದೇಶವೆಂದು ವಿಭಾಗಿಸಲಾಗಿದೆ. 1867ರಲ್ಲಿ ಮೊದಲು ಆರಂಭಿಸಿದ ಪ್ರತ್ಯೇಕವಾದ ದಂಡು ಪ್ರದೇಶ ಮಂಡಳಿಯಿದ್ದು ಈ ಪ್ರದೇಶದ ನಾಗರಿಕ ಸೌಲಭ್ಯಗಳನ್ನು ಇದು ನೋಡಿಕೊಳ್ಳುತ್ತದೆ. ಹಳೆ ಮುಂಬಯಿ ಪ್ರಾಂತ್ಯವು ಸ್ಥಾಪಿಸಿದ ಐದು ಸೈನಿಕ ಕೇಂದ್ರಗಳಲ್ಲಿ ಇದೂ ಒಂದಾಗಿದೆ. ಮರಾಠಾ ಲೈಟ್ ಇನ್ಫೆಂಟ್ರಿ ರೆಜಿಮೆಂಟಿನ ಕೇಂದ್ರವೂ ಹೌದು. ಬೆಳಗಾವಿಯ ಮೂಲ ಹೆಸರು 1160ರ ಹೊತ್ತಿಗೆ ವೇಣು ಗ್ರಾಮ, ವೇಲುಗ್ರಾಮ ಎಂದಿದ್ದು (ವೇಣು= ಬಿದಿರು) ಅನಂತರದಲ್ಲಿ ಬೆಳಗು ಗ್ರಾಮ, ಬೆಳುಗಾವ್ ಎಂದಾಗಿ ಕೊನೆಯಲ್ಲಿ ಬೆಳಗಾವಿ ಅಥವಾ ಬೆಳಗಾಂವ್ ಎಂದು ರೂಪಾಂತರ ಪಡೆಯಿತು. ಪ್ರಾಚೀನ ಶಾಸನ ಮತ್ತಿತರ ಮೂಲಗಳಲ್ಲಿ ಇದನ್ನು ಯದುಗ್ರಾಮ, ಇಕ್ಷುಗ್ರಾಮ, ಇತ್ಯಾದಿಯಾಗಿ ಕೂಡ ಉಲ್ಲೇಖಿಸಲಾಗಿದೆ. ಆದಿಲ್ ಷಾಹಿ ಕಾಲದಲ್ಲಿ ಇದಕ್ಕೆ ಅಜಂನಗರವೆಂದೂ ಹೆಸರಿತ್ತು; ಬಹಮನಿ ಕಾಲದಲ್ಲಿ ಮುಸ್ತಫಾಬಾದ್ ಎಂದೂ ಕರೆಯಲಾಗಿತ್ತು. ಸ್ಥಳೀಯ ಐತಿಹ್ಯದ ಪ್ರಕಾರ ಕ್ರಿಸ್ತಪೂರ್ವ 225ರ ಸುಮಾರಿಗೆ ಜಕ್ಕದೇವನೆಂಬ ಜೈನ ದೊರೆ ಇಲ್ಲಿ ಆಳುತ್ತಿದ್ದು, ಇಲ್ಲಿಯ ಮಣ್ಣಿನ ಕೋಟೆಯನ್ನು ನಿರ್ಮಿಸಿದ. ವಡಗಾಂವ್ ಮಾಧವಪುರ ಪ್ರದೇಶದಲ್ಲಿ (ಇದನ್ನು ಹಳೇ ಬೆಳಗಾವಿ ಎಂದು ಕರೆಯುತ್ತಾರೆ) ಇಂದಿಗೂ, ಅದರ ಅವಶೇಷಗಳಿವೆ. ಈಚೆಗೆ ನಡೆಸಿದ ಉತ್ಖನನಗಳಿಂದ ಅಲ್ಲಿದ್ದ ಗ್ರಾಮೀಣ ನೆಲೆ ಕಾಲಕ್ರಮದಲ್ಲಿ ನಗರೀಕರಣಗೊಂಡು ಶಾತವಾಹನರ ಕಾಲದಲ್ಲಿ ಅಭಿವೃದ್ಧಿ ಹೊಂದಿದ ವಿವರಗಳು ಬೆಳಕಿಗೆ ಬಂದಿವೆ.

ಬೆಳಗಾವಿ ನಗರದ ಪ್ರಾಚೀನ ಉಲ್ಲೇಖವು 1160ರ ಗೋವಾ ಕದಂಬರ ಶಾಸನದಲ್ಲಿ ಬಂದಿದೆ. ವೇಣುಗ್ರಾಮ, ವೇಣುಪುರ ಎಂದು ಅದರಲ್ಲಿ ಹೆಸರಿಸಲಾಗಿದ್ದು, ವೇಣುಗ್ರಾಮ 70ರ ವಿಭಾಗದ ಪ್ರಧಾನ ನಗರ ಅದಾಗಿತ್ತೆಂದೂ ತಿಳಿದು ಬರುತ್ತದೆ. 1208ರ ಇನ್ನೊಂದು ಶಾಸನವು ಬೈಲಹೊಂಗಲ ತಾಲೂಕು ಹನ್ನಿಕೇರಿಯಲ್ಲಿ ದೊರೆತಿದ್ದು, ಅದರ ಪ್ರಕಾರ ರಟ್ಟರಸರು ತಮ್ಮ ಮೂಲ ರಾಜಧಾನಿಯನ್ನು ಸುಗಂಧವತಿ (ಆಧುನಿಕ ಸವದತ್ತಿ)ಯಿಂದ ಬೆಳಗಾವಿಗೆ ಸ್ಥಳಾಂತರಿಸಿದರು. 1250ರ ಸುಮಾರಿನಲ್ಲಿ ದೇವಗಿರಿ ಯಾದವರು (ಸೇಉಣರು) ಇದನ್ನು ಆಳಿದರು. 1375ರಲ್ಲಿ ಇದು ವಿಜಯನಗರದ ಅರಸರ ಅಂಕಿತದಲ್ಲಿತ್ತು. ಬಹಮನಿ ಸುಲ್ತಾನರೂ ಇದನ್ನು ಕೆಲ ಕಾಲ ಆಳಿದ್ದರು. ಅನಂತರ ವಿಜಾಪುರದ ಷಾಹಿಗಳ ವಶವಾಗಿತ್ತು.

1511 ರಿಂದ 1549ರವರೆಗೆ 38 ವರ್ಷಗಳ ಸುಧೀರ್ಘ ಕಾಲ ವಿಜಾಪುರದ ಅಸದ್ ಖಾನನು ಬೆಳಗಾವಿಯಲ್ಲಿ ಆಳಿದ. ಈತನ ಉತ್ತಮ ಆಡಳಿತದ, ಘನ ವ್ಯಕ್ತಿತ್ವದ ಪ್ರಭಾವವು ಈ ನಗರ ಜೀವನದಲ್ಲಿ ಅಚ್ಚಳಿಯದೆ ಉಳಿದಿದೆ. 1550ರ ಸುಮಾರಿಗೆ, ವಿಜಾಪುರದ ದಂಡನಾಯಕನಾಗಿದ್ದ ಶೇರ್ ಖಾನ್ ಇಂದಿನ ಶಹಾಪುರವನ್ನು ನಿರ್ಮಿಸಿದ. ಇದನ್ನು ಮೂಲತಃ ಶಹಾಪೇಟ್ ಎಂದು ಕರೆಯುತ್ತಿದ್ದರು. 1673ರಲ್ಲಿ ಶಿವಾಜಿಯು ಈ ಸಮೃದ್ಧ ನಗರವನ್ನು ಕೊಳ್ಳೆ ಹೊಡೆದ. 22 ದಿನಗಳ ಕಾಳಗದ ನಂತರ 1818ರ ಮಾರ್ಚ್ 20 ರಂದು ಇಂಗ್ಲಿಷ್ ಸೇನಾನಿ ಮುನ್ರೊ ಇದನ್ನು ಪೇಶ್ವೆಗಳಿಂದ ಪಡೆದುಕೊಂಡ. 17ನೇಯ ಶತಮಾನದಲ್ಲಿ ಭೇಟಿ ನೀಡಿದ ವಿದೇಶಿ ಪ್ರವಾಸಿಗರು ಈ ನಗರದ ಬಗೆಗೆ ತಮ್ಮ ಮೆಚ್ಚುಗೆಯನ್ನು ಬರೆದಿಟ್ಟಿದ್ದಾರೆ. ಈ ನಗರದಲ್ಲಿ ಹಲವು ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ ಮಹತ್ವವುಳ್ಳ ಸ್ಥಳಗಳಿವೆ. ಅವುಗಳಲ್ಲಿ ಪ್ರಧಾನವಾದವನ್ನು ಸಂಕ್ಷಿಪ್ತವಾಗಿ ಸಮೀಕ್ಷಿಸಬಹುದು. ಬೆಳಗಾವಿ ಕೋಟೆ :ಇದು ಐತಿಹಾಸಿಕ ಮಹತ್ವವುಳ್ಳ ಕೋಟೆಯಾಗಿದ್ದು, ಹಲವು ಅರಸರ ದಾಳಿಗೆ ತುತ್ತಾಗಿಯೂ ಉಳಿದಿದೆ. ನಗರದ ಪೂರ್ವ ಭಾಗದಲ್ಲಿರುವ ಈ ಕೋಟೆಯು ಸುಮಾರು ನೂರು ಎಕರೆ ಪ್ರದೇಶವನ್ನೊಳಗೊಂಡಿದೆ. 1631ರಲ್ಲಿ ನಿರ್ಮಿಸಿದ ಪ್ರಧಾನ ದ್ವಾರ ಉತ್ತರಕ್ಕಿದೆ. ಇನ್ನೊಂದು ದ್ವಾರವು ಪಶ್ಚಿಮಕ್ಕಿದೆ. ಈ ಕೋಟೆಯ ನಿರ್ಮಾಣದಲ್ಲಿ ವಿಜಾಪುರದ ಅಸದ್ ಖಾನನ ಪಾತ್ರ ಪ್ರಧಾನವಾಗಿದೆ. ಕೋಟೆಯ ಒಳಭಾಗದಲ್ಲಿ ಸಾಫಾಮಸೀದಿ (ಪವಿತ್ರ ಮಸೀದಿ), ಪೀರ್ ಖುದ್ರುದ್ದೀನನ ದರ್ಗಾ ಮತ್ತು ಎರಡು ಜಿನಾಲಯಗಳಿವೆ. ಕಮಲ ಬಸದಿ ಅಥವಾ ನೇಮಿನಾಥ ಬಸದಿಯು ಉತ್ತಮ ಸ್ಥಿತಿಯಲ್ಲಿದೆ. ಮತ್ತು ಇತಿಹಾಸ, ವಾಸ್ತುಶಿಲ್ಪಗಳ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ಸುಂದರ ದೇವಾಲಯವೊಂದರ ನವರಂಗ ಮಾತ್ರ ಉಳಿದಿದೆ. 1833ರಲ್ಲಿ ಕಟ್ಟಿದ ಒಂದು ಸಣ್ಣ ಚರ್ಚ್ ಕೂಡ ಈ ಕೋಟೆಯ ಒಳಗಿದೆ. ಕ್ಯಾಂಪ್ ಪ್ರದೇಶದಲ್ಲಿ 'ಮಿಲಿಟರಿ ಮಹದೇವ' ಎಂದು ಕರೆಯಲಾದ ಶಿವ ಮಂದಿರವು ಒಂದು ಆಕರ್ಷಕ ಆಧುನಿಕ ಕಟ್ಟಡವಾಗಿದೆ. ನಗರದ ಶೈವಾಲಯಗಳಲ್ಲೆಲ್ಲ ಪ್ರಾಚೀನವಾದದ್ದು ಶಹಾಪುರದ ಕಪಿಲೇಶ್ವರ ದೇವಾಲಯ. ಗಣಪತಿ, ವೆಂಕಟರಮಣ, ಅನಂತಶಯನ, ರಾಮಮಂದಿರ, ವಿಠೋಬ ಮಂದಿರ, ಮಾರುತಿ, ಬಸವಣ್ಣ ಮುಂತಾದವು ಇಲ್ಲಿಯ ಇತರ ಪ್ರಮುಖ ದೇವಾಲಯಗಳಾಗಿವೆ. ಇಲ್ಲಿ ಹಲವು ವೀರಶೈವ ಮಠಗಳಿದ್ದು ಕಲ್ಮಠವು ಇವುಗಳಲ್ಲೆಲ್ಲ ಪ್ರಾಚೀನವಾಗಿದ್ದು, ಇಲ್ಲಿಯ ಹಲವು ಮಸೀದಿ ಹಾಗೂ ದರ್ಗಾಗಳಲ್ಲಿ ಬಹಾರುದ್ದೀನ್ ಷಾವಲಿ, ಖಥಲ್ ಷಾವಲಿ ಹಾಗೂ ಅಸದ್ ಖಾನನವು ಪ್ರಮುಖವಾಗಿವೆ. ಹಲವು ಚರ್ಚುಗಳೂ ಇಲ್ಲಿವೆ. ಸೇಂಟ್ ಪಾಲ್ಸ್ ಕಥೀಡ್ರಲ್, ಸೇಂಟ್ ಅಂತೋನಿ ಚರ್ಚ್, ಚರ್ಚ್ ಆಫ್ ಇಂಗ್ಲೆಂಡ್ ಮುಂತಾದವನ್ನು ಹೆಸರಿಸಬಹುದು. ಸೇಂಟ್ ಜೇವಿಯರ್ಸ್ ಚರ್ಚ್ ಪ್ರಾಚೀನವಾದ ಚರ್ಚೆಂದು ಹೇಳುತ್ತಾರೆ. ಶ್ರೇಷ್ಠ ಪುರುಷರ ಹಲವು ಸಮಾಧಿಗಳೂ ಇಲ್ಲಿವೆ. 1857ರ ವೀರಾಗ್ರಣಿಯಾಗಿದ್ದ ಸರಗುಂದ ಬಾಬಾ ಸಾಹೇಬನ ಸಮಾಧಿ ಮುಖ್ಯವಾಗಿದೆ. ಇಲ್ಲಿರುವ 15 ಜೈನ ಬಸದಿಗಳಲ್ಲಿ ಕೋಟೆಯೊಳಗಿನ ಕಮಲ ಬಸದಿ ಪ್ರಾಚೀನವಾದುದಾಗಿದೆ.

1924ರಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವನ್ನು ನಡೆಸಿದ ಕೀರ್ತಿ ಬೆಳಗಾವಿ ನಗರಕ್ಕಿದೆ. ಇದೊಂದೇ ಅಧಿವೇಶನದಲ್ಲಿ ಮಹಾತ್ಮಾಗಾಂಧಿಯವರು ಅಧ್ಯಕ್ಷರಾಗಿದ್ದುದು. ಈ ಅಧಿವೇಶನದ ಸಮಯದಲ್ಲಿ ಗದಗಿನ ಹುಯಿಲಗೋಳ ನಾರಾಯಣ ರಾಯರು ರಚಿಸಿದ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂಬ ನಾಡಗೀತೆಯನ್ನು ಮೊದಲ ಬಾರಿಗೆ ಹಾಡಲಾಯಿತು. ಕರ್ನಾಟಕ, ಮಹಾರಾಷ್ಟ್ರ, ಗೋವೆಯ ಸಮ್ಮಿಶ್ರ ಸಂಸ್ಕೃತಿಯನ್ನು ಬೆಳಗಾವಿ ನಗರ ಪ್ರತಿನಿಧಿಸುತ್ತದೆ. ಇದು ವಾಣಿಜ್ಯ, ಉದ್ಯಮ, ವ್ಯಾಪಾರ, ಶಿಕ್ಷಣ ಕ್ಷೇತ್ರಗಳ ಪ್ರಮುಖ ಕೇಂದ್ರವಾಗಿದೆ. ಕೈಮಗ್ಗದ ಸೀರೆ, ಬಟ್ಟೆಗಾಗಿ ಶಹಾಪುರವು ಪ್ರಸಿದ್ಧವಾಗಿದೆ. ಬೆಳಗಾವಿಯ ಪೂರ್ವಕ್ಕೆ ಸುಮಾರು 12 ಕಿಮೀ ದೂರದಲ್ಲಿರುವ ಸಾಂಬ್ರಾದಲ್ಲಿ ವಿಮಾನ ನಿಲ್ದಾಣವಿದೆ. ಬೆಳಗಾವಿಯ ಗಣೇಶ ಉತ್ಸವಕ್ಕೆ ವಿಶೇಷ ಆಕರ್ಷಣೆಯಿದೆ. ಬೆಳಗಾವಿ ನಗರದ ಸುತ್ತಮುತ್ತಲಿನ ಪ್ರಮುಖ ಸ್ಥಳಗಳಲ್ಲಿ ಕೆಲವನ್ನು ಹೆಸರಿಸಬಹುದು. ಕಾಕತಿಯು ಕಿತ್ತೂರು ರಾಣಿ ಚೆನ್ನಮ್ಮನ ತವರೂರು. ಇಲ್ಲಿರುವ ಸಿದ್ದೇಶ್ವರ ದೇವಾಲಯವು ಪ್ರಮುಖವಾಗಿದೆ. ಬಸವನಕುಡಚಿಯಲ್ಲಿರುವ ಬಸವಣ್ಣನ ದೇಗುಲವೂ ಪುರಾತನವಾದದ್ದು. ಕಣಬರ್ಗಿಯಲ್ಲಿ ರೇವಣಸಿದ್ದೇಶ್ವರ ಗುಹಾಲಯವಿದೆ. ಮತ್ತು ಇದರ ಬಳಿಯಿರುವ ರಾಮತೀರ್ಥವೂ ಭಕ್ತಾದಿಗಳಿಗೆ ಪವಿತ್ರ ಸ್ಥಳವಾಗಿದೆ. ದತ್ತಾತ್ರೇಯ ಆರಾಧನಾ ಕೇಂದ್ರವಾದ ಪಂತ ಬಾಳೆಕುಂದ್ರಿಯು ಇನ್ನೊಂದು ಅಧ್ಯಾತ್ಮಿಕ ಮಹತ್ವವುಳ್ಳ ಸ್ಥಳವಾಗಿದೆ.

ಬೆಳವಡಿ : (ಬೆಳಗಾವಿ ಜಿ; ಬೈಲಹೊಂಗಲ ತಾ; ಜನ: 4,533) ಬೈಲಹೊಂಗಲದಿಂದ ಸುಮಾರು 12 ಕಿಮೀ ದೂರದಲ್ಲಿ ಬೆಳವಡಿಯಿದೆ. 'ಬೆಳವಲ' (ಫಲವತ್ತಾದ ಭೂಮಿ) ಎಂಬ ಪದದಿಂದ ಈ ಊರಿನ ಹೆಸರಾದ ಬೆಳವಡಿ ವ್ಯುತ್ಪತ್ತಿಯಾಗಿರಬೇಕು. ಬೆಳವಡಿಯು ಹೊಳಲುಂಡ-30ರ ಒಂದು ಭಾಗವಾಗಿತ್ತು. ಕಲ್ಯಾಣ ಚಾಲುಕ್ಯರ ನಾಲ್ಕು ಶಾಸನಗಳು ಇಲ್ಲಿ ದೊರೆತಿವೆ. ಈ ಶಾಸನಗಳು ತಿಳಿಸುವಂತೆ 11-12ನೇಯ ಶತಮಾನಗಳಲ್ಲಿ ಹಲವು ಜಿನಾಲಯಗಳಿರುವ ಒಂದು ಜೈನ ಕೇಂದ್ರ ಇದಾಗಿತ್ತು. 17ನೇಯ ಶತಮಾನದ ಮಣ್ಣಿನ ಕೋಟೆಯ ಕೆಲವು ಅವಶೇಷಗಳೂ ಇಲ್ಲಿವೆ. ಇಲ್ಲಿನ ವೀರಭದ್ರಾಲಯದಲ್ಲಿ ಎರಡು ಶಾಸನಗಳಿವೆ. ಇದು ಕಿತ್ತೂರು ದೇಸಾಯಿಯವರ ಕುಲದೇವತೆಯೆಂದೂ ಹೇಳಲಾಗಿದೆ. ವಿಜಾಪುರದ ಮಾಂಡಲಿಕ

ರಾಗಿದ್ದ ಸ್ಥಳೀಯ ಈಶಪ್ರಭುಗಳು ಆಳಿದ್ದರಿಂದ ಇದು ಹೆಚ್ಚಿನ ಮಹತ್ವ ಪಡೆದಿತ್ತು. ಉತ್ತರ ಕನ್ನಡ ಜಿಲ್ಲೆಯ ಸೋಂದೆ ಅರಸು ಪುತ್ರಿಯೇ ಈತನ ವೀರರಾಣಿ ಮಲ್ಲಮ್ಮ. 1677ರಲ್ಲಿ ಶಿವಾಜಿಯು ತನ್ನ ದಕ್ಷಿಣ ದಂಡಯಾತ್ರೆ ಮುಗಿಸಿ ಮರಳಿ ಬರುತ್ತಿರುವಾಗ ಬೆಳವಾಡಿಗೆ ಮುತ್ತಿಗೆ ಹಾಕಿದನು. ಆಗ ಸ್ಥಳೀಯ ಈಶಪ್ರಭು ನಾಯಕನು ಧೈರ್ಯದಿಂದ ಇವನನ್ನು ಎದುರಿಸಿ ಮರಣವನ್ನಪ್ಪಿದ. ಕೂಡಲೆ ಆತನ ರಾಣಿ ಮರಾಠಾ ಸೈನ್ಯವನ್ನು ಕೆಚ್ಚಿನಿಂದ ಎದುರಿಸಿದಳು. ಒಂದು ತಿಂಗಳ ಕಾಲ ನಡೆದ ಈ ಯುದ್ಧದ ಕೊನೆಯಲ್ಲಿ ಮಲ್ಲಮ್ಮನನ್ನು ಸೆರೆ ಹಿಡಿಯಲ್ಪಾಯಿತು. ಇವಳ ಶೌರ್ಯವು ಶಿವಾಜಿಯ ಅಪಾರ ಮೆಚ್ಚುಗೆ ಗಳಿಸಿತು. ಅಂತೆಯೇ ಆತ ಇವಳನ್ನು ಪೂರ್ಣ ಗೌರವದಿಂದ ಕಂಡ. ಇಲ್ಲಿರುವ ಪುರಾತನ ದೇಗುಲಗಳಲ್ಲಿ ಪರಮೇಶ್ವರ, ಮಲ್ಲಿಕಾರ್ಜುನ, ದಂಡಿದೇವರು, ಮಾರುತಿ ಮುಂತಾದವನ್ನು ಹೆಸರಿಸಬಹುದು. ಇಲ್ಲಿ ಎರಡು ವೀರಶೈವ ಮಠಗಳಿವೆ.

ಬೆಳವಾಡಿ : (ಚಿಕ್ಕಮಗಳೂರು ಜಿ. ಹಾಗೂ ತಾ; ಜನ: 2,002) ಇದು ಚಿಕ್ಕಮಗಳೂರಿನಿಂದ 29 ಕಿಮೀ ಹಳೇಬೀಡಿನಿಂದ ಸುಮಾರು 10 ಕಿಮೀ ದೂರದಲ್ಲಿದೆ. ಇದನ್ನು ಮಹಾಭಾರತದ ಏಕಚಕ್ರನಗರ ಎಂದು ಬಣ್ಣಿಸಲಾಗಿದೆ. ಭೀಮ ಬಕಾಸುರನನ್ನು ಸಂಹರಿಸಿದ ಸ್ಮಾರಕವಾಗಿ ಇಲ್ಲಿಯ ಜನ ಇಂದಿಗೂ ವರ್ಷಂಪ್ರತಿ 'ಬಂಡಿಬನ' ಎಂಬ ಹಬ್ಬವನ್ನಾಚರಿಸುತ್ತಾರೆ. ಇಲ್ಲೊಂದು ದೊಡ್ಡ ಧಣಕರಾಯನ ಕೆರೆಯಿದೆ. ಈತನು ಸ್ಥಳೀಯ ಮುಖಂಡನಾಗಿದ್ದು (ಪಾಳೆಯಗಾರ) ಇವನ ಗೌರವಾರ್ಥವಾಗಿ ಒಂದು ಗುಹೆಯನ್ನು ನಿರ್ಮಿಸಲಾಗಿದೆ. ಇದು ಮೂಲತಃ ಒಂದು ಜೈನ ಕೇಂದ್ರವಾಗಿತ್ತು. ಮುಮ್ಮಡಿ ಕೃಷ್ಣ ರಾಜ ಒಡೆಯರು ಇದನ್ನು ಶೃಂಗೇರಿ ಮಠಕ್ಕೆ ದತ್ತಿ ನೀಡಿದರು. ಇಲ್ಲೊಂದು ಗಣಪತಿ ದೇವಾಲಯವಿದೆ. ಈ ವಿಗ್ರಹವನ್ನು ಹುತ್ತದ ಗಣಪತಿ, ಉದ್ಭವ ಗಣಪತಿ, ವರದ ಗಣಪತಿ ಎಂದು ಮುಂತಾಗಿ ಕರೆಯುತ್ತಾರೆ. ಇದರ ಬಳಿ ಶಂಕರೇಶ್ವರಾಲಯವಿದೆ. ಭಗ್ನವಾಗಿದ್ದ ಬಸವೇಶ್ವರಾಲಯವನ್ನೂ ಈಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ. ವೀರನಾರಾಯಣ, ಬೀರೇದೇವರು, ಕರಿಯಮ್ಮ, ಬಿಂಡಿಗಮ್ಮ ಮುಂತಾದವು ಇಲ್ಲಿಯ ಇತರ ದೇಗುಲಗಳು. ವೀರನಾರಾಯಣ ದೇಗುಲವು ಹೊಯ್ಸಳ ಶೈಲಿಯ ಖ್ಯಾತವಾದ ದೊಡ್ಡ ದೇವಾಲಯಗಳಲ್ಲೊಂದಾಗಿದೆ. ಇದು ತ್ರಿಕೂಟಾಚಲ ದೇವಾಲಯವಾಗಿದ್ದು ಇದರ ಗರ್ಭಗುಡಿಗಳಲ್ಲಿ ವೀರನಾರಾಯಣ, ವೇಣುಗೋಪಾಲ ಹಾಗೂ ಯೋಗಾನರಸಿಂಹ ಪ್ರತಿಮೆಗಳಿವೆ. 1206ರ ಶಾಸನದಲ್ಲಿ ವೀರನಾರಾಯಣನ ಪ್ರಸ್ತಾಪ ಬಂದಿರುವುದರಿಂದ ಆ ಕಾಲಕ್ಕಾಗಲೇ ವೀರನಾರಾಯಣ ದೇಗುಲ ಸ್ಥಾಪಿತವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಬೆಳ್ತಂಗಡಿ : (ದಕ್ಷಿಣ ಕನ್ನಡ ಜಿ; ತಾ. ಕೇ; ಜನ: 5,668) ಬೆಳ್ತಂಗಡಿಯು ಮಂಗಳೂರಿನಿಂದ ಸುಮಾರು 60 ಕಿಮೀ ಅಂತರದಲ್ಲಿ ಪೂರ್ವಕ್ಕಿದೆ. ಈ ಊರಿನಲ್ಲಿರುವ ಸೋಮನಾಥ ದೇವಾಲಯವು ಪ್ರಾಚೀನವಾದುದಾಗಿದ್ದು ಕರಿಯ ಕಲ್ಲಿನಿಂದ ಕಟ್ಟಲಾಗಿದೆ. ಹಾಗೆಯೇ, ಒಂದು ಜೈನ ಬಸದಿ, ಹಾಳಾದ ಕೋಟೆಯ ಗೋಡೆಗಳು ಇಲ್ಲಿ ಕಂಡುಬರುತ್ತವೆ. ಇವುಗಳನ್ನು ಬಂಗಾಡಿಯ ಬಂಗ ಮನೆತನದ ಅರಸರು ಕಟ್ಟಿಸಿದರೆಂದು ಪ್ರತೀತಿ. ಈ ಬಂಗಾಡಿಯು ಬೆಳ್ತಂಗಡಿಯಿಂದ 15 ಕಿಮೀ ದೂರದಲ್ಲಿದೆ. ಈ ಬಸದಿಯಲ್ಲಿ 15ನೇಯ ಶತಮಾನದ ಒಂದು ಶಿಲಾಶಾಸನವಿದೆ. ತುಳು ಭಾಷೆಯಲ್ಲಿ ಈ ಊರನ್ನು ಬೊಳ್ತೆರ್ ಎಂದು ಕರೆಯಲಾಗುತ್ತದೆ. ಬ್ರಿಟಿಷರ ಕಾಲದಲ್ಲಿ ಇದು ಉಪತಾಲೂಕು ಕೇಂದ್ರವಾಗಿದ್ದು, 1954ರಲ್ಲಿ ಇದನ್ನು ತಾಲೂಕು ಕೇಂದ್ರವನ್ನಾಗಿ ಪರಿವರ್ತಿಸಲಾಯಿತು. ಈ ಊರಿನಲ್ಲಿ ಒಂದು ವೆಂಕಟರಮಣ ಮಂದಿರವೂ ಇದೆ. ನಡ ಅಥವಾ ಜಮಾಲಾಬಾದ್ ಎಂಬುದು ಬೆಳ್ತಂಗಡಿಯಿಂದ 6 ಕಿಮೀ ದೂರದಲ್ಲಿದ್ದು ಹಿಂದೆ ಇದನ್ನು ನರಸಿಂಹಅಂಗಡಿಯೆಂದು ಕರೆಯಲಾಗುತ್ತಿತ್ತು. ಈಗ ಉಳಿದಿರುವ ಬೆಟ್ಟದ ಮೇಲಿನ ಕೋಟೆಯನ್ನು ಹಿಂದಿನ ಕಾಲದ ಹಾಳುಬಿದ್ದ ಕೋಟೆಯ ಅವಶೇಷಗಳ ಮೇಲೆ ಟಿಪ್ಪುಸುಲ್ತಾನನು 1794ರಲ್ಲಿ ಕಟ್ಟಿಸಿದನು. ತನ್ನ ತಾಯಿಯಾದ ಜಮಾಲಬಿಯ ಗೌರವಾರ್ಥ ಅದನ್ನು ಜಮಾಲಾಬಾದ್ ಎಂದು ಹೆಸರಿಸಿದನು. ನಡ ಎಂಬ ಹಳ್ಳಿಯು ಈ ಬೆಟ್ಟದ ತಳದಲ್ಲಿ ಬೆಳೆದಿದ್ದು, ಕುದುರೆಮುಖದಿಂದ ಹೊರಡುವ ಒಂದು ದೀರ್ಘ ತಿರುವಿನ ಕೊನೆಯ ಹಂತದಲ್ಲಿದೆ. ಹತ್ತಿರದಲ್ಲಿರುವ ಪೆರ್ಮಣ್ಣು ಎಂಬಲ್ಲಿ ಒಂದು ಜೈನ ಬಸದಿ ಇದೆ. ಜಮಾಲಾಬಾದ್ ಕೋಟೆಯಿಂದ ಸುತ್ತಲಿನ ಪ್ರದೇಶದ ಚಿತ್ರವತ್ತಾದ ದೃಶ್ಯವನ್ನು ಕಾಣಬಹುದು. ಬಂಗಾಡಿಯು ಮೊದಲು ಬಂಗ ದೊರೆಗಳ ರಾಜಧಾನಿಯಾಗಿತ್ತು. ಅಲ್ಲಿ ಒಂದು ಶಾಂತಿನಾಥ ಬಸದಿ ಇದ್ದು, ಅದರಲ್ಲಿ ಅಸಂಖ್ಯ ಕಂಚಿನ ಜೈನ ಪ್ರತಿಮೆಗಳ ಸಂಗ್ರಹವಿದೆ. ಅಲ್ಲದೆ 16ನೇಯ ಶತಮಾನದ ಒಂದು ಶಾಸನವನ್ನು ಒಳಗೊಂಡ ವೀರಭದ್ರ ದೇವರ ಒಂದು ಗುಡಿಯೂ ಅಲ್ಲಿದೆ. ವೇಣೂರು ಅಥವಾ ಏಣೂರು ಎಂಬ ಹೆಸರಿನ ಊರು ಈ ತಾಲೂಕಿನಲ್ಲಿದ್ದು, ಒಂದು ಕಾಲದಲ್ಲಿ ಅದು ಅಜಿಲ ದೊರೆಗಳ ರಾಜಧಾನಿಯಾಗಿತ್ತು. ಈ ಊರಿನಲ್ಲಿ, 1603ರಲ್ಲಿ ಪ್ರತಿಷ್ಠಾಪಿಸಲಾದ ಗೊಮ್ಮಟೇಶ್ವರನ ಅಖಂಡ ಶಿಲಾಪ್ರತಿಮೆಯಿದೆ.

ಬೇಲೂರು : (ಹಾಸನ ಜಿ; ತಾ. ಕೇ; ಜನ: 41,074) ಪ್ರಾಚೀನ ಕಾಲದಲ್ಲಿ ವೇಲಾಪುರಿ, ವೇಲೂರು, ಬೇಲಾಪುರ ಹಾಗೂ ದಕ್ಷಿಣ ವಾರಣಾಸಿ ಎಂದು ಹಲವಾರು ಹೆಸರುಗಳಿಂದ ಖ್ಯಾತವಾಗಿದ್ದು ಬೇಲೂರು ಯಗಚಿನದಿಯ ತೀರದಲ್ಲಿದ್ದು ಹಾಸನದಿಂದ 38 ಕಿಮೀ ಮತ್ತು ಬೆಂಗಳೂರಿನಿಂದ 222 ಕಿಮೀ ದೂರದಲ್ಲಿದೆ. ಹೊಯ್ಸಳ ರಾಜರು ಸೊಸೆವೂರಿ (ಅಂಗಡಿ) ನಿಂದ ತಮ್ಮ ರಾಜಧಾನಿಯನ್ನು ಬೇಲೂರಿಗೆ ಸ್ಥಳಾಂತರಿಸಿದರು. ಅಂತಿಮವಾಗಿ ದ್ವಾರಸಮುದ್ರಕ್ಕೆ ರಾಜಧಾನಿಯ ಸ್ಥಳಾಂತರವಾಗುವವರೆಗೆ ಬೇಲೂರು ಅವರ ರಾಜಧಾನಿಯಾಗಿತ್ತು.

ಹೊಯ್ಸಳರ ಕಾಲದ ಸುಂದರ ಮಂದಿರದಿಂದಾಗಿ ಈ ಸ್ಥಳವು ವಿಖ್ಯಾತವಾಗಿದೆ. ಚೆನ್ನಕೇಶವ ದೇವಾಲಯ ಈ ಸ್ಥಳದ ಪ್ರಮುಖ ದೇವಾಲಯವಾಗಿದ್ದು ಮೂಲತಃ ಅದು ವಿಜಯ ನಾರಾಯಣ ದೇವಾಲಯವೆಂಬ ಹೆಸರು ಹೊಂದಿತ್ತು. ಅದನ್ನು ಹೊಯ್ಸಳರ ಪ್ರಸಿದ್ಧ ದೊರೆಯಾಗಿದ್ದ ವಿಷ್ಣುವರ್ಧನನು ನಿರ್ಮಿಸಿದನು. ಬಳ್ಳಿಗಾವೆಯಿಂದ ಬಂದವರಾದ ದಾಸೋಜ ಮತ್ತು ಚಾವಣ ಎಂಬ ತಂದೆ ಮಕ್ಕಳು ಅದರ ಪ್ರಮುಖ ರೂವಾರಿಗಳು. ಈ ದೇವಾಲಯದಲ್ಲಿರುವ ಸುಮಾರು 3.7 ಮೀ ಎತ್ತರದ ಚೆನ್ನ ಕೇಶವಮೂರ್ತಿಯನ್ನು ಹೊಯ್ಸಳ ದೊರೆ ವಿಷ್ಣುವರ್ಧನನು ಚೋಳರ ವಿರುದ್ಧ ತಾನು ಸಾಧಿಸಿದ ವಿಜಯಗಳ ಸ್ಮಾರಕಾರ್ಥವಾಗಿ ಪ್ರತಿಷ್ಠಾಪಿಸಿದನು. ಹೊಯ್ಸಳರ ಕಾಲದ ನಕ್ಷತ್ರಾಕಾರದ ದೇವಾಲಯಗಳಲ್ಲಿ ಇದು ಅತ್ಯಂತ ಪ್ರಾಚೀನವಾದುದಾಗಿದೆ. ಹೊರಗೋಡೆಗಳಲ್ಲಿ ಉದ್ದಕ್ಕೂ ನಾಜೂಕಾದ ಸುಂದರ ಶಿಲ್ಪ ಪಟ್ಟಿಕೆಗಳ ಸಾಲುಸಾಲೇ ಇದೆ. ದೇವಾಲಯದ ಹೊರಚಾಚು ಚಾವಣಿಗೆ ಆಧಾರವಾಗಿ ನಿಂತಿರುವ ಮದನಿಕಾ ವಿಗ್ರಹಗಳು ಕಲಾ ನೈಪುಣ್ಯದ ಪ್ರತೀಕಗಳಾಗಿವೆ. ಚೆನ್ನಕೇಶವಮೂರ್ತಿಯ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರಗಳನ್ನು ಕಲಾತ್ಮಕವಾಗಿ ಕೆತ್ತಲಾಗಿದೆ. ಗರ್ಭಗೃಹ, ಶುಕನಾಸಿಯ ಪ್ರವೇಶದ್ವಾರ ಮತ್ತು ನವರಂಗದ ಸ್ತಂಭಗಳು ಸುಂದರವಾಗಿವೆ. ತಿರುಗಣಿ ತಂತ್ರದಿಂದ ನಿರ್ಮಿತವಾದ ನವರಂಗದಲ್ಲಿ ಸ್ತಂಭಗಳ ಮೇಲಿರುವ ನಾಲ್ಕು ಮದನಿಕಾ ವಿಗ್ರಹಗಳು ಅಪ್ರತಿಮ ಕಲಾಕೌಶಲ್ಯಪೂರ್ಣ ಕಲಾಕೃತಿಗಳಾಗಿವೆ. ಚೆನ್ನಕೇಶವ ದೇವಾಲಯದ ಪಶ್ಚಿಮಕ್ಕಿರುವ ವೀರನಾರಾಯಣ ದೇವಾಲಯವು ವಿವಿಧ ಹಿಂದೂ ದೇವತೆಗಳ ಸೂಕ್ಷ್ಮ ಕೆತ್ತನೆಯ ಮೂರ್ತಿಗಳನ್ನು ಒಳಗೊಂಡಿದೆ. ಕಪ್ಪೆ ಚೆನ್ನಿಗರಾಯನ ಗುಡಿ, ಸೌಮ್ಯನಾಯಕಿಯ ಗುಡಿ, ಅಂಡಾಳ್ ಮುಂತಾದವರ ಗುಡಿಗಳು ಹಾಗೂ ಹಲವಾರು ಮಂಟಪಗಳು ಈ ದೇವಾಲಯವನ್ನು ಸುತ್ತುವರೆದಿವೆ. ಇಲ್ಲಿ ಅರಳಿರುವ ವಾಸ್ತು ಶಿಲ್ಪ ಕಲಾ ಕೌಶಲ್ಯವು ಉತ್ಕೃಷ್ಟವಾದುದಾಗಿದ್ದು, ಅನೇಕ ವಿಷಯಗಳಲ್ಲಿ ಆಂತರಿಕ ಕಲಾ ಕೌಶಲ್ಯವು ಹೊರಮೈಯ ಕೌಶಲ್ಯಕ್ಕಿಂತಲೂ ಹೆಚ್ಚು ನವುರಾಗಿದೆ. ಇಲ್ಲಿರುವ ಪುರಾತನ ಕಾಲದ ರಥವನ್ನು ವಿಜಯನಗರದ ದೊರೆ ಶ್ರೀರಂಗರಾಯನು ಕಾಣಿಕೆಯಾಗಿತ್ತನೆಂಬ ಪ್ರತೀತಿ ಇದೆ. ಈಗ ಹಳೆಯ ರಥವನ್ನು ಬದಲಿಸಿ, ಏಳು ಅಂತಸ್ತುಳ್ಳ ಒಂದು ಲಕ್ಷ ರೂಪಾಯಿ ಬೆಲೆಯ ಭವ್ಯವಾದ ಹೊಸ ರಥವನ್ನು ನಿರ್ಮಿಸಲಾಗಿದೆ. ಇಲ್ಲಿರುವ ಒಂದು ಸಮಾಧಿಯು 13ನೇಯ ಶತಮಾನದ ಸುಪ್ರಸಿದ್ಧ ಕನ್ನಡ ಕವಿ ರಾಘವಾಂಕನದೆಂದು ಪ್ರತೀತಿಯಿದೆ. ಈ ಮಂದಿರದ ಪ್ರವೇಶ ದ್ವಾರವು ವಿಜಯನಗರ ಶೈಲಿಯಲ್ಲಿದ್ದು, ಅದನ್ನು ಬಲಂನ ದೊರೆ ಕಟ್ಟಿಸಿದ್ದಾನೆ. ಈ ದೇವಾಲಯದಲ್ಲಿ ಕ್ರಿ.ಶ. 1114ರಿಂದ ಆರಂಭಿಸಿ ಸುಮಾರು 700 ವರ್ಷಗಳಷ್ಟು ಅವಧಿಯ ಅಸಂಖ್ಯ ಶಿಲಾಶಾಸನಗಳಿವೆ. ಈ ಪಟ್ಟಣವು ಪುರಸಭೆಯನ್ನು ಪಡೆದಿದೆ.

ಬೈಲಕುಪ್ಪೆ : (ಮೈಸೂರು ಜಿ ; ಪಿರಿಯಾಪಟ್ಟಣ ತಾ. ಜನ: 7,764). ಬೈಲುಕುಪ್ಪೆಯು ಟಿಬೇಟನ ನಿರ್ವಾಸಿತರ ಪುನರ್ವಸತಿ ಕೇಂದ್ರವಾಗಿದೆ. ಇದು ಪಿರಿಯಾ ಪಟ್ಟಣದಿಂದ 16 ಕಿಮೀ ಹಾಗೂ ಕೊಡಗಿನ ಕುಶಾಲನಗರದಿಂದ 5 ಕಿಮೀ ದೂರದಲ್ಲಿದೆ. ಟಿಬೇಟನ ನಿರ್ವಾಸಿತರ ಮೊದಲನೇಯ ಗುಂಪನ್ನು 1960ರಲ್ಲಿ ಇಲ್ಲಿ ನೆಲೆಗೊಳಿಸಲಾಯಿತು. ಸುಮಾರು 5,000 ಎಕರೆಯಷ್ಟು ಅರಣ್ಯ ಪ್ರದೇಶವನ್ನು ಸ್ವಿಸ್ ಸಂಸ್ಥೆಯ ಸಹಾಯದೊಂದಿಗೆ ಸಾಗುವಳಿಗೆ ಅನುಗೊಳಿಸಿ, ನಿರ್ವಾಸಿತರಿಗೆ ಕೊಡಲಾಯಿತು. ವಿದೇಶಗಳಲ್ಲಿಯೂ ಬೇಡಿಕೆಯಿರುವಂತಹ ಅತ್ಯಂತ ಸುಂದರವಾದ ಜಮಖಾನೆಗಳನ್ನು ಇಲ್ಲಿನ ಎರಡು ಕೇಂದ್ರಗಳಲ್ಲಿ ನೇಯಲಾಗುತ್ತದೆ. ಬಂಜರು ಭೂಮಿಯನ್ನು ಅವರು ಪ್ರಗತಿಶೀಲ ಯಾಂತ್ರೀಕೃತ ಸಾಗುವಳಿಯ ಕೇಂದ್ರವನ್ನಾಗಿಸಿದ್ದಾರೆ. ಇಲ್ಲಿನ ಟಿಬೇಟನ್ ಜನತೆಯ ಜಾನಪದ ಕಲಾಕೂಟಗಳು ಮತ್ತು ಧಾರ್ಮಿಕ ಕೇಂದ್ರಗಳು ಈ ಸ್ಥಳದ ಆಕರ್ಷಣೆಯನ್ನು ಹೆಚ್ಚಿಸಿವೆ.

ಬೈಲಹೊಂಗಲ : (ಬೆಳಗಾವಿ ಜಿ; ತಾ. ಕೇ; ಜನ: 26,465) ಈ ಸ್ಥಳ ಬೆಂಗಳೂರಿನಿಂದ ಸುಮಾರು 560 ಕಿಮೀ ಹಾಗೂ ಬೆಳಗಾವಿಯ ಪೂರ್ವಕ್ಕೆ ಸುಮಾರು 43 ಕಿಮೀ ದೂರದಲ್ಲಿದೆ. ವಿಶಾಲವಾದ ಬಯಲು ಪ್ರದೇಶದ ಮಧ್ಯೆ ಇರುವ ದಿಬ್ಬ ಅಥವಾ ಎತ್ತರದ ಸ್ಥಳದಲ್ಲಿ ಈ ಸ್ಥಳವಿರುವುದರಿಂದ ಇದಕ್ಕೆ ಬೈಲಹೊಂಗಲ ಎಂಬ ಹೆಸರು ಬಂದಿರಬೇಕು. ಹಿಂದೆ ಈ ಪ್ರದೇಶಕ್ಕೆ 'ಕುಂದರನಾಡು' ಎಂಬ ಹೆಸರಿತ್ತು. 1919ರಲ್ಲಿ ಇಲ್ಲಿ ಪುರಸಭೆಯು ಆರಂಭವಾಯಿತು. ಈ ಊರಿನ ಪಾಳು ಕೋಟೆಯ ಹೊರಭಾಗದಲ್ಲಿರುವ ರಾಮಲಿಂಗೇಶ್ವರಾಲಯವನ್ನು ಸ್ಥಳೀಯವಾಗಿ 'ಕರಿಗುಡಿ' ಎಂದು ಕರೆಯುತ್ತಾರೆ. ಇದು ಮೂಲತಃ ಒಂದು ಜೈನ ಬಸದಿಯಾಗಿತ್ತೆಂದು ತೋರುತ್ತದೆ. ಈ ದೇಗುಲದಲ್ಲಿ ಸವದತ್ತಿ ಮತ್ತು ಬೆಳಗಾವಿಯ ರಟ್ಟರ 12 ನೇಯ ಶತಮಾನದ ಎರಡು ಶಾಸನಗಳಿವೆ. ಚಿಕ್ಕಗುಡ್ಡದ ಮೇಲೆ ಮರಡಿ ಬಸವಣ್ಣ ಎಂದು ಹೇಳುವ ಬಸವನ ಗುಡಿಯಿದೆ. ಚೆನ್ನಬಸವಣ್ಣನು ಉಳವಿಗೆ ಹೋಗುವ ಮಾರ್ಗದಲ್ಲಿ ಇದನ್ನು ಸ್ಥಾಪಿಸಿ ಹೋದನೆಂದು ಹೇಳುತ್ತಾರೆ. ಹಫೀಜ್ ಬಸಿ ದರ್ಗಾ ಹಾಗೂ ಒಂದು ಮಸೀದಿ ಇಲ್ಲಿವೆ. ಬೈಲಹೊಂಗಲ ಪ್ರದೇಶವು ಕಿತ್ತೂರು ರಾಜ್ಯದ ಇತಿಹಾಸದೊಡನೆ ನಿಕಟ ಸಂಬಂಧ ಹೊಂದಿದೆ. ಕಿತ್ತೂರು ರಾಣಿ ಚೆನ್ನಮ್ಮನನ್ನು 1824ರಿಂದ 1829ರವರೆಗೆ (ಮರಣದವರೆಗೆ) ಬೈಲಹೊಂಗಲದ ಕೋಟೆಯಲ್ಲಿ ಬಂಧಿಸಿಡಲಾಗಿತ್ತು. ಇಲ್ಲಿಯ ಕಲ್ಮಠವೆಂಬ ವೀರಶೈವ ಮಠದಲ್ಲಿ ಈ ವೀರಾಗ್ರಣಿಯ ಸಮಾಧಿಯಿದೆ. ತಿಪ್ಪೆ ಮಠವು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತದೆ. ವ್ಯಾಪಾರ-ವಾಣಿಜ್ಯಗಳ ದೃಷ್ಟಿಯಿಂದಲೂ ಬೈಲಹೊಂಗಲ ಹೆಸರುವಾಸಿಯಾಗಿದೆ. ಈ ತಾಲೂಕಿನ ಹಲವೆಡೆಗಳಲ್ಲಿ ವಿಶಿಷ್ಟವಾದ ಶೈಲಿಯ ವಿಗ್ರಹಗಳು ಪತ್ತೆಯಾಗಿವೆ. ಸಂಗೊಳ್ಳಿಯಲ್ಲಿರುವ ದ್ವಿಭುಜ ಗಣೇಶ,

ಅಟಗಿಯ ಕೇಶವನೇವರ ಶಿಲ್ಪ ಏಣಗಿಯ ಹನುಮಾನ್, ಹೊಳೆ ನಾಗಲಾಪುರದ ಸೂರ್ಯ, ಕುರಗುಂದದ ವರ್ಧಮಾನ ಶಿಲ್ಪ ಹಾಗೂ ಸವಟಗಿಯ ವೀರಗಲ್ಲು ಹಾಗೂ ಮಹಾಸತಿ ಕಲ್ಲುಗಳನ್ನು ಪ್ರಮುಖವಾಗಿ ಹೆಸರಿಸಬಹುದು.

ಬ್ಲಫ್ : (ಮಂಡ್ಯ ಜಿ ; ಮಳವಳ್ಳಿ ತಾ.) ಬ್ಲಫ್ ಎಂಬುದು 1902ರಲ್ಲಿ ಆರಂಭವಾದ ಜಲ ವಿದ್ಯುತ್ತಿನ ಕೇಂದ್ರ ವಾಗಿದ್ದು ಅದನ್ನು ಸರ್ ಶೇಷಾದ್ರಿ ಅಯ್ಯರ್ ವಿದ್ಯುತ್ ಕೇಂದ್ರ ಎಂದೂ ಕರೆಯಲಾಗುತ್ತದೆ. ಅದು ಮಳವಳ್ಳಿ-ಕೊಳ್ಳೇಗಾಲ ರಸ್ತೆಯಲ್ಲಿ ಮಳವಳ್ಳಿಯಿಂದ ಐದು ಕಿಮೀ ದೂರದಲ್ಲಿದೆ. ಈ ವಿದ್ಯುದುತ್ಪಾದನಾ ಕೇಂದ್ರವು ಭಾರತದಲ್ಲಿಯೇ ಅತ್ಯಂತ ಹಳೆಯ ದಾದ ಕೇಂದ್ರಗಳಲ್ಲಿ ಒಂದಾಗಿದ್ದು, ಅದು 42,000 ಕಿ ವ್ಯಾ ಸಷ್ಟು ಶಕ್ತಿ ಉತ್ಪಾದನಾ ಸಾಮರ್ಥ್ಯ ಹೊಂದಿದೆ. ವಿದ್ಯುಜ್ಜನಕ ಕೇಂದ್ರದ ಯಂತ್ರಗಳಿಗೆ ಸರಬರಾಜು ಮಾಡಲು ನೀರಿನ ಕೊಳವೆ ಗಳನ್ನು ಹಾಕಲು ಅನುಕೂಲ ಮಾಡಿಕೊಟ್ಟ 450 ಅಡಿ ಎತ್ತರದ ಬ್ಲಫ್ (ಕಡಿದಾದ ಕಣಿವೆ)ನ ಕಾರಣದಿಂದಾಗಿ ಇದಕ್ಕೆ ಬ್ಲಫ್ ಎಂದು ಹೆಸರು ಬಂದಿದೆ. ಟ್ರಾಲಿಯಲ್ಲಿ ಕುಳಿತು ಕೆಳಗಿಳಿದು ಹೋಗಿ ಸಂದರ್ಶಕರು ವಿದ್ಯುಜ್ಜನಕದ ಕಾರ್ಯ ವಿಧಾನವನ್ನು ನೋಡಬಹುದು. ಮೇಲ್ತುದಿಯಿಂದ ಕೆಳಗಿನ ತುದಿಯವರೆಗಿನ ಟ್ರಾಲಿ ಮಾರ್ಗದ ದೂರ 750 ಅಡಿಗಳಷ್ಟಿದೆ. ಬ್ಲಫ್ ಅತ್ಯಂತ ಸುಂದರವಾದ ವಿಹಾರ ಧಾಮವಾಗಿದೆ. ಶಿವಸಮುದ್ರ ದ್ವೀಪ ದಲ್ಲಿ ಎರಡು ಆಕರ್ಷಕ ಜಲಪಾತಗಳಿವೆ. ಕಾವೇರಿಯ ಪಶ್ಚಿಮ ವಾಹಿನಿಯ ಗಗನಚುಕ್ಕಿ ಜಲಪಾತವು ಬ್ಲಫ್‌ನಿಂದ ನಾಲ್ಕು ಕಿಮೀ ದೂರದಲ್ಲಿದೆ. ಇದು ಮಳವಳ್ಳಿ ತಾಲೂಕಿನಲ್ಲಿದೆ. ಕಾವೇರಿಯ ಪೂರ್ವ ವಾಹಿನಿಯಾಗಿ ಭರಚುಕ್ಕಿ ಜಲಪಾತ ವಿದ್ದು (ಕೊಳ್ಳೇಗಾಲ ತಾಲೂಕು) ಅದರಲ್ಲಿ ನೀರು ರಭಸದಿಂದ 30 ಅಡಿ ಎತ್ತರದಿಂದ ಧುಮುಕುತ್ತದೆ. ಈ ಎರಡು ಜಲಪಾತಗಳು ಕೂಡಿ ಮನಸ್ಸನ್ನು ಸೆರೆ ಹಿಡಿಯುವ ದೃಶ್ಯವನ್ನು ನಿರ್ಮಿಸಿವೆ. ಈ ಶಿವಸಮುದ್ರ ದ್ವೀಪದಲ್ಲಿರುವ ರಂಗನಾಥ ದೇವಾಲಯವು ಹೊಯ್ಸಳರ ಕಾಲದ ಬೃಹತ್ ಕಟ್ಟಡವಾಗಿದೆ. ಇಲ್ಲಿನ ದೇವತೆಯನ್ನು ಜಗನ್ಮೋಹನ ರಂಗನಾಥ ಎಂದು ಕರೆಯ ಲಾಗಿದ್ದು, ಆ ಮೂರ್ತಿಯು ವಿಶ್ರಮಿಸುವ ಭಂಗಿಯಲ್ಲಿದ್ದು ಎಂಟು ಅಡಿ ಉದ್ದವಾಗಿದೆ. ಈ ಸ್ಥಳವನ್ನು ಮಧ್ಯರಂಗ ಎಂದೂ ಕರೆಯಲಾಗುತ್ತದೆ. ಕಾವೇರಿ, ತಕ್ಷಕ ಸರ್ಪ, ರಾಮಾನುಜಾ ಚಾರ್ಯ, ಆಳ್ವಾರರು ಮುಂತಾದವರ ಮೂರ್ತಿಗಳನ್ನು ಈ ದೇವಾಲಯದಲ್ಲಿ ಇರಿಸಲಾಗಿದೆ. ಬೃಹದಾಕಾರದ ಸುಗ್ರೀವನ ಪ್ರತಿಮೆಯೊಂದು ಅಲ್ಲಿದೆ. ಉನ್ನತವಾದ, ವಿವರವಾದ ಹಾಗೂ ಉತ್ಕೃಷ್ಟ ಕಲಾಕುಸುರಿನ ಕಾರ್ಯಗಳನ್ನು ಒಳಗೊಂಡ ಮಹಾ ದ್ವಾರವನ್ನುಳ್ಳ ಸೋಮೇಶ್ವರ ದೇವಾಲಯವೂ ತುಂಬ ದೊಡ್ಡ ದಾಗಿದೆ. ಅದರಲ್ಲಿ ಗಣೇಶ ಹಾಗೂ ಬಾಲಸುಬ್ರಹ್ಮಣ್ಯರ ಸುಂದರ ಪ್ರತಿಮೆಗಳಿವೆ. ಈ ದ್ವೀಪದಲ್ಲಿ ತಮ್ಮ ಪ್ರಧಾನ ಕೋಟೆ ಯನ್ನು ಹೊಂದಿದ್ದ ಉಮ್ಮತ್ತೂರಿನ ದೊರೆಗಳಿಗೆ ಸೋಮೇಶ್ವರನು ಕುಲದೇವತೆಯಾಗಿದ್ದನು. ಅಲ್ಲಿ ಮುಸ್ಲಿಮ ಸಂತ ಪೀರ ಸಾಹಿಬನ ಒಂದು ಗೋರಿಯಿದೆ. ಭರಚುಕ್ಕಿ ದರ್ಗಾ ಮತ್ತು ರಂಗನಾಥ ದೇವಾಲಯದ ಪ್ರದೇಶವು ಕೊಳ್ಳೇಗಾಲ ತಾಲೂಕಿನ ಪಾಳ್ಯ ಹೋಬಳಿಗೆ ಸೇರುತ್ತದೆ. ಶಿವಸಮುದ್ರದ ಸಮೀಪದ ಸತ್ಯಗಾಲ ಎಂಬಲ್ಲಿ ಒಂದು ಕಾಗದದ ಕಾರ್ಖಾನೆಯಿದೆ.

ಬ್ಯಾಡಗಿ : (ಧಾರವಾಡ ಜಿ; ತಾ. ಕೇ; ಜನ: 17,933) ಬ್ಯಾಡಗಿ ನಗರವು ಧಾರವಾಡದಿಂದ 112 ಕಿಮೀ ದೂರದಲ್ಲಿ ಹಾಗೂ, ಬೆಂಗಳೂರಿನಿಂದ 323 ಕಿಮೀ ದೂರದಲ್ಲಿದೆ. ಇಲ್ಲಿನ ಪುರಸಭೆಯನ್ನು 1879ರಲ್ಲಿ ಸ್ಥಾಪಿಸಲಾಗಿದೆ. ಈ ಊರಿನಲ್ಲಿ ನಾಲ್ಕು ಶಿಲಾಶಾಸನಗಳಿದ್ದು, ಅವುಗಳಲ್ಲಿ ಅತ್ಯಂತ ಪ್ರಾಚೀನವಾದ ಕ್ರಿ.ಶ. 902ನೇಯ ವರ್ಷದ ಶಾಸನವು, ರಾಷ್ಟ್ರ ಕೂಟ ದೊರೆ ಎರಡನೇಯ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದ್ದು ಎರಡು ಶಾಸನಗಳು ಚಾಳುಕ್ಯ ಆರನೇಯ ವಿಕ್ರಮಾದಿತ್ಯ ಹಾಗೂ ಸೇಉಣ ಸಿಘಂಣನ ಕಾಲಕ್ಕೆ ಸೇರಿದವುಗಳಾಗಿವೆ. ಇತ್ತೀಚಿನ ಶಾಸನ ವೊಂದು ಗೌಡಿಕೆಗೆ ಸಂಬಂಧಿಸಿದ ಎರಡು ಬಣಗಳ ವಿವಾದದ ಕುರಿತು ನೆರೆಯ ಹಳ್ಳಿಗಳ ಪ್ರತಿನಿಧಿಗಳನ್ನು ಒಳಗೊಂಡ ಸಭೆಯು ಇತ್ತ ನಿರ್ಣಯವನ್ನೂ ವರ್ಣಿಸುತ್ತದೆ. ಇಲ್ಲಿ ಹೇಳಿಕೊಳ್ಳು ವಂತಹ ಪ್ರಾಚೀನ ಅವಶೇಷಗಳೇನೂ ಇಲ್ಲ. ಆದರೂ ನಗರದ ಪ್ರಾಚೀನ ದೇವಾಲಯಗಳಲ್ಲಿ ಮಹತ್ವದವುಗಳೆಂದರೆ ಸಿದ್ದೇಶ್ವರ (ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ)ಮತ್ತು ಕಲ್ಮೇಶ್ವರ. ವೀರಭದ್ರ, ಬಸವಣ್ಣ, ಗ್ರಾಮ ದೇವತೆ ಮತ್ತು ದುರ್ಗಾ ದೇವಿಯ ಗುಡಿಗಳಿದ್ದು, ಎಲ್ಲವೂ ಆಧುನಿಕ ಕಟ್ಟಡಗಳಾಗಿವೆ. ಮೆಣಸಿನಕಾಯಿ ವ್ಯಾಪಾರಕ್ಕೆ ಬ್ಯಾಡಗಿಯು ಜಿಲ್ಲೆಯಲ್ಲೆಲ್ಲ ಪ್ರಸಿದ್ಧವಾಗಿದೆ. ಬ್ಯಾಡಗಿಯಿಂದ ಪಶ್ಚಿಮಕ್ಕೆ 15 ಕಿಮೀ ದೂರದಲ್ಲಿರುವ ಕಾಗಿನೆಲೆ ಎಂಬುದು ಈ ತಾಲೂಕಿನ ಇನ್ನೊಂದು ಐತಿಹಾಸಿಕ ಮಹತಿಯ ಊರಾಗಿದೆ. ಈ ಊರಿನಲ್ಲಿ ಪ್ರಾಚೀನ ಕಾಲದ ಆದಿಕೇಶವ, ಕಾಳಹಸ್ತೀಶ್ವರ, ಲಕ್ಷ್ಮೀನರಸಿಂಹ, ಸಂಗ ಮೇಶ್ವರ, ಸೋಮೇಶ್ವರ ಮತ್ತು ವೀರಭದ್ರ ದೇವಸ್ಥಾನಗಳಿವೆ. ಈ ಎಲ್ಲ ದೇವಸ್ಥಾನಗಳಲ್ಲಿ ಒಟ್ಟಿಗೆ 12 ಶಿಲಾಶಾಸನಗಳಿದ್ದು, ಅವುಗಳಲ್ಲಿ ಬಹುಸಂಖ್ಯ ಶಾಸನಗಳು ಕಲ್ಯಾಣಿ ಚಾಳುಕ್ಯರ ಆಳ್ವಿಕೆಗೆ ಸಂಬಂಧಿಸಿದವುಗಳಾಗಿದ್ದು, ಒಂದು ಕ್ರಿ.ಶ. 1282 ಇಸ್ವಿಯ ಶಾಸನವು ಸೇಉಣ ರಾಮಚಂದ್ರನ ಕಾಲದ್ದಾಗಿದೆ. ಇಲ್ಲಿನ ಮಂದಿರಗಳನ್ನು ಸ್ಥಳೀಯ ಅಧಿಕಾರಿಗಳಾಗಿದ್ದಿರಬಹುದಾದ ಕೊಂಡಪ್ಪ ಮತ್ತು ವೆಂಕಪ್ಪ ಎಂಬ ಇಬ್ಬರು ವ್ಯಕ್ತಿಗಳು ಕಟ್ಟಿಸಿ ದುದಾಗಿ ಹೇಳಲಾಗುತ್ತದೆ. 16ನೇಯ ಶತಮಾನದಲ್ಲಿ ಆಗಿ ಹೋದ ಪ್ರಸಿದ್ಧ ಹರಿದಾಸ ಮತ್ತು ಕವಿಯಾಗಿದ್ದ ಕನಕದಾಸರ ಕೀರ್ತನೆಗಳಲ್ಲಿ ಕಾಗಿನೆಲೆ ಆದಿಕೇಶವ ಎಂಬ ಅಂಕಿತವಿದೆ. ಈ ಊರಿನಲ್ಲಿ ಭಂಡಾರಿಕೇರಿಸ್ವಾಮಿಯವರಿಗೆ ಸೇರಿದ ಒಂದು ಗುಡಿ ಯಿದ್ದು, ಮೂಲತಃ ಅದು ಜೈನ ಮಂದಿರವಾಗಿತ್ತು ಎಂದು ಹೇಳಲಾಗುತ್ತದೆ.

ಭಟ್ಕಳ : (ಉ. ಕ. ಜಿ; ತಾ. ಕೇ; ಜನ: 25,666) ಉತ್ತರ ಕನ್ನಡ ಜಿಲ್ಲೆಯ ದಕ್ಷಿಣದ ತುದಿಯಲ್ಲಿರುವ ಭಟ್ಕಳವು ಬೆಂಗಳೂರಿನಿಂದ 452 ಕಿಮೀ ದೂರದಲ್ಲಿದೆ. ಪ್ರಾಚೀನ ಕಾಲದಲ್ಲಿ ಭಟ್ಕಳವನ್ನು ಸುಸಗಡಿ ಗ್ರಾಮ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಭಟ್ಕಳವು ಒಂದು ಸಣ್ಣ ನದಿಯ ತೀರದಲ್ಲಿದೆ ಎಂದು ಬುಕನನ್ ವರ್ಣಿಸಿದ್ದಾನೆ. ಪ್ರಾಚೀನ ಕಾಲದಲ್ಲಿ, ವಿಶೇಷವಾಗಿ ವಿಜಯನಗರದ ಅಧೀನದಲ್ಲಿದ್ದಾಗ ಅದು ಪಶ್ಚಿಮ ಕರಾವಳಿಯ ಒಂದು ಮಹತ್ವದ ವ್ಯಾಪಾರೀ ಕೇಂದ್ರವಾಗಿತ್ತು. 14ನೇಯ ಶತಮಾನದಿಂದೀಚೆಗೆ ಭಟ್ಕಳವು ವಿಜಯನಗರ ಅರಸರ ಸಾಮಂತರಾಗಿದ್ದ ಹಾಡುವಳ್ಳಿಯ ಸಾಳುವ ದೊರೆಗಳ ಅಧೀನವಾಗಿತ್ತು. ಬರ್ಬೋಸಾ ಮತ್ತು ಪಾಯಿಸ್‌ರಂತಹ ಅನೇಕ ವಿದೇಶೀ ಪ್ರವಾಸಿಕರು ಈ ಸ್ಥಳಕ್ಕೆ ಭೇಟಿಯಿತ್ತು, ಅಲ್ಲಿನ ವ್ಯಾಪಾರ ಮತ್ತು ಅಲ್ಲಿಂದ ವಿಜಯನಗರ ರಾಜಧಾನಿಯವರೆಗಿನ ಒಳಮಾರ್ಗವನ್ನು ಕುರಿತು ಬರೆದಿದ್ದಾರೆ. ಪೋರ್ಚುಗೀಸರು ಅಲ್ಲಿ ಒಂದು ವ್ಯಾಪಾರಿ ಮಳಿಗೆಯನ್ನು ತೆರೆಯುವುದಕ್ಕಾಗಿ ಸಾಮ್ರಾಜ್ಯದ ಒಪ್ಪಿಗೆಯನ್ನು ಕೇಳಿದಾಗ ಕೃಷ್ಣದೇವರಾಯನು ಅದನ್ನು ವಿನಮ್ರ ರೀತಿಯಲ್ಲಿ ತಿರಸ್ಕರಿಸಿದ್ದನು. ಅನಂತರ, ಹಾಡುವಳ್ಳಿಯ ರಾಣಿ ಚನ್ನಾದೇವಿಯನ್ನು 1542ರಲ್ಲಿ ಸೋಲಿಸಿ ಪೋರ್ಚುಗೀಸರು ಭಟ್ಕಳವನ್ನು ಸುಟ್ಟು ಅಲ್ಲಿರುವ ಎಲ್ಲ ದೇವಾಲಯಗಳನ್ನು ನಿರ್ನಾಮಗೊಳಿಸಿದರು. 1670ರಲ್ಲಿ ಬ್ರಿಟಿಷರು ಭಟ್ಕಳದಲ್ಲಿ ಒಂದು ವ್ಯಾಪಾರೀ ಮಳಿಗೆಯನ್ನು ಸ್ಥಾಪಿಸಿದರು. ಮುಂದೆ ಭಟ್ಕಳವು, ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರ ವಶವಾಯಿತು. ಹಾಡುವಳ್ಳಿ ದೊರೆಗಳಿಂದ ನಿರ್ಮಿತವಾದವೆಂದು ಹೇಳಲಾಗುವ ಕೆಲವು ಜೈನ ಬಸದಿಗಳು ಅಲ್ಲಿ ಇದ್ದರೂ, ಅವು 1542ರ ನಂತರ ನಿರ್ಮಿತವಾದವುಗಳಾಗಿವೆ. ಭಟ್ಕಳದ ಜೈನ ಕಟ್ಟಡಗಳಲೆಲ್ಲ ದೊಡ್ಡದಾದ ಚಂದ್ರನಾಥೇಶ್ವರ ಬಸದಿಯನ್ನು ಜಟ್ಟಪ್ಪನಾಯಕನೆಂಬಾತನು ಕಟ್ಟಿಸಿದನು. ಅದರಲ್ಲಿ ಅಗ್ರ ಮಂಟಪ, ಸಭಾ ಮಂಟಪ ಮತ್ತು ಗರ್ಭಗೃಹಗಳಿವೆ. ಗುಡಿಯ ಒಳಗಡೆ ಜಟ್ಟಪ್ಪನಾಯಕನ ನಾಲ್ಕು ಶಾಸನಗಳಿವೆ. ಪಾರ್ಶ್ವನಾಥ ಬಸದಿಯು ಇನ್ನೊಂದು ಮಹತ್ವದ ಜೈನ ಕಟ್ಟಡವಾಗಿದೆ. ಭಟ್ಕಳದಲ್ಲಿ ಆದಿನಾರಾಯಣ, ಚೋಳೇಶ್ವರ, ನರಸಿಂಹ, ತಿರುಮಲ, ಅಡಕೆ ನಾರಾಯಣ ಎಂಬ ದೇವಾಲಯಗಳಿವೆ. ಈ ಎಲ್ಲ ದೇವಾಲಯಗಳನ್ನು ಜನಪ್ರಿಯ ದ್ರಾವಿಡ ಶೈಲಿಯಲ್ಲಿ ಕಟ್ಟಲಾಗಿದ್ದು, ಹೆಚ್ಚಿನ ದೇವಾಲಯಗಳ ಮೇಲೆ ಕಲ್ಲಿನ ಮೇಲ್ಛಾವಣಿಗಳಿವೆ. ಖೇತಪ್ಪಯ್ಯ ನಾರಾಯಣ ಗುಡಿಯು ಈ ಊರಿನಲ್ಲಿರುವ ಅತ್ಯಂತ ಸುಂದರ ಕಟ್ಟಡವಾಗಿದ್ದು, ಅದರ ಹೊರ ಗೋಡೆಗಳ ಮೇಲೆ ರಾಮಾಯಣದ ಕಥೆಗಳು ಮತ್ತು ಸಾಮಾಜಿಕ ಜೀವನದ ದೃಶ್ಯಗಳನ್ನು ಚಿತ್ರಿಸುವ ಉಬ್ಬು ಶಿಲ್ಪಗಳಿಂದ ಅಲಂಕರಿಸಲಾಗಿದೆ. ಅಲ್ಲಿ ಇತ್ತೀಚಿನ ಕಾಲದ ಕ್ರೈಸ್ತ ದೇವಾಲಯವೊಂದಿದೆ. ಅಲ್ಲಿ ಹಲವು ಮಸೀದಿಗಳಿದ್ದು ಅವುಗಳಲ್ಲಿ ಜಮಾ ಮತ್ತು ಸುಲ್ತಾನ ಮಸೀದಿಗಳು ವಿಸ್ತಾರವಾಗಿವೆ. ಕೊಂಕಣಿ ಭಾಷೆಯ ಮುಸ್ಲೀಮರಾದ ನವಾಯತರು ಇಲ್ಲಿ ವಿಶೇಷವಾಗಿ ಕಂಡುಬರುತ್ತಾರೆ ಮತ್ತು ಅರಬರನ್ನು ಹೋಲುವ ಅವರು ವ್ಯಾಪಾರ ವೃತ್ತಿಗಾಗಿ ಹೆಸರಾಗಿದ್ದಾರೆ. ಭಟ್ಕಳದಿಂದ ಪಶ್ಚಿಮಕ್ಕೆ ಆರು ಕಿಮೀ ಅಂತರದಲ್ಲಿ ಒಂದು ಚಿತ್ತಾಕರ್ಷಕವಾದ ದ್ವೀಪವಿದೆ. ಅದು ಜಾಲಿಕುಂಡ ಅಥವಾ ಹಾಗ್‌ದ್ವೀಪವೆಂದು ಜನಪ್ರಿಯವಾಗಿದ್ದು, 91 ಮೀ ಎತ್ತರದಲ್ಲಿದೆ. ಅಲ್ಲಿ ನೇತ್ರಾಣಿ ದ್ವೀಪವೆಂಬ ಇನ್ನೊಂದು ದ್ವೀಪವಿದ್ದು ಅದನ್ನು ಜಾಲಿಕುಂಡದ ಬಳಿಯಿಂದ ತಲಪಬಹುದು. 'ಪಿಜನ್ ಅಯರ್‌ಲ್ಯಾಂಡ್' ಅಂದರೆ 'ಪಾರಿವಾಳಗಳ ದ್ವೀಪ'ವೆಂದು ಬ್ರಿಟಿಷರಿಂದ ವರ್ಣಿತವಾದ ಅದು ಇನ್ನೊಂದು ರಮ್ಯ ಸ್ಥಳವಾಗಿದೆ. ಭಟ್ಕಳದಲ್ಲಿ ಪುರಸಭೆಯಿದೆ. ಸಂಗೀತಪುರವೆಂದೂ ಹೆಸರು ಪಡೆದಿದ್ದ ಹಾಡುವಳ್ಳಿಯು ಭಟ್ಕಳದಿಂದ 19 ಕಿಮೀ ಅಂತರದಲ್ಲಿ ಭಟ್ಕಳ-ಸಾಗರ ಮಾರ್ಗದ ಮೇಲಿದೆ. 14 ರಿಂದ 16ನೇಯ ಶತಮಾನಗಳ ಕಾಲದಲ್ಲಿ ಸಾಳುವರು ಈ ಊರಿನಿಂದ ಆಳುತ್ತಿದ್ದರು. ಹಾಡುವಳ್ಳಿಯು ಚಂದ್ರಗಿರಿ ಹಾಗೂ ಇಂದ್ರಗಿರಿ ಎಂಬ ಎರಡು ಗುಡ್ಡಗಳ ಮಧ್ಯದಲ್ಲಿದೆ. ಇದು ಜೈನ ಧರ್ಮದ ಕೇಂದ್ರವಾಗಿತ್ತು. ಬಿಳಗಿ ಮತ್ತು ಸ್ವಾದಿಯ ಅರಸರು ಇಲ್ಲಿನ ಜೈನ ಮಠಗಳ ಭಕ್ತರಾಗಿದ್ದರು. ನೇಮಿನಾಥ ಬಸದಿ, ಚಂದ್ರನಾಥ ಬಸದಿ, ಪಾರ್ಶ್ವನಾಥ ಬಸದಿ ಮುಂತಾದವು ಹಾಡುವಳ್ಳಿಯ ಪ್ರಮುಖ ಜೈನ ಕಟ್ಟಡಗಳಾಗಿವೆ. ಐದು ಸ್ತಂಭಗಳುಳ್ಳ ಮಂಟಪವನ್ನು ಒಳಗೊಂಡ ಇಲ್ಲಿನ ಮಾನಸ್ತಂಭವು ದಕ್ಷಿಣ ಭಾರತದಲ್ಲಿಯೇ ಅತ್ಯಂತ ಎತ್ತರವಾದುದೆಂದು ತಿಳಿಯಲಾಗಿದೆ. 24 ತೀರ್ಥಂಕರರ ಮೂರ್ತಿಗಳನ್ನು ಇಲ್ಲಿರುವ ಪದ್ಮಾವತಿ ಮಂದಿರದಲ್ಲಿ ಸಾಲಾಗಿ ಪ್ರತಿಷ್ಠಾಪಿಸಿದೆ. ಈ ಮಂದಿರದ ಪರಿಸರದಲ್ಲಿ ಹಲವು ವೀರಗಲ್ಲು, ನಿಷಿಧಿ ಕಲ್ಲುಗಳಿವೆ.

ಭದ್ರಾವತಿ : (ಶಿವಮೊಗ್ಗಾ ಜಿ ; ತಾ. ಕೇ ; ಜನ : 1,30,159) ಪ್ರಾಚೀನ ಕಾಲದಲ್ಲಿ ಬೆಂಕಿಪುರ, ಬೆಂಕಿಯಪುರ ಮತ್ತು ವಂಕಿಪುರ ಎಂದು ಕರೆಯಲಾಗುತ್ತಿದ್ದ ಭದ್ರಾವತಿಯು ಭದ್ರಾನದಿಯ ತೀರದಲ್ಲಿ ಶಿವಮೊಗ್ಗಾ ನಗರದಿಂದ 16 ಕಿಮೀ ಅಂತರದಲ್ಲಿ ಮತ್ತು ಬೆಂಗಳೂರು ನಗರದಿಂದ 256 ಕಿಮೀ ದೂರದಲ್ಲಿ ಇದೆ. ಹೊಯ್ಸಳ ವಾಸ್ತುಶಿಲ್ಪ ಮಾದರಿಯಲ್ಲಿರುವ ಇಲ್ಲಿನ ಲಕ್ಷ್ಮೀನರಸಿಂಹ ದೇವಾಲಯವು 13ನೇಯ ಶತಮಾನದ ಮಧ್ಯದಲ್ಲಿ ನಿರ್ಮಿತವಾಗಿದ್ದು, ಪೂರ್ವಾಭಿಮುಖವಾಗಿದೆ. ಮೂರು ಗರ್ಭಗೃಹಗಳು ಮತ್ತು ಮೂರು ಶುಕನಾಸಿಗಳನ್ನುಳ್ಳ ಇದು ತ್ರಿಕೂಟಾಚಲ ಮಾದರಿಯಲ್ಲಿದೆ. ಇಲ್ಲಿ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರಖಾನೆ ನಿಯಮಿತ (ಈಗ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರಖಾನೆ) ಇದ್ದು ಇದು ಬೀಡು ಕಬ್ಬಿಣ, ಮೆದು ಉಕ್ಕು ಹಾಗೂ ಮಿಶ್ರಧಾತುಗಳ ಉತ್ಪಾದನೆಯಲ್ಲಿ ನಿರತವಾಗಿದೆ. ಪ್ರತೀದಿನ 60 ಟನ್ನುಗಳಷ್ಟು ಉತ್ಪಾದನಾ ಸಾಮರ್ಥ್ಯದ ಸಿಮೆಂಟ್ ಕಾರಖಾನೆಯನ್ನು 1938

ರಲ್ಲಿ ಇಲ್ಲಿ ಸ್ಥಾಪಿಸಲಾಗಿದೆ. ಮೈಸೂರು ಕಾಗದ ಕಾರಖಾನೆಯನ್ನು ಸಂಯುಕ್ತ ಬಂಡವಾಳ ಹೂಡಿಕೆ ಸಂಸ್ಥೆಯಾಗಿ 1936ರಲ್ಲಿ ಇಲ್ಲಿ ಸ್ಥಾಪಿಸಲಾಯಿತು. ಇಲ್ಲಿ ಅಖಿಲ ಭಾರತ ಆಕಾಶವಾಣಿಯ ಉಪಕೇಂದ್ರವೊಂದಿದೆ. ಭದ್ರಾ ಯೋಜನಾ ಬಡಾವಣೆಯನ್ನು ಒಳಗೊಂಡ ಸಿಂಗನಮನೆಯು (ಜನ: 4,313) ಭದ್ರಾವತಿಯಿಂದ 18 ಕಿಮೀ ದೂರದಲ್ಲಿದೆ. ಭದ್ರಾ ಯೋಜನೆಯ ಕಾರ್ಯವನ್ನು 1947ರಲ್ಲಿ ಆರಂಭಿಸಿ, 1972ರಲ್ಲಿ ಪೂರ್ತಿಗೊಳಿಸಲಾಯಿತು. ಅಣೆಕಟ್ಟಿನ ಕಲ್ಲು ಕಟ್ಟಡದ ಎಡ ಅರ್ಧಭಾಗ ಮತ್ತು ಎಡಗಾಲುವೆಯ ವಿದ್ಯುದಾಗಾರಗಳು ಇಲ್ಲಿದ್ದರೆ, ಅಣೆಕಟ್ಟಿನ ಕಟ್ಟಡದ ಉಳಿದ ಭಾಗ ಮತ್ತು ಬಲಗಾಲುವೆಯ ವಿದ್ಯುದಾಗಾರಗಳು ನೆರೆಯ ಚಿಕ್ಕಮಗಳೂರು ಜಿಲ್ಲೆಯ ಸೀಮೆಯಲ್ಲಿವೆ. ಈ ಪ್ರದೇಶದಲ್ಲಿ ಉನ್ನತ ಶಿಕ್ಷಣದ ಪ್ರಗತಿಯ ಉದ್ದೇಶದಿಂದ 1978ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಇಲ್ಲಿ ಒಂದು ಸ್ನಾತಕೋತ್ತರ ಕೇಂದ್ರವನ್ನು ಆರಂಭಿಸಿದೆ.

**ಭಾಗಮಂಡಲ :** (ಕೊಡಗು ಜಿ; ಮಡಿಕೇರಿ ತಾ. ಜನ: 1,994) ಭಾಗಮಂಡಲವು ಮಡಿಕೇರಿಯಿಂದ 38 ಕಿಮೀ ಮತ್ತು ಬೆಂಗಳೂರಿನಿಂದ 288 ಕಿಮೀ ದೂರದಲ್ಲಿರುವ ಒಂದು ಹಳ್ಳಿ. ಪರಂಪರಾಗತ ಪ್ರತೀತಿಯಂತೆ ಈ ಊರಿಗೂ ಭಗಂಡ ಎಂಬ ಒಬ್ಬ ಋಷಿಗೂ ಸಂಬಂಧವನ್ನು ಕಲ್ಪಿಸಲಾಗುತ್ತದೆ. ಈ ಕ್ಷೇತ್ರವನ್ನು ಭಗಂಡ ಕ್ಷೇತ್ರವೆಂದೂ ಕರೆಯುತ್ತಾರೆ. ಕಾವೇರಿ ಮತ್ತು ಕನ್ನಿಕಾ ನದಿಗಳ ಸಂಗಮ ಸ್ಥಳ ಇರುವದು ಇಲ್ಲಿಯೇ. ಸುಜ್ಯೋತಿ ಎಂಬ ಗುಪ್ತವಾಹಿನಿಯು ಈ ಎರಡು ನದಿಗಳ ಸಂಗಮದಲ್ಲಿ ಬಂದು ಸೇರುತ್ತದೆಂಬ ನಂಬಿಕೆ ಇದೆ. ಆದುದರಿಂದ ಈ ಸ್ಥಳವು ತ್ರಿವೇಣಿ ಸಂಗಮವೆಂದು ಜನಾದರಣೀಯವಾಗಿದೆ, ಮತ್ತು ಯಾತ್ರಾಸ್ಥಳವಾಗಿದೆ. ನದಿಗಳ ಸಂಗಮದ ಸನಿಹದಲ್ಲಿಯೇ ಈಶ್ವರ, ಗಣಪತಿ, ಸುಬ್ರಹ್ಮಣ್ಯ ಮತ್ತು ವಿಷ್ಣು ಎಂಬ ನಾಲ್ಕು ಮುಖ್ಯ ದೇವಾಲಯಗಳು ಇವೆ. ಈ ನದಿಗಳು ಮತ್ತು ದೇವಾಲಯಗಳು ಅಸಂಖ್ಯ ಯಾತ್ರಾರ್ಥಿಗಳನ್ನು ವಿಶೇಷವಾಗಿ ತುಲಾ ಸಂಕ್ರಮಣದ ಕಾಲದಲ್ಲಿ ನಡೆವ ಕಾವೇರಿ ಪೂಜಾಪರ್ವ (ಕಾವೇರಿ ತೀರ್ಥೋದ್ಭವ) ಕಾಲದಲ್ಲಿ ಆಕರ್ಷಿಸುತ್ತವೆ. ಭಗಂಡೇಶ್ವರ ದೇವಾಲಯದ ಆವರಣದಲ್ಲಿ ಒಂದು ತಮಿಳು ಶಾಸನವಿದೆ. ಟಿಪ್ಪುಸುಲ್ತಾನನು ಈ ದೇವಾಲಯದ ಆವರಣವನ್ನು 1785 ಮತ್ತು 1790ರ ಅವಧಿಯಲ್ಲಿ ಒಂದು ಕೋಟೆಯನ್ನಾಗಿ ಪರಿವರ್ತಿಸಿಕೊಂಡು ಅಲ್ಲಿ ತನ್ನ ಸೈನ್ಯದ ಸಣ್ಣ ತುಕಡಿಯೊಂದನ್ನು ಇರಿಸಿದ್ದನು. ಭಾಗಮಂಡಲವನ್ನು ಆತನು ಅಫಜಲಾಬಾದ ಎಂದು ಕರೆದಿದ್ದನು. ಆದರೆ, 1790ರಲ್ಲಿ ಈ ಕೋಟೆಯಾಗಿದ್ದ ದೇವಾಲಯವನ್ನು ಕೊಡಗಿನ ದೊಡ್ಡ ವೀರ ರಾಜೇಂದ್ರನು ವಶಪಡಿಸಿಕೊಂಡನು. ಈ ಘರ್ಷಣೆಯಲ್ಲಿ ರಾಜನೇ ಸಮೀಪದ ಗುಡ್ಡದ ತುದಿಯಿಂದ ಮೊದಲು ಫಿರಂಗಿಯನ್ನು ಹಾರಿಸಿದಾಗ ಈ ದೇವಾಲಯ ಶಿಖರದ ಮೂರು ತಾಮ್ರದ ಹಾಳೆಗಳು ನಾಶವಾದವು. ಅನಂತರ ಅವನು ಅವುಗಳಿಗೆ ಪ್ರತಿಯಾಗಿ ನಾಲ್ಕು ಬೆಳ್ಳಿಯ ಹಾಳೆಗಳನ್ನು ಹೊದಿಸಿದನು. ಯಾತ್ರಾರ್ಥಿಗಳು ಮೊದಲು ಸಂಗಮದಲ್ಲಿ ಸ್ನಾನ ಮಾಡಿ ನಂತರ ತಮ್ಮ ಅಗಲಿದ ಪೂರ್ವಜರಿಗೆ ತರ್ಪಣವನ್ನು ನೀಡುವರು. ಅನಂತರ ಅವರು ತಲಕಾವೇರಿಯಲ್ಲಿ ಪವಿತ್ರ ಸ್ನಾನ ಮಾಡಲು ಗುಡ್ಡವನ್ನೇರುತ್ತಾರೆ. ಇಲ್ಲಿ ಆಧುನಿಕ ಪದ್ಧತಿಯ ಜೇನು ಸಾಕಣೆಗೆ ಸಂಬಂಧಿಸಿದ ಪ್ರಾತ್ಯಕ್ಷಿಕೆ, ಸಂಶೋಧನೆ ಮತ್ತು ತರಬೇತಿ ಕೇಂದ್ರವೊಂದಿದೆ.

**ಭಾಲ್ಕಿ :** (ಬಿದರೆ ಜಿ; ತಾ. ಕೇ; ಜನ: 13,099) ಭಾಲ್ಕಿಯು ಬಿದರೆಯಿಂದ 40 ಕಿಮೀ ಮತ್ತು ಬೆಂಗಳೂರಿನಿಂದ 722 ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ ಅದನ್ನು ಭಲ್ಲುಂಕೆ, ಭಾಲಿಕಿ ಮತ್ತು ಭಾಲಿಕ್ಕೆ ಎಂದು ಉಲ್ಲೇಖಿಸಲಾಗಿದೆ. ಶರಣ ಶ್ರೇಷ್ಠ ಕುಂಬಾರ ಗುಂಡಯ್ಯನ ಮೂಲ ಸ್ಥಳವಿದು. ನಿಜಾಮನ ಕಾಲದಲ್ಲಿ ಇದು ಒಂದು ಪೈಗಾ ತಾಲೂಕಿನ ಮುಖ್ಯ ಸ್ಥಳವಾಗಿತ್ತು. ಇಲ್ಲಿ ಭಲ್ಕೇಶ್ವರ ಎಂಬ ಹೆಸರಿನ ಈಶ್ವರ ದೇವಾಲಯವಿದ್ದು ಅದರಲ್ಲಿ ಬಸವೇಶ್ವರ, ಕುಂಭೇಶ್ವರ, ಬಲಮುರಿ ಗಣಪತಿ ಮುಂತಾದ ಚಿಕ್ಕ ಗುಡಿಗಳಿವೆ. ನಿಂತ ಮುದ್ರೆಯಲ್ಲಿರುವ ಹಾಗೂ ಬಲಗಡೆ ಹೊರಳಿರುವ ಸೊಂಡಿಲಿನ ಗಣಪತಿ ವಿಗ್ರಹವು ಅಪೂರ್ವದ್ದಾಗಿದೆ. ಈ ನಗರದ ಕೋಟೆಯನ್ನು ರಾಮಚಂದ್ರ ಜಲ್ದಾರ ಎಂಬ ಸರದಾರನು ಕಟ್ಟಿಸಿದನೆಂಬ ಪ್ರತೀತಿಯಿದೆ. ಭಟಮಾಬ್ರ ಎಂಬುದು ಈ ತಾಲೂಕಿನಲ್ಲಿರುವ ಇನ್ನೊಂದು ಮಹತ್ವದ ಸ್ಥಳವಾಗಿದ್ದು, ಅದು ಭಾಲ್ಕಿಯಿಂದ ಎಂಟು ಕಿಮೀ ದೂರದಲ್ಲಿದೆ. ಅಲ್ಲಿ ವೀರಭದ್ರ ದೇವಸ್ಥಾನ ಮತ್ತು ಶ್ರೀ ಗುರುಬಸವೇಶ್ವರ ಮಠ ಇವೆ. ಭಾಲ್ಕಿಯಿಂದ ಸುಮಾರು 30 ಕಿಮೀ ದೂರದಲ್ಲಿರುವ ಚಳ್ಕಾಪುರ ಎಂಬಲ್ಲಿ ಸುಂದರ ವರ್ಣಚಿತ್ರಗಳಿಂದ ಅಲಂಕೃತವಾದ ಚಳ್ಕಮ್ಮ ದೇವಾಲಯವಿದೆ. ಭಾಲ್ಕಿಯ ಪೂರ್ವಕ್ಕೆ 20 ಕಿಮೀ ದೂರದಲ್ಲಿರುವ ಖಾನಾಪುರವು ಮೈಲಾರ ಕ್ಷೇತ್ರವೆಂದು ಪರಿಚಿತವಿದೆ. ಅಲ್ಲಿ ಮೈಲಾರಲಿಂಗೇಶ್ವರ ಗುಡಿಯಿದ್ದು, ಶಾಸನಗಳಲ್ಲಿ ಈ ದೇವತೆಯನ್ನು ಮಹಾಭೈರವ ಮೈಲಾರ ಎಂದು ಕರೆಯಲಾಗಿದೆ. ಚಾಳುಕ್ಯ ದೊರೆ ಎರಡನೇಯ ಜಗದೇಕಮಲ್ಲನು ತನ್ನ ಸಿಂಹಾಸನಾರೋಹಣ ಸಂದರ್ಭದಲ್ಲಿ ಕೆಲವೊಂದು ಭೂಮಿಯನ್ನು ಈ ಗುಡಿಗೆ ದತ್ತಿ ಬಿಟ್ಟಿರುವಂತೆಯೂ ತಿಳಿದುಬರುತ್ತದೆ. ಈ ಮಂದಿರದ ಪ್ರವೇಶದ್ವಾರವನ್ನು ಅಹಲ್ಯಾಬಾಯಿ ಹೋಳ್ಕರಳು ಕಟ್ಟಿಸಿದಳೆಂದು ಹೇಳಲಾಗುತ್ತದೆ. ಖಟಕಚಿಂಚೋಳಿಯು ಭಾಲ್ಕಿಯಿಂದ ಸುಮಾರು 24 ಕಿಮೀ ದೂರದಲ್ಲಿದ್ದು, ಅಲ್ಲಿ 13ನೇಯ ಶತಮಾನದಲ್ಲಿ ಸ್ಥಾಪಿತವಾದದ್ದೆಂದು ಹೇಳಲಾಗುವ ವೀರಶೈವ ಹುಲಿಕುಂಟೆ ಮಠವಿದೆ. ಭಾಲ್ಕಿಯಿಂದ ದಕ್ಷಿಣಕ್ಕೆ ಸುಮಾರು 12 ಕಿಮೀ ದೂರದಲ್ಲಿರುವ ನಾವದಗಿಯು ಸುಪ್ರಸಿದ್ಧ

ಶರಣ ರೇವಪ್ಪಯ್ಯನ ಜನ್ಮಸ್ಥಳವೆಂದು ಪ್ರಸಿದ್ಧಿ ಪಡೆದಿದೆ. ಭಾಲ್ಕಿಯಿಂದ ಈಶಾನ್ಯ ದಿಕ್ಕಿನಲ್ಲಿ ಸುಮಾರು 19 ಕಿಮೀ ಅಂತರದಲ್ಲಿರುವ ಸಿದ್ದೇಶ್ವರದಲ್ಲಿ ಸಿದ್ದೇಶ್ವರ ದೇವಾಲಯ ವಿದೆ.

ಮಂಗಳೂರು : (ದ. ಕ. ಜಿ; ಜಿ. ಉಪವಿಭಾಗ ಮತ್ತು ತಾ. ಕೇ; ಜನ: 3,06,078) ಮಂಗಳೂರು ಬೆಂಗಳೂರಿನಿಂದ ಪಶ್ಚಿಮಕ್ಕೆ ಸುಮಾರು 365 ಕಿಮೀ ದೂರದಲ್ಲಿದೆ. ಇಲ್ಲಿಂದ ಬೆಂಗಳೂರು ಮತ್ತು ಮುಂಬೈಗಳಿಗೆ ವಿಮಾನ ಸೌಕರ್ಯವಿದೆ. ಇದು ನೇತ್ರಾವತಿ ಮತ್ತು ಗುರುಪುರ ಎಂಬ ಎರಡು ನದಿಗಳ ಸಂಗಮ ಮತ್ತು ಅಳಿವೆಯ ಸ್ಥಾನದಲ್ಲಿದೆ. ಸ್ಥಳೀಯವಾಗಿ ಇದನ್ನು ತುಳು ಭಾಷೆಯಲ್ಲಿ ಕೊಡಿಯಾಲ ಮತ್ತು ಕುಡ್ಲ ಎಂದು ಕರೆಯುತ್ತಾರೆ. ಇವು ನದಿಗಳ ಸಂಗಮ ಮತ್ತು ಅವುಗಳು ಸಮುದ್ರವನ್ನು ಸೇರುವುದನ್ನು ಸೂಚಿಸುತ್ತವೆ. ವಿದೇಶೀಯ ಬರವಣಿಗೆಗಳಲ್ಲಿ ಇದರ ಹೆಸರು ಮಂದೆಗೊರಾ, ಮಂಜರೂರ್ ಮತ್ತು ಮಂಗರೂತ್ ಮುಂತಾದ ರೂಪಗಳಲ್ಲಿ ದೊರಕುತ್ತದೆ. ಸಾಂಪ್ರದಾಯಿಕ ಕಥನಗಳ ಪ್ರಕಾರ ಈ ಪಟ್ಟಣಕ್ಕೆ ಈ ಹೆಸರು ಬರಲು, ಹತ್ತನೇಯ ಶತಮಾನದಲ್ಲಿ ಜೀವಿಸಿದ್ದ ಮಂಗಳಾದೇವಿ ಎಂಬ ರಾಣಿಯೇ ಕಾರಣ. ಈಕೆಯು ನಾಥಪಂಥದ ಅನುಯಾಯಿ ಯಾದಳು. ಆದರೆ ಶಾಸನಗಳ ಪ್ರಕಾರ ಇದಕ್ಕೆ ಆ ಹೆಸರು ಅದಕ್ಕೂ ಮೊದಲಿನಿಂದಲೇ, ಅಂದರೆ ಏಳನೇಯ ಶತಮಾನ ದಿಂದಲೇ ಇದ್ದಿತೆಂದು ಗೊತ್ತಾಗುತ್ತದೆ. ಇಲ್ಲಿನ ಮಂಗಳಾದೇವಿ ಮಂದಿರವು ಮೊದಲು ಅತ್ತಾವರದ ಬಲ್ಲಾಳರಿಂದ ಕಟ್ಟಿಸಲ್ಪಟ್ಟು, 968ರಲ್ಲಿ ಆಳುಪ ದೊರೆ ಎರಡನೇಯ ಕುಂದವರ್ಮನಿಂದ ಇದು ಪುನರ್ನಿರ್ಮಾಣ ಹೊಂದಿತು. ಈಗಿನ ದೇವಾಲಯವನ್ನು ಇಕ್ಕೇರಿ ನಾಯಕರ ಕಾಲದಲ್ಲಿ ಕಟ್ಟಿಲಾಯಿತೆಂದು ನಂಬಲಾಗಿದೆ. ಇದು ಪ್ರಾಚೀನ ಕಾಲದಲ್ಲಿ ಪೂರ್ವ ಮತ್ತು ಪಶ್ಚಿಮ ದೇಶಗಳೊಡನೆ ವ್ಯಾಪಾರ ಸಂಬಂಧಗಳನ್ನು ಹೊಂದಿದ್ದ ಪ್ರಖ್ಯಾತ ರೇವು ಪಟ್ಟಣ ವಾಗಿದ್ದಿತೆಂದು ಅನೇಕ ವಿದೇಶೀಯ ಲೇಖಕರು ಉಲ್ಲೇಖಿಸಿ ದ್ದಾರೆ. ಇಲ್ಲಿ ನಾಲ್ಕು ಕೋಟೆಗಳು ಇದ್ದವೆಂದು ಈಗ ದೊರೆ ತಿರುವ ಮಾಹಿತಿಗಳಿಂದ ತಿಳಿಯುತ್ತದೆ. ಅವು ಯಾವುವೆಂದರೆ : 1) ಇಕ್ಕೇರಿಯ ಬಸಪ್ಪನಾಯಕನಿಂದ ನಿರ್ಮಿತವಾದ ಮಂಗ ಳೂರು ಕೋಟೆ, 2) ಲೈಟ್‌ಹೌಸ್ ಬೆಟ್ಟದ ಕೋಟೆ, 3) ಹದಿನಾರನೇಯ ಶತಮಾನದಲ್ಲಿ ಮಳಿಗೆಗಳನ್ನು ನಿರ್ಮಿಸಿದ ಪೋರ್ತುಗೀಸರಿಂದ ನಿರ್ಮಿಸಲಾದ ಸಂತ ಸೆಬಾಸ್ಟಿಯನ್ ಕೋಟೆ ಮತ್ತು 4) ಬಂಗ ನಾಯಕನಿಂದ ರಚಿತವಾದ ಉರ್ವಕ್ಕೆ ಸಮೀಪದಲ್ಲಿರುವ ಬಂಗರಕೋಟೆ. ಈ ಮೊದಲನೇಯ ಎರಡು ಕೋಟೆಗಳ ಅವಶೇಷಗಳನ್ನು ಇಂದಿಗೂ ನೋಡಬಹುದು. ಬಹಳ ಕಾಲದವರೆಗೆ ಆಳುಪರು ಮಂಗಳೂರನ್ನು ತಮ್ಮ ರಾಜಧಾನಿ ಯನ್ನಾಗಿ ಮಾಡಿಕೊಂಡಿದ್ದರು. ವಿಜಯನಗರ ಕಾಲದಲ್ಲಿ ಮಂಗಳೂರು ರಾಜ್ಯವನ್ನು ಸಾಮ್ರಾಜ್ಯದ ರಾಜ್ಯಪಾಲನು ಇಲ್ಲಿಂದ ಆಳುತ್ತಿದ್ದನು. ಆ ಕಾಲದಲ್ಲಿ ಮಾಂಡಳಿಕ ಬಂಗರಾಜರ ವಶದಲ್ಲಿ ಈ ಸ್ಥಳ ಇದ್ದಿತು. ಹೈದರ್‌ಅಲಿಯಿಂದ 1763ರಲ್ಲಿ ಆಕ್ರಮಿಸಿತವಾಗುವವರೆಗೆ ಈ ಪ್ರದೇಶವು ವಿಜಯನಗರದ, ನಂತರ ಕೆಳದಿ ನಾಯಕರ ಅಧೀನದಲ್ಲಿಯೇ ಇತ್ತು. ಗುರುಪುರ ನದಿಗೆ ಯುದ್ಧ ನೌಕೆಗಳು ಬರುವುದನ್ನು ತಡೆಯಲು ಟಿಪ್ಪುಸುಲ್ತಾನನು ಕಾವಲುಕೋಟೆಯಾದ ಸುಲ್ತಾನ್ ಬತೇರಿಯನ್ನು ನಿರ್ಮಿಸಿದನು. ಊರಿನ ಮಧ್ಯದಲ್ಲಿ ಲೈಟ್‌ಹೌಸ್ ಬೆಟ್ಟವಿದ್ದು, 1900ರಲ್ಲಿ ಹೊಸ ದೀಪಸ್ತಂಭವನ್ನು ಅಲ್ಲಿ ಕಟ್ಟಲಾಯಿತು. ಕದ್ರಿಬೆಟ್ಟದಲ್ಲಿ ಪ್ರಖ್ಯಾತವಾದ ಮಂಜುನಾಥ ದೇವಾಲಯ ಮತ್ತು ಜೋಗಿ ಮಠಗಳಿವೆ. ಈ ಮಠದಲ್ಲಿ ಒಬ್ಬ ನಾಥಪಂಥದ ಸಂನ್ಯಾಸಿ ಯಿದ್ದಾರೆ. ಇಲ್ಲಿ ಮೂರು ಕಂಚಿನ ವಿಗ್ರಹಗಳಿದ್ದು, ಅವುಗಳಲ್ಲಿ ಹತ್ತನೇಯ ಶತಮಾನದ ಅವಲೋಕಿತೇಶ್ವರನ ಕಂಚಿನ ಶಿಲ್ಪವು ಅತ್ಯುತ್ತಮವಾದುದು. ಇಲ್ಲಿನ ವಾಸ್ತುಶಿಲ್ಪವು ನೇಪಾಳಿ ವಾಸ್ತುಶಿಲ್ಪವನ್ನು ಹೋಲುತ್ತದೆ. ಇಲ್ಲಿರುವ ಚರ್ಚುಗಳಲ್ಲಿ ಸೇಂಟ್ ಜೋಸೆಫ್ ಥಿಯೊಲಾಜಿಕಲ್ ಸೆಮಿನರಿ, ಬೋಳಾರ ದಲ್ಲಿರುವ ಮೋಸ್ಟ್ ಹೋಲಿ ರೋಸರಿ ಚರ್ಚು, ಅಸಾಧಾರಣ ಚಿತ್ರ ಗ್ಯಾಲರಿಯಾದ ಸೇಂಟ್ ಎಲೋಸಿಯಸ್ ಕಾಲೇಜಿನ ಚರ್ಚು (1885), ಬಲ್ಮಠದಲ್ಲಿರುವ ಶಾಂತಿ ಕಥೀಡ್ರಲ್ (1862) ಹೆಸರಿಸಬೇಕಾದವು. ಇಲ್ಲಿರುವ ಮಸೀದಿಗಳಲ್ಲಿ ಜುಮ್ಮಾ ಮಸೀದಿ, ಜೀನತ್ ಬಕ್ಸ್ ಮಸೀದಿ, ಲೈಟ್‌ಹೌಸ್ ಬೆಟ್ಟದ ಈದ್‌ಗಾ ಮಸೀದಿ, ಡೋಂಗರಕೇರಿಯ ಶಮೀರ್ ಮಸೀದಿಗಳು ಪ್ರಮುಖ ವಾದವು. ಇದು ದೊಡ್ಡ ವಾಣಿಜ್ಯ, ವಿದ್ಯಾ ಮತ್ತು ಕೈಗಾರಿಕಾ ಕೇಂದ್ರವಾಗಿದೆ. ಇಲ್ಲಿ ಅನೇಕ ಸಾಮಾಜಿಕ ಸೇವಾ ಸಂಸ್ಥೆ ಗಳಿವೆ. ಇಲ್ಲಿನ ನಗರ ಕಾರ್ಪೊರೇಶನ್ ನಾಗರಿಕ ಸೌಲಭ್ಯಗಳನ್ನು ಒದಗಿಸುತ್ತಿದೆ. ಶಕ್ತಿನಗರದಲ್ಲಿರುವ ರಮಾ ಶಕ್ತಿ ಮಿಷನ್ ಸಂಸ್ಥೆಯು ಗಮನಾರ್ಹ ಆಧ್ಯಾತ್ಮಿಕ ಕೇಂದ್ರ. ವೆಂಕಟರಮಣ, ಮಹಾಮಾಯಾ, ಮುಖ್ಯಪ್ರಾಣ, ವಿಠೋಬ, ಉಮಾಮಹೇಶ್ವರ, ತ್ರಿಶೂಲೇಶ್ವರ, ಪಂಚಲಿಂಗೇಶ್ವರ, ಗೋಕರ್ಣನಾಥ, ಕಾಳಿಕಾಂಬಾ ಇತ್ಯಾದಿ ಇಲ್ಲಿ ಗಮನಿಸಬೇಕಾದ ಇತರ ದೇವಾಲಯಗಳು. 1968ರಲ್ಲಿ ಕೊಣಾಜೆಯಲ್ಲಿ ಮೈಸೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರವನ್ನು ಸ್ಥಾಪಿಸಲಾಯಿತು. ಇದು ಮಂಗಳೂರಿನಿಂದ 19 ಕಿಮೀ ದೂರದಲ್ಲಿದ್ದು, ಮಂಗಳ ಗಂಗೋತ್ರಿ ಎಂಬ ಹೆಸರನ್ನು ಪಡೆದಿದೆ. ಈಗ ಇದು ಮಂಗ ಳೂರು ವಿಶ್ವವಿದಾಲಯದ ಕೇಂದ್ರವಾಗಿದೆ. ಮಂಗಳೂರಿನಲ್ಲಿ ಸರಕಾರಿ ಮ್ಯೂಸಿಯಂ, ವಿಶಿಷ್ಟವಾದ ಮೀನುಗಾರಿಕೆ ಕಾಲೇಜು, ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ ಕಾರ್ಖಾನೆ, ಅನೇಕ ಹೆಂಚಿನ ಮತ್ತು ಗೇರುಬೀಜದ ಕಾರ್ಖಾನೆಗಳು, ಹೊಸ ಮತ್ತು ಹಳೆಯ ರೇವು ಪಟ್ಟಣ, ಬೆಂಗ್ರೆ ಬೀಚು ಮುಂತಾದ ಪ್ರೇಕ್ಷಣೀಯ ಸ್ಥಳಗಳಿವೆ. ಮೀನುಗಾರಿಕೆ, ಬೀಡಿ ಸುತ್ತುವುದು, ತೆಂಗಿನ ನಾರಿನ ಕೆಲಸ ಮುಂತಾದವು ಜನಗಳ ಮುಖ್ಯ ಕಸಬು. ಬಜ್ಪೆ : (ಜನ: 4,580) ಮಂಗಳೂರಿನಿಂದ ವಾಯುವ್ಯಕ್ಕೆ 25

ಕಿಮೀ ದೂರದಲ್ಲಿರುವ ಎತ್ತರವಾದ ಪ್ರದೇಶ. ಇಲ್ಲಿ ವಿಮಾನ ನಿಲ್ದಾಣವಿದೆ. ಸಮೀಪದಲ್ಲೇ ಬಜ್ಪೆ ಜಲಪಾತವಿದೆ. ಈ ತಾಲೂಕಿನ ಇತರ ಗಮನಾರ್ಹ ಸ್ಥಳಗಳು ಹೀಗಿವೆ: ಕಟೀಲ್ (ಜನ: 1,448) ಎನ್ನುವುದನ್ನು ನಂದಿನಿ ನದಿಯ ದಂಡೆಯ ಮೇಲೆ ಕೊಂಡೆಮೂಲ ಎನ್ನುವ ಕಂದಾಯ ಗ್ರಾಮಕ್ಕೆ ಸೇರಿದ ಉಪಗ್ರಾಮವಾಗಿದ್ದು, ಮಂಗಳೂರಿನಿಂದ 27 ಕಿ.ಮೀ. ದೂರ ದಲ್ಲಿದೆ. ಇಲ್ಲಿ ಪ್ರಖ್ಯಾತವಾದ ದುರ್ಗಾಪರಮೇಶ್ವರಿ ದೇವಾಲಯ ವಿದೆ. ಈ ದೇವಾಲಯದಲ್ಲಿ ಹೊಸದಾಗಿ ಕಟ್ಟಲಾದ ಕಲ್ಲಿನ ಕಂಬಗಳ ಮೇಲೆ ಕಾರ್ಕಳದ ರಂಜಾಳ ಗೋಪಾಲಕೃಷ್ಣ ಶೆಣೈ ಅವರು ಕೆತ್ತಿರುವ ಸುಂದರ ಶಿಲ್ಪಗಳಿವೆ. ಮಂಗಳೂರಿನಿಂದ ಉತ್ತರದಲ್ಲಿ 14 ಕಿಮೀ ದೂರದಲ್ಲಿರುವ ಸುರತ್ಕಲ್ (ಜನ: 25,998–1981) ನಲ್ಲಿ ಸಮುದ್ರ ತೀರದಲ್ಲಿರುವ ಬೆಟ್ಟದ ಮೇಲೆ ಸದಾಶಿವ ದೇವಾಲಯವಿದೆ. ಸುಮಾರು ಡಿಸೆಂಬರ್ ತಿಂಗಳಲ್ಲಿ ಇಲ್ಲಿ ರಥೋತ್ಸವ ನಡೆಯುತ್ತದೆ. ಇಲ್ಲಿ ಸುಂದರವಾದ ಕಡಲ ತೀರವಿದೆ. 1960ರಲ್ಲಿ ಕರ್ನಾಟಕ ರೀಜನಲ್ ಇಂಜಿನಿಯರಿಂಗ್ ಕಾಲೇಜು ಇಲ್ಲಿ ಸ್ಥಾಪಿತವಾದ ಮೇಲೆ ಈ ಊರಿನ ಪ್ರಾಮುಖ್ಯತೆಯು ಹೆಚ್ಚಿದೆ. ಉಲ್ಲಾಳ (ಜನ: 25,508–1981)ವು ಮಂಗಳೂರಿನಿಂದ ಎಂಟು ಕಿಮೀ ಮತ್ತು ಬೆಂಗಳೂರಿನಿಂದ 375 ಕಿಮೀ ಪಶ್ಚಿಮದಲ್ಲಿ ನೇತ್ರಾವತಿ ನದಿಯ ತೀರದಲ್ಲಿದೆ. ಪುತ್ತಿಗೆಯ ಚೌಟ ರಾಜವಂಶದ ಶಾಖೆಯೊಂದು ಉಲ್ಲಾಳದಿಂದ ರಾಜ್ಯವಾಳಿತು. ಈ ರಾಜವಂಶದಲ್ಲಿ ರಾಜ್ಯವಾಳಿದ ಅತ್ಯಂತ ಪ್ರಸಿದ್ಧ ವ್ಯಕ್ತಿಯೆಂದರೆ, ಹದಿನಾರನೇಯ ಶತಮಾನದ ಉತ್ತರಾರ್ಧದಲ್ಲಿ ಆಳಿದ ಅಬ್ಬಕ್ಕದೇವಿ. ಶೂರಳೂ, ದೇಶಭಕ್ತಿಪರಳೂ ಆದ ಈ ರಾಣಿಗೆ ಪೋರ್ತುಗೀಸರೂ ಹೆದರುತ್ತಿದ್ದರು. ಉಲ್ಲಾಳದ ಸೋಮನಾಥನು ಚೌಟ ರಾಜವಂಶದವರ ಆರಾಧ್ಯ ದೈವ. ಇಲ್ಲಿ ಅರಮನೆಯ ಮತ್ತು ಕೋಟೆಯ ಅವಶೇಷಗಳಿವೆ. ಸೋಮನಾಥ ದೇವಾಲಯದಲ್ಲಿ ಅನೇಕ ಸುಂದರ ಶಿಲ್ಪಗಳಿವೆ. ದೇವಾಲಯಕ್ಕೆ ಸಮೀಪದಲ್ಲಿ, ಕಡಹಿನ ಜಾಗದಿಂದ ಸುಮಾರು ಒಂಬತ್ತು ಕಿಮೀ ದೂರದಲ್ಲಿ ಬಹುಶಃ ಉಲ್ಲಾಳದ ರಾಣಿಯ ಭದ್ರ ನೆಲೆಯಾಗಿದ್ದ ಉಚ್ಚಿಲಕೋಟೆಯಿದೆ. ಭೈರವರಸ ಒಡೆಯರು ಕೂಡ ಇಲ್ಲಿ ಒಂದು ಅರಮನೆಯನ್ನು ಕಟ್ಟಿಸಿದ್ದರು. ಸುಮಾರು 400 ವರ್ಷಗಳ ಹಿಂದೆ ಮದೀನದಿಂದ ಉಲ್ಲಾಳಕ್ಕೆ ಬಂದಿದ್ದ ಸಂತ ಸೈಯದ್ ಮಹಮದ್ ಶರಿಫುಲ್ ಮದನಿಯವರ ಖ್ಯಾತ ದರ್ಗಾ ಇಲ್ಲಿದೆ. ಈ ಸಂತನ ಮರಣಾನಂತರ ಕಟ್ಟಲಾದ ಈ ದರ್ಗಾವನ್ನು ನಾಲ್ಕು ಬಾರಿ ವಿಸ್ತರಿಸಿ ಮತ್ತೆ ಕಟ್ಟಲಾಯಿತು. ಈಗಿರುವ ಎತ್ತರವಾದ ಕಟ್ಟಡವನ್ನು 1970ರಲ್ಲಿ ಹೈದರಾಬಾದಿನ ಶಿಲ್ಪಿ ಫಯಾಸುದ್ದೀನ್ ಅಹಮದ್ ಅವರು ನಿರ್ಮಿಸಿದರು. ಇಲ್ಲಿ ಒಂದು ಗ್ರಾಮ ಪಂಚಾಯಿತಿ ಇದೆ. ಮೂಲ್ಕಿ (ಜನ: 12,098–1981): ಮೂಲ್ಕಿಯಲ್ಲಿಯೂ ಪಂಚಾಯಿತಿ ಇದೆ. ಇದು ಮಂಗಳೂರಿನಿಂದ ಉತ್ತರಕ್ಕೆ 29 ಕಿಮೀ ಹಾಗೂ, ಬೆಂಗಳೂರಿನಿಂದ ವಾಯುವ್ಯಕ್ಕೆ 394 ಕಿಮೀ ದೂರದಲ್ಲಿದ್ದು, ಮೂಲ್ಕಿ ನದಿಯ ದಕ್ಷಿಣ ದಂಡೆಯ ಮೇಲಿದೆ. ಇದು ಹಿಂದೆ ಸಾವಂತ ಮನೆತನದವರ ಆಡಳಿತ ಕೇಂದ್ರವಾಗಿತ್ತು. ಸೀಮಂತೂರಿನ (ಮೂಲ್ಕಿಯಿಂದ ಸುಮಾರು ಐದು ಕಿಮೀ ದೂರದಲ್ಲಿದೆ) ಜನಾರ್ದನಸ್ವಾಮಿಯು ಸಾವಂತರ ಆರಾಧ್ಯದೈವ. ಸುಮಾರಾಗಿ ಹಾಳಾಗಿರುವ ಸಾವಂತರ ಅರಮನೆ ಮತ್ತು ಬಿದನೂರಿನ ವೆಂಕಟಪ್ಪನಾಯಕನು ನಿರ್ಮಿಸಿದ ಕೋಟೆಯನ್ನು ಇಂದಿಗೂ ಇಲ್ಲಿ ಕಾಣಬಹುದು. ಅರಮನೆಯ ಮುಂಭಾಗದಲ್ಲಿ ಸಾವಂತರ ಅರಸರ 20 ಸಮಾಧಿಗಳಿವೆ. ಇಲ್ಲಿ ನಾಲ್ಕು ಜೈನ ಬಸದಿಗಳಿದ್ದು, ಅವುಗಳಲ್ಲಿ ಎರಡರಲ್ಲಿ ಮಾನಸ್ತಂಭಗಳಿವೆ. ಬಪ್ಪನಾಡುವಿನ ದುರ್ಗಾಪರಮೇಶ್ವರಿ ದೇವಾಲಯ, ವೆಂಕಟರಮಣ ದೇವಾಲಯ, ಅವಳಿ ದೇವಾಲಯಗಳಾದ ಸೋಮನಾಥ ಮತ್ತು ನಾರಾಯಣ, ಇವು ಇಲ್ಲಿನ ಇತರ ದೇವಾಲಯಗಳು. ಅರಸು ಕಂಬಳ ಎಂದು ಕರೆಯಲಾಗುವ ಕೋಣಗಳ ಓಟದ ಪಂದ್ಯ ಇಲ್ಲಿ ವರ್ಷಕ್ಕೊಮ್ಮೆ ನಡೆಯುತ್ತದೆ.

**ಮಂಡ್ಯ:** (ಜಿ. ಉಪವಿಭಾಗ ಮತ್ತು ತಾ. ಕೇ; ಜನ: 1,00,264) ಪುರಸಭೆಯ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿರುವ ಮಂಡ್ಯ, ಮೈಸೂರಿನಿಂದ 42 ಕಿಮೀ ಮತ್ತು ಬೆಂಗಳೂರಿನಿಂದ ನೈಋತ್ಯಕ್ಕೆ 100 ಕಿಮೀ ದೂರದಲ್ಲಿಯೂ ಇದೆ. ಇದು ಮೈಸೂರು-ಬೆಂಗಳೂರು ಹೆದ್ದಾರಿಯಲ್ಲಿದ್ದು 1939ರಿಂದ ಹೊಸದಾಗಿ ಸ್ಥಾಪಿಸಿದ ಮಂಡ್ಯ ಜಿಲ್ಲೆಯ ಕೇಂದ್ರವಾಗಿದೆ. ಕೃಷ್ಣರಾಜ ಸಾಗರ ಅಣೆಕಟ್ಟು ಕಟ್ಟಿದ ನಂತರ ಮಂಡ್ಯದ ಪ್ರಾಮುಖ್ಯತೆ ಹೆಚ್ಚಿತು. ಅಲ್ಲಿನ ಪೌರಾಣಿಕ ಕಥೆಗಳ ಪ್ರಕಾರ ಮಂಡ್ಯಕ್ಕೆ ವೇದಾರಣ್ಯವೆಂತಲೂ, ನಂತರ ವಿಷ್ಣುಪುರವೆಂದೂ ಹೆಸರಿದ್ದಿತು. ಮತ್ತೊಂದು ಕಥೆಯ ಪ್ರಕಾರ ರಾಜನಾದ ಇಂದ್ರವರ್ಮನು ಇಲ್ಲಿ ತಪಸ್ಸು ಮಾಡಿ, ಸೋಮವರ್ಮನೆಂಬ ಮಗನನ್ನು ಪಡೆದನು. ಈ ಸೋಮವರ್ಮನು ಇಲ್ಲಿ ಒಂದು ಅಗ್ರಹಾರವನ್ನು ಸ್ಥಾಪನೆ ಮಾಡಿ ಅದಕ್ಕೆ ಮಂಡೆನಮು ಎಂಬ ಹೆಸರನ್ನು ಕೊಟ್ಟನು. ಈ ಹೆಸರಿನ ಸ್ಖಲಿತ ರೂಪವೇ ಮಂಡ್ಯವೆಂದಾಯಿತೆಂದು ಕೆಲವರ ಅಭಿಪ್ರಾಯ. ಮತ್ತೊಂದು ನಂಬಿಕೆಯ ಪ್ರಕಾರ ಪ್ರಾಚೀನ ಕಾಲದಲ್ಲಿ ಮಾಂಡವ್ಯನೆಂಬ ಋಷಿಯು ಇಲ್ಲಿ ತಪಸ್ಸು ಮಾಡಿದುದರಿಂದ ಈ ಸ್ಥಳಕ್ಕೆ ಆ ಋಷಿಯ ಹೆಸರನ್ನೇ ಇಡಲಾಯಿತು. ಮಂಡ್ಯವು ಟಿಪ್ಪು ಸುಲ್ತಾನನ ಕಾಲದವರೆಗೆ ಸರ್ವಮಾನ್ಯ ಗ್ರಾಮವಾಗಿಯೇ ಮುಂದುವರಿಯಿತು. ಮಂಡ್ಯ ಮತ್ತು ಅದರ ಸುತ್ತಮುತ್ತ ಅನೇಕ ಚಾರಿತ್ರಿಕ ಕಟ್ಟಡಗಳೂ ಪ್ರಾಚೀನ ಅವಶೇಷಗಳೂ ಇವೆ. ಲಕ್ಷ್ಮೀಜನಾರ್ದನ ಸ್ವಾಮಿ ದೇವಾಲಯವು ದೊಡ್ಡದಾಗಿದ್ದು, ದೊಡ್ಡದಾದ ಗೋಪುರಗಳಿಂದ ಕೂಡಿದ ಪ್ರಾಚೀನ ದೇವಾಲಯ. ಇದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ. ಶ್ರೀನಿವಾಸ, ಬಸವ (ನಂದಿ) ಮತ್ತು ಈಶ್ವರ ದೇವಾಲಯಗಳು ಈ ಪಟ್ಟಣದಲ್ಲಿವೆ. ಇಲ್ಲಿ ಎರಡು ಬಸದಿಗಳಿವೆ. ಮಂಡ್ಯವು

ತ್ವರಿತವಾಗಿ ಅಭಿವೃದ್ಧಿ ಹೊಂದುತ್ತಿರುವ ಪಟ್ಟಣ ಮತ್ತು ವ್ಯಾಪಾರೀ ಕೇಂದ್ರ. ಇಲ್ಲಿ ಚೆನ್ನಾಗಿ ರಕ್ಷಿಸಲ್ಪಟ್ಟ 14 ಉದ್ಯಾನವನಗಳಿವೆ. ಇಲ್ಲಿನ ಮೈಸೂರು ಸಕ್ಕರೆ ಕಾರ್ಖಾನೆಯನ್ನು 1933ರಲ್ಲಿ ಸ್ಥಾಪಿಸಲಾಯಿತು. ಇದು ಭಾರತದ ದೊಡ್ಡ ಸಕ್ಕರೆ ಕಾರ್ಖಾನೆಗಳಲ್ಲೊಂದು. ಈ ಕಾರ್ಖಾನೆಗೆ ಬಡಾವಣೆಯಂತೆ, ಒಂದು ಮದ್ಯಸಾರದ ಬಟ್ಟಿ ಕಾರ್ಖಾನೆಯನ್ನು 1962ರಲ್ಲಿ ಪ್ರಾರಂಭಿಸಲಾಯಿತು. ದಿ ಮೈಸೂರು ಅಸಿಟೇಟ್ ಅಂಡ್ ಕೆಮಿಕಲ್ ಫ್ಯಾಕ್ಟರಿಯನ್ನು 1962ರ ಸ್ಥಾಪಿಸಲಾಯಿತು. ಆಧುನಿಕವಾದ ಅಕ್ಕಿ ಗಿರಣಿಯನ್ನು ಇಲ್ಲಿ 1965ರಲ್ಲಿ ಸ್ಥಾಪಿಸಲಾಯಿತು. ಅದು ಭಾರತದಲ್ಲೇ ಆ ರೀತಿಯ ಎಂಟು ಘಟಕಗಳಲ್ಲಿ ಒಂದು. ಇಂಪ್ಲಿಮೆಂಟ್ಸ್ ಕಾರ್ಖಾನೆ, ಮಂಡ್ಯ ಇಂಜಿನಿಯರಿಂಗ್ ವರ್ಕ್ಸ್, ಮೈಸೂರು ಮಿನರಲ್ಸ್ ಮತ್ತು ಗ್ಯಾಸ್ ಕಂಪೆನಿಗಳು ಮತ್ತು ಅದರ ಜೊತೆಗೆ ಮರ ಕೊಯ್ಯುವ ಕಾರ್ಖಾನೆ ಮತ್ತು ಇತರ ಕಾರ್ಖಾನೆಗಳು ಈ ಪಟ್ಟಣದಲ್ಲಿದೆ. ಈ ಪಟ್ಟಣದಲ್ಲಿ ಪ್ರತ್ಯೇಕವಾದ ಕೈಗಾರಿಕಾ ಬಡಾವಣೆಯಿದೆ. ಒಂದು ಇಂಜಿನಿಯರಿಂಗ್ ಕಾಲೇಜೂ ಸೇರಿದಂತೆ, ಮಂಡ್ಯದಲ್ಲಿ ಅನೇಕ ವಿದ್ಯಾಸಂಸ್ಥೆಗಳಿವೆ. ಇಲ್ಲಿ ಒಂದು ರೈಲು ನಿಲ್ದಾಣ, ತೋಟಗಾರಿಕಾ ಕೇಂದ್ರ ಮತ್ತು ಸಣ್ಣ ಪ್ರಾಣಿ ಸಂಗ್ರಹಾಲಯಗಳಿವೆ. ಗಂಡಲು ಎಂಬ ಹಳ್ಳಿಯು ಮಂಡ್ಯಕ್ಕೆ ವಾಯುವ್ಯದಲ್ಲಿ 10 ಕಿಮೀ ದೂರದಲ್ಲಿದೆ. ಇಲ್ಲಿ 1951ರಲ್ಲಿ ಒಂದು ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲಾಯಿತು. ಇದು ಒಟ್ಟು 665 ಎಕರೆ ಪ್ರದೇಶವನ್ನು ಹೊಂದಿದೆ. ಜೊತೆಗೆ ಇಲ್ಲಿ ಇಂಡೋ–ಜಪಾನ್ ಕೃಷಿ ಪ್ರಾತ್ಯಕ್ಷಿಕಾ ಕೇಂದ್ರವೂ ಇದೆ. ಈ ಕೇಂದ್ರಕ್ಕೆ ಗ್ರಾಮಸೇವಕರ ತರಬೇತಿ ಕೇಂದ್ರವನ್ನು ಸೇರಿಸಲಾಗಿದೆ. ಈ ಕೇಂದ್ರದಲ್ಲಿ ಜಪಾನಿ ಮಾದರಿಯಲ್ಲಿ ಬೆಳೆ ತೆಗೆಯುವ ತಾಂತ್ರಿಕ ವಿಧಾನಗಳನ್ನು ಕಲಿಸಿಕೊಡಲಾಗುತ್ತದೆ. ಮಂಡ್ಯಕ್ಕೆ ಸಮೀಪದಲ್ಲಿರುವ ಇಂಡುವಾಳು ಎಂಬ ಗ್ರಾಮದಲ್ಲಿ ಒಂದು ನೈಸರ್ಗಿಕ ಉದ್ಯಾನವನ್ನು (ಸಣ್ಣ ಪ್ರಾಣಿ ಸಂಗ್ರಹಾಲಯ) ಪ್ರಾರಂಭಿಸಲಾಗಿದೆ. ಇದರಲ್ಲಿ ಜಿಂಕೆಗಳು, ಕಡವೆಗಳು, ಚಿಗರೆ ಮುಂತಾದ ಪ್ರಾಣಿಗಳು ಅಡಚಣೆಯಿಲ್ಲದೆ ಓಡಾಡುತ್ತವೆ. ಹುಲಿಕೆರೆ ಎಂಬ ಹಳ್ಳಿಯು ಮಂಡ್ಯಕ್ಕೆ ದಕ್ಷಿಣದಲ್ಲಿ 12 ಕಿಮೀ ದೂರದಲ್ಲಿದೆ. ವಿಶ್ವೇಶ್ವರಯ್ಯ ನಾಲೆಯ ನೀರನ್ನು ಕರೀಘಟ್ಟ ಬೆಟ್ಟ ಶ್ರೇಣಿಯ ಮೂಲಕ ಹಾಯಿಸಲು ಕಲ್ಲಿನಲ್ಲಿ ಕೊರೆಯಲಾದ ಸುರಂಗವನ್ನು ಇಲ್ಲಿ ನೋಡಬಹುದು. ಈ ಸುರಂಗವು 9,200 ಅಡಿ ಉದ್ದವಾಗಿದ್ದು ಪ್ರಪಂಚದಲ್ಲೇ ನೀರಾವರಿಗಾಗಿ ಮಾಡಿದ ಉದ್ದವಾದ ಸುರಂಗಗಳಲ್ಲಿ ಒಂದಾಗಿದ್ದು ನಮ್ಮ ಇಂಜಿನಿಯರುಗಳ ತಾಂತ್ರಿಕ ಕುಶಲತೆಗೆ ಸಾಕ್ಷಿಯಾಗಿದೆ. ಅದರ ಆಳವು ನೆಲದ ಮಟ್ಟದಿಂದ 67 ಅಡಿಗಳಿಂದ 150 ಅಡಿಗಳವರೆಗೆ ಬದಲಾಗುತ್ತದೆ. ಈ ಸುರಂಗದ ಸುಮಾರು ಅರ್ಧದಷ್ಟು ಭಾಗವು ಪಾಂಡವಪುರ ತಾಲೂಕಿನಲ್ಲಿಯೂ, ಮಿಕ್ಕ ಭಾಗವು ಮಂಡ್ಯದಲ್ಲೂ ಇದೆ. ಮಂಡ್ಯ ನಗರಕ್ಕೆ ಪಶ್ಚಿಮದಲ್ಲಿ ಹತ್ತು ಕಿಮೀ ದೂರದಲ್ಲಿರುವ ಶಿವಳ್ಳಿಯಲ್ಲಿ ಬಿತ್ತನೆ ಬೀಜದ ತೋಟವಿದೆ.

**ಮಡಿಕೇರಿ :** (ಕೊಡಗು ಜಿ. ಮತ್ತು ತಾ. ಕೇ; ಜನ: 24,724) ಬೆಂಗಳೂರಿಗೆ 250 ಕಿಮೀ ದೂರದಲ್ಲಿ ಪಶ್ಚಿಮ ಘಟ್ಟಗಳ ಒಂದು ಉನ್ನತವಾದ ಪ್ರಸ್ಥಭೂಮಿಯ ಮೇಲೆ ಮಡಿಕೇರಿ ಇದೆ. ಬ್ರಿಟಿಷರು ಇದನ್ನು 'ಮರ್‌ಕೆರಾ' ಎಂದು ಕರೆಯುತ್ತಿದ್ದರು. ಹಾಲೇರಿ ವಂಶದ ಮುದ್ದುರಾಜನೆಂಬ ರಾಜಕುಮಾರನು ಕ್ರಿ. ಶ. 1681ರಲ್ಲಿ ಮಡಿಕೇರಿಯನ್ನು ಸ್ಥಾಪಿಸಿದನು. ಸ್ಥಾಪಕನ ಹೆಸರಿನ ಮುದ್ದುರಾಜಕೇರಿ ಎಂಬ ಹೆಸರು ಇದಕ್ಕೆ ಮೊದಲಿತ್ತು. ಆ ಹೆಸರಿಗೆ ನಂತರ ಮಡಿಕೇರಿ ಎಂಬ ಹ್ರಸ್ವ ರೂಪ ಬಂತು. ಮಡಿಕೇರಿ ಅನೇಕ ಪ್ರೇಕ್ಷಣೀಯ ಸ್ಥಳಗಳನ್ನುಳ್ಳ ಊರು. ಅವುಗಳಲ್ಲಿ ಇಲ್ಲಿನ ಕೋಟೆ, ಅರಮನೆ, ಓಂಕಾರೇಶ್ವರ ದೇವಸ್ಥಾನ, ರಾಜರ ಗದ್ದಿಗೆ ಮತ್ತು ರಾಜಾಸೀಟ್ ಎಂಬ ಸ್ಥಳ ಮುಖ್ಯವಾದವು. ಇಲ್ಲಿನ ಕೋಟೆ ಎತ್ತರವಾದ ಸ್ಥಳದಲ್ಲಿ ಭವ್ಯವಾಗಿ ಎದ್ದು ನಿಂತಿದೆ. ಇದನ್ನು ಕಲ್ಲಿನಲ್ಲಿ ಟಿಪ್ಪು ಸುಲ್ತಾನನು ಕಟ್ಟಿಸಿದನು. ಅದು 1790ರಲ್ಲಿ ವೀರರಾಜೇಂದ್ರನ ವಶಕ್ಕೆ ಬಂತು. 1812-1814ರ ಕಾಲದಲ್ಲಿ ಇಮ್ಮಡಿ ಲಿಂಗರಾಜೇಂದ್ರನು ಕೋಟೆಯೊಳಗಿನ ಇಲ್ಲಿನ ಅರಮನೆಯನ್ನು ಪುನಃ ಕಟ್ಟಿಸಿದ. ಈಗ ಇದು ಎಲ್ಲ ಪ್ರಮುಖ ಸರ್ಕಾರಿ ಕಚೇರಿಗಳಿಗೆ ಆಸರೆಯಾಗಿದೆ. 1820ರಲ್ಲಿ ಲಿಂಗರಾಜೇಂದ್ರನು ಇಲ್ಲಿನ ಮುಖ್ಯವಾದ ಓಂಕಾರೇಶ್ವರ ದೇವಸ್ಥಾನವನ್ನು ಹಿಂದೂ-ಮುಸ್ಲಿಂ ಸಮ್ಮಿಳಿತ ಮಾದರಿಯಲ್ಲಿ ಕಟ್ಟಿಸಿದ. ಇದರೊಳಗೆ ಪ್ರತಿಷ್ಠಾಪಿಸಲಾಗಿರುವ ಲಿಂಗ ವಾರಣಾಸಿಯಿಂದ ತಂದುದೆಂಬ ನಂಬಿಕೆ ಇದೆ. ಇಲ್ಲಿನ ರಾಜ ಸಮಾಧಿ (ವೀರರಾಜೇಂದ್ರ ಮತ್ತು ಅವನ ರಾಣಿಯರನ್ನು ಇಲ್ಲಿ ಹೂಳಲಾಯಿತು)ಯ ಕಟ್ಟುವಿಕೆ ವೀರರಾಜೇಂದ್ರ ಬದುಕಿದ್ದ ಕಾಲದಲ್ಲಿ ಆರಂಭವಾಗಿ ಅವನ ತಮ್ಮ ಲಿಂಗರಾಜನಿಂದ ಮುಕ್ತಾಯವಾಯಿತು. ಅದು ಮಹದೇವ ಪೇಟೆಯ ಉತ್ತರ ತುದಿಯಲ್ಲಿ ಇದೆ. ಮತ್ತು ಅದರ ಸುತ್ತ ಎತ್ತರದ ಗೋಡೆ ಕಟ್ಟಲಾಗಿದೆ. ರಾಜಾಸೀಟ್ ಎಂಬ ಸ್ಥಳ ಹಚ್ಚಹಸುರಿನ ಪ್ರಕೃತಿ ವೈಶಾಲ್ಯವನ್ನು ಕಾಣಬಹುದಾದ ಎತ್ತರದ ಸ್ಥಳ. ಇಲ್ಲಿಂದ ಕಾಣುವ ನೋಟ ರೋಮಾಂಚನಗೊಳಿಸುವಂತಹುದು. ಆ ಸ್ಥಳದಿಂದ ಒಂದು ಆಳವಾದ ಮತ್ತು ವಿಸ್ತಾರವಾದ ಕಣಿವೆ ಪ್ರದೇಶ ಹಾಗೂ ಭತ್ತದ ಗದ್ದೆಗಳನ್ನು ನೋಡಬಹುದು. 1870ರಲ್ಲಿ ಮಡಿಕೇರಿಯು ಪುರಸಭೆಯನ್ನು ಪಡೆಯಿತು. ಇನ್ನೊಂದು ಪ್ರೇಕ್ಷಣೀಯ ಸ್ಥಳವು ಮಡಿಕೇರಿಗೆ 9 ಕಿಮೀ ದೂರದಲ್ಲಿರುವ ಹಾಲೇರಿ. ಇದು ಕಾಫಿ ತೋಟಗಳಿಗೆ ಪ್ರಸಿದ್ಧಿ. ಅದೇ ರೀತಿ ಕೊಡಗನ್ನು ಹಾಲೇರಿ ರಾಜರು ಆಳಿದುದರಿಂದ ಇದಕ್ಕೆ ಐತಿಹಾಸಿಕ ಪ್ರಾಮುಖ್ಯತೆಯೂ ಇದೆ. ಮಡಿಕೇರಿ-ಸಿದ್ದಾಪುರ-ವೀರರಾಜಪೇಟೆ ಹೆದ್ದಾರಿಯಲ್ಲಿ ಮಡಿಕೇರಿಗೆ 16 ಕಿಮೀ ದೂರದಲ್ಲಿ ಚೆಟ್ಟಳ್ಳಿ ಎಂಬ ಇನ್ನೊಂದು ಮುಖ್ಯ ಸ್ಥಳವಿದೆ. ಇಲ್ಲಿಂದ ಏಳು ಕಿಮೀ ದೂರ

ದಲ್ಲಿ ಚೆಟ್ಟಳ್ಳಿ-ಶುಂಟಿಕೊಪ್ಪ ರಸ್ತೆಯಲ್ಲಿ ಕೇಂದ್ರ ಸರಕಾರದ ಕಿತ್ತಳೆ ಮತ್ತು ಜಂಬೀರ ಜಾತಿ ಗಿಡಗಳ ಸಂಬಂಧವಾದ ಒಂದು ಸಂಶೋಧನಾ ಕೇಂದ್ರವಿದೆ. ಇಲ್ಲಿ ಒಂದು ಕಾಫಿ ಸಂಶೋಧನಾ ಕೇಂದ್ರವೂ ಇದೆ.

ಮದ್ದೂರು : (ಮಂಡ್ಯ ಜಿ; ತಾ. ಕೇ; ಜನ: 17,401) ಮದ್ದೂರು, ಮಂಡ್ಯದ ಪೂರ್ವಕ್ಕೆ 20 ಕಿಮೀ ಹಾಗೂ ಬೆಂಗಳೂರಿಗೆ 80 ಕಿಮೀ ದೂರದಲ್ಲೂ ಇದೆ. ಪುರಸಭೆಯನ್ನು ಹೊಂದಿರುವ ಈ ಊರು ಶಿಂಷಾ ನದಿಯ ಬಲದಂಡೆಯ ಮೇಲೆ ಇದೆ. ಇದು ಬಹಳ ಪ್ರಾಚೀನವಾದ ಸ್ಥಳವೆಂಬುದು ಇಲ್ಲಿನ ಸಾಂಪ್ರದಾಯಿಕ ನಂಬಿಕೆ. ಇಲ್ಲಿನ ಐತಿಹ್ಯದ ಪ್ರಕಾರ ಇದರ ಮೂಲ ಹೆಸರು ಅರ್ಜುನಪುರಿ ಎಂದು; ಮಹಾಭಾರತದ ಅರ್ಜುನ ತನ್ನ ತೀರ್ಥ ಯಾತ್ರೆಯ ಸಂದರ್ಭದಲ್ಲಿ ಇಲ್ಲಿಗೆ ಭೇಟಿ ಕೊಟ್ಟಿದ್ದುದರ ಸ್ಮರಣಾರ್ಥ ಹಿಂದಿನ ಅಗ್ರಹಾರವಾದ ಇದನ್ನು ಅರ್ಜುನಪುರಿ ಎಂದು ಹೆಸರಿಸಲಾಗಿತ್ತಂತೆ. ಶಿಂಷಾ ನದಿಯ ದಂಡೆಯ ಮೇಲೆ ಕದಂಬನೆಂಬ ಋಷಿ ವಾಸವಾಗಿದ್ದನೆಂಬ ಕಾರಣದಿಂದ ಇದಕ್ಕೆ ಕದಂಬ ಎಂಬ ಹೆಸರೂ ಇದೆ. ಟಿಪ್ಪುಸುಲ್ತಾನನು ಇಲ್ಲಿ ಒಂದು ಭಾರಿ ಮದ್ದು ಗುಂಡಿನ ಕೋಠಿಯನ್ನು ಕಟ್ಟಿಸಿದ್ದನೆಂದೂ ಅದರಿಂದಲೇ ಇದನ್ನು ಮದ್ದೂರು ಎಂದು ಕರೆಯಲಾಯಿತೆಂದೂ ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯಕ್ಕೆ ಹೆಚ್ಚು ಮನ್ನಣೆ ಕೊಡುವ ಕಾರಣವಿಲ್ಲ. ಏಕೆಂದರೆ ಕ್ರಿ.ಶ. 1100 ಶಾಸನ ಒಂದರಲ್ಲಿ ಇದನ್ನು ಮರುದೂರು ಎಂದು ಹೆಸರಿಸಲಾಗಿದೆ. ಗಂಗರ ಕಾಲದಲ್ಲಿ ಇದು ಗಂಗರ ಕೈಕೆಳಗಿನ ಚಿಕ್ಕ ಗಂಗವಾಡಿ ಪ್ರಾಂತಕ್ಕೆ ಸೇರಿತ್ತು. ನಂತರ ಹೊಯ್ಸಳರ ಕಾಲದಲ್ಲಿ ಇದು ಒಂದು ಅಗ್ರಹಾರವಾಗಿ ದಾನ ಮಾಡಲ್ಪಟ್ಟಿತು. 1406ರ ಶಾಸನವೊಂದು ಈ ಅಗ್ರಹಾರವನ್ನು ನರಸಿಂಹ ಚತುರ್ವೇದಿ ಮಂಗಲ ಎಂದು ಹೆಸರಿಸಿದೆ. ರಾಜ ಒಡೆಯರ್ ಅವರು ಈ ಕೋಟೆಯನ್ನು 1617ರಲ್ಲಿ ತಮ್ಮ ವಶಪಡಿಸಿಕೊಂಡರು. ನಂತರ ಹೈದರ್ ಅಲಿ ಕಾಲದಲ್ಲಿ ಕೋಟೆಯ ಪುನರ್ನಿರ್ಮಾಣವಾಯಿತು. ಕ್ರಿ.ಶ. 1791ರಲ್ಲಿ ರಲ್ಲಿ ಲಾರ್ಡ್ ಕಾರ್ನವಾಲೀಸನು ಶ್ರೀರಂಗಪಟ್ಟಣದ ಮೇಲೆ ದಾಳಿಗೆ ಹೊರಟಾಗ ಈ ಕೋಟೆಯನ್ನು ಧ್ವಂಸ ಮಾಡಿದನು. ಇಲ್ಲಿನ ಪೂರ್ವಾಭಿಮುಖದ ನರಸಿಂಹಸ್ವಾಮಿ ದೇವಸ್ಥಾನ ಮೂಲತಃ ಹೊಯ್ಸಳ ಶಿಲ್ಪದ್ದು. ಆ ನಂತರದಲ್ಲಿ ಅದಕ್ಕೆ ಗೋಪುರ ಸಮೇತ ದ್ರಾವಿಡ ಶಿಲ್ಪದ ಜೋಡಣೆಗಳೂ ಆಗಿವೆ. ಹಿರಣ್ಯಕಶ್ಯಪುವನ್ನು ಸಂಹರಿಸುವ ಕೆಲಸದಲ್ಲಿ ಉದ್ಯುಕ್ತನಾಗಿರುವ ಏಳು ಅಡಿ ಎತ್ತರದ ಉಗ್ರ ನರಸಿಂಹ ಪ್ರತಿಮೆಯನ್ನು ಬಹಳ ಭವ್ಯವಾಗಿ ಕೆತ್ತಲಾಗಿದೆ. ಈ ದೇವಸ್ಥಾನದಲ್ಲಿ ಮೂರು ಶಿಲಾಶಾಸನಗಳು ಇವೆ. ನರಸಿಂಹ ದೇವಸ್ಥಾನದ ಬದಿಗಿರುವ ವರದರಾಜ ದೇವಸ್ಥಾನ ಚೋಳ ಕಟ್ಟಡ. ಒಳಗಿರುವ ವರದರಾಜ ವಿಗ್ರಹ 12 ಅಡಿ ಎತ್ತರವಿದ್ದು, ಅತ್ಯಂತ ಉತ್ತಮ ಶಿಲ್ಪ ವಿನ್ಯಾಸದಿಂದ ಕೂಡಿದೆ. ಗಂಗರ ಕಾಲದಲ್ಲಿ ಕಟ್ಟಿದ ದೇಶೇಶ್ವರ ದೇವಸ್ಥಾನಕ್ಕೆ ಜೀರ್ಣೋದ್ಧಾರ ಸಮಯದಲ್ಲಿ ಬಳಪದ ಕಲ್ಲಿನ ಗೋಡೆಗಳ ನಿರ್ಮಾಣವಾಗಿದೆ. ಈ ದೇವಸ್ಥಾನದ ಪುಟ್ಟ ನಂದಿ ಮಂಟಪವು ಚೋಳರ ಕಾಲದ್ದು. ಅದಕ್ಕೆ ನಾಲ್ಕು ಬಹು ಸುಂದರ ಕಂಭಗಳಿವೆ. ಗ್ರಾಮದೇವತೆ ಮದ್ದೂರಮ್ಮನ ಹೆಸರಿನಲ್ಲಿ ಪ್ರತೀವರ್ಷ ಜಾತ್ರೆ ಮತ್ತು ದನಗಳ ಪರಿಷೆ ಕೂಡುತ್ತದೆ. ಆ ಸಂದರ್ಭದಲ್ಲಿ ಬೆಂಕಿಯ ಮೇಲೆ ನಡೆಯುವ (ಕೊಂಡ ಹಾಯುವ) ಕ್ರಿಯೆ ವಿಶೇಷ ಆಕರ್ಷಣೆಯದು. ಮದ್ದೂರಿನಿಂದ ಮೂರು ಕಿಮೀ ದೂರದಲ್ಲಿರುವ ವೈದ್ಯನಾಥಪುರದಲ್ಲಿ ವೈದ್ಯನಾಥೇಶ್ವರ ದೇವಸ್ಥಾನವಿದೆ. ಅದರಲ್ಲಿ 1406ರ ಶಿಲಾಶಾಸನವೊಂದಿದೆ. ಮೈಸೂರು ಕಾಂಗ್ರೆಸ್‌ನ ಪ್ರಪ್ರಥಮ ಮಹಾಮೇಳವನ್ನು ಮದ್ದೂರು ಗಡಿಗೆ ಹೊಂದಿದಂತಿರುವ ಶಿವಪುರದಲ್ಲಿ 1938ರಲ್ಲಿ ಸಮಾವೇಶಗೊಳಿಸಿದ್ದರಿಂದ ಮದ್ದೂರು ಖ್ಯಾತಿ ಪಡೆಯಿತು. ಇಲ್ಲಿನ ಸತ್ಯಾಗ್ರಹ ಸ್ಮಾರಕ ಭವನವೂ ಸಹ ಒಂದು ಆಸಕ್ತಿ ಮೂಡಿಸುವ ಸ್ಮಾರಕ. ಅದರ ಸುತ್ತ ಸುಂದರವಾದ ಹೂದೋಟವಿದೆ. ಅದರ ಒಳಗೆ ಕೆಲವು ವರ್ಣಚಿತ್ರಗಳು ಇವೆ ರೇಷ್ಮೆ ಕೃಷಿ ಇಲ್ಲಿ ವ್ಯಾಪಕವಾಗಿ ಇದೆ. ತೋಟಗಾರಿಕೆ ಹಾಗೂ ರೇಷ್ಮೆಯ ಕೃಷಿ ಉತ್ಪಾದನಾ ತಾಣಗಳು ಮತ್ತು ಮದ್ದೂರು ಕೆರೆಗೆ ಸೇರಿದ ಮೀನು ಅಭಿವೃದ್ಧಿ ಕೊಳಗಳು ಇಲ್ಲಿ ಗಮನಾರ್ಹವಾದವುಗಳು. ಹಳ್ಳಿಯ ಗಾಡಿಗಳ ತಯಾರಿಕೆ, ಕುಂಬಾರಿಕೆ, ಬಿದರಿನಿಂದ ತಯಾರಾದ ಗೃಹೋಪಯೋಗಿ ಸಾಮಗ್ರಿಗಳು ಇಲ್ಲಿನ ಗಮನಾರ್ಹವಾದ ಕೈಕಸಬುಗಳು. 1850ರಲ್ಲಿ ಮದ್ದೂರಿನ ಬಳಿ ಶಿಂಷಾ ನದಿಗೆ ಅಡ್ಡಲಾಗಿ ಕಟ್ಟಿರುವ ಶಿಂಷಾ ಸೇತುವೆ ರಾಜ್ಯದ ಹಳೆಯ ಸೇತುವೆಗಳಲ್ಲಿ ಒಂದು. ಈ ಸೇತುವೆ ಅನೇಕ ವರ್ಷಗಳ ಕಾಲ ರಸ್ತೆ ಹಾಗೂ ರೈಲುಗಳ ಜಂಟಿ ಸಂಪರ್ಕ ಸಾಧನವಾಗಿತ್ತು. ಮದ್ದೂರಿನಿಂದ ಆರು ಕಿಮೀ ದೂರದಲ್ಲಿರುವ ಗೆಜ್ಜಲಗೆರೆಯಲ್ಲಿ ಹಾಲಿನ ಶೈತ್ಯಾಗಾರವಿದೆ. ಶಿಂಷಾ ನದಿ ದಂಡೆಯ ಮೇಲೆ ಮದ್ದೂರಿನಿಂದ 15 ಕಿಮೀ ದೂರದಲ್ಲಿನ ಕೊಕ್ಕರೆ ಬೆಳ್ಳೂರಿನಲ್ಲಿ ಒಂದು ಪುಟ್ಟ ಪಕ್ಷಿಧಾಮ ಇದೆ. ಅಲ್ಲಿ ಅನೇಕ ಬಗೆಯ ಪಕ್ಷಿಗಳು ಇವೆ. ಕೆಲವು ಋತುಮಾನ ಕಾಲದಲ್ಲಿ ವಿಶೇಷವಾಗಿ ಪೆಲಿಕನ್ ಹಕ್ಕಿಗಳು ಇಲ್ಲಿಗೆ ಬರುತ್ತವೆ. ಮದ್ದೂರಿನಿಂದ 12 ಕಿಮೀ ದೂರದ ಕಾಳಮುದ್ದನದೊಡ್ಡಿ ಗ್ರಾಮದಲ್ಲಿ ಚಾಮುಂಡೇಶ್ವರಿ ಸಹಕಾರಿ ಸಕ್ಕರೆ ಕಾರ್ಖಾನೆ ಇದೆ. ಬೆಂಗಳೂರು-ಮದ್ದೂರು ಹೆದ್ದಾರಿಯಲ್ಲಿ ನಿಡಘಟ್ಟ ಗ್ರಾಮದಲ್ಲಿ ತೆಂಗಿನ ನಾರಿನಿಂದ ತಯಾರಾಗುವ ವಿವಿಧ ಪದಾರ್ಥಗಳ ಉತ್ಪಾದನಾ ಕೇಂದ್ರವಿದೆ. ಮದ್ದೂರಿನಿಂದ ಆರು ಕಿಮೀ ದೂರದ ಸೋಮನಹಳ್ಳಿಯಲ್ಲಿ ಕರ್ನಾಟಕ ಸ್ಕೂಟರ್ ಕಾರ್ಖಾನೆ ಎಂಬ ದೊಡ್ಡ ಪ್ರಮಾಣದ ಕಾರ್ಖಾನೆ ಸ್ಥಾಪಿತವಾಗಿದೆ. ಕರ್ನಾಟಕದಲ್ಲಿ ಇಂತಹ ಕಾರ್ಖಾನೆಗಳಲ್ಲಿ ಇದೇ ಮೊದಲನೇಯದು. ಇಲ್ಲಿ ವ್ಯವಸಾಯ ತರಬೇತಿ ಶಾಲೆ ಹಾಗೂ ಒಂದು ಕೃಷಿ ಕ್ಷೇತ್ರವಿದೆ. ಮದ್ದೂರಿನಿಂದ 12 ಕಿಮೀ ದೂರದಲ್ಲಿರುವ ಶಿವಾರ ಗುಡ್ಡದಲ್ಲಿ 1954 ರಿಂದ ಒಂದು ವಯಸ್ಕರ ಶಿಕ್ಷಣ ಕೇಂದ್ರ

ಕಾರ್ಯನಿರತವಾಗಿದೆ. ವಿಶ್ವಖ್ಯಾತ ಡೇನಿಷ್ ಜಾನಪದ ಮಾದರಿಯಲ್ಲಿ ಇದು ಕೆಲಸ ಮಾಡುತ್ತಿದೆ. ಅದೇ ರೀತಿ ಡೇನಿಷ್ ಮಾದರಿಯ ಕೋಳಿ ಸಾಕಣೆ ಕೇಂದ್ರವನ್ನು ಸಹ ಇಲ್ಲಿ ಆರಂಭ ಮಾಡಲಾಗಿದೆ. ಮದ್ದೂರಿನ ಈಶಾನ್ಯಕ್ಕೆ ಎಂಟು ಕಿಮೀ ದೂರದ ಅರೆತಿಪ್ಪೂರಿನ ಬಳಿಯ ಗುಡ್ಡದಲ್ಲಿ ಹತ್ತು ಅಡಿ ಎತ್ತರದ ಗೊಮ್ಮಟ ವಿಗ್ರಹ ಇದೆ. ಇದು ಇಲ್ಲಿನ ಮುಖ್ಯ ಆಕರ್ಷಣೆ. 9 ರಿಂದ 12ನೇಯ ಶತಮಾನದವರೆಗೆ ಈ ಊರು ಒಂದು ಮುಖ್ಯ ಜೈನ ಕೇಂದ್ರವಾಗಿತ್ತೆಂದು ಇಲ್ಲಿನ ಒಂದು ಶಾಸನ ತಿಳಿಸುತ್ತದೆ.

ಮಧುಗಿರಿ : (ತುಮಕೂರು ಜಿ; ಉಪವಿಭಾಗ ಹಾಗೂ ತಾ. ಕೇ; ಜನ: 17,797) ಮಧುಗಿರಿ ಬೆಂಗಳೂರಿನ ವಾಯುವ್ಯಕ್ಕೆ 107 ಕಿಮೀ ಹಾಗೂ ತುಮಕೂರಿನ ಉತ್ತರಕ್ಕೆ 43 ಕಿಮೀ ದೂರದಲ್ಲಿಯೂ ಇದೆ. ಊರಿನ ಉತ್ತರ ಪಕ್ಕದಲ್ಲಿರುವ ಬೆಟ್ಟ ಮಧುಗಿರಿ (ಜೇನು ಬೆಟ್ಟ)ಯಿಂದ ಊರಿಗೆ ಅದೇ ಹೆಸರು ಬಂದಿದೆ. ಹಿಂದೆ ಇದನ್ನು ಮದ್ದಗಿರಿಯೆಂದು ಕರೆಯಲಾಗಿದೆ. ಊರಿನಲ್ಲಿ ವೆಂಕಟರಮಣ ಮತ್ತು ಮಲ್ಲೇಶ್ವರ ದೇವರುಗಳ ದೊಡ್ಡ ದೇವಸ್ಥಾನಗಳು ಅಕ್ಕಪಕ್ಕದಲ್ಲಿ ಇವೆ. ಎರಡೂ ಪೂರ್ವಾಭಿಮುಖವಾಗಿ ಒಂದೇ ಸಾಲಿನಲ್ಲಿ ಇದ್ದು, ದ್ರಾವಿಡ ಶಿಲ್ಪ ಶೈಲಿಯ ಕಟ್ಟಡಗಳಾಗಿದ್ದು ಎತ್ತರವಾದ ಗೋಪುರಗಳನ್ನು ಒಳಗೊಂಡಿವೆ. ಈ ದೇವಸ್ಥಾನದೊಳಗಿರುವ ಕಲ್ಯಾಣ ಮಂಟಪ ಬಹಳ ಸುಂದರವಾಗಿದೆ. ಕೋಟೆ ಗೋಡೆಗೆ ಸೇರಿದಂತಿರುವ ಮಲ್ಲಿನಾಥ ಜೈನ ಬಸದಿಯಲ್ಲಿ ಒಂದು ಸೊಗಸಾದ ಮಾನಸ್ತಂಭ ವಿದೆ. ವೀರಶೈವ ಗುರ್‍ರಮ್ಮನ ಮಠದಲ್ಲಿ ಶಿವಲಿಂಗಸ್ವಾಮಿ ಎಂಬ ಗುರುವಿನ ಗದ್ದುಗೆ ಇದೆ. ಈ ಮಠದ ಬಳಿ ಕೆಲವು ಉತ್ತಮ ಗವಿಗಳು ಇವೆ. ಮಧುಗಿರಿಯ ಬಲವಾದ ಕೋಟೆಯನ್ನು ರಾಜಾ ಹೀರೇಗೌಡನು ಕಟ್ಟಿಸಿದನೆಂದು ಹೇಳಲಾಗಿದೆ. ಹೈದರ್ ಅಲಿ ಈ ಕೋಟೆಯನ್ನು ಬಲಪಡಿಸಿದನಷ್ಟೇ ಅಲ್ಲ, ಇಲ್ಲಿನ ವ್ಯಾಪಾರವನ್ನೂ ಅಭಿವೃದ್ಧಿ ಪಡಿಸಿದ. ಹೈದರ್ ಅಲಿಯು ಬಿದನೂರನ್ನು ಗೆದ್ದ ನಂತರ ಬಿದನೂರಿನ ರಾಣಿಯನ್ನು ಈ ಕೋಟೆಯಲ್ಲಿ ಬಂಧಿಸಿಟ್ಟಿದ್ದ. 1767ರಲ್ಲಿ ಮರಾಠರು ಇದನ್ನು ಗೆದ್ದುಕೊಳ್ಳುವವರೆಗೆ ಆಕೆ ಇಲ್ಲಿಯೇ ಬಂದಿಯಾಗಿದ್ದಳು. ಅಂತರಾಳದ ಬಾಗಿಲು, ದಿಡ್ಡಿಬಾಗಿಲು, ಮೈಸೂರು ಬಾಗಿಲು ಮೊದಲಾದ ಬಾಗಿಲುಗಳನ್ನು ದಾಟ ಬೆಟ್ಟದ ತುದಿಗೆ ಹೋಗಬೇಕು. ಅಲ್ಲಿ ಅನೇಕ ನೀರಿನ ಒರತೆಗಳು ಇವೆ. ಕೈಮಗ್ಗದ ಬಟ್ಟೆ ಮತ್ತು ಹಚ್ಚಡಗಳ ತಯಾರಿಕೆಗೆ ಈ ಊರು ಪ್ರಸಿದ್ಧವಾಗಿದೆ. ಅಕ್ಕಿಯಲ್ಲಿ ಬಹಳ ಉತ್ತಮವಾದ ಚಿನ್ನದ ಸಾಲಕ್ಕಿ ಈ ತಾಲೂಕಿನಲ್ಲಿ ಬೆಳೆಯುತ್ತದೆ. ಇಲ್ಲಿ ಪುರಸಭೆ ಇದೆ. ಮಿಡಿಗೇಶಿ (ಜನ: 2,033)ಯು ಅದೇ ಹೆಸರಿನ ಹೋಬಳಿಯ ಆಡಳಿತ ಕೇಂದ್ರ. ಇದು ಮಧುಗಿರಿಯ ಉತ್ತರಕ್ಕೆ 19 ಕಿಮೀ ದೂರದಲ್ಲಿ ಇದೆ. ಇಲ್ಲಿನ ಬೆಟ್ಟದ ಕೋಟೆ ಈ ಊರಿಗೆ ಪ್ರಾಮುಖ್ಯತೆ ತಂದುಕೊಟ್ಟಿದೆ. ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಸ್ಥಳೀಯ ಆಡಳಿತಗಾರನಾಗಿದ್ದ ನಾಗಿರೆಡ್ಡಿಯ ಹೆಂಡತಿಯ ಹೆಸರು ಮಿಡಿಗೇಶಿ. ಮಿಡಿಗೇಶಿ ಎಂದರೆ ಅಡಿ ಮುಟ್ಟುವವರೆಗೆ ಬೆಳೆದ ಉದ್ದವಾದ ಸುಂದರ ಕೂದಲಿನವಳು ಎನ್ನಲಾಗಿದೆ. ಆಕೆಯ ಹೆಸರನ್ನೇ ಈ ಊರಿಗೆ ಇಡಲಾಗಿದೆ. ಇಲ್ಲಿನ ವೆಂಕಟರಮಣ ದೇವಾಲಯವನ್ನು ನಾಗಿರೆಡ್ಡಿಯೇ ಕಟ್ಟಿಸಿದನೆಂದು ಪ್ರತೀತಿ. ಆದರೆ ಇದರ ಗರ್ಭಗೃಹವು ಹೊಯ್ಸಳ ಶೈಲಿಯ ಮಾದರಿಯಂತಿದೆ. ದೇವಸ್ಥಾನದ ದಕ್ಷಿಣ ದ್ವಾರದತ್ತ ಇರುವ ಪ್ರತಿಮೆಯನ್ನು ನಾಗಿರೆಡ್ಡಿಯ ಪ್ರತಿಮೆ ಎಂದು ವರ್ಣಿಸಲಾಗುತ್ತದೆ. ಇಲ್ಲಿ ಒಂದು ಮಲ್ಲೇಶ್ವರ ದೇವಸ್ಥಾನವೂ ಇದೆ. ಮಿಡಿಗೇಶಿ ಬೆಟ್ಟಕ್ಕೆ ನಾಗಿರೆಡ್ಡಿಯೇ ಕೋಟೆಯನ್ನು ಕಟ್ಟಿಸಿದ್ದ. ಬೆಟ್ಟದ ತುದಿಗೆ ಹೋಗಲು ಅನೇಕ ಬಾಗಿಲುಗಳು ಇವೆ. ಬೆಟ್ಟವೇರುವ ಸೋಪಾನ ಮಾರ್ಗದ ಬದಿಯಲ್ಲಿರುವ ಒಂದು ದೊಡ್ಡ ಬಂಡೆಯಲ್ಲಿ ಒಬ್ಬ ಹೆಣ್ಣುಮಗಳ ಉಬ್ಬು ಚಿತ್ರವನ್ನು ಕೆತ್ತಲಾಗಿದೆ. ಇದನ್ನು ವೀರನಾರಿ ಚಿಕ್ಕಮಲ್ಲಮ್ಮನದೆಂದು ಗುರುತಿಸಲಾಗಿದೆ. ಬೆಟ್ಟದ ಮೇಲೆ ಕಣಜಗಳಿವೆ. ಬೆಣ್ಣೆ ಮತ್ತು ತುಪ್ಪಗಳನ್ನು ಶೇಖರಿಸುತ್ತಿದ್ದ ಗೋಳಾಕಾರದ ಅವರಣಗಳು ಇವೆ. ಮದ್ದು ಗುಂಡಿನ ಕೋಠಿ ಇದೆ. ಮತ್ತು ಮುಸುರೆ ದೊಣೆ, ಕನ್ನೀರಮ್ಮನ ದೊಣೆ ಎಂಬ ಹೆಸರಿನ ಒರತೆಗಳು ಇವೆ. ಬೆಟ್ಟದ ತುದಿಯಲ್ಲಿ ಎರಡು ಮಿನಾರುಗಳ ಸುಂದರ ಮಸೀದಿ ಇದೆ. ಇದರ ಚಾವಣಿಯ ಸುತ್ತಲೂ ಕುಸುರಿ ಕೆಲಸದ ಅಡ್ಡಗೋಡೆಯನ್ನು ಕಟ್ಟಲಾಗಿದೆ. ಮಸೀದಿಗೆ ಹತ್ತಿರದಲ್ಲಿಯೇ ಒಂದು ಹನುಮಾನ್ ಗುಡಿ ಇದೆ. ಇದಕ್ಕೆ ಎರಡೂ ಕಡೆ ಸೋಪಾನ ಮಾರ್ಗವಿದೆ.

ಮರಡಿ ಹಳ್ಳಿ : (ಚಿತ್ರದುರ್ಗ ಜಿ; ಹಿರಿಯೂರು ತಾ; ಜನ: 2,345) ಮರಡಿಹಳ್ಳಿಯು ಬೆಂಗಳೂರು-ಚಿತ್ರದುರ್ಗ ರಸ್ತೆಯಲ್ಲಿ ಬೆಂಗಳೂರಿನಿಂದ 182 ಕಿಮೀ ಕಲ್ಲಿನಿಂದ ಪೂರ್ವಕ್ಕೆ ಸುಮಾರು 2.4 ಕಿಮೀ ದೂರದಲ್ಲಿದೆ. ಇದು ಹಿರಿಯೂರು ಮತ್ತು ಚಿತ್ರದುರ್ಗಗಳ ಮಧ್ಯೆ ಇದೆ. ಭೂಗರ್ಭಶಾಸ್ತ್ರಜ್ಞರ ಪ್ರಕಾರ ಮರಡಿಹಳ್ಳಿಯ ಬೆಟ್ಟಗಳು ಬಲು ಪ್ರಾಚೀನವಾದುವೆಂದೂ ಮತ್ತು ಎರಡೂವರೆ ಕೋಟಿ ವರ್ಷಗಳ ಹಿಂದಿನವೆಂದೂ ತಿಳಿಯುತ್ತದೆ. ಮರಡಿಹಳ್ಳಿಯ ಬೆಟ್ಟಗಳಲ್ಲಿ ಕಾಣಸಿಗುವ ದಿಂಬಿನಾಕಾರದ ಶಿಲಾ ಪ್ರವಾಹದ ಅವಶೇಷಗಳು ಬಹಳ ಅಪರೂಪದ ವಸ್ತುಗಳು ಮತ್ತು ಅಸಾಧಾರಣವಾದವು. ಅವು ಕರ್ನಾಟಕದ ಪ್ರಾಕೃತಿಕ ವಿಸ್ಮಯಗಳಲ್ಲಿ ಒಂದಾಗಿರುವುದರಿಂದ, ಅವುಗಳನ್ನು ಭೂಗರ್ಭದ ಸ್ಮಾರಕಗಳೆಂದು ಪರಿಗಣಿಸಲಾಗಿದೆ. ಮರಡಿಹಳ್ಳಿಯ ತಗ್ಗಾದ ಬೆಟ್ಟವು ಪೂರ್ಣವಾಗಿ ಶಿಲಾಪ್ರವಾಹದಿಂದಲೇ ನಿರ್ಮಿತವಾದದ್ದು. ಜ್ವಾಲಾಮುಖಿಯ ರೂಪರೇಷೆಗಳನ್ನು ಅಧ್ಯಯನ ಮಾಡಲು ಇದು ಒಂದು ಅತ್ಯುತ್ತಮವಾದ ಸ್ಥಳ. ಆ ದೃಷ್ಟಿಯಿಂದ ಇದು ವಿಶಿಷ್ಟವಾದುದು. ಇಲ್ಲಿ ಕಾಣಬರುವ ಭಾರಿ ಪ್ರಮಾಣದ ಶಿಲಾ ಪ್ರವಾಹದಲ್ಲಿ, ದೀರ್ಘ ವೃತ್ತಾಕಾರದ ಅಥವಾ ವಿವಿಧ ಆಕಾರದ

ಮತ್ತು ಅಪರೂಪವಾಗಿ ಗೋಳಾಕಾರದ ಇಲ್ಲವೇ ಅಂಡಾಕಾರದ ಎಂಟು ಅಂಗುಲದಿಂದ ಎರಡು ಅಡಿ ವರೆಗಿನ ವ್ಯಾಸವುಳ್ಳ ದಿಂಬಿನಂಥ ಶಿಲಾಪದರಗಳು ವಿಶೇಷವಾಗಿವೆ. ಇಲ್ಲಿ ವೆಂಕಟರಮಣ, ಆಂಜನೇಯ, ಗುಡ್ಡದ ರಂಗಪ್ಪನ ಸುಂದರ ದೇವಾಲಯಗಳು ಇವೆ. ಇಲ್ಲಿರುವ ಇತರ ದೇವಾಲಯಗಳೆಂದರೆ ಕಾಟಪ್ಪ ದೇವರು, ಕೊಲ್ಲಾಪುರದಮ್ಮ ಮತ್ತು ದುರ್ಗಾದೇವಿ ದೇಗುಲಗಳು.

**ಮಲ್ಲಾಡಿಹಳ್ಳಿ :** (ಚಿತ್ರದುರ್ಗ ಜಿ; ಹೊಳಲ್ಕೆರೆ ತಾ; ಜನ: 2,808) ಮಲ್ಲಾಡಿಹಳ್ಳಿಯು ಹೊಳಲ್ಕೆರೆ ಪಟ್ಟಣದಿಂದ ಸುಮಾರು 10 ಕಿಮೀ ಹಾಗೂ ಬೆಂಗಳೂರಿನಿಂದ 244 ಕಿಮೀ ದೂರದಲ್ಲಿದೆ. ಇಲ್ಲಿ 1943ರಲ್ಲಿ ಯೋಗಿ ಶ್ರೀ ರಾಘವೇಂದ್ರ ಸ್ವಾಮಿಗಳಿಂದ ಅನಾಥ ಸೇವಾಶ್ರಮವು ಸ್ಥಾಪಿಸಲ್ಪಟ್ಟಿತು. ಇಲ್ಲಿರುವ ಆಶ್ರಮವು ಸಮುದಾಯ ವಿಕಾಸ ಕೇಂದ್ರವಾಗಿದ್ದು ಜಾತಿ, ಮತಗಳ ಭೇಧವಿಲ್ಲದೆ ಎಲ್ಲ ಜನಗಳಿಗೂ ಸೇವೆಯನ್ನು ಒದಗಿಸುವುದೇ ಇದರ ಮುಖ್ಯ ಗುರಿಯಾಗಿದೆ. ಈ ಆಶ್ರಮದ ಮುಖ್ಯ ಉದ್ದೇಶಗಳೆಂದರೆ ವಿಶ್ವವ್ಯಾಪಿ ಭ್ರಾತೃತ್ವ ಮತ್ತು ವಿಶ್ವಶಾಂತಿ. ಈ ಆಶ್ರಮವು ತನ್ನ ಬಹುಮುಖ ಸಮಾಜಸೇವೆ ಯಿಂದ ಗ್ರಾಮೀಣ ವಿಕಾಸಕ್ಕೆ ಮೂಲಸ್ಥಾನವಾಗಿ ಪರಿಣಮಿಸಿದೆ. ಈ ಆಶ್ರಮದ ಆಶ್ರಯದಲ್ಲಿ ಒಂದು ಕಾಲೇಜು, ಇತರ ವಿದ್ಯಾ ಸಂಸ್ಥೆಗಳು, ಉಚಿತ ವಿದ್ಯಾರ್ಥಿನಿಲಯ, ಖ್ಯಾತ ಯೋಗಮಂದಿರ, ಮತ್ತು ಸಣ್ಣ ಪ್ರಮಾಣದ ಪ್ರಾಣಿ ಸಂಗ್ರಹಾಲಯಗಳಿವೆ. ಇಲ್ಲಿ ಪರಪ್ಪಸ್ವಾಮಿಗಳ ಮಠವೂ ಮತ್ತು ರಾಘವೇಂದ್ರಸ್ವಾಮಿಗಳ ಗುರುಗಳಾಗಿದ್ದ ಶ್ರೀ ಪಳನಿಸ್ವಾಮಿಗಳ ಬೃಂದಾವನವೂ ಇವೆ. ಇಲ್ಲಿರುವ ಆಯುರ್ವೇದ ಚಿಕಿತ್ಸಾಲಯಕ್ಕೆ ಚಿಕಿತ್ಸೆಗೆಂದು ಪ್ರತೀ ವರ್ಷವೂ ಸುಮಾರು 25 ರಿಂದ 30 ಸಾವಿರ ರೋಗಿಗಳು ದೇಶದ ನಾನಾ ಭಾಗಗಳಿಂದ ಬರುತ್ತಾರೆ.

**ಮಳವಳ್ಳಿ :** (ಮಂಡ್ಯ ಜಿ; ತಾ. ಕೇ; ಜನ: 25,114) ಮಳವಳ್ಳಿಯು ಮಂಡ್ಯದಿಂದ 29 ಕಿಮೀ ಆಗ್ನೇಯದಲ್ಲಿಯೂ, ಬೆಂಗಳೂರಿನಿಂದ 124 ಕಿಮೀ ದೂರದಲ್ಲಿಯೂ ಇದೆ. ಇದು ಪುರಸಭೆಯನ್ನು ಹೊಂದಿದ ಪಟ್ಟಣವಾಗಿದ್ದು, 1-7-1939ರಲ್ಲಿ ತಾಲೂಕು ಕೇಂದ್ರವಾಯಿತು. ದೊಡ್ಡದಾದ ಕೋಟೆಯ ಅವಶೇಷಗಳು ಈ ಪಟ್ಟಣದಲ್ಲಿವೆ. ಹೈದರ್ ಅಲಿಯು ತನ್ನ ಮಗ ಟಿಪ್ಪುವಿಗೆ ಮಳವಳ್ಳಿಯನ್ನು ಜಹಗೀರಾಗಿ ಕೊಟ್ಟನು. ಈ ಪಟ್ಟಣದಿಂದ ಸುಮಾರು ಮೂರು ಕಿಮೀ ದೂರದಲ್ಲಿ, ಮತ್ತು ಮೈಸೂರು ರಸ್ತೆಗೆ ಸಮೀಪದಲ್ಲಿ ಬ್ರಿಟಿಷರಿಗೂ ಟಿಪ್ಪುವಿಗೂ ಯುದ್ಧ ನಡೆದ ಸ್ಥಳವಿದೆ. ಈ ಯುದ್ಧಾನಂತರ ಟಿಪ್ಪುವು ಮಳವಳ್ಳಿಯನ್ನು ನಾಶ ಮಾಡಿ, ಅದು ತನ್ನ ಶತ್ರುಗಳಿಗೆ ಯಾವ ಉಪಯೋಗಕ್ಕೂ ಬಾರದಂತೆ ಮಾಡಿದನು. ಪ್ರಾಚೀನ ಕೋಟೆ ಯಲ್ಲಿ ಸಾರಂಗಪಾಣಿ ದೇವಾಲಯವಿದೆ. ಇದರಲ್ಲಿರುವ ಐದು ಅಡಿ ಎತ್ತರದ ಸಮಭಂಗದಲ್ಲಿರುವ ಶಿಲ್ಪವು ಆಕರ್ಷಕವಾಗಿದೆ. ಈಶ್ವರ ಮತ್ತು ವೀರಭದ್ರಸ್ವಾಮಿಯ ದೇವಾಲಯಗಳು, ಎರಡು ಮಸೀದಿಗಳು, ಒಂದು ದರ್ಗಾ, ಮತ್ತು ಒಂದು ಚರ್ಚ್ ಈ ಪಟ್ಟಣದಲ್ಲಿವೆ. ಗ್ರಾಮದೇವತೆ ದಂಡಿನ ಮಾರಮ್ಮನ ವಾರ್ಷಿಕ ಜಾತ್ರೆ ಇಲ್ಲಿ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಮಳವಳ್ಳಿಗೆ ಮೂರು ಕಿಮೀ ಸಮೀಪದಲ್ಲಿರುವ ಮಾರೆಹಳ್ಳಿಯಲ್ಲಿ ಚೋಳರ ಕಾಲದ ಲಕ್ಷ್ಮೀನರಸಿಂಹ ದೇವಾಲಯವಿದೆ. ಸುಖಾಸನದಲ್ಲಿರುವ ಲಕ್ಷ್ಮೀನರಸಿಂಹನ ವಿಗ್ರಹವು ಬಲು ಸುಂದರವಾಗಿದೆ. ಇದಕ್ಕೆ ರಾಜಾಶ್ರಯ ವಿಣ್ಣಗರಂ ಎಂಬ ಹೆಸರಿತ್ತೆಂದು ಅಲ್ಲಿರುವ ಶಾಸನ ದಿಂದ ತಿಳಿಯುತ್ತದೆ. ರಾಜಾಶ್ರಯ ಎನ್ನುವುದು ಚೋಳ ರಾಜರಾಜನ (985-1012) ಬಿರುದು. ಆದುದರಿಂದ ಈ ದೇವಾಲಯವನ್ನು ಅವನೇ ನಿರ್ಮಿಸಿರಬೇಕೆಂದು ಊಹಿಸ ಬಹುದು. ಈ ಪಟ್ಟಣದಲ್ಲಿ ಎಂಟನೇಯ ಶತಮಾನದಿಂದ ಪ್ರಾರಂಭವಾಗಿ 18ನೇಯ ಶತಮಾನದವರೆಗಿನ ಅನೇಕ ಶಾಸನ ಗಳು ಕಾಣಸಿಗುತ್ತವೆ. ಈ ತಾಲೂಕು ಚೋಳರು, ಗಂಗರು, ಹೊಯ್ಸಳರು, ವಿಜಯನಗರದ ಅರಸುಗಳು, ಮೈಸೂರು ಒಡೆಯರು ಮತ್ತು ಟಿಪ್ಪು ಸುಲ್ತಾನನ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ. ಶ. 1685ರ ಶಾಸನದ ಪ್ರಕಾರ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪಂಡಿತರುಗಳಿದ್ದು, ಇದು ವಿದ್ಯೆಗೆ ಹೆಸರಾಗಿತ್ತು. ಟಿಪ್ಪುವಿನ ಕಾಲದಲ್ಲಿ ಇದು ವಾಣಿಜ್ಯ ನಗರವಾಗಿತ್ತು. ಈ ಪಟ್ಟಣದಲ್ಲಿರುವ ಒಂದು ದೊಡ್ಡ ಕೆರೆಯು ನೀರಾವರಿಗೂ ಮತ್ತು ಮೀನು ಸಾಕಣೆಗೂ ಸಹಕಾರಿಯಾಗಿದೆ. ಈ ಪಟ್ಟಣ ಮತ್ತು ಇದರ ಸುತ್ತಮುತ್ತಲ ಪ್ರದೇಶ ಹಿಪ್ಪುನೇರಳೆ ಬೆಳೆಗೆ ಮತ್ತು ಬೆಲ್ಲದ ತಯಾರಿಕೆಗೆ ಪ್ರಸಿದ್ಧಿ ಪಡೆದಿವೆ. ಸರಕಾರೀ ಸ್ವಾಮ್ಯದ ರೇಷ್ಮೆ ಬಿತ್ತನೆ ಕೋಠಿ, ರೇಷ್ಮೆ ನೂಲುವ ಕೇಂದ್ರ, ಸಹಕಾರೀ ಚರ್ಮ ಉದ್ಯಮ ಮತ್ತು ಮರಗೆಲಸದ ಶಿಕ್ಷಣ ತರಬೇತಿ ಕೇಂದ್ರಗಳು ಇಲ್ಲಿವೆ. ಇಲ್ಲಿ ಸುಮಾರು ಒಂದು ಸಾವಿರ ಚಮ್ಮಾರರಿದ್ದು, ಇವರು ತಯಾರಿಸಿದ ಚಪ್ಪಲಿಗಳು ಉತ್ತಮ ಗುಣಕ್ಕೆ ಪ್ರಸಿದ್ಧ ವಾಗಿವೆ. ಈ ಪಟ್ಟಣ ಮತ್ತು ಸುತ್ತಮುತ್ತಲ ಕೆಲವು ಗ್ರಾಮ ಗಳು ಬಟ್ಟೆ, ಸೀರೆ ಮತ್ತು ಧೋತಿಗಳ ನೇಯ್ಗೆಗೆ ಪ್ರಸಿದ್ಧಿ ಪಡೆದಿವೆ. ಈ ತಾಲೂಕಿನಲ್ಲಿ ಪ್ರವಾಸೋದ್ಯಮ ಮತ್ತು ಧಾರ್ಮಿಕ ದೃಷ್ಟಿಗಳಿಂದ ಪ್ರಸಿದ್ಧವಾದ ಅನೇಕ ಸ್ಥಳಗಳಿವೆ. ಮಳವಳ್ಳಿ ಪಟ್ಟಣಕ್ಕೆ ಸಮೀಪದಲ್ಲಿರುವ ಬ್ಲಫ್, ಜಲಪಾತದಿಂದ ಖ್ಯಾತ ಪ್ರವಾಸಿಗಳ ಕೇಂದ್ರವಾಗಿದೆ. (ನೋಡಿ: ಬ್ಲಫ್). ಮುತ್ತತ್ತಿಯು ಖ್ಯಾತ ಸ್ಥಳವಾಗಿದ್ದು ಅಲ್ಲಿ ಆಂಜನೇಯ ದೇವಾಲಯವಿದೆ. ಜೊತೆಗೆ ಅದೊಂದು ವಿಹಾರತಾಣ. ಬಸವನ ಬೆಟ್ಟದಲ್ಲಿ ಸುಂದರವಾದ ಬಸವನ ಶಿಲ್ಪವಿದೆ. ಬೊಪ್ಪೆಗೌಡನ ಪುರವು ಖ್ಯಾತ ಯಾತ್ರಾಸ್ಥಳವಾಗಿದ್ದು ಇಲ್ಲಿ ಮಂಟೇಸ್ವಾಮಿಯ ಗದ್ದುಗೆ ಮತ್ತು ಮಠವಿದೆ. ಈ ಮಂಟೇಸ್ವಾಮಿಗಳು ಉತ್ತರ ಕರ್ನಾಟಕದಿಂದ ಇಲ್ಲಿಗೆ ಬಂದು ಇಲ್ಲಿ ಸಮಾಧಿ ಹೊಂದಿದರೆಂದು ತಿಳಿದು ಬರುತ್ತದೆ. ಈ ಪ್ರದೇಶದಲ್ಲಿ ಪ್ರಚಾರದಲ್ಲಿರುವ ಜಾನಪದ ಹಾಡುಗಳು ಈ ಸಂಪ್ರದಾಯದ ವಿಷಯದಲ್ಲಿ ವಿಶೇಷ ಮಾಹಿತಿ

ನೀಡುತ್ತವೆ. ಇಲ್ಲಿ ನಡೆಯುವ ವಾರ್ಷಿಕ ಜಾತ್ರೆಯು ಸಾವಿರಾರು ಜನರನ್ನು ಆಕರ್ಷಿಸುತ್ತದೆ. ಈ ಸಂಪ್ರದಾಯದ ದೇವಾಲಯಗಳು ಮಳವಳ್ಳಿ, ಕೊಳ್ಳೇಗಾಲ ತಾಲೂಕಿನ ಚಿಕ್ಕಲ್ಲೂರು ಮತ್ತು ಕೃಷ್ಣರಾಜನಗರ ತಾಲೂಕಿನ ಕಪ್ಪಡಿಗಳಲ್ಲಿವೆ. ಶಿಂಷಾಪುರವು ಬ್ಲಫ್‌ನಿಂದ 15 ಕಿಮೀ ದೂರದಲ್ಲಿದೆ. ಇದು ಕಾವೇರಿಯ ಕೆಳದಂಡೆಯಲ್ಲಿದ್ದು, ಶಿಂಷಾ ನದಿಯ ಸಂಗಮಕ್ಕೆ ಅತಿ ಸಮೀಪದಲ್ಲಿದೆ. 1940ರಲ್ಲಿ ಪ್ರಾರಂಭಿಸಲಾದ ಶಿಂಷಾ ಹೈಡ್ರೋ ಎಲೆಕ್ಟ್ರಿಕ್ ಸ್ಟೇಷನ್ನಿನ ಸಮೀಪದಲ್ಲಿ ಈಗ ಒಂದು ಸಣ್ಣ ಪಟ್ಟಣವೇ ಬೆಳೆದು ಬಂದಿದೆ. ಇಲ್ಲಿ ಉತ್ಪನ್ನವಾಗುವ ವಿದ್ಯುತ್ತಿನ ಪ್ರಮಾಣ 17,200 ಕಿ. ವ್ಯಾ. ಟ್ರಾಲಿಯ ರಸ್ತೆಯ ಮೇಲ್ಭಾಗದಿಂದ ವಿದ್ಯುತ್ ಉತ್ಪಾದನಾ ಸ್ಥಳಕ್ಕೆ ಸುಮಾರು 900 ಅಡಿ ಅಂತರವಿದೆ. ಬಹುಸಂಖ್ಯೆಯಲ್ಲಿ ಪ್ರವಾಸಿಗರು ಈ ಸ್ಥಳಕ್ಕೆ ಬರುತ್ತಾರೆ. ಇಲ್ಲಿ ಒಂದು ಚರ್ಚ್, ಮಸೀದಿ ಮತ್ತು ದೇವಾಲಯಗಳಿವೆ.

**ಮಾಗಡಿ :** (ಬೆಂಗಳೂರು ಜಿ ; ತಾ. ಕೇ ; ಜನ : 17,623) ಮಾಗಡಿಯು ಬೆಂಗಳೂರಿನ ಪಶ್ಚಿಮಕ್ಕೆ 41 ಕಿಮೀ ದೂರದಲ್ಲಿ ಇದೆ. ಮಾಂಡವ್ಯಋಷಿ ಇಲ್ಲಿ ತಮ್ಮ ಆಶ್ರಮ ಕಟ್ಟಿಕೊಂಡಿದ್ದನೆಂದು ಸ್ಥಳೀಯರ ನಂಬಿಕೆ. ಕ್ರಿ.ಶ. 1139ರಲ್ಲಿ ಚೋಳ ದೊರೆಯೊಬ್ಬ ಈ ಊರನ್ನು ನಿರ್ಮಿಸಿದನೆಂದು ಭಾವಿಸಲಾಗಿದೆ. ಇದು ಹೊಯ್ಸಳರ ಮತ್ತು ವಿಜಯನಗರದ ಅರಸುಗಳ ಆಳ್ವಿಕೆಗೆ ಒಳಪಟ್ಟಿತ್ತು. ಅಚ್ಯುತರಾಯನ ಕಾಲದಲ್ಲಿ ದಂಡನಾಯಕ ಸಾಮಂತರಾಯನಿಗೆ ಇದನ್ನು ಜಹಗೀರಿಯಾಗಿ ಕೊಡಲಾಯಿತು. ಈ ಮನೆತನದಿಂದ ತಳಾರಿ ಗಂಗನೆಂಬವನು ಇದನ್ನು ಕಿತ್ತುಕೊಂಡ. ವಿಜಾಪುರದ ಸೈನ್ಯ ಬೆಂಗಳೂರನ್ನು 1637ರಲ್ಲಿ ಆಕ್ರಮಿಸಿಕೊಂಡಾಗ, ಮಾಗಡಿಯ ಮೇಲ್ವಿಚಾರಣೆಯನ್ನು ಬೆಂಗಳೂರಿನ ಮುಮ್ಮಡಿ ಕೆಂಪೇಗೌಡನಿಗೆ ವಹಿಸಲಾಯಿತು. ಅವನು ಮಾಗಡಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಅವನ ಉತ್ತರಾಧಿಕಾರಿಗಳು 1728ರಲ್ಲಿ ಸೋತು ಇದನ್ನು ಮೈಸೂರರಸರಿಗೆ ಬಿಟ್ಟುಕೊಟ್ಟರು. ಇಲ್ಲಿನ ಕೋಟೆಯೊಳಗೆ ಒಂದು ಶಿಥಿಲವಾದ ರಾಮೇಶ್ವರ ದೇವಾಲಯವಿದೆ. ಮಾಗಡಿ ಪ್ರಭುಗಳು ಈ ದೇವರ ಆರಾಧಕರಾಗಿದ್ದರಂತೆ. ರಾಮೇಶ್ವರ ದೇವಾಲಯದ ಹಿಂದೆ ಪಂಚಲಿಂಗೇಶ್ವರ ಗುಡಿಯಿದೆ. ಮೂಲ ದೇವಸ್ಥಾನದ ಎಡಭಾಗದಲ್ಲಿ ಪಾರ್ವತಿ ಗುಡಿಯಿದೆ. ಕನ್ನಿಕಾಪರಮೇಶ್ವರಿ ಮತ್ತು ಆಂಜನೇಯ ದೇವಸ್ಥಾನಗಳು ಊರಿನಲ್ಲಿರುವ ಇತರ ಮುಖ್ಯ ದೇವಸ್ಥಾನಗಳು. ಕಾಶೀ ವಿಶ್ವೇಶ್ವರ ಹಾಗೂ ಪಾರ್ವತಿ ದೇವಸ್ಥಾನಗಳು ಊರಿನ ಕೆರೆದಂಡೆಯ ಮೇಲಿವೆ. ಮಾಗಡಿಯ ಪಶ್ಚಿಮಕ್ಕೆ ಎರಡು ಕಿಮೀ ದೂರದಲ್ಲಿ ದ್ರಾವಿಡ ಶೈಲಿಯಲ್ಲಿ ಕಟ್ಟಿರುವ ಸೋಮೇಶ್ವರ ದೇವಸ್ಥಾನವಿದೆ. ಕ್ರಿ.ಶ. 1712ರಲ್ಲಿ ಇದನ್ನು ಮುಮ್ಮಡಿ ಕೆಂಪವೀರಗೌಡ ಕಟ್ಟಿಸಿದ. ಪರಶುರಾಮ, ಪಾರ್ವತಿ ಗುಡಿಗಳೂ, ಕೆಲವು ಛತ್ರಗಳೂ ದೇವಸ್ಥಾನದ ಆವರಣದಲ್ಲಿವೆ. ಇವುಗಳಲ್ಲಿ ವರ್ಣಚಿತ್ರಗಳು ಇದ್ದವು. ಈಗ ಇಲ್ಲ. ಸಧ್ಯಕ್ಕೆ ಅವು ವಾಸದ ಮನೆಗಳಂತೆ ಕಂಡುಬರುತ್ತವೆ. ಇಲ್ಲಿನ ಗಚ್ಚುಗಾರೆ ವಿಗ್ರಹಗಳಿಗೆ ಬಣ್ಣ ಹಾಕಿದ್ದರು. ಒಂದು ಬಂಡೆಯ ಮೇಲೆ ಒಂದು ಬಸವನ ಗುಡಿ ಇದೆ. ಅದನ್ನು ಶಿಖರಬಸವ ಎನ್ನುತ್ತಾರೆ. ರೇಷ್ಮೆ ಹುರಿ ಮಾಡುವ ಹತ್ತಾರು ಕಾರ್ಖಾನೆಗಳು ಇಲ್ಲಿವೆ ಮತ್ತು ಇಲ್ಲಿ ನೇಯ್ಗೆ ಕೆಲಸದವರು ಬಹಳ ಜನರಿದ್ದಾರೆ. ಪೌರ ಸೌಲಭ್ಯಗಳನ್ನು ಪುರಸಭೆ ನೋಡಿಕೊಳ್ಳುತ್ತದೆ. ತಿರುಮಲೆ (ಜನ : 778) ಮಾಗಡಿ ಊರಿನ ಪೂರ್ವಕ್ಕೆ ಎರಡು ಕಿಮೀ ದೂರದಲ್ಲಿದೆ. ಇಲ್ಲಿನ ರಂಗನಾಥ (ಮೂಲತಃ ಶ್ರೀನಿವಾಸ) ದೇವಾಲಯ ಬಹಳ ಪ್ರಸಿದ್ಧವಾದುದು. ಇಲ್ಲಿನ ರಂಗನಾಥ ವಿಗ್ರಹವನ್ನು ಋಷಿಶ್ರೇಷ್ಠರಾದ ಮಾಂಡವ್ಯರು ಮತ್ತು ವಶಿಷ್ಠರು ಪೂಜಿಸುತ್ತಿದ್ದರಂತೆ. ದೇವಾಲಯದ ಸುತ್ತ ಇರುವ ಗೂಡುಗಳಲ್ಲಿ ರಾಮ, ಸೀತೆ ಮತ್ತು ಶ್ರೀವೈಷ್ಣವ ಆಳ್ವಾರುಗಳ ಪ್ರತಿಮೆಗಳಿವೆ. ಮೂಲ ಗರ್ಭಗೃಹದ ಹಿಂಬದಿಯಲ್ಲಿ ಒಂದು ವಿಗ್ರಹವಿದೆ. ಇದನ್ನು ಪುಟ್ಟರಂಗನಾಥನೆಂದೂ, ಬೆಳೆಯುವ ರಂಗನಾಥನೆಂದೂ ಕರೆಯುತ್ತಾರೆ. ಅದರ ಎಡಭಾಗದಲ್ಲಿ ಲಕ್ಷ್ಮೀ ವಿಗ್ರಹವಿದೆ. ಇಮ್ಮಡಿ ಕೆಂಪೇಗೌಡ ಈ ದೇವಾಲಯದ ಜೀರ್ಣೋದ್ಧಾರ ಮಾಡಿಸಿದ. ಇದಕ್ಕೆ ಎರಡು ಗೋಪುರಗಳಿದ್ದು ಒಂದು ಮೂಲ ಮಹಾದ್ವಾರದ ಮೇಲೂ, ಇನ್ನೊಂದು ಗರ್ಭಗೃಹದ ಮೇಲೂ ಇವೆ. ಮಹಾದ್ವಾರದ ಮೇಲಿನ ಗೋಪುರವನ್ನು ಮೈಸೂರಿನ ಜಯಚಾಮರಾಜ ಒಡೆಯರ್ ಅವರು ಕಟ್ಟಿಸಿದರು. ಈ ದೇವಸ್ಥಾನದ ಗರುಡಗಂಭದಲ್ಲಿ ಕ್ರಿ.ಶ. 1524ರ ಶಾಸನವೊಂದನ್ನು ಕೆತ್ತಿದ್ದು ಇದರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ತಿರುವೆಂಗಳೇಶ್ವರನಿಗೆ ಕೊಟ್ಟ ಕಾಣಿಕೆಯ ವಿಷಯವಿದೆ. ದೇವಸ್ಥಾನದ ಎಡಭಾಗದಲ್ಲಿ ಒಂದು ಸುಂದರ ಪುಷ್ಕರಣಿ ಇದೆ. ದೇವಸ್ಥಾನದ ಮುಂಭಾಗದಲ್ಲಿ ಒಂದು ಕಲ್ಲಿದ್ದು ಅದನ್ನು ಮಾರಮ್ಮ ಅಂದರೆ ಗ್ರಾಮದೇವತೆ ಎಂದು ನಂಬಲಾಗಿದೆ. ದೇವಸ್ಥಾನದ ಬಲಭಾಗದಲ್ಲಿ ಸ್ವಲ್ಪದೂರದಲ್ಲಿ ಒಂದು ಸಣ್ಣ ಗುಡ್ಡವಿದೆ. ಅದರ ಮೇಲೆ ನರಸಿಂಹನ ಒಂದು ಸಣ್ಣ ಗುಡಿ ಇದೆ. ಅದಕ್ಕೆ ಸುಲಭವಾಗಿ ಹೋಗಲು ಸೋಪಾನಗಳಿವೆ. ಪ್ರತೀ ಚೈತ್ರಮಾಸ ಇಲ್ಲಿನ ರಂಗನಾಥಸ್ವಾಮಿಯ ರಥೋತ್ಸವದ ಸಂದರ್ಭದಲ್ಲಿ ಇಲ್ಲಿ ಒಂದು ಭಾರಿ ದನದ ಪರಿಷೆ ಸೇರುತ್ತದೆ. ರಾಜ್ಯದಲ್ಲಿ ಸೇರುವ ದೊಡ್ಡ ಪ್ರಮಾಣದ ದನದ ಪರಿಷೆಗಳ ಪೈಕಿ ಇದೂ ಒಂದು. ಆ ಸಂದರ್ಭದಲ್ಲಿ ಇಲ್ಲಿನ ಬೇರೆ ಬೇರೆ ಜಾತಿಯವರ ಛತ್ರಗಳಲ್ಲಿ ಯಾತ್ರಾರ್ಥಿಗಳಿಗೆ ಉಚಿತ ಊಟದ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಇಲ್ಲಿ ಹುರಿ ಮಾಡುವ ಕಾರ್ಖಾನೆಗಳು ಸಾಕಷ್ಟು ಇವೆ. ಸಾವನದುರ್ಗ ಕೋಟೆಯುಳ್ಳ ಒಂದು ಉನ್ನತ ಬೆಟ್ಟ. ಇದು ಮಾಗಡಿಯಿಂದ ಎಂಟು ಕಿಮೀ ದೂರದಲ್ಲಿದೆ. ಇದು ಒಂದು ಬಹು ರಮ್ಯತಾಣ. ಬೆಟ್ಟಕ್ಕೆ ಎರಡು ಶಿಖರಗಳಿದ್ದು ಒಂದನ್ನು ಬಿಳಿ ಬೆಟ್ಟವೆಂದೂ, ಇನ್ನೊಂದನ್ನು ಕರಿ ಬೆಟ್ಟವೆಂದೂ

ಕರೆಯಲಾಗುತ್ತದೆ. ಇದನ್ನು ಮೊದಲು ಸಾಮಂತದುರ್ಗ ಎಂತಲೂ ಕೃಷ್ಣರಾಜಗಿರಿ ಎಂತಲೂ ಕರೆಯಲಾಗುತ್ತಿತ್ತು. ಆಮೇಲೆ ಇದು ಸಾವನದುರ್ಗವಾಯಿತು. ಹೊಯ್ಸಳರ ಕಾಲದಲ್ಲಿ ಇದು ಒಂದು ಪ್ರಮುಖ ಸ್ಥಳವಾಗಿತ್ತು. ವಿಜಯನಗರದ ಅನೇಕ ಸಾಮಂತರುಗಳು ಇಲ್ಲಿ ಅಧಿಕಾರ ಮಾಡಿದ್ದಾರೆ. ಇಮ್ಮಡಿ ಕೆಂಪೇಗೌಡನು ತಳ್ಳಾರಿಗಂಗನನ್ನು ಸಂಹರಿಸಿ ಇದನ್ನು ಗೆದ್ದುಕೊಂಡ. ಕ್ರಿ.ಶ. 1728ರಲ್ಲಿ ದೇವರಾಜನೆಂಬ ಮೈಸೂರಿನ ದಳವಾಯಿ ಇದನ್ನು ವಶಪಡಿಸಿಕೊಂಡ. ಕಡೆಗೆ ಸಾವನದುರ್ಗವನ್ನು ಬ್ರಿಟಿಷರು ಗೆದ್ದುಕೊಂಡರು. ಇಡೀ ಪ್ರದೇಶ ಹಚ್ಚಹಸುರಿನಿಂದ ತುಂಬಿದೆ ಮತ್ತು ಎಲ್ಲ ಕಾಲಕ್ಕೂ ಲವಲವಿಕೆಯ ವಾತಾವರಣ ಇಲ್ಲಿದೆ. ವೀರಭದ್ರ ಮತ್ತು ನರಸಿಂಹರ ದೇವಸ್ಥಾನಗಳು ಇಲ್ಲಿನ ಎರಡು ಮುಖ್ಯ ದೇವಸ್ಥಾನಗಳು. ಊರ ಬಾಗಿಲಲ್ಲಿ ವೀರಭದ್ರ ದೇವಸ್ಥಾನವಿದೆ. ಅದರ ಪಕ್ಕದಲ್ಲಿ ಭದ್ರಕಾಳಿ ವಿಗ್ರಹವಿದೆ. ಇವೆರಡಲ್ಲದೆ ಇಲ್ಲಿನ ಗವಿಯೊಂದರಲ್ಲಿ ಲಕ್ಷ್ಮೀನರಸಿಂಹ ದೇವಸ್ಥಾನವಿದೆ. ಇದರ ಹಜಾರ ಆಧುನಿಕ ಮಾದರಿಯದು. ಸಯ್ಯದ್ ಸುಲ್ತಾನ ಗುಲಾಂ ಹುಸೇನ್ ಷಾ ಖಾದ್ರಿ ಅವರ ದರ್ಗಾದಲ್ಲಿ ಪ್ರತೀ ವರ್ಷ ಉರುಸ್ ಜರುಗುತ್ತದೆ. ಬಿಳಿ ಬೆಟ್ಟದ ತುದಿಯಲ್ಲಿ ಒಂದು ಸಣ್ಣ ಕಲ್ಲು ಮಂಟಪದಲ್ಲಿ ನಂದಿಯಿದೆ. ಬೆಟ್ಟದ ಅನೇಕ ಸ್ಥಳಗಳಲ್ಲಿ ಕೋಟೆ ಗೋಡೆಗಳು ಮತ್ತು ಇತರ ಕಟ್ಟಡಗಳ ಅವಶೇಷಗಳು ಇವೆ. ಈಚಿನ ವರ್ಷಗಳಲ್ಲಿ ಅನೇಕ ಛತ್ರಗಳನ್ನು ಇಲ್ಲಿ ಕಟ್ಟಿಸಲಾಗಿದ್ದು, ಇಲ್ಲಿ ಮದುವೆಗಳನ್ನು ನೆರವೇರಿಸಲು ಅನುಕೂಲಕರವೆನಿಸಿದೆ.

ಮಾನ್ವಿ: (ರಾಯಚೂರು ಜಿ ; ತಾ. ಕೇ ; ಜನ : 21,345) ಮಾನ್ವಿಯು ಬೆಂಗಳೂರಿನಿಂದ 447 ಕಿಮೀ ದೂರದಲ್ಲಿದೆ. ಇದು ಕಲ್ಯಾಣಿ ಚಾಳುಕ್ಯರ ಮತ್ತು ಸೇಉಣರ ಕಾಲಗಳಲ್ಲಿ ಮಾನುವೆ ಎಂಬ ಹೆಸರಿನಿಂದ ಪ್ರಖ್ಯಾತವಾಗಿತ್ತು. ಇಲ್ಲಿ ಪ್ರಸಿದ್ಧವಾದ ಜಗನ್ನಾಥಸ್ವಾಮಿಯ ದೇವಾಲಯ ಮತ್ತು ಹಾಳಾಗಿರುವ ಕೋಟೆಗಳಿವೆ. ಇದು ಮಾಧ್ವಕವಿ ಮತ್ತು ಸಂತ ಜಗನ್ನಾಥದಾಸರ ಜನ್ಮಸ್ಥಾನವಾಗಿದ್ದಿತೆಂದು ಹೇಳುತ್ತಾರೆ. ಇವರು ಭಕ್ತಿಪಂಥವನ್ನು ಹರಡಿದುದಲ್ಲದೆ ಸರಳವೂ, ಸುಂದರವೂ ಆದ ಶೈಲಿಯಲ್ಲಿ ಕನ್ನಡದಲ್ಲಿ ಹರಿಕಥಾಮೃತಸಾರವನ್ನು ರಚಿಸಿದರು. ಈ ಗ್ರಂಥವು ಮಾಧ್ವ ತತ್ತ್ವಶಾಸ್ತ್ರಕ್ಕೆ ಆಧಾರ ಗ್ರಂಥವಾಗಿದೆಯೆಂದು ಹೊಗಳಲಾಗಿದೆ. ಮಾನ್ವಿಯಲ್ಲಿ ಇತಿಹಾಸಪೂರ್ವ ಕಾಲದ ಆಯುಧಗಳೂ ದೊರಕಿವೆ. ಜಾಮಿ ಮಸೀದಿ ಎಂದು ಕರೆಯಲಾಗುವ ಹಳೆಯ ಮಸೀದಿಯಲ್ಲಿ ಪರ್ಷಿಯನ್ ಭಾಷೆಯ ಶಾಸನವಿದೆ. ಹಜರತ್ ಫರೀದುದ್ದೀನ್ ಸಾಹೆಬ್ ಮತ್ತು ಸುಬ್ಬ ಅಲಿಯವರ ಪ್ರಸಿದ್ಧ ದರ್ಗಾಗಳೂ ಇಲ್ಲಿವೆ. ಈ ತಾಲೂಕಿನ ಇತರ ಪ್ರಸಿದ್ಧ ಸ್ಥಳಗಳೆಂದರೆ : ಕಲ್ಲೂರು (ಜನ : 5,444): ಕಲ್ಲೂರು ರಾಯಚೂರಿನಿಂದ 21 ಕಿಮೀ ದೂರದಲ್ಲಿ, ಗಿಣಿಗೇರಕ್ಕೆ ಹೋಗುವ ರಸ್ತೆಯಲ್ಲಿದೆ. ಈ ಗ್ರಾಮದ ಸುತ್ತಲೂ ಕಗ್ಗಲ್ಲಿನ ಬೆಟ್ಟಗಳಿವೆ. ಈ ಹಳ್ಳಿ ಮತ್ತು ಇದರ ಸುತ್ತಮುತ್ತಲು ಪ್ರದೇಶಗಳಲ್ಲಿ 13-14ನೇಯ ಶತಮಾನಕ್ಕೆ ಸೇರಿರಬಹುದಾದ ಬಹಳಷ್ಟು ಅವಶೇಷಗಳಿವೆ. ಆದರೆ ಇಲ್ಲಿರುವ ಐದು ದ್ವಾರಗಳು ಮಹಮ್ಮದೀಯರ ಕಾಲಕ್ಕೆ ಸೇರಿದವು. ಇವುಗಳಲ್ಲಿ ಎರಡು ಉಪಯೋಗದಲ್ಲಿಲ್ಲ. ಅವುಗಳಿಗೆ ಹೆಸರೂ ಇಲ್ಲ. ಮಿಕ್ಕ ಮೂರು ಬಾಗಿಲುಗಳಿಗೆ ಅವು ಯಾವ ಊರಿನ ರಸ್ತೆಯ ಕಡೆಗಿವೆಯೋ ಆ ಅಂದರೆ ಮಾನ್ವಿ ದರವಾಜಾ, ಕಲ್ಮಲ ದರವಾಜಾ ಮತ್ತು ರಾಯಚೂರು ದರವಾಜಾ ಎನ್ನುವ ಹೆಸರನ್ನು ಕೊಡಲಾಗಿದೆ. ಈ ದರವಾಜಾಗಳು ಹೆಚ್ಚು ಕಡಿಮೆ ಜೀರ್ಣಾವಸ್ಥೆಯಲ್ಲಿವೆ. ರಾಯಚೂರು ದರವಾಜಾದ ಮೇಲ್ಭಾಗವನ್ನು ಕೆಡವಿ ಊರಿನ ಚಾವಡಿಯನ್ನು ನಿರ್ಮಿಸಲಾಯಿತು. ಇದರಲ್ಲಿ ಮರದಲ್ಲಿ ಕೆತ್ತಿದ್ದ ಕನ್ನಡದ ಶಾಸನವೊಂದು ದೊರಕಿದೆ. ಈಗ ಚಾವಡಿಯ ಚಾವಣಿಯಲ್ಲಿ ಸೇರಿಸಲಾಗಿರುವ ಈ ಶಾಸನದ ಪ್ರಕಾರ, ಈ ಹೆಬ್ಬಾಗಿಲು ಆದಿಲ್‌ಷಾಹಿ ಅರಸರ ಕಾಲದ ಗಣ್ಯನಾದ ಆಗಾಖುಸ್ರುವಿನಿಂದ ನಿರ್ಮಾಣವಾಯಿತು. ಇಲ್ಲಿ ಮತ್ತು ಇದರ ಸುತ್ತಮುತ್ತ ಆರು ದೇವಾಲಯಗಳಿವೆ. ಇವುಗಳಲ್ಲಿ ಮಾರ್ಕಂಡೇಶ್ವರ ದೇವಾಲಯವು ಮಾತ್ರ ಮುಖ್ಯವಾದದ್ದು. ಇಲ್ಲಿ ಅನೇಕ ಶಾಸನಗಳು ದೊರಕಿದ್ದು, ಅವುಗಳಲ್ಲಿ ಹೆಚ್ಚಿನವು ಕಲ್ಯಾಣಿ ಚಾಳುಕ್ಯರ (973-1200) ಕಾಲಕ್ಕೆ ಸೇರಿದವು. ಕವಿತಾಳ: (ಜನ : 6,455) ಇದು ರಾಯಚೂರು-ಲಿಂಗಸುಗೂರು ರಸ್ತೆಯಲ್ಲಿ ರಾಯಚೂರಿನಿಂದ 40 ಮೈಲಿ ಮತ್ತು ಲಿಂಗಸುಗೂರಿನಿಂದ 18 ಮೈಲಿ ದೂರದಲ್ಲಿದೆ. ಈ ಗ್ರಾಮದ ನೈಋತ್ಯದಲ್ಲಿ ಒಂದು ಬೆಟ್ಟವಿದೆ. ಅದರಲ್ಲಿ ಅನೇಕ ಪ್ರಾಕೃತಿಕ ಗುಹೆಗಳಿವೆ. ಈ ಬೆಟ್ಟಗಳ ಇಳಿಜಾರಿನಲ್ಲಿ ಕಲ್ಲಿನ ಆಯುಧಗಳು, ಕಬ್ಬಿಣದ ಅದುರು ಮತ್ತು ಪ್ರಾಚೀನ ಮಡಿಕೆ ಕುಡಿಕೆಯ ಚೂರುಗಳು ಹೇರಳವಾಗಿ ಸಿಕ್ಕಿವೆ. ಈ ಗ್ರಾಮದ ಪಶ್ಚಿಮದಲ್ಲಿ ಒಂದು ಬೂದಿಗುಡ್ಡೆಯಿದೆ. ಇದರ ಮೇಲೆ ಅನಂತರದ ಕಾಲದಲ್ಲಿ ದೇವಾಲಯವನ್ನು ನಿರ್ಮಿಸಿದ್ದಾರೆ. ಈ ಬೂದಿಗುಡ್ಡೆಯ ಸ್ಥಳದಲ್ಲಿ ಪ್ರಾಚೀನ ಕಾಲದಲ್ಲಿ ಕಬ್ಬಿಣದ ಕುಲುಮೆಯಿದ್ದಿತು. ಇಲ್ಲಿ ತ್ರ್ಯಂಬಕೇಶ್ವರ ಎಂದು ಕರೆಯಲಾಗುವ ಮಧ್ಯಕಾಲೀನ ದೇವಾಲಯವಿದೆ. ಇದರಲ್ಲಿ ಮೂರು ಗುಡಿಗಳಿದ್ದು, ಎರಡರಲ್ಲಿ ಲಿಂಗಗಳಿವೆ. ಇಲ್ಲಿ ಎರಡು ಕನ್ನಡ ಶಾಸನಗಳಿವೆ. ಈ ದೇವಾಲಯದ ಪಶ್ಚಿಮದ ದೇವಕೋಷ್ಠದಲ್ಲಿ ಸುಂದರವಾದ ಮಹಿಷಾಸುರಮರ್ದಿನಿಯ ಶಿಲ್ಪವಿದೆ. ಈ ಮೂರು ಗುಡಿಗಳೂ ಒಂದೇ ಪ್ರಮಾಣದವು. ಹೊರಭಾಗವು ಬಹಳ ಸರಳವಾಗಿವೆ. ಆದರೆ ಕಲ್ಲು ಕಟ್ಟಡ ಬಹಳ ಅಸಾಧಾರಣವಾಗಿದೆ. ಈ ಗುಡಿಗಳ ಶಿಖರಗಳು ದ್ರಾವಿಡ ರೀತಿಯಲ್ಲಿವೆ. ಇವುಗಳ ಕೆಳಗಿನ ಮೂರನೇಯ ಎರಡು ಭಾಗ ಕಲ್ಲಿನಿಂದಲೂ, ಮೇಲಿನ ಉಳಿದ ಭಾಗಗಳು ಇಟ್ಟಿಗೆಯ ಮತ್ತು ಸುಣ್ಣದಿಂದಲೂ ಪೂರ್ಣಗೊಳಿಸಲ್ಪಟ್ಟಿವೆ. ಕವಿತಾಳಕ್ಕೆ ಉತ್ತರದಲ್ಲಿ ನಾಲ್ಕು ಮೈಲಿ ದೂರದಲ್ಲಿ ತುಪ್ಪಲದೊಡ್ಡಿ ಎಂಬ ಗ್ರಾಮವಿದೆ. ಇಲ್ಲಿ ಪ್ರಾಚೀನ ಕಾಲದಲ್ಲಿ ಚಿನ್ನ ತೆಗೆಯುವ ಉದ್ಯಮದ ಅವಶೇಷಗಳು ಕಂಡುಬಂದಿವೆ.

**ಮಾಯಕೊಂಡ :** (ಚಿತ್ರದುರ್ಗ ಜಿ; ದಾವಣಗೆರೆ ತಾ; ಜನ: 4642-1981) ದಾವಣಗೆರೆಯಿಂದ 32 ಕಿಮೀ ದೂರದಲ್ಲಿರುವ ಮಾಯಕೊಂಡವು ಹೋಬಳಿಯ ಕೇಂದ್ರ ಹಾಗೂ ರೈಲ್ವೆ ನಿಲ್ದಾಣವನ್ನು ಹೊಂದಿರುವ ಪಟ್ಟಣ. ಇದು ಬೆಂಗಳೂರಿನಿಂದ 264 ಕಿಮೀ ದೂರದಲ್ಲಿದೆ. ಇಟ್ಟಿಗೆಪುರದ ರಾಜನು ತನ್ನ ಹೆಣ್ಣುಮಕ್ಕಳಾದ ಮಾಯಮ್ಮ ಮತ್ತು ಉಜ್ಜಮ್ಮನವರಿಗೆ ಎರಡು ಸ್ಥಳಗಳನ್ನು ಕೊಟ್ಟನಂತೆ. ಮಾಯಕೊಂಡ ಮತ್ತು ಉಜ್ಜಕೊಂಡ ಸಮೀಪದ ಎರಡು ಹಳ್ಳಿಗಳು. ಇಲ್ಲಿ ಎರಡು ದೇವಾಲಯಗಳಿವೆ. ಮೊದಲನೇಯದು ಊರಿನ ಮಧ್ಯದಲ್ಲಿರುವ ಮಣ್ಣಿನಿಂದ ಕಟ್ಟಿಲಾದ ಮತ್ತು ಹೆಂಚಿನ ಚಾವಣಿಯನ್ನು ಹೊಂದಿರುವ ಕೇಶವ ದೇವಾಲಯ; ಎರಡನೇಯದಾದ ಊರಿನ ಹೊರಗಿರುವ ಓಬಳ ನರಸಿಂಹ ದೇವಾಲಯವು ಜೀರ್ಣಾವಸ್ಥೆಯಲ್ಲಿದೆ. ಈ ದೇವಾಲಯದ ಗರ್ಭಗೃಹದಲ್ಲಿರುವ ಒರಟಾದ ಕಲ್ಲನ್ನು 'ಉದ್ಭವ' ನರಸಿಂಹ ಎಂದು ವರ್ಣಿಸುತ್ತಾರೆ. ಇಲ್ಲಿ ಅನೇಕ ವೀರಗಲ್ಲುಗಳು ಇವೆ. ಈ ಪಟ್ಟಣವು ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರ ಕಾಲಗಳಲ್ಲಿ ವೈಭವವನ್ನು ಹೊಂದಿತ್ತು. ಇಲ್ಲಿರುವ ಕೋಟೆಯನ್ನು ಹಿರೇಮದಕರಿ ನಾಯಕನ ಕಾಲದಲ್ಲಿ ಕಟ್ಟಿಲಾಯಿತೆಂದು ಹೇಳಲಾಗಿದೆ. ಇದರಿಂದ ಊರು ಬೆಳೆದಿರಬೇಕು. 1748ರಲ್ಲಿ ಈ ಅರಸನಿಗೂ ಕೆಳದಿ ನಾಯಕರಿಗೂ ನಡೆದ ಯುದ್ಧದಲ್ಲಿ ಮರಣಹೊಂದಿದ ಹಿರೇ ಮದಕರಿನಾಯಕನ ಸಮಾಧಿ ಇಲ್ಲಿ ಇದೆ. ಇಲ್ಲಿ ಹೊಗೆಸೊಪ್ಪು ಪರಿಷ್ಕರಣ ಕೇಂದ್ರ ಮತ್ತು ಪುರಸಭೆ ಇದೆ. ಇಲ್ಲಿರುವ ಮಾರಿಕಾಂಬಾ ದೇವಾಲಯದ ಜಾತ್ರೆಯು ಏಪ್ರಿಲ್ ತಿಂಗಳಿನಲ್ಲಿ ನಡೆಯುತ್ತದೆ.

**ಮಾಲೂರು :** (ಕೋಲಾರ ಜಿ; ತಾ. ಕೇ; ಜನ: 15,093) ಮಾಲೂರು ಪಟ್ಟಣವು ಕೋಲಾರದ ನೈಋತ್ಯಕ್ಕೆ 24 ಕಿಮೀ ಹಾಗೂ ಬೆಂಗಳೂರಿನಿಂದ 46 ಕಿಮೀ ದೂರದಲ್ಲಿದೆ. ಇದು ಅದೇ ಹೆಸರಿನ ತಾಲೂಕು ಕೇಂದ್ರವಾಗಿದ್ದು, ಪುರಸಭೆಯನ್ನು ಹೊಂದಿದೆ. ಈ ಊರಿನ ಮೂಲ ಹೆಸರು ಮಲ್ಲಿಕಾಪುರ ಅಥವಾ ಮಲ್ಲಿಗೆಪುರ ಎಂದಿತ್ತು. ಈ ಊರಿನ ಸುತ್ತಮುತ್ತ ಮಲ್ಲಿಗೆಯ ತೋಟಗಳಿದ್ದುದೇ ಈ ಹೆಸರು ಬರಲು ಕಾರಣವಾಯಿತು. ಇದು ಹದಿನಾರನೇಯ ಶತಮಾನದಲ್ಲಿ ಹೊಸಕೋಟೆಯ ನಾಯಕ ತಮ್ಮೇಗೌಡನ ಅಧಿಪತ್ಯಕ್ಕೆ ಸೇರಿದ್ದ ಭಾಗವಾಗಿದ್ದಿತು. ವಿಜಾಪುರ ಸುಲ್ತಾನನ ಕೈವಶವಾದ ಮೇಲೆ ಇದು ಅನೇಕ ಮಾನ್‌ಸಬದಾರರಿಗೆ ಸೇರಿದ ಜಹಗೀರಿಯಾಗಿತ್ತು. ಮರಾಠರು ಇದನ್ನು ಹೃದ್ ರಾಮಸಿಂಗ್ ಎಂಬ ರಾಜಪುತ್ರ ಜಮೀನುದಾರನಿಗೆ ಕೊಟ್ಟರು. ಈ ಜಮೀನುದಾರನು ಈ ಪಟ್ಟಣಕ್ಕೆ ಹೊಸ ಬಡಾವಣೆಗಳನ್ನು ಸೇರಿಸಿ ಮಾಲೂರು ಎಂಬ ಹೆಸರನ್ನು ಕೊಟ್ಟನು. ಕೊನೆಗೆ ಇದು ಹೈದರ್ ಅಲಿಯ ವಶವಾಗಿ, ಅಲ್ಲಿಂದೀಚೆಗೆ ಇದು ಮೈಸೂರು ರಾಜ್ಯದ ಭಾಗವಾಗಿದೆ. ಇಲ್ಲಿರುವ ಶಂಕರನಾರಾಯಣ ದೇವಾಲಯವು ವಿಶಿಷ್ಟವಾದುದು, ಏಕೆಂದರೆ ಇಲ್ಲಿನ ಲಿಂಗದಲ್ಲಿ ಶಿವ ಮತ್ತು ವಿಷ್ಣು, ಈ ಇಬ್ಬರ ಚಿಹ್ನೆಗಳೂ ಇವೆ. ಹಾಳಾಗಿರುವ ಕುರುಬರ ಗುಡಿಯ ಮುಂದೆ ಎರಡು ಸಾಲು ವೀರರ ಗುಡಿಗಳಿವೆ. ಈ ಪಟ್ಟಣವು ವಾಣಿಜ್ಯ ಬೆಳೆಗಳಾದ ಹಿಪ್ಪುನೇರಳೆ, ಕಬ್ಬು ಮತ್ತು ತರಕಾರಿಗಳ ಸಾಗುವಳಿಗೆ ಪ್ರಖ್ಯಾತಿಯನ್ನು ಪಡೆದಿದೆ. ಮಾಲೂರು ಮತ್ತು ಬಂಗಾರಪೇಟೆಗಳ ನಡುವೆ, ಕೋಲಾರಕ್ಕೆ 25 ಕಿಮೀ ದೂರದಲ್ಲಿ ಟೇಕಲ್ ಎಂಬ ಗ್ರಾಮವಿದೆ. ಟೇಕಲ್ ಬೆಟ್ಟವು ಎದ್ದು ಕಾಣುವ ವಿವಿಧ ಆಕಾರದ ಶಿಲೆಗಳಿಗೆ ಹೆಸರುವಾಸಿಯಾಗಿದೆ. ಇದು ಪ್ರಾಚೀನ ಸ್ಥಳವೆಂಬುದು ಒಂಭತ್ತನೇಯ ಶತಮಾನದ ಶಾಸನಗಳಿಂದ ತಿಳಿಯುತ್ತದೆ. ಇಲ್ಲಿರುವ ವಿಶಾಲವಾದ ವರದ ರಾಜ ದೇವಾಲಯವು ದ್ರಾವಿಡ ಶೈಲಿಗೆ ಸೇರಿದ್ದು ಎತ್ತರವಾದ ಮಹಾದ್ವಾರವನ್ನು ಹೊಂದಿದ್ದು ಮತ್ತು ತಮಿಳು ಶಾಸನಗಳನ್ನು ಹೊಂದಿದೆ. ಈಗ ಜೀರ್ಣಾವಸ್ಥೆಯಲ್ಲಿರುವ ಸಿಂಗಪೆರುಮಾಳ್ ದೇವಾಲಯವೂ ಅಲಂಕೃತ ಕಂಬಗಳಿಂದ ಕೂಡಿದ ಸುಂದರ ಕಟ್ಟಡವಾಗಿದೆ. ಇಲ್ಲಿನ ಆಂಜನೇಯ ದೇವಾಲಯದಲ್ಲಿ ಏಳು ಅಡಿ ಎತ್ತರದ ಆಂಜನೇಯ ಶಿಲ್ಪವಿದೆ. ಇದಲ್ಲದೆ ಇಲ್ಲಿ ಇನ್ನೂ ಅನೇಕ ಜೀರ್ಣಾವಸ್ಥೆಯ ದೇವಾಲಯಗಳಿವೆ. ಪೌರಾಣಿಕ ಕಥೆಗಳ ಪ್ರಕಾರ ಇಲ್ಲಿ ನೂರೊಂದು ದೇವಾಲಯಗಳೂ, ನೂರೊಂದು ಕಲ್ಯಾಣಿಗಳೂ ಇದ್ದುವಂತೆ. ಭೀಮನ ಗರಡಿ ಎಂದು ಖ್ಯಾತವಾಗಿರುವ, 150 ಅಡಿ ಉದ್ದ ಮತ್ತು 70 ಅಡಿ ಅಗಲವಿರುವ ಗುಹೆಯು ಇಲ್ಲಿನ ಬೆಟ್ಟದ ಮೇಲಿದೆ. ಟೇಕಲ್ಲಿನ ಉತ್ತರಕ್ಕಿರುವ ಬೆಟ್ಟಕ್ಕೆ ಭೂಪತಿಯಮ್ಮನ ಬೆಟ್ಟ ಎಂದು ಹೆಸರು. ಬೆಟ್ಟದ ಮೇಲೆ ಕಿರಿದಾದ ಗವಿ ಇದ್ದು ಇದರ ಒಳಭಾಗದಲ್ಲಿ ಗಾರೆಯಿಂದ ನಯ ಮಾಡಲಾಗಿದೆ. ಹಿಂದಿನ ಸ್ಥಳೀಯ ನಾಯಕರ ಐಶ್ವರ್ಯವನ್ನು ಇಲ್ಲಿಡಲಾಗಿತ್ತೆಂಬ ಪ್ರತೀತಿಯಿಂದ ಇದಕ್ಕೆ ರೊಕ್ಕದ ಗವಿ ಎಂದು ಹೆಸರಾಗಿದೆ. ಈ ಸ್ಥಳವು ಚೌಳು ಮಣ್ಣಿಗೆ ಪ್ರಖ್ಯಾತವಾಗಿದೆ. ಇದೇ ತಾಲೂಕಿನ ಚಿಕ್ಕ ತಿರುಪತಿಯು ಕೋಲಾರ ಜಿಲ್ಲೆಯಲ್ಲಿಯೇ ಪ್ರಸಿದ್ಧ ಯಾತ್ರಾ ಸ್ಥಳ. ಇಲ್ಲಿರುವ ಶ್ರೀನಿವಾಸ ದೇವಾಲಯವು ದೊಡ್ಡದಾಗಿದ್ದು ವಿಶಾಲವಾದ ಅಂಗಳವನ್ನು ಹೊಂದಿದೆ. ಇಲ್ಲಿನ ನವರಂಗದಲ್ಲಿ ವೈಷ್ಣವ ಸಂತರಾದ ರಾಮಾನುಜಾಚಾರ್ಯ ಮತ್ತು ವೇದಾಂತ ದೇಶಿಕರ ಶಿಲ್ಪಗಳಿವೆ. ಆಂಧ್ರಪ್ರದೇಶದಲ್ಲಿರುವ ತಿರುಪತಿಗೆ ಹೋಗಲಾಗದವರು, ಈ ಸ್ಥಳವನ್ನು ಸಂದರ್ಶಿಸುತ್ತಾರೆ. ಆದುದರಿಂದ ಇದಕ್ಕೆ ಬಡವರ ತಿರುಪತಿ ಎಂಬ ಅಡ್ಡ ಹೆಸರು ಬಂದಿದೆ. ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳು ಇಲ್ಲಿ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತವೆ. ಶಿವಾರ ಪಟ್ಟಣವು ಸಾಂಪ್ರದಾಯಿಕ ಶಿಲ್ಪಿಗಳ ತಂಡಗಳಿಗೆ ಪ್ರಖ್ಯಾತವಾಗಿದೆ. ಇವರು ಕಲ್ಲಿನಲ್ಲಿ ಮತ್ತು ಕಂಚಿನಲ್ಲಿ ವಿಗ್ರಹಗಳನ್ನು ಮಾಡುವ ಕಲೆಯಲ್ಲಿ ಯಾವಾಗಲೂ ಕಾರ್ಯನಿರತರಾಗಿರುತ್ತಾರೆ. ಇಲ್ಲಿ ಗಂಗರ ಕಾಲದ ಅನೇಕ ಶಿಲಾಶಾಸನಗಳಿವೆ. ಈ ಸ್ಥಳವು ಶ್ರೀಪುರುಷನ ಮಗನಾದ ಗಂಗ ಇಮ್ಮಡಿ ಶಿವಮಾರನ ವಾಸಸ್ಥಾನವಾಗಿದ್ದುದರಿಂದ ಶಿವಮಾರಪಟ್ಟಣ ಎಂಬ ಹೆಸರು ಪಡೆದಿತ್ತು.

**ಮಹದೇಶ್ವರ ಬೆಟ್ಟ :** (ಮೈಸೂರು ಜಿ; ಕೊಳ್ಳೆಗಾಲ ತಾ. ಜನ: 4,320) ಮಹದೇಶ್ವರ (ಮಾದೇಶ್ವರ) ಬೆಟ್ಟವು ಈ ರಾಜ್ಯದಲ್ಲಿ ಅತ್ಯಂತ ಪ್ರಸಿದ್ಧವಾದ ಯಾತ್ರಾಸ್ಥಳ. ಅದು ಘಟ್ಟದ ಮಧ್ಯದಲ್ಲಿ, ಪೂರ್ವಘಟ್ಟಗಳಿಗೆ ಸಮೀಪವಾಗಿದ್ದು ರಾಮಪುರ ಹೋಬಳಿಗೆ ಸೇರಿದ್ದು ಕೊಳ್ಳೆಗಾಲಕ್ಕೆ ಸುಮಾರು 80 ಕಿಮೀ ಪೂರ್ವಕ್ಕೂ, ಮೈಸೂರಿನಿಂದ 142 ಕಿಮೀ ಹಾಗೂ ಬೆಂಗಳೂರಿನಿಂದ 220 ಕಿಮೀ ದೂರದಲ್ಲಿಯೂ ಇದೆ. ಅದು ಸಮುದ್ರಮಟ್ಟಕ್ಕಿಂತ 3,200 ಅಡಿಗಳು ಎತ್ತರದಲ್ಲಿದೆ. ಮಹದೇಶ್ವರನ ವಿಷಯದಲ್ಲಿ ಪ್ರಚಲಿತವಾಗಿರುವ ಜನಪದ ಹಾಡುಗಳ ಪ್ರಕಾರ ಏಳು ಬೆಟ್ಟಗಳಿಂದ ಇದು ಆವೃತವಾಗಿದೆ. ಈ ಬೆಟ್ಟದಲ್ಲಿ ಆನೆಮಲೆ, ಜೇನುಮಲೆ, ಕಾಡುಮಲೆ, ಪಚ್ಚೆಮಲೆ ಮುಂತಾದ 77 ಶ್ರೇಣಿಗಳಿವೆ. ಈ ಬೆಟ್ಟಗಳು ಪ್ರಾಣಿ ಮತ್ತು ಸಸ್ಯ ಸಂಪತ್ತುಗಳಿಂದ ತುಂಬಿವೆ. ಮಾದೇಶ್ವರನ ಹೆಸರಿನಲ್ಲಿ ನಿರ್ಮಿತವಾದ ದೇವಾಲಯವು ಈ ಬೆಟ್ಟದ ತುದಿಯಲ್ಲಿದೆ. ಈ ದೇವಾಲಯದ ದೇವರು ಲಿಂಗರೂಪದಲ್ಲಿದ್ದಾನೆ. ಸುತ್ತೂರು ಮಠದಲ್ಲಿರುವ ಶಿಲಾ ಮತ್ತು ತಾಮ್ರ ಶಾಸನಗಳ ಪ್ರಕಾರ ಮತ್ತು ಜನಪದ ಸಾಹಿತ್ಯದ ಆಧಾರದ ಮೇಲೆ ಹೇಳುವುದಾದರೆ, ಮಹದೇಶ್ವರ ಎಂಬ ವೀರಶೈವ ಸಂತನು ಕ್ರಿ. ಶ. 14-15ನೇಯ ಶತಮಾನಗಳಲ್ಲಿ ಜೀವಿಸಿದ್ದು ಸುತ್ತೂರು ಮಠದಲ್ಲಿ ಕಾಯಕ ಅಥವಾ ದಾಸೋಹವನ್ನು ಮಾಡಿ, ಅನಂತರ ಕೊಳ್ಳೆಗಾಲಕ್ಕೆ ಸಮೀಪದಲ್ಲಿರುವ ಕುಂತೂರಿಗೆ ಹೋಗಿ, ಕೊನೆಗೆ ಈ ಬೆಟ್ಟದ ಮೇಲಿರುವ ಮಹಾಮಲೆ ಎಂಬಲ್ಲಿ ಜೀವಿಸಿದ್ದು ಸಮಾಧಿಯನ್ನು ಪಡೆದನು. ಆತನು ಅನೇಕ ಭಕ್ತರಿಗೆ ಅನುಗ್ರಹ ಮಾಡಿದುದರಿಂದ, ಈ ಪ್ರದೇಶವು ಪವಿತ್ರ ಸ್ಥಳವಾಯಿತು. ಆತನು ಅನೇಕ ಪವಾಡಗಳನ್ನೂ ಮಾಡಿದನೆಂದು ನಂಬಲಾಗಿದೆ. ಅವನ ಗೌರವಾರ್ಥವಾಗಿ ಈ ದೇವಾಲಯವನ್ನು ಕಟ್ಟಲಾಯಿತು. ಇದರಲ್ಲಿ ಗೋಪುರ ಮತ್ತು ಮಹಾದ್ವಾರಗಳಿವೆ. ಸಾಕಷ್ಟು ದೊಡ್ಡದಾಗಿರುವ ನಂದಿಯ ಮೂರ್ತಿಯು ಈ ದೇವಾಲಯದ ಮೇಲಿದೆ. ಈ ದೇವಾಲಯದ ಸುತ್ತಮುತ್ತಲೂ ಅನೇಕ ಸಣ್ಣ ದೇವಾಲಯಗಳಿವೆ. ಅಂತರಗಂಗೆ ಎಂಬ ಇಲ್ಲಿ ಸದಾ ಹರಿಯುವ ಜಲಸ್ಥಾನವಿದ್ದು ಇದರಲ್ಲಿ ಯಾತ್ರಿಕರು ಸ್ನಾನ ಮಾಡುತ್ತಾರೆ. ಇಲ್ಲಿ ಶಿವರಾತ್ರಿ, ಉಗಾದಿ, ಗೌರೀಹಬ್ಬ (ಭಾದ್ರಪದ ಮಾಸ), ಮಹಾಲಯ ಅಮಾವಾಸ್ಯೆ ಮತ್ತು ದೀಪಾವಳಿ ಹಬ್ಬಗಳ ಸಮಯದಲ್ಲಿ ನಡೆಯುವ ರಥೋತ್ಸವ ಸಮಯದಲ್ಲಿ ದಕ್ಷಿಣ ಭಾರತದ ಎಲ್ಲ ಕಡೆಗಳಿಂದಲೂ ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಮಂದಿ ಇಲ್ಲಿ ಸೇರುತ್ತಾರೆ. ಇದಲ್ಲದೆ ಅನೇಕ ಭಕ್ತರು ಪ್ರತೀ ಅಮಾವಾಸ್ಯೆಗೂ ಇಲ್ಲಿಗೆ ದೇವರ ದರ್ಶನಕ್ಕಾಗಿ ಬರುತ್ತಾರೆ. ಮೈಸೂರಿನ ಒಡೆಯರು ಈ ದೇವಾಲಯಕ್ಕೆ ಅನೇಕ ದಾನ ದತ್ತಿಗಳನ್ನು ಕೊಟ್ಟಿದ್ದಾರೆ. ಈ ದೇವಾಲಯವು ಪ್ರಮುಖ ಮುಜರಾಯಿ ಸಂಸ್ಥೆಯಾಗಿದ್ದು ಒಳ್ಳೆಯ ಆದಾಯವನ್ನು ಹೊಂದಿದೆ. ಇಲ್ಲಿ ಸಾಲೂರು ಮಠ ಎಂಬ ಹೆಸರಿನ ಹಳೆಯ ವೀರಶೈವ ದಾಸೋಹ ಮಠವಿದ್ದು ಜಾತ್ರೆಗಳ ಸಮಯದಲ್ಲಿ ಅದು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಯಾತ್ರಿಕರಿಗೆ ಇಲ್ಲಿ ಉಚಿತ ವಸತಿ ಮತ್ತು ಭೋಜನ ಸೌಲಭ್ಯವನ್ನು ಒದಗಿಸಲಾಗುತ್ತದೆ. ಈ ಮಠಕ್ಕೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಯು ಬೆಟ್ಟದ ಮೇಲೆ ಮತ್ತು ಕೊಳ್ಳೆಗಾಲದಲ್ಲಿ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿವೆ. ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯವಿರುವ ಸಂಸ್ಕೃತ ಶಾಲೆಯೂ ಇಲ್ಲಿದೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಈ ಮಠದ ಆಶ್ರಯದಲ್ಲಿ ನಡೆಯುತ್ತವೆ. ದೇವಾಲಯಗಳು ಮತ್ತು ಸ್ವಾಮಿಗಳ ಗದ್ದುಗೆಗಳೂ ಇಲ್ಲಿವೆ. ಈ ಮಠದ ಆದಿಗುರುಗಳಾಗಿದ್ದ ಮಹದೇಶ್ವರರು ಉಪಯೋಗಿಸುತ್ತಿದ್ದ ಪಾದುಕೆಗಳು, ಶಂಖ, ಜೋಳಿಗೆ, ಕೋಲು ಮುಂತಾದ ವಸ್ತುಗಳು ಇಲ್ಲಿ ಪ್ರದರ್ಶಿತವಾಗಿವೆ. ಪ್ರೇಕ್ಷಕರು ಇಲ್ಲಿನ ಸುತ್ತು ನೋಟ ಮತ್ತು ಮನೋಹರವಾದ ಪ್ರಕೃತಿ ಸೌಂದರ್ಯವನ್ನು ಅನುಭವಿಸಬಹುದು. ಆನೆ, ಕಾಡೆಮ್ಮೆ ಮುಂತಾದ ವನ್ಯ ಮೃಗಗಳೂ ಇಲ್ಲಿ ಹೇರಳವಾಗಿವೆ. ಆಲಂಬಾಡಿ ಕೋಟೆಯು ಚರಿತ್ರಾರ್ಹವಾದ ಸ್ಥಳವಾಗಿದ್ದು ಇದು ಕಾವೇರಿಯ ತೀರದಲ್ಲಿದ್ದು ಮಹದೇಶ್ವರಮಲೆ ರಕ್ಷಿತ ಅರಣ್ಯದ ಬುಡದಲ್ಲಿದೆ. ಗೋಪೀನಾಥಂನಿಂದ ಆಲಂಬಾಡಿಗೆ ಹೋಗಲು ಕಾಡಿನ ಮಧ್ಯದಲ್ಲಿ ಒಂದು ಸಣ್ಣದಾದ ಬಂಡಿ ರಸ್ತೆಯಿದೆ. ಅಲ್ಲಿ ಹಾಳಾಗಿರುವ ಒಂದು ಮಣ್ಣಿನ ಕೋಟೆಯೂ, ಅದರೊಳಗೆ ವಿಜಯನಗರ ಕಾಲದ್ದೆಂದು ಹೇಳಲಾದ ಒಂದು ಹನುಮಂತನ ಗುಡಿಯೂ ಇವೆ. ಇಲ್ಲಿರುವ ರಂಗನಾಥ ದೇವಾಲಯವು 30 ಮೀ ಉದ್ದವಾಗಿದೆ. ಮಣ್ಣಿನ ಕೋಟೆಯು ಚೌಕಾಕಾರವಾಗಿದ್ದು ಸುಮಾರು 15ನೇಯ ಶತಮಾನಕ್ಕೆ ಸೇರುತ್ತದೆ. ಅದರ ಸುತ್ತಲೂ ಕಂದಕವಿದೆ.

**ಮುಂಡಗೋಡ :** (ಉ. ಕ. ಜಿ; ತಾ. ಕೇ; ಜನ: 10,332) ಮುಂಡಗೋಡ ಬೆಂಗಳೂರಿನಿಂದ ವಾಯುವ್ಯದಲ್ಲಿ ಸುಮಾರು 381 ಕಿಮೀ ದೂರದಲ್ಲಿದೆ. ಇಲ್ಲಿ ವಿಜಯನಗರದ ಕಾಲದ ಒಂದು ಹನುಮಂತನ ದೇವಾಲಯವಿದ್ದು ಈಗ ನವೀಕೃತವಾಗಿದೆ. 1764ರಲ್ಲಿ ಮಾಧವರಾವ್ ಪೇಶ್ವೆಯು ಮುಂಡಗೋಡನ್ನು ತನ್ನ ವಶ ಮಾಡಿಕೊಂಡನು. ತನ್ನ ಅನೇಕ ವರದಿಗಳಲ್ಲಿ ಕರ್ನಲ್ ವೆಲ್ಲೆಸ್ಲಿಯು ಮುಂಡಗೋಡನ್ನು ಬಹಳ ಮುಖ್ಯವಾದ ಗಡಿಯ ತಾಣವನ್ನಾಗಿಯೂ, ಮತ್ತು ಅಲ್ಲಿರುವ ಕೋಟೆಯ ವಿಷಯವಾಗಿಯೂ ಉಲ್ಲೇಖಿಸಿದ್ದಾನೆ. ಅವನು ಇಲ್ಲಿ ಒಂದು ಬ್ರಿಟಿಷ್ ಸೈನ್ಯದ ತುಕಡಿಯನ್ನು ಇಡಬೇಕೆಂದೂ ಯೋಚಿಸಿದ್ದನು. ಮುಂಡಗೋಡಿಗೆ ಐದು ಕಿಮೀ ದೂರದಲ್ಲಿರುವ ಬಾಚಣಕಿಯಲ್ಲಿರುವ ಬಾಚಣಕಿ ಜಲಾಶಯ ಆಕರ್ಷಣೀಯ ಸ್ಥಳ. ಈ ಜಲಾಶಯದ ಕೆಲಸ 1974ರಲ್ಲಿ ಪೂರ್ಣಗೊಂಡಿತು. ಇಲ್ಲಿನ ನಾಗರಿಕ ಆಡಳಿತವು ಊರಿನ ಪುರಸಭೆಯ ಅಧಿಕಾರದಲ್ಲಿದೆ. ಇತ್ತೀಚೆಗೆ ಟಿಬೆಟನರು ಈ ಊರಿನ ಬಳಿ ತಮ್ಮದೇ ಆದ ಒಂದು ನೆಲೆಯನ್ನು ಸ್ಥಾಪಿಸಿಕೊಂಡಿದ್ದಾರೆ.

**ಮುಂಡರಗಿ :** (ಧಾರವಾಡ ಜಿ; ತಾ. ಕೇ; ಜನ: 13,617) ಹಿಂದೆ ಮುಂಡರಗಿಯು ಪೇಠಾ ಕೇಂದ್ರವಾಗಿದ್ದು, ಈಗ ತಾಲೂಕಿನ ಕೇಂದ್ರವಾಗಿದೆ. ಇದು ಗದಗಿನಿಂದ ಆಗ್ನೇಯಕ್ಕೆ ಸುಮಾರು 39 ಕಿಮೀ ದೂರದಲ್ಲಿದೆ. ಇಲ್ಲಿ 1973ರಲ್ಲಿ ಪುರಸಭೆಯನ್ನು ಸ್ಥಾಪಿಸಲಾಯಿತು. ಇಲ್ಲಿ ಹೇಳಿಕೊಳ್ಳುವಂತಹ ಪ್ರಾಚೀನ ಅವಶೇಷಗಳೇನೂ ಇಲ್ಲ. ಇತ್ತೀಚೆಗೆ ಕಟ್ಟಲಾದ ದೇವಾಲಯಗಳಲ್ಲಿ ಬೆಟ್ಟದ ಮೇಲಿರುವ ಕನಕ ನರಸಿಂಹ, ಕೋಟೆ ಹನುಮಂತ, ವಿಠ್ಠಲ ರುಕ್ಮಾಯಿ ಮತ್ತು ಕನ್ನಿಕಾಪರಮೇಶ್ವರಿ ದೇವಾಲಯಗಳು ಮುಖ್ಯವಾದವು. ಹತ್ತಿರದಲ್ಲೇ ಇರುವ ಬೆಟ್ಟದ ಮೇಲೆ ಹಾಳಾಗಿರುವ ಕೋಟೆಯೂ ಮತ್ತು ಕೆಲವು ಸಣ್ಣ ಗುಡಿಗಳೂ ಇವೆ. ಈ ಊರಿನಲ್ಲಿ ಅನ್ನದಾನೇಶ್ವರ ಮಠ ಮತ್ತು ತೋಂಟದಾರ್ಯ ಮಠ ಎಂಬ ಎರಡು ಪ್ರಾಚೀನ ವೀರಶೈವ ಮಠಗಳಿವೆ. ಇಲ್ಲಿ ಎರಡು ಮಸೀದಿಗಳೂ, ಜಲಾಲುದ್ದೀನ್ ಖಾದ್ರಿ ಮತ್ತು ಮಹಬೂಬ್ ಸುಬಾನಿಯವರ ದರ್ಗಾಗಳೂ ಇವೆ. ನರಗುಂದದ ಬಾಬಾಸಾಹೇಬನ ಜೊತೆ ಸೇರಿ ಬ್ರಿಟಿಷರ ವಿರುದ್ಧ 1857-58ರಲ್ಲಿ ದಂಗೆ ಎದ್ದ, ಜನಾನುರಾಗಿಯಾದ ವೀರ ಮುಂಡರಗಿ ಭೀಮರಾಯನು ಈ ಸ್ಥಳಕ್ಕೆ ಸೇರಿದವನು. ಈ ಸ್ಥಳವು ಕಡಲೆಕಾಯಿ ಬೆಳೆಗೆ ಪ್ರಖ್ಯಾತವಾಗಿದೆ. ಇಲ್ಲಿಯ ಮುಖ್ಯ ಕೈಗಾರಿಕೆಗಳೆಂದರೆ ಹತ್ತಿಯ ಬೀಜ ವಿಂಗಡಿಸುವುದು, ಎಣ್ಣೆ ಗಿರಣಿಗಳು, ಕಂಬಳಿಗಳ ನೇಯ್ಗೆ, ಇತ್ಯಾದಿ.

**ಮುದ್ದೆಬಿಹಾಳ :** (ವಿಜಾಪುರ ಜಿ; ತಾ. ಕೇ; ಜನ: 14,962) ಮುದ್ದೆಬಿಹಾಳವು ವಿಜಾಪುರದಿಂದ ಆಗ್ನೇಯದಲ್ಲಿ 83 ಕಿಮೀ ದೂರದಲ್ಲಿದೆ. ಈಗಿನ ಬಸರಕೋಡಿನ ನಾಡಗೌಡನ ಹಿರಿಯ ವಂಶಸ್ಥನಾದ ಪರಮಣ್ಣನು 1680ರಲ್ಲಿ ಮುದ್ದೆಬಿಹಾಳವನ್ನು ಸ್ಥಾಪಿಸಿದನು. ಪರಮಣ್ಣನ ಮಗನಾದ ಹುಚ್ಚಪ್ಪನು ಸುಮಾರು 1720ರ ಸುಮಾರಿನಲ್ಲಿ ಕೋಟೆಯನ್ನು ಕಟ್ಟಿಸಿದನು. ಸುಮಾರು 1764ರಲ್ಲಿ ಈ ಸ್ಥಳವು ಪೇಶ್ವೆಗಳ ಅಧಿಪತ್ಯಕ್ಕೆ ಸೇರಿತು. 1817ರ ವರೆಗೆ ಮುದ್ದೆಬಿಹಾಳ ಉಪವಿಭಾಗದ ಕೇಂದ್ರವಾಗಿತ್ತು. ಈ ಊರಿನಲ್ಲಿ ಅನೇಕ ದೇವಾಲಯಗಳಿವೆ. ದ್ಯಾಮವ್ವನ ದೇವಾಲಯ ಊರಿನ ಮಧ್ಯದಲ್ಲಿದ್ದು ಮೂರು ವರ್ಷಗಳಿಗೊಮ್ಮೆ ಒಂದು ದೊಡ್ಡ ಜಾತ್ರೆಯು ನಡೆಯುತ್ತದೆ. ಇದಕ್ಕೆ ಸಮೀಪದಲ್ಲಿ ಬಲಭಾಗದಲ್ಲಿ ಹನುಮಂತನ ದೇವಾಲಯವೂ, ಎಡಭಾಗದಲ್ಲಿ ದತ್ತಾತ್ರೇಯ ದೇವಾಲಯವೂ ಇವೆ. ರಾಘವೇಂದ್ರಸ್ವಾಮಿಗಳ ಬೃಂದಾವನವನ್ನು ಕೆಲವು ವರ್ಷಗಳ ಹಿಂದೆ ಪ್ರತಿಷ್ಠಾಪಿಸಲಾಯಿತು. ಇಲ್ಲಿರುವ ಇತರ ದೇವಾಲಯಗಳೆಂದರೆ ಪಾಂಡುರಂಗ, ದುರ್ಗಾದೇವಿ, ಮಲ್ಲಯ್ಯ, ಮರಳು ಸಿದ್ದೇಶ್ವರ ಮತ್ತು ಬನಶಂಕರಿ. ಇಲ್ಲಿ ಮೂರು ಮಸೀದಿಗಳೂ, ಮಹಬೂಬ್ ಷಾ ಮತ್ತು ಸಾಹೇಬ್ ಮೊದಿನ್ ಅವರ ಎರಡು ದರ್ಗಾಗಳೂ ಇವೆ. ಇಲ್ಲಿರುವ ತಾಲೂಕು ಗ್ರಾಮೋದ್ಯೋಗ ಸಂಘವು ಖಾದಿಬಟ್ಟೆ, ಸಾಬೂನು ಮುಂತಾದವುಗಳನ್ನು ತಯಾರಿಸಿ ಅನೇಕ ನಿಸ್ಸಹಾಯ ಸ್ತ್ರೀಯರಿಗೆ ಉದ್ಯೋಗವನ್ನು ಒದಗಿಸಿದೆ. ಇಲ್ಲಿ ಒಂದು ಬಿತ್ತನೆ ಬೀಜದ ಕೇಂದ್ರವಿದೆ. ಇಲ್ಲಿನ ಪುರಸಭೆಯು ಊರಿನ ಸ್ಥಳೀಯ ಆಡಳಿತವನ್ನು ನೋಡಿಕೊಳ್ಳುತ್ತದೆ. ಮುದ್ದೆಬಿಹಾಳಿಗೆ ಆಗ್ನೇಯದಲ್ಲಿ 19 ಕಿಮೀ ದೂರದಲ್ಲಿರುವ ನಲತವಾಡ (ಜನ: 8,602)ದ ಮೊದಲಿನ ಹೆಸರು ನೀಲಾವತಿ ಪಟ್ಟಣ. ಇಲ್ಲಿರುವ ಹನುಮಂತನ ದೇವಾಲಯವು ಪ್ರಾಚೀನವಾದುದು. ಇಲ್ಲಿರುವ ಇತರ ದೇವಾಲಯಗಳೆಂದರೆ ಸಂಗಮೇಶ್ವರ, ಪಾವಡಬಸವಣ್ಣ, ಕಾಳಮ್ಮ ಮತ್ತು ದ್ಯಾಮವ್ವ. ಇಲ್ಲಿರುವ ವೀರಶೈವ ವಿರಕ್ತಮಠದಲ್ಲಿ ಶರಣ ವೀರೇಶ್ವರನ ಗದ್ದುಗೆಯಿದೆ ಚಾಳುಕ್ಯ ಇಮ್ಮಡಿ ಜಗದೇಕಮಲ್ಲನ ಆಳ್ವಿಕೆಯ ಕ್ರಿ. ಶ. 1148ನೇಯ ವರ್ಷದ ಕಲ್ಲಿನ ಶಾಸನವು ನಾಡಗೌಡನ ಮನೆಯ ಗೋಡೆಯಲ್ಲಿ ದೊರಕಿದ್ದು, ಕಲಿದೇವ ದೇವಾಲಯಕ್ಕೆ ಕೊಡಲಾದ ಅನೇಕ ದತ್ತಿಗಳನ್ನು ಇದು ಉಲ್ಲೇಖಿಸುತ್ತದೆ. ಇಲ್ಲಿ ಒಂದು ಜುಮ್ಮಾಮಸೀದಿಯೂ, ಇತರ ಎಂಟು ಸಣ್ಣ ಮಸೀದಿಗಳೂ ಇವೆ. ಇದು ಪ್ರಖ್ಯಾತ ವ್ಯಾಪಾರದ ಕೇಂದ್ರವಾಗಿದ್ದು, ಕಡಲೆಕಾಯಿ, ಸಜ್ಜೆ, ಜೋಳ ಮತ್ತು ಹತ್ತಿಯ ವ್ಯಾಪಾರಕ್ಕೆ ಪ್ರಸಿದ್ಧಿಯಾಗಿದೆ. ಇಲ್ಲಿ ಹತ್ತಿಯನ್ನು ಬೀಜದಿಂದ ಬೇರ್ಪಡಿಸುವ ಮತ್ತು ಕಡಲೆಕಾಯಿ ಎಣ್ಣೆಯ ತಲಾ ನಾಲ್ಕು ಕಾರ್ಖಾನೆಗಳಿವೆ. ಇಲ್ಲಿನ ನಗರ ಪಂಚಾಯತಿಯು ಊರಿನ ಆಡಳಿತವನ್ನು ನೋಡಿಕೊಳ್ಳುತ್ತಿದೆ. ತಾಳಿಕೋಟೆಯು (ಜನ : 18,336) ಮುದ್ದೇಬಿಹಾಳದಿಂದ ಈಶಾನ್ಯದಲ್ಲಿರುವ, ಪುರಸಭೆಯನ್ನು ಹೊಂದಿರುವ ಪಟ್ಟಣ. 1565ರಲ್ಲಿ ದಖ್ಖಣದ ಸುಲ್ತಾನರಿಗೂ ವಿಜಯನಗರದ ಅರಸರಿಗೂ ನಡುವೆ ನಿರ್ಣಾಯಕ ಯುದ್ಧ ನಡೆಯುವ ಮೊದಲು, ಸುಲ್ತಾನರ ಸೇನೆ ಇಲ್ಲಿ ತಂಗಿತ್ತು. ಇಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ನಗರೇಶ್ವರ ಮತ್ತು ಸಿದ್ದೇಶ್ವರ ದೇವಾಲಯಗಳು ಬಹಳ ಪ್ರಾಚೀನವಾದವು. ಇಲ್ಲಿ ಎರಡು ಮಸೀದಿಗಳೂ ಇವೆ.

**ಮುಧೋಳ :** (ವಿಜಾಪುರ ಜಿ ; ತಾ. ಕೇ ; ಜನ : 21,356) ಮುಧೋಳ ಪಟ್ಟಣವು ಘಟಪ್ರಭಾ ನದಿಯ ಎಡದಂಡೆಯ ಮೇಲೆ, ವಿಜಾಪುರಕ್ಕೆ ನೈಋತ್ಯದಲ್ಲಿ 81 ಕಿಮೀ ದೂರದಲ್ಲಿದೆ. ಇದರ ಪೌರಾಡಳಿತವನ್ನು ನೋಡಿಕೊಳ್ಳಲು ಪುರಸಭೆಯಿದೆ. ಹಿಂದಿನ ಕಾಲದಲ್ಲಿ ಇದಕ್ಕೆ ಮುದುವೊಳಲ್ ಅಂದರೆ ಸುಂದರವಾದ ಪಟ್ಟಣ ಎಂಬ ಹೆಸರಿದ್ದಿತು. ಇದು ಖ್ಯಾತ ಕನ್ನಡಕವಿ ರನ್ನನ ಜನ್ಮಸ್ಥಳ. ಘೋರ್ಪಡೆಯ ವಂಶಸ್ಥರು ಆಳಿದ ಸಂಸ್ಥಾನದ ಕೇಂದ್ರವಾಗಿಯೂ ಈ ಊರು ಇದ್ದಿತು. ವಿಜಾಪುರದ ಸುಲ್ತಾನರ ಆಶ್ರಯದಲ್ಲಿ ಸೇನಾಧಿಕಾರಿಯಾಗಿದ್ದ ಬಾಜಿ ಘೋರ್ಪಡೆಯ ವಂಶಸ್ಥರು ಇಲ್ಲಿ 1947ರ ವರೆಗೆ ರಾಜ್ಯವಾಳಿದರು. ಇಲ್ಲಿ ಭೂಮಿಯ ಮಟ್ಟಕ್ಕಿಂತ ಕೆಳಕ್ಕೆ ಕಟ್ಟಿರುವ

ಶಿವದೇವಾಲಯವು ಬಹಳ ಪ್ರಾಚೀನವಾಗಿದ್ದು ಸುಂದರ ಸ್ಮಾರಕವಾಗಿದೆ. ಇಲ್ಲಿರುವ ಶ್ವೇತಾಂಬರ ಜೈನ ದೇವಾಲಯದಲ್ಲಿ ಮುನೀಶ್ವರಜಿ ಮತ್ತು ಮಹಾವೀರಸ್ವಾಮಿಯ ಸುಂದರ ಶಿಲ್ಪಗಳಿವೆ. ಶ್ರೀರಾಮ, ಮಾರುತಿ, ದತ್ತಾತ್ರೇಯ, ವೆಂಕಟೇಶ್ವರ ದೇವಾಲಯಗಳು ಮತ್ತು ರಾಘವೇಂದ್ರಸ್ವಾಮಿ ಮಠ ಇಲ್ಲಿನ ಇತರ ಧಾರ್ಮಿಕ ಕಟ್ಟಡಗಳು. ಇಲ್ಲಿರುವ ಬ್ರಹ್ಮಗದ್ದಿಗೆ ಮಠವು ದೊಡ್ಡದಾಗಿದ್ದು, ಅದರಲ್ಲಿ ರಾಜರಾಜೇಶ್ವರೀ, ಶೃಂಗಾರಗೌರಿ ಮತ್ತು ದತ್ತಾತ್ರೇಯನ ಗುಡಿಗಳಿವೆ. ಇಲ್ಲಿ ಮಹಾಲಿಂಗೇಶ್ವರನ ಇನ್ನೊಂದು ಮಠವಿದೆ. ಊರಿಗೆ ಪಕ್ಕದಲ್ಲೇ ಹಿಂದಿನ ರಾಜರ ವಾಡೆ ಇದೆ. ಈ ಆವರಣದಲ್ಲಿ ಸಿದ್ಧರಾಮೇಶ್ವರ ದೇವಾಲಯವಿದೆ. ಸೈಫಿ ಸಾಹೇಬರ ಖ್ಯಾತ ದರ್ಗಾ ಎತ್ತರವಾದ ಸ್ಥಳದಲ್ಲಿದ್ದು, ಇಲ್ಲಿ ನಡೆಯುವ ವಾರ್ಷಿಕ ಉರುಸ್ ಬಹುಸಂಖ್ಯೆಯ ಜನಗಳನ್ನು ಆಕರ್ಷಿಸುತ್ತದೆ. ಇಲ್ಲಿ ಅನೇಕ ಮಸೀದಿಗಳೂ ಇವೆ. ಈ ಊರು ಒರಳುಕಲ್ಲುಗಳಿಗೂ ಮತ್ತು ಬೃಂದಾವನ (ತುಳಸಿಕಟ್ಟೆ) ಗಳಿಗೂ ಪ್ರಸಿದ್ಧಿಯಾಗಿದೆ. ಮಹಾಲಿಂಗಪುರವು (ಜನ: 17,809–1981) ಮುಧೋಳದಿಂದ ವಾಯುವ್ಯದಲ್ಲಿ 19 ಕಿಮೀ ದೂರದಲ್ಲಿದೆ. ಇದರ ಮೊದಲಿನ ಹೆಸರು ನರಗಟ್ಟಿ. ಅನಂತರ ಶರಣ ಮಹಾಲಿಂಗೇಶ್ವರನ ಗೌರವಾರ್ಥವಾಗಿ ಈ ಸ್ಥಳದ ಹೆಸರನ್ನು ಮಹಾಲಿಂಗಪುರವೆಂದು ಬದಲಾಯಿಸಲಾಯಿತು. ಇಲ್ಲಿರುವ ಈ ಶರಣನ ಮಠವು ಬಹಳ ಪ್ರಖ್ಯಾತಿಯನ್ನು ಪಡೆದಿದೆ. ಮರದಿಂದ ರಚಿತವಾದ ಮುಮ್ಮುಖವುಳ್ಳ ಅಂತಸ್ತಿನ ಈ ಮಠವು ಕಲಾತ್ಮಕವಾಗಿ ನಿರ್ಮಿಸಲ್ಪಟ್ಟಿದೆ. ಈ ಮಠದ ದೊಡ್ಡ ಹಜಾರದಲ್ಲಿ ಶಿವನ ಎರಡು ಪ್ರಾಚೀನ ವರ್ಣಚಿತ್ರಗಳಿವೆ. ಇಲ್ಲಿ ಒಂದು ಕೊಠಡಿಯಲ್ಲಿ ಇಂದಿಗೂ ಬೆಳೆಯುತ್ತಿದೆ ಎಂದು ವರ್ಣಿಸಲಾದ ಈ ಶರಣನ ಜಟೆಯ ರೂಪದ ಕೂದಲು ರಕ್ಷಿಸಲ್ಪಟ್ಟಿದೆ. ಈ ಮಠಕ್ಕೆ ಹೊಂದಿಕೊಂಡಂತೆ ಒಂದು ದೊಡ್ಡ ದೇವಾಲಯವಿದ್ದು ಅದರಲ್ಲಿ ಈ ಶರಣನ ಗದ್ದುಗೆಯೇ ಮುಖ್ಯವಾಗಿ ಪೂಜೆಗೊಳ್ಳುತ್ತಿರುವುದು. ಈ ದೇವಾಲಯದ ಸಮೀಪದಲ್ಲೇ ಬಸವತೀರ್ಥವೆಂಬ ಪವಿತ್ರ ಕೊಳವಿದೆ. ಸಮೀಪದ ಎತ್ತರವಾದ ಸ್ಥಳದಲ್ಲಿ ಚನ್ನಗಿರೇಶ್ವರ ಅಥವಾ ರಾಮಲಿಂಗ ಎಂಬ ಪ್ರಾಚೀನ ದೇವಾಲಯವಿದೆ. ಈ ಊರಿನ ಇನ್ನೊಂದು ಮುಖ್ಯ ದೇವಾಲಯವೆಂದರೆ ಬನಶಂಕರಿ ದೇವಸ್ಥಾನ. ಇಲ್ಲಿ ಬಹುಸಂಖ್ಯೆಯಲ್ಲಿ ಕೈಮಗ್ಗಗಳು ಕೆಲಸ ಮಾಡುತ್ತಿದ್ದು, ಇಲ್ಲಿ ತಯಾರಾದ ಕೈಮಗ್ಗದ ಸೀರೆಗಳಿಗೆ ಹೊರಗಡೆ ಮಾರುಕಟ್ಟೆಯಲ್ಲಿ ಬೇಡಿಕೆಯಿದೆ. ಇಲ್ಲಿ ಪುರಸಭೆಯಿದೆ.

**ಮುಳಗುಂದ:** (ಧಾರವಾಡ ಜಿ; ಗದಗು ತಾ; ಜನ: 14,535–1981) ಮುಳಗುಂದವು ಗದಗು ತಾಲೂಕಿನಲ್ಲಿ ಪ್ರಾಮುಖ್ಯವಾದ ಐತಿಹಾಸಿಕ ಸ್ಥಳ. ಇದು ಗದಗಿನಿಂದ ನೈಋತ್ಯದಲ್ಲಿ 19 ಕಿಮೀ ದೂರದಲ್ಲಿದೆ. ಇಲ್ಲಿನ ಪುರಸಭೆಯು 1973ರಲ್ಲಿ ರಚಿತವಾಯಿತು. ಇದು ಪ್ರಾಚೀನತೆ ಮತ್ತು ಪ್ರಾಮುಖ್ಯತೆಗಳೆರಡನ್ನೂ ಹೊಂದಿದೆ. ಇಲ್ಲಿ 18 ಶಾಸನಗಳು ದೊರಕಿದ್ದು, ಅವುಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಕ್ರಿ.ಶ. 1028ರ ಚಾಳುಕ್ಯ ಇಮ್ಮಡಿ ಜಗದೇಕಮಲ್ಲನ ಶಾಸನ. ಹಾಗೆಯೇ ಇದು ಹನ್ನೆರಡು ಹಳ್ಳಿಗಳ ಸಮುದಾಯದ ಕೇಂದ್ರವಾಗಿತ್ತು. ಇಲ್ಲಿ ದೊರಕಿರುವ ಶಾಸನಗಳು ರಾಜಕೀಯದ ವಿವರಗಳನ್ನೂ, ಅನೇಕ ವಿವಿಧ ಧಾರ್ಮಿಕ ಸಂಸ್ಥೆಗಳ ಚಟುವಟಿಕೆಗಳನ್ನೂ ತಿಳಿಸುತ್ತವೆ. ಹತ್ತನೇಯ ಶತಮಾನದಲ್ಲಿ ಇದು ಶೈವ ಮತ್ತು ಜೈನಧರ್ಮಗಳೆರಡರ ಪ್ರಮುಖ ಪಟ್ಟಣವಾಗಿತ್ತು. ಇದು ಅನೇಕ ಜೈನ ಮುನಿಗಳ ಮತ್ತು ವಿದ್ವಾಂಸರ ವಾಸಸ್ಥಾನವಾಗಿತ್ತು. ಅದರಲ್ಲಿ ಮುಖ್ಯನಾದವನು ಧರ್ಮಾಮೃತ ಎಂಬ ಕನ್ನಡ ಗ್ರಂಥದ ರಚಯಿತ ನಯಸೇನ. ಬಂಗಾಳದ ಸೇನ ವಂಶಸ್ಥರು ಇಲ್ಲಿಗೆ ಸೇರಿದವರೆಂದು ಕೆಲವು ವಿದ್ವಾಂಸರ ಅಭಿಪ್ರಾಯ. 1848ಕ್ಕೆ ಮುಂಚೆ ಇದು ತಾಸಗಾವಿನ ಮರಾಠಾ ನಾಯಕನ ಅಧಿಕಾರಕ್ಕೆ ಒಳಪಟ್ಟಿದ್ದಿತು. ಅನಂತರ ಅವನಿಗೆ ಮಕ್ಕಳಿಲ್ಲದೇ ಹೋದುದರಿಂದ ಬ್ರಿಟಿಷರ ವಶವಾಯಿತು. ಮತ್ತೆ 1862ರಲ್ಲಿ ಸಣ್ಣ ವಿಭಾಗದ ಕೇಂದ್ರವಾಯಿತು. ಇಲ್ಲಿ ನೋಡಲು ಯೋಗ್ಯವಾದುವೆಂದರೆ ಪ್ರಾಚೀನ ಕಾಲದ ಕಾಲಭೈರವ, ಕುಂಭೇಶ್ವರ, ನಗರೇಶ್ವರ, ಸಿದ್ಧೇಶ್ವರ, ಬಸವಣ್ಣ ದೇವಾಲಯಗಳು ಮತ್ತು ಚಂದ್ರನಾಥ, ಪಾರ್ಶ್ವನಾಥ ಬಸದಿಗಳು. ಈ ಎಲ್ಲ ಸ್ಮಾರಕಗಳೂ ಚಾಳುಕ್ಯ ವಾಸ್ತುಶೈಲಿಯಲ್ಲಿವೆ. ಇಲ್ಲಿ ಮಹಂತ ಶಿವಯೋಗಿ ಮಠ ಎಂಬ ವೀರಶೈವ ಮಠವೂ ಇದೆ.

**ಮುಳಬಾಗಿಲು:** (ಕೋಲಾರ ಜಿ; ತಾ. ಕೇ; ಜನ: 26,762) ಮುಳಬಾಗಿಲು ಕೋಲಾರದಿಂದ 30 ಕಿಮೀ ಮತ್ತು ಬೆಂಗಳೂರು-ಮದರಾಸು ಹಳೆಯ ರಸ್ತೆಯಲ್ಲಿ ಬೆಂಗಳೂರಿನಿಂದ 100 ಕಿಮೀ ದೂರದಲ್ಲಿ ಇದೆ. ಇಲ್ಲಿ ಒಂದು ಪುರಸಭೆಯಿದೆ. ಮುಳಬಾಗಿಲು ಎಂಬ ಹೆಸರು ಕನ್ನಡದ ಮೂಡಲ ಬಾಗಿಲು, ಅಂದರೆ ಪೂರ್ವದ ಬಾಗಿಲು ಎಂಬುದರಿಂದ ಬಂದಿರಬೇಕು. ಏಕೆಂದರೆ ಇದು ಕರ್ನಾಟಕದಿಂದ ತಿರುಪತಿಯ ದೇವಾಲಯಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ಪೂರ್ವದ ಮೈದಾನ ಪ್ರದೇಶದ ಕಣಿವೆಯಾಗಿದೆ. ಪ್ರಾಚೀನ ಶಾಸನಗಳಲ್ಲಿ ಇದರ ಹೆಸರು ಮುಳುವಾಯಿ ಎಂದು ಬರೆಯಲಾಗಿದೆ. ವಿಜಯನಗರದ ಕಾಲದಲ್ಲಿ ಇದು ಮುಳುವಾಯಿ ರಾಜ್ಯ, ಅಂದರೆ ಈಗಿನ ಕೋಲಾರ ಪ್ರದೇಶದ ಆಡಳಿತದ ಕೇಂದ್ರವಾಗಿದ್ದಿತು. ಅನಂತರ ಇದು ಸುಗಟೂರಿನ ತಮ್ಮೇಗೌಡನ ಆಳ್ವಿಕೆಗೆ ಸೇರಿತು. 1768ರಲ್ಲಿ ಬ್ರಿಟಿಷರು ಇದನ್ನು ತಮ್ಮ ವಶಮಾಡಿಕೊಂಡರು. ಅದೇ ವರ್ಷದಲ್ಲಿ ಹೈದರ್ ಅಲಿಯು ಇದನ್ನು ಬ್ರಿಟಿಷರಿಂದ ತನ್ನ ವಶ ಮಾಡಿಕೊಂಡನು. ವಿಜಯನಗರದ ಆರಂಭದ ಕಾಲದಲ್ಲಿ ನಿರ್ಮಿತವಾದ ಆಂಜನೇಯ ದೇವಾಲಯವು ಮುಳಬಾಗಿಲಿನ ಅತ್ಯಂತ ಪ್ರಮುಖ ದೇವಾಲಯ. ವೀರ ಆಂಜನೇಯನ ವಿಗ್ರಹವು ಹತ್ತು ಅಡಿ ಎತ್ತರವಾಗಿದೆ. ಮೊಗಲ್ ಚಕ್ರವರ್ತಿ ಅಕ್ಬರನ ಪ್ರಖ್ಯಾತ

ಕಂದಾಯ ಮಂತ್ರಿಯಾದ ರಾಜ ತೋದರಮಲ್ಲನು ತನ್ನ ದಕ್ಷಿಣ ತೀರ್ಥಯಾತ್ರೆಯ ಸಮಯದಲ್ಲಿ ಈ ಸ್ಥಳಕ್ಕೆ ಭೇಟಿ ಕೊಟ್ಟಿದ್ದನೆಂದು ಹೇಳುವರು. ಇದೇ ದೇವಾಲಯದ ಪ್ರಾಕಾರದಲ್ಲಿ ಕೋದಂಡರಾಮ, ಕೇಶವ, ಗೋಪಾಲಕೃಷ್ಣ ಮತ್ತು ನರಸಿಂಹ ದೇವಾಲಯಗಳಿವೆ. ಇಲ್ಲಿರುವ ಸೋಮೇಶ್ವರ ದೇವಾಲಯವು ದೊಡ್ಡದಾದ ಮತ್ತು ವಾಸ್ತುಶಿಲ್ಪಕ್ಕೆ ಹೆಸರಾದ ದೇವಾಲಯ. ಈ ದೇವಾಲಯದ ಅತ್ಯಂತ ಆಕರ್ಷಕ ಭಾಗವೆಂದರೆ, ಸುಂದರವಾದ ಕೆತ್ತನೆಯಿಂದ ಕೂಡಿದ ಕಂಬಗಳನ್ನುಳ್ಳ ನವರಂಗ. ಇದರ ಮುಂದಿರುವ ಮಂಟಪದಲ್ಲಿ ಸುಂದರ ಕಂಬಗಳೂ ನಂದಿಯ ವಿಗ್ರಹವೂ ಇದೆ. ದೇವಾಲಯದಲ್ಲಿರುವ ಅತ್ಯಂತ ಮಹತ್ತರವಾದ ಅವಶೇಷವೆಂದರೆ ಬಹಳ ಸುಂದರವಾದ ಅಂಧಕಾಸುರ ಸಂಹಾರಿಯ ರೂಪದಲ್ಲಿರುವ ಇದರ ಪೀಠವೂ ಸೇರಿದಂತೆ ಮೂರು ಅಡಿ ಏಳು ಅಂಗುಲ ಎತ್ತರದ ಲೋಹದ ನಟರಾಜ ಶಿಲ್ಪ. ಹದಿಮೂರನೇಯ ಶತಮಾನದ ಈ ಶಿಲ್ಪ ವಿಶಿಷ್ಟ ಪ್ರಮಾಣವನ್ನು ಹೊಂದಿದ್ದು, 'ಕರ್ನಾಟಕದಲ್ಲೇ ಈವರೆಗೆ ದೊರಕಿರುವ ಅತ್ಯಂತ ಬೆಲೆ ಬಾಳುವ ಲೋಹದ ಶಿಲ್ಪಗಳಲ್ಲಿ ಒಂದು' ಎಂಬುದಾಗಿ ವರ್ಣಿತವಾಗಿದೆ. ಇನ್ನೊಂದು ಆಕರ್ಷಣೀಯ ವಿಗ್ರಹವೆಂದರೆ ಕಲ್ಲಿನಿಂದ ಮಾಡಿದ ಆರು ಅಡಿ ಎತ್ತರದ ಆರು ಮುಖಗಳನ್ನುಳ್ಳ, ನವಿಲಿನ ಮೇಲೆ ಕುಳಿತಿರುವ, ದೇವಾಲಯದ ಹಿಂಭಾಗದಲ್ಲಿರುವ ಕುಮಾರಸ್ವಾಮಿಯ ಶಿಲ್ಪ. ಸುಮಾರು 1.5 ಕಿಮೀ ದೂರದಲ್ಲಿರುವ ಮಾಧ್ವಗುರು ಶ್ರೀಪಾದರಾಯರ ಬೃಂದಾವನವೂ ಸಂದರ್ಶನ ಯೋಗ್ಯವಾದುದು. ಸಂತ ಬಾಬಾ ಹೈದರ್ ಅಲಿಯ ಗೋರಿಯು ಅಧಿಕ ಸಂಖ್ಯೆಯಲ್ಲಿ ಮುಹಮ್ಮದೀಯರನ್ನು, ಜನವರಿ ತಿಂಗಳಲ್ಲಿ ನಡೆಯುವ ಉರುಸ್ ಸಮಯದಲ್ಲಿ ಆಕರ್ಷಿಸುತ್ತದೆ. ಮುಳಬಾಗಿಲಿನ ಸಮೀಪದ ಬೆಟ್ಟವು ಕೋಟೆಯನ್ನು ಹೊಂದಿದ್ದು ಸುತ್ತಮುತ್ತಲಿನ ಭೂ ದೃಶ್ಯವು ನೋಡಲು ಸುಂದರವಾಗಿದೆ. ಮಹಾದೇವನ ಗುಂಡು ಮತ್ತು ಬಾಬಯ್ಯನ ಗುಂಡು ಎಂದು ಕರೆಯಲಾಗುವ ಎರಡು ದೊಡ್ಡ ಬಂಡೆಗಳು ಬೆಟ್ಟದ ಮೇಲಿವೆ. ಬೆಟ್ಟದ ಮೇಲೆ ರಾಮತೀರ್ಥ ಮತ್ತು ಲಕ್ಷ್ಮಣತೀರ್ಥ ಎಂಬ ಹೆಸರಿನ ಎರಡು ಜಲಾಶಯಗಳಿವೆ. ಮುಳಬಾಗಿಲು ಹಿಪ್ಪುನೇರಳೆ ಸೊಪ್ಪಿನ ಬೆಳೆಗೆ ಮತ್ತು ತೋಟದ ಬೆಳೆಗಳಿಗೆ ಪ್ರಸಿದ್ಧಿಯಾಗಿದೆ. ಮುಳಬಾಗಿಲಿನ ವಾಯುವ್ಯದಲ್ಲಿ ಸುಮಾರು 8 ಕಿಮೀ ದೂರದಲ್ಲಿ ಕುರುಡುಮಲೆ ಎಂಬ ಹೆಸರಿನ ಬೆಟ್ಟ ಮತ್ತು ಊರು ಇವೆ. ಇದು ವಿಜಯನಗರ ಕಾಲದ ಮಹಾಗಣಪತಿಯ ದೇವಾಲಯಕ್ಕೆ ಹೆಸರಾಗಿದೆ. ಸೋಮೇಶ್ವರ ದೇವಾಲಯವು ದ್ರಾವಿಡ ಶೈಲಿಗೆಸೇರಿದ್ದು, ಪಲ್ಲವ ಮತ್ತು ವಿಜಯನಗರ ಮಧ್ಯಂತರ ಶೈಲಿಯಲ್ಲಿದೆ. ಇಲ್ಲಿನ ನವರಂಗವು ಸುಂದರ ಕೆತ್ತನೆಗಳಿಂದ ಕೂಡಿದ ಕಂಬಗಳನ್ನು ಹೊಂದಿದೆ.

**ಮೂಡಿಗೆರೆ :** (ಚಿಕ್ಕಮಗಳೂರು ಜಿ; ತಾ. ಕೇ; ಜನ: 7,083) ಮೂಡಿಗೆರೆಯು ಬೆಂಗಳೂರಿನಿಂದ ವಾಯುವ್ಯದಲ್ಲಿ 259 ಕಿಮೀ ದೂರದಲ್ಲಿದೆ. ಇದು 1876ರಲ್ಲಿ ತಾಲೂಕು ಕೇಂದ್ರವಾಯಿತು. ಹೇಮಾವತಿ ನದಿಯು ಈ ತಾಲೂಕಿನಲ್ಲಿ ಜನ್ಮತಾಳಿ ಆಗ್ನೇಯಕ್ಕೆ ಹರಿಯುತ್ತದೆ. ಈ ಸ್ಥಳವು ಆಕರ್ಷಕವಾದ ಭೂದೃಶ್ಯ, ಸುಂದರವಾದ ಪ್ರಕೃತಿ ಸೌಂದರ್ಯ ಮತ್ತು ಇಳಿಜಾರಿನ ಕಾಫಿ ಪ್ಲಾಂಟೇಷನ್ ಇವುಗಳಿಗೆ ಪ್ರಖ್ಯಾತವಾಗಿದೆ. ಈ ಊರಿನಲ್ಲಿ ಗೋಪಾಲಸ್ವಾಮಿ ದೇವಾಲಯ, ಜಾಮಿಯ ಮಸೀದಿ, ಜಡೀದ್ ಮಸೀದಿ ಮತ್ತು ಬದ್ರಿಯ ಮಸೀದಿಗಳಿವೆ. ಇವುಗಳಲ್ಲಿ ಜಾಮಿಯ ಮಸೀದಿಯು ಪ್ರಾಚೀನವಾದುದು ಮತ್ತು ಅದು ಒಂದು ಅರಾಬಿಕ್ ಪಾಠಶಾಲೆಯನ್ನು ಹೊಂದಿದೆ. ಸಂತ ಅಂಥೋಣಿ ಚರ್ಚು ಕ್ಯಾಥಲಿಕರ ಪೂಜಾಸ್ಥಳ. ಕೆಳಗೂರು ಮೂಡಿಗೆರೆಯಿಂದ ಪಶ್ಚಿಮಕ್ಕೆ 31 ಕಿಮೀ ದೂರದಲ್ಲಿ ಬೆಟ್ಟಗಳ ಮಧ್ಯದಲ್ಲಿದೆ. ಇಲ್ಲಿ ಟೀ ತೋಟಗಳಿವೆ. ಮೂಡಿಗೆರೆಯಿಂದ ನೈಋತ್ಯದಲ್ಲಿ ಹದಿನೈದು ಕಿಮೀ ದೂರದಲ್ಲಿರುವ ಹಂತೂರಿನಲ್ಲಿ ಗೋಪುರವಿರುವ ಪಾರ್ಶ್ವನಾಥ ಬಸದಿಯಿದೆ. ಕ್ರಿ. ಶ. 1129 ನೇಯ ವರ್ಷದ ಶಾಸನದ ಪ್ರಕಾರ ಇದನ್ನು ಹೊಯ್ಸಳ ರಾಜಕುಮಾರಿ ಹರಿಯಬ್ಬರಸಿಯು ನಿರ್ಮಿಸಿದಳು. ಕಲ್ಲೇಶ್ವರ ಮತ್ತು ದೇವೀರಮ್ಮ ದೇವಾಲಯಗಳೂ ಇಲ್ಲಿವೆ. ಮೂಡಿಗೆರೆಯಿಂದ ಆಗ್ನೇಯದಲ್ಲಿ 16 ಕಿಮೀ ದೂರದಲ್ಲಿ ಹೇಮಾವತೀ ನದಿಯ ಎಡದಂಡೆಯ ಮೇಲೆ, ಹಿಂದೆ ಅಗ್ರಹಾರವಾಗಿದ್ದ ಗೋಣೀಬೀಡು ಇದೆ. ಇಲ್ಲಿರುವ ಸುಬ್ರಹ್ಮಣ್ಯ ದೇವಾಲಯವನ್ನು ವಿಜಯನಗರದ ಅರಸು ಇಮ್ಮಡಿ ಹರಿಹರನು ನಿರ್ಮಿಸಿದನೆಂದು ನಂಬಲಾಗಿದೆ. ವಿಜಯನಗರ ಕಾಲದ, ಕ್ರಿ. ಶ. 1561 ನೇಯ ವರ್ಷದ ಶಾಸನವೊಂದು ನಾಯಕನಿಂದ ಕೊಡಲಾದ ದತ್ತಿಯ ವಿಚಾರವನ್ನು ಉಲ್ಲೇಖಿಸುತ್ತದೆ. ಮೂಡಿಗೆರೆಯಿಂದ ಸುಮಾರು 60 ಕಿಮೀ ದೂರದಲ್ಲಿ ಪ್ರಾಚೀನ ಅಗ್ರಹಾರವಾಗಿದ್ದ ಕಳಸ (ಜನ: 7,523) ಇದೆ. ಇದಕ್ಕೆ ಮಾವಿನಕೆರೆ ಮತ್ತು ಕಳಸಪುರಿ ಎಂಬ ಹೆಸರೂ ಇದೆ. ಇದು ಭದ್ರಾ ನದಿಯ ದಡದಲ್ಲಿ ಸುಂದರ ಸನ್ನಿವೇಶದಲ್ಲಿದೆ. ಭದ್ರಾನದಿಯ ಸಮೀಪದಲ್ಲಿ ಕೋಟಿತೀರ್ಥ, ರುದ್ರತೀರ್ಥ, ಅಂಬುತೀರ್ಥ, ನಾಗತೀರ್ಥ ಮತ್ತು ವಸಿಷ್ಠತೀರ್ಥ ಎಂಬ ಐದು ತೀರ್ಥಗಳಿವೆ (ಪವಿತ್ರ ಕೊಳ). ಭದ್ರಾನದಿಯ ತೀರದಲ್ಲಿರುವ ಕಳಸವು ಪಂಚಕ್ಷೇತ್ರಗಳಲ್ಲಿ ಒಂದು ಎಂಬುದಾಗಿ ಪರಿಗಣಿತವಾಗಿದೆ. ಇಲ್ಲಿ ಅಗಸ್ತ್ಯೇಶ್ವರ ಮತ್ತು ಕಳಸೇಶ್ವರರಿಗಾಗಿ ನಿರ್ಮಿತವಾದ ದೇವಾಲಯವಿದೆ. ಇದನ್ನು ಶ್ರುತಬಿಂದು ಎಂಬ ನಾಯಕನು ನಿರ್ಮಿಸಿದನೆಂದು ಹೇಳಲಾಗಿದೆ. ಇಲ್ಲಿ ವೆಂಕಟರಮಣ, ಆಂಜನೇಯ, ವೀರನಾರಾಯಣ, ಗೋಪಾಲಕೃಷ್ಣ, ಗಂಗಾಧರೇಶ್ವರ, ಗಣಪತಿ, ಚನ್ನಕೇಶವ, ಬಿಂದುಮಾಧವ, ದುರ್ಗಾ ಮತ್ತು ಕಾಲಭೈರವ ದೇವಾಲಯಗಳೂ ಇವೆ. ಇವುಗಳಲ್ಲಿ ಕೆಲವು ಆಧುನಿಕವಾದವು. ಚಂದ್ರನಾಥ ಜೈನ ಬಸದಿಯು ಪ್ರಾಚೀನವಾದುದು. ಆಗಲೇ ಉಲ್ಲೇಖಿಸಿದ ಅಂಬುತೀರ್ಥದಲ್ಲಿ ಭದ್ರಾನದಿಯು ನೀರಿನಿಂದ ಸವೆದುಹೋದ ಕೆಲವು ಬಂಡೆಗಳ ಮಧ್ಯದಲ್ಲಿ ಆಳವಾಗಿ ಹರಿಯುತ್ತದೆ. ಇದರ

ಮಧ್ಯದಲ್ಲಿ ಚೌಕಾಕಾರದ ಒಂದು ಬಂಡೆಯ ಮೇಲೆ ಇನ್ನೊಂದು ಬಂಡೆಯನ್ನು ನಿಲ್ಲಿಸಲಾಗಿದೆ. ಇದನ್ನು ಮಧ್ವಾಚಾರ್ಯರ ಬಂಡೆ ಅಥವಾ ಭೀಮನಕಲ್ಲು ಎಂದೂ ಕರೆಯುತ್ತಾರೆ. ಮಧ್ವಾಚಾರ್ಯರು ಈ ಬಂಡೆಯನ್ನು ಒಂದೇ ಕೈಯಿಂದ ತಂದು ಇಲ್ಲಿ ಇಟ್ಟರೆಂದು ತಿಳಿಸುವ ಸಂಸ್ಕೃತ ಭಾಷೆಯ ಶಾಸನವು ಈ ಬಂಡೆಯ ಮೇಲಿದೆ. ಭದ್ರಾನದಿಯ ಆಚೆಗೆ ಪ್ರಖ್ಯಾತವಾದ ಅನ್ನಪೂರ್ಣೇಶ್ವರೀ ದೇವಾಲಯವಿರುವ ಹೊರನಾಡು ಇದೆ. ಇತ್ತೀಚೆಗೆ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಯಿತು. ಇದು ನಿಶ್ಶಬ್ದವಾದ ವಾತಾವರಣದಲ್ಲಿದ್ದು ಹೆಚ್ಚಿನ ಪ್ರಾಚೀನತೆಯನ್ನೂ ಪಡೆದಿದೆ. ಮೂಡಿಗೆರೆಯಿಂದ ಪಶ್ಚಿಮದಲ್ಲಿ 44 ಕಿಮೀ ದೂರದಲ್ಲಿರುವ ಬಲ್ಲಾಳರಾಯನದುರ್ಗವು ಪಶ್ಚಿಮಘಟ್ಟದ ವೃತ್ತಾಕಾರದ ಬೆಟ್ಟಗಳ ಶ್ರೇಣಿಯನ್ನು ಹೊಂದಿದೆ. ಇದು 1506.7 ಮೀಟರ್ ಎತ್ತರದಲ್ಲಿದ್ದು, ಮೂಡಿಗೆರೆಯಿಂದ ವಾಯುವ್ಯ ದಿಕ್ಕಿನಲ್ಲಿದೆ. ಹಿಂದಿನ ಕಾಲದಲ್ಲಿ ಇದು ಸಾಕಷ್ಟು ಸೈನಿಕ ದೃಷ್ಟಿಯ ಪ್ರಾಮುಖ್ಯತೆಯನ್ನು ಹೊಂದಿತ್ತು. ವಿಶೇಷವಾದ ರಕ್ಷಣಾ ಕೋಟೆಗಳು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದವು. ಇಲ್ಲಿರುವ ದಿಡ್ಡೀಬಾಗಿಲು ಮಣ್ಣುದಿಬ್ಬಗಳಿಂದ ರಕ್ಷಿಸಲ್ಪಟ್ಟು, ವೃತ್ತಾಕಾರದ ಎರಡು ಬುರುಜುಗಳನ್ನು ಹೊಂದಿದೆ. ಮೇಲಿರುವ ದುರ್ಗದಲ್ಲಿ ತ್ರಿಕೋನಮಿತಿಯ ಕೇಂದ್ರವಿದೆ. ಈ ಬೆಟ್ಟವು ದಟ್ಟವಾದ ಕಾಡಿನಿಂದ ಕೂಡಿದ್ದು, ಅದರಲ್ಲಿ ಉತ್ತಮ ಜಾತಿಯ ಮಲೆನಾಡಿನ ಮರಗಳು ತುಂಬಿವೆ. ಇಲ್ಲಿಂದ ಸುತ್ತಮುತ್ತಲಿನ ನೋಟ ಆಕರ್ಷಕವೂ ರಮ್ಯವೂ ಆಗಿದೆ. ಬೆಂಗಳೂರು ನಗರದಿಂದ 277 ಕಿಮೀ ವಾಯುವ್ಯದಲ್ಲಿ ಅಂಗಡಿ (ಜನ: 720) ಎಂಬ ಊರಿದೆ. ಈ ಸ್ಥಳನಾಮ ಅಂಗಡಿ ಎಂಬ ಶಬ್ದದ ಅರ್ಥವು ಮಾರುಕಟ್ಟೆ ಅಥವಾ ಅಂಗಡಿಯನ್ನು ಸೂಚಿಸುತ್ತದೆ. ಇದಕ್ಕೆ ಕುತೂಹಲವಾದ ಚಾರಿತ್ರಿಕ ಪ್ರಾಚೀನತೆಯಿದೆ. ಹೊಯ್ಸಳರ ಮೂಲ ನಿವಾಸಸ್ಥಾನವಾಗಿದ್ದ ಶಶಕಪುರ ಅಥವಾ ಸೊಸೆವೂರು ಈ ಅಂಗಡಿ ಎಂದು ಗುರುತಿಸಲಾಗಿದೆ. ಸೊಸೆವೂರು ಎನ್ನುವ ಹೆಸರು 11ರಿಂದ 13ನೇಯ ಶತಮಾನಗಳವರೆಗೆ ಬಳಕೆಯಲ್ಲಿದ್ದಿತು. ಕ್ರಿ.ಶ. 1539ನೇಯ ವರ್ಷದ ಹಾಸನ ಜಿಲ್ಲೆಯ ಬೇಲೂರು ತಾಲೂಕಿನಲ್ಲಿ ದೊರಕಿರುವ ಶಾಸನವೊಂದರಲ್ಲಿ ಅಂಗಡಿ ಎಂಬ ಹೆಸರಿನ ಉಲ್ಲೇಖವಿದೆ. ಇಲ್ಲಿ ವಸಂತಮ್ಮ ಅಥವಾ ವಾಸಂತಿಕಾದೇವಿಗಾಗಿ ನಿರ್ಮಿಸಲಾದ ದೇವಾಲಯವಿದೆ. ಇಲ್ಲಿ ಮಕರ ಜಿನಾಲಯವು ಕ್ರಿ.ಶ. 1063ರಲ್ಲಿ ಮಾಣಿಕ್ಯ ಪೊಯ್ಸಳಾಚಾರಿಯಿಂದ ನಿರ್ಮಿಸಲ್ಪಟ್ಟಿತೆಂದು ಹೇಳಲಾಗಿದೆ. ದೊಡ್ಡದಾದ ನೇಮಿನಾಥ ಬಸದಿಯಲ್ಲಿ ನೇಮಿನಾಥ, ಚಂದ್ರನಾಥ, ಬಾಹುಬಲಿ, ಯಕ್ಷ ಯಕ್ಷಿಯರ ವಿಗ್ರಹಗಳಿವೆ. ಮಕರ ಜಿನಾಲಯದಲ್ಲಿ ಕುಳಿತಿರುವ ಶಾಂತಿನಾಥನ ಬೃಹತ್ ವಿಗ್ರಹವಿದೆ. ಇಲ್ಲಿ ಜೀರ್ಣಾವಸ್ಥೆಯಲ್ಲಿರುವ ಕೇಶವ, ಪಾತಾಳ ರುದ್ರೇಶ್ವರ ಮತ್ತು (ಸ್ಥಳೀಯವಾಗಿ ವೀರಭದ್ರ ಎಂದು ಕರೆಯಲಾಗುವ) ಮಲ್ಲೇಶ್ವರ ಅಥವಾ ಮಲ್ಲಿಕಾರ್ಜುನ ದೇವಾಲಯಗಳಿವೆ. ವಸಂತ ಪರಮೇಶ್ವರಿಯ ಗೌರವಾರ್ಥವಾಗಿ ವರ್ಷಕ್ಕೊಂದುಸಾರಿ ಫೆಬ್ರವರಿ ತಿಂಗಳಿನಲ್ಲಿ ಜಾತ್ರೆಯು ನಡೆಯುತ್ತದೆ. ಜೊತೆಗೆ ಸಾಂಪ್ರದಾಯಿಕವಾದ ಕೆಂಡಾರ್ಚನೆ ಅಥವಾ ಬೆಂಕಿಯ ಮೇಲೆ ನಡೆಯುವ ಕಾರ್ಯವೂ ನಡೆಯುತ್ತದೆ. ಇಲ್ಲಿನ ದೇವತೆಯು ಸಪ್ತಮಾತೃಕೆಯರಲ್ಲಿ ಒಬ್ಬಳೆಂದು ಕಾಣುತ್ತದೆ. ಇಲ್ಲಿ ಪ್ರಾಚೀನ ಕಾಲದ ಕೆಲವು ವರ್ಣಚಿತ್ರಗಳೂ ಇವೆ. ಮಲ್ಲೇಶ್ವರವು (ಜನ: 7,972-1981) ಪಶ್ಚಿಮಘಟ್ಟದ ಕುದುರೆಮುಖ-ಆರೋಳಿ-ಗಂಗಾಮೂಲ ಬೆಟ್ಟ ಶ್ರೇಣಿಗಳ ತಪ್ಪಲಲ್ಲಿ, ಕಳಸದಿಂದ 25 ಕಿಮೀ ಮೂಡಿಗೆರೆಯಿಂದ 88 ಕಿಮೀ ಮತ್ತು ಚಿಕ್ಕಮಗಳೂರಿನಿಂದ 120 ಕಿಮೀ ದೂರದಲ್ಲಿದೆ. ಹಿಂದೆ ಇದು ಸಂಸೆ ಎನ್ನುವ ಹಳ್ಳಿಯ ಉಪಗ್ರಾಮವಾಗಿತ್ತು. ಈಗ ಕುದುರೆಮುಖ ಗಣಿಯ ಪ್ರದೇಶದ ಪಟ್ಟಣವಾಗಿದೆ. ಈ ಘಟಕವು 1976ರಲ್ಲಿ ಕೆಲಸ ಮಾಡಲು ಪ್ರಾರಂಭಿಸಿತು; ಈಗ ಖಾಯಂ ಆದ ಈ ಪಟ್ಟಣದಲ್ಲಿ 2,520 (1981) ಮನೆಗಳಿದ್ದು ಈಗ ಇಲ್ಲಿ ಬಂದು ಹೋಗುವ 20,000 ಜನಸಂಖ್ಯೆಯಿದೆ. ಹೊಸದಾಗಿ ನಿರ್ಮಿತವಾದ ರಾಧಾಕೃಷ್ಣ ದೇವಾಲಯ, ಯಾವ ಪಂಥಕ್ಕೂ ಸೇರದ ಚರ್ಚು, ಒಂದು ಮಸೀದಿ ಇತ್ತೀಚೆಗೆ ಈ ಗಣಿಯ ಪಟ್ಟಣದಲ್ಲಿ ನಿರ್ಮಾಣಗೊಂಡಿವೆ. ಕುದುರೆಮುಖವು ಮಲ್ಲೇಶ್ವರಕ್ಕೆ ಸಮೀಪದಲ್ಲಿ, ಪಶ್ಚಿಮ ಘಟ್ಟಗಳಲ್ಲಿರುವ ಎತ್ತರವಾದ ಶಿಖರ. ಇದು ಕುದುರೆಮುಖದ ರೀತಿಯಲ್ಲಿ ಇದ್ದು ಈ ಹೆಸರು ಬಂದಿದೆ. ಈ ಬೆಟ್ಟವು ಸಮುದ್ರಮಟ್ಟದಿಂದ 6,215 ಅಡಿ ಎತ್ತರದಲ್ಲಿದೆ. ಚಿಕ್ಕಮಗಳೂರಿನಿಂದ ಇಲ್ಲಿಗೆ ಹೋಗಬೇಕಾದರೆ ಸಂಸೆಯ ಮೂಲಕವೇ ಹೋಗಬೇಕು. ಆದುದರಿಂದ ಕೆಲವುಸಾರಿ, ಕುದುರೆಮುಖ ಬೆಟ್ಟವನ್ನು ಸಂಸೆ ಪರ್ವತ ಎಂದೂ ಕರೆಯುತ್ತಾರೆ. ಕಬ್ಬಿಣದ ಅದುರಿನ ನಿಕ್ಷೇಪಗಳು, ಪಶ್ಚಿಮಘಟ್ಟದ ಕುದುಮುಖ-ಆರೋಳಿ-ಗಂಗಾಮೂಲ ಬೆಟ್ಟ ಶ್ರೇಣಿಗಳಲ್ಲಿವೆ. ಭಾರತ ಸರಕಾರ ಸ್ವಾಮ್ಯ ಹೊಂದಿರುವ ಕುದುರೆಮುಖ ಐರನ್ ಓರ್ ಕಂಪನಿಯು ಇಲ್ಲಿನ ಅದುರನ್ನು ಹೊರತೆಗೆಯುತ್ತದೆ. ಇದರ ಸಮೀಪದಲ್ಲೇ, ಭದ್ರಾನದಿಗೆ ಉಪನದಿಯಾದ ಲಾಖ್ಯ ಎಂಬ ತೊರೆಗೆ ಹೊಸ ಲಾಖ್ಯ ಎಂಬ ಅಣೆಕಟ್ಟನ್ನು ಕಟ್ಟಿದ್ದಾರೆ. ಇದರಿಂದ ಈ ಕಾರ್ಖಾನೆಯಲ್ಲಿ ದೊರಕುವ ಅನುಪಯುಕ್ತ ವಸ್ತುವನ್ನು ಶೇಖರಿಸಲು ಸಹಾಯವಾಗಿದೆ.

ಮೇಲುಕೋಟೆ : (ಮಂಡ್ಯ ಜಿ; ಪಾಂಡವಪುರ ತಾ; ಜನ: 2,958-1981) ಮೇಲುಕೋಟೆಯು ಪುರಸಭಾನಗರ ಮತ್ತು ಆ ಹೆಸರಿನ ಹೋಬಳಿಯ ಕೇಂದ್ರ. ಇದು ಮಂಡ್ಯದಿಂದ ವಾಯುವ್ಯದಲ್ಲಿ 36 ಕಿಮೀ ಮತ್ತು, ಮೈಸೂರಿನಿಂದ ಉತ್ತರಕ್ಕೆ 50 ಕಿಮೀ ದೂರದಲ್ಲಿದೆ. ಇದೊಂದು ಪವಿತ್ರ ಯಾತ್ರಾಸ್ಥಳ. ಪೌರಾಣಿಕ ಉಲ್ಲೇಖಗಳ ಪ್ರಕಾರ ಈ ಸ್ಥಳಕ್ಕೆ ನಾರಾಯಣಾದ್ರಿ, ವೇದಾದ್ರಿ, ಯಾದವಾದ್ರಿ, ಯತಿಶೈಲ ಮತ್ತು ತಿರುನಾರಾಯಣಪುರ ಎಂಬ ಹೆಸರುಗಳಿದ್ದವು. ಇಲ್ಲಿರುವ ನಾರಾಯಣಸ್ವಾಮಿಯ

ದೇವಾಲಯವು ಬೆಟ್ಟದ ಮೇಲೆ ಕಟ್ಟಲ್ಪಟ್ಟು ಕೋಟೆಯಿಂದ ಸುತ್ತುವರಿಯಲ್ಪಟ್ಟಿರುವುದರಿಂದ ಈ ಸ್ಥಳಕ್ಕೆ ಮೇಲುಕೋಟೆ ಎಂಬ ಹೆಸರು ಬಂದಿತು. ಇದು ಕಗ್ಗಲ್ಲಿನ ಬೆಟ್ಟದ ಶ್ರೇಣಿಯಾದ ಯದುಗಿರಿಯ ಮೇಲೆ ನಿರ್ಮಾಣವಾಗಿದ್ದು ಸಮುದ್ರಮಟ್ಟದಿಂದ 3,589 ಅಡಿ ಎತ್ತರದಲ್ಲಿದೆ. ಹನ್ನೆರಡನೇಯ ಶತಮಾನದ ಆದಿಭಾಗದಲ್ಲಿ ತಮಿಳುನಾಡಿನಲ್ಲಿ ಜನಿಸಿದ ಪ್ರಖ್ಯಾತ ಶ್ರೀವೈಷ್ಣವ ಸಂತರಾದ ರಾಮಾನುಜಾಚಾರ್ಯರು ಮೇಲುಕೋಟೆಯಲ್ಲಿ ಹನ್ನೆರಡು ವರ್ಷಗಳ ಕಾಲ ತಂಗಿದ್ದರು. ಅಂದಿನಿಂದ ಇದು ಪ್ರಖ್ಯಾತ ಶ್ರೀವೈಷ್ಣವ ಕೇಂದ್ರವಾಗಿ ಪರಿಣಮಿಸಿತು. ಇಲ್ಲಿರುವ ದೇವಾಲಯವು ದೊಡ್ಡ ಪ್ರಮಾಣದ್ದಾಗಿದ್ದು, ನಾರಾಯಣ ಸ್ವಾಮಿಯೇ ಇಲ್ಲಿನ ಮುಖ್ಯ ದೇವತೆ. ಇಲ್ಲಿ ಪ್ರಚಲಿತವಾಗಿರುವ ಕಥೆಯ ಪ್ರಕಾರ ಇಲ್ಲಿನ ಉತ್ಸವಮೂರ್ತಿಯು ಕಳೆದು ಹೋಗಿತ್ತು. ಅದನ್ನು ಶ್ರೀ ರಾಮಾನುಜರು ಪತ್ತೆ ಹಚ್ಚಿ ಹಿಂದಕ್ಕೆ ಪಡೆದರು. ಈ ಸ್ಥಳದ ಅನೇಕ ಶಾಸನಗಳು ಮತ್ತು ಇತರ ದಾಖಲೆಗಳು ಈ ದೇವಾಲಯಕ್ಕೆ ಕೊಡಲಾದ ದಾನ ಮತ್ತು ದತ್ತಿಗಳ ವಿವರವನ್ನು ತಿಳಿಸುತ್ತವೆ. ಬಹುಶಃ ಇಲ್ಲಿನ ಬೆಟ್ಟದ ಮೇಲಿರುವ ಕೋಟೆಯು ಹೊಯ್ಸಳರ ಕಾಲದಲ್ಲಿ ನಿರ್ಮಿತವಾಗಿರಬೇಕು. ಜೀರ್ಣೋದ್ಧಾರ ಮಾಡಲಾದ ಈ ದೇವಾಲಯಕ್ಕೆ ಸುಂದರವಾದ ಗೋಪುರವಿದೆ. ಈ ದೇವಾಲಯ ದಲ್ಲಿ ರಾಮಾನುಜರ ಗುಡಿಗಳು, ಆಳ್ವಾರರ ವಿಗ್ರಹಗಳು, ಯದು ಗಿರಿಯಮ್ಮನವರ ವಿಗ್ರಹ ಮುಂತಾದವು ಇವೆ. ಈ ದೇವಾ ಲಯಕ್ಕೆ ಅನೇಕ ದತ್ತಿಗಳಿವೆ. ಮೈಸೂರು ಒಡೆಯರ ಕಾಲ ದಲ್ಲಿಯೂ ಈ ದೇವಾಲಯವು ಪ್ರತ್ಯೇಕವಾದ ಪ್ರೋತ್ಸಾಹವನ್ನು ಪಡೆಯಿತು. ಈ ದೇವಾಲಯದಲ್ಲಿ ಅತ್ಯಂತ ಅಮೂಲ್ಯವಾದ ಆಭರಣಗಳಿವೆ. ಮೈಸೂರಿನ ದೊರೆ ರಾಜ ಒಡೆಯರ್ ಅವರು (1578-1617) ರಾಜಮುಡಿ ಎನ್ನುವ, ಅಮೂಲ್ಯ ರತ್ನ ಗಳಿಂದ ಮಾಡಿದ ರತ್ನಖಚಿತವಾದ ಚಿನ್ನದ ಕಿರೀಟವನ್ನು ಈ ದೇವರಿಗೆ ಅರ್ಪಿಸಿದ್ದಾರೆ. 1785ರಲ್ಲಿ ಟಿಪ್ಪು ಸುಲ್ತಾನನು ಕೆಲವು ಆನೆಗಳನ್ನು ಈ ದೇವಾಲಯಕ್ಕೆ ಕೊಟ್ಟನು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರೂ ಕೂಡ ರತ್ನ ಖಚಿತವಾದ 'ಕೃಷ್ಣರಾಜಮುಡಿ' ಎಂಬ ಚಿನ್ನದ ಕಿರೀಟವನ್ನು ಅರ್ಪಿಸಿರು ತ್ತಾರೆ. 'ವೈರಮುಡಿ' ಎಂಬ ಇನ್ನೊಂದು ಅಮೂಲ್ಯವಾದ ಕಿರೀಟವು ಈ ದೇವಾಲಯದಲ್ಲಿದೆ. ಈ ಮೂರು ಕಿರೀಟಗಳೂ ಭದ್ರವಾದ ರಕ್ಷಣೆಯಲ್ಲಿ ಇಡಲ್ಪಟ್ಟು, ಕೆಲವು ವಾರ್ಷಿಕ ಜಾತ್ರೆ ಗಳಲ್ಲಿ ಮತ್ತು ಉತ್ಸವಗಳಲ್ಲಿ ಉತ್ಸವಮೂರ್ತಿಯನ್ನು ಅಲಂಕರಿ ಸಲು ಬಳಸಲಾಗುವುದು. ಪ್ರತೀವರ್ಷವೂ ಮಾರ್ಚಿ-ಏಪ್ರಿಲ್ ತಿಂಗಳಿನಲ್ಲಿ ಇಲ್ಲಿ ನಡೆಯುವ ಜಾತ್ರೆಗೆ ಲಕ್ಷಾಂತರ ಜನ ಸೇರು ತ್ತಾರೆ. ಬೆಟ್ಟದ ಮೇಲುಗಡೆ ಸುಂದರವಾದ ಯೋಗಾನರಸಿಂಹ ದೇವಾಲಯವಿದೆ. ಈ ಮೇಲಿನ ದೇವಾಲಯಕ್ಕೂ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಒಂದು ಚಿನ್ನದ ಕಿರೀಟವನ್ನು ಕೊಟ್ಟಿದ್ದಾರೆ. ಇಲ್ಲಿ ಒಂದು ದೊಡ್ಡ ಕೊಳವಿದೆ. ಈ ಊರಿನಲ್ಲಿ ಇನ್ನೂ ಅನೇಕ ದೇವಾಲಯಗಳೂ ಮತ್ತು ಕೊಳಗಳೂ ಇವೆ. ಮೇಲುಕೋಟೆಯು ಖ್ಯಾತ ವಿದ್ಯಾಕೇಂದ್ರವೂ ಆಗಿದೆ. ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಅಳಸಿಂಗಾರ್ಯ, ಪು. ತಿ. ನರಸಿಂಹಾಚಾರ್ ಮುಂತಾದ ಖ್ಯಾತ ಸಾಹಿತಿಗಳನ್ನು ಈ ಊರು ನೀಡಿದೆ. ಇಲ್ಲಿ 1854ರಲ್ಲಿ ಪ್ರಾರಂಭಿಸಲಾದ ವೇದವೇದಾಂತ ಬೋಧಿನೀ ಸಂಸ್ಕೃತ ಕಾಲೇಜು ಅತ್ಯಂತ ಪ್ರಾಚೀನ ಸಂಸ್ಥೆಗಳ ಲ್ಲೊಂದು. 1935ರಲ್ಲಿ ಪ್ರಾರಂಭಿಸಲಾದ ಪ್ರಾಚೀನ ಪುಸ್ತಕ ಭಂಡಾರವು ತಮಿಳು, ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆ ಗಳ ಪುಸ್ತಕಗಳು ಮತ್ತು ಹಸ್ತಪ್ರತಿಗಳನ್ನು ಹೊಂದಿದೆ. ಇತ್ತೀಚೆಗೆ ಸಂಸ್ಕೃತ ಅಕ್ಯಾಡೆಮಿ ಎನ್ನುವ ಸಂಸ್ಥೆಯನ್ನು ಪ್ರಾರಂಭಿಸಲಾಯಿತು. ಶ್ರೀವೈಷ್ಣವರ ಯತಿರಾಜಮಠ, ಅಹೋಬಲಮಠ ಮತ್ತು ಪರಕಾಲಮಠಗಳು ಇಲ್ಲಿವೆ. ಮೇಲು ಕೋಟೆಯು ಕೈಮಗ್ಗದ ಬಟ್ಟೆಗಳಿಗೆ, ಅದರಲ್ಲಿಯೂ ಧೋತಿ ಮತ್ತು ಸೀರೆಗಳಿಗೆ ವಿಶೇಷ ಪ್ರಖ್ಯಾತವಾಗಿದೆ. ಕುಶಲಕರ್ಮಿಗಳ ತರಬೇತಿ ಕೇಂದ್ರ, ಹಾಲಿನ ಡೈರಿಯ ಘಟಕ ಮತ್ತು ರೆಸಿಡೆನ್ಷಿ ಯಲ್ ಶಾಲೆಗಳು ಇಲ್ಲಿವೆ. ಇಲ್ಲಿಗೆ ಸಮೀಪದಲ್ಲಿ ವಿಶಾಲವಾದ ಕಾಡಿದ್ದು, ಇಲ್ಲಿ ಹೆಚ್ಚಾಗಿ ವಾಸಿಸುವ ತೋಳ ಮತ್ತು ಕಪ್ಪು ಜಿಂಕೆ (ಕೃಷ್ಣಮೃಗ) ಮುಂತಾದ ಪ್ರಾಣಿಗಳನ್ನು ರಕ್ಷಿಸಲು ಇಲ್ಲಿ ಒಂದು ವನ್ಯಜೀವಿಧಾಮವನ್ನು 13-6-1974ರಂದು ಸ್ಥಾಪಿಸ ಲಾಯಿತು.

ಮೈಸೂರು : (ಮೈಸೂರು ಜಿ; ಉಪವಿಭಾಗ ಮತ್ತು ತಾ. ಕೇ; ಜನ: 4,39,185) ನಗರ ಕಾರ್ಪೊರೇಶನ್ ಹೊಂದಿ ರುವ ಮೈಸೂರು ನಗರವು, 37.30 ಚಕಿಮೀ ವಿಸ್ತೀರ್ಣವುಳ್ಳ ದ್ದಾಗಿದ್ದು ಬೆಂಗಳೂರು–ಉದಕಮಂಡಲ ಹೆದ್ದಾರಿಗೆ ನೈಋತ್ಯ ಡಲ್ಲಿ 139 ಕಿಮೀ ದೂರದಲ್ಲಿದೆ. ಇದು ರೆವಿನ್ಯೂ ಡಿವಿಷನ್ನಿನ ಕೇಂದ್ರವೂ ಆಗಿದೆ. ಮೈಸೂರು ನಗರವು ಭಾರತದ ಉದ್ಯಾನ ನಗರಗಳಲ್ಲೊಂದು ಎಂದು ಪರಿಗಣಿತವಾಗಿದೆ. ಮೈಸೂರು ಪುರಸಭೆಯು 1862ರಲ್ಲಿ ರಚಿತವಾಗಿತ್ತು. ಅದು 10-6-1977ರಲ್ಲಿ ಕಾರ್ಪೊರೇಶನ್ ಆಯಿತು. ಮೈಸೂರು ಪ್ರಾಚೀನ ಐತಿಹಾಸಿಕ ನಗರವಾಗಿದ್ದು, ಇದರ ಸುತ್ತಮುತ್ತ ಬಹು ಸಂಖ್ಯೆಯಲ್ಲಿ ಪ್ರಾಚೀನ ಅವಶೇಷಗಳು ದೊರೆತಿವೆ. ಸಾಂಪ್ರದಾಯಿಕ ಕಥೆಗಳ ಪ್ರಕಾರ ಈ ನಗರವು ಚಾಮುಂಡೇಶ್ವರಿಯಿಂದ ಹತನಾದ ಮಹಿಷಾಸುರನ ನಿವಾಸಸ್ಥಾನವಾಗಿತ್ತು. ಆದುದರಿಂದಲೇ ಮೈಸೂರು ಎಂಬ ಹೆಸರಿಗೆ ಅವನೇ ಕಾರಣ. ಮಹಿಸೂರಿನ ಉಲ್ಲೇಖವು ಕ್ರಿ.ಪೂ. ಮೂರನೇಯ ಶತಮಾನದಲ್ಲೇ ಪ್ರಸ್ತಾಪ ವಾಗಿದೆಯೆಂದೂ ರಾಜ ಅಶೋಕನು ಬೌದ್ಧ ಪ್ರಚಾರಕರನ್ನು ಮಹಿಷಮಂಡಲಕ್ಕೆ ಕಳುಹಿಸಿದ್ದು ಇಲ್ಲಿಗೇ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಶಾಸನಗಳು ಮಹಿಷಪುರ, ಮಹಿಸೂರು ಪುರ ಮತ್ತು ಮಹಿಷಾಸುರ ಪುರಗಳನ್ನು ಉಲ್ಲೇಖಿಸುತ್ತವೆ. ಪ್ರಾಚೀನ ತಮಿಳು ಗ್ರಂಥಗಳಲ್ಲಿ ಉಲ್ಲೇಖಿತವಾಗಿರುವ ಎರುಮೈ

ನಾಡನ್ನು ಮೈಸೂರೆಂದು ಗುರುತಿಸಲಾಗಿದೆ. 1499ರ ನಂತರ ಈ ಪಟ್ಟಣವನ್ನು ಸ್ಪಷ್ಟವಾಗಿ ಮೈಸೂರು ಎಂದು ಕರೆಯಲಾಗಿದೆ. ಈ ಪ್ರದೇಶವು ಹತ್ತನೇಯ ಶತಮಾನದವರೆಗೆ ಗಂಗರಾಜರ ಆಳ್ವಿಕೆಗೆ ಸೇರಿತ್ತು. ನಂತರ ಚೋಳರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಈ ಪ್ರದೇಶವನ್ನು ಆಳಿದರು. ಸುಮಾರು 1399 ರಿಂದ ರಾಜ ಒಡೆಯರು (1578-1618) ಶ್ರೀರಂಗಪಟ್ಟಣವನ್ನು ಗೆಲ್ಲುವವರೆಗೆ ಮೈಸೂರು ಒಡೆಯರ್ ವಂಶದ ಅರಸರ ರಾಜಧಾನಿಯಾಗಿತ್ತು. 1799 ರಿಂದ 1831 ರವರೆಗೆ ಮತ್ತೆ ಮೈಸೂರು ರಾಜಧಾನಿಯಾಯಿತು. ಅನಂತರ ಬೆಂಗಳೂರು ಆಡಳಿತ ಕೇಂದ್ರವಾದ ಮೇಲೂ ಮೈಸೂರಿನ ಮಹಾರಾಜರು ಮೈಸೂರು ನಗರದಲ್ಲಿಯೇ ವಾಸಿಸುತ್ತಿದ್ದರು. ಮೈಸೂರು ಒಡೆಯರ ರಾಜವಂಶಕ್ಕೆ ಸೇರಿದ ನೂರಾರು ಶಿಲಾ ಮತ್ತು ತಾಮ್ರ ಶಾಸನಗಳು ಮೈಸೂರಿನಲ್ಲಿವೆ. ಈ ಸುಂದರ ನಗರವು ಇತಿಹಾಸ, ಧರ್ಮ, ವಿದ್ಯಾಭ್ಯಾಸ, ಸಂಸ್ಕೃತಿ ಮತ್ತು ಆರ್ಥಿಕಾಭಿವೃದ್ಧಿಯ ದೃಷ್ಟಿಗಳಿಂದ ಪ್ರಮುಖವೆನಿಸಿದೆ. ಮೈಸೂರು ದೊರೆಗಳ ಆಸ್ಥಾನವು ಅನೇಕ ವಿದ್ವಾಂಸರಿಗೆ, ಸಾಹಿತಿಗಳಿಗೆ, ಸಂಗೀತಗಾರರಿಗೆ, ಕಲಾಕಾರರಿಗೆ, ಚಿತ್ರಕಾರರಿಗೆ ಪ್ರೋತ್ಸಾಹ ಕೊಟ್ಟಿದೆ. ಇದರಿಂದಾಗಿ ಮೈಸೂರು ನಗರವು ವಿಶೇಷವಾಗಿ 19 ಮತ್ತು 20ನೇಯ ಶತಮಾನಗಳಲ್ಲಿ ಪ್ರಖ್ಯಾತವಾದ ಸಾಂಸ್ಕೃತಿಕ ಕೇಂದ್ರವಾಯಿತು. ಮೂರು ಸುಂದರ ಅರಮನೆಗಳು, ಚಾಮುಂಡಿ ಬೆಟ್ಟ, ಮೃಗಾಲಯ, ಜಗನ್ಮೋಹನ ಕಲಾಶಾಲೆ, ಶ್ರೀ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆ, ಪ್ರಿಮಿಯರ್ ಚಲನಚಿತ್ರ ಸ್ಟುಡಿಯೊ, ರೈಲು ಮ್ಯೂಸಿಯಂ, ರಾಮಕೃಷ್ಣ ಆಶ್ರಮ, ಪರಕಾಲ ಮಠ, ಸುತ್ತೂರು ಮಠ ಮತ್ತು ಇತರ ಧಾರ್ಮಿಕ ಸಂಸ್ಥೆಗಳು, ಚರ್ಚುಗಳು, ಮಸೀದಿಗಳು, ಬಸದಿಗಳು ಮತ್ತು ಅನೇಕ ದೇವಾಲಯಗಳು, ಐಡಿಯಲ್ ಜಾವಾ ಕಾರ್ಖಾನೆ, ವಿಕ್ರಾಂತ್ ಟೈರ್ ಕಾರ್ಖಾನೆ, ಕೇಂದ್ರ ರೇಷ್ಮೆ ನೂಲುವ ಕೇಂದ್ರ ಮತ್ತು ತೋಟ, ಕೃಷ್ಣರಾಜೇಂದ್ರ ಬಟ್ಟೆ ಗಿರಣಿ, ಮತ್ತು ಅನೇಕ ಭಾರಿ ಮತ್ತು ಮಧ್ಯಮ ಉದ್ಯಮಗಳು ಮತ್ತು ಗೃಹ ಕೈಗಾರಿಕೆಗಳು, ಹಾಗೂ ವಿದ್ಯಾಸಂಸ್ಥೆಗಳ ಕಟ್ಟಡಗಳು, ಸುಂದರವಾದ ಉದ್ಯಾನವನಗಳು ಮುಂತಾದವು ಈ ನಗರದ ಪ್ರಾಮುಖ್ಯತೆಯನ್ನು ಹೆಚ್ಚಿಸಿವೆ. ಇಲ್ಲಿ ಕೇಂದ್ರೀಯ ಆಹಾರ ವಿಜ್ಞಾನ ಸಂಶೋಧನಾಲಯ ಮತ್ತು ಮೈಸೂರು ವಿಶ್ವವಿದ್ಯಾಲಯಗಳು ಗಮನಾರ್ಹವಾದ ವಿದ್ಯಾ ಸಂಸ್ಥೆಗಳು. ನಗರದ ಮಧ್ಯದಲ್ಲಿರುವ ಅರಮನೆಯು ಅಸಾಧಾರಣವಾದ ಎದ್ದು ಕಾಣುವ ಕಟ್ಟಡ. ಹಳೆಯ ಅರಮನೆಯು 1897ರಲ್ಲಿ ಬೆಂಕಿಯಿಂದ ಹಾಳಾಯಿತು. ಈಗಿರುವ ಅರಮನೆಯು ಪ್ರಪಂಚದ ಸುಂದರವಾದ ಅರಮನೆಗಳಲ್ಲಿ ಒಂದೆಂದು ಭಾವಿಸಲಾಗಿದ್ದು, ಅದೇ ಜಾಗದಲ್ಲಿ ಇದನ್ನು ನಿರ್ಮಿಸಲಾಯಿತು. ಈ ಅರಮನೆಯ ನಿರ್ಮಾಣ ಕಾರ್ಯ 1897ರಲ್ಲಿ ಪ್ರಾರಂಭಿಸಿ 1907ರಲ್ಲಿ ಪೂರ್ಣಗೊಂಡಿತು. ಸಾಮಾನ್ಯವಾದ ನೋಟಕ್ಕೆ ಈ ಅರಮನೆಯು ಮುಘಲ್ ಶೈಲಿಯಲ್ಲಿರುವುದಾಗಿ ಕಂಡರೂ, ಶಿಲ್ಪ ಫಲಕಗಳ, ಸ್ತಂಭಗಳ ಮತ್ತು ಗೂಡುಗಳ ಅಲಂಕಾರದಿಂದ ಹೊಯ್ಸಳ ಶೈಲಿಯನ್ನು ತೋರ್ಪಡಿಸುತ್ತದೆ. ಅರಮನೆಯ ಒಳಗೆ ಅಂಬಾ ವಿಲಾಸವಿದೆ. ಇದನ್ನು ರಾಜವಂಶದವರ ಖಾಸಗಿ ಸಮಾರಂಭಗಳಿಗೂ ಮತ್ತು ದರ್ಬಾರಿಗೂ ಉಪಯೋಗಿಸಲಾಗುತ್ತಿದ್ದಿತು. ಕಲ್ಯಾಣ ಮಂಟಪದಲ್ಲಿ ಮನುಷ್ಯ ಪ್ರಮಾಣದ ವರ್ಣಚಿತ್ರಗಳಿವೆ. ಅಮೂಲ್ಯವಾದ ಆಯುಧಗಳು ಅರಮನೆಯ ಒಂದು ಭಾಗದಲ್ಲಿ ಪ್ರದರ್ಶಿತವಾಗಿವೆ. ಮಹಾರಾಜರ ಆಸನವಾದ ಸ್ವರ್ಣ ಸಿಂಹಾಸನವು ಭದ್ರ ಕೋಟಿಯಲ್ಲಿದ್ದು ಹಬ್ಬದ ದಿನಗಳಲ್ಲಿ ಜನಗಳು ನೋಡಲು ಅನುಕೂಲವಾಗುವಂತೆ ಪ್ರದರ್ಶಿತವಾಗುತ್ತದೆ. ಇದು ಅತ್ತಿಯ ಮರದಿಂದ ಮಾಡಲ್ಪಟ್ಟು, ದಂತದ ಫಲಕಗಳಿಂದ, ಚಿನ್ನ ಮತ್ತು ಆಭರಣಗಳಿಂದ ಅಲಂಕರಿಸಲ್ಪಟ್ಟು ಚಿನ್ನದ ಕಂಬಗಳು ಮತ್ತು ಚಿನ್ನದ ಛತ್ರಿಯನ್ನು ಹೊಂದಿದೆ. ಇದರಲ್ಲಿ ಕುಳಿತುಕೊಳ್ಳುವ ಭಾಗವು ಕೂರ್ಮಾಸನದಂತಿದ್ದು ಸಿಂಹಾಸನ ನಾಲ್ಕೂ ಭಾಗಗಳೂ ಆನೆಗಳು, ಕುದುರೆಗಳು, ಯೋಧರು ಮತ್ತು ರಥಗಳಿಂದ ಅಲಂಕೃತವಾಗಿವೆ. ಅರಮನೆಯ ಆವರಣದಲ್ಲಿ ಅನೇಕ ದೇವಾಲಯಗಳಿವೆ. ಮೈಸೂರಿನ ದಸರಾ ಮೆರವಣಿಗೆಯು ಅರಸರ ವೈಭವಯುತ ಉತ್ಸವವಾಗಿದ್ದಿತು. ಇಂದಿಗೂ ದಸರಾ ಸಮಯದಲ್ಲಿ ವರ್ಣರಂಜಿತ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ. ಅರಮನೆ ಮತ್ತು ಇತರ ಕಟ್ಟಡಗಳನ್ನು ವಿದ್ಯುದ್ದೀಪಗಳಿಂದ ಅಲಂಕರಿಸುವುದು ಮರೆಯಲಾಗದ ದೃಶ್ಯ. ಅರಮನೆಯಿಂದ ಹೊರಟು ಬನ್ನೀಮಂಟಪವನ್ನು ಸೇರುವ ದಸರಾ ಮೆರವಣಿಗೆಯು ಪ್ರಪಂಚದ ಎಲ್ಲ ಕಡೆಗಳಿಂದಲೂ ಲಕ್ಷಾಂತರ ಜನಗಳನ್ನು ಆಕರ್ಷಿಸುತ್ತದೆ. ಇದೊಂದು ಮರೆಯಲಾಗದ ವೈಭವಯುತ ಅನುಭವ. ಇದೇ ಸಮಯದಲ್ಲಿ ಎರಡು ತಿಂಗಳು ನಡೆಯುವ ಔದ್ಯೋಗಿಕ ಮತ್ತು ಸಾಂಸ್ಕೃತಿಕ ವಸ್ತುಪ್ರದರ್ಶನವನ್ನು ಸುಂದರವಾಗಿ ಅಲಂಕಾರ ಮಾಡಿದ ಸ್ಥಳದಲ್ಲಿ ಏರ್ಪಡಿಸಲಾಗುತ್ತದೆ. ಚಾಮುಂಡಿ ಬೆಟ್ಟದ ಬುಡದಲ್ಲಿರುವ ಲಲಿತಮಹಲ್ ಅರಮನೆಯು ಅರಸರ ಅತಿಥಿಗಳಿಗಾಗಿ ಕಟ್ಟಲಾಯಿತು. ಇದರ ಗುಮ್ಮಟವು ಲಂಡನ್ನಿನ ಸೇಂಟ್ ಪಾಲ್ ಕಥೀಡ್ರಲ್‌ನ ಮಾದರಿಯ ಮೇಲೆ ನಿರ್ಮಾಣವಾಗಿದ್ದು ಬ್ರಿಟಿಷ್ ಅರಮನೆಯಲ್ಲಿ ಕಾಣಬರುವ ಸಣ್ಣಪುಟ್ಟ ಅಲಂಕಾರಗಳು ಇಲ್ಲಿವೆ. ಇಲ್ಲಿನ ಭೋಜನ (ಬಾಂಕ್ವೆಟ್) ಭವನ ಮತ್ತು ನಾಟ್ಯ (ಬ್ಯಾಲೆ) ಭವನಗಳು ಮುಖ್ಯ ಆಕರ್ಷಣೆಗಳು. ಇದು ಈಗ ಪ್ರವಾಸೋದ್ಯಮ ಸಂಸ್ಥೆಯ ಹೋಟೆಲಾಗಿದೆ (ವಸತಿಗೃಹ). ಜಗನ್ಮೋಹನ ಅರಮನೆ ಅಥವಾ ಜಯಚಾಮರಾಜೇಂದ್ರ ಕಲಾ ಸಂಗ್ರಹ ಶಾಲೆಯು ಪರಕಾಲಮಠದ ಪಕ್ಕದಲ್ಲಿಯೇ ಇದೆ. ಇದು 1861ರಲ್ಲಿ ನಿರ್ಮಾಣವಾಯಿತು. ಇದರಲ್ಲಿ ಮೂರು ಅಂತಸ್ತುಗಳಿವೆ. ಇಲ್ಲಿ ಅನೇಕ ಕಲಾತ್ಮಕ ವಸ್ತುಗಳ ಚಿತ್ರಗಳೂ, ಅಲಂಕರಿಸಲ್ಪಟ್ಟ ವರ್ಣಚಿತ್ರಗಳೂ ಇವೆ. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ಇದನ್ನು

ಕಲಾಸಂಗ್ರಹ ಶಾಲೆಯನ್ನಾಗಿ ಪರಿವರ್ತಿಸಲಾಯಿತು. ಇದರ ಅಮೂಲ್ಯವಾದ ಸಂಗ್ರಹದಲ್ಲಿ ರವಿವರ್ಮನ ಮತ್ತು ಇತರ ಕಲಾಕಾರರ ಮೂಲ ವರ್ಣಚಿತ್ರಗಳು, ಸಂಗೀತವಾದನಗಳು ಮತ್ತು ಅನೇಕ ಅಪರೂಪದ ವಸ್ತುಗಳೂ ಸೇರಿವೆ. ಚಾಮರಾಜೇಂದ್ರ ಪ್ರಾಣಿ ಸಂಗ್ರಹಾಲಯ ವನ ಎಂದು ಹೆಸರಾಗಿರುವ ಮೈಸೂರಿನ ಪ್ರಾಣಿ ಸಂಗ್ರಹಾಲಯವು 1892ರಲ್ಲಿ ಪ್ರಾರಂಭವಾಯಿತು. ಇದರಲ್ಲಿ 37.25 ಹೆ. ಸ್ಥಳಾವಕಾಶವಿದ್ದು, ಇದರಲ್ಲಿ ಅನೇಕ ಅಪರೂಪವಾದ, ದೂರ ದೇಶಗಳಿಗೂ ಸೇರಿದ ಕಾಡು ಮೃಗಗಳು ಮತ್ತು ಪಕ್ಷಿಗಳೂ ಇವೆ. ಪ್ರಾಣಿ ಸಂಗ್ರಹಾಲಯಕ್ಕೆ ಸಮೀಪದಲ್ಲಿಯೇ ರೇಸ್ ಕೋರ್ಸ್ ಇದೆ. ಇಲ್ಲಿ ಆಯಾ ಕಾಲದಲ್ಲಿ ರೇಸುಗಳು ನಡೆಯುತ್ತವೆ(ನೋಡಿ ಭಾಗ ಒಂದು, ಪುಟ 420). ಪ್ರಖ್ಯಾತವಾದ ಚಾಮುಂಡಿ ಬೆಟ್ಟವು ಮೈಸೂರು ನಗರಕ್ಕೆ ಪೂರ್ವದಲ್ಲಿ ಮೂರು ಕಿಮೀ ದೂರದಲ್ಲಿದೆ. ಬೆಟ್ಟದ ಮೇಲೆ ಹೋಗಲು 12 ಕಿಮೀ ದೂರದ ರಸ್ತೆಯಿದೆ. ಈ ಬೆಟ್ಟದ ಎತ್ತರ ಸಮುದ್ರ ಮಟ್ಟಕ್ಕಿಂತ 3,489 ಅಡಿಗಳು. ಮಹಾಬಲೇಶ್ವರ ಮತ್ತು ಚಾಮುಂಡೇಶ್ವರಿ ಎಂಬ ಎರಡು ಪ್ರಾಚೀನ ದೇವಾಲಯಗಳು ಬೆಟ್ಟದ ಮೇಲೆ ಇವೆ. ಇದೊಂದು ಯಾತ್ರಾ ಸ್ಥಳ. ಪುರಾಣಗಳ ಪ್ರಕಾರ ಈ ಕಲ್ಲಿನ ಬೆಟ್ಟವು ಮಹಾಬಲಾಚಲ ಎಂದು ಖ್ಯಾತವಾಗಿತ್ತು. ಇಲ್ಲಿರುವ ಮಹಾಬಲೇಶ್ವರ ದೇವಾಲಯವು ಇತರ ದೇವಾಲಯಗಳಿಗಿಂತ ಪ್ರಾಚೀನವಾದುದು. 950 ಮತ್ತು 1128ನೇಯ ವರ್ಷಗಳಿಗೆ ಸೇರುವ ಎರಡು ಶಾಸನಗಳು ಇಲ್ಲಿದ್ದು, ಎರಡನೇಯದು ಹೊಯ್ಸಳ ಕಾಲಕ್ಕೆ ಸೇರಿದ್ದಾಗಿದೆ. ದೇವತೆಯಾದ ಚಾಮುಂಡೇಶ್ವರಿಯಿಂದ ಈ ಬೆಟ್ಟಕ್ಕೆ ಈ ಹೆಸರು ಬಂದಿದೆ. ಆಕೆಯು ಅರಸರ ಮನೆತನದ ದೇವತೆ. ಈ ದೇವಾಲಯವು 1827ರಲ್ಲಿ ಮುಮ್ಮಡಿ ಕೃಷ್ಣರಾಜಒಡೆಯರ ಕಾಲದಲ್ಲಿ ಜೀರ್ಣೋದ್ಧಾರಗೊಂಡು ಇದಕ್ಕೆ ಸುಂದರವಾದ ಎತ್ತರವಾದ ಗೋಪುರವನ್ನು ನಿರ್ಮಿಸಲಾಯಿತು. ಈ ದೇವಾಲಯವು ಸುಂದರವಾದ ಪ್ರಾಂಗಣದ ಕಟ್ಟಡ. ಈ ದೇವತೆಯನ್ನು ಮಹಿಷಾಸುರಮರ್ದಿನಿ ಎಂದೂ ಕರೆಯಲಾಗುತ್ತದೆ. ಈ ದೇವತೆಗೂ ನಂಜನಗೂಡಿನ ನಂಜುಂಡನಿಗೂ ಸಂಬಂಧ ಕಲ್ಪಿಸಿ ಜಾನಪದ ಗಾಯಕರು ಹಾಡುಗಳನ್ನು ಹಾಡುತ್ತಾರೆ. ಬೆಟ್ಟದ ಮೇಲೆ ನಡೆಯುವ ರಥೋತ್ಸವ ಮತ್ತು ತೆಪ್ಪೋತ್ಸವಗಳು ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸುತ್ತದೆ. ಬಲಗೈಯಲ್ಲಿ ಕತ್ತಿಯನ್ನೂ, ಎಡಗೈಯಲ್ಲಿ ಹಾವನ್ನೂ ಹಿಡಿದಿರುವ ಮಹಿಷಾಸುರನ ವಿಗ್ರಹವು ನೋಡಲು ಯೋಗ್ಯವಾದ ಮುಖ್ಯ ಆಕರ್ಷಣೆ. ಇದರ ಸಮೀಪದಲ್ಲಿಯೇ ಇರುವ, ಈಗ ಊಟ-ವಸತಿ ಗೃಹವಾಗಿರುವ ಹೋಟೆಲ್ ರಾಜೇಂದ್ರ ವಿಲಾಸ ಅರಸುಮನೆತನದವರ ಬೇಸಿಗೆ ಅರಮನೆಯಾಗಿತ್ತು. ಬೆಟ್ಟದ ಬುಡದಿಂದ ತುದಿಯವರೆಗೆ ಸುಮಾರು ಒಂದು ಸಾವಿರ ಮೆಟ್ಟಿಲುಗಳಿದ್ದು ಈ ಮೆಟ್ಟಿಲುಗಳನ್ನು ದೊಡ್ಡ ದೇವರಾಜ ಒಡೆಯರು ನಿರ್ಮಿಸಿದರು. ಮೆಟ್ಟಿಲುಗಳು ಮಾರ್ಗಮಧ್ಯದಲ್ಲಿ, ಇದೇ ಒಡೆಯರು ಅದ್ಭುತ ಗಾತ್ರದ ಒಂದೇ ಕಲ್ಲಿನಲ್ಲಿ ಕಡೆದ ನಂದಿಯ ಶಿಲ್ಪವನ್ನೂ ಸ್ಥಾಪಿಸಿದರು. ಇದು ಸುಮಾರು 16 ಅಡಿ ಎತ್ತರ ಮತ್ತು 25 ಅಡಿ ಉದ್ದವಾಗಿದೆ. ಮೈಸೂರು ನಗರದಲ್ಲಿ ಯೂರೋಪಿಯನ್ ಶೈಲಿಗೆ ಸೇರಿದ ಕೆಲವು ಪ್ರಾಚೀನ ಕಟ್ಟಡಗಳಿವೆ. ಲ್ಯಾನ್ಸ್‌ಡೌನ್ ಕಟ್ಟಡ (ಭಾರತದ ವೈಸ್‌ರಾಯ್ ಆಗಿದ್ದ ಲ್ಯಾನ್ಸ್‌ಡೌನನ ಸ್ಮರಣೆಗಾಗಿ 1892ರಲ್ಲಿ ಕಟ್ಟಲಾದದ್ದು), ಪುರಸಭಾ ಭವನ (ದಿವಾನ್ ರಂಗಾಚಾರ್ಲು ಅವರ ಜ್ಞಾಪಕಾರ್ಥವಾಗಿ 1884ರಲ್ಲಿ ಕಟ್ಟಲಾದದ್ದು), ಜಿಲ್ಲಾ ನ್ಯಾಯಾಲಯಗಳ ಕಟ್ಟಡ (ಚಿಕಾಗೊ ವಸ್ತುಪ್ರದರ್ಶನದ ಮಾದರಿಯಲ್ಲಿ 1895ರಲ್ಲಿ ನಿರ್ಮಾಣವಾದದ್ದು), ಸಾರ್ವಜನಿಕ ಕಚೇರಿಗಳ ಕಟ್ಟಡ (1895ರಲ್ಲಿ ಕಟ್ಟಲಾಗಿದ್ದು, 1923ರ ವರೆಗೆ ಪ್ರಜಾಪ್ರತಿನಿಧಿ ಸಭೆಯ ಭವನವಾಗಿದ್ದು ಈಗ ಜಿಲ್ಲಾಧಿಕಾರಿಗಳ ಕಚೇರಿಯಾಗಿದೆ), ಮುಂತಾದವು ಗಮನಾರ್ಹ ಕಟ್ಟಡಗಳಲ್ಲಿ ಮುಖ್ಯವಾದವು. ಮೈಸೂರು ಜಿಲ್ಲಾ ಕಚೇರಿಯ ಮುಂಭಾಗದಲ್ಲಿ, ಮೈಸೂರಿನ ರೆಸಿಡೆಂಟನಾಗಿದ್ದ ಸರ್ ಜೇಮ್ಸ್ ಗಾರ್ಡನನ ಪ್ರತಿಮೆಯಿದೆ. ವಿಕ್ಟೋರಿಯಾ ಜ್ಯೂಬಿಲಿ ಇನ್ಸ್‌ಟಿಟ್ಯೂಟ್, ಈಗ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿಯ ಕಟ್ಟಡವಾಗಿದ್ದು, ಅದರಲ್ಲಿ 60 ಸಾವಿರಕ್ಕೂ ಹೆಚ್ಚು ಕನ್ನಡ ಮತ್ತು ಸಂಸ್ಕೃತ ಭಾಷೆಯ ಅಮೂಲ್ಯವಾದ ತಾಳೆಗರಿಯ ಹಸ್ತಪ್ರತಿಗಳು ರಕ್ಷಿಸಲ್ಪಟ್ಟಿವೆ. 1913ರಲ್ಲಿ ನಿರ್ಮಾಣಗೊಂಡ ಶ್ರೀ ಚಾಮರಾಜೇಂದ್ರ ತಾಂತ್ರಿಕ ಶಾಲೆ ಇನ್ನೊಂದು ಸುಂದರ ಕಟ್ಟಡವಾಗಿದೆ. ಕಾರಂಜಿಕೆರೆಯ ಸಮೀಪದಲ್ಲಿರುವ ಗಡಿಯಾರ ಗೋಪುರವು 1886ರಲ್ಲಿ ವೈಸ್‌ರಾಯಿಯಾಗಿದ್ದ ಲಾರ್ಡ್ ಡಫರಿನ್ನನ ಸ್ಮರಣಾರ್ಥ ಕಟ್ಟಲಾಯಿತು. ಸಾರ್ವಜನಿಕ ಚೌಕಗಳಲ್ಲಿ ಸ್ಥಾಪಿಸಲಾದ ಚಾಮರಾಜ ಒಡೆಯರ್ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಅಮೃತಶಿಲಾ ಪ್ರತಿಮೆಗಳು ಗಮನಾರ್ಹವಾದ ಆಕರ್ಷಣೆಗಳು. ಮಾನಸಗಂಗೋತ್ರಿಯಲ್ಲಿರುವ ಮೈಸೂರು ವಿಶ್ವವಿದ್ಯಾಲಯದ ಕಟ್ಟಡ ಸಮೂಹ, ಕ್ರಾಫರ್ಡ್ ಭವನ, ಸಿ.ಎಫ್.ಟಿ.ಆರ್.ಐ. ಕಟ್ಟಡ (ಬರೋಕ್ ಶೈಲಿಯ ಹಿಂದಿನ ಅರಮನೆ) ಗಳು ಸಂದರ್ಶನಯೋಗ್ಯವಾದ ಇತರ ಕಟ್ಟಡಗಳು. ಸುಮಾರು ಒಂದು ಡಜನ್ ಮಸೀದಿಗಳು ಈ ನಗರದಲ್ಲಿವೆ. ಇವುಗಳಲ್ಲಿ ಕೆಲವು 19ನೇಯ ಶತಮಾನದಲ್ಲಿ ನಿರ್ಮಾಣಗೊಂಡವು. 1834ರಲ್ಲಿ ನಿರ್ಮಾಣವಾದ ಸಂತ ಬಾರ್ತಲೋಮಿಯೊ ಚರ್ಚು, ನಜರಾಬಾದಿನ 1870ರ ವೆಸ್ಲಿಯನ್ ಮಿಷನ್ ಚರ್ಚು, ಭವ್ಯವಾದ ಸಂತ ಫಿಲೋಮಿನ ಚರ್ಚು ಇವುಗಳು ಕ್ರೈಸ್ತ ಧರ್ಮೀಯರ ಗಮನಾರ್ಹ ಕಟ್ಟಡಗಳು. ಈ ನಗರವು ಪ್ರಸಿದ್ಧ ವಿದ್ಯಾಕೇಂದ್ರವಾಗಿದೆ. ಮೈಸೂರು ವಿಶ್ವವಿದ್ಯಾಲಯ ಮತ್ತು ಇತರ ಶಾಲಾ ಕಾಲೇಜುಗಳ ಜೊತೆಗೆ ಇಲ್ಲಿ ವಾಕ್ ಮತ್ತು ಶ್ರವಣ ಸಂಸ್ಥೆ ಮತ್ತು ಭಾರತೀಯ ಭಾಷಾ ಸಂಸ್ಥಾನಗಳಿವೆ. ಇಲ್ಲಿ ಒಂದು ದೊಡ್ಡ ರೈಲ್ವೆ ವರ್ಕ್‌ಷಾಪ್ ಇದೆ. ಇದರಲ್ಲಿ ರೈಲ್ವೆ ಬಂಡಿಗಳ ತಯಾರಿಕೆ ಮತ್ತು ರಿಪೇರಿ ಕೆಲಸವನ್ನು ಮಾಡಲಾಗುವುದು.

ಡಿವಿಷನಲ್ ರೈಲ್ವೆ ಆಫೀಸಿನ ಪಕ್ಕದಲ್ಲಿರುವ ರೈಲು ಮ್ಯೂಸಿಯಂ, ಮೊದಲನೇಯ ಪ್ರಾದೇಶಿಕ ಮ್ಯೂಸಿಯಂ ಆಗಿದ್ದು, 1979ರಲ್ಲಿ ಅದನ್ನು ಸ್ಥಾಪಿಸಲಾಯಿತು. ಇದರಲ್ಲಿ ಹಳೆಯ ರೈಲು ಎಂಜಿನ್ನುಗಳು, ಕೋಚುಗಳು, ಸಿಗ್ನಲ್ ಸಲಕರಣೆಗಳು, ಮೈಸೂರು ಮಹಾರಾಜರು ಉಪಯೋಗಿಸುತ್ತಿದ್ದ ಕೋಚುಗಳು ಮುಂತಾದವು ಪ್ರದರ್ಶಿತವಾಗಿವೆ. ಮೈಸೂರು ನಗರ ಮತ್ತು ಸುತ್ತಮುತ್ತಲಲ್ಲಿ ಅನೇಕ ಕೈಗಾರಿಕಾ ಘಟಕಗಳಿವೆ. ನಗರದಲ್ಲಿ 36 ದೊಡ್ಡ ಉದ್ಯಾನಗಳಿವೆ. ಮೈಸೂರಿಗೆ ಎಂಟು ಕಿಮೀ ದೂರದಲ್ಲಿರುವ ಮಂಡಕಳ್ಳಿ ಗ್ರಾಮದ ಬಳಿ ವಿಮಾನ ನಿಲ್ದಾಣವಿದೆ. ಮೈಸೂರಿನ ಪಕ್ಕದಲ್ಲಿರುವ ಸಿದ್ದಲಿಂಗಪುರದಲ್ಲಿ ಪ್ರಖ್ಯಾತವಾದ ಸುಬ್ರಹ್ಮಣ್ಯೇಶ್ವರ ದೇವಾಲಯವಿದೆ. ಮೈಸೂರಿಗೆ ಸುಮಾರು 10 ಕಿಮೀ ದೂರದಲ್ಲಿರುವ ನಾಗನಹಳ್ಳಿಯಲ್ಲಿ ವ್ಯವಸಾಯ ಸಂಶೋಧನಾ ಕೇಂದ್ರವಿದೆ. ಮೈಸೂರಿಗೆ ಸಮೀಪದಲ್ಲಿರುವ ವರುಣ ಎಂಬ ಗ್ರಾಮದಲ್ಲಿ ಗಂಗರ ಕಾಲದ ಮತ್ತು ಅನಂತರದ ಅನೇಕ ಚಾರಿತ್ರಿಕ ಅವಶೇಷಗಳಿವೆ. ಇಲ್ಲಿ ಅನೇಕ ಶಾಸನಗಳು ಮತ್ತು ವೀರಗಲ್ಲುಗಳೂ ದೊರಕಿವೆ. ಗಮನಾರ್ಹವಾದ ದೇವಾಲಯಗಳೆಂದರೆ ಮಹಾಲಿಂಗೇಶ್ವರ ಮತ್ತು ಮಹದೇಶ್ವರ ದೇವಾಲಯಗಳು. ಇಲ್ಲಿ ಬಸದಿಯ ಅವಶೇಷಗಳೂ ಇವೆ. ಮೈಸೂರು-ಕೃಷ್ಣರಾಜಸಾಗರ ರಸ್ತೆ ಮತ್ತು ಮೈಸೂರು-ಇಲವಾಲ ರಸ್ತೆಗಳಲ್ಲಿ ಅನೇಕ ಕೈಗಾರಿಕಾ ಘಟಕಗಳ ಸ್ಥಾಪನೆಯಾಗಿವೆ. ಕೃಷ್ಣರಾಜಸಾಗರ, ಬೆಳಗೊಳ, ನಂಜನಗೂಡು ಮತ್ತು ಶ್ರೀರಂಗಪಟ್ಟಣಗಳು ಪ್ರೇಕ್ಷಣೀಯ ಸ್ಥಳಗಳಾಗಿದ್ದು, ಅವುಗಳನ್ನು ಮೈಸೂರಿನಿಂದ ಸುಲಭವಾಗಿ ಸಂದರ್ಶಿಸಬಹುದು.

**ಮೊಳಕಾಲ್ಮುರು :** (ಚಿತ್ರದುರ್ಗ ಜಿ; ತಾ. ಕೇ; ಜನ: 7,441) ಮೊಳಕಾಲ್ಮುರು ಒಂದು ಪಟ್ಟಣ. ಇದು ಚಿತ್ರದುರ್ಗದಿಂದ 81 ಕಿಮೀ ಮತ್ತು ಬೆಂಗಳೂರಿನಿಂದ 259 ಕಿಮೀ ದೂರದಲ್ಲಿಯೂ ಇದೆ. ಇಲ್ಲಿ ಒಂದು ಪುರಸಭೆಯಿದೆ. ಮೊಳಕಾಲ್ಮುರುಕ ಎಂಬ ಜಲಸಸ್ಯದಿಂದ ಈ ಊರ ಹೆಸರು ಬಂದಿರಬಹುದು. ಈ ಊರು ಕಲ್ಲುಗುಡ್ಡಗಳಿಂದ ಸುತ್ತುವರೆದಿದೆ. ಇಲ್ಲಿ ಒಬ್ಬ ಹಟ್ಟಿ ನಾಯಕನಿಂದ, ತನ್ನ ತಾಯಿಯ ಹೆಸರಿನಲ್ಲಿ ನಿರ್ಮಿಸಲಾದ ದೊಡ್ಡ ಜಲಾಶಯವಿದೆ. ಸಮೀಪದಲ್ಲೇ ಶಬ್ದವನ್ನು ಪ್ರತಿಧ್ವನಿಸುವ 'ಕೂಗುವ ಬಂಡೆ' ಎಂದು ಕರೆಯಲಾಗುವ ಬಂಡೆಯಿದೆ. ಇದಕ್ಕೆ ಪೂರ್ವದಲ್ಲಿರುವ ಒಂದು ಬಂಡೆಯ ಮೇಲೆ ಕಾಳಿದಾಸನನ್ನು ಹೊಗಳುವ ಯಮಕ ಪದ್ಯವಿದೆ. ಈ ವಿಚಿತ್ರ ಪದ್ಯವನ್ನು ಆನೆಯ ಚಿತ್ರ ಬರೆದು ಅದರ ಕಾಲುಗಳ ಮಧ್ಯದಲ್ಲಿ ಕೆರೆಯ ಸಮೀಪದ ಈ ಗುಂಡಿನ ಮೇಲೆ ಕೆತ್ತಲಾಗಿದೆ. ಈ ಕಲ್ಲಿಗೆ ವಾಯುವ್ಯದಲ್ಲಿ ನುಂಕೆಭೈರವಬೆಟ್ಟ ಅಥವಾ ನುಂಕಪ್ಪನ ಗುಡ್ಡವಿದೆ. ಇದು 3,022 ಅಡಿ ಎತ್ತರವಾಗಿದೆ. ಉತ್ತರ ಭಾರತದಿಂದ ಬಂದ ಗೋಸಾಯಿಗಳು ಪೂಜಿಸುವ ಲುಂಕೇಶ್ವರ ದೇವಾಲಯವೂ ಇಲ್ಲಿದೆ. ಈ ದೇವಾಲಯವನ್ನು 10ನೇಯ ಶತಮಾನದಲ್ಲಿ ಕದಂಬ ರಾಜಕುಮಾರನು ಸ್ಥಾಪಿಸಿದನು. ಲುಂಕೆಯ ಕೋಟೆ ಎಂಬ ಕೋಟೆಯನ್ನು ಕದಂಬರು ಇಲ್ಲಿ ಹೊಂದಿದ್ದರು. ಕದಂಬರ ದಾಖಲೆಗಳಲ್ಲಿ ಉಲ್ಲೇಖಿಸಲಾದ ಈ ಕೋಟೆಯು ಮೊಳಕಾಲ್ಮುರುವಿಗೆ ಉತ್ತರದಲ್ಲಿದೆ. ಇಲ್ಲಿನ ನೇಯ್ಗೆಯ ಕೈಗಾರಿಕೆಯು, ಅದರಲ್ಲಿಯೂ ಮುಖ್ಯವಾಗಿ ರೇಷ್ಮೆಯ ಕೈಗಾರಿಕೆಯು ವಿಶೇಷ ಖ್ಯಾತಿಯನ್ನು ಹೊಂದಿದೆ. ಮೊಳಕಾಲ್ಮುರು ಪ್ರವಾಸಿಗಳಿಗೂ ಆಕರ್ಷಕ ಸ್ಥಳ. ಇಲ್ಲಿ ನೋಡಲು ಯೋಗ್ಯವಾದ ಸ್ಥಳಗಳೆಂದರೆ ಅಶೋಕ ಸಿದ್ದಾಪುರ, ಬ್ರಹ್ಮಗಿರಿ, ಜಟಿಂಗ ರಾಮೇಶ್ವರ ಮತ್ತು ಇದೇ ತಾಲೂಕಿನ ಸಿರೆಕೊಳದಲ್ಲಿರುವ ರಾಘವೇಂದ್ರ ಮಠ.

**ಯಡೆಯೂರು :** (ತುಮಕೂರು ಜಿ; ಕುಣಿಗಲ್ ತಾ; ಜನ: 818) ಯಡೆಯೂರು ಅದೇ ಹೆಸರಿನ ಹೋಬಳಿಯ ಕೇಂದ್ರ ಮತ್ತು ಒಂದು ಪ್ರಸಿದ್ಧ ಯಾತ್ರಾಸ್ಥಳ. ಇದು ಕುಣಿಗಲ್‌ನಿಂದ ನೈಋತ್ಯಕ್ಕೆ ಸುಮಾರು 19 ಕಿಮೀ ದೂರದಲ್ಲಿದೆ. ಇಲ್ಲಿರುವ ದ್ರಾವಿಡ ಶೈಲಿಯ ಸಿದ್ಧಲಿಂಗೇಶ್ವರ ದೇವಾಲಯ ಉತ್ತರಾಭಿಮುಖವಾಗಿದೆ. ಇದರೊಳಗೆ ಕ್ರಿ.ಶ. 16ನೇಯ ಶತಮಾನದಲ್ಲಿ ಬದುಕಿದ್ದ ಪ್ರಖ್ಯಾತ ವೀರಶೈವ ಗುರು ಮತ್ತು ಅನೇಕ ಗ್ರಂಥಗಳ ಕರ್ತೃ, ತೋಂಟದ ಸಿದ್ಧಲಿಂಗ ಯತಿಯ ಗದ್ದುಗೆ ಇರುವುದು. ಈತ ವೀರಶೈವ ಮತ ಮತ್ತು ಪ್ರೇಮ, ದಯೆ, ಭ್ರಾತೃತ್ವ ಮುಂತಾದ ನೀತಿತತ್ವಗಳನ್ನು ಬೋಧಿಸುತ್ತಾ, ತನ್ನ ಅನುಯಾಯಿಗಳ ದೊಡ್ಡ ತಂಡದೊಡನೆ, ದೇಶಾದ್ಯಂತ ಸಂಚರಿಸಿದನೆಂದು ನಂಬಿಕೆಯಿದೆ. ಈ ದೇವಾಲಯದ ಮುಖಮಂಟಪ ಮತ್ತು ತುಸು ತಗ್ಗಿನಲ್ಲಿರುವ, ಹಜಾರದ ಒಳಮಾಳಿಗೆಯ ಮೇಲ್ಮೈ ಗುರುಸಿದ್ಧಲಿಂಗ ಯತಿಯ ಜೀವನ ಮತ್ತು ಶಿವಲೀಲೆಗಳಿಂದ ಆಯ್ದ ವರ್ಣಚಿತ್ರಗಳಿಂದ ಅಲಂಕೃತವಾಗಿದೆ. ಯಾತ್ರಾರ್ಥಿಗಳಿಗೆ ಇಲ್ಲಿ ಉಚಿತವಾಗಿ ಊಟ ನೀಡುವ ವ್ಯವಸ್ಥೆ ಇದೆ. ಪ್ರತೀವರ್ಷ ಮಾರ್ಚ್-ಏಪ್ರಿಲ್ ಮಾಹೆಯಲ್ಲಿ ಸಿದ್ಧಲಿಂಗೇಶ್ವರ ರಥೋತ್ಸವ ಜರುಗುವುದು. ಈ ದೇವಾಲಯದ ಆಡಳಿತ ಮಂಡಳಿ ರಾಜ್ಯ ಸರ್ಕಾರದಿಂದ ರಚಿತವಾದುದು. ಯಡೆಯೂರಿನಲ್ಲಿ ಮತ್ತೆರಡು ವೀರಶೈವ ಮಠಗಳು ಹಾಗೂ ಒಂದು ವರದರಾಜ ದೇವಾಲಯ ಇವೆ.

**ಯಲಬುರ್ಗ :** (ರಾಯಚೂರು ಜಿ; ತಾ. ಕೇ; ಜನ 7,551) ಯಲಬುರ್ಗ ಬೆಂಗಳೂರಿನಿಂದ 407 ಕಿಮೀ ದೂರದಲ್ಲಿದೆ. ಹಿಂದೆ ಇದನ್ನು ಯರಂಬರಗೆ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಇದೊಂದು ಚಾರಿತ್ರಿಕ ಸ್ಥಳ; ಮತ್ತು ಕಲ್ಯಾಣಿ ಚಾಳುಕ್ಯರ ಹಾಗೂ ದೇವಗಿರಿಯ ಸೇಉಣರ ನಿಷ್ಠಾವಂತ ಸಾಮಂತರಾಗಿದ್ದು ದಕ್ಷಿಣದ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ, ಸಿಂಧ ವಂಶದವರ ರಾಜಧಾನಿ. ಪಟ್ಟಣದ ಹೊರವಲಯದಲ್ಲಿ ಇರುವ ಒಂದು ಪ್ರಾಚೀನ ಕಲ್ಲಿನ ಮಂಟಪ

ವನ್ನು ಚಾಳುಕ್ಯರ ಕಾಲದ ದೇವಸ್ಥಾನವೆಂದು ವರ್ಣಿಸಲಾಗಿದೆ. ಇಟಗಿಯನ್ನು (ನೋಡಿ : ಇಟಗಿ) ಹೊರತುಪಡಿಸಿದರೆ, ಈ ತಾಲೂಕಿನ ಇತರ ಗಮನಾರ್ಹ ಸ್ಥಳಗಳು ಹೀಗಿವೆ: ಕುಕ್ಕನೂರು (ಜನ: 9,012) ಬನ್ನಿಕೊಪ್ಪ ನಿಲ್ದಾಣದಿಂದ ಸುಮಾರು 12 ಕಿಮೀ ದೂರದಲ್ಲಿರುವ ಒಂದು ಚಿಕ್ಕ ಪಟ್ಟಣ. ಸ್ಥಳಪುರಾಣ ಇದನ್ನು ಚಂದ್ರಹಾಸನಿಗೆ ಸಂಬಂಧಿಸಿದ ಕುಂತಳಪುರ ಎಂದು ವರ್ಣಿಸಿದೆ. ಪ್ರಾಚೀನ ಮತ್ತು ಮಧ್ಯ ಕಾಲದಲ್ಲಿ ಇದು ಸಹಸ್ರ ಮಹಾಜನರಿದ್ದ ಒಂದು ಅಗ್ರಹಾರವಾಗಿತ್ತು. ಇಲ್ಲಿರುವ ಅವಶೇಷಗಳು ಕ್ರಿ. ಶ. ಎಂಟನೇಯ ಶತಮಾನದಿಂದ 13ನೇಯ ಶತಮಾನದ ಅವಧಿಯಲ್ಲಿ ಕಟ್ಟಿದವಾಗಿದ್ದು, ಆ ಅವಧಿಯ ವಾಸ್ತುಶಿಲ್ಪ ಶೈಲಿಗಳನ್ನು ವಿಶದಪಡಿಸುತ್ತವೆಂದು ಹೇಳಲಾಗಿದೆ. ನವಲಿಂಗ ಸಮುದಾಯ ಎಂದು ಕರೆಯುವ ದೇವಾಲಯ ಸಮೂಹವು ಪ್ರಾಚೀನ ಚಲುಕ್ಯ ವಾಸ್ತುಶಿಲ್ಪ ಶೈಲಿಯನ್ನು ಪ್ರತಿನಿಧಿಸುತ್ತದೆ; ಕಲ್ಯಾಣಿ ಚಾಳುಕ್ಯರ ವಾಸ್ತುಶಿಲ್ಪ ಶೈಲಿಯಲ್ಲಿರುವ ಅನೇಕ ಕಟ್ಟಡಗಳೂ ಇಲ್ಲಿವೆ. ಕಲ್ಲೇಶ್ವರ ಮತ್ತು ಮಲ್ಲಿಕಾರ್ಜುನ ಈ ಪಟ್ಟಣದಲ್ಲಿರುವ ಎರಡು ಹೆಸರಾಂತ ದೇವಸ್ಥಾನಗಳು. ಚಾಳುಕ್ಯ ಶೈಲಿಯ ಒಂದು ಉತ್ತಮ ಉದಾಹರಣೆ ಎನ್ನಬಹುದಾದ ಕಲ್ಲೇಶ್ವರ ದೇವಸ್ಥಾನ ಈಗಲೂ ಸುಸ್ಥಿತಿಯಲ್ಲಿದೆ; ಆದರೆ, ಮಲ್ಲಿಕಾರ್ಜುನ ದೇವಸ್ಥಾನದ ಮೂಲ ಸ್ವರೂಪವನ್ನು ಸ್ಪಷ್ಟವಾಗಿ ಅರಿಯಲು ಸಾಧ್ಯವಾಗಿಲ್ಲ. ಈ ದೇವಸ್ಥಾನ ಮತ್ತು ಇಲ್ಲಿರುವ ಮಂಟಪ ಇತ್ತೀಚಿನ ವರ್ಷಗಳಲ್ಲಿ ಮಾರ್ಪಾಟಾಗಿರುವುದೇ ಇದಕ್ಕೆ ಕಾರಣ. ನವಲಿಂಗ ದೇವಾಲಯದ ಪ್ರಾಕಾರದಲ್ಲಿರುವ ಮಹಾಮಾಯಾ ಗುಡಿಯು ಸಾಕಷ್ಟು ದೊಡ್ಡದಾಗಿದ್ದರೂ ವಾಸ್ತುಶಿಲ್ಪ ದೃಷ್ಟಿಯಿಂದ ಮಹತ್ವದ್ದೇನಲ್ಲ. ಪ್ರಾಚೀನ ಕಾಲದಲ್ಲಿ ಈ ಪಟ್ಟಣ ಕುಕ್ಕನೂರು-30 ಎಂಬ ನಾಡಿನ ಮುಖ್ಯ ಪಟ್ಟಣವಾಗಿತ್ತು. ಮತ್ತು ಈ ಘಟಕವು ಬೆಳ್ವೊಲ-300 ಪ್ರಾಂತ್ಯದ ಭಾಗವಾಗಿತ್ತು. ಮಹಾಮಾಯಾ ದೇವಾಲಯದ ಮುಖಮಂಟಪದಲ್ಲಿರುವ ಸುಂದರವಾಗಿ ಕೆತ್ತಿರುವ ಮಾರ್ಗ ಶೈಲಿಯಲ್ಲಿರುವ ಕ್ರಿ. ಶ. 1178ರ ದೀರ್ಘ ಶಾಸನವೊಂದು ಈ ಊರಿನ ಮತ್ತು ದೇವಾಲಯದ ಬಗ್ಗೆ ಅನೇಕ ಮಾಹಿತಿಗಳನ್ನು ನೀಡುತ್ತದೆ. ಪಟ್ಟಣ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ಅನೇಕ ದೇವಾಲಯಗಳನ್ನು ಪಡೆದಿತ್ತು; ಮತ್ತು ಜ್ಯೇಷ್ಠಾ ದೇವಾಲಯ ಅವುಗಳಲ್ಲೆಲ್ಲಾ ಅತ್ಯಂತ ಪ್ರಮುಖವಾದುದಾಗಿತ್ತು. ಅಲ್ಲಿ ಒಂಬತ್ತು 'ಸ್ವಯಂಭೂ'ಲಿಂಗಗಳು ಮತ್ತು ಅಷ್ಟೇ ಸಂಖ್ಯೆಯ ಶಕ್ತಿ ಪೀಠಗಳಿವೆ. ಕುಕ್ಕನೂರು ಜೈನ ಮತ್ತು ವೀರಶೈವ ಮತಗಳ ದೃಷ್ಟಿಯಿಂದಲೂ ಸಹ ಒಂದು ಪ್ರಸಿದ್ಧ ಸ್ಥಳ. ಕ್ರಿ. ಶ. 1027 ಮತ್ತು 1032ರ ಮಸ್ಕಿಯಲ್ಲಿ ದೊರೆತ ಎರಡು ಶಾಸನಗಳು (ಮೊದಲನೇಯದು ಈಗ ಹೈದರಾಬಾದಿನ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿದೆ) ಆ ಊರಿನಲ್ಲಿ ಎರಡು ಜೈನ ಬಸದಿಗಳು ಇದ್ದುದನ್ನು ಸಾಬೀತು ಮಾಡುತ್ತವೆ. ಹಾಗೆಯೇ ಧಾರವಾಡ ಜಿಲ್ಲೆಯ ಕರಜಗಿಯಲ್ಲಿರುವ ಕ್ರಿ. ಶ. 17ನೇಯ ಶತಮಾನದ ಶಾಸನವೊಂದು ಕುಕ್ಕನೂರಿನ ಚನ್ನಬಸವೇಶ್ವರ ದೇವಸ್ಥಾನಕ್ಕೆ ನೀಡಿದ ದತ್ತಿಯೊಂದರ ವಿವರಗಳನ್ನು ನೀಡುತ್ತವೆ. ಇಲ್ಲಿರುವ ವಿದ್ಯಾನಂದ ಗುರುಕುಲ ಮೊದಮೊದಲು ಆ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟ ದೇಶೀಯ ವಿದ್ಯಾಸಂಸ್ಥೆಗಳಲ್ಲಿ ಒಂದು ಎನ್ನಲಾಗಿದೆ. ಕುಕ್ಕನೂರಿನಿಂದ ನಾಲ್ಕು ಕಿಮೀ ದೂರದಲ್ಲಿರುವ ಗುದ್ನೆಪ್ಪನ ಮಠ ಒಂದು ಪ್ರಸಿದ್ಧ ಧಾರ್ಮಿಕ ಕ್ಷೇತ್ರ. ಕುಕ್ಕನೂರಿನಿಂದ ಎರಡು ಕಿಮೀ ದೂರದಲ್ಲಿರುವ ದ್ಯಾಂಪುರವು ಕವಿರತ್ನ ಚನ್ನಕವಿ, ಪಂಡಿತ ಕಲ್ಲಿನಾಥ ಕವಿ, ಮತ್ತು 'ಕಾವ್ಯಾನಂದ' ಎಂದು ಪ್ರಸಿದ್ಧರಾದ ಕವಿ ಸಿದ್ದಯ್ಯ ಪುರಾಣಿಕ ಇವರುಗಳ ಜನ್ಮಸ್ಥಳವಾಗಿದೆ.

ಯಲಹಂಕ : (ಬೆಂಗಳೂರು ಜಿ; ಬೆಂಗಳೂರು ಉತ್ತರ ತಾ; ಜನ: 16,020–1981) ಯಲಹಂಕವು ಬೆಂಗಳೂರಿನಿಂದ ಉತ್ತರಕ್ಕೆ ಬೆಂಗಳೂರು ಬಳ್ಳಾರಿ ರಾಷ್ಟ್ರೀಯ ಹೆದ್ದಾರಿಯಲ್ಲಿ 14 ಕಿಮೀ ದೂರದಲ್ಲಿರುವ ಒಂದು ಚಾರಿತ್ರಿಕ ಸ್ಥಳ. ಚೋಳರ ಆಳ್ವಿಕೆಯ ಕಾಲದಲ್ಲಿ ಇದು ಇಳೈಪಾಕ್ಕ ಎಂಬ ಹೆಸರಿನಿಂದ ಮತ್ತು ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಎಲಹಕ್ಕ ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಈ ಹೆಸರುಗಳಿಂದಲೇ ಇದರ ಸುತ್ತಮುತ್ತಲಿನ ನಾಡನ್ನೂ ಗುರುತಿಸಲಾಗುತ್ತಿತ್ತು. ವಿಜಯನಗರದ ಅಧೀನದಲ್ಲಿ ಆವತಿಯ ರಣಭೈರೇಗೌಡನ ಚಿಕ್ಕ ಮಗ ಜಯಗೌಡ ಎಂಬುವನು ಈ ಪ್ರಾಂತ್ಯವನ್ನು ತನ್ನ ಅಧೀನಕ್ಕೆ ತೆಗೆದುಕೊಂಡು 'ಯಲಹಂಕ ನಾಡಪ್ರಭು' ಎಂಬ ಬಿರುದನ್ನು ಧರಿಸಿದನು. ಅಂದಿನಿಂದ ಈ ಸ್ಥಳ ಖ್ಯಾತಿಗೆ ಬಂದಿತು. ಈತನು ಸು.ಕ್ರಿ.ಶ. 1418 ರಿಂದ 1433 ರವರೆಗೆ ಆಳಿದನು. ತದನಂತರ ಈತನ ಮಗ ಗಿಡ್ಡೇಗೌಡ ಮತ್ತು ಮೊಮ್ಮಗ ಕೆಂಪ ನಂಜೇಗೌಡ ಕ್ರಮವಾಗಿ ಆಳ್ವಿಕೆ ನಡೆಸಿದರು. ಕೆಂಪನಂಜೇಗೌಡನ ಮಗ ಮೊದಲನೇಯ ಕೆಂಪೇಗೌಡನೇ ಬೆಂಗಳೂರಿನ ಸಂಸ್ಥಾಪಕ. ಈತನ ಸಂತತಿಯವರು ಮೊದಲು ಬೆಂಗಳೂರು ಮುಂದೆ ಮಾಗಡಿ ಸೀಮೆಯನ್ನು ಮೈಸೂರು ಅರಸರು ಸ್ವಾಧೀನಪಡಿಸಿ ಕೊಳ್ಳುವವರೆಗೆ ಆಳಿದರು. ಯಲಹಂಕದಲ್ಲಿರುವ ವೇಣುಗೋಪಾಲ ಮಂದಿರ ಬಹಳ ಹಿಂದಿನದು. ಇದರ ಆವರಣದಲ್ಲಿಯೇ ಒಂದು ಈಶ್ವರ ಗುಡಿಯಿದೆ. ಈ ಮಂದಿರದ ಗರುಡಸ್ತಂಭದಲ್ಲಿರುವ ಕ್ರಿ.ಶ. 1410ರ ಶಾಸನವೊಂದು ಅದನ್ನು ಭಕ್ತನೋರ್ವನು ವೀರದೇವರಾಯ ಒಡೆಯರ ಕಾಲದಲ್ಲಿ ಸ್ಥಾಪಿಸಿದನೆಂದು ತಿಳಿಸುತ್ತದೆ. ಇಲ್ಲಿರುವ ಚೌಡೇಶ್ವರಿ ಗುಡಿ ಇತ್ತೀಚಿನದು. ಯಲಹಂಕದಲ್ಲಿ ಕಂಡುಬರುವ ಬೇರೆ ದೇವಾಲಯಗಳೆಂದರೆ ವಿಠೋಬ ಅಥವಾ ಪಾಂಡುರಂಗ, ಮಾರಮ್ಮ, ಯಲ್ಲಮ್ಮ, ವೀರಣ್ಣ, ಮಹೇಶ್ವರಮ್ಮ, ಗಂಗಮ್ಮ ಮತ್ತು ಬಯಲು ಬಸವಣ್ಣ. ಇಷ್ಟೇ ಅಲ್ಲದೆ ಇಲ್ಲಿ ಆಂಜನೇಯನ ಐದು ಗುಡಿಗಳಿವೆ. ಇವುಗಳಲ್ಲೊಂದಾದ ಕೋಟೆ ಆಂಜನೇಯ ಗುಡಿಯು ಹತ್ತಿರದಲ್ಲಿಯೇ

ನಾಲ್ಕು ವೀರಗಲ್ಲುಗಳಿವೆ. ಪಟ್ಟಣದ ಹೊರ ವಲಯದಲ್ಲಿ, ಬೆಂಗಳೂರು ಮಾರ್ಗದಲ್ಲಿ, ಶಂಕರಾನಂದ ಆಶ್ರಮವಿದೆ. ಯಲಹಂಕದಲ್ಲಿ ಒಂದು ಮಸೀದಿ ಮತ್ತು ಬುಡನ್ ಷಾ ವಲಿಯ ಒಂದು ದರ್ಗಾ ಸಹಾ ಇವೆ. ಇಲ್ಲಿ ಹಳೆಯ ಒಂದು ಹೆಂಚಿನ ಕಾರ್ಖಾನೆ ಇದೆ. ರೈಲು ಗಾಲಿ ಮತ್ತು ಅಚ್ಚು ತಯಾರಿಕೆಯ ಒಂದು ಬೃಹತ್ ಕಾರ್ಖಾನೆಯ ಸ್ಥಾಪನೆ ಪೂರ್ಣಗೊಳ್ಳುವ ಹಂತದಲ್ಲಿದೆ. ಯಲಹಂಕದಲ್ಲಿ ಸುಮಾರು 1,000 ರೇಷ್ಮೆ ಕೈಮಗ್ಗಗಳಿವೆ. ಅಲ್ಲದೆ, ಅನೇಕ ಯಂತ್ರಚಾಲಿತ ಮಗ್ಗಗಳು ಮತ್ತು ನೈಲಾನ್ ಪರದೆ ತಯಾರಿಕಾ ಘಟಕಗಳೂ ಇವೆ. ಸ್ಥಳೀಯ ಆಡಳಿತ ಪುರಸಭೆಯಿಂದ ನಡೆಸಲ್ಪಡುತ್ತಿದೆ. ಈ ತಾಲೂಕಿನ ಇತರ ಗಮನಾರ್ಹ ಸ್ಥಳಗಳೆಂದರೆ, ಬೆಂಗಳೂರು–ತುಮಕೂರು ಹೆದ್ದಾರಿಯ ಬಳಿ ಸ್ಥಾಪಿಸಿರುವ ಪೀಣ್ಯ ಕೈಗಾರಿಕಾ ನೆಲೆ, 'ಇಂಡಿಯನ್ ಸ್ಪೇಸ್ ರಿಸರ್ಚ್ ಆರ್ಗನೈಜೇಷನ್' (ಇಸ್ರೊ) ನವರ ಪ್ರಯೋಗಾಲಯ, ಜಕ್ಕೂರು ವಿಮಾನ ನಿಲ್ದಾಣದ ಬಳಿ, ಬೆಂಗಳೂರು-ದೊಡ್ಡಬಳ್ಳಾಪುರ ಮಾರ್ಗದಲ್ಲಿರುವ ಗಾಂಧಿ ಕೃಷಿ ವಿಜ್ಞಾನ ಕೇಂದ್ರ ಎಂಬ ಸಂಶೋಧನಾ ಸಂಸ್ಥೆಗಳಿವೆ. ಹೆಸರಘಟ್ಟ : (ಜನ: 4,301) ಬೆಂಗಳೂರು ಉತ್ತರ ತಾಲೂಕಿನಲ್ಲಿ, ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 22 ಕಿಮೀ ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಇದು ಹೆಸರುಘಟ್ಟ ಮತ್ತು ಶಿವಸಮುದ್ರ ಅಗ್ರಹಾರ ಎಂಬ ಹೆಸರುಗಳಿಂದ ಪರಿಚಿತವಾಗಿತ್ತು. ಇಲ್ಲಿರುವ ದೇವಾಲಯಗಳಲ್ಲಿ ಮುಖ್ಯವಾದವುಗಳೆಂದರೆ ಲಕ್ಷ್ಮೀನರಸಿಂಹ, ದಂಡಿಕಾಂಬಾ, ಗ್ರಾಮದೇವತೆ, ಮುತ್ತರಾಯಸ್ವಾಮಿ, ಚಂದ್ರಮೌಳೀಶ್ವರ ಮತ್ತು ದುರ್ಗಾಂಬಾ. ಚಂದ್ರಮೌಳೀಶ್ವರ ದೇವಾಲಯದ ಗೋಡೆಯಲ್ಲಿರುವ 1533ರ ಶಾಸನವೊಂದು ವಿಜಯನಗರದ ಅಚ್ಯುತರಾಯನ ದಿನಗಳಲ್ಲಿ ನೀಡಿದ ದತ್ತಿಯೊಂದರ ವಿವರಗಳನ್ನು ನೀಡುತ್ತದೆ. ಹೆಸರಘಟ್ಟದಲ್ಲಿ ಕೋಳಿ ಸಾಕಣೆ ತರಬೇತು ಘಟಕ, ಹೈನುಗಾರಿಕೆ ತರಬೇತು ಘಟಕ ಮತ್ತು ತೋಟಗಾರಿಕೆ ಸಂಶೋಧನಾ ಸಂಸ್ಥೆಗಳು ಕಾರ್ಯನಿರತವಾಗಿವೆ; ಹತ್ತಿರದಲ್ಲಿಯೇ ಇಂಡೋ-ಡೇನಿಷ್ ಯೋಜನೆ ಕೇಂದ್ರವೂ ಇದೆ. (ನೋಡಿ ಭಾಗ ಒಂದು, ಪು. 554 ಮತ್ತು 573).

**ಯಲ್ಲಾಪುರ :** (ಉ. ಕ. ಜಿ ; ತಾ. ಕೇ ; ಜನ: 11,792) ಯಲ್ಲಾಪುರವು ಬೆಂಗಳೂರಿನಿಂದ ಉತ್ತರಕ್ಕೆ 424 ಕಿಮೀ ದೂರವಿದೆ. ಇಲ್ಲಿರುವ ಮಾರಿಯಮ್ಮನ ಗುಡಿಯು ನೋಡತಕ್ಕ ಸ್ಥಳ. ಪ್ರತೀವರ್ಷ ಈ ದೇವಿಯ ಗೌರವಾರ್ಥ ಒಂದು ಜಾತ್ರೆ ನಡೆಸುವರು. ಇಲ್ಲಿ ಒಂದು ಪುರಸಭೆ ಇದೆ. ಯಲ್ಲಾಪುರದಿಂದ 22 ಕಿಮೀ ದೂರದಲ್ಲಿರುವ ಮಾಗೋಡು ಎಂಬಲ್ಲಿ ಸುಮಾರು 180 ಮೀಟರ್‌ಗಳಷ್ಟು ಎತ್ತರ ಇರುವ ಪ್ರಪಾತವೊಂದರ ಮೇಲಿಂದ ಎರಡು ಹಂತಗಳಲ್ಲಿ ತೆರೆತೆರೆಯಾಗಿ ಧುಮುಕುವ ಗಂಗಾವಳಿ (ಬೇಡ್ತಿ) ನದಿಯ ನಯನ ಮನೋಹರವಾದ ಜಲಪಾತವಿದೆ. ಇದೊಂದು ಆಹ್ಲಾದದಾಯಕ ನಿವೇಶನವಾಗಿದೆ. ಇಲ್ಲಿಯೇ ಬೇಡ್ತಿ ವಿದ್ಯುತ್ ಯೋಜನೆಯನ್ನು ಆರಂಭಿಸುವ ಕಲ್ಪನೆಮೂಡಿದೆ. ಇಲ್ಲಿ ಹೊಲತಿ ಕೋಟೆ ಎಂದು ಕರೆಯುವ, ಚಕ್ರವ್ಯೂಹದಾಕಾರದಲ್ಲಿ ನಿರ್ಮಿಸಿರುವ ಕೋಟೆಯೊಂದಿದೆ. ಮತ್ತು ಇದರ ಮೂರು ಬದಿಗಳಲ್ಲಿ ನದಿಯು ಹರಿದು ಸಾಗುತ್ತದೆ. ಯಲ್ಲಾಪುರದಿಂದ 13 ಕಿಮೀ ದೂರದಲ್ಲಿ ಇರುವ ಲಾಲ್ಗುಳಿ ಎಂಬ ಸ್ಥಳದಲ್ಲಿ, 91 ಮೀಟರ್ ಎತ್ತರದಿಂದ ಅನೇಕ ಹಂತಗಳಲ್ಲಿ ಧುಮುಕುವ ಕಾಳಿ ನದಿಯ ಜಲಪಾತವಿದೆ. ಇದಕ್ಕೆ ಸಮೀಪದಲ್ಲಿರುವ ಬೆಟ್ಟವೊಂದರ ಮೇಲೆ ಒಂದು ಹನುಮಂತನ ಗುಡಿಯಿದೆ; ಮರಣ ದಂಡನೆಗೆ ಗುರಿಯಾದ ಅಪರಾಧಿಗಳನ್ನು ಸೋಂದಾ ನಾಯಕರು ಈ ಬೆಟ್ಟದ ಮೇಲಿನಿಂದ ಕೆಳಕ್ಕೆ ತಳ್ಳಿಸುತ್ತಿದ್ದರೆಂದು ಪ್ರತೀತಿ.

**ಯಳಂದೂರು :** (ಮೈಸೂರು ಜಿ; ತಾ. ಕೇ; ಜನ: 6,710) ಯಳಂದೂರು ಬೆಂಗಳೂರಿನಿಂದ 155 ಕಿಮೀ ದೂರದಲ್ಲಿದೆ. ಹಾಗೂ ಮೈಸೂರಿನಿಂದ ಆಗ್ನೇಯಕ್ಕೆ 61 ಕಿಮೀ ದೂರದಲ್ಲಿದೆ. ಇದು ಮೈಸೂರಿನ ದಿವಾನರಾಗಿದ್ದ ಪೂರ್ಣಯ್ಯನವರಿಗೆ ನೀಡಿದ ಜಹಗೀರಾಗಿತ್ತು. ಇಲ್ಲಿನ ಗೌರೇಶ್ವರ ದೇವಸ್ಥಾನದ ದ್ವಾರ ಮಂಟಪದ ಬಾಗಿಲು ಸುಂದರವಾದ ಕೆತ್ತನೆ ಕೆಲಸಗಳಿಂದ ಕೂಡಿದೆ. ಈ ದೇವಸ್ಥಾನವನ್ನು ಕ್ರಿ. ಶ. 1450 ರಲ್ಲಿ ಹದಿನಾಡಿನ ಸಿಂಗಿದೇವನೆಂಬುವವನು ಕಟ್ಟಿಸಿದ್ದೆಂದು ಹೇಳುತ್ತಾರೆ. ಸ್ವಲ್ಪ ಕಾಲದವರೆಗೆ ಯಳಂದೂರು ಹದಿನಾಡು ಸಂಸ್ಥಾನದ ರಾಜಧಾನಿಯಾಗಿತ್ತು. ಇಲ್ಲಿರುವ ಶಾಸನವೊಂದರಲ್ಲಿ ಸ್ಥಳನಾಮ 'ಯೆಳೆಯಿಂದೂರು' ಎಂದಿದೆ. ವರಾಹಸ್ವಾಮಿ ಮತ್ತು ಪಾರ್ವತಿ ದೇವಸ್ಥಾನಗಳು ಸಹ ಇಲ್ಲಿವೆ. ಚೋಳರು ಇಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿದ್ದರು; ಕಪಿಲೇಶ್ವರ ದೇವಸ್ಥಾನ ಕೂಡ ಅದೇ ಕಾಲದ ಸ್ಮಾರಕ. ಯಳಂದೂರಿನ ಸಮೀಪದಲ್ಲೇ ಸುವರ್ಣಾವತಿ ಹೊಳೆ ಹರಿಯುತ್ತದೆ. ಬಾಳೇಂದುಪುರ (ಯಳಂದೂರು) ಮಠದ ಪೀಠಾಧಿಪತಿ ಎಂದು ಕರೆದುಕೊಂಡಿರುವ ಖ್ಯಾತ ಕನ್ನಡ ಕವಿ ಷಡಕ್ಷರ ದೇವನ ಗದ್ದುಗೆ ಇಲ್ಲಿದೆ. ಅವನು ಯಳಂದೂರು ಬಳಿ ಇರುವ ಧನಗೂರು ಎಂಬ ಸ್ಥಳದವನು. ಅವನಿಗೆ ಸಂಬಂಧಿಸಿದ ಗುಹೆಯೊಂದು ಯಳಂದೂರಿನಿಂದ ಐದು ಕಿಮೀ ದೂರದಲ್ಲಿರುವ ಶಂಭುಲಿಂಗನ ಬೆಟ್ಟದಲ್ಲಿದೆ. ಇದೇ ತಾಲೂಕಿನ ಒಂದು ಹೋಬಳಿ ಕೇಂದ್ರವಾದ ಅಗರ ಯಳಂದೂರಿನಿಂದ ಹತ್ತು ಕಿಮೀ ದೂರದಲ್ಲಿದೆ. ಹಿಂದೆ ಅಗ್ರಹಾರವಾಗಿದ್ದ ಅಗರ ಮತ್ತು ಮಾಂಬಳ್ಳಿ ಎಂಬ ಅವಳಿ ಗ್ರಾಮದಲ್ಲಿ ರೇಷ್ಮೆ ನೇಯ್ಗೆಯ ಅನೇಕ ಘಟಕಗಳಿವೆ. ಈ ಜೋಡಿ ಗ್ರಾಮದ ಬಳಿ ಇರುವ ಎರಡು ದೊಡ್ಡ ಕೆರೆಗಳು ವ್ಯವಸಾಯಕ್ಕೆ ನೀರೊದಗಿಸುತ್ತವೆ. ಇಲ್ಲಿಯ ಮುಖ್ಯ ವಾಣಿಜ್ಯ ಬೆಳೆ ಎಂದರೆ ಹಿಪ್ಪುನೇರಳೆ. ಪುರಾತತ್ತ್ವ ದೃಷ್ಟಿಯಿಂದ ಮಹತ್ವ ಪಡೆದಿರುವ

ದುರ್ಗಾ, ನರಸಿಂಹ, ರಾಮೇಶ್ವರ ಮತ್ತು ವರದರಾಜ ದೇವಾಲಯಗಳು ಸಹ ಆಗರದಲ್ಲಿಯೇ ಇವೆ.

**ಯಾಣ :** (ಉ. ಕ. ಜಿ ; ಕುಮಟಾ ತಾ.) ಭೈರವ ಕ್ಷೇತ್ರ ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿರುವ ಯಾಣವು ಜಡ್ಡಿ ಘಾಟ ಮತ್ತು ದೇವಿಮನೆ ಘಾಟಗಳ ನಡುವೆ ಸಮುದ್ರದೂರದಲ್ಲಿ, ಕುಮಟದಿಂದ ಈಶಾನ್ಯಕ್ಕೆ 24 ಕಿಮೀ ದೂರದಲ್ಲಿರುವ ಒಂದು ಪ್ರಮುಖ ಯಾತ್ರಾ ಕೇಂದ್ರ. ಇಲ್ಲಿಗೆ ವಾಹನಗಳ ಮೂಲಕ ತಲುಪಲು ಯಾವುದೇ ಅನುಕೂಲಕರವಾದ ರಸ್ತೆಯಿಲ್ಲ; ಹತ್ತಿರದ ರಸ್ತೆಯಿಂದ ಹಸಿರುಕಾಡಿನ ಮಧ್ಯೆ ಕನಿಷ್ಠ ಎಂಟು ಕಿಮೀ ದೂರವನ್ನಾದರೂ ನಡೆದು ಕ್ರಮಿಸಬೇಕು. ಸಿರಸಿಯಿಂದ ಹೆಗ್ಗಡೆಕಟ್ಟೆ ಎಂಬ ಸ್ಥಳದವರೆಗೆ ರಸ್ತೆ ಮೂಲಕ ಬಂದು, ಅಲ್ಲಿಂದ ಕಾಲುದಾರಿಯಲ್ಲಿ ಒಂಬತ್ತು ಕಿಮೀ ದೂರ ನಡೆದು ಕೂಡ ಯಾಣ ತಲುಪಲು ಸಾಧ್ಯ. ಒರಟೊರಟಾಗಿರುವ 300 ಅಡಿಗಳೆಷ್ಟೆತ್ತರದ ಬೆಟ್ಟವೊಂದರ ಮೇಲಿರುವ ಒಂದು ಅದ್ಭುತವಾದ ಗವಿಯೊಳಗೆ ಭೈರವೇಶ್ವರ ಗುಡಿಯಿದೆ. ಮಾಘಮಾಸದಲ್ಲಿ ಆಚರಿಸುವ ಶಿವರಾತ್ರಿ ಹಬ್ಬದ ದಿನ ಇದು ಸಹಸ್ರಾರು ಭಕ್ತರನ್ನು ಆಕರ್ಷಿಸುತ್ತದೆ. ಇಲ್ಲಿರುವ ಕೊಳವೊಂದರಲ್ಲಿ ಭಕ್ತಾದಿಗಳು ಪವಿತ್ರ ಸ್ನಾನಮಾಡುವರು. ಸ್ಥಳಪುರಾಣ ತಿಳಿಸುವಂತೆ ಅಟ್ಟಿಸಿಕೊಂಡು ಬರುತ್ತಿದ್ದ ಭಸ್ಮಾಸುರನಿಗೆ ಸಿಗದಂತೆ ಈ ಬೆಟ್ಟದಲ್ಲಿ ಶಿವನು ಅವಿತುಕೊಂಡಿದ್ದಾಗ ಭಗವಾನ್ ವಿಷ್ಣು ಚತುರೋಪಾಯಗಳಿಂದ ಭಸ್ಮಾಸುರನ ವಧೆ ಮಾಡಿದನು. ಇಲ್ಲಿ ಕಂಡುಬರುವ ಬಂಡೆಗಳ ರಚನೆ, ಬಣ್ಣ ಮತ್ತು ಮಾದರಿ ವಿಶೇಷವಾದುದು; ಸ್ಥಳಪುರಾಣ ವರ್ಣಿಸುವಂತೆ ಇದು ಸುಟ್ಟುಹೋದ ಭಸ್ಮಾಸುರನ ಬೂದಿ. ಹಿಂದೆ ಬಹಳ ಏಳ್ಗೆ ಸಾಧಿಸಿದ್ದ ಈ ಪಟ್ಟಣ ಈಗ ಹೆಚ್ಚು ಕಡಿಮೆ ಜನರಹಿತವಾಗಿದೆ. ಇಲ್ಲಿಯ ಪರಿಸರವು ಎಂಥವರನ್ನಾದರೂ ಮರುಳುಮಾಡುವಂಥದು.

**ಯಾದಗಿರಿ :** (ಕಲ್ಬುರ್ಗಿ ಜಿ; ಉಪವಿಭಾಗ ಮತ್ತು ತಾ. ಕೇ; ಜನ: 40,569) ಯಾದಗಿರಿ ಕಲ್ಬುರ್ಗಿಯಿಂದ ಸುಮಾರು 80 ಕಿಮೀ ಮತ್ತು ಬೆಂಗಳೂರಿನಿಂದ 570 ಕಿಮೀ ದೂರದಲ್ಲಿ ಮದ್ರಾಸ್-ಮುಂಬಯಿ ಬ್ರಾಡ್‌ಗೇಜ್ ರೈಲು ಮಾರ್ಗದಲ್ಲಿದೆ. ಪ್ರಾಚೀನ ಕಾಲದಲ್ಲಿ ಯೇತಗಿರಿ ಎಂಬ ಹೆಸರಿನಿಂದ ಕರೆಯಲಾಗುತ್ತಿದ್ದ ಇದು, ಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಳ್ಳುವ ಮೊದಲು ಸ್ವಲ್ಪ ಸಮಯದವರೆಗೆ, ಕಲ್ಯಾಣ ಚಾಳುಕ್ಯರ ರಾಜಧಾನಿಯಾಗಿತ್ತು. ಇಲ್ಲಿ ಚಾಳುಕ್ಯರಿಂದ ನಿರ್ಮಿತವಾದ ಒಂದು ಬಲವಾದ ದುರ್ಗವಿದೆ. ಈ ಸ್ಥಳವು ಕ್ರಮವಾಗಿ, ಕಾಕತೀಯ, ಸೇಉಣ ಮತ್ತು ಬಹಮನಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ಈಗಿರುವ ಕೋಟೆಯನ್ನು ಫಿರೋಜ್ ಷಾ ಬಹಮನಿ ಕಟ್ಟಿಸಿದನೆಂದು ಅದರ ಗೋಡೆ ಮತ್ತಿತರ ಭಾಗಗಳ ಮೇಲಿರುವ ಪರ್ಶಿಯನ್ ಶಾಸನಗಳ ಆಧಾರದಿಂದ ಹೇಳಲಾಗಿದೆ. ಈ ಪಟ್ಟಣದಲ್ಲಿ ಒಂದು ಜಾಮಿಯಾ ಮಸೀದಿ ಇದೆ. ಪ್ರಮುಖ ರೈಲು ಮಾರ್ಗದಲ್ಲಿ ಇರುವುದರಿಂದ, ಯಾದಗಿರಿಯು ಸಾಕಷ್ಟು ವ್ಯವಹಾರವುಳ್ಳ ಒಂದು ವಾಣಿಜ್ಯ ಕೇಂದ್ರವಾಗಿದೆ. ಭೀಮಾನದಿ ಇದಕ್ಕೆ ಸಮೀಪದಲ್ಲಿ ಹರಿಯುತ್ತಿದೆ. ಇದರ ಸಮೀಪದಲ್ಲಿಯೇ ಮೈಲಾರಲಿಂಗ ದೇವಾಲಯವಿದ್ದು ಇಲ್ಲಿ ಪ್ರತೀ ವರ್ಷ ಜರುಗುವ ಜಾತ್ರೆಗೆ ಭಾರಿ ಸಂಖ್ಯೆಯಲ್ಲಿ ಭಕ್ತಾದಿಗಳು ಆಗಮಿಸುತ್ತಾರೆ. ಇದೇ ತಾಲೂಕಿನ ಯಡೆಹಳ್ಳಿಯಲ್ಲಿ ಪತ್ತೆಯಾಗಿರುವ ಇತಿಹಾಸಪೂರ್ವ ಕಾಲದ ಶಿಲಾವರ್ತುಲಗಳಿಂದಾಗಿ ಮತ್ತು ಯಾದಗಿರಿಯಿಂದ 11 ಕಿಮೀ ದೂರದಲ್ಲಿರುವ ಹಟ್ಟಿಕುಣಿ ಎಂಬಲ್ಲಿರುವ ನೀರಾವರಿ ಯೋಜನೆಯಿಂದಾಗಿ ಆ ಊರುಗಳು ಪ್ರಸಿದ್ಧಿ ಪಡೆದಿವೆ.

**ರಾಣೆಬೆನ್ನೂರು :** (ಧಾರವಾಡ ಜಿ; ತಾ. ಕೇ; ಜನ: 58,118) ರಾಣೆಬೆನ್ನೂರು, ಬೆಂಗಳೂರಿನಿಂದ ವಾಯುವ್ಯದಲ್ಲಿ 294 ಕಿಮೀ ದೂರದಲ್ಲಿದ್ದು, ಧಾರವಾಡದಿಂದ 125 ಕಿಮೀ ಆಗ್ನೇಯದಲ್ಲಿದೆ. ಮರಾಠಾ ಸೈನಿಕ ರಾಣೆ ಎನ್ನುವವನಿಂದ ಈ ಊರಿಗೆ ಈ ಹೆಸರು ಬಂದಿತು. 1855ರಲ್ಲಿ ಸ್ಥಾಪಿತವಾದ ಪುರಸಭೆಯು ಈ ಊರಿನ ನಾಗರಿಕ ಆಡಳಿತವನ್ನು ನೋಡಿಕೊಳ್ಳುತ್ತಿದೆ. ಇಲ್ಲಿ ಮೂರು ಶಾಸನಗಳಿದ್ದು, ಅವುಗಳಲ್ಲಿ ಅತ್ಯಂತ ಪ್ರಾಚೀನವಾದುದು ಕ್ರಿ. ಶ. 859ಕ್ಕೂ, ಅತ್ಯಂತ ಈಚಿನದು ಕ್ರಿ. ಶ. 1550ಕ್ಕೂ ಸೇರಿದುದಾಗಿದೆ. ಶಾಸನಗಳನ್ನು ಹೊಂದಿರುವ ಸಿದ್ಧೇಶ್ವರ ದೇವಾಲಯವು ಪ್ರಾಚೀನವಾದುದಾಗಿದೆ. ಗಮನಾರ್ಹವಾದ ಇತ್ತೀಚಿನ ದೇವಾಲಯಗಳೆಂದರೆ, ಬಸವಣ್ಣ, ಚೌಡೇಶ್ವರಿ, ಬನಶಂಕರಿ ಮತ್ತು ಬೀರೇಶ್ವರ ದೇವಾಲಯಗಳು. ಇಲ್ಲಿ ಒಂಬತ್ತು ಮಸೀದಿಗಳು ಮತ್ತು ದರ್ಗಾಗಳೂ ಇವೆ. 1785ರಲ್ಲಿ ಅಜ್ಮೀರ್‌ನಿಂದ ಇಲ್ಲಿಗೆ ಬಂದ ಸಂತ ಹಜ್ರತ್ ಜಮಾಲ್ ಷಾ ವಲಿಯ ಜ್ಞಾಪಕಾರ್ಥವಾಗಿ ಕಟ್ಟಿದ ದರ್ಗಾವೇ ಅತ್ಯಂತ ಪ್ರಖ್ಯಾತವಾದುದು. ಇಲ್ಲಿಂದ ನಾಲ್ಕು ಕಿಮೀ ದೂರದಲ್ಲಿರುವ ಮೆಡಲೇರಿಯಲ್ಲಿ ಜಿಂಕೆಗಳ ವಿಶೇಷ ವನ್ಯಪ್ರಾಣಿಧಾಮವಿದೆ. ರಾಣೆಬೆನ್ನೂರು ಧಾರವಾಡ ಜಿಲ್ಲೆಯಲ್ಲಿ ಹತ್ತಿ, ಕಡಲೆಕಾಯಿ ಮತ್ತು ಮೆಣಸಿನಕಾಯಿ ವ್ಯಾಪಾರಕ್ಕೆ ಹೆಸರಾದ ಕೇಂದ್ರ. ಈ ತಾಲೂಕಿನ ಇತರ ಗಮನಾರ್ಹವಾದ ಸ್ಥಳಗಳು ಈ ಕೆಳಗಿನಂತೆ ಇವೆ: ಹನುಮನಮಟ್ಟಿಯು ರಾಣೆಬೆನ್ನೂರಿನಿಂದ 10 ಕಿಮೀ ದೂರದಲ್ಲಿದ್ದು, ಈ ತಾಲೂಕಿನಲ್ಲಿ, ವಿದ್ಯಾಸಕ್ತಿಯಿರುವ ಸ್ಥಳ. 312 ಎಕರೆಯಷ್ಟು ವಿಶಾಲವಾದ ಜಾಗವನ್ನು ಹೊಂದಿರುವ ಗ್ರಾಮೀಣ ವಿಕಾಸದ ಒಂದು ಸಂಸ್ಥೆಯನ್ನು ಕೇಂದ್ರ ಸರ್ಕಾರ 1962ರಲ್ಲಿ ಇಲ್ಲಿ ಸ್ಥಾಪಿಸಿತು. ಇದರಲ್ಲಿ ಗ್ರಾಮೀಣ ವಿದ್ಯಾಭ್ಯಾಸದ ಮುಖ್ಯಾಂಗಗಳಾದ ವ್ಯವಸಾಯ, ಸೇವೆ, ಗೃಹನಿರ್ಮಾಣ, ಕೈಗಾರಿಕೆ ಮುಂತಾದ ವಿಭಾಗಗಳಲ್ಲಿ ಸರ್ವಾಂಗೀಣ ಪ್ರಗತಿಗೆ ಅನುಕೂಲವಾದ ವಿದ್ಯೆಯನ್ನು ಕಲಿಸಲಾಗುತ್ತದೆ. ಈ ಸಂಸ್ಥೆಯನ್ನು 1956ರಲ್ಲಿ

ಗ್ರಾಮಸೇವಾ ಮಂಟಪವು ಪ್ರಾರಂಭಿಸಿತು. ಪ್ರಾರಂಭದ ಮೊದಲ ವರ್ಷಗಳಲ್ಲಿ ಈ ಸಂಸ್ಥೆಯು ಗ್ರಾಮೀಣ ವಿಕಾಸದ ಅನೇಕ ಕಾರ್ಯಗಳನ್ನು ನಿರ್ವಹಿಸಿತು. ಆದರೆ 1974ರಲ್ಲಿ ಈ ಸಂಸ್ಥೆಯು ಮುಚ್ಚಿಹೋದಾಗ ಈ ಕೇಂದ್ರವನ್ನು ಕರ್ನಾಟಕ ಸರಕಾರದವರು 1974ರಲ್ಲಿ ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯಕ್ಕೆ ವಹಿಸಿಕೊಟ್ಟರು. ಈಗ ಸರಕಾರ ಮತ್ತು ವಿಶ್ವವಿದ್ಯಾಲಯ ಈ ಕೇಂದ್ರದ ಅನೇಕ ಸಂಸ್ಥೆಗಳನ್ನು ನಡೆಸುತ್ತಾ ಇದ್ದು, ಸುತ್ತಮುತ್ತಲ ಪ್ರದೇಶದ ರೈತರಿಗೆ ಬೇಕಾದ ಸಲಹೆಗಳನ್ನು, ಸಲಕರಣೆಗಳನ್ನು ಒದಗಿಸುತ್ತಿದೆ. ಈಗ ಗ್ರಾಮ ಸೇವಾ ಮಂಟಪವು ರಾಣೆಬೆನ್ನೂರಿನಲ್ಲಿ ಒಂದು ವಿದ್ಯಾರ್ಥಿನಿಯರ ಕಿರಿಯ ಕಾಲೇಜು, ಎರಡು ವಿದ್ಯಾರ್ಥಿನಿಲಯಗಳು ಮತ್ತು ಕರ್ನಾಟಕ ಸರಕಾರದ ಸಹಾಯಧನ ಪಡೆಯುತ್ತಿರುವ ಅಂಗವಿಕಲರ ಕೇಂದ್ರಗಳನ್ನು ನಡೆಸುತ್ತಿದೆ. ಐರಣಿಯು ತುಂಗಭದ್ರಾನದಿಯ ಎಡದಂಡೆಯ ಮೇಲೆ ರಾಣೆಬೆನ್ನೂರಿನಿಂದ 24 ಕಿಮೀ ಪೂರ್ವದಲ್ಲಿದೆ. ಹಿಂದೆ ಈ ಸ್ಥಳಕ್ಕೆ ಐರಾವತ ಎಂಬ ಹೆಸರಿದ್ದಿತು. ಹಳ್ಳಿಗೆ ಸ್ವಲ್ಪ ದೂರದಲ್ಲಿ ತುಂಗಭದ್ರೆಯ ದಂಡೆಯ ಮೇಲೆ ನಾಶವಾಗಿರುವ ಕೋಟೆಯ ಅವಶೇಷಗಳು ಕಾಣಬರುತ್ತವೆ. ಇಲ್ಲಿ ಕೊಟ್ರೇಶ್ವರ ಮಠ ಎಂಬ ಹೆಸರಿನ ಪ್ರಖ್ಯಾತ ವೀರಶೈವ ಮಠ, ಮಲ್ಲಿಕಾರ್ಜುನ, ಮುಂಡಜಸಪ್ಪ, ಕೊಟ್ರೇಶ್ವರ ದೇವಾಲಯಗಳು, ಸಿದ್ಧಾಶ್ರಮ ಮತ್ತು ಅವಧೂತಾಶ್ರಮಗಳಿವೆ. ಇಲ್ಲಿನ ಕಂಬಳಿಗಳು ಬಹಳ ಪ್ರಖ್ಯಾತವಾಗಿವೆ. ರಾಣೆಬೆನ್ನೂರಿನಿಂದ ಉತ್ತರದಲ್ಲಿ 12 ಕಿಮೀ ದೂರದಲ್ಲಿ ಬೆಟ್ಟದ ಮೇಲೆ, ದೇವರಗುಡ್ಡ ರೈಲ್ವೆ ನಿಲ್ದಾಣದಿಂದ ಐದು ಕಿಮೀ ದೂರದಲ್ಲಿಯೂ ಇರುವ ಗುಡ್ಡದ ಗುಡ್ಡಾಪುರ (ದೇವರಗುಡ್ಡ)ವು ಖ್ಯಾತ ಪುಣ್ಯಸ್ಥಳ. ಇಲ್ಲಿ ಬಹುಜನರು ಕುಲದೇವತೆ ಎಂದು ಪೂಜಿಸುವ, ಮೈಲಾರ, ಮಲ್ಲಾರ ಅಥವಾ ಮಾರ್ತಾಂಡ ಎಂದು ಕರೆಯಲಾಗುವ ದೇವಾಲಯವಿದೆ. ದಸರಾ ಹಬ್ಬಕ್ಕೆ ಒಂದು ದಿನ ಮುಂಚೆ ಇಲ್ಲಿ ನಡೆಯುವ ಜಾತ್ರೆಗೆ ಬಹುಸಂಖ್ಯೆಯಲ್ಲಿ ಭಕ್ತರು ನೆರೆಯ ರಾಜ್ಯಗಳಿಂದಲೂ ಬರುತ್ತಾರೆ. ಜಾತ್ರೆಯಲ್ಲೂ ಭಕ್ತರಾದ ಸಾಂಪ್ರದಾಯಿಕ ಕಂಬಳಿಯ ಉಡಿಗೆ ತೊಡಿಗೆಗಳನ್ನು ಧರಿಸಿದ ವಗ್ಗಯ್ಯಗಳು ಅಥವಾ ಗೊರಪ್ಪಗಳು ಪವಾಡಗಳನ್ನು ಮೆರೆಯುತ್ತಾರೆ. ದೊಡ್ಡ ಪ್ರಮಾಣದಲ್ಲಿ ದನಗಳ ಜಾತ್ರೆಯೂ ನಡೆಯುವುದು. ಈ ಜಾಗದಲ್ಲಿ ಪ್ರವಾಸಿಗಳಿಗೆ ಮತ್ತು ಯಾತ್ರಿಕರಿಗೆ ಉತ್ತಮ ಅನುಕೂಲಗಳಿವೆ.

**ರಾಮದುರ್ಗ:** (ಬೆಳಗಾವಿ ಜಿ; ತಾ. ಕೇ; ಜನ; 27,555) ಹಿಂದೆ ಒಂದು ಸಣ್ಣ ಸಂಸ್ಥಾನದ ಕೇಂದ್ರವಾಗಿದ್ದ ರಾಮದುರ್ಗವು ಈಗ ಅದೇ ಹೆಸರಿನ ತಾಲೂಕು ಕೇಂದ್ರವಾಗಿದೆ. ಇದು ಬೆಂಗಳೂರಿನಿಂದ ವಾಯುವ್ಯಕ್ಕೆ 515 ಕಿಮೀ ಬೆಳಗಾವಿಯಿಂದ ಪೂರ್ವಕ್ಕೆ 104 ಕಿಮೀ ದೂರದಲ್ಲಿಯೂ ಮಲಪ್ರಭಾ ನದಿಯ ಬಲದಂಡೆಯ ಮೇಲಿದೆ. ವಾಸ್ತವವಾಗಿ ರಾಮದುರ್ಗ ಎನ್ನುವ ಕಂದಾಯ ಗ್ರಾಮವೇ ಇಲ್ಲ. ಕೀಲಬನೂರು ಮತ್ತು ತುರನೂರು ಎನ್ನುವ ಎರಡು ಹಳ್ಳಿಗಳು ಸೇರಿ ರಾಮದುರ್ಗ ಪುರಸಭಾ ಸರಹದ್ದಾಗಿದೆ. 1866ರಿಂದ ಇಲ್ಲಿ ಪುರಸಭೆಯು ಕೆಲಸ ಮಾಡುತ್ತಿದೆ. ಪೌರಾಣಿಕ ಕಥೆಯ ಪ್ರಕಾರ, ಶ್ರೀರಾಮನು ಇಲ್ಲಿ ಕೋಟೆಯೊಂದನ್ನು ಕಟ್ಟಿದ್ದರಿಂದ ಇದಕ್ಕೆ ರಾಮದುರ್ಗವೆಂಬ ಹೆಸರಾಯಿತೆಂದು ಹೇಳುತ್ತಾರೆ. 1948ರಲ್ಲಿ ಭಾರತ ಒಕ್ಕೂಟದೊಡನೆ ವಿಲೀನವಾಗುವವರೆಗೆ ಈ ಚರಿತ್ರಾರ್ಹ ನಗರವು ರಾಮದುರ್ಗ ಸಂಸ್ಥಾನದ ಕೇಂದ್ರವಾಗಿತ್ತು. ಶಿವಾಜಿಯು ರಾಮದುರ್ಗ ಮತ್ತು ನರಗುಂದ ಕೋಟೆಗಳನ್ನು ಹದಿನೇಳನೇಯ ಶತಮಾನದ ಅಂತ್ಯಭಾಗದಲ್ಲಿ ನಿರ್ಮಿಸಿದ ಕಾಲದಿಂದ, ಇಲ್ಲಿನ ಇತಿಹಾಸ ಪ್ರಾರಂಭವಾಗುತ್ತದೆ. ಶಿವಾಜಿಯು ಈ ಕೋಟೆಗಳ ರಕ್ಷಣೆಯನ್ನು ಅಪ್ಪಾಜಿ ಸೂರು ಎಂಬುವವನಿಗೆ ಸುಮಾರು ಕ್ರಿ.ಶ. 1680ರಲ್ಲಿ ವಹಿಸಿದ್ದನು. ಅನಂತರ ಇವುಗಳನ್ನು ಔರಂಗಜೇಬನ ಸೈನ್ಯವು 1692ರಲ್ಲಿ ತನ್ನ ವಶ ಮಾಡಿಕೊಂಡಿತು. ಹದಿನೈದು ವರ್ಷಗಳ ನಂತರ ಅಂದರೆ ಸುಮಾರು 1707ರಲ್ಲಿ, ಅಪ್ಪಾಜಿಯ ಸೇವಕನಾದ, ಚಿತ್ಪಾವನ ಬ್ರಾಹ್ಮಣ ರಾಮರಾವ್ ದಾದಾಜಿ ಭಾವೆಯು ಚಾತುರ್ಯದಿಂದ ಇದನ್ನು ಹಿಂದಕ್ಕೆ ಪಡೆದನು. ನಂತರ ಭಾವೆ ವಂಶಸ್ಥರೇ ಈ ಎರಡು ಪ್ರದೇಶಗಳನ್ನು ಆಳುತ್ತಿದ್ದರು. 1791 ರಿಂದ ರಾಮದುರ್ಗ ಮತ್ತು ನರಗುಂದ ಪ್ರತ್ಯೇಕವಾದವು. ಅವು ಪೇಶ್ವೆಯ ಆಧೀನದಲ್ಲಿದ್ದವು. ನಂತರ ಪೇಶ್ವೆಗೂ, ಬ್ರಿಟಿಷರಿಗೂ ಕಲಹಗಳು ಪ್ರಾರಂಭವಾದಾಗ, ರಾಮದುರ್ಗದ ಸಂಸ್ಥಾನಿಕ, ರಾಮರಾಯನ ಮಗನಾದ ನಾರಾಯಣರಾಯನು, ಜನರಲ್ ಮನ್ರೋವಿನ ಪಕ್ಷ ವಹಿಸಿ ಅವನಿಂದ ಅನುಕೂಲಕರವಾದ ಸವಲತ್ತುಗಳನ್ನು ಪಡೆದುಕೊಂಡನು. ಇದೇ ಸಮಯದಲ್ಲಿ ನರಗುಂದ ಶಾಖೆಯ ಬಾಬಾಸಾಹೇಬನು ಬ್ರಿಟಿಷರ ಮೇಲೆ 1858ರಲ್ಲಿ ದಂಗೆ ಎದ್ದಾಗ, ತನ್ನ ದಾಯಾದಿ ರಾಮರಾಯನನ್ನೂ, ಬ್ರಿಟಿಷರ ವಿರುದ್ಧ ಸೇರಿಕೊಳ್ಳುವಂತೆ ಪ್ರೇರೇಪಿಸಿದನು. ಆದರೆ ರಾಮದುರ್ಗದ ನಾಯಕನು ಬ್ರಿಟಿಷರಿಗೆ ಸಹಾಯ ಮಾಡಿದನು. ಈ ವಂಶದಲ್ಲಿ, ನಾರಾಯಣರಾಯನ ವಿಧವೆಯಾದ ರಾಧಾಬಾಯಿಯೂ ಸೇರಿದಂತೆ, ಪ್ರಾರಂಭದಿಂದ 1948ರವರೆಗೆ 12 ಜನ ರಾಜರು ಆಳಿದರು. 1921ರಲ್ಲಿ ಈ ಸಂಸ್ಥಾನದ ಒಟ್ಟು ವಿಶಾಲತೆ 169 ಚದುರ ಮೈಲಿಗಳಾಗಿದ್ದು, ಅದು 40 ಹಳ್ಳಿಗಳನ್ನು ಒಳಗೊಂಡಿತ್ತು. ಇದರ ಜನಸಂಖ್ಯೆ 34,000 ಆಗಿದ್ದು, ರಾಜಧಾನಿಯಲ್ಲೇ 10,000 ಜನ ಇದ್ದರು. 1930ರಲ್ಲಿ ಈಗಿನ ವಾಡೆಯ ಕಟ್ಟಡ ಮತ್ತು ಇತರ ಮುಖ್ಯ ಕಟ್ಟಡಗಳು ಕಟ್ಟಲ್ಪಟ್ಟವು. ಸ್ವತಂತ್ರವಾಗುವುದಕ್ಕೆ ಮುಂಚೆ ಈ ಸಂಸ್ಥಾನವು ಪ್ರಾಮುಖ್ಯತೆಯನ್ನು ಪಡೆಯಿತು. ಇಲ್ಲಿ ಏಪ್ರಿಲ್ 1939ರಲ್ಲಿ ಜನಗಳು ದಂಗೆ ಎದ್ದು ರಾಜ್ಯಭಾರದ ಅತಿರೇಕಗಳನ್ನು ಮತ್ತು ತೆರಿಗೆಯ ಭಾರವನ್ನೂ ಖಂಡಿಸಿದರು. ಆದರೆ ಈ ಚಳುವಳಿಯು ಹಿಂಸಾತ್ಮಕ ರೂಪವನ್ನು ತಾಳಿ ರಾಮದುರ್ಗ ದುರಂತ ಎಂದು ಹೆಸರಾಯಿತು. ಇಲ್ಲಿ ನೋಡಲು

ಯೋಗ್ಯವಾದ ಪ್ರಾಚೀನ ಸ್ಮಾರಕಗಳೆಂದರೆ ಹಾಳಾಗಿರುವ ಕೋಟೆಯ ಗೋಡೆಗಳು, ಪಡುಕೋಟೆ ಎಂದು ಕರೆಯಲಾಗುವ ಭಾಗದ ಸ್ಥಳೀಯ ದಿಡ್ಡೀಬಾಗಿಲುಗಳು (ಕೋಟೆಯ ಪಶ್ಚಿಮ ಭಾಗ), ಚೆನ್ನಾಗಿ ಕಟ್ಟಲಾದ ಸ್ನಾನಘಟ್ಟಗಳು, ಸಣ್ಣ ದೇವಾಲಯಗಳು, ಹಳೆಯ ವಾಡೆಗಳು, ಮತ್ತು ಸಂಸ್ಥಾಪಕರಿಗೆ ಸೇರಿದ ಅನೇಕ ಕಟ್ಟಡಗಳು. ಇವುಗಳಲ್ಲಿ ಅನೇಕವು ಇಂದು ಸ್ಥಳೀಯ ಕಾಲೇಜುಗಳಾಗಿ ಅಥವಾ ಸರಕಾರದ ಕಚೇರಿಗಳಾಗಿ ಪರಿವರ್ತಿತವಾಗಿವೆ. ಇತರ ಗಮನಾರ್ಹವಾದ ಚಾರಿತ್ರಿಕ ಮತ್ತು ಇತ್ತೀಚಿನ ದೇವಾಲಯಗಳೆಂದರೆ, ಪೂರ್ವಾಭಿಮುಖವಾಗಿರುವ, ಮಲಪ್ರಭಾ ನದಿಯ ದಡದಲ್ಲಿರುವ ವೆಂಕಟೇಶ್ವರ ದೇವಾಲಯ, ಸಂಕಮ್ಮ, ಯೆಚ್ಚರಪ್ಪ, ಶಂಕರಲಿಂಗ, ಪಾಂಡುರಂಗ, ಮಳೆಯಪ್ಪ, ಗ್ರಾಮದೇವತೆ, ಬಸವಣ್ಣ, ಮಾರುತಿ, ಅಕ್ಕಮಹಾದೇವಿ, ದುರ್ಗಾದೇವಿ ದೇವಾಲಯಗಳು ಮತ್ತು ರಾಘವೇಂದ್ರ ಮಠ, ಮುಂತಾದವುಗಳು. ಇವುಗಳಲ್ಲದೆ ಅನೇಕ ಮಸೀದಿಗಳೂ ಮತ್ತು ಪ್ರಮುಖವಾದ ಮೂರು ದರ್ಗಾಗಳೂ ಇವೆ. ಶೇಂಗಾ, ಹತ್ತಿ, ಬೇಳೆ ಕಾಳುಗಳು, ಕೈಮಗ್ಗದ ಬಟ್ಟೆಗಳು ಮತ್ತು ಉತ್ತಮಗುಣದ ಪಾದರಕ್ಷೆಗಳಿಗೆ ಈ ಸ್ಥಳ ಪ್ರಸಿದ್ಧಿಯಾಗಿದೆ. ಗೊಡಚಿಯು ರಾಮದುರ್ಗದಿಂದ ವಾಯವ್ಯಕ್ಕೆ 14 ಕಿಮೀ ದೂರದಲ್ಲಿದ್ದು, ಪ್ರಾಚೀನವಾದ ಹಾಗೂ ಪ್ರಸಿದ್ಧವಾದ ವೀರಭದ್ರಸ್ವಾಮಿಯ ದೇವಾಲಯಕ್ಕೆ ಹೆಸರಾಗಿದೆ. ಜಿಲ್ಲೆಯಿಂದ ಮತ್ತು ಜಿಲ್ಲೆಯ ಹೊರಗಿನಿಂದ ಬಹು ದೊಡ್ಡ ಸಂಖ್ಯೆಯಲ್ಲಿ ಭಕ್ತರು ಬರುತ್ತಾರೆ. ಈ ಸ್ಥಳದ ವಿಷಯದಲ್ಲಿ ಅನೇಕ ದಂತ ಕಥೆಗಳಿವೆ. ಮುನಿಹಾಳ-ಸುರೇಬಾನ (ಜನ: 4,732) ರಾಮದುರ್ಗ-ರೋಣದ ರಸ್ತೆಯಲ್ಲಿ, ರಾಮದುರ್ಗದಿಂದ ಆಗ್ನೇಯದಲ್ಲಿ 13 ಕಿಮೀ ದೂರದಲ್ಲಿರುವ ಸ್ಥಳವು ಐತಿಹಾಸಿಕ ಮತ್ತು ವ್ಯಾಪಾರದ ಕೇಂದ್ರ. ಇದು 1858ನೇಯ ನರಗುಂದದ ಬಂಡಾಯದೊಂದಿಗೆ ಸಂಬಂಧ ಹೊಂದಿತ್ತು. ಈ ಸ್ಥಳದಲ್ಲಿ, ಸಿ. ಜೆ. ಮ್ಯಾನ್‌ಸನ್ನನು ಇಲ್ಲಿನ ಮಾರುತಿ ದೇವಾಲಯದಲ್ಲಿ ತಂಗಿದ್ದಾಗ, 29ನೇಯ ಮೇ 1858 ರಂದು ಬಾಬಾ ಸಾಹೇಬನಿಂದ ಹತನಾದನು. ಈ ಸ್ಥಳವು ಭಾರಿ ಪ್ರಮಾಣದ ನೇಕಾರಿಕೆ ಮತ್ತು ಖಾದಿ ತಯಾರಿಕೆಗೆ ಪ್ರಸಿದ್ಧಿಯಾಗಿದೆ. ಇಲ್ಲಿ ಗಾಂಧಿ ಆಶ್ರಮವೂ ಇದೆ. ಗದಗಿನ ಶಿವಾನಂದ ಮಠದ ಪೂಜಾರ್ಹರಾದ ಸ್ವಾಮಿ ಶಿವಾನಂದರೂ ಮತ್ತು ಅವರ ಪುತ್ರರಾದ ಆತ್ಮಾನಂದ ಸ್ವಾಮಿಯವರೂ ಈ ಸ್ಥಳಕ್ಕೆ ಸೇರಿದವರು. ಆತ್ಮಾನಂದರ ಸಮಾಧಿಯು ಇಲ್ಲಿ ಇರುತ್ತದೆ. ಈ ಊರಿನಲ್ಲಿ ಒಂದು ಪುರ ಪಂಚಾಯತಿಯಿದೆ. ಇಲ್ಲಿಂದ ಸುಮಾರು ಮೂರು ಕಿಮೀ ದೂರದಲ್ಲಿ ಶಬರಿ ಕೊಳ್ಳ ಎಂಬುದು ಸಣ್ಣದಾದರೂ, ಪ್ರಕೃತಿ ಸೌಂದರ್ಯದಿಂದ ಕೂಡಿದ ಪ್ರಶಾಂತವಾದ ಸ್ಥಳವಿದೆ. ಈ ಸ್ಥಳವು ವಿಹಾರಕ್ಕೂ, ಮತ್ತು ಇಲ್ಲಿರುವ ಶಬರಿಯ ದೇವಾಲಯದಿಂದ ಯಾತ್ರೆಗೂ ಪ್ರಸಿದ್ಧಿಯಾಗಿದೆ. ಸುರೇಬಾನಿಗೆ ಸಮೀಪದಲ್ಲಿರುವ ಅವರಾದಿಯಲ್ಲಿ ಖ್ಯಾತ ಫಲಹಾರೇಶ್ವರ ವೀರಶೈವ ಮಠವಿದ್ದು ಇದನ್ನು 1820ರಲ್ಲಿ ಶಿವಯೋಗೀಶ್ವರಸ್ವಾಮಿಗಳು ಸ್ಥಾಪಿಸಿದರು. ಈ ಭಾಗದಲ್ಲಿ ತುಂಬಾ ಗೌರವಾದರಗಳಿಗೆ ಪಾತ್ರವಾದ ಮಠವಾಗಿದೆ. ತೊರಗಲ್ಲ ರಾಮದುರ್ಗದ ಪಶ್ಚಿಮಕ್ಕೆ ಬೆಳಗಾವಿ ರಸ್ತೆಯಲ್ಲಿ ಹತ್ತು ಕಿಮೀ ದೂರದಲ್ಲಿದೆ. ಇದು ಮಲಪ್ರಭಾ ನದಿಯಿಂದ ಸುತ್ತುವರಿದಿದ್ದು ಈ ತಾಲೂಕಿನ ಇನ್ನೊಂದು ಐತಿಹಾಸಿಕ ಸ್ಥಳವಾಗಿದೆ. ಇದರ ಮೊದಲಿನ ಹೆಸರು ಖಾನ್‌ಜುನ್ನಿಪೇಟೆ ಅಥವಾ ಜುನ್ನಿಪೇಟೆ. ಇಲ್ಲಿ ಅನೇಕ ಅಳ್ವೇರಿಗಳನ್ನು ಹೊಂದಿರುವ ಬೃಹದಾಕಾರದ ಕೋಟೆಯ ಅವಶೇಷಗಳು, ಅರಮನೆ, ಅನೇಕ ಪ್ರಾಚೀನ ದೇವಾಲಯಗಳ ಸಮೂಹ, ವಿಶೇಷ ಗೌರವಕ್ಕೆ ಪಾತ್ರವಾದ ಸುಮಾರು ಆರುನೂರು ವರ್ಷ ಪುರಾತನವಾದ ಇತ್ತೀಚೆಗೆ ಪುನರ್ನಿರ್ಮಾಣಗೊಂಡ ಗಚ್ಚಿನ ಹಿರೇಮಠವೆಂಬ ವೀರಶೈವ ಮಠ ಇವೆಲ್ಲ ಇವೆ. ಹಿಂದೆ ಇದು ಕೊಲ್ಲಾಪುರದ ರಾಜರ ಆಶ್ರಿತ ಜಹಗೀರದಾರರ ಕೇಂದ್ರವಾಗಿತ್ತು.

**ರಾಮನಗರ :** (ಬೆಂಗಳೂರು ಜಿ; ಉಪವಿಭಾಗ ಮತ್ತು ತಾ. ಕೇ; ಜನ: 44,005) ರಾಮನಗರವು ಬೆಂಗಳೂರಿನಿಂದ ನೈಋತ್ಯದಲ್ಲಿ 48 ಕಿಮೀ ದೂರದಲ್ಲಿದೆ. ಈ ಊರಿನ ಎಡ ಪಕ್ಕದಲ್ಲಿ ಅರ್ಕಾವತಿ ನದಿಯು ಹರಿಯುತ್ತದೆ. ಈಗಿನ ಈ ಪಟ್ಟಣವನ್ನು ದಿವಾನ್ ಪೂರ್ಣಯ್ಯನವರು 1800ರಲ್ಲಿ, ಈ ಊರಿನ ಮೂಲಕ ಹಾದುಹೋಗುತ್ತಿದ್ದ ರಸ್ತೆಯನ್ನು ರಕ್ಷಿಸುವ ಸಲುವಾಗಿ ಸ್ಥಾಪಿಸಿ ಆಗಿನ ರೆಸಿಡೆಂಟ್ ಆಗಿದ್ದ ಸರ್ ಬಾರಿ ಕ್ಲೋಸ್ ಅವರ ಗೌರವಾರ್ಥ, ಕ್ಲೋಸ್‌ಪೇಟೆ ಎಂದು ನಾಮಕರಣ ಮಾಡಿದರು. ಸ್ವಾತಂತ್ರ್ಯ ನಂತರ ಇದಕ್ಕೆ ರಾಮನಗರವೆಂಬ ಹೆಸರನ್ನು ಕೊಡಲಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರಿಂದ ಸ್ಥಾಪಿತವಾಯಿತೆನ್ನಲಾದ ಅರ್ಕೇಶ್ವರ ದೇವಾಲಯವು ಇಲ್ಲಿ ನದಿಯ ದಡದಲ್ಲಿದೆ. ಈ ದೇವಾಲಯದ ಆವರಣದಲ್ಲಿ ಒಂದು ಸಣ್ಣ ಗೋಪಾಲಕೃಷ್ಣ ದೇವಾಲಯವೂ ಇದೆ. ಕನ್ನಿಕಾಪರಮೇಶ್ವರಿ ದೇವಾಲಯವು ಇಲ್ಲಿನ ಇನ್ನೊಂದು ಮುಖ್ಯ ದೇವಾಲಯ. ಶ್ರೀರಾಮ ಮತ್ತು ಆಂಜನೇಯ ದೇವಾಲಯಗಳು, ಇಲ್ಲಿನ ಪ್ರಾಚೀನ ದೇವಾಲಯಗಳು. ಈ ಊರಿನ ಬಡಾವಣೆಯೇ ಆದ, ಐಜೂರಿನ ಬಳಿ ಬೆಟ್ಟದ ಬುಡದಲ್ಲಿ ಸಂತ ಮಹೇಶಯ್ಯ ಮತ್ತು ಶಾಂತಯ್ಯ ಅವರ ಗದ್ದುಗೆಗಳೂ ಆದಿ ಮಹಾದೇವಮ್ಮ ಎಂದು ಹೇಳುವ ಒಂದು ಶಿಲೆ ಮತ್ತು ಅನೇಕ ವೀರಗಲ್ಲುಗಳೂ ಇವೆ. ಇಲ್ಲಿನ ಮುಸ್ಲಿಂ ಜನಗಳು, ಅರ್ಕಾವತಿ ತೀರದಲ್ಲಿರುವ ಪೀರಾನ್ ಷಾವಲಿಯವರ ದರ್ಗಾವನ್ನು ವಿಶೇಷ ಭಕ್ತಿಯಿಂದ ಕಾಣುತ್ತಾರೆ. ಈ ಊರಿನಲ್ಲಿ ಅನೇಕ ಮಸೀದಿಗಳು ಮತ್ತು ದರ್ಗಾಗಳೂ ಇವೆ. ಊರಿನ ಮಧ್ಯದಲ್ಲಿ ರೆಸಿಡೆಂಟ್ ಕ್ಲೋಸ್‌ನ ಗೌರವಾರ್ಥವಾಗಿ ನಿರ್ಮಿಸಲಾದ ಸ್ಮಾರಕವಿದೆ. ಈ ಊರು ರೇಷ್ಮೆಯ ವ್ಯಾಪಾರದ ಪ್ರಮುಖ ಕೇಂದ್ರ. ಕರ್ನಾಟಕ ಕರಕುಶಲ ವಸ್ತು ನಿಗಮದ ಒಂದು ಘಟಕವೂ, ಕುಶಲ ಕಲಾಕಾರರ ತರಬೇತಿ ಕೇಂದ್ರವೂ ಇಲ್ಲಿ ಕಾರ್ಯ ನಿರ್ವ

ಹಿಸುತ್ತಿವೆ. ಇಲ್ಲಿ ಸುಂದರವಾದ ಮಣ್ಣಿನ ಗೊಂಬೆಗಳನ್ನು ತಯಾರಿಸುತ್ತಾರೆ. ಇಲ್ಲಿ ಪುರಸಭೆಯಿದೆ. ರಾಮನಗರದಿಂದ ಉತ್ತರದಲ್ಲಿ ಮೂರು ಕಿಮೀ ದೂರದಲ್ಲಿ ರಾಮಗಿರಿ ಬೆಟ್ಟವಿದೆ. ಈ ಬೆಟ್ಟದ ಮೇಲಿರುವ ದೇವಾಲಯದ ದೇವರ ಹೆಸರಿನಿಂದ, ಈ ಬೆಟ್ಟಕ್ಕೆ ರಾಮಗಿರಿ ಎಂಬ ಹೆಸರಾಯಿತು. ಇದು ಹಳ್ಳಿಮಾಳ ಗ್ರಾಮದ ಗಡಿಗೆ ಸೇರಿದೆ. 1800ರಲ್ಲಿ ಈಗಿರುವ ಸ್ಥಳಕ್ಕೆ ರಾಮನಗರವನ್ನು ಬದಲಾಯಿಸುವವರೆಗೆ ರಾಮನಗರವು ಈ ಬೆಟ್ಟದ ಬುಡದಲ್ಲೇ ಇತ್ತು. ಬೆಂಗಳೂರಿನ ಕೆಂಪೇಗೌಡನಿಂದ ನಿರ್ಮಿತವಾದುದೆಂದು ಹೇಳಲಾದ ಒಂದು ಕೋಟೆ ಇಲ್ಲಿ ಇತ್ತು. ಬೆಟ್ಟದ ತುದಿಯಲ್ಲಿ ಶ್ರೀರಾಮ ಮತ್ತು ರಾಮೇಶ್ವರ ಎಂಬ ದೇವಾಲಯಗಳಿವೆ. ರಾಮನಗರಕ್ಕೆ 15 ಕಿಮೀ ದೂರದಲ್ಲಿ ರೇವಣಸಿದ್ಧೇಶ್ವರ ಬೆಟ್ಟ ಎಂಬ ಬೆಟ್ಟ ಇದೆ. ಇದು ಶರಣ ರೇವಣಸಿದ್ಧರ ಜನ್ಮಸ್ಥಾನವೆಂದು ನಂಬಲಾಗಿದೆ. ಬೆಟ್ಟದ ಮೇಲೆ ಹಳೆಯದಾದ ಭೀಮೇಶ್ವರ ದೇವಾಲಯವಿದೆ. ಇದಕ್ಕೆ ಸ್ವಲ್ಪ ದೂರದಲ್ಲಿ ಒಂದು ಪ್ರಾಕೃತಿಕ ಗುಹೆಯಿದೆ. ಇದರಲ್ಲಿ ಒಂದು ಲಿಂಗವನ್ನು ಪ್ರತಿಷ್ಠಾಪಿಸಲಾಗುತ್ತದೆ. ಈ ಗುಹೆಯಲ್ಲಿ ಶರಣ ರೇವಣಸಿದ್ಧರು ತಪಸ್ಸು ಮಾಡಿದರೆಂದು ಹೇಳಲಾಗುತ್ತದೆ. ಬೆಟ್ಟದ ತುದಿಯಲ್ಲಿ ಶರಣ ರುದ್ರಮುನಿ ಮತ್ತು ಶರಣ ಸಿದ್ಧರಾಮೇಶ್ವರರ ಜ್ಞಾಪಕಾರ್ಥವಾಗಿ ನಿರ್ಮಿಸಲಾದ ಎರಡು ಶಿವಾಲಯಗಳಿವೆ. ದೂರದ ವಿವಿಧ ಭಾಗಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತಾದಿಗಳು ಇಲ್ಲಿಗೆ ಬರುತ್ತಾರೆ. ಕೆಲವರು ಇಲ್ಲಿಯೇ ಸ್ವಲ್ಪ ಕಾಲ ತಂಗಿದ್ದು ದೇವರ ಅರ್ಚನೆ ಮಾಡಿ, ಪಿಶಾಚಾದಿಗಳ ಮತ್ತು ಕ್ರೂರ ಗ್ರಹಗಳ ಗ್ರಹಚಾರವನ್ನು ಶಮನ ಮಾಡಿಕೊಳ್ಳುವರೆಂದು ಹೇಳಲಾಗುತ್ತದೆ.

ರಾಯಚೂರು : (ಜಿ. ಉಪವಿಭಾಗ ಮತ್ತು ತಾ. ಕೇ; ಜನ: 1,24,762) ರಾಯಚೂರು ಬೆಂಗಳೂರಿನಿಂದ 475 ಕಿಮೀ ದೂರದಲ್ಲಿರುವ ಮುಖ್ಯವಾದ ವ್ಯಾಪಾರ, ಕೈಗಾರಿಕೆ ಮತ್ತು ವಿದ್ಯಾಸಂಸ್ಥೆಗಳ ಕೇಂದ್ರ. ಇದು ಬಹಳ ಪ್ರಾಚೀನವಾದ ಸ್ಥಳ. ದುರ್ಗಮವಾದ ಇಲ್ಲಿನ ದುರ್ಗದ ಕೋಟೆಯನ್ನು ವಾರಂಗಲ್ಲಿನ ರುದ್ರದೇವರಾಜನು ಪೂರ್ಣಮಾಡಿದನು. ನಂತರ ಮಲ್ಲಿಕ್‌ಕಾಫರನ ದಂಡಯಾತ್ರೆಯ ಪರಿಣಾಮವಾಗಿ, ಇದು ಕಾಕತೀಯರಿಂದ ದೆಹಲಿ ಸುಲ್ತಾನರ ವಶಕ್ಕೆ ಹೋಯಿತು. ಅನಂತರ ವಿಜಯನಗರ ಮತ್ತು ಬಹಮನಿ ಸುಲ್ತಾನರ ವಶವಾಯಿತು. ವಿಜಾಪುರ ಸುಲ್ತಾನರ, ಮುಘಲರ ಮತ್ತು ಅಸಫಜಾಹಿ ದೊರೆಗಳ ಆಳ್ವಿಕೆಗೆ ಇದು ಒಳಪಟ್ಟಿದ್ದಿತೆಂದು ತಿಳಿಸುವ ಅನೇಕ ಪರ್ಶಿಯನ್ ಶಾಸನಗಳು ಕೋಟೆಯಲ್ಲಿವೆ. ವಿಜಾಪುರ ಸುಲ್ತಾನರ ಕಾಲದ ದೊಡ್ಡ ಫಿರಂಗಿಯೊಂದನ್ನು ಇಲ್ಲಿನ ಕೋಟೆಯ ಮೇಲೆ ಸ್ಥಾಪಿಸಲಾಗಿದೆ. ಇಲ್ಲಿನ ಹೊರಕೋಟೆಯ ಮೇಲಿರುವ ಕನ್ನಡ-ತೆಲುಗು ಶಾಸನದಿಂದ, ಈ ಕೋಟೆಯನ್ನು ಕಾಕತೀಯ ರುದ್ರಮದೇವಿಯ ಮಂತ್ರಿಯಾದ ಗೋರೆ ಗಂಗಯ್ಯರೆಡ್ಡಿ ಎಂಬುವವನು ಕ್ರಿ.ಶ. 1294ರಲ್ಲಿ ಸ್ಥಾಪಿಸಿದನೆಂದು ತಿಳಿದು ಬರುತ್ತದೆ. ಈ ಶಾಸನವನ್ನು ಕೆತ್ತಲಾಗಿರುವ ಕಲ್ಲು, ಈ ಕೋಟೆಯಲ್ಲೇ ಅತ್ಯಂತ ದೊಡ್ಡದಾಗಿದ್ದು, 41 ಅಡಿ ಉದ್ದವಾಗಿದೆ. ಈ ಬೃಹದಾಕಾರದ ಶಾಸನದ ಪಕ್ಕದಲ್ಲೇ ಇನ್ನೊಂದು ಕಲ್ಲಿನ ದೊಡ್ಡ ಫಲಕವಿದೆ. ಇದರಲ್ಲಿ ಈ ಬೃಹತ್‌ಪ್ರಮಾಣದ ಶಾಸನವನ್ನು ಎಮ್ಮೆಯ ಗಾಡಿಯಲ್ಲಿ ಹೇರಿಕೊಂಡು ಬಂಡೆಯ ಮೇಲಿಂದ ಕೋಟೆಗೆ ಸಾಗಿಸುತ್ತಿರುವ ದೃಶ್ಯ ಬಲು ಸುಂದರವಾಗಿ ಕೆತ್ತಲ್ಪಟ್ಟಿದೆ. ಇಲ್ಲಿರುವ ಮೂರನೇಯ ಕಲ್ಲಿನ ಮೇಲೆ ಬಹುಶಃ ರುದ್ರಮದೇವಿಗೇ ಸಂಬಂಧಿಸಿದ್ದಿರಬೇಕೆಂದು ಹೇಳಲಾದ, ಮೆರವಣಿಗೆಯ ಶಿಲ್ಪವಿದೆ. ಜೈನ ಶಿಲ್ಪಗಳು ಮತ್ತು 13-14 ಶತಮಾನದ ಶಾಸನಗಳನ್ನು ಕೋಟೆಯ ಗೋಡೆಗೆ ಅನೇಕ ಕಡೆಗಳಲ್ಲಿ ಅಳವಡಿಸಲಾಗಿದೆ. ಮತ್ತು ಊರಿನ ಅನೇಕ ಭಾಗಗಳಲ್ಲಿ ಅವು ಕಂಡುಬರುತ್ತವೆ. ಹೊರಕೋಟೆಗೆ ಐದು ದಿಡ್ಡಿಬಾಗಿಲುಗಳಿವೆ. ಒಳಗಿನ ಕೋಟೆಗೆ ಪಶ್ಚಿಮದಲ್ಲಿ ಶೈಲಾನಿ ದರವಾಜಾ, ಮತ್ತು ಪೂರ್ವದಲ್ಲಿ ಸಿಕಂದರಿ ದರವಾಜಾಗಳೆಂಬ ದಿಡ್ಡಿಬಾಗಿಲುಗಳಿವೆ. ಸಾರಂಗಿ ದರವಾಜಾವು ವಿಶೇಷವಾಗಿ ವರ್ಣಚಿತ್ರ ಮತ್ತು ಶಿಲ್ಪಗಳಿಂದ ಅಲಂಕಾರಯುಕ್ತವಾಗಿತ್ತು. ಈ ಊರಿನಲ್ಲಿ ಏಕ್‌ಮಿನಾರ್ ಮಸೀದಿಯಿದೆ. ಇಲ್ಲಿರುವ ಒಂದು ಪರ್ಶಿಯನ್ ಭಾಷೆಯ ಶಾಸನ ಪ್ರಕಾರ ಈ ಮಸೀದಿಯು ಹಿಜಿರಾ 919ರಲ್ಲಿ ಅಂಬರ್‌ನಿಂದ ಮೊಹಮದ್ ಷಾ ಬಹಮನಿಯ ಆಳ್ವಿಕೆಯಲ್ಲಿ ನಿರ್ಮಾಣವಾಯಿತು. ಈ ಮಸೀದಿಯಲ್ಲಿಯೂ, ಪ್ರವೇಶದ್ವಾರದ ಚಾವಣಿಯನ್ನು ಎತ್ತಿಹಿಡಿದಿರುವ ಕಂಬಗಳು ಚಾಳುಕ್ಯ ಸ್ತಂಭಗಳು. ಒಂಟಿ ಮಿನಾರೆಟ್ಟು 65 ಅಡಿ ಎತ್ತರ, 13 ಅಡಿ ವ್ಯಾಸವುಳ್ಳದ್ದಾಗಿದ್ದು, ದೌಲತಾಬಾದಿನ ಚಾಂದ್‌ಮಿನಾರನ್ನು ವಿಶೇಷವಾಗಿ ಹೋಲುತ್ತದೆ. ಬಹುಶಃ ಇದನ್ನು ಅಜಾನ್ ಗೋಪುರವಾಗಿ ಉಪಯೋಗಿಸುತ್ತಿರಬೇಕು. ಈ ಕೋಟೆಯಲ್ಲಿರುವ ಜಾಮಿ ಮಸೀದಿ ಇನ್ನೊಂದು ಸುಂದರ ಕಟ್ಟಡ. ಕೋಟೆಯ ಹೊರಗೆ ಇನ್ನೊಂದು ಜಾಮಿ ಮಸೀದಿಯಿದೆ. ಇದು ಈ ಊರಿನಲ್ಲೇ ಅತ್ಯಂತ ದೊಡ್ಡದಾದ ಮಹಮ್ಮದೀಯರ ಪ್ರಾರ್ಥನಾಸ್ಥಳ. ಸಮೀಪದ ದೇವಸಾರ ಗ್ರಾಮದಲ್ಲಿರುವ ವೀರಭದ್ರಸ್ವಾಮಿ ದೇವಾಲಯ, ರಾಯಚೂರಿನಲ್ಲಿರುವ ರಾಮಲಿಂಗೇಶ್ವರ ಮತ್ತು ಮಾಣಿಕ್ಯಪ್ರಭು ದೇವಾಲಯಗಳು, ಜಹೀರ್ ಗುಲ್ಷನ್ ಎಂಬ ರೈಲ್ವೆ ನಿಲ್ದಾಣಕ್ಕೆ ಪಕ್ಕದಲ್ಲಿರುವ ಉದ್ಯಾನ ಇತರ ಮುಖ್ಯ ಆಕರ್ಷಣೆಗಳು. ರಾಯಚೂರು ತಾಲೂಕಿನ ಮಲಿಯಾಬಾದಿನಲ್ಲಿ ಒಂದು ಕೋಟೆಯಿದ್ದು, ಇದು ಪ್ರಾಚೀನ ಹಿಂದೂ ರಾಜರ ಕೋಟೆಯಾಗಿದ್ದು, ಈಗ ಜೀರ್ಣಾವಸ್ಥೆಯಲ್ಲಿದೆ. ಮೊದಲು ಈ ಸ್ಥಳವನ್ನು ಮಲ್ಲಬಂಡಾ ಎಂದು ಕರೆಯುತ್ತಿದ್ದರು. ಕೆಂಪುಶಿಲೆಯಲ್ಲಿ ಕೆತ್ತಲಾದ ಎರಡು ಆನೆಗಳನ್ನು ಕೋಟೆಯ ಒಳಗೆ ದಿಡ್ಡಿಬಾಗಿಲಿನ ಎರಡು ಕಡೆಯಲ್ಲಿಯೂ ಇಡಲಾಗಿದೆ. ಕಾಕತೀಯ ರಾಜರ ಶಾಸನವೂ ಇಲ್ಲಿದೆ. ರಾಯಚೂರಿನಿಂದ ಸುಮಾರು 30 ಕಿಮೀ ಈಶಾನ್ಯದಲ್ಲಿರುವ ಕೊರವ (ಕೊಲನ್) ನಾರದಗಡ್ಡೆ (ಜನ: 319) ಕೃಷ್ಣಾನದಿಯಿಂದ ಆವೃತವಾದ ಸುಂದರ ದ್ವೀಪ.

ಇದೊಂದು ಪವಿತ್ರ ಸ್ಥಳವಾಗಿದ್ದು, ಇಲ್ಲಿ ನಾರದ ಮಹರ್ಷಿಯು ತಪಸ್ಸು ಮಾಡಿದನೆಂದು ಹೇಳಲಾಗಿದ್ದು, ಇಲ್ಲಿ ನಾರದ ಮಹರ್ಷಿಯ ದೇವಾಲಯ, ಖ್ಯಾತ ವೀರಶೈವಮಠ, ಶತಮಾನಗಳ ಹಿಂದೆ ಜೀವಿಸಿದ್ದ, ಅಧ್ಯಾತ್ಮಿಕ ಶಕ್ತಿಯನ್ನು ಹೊಂದಿದ್ದ ಪ್ರಖ್ಯಾತನಾದ ವಿರಾಗಿ ಚನ್ನಬಸವಸ್ವಾಮಿಯ ಸಮಾಧಿ, ಶಿವಯೋಗಪೀಠ ಮತ್ತು ಬಸವೇಶ್ವರ ದೇವಾಲಯಗಳಿವೆ. ನಾರದ ಗಡ್ಡೆಯ ಸಮೀಪದಲ್ಲಿ ಕೂರ್ಮಗಡ್ಡೆ (ಕೂರ್ಮಕ್ಷೇತ್ರ ಅಥವಾ ಕುರವಾಕಲ) ಇದೆ. ಇಲ್ಲಿ ದತ್ತಾತ್ರೇಯ ಪೀಠ ಮತ್ತು ಶ್ರೀಪಾದ ವಲ್ಲಭಸ್ವಾಮಿಯ ಸಮಾಧಿಗಳಿವೆ.

**ರಾಯಬಾಗ್ :** (ಬೆಳಗಾವಿ ಜಿ; ತಾ. ಕೇ; ಜನ: 9,635) ರಾಯಬಾಗ್ ಬೆಂಗಳೂರಿನಿಂದ ವಾಯುವ್ಯದಲ್ಲಿ 608 ಕಿಮೀ ಹಾಗೂ ಬೆಳಗಾವಿಯಿಂದ ಈಶಾನ್ಯಕ್ಕೆ ಸುಮಾರು 96 ಕಿಮೀ ದೂರದಲ್ಲಿದೆ. ಹದಿನೈದನೇಯ ಶತಮಾನದ ಒಂದು ಶಾಸನದ ಪ್ರಕಾರ ಈ ಸ್ಥಳದ ಹೆಸರು ಬಾಗಿ ಎಂದಿದೆ. ಹನ್ನೊಂದನೇಯ ಶತಮಾನದ ಸಮಯಕ್ಕೆ ಇದು ಜೈನರ ಮುಖ್ಯ ಕೇಂದ್ರವಾಗಿದ್ದಿತೆಂದು ಗೊತ್ತಾಗುತ್ತದೆ. 15ನೇಯ ಶತಮಾನ ದಲ್ಲಿ ಇದು ಸುಪ್ರಸಿದ್ಧ ವ್ಯಾಪಾರ ಕೇಂದ್ರವಾಗಿತ್ತು. ಹದಿನೇಳ ನೇಯ ಶತಮಾನದಲ್ಲಿ ಬ್ರಿಟಿಷರು ಇಲ್ಲಿ ಒಂದು ವ್ಯಾಪಾರಿ ಮಳಿಗೆಯನ್ನು ಸ್ಥಾಪಿಸಿದ್ದರು. ಈ ವ್ಯಾಪಾರ ಕೇಂದ್ರವನ್ನು 1638ರಲ್ಲಿ ಫ್ರೆಂಚ್ ಪ್ರವಾಸಿ ಟ್ರಿವರ್ನಿಯೆ ಸಂದರ್ಶಿಸಿದ್ದ. ಇಲ್ಲಿನ ವ್ಯಾಪಾರದ ವೈಭವವನ್ನು ನೋಡಿ ರಣದುಲ್ಲಾ ಖಾನನು ಹೊಟ್ಟೆಕಿಚ್ಚಿನಿಂದ, ಈ ನಗರವನ್ನು ನಾಶಮಾಡಿದನೆಂದು ಹೇಳುತ್ತಾರೆ. 1948ರ ವರೆಗೆ ಇದು ಕೊಲ್ಲಾಪುರ ಸಂಸ್ಥಾನಕ್ಕೆ ಸೇರಿದ ಶಿರೋಳ ಮಹಲಿನ ಉಪಮಹಲಾಗಿ ಕೊಲ್ಲಾಪುರದ ಮಹಾರಾಜರ ಅಧ್ವಿಕೆಗೆ ಒಳಗಾಗಿತ್ತು. ಅಲ್ಲದೇ ಮಹಾರಾಜರ ಮಳೆಗಾಲದ ನಿವಾಸಸ್ಥಾನವಾಗಿತ್ತು. ಇಲ್ಲಿರುವ ಮಹಾರಾಜರ ವಾಡೆಯನ್ನು 1935ರಲ್ಲಿ ಕಟ್ಟಲಾಯಿತು. ಸ್ಥಳೀಯ ಮಹತ್ವದ ಪ್ರೇಕ್ಷಣೀಯ ಸಂಗತಿಗಳೆಂದರೆ, ನರಸಿಂಹ, ಸಿದ್ದೇಶ್ವರ ಸೋಮೇಶ್ವರ ಅಥವಾ ಸೋಮನಾಥ ಮತ್ತು ಬಂಕನಾಥ ದೇವಾಲಯಗಳು. ಕೊಲ್ಲಾಪುರದ ಮಹಾರಾಜ ವಾಡೆಯು ಊರಿನಿಂದ ಮೂರು ಕಿಮೀ ದೂರದಲ್ಲಿ ಹೊರವಲಯ ದಲ್ಲಿ ಇದ್ದು ವಾಡೆಯಲ್ಲಿ ರಾಮದೇವ ಮತ್ತು ಅಂಬಾಭವಾನಿಯ ದೇವಾಲಯಗಳು ಇವೆ. ರಾಯಬಾಗದ ಇತ್ತೀಚಿನ ದೇವಾಲಯಗಳಲ್ಲಿ ಅಂಬಾಭವಾನಿ, ಬೀರಪ್ಪ ಮತ್ತು ವಿಠ್ಠಲ ದೇವಾಲಯಗಳಲ್ಲದೇ ಆದಿನಾಥ ಮತ್ತು 24ನೇಯ ತೀರ್ಥಂಕರರಿಗೆ ಮೀಸಲಾದ ಎರಡು ಸುಂದರ ಜೈನ ಬಸದಿಗಳು ಸೇರಿವೆ. ಅಲ್ಲದೇ ಇಲ್ಲಿ ಪಾಳುಬಿದ್ದಿರುವ ಜುಮ್ಮಾ ಮಸೀದಿಯೂ ಸೇರಿದಂತೆ ಐದು ಮಸೀದಿಗಳುಂಟು. ಅವುಗಳಲ್ಲಿ ಒಂದು ಮಸೀದಿ ಮತ್ತು ಗುಮ್ಮಟದ ಸಮಾಧಿಯು ಈ ನಗರ ವನ್ನು ಹಿಂದೆ ಕೊಳ್ಳೆಹೊಡೆದ ವಿಜಾಪುರದ ಸುಲ್ತಾನ ರಣದುಲ್ಲಾ ಖಾನನ ಕಾಲದ್ದೆಂದು ಹೇಳಲಾಗಿದೆ. 1960ರಲ್ಲಿ ರಾಯಬಾಗ್ ಮಹಲನ್ನು ತಹಶೀಲ್ ಆಗಿ ಪರಿವರ್ತಿಸಲಾಯಿತು. ಈ ಸ್ಥಳವು ವ್ಯಾಪಾರದ ಕೇಂದ್ರವೂ ಆಗಿದ್ದು, ಕಂಬಳಿಯ ನೇಯ್ಗೆ ಮತ್ತು ಬುಟ್ಟಿ ಹೆಣೆಯುವಿಕೆಗೆ ಪ್ರಖ್ಯಾತವಾಗಿದೆ. 1973ರಲ್ಲಿ ಸ್ಥಾಪಿಸ ಲಾದ ಪುರಸಭೆಯು ಈ ನಗರದ ಆಡಳಿತವನ್ನು ನೋಡಿಕೊಳ್ಳು ತ್ತಿದೆ. ಕುಡಚಿ : (ಜನ : 18,401-1981) ಇದು ರಾಯ ಬಾಗ್ ತಾಲೂಕಿನ ಮಹತ್ವದ ವ್ಯಾಪಾರ ಕೇಂದ್ರ ಮತ್ತು ಪುರ ಸಭೆಯನ್ನು ಒಳಗೊಂಡ ತಾಲೂಕಿನ ದೊಡ್ಡ ಸ್ಥಳವಾಗಿದ್ದು ರಾಯಬಾಗದಿಂದ ಉತ್ತರಕ್ಕೆ 18 ಕಿಮೀ ದೂರದಲ್ಲಿ ಕೃಷ್ಣಾ ನದಿಯ ಬಲದಂಡೆಯ ಮೇಲೆ ಇದೆ. ಇಲ್ಲಿ ಕೃಷ್ಣೆಗೆ ದೊಡ್ಡದಾದ ರೈಲ್ವೆ ಸೇತುವೆಯನ್ನು ನಿರ್ಮಿಸಲಾಗಿದೆ. 1973ರಲ್ಲಿ ಮೊದಲಿಗೆ ಇಲ್ಲಿ ಪುರಸಭೆಯು ರಚನೆಯಾಯಿತು. ಈ ಸ್ಥಳವು ಮಹಮದ್ ಬಿನ್ ತಘಲಕನಿಂದ ಬಹಮನಿರಾಜ್ಯದ ಸ್ಥಾಪಕ ಹಸನ್ ಗಂಗುವಿಗೆ (1347-58) ಮೊದಲನೇಯ ಜಹಗೀರಿಯಾಗಿ ಕೊಡ ಲ್ಪಟ್ಟಿತೆಂದು ತೋರುತ್ತದೆ. ಮೊದಲು ಇದು ಅಥಣಿ ತಾಲೂಕಿ ನಲ್ಲಿತ್ತು. ನಂತರ ಅಂದರೆ 1852ರಲ್ಲಿ ರಾಯಬಾಗ್ ಮಹಾಲಿನ ಭಾಗವಾಯಿತು. ಇಲ್ಲಿ ಅನೇಕ ದರ್ಗಾಗಳು ಮತ್ತು ಮಸೀದಿ ಗಳೂ ಇವೆ. ಈ ಪೈಕಿ ಅನೇಕರನ್ನು ಇಸ್ಲಾಮಿಗೆ ಮತಾಂತರ ಗೊಳಿಸಿದ ಶೇಕ್ ಮೊಹಮದ್ ಸಿರಾಜ್ ಜೆನಾಲಿ ಪೀರ್‌ಜಾದೆ ಮತ್ತು ಅವರ ಶಿಷ್ಯರಾದ ಹಾಗೂ ಅನೇಕ ಧರ್ಮಕಾರ್ಯಗಳನ್ನು ನಡೆಸಿದ್ದ, ಮುಸಪ್ಲಿ ಅಥವಾ ಮೂಸಾಹೇಬ ಇವರುಗಳ ದರ್ಗಾ ಗಳು ವಿಶೇಷವಾದ ಗೌರವಕ್ಕೆ ಪಾತ್ರವಾಗಿವೆ. ಇತ್ತೀಚೆಗೆ ಶಿಲಾ ಮತ್ತು ತಾಮ್ರಯುಗದ ಇತಿಹಾಸಪೂರ್ವ ಕಾಲದ ನೆಲೆಗಳನ್ನು, ಈ ಸ್ಥಳದ ಸಮೀಪದಲ್ಲಿ ಉತ್ಖನನದಲ್ಲಿ ಪತ್ತೆ ಮಾಡಲಾಗಿದೆ. ರಾಯ ಬಾಗ್‌ನಿಂದ ಸುಮಾರು ಎಂಟು ಕಿಮೀ ದೂರದಲ್ಲಿರುವ ಚಿಂಚಲಿ (ಜನ: 8,154) ಯಲ್ಲಿ ಪ್ರಖ್ಯಾತವಾಗಿರುವ ಮಾಯಕ್ಕ ದೇವಾ ಲಯವಿದೆ. ಈ ದೇವಾಲಯವು ಕರ್ನಾಟಕ ಮತ್ತು ಮಹಾ ರಾಷ್ಟ್ರಗಳಲ್ಲಿ ವಿಶೇಷವಾಗಿ ಪವಿತ್ರವೆನಿಸಿದೆ. ಈ ದೇವತೆಯ ಗೌರವಾರ್ಥ ಜಾತ್ರೆ ಮತ್ತು ದನಗಳ ಪರಿಷೆ, ಇಲ್ಲಿ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಉತ್ತರ ಕರ್ನಾಟಕದ ಜಾನಪದ ದಲ್ಲಿ ಜನಾನುರಾಗಿಯಾಗಿರುವ, ಮರಾಠಿಯ ಲಾವಣಿಯ ಮಾದರಿ ಯಲ್ಲಿರುವ ಗೀಗೀ ಪದಗಳು ಇಲ್ಲಿನ ಜಾತ್ರೆಯಲ್ಲಿ 1875ರಲ್ಲಿ ಮೊಟ್ಟಮೊದಲಿಗೆ ಹಾಡಲಾದವು ಎಂದು ಹೇಳಲಾಗಿದೆ. ಇಲ್ಲಿನ ಸ್ಥಳೀಯ ಪಂಚಾಯಿತಿಯು 1920ರಷ್ಟು ಹಿಂದೆಯೇ ಪ್ರಾರಂಭ ವಾಯಿತು.

**ರೋಣ :** (ಧಾರವಾಡ ಜಿ; ತಾ. ಕೇ; ಜನ: 16,363) ರೋಣ ಬೆಂಗಳೂರಿನಿಂದ ವಾಯುವ್ಯದಲ್ಲಿ 544 ಕಿಮೀ ಮತ್ತು ಧಾರವಾಡದಿಂದ ಈಶಾನ್ಯಕ್ಕೆ 94 ಕಿಮೀ ದೂರದಲ್ಲಿದೆ. ಇಲ್ಲಿ 1973ರಲ್ಲಿ ಪುರಸಭೆಯನ್ನು ಆರಂಭಿಸಲಾಯಿತು. ದಂತಕಥೆಗಳ ಪ್ರಕಾರ ರೋಣ ಎನ್ನುವ ಹೆಸರು ದ್ರೋಣ ಎನ್ನುವ ಪದದಿಂದ

ಬಂದಿತು. ದ್ರೋಣನಿಗಾಗಿ ಇಲ್ಲಿ ಒಂದು ದೇವಾಲಯವನ್ನೂ ಬಹಳ ಪ್ರಾಚೀನ ಕಾಲದಲ್ಲಿ ಕಟ್ಟಲಾಗಿತ್ತು. ಇಲ್ಲಿ 12ನೇಯ ಶತಮಾನದ ಶಾಸನಗಳಲ್ಲದೆ ಅನೇಕ ಪ್ರಾಚೀನ ಸ್ಮಾರಕಗಳೂ, ಅವಶೇಷಗಳೂ ಇವೆ. ಇಲ್ಲಿರುವ ದೇವಾಲಯಗಳು ಬಹು ಮಟ್ಟಿಗೆ ಈಶ್ವರನ ದೇವಾಲಯಗಳಾಗಿದ್ದು, ಬಹುತೇಕ ದೇವಾಲಯಗಳು ಪಾಳುಬಿದ್ದಿವೆ. ಪ್ರಾಚೀನ ಕಾಲದಲ್ಲಿ ಇದೊಂದು 105 ಮಹಾಜನಗಳ ಅಗ್ರಹಾರವಾಗಿತ್ತು. ಇಲ್ಲಿ ದೊರಕಿರುವ ಶಾಸನಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಕ್ರಿ. ಶ. 874ಕ್ಕೆ ಸೇರಿದ್ದುದಾಗಿದ್ದು, ರಾಷ್ಟ್ರಕೂಟ ಮೊದಲನೇಯ ಅಮೋಘವರ್ಷನ ಅಳ್ವಿಕೆಯ ಕಾಲಕ್ಕೆ ಸೇರಿದುದಾಗಿದೆ. ದ್ರೋಣ ದೇವಾಲಯದ (ಈಗಿನ ಯಾದವಾಡದ ಬಸವಣ್ಣ) ಹತ್ತಿರ ಇರುವ ಭಾಗಶಃ ಹೂತುಹೋಗಿರುವ ಕ್ರಿ. ಶ. 1111ರ ಶಾಸನವು ಸರಸ್ವತೀದೇವಿಗೆ ಮತ್ತು ತರ್ಕಶಾಸ್ತ್ರಬೋಧನೆಗಾಗಿ ಕೊಡಲಾದ ದತ್ತಿಯ ವಿವರಗಳನ್ನು ತಿಳಿಸುತ್ತದೆ. ಇಲ್ಲಿನ ಇತರ ಗಮನಾರ್ಹ ದೇವಾಲಯಗಳೆಂದರೆ, ಅನಂತಶಯನ, ಸಿದ್ಧೇಶ್ವರ, ಲೋಕನಾಥ, ಸಂಗಮೇಶ್ವರ ದೇವಾಲಯಗಳು ಮತ್ತು ಪಾರ್ಶ್ವನಾಥನಿಗಾಗಿ ನಿರ್ಮಿತವಾದ ಬಸದಿ. ಸುಂದರವಾದ ವೀರಭದ್ರ ದೇವಾಲಯವು ಇತ್ತೀಚೆಗೆ ನಿರ್ಮಿತವಾದುದು. ಪ್ರಾಚೀನ ಮಠಗಳಲ್ಲಿ, ಶಿವಾನಂದಸ್ವಾಮಿ ಮಠ, ಸಿದ್ಧಾರೂಢಮಠ ಮತ್ತು ಸಾಧುಮಠ ಮುಖ್ಯವಾದವು. ಎತ್ತಿನ ಗಾಡಿಗಳು, ಜಟಕಾಗಳು ಮತ್ತು ಮರದ ವಸ್ತುಗಳ ತಯಾರಿಕೆಗೆ ರೋಣವು ಪ್ರಸಿದ್ಧಿಯಾಗಿದೆ. ಗಜೇಂದ್ರಗಡವು (ಜನ: 20,226-1981) ಗಮನಾರ್ಹವಾದ ಐತಿಹಾಸಿಕ ಸ್ಥಳ. ಇದು ರೋಣ ತಾಲೂಕಿನಲ್ಲಿ ಅತ್ಯಂತ ದೊಡ್ಡದಾದ ಸ್ಥಳ. ಇದು ಬೆಂಗಳೂರಿನಿಂದ ವಾಯುವ್ಯದಲ್ಲಿ 485 ಕಿಮೀ ಹಾಗೂ ಧಾರವಾಡದಿಂದ ಈಶಾನ್ಯದಲ್ಲಿ 136 ಕಿಮೀ ದೂರದಲ್ಲಿಯೂ ಇದೆ. ಇಲ್ಲಿರುವ ದುರ್ಗಮವಾದ ಕೋಟೆ, ಅಂದರೆ ಗಜೇಂದ್ರನಷ್ಟೇ ಬಲವತ್ತರವಾದ ಕೋಟೆಯು ಇಲ್ಲಿನ ಪಕ್ಕದ ಬೆಟ್ಟದಲ್ಲಿರುವುದರಿಂದ, ಇದಕ್ಕೆ ಆ ಹೆಸರು ಬಂದಿದೆಯೆಂದು ಹೇಳಲಾಗಿದೆ. ಈ ಬೆಟ್ಟದ ಮೇಲೆ ಶಿವಾಜಿಯಿಂದ ನಿರ್ಮಿತವಾಗಿರಬಹುದಾದ ಒಂದು ಕೋಟೆ, ಮದ್ದುಗುಂಡಿನ ಕೋಠಿ ಮತ್ತು ಎರಡು ಕೊಳಗಳಿವೆ. ಇಲ್ಲಿ 1688ರಲ್ಲಿ ದೌಲತ್ ರಾವ್ ಘೋರ್ಪಡೆಯಿಂದ ನಿರ್ಮಿತವಾದ ಮತ್ತೊಂದು ಕೋಟೆಯೂ ಇದೆ. ಇಲ್ಲಿನ ಇತರ ಪ್ರಾಚೀನ ಸ್ಮಾರಕಗಳೆಂದರೆ ವಿರೂಪಾಕ್ಷ, ದುರ್ಗಾದೇವಿ, ರಾಮಲಿಂಗ, ರಾಮದೇವ ಮತ್ತು ಪಾಂಡುರಂಗ ದೇವಾಲಯಗಳು. ಇಲ್ಲಿಂದ ಐದು ಕಿಮೀ ದೂರದಲ್ಲಿ ವಾಯುವ್ಯಕ್ಕಿರುವ ಬೆಟ್ಟದ ಭಾಗದಲ್ಲಿ ಕೆಲವು ಗುಹೆಗಳು ಮತ್ತು ವೀರಭದ್ರ ಮತ್ತು ಕಲ್ಮೇಶ್ವರ ದೇವಾಲಯಗಳೂ ಇವೆ. ಕಲ್ಮೇಶ್ವರ ದೇವಾಲಯದಲ್ಲಿ ಚಾಳುಕ್ಯ ನಾಲ್ವಡಿ ಸೋಮೇಶ್ವರನ ಕಾಲದ ಶಾಸನವಿದೆ. ಸೇಉಣ ಸಿಂಘಣ, ವಿಜಯನಗರದ ದೊರೆ ಇಮ್ಮಡಿ ಹರಿಹರ ಮುಂತಾದವರು ನೀಡಿದ ದತ್ತಿಗಳನ್ನೂ ಶಾಸನವು ತಿಳಿಸುತ್ತದೆ. ಗಜೇಂದ್ರಗಡವು ವ್ಯಾಪಾರಕ್ಕೂ ಪ್ರಮುಖವಾಗಿರುವ ಊರು. ಇದರ ಜೊತೆಗೆ ನೇಯ್ಗೆಯ ಮಗ್ಗಗಳೂ ಇಲ್ಲಿ ಹೆಚ್ಚಾಗಿವೆ. ಇಲ್ಲಿ ಪುರಸಭೆಯಿದೆ. ರೋಣದಿಂದ ಹದಿನೆಂಟು ಕಿಮೀ ಈಶಾನ್ಯದಲ್ಲಿ ನರೇಗಲ್ ಇದೆ (ಜನ: 14,183-1981) ಪ್ರಾಚೀನ ಕಾಲದಲ್ಲಿ ನರೆಯಂಗಳ ಎಂದು ಪ್ರಸಿದ್ಧವಾಗಿದ್ದ ಇಲ್ಲಿ ಅನೇಕ ಪ್ರಾಚೀನ ದೇವಾಲಯಗಳಿವೆ. ಇದರಲ್ಲಿ ಮುಖ್ಯವಾದವು ತ್ರಿಪುರಾಂತಕೇಶ್ವರ, ಸೋಮೇಶ್ವರ, ಕಲ್ಮೇಶ್ವರ ಮತ್ತು ಚಂದ್ರಮೌಳೀಶ್ವರ, ಮತ್ತು ಇನ್ನೂ ಅನೇಕ ಆಧುನಿಕ ದೇವಾಲಯಗಳು. ರಾಷ್ಟ್ರಕೂಟ, ಕಲ್ಯಾಣಿ ಚಾಳುಕ್ಯ, ಕಳಚೂರಿ, ಯಾದವ ಮತ್ತು ಹೊಯ್ಸಳ ರಾಜವಂಶಗಳಿಗೆ ಸೇರಿದ ಹತ್ತು ಶಾಸನಗಳು ಇಲ್ಲಿ ದೊರಕಿವೆ. ಇದರ ಉಪಗ್ರಾಮವಾದ ಕೋಡಿಕೊಪ್ಪದಲ್ಲಿ, ಪ್ರಖ್ಯಾತನೂ ಗೌರವಕ್ಕೆ ಪಾತ್ರನೂ ಆದ ಹುಚ್ಚೀರಪ್ಪ ಅಜ್ಜನ ಜ್ಞಾಪಕಾರ್ಥವಾಗಿ ಕಟ್ಟಲಾದ ಮಠವೂ, ಮತ್ತು ಮೊಳೆ ಬ್ರಹ್ಮೇಶ್ವರನಿಗಾಗಿ ನಿರ್ಮಿಸಲಾದ ಪ್ರಾಚೀನ ದೇವಾಲಯವೂ ಇದೆ. ಇಲ್ಲಿ ರಹಮಾನ್‌ಷಾವಲಿಯ ದರ್ಗಾವೂ, ಹೊಸದಾಗಿ ನಿರ್ಮಿತವಾದ ಚರ್ಚೂ ಇವೆ. ಇದು ಪುರಸಭೆಯಿರುವ ಪಟ್ಟಣ.

ಲಕ್ಕುಂಡಿ : (ಧಾರವಾಡ ಜಿ; ಗದಗ ತಾ. 1981ರ ಜನ: 9,400) ಗದಗಿನ ಆಗ್ನೇಯಕ್ಕೆ 12 ಕಿಮೀ ದೂರದಲ್ಲಿ ಲಕ್ಕುಂಡಿ ಇದೆ. ಹಿಂದೆ ಇದಕ್ಕೆ ಶಾಸನಗಳಿಂದ ತಿಳಿಯುವಂತೆ ಲೊಕ್ಕಿಗುಂಡಿ ಎಂಬ ಹೆಸರಿತ್ತು. ಬಹುಶಃ ಇದು ಜೈನ ಯಕ್ಷಿ ಪದ್ಮಾವತಿ ಮತ್ತು ಲೊಕ್ಕಿಗಿಡದ ಸಂಬಂಧದಿಂದ ಇರಬಹುದು. ಪ್ರಾಚೀನ ಇತಿಹಾಸ ಮತ್ತು ಅವಶೇಷಗಳಿಗೆ ಇದು ಮಹತ್ವದ ಸ್ಥಳ. ಇಲ್ಲಿ 50 ದೇವಸ್ಥಾನಗಳಿವೆ ಮತ್ತು ಕಲ್ಯಾಣಿ ಚಾಳುಕ್ಯರ, ಕಳಚೂರ್ಯರ, ಸೇಉಣರ ಮತ್ತು ಹೊಯ್ಸಳರ ಕಾಲದ 29 ಶಿಲಾಶಾಸನಗಳು ಇವೆ. ಹಿಂದಿನ ಕಾಲದಲ್ಲಿ ಇದು ಬಹಳ ಪ್ರಸಿದ್ಧವಾದ ಒಂದು ಸಾವಿರ ಮಹಾಜನರನ್ನೊಳಗೊಂಡ ಅಗ್ರಹಾರ ಹಾಗೂ ಶಿಕ್ಷಣ ಕೇಂದ್ರವಾಗಿತ್ತು. ಕ್ರಿ. ಶ. 1007ರಲ್ಲಿ ಇಲ್ಲಿ ಸುಪ್ರಸಿದ್ಧ ಕನ್ನಡ ಕವಿ ರನ್ನನ ಆಶ್ರಯದಾತೆ ದಾನಚಿಂತಾಮಣಿ ಅತ್ತಿಮಬ್ಬೆಯು ಒಂದು ಬ್ರಹ್ಮ ಜಿನಾಲಯವನ್ನು ಕಟ್ಟಿಸಿದಳು. ಇಲ್ಲಿ ನಾಣ್ಯಗಳನ್ನು ಟಂಕಿಸುತ್ತಿದ್ದರು ಮತ್ತು ಇಲ್ಲಿ ಟಂಕಿಸುತ್ತಿದ್ದ ಬಂಗಾರದ ನಾಣ್ಯವನ್ನು ಲೊಕ್ಕಿ ಗದ್ಯಾಣವೆಂದು ಕರೆಯಲಾಗುತ್ತಿತ್ತು. 9ರಿಂದ 14ನೇಯ ಶತಮಾನದ ವರೆಗಿನ ಕಾಲದಲ್ಲಿ ಇದು ಒಂದು ಪ್ರಮುಖ ನಗರವಾಗಿತ್ತು. ಕ್ರಿ. ಶ. 1192ರಲ್ಲಿ ಹೊಯ್ಸಳ ವೀರ ಬಲ್ಲಾಳ (ಕ್ರಿ. ಶ. 1172-1211) ಇಲ್ಲಿ ವಾಸವಾಗಿದ್ದು, ಇದನ್ನು ತನ್ನ ಎರಡನೇಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಕಲ್ಯಾಣಿ ಚಾಳುಕ್ಯರ ಕಲೆ, ಶಿಲ್ಪಗಳಿಗೆ ಲಕ್ಕುಂಡಿ ಒಂದು ಪ್ರಧಾನ ಕೇಂದ್ರ. ಇಲ್ಲಿನ ದೇವಸ್ಥಾನಗಳೆಲ್ಲವೂ ಸುಂದರವಾದವು ಮತ್ತು ದೊಡ್ಡ ಪ್ರಮಾಣದವು. 1) ಕಾಶಿ ವಿಶ್ವೇಶ್ವರ (ಯಮಳ ದೇವಾಲಯ), 2) ಮಲ್ಲಿಕಾರ್ಜುನ, 3) ಪಾಲಗುಂದ

ಬಸವಣ್ಣ, 4) ವಿರೂಪಾಕ್ಷ, 5) ಲಕ್ಷ್ಮೀನಾರಾಯಣ, 6) ಮಾಣಿಕೇಶ್ವರ, 7) ವೀರಭದ್ರ, 8) ನನ್ನೇಶ್ವರ, 9) ಸೋಮೇಶ್ವರ, 10) ನೀಲಕಂಠೇಶ್ವರ, 11) ಕುಂಭಾರೇಶ್ವರ, 12) ನಗರದೇವ ಮತ್ತು 13) ವಿಶ್ವನಾಥ ಇವು ಪ್ರಮುಖವಾದ ದೇವಸ್ಥಾನಗಳು. ಇವುಗಳಲ್ಲಿ ಅತ್ಯಂತ ಸುಂದರವೂ ಅಲಂಕಾರಪ್ರಾಯವೂ ವಿಸ್ತಾರವೂ ಆದುದು ಕಾಶಿ ವಿಶ್ವೇಶ್ವರ ದೇವಸ್ಥಾನ. ದೇವಸ್ಥಾನಗಳಲ್ಲಿ ಬಹಳಷ್ಟು ಬಿದ್ದು ಹೋಗಿವೆ ಹಾಗೂ ಅತಿಕ್ರಮಿತವಾಗಿವೆ. ಇಲ್ಲಿ ಒಂದು ಮಹಾವೀರಸ್ವಾಮಿಯ ಜಿನಾಲಯವೂ ಇದೆ. ಇದು ಇಲ್ಲಿನ ಅತ್ಯಂತ ದೊಡ್ಡದೂ ಪ್ರಾಚೀನವಾದುದೂ ಆದ ದೇವಸ್ಥಾನ. ಈ ದೇವಸ್ಥಾನಗಳಲ್ಲದೆ ಇಲ್ಲಿನ ಕೆಲವು ಸೋಪಾನ ಬಾವಿಗಳ ರಚನೆ ತುಂಬಾ ಕಲಾಮಯವೂ ವೈವಿಧ್ಯಮಯವೂ ಆಗಿದೆ. ಬಾವಿಗಳ ಗೋಡೆಗಳ ಒಳಭಾಗದಲ್ಲಿನ ಚಿಕ್ಕ ಚಿಕ್ಕ ಅಲಂಕೃತ ಗೂಡುಗಳಲ್ಲಿ ಈಶ್ವರ ಲಿಂಗಗಳು ಇವೆ. ಇವುಗಳಲ್ಲಿ ಅತ್ಯಂತ ಪ್ರಸಿದ್ಧವಾದದ್ದು ಮಾಣಿಕೇಶ್ವರ ದೇವಸ್ಥಾನದ ಬಳಿಯ ಮುಸುಕಿನ ಬಾವಿ. ಪಾಳುಬಿದ್ದ ಕೋಟೆ ಗೋಡೆಯ ಅವಶೇಷಗಳೂ ಇಲ್ಲಿವೆ. ಇಲ್ಲಿ ಏಳು ಮಸೀದಿಗಳೂ, ಜಿಂದೆ ಷಾ ವಲಿ ಅವರ ದರ್ಗಾವೂ ಇದೆ. ವಾಡಿಕೆಯಿಂದ ಇದು ಹತ್ತಿ ಮತ್ತು ಜೋಳಗಳ ವ್ಯವಸಾಯಕ್ಕೆ ಪ್ರಸಿದ್ಧವಾಗಿದ್ದರೂ ಇಲ್ಲಿ ಹೂದೋಟಗಳ ಅಭಿವೃದ್ಧಿ ಈಚೆಗೆ ತುಂಬಾ ವ್ಯಾಪಕವಾಗಿ ಆಗಿದೆ. ಕುಂಬಾರಿಕೆ, ಕಂಬಳಿ ನೇಯ್ಗೆ ಮತ್ತು ಕೈಮಗ್ಗಗಳು ಇಲ್ಲಿನ ಗ್ರಾಮೋದ್ಯೋಗಗಳು. ಈ ಊರಿಗೆ ನಗರ ಪಂಚಾಯಿತಿ ಇದೆ.

**ಲಕ್ಷ್ಮೇಶ್ವರ :** (ಧಾರವಾಡ ಜಿ; ಶಿರಹಟ್ಟಿ ತಾ; 1981ರ ಜನ: 25,444) ಲಕ್ಷ್ಮೇಶ್ವರ ಬೆಂಗಳೂರಿನ ವಾಯುವ್ಯಕ್ಕೆ 460 ಕಿಮೀ ಹಾಗೂ ಧಾರವಾಡ ಆಗ್ನೇಯಕ್ಕೆ 72 ಕಿಮೀ ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಇದನ್ನು ಪುಲಿಗೆರೆ, ಪೊರಿಗೆರೆ, ಪುರಿಗೆರೆ, ಪುಲಿಕರನಗರ ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ಪ್ರಾಚೀನ ಕನ್ನಡ ಲೇಖಕರು ಮತ್ತು ಅವರ ಕೃತಿಗಳ ಪ್ರಕಾರ ತಿರುಳ್ಗನ್ನಡ ಪ್ರದೇಶದ ಗಡಿಗಳಲ್ಲಿ ಇದೂ ಒಂದಾಗಿದ್ದಿತು. ಸ್ಥಳೀಯರ ಐತಿಹ್ಯದಂತೆ 12ನೇಯ ಶತಮಾನದಲ್ಲಿ ಲಕ್ಷ್ಮರಸ ಎಂಬಾತನು ಕಟ್ಟಿಸಿದ ಲಕ್ಷ್ಮಣೇಶ್ವರ ದೇವಸ್ಥಾನದಿಂದ ಈ ಹೆಸರು ಸ್ಥಳಕ್ಕೆ ಬಂತೆಂದು ಹೇಳುತ್ತಾರೆ ಇದು 1948ರಲ್ಲಿ ಧಾರವಾಡದ ಜಿಲ್ಲೆಗೆ ಸೇರುವ ಮೊದಲು ಮೀರಜ್ (ಹಿರಿಯ) ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ.ಶ. 1887ರಲ್ಲಿಯೇ ಇಲ್ಲಿ ಪುರಸಭೆ ಪ್ರಾರಂಭವಾಯಿತು. ಬಹಳ ಪ್ರಾಚೀನ ಕಾಲದಿಂದಲೂ ಇದು ಸಾಂಸ್ಕೃತಿಕ ಹಾಗೂ ರಾಜಕೀಯ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿತ್ತು. ಪುಲಿಗೆರೆ-300 ಎಂಬ ವಿಭಾಗದ ಆಡಳಿತ ಕೇಂದ್ರವಾಗಿತ್ತು. ಇಲ್ಲಿ ಸಾಕಷ್ಟು ಐತಿಹಾಸಿಕ ದಾಖಲೆಗಳಿವೆ. ಇಲ್ಲಿಯವರೆಗೆ 53 ಶಾಸನಗಳನ್ನು ಇಲ್ಲಿ ಪತ್ತೆಹಚ್ಚಲಾಗಿದೆ. ಅವು ಏಳನೇಯ ಶತಮಾನದಿಂದ ಹಿಡಿದು 16ನೇಯ ಶತಮಾನದವರೆಗಿನ ಅವಧಿಯವಾಗಿದ್ದು, ಅವುಗಳಲ್ಲಿ ಬಹುತೇಕ ಬೇರೆ ಬೇರೆ ಧಾರ್ಮಿಕ ಸಂಸ್ಥೆಗಳಿಗೆ ದಾನವಿತ್ತುದರ ಉಲ್ಲೇಖವಿದೆ. ಇಲ್ಲಿ ಕರ್ನಾಟಕವನ್ನು ಆಳಿದ ಬಹುಪಾಲು ಅಂದರೆ, ಬಾದಾಮಿ ಚಲುಕ್ಯರಿಂದ ಹಿಡಿದು ವಿಜಯನಗರದವರೆಗಿನ ಅರಸರ ಕಾಲದ ಶಾಸನಗಳೂ ಲಭ್ಯವಾಗಿವೆ. ಇಲ್ಲಿನ ಅತ್ಯಂತ ಹಳೆಯದಾಗಿರುವ ವಿನಯಾದಿತ್ಯನ ಉಲ್ಲೇಖವಿರುವ ಶಾಸನವು ಕ್ರಿ.ಶ. 686ರಂದು. ಅನೇಕ ಶಾಸನಗಳಲ್ಲಿ ಇದನ್ನು ರಾಜಧಾನಿ ಪಟ್ಟಣವೆಂದೂ ಮತ್ತು 120 ಮಹಾಜನರ ಒಂದು ಅಗ್ರಹಾರವೆಂದೂ ಉಲ್ಲೇಖಿಸಲಾಗಿದೆ. ಶೈವಪಂಥದ ಮುಖ್ಯ ಸಂಸ್ಥೆಯೆಂದರೆ ಸೋಮೇಶ್ವರ ದೇವಸ್ಥಾನ. ಈ ದೇವಸ್ಥಾನಕ್ಕೆ ಸೇರಿದ ಒಂದು ವಿದ್ಯಾ ಸಂಸ್ಥೆಗೆ ದಾನ ಕೊಟ್ಟ ವಿಷಯವನ್ನು ಕದಂಬ ಇಮ್ಮಡಿ ಜಯಕೇಶಿಯ ಕ್ರಿ ಶ. 1128ರ ಶಾಸನವು ತಿಳಿಸುತ್ತದೆ. ಇಲ್ಲಿ ಜೈನಧರ್ಮವೂ ಪ್ರಬಲವಾಗಿತ್ತೆಂಬುದಕ್ಕೆ ಬಲವಾದ ಆಧಾರವಾಗಿ ಇಲ್ಲಿನ ಶಾಸನಗಳಲ್ಲಿ ಅನೇಕ ಬಸದಿಗಳ ಉಲ್ಲೇಖ ಬರುತ್ತದೆ. ಈಗ ಶಂಖ ಬಸದಿ ಮತ್ತು ಚಿಕ್ಕ ಬಸದಿ ಎಂಬ ಎರಡು ಬಸದಿಗಳು ಮಾತ್ರ ಇವೆ. ಇಲ್ಲಿನ ದೇವಸ್ಥಾನಗಳಲ್ಲಿ ಅತ್ಯಂತ ಹಳೆಯದು ಸೋಮೇಶ್ವರ ದೇವಸ್ಥಾನ. ಹನ್ನೆರಡನೇಯ ಶತಮಾನದ ಶಾಸನಗಳಲ್ಲಿ ಇದನ್ನು ಸೋಮನಾಥದೇವ ಮತ್ತು ಸ್ವಯಂಭೂ ದಕ್ಷಿಣ ಸೋಮನಾಥ ಎಂದು ಹೆಸರಿಸಲಾಗಿದೆ. ಸ್ಥಳೀಯ ಐತಿಹ್ಯದಂತೆ ಇಲ್ಲಿದ್ದ ಜಿನಾಲಯವನ್ನು ಆದಯ್ಯ ಎಂಬ ಶಿವಶರಣನು ಶಿವಾಲಯವಾಗಿ ಪರಿವರ್ತಿಸಿದನು. ಆದಯ್ಯನ ಈ ಭಕ್ತಿಯು ಸೌರಾಷ್ಟ್ರದ ಸೋಮನಾಥನಿಗೆ ತುಂಬ ತೃಪ್ತಿ ಕೊಟ್ಟು ಅವನೇ ಇಲ್ಲಿ ಬಂದು ನೆಲೆಸಿದನೆಂಬುದು ಸ್ಥಳೀಯ ಪ್ರತೀತಿ. ವಿಜಾಪುರದ ಆದಿಲ್ ಷಾಹಿಯ ಆಡಳಿತ ಕಾಲದಲ್ಲಿ ಇಲ್ಲಿ ಸ್ಥಳೀಯ ಆಡಳಿತ ನಡೆಸುತ್ತಿದ್ದ ಅಂಕುಶ್‌ಖಾನ್ ಎಂಬುವವನು ಇಲ್ಲಿನ ಜುಮ್ಮಾ ಮಸೀದಿ (ಕಾಲಿ ಮಸೀದಿ)ಯನ್ನು ಕಟ್ಟಿಸಿದನು. ಮತ್ತು ಇದರ ಹೊರವಲಯದ ಮಂಜಲಾಪುರದ ಒಂದು ದರ್ಗಾದಲ್ಲಿ ಈ ಅಂಕುಶ್‌ಖಾನನ ಸಮಾಧಿ ಸಹ ಇದೆ. ಅಂಕುಶ್‌ಖಾನ್ ಇಲ್ಲೊಂದು ಅರಮನೆಯನ್ನೂ ಕಟ್ಟಿಸಿದ್ದ. ಅದು ಈಗ ಪಾಳುಬಿದ್ದದೆ. ಈ ಪ್ರಾಚೀನ ಅವಶೇಷಗಳಲ್ಲದೆ ಇಲ್ಲಿ ಇನ್ನೂ ಅನೇಕ ಹಳೆಯ ಮತ್ತು ಆಧುನಿಕ ದೇವಸ್ಥಾನಗಳಾದ ಬಾಳೇಶ್ವರ, ಕೋಡಿ ಯಲ್ಲಮ್ಮ, ದುಂಡಿ ಬಸವಣ್ಣ, ಹನುಮಾನ್, ವಿಠ್ಠಲಮಂದಿರ, ಅಂಬಾಭವಾನಿ, ಶಂಕರಮಠ, ರಾಘವೇಂದ್ರಸ್ವಾಮಿ ಮಠ, ಮಹಂತಿನ ಮಠ, ಮುಂತಾದುವಿವೆ. ಅಲ್ಲದೆ ಊರಿನಲ್ಲಿ ಎಂಟು ಮಸೀದಿಗಳು, ಒಂದು ದರ್ಗಾ ಇವೆ. ದೂದ್ ಪೀರಾನ ಉರುಸು ಹಿಂದೂಗಳೂ ಸೇರಿದಂತೆ ಇಲ್ಲಿ ಭಾರಿ ಜನರನ್ನು ಆಕರ್ಷಿಸುತ್ತದೆ.

**ಲಿಂಗಸುಗೂರು :** (ರಾಯಚೂರು ಜಿ; ಉಪವಿಭಾಗ ಹಾಗೂ ತಾ. ಕೇ; ಜನ: 16,878) ಲಿಂಗಸುಗೂರು ಬೆಂಗಳೂರಿಗೆ 435 ಕಿಮೀ ದೂರದಲ್ಲಿ ಇದೆ. 1905ರವರೆಗೆ ಇದು

ಲಿಂಗಸುಗೂರು ಜಿಲ್ಲೆಯ ಆಡಳಿತ ಕೇಂದ್ರವಾಗಿತ್ತು. ಕಲ್ಲಿನ ಕೊಡಲಿ, ಸುತ್ತಿಗೆ, ಬಹುಬೆಲೆಯ ಚಾಲ್ಸಿಡೊನಿ (ಪ್ರಶಸ್ತಿ ಶಿಲೆ), ಕಲ್ಲು ಹೆಕ್ಕಳಿಕೆಗಳು ಮೊದಲಾದ ಶಿಲಾಸಾಧನಗಳನ್ನು ಮತ್ತು ಸಾದಾ ಮಡಿಕೆ, ಕುಡಿಕೆಗಳನ್ನೂ ಇಲ್ಲಿ ಪತ್ತೆ ಹಚ್ಚಲಾಗಿದೆ. ಇಲ್ಲಿ ಒಂದು ಹಳೆಯ ಕೋಟೆ ಇದೆ. ಈಗ ಇದು ಒಂದು ಮುಖ್ಯ ವ್ಯಾಪಾರೀ ಕೇಂದ್ರ. ಇಲ್ಲಿ ಕುಪ್ಪೆರಾಯ ದೇವಸ್ಥಾನ ಮತ್ತು ಒಂದು ಮಾಧ್ವ ಮಠ ಇವೆ. ಜಲದುರ್ಗ ಲಿಂಗಸುಗೂರು ತಾಲೂಕಿನ ಒಂದು ಗ್ರಾಮ. ಇಲ್ಲಿನ ಕೋಟೆ ಪ್ರಸಿದ್ಧವಾದುದು. ಈ ಕೋಟೆಯನ್ನು ಸೇಉಣ ರಾಜಕುಮಾರನೊಬ್ಬ 12ನೇಯ ಶತಮಾನದಲ್ಲಿ ಕಟ್ಟಿಸಿದನೆಂಬ ಉಲ್ಲೇಖ ಇಲ್ಲಿನ ಒಂದು ಶಿಲಾ ಶಾಸನದಲ್ಲಿದೆ. ತಲೇಖಾನ್ ಗ್ರಾಮವು ಅದರ ಜಿನಾಲಯ ಮತ್ತು ಶಾಸನದಿಂದ ಪ್ರಸಿದ್ಧಿ ಪಡೆದಿದೆ. ಹಟ್ಟಿ ಎಂಬಲ್ಲಿ ಬಂಗಾರದ ಗಣಿ ಇದೆ. ಗುರುಗುಂಟದಲ್ಲಿ ಹಿಂದೆ ಇಲ್ಲಿಂದ ಆಳುತ್ತಿದ್ದ ಪಾಳೆಯಗಾರರು ಕಟ್ಟಿಸಿದ ಒಂದು ಅರಮನೆ ಮತ್ತು ಕೋಟೆ ಇವೆ. ಈ ತಾಲೂಕಿನ ಉಳಿದೆರಡು ಮುಖ್ಯ ಸ್ಥಳಗಳು ಮಸ್ಕಿ ಮತ್ತು ಮುದಗಲ್‌ಗಳು. ಮಸ್ಕಿ (ಜನ: 8,688) ಬಹಳ ಹಿಂದೆ ಒಂದು ದೊಡ್ಡ ಮತ್ತು ಪ್ರಸಿದ್ಧವಾಗಿದ್ದ ಊರಾಗಿದ್ದಿರಬಹುದು ಎಂದೆನಿಸುತ್ತದೆ. ಬಹಳ ವ್ಯಾಪಕವಾದ ಭೂ ವಿಸ್ತಾರದಲ್ಲಿ ದೊರೆತಿರುವ ಕಬ್ಬಿಣ ಹಾಗೂ ಬಂಗಾರದ ಅವಶೇಷಗಳು ಮತ್ತು 10 ರಿಂದ 16ನೇಯ ಶತಮಾನಗಳ ಕಾಲಮಾನದ ಶಾಸನಗಳಲ್ಲಿ ಇದನ್ನು ಮಾಸಂಗಿ ಎಂದು ಉಲ್ಲೇಖಿಸಿರುವುದರಿಂದಲೂ ಹಾಗೆನ್ನಿಸುತ್ತದೆ. ಮಸ್ಕಿಯು ರಾಯಚೂರು ಜಿಲ್ಲೆಯಲ್ಲಿನ ಒಂದು ಪ್ರಸಿದ್ಧವಾದ ಇತಿಹಾಸಪೂರ್ವದ ಹೆಸರಾಂತ ಸ್ಥಳ. ಇಲ್ಲಿ ರೂಪನಾಥ ಶಾಸನದ ಒಂದು ಪಾಠವನ್ನು ಒಳಗೊಂಡ ಅಶೋಕನ ಕಾಲದ ಶಾಸನ ಸಹ ದೊರೆತಿದೆ. ಬುದ್ಧನ ಕಾಲದ ಕೆಲವು ಅವಶೇಷಗಳೂ ಇಲ್ಲಿ ದೊರೆತಿವೆ. ಅವುಗಳಲ್ಲಿ ಬಹಳ ಮುಖ್ಯವಾದುದು ಕ್ರಿ.ಪೂ. 300 ರಿಂದ 200 ಒಳಗಿನದಾಗಿರಬಹುದಾದ ಒಂದು ಸ್ಫಟಿಕದ ಬುದ್ಧನ ತಲೆ. ಕಲ್ಯಾಣಿ ಚಾಳುಕ್ಯ ಜಗದೇಕಮಲ್ಲನ ಕಾಲದ ಒಂದು ಶಾಸನ ಇಲ್ಲಿ ದೊರೆತಿದ್ದು ಅದರಲ್ಲಿಇದನ್ನು ರಾಜಧಾನಿ ಪಿರಿಯ ಮಾಸಂಗಿ ಎಂದು ಉಲ್ಲೇಖಿಸಲಾಗಿದೆ. ಉಳಿದ ವಿಜಯನಗರದ ದೊರೆಗಳಾದ ಅಚ್ಯುತರಾಯ (ಕ್ರಿ.ಶ. 1529–42) ಮತ್ತು ಸದಾಶಿವರಾಯನ ಕಾಲದ ಶಾಸನಗಳಲ್ಲಿ ಇದನ್ನು ಮೊಸಗೆ ನಾಡಿನ ಕೇಂದ್ರವಾದ ಮೊಸಗೆ ಎಂದು ಕರೆಯಲಾಗಿದೆ. ಮುದಗಲ್ (ಜನ: 11,458-1981) ಲಿಂಗಸುಗೂರಿನ ನೈಋತ್ಯಕ್ಕೆ 16 ಕಿಮೀ ದೂರದಲ್ಲಿದೆ. ಇದೂ ಸಹ ರಾಯಚೂರು ಜಿಲ್ಲೆಯ ಒಂದು ಇತಿಹಾಸ ಪ್ರಸಿದ್ಧವಾದ ಸ್ಥಳ. ಇದರ ಇತಿಹಾಸವು ಸೇಉಣರ ಕಾಲದಷ್ಟು ಹಿಂದಕ್ಕೆ ಹೋಗುತ್ತದೆ. ಇಲ್ಲಿ ಸೇಉಣರ ಕಾಲದ ಅನೇಕ ಶಾಸನಗಳು ದೊರೆತಿವೆ. ಹದಿನಾಲ್ಕನೇಯ ಶತಮಾನದ ಆದಿಭಾಗದಲ್ಲಿ ಇದು ಕಾಕತೀಯ ರಾಜ್ಯದ ಪ್ರಸಿದ್ಧ ಗಡಿ ಠಾಣ್ಯವಾಗಿತ್ತು. ಮಲ್ಲಿಕ್ ನಯೀಬನು ದೇವಗಿರಿಯನ್ನು ಆಕ್ರಮಿಸಿಕೊಂಡ ನಂತರ ಮುದಗಲ್ ಮತ್ತು ರಾಯಚೂರುಗಳನ್ನು ಗೆದ್ದುಕೊಂಡನು. ಬಹಮನಿ ರಾಜ್ಯ ಸ್ಥಾಪನೆಯಾದ ಮೇಲೆ ಮುದಗಲ್ ಬಹಮನಿ ಮತ್ತು ವಿಜಯನಗರ ರಾಜ್ಯಗಳ ಹೋರಾಟದ ಕಾರಣವಾಗಿ ಪದೇ ಪದೇ ರಣರಂಗವಾಗುತ್ತಿತ್ತು. ಈ ಪರಿಸ್ಥಿತಿ ಬಹಮನಿ ರಾಜ್ಯ ಪತನಾನಂತರವೂ ಮುಂದುವರಿದು ವಿಜಾಪುರದ ಸುಲ್ತಾನರು ಬಹಮನಿ ರಾಜ್ಯದ ದಕ್ಷಿಣ ಮತ್ತು ಪಶ್ಚಿಮ ಭಾಗಗಳನ್ನೂ, ರಾಯಚೂರು, ಮುದಗಲ್‌ಗಳನ್ನೂ ತಮ್ಮ ವಶಪಡಿಸಿಕೊಂಡರು. ಮುದಗಲ್ಲಿನಲ್ಲಿ ಅತ್ಯಂತ ಪ್ರಮುಖವಾದುದು ಅಲ್ಲಿನ ಕೋಟೆ. ಆ ಕೋಟೆಯೊಳಗೆ ವಿಜಾಪುರದ ಆದಿಲ್ ಷಾಹಿಯ ಮನೆತನದ ಕನಿಷ್ಠ ಏಳು ಶಾಸನಗಳು ಇವೆ. ಇವುಗಳ ಜೊತೆಗೆ 15 ಹಳೆಗನ್ನಡ ಶಾಸನಗಳೂ ಮತ್ತು ಎರಡು ದೇವನಾಗರಿ ಲಿಪಿಯ ಕನ್ನಡ ಶಾಸನಗಳೂ ಇಲ್ಲಿವೆ. ಇಲ್ಲಿ ಒಂದು ಹಳೆಯ ರೋಮನ್ ಕ್ಯಾಥೋಲಿಕ್ ಚರ್ಚು ಇದೆ. ಇದನ್ನು ಕ್ರಿ.ಶ. 1557ರಲ್ಲಿ ವಿಜಾಪುರದ ದೊರೆ ಇಬ್ರಾಹಿಂ ಆದಿಲ್ ಷಾನ ಕಾಲದಲ್ಲಿ ಹಾಕಿದ ಅಸ್ತಿಭಾರದ ಮೇಲೆ ಕಟ್ಟಲಾಗಿದೆ. ಇದರ ನೆರವಿಗೆಂದು ಅವನು ಭೂದಾನವನ್ನು ಸಹ ಮಾಡಿದ್ದ. ಆ ಪುರಾತನ ಚರ್ಚನ್ನು ಕೆಡವಿ ನಂತರ ಇನ್ನೊಂದು ಚರ್ಚನ್ನು ಇಲ್ಲಿ ಕಟ್ಟಲಾಯಿತು. ಇಲ್ಲಿ ಹುಸೇನ ಪಾಷಾ ದರ್ಗಾ ಇದೆ.

**ವಾಣಿವಿಲಾಸಪುರ:** (ಚಿತ್ರದುರ್ಗ ಜಿ; ಹಿರಿಯೂರು ತಾ; ಜನ: 1,711) ವಾಣಿವಿಲಾಸಪುರವು ಹಿರಿಯೂರಿನಿಂದ 19 ಕಿಮೀ ಮತ್ತು ಬೆಂಗಳೂರಿನಿಂದ 214 ಕಿಮೀ ದೂರವಿರುವ ಒಂದು ಹಳ್ಳಿ. ಇದು 'ಮಾರಿ ಕಣಿವೆ' ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿದೆ. ಚಿತ್ರದುರ್ಗ ಬೆಟ್ಟಗಳ ಪೂರ್ವಭಾಗದ ಘಟ್ಟಗಳಲ್ಲಿರುವ ಮಾರಿಕಣಿವೆಯ ಮೂಲಕವೇ ವೇದಾವತಿ ನದಿ ಹಿರಿಯೂರಿನ ವಿಸ್ತಾರವಾದ ಬಯಲು ಪ್ರದೇಶದತ್ತ ಹರಿಯುವುದು. ವಾಣಿವಿಲಾಸಪುರದ ಸಮೀಪದಲ್ಲಿಯೇ ಮಾರಿಕಣಿವೆಯ ಕೆರೆ ಅಥವಾ ಕೃಷ್ಣರಾಜ ಸಮುದ್ರ ಅಥವಾ 'ವಾಣಿವಿಲಾಸ ಸಾಗರ' ಎಂಬ ಕೃತಕ ಜಲಾಶಯ ಇದೆ. ಮಾರಿ ಕಣಿವೆಯ ಬಳಿ ನದಿಯ ಈ ಅಣೆಕಟ್ಟೆಯನ್ನು 1898ರಿಂದ 1907ರ ಅವಧಿಯಲ್ಲಿ ನಿರ್ಮಾಣ ಮಾಡಲಾಯಿತು. ಈ ನಿರ್ಮಾಣವು ಯಂತ್ರಶಿಲ್ಪ ಚಮತ್ಕೃತಿ ಎಂದು ಗಣಿಸಲಾಗಿದೆ. ಈ ಅಣೆಕಟ್ಟೆಯ ಉದ್ದ 1,330 ಅಡಿಗಳು ಮತ್ತು ಎತ್ತರ 162 ಅಡಿಗಳು; ಜಲಾನಯನ ಪ್ರದೇಶ 2,075 ಚದರ ಮೈಲಿಗಳು; ಜಲಸಂಗ್ರಹಣಾ ಸಾಮರ್ಥ್ಯ 30,000 ದಶಲಕ್ಷ ಘನ ಅಡಿಗಳು; ಜಲಾವೃತ ಪ್ರದೇಶ 31 ಚದರ ಮೈಲುಗಳು; ಮತ್ತು ನೀರಾವರಿ ಸೌಕರ್ಯ ಪಡೆಯುವ ಪ್ರದೇಶ 24,500 ಎಕರೆಗಳು. ಈ ಪ್ರದೇಶಕ್ಕೆ ನೀರುಣಿಸಲೆಂದು ತೋಡಿರುವ ಎರಡು ಕಾಲುವೆಗಳ ಉದ್ದ ಕ್ರಮವಾಗಿ 29 ಮತ್ತು 30 ಮೈಲುಗಳು. ಜಲಾಶಯದ ಸನಿಹದಲ್ಲಿಯೇ ಕಣಿವೆ ಮಾರಮ್ಮನ ಗುಡಿಯಿದ್ದು ಹಿಂದೆ ಇದ್ದ

ಮರದ ಗುಡಿಯು ಬದಲಾಗಿ ಈಗ ನಯಗೊಳಿಸಿದ ಕಲ್ಲಿನಿಂದ ಅದನ್ನು ಜೀರ್ಣೋದ್ಧಾರ ಮಾಡಲಾಗಿದೆ.

**ವಿಜಯಪುರ :** (ಬೆಂಗಳೂರು ಜಿ; ದೇವನಹಳ್ಳಿ ತಾ; ಜನ : 17,212–1981) ವಿಜಯಪುರ ದೇವನಹಳ್ಳಿಯಿಂದ ಈಶಾನ್ಯಕ್ಕೆ ಸುಮಾರು 12 ಕಿಮೀ ದೂರದಲ್ಲಿರುವ ಒಂದು ಮುಖ್ಯ ಪಟ್ಟಣ ಮತ್ತು ವ್ಯಾಪಾರ ಕೇಂದ್ರ. ಹಿಂದೆ ಇದಕ್ಕೆ ವಡಿಗೇನಹಳ್ಳಿ ಎಂಬ ಹೆಸರಿತ್ತು; 1947ರಲ್ಲಿ, ಭಾರತ ಸ್ವಾತಂತ್ರ್ಯ ಗಳಿಸಿದ ದಿನದಂದು, ಇದಕ್ಕೆ ವಿಜಯಪುರ ಎಂದು ನಾಮಕರಣ ಮಾಡಲಾಯಿತು. ಇದು ಮೊದಲು ತಿಂಜಡುನಾಡಿನ ಭಾಗ ವಾಗಿದ್ದು, ನಂತರದಲ್ಲಿ ದೇವನಾಪುರ ರಾಜ್ಯದೊಡನೆ- ಸೇರಿ ಹೋಯಿತು. ಈ ಪಟ್ಟಣದಲ್ಲಿ ಅನೇಕ ದೇವಾಲಯಗಳಿದ್ದು, ಅವುಗಳಲ್ಲಿ ಪ್ರಮುಖವಾದುದೆಂದರೆ ಚನ್ನಕೇಶವ ಅಥವಾ ಸೌಮ್ಯ ಕೇಶವ ಮತ್ತು ಕಂಚಿಯ ದೇವಾಲಯಗಳ ಮಾದರಿ ಯಲ್ಲಿ ಕಟ್ಟಿದೆ ಎನ್ನಲಾದ ನಗರೇಶ್ವರ. ಚನ್ನಕೇಶವ ದೇವಾ ಲಯದಲ್ಲಿರುವ 1525ನೇಯ ಇಸವಿಯ ಶಿಲಾಶಾಸನವು ವೀರ ಪ್ರತಾಪ ಕೃಷ್ಣರಾಯನು ಆಳುತ್ತಿದ್ದ ಕಾಲದ್ದಾಗಿದೆ. ಮತ್ತೊಂದು ಶಿಲಾಶಾಸನ 1729ರಲ್ಲಿ ಆವತಿ ನಾಡು ಪ್ರಭು ಇಮ್ಮಡಿ ಸೊಣ್ಣಬೈರೇಗೌಡರ ವಂಶಜರಾದ ದೊಡ್ಡ ಬೈರಪ್ಪ ಗೌಡರಾಯನು ದೇವರ ಸೇವೆಗೆ ಎರಡು ಹಳ್ಳಿಗಳನ್ನು ದತ್ತಿ ಯಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ. ನಗರೇಶ್ವರ ದೇವಸ್ಥಾನ ಹೆಚ್ಚು ಆಕರ್ಷಣೀಯವಾಗಿದೆ. ಇದನ್ನು 1845ರಲ್ಲಿ ಅವಧೂತ ರಾದ ಅಪ್ಪೇ ಶಾಮಪ್ಪ ಎಂಬುವರು ಕಟ್ಟಿಸಿದರು. ದೇವಸ್ಥಾನದ ಅಂಗಳದಲ್ಲಿ, 1853ರಲ್ಲಿ ಕಟ್ಟಿದ ಆದಿನಾರಾಯಣಸ್ವಾಮಿಯ ಚಿಕ್ಕ ಗುಡಿಯೊಂದಿದೆ. ನಗರೇಶ್ವರ ದೇವಸ್ಥಾನದ ಮುಖ್ಯ ದ್ವಾರದ ಮೇಲೆ ಸುಂದರವಾದ ಗೋಪುರವಿದೆ; ಇದರ ಬಲಬದಿಗೆ ಶ್ರೀರಾಮದೇವರ ಗುಡಿಯಿದೆ. ಓಂಕಾರೇಶ್ವರ ದೇವಾಸ್ಥಾನ ಸಹ ಬಹಳ ಪ್ರಾಚೀನವಾದುದು. ಈ ದೇವಸ್ಥಾನದ ಬಲಬದಿ ಯಲ್ಲಿರುವ ಒಂದು ಮಠವನ್ನು ಗುರಪ್ಪಸ್ವಾಮಿ ಎಂಬ ಸಂತ ನೋರ್ವನು ಸ್ಥಾಪಿಸಿದನೆಂದು ಹೇಳುವರು. ಈ ಮಠದಲ್ಲಿ ಗುರಪ್ಪಸ್ವಾಮಿ ಮತ್ತು ನೀಲಗಿರಿಸ್ವಾಮಿ ಎಂಬ ಇಬ್ಬರು ಸಂತರ ಗದ್ದುಗೆಗಳಿವೆ; ಕುರುಬ ಕೋಮಿನವರು ಪೂಜ್ಯವೆಂದು ಗೌರವಿಸುವ ಶಿಥಿಲವಾದ ಗುಡಿಯೊಂದರಲ್ಲಿ ಅನೇಕ ವೀರಗಲ್ಲುಗಳ ಸಂಗ್ರಹವಿದೆ. ಮೇಲೆ ಹೇಳಿದುವಲ್ಲದೆ, ವೇಣುಗೋಪಾಲಸ್ವಾಮಿ, ಗಣಪತಿ, ಆಂಜನೇಯ, ಸೋಮೇಶ್ವರ, ಲಕ್ಷ್ಮೀವೆಂಕಟೇಶ, ಸಂಗಮೇಶ್ವರ, ಕಾಲಭೈರವ, ಕುಮಾರಸ್ವಾಮಿ, ರುದ್ರದೇವರು ಮತ್ತು ಗಂಗಾದೇವಿ ದೇವಾಲಯಗಳು ಸಹ ಈ ಪಟ್ಟಣದಲ್ಲಿವೆ. ಪ್ರತೀ ವರ್ಷ ಇಲ್ಲಿ ಧರ್ಮರಾಯ ಮತ್ತು ಎಲ್ಲಮ್ಮನ ಎರಡು ಕರಗಗಳು ಜರುಗುತ್ತವೆ. ಇಲ್ಲಿ ಒಂದು ಮಸೀದಿ ಇದೆ; ಜಂಗ್ಲಿ ಪೀರ್‌ಬಾಬಾ ಅಥವಾ ಅಡವಿಸ್ವಾಮಿಯ ಉರುಸನ್ನು ಇಲ್ಲಿ ಪ್ರತೀ ವರ್ಷವೂ ಆಚರಿಸುವರು. ವಿಜಯಪುರ ರೇಷ್ಮೆ ವ್ಯಾಪಾರದ ಒಂದು ದೊಡ್ಡ ಕೇಂದ್ರ. ಇಲ್ಲಿಯ ಸ್ಥಳೀಯ ಆಡಳಿತವನ್ನು ಪುರಸಭೆ ನಡೆಸುತ್ತಿದೆ.

**ವಿಜಾಪುರ:** (ಜಿ. ಮತ್ತು ತಾ. ಕೇ; ಜನ: 1,46,808) ಬೆಂಗಳೂರಿನಿಂದ ವಾಯುವ್ಯೋತ್ತರಕ್ಕೆ 579 ಕಿಮೀ ದೂರ ದಲ್ಲಿರುವ, ಹಿಂದೆ ಆದಿಲಷಾಹಿ ಅರಸರ ರಾಜಧಾನಿಯಾಗಿದ್ದ ವಿಜಾಪುರವು ಇಂದು ದೇಶದ ಮಹತ್ವದ ಪ್ರವಾಸಿ ಕೇಂದ್ರ ವಾಗಿದೆ. ಹುಬ್ಬಳ್ಳಿ-ಸೊಲ್ಲಾಪುರ ರೈಲುಮಾರ್ಗವು ಈ ಊರಿನ ಮೂಲಕ ಹಾಯ್ದು ಹೋಗುತ್ತದೆ. ಪ್ರಾಚೀನ ಕಾಲದಲ್ಲಿಯೂ ಇದು ಅತ್ಯಂತ ಮಹತ್ವದ ಸ್ಥಳವಾಗಿದ್ದು, ವಿಜಯಪುರ ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಕ್ರಿ. ಶ. 1037ರ ಒಂದು ಶಾಸನದ ಮೇರೆಗೆ, ಕಲ್ಯಾಣದ ಚಾಳುಕ್ಯರು ಈ ಸ್ಥಳವನ್ನು ತಮ್ಮ ಉಪರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಜೈನ ಕವಿ ನಾಗಚಂದ್ರ (12ನೇಯ ಶತಮಾನ)ನ ಮನೆಯು ಇಲ್ಲಿ ಇದ್ದಿತೆಂದು ಭಾವಿಸಲಾಗಿದೆ. ವಿಜಯಪುರ, ವಿದ್ಯಾಪುರ, ಮೊಹಮ್ಮದಪುರ ಎಂಬುದು ಇದರ ಹಳೆಯ ಹೆಸರುಗಳು. ಸುಮಾರು ಎರಡು ನೂರು ವರ್ಷಗಳ ಕಾಲ (1489-1686) ಇದು ಆದಿಲಶಾಹಿ ಅರಸು ಮನೆತನದ ಆಡಳಿತ ಕೇಂದ್ರವಾಗಿತ್ತು. ವಿದೇಶೀ ಪ್ರವಾಸಿಗರಾದ ದ್ವಾರ್ತೆ ಬರ್ಬೊಸಾ, ವರ್ಥೆಮಾ, ಪೋಜರ್, ಮಂಡೆಲ್‌ಸ್ಲೊ (1637) ಮತ್ತು ಟ್ರೆವರ್ನಿಯೆ ಮುಂತಾದವರು ಈ ರಾಜ್ಯವನ್ನು ಸಂದರ್ಶಿಸಿದ್ದರು. 'ದಕ್ಷಿಣದ ರಾಣಿ' ಎಂದು ವರ್ಣಿತವಾದ ಈ ಸ್ಥಳದ ಅಂದಿನ ಸ್ಥಿತಿಗತಿಗಳನ್ನು ಅವರೆಲ್ಲ ಸುಸ್ಪಷ್ಟವಾಗಿ ಚಿತ್ರಿಸಿದ್ದಾರೆ. ವಿಜಾಪುರ ನಗರವು ಮುಂದೆ ಔರಂಗಜೇಬ, ನಿಜಾಮ, ಸವಣೂರಿನ ನವಾಬ, ಸತಾರಾದ ಛತ್ರಪತಿ ಮತ್ತು ಕೊನೆಗೆ ಬ್ರಿಟಿಷರ ಅಧೀನವಾಗಿತ್ತು. ಇಬ್ರಾಹಿಮ್ ರೋಜಾ ಮತ್ತು ಗೋಲುಗುಮ್ಮಟಗಳು ವಿಜಾಪುರದಲ್ಲಿರುವ ಅತ್ಯಂತ ಭವ್ಯ ಕಟ್ಟಡಗಳಾಗಿವೆ. ನಗರದಲ್ಲಿ ರುವ ನೋಡತಕ್ಕ ಸ್ಥಳಗಳ ಸಂಕ್ಷಿಪ್ತ ಪರಿಚಯವನ್ನು ಈ ಕೆಳಗೆ ಕೊಡಲಾಗಿದೆ. ಐನ್-ಉಲ್-ಮುಲ್ಕ್‌ನ ಗೋರಿ ಮತ್ತು ಮಸೀದಿಯು ಊರಿನ ಪೂರ್ವದ ಹೊರವಲಯದಲ್ಲಿದ್ದು, ಅದು ಸುಂದರ ಹಾಗೂ ಆಕಾರಕ್ಕೆ ಅನುಗುಣವಾದ ಗುಮ್ಮಟವನ್ನು ಹೊಂದಿರುವ ಭದ್ರವಾದ ಚೌಕಾಕಾರದ ಕಟ್ಟಡವಾಗಿದೆ. ಐನ್-ಉಲ್-ಮುಲ್ಕ್‌ನ ಗೋರಿಗೆ ಹೊಂದಿಕೊಂಡು ಮಸೀದಿ ಯಿದೆ. ಈ ಕಟ್ಟಡವು ಅಲಂಕರಣಗೊಂಡಿದ್ದು, ಗಾರೆಯಿಂದ ಲೇಪಿತವಾಗಿದೆ. ಒಂದನೇಯ ಅಲಿ ಆದಿಲ್‌ಷಾನ ಗೋರಿಯು ನಗರದ ನೈಋತ್ಯ ದಿಕ್ಕಿನಲ್ಲಿದೆ. ಮಧ್ಯದ ಸಭಾಂಗಣವನ್ನು ಸುತ್ತುವರಿದು ಸಾಲಾಗಿ ಇರುವ ಇದು ಕಮಾನುಗಳನ್ನು ಒಳ ಗೊಂಡ ಒಂದು ತೀರ ಸರಳ, ಸೌಮ್ಯ ಕಟ್ಟಡವಾಗಿದ್ದು, ವಿಜಾಪುರದಲ್ಲಿರುವ ರಾಜರ ಅತ್ಯಂತ ಹಳೆಯ ಸ್ಮಾರಕವಾಗಿದೆ. ಎರಡನೇಯ ಅಲಿ ಆದಿಲ್‌ಷಾನ ಗೋರಿಯು ಕೋಟೆಯ ವಾಯುವ್ಯ ದಿಕ್ಕಿನಲ್ಲಿದ್ದು, ಅದು ಕಪ್ಪು ಮಿಶ್ರಿತ ಕಂದು ಬಣ್ಣದ

ಅಗ್ನಿ ಶಿಲೆಯಿಂದ ರಚಿತವಾದ, ಅಪೂರ್ಣ ಕಮಾನುಗಳನ್ನು ಒಳಗೊಂಡ, ಚೌಕಾಕಾರದ, ಮಾಡು ಇಲ್ಲದ ಕಟ್ಟಡವೊಂದರಲ್ಲಿ ನೆಲೆಗೊಂಡಿದೆ. ಈ ಅಪೂರ್ಣ ಕಟ್ಟಡವು 215 ಅಡಿ ಚೌರಸಾಕಾರವಾಗಿದೆ; ಎತ್ತರದ ವೇದಿಕೆಯ ಮೇಲೆ ಅಪೂರ್ಣವಾದ ಕಮಾನುಗಳು ನಿಂತಿವೆ. ಮಧ್ಯದ ಇನ್ನೂ ಎತ್ತರದ ಜಗಲಿಯು ಗೋರಿಗಳನ್ನು ಒಳಗೊಂಡಿದೆ. ಅಲಿ ಷಾಹಿ ಪೀರನ ಮಸೀದಿ ಮತ್ತು ಗೋರಿ ಭವ್ಯ ಚೌಕಾಕಾರದ ಕಟ್ಟಡವಾಗಿದ್ದು ಅದರ ಮಿಹ್ರಾಬ್ ಕೆಲವು ದೃಷ್ಟಿಯಿಂದ ಗಮನಾರ್ಹವಾಗಿದೆ. ಸಂತನ ಗೋರಿಯು ಮಸೀದಿಯ ಈಶಾನ್ಯ ಪ್ರವೇಶ ದ್ವಾರದ ಹೊರಗಡೆ ಇದೆ. ವಿಜಾಪುರದಿಂದ ಪಶ್ಚಿಮಕ್ಕೆ ಒಂದೂವರೆ ಕಿಮೀ ದೂರದಲ್ಲಿರುವ ಅಮೀನ ದರ್ಗಾ ನಗರದಲ್ಲಿರುವ ಅತ್ಯಂತ ಪವಿತ್ರ ಸ್ಥಳವೆಂದು ಭಾವಿಸಲಾಗುತ್ತದೆ. ಅಮೀನುದ್ದೀನನ ಗೋರಿಯು ಎತ್ತರದ ಬಯಲಿನಲ್ಲಿದ್ದು, ಸುತ್ತುಮುತ್ತಲಿನ ಬಹು ಅಂತರದ ಪ್ರದೇಶದಲ್ಲಿನ ಗಮನಾರ್ಹ ಕಟ್ಟಡವಾಗಿದೆ. ಕೋಟೆಯ ಒಳಾಂಗಣದಲ್ಲಿ ಹಾಗೂ ಗಗನ ಮಹಲಿನ ಪಶ್ಚಿಮಕ್ಕೆ ಆನಂದ ಮಹಲ ಇದ್ದು, ಅದು ಎರಡಂತಸ್ತಿನ ಅರಮನೆಯಾಗಿದೆ. ಎರಡನೇಯ ಇಬ್ರಾಹಿಮ ಆದಿಲ್‌ಷಾನು ಇದನ್ನು 1589ರಲ್ಲಿ ಕೇವಲ ಸಂಗೀತ ಹಾಗೂ ನೃತ್ಯಗಳಿಗಾಗಿ ನಿರ್ಮಿಸಿದನು. ಅದರ ಮಾಡನ್ನು ಗಾರೆಯ ಕೆಲಸಗಳಿಂದ ಅಲಂಕರಿಸಲಾಗಿತ್ತು. ಪ್ರಸ್ತುತ ರಾಜ್ಯ ಸರಕಾರವು ಆನಂದ ಮಹಲನ್ನು ಸರಕಾರಿ ಕಾರ್ಯಗಳಿಗಾಗಿ ಉಪಯೋಗಿಸುತ್ತಿದೆ. ಅಂದು ಎಂಬ ಹೆಸರಿನ ಮಸೀದಿಯು ಕೋಟೆಯ ಆಚೆಗೆ ಜುಮ್ಮಾಳ ರಸ್ತೆಯ ಪಶ್ಚಿಮದಲ್ಲಿದೆ. ಇದು ಎರಡಂತಸ್ತಿನ ಕಟ್ಟಡವಾಗಿದ್ದು, ಅದರ ನೆಲ ಅಂತಸ್ತು ಸಭಾಂಗಣವಾಗಿದ್ದು, ಮೊದಲನೇಯ ಅಂತಸ್ತು ಪ್ರಾರ್ಥನಾ ಮಂದಿರವಾಗಿದೆ. ಈ ಮಸೀದಿಯಲ್ಲಿ ವೇದಿಕೆಯಿಲ್ಲ; ಬಹುತರವಾಗಿ ಇದು ಹೆಣ್ಣುಮಕ್ಕಳ ಪ್ರಾರ್ಥನೆಗಾಗಿ ಸೀಮಿತವಾಗಿರಬೇಕು. ಎರಡನೇಯ ಆದಿಲ್‌ಷಾನ ಆಸ್ಥಾನದಲ್ಲಿ ಸರದಾರನಾಗಿದ್ದ ಇತ್ಬಾರ ಖಾನನು 1608ರಲ್ಲಿ ಈ ಮಸೀದಿಯನ್ನು ಕಟ್ಟಿಸಿದನೆಂದು ಒಂದು ಪರ್ಶಿಯನ್ ಭಾಷೆಯ ಶಾಸನದಲ್ಲಿ ಉಲ್ಲೇಖವಿದೆ. ಅರಸ್ ಮಹಲ್ ಎಂಬುದು ಅದಾಲತ್ ಮಹಲಿನ ಈಶಾನ್ಯಕ್ಕೆ ಇದ್ದು, ಅದು ಎರಡನೇಯ ಅಲಿಯ ವಿಲಾಸ ಸ್ಥಾನವಾಗಿತ್ತು. ಈಗ ಅದು ಜಿಲ್ಲಾ ಆರೋಗ್ಯಾಧಿಕಾರಿಯ ಅಧಿಕೃತ ನಿವಾಸ ಸ್ಥಳವಾಗಿದೆ. ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿ ಶಾಸನಗಳು, ಮೂರ್ತಿಗಳು, ವರ್ಣಚಿತ್ರಗಳು, ಹಸ್ತಪ್ರತಿಗಳು, ಯುದ್ಧೋಪಕರಣಗಳು ಮುಂತಾದ ಕುತೂಹಲಕಾರಿ ವಸ್ತುಗಳನ್ನು ಪ್ರದರ್ಶಿಸಲಾಗಿದೆ. ಇದು ಗೋಲಗುಂಬಜದ ಹತ್ತಿರವಿದ್ದು, ಪ್ರಾಚ್ಯವಸ್ತು ಇಲಾಖೆಯ ಅಧೀನದಲ್ಲಿದೆ. ಅರ್ಕ ಕಿಲ್ಲಾ ಅಥವಾ ಕೋಟೆಯು ನಗರದ ಮಧ್ಯಭಾಗದಲ್ಲಿದೆ. ಇದೂ ಕೂಡ ವಿಜಾಪುರ ನಗರದ ಮಹತ್ವದ ಭಾಗಗಳಲ್ಲಿ ಒಂದಾಗಿದೆ. ಯೂಸುಫ್ ಆದಿಲಷಾನು ಇದನ್ನು ತನ್ನ ಕೋಟೆಯ ನಿರ್ಮಾಣಕ್ಕಾಗಿ ಆರಿಸಿದ್ದನು. ಪ್ರಸ್ತುತ ಕೋಟೆಯು ಆವರಣವು ವಸ್ತುತಃ ವರ್ತುಳಾಕಾರವಾಗಿದೆ. ಅದರ ರಕ್ಷಣೆಗಾಗಿ ದಕ್ಷಿಣ ಮತ್ತು ಪೂರ್ವ ದಿಕ್ಕಿನಲ್ಲಿ ಗಮನಾರ್ಹವಾಗಿ ಗಟ್ಟಿಮುಟ್ಟಾದ ಹಲವು ಕೊತ್ತಳಗಳನ್ನು ಒಳಗೊಂಡ ಭದ್ರವಾದ ಗೋಡೆಯಿದೆ. ಅಸಾರ್ ಮಹಲ್ ಕೋಟೆಯ ಆವರಣದ ಪೂರ್ವದ ಇಳಿಜಾರಿನ ತುತ್ತ ತುದಿಯಲ್ಲಿದೆ. 1646ರಲ್ಲಿ ಮಹಮ್ಮದ ಷಾನು ಇದನ್ನು ನಿರ್ಮಿಸಿದನು. ಇದು ಮೊದಲು ಅದಾಲತ್ ಮಹಲ್ ಎಂಬ ಹೆಸರಿನಿಂದ ಪರಿಚಿತವಿತ್ತು. ಗೋಡೆ ಮತ್ತು ಮಾಡುಗಳನ್ನು, ವರ್ಣಚಿತ್ರಗಳು, ನೈಸರ್ಗಿಕ ದೃಶ್ಯಗಳು ಹಾಗೂ ವಿವಿಧ ದೃಶ್ಯಗಳಿಂದ ಅಲಂಕರಿಸಲಾಗಿದೆ. ವರ್ಣರಂಜಿತ ಸಭಾಭವನದ ದಕ್ಷಿಣದ ಕೊಠಡಿಯು ಭವ್ಯವಾಗಿ ಅಲಂಕೃತವಾಗಿರುವ ಭಾಗವಾಗಿದೆ. ಔರಂಗಜೇಬನ ಆಜ್ಞೆಯ ಮೇರೆಗೆ ಈ ವರ್ಣಾಲಂಕಾರಗಳ ಮೇಲೆ ಸುಣ್ಣಬಳೆಯಲಾಗಿತ್ತು. ಅನಂತರ ಮತ್ತೆ ಮೂಲ ರೂಪಕ್ಕೆ ತರಲಾಗಿದೆ. ಈ ಕಟ್ಟಡದ ಹೊರಗಡೆ ಎದುರಿನಲ್ಲಿ ಒಂದು ಚೌಕಾಕಾರದ ಜಲಾಶಯವಿದೆ. ಔರಂಗಜೇಬ ಇದ್ಗಾ ಎಂಬುದು ಒಂದು ವಿಶಾಲವಾದ ಚೌಕಾಕಾರದ ಆವರಣವಾಗಿದ್ದು, ಇದನ್ನು ಔರಂಗಜೇಬನು 1686ರಲ್ಲಿ ಈ ನಗರವನ್ನು ವಶಪಡಿಸಿಕೊಂಡ ನಂತರ, ಮಹತ್ವದ ದಿನಗಳಲ್ಲಿ ಮುಸ್ಲೀಮ ಭಾಂಧವರು ಒಂದೆಡೆ ಕಲೆಯುವುದಕ್ಕಾಗಿ ನಿರ್ಮಿಸಿದನು. ಬುಖಾರಿ ಮಸೀದಿಯನ್ನು ಚಾಂದಬೀಬಿಯು ಬುಖಾರಿ ಮನೆತನದ ಓರ್ವ ಮೌಲ್ವಿಗಾಗಿ ನಿರ್ಮಿಸಿದ್ದಳೆಂದು ನಂಬಲಾಗುತ್ತದೆ. ಅದರ ದ್ವಾರದ ಮೇಲೆ ಒಂದು ಪರ್ಶಿಯನ್ ಭಾಷೆಯ ಶಾಸನವಿದೆ. ಚಾಂದಬಾವಡಿ ಎಂಬುದು ಒಂದನೇಯ ಅಲಿ ಆದಿಲಷಾ ತನ್ನ ರಾಣಿ ಚಾಂದಬೀಬಿಯ ಸ್ಮರಣಾರ್ಥ 1579ರಲ್ಲಿ ನಿರ್ಮಿಸಿದ ಬಾವಿಯಾಗಿದೆ. ಇದು ನಗರದ ಪಶ್ಚಿಮ ಮೂಲೆಯಲ್ಲಿದೆ. ಇಳಿಜಾರಾದ ಮೆಟ್ಟಿಲುಗಳ ಮೂಲಕ ತಲಪುವಂತಿರುವ ಪ್ರವೇಶ ದ್ವಾರವನ್ನು ಒಂದು ಕಮಾನಿನಿಂದ ಅಲಂಕರಿಸಲಾಗಿದೆ. ಛೋಟಾ ಅಸಾರ್ ಎಂಬುದು ಒಂದು ಸಣ್ಣ ಕಟ್ಟಡವಾಗಿದ್ದು, ಗೋಡೆಗಳು, ಮಾಡು ಮತ್ತು ಮುಂಭಾಗದಲ್ಲಿರುವ ಆವರಣದಲ್ಲಿನ ಗಾರೆಯ ಅಲಂಕರಣಗಳಿಗಾಗಿ ಅದು ಹೆಸರಾಗಿದೆ. ಚೀನಿ ಮಹಲ್ ಅಥವಾ ಫರೂಖ್ ಮಹಲ್ ಮಧ್ಯದಲ್ಲಿ ವಿಶಾಲವಾದ ಭವ್ಯ ಸಭಾಂಗಣ ಹಾಗೂ ಪಕ್ಕದಲ್ಲಿ ಸಾಲಾಗಿ ಇರುವ ಕೊಠಡಿಗಳನ್ನು ಒಳಗೊಂಡ ಕಟ್ಟಡವಾಗಿದೆ. ಯೂಸುಫ್ ಆದಿಲಷಾನು ಅದರ ನಿರ್ಮಾಪಕ. ತನ್ನ ವೈಶಾಲ್ಯ ಹಾಗೂ ಭವ್ಯತೆಯ ಕಾರಣಗಳಿಗಾಗಿ ಅದು ವಿಜಾಪುರದ ಯಾವುದೇ ಅರಮನೆಗಳಿಗೆ ಉಪಮಾತೀತವೆನಿಸಿದೆ. ಇಬ್ರಾಹಿಮ ರೋಜಾ ನಗರದ ಪಶ್ಚಿಮದ ಹೊರವಲಯದಲ್ಲಿದೆ. ಭವ್ಯವಾದ ಗುಮ್ಮಟ ಹಾಗೂ ಮಸೀದಿ ಒಳಗೆ ಎರಡು ಕಟ್ಟಡಗಳನ್ನು ಒಳಗೊಂಡ ಇಬ್ರಾಹಿಮ್ ರೋಜಾ ತೋಟಗಳಿಂದ ಸುತ್ತುವರಿಯಲ್ಪಟ್ಟಿದೆ. ಎದುರು ಬದುರಿನಲ್ಲಿರುವ ಈ ಅವಳಿ ಕಟ್ಟಡಗಳ ನಡುವೆ ಕಾರಂಜಿಯೊಂದಿದೆ. ಇಲ್ಲಿರುವ ಪರ್ಶಿಯನ್ ಭಾಷೆಯ ಶಾಸನವೊಂದು ಈ ರೋಜಾ 1626ರಲ್ಲಿ ನಿರ್ಮಿತವಾಯಿತೆಂದು ಉಲ್ಲೇಖಿಸುತ್ತದೆ.

ಕಮಾನುಗಳ ಆಧಾರದ ಮೇಲೆ ನಿಂತಿರುವ ಎತ್ತರದ ಇಳಿಜಾರಾದ ವೇದಿಕೆಯ ಮೇಲೆ ಒಂದು ಚೌಕಾಕಾರದ ಆವರಣದಲ್ಲಿ ಈ ಎರಡೂ ಕಟ್ಟಡಗಳು ನಿಂತಿವೆ. ಈ ಆವರಣದ ಉತ್ತರದ ಬದಿಯ ಮಧ್ಯದಲ್ಲಿ ಗೋಪುರವನ್ನುಳ್ಳ ಪ್ರವೇಶದ್ವಾರವಿದ್ದು, ಅದು ನಾಲ್ಕು ಸುಂದರವಾದ ಮಿನಾರುಗಳಿಂದ ಅಲಂಕೃತವಾಗಿದೆ. ವಿಜಾಪುರದಲ್ಲಿಯೇ ಇದು ಅತ್ಯಂತ ಅಲಂಕೃತವಾದ ಕಟ್ಟಡವಾಗಿದೆ. ಎರಡೂ ಕಟ್ಟಡಗಳ ಅಡಿಪಾಯ ಚೌಕಾಕಾರವಾಗಿದ್ದು, ಅವುಗಳ ನಾಲ್ಕು ಮೂಲೆಗಳಲ್ಲಿ ನಾಲ್ಕು ಮಿನಾರುಗಳು ಇವೆ. ಅವುಗಳ ಮಧ್ಯದಲ್ಲಿ ಸಾಕಷ್ಟು ಅರ್ಧಗೋಳಾಕಾರದ ಗುಮ್ಮಟಗಳಿವೆ. ಕಮಲದ ದಳಗಳಿಂದ ಎದ್ದು ಬಂದಿರುವಂತೆ ಅವುಗಳನ್ನು ರಚಿಸಲಾಗಿದೆ. ಈ ಕಟ್ಟಡವನ್ನು 'ದಕ್ಷಿಣದ ತಾಜಮಹಲ್' ಎಂದು ಕರ್ಝಿನ್ಸ್ ವರ್ಣಿಸಿದ್ದಾನೆ. ಮಲಿಕ್ ಕರಿಮ್-ಉದ್ ದೀನನ ಮಸೀದಿಯು ಚೀನಿ ಮಹಲಿನ ಪೂರ್ವ ದಿಕ್ಕಿನಲ್ಲಿದೆ. ಮೂಲತಃ ಇದು ಹಿಂದೂ ದೇವಾಲಯವಾಗಿದ್ದಿರಬೇಕು. ಈ ಮಸೀದಿಯ ಒಳಗಿನ ಒಂದು ಸ್ತಂಭದ ಮೇಲಿರುವ ಕ್ರಿ.ಶ. 1320ನೇಯ ವರ್ಷದ ಕನ್ನಡ ಲಿಪಿಯ ಒಂದು ಶಾಸನವು ಸಾಲೋಟಗಿಯ ರೇವಯ್ಯನೆಂಬಾತನು ಮೇಲ್ಭಾಗದ ಕರ್ತೃ ಎಂದು ಉಲ್ಲೇಖಿಸುತ್ತದೆ. ಎದುರುಗಡೆ ಸುಂದರವಾದ ಅರ್ಧ ಸಭಾ ಭವನ ಹಾಗೂ ಅದರ ಮೊಗಸಾಲೆಯನ್ನು ಹೊಂದಿರುವ ಇದು ಒಂದು ಚೌಕಾಕಾರದ ಪ್ರಾಂಗಣವನ್ನು ಹೊಂದಿದೆ. ಮೊಗಸಾಲೆಯ ಬದಿಗಳು ಚಾಚಿಕೊಂಡು ಮಸೀದಿಯ ಮುಂಭಾಗವನ್ನು ತುಂಬಿಕೊಂಡಿವೆ. ಹೆನ್ರಿ ಕರ್ಝಿನ್ಸ್ ಅವರ ಅಭಿಪ್ರಾಯದಲ್ಲಿ ಈ ಕಟ್ಟಡವನ್ನು ಹಿಂದೂ ದೇವಾಲಯಗಳ ಅಳಿದುಳಿದ ಸಾಮಗ್ರಿಗಳಿಂದ ನಿರ್ಮಿಸಲಾಗಿದೆ. ಇನ್ನೊಂದು ಅಭಿಪ್ರಾಯಂತೆ, ಮೂಲತಃ ಹಿಂದೂ ಶಿಕ್ಷಣ ಕೇಂದ್ರವಾಗಿದ್ದ ಇದನ್ನು ಮಸೀದಿಯಾಗಿ ಪರಿವರ್ತಿಸಲಾಗಿದೆ. ಜಾಮಿ ಮಸೀದಿಯು ದಕ್ಷಿಣ ಭಾರತದಲ್ಲಿಯೇ ಅತ್ಯಂತ ವಿಶಾಲವಾದ ಮತ್ತು ಪುರಾತನವಾದ ಕಟ್ಟಡವಾಗಿದೆ. ಇದು ಕೋಟೆಯಿಂದ ಸುಮಾರು 1,200 ಗಜಗಳಷ್ಟು ದೂರದಲ್ಲಿದೆ. ಒಂದನೇಯ ಅಲಿ ಆದಿಲ ಷಾನು ವಿಜಯನಗರದ ಮೇಲೆ ತಾನು ಸಾಧಿಸಿದ ವಿಜಯದ ನಂತರ ಇದನ್ನು ನಿರ್ಮಿಸಿದನು. ಇದು ಚೌಕಾಕಾರದ ಮಸೀದಿಯಾಗಿದ್ದು, ಪೂರ್ವ ಪಶ್ಚಿಮವಾಗಿ 400 ಅಡಿ ಉದ್ದವಾಗಿದ್ದು, ದಕ್ಷಿಣೋತ್ತರವಾಗಿ 280 ಅಡಿ ಅಗಲವಾಗಿದೆ. ಪ್ರವೇಶದ್ವಾರವು ಪೂರ್ವಾಭಿಮುಖವಾಗಿದ್ದು, ಅಲ್ಲಿ ಔರಂಗಜೇಬನಿಂದ ನಿರ್ಮಿತವಾದುದೆಂದು ಹೇಳಲಾಗುವ ಒಂದು ಮಂಟಪವಿದೆ. ಎರಡು ಬದಿಗಳಲ್ಲಿ ವಿಸ್ತರಿಸಿರುವ ವಿಶಾಲವಾದ ತೆರೆದ ಪ್ರಾರ್ಥನಾ ಭವನವನ್ನು ಒಳಗೊಂಡ ಈ ಮಸೀದಿಯು 1,16,300 ಚದರ ಅಡಿ ಜಾಗವನ್ನು ಆಕ್ರಮಿಸಿದ್ದು ವಿಜಾಪುರದಲ್ಲಿರುವ ಇನ್ನಾವುದೇ ಕಟ್ಟಡಕ್ಕೆ ಸಾಟಿಯಿಲ್ಲದುದಾಗಿದೆ. ಮೂಲ ಕಟ್ಟಡದಲ್ಲಿರುವ ಸ್ತಂಭಗಳು ಈ ಮಸೀದಿಯ ನೆಲವನ್ನು 45 ಸಮಾನವಾದ ಚದರಗಳಲ್ಲಿ ವಿಭಾಗಿಸುತ್ತವೆ. ಅತ್ಯಂತ ಪ್ರಮಾಣಬದ್ಧವಾಗಿರುವ ಗುಮ್ಮಟವು ಈ ಕಟ್ಟಡದ ಅತ್ಯಂತ ಸುಂದರ ಭಾಗವಾಗಿದೆ. ಇದರಲ್ಲಿರುವ ಮಿಹರಾಬ್ ಅನ್ನು ವೈಭವೋಪೇತವಾಗಿ ವರ್ಣಾಲಂಕರಣಗೊಳಿಸಲಾಗಿದೆ. ಕರ್ಝಿನ್ಸ್ ಅವರ ಅಭಿಪ್ರಾಯದಲ್ಲಿ 'ಪರಿಪೂರ್ಣ ಪ್ರಮಾಣಬದ್ಧತೆಯಲ್ಲಿ ಇದನ್ನು ಸರಿಗಟ್ಟುವ ಕಟ್ಟಡ ಅನಂತರ ತಲೆದೋರಿಲ್ಲ'. ಸರಕಾರೀ ಪ್ರೌಢಶಾಲೆಯ ಹಿಂದೆ ಜೋಡು ಗುಮ್ಮಟವಿದೆ. ಎರಡು ಗೋರಿಗಳು ಇದರಲ್ಲಿ ನಿರ್ಮಿತವಾಗಿವೆ. ಒಳಗಿನ ಸಮಾಧಿಗಳನ್ನು ನೆಲಗಟ್ಟಿನ ಎತ್ತರದಲ್ಲಿ ಕಟ್ಟಿರುವುದರಿಂದ ಎರಡೂ ಗುಮ್ಮಟಗಳ ನೆಲವು ಗಮನಾರ್ಹವಾಗಿ ಎತ್ತರವಾಗಿದೆ. ಎರಡೂ ಕಟ್ಟಡಗಳ ಗುಮ್ಮಟಗಳ ಒಳಗಡೆ ಕಟಾಂಜನಗಳಿವೆ. ಅಫ್ಜಲ್ ಖಾನನ ಸ್ಮಾರಕ ಸಮಾಧಿಯು ಶಹಪುರ ಅಗಸೆಯಿಂದ ನಾಲ್ಕು ಕಿಮೀ ಅಂತರದಲ್ಲಿದೆ. ಅಲ್ಲಿ ಒಂದು ಮಸೀದಿಯೂ ಇದೆ. ಅಫ್ಜಲ್ ಖಾನನು ತನ್ನ ಜೀವಿತ ಕಾಲದಲ್ಲಿಯೇ ತನ್ನ ಭವ್ಯ ಸಮಾಧಿಯ ನಿರ್ಮಾಣ ಕಾರ್ಯವನ್ನು ಆರಂಭಿಸಿದ್ದನು. ಆದರೆ, ಆತನ ದೇಹವನ್ನು ಅದರಲ್ಲಿ ಹೂಳಲಿಲ್ಲ. ಅಫ್ಜಲ್ ಖಾನನ ಸಮಾಧಿಯ ದಕ್ಷಿಣಕ್ಕೆ ಸುಮಾರು ಒಂದು ಕಿಮೀ ದೂರದಲ್ಲಿ, ವ್ಯವಸ್ಥಿತವಾಗಿ ಕಟ್ಟಲಾದ ಜಗಲಿಯ ಮೇಲೆ, ಹನ್ನೊಂದು ಸಾಲುಗಳಲ್ಲಿ ಆತನ ಪತ್ನಿಯರ ಗೋರಿಗಳಿವೆ. ಅಲ್ಲಿ 63 ಗೋರಿಗಳಿದ್ದು ಒಂದು ಖಾಲಿಯಾಗಿದೆ. ಶಿವಾಜಿಯನ್ನು ಎದುರಿಸಲು ಹೊರಟಾಗ ತಾನು ವಿಜಾಪುರಕ್ಕೆ ಮರಳಿ ಬರುವುದಿಲ್ಲವೆಂಬ ಭವಿಷ್ಯವಾಣಿಯನ್ನು ನಂಬಿ, ತಾನು ಪ್ರವಾಸ ಹೊರಡುವ ಮುಂಚೆ ತನ್ನ ಎಲ್ಲ 64 ಜನ ಹೆಂಡಂದಿರನ್ನು ನೀರಲ್ಲಿ ಮುಳುಗಿಸಿ ಅಫ್ಜಲ್ ಖಾನನು ಸಾಯಿಸಿದನೆಂದು ಹೇಳಲಾಗುತ್ತದೆ. ಅವರಲ್ಲಿ ಓರ್ವಳು ಪಾರಾದಳಂತೆ. ಆದರಿಂದಾಗಿ ಒಂದು ಗೋರಿ ಖಾಲಿಯಾಗಿ ಉಳಿದಿದೆ. ರೈಲ್ವೇ ನಿಲ್ದಾಣದ ಪಕ್ಕದಲ್ಲಿ ರಾಜಗಾಂಭೀರ್ಯದೊಂದಿಗೆ ತಲೆಯೆತ್ತಿ ನಿಂತಿರುವ ಹಾಗೂ ಸುತ್ತಲಿನ ಪ್ರದೇಶದಲ್ಲೆಲ್ಲ ಪ್ರಭುತ್ವ ಸ್ಥಾಪಿಸಿರುವ ಗೋಲ ಗುಮ್ಮಟವು ತನ್ನ ಸರಳತೆಯ ದೃಷ್ಟಿಯಲ್ಲಿ ಇನ್ನಾವುದೇ ಕಟ್ಟಡಕ್ಕೆ ಸರಿ ಸಾಟಿಯಾಗದಂತೆ ಉಳಿದಿದೆ. ಭವ್ಯ ಆಕಾರದ ದೃಷ್ಟಿಯಿಂದ ಭಾರತದ ಯಾವುದೇ ಕಟ್ಟಡಕ್ಕೆ ಅದು ತುಲನಾತೀತವಾಗಿದೆ. ಅದರ ಅಸಾಮಾನ್ಯ ಪ್ರಮಾಣಬದ್ಧತೆ ಹಾಗೂ ಭವ್ಯ ಗುಮ್ಮಟಗಳು ಅತೀ ದೂರದಿಂದ ಸುಸ್ಪಷ್ಟವಾಗಿ ಗೋಚರಿಸುತ್ತವೆ. ಈ ಗುಮ್ಮಟವು ಒಂದು ಮಸೀದಿ, ಒಂದು ನಗಾರ್‌ಖಾನಾ ಅಥವಾ ವಾದನಶಾಲೆ, ಒಂದು ಪ್ರವೇಶದ್ವಾರ ಮತ್ತು ರಾಜಸಮಾಧಿಗೆ ಅಗತ್ಯವಾದ ಎಲ್ಲ ಸೌಕರ್ಯಗಳನ್ನುಳ್ಳ ಅನ್ನ ಛತ್ರಗಳನ್ನು ಒಳಗೊಂಡಿದೆ. ಇವೆಲ್ಲವು ಅಖಂಡ ಗೋಡೆಯಿಂದ ಆವೃತವಾದ ಪ್ರಾಂಗಣದಲ್ಲಿವೆ. ಈ ಗುಮ್ಮಟವು, ಎತ್ತರವಾದ ನಾಲ್ಕು ಗೋಡೆಗಳಿಂದ ಆವೃತವಾದ ಒಂದು ಬೃಹದಾಕಾರದ ಚೌಕಾಕೃತಿಯ ಸಭಾಂಗಣವನ್ನು ಒಳಗೊಂಡಿದೆ. ಈ ಗೋಡೆಗಳಿಗೆ ಆಧಾರವಾಗಿ ನಾಲ್ಕು ಮೂಲೆಗಳಲ್ಲಿ ಅಷ್ಟಕೋನಾಕೃತಿಯ ಗೋಪುರಗಳನ್ನು ನಿರ್ಮಿಸಲಾಗಿದೆ. ಇವೆಲ್ಲವುಗಳ ಮೇಲೆ, ಅಡಿಯಲ್ಲಿ 120 ಅಡಿ ವ್ಯಾಸವುಳ್ಳ ಭಾರತದಲ್ಲಿಯೇ ಅತ್ಯಂತ

ಬೃಹತ್ತಾದ ಅರ್ಧ ಗೋಲಾಕಾರದ ಗುಮ್ಮಟವು ನಿಂತಿದೆ. ಈ ಗುಮ್ಮಟದ ಹೊರಗಿನ ತಳದ ಸುತ್ತಲೂ ಎತ್ತರವಾದ ಪ್ರದಕ್ಷಿಣಾ ಪಥವಿದ್ದು, ಅದನ್ನು ಆವರಿಸಿ ಸುವ್ಯವಸ್ಥಿತವಾಗಿ ಕಟ್ಟಿದ ರಕ್ಷಣಾತ್ಮಕ ಜಾಲಂಧ್ರವಿದೆ. ಪಿಸುಗುಟ್ಟುವ ಕಟಾಂಜನವು ಗುಮ್ಮಟದ ಒಳಭಾಗದ ಸುತ್ತಲೂ ನಿರ್ಮಿಸಲ್ಪಟ್ಟಿದ್ದು, ಈ ಕಟ್ಟಡದ ಇನ್ನೊಂದು ಅಸಾಧಾರಣ ಲಕ್ಷಣವಾಗಿದೆ. ಕಟ್ಟಡವನ್ನು ಪ್ರವೇಶಿಸುತ್ತಿದ್ದಂತೆಯೇ, ಪಿಸುಮಾತು ಕೂಡ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಕೇಳಿಬರುತ್ತದೆ. ಚೌಕಾಕಾರದ ಪ್ರಕಾರದ ಮಧ್ಯದಲ್ಲಿ ಮಹಮ್ಮದ ಷಾ (1626-56) ಹಾಗೂ ಆತನ ಕುಟುಂಬದವರ ಸಮಾಧಿಗಳಿವೆ. ಇಡೀ ಕಟ್ಟಡವು 18,000 ಚದರ ಅಡಿ ಪ್ರದೇಶವನ್ನು ವ್ಯಾಪಿಸಿದೆ. (ವಿವರಗಳಿಗಾಗಿ ಪುಟ 396ರಲ್ಲಿ 'ಮಹಮ್ಮದೀಯ ವಾಸ್ತು ಶಿಲ್ಪ' ನೋಡಿರಿ).

ಒಂದನೇಯ ಅಲಿಯ ಸಮಾಧಿಯಿಂದ ದಕ್ಷಿಣಕ್ಕೆ ಅನತಿ ದೂರದಲ್ಲಿ ಹಸಿರು ಕಲ್ಲಿನ ಶವ ಪೆಟ್ಟಿಗೆಯೆಂಬ ಸಮಾಧಿಯಿದೆ. ಹಸಿರು ಛಾಯೆಯ ಕಪ್ಪು ವರ್ಣದ ಅಗ್ನಿಶಿಲೆಯಲ್ಲಿ ನಯವಾಗಿ ಕೆತ್ತಿ ರೂಪಿಸಲಾಗಿರುವ ಇದು ಎತ್ತರದ ಹಾಗೂ ವಿಶಾಲವಾದ ವೇದಿಕೆಯ ಮೇಲೆ ನಿಂತಿದೆ. ಇದರಲ್ಲಿ ಹೂಳಲಾದ ವ್ಯಕ್ತಿಯ ಹೆಸರು ಗೊತ್ತಿಲ್ಲ. ಸಾತ್ ಮಂಜಿಲ್‌ನ ಉತ್ತರಕ್ಕೆ ಕೇವಲ ಅರಸು ಪರಿವಾರದವರ ವಿಲಾಸಕ್ಕಾಗಿ ನಿರ್ಮಿತವಾಗಿದ್ದ, ಈಗ ಒಣಗಿರುವ ಜಲಾಶಯದ ಮಧ್ಯದಲ್ಲಿ ನಿಂತಿರುವ ಜಲಮಂಜಿಲ್ ಎಂಬುದು ಚಿಕ್ಕದಾದ ಒಂದು ಚೌಕಾಕಾರದ ಕಟ್ಟಡವಾಗಿದೆ. ಲಂಡಾ ಕಸಬಾ ಎಂಬ ತೋಪು ನಗರದ ದಕ್ಷಿಣ ಕೋಟೆಯ ಮಧ್ಯದಲ್ಲಿ ಬಿದ್ದಿದ್ದು, 46½ ಟನ್ನುಗಳಷ್ಟು ಭಾರವಾಗಿದೆ. ಅದೇ ಕೊತ್ತಳದ ಮೇಲೆ ಇನ್ನೊಂದು ಸಣ್ಣ ತೋಪು ಇದೆ. 300 ವರ್ಷಗಳಷ್ಟು ದೀರ್ಘ ಕಾಲ ಅವು ನಿಸರ್ಗದ ವಿನಾಶಕಾರಿ ಶಕ್ತಿಗಳಿಂದ ರಕ್ಷಿಸಲ್ಪಡದಿದ್ದರೂ, ಈ ತೋಪುಗಳನ್ನು ತುಕ್ಕಿನ ಒಂದಿಷ್ಟು ಲಕ್ಷಣಗಳನ್ನೂ ಹೊಂದಿಲ್ಲ. ವಿಜಾಪುರದ ಅತ್ಯಂತ ಬೃಹದಾಕಾರದ ಮಾಲಿಕ್-ಈ-ಮೈದಾನ ಎಂಬ ತೋಪನ್ನು, ಕೋಟೆಯಲ್ಲಿನ ಘಟಕಾ ಅಗಸೆಯ ಉತ್ತರಕ್ಕೆ ಒಂದು ಗೋಪುರದ ಮೇಲೆ ಇರಿಸಲಾಗಿದೆ. ವಿಜಾಪುರದ ತೋಪುಗಳಲ್ಲೆಲ್ಲ ಅತ್ಯಂತ ದೊಡ್ಡದಾದ ಇದು 55 ಟನ್ನು ಭಾರವಾಗಿದೆ. ಈ ತೋಪು ಅಹಮ್ಮದ ನಗರದಲ್ಲಿ, 1549ರಲ್ಲಿ, ಬುರ್ಹಾನ ನಿಜಾಮ ಷಾನ ಸೇವೆಯಲ್ಲಿದ್ದ ಟರ್ಕೀ ಅಧಿಕಾರಿಯೊಬ್ಬನಿಂದ ಎರಕಗೊಂಡಿತೆಂಬ ವಿಷಯವನ್ನು ಅದರ ಮೇಲೆ ಕೆತ್ತಲಾಗಿದೆ. ತೋಪಿನ ಬಾಯಿಗೆ ಸಿಂಹ ಇಲ್ಲವೇ ಘಟಸರ್ಪದ ತಲೆಯ ಹೋಲಿಕೆಯ ಆಕಾರ ಕೊಡಲಾಗಿದೆ. ಕೋಟೆಯ ಪಶ್ಚಿಮಕ್ಕಿರುವ ಅರಮನೆಯ ಭಾಗವಾಗಿರುವ ಸಾತ್ ಮಂಜಿಲ್ ಎಂಬುದು ಐದಂತಸ್ತಿನ ಶಿಥಿಲ ಕಟ್ಟಡವಾಗಿದೆ. ಇದರಲ್ಲಿ ವರ್ಣಾಲಂಕಾರದ ಅವಶೇಷಗಳು ಇದ್ದು ಉಬ್ಬು ಗಾರೆಯ ಅಲಂಕರಣ ಕಾರ್ಯವನ್ನು ವಿವಿಧ ಅಂತಸ್ತಿನ ಮೇಲ್ಛಾವಣಿಯ ಒಳಗಡೆ ಕೈಕೊಳ್ಳಲಾಗಿದೆ. ಮಕ್ಕಾ ಅಗಸಿಯ ಪಶ್ಚಿಮಕ್ಕೆ ಸುಮಾರು 100 ಗಜಗಳಷ್ಟು ಅಂತರದಲ್ಲಿ ತಾಜಬಾವಡಿ ಎಂಬ ಬಾವಿಯಿದೆ. ಇದು 223 ಅಡಿ ಉದ್ದಗಲಗಳುಳ್ಳ ಚತುರಸ್ರಾಕಾರ ಹೊಂದಿದ್ದು, 52 ಅಡಿ ಆಳವಾಗಿದೆ. ಮೇಹ್ತಾರ ಮಹಲ್ ಎಂಬುದು ಜುಮ್ಮಾ ಮಸೀದಿ-ಅರ್ಕ ಕಿಲ್ಲಾ ರಸ್ತೆಯ ದಕ್ಷಿಣಕ್ಕೆ 250 ಗಜ ದೂರದಲ್ಲಿದೆ. ವಾಸ್ತವಿಕವಾಗಿ ಇದೊಂದು ಅರಮನೆಯಾಗಿರದೆ, ಮಸೀದಿ ಮತ್ತು ಹೂದೋಟಕ್ಕೆ ಹೋಗುವ ದಾರಿಯಲ್ಲಿರುವ ಅಲಂಕೃತ ಅಗಸೆಯಾಗಿದೆ. ಅದರ ಸಪಾಟಾದ ಕಲ್ಲಿನ ಮೇಲ್ಛಾವಣಿಯು ತಂತ್ರಜ್ಞರಿಗೆ ಒಂದು ಒಗಟಾಗಿದೆ. ಅದಕ್ಕೆ ಆಧಾರವಾಗಿ ಸೂಕ್ಷ್ಮ ಕೆತ್ತನೆಯ ಹಕ್ಕಿಗಳ ವಿಗ್ರಹಗಳನ್ನು ಅಳವಡಿಸಲಾಗಿದೆ. ಚಾಂದ್ ಬಾವಡಿಗೆ ಹೊಂದಿ, ಎತ್ತರ ದಿನ್ನೆಯ ಮೇಲೆ ಉಪರಿ ಬುರುಜ ಎಂಬ ಒಂಟಿ ಗೋಪುರ ನಿಂತಿದೆ. ಕ್ರಿ.ಶ. 1584ರಲ್ಲಿ ನಿರ್ಮಿತವಾದ ಇದರ ಮೇಲೆ ಎರಡು ತೋಪುಗಳನ್ನು ಇರಿಸಲಾಗಿದೆ.

ಗೋಲಗುಮ್ಮಟದ ಸಮೀಪದಲ್ಲಿ ಷಣ್ಮುಖಸ್ವಾಮಿ ಸ್ಥಾಪಿಸಿದ ಷಣ್ಮುಖಸ್ವಾಮಿಯ ಮಠವಿದೆ. ಅನಾಚ್ಛಾದಿತ ಅಂಗಳದಿಂದ ಸುತ್ತುವರಿಯಲ್ಪಟ್ಟಿರುವ ಮೊಗಸಾಲೆಯಲ್ಲಿ ಷಣ್ಮುಖಸ್ವಾಮಿಯ ಸಮಾಧಿಯಿದೆ. ಮಲಿಕ ಜಹಾನ್ ಬೇಗಮ್‌ಳ ಮಸೀದಿಯು ಕೋಟೆಯ ಪಶ್ಚಿಮಕ್ಕೆ 100 ಗಜ ಅಂತರದಲ್ಲಿದೆ. ಇದನ್ನು ಎರಡನೇಯ ಇಬ್ರಾಹಿಮ ಆದಿಲ್ ಷಾನು ತನ್ನ ರಾಣಿ ಮಲಿಕ್ ಜಹಾನಳ ಗೌರವಾರ್ಥ ನಿರ್ಮಿಸಿದನು. ಇದರ ಕಮಾನಿನ ಕಂಬಗಳು ಚೆನ್ನಾಗಿದ್ದು ಅವುಗಳ ಮೇಲಿರುವ ಉಬ್ಬು ಗಾರೆಯ ಅಲಂಕರಣ ಕಾರ್ಯವು ಸುಂದರವಾಗಿದೆ. ಮಲಿಕ್ ಸಂಡಲ್ ಮಸೀದಿಯು ಬುಖಾರಾ ಮಸೀದಿಯಿಂದ ಉತ್ತರಕ್ಕೆ 75 ಗಜ ದೂರದಲ್ಲಿದೆ. ಇದು ಹಿಂದೂ-ಮುಸ್ಲೀಮ ವಾಸ್ತುಶೈಲಿಗಳ ವಿಶಿಷ್ಟ ಸಂಗಮವಾಗಿದೆ. ಮೇಲ್ಛಾವಣಿಯು ಕಮಾನುಗಳ ಆಧಾರದ ಮೇಲೆ ನಿಂತಿರದೆ ಎಂಟು ಬದಿಗಳಿರುವ, ಹಿಂದೂ ಪದ್ಧತಿಯ ತಳಪಾಯ ಹಾಗೂ ಬೋದಿಗೆಗಳಿರುವ ಕಂಬಗಳನ್ನು ಆದರಿಸಿದೆ. ಮಧ್ಯದ ಗುಮ್ಮಟ ಹಾಗೂ ಪಶ್ಚಿಮದ ಮಿಹರಾಬಗಳನ್ನುಳಿದು, ಇದರ ರಚನೆಯು ಹಿಂದೂ ಶೈಲಿಯಲ್ಲಿದೆ. ಮಕ್ಕಾ ಮಸೀದಿಯು ಕೋಟೆಯ ಮಧ್ಯದಲ್ಲಿದೆ. ಇದು ಇಲ್ಲಿರುವ ಮಸೀದಿಗಳಲ್ಲಿ ಅತ್ಯಂತ ಚಿಕ್ಕದೂ ಅಷ್ಟೇ ಸುಂದರವೂ ಆಗಿದೆ. ಇದು ಎರಡನೇಯ ಇಬ್ರಾಹಿಮ್‌ನ ಕಾಲದ್ದೆಂದು ಕಂಡುಬರುತ್ತದೆ. ಗಡದ ಕೆಳಗೆ ಕೋಟೆಯ ಪಶ್ಚಿಮಕ್ಕೆ ಒಳಗಡೆಯ ಕಂದಕದ ಮೇಲೆ ನಿಂತಿರುವ ಮಂದಿರವು ಅತ್ಯಂತ ಪೂಜ್ಯವೆನಿಸಿದೆ. ನರಸೋಬಾನ ಗುಡಿ ಅಥವಾ ನರಸಿಂಹನ ಗುಡಿ ಎಂಬುದು ಇದರ ವಾಡಿಕೆಯ ಹೆಸರಾಗಿದೆ. ದತ್ತಾತ್ರೇಯನಂತೆ ತೋರುವ ಆದರೆ ಆಕಾರ ರಹಿತವಾದ ಕರಿಯ ಕಲ್ಲು ಇಲ್ಲಿಯ ಮುಖ್ಯ ಪೂಜನೀಯ ವಸ್ತುವಾಗಿದೆ. ಮಹರ್ಷಿ

ನರಸಿಂಹ ಸರಸ್ವತಿಯವರವೆಂದು ನಂಬಲಾಗಿರುವ ಪಾದುಕೆಗಳನ್ನು ಇಲ್ಲಿ ಪೂಜಿಸಲಾಗುತ್ತದೆ. ಎರಡನೇಯ ಇಬ್ರಾಹಿಮು ಆದಿಲ್‌ಷಾ ಇಲ್ಲಿಗೆ ಆಗಾಗ ದರ್ಶನಕ್ಕಾಗಿ ಬರುತ್ತಿದ್ದನೆಂದು ಹೇಳಲಾಗುತ್ತದೆ. ನಗರದಿಂದ ಮೂರು ಕಿಮೀ ದೂರದಲ್ಲಿ, ದರ್ಗಾಕ್ಕೆ ಹತ್ತಿರ ಪಾರ್ಶ್ವನಾಥ ಬಸದಿಯಿದೆ. ಮೂರು ಅಡಿ ಎತ್ತರದ ಕರಿಯ ಕಲ್ಲಿನ ಈ ಮೂರ್ತಿಯು ಕಲಾತ್ಮಕವಾಗಿದೆ. ದೇವತೆಯ ಮೇಲೆ ಕೊಡೆಯಂತೆ ಬಿಚ್ಚಿಕೊಂಡಿರುವ 1008 ಹೆಡೆಗಳುಳ್ಳ ನಾಗಸರ್ಪ ವನ್ನು ನಯವಾಗಿ ಕೆತ್ತಲಾಗಿದೆ. ಕೆಲವು ವರ್ಷಗಳ ಹಿಂದೆ ಒಂದು ದಿನ್ನೆಯನ್ನು ಅಗಿಯುವಾಗ ಈ ಮೂರ್ತಿಯು ಬೆಳಕಿಗೆ ಬಂದಿತೆಂದು ಹೇಳಲಾಗುತ್ತದೆ. ಸುಂದರ ಅಮೃತಶಿಲೆಯ ಮೂರ್ತಿಯನ್ನುಳ್ಳ, ಸುಮಾರು 75 ವರ್ಷಗಳ ಹಿಂದೆ ಕಟ್ಟಿಸ ಲಾದ ಬಾಲಾಜಿ ಮಂದಿರ, ಕೋಟೆಯ ಒಂದು ಕೊತ್ತಳದ ಮೇಲಿರುವ ಚಿಂಚಾದಿಡ್ಡಿ ಮಸೀದಿ, 1915ರಲ್ಲಿ ನಿರ್ಮಿತವಾದ ಮಹಾಲಕ್ಷ್ಮಿ ಗುಡಿ, ಪೇಟೆಯ ಮಧ್ಯದಲ್ಲಿ ಇರುವ ಪಾರ್ಶ್ವನಾಥ ಬಸದಿ (1917), ಸಿಂದಗಿ ರಸ್ತೆಯಲ್ಲಿ ಇರುವ ರುಕ್ಮಾಂಗದ ಪಂಡಿತರ ಸಮಾಧಿ, ಈಗ ಜಿಲ್ಲಾಧಿಕಾರಿಯವರ ಅಧಿಕೃತ ನಿವಾಸ ವಾಗಿರುವ ಅದಾಲತ್ ಕಟ್ಟಡ, ಪಕುತ ದಾಬುಲ್‌ನ ಸಮಾಧಿ (1584), 1954ರಲ್ಲಿ ನಿರ್ಮಿತವಾದ ಏಳುನೂರ ಎಪ್ಪತ್ತು ಶಿವಲಿಂಗಗಳ ಶಿವಾಲಯ ಊರಿನಲ್ಲಿರುವ ಇತರ ಆಕರ್ಷಣೀಯ ಸಂಗತಿಗಳಾಗಿವೆ. ಅಲ್ಲಿ ಸುಪ್ರಸಿದ್ಧವಾದ ಸಿದ್ಧರಾಮೇಶ್ವರ ದೇವಾಲಯವೂ ಇದೆ. ವಚನ ಪಿತಾಮಹ ಎಂದು ಖ್ಯಾತರಾದ ಸುಪ್ರಸಿದ್ಧ ಸಾಹಿತಿ ರಾವಬಹಾದ್ದೂರ ಫ. ಗು. ಹಳಕಟ್ಟಿ ಯವರು ವಿಜಾಪುರದವರು. ಈ ನಗರದಿಂದ ಸುಮಾರು ಆರು ಕಿಮೀ ದೂರದಲ್ಲಿ ತೊರವಿ ಎಂಬ ಹಳ್ಳಿಯಿದೆ. ಇದು ಭೂಗರ್ಭ ದಲ್ಲಿ ಗರ್ಭಗೃಹವನ್ನುಳ್ಳ ನರಸಿಂಹ ದೇವಾಲಯಕ್ಕಾಗಿ ಪ್ರಸಿದ್ಧ ವಿದೆ. ಕನ್ನಡದ ಖ್ಯಾತ ಕವಿ ಕುಮಾರ ವಾಲ್ಮೀಕಿಯು ಈ ದೇವಾಲಯದಲ್ಲಿ ಕನ್ನಡ ರಾಮಾಯಣವನ್ನು ರಚಿಸಿದನು. ಮತ್ತು ಅದು ತೊರವೆ ರಾಮಾಯಣ ಎಂದು ಜನಪ್ರಿಯವಾಗಿದೆ. ಎರಡನೇಯ ಇಬ್ರಾಹಿಮನು ಇಲ್ಲಿ ಒಂದು ಹೊಸ ಅರಮನೆ ಯನ್ನು ನಿರ್ಮಿಸಿ, ಈ ಪ್ರದೇಶವನ್ನು ನವರಸಪುರ ಎಂದು ಹೆಸರಿಸಿದನು. ವಿಜಾಪುರದಿಂದ 16 ಕಿಮೀ ಪೂರ್ವಕ್ಕೆ ಇರುವ ಕುಮಟಗಿಯಲ್ಲಿ ಒಂದು ಜಲಾಶಯವಿದೆ. ಆದಿಲಷಾನು ನಿರ್ಮಿಸಿದ ಜಲಮಂಟಪವು ಇಲ್ಲಿನ ಅತ್ಯಾಕರ್ಷಕ ಕಟ್ಟಡವಾಗಿದೆ. ಮಂಟಪದ ಗೋಡೆಗಳ ಮೇಲೆ ಕೆಲವೊಂದು ಗಮನಾರ್ಹ ವರ್ಣಚಿತ್ರಗಳಿವೆ. ಆದರೆ ಅವು ಅಳಿಸಿಹೋಗುತ್ತಿವೆ. ಕೃಷ್ಣಾ ನದಿಯ ದಂಡೆಯಲ್ಲಿರುವ ಬಬಲಾದ ಎಂಬ ಹಳ್ಳಿಯು ವಿಜಾಪುರ ದಿಂದ 45 ಕಿಮೀ ದೂರದಲ್ಲಿದೆ. ಇಲ್ಲಿರುವ ಪುರಾತನ ಮಠವನ್ನು ಚಿಕ್ಕಯ್ಯ ಸ್ವಾಮಿ ಎಂಬುವರು ಸ್ಥಾಪಿಸಿದರೆಂದು ಪ್ರತೀತಿಯಿದೆ. ಇದು ಬಹುಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸುತ್ತದೆ. ಮುಖ್ಯ ಸಭಾಂಗಣದಲ್ಲಿ ಹತ್ತು 'ಮತ್ತು ಅದರ ಎಡಬದಿಯ ಕೊಠಡಿಯಲ್ಲಿ ಎರಡು ಗದ್ದುಗೆಗಳಿರುವ ಇದು ಬಬಲಾದಿ ಅಥವಾ ಚಂದ್ರಗಿರಿ ಮಠವೆಂದು ಪ್ರಸಿದ್ಧವಿದೆ. ಎಲ್ಲ ಗದ್ದುಗೆಗಳ ಮೇಲೆ ಕಂಚಿನ ಅರ್ಧಾಕೃತಿಯ ಮೂರ್ತಿಗಳನ್ನು ಇರಿಸಲಾಗಿದೆ. ಮಹಾಶಿವರಾತ್ರಿಯ ದಿನ ನಡೆಯುವ ಜಾತ್ರೆಯ ಸಮಯದಲ್ಲಿ ಉಕ್ತವಾಗುವ ದೇವವಾಣಿ(ಕಾರಣಿಕ)ಗಾಗಿ ಈ ಸ್ಥಳವು ಪ್ರಸಿದ್ಧವಿದೆ. ಆ ಸಮಯದಲ್ಲಿ ಬೃಹತ್ ಪ್ರಮಾಣದಲ್ಲಿ ದನಗಳ ಜಾತ್ರೆಯೂ ಇಲ್ಲಿ ಕೂಡುತ್ತದೆ. ಬಸವಣ್ಣ, ಹನುಮಂತ ಮತ್ತು ದುರ್ಗಮ್ಮನ ಗುಡಿಗಳು ಈ ಹಳ್ಳಿಯಲ್ಲಿರುವ ಇತರ ಕಟ್ಟಡ ಗಳಾಗಿದ್ದು, ಅವು ಸರಳ ಶೈಲಿಯಲ್ಲಿವೆ. ಅಲ್ಲಿ ಒಂದು ಮಸೀದಿಯೂ ಇದೆ. ವಿಜಾಪುರದಿಂದ ನೈಋತ್ಯಕ್ಕೆ 35 ಕಿಮೀ ದೂರದಲ್ಲಿರುವ ದೊಡ್ಡ ಹಳ್ಳಿಯಾದ ಕಾಖಂಡಕಿಯಲ್ಲಿ ಸಂತ ಮಹೀಪತಿದಾಸರ ಬೃಂದಾವನವಿದೆ. ಮಹೀಪತಿ ಸ್ವಾಮಿಗಳು ಮಹಮ್ಮದ ಆದಿಲ್‌ಷಾನ ಕಾಲದಲ್ಲಿ ವಿಜಾಪುರದಲ್ಲಿ ಮಂತ್ರಿ ಗಳಾಗಿದ್ದರು. ಅನಂತರ ಅವರು ಮಂತ್ರಿ ಹುದ್ದೆ ಹಾಗೂ ಐಹಿಕ ಜೀವನವನ್ನು ತೊರೆದು ಸಂತರಾದರು. ಜಮಖಂಡಿಯ ಹಿಂದಿನ ಸಂಸ್ಥಾನಿಕರು ಈ ಸ್ಥಳದ ವಿಷಯವಾಗಿ ವಿಶೇಷ ಆಸಕ್ತಿ ವಹಿಸಿದ್ದರು ಮತ್ತು ಸಂತರ ಅರ್ಧಾಕೃತಿಯ ಸುವರ್ಣ ಮೂರ್ತಿ ಯನ್ನು ಕಾಣಿಕೆಯಾಗಿ ಅರ್ಪಿಸಿದ್ದರು. ಅದು ಈಗ ಅವರ ವಂಶ ಸ್ಥರ ವಶದಲ್ಲಿದೆ. ಅದರ ಪ್ರಾಂಗಣದಲ್ಲಿ ರಾಮೇಶ್ವರ ಗುಡಿ ಮತ್ತು ಮಹೀಪತಿದಾಸರ ಎರಡನೇಯ ಮಗ ಕೃಷ್ಣರಾಯರ ಬೃಂದಾವನ ಗಳಿವೆ. ಇಲ್ಲಿರುವ ಇತರ ಮಹತ್ವದ ದೇವಾಲಯಗಳೆಂದರೆ, ಸಂಗಮೇಶ್ವರ, ಮಲ್ಲಿಕಾರ್ಜುನ ಮತ್ತು ಕರವೀರಭದ್ರ ದೇವರ ಗುಡಿಗಳು. ಅವುಗಳಲ್ಲಿ ಕೊನೆಯದು ತುಂಬ ಪುರಾತನ ದೇವಾ ಲಯವಾಗಿದ್ದು, ಅದರ ಹೊರಗೋಡೆಯ ಮೇಲೆ ಒಂದು ಶಿಲಾ ಶಾಸನವಿದೆ. ಈ ಸ್ಥಳದ ಸಮೀಪದಲ್ಲಿಯೇ ಹರಳೇಶ್ವರ ಕ್ಷೇತ್ರ ಮತ್ತು ಶಿವ ದೇವಾಲಯಗಳೆಂಬ ಮಂದಿರಗಳಿವೆ.

ವಿದುರಾಶ್ವತ್ಥ : (ಕೋಲಾರ ಜಿ; ಗೌರಿಬಿದನೂರು ತಾ.) ವಿದುರಾಶ್ವತ್ಥ ಒಂದು ಮುಖ್ಯ ಯಾತ್ರಾ ಸ್ಥಳವಾಗಿದ್ದು, ಗೌರಿ ಬಿದನೂರಿನಿಂದ ಆರು ಕಿಮೀ ದೂರದಲ್ಲಿ ದೊಡ್ಡಕುರುಗೋಡು ಸಮೀಪದಲ್ಲಿದೆ. ಇಲ್ಲಿರುವ ಅತ್ಯಂತ ಪ್ರಾಚೀನ ಅಶ್ವತ್ಥ ವೃಕ್ಷ ವನ್ನು ಮಹಾಭಾರತ ಖ್ಯಾತಿಯ ವಿದುರನು ನೆಟ್ಟಿದ್ದರಿಂದ ಅದರ ಹೆಸರಿನಿಂದಲೇ ಈ ಸ್ಥಳವು ಪ್ರಸಿದ್ಧವಾಗಿದೆ ಎಂದು ಪ್ರತೀತಿ. ಈ ಭಾರಿ ಗಾತ್ರದ ಅಶ್ವತ್ಥವೃಕ್ಷದ ಸುತ್ತಲೂ ಅನೇಕಾನೇಕ ನಾಗರಕಲ್ಲುಗಳಿದ್ದು, ಮಕ್ಕಳಿಲ್ಲದ ದಂಪತಿಗಳು ಈ ಜಾಗಕ್ಕೆ ಭೇಟಿ ನೀಡಿ ಸಂತಾನ ಪ್ರಾಪ್ತಿಗಾಗಿ ಪ್ರಾರ್ಥಿಸುವರು. ಮತ್ತು ಹೊಸ ನಾಗರಕಲ್ಲೊಂದನ್ನು ಪ್ರತಿಷ್ಠಾಪಿಸುವುದಾಗಿ ಹರಕೆ ಮಾಡಿ ಕೊಳ್ಳುವರು. ಇಲ್ಲಿ ಶಿವ, ನಾರಾಯಣ, ರಾಮ ಮತ್ತು ನವಗ್ರಹಗಳ ಮಂದಿರಗಳಿವೆ. ಅನೇಕ ಸಮಾಜ ಸೇವಾ ಸಂಸ್ಥೆ ಗಳು ಇಲ್ಲಿ ಸಾಮೂಹಿಕ ವಿವಾಹಗಳನ್ನು ಜರಗಿಸುತ್ತವೆ. ಸ್ವಾತಂತ್ರ್ಯ ಚಳವಳಿ ಸಂಬಂಧವಾಗಿ, 1938ರಲ್ಲಿ, ಇಲ್ಲಿ ಕಾಂಗ್ರೆಸ್ ಧ್ವಜವನ್ನು ಹಾರಿಸಲು ಯತ್ನಿಸುತ್ತಿದ್ದ ದೇಶಪ್ರೇಮಿ

ಗಳ ಪೈಕಿ ಕೆಲವರು ಪೋಲೀಸರ ಗೋಲಿಬಾರಿನಿಂದ ಹುತಾತ್ಮರಾದರು. ಈ ಘಟನೆಯನ್ನು ವಿದುರಾಶ್ವತ್ಥ ದುರ್ಘಟನೆ ಎಂದೂ 'ಮೈಸೂರಿನ ಜಲಿಯನ್‌ವಾಲಾಬಾಗ್' ಎಂದೂ ವರ್ಣಿಸಲಾಗಿದೆ. ಈ ಹುತಾತ್ಮರಿಗಾಗಿ, 1962ರಲ್ಲಿ ಸ್ಮಾರಕ ಸ್ತಂಭವೊಂದನ್ನು ನಿಲ್ಲಿಸಲಾಯಿತು. ಮೈಸೂರು ಕಾಂಗ್ರೆಸ್‌ನ ಎರಡನೇಯ ಅಧಿವೇಶನ 1939ರಲ್ಲಿ ಇಲ್ಲಿಯೇ ಜರುಗಿತು.

ವೀರರಾಜಪೇಟೆ : (ಕೊಡಗು ಜಿ; ತಾ. ಕೇ; ಜನ: 11,676) ವೀರರಾಜಪೇಟೆ ('ವಿರಾಜಪೇಟೆ') ಬೆಂಗಳೂರಿನಿಂದ 258 ಕಿಮೀ, ಮಡಿಕೇರಿಯಿಂದ ದಕ್ಷಿಣಕ್ಕೆ 32 ಕಿಮೀ ದೂರದಲ್ಲಿರುವ ಪಟ್ಟಣ. ದಕ್ಷಿಣ ಕೊಡಗಿನ ತಂಪಾದ ಹವೆಯುಳ್ಳ ಮತ್ತು ಸುಂದರ ಪ್ರಕೃತಿ ದೃಶ್ಯಗಳಿಂದ ಸುತ್ತುವರಿದಿರುವ ಈ ಪಟ್ಟಣವನ್ನು ಶ್ರೀರಂಗಪಟ್ಟದ ವಿರುದ್ಧ ಮುಂಬಯಿಯಿಂದ ಸಾಗಿಬರುತ್ತಿದ್ದ ಬ್ರಿಟಿಷ್ ಸೈನ್ಯಾಧಿಕಾರಿ ಅಬರ್‌ಕ್ರಾಂಬಿ ಎಂಬಾತನನ್ನು ಇಲ್ಲಿ ಸಂಧಿಸಿದ ಸವಿನೆನಪಿಗಾಗಿ, ದೊಡ್ಡ ವೀರರಾಜೇಂದ್ರನು 1792ರಲ್ಲಿ ಕಟ್ಟಿಸಿದನು. ಇದರಿಂದಾಗಿ ಪ್ರಾರಂಭದಲ್ಲಿ ದೊಡ್ಡ ವೀರರಾಜೇಂದ್ರಪೇಟೆ ಎಂದೇ ಇದನ್ನು ಕರೆಯುತ್ತಿದ್ದರು. ದೊಡ್ಡ ವೀರರಾಜೇಂದ್ರನು ಅನೇಕ ಪ್ರಾಂತ್ಯಗಳಿಂದ ಜನರನ್ನು ತಂದು ಇಲ್ಲಿ ನೆಲೆಗೊಳಿಸಿದನು. ಇಂತಹವರಲ್ಲಿ ತೆಲುಗು ನೇಕಾರರು, ಕೊಂಕಣಿ ಕ್ರಿಶ್ಚಿಯನರು, ಬೆಂಗಾಲಿ ಮುಸ್ಲಿಮರು ಮುಂತಾದವರಿದ್ದರು. ಇಲ್ಲಿಯ ರೋಮನ್ ಕ್ಯಾಥಲಿಕ್ ಸಮುದಾಯದವರು ಟಿಪ್ಪುವಿನ ಶಿಬಿರದಿಂದ ಪಾರಾಗಿ ಬಂದವರೇ ಆಗಿದ್ದಾರೆ. ಪಶ್ಚಿಮ ತೀರ ಪ್ರದೇಶದೊಡನಿರುವ ಕಾಫಿ, ಅಕ್ಕಿ, ಏಲಕ್ಕಿ ಮುಂತಾದ ಉತ್ಪನ್ನಗಳ ವ್ಯಾಪಾರ ಬಾಂಧವ್ಯದಿಂದಾಗಿ ವೀರರಾಜಪೇಟೆ ಕೊಡಗು ಜಿಲ್ಲೆಯ ಮುಖ್ಯ ವಾಣಿಜ್ಯ ಕೇಂದ್ರವೆನಿಸಿದೆ. ಮಲೆತಂಬಿರನ್ ಬೆಟ್ಟದ ತಪ್ಪಲಿನ ಸುಂದರ ಸನ್ನಿವೇಶ ಹೊಂದಿರುವ ತಂಪು ಹವೆಯುಳ್ಳ ಈ ಪಟ್ಟಣ ಬಹಳ ಅಭಿವೃದ್ಧಿ ಸಾಧಿಸಿದೆ. ಈ ಬೆಟ್ಟದ ಮೇಲೆ ಚಚ್ಚೌಕಾಕೃತಿಯ ದೊಡ್ಡ ಮಂದಿರವೊಂದಿದೆ. ಸಾರ್ವಜನಿಕ ಕಛೇರಿಯ ಸಮೀಪದಲ್ಲಿರುವ ರೋಮನ್ ಕ್ಯಾಥಲಿಕ್ ಚರ್ಚ್ ಗಮನ ಸೆಳೆಯುವಂತಹ ಕಟ್ಟಡ. ವೀರರಾಜಪೇಟೆಯ ಪುರಸಭೆ 1870ರಲ್ಲಿ ಸ್ಥಾಪಿತವಾಯಿತು. ವೀರರಾಜಪೇಟೆಯಿಂದ ಆಗ್ನೇಯಕ್ಕೆ 16 ಕಿಮೀ ದೂರದಲ್ಲಿ 1,80,000 ಕಿಲೋವಾಟ್ಸ್ ವಿದ್ಯುಚ್ಛಕ್ತಿ ಉತ್ಪಾದನಾ ಸಾಮರ್ಥ್ಯವಿರುವ ಬರಪೊಳೆ ಜಲವಿದ್ಯುತ್ ಯೋಜನೆ ರೂಪಿಸಿದೆ. ಈ ತಾಲೂಕಿನ ಕುರುಚಿ ಗ್ರಾಮದ ಇರುಪು ಒಂದು ಯಾತ್ರಾ ಸ್ಥಳವಾಗಿದ್ದು ವೀರರಾಜಪೇಟೆಯಿಂದ 44 ಕಿಮೀ ಮತ್ತು ಬೆಂಗಳೂರಿನಿಂದ 272 ಕಿಮೀ ದೂರದಲ್ಲಿದೆ. ಇದರ ಸುತ್ತಮುತ್ತಲಿರುವ ಬೆಟ್ಟಗಳು ಕಾಫಿ ಮತ್ತು ಕಿತ್ತಳೆ ತೋಟಗಳಿಂದ ತುಂಬಿವೆ. ಯಾತ್ರಿಕರು ನೋಡಬಹುದಾದ ಮತ್ತೊಂದು ಸ್ಥಳವೆಂದರೆ, ಇರುಪುವಿಗೆ ಸಮೀಪದಲ್ಲಿಯೇ ವೈನಾಡು ಅರಣ್ಯದತ್ತ ಚಾಚಿಕೊಂಡಿರುವ ಬ್ರಹ್ಮಗಿರಿ ಶಿಖರ. ಶ್ರೀಮಂಗಲ ಇಲ್ಲಿಂದ ಎಂಟು ಕಿಮೀ ದೂರದಲ್ಲಿದೆ. ಇಲ್ಲಿ ಲಕ್ಷ್ಮಣತೀರ್ಥ ನದಿ ದಂಡೆಯ ಮೇಲಿರುವ ಶಿವಮಂದಿರವನ್ನು ಸಾಕ್ಷಾತ್ ಶ್ರೀರಾಮನೇ ಶಿವನಿಗೆ ಅರ್ಚಿಸಿದನೆಂದು ಪ್ರತೀತಿ. ಇಲ್ಲಿ ಮಹಾಶಿವರಾತ್ರಿ ದಿನದಂದು ಜಾತ್ರೆ ನಡೆಸುವರು. ಈ ಸ್ಥಳಕ್ಕೆ ವೀರರಾಜಪೇಟೆಯಿಂದ ಶ್ರೀಮಂಗಲದ ಮೂಲಕ ಸಾಗುವ, ವರ್ಷದ ಎಲ್ಲಾ ಕಾಲದಲ್ಲಿ ಉಪಯೋಗಿಸಬಹುದಾದ ಮೋಟಾರು ರಸ್ತೆಯೊಂದಿದೆ.

ಶಹಾಪುರ : (ಕಲ್ಬುರ್ಗಿ ಜಿ ; ತಾ. ಕೇ ; ಜನ: 17,981) ಶಹಾಪುರ ಬೆಂಗಳೂರಿನಿಂದ 549 ಕಿಮೀ ಮತ್ತು ಕಲ್ಬುರ್ಗಿಯಿಂದ 77 ಕಿಮೀ ದೂರದಲ್ಲಿದೆ. ಕೃಷ್ಣಾ ಮೇಲ್ದಂಡೆ ಯೋಜನೆಯ ಕೇಂದ್ರವಾದ ಶಹಾಪುರ ಕೈಗಾರಿಕೆ ವಾಣಿಜ್ಯ ಮತ್ತು ವಿದ್ಯಾಕೇಂದ್ರವೂ ಆಗಿದೆ. ಶಹಾಪುರ ಕೋಟೆಯನ್ನು ಮೊಟ್ಟ ಮೊದಲು ನಿರ್ಮಿಸಿದ ಓರಂಗಲ್ಲಿನ ರಾಜರು ಅದನ್ನು ದೇವದುರ್ಗ ಎಂದು ಕರೆದರೆಂದು ಹೇಳುವರಾದರೂ ಇದರ ಮೂಲದ ಬಗ್ಗೆ ಖಚಿತವಾದ ಮಾಹಿತಿ ಲಭ್ಯವಾಗಿಲ್ಲ. ಈಗಿರುವ ಕೋಟೆಯನ್ನು ಬಹಮನಿ ಮತ್ತು ಆದಿಲ್‌ಷಾಹಿ ಸುಲ್ತಾನರು ಕಟ್ಟಿದರೆಂದು ಗೋಡೆಗಳಲ್ಲಿ ಬುರುಜುಗಳಲ್ಲಿ ಹಾಗೂ ಪ್ರವೇಶ ದ್ವಾರಗಳ ಮೇಲಿರುವ ಪರ್ಷಿಯನ್ ಶಾಸನಗಳು ತಿಳಿಸುತ್ತವೆ. ಪೂರ್ವಭಾಗದಲ್ಲಿರುವ ಕೋಟೆಯ ಭಾಗಗಳು ಮಾತ್ರ ಈಗ ಉಳಿದಿದ್ದು ಕೋಟೆ ಸಂಪೂರ್ಣವಾಗಿ ಶಿಥಿಲವಾಗಿದೆ. ಬೆಟ್ಟದ ತುದಿಯಲ್ಲಿ ಫಲವಂತಪ್ಪನ ಹಳೆಯ ದೇವಾಲಯ, ಒಂದು ಪಾಳು ಬಿದ್ದ ಮಸೀದಿ ಮತ್ತು ಎರಡು ದರ್ಗಾಗಳಿವೆ. ಯಾದಗಿರಿ-ಶಹಾಪುರ ರಸ್ತೆಯುದ್ದಕ್ಕೂ ಸುಮಾರು 25 ಇತಿಹಾಸಪೂರ್ವ ಕಾಲದ ಒರಟಾದ ನೇರಕಲ್ಲುಗಳ ಸಮಾಧಿಗಳಿವೆ. ಗೋಗಿ (ಜನ: 4,387) ಎಂಬ ಸ್ಥಳ ಶಹಾಪುರದಿಂದ ಸುಮಾರು 11 ಕಿಮೀ ದೂರದಲ್ಲಿದೆ. ಇಲ್ಲಿ ನವಶಿಲಾಯುಗದ ನಿವೇಶನವಿದೆಯಲ್ಲದೆ ಆದಿಲ್‌ಷಾಹಿಗಳ ಕಾಲದ ಒಂದು ಮಸೀದಿ ಮತ್ತು ಅನೇಕ ಗೋರಿಗಳಿವೆ. ಹಿಂದೆ ಇದು 'ಗೋಪಿ ಪೇಟೆ' ಎಂಬ ಹೆಸರನ್ನು ಹೊಂದಿತ್ತು. ಶಹಾಪುರ ತಾಲೂಕಿನಲ್ಲಿಯೇ ಇರುವ ಸಾಗರವು ಷೇಕ್ ಸೂಫಿ ಸರ್ಮತ್ ಸಾಹೇಬ್ ಎಂಬ ಸಂತರ ದರ್ಗಾದಿಂದಾಗಿ ಹೆಸರುಗಳಿಸಿದೆ. ಇಲ್ಲಿರುವ ಕೋಟೆಯ ಭಾಗಗಳು ಬುರುಜುಗಳು, ಪ್ರವೇಶ ದ್ವಾರಗಳು, ಜಾಮಿ ಮಸೀದಿ, ದರ್ಗಾಗಳು ಮುಂತಾದವುಗಳಿಂದಾಗಿ ಈ ಸ್ಥಳ ಬಹಮನಿ ಮತ್ತು ಆದಿಲ್ ಷಾಹಿಗಳ ಕಾಲದಲ್ಲಿ ಪ್ರಾಮುಖ್ಯತೆಯನ್ನು ಹೊಂದಿತ್ತೆಂಬುದನ್ನು ಸೂಚಿಸುತ್ತದೆ. ಇಲ್ಲಿ ದೊರೆತಿರುವ ಪರ್ಷಿಯನ್ ಭಾಷೆಯ ಶಾಸನಗಳು ಕ್ರಿ. ಶ. 1521ರಿಂದ 1713ರವರೆಗಿನ ಕಾಲದ್ದಾಗಿವೆ. ದಿಗ್ಗಿ ಎಂಬ ಊರು ಅಲ್ಲಿರುವ ಸಂಗಮನಾಥ ದೇವಸ್ಥಾನದಿಂದಾಗಿ ಮತ್ತು ಹಯ್ಯಾಲಬುದ್ರುಕ ಎಂಬ ಊರು ಅಲ್ಲಿರುವ ಹಯ್ಯಾಲಪ್ಪ ಅಥವಾ ಶ್ರೀ ಲಿಂಗೇಶ್ವರ ಎಂಬ ದೊಡ್ಡ ದೇವಸ್ಥಾನದಿಂದಾಗಿ ಪ್ರಸಿದ್ಧವಾಗಿವೆ.

**ಶಹಾಬಾದ್ :** (ಕಲ್ಬುರ್ಗಿ ಜಿ ; ಚಿತ್ತಾಪುರ ತಾ ; ಜನ: 38,805-1981) ಶಹಾಬಾದ್ ಪಟ್ಟಣವು ಬೆಂಗಳೂರಿನಿಂದ 646 ಕಿಮೀ ಹಾಗೂ ವಾಡಿ ರೈಲ್ವೆಕೂಡು ನಿಲ್ದಾಣದಿಂದ ಸುಮಾರು 13 ಕಿಮೀ ದೂರದಲ್ಲಿದೆ. ಪಟ್ಟಣದ ಮಧ್ಯ ಭಾಗದಲ್ಲಿರುವ ಅಂಡವಾದ ವರ್ತುಲಾಕಾರದ ಕಲ್ಲಿನ ಗೋಡೆಯು ಹಿಂದೆ ಇಲ್ಲಿದ್ದ ಅರಮನೆಯೊಂದರ ಗೋಡೆಯಾಗಿದ್ದಿರಬೇಕೆಂದು ಊಹಿಸಲಾಗಿದೆ. ಈ ಆವರಣದೊಳಗೆ ಒಂದು ಬಾವಿ ಹಾಗೂ ಒಂದು ಮಸೀದಿ ಇವೆ. 'ಅಸೋಸಿಯೇಟೆಡ್ ಸಿಮೆಂಟ್ ಕಂಪನೀಸ್ ಲಿಮಿಟೆಡ್'ನವರು ಸ್ಥಾಪಿಸಿರುವ ಸಿಮೆಂಟ್ ಕಾರ್ಖಾನೆಯಿಂದಾಗಿ ಶಹಾಬಾದ್ ಪ್ರಸಿದ್ಧವಾಗಿದೆ. ಈ ತಾಲೂಕಿನಲ್ಲಿ ಸುಣ್ಣ ಕಲ್ಲಿನ ಹೇರಳವಾದ ನಿಕ್ಷೇಪಗಳಿವೆ. 'ಶಹಾಬಾದ್ ಕಲ್ಲು' ಎಂದು ಕರೆಯುವ ಅಲಂಕಾರದ ಪದರುಗಲ್ಲುಗಳಿಗೆ ಈ ಸ್ಥಳ ಹೆಸರುವಾಸಿಯಾಗಿವೆ. ಶಹಾಬಾದ್ ಪಟ್ಟಣದಲ್ಲಿ ಶ್ರೀ ಶರಣ ಬಸವೇಶ್ವರ ದೇವಾಲಯ ಮತ್ತು ಬಾಲಾಜಿ ಮಂದಿರ ಇವೆ.

**ಶಿಕಾರಿಪುರ :** (ಶಿವಮೊಗ್ಗ ಜಿ; ತಾ. ಕೇ; ಜನ: 24,485) ಶಿಕಾರಿಪುರವು ಬೆಂಗಳೂರಿನಿಂದ ಸುಮಾರು 325 ಕಿಮೀ ಹಾಗೂ ಶಿವಮೊಗ್ಗದಿಂದ ಸುಮಾರು 65 ಕಿಮೀ ದೂರದಲ್ಲಿ ಕುಮದ್ವತಿ ಅಥವಾ ಚೋರ್ಡಿ ನದಿಯ ಬಲದಂಡೆಯ ಮೇಲಿದ್ದು, ಒಂದು ಪುರಸಭೆಯನ್ನು ಹೊಂದಿದೆ. ಮಲಿಯ ಎಂಬುವನು ಈ ಪಟ್ಟಣವನ್ನು ಕಟ್ಟಿದ್ದರಿಂದ ಇದಕ್ಕೆ ಮಲಿಯನ ಹಳ್ಳಿ ಅಥವಾ ಮಲೇನಹಳ್ಳಿ ಎಂಬ ಹೆಸರು ಬಂತೆಂದು ಐತಿಹ್ಯವಿದೆ. ಕೆಳದಿ ದೊರೆಯೊಬ್ಬ ಇದರ ಹೆಸರನ್ನು ಮಹಾದಾನಪುರ ಎಂದು ಬದಲಾಯಿಸಿದನು. ಹೈದರ್‌ಅಲಿ ಅಥವಾ ಟಿಪ್ಪುಸುಲ್ತಾನನ ಕಾಲದಲ್ಲಿ ಇಂದಿನ ಹೆಸರಾದ ಶಿಕಾರಿಪುರ (ಬೇಟೆಯ ಅಥವಾ ಬೇಟೆಗಾರನ ಪಟ್ಟಣ) ಎಂಬುದು ಬಳಕೆಗೆ ಬಂದಿತು. ಇದಕ್ಕೆ ಸುತ್ತಲಿನ ಕಾಡುಗಳಲ್ಲಿ ಬೇಟೆಗಾರರಿಗೆ ವಿಪುಲವಾಗಿ ದೊರಕುತ್ತಿದ್ದ ಹಿಂಸ್ರಪಶುಗಳ ಹೆಚ್ಚಿನ ಸಂಖ್ಯೆಯೇ ಕಾರಣವೆನ್ನಬಹುದು. ಈ ತಾಲೂಕು ಪ್ರಾಚೀನಾವಶೇಷಗಳಿಗೆ ಹೆಸರಾಗಿದೆ. ಪುರಾತನ ಕೋಟೆಯೊಂದರ ಅವಶೇಷಗಳು ಈಗಲೂ ನೋಡಲು ಸಿಗುತ್ತವೆ. ಕ್ರಿ.ಶ. 17ನೇಯ ಶತಮಾನದ್ದೆಂದು ಹೇಳಲಾಗುವ ಹುಚ್ಚರಾಯಸ್ವಾಮಿ ದೇವಸ್ಥಾನದ ಮುಖ್ಯ ಗುಡಿಯಲ್ಲಿ ವೀರಾಂಜನೇಯನ ಪೂಜಾಮೂರ್ತಿಯಿದೆ. ಇದನ್ನು ವೀರಶೈವ ಸಂನ್ಯಾಸಿ ಹುಚ್ಚಾಚಾರ್ಯ ಎಂಬುವನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ಈ ದೇವಾಲಯದ ಕೈಸಾಲೆಯಲ್ಲಿರುವ ಹಳೇ ವಿಗ್ರಹವೊಂದರ ಬೆಳ್ಳಿ ಕಿರೀಟದ ಮೇಲೆ ಕಂಠೀರವ ನರಸರಾಜ ಒಡೆಯರ (ಕ್ರಿ.ಶ. 1638-59) ಶಾಸನವೊಂದಿದೆ. ಎರಡೂ ಬದಿಯಲ್ಲಿ ಅಲಗುಳ್ಳ ಕತ್ತಿಯೊಂದು ಇಲ್ಲಿದ್ದು, ಇದು ಬ್ರಿಟಿಷರ ವಿರುದ್ಧ ಸೆಣಸಿದ ಸಾಹಸಿ ಧೋಂಡ್‌ಜೀ ವಾಘನದೆಂದು ಹೇಳುತ್ತಾರೆ. ಇಲ್ಲಿಂದ ಸುಮಾರು ಮೂರು ಕಿಮೀ ದೂರದ ತಿಮ್ಮಲಾಪುರದಲ್ಲಿ ಒಂದು ಕರಗು ದ್ರಾವಣದ ಕಾರ್ಖಾನೆ ಇದೆ. ಈ ಕೆಳಗಿನವು ಈ ತಾಲೂಕಿನ ಕೆಲವು ಮುಖ್ಯ ಸ್ಥಳಗಳು: ಅಂಜನಾಪುರ ಶಿವಮೊಗ್ಗದಿಂದ ವಾಯುವ್ಯಕ್ಕೆ 44 ಕಿಮೀ ಹಾಗೂ ಶಿಕಾರಿಪುರದಿಂದ 18 ಕಿಮೀ ದೂರದಲ್ಲಿರುವ ಒಂದು ಬೇಚಿರಾಕ್ ಹಳ್ಳಿ. ಕುಮುದ್ವತಿ ನದಿಗೆ ಅಡ್ಡಲಾಗಿ 1936ರಲ್ಲಿ ಕಟ್ಟಿರುವ ಒಂದು ಜಲಾಶಯ ಇಲ್ಲಿದೆ. ಈ ಅಣೆಕಟ್ಟಿನ ಜಲಾವೃತ ಪ್ರದೇಶ 673.32 ಹೆಕ್ಟೇರುಗಳು. ಇದರ ಅಚ್ಚುಕಟ್ಟು 7169.31 ಹೆಕ್ಟೇರುಗಳು. ಇಲ್ಲಿ ಮಾರಮ್ಮ ಮತ್ತು ಅಂಜನೇಯನ ದೇವಸ್ಥಾನಗಳಿವೆ. ಈಸೂರು (ಜನ: 3,196) ಶಿಕಾರಿಪುರದಿಂದ ಸುಮಾರು ಎಂಟು ಕಿಮೀ ದಕ್ಷಿಣಕ್ಕೆ ಕುಮದ್ವತಿ ನದಿಯ ಬಲದಂಡೆಯ ಮೇಲಿದೆ. 'ಏಸೂರು ಕೊಟ್ಟರೂ ಈಸೂರು ಕೊಡೆ' ಎಂಬ ಪ್ರಚಲಿತ ಕನ್ನಡ ಗಾದೆ ಮಾತೊಂದರಿಂದ ಈ ಸ್ಥಳದ ಮಹತ್ವ ಅರ್ಥವಾದೀತು. ಈಸೂರಿನ ಜನ 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ (1942) ಉತ್ಸಾಹದಿಂದ ಭಾಗವಹಿಸಿ ಅನೇಕ ದುರಂತ ಘಟನೆಗಳಿಂದ ನೊಂದರು. ಈ ಹಳ್ಳಿಯ ಸ್ವಾತಂತ್ರ್ಯ ಹೋರಾಟಗಾರರ ನೆನಪಿಗಾಗಿ ರಾಜ್ಯ ಸರ್ಕಾರ ಒಂದು ಸ್ಮಾರಕ ಭವನವನ್ನು ನಿರ್ಮಿಸಿದೆ. ಮಾಸಗೊಂಡನ ಕೊಪ್ಪ (ಜನ: 275)ವು ಶಿಕಾರಿಪುರದಿಂದ ಸುಮಾರು 25 ಕಿಮೀ ವಾಯುವ್ಯಕ್ಕಿದೆ. ಅನಿಮಿಷಾರ್ಯ ಈ ಸ್ಥಳದವನೆಂದೂ ಮತ್ತು ಆತನಿಂದ ಇಷ್ಟಲಿಂಗ ಪಡೆಯಲು ಅಲ್ಲಮಪ್ರಭು ಇಲ್ಲಿಗೆ ಭೇಟಿ ನೀಡಿದ್ದನೆಂದೂ, ಆಗ ಗೊಗ್ಗೇಶ ಎಂಬ ಕೃಷಿಕನನ್ನು ಸಾಧಕನನ್ನಾಗಿ ಪರಿವರ್ತಿಸಿದನೆಂದೂ ಐತಿಹ್ಯವಿದೆ. ಐತಿಹ್ಯಗಳಲ್ಲಿ ಈ ಸ್ಥಳವನ್ನು ಅನಿಮಿಷಾರಣ್ಯ ಅಥವಾ ಅನಿಮಿಷಾರ್ಯನ ಕೊಪ್ಪಲು ಎಂದೂ ಕರೆಯಲಾಗುತ್ತಿದೆ. ಶಿರಾಳಕೊಪ್ಪ (ಜನ: 10,518) ಶಿಕಾರಿಪುರದಿಂದ ಸುಮಾರು 19 ಕಿಮೀ ಹಾಗೂ ಬೆಂಗಳೂರಿನಿಂದ 345 ಕಿಮೀ ದೂರದಲ್ಲಿದೆ. ಈ ಸ್ಥಳನಾಮ ಶಿರಿಯಾಳ ಸಂಗಯ್ಯ ಎಂಬುವನಿಂದ ಬಂದುದಾಗಿದೆ. ಇದು ಸಾಗರ, ಸೊರಬಗಳಲ್ಲದೆ ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಸಂಪರ್ಕ ಕೇಂದ್ರವೂ ಆಗಿದೆ. ಇದರ ಸುತ್ತಮುತ್ತ ಅನೇಕ ಪ್ರಾಚೀನಾವಶೇಷಗಳಿವೆ. ಶಿಕಾರಿಪುರದಿಂದ ವಾಯುವ್ಯಕ್ಕೆ ಸುಮಾರು 19 ಕಿಮೀ ದೂರದಲ್ಲಿರುವ ತಡಗಣಿ ಎಂಬ ಹಳ್ಳಿಯಲ್ಲಿ ಸುಂದರವಾಗಿ ಕೆತ್ತಿರುವ ದೇವದೇವಿಯರ ಕಲ್ಲಿನ ಪ್ರತಿಮೆಗಳಿರುವ ಪ್ರಾಚೀನ ಕೇದಾರೇಶ್ವರ ದೇವಸ್ಥಾನವಿದೆ. ಈ ಊರು ಮತ್ತು ಉಡುಗಣಿಯ ನಡುವೆ ಒಂದು ಮಲ್ಲಿಕಾರ್ಜುನ ದೇವಾಲಯವಿದೆ. ಉಡುತಡಿ ಎಂದು ಗುರುತಿಸಲಾಗುತ್ತಿರುವ ಉಡುಗಣಿ (ಜನ: 1,895) ಶಿಕಾರಿಪುರದಿಂದ ವಾಯುವ್ಯಕ್ಕೆ ಸುಮಾರು 14 ಕಿಮೀ ದೂರದಲ್ಲಿದೆ. ಈ ಸ್ಥಳ ಬಸವೇಶ್ವರರ ಸಮಕಾಲೀನಳಾದ ಅಕ್ಕಮಹಾದೇವಿಯ ಜೀವನಕ್ಕೆ ಸಂಬಂಧಿಸಿದ, ಅನೇಕ ಸ್ಮಾರಕಗಳಲ್ಲಿ ಅವಳ ಗುರುಗಳಾಗಿದ್ದ ಗುರುಲಿಂಗ ಮಲ್ಲಿಕಾರ್ಜುನರ ಮಠವೂ ಒಂದು. 1973ರಲ್ಲಿ ನಿರ್ಮಿಸಿದ ಅಕ್ಕಮಹಾದೇವಿಯ ಗುಡಿಯಲ್ಲಿ ಉತ್ತಮವಾಗಿ ಕಡೆದಿರುವ

ಅವಳ ಒಂದು ಪ್ರತಿಮೆ ಇದೆ. ಇದಲ್ಲದೆ, ಸೂರ್ಯ ಮತ್ತು ಚೆನ್ನಕೇಶವ ದೇವಾಲಯಗಳು ಹಾಗೂ ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿಗಳ ಒಂದು ಮೃತ್ತಿಕಾ ಬೃಂದಾವನ ಸಹ ಈ ಸ್ಥಳದಲ್ಲಿದೆ. ಮಾಸೂರು ಮದಗದಕೆರೆ ಎಂದೂ ಕರೆಯುವ ಮದಗದಕೆರೆ ಒಂದು ಬೇಚಿರಾಕ್ ಹಳ್ಳಿ. ಇದು ಶಿಕಾರಿಪುರದಿಂದ ಈಶಾನ್ಯಕ್ಕೆ ಸುಮಾರು 14 ಕಿಮೀ ದೂರದಲ್ಲಿ, ಧಾರವಾಡ ಜಿಲ್ಲೆಗೆ ಹೊಂದಿಕೊಂಡಂತೆಯೇ ಇದೆ. ಇಲ್ಲಿ ಚೋರ್ಡಿ ಅಥವಾ ಕುಮದ್ವತಿ ನದಿಗೆ ಅಡ್ಡವಾಗಿ ಕಟ್ಟಿರುವ, ವಿಜಯನಗರ ಕಾಲದ್ದೆಂದು ಹೇಳಲಾದ, ಒಂದು ದೊಡ್ಡ ಕೆರೆಯಿದ್ದು ಇದನ್ನು ಸವಣೂರು ನವಾಬನು ಒಮ್ಮೆ ದುರಸ್ತಿ ಮಾಡಿಸಿದ್ದನು. ಈ ಕೆರೆಯ ನೀರು ಧಾರವಾಡ ಜಿಲ್ಲೆಯಲ್ಲೂ ಬಹಳಷ್ಟು ಜಮೀನಿಗೆ ನೀರೊದಗಿಸುತ್ತದೆ. ಪಾಳುಬಿದ್ದಿರುವ ಇಲ್ಲಿನ ಕೋಟೆಯನ್ನು ಮುಹಮ್ಮದ್‌ಖಾನ್ ಬಿನ್ ರಾಜಾ ಫರೀದ್ ಕಟ್ಟಿಸಿದನು. ತಾಳಗುಂದ (ಜನ: 1,334) ಶಿಕಾರಿಪುರದಿಂದ ವಾಯುವ್ಯಕ್ಕೆ ಸುಮಾರು 24 ಕಿಮೀ ದೂರದಲ್ಲಿರುವ ಒಂದು ಪುರಾತನ ಅಗ್ರಹಾರ. ಶಾಸನಗಳಲ್ಲಿ ಇದನ್ನು ಸ್ಥಾನಕುಂದೂರು ಎಂದು ಕರೆದಿದೆ. ಬನವಾಸಿಯಲ್ಲಿ ರಾಜ್ಯವಾಳಿದ ಕದಂಬರು ಮೂಲತಃ ಇಲ್ಲಿನವರೇ. ಇಲ್ಲಿ ಅನೇಕ ಶಿಲಾ ಶಾಸನಗಳಿದ್ದು ಅವುಗಳಲ್ಲಿ ಪ್ರಣವೇಶ್ವರ ಗುಡಿಯ ಮುಂದಿರುವ ಸ್ತಂಭದ ಮೇಲಿರುವ ಕ್ರಿ.ಶ. ಐದನೇಯ ಶತಮಾನದ ಕದಂಬರ ಕುಬ್ಜಕವಿ ಲಿಖಿತ ಶಾಸನವೇ ಅತಿ ಮುಖ್ಯವಾದುದು. ಕರ್ನಾಟಕದ ದೇವಾಲಯಗಳಲ್ಲೆಲ್ಲಾ ಪುರಾತನವೆನಿಸಿದ ಈ ಪ್ರಣವೇಶ್ವರ ಗುಡಿಗೆ ಒಂದು ಗರ್ಭಗೃಹ ಮತ್ತು ಅಂತರಾಳ ಮಂಟಪವಿದ್ದು ಇದು ಆಡಂಬರರಹಿತ ಚೌಕಾಕಾರದ ಕಟ್ಟಡ. ಈಗ ಇದು ಶಿಥಿಲ ಸ್ಥಿತಿಯಲ್ಲಿದೆ. ಇಲ್ಲಿನ ಗಂಗಾಧರೇಶ್ವರ ಗುಡಿಯಲ್ಲಿ ಕದಂಬರ ನಂತರದ ಕಾಲದ ಒಂದು ಲಿಂಗ ಹಾಗೂ ನಂದಿಯ ವಿಗ್ರಹಗಳಿವೆ. ಕಲ್ಯಾಣಿಯೊಂದರ ಬಳಿ ಇರುವ ವೀರಾಂಜನೇಯ ಮತ್ತು ಕಲ್ಯಾಣಿ ಚಾಳುಕ್ಯರ ಕಾಲದ ವೀರಭದ್ರ ದೇವಾಲಯಗಳು ನೋಡಬೇಕಾದವು. ವೀರಭದ್ರ ಗುಡಿಯಿಂದ ಈಶಾನ್ಯಕ್ಕೆ ಸ್ವಲ್ಪ ದೂರದಲ್ಲಿ ಮಾಸ್ತಿಕಲ್ಲುಗಳು ಮತ್ತು ವೀರಗಲ್ಲುಗಳು ಕಾಣಸಿಗುತ್ತವೆ.

**ಶಿಗ್ಗಾಂವಿ :** (ಧಾರವಾಡ ಜಿ ; ತಾ. ಕೇ ; ಜನ : 14,977) ಶಿಗ್ಗಾಂವಿ ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 363 ಕಿಮೀ ಹಾಗೂ ಧಾರವಾಡದಿಂದ ಆಗ್ನೇಯಕ್ಕೆ ಸುಮಾರು 65 ಕಿಮೀ ದೂರದಲ್ಲಿದೆ. ಇಲ್ಲಿ 1973ರಲ್ಲಿ ಪುರಸಭೆಯನ್ನು ರಚಿಸಲಾಯಿತು. ಕ್ರಿ. ಶ. 866ರ ಒಂದನೇಯ ಅಮೋಘವರ್ಷನ ಒಂದು ಶಾಸನದಲ್ಲಿ ಈ ಸ್ಥಳವನ್ನು ಸಿಗ್ಗಾಮೆ ಎಂದು ಕರೆಯಲಾಗಿದೆ. ರಾಷ್ಟ್ರಕೂಟ, ಕಲ್ಯಾಣಿ ಚಾಳುಕ್ಯ, ಸೇಉಣ ಮತ್ತು ವಿಜಯನಗರ ರಾಜಮನೆತನಗಳ 16 ಶಾಸನಗಳು ಇಲ್ಲಿ ದೊರಕಿದ್ದು ರಾಷ್ಟ್ರಕೂಟ ಸೇನಾಪತಿ ಬಂಕೆಯರಸ ಮತ್ತು ಸಾಮಂತರಾದ ಕದಂಬ ಹಾಗೂ ಇತರ ಮನೆತನಗಳನ್ನು ಪರಿಚಯಿಸುವ ಶಾಸನಗಳು ಇಲ್ಲಿ ದೊರಕಿವೆ. ಭಾಗಶಃ ಶಿಥಿಲವಾಗಿರುವ ಪ್ರಾಚೀನ ಕಲ್ಮೇಶ್ವರ ಮತ್ತು ಜೀರ್ಣೋದ್ಧಾರ ಹೊಂದಿರುವ ಬಸವಣ್ಣ ದೇವಸ್ಥಾನಗಳಲ್ಲದೆ ಮಾರುತಿ, ಅಂಬಾಭವಾನಿ, ಮಲ್ಲಿಕಾರ್ಜುನ, ವೀರಭದ್ರ ಮುಂತಾದ ದೇವಸ್ಥಾನಗಳು ಇಲ್ಲಿವೆ. ಅಲ್ಲದೆ, ಮೂರು ವೀರಶೈವ ಮಠಗಳು, ಮೂರು ಮಸೀದಿಗಳು ಹಾಗೂ ಒಂದು ದರ್ಗಾ ಸಹ ಇಲ್ಲಿವೆ. ಇಲ್ಲಿಂದ ಆರು ಕಿಮೀ ದೂರದಲ್ಲಿ ಪಶ್ಚಿಮಕ್ಕೆ ಹಳಿಯಾಳ ರಸ್ತೆಯಲ್ಲಿರುವ ಎಡಲ್‌ಬಾದ್ ಎಂಬ ಸ್ಥಳದಲ್ಲಿ ಗಂಗಿಬಾವಿ ಎಂಬ ಹೆಸರಿನ ಪವಿತ್ರವೆಂದು ಭಾವಿಸಲಾದ ಬಾವಿಯೊಂದಿದ್ದು, ಇಲ್ಲಿಯೇ ಸ್ಥಳೀಯ ಜನರು ಪರಮ ಪೂಜ್ಯವೆಂದು ಆರಾಧಿಸುವ 'ಸ್ವಯಂಭೂಲಿಂಗ'ವಿರುವ ರಾಮೇಶ್ವರ ದೇವಸ್ಥಾನವಿದೆ. ಶಿಶುನಾಳ ಗ್ರಾಮವು ಶಿಗ್ಗಾಂವಿಯಿಂದ 17 ಕಿಮೀ ಮತ್ತು ಗುಡಗೇರಿ ರೈಲ್ವೆ ನಿಲ್ದಾಣದಿಂದ ಐದು ಕಿಮೀ ದೂರದಲ್ಲಿದ್ದು, ಶಿಶುನಾಳ ಶರೀಫ್ ಸಾಹೇಬ್ (1819-1899) ಎಂದು ಪ್ರಸಿದ್ಧರಾಗಿರುವ ಓರ್ವ ಸಂತ ಅನುಭಾವಿ ಕವಿಯಿಂದಾಗಿ ಈ ಸ್ಥಳ ಹೆಸರುವಾಸಿಯಾಗಿದೆ. ವೈದಿಕ, ವೀರಶೈವ ಮತ್ತು ಇಸ್ಲಾಂ ಧರ್ಮಶಾಸ್ತ್ರಗಳನ್ನು ಮೈಗೂಡಿಸಿಕೊಂಡಿದ್ದ ಶರೀಫ್ ಸಾಹೇಬರು 'ಕರ್ನಾಟಕದ ಕಬೀರ' ರೆಂದೇ ಹೆಸರಾಗಿದ್ದಾರೆ. ಶರೀಫರ ಮತ್ತು ಅವರ ಗುರುವಾಗಿದ್ದ ಕಳಸದ ಗೋವಿಂದ ಭಟ್ಟರ ಗದ್ದುಗೆಗಳು ಹಿಂದು-ಮುಸ್ಲಿಮರೆಲ್ಲರಿಗೂ ಪವಿತ್ರ ಪೂಜಾಸ್ಥಳಗಳಾಗಿವೆ. ಕಳಸದಲ್ಲಿಯ ಅಖಂಡೇಶ್ವರ ಮಠವು ಪ್ರಸಿದ್ಧವಾಗಿದೆ.

**ಶಿಡ್ಲಘಟ್ಟ :** (ಕೋಲಾರ ಜಿ; ತಾ. ಕೇ; ಜನ: 22,490) ಶಿಡ್ಲಘಟ್ಟವು ಬೆಂಗಳೂರಿನಿಂದ 66 ಕಿಮೀ ಮತ್ತು ಕೋಲಾರದಿಂದ ವಾಯುವ್ಯಕ್ಕೆ ಸುಮಾರು 48 ಕಿಮೀ ದೂರದಲ್ಲಿ ಚಿಕ್ಕಬಳ್ಳಾಪುರ-ಶ್ರೀನಿವಾಸಪುರ ರಸ್ತೆಯಲ್ಲಿರುವ ಒಂದು ಪುರಸಭಾ ಪಟ್ಟಣ. ಇದರ ಪುರಾತನ ಹೆಸರು 'ಸಿಡಿಲ ಘಟ್ಟ' ಎಂದು. ಸ್ಥಳ ಪುರಾಣದ ಪ್ರಕಾರ, ಕ್ರಿ. ಶ. 1526ರಲ್ಲಿ ಉಜನಿ ಪಟ್ಟಣದ ಕೆಂಪೇಗೌಡನ ಧರ್ಮಪತ್ನಿ ಹಲಸೂರಮ್ಮ ಈ ಊರನ್ನು ಕಟ್ಟಿಸಿ ತನ್ನ ಮಾವನಾದ ಸಿಡಿಲಗೌಡನ ಹೆಸರಿನಿಂದ ಕರೆದಳು. ವೆಲ್ಲೂರ ಮೇಲೆ ನಡೆಸಿದ ದಂಡಯಾತ್ರೆಯಲ್ಲಿ ಕೆಂಪೇಗೌಡನು ಮೃತನಾದಾಗ ಆಗ ಗರ್ಭವತಿಯಾಗಿದ್ದ ಹಲಸೂರಮ್ಮ ಶಿವನೇಗೌಡ ಎಂಬ ಗಂಡು ಮಗುವಿಗೆ ಜನ್ಮವಿತ್ತಳು; ಅಲ್ಲದೆ, ಅಬ್ಲೋಡು ಎಂಬ ಸ್ಥಳವನ್ನು ಆಕ್ರಮಣದ ವಿರುದ್ಧ ಬಲಪಡಿಸಿ ಕೆಲವು ಹಳ್ಳಿಗಳನ್ನು ಸಹ ವಶಪಡಿಸಿಕೊಂಡಳು. ಶಿವನೇಗೌಡನಿಗೆ ಕ್ರಿ. ಶ. 1529ರಲ್ಲಿ ಪಟ್ಟವಾಯಿತು. ಇಲ್ಲಿರುವ ಎರಡು ಕೆರೆಗಳಲ್ಲಿ, ನೈಋತ್ಯ ದಿಕ್ಕಿನಲ್ಲಿರುವ 'ಅಮ್ಮನ ಕೆರೆ'ಯನ್ನು ಹಲಸೂರಮ್ಮನೂ, ಆಗ್ನೇಯ ದಿಕ್ಕಿನಲ್ಲಿರುವ 'ಗೌಡನ ಕೆರೆ'ಯನ್ನು ಶಿವನೇಗೌಡನೂ ಕಟ್ಟಿಸಿದರು. ಇಲ್ಲಿಗೆ ಸಮೀಪದಲ್ಲಿಯೇ ಇರುವ ಚಾವಣಿ ಹೊದಿಸಿರುವ ಸಮಾಧಿಗಳು ಶಿವನೇಗೌಡ ಮತ್ತು ಅವನ ಧರ್ಮಪತ್ನಿಯವು. ಈ ಪಟ್ಟಣ 17ನೇಯ ಶತಮಾನ

ದಲ್ಲಿ ಮರಾಠರ, ತದನಂತರ, ವಿಜಾಪುರ ಸುಲ್ತಾನರ ಮತ್ತು ಮೊಘಲರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ. ಶ. 1679ರಲ್ಲಿ ಇದನ್ನು ವಶಪಡಿಸಿಕೊಂಡ ಮರಾಠರು 1691ರಲ್ಲಿ ಅಣ್ಣಯ್ಯ ಗೌಡ ಎಂಬಾತನಿಗೆ ಮಾರಿದರು. ಇದನ್ನು 1762ರಲ್ಲಿ ಹೈದರ್ ಅಲಿಯು ವಶಪಡಿಸಿಕೊಂಡನು. ಈ ಪಟ್ಟಣದಲ್ಲಿರುವ ಅನೇಕ ದೇವಾಲಯಗಳು ಆಧುನಿಕ ಕಾಲದವು. ಇವುಗಳಲ್ಲಿ ಹೆಸರಿಸ ಬೇಕಾದ ದೇವಾಲಯಗಳೆಂದರೆ ವೇಣುಗೋಪಾಲ, ಶ್ರೀಕಂಠೇಶ್ವರ, ನಗರೇಶ್ವರ ಮತ್ತು ವೆಂಕಟರಮಣ. ಇವುಗಳಲ್ಲೆಲ್ಲಾ ಅತ್ಯಂತ ಹಳೆಯದೆಂದರೆ, ಕೆತ್ತನೆ ಕೆಲಸದಿಂದ ಕೂಡಿರುವ ಸ್ತಂಭಗಳನ್ನುಳ್ಳ, ಆಂಜನೇಯನ ಗುಡಿ. ಶಿಡ್ಲಘಟ್ಟದಲ್ಲಿ ಒಂದು ಮಸೀದಿಯೂ ಇದೆ. ರಾಜ್ಯದ ರೇಷ್ಮೆ ಉದ್ಯಮ ಕೇಂದ್ರಗಳಲ್ಲೊಂದಾದ ಇಲ್ಲಿ ರೇಷ್ಮೆ ವ್ಯವಸಾಯ ಕೇಂದ್ರ ಮತ್ತು ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ ಮತ್ತು ಬಿತ್ತನೆ ಕೋಠಿಗಳಿವೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ ಗಂಗಾದೇವಿ ಗುಡಿ ಇರುವ ಮೇಲೂರು ಮತ್ತು ರಾಮಲಿಂಗೇಶ್ವರ ಗುಡಿಯಿರುವ ನಲ್ಲಾರಹಳ್ಳಿ.

**ಶಿರಹಟ್ಟಿ :** (ಧಾರವಾಡ ಜಿ ; ತಾ. ಕೇ ; ಜನ: 13,307) ಶಿರಹಟ್ಟಿಯು ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 413 ಕಿಮೀ ಮತ್ತು ಧಾರವಾಡದಿಂದ ಆಗ್ನೇಯಕ್ಕೆ ಸುಮಾರು 89 ಕಿಮೀ ದೂರದಲ್ಲಿದೆ. ಸ್ವಾತಂತ್ರ್ಯಪೂರ್ವದಲ್ಲಿ ಸಾಂಗ್ಲಿ (ಹಿರಿಯ) ಸಂಸ್ಥಾನದ ಅಧೀನದಲ್ಲಿದ್ದ ಈ ಊರಲ್ಲಿ 1878 ರಲ್ಲಿಯೇ ಒಂದು ಪುರಸಭೆ ಅಸ್ತಿತ್ವಕ್ಕೆ ಬಂದಿತ್ತು. ಶಿರಹಟ್ಟಿಯ ಪುರಾತನ ಹೆಸರು ಶಿರಹಪುರ ಎಂದಿತ್ತು. ಬಹಮನಿ ಸುಲ್ತಾನರ ಕಾಲ ದಲ್ಲಿ (1347-1499) ಶಿರಹಟ್ಟಿಯು ಲಕ್ಷ್ಮೇಶ್ವರ ಉಪವಿಭಾಗದ ಒಂದು ಭಾಗವಾಗಿತ್ತು. ವಿಜಾಪುರ ಸುಲ್ತಾನರ ಕಾಲದಲ್ಲಿ (1489-1686) ಇದೊಂದು ಜಹಗೀರಾಗಿದ್ದು ಸ್ವಲ್ಪ ಕಾಲ ಅಂಕುಶ ಖಾನನ ಆಳ್ವಿಕೆಯಲ್ಲಿತ್ತು. ಅಂಕುಶಖಾನನಿಂದ ಐದನೇಯವನಾದ ಅವನ ವಂಶಜನೋರ್ವನು ಶಿರಹಟ್ಟಿ ಸಹಿತ ಲಕ್ಷ್ಮೇಶ್ವರವನ್ನು ಖಾನಗೌಡ ಎಂಬ ಶಿರಹಟ್ಟಿಯ ದೇಸಾಯಿ ಮನೆತನದ ಪೂರ್ವಿಕನಿಗೆ 1607ರಲ್ಲಿ ದೇಶಗತಿಯಾಗಿ ನೀಡಿದನು. ವಿಜಾಪುರದ ಪತನಾನಂತರ, 1686ರಲ್ಲಿ, ಶಿರಹಟ್ಟಿಯ ದೇಸಾಯಿಯು ಸವಣೂರ ನವಾಬನೊಂದಿಗೆ ಸಂಧಾನ ನಡೆಸಿ ಒಪ್ಪಂದವೊಂದನ್ನು ಮಾಡಿಕೊಂಡನು. ಸವಣೂರ ನವಾಬನು 1756ರಲ್ಲಿ ಪೇಶ್ವೆ ಬಾಲಾಜಿರಾಯನಿಗೆ ಸಂಸ್ಥಾನವನ್ನು ಸಂಪೂರ್ಣವಾಗಿ ಒಪ್ಪಿಸಿಕೊಟ್ಟಾಗ, ಶಿರಹಟ್ಟಿಯ ದೇಸಾಯಿಗೆ ತನ್ನ ಇನಾಂ ಜಮೀನನ್ನು ಮಾತ್ರ ಅನುಭವಿಸಲು ಸಾಧ್ಯ ವಾಯಿತು. ಮುಂದೆ, ಪೇಶ್ವೆಯು ಈ ಸಂಸ್ಥಾನವನ್ನು ಪಟವರ್ಧನ್ ಮನೆತನಕ್ಕೆ ಸರಂಜಾಮಾಗಿ ನೀಡಿದನು. ಈ ಸರಂಜಾಮನ್ನು 1801ರಲ್ಲಿ ವಿಭಾಗ ಮಾಡಿದಾಗ, ಶಿರಹಟ್ಟಿಯು ಸಾಂಗ್ಲಿಯ ಒಡೆಯ ಚಿಂತಾಮಣಿರಾಯನ ಪಾಲಾಗಿ ಬಾಹು ಸಾಹೇಬ್ ಲಾಗು ಎಂಬಾತನ ಆಳ್ವಿಕೆಯಲ್ಲಿ ಮುಂದುವರೆಯಿತು. ಸ್ವಾತಂತ್ರ್ಯ ನಂತರ, ಶಿರಹಟ್ಟಿಯು ಧಾರವಾಡ ಜಿಲ್ಲೆಗೆ ಸೇರಿತು. ಮತ್ತು ಒಂದು ತಾಲೂಕಾಗಿ ರಚನೆಗೊಂಡಿತು. ಇಲ್ಲಿ ಮುಖ್ಯ ವಾಗಿ ನೋಡತಕ್ಕ ಸ್ಥಳಗಳೆಂದರೆ ಶಿಥಿಲವಾದ ಕೋಟೆ, ಅವ್ವ ಲಿಂಗವ್ವನ ಮಠ, ಮತ್ತು ಫಕೀರಸ್ವಾಮಿ ಮಠ. ಅವ್ವ ಲಿಂಗವ್ವನ ಮಠವು ಅಲಂಕಾರಗಳಿಂದ ಕೂಡಿದ ಸುಮಾರು ಮುನ್ನೂರು ವರ್ಷದಷ್ಟು ಹಳೆಯದಾದ ಒಂದು ಸುಂದರವಾದ ಭವ್ಯ ಕಲ್ಲಿನ ಕಟ್ಟಡ. ಈ ಮಠವನ್ನು ಲಕ್ಷ್ಮೇಶ್ವರ ದೇಶಗತಿಯ ಸಂಸ್ಥಾಪಕಿಯಾದ ಅವ್ವಲಿಂಗವ್ವ ಅವಳ ಸಮಾಧಿಗಾಗಿ ಎಂಬ ಉದ್ದೇಶದಿಂದ ಕಟ್ಟಿಸಿದರೂ ಅವಳ ಶವವನ್ನು ಅಲ್ಲಿ ಹೂಳಲಿಲ್ಲ ವೆಂದು ಹೇಳುತ್ತಾರೆ. ಫಕೀರಸ್ವಾಮಿ ಮಠ, ಅದರ ಹೆಸರೇ ಸೂಚಿಸುವಂತೆ, ಸಮಾಜದ ಎಲ್ಲಾ ವರ್ಗಗಳಿಂದಲೂ ಗೌರವಾದರಕ್ಕೆ ಪಾತ್ರವಾಗಿದ್ದು ಮತೀಯ ಮನೋವೈಶಾಲ್ಯಕ್ಕೆ ಭಾವೈಕ್ಯತೆಗೆ ಸಂಕೇತವೆನಿಸಿದೆ. ಇದನ್ನು ಸುಮಾರು 350 ವರ್ಷಗಳ ಹಿಂದೆ ಚೆನ್ನವೀರಸ್ವಾಮಿ ಎಂಬುವರು ಸ್ಥಾಪಿಸಿದರು. ಈ ಊರಿನಲ್ಲಿರುವ ಉಳಿದ ಪ್ರಖ್ಯಾತ ಪ್ರಾಚೀನ ದೇವಾಲಯ ಗಳೆಂದರೆ ಲಕ್ಷ್ಮೀನಾರಾಯಣ, ಮಾರುತಿ, ಮಹಾದೇವ, ಗಣೇಶ ಮತ್ತು ಬೀರಪ್ಪ ಮಂದಿರಗಳು, ಮೂರು ಮಸೀದಿಗಳು ಹಾಗೂ ಮಹಬೂಬ್ ಸುಭಾನಿ ದರ್ಗಾ. ಫಕೀರಸ್ವಾಮಿ ಮಠದ ಜಾತ್ರೆ ನಡೆಯುವ ಮೇ ತಿಂಗಳಲ್ಲಿ ಒಂದು ದೊಡ್ಡ ದನಗಳ ಪರಿಷೆ ನಡೆಯುತ್ತದೆ. ಇದು ಕನ್ನಡದ ಸುಪ್ರಸಿದ್ಧ ಕವಿ ದಿ|| ದ. ರಾ. ಬೇಂದ್ರೆಯವರ ಜನ್ಮಸ್ಥಳ.

**ಶಿವಗಂಗೆ :** (ಬೆಂಗಳೂರು ಜಿ; ನೆಲಮಂಗಲ ತಾ; ಜನ: 1,304) ಶಿವಗಂಗೆಯು ಒಂದು ಪ್ರಸಿದ್ಧ ಯಾತ್ರಾಸ್ಥಳ. ಇದು ನೆಲಮಂಗಲದಿಂದ ವಾಯುವ್ಯಕ್ಕೆ ಸುಮಾರು 31 ಕಿಮೀ ದೂರ ದಲ್ಲಿದೆ. ಹತ್ತಿರದಲ್ಲಿಯೇ ಇರುವ ನಿಡವಂದ ರೈಲ್ವೇ ನಿಲ್ದಾಣ ದಿಂದಲೂ ಇಲ್ಲಿಗೆ ಸುಲಭವಾಗಿ ತಲುಪಬಹುದು. ಶಿವಗಂಗೆ ಬೆಟ್ಟವು ಸಮುದ್ರ ಮಟ್ಟದಿಂದ ಸುಮಾರು 4,558 ಅಡಿಗಳಷ್ಟು ಎತ್ತರವಿದ್ದು ಶಂಕುವಿನಾಕೃತಿಯಲ್ಲಿದೆ. ಶಿವಗಂಗೆ ಗ್ರಾಮವು ಬೆಟ್ಟದ ಬುಡದಲ್ಲಿಯೇ ಇದೆ. ಐತಿಹ್ಯವೊಂದರ ಪ್ರಕಾರ, ಹಿಂದೆ ಇದನ್ನು ಕಕುದ್ಗಿರಿ ಎಂದು ಕರೆಯುತ್ತಿದ್ದರು ; ಆದರೆ ಕ್ರಿ.ಶ. 12ನೇಯ ಶತಮಾನದಿಂದೀಚೆಗೆ ಶಿವಗಂಗೆ ಎಂಬ ಹೆಸರಾಯಿತು. ಬೆಟ್ಟದ ಮೇಲೆ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯ ದೇವಸ್ಥಾನಗಳೇ ಮುಖ್ಯವಾದವು. ಶಿಖರದವರೆಗೆ ಮೇಲೇರುತ್ತಾ ಸಾಗಲು ಅಚ್ಚುಕಟ್ಟಾಗಿ ಮೆಟ್ಟಿಲುಗಳನ್ನು ಹಾಕಿದ್ದಾರೆ. ಒಂದು ನೈಸರ್ಗಿಕ ಗವಿಯೊಳಗಿರುವ ಗಂಗಾಧರೇಶ್ವರ ದೇವಸ್ಥಾನವು ವಿಶಾಲವಾದ ಪ್ರಾಕಾರ ಮತ್ತು ಲಿಂಗವಿರುವ ಗರ್ಭಗುಡಿ ಯನ್ನು ಹೊಂದಿದೆ. ಈ ದೇವಾಲಯದ ಉತ್ತರಕ್ಕೆ ಪಾರ್ವತಿಯ ಮಂಟಪವಿದೆ. ತಳಪಾಯದ ಕಲ್ಲುಗಳ ಮೇಲೆ ಕೆತ್ತಿರುವ ಶಾಸನ ಗಳು, ಕ್ರಿ.ಶ. 1196ರಲ್ಲಿ ದೇವಾಧಿದೇವನಾದ ಶಿವಗಂಗಾ

ನಾಥನಿಗೆ ನೀಡಿದ ದತ್ತಿಗೆ ಸಂಬಂಧಿಸಿವೆ. 'ಓಂಕಾರ ಘಂಟೆ' ಎಂದು ಕರೆಯುವ ಬೃಹತ್ಗಾತ್ರದ ಒಂದು ಕಂಚಿನ ಘಂಟೆ ಇಲ್ಲಿದ್ದು, ಅದರ ಮೇಲಿರುವ ಶಾಸನ ತಿಳಿಸುವಂತೆ ಅದು ಒಂದನೇಯ ಕೆಂಪೇಗೌಡ ಮತ್ತು ಅವನ ಕುಟುಂಬದವರು ನೀಡಿದ ಕಾಣಿಕೆಯಾಗಿದೆ. ಗವಿಯಲ್ಲಿರುವ ಕೆಲವು ಮೂರ್ತಿಗಳನ್ನು ಒಂದನೇಯ ಕೆಂಪೇಗೌಡ ಮತ್ತು ಆತನ ಪತ್ನಿಯರವು ಎಂದು ಗುರ್ತಿಸುತ್ತಾರೆ. ಈ ದೇವಸ್ಥಾನದ ಸ್ತಂಭವೊಂದರ ಮೇಲಿರುವ ಕ್ರಿ.ಶ. 1140ರ ಶಾಸನವು ಹೊಯ್ಸಳ ಬಿಟ್ಟಿದೇವನು ನೀಡಿದ ದತ್ತಿಯೊಂದರ ವಿವರಗಳನ್ನು ನೀಡುತ್ತದೆ. ಗವಿ ಗಂಗಾಧರೇಶ್ವರ ದೇವಸ್ಥಾನದಿಂದ ಉತ್ತರಕ್ಕಿರುವ ನೈಸರ್ಗಿಕ ಗುಹೆಯೊಂದ ರಲ್ಲಿಯೇ ಹೊನ್ನಾದೇವಿಯ ಗುಡಿ ಇದೆ. ಬೆಟ್ಟದ ತುದಿಯನ್ನು 'ಕುಂಭಿ' ಎಂದು ಕರೆಯುವರು. ಇಲ್ಲಿ ಗಿರಿ ಗಂಗಾಧರೇಶ್ವರ ಮತ್ತು ವೀರಭದ್ರನ ಮಂದಿರಗಳಿವೆ. ಇಲ್ಲಿಂದ ಉತ್ತರದಲ್ಲಿ ಅಗಾಧವಾದ ಬಂಡೆಯೊಂದರ ಮೇಲೆ ತೀರ್ಥದ ಕಂಬ ಎಂದು ಕರೆಯುವ ಭಾರವಾದ ಶಿಲಾಸ್ತಂಭವೊಂದಿದೆ. ಇದರ ಬುಡದಲ್ಲಿ ರುವ ಶಾಸನದ ಪ್ರಕಾರ, ಇದನ್ನು ಹೊಯ್ಸಳ ಒಂದನೇಯ ನರಸಿಂಹನ ಕಾಲದಲ್ಲಿ ಸ್ಥಾಪಿಸಲಾಯಿತು. ಇಲ್ಲಿರುವ ಕೋಡು ಗಲ್ಲು ಬಸವನ ವಿಗ್ರಹವನ್ನು ಕ್ರಿ. ಶ. 1388ರಲ್ಲಿ ಪ್ರತಿಷ್ಠಾಪಿಸ ಲಾಯಿತು. ಬೆಟ್ಟದ ಮೇಲೆ ಕಂಡುಬರುವ ಗಣನೀಯ ವಸ್ತು ವಿಶೇಷಗಳೆಂದರೆ ಬಂಡೆಯ ಮೇಲಿರುವ ದೊಡ್ಡ ಗಣಪತಿ, ಕಲ್ಲಿನ ಮಂಟಪದಲ್ಲಿರುವ ಬಸವಣ್ಣ, ಪಡೇಕಲ್ಲು ವೀರಭದ್ರ, ಸುಬ್ರಹ್ಮಣ್ಯ ಗುಡಿ, ಎಮ್ಮೆ ಬಸವ, ಗಂಜಿ ವೀರಭದ್ರ, ಕೆಂಪೇ ಗೌಡನ ಹಜಾರ ಮತ್ತು ಗಾರೆ ಬಸವಣ್ಣ ಮೇಲಿನ ಗವಿಮಠ ಎಂಬ ಜಾಗದಲ್ಲಿ ರುದ್ರಮುನಿ ಯತಿಯ ಗುಡಿ, ವೀರಭದ್ರ ಮತ್ತು ರೇಣುಕಾಚಾರ್ಯರ ಸುಂದರ ಪ್ರತಿಮೆಗಳಿವೆ. ಗರ್ಭ ಗುಡಿಯ ಹಿಂದೆ, ಪ್ರದಕ್ಷಿಣಾ ಪಥದಲ್ಲಿ, ಅತಿ ಸಣ್ಣ ಮತ್ತು ಆಳವಾದ 'ಒರಳುಕಲ್ಲು ತೀರ್ಥ' ಇದೆ. ಕೆಳಗಿನ ಗವಿಮಠ ಎಂಬ ಸ್ಥಳದಲ್ಲಿ 'ಪಾತಾಳಗಂಗೆ' ಹೆಸರಿನ ತೀರ್ಥವಿದೆ. ಇದರ ಸುತ್ತ ಮುತ್ತ ಕಂಡುಬರುವ ಇತರ ತೀರ್ಥಗಳು ಅಥವಾ ಒರತೆಗಳೆಂದರೆ ಚಕ್ರಾ, ಶಂಕರ, ಮೈತ್ರೇಯಿ ಗಂಗಾ, ಮೌದ್ಗಲ್ಯ, ಅಗಸ್ತ್ಯ, ಕಪಿಲ, ಕದಂಬ, ಪರಾಶರ ಮತ್ತು ಕಣ್ವ. ಶಿಲಾ ಶಾಸನವೊಂದರ ಪ್ರಕಾರ ಕಣ್ವ ತೀರ್ಥವನ್ನು ಕ್ರಿ. ಶ. 1652ರಲ್ಲಿ, ಷಾಜಿಯ ಆಳ್ವಿಕೆಯ ಅವಧಿಯಲ್ಲಿ, ನಿರ್ಮಿಸಲಾಯಿತು. ಇಲ್ಲಿರುವ ದೇವಾ ಲಯಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದೆಂದರೆ ಬೆಟ್ಟದ ಬುಡದಲ್ಲಿರುವ ಶಾಂತೇಶ್ವರ. ಬೆಟ್ಟಕ್ಕೆ ಪ್ರವೇಶಿಸುವ ಮೆಟ್ಟಿಲು ಗಳ ಎದುರುಗಡೆ ಬಹಳ ಚೊಕ್ಕವಾಗಿ ನಿರ್ಮಿಸಿರುವ ಕಲ್ಯಾಣಿಯೇ ಅಗಸ್ತ್ಯತೀರ್ಥ. ಈ ತೀರ್ಥದ ಸುತ್ತಲೂ ಪ್ರತ್ಯೇಕ ಕಿರುಕೋಣೆಗಳಲ್ಲಿ 108 ಲಿಂಗಗಳನ್ನು ಪ್ರತಿಷ್ಠಾಪಿಸ ಲಾಗಿದ್ದು, ಅವುಗಳಲ್ಲಿ ನಂಜುಂಡೇಶ್ವರನನ್ನು ಪ್ರತಿನಿಧಿಸುವ ಲಿಂಗವೇ ಅತಿ ಮುಖ್ಯವಾದುದು. ಈ ಊರಿನಲ್ಲಿ ಶೃಂಗೇರಿ. ಶಿವಗಂಗಾ ಮಠ ಎಂಬ ಹೆಸರುಳ್ಳ ಮಠವೊಂದಿದೆ. ಇದರ ಸುತ್ತ ಆದಿ ಶಂಕರಾಚಾರ್ಯ, ಬಾಲ ಗಣಪತಿ ಮತ್ತು ಶಾರದಾಂಬಾ ಇವರುಗಳ ಕಿರು ಗುಡಿಗಳಿವೆ. ಮಠದ ಸಮೀಪದಲ್ಲಿಯೇ ಕಮಲ ತೀರ್ಥವೆಂಬ ಮತ್ತೊಂದು ಕಲ್ಯಾಣಿ ಇದೆ. ಶಿವಗಂಗಾ ಕ್ಷೇತ್ರ ದಲ್ಲಿ ಅನೇಕ ಶಾಸನಗಳು ದೊರಕಿವೆ. ಶ್ರವಣಬೆಳಗೊಳದಲ್ಲಿರುವ ಶಾಸನವೊಂದು ಹೊಯ್ಸಳ ರಾಣಿ ಶಾಂತಲಾದೇವಿ ಶಿವಗಂಗೆಯಲ್ಲಿ ಮೃತಿ ಹೊಂದಿದಳೆಂದು ತಿಳಿಸುತ್ತದೆ.

ಶಿವಮೊಗ್ಗ : (ಜಿ. ಉಪವಿಭಾಗ ಮತ್ತು ತಾ. ಕೇ; ಜನ: 1,51,783) ಶಿವಮೊಗ್ಗೆಯು ಬೆಂಗಳೂರಿನಿಂದ ವಾಯು ವ್ಯಕ್ಕೆ 274 ಕಿಮೀ ದೂರದಲ್ಲಿ, ತುಂಗಾನದಿ ದಂಡೆಯ ಮೇಲಿದೆ. ಕೆಳದಿ ನಾಯಕರ ಕಾಲದಲ್ಲಿ ಒಂದು ಪ್ರಮುಖ ಪಟ್ಟಣವಾಗಿದ್ದ ಇಲ್ಲಿನ ಕೋಟೆ ಸೀತಾರಾಮಾಂಜನೇಯ ಸ್ವಾಮಿ ಗುಡಿಯೇ ಅತಿ ಹಳೆಯದು. ಇದರ ಗರ್ಭಗೃಹ, ನವರಂಗದ ಬಾಗಿಲವಾಡ ಗಳು ಮತ್ತು ಸ್ತಂಭಗಳು ಹೊಯ್ಸಳ ಶಿಲ್ಪಗಳು ಕಡೆದವುಗಳಾ ಗಿವೆ. ಈ ಗುಡಿಯನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಯಿತು. ಉಳಿದ ದೇವಾಲಯಗಳಲ್ಲಿ ಮುಖ್ಯವಾದವು ಭೀಮೇಶ್ವರ, ಲಕ್ಷ್ಮೀನಾರಾಯಣ, ಗಡ್ಡೇಕಲ್ಲು ಸಿದ್ದೇಶ್ವರ ಮತ್ತು ಶ್ರೀ ರಾಘವೇಂದ್ರ ಸ್ವಾಮಿಗಳ ಎರಡು ಮೃತ್ತಿಕಾ ಬೃಂದಾವನಗಳು. ಇಲ್ಲಿಯ ಹಳೆಯ ಸೇಕ್ರೆಡ್ ಹಾರ್ಟ್ ಆಫ್ ಜೀಸಸ್ ಚರ್ಚ್ ಸುಂದರವಾದ ಬಣ್ಣದ ಗಾಜಿನ ಅಲಂಕಾರದಿಂದ ಕೂಡಿದೆ. ಅಂಜನೇಯ ಗುಡಿಯ ಸಮೀಪ ಇರುವ ಕಟ್ಟಡ ವೊಂದನ್ನು ಸ್ಥಳೀಯರು ಶಿವಪ್ಪನಾಯಕನ ಅರಮನೆ ಎಂದು ಗುರ್ತಿಸುತ್ತಾರೆ. ಈ ಕಟ್ಟಡವು ಹಿರಿಯ ಗಾತ್ರದ ಮರದ ಸ್ತಂಭಗಳನ್ನು ಹೊಂದಿದೆ. ಇದನ್ನು ಒಂದು ಜನಪದ ಕಲಾ ವಸ್ತು ಸಂಗ್ರಹಾಲಯವಾಗಿ ಪರಿವರ್ತಿಸಬೇಕೆಂಬ ಯೋಜನೆ ಇದೆ. ಈಗಾಗಲೇ ಶಿವಮೊಗ್ಗೆಯಲ್ಲಿ ಒಂದು ಸರಕಾರೀ ಪ್ರಾಚ್ಯ ವಸ್ತು ಸಂಗ್ರಹಾಲಯ ಇದೆ. ಶಿವಮೊಗ್ಗೆಯು ಒಂದು ಪ್ರಮುಖವಾದ ವಾಣಿಜ್ಯ ಕೈಗಾರಿಕೆ ಹಾಗೂ ವಿದ್ಯಾಕೇಂದ್ರವೂ ಹೌದು. ಮಲೆನಾಡಿನ ಉತ್ಪನ್ನಗಳು ಮತ್ತು ಭತ್ತ ಇಲ್ಲಿನ ಮುಖ್ಯ ವ್ಯಾಪಾರಿ ಸರಕುಗಳು. ಇಲ್ಲಿ ಒಂದು ಪುರಸಭೆ ಇದೆ. ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಶ್ರೀಗಂಧದೆಣ್ಣೆಯ ಕಾರ್ಖಾನೆ ಸಹ ಇಲ್ಲಿದೆ. ಈ ಜಿಲ್ಲೆಯ ಇತರ ಮುಖ್ಯ ಸ್ಥಳಗಳು ಕೆಲವು ಹೀಗಿವೆ: ಗಾಜನೂರು (ಜನ: 1,392) ಶಿವಮೊಗ್ಗ ನಗರದಿಂದ ನೈಋತ್ಯಕ್ಕೆ ಸುಮಾರು 10 ಕಿಮೀ ದೂರದಲ್ಲಿ, ಶಿವಮೊಗ್ಗ-ತೀರ್ಥಹಳ್ಳಿ ಮಾರ್ಗದಲ್ಲಿ, ಪಶ್ಚಿಮ ಘಟ್ಟಗಳಲ್ಲೊಂದರ ಶಿಖರಕ್ಕೆ ಸಮೀಪದಲ್ಲಿದೆ. ಇಲ್ಲಿ ತುಂಗಾ ನದಿಗೆ ಅಡ್ಡವಾಗಿ ಒಂದು ಅಣೆಕಟ್ಟೆಯನ್ನು ಕಟ್ಟಿದ್ದಾರೆ. ಇದರಿಂದ ಶಿವಮೊಗ್ಗ ಮತ್ತು ಹೊನ್ನಾಳಿ ತಾಲೂಕುಗಳ ಒಣ ಪ್ರದೇಶಗಳಿಗೆ ನೀರೊದಗುತ್ತಿದೆ. ಗಾಜನೂರಿನ ಸುತ್ತಮುತ್ತಲಿನ ಪ್ರದೇಶವು ನಯನಮನೋಹರ ವಾದ ಪ್ರಾಕೃತಿಕ ದೃಶ್ಯಗಳಿಂದ ಕೂಡಿದೆ. ತುಂಗಾ ವಿದ್ಯಾಪೀಠ ಎಂಬ ಒಂದು ವಿದ್ಯಾಕೇಂದ್ರ ಮತ್ತು ಗ್ರಾಮೀಣ ಯುವಕರಿಗಾಗಿ

ಒಂದು ಪಂಚಾಯತ್ ರಾಜ್ಯ ತರಬೇತು ಕೇಂದ್ರ ಸಹ ಇಲ್ಲಿವೆ. ಕೂಡ್ಲಿ (ಜನ: 1,795) ಶಿವಮೊಗ್ಗದಿಂದ ಈಶಾನ್ಯಕ್ಕೆ ತುಂಗಾ ಮತ್ತು ಭದ್ರಾ ನದಿಗಳು ಸಂಗಮಿಸುವ ಸ್ಥಾನದಲ್ಲಿದೆ. ಕೂಡ್ಲಿಯ ಸ್ಮಾರ್ತ ಪಂಥದ ಮಠವನ್ನು 16ನೇಯ ಶತಮಾನದಲ್ಲಿ ಜಗದ್ಗುರು ನರಸಿಂಹ ಭಾರತಿ ಸ್ವಾಮಿಗಳು ಸ್ಥಾಪಿಸಿದರು. ಇದಕ್ಕೆ ಅನೇಕ ರೀತಿಯ ಭೂಮಿಕಾಣಿಕೆಗಳನ್ನು ಕೆಳದಿ ನಾಯಕರು ಮತ್ತು ಸಂತೇಬೆನ್ನೂರಿನ ಪಾಳೇಗಾರರು ಇತ್ತು ಪ್ರೋತ್ಸಾಹಿಸಿದರು. ಮಠದ ಆವರಣದಲ್ಲಿಯೇ ಶಾರದಾಂಬಾ ಮತ್ತು ಶಂಕರಾಚಾರ್ಯರ ಮಂದಿರಗಳಿವೆ. ಹೊಯ್ಸಳರ ಕಾಲದ ರಾಮೇಶ್ವರ, ನರಸಿಂಹ ಮತ್ತು ಬ್ರಹ್ಮೇಶ್ವರ, ಚಿಂತಾಮಣಿ ನರಸಿಂಹ ದೇವಾಲಯಗಳೂ ಇಲ್ಲಿವೆ. ಅಲ್ಲದೆ, ತುಂಗಾ ಮತ್ತು ಭದ್ರಾ ನದಿಗಳ ಸಂಗಮಸ್ಥಾನದಲ್ಲಿ ಸಂಗಮೇಶ್ವರ ಮಂದಿರವಿದೆ. ಮಾಧ್ವ ಪಂಥದ ಮಠವೊಂದು ಸಹ ಇಲ್ಲಿದೆ. ಕುಂಸಿ (ಜನ: 4,680) ಅದೇ ಹೆಸರಿನ ಹೋಬಳಿ ಕೇಂದ್ರವಾಗಿದ್ದು ಶಿವಮೊಗ್ಗದಿಂದ ವಾಯುವ್ಯಕ್ಕೆ ಸುಮಾರು 24 ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ 'ಕುಂಬಸೆ' ಎಂದು ಕರೆದಿರುವ ಈ ಊರಿನಲ್ಲಿ ಕುಂಭೇಶ್ವರ, ಪಕ್ಷಿ ರಂಗನಾಥ, ಗುರುಪಾದೇಶ್ವರ, ವೆಂಕಟರಮಣ ಮುಂತಾದ ದೇವಾಲಯಗಳಿವೆ. ಪಕ್ಷಿ ರಂಗನಾಥ ದೇವಾಲಯದಲ್ಲಿ ರೆಕ್ಕೆ ಬಿಚ್ಚಿ ಹಾರುತ್ತಿರುವ ಭಂಗಿಯ ಗರುಡನ ಮೇಲೆ ಕುಳಿತಿರುವ ವಿಷ್ಣುವಿನ ಪುಟ್ಟ ಮೂರ್ತಿ ಇದೆ.

ಶೃಂಗೇರಿ : (ಚಿಕ್ಕಮಗಳೂರು ಜಿ ; ತಾ. ಕೇ; ಜನ: 4,272) ಶೃಂಗೇರಿ ತುಂಗಾನದಿ ದಂಡೆಯ ಮೇಲೆ, ಬೆಂಗಳೂರಿನಿಂದ ವಾಯುವ್ಯಕ್ಕೆ 334 ಕಿಮೀ ದೂರದಲ್ಲಿರುವ ಒಂದು ಪುಣ್ಯಕ್ಷೇತ್ರ. ಐತಿಹ್ಯದಂತೆ ಇದು ರಾಮಾಯಣದಲ್ಲಿ ಉಲ್ಲೇಖವಾಗಿರುವ ವಿಭಾಂಡಕಮುನಿ ಮತ್ತು ಆತನ ಪುತ್ರ ಋಷ್ಯಶೃಂಗ ಮುನಿಯ ಆಶ್ರಮವಿದ್ದ ಸ್ಥಳವಾಗಿತ್ತು. ಇದು ಋಷ್ಯಶೃಂಗಗಿರಿ ಎಂದೂ, ಕಾಲಕ್ರಮೇಣ ಶೃಂಗಗಿರಿ ಅಥವಾ ಶೃಂಗೇರಿ ಎಂದೂ ಹೆಸರು ಪಡೆಯಿತು. ಇಲ್ಲಿರುವ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ ಮಠದಿಂದಾಗಿ ವಿಶೇಷ ಮನ್ನಣೆಗೆ ಪಾತ್ರವಾಗಿದೆ. ಅದ್ವೈತ ಸಿದ್ಧಾಂತದ ಪ್ರತಿಪಾದಕ ಶ್ರೀ ಶಂಕರಾಚಾರ್ಯರು ಸ್ಥಾಪಿಸಿದ ಶಾರದಾಂಬಾ ದೇವಾಲಯ ಇಲ್ಲಿದೆ. ಶೃಂಗೇರಿಯ ಮಧ್ಯೆ ಇರುವ ಪಾರ್ಶ್ವನಾಥ ಬಸದಿಯಲ್ಲಿ ಕ್ರಿ.ಶ. 1150ರ ಮತ್ತು 1161ರ ಎರಡು ಹೊಯ್ಸಳ ಶಾಸನಗಳಿವೆ. ಕ್ರಿ.ಶ. 1346ರ ಶಾಸನವೊಂದರಲ್ಲಿ ಹರಿಹರನು ತನ್ನ ನಾಲ್ವರು ಸಹೋದರರೊಡಗೂಡಿ ವಿದ್ಯಾತೀರ್ಥ ಗುರುಗಳಿಗೆ ನೀಡಿದ ದತ್ತಿಯ ಉಲ್ಲೇಖವಿದೆ. ಕ್ರಿ.ಶ. 1356ರ ಮತ್ತೊಂದು ಶಾಸನವು ಒಂದನೇಯ ಬುಕ್ಕನು ಶೃಂಗೇರಿಗೆ ಭೇಟಿ ನೀಡಿ ಅವರಿಗೆ ಅನೇಕ ಕಾಣಿಕೆಗಳನ್ನು ಸಲ್ಲಿಸಿದುದನ್ನು ತಿಳಿಸುತ್ತದೆ. ವಿದ್ಯಾರಣ್ಯರು (ಕ್ರಿ.ಶ. ಸು. 1380-1386) ಶೃಂಗೇರಿ ಪೀಠವನ್ನು ಅಲಂಕರಿಸಿದ್ದರು. ಕಾಲಕ್ರಮೇಣ ವಿಜಯನಗರ, ಕೆಳದಿ, ಮುಂತಾದ ಅರಸುಮನೆತನಗಳು ನೀಡಿದ ಭೂದಾನಗಳಿಂದಾಗಿ ಶೃಂಗೇರಿ ಸಂಸ್ಥಾನ ಸ್ವಯಮಾಡಳಿತ ಸ್ಥಾನಮಾನವನ್ನು ಗಳಿಸಿಕೊಂಡಿತು. ಟಿಪ್ಪುಸುಲ್ತಾನನೂ ಸಹ ಈ ಮಠದ ಉದಾರ ಪೋಷಕನಾಗಿದ್ದನು. ಇಲ್ಲಿಯ ಚಿಕ್ಕ ಬೆಟ್ಟವೊಂದರ ಮೇಲೆ ವಿಜಯನಗರ ಕಾಲದಲ್ಲಿ ನಿರ್ಮಿಸಲಾದ ಮಲ್ಲಿಕಾರ್ಜುನ ಗುಡಿಯಿದೆ. ಐತಿಹ್ಯವೊಂದು ತಿಳಿಸುವಂತೆ ಈ ಲಿಂಗವನ್ನು ಋಷ್ಯಶೃಂಗಮುನಿ ಪೂಜಿಸುತ್ತಿದ್ದನು. ಒಳಮಾಳಿಗೆಯ ಮಧ್ಯೆ ಭುವನೇಶ್ವರಿಯ ಉಬ್ಬು ಶಿಲ್ಪವನ್ನು ಕೆತ್ತಿದ್ದಾರೆ. ಕೇಂದ್ರ ಸರ್ಕಾರದ ರಕ್ಷಣೆಯಲ್ಲಿರುವ ವಿದ್ಯಾಶಂಕರ ಗುಡಿಯು ಶೃಂಗೇರಿಯಲ್ಲಿರುವ ಸ್ಮಾರಕಗಳಲ್ಲೆಲ್ಲಾ ಅತಿ ಸುಂದರವಾದುದು. ಇದು ತುಂಗಾನದಿಯ ಎತ್ತರದ ದಂಡೆಯ ಮೇಲಿದೆ. ಕ್ರಿ.ಶ. 1346 ಮತ್ತು 1356ರ ಎರಡು ಶಾಸನಗಳ ಪ್ರಕಾರ ಈ ಗುಡಿಯು ವಿದ್ಯಾತೀರ್ಥರಿಗೆ ಅರ್ಪಿತವಾದುದಾಗಿದೆ. ಇದು ದಕ್ಷಿಣ ಭಾರತದ ಮೂರು ಮುಖ್ಯ ದೇವಾಲಯ ನಿರ್ಮಾಣ ಶೈಲಿಗಳಾದ ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರ ಶೈಲಿಗಳ ಹಿತಕರ ಹೊಂದಾಣಿಕೆಗೆ ಒಂದು ಉತ್ತಮ ನಿದರ್ಶನವಾಗಿದೆ ; ಮತ್ತು ಹೊಯ್ಸಳ ವಾಸ್ತುಶಿಲ್ಪ ಶೈಲಿ ವಿಜಯನಗರ ವಾಸ್ತುಶಿಲ್ಪ ಶೈಲಿಯಾಗಿ ಪರಿವರ್ತನೆಗೊಂಡದ್ದರ ಪ್ರತೀಕವೂ ಹೌದು. ಒಂದು ರೀತಿಯಲ್ಲಿ ಇದು ಬೌದ್ಧರ ಚೈತ್ಯಗೃಹವನ್ನು ಸಹ ಹೋಲುತ್ತದೆ ಎನ್ನಲಾಗಿದೆ. ಇದರ ನವರಂಗ ಸಂಕೀರ್ಣದಲ್ಲಿ ರಾಶಿಚಕ್ರದ ಮೇಷಾದಿ ಹನ್ನೆರಡು ಭಾಗಗಳನ್ನು ಪ್ರತಿನಿಧಿಸುವ ಹನ್ನೆರಡು ರಾಶಿಕಂಬಗಳಿವೆ. ಉದಯಸೂರ್ಯನ ಕಿರಣಗಳು ನಿರ್ದಿಷ್ಟ ಸೌರಮಾಸವೊಂದರಲ್ಲಿ ಅದೇ ಹೆಸರಿನ ರಾಶಿಕಂಬದ ಮೇಲೆ ಬೀಳುವುದು ಇಲ್ಲಿಯ ಒಂದು ವೈಶಿಷ್ಟ್ಯವಾಗಿದೆ. ಇದರ ವಿಮಾನ ಚಾಳುಕ್ಯ ಹಾಗೂ ನಾಗರ ವಾಸ್ತುಶಿಲ್ಪ ಲಕ್ಷಣಗಳ ಸಮ್ಮಿಶ್ರಣವನ್ನು ತೋರುವ ಒಂದು ವಿಶೇಷ ಭಾಗವಾಗಿದೆ. ವಿದ್ಯಾಶಂಕರ ಗುಡಿಯ ಹಿಂದುಗಡೆ ಆಗಿಹೋದ ಜಗದ್ಗುರುಗಳ ಸಮಾಧಿಗಳ ಮೇಲೆ ಕಟ್ಟಿರುವ ಅನೇಕ ಸಮಾಧಿ ಗುಡಿಗಳಿವೆ. ಪ್ರತೀ ಸಮಾಧಿ ಗುಡಿಯಲ್ಲೂ ಒಂದೊಂದು ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದೇ ಆವರಣದಲ್ಲಿ ಕೋದಂಡರಾಮ, ವಾಗೀಶ್ವರೀ, ಹರಿಹರೇಶ್ವರ, ಶಂಕರನಾರಾಯಣ, ಶಂಕರಾಚಾರ್ಯ ಮುಂತಾದವರಿಗೆ ಅರ್ಪಿತವಾಗಿರುವ ಅನೇಕ ಸಣ್ಣ ಸಣ್ಣ ಗುಡಿಗಳಿವೆ. 1973ರಲ್ಲಿ ನಿರ್ಮಿಸಲಾದ ಪ್ರವಚನಮಂದಿರದ ಒಳಗೋಡೆಗಳ ಮೇಲೆ ಶಂಕರಾಚಾರ್ಯರ ಜೀವನಗತಿಯನ್ನು ವರ್ಣಿಸುವ ವರ್ಣಚಿತ್ರಗಳಿವೆ. ನದಿಯಾಚೆಗೆ ಗಮನ ಸೆಳೆಯುವಂತಹ ನರಸಿಂಹವನ ಮಠದ ಸಂಕೀರ್ಣದಲ್ಲಿಯೇ ಗುರುಗಳು ಸಾಮಾನ್ಯವಾಗಿ ವಾಸಿಸುವರು. ಇಲ್ಲಿರುವ ವಿಶೇಷಗಳೆಂದರೆ ಸಚ್ಚಿದಾನಂದ ವಿಲಾಸ ಆಶ್ರಮ, ಗೋಶಾಲೆ, ಕಾಳಭೈರವ, ನರಸಿಂಹಭಾರತಿ ಮತ್ತು ಚಂದ್ರಶೇಖರಭಾರತಿ ಇವರ ಗುಡಿಗಳು. ಇಲ್ಲಿ ಶಂಕರಾಚಾರ್ಯರ ಮೂರ್ತಿಯೊಂದಿದೆ. ಮಾರ್ಕಲಿ, ಕಿಗ್ಗ, ಇತ್ಯಾದಿ ಹೆಸರುಗಳಿಂದ ಕರೆಯುವ ಋಷ್ಯಶೃಂಗಪುರ ಶೃಂಗೇರಿಯಿಂದ ಎಂಟು

ಕಿಮೀ ದೂರದಲ್ಲಿದೆ. ಇಲ್ಲಿ ಕೋಟೆಯೊಂದರ ಅವಶೇಷಗಳಿವೆ. ದತ್ತಿ ನೀಡಿಕೆಗೆ ಸಂಬಂಧಿಸಿದ, ಎಂಟನೇಯ ಶತಮಾನದ ನಾಲ್ಕು ಮತ್ತು ಸುಮಾರು ಹನ್ನೊಂದನೇಯ ಶತಮಾನದ ಒಂದು, ಒಟ್ಟು ಐದು ಶಾಸನಗಳು ಇಲ್ಲಿ ಪತ್ತೆಯಾಗಿವೆ. ಇಲ್ಲಿರುವ ವಿಜಯನಗರ ಕಾಲದ ವಿಶಾಲವಾದ ಋಷ್ಯಶೃಂಗೇಶ್ವರ ಮಂದಿರ ಗ್ರಾನೈಟ್ ಶಿಲೆಯಿಂದ ಕಟ್ಟಿದುದಾಗಿದೆ. ಇದರ ಗರ್ಭಗೃಹ ದಲ್ಲಿರುವ ಮೂಲ ಲಿಂಗವನ್ನು ಶೃಂಗೇಶ್ವರ ಎಂದು ಕರೆಯುವರು. ಒಳಮಂಟಪದ ಎರಡು ಸ್ತಂಭಗಳು ಅತಿ ಹಳೆಯವಾಗಿದ್ದು, ಅವುಗಳಲ್ಲೊಂದರ ಮೇಲೆ ಬಾದಾಮಿ ಚಲುಕ್ಯರ ಕಾಲದ (ಆಳುಪರ) ಶಾಸನವಿದೆ.

**ಶೋರಾಪುರ :** (ಕಲ್ಬುರ್ಗಿ ಜಿ ; ತಾ. ಕೇ ; ಜನ: 25,595) ಶೋರಾಪುರವು ಬೆಂಗಳೂರಿನಿಂದ 520 ಕಿಮೀ ದೂರ ದಲ್ಲಿದೆ. ಹಿಂದೆ ಇದನ್ನು ಸುರಪುರ ಎಂದು ಕರೆಯುತ್ತಿದ್ದರು. ಆದರೆ ಮುಸ್ಲಿಮರ ಆಗಮನಾನಂತರ ಶೋರಾಪುರ ಎಂಬ ಹೆಸರು ಸ್ಥಿರವಾಯಿತು. ಭೀಮಾ ನದಿಯಿಂದ ಕೃಷ್ಣಾ ನದಿಯವರೆಗೆ ಹಬ್ಬಿದ್ದ ಈ ಪ್ರದೇಶಕ್ಕೆ ಸಗರನಾಡು ಎಂಬ ಹೆಸರಿತ್ತು ಮತ್ತು ಸುರಪುರದ ನಾಯಕಮನೆತನದವರು ಇದನ್ನು ಆಳುತ್ತಿದ್ದರು. ಇವರ ರಾಜಧಾನಿಯಾಗಿದ್ದ ಸುರಪುರದಲ್ಲಿ ಒಂದು ಒಳ್ಳೆಯ ಕೋಟೆ ಇದೆ. ಸುರಪುರದ ಬೇಡರ ದೊರೆ ವೆಂಕಟಪ್ಪನಾಯಕನು 1857-58ರ ಪ್ರಥಮ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿದ್ದು ಈ ಸ್ಥಳದ ಪ್ರಾಮುಖ್ಯವನ್ನು ಹೆಚ್ಚಿಸಿದೆ. ಇದಕ್ಕೆ ಮೊದಲು ಇಲ್ಲಿಯ ಬೇಡನಾಯಕರು ಔರಂಗಜೇಬನ ವಿರುದ್ಧ ಹೋರಾಡಿ ದ್ದರು. ಪಟ್ಟಣದಲ್ಲಿರುವ ಗೋಪಾಲಸ್ವಾಮಿ ಮಂದಿರವು ವರ್ಷದುದ್ದಕ್ಕೂ ಭಕ್ತಾದಿಗಳಿಂದ ತುಂಬಿರುತ್ತದೆ. ಗೋಕುಲಾ ಷ್ಟಮಿಯಂದು ಇಲ್ಲಿ ಒಂದು ದೊಡ್ಡ ಜಾತ್ರೆ ಸೇರುತ್ತದೆ. ಇಲ್ಲಿ ಇನ್ನೂ ಕೆಲವು ದೇವಾಲಯಗಳು ಹಾಗೂ ಮಸೀದಿಗಳಿವೆ. ಪ್ರಖ್ಯಾತ ಇಂಗ್ಲಿಷ್ ಚಾರಿತ್ರಿಕ ಕಾದಂಬರಿಗಳ ಕರ್ತೃ ಕರ್ನಲ್ ಮೆಡೋಸ್ ಟೇಲರ್ ಕೆಲಕಾಲ ಇಲ್ಲಿ ತಂಗಿದ್ದನು. ಇವರು ಕಟ್ಟಿ ಸಿದ 'ಟೇಲರ್ಸ್ ಮಂಜಿಲ್' ಈಗಲೂ ಸುಸ್ಥಿತಿಯಲ್ಲಿದೆ. ನಿಜಾಮರ ಆಳ್ವಿಕೆಯ ಕಾಲದಲ್ಲಿ ಶೋರಾಪುರದಲ್ಲಿ ದಂಡೊಂದನ್ನಿಟ್ಟಿದ್ದರು. ಈ ತಾಲೂಕಿನ ಇತರ ಸ್ಥಳಗಳು : ಛಾಯಾಭಗವತಿ (ಜನ: 3,703) ಕೃಷ್ಣಾದಂಡೆಯ ಮೇಲೆ, ನಾರಾಯಣಪುರದ ಬಳಿ ಇದೆ. ಇಲ್ಲಿಯೇ ಜಲದುರ್ಗ ಜಲಪಾತ ಎಂದು ಹೆಸರಾದ ಕೃಷ್ಣಾನದಿಯ ಜಲಪಾತ ಇರುವುದು. ಇಲ್ಲಿ ನದಿಯ ಒಂದು ಭಾಗವು ಗುಹೆಯೊಂದನ್ನು ಹೊಕ್ಕು ಹೊರಬರುತ್ತದೆ. ವೈಶಾಖ ಶುದ್ಧ ತದಿಗೆಯಂದು ಇಲ್ಲಿ ಸಹಸ್ರಾರು ಭಕ್ತರು ಸೇರಿ ಸೂರ್ಯ ದೇವನ ಪತ್ನಿ ಛಾಯಭಗವತಿಯನ್ನು ಪೂಜಿಸಿ ಹಬ್ಬ ಆಚರಿಸು ತ್ತಾರೆ. ಹತ್ತಿರವೇ ಇರುವ ದೇವಪುರಹಳ್ಳಿ ಮಹಾಕವಿ ಲಕ್ಷ್ಮೀಶನ ಜನ್ಮಸ್ಥಳ ಎಂದು ಕೆಲವರು ಹೇಳುತ್ತಾರೆ. ಹಗರಟಗಿಯು ಒಂದು ಚರಿತ್ರಪೂರ್ವ ಕಾಲದ ನಿವೇಶನ. ಕೆಂಬಾವಿಯು ಬಹಮನಿ ವಂಶದ ಐತಿಹಾಸಿಕ ಅವಶೇಷಗಳಿಂದಾಗಿ ಹೆಸರು ಗಳಿಸಿದೆ. ಕಕ್ಕೇರ ಎಂಬ ಸ್ಥಳದಲ್ಲಿ ಸೋಮನಾಥದೇವನ ಮಂದಿರವಿದ್ದು ದನಗಳ ಭಾರಿ ಪರಿಷೆ ಜರುಗುವುದು. ಕೊಡೇಕಲ್ ಗ್ರಾಮವು ಅಲ್ಲಿರುವ ಚನ್ನಕೇಶ್ವರ ದೇವಸ್ಥಾನ ಮತ್ತು ಒಂದು ದರ್ಗಾದಿಂದಾಗಿ ಹೆಸರು ಗಳಿಸಿದೆ. ತಿಂಥಿಣಿ ಎಂಬ ಊರಲ್ಲಿ ಹಿಂದೂ-ಮುಸ್ಲಿಮರೀರ್ವರ ಗೌರವಾದರಗಳಿಗೆ ಪಾತ್ರವಾಗಿರುವ ಪ್ರಖ್ಯಾತ ಮುನೇಶ್ವರನ ಗುಡಿ ಇದೆ. ಇದನ್ನು ಮೊನ್ನಪ್ಪಯ್ಯ ದರ್ಗಾ ಎಂದು, ಓರ್ವ ವಿಶ್ವಕರ್ಮ ಜಾತಿಗೆ ಸೇರಿದ ಹಿಂದು ಸೂಫಿ ಸಂತನ ಹೆಸರಿನಿಂದ ಕರೆಯುವರು. ಇಲ್ಲಿ ಬಿದರೆ ಮತ್ತು ಬೆಂಗಳೂರುಗಳ ನಡುವೆ ನೇರ ಸಂಪರ್ಕ ಕಲ್ಪಿಸುವ ಸೇತುವೆಯೊಂದನ್ನು ಇತ್ತೀಚೆಗೆ ಕಟ್ಟಿದ್ದಾರೆ. ವಾಗಿಂಗೇರ ಎಂಬ ಊರಿನಲ್ಲಿ ಓರಣವಾಗಿ ಕಟ್ಟಿರುವ ಕೋಟೆಯೊಂದರ ಅವಶೇಷಗಳಿವೆ. ಇದು ಶೋರಾಪುರದ ರಾಜನು ಚಕ್ರವರ್ತಿ ಔರಂಗಜೇಬನೊಡನೆ ಮಾಡಿದ ಪ್ರಮುಖ ಯುದ್ಧದಿಂದಾಗಿ ಭಾರತದ ಇತಿಹಾಸದಲ್ಲಿ ಪ್ರಖ್ಯಾತವಾಗಿದೆ.

**ಶ್ರವಣಬೆಳಗೊಳ :** (ಹಾಸನ ಜಿ ; ಚನ್ನರಾಯಪಟ್ಟಣ ತಾ; ಜನ: 5,441-1981) ಶ್ರವಣಬೆಳಗೊಳವು ಬೆಂಗಳೂರಿನಿಂದ ಸುಮಾರು 157 ಕಿಮೀ ಹಾಸನದ ಆಗ್ನೇಯಕ್ಕೆ 51 ಕಿಮೀ ಚನ್ನರಾಯಪಟ್ಟಣದಿಂದ ಆಗ್ನೇಯಕ್ಕೆ 13 ಕಿಮೀ ಬೆಂಗಳೂರು-ಮಂಗಳೂರು 12 ಕಿಮೀ ದೂರದಲ್ಲಿದೆ. ಇದು ವೆಳ್ಗೊಳ, ದೇವರ ಬೆಳಗೊಳ, ಶ್ವೇತ ಸರೋವರ, ಧವಳ ಸರೋವರ ಮತ್ತು ಗೌತಮಪುರ ಎಂಬ ಹೆಸರುಗಳಿಂದ ಶಾಸನಗಳಲ್ಲಿ ಹೆಸರುಗೊಂಡಿದೆ. ಜೈನರ ದಕ್ಷಿಣ ಕಾಶಿ ಎಂದೂ ಪ್ರಸಿದ್ಧವಾಗಿರುವ ಇದು ಒಂದು ಪ್ರಸಿದ್ಧ ಯಾತ್ರಾಸ್ಥಳ. ಚಂದ್ರಗುಪ್ತಮೌರ್ಯ ಮತ್ತು ಪ್ರಖ್ಯಾತ ಜೈನಮುನಿ ಭದ್ರಬಾಹು ಉತ್ತರದಿಂದ ಇಲ್ಲಿಗೆ ಬಂದ ರೆಂಬುದಾಗಿ ತಿಳಿದುಬರುತ್ತದೆ. ಶ್ರಮಣ ಅಥವಾ ಶ್ರವಣ ಎಂದರೆ ಜೈನಮುನಿ ಎಂದೂ, ಬೆಳ (ಬಿಳಿಯ) ಕೊಳ ಎಂಬ ಕನ್ನಡ ಪದಗಳಿಂದಲೇ ಬೆಳಗೊಳ ಎಂಬ ಹೆಸರು ಬಂದಿದೆಯೆಂದೂ ತಿಳಿಯು ತ್ತದೆ. ಈ ಬೆಳಗೊಳವು ಊರಿನ ಮಧ್ಯೆ ಇರುವ ಸುಂದರವಾದ ಕೊಳವೇ ಹೊರತು ಬೇರೆಯಲ್ಲ. ಈ ಕೊಳವನ್ನು ಮೈಸೂರು ಅರಸರಾದ ಚಿಕ್ಕದೇವರಾಯರು ದುರಸ್ತಿ ಮಾಡಿಸಿದುದಾಗಿ ತಿಳಿದು ಬರುತ್ತದೆ. ಶ್ರವಣಬೆಳಗೊಳ ಗ್ರಾಮವು ಒಂದು ದೊಡ್ಡ ಮತ್ತೊಂದು ಚಿಕ್ಕ ಬೆಟ್ಟಗಳ ಮಧ್ಯೆ ಇದೆ. ದಕ್ಷಿಣಕ್ಕಿರುವ ಬೆಟ್ಟವನ್ನು ದೊಡ್ಡ ಬೆಟ್ಟ ಅಥವಾ ಇಂದ್ರಗಿರಿ ಅಥವಾ ವಿಂಧ್ಯಾ ಗಿರಿ ಎಂದು ಕರೆಯುವರು. ಈ ಬೆಟ್ಟದ ತುದಿಯಲ್ಲಿಯೇ ಅನೇಕ ಕಟ್ಟಡಗಳಿಂದ ಸುತ್ತುವರೆಯಲ್ಪಟ್ಟ, ಸುಮಾರು 17 ಮೀ. ಗಳಷ್ಟು ಎತ್ತರವಿರುವ ಗೊಮ್ಮಟೇಶ್ವರನ ಮಹಾಮೂರ್ತಿ ಇರುತ್ತದೆ. ಈ ಬೆಟ್ಟವು ಸಮುದ್ರಮಟ್ಟದಿಂದ 1,020 ಮೀ. ಗಳಷ್ಟು ಮತ್ತು ಬೆಟ್ಟದ ಬುಡದಲ್ಲಿರುವ ಊರಿನ ಮಟ್ಟದಿಂದ ಸುಮಾರು 143 ಮೀ.ಗಳಷ್ಟು ಎತ್ತರದಲ್ಲಿದೆ. ಈ ಗೊಮ್ಮ

ಟೇಶ್ವರನ ಮೂರ್ತಿಯನ್ನು ಕ್ರಿ.ಶ.ಸು. 982ರಲ್ಲಿ ಗಂಗರಾಜ ರಾಚಮಲ್ಲನ ಮಂತ್ರಿ ಹಾಗೂ ದಂಡನಾಯಕನಾಗಿದ್ದ ಚಾವುಂಡ ರಾಯನು ಕೆತ್ತಿಸಿದನು. ಏಕಶಿಲೆಯಲ್ಲಿ ಕೆತ್ತಲಾಗಿರುವ ಈ ಗಂಭೀರ ನಗ್ನ ಮೂರ್ತಿ ಒಂದು ಅದ್ವಿತೀಯ ಕಲಾಕೃತಿ ಎನಿಸಿದೆ. ಇದೇ ಬೆಟ್ಟದ ಮೇಲೆ ಅನೇಕ ಜೈನಬಸದಿಗಳಿವೆ. ಅವೆಂದರೆ : ಸಿದ್ಧರ ಬಸದಿ, ಒದೆಗಲ್ ಬಸದಿ, ಚೆನ್ನಮ್ಮ ಬಸದಿ, ಚವ್ವಿೀಸ ತೀರ್ಥಂಕರರ ಬಸದಿ. ಇವಲ್ಲದೆ ಇಲ್ಲಿರುವ ಆಸಕ್ತಿ ಕೆರಳಿಸುವ ಇತರ ವಿಶೇಷಗಳೆಂದರೆ ತ್ಯಾಗದ ಬ್ರಹ್ಮಸ್ತಂಭ ಮತ್ತು ಅಖಂಡ ಬಾಗಿಲು. ಶಾಸನಗಳಲ್ಲಿ ಚಂದ್ರಗಿರಿ ಕಳ್ಬಪ್ಪು ಮತ್ತು ಕಟವಪ್ರ ಎಂದು ಕರೆಯಲಾಗಿರುವ ಚಿಕ್ಕ ಬೆಟ್ಟವು ಊರಿನ ಉತ್ತರಕ್ಕಿದ್ದು ಸಮುದ್ರಮಟ್ಟದಿಂದ ಸುಮಾರು 931 ಮೀ.ಗಳಷ್ಟು ಎತ್ತರವಿದೆ. ಇಲ್ಲಿರುವ 13 ಜೈನಬಸದಿಗಳು ಒಂದು ಪ್ರಾಕಾರದೊಳಗಡೆ ಇವೆ. ಇವುಗಳಲ್ಲಿ ಅತಿ ಪುರಾತನವಾದುದು ಕ್ರಿ.ಶ. ಎಂಟನೇಯ ಶತಮಾನದ್ದು; ಉಳಿದವು ಗಂಗರ ಮತ್ತು ಹೊಯ್ಸಳರ ಕಾಲದವು. ಅತೀ ಪುರಾತನವಾದ ಚಂದ್ರಗುಪ್ತ ಬಸದಿಯ ಮುಖಭಾಗದಲ್ಲಿ, ನಂತರದ ಶತಮಾನಗಳಲ್ಲಿ ಸೇರಿಸಿರಬಹುದಾದ, ಆದರೆ ಚಾರಿತ್ರಿಕವಾಗಿ ಮುಖ್ಯವೆನಿಸಿರುವ ಘಟನೆಗಳನ್ನೊಳಗೊಂಡ, ಕೆಲವು ಸುಂದರ ಶಿಲ್ಪಗಳಿವೆ. ಪಾರ್ಶ್ವನಾಥ ಬಸದಿಯೇ ಇಲ್ಲಿರುವ ಬಸದಿಗಳಲ್ಲೆಲ್ಲಾ ದೊಡ್ಡದು. ಶ್ರವಣಬೆಳಗೊಳದಲ್ಲಿ ಮತ್ತೆ ಕೆಲವು ಜೈನ ಬಸದಿಗಳು ಹಾಗೂ ವರ್ಣಚಿತ್ರಗಳನ್ನು ಹೊಂದಿರುವ ಒಂದು ಜೈನಮಠ ಇವೆ. ಈ ಊರಿನಲ್ಲಿ ಒಂದು ಪುರಸಭೆಯಿದೆ. ಇಲ್ಲಿಂದ ಉತ್ತರಕ್ಕಿರುವ ಜಿನನಾಥಪುರದಲ್ಲಿ ಅರೆಗಲ್ ಮತ್ತು ಶಾಂತಿನಾಥ ಎಂಬ ಎರಡು ಬಸದಿಗಳಿವೆ. ಪ್ರತೀ ಹನ್ನೆರಡು ವರ್ಷಗಳಿಗೊಮ್ಮೆ ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕ ನಡೆಯುತ್ತದೆ. ಕ್ರಿ.ಶ. 1398ರ ಶಾಸನವೊಂದರಲ್ಲಿ ಈ ಮಸ್ತಕಾಭಿಷೇಕದ ಪ್ರಪ್ರಥಮ ಪ್ರಸ್ತಾಪವಿದೆ. ಗೊಮ್ಮಟೇಶ್ವರ ಮೂರ್ತಿಯ ಪ್ರತಿಷ್ಠಾಪನೆಯಾಗಿ ಸಹಸ್ರ ವರ್ಷಗಳು ಪೂರ್ತಿಯಾದ ವರ್ಷವಾದ 1981ರಲ್ಲಿ ಉತ್ಸವಗಳ ಜೊತೆ ಮಹಾಮಸ್ತಕಾಭಿಷೇಕ ಕಾರ್ಯಕ್ರಮವನ್ನೂ ನಡೆಸಲಾಯಿತು. ಶ್ರವಣಬೆಳಗೊಳದ ಸಮೀಪದಲ್ಲಿಯೇ ಇರುವ ಹಳೇ ಬೆಳಗೊಳದಲ್ಲಿ ಒಂದು ಜೈನಬಸದಿ ಮತ್ತು ಇತರ ಪುರಾತನ ಅವಶೇಷಗಳಿವೆ. ಶ್ರವಣಬೆಳಗೊಳ ಹಾಗೂ ಅದರ ಸುತ್ತಮುತ್ತ ಐನೂರಕ್ಕೂ ಹೆಚ್ಚು ಶಾಸನಗಳಿದ್ದು, ಅವುಗಳಲ್ಲಿ ಹೆಚ್ಚಿನವು ಜೈನಮುನಿಗಳು ಸಲ್ಲೇಖನ ವ್ರತ ಆಚರಿಸಿ ದೇಹ ತ್ಯಾಗಮಾಡಿದ್ದನ್ನು ತಿಳಿಸುತ್ತವೆ. ಶ್ರವಣಬೆಳಗೊಳವು ಕರ್ನಾಟಕ ಮಾತ್ರವಲ್ಲದೆ ಭಾರತದ ಸಾಂಸ್ಕೃತಿಕ ಭೂಪಟದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ.

ಶ್ರೀರಂಗಪಟ್ಟಣ : (ಮಂಡ್ಯ ಜಿ; ತಾ. ಕೇ; ಜನ: 18,148) ಶ್ರೀರಂಗಪಟ್ಟಣವು ಮೈಸೂರಿನಿಂದ ಈಶಾನ್ಯ 14 ಕಿಮೀ ಮತ್ತು ಬೆಂಗಳೂರಿನಿಂದ 125 ಕಿಮೀ ದೂರದಲ್ಲಿ ಪುರಸಭೆಯ ಆಡಳಿತ ಹೊಂದಿರುವ ಒಂದು ಪಟ್ಟಣ. ಇಲ್ಲಿರುವ ಶ್ರೀರಂಗನಾಥ ಸ್ವಾಮಿಯ ದೇವಸ್ಥಾನದಿಂದಾಗಿ ಶ್ರೀರಂಗಪಟ್ಟಣವೆಂಬ ಹೆಸರು ಬಂದಿದೆ. ಕಾವೇರಿ ನದಿ ದಂಡೆಯ ಮೇಲೆ, ದ್ವೀಪದ ಪಶ್ಚಿಮದ ತುದಿಯಲ್ಲಿ, ಈ ದೇವಾಲಯವಿದೆ. ಈ ದ್ವೀಪದ ವಿಸ್ತೀರ್ಣ ಪಶ್ಚಿಮದಿಂದ ಪೂರ್ವದತ್ತ ಸುಮಾರು ಮೂರು ಮೈಲಿಗಳಷ್ಟು ಉದ್ದ ಮತ್ತು ಒಂದು ಮೈಲಿಯಷ್ಟು ಅಗಲವಿದೆ. ದ್ವೀಪದ ಪೂರ್ವ ತುದಿಯಲ್ಲಿ ಗಂಜಾಂ ಉಪನಗರವಿದೆ. ಶ್ರೀರಂಗಪಟ್ಟಣವು ಒಂದು ಧಾರ್ಮಿಕ ಹಾಗೂ ಚಾರಿತ್ರಿಕ ಕ್ಷೇತ್ರ. ಕಾವೇರಿ ನದಿ ನಿರ್ಮಿಸಿರುವ ಮೂರು ದ್ವೀಪಗಳಾದ ಶ್ರೀರಂಗಪಟ್ಟಣ, ಶಿವಸಮುದ್ರ ಮತ್ತು ತಮಿಳುನಾಡಿನಲ್ಲಿರುವ ಶ್ರೀರಂಗಂಗಳಲ್ಲಿ ಶ್ರೀರಂಗನಾಥಸ್ವಾಮಿಯ ಒಂದೊಂದು ದೇವಾಲಯಗಳನ್ನು ಹೊಂದಿದ್ದು, ಅವುಗಳನ್ನು ಕ್ರಮವಾಗಿ, ಆದಿರಂಗ, ಮಧ್ಯರಂಗ ಮತ್ತು ಅಂತ್ಯರಂಗ ಎಂದು ಕರೆಯುವರು. ಗೌತಮ ಋಷಿ ಶ್ರೀರಂಗಪಟ್ಟಣದ ರಂಗನಾಥ ಸ್ವಾಮಿಯನ್ನು ಪೂಜಿಸಿದುದಾಗಿ ಹೇಳುವರು. ಶ್ರೀರಂಗಪಟ್ಟಣದಿಂದ ಪಶ್ಚಿಮಕ್ಕೆ ಕಾವೇರಿ ನದಿ ಎರಡು ಶಾಖೆಗಳಾಗಿ ಒಡೆದು ಸಾಗುವ ಸ್ಥಳದಲ್ಲಿಯೇ ಗೌತಮ ಕ್ಷೇತ್ರವಿದೆ. ಮೂಲ ಶ್ರೀರಂಗಪಟ್ಟಣವನ್ನು ಹೊಯ್ಸಳ ದೊರೆ ವಿಷ್ಣುವರ್ಧನನ ಸಹೋದರ ಉದಯಾದಿತ್ಯನು ಕ್ರಿ. ಶ. 1120ರಲ್ಲಿ ಕಟ್ಟಿಸಿದಂತೆ ಕಂಡುಬರುತ್ತದೆ. ವಿಷ್ಣುವರ್ಧನ ದೊರೆಯು ರಾಮಾನುಜಾಚಾರ್ಯ ಮತ್ತು ಅವರ ಶಿಷ್ಯವೃಂದಕ್ಕೆ ಶ್ರೀರಂಗಪಟ್ಟಣದ ಬಳಿ ಕಾವೇರಿ ನದಿಯ ಇಕ್ಕೆಡೆಗಳಲ್ಲಿದ್ದ ಅಷ್ಟಗ್ರಾಮ ಅಥವಾ ಎಂಟು ಹಳ್ಳಿಗಳನ್ನು ದತ್ತಿಯಾಗಿ ನೀಡಿದನು. 1454ರಲ್ಲಿ ನಾಗಮಂಗಲದ ದೊರೆ ತಿಮ್ಮಣ್ಣ ಈ ಪಟ್ಟಣದ ಸುತ್ತಲೂ ಕೋಟೆಯೊಂದನ್ನು ಕಟ್ಟಲು ವಿಜಯನಗರದ ಅರಸರಿಂದ ಅನುಮತಿ ದೊರಕಿಸಿಕೊಂಡನು. ಈತನು ರಂಗನಾಥ ಸ್ವಾಮಿ ದೇವಸ್ಥಾನವನ್ನು ಸಹ ವಿಸ್ತರಿಸಿದನು. ಮುಂದೆ, ಯುದ್ಧತಂತ್ರ ದೃಷ್ಟಿಯಿಂದ ಮಹತ್ವವಾದ ಪ್ರದೇಶದಲ್ಲಿ ಇದ್ದುದರಿಂದ, ಶ್ರೀರಂಗಪಟ್ಟಣವನ್ನು ಸಾಮಂತನೋರ್ವನ ಹಿಡಿತದಲ್ಲಿರಲು ಬಿಡುವುದು ಅಪಾಯಕರವೆಂದು ಭಾವಿಸಲಾಯಿತು. ಆದ್ದರಿಂದ, ಚಂದ್ರಗಿರಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಸಮಯದಲ್ಲಿ,ಶ್ರೀರಂಗಪಟ್ಟಣವನ್ನು ಶ್ರೀರಂಗರಾಯನೆಂಬ ರಾಜಪ್ರತಿನಿಧಿಯೋರ್ವನ ನೇರ ಹತೋಟಿಗೆ ತರಲಾಯಿತು. 1610ರಲ್ಲಿ ಮೈಸೂರಿನ ದೊರೆ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡರು. ಅಂದಿನಿಂದ, 1799ರಲ್ಲಿ ಬ್ರಿಟಿಷರ ವಶವಾಗುವ ತನಕ, ಶ್ರೀರಂಗಪಟ್ಟಣವು ಮೈಸೂರು ದೊರೆಗಳ ಮತ್ತು ಹೈದರ್ ಅಲಿ ಹಾಗೂ ಟಿಪ್ಪುಸುಲ್ತಾನನ ರಾಜಧಾನಿಯಾಗಿ ಮುಂದುವರೆಯಿತು. ಈ ಮಧ್ಯೆ ಇದು ಅನೇಕ ಮುತ್ತಿಗೆಗಳನ್ನು ಎದುರಿಸಿತು. ಚಿಕ್ಕದೇವರಾಜ ಒಡೆಯರ್ ಕಾಲದಲ್ಲಿ ಶ್ರೀರಂಗಪಟ್ಟಣ ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿತು. ಇಲ್ಲಿ ಸುಮಾರು 32 ಶಾಸನಗಳು ದೊರಕಿದ್ದು ಅವುಗಳಲ್ಲೊಂದು ಪಟ್ಟಣದ ವರ್ಣನೆ ಮಾಡಿದೆ (ಕ್ರಿ. ಶ. 1685). ದೇವಾಲಯಗಳು, ಮಸೀದಿಗಳು ಮತ್ತು

ಟಿಪ್ಪುವಿನ ಕಾಲದ ಅನೇಕ ಸ್ಮಾರಕಗಳಿರುವ ಈ ಪಟ್ಟಣದ ಸುತ್ತಲೂ ನಾಲ್ಕು ದ್ವಾರಗಳಿರುವ ಬಲವಾದ ಕಲ್ಲಿನ ಕೋಟೆ ಇದೆ. ಹೈದರ್ ಮತ್ತು ಟಿಪ್ಪು ಈ ಕೋಟೆಯನ್ನು ಬಲ ಪಡಿಸಲು ಯತ್ನಿಸಿದ್ದಂತೆ ತೋರುತ್ತದೆ. ಅಗ ಇದಕ್ಕೆ ಒಂದು ಜಲದ್ವಾರವನ್ನೂ ಅವರು ಇಟ್ಟರು. ಕೋಟೆಯೊಳಗೆ, ದೆಹಲಿ ಬಾಗಿಲಿನ ಪೂರ್ವಕ್ಕೆ ಮತ್ತು ಈಶಾನ್ಯ ಮೂಲೆಯಲ್ಲಿ ಒಂದು ಹೀಗೆ ಎರಡು ಕತ್ತಲು ಕೋಣೆಗಳಿವೆ. ಟಿಪ್ಪು ಸುಲ್ತಾನ್ ಮೊದಲನೇಯ ಕೋಣೆಯಲ್ಲಿ ಕೆಲವು ಬ್ರಿಟಿಷ್ ಸೈನಿಕರನ್ನು ಮತ್ತು ಎರಡನೇಯ ಕೋಣೆಯಲ್ಲಿ ಧೊಂಡಜಿ ವಾಘ್ ಎಂಬ ಮರಾಠ ಯೋಧನೋರ್ವನನ್ನು ಸೆರೆಯಲ್ಲಿಟ್ಟಿದ್ದನೆಂದು ಹೇಳು ತ್ತಾರೆ. ಕೋಟೆಯ ಒಳಗಡೆ ಲಾಲ್‌ಮಹಲ್ ಎಂಬ ಟಿಪ್ಪುವಿನ ಅರಮನೆಯ ಅವಶೇಷಗಳಿವೆ. ಕೋಟೆ ಈಗ ಶಿಥಿಲ ಸ್ಥಿತಿ ಯಲ್ಲಿದೆ. ರಾಜ್ಯದ ಬೃಹತ್ ದೇವಾಲಯಗಳಲ್ಲೊಂದಾದ ಶ್ರೀರಂಗನಾಥಸ್ವಾಮಿ ದೇವಾಲಯದ ನಿರ್ಮಾಣ ಮೂರು ಹಂತಗಳಲ್ಲಿ ಆಗಿರುವಂತೆ ಕಂಡುಬರುತ್ತದೆ. ಇದರ ತೀರ ಒಳಭಾಗ ಹೊಯ್ಸಳರ ಕಾಲದ್ದು; ನವರಂಗವು ವಿಜಯನಗರ ಕಾಲದ್ದು; ಮತ್ತು ವಿಜಯನಗರ ಶೈಲಿಯಲ್ಲಿ ನಿರ್ಮಿತವಾಗಿರುವ ಮುಖ್ಯ ದ್ವಾರದ ಗೋಪುರ ನಂತರದ ಕಾಲದ್ದು. ದೇವಸ್ಥಾನದ ಒಳಗಡೆ ಇಟ್ಟಿರುವ ದೇವತೆಗಳು ಮತ್ತು ಅನೇಕ ವಿಗ್ರಹಗಳು ಹೊಯ್ಸಳ ಮತ್ತು ವಿಜಯನಗರ ಕಾಲದ ಶಿಲ್ಪಿಗಳ ಶ್ರೇಷ್ಠ ಕೆಲಸಗಾರಿಕೆಗೆ ನಿದರ್ಶನಗಳಂತಿವೆ. ಆದಿಶೇಷನ ಮೇಲೆ ಒರಗಿರುವ ರಂಗನಾಥನ ವಿಗ್ರಹ 15 ಅಡಿಗಳಷ್ಟು ಉದ್ದವಿದೆ. ಕಂಠೀರವ ನರಸರಾಜ ಒಡೆಯರ್ ನಿರ್ಮಿಸಿದ ನರಸಿಂಹ ದೇವಾಲಯವು ವಿಶಾಲವಾದ ಗರ್ಭಗೃಹ, ಶುಕನಾಸ ಮತ್ತು ನವರಂಗ ಇವು ಗಳನ್ನು ಹೊಂದಿದೆ. ಈ ದೇವಾಲಯದಲ್ಲಿ ಪ್ರತಿಷ್ಠಾಪಿಸಿರುವ ಲಕ್ಷ್ಮೀನರಸಿಂಹ ದೇವರ ವಿಗ್ರಹ ಹೊಯ್ಸಳರ ಕಾಲದ್ದು. ಮತ್ತೊಂದು ದೊಡ್ಡ ದೇವಾಲಯವೆಂದರೆ, 16ನೇಯ ಶತಮಾನ ದಲ್ಲಿ ನಿರ್ಮಿಸಿದ, ಗಂಗಾಧರೇಶ್ವರ ದೇವಾಲಯ. ಇದರ ಮುಖ್ಯ ಗುಡಿ ಮತ್ತು ಮಹಾದ್ವಾರಗಳು ಒಳ್ಳೆಯ ಕೆತ್ತನೆ ಕೆಲಸದಿಂದ ಅಲಂಕೃತವಾಗಿವೆ; ನವರಂಗದಲ್ಲಿರುವ ಸುಬ್ರಹ್ಮಣ್ಯ ವಿಗ್ರಹಕ್ಕೆ ಆರು ಮುಖಗಳು ಮತ್ತು ಹನ್ನೆರಡು ಕೈಗಳಿವೆ. ಇಲ್ಲಿಯ ಒಂದು ಮಂಟಪದಲ್ಲಿ ಹದಿನೈದು ಶೈವ ಪುರಾತನದ ವಿಗ್ರಹಗಳಿವೆ. ಗಂಗಾಧರೇಶ್ವರ ದೇವಾಲಯದಿಂದ ಸುಮಾರು 100 ಅಡಿಗಳಷ್ಟು ದೂರದಲ್ಲಿ ಹೋರಾಡುತ್ತಾ ಮಡಿದ ಟಿಪ್ಪುಸುಲ್ತಾನನ ಶವ ಸಿಕ್ಕಿದ ಜಾಗವಿದ್ದು, ಒಂದು ಸ್ಮಾರಕ ಫಲಕವನ್ನು ನಿಲ್ಲಿಸಿದ್ದಾರೆ. ವಿಶಾಲವಾದ ಆದಿನಾಥ ಬಸದಿಯಲ್ಲಿ 24 ತೀರ್ಥಂಕರರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದೆ. ಟಿಪ್ಪು ಸುಲ್ತಾನನು ಕಟ್ಟಿಸಿದ ಜುಮ್ಮಾ ಮಸೀದಿ ಒಂದು ಸೊಗಸಾದ ಕಟ್ಟಡವಾಗಿದ್ದು, ಘನವಾಗಿಯೂ ರಮ್ಯವಾಗಿಯೂ ಕಾಣುವ ಎರಡು ಉನ್ನತ ಮಿನಾರುಗಳನ್ನು ಹೊಂದಿದೆ. ಈ ಮಿನಾರುಗಳ ಮೇಲ್ಭಾಗದಲ್ಲಿ ಲೋಹದಿಂದ ಮಾಡಿದ ಒಂದೊಂದು ಕಳಶಗಳಿವೆ. ಇವುಗಳ ಕೆಳಗೆ ಗಾರೆಯಿಂದ ಮಾಡಿದ ದೊಡ್ಡ ಗಾತ್ರದ ಅಲಂಕೃತ ಕಳಶಗಳಿವೆ. ಈ ಮಿನಾರುಗಳ ತುದಿಗೇರಲು ಸುಮಾರು 200 ಮೆಟ್ಟಿಲುಗಳನ್ನು ಏರಬೇಕು. ಜುಮ್ಮಾ ಮಸೀದಿಯಲ್ಲಿ ಸುಂದರ ವಾದ ಅಕ್ಷರಗಳಲ್ಲಿ ಬರೆದಿರುವ ಐದು ಪರ್ಷಿಯನ್ ಶಾಸನಗಳಿದ್ದು, ಅವುಗಳಲ್ಲೊಂದು ತಿಳಿಸುವಂತೆ ಇದರ ನಿರ್ಮಾಣ 1787ರಲ್ಲಿ ಆಯಿತು. ಶ್ರೀರಂಗಪಟ್ಟಣ ಮತ್ತು ಅದರ ಸುತ್ತಲಿನ ಪ್ರದೇಶ ದಲ್ಲಿ ಯೂರೋಪಿಯನ್ ಸೈನಿಕರ ಹಾಗೂ ನಾಗರಿಕ ಅಧಿಕಾರಿ ಗಳ ಅನೇಕಾನೇಕ ಗೋರಿಗಳಿವೆ. ಸೈನಿಕ ನೆಲೆಯಾಗಿ ಈ ಪಟ್ಟಣ ಪಡೆದಿದ್ದ ಪ್ರಾಮುಖ್ಯತೆಯನ್ನು ಕ್ರಿ. ಶ. 1800ರಿಂದ 1867ರ ಅವಧಿಯ 'ಕಾವಲು ದಂಡಿನ ಸ್ಮಶಾನ'ದಲ್ಲಿರುವ ಗೋರಿಗಳಿಂದಲೇ ಊಹಿಸಬಹುದು. ಈ ದ್ವೀಪದಲ್ಲಿಯೇ, ಆದರೆ ಕೋಟೆಯಿಂದ ಹೊರಗಡೆ, ದರಿಯಾ ದೌಲತ್ ಬಾಗ್ ಇದೆ. ಇಲ್ಲಿಯೇ ಟಿಪ್ಪು ಸುಲ್ತಾನ್ 1784ರಲ್ಲಿ ನಿರ್ಮಿಸಿದ, ಆತನ ಅಚ್ಚುಮೆಚ್ಚಿನ ವಿಶ್ರಾಂತಿ ಧಾಮವಾದ, ಉದ್ಯಾನವನ ಮತ್ತು ಬೇಸಿಗೆ ಅರಮನೆ ಇರುವುದು. ಚಚ್ಚೌಕವಾದ ಜಗಲಿಯ ಮೇಲೆ ನಿಂತಿರುವ ಈ ಬೇಸಿಗೆ ಅರಮನೆ ಇಸ್ಲಾಂ ವಾಸ್ತುಶಿಲ್ಪದ ಒಂದು ಉತ್ತಮ ಮಾದರಿಯಾಗಿದೆ. ಇದರ ಗೋಡೆಗಳ ಮೇಲೆ ಉತ್ತಮ ವರ್ಣಚಿತ್ರಗಳಿವೆ. ಈಗ ಒಂದು ವಸ್ತುಸಂಗ್ರಹಾಲಯವಾಗಿ ಪರಿವರ್ತನೆಗೊಂಡಿರುವ ಈ ಅರಮನೆ ಯಲ್ಲಿ ಟಿಪ್ಪುಸುಲ್ತಾನನ ಕಾಲದ ಆಯುಧಗಳು, ವರ್ಣಚಿತ್ರಗಳು, ನಾಣ್ಯಗಳು ಮುಂತಾದ ವಸ್ತುಗಳನ್ನು ಸಂರಕ್ಷಿಸಿ ಪ್ರದರ್ಶನಕ್ಕಿಡ ಲಾಗಿದೆ. ಪಟ್ಟಣದ ಆಗ್ನೇಯ ದಿಕ್ಕಿನಲ್ಲಿ ಗುಂಬಜ್ ಇದೆ. ಇಲ್ಲಿ ಹೈದರ್ ಅಲಿ, ಟಿಪ್ಪುಸುಲ್ತಾನ್ ಹಾಗೂ ಅವರ ಕುಟುಂಬ ದವರ ಸಮಾಧಿಗಳಿವೆ. ಚಚ್ಚೌಕಾಕೃತಿಯ ಈ ಆಕರ್ಷಣೀಯ ಕಟ್ಟಡದ ಮೇಲೆ ಒಂದು ಗುಮ್ಮಟ ಮತ್ತು ಸುತ್ತಲೂ ಕರಿ ಶಿಲೆಯ ಸ್ತಂಭಗಳ ಆಧಾರ ಇರುವ ಒಂದು ಮೊಗಸಾಲೆ ಇವೆ. ಪ್ರತೀ ಶುಕ್ರವಾರ ಈ ಗುಂಬಜವನ್ನು ವಿದ್ಯುದ್ದೀಪಗಳಿಂದ ಬೆಳಗಿಸಲಾಗುವುದು. ಟಿಪ್ಪುಸುಲ್ತಾನ್ ಕಟ್ಟಿಸಿದ, ಶ್ರೀರಂಗ ಪಟ್ಟಣದ ಉಪಪಟ್ಟಣವಾದ, ಗಂಜಾಂ ಒಂದು ಕಾಲದಲ್ಲಿ ಬಟ್ಟೆ ತಯಾರಿಕೆಗೆ ಹೆಸರಾಗಿತ್ತು. ಇಲ್ಲಿನ ಕಾಗದ ತಯಾರಿಕೆ ಒಂದು ಗೃಹ ಕೈಗಾರಿಕೆಯಾಗಿ ಅಭಿವೃದ್ಧಿ ಹೊಂದಿತ್ತು. ತೋಟಗಾರಿಕೆ ಇಲಾಖೆಯ ಒಂದು ಅಂಜೂರದ ತೋಟ ಇಲ್ಲಿದೆ. ಇಲ್ಲೊಂದು ಹಳೆಯ ದೇವಾಲಯವಿದೆ. ಮೀನುಗಾರರು, ಕಮ್ಮಾರರು, ಮತ್ತು ಬಡಗಿಗಳ ಸಹಕಾರ ಸಂಘಗಳು ಸಹ ಇಲ್ಲಿವೆ. ಬಡಗಿ ಗಳಲ್ಲಿ ಬಹಳ ಮಂದಿ ಎತ್ತಿನ ಗಾಡಿ ತಯಾರಿಕೆಯಲ್ಲಿ ತೊಡಗಿರು ತ್ತಾರೆ; ಸುಧಾರಿತ ಎತ್ತಿನಗಾಡಿಗಳನ್ನು ತಯಾರಿಸಲು ಇವರಿಗೆ ಭಾರತೀಯ ಆಡಳಿತ ಸಂಸ್ಥೆ (ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್) ತಾಂತ್ರಿಕ ಸಲಹೆ ನೀಡುತ್ತದೆ. ಇಲ್ಲಿ ಕಬ್ಬಿಣದ ನೇಗಿಲು ಮತ್ತು ಇತರ ವ್ಯವಸಾಯೋಪಕರಣಗಳ ತಯಾರಿಕೆ ಸಹ ನಡೆಯುತ್ತದೆ. ಅಲ್ಲದೆ, ಇಲ್ಲಿ ಬೆಂಕಿಪೆಟ್ಟಿಗೆ ತಯಾರಿಕೆ ಮತ್ತು ಜೇನುಸಾಕಣೆ ಘಟಕಗಳಿವೆ. ಒಂದು ಮಸೀದಿ

ಮತ್ತು ಫ್ರೆಂಚ್ ಕ್ರೈಸ್ತಧರ್ಮ ಪ್ರಚಾರಕ ಅಬ್ಬೆದುಬುವಾ ಸ್ಥಾಪಿಸಿದ ಒಂದು ಚರ್ಚ್ ಇಲ್ಲಿದೆ. ಇಲ್ಲಿರುವ ಕೈಗಾರಿಕಾ ಘಟಕವೊಂದರಲ್ಲಿ ತೌಡಿನಿಂದ ಎಣ್ಣೆ ತೆಗೆಯುತ್ತಾರೆ. ಗೋಸಾಯಿ ಘಾಟಿಯಲ್ಲಿ ಕಾವೇರಿನದಿ ಸಂಗಮಿಸಿ ಪುನಃ ಮುಂದೆ ಸಾಗುತ್ತದೆ. ಇಲ್ಲಿ ವಿಶ್ವನಾಥ ದೇವಾಲಯವಿದೆ. ಪಶ್ಚಿಮವಾಹಿನಿ ಶ್ರೀರಂಗಪಟ್ಟಣದಿಂದ ಎರಡು ಕಿಮೀ ದೂರದಲ್ಲಿರುವ ಒಂದು ಪವಿತ್ರ ಸ್ಥಳ. ಇಲ್ಲಿಂದ ಕಾವೇರಿನದಿಯು ಒಂದು ಕವಲು ಪಶ್ಚಿಮ ದಿಕ್ಕಿನತ್ತ ತಿರುಗಿ ಹರಿಯುತ್ತದೆ. ಈ ಜಾಗದಲ್ಲಿ ಅನೇಕ ಸ್ನಾನ ಘಟ್ಟಗಳು ಹಾಗೂ ಧರ್ಮಛತ್ರಗಳು ವಿವಾಹವೇ ಮುಂತಾದ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಲು ಜನರಿಗೆ ಅನುಕೂಲಕರವಾಗಿವೆ. ಸಮೀಪದಲ್ಲಿಯೇ ಒಂದು ಸತ್ಯ ಸಾಯಿಮಂದಿರವಿದೆ. ಶ್ರೀರಂಗಪಟ್ಟಣದಿಂದ ಮೂರು ಕಿಮೀ ದೂರದಲ್ಲಿರುವ ಕರಿಘಟ್ಟವು 2,697 ಅಡಿಗಳಷ್ಟು ಎತ್ತರವಿರುವ ಒಂದು ಬೆಟ್ಟದಸಾಲು. ಈ ಬೆಟ್ಟದ ಮೇಲೆ ವೆಂಕಟರಮಣಸ್ವಾಮಿ ದೇವಸ್ಥಾನವಿದೆ. ಸಮೀಪದಲ್ಲಿಯೇ ಕಾವೇರಿ ಸಂಗಮವಿದೆ. ಈ ತಾಲೂಕಿನ ಇತರ ಗಮನಾರ್ಹ ಸ್ಥಳಗಳೆಂದರೆ: ಪಾಲಹಳ್ಳಿ (ಜನ: 4,196) ಶ್ರೀರಂಗಪಟ್ಟಣದಿಂದ ಐದು ಕಿಮೀ ದೂರದಲ್ಲಿದೆ. ಈಗ ಭತ್ತ ವ್ಯಾಪಾರದ ಕೇಂದ್ರವಾಗಿರುವ ಇದು 1871ರ ತನಕ ಮೈಸೂರು ಅಷ್ಟಗ್ರಾಮ ತಾಲೂಕಿನ ಕೇಂದ್ರವಾಗಿತ್ತು. ಇಲ್ಲಿ ಒಂದು ಕಮ್ಮಾರಸಾಲೆಯಿದೆ. ಮೈಸೂರು ರಾಜ್ಯದ ಪುರಾತನ ಚರ್ಚ್‌ಗಳಲ್ಲಿ ಒಂದೆನಿಸಿದ ಬ್ಯಾಪ್ಟಿಸ್ಟರ ಸೈಂಟ್ ಜಾನ್ ಚರ್ಚ್ ಇಲ್ಲಿದೆ. ರಂಗನತಿಟ್ಟು ಪಕ್ಷಿಧಾಮ ಶ್ರೀರಂಗಪಟ್ಟಣದಿಂದ ನಾಲ್ಕು ಕಿಮೀ ಮತ್ತು ಮೈಸೂರಿನಿಂದ 19 ಕಿಮೀ ದೂರದಲ್ಲಿದೆ. ಇದು ಕಾವೇರಿನದಿಯಲ್ಲಿರುವ ಚಿಕ್ಕ ದ್ವೀಪವಾಗಿದ್ದು ಸುಮಾರು 40 ಹೆಕ್ಟೇರುಗಳಷ್ಟು ವಿಸ್ತೀರ್ಣವುಳ್ಳದ್ದಾಗಿದೆ. ನದಿಯ ನಡುವೆ ಗಿಡಮರಗಳಿಂದ ತುಂಬಿರುವ ಕೆಲವು ಗುಡ್ಡಗಳಿದ್ದು ಪುಟ್ಟ ಹಸಿರು ದ್ವೀಪಗಳಂತೆ ತೋರಿಬರುತ್ತವೆ. ನದಿಯ ಇಕ್ಕೆಲಗಳಲ್ಲೂ ಎತ್ತರವಾಗಿ ಬೆಳೆದಿರುವ ವೃಕ್ಷಗಳು, ಗಿಡಗಳು ಮತ್ತು ಪೊದೆಗಳು ಹರಡಿಕೊಂಡಿವೆ. ವಿವಿಧ ಬಣ್ಣದ ಮತ್ತು ವಿಶಿಷ್ಟ ಗರಿಗಳುಳ್ಳ ಹಕ್ಕಿಪಕ್ಕಿಗಳು ಸಹಸ್ರಾರು ಸಂಖ್ಯೆಯಲ್ಲಿ ಈ ಗುಡ್ಡಗಳ ಮೇಲೆ ನೆರೆದಾಗ ಸುಂದರವಾದ ಹೂಗಳ ಭಾರಿ ರಾಶಿಗಳಂತೆ ಕಾಣಿಸುತ್ತವೆ. ಅಲ್ಲದೆ, ಈ ಪಕ್ಷಿಗಳು ಒಟ್ಟಾಗಿ ಹಾರಿಹೋಗುವಾಗ ಆಕಾಶವನ್ನು ಅನೇಕ ವರ್ಣಗಳ ಹಾಳೆಗಳಿಂದ ಮುಚ್ಚಿದಂತೆ ಅನಿಸುವುದು. ಜೂನ್ ಮತ್ತು ಡಿಸೆಂಬರ್ ಮಾಹೆಗಳ ನಡುವಿನ ಕಾಲದಲ್ಲಿ ಇಲ್ಲಿಗೆ ವಿಪರೀತ ಸಂಖ್ಯೆಯಲ್ಲಿ ಹಕ್ಕಿಪಕ್ಷಿಗಳು ಆಶ್ರಯ ಅರಸಿ ಬರುತ್ತವೆ. ಬೆಳಗೊಳದಿಂದ ಮೂರು ಕಿಮೀ ದೂರದಲ್ಲಿರುವ ಬಲಮುರಿ ಕ್ಷೇತ್ರವು ಕಾವೇರಿನದಿ ದಂಡೆಯ ಮೇಲಿರುವ ಒಂದು ಬೇಚಿರಾಕ್ ಗ್ರಾಮ ಮತ್ತು ತಾಲೂಕಿನ ಮುಖ್ಯ ಯಾತ್ರಾ ಸ್ಥಳಗಳಲ್ಲೊಂದು. ಇಲ್ಲಿರುವ ಅಗಸ್ತ್ಯೇಶ್ವರಸ್ವಾಮಿ ಮತ್ತು ಆಂಜನೇಯಸ್ವಾಮಿ ದೇವಸ್ಥಾನಗಳು ಗಮನಾರ್ಹವಾಗಿವೆ. ಬೆಳಗೊಳ (ಜನ: 4,519) ಶ್ರೀರಂಗಪಟ್ಟಣ-ಕೃಷ್ಣರಾಜಸಾಗರ ಮಾರ್ಗದಲ್ಲಿ, ಶ್ರೀರಂಗಪಟ್ಟಣದಿಂದ 12 ಕಿಮೀ ದೂರದಲ್ಲಿರುವ ಅದೇ ಹೆಸರಿನ ಹೋಬಳಿಯ ಕೇಂದ್ರ. ಇಲ್ಲಿ ಈಗ ದುಸ್ಥಿತಿಯಲ್ಲಿರುವ ಕಣ ಶಿಲೆಯಿಂದ ಕಟ್ಟಿರುವ, ಜನಾರ್ದನ ದೇವಸ್ಥಾನವಿದೆ. ಇದು ಹೊಯ್ಸಳ ವಿಷ್ಣುವರ್ಧನನಿಂದ ಸ್ಥಾಪಿಸಲ್ಪಟ್ಟ ಒಂದು ಅಗ್ರಹಾರವೆಂದು ತಿಳಿಯಲಾಗಿದೆ. ಈಗ ಇದು ಅನೇಕ ಕೈಗಾರಿಕೆಗಳ ಕೇಂದ್ರವಾಗಿದೆ. ಸಮೀಪದಲ್ಲಿಯೇ ಮಂಡ್ಯ ನ್ಯಾಷನಲ್ ಪೇಪರ್ ಮಿಲ್ಸ್ ಮತ್ತು ದಿ ಮೈಸೂರ್ ಕೆಮಿಕಲ್ಸ್ ಅಂಡ್ ಫರ್ಟಿಲೈಜರ್ಸ್ (ಇತ್ತೀಚೆಗೆ ಗೆಮ್ಮಾನ್ ಫರ್ಮ್ಸ್ ಎಂದು ಹೆಸರುಗೊಂಡಿದೆ) ಕಾರ್ಖಾನೆಗಳಿವೆ. ಮೈಸೂರು ನಗರಕ್ಕೆ ನೀರು ಸರಬರಾಜು ಮಾಡಲೆಂದು ಒಂದು ಪಂಪ್‌ಹೌಸ್ ನಿರ್ಮಿಸಿದ್ದಾರೆ.

**ಶ್ರೀರಾಮಪುರ:** (ಚಿತ್ರದುರ್ಗ ಜಿ; ಹೊಸದುರ್ಗ ತಾ; ಜನ: 3,414) ಶ್ರೀರಾಮಪುರ ಗ್ರಾಮವು ಹೊಸದುರ್ಗ ಪಟ್ಟಣದಿಂದ ಸುಮಾರು 26 ಕಿಮೀ ದೂರದಲ್ಲಿದೆ. ಇದರ ಪ್ರಾಚೀನ ಹೆಸರುಗಳೆಂದರೆ ಬೂದಿಹಾಳು, ವಿಭೂತಿಪುರ ಮತ್ತು ಬೂದಿಪುರ. ಇದೊಂದು ಇತಿಹಾಸ ಪೂರ್ವ ಕಾಲದ ನಿವೇಶನ. ಇಲ್ಲಿ ತೆಂಗಿನ ತೋಟಗಳು ಬಹಳವಿದ್ದು, ಊರಿಗೆ ಕಾಯಿ ಬೂದಿಹಾಳು ಎಂಬ ಹೆಸರನ್ನು ಸಹ ನೀಡಿವೆ. ಚಿತ್ರದುರ್ಗದ ಪಾಳೇಗಾರರ ಕಾಲದಲ್ಲಿ ಇದನ್ನು ಗಿರಿಜಾನಗರವೆಂದು ಕರೆಯಲಾಗುತ್ತಿತ್ತು. ಇಲ್ಲಿರುವ ಕೋಟೆಯನ್ನು 15ನೇಯ ಶತಮಾನದಲ್ಲಿ ವಿಜಯನಗರದ ಸಾಮಂತನೊರ್ವನು ಕಟ್ಟಿಸಿದನು. ಈ ಕೋಟೆಯಲ್ಲಿ ಅನೇಕ ಶಾಸನಗಳು ದೊರಕಿವೆ. ಹದಿನೈದನೇಯ ಶತಮಾನದಲ್ಲಿ ಬೂದಿಹಾಳು ಗೊಲ್ಲರ ಸಿರುಮ ನೃಪಾಲ ಎಂಬವನ ಆಳ್ವಿಕೆಯಲ್ಲಿತ್ತೆಂದೂ, ಈತ ವಿಜಯನಗರದ ವಿರುದ್ಧ ನಡೆದ ಯುದ್ಧದಲ್ಲಿ ಮಡಿದನೆಂದೂ ಹೇಳುತ್ತಾರೆ. ಸಿಂಗಿರಾಜನ ಬಸವರಾಜ ಚರಿತೆಯಲ್ಲಿ (ಕ್ರಿ.ಶ. 1485) ಈತನ ಪ್ರಸ್ತಾಪ ಬಂದಿದೆ. ಸಿರುಮನ ಸಮಕಾಲೀನ ಕವಿ ರಾಮನು ಸಾಂಗತ್ಯ ಶೈಲಿಯಲ್ಲಿ ಸಿರುಮನ ಚರಿತ್ರೆಯನ್ನು ಬರೆದನು. ಕವಿ ಸಿದ್ಧನು ಕ್ರಿ.ಶ. 1700 ರಲ್ಲಿ ಸಿರುಮನ ಸಾಂಗತ್ಯ ಎಂಬ ಗ್ರಂಥವನ್ನು ರಚಿಸಿದನು. ಇಲ್ಲಿ ವಿಜಯನಗರ ಶೈಲಿಯ ದೊಡ್ಡದಾದ ಲಕ್ಷ್ಮೀಕಾಂತ ದೇವಸ್ಥಾನ ಇದೆ. ಮೈಲಾರ ಲಿಂಗೇಶ್ವರ, ಕಾಳಿಕಾಂಬಾ, ವೀರಭದ್ರ, ಗೋಪಾಲಕೃಷ್ಣ, ಕುಮಾರಮಲ್ಲ, ಸೋಮೇಶ್ವರ ಮತ್ತು ಬನಶಂಕರಿ ಮುಂತಾದ ದೇವಾಲಯಗಳೂ ಇಲ್ಲಿ ಇವೆ. ಇವಲ್ಲದೆ, ಇಲ್ಲಿ ಗುರು ಪರಪ್ಪ ಸ್ವಾಮಿಯ ಸಮಾಧಿ ಇದ್ದು, ಅದರ ಗೌರವಾರ್ಥ ಪ್ರತೀ ಫೆಬ್ರವರಿ ತಿಂಗಳಿನಲ್ಲಿ ಒಂದು ಜಾತ್ರೆ ಜರುಗುವುದು. ಇಲ್ಲಿ ಒಂದು ಸುರಂಗಮಾರ್ಗ, ಕೊಳ, ಕೋಟೆಯ ಬುರುಜು ಮುಂತಾದ ಅನೇಕ ಕುತೂಹಲಕಾರಿ ಚಾರಿತ್ರಿಕ ಅವಶೇಷಗಳಿವೆ. ಇದು ಒಂದು ಯಾತ್ರಾಸ್ಥಳ ಹಾಗೂ ಹೋಬಳಿ ಕೇಂದ್ರ.

**ಶ್ರೀನಿವಾಸಪುರ:** (ಕೋಲಾರ ಜಿ; ತಾಲೂಕು ಕೇ;

ಜನ: 12,433) ಶ್ರೀನಿವಾಸಪುರ ಕೋಲಾರದಿಂದ ಈಶಾನ್ಯಕ್ಕೆ 28 ಕಿಮೀ ಮತ್ತು ಬೆಂಗಳೂರಿನಿಂದ 95 ಕಿಮೀ ದೂರದಲ್ಲಿದೆ. ಹಿಂದೆ ಇದಕ್ಕೆ ಪಾಪನಪಲ್ಲಿ ಎಂಬ ಹೆಸರಿತ್ತು. ದಿವಾನ್ ಪೂರ್ಣಯ್ಯನವರು, ತಿರುಪತಿ ಯಾತ್ರೆ ಮುಗಿಸಿ ಹಿಂತಿರುಗುತ್ತಿದ್ದಾಗ, ಇದಕ್ಕೆ ತನ್ನ ಮಗ ಶ್ರೀನಿವಾಸಮೂರ್ತಿಯ ಹೆಸರನ್ನು ಇಟ್ಟರು. ಈ ಪಟ್ಟಣ ಹಿಪ್ಪು ನೇರಳೆ ಕೃಷಿಗೆ ಪ್ರಸಿದ್ಧವಾಗಿದೆ. ಇಲ್ಲಿಂದ ಸುಮಾರು ಮೂರು ಕಿಮೀ ದೂರದಲ್ಲಿರುವ ಗುಳ್ಗನಪೊಡೆ ಒಂದು ಪುರಾತನ ಪಟ್ಟಣವಾಗಿತ್ತೆಂದು ವರ್ಣಿತವಾಗಿದೆ. ಹರಲಕೋಟೆ ಎಂಬಲ್ಲಿ ಬಾಣರ ಎರಡು ಶಾಸನಗಳು ಲಭ್ಯವಿವೆ. ಇಲ್ಲಿನ ಚೌಡೇಶ್ವರಿ ದೇವಿಯ ಗುಡಿಯಲ್ಲಿರುವ ವಿಗ್ರಹದ ನಾಲ್ಕು ಕೈಗಳಲ್ಲಿ, ಕ್ರಮವಾಗಿ, ಡಮರು, ಸರ್ಪ, ಕಪಾಲ ಮತ್ತು ದಾನವನೋರ್ವನನ್ನು ತಿವಿಯುತ್ತಿರುವ ತ್ರಿಶೂಲವಿವೆ. ಇದೇ ಗುಡಿಯಲ್ಲಿ ಸಾಲಾಗಿ ಕುಳಿತಿರುವ ಸಪ್ತಮಾತೃಕೆಯರ ಪ್ರತಿಮೆಗಳಿವೆ. ಈ ಪಟ್ಟಣವು ಹಿಪ್ಪುನೇರಳೆಯ ಜೊತೆಗೆ ಮಾವಿನ ಕೃಷಿಗೂ ಪ್ರಸಿದ್ಧವಾಗಿದೆ. ಶ್ರೀನಿವಾಸಪುರದಿಂದ ಆರು ಕಿಮೀ ದೂರದಲ್ಲಿರುವ ಹೆಬ್ಬಟ್ಟ ಒಂದು ಪ್ರಾಚೀನ ನಿವೇಶನವಾಗಿದ್ದು ಗಂಗರ ಅನೇಕ ಶಾಸನಗಳು ಅಲ್ಲಿ ದೊರಕಿವೆ. ಶ್ರೀನಿವಾಸಪುರದಿಂದ 22 ಕಿಮೀ ದೂರದಲ್ಲಿರುವ ಕೊಳಗುರ್ತಿ, ಅಲ್ಲಿರುವ ಗಂಗಮ್ಮನ ಗುಡಿಯಿಂದಾಗಿ ಪ್ರಸಿದ್ಧವಾಗಿದೆ.

**ಸಂಕೇಶ್ವರ :** (ಬೆಳಗಾವಿ ಜಿ; ಹುಕ್ಕೇರಿ ತಾ; ಜನ: 24,018–1981) ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 550 ಕಿಮೀ ಮತ್ತು ಬೆಳಗಾವಿಯಿಂದ ಉತ್ತರಕ್ಕೆ ಸುಮಾರು 48 ಕಿಮೀ ದೂರದಲ್ಲಿದೆ. ಇಲ್ಲಿನ ಶಂಕರಲಿಂಗ ದೇವಾಲಯದಲ್ಲಿ ದೊರಕಿರುವ ಮೂರು ಶಾಸನಗಳಲ್ಲಿ ಕ್ರಿ.ಶ. 1199 ಮತ್ತು 1202ನೇ ವರ್ಷದ ಉಲ್ಲೇಖವಿರುವ ಒಂದು ಶಾಸನ ರಟ್ಟರ ಏಳನೇ ದೊರೆ ನಾಲ್ಪಡಿ ಕಾರ್ತವೀರ್ಯನ ಕಾಲಕ್ಕೆ ಸಂಬಂಧಿಸಿದ್ದು, ಸಂಕೇಶ್ವರದ ಐತಿಹಾಸವನ್ನು 12ನೇಯ ಶತಮಾನಕ್ಕೂ ಹಿಂದಕ್ಕೊಯ್ಯುತ್ತದೆ. ಕ್ರಿ.ಶ. 1481ರಲ್ಲಿ ಬಹಮನಿ ಸಾಮ್ರಾಜ್ಯದ ಕೊಂಕಣ ಪ್ರಾಂತ್ಯದ ರಾಜಪ್ರತಿನಿಧಿಯಾಗಿದ್ದ ಬಹಾದ್ದೂರ್ ಗಿಲಾನಿ ದಂಗೆಯೆದ್ದು ಬೆಳಗಾವಿ ಮತ್ತು ಗೋವೆಗಳನ್ನಾಕ್ರಮಿಸಿ ಸಂಕೇಶ್ವರದಲ್ಲಿ ಕೋಟೆಯೊಂದನ್ನು ಕಟ್ಟಿಸಿ ತನ್ನ ಕೇಂದ್ರ ಕಾರ್ಯಸ್ಥಾನವನ್ನಾಗಿ ಮಾಡಿಕೊಂಡಿದ್ದನು. ಕ್ರಿ.ಶ. 1659ರಲ್ಲಿ ಇದು ಶಿವಾಜಿಯ ವಶವಾಗಿ ಕೊಲ್ಲಾಪುರ ಜಿಲ್ಲೆಯ ಭಾಗವಾಗಿತ್ತು. ನಾಲ್ಕನೇಯ ಮೈಸೂರು ಯುದ್ಧದ ಬಳಿಕ (1799) ಸಂಕೇಶ್ವರವು ಮುಂಬೈ ಪ್ರಾಂತಕ್ಕೆ ಸೇರಿತ್ತು. ಇಲ್ಲಿನ ಮುಖ್ಯ ಆಕರ್ಷಣೆಗಳೆಂದರೆ ಶಂಕರಲಿಂಗ ದೇವಾಲಯ ಹಾಗೂ ಶಂಕರ ಭಾರತಿ ಮಠ. ಈ ಮಠವನ್ನು ಅದೇ ಹೆಸರಿನ ಸಂನ್ಯಾಸಿಯೋರ್ವನು 16ನೇ ಶತಮಾನದ ಅಂತ್ಯದಲ್ಲಿ ವಿಜಾಪುರದ ಸೇನಾಧಿಕಾರಿ ರಣದುಲ್ಲಾ ಖಾನನ ಸಹಾಯದಿಂದ ಸ್ಥಾಪಿಸಿದನು. ರಣದುಲ್ಲಾಖಾನನು ಈ ಮಠಕ್ಕೆ ಅನೇಕ ಇನಾಮುಗಳನ್ನು ನೀಡಿರುವುದಾಗಿ ತಿಳಿದುಬರುತ್ತದೆ. ಈ ಮಠವು ಹಿರಣ್ಯಕೇಶಿ ಎಂಬ ತೊರೆಯ ದಡದ ಮೇಲಿದೆ. ಇಲ್ಲಿನ ಆಧುನಿಕ ದೇವಾಲಯಗಳಲ್ಲಿ ಲಕ್ಷ್ಮೀನಾರಾಯಣ, ಲಕ್ಷ್ಮೀದೇವಿ, ವಿಠಲಮಂದಿರ ಹಾಗೂ ಮಹಾವೀರ ಮಂದಿರ ಅಲ್ಲದೇ ಕೆಲವು ಮಸೀದಿಗಳು ಹಾಗೂ ದರ್ಗಾಗಳು ಗಮನಾರ್ಹವಾದವು. ಪುರಸಭೆ ಇರುವ ಈ ಸ್ಥಳ ಮೆಣಸಿನಕಾಯಿ, ಹತ್ತಿ ಮತ್ತು ಶೇಂಗಾದ ದೊಡ್ಡ ಪ್ರಮಾಣದ ವ್ಯಾಪಾರ ಕೇಂದ್ರವೆನಿಸಿದೆ. ಇಲ್ಲಿನ ನೇಕಾರಿಕೆಗೆ ಹಿರಿದಾದ ಪರಂಪರೆ ಇದೆ. ಅಲ್ಲದೆ ಒಂದು ಸಕ್ಕರೆ ಕಾರ್ಖಾನೆ ಸಹ ಇದೆ. ಇಲ್ಲಿ ಪ್ರತೀವರ್ಷ ನಡೆಯುವ ವಿಶಿಷ್ಟವಾದ ಎತ್ತಿನ ಗಾಡಿಗಳ ಸ್ಪರ್ಧೆ ಬಹಳಷ್ಟು ಜನರನ್ನೂ ಆಕರ್ಷಿಸುತ್ತದೆ.

**ಸಂಗಮ :** (ಬಿಜಾಪುರ ಜಿಲ್ಲೆ; ಹುನಗುಂದ ತಾ; ಜನ: 2,504) ಸಂಗಮ ಅಥವಾ ಕೂಡಲಸಂಗಮವು ಹುನಗುಂದದಿಂದ ಸುಮಾರು 19 ಕಿಮೀ ದೂರದಲ್ಲಿರುವ ಒಂದು ಹಳ್ಳಿಯಾಗಿದ್ದು ಕೃಷ್ಣಾ ಮತ್ತು ಮಲಪ್ರಭಾ ನದಿಗಳು ಕೂಡುವ ಸ್ಥಳದಲ್ಲಿದೆ. ಕಪ್ಪಡಿ ಸಂಗಮ ಎಂಬುದು ಈ ಊರಿನ ಪುರಾತನ ಹೆಸರಾಗಿದ್ದು ಬಸವೇಶ್ವರರ ವಿದ್ಯಾಗುರುವಾದ ಈಶಾನಗುರುವು ಇಲ್ಲಿಯೇ ನೆಲೆಸಿದ್ದರು. ಇಲ್ಲಿಗೆ ಸಮೀಪದಲ್ಲಿಯೇ ನದೀ ದಂಡೆಯ ಮೇಲೆ, ಪುರಾತನ ಸಂಗಮೇಶ್ವರ ದೇವಾಲಯವಿದ್ದು ಪುಣ್ಯಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಈ ದೇವಾಲಯವು ಮುಖಮಂಟಪ, ಗರ್ಭಗೃಹ ಮತ್ತು ನವರಂಗಗಳನ್ನೊಳಗೊಂಡಿದೆ. ನವರಂಗದಲ್ಲಿ ಬಸವೇಶ್ವರ, ನೀಲಮ್ಮ, ನಂದಿ ಮತ್ತು ಗಣಪತಿ ಇವರುಗಳ ವಿಗ್ರಹಗಳಿವೆ. ಗರ್ಭಗೃಹದ ಬಾಗಿಲವಾಡವು ಅಂದವಾಗಿ ಕೆತ್ತಲ್ಪಟ್ಟ ಹೂ ಬಳ್ಳಿಗಳ ನಮೂನೆಗಳು ಮತ್ತು ಪ್ರಾಣಿಗಳ ಚಿತ್ರಗಳಿಂದ ಅಲಂಕೃತವಾಗಿದೆ. ಗರ್ಭಗೃಹದಲ್ಲಿ ಸಂಗಮೇಶ್ವರ ಅಥವಾ ಸಂಗಮನಾಥನೆಂದು ಪ್ರಸಿದ್ಧವಾಗಿರುವ ಲಿಂಗವಿದೆ. ದೇವಾಲಯದಲ್ಲಿರುವ ಕ್ರಿ.ಶ. 1213ರ ಒಂದು ಶಾಸನ ಆಚೇಶ್ವರ ದೇವರಿಗೆ ದತ್ತಿಯೊಂದನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. 1160ರ ಮತ್ತೊಂದು ಶಾಸನ ಕಾಲೇಶ್ವರ ಮತ್ತು ಆಚೇಶ್ವರ ದೇವರುಗಳಿಗೆ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಇಲ್ಲಿ ಜಾತವೇದ ಮುನಿಯು ಕ್ರಿ.ಶ. 12ನೇಯ ಶತಮಾನದಲ್ಲಿ ವಿದ್ಯಾಕೇಂದ್ರವೊಂದನ್ನು ಸ್ಥಾಪಿಸಿದ್ದು ಹಾಗೂ ಬಸವೇಶ್ವರ, ಚನ್ನಬಸವಣ್ಣ ಮತ್ತು ಅಕ್ಕನಾಗಮ್ಮನವರು ಇವರಲ್ಲಿ ವಿದ್ಯಾರ್ಥಿಗಳಾಗಿದ್ದರೆಂದು ನಂಬಲಾಗಿದೆ. ಬಸವೇಶ್ವರರು ತನ್ನ ಬಾಲ್ಯವನ್ನು ಇಲ್ಲಿಯೇ ಕಳೆದರಲ್ಲದೆ ಕಲ್ಯಾಣಕ್ರಾಂತಿಯ ನಂತರ ಈ ಸ್ಥಳದಲ್ಲಿಯೇ ಕೂಡಲ ಸಂಗಮದೇವನಲ್ಲಿ ಐಕ್ಯನಾದನೆಂದು ಹೇಳುತ್ತಾರೆ. ಬಸವೇಶ್ವರರು ರಚನೆ ಮಾಡಿದ ವಚನಗಳು ಇಲ್ಲಿಯ ತನ್ನ ಆರಾಧ್ಯ ದೈವನಾದ ಸಂಗಮನಾಥನಿಗೇ ಅರ್ಪಿತವಾದವು. ದೇವಾಲಯದ ಎದುರಿಗೆ ನದಿಯ ಮಧ್ಯೆ ಶಿವಲಿಂಗವನ್ನೊಳಗೊಂಡ ಒಂದು ಚಿಕ್ಕ ಶಿಲಾಮಂಟಪವಿದೆ. ಇದು ನೀರಿನಲ್ಲಿ ಮುಳುಗಿ ಹೋಗದಂತೆ ಸುತ್ತಲು ಎತ್ತರವಾದ

ಒಣ ಬಾವಿಯೊಂದನ್ನು ಸಿಮೆಂಟ್ ಕಾಂಕ್ರೀಟಿನಿಂದ ನಿರ್ಮಿಸಿರುತ್ತಾರೆ. ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಸಂಗಮೇಶ್ವರ ದೇವಾಲಯವಿರುವ ಸ್ಥಳವು ಮುಳುಗಡೆಯಾಗಲಿದ್ದು ಸರ್ಕಾರವು ಅದರ ರಕ್ಷಣೆಗೆ ಅಗತ್ಯ ಕ್ರಮಗಳನ್ನು ತೆಗೆದುಕೊಂಡಿದೆ. ಕೃಷ್ಣಾ ನದಿಯಾಚೆ ಪೂರ್ವಕ್ಕೆ ಬಸವೇಶ್ವರರ ಧರ್ಮಪತ್ನಿ ನೀಲಮ್ಮನ ಮಂದಿರವಿದೆ. ಇಲ್ಲಿಯೂ ಸಹ ಮಂದಿರದ ಸುತ್ತಲು ಸಿಮೆಂಟ್ ಕಾಂಕ್ರೀಟಿನ ಎತ್ತರವಾದ ಒಣಬಾವಿಯನ್ನು ಕಟ್ಟಿ ನೀರಿನಲ್ಲಿ ಮುಳುಗದಂತೆ ರಕ್ಷಿಸಿದ್ದಾರೆ. ಸಂಗಮದಲ್ಲಿ ಒಂದು ಪ್ರವಾಸಿ ಮಂದಿರವಿದೆ. 1968ರಲ್ಲಿ ರಾಜ್ಯ ಸರ್ಕಾರ ಮತ್ತು ಬಸವ ಸಮಿತಿ ಜೊತೆಗೂಡಿ ಬಸವೇಶ್ವರನ ಎಂಟನೇಯ ಜನ್ಮ ಶತಮಾನೋತ್ಸವವನ್ನು ಸಂಗಮದಲ್ಲಿ ಅದ್ದೂರಿಯಿಂದ ಆಚರಿಸಿದರು.

**ಸಂಡೂರು :** (ಬಳ್ಳಾರಿ ಜಿ; ತಾ. ಕೇ; ಜನ: 17,698) ಸಂಡೂರು ಬಳ್ಳಾರಿಯಿಂದ 48 ಕಿಮೀ ಮತ್ತು ಬೆಂಗಳೂರು ನಗರದಿಂದ ವಾಯುವ್ಯದಲ್ಲಿ ಸುಮಾರು 354 ಕಿಮೀ ದೂರದಲ್ಲಿದೆ. ಇಲ್ಲಿ ಪುರಸಭೆಯಿದೆ. ಇದು ಈ ಹಿಂದೆ ಘೋರ್ಪಡೆ ವಂಶದವರು ಆಳುತ್ತಿದ್ದ ಸಣ್ಣ ರಾಜ್ಯವಾದ ಸಂಡೂರು ಸಂಸ್ಥಾನದ ರಾಜಧಾನಿಯಾಗಿತ್ತು. ಪಾರಂಪರಿಕ ಉಲ್ಲೇಖಗಳ ಪ್ರಕಾರ ಇದರ ಹಿಂದಿನ ಹೆಸರು ಸ್ಕಂದಪುರಿ. ಕನ್ನಡದಲ್ಲಿ ಸಂದು ಅಂದರೆ ಕಣಿವೆ ಅಥವಾ ಸಂದಿ ಎಂಬುದರಿಂದ ಈ ಊರಿಗೆ ಸಂಡೂರು ಎನ್ನುವ ಹೆಸರು ಬಂದಿರಬೇಕು. ಹೈದರ್‌ಅಲಿಯು ಇಲ್ಲಿ ಒಂದು ಕೋಟೆಯನ್ನು ಕಟ್ಟಿದನು. ಇಲ್ಲಿರುವ ವಿಠೋಬ ದೇವಾಲಯದಲ್ಲಿ, ಸುಂದರ ಕೆತ್ತನೆ ಮತ್ತು ಚಾವಣಿಯಿಂದ ಕೂಡಿದ ಗರ್ಭಗುಡಿಯಿದೆ. ರಾಜನ ಅರಮನೆಯು ಬಹಳ ಅಚ್ಚುಕಟ್ಟಾಗಿ ಕಟ್ಟಲಾದ ಆಧುನಿಕ ಕಟ್ಟಡ. ಊರಿಗೆ 12 ಕಿಮೀ ದೂರದಲ್ಲಿರುವ ಕುಮಾರಸ್ವಾಮಿ ದೇವಾಲಯ ಸಮೂಹ ಮತ್ತು ಅದರ ಪಕ್ಕದಲ್ಲಿರುವ ಪಾರ್ವತಿ ದೇವಾಲಯಗಳು ಕೇಂದ್ರ ಸರಕಾರದ ರಕ್ಷಣೆಗೆ ಒಳಪಟ್ಟಿರುವ ಸ್ಮಾರಕಗಳು. ಇವು ಸುಂದರವಾದ ಕಾಡಿನ ಇಳಿಜಾರಿನಲ್ಲಿ ಕಮರಿಯ ಹಿಂಭಾಗದಲ್ಲಿದ್ದು ರಮಣೀಯ ನೋಟವನ್ನು ಪ್ರದರ್ಶಿಸುತ್ತವೆ. ಪಾರ್ವತಿ ದೇವಾಲಯವು ವಾಸ್ತುಶಿಲ್ಪ ದೃಷ್ಟಿಯಿಂದ ಬಹಳ ಪ್ರಾಮುಖ್ಯವಾಗಿದ್ದು, ಚಲುಕ್ಯ ಶೈಲಿಗೆ ಸೇರಿದ ಎಂಟನೇಯ ಶತಮಾನದ ಸ್ಮಾರಕ. ಕುಮಾರಸ್ವಾಮಿ ದೇವಾಲಯವು ಕಲ್ಯಾಣಿ ಚಾಳುಕ್ಯರ ಶೈಲಿಯಲ್ಲಿದ್ದು, ಹನ್ನೊಂದನೇಯ ಶತಮಾನದಲ್ಲಿ ನಿರ್ಮಿತವಾದ ದೇಗುಲ. ಕುಮಾರಸ್ವಾಮಿ ದೇವಾಲಯದಲ್ಲಿ ಅನೇಕ ಮಾಸ್ತಿಕಲ್ಲುಗಳು ಮತ್ತು ಶಾಸನಗಳೂ ಇದ್ದು, ಇವುಗಳಲ್ಲಿ ಒಂದು ಶಾಸನ ಕ್ರಿ. ಶ. 1206ಕ್ಕೆ ಸೇರಿದ್ದು, ಹೊಯ್ಸಳ ಇಮ್ಮಡಿ ಬಲ್ಲಾಳನ ಕಾಲದ್ದಾಗಿದೆ. ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ಷಣ್ಮುಖ ದೇವಾಲಯಕ್ಕೆ ಹಿಂದೆ ಕೊಟ್ಟಿದ್ದ ದತ್ತಿಗಳ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕೂಡ್ಲಿಗಿಯ ಪಕ್ಕದಲ್ಲಿ, ಬೆಟ್ಟದ ಕೆಳಭಾಗದಲ್ಲಿ ನವಿಲುಸ್ವಾಮಿ ಎಂದು ಪ್ರಖ್ಯಾತವಾಗಿರುವ ಕುಮಾರಸ್ವಾಮಿಯ ದೇವಾಲಯವಿದೆ. ರಾಮನ ದುರ್ಗ ಅಥವಾ ರಾಮದುರ್ಗ ಎಂಬ ಬೆಟ್ಟದ ತಾಣವು (ಜನ: 331), ಸಂಡೂರಿನಿಂದ ಸುಮಾರು 16 ಕಿಮೀ ವಾಯುವ್ಯದಲ್ಲಿ ಮತ್ತು ಹೊಸಪೇಟೆಯಿಂದ ಆಗ್ನೇಯದಲ್ಲಿ 20 ಕಿಮೀ ದೂರದಲ್ಲಿಯೂ ಇದೆ. ಇಲ್ಲಿ ಕೋಟೆಯ ಅವಶೇಷಗಳಿವೆ. ಇಲ್ಲಿರುವ ರಾಮದೇವ ದೇವಾಲಯವನ್ನು ಕುಮಾರರಾಮನು ನಿರ್ಮಿಸಿದನೆಂದು ಹೇಳುತ್ತಾರೆ. ಈ ರಾಮದೇವ ದೇವಾಲಯವನ್ನು ಯಾವುದೋ ಒಂದು ಪ್ರಾಚೀನ ದೇವಾಲಯದ ಭಾಗಗಳನ್ನೇ ಉಪಯೋಗಿಸಿ ಕಟ್ಟಲಾಗಿದೆ. ಎರಡನೇಯ ಪ್ರಪಂಚ ಯುದ್ಧದಲ್ಲಿ ಸೇನಾ ತುಕಡಿಗಳು ಇಲ್ಲಿ ತಂಗಿದ್ದವು. ಇಲ್ಲಿ ಸುಂದರವಾದ ಸೌಧಗಳು ಮತ್ತು ಮಾವಿನ ತೋಟಗಳೂ ಇವೆ. ಇಲ್ಲಿ ತ್ರಿಕೋನಮಿತಿಯ ಕೇಂದ್ರವೂ ಇದೆ. ಇಲ್ಲಿಯ ಬೆಟ್ಟದ ಪಶ್ಚಿಮ ತಪ್ಪಲಲ್ಲಿ ಹೇಮಟೈಟ್ ಎಂಬ ಒಳ್ಳೆಯ ಅದುರು ಇದೆ. ಇಲ್ಲಿ ಪ್ರವಾಸಿಗಳಿಗೆ ಬೇಕಾದ ಸೌಲಭ್ಯಗಳಿವೆ. ಹಿಂದಿನ ಸಂಡೂರು ರಾಜರ ನೆನಪಿನಲ್ಲಿ ಕಟ್ಟಲಾದ ಯಶವಂತಪುರ ಎಂಬ ಸುಂದರ ನಗರವು ಸುಮಾರು ಎಂಟು ಕಿಮೀ ದೂರದಲ್ಲಿ ವಾಯುವ್ಯದಲ್ಲಿದೆ. ಸಂಡೂರು ಮ್ಯಾಂಗನೀಸ್ ಮತ್ತು ಕಬ್ಬಿಣ ಅದುರು ಕಾರ್ಖಾನೆಯ ರಿಜಿಸ್ಟರ್ಡ್ ಕಚೇರಿಯು ಇಲ್ಲಿನ ಲೋಹಾದ್ರಿ ಭವನದಲ್ಲಿವೆ. ಹಿಂದೂಗಳು ಮತ್ತು ಮುಸ್ಲಿಮರಿಬ್ಬರೂ ಪೂಜಿಸುವ ಖ್ಯಾತ ಸಿದ್ದೇಶ್ವರ ಮಠವೂ ಇಲ್ಲಿದೆ.

**ಸಕಲೇಶಪುರ :** (ಹಾಸನ ಜಿ ; ತಾ. ಕೇ ; ಜನ : 12,025) ಪುರಸಭೆಯನ್ನು ಹೊಂದಿರುವ ಸಕಲೇಶಪುರವು ಹೇಮಾವತಿಯ ಬಲದಂಡೆಯ ಮೇಲಿದೆ. ಇದು ಹಿಂದಣ ಮಂಜರಾಬಾದ್ ತಾಲೂಕಿನ ಕೇಂದ್ರಪಟ್ಟಣವಾಗಿದ್ದು ಬೆಂಗಳೂರಿನಿಂದ ಪಶ್ಚಿಮದಲ್ಲಿ 222 ಕಿಮೀ ಹಾಗೂ ಹಾಸನದಿಂದ ಪಶ್ಚಿಮಕ್ಕೆ 38 ಕಿಮೀ ದೂರದಲ್ಲಿದೆ. ನದಿಯ ತೀರದಲ್ಲಿ ಸಕಲೇಶ್ವರ (ಸಖಿಲ-ಈಶ್ವರ) ಅಂದರೆ ಭಿನ್ನವಾದ (ಮುಕ್ಕಾದ) ಈಶ್ವರನಿಗಾಗಿ ದೇವಾಲಯವಿರುವುದರಿಂದ ಊರಿಗೆ ಈ ಹೆಸರು ಬಂತೆಂದು ಹೇಳುವರು. (ಲಿಂಗವು ಒಂದು ಚೂರು ಖಂಡವಾದಂತೆ ಕಾಣುತ್ತದೆ). ಇದು ದ್ರಾವಿಡ ರೀತಿಯ ದೇವಾಲಯ. ಈ ಜಾಗವು ಸಮುದ್ರಮಟ್ಟದಿಂದ 896 ಮೀ ಎತ್ತರದಲ್ಲಿದೆ. ಈ ಜಾಗ ಪ್ರಾಮುಖ್ಯತೆಗೆ ಬರಲು ಇಲ್ಲಿ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಕಾಫಿ ಮತ್ತು ಏಲಕ್ಕಿ ಬೆಳೆಯುವುದೇ ಕಾರಣ. ಇದು ಬಿಸಿಲೇಘಾಟಿಗೆ ಹೆಬ್ಬಾಗಿಲಾಗಿದ್ದು, ಇಲ್ಲಿಂದಲೇ ಯಾತ್ರಿಕರು ಕುಕ್ಕೆ ಸುಬ್ರಹ್ಮಣ್ಯಕ್ಕೆ ಹೋಗಬೇಕು. ಸಕಲೇಶಪುರಕ್ಕೆ ಆರು ಕಿಮೀ ಆಗ್ನೇಯಕ್ಕೆ ಬೆಂಗಳೂರು–ಮಂಗಳೂರು ರಸ್ತೆಯಲ್ಲಿ ಮಂಜರಾಬಾದ್ ಕೋಟೆಯಿದೆ. ಇದು ಸಮುದ್ರ ಮಟ್ಟಕ್ಕಿಂತ 988 ಮೀಟರ್ ಎತ್ತರದಲ್ಲಿದೆ. ಇದು ಬಲಮ್ (ಬೇಲೂರು) ನಾಯಕರ ಕೇಂದ್ರವಾಗಿತ್ತು. ಇದು ಕಲ್ಲು ಮತ್ತು ಮಣ್ಣಿನಿಂದ

ನಿರ್ಮಿಸಲ್ಪಟ್ಟು, ಸುತ್ತಲೂ ಕಂದಕವನ್ನು ಹೊಂದಿದೆ. ಈ ಕೋಟೆಯು ಅಷ್ಟಕೋನಾಕೃತಿಯ ನಕ್ಷತ್ರಾಕಾರದಲ್ಲಿದೆ. ಇದರ ಗೋಡೆಯ ಮೇಲೆ ಗುಂಡು ಹೊಡೆಯಲು ರಂಧ್ರಗಳನ್ನು ಮಾಡಲಾಗಿದೆ. ಟಿಪ್ಪು ಸುಲ್ತಾನನು ಕ್ರಿ. ಶ. 1792ರಲ್ಲಿ ಈ ಕೋಟೆಯು ಪೂರ್ಣಗೊಂಡಮೇಲೆ ಇದರ ಮೇಲಿನಿಂದ, ಕೆಳಗಿನ ಸೌಂದರ್ಯವನ್ನು ನೋಡಿ, ಅದು ಮಂಜಿನಿಂದ ಕೂಡಿದ್ದುದರಿಂದ, ಈ ಸ್ಥಳವನ್ನು ಮಂಜರಾಬಾದ್ (ಮಂಜರ್ ಅಂದರೆ ಸುಂದರ ತಾಣ) ಎಂದು ಕರೆದನು.

**ಸನ್ನತಿ :** (ಕಲ್ಬುರ್ಗಿ ಜಿ; ಚಿತಾಪುರ ತಾ; ಜನ: 1,009) ಸೋಂಥಿ ಎಂದೂ ಕರೆಯುವ ಸನ್ನತಿಯು ಮಧ್ಯ ರೈಲ್ವೆಗೆ ಸೇರಿದ, ರಾಯಚೂರು-ವಾಡಿ ವಿಭಾಗದ ನಲ್ವಾರ್ ರೈಲು ನಿಲ್ದಾಣದಿಂದ ಸುಮಾರು 12 ಮೈಲಿ ದೂರದಲ್ಲಿದೆ. ಪವಿತ್ರವಾದ ಭೀಮಾನದಿ ಇದರ ದಕ್ಷಿಣಕ್ಕೆ ಹರಿಯುತ್ತಿದೆ. ಇಲ್ಲಿ ಪ್ರಸಿದ್ಧವಾದ ಚಂದ್ರಲಾಂಬಾ ದೇವಸ್ಥಾನ ಇದೆ. ಸ್ಥಳೀಯರ ನಂಬಿಕೆಯ ಪ್ರಕಾರ ಚಂದ್ರಲಾಂಬಾ ಲಕ್ಷ್ಮೀದೇವಿಯ ಅವತಾರವಾದ ಸೀತಾದೇವಿಯೇ ಹೊರತು ಬೇರೆಯಲ್ಲ. ಈ ದೇವಿಯನ್ನು ಹೊಗಳಿ ಆದಿಶಂಕರಾಚಾರ್ಯರು ಅಷ್ಟೋತ್ತರ ಸ್ತೋತ್ರವೊಂದನ್ನು ರಚಿಸಿದ್ದಾರೆ. ಜಗನ್ನಾಥ ಪಂಡಿತ ಮತ್ತು ಲಿಂಗಸೂಗೂರಿನ ಮುದ್ದುರಂಗ ಗುರುಪ್ರಾಣೇಶ ವಿಠಲ ಈ ದೇವಿಯ ಆರಾಧಕರಾಗಿದ್ದರು. ಕಲ್ಯಾಣಿ ಚಾಳುಕ್ಯರೂ ಸಹ ಈ ದೇವಿಯ ಆರಾಧಕರಾಗಿದ್ದರು. ಶ್ರೀ ಚಂದ್ರಲಾಂಬಾ ಸೇವಾ ಸಂಘ ಈ ದೇವಸ್ಥಾನದ ಆಗುಹೋಗುಗಳ ಹೊಣೆ ಹೊತ್ತಿದೆ. ವರ್ತುಲಾಕೃತಿಯ ಈ ದೇವಸ್ಥಾನದ ಪ್ರಧಾನ ದ್ವಾರದ ಇಕ್ಕೆಲಗಳಲ್ಲಿ ಮಹಾ ಮಂಟಪಗಳಿವೆ. ಈ ದೇವಸ್ಥಾನದ ಒಳ ಆವರಣದಲ್ಲಿ 12 ಲಿಂಗಗಳಲ್ಲದೆ ಮಹಾಕಾಳಿ, ಮಹಾಲಕ್ಷ್ಮಿ ಮತ್ತು ಸರಸ್ವತಿ ವಿಗ್ರಹಗಳಿವೆ. ಈ ಊರಿನಲ್ಲಿ ಒಂದು ಮಾರ್ಕಂಡೇಯ ಗುಡಿಯಿದೆ. ಇಲ್ಲಿನ ವಿಶ್ವಂಭರ ದೀಕ್ಷಿತರ ಸಮಾಧಿಯ ದರ್ಶನಕ್ಕೆಂದು ಸಾವಿರಾರು ಭಕ್ತರು ಬಂದುಹೋಗುತ್ತಾರೆ. ಇತ್ತೀಚೆಗೆ ಇಲ್ಲಿ ಶಾತವಾಹನರ ಕಾಲದ ಒಂದು ಬೌದ್ಧ ಸ್ತೂಪ ಮತ್ತು ಇತರ ಸ್ಮಾರಕ ವಸ್ತುಗಳು ಹಾಗೂ ಪ್ರಾಕೃತ ಮತ್ತು ಕನ್ನಡ ಶಾಸನಗಳು ಪತ್ತೆಯಾಗಿವೆ.

**ಸವದತ್ತಿ :** (ಬೆಳಗಾವಿ ಜಿ; ತಾ. ಕೇ; ಜನ: 26,404) ಸವದತ್ತಿಯು ಬೆಂಗಳೂರಿನಿಂದ ವಾಯುವ್ಯಕ್ಕೆ 493 ಕಿಮೀ ಮತ್ತು ಬೆಳಗಾವಿಯಿಂದ ಸುಮಾರು 78 ಕಿಮೀ ದೂರದಲ್ಲಿದೆ. ಇದು ಮೊದಲಿಗೆ ಇತಿಹಾಸ ಪ್ರಸಿದ್ಧ ಪರಸಗಡ ಕೋಟೆಯಿಂದಾಗಿ ಅದೇ ಹೆಸರಿನ ತಾಲೂಕಿನ ಆಡಳಿತ ಕೇಂದ್ರವಾಗಿತ್ತು. ಎಲ್ಲಮ್ಮನಗುಡ್ಡಕ್ಕೆ ಹೋಗುವ ದಾರಿಯಲ್ಲಿದ್ದ ಪರಸಗಡ ಕೋಟೆ ಈಗ ಹಾಳಾಗಿದೆ. ಈಗಿನ ಹೆಸರಾದ ಸವದತ್ತಿ ಎಂಬುದು ಸುಗಂಧವರ್ತಿ (ಸುಗಂಧನಗರ), ಸುಗಂಧವತಿ ಹೆಸರುಗಳ ಅಪಭ್ರಂಶವಾಗಿರಬಹುದು. ಇಲ್ಲಿನ ನೇಕಾರರು ಬಣ್ಣ ಹಾಕುವಾಗ ಸುಗಂಧವನ್ನು ಬೆರೆಸುತ್ತಿದ್ದರೆಂದು ಪ್ರತೀತಿ ಇದೆ. ಇಲ್ಲಿನ ಪುರಸಭೆ 1876ರಲ್ಲಿಯೇ ಸ್ಥಾಪಿತವಾದುದು. ಸವದತ್ತಿಯು 9ರಿಂದ 13ನೇಯ ಶತಮಾನದವರೆಗೆ ಏಳ್ಗೆಯಲ್ಲಿದ್ದ ರಟ್ಟ ವಂಶದವರ ರಾಜಧಾನಿಯಾಗಿತ್ತು. ಆದರೆ ವೇಣುಗ್ರಾಮ ಅಥವಾ ಬೆಳಗಾವಿಯು ಕ್ರಿ.ಶ. 1210ರಲ್ಲಿ ರಟ್ಟರ ರಾಜಧಾನಿಯಾದ ನಂತರ ತನ್ನ ಆಡಳಿತ ಸಂಬಂಧವಾದ ಪ್ರಖ್ಯಾತಿಯನ್ನು ಕಳೆದುಕೊಂಡಿತು; ಅದರೂ ಕುಂದಿ ಜಿಲ್ಲೆಯ ಸುಗಂಧವರ್ತಿ ಎಂಬ ಹನ್ನೆರಡು ಹಳ್ಳಿಗಳ ಸಣ್ಣ ವಿಭಾಗವೆನಿಸಿ ಮುಂದುವರೆಯಿತು. ಇಲ್ಲಿ ಕ್ರಿ.ಶ. 875ರಿಂದ 1229ರ ನಡುವಿನ ರಟ್ಟದೊರೆಗಳ ಆರು ಶಾಸನಗಳು ದೊರೆತಿವೆ. ಇವು ಇಲ್ಲಿ ರಟ್ಟದೊರೆಗಳಿಂದ ಕ್ರಿ.ಶ. 876 ಮತ್ತು 981ರ ಸುಮಾರಿಗೆ ನಿರ್ಮಿತವಾದ ಜೈನಮಂದಿರಗಳಿಗೆ ಸಂಬಂಧಿಸಿವೆ. ಕ್ರಿ.ಶ. 1230ರ ಸುಮಾರಿಗೆ ವಿಜಾಪುರ ಜಿಲ್ಲೆಯ ಕೊಲ್ಹಾರದ ಸ್ಥಳೀಯ ನಾಯಕನಾದ ಕೇಶಿರಾಜ ಎಂಬವನು ಮಲ್ಲಿಕಾರ್ಜುನದೇವರ ಮಂದಿರವನ್ನು ನಿರ್ಮಿಸಿದನು. ಸುಮಾರು 1730ರಲ್ಲಿ ಸವಣೂರು ನವಾಬನು ಈ ಸ್ಥಳದ ಮೇಲೆ ಪ್ರಭುತ್ವ ಹೊಂದಿದ್ದು ನವಲಗುಂದದ ದೇಸಾಯಿ ಜಯಗೊಂಡ (1734-1758) ಎಂಬವನಿಗೆ ಸವದತ್ತಿ ಮತ್ತು ಧಾರವಾಡ ಜಿಲ್ಲೆಯ ಇತರ ಹತ್ತು ಹಳ್ಳಿಗಳನ್ನು ದತ್ತಿ ಕೊಟ್ಟಿದ್ದನು. ಜಯಗೊಂಡನು ಪಟ್ಟಣದ ಪಶ್ಚಿಮಕ್ಕಿರುವ ಸಣ್ಣಗುಡ್ಡದ ಮೇಲೆ 1734ರಲ್ಲಿ ಕೋಟೆಯೊಂದನ್ನು ನಿರ್ಮಿಸಿದನು. ಈ ಪರಸಗಡ ಜಿಲ್ಲೆಯನ್ನು 1746ರಲ್ಲಿ ಸವಣೂರ ನವಾಬನಿಂದ ಮರಾಠರು ಕಿತ್ತುಕೊಂಡರು. ಆದರೆ ಆ ಪ್ರದೇಶ ಹೈದರನ ವಶವಾದಾಗ ಮತ್ತೆ ನವಾಬನಿಗೇ ಹಿಂದಿರುಗಿಸಲಾಯಿತು. ಪೇಶ್ವೆ ರಘುನಾಥರಾಯನ ದತ್ತುಪುತ್ರ ಅಮೃತರಾಯನು 1802ರಲ್ಲಿ ಪರಸಗಡ ಜಿಲ್ಲೆ ಮತ್ತು ಅಣ್ಣಿಗೇರಿಯನ್ನು ಬ್ರಿಟಿಷರಿಗೆ ವರ್ಗಾಯಿಸಿದನು. 1881ರಲ್ಲಿ ಸವದತ್ತಿಯು ಬ್ರಿಟಿಷರ ಅಧೀನದಲ್ಲಿ ಪರಸಗಡ ವಿಭಾಗದ ಕೇಂದ್ರ ಕಾರ್ಯಸ್ಥಾನವಾಗಿತ್ತು. ಸವದತ್ತಿಯು ಹತ್ತಿ, ಶೇಂಗಾ ಮುಂತಾದ ಉತ್ಪನ್ನಗಳ ಒಂದು ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿದೆ. ಇಲ್ಲಿನ ಪ್ರಾಚೀನ ಸ್ಮಾರಕಗಳ ಪೈಕಿ ಅಂಕುಲೇಶ್ವರ, ಪುರದೇಶ್ವರ ಮತ್ತು ಶಂಕರಲಿಂಗ ದೇವಸ್ಥಾನಗಳು ಮತ್ತು ಒಂದು ಜೈನಬಸದಿ ಮುಖ್ಯವಾದವು. ಇವಲ್ಲದೆ ಕೋಟೆಯ ಅವಶೇಷಗಳ ನಡುವೆ ಮಾರುತಿ ಮತ್ತು ಕಾಡಸಿದ್ದೇಶ್ವರ ದೇವಸ್ಥಾನಗಳೂ ಇವೆ. ಲಕ್ಷ್ಮೀವೆಂಕಟೇಶ್ವರ ಮತ್ತು ವೀರಭದ್ರ ದೇವಸ್ಥಾನಗಳು ಆಧುನಿಕ ಕಾಲದಲ್ಲಿ ಕಟ್ಟಲಾದವುಗಳು. ಮಲಪ್ರಭಾ ಯೋಜನೆಯಲ್ಲಿ ಮುಳುಗಡೆಯಾದ ಗುರ್ಲಹೊಸೂರಿನ ಪರಮಪೂಜ್ಯವೆನಿಸಿದ್ದ ಮೂಲ ಚಿದಂಬರೇಶ್ವರ ದೇವಾಲಯವನ್ನು ಸಹಾ ಸೌಂದತ್ತಿಯಲ್ಲಿ ಹೊಸತಾಗಿ ನಿರ್ಮಿಸಲಾಗಿದೆ. **ಯಲ್ಲಮ್ಮನಗುಡ್ಡ :** ಮುಂಬೈ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಕೆಲವು ಭಾಗಗಳ ಜನರು ಅನನ್ಯ ಭಕ್ತಿಯಿಂದ ಆರಾಧಿಸುವ ಸರ್ವಮಾನ್ಯವಾದ ಎಲ್ಲಮ್ಮ

ದೇವಿಯಗುಡ್ಡ ಒಂದು ಪ್ರಖ್ಯಾತ ಯಾತ್ರಾಸ್ಥಳವಾಗಿದ್ದು ಸವದತ್ತಿಯಿಂದ ಸುಮಾರು ಐದು ಕಿಮೀ ದೂರದಲ್ಲಿದೆ. ಈ ಎಲ್ಲಮ್ಮನೇ ಪುರಾಣಪ್ರಸಿದ್ಧವಾದ ಜಮದಗ್ನಿಯ ಋಷಿಯ ಪತ್ನಿ ಹಾಗೂ ಪರಶುರಾಮನ ತಾಯಿ ರೇಣುಕೆ ಎಂದು ಪ್ರತೀತಿ. ಏಕನಾಥ ಮತ್ತು ಜೋಗಿನಾಥ ಮುಂತಾದ ಯೋಗಿಗಳು ಈ ಗುಡ್ಡಗಳಲ್ಲಿ ನೆಲೆಸಿದ್ದರೆಂದು ಸಹ ಪ್ರತೀತಿ. ಪ್ರಖ್ಯಾತ ಎಲ್ಲಮ್ಮನ ಗುಡಿಯನ್ನು ಸಿದ್ಧನಕೊಳ್ಳ, ಸಂಗನಕೊಳ್ಳ, ಇತ್ಯಾದಿ ಏಳು ಕೊಳ್ಳಗಳಿಂದ ಆವೃತವಾದ ಸರಸ್ವತಿ ಗುಡ್ಡದ ಕೆಳಭಾಗದಲ್ಲಿ ನಿರ್ಮಿಸಿದ್ದಾರೆ. ದೇವಾಲಯದ ಮುಖ್ಯಭಾಗವು ಸುಮಾರು 8-9ನೇ ಶತಮಾನದ ವಾಸ್ತುಶಿಲ್ಪದ ಲಕ್ಷಣವನ್ನು ಹೊಂದಿದ್ದು ಉಳಿದ ಭಾಗಗಳು ನಂತರದ ರಚನೆಗಳು. ಇಲ್ಲಿರುವ ಬಾಗಿ (ರಾಯಬಾಗ) ಯ ಬೊಮ್ಮಪ್ಪನಾಯಕ ಎಂಬುವನ 1514ರ ಶಾಸನವೊಂದು ನಗಾರಿಖಾನೆಯ ನಿರ್ಮಾಣ ಪೂರ್ತಿಯಾದದ್ದನ್ನು ತಿಳಿಸುತ್ತದೆ. ಶಾಸನದಲ್ಲಿ ದೇವಿಯನ್ನು 'ಜಟ್ಟಿಕ ಮಹಾ ಮಾಯೇ' ಎಂದು ಬಣ್ಣಿಸಲಾಗಿದೆ. ಮುಖ್ಯ ಮಂದಿರದ ಮತ್ತು ಮೂಲ ದೇವಿಯ ವಿಗ್ರಹದ ವಾಸ್ತುಶಿಲ್ಪ ಮತ್ತು ಕೆತ್ತನೆ ಕೆಲಸದ ವೈಲಕ್ಷಣ್ಯಗಳು ಪ್ರಾಚೀನ ಜೈನ ಮೂಲವನ್ನು ಸೂಚಿಸುತ್ತವೆ. ಇಲ್ಲಿ ಜಮದಗ್ನಿ, ಪರಶುರಾಮ, ಮಾತಂಗಿ ಮುಂತಾದ ದೇವರುಗಳ ಚಿಕ್ಕ ಗುಡಿಗಳು ಸಹ ಇವೆ. ದೇವಿಯ ಗೌರವಾರ್ಥವಾಗಿ ಇಲ್ಲಿ ವರ್ಷದಲ್ಲೆರಡು ಜಾತ್ರೆಗಳು ಜರುಗುತ್ತವೆ; ಒಂದು ಚೈತ್ರ ಪೌರ್ಣಿಮೆಯಂದು (ಏಪ್ರಿಲ್) ಮತ್ತೊಂದು ಮಾರ್ಗಶಿರ ಪೌರ್ಣಿಮೆಯಂದು (ನವೆಂಬರ್-ಡಿಸೆಂಬರ್). ಜಾತ್ರಾ ದಿವಸಗಳಲ್ಲಿ ಸುಮಾರು ಎರಡು ಲಕ್ಷಕ್ಕೂ ಹೆಚ್ಚು ಜನರು ಸೇರುವರು. ಸಾರಿಗೆ ಸಂಪರ್ಕ ಇತ್ಯಾದಿ ಸೌಲಭ್ಯಗಳನ್ನು ಉತ್ತಮಪಡಿಸಲು ಇಲ್ಲಿ 1878ಕ್ಕೂ ಹಿಂದೆಯೇ ತಾತ್ಕಾಲಿಕವಾಗಿ ಒಂದು ಪೌರಸಭೆ ಅಸ್ತಿತ್ವಕ್ಕೆ ಬಂದಿತ್ತು. ಈಗ ಯಲ್ಲಮ್ಮನ ಗುಡ್ಡವು ಸವದತ್ತಿ ಪುರಸಭೆಯ ವ್ಯಾಪ್ತಿಗೊಳಪಟ್ಟಿದೆ. ಅಲ್ಲದೆ ಸವದತ್ತಿ ಪುರಸಭೆಯನ್ನು ಎಲ್ಲಮ್ಮನ ಹೆಸರಿನಿಂದಲೇ ಕರೆಯುತ್ತಿದ್ದಾರೆ. ಲಕ್ಷಾಂತರ ರೂಪಾಯಿಗಳ ವಾರ್ಷಿಕ ವರಮಾನವಿರುವ ಈ ದೇವಾಲಯದ ಆಡಳಿತವನ್ನು ರೇಣುಕ ಎಲ್ಲಮ್ಮ ಆಡಳಿತ ಅಧಿನಿಯಮ, 1974ರ ಪ್ರಕಾರ ನಡೆಸಲಾಗುತ್ತಿದೆ. ಮುನವಳ್ಳಿ ಅಥವಾ ಮುನೋಳಿ ಒಂದು ದೊಡ್ಡ ಹಳ್ಳಿಯಾಗಿದ್ದು (ಜನ: 8,698) ಇದು ಸವದತ್ತಿಯಿಂದ ಉತ್ತರಕ್ಕೆ ಸುಮಾರು 11 ಕಿಮೀ ದೂರದಲ್ಲಿ ಸವದತ್ತಿ ಗೋಕಾಕ್ ಮಾರ್ಗದಲ್ಲಿ ಮಲಪ್ರಭೆಯ ಎಡದಂಡೆಯ ಮೇಲಿದೆ. ಶಾಸನಗಳಲ್ಲಿ ಈ ಸ್ಥಳವನ್ನು ಮುನಿಪುರ ಅಥವಾ ಮುನಿವಳ್ಳಿ (ಋಷಿಸ್ಥಾನ) ಎಂದು ವರ್ಣಿಸಿದ್ದಾರೆ. ದೇವಗಿರಿಯ ಯಾದವ (ಸೇಉಣ)ರ ಕಾಲದ ಶಾಸನಗಳು ಇಲ್ಲಿ ಕಂಡುಬಂದಿವೆ. ಇಲ್ಲಿ ಅನೇಕ ಪ್ರಾಚೀನ ಸ್ಮಾರಕಗಳಿದ್ದು ಎಂಟು ಮಂದಿರಗಳುಳ್ಳ ಪಂಚಲಿಂಗೇಶ್ವರ ದೇವಾಲಯ ಸಂಕೀರ್ಣವೇ ಪ್ರಮುಖವಾದುದಾಗಿದೆ. ಇದೊಂದು ವಿಶಾಲವಾದ ದೇವಿಯ ಸಂಕೀರ್ಣ. ಇಲ್ಲಿ ಯಾದವರ ದೊರೆ ಸಿಂಘಣನ ಕ್ರಿ.ಶ. 1222ರ ಶಾಸನವೊಂದಿದೆ. ಪಂಚಲಿಂಗೇಶ್ವರ ದೇವಾಲಯವು 11 ಅಥವಾ 12ನೇಯ ಶತಮಾನದ್ದೆಂದು ತೋರುತ್ತದೆ. ಇಲ್ಲಿರುವ ಸಿಂಧೆ (ತೊರಗಲ್) ಮನೆತನದವರಿಂದ ಕಟ್ಟಲಾದ ಈಗ ಶಿಥಿಲವಾಗಿರುವ ಕೋಟೆಯಲ್ಲಿ ಎರಡು ಪುರಾತನ ದೇವಾಲಯಗಳಿದ್ದು, ಅವು ಯಾದವ ದೊರೆ ಕನ್ನರ ಅಥವಾ ಕೃಷ್ಣನ 1252ರ ಶಾಸನವಿರುವ ಉಡಚವ್ವ ಮತ್ತು ಮಾರುತಿಯವಾಗಿವೆ. ಈ ಶಾಸನವು ಕರ್ನಾಟಕದಲ್ಲಿ 13ನೇಯ ಶತಮಾನದ ಲಾಕುಳ ಶೈವಪಂಥ ಹರಡಿತ್ತೆನ್ನಲು ಒಂದು ದಾಖಲೆಯಾಗಿದೆ. ಮುನವಳ್ಳಿಯಲ್ಲಿ ಒಂದು ಪ್ರಾಚೀನ ವಿಠಲ ಮಂದಿರವೂ ಮುಳುಗಡೆಯಾದ ಗುರ್ಲ ಹೊಸೂರಿನಿಂದ ಸ್ಥಳಾಂತರಗೊಂಡ ಕೈವಲ್ಯಾಶ್ರಮವೂ ಇವೆ. ಬ್ರಿಟಿಷ್ ಆಳ್ವಿಕೆಗೊಳಪಡುವ ಮುನ್ನ ಮುನವಳ್ಳಿಯು ತೊರಗಲ್ ಸಂಸ್ಥಾನಿಕನ ಅಧೀನದಲ್ಲಿತ್ತು. ವ್ಯಾಪಾರ ಕೇಂದ್ರವೇ ಅಲ್ಲದೆ ಈ ಸ್ಥಳ ನೇಯ್ಗೆ ಮತ್ತು ಬಣ್ಣ ಹಾಕುವ ಉದ್ಯಮಗಳಿಗೂ ಹೆಸರಾಗಿದೆ. ಇಲ್ಲಿ 1959ರಲ್ಲಿ ಅಸ್ತಿತ್ವಕ್ಕೆ ಬಂದ ಒಂದು ನಗರ ಪಂಚಾಯಿತಿ ಇದೆ. ಸೊಗಲ ಎಂಬ ಊರು ಸವದತ್ತಿಯಿಂದ ವಾಯುವ್ಯಕ್ಕೆ ಸುಮಾರು 19 ಕಿಮೀ ದೂರದಲ್ಲಿರುವ ಒಂದು ಸಣ್ಣ ಹಳ್ಳಿ. ಕ್ರಿ.ಶ. 980ರ ಚಾಳುಕ್ಯ ಇಮ್ಮಡಿ ತೈಲನ ಕಾಲದ ಶಾಸನವೊಂದು ತಿಳಿಸುವಂತೆ ತ್ರೇತಾಯುಗದ ಅಂತ್ಯದಲ್ಲಿ ರಾವಣನ ಅನುಚರರಾದ ಮಾಲಿ ಮತ್ತು ಸುಮಾಲಿ ಎಂಬ ಇಬ್ಬರು ರಾಕ್ಷಸರು ಇಲ್ಲಿ ಸೋಮೇಶ್ವರನನ್ನು (ಶಾಸನದಂತೆ 'ಸುವರ್ಣ ಮಹಾಕ್ಷಿದೇವ') ಪ್ರತಿಷ್ಠಾಪಿಸಿದರು. ಈ ಸ್ಥಳನಾಮ 'ಸುಮಾಲಿ' ಎಂದಿತ್ತು. ಮತ್ತೊಂದು ಮೂಲದಂತೆ ಸೊಗಲ ಎಂಬ ಹೆಸರು, ಈ ಸ್ಥಳದಲ್ಲಿ ತಪವನ್ನಾಚರಿಸಿ ಪುಣ್ಯಭೂಮಿಯಾಗಿಸಿದ, ಸುಗೋಲ ಎಂಬ ಮಹರ್ಷಿಯಿಂದ ಬಂದುದೆಂದು ತಿಳಿಸುತ್ತದೆ. ಇಲ್ಲಿರುವ ಒಂದು ದೊಡ್ಡ (ಸುಮಾರು 60 ಅಡಿಗಳಷ್ಟು ಎತ್ತರ) ಹಾಗೂ ಒಂದು ಚಿಕ್ಕ ನಯನಮನೋಹರ ಜಲಪಾತಗಳಿಂದಾಗಿ ಈ ಸ್ಥಳದ ಖ್ಯಾತಿ ಹೆಚ್ಚಿದೆ. ಇಲ್ಲಿನ ಕಣಿವೆಯ ಶೃಂಗದಲ್ಲಿರುವ ಅನೇಕ ಪ್ರಾಚೀನ ದೇಗುಲಗಳಲ್ಲಿ ಸೋಮೇಶ್ವರನದೇ ಪ್ರಮುಖವಾದುದು. ನವಿಲುತೀರ್ಥ ಎಂಬುದು ಸವದತ್ತಿಯಿಂದ ಸುಮಾರು ಎಂಟು ಕಿಮೀ ದೂರದಲ್ಲಿ ಸವದತ್ತಿ-ಗೋಕಾಕ್ ಮಾರ್ಗದಲ್ಲಿರುವ ಒಂದು ಪ್ರವಾಸಿ ಸ್ಥಳ ಹಾಗೂ ಹಿಂದೆ ಪವಿತ್ರಸ್ನಾನ ಮಾಡುತ್ತಿದ್ದ ಸ್ಥಳ. ಬೆಟ್ಟಗಳಿಂದ ಸುತ್ತುವರೆದಿರುವ ಇದು ಅತಿ ಕಿರಿದಾದ ಕೊಳ್ಳವೊಂದರ ಬಳಿ ಇದೆ. ಮಲಪ್ರಭಾ ನದಿಗೆ ಅಡ್ಡಲಾಗಿ ಅಣೆಕಟ್ಟೆ ನಿರ್ಮಾಣವಾಗುವ ಮುನ್ನ, ಆ ನದಿ ಮುನವಳ್ಳಿ ಕಡೆಗೆ ಇಲ್ಲಿಂದಲೇ ಹರಿಯುತ್ತಿತ್ತು. ಈ ಅಣೆಕಟ್ಟೆಯ ನಿವೇಶನವನ್ನು ನವಿಲು ತೀರ್ಥ ಎಂಬ ಹೆಸರಿನಿಂದಲೇ ಕರೆಯುವರು. (ಭಾಗ I ಅಧ್ಯಾಯ 4, ನೋಡಿ). ಇದರ ಬಲಬದಿಯಲ್ಲೇ ರಾಮಲಿಂಗೇಶ್ವರ ದೇವಾಲಯವಿದೆ. ಇದಕ್ಕೆ ಹತ್ತಿರದಲ್ಲಿಯೇ ನವಿಲು ತೀರ್ಥ ಕಾಲೋನಿ ಆಗಿದ್ದು, ಇಲ್ಲಿ ಇತ್ತೀಚೆಗೆ ಕಟ್ಟಲಾದ ಗಣಪತಿಯ ಸುಂದರವಾದ ದೇವಾಲಯವಿದೆ. ನವಿಲುತೀರ್ಥ

ಎಲಾ ರೀತಿಯ ಪ್ರವಾಸೀ ಅನುಕೂಲತೆಗಳನ್ನೂ ಹೊಂದಿದೆ.

ಸಿರಸಂಗಿ : (ಜನ: 1,916) ಸಿರಸಂಗಿಯು ಪುರಾತತ್ವ ಮತ್ತು ಚಾರಿತ್ರಿಕ ದೃಷ್ಟಿಯಿಂದ ಮುಖ್ಯವೆನಿಸಿರುವ, ಸವದತ್ತಿಯಿಂದ ಈಶಾನ್ಯಕ್ಕೆ ಸುಮಾರು 19 ಕಿಮೀ ದೂರದಲ್ಲಿ, ಸವದತ್ತಿ-ರಾಮದುರ್ಗ ಮಾರ್ಗದಲ್ಲಿನ ಊರಾಗಿದೆ. ಶಾಸನಗಳಲ್ಲಿ ಇದನ್ನು 'ಋಷಿಶೃಂಗಪುರ', 'ಪಿರಿ ಸಿಂಗಿ', 'ಹಿರಿಸಿಂಗಿ' ಮುಂತಾಗಿ ಹೆಸರಿಸಿವೆ. ಇಲ್ಲಿ ಕಲ್ಯಾಣಿ ಚಾಳುಕ್ಯರ ಕಾಲದ ನಾಲ್ಕು ಶಾಸನಗಳಿದ್ದು, ಮೊದಲನೇಯದು (ಕ್ರಿ. ಶ. 1148) ಚಾಳುಕ್ಯ ಇಮ್ಮಡಿ ಜಗದೇಕಮಲ್ಲ ಮತ್ತು ಕೊನೆಯದು (ಕ್ರಿ. ಶ. 1186) ತ್ರಿಭುವನ ಮಲ್ಲ ವೀರ ನಾಲ್ವಡಿ ಸೋಮೇಶ್ವರ ಇವರುಗಳು ಹೊರಡಿಸಿದವು. ಕಾಳಮ್ಮ ದೇವಾಲಯದಲ್ಲಿರುವ ಒಂದು ಶಾಸನದ ಪ್ರಕಾರ ರಾಮ ಲಕ್ಷ್ಮಣರು ಋಷ್ಯಶೃಂಗಾಶ್ರಮದಲ್ಲಿ ಉಳಿದುಕೊಂಡಿದ್ದಾಗ ಸ್ಥಾಪಿಸಿದ ರಾಮೇಶ್ವರ, ಲಕ್ಷ್ಮಣೇಶ್ವರ ಮತ್ತು ಹನುಮಂತೇಶ್ವರ ದೇಗುಲಗಳಿಂದಾಗಿ ಈ ಸ್ಥಳ ಪುಣ್ಯ ಕ್ಷೇತ್ರವೆನಿಸಿದೆ. ಇದೇ ಶಾಸನ ಸ್ಥಳೀಯ ದೊರೆ ಹೆಬ್ಬೆನಾಯಕ ನೆಂಬಾತನ ವಂಶಾವಳಿಯನ್ನು ಸಹ ತಿಳಿಸುತ್ತದೆ. ಇವನು ಕಾಳಮ್ಮ ಮತ್ತು ಹೆಬ್ಬೇಶ್ವರ ದೇವಾಲಯಗಳನ್ನೂ ಮತ್ತು ಇವನ ರಾಣಿ ಮಲ್ಲಮ್ಮ ಉಮಾ ಮಹೇಶ್ವರ ದೇವಾಲಯವನ್ನೂ ನಿರ್ಮಿಸಿದರು. ಅಂದು ಈ ಸ್ಥಳ ಬೆಳವಲದ ಕೊಳನೂರು-30 (ನರಗುಂದದ ಬಳಿಯಿರುವ ಕೊಣ್ಣೂರು) ಎಂಬ ಪ್ರದೇಶದಲ್ಲಿ ಸೇರಿತ್ತು. ಶಾಸನಗಳ ಪ್ರಕಾರ ಸಿರಸಂಗಿ ಒಂದು ದೊಡ್ಡ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರವಾಗಿದ್ದು ಅನೇಕ ವ್ಯಾಪಾರಿ ವೃತ್ತಿ ಸಂಘಗಳು ಇಲ್ಲಿದ್ದವು. ಕರ್ನಾಟಕ, ತಮಿಳುನಾಡು ಹಾಗೂ ತೆಲುಗು ದೇಶಗಳ ವ್ಯಾಪಾರಿಗಳು ಇಲ್ಲಿಗೆ ಬರುತ್ತಿದ್ದುದಾಗಿ ತಿಳಿದುಬರುತ್ತದೆ. ಇಲ್ಲಿಂದ ಎರಡು ಕಿಮೀ ದೂರದಲ್ಲಿರುವ ವಿಶ್ವಕರ್ಮ ಅಥವಾ ಪಾಂಚಾಲರ ಕುಲ ದೇವತೆಯಾದ ಕಾಳಿಕಾದೇವಿ ಅಥವಾ ಕಾಳಮ್ಮನ ದೇವಾಲಯ ಒಂದು ಮುಖ್ಯ ಆಕರ್ಷಣೆ. ಈ ಕಾಳಮ್ಮನ ದೇವಾಲಯ ಸಂಕೀರ್ಣದಲ್ಲಿಯೇ ಪ್ರಸಿದ್ಧ ಹೆಬ್ಬೇಶ್ವರ, ಕಾಳಭೈರವ, ಉಮಾ ಮಹೇಶ್ವರ, ಸೂರ್ಯನಾರಾಯಣ, ಮುಂತಾದ ಚಿಕ್ಕ ಗುಡಿಗಳಿವೆ. ಈ ಸ್ಥಳವು ನವಲಗುಂದ-ಸಿರಸಂಗಿ ಸರದೇಶಮುಖಿಯ ಆಡಳಿತ ಕೇಂದ್ರವಾಗಿತ್ತು. ಇದನ್ನು ವಿಜಾಪುರ ಜಿಲ್ಲೆಯ ಅವರಾದಿಯಿಂದ ಬಂದ ವಿಟ್ಟಗೌಡ ಎಂಬುವನು ಕ್ರಿ. ಶ. 1565 ರಲ್ಲಿ ಸ್ಥಾಪಿಸಿದ್ದನು. ಆದಿಲ್‌ಷಾಹಿ ಅರಸರ, ಸವಣೂರ ನವಾಬರ ಮತ್ತು ಪೇಶ್ವೆಗಳ ಮಾಂಡಳಿಕರಾಗಿದ್ದ ದೇಸಾಯಿ ಮನೆತನದವರು ನವಲಗುಂದವನ್ನೂ ಒಳಗೊಂಡಂತೆ ಹತ್ತು ಹಳ್ಳಿಗಳ ದೇಶಗತಿ ಹಕ್ಕನ್ನು ಅನುಭವಿಸುತ್ತಿದ್ದರು. ಕೊನೆಯವರಾದ ಲಿಂಗರಾಜ ದೇಸಾಯಿ (1861-1906) ಉದಾರ ದಾನಿಯಾಗಿದ್ದರಲ್ಲದೇ ತಮ್ಮ ಸಣ್ಣ ಸಂಸ್ಥಾನದ ಆರ್ಥಿಕಾಭಿವೃದ್ಧಿಗಾಗಿ ಬಹಳ ಶ್ರಮ ವಹಿಸುತ್ತಿದ್ದರು. ಮಕ್ಕಳಿಲ್ಲದ ಇವರು ಮೃತಿ ಹೊಂದುವ ಮುನ್ನ ತಮ್ಮ ಸಂಪೂರ್ಣ ಆಸ್ತಿಪಾಸ್ತಿಗಳನ್ನು ವಿದ್ಯಾಭಿವೃದ್ಧಿಗಾಗಿ, ಈಗ ಬೆಳಗಾವಿಯಲ್ಲಿರುವ ಟ್ರಸ್ಟ್ ಒಂದಕ್ಕೆ ದಾನ ನೀಡಿದರು. ಬೆಳಗಾವಿಯ ಲಿಂಗರಾಜ ಕಾಲೇಜು ಈ ಸಂಸ್ಥಾನಿಕರ ಸ್ಮರಣೆ ಮತ್ತು ಗೌರವದ ಪ್ರತೀಕವಾಗಿದೆ.

ಹೂಲಿ (ಜನ: 3,693) ಸವದತ್ತಿಯಿಂದ ಪೂರ್ವಕ್ಕೆ ಸುಮಾರು ಒಂಬತ್ತು ಕಿಮೀ ದೂರದಲ್ಲಿರುವ ಒಂದು ಪುರಾತನ ಸ್ಥಳ. ಶಿಲಾ ಶಾಸನಗಳಲ್ಲಿ ಈ ಸ್ಥಳವನ್ನು 'ಪುಲಿಗ್ರಾಮ', 'ಪುಲಿಪುರ', 'ಪೂವಳ್ಳಿ' ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇದು ಪ್ರಾಚೀನ ಕಾಲದಲ್ಲಿ ಬೆಳವೊಲ ದೇಶದ ಸಾವಿರ ಮಹಾಜನರುಗಳಿಂದ ನಿರ್ವಹಿಸಲ್ಪಡುತ್ತಿದ್ದ 18 ಅಗ್ರಹಾರಗಳ ಮಕುಟ ರತ್ನದಂತಿತ್ತೆಂದು ವರ್ಣಿತವಾಗಿದೆ. ಮಂಗಳೇಶನ ಹೂಲಿ ತಾಮ್ರಪಟಗಳು ಇತ್ತೀಚೆಗೆ ಬೆಳಕಿಗೆ ಬಂದಿವೆ. ಇಲ್ಲಿಯ ಮದನೇಶ್ವರ ಅಥವಾ ಅಂಧಕೇಶ್ವರ ದೇವಸ್ಥಾನದಲ್ಲಿಯ ಶಾಸನಗಳು ಕಾಳಾಮುಖ ಶೈವ ಪಂಥದ ಆರಾಧನಾ ಚಟುವಟಿಕೆಗಳನ್ನು ಬಿಂಬಿಸುತ್ತವೆ. ಕ್ರಿ. ಶ. 1042ರಿಂದ 1162ರ ಅವಧಿಯ ಕಲ್ಯಾಣಿ ಚಾಳುಕ್ಯರ ಅನೇಕ ಶಾಸನಗಳು ಇಲ್ಲಿನ ದೇವಾಲಯಗಳಲ್ಲಿ ಕಾಣಸಿಗುತ್ತವೆ. ಈ ಸ್ಥಳದಲ್ಲಿ ಸುಮಾರು 30 ವೈದಿಕ ಹಾಗೂ ಜೈನ ಧರ್ಮದ ದೇವಾಲಯಗಳಿವೆಯೆಂದು ಹೇಳಲಾಗಿದೆ. ಆದರೆ, ಈಗ ಅವುಗಳಲ್ಲಿ ಹೆಚ್ಚಿನವು ಹಾಳಾಗಿವೆ. ಈಗ ಇರುವ ಪ್ರಾಚೀನ ದೇಗುಲಗಳಲ್ಲಿ ಮುಖ್ಯವಾದವೆಂದರೆ, ಮೂಲದಲ್ಲಿ ಜೈನ ಬಸದಿಯಾಗಿದ್ದಿರಬಹುದಾದ ಪಂಚಲಿಂಗೇಶ್ವರ, ವಾಸ್ತು ಶಿಲ್ಪ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಿರುವ ಕೆರೆ ಸಿದ್ದಪ್ಪ ಮತ್ತು ಅಗಸ್ತ್ಯೇಶ್ವರ, ಮದನೇಶ್ವರ ಮತ್ತು ಭೀಮೇಶ್ವರ ಇವೇ ಅಲ್ಲದೆ, ಇತ್ತೀಚಿನ ಕಾಲದಲ್ಲಿ ಕಟ್ಟಿರುವ ಕಲ್ಮೇಶ್ವರ, ರಾಮೇಶ್ವರ, ಬನಶಂಕರಿ, ವಿಠೋಬಾ ಮತ್ತು ಪರ್ವತಲಿಂಗೇಶ್ವರ ದೇವಸ್ಥಾನಗಳು. ಇಲ್ಲಿನ ಮೂರು ಕಲ್ಯಾಣಿಗಳು ಗಮನಿಸಬೇಕಾದವು. ವಿರಕ್ತಮಠ ಮತ್ತು ಪಂಚವಣ್ಣಿಗೆ ಮಠ ಐತಿಹಾಸಿಕವಾಗಿ ಮುಖ್ಯವಾದವುಗಳು. ಶಿಥಿಲವಾಗಿರುವ ಇಲ್ಲಿನ ಕೋಟೆಯನ್ನು 1674ರಲ್ಲಿ ಶಿವಾಜಿಯು ಕಟ್ಟಿಸಿದನೆಂದು ಹೇಳುತ್ತಾರೆ. 1565ರಲ್ಲಿ, ವಿಜಯನಗರ ಪತನವಾದ ನಂತರ ಹೂಲಿ ನವಲಗುಂದದ ದೇಸಾಯಿ ವಿಟ್ಟಗೌಡನ ವಶಕ್ಕೆ ಬಂದು ತರುವಾಯದ ದಿನಗಳಲ್ಲಿ ಮರಾಠರ ವಶವಾದಂತೆ ತೋರುತ್ತದೆ.

ಮುರಗೋಡವು ಸವದತ್ತಿಯಿಂದ ವಾಯುವ್ಯಕ್ಕೆ ಸುಮಾರು 24 ಕಿಮೀ ದೂರದಲ್ಲಿದ್ದು ತಾಲೂಕಿನ ಮತ್ತೊಂದು ಆಸಕ್ತಿ ಕೆರಳಿಸುವ ಸ್ಥಳವಾಗಿದೆ. ಬಹಳ ಹಿಂದೆ ಈ ಸ್ಥಳ 'ತ್ರಿಶೃಂಗಪುರ' ಅಥವಾ 'ತ್ರಿಪರ್ವತ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದು, ಪ್ರಾಚೀನ ಕದಂಬರ ಎರಡನೇಯ ರಾಜಧಾನಿಯಾಗಿತ್ತು. ಕಳೆದ ಶತಮಾನದಲ್ಲಿ ಸಹ ಇದು ಎಂತಹ ಪ್ರಾಮುಖ್ಯತೆ ಹೊಂದಿತ್ತೆಂದರೆ, 1836ರಲ್ಲಿ ಜಿಲ್ಲಾ ಸ್ಥಳವಾಗಿ ಬೆಳಗಾವಿಯು ಆಯ್ಕೆಯಾಗುವ ಮೊದಲು, ಕೇಂದ್ರಕಾರ್ಯ ಸ್ಥಾನವಾಗಿ ಸೂಚಿಸಲಾದ ನಾಲ್ಕು ಸ್ಥಳಗಳಲ್ಲಿ ಇದೂ ಒಂದಾಗಿತ್ತು. ಹಿಂದಿನಿಂದಲೂ ಇದು ತನ್ನದೇ ಹೆಸರಿನ ಬೀಗ

ಮತ್ತು ಬಳೆಗಳ ತಯಾರಿಕೆಗೆ ಪ್ರಸಿದ್ಧವಾಗಿತ್ತು. ಇಂದಿಗೂ ಇಲ್ಲಿಯ ಹಸಿರು ಗಾಜಿನ ಬಳೆಗಳು ಪ್ರಸಿದ್ಧವಾಗಿವೆ. ವಿಜಯನಗರದ ಪತನಾನಂತರ ಇದು ನವಲಗುಂದ ದೇಸಾಯಿ ವಿಟ್ಟಗೌಡನ ಆಳ್ವಿಕೆಗೆ ಒಳಪಟ್ಟಿತ್ತು. ನಂತರ 1680ರ ಸುಮಾರಿಗೆ ಶಿವಾಜಿಯ ವಶವಾಯಿತು. ಮುರಗೋಡವು ಪ್ರಖ್ಯಾತ ಗುರುಗಳಾದ ಚಿದಂಬರ ದೀಕ್ಷಿತರ ಜನ್ಮಸ್ಥಳ. ಇಲ್ಲಿನ ಚಿದಂಬರೇಶ್ವರ ಮಠ ಮತ್ತು ಮಲ್ಲಿಕಾರ್ಜುನ ಮಠ ಎರಡೂ ಜನರ ಗೌರವಾದರಗಳಿಗೆ ಪಾತ್ರವಾಗಿವೆ. ಮಹಂತ ಶಿವಯೋಗಿ ಎಂಬ ಹೆಸರಾಂತ ಅನುಭಾವ ಯೋಗಿಯು ಇಲ್ಲಿಯೇ ನೂರು ವರ್ಷ ಬಾಳಿದವರು. ಇವರ ಹೆಸರಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಒಂದು ಅಧ್ಯಯನ ಪೀಠವನ್ನು ಸ್ಥಾಪಿಸಲಾಗಿದೆ.

**ಸವಣೂರು :** (ಧಾರವಾಡ ಜಿ; ಉಪವಿಭಾಗ ಮತ್ತು ತಾ. ಕೇ; ಜನ: 25,053) ಇದು ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು 415 ಕಿಮೀ ಮತ್ತು ಧಾರವಾಡದಿಂದ ಆಗ್ನೇಯಕ್ಕೆ ಸುಮಾರು 83 ಕಿಮೀ ದೂರದಲ್ಲಿದೆ. ನೆರೆಹೊರೆಯ ಹಾವೇರಿ ಮತ್ತು ಶಿಗ್ಗಾವಿ ತಾಲೂಕುಗಳ ಪುನರ್‌ರಚನೆಗೊಂಡಾಗ 1969ರ ಮೇ ತಿಂಗಳಲ್ಲಿ, ಸವಣೂರು ತಾಲೂಕು ಅಸ್ತಿತ್ವಕ್ಕೆ ಬಂದಿತು. ಇಲ್ಲಿಯ ಪ್ರಥಮ ನಾಗರಿಕ ಸಮಿತಿಯು 1893ರಲ್ಲಿ ಅಸ್ತಿತ್ವಕ್ಕೆ ಬಂತು. ಈಗ ಇಲ್ಲಿ ಪುರಸಭೆ ಇದೆ. ಈ ಪಟ್ಟಣದ ಹೆಸರು 'ಶ್ರಾವಣ ಮಾಸ' ಎಂಬುದರಿಂದ ಬಂತೆಂದು ಹೇಳುವರು. ಶ್ರಾವಣಮಾಸದಲ್ಲಿ ನವಾಬರ ಪೂರ್ವಿಕರಲ್ಲೊಬ್ಬನಾದ ಅಬ್ದುಲ್ ರಾವೂಫ್ ಖಾನ್ ತನ್ನ ರಾಜಧಾನಿಯನ್ನು ಬಂಕಾಪುರದಿಂದ ಈಗಿನ ಪಟ್ಟಣವಿರುವ ಅಂದು ಜನಮಾರನಹಳ್ಳಿ ಎಂಬ ಹೆಸರಿದ್ದ, ಹೊಸ ಸ್ಥಳಕ್ಕೆ ಸ್ಥಳಾಂತರಿಸಿದ್ದೇ ಇದಕ್ಕೆ ಕಾರಣವೆನ್ನಲಾಗಿದೆ. ಇಲ್ಲಿ ಒಟ್ಟು 20 ಶಾಸನಗಳು ದೊರಕಿವೆ. ಪ್ರಾಚೀನ ಕಾಲದಲ್ಲಿ (ಕ್ರಿ.ಶ. 1087) ಇಲ್ಲಿ 200 ಮಹಾಜನರಿದ್ದ ಒಂದು ಅಗ್ರಹಾರವಿದ್ದು ಅವರು ಮಧುಸೂದನ ಎಂಬ ಯೋಧನನ್ನು ನಗರ ರಕ್ಷಕನೆಂದು ಆರಿಸಿಕೊಂಡಿದ್ದರು. ಸವಣೂರು ನವಾಬ ವಂಶದ ಸ್ಥಾಪಕನೆಂದು ಹೇಳುವ ಅಬ್ದುಲ್ ಕರೀಮ್ ಖಾನನು ವಿಜಾಪುರದ ಸುಲ್ತಾನರಿಂದ ಶಿವಾಜಿಯು ಯುದ್ಧ ಚಟುವಟಿಕೆಗಳನ್ನು ಹತ್ತಿಕ್ಕಲೆಂದು ಬಂಕಾಪುರದ ಪ್ರಥಮ ಸುಬೇದಾರನಾಗಿ ನೇಮಕಗೊಂಡಿದ್ದನು. ಪ್ರಾರಂಭದಲ್ಲಿ, ಸವಣೂರು ಸಂಸ್ಥಾನವು ಬಂಕಾಪುರ ಮತ್ತು ಕರಜಗಿ ತಾಲೂಕುಗಳ 25 ಹಳ್ಳಿಗಳನ್ನೊಳಗೊಂಡಿದ್ದು 70 ಚ.ಮೈ. ವಿಸ್ತಾರವಾಗಿತ್ತು. ಔರಂಗಜೇಬನ ಪತನದವರೆಗೆ ಸವಣೂರು ನವಾಬರು ಮೊಘಲರ ಪರವಾಗಿ ಆಳ್ವಿಕೆ ನಡೆಸಿದರು. ನಂತರ ಅವರು ಕ್ರಮವಾಗಿ ನಿಜಾಮ, ಹೈದರ್, ಟಿಪ್ಪು ಮತ್ತು ಮರಾಠರಿಗೆ ನಿಷ್ಠೆಯಿಂದಿರುತ್ತಾ ಆಳ್ವಿಕೆ ನಡೆಸಿದರು. ಸವಣೂರ ನವಾಬರು 1802ರಲ್ಲಿ ಮರಾಠರಿಂದ ಬ್ರಿಟಿಷರ ಅಧೀನಕ್ಕೆ ಒಳಪಟ್ಟರು. ಬ್ರಿಟಿಷರು 1806ರಲ್ಲಿ ಸವಣೂರು ಸಂಸ್ಥಾನಕ್ಕೆ 25 ಹಳ್ಳಿಗಳನ್ನು ಬಿಟ್ಟುಕೊಟ್ಟರಲ್ಲದೆ ಖೈರಖಾನ್ ಎಂಬವನನ್ನು ನವಾಬನೆಂದು ಅಂಗೀಕರಿಸಿದರು. ನವಾಬ ಮನೆತನದವರ ಶಾಸನಗಳು, ಅರಮನೆ ಆವರಣ ಮತ್ತು ಇತರ ಕೆಲವು ಸ್ಮಾರಕಗಳು ಇಲ್ಲಿ ಇವೆ. ಸವಣೂರಿನಲ್ಲಿ ನೋಡಬೇಕಾದ ಸ್ಥಳಗಳೆಂದರೆ ನವಾಬರ ಅರಮನೆ, ಒಂಬತ್ತು ಮಸೀದಿಗಳು ಮತ್ತು ವೈಷ್ಣವ ಸಂಪ್ರದಾಯದ ಉತ್ತರಾಧಿ ಮಠದ ಶಾಖೆಯಾದ, ಸುಮಾರು 200 ವರ್ಷಗಳಷ್ಟು ಹಳೆಯದಾದ ಸತ್ಯಬೋಧ ಸ್ವಾಮಿ ಮಠ. ಮಸೀದಿಗಳಲ್ಲಿ ನವಾಬರ ಸಮಾಧಿಗಳಿರುವ ಕಮಾಲಬಂಗ್ಡಿ ಮತ್ತು ಖಾದರ್ ಬಾಗ್ ಹೆಸರಿಸಬೇಕಾದವು. ಮೋತಿ ತಲಾಬ್ ಎಂಬ ದೊಡ್ಡ ಕೆರೆಯ ನೀರನ್ನು ಬೇಸಾಯಕ್ಕೆ ಉಪಯೋಗಿಸಲಾಗುತ್ತಿದೆ. ಅರಮನೆ ಮತ್ತು ದರ್ಬಾರ್ ಹಾಲ್ ಈಗ ಸರ್ಕಾರಿ ಕಛೇರಿಗಳಾಗಿ ಬದಲಾವಣೆ ಹೊಂದಿವೆ. ಆಧುನಿಕ ಹಿಂದೂ ದೇವಾಲಯಗಳಲ್ಲಿ ಮುಖ್ಯವಾದವೆಂದರೆ ವೀರಭದ್ರ, ಬಸವಣ್ಣ, ಫಕೀರಸ್ವಾಮಿ, ಮೈಲಾರಲಿಂಗ, ಎಲ್ಲಮ್ಮ, ಮುಂತಾದವು. ಡಾ|| ವಿ. ಕೃ. ಗೋಕಾಕ್ ಸವಣೂರಿನವರು. ಸವಣೂರು ಮತ್ತು ಸುತ್ತ ಮುತ್ತಲ ಪ್ರದೇಶದಲ್ಲಿ ಖ್ಯಾತ ಸವಣೂರು ವೀಳ್ಯದೆಲೆ ಬೆಳೆಯುತ್ತಾರೆ. ಇಲ್ಲಿ ಮೆಣಸಿನಕಾಯಿ ಬೆಳೆ ವಿಪುಲ. ಬೀಡಿ ಸುತ್ತುವುದು ಇಲ್ಲಿನ ಒಂದು ಮುಖ್ಯವಾದ ಗೃಹ ಕೈಗಾರಿಕೆಯಾಗಿದೆ.

**ಸಾಗರ :** (ಶಿವಮೊಗ್ಗ ಜಿ; ಉಪವಿಭಾಗ ಮತ್ತು ತಾ. ಕೇ; ಜನ: 35,648) ಸಾಗರವು ಶಿವಮೊಗ್ಗದಿಂದ ಪಶ್ಚಿಮಕ್ಕೆ 72 ಕಿಮೀ ಹಾಗೂ ಬೆಂಗಳೂರಿನಿಂದ 347 ಕಿಮೀ ವಾಯುವ್ಯದಲ್ಲಿಯೂ ಇದೆ. ಇಲ್ಲಿ ಪ್ರಖ್ಯಾತವಾದ ಸಿದ್ಧಿವಿನಾಯಕನ ದೇವಾಲಯವಿದ್ದು, ಇದು ಗಣಪತಿಯ ಪಾಣಿಪೀಠದ ಮೇಲೆ ಲಿಂಗವು ಸ್ಥಾಪಿತವಾಗಿರುವುದರಿಂದ, ಇದನ್ನು ಗಣಾಧೀಶ್ವರ ದೇವಾಲಯವೆಂದು ಕರೆಯುತ್ತಾರೆ. ಇಲ್ಲಿ ಕಾಳಿಂಗಮರ್ದನ ಮತ್ತು ಗೋಪಾಲಕೃಷ್ಣ ದೇವಾಲಯಗಳೂ ಇವೆ. ಜೊತೆಗೆ ಕೆಳದಿಯ ಕಾಲದ ಶಿವದೇವಾಲಯ, ಮಾರಿಕಾಂಬಾ ದೇವಾಲಯ, ರಾಘವೇಂದ್ರಸ್ವಾಮಿಗಳ ಮೃತ್ತಿಕಾವೃಂದಾವನ ಮತ್ತು ಬ್ರಹ್ಮಾನಂದರಿಂದ 1944ರಲ್ಲಿ ಸ್ಥಾಪಿತವಾದ ನಾರಾಯಣಾಶ್ರಮಗಳೂ ಇವೆ. ಈ ಊರು, ಗುಡಿಗಾರ ಕುಶಲಕರ್ಮಿಗಳಿಂದ ತಯಾರಾಗುವ ಗಂಧದ ಮತ್ತು ದಂತದ ಕೆತ್ತನೆಗೆ ಬಹಳ ಪ್ರಖ್ಯಾತವಾಗಿದೆ. ಇಲ್ಲಿ ಗುಡಿಗಾರರ ಪರಸ್ಪರ ಸಹಾಯಕ ಸಂಘ, ಪ್ರದರ್ಶನ ಗೃಹ, ಕೈಗಾರಿಕಾ ಶಾಲೆ ಮತ್ತು ಗ್ರಾಮೀಣ ಕುಶಲ ಕಲಾ ತರಬೇತಿ ಕೇಂದ್ರಗಳಿವೆ. ಅಡಿಕೆ, ಭತ್ತ, ಮೆಣಸು ಮತ್ತು ಗಂಧದ ಮರದ ಕೆತ್ತನೆಗಳ ಮಾರಾಟಕ್ಕೆ ಈ ಊರು ಮುಖ್ಯ ಕೇಂದ್ರವಾಗಿದೆ. ಇಲ್ಲಿ ಪುರಸಭೆಯಿದೆ. ಸಾಗರಕ್ಕೆ 28 ಕಿಮೀ ಆಗ್ನೇಯದಲ್ಲಿ ಮಾಲಂದೂರು ಇದೆ. ಇಲ್ಲಿ ಕೆಳದಿಯ ಶಿವಪ್ಪ ನಾಯಕನಿಂದ ನಿರ್ಮಿಸಲಾದುದೆಂದು ಹೇಳಲಾದ ಕೊಳವಿದೆ. ಈ ಕೊಳದ ಮಧ್ಯದಲ್ಲಿರುವ ಬಸವನಗುಡಿಯು ಪಶ್ಚಿಮಾಭಿಮುಖವಾಗಿದ್ದು, ಅದರ ಪ್ರವೇಶದ್ವಾರವು ಮಹಮ್ಮದೀಯ ಶೈಲಿಯ

ಕಮಾನಿನಂತಿದೆ. ಚಂಪಕಸರಸಿ ಮಹತ್ತು ಮಠ ಎಂಬ ಹೆಸರಿನ ಪ್ರಾಚೀನ ವೀರಶೈವ ಮಠದ ಕಟ್ಟಡವಿದೆ. ಕೆಳದಿ ನಾಯಕರು ಈ ಮಠಕ್ಕೆ ಪ್ರೋತ್ಸಾಹ ಕೊಟ್ಟರು. ಈ ಮಠದ ಪ್ರವೇಶದಲ್ಲಿ ಬಲು ನಾಜೂಕಾಗಿ ಕೆತ್ತಲಾದ ಕೆಲವು ಆನೆಗಳ ಶಿಲ್ಪಗಳಿವೆ. ಸಾಗರಕ್ಕೆ 38 ಕಿಮೀ ವಾಯುವ್ಯದಲ್ಲಿ ತಲಕಳಲೆ (ಜನ: 6,764) ಇದೆ. ಇಲ್ಲಿ ಶರಾವತಿ ನದಿಯ ಉಪನದಿಯಾದ ತಲಕಳಲೆಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಿ ನೀರಿನ ಆಸರೆಯನ್ನು ನಿರ್ಮಿಸಲಾಗಿದೆ. ಈ ಊರಿನ ಸುತ್ತಮುತ್ತ ರಮಣೀಯವಾದ ಪ್ರಕೃತಿ ಸೌಂದರ್ಯದ ದೃಶ್ಯಗಳಿವೆ. ಕೆಳದಿ ನಾಯಕರ ಮೊದಲ ರಾಜಧಾನಿಯಾಗಿದ್ದ ಕೆಳದಿ (ಜನ: 2,125) ಸಾಗರಕ್ಕೆ ಉತ್ತರದಲ್ಲಿ ಸುಮಾರು ಆರು ಕಿಮೀ ದೂರದಲ್ಲಿದೆ. ಇಲ್ಲಿ ರಾಮೇಶ್ವರ, ವೀರಭದ್ರ ಮತ್ತು ಪಾರ್ವತಿ ದೇವಾಲಯಗಳಿವೆ. ರಾಮೇಶ್ವರ ದೇವಾಲಯವು ಹೊಯ್ಸಳ ಮತ್ತು ವಿಜಯನಗರ ಶೈಲಿಗಳ ಮಿಶ್ರಣವಾಗಿದ್ದು, ಇದರಲ್ಲಿ ಗರ್ಭಗೃಹ, ಸಣ್ಣ ನವರಂಗ ಮತ್ತು ಮುಖಮಂಟಪಗಳಿವೆ. ಇದು ಹದಿನಾರನೇಯ ಶತಮಾನದ ಆದಿಭಾಗದಲ್ಲಿ, ಕೆಳದಿಯ ಮೊದಲನೇಯ ದೊರೆಯಿಂದ ನಿರ್ಮಿಸಲ್ಪಟ್ಟಿತೆಂದು ಹೇಳಲಾಗಿದೆ. ವೀರಭದ್ರ ದೇವಾಲಯವು ಕೆಳದಿ ದೊರೆಗಳಿಂದ ಬಹುಶಃ 1529 ರಿಂದ 1542ರ ಅವಧಿಯಲ್ಲಿ ನಿರ್ಮಿತವಾಗಿದ್ದಿರಬಹುದು. ಇದರಲ್ಲಿ ಅನೇಕ ಶಿಲ್ಪಗಳಿವೆ. ಕಲ್ಲಿನಿಂದ ಕಟ್ಟಲಾದ ಪಾರ್ವತೀ ದೇವಾಲಯದ ಗರ್ಭಗೃಹದಲ್ಲಿ ದ್ವಿಭುಜ ಪಾರ್ವತಿಯ ಶಿಲ್ಪವಿದೆ. ಈ ದೇವಾಲಯದ ಚಾವಣಿಯಲ್ಲಿ ಸುಂದರವಾದ ಮರದಿಂದ ಮಾಡಿದ ಕೆತ್ತನೆಗಳಿವೆ. ಈ ಹಳ್ಳಿಯಲ್ಲಿ ಇನ್ನೂ ಅನೇಕ ದೇವಾಲಯಗಳು, ಪಾರ್ಶ್ವನಾಥ ಜೈನ ಬಸದಿ, ವೀರಶೈವ ಮಠ ಮತ್ತು ಖಾಸಗಿ ವಸ್ತುಸಂಗ್ರಹಾಲಯವಿದೆ. ನಾಡವಡ್ಡಳ್ಳಿ ಹಳ್ಳಿಯ ಉಪಗ್ರಾಮವಾದ ವರದಹಳ್ಳಿ ಅಥವಾ ಒಡ್ಡಹಳ್ಳಿ ಅಥವಾ ವರದಾಪುರದಲ್ಲಿ ಹೆಂಚಿನ ಚಾವಣಿಯನ್ನುಳ್ಳ ಮಹಿಷಾಸುರಮರ್ದಿನಿಯ ದೇವಾಲಯವಿದೆ. ಈಗ ದಿವಂಗತರಾಗಿರುವ, ಆಧ್ಯಾತ್ಮಿಕ ಶಕ್ತಿಯನ್ನು ವಿಶೇಷವಾಗಿ ಹೊಂದಿದ್ದ ಶ್ರೀಧರಸ್ವಾಮಿಗಳು ಇಲ್ಲಿ 1961ರಲ್ಲಿ ಆಶ್ರಮವನ್ನು ಸ್ಥಾಪಿಸಿದರು. ಕ್ಷೇತ್ರಪಾಲ, ಮಾರುತಿ ಮತ್ತು ರಾಮಚಂದ್ರರಿಗಾಗಿ ಕಟ್ಟಲಾದ ದೇವಾಲಯಗಳು ಇಲ್ಲಿವೆ. ರಾಮಚಂದ್ರ ದೇವಾಲಯದ ಹಿಂಭಾಗದಲ್ಲಿ ಅಗಸ್ತ್ಯತೀರ್ಥ ಅಥವಾ ರಾಮತೀರ್ಥವೆಂಬ ಕೊಳವಿದೆ. ಸಂಸ್ಕೃತ ಮತ್ತು ವೇದಗಳ ಬೋಧನೆಗಾಗಿ ಶ್ರೀ ಶ್ರೀಧರಸಾಂಗವೇದ ವಿದ್ಯಾಲಯ ಎಂಬ ಗುರುಕುಲವು ಇಲ್ಲಿ ಸ್ಥಾಪಿತವಾಗಿದೆ. ಸಮೀಪದಲ್ಲಿ ಶ್ರೀಧರ ತೀರ್ಥವಿದೆ. ಸಾಗರಕ್ಕೆ ಸುಮಾರು ನಾಲ್ಕು ಕಿಮೀ ಆಗ್ನೇಯದಲ್ಲಿ ವರದಾ ನದಿಯು ಹುಟ್ಟುವ ಸ್ಥಳದಲ್ಲಿ ವರದಾಮೂಲವೆಂಬ ಸ್ಥಳವಿದೆ. ಇಲ್ಲಿ ಗಾಯತ್ರೀ ದೇವಾಲಯ ಮತ್ತು ಅದರ ಮುಂಭಾಗದಲ್ಲಿ ಲಕ್ಷ್ಮೀ ತೀರ್ಥ ಎಂಬ ಕೊಳವೂ ಇದೆ. ಇಲ್ಲಿರುವ ಮೂಲ ವಿಗ್ರಹಕ್ಕೆ ಹಂಸವಾಹನವಿದ್ದು, ಇದು ಸುಂದರವಾಗಿ ಕೆತ್ತಲಾದ ಕೆಳದಿಯ ಕಾಲದ ವಿಗ್ರಹ. ಇಲ್ಲಿರುವ ಸದಾಶಿವ ದೇವಾಲಯವು ಕೆಳದಿ ಸದಾಶಿವನಾಯಕನಿಂದ, ಇಲ್ಲಿದ್ದ ಪ್ರಾಚೀನ ಚಾಳುಕ್ಯ ದೇವಾಲಯದ ಪದಾರ್ಥಗಳನ್ನೇ ಉಪಯೋಗಿಸಿ ಕಟ್ಟಲಾದ ಕಟ್ಟಡ. ಇಲ್ಲಿ ಗೋಪಾಲಕೃಷ್ಣ ಮತ್ತು ಗಣಪತಿ ದೇವಾಲಯಗಳಿವೆ. ಇಲ್ಲಿನ ಕಲ್ಲಿನ ಮಂಟಪದಲ್ಲಿರುವ ವಿಗ್ರಹವು ಚಾಳುಕ್ಯರ ಕಾಲದ್ದು.

**ಸಿಂಧಗಿ :** (ವಿಜಾಪುರ ಜಿ; ತಾ. ಕೇ; ಜನ: 15,811) ಸಿಂಧಗಿಯು ವಿಜಾಪುರದಿಂದ ಸುಮಾರು 60 ಕಿಮೀ ದೂರದಲ್ಲಿದೆ. ಈ ಪಟ್ಟಣವು ಬಹುಶಃ ಕಲ್ಯಾಣಿ ಚಾಳುಕ್ಯರ ಸಾಮಂತರಾಗಿದ್ದ ಸಿಂಧರ ಮನೆತನದವರ ಆಳ್ವಿಕೆಗೊಳಪಟ್ಟಿತ್ತು. ಹಿಂದೆ ಇದನ್ನು ಸಿಂಧಪುರ ಎಂದು ಕರೆಯುತ್ತಿದ್ದು ನಂತರ ಸಿಂಧಗಿ ಎಂದಾಯಿತು. ಈ ಪಟ್ಟಣವು 1824ರಲ್ಲಿ ದಿವಾಕರ ದೀಕ್ಷಿತ ಎಂಬವನ ನೇತೃತ್ವದಲ್ಲಿ ಬ್ರಿಟೀಷರ ವಿರುದ್ಧ ನಡೆದ ದಂಗೆಯ ಕೇಂದ್ರಸ್ಥಾನವಾಗಿತ್ತು. ಇಲ್ಲಿರುವ ಸಂಗಮೇಶ್ವರ ದೇವಾಲಯ ಪುರಾತನವಾದುದು. ಮುಖ್ಯಗುಡಿಯ ಹಿಂಬಾಗದಲ್ಲಿ ಚೌರಮ್ಮನ ಚಿಕ್ಕ ಗುಡಿ ಇದ್ದು, ಇದು ಭ್ರಮರಾಂಬಿಕಾ ಎಂಬುದರ ಅಪಭ್ರಂಶವಾಗಿದೆ. ನರಸಿಂಹ ಮತ್ತು ಬನಶಂಕರಿಯ ಚಿಕ್ಕ ಗುಡಿಗಳು ಸಹ ಇದೇ ಆವರಣದಲ್ಲಿವೆ. ಉತ್ತಮವಾಗಿ ಕೆತ್ತಲಾದ ಭಗ್ನಗೊಂಡ ಅನೇಕ ವಿಗ್ರಹಗಳನ್ನು ದೇವಾಲಯದ ಅವರಣದಲ್ಲಿ ಇಟ್ಟಿದ್ದಾರೆ. ಸಿಂಧಗಿಯಲ್ಲಿ ಹಳೆಯದಾದ ನೀಲಗಂಗಮ್ಮ ಮತ್ತು ಶರಣ ಬಸವೇಶ್ವರ ದೇವಾಲಯಗಳಿವೆ. ಅಲ್ಲದೆ, ಇಲ್ಲಿ ನಾಥಪಂಥದವರ ಪ್ರಸಿದ್ಧ ಭೀಮಶಂಕರ ಮಠವೂ ಇದೆ. ಇದನ್ನು ಜಕ್ಕಪ್ಪಯ್ಯನವರ ಮಠ ಎಂತಲೂ ಕರೆಯುವರು. ಇಲ್ಲಿನ ಪ್ರಧಾನ ಗುಡಿಯಲ್ಲಿ ಸಂತರಾದ ಭೀಮಶಂಕರರ ಸಮಾಧಿಯಿದೆ. ಸಂತರ ನೆನಪಿನಲ್ಲಿ ಇಲ್ಲಿ ಪ್ರತೀ ವರ್ಷವೂ ಒಂದು ಉತ್ಸವ ನಡೆಯುತ್ತದೆ. ಇಲ್ಲಿ ವರ್ಷಂಪ್ರತೀ ನಡೆಯುವ ಬ್ರಾಹ್ಮಣರ ಪಾದಪೂಜೆಯ ವಿಧಿಯನ್ನು ವೀಕ್ಷಿಸಲೆಂದು ಸಹಸ್ರಾರು ಜನ ನೆರೆಯುವರು. ಈ ವಿಧಿಯ ವಿಶೇಷವೆಂದರೆ ಪಾದ ತೊಳೆಯಲು ಎಷ್ಟೇ ಪ್ರಮಾಣದಲ್ಲಿ ನೀರನ್ನು ಬಳಸಿದರೂ ಅದಷ್ಟೂ ಒಂದು ಪವಿತ್ರ ಮಣ್ಣಿನ ಕಲಶದಲ್ಲಿ ಸಂಗ್ರಹವಾಗುತ್ತದೆಂಬುದು; ಇಷ್ಟೇ ಅಲ್ಲ ಈ ಕಲಶ ಎಂದೂ ಪೂರ್ಣವಾಗಿ ತುಂಬಿಕೊಳ್ಳುವುದಿಲ್ಲ. ಪಟ್ಟಣದ ಪೂರ್ವ ಹೊರವಲಯದಲ್ಲಿರುವ ಎರಡು ಗುಡಿಗಳಲ್ಲಿ ಜಕ್ಕಪ್ಪಯ್ಯ ಮತ್ತು ಆತನ ಪತ್ನಿಯ ಸಮಾಧಿಗಳಿವೆ. ಸಿಂದಗಿಯಲ್ಲಿ ಒಂದು ಮಸೀದಿ ಮತ್ತು ಘಾಜಿ ಹುಸೇನರ ದರ್ಗಾ ಸಹ ಇವೆ. ಇಲ್ಲಿ ಒಂದು ಪುರಸಭೆ ಇದೆ. ಹಿಪ್ಪರಗಿ (ಜನ: 6,466) ಸಿಂಧಗಿಯಿಂದ ಸುಮಾರು 21 ಕಿಮೀ ದೂರದಲ್ಲಿರುವ ಹೆಸರಿಸಬೇಕಾದ ಒಂದು ದೊಡ್ಡ ಹಳ್ಳಿ. ಪಿಪ್ಪಲಿ ಇದರ ಹಿಂದಿನ ಹೆಸರು. ಇಲ್ಲಿರುವ ಕಲ್ಮೇಶ್ವರ ದೇವಾಲಯವು ಅತಿ ಪುರಾತನವಾದುದು, ಮತ್ತು ಜಮದಗ್ನಿ ಋಷಿಯಿಂದ ಸ್ಥಾಪಿಸಲಾದುದೆಂದು ಹೇಳುವರು. ಈ ದೇವಾಲಯದಲ್ಲಿ ಏಕಶಿಲೆಯಿಂದ ಮಾಡಿದ ಒಂದು ಬೃಹದಾಕಾರದ ನಂದಿಯ ವಿಗ್ರಹವಿದೆ. ಇಲ್ಲಿರುವ ವೀರಭದ್ರ ದೇವಾಲಯದಲ್ಲಿ ಎರಡು

ವೀರಗಲ್ಲುಗಳನ್ನೂ ಕಾಣಬಹುದು. ಇಲ್ಲಿಂದ ½ ಕಿಮೀ ಪೂರ್ವಕ್ಕೆ ಮಾರ್ತಾಂಡ ಅಥವಾ ಮಲ್ಲಯ್ಯ ಎಂಬ ಹೆಸರಿನ ಪುರಾತನ ದೇಗುಲವೊಂದಿದ್ದು, ನಿರ್ದಿಷ್ಟ ಆಕಾರವಿಲ್ಲದ ಒಂದು ಶಿಲೆ ಇಲ್ಲಿ ಪೂಜಾವಸ್ತುವಾಗಿದೆ. ಪ್ರತೀ ವರ್ಷ ಅಕ್ಟೋಬರ್ ತಿಂಗಳಿನಲ್ಲಿ ಈ ದೇವಾಲಯದ ಜಾತ್ರೆ ಜರುಗುವುದು. ಈ ಜಾತ್ರೆಗೆ ಸುಮಾರು 25,000 ಜನರು ಸೇರುವರು. ಬೆಳಗಾವಿ ಜಿಲ್ಲೆಯ ಮುರಗೋಡಿನ ಸಂತರಾಗಿದ್ದ ಚಿದಂಬರ ದೀಕ್ಷಿತರ ಉತ್ತರಾಧಿಕಾರಿಗಳ ನೇತೃತ್ವದಲ್ಲಿ ಇಲ್ಲಿಯ ಧಾರ್ಮಿಕ ವಿಧಿಗಳು ಜರುಗುತ್ತವೆ. ಈ ದೇವಾಲಯದ ಪ್ರಾಂಗಣದ ಹೊರಗಡೆ, ಪೂರ್ವದಿಕ್ಕಿನಲ್ಲಿ ಸುಮಾರು ನೂರು ಅಡಿಗಳಷ್ಟೆತ್ತರ ಇರುವ ಒಂದು ಕಲ್ಲಿನ ದೀಪಸ್ತಂಭವಿದೆ. ಸಮೀಪದಲ್ಲಿಯೇ ಇರುವ ಮತ್ತೊಂದು ಗುಡಿಯನ್ನು ಬಸವೇಶ್ವರರ ಸಮಕಾಲೀನನಾದ ಮಡಿವಾಳ ಮಾಚಿದೇವನ ಗದ್ದುಗೆ ಎಂದು ಸ್ಥಳ ಪುರಾಣ ಬಣ್ಣಿಸುತ್ತದೆ. ಇದರ ಮುಂಭಾಗದಲ್ಲಿರುವ ಸುಮಾರು 45 ಅಡಿಗಳಷ್ಟು ಎತ್ತರವಿರುವ ಕಲ್ಲಿನ ಸ್ತಂಭವನ್ನು ನೂಕಿದಾಗ ಸ್ವಲ್ಪ ತೂಗಾಡುವುದು. ಇದರ ಮೇಲೆ ಈ ಶರಣನ ಎದೆ ಮಟ್ಟದ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿಂದ ಕೆಲವೇ ಗಜಗಳಷ್ಟು ದೂರದಲ್ಲಿರುವ ದೊಡ್ಡ ಕಲ್ಯಾಣಿಯನ್ನು, ಮಡಿವಾಳ ಮಾಚಿದೇವನ ಉಪಯೋಗಕ್ಕಾಗಿ ಓರ್ವ ನರ್ತಕಿ ಕಟ್ಟಿಸಿದಳೆಂದು ಪ್ರತೀತಿ. ಅವನ ಜನ್ಮಸ್ಥಾನವೆನ್ನಲಾದ ಜಾಗದಲ್ಲಿ ಒಂದು ಮಠವಿದ್ದು, ಅದನ್ನು ಮಡಿವಾಳಯ್ಯನ ಮಠ ಎಂದು ಕರೆಯುವರು. ಇಲ್ಲಿರುವ ಇನ್ನೊಂದು ಮುಖ್ಯ ಗುಡಿಯೆಂದರೆ ರಾಹುತರಾಯನದು. ಇಲ್ಲಿ ಹಿಂದು–ಮುಸ್ಲಿಮರಿಬ್ಬರೂ ಪೂಜಿಸುವ ಐದು ಅಡಿಗಳೆಷ್ಟೆತ್ತರದ ಗಡ್ಡಧಾರಿ ಕುದುರೆ ಸವಾರನ ಗಾರೆಯ ಪ್ರತಿಮೆ ಇದೆ.

**ಸಿಂಧನೂರು :** (ರಾಯಚೂರು ಜಿ; ತಾ. ಕೇ; ಜನ: 25,875) ಬೆಂಗಳೂರಿನಿಂದ 423 ಕಿಮೀ ದೂರದಲ್ಲಿರುವ ಸಿಂಧನೂರು ಅರಳೆ ವ್ಯಾಪಾರದ ಕೇಂದ್ರವಾಗಿದೆಯಲ್ಲದೆ, ರಾಯಚೂರು ಜಿಲ್ಲೆಯಲ್ಲಿ ತುಂಗಭದ್ರಾ ನದಿಯ ಅಚ್ಚುಕಟ್ಟು ಪ್ರದೇಶದ ಕೇಂದ್ರಸ್ಥಾನವೆನಿಸಿದೆ. ಪಟ್ಟಣದ ಹೊರ ವಲಯದಲ್ಲಿರುವ ಮಸೀದಿಯನ್ನು ಔರಂಗಜೇಬನು ಕಟ್ಟಿಸಿದನೆಂದು ಹೇಳುತ್ತಾರೆ. ಈ ತಾಲೂಕಿನ ಸೋಮಲಾಪುರ ಗ್ರಾಮದಲ್ಲಿ ಪ್ರಸಿದ್ಧ ಅಂಬಾದೇವಿ ಮಂದಿರವಿದೆ. ಮುಕ್ಕುಂದ ಎಂಬ ಹಳ್ಳಿಯ ಮುಂಭಾಗದಲ್ಲಿ ಕಲ್ಲಿನಿಂದ ಕಟ್ಟಿರುವ ಮುರಾರಿ ದೇವಾಲಯವಿದೆ; ಹತ್ತಿರದಲ್ಲಿಯೇ ಬೆಟ್ಟವೊಂದರ ಮೇಲೆ ಒಂದು ಪುರಾತನ ಕೋಟೆಯಿದೆ. ಇಲ್ಲಿಂದ ತುಸುವೇ ದೂರದಲ್ಲಿ ತುಂಗಭದ್ರಾ ನದಿ ಮಧ್ಯೆ ಇರುವ ದ್ವೀಪವೊಂದರಲ್ಲಿ ಗಡ್ಡಿ ಖಾದರ್ ವಲಿಯ ದರ್ಗಾ ಇದ್ದು, ಪ್ರತೀವರ್ಷ ಉರುಸ್ ಜರುಗುವುದು. ತಡಿಕುಂಡ ಎಂಬಲ್ಲಿ ನವಶಿಲಾಯುಗದ ನಿವೇಶನಗಳು ಸಿಕ್ಕಿವೆ. ಇಲ್ಲಿಯೇ ಬೆಟ್ಟವೊಂದರ ಮೇಲೆ ಹಳೇ ಕೋಟೆಯೊಂದಿದೆ.

**ಸಿದ್ದಾಪುರ :** (ಉ. ಕ. ಜಿ; ತಾ. ಕೇ; ಜನ: 11,289) ಸಿದ್ದಾಪುರವು ಬೆಂಗಳೂರಿನಿಂದ ವಾಯುವ್ಯಕ್ಕೆ 386 ಕಿಮೀ ದೂರದಲ್ಲಿದೆ. ಬಿಳಗಿ ಒಡೆಯರು ಕಟ್ಟಿದ ಸಿದ್ಧಿ ವಿನಾಯಕ ದೇವಸ್ಥಾನ ಇಲ್ಲಿದೆ. ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಸಿದ್ದಾಪುರ ಕರನಿರಾಕರಣ ಚಳವಳಿಯಿಂದಾಗಿ (1930-34) ಪ್ರಸಿದ್ಧಿ ಪಡೆಯಿತು. ಸಿದ್ದಾಪುರದಿಂದ ಸುಮಾರು ಎರಡು ಮೈಲುಗಳ ದೂರದಲ್ಲಿ ಐತಿಹಾಸಿಕ ಸ್ಥಳವಾದ ಕೊಂಡಲಿ ಎಂಬಲ್ಲಿ ನಾಲ್ಕು ಕೊಳಗಳಿಂದ ಸುತ್ತುವರೆದಿರುವ ಕೋಟೆಯೊಂದರ ಅವಶೇಷಗಳು ಮತ್ತು ಕಾಳಮ್ಮ ಗುಡಿ ಇವೆ. ಸಿದ್ದಾಪುರದಿಂದ ಒಂಬತ್ತು ಕಿಮೀ ದೂರದಲ್ಲಿ ಭುವನಗಿರಿ ಎಂಬ ಧಾರ್ಮಿಕ ಕೇಂದ್ರವೊಂದಿದ್ದು ಈ ಬೆಟ್ಟದ ತುದಿಯಲ್ಲಿ ದೇವಾಲಯವೊಂದಿದೆ. ಶರಾವತಿ ನದಿ ಈ ತಾಲೂಕಿನ ಮೂಲಕ ಸಾಗಿ ಸಮುದ್ರ ಸೇರುವ ಮುನ್ನ ಹೊನ್ನಾವರವನ್ನು ತಲುಪುತ್ತದೆ. ಶರಾವತಿ ಮತ್ತು ಅಘನಾಶಿನಿಗಳು ಇಕ್ಕೆಲಗಳಲ್ಲೂ ತುಂಬಿರುವ ವನಸಿರಿಯ ನಡುವೆ ಹರಿಯುತ್ತವೆ. ಜೋಗ, ಉಂಚಳ್ಳಿ ಮುಂತಾದ ಸ್ಥಳಗಳಲ್ಲಿ ನೈಸರ್ಗಿಕ ಜಲಧಾರೆಗಳಾಗಿ ಧುಮುಕುತ್ತಾ ಹರಿಯುತ್ತವೆ. ಆಸಕ್ತಿದಾಯಕವೆನಿಸಿರುವ ಉಂಚಳ್ಳಿ ಜಲಪಾತ ಸಿದ್ದಾಪುರದಿಂದ ಸುಮಾರು 19 ಕಿಮೀ ದೂರದಲ್ಲಿರುವ ಒಂದು ಪ್ರೇಕ್ಷಣೀಯ ಸ್ಥಳ. ಸುಮಾರು 400 ಅಡಿಗಳಷ್ಟು ಎತ್ತರದಿಂದ ಧುಮುಕುವ ಈ ಜಲಪಾತವನ್ನು, 1845ರ ಸರಿಸುಮಾರಿಗೆ ಪತ್ತೆಹಚ್ಚಿದ ಕೆನರಾ ಜಿಲ್ಲೆಯ ಕಲೆಕ್ಟರ್ ಆಗಿದ್ದ ಟಿ. ಡಿ. ಲೂಶಿಂಗ್‌ಟನ್ ಎಂಬಾತನ ನೆನಪಿಗಾಗಿ 'ಲೂಶಿಂಗ್‌ಟನ್ ಫಾಲ್ಸ್' ಎಂದು ಕರೆಯುವರು. ಸಿದ್ದಾಪುರದಿಂದ 15 ಕಿಮೀ ದೂರದಲ್ಲಿರುವ ಬಿಳಗಿ ಸಹ ಒಂದು ಪ್ರಮುಖ ಸ್ಥಳ. ಹಿಂದೆ ಇದನ್ನು ಶ್ವೇತಪುರ ಎಂದು ಕರೆಯುತ್ತಿದ್ದರು. ಕ್ರಿ. ಶ. 1593ರಲ್ಲಿ ಬಿಳಗಿ ವಂಶದ ನರಸಿಂಹ ಎಂಬ ದೊರೆಯು ಕಟ್ಟಿಸಿದ ಇಲ್ಲಿನ ಪಾರ್ಶ್ವನಾಥ ಬಸದಿ ನೋಡಬಹುದಾದ ಒಂದು ವಿಶೇಷ ಸ್ಮಾರಕ. 1650ರಲ್ಲಿ ಪಾರ್ಶ್ವನಾಥ ಬಸದಿಯನ್ನು ವಿಸ್ತರಿಸಿ ನೇಮಿನಾಥ, ವರ್ಧಮಾನ ಮಹಾವೀರ ಮೊದಲಾದ ತೀರ್ಥಂಕರರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಲಾಯಿತು. ದ್ರಾವಿಡ ಶೈಲಿಯಲ್ಲಿರುವ ಈ ಬಸದಿಯ ನವರಂಗದಲ್ಲಿರುವ ಕಪ್ಪು ಶಿಲೆಯ ಸ್ತಂಭಗಳು ತಿರುಗುಣಿ ಯಂತ್ರದಿಂದ ಕಡೆಯಲಾದವು; ಚೌಕಾಕಾರದ ಕಂಭಗಳೂ ಇಲ್ಲಿ ಇವೆ. 1588 ಮತ್ತು 1628ರ ಎರಡು ಶಾಸನಗಳು ಇಲ್ಲಿದ್ದು ಬಸದಿಗೆ ಕೊಡಲಾದ ಅನೇಕ ದತ್ತಿಯ ವಿವರಗಳನ್ನು ನೀಡುತ್ತವೆ. ಬಿಳಗಿಯಲ್ಲಿರುವ ಇನ್ನಿತರ ಎರಡು ದೇವಾಲಯಗಳೆಂದರೆ ವಿರೂಪಾಕ್ಷ ಮಹಾದೇವ ಮತ್ತು ಹನುಮಂತ. ಈ ಎರಡೂ ಮಂದಿರಗಳಲ್ಲಿ 1571ರ ಒಂದೊಂದು ಶಿಲಾ ಶಾಸನಗಳಿವೆ. ಕವಿ ಭಟ್ಟಾಕಳಂಕನು ಬಿಳಗಿಯಲ್ಲಿಯೇ ಹಲಕಾಲ ನೆಲೆಸಿದ್ದನು.

**ಸಿರುಗುಪ್ಪ :** (ಬಳ್ಳಾರಿ ಜಿ; ತಾ. ಕೇ; ಜನ:

23,350) ಸಿರುಗುಪ್ಪವು ತುಂಗಭದ್ರಾ ನದಿಯ ಕಿರಿದಾದ ಕವಲೊಂದರ ದಂಡೆಯ ಮೇಲೆ ಬಳ್ಳಾರಿ-ರಾಯಚೂರು ಮಾರ್ಗ ದಲ್ಲಿ, ಬೆಂಗಳೂರಿನಿಂದ 362 ಕಿಮೀ ಮತ್ತು ಬಳ್ಳಾರಿಯಿಂದ 56 ಕಿಮೀ ದೂರದಲ್ಲಿದೆ. 'ಸಿರಿಗುಪ್ಪ' ಎಂದರೆ ಐಶ್ವರ್ಯದ ರಾಶಿ ಎಂಬರ್ಥವಿದೆ. ಇಲ್ಲಿನ ಕೋಟೆಯ ಕೊತ್ತಲದಲ್ಲಿ ಪುರಾತನ ಶಂಭುಲಿಂಗ ದೇವಾಲಯವಿದೆ. ಸ್ಥಳೀಯ ವ್ಯಾಪಾರಿಯೋರ್ವರು 1887ರಲ್ಲಿ ಕಟ್ಟಿಸಿದ ಕೊಟ್ಟೂರ ಬಸವಣ್ಣ ದೇವಸ್ಥಾನದ ಗೋಪುರ ಎದ್ದು ಕಾಣುವಂಥಹದು. ಸಿರುಗುಪ್ಪದಲ್ಲಿ ಪುರಸಭೆ ಯೊಂದಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ: ಸಿರುಗುಪ್ಪದಿಂದ ನೈಋತ್ಯಕ್ಕೆ ಸುಮಾರು ಅರು ಕಿಮೀ ದೂರದಲ್ಲಿ ತುಂಗಭದ್ರಾ ನದಿ ದಂಡೆಯ ಮೇಲೆ ಕೆಂಚನಗುಡ್ಡ ಎಂಬ ಸ್ಥಳ ವೊಂದಿದೆ. ಇಲ್ಲಿ ಮೇಲಿನ ಕೋಟೆ ಮತ್ತು ಕೆಳಗಿನ ಕೋಟೆ ಎಂಬ ಕೋಟೆಗಳಿವೆ. ಈ ಸ್ಥಳವನ್ನಾಳುತ್ತಿದ್ದ ಕೆಂಚನಗೌಡ ನಿಂದಾಗಿ ಮೇಲಿನ ಕೋಟೆಗೆ ಕೆಂಚನಗುಡ್ಡ ಎಂಬ ಹೆಸರು ಬಂದಿದೆ. ಇದರ ಬುಡದಲ್ಲಿಯೇ ಗಂಗಾಧರ ದೇವಸ್ಥಾನವಿದೆ. ಈ ಊರಿನ ಲ್ಲಿಯೇ ಸಿದ್ಧಮಲ್ಲಯ್ಯನ ಗವಿ ಇರುವುದು. ಸಮೀಪದಲ್ಲಿಯೇ ಒಂದು ಕನ್ನಡ ಶಾಸನ ಮತ್ತು ಸುಪ್ರಸಿದ್ಧರಾದ ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳ ಓರ್ವ ಶಿಷ್ಯರ ಸಮಾಧಿ ಇದೆ. ಸಿರುಗುಪ್ಪದಿಂದ ನೈಋತ್ಯಕ್ಕೆ ಸುಮಾರು 25 ಕಿಮೀ ದೂರದಲ್ಲಿ ಇರುವ ಉದೇಗೋಳ ಎಂಬ ಸ್ಥಳದಲ್ಲಿ ಇತ್ತೀಚೆಗೆ ಅಶೋಕನ ಎರಡು ಲಘುಶಿಲಾ ಶಾಸನಗಳು ದೊರೆತಿವೆ. ತೆಕ್ಕಲಕೋಟೆ (ಜನ: 14,754-1981) ಬಳ್ಳಾರಿ-ಸಿರುಗುಪ್ಪ ಮಾರ್ಗದಲ್ಲಿ ಬಳ್ಳಾರಿಯಿಂದ ಉತ್ತರಕ್ಕೆ ಸುಮಾರು 43 ಕಿಮೀ ದೂರದಲ್ಲಿದೆ. ಕ್ರಿ.ಶ. 1021ನೇ ಇಸವಿಯ ಕನ್ನಡ ಶಾಸನವೊಂದರಲ್ಲಿ ಈ ಊರನ್ನು ಪಾಪೆಕಲ್ಲು ಎಂದು ಕರೆಯಲಾಗಿದೆ. ಬಳ್ಳಾರಿಯ ಪಾಳೇಗಾರ ಹನುಮಪ್ಪ ನಾಯಕನು ಅಮರೇಶ್ವರ ದೇವಸ್ಥಾನದ ಸುತ್ತಲೂ ಒಂದು ಕೋಟೆಯನ್ನು ಕಟ್ಟಿಸಿದನೆಂದು ತಿಳಿದುಬರು ತ್ತದೆ; ಆದರೆ ಕೋಟೆಯ ಯಾವುದೇ ಅವಶೇಷವೂ ಈಗ ಉಳಿದಿಲ್ಲ. ಇಲ್ಲಿನ ಅಮರೇಶ್ವರ ದೇವಸ್ಥಾನದಲ್ಲಿರುವ ಶಾಸನವೊಂದರಂತೆ ವಿಜಯನಗರದ ಅರಸನಾದ ಕೃಷ್ಣದೇವರಾಯನ ಉತ್ತರೋತ್ತ ರಾಭಿವೃದ್ಧಿಗಾಗಿ ಶಿವನಿಗೆ ಮೀಸಲಾದ ದೇವಾಲಯವನ್ನು 1511 ರಲ್ಲಿ ಜಕ್ಕರಾಯನು ಕಟ್ಟಿಸಿದನು. ಹೆಚ್ಚು ಕಡಿಮೆ ನೆಲದಲ್ಲಿ ಹೂತು ಹೋಗಿದ್ದ ಇದನ್ನು ಅಗೆದು ಹೊರತೆಗೆದು ಕೆಳಗಿಳಿಯಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಕಾಡುಸಿದ್ದಪ್ಪ ಗುಡಿ ಮತ್ತು ಅವನದೇ ಸಮಾಧಿಯಿಂದಾದ ಮಂಟಪ (ಸಮಾಧಿ) ಊರಿ ನಿಂದ ಪಶ್ಚಿಮ ದಿಕ್ಕಿಗಿವೆ. ಊರಿನಿಂದ ಈಶಾನ್ಯ ದಿಕ್ಕಿನಲ್ಲಿ, ಸುಮಾರು ಮೂರು ಕಿಮೀ ದೂರದಲ್ಲಿ ಹರಿಮಲ್ಲಪ್ಪ ದೇವಸ್ಥಾನ ವಿದೆ. ಇಲ್ಲಿ ಪ್ರತೀವರ್ಷ ಜಾತ್ರೆಯೊಂದು ಜರುಗುವುದು. ಈ ಊರು ಒಂದು ಚರಿತ್ರಪೂರ್ವ ವಸತಿಯಾಗಿತ್ತೆಂದು ಸಹ ತಿಳಿದು ಬಂದಿದೆ.

**ಸಿರಸಿ :** (ಉ. ಕ. ಜಿ; ತಾ. ಕೇ; ಜನ: 38,907) ಸಿರಸಿ ಬೆಂಗಳೂರಿನಿಂದ ವಾಯುವ್ಯಕ್ಕೆ 428 ಕಿಮೀ ದೂರದಲ್ಲಿದೆ. ಈ ಊರನ್ನು ಹಿಂದೆ ಸಿರಸೆ ಎಂದು ಕರೆದಿದೆ. ಇದು ಸಮುದ್ರ ಮಟ್ಟದಿಂದ ಸುಮಾರು 2,500 ಅಡಿಗಳಷ್ಟು ಎತ್ತರದಲ್ಲಿದೆ. ಈ ಪಟ್ಟಣವು ಅನಿರ್ದಿಷ್ಟವಾಗಿ ಸಮತಲವಲ್ಲದ ನೆಲದ ಮೇಲೆ ಹರಡಿದೆ. ಇಲ್ಲಿರುವ ಐತಿಹಾಸಿಕ ಸ್ಮಾರಕಗಳೆಂದರೆ ಕೋಟೆ ಯೊಂದರ ಅವಶೇಷಗಳು, ಸೋಂದೆಯ ರಾಮಚಂದ್ರನಾಯಕ ನಿಂದ ನಿರ್ಮಿತವಾದ ಬಜಾರ್ ಮತ್ತು ಚನ್ನಪಟ್ಟಣ ಬಜಾರ್. ಕ್ರಿ.ಶ. 1689ರಲ್ಲಿ ಪ್ರತಿಷ್ಠಾಪಿಸಲಾದ ಮಾರಿಕಾಂಬಾ ದೇವಿಯ ವಿಶಾಲವಾದ ದೇವಾಲಯ ಇಲ್ಲಿದ್ದು, ಅದರ ಗೋಡೆಗಳ ಮೇಲೆ ಆಕರ್ಷಕ ಕಾವಿ ಚಿತ್ರಗಳಿವೆ. ಇತರ ಮುಖ್ಯ ಸ್ಮಾರಕಗಳೆಂದರೆ ಗಣಪತಿ ಗುಡಿ ಮತ್ತು ಸಂತ ಮೇರಿಯ ಚರ್ಚ್. ಸಿರಸಿಯು ಸುತ್ತಮುತ್ತಲಿನ ಪ್ರದೇಶದಲ್ಲಿ ಬೆಳೆಯುವ ಅಡಿಕೆ, ಮೆಣಸು ಮತ್ತು ಏಲಕ್ಕಿ ಮುಂತಾದವುಗಳ ಒಂದು ಪ್ರಮುಖ ವ್ಯಾಪಾರ ಕೇಂದ್ರ. ಇಲ್ಲಿ ಎರಡು ವರ್ಷಕ್ಕೊಮ್ಮೆ ಮಾಘ ಮಾಸದಲ್ಲಿ ಮಾರಿಕಾಂಬಾ ಜಾತ್ರೆ ನಡೆಯುವುದು. ಸ್ವಾತಂತ್ರ್ಯ ಹೋರಾಟ ನಡೆದ ಕಾಲದಲ್ಲಿ ಸಿರಸಿ ವಿಶೇಷ ಚಟುವಟಿಕೆಗಳನ್ನು ಕಂಡ ಕೇಂದ್ರ ಗಳಲ್ಲೊಂದಾಗಿತ್ತು. ಇಲ್ಲಿಯ ನಾಗರಿಕ ಆಡಳಿತವನ್ನು ಪುರ ಸಭೆಯ ನೋಡಿಕೊಳ್ಳುತ್ತಿದೆ.

**ಸಿರಾ :** (ತುಮಕೂರು ಜಿ; ತಾ. ಕೇ; ಜನ: 27,665) ಸಿರಾ ಬೆಂಗಳೂರು-ಪುಣೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಬೆಂಗಳೂರಿ ನಿಂದ 120 ಕಿಮೀ ಮತ್ತು ತುಮಕೂರಿನಿಂದ 52 ಕಿಮೀ ದೂರ ದಲ್ಲಿದೆ. ರತ್ನಗಿರಿಯ ದೊರೆ ರಂಗಪ್ಪನಾಯಕ ಸಿರಾ ಪಟ್ಟಣ ಮತ್ತು ಕೋಟೆಯನ್ನು ಕಟ್ಟಿಸಿದನೆಂದು ತಿಳಿಯಲಾಗಿದೆ. ಹಿಂದೆ ಇದನ್ನು ಸೀರ್‍ಯ ಎಂದು ಕರೆಯುತ್ತಿದ್ದರು. ಸಿರಾ 1686ರಲ್ಲಿ ಮೊಘಲರ ವಶವಾದಾಗ ಒಂದು ಫೌಜುದಾರಿ ಕೇಂದ್ರವಾಯಿತು. ದಿಲಾವರ್ ಖಾನ್ ಎಂಬ ಮೊಘಲರ ಅಧಿಕಾರಿಯೋರ್ವನು ಇಲ್ಲಿ ಖಾನ್ ಬಾಗ್ ಎಂಬ ಸುಂದರವಾದ ಉದ್ಯಾನವನವನ್ನು ಬೆಳೆಸಿ ದನು. ಇದನ್ನು ಹೈದರನು ಉಳಿಸಿಕೊಂಡು ಬಂದಿದ್ದನು; ಮತ್ತು ಬೆಂಗಳೂರಿನ ಲಾಲ್‌ಬಾಗ್ ಉದ್ಯಾನವನವನ್ನು ಬೆಳೆಸಲು ಅವನಿಗೆ ಇದೇ ಸ್ಫೂರ್ತಿ ನೀಡಿರಬೇಕು. ಲತಾಪುರ ಎಂಬ ಪುರಾತನ ಹೆಸರಿನ ಬಿಡದಿಯೊಂದು ಕೋಟೆಯಿಂದ ವಾಯುವ್ಯ ದಿಕ್ಕಿನಲ್ಲಿ ತುಸುವೇ ದೂರದಲ್ಲಿದೆ. ಇಲ್ಲಿರುವ ಇಬ್ರಾಹಿಂ ರೋಜ ಅನೇಕ ಸಮಾಧಿಗಳನ್ನೊಳಗೊಂಡಿದ್ದು, ಅದರ ನಾಲ್ಕು ಮಿನಾರ್ ಗಳನ್ನು ಹೊರತುಪಡಿಸಿದರೆ, ಇದನ್ನು ಒಂದು ಹಿಂದೂ ಕಟ್ಟಡ ಎಂದೇ ಹೇಳುವಂತಿದೆ. ಇಲ್ಲಿ ಕಲ್ಲಿನಿಂದ ನಿರ್ಮಿಸಿರುವ ಜುಮ್ಮಾ ಮಸೀದಿ (ಕ್ರಿ.ಶ. 1696) ಮತ್ತು ಮಲ್ಲಿಕ್ ರಿಹಾನನ (ಕ್ರಿ.ಶ. 1651) ಸಮಾಧಿ ಹೆಸರಿಸಬೇಕಾದವು. ಮುಘಲ್ ಶೈಲಿಯಲ್ಲಿ ರುವ ಇವೆರಡೂ ಸುಂದರವಾದ ಕಟ್ಟಡಗಳು. ಸಿರಾದ ಕಲ್ಲಿನ ಕೋಟೆಯು ಸುತ್ತಲೂ ಕಂದಕಗಳನ್ನು ಹೊಂದಿದ್ದು ಉತ್ತಮ ರಚನೆಯೆನಿಸಿದೆ. ಇಲ್ಲಿಯ ಗೋಪಾಲಕೃಷ್ಣ ಮಂದಿರದ ಮೂಲ

ವಿಗ್ರಹವನ್ನು ಹೊಸತಾಗಿ ನಿರ್ಮಿಸಿರುವ ನಾರಾಯಣ ಮಂದಿರ ದಲ್ಲಿಟ್ಟು ಅದರ ಮೊದಲಿನ ಸ್ಥಾನದಲ್ಲಿ ಬೇರೆಡೆಯಿಂದ ತಂದಿರುವ ಹನುಮಂತನ ಸುಂದರ ವಿಗ್ರಹವೊಂದನ್ನು ಪ್ರತಿಷ್ಠಾಪಿಸಿದ್ದಾರೆ. ದುರ್ಗಾ ಮಂದಿರದಲ್ಲಿ ಹುತ್ತವೇ ಪೂಜಾವಸ್ತುವಾಗಿದೆ. ಇಲ್ಲಿಯ ನಾಗರಿಕ ಆಡಳಿತವನ್ನು ಪುರಸಭೆ ನಡೆಸುತ್ತದೆ. ಸೀಬಿ (ಜನ: 1,107) ಒಂದು ಅಗ್ರಹಾರ ಗ್ರಾಮವಾಗಿದ್ದು ಬೆಂಗಳೂರು–ಪುಣೆ ರಾಷ್ಟ್ರೀಯ ಹೆದ್ದಾರಿಯಲ್ಲಿ, ತುಮಕೂರಿನಿಂದ ಸುಮಾರು 24 ಕಿಮೀ ಮತ್ತು ಸಿರಾದಿಂದ ಸುಮಾರು 28 ಕಿಮೀ ದೂರ ದಲ್ಲಿದೆ. ಹಿಂದೆ ಇದನ್ನು ಸೀಬೂರ್ ಎಂದೂ ಹರಿಹರರಾಯಪುರ ಎಂದೂ ಕರೆಯುತ್ತಿದ್ದರು. ಇಲ್ಲಿ ಕಲ್ಲಿನಿಂದ ಕಟ್ಟಿರುವ ನರಸಿಂಹ ಸ್ವಾಮಿ ದೇವಸ್ಥಾನವಿದೆ. ಇಲ್ಲಿ ನರಸಿಂಹಸ್ವಾಮಿಯನ್ನು ಸಾಲಿ ಗ್ರಾಮ ರೂಪದಲ್ಲಿ ಆರಾಧಿಸುವರು. ಈ ದೇವಸ್ಥಾನದ ಒಳಮಾಳಿಗೆ ಮತ್ತು ತೊಲೆಗಳ ಮೇಲೆ ದಶಾವತಾರ, ಶಿವಲೀಲೆ, ರಾಮಾಯಣ ಮತ್ತು ಮಹಾಭಾರತಗಳಿಂದಾಯ್ದ ದೃಶ್ಯಗಳನ್ನು ಬಣ್ಣದಲ್ಲಿ ಚಿತ್ರಿಸಿದ್ದಾರೆ. ಈ ವರ್ಣಚಿತ್ರಗಳು 18ನೇ ಶತಮಾನದ ಉತ್ತರಾರ್ಧದಲ್ಲಿ ಹೈದರನ ಬಳಿ ಅಧಿಕಾರಿಯಾಗಿದ್ದ ನಲ್ಲಪ್ಪ ಎಂಬಾತನು ಬರೆಸಿದನು. ಇವು ಶ್ರೀರಂಗಪಟ್ಟಣದಲ್ಲಿರುವ ವರ್ಣ ಚಿತ್ರಗಳಿಗೆ ಸಮಕಾಲೀನವಾದವು.

**ಸಿರಿಗೆರೆ :** (ಚಿತ್ರದುರ್ಗ ಜಿ; ಚಿತ್ರದುರ್ಗ ತಾ; ಜನ: 2,765) ಸಿರಿಗೆರೆ ಚಿತ್ರದುರ್ಗದಿಂದ ಸುಮಾರು 24 ಕಿಮೀ ದೂರ ದಲ್ಲಿದ್ದು ಭರಮಸಾಗರ ಹೋಬಳಿಗೆ ಸೇರಿದ ಒಂದು ಹಳ್ಳಿ. ಇಲ್ಲಿ, ಮೂಲದಲ್ಲಿ ಉಜ್ಜಯಿನಿಯದ್ದೆನ್ನಲಾದ, ತರಳಬಾಳು ಸಂಪ್ರ ದಾಯದ ಒಂದು ಪ್ರಸಿದ್ಧ ವೀರಶೈವ ಮಠವಿದೆ. ಉದಾರತೆಗೆ ಹೆಸರಾಗಿರುವ ಈ ಮಠ ಸಮಾಜ ಸೇವಾ ಕಾರ್ಯಗಳಿಗೆ ಹೆಸರಾ ದುದು. ಈ ಮಠದ ಅನುಯಾಯಿಗಳು ರಾಜ್ಯಾದ್ಯಂತ ಕಾಣ ಸಿಗುತ್ತಾರೆ. ಈ ಮಠವು ರಾಜ್ಯದ ಅನೇಕ ಭಾಗಗಳಲ್ಲಿ ವಿದ್ಯಾ ಸಂಸ್ಥೆಗಳನ್ನು ಮತ್ತು ಉಚಿತ ವಿದ್ಯಾರ್ಥಿ ನಿಲಯಗಳನ್ನು ನಡೆಸು ತ್ತಿದೆ. ಸಿರಿಗೆರೆಯಲ್ಲಿ ತರಳಬಾಳು ವಿದ್ಯಾಸಂಸ್ಥೆಯು ಅನೇಕ ಕಾಲೇಜುಗಳನ್ನು ನಡೆಸುತ್ತಿದೆ. ಕೃಷಿ ಇಲಾಖೆಯ ಮುಖಾಂತರ ಈ ಪ್ರದೇಶದಲ್ಲಿ ಸುಧಾರಿತ ಕೃಷಿ ಪದ್ಧತಿ ಆಚರಣೆಯಲ್ಲಿದೆ. ಈ ಪ್ರದೇಶದಲ್ಲಿ ಹಲವು ಗೋಬರ್ ಅನಿಲ ಘಟಕಗಳನ್ನು ಸ್ಥಾಪಿಸ ಲಾಗಿದೆ. ಹೈನುಗಾರಿಕೆ ಮತ್ತು ಕುರಿ ಸಾಕಣೆಗೆ ಸಂಬಂಧಿಸಿದಂತೆ ಇಲ್ಲಿ ಮಿಶ್ರ ತಳಿಗಳ ಅಭಿವೃದ್ಧಿ ಕಾರ್ಯಗಳನ್ನು ಸಹ ನಡೆಸ ಲಾಗುತ್ತಿದೆ.

**ಸುಳ್ಯ :** (ದ. ಕ. ಜಿ; ತಾ. ಕೇ; ಜನ: 13,389) ಸುಳ್ಯವು ಮಂಗಳೂರಿನಿಂದ ಆಗ್ನೇಯಕ್ಕೆ ಸುಮಾರು 86 ಕಿಮೀ ದೂರದಲ್ಲಿರುವ ಪಟ್ಟಣವಾಗಿದ್ದು ಪುರಸಭೆಯೊಂದನ್ನು ಹೊಂದಿದೆ. ಈ ತಾಲೂಕು ಹಿಂದೆ ಕೊಡಗಿನ ಭಾಗವಾಗಿದ್ದು, 1834ರಲ್ಲಿ ಬ್ರಿಟಿಷರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಲೀನಗೊಳಿಸಿದರು. ಸುಳ್ಯ ತಾಲೂಕನ್ನು 1966ರಲ್ಲಿ ಪುತ್ತೂರು ತಾಲೂಕಿನಿಂದ ಬೇರ್ಪಡಿಸಿ ರಚಿಸಲಾಯಿತು. ಈ ಸ್ಥಳ ರಬ್ಬರ್ ತೋಟಗಳಿಂದಾಗಿ ಪ್ರಸಿದ್ಧಿ ಪಡೆದಿದ್ದು, ಇವುಗಳಲ್ಲಿ ಶ್ರೀಲಂಕಾದಿಂದ ಹಿಂತಿರುಗಿದ ನೂರಾರು ನಿರಾಶ್ರಿತರು ದುಡಿಯುತ್ತಿದ್ದಾರೆ. ಇವರಿಗೆ ಇದರ ಸಮೀಪ ದಲ್ಲಿಯೇ ನೆಲೆ ಕಲ್ಪಿಸಲಾಗಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳೆಂದರೆ: ಬೆಳ್ಳಾರೆ (ಜನ: 3,189) ಕುಕ್ಕೆ ಸುಬ್ರಹ್ಮಣ್ಯಕ್ಕೆ ಹೋಗುವ ಮಾರ್ಗದಲ್ಲಿ, ಸುಳ್ಯದಿಂದ ಸುಮಾರು 10 ಕಿಮೀ ದೂರದಲ್ಲಿದೆ. ಇಲ್ಲಿನ ಬಲ್ಲಾಳರ ಮನೆತನದ ಅರಮನೆ ಮತ್ತು ಒಂದು ಬಸದಿ ಇಲ್ಲಿ ಇವೆ. ಇಲ್ಲಿ ಕೆಳದಿಯ ವೆಂಕಟಪ್ಪನಾಯಕನು ಕೋಟೆಯೊಂದನ್ನು ಕಟ್ಟಿಸಿದನು. ಸುಬ್ರಹ್ಮಣ್ಯ (ಜನ: 1,868) ಸುಳ್ಯದಿಂದ ಈಶಾನ್ಯ ದಿಕ್ಕಿನಲ್ಲಿ 44 ಕಿಮೀ ದೂರ ದಲ್ಲಿದೆ. ಇದನ್ನು ಕುಕ್ಕೆ ಸುಬ್ರಹ್ಮಣ್ಯ ಎಂತಲೂ ಪುಷ್ಪಗಿರಿ ಎಂತಲೂ ಕರೆಯುವ ವಾಡಿಕೆ ಇದೆ. ಸುಬ್ರಹ್ಮಣ್ಯ ಮಾರ್ಗಕ್ಕೆ ಸಮೀಪದಲ್ಲಿಯೇ ಹಾಸನ–ಮಂಗಳೂರು ರೈಲ್ವೇ ನಿಲ್ದಾಣ ಸಹ ಇದೆ. ಈ ಪ್ರದೇಶದ ಏಳು ಪ್ರಮುಖ ಪುಣ್ಯಕ್ಷೇತ್ರಗಳಲ್ಲಿ ಒಂದಾದ ಇಲ್ಲಿಗೆ ಶ್ರೀ ಆದಿ ಶಂಕರಾಚಾರ್ಯರು ಭೇಟಿ ನೀಡಿದ್ದ ರೆಂದು ಪ್ರತೀತಿ. ವಿಜಯನಗರ ಕಾಲದಲ್ಲಿ ಬಂಗರಸರ ಅಧೀನ ದಲ್ಲಿದ್ದ ಇದನ್ನು ಕುಕ್ಕೆಪಟ್ನ ಎಂದು ಕರೆಯುತ್ತಿದ್ದರು. ಈ ಕ್ಷೇತ್ರದಲ್ಲಿ ಪೂಜಿಸಲಾಗುವ ಕುಮಾರ (ಸುಬ್ರಹ್ಮಣ್ಯ) ನಾಗನ ರೂಪದಲ್ಲಿರುತ್ತಾನೆ. ಇಲ್ಲಿ ಲಕ್ಷ್ಮೀನರಸಿಂಹ, ಸುಬ್ರಹ್ಮಣ್ಯ ಮತ್ತು ಉಮಾಮಹೇಶ್ವರ ದೇವರ ಸಣ್ಣ ಗುಡಿಯಿದೆ. ಕುಮಾರ ಧಾರಾ ನದಿಯ ದಂಡೆಯಲ್ಲಿ ಆದಿ ಸುಬ್ರಹ್ಮಣ್ಯಸ್ವಾಮಿಯ (ಮೂಲ ದೇವರ) ದೇವಾಲಯವಿದೆ. ಮಧ್ವಾಚಾರ್ಯರ ಸಹೋದರ ಮತ್ತು ಶಿಷ್ಯ ವಿಷ್ಣುತೀರ್ಥಾಚಾರ್ಯರಿಂದ ಸ್ಥಾಪಿಸ ಲ್ಪಟ್ಟ ಲಕ್ಷ್ಮೀ ನರಸಿಂಹ ಗುಡಿ ಮಾಧ್ವಮಠದವರ ಮೇಲ್ವಿಚಾರಣೆ ಯಲ್ಲಿದೆ.

**ಸೂಪಾ :** (ಉ. ಕ. ಜಿ; ಹಿಂದಿನ ತಾ. ಕೇ;) ಸೂಪಾ ಬೆಂಗಳೂರಿನಿಂದ ವಾಯುವ್ಯ ದಿಕ್ಕಿನಲ್ಲಿ 494 ಕಿಮೀ ದೂರದಲ್ಲಿ ಇತ್ತು. ಇತ್ತೀಚಿನವರೆಗೂ ಸೂಪಾ ಅದೇ ಹೆಸರಿನ ತಾಲೂಕು ಕೇಂದ್ರವಾಗಿತ್ತು. ಕಾಳಿ ಯೋಜನೆಯಿಂದಾಗಿ ಸೂಪಾ ಮುಳುಗಡೆಯಾದಾಗ ತಾಲೂಕು ಕೇಂದ್ರವನ್ನು ಜೋಯಡಾಕ್ಕೆ ವರ್ಗಾಯಿಸಲಾಯಿತು. ಸೂಪಾ ಎಂಬ ಹೆಸರು ರಾವಣನ ಸಹೋದರಿ ಶೂರ್ಪನಖಿಯಿಂದ ಬಂತೆಂದೂ, ಇದರಿಂದಾ ಗಿಯೇ ಇದನ್ನು 'ಶೂರ್ಪ' ಎಂದೂ ಕರೆಯುತ್ತಿದ್ದರೆಂದು ಐತಿಹ್ಯ ವಿದೆ. ಇದು ನಿತ್ಯ ಹರಿದ್ವರ್ಣದ ಕಾಡಿನ ನಡುವೆ ಕಾಳಿ ಮತ್ತು ಪಾಂಡರಿ ನದಿಗಳ ಸಂಗಮ ಸ್ಥಾನದಲ್ಲಿದ್ದುದರಿಂದ ಮನಸೆಳೆಯುವ ಪ್ರಕೃತಿ ಸೌಂದರ್ಯದಿಂದ ತುಂಬಿತ್ತು. ಇದರ ಸುತ್ತಮುತ್ತಲಿನ ಪ್ರದೇಶದಲ್ಲಿ ಅನೇಕ ಬೌದ್ಧ ಗುಹೆಗಳು ಮತ್ತು ಒಂದು ರಾಮ ಲಿಂಗ ದೇವಸ್ಥಾನ ಇದ್ದವು. ಇಲ್ಲಿಯ ಇತರ ಗಮನಾರ್ಹ ಸ್ಥಳ ಗಳೆಂದರೆ ಕಾಳಿ ನದಿಗೆ ಅಡ್ಡವಾಗಿ ಇತ್ತೀಚೆಗೆ ನಿರ್ಮಿಸಿರುವ ಭಾರಿ

ಅಣೆಕಟ್ಟೆ ಮತ್ತು ಕಾಳಿ ನದೀ ಜಲವಿದ್ಯುದಾಗಾರ. ಹಿಂದಿದ್ದ ಸೂಪಾ ಪಟ್ಟಣಕ್ಕೆ ಸನಿಹಪದಲ್ಲಿಯೇ ಈಗ ಗಣೇಶಗುಡಿ (ಜನ: 4,922-1981) ಎಂಬ ಹೊಸ ಪಟ್ಟಣವೊಂದು ತಲೆಯೆತ್ತಿದೆ.

**ಸೇಡಂ :** (ಕಲ್ಬುರ್ಗಿ ಜಿ; ತಾ. ಕೇ; ಜನ: 15,823) ಸೇಡಂ ಬೆಂಗಳೂರಿನಿಂದ 681 ಕಿಮೀ ಹಾಗೂ ವಾಡಿ ರೈಲು ಕೂಡುಸಿಲ್ದಾಣದಿಂದ ಬ್ರಾಡ್‌ಗೇಜ್ ಮಾರ್ಗದಲ್ಲಿ ಸುಮಾರು 40 ಕಿಮೀ ದೂರವಿದೆ. ಪ್ರಾಚೀನ ಸ್ಥಳವಾದ ಇದನ್ನು 'ಸೇಡಿಂಬಪುರ' ಎಂದು ಕರೆಯುತ್ತಿದ್ದರು. ಇಲ್ಲಿ ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ 300 ಮಹಾಜನರಿದ್ದ ಒಂದು ಅಗ್ರಹಾರ ವಿತ್ತು. ನಿಜಾಮರ ಆಳ್ವಿಕೆಯಲ್ಲಿ ಈ ತಾಲೂಕಿನಲ್ಲಿ 45 ಜಹಗೀರು ಗ್ರಾಮಗಳಿದ್ದವು. ಆದರೆ ಎಲ್ಲಾ ಜಹಗೀರುಗಳನ್ನೂ ಈಗ ರದ್ದುಗೊಳಿಸಲಾಗಿದೆ. ಸೇಡಂ ಪಟ್ಟಣದಲ್ಲಿ ಅನೇಕ ಹಳೆಯ ದೇವಸ್ಥಾನಗಳೂ, ಮಸೀದಿಗಳೂ ಇವೆ. ಇವುಗಳಲ್ಲಿ ಪ್ರಮುಖ ಹಾಗೂ ಆಸಕ್ತಿಯುತವಾದವುಗಳೆಂದರೆ ಸುಂದರವಾದ ಜುಮ್ಮಾ ಮಸೀದಿ, ಅಂದವಾದ ಕೆತ್ತನೆಯುಳ್ಳ ಸ್ತಂಭಗಳಿರುವ ಪಂಚಲಿಂಗ ದೇವಸ್ಥಾನ, ಎತ್ತರವಾದ ಗರುಡಗಂಬ ಇರುವ ಮಾಣಿಕೇಶ್ವರ ದೇವಸ್ಥಾನ ಹಾಗೂ ಜೈನ ಮಂದಿರ. ಸೇಡಂ ತಾಲೂಕಿನ ಯಾನಗುಂದಿ ಎಂಬ ಹಳ್ಳಿ ಮಾಣಿಕಮ್ಮ ಅಥವಾ ಮಾಣಿಕೇಶ್ವರ ದೇವಸ್ಥಾನದಿಂದಾಗಿ ಪ್ರಸಿದ್ಧವಾಗಿದೆ. ಇದರ ಸಮೀಪದಲ್ಲೇ ಮೌಲಾಲಿದರ್ಗಾ ಇದೆ. ಕಲ್ಬುರ್ಗಿ ನಗರದಿಂದ ಸುಮಾರು 35 ಕಿಮೀ ದೂರದಲ್ಲಿ ಕಾಗ್ನಾ ನದಿ ದಂಡೆಯ ಮೇಲಿರುವ ಪ್ರಾಚೀನ ನಗರ ಮಳಖೇಡವು ಸೇಡಂ ತಾಲೂಕಿನಲ್ಲಿಯೇ ಇದೆ. ಇತಿಹಾಸ ಪ್ರಸಿದ್ಧವಾದ 'ಮಾನ್ಯಖೇಟ' ರಾಜಧಾನಿ ಇದೇ. ಕ್ರಿ. ಶ. 753ರಿಂದ ಮೊದಲ್ಗೊಂಡು ಎರಡು ಶತಮಾನಗಳಿಗೂ ಹೆಚ್ಚು ಕಾಲ ಆಡಳಿತ ನಡೆಸಿದ ರಾಷ್ಟ್ರಕೂಟರ ಕಾಲದಲ್ಲಿ ಇದು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಈ ನಗರವನ್ನು ಅಭಿವೃದ್ಧಿ ಪಡಿಸಿದವನು ಒಂದನೇಯ ಅಮೋಘವರ್ಷ (ಕ್ರಿ. ಶ. 814). ರಾಷ್ಟ್ರಕೂಟರ ಅವನತಿಯ ನಂತರ ಈ ನಗರ ತನ್ನ ಪ್ರಾಮುಖ್ಯ ವನ್ನು ಕಳೆದುಕೊಂಡಿತು. ಇಲ್ಲಿ, ಬಹುಶಃ ರಾಷ್ಟ್ರಕೂಟರ ನಂತರದ, ಕೋಟೆ ಕೊತ್ತಳಗಳ ಅವಶೇಷಗಳಿವೆ. ಮಧ್ವಾ ಚಾರ್ಯರ ಕೃತಿಗಳ ಟೀಕಾಕಾರರಲ್ಲಿ ಪ್ರಸಿದ್ಧರಾದ ಜಯತೀರ್ಥ ಯತಿ (ಟೀಕಾಚಾರ್ಯ)ಗಳ ಸಮಾಧಿ ಇರುವ ಕಾರಣದಿಂದಾಗಿ ಮಾಧ್ವ ಪಂಥದವರಿಗೆ ಇದು ಒಂದು ಪವಿತ್ರ ಸ್ಥಳವೆನಿಸಿದೆ. ರಾಷ್ಟ್ರಕೂಟ ಸಾಮ್ರಾಜ್ಯದ ರಾಜಧಾನಿಯಾಗಿ ಇದು ಅನೇಕಾ ನೇಕ ವಿದ್ವಾಂಸರಿಗೆ ಆಶ್ರಯ ನೀಡಿತ್ತು. ರಾಷ್ಟ್ರಕೂಟ ಚಕ್ರವರ್ತಿ ಇಮ್ಮಡಿ ಕೃಷ್ಣ ಮತ್ತು ಅವನ ಉತ್ತರಾಧಿಕಾರಿಗಳ ಆಶ್ರಯದಲ್ಲಿದ್ದ ಸುಪ್ರಸಿದ್ಧ ಅಪಭ್ರಂಶ ಕವಿ ಪುಷ್ಪದಂತ ಇಲ್ಲಿಯೇ ಬಾಳಿದವನು. ಇವನ ಮುಖ್ಯ ಕೃತಿಗಳೆಂದರೆ ಮಹಾಪುರಾ, ಜಸಹರ ಚರಿಉ ಮತ್ತು ಣಯಕುಮಾರ ಚರಿಉ.

**ಸೊರಬ :** (ಶಿವಮೊಗ್ಗ ಜಿ; ತಾ. ಕೇ; ಜನ: 6,686) ಸೊರಬ ಬೆಂಗಳೂರಿನಿಂದ ಸುಮಾರು 360 ಕಿಮೀ ಮತ್ತು ಶಿವಮೊಗ್ಗದಿಂದ 88 ಕಿಮೀ ದೂರದಲ್ಲಿ ದಂಡಾವತಿ ನದಿ ದಂಡೆಯ ಮೇಲಿದೆ. ಸುರಭಿ ಸೇರಿದಂತೆ ನಾಲ್ಕು ದೇವಲೋಕದ ಹಸುಗಳು ಇಲ್ಲಿಯ ರಂಗನಾಥ ದೇವಸ್ಥಾನದಲ್ಲಿರುವ ಮೂರ್ತಿಯ ಮೇಲೆ ಹಾಲು ಸುರಿಸಿದವೆಂಬ ಐತಿಹ್ಯವನ್ನಾಧರಿಸಿ, ಹಿಂದೆ ಇದನ್ನು ಸುರಭೀಪುರ ಎಂದು ಕರೆಯುತ್ತಿದ್ದರು. ಇಲ್ಲಿರುವ ಶ್ರೀ ನರಹರಿ ಸದ್ಗುರು ಪೀಠವನ್ನು 1890ರಲ್ಲಿ ಸ್ಥಾಪಿಸಲಾಯಿತು. ಸೊರಬ ಗುಡಿಗಾರರ (ಶ್ರೀಗಂಧದ ಕೆತ್ತನೆ ಕೆಲಸಗಾರರ) ಕೇಂದ್ರ ವಾಗಿದ್ದು, ಇವರು ನಾಜೂಕಾದ ಮತ್ತು ವಿವರಪೂರ್ಣ ಪರಂಪರೆಯ ಕುಶಲ ಕೆಲಸಗಾರಿಕೆಗೆ ಖ್ಯಾತರಾಗಿದ್ದಾರೆ. ಇದಕ್ಕೆ ಹೊಂದಿಕೊಂಡಂತೆ ಇರುವ ಕೋಡಕಣಿ ಹಳ್ಳಿಯ ಸಿದ್ದೇಶ್ವರ ದೇವಸ್ಥಾನದ ನವರಂಗದ ಕೆಂಪು ವರ್ಣದ ಕಂಬಗಳು ಬಹಳ ಸೊಗಸಾಗಿವೆ. ಸೊರಬದ ನಾಗರಿಕ ಆಡಳಿತವನ್ನು ಪುರ ಸಭೆ ನಡೆಸುತ್ತದೆ. ಈ ತಾಲೂಕಿನ ಇತರ ಮುಖ್ಯ ಸ್ಥಳ ಗಳೆಂದರೆ : ಉದ್ರಿ (ಜನ: 2,630)ಯು ಸೊರಬ ಪಟ್ಟಣದಿಂದ ಈಶಾನ್ಯಕ್ಕೆ ಸುಮಾರು 15 ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ ಇದನ್ನು ಉದ್ದೂರು, ಉದ್ಧರೆ ಮತ್ತು ಉದ್ಧರಪುರ ಎಂದು ಕರೆಯಲಾಗಿದೆ. ಕೋಟೆ ಗೋಡೆಯ ಅವಶೇಷಗಳು ಮತ್ತು ಅನೇಕ ವೀರಗಲ್ಲುಗಳು ಇಲ್ಲಿ ಕಂಡುಬರುತ್ತವೆ. ಇಲ್ಲಿ ಪುರಾತನ ಈಶ್ವರ ದೇವಾಲಯವೊಂದಿದೆ. ಚಾಳುಕ್ಯ ಶೈಲಿಯಲ್ಲಿರುವ ಇದು ಗರ್ಭಗೃಹ, ಶುಕನಾಸಿ ಮತ್ತು ನವರಂಗಗಳನ್ನು ಹೊಂದಿದೆ. ದೇವಾಲಯದ ಬಾಗಿಲವಾಡವು ಅಂದವಾದ ಕೆತ್ತನೆ ಗಳಿಂದ ಕೂಡಿದೆ. ಇದೇ ಊರಿನಲ್ಲಿ ಒಂದು ಜೈನ ಬಸದಿಯಿದ್ದು ಗರ್ಭಗೃಹ, ಒಳಕೋಣೆ ಮತ್ತು ನವರಂಗಗಳನ್ನು ಹೊಂದಿದೆ. ಒಂಬತ್ತು ಮೆಟ್ಟಿಲುಗಳಿಂದಾದ ಇದರ ಶಿಖರ ಪಿರಮಿಡ್ಡಿನ ಮಾದರಿಯಲ್ಲಿದೆ. ಗರ್ಭಗೃಹದಲ್ಲಿ ಈಗ ಗಣೇಶನ ವಿಗ್ರಹವಿದೆ. ಪದ್ಮಪೀಠದ ಮೇಲೆ ಆಸೀನವಾದ ಲಕ್ಷ್ಮೀನಾರಾಯಣಮೂರ್ತಿ ಇರುವ ಲಕ್ಷ್ಮೀನಾರಾಯಣ ದೇವಾಲಯ ಶ್ರೇಷ್ಠ ಕೆಲಸಗಾರಿಕೆ ಯಿಂದಾಗಿ ಹೆಸರಾಗಿದೆ. ಇತ್ತೀಚೆಗೆ ಇಲ್ಲಿ ಅಂದವಾದ ಒಂದು ವೀರಭದ್ರದೇವರ ಗುಡಿಯನ್ನು ನಿರ್ಮಿಸಿದ್ದಾರೆ. ಮಾವಳ್ಳಿ ಎಂಬ ಊರಿನ ಕಲ್ಲೇಶ್ವರ ದೇವಸ್ಥಾನದ ಬಳಿಯಲ್ಲಿರುವ ವೀರ ಗಲ್ಲುಗಳು ಉತ್ತಮ ಮಾದರಿಗಳಾಗಿವೆ. ಕುಬಟೂರು (ಜನ: 1,140) ಸೊರಬ ಪಟ್ಟಣದಿಂದ ಈಶಾನ್ಯಕ್ಕೆ ಸುಮಾರು 29 ಕಿಮೀ ದೂರದಲ್ಲಿದೆ. ಇದು ಅತಿ ಪುರಾತನ ಸ್ಥಳವಾಗಿದ್ದು ಹಿಂದೆ ಕುಪ್ಪಟೂರು ಮತ್ತು ಕುಂತಲ ನಗರ ಎಂಬ ಹೆಸರುಗಳಿಂದ ಕರೆಯಲಾಗಿದೆ. ಇದು ಒಂದು ಅಗ್ರಹಾರವಾಗಿತ್ತು. ಕ್ರಿ .ಶ. 1017ರಲ್ಲಿ ಕಟ್ಟಿದ ಈ ಊರಿನ ಪಾರ್ಶ್ವನಾಥ ಬಸದಿ ಒಂದು ಉದ್ದವಾದ ಮಂಟಪ ಹಾಗೂ ಗರ್ಭಗೃಹವನ್ನು ಹೊಂದಿದೆ. ಇಲ್ಲಿನ ರಾಮೇಶ್ವರ ದೇವಸ್ಥಾನವು (ಕ್ರಿ. ಶ. ಸು. 900) ಮೂಲತಃ ರಾಷ್ಟ್ರಕೂಟರ ಕಾಲದ್ದಾಗಿದ್ದು ಪಾರ್ಶ್ವನಾಥ

ಬಸದಿಯ ಉತ್ತರಕ್ಕಿದೆ. ಇದು ಗರ್ಭಗೃಹ, ಒಳಪ್ರದಕ್ಷಿಣಾ ಪಥ ಮತ್ತು ರಂಗಮಂಟಪಗಳಿಂದ ಕೂಡಿದೆ. ನವರಂಗವು ಸಪ್ತಮಾತೃಕೆಯರ ವಿಗ್ರಹ ಪಟ್ಟಿಕೆಯನ್ನು ಮತ್ತು ಮಹಿಷಾಸುರ ಮರ್ದಿನಿಯ ಸುಂದರ ಶಿಲ್ಪದಿಂದ ಅಲಂಕೃತವಾಗಿದೆ. ಹೊಯ್ಸಳ ಶಾಸನವೊಂದರಲ್ಲಿ ಇದನ್ನು ಕೋಟೀಶ್ವರ ದೇವಸ್ಥಾನವೆಂದು ಕರೆಯಲಾಗಿದೆ. ಈ ಹಳ್ಳಿಯಿಂದ ಪಶ್ಚಿಮ ದಿಕ್ಕಿಗೆ ಚಿಂತಾಮಣಿ ನರಸಿಂಹ ದೇವಾಲಯವಿದೆ. ಇಲ್ಲಿರುವ ನರಸಿಂಹರಿಗೆ ಕೇವಲ ಎರಡು ಕೈಗಳಿವೆ. ದ್ಯಾಮವ್ವನ ಗುಡಿಯಲ್ಲಿ, ಪ್ರಭಾವಳಿ ಸಹಿತ 2.44 ಮೀ ಗಳಷ್ಟು ಎತ್ತರವಿರುವ, ಹದಿನಾರು ಕೈಗಳಿರುವ ಉಗ್ರರೂಪಿ ದ್ಯಾಮವ್ವ ದೇವತೆಯ ವಿಗ್ರಹವಿದೆ. ದೇವಸ್ಥಾನದ ಹಕ್ಕಲು ಎಂದು ಹೆಸರಾಗಿರುವ ಕೋಟಿಪುರ (ಜನ: 511)ವು ಕುಬಟೂರಿನಿಂದ ಪೂರ್ವಕ್ಕೆ ಸುಮಾರು ಎರಡು ಕಿಮೀ ದೂರದಲ್ಲಿದೆ. ಇಲ್ಲಿರುವ ಖೈಟಭೇಶ್ವರ ದೇವಸ್ಥಾನವು ಚಾಳುಕ್ಯ ವಾಸ್ತುಶಿಲ್ಪ ಶೈಲಿಯ ಉತ್ತಮ ಮಾದರಿಯಾಗಿದೆ. ಇದರ ಗರ್ಭಗೃಹದ ಮೇಲಿನ ಶಿಖರದ ಮೇಲ್ಭಾಗದಲ್ಲಿ ಮಹಿಷಾಸುರ ಮರ್ದಿನಿ, ಭೈರವ ಮತ್ತು ಮಹೇಶ್ವರ ಮುಂತಾದ ಪ್ರತಿಮೆಗಳಿವೆ. ಎತ್ತರವಾಗಿಯೂ ವಿಶಾಲವಾಗಿಯೂ ಇರುವ ಈ ದೇವಸ್ಥಾನದ ಮಂಟಪದ ಸ್ತಂಭಗಳು ತಿರುಗುಣಿ ಯಂತ್ರದಲ್ಲಿ ತಿರುಗಿಸಿದವಾಗಿವೆ. ಈ ದೇವಸ್ಥಾನದ ಶುಕನಾಸಿಯ ಬಾಗಿಲವಾಡದ ಮೇಲೆ ಗಜಲಕ್ಷ್ಮಿಯ ಶಿಲ್ಪವಿದೆ. ಶಾಸನಗಳಲ್ಲಿ ಕೋಟೀಶ್ವರ ಎಂದು ಕರೆದಿದ್ದರೂ ಇದು ಖೈಟಭೇಶ್ವರ ದೇವಸ್ಥಾನವೆಂದೇ ಜನಪ್ರಿಯವಾಗಿದೆ. ಸ್ಥಳಪುರಾಣದ ಪ್ರಕಾರ ಖೈಟಭನು ಶಿವನಿಂದ ಹತನಾದ ಓರ್ವ ದಾನವ. ಕಳದಿ ಚೆನ್ನಮ್ಮ ಇದೇ ಊರವಳು. ಆನವಟ್ಟಿ (ಜನ: 4,794) ಅದೇ ಹೆಸರಿನ ಹೋಬಳಿಯ ಕೇಂದ್ರ. ಇದು ಸೊರಬದಿಂದ ಉತ್ತರಕ್ಕೆ ಸುಮಾರು 25 ಕಿಮೀ ದೂರದಲ್ಲಿದೆ. ಸ್ಥಳ ಪುರಾಣ ಹೇಳುವಂತೆ ಹಿಂದಿನ ದೊರೆಗಳು ಇದನ್ನು ಆನೆ ಲಾಯವಾಗಿ ಉಪಯೋಗಿಸುತ್ತಿದ್ದುದರಿಂದ ಈ ಹೆಸರು ಬಂತು.

**ಸೋಂದೆ :** (ಉ. ಕ. ಜಿ; ಸಿರಸಿ ತಾ; ಜನ: 969) ಸೋಂದೆಯು ಸಿರಸಿಯಿಂದ 35 ಕಿಮೀ ದೂರವಿದೆ. ಹಿಂದೆ ಇದನ್ನು ಸ್ವಾದಿ, ಸೋಂದೆ, ಸೋಂದಕೆರೆ ಮತ್ತು ಸುದಾಪುರ ಎಂಬ ಹೆಸರುಗಳಿಂದ ಕರೆಯಲಾಗಿದೆ. ಇದೊಂದು ಯಾತ್ರಾಸ್ಥಳ. ಸೋಂದೆಯ ನಾಯಕರು ಸಿರಸಿ, ಹಳಿಯಾಳ, ಅಂಕೋಲ, ಕಾರವಾರ ಮತ್ತು ಇಂದಿನ ಗೋವೆಯ ಕೆಲವು ಭಾಗಗಳ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ್ದರು. ಸಂಕಣ್ಣನಾಯಕ ಮತ್ತು ಅವನ ಮಗ ಅರಸಪ್ಪನಾಯಕ ಸೋಂದೆ ಪ್ರಾಂತ್ಯದ ಪ್ರಸಿದ್ಧ ದೊರೆಗಳಾಗಿದ್ದರು. ಇದನ್ನು 1763ರಲ್ಲಿ ಹೈದರ್‌ಅಲಿ ಧ್ವಂಸ ಮಾಡಿದನು. ಇಲ್ಲೊಂದು ಹಳೆಯ ಕೋಟೆ ಮತ್ತು ಸ್ಮಾರ್ತ, ವೈಷ್ಣವ ಮತ್ತು ಜೈನರ ಮಠಗಳಿವೆ. ಈ ಮಠಗಳಲ್ಲಿ ಜೈನರದು ಶಿಥಿಲಾವಸ್ಥೆಯಲ್ಲಿದೆ. ಸೋಂದೆಕೆರೆಯಿಂದ ದಕ್ಷಿಣಕ್ಕೆ ಎತ್ತರವಾದ ಸ್ಥಳದಲ್ಲಿರುವ ಕೋಟೆಯೂ ಈಗ ಶಿಥಿಲವಾಗಿದೆ. ಈ ಮಠಗಳ ನಿರ್ಮಾಣದಲ್ಲಿ ಬಳಸಿರುವ ಗಾರೆ ಕೆಲಸದಿಂದ ಅಂದಿನ ವಾಸ್ತುಶಿಲ್ಪ ಕೌಶಲ್ಯದ ಕುರುಹುಗಳು ಕಾಣಬಹುದು. ಇಲ್ಲಿರುವ ಜೈನ ಮಠವು ಚಿಕ್ಕದಾಗಿದ್ದು ಎಂಟನೇಯ ಶತಮಾನದ್ದಾಗಿದೆ. ಸ್ಮಾರ್ತ ಮಠವು ಸ್ವರ್ಣವಲ್ಲಿಮಠ ಎಂದೂ, ವೈಷ್ಣವಮಠವು ವಾದಿರಾಜ ಮಠ ಎಂದೂ ಹೆಸರುವಾಸಿಯಾಗಿವೆ. ಸ್ವರ್ಣವಲ್ಲಿಮಠ ಹವ್ಯಕ ಬ್ರಾಹ್ಮಣರ ಗುರುಗಳ ಪೀಠದ ಕೇಂದ್ರಸ್ಥಾನವಾಗಿದ್ದು, ಇಲ್ಲಿ ಹನುಮಂತ, ಈಶ್ವರ, ಸದಾಶಿವ ಮತ್ತು ಮಾರಿಯಮ್ಮನ ದೇವಸ್ಥಾನಗಳಿವೆ. ಈ ಮಠವನ್ನು ಶೃಂಗೇರಿಮಠದ ಒಂದು ಉಪಶಾಖೆಯೆಂದು ಪರಿಗಣಿಸಲಾಗಿದೆ. ವಾದಿರಾಜಮಠದಲ್ಲಿ ನರಸಿಂಹ, ಜ್ಞಾನೇಶ್ವರಿ ಮತ್ತು ಭೂತಪ್ಪ ದೇವಸ್ಥಾನಗಳಿವೆ. ಇಲ್ಲಿ ಪ್ರತೀವರ್ಷ, ಮಾರ್ಚ್-ಏಪ್ರಿಲ್ ಮಾಹೆಯಲ್ಲಿ ನರಸಿಂಹ ರಥೋತ್ಸವ ಜರುಗುವುದು. ಈ ಜಾತ್ರೆಯಲ್ಲಿ ಈ ಭಾಗದ ಮುಸಲ್ಮಾನರೂ ಪಾಲ್ಗೊಂಡು ರಥವನ್ನು ಎಳೆಯುತ್ತಾರೆ. ವಾದಿರಾಜಮಠದಲ್ಲಿ ಅದರ ಸ್ಥಾಪಕ ವಾದಿರಾಜರ (ಕ್ರಿ.ಶ. 1480-1600) ಸಮಾಧಿಯಿದೆ. ಇವರು ಮಧ್ವಾಚಾರ್ಯರ ಪರಂಪರೆಯಲ್ಲಿ ಹತ್ತನೇ ಗುರು. ಈ ಕಾರಣದಿಂದ ಇದು ವಿಶೇಷ ಗೌರವಾದರಗಳಿಗೆ ಪಾತ್ರವಾಗಿದೆ. ಇದು ಮಧ್ವಾಚಾರ್ಯರು ಸ್ಥಾಪಿಸಲಾದ ಅಷ್ಟಮಠಗಳಲ್ಲೊಂದು. ಮಹಾ ವಿದ್ವಾಂಸರಾದ ಸಂತರಾದ ವಾದಿರಾಜರಿಗೆ ದೊರೆ ಅರಸಪ್ಪನಾಯಕನು ಪ್ರೋತ್ಸಾಹವಿತ್ತನು. ವಾದಿರಾಜರು ಅವರ ಕೃತಿ ತೀರ್ಥಪ್ರಬಂಧದಲ್ಲಿ, ಶಾಲ್ಮಲೀನದಿ ದಂಡೆಯ ಮೇಲೆ, ಸೋಂದೆಯಿಂದ ಐದು ಕಿಮೀ ದೂರದಲ್ಲಿ, ದಟ್ಟಡವಿಯೊಂದರ ನಡುವೆ ಇರುವ ತಪೋವನದ ವಿವರಪೂರ್ಣ ಚಿತ್ರಣ ನೀಡಿದ್ದಾರೆ. ಒಂದು ಕಡೆ ಶಾಲ್ಮಲೀನದಿ 91 ಮೀಟರುಗಳಷ್ಟು ಎತ್ತರದಿಂದ ಧುಮುಕುವುದು; ಸ್ಥಳೀಯರು ಇದನ್ನು ಶಿವಗಂಗಾ ಜಲಪಾತ ಎಂದು ಕರೆಯುವರು. ಈ ಸ್ಥಳದ ಇನ್ನಿತರ ವಿಶೇಷಗಳೆಂದರೆ ಗದ್ದಿಗೆಮಠ, ಹುಣಸೇಹೊಂಡ, ದೇವರಹೊಳೆ, ಮುತ್ತಿನಕೆರೆ ಮತ್ತು ಶಂಕರನಾರಾಯಣ ದೇವಸ್ಥಾನ. ಇಲ್ಲಿರುವ ತ್ರಿವಿಕ್ರಮ ದೇವಸ್ಥಾನದ ಮುಂಭಾಗದಲ್ಲಿ ಒಂದು ಧ್ವಜಸ್ತಂಭವಿದೆ. ಈ ಊರಿನಲ್ಲಿ ಅನೇಕ ಶಾಸನಗಳು ಸಿಕ್ಕಿದ್ದು, ಅವುಗಳಲ್ಲೊಂದು ವಾದಿರಾಜರ ಬಗ್ಗೆ ಮಾಹಿತಿ ನೀಡುತ್ತವೆ. ವೈಯಾಕರಣಿ ಭಟ್ಟಾಕಳಂಕನ ಸಮಾಧಿ ಸೋಂದೆಯಲ್ಲಿದೆ.

**ಸೋಮನಾಥಪುರ :** (ಪುಟ 516 ನೋಡಿ).

**ಸೋಮವಾರಪೇಟೆ :** (ಕೊಡಗು ಜಿ; ತಾ. ಕೇ; ಜನ: 6,936) ಸೋಮವಾರಪೇಟೆ ಮಡಿಕೇರಿ- ಹಾಸನ ಹೆದ್ದಾರಿಯಲ್ಲಿ, ಸಮುದ್ರಮಟ್ಟದಿಂದ 3,710 ಅಡಿಗಳಷ್ಟು ಎತ್ತರದಲ್ಲಿದೆ. ಇದು ಬೆಂಗಳೂರಿನಿಂದ 256 ಕಿಮೀ ಮಡಿಕೇರಿಯಿಂದ 40 ಕಿಮೀ ದೂರದಲ್ಲಿದೆ. ಇಲ್ಲಿ ಒಂದು ಪುರಸಭೆ ಇದೆ. ಈ ಪಟ್ಟಣದ

ಸುತ್ತಲೂ ಭತ್ತದ ಗದ್ದೆಗಳು, ಕಾಫಿ, ಏಲಕ್ಕಿ ಮತ್ತು ಕಿತ್ತಳೆ ಹಣ್ಣಿನ ತೋಟಗಳಿವೆ. ಇಲ್ಲಿ ವ್ಯವಸಾಯೋಪಕರಣಗಳ ಕಾರ್ಖಾನೆಯೊಂದಿದೆ. ಇಲ್ಲಿಂದ ಆರು ಕಿಮೀ ದೂರದಲ್ಲಿ ಅಬ್ಬಿ ಮಠ ಎಂಬ ವೀರಶೈವರ ಮಠವೊಂದಿದ್ದು ಇದನ್ನು 18ನೇಯ ಶತಮಾನದಲ್ಲಿ ಕೊಡಗಿನ ದೊರೆ ದೊಡ್ಡವೀರರಾಜನು ಸ್ಥಾಪಿಸಿದನು. ಸೋಮವಾರಪೇಟೆಯಿಂದ 19 ಕಿಮೀ ದೂರದ ಮಾದಾಪುರ ಎಂಬಲ್ಲಿ ಕೊಡಗಿನ ರಾಜಕುಮಾರರಿಬ್ಬರ ಸಮಾಧಿಗಳು ಮತ್ತು ವೀರಶೈವಮಠ ಇದೆ. ಇದೇ ತಾಲೂಕಿನ ನಂಜರಾಜಪಟ್ಟಣವನ್ನು ಪಿರಿಯಾಪಟ್ಟಣದ ಚೆಂಗಾಳ್ವ ದೊರೆಯಾದ ನಂಜರಾಜನು ಸ್ಥಾಪಿಸಿದನು. ಇಲ್ಲಿ ನಂಜುಂಡೇಶ್ವರ ದೇವಸ್ಥಾನವಿದೆ.

ಹಂಪೆ : (ಬಳ್ಳಾರಿ ಜಿ; ಹೊಸಪೇಟೆ ತಾ; ಜನ: 777) ಬೆಂಗಳೂರಿನಿಂದ 360 ಕಿಮೀ ಮತ್ತು ಹೊಸಪೇಟೆಯಿಂದ 10 ಕಿಮೀ ದೂರದಲ್ಲಿರುವ ಹಂಪೆ ಇಂದು ತುಂಗಭದ್ರಾನದಿ ತೀರದಲ್ಲಿರುವ ಒಂದು ಸಣ್ಣ ಹಳ್ಳಿ. ಹಿಂದೆ ಇದು ಪ್ರಸಿದ್ಧ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದಿತು. ಹಂಪೆಯ ಅವಶೇಷಗಳು ಒಂಬತ್ತು ಚ.ಮೈ. ವಿಸ್ತಾರದ ಪ್ರದೇಶದಲ್ಲಿ ಹರಡಿಹೋಗಿವೆ. ಈ ಪ್ರದೇಶದಲ್ಲೆಲ್ಲಾ ಮರಗಿಡಗಳಿಲ್ಲದೆ ಬರಿಯ ಗುಡ್ಡಗಳು ಹಳೆಯ ನಗರದ ಒಂದರ ಹಿಂದೆ ಒಂದರಂತೆ ಕೋಟೆಯ ಗೋಡೆಗಳನ್ನು ನೋಡಬಹುದು. ಕಣಿವೆ ಪ್ರದೇಶದಲ್ಲಿ ನಿರ್ಜನವಾದ ಹಾಳಾದ ಬೀದಿಗಳೂ, ಭಗ್ನವಾದ ಅರಮನೆಗಳೂ, ದೇವಾಲಯಗಳೂ ಕಂಡುಬರುತ್ತವೆ. ದಂತಕತೆಗಳ ಪ್ರಕಾರ ಈ ಸ್ಥಳವು ರಾಮಾಯಣ ಪ್ರಮುಖ ವ್ಯಕ್ತಿಗಳೊಂದಿಗೆ ಸಂಬಂಧ ಹೊಂದಿದೆ. ಇದನ್ನು ರಾಮಾಯಣಕಾಲದ ಕಿಷ್ಕಿಂಧೆಯೆಂದು ಪರಿಗಣಿಸಿದ್ದು ಎಂಟನೇಯ ಶತಮಾನದ ಒಂದು ಶಾಸನದಲ್ಲಿ ಪಂಪಾಕ್ಷೇತ್ರವೆಂದು ಕರೆಯಲ್ಪಟ್ಟಿದೆ. ಇಲ್ಲಿರುವ ಪಂಪಾ ವಿರೂಪಾಕ್ಷ ದೇವಾಲಯವು ಕಲ್ಯಾಣಿ ಚಾಳುಕ್ಯರ ಕಾಲದ್ದು. ಕಲ್ಯಾಣದ ಚಾಳುಕ್ಯರ ಹಾಗೂ ಹೊಯ್ಸಳರ ಕಾಲದಲ್ಲಿ ಇದು ಒಂದು ಸಮೃದ್ಧವಾದ ಕೇಂದ್ರವಾಗಿದ್ದಿತು. ಒಂದನೇಯ ಹರಿಹರನು ಇದನ್ನು 1336ರಲ್ಲಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ವಿಜಯನಗರದ ಸಾಮ್ರಾಜ್ಯದ ಅವಶೇಷಗಳೆಲ್ಲ ಬಹಳಷ್ಟು ಕಮಲಾಪುರದಿಂದ ಹಂಪಿಗೆ ಹೋಗುವ ರಸ್ತೆಯಲ್ಲಿ ಕಾಣಸಿಗುತ್ತವೆ. ಇಲ್ಲಿ ಮೊಟ್ಟಮೊದಲು ಸಿಗುವ ಸ್ಮಾರಕ ಕಮಲಾಪುರ-ಕಂಪಿಲಿ ರಸ್ತೆಯಲ್ಲಿರುವ ಗಾಣಿಗಿತ್ತಿ ಜಿನಾಲಯ. ಈ ಜೈನ ದೇವಾಲಯವನ್ನು ಇರುಗಪ್ಪನೆಂಬ ಜೈನ ದಂಡನಾಯಕನು ಕ್ರಿ.ಶ. 1385ರಲ್ಲಿ ನಿರ್ಮಿಸಿದನೆಂದು ಶಾಸನದಿಂದ ತಿಳಿದುಬರುತ್ತದೆ. ಮಾಲ್ಯವಂತ ರಘುನಾಥಸ್ವಾಮಿ ದೇವಾಲಯವನ್ನು ದ್ರಾವಿಡಶೈಲಿಯಲ್ಲಿ ಕಟ್ಟಲಾಗಿದೆ. ಕಮಲಾಪುರ-ಹಂಪಿ ರಸ್ತೆಯ ಉತ್ತರಕ್ಕಿರುವ ರಾಣಿಯರ ಸ್ನಾನಗೃಹ 15.2 ಮೀ ಉದ್ದವಿದ್ದು 1.8 ಮೀ ಆಳವಿದೆ. ಇದು ಇಂಡೋ-ಸಾರ್‌ಸೆನಿಕ್ ಶೈಲಿಯ ಕಟ್ಟಡ. ಮಹಾನವಮಿದಿಬ್ಬವು ಕೃಷ್ಣದೇವರಾಯನು ಓರಿಸ್ಸಾದ ಮೇಲೆ ಮಾಡಿದ ಯುದ್ಧದಲ್ಲಿ ಜಯಶೀಲನಾಗಿ ಬಂದಾಗ ಕಟ್ಟಿಸಿದ ದೊಡ್ಡ ಶಿಲಾವೇದಿಕೆ. ಇದರ ಮೇಲಿನ ಉಬ್ಬು ಚಿತ್ರಗಳು ದಸರಾ ಹಬ್ಬದ ವಿವಿಧ ದೃಶ್ಯಗಳನ್ನು ನಿರೂಪಿಸುತ್ತವೆ. (ಇದರ ಪರಿಸರದಲ್ಲಿ ಈಗ ವ್ಯಾಪಕ ಉತ್ಖನನ ನಡೆಸಿದ್ದಾರೆ). ಹಂಪೆಯ ಮಧ್ಯದಲ್ಲಿರುವ ಕಮಲ್‌ಮಹಲ್ ಗಾರೆಯ ಲೇಪವಿರುವ ಎರಡು ಮಹಡಿಗಳ ಕಟ್ಟಡ. ಟಂಕಸಾಲೆಯ ಸ್ಥಳವು ಮಂಟಪದ ಪಶ್ಚಿಮಕ್ಕೆ ಕೆಲವು ಮೀಟರುಗಳ ದೂರದಲ್ಲಿದೆ. ಹಜಾರ ರಾಮಸ್ವಾಮಿಯ ದೇವಾಲಯವು ರಾಜಮನೆತನದವರ ಪ್ರತ್ಯೇಕ ಪೂಜೆಗಾಗಿ ಮೀಸಲಾಗಿದ್ದಿತು. ಈ ದೇವಾಲಯದ ಹೊರಗಿನ ಗೋಡೆಗಳು ಹಲವಾರು ಸುಂದರವಾದ ಕೆತ್ತನೆಯ ಚಿತ್ರಗಳಿಂದ ತುಂಬಿವೆ. ದೇವಾಲಯದ ಒಳಾಂಗಣದ ಗೋಡೆಗಳ ಮೇಲೆ ರಾಮಾಯಣದ ದೃಶ್ಯಗಳನ್ನು ಕೆತ್ತಲಾಗಿದೆ. ಇಲ್ಲಿ ನಡೆದ ಉತ್ಖನನದಲ್ಲಿ ಅರಮನೆಯ ಕೆಲವು ಭಾಗಗಳು, ಕೆತ್ತನೆಗಳಿಂದ ಕೂಡಿದ ಒಂದು ಕಟ್ಟಡದ ತಳಭಾಗ, ಬೌದ್ಧಶಿಲ್ಪಗಳು ಪತ್ತೆಯಾಗಿವೆ. ದಿವಾನ್‌ಖಾನೆ ಅಥವಾ ಸಾರ್ವಜನಿಕ ಕಚೇರಿ ಈ ದೇವಾಲಯದ ಈಶಾನ್ಯದಲ್ಲಿದೆ. ಈಗ ಉಳಿದಿರುವ ಪ್ರಮುಖ ಸ್ಮಾರಕ ಎರಡು ಮಹಡಿಗಳುಳ್ಳ ಒಂದು ಕಟ್ಟಡ. ಗಜಶಾಲೆಯು ಇದರ ಪಶ್ಚಿಮಕ್ಕಿದೆ. ಗಜಶಾಲೆಯ ಪೂರ್ವಕ್ಕೆ ಎರಡು ಶಿಥಿಲವಾಗಿರುವ ಜೈನಬಸದಿಗಳಿವೆ. ರಂಗನಾಥಸ್ವಾಮಿ ಮತ್ತು ಪಟ್ಟದ ಎಲ್ಲಮ್ಮ ದೇವಾಲಯಗಳು ಹತ್ತಿರದಲ್ಲಿದ್ದು ಪ್ರೇಕ್ಷಣೀಯ ಕಟ್ಟಡಗಳಾಗಿವೆ. ಉದ್ದಾನ ವೀರಭದ್ರಸ್ವಾಮಿ (ಮುದುವೀರಣ್ಣ) ದೇವಾಲಯದ ಬಳಿಯಲ್ಲಿ ಅನೇಕ ಮಹಾಸತಿ ಕಲ್ಲುಗಳಿವೆ. 6.7 ಮೀಟರ್ ಎತ್ತರದ ಬೃಹತ್ ಏಕಶಿಲೆಯ ನರಸಿಂಹಮೂರ್ತಿಯನ್ನು ಕೃಷ್ಣದೇವರಾಯನು 1528ರಲ್ಲಿ ನಿರ್ಮಿಸಿದನು. ಈ ವಿಗ್ರಹದ ಉತ್ತರಕ್ಕೆ ಇರುವ ಒಂದು ಸಣ್ಣ ಗುಡಿಯಲ್ಲಿ ಬಡವಿಲಿಂಗವೆಂಬ ಬಹು ದೊಡ್ಡ ಶಿವಲಿಂಗವಿದೆ. ಇದರ ಬಳಿಯಿರುವ ಕೃಷ್ಣಸ್ವಾಮಿ ದೇವಾಲಯವನ್ನು ಕೃಷ್ಣದೇವರಾಯನು 1513ರಲ್ಲಿ ಕಟ್ಟಿಸಿ ಆಂಧ್ರದ ನೆಲ್ಲೂರು ಜಿಲ್ಲೆಯ ಉದಯಗಿರಿಯ ದೇವಾಲಯದಿಂದ ತಂದಿದ್ದ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದನು. ಈಗ ಆ ವಿಗ್ರಹವು ಮದರಾಸಿನ ವಸ್ತುಸಂಗ್ರಹಾಲಯದಲ್ಲಿದೆ. ಸಮೀಪದಲ್ಲಿಯೇ ಸುಂದರವಾದ ಕಲ್ಲುಕಟ್ಟಡಗಳಲ್ಲಿ ಸಾಸಿವೆಕಾಳು ಗಣೇಶ ಮತ್ತು ಕಡಲೇಕಾಳು ಗಣೇಶ ವಿಗ್ರಹಗಳಿವೆ. ವಿರೂಪಾಕ್ಷ ದೇವಾಲಯಕ್ಕೆ ಹೋಗುವ ಹಾದಿಯಲ್ಲಿರುವ ಹಂಪೆಯ ಪೇಟೆ ಬೀದಿಯು 32 ಮೀಟರ್ ಅಗಲ ಮತ್ತು 732 ಮೀಟರ್ ಉದ್ದವಿದೆ. ರಸ್ತೆಯ ಇಕ್ಕೆಲಗಳಲ್ಲಿ ಹಳೆಯ ಕಲ್ಲಿನ ಮಂಟಪಗಳಿವೆ. ಈ ಬೀದಿಯ ಪೂರ್ವದ ತುದಿಯಲ್ಲಿ ಒಂದು ಬೃಹತ್ ನಂದಿಯ ವಿಗ್ರಹವಿದ್ದು ಅಲ್ಲಿ ಚಾಳುಕ್ಯ ಶೈಲಿಯಲ್ಲಿ ಕಪ್ಪುಕಲ್ಲಿನ ಕಂಭಗಳ ಮೇಲೆ ಸುಂದರವಾಗಿ ನಿರ್ಮಿಸಿರುವ ಒಂದು ಮಂಟಪವಿದೆ. ಬೀದಿಯ ಪಶ್ಚಿಮದ ತುದಿಯಲ್ಲಿ ವಿರೂಪಾಕ್ಷ ದೇವಾಲಯವಿದ್ದು ದೇವಾಲಯದ ಪೂರ್ವದ ದ್ವಾರದಲ್ಲಿ ಬಿಷ್ಟಪ್ಪಯ್ಯ

ಎಂಬ ದಂಡನಾಯಕನ ಹೆಸರಿನಿಂದ ಕರೆಯಲಾಗುವ ಬಿಷ್ಟಪ್ಪಯ್ಯನ ಗೋಪುರವೆಂಬ ಬಹು ಎತ್ತರದ ಗೋಪುರವಿದೆ. ಈ ದೇವಾಲಯದಲ್ಲಿ ಶಿವ, ಪಂಪಾ ಮತ್ತು ಭುವನೇಶ್ವರಿ ಇವರ ಗರ್ಭಗುಡಿಗಳಿವೆ. ಈ ಮಂದಿರದ ಕೆಲವು ಭಾಗಗಳು ವಿಜಯನಗರದ ಸಾಮ್ರಾಜ್ಯಕ್ಕಿಂತಲೂ ಹಳೆಯವು. ವಿಜಯನಗರದ ದೊರೆಗಳು ಈ ದೇಗುಲವನ್ನು ವಿಸ್ತರಿಸುತ್ತಾ ಹೋದರು. ಭುವನೇಶ್ವರಿ ಮಂದಿರದಲ್ಲಿ ಹನ್ನೊಂದು ಅಥವಾ ಹನ್ನೆರಡನೇಯ ಶತಮಾನಕ್ಕೆ ಸೇರಿದ ಕಲ್ಯಾಣಿ ಚಾಳುಕ್ಯ ಮಾದರಿಯ ಬಾಗಿಲುವಾಡವಿದೆ. ಇದರ ಉಭಯ ಪಾರ್ಶ್ವಗಳಲ್ಲಿ ಸಂದುಗಳುಳ್ಳ ಶಿಲಾ ಫಲಕಗಳಿವೆ. ಕೃಷ್ಣರಾಯನು ಕಟ್ಟಿಸಿದ ಕಲ್ಯಾಣಮಂಟಪದಲ್ಲಿ ಹಿಂಗಾಲಲ್ಲಿ ನಿಂತ ಪ್ರಾಣಿಗಳ ಆಕೃತಿಗಳನ್ನುಳ್ಳ ಕಣ ಶಿಲೆಯ ಕಂಬಗಳಿವೆ. ಇದರ ಒಳಛಾವಣಿಯಲ್ಲಿ ದಶಾವತಾರ ಮತ್ತು ಶಿವಪುರಾಣದ ದೃಶ್ಯಗಳನ್ನು ಚಿತ್ರಿಸಲಾಗಿದೆ. ಹಂಪೆಯ ಬಜಾರಿನ ಪೂರ್ವದ ತುದಿಯಿಂದ ತುಂಗಭದ್ರಾನದಿಗೆ ಹೋಗುವ ಕಲ್ಲು ಹಾಸಿದ ಹಾದಿಯಿದೆ. ಅಲ್ಲಿಂದ ಮುಂದೆ ಬಂಡೆಗಳ ಮೂಲಕ ಹಾದು ಕೋದಂಡ ರಾಮಸ್ವಾಮಿಯ ದೇವಾಲಯಕ್ಕೆ ಹೋಗಬಹುದು. ಸೂಳೆ ಬಜಾರಿನ ಉತ್ತರದ ತುದಿಯಲ್ಲಿ 1539ರಲ್ಲಿ ಅಚ್ಯುತರಾಯ ಕಟ್ಟಿಸಿದ ಅಚ್ಯುತರಾಯಸ್ವಾಮಿ ದೇವಾಲಯವಿದೆ. ಇದರ ಸಮೀಪದಲ್ಲಿಯೇ ಸುಗ್ರೀವನು ಸೀತೆಯ ಆಭರಣಗಳನ್ನು ಬಚ್ಚಿಟ್ಟಿದ್ದನೆಂದು ಹೇಳುವ ಒಂದು ಗುಹೆಯಿದೆ. ತುಂಗಭದ್ರಾನದಿಯನ್ನು ದಾಟಿ (ಆನೆಗೊಂದಿಗೆ ಹೋಗಲು) ಏಕಶಿಲಾ ಕಂಬಗಳಿಂದ ನಿರ್ಮಿಸಿದ ಭಗ್ನವಾಗಿರುವ ಸೇತುವೆಯ ಅವಶೇಷಗಳನ್ನು ನೋಡಬಹುದು. ಕಲ್ಲಿನ ತೋರಣದಂತಿರುವ ಅಡ್ಡಪಟ್ಟಿಯಿಂದ ಕೂಡಿಸಿದ ಎರಡು ಕಲ್ಲಿನ ಕಂಬಗಳನ್ನು ತುಲಾಭಾರದ ಸ್ಥಳವೆಂದು ಹೇಳುತ್ತಾರೆ. ಇಲ್ಲಿಯ ವಿಜಯನಗರದ ದೊರೆಗಳು ಚಿನ್ನದಲ್ಲಿ ತುಲಾಭಾರ ಮಾಡಿಸಿಕೊಳ್ಳುತ್ತಿದ್ದರಂತೆ. ವಿಜಯವಿಠ್ಠಲಸ್ವಾಮಿಯ ದೇವಾಲಯದ ನಿರ್ಮಾಣವನ್ನು ಕೃಷ್ಣದೇವರಾಯನು ಪ್ರಾರಂಭಿಸಿದನು. ಇದಕ್ಕೆ ಕೆಲವು ಗ್ರಾಮಗಳನ್ನು ದತ್ತಿ ನೀಡಿದ್ದನು. ಈ ದೇವಾಲಯದ ಮುಖ್ಯದ್ವಾರದ ಮುಂದೆ ಒಂದು ದೊಡ್ಡ ಬಜಾರಿನ ಅವಶೇಷಗಳು ಹರಡಿ ಹೋಗಿವೆ. ಹಂಪೆಯ ಸ್ಮಾರಕಗಳಲ್ಲಿ ಬಹು ಸುಂದರವಾಗಿರುವ ಏಕಶಿಲೆಯ ರಥವೂ ಇಲ್ಲಿ ಕಾಣಸಿಗುತ್ತದೆ. ಈ ದೇವಾಲಯದ ಬಳಿಯಲ್ಲೇ ಪುರಂದರದಾಸರ ಮಂಟಪವಿದೆ. ಖ್ಯಾತ ಸಂತರಾದ ಪುರಂದರದಾಸರು ಈ ಮಂಟಪದಲ್ಲಿ ಕುಳಿತು ಕೀರ್ತನೆಗಳನ್ನು ರಚಿಸುತ್ತಿದ್ದರೆಂದು ಹೇಳುತ್ತಾರೆ. ಇಲ್ಲಿಯ ರತ್ನಕೂಟಪರ್ವತದಲ್ಲಿ ಒಂದು ಜೈನ ಆಶ್ರಮವಿದೆ. ವಿರೂಪಾಕ್ಷ ದೇವಾಲಯದ ಬಳಿಯಿರುವ ಹೇಮಕೂಟಪರ್ವತದ ಮೇಲೆ ಬಾದಾಮಿ ಚಲುಕ್ಯರ ಕಾಲದ ಒಂದು ದೇವಾಲಯವೂ ಕದಂಬ ನಾಗರಶಿಖರಗಳುಳ್ಳ ಕೆಲವು ದೇವಾಲಯಗಳೂ ಇವೆ. ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಹಂಪೆಯು ಕವಿ ಹರಿಹರ, ಪುರಂದರದಾಸ, ಕನಕದಾಸ, ವ್ಯಾಸತೀರ್ಥ, ಲಕ್ಕಣ್ಣ ದಂಡೇಶ ಮೊದಲಾದವರ ಜೀವನ ಸಾಧನೆಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಇದನ್ನು ಒಂದು ತೆರದ ವಸ್ತುಸಂಗ್ರಹಾಲಯವೆಂದು ಕರೆಯಲಾಗಿದೆ. ಹಳೆಯ ವಿಜಯನಗರವನ್ನು ಒಳಗೊಂಡಿದ್ದ ಕಮಲಾಪುರವು ಹೊಸಪೇಟೆಯ ಈಶಾನ್ಯಕ್ಕೆ ಹನ್ನೆರಡು ಕಿಮೀ ದೂರದಲ್ಲಿದೆ. ಇದು ಆನೆಗುಂದಿ ರಾಜರ ನಿವಾಸಸ್ಥಾನವಾಗಿದ್ದಿತು. ಇಲ್ಲಿರುವ ಕೋಟೆಗೆ ಗುಂಡಗಿರುವ ಬತೇರಿಗಳಿವೆ. ಕೋಟೆಯಲ್ಲಿರುವ ಒಂದು ಕಲ್ಲಿನ ಬಾವಿಯು ಬ್ರಹ್ಮನಿಗೆ ಪೂಜ್ಯತೀರ್ಥಸ್ಥಳವಾಗಿದ್ದಿತಂತೆ. ಇಲ್ಲೊಂದು ಸಣ್ಣ ಪ್ರಾಚ್ಯವಸ್ತು ಸಂಗ್ರಹಾಲಯವಿದೆ. ಕಮಲಾಪುರದಲ್ಲೊಂದು ಪಂಚಾಯಿತಿ ಸಮಿತಿಯಿದೆ.

**ಹಗರಿಬೊಮ್ಮನಹಳ್ಳಿ :** (ಬಳ್ಳಾರಿ ಜಿ; ತಾ. ಕೇ; ಜನ: 1971ರಲ್ಲಿ 3,001) ಬಳ್ಳಾರಿಗೆ 86 ಕಿಮೀ ದೂರದಲ್ಲಿರುವ ಹಗರಿಬೊಮ್ಮನಹಳ್ಳಿಯು 1974ರ ನವೆಂಬರ್‌ನಲ್ಲಿ ತಾಲೂಕು ಕೇಂದ್ರವಾಯಿತು. ಹಿಂದಿನ ಮಲ್ಲಾಪುರ ತಾಲೂಕು ಮತ್ತು ಹಡಗಲಿ ಮತ್ತು ಕೂಡ್ಲಿಗಿ ತಾಲೂಕುಗಳ ಕೆಲವು ಭಾಗಗಳನ್ನು ಸೇರಿಸಿ ಈ ಹೊಸ ತಾಲೂಕನ್ನು ರಚಿಸಲಾಯಿತು. ಇದೊಂದು ದೊಡ್ಡ ವಾಣಿಜ್ಯ ಕೇಂದ್ರವಾಗಿದ್ದು ಇಲ್ಲಿ ಅನೇಕ ಎಣ್ಣೆ ಗಿರಣಿಗಳಿವೆ. ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾದ ಗ್ರಾಮಗಳ ಕುಟುಂಬಗಳಿಗೆ ಇಲ್ಲಿ ಪುನರ್ವಸತಿ ಕಲ್ಪಿಸಲಾಗಿದೆ. ಈ ಊರಿನಿಂದ ನಾಲ್ಕು ಕಿಮೀ ದೂರದಲ್ಲಿರುವ ಹಗರಿಬೊಮ್ಮನಹಳ್ಳಿ ಯೋಜನೆಯಲ್ಲಿ ಚಿಕ್ಕ ಹಗರಿನದಿಗೆ 1,784 ಮೀಟರ್ ಉದ್ದ 15.2 ಮೀಟರ್ ಎತ್ತರದ ಒಂದು ಮಣ್ಣಿನ ಅಣೆಕಟ್ಟನ್ನು ನಿರ್ಮಿಸಲಾಗಿದೆ. ಈ ಯೋಜನೆಗೆ ಒಟ್ಟು 250 ಲಕ್ಷ ರೂಪಾಯಿ ವೆಚ್ಚವಾಗಿದೆ.

**ಹಡಗಲಿ :** (ಬಳ್ಳಾರಿ ಜಿ; ತಾ. ಕೇ; ಜನ: 13,723) ಹಡಗಲಿ ಅಥವಾ ಹೂವಿನ ಹಡಗಲಿಯು ಬಳ್ಳಾರಿಯ ಪಶ್ಚಿಮಕ್ಕೆ 150 ಕಿಮೀ ಮತ್ತು ಬೆಂಗಳೂರಿನಿಂದ ವಾಯುವ್ಯಕ್ಕೆ 341 ಕಿಮೀ ದೂರದಲ್ಲಿರುವ ಸುಂದರವೂ ಆರೋಗ್ಯಕರವೂ ಆಗಿರುವ ತಾಣ. ಶಾಸನಗಳಲ್ಲಿ ಇವನ್ನು 'ಪೂವಿನ ಪಡಂಗಿಲು' ಎಂದು ಉಲ್ಲೇಖಿಸಿವೆ. ಇಲ್ಲಿಂದ ವಿಜಯನಗರಕ್ಕೆ ನದಿಯ ಮಾರ್ಗವಾಗಿ ಹೂವನ್ನು ಸರಬರಾಜು ಮಾಡುತ್ತಿದ್ದರಂತೆ. ಇಲ್ಲಿನ ಕೇಶವಸ್ವಾಮಿ ದೇವಾಲಯವನ್ನು ಚಾಳುಕ್ಯ ದಳಪತಿ ರೆವಿದೇವನ ಪತ್ನಿ ರೆಬ್ಬಲದೇವಿ ಕಟ್ಟಿಸಿದಳೆಂದು ಹೇಳಲಾಗಿದೆ. ಇಲ್ಲಿನ ಕಲ್ಲೇಶ್ವರ ಮತ್ತು ಕೇಶವಸ್ವಾಮಿ ದೇವಾಲಯಗಳಲ್ಲಿ ಬಹು ಸೂಕ್ಷ್ಮವಾದ ಕೆತ್ತನೆಗಳಿದ್ದರೂ ಅವುಗಳು ಪದೇ ಪದೇ ಸುಣ್ಣ ಬಳಿದಿದ್ದರಿಂದಲೂ ಕೆಲವೊಮ್ಮೆ ಉದ್ದೇಶಪೂರ್ವಕವಾಗಿ ಜಜ್ಜಿ ಹಾಕಿದ್ದುದರಿಂದಲೂ ನಾಶ ಹೊಂದಿವೆ. 1866ರಲ್ಲಿ ಹಳೆಯ ಕೋಟೆಯನ್ನು ಕೆಡವಿದಾಗ ಅದರಲ್ಲಿ ಎರಡು ದೇವಾಲಯಗಳು ಕಂಡುಬಂದವು. ಒಂದು ದೇವಾಲಯದಲ್ಲಿ ಕೃಷ್ಣ ಶಿಲೆಯಲ್ಲಿ ಕಡೆದ ಸುಂದರವಾದ ಯೋಗಾನರಸಿಂಹ ಮೂರ್ತಿಯಿತ್ತು.

ಚಾಳುಕ್ಯ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿರುವ ಈ ಎರಡೂ ದೇವಾಲಯಗಳಲ್ಲಿ ಜಾಲಂದ್ರಗಳಿರುವ ಕಿಟಕಿಗಳಿವೆ. ಇಲ್ಲಿರುವ ಪುರಸಭೆ ಈ ಪಟ್ಟಣದ ಆಡಳಿತವನ್ನು ನಿರ್ವಹಿಸುತ್ತದೆ. ಈ ತಾಲೂಕಿನ ಇತರ ಪ್ರಮುಖ ಸ್ಥಳಗಳು ಇಂತಿವೆ: ಹಡಗಲಿಯಿಂದ 24 ಕಿಮೀ, ತುಂಗಭದ್ರ ನದಿಯಿಂದ ಎರಡು ಮೈಲಿ ದೂರದಲ್ಲಿರುವ ಮಾಗಳ (ಜನ: 3,024)ದಲ್ಲಿ ಚಾಳುಕ್ಯ ಶೈಲಿಯ ವೇಣುಗೋಪಾಲ ಸ್ವಾಮಿ ದೇವಾಲಯವಿದೆ. ಇಲ್ಲಿನ ದೇವತಾಮೂರ್ತಿ ಕೃಷ್ಣ ಶಿಲೆಯಿಂದ ಕಡೆದಿರುವ ಉತ್ಕೃಷ್ಟ ರಚನೆ. ದೇವಾಲಯದಲ್ಲಿ ನವರಂಗಕ್ಕೆ ಹೊಂದಿಕೊಂಡಂತಿರುವ ಮೂರು ಗರ್ಭಗುಡಿಗಳಿವೆ. ಇಲ್ಲಿ ಒಂದು ಸೂರ್ಯನಾರಾಯಣನ ಗುಡಿಯೂ ಇದೆ. ಹಿರೇ ಹಡಗಲಿ (ಜನ: 5,445)ಯು ಹಡಗಲಿಯಿಂದ 17 ಕಿಮೀ ದೂರದಲ್ಲಿದೆ. ಇದು ಈ ಜಿಲ್ಲೆಯ ಅತ್ಯಂತ ಸುಂದರವಾದ ಚಾಳುಕ್ಯ ದೇವಾಲಯವನ್ನು ಹೊಂದಿದೆ. ಈ ಮಂದಿರದ ಮುಖ್ಯ ಆಕರ್ಷಣೆಯೆಂದರೆ ಎರಡು ದ್ವಾರಗಳ ಮೇಲಿನ ಹಾಗೂ ಹೊರಗಿನ ಗೋಡೆಗಳ ಮೇಲಿನ ನಾಜೂಕಾದ ಕೆತ್ತನೆಗಳು. ಅಲೆಕ್ಸಾಂಡರ್ ರೀಯ ಎಂಬ ವಿದ್ವಾಂಸನು ಹೇಳುವಂತೆ 'ಕೆತ್ತನೆಯ ಪ್ರತೀಯೊಂದು ಸೂಕ್ಷ್ಮ ಭಾಗವನ್ನೂ ಆಭರಣದಂತೆ ಬಿಡಿಸಲಾಗಿದೆ'. ಕುರುವತ್ತಿ : (ಜನ: 1,759) ಹಡಗಲಿಯಿಂದ 36 ಕಿಮೀ ದೂರದಲ್ಲಿರುವ ಕುರುವತ್ತಿಯಲ್ಲಿ ಕಲ್ಯಾಣಿ ಚಾಳುಕ್ಯರ ಕಾಲಕ್ಕೆ ಸೇರಿದ ಮಲ್ಲಿಕಾರ್ಜುನ ದೇವಾಲಯವಿದೆ. ಇದರಲ್ಲಿಯೂ ದ್ವಾರಗಳು ಬಹು ಮುಖ್ಯವಾದ ಆಕರ್ಷಣೆಗಳಾಗಿವೆ. ಪೂರ್ವದ ಬಾಗಿಲು ಬಹು ಸುಂದರವಾಗಿದ್ದು ಈ ಶೈಲಿಯ ಶ್ರೇಷ್ಠ ಉದಾಹರಣೆಯಾಗಿದೆ. ಗರ್ಭಗುಡಿಗೆ ಹೋಗುವ ಮುನ್ನ ಸಿಗುವ ಬಾಗಿಲುವಾಡದಲ್ಲಿ ಬಹು ನಾಜೂಕಾಗಿ ಕೆತ್ತಿರುವ ಒಂದು ತೋರಣವಿದೆ. ಈ ಪ್ರದೇಶದ ಚಾಳುಕ್ಯ ದೇವಾಲಯಗಳಲ್ಲಿ ಎಲ್ಲೂ ಇಂತಹ ತೋರಣ ಕಾಣಬರುವುದಿಲ್ಲ. ನವರಂಗದಲ್ಲಿ ಅಚ್ಚುಕಟ್ಟಾಗಿ ಕಡೆದಿರುವ ಮದನಿಕಾ ಮೂರ್ತಿಗಳನ್ನು ಕಾಣಬಹುದು. ಮಲ್ಲಿಕಾರ್ಜುನ ಸ್ವಾಮಿಯ ರಥೋತ್ಸವ ಹಾಗೂ ದನಗಳ ಪರಿಷೆ ಫೆಬ್ರವರಿ ಮಾರ್ಚ್ ತಿಂಗಳಲ್ಲಿ ಜರುಗುತ್ತದೆ. ಮೈಲಾರ (ಜನ: 1,990) ಹಡಗಲಿಯಿಂದ 33 ಕಿಮೀ ತುಂಗಭದ್ರಾ ನದಿಯಿಂದ ಎರಡು ಕಿಮೀ ದೂರದಲ್ಲಿದೆ. ಈ ಊರು ಫೆಬ್ರವರಿ ತಿಂಗಳಲ್ಲಿ ನಡೆಯುವ ಶಿವನ ಒಂದು ರೂಪವಾದ ಮೈಲಾರ ಅಥವಾ ಮಲ್ಲಾರಿ ದೇವರ ಜಾತ್ರೆಗಾಗಿ ಪ್ರಸಿದ್ಧವಾಗಿದೆ. ಈ ಜಾತ್ರೆಗೆ ಬರುವ ಭಕ್ತರು "ಏಳು ಕೋಟಿ ಏಳು ಕೋಟಿ" ಎಂದು ಕೂಗುತ್ತಾ ಸಾಗುತ್ತಾರೆ. ದೇವರಿಗೆ ಹರಕೆ ಹೊತ್ತಿರುವ ಗೊರವರು ಕಂಬಳಿಗಳನ್ನು ಸುತ್ತಿಕೊಂಡು ನಾಯಿಗಳಂತೆ ಕೈಕಾಲುಗಳ ಮೇಲೆ ತೆವಳುತ್ತಾ, ಬೊಗಳುತ್ತಾ ಸಾಗುತ್ತಾರೆ. ಮಲ್ಲಾಸುರನನ್ನು ಕೊಂದ ಶಿವನ ಶ್ವಾನ ಸೈನ್ಯದವರು ತಾವೆಂದು ಭಾವಿಸಿಕೊಂಡು ಸ್ತ್ರೀ ಪುರುಷರು ಈ ರೀತಿ ಮಾಡುತ್ತಾರೆ. ಈ ಉತ್ಸವದ ಸಮಯದಲ್ಲಿ ಒಂದು ಪ್ರಮುಖ ದನಗಳ ಪರಿಷೆಯೂ ನಡೆಯುತ್ತದೆ.

**ಹರಪನಹಳ್ಳಿ :** (ಬಳ್ಳಾರಿ ಜಿ; ತಾ. ಕೇ; ಜನ: 27,314) ಹರಪನಹಳ್ಳಿಯು ಬಳ್ಳಾರಿಗೆ ನೈಋತ್ಯಕ್ಕೆ 127 ಕಿಮೀ ಬೆಂಗಳೂರಿಗೆ 314 ಕಿಮೀ ದೂರದಲ್ಲಿದೆ. ಈ ಪಟ್ಟಣದ ಬಳಿ ಇರುವ ಗೊಸಾಯಿಗುಡ್ಡದಲ್ಲಿ ಗೋಸಾಯಿಯ ಸಮಾಧಿಯಿದೆ. ಕರ್ನಾಟಕದ ಬಹುಬಲಿಷ್ಠ ಪಾಳೆಗಾರರಲ್ಲಿ ಹರಪನಹಳ್ಳಿ ಪಾಳೆಗಾರರೂ ಒಬ್ಬರಾಗಿದ್ದರು. ಇಲ್ಲಿನ ತಗ್ಗಾದ ಜಾಗದಲ್ಲಿ ನಿರ್ಮಿಸಿದ್ದ ಕೋಟೆಯು ಈಗ ಪಾಳು ಬಿದ್ದಿದೆ. ಕೋಟೆಯೊಳಗಡೆ ಹನುಮಾನ್ ಮಂದಿರ ಮತ್ತು ಒಂದು ಜೈನ ದೇವಾಲಯವಿದೆ. ಇಲ್ಲಿ ಆಳಿದ ಮೊದಲ ಪಾಳೆಯಗಾರರಾದ ದಾದಯ್ಯ ಮತ್ತು ರಂಗನಾಯಕರು ಇಲ್ಲಿನ ವೆಂಕಟರಮಣಸ್ವಾಮಿ ದೇವಾಲಯವನ್ನು ಕಟ್ಟಿಸಿದರೆಂದು ಹೇಳುತ್ತಾರೆ. ಈ ದೇವಾಲಯದ ಗರ್ಭಗುಡಿಯ ಉತ್ತರಕ್ಕಿರುವ ಮಂಟಪದಲ್ಲಿ ಒಂದು ಕಲ್ಲಿನ ಮೇಲೆ ಕೆತ್ತಿರುವ ಶಂಖ, ಚಕ್ರ ಮತ್ತು ನಾಮವು ಕಣ್ಣುಕೊಟ್ಟಪ್ಪನ ಸಂಕೇತ ಎಂದು ಭಾವಿಸಲಾಗಿದೆ. ಈ ಊರಿನ ಸಣ್ಣ ಮಂದಿರದಲ್ಲಿರುವ ಊರು ದೇವತೆಯು ಅತ್ಯಂತ ಜನಪ್ರಿಯ ದೇವತೆಯಾಗಿದೆ. ನಗರದ ವಾಯುವ್ಯಕ್ಕಿರುವ ಮೈಲಾರ ಲಿಂಗಪ್ಪನ ದೇವಾಲಯವು ಹಡಗಲಿ ತಾಲೂಕು ಮೈಲಾರದಲ್ಲಿರುವ ದೇವಾಲಯವನ್ನು ಹೋಲುತ್ತದೆ. ಇಲ್ಲಿ ಆಯುರ್ವೇದ ಮತ್ತು ಜ್ಯೋತಿಷ್ಯವನ್ನು ಬೋಧಿಸುವ ಒಂದು ಶಾಲೆಯಿದೆ. ದಿವಂಗತ ಹಯಾತ್ ಸಾಹೇಬ್ ಸಿದ್ಧಾಂತಿ ಸಿದ್ಧಾಂತ ಪಂಚಾಂಗದ ಪ್ರಕಟಣೆಯನ್ನು ಇಲ್ಲಿ ಪ್ರಾರಂಭಿಸಿದರು. ಹರಪನಹಳ್ಳಿಯು ಪುರಸಭೆಯನ್ನು ಹೊಂದಿದೆ. ಈ ತಾಲೂಕಿನ ಇತರ ಪ್ರೇಕ್ಷಣೀಯ ಸ್ಥಳಗಳು ಈ ರೀತಿ ಇವೆ. ದೇವರ ತಿಮ್ಮಲಾಪುರ (ಜನ: 619)ವು ಹರಪನಹಳ್ಳಿಯ ದಕ್ಷಿಣಕ್ಕೆ ಮೂರು ಕಿಮೀ ದೂರದಲ್ಲಿರುವ ಒಂದು ಸಣ್ಣ ಹಳ್ಳಿ. ಇಲ್ಲಿ ಹರಪನಹಳ್ಳಿಯ ದಾದಯ್ಯ ನಾಯಕನು ಕಟ್ಟಿಸಿದ ಒಂದು ವೆಂಕಟೇಶ್ವರ ದೇವಾಲಯವಿದೆ. ಅವನ ಮಗ ರಂಗನಾಯಕನು ದೇವಾಲಯದ ನಿರ್ಮಾಣವನ್ನು ಪೂರ್ಣಗೊಳಿಸಿದನು. ಈ ದೇಗುಲದ ಆವರಣದಲ್ಲಿ ಈ ಇಬ್ಬರು ದೊರೆಗಳೂ ಹಾಗೂ ಅವರ ಪತ್ನಿಯರ ಶಿಲ್ಪಗಳನ್ನು ಕಲ್ಲಿನ ಮೇಲೆ ಬಿಡಿಸಲಾಗಿದೆ. ಈ ದೇವಾಲಯದ ಆವರಣದಲ್ಲಿಯೇ ಕಣ್ಣುಕೊಟ್ಟಪ್ಪ ದೇವರ ಮಂದಿರವೂ ಇದೆ. ಮುಖ್ಯ ದೇಗುಲದ ದೊಡ್ಡಗೋಪುರವನ್ನು ಹರಪನಹಳ್ಳಿಯ ತಹಸೀಲ್ದಾರ್ ಕಂಡಿ ಶೇಷಗಿರಿರಾವ್ ಕಟ್ಟಿಸಿದುದಾಗಿ ಹೇಳುತ್ತಾರೆ. ನೀಲಗುಂದ (ಜನ: 2,076)ವು ಹರಪನಹಳ್ಳಿಯಿಂದ 12 ಕಿಮೀ ದೂರದಲ್ಲಿದೆ. ಇಲ್ಲಿ ಚಾಳುಕ್ಯರ ಕಾಲದ ಸುಂದರವಾದ ಭೀಮೇಶ್ವರ ದೇವಾಲಯವಿದೆ. ದೇವಾಲಯದ ಮಂಟಪದ ಮಧ್ಯದ ಸುಖನಾಸಿಯಲ್ಲಿಯೂ ಗರ್ಭಗುಡಿಯ ಬಾಗಿಲುವಾಡದಲ್ಲಿಯೂ ಸುಂದರವಾದ ಶಿಲ್ಪಗಳನ್ನು ಕೆತ್ತಲಾಗಿದೆ. ಅನಂತಶಯನ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಲ್ಲಿನ ಶಿಲಾಮೂರ್ತಿಗಳು ಚಾಳುಕ್ಯರ ಕಲೆಗಾರಿಕೆಯ ಉತ್ತಮ ನಿದರ್ಶನಗಳಾಗಿವೆ. ಉಚ್ಚಂಗಿ ದುರ್ಗ (ಜನ: 5,045) ಹರಪನಹಳ್ಳಿಗೆ 28 ಕಿಮೀ ದೂರದಲ್ಲಿ ಉಚ್ಚಂಗಿ

ಗ್ರಾಮ ಹಾಗೂ ಕೋಟೆ ಇದೆ. ಈ ಊರಿನ ಹಳೆಯ ಹೆಸರು ಉಚ್ಚಶೃಂಗ ಎಂದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ಐದನೇಯ ಶತಮಾನದಲ್ಲಿ ಇದು ಕದಂಬರ ಒಂದು ಮುಖ್ಯ ಪಟ್ಟಣವಾಗಿದ್ದಿತು. ಅನಂತರ ಇದು ನೊಳಂಬವಾಡಿ 32,000 ಪ್ರಾಂತ್ಯದ ರಾಜಧಾನಿಯಾಗಿದ್ದಿತು. ಪಾಂಡ್ಯರ ಒಂದು ಶಾಖೆಯು ಉಚ್ಚಂಗಿಯಿಂದ ಆಳ್ವಿಕೆ ನಡೆಸಿತು. ಉಚ್ಚಂಗಿಯ ಕೋಟೆಯು ಅಭೇದ್ಯವೆಂದು ಪ್ರಸಿದ್ಧಿ ಹೊಂದಿದ್ದು, ಒಂದೊಂದು ಕಾಲದಲ್ಲಿ ಒಬ್ಬೊಬ್ಬ ನಾಯಕರ ಅಧೀನದಲ್ಲಿ ಇದ್ದಿತು. ಉಚ್ಚಂಗಿ ಬೆಟ್ಟವು ಉತ್ತರದಿಂದ ದಕ್ಷಿಣಕ್ಕೆ ಒಂದು ಕಿಮೀ ಉದ್ದವಿದ್ದು ಕಡಿದಾದ ಬಂಡೆಗಳನ್ನು ಹೊಂದಿದೆ. ಉತ್ತರ ಮತ್ತು ಪಶ್ಚಿಮದಲ್ಲಿ ಇದು ನೇರವಾಗಿದ್ದು ಗ್ವಾಲಿಯರ್ ಕೋಟೆಗೆ ಹೋಲಿಸಬಹುದಾಗಿದೆ. ಬೆಟ್ಟದ ಮೇಲೆ ಉಚ್ಚಂಗಮ್ಮನ ದೇವಾಲಯವಿದೆ. ಬೆಟ್ಟದ ಬುಡದಲ್ಲಿ ಆಧುನಿಕ ಗ್ರಾಮವೊಂದು ತಲೆ ಎತ್ತಿದೆ.

**ಹರಿಹರ :** (ಚಿತ್ರದುರ್ಗ ಜಿ; ತಾ. ಕೇ; ಜನ: 52,325) ತುಂಗಭದ್ರಾ ನದಿಯ ಬಲದಂಡೆಯ ಮೇಲಿರುವ ಹರಿಹರ ಬೆಂಗಳೂರಿನಿಂದ 277 ಕಿಮೀ ದೂರದಲ್ಲಿದೆ. ಇಲ್ಲಿ ಒಂದು ರೈಲ್ವೆ ಸ್ಟೇಷನ್ ಮತ್ತು ಪುರಸಭೆ ಇವೆ. ಈ ಸ್ಥಳದಲ್ಲಿ ಗುಹಾಸುರನಿದ್ದನೆಂದು ಪ್ರತೀತಿ ಇರುವುದರಿಂದ ಇದಕ್ಕೆ ಗುಹಾರಣ್ಯ ಕ್ಷೇತ್ರವೆಂದೂ ಹೆಸರಿದೆ. ಇದು ತುಂಗಭದ್ರಾ ಮತ್ತು ಹರಿದ್ರಾ ನದಿಗಳ ಸಂಗಮ ಸ್ಥಳವಾಗಿದೆ. ಈ ಸ್ಥಳದಲ್ಲಿ ದೇವರ ಪಾದದ ಗುರುತು ಎಂದು ಪಾದದ ಶಿಲ್ಪವನ್ನು ತೋರಿಸುತ್ತಾರೆ. ಗುಹಾಸುರನನ್ನು ಸಂಹರಿಸಲು ಹರಿ ಮತ್ತು ಹರ ಇಬ್ಬರೂ ಸೇರಿ ಹರಿಹರನಾಗಬೇಕಾಯಿತು. ಈ ಅವತಾರವೆತ್ತಿದ ಸ್ಥಳವೇ ಕೂಡಲೂರು ಅಂದರೆ ಇಂದಿನ ಹರಿಹರ. ಇಲ್ಲಿ ಹೊಯ್ಸಳ ಶೈಲಿಯ ಹರಿಹರೇಶ್ವರ ದೇವಾಲಯವಿದೆ. ಇದನ್ನು ಹೊಯ್ಸಳರ ಇಮ್ಮಡಿ ನರಸಿಂಹನ ಮಂತ್ರಿ ಪೋಲಾಳ್ವನು 1223ರಲ್ಲಿ ಕಟ್ಟಿಸಿದನು. ಹರಿಹರೇಶ್ವರ ದೇವಾಲಯದಲ್ಲಿ ಅನೇಕ ಶಿಲಾ ಶಾಸನಗಳಿವೆ. ಕಲ್ಯಾಣಿ ಚಾಳುಕ್ಯರ ಆಳ್ವಿಕೆಯಲ್ಲಿ ನೊಳಂಬವಾಡಿ ಪ್ರಾಂತ್ಯದಲ್ಲಿ ಇದು ಒಂದು ಅಗ್ರಹಾರವಾಗಿದ್ದಿತು. ದೇವಾಲಯಕ್ಕೆ ದಾನ ನೀಡಿ, ವಿಜಯನಗರ, ಹೊಯ್ಸಳ, ಯಾದವ ದೊರೆಗಳು ಬರೆಸಿರುವ ಶಾಸನಗಳು ದೇವಾಲಯದ ಆವರಣದಲ್ಲಿ ದೊರಕುತ್ತವೆ. ವಿಜಯನಗರದ ಕಾಲದಲ್ಲಿ ಹರಿದ್ರಾ ನದಿಗೆ ಅಡ್ಡಗಟ್ಟೆಯನ್ನು ಕಟ್ಟಿದ್ದರು. ವಿಜಯನಗರದ ಪತನಾನಂತರ ತರೀಕೆರೆ ಪಾಳೆಯಗಾರರು ಈ ಪ್ರದೇಶವನ್ನು ಗೆದ್ದುಕೊಂಡರು. ಮತ್ತು ಕೋಟೆಯನ್ನು ಕಟ್ಟಿದರು. ಅನಂತರ ಅದು ಕೆಳದಿಯ ನಾಯಕರ ಆಡಳಿತಕ್ಕೂ ಅನಂತರ ಹೈದರನ ಕಾಲದಲ್ಲಿ ಮೈಸೂರಿಗೂ ಸೇರಿಹೋಯಿತು. ಬೆಂಗಳೂರು ಧಾರವಾಡದ ಹೆದ್ದಾರಿಯಲ್ಲಿರುವ ತುಂಗಭದ್ರಾ ನದಿಗೆ 1868ರಲ್ಲಿ ಈಗ ಇರುವ ದೊಡ್ಡ ಸೇತುವೆಯನ್ನು ಕಟ್ಟಲಾಯಿತು. ಪೂಜ್ಯ ಸಮರ್ಥ ರಾಮದಾಸರ ಪರಂಪರೆಯ ಸಮರ್ಥ ನಾರಾಯಣ ಆಶ್ರಮವೊಂದು ಇಲ್ಲಿದೆ. ಶ್ರೀರಾಮ, ದತ್ತಾತ್ರೇಯ, ಈಶ್ವರ ದೇವಾಲಯಗಳು ಇಲ್ಲಿವೆ. ಇವುಗಳಲ್ಲದೆ ಪ್ರತಾಪ ಮಾರುತಿ, ದಾಸ ಮಾರುತಿ, ಕಾಮಧೇನು ಮಂದಿರಗಳೂ ಇವೆ. ಮೈಸೂರು ಕಿರ್ಲೋಸ್ಕರ್ ಕಂಪನಿಯವರು ನದಿಯ ದಂಡೆಯ ಮೇಲೆ ಒಂದು ಮೆಷಿನ್ ಟೂಲ್ಸ್ ಕಾರ್ಖಾನೆಯನ್ನು ಸ್ಥಾಪಿಸಿದ್ದಾರೆ. ಇತ್ತೀಚೆಗೆ ಒಂದು ಪಾಲಿಫೈಬರ್ ಕಾರ್ಖಾನೆಯೂ ಪ್ರಾರಂಭವಾಗಿದೆ. ಅದರ ಸಮೀಪದಲ್ಲಿ ಒಂದು ಕೈಗಾರಿಕಾ ವಸಾಹತುವನ್ನು ಸ್ಥಾಪಿಸಲಾಗಿದೆ. ಲೇತ್‌ಗಳು, ವ್ಯವಸಾಯದ ಉಪಕರಣಗಳು ಮತ್ತು ಕೈಮಗ್ಗದ ಸೀರೆಗಳನ್ನು ಇಲ್ಲಿ ತಯಾರಿಸಲಾಗುವುದು. ಸಮೀಪದಲ್ಲಿಯೇ ಇರುವ ನಂದಿತಾವರೆಯ ಈಶ್ವರ ದೇವಾಲಯ, ಕೊಮಾರನಹಳ್ಳಿಯ ದತ್ತಾತ್ರೇಯ ಮತ್ತು ರಂಗನಾಥ, ಉಕ್ಕಡಗತ್ರಿಯ ಕರಿಬಸವೇಶ್ವರ ದೇವಾಲಯ ಈ ತಾಲೂಕಿನ ಪ್ರಮುಖ ಮಂದಿರಗಳು.

**ಹಲಸಿ :** (ಬೆಳಗಾವಿ ಜಿ; ಖಾನಾಪುರ ತಾ; ಜನ: 3,206) ಬೆಳಗಾವಿಗೆ 40 ಕಿಮೀ ದೂರದಲ್ಲಿರುವ ಹಲಸಿ ಈ ಜಿಲ್ಲೆಯ ಒಂದು ಇತಿಹಾಸ ಪ್ರಸಿದ್ಧವಾದ ಸ್ಥಳ. ಶಾಸನಗಳಲ್ಲಿ ಇದನ್ನು 'ಪಲಾಶಿಕಾ', ಪಲಸಿ, ಹಲಸಿಗಿ, ಪಲಸಿಗೆ ನಾಡು ಎಂದು ಕರೆಯಲಾಗಿದೆ. ಇದು ಕ್ರಿ.ಶ. ಐದನೇಯ ಶತಮಾನದಲ್ಲಿ ಬನವಾಸಿ ಕದಂಬರ ಎರಡನೇಯ ರಾಜಧಾನಿಯಾಗಿತ್ತು. ಅನಂತರ ಗೋವಾ ಕದಂಬರ (ಕ್ರಿ.ಶ. 980-1250) ಒಂದು ಮುಖ್ಯ ನಗರವಾಗಿದ್ದಿತು. ಪ್ರಾಚೀನ ಕದಂಬರ ಕಾಲದಲ್ಲಿ ಇದು ಜೈನ, ವೈಷ್ಣವ ಹಾಗೂ ಶೈವ ಧರ್ಮಗಳ ಸಂಗಮಸ್ಥಾನವಾಗಿದ್ದಿತು. ಪ್ರಾಚೀನ ಹಾಗೂ ಮಧ್ಯಕಾಲೀನ ಯುಗಗಳಲ್ಲಿ ಹಲಸಿಯು ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳ ಭಾಗಗಳನ್ನು ಒಳಗೊಂಡ ಹಲಸಿಗೆ-12,000 ಎನ್ನುವ ಒಂದು ದೊಡ್ಡ ಪ್ರಾಂತ್ಯವಾಗಿದ್ದಿತು. ಇಲ್ಲಿಯ ಪ್ರಮುಖ ಸ್ಮಾರಕಗಳೆಂದರೆ ಊರ ಮಧ್ಯದಲ್ಲಿರುವ ಭೂವರಾಹ ನರಸಿಂಹ, ಸುವರ್ಣೇಶ್ವರ ಮತ್ತು ಕಲ್ಮೇಶ್ವರ ದೇವಾಲಯಗಳು. ಈ ದೇವಾಲಯಗಳಲ್ಲಿ ವಾಸ್ತುಶಿಲ್ಪ ಮತ್ತು ಮೂರ್ತಿ ಶಿಲ್ಪಗಳ ದೃಷ್ಟಿಯಿಂದ ಮಹತ್ವದ್ದಾಗಿರುವ ಭೂವರಾಹ ನರಸಿಂಹ ದೇವಾಲಯವನ್ನು ಉತ್ತಮ ಸ್ಥಿತಿಯಲ್ಲಿ ರಕ್ಷಿಸಲಾಗಿದೆ. ನರಸಿಂಹ ದೇವಾಲಯದಲ್ಲಿ ದೊರಕಿರುವ ಒಂದು ಶಿಲಾ ಶಾಸನದಲ್ಲಿ ಸಿಂಧವಳ್ಳಿಯಲ್ಲಿ ಆಳುತ್ತಿದ್ದ ಗೋವೆಯ ಕದಂಬರ ಅರಸನೇಯ ದೊರೆಯಾದ ಪೆರ್ಮಾಡಿ ಅಥವಾ ಶಿವಚಿತ್ತ (ಕ್ರಿ.ಶ. 1147–1175)ನ ಶಾಸನವಿದೆ. ಈ ನರಸಿಂಹ ದೇವಾಲಯವನ್ನು ಕ್ರಿ.ಶ. 1170ರಲ್ಲಿ ನಿರ್ಮಿಸಲಾಯಿತು. ಅನಂತರ ಸುಮಾರು ಕ್ರಿ.ಶ. 1185ರಲ್ಲಿ ಇದಕ್ಕೆ ಹೊಂದಿಕೊಂಡಂತೆ ವರಾಹ ದೇವಾಲಯವನ್ನು ಗೋವೆಯ ಜಯಕೇಶಿಯು ಕಟ್ಟಿಸಿದನು. ಉಳಿದೆರಡು ಶೈವ ದೇವಾಲಯಗಳು ಹಾಳಾಗಿದ್ದು ಅವುಗಳ ಭಗ್ನಾವಶೇಷಗಳು ಮಾತ್ರ ಉಳಿದಿವೆ. ಸಮೀಪದಲ್ಲಿರುವ ಬೆಟ್ಟದ ಮೇಲೆ ಸೋಮೇಶ್ವರ ಅಥವಾ ಸುವರ್ಣೇಶ್ವರ ದೇವಾಲಯವೂ

ಒಂದು ತೀರ್ಥವೂ ಇವೆ. ಈ ದೇವಾಲಯವನ್ನು ಬಹು ಪವಿತ್ರ ಸ್ಥಾನವೆಂದು ಪರಿಗಣಿಸಲಾಗಿದೆ. ಇಲ್ಲಿ 1870ರಲ್ಲಿ ಒಂದು ಸೋಮ ಯಾಗವನ್ನು ಮಾಡಲಾಯಿತು. ಹತ್ತು ದಿನಗಳ ಕಾಲ ನಡೆದ ಈ ಯಾಗದಲ್ಲಿ ಅಸಂಖ್ಯಾತ ಜನ ಭಕ್ತರು ಭಾಗವಹಿಸಿದ್ದರು. ಹಲಸಿಯಲ್ಲಿ ಕದಂಬರ ಅನೇಕ ತಾಮ್ರ ಶಾಸನಗಳು ದೊರಕಿವೆ. ಇಲ್ಲಿನ ಇತ್ತೀಚಿನ ಮಂದಿರಗಳೆಂದರೆ ಬಸವಣ್ಣ, ಕಲ್ಮೇಶ್ವರ, ಲಾಲಕೇಶ್ವರ ಮತ್ತು ಗೋಕರ್ಣೇಶ್ವರ ದೇವಾಲಯ ಮುಂತಾದವುಗಳಿದ್ದು ಒಂದು ಚರ್ಚ್ ಮತ್ತು ಒಂದು ಮಸೀದಿ ಕೂಡ ಇವೆ. ಘಟ್ಟದ ರಸ್ತೆಗಳನ್ನು ನಿರ್ಮಿಸುವುದಕ್ಕೆ ಮುಂಚೆ (1885ರ ಸರಿಸುಮಾರಿಗೆ) ಹಲಸಿ ಮತ್ತು ನಂದಗಡಗಳೆರಡೂ ಪಶ್ಚಿಮ ಘಟ್ಟ ಮತ್ತು ಮೈದಾನ ಪ್ರದೇಶಗಳ ನಡುವೆ ಮೆಣಸು, ಸಾಂಬಾರ ಪದಾರ್ಥಗಳು, ಅಡಿಕೆ, ತೆಂಗು, ಮೀನು ಇತ್ಯಾದಿ ವಸ್ತುಗಳ ವ್ಯಾಪಾರ ಕೇಂದ್ರಗಳಾಗಿದ್ದವು. ಈ ಸ್ಥಳವು ಭತ್ತದ ಬೆಳೆಗೆ ಪ್ರಸಿದ್ಧಿಯಾಗಿದ್ದು, ಇಲ್ಲಿ ಅನೇಕ ಭತ್ತದ ಗಿರಣಿಗಳಿವೆ.

**ಹಳಿಯಾಳ :** (ಉ. ಕ. ಜಿ; ತಾ. ಕೇ; ಜನ: 15,654) ಹಳಿಯಾಳವು ಬೆಂಗಳೂರಿನ ವಾಯುವ್ಯಕ್ಕೆ 461 ಕಿಮೀ ದೂರದಲ್ಲಿದೆ. ಇಲ್ಲಿನ ಕೋಟೆಯಲ್ಲಿರುವ 12ನೇಯ ಶತಕದ ಶಾಸನವು ಈ ಊರನ್ನು 'ಪಳ್ಳಿಯಾಳ' ಎಂದು ಕರೆದಿದೆ. ಇದು ಮರಾಠರ ವಶದಲ್ಲಿದ್ದು ಇದನ್ನು ವಶಪಡಿಸಿಕೊಳ್ಳಲು ಬ್ರಿಟಿಷರು ದಂಡೆತ್ತಿ ಬಂದಾಗ 13 ಕಿಮೀ ದೂರದ ಸಾಂಬ್ರಾಣಿ ಊರು ಬ್ರಿಟಿಷರ ಕೈವಶವಾಯಿತೆಂದು ಕೇಳಿದ ಧಾರವಾಡದ ದಳಪತಿಯಾಗಿದ್ದ ಬಾಪೂಜಿ ಸಿಂಧ್ಯ ನೇಮಿಸಿದ್ದ ಸೈನ್ಯವು ಹೆದರಿ ಓಡಿಹೋಯಿತು. ಹೀಗೆ ಯಾವುದೇ ವಿರೋಧವಿಲ್ಲದೆ ಸುಲಭವಾಗಿ ಬ್ರಿಟಿಷರ ಕೈವಶವಾಯಿತು. ಆಗಿನ ಕಾಲದಲ್ಲಿ ಹಳಿಯಾಳವು ಭತ್ತ ಮತ್ತು ಮರಮುಟ್ಟು ವ್ಯಾಪಾರದ ಸೇತುಬಿಂದುವಾಗಿದ್ದಿತು. ಇಲ್ಲಿರುವ ಶಿಥಿಲವಾದ ಕೋಟೆಯು ಮರಾಠರ ಕಾಲದ್ದೆಂದು ಹೇಳುತ್ತಾರೆ. ಇಲ್ಲಿ ಚಾಳುಕ್ಯ ಶೈಲಿಯ ಮಲ್ಲಿಕಾರ್ಜುನ ದೇವಾಲಯವಿದೆ. ಮರಾಠರ ನಂತರ ಬ್ರಿಟಿಷ್ ಅಧಿಕಾರಿಗಳು ಈ ಕೋಟೆಯಲ್ಲಿ ವಾಸಿಸುತ್ತಿದ್ದರು. ವಿಠೋಬ, ಶಿವ, ದತ್ತಾತ್ರೇಯ, ಹನುಮಂತ, ವೆಂಕಟರಮಣ, ಪೇಟೆ ಬಸವೇಶ್ವರ, ಇವು ಹಳಿಯಾಳದ ಮುಖ್ಯ ದೇವಾಲಯಗಳು. ಇಲ್ಲಿ ನೂರು ವರ್ಷ ಹಳೆಯದೆನ್ನಲಾದ ಮಸೀದಿಯೂ ಒಂದೂ ಸೇರಿ ಊರಲ್ಲಿ ಆರು ಮಸೀದಿಗಳೂ ಒಂದು ಚರ್ಚೂ ಇವೆ. ಮತ್ತು ಒಂದು ಪುರಸಭೆಯೂ ಇದೆ. ಹಳಿಯಾಳ ಬಳಿಯ ಹೊಸೂರಿನಲ್ಲಿ ನಾಲ್ಕು ದೊಡ್ಡ ಶಿಲಾ ಶಾಸನಗಳಿವೆ. ಹಳಿಯಾಳಕ್ಕೆ ಎರಡು ಕಿಮೀ ದೂರದಲ್ಲಿರುವ ಹಾವಗಿಯಲ್ಲಿ ಒಂದು ಪಾರ್ಶ್ವನಾಥ ಬಸದಿ ಮತ್ತು ಮಾರುತಿ ದೇವಾಲಯಗಳಿವೆ.

**ಹಳೇಬೀಡು :** (ಹಾಸನ ಜಿ; ಬೇಲೂರು ತಾ; ಜನ: 3,695) ಹಾಸನದಿಂದ ವಾಯುವ್ಯಕ್ಕೆ 27 ಕಿಮೀ ಬೇಲೂರಿನ ಪೂರ್ವಕ್ಕೆ 17 ಕಿಮೀ ದೂರದಲ್ಲಿರುವ ಹಳೆಬೀಡು ಇಂದು ಹೋಬಳಿ ಕೇಂದ್ರವಾಗಿರುವ ಒಂದು ಸಣ್ಣ ಪಟ್ಟಣ. ಈ ಸ್ಥಳದಲ್ಲಿ 11ನೇಯ ಶತಮಾನದ ಹೊಯ್ಸಳ ದೊರೆಗಳ ರಾಜಧಾನಿ ದೋರ ಸಮುದ್ರ ಅಥವಾ ದ್ವಾರಾ ಸಮುದ್ರ ಅಥವಾ ದ್ವಾರಾವತಿಪುರ ಇದ್ದಿತು. ಕೆಲವು ವಿದ್ವಾಂಸರು ಇದರ ಸ್ಥಾಪನೆ ರಾಷ್ಟ್ರಕೂಟ ಧ್ರುವ ಅಥವಾ ಧೋರ (ಕ್ರಿ. ಶ. ಎಂಟನೇಯ ಶತಮಾನ)ನಿಂದ ಆಯಿತೆಂದೂ ಭಾವಿಸುತ್ತಾರೆ. ಈ ನಗರವು 1311 ಮತ್ತು 1327ರಲ್ಲಿ ಎರಡು ಬಾರಿ ದೆಹಲಿ ಸುಲ್ತಾನರ ಸೈನ್ಯದ ದಾಳಿಗೆ ತುತ್ತಾಯಿತು. ಈ ದಾಳಿಯ ನಂತರ ನಿರ್ಜನವಾದ ಈ ಸ್ಥಳವನ್ನು ಹಳೆಬೀಡು ಎಂದು ಕರೆಯುತ್ತಾರೆ. ಇಲ್ಲಿ ಕೇದಾರೇಶ್ವರ ಮತ್ತು ಹೊಯ್ಸಳೇಶ್ವರ ಎಂಬ ಹೊಯ್ಸಳರ ಕಾಲದ ಎರಡು ಪ್ರಸಿದ್ಧ ವಾಸ್ತುಶಿಲ್ಪದ ಸ್ಮಾರಕಗಳಿವೆ. ಕೇದಾರೇಶ್ವರ ಮಂದಿರವನ್ನು 1219ರಲ್ಲಿ ಇಮ್ಮಡಿ ಬಲ್ಲಾಳ ಮತ್ತು ಅವನ ಪತ್ನಿ ಅಭಿನವ ಕೇತಲದೇವಿ ಕಟ್ಟಿಸಿದರು. ಈ ದೇವಾಲಯವು ಚಿಕ್ಕದಾಗಿದ್ದರೂ ಒಂದು ಸುಂದರವಾದ ಕಲಾಕುಸುಮವಾಗಿದೆ. ಇದು ಒಂದು ತ್ರಿಕೂಟಾಚಲ ದೇವಾಲಯ. ಹೊಯ್ಸಳೇಶ್ವರ ದೇವಾಲಯವನ್ನು ವಿಷ್ಣುವರ್ಧನನ ದಳಪತಿ ಕೇತಮಲ್ಲನು ಕಟ್ಟಿಸಿದನು. ಇದರ ನಿರ್ಮಾಣ ಕಾರ್ಯ 1121ರಲ್ಲಿ ಪ್ರಾರಂಭವಾಯಿತು. ಶಾಂತಲೇಶ್ವರ ಮತ್ತು ಹೊಯ್ಸಳೇಶ್ವರ ದೇವಾಲಯಗಳಿರುವ ಈ ಸಂಕೀರ್ಣಕ್ಕೆ ಬಹು ಸುಂದರವಾದ ವಿಪುಲ ಅಲಂಕಾರಗಳಿರುವ ನಾಲ್ಕು ಪ್ರವೇಶ ದ್ವಾರಗಳಿವೆ. ಇವುಗಳಲ್ಲಿ ಒಂದನ್ನು ಶಿಲ್ಪಿ ಕಾಳಿದಾಸಿ ನಿರ್ಮಿಸಿದನು. ಈ ದೇವಾಲಯವು ಹೊಯ್ಸಳ ಶೈಲಿಯಲ್ಲಿ ನಿರ್ಮಿತವಾಗಿರುವ ದೇವಾಲಯಗಳಲ್ಲೇ ಅತ್ಯಂತ ದೊಡ್ಡದಾದುದು. ಶಾಂತಲೇಶ್ವರ ಮತ್ತು ಹೊಯ್ಸಳೇಶ್ವರ ದೇವಾಲಯಗಳು ಶಿಲುಬೆಯ ಆಕಾರವನ್ನು ಹೊಂದಿದ್ದು ಒಂದಕ್ಕೊಂದು ಸೇರಿಕೊಂಡಿವೆ. ಹೊಯ್ಸಳೇಶ್ವರ ದೇವಾಲಯವನ್ನು ನಿರ್ಮಿಸಿದ ಪ್ರಮುಖ ಶಿಲ್ಪಿ ಕೇದಾರೋಜ. ಇದು ಒಂದನೇಯ ನರಸಿಂಹನ ಕಾಲದಲ್ಲಿ ಪೂರ್ಣಗೊಂಡಿತು. ಈ ದೇವಾಲಯದ ಹೊರ ಗೋಡೆಯ ಮೇಲೆ ಮೆದುಕಲ್ಲಿನಲ್ಲಿ ಕಂಡರಿಸಿದ ಆಶ್ಚರ್ಯಕರವಾದ ಶಿಲ್ಪಗಳಿವೆ. ಪರ್ಸಿ ಬ್ರೌನ್ ಇದನ್ನು 'ಭಾರತೀಯ ವಾಸ್ತುಶಿಲ್ಪದ ಅತ್ಯದ್ಭುತ ಪರಾಕಾಷ್ಠೆ'ಯೆಂದು ಕರೆದಿದ್ದಾರೆ. ಇಲ್ಲಿರುವ ಸಾಲಭಂಜಿಕೆ ವಿಗ್ರಹಗಳು ಶ್ರೇಷ್ಠಮಟ್ಟದ ಕೆತ್ತನೆಯ ಕೆಲಸದ ನಿದರ್ಶನಗಳಾಗಿವೆ. ಇಲ್ಲಿ 120 ಜೈನ ಬಸದಿಗಳು ಇದ್ದುವೆಂದು ಹೇಳುತ್ತಾರಾದರೂ ಈಗ ಆದಿನಾಥೇಶ್ವರ (1138) ಎಂಬ ಸಣ್ಣ ಬಸದಿ, ಶಾಂತಿನಾಥ (1192) ಮತ್ತು ಪಾರ್ಶ್ವನಾಥೇಶ್ವರ ಎಂಬ ಮೂರು ಬಸದಿಗಳು ಮಾತ್ರ ಉಳಿದುಕೊಂಡಿವೆ. ಗಂಗರಾಜನ ಮಗ ಬೊಪ್ಪಣನೆಂಬುವನು 1133ರಲ್ಲಿ ಕಟ್ಟಿಸಿದ ಪಾರ್ಶ್ವನಾಥೇಶ್ವರ ಬಸದಿ ಎಲ್ಲಕ್ಕಿಂತಲೂ ದೊಡ್ಡ ಕಟ್ಟಡವಾಗಿದೆ. ಈ ದೇವಾಲಯದಲ್ಲಿರುವ 4.27 ಮೀಟರ್ ಎತ್ತರದ ಪಾರ್ಶ್ವನಾಥ ಮೂರ್ತಿಯನ್ನು ಬಹು ಚೊಕ್ಕವಾಗಿ ಕಡೆಯಲಾಗಿದೆ. ನಗರದ ಆಗ್ನೇಯದಲ್ಲಿ

ರುವ ವೀರಭದ್ರ ದೇವಾಲಯವು ಇನ್ನೊಂದು ಮುಖ್ಯ ಸ್ಮಾರಕ. ಹಳೇಬೀಡಿನ ದಕ್ಷಿಣಕ್ಕೆ ಮೂರು ಕಿಮೀ ದೂರದಲ್ಲಿರುವ ಪುಷ್ಪಗಿರಿ ಬೆಟ್ಟವು ಒಂದು ಗುಂಡಾದ ಸ್ತಂಭಗಳುಳ್ಳ ಹಜಾರವನ್ನು ಹೊಂದಿದೆ. ಇಲ್ಲಿದ್ದ ಒಂದು ಹಳೆಯ ವಿಷ್ಣು ದೇವಾಲಯವನ್ನು ವಿಜಯನಗರದ ಅರಸರು ಹಳೆಯ ದೇವಾಲಯದ ಸಾಮಗ್ರಿಗಳನ್ನೇ ಬಳಸಿ ಪುನರ್ ನಿರ್ಮಿಸಿದ್ದಾರೆ. ಮಲ್ಲಿಕಾರ್ಜುನ ಮತ್ತು ಪಾರ್ವತಿ ದೇವಾಲಯಗಳು ಇಲ್ಲಿನ ಪ್ರಮುಖ ಸ್ಮಾರಕಗಳು. ಹಳೇಬೀಡಿನಲ್ಲಿ ಒಂದು ಸಣ್ಣ ವಸ್ತು ಸಂಗ್ರಹಾಲಯವೂ ಒಂದು ಪ್ರವಾಸಿ ಮಂದಿರವೂ ಇದೆ. ಹಳೇಬೀಡಿಗೆ ಮೂರು ಕಿಮೀ ದೂರದಲ್ಲಿ ಬೇಲೂರು-ಜಾವಗಲ್ ರಸ್ತೆಯಲ್ಲಿ ಇರುವ ಚಟ ಚಟ್ಟನಹಳ್ಳಿ (ಜನ: 1,107)ಯಲ್ಲಿ ಒಂದು ಸುಂದರವಾದ ಚಟ್ಟೇಶ್ವರ ಎಂಬ ತ್ರಿಕೂಟಾಚಲ ದೇವಾಲಯವಿದೆ. ಸುಮಾರು ಕ್ರಿ. ಶ. 1200ರಲ್ಲಿದ್ದ ಚಟ್ಟದಣ್ಣಾಯಕನೆಂಬ ಹೊಯ್ಸಳ ಅಧಿಕಾರಿಯು ಈ ಚಟ್ಟೇಶ್ವರ ದೇವಾಲಯವನ್ನು ಕಟ್ಟಿಸಿದನು. ದೇವಾಲಯದಲ್ಲಿರುವ ಮೂರು ಗರ್ಭಗುಡಿಗಳಲ್ಲಿ ಪ್ರಧಾನವಾದುದರಲ್ಲಿ ಶಿವಲಿಂಗವೂ ಉಳಿದೆರಡು ಗುಡಿಗಳಲ್ಲಿ ಸುಂದರ ಕೆತ್ತಿನ ವಿಷ್ಣು ಮತ್ತು ಸೂರ್ಯದೇವರ ಮೂರ್ತಿಗಳಿವೆ. ಗರ್ಭಗುಡಿಗಳಲ್ಲಿ ಬಹು ಅಪರೂಪವಾಗಿ ಸುಖನಾಸಿಗಳನ್ನು ಅವಳವಡಿಸಲಾಗಿದೆ.

**ಹಾನಗಲ್** : (ಧಾರವಾಡ ಜಿ ; ತಾ. ಕೇ ; ಜನ : 17,082) ಹಾನಗಲ್ ಬೆಂಗಳೂರಿನ ವಾಯುವ್ಯಕ್ಕೆ 368 ಕಿಮೀ ಧಾರವಾಡದ ದಕ್ಷಿಣಕ್ಕೆ 90 ಕಿಮೀ ದೂರದಲ್ಲಿದೆ. ಈಗಿನ ಪುರಸಭೆಯನ್ನು 1973ರಲ್ಲಿ ರಚಿಸಲಾಯಿತು. ಪಾಂಡವರು ತಮ್ಮ ವನವಾಸದಲ್ಲಿ ಇಲ್ಲಿ ತಂಗಿದ್ದರೆಂದು ಸ್ಥಳೀಯ ಐತಿಹ್ಯವು ತಿಳಿಸುತ್ತದೆ. ಅದನ್ನು ಸಮರ್ಥಿಸಲು ಕೆಲವು ಆಧಾರಗಳನ್ನು ಜನ ತೋರಿಸುತ್ತಾರೆ. ಹಿಂದಿನ ದಾಖಲೆಗಳಲ್ಲಿ ಈ ಊರನ್ನು ಪಂಕ್ತಿಪುರ, ವಿರಾಟಪುರ, ವಿರಾಟನಕೋಟೆ, ವಿರಾಟನಗರ, ಪಾನುಂಗಲ್, ಹಾನುಂಗಲ್ ಎಂದು ಕರೆಯಲಾಗಿದೆ. ಇಲ್ಲಿ 20ಕ್ಕೂ ಹೆಚ್ಚು ಶಾಸನಗಳಿದ್ದು ಅವು, ಕಲ್ಯಾಣಿ ಚಾಳುಕ್ಯ ಕಳಚೂರಿನ ಮತ್ತು ಹಾನಗಲ್ ಕದಂಬರಿಗೆ ಸೇರಿದವುಗಳಾಗಿವೆ. ಹಿಂದೆ ಇದು ಪಾನುಂಗಲ್-500 ಎಂಬ ವಿಭಾಗದ ಮುಖ್ಯ ಪಟ್ಟಣವಾಗಿತ್ತು ಮತ್ತು ಕಲ್ಯಾಣಿ ಚಾಳುಕ್ಯರ ಸಾಮಂತರಾದ ಕದಂಬರ ಇದೇ ಊರಿನ ಹೆಸರಿನ ಶಾಖೆಗೆ ಇದು ರಾಜಧಾನಿಯಾಗಿದ್ದಿತು. ಹೊಯ್ಸಳ ವಿಷ್ಣುವರ್ಧನನು ಉತ್ತರ ದಂಡಯಾತ್ರೆಯನ್ನು ಕೈಗೊಂಡಾಗ ಅವನು ಸ್ವಾಧೀನಪಡಿಸಿಕೊಂಡ ಪ್ರಮುಖ ಕೇಂದ್ರಗಳಲ್ಲಿ ಇದೂ ಒಂದು. ಇಲ್ಲಿನ ಪ್ರಮುಖ ಐತಿಹಾಸಿಕ ಸ್ಮಾರಕಗಳೆಂದರೆ ತಾರಕೇಶ್ವರ, ವೀರಭದ್ರ, ಭಿಲ್ಲೇಶ್ವರ, ರಾಮಲಿಂಗ, ನಾರಾಯಣ ದೇವಾಲಯಗಳೂ ಶಿಥಿಲವಾದ ಕೋಟೆ ಮುಂತಾದವುಗಳು ಮತ್ತು ಆನೆಕೆರೆ ಎಂಬ ಕೆರೆ. ಚಾಳುಕ್ಯ ಶೈಲಿಯಲ್ಲಿ ಕಣಶಿಲೆಯಲ್ಲಿ ನಿರ್ಮಿತವಾದ ತಾರಕೇಶ್ವರ ದೇವಾಲಯವು ದೊಡ್ಡ ಕಟ್ಟಡವಾಗಿದ್ದು ಇಂದಿಗೂ ಇದನ್ನು ಚೆನ್ನಾಗಿ ರಕ್ಷಿಸಿಕೊಂಡು ಬರಲಾಗಿದೆ. ಈ ದೇವಾಲಯಕ್ಕೆ ಸಮೀಪದಲ್ಲಿಯೇ ಚಿಕ್ಕದಾದರೂ ಬಹು ಗಮನಾರ್ಹವಾದ ಗಣಪತಿ ಮಂದಿರವಿದೆ. ಪಾಳು ಕೋಟೆಯಲ್ಲಿರುವ ವೀರಭದ್ರ ದೇವಾಲಯದಲ್ಲಿ ಈಗ ಶಿವನನ್ನು ಆರಾಧಿಸಲಾಗುತ್ತಿದೆ. ಕೋಟೆಯ ಪ್ರದೇಶದಲ್ಲಿ ಹಲವಾರು ದೇಗುಲಗಳ ಅವಶೇಷಗಳು ಕಂಡುಬರುತ್ತವೆ. ಭಿಲ್ಲೇಶ್ವರ ದೇವಾಲಯ ಬಹಳಷ್ಟು ಶಿಥಿಲವಾಗಿದೆ. ಪಕ್ಕದಲ್ಲಿಯೇ ಹರಿಯುತ್ತಿರುವ ಧರ್ಮಾನದಿಯ ಎಡದಂಡೆಯಲ್ಲಿ ಇರುವ ಜೀರ್ಣಾವಸ್ಥೆಯ ಕಟ್ಟಡದ ಅವಶೇಷಗಳನ್ನು ನೋಡಬಹುದು. ಹಾಳಾದ ಕೋಟೆಯ ಒಂದು ಭಾಗದಲ್ಲಿ ಸೊಗಸಾದ ತೋಟಗಾರಿಕೆ ಕೈದೋಟವನ್ನು ಬೆಳೆಸಿದ್ದಾರೆ. ಧರ್ಮಾನದಿಯ ತೀರದ ಮೇಲೆ ರಾಮಲಿಂಗೇಶ್ವರ, ಹನುಮಾನ್, ಈಶ್ವರ, ನಾರಾಯಣ, ಮೊದಲಾದ ದೇವಮಂದಿರಗಳ ಅವಶೇಷಗಳು ಎದ್ದುಕಾಣುತ್ತವೆ. ಕುಮಾರಸ್ವಾಮಿಮಠ ಇಲ್ಲಿನ ಪ್ರಮುಖ ವೀರಶೈವಮಠ. ಈ ಕುಮಾರಸ್ವಾಮಿಗಳು ಶಿವಯೋಗ ಮಂದಿರದ ಸ್ಥಾಪಕರಲ್ಲೊಬ್ಬರು. ಶೃಂಗೇರಿಮಠ, ವಿಠಲ ಮಂದಿರವಲ್ಲದೆ ಹಾನಗಲ್ಲಿನಲ್ಲಿ ಎಂಟು ಮಸೀದಿಗಳು, ಸಯ್ಯದ್ ಸಾದತ್ ವಲಿ ಮತ್ತು ಪೀರ್‌ಸಯ್ಯದ್ ಇವರ ಎರಡು ಮುಖ್ಯ ದರ್ಗಾಗಳು ಇವೆ. ಈ ಊರು ಭತ್ತದ ಬೆಳೆದ ಹೆಸರುವಾಸಿಯಾಗಿದೆ. ಈ ತಾಲೂಕಿನ ಕಾಡುಗಳಲ್ಲಿ ಗಂಧದಮರ ಹೆಚ್ಚಾಗಿ ಬೆಳೆಯುತ್ತದೆ.

**ಹಾವೇರಿ** : (ಧಾರವಾಡ ಜಿ; ಉಪವಿಭಾಗ ಮತ್ತು ತಾ. ಕೇ; ಜನ : 36,358) ಹಾವೇರಿಯು ಬೆಂಗಳೂರಿನಿಂದ ವಾಯುವ್ಯಕ್ಕೆ 339 ಕಿಮೀ ಮತ್ತು ಧಾರವಾಡದಿಂದ 115 ಕಿಮೀ ದೂರದಲ್ಲಿದೆ. 1905ರಲ್ಲಿ ಕರ್ಜಗಿಗೆ ಬದಲಾಗಿ ಇದನ್ನು ಉಪವಿಭಾಗ ಮತ್ತು ತಾಲೂಕನ್ನಾಗಿ ಮಾಡಲಾಯಿತು. 1879ರಲ್ಲಿ ಇಲ್ಲಿ ಮೊಟ್ಟಮೊದಲನೇಯ ಬಾರಿಗೆ ಪುರಸಭೆ ಸ್ಥಾಪಿತವಾಯಿತು. ಕೃತಯುಗದಲ್ಲಿ ಇದನ್ನು ನಳನು ಸ್ಥಾಪಿಸಿದನೆಂದೂ, ಆದ್ದರಿಂದ ಇದಕ್ಕೆ ನಳಪುರಿ ಎಂಬ ಹೆಸರಿದ್ದಿತೆಂದೂ ಒಂದು ದಂತಕಥೆಯಿದೆ. ಶಾಸನಗಳಲ್ಲಿ ಇದನ್ನು ಪಾವರಿ, ಹಾಹರಿ, ಕಡೆಯದಾಗಿ ಹಾವೇರಿ ಎಂದು ಕರೆಯಲಾಯಿತು. ಇದು ನಾನ್ನೂರು ಮಹಾಜನಗಳ ಒಂದು ಅಗ್ರಹಾರವಾಗಿದ್ದಿತು. ಬನವಾಸಿ 12,000 ಪ್ರಾಂತ್ಯದಲ್ಲಿ ಪುಲಿಗೆರೆ 300ರ ವಿಭಾಗದಲ್ಲಿ ಹಾವೇರಿ ಒಂದು ಭಾಗವಾಗಿದ್ದಿತು. ಈ ನಗರವು ಹತ್ತನೇಯ ಶತಮಾನಕ್ಕೂ ಮೊದಲೇ ಅಸ್ತಿತ್ವದಲ್ಲಿದ್ದಿತು. ಇಲ್ಲಿ 32 ಶಾಸನಗಳು ದೊರಕಿದ್ದು ಅವು ಸಿಂಘಣ, ಕನ್ನರ, ರಾಮಚಂದ್ರ, ಮಹಾದೇವ, ಮೊದಲಾದ ಸೇಉಣ ದೊರೆಗಳ ಹೆಸರನ್ನು ಪ್ರಸ್ತಾಪಿಸುತ್ತವೆ. ಕಲ್ಯಾಣಿಯ ಚಾಳುಕ್ಯರು ಮತ್ತು ಕಳಚುರಿಗಳ ಪ್ರಸ್ತಾಪವೂ ಇಲ್ಲಿನ ಶಾಸನಗಳಲ್ಲಿ ಬರುತ್ತದೆ. ಇಲ್ಲಿನ ಸಿದ್ಧೇಶ್ವರ ದೇವಾಲಯವು ಐತಿಹಾಸಿಕ ದೃಷ್ಟಿಯಿಂದ ಪ್ರಮುಖ

ವಾಗಿದೆ. ಈ ಮಂದಿರದ ಅಧಿದೇವತೆಯನ್ನು ಸ್ವಯಂಭೂ ಸಿದ್ಧನಾಥನೆಂದು ಕರೆದು ಅವನಿಗೆ ನೀಡಿದ ದಾನದತ್ತಿ ವಿವರಗಳನ್ನು ದೇವಾಲಯದ ಕಂಬಗಳ, ಶಿಲೆಗಳ ಹಾಗೂ ತೊಲೆಗಳ ಮೇಲೆ ಕೆತ್ತಿರುವ ಶಾಸನಗಳು ತಿಳಿಸುತ್ತವೆ. ಸಿದ್ಧೇಶ್ವರ ದೇವಾಲಯದಲ್ಲಿ ಎಡಗೈಯಲ್ಲಿ ಲಿಂಗವನ್ನು ಹಿಡಿದಿರುವ ಆರು ಬಾಹುಗಳುಳ್ಳ ವಿಷ್ಣುವಿನ ವಿಗ್ರಹವು ಮೂರ್ತಿ ಶಿಲ್ಪದ ದೃಷ್ಟಿಯಿಂದ ಬಹು ಸ್ವಾರಸ್ಯಕರವಾಗಿದೆ. ಕ್ರಿ.ಶ. 1109ರಲ್ಲಿ ಕಲ್ಯಾಣಿ ಚಾಳುಕ್ಯ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ನಿರ್ಮಿಸಲಾದ ಈ ದೇವಾಲಯವು ಕಾಳಾಮುಖ ಪಂಥದ ಒಂದು ಪ್ರಮುಖ ಕೇಂದ್ರವಾಗಿದ್ದಿತು. ಇದರ ಪಕ್ಕದಲ್ಲೇ ಇರುವ ನರಸಿಂಹ ದೇವಾಲಯವು ಅನಂತರದ ರಚನೆಯೆಂದು ತೋರುತ್ತದೆ. ಇಲ್ಲಿರುವ ಕಲ್ಮೇಶ್ವರ ದೇವಾಲಯವು ಪ್ರಾಚೀನವಾದುದಾಗಿದ್ದು ಜೀರ್ಣಾವಸ್ಥೆಯಲ್ಲಿದೆ. ಇಲ್ಲಿ ಬ್ರಹ್ಮದೇವನಿಗೆಂದು ನಿರ್ಮಿಸಿರುವ ಕಲ್ಲುಮಂಟಪ ಮತ್ತೊಂದು ಪ್ರಮುಖವಾದ ಪ್ರಾಚೀನ ಸ್ಮಾರಕ. ಇಲ್ಲಿನ ವೀರಭದ್ರ ದೇವಾಲಯವು ಜೈನಧರ್ಮದ ಉಚ್ಛ್ರಾಯ ಕಾಲದ ಜೈನಬಸದಿಯಾಗಿತ್ತೆಂದು ಇಲ್ಲಿ ದೊರಕಿರುವ ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿರುವ ಹೆಗ್ಗೆರೆ ಎಂಬ ಕೆರೆಯು ನಳನ ಕತೆಯೊಂದಿಗೆ ಸಂಬಂಧವನ್ನು ಹೊಂದಿದೆ. ಹಾವೇರಿಯ ಸುತ್ತಮುತ್ತ ಹಲವಾರು ವೀರಗಲ್ಲುಗಳು ಇವೆ. ಈ ಸ್ಥಳದ ವೀರಶೈವಮಠವಾದ ಹುಕ್ಕೇರಿಮಠವು ಮತ್ತೊಂದು ದರ್ಶನೀಯ ಸ್ಥಳವಾದುದಾಗಿದ್ದು ತನ್ನ ವಾರ್ಷಿಕ ಜಾತ್ರೆಯ ಸಲುವಾಗಿ ಒಂದು ಬೃಹತ್ ದನಗಳ ಪರಿಷೆಯನ್ನು ಒಂದು ತಿಂಗಳವರೆಗೆ ನಡೆಸುತ್ತದೆ. ಇವಲ್ಲದೆ ಹಾವೇರಿಯಲ್ಲಿ ಮೂರು ಮಸೀದಿಗಳು, ಮಹಬೂಬ್ ಸುಭಾನಿಯವರ ದರ್ಗಾ, ಒಂದು ಚರ್ಚ್ ಮತ್ತು ಇತ್ತೀಚಿನ ಕಾಲದ ಎರಡು ಜೈನಬಸದಿಗಳೂ ಇವೆ. ಹಾವೇರಿ ಒಂದು ಏಲಕ್ಕಿಯ ವ್ಯಾಪಾರ ಕೇಂದ್ರವಾಗಿದ್ದು ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಕೇರಳದಿಂದ ಬರುವ ಏಲಕ್ಕಿಯನ್ನು ಇಲ್ಲಿ ಸ್ವಚ್ಛಗೊಳಿಸಿ ಹೊರದೇಶಗಳಿಗೆ ರಫ್ತು ಮಾಡಲಾಗುವುದು. ಈ ಊರಿನಲ್ಲಿ ಏಲಕ್ಕಿಯನ್ನು ಶುದ್ಧಿ ಮಾಡಲು ಬಹು ಉಪಯುಕ್ತವಾದ ಸುಣ್ಣ ಮೊದಲಾದ ಶುದ್ಧೀಕರಿಸುವ ಗುಣಗಳುಳ್ಳ ಉಪ್ಪು ನೀರಿನ ಒಂದು ಸಣ್ಣ ಬಾವಿಯಿದೆ. ಈ ಊರು ಹತ್ತಿ ಮತ್ತು ಮೆಣಸಿನಕಾಯಿ ವ್ಯಾಪಾರಕ್ಕೂ ಹೆಸರು ಪಡೆದಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಊರು ಮುಖ್ಯ ಕೇಂದ್ರವಾಗಿತ್ತು. ಸ್ವಾತಂತ್ರ್ಯಾಂದೋಳನದಲ್ಲಿ ಭಾಗವಹಿಸಿ ಹುತಾತ್ಮನಾದ ಮೈಲಾರ ಮಹಾದೇವಪ್ಪನವರ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ.

ಹಾಸನ : (ಜಿ. ಕೇ; ಉಪವಿಭಾಗ ಮತ್ತು ತಾ. ಕೇ; ಜನ: 71,363) ಹಾಸನವು ಬೆಂಗಳೂರಿನಿಂದ 186 ಕಿಮೀ ದೂರದಲ್ಲಿದೆ. ಇದು ಮಹಾಭಾರತ ಕಾಲದ ಜನಮೇಜಯನ ಸಿಂಹಾಸನಪುರವೆಂದು ಸ್ಥಳ ಪುರಾಣವು ತಿಳಿಸುತ್ತದೆ. ಹಾಸಿನ ಬಳ್ಳಿ ಎಂಬ ಸಸ್ಯದಿಂದ ಊರಿಗೆ ಈ ಹೆಸರು ಬಂದಿರಬಹುದು. ಮೂಲ ಪಟ್ಟಣವನ್ನು ಬುಕ್ಕನಾಯಕನೆಂಬ ಚೋಳ ಅಧಿಕಾರಿಯು ಸಮೀಪದ ಚನ್ನಪಟ್ಟಣದಲ್ಲಿ ಹನ್ನೊಂದನೇಯ ಶತಮಾನದಲ್ಲಿ ಸ್ಥಾಪಿಸಿದನು. ಇಲ್ಲಿರುವ ಹಾಸನಾಂಬಾ ದೇವಾಲಯ ಪಾಳೆಯಗಾರರ ಕಾಲದ ರಚನೆ. ಈ ದೇವತಾ ಮೂರ್ತಿಯು ಹುತ್ತದ ರೂಪದಲ್ಲಿದೆ. ಈ ಗುಡಿಯನ್ನು ಆಶ್ವಿಜದ ದ್ವಿತೀಯಾರ್ಧದ ಎರಡನೇಯ ದಿನ ತೆರೆದು ಒಂದು ವಾರ ಮಾತ್ರವಿಟ್ಟು ಅನಂತರ ಮುಚ್ಚಿಬಿಡುತ್ತಾರೆ. ಇಲ್ಲಿರುವ ಸಿದ್ದೇಶ್ವರ ದೇವಾಲಯವನ್ನು ಬಲಮ್‌ನ ವೆಂಕಟಪ್ಪನಾಯಕ ಮತ್ತು ಅವನ ಮಗ ಕೃಷ್ಣಪ್ಪನಾಯಕ ಕಟ್ಟಿಸಿದರು. ದೇವಿಕೆರೆಯ ದಂಡೆಯ ಮೇಲೆ ಕೊಳಲ ಗೋಪಾಲಕೃಷ್ಣ ಮತ್ತು ಗಂಗಾಧರೇಶ್ವರ ದೇವಾಲಯಗಳಿವೆ. ಇವೂ ಸಹ ಪಾಳೆಯಗಾರರ ಕಾಲದ ರಚನೆಗಳು. ಪ್ರಧಾನ ಹೆಗಡೆ ಲಕುಮಯ್ಯ ಕಟ್ಟಿಸಿದ ಚನ್ನಕೇಶವ ದೇವಾಲಯ, ವೆಂಕಟಕೃಷ್ಣಪ್ಪ ಕಟ್ಟಿಸಿದ ಮಲ್ಲೇಶ್ವರ ದೇವಾಲಯ, ವಿದ್ಯಾರಣ್ಯರಿಂದ ಜೀರ್ಣೋದ್ಧಾರವಾದ ವಿರೂಪಾಕ್ಷೇಶ್ವರ ದೇವಾಲಯ ಮತ್ತು ಜೈನ ಬಸದಿ ಇಲ್ಲಿನ ಪ್ರೇಕ್ಷಣೀಯ ಸ್ಥಳಗಳು. ಇದೊಂದು ಕೈಗಾರಿಕೆ ಹಾಗೂ ಶೈಕ್ಷಣಿಕ ಕೇಂದ್ರವಾಗಿದೆ. ಹಾಸನವು ಬಡವರ ಊಟಿ ಎಂದು ಹೆಸರು ಪಡೆದು ಪ್ರವಾಸಿ ಕೇಂದ್ರವಾಗಿ ಜನಪ್ರಿಯವಾಗುತ್ತಿದೆ. ಇಲ್ಲಿ ಒಂದು ಪುರಸಭೆಯಿದೆ. ಹಾಸನ ತಾಲೂಕಿನ ಇತರ ಮುಖ್ಯ ಸ್ಥಳಗಳಲ್ಲಿ ಕೊಂಡಜ್ಜಿ (ಜನ: 406)ಯು ಹಾಸನದ ಉತ್ತರಕ್ಕೆ 17 ಕಿಮೀ ದೂರದಲ್ಲಿದೆ. ಇಲ್ಲಿನ ಚೆನ್ನಕೇಶವ ಅಥವಾ ಅಲ್ಲಾಳನಾಥ ದೇವಾಲಯವು ಬಹು ಪ್ರಸಿದ್ಧವಾಗಿದ್ದು, ಈ ದೇವತಾ ಮೂರ್ತಿಯು 4.2 ಮೀಟರ್ ಎತ್ತರವಾಗಿದೆ. ಈ ದೇವಾಲಯವು 14ನೇಯ ಶತಮಾನದ್ದೆಂದು ತೋರುತ್ತದೆ. ಗ್ರಾಮದ ಪಶ್ಚಿಮದಲ್ಲಿ ಈ ದೇವಾಲಯವು ಇರುವ ಸ್ಥಳದಲ್ಲಿ ಹಿಂದೆ ಇಲ್ಲಿ ಒಂದು ಪಟ್ಟಣವು ಇದ್ದಂತೆ ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯದ ಮಧ್ಯಕಾಲದಲ್ಲಿ ಈ ದೇವಾಲಯವು ನಾಶವಾಗಿ ಅನಂತರ ಪುನರ್ ನಿರ್ಮಾಣವಾಗಿದ್ದಂತೆ ಕಂಡುಬರುತ್ತದೆ. ಕೋರವಂಗಲ (ಜನ: 878)ವು ಹಾಸನದ ಪೂರ್ವಕ್ಕೆ ಎಂಟು ಕಿಮೀ ದೂರದಲ್ಲಿರುವ ಗ್ರಾಮವಾಗಿದ್ದು 12ನೇಯ ಶತಮಾನಕ್ಕೆ ಸೇರಿದ ಮೂರು ಹೊಯ್ಸಳ ದೇವಾಲಯಗಳಿವೆ. ಇಲ್ಲಿನ ನಖರೇಶ್ವರ ಮತ್ತು ಗೋವಿಂದೇಶ್ವರ ದೇವಾಲಯಗಳು ಶಿಥಿಲವಾಗಿವೆ. ಬೂಚೇಶ್ವರ ದೇವಾಲಯವು ಉತ್ತಮ ಸ್ಥಿತಿಯಲ್ಲಿದ್ದು ಹೊಯ್ಸಳ ಶೈಲಿಯ ಉತ್ತಮ ನಿದರ್ಶನವಾಗಿದೆ. ಈ ದೇವಾಲಯದಲ್ಲಿ ತುಂಬ ಸೂಕ್ಷ್ಮವಾಗಿ ಕೆತ್ತಲಾಗಿರುವ ಅನೇಕ ಶಿಲ್ಪಗಳಿವೆ. ದೇವಾಲಯದ ಮುಂಭಾಗಕ್ಕೆ ಎದುರಾಗಿರುವ ಸೂರ್ಯ ಮಂದಿರ ಶ್ರೇಷ್ಠಮಟ್ಟದ ಮೂರ್ತಿ ಶಿಲ್ಪಕ್ಕಾಗಿ ಪ್ರಖ್ಯಾತವಾಗಿದೆ. ದೊರೆ ಎರಡನೇಯ ಬಲ್ಲಾಳನ ಪಟ್ಟಾಭಿಷೇಕದ ಸಂದರ್ಭದಲ್ಲಿ (1173) ಬೂಚಿ

ರಾಜನು ಬೂಚೇಶ್ವರ ದೇವಾಲಯವನ್ನು ಕಟ್ಟಿಸಿದನು. ಈ ಊರಿನಲ್ಲಿ ಒಂದು ಆಂಜನೇಯ ದೇವಾಲಯವೂ ಸುಂದರವಾದ ಕೆತ್ತನೆಯುಳ್ಳ ಒಂದು ವೀರಗಲ್ಲೂ ಇದೆ. ಗೊರೂರು: (ಜನ: 5,553) ಹಾಸನದಿಂದ ದಕ್ಷಿಣಕ್ಕೆ 28 ಕಿಮೀ, ಅರಕಲಗೂಡಿನಿಂದ ಉತ್ತರಕ್ಕೆ ಒಂಬತ್ತು ಕಿಮೀ ದೂರದಲ್ಲಿ ಹೇಮಾವತಿ ನದಿ ತೀರದ ಮೇಲೆ ಗೊರೂರು ಗ್ರಾಮವಿದೆ. ಇಲ್ಲಿ 1586ರಲ್ಲಿ ನಿರ್ಮಿಸಲಾದ ಪಶ್ಚಿಮಾಭಿಮುಖವಾದ ಯೋಗಾನರಸಿಂಹ ದೇವಾಲಯವಿದೆ. ಈ ದೇವಾಲಯವು ಬಹು ಸುಂದರವಾಗಿದ್ದು ಮಂದಿರದಲ್ಲಿ 1.8 ಮೀಟರಿನ ಹೊಯ್ಸಳ ಶೈಲಿಯ ಯೋಗ ಮುದ್ರೆಯಲ್ಲಿರುವ ನರಸಿಂಹಸ್ವಾಮಿ ಮೂರ್ತಿಯು ಬಹು ಮುದ್ದಾಗಿದೆ. ಹೊಯ್ಸಳ ಕಾಲದ ತ್ರಿಕೂಟೇಶ್ವರ ದೇವಾಲಯದಲ್ಲಿ ಮೂರು ಗರ್ಭಗುಡಿಗಳು, ಮೂರು ತೆರೆದ ಶುಕನಾಸಿಗಳು, ನವರಂಗ ಮತ್ತು ಒಂದ ತೆರೆದ ಕಮಾನು ಇವೆ. ವಿಜಯನಗರದ ಕಾಲದ ವಾಸುದೇವ ದೇವಾಲಯವು ದೊಡ್ಡದಾಗಿದ್ದರೂ ಸರಳವಾದ ಕಟ್ಟಡ. ಇಲ್ಲಿರುವ ಏಕಕೂಟ ಕೈಲಾಸೇಶ್ವರ ದೇವಾಲಯವನ್ನು ಭಗ್ನವಾದ ಹೊಯ್ಸಳ ದೇವಾಲಯದ ಸಾಮಗ್ರಿಗಳಿಂದ ವಿಜಯನಗರದ ತರುವಾಯದ ಕಾಲದಲ್ಲಿ ಕಟ್ಟಿದಂತೆ ತೋರುತ್ತದೆ. ಹೇಮಾವತಿ ನದಿಗೆ ಅಡ್ಡವಾಗಿ ಗೊರೂರಿಂದ ಒಂದು ಕಿಮೀ ದೂರದಲ್ಲಿ 16 ಕೋಟಿ ರೂ. ವೆಚ್ಚದಲ್ಲಿ ಒಂದು ಅಣೆಕಟ್ಟನ್ನು ಕಟ್ಟಲಾಗುತ್ತಿದೆ. ಮೊಸಳೆ (ಜನ: 647)ಯು ಹಾಸನದ ಆಗ್ನೇಯಕ್ಕೆ 12 ಕಿಮೀ ದೂರದಲ್ಲಿ ಹಾಸನ ಹೊಳೆನರಸೀಪುರ ರಸ್ತೆಯಲ್ಲಿದೆ. ಇದು ಸ್ಥಳ ಪುರಾಣದಂತೆ, ಪ್ರಾಚೀನ ಕಾಲದಲ್ಲಿ ಜಮದಗ್ನಿ ಋಷಿಯ ಆಶ್ರಮವಾಗಿದ್ದಿತು. ಮೊದಲು ಇದಕ್ಕೆ 'ಮುಸಲ' ಎಂಬ ಹೆಸರಿದ್ದಿತೆಂದು ಪ್ರತೀತಿ. ಇಲ್ಲಿರುವ ಚೆನ್ನಕೇಶವ ಮತ್ತು ನಾಗೇಶ್ವರ ದೇವಾಲಯಗಳು ಒಂದರ ಪಕ್ಕದಲ್ಲೊಂದಿದ್ದು ಒಂದೇ ರೀತಿಯಲ್ಲಿ ನಿರ್ಮಿಸಲ್ಪಟ್ಟಿರುವ ಹೊಯ್ಸಳ ಕಲಾಕೃತಿಗಳು. ಇವು 13ನೇಯ ಶತಮಾನಕ್ಕೆ ಸೇರಿದವೆಂದು ಹೇಳಬಹುದು. ಪ್ರತಿಯೊಂದರಲ್ಲೂ ಒಂದು ಗರ್ಭಗೃಹ, ಶುಕನಾಸಿ, ನವರಂಗ, ಜಗತಿಯಿಂದ ಕೂಡಿದ ಹೊರಾಂಗಣ ಮತ್ತು ಒಂದು ಮನೋಹರವಾದ ಶಿಖರವಿದೆ. ದೇವಾಲಯದ ಮೇಲ್ಮೈವಣಿಗಳಲ್ಲಿ ವೈವಿಧ್ಯವೂ, ಸಂಕೀರ್ಣವೂ, ಸೂಕ್ಷ್ಮವೂ ಆದ ರೇಖಾ ಶಿಲ್ಪಗಳನ್ನು ಸಂಕೀರ್ಣ ಆಕಾರಗಳನ್ನು ಕೆತ್ತಲಾಗಿದೆ.

**ಹಿರಿಯೂರು :** (ಚಿತ್ರದುರ್ಗ ಜಿ ; ತಾ. ಕೇ ; ಜನ: 2,152) ಹಿರಿಯೂರು ವೇದಾವತಿನದಿಯ ಬಲದಂಡೆಯ ಮೇಲಿರುವ ಪಟ್ಟಣ. ಇದು ಬೆಂಗಳೂರಿನಿಂದ 160 ಕಿಮೀ ಮತ್ತು ಚಿತ್ರದುರ್ಗದಿಂದ 40 ಕಿಮೀ ದೂರದಲ್ಲಿದೆ. ಪ್ರಾಚೀನ ಕಾಲದಲ್ಲಿ ಇದಕ್ಕೆ ಘನಪುರಿ ಎಂಬ ಹೆಸರಿದ್ದಿತು. ಇಲ್ಲಿ ಚಿನ್ನದ ಗಣಿಗಳಿದ್ದುದರಿಂದ ಇದನ್ನು ಹೊನ್ನ ಹಿರಿಯೂರು ಎಂದು ಕರೆಯುತ್ತಿದ್ದರು. ಮಾಯಸಮುದ್ರದ ಕೇಶವನಾಯಕ ಇದನ್ನು 16ನೇಯ ಶತಮಾನದಲ್ಲಿ ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಹಿರಿಯೂರಿನ ಪಾಳೆಗಾರನಾಗಿದ್ದ ಕೆಂಚಪ್ಪನಾಯಕನು ಇಲ್ಲಿರುವ ಪ್ರಾಚೀನಮಂದಿರ 'ದಕ್ಷಿಣ ಕಾಶಿ' ತೇರು ಮಲ್ಲೇಶ್ವರನ ದೇವಸ್ಥಾನವನ್ನು ಕಟ್ಟಿಸಿದನು. ಚಿತ್ರದುರ್ಗದ ಪಾಳೆಯಗಾರನೊಬ್ಬನು ಈ ದೇವಾಲಯಕ್ಕೆ ಒಂದು ಎತ್ತರವಾದ ಗೋಪುರವನ್ನು ಕಟ್ಟಿಸಿದನು. ಈ ದೇವಾಲಯದಲ್ಲಿ ಕೆಲವು ವರ್ಣಚಿತ್ರಗಳೂ ಇವೆ. ಇದರಲ್ಲಿ 42ಅಡಿ ಉದ್ದದ ಒಂದು ಕಬ್ಬಿಣದ 'ಶಿವಧನಸ್ಸು' ಇದೆ. ತೇರುಮಲ್ಲೇಶ್ವರನ ರಥೋತ್ಸವದ ಸಮಯದಲ್ಲಿ ಅದನ್ನು ಮೆರವಣಿಗೆ ಮಾಡಲಾಗುವುದು. ತೇರುಮಲ್ಲೇಶ್ವರ ಭಕ್ತ ಮಂಡಲಿಯ ಆಶ್ರಯದಲ್ಲಿ ಇತ್ತೀಚೆಗೆ ಸಾಮೂಹಿಕ ವಿವಾಹಗಳು ಜರುಗುತ್ತಿವೆ. ಲಕ್ಷ್ಮೀವೆಂಕಟರಮಣ, ಮೈಲಾರಲಿಂಗೇಶ್ವರ, ಸತ್ಯನಾರಾಯಣ, ದುರ್ಗಾಂಬಿಕಾ, ಆಂಜನೇಯ, ಗಣೇಶ ಮತ್ತು ಬನದಮ್ಮ ದೇವಾಲಯಗಳು ಈ ಊರಿನಲ್ಲಿದೆ. ಇದು ಪುರಸಭೆಯನ್ನು ಹೊಂದಿದೆ. ಹಿರಿಯೂರಿನ ಬಳಿ ವಾಣೀವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲಾಗಿದೆ. ಕಡಲೇಕಾಯಿ ಎಣ್ಣೆ, ಬೆಲ್ಲ, ಅಕ್ಕಿ ಈ ಊರಿನ ಪ್ರಮುಖ ಉತ್ಪನ್ನಗಳು. ಅಂಬಲಗೆರೆಯ ರಂಗನಾಥ, ಭರಮಗಿರಿಯ ಕಣಿವೆಮಾರಮ್ಮ, ಅಬ್ಬಿನಹೊಳೆಯ ರಂಗನಾಥ, ಈ ತಾಲೂಕಿನ ಪ್ರಮುಖ ದೇವಾಲಯಗಳು. ತಾಲೂಕಿನ ಇತರ ಮುಖ್ಯ ಸ್ಥಳಗಳಲ್ಲಿ ಐಮಂಗಲ (ಜನ: 1,293)ವು ಹಿರಿಯೂರಿಗೆ 18 ಕಿಮೀ ದೂರದಲ್ಲಿ ಚಿತ್ರದುರ್ಗದ ಕಡೆ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿದ್ದು ಅದೇ ಹೆಸರಿನ ಹೋಬಳಿ ಕೇಂದ್ರವಾಗಿದೆ. ಕ್ರಿ.ಶ. 975ರ ಒಂದು ಶಾಸನದಲ್ಲಿ ಅದನ್ನು ಐಯ್ಯಪ್ಪಮಂಗಲ ಎಂದು ಕರೆಯಲಾಗಿದೆ. ಇದು ಚೋಳರ ಕಾಲದಲ್ಲಿ ಒಂದು ಅಗ್ರಹಾರವಾಗಿತ್ತು. ಇಲ್ಲಿನ ಕೋಟೆಯನ್ನು 17ನೇಯ ಶತಮಾನದಲ್ಲಿ ಚಿತ್ರದುರ್ಗದ ಹಿರೇಮದಕರಿನಾಯಕನು ಕಟ್ಟಿಸಿದನು. ಈ ಸ್ಥಳದ ಪ್ರಾಚೀನಾವಶೇಷಗಳೆಲ್ಲವೂ ಕೋಟೆಯೂ ಸೇರಿದಂತೆ ಬಹುತೇಕ 17-18ನೇಯ ಶತಮಾನಕ್ಕೆ ಸೇರಿದವುಗಳಾಗಿವೆ. ಈ ಊರಿನ ಬಹು ಮುಖ್ಯ ಸ್ಮಾರಕವೆಂದರೆ ವೀರಭದ್ರ ದೇವಾಲಯ. ರಾಜ್ಯದ ಖಾದಿ ಗ್ರಾಮೋದ್ಯೋಗ ಸಮಿತಿಯು ಐಮಂಗಲದಲ್ಲಿ ಒಂದು ಖಾದಿ ಕೇಂದ್ರವನ್ನು ನಡೆಸುತ್ತದೆ. ಬಬ್ಬೂರು (ಜನ: 2,445) ಹಿರಿಯೂರಿಗೆ ಮೂರು ಕಿಮೀ ದೂರದಲ್ಲಿದ್ದು ಕ್ರಿ.ಶ. 1750ರಲ್ಲಿ ಜೀವಿಸಿದ್ದ ಬಬ್ಬೂರುರಂಗ ಎಂಬ ಕವಿಯ ವಾಸಸ್ಥಳವಾಗಿದೆ. ಈತನು ಭಾಮಿನಿ ಷಟ್ಪದಿಯಲ್ಲಿ 'ಅಂಬಿಕಾ ವಿಜಯ'ವನ್ನು 'ಪರಶುರಾಮ ರಾಮಾಯಣ'ವನ್ನು ಬರೆದಿದ್ದಾನೆ. ಇಲ್ಲಿ ಒಂದು ಪ್ರಾಚೀನ ರಂಗನಾಥ ದೇವಾಲಯವಿದೆ. ಇದು ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ. ಹರ್ತಿಕೋಟೆಯು (ಜನ : 2,557) ಹಿರಿಯೂರಿನಿಂದ ಚಳ್ಳಕೆರೆಗೆ ಹೋಗುವ ರಸ್ತೆಯಲ್ಲಿ 16 ಕಿಮೀ ದೂರದಲ್ಲಿದೆ. ಇದು ಹರತಿ ಪಾಳೆಯಗಾರರ ಮುಖ್ಯ ಸ್ಥಳವಾಗಿತ್ತು. ಈ ಪಾಳೆಯಗಾರರು ಮುಂದೆ ನಿಡುಗಲ್ಲನ್ನು

ಆಕ್ರಮಿಸಿಕೊಂಡು ನಿಡುಗಲ್ಲು ಪಾಳೆಯಗಾರರೆಂದು ಪ್ರಸಿದ್ಧರಾದರು. ಈ ಸಂತತಿಯ ಸ್ಥಾಪಕನು ವಿಜಾಪುರದ ಪ್ರದೇಶದಿಂದ ಇಲ್ಲಿಗೆ ಬಂದು ಈ ಭಾಗವನ್ನು ದತ್ತಿಪಡೆದನೆಂದು ಹೇಳಲಾಗಿದೆ. ಅವನೇ ದೊಡ್ಡೇರಿ ಮತ್ತು ಹರತಿ ಗ್ರಾಮವನ್ನು ಕಟ್ಟಿದನೆಂದು ಹೇಳಲಾಗಿದೆ. ಇಲ್ಲಿ ಒಂದು ವೀರಭದ್ರ ದೇವಾಲಯವಿದೆ.

**ಹಿರೇಕೆರೂರು :** (ಧಾರವಾಡ ಜಿ; ತಾ. ಕೇ; ಜನ : 10,270) ಹಿರೇಕೆರೂರು ಬೆಂಗಳೂರು ವಾಯುವ್ಯಕ್ಕೆ 382 ಕಿಮೀ ಧಾರವಾಡದ ದಕ್ಷಿಣಕ್ಕೆ 155 ಕಿಮೀ ದೂರದಲ್ಲಿದೆ. ಹಿರೇಕೆರೂರು ಎಂಬ ಹೆಸರಿನ ತಾಲೂಕು ರಚನೆಯಾಗುವ ಮೊದಲು ಇದು ಕೋಡ ತಾಲೂಕಿನ ಮುಖ್ಯ ಸ್ಥಳವಾಗಿದ್ದಿತು. ಇಲ್ಲಿನ ಪುರಸಭೆಯು 1973ರ ಏಪ್ರಿಲ್‌ನಲ್ಲಿ ಅಸ್ತಿತ್ವಕ್ಕೆ ಬಂದಿತು. ಹಿರಿಯಕೆರೆಯೂರು ಎಂಬ ಪದದಿಂದ ಹಿರೇಕೆರೂರು ಎಂಬ ಹೆಸರು ಬಂದಿದೆ. ಈ ಕೆರೆಯನ್ನು ಜನಮೇಜಯನ ಕೆರೆಯೆಂದೂ ಕರೆಯುತ್ತಾರೆ. ಇಲ್ಲಿ ಒಂಬತ್ತು ಶಿಲಾಶಾಸನಗಳು ದೊರಕಿವೆ. ಅವುಗಳಲ್ಲಿ ಕ್ರಿ.ಶ. 1060ರ ಒಂದು ಶಾಸನವು ಕಲ್ಯಾಣಿ ಚಾಳುಕ್ಯ ದೊರೆ ಒಂದನೇಯ ಸೋಮೇಶ್ವರನ ದಳಪತಿ ಗುಂಡಮಯ್ಯನ ಸಾಹಸಗಳನ್ನು ವಿವರಿಸುತ್ತದೆ. ಇಲ್ಲಿ ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದ್ದೆನಿಸಿದ ಸ್ಮಾರಕಗಳು ಯಾವುವೂ ಇಲ್ಲ; ಆದರೂ ಭಗ್ನವಾಗಿ ಭಾಗಶಃ ಮಣ್ಣಿನಲ್ಲಿ ಹೂತುಹೋಗಿರುವ ಜನಾರ್ದನ, ತೋಟದ ವೀರಣ್ಣ (ವೀರಭದ್ರ), ಹನುಮಾನ್ ಮತ್ತು ಕೆರೆಯ ದಂಡೆಯ ಮೇಲಿರುವ ದುರ್ಗಾದೇವಿ ದೇವಾಲಯಗಳು ಪ್ರಮುಖವಾಗಿವೆ. ಇಲ್ಲಿ ಎರಡು ಮಸೀದಿಗಳೂ, ಎರಡು ದರ್ಗಾಗಳೂ ಇವೆ. ಈ ತಾಲೂಕಿನಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಕರನಿರಾಕರಣ ಚಳುವಳಿಯನ್ನು ಏರ್ಪಡಿಸಲಾಗಿದ್ದಿತು (1931). ಈ ತಾಲೂಕಿನ ಇತರ ಪ್ರಮುಖ ಸ್ಥಳಗಳು ಇಂತಿವೆ: ಬಾಳಂಬೀಡು: ಹಿರೇಕೆರೂರಿಗೆ ಮೂರು ಕಿಮೀ ದೂರದಲ್ಲಿರುವ ಬಾಳಂಬೀಡು ಎಂಬ ಸಣ್ಣ ಹಳ್ಳಿಯಲ್ಲಿ ಕಲ್ಯಾಣದ ಚಾಳುಕ್ಯರ ಕಾಲದ ವಿಷಪರಿಹಾರೇಶ್ವರ ಎಂಬ ಪ್ರಸಿದ್ಧ ದೇವಾಲಯ ಮತ್ತು ಬಸವಣ್ಣನ ದೇವಾಲಯಗಳಿವೆ. ವಿಷಪರಿಹಾರೇಶ್ವರ ದೇವಾಲಯದ ಶಿವಲಿಂಗವು ಹಾವು ಮತ್ತು ವಿಷಪ್ರಾಣಿಗಳ ಕಡಿತಕ್ಕೊಳಗಾದವರನ್ನು ಗುಣಪಡಿಸುವುದೆಂದು ಇಲ್ಲಿನ ಜನರು ನಂಬುತ್ತಾರೆ. ಇಲ್ಲಿ ಐದು ಶಾಸನಗಳಿದ್ದು, ಅವುಗಳಲ್ಲಿ ಕ್ರಿ.ಶ. 1058, 1079 ಮತ್ತು 1088ರ ಕಾಲದ ಮೂರು ಶಾಸನಗಳು ಇವೆ. ಈ ಶಾಸನಗಳು ದೇವರನ್ನು ಅಂಡೂರೇಶ್ವರ, ಲಾಂಡೂರೇಶ್ವರ ಮತ್ತು ಪಾಂಡುರಂಗೇಶ್ವರ ಎಂದು ವರ್ಣಿಸಿವೆ. ಹಿರೇಕೆರೂರಿಗೆ 10 ಕಿಮೀ ದೂರದಲ್ಲಿರುವ ಅಬ್ಬಲೂರಲ್ಲಿ 20 ಶಾಸನಗಳೂ ಸೇರಿದಂತೆ ಅನೇಕ ಐತಿಹಾಸಿಕ ಸ್ಮಾರಕಗಳಿವೆ. ಇದು 12ನೇಯ ಶತಮಾನದಲ್ಲಿ ಜೈನಧರ್ಮದ ಒಂದು ಮುಖ್ಯ ಕೇಂದ್ರವಾಗಿದ್ದಿತು. ಪ್ರಸಿದ್ಧ ಶೈವಭಕ್ತ ಏಕಾಂತದ ರಾಮಯ್ಯನು ಒಂದು ಧಾರ್ಮಿಕ ಗೋಷ್ಠಿಯಲ್ಲಿ ಜೈನಧರ್ಮದ ಸಿದ್ಧಾಂತವನ್ನು ಖಂಡಿಸಿ ತನ್ನ ತಲೆಯನ್ನು ಕತ್ತರಿಸಿಕೊಂಡು ಸಂವಾದದಲ್ಲಿ ಜಯಶಾಲಿಯಾಗಿ ಅನಂತರ ಶಿವನ ಕೃಪೆಯಿಂದ ಮತ್ತೆ ಶಿರವನ್ನು ಪಡೆದನೆಂದು ಸೋಮೇಶ್ವರ ದೇವಾಲಯದ ಶಾಸನ ತಿಳಿಸುತ್ತದೆ. ಬ್ರಹ್ಮೇಶ್ವರ ದೇವಾಲಯದಲ್ಲಿ ಚಾಳುಕ್ಯ ಶೈಲಿಯ ಸೊಗಸಾದ ಸೂರ್ಯನಾರಾಯಣ ವಿಗ್ರಹವಿದೆ. ಕನ್ನಡದ ಜನಪ್ರಿಯ ಕವಿ ಸರ್ವಜ್ಞ ಈ ಊರಿನವನೆಂದು ಹೇಳಲಾಗಿದೆ.

**ಹುಕ್ಕೇರಿ :** (ಬೆಳಗಾವಿ ಜಿ; ತಾ. ಕೇ; ಜನ: 15,534) ಹುಕ್ಕೇರಿಯು ಬೆಂಗಳೂರಿನಿಂದ ವಾಯುವ್ಯಕ್ಕೆ 550 ಕಿಮೀ ದೂರದಲ್ಲಿ, ಬೆಳಗಾವಿಯಿಂದ 48 ಕಿಮೀ ಉತ್ತರಕ್ಕಿದೆ. ಹುಕ್ಕೇರಿ ಎಂಬ ಊರಿನ ಹೆಸರು ಹೂವಿನಕೇರಿ ಎಂಬ ಪದದಿಂದ ಬಂದುದಾಗಿ ಒಂದು ವಿವರಣೆ ಇದೆ. ಆದಿಲ್ ಷಾಹಿಗಳ ಕಾಲದಲ್ಲಿ ಇಲ್ಲಿ ಉತ್ತಮ ಜಾತಿಯ ಗುಲಾಬಿ ಹೂಗಳು ಬೆಳೆಯುತ್ತಿದ್ದು, ಅವನ್ನು ಇಲ್ಲಿಂದ ವಿಜಾಪುರಕ್ಕೆ ರವಾನಿಸಲಾಗುತ್ತಿತ್ತು. ಸ್ಥಳೀಯ ದಾಖಲೆಗಳ ಪ್ರಕಾರ ಇಲ್ಲಿನ ಇತಿಹಾಸವು 14ನೇಯ ಶತಮಾನದಿಂದ ಆರಂಭವಾಗುತ್ತದೆ. ಹುಕ್ಕೇರಿ ಮತ್ತು ಆದರ ಸುತ್ತಮುತ್ತಣ ಪ್ರದೇಶದಲ್ಲಿ ಜೈನ ಮತ್ತು ಶೈವ ಪಂಥಗಳ ಪ್ರಭಾವವನ್ನು ಕಾಣಬಹುದು. 1327ರಲ್ಲಿ ಈ ಪ್ರದೇಶವನ್ನು ದೆಹಲಿಯ ಸುಲ್ತಾನ ಮುಹಮ್ಮದ್ ಬಿನ್ ತಘಲಕನು (1325–51) ಗೆದ್ದುಗೊಂಡನು. ಆಗ ಹುಕ್ಕೇರಿಯು ಅವನಿಂದ ನೇಮಿಸಲಾದ ಅಮೀರನ ಆಡಳಿತಕ್ಕೆ ಒಳಪಟ್ಟಿತ್ತು. ಆ ಬಳಿಕ ಈ ಪ್ರದೇಶವು ಬಹಮನಿಗಳ, ವಿಜಾಪುರದ ಸುಲ್ತಾನರ, ಮೊಗಲರ ಮತ್ತು ಮರಾಠರ ಆಡಳಿತಕ್ಕೆ ಒಳಪಟ್ಟಿದ್ದು, 1806ರಲ್ಲಿ ಬ್ರಿಟಿಷರು ಹುಕ್ಕೇರಿಯನ್ನು ವಶಪಡಿಸಿಕೊಂಡು ಅದನ್ನು ಒಂದು ತಾಲೂಕಾಗಿ ಮಾಡಿದರು. ಇಲ್ಲಿಯ ಕೋಟೆಯನ್ನು ಐನ್-ಉಲ್-ಮುಲ್ಕ್ ಗಿಲಾನಿ ಎಂಬ ವಿಜಾಪುರದ ಸೇನಾನಿ ಕಟ್ಟಿಸಿದನು. ರುಸ್ತುಂ ಜಮಾನನು ಚೀನಿ ಗುಮ್ಮಟ ಮತ್ತು ಕದಂ ರಸುಲ್ ಮಸೀದಿಗಳನ್ನು 17ನೇಯ ಶತಮಾನದಲ್ಲಿ ಕಟ್ಟಿಸಿದನು. ಮರಾಠರ ಕಾಲದಲ್ಲಿ ವಂಟಮುರಿ ದೇಸಾಯಿ ಇಲ್ಲಿಯ ಆಡಳಿತ ನೋಡಿಕೊಳ್ಳುತ್ತಿದ್ದನು. ಇಲ್ಲಿ ಹಲವಾರು ಸ್ವಾರಸ್ಯಕರವಾದ ಪ್ರಾಚೀನ ಸ್ಮಾರಕಗಳಿವೆ. ಅವುಗಳಲ್ಲಿ ಮುಖ್ಯವಾದುವೆಂದರೆ ಊರಿನ ಉದ್ದಗಲದಲ್ಲೂ ಕಂಡುಬರುವ ವಿವಿಧ ಗಾತ್ರದ ಗುಮ್ಮಟಗಳು. ಈಗ ಇಲ್ಲಿ ಬರೀ ನಾಲ್ಕು ಗುಮ್ಮಟಗಳು ಮಾತ್ರ ಉಳಿದಿವೆ. ಇಲ್ಲಿ ಮುಸ್ಲಿಂ ಶಿಲ್ಪಶೈಲಿಯ ಶ್ರೇಷ್ಠ ಸ್ಮಾರಕಗಳೆಂದು ಪರಿಗಣಿಸಲ್ಪಟ್ಟಿವೆ. ಇಲ್ಲಿ ಹಲವಾರು ನೀರಿನ ಚಿಲುಮೆಗಳು ಇವೆ. ಈಗ ಬರೇ ನಾಲ್ಕು ಮಾತ್ರ ಕೆಲಸ ಮಾಡುತ್ತಿವೆ. ಈ ಕೌತುಕಮಯ ಕಾರಂಜಿಗಳು ಅವುಗಳ ರಚನಾ ಕೌಶಲ್ಯ, ಅಂತರಿಕ ವ್ಯವಸ್ಥೆ, ನೀರಿನ ನೆಲೆ, ವಿತರಣೆ ಮತಿತ್ತರ ತಾಂತ್ರಿಕ ವಿವರಗಳಿಂದ ಆಧುನಿಕ ತಂತ್ರಜ್ಞಾನಕ್ಕೆ ಸವಾಲಾಗಿವೆ. ಈಗ ಇವುಗಳೇ ಪಟ್ಟಣಕ್ಕೆ

ನೀರು ಪೂರೈಕೆಯ ಮೂಲಗಳಾಗಿವೆ. 1583ರ ಪರ್ಶಿಯನ್ ಮತ್ತು ಮರಾಠಿ ದಾಖಲೆಗಳ ಪ್ರಕಾರ ಒಂದು ಕಾರಂಜಿಯು ಆದಿಲ್ ಷಾಹಿಗಳ ಕಾಲದಲ್ಲಿ ಸ್ಥಾಪಿತವಾಯಿತು. ಮಳೆಗಾಲದಲ್ಲಿ ಇವು ಸರಿಯಾಗಿ ಕೆಲಸ ಮಾಡುತ್ತವೆ. ಈ ಪಟ್ಟಣದಿಂದ ಸುಮಾರು ಒಂದು ಕಿಮೀ ದೂರಕ್ಕೆ ಗಜಬರ್‌ವಾಡಿ ಎಂಬ ಬಡಾವಣೆಯಲ್ಲಿ ಒಂದು ಮಸೀದಿ ಇದೆ. ಅಲ್ಲದೆ, 1498ರಲ್ಲಿ ನಂದಿ ಗ್ರಾಮದ ದೇಸಾಯಿಯಾದ ಕೇತಗೌಡನು ಮುಸ್ಲಿಂ ಸರದಾರ ಗಜಬರ್ ಸಾಹೇಬನ ಹೆಸರಲ್ಲಿ ಕಟ್ಟಿದ ದರ್ಗಾ ಇದೆ. ಬಣ್ಣದ ಹೆಂಚುಗಳಿಂದ ಅಲಂಕೃತವಾದ ಚೀನಿ ಗುಮ್ಮಟವು ಇಲ್ಲಿನ ಇನ್ನೊಂದು ಸ್ಮಾರಕವಾಗಿದೆ. ಇಲ್ಲಿ ಏಳು ಮಸೀದಿಗಳು ಪೈಗಂಬರ, ಮಹಾಸಬ್‌ತಿ ಮತ್ತು ಗಜಬರ್ ಸಾಹೇಬರ ಸ್ಮಾರಕಾರ್ಥವಾಗಿ ಕಟ್ಟಲಾದ ಮೂರು ದರ್ಗಾಗಳು ಇವೆ. ಇಲ್ಲಿನ ಪ್ರಸಿದ್ಧ ಹಿಂದೂ ದೇವಾಲಯಗಳೆಂದರೆ ಪ್ರಾಚೀನವಾದ ಲಕ್ಷ್ಮೀ ದೇವಾಲಯ, ವಿಠಲ ಮಂದಿರ ಮತ್ತು ಮಾರುತಿ ಮಂದಿರಗಳು. ಲಕ್ಷ್ಮೀ ದೇವಾಲಯವು ಇತ್ತೀಚೆಗೆ ದುರಸ್ತಿಗೊಂಡಿದೆ. ಅಲ್ಲದೆ ವಿಜಯನಗರ ಪೂರ್ವದ ಆಧಿನಾಥ ಜಿನಾಲಯವಿದೆ. ಇಲ್ಲಿ ಮೂರು ವೀರಶೈವ ಮಠಗಳಿವೆ. ಹಾಳುಬಿದ್ದ ಕೋಟೆಯ ಅವಶೇಷಗಳನ್ನು ಇಲ್ಲಿ ಕಾಣಬಹುದು. ಹಳೇ ದಾಖಲೆಗಳ ಪ್ರಕಾರ ಇಲ್ಲಿ ಒಂದು ಪುರಸಭೆ ಇದ್ದಿತು. 1861ರಲ್ಲಿ ಸಂಪನ್ಮೂಲದ ಕೊರತೆಯಿಂದಾಗಿ ಅದನ್ನು ರದ್ದುಪಡಿಸಲಾಯಿತು. ಈಗಿನ ಪುರಸಭೆಯನ್ನು ಮೊತ್ತಮೊದಲಾಗಿ 1973ರಲ್ಲಿ ರಚಿಸಲಾಯಿತು. ಅಗರಬತ್ತಿ ಕೈಗಾರಿಕೆಗೆ ಈ ಸ್ಥಳ ಪ್ರಸಿದ್ಧವಾಗಿದೆ. ಮೆಣಸಿನ ಕಾಯಿ, ಬೆಲ್ಲ ಮತ್ತು ನೆಲಗಡಲೆಕಾಯಿಯ ಮುಖ್ಯವ್ಯಾಪಾರ ಕೇಂದ್ರವೂ ಇದಾಗಿದೆ. ಇಲ್ಲೊಂದು ವಿಶಿಷ್ಟವಾದ ಸಹಕಾರಿ ಸಂಸ್ಥೆ ಇದ್ದು ಅದರ ಹೆಸರು ಹುಕ್ಕೇರಿ ತಾಲೂಕು ಸಹಕಾರಿ ಗ್ರಾಮೀಣ ವಿದ್ಯುಚ್ಛಕ್ತಿ ಸಂಘ ಎಂಬ ಹೆಸರಿನಿಂದ 1969ರಲ್ಲಿ ಸ್ಥಾಪನೆಯಾಗಿತ್ತು. ಮಜಲಿ ಹುಕ್ಕೇರಿ ತಾಲೂಕಿನ ಒಂದು ಚಿಕ್ಕ ಗ್ರಾಮ. ಇದು ಘಟಪ್ರಭಾ ಅಣೆಕಟ್ಟಿನ ರಚನೆಯ ಕಾಲದಲ್ಲಿ ಜಲಾಶಯದೊಳಗೆ ಮುಳುಗಿಹೋಯಿತು. ಇತರ ಎರಡು ಜೈನ ಶಿಲ್ಪದ ಜೊತೆ ದೊರೆತ ಲಜ್ಜಾಗೌರಿ ವಿಗ್ರಹವು ಒಂದು ವೈಶಿಷ್ಟ್ಯಪೂರ್ಣ ಶಿಲ್ಪಕಲಾಕೃತಿಯಾಗಿದೆ. ಈ ಅಪೂರ್ವ ಕಲಾಕೃತಿಯು ಇಲ್ಲಿ ಏಳು ಅಥವಾ ಎಂಟನೇಯ ಶತಮಾನದಲ್ಲಿ ಶೈವ ಪಂಥದ ಪ್ರಭಾವವಿತ್ತು ಎಂಬುದನ್ನು ತಿಳಿಸುತ್ತದೆ. ಇಲ್ಲಿಗೆ ಮೂರು ಕಿಮೀ ದೂರದಲ್ಲಿರುವ ಅರ್ಜುನವಾಡ ಗ್ರಾಮದಲ್ಲಿ ಬಸವೇಶ್ವರರನ್ನು ಉಲ್ಲೇಖಿಸುವ ಶಿಲಾಶಾಸನ ದೊರೆತಿದೆ. (ಈ ಶಿಲಾ ಶಾಸನವು ಈಗ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿದೆ)

ಹುಣಸೂರು : (ಮೈಸೂರು ಜಿ; ಉಪವಿಭಾಗ ಹಾಗೂ ತಾ. ಕೇ; ಜನ: 27,704) ಹುಣಸೂರು ಪಟ್ಟಣವು ಮೈಸೂರು–ಮಡಿಕೇರಿ ರಸ್ತೆಯಲ್ಲಿರುವ ಪೌರಾಡಳಿತ ಹೊಂದಿರುವ ಊರು. ಇದು ಮೈಸೂರಿನ ಪಶ್ಚಿಮಕ್ಕೆ 45 ಕಿಮೀ ಹಾಗೂ ಬೆಂಗಳೂರಿಗೆ 184 ಕಿಮೀ ದೂರದಲ್ಲಿ ಲಕ್ಷ್ಮಣತೀರ್ಥ ನದಿಯ ದಂಡೆಯ ಮೇಲೆ ಇದೆ. ಇಲ್ಲಿ ಹುಣಿಸೆ ಮರಗಳು ವಿಪುಲವಾಗಿರುವುದರಿಂದ ಈ ಊರಿಗೆ ಈ ಹೆಸರು ಬಂದಿದೆ. ಅಮೃತ ಮಹಲ್ ರಾಸಿನ ಒಂದು ದೊಡ್ಡ ಕೇಂದ್ರ ಇದು. ಊರಿನಲ್ಲಿ ಇಪ್ಪತ್ನಾಲ್ಕಕ್ಕೂ ಹೆಚ್ಚು ಸರ್ಕಾರಿ ಹಾಗೂ ಖಾಸಗಿ ಮರಮುಟ್ಟು ಮಳಿಗೆಗಳು ಇವೆ. ಕ್ರಿ.ಶ. 1882ರಲ್ಲಿ ಈ ಊರನ್ನು ತಾಲೂಕು ಕೇಂದ್ರವಾಗಿ ಮಾಡಲಾಯಿತು. ಊರು ಒಂದು ವ್ಯಾಪಾರೋದ್ಯಮ ಕೇಂದ್ರವೂ ಆಗಿದೆ. ಇಲ್ಲಿ ಒಂದು ಕಾಫಿ ಬೀಜದ ಶುದ್ಧೀಕರಣ ಮತ್ತು ಸಂಸ್ಕರಣ ಕಾರ್ಖಾನೆ ಇದೆ. ಭಾರತೀಯ ಹೊಗೆಸೊಪ್ಪು ಅಭಿವೃದ್ಧಿ ಕೇಂದ್ರದ ಒಂದು ಸಂಶೋಧನ ಶಾಖೆ ಇಲ್ಲಿದೆ. ಸುಮಾರು ಹದಿಮೂರು ಹೊಗೆಸೊಪ್ಪು ಕಂಪನಿಗಳು ಇಲ್ಲಿ ಕಾರ್ಯಾಚರಣೆ ನಡೆಸುತ್ತಿವೆ. ಎರಡು ಹೆಂಚಿನ ಕಾರ್ಖಾನೆಗಳು, ಒಂದು ಪದರು ಹಲಗೆ ಕಾರ್ಖಾನೆ, ಮೀನಾಕ್ಷಿ ಸುಂದರಂ ಬಟ್ಟೆ ಗಿರಣಿ, ಹಾಲಿನ ಶೈತ್ಯಾಗಾರ ಹಾಗೂ ಅನೇಕ ಗೃಹ ಕೈಗಾರಿಕಾ ಘಟಕಗಳು ಇಲ್ಲಿ ಇವೆ. ಇಲ್ಲಿ ತಯಾರಾಗುವ ಕಂಬಳಿಗಳು ಪ್ರಸಿದ್ಧವಾಗಿವೆ. ಈ ಸ್ಥಳವು ಚಪ್ಪಲಿ, ಕೈನೇಯ್ಗೆ ಸೀರೆಗಳು, ಎತ್ತಿನ ಬಂಡಿಗಳ ತಯಾರಿಕೆಗೆ ಪ್ರಸಿದ್ಧವಾಗಿದೆ. ಬಿದಿರಿನ ಬುಟ್ಟಿಗಳ ತಯಾರಿಕೆ ಇಲ್ಲಿ ಒಂದು ಲಾಭದಾಯಕ ಗೃಹ ಕೈಗಾರಿಕೆ. ಹುಣಸೂರಿಗೆ ಐದು ಕಿಮೀ ದೂರದಲ್ಲಿರುವ ಕಟ್ಟೆಮಳಲವಾಡಿ ಗ್ರಾಮದಲ್ಲಿ ಪಾಳುಬಿದ್ದ ಕೋಟೆ, ರಾಮೇಶ್ವರ ದೇವಸ್ಥಾನಗಳು ಇವೆ. ಹುಣಸೂರಿಗೆ 12 ಕಿಮೀ ದೂರದಲ್ಲಿರುವ ಗುರುಪುರ ಮತ್ತು ಮರೂರುಕಾವಲುಗಳಲ್ಲಿ ಗುಡ್ಡಗಾಡು ಜನಾಂಗವಾದ ಹಕ್ಕಿಪಕ್ಕಿ ಮತ್ತು ಬುರುಡೆ ಬೆಸ್ತರ ಠಾಣ್ಯಗಳಿವೆ. ಧರ್ಮಪುರಿ ಗ್ರಾಮದಲ್ಲಿ ರೇಷ್ಮೆ ತರಬೇತಿ ಹಾಗೂ ವ್ಯವಸಾಯ ಕೇಂದ್ರಗಳು ಇವೆ. ಹುಣಸೂರಿಗೆ 12 ಕಿಮೀ ದೂರದಲ್ಲಿರುವ ಗುರುಪುರ ಗ್ರಾಮದಲ್ಲಿ ಟಿಬೆಟ್ ನಿರಾಶ್ರಿತರ ವಸತಿ ಕೇಂದ್ರವಿದೆ. ಇಲ್ಲಿ ಆಶ್ರಯ ಪಡೆದ ಟಿಬೆಟನರ ನೇಯ್ಗೆ ಹಾಗೂ ಕಸೂತಿ ಸಾಮಗ್ರಿಗಳಿಗೆ ವಿದೇಶಗಳಲ್ಲಿ ಮಾರುಕಟ್ಟೆ ಇದೆ. ಕಲ್ಲಹಳ್ಳಿಯಲ್ಲಿರುವ ಜೈನ ಬಸದಿಯೊಂದನ್ನು ಅಚ್ಚುಕಟ್ಟಾಗಿ ಇಟ್ಟುಕೊಳ್ಳಲಾಗಿದೆ. ಹುಣಸೂರಿಗೆ 15 ಕಿಮೀ ದೂರದಲ್ಲಿ ಇರುವ ರತ್ನಪುರದಲ್ಲಿ ಪಾಳುಬಿದ್ದ ಒಂದು ಹಳೇಕೋಟೆ ಇದೆ. ಇಲ್ಲಿ ಇನ್ನೂ ಕೆಲವು ದೇವಾಲಯಗಳು ಇದ್ದು, ಅವುಗಳಲ್ಲಿ ಕೆಲವು ಪಾಳು ಬಿದ್ದಿವೆ. ಇಲ್ಲಿನ ಆಂಜನೇಯ ಮತ್ತು ಈಶ್ವರ ದೇವಸ್ಥಾನಗಳು ಗಮನಾರ್ಹವಾದವುಗಳು. ಇಲ್ಲಿ ಜಮಾಲಮ್ಮನ ದರ್ಗಾ ಇದ್ದು ಪ್ರತೀವರ್ಷ ಉರುಸು ನಡೆಯುತ್ತದೆ. ಹುಣಸೂರು ತಾಲೂಕಿನ ಬಿಳಿಕೆರೆ ಹೋಬಳಿಗೆ ಸೇರಿದ ಬೆಟ್ಟದೂರು ಗ್ರಾಮದ ಕೊಪ್ಪಲು (ಉಪ ಗ್ರಾಮ) ಸ್ಥಳವು ಗೊಮ್ಮಟಗಿರಿ. ಗೊಮ್ಮಟಗಿರಿಯು ಮೈಸೂರು ನಗರದ ವಾಯುವ್ಯಕ್ಕೆ 19 ಕಿಮೀ ಹಾಗೂ ಹೋಬಳಿ ಕೇಂದ್ರವಾದ ಬಿಳಿಕೆರೆಯ ವಾಯುವ್ಯಕ್ಕೆ ಎಂಟು ಕಿಮೀ ದೂರದಲ್ಲಿದೆ.

ಅಲ್ಲಿನ ಕಲ್ಲುಗುಡ್ಡದ ಮೇಲೆ 16 ಅಡಿ ಎತ್ತರದ ಏಕಶಿಲಾ ಗೊಮ್ಮಟೇಶ್ವರ ಮೂರ್ತಿ ಇದೆ.

**ಹುದಲಿ :** (ಬೆಳಗಾವಿ ಜಿ; ಜನ: 4,218) ಬೆಳಗಾವಿ-ಗೋಕಾಕ್ ರಸ್ತೆಯಲ್ಲಿ, ಬೆಳಗಾವಿಯಿಂದ 27 ಕಿಮೀ ಈಶಾನ್ಯದಲ್ಲಿ ಹುದಲಿ ಇದೆ. ಸ್ವಾತಂತ್ರ್ಯದ ಪೂರ್ವದಲ್ಲಿ ಇದು ಖಾದಿ ಮತ್ತು ಗ್ರಾಮೋದ್ಯೋಗ ಚಟುವಟಿಕೆಗಳ ಮಾದರಿ ಕೇಂದ್ರವಾಗಿತ್ತು. ಗಾಂಧೀಜಿಯವರು ಗ್ರಾಮೀಣ ಅರ್ಥಶಾಸ್ತ್ರ ತತ್ವಗಳನ್ನು ಆಚರಣೆಗೆ ತರಲು, ಸಾಬರಮತಿ ಮತ್ತು ಇತರ ಕೇಂದ್ರಗಳ ಮಾದರಿಯಲ್ಲಿ ಕುಮ್ರಿ ಖಾದಿ ಆಶ್ರಮವು ಕರ್ನಾಟಕ ಸಿಂಹರೆನಿಸಿದ ಹಾಗೂ ಗಾಂಧಿ ಮತ್ತು ಟಿಳಕರ ಅನುಯಾಯಿಯಾದ ಗಂಗಾಧರ ರಾವ್ ದೇಶಪಾಂಡೆ (1871-1960) ಯವರಿಂದ ಸ್ಥಾಪಿತವಾಯಿತು. ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರಿ ಉತ್ಪಾದಕರ ಸಂಸ್ಥೆಯು 1923ರಲ್ಲಿ ಇಲ್ಲಿ ಆರಂಭವಾಯಿತು. ದೇಶಪಾಂಡೆಯವರು ಕರ್ನಾಟಕದಲ್ಲಿ ಗ್ರಾಮೀಣ ಪುನರ್ರಚನಾ ಕಾರ್ಯಕ್ರಮಗಳೂ ಸೇರಿದಂತೆ ನಡೆದ ಚರಖಾ ಸಂಘ ಮತ್ತು ಖಾದಿ ಚಳುವಳಿಯ ಅಗ್ರಗಣ್ಯರಲ್ಲಿ ಒಬ್ಬರು. 1937ರಲ್ಲಿ ಕುಮ್ರಿ ಆಶ್ರಮವು ಗಂಗಾಧರ ರಾವ್ ದೇಶಪಾಂಡೆ, ಪುಂಡಲೀಕ್‌ಜೀ ಕಾತಗಡೆ ಮತ್ತು ರಾಮಚಂದ್ರ ವಡವಿ ಮತ್ತಿತರರ ನಾಯಕತ್ವದಲ್ಲಿ ರಾಷ್ಟ್ರೀಯ ಮಟ್ಟದ ಗಾಂಧೀ ಸೇವಾ ಸಮ್ಮೇಳನವನ್ನು ವ್ಯವಸ್ಥೆ ಮಾಡಿದ್ದಿತು. ಆ ಸಂದರ್ಭದಲ್ಲಿ ಗಾಂಧೀಜಿ ಇಲ್ಲಿ ಏಳು ದಿನ ಬೀಡು ಬಿಟ್ಟಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಈ ಆಶ್ರಮವು ತೀವ್ರ ಆಸಕ್ತಿ ವಹಿಸಿದುದರಿಂದ ಆಂಗ್ಲ ಸರಕಾರವು ಇದರ ಚಟುವಟಿಕೆಗಳನ್ನು ಕುಂಠಿತಗೊಳಿಸಿತು. 1941ರಲ್ಲಿ ಜಮುನಲಾಲ್ ಖಾದಿ ವಿದ್ಯಾಲಯ ಇಲ್ಲಿ ಆರಂಭವಾಯಿತು. ಆ ಮೇಲೆ ಈ ಸಂಸ್ಥೆಯು ಹುಬ್ಬಳ್ಳಿಗೆ ಸ್ಥಳಾಂತರಿತವಾಯಿತು. ಇಲ್ಲಿನ ಸಂಸ್ಥೆಯು 1954ರಲ್ಲಿ ಪುನರ್ಸಂಘಟನೆಗೊಂಡ ಬಳಿಕ ತನ್ನ ಚಟುವಟಿಕೆಗಳನ್ನು ಖಾದಿ ಮತ್ತು ಗ್ರಾಮೋದ್ಯೋಗದ ವಿವಿಧ ಶಾಖೆಗಳಲ್ಲಿ ಅಳವಡಿಸಿಕೊಂಡು ನೆರೆಯ ಇಪ್ಪತ್ತಕ್ಕೂ ಹೆಚ್ಚು ಗ್ರಾಮದಲ್ಲಿ ವಿಸ್ತರಿಸಿಕೊಂಡು 800ಕ್ಕೂ ಹೆಚ್ಚಿನ ಜನರಿಗೆ ಉದ್ಯೋಗವಕಾಶ ಕಲ್ಪಿಸಿದೆ. ಗ್ರಾಮದೇವತಾ ರಾಮಲಿಂಗೇಶ್ವರ, ಮಾರುತಿ, ನಿರ್ವಾಣೇಶ್ವರ ದೇವಾಲಯಗಳು, ಒಂದು ಜೈನ ಬಸದಿ ಮತ್ತು ಹಜರತ್ ಬಸೆಬಾನನ ದರ್ಗಾ ಇಲ್ಲಿನ ಮುಖ್ಯ ಧಾರ್ಮಿಕ ಸ್ಥಳಗಳಾಗಿವೆ.

**ಹುನಗುಂದ :** (ವಿಜಾಪುರ ಜಿ; ತಾ. ಕೇ; ಜನ: 14,548) ಹುನಗುಂದದ ಹಿಂದಿನ ಹೆಸರು ಹೊನ್ನಕುಂದ ಅಥವಾ ಹೊನ್ನಗುಂದ ಎಂದಿತ್ತು. ಊರಿಗೆ ತಾಗಿ ನಿಂತಿರುವ ಬೆಟ್ಟದ ಮೇಲೆ ಬಂಗಾರದ ಛಾಯೆಗೆ ಹೋಲುವ ಹಳದಿ ಬಣ್ಣದ ಅಭ್ರಕ ಇರುವುದರಿಂದ ಆ ಹೆಸರು ರೂಢಿಯಲ್ಲಿ ಇತ್ತೆಂದು ಭಾವಿಸಬಹುದು. ಇಲ್ಲಿ ನಗರೇಶ್ವರ, ಕನ್ನಿಕಾಪರಮೇಶ್ವರಿ, ಮಲ್ಲಿಕಾರ್ಜುನ, ಸಂಗಮೇಶ್ವರ ಮೊದಲಾದ ಕೆಲವು ದೇವಸ್ಥಾನಗಳಿವೆಯಾದರೂ ಅವೆಲ್ಲ ಬಹುತೇಕ ಆಧುನಿಕ ಕಟ್ಟಡಗಳು. ಬೆಟ್ಟದ ಬುಡದಲ್ಲಿ ಊರಿಗೆ ತಾಗಿದಂತೆ ಒಂದು ರಾಮಲಿಂಗೇಶ್ವರ ದೇವಸ್ಥಾನ ಇದೆ. ಅದರಲ್ಲಿ ಅನೇಕ ಚಾಳುಕ್ಯ ಮಾದರಿಯ ಕಂಭಗಳಿವೆ. ಗರ್ಭಗೃಹ ಭೂಮಟ್ಟಕ್ಕಿಂತ ತಗ್ಗಿನಲ್ಲಿದೆ. ಇಲ್ಲಿ ಒಂದು ಶಿಲಾಶಾಸನವಿದೆ. ಅದರಲ್ಲಿ ಬಲ್ಲಾಳ ವಂಶಕ್ಕೆ ಸೇರಿದ ದೊರೆ ಅಯ್ಯನೋರ್ವನ ಹೆಂಡತಿ ಸತ್ಯವತಿ ಮಹಾದೇವಿಯು ಮಲ್ಲಿಕಾರ್ಜುನ ದೇವರಿಗೆ ಭೂದಾನ ಮಾಡಿದ ವಿವರವಿದೆ. ವಿಜಯ ಮಹಂತೇಶ್ವರ ಮಠದ ಒಂದು ಶಾಖೆ ಇಲ್ಲಿ ಕಾರ್ಯ ಚಟುವಟಿಕೆ ನಡೆಸುತ್ತಿದೆ. ಕ್ರಿ.ಶ. 1870ರಲ್ಲಿ ಇಲ್ಲಿ ಕಟ್ಟಿಸಿದ ದೊಡ್ಡ ಕಲ್ಲು ಪುಷ್ಕರಣಿಯ ಬಳಿ ಒಂದು ಜುಮ್ಮಾ ಮಸೀದಿ ಇದೆ. ಈ ಊರು ಪೌರಸಭೆಯನ್ನು ಹೊಂದಿದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳು ಈ ಕೆಳಕಂಡಂತಿವೆ. ಈ ತಾಲೂಕಿನಲ್ಲಿನ ಅತ್ಯಂತ ದೊಡ್ಡ ಊರು ಇಳಕಲ್ (ಜನ: 35,970). ಹುನಗುಂದಕ್ಕೆ ಇದು 13 ಕಿಮೀ ದೂರದಲ್ಲಿದೆ. ವಿಜಯ ಮಹಂತೇಶ್ವರ ಮಠ ಇಲ್ಲಿನ ಪ್ರಸಿದ್ಧ ಮಠ. ವೆಂಕಟೇಶ್ವರ, ಬನಶಂಕರಿ ಮತ್ತು ಆಂಜನೇಯನ ಹಳೆಯ ದೇವಸ್ಥಾನಗಳು ಇವೆ. ಹಾಗೆಯೇ ಮಲ್ಲಿಕಾರ್ಜುನ, ಜಡೇಶಂಕರಲಿಂಗ, ದತ್ತಾತ್ರೇಯ ಮತ್ತು ಬಸವಣ್ಣ ದೇವಾಸ್ಥಾನಗಳೂ ಇವೆ. ಊರ ಆಗ್ನೇಯಕ್ಕೆ ಹರಿಯುವ ಹಿರೇಹಳ್ಳದ ದಂಡೆಯ ಮೇಲೆ ಒಂದು ದೊಡ್ಡ ದೇವಸ್ಥಾನವಿದೆ. ಅದರಲ್ಲಿ ವಿಜಯ ಮಹಂತೇಶಸ್ವಾಮಿ ಮತ್ತು ಅವರ ಗುರು ಮಹಂತ ಶಿವಯೋಗೀಶ್ವರರ ಗದ್ದುಗೆಗಳಿವೆ. ಈ ವಿಜಯಮಹಂತೇಶ್ವರ ಸ್ಮರಣಾರ್ಥವಾಗಿ ಪ್ರತೀವರ್ಷವೂ ರಥೋತ್ಸವ ಜರುಗುತ್ತದೆ. ಊರಿನ ಪೂರ್ವ ಭಾಗದಲ್ಲಿ ಎತ್ತರವಾದ ಸ್ಥಳದಲ್ಲಿ ಒಂದು ಭಾರಿ ಗುಮ್ಮಟದ ಕಟ್ಟಡವಿದೆ. ಅದು ಹಜರತ್ ಸಯ್ಯದ್ ಮುರ್ತಜಾಷಾ ಖಾದ್ರಿ ಅವರ ದರ್ಗಾ. ಅದು ಬಹು ಜನರ ನಂಬಿಕೆಗೆ ಪಾತ್ರವಾದ ದರ್ಗಾ ಆಗಿದ್ದು ಪ್ರತೀವರ್ಷ ಅಲ್ಲಿ ನಡೆಯುವ ಉರುಸಿಗೆ ಬಹು ಸಂಖ್ಯಾತ ಜನರನ್ನು ಅದು ಆಕರ್ಷಿಸುತ್ತದೆ. ಇಲ್ಲಿ ಇನ್ನೂ ಕೆಲವು ಮಸೀದಿಗಳು, ದರ್ಗಾಗಳು ಇವೆ. ಕೈಮಗ್ಗದ, ರೇಷ್ಮೆ ಹಾಗೂ ಕೃತಕ ರೇಷ್ಮೆಯ ಬಗೆಬಗೆಯ ಸೀರೆಗಳಿಗೆ ಇಳಕಲ್ ತುಂಬಾ ಪ್ರಸಿದ್ಧಿ. ನೂಲು ಹುರಿ ಮಾಡುವ ಅನೇಕ ಘಟಕಗಳೂ ಮತ್ತು ಮರ ಕೊಯ್ಯುವ ಅನೇಕ ಘಟಕಗಳೂ ಇಲ್ಲಿ ಇವೆ. ಕಮತಗಿ: (1981ರಲ್ಲಿ ಜನ: 11,088) ಇದು ಹುನಗುಂದಕ್ಕೆ 25 ಕಿಮೀ ದೂರದಲ್ಲಿ ಮಲಪ್ರಭಾ ನದಿ ದಂಡೆಯ ಮೇಲೆ ಇದೆ. ಇಲ್ಲಿ ಬಸವೇಶ್ವರರ ಸಮಕಾಲೀನರೆಂದು ಪರಿಗಣಿತರಾದ ಮರುಳಶಂಕರ ದೇವರು ಸ್ಥಾಪಿಸಿದರೆಂದು ಹೇಳುವ ಹುಚ್ಚೇಶ್ವರರ ಒಂದು ಹಳೆಯ ವೀರಶೈವ ಮಠವಿದೆ. ಈ ಮಠದಲ್ಲಿ ಮೂರು ಗದ್ದುಗೆಗಳಿವೆ. ಹುಚ್ಚೇಶ್ವರರ ಹೆಸರಿನಲ್ಲಿ ಪ್ರತೀವರ್ಷ ಇಲ್ಲಿ ಜಾತ್ರೆ ನಡೆಯುತ್ತದೆ. ಬನಶಂಕರಿ ಮತ್ತು ಈಶ್ವರ ದೇವಸ್ಥಾನಗಳೂ ಇಲ್ಲಿ ಪ್ರಮುಖ

ವಾದವು. ಇಲ್ಲಿನ ಮಠ ಒಂದು ಪ್ರೌಢಶಾಲೆಯನ್ನು ನಡೆಸುತ್ತಿದೆ. ಇಲ್ಲಿನ ಪೌರಾಡಳಿತವನ್ನು ಪೌರಸಭೆ ನಿರ್ವಹಿಸುತ್ತದೆ. ಇಲ್ಲಿ ಒಂದು ಗ್ರಾಮೀಣ ಹಾಲಿನ ಕೇಂದ್ರವನ್ನು ಸರ್ಕಾರ ನಡೆಸುತ್ತಿದೆ. ಈ ಊರು ಕೈಮಗ್ಗದ ಉದ್ಯಮಕ್ಕೆ ಪ್ರಸಿದ್ಧವಾಗಿದ್ದು ಚಮುಕಾ, ಖಣ ಮತ್ತು ಸೀರೆ ಮುಂತಾದ ಬಗೆಯ ಬಟ್ಟೆಯನ್ನು ಉತ್ಪಾದಿಸುತ್ತಿದೆ.

ಹುಬ್ಬಳ್ಳಿ : (ಧಾರವಾಡ ಜಿ ; ತಾ. ಕೇ ; ಜನ: 3,52,572) ಕರ್ನಾಟಕದಲ್ಲಿ ಎರಡನೇಯ ಮುಖ್ಯ ಹಾಗೂ ದೊಡ್ಡ ನಗರವಾದ ಹುಬ್ಬಳ್ಳಿ ಬೆಂಗಳೂರಿನಿಂದ ಪೂಣೆ–ಬೆಂಗಳೂರು ಹೆದ್ದಾರಿಯಲ್ಲಿ ಧಾರವಾಡದಿಂದ ಆಗ್ನೇಯಕ್ಕೆ 19 ಕಿಮೀ ದೂರದಲ್ಲಿದೆ. ಮಿರಜ್–ಬೆಂಗಳೂರು ರೈಲ್ವೆ ದಾರಿಯಲ್ಲಿರುವ ದಕ್ಷಿಣ-ಮಧ್ಯ ರೈಲ್ವೆಯ ಮುಖ್ಯ ಕೂಡು ನಿಲ್ದಾಣ ಇದಾಗಿದೆ. ಹಳೇ ಹುಬ್ಬಳ್ಳಿಯ ಪುರಾತನ (ಹನ್ನೊಂದನೇಯ ಶತಮಾನದ) ಭವಾನಿ ಶಂಕರ ದೇವಾಲಯದಲ್ಲಿ ದೊರೆಕಿದ ಕನ್ನಡದ ಶಾಸನದ ಪ್ರಕಾರ, ಹುಬ್ಬಳ್ಳಿ ಎಂಬ ಹೆಸರು 'ಎಲೆಯ ಪೂರ್ವದ ಹಳ್ಳಿ' ಎಂಬ ಪದದಿಂದ ಬಂದುದಾಗಿದೆ. ಕಾಲಕ್ರಮದಲ್ಲಿ ಈ ಹೆಸರು ಮೊಟುಕಾಗುತ್ತಾ ಪೂರ್ಬಳ್ಳಿ, ಪೂರ್ವಳ್ಳಿ, ಪೂರ್ವದಳ್ಳಿ ಎಂದು ಕರೆಯಲಾಯಿತು. ಈಗ ಈ ನಗರವು ಹಳೇ ಹುಬ್ಬಳ್ಳಿ ಮತ್ತು ಹೊಸ ಹುಬ್ಬಳ್ಳಿ ಎಂದು ವಿಭಾಗವಾಗಿದೆ. ಹಳೇ ಹುಬ್ಬಳ್ಳಿಯನ್ನು ರಾಯರ ಹುಬ್ಬಳ್ಳಿ, ಅಂದರೆ ವಿಜಯನಗರ ಅರಸರ ಹುಬ್ಬಳ್ಳಿ ಎಂದು ಸ್ಥಳೀಯರು ಕರೆಯುತ್ತಾರೆ. 1885ರಲ್ಲಿ ಪ್ರಥಮವಾಗಿ ಪುರಸಭೆ ಇಲ್ಲಿ ಸ್ಥಾಪಿಸಲ್ಪಟ್ಟು 1925ರಲ್ಲಿ ಇದನ್ನು 'ಬರೊ' ಪುರಸಭೆಯ ಸ್ಥಾನಕ್ಕೆ ಏರಿಸಲಾಯಿತು. 1962ರ ಜುಲೈ ತಿಂಗಳಲ್ಲಿ ಹುಬ್ಬಳ್ಳಿ–ಧಾರವಾಡ ಈ ಎರಡು ಅವಳಿ ನಗರಗಳನ್ನು ಸೇರಿಸಿ ಮುನಿಸಿಪಲ್ ಕಾರ್ಪೋರೇಶನ್ ರಚಿಸಲಾಯಿತು. ಈ ನಗರಸಭೆಯ ಆಡಳಿತ ವ್ಯಾಪ್ತಿಗೆ 183.49 ಚ ಕಿಮೀ ನಷ್ಟು ಪ್ರದೇಶ ಒಳಪಡುತ್ತದೆ. ಪ್ರಾಚೀನ ಕಾಲದಲ್ಲಿ 200 ಮಹಾಜನಗಳಿದ್ದ ಬಹು ಪುರಾತನವೂ ಶ್ರೀಮಂತವೂ ಆದ ಅಗ್ರಹಾರ ಇದಾಗಿತ್ತು. ಇಲ್ಲಿನ ಜನರು ನಾರಾಯಣನ ಆರಾಧಕರಾಗಿದ್ದು ವಿವಿಧ ಶಾಸ್ತ್ರಗಳಲ್ಲಿ ಪಾಂಡಿತ್ಯ ಪಡೆದಿದ್ದ ವಿದ್ವಾಂಸರಾಗಿದ್ದರು. ರಾಷ್ಟ್ರಕೂಟರ ಕಾಲದಿಂದ ಹುಬ್ಬಳ್ಳಿಯ ಇತಿಹಾಸವನ್ನು ತಿಳಿಯಬಹುದು. ಆ ವಂಶದ ಮುಮ್ಮಡಿ ಇಂದ್ರ ಮತ್ತು ಅಮೋಘವರ್ಷ ಕರ್ಕನಿಗೆ ಸಂಬಂಧಿಸಿದ ಎರಡು ಶಿಲಾ ಶಾಸನಗಳು ಇಲ್ಲಿ ದೊರೆತಿವೆ. ಭವಾನಿ ಶಂಕರ ದೇವಾಲಯದಲ್ಲಿ ದೊರೆತ ಶಾಸನವು ಕಲ್ಯಾಣಿ ಚಾಳುಕ್ಯರ ಎರಡನೇಯ ಸೋಮೇಶ್ವರನ ಆಡಳಿತವನ್ನು ಸೂಚಿಸುತ್ತದೆ. ಅನಂತರ ಹೊಯ್ಸಳರ ಎರಡನೇಯ ಬಲ್ಲಾಳನು ಹುಬ್ಬಳ್ಳಿ ಮತ್ತು ಸುತ್ತಲಿನ ಪ್ರದೇಶಗಳನ್ನು ಗೆದ್ದುಕೊಂಡನು. ಆದರೆ ಈ ಪಟ್ಟಣವು ವಿಜಯನಗರದ ಆಡಳಿತದ ಕಾಲದಲ್ಲಿ ಪ್ರಾಮುಖ್ಯತೆಯನ್ನು ಪಡೆದು ಮುಖ್ಯ ವಾಣಿಜ್ಯ ಕೇಂದ್ರವಾಯಿತೆಂದು ಇಲ್ಲಿನ ಒಂದು ಶಾಸನವು ತಿಳಿಸುತ್ತದೆ. ವಿಜಯನಗರದ ಪತನಾನಂತರ ಹುಬ್ಬಳ್ಳಿಯು ಆದಿಲ್ ಷಾಹಿಗಳ ಹತೋಟಿಗೆ ಒಳಪಟ್ಟಿತು. ಹದಿನೇಳನೇಯ ಶತಮಾನದಲ್ಲಿ ತಮ್ಮ ವ್ಯಾಪಾರದ ಅನುಕೂಲಕ್ಕಾಗಿ ಬ್ರಿಟಿಷರು ಇಲ್ಲೊಂದು ಮಳಿಗೆಯನ್ನು ಸ್ಥಾಪಿಸಿದ್ದರು. ವಿಜಯನಗರ ಮತ್ತು ಪೋರ್ಚುಗೀಸರ ನಡುವೆ ನಡೆದ ಒಪ್ಪಂದದಲ್ಲಿ ಹುಬ್ಬಳ್ಳಿಯನ್ನು 'ಒಬೆಳಿ' ಎಂದು ಕರೆದಿದ್ದು ಇದು ವಿಜಾಪುರ ರಾಜ್ಯಕ್ಕೆ ಪೆಟ್ಲುಪ್ಪು ಮತ್ತು ಕಬ್ಬಿಣವನ್ನು ಸರಬರಾಜು ಮಾಡುವ ಮುಖ್ಯ ವ್ಯಾಪಾರ ಕೇಂದ್ರವಾಗಿತ್ತು ಎಂದು ತಿಳಿಯುತ್ತದೆ. 1673ರ ಹೊತ್ತಿಗೆ ಹುಬ್ಬಳ್ಳಿ ಒಂದು ಶ್ರೀಮಂತ ವ್ಯಾಪಾರ ಕೇಂದ್ರವಾಗಿದ್ದು, ಶಿವಾಜಿಯ ಅಧಿಕಾರಿಯಾಗಿದ್ದ ಅಣ್ಣಾಜಿ ದತ್ತೋ ಈ ಪ್ರದೇಶವನ್ನು ಕೊಳ್ಳೆ ಹೊಡೆದನು ಎಂದು ತಿಳಿಸುತ್ತದೆ. ಇದರಿಂದ ದೊರೆತ ಹಣ ಹಿಂದಿನ ಎಲ್ಲಾ ಲೂಟಿಗಳಿಗಿಂತಲೂ ಮಿಗಿಲಾಗಿದ್ದಿತು ಎನ್ನಲಾಗಿದೆ. 1677ರಲ್ಲಿ ಈ ಪ್ರದೇಶವು ಔರಂಗಜೇಬನಿಗೆ ಸೇರಿ ಷಾಮಹಮ್ಮದ್ ಖಾನನಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಮುಂದೆ ಕಿತ್ತೂರಿನ ದೇಸಾಯಿಯ ಅಪ್ರತಿಮ ಸೇವೆಯನ್ನು ಪರಿಗಣಿಸಿದ ಔರಂಗಜೇಬನು, 1689ರಲ್ಲಿ ಹುಬ್ಬಳ್ಳಿಯನ್ನು ಅವನಿಗೆ 'ಸರ್‌ದೇಶ್‌ಮುಖಿ'ಯಾಗಿ ಕೊಟ್ಟನು. ಸುಮಾರು 1727ರಲ್ಲಿ ಇದು ಸವಣೂರಿನ ಜಹಗೀರಾಯಿತು. ಅದೇ ವರ್ಷ ಹಳೇ ಹುಬ್ಬಳ್ಳಿಯ ಬಸಪ್ಪಶೆಟ್ಟಿಯೆಂಬುವನು ಹೊಸ ಹುಬ್ಬಳ್ಳಿಯ (ಈಗಿನ ದುರ್ಗದ ಬೈಲು) ಪಟ್ಟಣ ಮತ್ತು ಕೋಟೆಯನ್ನು ಆಗಿನ ಸವಣೂರಿನ ನವಾಬನಾದ ಮಜೀದ್ ಖಾನರ ನೆರವಿನಿಂದ ಕಟ್ಟಿಸಿದನು. ಸದರ್ನ್ ಮರಾಠಾ ಸ್ಪಿನ್ನಿಂಗ್ ಆ್ಯಂಡ್ ವೀವಿಂಗ್ ಕಂಪನಿಯು (ಭಾರತ್ ಮಿಲ್) 1881ರಲ್ಲಿ ಸ್ಥಾಪಿಸಿದ ಹತ್ತಿ ನೂಲುವ ಮತ್ತು ನೇಯ್ಗೆಯ ಗಿರಣಿ, 1882ರಲ್ಲಿ ಹಾಕಿದ ರೈಲು ಮಾರ್ಗ, 1885ರಲ್ಲಿ ಸ್ಥಾಪಿಸಿದ ರೈಲ್ವೆ ಕಾರ್ಯಾಗಾರ, ಕೈಗಾರಿಕಾ ಚಟುವಟಿಕೆಗಳ ಅಭಿವೃದ್ಧಿ, ಹತ್ತಿ ಮಾರ್ಕೆಟ್ಟಿನ ಸ್ಥಾಪನೆ ಮೊದಲಾದವುಗಳಿಂದ ನೂತನ ನಗರ ಬೆಳೆಯಲು ಕಾರಣವಾಯಿತು. 1755-56ರಲ್ಲಿ ಸವಣೂರಿನ ನವಾಬನಾದ ಹಕೀಂ ಖಾನನನ್ನು ಸೋಲಿಸಿದ ಮರಾಠರು (ಪೇಶ್ವೆ) ಹುಬ್ಬಳ್ಳಿ ಮತ್ತು ಸುತ್ತಮುತ್ತಲಿನ ಪ್ರದೇಶಗಳನ್ನು ಗೆದ್ದುಕೊಂಡರು. 1778ರಲ್ಲಿ ಹೈದರ್‌ಅಲಿಯು ಮುಂಬಯಿ ಕರ್ನಾಟಕ ಪ್ರದೇಶವನ್ನೆಲ್ಲಾ ಗೆದ್ದುಕೊಂಡು ಹುಬ್ಬಳ್ಳಿಯನ್ನು ಸವಣೂರಿನ ನವಾಬನ ಆಡಳಿತಕ್ಕೆ ಕೊಟ್ಟನು. ಆದರೆ 1783ರಲ್ಲಿ ಟಿಪ್ಪುವಿಗೂ ನವಾಬನಿಗೂ ಜಗಳವಾಗಿ ಟಿಪ್ಪುವು ಹುಬ್ಬಳ್ಳಿಯನ್ನು ತನ್ನ ವಶಕ್ಕೆ ಪಡೆದುಕೊಂಡನು. 1787ರಲ್ಲಿ ಪೇಶ್ವೆ ಎರಡನೇಯ ಮಾಧವರಾಯನು ಪುನಃ ಹುಬ್ಬಳ್ಳಿಯನ್ನು ಪಡೆದರೂ ಮರುವರ್ಷವೇ (1788) ಟಿಪ್ಪುವು ಹುಬ್ಬಳ್ಳಿಯೂ ಸೇರಿದಂತೆ ಪೇಶ್ವೆ ಗೆದ್ದುಕೊಂಡಿದ್ದ ಎಲ್ಲಾ ಪ್ರದೇಶಗಳನ್ನು

ವಶಪಡಿಸಿಕೊಂಡನು. ಎರಡು ವರ್ಷಗಳ ಅನಂತರ 1796ರಲ್ಲಿ ಪರಶುರಾಮ ಭಾವು ಪಟವರ್ಧನನು ಟಿಪ್ಪುವಿನಿಂದ ಇಡೀ ಬೊಂಬಾಯಿ ಕರ್ನಾಟಕ ಪ್ರದೇಶಗಳನ್ನು ಗೆದ್ದುಕೊಂಡನು. ಪಟವರ್ಧನ ಕುಟುಂಬದಲ್ಲಿ ವಿಭಜನೆಯಾದಾಗ ಹುಬ್ಬಳ್ಳಿಯು ಸಾಂಗ್ಲೀಕರರ ಭಾಗಕ್ಕೆ ಹೋಯಿತು. 1796ರಲ್ಲಿ ಸ್ಥಳೀಯ ಗಲಭೆಗಳ ಸದುಪಯೋಗ ಪಡೆದ ಕೊಲ್ಲಾಪುರದ ಛತ್ರಪತಿ ಶಿವಾಜಿ ಹುಬ್ಬಳ್ಳಿಯನ್ನು ಕೊಳ್ಳೆ ಹೊಡೆದು, ಕಿತ್ತೂರಿನ ದೇಸಾಯಿಯನ್ನು ಆ ಪ್ರದೇಶವನ್ನು ನೋಡಿಕೊಳ್ಳಲು ನೇಮಿಸಿದನು. ಆದರೆ ಪೇಶ್ವೆಯು ಅತಿ ಶೀಘ್ರದಲ್ಲೇ ಪಟ್ಟಣವನ್ನು ಪುನಃ ಪಡೆದನು. 1804ರಲ್ಲಿ ಹುಬ್ಬಳ್ಳಿಯು ಫಡ್ಕೆ ಕುಟುಂಬಕ್ಕೆ ಸೇರಿತ್ತು. 1817-18ರಲ್ಲಿ ನಡೆದ ಕೊನೆಯ ಮರಾಠಾ ಯುದ್ಧದಲ್ಲಿ ಜನರಲ್ ಮುನ್ರೋ ಹಳೆಯ ಹುಬ್ಬಳ್ಳಿಯನ್ನೂ ಗೆದ್ದುಕೊಂಡನು. 1820ರಲ್ಲಿ 47 ಹಳ್ಳಿಗಳನ್ನೊಳಗೊಂಡ ಹೊಸ ಹುಬ್ಬಳ್ಳಿಯನ್ನು ಸಾಂಗ್ಲಿಯ ಚಿಂತಾಮಣಿ ರಾವ್ ಪಟವರ್ಧನ್ ಇಂಡಿಯಾ ಸರಕಾರಕ್ಕೆ ಸೇರಿಸಿದನು. 1844ರಲ್ಲಿ ಕ್ಯಾಪ್ಟನ್ ವಿಂಜೆಟನು "ಹುಬ್ಬಳ್ಳಿಯು 33,000 ಜನಸಂಖ್ಯೆಯಿರುವ ಒಂದು ಮುಖ್ಯ ವ್ಯಾಪಾರೀ ಕೇಂದ್ರ; ಬಹಳ ಹಿಂದಿನಿಂದಲೂ ಬೆಳೆದುಬಂದ ವ್ಯಾಪಾರೀ ಸಂಸ್ಥೆಗಳು ಇಲ್ಲಿದ್ದು ಅವು ಬೊಂಬಾಯಿ ಮತ್ತು ಮದ್ರಾಸು ಹಾಗೂ ಇತರ ವ್ಯಾಪಾರಿ ಕೇಂದ್ರಗಳೊಂದಿಗೆ ವ್ಯಾಪಾರ ಸಂಬಂಧಹೊಂದಿವೆ", ಎಂದು ಬರೆದಿದ್ದಾನೆ. ಸುಮಾರು ಒಂದು ನೂರು ವರ್ಷಗಳ ಹಿಂದೆ (1883-84) ಹುಬ್ಬಳ್ಳಿಯಲ್ಲಿ 37 ದೇವಾಲಯಗಳೂ, 27 ಮಠಗಳೂ, 17 ಮಸೀದಿಗಳೂ, ಎರಡು ಇಗರ್ಜಿಗಳೂ ಇದ್ದವು. ಪೂರ್ವ ಮತ್ತು ಪಶ್ಚಿಮದ ಎರಡು ಮಹಾದ್ವಾರಗಳಿಂದ ಕೂಡಿದ ಹಳೇ ಹುಬ್ಬಳ್ಳಿ ಕೋಟೆಯು 23 ಎಕರೆ ಸ್ಥಳವನ್ನು ಆಕ್ರಮಿಸಿದರೆ ಹೊಸ ಹುಬ್ಬಳ್ಳಿ ಕೋಟೆಯು ಆರು ಮಾರುಕಟ್ಟೆಗಳು ಸೇರಿದಂತೆ ಎಂಟು ಎಕರೆ ಸ್ಥಳವನ್ನು ಆಕ್ರಮಿಸಿದ್ದಿತು. ಈಗ ಕೋಟೆಗಳ ಯಾವ ಅವಶೇಷಗಳೂ ಉಳಿದಿಲ್ಲ. ಹುಬ್ಬಳ್ಳಿಯಲ್ಲಿ ಮತ್ತು ಅದರ ಸುತ್ತಮುತ್ತಲೂ ಹಲವಾರು ಪ್ರೇಕ್ಷಣೀಯ ಸ್ಥಳಗಳೂ ಸ್ಮಾರಕಗಳೂ ಇವೆ. ಹಳೇ ಹುಬ್ಬಳ್ಳಿಯಲ್ಲಿರುವ ಭವಾನಿ ಶಂಕರ ದೇವಾಲಯವು ಇಲ್ಲಿನ ಅತ್ಯಂತ ಪ್ರಾಚೀನ ದೇವಾಲಯವಾಗಿದ್ದು (11ನೇಯ ಶತಮಾನ) ಶಿಥಿಲವಾಗಿದೆ. ಬಹು ಕಲಾತ್ಮಕವಾಗಿ ಕೆತ್ತಿದ ನಾರಾಯಣನ ವಿಗ್ರಹವನ್ನು ಈ ದೇವಾಲಯದಲ್ಲಿ ಅನಂತರ ಸ್ಥಾಪಿಸಿದಂತೆ ಕಾಣುತ್ತದೆ. ಇಲ್ಲಿಯ ಇತರ ಹಳೇ ದೇವಾಲಯಗಳಲ್ಲಿ ಅಂಬಾಭವಾನಿ, ಬನಶಂಕರಿ, ವೀರಭದ್ರ ಮತ್ತು ಬಸವಣ್ಣನ ದೇವಾಲಯಗಳು ಮುಖ್ಯವಾಗಿವೆ. ಇವಲ್ಲದೆ ದತ್ತಾತ್ರೇಯ, ರಾಧಾಕೃಷ್ಣ, ಗಣೇಶ, ಕಾಳಮ್ಮ, ದುರ್ಗಾದೇವಿ, ಮಾರುತಿ, ಮುರಲೀಧರ, ತುಳಜಾಭವಾನಿ, ಮತ್ತು ವಿಠೋಬನ ದೇವಾಲಯಗಳೂ ಇವೆ. ಇತ್ತೀಚೆಗೆ ಹೆಚ್ಚಿನ ದೇವಾಲಯಗಳನ್ನು ದುರಸ್ತಿ ಮಾಡಲಾಗಿದೆ; ಇಲ್ಲವೆ ಪುನರ್‌ರಚಿಸಲಾಗಿದೆ. ಈ ನಗರದಲ್ಲಿ ಅನೇಕ ಮಠಗಳೂ ಇವೆ. ವೀರಶೈವ ಮಠಗಳಲ್ಲಿ ಮುಖ್ಯವಾದವುಗಳೆಂದರೆ ಮೂರುಸಾವಿರ ಮಠ, ಹೊಸಮಠ, ಕಲ್ಯಾಣಮಠ, ಓಲೆಮಠ, ರುದ್ರಾಕ್ಷಿಮಠ, ಹನ್ನೆರಡುಮಠ ಮತ್ತು ನೀಲಕಂಠಮಠ. ಈ ಮಠಗಳಲ್ಲಿ 12ನೇಯ ಶತಮಾನದಲ್ಲಿ ಸ್ಥಾಪನೆಗೊಂಡಿತೆಂದು ಹೇಳಲಾಗುವ ಮೂರುಸಾವಿರ ಮಠವು ಹೆಚ್ಚಿನ ಪ್ರಾಮುಖ್ಯತೆ ಪಡೆದಿದೆ ಮತ್ತು ಇಂದಿಗೂ ಹೆಚ್ಚಿನ ಗೌರವಾದರಗಳಿಗೆ ಪಾತ್ರವಾಗಿದ್ದು, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಮುಖ್ಯ ಪಾತ್ರ ವಹಿಸುತ್ತಿದೆ. ಈ ಶತಮಾನದಲ್ಲಿ ವಿದ್ಯಾಪ್ರಗತಿಗಾಗಿ ಈ ಮಠವು ಕೈಗೊಂಡ ಕಾರ್ಯಕ್ರಮಗಳು ಗಮನಾರ್ಹವಾಗಿವೆ. ಶ್ರೀ ಸಿದ್ಧಾರೂಢ ಮಠವನ್ನು ಅದ್ವೈತಸಿದ್ಧಾಂತಿ ಯೋಗಿ ಸಿದ್ಧಾರೂಢಸ್ವಾಮಿ (1837-1929)ಯವರು ಸ್ಥಾಪಿಸಿದ್ದು, ಹಳೇ ಹುಬ್ಬಳ್ಳಿಯಲ್ಲಿರುವ ಈ ಹಳೇ ಮಠವು ಸಮಾಜದ ಎಲ್ಲಾ ವರ್ಗದ ಜನರ ಗೌರವಾದರಗಳಿಗೆ ಪಾತ್ರವಾಗಿ ಭಾರತದ ಎಲ್ಲಾ ಭಾಗಗಳಿಂದ ಭಕ್ತರನ್ನು ಆಕರ್ಷಿಸುತ್ತಿದೆ. ಮಧ್ವಮಠಗಳಲ್ಲಿ ಮುಖ್ಯವಾದುವೆಂದರೆ ಶ್ರೀಕೃಷ್ಣ ಮಠ, ಸತ್ಯಭೋಧಸ್ವಾಮಿ ಮಠ, ಮತ್ತು ರಾಘವೇಂದ್ರಸ್ವಾಮಿ ಮಠ. ಇವಲ್ಲದೆ ಶಂಕರಮಠ, ದತ್ತ ಮಂದಿರ ಮತ್ತು ಇತರ ಮಠಗಳು ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನೂ ನಡೆಸುವಲ್ಲಿ ಆಸಕ್ತಿಹೊಂದಿವೆ. ಇಲ್ಲಿ ಒಂದು ಗುರುದ್ವಾರವೂ ಇದೆ. ಹಲವಾರು ಚರ್ಚ್‌ಗಳು ಹುಬ್ಬಳ್ಳಿನಗರದಲ್ಲಿವೆ. ಅವುಗಳಲ್ಲಿ ಅಸೆನ್‌ಶನ್ ಚರ್ಚ್ (1905), ಹೋಲಿನೇಮ್ ಚರ್ಚ್ (1928), ಸೈಂಟ್ ಜೋಸೆಫ್ಸ್ ಕ್ಯಾಥಲಿಕ್ ಚರ್ಚ್ (1888), ಸೈಂಟ್ ಜಾನ್ಸ್ ಲುಥರನ್ ಚರ್ಚ್ (1944), ಸೈಂಟ್ ಆಂಡ್ರ್ಯೂಸ್ ಚರ್ಚ್ (1890) ಮುಖ್ಯವಾಗಿವೆ. ಮಸೀದಿಗಳಲ್ಲಿ ಹಳೇ ಹುಬ್ಬಳ್ಳಿಯಲ್ಲಿರುವ ಜಂಗ್ಲೀಪೇಟೆಯ ಜುಮ್ಮಾ ಮಸೀದಿ ಅತೀ ಪ್ರಾಚೀನವಾದುದು. ನಗರದಲ್ಲಿರುವ ಇತರ ಐತಿಹಾಸಿಕ ಪ್ರಸಿದ್ಧ ಮಸೀದಿಗಳಲ್ಲಿ ದೊಡ್ಡ ಮಸೀದಿ, ಗಣೇಶ ಪೇಟೆಯ ಮಹಡಿ ಮಸೀದಿ ಮತ್ತು ಭಂಡಿವಾಡದಲ್ಲಿರುವ ಮಸೀದಿಗಳಾಗಿವೆ. ಹುಬ್ಬಳ್ಳಿ ನಗರದ ಎಲ್ಲಾ ಮಸೀದಿಗಳಿಗಿಂತಲೂ ಇತ್ತೀಚೆಗೆ (1980) ಹಳೇ ಹುಬ್ಬಳ್ಳಿಯಲ್ಲಿ ಕಟ್ಟಿದ ಮಸ್ತಾನ ಸೋಫಾ ತನ್ನ ನಾಜೂಕಿನ ಕೆತ್ತನೆ ಮತ್ತು ಕಲಾತ್ಮಕ ಸೌಂದರ್ಯಕ್ಕಾಗಿ ಪ್ರಸಿದ್ಧಿ ಪಡೆದಿದೆ. ಇಲ್ಲಿಯ ಎಂಟು ದರ್ಗಾಗಳಲ್ಲಿ ಮೌಲಾಲಿ, ಸಯ್ಯದ್ ಫತೇಸಾಬ್, ಕರಿಮುಲ್ಲಾ ಮತ್ತು ಗೌಸ್ ಮೊಯ್ದಿನ್ ದರ್ಗಾಗಳು ಮುಖ್ಯವಾದವು. ಜೈನರ ಎರಡು ಪಂಗಡಗಳಿಗೂ ಸೇರಿದ ಹಲವಾರು ಜೈನಬಸದಿಗಳು ನಗರದಲ್ಲಿವೆ. ಅನಂತನಾಥ ಮತ್ತು ಪಾರ್ಶ್ವನಾಥ ಬಸದಿಗಳು ಹಳೇ ಹುಬ್ಬಳ್ಳಿಯಲ್ಲಿರುವ ಪ್ರಾಚೀನ ಮತ್ತು ಐತಿಹಾಸಿಕ ಬಸದಿಗಳು. ಅನಂತನಾಥ ಬಸದಿಯಲ್ಲಿರುವ ಜಾಗಟೆಯ ಮೇಲೆ ಕೆತ್ತಿದ ಬರವಣಿಗೆಯು ಬಹು ಸ್ವಾರಸ್ಯಕರವಾದ ಮಾಹಿತಿಯನ್ನು ಒದಗಿಸುತ್ತದೆ. ಮುಂಬಯಿ ಕರ್ನಾಟಕ ವಿಭಾಗದಲ್ಲಿ ಹುಬ್ಬಳ್ಳಿಯು ಒಂದು ವ್ಯಾಪಾರ

ಮತ್ತು ವಾಣಿಜ್ಯ ಕೇಂದ್ರವಾಗಿದ್ದು, ರಾಜ್ಯದ ಒಂದು ಮುಖ್ಯ ವಿದ್ಯಾ ಮತ್ತು ಕೈಗಾರಿಕಾ ಕೇಂದ್ರವಾಗಿಯೆಯಲ್ಲದೆ, ಪ್ರಮುಖ ಹತ್ತಿ ಮಾರುಕಟ್ಟೆಯಾಗಿದೆ. 1957ರಲ್ಲಿ ಸ್ಥಾಪಿಸಿದ ಕರ್ನಾಟಕದ ಮೆಡಿಕಲ್ ಕಾಲೇಜು ರಾಜ್ಯದ ನಾಲ್ಕು ಸರಕಾರಿ ಮೆಡಿಕಲ್ ಕಾಲೇಜುಗಳಲ್ಲಿ ಒಂದಾಗಿದೆ. ಇಲ್ಲಿ ಕೆ.ಎಲ್.ಇ. ಸಂಸ್ಥೆಯು ಹಲವಾರು ಕಾಲೇಜುಗಳನ್ನು ನಡೆಸುತ್ತಿದೆ.

ಬೀಡೀ ತಯಾರಿಕೆ ಮತ್ತು ನೇಯ್ಗೆ ಹಳೇ ಹುಬ್ಬಳ್ಳಿಯಲ್ಲಿನ ಮುಖ್ಯ ಗುಡಿಕೈಗಾರಿಕೆಗಳಾಗಿವೆ. ಹುಬ್ಬಳ್ಳಿ ನಗರಪಾಲಿಕೆಯ ಸರಹದ್ದಿನಲ್ಲಿ ಮತ್ತು ಹೊರವಲಯದ ಹಳ್ಳಿಗಳಲ್ಲಿ ಕುತೂಹಲ ಕಾರಕ ಹಲವಾರು ಸ್ಮಾರಕಗಳಿವೆ. ಅವುಗಳಲ್ಲಿ ಉಣಕಲ್ ನಲ್ಲಿರುವ 12ನೇಯ ಶತಮಾನದ ಚಂದ್ರಮೌಳೀಶ್ವರ ದೇವ ಸ್ಥಾನವು ಐತಿಹಾಸಿಕ ಮಹತ್ವವುಳ್ಳ ಚಾಳುಕ್ಯ ಸ್ಮಾರಕವಾಗಿದೆ. ಇಲ್ಲಿ ಶಾಸನವನ್ನು ಹೊಂದಿರುವ ಕಲ್ಮೇಶ್ವರ ಮತ್ತು ವೀರಭದ್ರ ದೇವಾಲಯ ಮತ್ತು ಸಿದ್ಧಪ್ಪಜ್ಜನ ಮಠಗಳೂ ಇವೆ. ಹುಬ್ಬಳ್ಳಿಯ ಈಶಾನ್ಯದಲ್ಲಿರುವ ಉಣಕಲ್‌ಬೆಟ್ಟವನ್ನು ಒಂದು ಪ್ರವಾಸಧಾಮವಾಗಿ ಮಾರ್ಪಡಿಸಿದ್ದು ಈ ಬೆಟ್ಟವನ್ನು ನೃಪತುಂಗಬೆಟ್ಟ ಎಂದು ಕರೆಯಲಾಗಿದೆ. ಅಮರಗೋಳದಲ್ಲಿರುವ ಶಂಕರಲಿಂಗ ಮತ್ತು ಬನಶಂಕರಿ ದೇವಾಲಯಗಳು ಆಸಕ್ತಿ ಕೆರಳಿಸುವಂತಹವಾಗಿವೆ. ಸಮೀಪದ ಅದರಗುಂಚಿ ಗ್ರಾಮ ದಲ್ಲಿರುವ ತೀರ್ಥಂಕರನ ಅಸಾಧಾರಣ ಮೂರ್ತಿ ಶಿಲ್ಪವನ್ನೂ ಸ್ಥಳೀಯರು ದೊಡ್ಡಪ್ಪ ಎಂದು ಕರೆಯುತ್ತಾರೆ. ಈ ಶಿಲ್ಪವು ಬಹು ಕುತೂಹಲಕರವಾಗಿದೆ.

ಹುಮನಾಬಾದ್ : (ಬಿದರೆ ಜಿ; ತಾ. ಕೇ; ಜನ: 21,803) ಹುಮನಾಬಾದ್ ಊರು ಬಿದರೆಯ ನೈಋತ್ಯಕ್ಕೆ 52 ಕಿಮೀ ಹಾಗೂ ಬೆಂಗಳೂರಿನಿಂದ 668 ಕಿಮೀ ದೂರದಲ್ಲಿದೆ. ಮತ್ತು ಸಮುದ್ರ ಮಟ್ಟದಿಂದ 610 ಮೀ ಎತ್ತರದಲ್ಲಿದೆ. ಬಹುಶಃ ಬಹಮನಿ ಸುಲ್ತಾನ ಹುಮಾಯೂನನಿಂದ ಊರಿಗೆ ಈ ಹೆಸರು ಬಂದಿದೆ. ಚಾಳುಕ್ಯ ದೊರೆ ಎರಡನೇಯ ಜಯಸಿಂಹನು ಈ ಊರನ್ನು ಕ್ರಿ. ಶ. 1040ರಲ್ಲಿ ಸ್ಥಾಪಿಸಿದನೆಂದು ಹೇಳು ತ್ತಾರೆ. ಆಗ ಜಯಸಿಂಹಪುರ ಎನಿಸಿತ್ತು. ಅದು ಮೊದಲು ನೈಜಾಂ ರಾಜ್ಯದ ಚಿಂಚೋಳಿಯ ಪೈಗಾ ತಾಲೂಕಿನಲ್ಲಿತ್ತು. ಅಲ್ಲಿನ ವೀರಭದ್ರೇಶ್ವರ ದೇವಸ್ಥಾನ ಭಾರಿಯಾದ ಕಟ್ಟಡ. ಮರಾಠಾ ಧನಾಜಿ ಜಾಧವನ ಮೊಮ್ಮಗ ರಾಜಾರಾಮಚಂದ್ರ ಇದನ್ನು ಕಟ್ಟಿದನೆಂದು ಪ್ರತೀತಿ. ಗರ್ಭಗೃಹದ ಶಿಖರದಲ್ಲಿ 28 ಶಿವಲೀಲಾ ವಿಗ್ರಹಗಳ ಕೆತ್ತನೆ ಇದೆ. ಅಷ್ಟೇ ಅಲ್ಲ, ವಿಷ್ಣುವಿನ ದಶಾವತಾರದ ಕೆತ್ತನೆಗಳೂ ಪೌರಾಣಿಕ ಕಥಾ ಪ್ರಸಂಗದ ಕೆತ್ತನೆಗಳೂ ಇವೆ. ದೇವಸ್ಥಾನದ ಒಳಗಿರುವ ಒಂದು ದೊಡ್ಡ ಕಂಭವನ್ನು 'ತೂಗುವ ಕಂಭ' ಎಂದು ಕರೆಯುತ್ತಾರೆ. ಮೆದು ವಾಗಿ ತಳ್ಳಿದರೆ ಅದು ಸುತ್ತುವುದೋ ಎಂಬಂತೆ ಸರಿಯುತ್ತದೆ. ಈ ತಾಲೂಕಿನ ಇತರ ಮುಖ್ಯ ಸ್ಥಳಗಳು ಈ ಕೆಳಗಿನಂತಿವೆ. ಬಿಲ್‌ಖೇರಾ ಎಂಬುದು ಹುಮನಾಬಾದ್‌ನ ಆಗ್ನೇಯಕ್ಕೆ 16 ಕಿಮೀ ದೂರದಲ್ಲಿ ಇದೆ. ಶರಣ ವೀರಸಂಗಯ್ಯ ಈ ಊರಿ ನವನು. ದುಬಲ್‌ಗುಂಡಿ ಎಂಬುದು ಹುಮನಾಬಾದಿನ ಈಶಾ ನ್ಯಕ್ಕೆ 14 ಕಿಮೀ ದೂರದಲ್ಲಿ ಇದೆ. ಇಲ್ಲಿ ಪ್ರಸಿದ್ಧವಾದ ಕುಂಬಾರಗೇರಿ ಮಠವಿದೆ. ಹಳ್ಳಿಖೇಡ್ ಬಿ. (ಬಿ. ಎನ್ನುವುದು ಬುದ್ರುಕ್ ಎಂಬುದರ ಸಂಕೇತ. ಬುದ್ರುಕ್ ಎಂದರೆ ದೊಡ್ಡದು ಎಂದು ಅರ್ಥ) ಎಂಬುದು ಹುಮನಾಬಾದಿನ ಈಶಾನ್ಯಕ್ಕೆ 22 ಕಿಮೀ ದೂರದಲ್ಲಿ ಇದೆ. ಇದು ಹಿಂದೆ ಇಕ್ಬತ್-ಉದ್-ದೌಲಾನ ಪೈಗಾ ಕೇಂದ್ರವಾಗಿತ್ತು. ಇಲ್ಲಿನ ನಾಗನಾಥಸ್ವಾಮಿ ಮತ್ತು ಸಂಗಮೇಶ್ವರ ದೇವಸ್ಥಾನಗಳು ಗಮನಾರ್ಹವಾದವು. ಈ ಗ್ರಾಮದ ಬಳಿ ಕಾರಂಜಾ ನದಿಗೆ ಅಣೆಕಟ್ಟನ್ನು ಕಟ್ಟಲಾಗಿದೆ. ಮಾಣಿಕನಗರ ಎಂಬುದು ಹುಮನಾಬಾದಿನ ವಾಯುವ್ಯಕ್ಕೆ ಕೇವಲ ಮೂರು ಕಿಮೀ ದೂರದಲ್ಲಿದೆ. ಇದು ಆಧುನಿಕ ಗ್ರಾಮ ಮತ್ತು ಇದರ ಸುತ್ತಮುತ್ತಿನ ಪ್ರದೇಶ ಪ್ರಶಾಂತವಾಗಿದೆ. ಹಿಂದೆ ಇದನ್ನು ಮಣಿಚುರು ಕಂದರ ಎಂದು ಕರೆಯಲಾಗು ತ್ತಿತ್ತು. ಸಂತ ಮಾಣಿಕ ಪ್ರಭುಗಳ (19ನೇಯ ಶತಮಾನ) ಸಮಾಧಿ ಇಲ್ಲಿ ಇದೆ. ಅವರು 'ಸಕಲಮತಾಚಾರ್ಯ' ಎಂದು ಪ್ರಸಿದ್ಧರಾಗಿದ್ದರು. ಈ ಮಾಣಿಕಪ್ರಭು ಸಂಸ್ಥಾನದ ಆಶ್ರಯ ದಲ್ಲಿ ಇಲ್ಲಿ ದತ್ತ ಜಯಂತಿಯನ್ನು ಆಚರಿಸಲಾಗುತ್ತದೆ. ಹುಮನಾಬಾದಿನ ಪಶ್ಚಿಮಕ್ಕೆ ಏಳು ಕಿಮೀ ದೂರದಲ್ಲಿರುವ ಮೋಳ್‌ಖೇರಾದಲ್ಲಿ ಮೋಳಿಗೆ ಮಾರಯ್ಯನವರ ಗವಿ ಇದೆ. ಹಿಂದೆ ಕಾಶ್ಮೀರ ದೇಶದ ಅಧಿಪತಿಯಾಗಿದ್ದ ಬಸವೇಶ್ವರರ ಸಮಕಾಲೀನನಾಗಿದ್ದ ಈತ ಇಲ್ಲಿಗೆ ಬಂದು ಶರಣನಾದ. ಹುಮನಾಬಾದಿಗೆ 12 ಕಿಮೀ ಈಶಾನ್ಯದಲ್ಲಿರುವ ಹಿಲಾಲಪುರ ದಲ್ಲಿ ಚಾಳುಕ್ಯರ ಕಾಲದ ಶಿಥಿಲವಾಗಿ ಹಾಳುಬಿದ್ದ ದೇವಸ್ಥಾನ ವೊಂದಿದೆ. ಹುಮನಾಬಾದ್ ಊರಿಗೆ 10 ಕಿಮೀ ಈಶಾನ್ಯಕ್ಕೆ ಇರುವ ಜಲಸಂಗಿ, ಮಹಾಭಾರತ ಕಾಲದ ವಿರಾಟನ ರಾಜಧಾನಿ ಯಾಗಿತ್ತೆಂಬ ಪ್ರತೀತಿ ಇದೆ. ಇಲ್ಲಿ ಒಂದು ಈಶ್ವರ ದೇವಾಲಯ ವಿದ್ದು ಹಾಳು ಸ್ಥಿತಿಯಲ್ಲಿ ಇದೆ. ಆರನೇಯ ವಿಕ್ರಮಾದಿತ್ಯನ ಕಾಲದಲ್ಲಿ ಕಟ್ಟಿದ ಈ ದೇವಾಲಯದ ಹೊರ ಭಿತ್ತಿಯಲ್ಲಿ ಕೆಲವು ಸುಂದರ ಕೆತ್ತನೆಗಳು ಇವೆ. ಅವುಗಳಲ್ಲಿ ಒಂದು ಕ್ರಿ. ಶ. 1100 ರಲ್ಲಿ ಬಳಕೆಯಲ್ಲಿದ್ದ ಕನ್ನಡ ಲಿಪಿಯಲ್ಲಿ ಸಂಸ್ಕೃತ ಶಾಸನವನ್ನು ಬರೆಯುತ್ತಿರುವ ಹೆಂಗಸಿನ ಸುಂದರ ಶಿಲ್ಪಕೃತಿ. ಈ ಊರಿನಲ್ಲಿ ಹಳೇ ಕಟ್ಟಡಗಳ ಇನ್ನೂ ಅನೇಕ ಭಗ್ನ ಅವಶೇಷಗಳು ಇವೆ. ಚಿಟಗುಪ್ಪ (ಜನ: 13,413) ಪೌರಸಭೆಯುಳ್ಳ ಊರು. ಇದು ಹುಮನಾಬಾದಿನ ಆಗ್ನೇಯಕ್ಕೆ 12 ಕಿಮೀ ದೂರದಲ್ಲಿದೆ. ಮತ್ತು ಸಮುದ್ರ ಮಟ್ಟಕ್ಕೆ 615 ಮೀಟರ್ ಎತ್ತರದಲ್ಲಿದೆ. ಇದು ಹಿಂದೆ ನವಾಬ್ ಮೊಯಿನುದ್ದೌಲಾನ ವಶದಲ್ಲಿದ್ದ ಪೈಗಾ ತಾಲೂಕಿನ ಕೇಂದ್ರವಾಗಿತ್ತು. ಆಗ ಇದನ್ನು ಮೊಯಿನಾಬಾದ್

ಎಂದು ಕರೆಯಲಾಗುತ್ತಿತ್ತು. ಇಲ್ಲಿ ಸಾಲಾರ್ ಮಕ್‌ದೂಂ ಮತ್ತು ಕರೀಮುಲ್ಲಾ ಷಾ ಅವರ ದರ್ಗಾಗಳು ಇವೆ. ಬಾಳೋಬಾ ಎಂಬ ಸಂತನ ಗೌರವಾರ್ಥ ಪ್ರತೀವರ್ಷ ಆಗಸ್ಟ್ ಮಾಹೆಯಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಇಲ್ಲಿ ಶರಣ ಮಡಿವಾಳಪ್ಪನ ಗವಿ ಎಂದು ಪ್ರತೀತಿ ಪಡೆದ ಗವಿ ಇದೆ. ಈ ಊರಿನಲ್ಲಿ ಸಂತ ಮಹಾದೇವಪ್ಪ ದೇವರ್ಷಿ ಅವರ ಮಾನವ ಪ್ರಮಾಣದ ಅಮೃತಶಿಲೆಯ ವಿಗ್ರಹ ಹಾಗೂ ಸಮಾಧಿಗಳು ಇವೆ.

ಹೆಗ್ಗಡದೇವನಕೋಟೆ : (ಮೈಸೂರು ಜಿ ; ತಾ. ಕೇ; ಜನ: 6,153) ಹೆಗ್ಗಡದೇವನಕೋಟೆಯು ಮೈಸೂರಿನಿಂದ 52 ಕಿಮೀ ಮತ್ತು ಬೆಂಗಳೂರಿನಿಂದ 193 ಕಿಮೀ ದೂರದಲ್ಲಿರುವ ಪಟ್ಟಣ. ಇದು ಒಂದು ಪುರಸಭೆಯನ್ನು ಹೊಂದಿದೆ. ಹೆಗ್ಗಡ ದೇವರಾಯ ಎಂಬ ಪಾಳೇಗಾರನು ಇದನ್ನು ತನ್ನ ರಾಜಧಾನಿ ಯನ್ನಾಗಿ ಮಾಡಿಕೊಂಡು ಊರಿನ ಸುತ್ತಲೂ ಒಂದು ಕೋಟೆ ಯನ್ನು ಕಟ್ಟಿಸಿದನು. ಅವನಿಂದ ಈ ಊರಿಗೆ ಈ ಹೆಸರು ಬಂದಿದೆ. ಈ ಪಟ್ಟಣದಲ್ಲಿ ದ್ರಾವಿಡ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿ ರುವ ವರದರಾಜಸ್ವಾಮಿ ಮತ್ತು ಸೋಮೇಶ್ವರ ದೇವಾಲಯ ಗಳು, 12ನೇಯ ಶತಮಾನದಲ್ಲಿ ನಿರ್ಮಿಸಲಾದ ಚಂದ್ರನಾಥ ಬಸದಿಯೂ ಇದೆ. ಇಲ್ಲಿರುವ ಆಂಜನೇಯ ದೇವಾಲಯವು ಪ್ರಮುಖ ದೇವಾಲಯವಾಗಿದ್ದು ಪ್ರತೀ ವರ್ಷವೂ ಅಲ್ಲಿ ಒಂದು ಜಾತ್ರೆಯು ನಡೆಯುತ್ತದೆ. ಈ ತಾಲೂಕು ಜೈನಧರ್ಮದ ಆಶ್ರಯಸ್ಥಾನವಾಗಿದ್ದಂತೆ ಕಂಡುಬರುತ್ತದೆ. ಈ ಪ್ರದೇಶ ದಲ್ಲೆಲ್ಲ ಅನೇಕ ಜೈನ ಸ್ಮಾರಕಗಳು ಕಂಡುಬರುತ್ತವೆ. ಈ ತಾಲೂಕಿಗೆ ಪ್ರಾಚೀನ ಕಾಲದಲ್ಲಿ ಪುನ್ನಾಟ ಎಂಬ ಹೆಸರಿದ್ದಿತು. ಹೆಗ್ಗಡದೇವನಕೋಟೆಗೆ 10 ಕಿಮೀ ದೂರದಲ್ಲಿರುವ ಕೀರ್ತಿಪುರ (ಇಂದಿನ ಕಿತ್ತೂರು) ಇದರ ರಾಜಧಾನಿಯಾಗಿದ್ದಿತು. ಆ ಕೀರ್ತಿ ಪುರವು ಈಗ ಕಬಿನಿ ಜಲಾಶಯದಲ್ಲಿ ಮುಳುಗಿಹೋಗಿದೆ. ರಾಮೇಶ್ವರ ಮತ್ತು ಬಸವ ದೇವಾಲಯಗಳಲ್ಲದೆ ಎರಡು ಜೈನ ಬಸದಿಗಳು ಮುಳುಗಿಹೋದವುಗಳಲ್ಲಿ ಸೇರಿವೆ. ಭಾವಲಿಯ ದರ್ಗಾ, ನಾಗನಹಳ್ಳಿಯ ಚರ್ಚ್, ಅಂತರಸಂತೆಯ ಮಹನೇಶ್ವರ ದೇವಾ ಲಯ, ಕಾರಾಪುರದ ಐನೂರು ಮಾರಮ್ಮ, ಮಾಗೋಡಿನ ನೀಲ ಕಂಠೇಶ್ವರ, ಮಾದಾಪುರದ ಮಲ್ಲಿಕಾರ್ಜುನ ದೇವಾಲಯ, ಸರಗೂರು ಬಳಿಯ ಮೂಡಲಮಠ ಈ ತಾಲೂಕಿನ ಪ್ರಮುಖ ಧಾರ್ಮಿಕ ಪುಣ್ಯಕ್ಷೇತ್ರಗಳು. ಈ ತಾಲೂಕಿನಲ್ಲಿ ವಿಸ್ತಾರವಾದ, ಒತ್ತಾಗಿ ಬೆಳೆದ ಅರಣ್ಯ ಪ್ರದೇಶವಿದೆ. ಕಾಕನಕೋಟೆ, ಬೇಗೂರು, ಬಿಸಿಲವಾಡಿ, ಐನೂರು ಮಾರಿಗುಡಿ ಮತ್ತು ಕಾರಾಪುರ ಅರಣ್ಯಪ್ರದೇಶಗಳು ನಿಸರ್ಗ ರಮಣೀಯವಾದ ಸ್ಥಳ ವಾಗಿದ್ದು ಪ್ರವಾಸಿಗರ ಆಕರ್ಷಣೆಯಾಗಿವೆ. ಕಾಕನಕೋಟೆ ಜಗತ್ಪ್ರಸಿದ್ಧವಾದ ಖೆಡ್ಡಾ ಕಾರ್ಯಕ್ರಮಕ್ಕಾಗಿ ಖ್ಯಾತಿ ಪಡೆದಿದೆ. ಇತ್ತೀಚೆಗೆ 1971ರಲ್ಲಿ ಖೆಡ್ಡಾ ಕಾರ್ಯಕ್ರಮವನ್ನು ನಡೆಸ ಲಾಯಿತು. ಬೇಗೂರು ಅರಣ್ಯಪ್ರದೇಶವನ್ನು ಹುಲಿಗಳ ಸಂರಕ್ಷಣಾ ಯೋಜನೆಯ ಸ್ಥಳವನ್ನಾಗಿ ಆರಿಸಲಾಗಿದೆ. ಬಂಡೀಪುರ-ಬೇಗೂರು ಅರಣ್ಯಪ್ರದೇಶದಲ್ಲಿ ಸುಮಾರು 50 ಹುಲಿಗಳಿವೆ. ಸರಗೂರು: (ಜನ: 7,539) ಹೆಗ್ಗಡದೇವನಕೋಟೆಗೆ ದಕ್ಷಿಣದಲ್ಲಿ 13 ಕಿಮೀ ದೂರದಲ್ಲಿರುವ ಸರಗೂರು ಪುರಸಭೆಯುಳ್ಳ ಹೋಬಳಿ ಕೇಂದ್ರವಾಗಿದೆ. 1880ರ ವರೆಗೂ ತಾಲೂಕು ಮುಖ್ಯಸ್ಥಳ ವಾಗಿದ್ದಿತು. ಇಲ್ಲಿ ಎರಡು ಜೈನಬಸದಿಗಳು, ದ್ರಾವಿಡ ಶೈಲಿಯಲ್ಲಿ 17ನೇಯ ಶತಮಾನದಲ್ಲಿ ನಿರ್ಮಿತವಾದ ಲಕ್ಷ್ಮೀನರಸಿಂಹ ಮತ್ತು ಸೋಮೇಶ್ವರ ದೇವಾಲಯಗಳೂ ಇವೆ. ಸರಗೂರಿನ ಬಳಿಯಿರುವ ಮಳಲಿಯಲ್ಲೂ ಎರಡು ಬಸದಿಗಳಿವೆ. ಅದು ಈ ತಾಲೂಕಿನ ಮುಖ್ಯ ವ್ಯಾಪಾರಸ್ಥಳ. ಈ ಪ್ರದೇಶದಲ್ಲಿ ಅನೇಕ ನೀರಾವರಿ ಯೋಜನೆಗಳು ಜಾರಿಯಲ್ಲಿವೆ. ಬೀರವಾಳ್ ಯೋಜನೆ, ಕಬಿನಿ ಯೋಜನೆ, ತಾರಕಾ ಮತ್ತು ಹೆಬ್ಬಾಳ್ ಯೋಜನೆಗಳು ಈ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ನೀಡುವುವಲ್ಲದೆ, ಪ್ರವಾಸಿಗ ರನ್ನು ಆಕರ್ಷಿಸುತ್ತಿವೆ. ಬೀರವಾಳ್ ಅಣೆಕಟ್ಟು ಸರಗೂರಿನ ಆಗ್ನೇಯಕ್ಕೆ ಹತ್ತು ಕಿಮೀ ದೂರದಲ್ಲಿದೆ. ಕಪಿಲಾನದಿಯ ಉಪ ನದಿಯಾದ ನುಗುನದಿಗೆ ಅಡ್ಡವಾಗಿ ಈ ಅಣೆಕಟ್ಟನ್ನು ನಿರ್ಮಿಸ ಲಾಗಿದೆ. ಬೀರವಾಳದಲ್ಲಿ ಒಂದು ವ್ಯವಸಾಯ ಶಿಕ್ಷಣ ಶಾಲೆ ಮತ್ತು ಕೃಷಿ ಕ್ಷೇತ್ರ, ತೋಟಗಾರಿಕೆಯ ಕ್ಷೇತ್ರ ಮತ್ತು ಮೀನು ಗಾರಿಕೆಯ ತರಬೇತಿ ಕೇಂದ್ರಗಳಿವೆ. ಇಡೀ ಪ್ರದೇಶವೆಲ್ಲ ಒಂದು ಪ್ರೇಕ್ಷಣೀಯ ವಿಹಾರಧಾಮವಾಗಿದೆ. ಕಬಿನಿ ಯೋಜನೆಯು ತಾಲೂಕು ಮುಖ್ಯಸ್ಥಳದಿಂದ 15 ಕಿಮೀ ದೂರದಲ್ಲಿದೆ. ಬೀಚನಹಳ್ಳಿಯ ಬಳಿ ಕಬಿನಿ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಲಾಗಿದೆ. ಇದು ನಿಸರ್ಗ ರಮಣೀಯ ಪ್ರದೇಶದಲ್ಲಿದೆ. ಈ ಅಣೆಕಟ್ಟೆಯ ನೀರು ಕಾಕನಕೋಟೆಯ ಅರಣ್ಯಧಾಮದವರೆಗೂ ಚಾಚಿದೆ. ಅಣೆಕಟ್ಟೆಯ ಹಿಂದೆ ವ್ಯವಸ್ಥಿತವಾಗಿ ನಿರ್ಮಿಸಿರುವ ಉದ್ಯಾನವು ಮತ್ತೊಂದು ಆಕರ್ಷಣೆಯಾಗಿದೆ. ಇಲ್ಲೊಂದು ಮೀನುಕೊಳವೂ ಸಿದ್ಧಗೊಳ್ಳುತ್ತಿದೆ. ಪ್ರವಾಸಿಗಳಿಗಾಗಿ ಒಂದು ಪ್ರವಾಸಿಮಂದಿರವೂ ಇಲ್ಲಿದೆ.

ಹೊನ್ನಾವರ : (ಉ. ಕ. ಜಿಲ್ಲೆ; ತಾ. ಕೇ; ಜನ: 15,120) ಹೊನ್ನಾವರವು ಒಂದು ಐತಿಹಾಸಿಕ ಮಹತ್ವದ ಪಟ್ಟಣವಾಗಿದ್ದು ಇದು ಬೆಂಗಳೂರಿನಿಂದ 500 ಕಿಮೀ ದೂರ ದಲ್ಲಿದೆ. ಹೊನ್ನವರಿ ಎಂಬ ಗಿಡದಿಂದ ಈ ಹೆಸರು ಬಂದಿರ ಬಹುದು. ಪೌರಾಣಿಕ ಆಧಾರಗಳು ರಾಮಾಯಣ ಕಾಲದಲ್ಲಿ ಈ ಊರು ಇತ್ತೆಂದು, ಇಲ್ಲಿಗೆ ತುಸು ದೂರದಲ್ಲಿರುವ ರಾಮತೀರ್ಥ ವೆಂಬ ಚಿಲುಮೆಯು ಶ್ರೀರಾಮನಿಂದ ಸೃಷ್ಟಿಸಲ್ಪಟ್ಟಿತೆಂದು ತಿಳಿಸು ತ್ತದೆ. ಪೆರಿಪ್ಲಸ್ ಪ್ರಸ್ತಾಪಿಸಿರುವ ನವುರ ಈ ಹೊನ್ನಾವರವೇ ಎಂದು ಗುರುತಿಸಲಾಗಿದೆ. ಶಾಸನಗಳಲ್ಲಿ ಇದನ್ನು ಹೊನ್ನಉರ

ಎಂದೂ ಹೊನುರುಹ ದ್ವೀಪವೆಂದು ಕರೆಯಲಾಯಿತು. ಅನೇಕ ವಿದೇಶಿ ಯಾತ್ರಿಕರು ಈ ಸ್ಥಳವನ್ನು ವರ್ಣಿಸಿದ್ದಾರೆ. ಸುಪ್ರಸಿದ್ಧ ಭೂಗೋಳ ಶಾಸ್ತ್ರಜ್ಞ ಅಬುಲ್-ಫಿದಾ (1272-1331), ಇಬ್ನ್ ಬಟುಟ (1342), ಅಬ್ದುರ್ ರಜಾಕ್ ಮೊದಲಾದವರು ಹೊನ್ನಾವರಕ್ಕೆ ಭೇಟಿ ನೀಡಿದ್ದರು. ಇಬ್ನ್ ಬಟುಟ ಇದನ್ನು 'ಹಿನಾವರ್' ನಗರವೆಂದು ಕರೆದು ಇದರಲ್ಲಿ ಬಹು ಸಂಖ್ಯಾತ ಜನರು ಮಹಮದೀಯರೆಂದೂ ಇಲ್ಲಿ ಹುಡುಗರಿಗಾಗಿ 23 ಶಾಲೆಗಳೂ ಬಾಲಕಿಯರಿಗಾಗಿ 13 ಶಾಲೆಗಳೂ ಇದ್ದವೆಂದೂ ತಿಳಿಸುತ್ತಾನಲ್ಲದೆ ಇಲ್ಲಿ ಹರಿಯಬ್‌ನ (ವಿಜಯನಗರದ ರಾಜ ಹರಿಹರ) ಸಾಮಂತನಾಗಿದ್ದ ಸುಲ್ತಾನನೊಬ್ಬನು ಆಳ್ವಿಕೆ ನಡೆಸಿದ್ದನೆಂದು ಹೇಳುತ್ತಾನೆ. ಇದು ಗೇರುಸೊಪ್ಪ ಸಂಸ್ಥಾನದ ಅಧೀನಕ್ಕೊಳಪಟ್ಟು ಒಂದು ಪ್ರಮುಖ ವ್ಯಾಪಾರ ಕೇಂದ್ರವಾಯಿತು. ಮುಂದೆ ಇದು ವಿಜಯ ನಗರದ ಅಧೀನಕ್ಕೊಳಪಟ್ಟಿತು. ಪೋರ್ಚುಗೀಸರು ಇಲ್ಲಿ ತಮ್ಮ ಮಳಿಗೆಯನ್ನು ಸ್ಥಾಪಿಸಿ ಈ ಊರನ್ನು 'ಓನೋರ್' ಎಂದು ಕರೆದರು. ಹೈದರನ ಆಳ್ವಿಕೆಯಲ್ಲಿ ಇಲ್ಲಿ ಒಂದು ನೌಕಾ ಕೇಂದ್ರವಿದ್ದು ಇದು ಗಣ್ಯ ವ್ಯಾಪಾರ ಕೇಂದ್ರವೂ ಆಗಿತ್ತು. 1862ರಲ್ಲಿ ಉತ್ತರ ಕನ್ನಡವನ್ನು ಮುಂಬಯಿ ಆಧಿಪತ್ಯಕ್ಕೆ ವರ್ಗಾಯಿಸುವವರೆಗೆ ಹೊನ್ನಾವರವು ಒಂದು ಜಿಲ್ಲಾ ಉಪ ಕೇಂದ್ರವಾಗಿ ಸಬ್ ಕಲೆಕ್ಟರನ ಕಚೇರಿಯನ್ನು ಹೊಂದಿತ್ತು. ಆಗ ಸಂಪೂರ್ಣವಾಗಿ ಪುನರ್ ನಿರ್ಮಿತವಾದ ನಗರವನ್ನು ನೋಡಬಹುದಾಗಿದೆ. ಇಲ್ಲಿ ದುರ್ಗಾದೇವಿ, ಲಕ್ಷ್ಮೀನಾರಾಯಣ, ಹನುಮಾನ್, ವಿಠೋಬ ಮತ್ತು ರಾಮೇಶ್ವರ ದೇವಾಲಯಗಳಿವೆ. ಪ್ರಪ್ರಥಮ ಚರ್ಚ್‌ನ್ನು ಕ್ರಿ.ಶ. 1599ರಲ್ಲಿ ಪೋರ್ಚುಗೀಸರು ನಿರ್ಮಿಸಿದರು. ಈಗಿರುವ ಸ್ಯಾನ್ ಸಾಲ್‌ಡೋನ್ ರೋಮನ್ ಚರ್ಚನ್ನು ಸುಮಾರು ಒಂದು ಶತಮಾನದ ಹಿಂದೆ ಕಟ್ಟಲಾಯಿತು. ಹೊನ್ನಾವರ ಮತ್ತು ಕಾಸರಕೋಡಿಗೆ ಸಂಪರ್ಕ ಕಲ್ಪಿಸುವ ಶರಾವತಿ ಸೇತುವೆಯು ಕರ್ನಾಟಕದಲ್ಲಿಯೇ ಅತ್ಯಂತ ಉದ್ದವಾದ ಸೇತುವೆಯೆಂದು ಪರಿಗಣಿತವಾಗಿದೆ. ತಾಲೂಕಿನ ಇತರ ಮುಖ್ಯ ಸ್ಥಳಗಳು ಹೀಗಿವೆ: ಇಡುಗುಂಜಿಯು ಹೊನ್ನಾವರದ ದಕ್ಷಿಣಕ್ಕೆ ಎಂಟು ಕಿಮೀ ದೂರದಲ್ಲಿದ್ದು ಯಕ್ಷಗಾನ ಕಲೆಗೆ ಪ್ರಸಿದ್ಧವಾದ ಸ್ಥಳ. ಇಲ್ಲಿ ಒಂದು ದ್ವಿಭಾಹು ಗಣಪತಿ ಮೂರ್ತಿಯಿರುವ ದೇವಾಲಯವಿದೆ. ಹೊನ್ನಾವರದಿಂದ ಐದು ಕಿಮೀ ದೂರದಲ್ಲಿರುವ ಬಸವರಾಜದುರ್ಗ ಎಂಬ ದ್ವೀಪದಲ್ಲಿ ಹಳೆಯ ಕೋಟೆಯ ಭಗ್ನಾವಶೇಷಗಳಿವೆ. ಈ ತಾಲೂಕಿನ ಮತ್ತೊಂದು ಊರಾದ ಹೈಗುಂದ ಶರಾವತಿಯ ನಡುವಿನ ದ್ವೀಪವಾಗಿದ್ದು ಕದಂಬರ ಸಾಮಂತರಾಗಿದ್ದ ಕೇಕಯ ರಾಜರ ರಾಜಧಾನಿಯಾಗಿತ್ತು. ಗೇರುಸೊಪ್ಪವು ಹೊನ್ನಾವರದಿಂದ 26 ಕಿಮೀ ದೂರದಲ್ಲಿ ಶರಾವತಿ ನದಿಯ ಬಲದಂಡೆಯ ಮೇಲಿದೆ. ಈ ಊರಿನ ಹೆಸರು ಗೇರು ಮತ್ತು ಸೊಪ್ಪು ಎಂಬ ಪದಗಳಿಂದ ಬಂದಿವೆ. ಇಲ್ಲಿ ಶರಾವತಿಯ ಎಡದಂಡೆಯ ಮೇಲಿರುವ ಬಸ್ತಿ ಕೇರಿ ಹಿಂದಿನ ರಾಜಧಾನಿಯಾಗಿದ್ದು ಗೇರುಸೊಪ್ಪೆ ರಾಜವಂಶದ ಕೊನೆಯ ರಾಣಿ ಚೆನ್ನಭೈರಾದೇವಿಯನ್ನು ಪೋರ್ಚುಗೀಸರು 'ಮೆಣಸಿನ ರಾಣಿ' ಎಂದು ಕರೆಯುತ್ತಿದ್ದರು. ಈ ಪ್ರದೇಶದಲ್ಲಿ ಕರಿಮೆಣಸಿನ ವ್ಯಾಪಾರ ಬಿರುಸಿನಿಂದ ಸಾಗಿತ್ತೆಂಬುದನ್ನು ಇದು ತಿಳಿಸುತ್ತದೆ. ಇಲ್ಲಿ ಸಾಳುವರೆಂಬ ಜೈನ ಸಂಸ್ಥಾನಿಕರು 14 ರಿಂದ 16ನೇಯ ಶತಮಾನದವರೆಗೆ ಆಳಿದರು. ಅನಂತರ ಈ ಪ್ರದೇಶ ಕೆಳದಿ ರಾಜ್ಯದಲ್ಲಿ ಸೇರಿಹೋಯಿತು. ಈ ಊರನ್ನು ಕ್ಷೇಮಪುರ, ನಗಿರೆ, ಭಲ್ಲಾತಕಿಪುರ ಎಂದು ಕರೆಯುತ್ತಿದ್ದರು. ಇಲ್ಲಿರುವ ಚತುರ್ಮುಖ ಬಸದಿ ಸುಮಾರು 14ನೇಯ ಶತಮಾನದ್ದು. ನಾಲ್ಕು ಬಾಗಿಲುಗಳುಳ್ಳ ಈ ಬಸದಿ ಶಿಲುಬೆಯಾಕಾರದಲ್ಲಿದ್ದು ಅಕ್ಷರಶಃ ನಾಲ್ಕು ಮುಖವುಳ್ಳದ್ದಾಗಿದೆ. ಇಲ್ಲಿ ಕೆಲವು ಶಿಥಿಲವಾದ ದೇವಾಲಯಗಳೂ, ಬಸದಿಗಳೂ ಇವೆ.

ಹೊನ್ನಾಳಿ: (ಶಿವಮೊಗ್ಗ ಜಿ; ತಾ. ಕೇ; ಜನ: 10,942) ಹೊನ್ನಾಳಿಯು ಶಿವಮೊಗ್ಗದಿಂದ ಉತ್ತರಕ್ಕೆ 38 ಕಿಮೀ, ಬೆಂಗಳೂರಿನಿಂದ 311 ಕಿಮೀ ದೂರದಲ್ಲಿದೆ. ಪುರಾಣಗಳಲ್ಲಿ ಇದನ್ನು ಭಾಸ್ಕರ ಕ್ಷೇತ್ರವೆಂದು ಕರೆಯಲಾಗಿದೆ. ಈ ಸ್ಥಳವು ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಅಷ್ಟು ಎತ್ತರವಲ್ಲದ ಕಲ್ಲುಗುಡ್ಡಗಳಿಂದ ಕೂಡಿದೆ. ಹಿಂದೆ ಈ ಸ್ಥಳದ ಸಮೀಪದ ಗಣಿಗಳಿಂದ ಚಿನ್ನವನ್ನು ತೆಗೆಯುತ್ತಿದ್ದರು. ಹೊಯ್ಸಳ ದೇವಿಯು ಇಲ್ಲಿ ಮಲ್ಲಿಕಾರ್ಜುನ ದೇವರಿಗೆ ಮಲ್ಲಿಕೇಶ್ವರ ತೀರ್ಥವೆಂಬ ಒಂದು ದೇವಾಲಯವನ್ನು ಕ್ರಿ.ಶ. 1055ರಲ್ಲಿ ಕಟ್ಟಿಸಿದಳು. ನದಿ ಆಚೆಯ ಸೇತುವೆಯ ಬಳಿ ಶ್ರೀನಿವಾಸ ತೀರ್ಥರೆಂಬ ಸಾಧು ಪುರುಷರ ಸಮಾಧಿ ಇದೆ. ಈ ಊರಿನಲ್ಲಿ ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳ ಮೃತ್ತಿಕಾ ಬೃಂದಾವನವಿದೆ. ಪಟ್ಟಣದ ಹಳೆಯ ಪ್ರದೇಶದಲ್ಲಿ ಚಚ್ಚೌಕವಾದ ಶಿಥಿಲವಾದ ಒಂದು ಕೋಟೆಯಿದ್ದು ಅದರ ಸುತ್ತಲೂ ಕಂದಕವಿದೆ. ನದಿಯ ಬಳಿಯಿರುವ ಪೂರ್ವದ ಬಾಗಿಲನ್ನು ಗಾರೆಯಿಲ್ಲದೆ ಒರಟು ಕಲ್ಲಿನಿಂದ ಕಟ್ಟಲಾಗಿದೆ. ಈ ಬಾಗಿಲಿಗೆ ಮೊನಚಾದ ಕಮಾನಿದೆ. ಈ ಬಾಗಿಲ ಬಳಿ ಒಂದು ಗುಂಡಗಿರುವ ಬುರುಜಿದ್ದು ಅದರ ಮೇಲೆ ಒಂದು ಫಿರಂಗಿ ಇಡುವ ಕಟ್ಟೆಯಿದೆ. ಈ ಸ್ಥಳದಲ್ಲಿ ಹಿಂದೆ ಆಳುತ್ತಿದ್ದ ನವಾಬನ ವಂಶಜರು ಇಂದಿಗೂ ಇಲ್ಲಿಯೇ ವಾಸಿಸುತ್ತಿದ್ದಾರೆ. ಇಲ್ಲಿ ಒಂದು ಪುರಸಭೆ ಇದೆ. ತಾಲೂಕಿನ ಇತರ ಮುಖ್ಯ ಸ್ಥಳಗಳು ಹೀಗಿವೆ: ಹಿರೇಮಠ: (ಜನ: 246) ಹೊನ್ನಾಳಿಯಿಂದ ಸುಮಾರು ಒಂದು ಕಿಮೀ ದೂರದಲ್ಲಿರುವ ಈ ಸಣ್ಣ ಹಳ್ಳಿಯಲ್ಲಿ ಚೆನ್ನಪ್ಪಸ್ವಾಮಿ ಮಠ ಎಂಬ ಒಂದು ವೀರಶೈವ ಮಠವಿದ್ದು, ಇಲ್ಲಿ ಒಬ್ಬ ವಿರಕ್ತ ಸ್ವಾಮಿಗಳು ಇದ್ದಾರೆ. ಕೆಲವು ಶತಮಾನಗಳ ಹಿಂದೆ ಜಡೆಯ ಶಂಕರ ಮಹಾಸ್ವಾಮಿ ಎನ್ನುವವರು ಕಟ್ಟಿಸಿದರೆಂದು ಹೇಳುವ ಈ ಮಠವು ಬೃಹದಾಕಾರದ ಕಲ್ಲು ಕಂಬಗಳ ಮೇಲೆ ನಿಂತಿರುವ ವಿಸ್ತಾರವಾದ ಕಲ್ಲು ಕಟ್ಟಡವಾಗಿದ್ದು

ಒಂದು ದೊಡ್ಡ ಪ್ರಾಕಾರ, ಮತ್ತು ಎತ್ತರವಾದ ಧ್ವಜ ಸ್ತಂಭವನ್ನು ಹೊಂದಿದೆ. ಈ ಮಠದ ಆವರಣದಲ್ಲಿ ಚೆನ್ನಮಲ್ಲಿಕಾರ್ಜುನ, ವೀರಭದ್ರ ಮತ್ತು ಚೌಡೇಶ್ವರಿ ದೇವಾಲಯಗಳಲ್ಲದೆ ಒಂದು ಅನುಭವ ಮಂಟಪವೂ ಇದೆ. ಈ ಮಠವು ಒಂದು ವೇದ ಜ್ಯೋತಿಷ್ಯ ಪಾಠಶಾಲೆ, ಒಂದು ಕಿರಿಯ ಕಾಲೇಜ್ ಮತ್ತು ಒಂದು ಉಚಿತ ವಿದ್ಯಾರ್ಥಿ ನಿಲಯವನ್ನು ನಡೆಸುತ್ತಿದೆ. ಇದು ಪ್ರತೀವರ್ಷವೂ ಒಂದು ಪಂಚಾಂಗವನ್ನು ಪ್ರಕಟಿಸುತ್ತದೆ. ನ್ಯಾಮತಿ (ಜನ: 7,669) ಹೊನ್ನಾಳಿಗೆ ನೈಋತ್ಯಕ್ಕೆ 26 ಕಿಮೀ ದೂರದಲ್ಲಿರುವ ನ್ಯಾಮತಿಯು 1869 ರಿಂದ 1882 ರವರೆಗೆ ಹೊನ್ನಾಳಿ ತಾಲೂಕಿನ ಮುಖ್ಯ ಸ್ಥಳವಾಗಿತ್ತು. ಈ ಊರಿನ ಪೇಟೆಯನ್ನು ದಿವಾನ್ ಪೂರ್ಣಯ್ಯನ ಕಾಲದಲ್ಲಿ ಸ್ಥಾಪಿಸಲಾಯಿತು. ಇದು ಮಲೆನಾಡು ಮತ್ತು ಮೈದಾನಗಳ ನಡುವೆ ಇದ್ದು ಬಿರುಸಿನ ವ್ಯಾಪಾರಕ್ಕೆ ಹೆಸರುವಾಸಿಯಾಗಿದೆ. ಇಲ್ಲಿನ ಮೆಣಸಿನ ಕಾಯಿ ಬಹು ಪ್ರಸಿದ್ಧವಾದುದು. ಇಲ್ಲಿಯೂ ಒಂದು ಪುರಸಭೆ ಇದೆ. ಬೆಳಗುತ್ತಿ (ಜನ: 4,476)ಯು ಹೊನ್ನಾಳಿಯ ನೈಋತ್ಯಕ್ಕೆ 23 ಕಿಮೀ ದೂರದಲ್ಲಿದೆ. ಇದಕ್ಕೆ ಹಿಂದೆ ಬೆಳಗವತಿ ಮತ್ತು ಬೆಳಗುವರ್ತಿ ಎಂಬ ಹೆಸರಿತ್ತು. ಇದು ಅದೇ ಹೆಸರಿನ ಹೋಬಳಿಯ ಮುಖ್ಯ ಸ್ಥಳವಾಗಿದೆ. ಹೊಯ್ಸಳ ಮತ್ತು ಸೇಉಣರ ಸಾಮಂತರಾಗಿದ್ದ ಬೆಳಗುತ್ತಿಯ ಸಿಂಧರು ಇದನ್ನು ತಮ್ಮ ಮುಖ್ಯಸ್ಥಳವನ್ನಾಗಿ ಮಾಡಿಕೊಂಡಿದ್ದರು. ಅನಂತರ 16ನೇಯ ಶತಮಾನದಲ್ಲಿ ಒಂದು ಪಾಳೇಗಾರರ ಸಂತತಿಯು ಇಲ್ಲಿಂದ ಆಳಿತು. ಇಲ್ಲಿ ಚೆನ್ನಕೇಶವ, ದುರ್ಗಾಂಬಾ ಮತ್ತು ಸಿದ್ದೇಶ್ವರ ದೇವಾಲಯಗಳಿವೆ. ಪ್ರತೀವರ್ಷವೂ ಅಕ್ಟೋಬರ್ ತಿಂಗಳಿನಲ್ಲಿ ಎರಡು ದಿನಗಳ ಕಾಲ ಇಲ್ಲಿ ದುರ್ಗಾಂಬಾ ಮತ್ತು ಸಿದ್ದೇಶ್ವರ ದೇವಾಲಯಗಳಿವೆ. ಪ್ರತೀವರ್ಷವೂ ಅಕ್ಟೋಬರ್ ತಿಂಗಳಿನಲ್ಲಿ ಎರಡು ದಿನಗಳ ಕಾಲ ಇಲ್ಲಿ ದುರ್ಗಾಂಬಾ ಜಾತ್ರೆಯೂ ನಡೆಯುತ್ತದೆ. ಆ ಸಂದರ್ಭದಲ್ಲಿ ಇಲ್ಲಿ ಕುಸ್ತಿ ಪಂದ್ಯಗಳನ್ನು ಏರ್ಪಡಿಸುತ್ತಾರೆ. ಬೆಳಗುತ್ತಿಯ ಈಶಾನ್ಯಕ್ಕೆ ನಾಲ್ಕು ಕಿಮೀ ದೂರದಲ್ಲಿ ತೀರ್ಥರಾಮಪುರವೆಂಬ ಒಂದು ನಿರ್ಜನ (ಬೇಚಿರಾಕ್) ಗ್ರಾಮವಿದೆ. ಇಲ್ಲಿನ ಗುಡ್ಡದ ಮೇಲಿರುವ ರಾಮೇಶ್ವರ ದೇವಾಲಯಕ್ಕೆ ಅಧಿಕ ಸಂಖ್ಯೆಯ ಭಕ್ತರು ಬರುತ್ತಾರೆ. ದೇವಾಲಯದ ಪಕ್ಕದಲ್ಲಿರುವ ಕಲ್ಲಿನ ಬಸವನ ಬಾಯಿಂದ ನೀರು ಸದಾ ಹರಿಯುತ್ತಿರುತ್ತದೆ.

**ಹೊಸಕೋಟೆ :** (ಬೆಂಗಳೂರು ಜಿ; ತಾ. ಕೇ; ಜನ: 17,538) ಹೊಸಕೋಟೆಯು ಬೆಂಗಳೂರಿನಿಂದ ಸುಮಾರು 26 ಕಿಮೀ ದೂರದಲ್ಲಿ ಬೆಂಗಳೂರಿನ ಪೂರ್ವಕ್ಕೆ ಬೆಂಗಳೂರು–ಕೋಲಾರ ಹೆದ್ದಾರಿಯಲ್ಲಿದೆ. ಸುಮಾರು ಕ್ರಿ. ಶ. 1595ರಲ್ಲಿ ಸುಗಟೂರಿನ ಪಾಳೆಯಗಾರ ತಮ್ಮೇಗೌಡ ಎಂಬುವನು ಹೊಸತಾಗಿ ಇಲ್ಲೊಂದು ಕೋಟೆಯನ್ನು ಕಟ್ಟಿಸಿ ಹೊಸಕೋಟೆ ಎಂದು ಕರೆದನು. ಆ ಸಮಯದಲ್ಲಿ ವಿಜಯನಗರ ರಾಜವಂಶದ ಪೆನುಕೊಂಡದಲ್ಲಿದ್ದ ಅರಸನು ಈತನಿಗೆ ಚಿಕ್ಕರಾಯ ಎಂಬ ಬಿರುದನ್ನು ದಯಪಾಲಿಸಿದನು. ಈತನು 1632ರವರೆಗೆ ಆಳಿದನು. ಬಳಿಕ ಈ ಪ್ರದೇಶವನ್ನು ವಿಜಾಪುರದ ಸುಲ್ತಾನನು ಗೆದ್ದು, ಷಾಜಿಗೆ ಜಹಗೀರಾಗಿ ನೀಡಿದನು. ಮೊಗಲರ ಸೇನಾಧಿಕಾರಿ ಕಾಸಿಂಖಾನನು ಈ ಜಿಲ್ಲೆಗಳನ್ನು ಗೆದ್ದು ಸಿರಾ ಪ್ರಾಂತ್ಯದೊಡನೆ ಸೇರಿಸಿದನು. 1756ರಲ್ಲಿ ಮೈಸೂರು ಒಡೆಯರು ಈ ಪ್ರದೇಶವನ್ನು ವಶಪಡಿಸಿಕೊಂಡರೂ ಮರು ವರ್ಷವೇ ಈ ಸ್ಥಳಗಳೆಲ್ಲಾ ಮರಾಠರ ವಶವಾದುವು. ಕೊನೆಗೆ 1761ರಲ್ಲಿ ಹೈದರ್‌ಅಲಿಯು ಅದನ್ನು ಗೆದ್ದು ಮೈಸೂರಿಗೆ ಸೇರಿಸಿಕೊಂಡನು. ಹೊಸಕೋಟೆಯಲ್ಲಿ ಪ್ರಾಚೀನವೂ, ಪ್ರಮುಖವೂ ಆದ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ಅವಿಮುಕ್ತೇಶ್ವರ ದೇವಾಲಯವು ದ್ರಾವಿಡ ಶಿಲ್ಪಶೈಲಿಯಲ್ಲಿ ರಚಿಸಲಾಗಿದ್ದು ಇದನ್ನು ತಮ್ಮೇಗೌಡನು ಕಟ್ಟಿಸಿದನು ಎನ್ನಲಾಗಿದೆ. ಇದರಲ್ಲಿ ಸಾಲಾಗಿ ಮೂರು ಗರ್ಭಗೃಹಗಳಿದ್ದು ಮಧ್ಯದಲ್ಲಿ ಶಿವಲಿಂಗವಿದ್ದು, ಇಬ್ಬದಿಯಲ್ಲಿ ಪಾರ್ವತಿ ಮತ್ತು ವೀರಭದ್ರರ ಮೂರ್ತಿಗಳಿವೆ. ಇದಲ್ಲದೆ ಇಲ್ಲಿ 16ನೇಯ ಶತಮಾನದ್ದೆನ್ನಲಾದ ವರದರಾಜ ದೇವಾಲಯವೂ 17ನೇಯ ಶತಮಾನದ ಶ್ರೀನಿವಾಸ ದೇವಾಲಯವೂ ಇವೆ. ಪೇಶ್ವೆಯ ಕಾಲದಲ್ಲಿ ಹೊಸಕೋಟೆ ಪರಗಣದ ಸುಭೇದಾರನಾಗಿದ್ದ ರಘುನಾಥ ಬಾವಜೀ ಎಂಬುವನು ವಿಠೋಬಾ ದೇವಾಲಯವನ್ನು ಕಟ್ಟಿಸಿದ ಎನ್ನಲಾಗಿದೆ. ಈ ಗುಡಿಯ ಪ್ರಥಮ ಅರ್ಚಕನಾದ ಮುದ್ಗಲಭಟ್ಟನು ಇಲ್ಲಿಯ ವಿಠೋಬಾ ಮತ್ತು ರಕುಮಾಯಿಗಳ ಮೂರ್ತಿಗಳನ್ನು ಪುಣೆಯಿಂದ ತರಿಸಿದನಂತೆ. ಇಲ್ಲಿರುವ ಇತರ ದೇವಸ್ಥಾನಗಳೆಂದರೆ ಕೋಟೆ ಆಂಜನೇಯನ ಗುಡಿ, ಅಗ್ರಹಾರದ ಆಂಜನೇಯನ ಗುಡಿ, ಕಮಟೇಶ್ವರ, ಕಾಳಿಕಾಂಬಾ ದೇವಾಲಯ ಮತ್ತು ಕಾಶೀ ವಿಶ್ವನಾಥ ದೇವಾಲಯ. ವೀರಮ್ಮನ ಮಠ ಎಂದು ಕರೆಯುವ ವೀರಶೈವ ಮಠವೂ ಇಲ್ಲಿದೆ. ಹಜರತ್ ಸೈಯದ್ ಶೈಲಾನಿ ಷಾನ ದರ್ಗಾ ಮತ್ತು ಕೆಲವು ಮಸೀದಿಗಳು ಇಲ್ಲಿವೆ. ಈ ದರ್ಗಾದಲ್ಲಿ ಪ್ರತೀವರ್ಷವೂ ಉರುಸ್ ನಡೆಯುತ್ತದೆ. ಪಟ್ಟಣದ ಹೊರವಲಯದಲ್ಲಿ ಆಕಾಶವಾಣಿಯ ಪ್ರಸರಣ ಕೇಂದ್ರವಿದೆ. ಹೊಸಕೋಟೆಯಲ್ಲಿರುವ ವಿಶಾಲವಾದ ಕೆರೆಯನ್ನು ಪಾಳೆಯಗಾರ ತಮ್ಮೇಗೌಡನು ಕಟ್ಟಿಸಿದನು. ಓಗಟ (ಜನ: 755) ಎಂಬ ಸ್ಥಳವು ಹೊಸಕೋಟೆಯಿಂದ ಹತ್ತು ಕಿಮೀ ಪಶ್ಚಿಮಕ್ಕೆ ಇದೆ. ಈ ಸ್ಥಳವನ್ನು ಹಿಂದೆ ಓವಟ್ಟಂ, ವರದರಾಜ ಚತುರ್ವೇದಿ ಮಂಗಲಂ, ಓಗಟೆ ಮತ್ತು ಭಾಗೀರಥೀಪುರ ಎಂದು ಕರೆಯಲಾಗುತ್ತಿತ್ತು. ತರುವಾಯದ ಸಾಹಿತ್ಯದಲ್ಲಿ ಈ ಸ್ಥಳವನ್ನು ಯೋಗವತಪುರ ಅಥವಾ ಯೋಗಪುರಿ ಎಂದು ಕರೆಯಲಾಗಿದೆ. ಇಲ್ಲಿ ದ್ರಾವಿಡ ಶೈಲಿಯ ಪುರಾತನವಾದ ವರದರಾಜ ದೇವಾಲಯವೂ ಇದೆ. ಇಲ್ಲಿ ಹಲವಾರು ಶಿಲಾ ಶಾಸನಗಳಿದ್ದು ಕ್ರಿ. ಶ. 1491ರ ಒಂದು ಶಾಸನವು ದೇವಾಲಯಕ್ಕೆ ದತ್ತಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ಸ್ಥಳೀಯ ಕೆರೆಯ ಬದಿ

ಯಲ್ಲಿ ಇರುವ ಚಂದ್ರಮೌಳೀಶ್ವರ ದೇವಾಲಯದ ಗರ್ಭಗುಡಿಯಲ್ಲಿ ಸುಂದರವಾದ ಶಿವಲಿಂಗವಿದೆ. ಆಂಜನೇಯ ದೇವಾಲಯದಲ್ಲಿರುವ ಏಳು ಅಡಿ ಎತ್ತರದ ಮೂರ್ತಿಯು ಮನಮೋಹಕವಾಗಿದೆ. ಊರಿನ ಸಮೀಪದಲ್ಲೇ ಇರುವ ಚೌಡೇಶ್ವರಿ ದೇವಾಲಯ ಶಿಥಿಲವಾಗಿದೆ. ಅಲ್ಲಿ ಸಪ್ತಮಾತೃಕೆಯರು, ಗಣಪತಿ ಮತ್ತು ಅಸ್ಥಿಪಂಜರದಂತಿರುವ ಬೇತಾಳನ ಪ್ರತೀಕವಾದ ಮೂರ್ತಿಗಳಿವೆ. ದೇವಸ್ಥಾನವಿರುವ ಭೂಮಿಯೊಳಗೆ ಅರ್ಧ ಹೂತುಹೋಗಿರುವ ತೋರಣಗಂಭದ ಮೇಲಿರುವ ಕ್ರಿ. ಶ. 1020ರ ಶಾಸನವು ರಾಜೇಂದ್ರ ಚೋಳನ ಕಾಲದ್ದು.

**ಹೊಸದುರ್ಗ :** (ಚಿತ್ರದುರ್ಗ ಜಿ; ತಾ. ಕೇ; ಜನ: 12,378) ಹೊಸದುರ್ಗವು ಬೆಂಗಳೂರು ಹುಬ್ಬಳ್ಳಿ ಮಾರ್ಗದಲ್ಲಿರುವ ಹೊಸದುರ್ಗ ರೋಡ್ ರೈಲ್ವೆ ಸ್ಟೇಷನ್‌ನಿಂದ ಪೂರ್ವಕ್ಕೆ, 17.6 ಕಿಮೀ ದೂರದಲ್ಲಿ ಬೆಟ್ಟದ ಬುಡದಲ್ಲಿ ಇದೆ. ಇದು ಬೆಂಗಳೂರಿನಿಂದ 201 ಕಿಮೀ ದೂರದಲ್ಲಿದೆ. ಇದು ಈಗ ಪುರಸಭೆಯುನ್ನು ಹೊಂದಿದೆ. ಮೂಲತಃ ಇದು ಚಿತ್ರದುರ್ಗದ ಪಾಳೆಗಾರರಿಂದ 1676ರಲ್ಲಿ ನಿರ್ಮಿತವಾದ ಒಂದು ಗಿರಿದುರ್ಗವಾಗಿತ್ತು. ಇಲ್ಲಿ ದುರ್ಗಮ್ಮ, ವೀರಭದ್ರ, ಭೈರೇಶ್ವರ, ಗಣಪತಿ ಮತ್ತು ಬನಶಂಕರಿ ದೇವಾಲಯುಗಳಿವೆ. ಈ ಊರಿನಲ್ಲಿ ಎಣ್ಣೆ ಗಿರಣಿಗಳು, ಮೊಂಬತ್ತಿ ಕಾರ್ಖಾನೆ, ಬಿದಿರು ಕೈಗಾರಿಕೆ ಇವು ಮುಖ್ಯ ಉದ್ಯಮಗಳು. ಗುಡಿ ಕೈಗಾರಿಕೆಗಳು ಇಲ್ಲಿ ಬಹಳ ಅಭಿವೃದ್ಧಿಯುನ್ನು ಪಡೆದಿವೆ. ಊರಿನ ಹೊರವಲಯುದಲ್ಲಿ ಅನೇಕ ತೆಂಗಿನ ತೋಟಗಳಿವೆ. ಇಲ್ಲಿ ನಯವಾದ ಉಡುರೇಷ್ಮೆ ಬಟ್ಟೆಯುನ್ನು ಹೆಚ್ಚಾಗಿ ನೇಯುತ್ತಾರೆ. ಇಲ್ಲೊಂದು ವ್ಯವಸಾಯೋತ್ಪನ್ನ ಮಾರುಕಟ್ಟೆಯಿದೆ. ಗವಿ ರಂಗಾಪುರದ ಗವಿ ರಂಗನಾಥ, (ಸಣ್ಣಕ್ಕಿ) ಬಾಗೂರಿನ ಚನ್ನಕೇಶವ, ಶ್ರೀರಾಮ ಮತ್ತು ಮಾರುತಿ, ಮೈಲಾಪುರದ ಮೈಲಾರಲಿಂಗೇಶ್ವರ, ಜಾನಕಲ್ಲಿನ ಶಂಕರಲಿಂಗ, ಹೆಗ್ಗೆರೆಯ ಈಶ್ವರ ಮತ್ತು ಕೆಂಪಮ್ಮ, ಬೆಳಗೂರಿನ ಪ್ರಸನ್ನ ರಾಮೇಶ್ವರ ಈ ತಾಲೂಕಿನ ಮುಖ್ಯ ದೇವಾಲಯುಗಳು. ಹೆಗ್ಗೆರೆಯಲ್ಲಿರುವ ಪಾರ್ಶ್ವನಾಥ ಬಸದಿ ಜೈನರಿಗೆ ಒಂದು ಮುಖ್ಯ ಯಾತ್ರಾಸ್ಥಳವಾಗಿದೆ. ಈ ಕೆಳಗಿನವು ತಾಲೂಕಿನ ಇತರ ಮುಖ್ಯ ಸ್ಥಳಗಳು. ಹಾಲು ರಾಮೇಶ್ವರವು ಹೊಸದುರ್ಗದಿಂದ ಎಂಟು ಕಿಮೀ ದೂರದಲ್ಲಿ ತಾಳ್ಯರಸ್ತೆಯಲ್ಲಿದೆ. ಇದು ಹಾಲಿನಂತೆ ಬೆಳ್ಳಗಿರುವ ನೀರಿನ ಪವಿತ್ರ ಹೊಂಡದಿಂದ ಪ್ರಸಿದ್ಧವಾಗಿದೆ. ಆದುದರಿಂದ ಇದನ್ನು ಹಾಲು ರಾಮೇಶ್ವರ ಎಂದು ಕರೆಯಲಾಗಿದೆ. ಈ ಕ್ಷೇತ್ರವನ್ನು ವಜ್ರ ಮತ್ತು ಗಂಗಾಸ್ಥಾನ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಈ ಕ್ಷೇತ್ರವು ಮಾಡದಕೆರೆಯ ಹೋಬಳಿಯ ದೇವಪುರ ಗ್ರಾಮದ (ಜನ: 2,425) ವ್ಯಾಪ್ತಿಗೆ ಒಳಪಡುತ್ತದೆ. ಗಂಗಾಮಾತೆ ಇಲ್ಲಿನ ಪ್ರಮುಖ ದೇವತೆ. ಶ್ರೀ ರಾಮೇಶ್ವರ, ಪಂಚಲಿಂಗಗಳು, ಸೀತಾಲಕ್ಷ್ಮಣ, ಹನುಮ ಮತ್ತು ಶ್ರೀರಾಮರು ಇಲ್ಲಿನ ಪರಿವಾರ ದೇವತೆಗಳು. ಭಕ್ತಾದಿಗಳು ಈ ಕುಂಡದಲ್ಲಿ ಶ್ರದ್ಧಾಭಕ್ತಿಗಳಿಂದ ಪೂಜೆಯುನ್ನು ಸಲ್ಲಿಸುತ್ತಾರೆ. ಇಲ್ಲಿ ಅನೇಕ ಪವಾಡಗಳು ನಡೆಯುತ್ತವೆ ಎಂದು ಜನರ ಭಾವನೆಯಿದೆ. 1943ರಲ್ಲಿ ಮೈಸೂರಿನ ಮಹಾರಾಜ ಜಯಚಾಮರಾಜೇಂದ್ರ ಒಡೆಯರು ಇಲ್ಲಿಗೆ ಬಂದಾಗ ಕುಂಡದಲ್ಲಿ ಒಂದು ತೊಟ್ಟಿಲು ತೇಲಿಬಂದಿತಂತೆ. ಮತ್ತೋಡು (ಜನ: 2,632) ಗ್ರಾಮವು ವೇದಾವತಿ ನದಿಯ ಬಲದಂಡೆಯ ಮೇಲಿದೆ. ಇದು ಹೊಸದುರ್ಗದ ಪೂರ್ವಕ್ಕೆ 20 ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ ಇದನ್ನು ಮತ್ತೋಡು ಮತ್ತು ಮತ್ತಿನಾಡು ಎಂದು ಕರೆಯಲಾಗಿದೆ. ಪ್ರಾಚೀನ ಕಾಲದಲ್ಲಿ ಇದಕ್ಕೆ 'ಮತಿವಂತರ ನಾಡು' ಎಂಬ ಹೆಸರಿದ್ದು ಹಾಗಿಯೂ ಅನಂತರ ಅದು ಮತಿನಾಡು ಆಯಿತೆಂದು ಹೇಳಲಾಗಿದೆ. ಮತ್ತೋಡು ಸ್ಥಳೀಯ ಪಾಳೇಗಾರರ ಮುಖ್ಯಸ್ಥಳ. ಗಿರಿಯಪ್ಪನಾಯಕ ಈ ಸಂತತಿಯ ಮೂಲಪುರುಷ. ದೊಡ್ಡಲನಾಯಕ ಇಲ್ಲಿ ಒಂದು ಕೋಟೆಯುನ್ನು ಕಟ್ಟಿಸಿ (ಸುಮಾರು 1710) ವೀರಶೈವ ಧರ್ಮವನ್ನು ಸ್ವೀಕರಿಸಿದನು. ಇಲ್ಲಿ ಗಾಜಿನ ಬಳೆ ಮತ್ತು ಉಂಗುರಗಳ ಕೈಗಾರಿಕೆ ಪ್ರಸಿದ್ಧವಾಗಿತ್ತು. ಕಪ್ಪು, ಹಸಿರು, ಕೆಂಪು, ನೀಲಿ ಮತ್ತು ಹಳದಿ ಬಣ್ಣದ ಬಳೆಗಳನ್ನು ತಯಾರಿಸಲಾಗುತ್ತಿತ್ತು. ಅವುಗಳ ತಯಾರಿಕೆಗಾಗಿ ಗೋಡೆಯ ಒಳಗಡೆ ಎತ್ತರವಾದ ಅಟ್ಟಣೆಗಳ ಮೇಲೆ ಕುಲುಮೆಗಳನ್ನು ಸ್ಥಾಪಿಸಿದ್ದರು. ಮತ್ತೋಡು ಹೋಬಳಿ ಮತ್ತು ಪಂಚಾಯಿತಿಯ ಕೇಂದ್ರ ಸ್ಥಳವಾಗಿದೆ. ಇಲ್ಲಿ ಸಿದ್ಧರಾಮೇಶ್ವರ ಮತ್ತು ಬನಶಂಕರಿ ದೇವಾಲಯುಗಳಿವೆ. ಪ್ರತೀವರ್ಷ ಏಪ್ರಿಲ್‌ನಲ್ಲಿ ಮೂರು ದಿನ ನಡೆಯುವ ಭಗಿವರ್ಧಮ್ಮನ ಜಾತ್ರೆ ಇಲ್ಲಿ ಬಹು ಜನಪ್ರಿಯವಾದುದು. ತೆಂಗಿನಕಾಯಿ ವ್ಯಾಪಾರವು ಇಲ್ಲಿ ಬಹು ಮುಖ್ಯವಾದ ವ್ಯಾಪಾರ. ನೀರಗುಂದ : (ಜನ: 1,056) ಹೊಸದುರ್ಗದಿಂದ 11 ಕಿಮೀ ದೂರದಲ್ಲಿರುವ ಊರಾಗಿದ್ದು ಇಲ್ಲಿ ಒಂದು ಪ್ರಾಚೀನ ಪಟ್ಟಣವಿತ್ತು. ಸ್ಥಳಪುರಾಣದಂತೆ ನೀಲಶೇಖರನು ಕ್ರಿ.ಪೂ. 160ರಲ್ಲಿ ನೀರಗುಂದವನ್ನು ಸ್ಥಾಪಿಸಿ ಅದಕ್ಕೆ ನೀಲಾವತಿಪಟ್ಟಣ ಎಂಬ ಹೆಸರನ್ನು ಕೊಟ್ಟನು. ಕ್ರಿ.ಶ. ಐದನೇಯ ಶತಮಾನದಲ್ಲಿ ಇದು ಗಂಗರಾಜ್ಯದಲ್ಲಿ ಸೇರ್ಪಡೆಯಾಗಿದ್ದ ಒಂದು ಜೈನರಾಜ್ಯದ ಮುಖ್ಯಸ್ಥಳವಾಗಿತ್ತು. ಹೊಯ್ಸಳರ ಕಾಲದಲ್ಲಿ ಇದು ನೀರಗುಂದ-300ರ ನಾಡಿನ ಕೇಂದ್ರವಾಗಿದ್ದು ಸ್ವಲ್ಪಕಾಲ ಹೊಯ್ಸಳ ಮಹಿಷಿಯೊಬ್ಬಳ ಆಳ್ವಿಕೆಗೆ ಒಳಪಟ್ಟಿದ್ದಿತು. ಈ ಊರಿನ ಸುತ್ತಲು ಹಲವಾರು ಹಳೆಯ ದೇವಾಲಯುಗಳು ಇತರ ಭಗ್ನಾವಶೇಷಗಳ ರಾಶಿ ಕಂಡು ಬರುತ್ತದೆ. ಇಲ್ಲಿ ಒಂದು ಪುರಾತನ ವೀರಭದ್ರ ದೇವಾಲಯ ಇದೆ.

**ಹೊಸನಗರ :** (ಶಿವಮೊಗ್ಗ ಜಿ; ತಾ. ಕೇ; ಜನ: 4,561) ಹೊಸನಗರವು ಶಿವಮೊಗ್ಗದಿಂದ ಪಶ್ಚಿಮಕ್ಕೆ 70 ಕಿಮೀ

ಮತ್ತು ಬೆಂಗಳೂರಿನಿಂದ ವಾಯುವ್ಯಕ್ಕೆ 352 ಕಿಮೀ ದೂರದಲ್ಲಿದೆ. ಇದಕ್ಕೆ ಹಿಂದೆ 'ಕಲ್ಲೂರು ಕಟ್ಟೆ' ಎಂಬ ಹೆಸರಿದ್ದಿತು. 1893ರಲ್ಲಿ ತಾಲೂಕು ಕೇಂದ್ರವನ್ನು ನಗರದಿಂದ ಕಲ್ಲೂರುಕಟ್ಟೆಗೆ ಸ್ಥಳಾಂತರಿಸಲಾಯಿತು. ಈ ಊರು ರಮಣೀಯವಾದ ನಿಸರ್ಗದ ನಡುವೆ ಕಂಗೊಳಿಸುತ್ತಿದೆ. ಇಲ್ಲಿಂದ ಹೊರಡುವ ರಸ್ತೆಗಳು ಮಲೆನಾಡು, ಅರೆ ಮಲೆನಾಡು, ತೀರಪ್ರದೇಶ ಹಾಗೂ ರಾಜ್ಯದ ಮತ್ತಿತರ ಭಾಗಗಳಿಗೆ ಸಂಪರ್ಕವನ್ನು ಕಲ್ಪಿಸುತ್ತವೆ. ಇದು ಅಡಕೆಯ ವ್ಯಾಪಾರಕ್ಕಾಗಿ ಹೆಸರುವಾಸಿಯಾಗಿದೆ. ಲಿಂಗನಮಕ್ಕಿ ಜಲಾಶಯದಲ್ಲಿ ಮುಳುಗಿಹೋದ ವೀರಭದ್ರಾಪುರ ಹಳ್ಳಿಯ ಒಂದು ದೇವಾಲಯದ ಬಿಡಿ ಭಾಗಗಳಿಂದ ಈ ಊರಿನಲ್ಲಿ ಒಂದು ಈಶ್ವರ ದೇವಾಲಯವನ್ನು ಇತ್ತೀಚೆಗೆ ಕಟ್ಟಿದ್ದಾರೆ. ಇಲ್ಲಿ ಒಂದು ಪುರಸಭೆ ಇದೆ. ತಾಲೂಕಿನ ಇತರ ಪ್ರಮುಖ ಸ್ಥಳಗಳು ಕೆಳಕಂಡಂತಿವೆ. ರಾಮಚಂದ್ರಾಪುರ (ಜನ: 407)ವು ಹೊಸನಗರದಿಂದ ಆರು ಕಿಮೀ ದೂರದಲ್ಲಿದೆ. ಇಲ್ಲಿ ಸ್ಮಾರ್ತ ಹವ್ಯಕ ಬ್ರಾಹ್ಮಣರ ಒಂದು ಹೆಸರಾಂತ ಮಠವಿದೆ. ವಿಶಾಲವಾದ ಕಟ್ಟಡವಿರುವ ಈ ಮಠದಲ್ಲಿ ರಾಮಚಂದ್ರ ಮತ್ತು ಚಂದ್ರಮೌಳೀಶ್ವರರನ್ನು ಆರಾಧಿಸಲಾಗುತ್ತದೆ. ಸೊರಬದ ಗುಡಿಗಾರರು ತಮ್ಮ ಕೌಶಲ್ಯವನ್ನು ಮೆರೆದು ಮಾಡಿರುವ ಒಂದು ದಂತದ ಸಿಂಹಾಸನ ಈ ಮಠದಲ್ಲಿರುವ ಒಂದು ಅಪೂರ್ವ ಕಲಾಕೃತಿ (ಭಾಗ ಎರಡರಲ್ಲಿ ಭಾವಚಿತ್ರ ನೋಡಿ). ಕೊಡಚಾದ್ರಿ ಕಟ್ಟಿನಹೊಳೆಗೆ ಸೇರಿದಂತಿರುವ ಕೊಡಚಾದ್ರಿಯು ಹೊಸನಗರದಿಂದ 46 ಕಿಮೀ ಮತ್ತು ಶಿವಮೊಗ್ಗದಿಂದ 115 ಕಿಮೀ ದೂರದಲ್ಲಿದೆ. ಇದು ಪಶ್ಚಿಮ ಘಟ್ಟಗಳ ಒಂದು ಶಿಖರದ ಬುಡದಲ್ಲಿದ್ದು, ದಕ್ಷಿಣ ಕನ್ನಡದ ಕುಂದಾಪುರ ತಾಲೂಕು ಮತ್ತು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕುಗಳನ್ನು ಬೇರ್ಪಡಿಸುವ ಒಂದು ಗಡಿಯಾಗಿದೆ. ಇಲ್ಲಿನ ಗಿರಿಶಿಖರವು ಸಮುದ್ರಮಟ್ಟದಿಂದ 1,343 ಮೀಟರ್ ಎತ್ತರದಲ್ಲಿದೆ. ಇಲ್ಲಿರುವ ದೇವಾಲಯದಲ್ಲಿ 32 ಬಾಹುಗಳುಳ್ಳ ಹುಲಿದೇವನ ಶಿಲಾಮೂರ್ತಿ ಇದೆ. ಇಲ್ಲಿ 'ಅಂಬಾವನ'ವೆಂಬ ದಟ್ಟವಾದ ಅರಣ್ಯವಿದೆ. ಈ ಬೆಟ್ಟದ ತುದಿಯಿಂದ ಸಮೀಪದ ಅರೇಬಿಯನ್ ಸಮುದ್ರವನ್ನು ನೋಡಬಹುದು. ಆಕಾಶ ಸ್ಪಷ್ಟವಾಗಿದ್ದಾಗ ಬರಿಗಣ್ಣಿನಿಂದಲೇ ಸಮುದ್ರದಲ್ಲಿರುವ ಹಡಗುಗಳನ್ನು ಕಾಣಬಹುದು. ಇಲ್ಲಿ ಕೆಲವು ಅಪರೂಪದ ಗಿಡಮೂಲಿಕೆಗಳು ದೊರೆಯುತ್ತವೆ. ಇಲ್ಲಿನ ಕಾಲಭೈರವ ಮತ್ತು ಉಮಾ ಮಹೇಶ್ವರ ದೇವಾಲಯಗಳ ನಡುವೆ ಇರುವ ಕೆರೆಯು ಸೌಪರ್ಣಿಕಾ ನದಿಯ ಉಗಮ ಸ್ಥಾನವಾಗಿದೆ. ಭೈರವ ದೇವರ ದೇವಾಲಯದ ಎದುರು ಒಂದು ಪುರಾತನವಾದ ಕಬ್ಬಿಣದ ಸ್ತಂಭವಿದೆ. ಆದಿಶಂಕರಾಚಾರ್ಯರು ಇಲ್ಲಿ ಆದಿಶಕ್ತಿಯನ್ನು ಕುರಿತು ತಪಸ್ಸು ಮಾಡಿದರೆಂದು ಹೇಳಲಾಗುತ್ತದೆ. ಇಲ್ಲಿ ಒಂದು ಸಣ್ಣ ಬಂಗಲೆಯೂ ಇದೆ. ಹುಂಚ: (ಜನ: 1,894) ಬಿಲ್ಲೇಶ್ವರ ಬೆಟ್ಟದ ಬುಡದಲ್ಲಿರುವ ಹುಂಚವು ಶಿವಮೊಗ್ಗದಿಂದ ನೈಋತ್ಯಕ್ಕೆ 60 ಕಿಮೀ ಮತ್ತು ಹೊಸನಗರದ ಆಗ್ನೇಯಕ್ಕೆ 21 ಕಿಮೀ ದೂರದಲ್ಲಿದೆ. ಇದು ಹೋಬಳಿಯ ಮುಖ್ಯ ಸ್ಥಳ. ಶಾಸನಗಳಲ್ಲಿ ಇವನ್ನು ಹೊಂಬುಚ, ಪೊಂಬುರ್ಚ, ಪಟ್ಟಿ ಪೊಂಬುರ್ಚ್ಚ, ಪಟ್ಟಿ ಪೊಂಬುಳ್ಚಪುರ ಎಂದು ವಿವಿಧವಾಗಿ ಉಲ್ಲೇಖವಾಗಿದೆ. ಇದು ಸಾಂತರ ವಂಶದ ಸ್ಥಾಪಕನಾದ ಜಿನದತ್ತನ ರಾಜಧಾನಿಯಾಗಿದ್ದಿತು. ಇಲ್ಲಿ ಕುಂದಕುಂದಾನ್ವಯದ ನಂದಿಸಂಘದ ಜೈನ ಮುನಿಗಳು ಅನೇಕ ಶತಮಾನಗಳ ಹಿಂದೆ ಸ್ಥಾಪಿಸಿದ ಹೆಸರಾಂತ ಜೈನ ಮಠವಿದೆ. ಈ ಮಠದ ಸ್ವಾಮಿಗಳನ್ನು ದೇವೇಂದ್ರ ಕೀರ್ತಿ ಭಟ್ಟಾರಕರೆಂದು ಕರೆಯುತ್ತಾರೆ. ವಿಸ್ತಾರವಾದ ಈ ಮಠದ ಆವರಣಗಳಲ್ಲಿ ಅನೇಕ ಕಟ್ಟಡಗಳಿವೆ. ಅವುಗಳಲ್ಲಿ ಪಾರ್ಶ್ವನಾಥ, ಪದ್ಮಾವತಿ ದೇವಾಲಯ, ಮಠದ ಬಸದಿ, ಬೋಗಾರ ಬಸದಿ ಮತ್ತು ಜಟ್ಟಂಗಿರಾಯ ಬಸದಿ ಮುಖ್ಯವಾದವು. ಪದ್ಮಾವತಿ ಮೂರ್ತಿಯು ಚತುರ್ಭುಜಗಳಿಂದ ಕೂಡಿ ಆಸೀನ ಭಂಗಿಯಲ್ಲಿದೆ. ಇಲ್ಲಿ ಜರುಗುವ ನವರಾತ್ರಿ ಉತ್ಸವವನ್ನು ನೋಡಲು ಬಹಳ ಜನ ಬರುತ್ತಾರೆ. ಪದ್ಮಾವತಿ ಮತ್ತು ಪಾರ್ಶ್ವನಾಥ ದೇವಾಲಯಗಳನ್ನು ಹಳೆಯ ಹೊಯ್ಸಳ ಮತ್ತು ಚಾಳುಕ್ಯರ ಕಾಲದ ದೇವಾಲಯಗಳ ಕೆಲವು ಭಾಗಗಳನ್ನೂ ಬಳಸಿ, ಜೊತೆಗೆ ಕಣಶಿಲೆಯಿಂದ ನಿರ್ಮಿಸಲಾಗಿದೆ. ಇಲ್ಲಿ ಪದ್ಮಾವತಿ ದೇವಾಲಯದ ಪಕ್ಕದಲ್ಲಿ ಬೆಳೆದಿರುವ ಕರಿಲಕ್ಕಿ ಮರವು ಜಿನದತ್ತನ ಕಾಲದ್ದೆಂದೂ ಈ ಮರದ ಬೇರುಗಳು ಪದ್ಮಾವತೀ ಮೂರ್ತಿಯ ಪೀಠದ ಕೆಳಗೆ ಇವೆ ಎಂದೂ ಹೇಳಲಾಗಿದೆ. ಇಲ್ಲಿರುವ ಪಂಚಕೂಟ ಬಸದಿ ಚಾಳುಕ್ಯ ಶೈಲಿಯಲ್ಲಿದ್ದು 10 ಅಥವಾ 11ನೇಯ ಶತಮಾನಕ್ಕೆ ಸೇರಿದ್ದಾಗಿವೆ. ಇದರಲ್ಲಿ ಒಂದೇ ಸಾಲಿನಲ್ಲಿರುವ ಐದು ಗರ್ಭಗೃಹಗಳು ಒಂದೇ ಒಂದು ನವರಂಗ, ಒಂದು ತೆರೆದ ಮುಖಮಂಟಪ ಮತ್ತು ದೇವಾಲಯದ ಸುತ್ತಲೂ ಒಂದು ಪಡಸಾಲೆ ಇವೆ. ಮಹಾದ್ವಾರ ಮತ್ತು ಮುಖ್ಯ ಕಟ್ಟಡದ ನಡುವೆ ಒಂದು ಸಣ್ಣ ಮಂಟಪ ಮತ್ತು ಸುಂದರವಾಗಿ ರಚಿಸಿದ ಏಕಶಿಲೆಯ ಮಾನಸ್ತಂಭವಿದೆ. ಈ ಊರಿಗೆ ಹೊಂದಿದಂತಿರುವ ಬೆಟ್ಟದ ತುದಿಯ ಮೇಲೆ ಬಾಹುಬಲಿ ದೇವನ ಒಂದು ಸಣ್ಣ ಪುರಾತನ ಬಸದಿ ಇದೆ. ಇದು ಕ್ರಿ.ಶ. 898ರಲ್ಲಿ ವಿಕ್ರಮ ಸಾಂತರನು ಕಟ್ಟಿಸಿದನೆಂದು ಇಲ್ಲಿನ ಶಾಸನವು ತಿಳಿಸುತ್ತದೆ. ಈಗ ಈ ಬಸದಿಯನ್ನು ಹೊಸದಾಗಿ ಕಟ್ಟಿಸಿರುತ್ತಾರೆ. ಇಲ್ಲಿ ಮುತ್ತಿನ ಕೆರೆ ಎಂಬ ಒಂದು ಕೆರೆ ಇದೆ. ಜೈನ ಮಠವು ಒಂದು ಪ್ರೌಢಶಾಲೆಯನ್ನು ನಡೆಸುತ್ತದೆ. ಈ ಮಠವು ನಡೆಸುತ್ತಿರುವ ಕುಂದಕುಂದ ವಿದ್ಯಾಪೀಠವು ವಿದ್ಯಾರ್ಥಿಗಳಿಗೆ ವಸತಿ ಊಟ ಸೌಕರ್ಯವನ್ನು ನೀಡಿ ಆಧ್ಯಾತ್ಮಿಕ ಮತ್ತು ನೈತಿಕ ಶಿಕ್ಷಣವನ್ನು ನೀಡುತ್ತದೆ. ಹುಲಿಕಲ್: (ಜನ: 1,113) ನಿಡಗೋಡು ಗ್ರಾಮಕ್ಕೆ ಸೇರಿದ ಹುಲಿಕಲ್ ಹೊಸನಗರದ ನೈಋತ್ಯಕ್ಕೆ 30 ಕಿಮೀ ಮತ್ತು ಶಿವಮೊಗ್ಗಕ್ಕೆ ನೈಋತ್ಯದಲ್ಲಿ 100 ಕಿಮೀ ದೂರದಲ್ಲಿದೆ. ಇದು ಕುಂದಾಪುರ ಹಾಗೂ ಹೊಸನಗರ ತಾಲೂಕುಗಳ ಗಡಿಯಾಗಿದೆ. ಇಲ್ಲಿ ದಟ್ಟವಾದ ಅರಣ್ಯವಿದ್ದು ರಸ್ತೆಯಲ್ಲಿರುವ ಬಹು ಕಡಿದಾದ

ತಿರುವುಗಳ ಮೂಲಕ ಸೂರ್ಯಾಸ್ತದ ಸುಂದರ ದೃಶ್ಯಗಳನ್ನು ನೋಡಬಹುದು. ಇದೊಂದು ಭಾರಿ ಮಳೆ ಬೀಳುವ ಪ್ರದೇಶ. ಆಗುಂಬೆ ಘಾಟಿನಲ್ಲಿ ಹುಟ್ಟುವ ವಾರಾಹಿ ನದಿಯು ಒಂಭತ್ತು ವಿವಿಧ ಘಟ್ಟಗಳಲ್ಲಿ 353 ಮೀಟರ್‌ಗಳಿಂದ ಕೆಳಗೆ ಬೀಳುವ ಕುಂಚಿಕಲ್ ಅಬ್ಬೆ ಜಲಪಾತವು ಹುಲಿಕಲ್ ಗ್ರಾಮದ ನೈಋತ್ಯಕ್ಕೆ ನಾಲ್ಕು ಕಿಮೀ ದೂರದಲ್ಲಿದೆ. ಇಲ್ಲಿ ಲಕ್ಷ್ಮೀನರಸಿಂಹ ಮತ್ತು ಚಂಡಿಕಾಂಬಾ ದೇವಾಲಗಳಿವೆ.

**ಹೊಸಪೇಟೆ :** (ಬಳ್ಳಾರಿ ಜಿ ; ತಾ. ಕೇ ; ಜನ: 90,506) ಪುರಸಭೆ ಇರುವ ಹೊಸಪೇಟೆ ಪಟ್ಟಣವು ಬಳ್ಳಾರಿಯಿಂದ 64 ಕಿಮೀ ಹಾಗೂ ಬೆಂಗಳೂರಿನಿಂದ 336 ಕಿಮೀ ದೂರದಲ್ಲಿದೆ. ವಾಣಿಜ್ಯ, ಕೈಗಾರಿಕೆ ಮತ್ತು ವಿದ್ಯಾಕೇಂದ್ರವೆನಿಸಿರುವ ಈ ಪಟ್ಟಣವನ್ನು ವಿಜಯನಗರದ ಕೃಷ್ಣದೇವರಾಯನು ತನ್ನ ತಾಯಿ ನಾಗಲಾದೇವಿಯ ಸ್ಮರಣಾರ್ಥವಾಗಿ ಕಟ್ಟಿಸಿ ನಾಗಲಾಪುರ ಎಂದು ಹೆಸರಿಟ್ಟಿದ್ದನು. ರಾಜಧಾನಿ ವಿಜಯನಗರಕ್ಕೆ ಪ್ರವೇಶಿಸುವ ತಾಣವಾಗಿ ಆಯಕಟ್ಟಿನ ಸ್ಥಳವಾಗಿದ್ದ ಈ ಪಟ್ಟಣವನ್ನು ಎಲ್ಲ ಕಡೆಯಲ್ಲೂ ಭದ್ರವಾದ ಗೋಡೆ ಮತ್ತು ಬತೇರಿಗಳಿರುವ ಕೋಟೆ ಸುತ್ತುವರಿದಿದೆ. ಈ ಪಟ್ಟಣದ ದಕ್ಷಿಣದಲ್ಲಿ ಸಂಡೂರು ಕಣಿವೆಯನ್ನು ಆವರಿಸಿಕೊಂಡ ಸಮಾನಾಂತರದಲ್ಲಿ ಚಾಚಿರುವ ಬೆಟ್ಟಗಳನ್ನು ಜೋಡಿಸಿ ಕೃಷ್ಣದೇವರಾಯನು ಕಟ್ಟೆಗಳನ್ನು ಕಟ್ಟಿಸಿದನು. ಹಳೆಯ ಪಟ್ಟಣದಲ್ಲಿ ಒಂದು ಉದ್ದವಾದ ಪೇಟೆ ಬೀದಿ ಇದ್ದು, ಅದರ ಕೊನೆಯಲ್ಲಿ ಒಂದು ದೇವಸ್ಥಾನವಿದೆ. ಹಲವಾರು ಗಲ್ಲಿಗಳು ಈ ರಸ್ತೆಯನ್ನು ಬಂದು ಸೇರುತ್ತವೆ. ಈ ಮುಖ್ಯರಸ್ತೆಯ ಪೂರ್ವಕ್ಕೆ ಯಾವುದೋ ಯುದ್ಧದಲ್ಲಿ ಸಾವಿಗೀಡಾದ ಮೂವರು ಮುಸಲ್ಮಾನರ ಗೋರಿಗಳಿವೆ. ಕ್ರಿ. ಶ. 1785-86ರಲ್ಲಿ ಇಲ್ಲಿ ಟಿಪ್ಪುವಿನ ಸುಬೇದಾರನಾಗಿದ್ದ ಗಫಾರ್ ಖಾನನು ಸುಬೇದಾರ್ ಬಾವಿಯನ್ನೂ ಅದಕ್ಕೆ ಹೊಂದಿಕೊಂಡಂತೆ ಮಸೀದಿಯನ್ನೂ ಕಟ್ಟಿಸಿದ್ದನು. ಇಲ್ಲಿಯ ಜಂಬುನಾಥ ದೇವಾಲಯವು ನಗರದ ಪ್ರಮುಖ ದೇವಾಲಯ. ಹತ್ತಿ ಬಟ್ಟೆ ನೇಯ್ಗೆಯು ಇಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಕೈಗಾರಿಕೆ. ಹಿಂದೆ ಬೆಲ್ಲ ತಯಾರಿಕೆಗೂ ಈ ಪಟ್ಟಣ ಹೆಸರುವಾಸಿಯಾಗಿತ್ತು. ಈಗ ಇಲ್ಲಿ ಹಲವು ಎಣ್ಣೆ ಗಿರಣಿಗಳೂ, ಒಂದು ಸಕ್ಕರೆ ಕಾರ್ಖಾನೆಯೂ ಇವೆ. ತುಂಗಭದ್ರಾ ಸ್ಟೀಲ್ ಪ್ರೊಡಕ್ಟ್ಸ್ ಲಿಮಿಟೆಡ್ ಇಲ್ಲಿಯ ಇನ್ನೊಂದು ಕೈಗಾರಿಕಾ ಘಟಕ. ಕಂಪ್ಲಿ (ಜನ: 27,085–1981)ಯು ಹೊಸಪೇಟೆಯಿಂದ 33 ಕಿಮೀ ದೂರದಲ್ಲಿದೆ. 1851ರವರೆಗೂ ಇದು ಹೊಸಪೇಟೆ ತಾಲೂಕಿನ ಮುಖ್ಯಸ್ಥಳವಾಗಿತ್ತು. ಸುಮಾರು 1064ರ ವೇಳೆಗೆ ಕಂಪ್ಲಿಯು ಕಲ್ಯಾಣಿ ಚಾಳುಕ್ಯರ ಎರಡನೇಯ ರಾಜಧಾನಿಯಾಗಿತ್ತು. ಆನೆಗೊಂದಿಯ (ಕುಮಾರರಾಮನ ಸಂತತಿಯ) ನಾಯಕರ ಎರಡನೇಯ ರಾಜಧಾನಿ (ಕಂಪಿಲ) ಇದಾಗಿತ್ತು. ಅಲ್ಲದೆ ವಿಜಯನಗರ ಪಟ್ಟಣದ ಕಾವಲುಗಡಿಯೂ ಆಗಿತ್ತು. ತುಂಗಭದ್ರಾ ನದೀ ತೀರದಲ್ಲಿರುವ ಕಂಪ್ಲಿ ಕೋಟೆಯನ್ನು ಬಳ್ಳಾರಿಯ ಒಬ್ಬ ಪಾಳೆಯಗಾರನು ಕಟ್ಟಿಸಿದನು. ನಾಡಿನ ಮೇಲೆ ಆಕ್ರಮಣ ಮಾಡಿದ ದೆಹಲಿ ಸುಲ್ತಾನನ ವಿರುದ್ಧ ಹೋರಾಡುತ್ತಾ ಪ್ರಸಿದ್ಧ ವೀರ ಕಂಪಿಲರಾಯ ಮತ್ತು ಅವನ ಮಗ ಕುಮಾರರಾಮ ಇದೇ ಸ್ಥಳದಲ್ಲಿ ಆಸು ನೀಗಿದ್ದರು. ಇಲ್ಲಿ ನೇಯ್ಗೆ, ಬೆಲ್ಲದ ತಯಾರಿಕೆ, ಮರದ ಕೆತ್ತನೆ ಮತ್ತು ಆಟಿಕೆಗಳ ಕೈಗಾರಿಕೆಗಳಿವೆ. 1954ರಿಂದ ಸಹಕಾರಿ ಸಕ್ಕರೆ ಕಾರ್ಖಾನೆಯೊಂದು ಇಲ್ಲಿ ಕೆಲಸ ಮಾಡುತ್ತಿದೆ.

**ಹೊಳಲ್ಕೆರೆ :** (ಚಿತ್ರದುರ್ಗ ಜಿ ; ತಾ. ಕೇ ; ಜನ: 9,796) ಹೊಳಲ್ಕೆರೆಯು ಚಿತ್ರದುರ್ಗದಿಂದ 32 ಕಿಮೀ ಬೆಂಗಳೂರಿನಿಂದ 234 ಕಿಮೀ ದೂರದಲ್ಲಿದೆ. ಇಲ್ಲಿ ಪುರಸಭೆಯಿದೆ. ಇಲ್ಲಿ 10ನೇಯ ಶತಮಾನದಲ್ಲಿ ಜೈನರ ಒಂದು ನಿವಾಸ ಸ್ಥಾನ ಇದ್ದಂತೆ ಕಂಡುಬರುತ್ತದೆ. ಈಗಿನ ಪಟ್ಟಣವನ್ನು ದುಮ್ಮಿಯ ದೊಡ್ಡಣ್ಣನಾಯಕನ ಅಧೀನದಲ್ಲಿದ್ದ ಬೋಯ ಗೌಡನು 12ನೇಯ ಶತಮಾನದಲ್ಲಿ ಸ್ಥಾಪಿಸಿದನೆಂದು ತಿಳಿದು ಬರುತ್ತದೆ. ಕಾಲಾನುಕ್ರಮದಲ್ಲಿ ಇದು ಬಸವಾಪಟ್ಟಣದ ಪಾಳೆಯಗಾರರ ಅಧೀನಕ್ಕೆ ಒಳಪಟ್ಟಿತ್ತು. 1475ರಲ್ಲಿ ಚಿತ್ರದುರ್ಗ ಪಾಳೆಯಗಾರರ ವಂಶದ ಮೂಲಪುರುಷನಾದ ತಿಮ್ಮಣ್ಣ ನಾಯಕನು ಹೊಳಲ್ಕೆರೆಯ ನಾಯಕನಾಗಿ ವಿಜಯನಗರದ ಅರಸರಿಂದ ನೇಮಕಗೊಂಡನು. ಹೈದರ್‌ಅಲಿ ತನ್ನ ವಶಕ್ಕೆ ತೆಗೆದುಕೊಳ್ಳುವವರೆಗೂ ಹೊಳಲ್ಕೆರೆ ಚಿತ್ರದುರ್ಗದ ನಾಯಕನ ಅಧೀನದಲ್ಲಿತ್ತು. ಮರಾಠರು ಈ ಪ್ರದೇಶದ ಮೇಲೆ ಪದೇಪದೇ ದಾಳಿ ನಡೆಸಿದಾಗ ಇತರ ಭಾಗಗಳಂತೆ ಇಲ್ಲಿನ ಜನರು ಕಷ್ಟನಷ್ಟಗಳಿಗೆ ಗುರಿಯಾದರು. ಇಲ್ಲಿ ಒಂದು ಬಯಲು ಗಣಪತಿಯ ದೇವಾಲಯವಿದೆ. ಎತ್ತರವಾದ ಪೀಠದ ಮೇಲೆ ಒಂಬತ್ತು ಅಡಿ ಎತ್ತರದ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಗಣಪತಿ ವಿಗ್ರಹದ ಎಡ ಭಾಗಕ್ಕೆ ಉದ್ಭವ ನರಸಿಂಹನ ಮೂರ್ತಿ ಇದೆ. ಇಲ್ಲಿ ಪ್ರಾಚೀನ ಕಾಲದ ವೇಣುಗೋಪಾಲ ದೇವಾಲಯವಲ್ಲದೆ ವೀರಭದ್ರ, ಪಾಂಡುರಂಗ, ಆಂಜನೇಯ ಮತ್ತು ಕನ್ನಿಕಾಪರಮೇಶ್ವರಿ ದೇವಾಲಯಗಳಿವೆ. ಚಿತ್ರಹಳ್ಳಿಯ ಚಿತ್ರಲಿಂಗೇಶ್ವರಿ, ಲೋಕದೊಳಲಿನ ದೊಡ್ಡಹೊಟ್ಟೆರಂಗಸ್ವಾಮಿ, ಕಡೂರಿನ ವೀರಭದ್ರ, ರಾಮಗಿರಿಯ ಕರಿಸಿದ್ದೇಶ್ವರ, ತಾಳ್ಯದ ಆಂಜನೇಯ ದೇವಾಲಯಗಳು ಹೊಳಲ್ಕೆರೆ ತಾಲೂಕಿನ ಕೆಲವು ಪ್ರಮುಖ ದೇವಮಂದಿರಗಳು. ತಾಲೂಕಿನ ಕೆಲವು ಪ್ರಮುಖ ಸ್ಥಳಗಳು ಇಂತಿವೆ. ಹಿರೆ ಎಮ್ಮಿಗನೂರು (ಜನ: 1,338) ಹೊಳಲ್ಕೆರೆಯಿಂದ 23 ಕಿಮೀ ದೂರದಲ್ಲಿದೆ. ಊರಿನ ಪೂರ್ವಕ್ಕೆ ಐದು ಎಕರೆ ಪ್ರದೇಶದಲ್ಲಿ ಬೆಳೆಸಿರುವ ಬಿಲ್ವಪತ್ರ ವನವಿದೆ. ಇಲ್ಲಿ ಕಲ್ಲೇಶ್ವರ ದೇವಾಲಯವು ಇದೆ. ಉಚ್ಚಂಗಿ ಪಾಂಡ್ಯರ ಕಾಲದಲ್ಲಿ ಇದೊಂದು ಮುಖ್ಯ

ಪಟ್ಟಣವಾಗಿದ್ದಿತು. ಹೊರಕೆರೆದೇವರಪುರ: (ಜನ: 2,096) ಹೊಳಲ್ಕೆರೆಯಿಂದ 32 ಕಿಮೀ ದೂರದಲ್ಲಿರುವ ಈ ಊರು ಗಿರಿವನಗಳ ನಡುವೆ ರಾರಾಜಿಸುತ್ತಿದೆ. ಇದು ಜೈನರಾಜ ಉತ್ತುಂಗನು ಆಳುತ್ತಿದ್ದ ನಂದನ ನಗರದ ಬಡಾವಣೆ ಅಥವಾ ಹೊರಕೆರೆ ಎಂದು ಪರಿಗಣಿಸಲಾಗಿತ್ತು. ಇಲ್ಲಿ ಹೊಯ್ಸಳ ಶೈಲಿಯ ಒಂದು ಪ್ರಾಚೀನ ಲಕ್ಷ್ಮೀನರಸಿಂಹ ದೇವಾಲಯವಿದೆ. ದೇವಾಲಯದ ಗರ್ಭಗುಡಿಯ ಬಲಗಡೆ ದೇವರ ಶ್ರೀಪಾದ (ಹೆಜ್ಜೆಯ ಗುರುತು)ವಿದೆ. ಕೃಷ್ಣಾಚಲ ಪರ್ವತದಲ್ಲಿ ಇನ್ನೊಂದು ಶ್ರೀಪಾದವಿದೆ. ಇಲ್ಲಿ ಕೆಲವು ಪ್ರಾಚೀನ ಶಿಲಾಶಾಸನಗಳು ದೊರಕಿವೆ. ಕೃಷ್ಣಾಚಲಬೆಟ್ಟದಲ್ಲಿ 12 ವರ್ಷಕ್ಕೊಮ್ಮೆ ನಡೆಯುವ ಗುಂಡಿನ ಸೇವೆ ಮತ್ತು ಅನ್ನದ ಕೋಟಿ ಸೇವೆ ಮಹೋತ್ಸವ (ಇತ್ತೀಚೆಗೆ 1981ರ ಫೆಬ್ರವರಿಯಲ್ಲಿ ಜರುಗಿತು) ಬಹು ಜನಪ್ರಿಯವಾದುದು.

**ಹೊಳೆನರಸೀಪುರ :** (ಹಾಸನ ಜಿ; ತಾ. ಕೇ; ಜನ: 20,219) ಹೊಳೆನರಸೀಪುರವು ಹೇಮಾವತಿ ನದಿ ದಂಡೆಯ ಮೇಲೆ ಹಾಸನದ ಆಗ್ನೇಯಕ್ಕೆ 32 ಕಿಮೀ, ಬೆಂಗಳೂರಿಗೆ 176 ಕಿಮೀ ದೂರದಲ್ಲಿದೆ. ಈ ಪಟ್ಟಣವು 1168ರಲ್ಲಿ ಇಲ್ಲಿ ಒಂದು ಕೋಟೆಯನ್ನು ಕಟ್ಟಿಸಿದ ನರಸಿಂಹನಾಯಕನ ಅಧೀನದಲ್ಲಿ ಬಹಳ ಕಾಲವಿತ್ತು. ಮೈಸೂರಿನ ದೊಡ್ಡದೇವರಾಜ ಒಡೆಯರು ಇದನ್ನು ಕ್ರಿ. ಶ. 1667ರಲ್ಲಿ ಆಕ್ರಮಿಸಿಕೊಂಡರು. ಇಲ್ಲಿರುವ ಲಕ್ಷ್ಮೀ ನರಸಿಂಹ ದೇವಾಲಯವು ಒಂದು ತ್ರಿಕೂಟಾಚಲ. ಅದರ ನವರಂಗ ಮೂರು ಗರ್ಭಗೃಹಗಳು ಮತ್ತು ದೇವತಾ ಮೂರ್ತಿಗಳು 14ನೇಯ ಶತಮಾನದಲ್ಲಿ ಪುನರ್ರಚಿತವಾಗಿದ್ದು ಹೊಯ್ಸಳ ಶೈಲಿಯಲ್ಲಿದೆ. ಹೊರಗಿನ ನವರಂಗ ಮತ್ತು ದ್ವಾರಪಾಲಕ ವಿಗ್ರಹಗಳು ವಿಜಯನಗರದ ಕಾಲದ ರಚನೆಗಳು. ದೇವಾಲಯದ ಮೂರು ಗೋಪುರಗಳು ಮಹಾದ್ವಾರ ಆಳ್ವಾರರ ಮಂದಿರ ಮತ್ತು ಪಾತಾಳಾಂಕಣ ಪಾಳೆಯಗಾರರ ಕಾಲದ ರಚನೆಗಳು. ಒಳಗಿನ ನವರಂಗದಲ್ಲಿ ವೆಂಕಟಪ್ಪ ನಾಯಕನ ವಿಗ್ರಹವಿದೆ. ಈ ಊರಿನಲ್ಲಿ ಉತ್ತರಾಧಿ ಮಠದ ಒಂದು ಶಾಖೆಯಿದೆ. ಸ್ವಾಮಿ ಸಚ್ಚಿದಾನಂದ ಸರಸ್ವತಿಯವರು 1920ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಿದ ಆಧ್ಯಾತ್ಮ ಪ್ರಕಾಶನ ಕಾರ್ಯಾಲಯವನ್ನು 1935ರಲ್ಲಿ ಇಲ್ಲಿಗೆ ಸ್ಥಳಾಂತರಿಸಿದರು. ಇದು ಪುರಸಭೆಯ ಆಡಳಿತಕ್ಕೆ ಒಳಪಟ್ಟ ಮುಖ್ಯ ವ್ಯಾಪಾರ ಸ್ಥಳವಾಗಿದ್ದು, ಹತ್ತಿ ಬಟ್ಟೆ ತಯಾರಿಕೆಗೆ ಪ್ರಸಿದ್ಧವಾಗಿದೆ. ಇಲ್ಲಿಂದ ಮೂರು ಕಿಮೀ ದೂರದಲ್ಲಿರುವ ಕಡವಿನ ಕಟ್ಟೆಯಲ್ಲಿ ಕಲ್ನಾರಿನ ಶೀಟುಗಳ ಕಾರ್ಖಾನೆಯಿದೆ.



ಕರ್ನಾಟಕ ವಿಶ್ವವಿದ್ಯಾಲಯದ ಆಡಳಿತ ಕಚೇರಿ, ಧಾರವಾಡ



ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ ಕಟ್ಟಡ, ಧಾರವಾಡ



ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು



ಶ್ರೀ ಕೃಷ್ಣರಾಜೇಂದ್ರ ತಾಂತ್ರಿಕ ಸಂಸ್ಥೆ, ಬೆಂಗಳೂರು



ಕೇಂದ್ರೀಯ ಆಹಾರ ತಾಂತ್ರಿಕ ಸಂಶೋಧನಾ ಸಂಸ್ಥೆ, ಮೈಸೂರು
(ಇದು ಹಿಂದೆ ಮೈಸೂರು ಅರಸು ವಂಶದವರ ಚೆಲುವಾಂಬಾ ಅರಮನೆ ಎಂದು ಹೆಸರಾಗಿತ್ತು)



ಕೇಂದ್ರೀಯ ಆಹಾರ ತಾಂತ್ರಿಕ ಸಂಶೋಧನಾ ಸಂಸ್ಥೆಯ ತಾಂತ್ರಿಕ ವಿಭಾಗ, ಮೈಸೂರು



ಬಿ. ವಿ. ಬಿ. ಇಂಜಿನಿಯರಿಂಗ್ ಮತ್ತು ತಾಂತ್ರಿಕ ಕಾಲೇಜು, ಹುಬ್ಬಳ್ಳಿ



ಸೆಂಟ್ರಲ್ ಕಾಲೇಜು, ಬೆಂಗಳೂರು (ಗಾಥಿಕ್ ಶೈಲಿಯ ಕಟ್ಟಡ, ೧೮೬೦)



ರಾಜಾ ಲಖಮನಗೌಡ ವಿಜ್ಞಾನ ಕಾಲೇಜು, ಬೆಳಗಾವಿ



ಲಿಂಗರಾಜ ಕಾಲೇಜು, ಬೆಳಗಾವಿ




ಅರ್. ಬಿ. ಎ. ಎನ್. ಎಂ. ತಾಂತ್ರಿಕ ಶಾಲೆ, ಬೆಂಗಳೂರು
(ಕರ್ನಾಟಕದಲ್ಲೇ ಹಳೆಯದಾದ ತಾಂತ್ರಿಕ ಶಾಲೆ–೧೮೮೭)



ಸಂಸ್ಕೃತ ಕಾಲೇಜು, ಬೆಂಗಳೂರು



ಕರ್ನಾಟಕ ಕಾಲೇಜು, ಧಾರವಾಡ (ಹಿಂದೆ ಇದು ಎಂ. ಅ್ಯಂಡ್ ಎಸ್. ಎಂ. ರೈಲ್ವೇಯ ಕಚೇರಿಯಾಗಿತ್ತು)



ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು




ಫಾ॥ ಮುಲ್ಲರ್ ಅವರ ಧರ್ಮಾರ್ಥ ಸಂಸ್ಥೆ ಆಸ್ಪತ್ರೆ, ಮಂಗಳೂರು



ಜೆ. ಜಿ. ಸಹಕಾರಿ ಆಸ್ಪತ್ರೆ, ಘಟಪ್ರಭಾ, ಬೆಳಗಾವಿ ಜಿಲ್ಲೆ



ಜವಹರಲಾಲ್ ನೆಹರು ವೈದ್ಯಕೀಯ ಕಾಲೇಜಿನ ಮುಖ್ಯ ಕಟ್ಟಡ, ಬೆಳಗಾವಿ



ರಾಮನ್ ಸಂಶೋಧನಾ ಕೇಂದ್ರ, ಬೆಂಗಳೂರು
ಕೆಳಗೆ : ಅದೇ ಸಂಸ್ಥೆಯ ಒಂದು ಸಂಶೋಧನಾ ವಿಭಾಗ



ರಾಜ್ಯ ಕೇಂದ್ರ ಗ್ರಂಥಾಲಯ, ಕಬ್ಬನ್ ಪಾರ್ಕ್, ಬೆಂಗಳೂರು



ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕ ವಸ್ತು ಸಂಗ್ರಹಾಲಯ, ಬೆಂಗಳೂರು



ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯದ ಒಂದು ಒಳನೋಟ, ಬೆಂಗಳೂರು




ಸರ್ಕಾರಿ ವಸ್ತುಸಂಗ್ರಹಾಲಯ, ಬೆಂಗಳೂರು



ಕಲಾಪ್ರದರ್ಶನಾಲಯವನ್ನೊಳಗೊಂಡ ಜಗನ್ಮೋಹನ ಅರಮನೆ, ಮೈಸೂರು



ಬಾದಾಮಿ ಚಲುಕ್ಯರ ಕಾಲದ ಗಜಪೃಷ್ಠಾಕೃತಿಯ ದುರ್ಗದೇವಾಲಯ, ಐಹೊಳೆ



ಚೋಳ–ಗಂಗರ ವಾಸ್ತು ಲಕ್ಷಣಗಳನ್ನೊಳಗೊಂಡ ಕುರುಡುಮಲೆ ದೇವಾಲಯ, ಮುಳಬಾಗಲು ತಾಲೂಕು, ಕೋಲಾರ ಜಿಲ್ಲೆ







ಕರ್ನಾಟಕದ ಏಕಶಿಲೆಯ ಗೋಮಟೇಶ್ವರ ಮೂರ್ತಿಗಳು

೧) ಶ್ರವಣಬೆಳಗೊಳ (ಸು. ಕ್ರಿ. ಶ. ೯೮೨ ; ೫೭ ಅಡಿ ಎತ್ತರ)   ೨) ಕಾರ್ಕಳ (ಕ್ರಿ. ಶ. ೧೪೩೨)   ೩) ಧರ್ಮಸ್ಥಳ (೧೯೮೨)



ಬಾದಾಮಿ ಚಲುಕ್ಯರ ಸುಂದರ ಕಟ್ಟಡವಾದ ವಿರೂಪಾಕ್ಷ ದೇವಾಲಯ, ಪಟ್ಟದಕಲ್ಲು (ಸು. ಕ್ರಿ. ಶ. ೭೪೦)



ಕಲ್ಯಾಣಿ ಚಾಳುಕ್ಯರ ವಾಸ್ತು ಶೈಲಿಯ ಸುಂದರವಾದ ಮಹಾದೇವ ದೇವಾಲಯ, ಇಟಗಿ,
ರಾಯಚೂರು ಜಿಲ್ಲೆ





ಔತ್ತರೇಯ ರೀತಿಯ ರೇಖಾನಾಗರ ಶಿಖರವನ್ನು ಹೊಂದಿರುವ ಗಳಗನಾಥ ದೇವಾಲಯ, ಪಟ್ಟದ ಕಲ್ಲು
ಬಲಗಡೆ : ಬಾದಾಮಿಯ ಮೂರನೇಯ ಗುಹೆಯ ಪರವಾಸುದೇವ (ಕ್ರಿ. ಶ. ೫೭೮)





ಕಲ್ಯಾಣಿ ಚಾಳುಕ್ಯರ ವಾಸ್ತುವಾದ ಲಕ್ಕುಂಡಿಯ ಬ್ರಹ್ಮಜಿನಾಲಯ
ಬಲಗಡೆ: ಗದಗಿನ ಕಲ್ಯಾಣಿ ಚಾಲುಕ್ಯರ ದೇವಾಲಯದಲ್ಲಿರುವ ಭಿನ್ನವಾದ ಸರಸ್ವತೀ ವಿಗ್ರಹ





ಶೃಂಗೇರಿಯ ವಿದ್ಯಾಶಂಕರ ದೇವಾಲಯ (೧೪ನೇಯ ಶತಮಾನ)
ಬಲಗಡೆ : ಶಾರದಾಂಬಾ ವಿಗ್ರಹ, ಶೃಂಗೇರಿ



ಇಳಿಜಾರು ರೀತಿಯ ಕಲ್ಲಿನ ಮೇಲ್ಛಾವಣಿಯನ್ನು ಹೊಂದಿರುವ ಖೇತಪ್ಪಯ್ಯ ನಾರಾಯಣ ದೇವಾಲಯ, ಭಟ್ಕಳ
(೧೬ನೇಯ ಶತಮಾನ) ಉತ್ತರ ಕನ್ನಡ ಜಿಲ್ಲೆ







ಎಡ : ದಂಪತಿ, ಪಟ್ಟದ ಕಲ್ಲು ದೇವಾಲಯ ; ಮಧ್ಯೆ : ಶಿವ, ದುರ್ಗ ದೇವಾಲಯ, ಐಹೊಳೆ (ಎರಡೂ ಬಾದಾಮಿ ಚಲುಕ್ಯರ ಕಾಲದವು) ಮತ್ತು
ಬಲ : ಸಾಲಭಂಜಿಕೆ ಬರೆಯುತ್ತಿರುವುದು, ಜಲಸಂಗವಿ, ಬಿದರೆ ಜಿಲ್ಲೆ (ಕಲ್ಯಾಣಿ ಚಾಳುಕ್ಯರ ಶೈಲಿ)







ಮೇಲೆ : ಮಧುಕೇಶ್ವರ ದೇವಾಲಯ, ಬನವಾಸಿ, ಉತ್ತರ ಕನ್ನಡ ಜಿಲ್ಲೆ
ಮಧ್ಯೆ : ಚೋಳರ ಕಾಲದ ನಾಗೇಶ್ವರ ದೇವಾಲಯ, ಬೇಗೂರು (ಬೆಂಗಳೂರು ಜಿಲ್ಲೆ)
ಕೆಳಗೆ : ಹೊಯ್ಸಳರ ಕಾಲದ್ದಾದ ಕತ್ತಮೇಶ್ವರ ದೇವಾಲಯದ ಮುಂದಿನ ಮಂಟಪ, ಅರಸೀಕೆರೆ



ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಶ್ರೀಮಂತ ಕೆತ್ತನೆ



ವೀರನಾರಾಯಣ ದೇವಾಲಯದ ಪ್ರವೇಶ, ಬೆಳವಾಡಿ, ಚಿಕ್ಕಮಗಳೂರು ಜಿಲ್ಲೆ
(ಎರಡೂ ಹೊಯ್ಸಳರ ಕಾಲದ ಕಟ್ಟಡಗಳು)





ಎಡ : ನಾಟ್ಯ ಸರಸ್ವತಿ, ಹಳೇಬೀಡು, [ಬಲ : ಮಹಿಷ ಮರ್ದಿನಿ
(ವಿಕ್ಟೋರಿಯಾ ಆಲ್ಬರ್ಟ್ ಮ್ಯೂಸಿಯಂ, ಲಂಡನ್) ಎರಡೂ ಹೊಯ್ಸಳ ಶಿಲ್ಪಗಳು





ಎಡ : ವೀರನಾರಾಯಣ ; ಬಲ : ವೇಣುಗೋಪಾಲ (ಎರಡೂ ಹೊಯ್ಸಳರ ಕಾಲದವಾಗಿದ್ದು
ಚಿಕ್ಕಮಗಳೂರು ಜಿಲ್ಲೆಯ ಬೆಳವಾಡಿ ದೇವಾಲಯಕ್ಕೆ ಸೇರಿದವುಗಳಾಗಿವೆ)





ಏಕಶಿಲೆಯ ನರಸಿಂಹ ವಿಗ್ರಹ (ಕ್ರಿ. ಶ. ೧೫೨೮) ಮತ್ತು ವಿಜಯ ವಿಠ್ಠಲ ದೇವಾಲಯದ ಎದುರಿರುವ ಕಲ್ಲಿನ ರಥ (ವಿಜಯನಗರದ ಕೆತ್ತನೆಗೆ ಉತ್ತಮ ಉದಾಹರಣೆಗಳಾಗಿದ್ದು ಹಂಪೆಯಲ್ಲಿವೆ). ಬಲ ಕೆಳಭಾಗದಲ್ಲಿ : ಹಜಾರ ರಾಮದೇವಾಲಯದ ಗೋಡೆಯಲ್ಲಿನ ಉಬ್ಬು ಶಿಲ್ಪಗಳು







ವಿಜಯನಗರ ಕಾಲದ ಚಿತ್ರಕಲೆ : ವಿರೂಪಾಕ್ಷ ದೇವಾಲಯದ ಕಲ್ಯಾಣ ಮಂಟಪದ ಒಳಛಾವಣಿಯಲ್ಲಿರುವ ದೇವಗಾಯಕರು. ಬಲಮೇಲ್ಭಾಗ : ಕೃಷ್ಣ ಮತ್ತು ಕೆಳಗೆ : ಲಕ್ಷ್ಮಣ; ಶಿವಮೊಗ್ಗ ಜಿಲ್ಲೆಯ ಮಹಿಷಿಯಲ್ಲಿನ ಮರದ ಕೆತ್ತನೆಗಳು



ಮಹಾಬಲೇಶ್ವರ ದೇವಾಲಯ, ಗೋಕರ್ಣ



ಲಕ್ಷ್ಮೀನಾರಾಯಣ ಮಹಾಮಾಯಾ ದೇವಾಲಯ, ಅಂಕೋಲಾ



ಮಾರಿಕಾಂಬಾ ದೇವಾಲಯ, ಸಿರಸಿ (ಒಳಗೆ ಅಡಕ ಮಾಡಿರುವುದು ಮಾರಿಕಾಂಬಾ ವಿಗ್ರಹ)
ಈ ಎಲ್ಲಾ ದೇವಾಲಯಗಳು ಉತ್ತರ ಕನ್ನಡ ಜಿಲ್ಲೆಯವು



ಕೃಷ್ಣದೇವಾಲಯ, ಉಡುಪಿ, ದಕ್ಷಿಣ ಕನ್ನಡ ಜಿಲ್ಲೆ. (ಇಲ್ಲಿನ ವಿಗ್ರಹ ಮಧ್ವಾಚಾರ್ಯರ ಪ್ರತಿಷ್ಠಾಪನೆ)



ಶರಣ ಬಸವೇಶ್ವರ ದೇವಾಲಯ, ಕಲ್ಬುರ್ಗಿ



ವಾದಿರಾಜ ಸ್ವಾಮಿಗಳ ಬೃಂದಾವನ, ಸೋಂದಾ, ಉತ್ತರ ಕನ್ನಡ ಜಿಲ್ಲೆ



ಟಿಬೇಟನ ಬೌದ್ಧರ ಸರ್ಯ ಆಶ್ರಮ, ಮುಂಡಗೋಡ ತಾಲೂಕು, ಉತ್ತರ ಕನ್ನಡ ಜಿಲ್ಲೆ



ರಾಯಚೂರಿನ ಕೋಟೆ



ವೀರಶೈವ ಹುಕ್ಕೇರಿ ಮಠ, ಹಾವೇರಿ (ಧಾರವಾಡ ಜಿಲ್ಲೆ)





ಮಧ್ಯೆ : ಮಂಡ್ಯ ಜಿಲ್ಲೆಯ ಮೇಲುಕೋಟೆಯ ಬೆಟ್ಟದ ಮೇಲಿನ ನರಸಿಂಹ ದೇವಾಲಯ ಮತ್ತು
ಕೆಳಗಡೆ : ಚೆಲುವ ನಾರಾಯಣ ದೇವಾಲಯ (ಎರಡೂ ಆಚಾರ್ಯ ರಾಮಾನುಜರಿಗೆ ಸಂಬಂಧಪಟ್ಟವು)



ಶ್ರೀ ಮಂಜುನಾಥ ದೇವಾಲಯ, ಧರ್ಮಸ್ಥಳ, ದಕ್ಷಿಣ ಕನ್ನಡ ಜಿಲ್ಲೆ



ಮೇಲೆ: ರೇಣುಕಾ ಯೆಲ್ಲಮ್ಮ ದೇವಾಲಯ, ಸೌಂದತ್ತಿ ಮತ್ತು
ಕೆಳಗಡೆ : ದುರುದುಂಡೇಶ್ವರ ಮಠ, ಅರಭಾವಿ ; ಎರಡೂ ಬೆಳಗಾವಿ ಜಿಲ್ಲೆಯಲ್ಲಿವೆ




ಹನುಮಂತ ದೇವಾಲಯ, ಕೆಂಗಲ್, ಬೆಂಗಳೂರು ಜಿಲ್ಲೆ ; ಬಲಗಡೆ : ಶ್ರೀ ಮಾಳಸಾಂಬಾ
(ಮೈಲಾರ ದೇವರ ಸತಿ) ದೇವಾಲಯ, ದೇವರಗುಡ್ಡ, ಧಾರವಾಡ ಜಿಲ್ಲೆ




ಶ್ರೀ ಮುಕ್ತಿ ಮಂದಿರ, ಲಕ್ಷ್ಮೇಶ್ವರದ ಬಳಿ, ಧಾರವಾಡ ಜಿಲ್ಲೆ
ಬಲಗಡೆ : ಮಿಲಿಟರಿ ಮಹಾದೇವ ದೇವಾಲಯ, ಬೆಳಗಾವಿ




ಶ್ರೀ ಜಗದ್ಗುರು ಮೂರುಸಾವಿರ ಮಠ, ಹುಬ್ಬಳ್ಳಿ



ಶ್ರೀ ಗುರುನಾಥಾರೂಢರ ಸಮಾಧಿ, ಸಿದ್ಧಾರೂಢ ಮಠ, ಹುಬ್ಬಳ್ಳಿ



ಆಲಸೂರು ಸೋಮೇಶ್ವರ ದೇವಾಲಯದ ದ್ವಾರಗೋಪುರ, ಬೆಂಗಳೂರು
ಬಲಗಡೆ : ನಗರೇಶ್ವರ ದೇವಾಲಯ, ವಿಜಯಪುರ, ಬೆಂಗಳೂರು ಜಿಲ್ಲೆ



ಮಸೀದಿಯೊಂದರ ಒಳ ಅಲಂಕರಣ, ವಿಜಾಪುರ



ಬಹಮನಿ ಸುಲ್ತಾನರ ಗೋರಿಗಳು, ಅಷ್ಟೂರ (ಬಿದರೆ ಬಳಿ)



ಬೃಹತ್ ಗೋಳ ಗುಮ್ಮಟ, ವಿಜಾಪುರ (೧೭ನೇಯ ಶತಮಾನ)



ಮಾಲಿಕ ರೆಹಾನ್ ದರ್ಗಾ, ಸಿರಾ, ತುಮಕೂರು ಜಿಲ್ಲೆ  (ಮೊಘಲರ ಕಟ್ಟಡ)



ಬಂದೇ ನವಾಜ ದರ್ಗಾ, ಕಲ್ಬುರ್ಗಿ



ಇಬ್ರಾಹಿಂ ರೋಜಾ, ವಿಜಾಪುರ (ಕ್ರಿ.ಶ. ೧೬೨೬)



ಜಾಮಿಯಾ ಮಸೀದಿ, ಶ್ರೀ ಕೃಷ್ಣರಾಜೇಂದ್ರ ಮಾರುಕಟ್ಟೆ ಬಳಿ, ಬೆಂಗಳೂರು







(ಗಡಿಯಾರ ಸೂಚಿಯಂತೆ) ಸಂತ ಫಿಲೋಮಿನಾ ಇಗರ್ಜಿ (ಮೈಸೂರು), ಸಂತ ಮಿಲಾಗ್ರಿಸ್ ಇಗರ್ಜಿ (ಮಂಗಳೂರು), ಸಂತ ಮಾರ್ಕ್ಸ್ ಇಗರ್ಜಿ (ಬೆಂಗಳೂರು) ಮತ್ತು ರೋಸಾರಿಯೋ ಕ್ಯಾಥಿಡ್ರಲ್ (ಮಂಗಳೂರು)



ಗುರುದ್ವಾರ, ಬಿದರೆ



ಅಲಸೂರಿನ ಗುರುದ್ವಾರ, ಬೆಂಗಳೂರು





ಮೇಲೆ : ವಿದ್ಯುದ್ದೀಪಾಲಂಕಾರಗೊಂಡ, ಮೈಸೂರು ಅರಮನೆ
ಕೆಳಗೆ : ಹಿಂದಿನ ಮೈಸೂರು ಮಹಾರಾಜರ ಅರಮನೆ, ಬೆಂಗಳೂರು.



ಶ್ರೀರಂಗಪಟ್ಟಣ ದರಿಯಾ ದೌಲತ್ ಅರಮನೆಯ ಒಳನೋಟ



ದರಿಯಾ ದೌಲತ್ ಅರಮನೆಯ ವರ್ಣ ಚಿತ್ರಗಳು



ಕಿತ್ತೂರು ರಾಣಿ ಚೆನ್ನಮ್ಮನ ವಿಗ್ರಹ, ಬೆಳಗಾವಿ



ರಮ್ಯ ಪ್ರಕೃತಿ ಪರಿಸರದ ಮಧ್ಯೆ ಇರುವ ರಾಜಾಸೀಟ್, ಮಡಿಕೇರಿ



ಪುಟ್ಟಣ್ಣ ಚೆಟ್ಟಿ ಪುರಭವನ, ಬೆಂಗಳೂರು




ರಂಗ ಚಟುವಟಿಕೆಗಳ ಕೇಂದ್ರವಾದ ರವೀಂದ್ರ ಕಲಾಕ್ಷೇತ್ರ, ಬೆಂಗಳೂರು



ಬೆಂಗಳೂರಿನ ಲಾಲ್‌ಬಾಗಿನ ಗಾಜಿನ ಮನೆಯ ಮಾದರಿಯಲ್ಲಿ ನಿರ್ಮಿಸಿರುವ
ಗಾಜಿನ ಮನೆ, ಹುಬ್ಬಳ್ಳಿ

# ಕರ್ನಾಟಕದ ಪ್ರವಾಸಿ ಕೇಂದ್ರಗಳು




1. ಶಿವನಸಮುದ್ರ
2. ಶ್ರೀರಂಗಪಟ್ಟಣ
3. ಮೈಸೂರು
4. ಕೃಷ್ಣರಾಜಸಾಗರ
5. ಸೋಮನಾಥಪುರ
6. ತಲಕಾಡು
7. ಮಹದೇಶ್ವರ ಬೆಟ್ಟ
8. ಬಿಳಿಗಿರಿರಂಗನ ಬೆಟ್ಟ
9. ಬಂಡೀಪುರ
10. ಮೇಲುಕೋಟೆ
11. ಮಡಿಕೇರಿ
12. ತಲಕಾವೇರಿ
13. ಶ್ರವಣಬೆಳಗೊಳ
14. ಹಾಸನ
15. ಬೇಲೂರು
16. ಹಳೇಬೀಡು
17. ಧರ್ಮಸ್ಥಳ
18. ಮಂಗಳೂರು
19. ಉಡುಪಿ
20. ಮೂಡಬಿದರೆ
21. ಕಾರ್ಕಳ
22. ವೇಣೂರು
23. ಶೃಂಗೇರಿ
24. ಆಗುಂಬೆ
25. ಭದ್ರಾವತಿ
26. ಜೋಗ್
27. ಕಾರವಾರ
28. ಗೋಕರ್ಣ
29. ವಾಣೀವಿಲಾಸಸಾಗರ
30. ಚಿತ್ರದುರ್ಗ
31. ಧಾರವಾಡ
32. ಸೌಂದತ್ತಿ
33. ಕಿತ್ತೂರು
34. ಬೆಳಗಾವಿ
35. ಗೋಕಾಕ್ ಜಲಪಾತ
36. ಬಾದಾಮಿ
37. ಪಟ್ಟದಕಲ್ಲು
38. ಐಹೊಳೆ
39. ಹಂಪೆ
40. ತುಂಗಭದ್ರಾ ಅಣೆಕಟ್ಟೆ
41. ವಿಜಾಪುರ
42. ಬಳ್ಳಾರಿ
43. ಮಾಸ್ಕಿ
44. ರಾಯಚೂರು
45. ಕಲ್ಬುರ್ಗಿ
46. ಬಸವಕಲ್ಯಾಣ
47. ಬಿದರೆ
48. ನಂದಿ ಬೆಟ್ಟ
49. ಕೋಲಾರ ಚಿನ್ನದ ಗಣಿ
50. ಬೆಂಗಳೂರು

51. ಬಳ್ಳಿಗಾವೆ 52. ಗದಗು 53. ಉಳವಿ
54. ಬನವಾಸಿ 55. ಕೊಲ್ಲೂರ 56. ಗಾಣಗಾಪುರ

# ಆಯ್ದ ಆಧಾರ ಗ್ರಂಥಗಳ ಪಟ್ಟಿ

## ಅಧ್ಯಾಯ 10 : ಸಮಾಜ ಸೇವಾ ಸೌಲಭ್ಯಗಳು

### ಸಾಮಾನ್ಯ ಮಾಹಿತಿ


Diwakar, R. R. : Karnataka Through the Ages

Hayavadana Rao, C. : Mysore Gazetteer, 1927-30

Kamath, S. U. : Karnataka State Gazetteer, Part I (Ed); A Concise History of Karnataka, Bangalore, 1980

Narasimha Murthy, A. V. (Ed) : Archaeology of Karnataka, University of Mysore, Mysore, 1974

Rice, B. L. : Mysore, A Gazetteer

District Gazetteers of Karnataka

Report on the Administration of Mysore from 1866 to 1961-69

The Mysore Blue Book Journal (for various years), Bangalore


### ಶಿಕ್ಷಣ


Devegowda, A. C. : Handbook of Administration of Education in Mysore, 1975

Devegowda, A. C. and S. M. Hunsyal : History of Education in Hyderabad Karnataka (Upto 1st Nov. 1956), Bangalore, 1973

Devegowda, A. C. and V. A. Desai : History of Education in Bombay Karnataka Districts (Upto 1st Nov. 1956), Bangalore, 1973

Devegowda, A. C. and others : History of Education in Madras Karnataka Districts (Upto 1st Nov. 1956), Bangalore, 1977

Devegowda, A. C. and D. N. Krishnaiah : History of Education in Coorg (Upto 1st Nov. 1956), Bangalore, 1973

Devegowda. A. C. and T. R. Parameswaran : Progress of Education in Mysore State from 1956-57 to 1968-69, Bangalore, 1971

Gururaja Rao and Nagaraja Rao, B. S. : The Almanac for Mysore and Who is Who, Bangalore, 1958

Gururajachar, S. : Some Aspects of Economic and Social Life in Karnataka, Mysore, 1974

ಹಾವನೂರು, ಶ್ರೀನಿವಾಸ : ಕನ್ನಡ ಸಾಹಿತ್ಯ ಅರುಣೋದಯ, ಮೈಸೂರು, 1974

Jevoor, S. V. : A History of Education in Karnataka, Mysore, 1966

ಶಿಕ್ಷಣ ಸಮೀಕ್ಷೆ, 1970

Mukherji and others : Education of Teachers in India, Vol. II, Delhi, 1968

ಸದಾಶಿವಯ್ಯ, ಕೆ. ಎಸ್. : ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ಸಂಸ್ಥೆಗಳು, ಮೈಸೂರು, 1970

A Handbook on Education 1964-65, Department of Public Instruction, Bangalore

Annual Reports of Departments of Education, Technical Education, Vocational Education, Mining Education, Adult Education, Employment and Training, etc.

Draft Five Year Plans (First to Sixth) and Annual Plans, Planning Department, Bangalore

ಮೈಸೂರು ರಾಜ್ಯ, ವಾರ್ತಾ ಇಲಾಖೆ, ಮೈಸೂರು ಸರಕಾರ, ಬೆಂಗಳೂರು, 1956

Mysore (1971-72), An Economic Review, Bureau of Economics and Statistics, Bangalore, 1972

Quinquennium Reports of the Department of Education for the Periods 1911 to 1916, 1932 to 1944, 1945 to 1951 and 1952 to 1956

Replies from various Departments as well as private agencies

Report of the Committee for Educational Reforms in Mysore, 1953, Government of Karnataka

Souvenir on All-India Educational Conference-XXVI Session, Mysore, 1948

Statistical Appendix Together with a Supplement to the District Mannual for South Kanara, 1938

## ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ ಸೇವೆಗಳು

Madhava Rao, V. P. : Report on Plague Operations in the Mysore State Excluding the Civil and Military Station of Bangalore. Bangalore, 1899

Administration Report of St. John's Medical College, 1981, Bangalore

Amrita, a Magazine of Taranath Government Ayurvedic College, Bellary, Vol. I, 1979-80

Annual Reports of the Working of the Registration of Births and Deaths Act, 1969, published in 1973 and 1974 by the Chief Registrar of Births and Deaths of the Bureau of Economics and Statistics, Bangalore

Annual Report of National Institute of Virology, Pune, 1980

Aspects of Biology in Karnataka, published by the University of Agricultural Sciences, Bangalore

ಬೆಳ್ಳಿ ನುಡಿ, ಆಯುರ್ವೇದ ಮಹಾವಿದ್ಯಾಲಯ, ಹುಬ್ಬಳ್ಳಿ, 1981

Cancer Prevention Contract, A Research Module, 1981, Bangalore

Cancer Registry, A Note, 1981, Bangalore

Commissioning of Cauvery Water Supply and Sewerage, published by the Bangalore Water Supply and Sewerage Board 1982, Bangalore

General Report of Kidwai Memorial Institute of Oncology, December, 1979, Bangalore

General Report of Karnataka Cancer Society, 1968-1981, Bangalore

Handbook of the National Institute of Virology, 1978, Pune

Handbook on Princess Krishnarajammanni Tuberculosis Hospital, 1979, Mysore

Health and Comfort, Centenary Souvenir of Father Muller's Charitable Institutions, 1880-1980, Mangalore

Health and Medical Institutions (Allopathy) in Karnataka State, published by the Director of Health and Family Planning Services, 1976, Bangalore

Karnataka State Legislators' Conference on Problems of Population and Development, February, 1982, Bangalore

Medical and Electronic Systems published by Electronics and Radar Development, 1969, Bangalore

NIMHANS at a Glance, 1982, Bangalore

Performance Budget of Health and Family Welfare Department, 1979-80 and 1980-81, Bangalore

Report on Sample Registration System in Karnataka 1975, 1976 and 1977 published by the Bureau of Economics and Statistics, Bangalore

Report on the Plague Operations in the Mysore State during 1905-06 to 1917-18 with the Government Review thereon, Bangalore

Report of the Family Planning Association of India, 1981, Bangalore

Report on Wastage and Stagnation in Medical Education of Indian Systems of Medicine, published by Planning Department of the Government of Karnataka, 1983, Bangalore

Seventeenth Annual Report of the Sindhi Youth Association, 1981, Bangalore

Silver Jubilee Commemoration Volume of NIMHANS, 1980, Bangalore

Silver Jubilee Year of the Family Planning Association of India, 1980, Bangalore

Statisiical Brochure of Karnataka Urban Water Supply Board, October, 1982.

Year Book for 1977-78, 1978-79 and 1980-81 of the Health and Family Welfare Services in Karnataka, 1982, Bangalore

## ಕರ್ನಾಟಕ ವೈಜ್ಞಾನಿಕ ಪರಂಪರೆ

Anantha Rangachar : Karnataka Vastushilpa, Mysore, 1972

Gururaja Rao, B. K. : Megalithic Culture in South India, Mysore, 1972

ಕರ್ನಾಟಕದಲ್ಲಿ ಶಿಲಾಯುಗದ ಸಂಸ್ಕೃತಿಗಳು, ಮೈಸೂರು, 1970

ಗೋಪಾಲ್, ಬಿ. ಆರ್. : ಕರ್ನಾಟಕದಲ್ಲಿ ನವಶಿಲಾಯುಗ, ಧಾರವಾಡ, 1971

Nagaraja Rao, M. S. : The Stone Age Hill Dwellers of Tekkalakota; Proto-historic Cultures of the Tungabhadra Valley, Dharwad, 1971

Saletore, B. A. : Karnataka's Trans-oceanic Contacts, Dharwad, 1959

Subbaiah, K. K. : Archaeology of Coorg with Special Reference to Megaliths, Pune, 1972

Someshwara : Manasollasa (Samskrita)

## ಸಾರ್ವಜನಿಕ ಗ್ರಂಥಾಲಯಗಳು

Bagari, N. D. : Public Library Movement in Karnataka, Bangalore, 1979

Deshpande, K. S. : "Library Movement in the Karnataka State" in Eleventh IASLIC Conference Souvenir, Dharwad, 1977

ಗುಂಜಾಳ, ಎಸ್. ಆರ್. : ಮೈಸೂರು ರಾಜ್ಯದ ಗ್ರಂಥ ಭಂಡಾರಗಳು, ಮೈಸೂರು

Kirmani : History of Tipu Sultan, Tr. from Persian by W. Miles, 2nd Edn. Calcutta, Susil Gupta (India), 1958

ನಾಗಯ್ಯ, ಹೀ. ಮ. : ಪುಸ್ತಕ ಭಾಗ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1972

ಕನ್ನಡ ವಿಶ್ವಕೋಶ, ಸಂ. 6, 1972

ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ, ಮೈಸೂರು ವಿಶ್ವವಿದ್ಯಾಲಯ, 1979

## ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿಗಳು

Annual Reports of the Department of Religious and Charitable Endowments, Wakf Board, etc., Bangalore

Muzrai Manual, Bangalore, 1934

Replies from the Department of Religious and Charitable Endowments, Samskrita and Veda Pathashalas, Wakf Board, etc

The Bombay Public Trusts Act, 1950

The Hyderabad Religious and Endowment Act, 1939

## ಪಾನ ನಿರೋಧ

Annual Reports of the Department of Excise, Bangalore

Replies from the Department of Excise, Temperance Board, Deena Seva Sangha, etc., Bangalore

Souvenir of the Prohibition Week October 1959 and December, 1961, Department of Publicity and Information, Bangalore

The Prohibition Act, 1967

## ಕಾರ್ಮಿಕ ಕಲ್ಯಾಣ

Abdul Aziz, Trade Unions and Industrial Peace in Karnataka, Bangalore, 1978

Indian Labour Year Book, First Copy, Simla, 1946, Labour Bureau Trade Union List, 1980, Labour Department, Bangalore

ಕಾಮತ್, ಸೂರ್ಯನಾಥ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಮೂರು ಸಂಪುಟಗಳು

## ಹಿಂದುಳಿದ ವರ್ಗದವರ ಆಂದೋಲನ

Backward Class Movement in Karnataka, Welfare of Scheduled Castes and Scheduled Tribes, etc.

ಕಮಲಾಕ್ಷ, ಪಿ., ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ, ಮಂಗಳೂರು, 1958

Kuppuswamy, B. : The Backward Class Movement in Karnataka, Bangalore, 1978

Marulasiddaiah, H. M. : Directory of Social Service and Development Agencies in Bangalore, Bangalore, 1982

Nirmal Kumar Bose : Tribal Life in India, New Delhi, 1971

Economic Development of Scheduled Castes and Scheduled Tribes in Karnataka in the Sixth Five Year Plan, 1978-1983, published by the Karnataka Scheduled Castes and Tribes Development Corporation, Bangalore

Census of India, 1971 Part II (i) Special Tables on Scheduled Castes and Scheduled Tribes

Departmental Manual of Social Welfare Department, Vols. I, II and III

Muzrai Manual, Bangalore, 1934

Drafts of III, IV, V and VI Five Year Plans

The Mysore Backward Class Committee Report

Welfare of Backward Classes, Government of India, 1963

# ಅಧ್ಯಾಯ 11 ಸಂಸ್ಕೃತಿ

## ಸಾಮಾನ್ಯ ಮಾಹಿತಿ

ಚಿದಾನಂದ ಮೂರ್ತಿ, ಎಂ. : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, 1966

Diwakar, R. R. : (Ed) Karnataka Through the Ages

ಹಾವನೂರು, ಶ್ರೀನಿವಾಸ : ಹೊಸಗನ್ನಡ ಅರುಣೋದಯ, ಮೈಸೂರು, 1974

ಕೃಷ್ಣರಾವ್, ಎಂ. ವಿ. ಮತ್ತು ಕೇಶವ ಭಟ್ಟ, ಎಂ. : ಕರ್ನಾಟಕ ಇತಿಹಾಸ ದರ್ಶನ, ಬೆಂಗಳೂರು, 1970

ನಾಗರಾಜಯ್ಯ, ಹಂ. ಪ. : ದ್ರಾವಿಡ ಭಾಷಾ ವಿಜ್ಞಾನ, ಬೆಂಗಳೂರು

ನರಸಿಂಹಾಚಾರ್, ಪು. ತಿ. (ಭಾಷಾಂತರ) : ಸಮಕಾಲೀನ ಭಾರತೀಯ ಸಾಹಿತ್ಯ, ನವದೆಹಲಿ, 1968

ನರಸಿಂಹಾಚಾರ್, ಆರ್. : ಕರ್ನಾಟಕ ಕವಿ ಚರಿತ್ರೆ, ಸಂಪುಟ I, II, III, ಬೆಂಗಳೂರು, 1972, 1973, 1974.

ಶಿವರುದ್ರಪ್ಪ, ಜಿ. ಎಸ್. (ಸಂ.) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಐದು ಸಂಪುಟಗಳು, ಬೆಂಗಳೂರು, 1974ರಿಂದ

ತಿಪ್ಪೇರುದ್ರಸ್ವಾಮಿ, ಎಚ್. : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, 1968

ಚಿನ್ನದ ಬೆಳಸು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1970

ಕೌಸ್ತುಭ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ರಾಜ್ಯ ಹಾಗೂ ಕೇಂದ್ರ ಸರಕಾರದ ವಿವಿಧ ಇಲಾಖೆಗಳಿಂದ ಹಾಗೂ ಖಾಸಗೀ ಮೂಲಗಳಿಂದ ತರಿಸಿಕೊಂಡ ಮಾಹಿತಿಗಳು

## ಸಾಂಸ್ಕೃತಿಕ ಪರಂಪರೆ: ಒಂದು ಸಂಕ್ಷಿಪ್ತ ನೋಟ

Desai, P. B. and others : A History of Karnataka

Hukkerikar, R. S. and others : Karnataka Darshana (R. R. Diwakar Felicitation Vol.) Bombay, 1955

ಜೋಶಿ, ಶಂ. ಬಾ. : ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಧಾರವಾಡ, 1966

ಕಾಮತ್, ಸೂರ್ಯನಾಥ : ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಬೆಂಗಳೂರು, 1973

ಮುತ್ತಣ್ಣ, ಐ. ಎಂ. : ಹತ್ತೊಂಬತ್ತನೇಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಮೈಸೂರು, 1969

ನಂದೀಮಠ, ಶೀ. ಚ. : ಕನ್ನಡ ನಾಡಿನ ಚರಿತ್ರೆ, ಭಾಗ II, ಕರ್ನಾಟಕದ ಧರ್ಮಗಳು, ಬೆಂಗಳೂರು, 1949

ನಿರಂಜನ (ಸಂ). : ಜ್ಞಾನ ಗಂಗೋತ್ರಿ, ಮನುಕುಲದ ಕತೆ, ಬೆಂಗಳೂರು, 1970

ಪಲುಮತಿ ಶಾಮರಾವ್ : ವಿಜಯನಗರದ ಕಲೆ ಮತ್ತು ಸಾಹಿತ್ಯ, ಬೆಂಗಳೂರು, 1956

ರಾಜಗೋಪಾಲ್ ಟಿ. ಎಸ್. : ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕೊಡುಗೆ, ಬೆಂಗಳೂರು, 1977

ಸಾಲೆತೊರೆ, ಬಿ. ಎ. ಮತ್ತು ದೇಸಾಯಿ, ಪಿ. ಬಿ. : ಕನ್ನಡ ನಾಡಿನ ಚರಿತ್ರೆ, ಬೆಂಗಳೂರು, 1964

ಸೀತಾರಾಮಯ್ಯ, ವಿ. : ಕಲಾನುಭವ, ಬೆಂಗಳೂರು, 1976

Seetharamaiah, M V. : Popular Culture in Karnataka, Bangalore, 1937

ಸುಂಕದ, ಆರ್. ಎಸ್. : ಕನ್ನಡ ಸಾಹಿತ್ಯ ಸಂಸ್ಕೃತಿ ದರ್ಶನ, ಧಾರವಾಡ, 1976

## ಕನ್ನಡ ಸಾಹಿತ್ಯ

ಧಾರವಾಡಕರ, ರಾ. ಯ. : ಕನ್ನಡ ಭಾಷಾ ಶಾಸ್ತ್ರ, ಧಾರವಾಡ, 1969

Keshiraja : Shabdamanidarpanam (Ed. by F. Kittel)

Chidananda Murthy, M. : "Manipravalam in Kannada" in Proceedings of the 3rd All India Conference of Dravidian Linguistics, Dharwad, 1976

Gai, G. S. : Historical Grammar of Old Kannada, Deccan College, Poona, 1946

Kedilaya, S. : Foreign Loan-words in Kannada, Madras University, Madras

Narasimhaiah, A. N. : A Grammar of the Oldest Kanarese Inscriptions, University of Mysore, Mysore, 1941

Rice, B. L. : Epigraphia Carnatica, Vol. 2

Row, Adacki Sooba : Selection of Stories and Revenue Papers in Karnataka Language, 1864, (Reprinted in the Annals of Oriental Research of the University of Madras, Vol. XVI. 1959-60 by M. M. Bhat)
ಮುಗಳಿ, ರಂ. ಶ್ರೀ. : ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು, 1968

## ಕರ್ನಾಟಕದ ಜಾನಪದ

ಚನ್ನಬಸಪ್ಪ, ಗೊ. ರು. : ಕರ್ನಾಟಕ ಜಾನಪದ ಕಲೆಗಳು, ಬೆಂಗಳೂರು, 1969
Handoo, Jawaharlal : Current Trends in Folklore, Mysore
ಪರಮಶಿವಯ್ಯ, ಜಿ. ಶಂ. : ಕರ್ನಾಟಕ ಜನಪದ ಸಮೀಕ್ಷೆ, ಬೆಂಗಳೂರು, 1983

## ಕರ್ನಾಟಕದಲ್ಲಿ ಪತ್ರಿಕೋದ್ಯಮ

ಬಲ್ಲಾಳ, ನಾರಾಯಣ ಎನ್. : "ಕನ್ನಡ ಪತ್ರಿಕೋದ್ಯಮ" ಕನ್ನಡ ನುಡಿ, ಬೆಳ್ಳಿ ಸಂಚಿಕೆ
Desai, S. K. : "Literary Magazines in Kannada", Indian Writing Today, 3-4
ಧಾರವಾಡಕರ, ರಾ. ಯ. : ಪತ್ರಿಕಾ ವ್ಯವಸಾಯ, ಧಾರವಾಡ, 1948
ಹಾವನೂರು, ಶ್ರೀನಿವಾಸ : ಹೊಸಗನ್ನಡ ಅರಣೋದಯ, ಮೈಸೂರು, 1974
ಹುರಳಿ ಭೀಮರಾವ್ : ದಕ್ಷಿಣ ಕನ್ನಡದಲ್ಲಿ ಪತ್ರಿಕೋದ್ಯಮ ಬೆಳವಣಿಗೆ, ತೆಂಕನಾಡು, 1947
ಕೃಷ್ಣಮೂರ್ತಿ ನಾಡಿಗ್ : ಭಾರತೀಯ ಪತ್ರಿಕೋದ್ಯಮ, ಮೈಸೂರು, 1968
ಮುತ್ತಣ್ಣ, ಐ. ಮಾ. : ಹತ್ತೊಂಬತ್ತನೇಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಮೈಸೂರು, 1969
Natarajan, J. : History of Indian Journalism, Delhi, 1953
ಪಾಟೀಲ್, ಎಸ್. ವಿ. : "ವಾರ್ತಾಪತ್ರಿಕೆಗಳ ಪಾತ್ರ", ಚಿನ್ನದ ಬೆಳಸು
Sen, S. P. (Ed) : Indian Press, Calcutta, 1967
"ಕನ್ನಡ ಪತ್ರಿಕೆಗಳ ಕೈಪಿಡಿ", ಜಯಕರ್ನಾಟಕ, 8–8

## ಕೊಡವ ಭಾಷೆ ಮತ್ತು ಸಾಹಿತ್ಯ

Balakrishnan, P. : Phonology of Kodagu with Vocabulary
Ganapathy, B. D. : Kodavas, Mysore, 1980
Graeter : Kodava Folk Songs (translation)
ಕೃಷ್ಣಯ್ಯ, ಡಿ. ಎನ್. : ಕೊಡಗಿನ ಇತಿಹಾಸ, ಮೈಸೂರು, 1974
ಲಕ್ಷ್ಮೀನಾರಾಯಣ ಆರೋರ, ಎಸ್. : ಅನ್ಯ ಭಾಷೆಗಳ ಮೇಲೆ ಕನ್ನಡದ ಪ್ರಭಾವ, ಬೆಂಗಳೂರು, 1978
ಮುತ್ತಣ್ಣ, ಐ. ಮಾ. : ಹತ್ತೊಂಬತ್ತನೇಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಮೈಸೂರು, 1969
ಮುತ್ತಣ್ಣ, ಕೆ. ಪಿ., ಜಗತ್ತಿಗೊಂದೇ ಕೊಡಗು, ಬೆಂಗಳೂರು, 169
ನಡಿಕೇರಿಯಂಡ ಚಿಣ್ಣಪ್ಪ : ಪಟ್ಟೋಲೆ ಪಳಮೆ, ಮೈಸೂರು, 1924

## ತುಳು ಭಾಷೆ ಮತ್ತು ಸಾಹಿತ್ಯ

Gururaja Bhat, P. : Studies in Tuluva History and Culture, Manipal, 1975 ; ದಕ್ಷಿಣ ಕನ್ನಡದ ತುಳುವರೂ ತುಳುವ ಸಂಸ್ಕೃತಿಯೂ, ಬೆಂಗಳೂರು, 1977

ಲಕ್ಷ್ಮೀನಾರಾಯಣ ಆರೋರ, ಎಸ್. : ಅನ್ಯ ಭಾಷೆಗಳ ಮೇಲೆ ಕನ್ನಡದ ಪ್ರಭಾವ, ಬೆಂಗಳೂರು, 1969

ರಘುಪತಿಭಟ್, ಕೆಮ್ತೂರು : ತುಳುನಾಡಿನ ಸ್ಥಳ ನಾಮಗಳು, ಬೆಂಗಳೂರು, 1979

ಸಂಗಮೇಶ ಸವದತ್ತಿಮಠ, ದ್ರಾವಿಡ ಭಾಷೆಗಳು, ಧಾರವಾಡ, 1974

South Kanara District Gazetteer, 1973

## ಕರ್ನಾಟಕದಲ್ಲಿ ಕೊಂಕಣಿ

ಬೇಂದ್ರೆ, ದ. ರಾ. : "ಕೊಂಕಣಿಯ ಬಗ್ಗೆ", ಜೀವನ 2–1

ಭಟ್ಟ, ಮರಿಯಪ್ಪ, ಎಂ. : "ದ್ರಾವಿಡ ಭಾಷಾ ಅಧ್ಯಯನ" ಪ್ರಬುದ್ಧ ಕರ್ನಾಟಕ, 43–4

ಐತಾಳ, ಕೆ. ಶಿವರಾಮ : "ಕೊಂಕಣಿ-ಕನ್ನಡ", ಪ್ರಜಾವಾಣಿ, 18-8-63

ನಾಗರಾಜಯ್ಯ, ಹಂ. ಪ. : ಆರು ದ್ರಾವಿಡ ಭಾಷೆಗಳು, ಬೆಂಗಳೂರು

ಪೈ, ಎಲ್. ವಿ. : ಕನ್ನಡ ಕೊಂಕಣಿ ಜಾನಪದ ಸಾಹಿತ್ಯ, ಧಾರವಾಡ, 1973

Pereira, Jose : "Konkani'. a Language, A History of the Konkani, Dharwad

## ಕರ್ನಾಟಕದಲ್ಲಿ ಮಲಯಾಳಂ

Gundert, Herman, Malayalam Bhasha Vyakaranam, 1868 ; Malayalam — English Dictionary, 1872

ಲಕ್ಷ್ಮೀನಾರಾಯಣ ಆರೋರ, ಎಸ್. : ಅನ್ಯ ಭಾಷೆಗಳ ಮೇಲೆ ಕನ್ನಡದ ಪ್ರಭಾವ, ಬೆಂಗಳೂರು, 1978

ಸಂಗಮೇಶ್ವರ ಸವದತ್ತಿಮಠ, ದ್ರಾವಿಡ ಭಾಷೆಗಳು, ಧಾರವಾಡ, 1974

ಸಿದ್ದಯ್ಯ ಪುರಾಣಿಕ (ಸಂ.), ಮಣಿಹ, ಬೆಂಗಳೂರು, 1982

ಉಪಾಧ್ಯಾಯ, ಯು. ಪಿ. ಮತ್ತು ಸುಶೀಲಾ ಪಿ. ಉಪಾಧ್ಯಾಯ : ಮಲೆಯಾಳ ಭಾಷೆ ಮತ್ತು ಸಾಹಿತ್ಯ, ಮೈಸೂರು, 1973

## ತೆಲುಗು ಮತ್ತು ಕರ್ನಾಟಕ

ಭೀಮಸೇನರಾವ್, ಡಿ. ಕೆ. : ಹದಿಮೂರನೇಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ, 1942

ಕೃಷ್ಣರಾವ್, ಕೆ. ಎಂ. : ಕನ್ನಡ-ತೆಲುಗು ಸಂಬಂಧಸಾಮ್ಯ, ಬೆಂಗಳೂರು, 1977

ಪುಲುಮತಿ ಶಾಮರಾವ್ : ವಿಜಯನಗರ ಕಲೆ ಮತ್ತು ಸಾಹಿತ್ಯ, ಬೆಂಗಳೂರು, 1956

Rama Rao, M. : Karnataka-Andhra Relations, Dharwad, 1974

ಸಂಗಮೇಶ್ವರ ಸವದತ್ತಿಮಠ, ದ್ರಾವಿಡ ಭಾಷೆಗಳು, ಧಾರವಾಡ, 1974

## ಕರ್ನಾಟಕದಲ್ಲಿ ಉರ್ದು

Nasiruddin Hashmi : Dakhni (Khadeem Urdu), Delhi, 1963

Sherwani, H. K. and Joshi, P. M. : The Early History of Medieval Deccan, Vol. II, Hyderabad, 1974

Sinha, S. K. : Medieval History of the Deccan, Vol. II, Hyderabad, 1968

## ಕರ್ನಾಟಕದಲ್ಲಿ ಹಿಂದಿ

Saxena, Baburam : Dakhni Hindi (Hindi), Allahabad, 1952

Sayed Mohammad : The Value of Dakkhni Language and Literature, Mysore, 1968

Sharma, Shri Ram : Dakhni Hindika Sahitya (Hindi), Hyderabad, 1972

Sherwani, H. K. and Joshi : The Early History of Medieval Deccan, Vol. II, Hyderabad, 1974

Bidar District Gazetteer, 1977

## ಕರ್ನಾಟಕದಲ್ಲಿ ಮರಾಠಿ ಭಾಷೆ

ಅವಳೀಕರ್, ಎ. : ಕರ್ನಾಟಕ ಮತ್ತು ಮರಾಠಿ ಸಾಹಿತ್ಯ, ಧಾರವಾಡ, 1977, ಮರಾಠಿ, ವಾಙ್ಮಯ ದರ್ಶನ, ಧಾರವಾಡ, 1952

ಬೇಂದ್ರೆ, ದ. ರಾ. : ಮಹಾರಾಷ್ಟ್ರ ಸಾಹಿತ್ಯ, ಮೈಸೂರು, 1959

ಭೀಮಸೇನರಾವ್, ಡಿ. ಕೆ. : ಹರಿಮೂರನೇಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ, 1942

Gokak, V. K. : (Ed), Literatures in Modern Languages, Delhi, 1957

## ಪ್ರಾಕೃತ ಭಾಷೆಗಳು ಮತ್ತು ಕರ್ನಾಟಕ

Bhujabali Shastri, K. : Kannada Prantiya Tadapatriya Granthasuchi, Varanasi, 1948

Gai, G. S. : "Studies in Prakrit Inscriptions", Proceedings of Seminar in Prakrit Studies, Pune, 1970

Jain, J. C. : Prakrit Sahityaka Ithihasa, Varanasi, 1966

Katre, S. M. : Prakrit Languages and their Contributions to Indian Culture, Bombay, 1945

Khadabadi, B. K. : Vaddaradhane—A Study, Dharwad, 1979

Koppa, S. K. : "Karnatakadalliya Prakrita Bhasha Shasanagalu", Karnataka Bharati, Vol. XI-I., K. "Influence of Middle Indo-Aryan Literature on Kannada Literature", Proceedings of Seminar on Prakrit Studies (1973), Ahmedabad, 1978; "Jaina Sauraseni Literature and Karnataka", Jain Antiquary, Vol. XXVIII, 1-2; "On the Paisachi Origin of Kannada Language", Subodhi, Vol. VI-1-2; "Kannada Words in Desi Stocks", Journal of Karnatak University (Hm) Vol. VII

## ಕರ್ನಾಟಕದಲ್ಲಿ ಸಂಸ್ಕೃತ

ಅನಂತರಂಗಾಚಾರ್, ಎನ್. : "ಆಧುನಿಕ ಸಂಸ್ಕೃತ ಸಾಹಿತ್ಯ ಚರಿತ್ರೆ", ಸಾಹಿತ್ಯಭಾರತೀ
ಗಲಗಲಿ, ಕೇಶವಶರ್ಮ, : "ಕವಿರಾಜಶೇಖರನು ಕನ್ನಡಿಗನಲ್ಲವೆ?" ಜಯಕರ್ನಾಟಕ 1-2
ಕಲ್ಯಾಣಮ್ಮ, ಆರ್. : "ಸಂಸ್ಕೃತ ಕವಯಿತ್ರಿಯರು", ಸಮರ್ಪಣೆ
ಕೃಷ್ಣಮೂರ್ತಿ, ಕೆ. : "ಸಂಸ್ಕೃತ ಸಾಹಿತ್ಯ ವಾಹಿನೀ" ಜೀವನ, 11-4
ಮರುಳಸಿದ್ದಯ್ಯ, ಜಿ. : "ಕನ್ನಡ ಬೊಕ್ಕಸಕ್ಕೆ ಸಂಸ್ಕೃತದ ಕೊಡುಗೆ" ಚಿನ್ನದ ಬೆಳಸು
ನಂಜುಂಡಶಾಸ್ತ್ರಿ, ಎಂ. : "ಕನ್ನಡದಲ್ಲಿ ಕಾಳಿದಾಸನ ಕೃತಿಗಳು", ಜೀವನ 21-4
ನರಸಿಂಹಮೂರ್ತಿ, ಕೆ. : "ಸಂಸ್ಕೃತ ಸಾಹಿತ್ಯವೂ ಗದ್ಯಕಾವ್ಯಗಳೂ", ಸುಬೋಧ, 9-3
ರಾಮಾಚಾರಿ, ಸಿ. : "ಸಂಸ್ಕೃತ ಗದ್ಯಕಲೆಯ ಸಂಕ್ಷಿಪ್ತ ಇತಿಹಾಸ", ಪ್ರಬುದ್ಧ ಕರ್ನಾಟಕ, 40-4
ರಿತ್ತಿ, ಶ್ರೀನಿವಾಸ, : "ಕರ್ನಾಟಕ ಸಂಸ್ಕೃತ ಕವಯಿತ್ರಿಯರು", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, 42-1
ಶೇಷಾದ್ರಿ, ಎಂ. : "ಕರ್ನಾಟಕ ಶಿಲ್ಪದಲ್ಲಿ ಪಂಚತಂತ್ರದ ಕತೆಗಳು", ಸವಿನೆನಪು
ಶಿವಮೂರ್ತಿ ಶಾಸ್ತ್ರಿ, ಬಿ. : "ಕಾಳಿದಾಸ ಮತ್ತು ಕರ್ನಾಟಕ", ಶರಣ ಸಾಹಿತ್ಯ, 15-2
ಸಿದ್ದಪ್ಪಾರಾಧ್ಯ : "ವಿಷ್ಣುಶರ್ಮನ ಪಂಚತಂತ್ರ", ಪ್ರಬುದ್ಧ ಕರ್ನಾಟಕ, 37-2
ತಿರುನಾರಾಯಣ ಅಯ್ಯಂಗಾರ್, ವಿ. ಟಿ. : "ಸಂಸ್ಕೃತದ ಕಾಣಿಕೆ", ಸವಿನೆನಪು
ವೆಂಕಟಕೃಷ್ಣರಾವ್, ಉಡುಪಿ : "ರಾಜಶೇಖರನ ಕಾವ್ಯಮೀಮಾಂಸೆ", ಜೀವನ 21-4
ವೆಂಕಟರಾಯಚಾರ್ಯ, ಕೆ. : "ಸಂಸ್ಕೃತದಲ್ಲಿ ಕನ್ನಡ ಗ್ರಂಥಗಳು", ಪ್ರಬುದ್ಧ ಕರ್ನಾಟಕ, 40-4

## ವಾಸ್ತುಶಿಲ್ಪ

ಅನಂತರಂಗಾಚಾರ್ : ಕರ್ನಾಟಕದ ವಾಸ್ತುಶಿಲ್ಪ, ಮೈಸೂರು, 1972
Brown, Percy : Indian Architecture I and II, Bombay, 1942
Burgess, J. : Indian Architecture
Cousens, Henry : Chalukyan Architecture of the Canarese Districts, Calcutta, 1926
Fergusson, James and Taylor, Meadows : Architecture in Dharwad and Mysore
ಶ್ರೀಕಂಠ ಶಾಸ್ತ್ರಿ, ಎಸ್. : ಹೊಯ್ಸಳ ವಾಸ್ತುಶಿಲ್ಪ, ಮೈಸೂರು, 1965
Srinivasan. K. K. : Temples of South India, New Delhi, 1972
Terry, John. : The Charm of Indo-Islamic Architecture
ವೆಂಕೋಬರಾವ್, ಬಿ. : ಮೈಸೂರು ದೇಶದ ವಾಸ್ತುಶಿಲ್ಪ
Ananda Alwar. : Indian Architecture

## ಚಿತ್ರಕಲೆ

Havell, E. B. : Indian Sculpture and Painting, London, 1928
ಶಿವರಾಮ ಕಾರಂತ, ಕೆ. : ಕರ್ನಾಟಕದಲ್ಲಿ ಚಿತ್ರಕಲೆ, ಮೈಸೂರು, 1971

